# ಶ್ರೀಮನ್ಮಹಾಭಾರತಮ್

ಗ್ರಂಥಕರ್ತರು :

ಭಾಗವತರತ್ನಂ ವಿದ್ವಾನ್ ಘೂಳೀ ಕೃಷ್ಣಮೂರ್ತ್ಯಾಚಾರ್ಯ



ಪ್ರಕಾಶಕರು :

ಶ್ರೀಮದಾನಂದತೀರ್ಥ ವಿದ್ಯಾಪೀಠ

ಶ್ಯಾ|| ನಾರಣಪ್ಪ ರಸ್ತೆ, ದೊಡ್ಡಬೊಮ್ಮಸಂದ್ರ

ವಿದ್ಯಾರಣ್ಯಪುರ ಅಂಚೆ

ಬೆಂಗಳೂರು—560 097

# ಪ್ರಥಮ ಮುದ್ರಣದ ಮುನ್ನುಡಿಯಿಂದ

ಶ್ರೀ ಲಕ್ಷ್ಮೀವೆಂಕಟೇಶನ ದಿವ್ಯಾನುಗ್ರಹದಿಂದಲು, ಶ್ರೀ ಘೂಳೀ ಪ್ರಾಣೇಶ ಭಾರತೀರಮಣನ ದಿವ್ಯ ಕೃಪೆಯಿಂದಲು, ಶ್ರೀ ರಾಘವೇಂದ್ರತೀರ್ಥ ಗುರುರಾಜರ ಕರುಣೆಯಿಂದಲು, ಶ್ರೀ ಸತ್ಯಧ್ಯಾನ ಗುರುವರರ ಆಶೀರ್ಬಲದಿಂದಲು, ಅಸ್ಮದಾಚಾರ್ಯ, ಪೂಜ್ಯ ಶ್ರೀ ಹುಲಗೀ ಹುಚ್ಚಾಚಾರ್ಯರವರ ಅವ್ಯಾಜ ಕೃಪೆಯಿಂದಲು ಶ್ರೀ ಭಾರತಾಮೃತ ಗ್ರಂಥವು ಸಂಪೂರ್ಣವಾಯಿತು. ಶ್ರೀಮಧ್ವೇಶಾರ್ಪಿತಮಸ್ತು.

ಶ್ರೀ ವೈಶಂಪಾಯನ ಶ್ರೀ ಶುಕರಾದಿ ಮಹಾನುಭಾವರಿಂದ ಅನುವಾದಿಸಲ್ಪಟ್ಟ ಶ್ರೀ ಭಾರತವನ್ನು ನನ್ನಂತಹ ಪಾಮರನು, ನನ್ನಂತಹ ಮಂದಮತಿಯು ವಚನದಲ್ಲಿ ಅನುವದಿಸುವುದೆಂದರೆ ಅತ್ಯಂತ ಸಾಹಸವೇ ಸರಿ. ಆದರೂ ಕ್ರಿಮಿಯಿಂದ ರಾಜ್ಯವಾಳಿಸಿದ ಶ್ರೀ ವೇದವ್ಯಾಸದೇವನ ದಿವ್ಯ ಕರುಣಾಮೃತಶೀಕರವು ನನ್ನ ಮೇಲೆ ಹರಿದು ಶ್ರೀ ಭಾರತಾಮೃತವನ್ನು ಬರೆಯಿಸಿತು. ಲೇಖನಿಯು ಬರೆದಂತೆ ನಾನೂ ಬರೆದಿರುವೆನು. ಅಮೃತವನ್ನು ಬಡಿಸುವ ಸೌಟಿಗೆ ಅಮೃತದ ಸವಿ ಗೊತ್ತೇ ? ಆದರೂ ಆ ಭಾಗ್ಯವನ್ನೆನಗಿತ್ತು ಸುಜನತತಿಗೆ ಶ್ರೀ ಭಾರತಾಮೃತವನ್ನು ಉಣಿಸಿದ ಶ್ರೀ ಹರಿ ವಾಯು ಗುರುಗಳ ಅಪಾರ ಕರುಣೆಗೆ ಶಿರಬಾಗಿ, ಕೃತಜ್ಞನಾಗಿ ನಮಿಸಿ, ಶ್ರೀ ಭಾರತಾಮೃತವನ್ನು ನಮ್ಮ ಆಚಾರ್ಯರವರ ಕರಕಮಲಗಳಲ್ಲಿಟ್ಟು ಶ್ರೀ ಹರಿ ವಾಯು ಗುರುಗಳಿಗೆ ಸಮರ್ಪಿಸಿರುವೆನು.

ವಿದ್ವಜ್ಜನರಿಗೆ ವಿಜ್ಞಾಪಿಸುವುದು, ಅವರು ಜನರಿಗೆ ಉಪದೇಶಿಸುವುದು. ಜ್ಞಾನ ದುರ್ಲಭವಾದ ಕಾಲದಲ್ಲಿ ಕಿಂಚಿತ್ ಆದರೂ ಚಿಂತೆಯಿಲ್ಲ. ಶ್ರೀ ವೇದವ್ಯಾಸರ ಸೇವೆ ಮಾಡುವುದು—ಈ ಉದ್ದೇಶಗಳಿಂದ ರಚಿತವಾದ ಶ್ರೀ ಭಾರತಾಮೃತವು ಸಹೃದಯ ಸುಜನರ ಮನ್ನಣೆಗೆ—ಕೊನೆಗೆ ಒಪ್ಪಿಗೆಗೆ ಪಾತ್ರವಾದರೆ—ನಾನು ಚರಿತಾರ್ಥನೆಂದು ತಿಳಿಯುವೆನು.

ಬರೆಯಲು ಪ್ರಾರಂಭಿಸಿದುದು ಶ್ರೀ ಶ್ರೀನಿವಾಸನ ಅಡಿದಾವರೆಯ ನೆರಳಲ್ಲಿ. ಮುಗಿಸಿದುದೂ ಬೆಟ್ಟದೊಡೆಯನ ದಿವ್ಯ ಶ್ರೀ ಚರಣಾರವಿಂದ ಸಾನ್ನಿಧ್ಯದಲ್ಲಿ ! ಅರ್ಪಿಸಿದುದೂ ಶ್ರೀ ಶ್ರೀನಿವಾಸನ ದಿವ್ಯ ಶ್ರೀಪಾದಪದ್ಮಗಳಲ್ಲಿ, ಬ್ರಹ್ಮೋತ್ಸವದ ಪುಣ್ಯಕಾಲದಲ್ಲಿ (1971). ಬರುವ ಪುಣ್ಯವಿದ್ದರೆ ಅದು ನಮ್ಮ ಪೂಜ್ಯ ಆಚಾರ್ಯರ ಹೃದಯಮೂರ್ತಿ ಶ್ರೀ ಸತ್ಯಧ್ಯಾನತೀರ್ಥ ಮಹಾಪ್ರಭುಗಳದು. ಮತ್ತೆ ತದಂತರ್ಗತ ಶ್ರೀ ಮಂತ್ರಾಲಯ ಗುರುಸಾರ್ವಭೌಮರಿಗೆ ಸೇರಿದ್ದು, ಶ್ರೀಹರಿಗುರುಗಳಲ್ಲಿ ತಲೆಬಾಗಿ ನಿಂತು, ಕೈಜೋಡಿಸಿ, 'ಸ್ವಾಮಿನ್ ! ಶ್ರೀನಿವಾಸ ಪ್ರಾಣೇಶ ! ಗುರುರಾಜ! ನಮೋ ನಮಃ ! ನನ್ನನ್ನು ನಿಮ್ಮ ಅಡಿದಾವರೆಯ ಭಕ್ತರ ಭಕ್ತನನ್ನಾಗಿ

ಸ್ವೀಕರಿಸಿ, ಕರುಣಿಸಿ, ನನ್ನ ಸರ್ವಾಪರಾಧಗಳನ್ನು ಮನ್ನಿಸಿ, ಜ್ಞಾನ-ಭಕ್ತಿ ವೈರಾಗ್ಯ ಭಾಗ್ಯವನ್ನಿತ್ತು ಉದ್ಧರಿಸಿ ಬೇಡುವುದೊಂದೇ ನಮ್ಮದು. ನನೋ ನಮಃ.

ಈ ಮಹತ್ಕಾರ್ಯವನ್ನು ಸಾಂಗವಾಗಿ ಶ್ರೀಹರಿಗುರುಚರಣ ಸರಸಿಜಾರ್ಪಿತವಾಗುವಂತೆ ಸಾಗಗೊಳಿಸಿದ ಮತ್ತು ಆಶೀರ್ವದಿಸಿದ ಮಹಾನುಭಾವರಿಗೆ ನಾನು ಚಿರಋಣಿಯಾಗಿರುವೆನು. ಶ್ರೀ ಹರಯೇ ನಮಃ.

ಶ್ರೀ ಮುಳಬಾಗಿಲು, ಸಾಗರಕಟ್ಟೆ, ಮಂತ್ರಾಲಯ, ಪೇಜಾವರ, ಫಲಿಮಾರು, ಭಂಡಾರಕೇರಿ, ಉತ್ತರಾದಿ ಮಠಗಳ ಶ್ರೀಮಾನ್ ಶ್ರೀಪಾದಂಗಳವರಿಗೆ ಅವರ ಆಶೀರ್ವಾದಗಳಿಗಾಗಿ ಅಭಿನಮಿಸುತ್ತಿರುವೆನು. ಶ್ರೀಗುರುಭ್ಯೋ ನಮಃ.

—ಘೂಳೀ ಕೃಷ್ಣಮೂರ್ತ್ಯಾಚಾರ್ಯ

# ದ್ವಿತೀಯ ಮುದ್ರಣದ ಮುನ್ನುಡಿ

**ಶ್ರೀ ಕೃಷ್ಣೇತಿ ಮಂಗಲಂ ನಾಮ ಯಸ್ಯ ವಾಚಿ ಪ್ರವರ್ತತೇ ।**
**ತಸ್ಯ ಭಸ್ಮೀಭವಂತ್ಯಾಶು ಮಹಾಪಾತಕಕೋಟಯಃ ॥**

ಶ್ರೀಮನ್ಮಹಾಭಾರತ ಕನ್ನಡಾನುವಾದವನ್ನು 1969ರಲ್ಲಿ ನಮ್ಮ ಪೂಜ್ಯ ತಂದೆ ಹಾಗೂ ವಿದ್ಯಾಗುರುಗಳು, ಭಾಗವತರತ್ನ, ಗೀತಾಚತುರ, ಇತ್ಯಾದಿ ಬಿರುದಾಂಕಿತರಾದ ಪಂಡಿತವರೇಣ್ಯ ಶ್ರೀ ಕೃಷ್ಣಮೂರ್ತಿ ಆಚಾರ್ಯ ಘೂಳಿಯವರು ಪ್ರಕಟಿಸಿದುದನ್ನು ಇಲ್ಲಿ ಸ್ಮರಿಸಬಹುದು. ಆದರೆ ಈಗ ಪ್ರತಿಗಳು ಲಭ್ಯವಿಲ್ಲ ಹಾಗೂ ಬೇಡಿಕೇನೂ ಇರುತ್ತೆ. ಶ್ರೀ ಆಚಾರ್ಯರು ಶ್ರೀ ವೇದವ್ಯಾಸರ ಮೂಲಗ್ರಂಥ ಮತ್ತು ಶ್ರೀಮದಾಚಾರ್ಯರ ತಾತ್ಪರ್ಯನಿರ್ಣಯಕ್ಕೆ ಅನುಗುಣವಾಗಿ ಅನುವಾದ ಮಾಡಿದ್ದಾರೆ.

ಶ್ರೀಮದಾನಂದತೀರ್ಥ ವಿದ್ಯಾಪೀಠದ ಅಧ್ಯಕ್ಷರಾದ ಡಾ|| ಬಿ. ಎನ್. ವಾಸುದೇವರಾಯರು ಉದಾರಮನಸ್ಕರಾದವರು. ಈವರೆಗೆ ಅನೇಕ ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳನ್ನು ವಿದ್ವಾಂಸರಿಂದ ಅನುವಾದಿಸಿ, ಪ್ರಕಟಿಸಿದ್ದಾರೆ. ಈಗ ಈ ಯೋಜನೆಯನ್ನೂ ಕೈಗೊಂಡು ಸಜ್ಜನರ ವೃಂದಕ್ಕೆ ಕೈಸೇರಲಿದೆ. ಈ ಗ್ರಂಥಕ್ಕೆ ಮುನ್ನುಡಿ ಬರೆದುಕೊಡಬೇಕೆಂದು ಶ್ರೀ ವಾಸುದೇವರಾಯರು ಕೇಳಿದರು. ಆ ಯೋಗ್ಯತೆ ಇಲ್ಲದಿದ್ದರೂ ತೀ|| ಆಚಾರ್ಯರ ಪುತ್ರನಾಗಿ ಅವರ ಪ್ರೀತ್ಯರ್ಥವಾಗಿ ಮುನ್ನುಡಿ ಬರೆಯುವ ಸಾಹಸಕ್ಕೆ ಕೈಹಾಕಿದ್ದೇನೆ.

ನಮ್ಮ ದೇಶದಲ್ಲಿ ಎರಡು ಮಹಾಕಾವ್ಯಗಳು ರಾಮಾಯಣ ಮತ್ತು ಮಹಾಭಾರತ. ರಾಮಾಯಣವು ಮಹಾಭಾರತಕ್ಕಿಂತ ಪ್ರಾಚೀನವಾದದ್ದು. ಭಾರತವನ್ನು ಭಗವಾನ್ ಶ್ರೀ ವೇದವ್ಯಾಸರು ರಚಿಸಿದರೆಂಬುದು ಸುಪ್ರಸಿದ್ಧ.

**" ಕೋನ್ಯಃ ಪುಂಡರೀಕಾಕ್ಷೋ ಮಹಾಭಾರತಕೃತ್ ಭವೇತ್ "**

ಎಂಬ ವಚನದಂತೆ—" ಭಾರತಂ ಸರ್ವ ಶಾಸ್ತ್ರೇಷು "—ಮಹಾಭಾರತವು ಸರ್ವ ಶಾಸ್ತ್ರಸಾರಭೂತವಾಗಿರುವುದು. ಆದಕ್ಕೆಂದೇ ಇದನ್ನು ಪಂಚಮವೇದವೆಂದೂ ಕರೆಯಲಾಗಿದೆ. ಮಹಾಭಾರತವು ಬ್ರಹ್ಮಸೂತ್ರಗಳಿಗೆ ಅರ್ಥನಿರ್ಣಯ ಗ್ರಂಥವು. "ಅರ್ಥೋಽಯಂ ಬ್ರಹ್ಮಸೂತ್ರಾಣಾಂ । ಭಾರತಾರ್ಥವಿನಿರ್ಣಯಃ " ಇಂತಹ ಮಹಾಭಾರತವು ಸರ್ವ ಬ್ರಹ್ಮಬಂಧುಗಳಿಗೆ ತತ್ವಬೋಧನೆ ಆಗಬೇಕೆಂದು ಪರಮಕೃಪಾಳುಗಳಾದ ಶ್ರೀ ವೇದವ್ಯಾಸರು ರಚಿಸಿ, ಇದರ ಪಠನ-ಶ್ರವಣದಿಂದ ಲಭಿಸುವ ಫಲ ಎಂಥದ್ದೆಂಬುದನ್ನು

" ದ್ವೈಪಾಯನೋಷ್ಠಪುಟವಿಶ್ರುತಮಪ್ರಮೇಯಂ
ಪುಣ್ಯಂ ಪವಿತ್ರಮಥ ಪಾಪಹರಂ ಪರಂ ಚ |
ಯೋ ಭಾರತಂ ಸಮಧಿಗಚ್ಛತಿ ವಾಚ್ಯಮಾನಂ
ಕಿಂ ತಸ್ಯ ಪುಷ್ಕರಜಲೈರಭಿಷೇಚನೇನ || "

ಎಂಬಂತೆ ಪವಿತ್ರ ಪುಷ್ಕರಾದಿ ತೀರ್ಥಗಳಲ್ಲಿ ಸ್ನಾನ ಮಾಡಿದ ತುಲ್ಯ ಪುಣ್ಯವು ಲಭಿಸುವುದೆಂದು ಹೇಳಿದೆ.

ಮಹಾಭಾರತವು ಒಂದು ಲಕ್ಷ ಶ್ಲೋಕಗಳಿಂದ ಬೃಹತ್ತಾಗಿಯೂ ಮತ್ತೂ ಪ್ರಮೇಯಗಳಿಂದ ಮಹತ್ತಾಗಿಯೂ ಇದೆ.

" ಮಹತ್ವಾತ್ ಭಾರವತ್ವಾಚ್ಚ ಮಹಾಭಾರತಮುಚ್ಯತೇ "

ಇಂತಹ ಮಹಾಕಾವ್ಯಗಳು ಪ್ರಾಚೀನ ಗ್ರೀಕ್ ದೇಶದಲ್ಲಿ—"Iliad and Odyssey" ಎಂಬೆರಡು Epics ಇದ್ದವು. ಆದರೆ ಅವುಗಳಲ್ಲಿ ಕೇವಲ ಆ ದೇಶದ ರಾಜ್ಯಗಳ ಸಮರಗಳ ಜಯಾಪಜಯಗಳ ವರ್ಣನೆ ಅಷ್ಟೇ ಇದೆ. ಮಹಾಭಾರತವಾದಲ್ಲಿ—ಭಾರತೀಯ ಸಂಸ್ಕೃತಿ-ಧರ್ಮ-ನೀತಿ—ಎಲ್ಲಕ್ಕೂ ಮಿಗಿಲಾಗಿ ಶ್ರೀಕೃಷ್ಣ ಪರಮಾತ್ಮನ ಮಹಿಮಾ ವರ್ಣನೆ ಇದೆ. ಇದರಿಂದ—ಭಾರತವು ಒಂದು ಐತಿಹಾಸಿಕ ಪುಸ್ತಕವಲ್ಲದೇ—ಆಧ್ಯಾತ್ಮಿಕ ಚಿಂತನೆ, ವರ್ಣನೆ ಹಾಸುಹೊಕ್ಕಾಗಿ ಇದೆ. ಹಾಗೆಂದೇ ಮಹಾಭಾರತ ರಾಮಾಯಣಗಳು ಇಂದಿಗೂ ಜೀವಂತವಾಗಿ, ಅವುಗಳಲ್ಲಿ ವರ್ಣಿತವಾದ ಪಾತ್ರಗಳು ಆದರ್ಶಪ್ರಾಯವಾಗಿ ಇವೆ. ತತ್ರಾಪಿ—ಶ್ರೀಮದ್ಭಗವದ್ಗೀತಾ—ವಿಶ್ವದಲ್ಲೇ ಒಂದು ವಿಶಿಷ್ಟ ಸ್ಥಾನ ಪಡೆದಿದೆಯೆಂಬುದು ಗಮನಾರ್ಹ.

ಶ್ರೀಮನ್ಮಹಾಭಾರತ ಗ್ರಂಥವನ್ನು ಒಂದು ಸುವರ್ಣಪೀಠದಲ್ಲಿ ಇರಿಸಿ ಶ್ರೋತ್ರಿಯ ಬ್ರಾಹ್ಮಣರಿಗೆ ಯಾರಾದರೂ ದಾನವಾಗಿ ಕೊಡುತ್ತಾರೋ ಅವರ ಪುಣ್ಯ ಎಷ್ಟೆಂದು ವರ್ಣಿಸಬೇಕು !

" ಯೋ ಗೋಶತಂ ಕನಕಶೃಂಗಮಯಂ ದದಾತಿ
ವಿಪ್ರಾಯ ವೇದವಿದುಷೇ ಚ ಬಹುಶ್ರುತಾಯ |
ಪುಣ್ಯಾಂ ಚ ಭಾರತಕಥಾಂ ಶೃಣುಯಾಚ್ಚ ನಿತ್ಯಂ
ತುಲ್ಯಂ ಫಲಂ ಭವತಿ ತಸ್ಯ ಚ ತಸ್ಯ ಚೈವ || "

ಪ್ರತಿನಿತ್ಯವೂ ಭಾರತ ಶ್ರವಣ ಮಾಡಿದವರಿಗೂ ಮಹಾಪುಣ್ಯವು ಲಭಿಸುವುದೆಂದು ಪ್ರಮಾಣವಿದೆ.

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ |
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ||

ಶ್ರೀಮದಾಚಾರ್ಯರು

**ಋಗಾದ್ಯಾ ಭಾರತಂ ಚೈವ ಪಂಚರಾತ್ರಮಥಾಖಿಲಂ ।**
**ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥**

ಎಂದು ಭಾರತವು ಒಂದು ಶಾಸ್ತ್ರವೆಂದೇ ಉಲ್ಲೇಖಿಸಿದ್ದಾರೆ.

ಶ್ರೀ ನಾರಾಯಣಪಂಡಿತಾಚಾರ್ಯರು ಸುಮಧ್ವವಿಜಯ ಕಾವ್ಯದ 15ನೇ ಸರ್ಗ, ಶ್ಲೋಕ 76ರಲ್ಲಿ—

**" ಇತಿಹಾಸ ಪುರಾಣಾಬ್ಧೇಃ ಭವಚ್ಚಿತ್ತಾದ್ರಿ ಲೋಡಿತಾತ್ ।**
**ಜಾತಾಂ ಭಾರತತಾತ್ಪರ್ಯ ಸುಧಾಂ ಕಃ ಸನ್ನ ಸೇವತೇ ॥ "**

ಹೀಗೆ ಮಹಾಭಾರತವು ಹಿರಿಮೆ-ಗರಿಮೆಗಳಿಂದ ಸಮಸ್ತ ಭಾರತೀಯರ ಹೃದಯಗಳನ್ನೂ ಸೂರೆಗೊಂಡಿದೆ.

ಪ್ರಸ್ತುತ ನಮ್ಮ ಪೂಜ್ಯ ಶ್ರೀ|| ಆಚಾರ್ಯರು ಅನುವಾದಿಸಿದ ಈ ಗ್ರಂಥವು ಈವರೆಗೂ ಪಡೆಯದಿದ್ದವರ ಸಲುವಾಗಿ ಶ್ರೀಮದಾನಂದತೀರ್ಥ ವಿದ್ಯಾಪೀಠದ ವತಿಯಿಂದ ಡಾ|| ಬಿ. ಎನ್. ವಾಸುದೇವರಾಯರು ಪ್ರಕಟಿಸುತ್ತಿರುವುದು ನಿಜಕ್ಕೂ ಸ್ತುತ್ಯಾರ್ಹ. ಶ್ರೀ ರುಕ್ಮಿಣಿಸತ್ಯಾಸಮೇತ ಶ್ರೀಕೃಷ್ಣ ಪರಮಾತ್ಮನು ಶ್ರೀ ರಾಯರಿಗೂ ಹಾಗೂ ಅವರ ಕುಟುಂಬಕ್ಕೂ ಆಯುರಾರೋಗ್ಯಾದಿಗಳನ್ನು ದಯಪಾಲಿಸಲೆಂದು ಮತ್ತೊಮ್ಮೆ ಅಭಿನಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

ಶ್ರೀಹರಿದಾಸರ ದಾಸ
**ಬದರೀನಾಥಾಚಾರ್ ಘೂಳಿ**

# ಪ್ರಕಾಶಕರ ನುಡಿ

ನಮ್ಮ ಪ್ರಕಾಶನದ ವತಿಯಿಂದ ೩೩ನೇ ಕುಸುಮವಾಗಿ ವೇ|| ಬ್ರ|| ಘೂಳಿ ಕೃಷ್ಣಮೂರ್ತ್ಯಾಚಾರ್ಯರ ಶ್ರೀಮದ್ಭಾಗವತಮ್ ಬೃಹದ್ಗ್ರಂಥ ಪ್ರಕಟಗೊಂಡು ಈಗಾಗಲೇ ಹದಿನಾರು ವರುಷಗಳೇ ಕಳೆದುಹೋದುವು.

ವೇ|| ಬ್ರ|| ಘೂಳಿ ಕೃಷ್ಣಮೂರ್ತ್ಯಾಚಾರ್ಯರನ್ನು ನಮಗೆ ಪರಿಚಯಿಸಿ ಅವರ ಪಾಂಡಿತ್ಯದ ಬಗ್ಗೆ ಮನವರಿಕೆ ಮಾಡಿಕೊಟ್ಟವರು ಪ್ರಸಿದ್ಧ ಗಮಕ ವಿದ್ವಾಂಸರೂ, ಹಿರಿಯ ಸಾಹಿತಿಗಳೂ ನಮ್ಮ ಹಿತಚಿಂತಕರೂ ಆಗಿದ್ದ ಕೀ|| ಶೇ|| ಪ್ರೊ. ಶೇ. ಅನಂತ ಪದ್ಮನಾಭರಾಯರು. ಅವರ ಸಲಹೆಯಂತೆ ಆಗ ಭಾಗವತ ಮಹಾಗ್ರಂಥವು ಹೊರ ಬರಲು ಕಾರಣವಾಯಿತು. ಈಗ ಅವರ ಮಕ್ಕಳಾದ ಗಮಕಕಲಾ ಕೇಸರಿ ಎಂ. ಎ. ಜಯರಾಮರಾಯರು ನಮ್ಮ ಸಲಹೆಗಾರರಾಗಿ ಶ್ರಮಿಸುತ್ತಿದ್ದಾರೆ.

ಅದರಂತೆ ಮತ್ತೊಂದು ಬೃಹದ್ಗ್ರಂಥ ಘೂಳಿ ಕೃಷ್ಣಮೂರ್ತ್ಯಾಚಾರ್ಯರ ಶ್ರೀಮನ್ಮಹಾಭಾರತಮ್ ಈಗ ಎರಡು ಸಂಪುಟಗಳಲ್ಲಿ ನಮ್ಮ ಪ್ರಕಾಶನದಿಂದ ಪ್ರಕಟಗೊಳ್ಳುತ್ತಿರುವುದು ನಮ್ಮ ಸುದೈವ. ಈಗ ಇದರ ಪ್ರಥಮ ಸಂಪುಟವಾಗಿ ಆದಿ-ಸಭಾ-ವನ-ವಿರಾಟ-ಉದ್ಯೋಗ ಪರ್ವಗಳ ಕಥಾವಿವರಣೆ ತಮ್ಮ ಕೈಸೇರುತ್ತಿದೆ. ಮುಂದಿನ ಸಂಪುಟ ಸದ್ಯದಲ್ಲೇ ಪ್ರಕಟಗೊಳ್ಳಲಿದೆ.

ಶ್ರೀ ಘೂಳೀ ಆಚಾರ್ಯರ ಶ್ರೀಮದ್ಭಾಗವತಮ್ ಗ್ರಂಥ ಅತ್ಯಂತ ಜನಪ್ರಿಯವಾಗಿ ಈಗ ಅದರ ಪ್ರತಿಗಳೆಲ್ಲ ಮುಗಿಯುತ್ತಾ ಬಂದಿವೆ. ಅದೇ ರೀತಿಯ ಜನಪ್ರಿಯತೆಯನ್ನು ಈ ಮಹಾಸಂಪುಟಗಳೂ ಗಳಿಸುತ್ತವೆಂಬ ಆಶಯ ನಮ್ಮದು. ಕಾರಣ ಇಂದು ಮಹಾಭಾರತದ ಕಥಾ ಪ್ರಸಂಗಗಳು ಕಾವ್ಯರೂಪದಲ್ಲಿ ಹೊರಬಂದಿವೆ. ಆದರೆ ಎಲ್ಲ ವಿವರಗಳನ್ನೊಳಗೊಂಡು ಸಟೀಕಾ ತಾತ್ಪರ್ಯ ಸಹಿತ ಸರಳವಾದ ಕನ್ನಡದಲ್ಲಿ ಜನಸಾಮಾನ್ಯರಿಗೂ ಅರ್ಥವಾಗುವ ರೀತಿಯ ಶೈಲಿಯಲ್ಲಿ ರಚಿಸಲ್ಪಟ್ಟ ಗ್ರಂಥವೆಂದರೆ ಇದೊಂದೇ. ಇದಕ್ಕಾಗಿ ವೇ|| ಬ್ರ|| ಘೂಳಿ ಆಚಾರ್ಯರಿಗೆ ನಾವು ಕೃತಜ್ಞರಾಗಿರಬೇಕು. ಇವರು 'ಭಾಗವತ ರತ್ನಂ' ಎಂದೇ ಪ್ರಸಿದ್ಧರಾಗಿ ಸಂಸ್ಕೃತ-ಕನ್ನಡ ಭಾಷೆಗಳೆರಡರಲ್ಲೂ ಅಪ್ರತಿಮ ಪಾಂಡಿತ್ಯ ಹೊಂದಿದ್ದು ಭಾರತ, ಭಾಗವತ, ಅಷ್ಟಾದಶ ಪುರಾಣಗಳೆಲ್ಲವನ್ನೂ ಓದಿ, ಮಥಿಸಿ, ಮನನ ಮಾಡಿಕೊಂಡವರು. ಮಧ್ವಶಾಸ್ತ್ರಭೂಷಣ ಎಂದೇ ಖ್ಯಾತರಾಗಿದ್ದ ಹುಲಿಗಿ ರಾಘವೇಂದ್ರಾಚಾರ್ಯರು, ನ್ಯಾಯವೇದಾಂತರತ್ನಂ ಹುಲಿಗಿ ಹುಚ್ಚಾಚಾರ್ಯರಂಥ ಪ್ರಕಾಂಡ ಪಂಡಿತರ ಶಿಷ್ಯರಾಗಿ ನ್ಯಾಯ, ವೇದಾಂತ, ತರ್ಕ ಶಾಸ್ತ್ರಾದಿ ಗ್ರಂಥಗಳನ್ನು ಅಧ್ಯಯನ ಮಾಡಿದಂಥ ಪರಮ ಮೇಧಾವಿಗಳಾಗಿದ್ದವರು. ಅಷ್ಟೇ ಸಾಲದೆಂಬಂತೆ ಶ್ರೀಮದುತ್ತರಾದಿ

# ಅರ್ಪಣೆ



ನಮ್ಮ ಪರಮಪೂಜ್ಯ ತಂದೆಯವರಾದ ಆಯುರ್ವೇದ ಪಂಡಿತರತ್ನ

**ದಿ || ಶ್ಯಾನುಭೋಗ್ ನಾರಣಪ್ಪನವರ**

**ಸ್ಮರಣಾರ್ಥ**

ಈ ಗ್ರಂಥವನ್ನು ಭಕ್ತಿಯಿಂದ ಸಮರ್ಪಿಸಲಾಗಿದೆ

**ಮಹಾಶಾಲಾ ಡಾ || ಬಿ. ಎನ್. ವಾಸುದೇವರಾವ್**

ಪ್ರಕಾಶಕರು

ಮಠಾಧೀಶರಾಗಿದ್ದ ಶ್ರೀ ಶ್ರೀ ಸತ್ಯಧ್ಯಾನತೀರ್ಥರ ಪರಮ ಶಿಷ್ಯರಾಗಿ ಅವರ ಅಪಾರ ಅನುಗ್ರಹಕ್ಕೆ ಪಾತ್ರರಾಗಿದ್ದವರು.

ಶ್ರೀಯುತ ಘೂಳೀ ಆಚಾರ್ಯರು ಕೇವಲ ಶಾಸ್ತ್ರಪರಿಣತರೂ, ಗ್ರಂಥಕರ್ತರೂ ಮಾತ್ರವಲ್ಲದೆ ಉತ್ತಮ ವಾಗ್ಮಿಗಳೂ ಸಹ ಆಗಿದ್ದವರು. ಅವರ ಪುರಾಣಾದಿ ಪ್ರವಚನಗಳನ್ನು ಇಂದಿಗೂ ಜ್ಞಾಪಿಸಿಕೊಳ್ಳುತ್ತೇವೆ.

ಇವರ ಸುಪುತ್ರರಾದ ವೇ|| ಬ್ರ|| ಬದರೀನಾಥಾಚಾರ್ಯ ಘೂಳಿಯವರೂ ತಂದೆಯ ಜಾಡಿನಲ್ಲೆ ಹೆಜ್ಜೆಯಿಟ್ಟು ತಾವೂ ಶಾಸ್ತ್ರಪರಿಣತರಾಗಿ, ಪ್ರವಚನಕಾರರಾಗಿ ಜನಪ್ರಿಯರಾಗಿದ್ದಾರೆ. ತಂದೆಯವರಿಂದ ರಚಿತ ಶ್ರೀಮನ್ಮಹಾಭಾರತವ್ ಕೃತಿಯ ಪ್ರಕಟನಾ ಕಾರ್ಯದಲ್ಲಿ ಅವರ ಪಾತ್ರವು ಇದ್ದು ತನ್ಮೂಲಕ ಗುರು ಋಣ ಹಾಗೂ ಪಿತೃ ಋಣವನ್ನು ತೀರಿಸುತ್ತಿದ್ದಾರೆ. ಅವರಿಗೆ ನಮ್ಮ ಅಭಿವಂದನೆಗಳು.

ಯಾವತ್ತೂ ನಮ್ಮ ಎಲ್ಲ ಪ್ರಕಾಶನದ ಮುದ್ರಣದ ಜವಾಬ್ದಾರಿಯನ್ನು ವಹಿಸಿಕೊಂಡು ಸಕಾಲದಲ್ಲಿ ಅಂದವಾಗಿ ಈ ಗ್ರಂಥವನ್ನು ಮುದ್ರಿಸಿಕೊಟ್ಟಿರುವ ಪ್ರಥಾ ಮುದ್ರಣಾಲಯದ ಮಾಲೀಕರೂ, ಸಹೃದಯಿಗಳೂ ಆಗಿರುವ ಸನ್ಮಾನ್ಯ ಡಿ. ಎಸ್. ಕೃಷ್ಣಾಚಾರ್ಯರಿಗೂ ನಮ್ಮ ಅನಂತ ಪ್ರಣಾಮಪೂರ್ವಕ ಧನ್ಯವಾದಗಳು.

ಪ್ರೊಫೆಸರ್ ಡಾ|| ಎ. ಶ್ರೀಪಾದರಾವ್, ನಿವೃತ್ತ ಇಂಜನಿಯರ್, ಅನಂತಪುರ, ಇವರು ಮುದ್ರಣ ಕಾರ್ಯದಲ್ಲಿ ಸಹಾಯ ನೀಡಿ ಸಹಕರಿಸಿದ್ದಾರೆ. ಅವರಿಗೆ ನಮ್ಮ ವಂದನೆಗಳು.

ಈ ಮಹತ್ಕಾರ್ಯದಲ್ಲಿ ಶ್ರೀ ಜಿ. ವಿ. ಕೃಷ್ಣ ಅವರು ಸಕ್ರಿಯವಾಗಿ ಭಾಗವಹಿಸಿ ಉಪಕರಿಸಿದ್ದಾರೆ. ಅವರಿಗೂ ನಾವು ಆಭಾರಿಯಾಗಿದ್ದೇವೆ.

ಇದು ಮನೆ ಮನೆಯಲ್ಲೂ ಇರಬೇಕಾದಂತಹ ಸದ್ಗ್ರಂಥ. ಪಂಡಿತಪಾಮರರಾದಿಯಾಗಿ ಸರ್ವರೂ ಏಕಮುಖವಾಗಿ ಇದನ್ನು ಬರಮಾಡಿಕೊಳ್ಳುವರೆಂದು ಆಶಿಸುವ,

ಸಜ್ಜನ ವಿಧೇಯ,
**ಮಹಾಶಾಲಾ ಡಾ|| ಬಿ. ಎನ್. ವಾಸುದೇವರಾವ್**
ಪ್ರಕಾಶಕರು ಹಾಗೂ ಅಧ್ಯಕ್ಷರು.

ಶ್ರೀಮದಾನಂದತೀರ್ಥ ವಿದ್ಯಾಪೀಠ,
ಶ್ಯಾ|| ನಾರಣಪ್ಪ ರಸ್ತೆ, ದೊಡ್ಡಬೊಮ್ಮಸಂದ್ರ,
ವಿದ್ಯಾರಣ್ಯಪುರ ಅಂಚೆ, ಬೆಂಗಳೂರು–560 097
ಫಾಲ್ಗುಣ ಶುದ್ಧ ನವಮಿ, ಚಿತ್ರಭಾನು ಸಂವತ್ಸರ
ಬುಧವಾರ, ತಾ|| 12–3–2003

# ವಿಷಯಾನುಕ್ರಮಣಿಕೆ

## ೧. ಆದಿಪರ್ವ

## ೨. ಸಭಾಪರ್ವ



## ೩. ವನಪರ್ವ

ಪುಟ

## ೪. ವಿರಾಟಪರ್ವ

## ೫. ಉದ್ಯೋಗಪರ್ವ

|| ಶ್ರೀ ಲಕ್ಷ್ಮೀವೆಂಕಟೇಶೋ ವಿಜಯತೇ ||



# ಶ್ರೀಮನ್ಮಹಾಭಾರತಮ್

## ಆದಿಪರ್ವ

### ಮಂಗಳಾಚರಣೆ

ಓಂ ನಾರಾಯಣಂ ಸುರಗುರುಂ ಜಗದೇಕನಾಥಂ
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ |
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ
ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ||

ಓಂ ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ |
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ-
ಸತ್ಕಾರಣಾಯ ವಿತತಾಯ ನಮೋನಮಸ್ತೇ ||

ಓಂ ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ |
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ||

ಸತ್ಯವತೀ ಸುಧಾಂಭೋರಾಶಿ ರಾಕಾಚಂದ್ರಮರಾದ ಶ್ರೀಮದ್ವೇದವ್ಯಾಸರು ವೇದಗಳನ್ನು ವಿಂಗಡಿಸಿ ಪೈಲಾದಿಗಳಿಗೆ ಉಪದೇಶಿಸಿದರು. ವೇದಾರ್ಥವನ್ನು ನಿರೂಪಿಸಲು ಬ್ರಹ್ಮಸೂತ್ರಗಳೆಂಬ ವೇದಾಂತಶಾಸ್ತ್ರವನ್ನು ರಚಿಸಿದರು. ವೇದಾನಧಿಕಾರಿಗಳಾದ ಸ್ತ್ರೀ-ಶೂದ್ರ-ಬ್ರಹ್ಮಬಂಧುಗಳಲ್ಲಿ ದಯೆತೋರಿ, ಅವರಿಗೂ ಮೋಕ್ಷನಾಗಬೇಕೆಂದು ಬಯಸಿ, ಜ್ಞಾನದಾಯಕವಾದ ಭಾರತವನ್ನು ರಚಿಸಿದರು. ಶ್ರೀ ಮಹಾಭಾರತದಲ್ಲಿ ವೇದದಲ್ಲಿ ಹೇಳಿರುವುದನ್ನಲ್ಲದೆ, ಕೇವಲ ಶ್ರೀನಾರಾಯಣಜ್ಞಾನಗೋಚರವಾದ ಇತರ ಕೆಲವು ದಿವ್ಯಾಪೂರ್ವ ವಿಷಯಗಳನ್ನೂ ತಾವೇ ನಾರಾಯಣನಾದುದರಿಂದ ರಚಿಸಿ ನಿರೂಪಿಸಿದರು.

ಶ್ರೀಭಾರತವೆಂದರೆ ಸಕಲ ಧರ್ಮನಿರೂಪಕವೂ, ಧರ್ಮಶಾಸ್ತ್ರ ಮಾತ್ರವಲ್ಲದೆ ಅರ್ಥಶಾಸ್ತ್ರ, ಶೃಂಗಾರಾದಿ ರಸನಿರೂಪಕ ಪ್ರಬಂಧ, ನೀತಿಶಾಸ್ತ್ರ, ಸಕಲ ಸಾರ ಸರ್ವಸ್ವವೂ ಆಗಿದೆ. ಇದರಲ್ಲಿ ಇಲ್ಲದ್ದು ಮತ್ತೆಲ್ಲಿಯೂ ಇಲ್ಲ. ಇದರಲ್ಲಿರುವುದನ್ನೇ ಮಿಕ್ಕೆಲ್ಲ ಗ್ರಂಥಕಾರರೂ ಸ್ವೀಕರಿಸಿ, ಉಪಜೀವಿಸಿ, ತಮ್ಮ ತಮ್ಮ ಗ್ರಂಥಗಳನ್ನು ಬರೆದಿದ್ದಾರೆಂದರೆ ಅತಿಶಯೋಕ್ತಿಯಾಗಲಾರದು. ಇದನ್ನು ನಮ್ಮ ಪ್ರಾಚೀನ ಪಂಡಿತರು ಮಾತ್ರವಲ್ಲದೆ, ಪಾಶ್ಚಾತ್ಯ ಪಂಡಿತರು ಕೂಡ (ಮ್ಯಾಕ್ಸಮ್ಯೂಲರ, ಸ್ಟೂಅರ್ಟ, ಬೈಲಿ ಮುಂತಾದವರು) ನಿಜವೆಂದು ನಂಬಿದ್ದರು. ನೂರಾರು ವರ್ಷಗಳ ಪಾರತಂತ್ರ್ಯದ ಕಾರಾಗಾರದಿಂದ ವಿಮುಕ್ತರಾದರೂ, ಇನ್ನೂ ಅದೇ ಸಂಸ್ಕೃತಿಯನ್ನು ಬಿಡದೆ, ಕುರುಡರಂತೆ ಅನುಸರಿಸುತ್ತಿರುವ ನಮ್ಮ ಇಂದಿನ ಜನರಿಗೆ ನವೀನ ಪಂಡಿತಂಮನ್ಯರಿಗೆ ತಾವು ಬರೆಯುವುದರ ಬೀಜ ಭಾರತದಲ್ಲಿದೆ ಎಂದರೆ ಆಶ್ಚರ್ಯವಾಗಬಹುದು.

ಭರತದೇಶದ ಅಂದರೆ, ಇಂಡಿಯಾದ ಯಾವ ಗ್ರಂಥವನ್ನಾಗಲಿ, ಯಾವ ಭಾಷೆಯಲ್ಲಾಗಲಿ, ತೆಗೆದು ನೋಡಿದರೆ, ಅದರಲ್ಲಿ ಭಾರತದ ಸೊಲ್ಲಿಲ್ಲವೆಂದು ಹೇಳುವ ಎದೆಗಾರಿಕೆ ಯಾರಿಗಾದರೂ ಇದೆಯೇ ?

ಮಹಾಭಾರತವು ಪಂಚಮ ವೇದವೆನಿಸಿದೆ. ಅದು ಭರತದೇಶದ ಚರಿತ್ರೆ, ಭಾರತೀಯರ ಆತ್ಮಕಥೆ. ಅದರಲ್ಲಿ ಇತರ ದೇಶದ ಜನರಿಗೆ ಅರಿವೆ ಉಡುವ ಅರಿವೂ ಇಲ್ಲದಿದ್ದಾಗಲೇ ಚೆನ್ನಾಗಿ ಸಮಗ್ರವಾಗಿ ಲಿಖಿಸಲ್ಪಟ್ಟ ಗಣಿತಶಾಸ್ತ್ರ, ಆತ್ಮವಿಜ್ಞಾನ, ಜ್ಯೋತಿಶ್ಶಾಸ್ತ್ರ, ಕಾಲಮಾನ, ರಾಜನೀತಿ, ದಂಡನೀತಿ, ಪೌರಶಾಸ್ತ್ರ ಇವುಗಳ ನಿರೂಪಣೆಯಿದೆ. ಇಷ್ಟೆಲ್ಲವೂ ಅಹುದು. ಮಹಾಭಾರತವು ಪರಬ್ರಹ್ಮಜ್ಞಾನಸಾಧಕವಾದ ಮೋಕ್ಷಶಾಸ್ತ್ರವೂ ಅಹುದು.

ಪ್ರಾಚೀನ ಭಾರತೀಯ ಋಷಿವರರು ಗುಹೆಗಳಲ್ಲಿ, ತಪೋವನಗಳಲ್ಲಿ ನೆಲಸಿ, ಹಣ್ಣು ಹಂಪಲುಗಳನ್ನುಂಡು, ನೆಲದಿ ಮಲಗಿ ತಪವಗೈದರು. ನೈತಿಕವಾಗಿ, ಮಾನಸಿಕವಾಗಿ, ಧಾರ್ಮಿಕವಾಗಿ ಮೇರುಪರ್ವತದಂತೆ ಬೆಳೆದುನಿಂತರು. ಅವರ ಜ್ಞಾನದೀಪದ ಕಿರಣಗಳಿಂದ ಅಂಧಕಾರ-ಬಂಧುರವಾದ ಜಗವೆಲ್ಲ ಜೀವನಜ್ಯೋತಿಯಾಯಿತು. ಅವರಾಡಿದ ನುಡಿ ಸುಳ್ಳಾಗಲಿಲ್ಲ. ಅವರ ವಿಶ್ವಜ್ಞಾನ, ಅವರ ಬ್ರಹ್ಮಜ್ಞಾನ, ಅವರ ನಕ್ಷತ್ರಗಣನೆ, ಅವರ ಆತ್ಮಾನಾತ್ಮ ವಿಚಾರಸರಣಿ, ಇಂದಿಗೂ ಎಲ್ಲರ ಮನ ಸೆಳೆಯುವಷ್ಟು ಅಗಾಧವೂ, ಅದ್ಭುತವೂ, ಸತ್ಯವೂ, ಮಂಗಳಕರವೂ ಆಗಿದೆ.

ಖಗೋಳ ವಿಚಾರದ ಪ್ರಖರ ವಿಜ್ಞಾನವನ್ನು ಭೃಗು-ಭರದ್ವಾಜ ಸಂವಾದದಲ್ಲಿ ನೋಡಿ; ಕಾಲಚಕ್ರದ ಅಣುಗಳ ಸೂಕ್ಷ್ಮಗಣನೆ ಬೇಕಾದರೆ ಗರ್ಗರ ಜ್ಯೋತಿಶ್ಶಾಸ್ತ್ರ ವಿಜ್ಞಾನವನ್ನು ನಿರೂಪಿಸುವ ಘಟ್ಟವನ್ನು ವಿಚಾರಿಸಿರಿ. ನಮ್ಮ ನಾಯಕರು ಭಾರತವನ್ನು ಓದಿ ರಾಜನೀತಿ ವಿಜ್ಞಾನವನ್ನು ಕಲಿತು ಪಾಲಿಸಿದರೆ, ಭಾರತವು ರಾಮ-ರಾಜ್ಯವಾದೀತು ! ರಾಜಧರ್ಮಗಳನ್ನು ನಿರೂಪಿಸುವಲ್ಲಿ ಶಾಂತಿಪರ್ವಕ್ಕೆ ಮಿಗಿಲಾದ

ಗ್ರಂಥ ಉಂಟೇ ? ಭೀಷ್ಮನ ರಾಜಧರ್ಮಸೂಕ್ಷ್ಮಗಳನ್ನು ಕೇಳಿ, ಅದರಂತೆ ನಡೆದರೆ ನಮ್ಮ ರಾಜರು, ಮಂತ್ರಿಗಳು, ತಮ್ಮ ಕೀರ್ತಿಚಂದ್ರಮನಿಗೆ ಬಂದ ಕಳಂಕವನ್ನು ಅಳಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ.

ಇಂತಹ ಭಾರತವನ್ನು ಶ್ರೀಬಾದರಾಯಣರು ಒಂದು ಲಕ್ಷ ಶ್ಲೋಕಗಳಲ್ಲಿ ಸಮಗ್ರವಾಗಿ ರಚಿಸಿದರು. ಅರ್ಥದಿಂದಲೂ ಶಬ್ದದಿಂದಲೂ ಕೂಡ ಮಹತ್ತಾಗಿ, ಇತರ ಪುರಾಣಾದಿಗಳಿಗೂ ಹೆಚ್ಚು ಭಾರವಾದುದರಿಂದಲೇ ಶ್ರೀ ಮಹಾಭಾರತ ವೆಂಬುದಾಗಿ ಕರೆಯಲ್ಪಡುವ ಈ ಗ್ರಂಥರಾಜವು 'ಜಯ' ಎಂದೂ ಕರೆಯಲ್ಪಟ್ಟು ಓದುವವರಿಗೂ ಲಿಖಿಸುವವರಿಗೂ ಕಿವಿಗೊಟ್ಟು ಕೇಳುವವರಿಗೂ ದೀರ್ಘಾಯು ರಾರೋಗ್ಯ ಸಂಪತ್ಸಂತಾನ ಸದ್ಭಕ್ತಿಮುಕ್ತಿಗಳನ್ನು ತಂದುಕೊಡುವ ಕಾಮಧೇನುವೂ ಪಾರಿಜಾತವೂ ಚಿಂತಾಮಣಿಯೂ ಆಗಿದೆ. ಇಂತಹ ಶ್ರೀಮನ್ಮಹಾಭಾರತವನ್ನು ಶ್ರೀಪುಂಡರೀಕಾಕ್ಷನಲ್ಲದೆ ಮತ್ತೊಬ್ಬರು ರಚಿಸಬಲ್ಲರೇ ?

ಸರ್ವಜ್ಞ! ಪುಂಡರೀಕನಯನ! ಪರಮಪವಿತ್ರ! ಸತ್ಯವತೀ ಪುತ್ರ! ನಮೋ ನಮಃ. ಭಾರತವೆಂಬ ತೈಲವನ್ನಿತ್ತು ಜ್ಞಾನದೀಪವನ್ನು ಆರದಂತೆ ಬೆಳಗಿ, ದಾರಿ ತೋರುವ ಕರುಣಾನಿಧಿಯೇ ! ನಿನಗೆ ಮತ್ತೆ ನಮಸ್ಕಾರವು.

ಶ್ರೀನಾರಾಯಣ ! ಶ್ರೀ ಜೀವೋತ್ತಮ ಮುಖ್ಯಪ್ರಾಣ ! ಶ್ರೀ ಶೇಷದೇವ ! ಸಕಲ ಶಿವಾದಿತತ್ವನಿಯಾಮಕ ದೇವ ಋಷಿವರರೇ ! ನಿಮಗೆ ನಮಃ.

ಜಗಜ್ಜನನಿ ! ಶ್ರೀದೇವಿ ! ವಾಙ್ನಿಯಾಮಿಕೆ ಸರಸ್ವತಿ ! ತಾಯೆ ಭಾರತಿ ! ಅಮ್ಮ ಪಾರ್ವತಿ ! ನಿಮಗೆ ನಮೋ ನಮಃ.

ಶ್ರೀ ವಾಸುದೇವ ! ಮತ್ಪ್ರಾಣರಕ್ಷಣ ದೀಕ್ಷಾದಕ್ಷ ! ಜ್ಞಾನಸಿಂಧು ! ಸ್ವಾಮೀ, ನಿನ್ನ ದಾಸನಮೇಲೆ ದಯೆದೋರು ! ಪ್ರಭೂ ! ಬಂತೇ ನಿನ್ನ ಮನಃ ಕಲ್ಪವೃಕ್ಷ ದಡಿಯಲ್ಲಿ ಈ ಪಾಮರನ ಕೂಡಿಸಿ, ಪಾಲಿಸಿ, ಲಾಲಿಸಬೇಕೆಂಬ ಕರುಣೆ! ಕ್ರಿಮಿ ಯಿಂದ ರಾಜ್ಯವಾಳಿಸಿದ ದೊರೆ ! ನೀನಾಡಿಸಿದಂತೆ ಆಡುವ ಕೈಗೊಂಬೆಯಾದ ನನ್ನನ್ನು ಕಾಪಾಡು ! ಕ್ಷೀರದಲ್ಲದ್ದು, ನೀರಲ್ಲದ್ದು ನನಗೇನು ? ನೀನು ಎಂಬ ತಂದೆಯು ಸಿರಿ ಕರುಣೆಯ ಕಡಲಿನ ದಡವ ಕಂಡೆ ! ಪಾರಾದೆ. ಶ್ರೀಹರೇ ! ನಿನಗೆ ಪುನಃ ಪುನಃ ನಮಸ್ಕಾರ.

ನಾರಾಯಣ ! ಸುರಗುರೋ ! ಜಗದೇಕನಾಥ ! ಭಕ್ತಪ್ರಿಯ ! ಸಕಲಲೋಕ ವಂದ್ಯ ! ತ್ರಿಗುಣಾತೀತ ! ಜನನಮರಣಾದಿ ಸರ್ವದೋಷರಹಿತ ! ಸರ್ವ ಸಮರ್ಥ ! ಪಾಪ ಹರಣ ! ಸಂಸಾರಸಾಗರ ತರಣ ಚರಣ ! ಜಗದ್ಗುರೋ ! ದೇವ ! ನಮೋ ನಮಃ ಪುನಶ್ಚ ನಮೋ ನಮಃ.

ಸುರಗುರುವೇ ! ಜಗದೇಕನಾಥನೇ ! ಭಕ್ತಪ್ರಿಯನೇ ! ಸಕಲಲೋಕ ನಮ ಸ್ಕೃತನೇ ! ಜಗಜ್ಜನ್ಮ ಪಾಲನ ಸಂಹರಣ ನಿಯಮನಕರ್ತನೇ ! ಜ್ಞಾನಮೋಕ್ಷ ದಾತನು, ಅಜ್ಞಾನಬಂಧಪ್ರದನು, ದೇವವಲ್ಲಭನು, ಅಸುರ ಮರ್ದನನು,

ಜೀವ-ಜಡಾತ್ಮಕ ಜಗದ್ವಿಲಕ್ಷಣನು, ಅಪ್ರಾಕೃತನು, ದಿವ್ಯ ಸುಂದರ ಮಂಗಳ ಸ್ವರೂಪನು ಆದ ಶ್ರೀ ಲಕ್ಷ್ಮೀಪತೇ ! ನಿನಗೆ ನಮಸ್ಕಾರವು.

ಶ್ರೀ ಘೂಳೀ ಪ್ರಾಣನಾಥ ! ನಿನ್ನ ಕರುಣೆಯಿಂದಲ್ಲವೆ, ಈ ಪಾಮರನು ಭಾಗವತಾಮೃತಪಾನ ಮಾಡಿ, ಸುಜನರಿಗೆ ಮಾಡಿಸಿದನೇ ? ಪವಮಾನ ನಂದನ ! ಕುಂತೀ ಸುತ ! ಮಧ್ವನಾಥ ! ಎನ್ನ ತಂದೆ ! ಜಗದ್ಗುರೋ ! ಭಾರತೀಶ ! ನನ್ನಲ್ಲಿ ನಿಲ್ಲು ! ನಡೆಸು ನನ್ನನ್ನು ಸನ್ಮಾರ್ಗದಲ್ಲಿ ! ನಿಲ್ಲಿಸು ನಿನ್ನ ಸನ್ಮತದ ಸರಣಿಯಲ್ಲಿ ! ಶ್ರೀ ಭಾರತಾಮೃತ ಸವಿಗಂಡ ಸರ್ವಜ್ಞನೇ ! ನಿನ್ನ ಚರಣಚ್ಛತ್ರದ ಛಾಯೆ ಎನಗಿರಲಿ! ನೀ ನುಡಿಸಿದಂತೆ ನುಡಿದು ಬರೆಯುವ ನನ್ನಲ್ಲಿ ವಾತ್ಸಲ್ಯವಿಟ್ಟು, ಈ ನಿನ್ನ ಮಂಗಳ ಕರ ಸೇವೆಯನ್ನು ಪೂರ್ಣವಾಗಿ ಸಾಂಗಗೊಳಿಸಿ, ಬಂದ ಸುಕೃತವನ್ನು ನಿಮ್ಮಪ್ಪನಿ ಗೊಪ್ಪಿಸು. ತಪ್ಪುಗಳನ್ನು ತಪ್ಪಿಸಿ, ಒಪ್ಪಾಗಿ ಬರೆಸಿ, ಸಲಹುವ ಭಾರ ನಿನ್ನದಯ್ಯಾ ಜೀಯಾ ! ನಮೋ ನಮಃ.

ಶ್ರೀ ಪಾರ್ವತೀ ಪರಮೇಶಾದಿ ಸಕಲ ವೃಂದಾರಕ ವೃಂದವೇ ! ಈ ಮಂದ ಮತಿಯನ್ನು ಅಮಂದ ಕರುಣೆಯಿಂದ ಕಾಪಾಡಿ ! ನಿಮಗೆ ನಮೋ ನಮಃ.

## ಸರ್ವಶಾಸ್ತ್ರಸಾರ

ಶ್ರೀ ಲಕ್ಷ್ಮೀನಾರಾಯಣನು ಸಮಸ್ತಕಲ್ಯಾಣಗುಣ ಪರಿಪೂರ್ಣನು. ಸರ್ವ ದೇಶ ಕಾಲ ಗುಣಗಳಿಂದ ವ್ಯಾಪ್ತನು. ದೇಹದಿಂದಲೇ ಎಲ್ಲ ಕಡೆಯೂ ವ್ಯಾಪ್ತನಾಗಿದ್ದರೂ, ಸ್ವಕೀಯ ಅಚಿಂತ್ಯಾದ್ಭುತ ಶಕ್ತಿಯಿಂದ ಅವ್ಯಕ್ತನಾಗಿರುವನು. ಸ್ವತಂತ್ರನಾಗಿ ಜೀವ ಜಡಾತ್ಮಕ ಜಗತ್ತಿಗೆ ಸೃಷ್ಟಿ, ಸ್ಥಿತಿ, ಲಯ, ನಿಯಮನಗಳನ್ನು ಮಾಡುವನು. ಅಜ್ಞಾನ, ಬಂಧಗಳು, ಜ್ಞಾನ ಮೋಕ್ಷಗಳನ್ನು ಅವನೇ ಕೊಡುವವನು. ಬ್ರಹ್ಮ, ಶಂಕರ ಶಕ್ರಾದಿ ದೇವತೆಗಳು ಅವನಿಗೆ ವಶರಾಗಿ ಅವನಾಜ್ಞೆಯಿಂದ ಜಗತ್ತಿನ ಸೃಷ್ಟಿ, ಸಂಹರಣ ರಕ್ಷಣಾದಿ ಕಾರ್ಯಗಳಲ್ಲಿ ಪ್ರವೃತ್ತರಾಗಿರುವರು. ಸರ್ವಜ್ಞನಾದ ಶ್ರೀ ನಾರಾಯಣನಿಗೆ ಸಮರಿಲ್ಲ. ಅಧಿಕರಿನ್ನೆಲ್ಲಿ ? ಅವನಿಗೆ ಸೃಷ್ಟ್ಯಾದಿ ವ್ಯಾಪಾರದಿಂದ ಪ್ರಯೋಜನವಿಲ್ಲ. ಸಕಲ ಜೀವರಿಗೆ ತತ್ತದ್ಯೋಗ್ಯ ಗುರಿಯಾಗಲು ಸಾಧನ ಮಾಡಿಸಿ, ಅವರಿಗೆ ತಕ್ಕ ಮುಕ್ತಿದಾನವೇ ಸೃಷ್ಟಿ ಪ್ರಯೋಜನವು. ಸ್ವರಮಣನಾದ ಶ್ರೀಹರಿಯು ಜೀವರಿಗೆ ಭೌತ ಶರೀರಗಳನ್ನು ಕೊಡಲು ಶ್ರೀ ರಮೆಯಿಂದ ಕ್ರೀಡಿಸಿ, ಪ್ರಳಯಕಾಲದ ಕೊನೆಯಲ್ಲಿ ಬ್ರಹ್ಮಾಂಡವನ್ನು ನಿರ್ಮಿಸುವನು.

ಸೃಷ್ಟಿಯು ನಾಲ್ಕು ವಿಧವಾಗಿದೆ— ಶುದ್ಧ ಸೃಷ್ಟಿ ಎಂದರೆ ತನ್ನನ್ನು ತಾನೇ ಶರೀರೇಂದ್ರಿಯಾದಿ ವಿಕಾರಗಳನ್ನು ಹೊಂದದೆ ಮೂಲರೂಪದಿಂದ ಹೊರಬಂದು ಅವತಾರ ರೂಪಗಳಿಂದ ವಿಹರಿಸಿ, ಜಗದುಪಕಾರಕನಾಗಿರುವುದು. ಶ್ರೀ ಲಕ್ಷ್ಮೀ ದೇವಿಯು ಭಗವದಾಜ್ಞೆಯಿಂದ ಪ್ರಕೃತಿಸ್ವಾಮಿತ್ವವನ್ನು ಚೆನ್ನಾಗಿ ಹೊಂದಿ, ಜೀವ ರಿಗೆ ದೇಹಕಾರಣಗಳಾಗಿರುವುದು ಪರಾಧೀನ ವಿಶೇಷಾವ್ಯಾಪ್ತಿರೂಪ ಸೃಷ್ಟಿಯು.

ಮಿಶ್ರಸೃಷ್ಟಿ ಎಂದರೆ ಸ್ವರೂಪದಿಂದ ಹುಟ್ಟಿಲ್ಲದ ಜೀವರು ಬಾಹ್ಯ ದೇಹದಿಂದ ಹುಟ್ಟುವುದು. ಕೇವಲ ಸೃಷ್ಟಿ ಎಂದರೆ ಹಿಂದಿಲ್ಲದ ಘಟಪಟಾದಿಗಳನ್ನು ತ್ರಿಗುಣ ಗಳನ್ನು ಉಪಾದಾನ ಕಾರಣವಾಗಿ ಸೃಜಿಸುವುದು.

ಮೊದಲು ಶ್ರೀ ಭಗವಂತನು ಮುಕ್ತಿಪ್ರದನೆನಿಸುವ ವಾಸುದೇವನಾದನು. ರಮೆಯು ಮಾಯೆ ಎನಿಸಿದಳು. ಮಾಯೆಗೆ ಪತಿಯಾದ ವಾಸುದೇವನನ್ನು ಮಾಯಿ ಎಂಬುವರಷ್ಟೇ ಆಗಲಿ ಮಾಯೆ ಎಂಬ ಅಜ್ಞಾನಕ್ಕೊಳಗಾದವನೆಂದಲ್ಲ. ವಾಸುದೇವ ನಿಂದ ಸಂಹಾರಕಾರಣನಾಗಿ ಸಂಕರ್ಷಣನು ಜನಿಸಿದನು. ಆಗ ರಮೆಯು ಜಯೆ ಎನಿಸಿದಳು. ಶ್ರೀಶನು ಪ್ರದ್ಯುಮ್ನನಾಗಿ ಸೃಷ್ಟಿಕಾರಣನಾಗಲು ಶ್ರೀದೇವಿಯು ಕೃತಿ ಎನಿಸಿ ಅವನನ್ನು ಸೇವಿಸಿದಳು. ಸ್ಥಿತಿಮಾಡಲು ಶ್ರೀಶನು ಅನಿರುದ್ಧನಾಗಲು ದೇವಿಯು ಶಾಂತಿ ಎನಿಸಿದಳು. ಅನಿರುದ್ಧನು ಜೀವರ ಲಿಂಗದೇಹಗಳನ್ನು ಮುಚ್ಚಿ ರುವ ಶುದ್ಧ ಪ್ರಕೃತ್ಯಂಶದಿಂದ ನಿರ್ಮಿತ ಸೂಕ್ಷ್ಮ ದೇಹಗಳನ್ನು ತನ್ನಲ್ಲಿದ್ದ ಅವರಿಗೆ ಕೊಡುವವನಲ್ಲದೆ, ಮುಂದೆ ಬ್ರಹ್ಮಾಂಡದ ಒಳಗೆ ಬಂದ ಜೀವರಿಗೆ ರಾಗವನ್ನು ಹುಟ್ಟಿಸಿ ಸ್ತ್ರೀ-ಪುರುಷಯೋಗದಿಂದ ದೇಹಗಳನ್ನು ಕೊಟ್ಟು ಸೃಜನಕರ್ತನಾದ ಪ್ರದ್ಯುಮ್ನನು ಹೊರಗೆಡಹಿದಾಗ, ಅನಿರುದ್ಧನು ಆ ದೇಹ ಪೋಷಣ ಸ್ಥಿತಿಗಳನ್ನೂ ಮಾಡುವನು.

ಇಂತಹ ಶ್ರೀಹರಿಯು ಸರ್ವಜ್ಞನು, ಈಶ್ವರತಮನು, ಸರ್ವಶಕ್ತನು. ಅವನ ಆಜ್ಞೆಯಿಲ್ಲದೆ ಬ್ರಹ್ಮೇಶಾದಿ ಜೀವರು ಏನೂ ಮಾಡಲಾರರು. ಶ್ರೀಹರಿಗೆ ಪ್ರತಿಬಿಂಬನು ಮುಖ್ಯಪ್ರಾಣನು. ದರ್ಪಣಗತ ಪ್ರತಿಮುಖವನ್ನು ನೋಡಿ ತಮ್ಮ ಮುಖರೀತಿ ಯನ್ನು ತಿಳಿದಂತೆ ಮುಖ್ಯಪ್ರಾಣನು ಶ್ರೀಹರಿಯನ್ನು ತಿಳಿಸಿಕೊಡುವವನು. ಅವನಂತೆ ಇದ್ದು, ಅವನ ಅಧೀನನಾಗಿರುವ ಮುಖ್ಯಪ್ರಾಣನಿಗೆ ಜೀವರಲ್ಲಿ ಸಮರಿಲ್ಲ. ಶ್ರೀರಮೆಗೆ ಪ್ರತಿಬಿಂಬಳಾದ ಭಾರತಿಯು, ಗರುಡ, ಶೇಷ, ರುದ್ರ, ಸುರೇಂದ್ರರಿಗೆ ಬಿಂಬನಾದ ಮುಖ್ಯಪ್ರಾಣನಂತೆಯೇ ತಾನೂ ಸೌಪರ್ಣಿ, ವಾರುಣಿ, ಪಾರ್ವತಿ, ಶಚ್ಯಾದಿಗಳಿಗೆ ಬಿಂಬಳಾಗಿರುವಳು. ಇಂತು ನರೋತ್ತಮ ಪರ್ಯಂತವಾಗಿರುವ ಸಾತ್ವಿಕ ಜೀವರು ಕ್ರಮವಾಗಿ ಸ್ವೋತ್ತಮರಿಗೆ ಶತಸಹಸ್ರಾದಿ ಗುಣಗಳಿಂದ ಕಡಿಮೆಯಾಗಿರುವರು. ಮುಕ್ತಿಯಲ್ಲಿಯೂ ತಾರತಮ್ಯವು ಉಂಟು.

ಶ್ರೀ ನಾರಾಯಣನು ವೇದಾದಿ ಸಚ್ಛಾಸ್ತ್ರದಲ್ಲಿ ಅನಂತ ಮಹಿಮನಾಗಿ ವರ್ಣಿತನಾಗಿರುವನು. ಕ್ಷರರೆನಿಸಿದ ಬ್ರಹ್ಮಾದಿ ಜೀವರಿಗೂ, ಅಕ್ಷರಗಳೆನಿಸಿದ ರಮೆಗೂ ಭಿನ್ನನೂ ಉತ್ತಮನೂ ಆಗಿರುವುದರಿಂದ ಶ್ರೀಹರಿಯನ್ನು ಪುರುಷೋತ್ತಮನೆಂಬು ವರು. ಅವನು ಮುಕ್ತರಿಂದಲೂ ಸೇವಿತ ಚರಣನಾಗಿರುವನು. ಸಂಸಾರ ಮುಕ್ತಿಯನ್ನು ಪಡೆದಮಾತ್ರಕ್ಕೆ ಬ್ರಹ್ಮಾದಿ ಜೀವರೆಂದಿಗೂ ಶ್ರೀಹರಿಗೆ ಸಮರಾಗಲಾರರು. ಅವರಿಗೆ ಜಗದ್ವ್ಯಾಪಾರದಲ್ಲಿ ಶಕ್ತಿ ಇಲ್ಲ. ಇಂದಿರೆಯು ಗೋವಿಂದನ ಸಮಗ್ರಾನಂದ, ಜ್ಞಾನ, ವೀರ್ಯ, ಸೌಂದರ್ಯ, ಧೈರ್ಯ, ಬಲೌದಾರ್ಯಾದಿ ಅನಂತಗುಣಗಳನ್ನೆಣಿಸುತ್ತ,

ಒಂದರಲ್ಲಿಯ ಅನಂತ ವಿಶೇಷಗಳನ್ನೂ ಗಣಿಸಿ ಮುಗಿಸಲಾರಳೆಂದಮೇಲೆ, ಇಂದಿರೆಯ ಕೃಪೆಯಿಂದ ಬಂದ ಬ್ರಹ್ಮರುದ್ರಾದಿ ಪದವಿ ಸ್ಥಿತರಾದ ಇತರ ಜೀವರು ಶ್ರೀಹರಿಯ ಗುಣಗಳ ಪರಿಮಿತಿಯನ್ನರಿತಿರುವರೇ ?

ಋಕ್, ಯಜುಸ್, ಸಾಮ, ಅಥರ್ವಣ ವೇದಗಳು, ಪಂಚಮ ವೇದವೆನಿಸಿದ ಭಾರತ, ಮಹಿದಾಸ ನಾಮಕ ವಿಷ್ಣುರಚಿತ ಪಂಚರಾತ್ರಾಗಮ, ಹಯಗ್ರೀವರೂಪ ಹರಿ ವಿರಚಿತ ಮೂಲ ರಾಮಾಯಣ, ವೇದಾರ್ಥ ನಿರ್ಣಾಯಕ ವೇದವ್ಯಾಸ ವಿರಚಿತ ಬ್ರಹ್ಮ ಸೂತ್ರಗಳು, ಇವುಗಳಿಗೆ ಅವಿರೋಧವಾದ ಅರ್ಥವನ್ನು ನಿರೂಪಿಸುವ ಭಾಗವತಾದಿ ಸಕಲ ಪುರಾಣಗಳೂ ಪರಮ ಪ್ರಮಾಣವೆನಿಸಿವೆ. ಶೈವಾದಿ ಪುರಾಣಗಳಲ್ಲಿ ಶಿವಾದಿ ಪಾರಮ್ಯವು ಹೇಳಿದಂತೆ ತೋರಿದರೂ, ಅವು ಆ ವಿಷಯದಲ್ಲಿ ನಂದಿ,ಕುಮಾರಾದಿಗಳಿಂದ ದುಷ್ಟಜನ ಮೋಹನಾರ್ಥವಾಗಿ ಹೇಳಲ್ಪಟ್ಟಿವೆ. ಆದುದರಿಂದ ಶಿವ-ಪಾರಮ್ಯಾದಿಗಳು ವೇದ(ವ್ಯಾಸ)ಸಮ್ಮತವಲ್ಲವೆಂದೇ ತಿಳಿಯಬೇಕು. ಇತರಾನುವಾದವನ್ನು ಮಾಡಿದ ವೇದವ್ಯಾಸರು ಅಲ್ಲಲ್ಲೇ ಆ ದುಷ್ಟಮತಗಳನ್ನು ಉಚಿತವಾಗಿ ನಿರಾಕರಿಸಿ ವಿಷ್ಣುಸರ್ವೋತ್ತಮತ್ವವನ್ನೇ ಸ್ವಮತವೆಂದು ಸಜ್ಜನರಿಗೆ ಸ್ಪಷ್ಟವಾಗಿ ನಿರೂಪಿಸಿರುವರು.

ಶ್ರೀಹರಿ ನಿರ್ಮಿತ ಜಗತ್ತು ಸತ್ಯವಾದದ್ದು. ಅವನಿಗೂ ಜೀವ ಜಡಗಳಿಗೂ ಇರುವ ಭೇದವೂ ಸತ್ಯವಾದದ್ದು. ಪಂಚಭೇದ ತಾರತಮ್ಯ ಜ್ಞಾನವೇ ಮೋಕ್ಷ ಸಾಧನವು. ಮನುಜೋತ್ತಮರು, ಚಕ್ರವರ್ತಿಗಳು, ಮನುಷ್ಯ ಗಂಧರ್ವರು, ದೇವ ಗಂಧರ್ವರು, ಚಿರಪಿತೃಗಳು, ಅಜಾನಜರು, ಕರ್ಮಜ ದೇವತೆಗಳು, ದೇವತೆಗಳು, ಬೃಹಸ್ಪತಿ, ಇಂದ್ರ, ರುದ್ರ (ಶೇಷ), ಸರಸ್ವತೀ, ವಾಯು (ಬ್ರಹ್ಮರು) ಕ್ರಮವಾಗಿ ಶತಗುಣಾಧಿಕರು. ಮುಕ್ತವಾಯುವೇ ಬ್ರಹ್ಮನು. ಬ್ರಹ್ಮನಿಗಿಂತಲೂ ಸಾವಿರ ಗುಣಗಳಿಂದ ರಮೆಯು ಹೆಚ್ಚು. ಆಕೆಗಿಂತಲೂ ಅನಂತಗುಣದಿಂದ ಅಧಿಕನು ಶ್ರೀ ನಾರಾಯಣನು. ಅವನಿಗೆ ಸಮರೇ ಇಲ್ಲ. ಅಧಿಕರಿನ್ನೆಲ್ಲಿ ? ಶ್ರೀಹರಿಗೆ ಸ್ವಗತ ಭೇದವಿಲ್ಲ. ಅವನ ಮಹಿಮೆಯ ಜ್ಞಾನವನ್ನು ಸಂಪಾದಿಸಿ ಶ್ರೀಪತಿಯಲ್ಲಿ ದೃಢವಾದ ಪ್ರೀತಿಯನ್ನು ಎಡೆಬಿಡದೆ, ಫಲ ಬೇಡದೆ ಮಾಡುವುದೇ ಭಕ್ತಿಯು. ಅಂತಹ ಭಕ್ತಿಯಿಂದಲೇ ಭಗವದತ್ಯರ್ಥ ಪ್ರಸಾದ. ಅದರಿಂದಲೇ ಸ್ವರೂಪಾನಂದಾವಿರ್ಭಾವ ರೂಪವಾದ ಮೋಕ್ಷ, ದಾನ, ತೀರ್ಥ, ತಪೋಯಜ್ಞಾದಿಗಳೆಲ್ಲವೂ ಹರಿಸೇವೆಗೆ ಅಂಗಗಳು ನಿಜ; ಆದರೆ ಭಕ್ತಿಯೇ ಮುಕ್ತಿಯನ್ನು ತಂದುಕೊಡುವ ಮುಖ್ಯಸಾಧನ. ಭಕ್ತಿಯಿಲ್ಲದ ದಾನಾದಿಗಳಿಂದ ಶ್ರೀ ಹರಿಯು ಪ್ರೀತನಾಗನು. ಭಕ್ತಿಯಂತೆ ಹರಿಪ್ರೀತಿ ಸಾಧನ ಇನ್ನೊಂದಿಲ್ಲ.

ತಾಮಸ ಜೀವರಿಗೆ ಭಕ್ತಿ ಹುಟ್ಟಲಾರದು. ಅವರು ಶ್ರೀಹರಿಯಲ್ಲಿ ಮತ್ತು ಹರಿಭಕ್ತರಲ್ಲಿ ದ್ವೇಷ ಮಾಡಿ, ಜ್ಞಾನಪ್ರಕಾಶದೂರರಾಗಿ ಕೊನೆಗೆ ತಮಸ್ಸನ್ನೇ ಹೊಂದುವರು. ಜೀವನೇ ದೇವನು ; ಜಗತ್ತು ಮಿಥ್ಯೆ ; ಹರಿಯು ನಿರ್ಗುಣನು. ಹರಿಗೆ

ಶಿವಾದಿಗಳಧಿಕರು ಅಥವಾ ಸಮರು ; ಹರಿಯ ಅವತಾರಗಳಲ್ಲಿ ಪರಸ್ಪರ ಭೇದವಿದೆ ; ವೇದಗಳು ಪ್ರಮಾಣವಲ್ಲ ; ಹರಿಗೂ ಅಜ್ಞಾನ ಬಂದು ಜೀವನಾದನು— ಎಂದು ಮೊದಲಾದ ವಿಷಯಗಳನ್ನು ಪ್ರತಿಪಾದಿಸುವ ಅಸುರ ಜೀವರು ನಿತ್ಯನರಕದಲ್ಲಿ ದುಃಖವನ್ನೇ ಹೊಂದುವರು.

ಶ್ರೀ ಹರಿಭಕ್ತರಲ್ಲಿ ಬ್ರಹ್ಮನಿಗೆ ಸಮರಿಲ್ಲ. ಮೂವತ್ತೆರಡು ಶುಭ ಲಕ್ಷಣಯುತ ರಾದವರೇ ಶ್ರೀ ಹರಿದರ್ಶಕ ಗುರುಗಳು. ಅಂತಹವರೆಂದರೆ ಶ್ರೀಭಾರತೀಪತಿಮುಖ್ಯ-ಪ್ರಾಣರೇ ಸರಿ. ಅನ್ಯರಲ್ಲ. ಅಂತಹ ಗುರುಗಳು ಸುಪ್ರಸನ್ನರಾಗಿ ನೀಡಿದ ಜ್ಞಾನವು ಮೋಕ್ಷಕಾರಣವಾಗುವುದು. ಸ್ವಯೋಗ್ಯ ಗುರುಗಳಿಂದ ಶ್ರೀಮಧ್ವಾಚಾರ್ಯರ ವರೆವಿಗೂ ಇರುವ ಗುರುಗಳೆಲ್ಲರು ಪರಮ ಮಾನ್ಯರು. ತಾರತಮ್ಯಕ್ಕನುಸರಿಸಿ ಅವರಲ್ಲಿ ನಾವು ಭಕ್ತಿಯನ್ನು ತೋರಿ, ಅವರನ್ನು ಸೇವಿಸಬೇಕು. ದೇವತೆಗಳು ಬ್ರಹ್ಮಪರ್ಯಂತ ವಾಗಿ ಆನಂದದಲ್ಲಿ ಹೆಚ್ಚಾಗಿರುವಂತೆ, ಅಸುರರು ಕಲಿ ಪರ್ಯಂತವಾಗಿ ದುಃಖದಲ್ಲಿ ಹೆಚ್ಚಾಗುತ್ತಲಿರುವರು. ಮನುಜ ಮಧ್ಯಮರು ನಿತ್ಯಸಂಸಾರಿಗಳಾಗಿ ಸದಾ ಸುಖ-ದುಃಖ-ಮಿಶ್ರವಾದ ಅನುಭವವುಳ್ಳವರಾಗಿರುವರು.

ಪ್ರಳಯಕಾಲದಲ್ಲಿ ಮಾನವ ಮುಕ್ತರು ದೇವತೆಗಳನ್ನು, ಅವರು ಇಂದ್ರನನ್ನು, ಆತನು ಶಂಕರನನ್ನು, ಶಂಕರನು ಬ್ರಹ್ಮನನ್ನು ಸೇರುವರು. ಆಗ ಬ್ರಹ್ಮನು ಎಲ್ಲರಿಂದ ಕೂಡಿ, ಶ್ರೀಹರಿಯ ಉದರದಲ್ಲಿ ಸೇರಿ ಮುಂದೆ ಮುಕ್ತನಾಗುವನು. ಆಗ ಸಾಧನ ಸಂಪೂರ್ತಿಯನ್ನು ಪಡೆದ ಜೀವರೆಲ್ಲ ಸ್ವಯೋಗ್ಯಾನಂದಾವಿರ್ಭೂತಿ ರೂಪ ಮೋಕ್ಷ ವನ್ನು ಪಡೆಯುವರು. ಮುಕ್ತರಿಗೆ ಪುನಃ ಜನನಮರಣಗಳಿಲ್ಲ. ಅವರು ಸ್ವೋತ್ತಮ ರನ್ನು ಅನುಸರಿಸಿರುವರು. ಸ್ವಾವರದಿಂದ ಪೂಜಿತರಾಗುವರು. ಅವರಿಗೆ ದುಃಖ ಅಜ್ಞಾನಾದಿ ದೋಷಗಂಧವೇ ಇರುವುದಿಲ್ಲ. ಇದೆಲ್ಲವೂ ಶ್ರೀಹರಿಪ್ರಸಾದದಿಂದಲೇ ಎಂದು ತಿಳಿದು ಮುಕ್ತಜೀವರು ಬ್ರಹ್ಮದೇವನ ದ್ವಾರಾ ಶ್ರೀ ವಾಸುದೇವನನ್ನು ಆರಾಧಿಸುವ ಆನಂದದಲ್ಲಿ ಮಗ್ನರಾಗಿರುವರು.

## ಭಾರತರಚನೋಪಕ್ರಮ

ಈ ಮೇಲ್ಕಂಡ ತತ್ತ್ವಗಳನ್ನೆಲ್ಲ ಮಹಾಭಾರತದಲ್ಲಿ ವೇದವ್ಯಾಸರು ಚೆನ್ನಾಗಿ ನಿರೂಪಿಸಿರುವರು. ಭಾರತವು ಸರ್ವವೇದಾದಿಶಾಸ್ತ್ರಗಳ ನಿರ್ಣಯವಾಗಿದೆ. ಶ್ರೀಕೃಷ್ಣ ನಿಗೆ ಭೀಮನಷ್ಟು ಪ್ರೀತಿಪಾತ್ರರಿನ್ನೊಬ್ಬರಿಲ್ಲ. ಭೀಮನು ಭೂಭಾರಹರಣಕಾರ್ಯದಲ್ಲಿ ಪ್ರಧಾನಾಂಗನಾಗಿರುವನು. ದೇವತೆಗಳಲ್ಲಿ ಬಲದಿಂದ ಯಾರು ಅಧಿಕರೋ ಅವರೇ ಜ್ಞಾನದಿಂದಲೂ ಅಧಿಕರು. ಅಸುರರಲ್ಲಿ ಹಾಗಲ್ಲ. ಅವರಿಗೆ ಸಮ್ಯಕ್ ಜ್ಞಾನವಿಲ್ಲ. ಬಲವಾದರೂ, ಆವೇಶಾದಿಗಳಿಂದ ವರಾದಿಗಳಿಂದ ಅಹಿತವಾಗಿರುವುದು. ಆದ್ದರಿಂದ ಭೀಮಸೇನನು ಬಲಜ್ಯೇಷ್ಠನೂ ಅಹುದು. ಗುಣಜ್ಯೇಷ್ಠನೂ ಅಹುದು. ಭಾರತದಲ್ಲಿ

ವಾಯುಜೀವೋತ್ತಮತ್ವವೂ, ಶ್ರೀಹರಿಸರ್ವೋತ್ತಮತ್ವವೂ ಪ್ರತಿಪಾದಿತವಾಗಿವೆ ಎಂದು ನಿರಾಗ್ರಹ ಮನಸ್ಕ ಸುಜನರಿಗೆ ಗೋಚರವಾಗದಿರದು.

ಮಹಾಭಾರತವು ನಾರಾಯಣನ ಕಥೆ ; ಅದನ್ನು ಹೇಳಲು ಕೇಳಲು ಅವನ ಪ್ರಸಾದ ಬೇಕು. ವ್ಯಾಸರೂಪಿಯಾದ ಸಾಕ್ಷಾನ್ನಾರಾಯಣನೇ ಭಾರತ ಕರ್ತನು. ಪುಂಡರೀಕಾಕ್ಷನಿಗಲ್ಲದೆ ಲಕ್ಷ ಶ್ಲೋಕದಿಂದ ಸುಂದರವಾದ ಭಾರತೇತಿಹಾಸ ರಚನೆ ಇನ್ನೊಬ್ಬನಿಗೆ ಶಕ್ಯವಾದೀತೇ ? ಭಾರತದಲ್ಲಿ ಪರ್ವ ಪರ್ವದಲ್ಲಿ ಶ್ರೀಕೃಷ್ಣನೆಂಬ ಮಧು ರಸವು ತುಂಬಿತುಳುಕುತ್ತಿದೆ. ಹಿಂದೆ ಶ್ರೀರಾಮನ ಸೇವೆಯನ್ನು ಹನುಮದ್ರೂಪಿಯಾಗಿ ಮಾಡಿದ ಮರುದ್ವಲ್ಲಭನೇ ಈಗ ಭೀಮನಾಗಿ ಶ್ರೀಕೃಷ್ಣಸೇವೆಯನ್ನು ಸಂಪೂರ್ಣವಾಗಿ ಮಾಡಿರುವನು. ಮುಂದೆ ಮಧ್ವನಾಗಿ ವ್ಯಾಸ ಸೇವೆಯನ್ನೂ ಮಾಡಿರುವನು. ಭೀಮನ ಭಕ್ತಿಯಲ್ಲಿ ಕಲಂಕವಿಲ್ಲ ; ಅನುಮಾನವಿಲ್ಲ. ಶ್ರೀಕೃಷ್ಣನು ಸಾಕ್ಷಾನ್ನಾರಾಯಣನೆಂಬ ದಿವ್ಯ ಜ್ಞಾನವು ಭೀಮನಿಗೆಂದೂ ಮರೆಯಾಗಿಲ್ಲ. ಭಕ್ತಿ, ಜ್ಞಾನ, ವೈರಾಗ್ಯ, ಮೇಧಾ, ಧೈರ್ಯ, ಸ್ಥೈರ್ಯ, ಯೋಗ, ಬಲ ಮೊದಲಾದ ಗುಣಗಳಿಗೆ ಭೀಮನು ಆಶ್ರಯನೆಂದು ಶ್ರೀಕೃಷ್ಣನೇ ಒಪ್ಪಿ ನುಡಿದಿರುವನು. ಅಜ್ಞಾನ, ಹರಿ ದ್ವೇಷಾದಿ ದುಃಖಸ್ವರೂಪನಾದ ಕಲಿಯನ್ನು ನಿಗ್ರಹಿಸಲು ಮುಖ್ಯ ವಾಯುವೇ ಸಮರ್ಥನು. ಕಲಿಸ್ವರೂಪನಾದ ದುಷ್ಟ ದುರ್ಯೋಧನನನ್ನು ಕೊಂದು, ತತ್ಫಲ ಸುಕೃತ ರಾಶಿಯನ್ನು ಶ್ರೀಕೃಷ್ಣನಿಗರ್ಪಿಸಿದ ಭೀಮಸೇನನು ಮುಖ್ಯಪ್ರಾಣನೇ ಸರಿ. ಯುಧಿಷ್ಠಿರನೇ 'ಎರಡು ಸೇನೆಗಳಲ್ಲಿ ನಮ್ಮ ಭೀಮಸೇನನಿಗೆ ಪಾಂಡಿತ್ಯದಲ್ಲಿ, ಪಟುತ್ವದಲ್ಲಿ, ಶೂರತ್ವದಲ್ಲಿ, ಬಲದಲ್ಲಿ ಸಮಾನರಾದವರು ಇಲ್ಲ' ಎಂದು ಸ್ಪಷ್ಟವಾಗಿ ಹೇಳಿರುವನು. ಜ್ಞಾನ, ವೀರ್ಯ, ಬಲಾದಿಗಳಲ್ಲಿ ಭೀಮನಾದಮೇಲೆ ದ್ರೌಪದಿಯು, ಅನಂತರದಲ್ಲಿ ಬಲರಾಮ, ಅಶ್ವತ್ಥಾಮ, ಅರ್ಜುನ, ದ್ರೋಣ, ಭೀಷ್ಮರು ಕ್ರಮವಾಗಿ ಕಡಿಮೆಯಾಗಿ ಶ್ರೀ ಹರಿ ಸೇವೆಯನ್ನು ಸ್ವಯೋಗ್ಯತಾನುಸಾರವಾಗಿ ಮಾಡಿರುವರು.

ಭೀಮಸೇನನೇ ಬಕ ಹಿಡಿಂಬಾದಿಗಳನ್ನು, ಕಿರ್ಮೀರನನ್ನು ಕೀಚಕನನ್ನು ಕೊಂದು ತನ್ನವರಿಗೆ ಬಂದ ಆಪತ್ತನ್ನು ಪಾರುಗಾಣಿಸಿದವನು. ಭೀಮಸೇನನೇ ಜಯದ್ರಥನನ್ನು ದ್ರೌಪದೀ ಪಾದಾಕ್ರಾಂತನನ್ನಾಗಿಸಿದುದು. ಭೀಮನೇ ಚಿತ್ರರಥನನ್ನು ಗೆದ್ದು ಕೌರವನನ್ನು ಮುಕ್ತನನ್ನಾಗಿ ಮಾಡಿದುದು. ಭೀಮನೇ ದುರ್ಯೋಧನ, ದುಶ್ಶಾಸನ ಹಂತಕರನ್ನು ಸಂಹರಿಸಿ ಕೃಷ್ಣೆಯ ದುಃಖಾಶ್ರುಗಳನ್ನು ಅಳಿಸಿದವನು. ಭೀಮಸೇನನೇ ಕೌರವ ಬಲದಲ್ಲಿ ಆರು ಅಕ್ಷೌಹಿಣಿಗಳ ಸೈನ್ಯವನ್ನು ನಾಶಪಡಿಸಿದವನು. ಜರಾಸಂಧನನ್ನು ಕೊಂದು ಅಣ್ಣನಿಗೆ ರಾಜಸೂಯಯಾಗ ಸೌಕರ್ಯವನ್ನೊದಗಿಸಿದವನೂ ಭೀಮಸೇನನೇ. ಇಂತು ಭೀಮನ ಅಪಾರ ಸೇವೆಯಿಂದ ಶ್ರೀಕೃಷ್ಣನು ಪ್ರೀತನಾಗಿ, ಮುಂದೆ ಮಧ್ವನಾಗಿ, ಜ್ಞಾನಸ್ಥಾಪನೆಗೈಯುವ ಸಾಧಾನಾವಕಾಶವನ್ನು ಭಕ್ತಸತ್ತಮನಿಗಿತ್ತನೆಂದರೆ ಆಶ್ಚರ್ಯವೇನು ?

ಇಂತಹ ಭಾರತವನ್ನು ಶ್ರೀ ವೇದವ್ಯಾಸರು ರಚಿಸಿ, ಅದನ್ನು ವೈಶಂಪಾಯನ ಶುಕಾದಿಗಳಿಗೆ ಉಪದೇಶಿಸಿದರು. ವೈಶಂಪಾಯನನು ಜನಮೇಜಯನಿಗೆ ಅದನ್ನು ಹೇಳಿದನು. ಆಗ ಅಲ್ಲಿದ್ದು ಭಾರತವನ್ನು ಕೇಳಿ ತಿಳಿದ ಸೂತನು ನೈಮಿಷಾರಣ್ಯ ವಾಸಿಗಳಾದ ಶೌನಕಾದಿಗಳಿಗೆ ಅದನ್ನು ವಿಸ್ತಾರವಾಗಿ ರೂಪಿಸಿದನು.

ಉಗ್ರಶ್ರವ ಸೂತನು ನೈಮಿಷಾರಣ್ಯದ ಋಷ್ಯಾಶ್ರಮವನ್ನು ಸೇರಿ ಶೌನಕಾದಿ ಮುನಿಗಳಿಗೆ ವಿನಯದಿಂದ ಶಿರಬಾಗಿ ನಮಿಸಿದನು ಮತ್ತು ಅವರಿತ್ತ ಆಸನದಲ್ಲಿ ಕೂತು ಅವರ ತಪಸ್ಸಿದ್ಧಿಯನ್ನು ವಿಚಾರಿಸಿದನು. ಕುಲಪತಿಯಾದ ಶೌನಕನು 'ಸೂತ ನನ್ನು ಎಲ್ಲಿಂದ ಬಂದೆ ? ಇಷ್ಟು ಕಾಲ ಎಲ್ಲಿ, ಹೇಗೆ ಕಳೆದೆ' ಎಂದು ಕೇಳಿದನು.

'ಜನಮೇಜಯನ ಸರ್ಪಯಾಗವನ್ನು ಕಂಡೆ; ಅದನ್ನು ನಿವಾರಿಸಿದ ಆಸ್ತಿಕ ನನ್ನು ಕಂಡೆ; ಅಲ್ಲಿ ಋಷಿರಾಜನ್ಯರ ಸಭೆಯಲ್ಲಿ ಕೃಷ್ಣದ್ವೈಪಾಯನ ಭಗವಂತನಿಂದ ರಚಿತವಾದ ಭಾರತವನ್ನು ಅವರ ಶಿಷ್ಯನಾದ ವೈಶಂಪಾಯನನು ಜನಮೇಜಯನಿಗೆ ಉಪದೇಶಮಾಡಿದನು; ಅದನ್ನು ಕೇಳಿದೆ. ಅನೇಕ ತೀರ್ಥಗಳಲ್ಲಿ ಮಿಂದು, ಸ್ಯಮಂತ ಪಂಚಕವೆಂಬ ಪುಣ್ಯಕ್ಷೇತ್ರವನ್ನು ಸೇವಿಸಿ ಬಂದೆ. ಅಲ್ಲಿಯೇ ಅಲ್ಲವೇ ಹಿಂದೆ ಭಾರತ ಯುದ್ಧವಾದುದು ? ಆ ಪುಣ್ಯ ಸರೋವರಗಳಲ್ಲಿ ಸ್ನಾನಮಾಡಿ, ಕ್ರಮವಾಗಿ ಕ್ಷೇತ್ರ ಗಳನ್ನು ನೋಡಿಕೊಂಡು, ಇಲ್ಲಿಗೆ ಬಂದೆ. ತಾವು ಪೂಜ್ಯರು. ನಿಮ್ಮನ್ನು ನೋಡಿ ಧನ್ಯನಾದೆ' ಎಂದ ಸೂತನ ಮಾತನ್ನು ಕೇಳಿ ಶೌನಕನು ಇಂತೆಂದನು.

'ವೇದವ್ಯಾಸರು ನಿರ್ಮಿಸಿದ ಭಾರತೇತಿಹಾಸವು ಪಂಚಮ ವೇದವೆನಿಸಿದೆ. ಅನೇಕ ವಿಚಿತ್ರ ತತ್ತ್ವಾರ್ಥಗಳಿಂದ ವಿಲಸಿತವು, ವೇದಾರ್ಥಪ್ರತಿಪಾದಕವು, ಧರ್ಮ ಸ್ವರೂಪ ನಿರೂಪಕವು, ವಿವಿಧಾಖ್ಯಾನ ಮನೋಹರವು, ರಾಜಧರ್ಮಾದಿ ಸಕಲಧರ್ಮ ಸ್ವರೂಪ ನಿರೂಪಕವು ಆದ ಭಾರತವನ್ನು ನಮಗೆ ಹೇಳು. ನೀತಿಶಾಸ್ತ್ರವೆಂದು ಬೃಹಸ್ಪತ್ಯಾದಿಗಳು, ಧರ್ಮಶಾಸ್ತ್ರವೆಂದು ಪರಾಶರಾದಿಗಳು, ವೇದಾಂತವೆಂದು ವ್ಯಾಸಾದಿಗಳು, ಇತಿಹಾಸ ವೆಂದು ಮನ್ವಾದಿಗಳು, ಪುರಾಣಸಂಗ್ರಹವೆಂದು ಪೌರಾಣಿಕರು, ತಿಳಿದು ನಿರೂಪಿಸುವ ಭಾರತವು ಬಹು ದುರ್ಗಮವಾಗಿದೆ. ಅದನ್ನು ವೇದವ್ಯಾಸರ ದಯ ದಿಂದ, ನಿಮ್ಮ ತಂದೆಯಾದ ರೋಮಹರ್ಷಣನು ತಿಳಿದಂತೆ, ನೀನೂ ತಿಳಿದಿರುವೆ. ನಮಗೆ ಈ ಭಾರತವನ್ನು ಕೇಳಬೇಕೆಂದೆನಿಸಿದೆ. ದಯಮಾಡಿ ನಮಗದನ್ನು ಹೇಳು.'

ಆಗ ಸೂತನು ಗುಣಪೂರ್ಣನು, ವೇದಾದಿ ಸರ್ವ ಸಚ್ಛಾಸ್ತ್ರಪ್ರತಿಪಾದ್ಯನು, ಚತುರ್ವಿಧನಾಶರಹಿತನು, ಚರಾಚರಜಗದ್ವಲ್ಲಭನು, ಜೀವಜಡವಿಲಕ್ಷಣನು,ಬ್ರಹ್ಮಾದಿ ಸರ್ವದೇವ ವಂದ್ಯನು, ಲಕ್ಷ್ಮೀಪತಿಯು ಆದ ಶ್ರೀನಾರಾಯಣನಿಗೆ ನಮಸ್ಕರಿಸಿ, ಲೋಕಹಿತಕ್ಕಾಗಿ ಶ್ರೀನಾರಾಯಣಾವತಾರರಾದ ಶ್ರೀ ವೇದವ್ಯಾಸರು ರಚಿಸಿದ ಭಾರತೇತಿಹಾಸವನ್ನು ಹೇಳಲು ಪ್ರಾರಂಭಿಸಿದನು.

ಜಗಜ್ಜನ್ಮಾದಿಕಾರಣನಾದ ಶ್ರೀ ನಾರಾಯಣನ ನಾಭಿಕಮಲದಿಂದ ಚತು- ರ್ಮುಖನು ಜನಿಸಿದನು. ಅವನಿಂದ ರುದ್ರಾದಿಗಳು, ಕ್ರಮವಾಗಿ ಇಂದ್ರ-ಕಾಮರು,

ದಕ್ಷಾದಿ ಪ್ರಜಾಪತಿಗಳು, ಅಷ್ಟ ವಸುಗಳು, ಏಕಾದಶ ರುದ್ರರು ದ್ವಾದಶಾದಿತ್ಯರು ಜನಿಸಿದರು. ಸೂರ್ಯನಿಗೆ ಮನುರಾಜನುದಿಸಿದನು. ಮನುಪುತ್ರನಾದ ಇಕ್ಷ್ವಾಕುವಿಗೆ ವಿಕುಕ್ಷಿ, ಅವನ ವಂಶದಲ್ಲಿ ಅನೇಕರು ಜನಿಸಿದರು. ಇವರುಸೂರ್ಯವಂಶ ಜಾತರೆನಿಸಿದರು.

ವೈವಸ್ವತಮನುಪುತ್ರನಾದ ಸುದ್ಯುಮ್ನನು, ಶಿವ ಶಾಪದಿಂದ 'ಇಳೆ' ಎಂಬ ತರುಣಿಯಾದಾಗ ಅವಳನ್ನುಸ್ವೀಕರಿಸಿದ ಬುಧನಿಂದ ಚಂದ್ರವಂಶವು ವಿಸ್ತೃತವಾಯಿತು. ಆ ವಂಶದಲ್ಲಿ ಯಯಾತಿ, ಯದು, ಪುರು ಮುಂತಾದ ರಾಜರ್ಷಿಗಳು ಹುಟ್ಟಿದರು. ಈ ವಂಶದಲ್ಲಿ ಯದುರಾಜನಿಂದ ಜನಿಸಿದವರು ಯಾದವರಾದರು. ಪುರುರಾಜನಿಂದ ಬಂದವರು ಪೌರವರಾದರು. ಅವರ ಕಥೆಯೇ ಭಾರತವೆಂದು ಖ್ಯಾತವಾಯಿತು.

ನಾರಾಯಣಂ ಸುರಗುರುಂ | ನಾರಾಯಣಂ ನಮಸ್ಕೃತ್ಯ || ಎಂಬುವಲ್ಲಿಂದಲೇ ಭಾರತದ ಪ್ರಾರಂಭವಾಯಿತೆಂದು ಕೆಲವರು ಪೇಳುವರು. ಕೆಲವರು ಆಸ್ತಿಕಚರಿತವೇ ಭಾರತದ ಆರಂಭವೆನ್ನುವರು. ಇನ್ನು ಕೆಲವರು ಉಪರಿಚರ ವಸು ಚರಿತವೇ ಭಾರತದ ಆದಿ ಎನ್ನುವರು. ಅದಲ್ಲ. ಉಪರಿಚರನೆಂದರೆ ಎಲ್ಲರಿಗೂ ಮೇಲಾಗಿ ಚರಿಸುವ ಶ್ರೀವಿಷ್ಣುವೆಂದರ್ಥವು. ಅವನನ್ನು ಭಾರತದ ಸ್ವರ ವರ್ಣ ವಾಕ್ಯಾತ್ಮಕ ಸರ್ವ ಶಬ್ದಗಳೂ ಮುಖ್ಯವಾಗಿ ಪ್ರತಿಪಾದಿಸುತ್ತಿವೆ. ಮನು ಎಂದರೆ ಧರ್ಮ, ಭಕ್ತಿ, ಶ್ರವಣ ಮನನ, ಧ್ಯಾನ, ಶೀಲ, ವಿನಯ, ವಿಷ್ಣುಪೂಜಾ, ವೇದಾಧ್ಯಯನ ಮೊದಲಾದ ಭಾಗವತ ಧರ್ಮಗಳನ್ನು ಭಾರತವು ಸರ್ವತ್ರ ಸಜ್ಜನ ಕರ್ತವ್ಯವೆಂಬುದು ಎತ್ತಿ ತೋರಿಸುವುದರಿಂದ ಅದನ್ನು ಮನ್ವಾದಿ ಎಂಬುವರು. ಪರದೇವನು ಶ್ರೀಕೃಷ್ಣನು. ಅವನೇ ನಮಗೆ ರಕ್ಷಕನಾಗಿ ಅಸ್ತಿ = ಇದ್ದಾನೆ ಎಂದು ತಿಳಿದ ಪಾಂಡವರ ಕಥೆಯಾದುದ ರಿಂದ ಭಾರತವು ಆಸ್ತಿಕಾದಿ ಎನಿಸಿಕೊಂಡಿದೆ. ಸೃಷ್ಟಿ, ಪ್ರತಿಸೃಷ್ಟಿ, ಮನ್ವಂತರ, ಧರ್ಮ-ಕಾಮ-ಅರ್ಥ ಶಾಸ್ತ್ರಗಳು, ಮೋಕ್ಷ, ಧರ್ಮ, ಲೋಕಯಾತ್ರಾ ವಿಧಾನ ಮೊದಲಾದ ಸರ್ವ ವಿಷಯವನ್ನು ಸರ್ವಜ್ಞರಾದ ವೇದವ್ಯಾಸರು ಭಾರತದಲ್ಲಿ ಅನಿತರ ಸಾಧಾರಣವಾಗಿ ನಿರೂಪಿಸಿರುವರು.

## ಭಾರತ ಮಹಿಮೆ

ಅದನ್ನರಿತು ಒಂದು ದಿನ ಶ್ರೀ ಚತುರ್ಮುಖನು ವೇದವ್ಯಾಸರ ಆಶ್ರಮಕ್ಕೆ ತಾನಾಗಿ ಬಂದನು. ಬಂದು ಗೋವಿಂದನಾದ ಪಾರಾಶರ್ಯನಿಗೆ ವಂದಿಸಿ "ಸ್ವಾಮಿನ್! ಪರಮಪವಿತ್ರವು, ವೇದಾರ್ಥ ಪರಿಬೃಂಹಿತವು, ವೇದಾಗಮ್ಯ ಕೇವಲ ನಾರಾಯಣ ಬುದ್ಧಿ ಗೋಚರಾರ್ಥ ಸಂಕಲಿತವು, ಜರಾ ಮೃತ್ಯು ಜರಾ ವ್ಯಾಧಿ ಮೋಚಕವು, ಚಾತುರ್ವರ್ಣ್ಯ ವಿವಿಧ ಧರ್ಮ ಮರ್ಮ ಬೋಧಕವು, ತೀರ್ಥಮಹಿಮಾ ಕೀರ್ತನವು, ಲೋಕಯಾತ್ರಾಲಕ್ಷಣ ಮೊದಲಾದ ಸರ್ವವಿಷಯನಿರೂಪಕವೂ ಆದ ಭಾರತ ವನ್ನು ರಚಿಸಿರುವೆ. ಇದನ್ನು ಬರೆದಿರುವುದವಶ್ಯವಾಗಿದೆ. ಇದರಿಂದ ಸಜ್ಜನರಿಗೆ

ಉಪಕಾರವಾಗುತ್ತದೆ. ದೇವಾ ! ಶ್ರೀ ಭಾರತವನ್ನು ಬರೆಯ[illegible] ಶ್ರೀ ಗಣೇಶನೇ ಸಮರ್ಥನಿರುವನು" ಎಂದು ವಿಜ್ಞಾಪಿಸಿ, ಬ್ರಹ್ಮನು ಅಂತರ್ಹಿತನಾದನು. ವ್ಯಾಸರು ಗಣೇಶನನ್ನು ಸ್ಮರಿಸಿದರು. ವಿಘ್ನರಾಜನು ಬಂದು ವಂದಿಸಿ, ಈ ವ್ಯಾಸರ ಅಪ್ಪಣೆಯಂತೆ ಭಾರತವನ್ನು ಬರೆಯಲು ತೊಡಗಿ ಇಂತೆಂದನು. "ಸರ್ವಜ್ಞಪ್ರಭೋ ! ನನ್ನ ಲೇಖನಿ ನಿಲ್ಲದಂತೆ ಶ್ಲೋಕಗಳನ್ನು ಬೇಗಬೇಗನೆ ನೀನು ಹೇಳುವೆಯಾ ?" ಆ ಮಾತನ್ನು ಕೇಳಿ ನಸುನಕ್ಕು ಸತ್ಯವತೀ ಸುತರು "ಆಗಲಿ ! ಶ್ಲೋಕಗಳ ಅರ್ಥವನ್ನು ತಿಳಿದು, ನೀನು ಮುಂದೆ ಬರೆಯುತ್ತ ಹೋಗು" ಎಂದರು. ಗಣೇಶನು ಸಮ್ಮತಿಸಿ, ಅಂತೆಯೇ ವ್ಯಾಸಾನುಗ್ರಹದಿಂದ ಶ್ರೀ ಭಾರತವನ್ನೆಲ್ಲ ಬರೆದಿಟ್ಟನು. ಅದರಲ್ಲಿ ಎಂಟು ಸಾವಿರದ ಎಂಟು ನೂರು ಶ್ಲೋಕಗಳನ್ನು ಗ್ರಂಥ ಗ್ರಂಥಿಗಳೆಂಬುವರು. ಆ ಶ್ಲೋಕಗಳನ್ನು ಅರಿತು ಲಿಖಿಸಲು ಗಣೇಶನಿಗೆ ಕಾಲ ವಿಲಂಬವಾದಾಗ, ವ್ಯಾಸರ ವಚನಪ್ರವಾಹವು ಮುಂದೆ ಸಾಗಿಹೋಗುತ್ತಿತ್ತು. ಆ ಗ್ರಂಥಿ ಶ್ಲೋಕಗಳ ಅರ್ಥವನ್ನು ಪೂರ್ಣವಾಗಿ ವ್ಯಾಸರೇ ಬಲ್ಲರು. ಶುಕನೂ ಸ್ವಯೋಗ್ಯವಾಗರಿತಿಹನು. ಕ್ರಮವಾಗಿ ಸಂಜಯಾದಿಗಳೂ ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಅರಿತಿಹರು.

ಭಾರತಕಲ್ಪವೃಕ್ಷದ ಬೀಜವು ಸಂಗ್ರಹಾಧ್ಯಾಯವು. ಪೌಲೋಮಾಸ್ತೀಕ ಪರ್ವಗಳು ಬೇರುಗಳು. ಆದಿಪರ್ವವೇ ಅಂಕುರ ವಿಸ್ತಾರ. ಸಭಾಪರ್ವವು ವಿಟಂಕವಾಗಿದೆ. ಅರಣ್ಯಪರ್ವವು ಬುಡವಾಗಿದೆ. ಅದರ ಸಾರವೇ ವಿರಾಟೋದ್ಯೋಗ ಪರ್ವಗಳು. ಭೀಷ್ಮಪರ್ವವು ಕೊಂಬೆಯಾದರೆ, ದ್ರೋಣಪರ್ವವು ರೆಂಬೆಯಾಗಿದೆ. ಕರ್ಣಪರ್ವವು ಪುಷ್ಪವು. ಶಲ್ಯಪರ್ವವು ಗಂಧವು. ಸ್ತ್ರೀಪರ್ವವು, ಇಷೀಕಪರ್ವವು ನೆರಳಾಗಿವೆ. ಶಾಂತಿಪರ್ವವೇ ಮಹಾ ಫಲವು. ಅಶ್ವಮೇಧಪರ್ವವು ಅಮೃತರಸವಾಗಿದೆ. ಆಶ್ರಮವಾಸಪರ್ವವು ಆ ಗಿಡದ ಸಂಶ್ರಯ ಸ್ಥಾನವಾಗಿರಲು, ಮೌಸಲವು ಶಾಖಾಂತವಾಗಿದೆ. ಸ್ವರ್ಗಾರೋಹಣ ಮಹಾಪ್ರಸ್ಥಾನಗಳು ಪುಷ್ಪ ಫಲಗಳಂತೆ ವಿರಾಜಿಸುತ್ತಿವೆ. ಈ ಕಲ್ಪವೃಕ್ಷವನ್ನಾಶ್ರಯಿಸಿ ಲೋಕದ ಸುಜನರು ಸರ್ವ ಪುರುಷಾರ್ಥಗಳನ್ನು ಪೊಂದುತ್ತಿರುವರು.

ಶ್ರೀ ವ್ಯಾಸರು, ವಾಸುದೇವ ಮಹಿಮಾ ವಿಸ್ತಾರ ಪ್ರಸ್ತಾಪಕವಾದ ಭಾರತವನ್ನು ರಚಿಸಿ, ಇದನ್ನು ಪುತ್ರನಾದ ಶುಕನಿಗೆ ಹೇಳಿದರು. ಅರುವತ್ತು ಲಕ್ಷ ಗ್ರಂಥ ಸಂಖ್ಯೆಯುಳ್ಳ ಭಾರತವನ್ನು ಮೂವತ್ತು ಲಕ್ಷ ಶ್ಲೋಕಗಳಲ್ಲಿ ಸಂಗ್ರಹಿಸಿ ನಾರದನು ದೇವಲೋಕದಲ್ಲಿ ಪಾಡಿದನು. ಅದರಲ್ಲಿ ಹದಿನೈದು ಲಕ್ಷ ಸಂಗ್ರಹವನ್ನು ದೇವ-ಲಾಸಿತನು ಪಿತೃಲೋಕದಲ್ಲಿ ಹೇಳಿದನು. ಹದಿನಾಲ್ಕು ಲಕ್ಷ ಶ್ಲೋಕಗಳನ್ನು ಶುಕನು ಗಂಧರ್ವಾದಿಗಳಿಗೆ ಉಪದೇಶಿಸಿದನು. ಒಂದು ಲಕ್ಷ ಶ್ಲೋಕಗಳಲ್ಲಿ ವೈಶಂಪಾಯನನು ಜನಮೇಜಯನನ್ನುದ್ದೇಶಿಸಿ, ಮನುಷ್ಯಲೋಕದಲ್ಲಿ ಭಾರತವನ್ನು ಪ್ರಕಟಿಸಿದನು.

ದುರ್ಯೋಧನನು ಕ್ರೋಧಮಯ ಮಹಾವೃಕ್ಷವು. ಕರ್ಣನು ಅದರ ಬುಡವು. ಶಕುನಿ ಕೊಂಬೆಗಳು. ದುಶ್ಶಾಸನನೇ ಫಲಪುಷ್ಪಗಳು. ಗಿಡದ ಬೇರಿನಂತೆ ಧೃತರಾಷ್ಟ್ರನು.

ಧರ್ಮರಾಜನು ಧರ್ಮಮಯ ಮಹಾವೃಕ್ಷವು. ಭೀಮಸೇನನು ಅದರ ಬುಡವು. ಅರ್ಜುನನು ಕೊಂಬೆಗಳು. ನಕುಲ ಸಹದೇವರು ಪುಷ್ಪ ಫಲಗಳು. ಈ ಗಿಡದ ಬೇರಿನಂತೆ ಶ್ರೀ ಕೃಷ್ಣನು ಮತ್ತು ವೇದಗಳು, ಬ್ರಾಹ್ಮಣರು.

ವೇದಗಳನ್ನು ತಿಳಿಯಬೇಕಾದರೆ ಇತಿಹಾಸ ಪುರಾಣಗಳನ್ನು ಚೆನ್ನಾಗಿ ಅರಿತಿರಬೇಕು. ವ್ಯಾಖ್ಯಾನರೂಪವಾದ ಇತಿಹಾಸ ಪುರಾಣಗಳನ್ನರಿಯದೆ, ವೇದವನ್ನು ಉಪದೇಶಿಸಲು ಹೋದ ಮೂಢನನ್ನು ನೋಡಿ ವೇದವು "ಇವನು ನನ್ನನ್ನು ಅಪಾರ್ಥದಿಂದ ಕೆಡಿಸುವ"ನೆಂದು ನಡುಗುವದು. ವೇದಾರ್ಥವನ್ನು ಭಾರತದಿಂದಲೇ ತಿಳಿಯಬಹುದಾಗಿದೆ. ವೇದಾದಿ ಸರ್ವಶಾಸ್ತ್ರಗಳಿಗೂ ಅರ್ಥತಃ ಶಬ್ದತಃ ಭಾರತರವಾಗಿರುವುದರಿಂದಲೇ ಮಹಾಭಾರತವೆಂದು ಖ್ಯಾತವಾಗಿರುವ ಈ ಗ್ರಂಥವನ್ನರಿತವನು ಸರ್ವ ಪಾಪಗಳಿಂದಲೂ ಮುಕ್ತನಾಗುವನು.

ತ್ರೇತಾ, ದ್ವಾಪರಗಳ ಸಂಧಿಕಾಲದಲ್ಲಿ ಶ್ರೀಹರಿಯು ಪರಶುರಾಮನಾಗಿ ಅವತರಿಸಿ ಸಕಲ ದುಷ್ಟ ಕ್ಷತ್ರಿಯರನ್ನು ಸಂಹರಿಸಿ, ಅವರ ರಕ್ತದಿಂದ ಕುರುಕ್ಷೇತ್ರದಲ್ಲಿ ಐದು ಮಡುವುಗಳನ್ನು ನಿರ್ಮಿಸಿ, ತನ್ನ ಪಿತೃಗಳಿಗೆ ತರ್ಪಣವನ್ನಿತ್ತು, ಸಂತುಷ್ಟರಾದ ಪಿತೃದೇವತೆಗಳ ಪ್ರಸಾದದಿಂದ ತಾನು ಮಾಡಿದ ಕ್ಷತ್ರವಧ ರೂಪ ಪಾಪದಿಂದ ಮುಕ್ತನಾದನು. ಇಂತು ನಿತ್ಯಶುದ್ಧನಾದ ಶ್ರೀ ಭಾರ್ಗವನು ತನ್ನ ವರದ ನೆಪದಿಂದ ಆ ಸ್ಯಮಂತಪಂಚಕವು ಕ್ಷೇತ್ರರಾಜವಾಗುವಂತೆ ಮಾಡಿದನು. ದ್ವಾಪರ ಕಲಿಗಳ ಸಂಧಿಯಲ್ಲಿ ಆ ಕ್ಷೇತ್ರದಲ್ಲಿ ಕುರು ಪಾಂಡವ ಯುದ್ಧವು ನಡೆಯಿತು. ಹದಿನೆಂಟು ಅಕ್ಷೌಹಿಣೀ ಸೈನ್ಯ ನಾಶವಾಗಿ ಭೂ ಭಾರವು ಅಳಿಯಿತು.

೨೧೮೭೦ ರಥಗಳು, ೨೧೮೭೦ ಗಜಗಳು, ೬೫೬೧೦ ತುರಗಗಳು, ೧೦೯೩೫೦ ಪದಾತಿ ಭಟರು ಕಲೆತು ಒಂದಕ್ಷೌಹಿಣಿ ಸೈನ್ಯವೆನಿಸುವುದು. ಕೌರವರು ಇಂದ್ರಿಯ ಮನೋರೂಪವಾದ ಹನ್ನೊಂದಕ್ಷೌಹಿಣಿಯನ್ನು ತಂದರು. ಪಾಂಡವರು ಇಂದ್ರಿಯ ಮನೋಬುದ್ಧಿರೂಪ ಏಳಕ್ಷೌಹಿಣಿಯಿಂದ ಪಾರ್ಥಸಾರಥಿಯನ್ನು ಕೂಡಿ ಬಂದರು. ಯುದ್ಧವು ೧೮ ದಿನ ನಡೆಯಿತು. ಭೀಷ್ಮನು ಹತ್ತು ದಿನ, ದ್ರೋಣನು ಐದು ದಿನ ಕರ್ಣನು ಎರಡು ದಿನ, ಶಲ್ಯನು ಅರ್ಧ ದಿನ, ದುರ್ಯೋಧನನು ಅರ್ಧ ದಿನ, ಇಂತು ಹದಿನೆಂಟು ದಿನದ ಯುದ್ಧದಲ್ಲಿ ಕೌರವ ಸೇನಾಪತಿಗಳಾಗಿ ಹೋರಾಡಿ ಮಡಿದರು. ಧರ್ಮಕ್ಕೆ ಜಯವಾಯಿತು.

## ಪರ್ವ ಸಂಗ್ರಹ

### ಭಾರತದಲ್ಲಿ ಹದಿನೆಂಟು ಪರ್ವಗಳು (ವಿವರ)

| ಸಂಖ್ಯೆ | ಪರ್ವ | ಅನುಪರ್ವ | ಅಧ್ಯಾಯ | ಶ್ಲೋಕ ೧ | ಶ್ಲೋಕ ೨ ಪಾಠಾಂತರ |
|---|---|---|---|---|---|
| ೧ | ಆದಿಪರ್ವ | ೧೮ | ೨೨೮ | ೮೮೮೪ | ೯೯೮೪ |
| ೨ | ಸಭಾಪರ್ವ | ೯ | ೭೮ | ೨೫೧೧ | ೪೩೧೧ |
| ೩ | ಅರಣ್ಯಪರ್ವ | ೧೬ | ೨೬೯ | ೧೧೬೬೪ | ೧೩೬೬೪ |
| ೪ | ವಿರಾಟಪರ್ವ | ೪ | ೬೭ | ೨೦೫೦ | ೩೫೦೦ |
| ೫ | ಉದ್ಯೋಗಪರ್ವ | ೭ | ೧೮೬ | ೬೬೯೮ | ೬೯೯೮ |
| ೬ | ಭೀಷ್ಮಪರ್ವ | ೫ | ೧೧೭ | ೫೮೮೪ | ೫೮೮೪ |
| ೭ | ದ್ರೋಣಪರ್ವ | ೮ | ೧೭೦ | ೮೯೦೯ | ೧೦೯೧೯ |
| ೮ | ಕರ್ಣಪರ್ವ | ೮ | ೬೯ | ೪೯೬೪ | ೪೯೦೦ |
| ೯ | ಶಲ್ಯಪರ್ವ | ೪ | ೫೯ | ೩೨೨೦ | ೩೨೨೦ |
| ೧೦ | ಸೌಪ್ತಿಕಪರ್ವ | ೩ | ೧೮ | ೮೭೦ | ೨೮೭೪ |
| ೧೧ | ಸ್ತ್ರೀಪರ್ವ | ೪ | ೨೭ | ೭೭೫ | ೧೭೭೫ |
| ೧೨ | ಶಾಂತಿಪರ್ವ | ೪ | ೩೨೯ | ೧೪೭೨೫ | ೧೪೫೨೫ |
| ೧೩ | ಆನುಶಾಸನಿಕಪರ್ವ | ೨ | ೧೪೬ | ೮೦೦೦ | ೧೨೦೦೦ |
| ೧೪ | ಅಶ್ವಮೇಧಪರ್ವ | ೨ | ೧೦೩ | ೩೩೨೦ | ೪೪೨೦ |
| ೧೫ | ಆಶ್ರಮವಾಸಪರ್ವ | ೩ | ೪೨ | ೧೫೦೬ | ೧೧೦೬ |
| ೧೬ | ಮೌಸಲಪರ್ವ | ೧ | ೮ | ೩೨೦ | ೩೦೦ |
| ೧೭ | ಮಹಾಪ್ರಸ್ಥಾನಿಕಪರ್ವ | ೧ | ೩ | ೩೨೦ | ೧೨೦ |
| ೧೮ | ಸ್ವರ್ಗಾರೋಹಣಪರ್ವ | ೧ | ೫ | ೨೦೯ | ೨೦೦ |
| | ಹರಿವಂಶ ಭವಿಷ್ಯ | | | ೧೨೦೦೦ | |
| | ಮೊತ್ತ | ೧೦೦ | ೧೫೨೪ | ೯೬೫೨೯ | ೧೦೦೬೦೦ |

ಶ್ರೀ ಭಾರತದಲ್ಲಿ ಒಂದು ನೂರು ಅನುಪರ್ವಗಳಿವೆ. ಪೌಷ್ಯ, ಪೌಲೋಮ, ಆಸ್ತಿಕ, ಅಂಶಾವತರಣ, ಸಂಭವ, ಜತುಗೃಹ ದಾಹ, ಹೈಡಿಂಬ, ಬಕ ವಧ, ಚೈತ್ರರಥ .ದ್ರೌಪದೀ ಸ್ವಯಂವರ, ವೈವಾಹಿಕ, ವಿದುರಾಗಮನ, ರಾಜ್ಯಾರ್ಧಲಾಭ, ಅರ್ಜುನ ತೀರ್ಥಯಾತ್ರಾ, ಸುಭದ್ರಾ ಕಲ್ಯಾಣ, ಹರಿಣ ಹಾರಿಕ, ಖಾಂಡವ ದಹನ, ಮಯ ದರ್ಶನ (ಆದಿಪರ್ವ) ಸಭಾ ನಿರ್ಮಾಣ, ಮಂತ್ರ ಪರ್ವ, ಜರಾಸಂಧ ವಧ,

ದಿಗ್ವಿಜಯ, ರಾಜಸೂಯ, ಅರ್ಘ್ಯಾಭಿಹರಣ, ಶಿಶುಪಾಲ ವಧ, ದ್ಯೂತ, ಅನು ದ್ಯೂತ, (ಸಭಾಪರ್ವ); ಅರಣ್ಯ, ಕಿರ್ಮೀರ ವಧ, ಇಂದ್ರಕೀಲಾಭಿಗಮನ, ಕೈರಾತ, ಧರ್ಮಜ ತೀರ್ಥಯಾತ್ರ, ಜಟಾಸುರ ವಧ, ಯಕ್ಷ ಯುದ್ಧ, ಅಜಗರ, ಮಾರ್ಕಂಡೇಯೋಪಾಖ್ಯಾನ, ಸತ್ಯಾ ದ್ರೌಪದೀ ಸಂವಾದ, ಘೋಷಯಾತ್ರ, ಪ್ರಾಯೋಪವೇಶ, ವ್ರೀಹಿದ್ರೋಣಕಾಖ್ಯಾನ, ದ್ರೌಪದೀ ಹರಣ, ಕುಂಡಲಾಹರಣ, ಆರಣೇಯ, (ಅರಣ್ಯಪರ್ವ); ವೈರಾಟ, ಕೀಚಕ ವಧ, ಗೋಗ್ರಹಣ, ಅಭಿಮನ್ಯು ವಿವಾಹ, (ವಿರಾಟಪರ್ವ); ಉದ್ಯೋಗ, ಸಂಜಯ ಯಾನ, ಧೃತರಾಷ್ಟ್ರ ಪ್ರಜಾ ಗರಣ, ಸಾನತ್ಸುಜಾತ, ಯಾನ ಸಂಧಿ, ಭಗವದ್ಯಾನ, ಸೇನಾ ನಿರ್ಯಾತ್ರ, ಉಲೂಕ, ದೂತಾಭಿಗಮನ, ಸಮರಥಾತಿರಥ ಸಂಖ್ಯಾನ, (ಉದ್ಯೋಗಪರ್ವ); ಕರ್ಣ ಭೀಷ್ಮ ವಿವಾದ, ಅಂಬೋಪಾಖ್ಯಾನ, ಜಂಬೂಖಂಡ ನಿರ್ಮಾಣ, ಭೂಮಿಪರ್ವ, ಭೀಷ್ಮಾ ಭಿಷೇಕ, ಭಗವದ್ಗೀತ, ಭೀಷ್ಮವಧ, (ಭೀಷ್ಮಪರ್ವ); ದ್ರೋಣಾಭಿಷೇಕ, ಸಂಶಪ್ತಕ ವಧ, ಅಭಿಮನ್ಯು ವಧ, ಪ್ರತಿಜ್ಞಾ, ಜಯದ್ರಥವಧ, ಘಟೋತ್ಕಚ ವಧ, ದ್ರೋಣ ವಧ, ನಾರಾಯಣಾಸ್ತ್ರ ಪ್ರಯೋಗ, (ದ್ರೋಣಪರ್ವ); ಕರ್ಣಪರ್ವ, ಶಲ್ಯಪರ್ವ, ಹ್ರದಪ್ರವೇಶ, ಗದಾಯುದ್ಧ, ಸಾರಸ್ವತ, ಸೌಪ್ತಿಕ, ಐಷೀಕ, ಜಲಪ್ರದಾನ, ಸ್ತ್ರೀ ಪರ್ವ, ಶ್ರಾದ್ಧಪರ್ವ, ರಾಜ್ಯಾಭಿಷೇಕ, ಚಾರ್ವಾಕ ನಿಗ್ರಹ, ಗೃಹಪ್ರವಿಭಾಗ, ಶಾಂತಿಪರ್ವ, ರಾಜಧರ್ಮ ಕೀರ್ತನ, ಆಪದ್ಧರ್ಮ ಕೀರ್ತನ, ಮೋಕ್ಷಧರ್ಮ ಕಥನ, ಆನುಶಾಸನಿಕ, ಭೀಷ್ಮನಿರ್ಯಾಣ, ಅಶ್ವಮೇಧಿಕ, ಅನುಗೀತಾ ಕಥನ, ಆಶ್ರಮವಾಸ, ಪುತ್ರಸಂದರ್ಶನ, ನಾರದಾಗಮನ, ಮೌಸಲ, ಮಹಾಪ್ರಸ್ಥಾನಿಕ, ಸ್ವರ್ಗಾರೋಹಣ, ಹರಿವಂಶ, ಭವಿಷ್ಯತ್ಪರ್ವಗಳೆಂಬುವ ನೂರಾರು ಅನುಪರ್ವಗಳಿಂದ ಅಲಂಕೃತವಾದ ಭಾರತವು ಪರಮ ಪವಿತ್ರವು, ಪಾಪ ಪರಿಹಾರಕವು, ಸಕಲ ಸುಜನ ಶ್ರವಣ ಮನೋ ಹರವು ಆಗಿದೆ.

ಆದಿಪರ್ವದಲ್ಲಿ ಪೌಷ್ಯೋತ್ತಂಕ ಮಹಿಮೆ, ಭೃಗುವಂಶ ಕೀರ್ತನ, ನಾಗ ಗರುಡ ಸಂಭವ, ಸಮುದ್ರ ಮಥನ, ಉಚ್ಚೈಶ್ರವ ಜನನ, ಸೌಪರ್ಣ ಕಥಾ, ಆಸ್ತೀಕ ಚರಿತ, ಜನಮೇಜಯ ಸರ್ಪಯಾಗ, ಶ್ರೀ ಮಹಾಭಾರತ ಕಥಾಶ್ರವಣ ಪ್ರವೃತ್ತಿ, ವ್ಯಾಸ ಜನನ, ದೇವ ದೈತ್ಯ ದಾನವ ಮುನಿ ಯಕ್ಷ ಪಕ್ಷಿ ಗಂಧರ್ವ ಮಾನವಾದಿ ವಿವಿಧ ಭೂತ ಸಂಭೂತಿ, ಅಂಶಾವತರಣ, ರಾಜವಂಶಾನುಕಥನ, ಯಯಾತಿ ಚರಿತ, ಭಾರತ ವಂಶಾನುಕೀರ್ತನ, ಗಂಗಾ ಶಂತನು ಸಮಾಗಮ, ವಸೂತ್ಪತ್ತಿ, ಸ್ವರ್ಗ ಗಮನ, ಗಾಂಗೇಯ ಜನನ, ತದ್ರಾಜ್ಯ ನಿವರ್ತನ, ಬ್ರಹಚರ್ಯ ವ್ರತ ಪ್ರತಿಜ್ಞಾ ಪರಿಪಾಲನ, ಸತ್ಯವತೀ ವಿವಾಹ, ಚಿತ್ರಾಂಗದ ವಿಚಿತ್ರವೀರ್ಯ ಜನನ, ಚಿತ್ರಾಂಗದ ಮರಣ, ವಿಚಿತ್ರವೀರ್ಯ ರಾಜ್ಯಾಭಿಷೇಕ, ತನ್ಮರಣ, ಕೃಷ್ಣ ದ್ವೈಪಾಯನ ವರದಿಂದ ಧೃತರಾಷ್ಟ್ರ, ಪಾಂಡುರಾಜ ಜನನ, ಅಣಿಮಾಂಡವ್ಯ ಕಥಾ, ವಿದುರೋತ್ಪತ್ತಿ, ಪಾಂಡವ ಕೌರವ ಸಂಭವ, ಪಾಂಡು ನಿರ್ಯಾಣ, ಕೃಪ ದ್ರೋಣ ಜನನ ಕಥನ,

ಕುಮಾರಾಸ್ತ್ರ ವಿದ್ಯಾಗ್ರಹಣ, ಅಸ್ತ್ರ ಸಂದರ್ಶನ, ಕರ್ಣಾರ್ಜುನ ಪರಸ್ಪರ ಕ್ರೋಧ, ದ್ರುಪದಗ್ರಹಣ ಮೋಕ್ಷಣ, ಧರ್ಮರಾಜನ ಯೌವರಾಜ್ಯಾಭಿಷೇಕ, ದುರ್ಯೋ-ಧನ ದುರ್ಮಂತ್ರ, ವಾರಣಾವತ ಯಾತ್ರ, ಜತುಗೃಹ ದಾಹ, ಪಾಂಡವಾಪಕ್ರಮಣ, ಹಿಡಿಂಬ ವಧೆ, ಹಿಡಿಂಬಾ ವಿವಾಹ, ಘಟೋತ್ಕಚ ಸಂಭವ, ಏಕಚಕ್ರಪುರ ವಾಸ, ಬಕ ವಧ, ಧೃಷ್ಟದ್ಯುಮ್ನ ದ್ರೌಪದೀ ಜನ್ಮಕಥನ, ವ್ಯಾಸ ಸಂದರ್ಶನ, ಅಂಗಾರಪರ್ಣ ಪರಾಭವ, ತಾಪತ್ಯ ವಸಿಷ್ಠೌರ್ಯೋಪಾಖ್ಯಾನ, ಪಾಂಚಾಲದೇಶ ಗಮನ, ದ್ರೌಪದೀ ಸ್ವಯಂವರ; ಪಂಚೇಂದ್ರೋಪಾಖ್ಯಾನ, ದ್ರೌಪದೀ ವಿವಾಹ, ವಿದುರಾಗಮನ, ಶ್ರೀಕೃಷ್ಣಸಂದರ್ಶನ, ರಾಜ್ಯಾರ್ಧ ಲಾಭ, ಖಾಂಡವಪ್ರಸ್ಥ ನಿವಾಸ, ಸುಂದೋಪಸುಂದೋಪಾಖ್ಯಾನ, ನಾರದ ವಚನಾನುಸಾರ ಸಮಯ ನಿರ್ವಹಣ, ಅರ್ಜುನ ತೀರ್ಥಾಗಮನ, ಉಲೂಪಿ ಸಮಾಗಮ, ಚಿತ್ರಾಂಗದಾ ವಿವಾಹ, ಬಭ್ರುವಾಹನ ಜನನ, ದ್ವಾರಕಾಗಮನ, ವಾಸುದೇವಾನುಮತಿಯಿಂದ ಸುಭದ್ರಾರ್ಜುನ ವಿವಾಹ, ಸುಭದ್ರಾ ಹರಣ, ಹರಣ ಹಾರಿಕ, ಅಭಿಮನ್ಯು ಸಂಭವ, ಗಾಂಡೀವ ದೇವದತ್ತ ದಿವ್ಯ ರಥಾಶ್ವ ಲಾಭ, ಖಾಂಡವ ದಹನ, ಮಯ ಭುಜಂಗ ಮೋಕ್ಷಣ, ಮಂದಪಾಲ ಕಥೆ ಎಂಬುವ ವೃತ್ತಾಂತಗಳಿವೆ.

ಸಭಾಪರ್ವದಲ್ಲಿ ಸಭಾ ಪ್ರಾಪ್ತಿ, ಕಿಂಕರ ದರ್ಶನ, ಲೋಕಪಾಲ ಸಭಾ ವರ್ಣನ, ರಾಜಸೂಯ ಮಹಾಧ್ವರಾರಂಭ, ಜರಾಸಂಧ ಸಂಹಾರ, ರಾಜಮೋಕ್ಷಣ, ದಿಗ್ವಿಜಯ, ರಾಜಸೂಯ ಯಾಗ, ಅರ್ಘ್ಯಾಭಿಹರಣ, ಶಿಶುಪಾಲ ವಧ, ದುರ್ಯೋಧನ ಮನಸ್ತಾಪ, ಸಭಾಸ್ಖಲಿತ ದುರ್ಯೋಧನ ಪರಾಭವ, ದ್ಯೂತ, ಧರ್ಮರಾಜ ಪರಾಜಯ, ಅಕ್ಷಯ ವಸ್ತ್ರದಾನ, ಪಾಂಡವ ಮೋಚನ, ಪುನದ್ಯೂ೯ತ, ವನವಾಸ ಗಮನ ಎಂಬುವ ವೃತ್ತಾಂತಗಳಿವೆ.

ಅರಣ್ಯಪರ್ವದಲ್ಲಿ ಕಿರ್ಮೀರ ವಧ, ಕೃಷ್ಣ ಪಾಂಚಾಲಾದಿ ಸಮಾಗಮ, ಸೌಭಾಖ್ಯಾನ, ಧರ್ಮರಾಜ ಭೀಮಸೇನ ಸಂವಾದ, ಅರ್ಜುನ ತಪಶ್ಚರಣ, ಶಂಕರ ಸಂಗರ, ಲೋಕಪಾಲ ಸಂದರ್ಶನ, ದಿವ್ಯಾಸ್ತ್ರಲಾಭ, ಸ್ವರ್ಗಗಮನ, ಬೃಹದಶ್ವ ಮುನಿದರ್ಶನ, ಧರ್ಮರಾಜಾದಿ ಪರಿದೇವನ, ನಲೋಪಾಖ್ಯಾನ, ದಮಯಂತೀ ಪಾತಿವ್ರತ್ಯ, ಅರ್ಜುನ ಕುಶಲವಾರ್ತಾ ಶ್ರವಣ, ರೋಮಶ ಮುನಿ ಸಮಾಗಮ, ತೀರ್ಥಯಾತ್ರಾ ಗಮನ, ಜಟಾಸುರ ವಧ, ಸೌಗಂಧಿಕಾ ಹರಣ, ಮಣಿಮದಾದಿ ರಾಕ್ಷಸ ವಧ, ಅಜಗರ ಅಗಸ್ತ್ಯೋಪಾಖ್ಯಾನ, ವಾತಾಪಿಭಕ್ಷಣ, ಲೋಪಮುದ್ರಾ ವಿವಾಹ, ಶಿಬಿರಾಜಚರಿತ, ಋಷ್ಯಶೃಂಗ ಕಥಾ, ಪರಶುರಾಮ ಚರಿತ, ಕಾರ್ತವೀರ್ಯ ವಧ, ಮಾಂಧಾತೃ ಜನನ, ಸೌಕನ್ಯಾಖ್ಯಾನ, ಚ್ಯವನ ಯೌವನ, ಅಶ್ವಿನೀ ದೇವ ಹವಿರ್ದಾನ, ಜಂತೂಪಾಖ್ಯಾನ, ಸೋಮಕ ಯಜ್ಞ, ಶತಪುತ್ರ ಪ್ರಾಪ್ತಿ, ವಂದ್ಯಷ್ಟಾವಕ್ರ ವಿವಾದ, ತಿತ್ತಿರಿ ಕೃತ ಸಮುದ್ರವಿಜಯ, ಪೌಲೋಮ ಕಾಲಕೇಯ ನಿವಾತಕವಚ ವಧ, ಗಂಧಮಾದನದಲ್ಲಿ ಸರ್ವ ಪಾಂಡವ ಸಮಾಗಮ, ಮಾರ್ಕಂಡೇಯ ಕೃತ ವಿವಿಧಕಥಾ ವರ್ಣನ,

ಶ್ರೀಕೃಷ್ಣ ಸಂದರ್ಶನ, ಸತ್ಯಾ ದ್ರೌಪದೀ ಸಂವಾದ, ಘೋಷಯಾತ್ರ, ದುರ್ಯೋಧನ ಪರಿಮೋಕ್ಷಣ, ದುರ್ಯೋಧನ ಪ್ರಾಯೋಪವೇಶ, ವ್ರೀಹಿ ದ್ರೋಣಕಾಖ್ಯಾನ, ಕಲಿಯುಗ ಧರ್ಮ, ವಾಮ್ಯಾಶ್ವ ಹರಣ, ಇಂದ್ರದ್ಯುಮ್ನ ಕಥೆ, ಸರಸ್ವತೀ ಗೀತಾ, ದುಂಧುಮಾರ ಚರಿತ, ಜಯದ್ರಥ ಪರಾಭವ, ಉದ್ದಾಲಕೋಪಾಖ್ಯಾನ, ವೈನ್ಯೋಪಾಖ್ಯಾನ, ಶ್ರೀರಾಮಾಯಣ ಕಥಾ ವರ್ಣನ, ಸಾವಿತ್ರೀ ಚರಿತ್ರ, ದ್ವೈತ ವನ ಪುನರಾಗಮನ, ಕರ್ಣ ಕವಚಕುಂಡಲಾಪಹರಣ, ಆರಣೇಯ, ಯಮಧರ್ಮ ರಾಜಾನುಶಾಸನ ವರಪ್ರಾಪ್ತಿ ಎಂಬುವ ವಿವಿಧಾಂಶಗಳಿವೆ.

ವಿರಾಟಪರ್ವದಲ್ಲಿ ಆಯುಧ ನಿಕ್ಷೇಪ, ಅಜ್ಞಾತವಾಸ, ಸಕಲ ಕೀಟಕ ಸಂಹಾರ, ದಕ್ಷಿಣ ಗೋಗ್ರಹಣ, ಉತ್ತರ ಗೋಗ್ರಹಣ, ಧನಂಜಯ ವಿಜಯ, ಉತ್ತರೆ ಅಭಿಮನ್ಯು ವಿವಾಹವೆಂಬುವ ಕಥೆಗಳಿವೆ.

ಉದ್ಯೋಗಪರ್ವದಲ್ಲಿ ಉಪಪ್ಲಾವ್ಯ ಗಮನ, ಶ್ರೀಕೃಷ್ಣ ಸಹಾಯ ಪ್ರಾರ್ಥನ, ನಾರಾಯಣ ಗೋಪಾಲ ಬಲವನ್ನು ದುರ್ಯೋಧನ ಸ್ವೀಕರಿಸಿದ ವಿಷಯ, ಅರ್ಜುನ ಕೃತಕೃಷ್ಣ ವರಣ, ಸಂಜಯ ರಾಯಭಾರ, ಧೃತರಾಷ್ಟ್ರ ಚಿಂತೆ, ವಿದುರೋಪದೇಶ, ಸನತ್ಸುಜಾತೀಯ, ವಾಸುದೇವಾರ್ಜುನಾದಿ ಪರಮ ಸಾಂಗತ್ಯ ಕಥನ, ಶ್ರೀಕೃಷ್ಣ ಹಸ್ತಿನಾಪುರ ಗಮನ, ದುರ್ಯೋಧನಾದಿ ದುರ್ಮಂತ್ರ, ವಿಶ್ವರೂಪದರ್ಶನ, ಶ್ರೀಕೃಷ್ಣ ಕರ್ಣ ಸಂವಾದ, ಬಲಾತಿಬಲ ಸಂಖ್ಯಾನ, ಉವಾಕ ಪುರುಷ ವಚನ, ಸಮರಥಾತಿರಥ ಸಂಖ್ಯಾನ, ಕರ್ಣಕೋಪಾಸ್ತ್ರ ಸನ್ಯಾಸ, ರಾಯ ಭೀಷ್ಮ ಸಮರವರ್ಣನ, ಅಂಬೋಪಾಖ್ಯಾನ, ಸಂಕ್ರಂದನ ಕಥಾ, ಶ್ವೇತಾಭಿಷೇಕ ಎಂಬುವ ಕಥೆಗಳಿವೆ.

ಭೀಷ್ಮಪರ್ವದಲ್ಲಿ ಜಂಬೂಖಂಡ ನಿರ್ಮಾಣ, ಭೂ ವಿಸ್ತಾರ ವರ್ಣನ, ಭೀಷ್ಮಾಭಿಷೇಕ, ಅರ್ಜುನ ವಿಷಾದ, ಶ್ರೀ ಭಗವದ್ಗೀತೋಪದೇಶ, ಭೀಷ್ಮ ಪರಾಕ್ರಮ, ಶಿಖಂಡಿ ವೃತ್ತಾಂತ, ಭೀಷ್ಮ ಪತನ, ಶರಪಂಜರಶಯನ ಎಂಬು ವಿಷಯಗಳಿವೆ.

ದ್ರೋಣಪರ್ವದಲ್ಲಿ ದ್ರೋಣಾಭಿಷೇಕ, ಸಂಶಪ್ತಕ ಯುದ್ಧ, ಭಗದತ್ತ ಸುಪ್ರತೀಕ ವಧ, ಪದ್ಮವ್ಯೂಹ, ಅಭಿಮನ್ಯು ಸಂಹಾರ, ಅರ್ಜುನ ಪ್ರತಿಜ್ಞೆ, ಸೈಂಧವ ವಧ, ಸಂಶಪ್ತಕ ಸೈನ್ಯ ಸಂಹಾರ, ಆಲಂಬ ಸಶ್ರುತಾಯು ಜಲಸಂಧ ಸೋಮದತ್ತ ಭೂರಿಶ್ರವ ಬಾಹ್ಲಿಕ ವಿರಾಟ ದ್ರುಪದ ಸಂಹಾರ, ಘಟೋತ್ಕಚ ವಧ, ಕೌರವವಿನಾಶ, ನಾರಾಯಣ ಗೋಪಾಲ ಸೇನಾವಿನಾಶ, ದ್ರೋಣ ವಧ, ನಾರಾಯಣಾಸ್ತ್ರ ಪ್ರಯೋಗ, ಶ್ರೀಕೃಷ್ಣ ಭೀಮಾರ್ಜುನ ಮಹಿಮೆ ಎಂಬುವ ವಿವರಗಳವೆ.

ಕರ್ಣಪರ್ವದಲ್ಲಿ ಕರ್ಣಾಭಿಷೇಕ, ಶಲ್ಯ ಸಾರಥ್ಯ, ತ್ರಿಪುರದಹನ ಕಥೆ, ಕರ್ಣ ಶಲ್ಯ ವಿವಾದ, ಹಂಸ ಕಾಕೀಯೋಪಾಖ್ಯಾನ, ಧರ್ಮಜಾರ್ಜುನ ಪರಸ್ಪರ ಕ್ರೋಧ ವಚನ, ಅರ್ಜುನಾನುನಯ, ವೃಷಸೇನ ವಧ, ದುಶ್ಯಾಸನ ಸಂಹಾರ ರಕ್ತಪಾನ, ವಿಪ್ರ ಶಾಪ, ಕರ್ಣ ರಥಚಕ್ರ ಭೂಪ್ರವೇಶ, ನಾಗಾಸ್ತ್ರ ಪರಿಮೋಚನ, ಇಂದ್ರ

ಸೂರ್ಯ ಸಂವಾದ, ಕರ್ಣವಧ, ಎಂಬುವ ವೃತ್ತಾಂತಗಳಿವೆ.

ಶಲ್ಯಪರ್ವದಲ್ಲಿ ಶಲ್ಯಾಭಿಷೇಕ, ಕುರುಕುಮಾರ ವಧ, ಶಲ್ಯ ಮರಣ, ಕುರು ಮುಖ್ಯ ಸಂಹಾರ, ಶಕುನಿ ತತ್ಪುತ್ರ ಮರಣ, ಸಂಜಯ ಗ್ರಹಣ ಮೋಕ್ಷಣ, ಹ್ರದ ಪ್ರವೇಶ, ಭೀಮ ದುರ್ಯೋಧನ ಗದಾಯುದ್ಧ, ಸರಸ್ವತ್ಯಾದಿ ಪುಣ್ಯತೀರ್ಥ ಕೀರ್ತನ ಎಂಬುವ ವಿಷಯಗಳಿವೆ.

ಸೌಪ್ತಿಕಪರ್ವದಲ್ಲಿ ದುರ್ಯೋಧನೋರುಭಂಗ; ಕೃಪಾಶ್ವತ್ಥಾಮ, ಕೃತವರ್ಮ, ದುರ್ಮಂತ್ರಣ, ಧೃಷ್ಟದ್ಯುಮ್ನಾದಿ ಸರ್ವ ಪಾಂಚಾಲ ವಧ; ಉಪಪಾಂಡವ ಸಂಹಾರ, ಶ್ರೀಕೃಷ್ಣ ಕೃತ ಪಾಂಡವ ಸಂರಕ್ಷಣ, ಪಾಂಚಾಲೀ ಶೋಕ, ಭೀಮಸೇನ ಪ್ರತಿಜ್ಞಾ, ಅಶ್ವತ್ಥಾಮ ಶರಸಂಧಾನ, ಶ್ರೀ ಕೃಷ್ಣ ಕೃತ ಪರಿಹಾರ, ವ್ಯಾಸಾಶ್ವತ್ಥಾಮ ಶಾಪ, ಶಿರೋರತ್ನಾಪಹರಣ ಎಂಬುವ ವೃತ್ತಾಂತಗಳಿವೆ.

ಸ್ತ್ರೀಪರ್ವದಲ್ಲಿ ವೀರಪತ್ನೀ ವಿಲಾಪ, ಗಾಂಧಾರೀ ಧೃತರಾಷ್ಟ್ರ ಕೋಪ ನಿವೃತ್ತಿ, ಮೃತ ಬಂಧು ಮಿತ್ರಾದಿ ಸಂಸ್ಕಾರ, ಭಾರತ ವೀರರಿಗೆ ಉದಕದಾನ, ಕರ್ಣಜನ್ಮರಹಸ್ಯ, ಧರ್ಮರಾಜ ವಿಲಾಪವೆಂಬುವ ವಿಷಯಗಳಿವೆ.

ಶಾಂತಿಪರ್ವದಲ್ಲಿ ಧರ್ಮರಾಜ ನಿರ್ವೇದ, ಶ್ರೀಕೃಷ್ಣ ವಚನ, ವ್ಯಾಸಾದಿ ಕೃತೋಪದೇಶ, ಧರ್ಮಜ ರಾಜ್ಯಾಭಿಷೇಕ, ಚಾರ್ವಾಕ ನಿಗ್ರಹ, ಗೃಹ ಪ್ರವಿಭಾಗ, ಭೀಷ್ಮ ಸಮೀಪ ಗಮನ, ರಾಜಧರ್ಮ ನಿರೂಪಣ, ಆಪದ್ಧರ್ಮ ವಿವರಣ, ಮೋಕ್ಷ ಧರ್ಮ ಕಥನ ಎಂಬುವ ವೃತ್ತಾಂತಗಳಿವೆ.

ಅನುಶಾಸನಿಕ ಪರ್ವದಲ್ಲಿ ಸರ್ವಧರ್ಮ ನಿಶ್ಚಯ, ದಾನ ವಿಧಿ, ಆಚಾರ ವಿಧಿ, ಪುತ್ರಾನುಶಾಸನ, ಭೀಷ್ಮ ಸ್ವರ್ಗಾರೋಹಣಗಳೆಂಬ ವಿಷಯಗಳಿವೆ.

ಅಶ್ವಮೇಧ ಪರ್ವದಲ್ಲಿ ಅಶ್ವಮೇಧಾರಂಭ, ಸಂವರ್ತ ಮರುತ್ತೀಯೋಪಾಖ್ಯಾನ, ಸ್ವರ್ಣಕೋಶ ಸಂಪ್ರಾಪ್ತಿ, ಅಶ್ವತ್ಥಾಮಾಸ್ತ್ರದಗ್ಧ ಪರೀಕ್ಷಿತ್ ಪುನರುಜ್ಜೀವನ, ಅರ್ಜುನ ತುರಗಾನುಸರಣ, ರಾಜ ಪರಾಜಯ, ಬಭ್ರುವಾಹನ ವಿಜಯ, ಯಜ್ಞ ಶಾಲಾಗತ ನಕುಲೋಪಾಖ್ಯಾನ, ಅನುಗೀತ, ಬ್ರಾಹ್ಮಣಗೀತ, ಗುರು ಶಿಷ್ಯಸಂವಾದ ಎಂಬುವ ವೃತ್ತಾಂತಗಳಿವೆ.

ಆಶ್ರಮವಾಸ ಪರ್ವದಲ್ಲಿ ಗಾಂಧಾರೀ ಧೃತರಾಷ್ಟ್ರ ವಿರಾಗ, ಅರಣ್ಯ ಗಮನ, ವಿದುರಾನುಸರಣ, ಕುಂತೀ ವನಗಮನ, ವ್ಯಾಸ ವರದಿಂದ ಸಮರ ನಿಹತ ಪುತ್ರ ಪೌತ್ರಾದಿಗಳನ್ನು ಧೃತರಾಷ್ಟ್ರನು ನೋಡಿ ವಿಶೋಕನಾದುದು, ವಿದುರ ಧರ್ಮ ರಾಜೈಕ್ಯ, ಗಾಂಧಾರೀ ಕುಂತೀ ಧೃತರಾಷ್ಟ್ರ ದಾಹ, ಅವರ ಸದ್ಗತಿ, ಯಾದವ ವ್ಯಸನ ಶ್ರವಣ ಎಂಬುವ ವಿಷಯಗಳಿವೆ.

ಮೌಸಲಪರ್ವದಲ್ಲಿ ಬ್ರಾಹ್ಮಣ ಶಾಪ, ಮದಿರಾಪಾನ ಮತ್ತು ಯಾದವಕುಲ ನಾಶ, ಅರ್ಜುನ ದ್ವಾರಾವತೀ ಗಮನ, ಸಂಸ್ಕಾರ, ಕಳತ್ರ ಹರಣ, ತತ್ಪ್ರಾಯಶ್ಚಿತ್ತ ಕರಣ, ಧರ್ಮರಾಜ ವಿರಾಗ ಎಂಬುವ ವಿಷಯಗಳಿವೆ.

ಮಹಾಪ್ರಸ್ಥಾನಿಕ ಪರ್ವದಲ್ಲಿ ಪರೀಕ್ಷಿದ್ರಾಜ್ಯಾಭಿಷೇಕ, ಪಾಂಡವ ಪರಮಸಿದ್ಧಿ ಎಂಬ ವಿಷಯಗಳಿವೆ.

ಸ್ವರ್ಗಾರೋಹಣ ಪರ್ವದಲ್ಲಿ ಕರ್ಣ ನರಕ ಪ್ರಾಪ್ತಿ, ತನ್ಮೋಕ್ಷಣ, ಭಾರತ ವೀರ ಸಂಗಮ, ಸ್ವ-ಸ್ವಯೋಗ್ಯ ಲೋಕ ಪ್ರಾಪ್ತಿ, ಕರ್ಮಪರಿಪಾಕೋಪಭೋಗ ವಿಧಾನ ಎಂಬುವ ವೃತ್ತಾಂತಗಳಿದ್ದು ಕೊನೆಗೆ ಮಂಗಳ ಮಹೋತ್ಸವ ವರ್ಣನವಿದೆ.

ಮುಂದೆ ಹರಿವಂಶ ಭವಿಷ್ಯ ಪರ್ವಗಳಲ್ಲಿ ಹನ್ನೆರಡು ಸಾವಿರ ಶ್ಲೋಕಗಳಿವೆ.

ನಾಲ್ಕು ವೇದಗಳನ್ನು ಸಾಂಗವಾಗಿ ಓದಿದ್ದರೂ ಭಾರತವನ್ನು ವಿಚಾರಿಸಿ, ಅರಿಯದವನು, ವಿಚಕ್ಷಣನೆನಿಸಲಾರನು. ಪುಂಸ್ಕೋಕಿಲ ಪಂಚಮರಾವವನ್ನು ಕೇಳಿದ ಕಿವಿಗೆ ಕಾಗೆಯ ಕೂಗು ಇಂಪಾಗದಿರುವಂತೆ, ಭಾರತವನ್ನು ಕೇಳಿದವನಿಗೆ ಇನ್ನೊಂದು ಶ್ರಾವ್ಯವೆನಿಸುವುದಿಲ್ಲ. ಭಾರತವನ್ನಾಶ್ರಯಿಸದ ಪುರಾಣ ಕಾವ್ಯ ಕಥಾ ಕಲಾಪ ಇನ್ನೊಂದಿಲ್ಲ.

ವೇದವ್ಯಾಸ ಮುಖಕಮಲ ನಿಃಸೃತವು, ಅಪ್ರಮೇಯಾರ್ಥ ವಿಶಿಷ್ಟವು, ಪುಣ್ಯ ಕಾರಣವು, ಪವಿತ್ರವು, ಪಾಪಹರಣವು ಆದ ಭಾರತವನ್ನು ಕೇಳಿದವನಿಗೆ ಅನಾಯಾಸ ವಾಗಿ ಸಕಲ ತೀರ್ಥರಾಜಾದಿ ತೀರ್ಥಸ್ನಾನ ಫಲವು, ರಾಜ್ಯಾಭಿಷೇಕ ಸಮಶ್ರೀಯು ಸ್ಸಿದ್ಧಿಯು ಆಗುವುದು. ಕನಕ ಶೃಂಗಾದಿ ಸಮಲಂಕೃತವಾದ ಧೇನುಶತವನ್ನು ಬಹು ಶ್ರುತನು, ವೇದಚತುರನು ಆದ ವಿಪ್ರನಿಗೆ ದಾನವಿತ್ತರೆ ಬರುವ ಪುಣ್ಯವು ಅನಾ ಯಾಸವಾಗಿ ನಿತ್ಯವು ಭಾರತ ಕಥೆಯನ್ನು ಶ್ರದ್ಧೆಯಿಂದ ಕೇಳುವವನಿಗೆ ಲಭಿಸುವುದು.

## ದೇವಶುನೀ ಚರಿತೆ

ಜನಮೇಜಯನೊಂದು ಸಲ ಕುರುಕ್ಷೇತ್ರದಲ್ಲಿ ದೀರ್ಘ ಸತ್ರಯಾಗ ನಿರತನಾ ಗಿದ್ದನು. ಅವನ ತಮ್ಮಂದಿರು ಶ್ರುತಸೇನ, ಉಗ್ರಸೇನ, ಭೀಮಸೇನರೆಂಬುವರು ಪರಿ ಚರಿಸುತ್ತಿದ್ದರು. ಆಗ ಒಂದು ನಾಯಿಯ ಮರಿಯು ಅಲ್ಲಿಗೆ ಬರಲು ಭೀಮಸೇನಾದಿ ಗಳದನ್ನು ಹೊಡೆದೋಡಿಸಿದರು. ಅದು ತನ್ನ ಮಾತೆಯನ್ನು ಸೇರಿ "ಅಮ್ಮಾ! ಹವಿಸ್ಸನ್ನು ನಾನು ಕಣ್ಣೆತ್ತಿ ನೋಡಿಲ್ಲ. ಯಾವ ವಸ್ತುವನ್ನೂ ನೆಕ್ಕಿಲ್ಲ. ನಿರಪರಾಧಿ ಯಾದ ನನ್ನನ್ನು ರಾಜಸೋದರರು ಹೊಡೆದರು" ಎಂದು ರೋದಿಸಿತು. ಸರಮೆ ಎಂಬುವ ಆ ದೇವಶುನಿಯು ಆ ಮಾತನ್ನಾಲಿಸಿ, ಕೋಪಗೊಂಡು, ಸತ್ರಯಾಗಶಾಲೆ ಮುಂದೆ ನಿಂತು, ಮಗನ ಅಪರಾಧವೇನೆಂದು ಕೇಳಿತು. ಅವರು ಸುಮ್ಮನಿದ್ದರು. ಆಗ ಶುನಿಯು ಸಿಟ್ಟಿನಿಂದ "ನಿರಪರಾಧಿಯಾದ ನನ್ನ ಮಗನನ್ನು ಹೊಡೆದ ಕಾರಣ ದಿಂದ ಅತರ್ಕಿತವಾದ ಭಯವು ನಿಮ್ಮನ್ನು ಕಾಡಲಿ!" ಎಂದು ಶಾಪವನ್ನಿತ್ತು ಹೊರಟು ಹೋಯಿತು. ಜನಮೇಜಯನು ಸಂಭ್ರಾಂತನಾದನು. ಸತ್ರವು ಮುಗಿದಮೇಲೆ ಹಸ್ತಿನಾವತಿಗೆ ಬಂದು, ತನ್ನ ಪಾಪಶಮನವನ್ನು ಮಾಡಲು ಸಮರ್ಥನಾದ ಪುರೋ ಹಿತನನ್ನು ಹುಡುಕುತ್ತಿದ್ದನು.

ಒಂದು ದಿನ ಬೇಟೆಗೆಂದು ವನ ಪ್ರವೇಶಮಾಡಿದ ರಾಜನು ಒಂದಾಶ್ರಮದಲ್ಲಿ ಶ್ರುತಶ್ರವನೆಂಬ ಋಷಿವರನನ್ನು ಕಂಡು, ಅವನ ಪುತ್ರನಾದ ಸೋಮಶ್ರವನನ್ನು ತನಗೆ ಪುರೋಹಿತನನ್ನಾಗಿ ಕೊಡೆಂದು ಬೇಡಿದನು. ಸರ್ಪಿಣಿಯಲ್ಲಿ ಹುಟ್ಟಿ, ಮಹಾ ತಪಸ್ವಿಯಾದ ಸೋಮಶ್ರವನನ್ನು ಪುರೋಹಿತನನ್ನಾಗಿ ಪಡೆದುಬಂದ ಜನಮೇಜಯನು ಸೋಮಶ್ರವನನ್ನು ಸಚರಿಸಲು ತಮ್ಮಂದಿರನ್ನು ನಿಯೋಗಿಸಿ, ತಾನು ತಕ್ಷಶಿಲೆಗೆ ಹೋಗಿ, ಆ ದೇಶವನ್ನು ಗೆದ್ದು ವಶದಲ್ಲಿ ತಂದುಕೊಂಡನು. ಶಾಂತಿ ಪೌಷ್ಟಿಕ ಕರ್ಮಗಳನ್ನೂ ಮಾಡಿದನು.

## ೭. ಉದಂಕ ಚರಿತೆ

ಅದೇಕಾಲದಲ್ಲಿ ಧೌಮ್ಯಪುತ್ರನಾದ ಆಪೋದನೆಂಬ ಋಷಿವರನಲ್ಲಿ ಉಪಮನ್ಯು, ಆರುಣಿ, ವೇದರೆಂಬ ಮೂರು ಜನ ಶಿಷ್ಯರು ಓದಲು ಬಂದು ಸೇವಿಸುತ್ತಿದ್ದರು.

ಆರುಣಿಯನ್ನು ಋಷಿಯು ಗದ್ದೆಗಳನ್ನು ಕಾಯಲು ಕಳಿಸಿದನು. ಒಂದು ದಿನ ಗದ್ದೆಯ ಬದುವು ಒಡೆದು ನೀರು ಹರಿದುಹೋಗುತ್ತಿರುವುದನ್ನು ನೋಡಿ ಆರುಣಿಯು ಅದನ್ನು ತಡೆಗಟ್ಟದನು. ಅದು ಪುನಃ ಒಡೆಯಲು ತಾನೇ ಬದುವಿನಂತೆ ಬಿದ್ದುಕೊಂಡಿದ್ದು, ರಾತ್ರಿಯೆಲ್ಲ ಕಳೆದನು. ಬೆಳಿಗ್ಗೆ ಅವನನ್ನು ಹುಡುಕುತ್ತ ಬಂದು ಕಾತರನಾದ ಆಪೋದನು, ಕೇದಾರಖಂಡದಿಂದ ಎದ್ದುಬಂದ ಆರುಣಿಯನ್ನು ನೋಡಿ, ಪ್ರೀತನಾಗಿ—

"ಪಾಂಚಾಲ್ಯ ಆರುಣಿ ! ನನ್ನಾಜ್ಞೆಯನ್ನು ಚನ್ನಾಗಿ ಪಾಲಿಸಿದೆ. ನೀರು ಹರಿಯದಂತೆ ಮಲಗಿದ್ದು ಕೇದಾರಖಂಡದಿಂದ ಎದ್ದುಬಂದೆ, ಆದ್ದರಿಂದ ನಿನಗೆ ಉದ್ದಾಲಕನೆಂಬ ಹೆಸರಾಗಲಿ ! ನನ್ನ ಅನುಗ್ರಹದಿಂದ ನಿನಗೆ ಸರ್ವ ವೇದಾದಿ ಶಾಸ್ತ್ರಗಳೆಲ್ಲವು ಪ್ರತಿಭಾತವಾಗಲಿ !" ಎಂದು ಅನುಗ್ರಹಿಸಿ ಕಳಿಸಿಕೊಟ್ಟನು.

ಆಪೋದನ ಶಿಷ್ಯನಾದ ಉಪಮನ್ಯುವು ಗುರ್ವಾಜ್ಞೆಯಂತೆ ಗೋ ಗಣವನ್ನು ಕಾಪಾಡುತ್ತಿದ್ದನು. ನಿತ್ಯವೂ ಸಾಯಂಕಾಲದಲ್ಲಿ ಆಕಳ ಗುಂಪನ್ನು ಮುಂದೆಯಲ್ಲಿ ಬಿಟ್ಟು, ಗುರುವಿಗೆ ನಮಸ್ಕರಿಸುವುದು ಅವನಿಗೆ ವಾಡಿಕೆಯಾಗಿತ್ತು. ಒಂದು ದಿನ ಬಲಿಷ್ಠನಾಗಿರುವ ಶಿಷ್ಯನನ್ನು ನೋಡಿ ಆಪೋದನು "ವತ್ಸ ! ಉಪಮನ್ಯೋ ! ಬಲಿತಿರುವೆ, ನಿನ್ನ ಜೀವನವನ್ನು ಹೇಗೆ ನಿರ್ವಹಿಸುತ್ತಿರುವೆ ?" ಎಂದು ಕೇಳಿದನು. "ಸ್ವಾಮಿ ! ಭೈಕ್ಷ್ಯದಿಂದ" ಎಂದು ನುಡಿದ ಶಿಷ್ಯನನ್ನು, ಇನ್ನು ಮುಂದೆ ಭಿಕ್ಷಾನ್ನವನ್ನು ಗುರುವಿಗೆ ನಿವೇದಿಸುವಂತೆ ಆಜ್ಞಾಪಿಸಿದನು. ಅಂತೆಯೇ ಶಿಷ್ಯನಿತ್ತ ಭೈಕ್ಷ್ಯಾನ್ನವನ್ನೆಲ್ಲ ಆಪೋದನು ವಿನಿಯೋಗಿಸುತ್ತಿದ್ದನು.

ಕೆಲಕಾಲದಮೇಲೆ ಕೃಶನಾಗದಿರುವ ಉಪಮನ್ಯುವನ್ನು ಜೀವನ ಕಾರಣವು ಏನೆಂದು ಗುರುವು ಕೇಳಿದನು. 'ಎರಡನೆಯ ಸಲ ಭಿಕ್ಷೆ ಬೇಡಿ ಬಂದದ್ದನ್ನುಂಡು ಬದುಕಿರುವೆ'ನೆಂದು ಶಿಷ್ಯನು ನುಡಿದನು. "ಇದು ಅನ್ಯಾಯ ! ನೀನು ಹೀಗೆ

*

ಮಾಡಿದುದರಿಂದ ಇನ್ನೊಬ್ಬರ ಭಿಕ್ಷಾನ್ನವನ್ನು ಅಪಹರಿಸಿದಂತಾಗಲಿಲ್ಲವೇ ? ಲೋಭ ದಿಂದ ಹೀಗೆ ಮಾಡುವುದು ಉಚಿತವಲ್ಲ" ಎಂದು ಗುರುವು ನುಡಿಯಲು ಉಪಮನ್ಯು 'ಸರಿ' ಎಂದನು. ಕೆಲಕಾಲವಾಯಿತು. ಉಪಮನ್ಯು ಬಲಿಷ್ಠನಾಗೇ ಇದ್ದನು. "ವತ್ಸ! ಸರ್ವ ಭಿಕ್ಷಾನ್ನವನ್ನು ನಾನೇ ತೆಗೆದುಕೊಂಡರೂ ಇನ್ನೂ ಪುಷ್ಟನಾಗಿ ರುವೆ! ಇದೆಂತು ?" ಎಂದು ಗುರುವು ಕೇಳಿದನು. ಆಕಳ ಹಾಲನ್ನು ಕುಡಿದು ಬದುಕುವೆನೆಂದ ಶಿಷ್ಯನನ್ನು "ನನ್ನ ಪ್ಪಣೆ ಪಡೆಯದೆ, ನನ್ನ ಆಕಳ ಹಾಲನ್ನು ಕುಡಿದದ್ದು ತಪ್ಪು" ಎಂದನು. ಆದರೂ ಪುಷ್ಟನಾಗಿರುವ ಶಿಷ್ಯನನ್ನು 'ಅದೆಂತೆ'ಂದು ಗುರುವು ಕೇಳಲು, "ಸ್ವಾಮಿ! ಆಕಳ ಮೊಲೆಗಳನ್ನುಣ್ಣುವಾಗ ಕರುಗಳು ಜಾರಿಸಿದ ಹಾಲಿನ ನೊರೆಯನ್ನು ಉಂಡು ಬದುಕಿರುವೆ"ನೆಂದನು. "ಅದನ್ನೂ ತಿನ್ನಬಾರದು. ಕರುವಿಗೆ ಅನ್ಯಾಯವಾದೀತೆ"ಂದು ನುಡಿದ ಗುರುವಿನ ವಚನದಂತೆ, ಉಪಮನ್ಯು ಸರ್ವವನ್ನೂ ಬಿಟ್ಟು, ಒಂದು ದಿನ, ಹಸಿವೆ ತಾಳಲಾರದೆ, ಕ್ಷಾರತಿಕ್ತ ಕಟು ತೀಕ್ಷ್ಣವಾದ ಎಕ್ಕೆ ಎಲೆಗಳನ್ನು ತಿಂದುಬಿಟ್ಟನು. ಅವನ ನೇತ್ರಗಳು ಕೆಟ್ಟವು. ಅಂಧನಾದ ಉಪಮನ್ಯು ಒಂದು ಹಾಳು ಬಾವಿಯಲ್ಲಿ ಬಿದ್ದನು. ಆಪೋದನು ಚಿಂತಾಕ್ರಾಂತನಾಗಿ ಶಿಷ್ಯರಿಂದ ಕೂಡಿ 'ಉಪಮನ್ಯೋ!' ಎಂದು ಕೂಗುತ್ತಾ ಬಂದನು. ಅಂಧನಾಗಿರುವ ಶಿಷ್ಯನಲ್ಲಿ ಕರುಣಿಸಿ ಆಪೋದನು ಅವನಿಗೆ "ಅಶ್ವಿನೀ ದೇವದ್ವಯರನ್ನು ಸ್ತುತಿಸು, ಅವರು ನಿನಗೆ ದೃಷ್ಟಿಯನ್ನಿತ್ತು ಕಾಪಾಡುವರೆ"ಂದು ಹೇಳಿ ಹೋದನು.

ಉಪಮನ್ಯುವು ಅಶ್ವಿನೀದೇವರನ್ನೂ ತದಂತರ್ಯಾಮಿ ಶ್ರೀಹರಿಯನ್ನೂ ಇಂತು ಸ್ತುತಿಸಿದನು—

"ಅನಾದಿನಿತ್ಯನು, ವಿಚಿತ್ರ ಸೃಜನ ಕಾರಣನು, ಜೀವರ ಅಂತರ್ಯಾಮಿಯು, ಪಾಪರಹಿತನು, ಅಪ್ರಮೇಯ ಮಹಾಮಹಿಮನು, ಜಗತ್ಪರಿಪಾಲಕನು, ಸುಖಮಯ ದಿವ್ಯದೇಹನು, ಲಯಕರ್ತನು, ದಿನ ರಾತ್ರಿಗಳಿಂದ ಸಂವತ್ಸರ ಚಕ್ರ ಪ್ರವರ್ತಕನು ಆದ ಶ್ರೀ ನಾರಾಯಣ ! ನಿನಗೆ ವಂದಿಸಿ ಮನಸಾ ಸ್ತುತಿಸುವೆನು.

"ಸ್ವಯಮಾನಂದಪೂರ್ಣನಾಗಿದ್ದು, ನಂಬಿದ ಜೀವರನ್ನು ಶರೀರೇಂದ್ರಿಯ ಮನೋರೂಪ ಪ್ರಕೃತಿಬಂಧದಿಂದ ಬಿಡಿಸಿ, ಕೈವಲ್ಯವನ್ನಿತ್ತು ಸ್ವಯೋಗ್ಯಾನಂದ ವನ್ನೀವ ಲಕ್ಷ್ಮೀರಮಣ! ನಿನಗೆ ನಮಃ. ಮುನ್ನೂರ ಅರವತ್ತು ದಿನಗಳೆಂಬ ಗೋಗಳನ್ನು ಸಂವತ್ಸರವೆಂಬ ಕರುವಿನಿಂದ ಕರೆದು, ಜೀವರಿಗೆ ತತ್ತದ್ಯೋಗ್ಯಕರ್ಮ ಫಲರೂಪ ಕ್ಷೀರವನ್ನು ಕೊಡುವ ಕಾಲನಿಯಾಮಕನಿಗೆ ಶರಣು. ನಮ್ಮನ್ನು ಅವಿದ್ಯಾ ಕಾಮಕರ್ಮರೂಪ ಬಂಧದಿಂದ ಬಿಡಿಸು!

"ಎಲೌ ಅಶ್ವಿನಿಗಳಿರಾ! ಸೂರ್ಯಪುತ್ರರಾದ ನೀವು ನಮಗೆ ಅನೇಕ ವಿಧ ಸೌಭಾಗ್ಯವನ್ನಿತ್ತು ಸಂರಕ್ಷಿಸಿ! ಪುಷ್ಕರಮಾಲಾಧಾರಿಗಳಾದ ನಿಮ್ಮ ಅನುಗ್ರಹದಿಂದ ನಮಗೆ ಸರ್ವಶ್ರೇಯಸ್ಸಾಗಲಿ! ಜೀವನದ ಸುಖವನ್ನು ಸವಿಯಲು ನನಗೆ ಚಕ್ಷು ಸ್ಸನ್ನು ದಯಪಾಲಿಸಿ!"

ಅದನ್ನು ಕೇಳಿ ಪ್ರೀತರಾಗಿ ಅಶ್ವಿನಿಗಳು ಬಂದು "ವರವನ್ನು ಬೇಡು. ನಿನಗೆ ಕಣ್ಣು ಬರಲು ಕಾರಣವಾದ ಈ ದಿವ್ಯಾಪೂಪವನ್ನು ತಿನ್ನು !" ಎಂದರು. ಗುರುವಿಗೆ ನಿವೇದಿಸದೆ ಅಪೂಪವನ್ನು ತಿನ್ನಲು ನಿರಾಕರಿಸಿದ ಉಪಮನ್ಯುವನ್ನು ನೋಡಿ ಪ್ರೀತರಾಗಿ "ಉಪಮನ್ಯು ! ವತ್ಸ ! ನಿನ್ನ ಉಪಾಧ್ಯಾಯನ ದಂತಗಳು ಕಬ್ಬಿಣದಂತೆ ಕಪ್ಪಾಗಿವೆ. ನಿನ್ನ ದಂತಗಳು ಬಂಗಾರವಾಗಿ ಹೊಳೆಯಲಿ ! ನಿನಗೆ ಕಣ್ಣು ಬರಲಿ" ಎಂದು ವರವಿತ್ತು ಹೋದರು. ಆಗ ಉಪಮನ್ಯುವು ಲಬ್ಧನೇತ್ರನಾಗಿ ಆಪೋದನ ಮನೆಗೆ ಬಂದನು. "ವತ್ಸ ! ಪ್ರೀತನಾದೆ. ಸರ್ವ ವೇದಗಳು ನಿನಗೆ ಪ್ರತಿಭಾತ ವಾಗಲಿ" ಎಂದು ಗುರುವು ಅವನನ್ನು ಕಳುಹಿಸಿಕೊಟ್ಟನು.

ಮೂರನೆಯವನಾದ ವೇದನನ್ನು ಆಶ್ರಮದಲ್ಲಿ ನಿಲ್ಲಿಸಿ, ಆಪೋದನು, ಅವ ನಿಂದ ಅನೇಕ ಕಷ್ಟದ ಕೆಲಸಗಳನ್ನು ಮಾಡಿಸುತ್ತಿದ್ದನು. ಅಪ್ರತಿಕೂಲನು, ವಿಧೇ ಯನು ಆದ ವೇದನಲ್ಲಿ ಪ್ರೀತನಾಗಿ ಗುರುವು 'ಸರ್ವಜ್ಞನಾಗೆ'ಂದು ವರವನ್ನಿತ್ತು ಅವನನ್ನೂ ಕಳುಹಿಸಿದನು.

ಆ ವೇದನನ್ನು ಜನಮೇಜಯ ಮತ್ತು ಪೌಷ್ಯ ಎಂಬ ರಾಜರು ಪುರೋಹಿತ ನನ್ನಾಗಿ ವರಿಸಿದರು. ಯಾಜನ ಕಾರ್ಯನಿರತನಾದ ವೇದನು, ಒಂದು ಸಲ ತನ್ನ ಶಿಷ್ಯನಾದ ಉತ್ತಂಕನೆಂಬ ಕುಮಾರನನ್ನು ಆಶ್ರಮ ರಕ್ಷಣೆಗೆಂದು ನಿಯಮಿಸಿ ಮನೆ ಯಲ್ಲಿ ಯಾವ ಕೊರತೆ ಬಾರದಂತೆ ನೋಡಿಕೊಳ್ಳುವಂತೆ ಆಜ್ಞಾಪಿಸಿ, ಹೊರಟು ಹೋದನು. ಹೀಗಿರುವಾಗ ಉಪಾಧ್ಯಾಯ ಸ್ತ್ರೀ ಜನವು ಅವನನ್ನು ಕರೆಯಿಸಿ 'ನಿನ್ನ ಗುರುಪತ್ನಿಯು ಋತುಸ್ನಾತಳಾಗಿದ್ದಾಳೆ. ಅವಳ ಋತುಕಾಲವು ವ್ಯರ್ಥವಾಗದಂತೆ ಮಾಡಿ, ಏತತ್ಕರ್ಮ ಲೋಪವಾಗದಂತೆ ನಡೆ' ಎಂದರು. ಉತ್ತಂಕನು ಕಿವಿಯನ್ನು ಮುಚ್ಚಿ 'ಹರಿ ಹರೀ !' ಎಂದು ಅಂತಹ ದುಷ್ಕಾರ್ಯವನ್ನು ಮಾಡುವುದಿಲ್ಲವೆಂದು ತಿರಸ್ಕರಿಸಿದನು. ಕೆಲಕಾಲವಾಯಿತು. ವೇದನು ಮನೆಗೆ ಬಂದು ನಡೆದುದೆಲ್ಲವನ್ನೂ ತಿಳಿದು, ಶಿಷ್ಯನಲ್ಲಿ ಪ್ರೀತನಾದನು. "ವತ್ಸ ! ನಿನ್ನ ಕಾಮಿತಗಳೆಲ್ಲ ನೆರವೇರಲಿ. ಧರ್ಮ ದಿಂದ ಶುಶ್ರೂಷೆಯನ್ನು ಮಾಡಿದೆ. ವಿದ್ಯೆಗಳೆಲ್ಲ ನಿನಗೆ ಸಿದ್ಧಿಸಲಿ !" ಎಂದು ವರವಿತ್ತು ಕಳುಹಿಸಿದನು. ಆಗ ಉತ್ತಂಕನು "ಗುರುದಕ್ಷಿಣೆಯನ್ನಿತ್ತು ಹೋಗುವುದು ನನ್ನ ಕರ್ತವ್ಯವಾಗಿದೆ. ಏನನ್ನಿತ್ತು ಸೇವಿಸಲಿ ?" ಎಂದನು. "ನಿನ್ನ ಗುರುಪತ್ನಿಯು ಏನನ್ನು ಬೇಡುವಳೋ ಅದನ್ನು ತಂದುಕೊಡು' ಎಂದ ಗುರುವಿನ ಮಾತಿನಂತೆ, ಉತ್ತಂಕನು ಗುರುಪತ್ನಿಯನ್ನು ಕೇಳಿದನು.

"ಪೌಷ್ಯರಾಜನಲ್ಲಿಗೆ ಹೋಗು. ಅವನ ರಾಣಿಯ ದಿವ್ಯ ವಜ್ರಕುಂಡಲಗಳನ್ನು ಬೇಡಿ ತಂದುಕೊಡು ! ಇಂದಿನಿಂದ ನಾಲ್ಕನೆಯ ದಿನ ಪುಣ್ಯಕ ವ್ರತವಿರುವುದು. ಅಂದು ನಾನು ಆ ಕುಂಡಲಗಳನ್ನು ಧರಿಸಲು ಇಚ್ಛಿಸುವೆ. ತಂದುಕೊಟ್ಟರೆ, ನಿನಗೆ ಸರ್ವಶ್ರೇಯಸ್ಸಾಗಲಿ ! ಇಲ್ಲದಿದ್ದರೆ ಶ್ರೇಯಸ್ಸೆಲ್ಲಿಯದು ?" ಎಂದ ಗುರುಪತ್ನಿಯ ಮಾತನ್ನಾಲಿಸಿ, ಉತ್ತಂಕನು ಹೊರಟುಹೋದನು.

ಉತ್ತಂಕನು ಪೌಷ್ಯಪುರಕ್ಕೆ ಹೋಗುತ್ತ, ಹಾದಿಯಲ್ಲಿ ವೃಷಭಾರೂಢನಾದ ಉನ್ನತಕಾಯ ಪುರುಷನನ್ನು ಕಂಡನು. ಆ ಪುರುಷನು "ಉತ್ತಂಕ ! ಈ ಎತ್ತಿನ ಸಗಣಿಯನ್ನು ತಿನ್ನು" ಎಂದನು. ಉತ್ತಂಕ ಸುಮ್ಮನಿರಲು, ಆ ಮಹಾಪುರುಷನು "ವತ್ಸ ! ನಿನ್ನ ಗುರುವೂ ತಿಂದಿರುವನು, ಸಂಶಯಿಸದೆ ತಿನ್ನು ಇದರ ಪುರೀಷವನ್ನು" ಎಂದನು. ಉತ್ತಂಕನಾಗ ಗೋಮಯ ಗೋಮೂತ್ರಗಳನ್ನು ತಿಂದು, ಅವಸರದಿಂದ ನಿಂತೇ ಆಚಮಿಸಿ, ಮುಂದೆ ಪಯಣಿಸಿದನು.

ಪೌಷ್ಯನನ್ನು ನೋಡಿ ಉತ್ತಂಕನು ತನ್ನ ಗುರುದಕ್ಷಿಣೆಗಾಗಿ ಅವನ ರಾಣಿಯ ಕುಂಡಲಗಳನ್ನು ಬೇಡಿದನು. ರಾಣಿಯನ್ನು ಅಂತಃಪುರದಲ್ಲಿ ಕಂಡು ಬೇಡಿದರೆ ಕೊಡು ವಳೆಂದು ನುಡಿದ ರಾಜನ ಮಾತಿನಂತೆ, ಉತ್ತಂಕನು ಅಂತಃಪುರವನ್ನು ಹೊಕ್ಕು ನೋಡಲು, ಅಲ್ಲಿ ಆಕೆ ಕಾಣಲಿಲ್ಲ. ಮತ್ತೆ ರಾಜನಲ್ಲಿಗೆ ಬಂದು "ಸುಳ್ಳು ಹೇಳಿದು ದೇಕೆ ? ಇಲ್ಲವೆನ್ನಬಾರದಿತ್ತೇ ?" ಎಂದು ಕೇಳಿದ ವಿಪ್ರನನ್ನು ನೋಡಿ, ರಾಜನು "ನೀನು ಅಶುಚಿಯಾಗಿರುವೆ ಎಂದು ಕಾಣುತ್ತಿದೆ. ನನ್ನ ಪತ್ನಿಯು ಅಶುಚಿ ಜನರಿಗೆ ಕಾಣಿಸಳು" ಎಂದನು. ಆಗ ಉತ್ತಂಕನು ಹಾದಿಯಲ್ಲಿ ತಾನು ನಿಂತು ಆಚಮಿಸಿದ್ದನ್ನು ನೆನೆದು, ರಾಜನಿಗೆ ನಿವೇದಿಸಿದನು. ಪುನಃ ವಿಪ್ರನು ಕೈಕಾಲು ಮುಖ ಗಳನ್ನು ತೊಳೆದು, ಪ್ರಾಙ್ಮುಖನಾಗಿ ಕೂತು, ಸ್ವಚ್ಛವು, ಶೀತಲವು, ಹೃದಯ ಪರ್ಯಂತ ಮಾತ್ರ ಪ್ರವೇಶನೀಯವು ಆದ ಜಲವನ್ನು ಮೂರು ಸಲ ಆಚಮಿಸಿ, ಶುದ್ಧನಾಗಿ ಅಂತಃಪುರ ಪ್ರವೇಶವನ್ನು ಮಾಡಿದನು. ಆಗ ಆ ಪತಿವ್ರತಾ ರತ್ನವು ಅವನ ಕಣ್ಣಿಗೆ ಕಾಣಿಸಿದಳು. ಸ್ವಾಗತವನ್ನು ಹೇಳಿ, 'ಏನು ಬೇಕು ಬೇಡು' ಎಂದಳು. 'ಗುರುಪತ್ನಿಗಾಗಿ ಕುಂಡಲಗಳನ್ನು ಬೇಡಲು ಬಂದಿರುವೆ'ನೆಂದ ಬ್ರಾಹ್ಮಣ ನಿಗೆ ಅವನ್ನಿತ್ತು, ಆಕೆ "ಈ ಕುಂಡಲಗಳನ್ನು ಕದಿಯಲು ತಕ್ಷಕನು ಕಾದಿದ್ದಾನೆ. ಅಪ್ರಮತ್ತನಾಗಿ ಹೋಗು" ಎಂದು ಪೂಜಿಸಿ ಕಳುಹಿಸಿದಳು.

ಪೌಷ್ಯನಾಗ ಉತ್ತಂಕನನ್ನು ನೋಡಿ "ಪೂಜ್ಯನೇ ! ಪಾತ್ರನು ಬಂದಾಗ ಬಿಡ ಬಾರದು. ಗುಣವಂತನಾದ ಅತಿಥಿ ಬಂದಿರುವೆ ! ಶ್ರಾದ್ಧವನ್ನು ಮಾಡುವೆನು. ಕ್ಷಣ ವನ್ನು ಸ್ವೀಕರಿಸು" ಎಂದನು. ಸಮ್ಮತಿಸಿ ವಿಪ್ರನು ವಿಪ್ರಶಾಲೆಯಲ್ಲಿ ಭುಜಿಸಲು ಕೂತನು. ಆಗ ಅನ್ನದಲ್ಲಿ ಕೂದಲನ್ನು ಕಂಡು ಉತ್ತಂಕನು "ಅಶುದ್ಧಾನ್ನವನ್ನು ಕೊಟ್ಟ ನೀನು ಅಂಧನಾಗೆ"ಂದು ಶಪಿಸಿದನು. ಪೌಷ್ಯನೂ ಕುಪಿತನಾಗಿ "ನಿಷ್ಕಾರಣ ವಾಗಿ ಶುದ್ಧಾನ್ನವನ್ನು ಅಶುಚಿಯೆಂದೆ, ಆದ್ದರಿಂದ ನೀನು ಸಂತಾನರಹಿತನಾಗು" ಎಂದನು. ಉತ್ತಂಕನು ಕೇಶರಾಶಿಯನ್ನು ಅನ್ನದಲ್ಲಿ ತೋರಿಸಿ "ಮುಕ್ತಕೇಶಿ ಯಾದವಳು ಮಾಡಿದ ಈ ಅನ್ನದಲ್ಲಿ ಕೇಶವು ಬಂದಿತಾದ್ದರಿಂದ ಅನ್ನವು ಅಶುಚಿಯೇ ಸರಿ. ನಿಷ್ಕಾರಣವಾಗಿ ನೀನು ನನಗೆ ಕೊಟ್ಟ ಶಾಪವು ಫಲಿಸದಿರಲಿ !" ಎಂದು, ರಾಜನಿಗೆ "ಅಂಧನಾಗಿ ಮತ್ತೆ ಶೀಘ್ರದಲ್ಲಿಯೇ ಅನಂಧನಾಗೆ"ಂದು ವಿಶಾಪವನ್ನೂ

ಅನುಗ್ರಹಿಸಿ, "ನಿನ್ನ ಶಾಪವನ್ನೂ ನಿವರ್ತಿಸು" ಎಂದು ಕೇಳಿದನು. ಪೌಷ್ಯನಾಗ "ಬ್ರಾಹ್ಮಣ ಹೃದಯವು ನವನೀತವು, ವಾಕ್ಕು ಮಾತ್ರ ನಿಶಿತ ಖಡ್ಗವು, ಆದರೆ ಕ್ಷತ್ರಿಯನಾದೆನ್ನ ಹೃದಯವು ಖಡ್ಗನಿಶಿತವಾಗೇ ಇರುವುದು. ವಿಶಾಪವನ್ನು ಕೊಡ ಲಾರೆ"ನೆಂದನು. ಇರಲಿ ನೋಡೋಣವೆಂದು ಉತ್ತಂಕನು ಗುರುಗಳ ಮನೆಗೆಂದು ಹೊರಟನು.

ಹಾದಿಯಲ್ಲಿ ಅವನ ಹಿಂದೆ ಒಬ್ಬ ಕ್ಷಪಣಿಕನು ಬರುತ್ತಿದ್ದನು. ಉತ್ತಂಕನು ಲಘುಶಂಕೆಗೋಸುಗ ಹೋಗುತ್ತ, ಆ ದಿವ್ಯ ಕುಂಡಲಗಳನ್ನು ಅಲ್ಲಿ ನೆಲದಲ್ಲಿಟ್ಟು ಹೋದನು. ತಕ್ಷಣವೇ ಕ್ಷಪಣಕನು ಕುಂಡಲಗಳನ್ನಪಹರಿಸಿ ಓಡಿದನು. ಉತ್ತಂಕನು ಶುಚಿಯಾಗಿ, ವೇಗವಾಗಿ ಅವನ ಹಿಂದೆ ತಾನೂ ಓಡಿದನು. ಕ್ಷಪಣಕ ರೂಪವನ್ನು ಬಿಟ್ಟು ಆ ಚೋರನು ತಕ್ಷಕ ಮಹಾಸರ್ಪನಾಗಿ ಭೂ ಬಿಲವನ್ನು ಹೊಕ್ಕು ತನ್ನ ನಾಗಲೋಕವನ್ನು ಸೇರಿದನು. ಉತ್ತಂಕನು ತನ್ನ ದಂಡಕಾಷ್ಠದಿಂದ ಆ ಬಿಲವನ್ನು ತೋಡಿ, ತಾನೂ ಹೋಗಲು ಹವಣಿಸುತ್ತಿದ್ದನು. ಆಗ ಇಂದ್ರನು ಅವನ ಸಹಾಯ ಕ್ಕೆಂದು ವಜ್ರವನ್ನು ಕಳಿಸಿದನು. ಅದು ಕಾಷ್ಠದಲ್ಲಿ ಹೊಕ್ಕು ಪಾತಾಳ ಮಾರ್ಗವನ್ನು ಮಾಡಿತು. ನಾಗಲೋಕವನ್ನು ಹೊಕ್ಕು ವಿಪ್ರನು ಅಲ್ಲಿ ವಿವಿಧ ಪ್ರಾಸಾದಗಳನ್ನು, ಕ್ರೀಡಾ ಸ್ಥಾನಗಳನ್ನು, ಸಭಾ ಚತ್ವರಗಳನ್ನು, ಅಲ್ಲಲ್ಲಿ ನೆರೆದಿರುವ ನಾನಾ ವಿಧ ನಾಗರನ್ನು ಕಂಡನು. ಅವರನ್ನಿಂತು ನುತಿಸಿದನು—

"ಐರಾವತ, ಧೃತರಾಷ್ಟ್ರ, ತಕ್ಷಕ, ವಾಸುಕಿ ಮುಂತಾದ ನಾಗರಾಜರಿಗೆ ನಮ ಸ್ಕರಿಸುವೆನು. ಮಳೆಗರೆಯುವ ಮೇಘಗಳಂತೆ, ಮಿಂಚಿನಂತೆ, ಶೋಭಿಸುವ ನಾಗರಿಗೆ ಮುಖ್ಯನಾದ ಐರಾವತನೇ ಪ್ರಸನ್ನನಾಗು. ನಿನ್ನ ಪರಿವಾರವು ದೇವತೆಗಳಂತೆ ಶೋಭಿ ಸುತ್ತಿರುವುದು. ಗಂಗೆಯ ಉತ್ತರ ತೀರದಲ್ಲಿರುವ ನಾಗಮಂದಿರಗಳಲ್ಲಿ ವಿಹರಿಸುವ ಪನ್ನಗಾಧೀಶರೇ ! ನಿಮಗೆ ಶರಣು. ೨೮೦೦೮ ಸಂಖ್ಯಾವಿಶಿಷ್ಟರಾದ, ಸೂರ್ಯಪ್ರಗ್ರಹ (ಲಗಾಮು)ಗಳಾಗಿರುವ ನಾಗರಿಗೆ ಒಡೆಯನಾದ ಐರಾವತನಿಗೆ ವಂದಿಸುವೆನು. ಐರಾ ವತ ಭ್ರಾತನಾದ ಧೃತರಾಷ್ಟ್ರನ ತೇಜೋಬಲದಿಂದ ಸೂರ್ಯ ತುರಗ ತೋತ್ರಗಳಾಗಿ ರುವ ಸರ್ಪಗಳು ಸೂರ್ಯ ತೇಜದಿಂದ ದಗ್ಧವಾಗದೆ, ಉಳಿಯುತ್ತಿವೆ. ಅಶ್ವಸೇನನಿಂದ ಕೂಡಿ ಕುರುಕ್ಷೇತ್ರದಲ್ಲಿಯೂ ಇಕ್ಷುಮತೀ ನದೀ ತೀರದಲ್ಲಿಯೂ ವಿಹರಿಸುವ ತಕ್ಷಕನಿಗೆ ನಮೋ ನಮಃ."

ಸ್ತುತಿಸಿ ಶರಣಾಗತನಾಗಿಯೂ, ಕುಂಡಲಗಳನ್ನು ಪಡೆಯಲಾರದ ಉತ್ತಂಕನು, ಅಲ್ಲಿ ಒಂದು ಮಗ್ಗದಲ್ಲಿ ಕರಿ ದಾರವನ್ನು ಹಾಸಿ, ಬಿಳಿ ದಾರದಿಂದ ಹೊಕ್ಕುಮಾಡಿ ನೇಯುತ್ತಿರುವ ಲಲನೆಯರನ್ನಿಬ್ಬರನ್ನೂ, ಹನ್ನೆರಡು ಕಡ್ಡಿಗಳಿಂದ ಕೂಡಿ, ಆರು ಜನ ಬಾಲರಿಂದ ನಡೆಸಲ್ಪಡುವ ಒಂದು ಚಕ್ರವನ್ನೂ, ಅಲ್ಲಿಯೇ ಅಶ್ವಾರೂಢನಾಗಿದ್ದ ಒಬ್ಬ ಮಹಾಪುರುಷನನ್ನೂ ಕಂಡು ಅವರನ್ನಿಂತು ಸ್ತುತಿಸಿದನು—

"ಪ್ರಜಾಪಾಲನ ಚತುರನಾದ ಪ್ರಜಾಪತಿನಾಮಕ ನಾರಾಯಣಾ ! ಮೂರು ಚಾತುರ್ಮಾಸಗಳು, ಆರು ಋತುಗಳು, ಇಪ್ಪತ್ನಾಲ್ಕು ದರ್ಶ ಪೂರ್ಣಿಮಾ ಪರ್ವಗಳು, ಮುನ್ನೂರ ಅರವತ್ತು ದಿನಗಳು ಇವುಗಳಿಗೆ ನಿಯಾಮಕನಾಗಿ ಸಂವತ್ಸರವೆಂಬ ಕಾಲ ಚಕ್ರವನ್ನು ಮೂರು ಗುಣಗಳು, ಆರು ವಿಕಾರಗಳು, ಇಪ್ಪತ್ನಾಲ್ಕು ತತ್ವಗಳು, ಮುನ್ನೂರ ಅರವತ್ತು ನೂರು ಪುರುಷನಾಡಿಗಳು, ಮುನ್ನೂರ ಅರವತ್ತು ನೂರು ಸ್ತ್ರೀ ನಾಡಿಗಳು ಎಂಬ ಆಧ್ಯಾತ್ಮಿಕ ಶರೀರ ಯಾತ್ರೆಯನ್ನು ನಿನ್ನ ದಿವ್ಯಾಜ್ಞೆಯಿಂದ ನಡೆಸುವ ಧಾತೃ-ವಿಧಾತೃಗಳನ್ನೂ, ಸಂಸಾರ ಚಕ್ರಪ್ರವರ್ತನೆ ಮಾಡುವ ಶ್ರೀ ಭಾರತಿಯರನ್ನೂ ಕಂಡೆ. ಅವರು ನೇಯುವ ಈ ಬಿಳೀ ಕರೀ ದಾರಗಳು ಜೀವರ ಸುಖ ದುಃಖಗಳಂತೆ ಹಾಸುಹೊಕ್ಕಾಗಿರುವುದನ್ನು ಕಂಡೆ. ಸರ್ವಜೀವ ಭಯಪ್ರದನಾದುದರಿಂದ ವಜ್ರ ನಾಮಕನಾಗಿ ವಜ್ರಾಯುಧ ಸ್ವಾಮಿಯಾಗಿರುವೆ. ಶ್ರೀಹರೀ ! ಭುವನವನ್ನು ನೀನೇ ರಕ್ಷಿಸುವೆ. ಲಿಂಗಶರೀರ ಭಂಗವಾಗಿ ಜೀವನು ಸ್ವರೂಪಾನಂದವನ್ನು ಹೊಂದುವದು ನಿನ್ನಿಂದ. ಅವಿದ್ಯಾಗ್ರಂಥಿಚ್ಛೇದನವನ್ನು ಮಾಡಿ ನಿನ್ನ ಲೋಕದಲ್ಲಿ ಪುಣ್ಯ ಪಾಪಗಳ ವಿಚಾರಣೆಯನ್ನು ನಡೆಸಿ, ಯೋಗ್ಯ ಗತಿಯನ್ನು ದಯಪಾಲಿಸುವವನು ನೀನೇ. ನೀರಿನಲ್ಲಿರುವುದರಿಂದ ನೀನು ನಾರಾಯಣನೆನಿಸಿರುವೆ. ಎಲ್ಲ ನರರಲ್ಲಿದ್ದು ಅಗ್ನಿ ದೀಪಕನಾಗಿರುವುದರಿಂದ ನಿನ್ನನ್ನು ವೈಶ್ವಾನರನೆಂಬುವರು. ಜಗದೀಶ ! ಇಂದ್ರ, ವಹ್ನಿ ವರುಣಾದಿ ಸರ್ವದೇವ ವಂದ್ಯ ! ನಿನಗೆ ನಮಸ್ಕರಿಸುವೆನು. ನನ್ನನ್ನು ಕಾಪಾಡು !"

ಅದನ್ನು ಕೇಳಿ ಅಶ್ವವಾಹನನಾದ ಮಹಾಪುರುಷನು ಪ್ರೀತನಾದನು. ಅವನ ಆಜ್ಞೆಯಂತೆ ಉತ್ತಂಕನು ಕುದುರೆಯ ಅಪಾನವನ್ನು ಶಂಖದಂತೆ ಊದಿದನು. ತತ್-ಕ್ಷಣವೇ ಆ ಕುದುರೆಯ ಸರ್ವೇಂದ್ರಿಯಗಳಿಂದ ಅಗ್ನಿಜ್ವಾಲೆಗಳೆದ್ದು, ನಾಗಲೋಕ ವನ್ನು ಹೊಗೆಯಿಂದ ಮುಚ್ಚಿದವು. ತಕ್ಷಕನು ಭೀತನಾಗಿ ಬಂದು ಉತ್ತಂಕನಿಗೆ ವಂದಿಸಿ, ಕುಂಡಲಗಳನ್ನರ್ಪಿಸಿದನು. ಉತ್ತಂಕನು ಅಂದೇ ಪುಣ್ಯಕವ್ರತವೆಂದು ಸ್ಮರಿಸಿ, ಕುಂಡಲ ವನ್ನಿಂದೇ ಗುರುಪತ್ನಿಗೆ ಸಮರ್ಪಿಸುವುದು ಹೇಗೆ ಸಾಧ್ಯವಾದೀತೆಂದು ಚಿಂತಿಸುತ್ತಿರಲು ಮಹಾ ಪುರುಷನು ಅವನನ್ನು ತನ್ನ ಕುದುರೆಯ ಮೇಲೆ ಕೂಡಿಸಿಕೊಂಡು, ಕಣ್ಣು ಮುಚ್ಚಿ ತೆಗೆಯುವಷ್ಟರಲ್ಲಿ, ಅವನನ್ನು ಗುರ್ವಾಶ್ರಮ ದ್ವಾರದಲ್ಲಿ ತಂದಿಳಿಸಿ ಹೋದನು.

ಗುರುಪತ್ನಿಯು ಸ್ನಾತಳಾಗಿ, ವ್ರತ ಸಂಕಲ್ಪವನ್ನು ಮಾಡಲೆಣಿಸುತ್ತಿದ್ದಳು. ಉತ್ತಂಕನು ಬೇಗ ಹೋಗಿ ಆಕೆಗೆ ವಂದಿಸಿ, ಬೆಂಡೋಲೆಗಳಿತ್ತು ಕೈಮುಗಿದು ನಿಂತನು. "ಉತ್ತಂಕ ! ಸರಿಯಾದ ವೇಳೆಗೆ ಬಂದೆ. ಕುಂಡಲಗಳನ್ನೂ ತಂದೆ. ಇದೀಗ ಬರದಿದ್ದರೆ ನಿನಗೆ ಶಾಪವನ್ನು ಕೊಡಲು ಸಿದ್ಧಳಿದ್ದೆನು. ಹೋಗು, ನಿನಗೆ ಶ್ರೇಯವಾಗಲಿ !" ಎಂದ ಗುರುಪತ್ನಿಯನ್ನು ಬೀಳ್ಕೊಟ್ಟು ಗುರುಗಳಿಗೆ ವಂದಿಸಿ, ಎಲ್ಲವನ್ನೂ ವಿವರಿಸಿ ಉತ್ತಂಕನು "ನಾನು ಕಂಡ ವೃಷಭಾರೂಢ ಪುರುಷನಾರು ? ಪುರೀಷವನ್ನು ತಿನ್ನೆನ್ನಲು ಕಾರಣ

ವೇನು ? ನಾಗಲೋಕದಲ್ಲಿದ್ದ ಚಕ್ರವಾವುದು ? ತರುಣಿಯರೀರ್ವರಾರು ? ಅಶ್ವಾ-
ರೋಹಿಯು ಯಾರು ?" ಎಂದು ಕೇಳಿದನು.

"ಸ್ತ್ರೀಯರೀರ್ವರು ಶ್ರೀ ಭಾರತೀಯರು. ಬಿಳಿ ಕಪ್ಪು ದಾರಗಳೇ ಹಗಲು ರಾತ್ರಿ ಗಳು. ಹನ್ನೆರಡು ಹಲಗೆಗಳುಳ್ಳ ಚಕ್ರವೇ ಸಂವತ್ಸರವು. ಆರು ಜನ ಬಾಲರು ಷಡೃತು ಗಳು. ಆ ಪುರುಷನು ಪರ್ಜನ್ಯನು, ಕುದುರೆಯೇ ಅಗ್ನಿದೇವನು. ಹಾದಿಯಲ್ಲಿ ನೀ ಕಂಡ ಎತ್ತೇ ಐರಾವತವು. ಅದನ್ನೇರಿ ಬಂದ ಇಂದ್ರನು ನನ್ನ ಸ್ನೇಹಿತನಾದುದರಿಂದ ನಿನಗೆ ಅಮೃತವನ್ನು ಸಗಣಿಯ ರೂಪದಿಂದ ಕೊಟ್ಟು, ದಂಡಕಾಷ್ಠದಲ್ಲಿ ವಜ್ರವನ್ನಿಟ್ಟು ಸಹಾಯ ಮಾಡಿರುವನು. ಸರ್ವಪ್ರೇರಕನಾದ ಶ್ರೀನಾರಾಯಣ ಸ್ತುತಿಯಿಂದ ನಿನಗೆಲ್ಲ ದೇವತೆಗಳು ಪರಮಾನುಗ್ರಹದಿಂದ ಒಲಿದಿರುವರು. ಒಳ್ಳೆಯದಾಗಲಿ ! ಹೋಗು!" ಎಂದ ಗುರುಗಳಿಗೆ ವಂದಿಸಿ, ಉತ್ತಂಕನು ತಕ್ಷಕನ ಅಪಕೃತಿಯನ್ನು ನೆನೆದು, ಅವನ ಮೇಲೆ ಸೇಡನ್ನು ತೀರಿಸಲು ನಿಶ್ಚಯಿಸಿ, ಹಸ್ತಿನಾಪುರಕ್ಕೆ ಬಂದು, ಜನಮೇಜಯ ರಾಜನನ್ನು ಸಂದರ್ಶಿಸಿದನು; ಆಶೀರ್ವದಿಸಿ "ರಾಜನ್! ಮುಖ್ಯಕರ್ತವ್ಯ ವನ್ನು ಮರೆತು, ಮುಖ್ಯ ಶತ್ರುವು ಜೀವದಿಂದಿರಲು, ಅನ್ಯಕಾರ್ಯಾಸಕ್ತನಾಗಿರುವೆ. ಇದು ನಿನಗುಚಿತವಲ್ಲ" ಎಂದು ನುಡಿದ ಉತ್ತಂಕನ ಮಾತನ್ನಾಲಿಸಿ, ಜನಮೇಜಯನು ಅವನನ್ನರ್ಚಿಸಿ ಕೂಡಿಸಿದನು. ಪ್ರಜಾಪಾಲನ ತತ್ಪರನಾಗಿ ಧರ್ಮವನ್ನು ಬಿಡದೆ ನಡೆಸುವ ತನ್ನಿಂದ ಆಗಬೇಕಾದ ಮುಖ್ಯಕಾರ್ಯವಾವುದೆಂದು ಬೇಡಿದನು.

"ಭರತಾನ್ವಯವರ್ಧನನು, ಕಲಿಮರ್ದನನು, ಧನಂಜಯ ಸನ್ನಿಭನು, ಯಶೋ ವಿಶಾಲನು ಆದ ನಿನ್ನ ತಂದೆಯು ಸಾವಿನ ವಿಧವನ್ನು ಮರೆತೆಯಾ ? ಒಬ್ಬ ಮಾಯಾವಿ ಸರ್ಪರಾಜನ ವಿಷಾಗ್ನಿಗೆ ತುತ್ತಾಗಲು ಆ ಮಹಾನುಭಾವನವನಿಗೆ ಮಾಡಿದ ಅಪರಾಧ ವೇನಾದರಿತ್ತೇ ? ಒಬ್ಬ ವಿಪ್ರ ಬಾಲಕನ ಶಾಪ ವಾಕ್ಯದಿಂದ ನಿಮ್ಮಪ್ಪನನ್ನು ಕೊಂದ ತಕ್ಷಕನನ್ನೂ, ಅವನ ದುಷ್ಟ ಸರ್ಪ ಪರಿವಾರವೆಲ್ಲವನ್ನೂ ನೀನು ಅನೇಕ ವಿಪ್ರರ ಸಹಾಯದಿಂದ ಸರ್ಪ ಯಾಗದ ಆಭೀಲವಹ್ನಿ ಜ್ವಾಲೆಗಳಲ್ಲಿ ಹೋಮಿಸಿ ನಾಶಮಾಡು ! ಒಬ್ಬ ದುಷ್ಟನ ಅಪರಾಧದಿಂದ ಅವನ ಕುಲವೇ ಹಾಳಾಗುವುದನ್ನು ನೋಡಿದ್ದೇನೆ. ರಾವಣನ ಅವಿವೇಕದಿಂದ ಲಂಕೆಯೇ ನಾಶವಾಗಲಿಲ್ಲವೆ ? ಇದು ನಿನ್ನದೇ ಆದ ಕಾರ್ಯವಿರಲಿ ಕೇಳು. ಗುರುಪತ್ನಿಗೆಂದು ನಾ ತರುತ್ತಿದ್ದ ಕುಂಡಲಗಳನ್ನು ಅಪಹರಿಸಿ ನಿಷ್ಕಾರಣವಾಗಿ ನನಗೂ ಅಪಕಾರವನ್ನು ಮಾಡಿದ ತಕ್ಷಕನು ಶಿಕ್ಷಾರ್ಹನೇ ಸರಿ ! ಪರೀಕ್ಷಿತನಿಗೆ ವಿಷೌಷಧಿಯನ್ನಿತ್ತು ಬದುಕಿಸಲು ಬರುತ್ತಿದ್ದ ಕಾಶ್ಯಪನಿಗೆ ಧನವನ್ನಿತ್ತು ದಾರಿಯಲ್ಲೇ ವಿಮುಖನನ್ನಾಗಿಸಿದ ತಕ್ಷಕನು ಶಿಕ್ಷಾರ್ಹನಲ್ಲವೇ ! ಹೇಳು, ರಾಜನ್ ! ಮಾಡು ಸರ್ಪಯಾಗವನ್ನು !" ಎಂದು ಉದಂಕನು ನುಡಿಯಲು, ರಾಜನು ಕೋಪೋದ್ದೀಪಿತನಾದನು. ಅವನ ಮಂತ್ರಿಗಳೂ ಪರೀಕ್ಷಿತನ ಮರಣ ವಿಧವನ್ನು ವಿವರಿಸಿದರು. ರಾಜನು ದುಃಖ ರೋಷ ಸಮನ್ವಿತನಾಗಿ, ಸರ್ಪಯಾಗವನ್ನು ಮಾಡಲು ಸಿದ್ಧನಾದನು.

## ಪುಲೋಮ ಚರಿತೆ

ಪೂರ್ವದಲ್ಲಿ ಕದ್ರೂ ದೇವಿಯು ಶಾಪದಿಂದ ಅವಳ ಮಕ್ಕಳಾದ ಸರ್ಪಗಳು ಜನಮೇಜಯನ ಸರ್ಪಯಾಗದಲ್ಲಿ ಸರ್ವ ಭಕ್ಷಕನಾದ ಅಗ್ನಿಗಾಹುತಿಯಾದರು. ಇದೂ ಒಂದು ಕಾರಣವಾಗಿ ಸರ್ಪಕುಲದ ಅಕಾಲ ಪ್ರಳಯವಾಗುತ್ತಿರಲು ಭೃಗುವಂಶಜನಾದ ರುರುವು ಮಾಡುತ್ತಿದ್ದ ಸರ್ಪ ಸಂಹಾರವನ್ನು ಸಹಸ್ರಪಾದನು ನಿಲ್ಲಿಸಿದಂತೆ, ಜರತ್ಕಾರು ಸುತನಾದ ಆಸ್ತೀಕನೆಂಬ ಮಹರ್ಷಿಯು ಸರ್ಪ ಯಾಗವನ್ನು ನಿಲ್ಲಿಸಿದನು.

ಭೃಗು ಮಹರ್ಷಿಗೆ ಪುಲೋಮೆ ಪತ್ನಿಯಾಗಿದ್ದಳು. ಅವಳು ಗರ್ಭಿಣಿಯಾಗಿದ್ದಳು. ಒಂದುದಿನ ಅವಳನ್ನು ಅಗ್ನಿ ಹೋತ್ರ ರಕ್ಷಣ ಕಾರ್ಯದಲ್ಲಿ ನಿಯಮಿಸಿ, ಭೃಗುವು ಸ್ನಾನ ಕ್ಕೆಂದು ಹೊರಟನು. ಆಗ ಪುಲೋಮನೆಂಬ ರಕ್ಕಸನು ಅಲ್ಲಿಗೆ ಬಂದು, ಆ ಸುಂದರಿ ಯನ್ನು ನೋಡಿ, ಕಾಮೋನ್ಮಾದಪರವಶನಾದನು. 'ಜಾತವೇದ ! ನಿಜವನ್ನು ಹೇಳು, ಇವಳು ಆರ ಸತಿ ?' ಎಂದು ಕೇಳಿದನು. ಅಗ್ನಿ ದೇವನಿಗೆ ಧರ್ಮಸಂಕಟ ಒದಗಿತು. ಅವ ಳನ್ನು ಕೊಡೆಂದು ಕೇಳಿದ ಪುಲೋಮನಿಗೆ, ಅವಳ ತಂದೆ 'ಆಗಲಿ ! ಹೋಗು' ಎಂದು ಅನಿಷ್ಟವನ್ನು ಮುಂದೂಡಿದ್ದನು ; ಮುಂದೆ ಅವಳನ್ನು ವಿಧಿ ವಿಧಾನದಿಂದ ಭೃಗುವಿಗೆ ಅಗ್ನಿ ಸಾಕ್ಷಿಕವಾಗಿ ಧಾರೆಯೆರೆದು ಕೊಟ್ಟಿದ್ದನು. ಆದುದರಿಂದ ಪುಲೋಮನಿಗೆ ವಾಗ್ದಾನ ಮಾಡಿದುದರಿಂದ ಪುಲೋಮನ ಸತಿಯೋ, ಅಸಡ್ಡೆಯ ವಾಗ್ದಾನವನ್ನು ಲೆಕ್ಕಿಸದ ವಿವಾಹ ಸಂಸ್ಕಾರದಿಂದ ಭೃಗುವಿನ ಪತ್ನಿಯೋ ಎಂಬ ಸಂದೇಹದಿಂದ ಅಗ್ನಿ ಸುಮ್ಮನಿದ್ದನು ; ಸುಳ್ಳನ್ನು ಹೇಳಲಾರದೆ, ನಿಜವನ್ನು ಹೇಳಿದರೆ ಭೃಗುವು ಶಾಪ ವನ್ನೀವನೆಂದೂ ಹೆದರಿದನು. ಆಗ ಪುಲೋಮನು ಮತ್ತೆ ಕೇಳಿದನು. ಅಗ್ನಿಯು 'ಪುಲೋಮಾ ! ಇವಳು ಅಗ್ನಿ ಸಾಕ್ಷಿಕವಾಗಿ ಭೃಗು ಪತ್ನಿಯಾಗಿರುವ'ಳೆಂದನು. ಅದನ್ನು ಲೆಕ್ಕಿಸದೆ ರಕ್ಕಸನು ವರಾಹ ರೂಪನ್ನು ತಾಳಿ, ಅವಳನ್ನೆತ್ತಿಕೊಂಡು ಓಡಿದನು. ಆಗ ಗರ್ಭದಲ್ಲಿದ್ದ ಅರ್ಭಕನು ಚ್ಯುತನಾಗಿ, ಹೊರಬಂದನು. ಅವನು ಸೂರ್ಯ ಸಹಸ್ರ ಸಮಪ್ರಕಾಶನಾಗಿದ್ದನು. ಅವನ ತೇಜಃಪ್ರಭಾವದಿಂದ ಪುಲೋಮನು ಸುಟ್ಟು ಬೂದಿ ಯಾದನು. ಚ್ಯುತನಾದುದರಿಂದ ಚ್ಯವನನೆನಿಸಿದ ಬಾಲಕನೊಡನೆ ಮನೆಗೆ ಬಂದ ಸುಂದರಿ, ಅಳುತ್ತಾ ಭೃಗುವಿಗಾವಾರ್ತೆಯನ್ನರುಹಿದಳು. ಅವಳ ಕಣ್ಣೀರೇ ವಧೂಸರ ಎಂಬ ನದಿಯಾಗಿ ಹರಿಯಿತು. ಭೃಗುವಾಗ ಅಗ್ನಿದೇವನು ವಾಗ್ದಾನದ ವಿಷಯವ ನ್ನೊಪ್ಪಿ ಅಗ್ನಿಸಾಕ್ಷಿಕ ವಿವಾಹದಿಂದ ಮಾತ್ರ ಭೃಗುಪತ್ನಿ ಎಂದು ರಕ್ಕಸನಿಗೆ ಹೇಳಿದ ಮಾತನ್ನು ಕೇಳಿ, ಕುಪಿತನಾಗಿ, 'ಸರ್ವ ಭಕ್ಷಕನಾಗೆ'ಂದು ಶಾಪವನ್ನಿತ್ತನು. ಅಗ್ನಿ ದೇವನು ಅಯ್ಯಾ ! ತಿಳಿಯದ ವಿಷಯದ ವಿವರಗಳನ್ನು ಕೇಳಿದಾಗ, ತಿಳಿದವನು ಸತ್ಯ ವನ್ನು ಹೇಳದಿದ್ದರೆ ಅಥವಾ ಏನೂ ಮಾತಾಡದಿದ್ದರೆ ಅವನಿಗೆ ಘೋರ ನರಕವಾಗುವ ದೆಂದಿದೆ. ಅಖಿಲಕರ್ಮ ಸಾಕ್ಷಿಯಾದ ದೇವತೆಯಾಗಿದ್ದು, ನಾನು ಸುಳ್ಳನ್ನು ಹೇಗೆ ಹೇಳಲಿ ? ಇದ್ದುದನ್ನಿದ್ದಂತೆ ನುಡಿದ ನನಗೆ ಶಾಪವನ್ನು ಕೊಟ್ಟ ನಿನಗೆ ನಾನೂ ಶಾಪ ಕೊಡಬಲ್ಲೆ. ಆದರೆ ದ್ವಿಜರೇನುಮಾಡಿದರೂ ಪೂಜ್ಯರಹುದು. ನೀನು ಮಹಾವಿಪ್ರನು,

ವಿಪ್ರರಿಡುವ ಹೋಮ ದ್ರವ್ಯಗಳಿಗಾಗಿ, ಋಣಿಯಾಗಿರುವೆನು. ಅದರ ಮೇಲೆ ನನಗೆ ಸಿಟ್ಟಿಲ್ಲ. ಆದರೆ ನನಗಿತ್ತ ಶಾಪದಿಂದ ಲೋಕ ಹಿತವನ್ನು ಕೆಡಿಸಿದೆ. ಹವ್ಯ ಕವ್ಯಗಳನ್ನು ಸ್ವೀಕರಿಸಿ ದೇವ ಪಿತೃಗಳಿಗೀವ ನನ್ನನ್ನು ಸರ್ವ ಭಕ್ಷಕನಾಗೆಂದೆ. ಸರ್ವ ಭಕ್ಷಕ ನಾದೊಡೆ ಅಶುಚಿಯಾದೆ ; ಅಶುಚಿಯಾದ ನನ್ನಿಂದ ಯಜ್ಞಾದಿ ಕಾರ್ಯ ನಿರ್ವಹಣ ವೆಂತು ? ಎಂದು ಸಿಟ್ಟಿನಿಂದ ಅಗ್ನಿಯು ತನ್ನ ವ್ಯಾಪ್ತವಾದ ತೇಜೋಮೂರ್ತಿ ಯನ್ನು ಉಪಸಂಹರಿಸಿದನು.

ಆಗ ಅಗ್ನಿಯ ಜ್ವಾಲೆಗಳಡಗಿದವು. ಆಹುತಿಗಳು ಹುತವಾಗಲಿಲ್ಲ. ಧೂಪ ದೀಪಾ ದಿಗಳು ನಿಂತವು. ಜನರು ಸಂಭ್ರಮದಿಂದ ಋಷಿ ಜನರಿಗೆ ಶರಣಾದರು. ಅವರು ದೇವತೆ ಗಳಿಗೆ ಮೊರೆ ಇಟ್ಟರು. ದೇವಗಣವು ಬ್ರಹ್ಮನನ್ನು ಬೇಡಿತು. ಆಗ ವಿಧಾತನು ಅಗ್ನಿ ದೇವನನ್ನು ಕರೆದು ಇಂತೆಂದನು, 'ಭೃಗುವಚನದಿಂದ ನೀನು ಸರ್ವ ಭಕ್ಷಕನಾದರೂ, ನಿನಗೆ ಲೇಪವಿಲ್ಲದಂತೆ ನಾನು ವರವನ್ನಿತ್ತಿರುವೆನು. ಅತ್ಯಂತ ಶುಚಿಯಾಗಿಯೇ ನೀನಿರು. ಪವಿತ್ರರಲ್ಲಿ ಪವಿತ್ರನಾಗು. ಪಾತ್ರರಲ್ಲಿ ಉತ್ತಮ ಪಾತ್ರನೆನಿಸು. ಭೃಗುವಚನವಮೋಘ ವದೂ ಸತ್ಯವಾಗಲಿ ! ಎಂದು ಸಮಾಧಾನಪಡಿಸಿ, ಎಂದಿನಂತೆ ಲೋಕದ ತೇಜಃಪುಂಜ ನಾದ ಅಗ್ನಿಯು ಜ್ವಲಿಸಿ ಉರಿಯುವಂತೆ ಮಾಡಿದನು.

ಅಂತಹ ಭೃಗುಪುತ್ರನಾದ ಚ್ಯವನನಿಗೆ ಸುಕನ್ಯೆಯಲ್ಲಿ ಪ್ರಮತಿ ಹುಟ್ಟಿದನು. ಪ್ರಮತಿಗೆ ಘೃತಾಚಿಯಲ್ಲಿ ರುರು ಎಂಬ ಸುತನು ಜನಿಸಿ ತೇಜಃಸಂಪನ್ನನಾಗಿದ್ದನು. ಅವನು ವಿಶ್ವಾವಸು ಗಂಧರ್ವ ರಾಜನಿಗೆ ಮೇನಕೆಯಲ್ಲಿ ಜನಿಸಿ, ಸ್ಥೂಲಕೇಶ ಋಷಿ ತಪೋವನದಲ್ಲಿ ಬೆಳೆಯುತ್ತಿದ್ದ ಪ್ರಮದ್ವರೆ ಎಂಬ ರೂಪಲಾವಣ್ಯವತಿಯನ್ನು ಮೋಹಿಸಿ ವಿವಾಹವಾಗಲು ನಿಶ್ಚಯಿಸಿದನು. ಪ್ರಮತಿ ಸ್ಥೂಲಕೇಶರೂ ಇದಕ್ಕೆ ಸಮ್ಮತಿಯಿತ್ತು ನಿಶ್ಚಿತಾರ್ಥವನ್ನೂ ನಡೆಸಿದರು. ಉತ್ತರಾ ನಕ್ಷತ್ರದಲ್ಲಿ ವಿವಾಹ ನಿಶ್ಚಿತವಾಗಿತ್ತು. ಒಂದು ದಿನ ಪ್ರಮದ್ವರೆ ಸಖಿಯರಿಂದ ಕೂಡಿ ವನದಲ್ಲಿ ಆಡುತ್ತಾ ಹಾವೊಂದನ್ನು ತುಳಿದಳು. ಅದು ಮೃತ್ಯುಚೋದಿತವಾಗಿ ಅವಳನ್ನು ಕಚ್ಚಿತು. ಪ್ರಮದ್ವರೆ ಕೆಳಗೆ ಬಿದ್ದು, ಚೀರಿ, ವಿಷವೇರಿ ಮೃತಳಾದಳು. ಸಖಿಯರು ಹಾಹಾಕಾರವನ್ನು ಮಾಡುತ್ತ ದಿಕ್ಕೆಟ್ಟು ಓಡಿದರು, ಆಗ ಆಶ್ರಮಾಂತರಗಳಲ್ಲಿಂದ ಭರದ್ವಾಜ, ಕೌಶಿಕ, ಕಠ, ಗೌತಮ ಮುಂತಾದ ಋಷಿಗಳು ಬಂದು, ಸತ್ತ ಪ್ರಮದ್ವರೆಯನ್ನು ನೋಡಿ ಕೃಪೆಯಿಂದ ಗೋಳಾ ಡಿದರು. ಪ್ರಮತಿ ಸ್ಥೂಲಕೇಶರ ದುಃಖವಂತೂ ಹೇಳತೀರದು. ರುರುವು ವನವನ್ನು ಹೊಕ್ಕು ಬಹು ಶೋಕಭರದಿಂದ ತಲೆಬಾಗಿ ಕೂತು ಹೋ ! ಎಂದು ಅತ್ತನು.

'ಹಾ ! ಪ್ರಮದ್ವರೇ ! ಎಲ್ಲಿ ಹೋದೆ ? ಎಂತಹ ದುಃಖವನ್ನಿತ್ತೆ ! ಬಂಧು ಜನರು ನಿನ್ನ ವಿಯೋಗವನ್ನೆಂತು ಸಹಿಸುವರು ? ದೇವತೆಗಳಿರಾ ! ನಾನು ತಪವನ್ನು ಮಾಡಿದ್ದರೆ, ಗುರುಜನರನ್ನು ಸೇವಿಸಿದ್ದರೆ, ಹುಟ್ಟಿದಂದಿನಿಂದ ವ್ರತನಿಷ್ಠನಾಗಿದ್ದರೆ, ನನ್ನ ಪ್ರಿಯೆ ಪ್ರಮದ್ವರೆ ಬದುಕಲಿ !' ಎಂದು ಶಪಥವನ್ನು ಮಾಡಿದ ರುರುವನ್ನು ನೋಡಿ ದೇವದೂತನು ಮುಂದೆ ನಿಂತು—

"ರುರುವೇ! ದುಃಖದಿಂದ ನೀನಾಡಿದ ಮಾತುಗಳು ನಿಜವೇ? ಪ್ರಲಾಪಗಳಿಗರ್ಥವಿದೆಯೇ? ಆಯುಸ್ಸಿಲ್ಲದೆ ಮೃತಳಾದ ಇವಳನ್ನು ಬದುಕಿಸಲಾದೀತೇ? ಬಿಡು ಶೋಕವನ್ನು! ಆದರೆ ಮಹಾತ್ಮರಾದ ದೇವತೆಗಳ ಮಾತನ್ನು ಕೇಳು! ಅದರಂತೆ ನಡೆದರೆ ನಿನಗೆ ನಿನ್ನ ಸತಿಯು ಸಿಗುವಳು" ಎಂದನು. ಆ ಉಪಾಯವಾವುದೆನ್ನಲು ರುರುವಿಗೆ ದೂತನು "ನಿನ್ನ ಆಯುವಿನ ಅರ್ಧವನ್ನು ನಿನ್ನ ಮಡದಿಗೆ ಕೊಡು. ಆಗ ಅವಳು ಬದುಕುವಳು" ಎಂದನು ಅಂತೆಯೇ ಸಂಕಲ್ಪಿಸಿ ರುರುವು ಅರ್ಧಾಯುರ್ದಾಯವನ್ನು ಸತಿಗೆ ಧಾರೆಯೆರೆಯಲು, ಧರ್ಮರಾಜನ ಅನುಮತಿಯನ್ನು ಪಡೆದು ದೇವದೂತನು ಪ್ರಮದ್ವರೆಯನ್ನು ಪುನರುಜ್ಜೀವಿಸಿದನು. ನಿದ್ದೆಯಿಂದೆದ್ದವರಂತೆ ಎದ್ದುನಿಂತ ಕಾಂತೆಯನ್ನು ಕಂಡು ಸಂತಸದಿಂದ ರುರುವು, ಅವಳನ್ನು ಗುರುಜನರ ಸಮಕ್ಷಮದಲ್ಲಿ ಅಗ್ನಿ ಸಾಕ್ಷಿಕವಾಗಿ ಮದುವೆಯಾಗಿ ಅವಳಿಂದ ಕೂಡಿ ಸುಖವಾಗಿದ್ದನು. ಅಂದಿನಿಂದ ರುರುವು ಸರ್ಪಗಳನ್ನು ಕಂಡೊಡನೆ ಕೊಲ್ಲುವೆನೆಂದು ಪಣತೊಟ್ಟು, ಅನೇಕ ಸರ್ಪಗಳನ್ನು ಹುಡುಕಿ ಹುಡುಕಿ ಕೊಂದನು. ರುರು ಪುತ್ರನೇ ನಿಮ್ಮ ತಂದೆಯಾದ ಶುನಕನು.

ಶೌನಕಾ! ಒಂದುದಿನ ಡುಂಡುಭನೆಂಬ ನಿರ್ವಿಷನಾದ ನಾಗವನ್ನು ಕೊಲ್ಲಲು ಕೋಲನ್ನೆತ್ತಿದ ರುರುವಿನನ್ನು ಕಂಡು, ಆ ಡುಂಡುಭವು ನಡುಗಿ "ಋಷಿವರ! ನಿರ್ವಿಷನಾದ ನನ್ನನ್ನೇಕೆ ಕೊಲ್ಲುವೆ? ನಿರಪರಾಧಿಯಾದ ನನ್ನನ್ನು ಕೊಂದರೆ ನಿನಗೆ ಏನು ಲಾಭ? ಇದು ನಿನ್ನಂತಹ ತಪಸ್ವಿಗೆ ನ್ಯಾಯವಲ್ಲ" ಎನಲು ರುರುವು ಆ ಡುಂಡುಭವು ಸಾಮಾನ್ಯ ಸರ್ಪವಲ್ಲವೆಂದರಿತು, ದಂಡವನ್ನಿಳಿಸಿ ನೀನಾರೆಂದು ಕೇಳಿದನು.

ಡುಂಡುಭವು ನುಡಿಯಿತು. "ನಾನು ಸಹಸ್ರಪಾದನೆಂಬ ಋಷಿಯಾಗಿದ್ದೆನು. ನನ್ನ ಸ್ನೇಹಿತನು ಖಗಮನು. ಒಂದು ದಿನ ನಾನು ಯಜ್ಞಶಾಲೆಯಲ್ಲಿದ್ದ ಖಗಮನ ಮೇಲೆ ಹಾಸ್ಯಕ್ಕೆಂದು ಹುಲ್ಲಿನಿಂದ ಸರ್ಪವನ್ನು ಮಾಡಿ ಎಸೆದೆನು. ಅವನು ಭೀತಿಯಿಂದ ಮೂರ್ಛಿತನಾದನು. ಎಚ್ಚತ್ತ ಖಗಮನು, ನಿಜವನ್ನರಿತು ಕೋಪದಿಂದ 'ಎಂತಹ ಸರ್ಪವನ್ನು ನನ್ನ ಮೇಲೆಸೆದೆಯೋ, ಅಂತಹ ನಿರ್ವೀರ್ಯ ಸರ್ಪನಾಗು ಹೋಗೆ'ಂದು ಶಾಪವನ್ನು ಕೊಟ್ಟನು. ಕ್ಷಮಿಸೆಂದು ಬೇಡಲು ರುರುವೆಂಬ ಋಷಿಯ ದರ್ಶನವಾದಾಗ ನಿನಗೆ ಶಾಪ ವಿಮುಕ್ತಿಯಾಗಲೆಂದನುಗ್ರಹಿಸಿದನು. ಇಂದು ನಿನ್ನ ಕಂಡು ನಾನು ಶಾಪ ಮುಕ್ತನಾದೆ." ಇಂತು ಹೇಳಿ ಡುಂಡುಭ ಶರೀರವನ್ನು ಬಿಟ್ಟು, ಸಹಸ್ರಪಾದನೆಂಬುವ ಋಷಿಯು ಸ್ವರೂಪದಿಂದ ರುರುವಿಗೆ ತೋರಿ ಮತ್ತೆ ಮಾತಾಡಿದನು.

"ಅಹಿಂಸೆಯೇ ಪರಮಧರ್ಮವು. ಅದಕ್ಕೆ ಮಿಗಿಲಾದ ಧರ್ಮವಿಲ್ಲ. ಬ್ರಾಹ್ಮಣನು ಸರ್ವಥಾ ಹಿಂಸಾರತನಾಗಬಾರದು. ವೇದಾಧ್ಯಯನ, ಅಭಯದಾನ, ಸತ್ಯವಚನ, ಸಹನೆಗಳೇ ಬ್ರಾಹ್ಮಣ ಧರ್ಮಗಳು. ಪ್ರಜಾಪಾಲನ ದಂಡ ಧಾರಣಗಳು ಕ್ಷತ್ರಿಯನ ಧರ್ಮಗಳು. ಹಿಂದೆ ಜನಮೇಜಯನು ಹಿಂಸಾರತನಾಗಿ ಬಹು ಸರ್ಪ ಮಾರಣ ಹೋಮವನ್ನು ಕೈಕೊಂಡು ನಡೆಸುವಾಗ ಆಸ್ತೀಕನೆಂಬ ಮಹಾನುಭಾವನು ಅದನ್ನು ನಿಲ್ಲಿಸಿದನು. ಅವನ ಕಥೆಯನ್ನು ಬ್ರಾಹ್ಮಣ ಸಭೆಯಲ್ಲಿ ನೀನು ಕೇಳುವೆ" ಎಂದು

ಸಹಸ್ರಪಾದನು ಅಂತರ್ಹಿತನಾದನು. ರುರುವು ಅಂದಿನಿಂದ ಸರ್ಪಹಿಂಸೆಯನ್ನು ಬಿಟ್ಟು ಆಶ್ರಮದಲ್ಲಿದ್ದ ತನ್ನ ತಂದೆಯನ್ನು ಕೇಳಲು ಪ್ರಮತಿಯು ಅವನಿಗೆ ಆಸ್ತೀಕ ಚರಿತೆಯನ್ನು ಹೇಳಿದನು.

## ಆಸ್ತೀಕ ಕಥಾ—ಗರುಡ ಜನನ

ಹಿಂದೆ ಜರತ್ಕಾರನೆಂಬುವ ಋಷಿವರನಿದ್ದನು. ಅವನು ಬ್ರಹ್ಮಚಾರಿಯು, ನಿಯತಾಹಾರನು, ಉಗ್ರತಪೋನಿರತನು, ಊರ್ಧ್ವರೇತಸ್ಕನಾಗಿದ್ದನು. ತೀರ್ಥಯಾತ್ರೆಗಳನ್ನು ಮಾಡುತ್ತಾ, ಸಾಯಂಕಾಲದಲ್ಲಿ ನಿಲ್ಲುತ್ತಾ ಭೂಸಂಚಾರವನ್ನು ಮಾಡುತ್ತಿದ್ದ ಆ ಮುನಿಯು ಹಿಮಪರ್ವತ ಕಂದರದಲ್ಲಿ ತನ್ನ ಪಿತಾಮಹರನ್ನು ಕಂಡನು. ಅವರು ತೃಣಗಳಿಂದಮಾಡಿದ ಹಗ್ಗಕ್ಕೆ ತಲೆ ಕೆಳಗಾಗಿ ಜೋತಾಡುತ್ತಿದ್ದರು. ಅಲ್ಲಿ ಬಿಲದಲ್ಲಿದ್ದ ಕಾಲಮೂಷಿಕವು ಒಂದೊಂದಾಗಿ ತೃಣಜಾಲವನ್ನು ಕತ್ತರಿಸಿ ಹಾಕುತ್ತಿತ್ತು. ಅವರ ಸ್ಥಿತಿಯು ಕೆಳಗಿನ ಮಹಾ ಪ್ರಪಾತವನ್ನು ಕಂಡಾಗ ಚಿಂತಾಜನಕವಾಗಿತ್ತು. ಅವರನ್ನು ಕಂಡು ನೀವಾರೆಂದು ಕೇಳಿದ ಜರತ್ಕಾರುವಿಗೆ ಅವರಿಂತೆಂದರು—

"ನಾವು ಯಾಯಾವರ ವಂಶಜ ಪಿತಾಮಹರು. ಈಗ ಭೂಲೋಕದಲ್ಲಿ ನಮ್ಮ ವಂಶಕ್ಕೆ ಒಬ್ಬನೇ ಉಳಿದಿದ್ದಾನೆ. ನಿರ್ಭಾಗ್ಯರಾದ ನಮಗೆ ಅವನಿಂದ ಉದ್ಧಾರವಾಗಿ ಊರ್ಧ್ವ ಲೋಕಗಳು ಸಿಗಬೇಕಾಗಿದೆ. ಆ ಮೂಢನು ಮದುವೆಯಿಲ್ಲದೆ ಅಲೆಯುತ್ತಿದ್ದಾನೆ. ನೀನು ನಮ್ಮನ್ನು ಕಂಡು ಕನಿಕರಪಡುತ್ತಿರುವೆ! ಅಪ್ಪಾ ನೀನಾದರೂ ಆ ಮೂಢ ಜರತ್ಕಾರುವಿಗೆ ಹೇಳಿ, ವಂಶವೃದ್ಧಿಯಿಂದ ಸಂತಾನ ತಂತುವಿನ ಆಧಾರವಿತ್ತು ನಮ್ಮನ್ನುದ್ಧರಿಸೆಂದು ಹೇಳು!" ಆ ಮಾತನ್ನಾಲಿಸಿ ಜರತ್ಕಾರುವು ವ್ಯಸನದಿಂದ "ನಾನೇ ಜರತ್ಕಾರುವು. ಏನು ಮಾಡಿದರೆ ನಿಮಗೆ ಅಧಃಪತನವಾಗದೇ ಸದ್ಗತಿ ಆದೀತು ಹೇಳಿ" ಎಂದು ಕೇಳಿದನು. "ತಪೋವ್ರತ, ದಾನ, ಯಾತ್ರಾದಿಗಳಿಂದ ಆಗದ ಸದ್ಗತಿಯು ಪುತ್ರ ಸಂತಾನ ಲಾಭದಿಂದಾಗುವುದಿದೆ. ಇದನ್ನು ತಿಳಿದು ನೀನು ಮದುವೆಯಾಗು! ಮಕ್ಕಳನ್ನು ಪಡೆ! ನಮ್ಮನ್ನು ಬದುಕಿಸು" ಎಂದ ಪಿತೃಗಳಿಗೆ ಜರತ್ಕಾರುವಿಂತೆಂದನು. "ನನಗಾಗಿ ಅಲ್ಲದಿದ್ದರೂ ನಿಮ್ಮ ಹಿತಕ್ಕಾಗಿ ನಾನು ಮದುವೆಯಾಗುವೆನು. ಆದರೆ ನನ್ನ ಹೆಸರೇ ಉಳ್ಳ ಕನ್ಯೆ ಸಿಕ್ಕರೆ ಮಾತ್ರ; ನಾನಾಗಿ ಬೇಡಲಾರೆ; ಅವರ ಬಂಧುಗಳೇ ತಂದಿತ್ತರೆ ಮಾತ್ರ ಒಂದು ಮಗುವಾಗುವವರಿವಿಗೆ ಮಾತ್ರ ಅವಳಿಂದ ಕೂಡಿಯಿರುವೆನು. ಈ ನಿಬಂಧನೆಗಳಿಂದ ನಾನು ಮದುವೆಯಾಗುವೆ"ನೆಂದು ಹೇಳಿ ಜರತ್ಕಾರು ಯಥಾಪ್ರಕಾರ ತಿರುಗುತ್ತಿದ್ದನು.

ಒಂದುದಿನ ವನ ಮಧ್ಯದಲ್ಲಿ ಅವನು "ನನಗೆ ಕನ್ಯಾದಾನ ಮಾಡುವವರು ಬನ್ನಿ, ಬನ್ನಿ, ಬನ್ನಿ!" ಎಂದು ಮೂರುಸಲ ಕೂಗಿ ಕರೆದನು. ಅದಕ್ಕಾಗಿ ಕಾದಿದ್ದ ನಾಗರಾಜ ವಾಸುಕಿಯು ತನ್ನ ತಂಗಿಯೊಡನೆ ಅಲ್ಲಿಗೆ ಓಡಿಬಂದು "ಹಿಡಿ ಕನ್ಯಾಭಿಕ್ಷೆಯನ್ನು" ಎಂದನು. ಇವಳ ಹೆಸರೇನೆಂದನು ಜರತ್ಕಾರು. 'ಜರತ್ಕಾರು' ಎಂದನು

ವಾಸುಕಿ : ವಿಧಿಗೆ ತಲೆಬಾಗಿ ಜರತ್ಕಾರು ಋಷಿಯು ಜರತ್ಕಾರು ನಾಗಕನ್ಯೆಯನ್ನು ಮದುವೆಯಾದನು.

ವಾಸುಕಿಯು ತನ್ನ ತಂಗಿಗೆ ಜರತ್ಕಾರು ಎಂಬ ಹೆಸರನ್ನಿಡಲು, ತಂದು ತನ್ನಾ ಮಕ ಮುನಿವರನಿಗೇ ಕೊಡಲು ವಿಶೇಷ ಕಾರಣವಿದೆ, ಅದನ್ನೂ ಕೇಳು!

ಹಿಂದೆ ಕಶ್ಯಪನು ದಕ್ಷಸುತೆಯರಾದ ಹದಿಮೂರು ತರುಣೀ ಮಣಿಯರನ್ನು ಮದುವೆಯಾಗಿ, ಬ್ರಹ್ಮದೇವನ ಆಜ್ಞೆಯಂತೆ ಲೋಕದ ವಿವಿಧ ಭೂತ ಸಂತಾನವನ್ನು ತತ್ತದ್ರೂಪನಾಗಿ ಪಡೆದನು. ಅವರಲ್ಲಿ ಕದ್ರೂ ದೇವಿಯು ಸಾವಿರಾರು ನಾಗರನ್ನು ಪಡೆದಳು. ವಿನತೆಯು ಎರಡು ಗುಡ್ಡುಗಳನ್ನಿಟ್ಟು, ಸವತಿಯು ಪುತ್ರ ಸಹಸ್ರವನ್ನು ಕಂಡು ಐನೂರು ವರ್ಷಗಳಾದರೂ ಕಲ್ಲಿನಂತಿದ್ದ ತನ್ನ ಗುಡ್ಡುಗಳಲ್ಲಿ ಒಂದನ್ನು ಬಲಾತ್ಕಾರ ವಾಗಿ ಒಡೆದಳು. ಅಲ್ಲಿಂದ ಬಂದ ಪುತ್ರನು ಪೂರ್ವಾರ್ಧಕಾಯ ಸಂಪನ್ನನಾಗಿದ್ದನು; ಅವನಿಗೆ ತೊಡೆ ಕಾಲುಗಳೇ ಬೆಳೆದಿರಲಿಲ್ಲ; ಆದ್ದರಿಂದ 'ಅನೂರು'ನೆನಿಸಿ ಅವನು ತಾಯಿ ಯನ್ನು ನೋಡಿ, ಕೋಪ ಶೋಕಪರಿತನಾಗಿ "ಅಂಬ! ಅರ್ಧ ಶರೀರನಾಗಿ ಹುಟ್ಟು ವಂತೆ ಮಾಡಿದ ನಿನ್ನ ಅವಿವೇಕವು ಅಕ್ಷಮ್ಯವಾಗಿದೆ. ಸವತಿಯ ಮೇಲಿನ ಅಸೂಯೆ ಯಿಂದ ಇನ್ನೂ ಪೂರ್ಣವಾಗದ ಗುಡ್ಡನ್ನೊಡದೆ. ಅದೇ ಸವತಿಯ ದಾಸಿಯಾಗಿ ಐನೂರು ವರ್ಷ ಬಾಳು! ಸಾವಿರ ವರ್ಷ ಪೂರ್ಣವಾಗುವವರೆವಿಗೂ ಇನ್ನೊಂದು ಗುಡ್ಡನ್ನು ಜನ್ನಾಗಿ ರಕ್ಷಿಸು! ಆಗ ಅತಿ ತೇಜೋ ವೀರ್ಯ ಸಮನ್ವಿತನಾದ ಪುತ್ರನದ ರಿಂದ ಬರುವನು. ಅವನು ನಿನ್ನ ದಾಸೀತ್ವವನ್ನು ಕಳೆಯುವನು." ಎಂದು ಹೇಳಿ ಅರುಣನು ಬ್ರಹ್ಮದೇವನ ಇಚ್ಛೆಯಂತೆ, ಸೂರ್ಯ ಸಾರಥಿಯಾಗಲು ಹೊರಟು ಹೋದನು. ಮುಂದೆ ಸಾವಿರ ವರ್ಷಗಳಾಗಲು, ಮಹಾತೇಜಸ್ವಿಯಾದ ಗರುಡನು, ಇನ್ನೊಂದು ಗುಡ್ಡನ್ನೊಡೆದುಕೊಂಡು ಹುಟ್ಟಿದನು.

ಒಂದುದಿನ ಕದ್ರೂ-ವಿನತೆಯರು, ಅಮೃತ ಮಥನ ಕಾಲದಲ್ಲಿ ಕ್ಷೀರ ನೀರಧಿ ಯಿಂದ ಜನಿಸಿ ಬಂದ ಉಚ್ಚೈಶ್ರವವೆಂಬ ಬಿಳಿ ಕುದುರೆಯನ್ನು ಕಂಡರು.

ಹಿಂದೆ ಮೇರು ಶೃಂಗದಲ್ಲಿ ದೇವತೆಗಳು ಕೂಡಿ, ಅಮೃತವನ್ನು ಪಡೆಯುವ ವಿಧಾನವನ್ನು ಚಿಂತಿಸುತ್ತಿರುವಾಗ, ಶ್ರೀನಾರಾಯಣನು ದೇವ ಪ್ರಮುಖನಾದ ಚತುರ್ಮುಖನಿಗಿಂತು ಅನುಗ್ರಹಿಸಿದನು—ದೇವತೆಗಳು ಬಲವಂತರಾದ ಅಸುರರಿಂದ ವೈರವನ್ನು ಮರೆತು, ಕಾಲವನ್ನರಿತು, ಸ್ನೇಹವನ್ನು ಮಾಡಲಿ! ಮಂದರಪರ್ವತ ವನ್ನೆತ್ತಿ ತಂದು, ಕ್ಷೀರಸಾಗರದಲ್ಲಿಟ್ಟು, ಸಕಲೌಷಧಿಗಳನ್ನು ಸಮುದ್ರದಲ್ಲಿ ಹಾಕಿ ವಾಸುಕಿಯನ್ನು ರಜ್ಜುವನ್ನಾಗಿ ಬಿಗಿಸಿ ಮಥಿಸಲಿ! ಅಮೃತವು ಹುಟ್ಟುವುದು. ಅದನ್ನು ನಾನು ಉಪಾಯದಿಂದ ರಾಕ್ಷಸರನ್ನು ವಂಚಿಸಿ ಅವರಿಗೆ ಕೊಡದೆ, ದೇವತೆ ಗಳಿಗೆ ಮಾತ್ರ ಕೊಡುವೆನು. ಅದರಿಂದ ಅಜರಾಮರರಾಗಿ, ತೇಜೋಬಲ ವೀರ್ಯ ಗಳನ್ನು ಸುರರು ಹೊಂದುವರು.

ಅಂತೆಯೇ ದೇವತೆಗಳು ರಾಕ್ಷಸರಿಂದ ಸಂಧಿಮಾಡಿ, ಮಂದರಪರ್ವತವನ್ನೆತ್ತಿ ತರುತ್ತಿದ್ದರು. ನಾನಾವೃಕ್ಷ ಸಮಲಂಕೃತವೂ, ಲತಾಜಾಲ ಸಮಾವೃತವೂ, ಉನ್ನತ ಶೃಂಗ ಶತ ಶೋಭಿತವೂ ಆದ ಮಂದರವು ಹನ್ನೊಂದು ಸಾವಿರ ಯೋಜನೋನ್ನತ ವಾಗಿತ್ತು. ದೇವಾಸುರರನ್ನು ಹೊರಲಾಗದೆ ಕೈಬಿಟ್ಟರು. ಸುರರು ಶ್ರೀಶನಿಗೆ ಶರಣಾಗತ ರಾದರು. ನಾರಾಯಣನು ಗರುಡಾರೂಢನಾಗಿ ಬಂದು, ಆ ಮಂದರವನ್ನು ಲೀಲೆ ಯಿಂದೆತ್ತಿ ಅನಂತನಾಮಕ ಗರುಡನ ಮೇಲಿಟ್ಟನು. ಗರುಡನದನ್ನು ಕ್ಷೀರಸಮುದ್ರ ದಲ್ಲಿಟ್ಟನು. ಸಮುದ್ರರಾಜನಾದ ವರುಣನಿಗೂ, ರಜ್ಜುವಾಗಲಿರುವ ವಾಸುಕಿಗೂ ಅಮೃತಭಾಗವನ್ನು ಕೊಡುವೆನೆಂದೊಪ್ಪಿಸಿ, ಔಷಧಿಗಳನ್ನು ಜಲನಿಧಿಯಲ್ಲಿ ಹಾಕಿ, ಮಂದರವನ್ನಿಟ್ಟು ವಾಸುಕಿಯನ್ನು ಸುತ್ತಿ, ಹಿಡಿದು ಮಥಿಸುವಾಗ, ಮಂದರವು ನೀರಿನಲ್ಲಿ ಮುಳುಗಿ ಕೂತಿತು. ಮತ್ತೆ ಶ್ರೀಹರಿಯೇ ಗತಿಯಾದನು. ಕೂರ್ಮರೂಪಿ ಯಾಗಿ ಮಂದರವನ್ನೆತ್ತಿ ಹಿಡಿದನು. ವಾಸುಕಿಯ ಮುಖದಿಂದ ಹರಿದುಬಂದ ವಿಷದ ತಾಪಕ್ಕೆ ಬೆಂದ ದೈತ್ಯರನ್ನು ಪುನರುಜ್ಜೀವಿಸಿದನು. ದೇವಾಸುರರಲ್ಲಿ ತತ್ತದ್ರೂಪದಿಂದ ನಿಂತು, ಅಂತರ್ಯಾಮಿ ಶ್ರೀ ಹರಿಯು ಅವರಿಗೆ ಬಹು ಬಲವನ್ನಿತ್ತನು.

ಇಂತು ಮಥಿಸುವಾಗ ಕಾಲಕೂಟ ಮಹಾವಿಷವು ಸಮುದ್ರದಿಂದ ಹುಟ್ಟಿ ಉಕ್ಕೇರಿ ಉರಿಯುತ್ತಾ ಬಂತು. ಅದರ ಭೀಕರ ಜ್ವಾಲೆಗಳಿಗೆ ದೇವ ದಾನವರು ಭೀತ ರಾದರು. ಸುರರು ಶಿವನಿಗೆ ಮೊರೆಯಿಟ್ಟರು. ಲೋಕ ಹಿತವನ್ನು ಬಯಸಿ ಭವಾನಿಯ ಸಮ್ಮತಿಯನ್ನು ಪಡೆದು, ಬ್ರಹ್ಮದೇವನ ಅಪ್ಪಣೆಯನ್ನು ಪಡೆದು ಶಂಕರನು ಹಾಲಾ ಹಲವನ್ನು ಕುಡಿಯಲು ತೊಡಗಿದನು. ಮಗನಮೇಲಿನ ಮಮತೆಯಿಂದ ಮುಖ್ಯ ಪ್ರಾಣನು ತನ್ನ ಕೈಯಿಂದ ವಿಷವನ್ನು ತಿಕ್ಕಿ, ತಾನು ಕುಡಿದು, ಸ್ವಲ್ಪ ವಿಷವನ್ನು ಶಂಕರನಿಗಿತ್ತನು. ಇಂತು ನೀಲಕಂಠನೆಂದು ಖ್ಯಾತನಾಗಿ ಶಿವನು ಲೋಕಹಿತವನ್ನು ಸಾಧಿಸಿದನು. ಮಹಾನುಭಾವನಾದ ಶಿವನ ಕಂಠದಲ್ಲಡಗಿದ್ದ ವಿಷವು ಕೂಡ ಮಚ್ಚೆ ಯಂತೆ ಧವಳ ದಿವ್ಯ ದೇಹನಾದ ಶಿವನ ಲಾವಣ್ಯವನ್ನು ಹೆಚ್ಚಿಸಿತು. ಮುಂದೆ ದೇವ ದಾನವರು ಸಮುದ್ರವನ್ನು ಮತ್ತೆ ಮಥಿಸಿದರು. ಆಗ ಐರಾವತವೆಂಬ ಗಜ, ಪಾರಿಜಾತ, ಉಚ್ಚೈಶ್ರವವೆಂಬ ತುರಗ, ಅಪ್ಸರೆಯರು, ಕಾಮಧೇನು, ಶ್ರೀದೇವಿಯರು, ಚಂದ್ರನೂ ಹುಟ್ಟಿದರು. ಶ್ರೀದೇವಿಯು ಸರ್ವೋತ್ತಮನೂ, ನಿರಪೇಕ್ಷನೂ, ಸದಾ ಸಮಸ್ತ ಕಲ್ಯಾಣಗುಣಭರಿತನೂ ಆದ ಅಜಿತನಾಮಕ ಶ್ರೀನಾರಾಯಣನನ್ನು ವರಿಸಿದಳು. ಮಿಕ್ಕ ವಸ್ತುಗಳು ಸ್ವರ್ಗಲೋಕವನ್ನು ಸೇರಿದವು.

ಪುನಃ ಮಥಿಸುತ್ತಿರಲು ಧನ್ವಂತರಿ ರೂಪದಿಂದ ಶ್ರೀಹರಿಯು ಅಮೃತ ಕಲಶ ವನ್ನು ಪಿಡಿದು ಸಮುದ್ರದಿಂದ ಪ್ರಾದುರ್ಭೂತನಾದನು. ದುರ್ಮಾರ್ಗರಾದ ದೈತ್ಯರ ವನ ಕೈಯಿಂದ ಸುಧಾಕಲಶವನ್ನು ಕಸಿದುಕೊಂಡು 'ನಾನು ಕುಡಿಯುವೆ, ನಾನು' ಎಂದು ತಮ್ಮಲ್ಲೆ ಕಲಹವಾಡುತ್ತಿದ್ದರು. ಸರ್ವೋಪಾಯ ಚತುರನಾದ ನಾರಾಯಣನು ಮೋಹಿನೀ ರೂಪದಿಂದ ಅಸುರರು ಮೋಹಪರವಶರಾಗಿರಲು, ಅಮೃತಕಲಶವನ್ನು

ಅವರಿಂದ ಪಡೆದು ಸುರರಿಗದನ್ನುಣಿಸಿದನು. ಮಾಯಾವಿಯಾದ ರಾಹುವಿನ ಶಿರಸ್ಸನ್ನು ಚಕ್ರದಿಂದ ಕತ್ತರಿಸಿ, ಬ್ರಹ್ಮವರವನ್ನು ಮನ್ನಿಸಿ, ಅವನನ್ನು ಗ್ರಹಗಣದಲ್ಲಿ ಸೇರಿಸಿದನು. ಹಾವಿಗೆ ಹಾಲೆರೆದಂತಾಗಕೂಡದೆಂದು ದೈತ್ಯರನ್ನು ವಂಚಿಸಿ, ತನ್ನ ಪಾದಪಂಕಜಾಶ್ರಯಣಶೀಲರಾದ ದೇವತೆಗಳಿಗೆ ಸುಧಾಪಾನ ಮಾಡಿಸಿದನು : ಕಾಮಿನೀಸಂಗಲೋಲುಪರು ಅಮೃತ ದೂರರಾಗುವರೆಂಬ ಸತ್ಯವನ್ನು ಸಾರಿ ಹೇಳಿದನು.

ಮುಂದೆ ದೇವದಾನವ ಸಂಗ್ರಾಮವಾಯಿತು. ಶ್ರೀನರನಾರಾಯಣರು ಧನುಸ್ಸನ್ನು ಚಕ್ರವನ್ನು ಹಿಡಿದು ದಾನವರನ್ನು ಸಂಹರಿಸಿದರು. ಉಳಿದ ದೈತ್ಯರು ಬಲಿರಾಜನಿಂದ ಕೂಡಿ ಸುತಲವನ್ನು ಸೇರಿದರು. ದೇವತೆಗಳು ಭಗವದನುಗ್ರಹದಿಂದ ಅಜರಾಮರರು, ಬಲಸಂಪನ್ನರು ಆದರು. ಅಮೃತಕಲಶವನ್ನು ಸುರಲೋಕದಲ್ಲಿಟ್ಟು ಸಂರಕ್ಷಿಸುತ್ತಿದ್ದರು.

ಇಂತು ಸಮುದ್ರಜಾತ ಭದ್ರಾಶ್ವವನ್ನು ಸಮುದ್ರತೀರದಲ್ಲಿ ವಿಹರಿಸುತ್ತಿದ್ದ ಕದ್ರೂ-ವಿನತೆಯರೊಂದು ಸಾಯಂಕಾಲ ಕಂಡರು. ದೈವಪ್ರೇರಿತಳಾದ ಕದ್ರುವು ಆ ಕುದುರೆಯ ಬಣ್ಣವಾವುದೆಂದು ಸವತಿಯನ್ನು ಕೇಳಿದಳು. 'ಬಿಳುವು' ಎಂದ ವಿನತೆಯನ್ನು ನೋಡಿ ಕದ್ರು 'ಅಲ್ಲ ! ಅದರ ಬಾಲವು ಕಪ್ಪಾಗಿದೆ. ಹಾಗಿದ್ದರೆ ನನಗೆ ನೀನು ದಾಸಿಯಾಗುವೆಯಾ' ಎಂದು ಪಣವನ್ನೊಡ್ಡಿದಳು. 'ಆಗಲಿ ನಾಳೆ ಬೆಳಗ್ಗೆ ನೋಡೋಣ'ವೆಂದು ವಿನತೆಯೂ ಕದ್ರುವೂ ಮನೆಗಳನ್ನು ಸೇರಿದರು. ಕುಟಿಲಮತಿಯಾದ ಕದ್ರೂಸತಿ ತನ್ನ ಸುತರನ್ನು ಕರೆದಿಂತಾಜ್ಞಾಪಿಸಿದಳು—"ನಾಗರೇ ! ಉಚ್ಚೈ-ಶ್ರವವು ಬೆಳ್ಳಗಿದೆ. ಅರಿತು ಅರಿತು ನಾನು ಪಣವನ್ನಿಟ್ಟಿರುವೆನು. ನೀವು ಕರಿಕೂದಲರೂಪದಿಂದ ಕುದುರೆಯ ಬಾಲದಲ್ಲಿ ಜೋತಾಡುತ್ತಿರಿ ! ಇಲ್ಲದಿದ್ದರೆ ವಿನತೆಗೆ ನಾನು ದಾಸಿಯಾಗಬೇಕಾದೀತು." ನಾಗರು ಅನ್ಯಾಯವಾದ ಮಾತೆಯ ಆಜ್ಞೆಯನ್ನು ಧಿಕ್ಕರಿಸಿದರು. ಸಿಟ್ಟಿಗೆದ್ದು ಕದ್ರುವು "ಜನಮೇಜಯನ ಸರ್ಪಯಾಗದಲ್ಲಿ ನೀವು ಅಗ್ನಿಗೆ ಆಹುತಿಯಾಗಿ ನಾಶವಾಗಿ !" ಎಂದು ಶಾಪವನ್ನಿತ್ತಳು.

ಇತರ ಪ್ರಾಣಿಗಳಿಗೆ ಮೃತ್ಯುಪ್ರದವಾಗಿರುವ ಸರ್ಪಗಳ ಸಂಖ್ಯೆ ವಿಪರೀತವಾಗಿರುವುದರಿಂದ, ಅವರು ನಾಶವಾಗುವುದು ಲೋಕಹಿತವೆಂದೆಣಿಸಿ, ವಿಧಾತನು ಆ ಶಾಪ-ವನ್ನನುಮೋದಿಸಿದನು. ಕಶ್ಯಪನನ್ನು ಸಮಾಧಾನಪಡಿಸಿ "ಶ್ರೀಹರೀಚ್ಛೆಗೆದುರಿಲ್ಲ. ಸರ್ಪಯಾಗದಲ್ಲಿ ಮಹಾ ವಿಷಸರ್ಪ ನಾಶವಾಗುವುದು ತಪ್ಪದು. ಚಿಂತಿಸಬೇಡ ಸರ್ಪ-ವಿಷಹರ ವಿದ್ಯೆಯನ್ನು ಸ್ವೀಕರಿಸು" ಎಂದು ಅವನಿಗೂ, ಅವನ ಸಂತತಿಗೂ ವಿಷಮಂತ್ರವನ್ನು ದಯಪಾಲಿಸಿದನು.

ಪ್ರಾತಃಕಾಲವಾಯಿತು. ಕದ್ರೂ-ವಿನತೆಯರು ಸಮುದ್ರದ ದಡವನ್ನು ಸೇರಿ ಉಚ್ಚೈಶ್ರವವನ್ನು ಹುಡುಕುತ್ತಿದ್ದರು. ಇಷ್ಟರಲ್ಲೇ ಕೆಲ ನಾಗರು ಮಾತೆಯ ಶಾಪಕ್ಕೆ ಹೆದರಿ, ಕರಿ ಕೂದಲುಗಳ ರೂಪದಿಂದ ಕುದುರೆಯ ಬಾಲದಲ್ಲಿ ಜೋತಾಡುತಿದ್ದರು. ಪಂದೆವಿಟ್ಟು ಬಂದ ಸುಂದರಿಯರು ಅಂದವಾದ ಕುದುರೆಯನ್ನು ಪರೀಕ್ಷಿಸಿದರು. ಕಪ್ಪು ಬಾಲವನ್ನು ಕಂಡು ವಿನತೆ ವಿಷಣ್ಣಳಾದಳು : ಮತ್ತೇನು ! ದಾಸಿಯಾಗಿ ಕದ್ರುವಿನ

ಮನೆಯಲ್ಲಿ ದುಡಿಯುತ್ತಿದ್ದಳು. ಕಾಲಕ್ರಮದಿ ಎರಡನೆಯ ಗುಡ್ಡು ಒಡೆದು, ಗರುಡನು ಹುಟ್ಟಿದನು. ಮಹಾಸತ್ವಬಲೋಪೇತನು, ಅತ್ಯಂತ ಪ್ರಕಾಶಮಾನನು, ಕಾಮ-ಗಮನನು, ಕಾಮರೂಪನು ಆದ ಪಕ್ಷಿರಾಜನು ಅಗ್ನಿರಾಶಿಯಂತೆ ಭಯಂಕರನಾಗಿದ್ದನು. ಅವನ ಕಣ್ಣುಗಳು ಮಿಂಚಿನಂತೆ ಹೊಳೆಯುತ್ತಿದ್ದವು. ಮಹಾಕಾಯನಾಗಿ ಬೆಳೆದುನಿಂತ ವೈನತೇಯನನ್ನು ನೋಡಿ ದೇವತೆಗಳು ಅವನಿಗೆ ತಲೆಬಾಗಿ ನುತಿಸಿದರು—"ಪತಗೇಶ! ನೀನು ಜ್ಞಾನಿಯು. ಪತಗಗಳಿಗೆ ಪ್ರಭುವಾದ ನೀನು ಸೂರ್ಯನಂತೆ ದುರ್ಭರತೇಜನಾಗಿರುವೆ. ನಿನ್ನ ಅಂತರ್ಯಾಮಿ ನಾರಾಯಣನು ಇಂದ್ರ ವರುಣಾದಿತ್ಯ ವಸುರುದ್ರಾದಿ ಸರ್ವ ದೇವತೆಗಳಿಗೆ ಪ್ರಭುವಾಗಿರುವನು. ಜರಾಮರಣಾದಿ ಜೀವಲಕ್ಷಣ ರಹಿತನಾದ ಶ್ರೀಶನು ವಿಮಲ ಯಶೋವಿಶಾಲನಾಗಿರುವನು. ಅವನ ಬಲವೀರ್ಯಗಳಿಗೆ ಎದುರಿಲ್ಲ. ಜಗಜ್ಜನ್ಮಾದಿಗಳು ಶ್ರೀಹರಿಯಿಂದಲೇ ಆಗುತ್ತಿರುವುವು. ಅಂತಹ ದುಃಸಹ ತೇಜಸ್ಸಂಪನ್ನನಾದ ಶ್ರೀಶನಿಂದ ಕೂಡಿ ವಿರಾಜಿಸುವ ಪಕ್ಷಿರಾಜನೇ! ನಿನಗೆ ನಾವು ಶರಣಾಗತರಾಗಿರುವೆವು. ಸುವರ್ಣಶರೀರನೇ! ನಮ್ಮನ್ನು ಕಾಪಾಡು; ಕಶ್ಯಪಕುಮಾರ! ಸಿಟ್ಟನ್ನು ಬಿಡು! ಜಗವೆಲ್ಲ ನಿನ್ನ ಸಿಡಿಲಿನಂತಹ ಕೂಗಿಗೆ ನಡುಗುತ್ತಿದೆ. ನಿನ್ನ ಶತ್ರುಗಳಾದ ದೈತ್ಯ ದುಷ್ಟ ಸರ್ಪಾದಿಗಳನ್ನು ನಾಶಮಾಡಿ, ಹಿತರಾದ ನಮಗೆ ಸುಖವನ್ನು ನೀಡು!"

ಆಗ ಗರುಡನು ತನ್ನ ಭಯಂಕರ ತೇಜೋರಾಶಿಯನ್ನು ಉಪಸಂಹರಿಸಿ ಶಾಂತನಾದನು. ಲೋಕಗಳನ್ನು ಸುಟ್ಟುಬಿಡಲು ಉದ್ಯುಕ್ತನಾದ ಸೂರ್ಯನ ಸಿಟ್ಟನ್ನು ಇಳಿಸಿ, ಶಾಂತವಾಗಿಸಲು ಅರುಣನನ್ನು ಸೂರ್ಯನ ಮುಂದೆ ಸಾರಥಿಯನ್ನಾಗಿ ನಿಯೋಗಿಸಿ ಸ್ಥಾಪಿಸಿದನು. ಪೂರ್ವ ವೈರವನ್ನು ಸ್ಮರಿಸಿ ರಾಹುವು ಸೂರ್ಯನನ್ನು ಪೀಡಿಸುತ್ತಿರುವಾಗ, 'ಸರ್ವ ದೇವತೆಗಳಿಗೆ ಹಿತವಾಗಲು ನಾ ಮಾಡಿದ ರಾಹು ಸೂಚನೆ ನನಗೇ ಬಾಧಕವಾಗಿದೆ; ಸುರರೆಲ್ಲರು ಈ ಅನ್ಯಾಯವನ್ನು ಸಹಿಸಿ ಸುಮ್ಮನಿರುವರು. ಲೋಕಗಳನ್ನೆಲ್ಲ ಸುಟ್ಟರೆ ಆಗ ಅವರು ರಾಹುಗ್ರಸ್ತನಾದ ನನ್ನ ವ್ಯಥೆಯನ್ನು ತಿಳಿಯುವ'ರೆಂದು ಸೂರ್ಯನು ವಿಲಕ್ಷಣ ತಾಪದಿಂದ ಲೋಕಗಳನ್ನು ಸುಡಲಾರಂಭಿಸಿದನು. ಆಗ ದೇವತೆಗಳ ಮೊರೆಯನ್ನಾಲಿಸಿ, ಚತುರ್ಮುಖನು ಅರುಣನನ್ನು ಸೂರ್ಯನಿಗೆ ಸಾರಥಿಯನ್ನಾಗಿಟ್ಟು, ಅವನು ಸೂರ್ಯ ತಾಪವನ್ನು ಕಡಿಮೆ ಮಾಡುವಂತೆ ವರವನ್ನಿತ್ತು ಸೂರ್ಯನ ತಾಪದಿಂದ ಲೋಕಗಳನ್ನು ರಕ್ಷಿಸಿದನು. ಅಂದಿನಿಂದ ಉದಿತನಾಗುವ ಸೂರ್ಯನ ತೇಜಃಪ್ರತಾಪವನ್ನು ಅರುಣನು ತಗ್ಗಿಸಿ, ಸಹನೀಯವಾಗುವಂತೆ ಮಾಡುತ್ತಿರುವನು.

## ಗರುಡ ಪರಾಕ್ರಮ

ಒಂದುದಿನ ಕದ್ರುವು ತನ್ನ ಮಕ್ಕಳಾದ ನಾಗರ ನಿವಾಸವನ್ನು ಸೇರಲಿಚ್ಛಿಸಿ ವಿನತೆಯನ್ನು ಕರೆದು ತನ್ನನ್ನು ಎತ್ತಿಕೊಂಡು ನಾಗಾಲಯಕ್ಕೆ ಹೋಗುವಂತೆ

ಆಜ್ಞಾಪಿಸಿದಳು. ದಾಸಿಯಾದ ವಿನತೆ ಕದ್ರುವಿನನ್ನು ವಹಿಸಿ ನಡೆದಳು. ದಾಸೀಪುತ್ರನಾದ ಗರುಡನು ಕದ್ರೂ ಪುತ್ರರಾದ ನಾಗರನ್ನು ವಹಿಸಿ, ಸಮುದ್ರತೀರವನ್ನು ಸೇರ ಹೊರಟನು. ಹಾರುತ್ತ ಹೊರಟ ಗರುಡನು ಸೂರ್ಯಮಂಡಲ ಸಮೀಪದಲ್ಲಿ ಬಂದಾಗ ಅವನು ಹೊತ್ತ ನಾಗರು ತಾಪದಿಂದ ಬೆಂದು ಕೆಳಗೆ ಬಿದ್ದರು. ಅದನ್ನು ಕಂಡು ದುಃಖಿತಳಾಗಿ ಕದ್ರುವು ಇಂದ್ರನನ್ನು ತುತಿಸಿದಳು—

"ಸರ್ವದೇವೇಶ! ಇಂದ್ರಾಂತರ್ಯಾಮಿ ನಾರಾಯಣ! ನಮುಚಿಯನ್ನು ಸಂಹರಿಸಿ, ದೇವ ಹಿತವನ್ನು ಸಾಧಿಸಿದೆ ಸ್ವಾಮಿ! ಸೂರ್ಯ ತಪ್ತರಾದ ನನ್ನ ಸುತರನ್ನು ಪುನರುಜ್ಜೀವಿಸು! ಲಿಂಗಶರೀರ ಭೇದಕ ಜ್ಞಾನೋಪದೇಶವನ್ನು ಮಾಡಿ, ಸುಜನರನ್ನು ಪೊರೆವ ಜಗತ್ಪಾಲಕನು ನೀನು. ನಿನ್ನಿಂದ ಸೃಷ್ಟಿಲಯಗಳು. ಮರಣರಹಿತನು, ಸರ್ವದೇವ ವಂದ್ಯನು, ಅಮೃತಮಯನು, ಸಂವತ್ಸರಾದಿ ಕಾಲನಿಯಾಮಕನು, ಭೂಸ್ವರ್ಗ ಪಾತಾಳಾದಿ ಸರ್ವಲೋಕ ಪಾಲನು ಆದ ನಿನಗೆ ಶರಣಾಗತಳಾದ ನನ್ನನ್ನು ಕಾಪಾಡು."

ಆ ಸ್ತುತಿಯಿಂದ ಪ್ರೀತನಾದ ಇಂದ್ರನು ಮೇಘಗಳಿಗೆ ಅಮೃತಶೀಕರವನ್ನು ಕರೆಯುವಂತೆ ಆಜ್ಞಾಪಿಸಿದನು. ಆಗ ಸರ್ಪಗಳು ಮತ್ತೆ ಬದುಕಿ ನಿಂತವು. ಅವನ್ನು ಮತ್ತೆ ಹೊತ್ತು ಗರುಡನು ಸಮುದ್ರತೀರದ ನಾಗದ್ವೀಪವನ್ನು ಸೇರಿಸಿದನು. ಮನೋರಮವಾದ ರಮಣಕದ್ವೀಪವು ಸಾಗರದಿಂದ ಸುತ್ತಲ್ಪಟ್ಟಿತ್ತು. ವಿಚಿತ್ರ ಫಲ-ಪುಷ್ಪಗಳು ಅಲ್ಲಿಯ ವನಗಳಲ್ಲಿ ಕಂಗೊಳಿಸುತ್ತಿದ್ದವು. ಸರೋವರಗಳಲ್ಲಿ ಸ್ವಚ್ಛ ಜಲವು ತುಂಬಿತ್ತು. ಅದರಲ್ಲಿ ಅರವಿಂದಾದಿ ಜಲಪುಷ್ಪಗಳು ಅರಳಿ ನಿಂತಿದ್ದವು. ಆ ಪುಷ್ಪಗಂಧವನ್ನು ಹೊತ್ತು ಮಂದಮಾರುತನು ಶೈತ್ಯಮಾಂದ್ಯ ಸೌಗಂಧ್ಯಗಳಿಂದ ಸುಖಾವಹನಾಗಿದ್ದನು. ಅಂಬರ ಚುಂಬಿಯಾದ ವೃಕ್ಷಗಳನ್ನು ಬಳಸಿ ಬೆಳೆದ ಮಲ್ಲಿಕಾಜಾತ್ಯಾದಿ ಲತೆಗಳು, ಮೇಲೇರಿ ವಿಕಸಿಸಿದ ತಮ್ಮ ಹೂಗಳಿಂದ ಸರ್ವಲೋಕದ ದೇವ ವನಿತೆಯರನ್ನು ಆಕರ್ಷಿಸುವಂತಿದ್ದವು. ಗಂಧರ್ವಾಪ್ಸರಸೆಯರು ಹೂ ಚಿಗುರೆಲೆಗಳಿಂದ ಹಾಸಿದಂತಿದ್ದ ಪುಲಿನತಲಗಳಲ್ಲಿ ಕೂತು, ಕಲ ಕಲ ನಾದದಿಂದ ಪಾಡುವ ಕೋಕಿಲಾದಿ ವಿಹಗ ಸಂಗೀತವನ್ನು ಕೇಳುತ್ತ ಕಮಲ ಭ್ರಮದಿಂದ ಮುಖಗಳಿಗೆ ಬಾಗುವ ದುಂಬಿಗಳನ್ನು ಅಂಗುಲಿ ಪಲ್ಲವಗಳಿಂದ ದೂಡುತ್ತಾ, ರಮಣರಿಂದ ನಲಿದಾಡುತ್ತಿದ್ದರು. ಅಂತಹ ಮನೋಹರ ದ್ವೀಪವನ್ನು ಸೇರಿ ನಾಗರು, ಗರುಡನನ್ನು ನೋಡಿ ಅದಕ್ಕಿಂತಲೂ ರಮಣೀಯ ದ್ವೀಪವನ್ನು ಸೇರಿಸೆಂದು ಆಜ್ಞಾಪಿಸಿದರು. ತನ್ನ ದಾಸ್ಯಭಾವವನ್ನರಿತ ಗರುಡನು ಖಿನ್ನನಾಗಿ ತಾಯಿಯ ಬಳಿ ಸಾರಿ, ದಾಸ್ಯ ಕಾರಣವೇನೆಂದು ಕೇಳಿ ತಿಳಿದನು. ಮತ್ತೆ ನಾಗರನ್ನು ನೋಡಿ "ನನ್ನ ದಾಸ್ಯವು ಹಿಂಗುವ ಬಗೆ ಯಾವದು? ಏನಾದರೂ ಮಾಡುವೆನು! ಯಾವದನ್ನಾದರೂ ತಂದುಕೊಡುವೆ"ನೆಂದನು. ನಾಗರು ನಾಗಮಾತೆ ಕದ್ರುವಿನೊಡನೆ ಆಲೋಚಿಸಿ "ಅಮೃತವನ್ನು ತಂದು ಕೊಟ್ಟು, ನೀನು, ನಿನ್ನ ಮಾತೆ ದಾಸ್ಯದಿಂದ ಮುಕ್ತರಾಗಿ ಹೋಗಿ"ಎಂದು ನುಡಿದರು. ಅಂತೆಯೇ ಮಾಡುವೆನೆಂದು ಗರುಡನು

ವಿನತೆಯು ಪಾದಕ್ಕೆರಗಿ 'ಅಮ್ಮಾ! ಮೋಸದಿಂದ ನಿನ್ನನ್ನು ದಾಸಿಯಾಗಿ ಮಾಡಿಕೊಂಡ ಕದ್ರುವಿನನ್ನೂ ಅವಳ ಮಕ್ಕಳನ್ನೂ ನೋಡಿ ಸಂತಪ್ತನಾಗಿರುವೆನು. ನಿನ್ನನ್ನು ದಾಸ್ಯದಿಂದ ಬಿಡಿಸಲು ನಿಶ್ಚಯಿಸಿ, ಅಮೃತವನ್ನು ತರಲು ಪೋಗುವ ನನಗೆ ತಕ್ಕ ಆಹಾರವಾವುದು ? ಹೇಳೆ'ಂದನು.

ಆಗ ವಿನತೆ 'ವತ್ಸ ! ಸಮುದ್ರ ಮಧ್ಯದ ದ್ವೀಪದಲ್ಲಿ ನಿಷಾದಾಲಯವಿದೆ. ಅಲ್ಲಿರುವ ದುಷ್ಟರಾದ ನಿಷಾದರನ್ನು ತಿಂದು, ಅಮೃತಕ್ಕಾಗಿ ಪಯಣಿಸು. ಅವರಲ್ಲಿ ಒಬ್ಬ ವಿಪ್ರನಿರುವನು. ಅವನನ್ನು ಸಂಹರಿಸಬೇಡ ! ವಿಪ್ರ ಕುದ್ಧನಾದರೆ, ಅಗ್ನಿಯಂತೆ ಸುಡಬಲ್ಲನು ; ಶಸ್ತ್ರದಂತೆ ನಾಶಮಾಡಬಲ್ಲನು ; ವಿಷದಂತೆ, ಆರ್ಯನಂತೆ ಭಯಂಕರನಾದ ಬ್ರಾಹ್ಮಣರನ್ನು ಮಾತ್ರ ಕೆದಕಿ ಕೆಡಬೇಡ' ಎಂದಾಶೀರ್ವದಿಸಿ ಕಳುಹಿಸಿದಳು.

'ಪುತ್ರ! ದಾಸಿಯಾಗಿ ನೊಂದಿರುವ ನನ್ನ ಸಂಕಟವನ್ನು ನೀಗಿಸು, ನಿನ್ನಿಂದ ನನ್ನ ದುಃಖಗಳೆಲ್ಲವೂ ಕಳೆಯುವವೆಂದು ನಂಬಿರುವೆನು. ಮರುದ್ದೇವತೆಗಳು ನಿನ್ನ ರೆಕ್ಕೆಗಳನ್ನು ರಕ್ಷಿಸಲಿ ! ಚಂದ್ರ ಸೂರ್ಯರು ನಿನ್ನ ಬೆನ್ನ ಹಿಂದೆ ರಕ್ಷಕರಾಗಿರಲಿ ! ವಹ್ನಿಯು ನಿನ್ನ ಶಿರವನ್ನು ಕಾಪಾಡಲಿ ! ವಸುಗಳು ಸರ್ವತ್ರ ನಿನ್ನನ್ನು ಪೊರೆಯುತ್ತಿರಲಿ ! ಹೋಗು ! ನಾನೂ ಇಲ್ಲಿ ಸಂತತವೂ ನಿನ್ನ ಕುಶಲವನ್ನೇ ಹಾರೈಸುತ್ತಾ, ಸ್ವಸ್ತಿ ಕಾರ್ಯಗಳನ್ನು ಮಾಡುತ್ತಿರುವೆನು. ಬ್ರಾಹ್ಮಣನನ್ನು ಮಾತ್ರ ಹಿಂಸಿಸಬೇಡ ! ವಿಪ್ರನು ಕುತ್ತಿಗೆಯನ್ನು ಅಗ್ನಿಯಂತೆ ಸುಡುವನು. ಅವನು ನಿನಗೆ ಜೀರ್ಣನಾಗನು. ಅಂತಹವನನ್ನು ವಿಪ್ರನೆಂದರಿತು ಹಿಂಸಿಸದೆ ಉಗುಳಿಬಿಡು ! ಕಾರ್ಯ ಸಿದ್ಧಿಯಾಗಲಿ !' ಎಂದಾಶೀರ್ವದಿಸಿದ ತಾಯಿಯನ್ನು ಬೀಳ್ಕೊಂಡು ಗರುಡನು ನಿಷಾದದ್ವೀಪವನ್ನು ಸೇರಿದನು.

ಅಲ್ಲಿ ದುಷ್ಟ ನಿಷಾದರಿದ್ದ ಬಿಲದ್ವಾರಕ್ಕೆ ಮುಖವನ್ನು ತೆಗೆದು ಒಡ್ಡಿ, ಅವರನ್ನು ನುಂಗಿದನು. ಅಲ್ಲಿದ್ದ ವೃಷಲೀಪತಿಯಾದ ಬ್ರಾಹ್ಮಣನನ್ನೂ ತಿಳಿಯದೆ ನುಂಗಿದ ಗರುಡನ ಕಂಠದಲ್ಲಿ ನಿಂತು ಸುಡತೊಡಗಿದ ಬಾಡಬನು ಗರುಡನಿಗಿಂತೆಂದನು. 'ನನ್ನನ್ನು ಬಿಡು ! ನನ್ನ ಪತ್ನಿ ನಿಷಾದಿಯನ್ನೂ ನುಂಗದೆ ಬಿಡು ! ನಿನಗೆ ಕ್ಷೇಮವಾಗಲಿ !' ಆ ಮಾತನ್ನು ಕೇಳಿ ಪತಿತಬ್ರಾಹ್ಮಣನಾದರೂ ಅವನನ್ನು ಕೊಲ್ಲಲಿಚ್ಛಿಸದೆ ಗರುಡನು ಅವನನ್ನೂ ಅವನ ಸತಿಯನ್ನೂ ಹೊರಗೆಡಹಿ, ಮಿಕ್ಕ ನಿಷಾದರನ್ನೆಲ್ಲ ನುಂಗಿ ತನ್ನ ತಂದೆಯಾದ ಕಶ್ಯಪನ ಆಶ್ರಮವನ್ನು ಸೇರಿ, ಅವನಿಗೆ ನಮಸ್ಕರಿಸಿ ಇಂತೆಂದನು—

'ತಾತ ! ಅಮ್ಮ ಚನ್ನಾಗಿರುವಳು. ಅಣ್ಣನೂ ಕುಶಲಿಯೇ, ನಾನು ಮಾತ್ರ ಸಾಕಷ್ಟುಆಹಾರವಿಲ್ಲದೆ ಕೊರಗುತ್ತಿರುವೆನು. ಹೋಗುವುದು ಸ್ವರ್ಗಕ್ಕೆ;ತರಬೇಕಾಗಿರುವದು ಅಮೃತವನ್ನು ; ಕಾದಾಡುವದು ದೇವತೆಗಳೊಂದ ; ಹೀಗಿರುವಾಗ ಹೊಟ್ಟೆಗಿಲ್ಲದ ನಾನೀ ಮಹಾಕಾರ್ಯವನ್ನೆಂತು ಸಾಧಿಸಲಿ ? ತಾಯಿಯ ದಾಸ್ಯವನ್ನೆಂತು ಬಿಡಿಸಲಿ ? ನಿಷಾದ ಭಕ್ಷಣದಿಂದ ನನ್ನ ಹಸಿವೆ ಹಿಂಗದಾಗಿದೆ. ಬಹು ಭಕ್ಷ್ಯವೆಲ್ಲಿದೆ ? ಹೇಳು.'

*

ಆಜ್ಞಾಪಿಸಿದಳು. ದಾಸಿಯಾದ ವಿನತೆ ಕದ್ರುವಿನನ್ನು ವಹಿಸಿ ನಡೆದಳು. ದಾಸೀಪುತ್ರ ನಾದ ಗರುಡನು ಕದ್ರೂ ಪುತ್ರರಾದ ನಾಗರನ್ನು ವಹಿಸಿ, ಸಮುದ್ರತೀರವನ್ನು ಸೇರ ಹೊರಟನು. ಹಾರುತ್ತ ಹೊರಟ ಗರುಡನು ಸೂರ್ಯಮಂಡಲ ಸಮೀಪದಲ್ಲಿ ಬಂದಾಗ ಅವನು ಹೊತ್ತ ನಾಗರು ತಾಪದಿಂದ ಬೆಂದು ಕೆಳಗೆ ಬಿದ್ದರು. ಅದನ್ನು ಕಂಡು ದುಃಖಿತ ಳಾಗಿ ಕದ್ರುವು ಇಂದ್ರನನ್ನು ತುತಿಸಿದಳು—

"ಸರ್ವದೇವೇಶ! ಇಂದ್ರಾಂತರ್ಯಾಮಿ ನಾರಾಯಣ! ನಮುಚಿಯನ್ನು ಸಂಹರಿಸಿ, ದೇವ ಹಿತವನ್ನು ಸಾಧಿಸಿದೆ ಸ್ವಾಮಿ! ಸೂರ್ಯ ತಪ್ತರಾದ ನನ್ನ ಸುತರನ್ನು ಪುನರುಜ್ಜೀವಿಸು! ಲಿಂಗಶರೀರ ಭೇದಕ ಜ್ಞಾನೋಪದೇಶವನ್ನು ಮಾಡಿ, ಸುಜನ ರನ್ನು ಪೊರೆವ ಜಗತ್ಪಾಲಕನು ನೀನು. ನಿನ್ನಿಂದ ಸೃಷ್ಟಿಲಯಗಳು. ಮರಣರಹಿತನು, ಸರ್ವದೇವ ವಂದ್ಯನು, ಅಮೃತಮಯನು, ಸಂವತ್ಸರಾದಿ ಕಾಲನಿಯಾಮಕನು, ಭೂ ಸ್ವರ್ಗ ಪಾತಾಳಾದಿ ಸರ್ವಲೋಕ ಪಾಲನು ಆದ ನಿನಗೆ ಶರಣಾಗತಳಾದ ನನ್ನನ್ನು ಕಾಪಾಡು."

ಆ ಸ್ತುತಿಯಿಂದ ಪ್ರೀತನಾದ ಇಂದ್ರನು ಮೇಘಗಳಿಗೆ ಅಮೃತಶೀಕರವನ್ನು ಕರೆಯುವಂತೆ ಆಜ್ಞಾಪಿಸಿದನು. ಆಗ ಸರ್ಪಗಳು ಮತ್ತೆ ಬದುಕಿ ನಿಂತವು. ಅವನ್ನು ಮತ್ತೆ ಹೊತ್ತು ಗರುಡನು ಸಮುದ್ರತೀರದ ನಾಗದ್ವೀಪವನ್ನು ಸೇರಿಸಿದನು. ಮನೋ ರಮವಾದ ರಮಣಕದ್ವೀಪವು ಸಾಗರದಿಂದ ಸುತ್ತಲ್ಪಟ್ಟಿತ್ತು. ವಿಚಿತ್ರ ಫಲ-ಪುಷ್ಪಗಳು ಅಲ್ಲಿಯ ವನಗಳಲ್ಲಿ ಕಂಗೊಳಿಸುತ್ತಿದ್ದವು. ಸರೋವರಗಳಲ್ಲಿ ಸ್ವಚ್ಛ ಜಲವು ತುಂಬಿತ್ತು. ಅದರಲ್ಲಿ ಅರವಿಂದಾದಿ ಜಲಪುಷ್ಪಗಳು ಅರಳಿ ನಿಂತಿದ್ದವು. ಆ ಪುಷ್ಪಗಂಧವನ್ನು ಹೊತ್ತ ಮಂದಮಾರುತನು ಶೈತ್ಯಮಾಂದ್ಯ ಸೌಗಂಧ್ಯಗಳಿಂದ ಸುಖಾವಹನಾಗಿದ್ದನು. ಅಂಬರ ಚುಂಬಿಯಾದ ವೃಕ್ಷಗಳನ್ನು ಬಳಸಿ ಬೆಳೆದ ಮಲ್ಲಿಕಾಜಾತ್ಯಾದಿ ಲತೆಗಳು, ಮೇಲೇರಿ ವಿಕಸಿಸಿದ ತಮ್ಮ ಹೂಗಳಿಂದ ಸರ್ವಲೋಕದ ದೇವ ವನಿತೆಯರನ್ನು ಆಕರ್ಷಿಸು ವಂತಿದ್ದವು. ಗಂಧರ್ವಾಪ್ಸರಸೆಯರು ಹೂ ಚಿಗುರೆಲೆಗಳಿಂದ ಹಾಸಿದಂತಿದ್ದ ಪುಲಿನತಲ ಗಳಲ್ಲಿ ಕೂತು, ಕಲ ಕಲ ನಾದದಿಂದ ಪಾಡುವ ಕೋಕಿಲಾದಿ ವಿಹಗ ಸಂಗೀತವನ್ನು ಕೇಳುತ್ತ ಕಮಲ ಭ್ರಮದಿಂದ ಮುಖಗಳಿಗೆ ಬಾಗುವ ದುಂಬಿಗಳನ್ನು ಅಂಗುಲಿ ಪಲ್ಲವ ಗಳಿಂದ ದೂಡುತ್ತಾ, ರಮಣರಿಂದ ನಲಿದಾಡುತ್ತಿದ್ದರು. ಅಂತಹ ಮನೋಹರ ದ್ವೀಪ ವನ್ನು ಸೇರಿ ನಾಗರು, ಗರುಡನನ್ನು ನೋಡಿ ಅದಕ್ಕಿಂತಲೂ ರಮಣೀಯ ದ್ವೀಪ ವನ್ನು ಸೇರಿಸೆಂದು ಆಜ್ಞಾಪಿಸಿದರು. ತನ್ನ ದಾಸ್ಯಭಾವವನ್ನರಿತ ಗರುಡನು ಖಿನ್ನನಾಗಿ ತಾಯಿಯ ಬಳಿ ಸಾರಿ, ದಾಸ್ಯ ಕಾರಣವೇನೆಂದು ಕೇಳಿ ತಿಳಿದನು. ಮತ್ತೆ ನಾಗರನ್ನು ನೋಡಿ "ನನ್ನ ದಾಸ್ಯವು ಹಿಂಗುವ ಬಗೆ ಯಾವದು? ಏನಾದರೂ ಮಾಡುವೆನು! ಯಾವದನ್ನಾದರೂ ತಂದುಕೊಡುವೆ"ನೆಂದನು. ನಾಗರು ನಾಗಮಾತೆ ಕದ್ರುವಿ ನೊಡನೆ ಆಲೋಚಿಸಿ "ಅಮೃತವನ್ನು ತಂದು ಕೊಟ್ಟು, ನೀನು, ನಿನ್ನ ಮಾತೆ ದಾಸ್ಯ ದಿಂದ ಮುಕ್ತರಾಗಿ ಹೋಗಿ"ಎಂದು ನುಡಿದರು. ಅಂತೆಯೇ ಮಾಡುವೆನೆಂದು ಗರುಡನು

ವಿನತೆಯ ಪಾದಕ್ಕೆರಗಿ 'ಅಮ್ಮಾ! ಮೋಸದಿಂದ ನಿನ್ನನ್ನು ದಾಸಿಯಾಗಿ ಮಾಡಿಕೊಂಡ ಕದ್ರುವಿನನ್ನೂ ಅವಳ ಮಕ್ಕಳನ್ನೂ ನೋಡಿ ಸಂತಪ್ತನಾಗಿರುವೆನು. ನಿನ್ನನ್ನು ದಾಸ್ಯದಿಂದ ಬಿಡಿಸಲು ನಿಶ್ಚಯಿಸಿ, ಅಮೃತವನ್ನು ತರಲು ಪೋಗುವ ನನಗೆ ತಕ್ಕ ಆಹಾರವಾವುದು ? ಹೇಳೆ'ಂದನು.

ಆಗ ವಿನತೆ 'ವತ್ಸ ! ಸಮುದ್ರ ಮಧ್ಯದ ದ್ವೀಪದಲ್ಲಿ ನಿಷಾದಾಲಯವಿದೆ. ಅಲ್ಲಿರುವ ದುಷ್ಟರಾದ ನಿಷಾದರನ್ನು ತಿಂದು, ಅಮೃತಕ್ಕಾಗಿ ಪಯಣಿಸು. ಅವರಲ್ಲಿ ಒಬ್ಬ ವಿಪ್ರನಿರುವನು. ಅವನನ್ನು ಸಂಹರಿಸಬೇಡ ! ವಿಪ್ರ ಕ್ರುದ್ಧನಾದರೆ, ಅಗ್ನಿಯಂತೆ ಸುಡ ಬಲ್ಲನು ; ಶಸ್ತ್ರದಂತೆ ನಾಶಮಾಡಬಲ್ಲನು ; ವಿಷದಂತೆ, ಆರ್ಯನಂತೆ ಭಯಂಕರನಾದ ಬ್ರಾಹ್ಮಣರನ್ನು ಮಾತ್ರ ಕೆದಕಿ ಕೆಡಬೇಡ' ಎಂದಾಶೀರ್ವದಿಸಿ ಕಳುಹಿಸಿದಳು.

'ಪುತ್ರ! ದಾಸಿಯಾಗಿ ನೊಂದಿರುವ ನನ್ನ ಸಂಕಟವನ್ನು ನೀಗಿಸು, ನಿನ್ನಿಂದ ನನ್ನ ದುಃಖಗಳೆಲ್ಲವೂ ಕಳೆಯುವವೆಂದು ನಂಬಿರುವೆನು. ಮರುದ್ದೇವತೆಗಳು ನಿನ್ನ ರೆಕ್ಕೆಗಳನ್ನು ರಕ್ಷಿಸಲಿ ! ಚಂದ್ರ ಸೂರ್ಯರು ನಿನ್ನ ಬೆನ್ನ ಹಿಂದೆ ರಕ್ಷಕರಾಗಿರಲಿ ! ವಹ್ನಿಯು ನಿನ್ನ ಶಿರವನ್ನು ಕಾಪಾಡಲಿ ! ವಸುಗಳು ಸರ್ವತ್ರ ನಿನ್ನನ್ನು ಪೊರೆಯುತ್ತಿರಲಿ ! ಹೋಗು ! ನಾನೂ ಇಲ್ಲಿ ಸಂತತವೂ ನಿನ್ನ ಕುಶಲವನ್ನೇ ಹಾರೈಸುತ್ತಾ, ಸ್ವಸ್ತಿ ಕಾರ್ಯಗಳನ್ನು ಮಾಡುತ್ತಿರುವೆನು. ಬ್ರಾಹ್ಮಣನನ್ನು ಮಾತ್ರ ಹಿಂಸಿಸಬೇಡ ! ವಿಪ್ರನು ಕುತ್ತಿಗೆಯನ್ನು ಅಗ್ನಿಯಂತೆ ಸುಡುವನು. ಅವನು ನಿನಗೆ ಜೀರ್ಣನಾಗನು. ಅಂತಹವನನ್ನು ವಿಪ್ರನೆಂದರಿತು ಹಿಂಸಿಸದೆ ಉಗುಳಿಬಿಡು ! ಕಾರ್ಯ ಸಿದ್ಧಿಯಾಗಲಿ !' ಎಂದಾಶೀರ್ವದಿಸಿದ ತಾಯಿಯನ್ನು ಬೀಳ್ಕೊಂಡು ಗರುಡನು ನಿಷಾದದ್ವೀಪವನ್ನು ಸೇರಿದನು.

ಅಲ್ಲಿ ದುಷ್ಟ ನಿಷಾದರಿದ್ದ ಬಿಲದ್ವಾರಕ್ಕೆ ಮುಖವನ್ನು ತೆಗೆದು ಒಡ್ಡಿ, ಅವರನ್ನು ನುಂಗಿದನು. ಅಲ್ಲಿದ್ದ ವೃಷಲೀಪತಿಯಾದ ಬ್ರಾಹ್ಮಣನನ್ನೂ ತಿಳಿಯದೆ ನುಂಗಿದ ಗರುಡನ ಕಂಠದಲ್ಲಿ ನಿಂತು ಸುಡತೊಡಗಿದ ಬಾಡಬನು ಗರುಡನಿಗಿಂತೆಂದನು. 'ನನ್ನನ್ನು ಬಿಡು ! ನನ್ನ ಪತ್ನಿ ನಿಷಾದಿಯನ್ನೂ ನುಂಗದೆ ಬಿಡು ! ನಿನಗೆ ಕ್ಷೇಮವಾಗಲಿ !' ಆ ಮಾತನ್ನು ಕೇಳಿ ಪತಿತಬ್ರಾಹ್ಮಣನಾದರೂ ಅವನನ್ನು ಕೊಲ್ಲಲಿಚ್ಛಿಸದೆ ಗರುಡನು ಅವನನ್ನೂ ಅವನ ಸತಿಯನ್ನೂ ಹೊರಗೆಡಹಿ, ಮಿಕ್ಕ ನಿಷಾದರನ್ನೆಲ್ಲ ನುಂಗಿ ತನ್ನ ತಂದೆಯಾದ ಕಶ್ಯಪನ ಆಶ್ರಮವನ್ನು ಸೇರಿ, ಅವನಿಗೆ ನಮಸ್ಕರಿಸಿ ಇಂತೆಂದನು—

'ತಾತ ! ಅಮ್ಮ ಚನ್ನಾಗಿರುವಳು. ಅಣ್ಣನೂ ಕುಶಲಿಯೇ, ನಾನು ಮಾತ್ರ ಸಾಕಷ್ಟುಆಹಾರವಿಲ್ಲದೆ ಕೊರಗುತ್ತಿರುವೆನು. ಹೋಗುವುದು ಸ್ವರ್ಗಕ್ಕೆ;ತರಬೇಕಾಗಿರುವದು ಅಮೃತವನ್ನು ; ಕಾದಾಡುವದು ದೇವತೆಗಳಿಂದ ; ಹೀಗಿರುವಾಗ ಹೊಟ್ಟೆಗಿಲ್ಲದ ನಾನೀ ಮಹಾಕಾರ್ಯವನ್ನೆಂತು ಸಾಧಿಸಲಿ ? ತಾಯಿಯ ದಾಸ್ಯವನ್ನೆಂತು ಬಿಡಿಸಲಿ ? ನಿಷಾದ ಭಕ್ಷಣದಿಂದ ನನ್ನ ಹಸಿವೆ ಹಿಂಗದಾಗಿದೆ. ಬಹು ಭಕ್ಷ್ಯವೆಲ್ಲಿದೆ ? ಹೇಳು.'

*

ಗರುಡನು ನುಡಿದದ್ದನ್ನು ಕೇಳಿ, ನಸುನಕ್ಕು ಕಶ್ಯಪನು "ವತ್ಸ! ಈ ಸರೋವರದಲ್ಲಿ ಒಂದು ಕೂರ್ಮವಿದೆ. ಸರೋಜಲವನ್ನು ಕುಡಿಯಲು ಒಂದು ವನಗಜವು ಬರುವದು. ನಿತ್ಯವೂ ಆ ಗಜ ಕಚ್ಛಪಗಳಿಗೆ ಮಹಾಯುದ್ಧವಾಗುತ್ತಿರುವುದು. ಇದಕ್ಕೆ ಕಾರಣವನ್ನು ಕೇಳು—ವಿಭಾವಸುವೆಂಬ ಕೋಪಿಷ್ಠನಾದ ಋಷಿಯಿದ್ದನು. ಅವನ ತಮ್ಮನು ಸುಪ್ರತೀಕನು. ಅವರು ಆಸ್ತಿಗಾಗಿ ಕಾದಾಡಿ ಭಾಗವಾದರು. ಆದರೂ ಅರ್ಥಲೋಭದಿಂದ ಜಗಳವಾಡುತ್ತಲೇಯಿದ್ದರು. ಅವರ ಜಗಳವನ್ನು ಹಿತಶತ್ರುಗಳು ಕೀಳು ನುಡಿಗಳಿಂದ ಆರದಂತೆ ಮಾಡುತ್ತಿದ್ದರು. ಒಂದುದಿನ ವಿಭಾವಸುವು ತಮ್ಮನನ್ನು ಆನೆಯಾಗೆಂದು ಶಪಿಸಿದನು. ತಮ್ಮನು ಅಣ್ಣನಿಗೆ ಆಮೆಯಾಗೆಂದು ಶಾಪವಿತ್ತನು. ಈಗ ಆ ಮುನಿಗಳು ಗಜ ಕಚ್ಛಪಗಳಾಗಿದ್ದರೂ, ಪೂರ್ವ ವೈರವನ್ನು ಮರೆಯದೆ, ಕಾದಾಡುತ್ತಿರುವರು. ಆನೆಯು ಆರು ಯೋಜನ ಎತ್ತರವಾಗಿ ಹನ್ನೆರಡು ಯೋಜನ ಅಗಲವಾಗಿದೆ: ಆಮೆಯು ಮೂರು ಯೋಜನ ಎತ್ತರವಾಗಿ, ಹತ್ತು ಯೋಜನ ಸುತ್ತಳತೆ ಉಳ್ಳದ್ದಾಗಿದೆ. ಅವೆರಡನ್ನೂ ತಿನ್ನು. ನಿನ್ನ ಕ್ಷುದ್ಬಾಧೆ ತೀರವುದು. ನಿನಗೆ ಶುಭವಾಗಲಿ! ದೇವತೆಗಳಿಂದ ಯುದ್ಧವು ನಡೆಯುವದಿದೆ. ಆಗ ನಿನಗೆ ಜಯವಾಗಲಿ! ಅಮೃತಲಾಭವಾಗಲಿ! ಸರ್ವವೇದಗಳು, ದೇವತೆಗಳು ನಿನಗೆ ಬಲಕರವಾಗಲಿ" ಎಂದು ಹರಸಿ ಕಳುಹಿದನು.

ಗರುಡನು ಸರೋವರವನ್ನು ಸೇರಿದನು. ಕಾದಾಡುತ್ತಿದ್ದ ಗಜಕಚ್ಛಪಗಳನ್ನು ತನ್ನ ಎರಡು ಕಾಲುಗಳಲ್ಲಿ ಹಿಡಿದೆತ್ತಿಕೊಂಡು, ಆಕಾಶ ಮಾರ್ಗವನ್ನು ಹಿಡಿದನು. ಮೇರು ಪರ್ವತ ಶಿಖರವನ್ನು ಸೇರಿ, ಅಲ್ಲಿ ಶತಯೋಜನ ವಿಸ್ತೀರ್ಣವಾದ ಒಂದು ಆಲದ ಮರದ ಸ್ವಾಗತವನ್ನು ಮನ್ನಿಸಿ, ಅದರ ಒಂದು ಶಾಖೆಯಲ್ಲಿ ಕೂತನು. ತತ್‌ಕ್ಷಣವೇ ಆ ಶಾಖೆಯು ಛಟ ಛಟತ್ಕಾರದಿಂದ ಮುರಿಯಿತು. ಆ ಶಾಖೆಯಲ್ಲಿ ತಲೆ ಕೆಳಗಾಗಿ ತಪಸ್ಸು ಮಾಡುತ್ತಿದ್ದ ವಾಲಖಿಲ್ಯರೆಂಬ ಅರವತ್ತು ಸಾವಿರ ತಪೋಧನರನ್ನು ಕಂಡು, ಅವರಿಗೆ ಹಾನಿಯಾದೀತೆಂಬ ಭಯದಿಂದ, ಗರುಡನು ಆ ಶಾಖೆಯನ್ನೂ ತನ್ನ ತುಂಡದಲ್ಲಿ ಗಟ್ಟಿಯಾಗಿ ಹಿಡಿದ ಗಜ ಕಚ್ಛಪರನ್ನೂ ಕಾಲ ಉಗುರುಗಳಲ್ಲಿ ಹಿಡಿದು, ತಾನು ಕೂತು ಭುಜಿಸಲು ತಕ್ಕ ಮರವನ್ನೂ ವಾಲಖಿಲ್ಯರನ್ನು ರಕ್ಷಿಸುವ ರೀತಿಯನ್ನೂ ತಿಳಿಯಲು ಕಶ್ಯಪನಿದ್ದಲ್ಲಿಗೇ ಬಂದನು. ತೇಜೋವೀರ್ಯ ಬಲೋಪೇತನಾದ ಗರುಡನ ಲೋಕೋತ್ತರ ಕಾರ್ಯವನ್ನು ಕಂಡು ಸುರರು, ಋಷಿಗಳು, ಗಂಧರ್ವರು ಆಶ್ಚರ್ಯ ಸಂಭ್ರಮಾನ್ವಿತರಾಗಿ ಅವನನ್ನು ಬಹುವಿಧವಾಗಿ ಸ್ತುತಿಸಿದರು.

ಆಗ ಕಶ್ಯಪನು ವಾಲಖಿಲ್ಯರನ್ನು ಪ್ರಸನ್ನೀಕರಿಸಿಕೊಂಡು ಅವರನ್ನು ಪೂಜಿಸಿ, ಹಿಮಪರ್ವತಕ್ಕೆ ಕಳುಹಿಸಿದನು. ಮಗನನ್ನು ನೋಡಿ 'ಮನುಜಾದಿ ಸಂಚಾರ ರಹಿತವಾದ ಹಿಮವಂತದ ಮಹಾಕುಕ್ಷಿ ಶಿಖರದಲ್ಲಿ ಕೂತು, ಗಜ ಕೂರ್ಮಗಳನ್ನು ಭಕ್ಷಿಸು! ಈ ಕೊಂಬೆಯನ್ನು ಅಲ್ಲೇ ಬಿಡು!' ಎಂದು ಬೀಳ್ಕೊಟ್ಟನು. ಅಂತೆಯೇ ಮಾಡಿ,

ತ್ರಿಭೇದ (Tibet) ವೆಂಬ ಆ ಪರ್ವತ ಕೂಟಾಗ್ರದಿಂದ ಗರುಡನು, ಅಮೃತಾರ್ಥಿಯಾಗಿ ಸುರಲೋಕಕ್ಕೆ ಹಾರಿದನು.

## ಅಮೃತಾನಯನ ವಿನತಾ—ವಿಮೋಚನ

ಗರುಡನು ಸ್ವರ್ಗವನ್ನು ಮುತ್ತಿದಾಗ ದೇವತೆಗಳು ಭಯಕಂಪಿತರಾದರು. ಇಂದ್ರನ ವಜ್ರಾಯುಧವು ಉರಿಯಲಾರಂಭಿಸಿತು. ಆಕಾಶದಿಂದ ಉಲ್ಕೆಗಳು ಉದುರಿದವು. ಬಿರುಗಾಳಿ ಬೀಸಿತು. ಇಂದ್ರನು ಭೀತನಾಗಿ ಬೃಹಸ್ಪತಿಯನ್ನು ಪ್ರಶ್ನಿಸಿದನು. ಅವನು ಇಂತೆಂದನು—"ದೇವೇಂದ್ರ ! ಇದು ನಿನ್ನ ಅಪರಾಧದ ಫಲವು. ಹಿಂದೆ ವಾಲಖಿಲ್ಯರನ್ನು ನಿಂದಿಸಿದೆ. ಅವರ ಅನುಗ್ರಹವನ್ನು ಪಡೆದ ಕಶ್ಯಪ ಪುತ್ರನಾದ ಗರುಡನು ಅಮೃತವನ್ನು ಒಯ್ಯಲು ಬರುತ್ತಿರುವನು. ಅವನು ಬಲವಂತನು. ತನ್ನ ಕಾರ್ಯವನ್ನು ಸಾಧಿಸಿಬಿಡುವ ಸಮರ್ಥನು. ಅವನನ್ನು ನೀನು ಗೆಲ್ಲಲಾರೆ. ಈಗ ಸಂಧಿಯೇ ಸರಿಯೆಂದು ನನ್ನ ಅಭಿಪ್ರಾಯ."

ಆಗ ಇಂದ್ರನು ಅಮೃತ ರಕ್ಷಕರನ್ನು ಎಚ್ಚರಿಸಿ, ಗರುಡನನ್ನೆದುರಿಸಲು ತಾನೂ ಸಿದ್ಧನಾದನು. ಉದ್ಯತ ಘೋರಾಯುಧಪಾಣಿಗಳಾಗಿ ಸುರರೆಲ್ಲರು ಅವನಿಗೆ ಸಹಾಯವಾದರು.

ಹಿಂದೆ ಪುತ್ರಕಾಮನಾಗಿ ಕಶ್ಯಪನು ಇಷ್ಟಿಯನ್ನು ಮಾಡುತ್ತಿರಲು, ದೇವಋಷಿ ಗಂಧರ್ವಾದಿಗಳು ಯಜ್ಞಶಾಲೆಯಲ್ಲಿ ವಿವಿಧ ಕಾರ್ಯ ಮಗ್ನರಾಗಿ ಅವನಿಗೆ ಸಹಾಯಕರಾಗಿದ್ದರು. ಇಂದ್ರನು ಯಜ್ಞಕ್ಕೆ ಬೇಕಾಗುವ ಒಣ ಕಟ್ಟಿಗೆಗಳನ್ನು ಆರಿಸಿತರಲು ನಿಯುಕ್ತನಾಗಿದ್ದನು. ವಾಲಖಿಲ್ಯರು ಸಮಿತ್ತುಗಳನ್ನು ತರುತ್ತಿದ್ದರು. ಬಲವಂತನಾದ ಇಂದ್ರನು ಮಹಾಭಾರವನ್ನು ಹೊತ್ತುತರುತ್ತಾ, ಹಾದಿಯಲ್ಲಿ ಒಂದು ಪಲಾಶ ಕಾಷ್ಠವನ್ನು ನೂರಾರುಮಂದಿ ವಾಲಖಿಲ್ಯರು ಕಲೆತು ಕಷ್ಟದಿಂದ ಹೊತ್ತು ತರುವುದನ್ನು ನೋಡಿದನು. ಅವರು ಗೋಷ್ಪದದಷ್ಟು ತಗ್ಗಿನ ನೀರಿನಲ್ಲಿಯೂ ಮುಣುಗುತ್ತಿದ್ದರು. ಅಂಗುಷ್ಠಪರ್ವಮಾತ್ರ ಶರೀರರಾದ ಅವರನ್ನು ನೋಡಿ ವೀರ್ಯೋನ್ಮತ್ತನಾದ ಇಂದ್ರನು ನಕ್ಕನು. ವಾಲಖಿಲ್ಯರು ಕುಪಿತರಾಗಿ, ಈ ಇಂದ್ರನನ್ನು ಸೋಲಿಸುವ ಮಹಾವೀರ್ಯ ತೇಜೋಬಲಯುತನಾದ ಇನ್ನೊಬ್ಬ ಇಂದ್ರನನ್ನು ಸೃಜಿಸುವೆವೆಂದು ತಪಸ್ಸನ್ನು ಮಾಡಿದರು. ಅದನ್ನು ತಿಳಿದು ಭಯಪಟ್ಟ ಇಂದ್ರನು ತಂದೆ ಕಶ್ಯಪನಿಗೆ ಶರಣಾಗತನಾದನು. ಕಶ್ಯಪನು ಸಾಮದಿಂದ ವಾಲಖಿಲ್ಯರನ್ನು ಶಾಂತಗೊಳಿಸಿದನು. 'ಇನ್ನೊಬ್ಬ ಇಂದ್ರನನ್ನು ಸೃಜಿಸುವದರಿಂದ ಬ್ರಹ್ಮನಿಯುಕ್ತನಾದ ಇಂದ್ರನ ಗತಿಯೇನು ? ಮತ್ತು ಬ್ರಹ್ಮದೇವನ ವಚನವು ಸುಳ್ಳಾಗಬಾರದೆಂದು ನೀವೂ ಯೋಚಿಸಿ. ನಿಮ್ಮ ಶಪಥವೂ ಸುಳ್ಳಾಗದಂತೆ ನಿಮ್ಮ ಇಂದ್ರನು ಪಕ್ಷೇಂದ್ರನಾಗಲಿ' ಎಂದ ಕಶ್ಯಪನಿಗೆ ವಾಲಖಿಲ್ಯರು 'ಹಾಗೇ ಆಗಲಿ ! ನಾವು ಇಂದ್ರನನ್ನು ಸೃಜಿಸಲಿರುವೆವು. ನೀನು ಪುತ್ರಕಾಮೇಷ್ಟಿಯನ್ನು ಮಾಡುತ್ತಿರುವೆ. ನಿನ್ನ ಈ ಪುತ್ರನೇ ನಮ್ಮ ವಿಹಗೇಂದ್ರ

ನಾಗಲಿ' ಎಂದು ಸಮ್ಮತಿಸಿದರು. ಆ ವಾಲಖಿಲ್ಯರ ತಪೋಬಲದಿಂದಲೂ ಕಶ್ಯಪರ ಅನುಗ್ರಹದಿಂದಲೂ ವಿನತೆ ಇಬ್ಬರು ಪುತ್ರರನ್ನು ಪಡೆದಳು. ಇಂದ್ರನಿಗೂ ಸಮಾಧಾನ ವಾಯಿತು. ವಿನತೆಯ ಪುತ್ರರು ಇಂದ್ರಮಿತ್ರ ರಾದರು. ವಿಹಗೇಂದ್ರನನ್ನು ಗೆಲ್ಲಲು ತಾನು ಸಮರ್ಥನಲ್ಲವೆಂದರಿತಿದ್ದೂ ಇಂದ್ರನು ಕರ್ತವ್ಯವನ್ನರಿತು ಅಮೃತ ರಕ್ಷಣವನ್ನು ಕೈಕೊಂಡನು.

ಆಗ ಗರುಡನು ದೇವತೆಗಳನ್ನೆಲ್ಲ ಸೋಲಿಸಿ, ತನ್ನ ರೆಕ್ಕೆಗಳಿಂದ ಎದ್ದ ಗಾಳಿಯಿಂದ ರಕ್ಷಕನಾಗಿದ್ದ ವಿಶ್ವಕರ್ಮನನ್ನು ಎತ್ತಿ ಬಿಸಾಡಿದನು. ಮೇಲಕ್ಕೆದ್ದ ಧೂಳು ಕಣ್ಣಿಗೆ ಕವಿದಾಗ ರಕ್ಷಕರಾಗಿದ್ದ ದೇವತೆಗಳು ಕುರುಡರಂತೆ ನಿಶ್ಚೇಷ್ಟರಾಗಿ ನಿಂತರು. ಪಕ್ಷತುಂಡ ಪ್ರಹಾರಗಳಿಂದ ಇತರ ರಕ್ಷಕರನ್ನು ಹೊಡೆದೆಬ್ಬಿಸಿ, ಸುತುಮುಲ ರಣದಲ್ಲಿ ಎಲ್ಲ ವಾಯ್ವಾದಿ ಸುರರನ್ನು ಸೋಲಿಸಿದನು. ವಸು, ರುದ್ರ, ಆದಿತ್ಯ, ಸಾಧ್ಯರು ಈ ಸಮಸ್ತರೂ ಓಡಿಹೋದರು. ನವಯಕ್ಷರನ್ನು ಗೆದ್ದು, ಅಮೃತ ಕುಂಭದ ಸುತ್ತಲೂ ಉರಿಯುತ್ತಿದ್ದ ಅಗ್ನಿಯನ್ನು ಗರುಡನು ಅನೇಕ ಸಹಸ್ರ ಮುಖನಾಗಿ ನದೀ ಜಲಗಳನ್ನು ತುಂಬಿಕೊಂಡು ತಂದು ಆರಿಸಿಬಿಟ್ಟನು: ಅಮೃತಕಲಶದ ಸುತ್ತಲೂ ಮಹಾ ವೇಗವಾಗಿ ತಿರುಗುತ್ತಿರುವ ಚಕ್ರ ಯಂತ್ರವನ್ನು ಸೂಕ್ಷ್ಮರೂಪನಾಗಿ ಪ್ರವೇಶಿಸಿದನು: ಒಳಗೆ ಮಹಾವಿಷವನ್ನು ಕಾರುತ್ತಿರುವ ಘೋರ ಸರ್ಪರಾಜರನ್ನಿಬ್ಬರನ್ನು ಕಂಡು, ಗರುಡನವರ ಕಣ್ಣಲ್ಲಿ ಮಣ್ಣನ್ನು ತೂರಿ, ರೆಕ್ಕೆಗಳಿಂದ ಬಡಿದು ಮೂರ್ಛೆಗೆಡವಿ ಅಮೃತಕಲಶವನ್ನೆತ್ತಿಕೊಂಡು ಕ್ಷಣಮಾತ್ರದಲ್ಲಿ ಹೊರಬಂದನು. ಕೈಯಲ್ಲಿ ಸ್ವಾಧೀನವಾಗಿ ಅಮೃತಕಲಶವಿದ್ದರೂ ಅದನ್ನು ಕುಡಿಯದೆ, ಧೀರನಾಗಿದ್ದ ಗರುಡನಿಗೆ ಪ್ರೀತನಾಗಿ ವಿಷ್ಣುವು ಪ್ರತ್ಯಕ್ಷನಾದನು. ವರವನ್ನು ಬೇಡೆಂದ ಮಹಾಪ್ರಭುವಿನ ಚರಣಗಳಿಗೆ ನಮಿಸಿ ಗರುಡನು 'ದೇವಾ! ಅಮೃತಪಾನ ಮಾಡದೆ, ನಾನು ಅಜರಾಮರನಾಗಿರುವಂತೆ ಅನುಗ್ರಹಿಸು. ನಿನ್ನ ರಥದ ಧ್ವಜದಲ್ಲಿ ನನ್ನ ಲಾಂಛನವಿರಲಿ!' ಎಂದು ಬೇಡಿದನು. ಶ್ರೀಹರಿಯು ಹಾಗೆಯೇ ಅನುಗ್ರಹಿಸಿ, ಗರುಡನನ್ನು ಕುರಿತು ನೀನು ನನಗೆ ವಾಹನವಾಗಿದ್ದು, ಸ್ಮರಿಸಿದಾಗ ಬಂದು ಸೇವಿಸು ಎಂಬುದಾಗಿ ಅಪ್ಪಣೆಯಿತ್ತು ಮರೆಯಾದನು.

ಗರುಡನು ಮಹಾವೇಗದಿಂದ ಅಮೃತಕಲಶವನ್ನು ತೆಗೆದುಕೊಂಡು ತಮ್ಮನ್ನು ಗೆದ್ದು ಹೋಗುತ್ತಿರುವುದನ್ನು ಸಹಿಸದೆ ಇಂದ್ರನು ವಜ್ರಾಯುಧದಿಂದ ಗರುಡನನ್ನು ಹೊಡೆದನು. ಆಗ ಗರುಡನು ನಗುತ್ತಾ 'ದೇವೇಂದ್ರನಾದ ನಿನಗೆ ನನ್ನಿಂದ ಗೌರವ ಸಲ್ಲತಕ್ಕದ್ದಾಗಿದೆ. ಋಷಿವರನಾದ ದಧೀಚಿಯ ತಪೋಯುಕ್ತವಾದ ಎಲುಬಿನಿಂದ ನಿರ್ಮಿತವಾದ ಈ ವಜ್ರವು ವ್ಯರ್ಥವಾಗಬಾರದು. ಅದಕ್ಕಾಗಿ ಈ ನನ್ನ ಒಂದು ಪುಕ್ಕವನ್ನು ನಿನಗೆ ಬಹುಮಾನವಾಗಿ, ವಜ್ರಾಯುಧದ ಮೇಲಿಟ್ಟು ಕಳಿಸುತ್ತಿರುವೆನು' ಎಂದು ಒಂದು ಪತ್ರವನ್ನು ಕಳುಹಿಸಿದನು. ವಜ್ರಾಯುಧವನ್ನು ಕೂಡ ಲೆಕ್ಕಿಸದೇ ನಿಂತ ಗರುಡನ ವೀರ್ಯಬಲಗಳಿಗೆ ಇಂದ್ರಾದಿಗಳು ಬೆರಗಾದರು. ಅವನ ಬಂಗಾರದ

ಪುಕ್ಕವನ್ನು ನೋಡಿ, ಅವನಿಗೆ 'ಸುಪರ್ಣ'ನೆಂದು ಹೆಸರಿಟ್ಟರು. ಆಗ ಇಂದ್ರನು ಗರುಡನ ಸ್ನೇಹವನ್ನು ಬಯಸಿ ಬೇಡಿದಾಗ ಗರುಡನಿಂತೆಂದನು—"ಆತ್ಮಸ್ತುತಿಯು ನಿಂದ್ಯವಾಗಿದೆ, ಆದರೂ ಸ್ನೇಹಿತನಾದ ನಿನಗೆ ನನ್ನ ಬಲದ ಅರಿವಿರಲಿ, ಕೇಳು ! ಸಕಲ ನದೀ ಪರ್ವತ ಸಮೇತವು, ಸಾಗರವೇಷ್ಟಿತವು, ದೇವ ದಾನವ ಮಾನವಾದಿ ಭೂತಗಣ ಯುತವು ಆದ ಭೂಮಂಡಲವನ್ನು ಒಂದು ರೆಕ್ಕೆಯ ಮೇಲೆ ಹೊರಲು ಶಕ್ತನಾಗಿರುವೆನು. ನನಗೆ ಅಮೃತದಿಂದ ಪ್ರಯೋಜನವಿಲ್ಲ. ಆದರೆ ನಮ್ಮ ತಾಯಿಯ ದಾಸ್ಯವನ್ನು ಬಿಡಿಸಲೋಸುಗ ಇದನ್ನು ನಾಗರಿಗೆ ಕೊಡಬೇಕಾಗಿ ಒಯ್ಯುತ್ತಿರುವೆನು" ಆ ಮಾತನ್ನಾಲಿಸಿ ದೇವೇಂದ್ರ "ಅಯ್ಯಾ ! ಪಕ್ಷಿರಾಜ ! ದುಷ್ಟರಾದ ನಾಗರಿಗೆ ಅಮೃತವೆಂದರೆ ಲೋಕಹಿತವಾಗುವುದಿಲ್ಲ. ಅಮೃತದಿಂದ ನಿನಗೆ ಪ್ರಯೋಜನವೂ ಇಲ್ಲ, ಅದನ್ನವರಿಗೆ ಕೊಡು. ನಿಮ್ಮ ಮಾತೆಯನ್ನು ದಾಸ್ಯಮುಕ್ತಳನ್ನಾಗಿಸಿ ಕರೆದುಕೊಂಡು ಹೋಗು. ನಾಗರು ಸುಧೆಯನ್ನು ಸೇವಿಸದಂತೆ ನಾನು ಅಮೃತಕಲಶವನ್ನು ಅಪಹರಿಸಿ ಬಿಡುವೆನು. ಇದಕ್ಕಾಗಿ ನಿನಗೊಂದು ವರವನ್ನು ಕೊಡುವೆನು ಕೇಳು" ಎಂದನು. ಆ ಮಾತನ್ನು ಕೇಳಿ, ಗರುಡನು ತನ್ನ ತಾಯಿಯನ್ನು ಮೋಸದಿಂದ ದಾಸಿಯನ್ನಾಗಿ ಮಾಡಿದ ಕದ್ರು ಮತ್ತು ಅವಳ ಪುತ್ರರನ್ನು ನೆನೆದು, ಸಿಟ್ಟನಿಂದ "ಸರ್ಪಗಳು ನನಗೆ ಭಕ್ಷ್ಯವಾಗಲಿ ! ಅಮೃತವನ್ನು ನೀನು ಅಪಹರಿಸಲು ನನ್ನ ಆಕ್ಷೇಪವಿಲ್ಲ"ವೆಂದು ಹೇಳಿ ತಾಯಿಯ ಸಮೀಪಕ್ಕೆ ಬಂದನು. ಸರ್ಪರಾಜರನ್ನು ಕರೆದು "ಅಮೃತವನ್ನು ಕಲಶಗಳ ಮೇಲಿಟ್ಟಿರುವೆನು. ಸ್ನಾನಮಾಡಿ, ದಾನಮಾಡಿ, ಅಮೃತಪಾನವನ್ನು ಮಾಡಿ ! ನಮ್ಮ ತಾಯಿಯು ಇಂದಿನಿಂದ ದಾಸ್ಯಮುಕ್ತಳಾದಳು" ಎಂದು ನುಡಿದನು. ವಿನತೆಯು ದಾಸ್ಯಮುಕ್ತಳಾದಳು. ಗರುಡನು ತನ್ನ ಸ್ವಾಮಿಯಾದ ನಾರಾಯಣನನ್ನು ಸೇರಿ ಅವನಿಗೆ ವಾಹನನಾಗಿ ಸುಖದಿಂದಿದ್ದನು.

ಸರ್ಪಗಳು ಸ್ನಾನಕ್ಕೆಂದು ಹೊರಟರು ; ತತ್‌ಕ್ಷಣವೇ ಇಂದ್ರನು ಸುಧಾಕಲಶವನ್ನು ತೆಗೆದುಕೊಂಡು ಮಾಯವಾದನು. ಸ್ನಾತರಾಗಿ ಬಂದ ನಾಗರು ಅಮೃತಕಲಶವನ್ನು ಹುಡುಕಿ ಕಾಣದೆ, ತಮಗೆ ತಕ್ಕ ಪ್ರತಿಮೋಸನಾಯಿತೆಂದು ಮಿಡುಕಿದರು. ಕುಶಗಳಲ್ಲಿ ಸುಧೆಯು ಬಿದ್ದಿರಬಹುದೆಂದು, ದರ್ಭಗಳನ್ನು ನೆಕ್ಕಿದರು. ಅಂದಿನಿಂದ ಸರ್ಪಗಳು, ನಾಲಿಗೆ ಎರಡಾಗಿ ಸೀಳಿದುದರಿಂದ, ದ್ವಿಜಿಹ್ವರೆನಿಸಿದರು.

ವಾಸುಕಿ, ಐರಾವತ, ತಕ್ಷಕ, ಕರ್ಕೋಟಕ, ಧನಂಜಯ, ಕಾಲಿಯ, ಮಣಿನಾಗ, ಪೂರಣ, ಪಿಂಜರ, ಏಲಾಪತ್ರ, ಆಶ್ಯಕ, ಶಂಖ, ಪಿಂಗಳ, ಶ್ಲೇಮಕ, ಪಿಂಡಾರಕ, ಕರವೀರ, ಧೃತರಾಷ್ಟ್ರ, ಸುಮುಖ, ಕುಮುದ, ಕುಂಡೋದರ ಮುಂತಾದ ನಾಗರು ಅಸಂಖ್ಯಾತರಾಗಿರುವರು. ನಾಗರಲ್ಲಿ ಜ್ಯೇಷ್ಠನೂ ಶ್ರೇಷ್ಠನೂ ಆದ ಶೇಷನು ತಾಯಿಯ ಕೌಟಿಲ್ಯವನ್ನರಿತು ರೋಸಿ, ಮನೆಯನ್ನು ಬಿಟ್ಟು ಗಂಧಮಾದನ ಗೋಕರ್ಣ ಪುಷ್ಕರ ಅರಣ್ಯಗಳಲ್ಲಿ ಉಗ್ರತಪವನ್ನು ಮಾಡಿದನು. ಅವನಲ್ಲಿ ಪ್ರೀತನಾಗಿ ಚತುರ್ಮುಖನು ಪ್ರತ್ಯಕ್ಷನಾಗಿ 'ವರವನ್ನು ಬೇಡು' ಎಂದನು. ಶೇಷನಿಂತೆಂದನು—"ಪಿತಾಮಹ !

ನನ್ನ ತಮ್ಮಂದಿರು ದುರ್ಮಾರ್ಗರು. ಅವರ ಸಹವಾಸವೆನಗೆ ಬೇಡವಾಗಿದೆ. ಪರಸ್ಪರ ಕಡಿದಾಡುವ ಅವರ ಮುಖವನ್ನೂ ನಾನು ನೋಡಲಿಚ್ಛಿಸುವುದಿಲ್ಲ. ನಮ್ಮ ಸೋದರ ನಾದ ಗರುಡನಲ್ಲಿ ನಿಷ್ಕಾರಣ ದ್ವೇಷವನ್ನು ಮಾಡುತ್ತಿರುವರು. ಅವನೋ ಬಲವಂತ ನಾಗಿ ಕಶ್ಯಪನಿಂದಲೂ, ನಿನ್ನಿಂದಲೂ ಶ್ರೀ ವಿಷ್ಣುವಿನಿಂದಲೂ ವರಗಳನ್ನು ಪಡೆದು, ಮಹಾತ್ಮನೆನಿಸಿರುವನು. ನಮ್ಮ ತಾಯಿಯಾದ ಕದ್ರುವಿನ ಶಾಪವು ಬೇರೆ ನನ್ನ ತಮ್ಮಂದಿರನ್ನು ಕಾಡುತ್ತಿದೆ. ಆದ್ದರಿಂದ ನಾನು ವಿರಕ್ತನಾಗಿರುವೆನು. ನೀನು ಪ್ರೀತ ನಾಗಿದ್ದರೆ ನನಗೆ ಧರ್ಮಬುದ್ಧಿಯನ್ನು ನೀಡು ! ನನ್ನನ್ನು ವಿಷ್ಣುಭಕ್ತನನ್ನಾಗಿ ಮಾಡು ! ತಪೋ ದಮ ವಿರಾಗಾದಿ ಗುಣಭಾಗ್ಯವನ್ನು ಕೊಡು." ಬ್ರಹ್ಮನು ಆ ವರಗಳನ್ನಿತ್ತು "ಶೇಷ ! ನಿನ್ನಿಂದ ಲೋಕಹಿತವಾಗಬೇಕಾಗಿದೆ. ಕೇಳು, ಸಾಗರ ಗ್ರಾಮ ಪತ್ತನ ವನ ಅದ್ರಿ ನದೀ ನದ ಸಮನ್ವಿತವಾದ ಭೂಮಿಯು ಅಚಲವಾಗಿರುವಂತೆ, ನಿನ್ನ ಹೆಡೆಯಲ್ಲಿ ಹೊತ್ತು ಪಾತಾಳದಲ್ಲಿರು ! ಇದು ಹರಿ ಸೇವೆ ಎಂದು ತಿಳಿ ! ನಾನೂ ಪ್ರೀತನಾಗಿರುವೆನು. ಮುಂದೆ ಶ್ರೀಹರಿಗೆ ಪರ್ಯಂಕವಾಗುವ ಭಾಗ್ಯವನ್ನು ನಿನಗೆ ಕೊಟ್ಟಿರುವೆನು" ಎಂದನುಗ್ರಹಿಸಿ, ಅಂತರ್ಹಿತನಾದನು. ಶೇಷನು ಬ್ರಹ್ಮನ ಆದೇಶ ದಂತೆ ಅನಾಯಾಸವಾಗಿ ಅನಂತ ಭೂಮಂಡಲವನ್ನು ಹೊತ್ತಿರುವನು. ಗರುಡ ನಿಂದ ಸ್ನೇಹಭಾವವನ್ನು ಬೆಳಸಿ, ಶೇಷನು ಶ್ರೀಹರಿಗೆ ಪ್ರಿಯಭಕ್ತನಾದನು.

## ಆಸ್ತೀಕ ಚರಿತೆ

ಇತ್ತ ವಾಸುಕಿಯು ಮಾತೃಶಾಪವನ್ನು ನೆನೆದು, ಸರ್ಪಕುಲನಾಶಕಾರಣವಾದ ಸರ್ಪ ಸತ್ರವನ್ನು ತಡೆಯುವ ಉಪಾಯವನ್ನು ಕುರಿತು ತಮ್ಮಂದಿರಿಂದ ಸಭೆ ಕೂಡಿ ಆಲೋಚಿಸಿದನು. ಕೆಲವರು ಜನಮೇಜಯನನ್ನು ಬ್ರಾಹ್ಮಣರೂಪದಿಂದ ನೋಡಿ, ಯಜ್ಞವನ್ನು ಮಾಡಬೇಡೆಂದು ಬೇಡುವುದೊಳಿತೆಂದರು. ಮಂತ್ರಿಗಳಾಗಿ ಯಜ್ಞವನ್ನು ನಿಲ್ಲಿಸಿಬಿಡೋಣವೆಂದು ಕೆಲವರಂದರು. ಯಜ್ಞವನ್ನು ಮಾಡಿಸುವ ಉಪಾಧ್ಯಾಯ ರನ್ನು ಕಚ್ಚಿ ಕೊಲ್ಲುವುದೆಂದರು ಕೆಲವರು. ರಾಜನನ್ನೇ ಕಚ್ಚಿ ಕೊಲ್ಲುವುದೆಂದರು ಮತ್ತೆ ಕೆಲವರು. ಇಂತು ಚಪಲರಾಗಿ ಮಾತಾಡುವ ಚಕ್ಷುಃಶ್ರವರನ್ನು ನಿವಾರಿಸಿ, ವಾಸುಕಿಯು, ತಂದೆಗೆ ಶರಣಾಗತರಾಗಿ ಬ್ರಹ್ಮಶಾಪದಂತೆ ದುರ್ನಿವಾರವಾಗಿರುವ ಮಾತೃಶಾಪದಿಂದ ಮುಕ್ತರಾಗುವಂತೆ ಅವನನ್ನು ಪ್ರಸನ್ನೀಕರಿಸಿಕೊಳ್ಳಬೇಕೆಂದು ಸೂಚಿಸಿದನು.

ಆಗ ಏಲಾಪತ್ರನೆಂಬ ನಾಗಪುತ್ರನು ಇಂತೆಂದನು—"ನೀವು ಹೇಳಿದ ಉಪಾಯ ಗಳು ಮಂತ್ರವೀರ್ಯ ಸಂಪನ್ನರಾದ ಜನಮೇಜಯನ ಪುರೋಹಿತರಲ್ಲಿ ನಡೆಯ ಲಾರವು. ಆದರೂ ಈ ಯಜ್ಞವು ಸಂಪೂರ್ಣವಾಗಿ ನಡೆಯುವುದಿಲ್ಲ. ಕೇಳಿ ! ಕಷ್ಟ ವನ್ನು ತಂದೊಡ್ಡಿದ ದೈವವೇ ಸುಖವನ್ನೂ ಕೊಡುವುದು. ನಮ್ಮ ಮಾತೆ ಕೊಟ್ಟ ಶಾಪವನ್ನು ಕೇಳಿ ದೇವತೆಗಳು' ಆಹಾ ! ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನೇ

ಬೈದು ಶಪಿಸಿದಳಲ್ಲ ! ಎಂತಹ ತೀಕ್ಷ್ಣವಿವಳ ನುಡಿ ! ಇವಳ ಶಾಪದಿಂದ ಸರ್ಪಗಳಿಗೆ ಮೋಚನವಿಲ್ಲವೇ !' ಎಂದು ಬ್ರಹ್ಮದೇವರನ್ನು ಕೇಳಿದರು. ಅವರ ಕರುಣೆಯನ್ನರಿತು ಬ್ರಹ್ಮನು 'ಬಹುಸಂಖ್ಯಾಕವಾಗಿ ಬೆಳೆದುನಿಂತ ಹಾವುಗಳು ಲೋಕಭಯಂಕರವಾಗಿವೆ. ಇವುಗಳಿಂದ ಪ್ರಜರಿಗೆ ಉಳಿಗಾಲವಿಲ್ಲ. ಮಾತೃಶಾಪದಿಂದ ಇವರಲ್ಲಿ ದುರ್ಮಾರ್ಗರು ಸಾಯುವರು. ಧರ್ಮಚಾರಿಗಳಾದ ನಾಗರಿಗೆ ಸರ್ಪಯಾಗದ ಭಯವಿಲ್ಲ. ಕಾಲಕ್ರಮದಲ್ಲಿ ಜರತ್ಕಾರುಮುನಿಗೆ ಜರತ್ಕಾರುವೆಂಬ ವಾಸುಕಿಯ ತಂಗಿಯಲ್ಲಿ ಜನಿಸುವ ಮುನಿಯು ಸರ್ಪಯಾಗವನ್ನು ನಿಲ್ಲಿಸುವನು' ಎಂದು ಸಮಾಧಾನಪಡಿಸಿ ಕಳಿಸಿದನು. ಈ ಎಲ್ಲ ಸಮಾಚಾರವನ್ನು ನಾನು ನಮ್ಮ ತಾಯಿಯ ಮಡಿಲಲ್ಲಿ ಅಡಗಿಕೊಂಡು ಕೇಳಿಕೊಂಡೆನು. ದೇವಸಭೆಯಲ್ಲಿ ನಡೆದ ಈ ವಿಚಾರವನ್ನು ಕೇಳುತ್ತಿದ್ದ ನಮ್ಮ ತಾಯಿಯು ಸಮಾಧಾನವನ್ನು ಹೊಂದಿದಳು".

ವಾಸುಕಿಯು ಪ್ರಮುಖ ಸರ್ಪರಾಜರ ಮಾತುಗಳನ್ನಾಲಿಸಿ 'ಸಾಧು, ಸಾಧು' ಎಂದು ಪ್ರಶಂಸಿಸಿದನು. ತನ್ನ ತಂಗಿಗೆ ಜರತ್ಕಾರುವೆಂದು ಹೆಸರಿಟ್ಟು ಬೆಳೆಸಿ, ಅವಳನ್ನು ಜರತ್ಕಾರುಮುನಿಗೆ ವಿವಾಹ ಮಾಡಿಕೊಟ್ಟನು. ಅಮೃತಮಥನಕಾಲದಲ್ಲಿ ಪಿತಾಮಹನಿಗೆ ಶರಣಾಗತನಾಗಿ ವಾಸುಕಿಯು "ಏಲಾಪತ್ರವಚನವು ನಿಜ ! ಆಸ್ತೀಕನಿಂದ ಸರ್ಪಯಾಗವು ನಿಲ್ಲಿಸಲ್ಪಟ್ಟು, ಸರ್ಪಕುಲ ಉಳಿಯುವುದು" ಎಂದು ಅಭಯವಚನವನ್ನು ಪಡೆದನು.

ಜರತ್ಕಾರುವೆಂದರೆ ಕೃಶವಾದ ದೇಹವುಳ್ಳವನೆಂದರ್ಥ. ಅಂತಹ ಆಂಗಿರಸಗೋತ್ರಜನಾದ ಮುನಿಗೆ ಆಸ್ತೀಕನು ಹುಟ್ಟಿ, ಸರ್ಪಕುಲ ಪ್ರತಿಷ್ಠಾಚತುರನೆನಿಸಿದನು. ಅವನು ಹಿಮವತ್ಕಂದರದ ಗರ್ತ ಪ್ರದೇಶದಲ್ಲಿ ತಲೆ ಕೆಳಗಾಗಿ ಜೋತಾಡುತ್ತಿದ್ದ, ಸಂತಾನ ಪರಂಪರೆ ನಿಂತುದರಿಂದ ನರಕೋನ್ಮುಖರಾಗಿದ್ದ, ಪಿತೃವರ್ಗದಲ್ಲಿ ಅನುಕಂಪೆಯಿಂದ ತನ್ನ ಸನಾಮ್ನಿಯಾದ ಜರತ್ಕಾರುಳನ್ನು ಮದುವೆಯಾದನಷ್ಟೆ ! ಅವಳನ್ನು ಮತ್ತು ಅವಳ ಗಂಡನನ್ನು ನಾಗಾಲಯದಲ್ಲಿ ಸಕಲ ಸುಖಸಾಧನ ಸಮನ್ವಿತವಾದ ಮಂದಿರದಲ್ಲಿಟ್ಟು ವಾಸುಕಿಯು ಆಸ್ತೀಕ ಸಮುದ್ಭೂತಿಯನ್ನು ನಿರೀಕ್ಷಿಸುತ್ತಿದ್ದನು. ತನಗೆ ವಿಪ್ರಿಯವಾಗಿ ಮಾತಾಡಿದರೆ, ಅಥವಾ ನಡೆದರೆ ಮಡದಿಯನ್ನು ಬಿಡುವೆನೆಂದು ಕಡುಕೋಪಿಯಾದ ಋಷಿವರನು ನುಡಿದಂತೆ, ಅವನ ಅಡಿಗೆ ಮಡಿ ಹಾಸಿ, ಜರತ್ಕಾರುವು ಭಯ ಭಕ್ತಿಗಳಿಂದ ಅವನನ್ನು ಸೇವಿಸುತ್ತಿದ್ದಳು. ಕಾಲಕ್ರಮದಲ್ಲಿ ಆ ಸಾಧ್ವಿ ಗರ್ಭವನ್ನು ಧರಿಸಿದಳು. ಶುಕ್ಲಪಕ್ಷದ ಚಂದ್ರನಂತೆ ಆ ಗರ್ಭವು ತೇಜೋವಿರಾಜಮಾನವಾಗಿ ಬೆಳೆಯುತ್ತಿತ್ತು. ಒಂದು ದಿನ ಬಳಲಿದವನಂತೆ ಜರತ್ಕಾರುವು ತನ್ನ ಮಡದಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿದನು. ಸ್ವಲ್ಪ ಹೊತ್ತಾಯಿತು, ಸೂರ್ಯನು ಅಸ್ತಗಿರಿಯನ್ನು ಸೇರಲು ಹೋಗುತ್ತಿದ್ದನು. ಅದನ್ನು ಕಂಡು ಜರತ್ಕಾರು ಚಿಂತೆಗೊಳಗಾದಳು. ಶ್ವಾನದಂತೆ ಎಚ್ಚರ ವಹಿಸಿ, ಜಿಂಕೆಯಂತೆ ಭಯಪಡುತ್ತ, ಕಾಕದಂತೆ ಇಂಗಿತವನ್ನರಿತು ಸೇವಿಸುವ ಆ ಪತಿವ್ರತೆ "ಪತಿಯನ್ನು ಎಬ್ಬಿಸಲೇ ?

ಎಬ್ಬಿಸಿದರೆ ಸಿಟ್ಟಾಗುವದು ನಿಜ ! ಎಬ್ಬಿಸದಿದ್ದರೆ ಸಂಧ್ಯಾಲೋಪವಾಗುವುದು. ಎಬ್ಬಿಸಲಿಲ್ಲದ್ದಕ್ಕಾದರೂ ಸಿಟ್ಟಾಗುವನು. ಎರಡು ವಿಧವಾಗಿಯೂ ಪತಿಯ ಕೋಪದ ತಾಪವು ತಪ್ಪಿದ್ದಲ್ಲ. ಧರ್ಮಲೋಪವಂತೂ ಆಗದಿರಲಿ!" ಎಂದು ಆಕೆ ಮುನಿಯನ್ನೆಬ್ಬಿಸಿದಳು.

"ಸ್ವಾಮಿನ್ ! ಭಗವಾನ್ ಸೂರ್ಯನು ಅಸ್ತಂಗತನಾಗಲಿರುವನು. ಏಳು ! ಆಚಮಿಸಿ, ಶುಚಿಯಾಗಿ, ಸಂಧ್ಯೆಯನ್ನು ಮಾಡು ! ಅಗ್ನಿಹೋತ್ರವನ್ನು ಪಚರಿಸು" ಎಂದು ನುಡಿದ ಪತ್ನಿಯನ್ನು ನೋಡಿ ಜರತ್ಕಾರುವು ಕುಪಿತನಾದನು. "ಆಯಿತು ! ನನ್ನನ್ನು ಅವಮಾನಿಸಿದ ನಿನ್ನ ಸಹವಾಸವಿನ್ನು ಬೇಡ ! ನಾನು ಮಲಗಿರುವಾಗ, ನನ್ನ ಅರ್ಘ್ಯ ಪೂಜಾದಿಗಳನ್ನು ಸ್ವೀಕರಿಸದೆ ಮುಣುಗುವನೇ ಸೂರ್ಯ ? ಅಷ್ಟು ತಪೋಬಲಹೀನನೇ ನಾನು ?" ಎಂದ ಪತಿಯ ಪಾದಗಳನ್ನು ಪಿಡಿದು ಜರತ್ಕಾರುವು ಬೇಡಿಕೊಂಡಳು—"ಸ್ವಾಮಿ ! ಅವಮಾನಮಾಡಲೆಂದಲ್ಲ, ಧರ್ಮಲೋಪವಾಗದಿರಲಿ ಎಂದು ನಾನು ತಮ್ಮನ್ನೆಬ್ಬಿಸಿದೆ ನಿಜ ! ಕ್ಷಮಿಸಿ" ಎಂದರೂ ಅವಳಿಂದಲೂ ಸಂಸಾರದಿಂದಲೂ ದೂರವಾಗಲು ಅಪೇಕ್ಷಿಸಿದ ಮುನಿವರನು "ಚಿಂತಿಸಬೇಡ ! ನಿನ್ನ ತಪ್ಪಿಲ್ಲ, ನಿಮ್ಮ ಮನೆಯಲ್ಲಿ ಸುಖದಿಂದಿದ್ದೆನು. ಇದಕ್ಕಾಗಿ ನಿಮ್ಮಣ್ಣನಿಗೆ ನಾನು ಶುಭವನ್ನು ಆಕಾಂಕ್ಷಿಸುವೆನು. ನನ್ನ ಮಾತು ಸುಳ್ಳಾಗುವುದಿಲ್ಲ. ಬೇಡ ನನಗೀ ಸಾಂಸಾರಿಕ ತಾಪ ! ಸ್ವಭಾವದಿಂದಲೇ ವಿರಕ್ತನಾದ ನಾನು ಪಿತೃಋಣ ಮುಕ್ತಿಗಾಗಿ ನಿನ್ನನ್ನು ಮದುವೆಯಾದೆ. ನನ್ನ ವಿಯೋಗದಿಂದ ದುಃಖಿಸದಿರು. ನಿನ್ನ ಹೊಟ್ಟೆಯಲ್ಲಿ ಇರುವನು ಉಭಯಕುಲವರ್ಧನನಾದ ಪುತ್ರನು" ಎಂದು ಅವಳನ್ನು ಸಮಾಧಾನಪಡಿಸಿ, ಜರತ್ಕಾರುಮುನಿಯು ಉಗ್ರತಪಸ್ಸಿಗೆಂದು ಹೊರಟುಹೋದನು.

ನಡೆದ ವೃತ್ತಾಂತವನ್ನು ಜರತ್ಕಾರು ಅಣ್ಣನಿಗೆ ಹೇಳಿದಳು. ಮುನಿಯು ವಿರಕ್ತನಾಗಿ ಹೋದುದಕ್ಕೆ ವಿಷಾದವನ್ನೂ ತಂಗಿಯ ಉದರದಿಂದ ಆಸ್ತೀಕನಿರುವನೆಂಬ ಅಮೃತವಾರ್ತೆಗೆ ಸಂತೋಷವನ್ನೂ ಒಂದೇ ಸಲ ಹೊಂದಿ ವಾಸುಕಿಯು, ತಂಗಿಯನ್ನು ಅಕ್ಕರೆಯಿಂದ ಪೋಷಿಸಿದನು. ಸುಮುಹೂರ್ತದಲ್ಲಿ ಪನ್ನಗಿಯು ಮಗನನ್ನು ಹಡೆದಳು. ದೇವಕುಮಾರನಂತೆ ಕಂಗೊಳಿಸುವ ಆ ಬಾಲನಿಗೆ, ಅಸ್ತಿ ಅಂದರೆ ಇರುವನು ಎಂದು ತಂದೆ ಹೇಳಿದನಾದ್ದರಿಂದ ಆಸ್ತೀಕನೆಂದು ಹೆಸರಿಟ್ಟು, ವಾಸುಕಿ ಅವನನ್ನು ಬೆಳೆಸಿದನು. ಉಪನೀತನಾಗಿ ಆಸ್ತೀಕನು ಚ್ಯವನ ಋಷಿಯಲ್ಲಿ ವೇದ ವೇದಾಂಗಗಳನ್ನು ಕಲಿತು ಮಹಾವಿದ್ವಾಂಸನೆನಿಸಿದನು. ಮಹಾದೇವನ ಕೃಪೆಯಿಂದ ದೇವತೆಗಳು ಸಂತಸಿಸಿದಂತೆ ಆಸ್ತೀಕನ ತಪೋವಿದ್ಯಾ ತೇಜಸ್ಸುಗಳನ್ನು ಕಂಡು ಸರ್ಪರಾಜರೆಲ್ಲರೂ ಸಂತುಷ್ಟರಾದರು.

## ಪರೀಕ್ಷಿದ್ರಾಜ ಶಾಪ ವೃತ್ತಾಂತ

ಸರ್ಪ ಸತ್ರವನ್ನು ಪ್ರಸ್ತಾಪಿಸುವೆನು, ಕೇಳಿ ! ಉತ್ತಂಕನ ನುಡಿಗಳಿಂದ ಸಿಡಿದೆದ್ದ ಜನಮೇಜಯನು ತನ್ನ ಮಂತ್ರಿಗಳನ್ನು ಕರೆಸಿ, ತನ್ನ ತಂದೆಯನ್ನು ತಕ್ಷಕನು ಬಂದು ಕಚ್ಚಿ ಕೊಂದ ವೃತ್ತಾಂತವನ್ನು ವಿವರಿಸಿ ಎಂದು ಕೇಳಿದನು. ಆಗ ಮಂತ್ರಿಗಳಿಂತೆಂದರು—

ರಾಜನ್ ! ಕೇಳು ! ನಿಮ್ಮ ತಂದೆಯಾದ ಪರೀಕ್ಷಿತನು ಅಖಂಡ ಭೂಮಂಡಲಾಧಿಪತಿಯಾಗಿ ಚಾತುರ್ವರ್ಣಾಶ್ರಮ ಧರ್ಮಗಳನ್ನು ಚನ್ನಾಗಿ ರಕ್ಷಿಸಿದನು. ಅಧರ್ಮವನ್ನು ಶಿಕ್ಷಿಸಿದನು. ಕಲಿಯನ್ನು ನಿಗ್ರಹಿಸಿ, ಧರ್ಮದ ಸತ್ಯ, ದಾನ, ತಪಸ್ಸು, ಶೌಚಗಳೆಂಬ ನಾಲ್ಕು ಪಾದಗಳನ್ನು ಸಾಂಗವಾಗಿಸಿ, ಭೂದೇವಿಯನ್ನು ಸಮಾಧಾನಪಡಿಸಿ, ಪ್ರಜಾರಂಜಕನಾಗಿ ರಾಜ್ಯವನ್ನಾಳಿದನು. ಅವನ ರಾಜ್ಯದಲ್ಲಿದ್ದ ವಿಧವೆಯರನ್ನು, ವಿಕಲಾಂಗರನ್ನು, ದೀನರನ್ನು ಬೇಕಾದುದನ್ನಿತ್ತು ಸಂತೈಸಿ, ಅವರ ದುಃಖದ ಕಣ್ಣೀರನ್ನೊರಸಿದನು. ಪ್ರಜರ ಮೊರೆಯನ್ನು ಸ್ವಯಂ ತಾನಾಗಿ ಕೇಳಿ, ಅವರನ್ನು ತೃಪ್ತಿಪಡಿಸಿದನು. ಸತ್ಯವಚನನು, ಸತ್ಕಾರ್ಯ ರಚನನು, ಶತ್ರುಭಯಂಕರನು, ಸುಜನ ಸುಖಂಕರನು ಆದ ಪರೀಕ್ಷಿದ್ರಾಜನು ಪಾಂಡವ ವಂಶ ಚಂದ್ರಕೀರ್ತಿ ಚಂದ್ರಿಕೆಯನ್ನು ದಿಗಂತಗಳಲ್ಲಿ ಹರಡಿದನು. ಕೃಪಾಚಾರ್ಯನಿಂದ ಧನುರ್ವೇದವನ್ನು ಕಲಿತು, ಶ್ರೀಕೃಷ್ಣನ ಚರಣಾರವಿಂದ ನಿರತ ಭಕ್ತಿಪರವಶನಾಗಿ ಪರೀಕ್ಷಿತನು ಪಟ್ಟಾಭಿಷಿಕ್ತನಾದಾಗ ವಯಸ್ಸಿನಿಂದ ಬಾಲನಾದರೂ, ಸದ್ಗುಣಗಳಿಂದ ಅಬಾಲನಾಗಿ, ಅರವತ್ತು ವರ್ಷಗಳ ಕಾಲ ಈ ಭೂಮಿಯನ್ನು ಪಾಲಿಸುತ್ತಾ ಮೆರೆದನು.

ಒಂದುದಿನ ಪರೀಕ್ಷಿತನು ಬೇಟೆಯಾಡಲು ಹೊರಟು, ದುರ್ಗಮಾರಣ್ಯದಲ್ಲಿ ಬಾಣಸಿದ್ಧವಾಗಿ ಓಡಿಹೋದ ಮೃಗವನ್ನು ಬೆನ್ನಟ್ಟಿ, ಏಕಾಕಿಯಾದನು. ಮೃಗವು ಸಿಗದೆ ಓಡಿಹೋಯಿತು. ರಾಜನು ಪರಿಶ್ರಾಂತನಾಗಿದ್ದನು. ಹಸಿವೆ ನೀರಡಿಕೆಗಳನ್ನು ತಡೆಯಲಾರದೆ ರಾಜನು, ಅರಣ್ಯದಲ್ಲಿ ಅಲೆಯುತ್ತಾ ಒಂದಾಶ್ರಮವನ್ನೂ ಅಲ್ಲಿ ರುರು ಚರ್ಮಾಸೀನನಾಗಿ ತೀವ್ರ ತಪೋಮಗ್ನನಾಗಿದ್ದ ಋಷಿವರನನ್ನೂ ಕಂಡನು. ನೀರನ್ನು ಬೇಡಿ ಪಡೆಯಲಾರದೆ, ಕಲ್ಲಿನಂತೆ ಕೂತಿದ್ದ ಮುನಿವರನ ಮೇಲೆ ಕೋಪಿಸಿ ಪರೀಕ್ಷಿತನು, ದುರ್ವಿಧಿ ವಿಲಾಸದಿಂದ, ಅವನ ಕೊರಳಲ್ಲಿ ಮೃತಸರ್ಪವನ್ನೊಂದನ್ನು ಹಾರದಂತೆ ಹಾಕಿ, ತನ್ನ ಪುರವನ್ನು ಸೇರಿದನು. ಅಸಂಪ್ರಜ್ಞಾತ ಸಮಾಧಿಯಲ್ಲಿದ್ದ ಮುನಿವರನಾದ ಶಮೀಕನಿಗೆ ಯಾವುದೂ ಗೊತ್ತಾಗಲಿಲ್ಲ. ಆಗ ಶಮೀಕ ಪುತ್ರನಾದ ಶೃಂಗಿ ಎಂಬ ಮುನಿ ಬಾಲಕನಿಗೆ ಕೃಶನೆಂಬ ಸ್ನೇಹಿತನು ಆ ವೃತ್ತಾಂತವನ್ನು ಹೇಳಿ "ಶೃಂಗೀ ! ನಿನಗೆ ಸಿಟ್ಟು ಹೆಚ್ಚು ನಿಜ ! ಅದು ಕೈಲಾಗದ ನಮ್ಮಂತಹ ಋಷಿಕುಮಾರರಲ್ಲಿ. ನಿಮ್ಮ ತಂದೆಯ ಕೊರಳಲ್ಲಿ ಸರ್ಪಹಾರವನ್ನು ಹಾಕಿಹೋದ ರಾಜನನ್ನು ನೀನೇನೂ ಮಾಡಲಾರೆ" ಎಂದು ಸಿಟ್ಟುಗೆಬ್ಬಿಸಿದನು. ಅನಪಕಾರಿಯಾದ ನನ್ನ ತಂದೆಗೆ ಅಪರಾಧವನ್ನು ಮಾಡಿದ ರಾಜನಿಗೆ ಶೃಂಗಿ ಶಾಪವನ್ನಿತ್ತು ಇಂತೆಂದನು—

"ನಮ್ಮ ತಂದೆಯು ಅಸಂಪ್ರಜ್ಞಾತ ಸಮಾಧಿಯಲ್ಲಿರುವಾಗ, ರಾಜ್ಯ ಧನ ಕುಲ ಮದಗಳಿಂದ ಕಣ್ಣು ಕಾಣದೆ ಅಪಚರಿಸಿದ ರಾಜನನ್ನು ಇಂದಿನಿಂದ ಏಳು ದಿನಕ್ಕೆ ತಕ್ಷಕನು ಕಚ್ಚಲಿ ! ಆ ರಾಜಾಧಮನು ಮೃತನಾಗಲಿ !" ಎಂದು ಕುಶಪಾಣಿಯಾಗಿ, ಕರ್ಣಾಚಮನವನ್ನು ಮಾಡಿ, ಶಾಪವನ್ನಿತ್ತ ಶೃಂಗಿ, ಆಶ್ರಮಕ್ಕೆ ಬಂದು, ತಂದೆಯ ಕೊರಳಲ್ಲಿರುವ ಸರ್ಪವನ್ನು ನೋಡಿ, ಅಳತೊಡಗಿದನು. ಆಗ ಸಮಾಧಿಯಿಂದ ಎಚ್ಚೆತ್ತ ಶಮೀಕನು ರೋದನ ಕಾರಣವನ್ನು ಕೇಳಿದನು. ಶೃಂಗಿಯು ಸರ್ಪವನ್ನು ತೋರಿಸಿ, ತಾನಿತ್ತ ಶಾಪ ವಿಷಯವನ್ನೂ ತಿಳಿಸಿದನು. ಆಗ ಶಮೀಕನು ಮೃತಸರ್ಪ ವನ್ನು ಬಿಸುಟು, ಮಗನಿಗಿಂತೆಂದನು—

"ಎಲೋ ಅವಿವೇಕಿಯೇ ! ಬಂದವನು ಪಾಂಡವೇಯನಾದ ಪರೀಕ್ಷಿತನು. ಉದಕವನ್ನು ಕೋರಿ ಬಂದ ಅತಿಥಿಸತ್ತಮನಿಗೆ ಶಾಪವನ್ನು ಕೊಡುವದೇ ! ಬ್ರಾಹ್ಮಣ ರಾದ ನಾವು ಕ್ಷಮಾಗುಣದಿಂದ ಪೂಜ್ಯರು. ಕ್ಷಮಾರಹಿತನಾಗಿ ಶಾಪವನ್ನಿತ್ತ ನಿನ್ನ ದುಡುಕುತನದಿಂದ ಲೋಕವು ಅರಾಜಕವಾಗಿ ಕೆಟ್ಟಿತು ! ಹಿಂತೆಗೆದುಕೋ ನಿನ್ನ ಶಾಪ ವನ್ನು."

ತಂದೆಯ ಮಾತನ್ನಾಲಿಸಿ ಶೃಂಗಿಯು "ಶಾಪವನ್ನು ನಾನು ಹಿಂತೆಗೆಯಲಾರ ದಿರುವೆ"ನೆಂದನು. ತತ್ಕ್ಷಣವೇ ಶಮೀಕನು ಗೌರಮುಖನೆಂಬ ಶಿಷ್ಯನನ್ನು ನಿಮ್ಮ ತಂದೆಗೆ ಶಾಪವೃತ್ತಾಂತವನ್ನು ತಿಳಿಸಿಕೊಡಲು ಹೇಳಿ ಕಳಿಸಿದನು. ಪರೀಕ್ಷಿತನು ಆ ಶಾಪವನ್ನು ಸಾಂಜಲಿಬದ್ಧನಾಗಿ ಸ್ವೀಕರಿಸಿ, ರಾಜ್ಯ ವಿರಕ್ತನಾದನು. ಶ್ರೀಕೃಷ್ಣ ಪಾದಾರ ವಿಂದಗಂಧಿತ ತುಲಸೀಮಂಜರೀಪರಿಪೂತ ಭಾಗೀರಥೀ ತೀರದಲ್ಲಿ, ಮಂತ್ರಿಗಳು ತನಗಾಗಿ ನಿರ್ಮಿಸಿದ ಏಕಸ್ತಂಭ ಪ್ರಸಾದದಲ್ಲಿ, ಪ್ರಾಯೋಪವಿಷ್ಟನಾಗಿದ್ದನು. ಅದೇ ಕಾಲದಲ್ಲಿ ಆ ಮಹಾಭಕ್ತನು ವೇದವ್ಯಾಸಾದಿ ಋಷಿವರ ಸಭೆಯಲ್ಲಿ ಶ್ರೀಶುಕನು ಪೇಳಿದ ಭಾಗವತವನ್ನು ಆದರದಿಂದ ಕೇಳಿ ಪುನೀತನಾದನು.

ಏಳನೆಯ ದಿನ ಬಂತು ; ಬ್ರಾಹ್ಮಣ ಶಾಪಪ್ರೇರಿತನಾಗಿ ತಕ್ಷಕನೂ ಬಂದನು. ಬರುತ್ತಾ ಹಾದಿಯಲ್ಲಿ ಕಶ್ಯಪನೆಂಬ ವಿಪ್ರವರನನ್ನು ನೋಡಿ ತಕ್ಷಕನು "ನೀನಾರು, ಎಲ್ಲಿಗೆ ಹೋಗುವೆ ?" ಎಂದನು. "ಕಶ್ಯಪನೆಂಬರು ನನ್ನನ್ನು. ಪರೀಕ್ಷಿದ್ರಾಜನಿಗೆ ವಿಷಬಾಧಾ ನಿವೃತ್ತಿಯನ್ನು ಮಾಡಲು ಹೊರಟಿರುವೆ"ನೆಂದ ಕಶ್ಯಪನನ್ನು ನೋಡಿ ಕುಪಿತನಾಗಿ ತಕ್ಷಕನು "ನಾನೇ ತಕ್ಷಕನು. ನನ್ನ ವಿಷಜ್ವಾಲೆಯನ್ನಾರಿಸುವ ಶಕ್ತಿ ನಿನಗಿದೆಯೇ ? ಆಗಲಿ ನೋಡುವೆ"ನೆಂದು, ಅಲ್ಲಿದ್ದ ಒಂದು ಆಲದಮರವನ್ನು ಭಯಂಕರ ಸರ್ಪರೂಪನಾಗಿ ಬುಸುಗುಟ್ಟುತ್ತಾ, ಸುತ್ತುಗಟ್ಟಿ ಕಚ್ಚಿದನು. ಆ ಮರವು ಒಂದೇ ಕ್ಷಣದಲ್ಲಿ ಭಸ್ಮವಾಯಿತು. ಅದರ ಮೇಲೇರಿ ಕಟ್ಟಿಗೆಯನ್ನು ಕಡಿಯುತ್ತಿದ್ದ ಬೇಡ ನೊಬ್ಬನು ಬೂದಿಯಾದನು. ಆಗ ಕಶ್ಯಪನು ಆ ಬೂದಿಯನ್ನೆಲ್ಲಾ ಕೂಡಿಸಿ, ನೀರಿ ನಿಂದ ಪ್ರೋಕ್ಷಿಸಿ, ಮಂತ್ರವನ್ನು ಜಪಿಸಿದನು. ಬೂದಿಯ ರಾಶಿಯಿಂದ ಅಂಕುರವು ಬಂದು, ಎರಡೆಲೆ ಚಿಗುರಿ, ಕೊಂಬೆ ರೆಂಬೆಗಳಾಗಿ ಯಥಾಪ್ರಕಾರ ಪುಷ್ಪ ಫಲ ಸಮೃದ್ಧ

ವಾಗಿ ನಿಂತ ಮರವನ್ನು ನೋಡಿ ತಕ್ಷಕನು ವಿಸ್ಮಿತನಾದನು. ತಂತಮ್ಮ ವಿವಾದದಲ್ಲಿ ಮಗ್ನ ಮನಸ್ಕರಾದ ಕಶ್ಯಪ ತಕ್ಷಕರಿಗೆ ಆ ಗಿಡದ ಮೇಲೆ ಯಥಾಪೂರ್ವಕವಾಗಿ ಬದುಕಿ ಅಡಗಿದ್ದ ಬೇಡನು ಗೋಚರನಾಗಲಿಲ್ಲ. ಆಗ ತಕ್ಷಕನು ಇಂತೆಂದನು—

"ಕಶ್ಯಪ! ವಿಪ್ರಶಾಪವು ವ್ಯರ್ಥವಾಗುವುದೇ? ಇಲ್ಲಿ ಸಫಲವಾದ ನಿನ್ನ ಮಂತ್ರವು ದೈವವಿಲಾಸದಿಂದ ರಾಜನಲ್ಲಿ ವಿಫಲವಾಗಬಹುದು. ನೀನೂ ಜ್ಞಾನಿಯಾಗಿರುವೆ. ವಿಚಾರಿಸು! ರಾಜನಿಗೆ ಬಂದಿರುವುದು ಕಾಲಮೃತ್ಯುವಾಗಿ, ಅನಿವಾರ್ಯವಾಗಿದೆ; ಹಿಂದಿರುಗು. ನಿನಗೆ ಬೇಕಾದಷ್ಟು ಧನವನ್ನು ನಾನು ಕೊಡುವೆನು" ಎಂದು ಧನರಾಶಿಯನ್ನಿತ್ತನು. ಕಶ್ಯಪನು ದಿವ್ಯಜ್ಞಾನಬಲದಿಂದ ರಾಜನ ಆಯುರ್ದಾಯವು ಮುಗಿದಿರುವುದನ್ನು ಕಂಡು ಧನವನ್ನು ಸ್ವೀಕರಿಸಿ, ಹಿಂದಿರುಗಿ ಹೋದನು. ತಕ್ಷಕನು ವಿಪ್ರವೇಷಧರರಾದ ತನ್ನ ಅನುಚರರೊಂದಿಗೆ, ತಾನೂ ವಿಪ್ರನಾಗಿ, ಕೈಯಲ್ಲಿ ಬದರೀ ಫಲವನ್ನು ಹಿಡಿದು ರಾಜನ ಪ್ರಾಸಾದವನ್ನು ಪ್ರವೇಶಿಸಿದನು. ಫಲವನ್ನು ರಾಜನಿಗಿತ್ತು ಆಶೀರ್ವದಿಸಿದನು. ಫಲವನ್ನು ಹಿಡಿದು ನೋಡುತ್ತಿದ್ದ ಮಹಾರಾಜನಿಗೆ ಅದರಲ್ಲಿ ಒಂದು ಕ್ರಿಮಿಯು ಕಂಡಿತು. ಕ್ರಮವಾಗಿ ಆ ಕ್ರಿಮಿಯು ದೊಡ್ಡದಾಗಿ, ತಕ್ಷಕನಾಯಿತು. ತಕ್ಷಣವೇ ಶುಕೋಪದೇಶವನ್ನು ನೆನೆದು, ಶರೀರಾಭಿಮಾನವನ್ನು ತೊರೆದು, ಬ್ರಹ್ಮಮಾರ್ಗದಲ್ಲಿ ಉತ್ಕ್ರಮಣಶೀಲನಾದ ಪರೀಕ್ಷಿದ್ರಾಜನನ್ನು ತಕ್ಷಕನು ಪಾದದಲ್ಲಿ ಕಡಿದನು. ಅವನ ವಿಷಜ್ವಾಲೆಯಿಂದ ಪ್ರಾಸಾದವೇ ಉರಿದುಬಿತ್ತು. ಇತರ ಸರ್ಪರೂ ಸ್ವರೂಪದಿಂದ ಮಂದಿರದಲ್ಲಿ ತುಂಬಿ ಬುಸುಗುಟ್ಟಿ ವಿಷವಹ್ನಿ ಜ್ವಾಲೆಗಳಿಂದ ಮಂತ್ರಿ, ಮಾಂತ್ರಿಕ ಮುನಿಜನರನ್ನೆಲ್ಲರನ್ನೂ ಓಡಿಸಿಬಿಟ್ಟರು. ರಾಜನು ಮೃತನಾದನು; ಇಂತು ಜನಮೇಜಯಾ! ನಿಮ್ಮ ತಂದೆ ತಕ್ಷಕನ ವಿಷಕ್ಕೆ ಸಿಕ್ಕು ಮೃತನಾದನು. ಮುಂದೆ ನೀನು ರಾಜನಾದೆ.

## ಸರ್ಪಯಾಗ ವಿರಮಣ

ಮಂತ್ರಿಗಳ ಮಾತನ್ನಾಲಿಸಿ, ತಂದೆಯ ದಾರುಣವಾದ ಮರಣ ವೃತ್ತಾಂತ ಶ್ರವಣದಿಂದ ಕೆರಳಿ ಜನಮೇಜಯನು ಸರ್ಪಯಾಗ ದೀಕ್ಷಿತನಾದನು. ಕಶ್ಯಪನನ್ನು ಧನಾಶೆಗೊಳಪಡಿಸಿ ಹಿಂದಿರುಗಿಸಿದ ತಕ್ಷಕನ ದ್ವೇಷವನ್ನು ಗಿಡದಿಂದಿಳಿದುಬಂದು ಹೇಳಿದ ಬೇಡನಿಂದ ತಿಳಿದ ಮಂತ್ರಿಗಳು "ರಾಜನು ಬದುಕಿದ್ದಿದ್ದರೆ ತಕ್ಷಕನಿಗೇನು ನಷ್ಟ! ಆದರೂ ಶೃಂಗಿಯ ಶಾಪದ ನೆಪದಿಂದ ತಕ್ಷಕನೇ ನಿಮ್ಮ ತಂದೆಯನ್ನು ಕಚ್ಚಿ ಕೊಂದಿರುವನು. ಅವನನ್ನು ಸಪರಿವಾರನಾಗಿ ಸುಸರ್ಪ ಸತ್ರದಲ್ಲಿ ನಾಶಮಾಡುವುದೇ ತಕ್ಕ ಪ್ರತೀಕಾರವು" ಎಂದು ಹುರಿದುಂಬಿಸಿದರು. ಜನಮೇಜಯನಿಂದ ಮಾತ್ರ ಮಾಡಲು ಸಾಧ್ಯವಾದ ಸರ್ಪಸತ್ರವನ್ನು, ಅವನ ಯೋಗ್ಯತೆಯನ್ನರಿತ ಋತ್ವಿಜರೂ ಮಾಡಿಸಲನುವಾದರು.

ಯಜ್ಞ ಭವನ ನಿರ್ಮಾಣವಾಗಿ, ಸಂಭಾರಗಳು ಸಿದ್ಧವಾದವು. ಪ್ರಭೂತ ಧನ ಧಾನ್ಯ ಸಮೃದ್ಧನಾಗಿ ಯಜಮಾನನು ದೀಕ್ಷಿತನಾದನು. ಆದರೆ ಯಜ್ಞಶಾಲೆಯನ್ನು ನಿರ್ಮಿಸಿದ ಸೂತ್ರಧಾರನು "ಒಬ್ಬ ಬ್ರಾಹ್ಮಣನಿಂದ ಯಜ್ಞಕ್ಕೆ ವಿಘ್ನ ಬರುವುದೆಂದು"ಸೂಚಿಸಿದನು. ವಾಸ್ತುವಿದ್ಯಾವಿಶಾರದನಾದ ಆ ಸ್ಥಪತಿಯ ಮಾತನ್ನಾಲಿಸಿ ಜನಮೇಜಯನು "ದೀಕ್ಷಿತನಾಗಿರುವ ನಾನು ಯಾರನ್ನೂ ನೋಡಲಾರೆ. ಒಳಗೆ ಯಾರನ್ನೂ ಬಿಡಬೇಡಿರಿ" ಎಂದು ದ್ವಾರಪಾಲಕರಿಗಾಜ್ಞಾಪಿಸಿ, ತಾನು ಸರ್ಪಸತ್ರವನ್ನು ಪ್ರಾರಂಭಿಸಿದನು.

ಹೋತೃವು ಸಮಿದ್ಧನಾದ ಯಜ್ಞಪುರುಷನನ್ನು ಸ್ತುತಿಸಿ, ಗಟ್ಟಿಯಾಗಿ ನಾಮಗಳನ್ನುಚ್ಚರಿಸಿ ಹೋಮಿಸಿದಾಗ, ತತ್ತನ್ನಾಮಕ ಸರ್ಪಗಳು ಬಂದು ಅಗ್ನಿಗಾಹುತಿಯಾಗುತ್ತಿದ್ದವು. ಸರ್ಪರಾಜರಿದನ್ನು ಕಂಡು ಗಡಗಡನೆ ನಡುಗಿದರು. ಬುಸುಗುಟ್ಟುತ್ತಾ ನಡುಗುತ್ತಾ ಸರ್ಪಗಳು ನಿಸ್ಸಹಾಯಕರಾಗಿ ಅಗ್ನಿಯಲ್ಲಿ ಬೀಳತೊಡಗಿದವು. ನಾನಾ ವರ್ಣಗಳು ನಾನಾ ರೂಪಗಳು ಆದ ಲಕ್ಷಗಟ್ಟಲೆ ಸರ್ಪಗಳು ಸುಟ್ಟುಬೂದಿಯಾದವು.

ಚಂಡಭಾರ್ಗವನು ಹೋತೃವಾಗಿ, ಕೌತ್ಸನು ಉದ್ಗಾತೃವಾಗಿ, ಸಾಂಗರವನು ಬ್ರಹ್ಮನಾಗಿ, ಪಿಂಗಳನು ಅಧ್ವರ್ಯುವಾಗಿ, ಯಜ್ಞವನ್ನು ನಡಸಿದರು. ವ್ಯಾಸ, ನಾರದ, ಉದ್ದಾಲಕ, ಶ್ವೇತಕೇತು, ದೇವಲಾಸಿತ, ಪರ್ವತ, ಕೋಹಲ, ದೇವಶರ್ಮ, ಮೌದ್ಗಲ್ಯರು ಸದಸ್ಯರಾಗಿದ್ದರು. ಸರ್ಪಹತ್ಯೆಯು ಅಕಾಂಡತಾಂಡವವಾಗಿ ಘೋರವೆನಿಸಿತು. ವಸಾ ಮೇದೋ ಮಾಂಸಗಳು ಸುಡುವ ಕೆಟ್ಟ ವಾಸನೆ ವ್ಯಾಪಿಸಿ, ಜನರು ಭೀತರಾದರು. ಇದನ್ನರಿತು ತಕ್ಷಕನು ಭೀತನಾಗಿ ಇಂದ್ರನಿಗೆ ಶರಣಾಗತನಾದನು. ಬ್ರಹ್ಮನ ವಚನವನ್ನು ನೆನೆದು, ಇಂದ್ರನು ತಕ್ಷಕನಿಗೆ ಅಭಯವನ್ನಿತ್ತನು. ವಾಸುಕಿ ಭಯ ಭ್ರಾಂತನಾಗಿ ತಂಗಿಯಾದ ಜರತ್ಕಾರುವನ್ನು ಕಂಡು, "ಕುಮಾರನನ್ನು ಕಳುಹಿಸಿ, ಯಜ್ಞವನ್ನು ನಿಲ್ಲಿಸುವಂತೆ ಮಾಡು" ಎಂದು ಬೇಡಿಕೊಂಡನು. ಆಸ್ತೀಕನು ತಾಯಿಯಿಂದ ಸಮಸ್ತವನ್ನು ಕೇಳಿ ತಿಳಿದಿದ್ದನು. ಬಂಧು ಪ್ರೀತಿಯೊಡನೆ ಪ್ರಾಣಿರಕ್ಷಣ ಪುಣ್ಯವೂ ಲಭಿಸುವುದೆಂದು, ಆಸ್ತೀಕನು ವಾಸುಕಿಯನ್ನು ಸಂತೈಸಿ, ಹಿಂಸಾಯಜ್ಞವನ್ನು ನಿಲ್ಲಿಸಿ ಸರ್ಪಕುಲವನ್ನು ಉಳಿಸುವೆನೆಂದು ವಚನವನ್ನಿತ್ತನು. ಬ್ರಹ್ಮದಂಡದಂತೆ ಭಯಂಕರವಾದ ಮಾತೃ ಶಾಪವನ್ನು ವಿಫಲವನ್ನಾಗಿಸಿ, ಸರ್ಪಕುಲವನ್ನು ಕಾಪಾಡುವ ಪಣವನ್ನು ತೊಟ್ಟನು. ಶೌನಕ ! ಕೇಳು ! ಅಷ್ಟುಹೊತ್ತಿಗೆ ಕೋಟಿಶ, ಮಾನಸ, ಪೂಣಶಲ, ಪಾಲ, ಪಿಚ್ಛಿಲ, ಕೌಣಪ, ಚಕ್ರಕ, ಕಾಲವೇಗ, ಶರಣ, ಹಿರಣ್ಯಬಾಹು, ಕಾಲದಂತ ಇವರೇ ಮುಂತಾದ ವಾಸುಕಿ ವಂಶಜಾತರು ; ಮಂಡಲಕ, ರಣೇಭ, ಶರಭ, ಬಿಲ್ವತೇಜ, ವಿರೋಹಣ, ಶಲಕಲ, ಸುಕುಮಾರ, ಶಿಶುರೋಮ, ಮುದ್ಗರಾದಿ ತಕ್ಷಕ ಕುಲಸಂಭೂತರು ; ಪಾರಾವತ, ಪಾರಿಜಾತ, ಪಾಂಡರ, ಹರಿಣ, ಕೃಶ, ಮೋದ, ಪ್ರಮೋದ, ಸಂಹತಾಪನರೇ ಮುಂತಾದ ಐರಾವತ ವಂಶಜರು ; ನೇರಕ, ಕುಂಡಲ ವೇಣಿ, ವೇಣಿಸಂಧ, ಕುಮಾರಕ, ಬಾಹುಕ, ಶೃಂಗಬೇರ, ಪ್ರಮುಖ ಕೌರವ್ಯ

ನಾಗವಂಶಜಾತರು ; ಶಂಕುಕರ್ಣ, ಪಿಠರಕ, ಕುಠಾರ, ಸುಖಸೇಚಕ, ಪೂರ್ಣಮುಖ, ಶಕುನಿ, ದರ್ಯಮಾಹಠ, ಸುಷೇಣ, ಮಾನಸಾವ್ಯಯ, ಭೈರವ, ವೇದಾಂಗ, ಪಿಶಂಗ, ವಾಸಕ, ವರಾಹಕ, ಸುಚಿತ್ರ, ತರುಣಕ, ಮಣಿಸ್ಕಂಧಾದಿ ಧೃತರಾಷ್ಟ್ರ ನಾಗಕುಲ ಸಂಭವರು; ಏಕ, ತ್ರಿ, ಪಂಚ, ಸಪ್ತ, ನವಸಂಖ್ಯಾಕ ಮಸ್ತಕ ಪ್ರಶಸ್ತರು ಆದ ನಾಗರು ಬ್ರಹ್ಮದಂಡ ಹತರಾಗಿ ಆರ್ತನಾದವನ್ನು ಮಾಡುತ್ತಾ ಯಜ್ಞಾಗ್ನಿ ಜ್ವಾಲೆಗಳಲ್ಲಿ ಬಿದ್ದು ಹತರಾಗಿ ಹೋಗಿದ್ದರು. ಇನ್ನು ಮಿಕ್ಕಿರುವ ನಾಗರನ್ನು ಕಾಪಾಡದಿದ್ದರೆ, ಸರ್ಪಕುಲ ಪ್ರಳಯವೇ ಆದೀತೆಂದು ಆಸ್ತೀಕನು ಶೀಘ್ರವಾಗಿ, ಚಂದ್ರಕುಲ ರಾಜನ್ಯ ಚಂದ್ರನಾದ ಜನಮೇಜಯನ ಯಾಗಶಾಲೆಯನ್ನು ಕುರಿತು ಹೊರಟನು.

ಯಜ್ಞಶಾಲಾ ದ್ವಾರದಲ್ಲಿ ಬಂದುನಿಂತ ಆಸ್ತೀಕನನ್ನು ದ್ವಾರಪಾಲಕರು ಒಳಗೆ ಬಿಡಲಿಲ್ಲ. ಆಸ್ತೀಕನು ರಾಜನನ್ನೂ ಯಜ್ಞವನ್ನೂ ಸ್ತುತಿಸಿ ಇಂತೆಂದನು—

"ಪಾರೀಕ್ಷಿತ! ನಿನ್ನ ಯಜ್ಞವು ಚಂದ್ರ, ವರುಣ, ದಕ್ಷಪ್ರಜೇಶ, ಇಂದ್ರ, ಯಮರಾಜ, ರಂತಿದೇವ, ಗಯರಾಜ, ಶಶಬಿಂದು, ಕುಬೇರ, ನೃಗ, ಅಜಮೀಢ ವೇದವ್ಯಾಸ, ಧರ್ಮರಾಜ ಮುಂತಾದ ಮಹನೀಯರು ಮಾಡಿದ ರಾಜಸೂಯಾದಿ ಯಾಗಗಳಂತೆ ಕಂಗೊಳಿಸುತ್ತಿದೆ. ಇದರಿಂದ ನಿನಗೆ ಪ್ರಿಯರಾದ ನಮಗೂ ಸ್ವಸ್ತಿಯಾಗಲಿ ! ನಿನ್ನ ಋತ್ವಿಜರು ಸರ್ವಜ್ಞರಾಗಿರುವರು. ಸೂರ್ಯನಂತೆ ಬೆಳಗುವ ಇವರಿಗಿತ್ತ ದಾನವು ಮಹಾ ಫಲದಾಯಕವಾಗಿರುವುದು. ಕೃಷ್ಣದ್ವೈಪಾಯನರಿಗೆ ಸಮಾನರಾದ ಸದಸಸ್ಪತಿಗಳು ಎಲ್ಲಿಯೂ ಇಲ್ಲ. ಅವರ ಶಿಷ್ಯರೇ ಋತ್ವಿಗ್ಜನರಾಗಿರುವ ಈ ಯಜ್ಞದಲ್ಲಿ ಹಿರಣ್ಯರೇತನು, ಹುತವಹನು, ಪುಣ್ಯಪ್ರದನು ಆಗಿರುವ ಅಗ್ನಿದೇವನ ಪ್ರದಕ್ಷಿಣಾವರ್ತಶಿಖನಾಗಿ ನಿನಗೆ ಶುಭಗಳನ್ನು ದಯಪಾಲಿಸುವನು. ಪ್ರಜಾರಂಜಕನಾದ ನಿನ್ನಂತಹ ರಾಜರನ್ನೂ ನಾ ಕಂಡಿಲ್ಲ. ಖಟ್ವಾಂಗ, ನಾಭಾಗ, ದಿಲೀಪ, ಯಯಾತಿ, ಮಾಂಧಾತ್ರಾದಿ ಮಹೀಪತಿಗಳನ್ನು ನೆನಪಿಗೆ ತರುವ ಸುಗುಣಗಳಿಂದ ವಿರಾಜಿಸುವ ನಿನಗೆ ಸ್ವಸ್ತಿ ಆಗಲಿ! ಕೃಷ್ಣನಂತೆ ಸುಗುಣಿಯು, ವಸಿಷ್ಠನಂತೆ ಜಿತ-ಕ್ರೋಧನು, ಯಮಧರ್ಮನಂತೆ ಸಮವರ್ತಿಯು, ಶ್ರೀರಾಮನಂತೆ ಶಸ್ತ್ರನಿಪುಣನು, ಭಗೀರಥನಂತೆ ಪ ಯತ್ನಶೀಲನು ಆದ ನಿನಗೆ ಸ್ವಸ್ತಿಯಾಗಲಿ !"

ಆಸ್ತೀಕನ ಮಧುರ ವಚನಗಳಿಂದ ಜನಮೇಜಯನು ಪ್ರೀತನಾಗಿ, ಅವನಿಗೆ ವರವನ್ನು ಕೊಡಲು ಉದ್ಯುಕ್ತನಾದನು. ಆಗ ಹೋತೃವಾಗಿದ್ದ ಚಂಡಭಾರ್ಗವನು ರಾಜನನ್ನು ನಿವಾರಿಸಿ, ತಕ್ಷಕನು ಬಂದು ಹೋಮಕುಂಡದಲ್ಲಿ ಬೀಳಲಿಲ್ಲವೆಂದು ಜ್ಞಾಪಿಸಿದನು. ರಾಜನು ತಕ್ಷಕನನ್ನು ಕರೆಯುವಂತೆ ಋತ್ವಿಜರನ್ನು ಬೇಡಿದನು. ಇಂದ್ರನಿಗೆ ಶರಣಾಗಿ ಅಭಯವನ್ನು ಪಡೆದ ತಕ್ಷಕನು ಬರುವುದಿಲ್ಲವೆಂದು ಅವರಂದರು. ರಾಜನು ಸಿಟ್ಟಿನಿಂದ "ಇಂದ್ರನನ್ನೂ ತಕ್ಷಕನೊಡನೆ ಹೋಮಿಸಿರಿ"ಎಂದು ನುಡಿದನು. ಅಂತೆಯೇ ಹೋತೃವು "ಸಹೇಂದ್ರಾಯ ತಕ್ಷಕಾಯ ಸ್ವಾಹಾ" ಎಂದು ಆಹುತಿಯನ್ನು ಎತ್ತಿಹಿಡಿದನು. ತತ್‌ಕ್ಷಣವೇ ಇಂದ್ರನು ತಕ್ಷಕನಿಂದ ಕೂಡಿ ಆಕಾಶದಲ್ಲಿ ಬಂದು ನಿಂತನು.

ಅವನ ಉತ್ತರೀಯದಲ್ಲಿ ಅಡಗಿದ್ದ ತಕ್ಷಕನು ಭಯದಿಂದ ನಡುಗುತ್ತಿದ್ದನು. ಅವನನ್ನು ಬಿಟ್ಟು ಸ್ವರ್ಗಸೀಮೆಯನ್ನು ಸೇರಪೋಗುತ್ತಿರುವ ಮಹೇಂದ್ರನನ್ನು ನೋಡಿ, ಋತ್ವಿಗ್ಜನರು "ಇನ್ನೇನು ತಕ್ಷಕನು ನಿಸ್ಸಹಾಯನಾಗಿ ಅಗ್ನಿಯಲ್ಲಿ ಬೀಳುವನು. ನಿನ್ನ ಯಜ್ಞವು ಸಾಂಗವಾದಂತೆಯೇ ಸರಿ! ಈ ವಿಪ್ರನಿಗೆ ವರವನ್ನು ಕೊಟ್ಟು ಕಳಿಸು" ಎಂದರು. ಜನಮೇಜಯನು ಆಸ್ತೀಕನನ್ನು ಕರೆಸಿ 'ವರವನ್ನು ಬೇಡು' ಎನ್ನಲು, ಆ ಸಮಯಕ್ಕಾಗಿ ಕಾದಿದ್ದ ಋಷಿಕುಮಾರನು, "ರಾಜನ್! ಈ ನಿನ್ನ ಹಿಂಸಾಯಜ್ಞವನ್ನು ನಿಲ್ಲಿಸು! ಇನ್ನು ಉಳಿದ ಸರ್ಪಗಳಾದರೂ ಬದುಕಿರಲಿ! ಒಬ್ಬ ಸರ್ಪರಾಜನ ಪಾಪಕ್ಕೆ ಎಷ್ಟು ಲಕ್ಷ ನಾಗರು ಹಾಳಾದರು! ಇದು ಮಹಾ ಪಾಪವಲ್ಲವೇ?" ಎಂದನು. ರಾಜನು ಆ ಮಾತಿನಿಂದ ಅಸಂತುಷ್ಟನಾಗಿ "ಆಸ್ತೀಕ! ಬೇಡು ಬಂಗಾರವನ್ನು: ಗೋವುಗಳನ್ನು ಬೇಡು! ಏನಾದರೂ ಬೇಡು! ಯಜ್ಞವನ್ನು ನಿಲ್ಲಿಸೆನ್ನಬೇಡ" ಎಂದನು: ಆದರೂ ಆಸ್ತೀಕನು ಮತ್ತೆ ಮತ್ತೆ ಯಜ್ಞವಿರಮಣವನ್ನೇ ಕೋರಿದನು. ಸದಸ್ಯರಾದ ವಿಪ್ರೋತ್ತಮರು ಕೂಡ "ಬ್ರಾಹ್ಮಣನು ಬೇಡಿದುದನ್ನೇ ನಡೆಸು" ಎಂದರು. ವಿಧಿಯಿಲ್ಲದೆ ಜನಮೇಜಯನು ಸರ್ಪಯಾಗವನ್ನು ನಿಲ್ಲಿಸಿಬಿಟ್ಟನು.

ಯಜ್ಞವು ಪೂರ್ಣವಾಗಲಾರದೆಂದು ಸೂಚಿಸಿದ ಸ್ಥಪತಿಯನ್ನೂ ಸೂತನನ್ನೂ ಬಹುಮಾನಿಸಿ, ಜನಮೇಜಯನು ಋತ್ವಿಕ್ಸದಸ್ಯಾದಿ ವಿಪ್ರರಿಗೆ ಸಾವಿರಾರು ಹೊನ್ನಿನ ದಕ್ಷಿಣೆಯನ್ನಿತ್ತನು. ಯಾಗಾಂತದಲ್ಲಿ ಅವಭೃತವನ್ನು ನೆರವೇರಿಸಿ ಆಸ್ತೀಕನಿಗೂ ಮತ್ತೆ ದರ್ಶನವೀಯಲು ಬೇಡಿ, ಬಹುಮಾನಗಳನ್ನಿತ್ತು ಕಳಿಸಿದನು. ಆಸ್ತೀಕನು ಸಂತೋಷದಿಂದ ನಾಗಾಲಯವನ್ನು ಸೇರಿ ಮಾವನನ್ನೂ, ತಾಯಿಯನ್ನೂ ಕಂಡು, ತಾನು ನುಡಿದ ವಚನವನ್ನು ಪಾಲಿಸಿಕೊಂಡುಬಂದ ವೃತ್ತಾಂತವನ್ನು ನಿವೇದಿಸಿದನು. ಅದರಿಂದ ಪ್ರೀತರಾದ ನಾಗರಾಜರು ಆಸ್ತೀಕನನ್ನು ಪೂಜಿಸಿ 'ವರವನ್ನು ಬೇಡು' ಎಂದರು. ಆಗ ಆಸ್ತೀಕನು "ಸಾಯಂ ಪ್ರಾತಃ ಕಾಲಗಳಲ್ಲಿ ಪ್ರಸನ್ನ ಚಿತ್ತರಾಗಿ ಆಸ್ತೀಕನಾದ ನನ್ನ ಕಥೆಯನ್ನು ಹೇಳಿ ಕೇಳುವ ಮನುಜರಿಗೆ ಸರ್ಪ ಭಯವಿರದಿರಲಿ!" ಎಂದು ಬೇಡಿದನು. ವಾಸುಕಿ ಪ್ರಮುಖ ನಾಗರು ಆ ವರವನ್ನಿತ್ತು "ಆಸ್ತೀಕ! ನಿನ್ನ ಹೆಸರನ್ನು ನೆನೆಸಿದವರಿಗೆ ನಮ್ಮ ಭಯವಿಲ್ಲದಂತೆ ನಾವು ಮಾತನ್ನಿತ್ತಿರುವೆವು! ಕೇಳು! ಆಸ್ತೀಕ ಎಂಬ ಮೂರಕ್ಷರದ ನಿನ್ನ ನಾಮವನ್ನು ಕೇಳಿ ಯಾವ ಸರ್ಪವು ದೂರ ಸರಿಯುವದಿಲ್ಲವೋ ಅದರ ತಲೆ ನೂರು ಹೋಳಾಗಲಿ!" ಎಂದು ಆಸ್ತೀಕನನ್ನು ಬೀಳ್ಕೊಟ್ಟರು. ಆಸ್ತೀಕನು ಮುಂದೆ ಪುತ್ರಪೌತ್ರಾನ್ವಿತನಾಗಿ ಬಾಳಿ, ಕೊನೆಗೆ ಮೋಕ್ಷವನ್ನು ಹೊಂದಿದನು.

"ಇಂತು ಪ್ರಮತಿಯ ಮಗನಾದ ರುರುವಿಗೆ ಪವಿತ್ರವು, ಪನ್ನಗಭಯಹರವು ಆದ ಆಸ್ತೀಕ ಚರಿತ್ರವನ್ನು ಹೇಳಿದನು. ಆ ರುರುವಿಗೆ ಪ್ರಮದ್ವರೆಯಲ್ಲಿ ಶುಕನು, ಶುಕನಿಗೆ ನೀನು ಹುಟ್ಟಿದೆ" ಎಂದು ಸೂತನು ನುಡಿದನು.

## ವ್ಯಾಸಾವತಾರ ಭಾರತ ರಚನೆ

ಇಂತು ನಡೆದ ಸರ್ಪಯಾಗದಲ್ಲಿ ಅನೇಕ ವಿದ್ವಜ್ಜನರು ಕರ್ಮವಿರಾಮ ಸಮಯ ಗಳಲ್ಲಿ ಅನೇಕ ಪುರಾಣ ಪುಣ್ಯ ಕಥಾ ಕಥನ ಪರಾಯಣರಾಗಿರುತ್ತಿದ್ದರು. ಸರ್ಪಯಾಗ ಸಂಪೂರ್ತಿ ಆದ ನಂತರ ಒಂದುದಿನ ಜನಮೇಜಯನು ಸದಸಸ್ಪತಿಯು, ದಯಾ ಸಮುದ್ರನು, ಕೌರವ್ಯ ಪಿತಾಮಹನು, ನೀಲಮೇಘಶ್ಯಾಮನು, ಉದ್ಯದ್ದಿವಾಕರ ಸಮತೇಜನು ಆದ ವೇದವ್ಯಾಸನನ್ನು ಪೂಜಿಸಿ, ವಿನಯದಿಂದ ತಲೆಬಾಗಿ ನಮಿಸಿ ಕೇಳಿಕೊಂಡನು—

"ಶಕ್ತಿಪುತ್ರನಾದ ಪರಾಶರನಿಗೆ ಚಿರಸಮಯ ಸಮಾಚೀರ್ಣ ತಪಸ್ಯಳಾದ ಸತ್ಯವತಿದೇವಿಯಲ್ಲಿ ಪ್ರಾದುರ್ಭೂತನಾದೆ. ಜಾತಮಾತ್ರನೇ ವಿವೃದ್ಧಪೂರ್ಣಜ್ಞಾನಾ ನಂದ ದೇಹನಾಗಿ, ವೇದಗಳನ್ನು ವಿಭಾಗಿಸಿದೆ. ತದರ್ಥ ನಿರ್ಣಾಯಕವಾದ ಬ್ರಹ್ಮ ಸೂತ್ರಗಳನ್ನು ರಚಿಸಿದೆ. ಸತ್ಯವ್ರತನು, ಉರುಶ್ರವನು, ಸಾಕ್ಷಾನ್ನಾರಾಯಣಾವ ತಾರನು ಆದ ನೀನು ಅನಿತರಸಾಧ್ಯವಾದ ಭಾರತವನ್ನು ಲಕ್ಷ ಗ್ರಂಥವನ್ನಾಗಿ ರಚಿಸಿ ರುವೆಯಂತೆ. ಪ್ರತ್ಯಕ್ಷವಾಗಿ ಕುರುಪಾಂಡವ ಯುದ್ಧವನ್ನು ಕಂಡು ವರ್ಣಿಸಿದ ನಿನ್ನ ಜ್ಞಾನವು ಅಪರಿಮಿತವಾಗಿದೆ. ನಮ್ಮ ಪಿತಾಮಹರಾದ ಪಾಂಡವರ ಕಥೆಯನ್ನು ವಿಸ್ತಾರವಾಗಿ ಕೇಳಲಿಚ್ಛಿಸುವೆನು, ದಯಮಾಡಿ ನನಗದನ್ನು ಹೇಳು."

ಆಗ ಶ್ರೀಕೃಷ್ಣದ್ವೈಪಾಯನನು ಅಲ್ಲಿ ಕೂತಿದ್ದ ತನ್ನ ಶಿಷ್ಯನಾದ ಭಾರತ ಕಥಾ ಕಥನ ಚತುರನಾದ ವೈಶಂಪಾಯನನಿಗೆ ಭಾರತವನ್ನು ಜನಮೇಜಯನಿಗೆ ಹೇಳುವಂತೆ ಆಜ್ಞಾಪಿಸಿದನು. ವೈಶಂಪಾಯನನು ವ್ಯಾಸನಿಗೆ ನಮಿಸಿ, ಅವನ ಉಪದೇಶವನ್ನನು ಸರಿಸಿ, ದ್ವಿಜವೃದ್ಧ ಜನರನ್ನು ಪೂಜಿಸಿ, ಜನಮೇಜಯನಿಗೆ ಭಾರತ ಕಥೆಯನ್ನು ಸಾಂಗವಾಗಿ ಹೇಳಿದನು—

ರಾಜನ್! ಕೇಳು, ಪಾಂಡುರಾಜ ಮರಣ, ಪಾಂಡವ ಹಸ್ತಿನಾವತೀ ಗಮನ, ದುರ್ಯೋಧನ ಕುಟಿಲವಧೋಪಾಯ, ಭೀಮಬಲ, ಕೌರವ ವಿಷದಾನ, ವಿದ್ಯಾ- ಪ್ರದರ್ಶನ, ಜತುಗೃಹದಾಹ, ಹಿಡಿಂಬ ವಧ, ಏಕಚಕ್ರಪುರವಾಸ, ಬಕವಧ, ದ್ರೌಪದೀ ವಿವಾಹ, ಇಂದ್ರಪ್ರಸ್ಥನಿವಾಸ, ಖಾಂಡವ ದಾಹ, ಮಯಸಭಾ ನಿರ್ಮಾಣ, ರಾಜ ಸೂಯ ವೈಭವ, ದುರ್ಯೋಧನ ಪರಾಭವ, ದ್ಯೂತಾನುದ್ಯೂತ, ಅರಣ್ಯವಾಸ, ಅಜ್ಞಾತವಾಸ, ಕೀಚಕವಧ, ಉತ್ತರಗೋಗ್ರಹಣ, ಅಭಿಮನ್ಯು ವಿವಾಹ, ಉದ್ಯೋಗ, ಸೈನ್ಯಸಂಗ್ರಹ, ಸಂಜಯ ಸಂದೇಶ, ಶ್ರೀಕೃಷ್ಣರಾಯಭಾರ, ವಿಶ್ವರೂಪದರ್ಶನ, ಕರ್ಣ ರಹಸ್ಯಜನ್ಮ ಕಥನ, ಮಹಾಯುದ್ಧ, ಸರ್ವ ಭೂಭಾರ ಹರಣ, ದುರ್ಯೋಧನಾದಿ ದುಷ್ಟಸಂಹಾರ, ಧರ್ಮರಾಜ ರಾಜ್ಯಾಭಿಷೇಕ ಮುಂತಾದ ಭಾರತೇತಿಹಾಸವು ಬಹು ರಮಣೀಯವು, ಪಾಪಹಾರವು, ಪುಣ್ಯಕರವು ಆಗಿದೆ. ಅದನ್ನು ನಿನಗೆ ಶ್ರೀ ವೇದ ವ್ಯಾಸನು ರಚಿಸಿರುವಂತೆ ವಿಸ್ತಾರವಾಗಿ ಹೇಳುವೆನು. ಭಾರತವು ಶ್ರೀಕೃಷ್ಣವೇದ ವೆನಿಸಿದೆ. ನಾಸ್ತಿಕರಿಗೆ ಶಠರಿಗೆ ಅಭಕ್ತರಿಗೆ ಇದನ್ನು ಹೇಳಲಾಗದು. ನೀನು

ಪಾಂಡವೇಯನು, ಮಹಾ ಕೃಷ್ಣಭಕ್ತನು, ಧರ್ಮಶೀಲನು. ಇದನ್ನು ಜಯವೆಂದು ಕರೆವರು. ಇದನ್ನು ಕೇಳಿದ ರಾಜನು ಜಯಶೀಲನಾಗುವನು. ಧರ್ಮಶಾಸ್ತ್ರವೇ ಅಲ್ಲದೆ ಮೋಕ್ಷಶಾಸ್ತ್ರವೂ ಆಗಿರುವ ಭಾರತವನ್ನು ಶ್ವೇತದ್ವೀಪಾಧಿಪತಿಯಾದುದರಿಂದ ದ್ವೈಪಾಯನನೆನಿಸಿದ ಶ್ರೀವ್ಯಾಸನು ಲಕ್ಷ ಶ್ಲೋಕಗಳಲ್ಲಿ ರಚಿಸಿ, ನನಗೆ ಉಪದೇಶಿಸಿರುವನು. ಆ ಮಹಾಮಹಿಮನ ಅಗಣ್ಯ ಕರುಣೆಯಿಂದ ನಾನದನ್ನು ಯಥಾಮತಿ ನಿನಗೆ ನಿರೂಪಿಸುವೆನು. ಮೂರು ವರ್ಷಗಳ ಕಾಲ ಪ್ರತಿನಿತ್ಯವು ಶ್ರೀವ್ಯಾಸಪಾದಾರವಿಂದದಲ್ಲಿ ಮನವಿಟ್ಟು ಇದನ್ನು ಓದಿರುವೆನು. ಮೊದಲು ವ್ಯಾಸಾವತಾರ ವಿವರವನ್ನು ಹೇಳುವೆನು, ಕೇಳು—

ಚೇದಿ ದೇಶದಲ್ಲಿ ಉಪರಿಚರನೆಂಬ ರಾಜರ್ಷಿಯು ಪ್ರಜಾರಂಜಕನಾಗಿದ್ದನು. ಅವನ ತಪಸ್ಸಿಗೆ ಮೆಚ್ಚಿ ಇಂದ್ರನು ಅವನಿಗೆ ಸಖನಾದನು. ಸಸ್ಯಸಮೃದ್ಧವು, ವರ್ಣಾಶ್ರಮ ಧರ್ಮಪಾಲನ ಪ್ರಜಾಸಮಂಚಿತವು, ಅಧರ್ಮವರ್ಜಿತವು ಆದ ಚೇದಿ ದೇಶವನ್ನು ಇಂದ್ರನೇ ಆ ರಾಜವರನಿಗೆ ಕೊಟ್ಟಿದ್ದನು. ಮನುಷ್ಯದುರ್ಲಭವಾದ ವಿಮಾನವನ್ನೂ ಕೊಟ್ಟು ದಿವಿಷ್ಠನಾದ ಇಂದ್ರನು ಭುವಿಷ್ಠನಾದ ವಸುರಾಜನನ್ನು ದೇವತಾಸಮನೆನಿಸಿದನು. 'ಇಂದ್ರಮಾಲೆ' ಎಂಬ ವೈಜಯಂತೀ ಹಾರವನ್ನೂ, ಶಿಷ್ಟಪಾಲನ ದುಷ್ಟಶಾಸನ ಸಮರ್ಥವಾದ 'ವಿಷ್ಣುಯಷ್ಟಿ' ಎಂಬ ರಾಜದಂಡವನ್ನೂ ಕೊಟ್ಟು ಸತ್ಕರಿಸಿದನು. ವಸುರಾಜನು ಇಂದ್ರನನ್ನು ಪೂಜಿಸಿ, ಪ್ರತಿವರ್ಷವೂ ಯಷ್ಟಿಪ್ರವೇಶವೆಂಬ ಉತ್ಸವವನ್ನೇರ್ಪಡಿಸಿದನು. ಇಂದಿಗೂ ವಿಷ್ಣುಯಷ್ಟಿಯಲ್ಲಿ ಇಂದ್ರನನ್ನೂ, ಹಂಸರೂಪೀ ಶ್ರೀನಾರಾಯಣನನ್ನೂ ಆವಾಹಿಸಿ, ಗಂಧಮಾಲ್ಯ ಧೂಪ ದೀಪ ನೈವೇದ್ಯಾದಿಗಳಿಂದ ಪೂಜಿಸುವ ಪರಿಪಾಟಿ ನಡೆದುಬಂದಿದೆ. ಆ ಉತ್ಸವಕರ್ತನು ಶ್ರೀ ವಿಜಯಕೀರ್ತಿಗಳನ್ನು ಹೊಂದುವಂತೆ ಅನುಗ್ರಹಿಸಿ, ಇಂದ್ರನು ತನ್ನ ಪುರಿಗೆ ಹೋದನು. ಆ ಮಹಾರಾಜನು ತನ್ನ ಸುತರಾದ ಬೃಹದ್ರಥ, ಪ್ರತ್ಯಗ್ರಹ, ಕುಶಾಂಬ, ಮಣಿವಾಹನ, ಮಾವೇಲ್ಲರೆಂಬ ರಾಜನ್ಯರನ್ನು ಮಾಗಧಾದಿ ದೇಶಗಳಲ್ಲಿ ನಿಲ್ಲಿಸಿ, ತಾನು ವಿಮಾನದಲ್ಲಿ ಇಂದ್ರನಂತೆ ಚರಿಸುತ್ತಿದ್ದನು. ಅಂತೆಯೇ ಅವನನ್ನು ಜನರು ಉಪರಿಚರ ವಸುರಾಜನೆಂದು ಕರೆದರು.

ಆ ರಾಜನ ಪುರದ ಸಮೀಪದಲ್ಲಿ (ಪೆನುಗೊಂಡ) ಶುಕ್ತಿಮತಿ (ಮುತ್ಯಾಲವಂಕ) ಎಂಬ ನದಿಯು ಹರಿಯುತ್ತಿತ್ತು. ಆ ಸಮೀಪದ (ಘನಗಿರಿ) ಕೋಲಾಹಲನೆಂಬ ಪರ್ವತರಾಜನು ನದೀ ದೇವತೆಯಾದ ಶುಕ್ತಿಮತಿಯನ್ನು ನೋಡಿ ಕಾಮಿಸಿ, ಕೈಪಿಡಿದನು. ವಸುರಾಜನಾಗ ತನ್ನ ಪಾದದಿಂದ ಪರ್ವತವನ್ನು ತುಳಿಯಲು, ಒಂದು ವಿವರವೇರ್ಪಟ್ಟು, ಅದರಿಂದ ಶುಕ್ತಿಮತಿಯು ವೇಗವಾಗಿ ಹರಿಯತೊಡಗಿದಳು. ಆ ಸಂಗಮದಿಂದ ಜನಿಸಿದ ಪುತ್ರೀ ಪುತ್ರರನ್ನು ರಾಜನಿಗೆ ಕಾಣಿಕೆಯಾಗಿತ್ತು ಶುಕ್ತಿಮತಿ ಅಂತರ್ಧಾನವಾದಳು. ಆ ಮಕ್ಕಳಲ್ಲಿ ವಸುಪದನೆಂಬ ಕುಮಾರನು ವಸುರಾಜನಿಗೆ ಸೇನಾಪತಿಯಾದನು. ಗಿರಿಕೆ ಎಂಬ ಕನ್ಯೆಯು ಅವನಿಗೆ ಪತ್ನಿಯಾದಳು.

ಕಾಲಕ್ರಮದಿ ಗಿರಿಕೆ ಋತುಮತಿಯಾದಳು. ರಾಜನು ಅವಳನ್ನು ಸ್ವೀಕರಿಸಲು ಹೋಗುವಾಗ ಪಿತೃದೇವತೆಗಳು ಕಾಣಿಸಿಕೊಂಡು ಅವನಿಗೆ ಮೃಗಮಾಂಸವನ್ನು ತಂದು ಕೊಡೆಂದು ವಿಧಿಸಿದರು. ಅವರ ಆಜ್ಞೆಯನ್ನು ಶಿರಸಾವಹಿಸಿ ಗಿರಿಕೆಯಲ್ಲಿ ಮನಸ್ಸು, ಅರಣ್ಯದಲ್ಲಿ ದೇಹ, ಇಂತು ವಸುರಾಜನು ಬೇಟೆಯಾಡುತ್ತಿದ್ದನು. ಅಶೋಕ, ಚಂಪಕ, ಚೂತ, ಪುನ್ನಾಗ, ಬಕುಳ, ಪಾಟಲ, ಚಂದನಾದಿ ಮಹಾವೃಕ್ಷಗಳಿಂದ ನಿಬಿಡವಾಗಿ ವಿವಿಧ ಪುಷ್ಪಗಂಧ ಗಂಧಿತವಾಗಿ, ಕೋಕಿಲ ಕೀರಶಾರಿಕಾದಿ ಪಕ್ಷಿ ಕಲಕಲನಾದಭರಿತ ವಾಗಿ, ಚೈತ್ರರಥ ನಂದನವನಗಳಂತೆ ರಂಜಿಸುವ ವನದಲ್ಲಿ, ವಸಂತವು ತನ್ನ ಶೋಭೆ ಯನ್ನು ತುಂಬಿತ್ತು. ರಾಜನ ಮನದಲ್ಲಿ ಗಿರಿಕೆಯ ರೂಪು ತುಂಬಿತ್ತು. ಅವಳ ಚಂದ್ರಮಂಡಲಮುಖರುಚಿ,ಕುಟಿಲಕುಂತಲ ನೀಲಿಮೆ ಕಮಲದಳಾಯತನೇತ್ರದ್ವಯ, ಚಂಪಕನಾಸಿಕೆ, ಬಿಂಬೋಷ್ಠ, ಕುಚಲಿಕುಚಯುಗ, ಅಸ್ತಿನಾಸ್ತಿ ಸಂಶಯಕಾರಣ ಕಟಿ, ಮಂದಗಮನಗಳನ್ನು ನೆನೆದು, ನೆನೆದು, ಪರವಶನಾದ ಆ ರಾಜರ್ಷಿಯ ವೀರ್ಯವು ಸ್ಖಲಿತವಾಯಿತು. ಅವನು ಆ ಅಮೋಘವೀರ್ಯವನ್ನು ಒಂದೆಲೆಯಲಿಟ್ಟು, ಗಿಡುಗನ ಕೈಲಿತ್ತು ತನ್ನ ಸತಿಗೆ ಕೊಡೆಂದು ಕಳಿಸಿದನು. ತ್ವರಿತಗತಿಯಿಂದ ಹಾರಿಬರುತ್ತಿರುವ ಗಿಡುಗನ ಚಂಚೂಪುಟದಲ್ಲಿದ್ದು ಪ್ರಕಾಶಿಸುವ ವೀರ್ಯವನ್ನು ಇನ್ನೊಂದು ಗಿಡುಗವು ನೋಡಿ ಮಾಂಸವೆಂದು ಭ್ರಮಿಸಿ ಅದನ್ನು ತಡೆಯಿತು. ಎರಡು ಶ್ಯೇನಗಳ ಕಾದಾಟ ದಲ್ಲಿ ವೀರ್ಯಪುಟವು ಕೆಳಗೆ ಯಮುನಾ ನದಿಯಲ್ಲಿ ಬಿತ್ತು. ಆ ಸಮಯದಲ್ಲಿ ಬ್ರಹ್ಮ ಶಾಪದಿಂದ ಮೀನಾಗಿದ್ದ ಅದ್ರಿಕೆ ಎಂಬ ಅಪ್ಸರೆ ಅಲ್ಲಿದ್ದು, ಅದನ್ನು ಸ್ವೀಕರಿಸಿ ಗರ್ಭವತಿ ಯಾದಳು. ಹತ್ತು ತಿಂಗಳಾದವು. ಜಾಲರು ಬಲೆಬೀಸಿ ಅದನ್ನು ಹಿಡಿದರು. ಸೀಳಿನೋಡಿ ಅದರಲ್ಲಿದ್ದ ಸ್ತ್ರೀ ಪುರುಷ ಶಿಶುದ್ವಯವನ್ನು ಕಂಡು, ಆಶ್ಚರ್ಯಪಟ್ಟು ಜಾಲಗಾರರು ದಾಶರಾಜನಿಗೆ ಅವರನ್ನು ತಂದೊಪ್ಪಿಸಿದರು. ದಾಶರಾಜನು ಅವರನ್ನು ವಸುರಾಜನಿಗೆ ಸಮರ್ಪಿಸಿದನು. ವಸುರಾಜನು ಅವರನ್ನು ಮಕ್ಕಳೆಂದರಿತು, ಮಗನಿಗೆ ಮತ್ಸ್ಯರಾಜ ನೆಂದು ಕರೆದನು. ಅವನನ್ನು ಮತ್ಸ್ಯದೇಶಕ್ಕೆ ರಾಜನಾಗಿ ಮಾಡಿದನು. ಮಗಳಿಗೆ ಸತ್ಯವತಿ ಎಂದು ಹೆಸರಿಸಿ, ದಾಶರಾಜನಿಗೆ 'ಮಗಳಂತೆ ಸಾಕು' ಎಂದು ಹೇಳಿ ಕೊಟ್ಟು ಕಳುಹಿದನು. ಅಪ್ಸರೆಯು ಮನುಷ್ಯ ಶಿಶು ಪ್ರಸವದಿಂದ ಶಾಪವಿಮುಕ್ತಳಾಗಲೆಂದು ಬ್ರಹ್ಮದೇವನ ವಿಶಾಪವಿತ್ತೆಂಬ ಕಾರಣದಿಂದ ಮತ್ತೆ ಅಪ್ಸರೆಯಾಗಿ ಸುರಲೋಕವನ್ನು ಸೇರಿದಳು.

ಸತ್ಯವತಿಯು ಹಿಂದಿನ ಬಹುಜನ್ಮಗಳಲ್ಲಿ ಮಾಡಿದ ತಪಃಫಲವಾಗಿ ಶ್ರೀನಾರಾ-ಯಣನನ್ನೇ ಮಗನನ್ನಾಗಿ ಪಡೆಯಬೇಕಿತ್ತು. ಅವಳಿಗೆ ಹಸಿವೆ ನೀರಡಿಕೆಗಳಿಲ್ಲದಿರು ವಂತೆ ದೇವೇಂದ್ರನು ಅನುಗ್ರಹಿಸಿದನು. ಅವಳ ದೇಹದಿಂದ ಮತ್ಸ್ಯದ ದುರ್ಗಂಧವು ಬರುತ್ತಿತ್ತು. ಆದ್ದರಿಂದ ಮತ್ಸ್ಯಗಂಧಿ ಎನಿಸಿ, ತಂದೆಯ ಸೇವೆ ಎಂದು ಯಮುನೆಯ ದಡದಲ್ಲಿ ಜನರನ್ನು ದಾಟಿಸುತ್ತ ಹಡಗದಲ್ಲಿರುತ್ತಿದ್ದಳು. ಒಂದುದಿನ ವಸಿಷ್ಠ ಮಹರ್ಷಿಯ ಪೌತ್ರನಾದ ಪರಾಶರನೆಂಬ ಋಷಿವರನು ಅಲ್ಲಿಗೆ ಬಂದನು. ಪರಾಶರನ

*

ತಪಸ್ಸಿಗೆ ಮೆಚ್ಚಿ ಶ್ರೀಹರಿಯು, ಅವನು ಬೇಡಿದಂತೆ ಅವನ ಮಗನಾಗಿ ಅವತರಿಸುವು ದಾಗಿ ವರವನ್ನಿತ್ತಿದ್ದನು.

ಬ್ರಹ್ಮಾದಿ ದೇವತೆಗಳೂ ದ್ವಾಪರದ ಅಂತ್ಯಭಾಗದಲ್ಲಿ ಜ್ಞಾನವು ಆಕುಲವಾಗಿ ಜನರು ಅಜ್ಞಾನದಲ್ಲಿ ತೊಳಲುತ್ತಿರುವುದನ್ನು ಕಂಡು, ಕೃಪಾಳುಗಳಾಗಿ ಸುಜನರಿಗೆ ಜ್ಞಾನೋಪದೇಶವನ್ನು ಮಾಡಿ ಉದ್ಧರಿಸಬೇಕೆಂದು ಶ್ರೀಹರಿಯನ್ನು ಪ್ರಾರ್ಥಿಸಿದರು. ಅವರ ಮೊರೆ ಕೇಳಿ, ಮುರಾರಿಯು ಪರಾಶರರಿಂದ, ಸತ್ಯವತಿಯಲ್ಲಿ ಅವತರಿಸುವೆ ನೆಂದು ಅನುಗ್ರಹಿಸಿದನು. ಇದನ್ನರಿತ ವಸಿಷ್ಠನು ವಸುರಾಜನನ್ನು ಕಂಡು ಮೊಮ್ಮಗ ನಾದ ಪರಾಶರನಿಗೆ ಸತ್ಯವತಿಯನ್ನಿತ್ತು ಶ್ರೀಹರಿಯ ಅವತಾರ ಕಾರ್ಯದಲ್ಲಿ ನೆರವಾಗು ವಂತೆ ಬೇಡಿದನು. ಅದೇಪ್ರಕಾರ ವಸುರಾಜನು ತನ್ನ ಮಗಳಾದ ಸತ್ಯವತಿಯನ್ನು ಪರಾಶರನಿಗೆ ಮನಸಾ ಧಾರೆ ಎರೆದು ಯಾಜ್ಞವಲ್ಕ್ಯಾದಿ ಮುನಿಜನರ ಸಾಕ್ಷಿಯಾಗಿ ವಿವಾಹ ಮಾಡಿಕೊಟ್ಟನು.

ಸತ್ಯಸಂಕಲ್ಪನಾದ ಶ್ರೀಹರಿಯ ಆಜ್ಞೆಯಂತೆ ಪರಾಶರನು, ಅತ್ಯಂತ ರೂಪ ಲಾವಣ್ಯವತಿಯಾದ ಸತ್ಯವತಿಯನ್ನು ಸಕೃತ್ಸಂಗಕ್ಕಾಗಿ ಬೇಡಿದನು. ಯಮುನಾ ತೀರದ ಜನರನ್ನು ನೋಡಿ ನಾಚಿದ ಅಂಗನೆಯ ಇಂಗಿತವನ್ನರಿತು, ಪರಾಶರನು ನೀಹಾರವನ್ನು ಸೃಜಿಸಿ, ಕತ್ತಲಾಗುವಂತೆ ಮಾಡಿದನು. 'ನನ್ನ ಕನ್ಯಾತ್ವವು ದೂಷಿತ ವಾದರೆ ನಾನು ಜೀವಿಸಿ ಏನು ಪ್ರಯೋಜನ? ಪಿತೃವಶಳಾಗಿರುವ ನನಗೆ ದುಷ್ಕೀರ್ತಿ ಬಾರದಂತೆ, ಎಂತು ನಡೆಯಬೇಕೋ ಚಿಂತಿಸು.' ಎಂದ ಸುಂದರಿಗೆ, ಮಹಾಯೋಗಿ ಯಾದ ಪರಾಶರನು 'ನಿನ್ನ ಕನ್ಯಾತ್ವವು ಕೆಡಲಾರದು. ಇದಕ್ಕೆ ತಾರ್ಕಾಣವಾಗಿ ಇಂದಿನಿಂದ ನಿನ್ನ ಮತ್ಸ್ಯಗಂಧವು ಹೋಗಿ, ನೀನು ಸುಗಂಧಿಯಾಗು! ನಿನ್ನನ್ನು ಮುಂದೆ ಶಂತನುವೆಂಬ ಚಕ್ರವರ್ತಿಯು ಸ್ವೀಕರಿಸುವನು' ಎಂದು ಸಮಾಧಾನಪಡಿಸಿ, ಯಮುನೆಯ ದ್ವೀಪದಲ್ಲಿ ಅವಳನ್ನು ಸ್ಪೃಶಿಸಿದನು. ತತ್‌ಕ್ಷಣವೇ ಶ್ರೀಭಗವಂತನು ಅವತರಿಸಿದನು.

ಶ್ರೀಕೃಷ್ಣನು ಕೋಟಿಸೂರ್ಯ ಪ್ರತಿಮ ಪ್ರಭಾಯುತನಾಗಿದ್ದನು. ಅವನ ಕಾಂತಿಪುಂಜವು ಬ್ರಹ್ಮಾಂಡದ ಹೊರಭಾಗದಲ್ಲಿಯೂ, ಅವನ ಜ್ಞಾನಪ್ರಕಾಶವು ಸುಜನ ಹೃದಯಮಂಡಲದಲ್ಲಿಯೂ ಪಸರಿಸಿತು. ನೀಲಮಾಣಿಕ್ಯದಂತೆ ಪೊಳೆಯುವ ದೇಹದ ಕಾಂತಿಯುತನಾಗಿ ಸಮಸ್ತ ವಿದ್ಯಾಧಿಪತಿಯು, ಜಗದ್ಗುರುಗಳಾದ ಬ್ರಹ್ಮರುದ್ರರಿಗೆ ಗುರುವು, ಜಗದೀಶನು, ದೋಷಗಂಧವಿಧುರನು, ಸಕಲ ಶುಭಲಕ್ಷಣ ಲಕ್ಷಿತನು ಆದ ರಮಾರಮಣನೇ ಮುಂದೆ ನಿಂತಾಗ, ಸತ್ಯವತಿ ಪರಾಶರರು ಆನಂದತುಂದಿಲರಾದರು. ನೋಡುತ್ತಿದ್ದಂತೆ ಸ್ವಾಮಿಯು ಋಷಿ ರೂಪನಾಗಿದ್ದನು. ತರ್ಕಾಭಯಮುದ್ರೆಗಳಿಂದ ಶೋಭಿಸುವ ಕರದ್ವಯ, ಕಂಬುಕಂಠ, ಕಂಠನಿರ್ಗತ ವೇದ ಸುಸ್ವರಘೋಷ, ಕಮಲ ವಿಶಾಲನೇತ್ರ, ನೇತ್ರನಿರ್ಗತಕರುಣಾಪೂರ್ಣಕಟಾಕ್ಷ, ವಿಸ್ತೀರ್ಣವಕ್ಷ, ಹೊದ್ದ ಧವಳ ರುರು ಚರ್ಮ, ಭಕ್ತರ ಅಜ್ಞಾನಮತವನ್ನು ದೂರೀಕರಿಸುವ ಪಾದಾಂಗುಲೀನಖ

ಚಂದ್ರಿಕೆ, ಇವೆಲ್ಲವನ್ನು ಕಂಡು ಬೆರಗಾಗಿದ್ದ ತಂದೆಯಿಂದ ಉಪನಯನಸಂಸ್ಕಾರವನ್ನು ಪಡೆದ ವೇದವ್ಯಾಸನು, ಸ್ಮರಿಸಿದಾಗ ಪ್ರತ್ಯಕ್ಷನಾಗುವಂತೆ ತಾಯಿಗೆ ವರವಿತ್ತನು.

ಚತುರ್ಮುಖ ಪ್ರಧಾನ ದೇವತೆಗಳು ಅನುಸರಿಸಿ ಬರಲು, ಮೇರು ಶಿಖರದ ಆಶ್ರಮದಲ್ಲಿ ನಿವಸಿಸಿ, ಅವರಿಗೆ ಅನಂತ ವೇದಗಳನ್ನು ಉಪದೇಶಿಸಿದನು. ಅಸ್ತವ್ಯಸ್ತವಾದ ವೇದಗಳನ್ನು ವಿಂಗಡಿಸಿ, ಅವುಗಳ ಮಹಾತಾತ್ಪರ್ಯವಾದ ಹರಿಸರ್ವೋತ್ತಮತ್ವ, ವಾಯುಜೀವೋತ್ತಮತ್ವ, ತಾರತಮ್ಯ, ಕಲಿದೋಷ ಪರಾಕಾಷ್ಠ, ತಮೋಯೋಗ್ಯ ಜೀವದುಃಖಪ್ರಾಪ್ತಿ, ಮುಂತಾದ ತತ್ವಗಳನ್ನು ದೃಷ್ಟಾಂತಮುಖೇನ ತಿಳಿಸಲು ಮಹಾಭಾರತವೆಂಬ ಇತಿಹಾಸವನ್ನು ರಚಿಸಿದನು. ಅದನ್ನು ವೈಶಂಪಾಯನ ಶುಕರಿಗೆ ಉಪದೇಶಿಸಿದನು. ಭಾಗವತಾದಿ ಹದಿನೆಂಟು ಪುರಾಣಗಳನ್ನು ರಚಿಸಿ, ವಿವಿಧಮತಾನುವಾದವನ್ನು ಮಾಡಿ, ಅಲ್ಲಲ್ಲಿ ತತ್ಖಂಡನವನ್ನೂ ಮಾಡಿ, ಸ್ವಮತವನ್ನು ಸುಜನರಿಗೆ ತಿಳಿಸಿದನು. ಅವರ ಅಜ್ಞಾನವನ್ನು ನಾಶಮಾಡಿ ಉದ್ಧರಿಸಿದನು. ಅಲ್ಲಲ್ಲಿ ಗುಹ್ಯಸಮಾಧಿದರ್ಶನರೂಪ ಭಾಷಾ ಭೇದದಿಂದ ಸತ್ತತ್ವ ರತ್ನಗಳನ್ನು ದುರ್ಜನರು ಹರಿಸದಂತೆ ಕಾಪಾಡಿ ಮೋಹಕ ವಾಕ್ಯಗಳಿಂದ ಅವರಿಗೆ ಅನ್ಯಥಾ ಜ್ಞಾನವನ್ನಿತ್ತು, ತಮಸ್ಸಿಗೆ ಯೋಗ್ಯರನ್ನಾಗಿ ಮಾಡಿ, ತಾನು ತತ್ತದ್ಯೋಗ್ಯ ಫಲಪ್ರದನಾಗಿ, ವೈಷಮ್ಯನೈರ್ಘೃಣ್ಯ ರೂಪ ದೋಷದೂರನೆನಿಸಿದನು.

ಒಂದುದಿನ ಹಾದಿಯಲ್ಲಿ ಬಿದ್ದಿದ್ದ ಕೀಟವನ್ನು ನೋಡಿ "ಈ ಹಾಳುಶರೀರವನ್ನು ಬಿಟ್ಟು ರಾಜನಾಗಿ ಆಳು" ಎಂದಾಜ್ಞಾಪಿಸಿದ ಪ್ರಭುವಿಗೆ ಲೋಭಿಯಾದ ಆ ಕೀಟವು "ಸ್ವಾಮೀ! ನಾನು ಈ ಶರೀರವನ್ನು ಬಿಡಲಾರೆ" ಎಂದು ಲೋಭದಿಂದ ವಿಜ್ಞಾಪಿಸಿತು. ಹಿಂದಿನ ಜನ್ಮದಲ್ಲಿ ಆ ಕೀಟವು ಒಬ್ಬ ಶೂದ್ರಭಕ್ತನು. ಅವನು ಮಹಾಲೋಭಿಯಾಗಿದ್ದುದರಿಂದ ಹುಳುವಾಗಿ ಹುಟ್ಟಿದನು. ಅವನ ಮಾತನ್ನಾಲಿಸಿ ನಕ್ಕು ಆ ಹುಳುವನ್ನು ಅದೇ ರೂಪದಿಂದ ರಾಜನಾಗುವಂತೆ ಅನುಗ್ರಹಿಸಿ, ವೇದವ್ಯಾಸನು "ಕೀಟರಾಜ! ಇದೇ ಜನ್ಮದಿಂದ ನಿನಗೆ ಮುಕ್ತಿಯನ್ನು ಕೊಡಬಲ್ಲೆ. ಆದರೆ ನೀನು ಸ್ವಭಾವದಿಂದ ಬ್ರಾಹ್ಮಣನು. ಆದುದರಿಂದ ನೀನು ಮುಂದೆ ವಿಪ್ರನಾಗಿ ಮುಕ್ತನಾಗುವೆ" ಎಂದು ಹೇಳಿ, ಅವನಿಗೆ ದಿವ್ಯ ಜ್ಞಾನೋಪದೇಶವನ್ನು ಮಾಡಿದನು. ಅಂತೆಯೇ ರಾಜ್ಯವಾಳಿ, ಸಾಮಂತರಿಂದಲೂ, ವರ್ತಕರಿಂದಲೂ ಕಪ್ಪ ಕಾಣಿಕೆಗಳನ್ನು ಸ್ವೀಕರಿಸಿ, ಆ ಕೀಟವು ರಾಜ್ಯವಾಳಿತು. ಶೌನಕ! ಕ್ರಿಮಿಯಿಂದ ರಾಜ್ಯವಾಳಿಸಿದ ಮಹಾಸ್ವಾಮಿಯ ಮಹಿಮೆ ಇನ್ನೆಂತು ವರ್ಣಿಸಲಿ! ಇಂತು ಎಷ್ಟೋ ಸುಜನರನ್ನು ಮುಕ್ತಿಭಾಗ್ಯವನ್ನಿತ್ತು ಪೊರೆದ ಜಗಜ್ಜನಕನಿಗೆ ನಮೋನಮಃ.

ವೇದಗಳ ವಿಭಾಗದಿಂದ ವೇದವ್ಯಾಸನೆನಿಸಿ ಯಮುನೆಯ ದ್ವೀಪದಲ್ಲಿ ಅವತಾರ ಮಾಡಿದುದರಿಂದ ದ್ವೈಪಾಯನನೆನಿಸಿದ ಶ್ವೇತದ್ವೀಪ ಪತಿಗೆ ಪುತ್ರನಾಗಲು ತಪವನ್ನು ಮಾಡಿ ಮಹಾದೇವನು ಒಂದುದಿನ ಅರಣೀಮಥನವನ್ನು ಮಾಡುತ್ತಿದ್ದ ವ್ಯಾಸದೇವನ ಅರಣಿಗಳಿಂದ ಹುಟ್ಟಿದನು. ಅದೇ ಸಮಯದಲ್ಲಿ ಶ್ರೀಹರಿಸಂಪರ್ಕವನ್ನು ವರವಾಗಿ

ಪಡೆದ ಘೃತಾಚಿ ಎಂಬ ಅಪ್ಸರೆ ಅಲ್ಲಿ ಹೋಗುತ್ತಾ, ಕಾಮುಕನಂತೆ ನಟಿಸಿದ ವ್ಯಾಸನನ್ನು ಶುಕಿರೂಪದಿಂದ ಸೃಷ್ಟಿಸಿ ಹೋದಳು. ಆಕೆಯು ಪ್ರಾರ್ಥನೆಯನ್ನು ಮನ್ನಿಸಿ ಮನ್ಮಥ ಜನಕನು ಅರಣೀಜಾತನಿಗೆ ಶುಕನೆಂದು ಹೆಸರಿಟ್ಟನು. ಆ ಶುಕನಲ್ಲಿ ಮುಖ್ಯ ಪ್ರಾಣನ ಆವೇಶವಿರುವುದೆಂದು ತಿಳಿ ! ಶ್ರೀಶನು ಅವನಿಗೆ ಶ್ರೀಭಾರತ ಭಾಗವತಾದಿ ಸಚ್ಛಾಸ್ತ್ರವನ್ನು ಉಪದೇಶಿಸಿದನು.

ವ್ಯಾಸಶಿಷ್ಯರಾಗಬಯಸಿದ ದೇವತೆಗಳು ಅವನ ಶಿಷ್ಯರಲ್ಲಿ ಆವಿಷ್ಟರಾದರು. ಶೇಷನು ಪೈಲನಲ್ಲಿಯು, ಸುಮಂತುವಿನಲ್ಲಿ (ವರುಣಪುತ್ರ-ವಾಲ್ಮೀಕಿಯು ತಮ್ಮ) ಗರುಡ, ವೈಶಂಪಾಯನನಲ್ಲಿ ಬ್ರಹ್ಮ, ಜೈಮಿನಿಯಲ್ಲಿ ಇಂದ್ರ, ರೋಮಹರ್ಷಣ ಸೂತನಲ್ಲಿ ಕಾಮನು ಪ್ರವಿಷ್ಟರಾಗಿ ಶ್ರೀಕೃಷ್ಣಪಾದಾರವಿಂದ ಸೇವೆಯನ್ನು ಸಲ್ಲಿಸಿದರು. ಪೈಲನು ಋಗ್ವೇದವನ್ನು, ವೈಶಂಪಾಯನನು ಯಜುರ್ವೇದವನ್ನು, ಶುಕ್ಲ ಯಜುರ್ವೇದವನ್ನು ಸೂರ್ಯನು, ಜೈಮಿನಿಯು ಸಾಮವೇದವನ್ನು, ಸುಮಂತುವು ಅಥರ್ವವೇದವನ್ನು ಕಲಿತು ತಮ್ಮ ಶಿಷ್ಯ ಪ್ರಶಿಷ್ಯರಿಗೆ ಶಾಖೋಪಶಾಖ ಭೇದದಿಂದ ಉಪದೇಶಿಸಿದರು. ಶ್ರೀವ್ಯಾಸರ ರೋಮಾಂಚನದಿಂದ ಹುಟ್ಟಿ ರೋಮಹರ್ಷಣನೆನಿಸಿದ ಸೂತನು (ನಮ್ಮ ತಂದೆ) ಭಾರತ, ಪುರಾಣ ಸರ್ವಸ್ವ, ಮಹಾರಾಮಾಯಣ, ಪಂಚರಾತ್ರಾಗಮಾದಿ ಗ್ರಂಥಗಳನ್ನು ಪ್ರಚುರಿಸಿದರು. ಇಂತು ಜ್ಞಾನಕಾರ್ಯವನ್ನು ಮಾಡಿ ಶ್ರೀ ವೇದವ್ಯಾಸನು ಬ್ರಹ್ಮಾದಿ ದೇವತೆಗಳಿಗೆ ದಾರ್ಢ್ಯವನ್ನೂ, ಋಷ್ಯಾದಿಗಳಿಗೆ ವಿಶೇಷಜ್ಞಾನವನ್ನೂ, ಮನುಷ್ಯೋತ್ತಮಾದಿ ಸುಜೀವಿಗಳಿಗೆ ಜ್ಞಾನಲಾಭವನ್ನೂ ದಯಪಾಲಿಸಿ, ಬದರಿಕಾಶ್ರಮದಲ್ಲಿಯೂ, ಮೇರುಪರ್ವತದ ಆಶ್ರಮದಲ್ಲಿಯೂ ಬ್ರಹ್ಮೇಶಾನಾದಿ ದೇವ ಸೇವಿತ ಪಾದಾರವಿಂದನಾಗಿ ಆನಂದದಿಂದಿರುವನು.

## ಅಂಶಾವತರಣ

ಜನಮೇಜಯ ! ಶ್ರೀಕೃಷ್ಣಸೇವೆಯನ್ನು ಮಾಡಿ ಸಾರ್ಥಕಜನ್ಮರಾಗಲು ದೇವ ಮುನಿ ಗಂಧರ್ವಾದಿಗಳು ಭೂಮಿಯಲ್ಲಿ ಶಾಪ ವರಾದಿಗಳ ನಿಮಿತ್ತದಿಂದ ಹುಟ್ಟಿದ ವಿವರವನ್ನು ಕೇಳು—

ವಸುಗಳಲ್ಲಿ ಕಡೆಯವನಾದ 'ದ್ಯು' ನಾಮಕನು ವಸಿಷ್ಠನಲ್ಲಿದ್ದ ಬ್ರಹ್ಮನ ಶಾಪದಿಂದ ದೇವವ್ರತನಾಗಿ ಗಂಗಾ ಶಂತನುಗಳಿಗೆ ಹುಟ್ಟಿದನು. ಅವನಲ್ಲಿ ಬ್ರಹ್ಮದೇವನ ಆವೇಶವಿರುವುದು. ಅಣಿಮಾಂಡವ್ಯ ಶಾಪದಿಂದ ಯಮರಾಜನು ವೇದವ್ಯಾಸಾನುಗ್ರಹದಿಂದ ವಿಚಿತ್ರವೀರ್ಯನ ಶೂದ್ರಪತ್ನಿಯಲ್ಲಿ ವಿದುರನಾಗಿ ಜನಿಸಿದನು. ತುಂಬುರುನೆಂಬ ಗಂಧರ್ವನು ಗವಲ್ಗಣನಿಗೆ ಸಂಜಯನಾಗಿ ಜನಿಸಿದನು. ಸೂರ್ಯನು ಒಂದಂಶದಿಂದ ಕುಂತೀದೇವಿಗೆ ಕರ್ಣನೆನಿಸಿ ಮಗನಾದನು. ಲೋಕ ನಮಸ್ಕೃತನು, ಜನ್ಮಾದಿ ಸರ್ವದೋಷ ರಹಿತನು, ಕ್ರೀಡಾದಿಗುಣ ವಿಶಿಷ್ಟನು, ಕಲ್ಯಾಣಗುಣಪೂರ್ಣನಾದ ಶ್ರೀರಮಣನು ತಾನೇ ಕೃಷ್ಣನಾಗಿ ದೇವಕೀ ವಸುದೇವರಲ್ಲಿ ಪ್ರಾದುರ್ಭೂತನಾದನು.

ಶೇಷನು ರೋಹಿಣಿ ಪುತ್ರನಾಗಿ ಜನಿಸಿ ನರಾವೇಶ, ಶುಕ್ಲಕೇಶಾವೇಶಗಳಿಂದ ಅತಿ ಬಲಿಷ್ಠನಾಗಿ ಬಲರಾಮನೆನಿಸಿದನು.

ಶ್ರೀರಮಣನನ್ನು ಶರಣುಹೊಂದಿ ಪ್ರಾರ್ಥಿಸಿದ ದೇವತೆಗಳು, ಅವನು ದೇವಕಿ ವಸುದೇವರಲ್ಲಿ ಅವತರಿಸುವನೆಂದು ತಿಳಿದು, ಅವನ ಆಜ್ಞೆಯಂತೆ ಭೂಮಿಯಲ್ಲಿ ಅವತರಿಸಿ, ಶ್ರೀಹರಿಸೇವೆಯನ್ನು ಮಾಡಿದರು. ಅಂತೆಯೇ ಹಿಂದೆ ರಾಕ್ಷಸರಾಗಿ ಸಂಹೃತರಾದ ದುಷ್ಟಜೀವರು ಕೂಡ, ಸೇಡಿನಿಂದ ದ್ವಾಪರ ಯುಗದಲ್ಲಿ ರಾಜರೂಪ ರಾಗಿ ಹುಟ್ಟಿದರು. ಆ ದೇವದಾನವರು ಅವತರಿಸಿದ ವಿವರ ಇಂತಿದೆ—

## ೧. ದೇವತೆಗಳು

| ನಾಮ | ಅಂಶ | ಆವೇಶ | ನಾಮ | ಅಂಶ | ಆವೇಶ |
|---|---|---|---|---|---|
| ಶ್ರೀಕೃಷ್ಣ | ಭಗವಂತ | | ದೇವಕ | ಗಂಧರ್ವದೇವಕ | |
| ಭೀಮ | ಮುಖ್ಯವಾಯು | | ಉಗ್ರಸೇನ | ಉಗ್ರಸೇನಗಂಧರ್ವ | |
| ಬಲರಾಮ | ಶೇಷ | ವಿಷ್ಣು (ಶುಕ್ಲಕೇಶ) | ಸಂಜಯ | ತುಂಬುರು | ಉದ್ವಹ |
| | | | ಕುಂತಿಭೋಜ | ಕೂರ್ಮವಾಯು | |
| ಅಶ್ವತ್ಥಾಮ | ರುದ್ರ | | ಕರ್ಣ | ಸೂರ್ಯ | ಸಹಸ್ರವರ್ಮ ರಾಕ್ಷಸ |
| ದೂರ್ವಾಸ | ರುದ್ರ | | | | |
| ಅರ್ಜುನ | ಇಂದ್ರ | ನರ+ವಿಷ್ಣು | ವಸುದೇವ | ಕಶ್ಯಪ | |
| ಧರ್ಮರಾಜ | ಯಮ | | ದೇವಕಿ | ಅದಿತಿ | |
| ವಿದುರ | ಯಮ | | ರೋಹಿಣಿ | ಸುರಭಿ | |
| ನಕುಲ | ನಾಸತ್ಯ | | ನಂದ | ದ್ರೋಣವಸು | |
| ಸಹದೇವ | ದಸ್ರ | | ಯಶೋದೆ | ಧರಾ | |
| ಧೃತರಾಷ್ಟ್ರ | ಧೃತರಾಷ್ಟ್ರ ಗಂಧರ್ವ | ವಾಯು | ಉದ್ಧವ | ಬೃಹಸ್ಪತಿ | ವಾಯು |
| | | | ಶಂತನು | ವರುಣ | |
| ಪಾಂಡು | ಪರಾವಹ | ವಾಯು | ಮಹಾಭಿಷಕ್ | ವರುಣ | |
| ಕುಂತಿ | ಸಿದ್ಧಿ | | ಬಾಹ್ಲಿಕ | ಪ್ರಹ್ಲಾದ | |
| ಮಾದ್ರಿ | ಧೃತಿ | | ಸೋಮದತ್ತ | ಪತ್ರತಾಪರುದ್ರ | |
| ಸುಭದ್ರ | ತ್ರಿಜಟ | | ಭೂರಿ | ಅಜೈಕಸಾತ್‌ರುದ್ರ | |
| ಅಭಿಮನ್ಯು | ಬುಧ | | ಭೂರಿಶ್ರವ | ಅಹಿರ್ಬುಧ್ನಿರುದ್ರ | ಸರ್ವರುದ್ರಾವೇಶ |
| ಘಟೋತ್ಕಚ | ನಿರ್ಋತಿ | | | | |
| ಹಿಡಿಂಬ | ಸ್ವರ್ಗಶ್ರೀ | | ಶಲ | ವಿರೂಪಾಕ್ಷರುದ್ರ | |
| ಶಿಖಂಡಿ | ಅಂಬಾ+ತುಂಬುರು | | ಭೀಷ್ಮ | ದ್ಯುವಸು | ಬ್ರಹ್ಮ |

| ನಾಮ | ಅಂಶ | ಆವೇಶ |
|---|---|---|
| ಅಂಬಾ | ವರಾಂಗಿ | |
| ಶರದ್ವಾನ್ | | |
| ಕೃಪ | ವಿಷ್ಕಂಭರುದ್ರ | |
| ಕೃಪಿ | ತಾರೆ | |
| ದ್ರೋಣ | ಬೃಹಸ್ಪತಿ | ಬ್ರಹ್ಮ |
| ದ್ರುಪದ | ಹೂಹೂ | ಆವಹ |
| ವಿರಾಟ | ಹಾಹಾ | ವಿವಹ |
| ಸಾತ್ಯಕಿ | ಕೃಷ್ಣಪಕ್ಷ ದೇವ | ಗರುಡ+ಕಾಮ +ವಿಷ್ಣು |
| ಕೃತವರ್ಮ | ಶುಕ್ಲಪಕ್ಷ ದೇವ | ಅನಿರುದ್ಧ+ ಪ್ರವಹ |
| ಧೃಷ್ಟದ್ಯುಮ್ನ | ಅಗ್ನಿ | |
| ದ್ರೌಪದಿ | ಭಾರತೀ | ಪಾರ್ವತಿ,ಶಚಿ, ಶಾಮಲಾ,ಉಷಾ |
| ಗಾಂಧಾರಿ | ಮತಿ | |
| ಶಲ್ಯ | ಸಂವಹ | ವಾಯು |
| ಯುಯುತ್ಸು | ನಿರ್ಋತಿ ಅನುಜ | ನಾಸಿಕ್ಯ ವಾಯು |
| ಧೃಷ್ಟಕೇತು | ಅನುಲ್ಲಾದ | |
| ಭಗದತ್ತ | ಕುಬೇರ | ಬಾಷ್ಕಲಾಸುರ |
| ಕೃತವರ್ಮ | ಅಶ್ವಪತಿ | ವಾಯು |
| ಪಂಚಪಾಂಡವ ಪುತ್ರರು | ವಿಶ್ವೇದೇವತೆಗಳು | |

## ೨. ರಾಕ್ಷಸರು

| ನಾಮ | ಅಂಶ | ಆವೇಶ |
|---|---|---|
| ದುರ್ಯೋಧನ | ಕಲಿ | ಮುಖ್ಯವಾಯು |
| ಜರಾಸಂಧ | ವಿಪ್ರಚಿತ್ತಿ | |
| ಶಿಶುಪಾಲ | ಹಿರಣ್ಯಕಶಿಪು | ಜಯ |
| ದಂತವಕ್ತ್ರ | ಹಿರಣ್ಯಾಕ್ಷ | ವಿಜಯ |
| ಶಿಬಿರಾಜ | ದ್ರುಮ | |
| ಉತ್ತಮೌಜ | ಕೇತುಮಾನ್ | |
| ದೀರ್ಘಪ್ರಜ್ಞ | ವೃಷಪರ್ವ | |
| ಪೌಂಡ್ರಕ | ವೇನ | |
| ಮಣಿಮಾನ್ | ವೃತ್ರ | |
| ರುಕ್ಮಿ | ದುರ್ಜಯ | |
| ಏಕಲವ್ಯ | ಮಹಾಮಾಯ | |
| ಕಂಸ | ಕಾಲನೇಮಿ | |
| ಹಂಸ | ಮಧು | |
| ಡಿಭಕ | ಕೈಟಭ | |
| ಶಕುನಿ | ದ್ವಾಪರರಾಕ್ಷಸ | |
| ಸಾಲ್ವ | ಬಲಿದೈತ್ಯ | ಬಲಿದೇವ |
| ಕೀಚಕ | ಬಾಣದೈತ್ಯ | ಬಾಣ+ವಾಯು |
| ಶೃಗಾಲ | ಧುಂಧು | |
| ದುಶ್ಕಲ | ವೃಷಾ | ಕುಹೂದೇವತೆ |
| ಸೈಂಧವ | ಕಾಲಕೇಯ | |
| ಪೂತನಾ | ತಾಟಕಾ | ಊರ್ವಶಿ |
| ದುಶ್ಶಾಸನ | ಇಂದ್ರಜಿತ್ | |
| ದುಸ್ಸಹ | ದೂಷಣ | |
| ವಿಕರ್ಣ | ಅತಿಕಾಯ | |
| ಚಿತ್ರಸೇನ | ಖರ | |
| ದುರ್ಮರ್ಷಣ | ತ್ರಿಶಿರ | |

ಹಿಂದೆ ಪರಶುರಾಮನಿಂದ ಸಂಹೃತರಾದ ಕ್ಷತ್ರಿಯ ವಂಶವು ನಿರ್ನಾಮವಾಗುವ ಸ್ಥಿತಿ ಬಂದಾಗ, ಶ್ರೀಹರಿಯ ಅಪ್ಪಣೆಯಂತೆ ಉತ್ತಮಶೀಲರು, ತಪೋಧನರು, ಇಂದ್ರಿಯ ಜಯವಂತರು ಆದ ಬ್ರಾಹ್ಮಣ ಋಷಿಗಳು ಮತ್ತೆ ಕ್ಷತ್ರಿಯ ವಂಶಗಳನ್ನು ಬೆಳೆಸಲು ರಾಜಪತ್ನಿಯರಲ್ಲಿ ಸಂತಾನವನ್ನು ಪಡೆದುಕೊಟ್ಟರು. ಕಾಮದಿಂದಲಾಗಲಿ ವ್ಯಸನದಿಂದಲಾಗಲಿ ಪ್ರೇರಿತರಾಗದ ರಾಜಪತ್ನಿಯರು, ತಮ್ಮ ಪತಿಗಳ ಅಪ್ಪಣೆಯನ್ನು ಪಡೆದು, ಋತುಕಾಲದಲ್ಲಿ ಮಾತ್ರ ಋಷಿಗಳಿಂದ ಸಂತಾನವನ್ನು ಪಡೆದರು. ಸಕೃತ್ ಸ್ಪರ್ಶದಿಂದಲೇ ಹುಟ್ಟಿದ ಆ ರಾಜನ್ಯರು ಧರ್ಮರಕ್ಷಕರೂ, ವಂಶವರ್ಧಕರೂ ಆದರು. ಮಹಾಪರಾಕ್ರಮಿಗಳಾದ ದೇವಾಸುರರು ಇಂತು ಕೌರವ ಪಾಂಡವ ಪಕ್ಷಗಳಲ್ಲಿ ನಿಂತು, ಸ್ವಯೋಗ್ಯ ಸಾಧನದಿಂದ ಸ್ವಗತಿಯನ್ನು ಹೊಂದಿದರು. ಈ ಅಂಶಾವತರಣ ವಿವರಣ ವನ್ನು ಹೇಳಿ, ಕೇಳಿದವರು ವಂಶಾಭಿವೃದ್ಧಿಯನ್ನೂ ಶ್ರೀಹರಿಯ ಮಹಿಮಾಜ್ಞಾನ ವನ್ನೂ ಹೊಂದಿ ಸುಖಿಸುವರು.

## ಕಚ ಚರಿತ್ರೆ

ರಾಜನ್! ಈಗ ನಿನಗೆ ಪುರುವಂಶವನ್ನು ನಿರೂಪಿಸುವೆನು. ಅಂತೆಯೇ ಯದುವಂಶವನ್ನೂ ವಿವರಿಸುವೆನು.

ಬ್ರಹ್ಮಪುತ್ರನಾದ ದಕ್ಷನಿಗೆ ಶಿವದ್ರೋಹದಿಂದ ಹೋತನ ತಲೆ ಬಂತು. ಆದ ರಿಂದ ಮನನೊಂದು ದಕ್ಷನು ಆ ಶರೀರವನ್ನು ಪರಿತ್ಯಜಿಸಿ, ದಶಪ್ರಚೇತಸರಿಗೆ ಮಾರಿಷೆ ಯಲ್ಲಿ ಮತ್ತೆ ಜನಿಸಿದನು. ಆ ದಕ್ಷನು ಅಸಿಕ್ನಿಯನ್ನು ಮದುವೆಯಾಗಿ ಅವಳಲ್ಲಿ ಹತ್ತು ಸಾವಿರ ಪುತ್ರರನ್ನು ಪಡೆದನು. ಅವರು ನಾರದೋಪದೇಶದಿಂದ ಸನ್ಯಾಸಿ ಗಳಾಗಿ ಮೋಕ್ಷಮಾರ್ಗ ನಿರತರಾದರು. ದಕ್ಷನು ಮತ್ತೆ ಸಾವಿರ ಪುತ್ರರನ್ನು ಪಡೆ ದನು. ಹರ್ಯಶ್ವರೆನಿಸಿದ ಪ್ರಥಮ ಸಂತಾನದಂತೆಯೇ ಶಬಲಾಶ್ವರೆನಿಸಿದ ದ್ವಿತೀಯ ಪುತ್ರ ಸಮೂಹವೂ ಕೂಡ ನಾರದರ ಉಪದೇಶದಿಂದ ಸನ್ಯಾಸಿಗಳಾದರು. ಆಗ ದಕ್ಷನು ಕುಪಿತನಾಗಿ ನಾರದನಿಗೆ ಒಂದೆಡೆ ನಿಲ್ಲದೆ ತಿರುಗುವಂತೆ ಶಾಪವನ್ನಿತ್ತು, ಮತ್ತೆ ಅರವತ್ತು ಕುಮಾರಿಯರನ್ನು ಪಡೆದನು. ಅವರಲ್ಲಿ ಹತ್ತು ಕನ್ಯೆಯರನ್ನು ಧರ್ಮ ನಿಗೂ, ಇಪ್ಪತ್ತೇಳು ಕುಮಾರಿಯರನ್ನು ಚಂದ್ರನಿಗೂ, ಹದಿಮೂರು ದುಹಿತೆಯರನ್ನು ಕಶ್ಯಪನಿಗೂ, ಭೂತಾಂಗಿರ, ಕೃಶಾಶ್ವರಿಗೆ ಇಬ್ಬಿಬ್ಬರಂತೆ ಆರು ಕನ್ಯೆಯರನ್ನೂ, ಮಿಕ್ಕ ನಾಲ್ಕು ಮಕ್ಕಳನ್ನು ತಾರ್ಕ್ಷ್ಯನಿಗೂ ಮದುವೆ ಮಾಡಿಕೊಟ್ಟನು.

ಕಶ್ಯಪನು ಅದಿತಿಯಲ್ಲಿ ದ್ವಾದಶಾದಿತ್ಯರನ್ನು ಪಡೆದನು. ಅವರಲ್ಲಿ ಸೂರ್ಯ (ವಿವಸ್ವಂತ) ನಿಗೆ ಮನುರಾಜನು ಪುಟ್ಟಿ, ಬ್ರಹ್ಮ, ಕ್ಷತ್ರ, ವೈಶ್ಯ ಶೂದ್ರಾದಿ ಸರ್ವ ಮಾನವ ಕುಲದ ಮೂಲಪುರುಷನೆನಿಸಿದನು. ಮನುರಾಜನಿಗೆ ಶ್ರದ್ಧಾದೇವಿಯಲ್ಲಿ ಇಲೆ ಎಂಬ ಮಗಳು ಮತ್ತು ಇಕ್ಷ್ವಾಕು, ನಾಭಾಗ, ದಿಷ್ಟ, ಧೃಷ್ಣು, ನರಿಸ್ಯಂತ, ಕಾರೂಷ, ಶರ್ಯಾತಿ, ಪೃಷಧ್ರ, ನೃಗ, ಕವಿ ಎಂಬ ಸುತರು ಜನಿಸಿದರು. ಇಲೆಗೆ

ಬುಧನಿಂದ ಜನಿಸಿದ ಪುರೂರವನು, ತನ್ನ ತಾಯಿಯಾದ ಇಲೆಯೇ ಪುರುಷರೂಪ ದಿಂದ ಸುದ್ಯುಮ್ನನೆನಿಸಿ ಆಳಿದ ರಾಜ್ಯವನ್ನು ಪಡೆದು ಚಕ್ರವರ್ತಿ ಎನಿಸಿದನು. ಸರ್ವ ಭೂಮಂಡಲಾಧಿಪನಾದ ಪುರೂರವನು ಮದದಿಂದ ಬ್ರಾಹ್ಮಣರ ಧನರತ್ನಾದಿಗಳನ್ನು ಬಲಾತ್ಕಾರವಾಗಿ ಅಪಹರಿಸಿದನು. ಆಗ ಸನತ್ಕುಮಾರನು ಅವನಿಗೆ ತಿಳಿಹೇಳಲು ಬಂದನು. ರಾಜನು ಆ ಮುನಿವರನಿಗೆ ದರ್ಶನವನ್ನೀಯದೆ ಅಹಂಕಾರದಿಂದಿರಲು ಸನತ್ಕುಮಾರನು ಉನ್ಮತ್ತನಾಗೆಂದು ಶಾಪವಿತ್ತು ಹೊರಟುಹೋದನು. ಅದರಂತೆಯೇ ಊರ್ವಶಿಯನ್ನು ಬೆನ್ನತ್ತಿ ಪುರೂರವನು ಹುಚ್ಚನಂತೆ ತಿರುಗುತ್ತಾ, ಕೊನೆಗೆ ಶ್ರೀಹರಿಯ ದಯದಿಂದ ಶಾಪಮುಕ್ತನಾಗಿ ಗಂಧರ್ವಲೋಕವನ್ನು ಸೇರಿದನು.

ಐಲನಾದ ಪುರೂರವನಿಗೆ ಆಯು, ಧೀಮಾನ್, ಅಮಾವಸು, ದೃಢಾಯು, ವನಾಯು, ಶತಾಯುರೆಂಬ ಸುತರಿದ್ದರು. ಆಯುವಿನ ಮಗನಾದ ನಹುಷನು ಧರ್ಮಿಷ್ಟ ನಾಗಿದ್ದನು. ಇಂದ್ರಸ್ಥಾನದಲ್ಲಿ ಕೆಲಕಾಲವಿದ್ದು ಬ್ರಾಹ್ಮಣಾಪಚಾರದಿಂದ ಅಜಗರ ನಾದನು. ನಹುಷನಿಗೆ ಯತಿ, ಯಯಾತಿ, ಸಂಯಾತಿ, ಆಯಾತಿ, ವಿಯಾತಿ, ಧ್ರುವ ರೆಂಬ ಸುತರಾದರು. ಯತಿಯು ಯತಿಯೇ ಆದನು. ಯಯಾತಿ ಚಕ್ರವರ್ತಿ ಯಾದನು. ಅವನು ಶುಕ್ರಾಚಾರ್ಯನಿಗೆ ಊರ್ಜಸ್ವತಿ ಎಂಬ ಪ್ರಿಯವ್ರತರಾಜ ಪುತ್ರಿಯಲ್ಲಿ ಜನಿಸಿದ ದೇವಯಾನಿಯನ್ನೂ, ವೃಷಪರ್ವನೆಂಬ ರಾಕ್ಷಸ ರಾಜಪುತ್ರಿ ಯಾದ ಶರ್ಮಿಷ್ಠೆಯನ್ನೂ ಮದುವೆಯಾದನು. ದೇವಯಾನಿ ಬ್ರಾಹ್ಮಣ ಪುತ್ರಿ ಯಾದರೂ ರಾಜನ ಕೈಯನ್ನು ಹಿಡಿಯಲು ವಿಶೇಷ ಕಾರಣವಿದೆ ಕೇಳು—

ಹಿಂದೆ ದೇವಾಸುರರಿಗೆ ಪ್ರಚಂಡ ಯುದ್ಧವಾಯಿತು. ಆಗ ಮಡಿದ ರಾಕ್ಷಸ ರನ್ನು ಶುಕ್ರಾಚಾರ್ಯನು ಮೃತಸಂಜೀವಿನೀ ವಿದ್ಯಾ ಪ್ರಭಾವದಿಂದ ಬದುಕಿಸು ತ್ತಿದ್ದನು. ಸುರರಿಗೆ ದಿಕ್ಕು ತೋಚದಂತಾಯಿತು. ಬೃಹಸ್ಪತಿಗೆ ತಿಳಿಯದಿದ್ದ ಮೃತ ಸಂಜೀವಿನಿಯನ್ನು ಶುಕ್ರನಿಂದ ಪಡೆದು ಬರದಿದ್ದರೆ ತಮಗೆ ಉಳಿವಿಲ್ಲವೆಂದು ದೇವತೆಗಳು ಗುರುಸುತನಾದ ಕಚನನ್ನು ಶುಕ್ರನಲ್ಲಿಗೆ ಕಳಿಸಿದರು. ವೃಷಪರ್ವನಿಗೆ ಪುರೋಹಿತ ನಾಗಿದ್ದ ಶುಕ್ರನು ದೇವಕುಮಾರನಾದ ಕಚನಿಗೆ ಮೃತಸಂಜೀವಿನಿಯನ್ನು ಕೊಡಲಾರ ನೆಂದರಿತು, ದೇವತೆಗಳು ಕಚನಿಗೆ ಶುಕ್ರನ ಮಗಳಾದ ದೇವಯಾನಿಯ ಪ್ರೀತಿ ವಿಶ್ವಾಸ ಗಳನ್ನು ಸಂಪಾದಿಸಿ, ಶುಕ್ರನಿಗೂ ಪ್ರೀತಿಪಾತ್ರನೆನಿಸಿ, ವಿದ್ಯೋಪದೇಶವನ್ನು ಹೊಂದಿ ಬರುವುದೆಂದು ಹೇಳಿ ಕಳಿಸಿದರು. ದೇವ ಪ್ರಾರ್ಥನೆಯನ್ನು ಮನ್ನಿಸಿ ಕಚನು, ಅಸುರ ರಾಜಪುರದಲ್ಲಿದ್ದ ಶುಕ್ರಾಚಾರ್ಯರನ್ನು ಕಂಡನು. ತನ್ನ ಕುಲ ಗೋತ್ರಗಳನ್ನು ತಿಳಿಸಿ, ಶಿಷ್ಯನಾಗಿ ಸ್ವೀಕರಿಸಲು ಬೇಡಿದ ಕಚನಿಗೆ ಶುಕ್ರನು—

'ಬೃಹಸ್ಪತ್ಯಾಚಾರ್ಯರ ಸುತನಾದ ನಿನ್ನ ಸತ್ಕಾರದಿಂದ ಬೃಹಸ್ಪತಿಯನ್ನು ಪೂಜಿಸಿದಂತೆಯೇ ಆಗುವುದು. ಒಳ್ಳೆಯದು. ಇರು ನಿನಗೆ ಬೇಕಾದಷ್ಟು ಕಾಲ' ಎಂದನು. ಅಂತೆಯೇ ಕಚನು ಶುಕ್ರಾಚಾರ್ಯರನ್ನು ಸೇವಿಸುತ್ತ, ತನ್ನ ವಿನಯ, ನಯ, ದಮ, ಶೀಲಾದಿ ಗುಣಗಳಿಂದ ಗುರುವನ್ನು ಸಂತೋಷಪಡಿಸಿದನು.

ದೇವಯಾನಿಗೆ ಫಲ ಪುಷ್ಪಗಳನ್ನು ತಂದುಕೊಡುತ್ತಾ, ಅವಳನ್ನೂ ಸಂತೋಷ ಪಡಿಸಿದನು. ಅವಳಿಗೆ ಕಚನಲ್ಲಿ ಪ್ರೀತಿಯು ಹುಟ್ಟಿ ಅಭಿವೃದ್ಧವಾಯಿತು.

ಬಹು ವರ್ಷಗಳಿಂತು ಕಳೆದವು. ಕಚನ ಇರುವಿಕೆಯನ್ನು ಸಹಿಸದ ರಾಕ್ಷಸರು ಒಂದುದಿನ ಅರಣ್ಯದಲ್ಲಿ ಗೋರಕ್ಷಕನಾಗಿದ್ದ ಕಚನನ್ನು ಕೊಂದು ತೋಳಗಳಿಗೆ ಹಾಕಿದರು. ಸಾಯಂಕಾಲವಾಯಿತು. ಗೋವುಗಳು ಮನೆಗೆ ಬಂದವು. ಕಚನು ಬರಲಿಲ್ಲ. ಆಗ ದೇವಯಾನಿ ದಿಗಿಲುಗೊಂಡು ತಂದೆಯನ್ನು ಕುರಿತು 'ಅಗ್ನಿಗಾಹುತಿ ಇತ್ತುದಾಯಿತು ; ಆಕಳುಗಳು ಹಿಂದಿರುಗಿ ಬಂದವು ; ಸೂರ್ಯನು ಮುಳುಗಿದನು ; ಆದರೂ ಕಚನು ಬರಲಿಲ್ಲ. ಅವನಿಗೆ ದೈತ್ಯರು ಅಸೂಯೆಯಿಂದ ಕೆಡುಕೆಣಿಸಿ ಕೊಂದುಬಿಟ್ಟರೋ ಏನೋ ? ಕಚನಿಲ್ಲದೆ ನಾನು ಬದುಕಲಾರೆ'ನೆಂದು ಗೋಳಿಟ್ಟಳು. ಮಗಳನ್ನು ಸಂತೈಸಿ, ಶುಕ್ರನು ವಿದ್ಯಾಬಲದಿಂದ ಕಚನನ್ನು ಬದುಕಿಸಿದನು. ತೋಳಗಳ ಶರೀರಗಳನ್ನು ತುಂಡರಿಸಿ, ಕಚನ ದೇಹವು ಒಂದಾಗಿ, ಜೀವದಿಂದ ಕೂಡಿ ಬಂದಾಗ ಶುಕ್ರನಿಗೆ ಸಮಾಧಾನವೂ, ದೇವಯಾನಿಗೆ ಆನಂದವೂ ಆದವು. ನಡೆದ ವೃತ್ತಾಂತವನ್ನು ಕೇಳಿ ದೇವಯಾನಿಗೆ ಭಯವಾಯಿತು.

ಇನ್ನೊಂದು ದಿನ ಪುಷ್ಪಗಳನ್ನು ತರಲು ವನವನ್ನು ಸೇರಿದ ಕಚನನ್ನು ದೈತ್ಯರು ಕೊಂದು, ಸುಟ್ಟು, ಆ ಭಸ್ಮವನ್ನು ಸಮುದ್ರದಲ್ಲಿ ಕಲೆಸಿದರು. ಆಗಲೂ ಶುಕ್ರನು ದೇವಯಾನಿಯ ಶೋಕದಿಂದ ಅನುತಪ್ತನಾಗಿ, ಕಚನನ್ನು ಬದುಕಿಸಿದನು. ದೈತ್ಯರಿದನ್ನು ನೋಡಿ ಕಚನನ್ನು ಮತ್ತೊಂದು ಸಲ ಹಿಡಿದು ಕೊಂದರು. ಅವನ ಬೂದಿಯನ್ನು ಸುರೆಯಲ್ಲಿ ಕದಡಿ, ಅದನ್ನು ಶುಕ್ರನಿಗೆ ಕೊಟ್ಟರು. ಸುರಾಪ್ರಿಯನಾದ ಶುಕ್ರನು ತಟಕ್ಕನೆ ಅದನ್ನು ಕುಡಿದುಬಿಟ್ಟನು. ಕಚನು ಬಾರದಿರುವುದನ್ನು ಕಂಡು ದೇವಯಾನಿ ತಂದೆಗೆ ಶರಣಾದಳು. ಅವನಿಲ್ಲದೆ ಬದುಕಲಾರೆನೆಂದಳು. ಶುಕ್ರನು ಅವಳಿಗಿಂತೆಂದನು. 'ಮಗಳೇ ! ಮರ್ತ್ಯನಾದ ಕಚನಿಗೇಕೆ ಚಿಂತಿಸುವೆ ? ಅವನನ್ನು ನಾನು ಬದುಕಿಸಿದಾಗೆಲ್ಲ ರಾಕ್ಷಸರು ಕೊಂದುಬಿಡುತ್ತಿರುವರು. ಏನುಮಾಡಲಿ ? ಅಳಬೇಡ ! ಇಂದ್ರಾದಿದೇವತೆಗಳು, ವೃಷಪರ್ವಾದಿ ರಾಕ್ಷಸರು ಸರ್ವಜಗವೇ ನನ್ನ ಪ್ರಭಾವಕ್ಕೆ ಮಣಿದು ಕೈಮುಗಿಯುತ್ತಿರುವಾಗ, ನನ್ನ ಮಗಳಾದ ನಿನಗೇನು ಕಡಿಮೆ? ಕಚನ ಚಿಂತೆ ಬಿಡು'. ಆಗ ದೇವಯಾನಿ ಇಂತೆಂದಳು—'ತಾತ ! ಬ್ರಹ್ಮಪುತ್ರನಾದ ಅಂಗೀರಸನೇ ತಾತನಾಗಿ, ದೇವಗುರುವಾದ ಬೃಹಸ್ಪತಿಯೇ ತಂದೆಯಾಗಿ, ಸಕಲ ವೃಂದಾರಕ ವೃಂದದಲ್ಲಿ ಸುಂದರನಾಗಿರುವ ಕಚನಿಗಾಗಿ ನಾನೆಂತು ಚಿಂತಿಸದಿರಲಿ? ವಿಧೇಯನಾಗಿ ನಿನ್ನ ಸೇವೆಯನ್ನು ಮಾಡಿದ ಶಿಷ್ಯನನ್ನು ರಾಕ್ಷಸರು ಕೊಂದುಬಿಟ್ಟರೆ ಉಪೇಕ್ಷಿಸುವುದು ನಿನಗೆ ಸರಿಯೇ ? ನನ್ನ ಪ್ರೀತಿಯನ್ನು ಸೂರೆಗೊಂಡಿರುವ ಕಚನ ಮುಖಪಂಕಜದ ದರ್ಶನವಾಗದೆ ನಾನು ಭೋಜನವನ್ನೇ ಮಾಡುವುದಿಲ್ಲ.'

ಪಾಪಿ ರಾಕ್ಷಸರು ಬಂದು ಶಿಷ್ಯರನ್ನು ಕೊಂದು ತನಗೆ ಬ್ರಹ್ಮಹತ್ಯೆಯನ್ನು ಕಟ್ಟುತ್ತಿರುವುದು ಶುಕ್ರನಿಗೆ ಅಸಹ್ಯವಾಯಿತು. 'ಇವರ ಸಹವಾಸದಿಂದ ನಾನೂ ರಾಕ್ಷಸ

ನಾಗುವೆ'ನೆಂಬ ದಿಗಿಲಿನಿಂದ ನೊಂದು ಶುಕ್ರನು ವಿದ್ಯಾಪ್ರಭಾವದಿಂದ ಕಚನನ್ನು ಬದುಕಿಸಿದನು. ದಿವ್ಯದೃಷ್ಟಿಯಿಂದ ಕಚನು ತನ್ನ ಹೊಟ್ಟೆಯಲ್ಲೇ ಸೂಕ್ಷ್ಮನಾಗಿರುವುದನ್ನು ಕಂಡು, ಸುರೆಯಲ್ಲಿ ಅವನ ಭಸ್ಮವನ್ನು ಕುಡಿಸಿ, ತನ್ನನ್ನು ವಂಚಿಸಿದ ರಾಕ್ಷಸರ ಘೋರ ಕೃತ್ಯವನ್ನು ಮಗಳಿಗೆ ಹೇಳಿ 'ಈಗೇನು ಮಾಡಲಿ ?' ಎಂದನು. ದೇವಯಾನಿ ಉಭಯ ಸಂಕಟಕ್ಕೊಳಗಾದಳು. ಕಚನು ಹಾಗೆ ಜೀರ್ಣನಾಗಿ ನಷ್ಟನಾದರೆ ಪ್ರಿಯನು ನಾಶನಾಗುವನು; ಕಚನು ಉದರವನ್ನು ಸೀಳಿಕೊಂಡು ಹೊರಬಂದರೆ ತಂದೆ ಸಾಯುವನು. ಎರಡೂ ಕಡೆ ಉರಿಯುವ ಕೊಲ್ಲಿನ ಗತಿಯಾಗಿ ತಪಿಸುವ ಮಗಳನ್ನು ನೋಡಿ ಶುಕ್ರನು ಕನಿಕರಪಟ್ಟನು. ಹೊಟ್ಟೆಯಲ್ಲಿದ್ದ ಕಚನಿಗೆ ಮೃತಸಂಜೀವಿನಿಯನ್ನಿತ್ತು ಹೊರಗೆ ಬಂದನಂತರ 'ನನ್ನನ್ನು ಬದುಕಿಸು' ಎಂದು ಪ್ರಾರ್ಥಿಸಿದನು. ಅಂತೆಯೇ ಕಚನು ವಿದ್ಯಾವಂತನಾಗಿ ಹೊರಗೆಬಂದು, ಗುರುವನ್ನೂ ಬದುಕಿಸಿದನು. ಹೊಟ್ಟೆಯಿಂದ ಬಂದುದರಿಂದ ಸುತನಂತೆ ಆದ ಗುರುಕುಮಾರನು ವೇದರಾಶಿಯಂತೆ ಪ್ರಕಾಶಿಸುವ ಶುಕ್ರನಿಗೆ ವಂದಿಸಿದನು; ಕಿವಿಗಳಲ್ಲಿ ಅಮೃತವನ್ನು ಸುರಿದ ಗುರುವನ್ನು ಮೃತ್ಯುಮುಖದಿಂದ ತಪ್ಪಿಸಿದ ಕೃತಜ್ಞನಾದ ಕಚನನ್ನಪ್ಪಿ ಅತ್ಯಂತ ಪ್ರೀತನಾದ ಶುಕ್ರನು ಅವನಿಗೆ ಅಪ್ಪಣೆಯನ್ನಿತ್ತು 'ಇನ್ನಿಲ್ಲಿ ಇರಬೇಡ' ಎಂದನು. ತಾನು ಸುರೆಯನ್ನು ಕುಡಿದುದರಿಂದ ಮತ್ತನಾದುದನ್ನು ನೆನೆದು 'ಇಂದಿನಿಂದ ಸುರೆಯನ್ನು ಸೇವಿಸುವ ವಿಪ್ರನು ಲೋಕಗರ್ಹಿತನಾಗಲಿ! ಬ್ರಹ್ಮಹತ್ಯೆಗೆ ಸಮವಾದ ಸುರಾಪಾನ ಪಾಪದಿಂದ ಅವನ ಧರ್ಮ ಪುಣ್ಯಗಳು ಹಾಳಾಗಲಿ!' ಎಂದು ಶಾಪವನ್ನಿತ್ತನು. ದೈವಬಲದಿಂದ ಮೂಢರಾದ ದಾನವರು ಕಚ ಸಂಹಾರವನ್ನು ಮಾಡಲು ಯತ್ನಿಸಿ ಅವನಿಗೆ ವಿದ್ಯಾಲಾಭವಾಗಲು ಕಾರಣರಾದುದನ್ನು ತಿಳಿಸಿ ರಾಕ್ಷಸರನ್ನು ನಿಂದಿಸಿದನು.

ಕಚನು ಶುಕ್ರಾಚಾರ್ಯರನ್ನು ವಂದಿಸಿ ಬೀಳ್ಕೊಂಡು, ದೇವಯಾನಿಯನ್ನು ಕಂಡನು. ಅವಳು ಪ್ರೇಮಾದರಗಳಿಂದ ಕಚನನ್ನು ಸತ್ಕರಿಸಿ, ಸ್ನಾತಕನಾಗಿ ವಿದ್ಯಾಪೂರ್ತಿಯನ್ನು ಪಡೆದಿರುವ ಕಚನು ತನ್ನ ಪಾಣಿಗ್ರಹಣವನ್ನು ಮಾಡುವುದೆಂದು ಬೇಡಿಕೊಂಡಳು. ಕಚನಿಂತೆಂದನು—

'ದೇವಯಾನಿ! ನೀನು ಗುರುಪುತ್ರಿಯಾಗಿರುವೆ. ಶುಕ್ರರಂತೆ ಪೂಜ್ಯಳಾದ ನೀನು ನನಗೆ ತಂಗಿಯಾಗಲು ಅರ್ಹಳಾಗಿರುವೆ. ಪತ್ನಿಯಂತೆ ಮಾತಾಡಬೇಡ. ಮಾಡಬಾರದ ಕೆಲಸಗಳನ್ನು ನನ್ನಿಂದ ಮಾಡಿಸಲೆಣಿಸಬೇಡ! ನೀನು ನನ್ನನ್ನು ಬದುಕಿಸಿದೆ ನಿಜ! ವಿದ್ಯಾಪ್ರಾಪ್ತಿಯೂ ನಿನ್ನ ದಯೆಯಿಂದಲೇ ನನಗಾಗಿದೆ. ಆದರೆ ನೀನು ನನಗೆ ಸೋದರಿಯೇ ಹೊರತು ಸತಿಯಾಗಲಾರೆ. ನೀನಿದ್ದು ಬಂದ ಉದರದಲ್ಲಿ ನಾನೂ ಇದ್ದು ಬಂದೆ. ಇನ್ನಿಂತಹ ಪಾಪದ ವಿಷಯವನ್ನೆತ್ತಬೇಡ. ನೀ ಮಾಡಿದ ಉಪಚಾರೋಪಕಾರಾದಿಗಳಿಗೆ ಕೃತಜ್ಞನಾಗಿರುವೆನು. ಹೋಗಿಬರುವೆ.'

ಆ ಮಾತನ್ನಾಲಿಸಿ ದೇವಯಾನಿ ಸಿಟ್ಟಾದಳು. 'ಮೊದಲಿನಿಂದಲೂ ನಿನ್ನನ್ನು ಪ್ರೀತಿಯಿಂದ ನೋಡಿ, ರಾಕ್ಷಸರ ಹಿಂಸೆಗೆ ಗುರಿಯಾದಾಗ ನೊಂದು, ಧರ್ಮದಿಂದ

ನಿನ್ನನ್ನು ವರಿಸಲು ಬಂದ ನನ್ನನ್ನು ನಿಷ್ಕಾರಣವಾಗಿ ತಿರಸ್ಕರಿಸಿದೆ. ಆದುದರಿಂದ ನಮ್ಮ ತಂದೆಯಿಂದ ಕಲಿತ ವಿದ್ಯೆ ನಿನಗೆ ಫಲಿಸದೇ ಹೋಗಲಿ !' ಎಂದು ಶಾಪವನ್ನಿತ್ತಳು. ಕಚನೂ ಸಿಟ್ಟಾಗಿ ಪ್ರತಿಶಾಪವನ್ನಿತ್ತು ಇಂತೆಂದನು—'ಆರ್ಷಧರ್ಮವನ್ನನುಸರಿಸಿ, ಗುರುಪುತ್ರಿಯಾದುದರಿಂದ ಸೋದರಿಯೆನಿಸಿದ ನಿನ್ನನ್ನು ವರಿಸೆನೆಂದ ನನ್ನನ್ನು ಕಾಮಾತುರಳಾಗಿ ಶಪಿಸಿದೆ, ಚಿಂತೆಯಿಲ್ಲ. ನಿನ್ನನ್ನು ಬ್ರಾಹ್ಮಣನು ಮದುವೆಯಾಗದಿರಲಿ ! ನನಗೆ ವಿದ್ಯಾಫಲವಿಲ್ಲದಿದ್ದರೂ, ನನ್ನಿಂದ ಉಪದಿಷ್ಟರಾದವರಿಗೆ ಅದು ಫಲಿಸುವುದು.'

ಇಂತು ಕಚನು ಮೃತಸಂಜೀವಿನಿ ವಿದ್ಯೆಯನ್ನು ಪಡೆದು, ದೇವಲೋಕಕ್ಕೆ ಬಂದನು. ಇಂದ್ರಾದಿದೇವತೆಗಳು ಅವನ ಸಾಹಸ, ಸಹನೆ, ಪ್ರಭಾವಗಳಿಂದಾಗಿ ಸಂತುಷ್ಟರಾಗಿ ಅವನಿಗೆ ಶಂಯು ಎಂಬ ಹೆಸರನ್ನಿತ್ತು, ಚಿರಕೀರ್ತಿವಂತನಾಗೆಂದು ಹರಸಿದರು. ಶಂಯು ಎಂದರೆ ಸುಖವನ್ನು ತಂದುಕೊಟ್ಟವನು. ಶಂಯುವು ವೇದವಿಖ್ಯಾತನಾಗಿ ಬಾಳಿದನು. ಇಂತು ದೇವಯಾನಿಯು ಕಚಶಾಪದಿಂದ ಕ್ಷತ್ರಿಯನಾದ ಯಯಾತಿಗೆ ಪತ್ನಿಯಾದಳು.

## ಯಯಾತಿ ಚರಿತೆ

ಒಂದುದಿನ ದೇವಯಾನಿ ವೃಷಪರ್ವ ಪುತ್ರಿಯಾದ ಶರ್ಮಿಷ್ಠೆಯೊಡನೆ ವನದಲ್ಲಿ ಜಲಕ್ರೀಡೆಯಾಡುತ್ತಿದ್ದಳು. ಸಖಿಯರು ಸಾವಿರ ಜನರಿರುವಾಗ ವಿಧಿವಶವಾಗಿ ಇಂದ್ರನು ವಾಯುರೂಪನಾಗಿ ಬೀಸುತ್ತಾ ಬಂದು, ಅವರು ತೀರದಲ್ಲಿಟ್ಟಿದ್ದ ಅವರ ಸೀರೆಗಳನ್ನು ಅಸ್ತವ್ಯಸ್ತವನ್ನಾಗಿ ಮಾಡಿದನು. ಅದೇ ಸಮಯದಲ್ಲಿ ಶ್ರೀ ಶಿವನು ಸತಿಯೊಡನೆ ನಂದಿವಾಹನನಾಗಿ ಬಂದನು. ತರುಣಿಯರು ಲಜ್ಜಿತರಾಗಿ, ಭಯಭಕ್ತಿಗಳಿಂದ ತಮ್ಮ ತಮ್ಮ ವಸ್ತ್ರಗಳನ್ನುಟ್ಟುಕೊಂಡರು. ಶರ್ಮಿಷ್ಠೆ ಮಾತ್ರ ಅವಸರದಲ್ಲಿ ಗೊತ್ತಾಗದೆ ದೇವಯಾನಿಯ ಸೀರೆಯನ್ನುಟ್ಟಳು. ಅದನ್ನು ಸಹಿಸದೆ ದೇವಯಾನಿ, 'ಅಸುರಿ ! ಶಿಷ್ಯ ಪುತ್ರಿಯಾದ ನೀನು ನನ್ನ ವಸ್ತ್ರವನ್ನೇಕೆ ಧರಿಸಿದೆ ? ನಿನ್ನ ನಡತೆ ಸರಿಯಲ್ಲ' ಎಂದಳು. ಶರ್ಮಿಷ್ಠೆ ಕುಪಿತಳಾದಳು. 'ಭಿಕ್ಷುಕನಂತೆ ನಮ್ಮ ತಂದೆಯ ಬಾಗಿಲ ಕಾಯುವ ಪುರೋಹಿತನಾದವನ ಮಗಳಿಗೆಷ್ಟು ಮದ !' ಎಂದು ನಿಂದಿಸಿ, ಶರ್ಮಿಷ್ಠೆ ತನ್ನ ಸಖಿಯರನ್ನು ಕರೆದು ದೇವಯಾನಿಯನ್ನು ಒಂದು ಹಾಳುಬಾವಿಯಲ್ಲಿ ನೂಕಿಸಿದಳು. ಹಾಗೂ ಮನೆಗೆ ಹೊರಟುಹೋದಳು.

ಅಕಸ್ಮಾತ್ತಾಗಿ ಅಲ್ಲಿಗೆ ಯಯಾತಿ ಬಂದನು. ಬೇಟೆಯಾಡಿ ಶ್ರಾಂತನಾದ ಭೂಕಾಂತನು ನೀರಿಗಾಗಿ ಹುಡುಕುತ್ತಾ ಆ ಬಾವಿಗೆ ಬಂದನು. ಪುಣ್ಯನಾಶದಿಂದ ಜಾರಿಬಿದ್ದ ಅಪ್ಸರೆಯಂತೆ ಶೋಭಿಸುವ ದೇವಯಾನಿಯನ್ನು ಕರುಣೆಯಿಂದ ಕೈಕೊಟ್ಟು ಮೇಲಕ್ಕೆತ್ತಿದನು. ದೇವಯಾನಿ ನಡೆದುದನ್ನೆಲ್ಲ ತಿಳಿಸಿ, ತನ್ನ ಕೈಯನ್ನು ಹಿಡಿದೆತ್ತಿದ ಅವನನ್ನು ಯಯಾತಿ ಚಕ್ರವರ್ತಿ ಎಂದರಿತಳು ; ವರಿಸೆಂದೂ ಬೇಡಿದಳು. ಬ್ರಾಹ್ಮಣಿಯು ಶುಕ್ರ ಪುತ್ರಿಯು ಆದ ಅವಳನ್ನು ಸ್ವೀಕರಿಸಲು ಭಯಪಟ್ಟು, ಶುಕ್ರನೇ ತಾನಾಗಿತ್ತರೆ, ವರಿಸುವುದಾಗಿ ಹೇಳಿದನು. ಕಚನ ಶಾಪದಿಂದ ತನಗೆ ವಿಪ್ರನು

ವರನಾಗನೆಂದು ತಿಳಿಸಿ, ದೇವಯಾನಿಯು ತಂದೆಯ ಅಪ್ಪಣೆ ಪಡೆಯಲು ಮನೆಗೆ ಬಂದಳು. ರಾಜನು ಸ್ವಪುರವನ್ನು ಸೇರಿದನು.

ಶುಕ್ರನು ಶರ್ಮಿಷ್ಠೆಯ ಕಟುವಾಕ್ಯಗಳನ್ನು ಕೇಳಿ ದುಃಖಿತನಾದನು. ಕಾಪೋತಿ ವೃತ್ತಿಯನ್ನು ಸ್ವೀಕರಿಸಿ ಬಾಳಬಹುದಾಗಲಿ ರಾಜಸೇವೆ ಬೇಡವೆಂದನು. ಮಗಳನ್ನು ಕರೆದುಕೊಂಡು ವೃಷಪರ್ವ ನಗರವನ್ನು ಬಿಟ್ಟು ಸಿಟ್ಟಿನಿಂದ ಹೊರಟನು. ದೇವ ದಾನವ ವಂದಿತನು, ಅಚಿಂತ್ಯಮಹಿಮ ಭಗವತ್ಪ್ರಸಾದ ಪಾತ್ರನು, ಬ್ರಹ್ಮವರದಿಂದ ಭೂಮಿಗತ ಸಕಲೈಶ್ವರ್ಯಸ್ವಾಮಿಯು, ಗ್ರಹರೂಪನಾಗಿ ವೃಷ್ಟ್ಯಾದಿ ನಿಯಾಮಕನು ಆದ ಶುಕ್ರಾಚಾರ್ಯನ ಮಹಿಮೆ ವೃಷಪರ್ವನಿಗೆ ಗೊತ್ತಿತ್ತು. ಅವನು ಓಡಿಬಂದು ಗುರುಚರಣಗಳಲ್ಲಿ ಬಿದ್ದು ಬೇಡಿಕೊಂಡನು. ಮೇಲಕ್ಕೆ ಉರಿದೆದ್ದು ಬರುವ ಕ್ರೋಧಾಗ್ನಿ ಯನ್ನು ಕ್ಷಮಾಜಲದಿಂದ ಆರಿಸಿ ಶಾಂತನಾದವನಿಗೆ ಸಕಲ ಪುರುಷಾರ್ಥಗಳು ಲಭಿಸು ವುವೆಂದು ಶುಕ್ರನಿಗೂ ತಿಳಿದಿತ್ತು. ಶಿಷ್ಯಳಾಗಿ ಗುರುಪುತ್ರಿಯನ್ನಲ್ಲದೆ, ಗುರುವನ್ನೂ ನಿಂದಿಸಿ, ಹೀಯಾಳಿಸಿದ ರಾಜಪುತ್ರಿಯನ್ನು ಕ್ಷಮಿಸುವದವನಿಗೆ ಶಕ್ಯವಾಗಲಿಲ್ಲ. "ಮಾಡಿದ ಪಾಪವು ತತ್ ಕ್ಷಣವೇ ಫಲಿಸುವುದಿಲ್ಲ: ಅದು ಪಾಪಕರ್ತನನ್ನು ನಾಶ ಮಾಡುವುದು ಅಥವಾ ನಿಧಾನವಾಗಿ ಅವನ ಪುತ್ರರಿಗೋ ಪೌತ್ರರಿಗೋ ಕೇಡು ಮಾಡುವುದು. ವಿಷದಂತೆ ದುಷ್ಕೃತವೂ ಜೀರ್ಣವಾಗದೆ ಫಲವನ್ನೀಯುವುದು. ನನ್ನ ಮನೆಯಲ್ಲಿ ಓದಿಕೊಂಡಿದ್ದ ಕಚನಿಗೆ ಮಾಡಿದ ದ್ರೋಹಾಗ್ನಿಗೆ, ಈಗ ನಿನ್ನ ಮಗಳು ತುಪ್ಪವನ್ನೆರೆದಿರುವಳು. ದೈತ್ಯರಾಜ! ನಾನು ಪರಿತ್ಯಜಿಸಿ ಹೋದಮೇಲೆ ನಿನಗೆ ನನ್ನ ಮಹಿಮೆ ಮತ್ತು ನಿನ್ನ ದೋಷಗಳ ಅರಿವು ಆದೀತು"—ಇಂತು ನುಡಿದ ಗುರು ವಿಗೆ ಕೈಮುಗಿದು ವೃಷಪರ್ವನಿಂತೆಂದನು—

"ಸತ್ಯನಿಷ್ಠನು, ಧರ್ಮಪರನಾದ ನಿನ್ನ ಮಹಿಮೆ ತಿಳಿದಿದೆ. ನೀನು ಬಿಟ್ಟು ಹೋದ ತಕ್ಷಣ ನಾವು ಗತಿಹೀನರಾಗಿ ಸಮುದ್ರದಲ್ಲಿ ಬೀಳುವೆವು. ನಿನ್ನ ಮಗಳನ್ನು ಕಾಲಿಗೆ ಬಿದ್ದು ಕ್ಷಮಿಸೆಂದು ಕೇಳುತ್ತಿರುವೆನು. ಅವಳು ಬೇಕಾದುದನ್ನು ಬೇಡಲಿ! ಕೊಡುವೆನು."

ದೇವಯಾನಿಯು ತಾನು ಪತಿಯಿಂದ ಮದುವೆಯಾಗಿ ಹೋಗುವಾಗ ಶರ್ಮಿಷ್ಠೆ ಸಹಸ್ರಸಖಿಯರಿಂದ ಕೂಡಿ, ತನಗೆ ದಾಸಿಯಾಗಿ ಬರಬೇಕೆಂದು ಬೇಡಿದಳು. ತನ್ನ ತಪ್ಪಿನಿಂದ, ದುಡುಕಿ ನುಡಿದ ಗುರುನಿಂದೆಯಿಂದ ನೊಂದ ಶರ್ಮಿಷ್ಠೆ, ರಾಕ್ಷಸರ ಕ್ಷೇಮಕ್ಕಾಗಿ ದೇವಯಾನಿಗೆ ದಾಸಿಯಾಗಿ ಹೋಗಲು ಒಪ್ಪಿದಳು.

ಕಾಲಾಂತರದಲ್ಲಿ ಶುಕ್ರನು ದೇವಯಾನಿಯನ್ನು ಯಯಾತಿಗಿತ್ತು, ಅವಳೊಡನೆ ದಾಸೀ ಸಹಿತವಾಗಿ ಶರ್ಮಿಷ್ಠೆಯನ್ನೂ ಕೊಟ್ಟನು. ವರ್ಣಸಂಕರ ದೋಷವು ರಾಜ ನಿಗೆ ತಟ್ಟದಂತೆ ನರವಿತ್ತು, ದೇವಯಾನಿ ಯಯಾತಿಯರ ವಿವಾಹವನ್ನು ವೈಭವದಿಂದ ಮಾಡಿದನು. ಯಯಾತಿಯು ದೇವಯಾನಿಯನ್ನು ತನ್ನ ಪುರಕ್ಕೆ ತಂದು ಶರ್ಮಿಷ್ಠೆ ಯನ್ನು ಪುರ ಸಮೀಪದ ಉದ್ಯಾನದ ಮಂದಿರದಲ್ಲಿಟ್ಟನು. ಕಾಲಕ್ರಮದಿ

ದೇವಯಾನಿಯು, ಯದು, ತುರ್ವಸುರೆಂಬ ಸುತರನ್ನು ಪಡೆದಳು. ಇದನ್ನು ಕಂಡು ಶರ್ಮಿಷ್ಠೆ ತಾನುಕೂಡ ಯಯಾತಿ ರಾಜನನ್ನು ವರಿಸಿ, ಸಂತಾನವನ್ನು ಪಡೆದು, ತನ್ನ ಕಾರ್ಯತ್ನದಿಂದ ಕೃತಾರ್ಥಳಾಗಬಯಸಿದಳು. ಒಂದುದಿನ ಯಯಾತಿಯು ಬೇಟೆಯಾಡಿ ಬರುತ್ತಾ ಶರ್ಮಿಷ್ಠೆಯ ವನ ಸಮೀಪದಲ್ಲಿ ತಂಗಿದನು. ಆಗ ಅವಳು ಅವನನ್ನು ಕಂಡು, 'ರಾಜನ್ ! ನಿನ್ನ ಪತ್ನಿಯಾದ ದೇವಯಾನಿಗೆ ದಾಸಿಯಾದ ನಾನು ನಿನ್ನ ದಾಸಿಯಲ್ಲವೇ ? ನಾನು ಇನ್ನೊಬ್ಬರ ಕೈ ಹಿಡಿಯಲು ಬರುವುದೇ ? ನನ್ನ ಸಖಿಯ ಪತಿಯಾದ ನಿನ್ನನ್ನೇ ಪತಿಯನ್ನಾಗಿ ವರಿಸುವ ನನ್ನ ಆರ್ತವವನ್ನು ಪರಿಪಾಲಿಸು. ಧರ್ಮವನ್ನುಳಿಸು. ನನ್ನನ್ನು ಅಧರ್ಮದಿಂದ ರಕ್ಷಿಸು. ಲೋಕದಲ್ಲಿ ಮೂರು ಜನರು ಅಧನರೆನಿಸುವರು. ಹೆಂಡತಿ, ಭೃತ್ಯ, ಸುತ, ಈ ಮೂವರ ಧನವು ಅವರ ಸ್ವಾಮಿಯದೇ ಆಗಲಿ ಅವರದಾಗುವುದಿಲ್ಲ. ದೇವಯಾನಿ ನಿನ್ನ ಪತ್ನಿ ಯಾಗಿರುವಳು. ಅವಳ ದಾಸಿಯಾದ ನಾನೂ ನಿನ್ನವಳೇ ಆಗಿರುವೆನು. ನನ್ನನ್ನು ಸ್ವೀಕರಿಸು' ಎಂದು ಬೇಡಿಕೊಂಡಳು. ಶುಕ್ರನ ಆಜ್ಞೆಯಿಂದ ಅವಳ ಶಯ್ಯಾರೋಹಣ ವನ್ನು ಮಾಡಲು ಹೆದರಿದ ರಾಜನಿಗೆ ಅಹಿಂಸಾಪಾಲನೆಗಾಗಿ ನುಡಿದ ಅನೃತವೂ ಸತ್ಯ ಸಮಾನವೆಂದಳು. ಗೋ, ಬ್ರಾಹ್ಮಣ, ದೀನ, ಅನಾಥ, ಸ್ತ್ರೀಯರೆಂಬ ಐವರ ವಿಷಯದಲ್ಲಿ ನುಡಿದ ಸುಳ್ಳು ಪಾಪವಾಗಲಾರದೆಂತಲೂ ಸಮಾಧಾನಪಡಿಸಿದಳು. ಆ ಮಾತಿನ ಸತ್ಯವನ್ನರಿತ ರಾಜನು ಅವಳನ್ನು ಸ್ವೀಕಾರಮಾಡಿದನು. ಶರ್ಮಿಷ್ಠೆ ರಾಜ ನಿಂದ ಕ್ರಮವಾಗಿ, ದ್ರುಹ್ಯು, ಅನು, ಪುರು ಎಂಬ ಮೂವರು ಸುತರನ್ನು ಪಡೆದಳು.

ಒಂದುದಿನ ದೇವಯಾನಿ ಯಯಾತಿಯೊಡನೆ ವನವಿಹಾರಕ್ಕೆಂದು ಹೋದಳು. ಅಲ್ಲಿ ಆಡುತ್ತಿದ್ದ ಕುಮಾರರನ್ನು ಕಂಡು, ಅವರಲ್ಲಿ ಯಯಾತಿಯ ಹೋಲಿಕೆಗಳಿದ್ದು ದರಿಂದ, ರಾಜನನ್ನು ನೋಡಿ, 'ಅವರು ಆರ ಕುಮಾರ'ರೆಂದು ಕೇಳಿದಳು. ರಾಜನು ಸುಮ್ಮನಿದ್ದನು. ದೇವಯಾನಿ ಆ ಕುಮಾರರನ್ನೇ 'ನೀವಾರ ಮಕ್ಕಳೆಂ'ದು ಕೇಳಿದಳು. ದೇವಕುಮಾರರಂತಿದ್ದ ಆ ಬಾಲಕರು ಪಲ್ಲವ ಕೋಮಲಾರುಣವಾದ ಬೆರಳುಗಳಿಂದ ಯಯಾತಿಯನ್ನು ತೋರಿಸಿದರು. ನಡೆದ ಅನರ್ಥವನ್ನರಿತು ದೇವ ಯಾನಿ ಕುಪಿತಳಾದಳು. ಅಳುತ್ತಾ ಹೋಗಿ ತಂದೆಯ ಮುಂದೆ ರಾಜನ ಅವಿನಯ ವನ್ನು ಹೇಳಿದಳು. ರಾಜನು ಅವಳ ಹಿಂದೆಯೇ ಹೋಗಿ, ಶುಕ್ರನನ್ನು ಕ್ಷಮಿಸೆಂದು ಬೇಡಿದನು. ಋತುಕಾಲದಲ್ಲಿ ಸಂತಾನಾರ್ಥಿನಿಯಾಗಿ ಬೇಡಿದ ದಾನವ ತರುಣಿಯನ್ನು ಅಧರ್ಮಭಯದಿಂದ ಸ್ವೀಕರಿಸಿದೆನೆಂದನು. ಆಗ ಶುಕ್ರನು 'ರಾಜನ್ ! ನನ್ನ ಮಾತನ್ನು ಮೀರಿ ನಡೆದೆ. ಕಾಮಾತುರನಾಗಿ ಧರ್ಮ ಪರಿತ್ಯಾಗವನ್ನು ಮಾಡಿ ಈಗ ಧರ್ಮಾಭಾಸವನ್ನು ನುಡಿಯುವ ನೀನು ಮುದುಕನಾಗು !' ಎಂದು ಶಪಿಸಿದನು. ಇದನ್ನು ಕೇಳಿ ರಾಜನು, 'ನೀನಿತ್ತಿರುವ ಶಾಪದಿಂದ ನಾನು ಮುದುಕನಾದೆ. ಆದರೆ ನಿನ್ನ ಮಗಳಾದ ದೇವಯಾನಿಯಲ್ಲಿ ಸಾಂಸಾರಿಕ ಭೋಗಗಳನ್ನು ಕಾಣುವ ಆಸೆ ಹಿಂಗಿಲ್ಲ. ಜರೆ ಬರದಂತೆ ನನ್ನನ್ನು ಕಾಪಾಡು' ಎಂದು ಬೇಡಿದನು. ಶುಕ್ರನಿಂತೆಂದನು:

'ರಾಜನ್ ! ನನ್ನ ಮಾತೆಂದಿಗೂ ಸುಳ್ಳಾಗಲಾರದು. ಆದರೂ ನಿನಗೆ ಬಂದ ಅಕಾಲ ಜರೆಯನ್ನು ಮತ್ತೊಬ್ಬರಿಗೆ ಕೊಟ್ಟು ಅವರ ಯೌವನವನ್ನು ನೀನು ಸ್ವೀಕರಿಸು !' ಆ ಮಾತನ್ನು ಕೇಳಿ ಯಯಾತಿಯು 'ಸರೀ ! ನನ್ನ ಮುಪ್ಪನ್ನು ಸ್ವೀಕರಿಸಿ, ತನ್ನ ಯೌವನವನ್ನು ನನಗೆ ಕೊಡುವ ಪುತ್ರನಿಗೇ ರಾಜ್ಯವನ್ನು ಕೊಡುವೆನು. ಅವನು ಪುಣ್ಯಕೀರ್ತಿಶಾಲಿಯಾಗಿ ಬಾಳುವಂತೆ ನೀನು ಅನುಗ್ರಹಿಸು' ಎಂದನು. 'ಅಂತೆಯೇ ಆಗಲಿ' ಎಂದಪ್ಪಣೆಯಿತ್ತ ಶುಕ್ರನನ್ನು ಬೀಳ್ಕೊಂಡು, ಪತ್ನಿಯಿಂದ ತನ್ನ ಪುರವನ್ನು ಸೇರಿ, ಯಯಾತಿಯು ಜ್ಯೇಷ್ಠಪುತ್ರನಾದ ಯದುರಾಜನನ್ನು ಕುರಿತು ತನ್ನ ಮುಪ್ಪನ್ನು ಸ್ವೀಕರಿಸೆಂದನು.

'ತಾತ ! ಜರೆಯು ದುಸ್ಸಹವಾಗಿದೆ. ನಿಮ್ಮ ತಾತನೇ ಕೊಟ್ಟ ಶಾಪದಿಂದ ಅಕಾಲದ ಮುಪ್ಪಿಗೆಸಿಕ್ಕು ನರಳುವ ನನಗೆ ನಿನ್ನ ಯೌವನವನ್ನು ಕೆಲಕಾಲ ಕೊಡು!' ಎಂದ ತಂದೆಗೆ ನಂದನನಿಂತೆಂದನು —'ತಾತ ! ಅದಾಗದು. ಪಲಿತರೋಮನು, ಪತಿತದಂತನು, ವಲೀಸಂವಲಿತಗಾತ್ರನಾಗಿ ಬಾಳಲಾರೆ. ಶರೀರವು ಕುಗ್ಗುವುದು. ನೇತ್ರಗಳು ಕಾಣದಾಗುವುವು. ಕಿವಿ ಕೇಳದಾಗುವುದು. ಸರ್ವ ಕಾರ್ಯಗಳಲ್ಲಿ ಶಕ್ತಿ ಕುಂಠಿತವಾಗುವುದು. ಇತರ ತರುಣರು ನೋಡಿ ನಗುವರು. ನಿನಗೆ ನಾನೊಬ್ಬನೆ ಮಗನಲ್ಲ. ಅವರನ್ನು ಕೇಳು ! ನನ್ನ ಮನೋಹರ ಯೌವನವನ್ನು ನಿನಗೆ ಕೊಡಲಾರೆ.'

ಆ ಮಾತನ್ನು ಕೇಳಿ ಕೆರಳಿದ ಯಯಾತಿ ಯದುವಿನನ್ನು ರಾಜ್ಯಾನರ್ಹನಾಗೆಂದು ಶಪಿಸಿ, ತುರ್ವಸುನನ್ನು, ದ್ರುಹ್ಯು, ಅನುರನ್ನೂ ಕೇಳಿದನು. ಅವರೂ ತಮ್ಮ ವಯಸ್ಸನ್ನು ತಂದೆಗೆ ಕೊಡಲು ಸಮ್ಮತಿಸಲಿಲ್ಲ. ಅವರನ್ನೂ ಅಂತೆಯೇ ರಾಜ್ಯಾನರ್ಹರಾಗುವಂತೆ ಶಪಿಸಿ, ಯಯಾತಿ ಪುರುವಿನನ್ನು ಪ್ರಾರ್ಥಿಸಿದನು. ಆಗ ಪುರು ವಿಂತೆಂದನು: 'ಮಹಾರಾಜ ! ಆಗಲಿ, ಕೊಡು ನಿನ್ನ ಜರೆಯನ್ನು ! ನನ್ನ ಯೌವನವೇಕೆ? ಸರ್ವಸ್ವನೂ ತಂದೆಯಾದ ನಿನಗೆ ಮೀಸಲಾಗಿದೆ, ಸ್ವೀಕರಿಸು.' ಆಗ ಯಯಾತಿಯು ಶುಕ್ರನನ್ನು ನೆನೆದು, ಆ ಋಷಿವರನ ದಯದಿಂದ ತನ್ನ ಮುಪ್ಪನ್ನು ಪುರುವಿಗಿತ್ತನು. ಅವನ ನವಯೌವನವನ್ನು ತಾನು ಸ್ವೀಕರಿಸಿದನು.

ಯಯಾತಿಯು ಧರ್ಮದಿಂದ ಪ್ರಜರನ್ನಾಳಿದನು. ಯಜ್ಞಗಳಿಂದ ದೇವತೆಗಳಿಗೂ, ದಾನದಿಂದ ದೀನರಿಗೂ, ಶ್ರಾದ್ಧ ಹೋಮಾದಿಗಳಿಂದ ವಿಪ್ರರಿಗೂ, ಅನ್ನಪಾನಗಳಿಂದ ಅತಿಥಿಗಳಿಗೂ, ನಿಷ್ಕಾಪಟ್ಯದಿಂದ ಶೂದ್ರರಿಗೂ, ಸಂತೋಷವನ್ನುಂಟು ಮಾಡಿದನು. ಬಹು ವರ್ಷಗಳಾದವು. ರಾಜರ್ಷಿಯು ವಿರಾಗವನ್ನು ಹೊಂದಿ, ಇಂತು ಚಿಂತಿಸಿದನು. 'ಕಾಮ ಸುಖವು ಸಾಕೆನಿಸುವುದಿಲ್ಲ. ಅದು ಅಗ್ನಿಯಂತೆ, ವಿಷಯಾಜ್ಯದಿಂದ ಅಭಿವೃದ್ಧಿಯಾಗಿ ಸಂತಾಪವನ್ನೇ ಕೊಡುವುದು. ಪೃಥಿವೀಮಂಡಲಗತವಾದ ಸಮಸ್ತೈಶ್ವರ್ಯವನ್ನಿತ್ತರೂ ಮನುಷ್ಯನು ತೃಪ್ತನಾಗದಿರುವನು. ಸಾಕಿನ್ನು ಸಂಸಾರದ ಭೋಗಲಾಲಸತೆ. ವಾನಪ್ರಸ್ಥನಾಗಿ ನಿರ್ದ್ವಂದ್ವನಾಗುವೆನು. ಭಕ್ತಿಯಿಂದ ಶ್ರೀಹರಿಯನ್ನು ಭಜಿಸುವೆನು.'

ಯಯಾತಿಯು ಪುರುವಿಗೆ ರಾಜ್ಯವನ್ನಿತ್ತನು. ತನ್ನ ಮುಪ್ಪನ್ನು ತಾನು ಹೊತ್ತ ಯದುರಾಜನು ಜ್ಯೇಷ್ಠನಾದರೂ ಪಿತ್ರಾಜ್ಞಾಪಾಲನ ವಿಮುಖನಾದುದರಿಂದ ರಾಜ್ಯದಲ್ಲಿ ಅಭಿಷಿಕ್ತನಾಗಲರ್ಹನಲ್ಲವೆಂದು ವಿಪ್ರಾದಿ ಪ್ರಜನರನ್ನು ಸಮಾಧಾನ ಪಡಿಸಿ, ಪುರುವಿಗೆ ಪಟ್ಟಾಭಿಷೇಕ ಮಾಡಿದನು. ಮಿಕ್ಕ ಪುತ್ರರನ್ನು ರಾಜ್ಯದ ಕೊನೆಯ ಪ್ರದೇಶಗಳಲ್ಲಿ ಸಣ್ಣ ರಾಜರನ್ನಾಗಿಸಿ ಸ್ಥಾಪಿಸಿದನು. ತಾನು ದೇವಯಾನಿಯಿಂದ ಕೂಡಿ ವನದಲ್ಲಿ ತಪೋನಿರತನಾಗಿದ್ದನು. ಕೆಲಕಾಲವಾದಮೇಲೆ ಯಯಾತಿಯು ಕಾಲಧರ್ಮವನ್ನು ಹೊಂದಿ ಸ್ವರ್ಗವನ್ನು ಸೇರಿದನು.

ಅತ್ಯಂತ ಪುಣ್ಯಸಂಪನ್ನನಾದ ಯಯಾತಿಯನ್ನು ದೇವತೆಗಳು ಸಂತೋಷದಿಂದ ಸನ್ಮಾನಿಸಿದರು. ಅಲ್ಲಿ ಸುಖವಾಗಿದ್ದು ಯಯಾತಿ ಒಂದುದಿನ ಇಂದ್ರನನ್ನು ಕಂಡನು. ಇಂದ್ರನು 'ಪುರುವಿಗೆ ರಾಜ್ಯವಿತ್ತು ಬರುವಾಗ ನೀನವನಿಗೆ ಉಪದೇಶಿಸಿದುದು ಏನು ?' ಎಂದು ಕೇಳಿದನು. ಯಯಾತಿಯು 'ಗಂಗಾ ಯಮುನಾ ಮಧ್ಯ ದೇಶವು ಮಾತ್ರ ನಿನ್ನದು. ' ಇತರ ನಾಲ್ಕು ನಿಟ್ಟಿನ ರಾಜ್ಯಭಾಗಗಳು ನಿನ್ನ ಅಣ್ಣಂದಿರಿಗಿತ್ತಿರುವೆನು. ರಾಜ್ಯವನ್ನು ಧರ್ಮದಿಂದ ಪಾಲಿಸು. ಸಿಟ್ಟನ್ನು ಬಿಡು! ಕ್ರೋಧನಾದವನು ಜನರ ಪ್ರೀತಿಗೆ ದೂರನಾಗುವನು. ವಾಕ್ಪಾರುಷ್ಯವನ್ನು ಬಿಡು ! ಕೆಟ್ಟಮಾತಾಡುವವನ ಮುಖದಲ್ಲಿ ಅಲಕ್ಷ್ಮಿಯು ಇರುವಳೆಂದು ತಿಳಿ ! ಸಜ್ಜನರನ್ನು ಪೂಜಿಸು! ಅವರು ನಡೆದಂತೆ ನಡೆ ! ಭೂತದಯೆ, ಮೈತ್ರಿ, ದಾನ, ಮಧುರ ವಚನಗಳಿಗೆ ಸಮಾನವಾದ ಪರಮೇಶ್ವರಾರಾಧನವಿನ್ನೊಂದಿಲ್ಲ. ಪೂಜ್ಯರಿಗೆ ಕೊಡು. ಇತರರನ್ನು ಬೇಡಬೇಡ ! ಇಂತು ಉಪದೇಶಿಸಿ ಬಂದೆ' ಎಂದನು. ಅವನನ್ನು ಪರೀಕ್ಷಿಸಲು ಇಂದ್ರನು ಮತ್ತೆ 'ವಾನಪ್ರಸ್ಥನಾಗಿ ನೀನು ಮಾಡಿದ ತಪಸ್ಸಿನ ಮಹಿಮೆ ಎಂತಹುದು? ತಪೋಬಲದಿಂದ ನೀನು ಯಾರಿಗೆ ಸಮನೆನಿಸಿರುವೆ?' ಎಂದು ಕೇಳಿದನು. ಯಯಾತಿಯು ಆ ಮಾತನ್ನಾಲಿಸಿ ಅಹಂಕಾರದಿಂದ: 'ಇಂದ್ರ ! ದೇವ ಋಷಿ ಮನುಷ್ಯರಲ್ಲಿ ನನಗೆ ಸಮಾನರಾದ ತಪೋಧನರು ಯಾರೂ ಇಲ್ಲ' ಎಂದನು. ಇಂದ್ರನು ಯಯಾತಿಯ ಅಹಂಭಾವವನ್ನು ನೋಡಿ 'ಮೂರ್ಖ ! ದೇವ ಋಷಿ ಗಂಧರ್ವರನ್ನು ಧಿಕ್ಕರಿಸಿದ ನಿನ್ನ ಪುಣ್ಯವೆಲ್ಲವೂ ನಷ್ಟವಾಯಿತು. ಕೆಳಗೆ ಬೀಳು.' ಎಂದು ಶಪಿಸಿದನು. ಆಗ ನಾಹುಷನು 'ಸುರರಾಜ ! ತಪ್ಪಾಯಿತು! ನನ್ನನ್ನು ಸುರಲೋಕದಿಂದ ಕೆಡಹುವೆಯಾದರೆ ಭೂಮಿಯಲ್ಲಿ ಬೇಡ. ಅಂತರಿಕ್ಷದಲ್ಲಿ ತಿರುಗುತ್ತಿರುವಂತೆ ಅನುಗ್ರಹಿಸು! ಸುಜನರ ಮಧ್ಯದಲ್ಲಿ ನನ್ನನ್ನು ಇರಿಸು' ಎಂದು ಬೇಡಿಕೊಂಡನು. ಇಂದ್ರನು 'ಒಳ್ಳೆಯದು! ಹಾಗೆಯೇ ಆಗಲಿ! ಸುಜನರ ಮಧ್ಯದಿ ಬಿದ್ದು ಅವರಿತ್ತ ಪುಣ್ಯಬಲದಿಂದ ಮತ್ತೆ ನನ್ನ ಲೋಕವನ್ನು ಸೇರುವೆ. ಇನ್ನುಮುಂದೆ ಮಹಜ್ಜನರನ್ನು ಹೀಯಾಳಿಸಬೇಡ ! ಹೋಗು' ಎಂದನು.

ತತ್‌ಕ್ಷಣವೇ ಪುಣ್ಯಚ್ಯುತನಾದ ಯಯಾತಿ ಸ್ವರ್ಗದಿಂದ ಕೆಳಗುರುಳಿ ಭೂಮಿಗೆ ಬರುತ್ತಾ ತನ್ನ ಮೊಮ್ಮಕ್ಕಳಾದ ಅಷ್ಟಕ, ಪ್ರತರ್ದನ, ವಸುಮಾನ, ಶಿಬಿ ಎಂಬ ರಾಜರ್ಷಿಗಳ ಆಶ್ರಮದಲ್ಲಿ ಬಂದುನಿಂತನು. ಅವನನ್ನು ನೋಡಿ ಅಷ್ಟಕ

ನೆಂಬ ರಾಜರ್ಷಿಯು 'ನೀನಾರು? ಇಂದ್ರನಂತೆ ಪ್ರಕಾಶಿಸುವ ನಿನಗೆ ಅಧಃಪತನ ವಾಗಲು ಕಾರಣವೇನು? ಭಯಪಡಬೇಡ! ಸತ್ಸಭೆಯಲ್ಲಿ ಬಂದಿರುವ ನಿನ್ನನ್ನು ಅವರು ಕೈಬಿಡರು' ಎಂದನು. ಯಯಾತಿ 'ನಾನು ಪುರುಪಿತನಾದ ಯಯಾತಿಯು. ವಯಸ್ಸಿನಿಂದ ಹಿರಿಯನಾದ್ದರಿಂದ ನಿಮಗೆ ವಂದಿಸಬಾರದೆಂದಿರುವೆ. ಆದರೆ ದ್ವಿಜರಲ್ಲಿ ವಯಸಾ ವೃದ್ಧರು ವೃದ್ಧರಲ್ಲ. ತಪಸ್ಸಿನಿಂದ, ಜ್ಞಾನದಿಂದ ಯಾರು ದೊಡ್ಡವರೋ ಅವರೇ ಪೂಜ್ಯರು. ನನಗೆ ರಾಜ್ಯವಿತ್ತು; ಧನವಿತ್ತು; ಪುತ್ರನಿತ್ತ ಯೌವನವಿತ್ತು; ಆದರೆ ಅಹಂಭಾವ ದೂಷಿತಾಂತಃಕರಣನಾಗಿ ದೇವ ಋಷಿಗಳನ್ನು ನಿಂದಿಸಿದುದರಿಂದ ಕೆಳಗೆ ಬಂದಿರುವೆನು. ಮನುಷ್ಯನ ಸುಖದುಃಖಗಳಿಗೆ ಭಗವಂತನೇ ಪ್ರಧಾನ ಸ್ವತಂತ್ರ ಕಾರಣನು. ಇದನ್ನರಿತು ಶ್ರೀಹರಿಯಿತ್ತ ಸುಖದಿಂದ ಹಿಗ್ಗದಿರುವೆನು; ದುಃಖ ದಿಂದ ಕುಗ್ಗದಿರುವೆನು; ಸಂತಾಪಪಡುತ್ತಾ ಕೂತವನಿಗೆ ಯಾವ ಪ್ರಯೋಜನವೂ ಇಲ್ಲ. ಆದ್ದರಿಂದ ಆಗುಹೋಗುಗಳನ್ನು ಲೆಕ್ಕಿಸದೇ ಎಲ್ಲವೂ ಶ್ರೀಹರಿವಶವೆಂದರಿತು ಸ್ವಾಮಿಪಾದಾರವಿಂದಚಿಂತನರತನಾಗಿರುವೆನು' ಎಂದನು. ಅಷ್ಟಕ—'ಪುಣ್ಯವಂತರು ಹೇಗಿರುವರು? ಅವರು ಮತ್ತೆ ಭೂಮಿಯಲ್ಲಿ ಹುಟ್ಟಬೇಕಾದರೆ ಬರುವ ಮಾರ್ಗ ವಾವುದು?' ಯಯಾತಿ—'ಪುಣ್ಯವಂತರು ಸ್ವರ್ಗಾದಿ ಊರ್ಧ್ವಲೋಕಗಳಲ್ಲಿದ್ದು ಬೇಕಾದ ಸುಖಗಳನ್ನು ಅನುಭವಿಸುವರು. ಅವರಿಗೆ ಪುಣ್ಯ ಕ್ಷಯವಾದಾಗ, ಕ್ಷೀಣವಿತ್ತ ನಾದವನನ್ನು ಬಂಧುಗಳು ಬಿಡುವಂತೆ ದೇವತೆಗಳು ಕೆಳಕ್ಕೆ ಕಳಿಸುವರು. ಅವರು ಮಳೆಯ ಹನಿಗಳಲ್ಲಿ ಭೂಮಿಗಿಳಿದು ನೀರು, ಧಾನ್ಯ, ಫಲ, ಪುಷ್ಪ, ಓಷಧೀರೂಪರಾಗಿ ತತ್ತಜ್ಜೀವರಿಂದ ಭಿನ್ನರಾಗೇ ಇರುವರು. ಅಲ್ಲಿ ಅವರನ್ನು ಸ್ವೀಕರಿಸಿದ ಪುರುಷರನ್ನು ಸೇರಿ ರೇತೋದ್ವಾರಾ ಸ್ತ್ರೀಗರ್ಭವನ್ನು ಪ್ರವೇಶಿಸುವರು. ಅವರಿಗೆ ಮಾರ್ಗದಲ್ಲಿಯೂ ಹೊಂದುವ ಯೋನಿ ಜನ್ಮಗಳಲ್ಲಿಯೂ ಸ್ವಾತಂತ್ರ್ಯವಿಲ್ಲ. ಶ್ರೀಶೇಚ್ಛೆಯಿಂದ ಸ್ವಕರ್ಮಾ ನುರೂಪವಾಗಿ, ತಿರ್ಯಕ್, ಸ್ಥಾವರ, ಪಕ್ಷಿ, ಜಲಚರ ಮನುಜಾದಿಯೋನಿಯಲ್ಲಿ ಜನಿ ಸುವರು. ಶ್ರೀಮುಖ್ಯಪ್ರಾಣನಿಂದ ಕೂಡಿಕೊಂಡೇ ಸಂಚರಿಸುವ ಜೀವನು ಶ್ರೀಹರಿ ಮುಖ್ಯಪ್ರಾಣರ ಅಧೀನನಾಗಿರುವನು. ಮತ್ತೆ ಮನುಜನಾದಾಗ ಸ್ವರ್ಗದ್ವಾರವೆನಿಸಿದ ತಪಸ್ಸು, ದಾನ, ಭಕ್ತಿ, ಇಂದ್ರಿಯನಿಗ್ರಹ, ನಿಷಿದ್ಧಕರಣದಲ್ಲಿ ಲಜ್ಜೆ, ಆರ್ಜವ, ಭೂತ ದಯೆ ಎಂಬ ಸಪ್ತ ಧರ್ಮಗಳನ್ನು ನಡೆಸುವನು. ಅಹಂಕಾರ ದೂಷಿತನಾಗದಿದ್ದರೆ, ಮತ್ತೆ ಸ್ವರ್ಗಾದಿ ಪುಣ್ಯಲೋಕಗಳನ್ನು ಹೊಂದುವನು. ದಂಭದಿಂದ ಪರರು ಮೆಚ್ಚಲು ಮಾಡಿದ ಮಾನಾಗ್ನಿಹೋತ್ರ, ಮಾನಮೌನ, ಮಾನಾಧ್ಯಯನ, ಮಾನದಾನಗಳಿಂದ ಪುಣ್ಯಪ್ರಾಪ್ತಿ ಇಲ್ಲ. ಮಾಡಿದ ಪುಣ್ಯಕಾರ್ಯಗಳನ್ನು ಹೇಳಿಕೊಂಡ ದಂಭಕನಿಗೆ ಪುಣ್ಯ ಲೋಕಗಳಾಗುವುದಿಲ್ಲ. ಗುರುಭಕ್ತಿ ವೇದಾಧ್ಯಯನಗಳಿಲ್ಲದ ಬ್ರಹ್ಮಚಾರಿ, ಪಂಚ ಯಜ್ಞಗಳನ್ನು ಬಿಟ್ಟ ಗೃಹಸ್ಥ, ನಗರವಾಸಿಯಾದ ವಾನಪ್ರಸ್ಥ, ಧನ ಪರಿವಾರ ಸ್ತ್ರೀ ಜನ ಸಮನ್ವಿತನಾದ ಸನ್ಯಾಸಿ ಇವರೆಲ್ಲ ಧರ್ಮಧ್ವಜರೆನಿಸುವರು. ಮಾನಧರ್ಮದಿಂದ 'ನನಗೆ ಸರಿ ಇಲ್ಲವೆ'ಂದ ನಾನು ಕೆಳಗೆ ಬೀಳುತ್ತಿರುವೆನು. ಆದರೆ ಇಂದ್ರನು ದಯ

ದಿಂದ 'ಸುಜನರ ಯಜ್ಞಶಾಲೆಯಲ್ಲಿ ನಿನ್ನ ಪತನವಾಗಲಿ' ಎಂದಿರುವನು. 'ನೀನು ಪುಣ್ಯಶಾಲಿಯಾದ ರಾಜರ್ಷಿಯಾಗಿರುವೆ. ನಿನ್ನ ಪುಣ್ಯದಿಂದ ನನಗೆ ಪುನಃ ಸ್ವರ್ಗಪ್ರಾಪ್ತಿಯಾಗುವಂತೆ ಮಾಡು'. ಅಷ್ಟಕನು ತನಗಿರುವ ಪುಣ್ಯ ಲೋಕಗಳಾವುವು? ಎಂದನು. ಭೂಮಂಡಲದಲ್ಲಿರುವ ಸಮಸ್ತ ಹಸುಕರುಗಳನ್ನು ಕೊಟ್ಟಷ್ಟು ಪುಣ್ಯವು ನಿನಗಿದೆ ಎಂದು ಯಯಾತಿ ಹೇಳಿದನು. ಆಗ ಅಷ್ಟಕನಿಂತೆಂದನು— 'ರಾಜನ್! ನೀನು ನನ್ನ ಮಾತಾಮಹನು. ನಿನ್ನ ಮಗಳಾದ ಮಾಧವಿಯ ಮಕ್ಕಳು ನಾವು ನಾಲ್ವರು. ನನ್ನನ್ನು ಅಷ್ಟಕನೆಂಬುವರು. ನನ್ನ ಪುಣ್ಯಲೋಕಗಳನ್ನು ನಿನಗೆ ಧಾರೆ ಎರೆದುಕೊಟ್ಟಿರುವೆನು. ಕೆಳಗೆ ಬೀಳುವ ಭಯವನ್ನು ಬಿಡು. ಪ್ರತರ್ದನ, ವಸುಮಾನ, ಶಿಬಿ ಎಂಬ ನನ್ನ ತಮ್ಮಂದಿರೂ ತಮ್ಮ ಪುಣ್ಯಲೋಕಗಳನ್ನು ನಿನಗಿತ್ತಿರುವರು. ನಿನಗೆ ಪ್ರತಿಗ್ರಹದಿಂದ ಬರುವ ಪಾಪದ ಭಯವಿಲ್ಲ. ಪಾವಿತ್ರವಾದ ನಮ್ಮ ಸರ್ವಸ್ವವೂ ನಿನ್ನದಾಗಿದೆ. ನಮ್ಮಿಂದ ಪ್ರತಿಗ್ರಹ ಪಾಪವೆಂತು?' ಎಂದು ಅಷ್ಟಕ, ಪ್ರತರ್ದನ, ವಸುಮಾನ, ಶಿಬಿಗಳು ತಮ್ಮ ಪುಣ್ಯಗಳನ್ನು ಯಯಾತಿಗಿತ್ತರು. ಅತಿಥಿ ಪೂಜಾಪುಣ್ಯವನ್ನು ಪ್ರತರ್ದನನು; ಗೋದಾನಪುಣ್ಯವನ್ನು ವಸುಮಾನನು; ಸಾಧು ಸತ್ಕಾರ ಪುಣ್ಯವನ್ನು ಶಿಬಿಯು ಧಾರೆಎರೆದು ಕೊಟ್ಟಾಗ, ಆ ಯಜ್ಞಶಾಲೋಪರಿಭಾಗದಲ್ಲಿ ಐದು ದಿವ್ಯರಥಗಳು ಕಾಣಿಸಿಕೊಂಡವು. ಪಿತಾಮಹನ ಮಾತಿನಿಂದ ಅವು ತಮಗಾಗಿ ದೇವತೆಗಳು ಕಳಿಸಿದ ಕನಕ ದಿವ್ಯರಥಗಳೆಂದರಿತು ಅಷ್ಟಕಾದಿ ರಾಜನ್ಯರು, ಯಯಾತಿಯೊಡನೆ ಆ ರಥಗಳನ್ನೇರಿದರು. ಆ ರಥಗಳು ಸ್ವರ್ಗಮಾರ್ಗದಲ್ಲಿ ಪಯಣಿಸುವಾಗ ಶಿಬಿಯ ರಥವೇ ಮುಂದಾಯಿತು. ಎಲ್ಲರೂ ಸಮಾನ ದಾನವಂತರಿರುವಾಗ ಶಿಬಿಯು ಹೆಚ್ಚೇನೆಂದು ಅಷ್ಟಕನು ಕೇಳಲು, ಯಯಾತಿ 'ಶಿಬಿಯು ದಾನ, ತಪಸ್ಸು, ಸತ್ಯವಚನ, ಶ್ರೀ, ಕ್ಷಮಾ ಧರ್ಮಾದಿಗುಣಗಳಿಂದ ದೊಡ್ಡವನು. ಅವನು ತನಗಿದ್ದುದನ್ನೆಲ್ಲ ಶ್ರೀಹರಿ ಪ್ರೀತಿಗಾಗಿ ಇತ್ತು ಹೆಚ್ಚು ಪುಣ್ಯವನ್ನು ಗಳಿಸಿರುವನೆ'ಂದು ತಿಳಿಸಿದನು. ತಾನಾದರೂ ಮಹಾಪುಣ್ಯವನ್ನು ಮಾಡಿದುದರಿಂದ ಸ್ವರ್ಗದಲ್ಲಿ ಇಂದ್ರಸಖನಾಗಿದ್ದು, ದೇವಋಷಿ ನಿಂದೆಯಿಂದಲೂ, ತನ್ನ ಪುಣ್ಯದ ಹೆಚ್ಚಳವನ್ನು ಹೇಳಿಕೊಂಡುದರಿಂದಲೂ ಪತಿತನಾದೆನೆಂದು ನಾಹುಷನು ಹೇಳಿ ದೌಹಿತ್ರರಿಂದ ಕೂಡಿ, ಸ್ವರ್ಗವನ್ನು ಸೇರಿ ಸುಖವಾಗಿದ್ದನು.

## ದುಷ್ಯಂತ ಕಥಾ

ಪುರುವಿಗೆ ಕೌಸಲ್ಯೆಯಲ್ಲಿ ಜನಮೇಜಯನು ಹುಟ್ಟಿದನು. ಅವನು ಮೂರು ಅಶ್ವಮೇಧಗಳನ್ನೂ, ವಿಶ್ವಜಿದ್ಯಾಗವನ್ನೂ ಮಾಡಿ, ರಾಜ್ಯಾನಂತರ ವಾನಪ್ರಸ್ಥನಾದನು. ಮುಂದೆ ರಾಜನಾದ ಜನಮೇಜಯನಿಗೆ ಮಾಧವಿಯಲ್ಲಿ ಪ್ರಾಚಿನ್ವಂತನು ಜನಿಸಿದನು. ಪ್ರಾಚಿನ್ವಂತನು ಒಂದೇ ದಿನದಲ್ಲಿ ಸೂರ್ಯೋದಯಪರ್ಯಂತವಾದ ದೇಶಗಳನ್ನು ಗೆದ್ದ ವೀರನಾಗಿದ್ದನು. ಅವನ ಮಗನೇ ಸಂಯಾತಿಯು. ಅವನ ಮಗನು

*

ಅಹಂಯಾತಿಯು. ಅಹಂಯಾತಿ ಸುತನಾದ ಸಾರ್ವಭೌಮನಿಗೆ ಜಯತ್ಸೇನನು ಮಗನಾದನು. ಜಯತ್ಸೇನನಿಗೆ ವೈದರ್ಭಿಯಲ್ಲಿ ಅರ್ವಾಚೀನನು, ಅವನಿಗೆ ಅರಿಹನು, ಅರಿಹನಿಗೆ ಮಹಾಭೌಮನು, ಮಹಾಭೌಮನಿಗೆ ಅಯುತಾನಾಯಿಯು, ಅವನಿಗೆ ಅಕ್ರೋಧನನು, ಅವನಿಗೆ ದೇವಾತಿಥಿಯು, ಅವನಿಗೆ ಅರಿಹನು, ಅವನಿಗೆ ಋಕ್ಷನು, ಅವನಿಗೆ ಮತಿನಾರನು ಜನಿಸಿದರು. ಮತಿನಾರನು ಸರಸ್ವತಿ ನದೀ ತೀರದಲ್ಲಿ ಹನ್ನೆರಡು ವರ್ಷದ ಸತ್ರಯಾಗವನ್ನು ಚೆನ್ನಾಗಿ ಮಾಡಿದನು. ಅವನ ಪತ್ನಿಯಾದ ಸರಸ್ವತಿ ತಂಸುನೆಂಬ ಮಗನನ್ನವನಿಗಿತ್ತಳು. ತಂಸುವು ಈಲಿ ಎಂಬ ಮಗನನ್ನು ಪಡೆದನು. ಈಲಿರಾಜನು ರಥಂತರಿಯಲ್ಲಿ ದುಷ್ಯಂತನೇ ಮೊದಲಾದ ಐದು ಜನ ಸುತರನ್ನು ಪಡೆದನು.

ಪುಣ್ಯಶ್ಲೋಕನಾದ ದುಷ್ಯಂತನು ಸಮುದ್ರ ಮುದ್ರಿತ ಭೂಮಂಡಲವನ್ನು ಧರ್ಮದಿಂದ ಆಳಿದನು. ಮ್ಲೇಂಛಾದಿ ದುಷ್ಟರಾಜರನ್ನು ಹತ್ತಿಕ್ಕಿದನು. ಅವನ ರಾಜ್ಯದಲ್ಲಿ ಸುಭಿಕ್ಷವು ನೆಲಸಿತ್ತು. ವರ್ಣಸಂಕರಗಳಿದ್ದಿಲ್ಲ. ಊಳದೆ ಭೂಮಿ ಫಲಿಸುತ್ತಿತ್ತು. ಚೋರ ರೋಗಾದಿ ಭಯವಿದ್ದಿಲ್ಲ. ಜನರು ಸ್ವಧರ್ಮನಿರತರಾಗಿದ್ದರು. ವಿಪ್ರರ ಯಾಗಗಳು ನಿರ್ವಿಘ್ನವಾಗಿ ನಡೆದವು. ಗದಾದಿ ಯುದ್ಧ ವಿಶಾರದನು, ಮಹಾವೀರ್ಯನು ಆದ ದುಷ್ಯಂತನು ವಿಷ್ಣುವಿನಂತೆ ಬಲವಂತನು, ಸೂರ್ಯನಂತೆ ತೇಜೋವಂತನು, ಸಮುದ್ರನಂತೆ ಅಕ್ಷೋಭ್ಯನು, ಧರೆಯಂತೆ ಸಹನಶೀಲನು, ಯಮನಂತೆ ದುಷ್ಟ ಶಾಸಕನೂ ಆಗಿ ಪ್ರಜಾಪ್ರೀತಿಯನ್ನು ಸೂರೆಗೊಂಡಿದ್ದನು.

ಒಂದುದಿನ ದುಷ್ಯಂತನು ಬಹು ಗಜಾಶ್ವ ಬಲಯುತನಾಗಿ ಬೇಟೆಯಾಡಲು ಹೊರಟನು. ನಾನಾವೇಷದ, ನಾನಾ ಆಯುಧಗಳನ್ನು ಧರಿಸಿದ ಸೈನಿಕರು ಸಿಂಹ ಗರ್ಜನೆಗಳನ್ನು ಮಾಡುತ್ತಾ ಅವನನ್ನು ಹಿಂಬಾಲಿಸಿದರು. ಬಂಗಾರದ ರಥದಲ್ಲಿ ಕೂತು ರಾಜನು ಸಿಂಹ ವ್ಯಾಘ್ರ ಭಲ್ಲೂಕ ಕರಿ ವರಾಹ ಸಂಕುಲವಾದ ಒಂದು ವನವನ್ನು ಪ್ರವೇಶಿಸಿದನು. ಬೇಟೆ ಆರಂಭವಾಯಿತು. ಮೃಗಗಳನ್ನು ಬೇಕಾದಷ್ಟು ಬೇಟೆಯಾಡಿ ರಾಜನೂ, ಪರಿವಾರದವರೂ ಶ್ರಾಂತರಾದರು. ಸೈನಿಕರು ಬಿಡಾರವನ್ನು ಹೂಡಿ, ಬೆಂಕಿ ಹೊತ್ತಿಸಿ, ವಿವಿಧ ಮಾಂಸಗಳನ್ನು ತಿಂದರು. ಹತ್ತಿರ ಹರಿಯುತ್ತಿದ್ದ ಮಾಲಿನೀ ನದಿಯಲ್ಲಿ ತೃಷೆಯನ್ನಡಗಿಸಿ ವಿಶ್ರಮಿಸಿದರು.

ರಾಜನು ಅಲ್ಲಿ ನಿಲ್ಲದೆ ಒಂದು ಜಿಂಕೆಯ ಬೆನ್ನತ್ತಿಹೋಗಿ ಇನ್ನೊಂದು ವನವನ್ನು ಸೇರಿದನು. ಆ ವನವನ್ನು ಪ್ರವೇಶಿಸುತ್ತಲೇ ರಾಜನ ಮನಸ್ಸು ಪ್ರಫುಲ್ಲವಾಯಿತು. ಅದೊಂದು ಆಶ್ರಮವಾಗಿತ್ತು. ಫಲ ವೃಕ್ಷಗಳನ್ನು ಪುಷ್ಪಲತೆಗಳು ಸಾನಂದವಾಗಿ ಅಪ್ಪಿದ್ದವು. ಸೂರ್ಯನ ಬಿಸಿಲತಾಪವು ಇದ್ದಿಲ್ಲ. ಪಕ್ಷಿಗಳು ಕಲಕಲನಾದದಿಂದ ಸ್ವಾಗತವನ್ನಿತ್ತವು. ಕೋಗಿಲೆಗಳು ಕೂಗಿ ಕರೆದವು. ಪುಷ್ಪಮಕರಂದ ರಸಾಸ್ವಾದನಮತ್ತವಾದ ಮಧುಕರಗಳು ಹಾಡಿದವು. ನೆಲದಮೇಲೆ ಚಿಗರೆಗಳು ಅವುಗಳಮೇಲೆ ಹೂಗಳು ಹರಡಿ, ರತ್ನಗಂಬಳಿ ಹಾಸಿದಂತಿತ್ತು. ಲತಾಗೃಹಗಳು ಮುಕ್ತದ್ವಾರವಾಗಿ, ಆಶ್ರಮದ

ಅತಿಥಿಪೂಜಾ ಆದರವನ್ನು ಸೂಚಿಸುತ್ತಿದ್ದವು. ಮಂದಮಲಯಾನಿಲಯವು ಶೈತ್ಯ ಮಾಂದ್ಯ ಸೌಗಂಧಗಳನ್ನು ವಹಿಸಿ ಮೆಲ್ಲನೆ ಬೀಸಿತು. ಇಂತಹ ವನವನ್ನು ಕಂಡೊಡನೆ ದುಷ್ಯಂತನು ಭಯಭಕ್ತಿಭರಾವನತನಾಗಿ ರಥವನ್ನಿಳಿದನು. ರಾಜವೇಷವನ್ನು ಕಳೆದನು. ವೇದಘೋಷವನ್ನು ಕೇಳುತ್ತಲೇ ಆ ಮುನಿವರರ ದರ್ಶನದಿಂದ ಪುನೀತನಾಗಲು ಮನತಳೆದನು. ಅದು ಗಂಗಾತೀರದ ನರನಾರಾಯಣ ವನದಂತೆ ಕಂಗೊಳಿಸುವ ಮಾಲಿನೀತೀರದ ಕಶ್ಯಪಕುಲಜಾತಕುಲಪತಿ ಕಣ್ವನ ಆಶ್ರಮವೆಂದು ಅವರಿಂದ ತಿಳಿದನು. ರಾಜನಿಗೂ ನೀರಡಿಕೆ, ಹಸಿವೆ ಆಗುತ್ತಿತ್ತು. ಆ ವನಪ್ರದೇಶದಿಂದಲೇ ಅವುಗಳನ್ನೆಲ್ಲ ರಾಜನು ಮರೆತನು.

ತಪೋರಾಶಿಯನ್ನು ನೋಡಲು ಬಂದ ವೀರ್ಯರಾಶಿಗೆ ಸೌಂದರ್ಯರಾಶಿಯ ಸಂದರ್ಶನವಾಯಿತು. ಕಣ್ವನು ಆಶ್ರಮಾಂತರಕ್ಕೆ ಹೋಗಿರುವನೆಂತಲು, ಮನೆಯಲ್ಲಿ ಮಗಳನ್ನು ಅತಿಥಿಪೂಜೆಗೆ ನಿಯಮಿಸಿರುವನೆಂತಲು, ತಪಸ್ವಿಗಳು ರಾಜನಿಗೆ ತಿಳಿಸಿದರು. ದ್ವಿತೀಯ ಶ್ರೀಯಂತೆ ಶೋಭಿಸುವ ಅದ್ವಿತೀಯ ಶ್ರೀಕಲೆಯಾದ ಶಕುಂತಲೆ ಅವನಿಗೆ ಸ್ವಾಗತವನ್ನಿತ್ತು, ಪಾದ್ಯಾರ್ಘ್ಯಗಳಿಂದ ಪೂಜಿಸಿ, ಫಲಾರ್ಥಿಯಾಗಿ ವನಾಂತರಕ್ಕೆ ಪೋಗಿರುವ ಕಾಶ್ಯಪನು ಬೇಗನೆ ಬರುವನೆಂದು ಹೇಳಿದಳು. ಅವಳ ಮಧುರ ಮಂದಹಾಸ, ಲಾವಣ್ಯ ವಿಲಾಸ ವಿಭ್ರಮಗಳು, ಯೌವನಶ್ರೀ, ನಯದಮ ಸಂಪತ್ತುಗಳಿಗೆ ಮಾರುಹೋದ ರಾಜನು ಮನೋಭವ ವಶನಾಗಿ 'ನೀನಾರೆಂದು' ಕೇಳಿದನು. ಶಕುಂತಲೆ ತಾನು ಕಣ್ವನ ಮಗಳೆಂದು ತಿಳಿಸಿದಳು. ಕಣ್ವನು ಊರ್ಧ್ವರೇತಸ್ಕನಾದ ಮಹಾತಪಸ್ವಿಯಾದುದರಿಂದ ಅವಳು ಕಣ್ವನ ಸಾಕುಮಗಳಿರಬಹುದೆಂದು ಶಂಕಿಸಿ, ರಾಜನಿಂತೆಂದನು: 'ಸುಂದರಿ! ಪ್ರಭಾತರಲವಾದ ಮಿಂಚು, ಮೇದಿನಿಯಿಂದ ಮೇಲೆದ್ದು ಬರಲಾರದಲ್ಲವೇ? ನಿನ್ನ ಜನ್ಮವೃತ್ತಾಂತವೆಂತು? ಕಣ್ವರಿಗೆ ಸಾಕು ಮಗಳಾದ ಬಗೆ ಹೇಗೆ?' ಎಂದು ಕೇಳಿದನು. ಶಕುಂತಲೆ—ರಾಜನ್! ಕೇಳು. ಒಬ್ಬ ಋಷಿವರನು ನೀನು ಕೇಳಿದಂತೆಯೇ ನನ್ನ ಜನ್ಮವಿವರವನ್ನು ತಿಳಿಯಬಯಸಿದಾಗ ನಮ್ಮ ಪೂಜ್ಯ ತಂದೆ ಹೇಳಿದುದನ್ನೇ ನಿನಗೆ ತಿಳಿಸುವೆನು—

ಕಣ್ವನು ನುಡಿದನು—'ಹಿಂದೆ ವಿಶ್ವಾಮಿತ್ರನೆಂಬ ರಾಜರ್ಷಿಯು ಘೋರ ತಪೋನಿರತನಾಗಿದ್ದನು. ಅದರಿಂದ ಭೀತನಾದ ಇಂದ್ರನು ಅವನ ತಪೋಭಂಗವನ್ನು ಮಾಡಲು ರೂಪ ವಯೋಲಾವಣ್ಯ ಮಂದಹಾಸಸಮಂಚಿತಳಾದ ಮೇನಕೆಯನ್ನು ಕಳಿಸಿದನು. ವಿಶ್ವಾಮಿತ್ರನು ಸಾಮಾನ್ಯನಲ್ಲ; ಮಹಾಕೋಪನನು ತಪಸ್ಸಾಮರ್ಥ್ಯ ಯುಕ್ತನು ಆದ ವಿಶ್ವಾಮಿತ್ರನಿಗೆ ಇಂದ್ರಾದಿಗಳು ಹೆದರುತ್ತಿದ್ದರು. ಹಿಂದೆ ರೋಷಾವೇಶ ವಶನಾಗಿ ವಿಶ್ವಾಮಿತ್ರನು ವಸಿಷ್ಠನ ನೂರುಜನ ಕುಮಾರರನ್ನು ಕೊಲ್ಲುವಂತೆ ಸೌದಾಸನಿಗೆ ಪ್ರೇರೇಪಿಸಿದನು. ಕ್ಷತ್ರಿಯನಾಗಿದ್ದು, ತಪೋಬಲದಿಂದ ಬೇರೆ ಶರೀರದಿಂದ ಬ್ರಹ್ಮತ್ವವನ್ನು ಸಂಪಾದಿಸಿದನು. ಮತಂಗನಾಗೆಂದು ಶಪಿಸಲ್ಪಟ್ಟ ತ್ರಿಶಂಕುವಿಗೆ ಅಂತರಿಕ್ಷದಲ್ಲಿ ಒಂದು ಲೋಕವನ್ನೇ ಕಲ್ಪಿಸಿಕೊಟ್ಟನು. ಲೋಕವನ್ನು ತೇಜಸ್ಸಿ

ನಿಂದ ಸುಡಲು, ಮೇರುವನ್ನು ಪುಡಿಮಾಡಲು, ಸಮುದ್ರವನ್ನು ಇಂಗಿಸಲು ಸಮರ್ಥ ನಾದ ವಿಶ್ವಾಮಿತ್ರನ ಮಹಿಮೆ ಮೇನಕೆ ಅರಿತಿದ್ದಳು. ಇಂದ್ರನು ಅವಳಿಗೆ ಅಭಯ ವನ್ನಿತ್ತು, ಸಹಾಯವಾಗಲು ಮಂದಮಾರುತ, ವಸಂತ, ಪಿಕಶಾರಿಕಾನಿವಹಯುತ ನಾದ ಮನ್ಮಥನನ್ನು ಕಳಿಸಿದನು. ಮೇನಕೆಯು ಕೌಶಿಕಾಶ್ರಮವನ್ನು ಸಪರಿವಾರ ಳಾಗಿ ಪ್ರವೇಶಿಸಿದಳು. ಅಂತೆಯೇ ವಿಶ್ವಾಮಿತ್ರನ ಮನವನ್ನೂ ಪ್ರವೇಶಿಸಿದಳು. ಅವಳ ಹಾವಭಾವಗಳಿಗೆ ಮನಸೋತ ಮಹರ್ಷಿಯು ಮನ್ಮಥವಶನಾಗಿ ತಪೋಭ್ರಷ್ಟ ನಾದನು. ಆಗ ಜನಿಸಿದ ಶಕುಂತಲೆಯನ್ನು ಮೇನಕೆ ಮಾಲಿನೀನದೀ ತೀರದಲ್ಲಿ ಬಿಟ್ಟು, ಇಂದ್ರಸದನವನ್ನು ಸೇರಿದಳು. ವಿಶ್ವಾಮಿತ್ರನು ಪಶ್ಚಾತ್ತಪ್ತನಾಗಿ ಮತ್ತೆ ತಪಸ್ಸಿಗಾಗಿ ಗಂಧಮಾದನ ವನಕ್ಕೆಂದು ಹೊರಟುಹೋದನು.

ನಿರ್ಜನ ವನದಲ್ಲಿ ಪರಿತ್ಯಕ್ತಳಾದ ಕೂಸನ್ನು ಶಕುಂತಗಳು ಪುಷ್ಪರಸ ಫಲರಸ ಗಳನ್ನಿತ್ತು ಪೋಷಿಸಿದವು. ಒಂದು ದಿನ ನಾನು ಸ್ನಾನಾರ್ಥವಾಗಿ ಅಲ್ಲಿಗೆ ಹೋದೆನು. ಇವಳನ್ನು ಕಂಡು, ಕನಿಕರದಿಂದ ತಂದು ಶಕುಂತರಕ್ಷಿತಳಾದುದರಿಂದ ಶಕುಂತಲೆ ಎಂದು ಹೆಸರಿಟ್ಟು, ಪೋಷಿಸಿದೆನು. ಇವಳಾದರೂ ನನ್ನನ್ನು ತಂದೆಯೆಂದೇ ತಿಳಿದು ಪ್ರೀತಿಸುತ್ತಿರುವಳು. ರಾಜನ್ ! ದಿವ್ಯಜ್ಞಾನಿಯಾದ ಕಣ್ವಮಹರ್ಷಿಯ ವಚನದಿಂದ ನಾನು ವಿಶ್ವಾಮಿತ್ರ ಪುತ್ರಿ ಎಂದು ತಿಳಿದಿರುವೆನು.

ದುಷ್ಯಂತನಾಗ ಸಮಾಧಾನದ ನಿಟ್ಟುಸಿರನ್ನು ಬಿಟ್ಟು 'ನಿಜ ! ಇವಳು ಕ್ಷತ್ರಿಯ ಕುವರಿಯೇ ಸರಿ ! ಪೌರವವಂಶಜಾತನು, ಧರ್ಮಪಥವರ್ತನು ಆದ ನನ್ನ ಮನಸ್ಸು ಇವಳಲ್ಲಿ ಲಗ್ನವಾಗಿದೆ. ಇವಳು ಕಣ್ವಪುತ್ರಿಯಾಗಿದ್ದಿದ್ದರೆ ಹಾಗಾಗುತ್ತಿದ್ದಿಲ್ಲ' ಎಂದು ಚಿಂತಿಸಿ, 'ಶಕುಂತಲೇ ! ದುಷ್ಯಂತನೆನಿಸಿ, ಅಖಂಡ ಭೂಮಂಡಲಾಧಿಪತಿಯಾದ ನನ್ನನ್ನು ಗಾಂಧರ್ವವಿವಾಹ ವಿಧಿಯಿಂದ ವರಿಸಿ ಧನ್ಯನಾಗಿಸು ! ನನ್ನ ಅತುಲೈ ಶ್ವರ್ಯದ ಒಡತಿಯಾಗು' ಎಂದು ಬೇಡಿದನು. ಕಣ್ವನು ಬಂದು ಕನ್ಯಾದಾನ ಮಾಡಿದಾಗ ತನ್ನನ್ನು ಸ್ವೀಕರಿಸಬಹುದೆಂದ ಕನ್ಯಾಮಣಿಗೆ, ಪೌರವ ಕುಲಾಲಂಕಾರ ನಿಂತೆಂದನು—'ಕಾಂತೇ ! ವಿವಾಹವು ಎಂಟು ವಿಧವಾಗಿದೆ. ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಆಸುರ, ಗಾಂಧರ್ವ, ರಾಕ್ಷಸ, ಪೈಶಾಚಗಳಲ್ಲಿ ಕ್ಷತ್ರಿಯರಿಗೆ ಗಾಂಧರ್ವ ರಾಕ್ಷಸಗಳು ನಿಂದಿತವಲ್ಲ. ನಾನು ಧರ್ಮದ್ರೋಹವನ್ನೆಂದಿಗೂ ಮಾಡುವವನಲ್ಲ. ನೀನೂ ನನ್ನಲ್ಲಿ ಅನುರಕ್ತಳಾಗಿರುವೆ. ನನ್ನ ಸತಿಯಾಗು !' ಆಗ ಶಕುಂತಲೆ 'ಒಳ್ಳೆ ಯದು ! ರಾಜನ್ ! ನನ್ನ ಮಗನೇ ಯುವರಾಜನಾಗಬೇಕೆಂದು ನನ್ನ ಪ್ರಾರ್ಥನೆ. ಈ ನಿಯಮವನ್ನೂ ನನ್ನನ್ನೂ ಅಂಗೀಕರಿಸು' ಎಂದಳು. ದುಷ್ಯಂತನು ಅವಳ ಮಗನಿಗೇ ಪಟ್ಟಕಟ್ಟುವೆನೆಂದು ಮಾತುಕೊಟ್ಟು, ಗಾಂಧರ್ವ ವಿವಾಹದಲ್ಲಿ ಅವಳನ್ನು ಸ್ವೀಕರಿಸಿದನು. ಮರುದಿನ ಅವಳನ್ನು ಬೀಳ್ಕೊಂಡು ಪುರಕ್ಕೆ ತೆರಳುತ್ತಾ, ತನ್ನ ವಿಯೋಗತಾಪದಿಂದ ಬಳಲಿದ ಪತ್ನಿಗೆ 'ಬೇಗನೆ ಕಂಚುಕೀ ಚೇಟಿಕಾ, ಸಖಿಪರಿವಾರ

ಸಮನ್ವಿತವಾದ ಸೈನ್ಯವನ್ನು ಕಳುಹಿಸುವೆನು. ನಿನ್ನನ್ನು ನಾನು ಬಿಟ್ಟಿರಲಾರೆ' ನೆಂದು ಹೇಳಿ ಸಂತೈಸಿ ಹೊರಟುಹೋದನು.

ಸ್ವಲ್ಪ ಹೊತ್ತಾದಮೇಲೆ ಭಗವಾನ್ ಕಾಶ್ಯಪನು ತನ್ನ ವನಕ್ಕೆ ಹಿಂದಿರುಗಿ ಬಂದನು. ಎಂದಿನಂತೆ ಎದುರ್ಗೊಂಡು ಬರದೆ, ಕುಟೀರದಲ್ಲಿ ಕೂತಿದ್ದ ಕುವರಿಯನ್ನು ಕಂಡು, ದಿವ್ಯದೃಷ್ಟಿಯಿಂದ ನಡೆದುದನ್ನರಿತನು. ಅವನಿಗೆ ಸಂತೋಷವಾಯಿತು. ಮಗಳನ್ನು ಕರೆದಪ್ಪಿ, ಮಮತೆಯಿಂದ 'ಭದ್ರೇ! ದೈವಾನುಗ್ರಹದಿಂದ ಎಲ್ಲವೂ ಸರಿ ಯಾಗಿಯೇ ನಡೆದಿದೆ. ನೀನು ಧರ್ಮಾಪರಾಧವನ್ನು ಮಾಡಿಲ್ಲ. ದುಷ್ಯಂತ ಚಕ್ರ ವರ್ತಿಯು ಧರ್ಮಾತ್ಮನು. ರಾಜರ್ಷಿಯು ಪತ್ನಿಯಾದೆ. ಮಹಾಬಲನಾದ ಮಗನಿಗೆ ಮಾತೆಯಾಗುವಳಿರುವೆ. ನಿನ್ನ ಮಗನು ಸಾಗರಾಂತವಾದ ಸಕಲ ಭೂಮಂಡಲ ವನ್ನಾಳುವ ಚಕ್ರವರ್ತಿಯಾಗುವನು' ಎಂದು ಅಭಯವನ್ನಿತ್ತು, ಹರಸಿದನು. ಶಕುಂತಲೆಗೆ ಸಮಾಧಾನವಾಯಿತು. ತಂದೆಗೆ ವಂದಿಸಿ, ಪಾದ್ಯಾದಿಗಳನ್ನಿತ್ತಳು. ಸಂತುಷ್ಟನಾದ ಕಣ್ವನನ್ನು ಶಕುಂತಲೆ 'ತಾತ ! ನನ್ನ ಪತಿಯು ಶತ್ರುಂಜಯನಾಗಲಿ! ಅವನ ಮನಸ್ಸೆಂದಿಗೂ ಧರ್ಮವಿರೋಧವಾಗದಿರಲಿ!' ಎಂದು ಬೇಡಿದಳು. 'ತಥಾಸ್ತು!' ಎಂದು ಮಹರ್ಷಿಯು ಅನುಗ್ರಹಿಸಿದನು.

ರಾಜನು ಹೋದವನು ಸೈನ್ಯವನ್ನೂ ಕಳಿಸಲಿಲ್ಲ. ತಾನೂ ಬರಲಿಲ್ಲ. ಗರ್ಭಿಣಿ ಯಾಗಿದ್ದ ಶಕುಂತಲೆ ಮೂರುವರ್ಷಗಳಾದಮೇಲೆ ದೀಪ್ತಾನಲಪ್ರಕಾಶನಾದ ಕುಮಾರ ನನ್ನು ಪಡೆದಳು. ಅವನಿಗೆ ಜಾತಕರ್ಮಾದಿ ಕ್ಷತ್ರಿಯೋಚಿತ ಸಂಸ್ಕಾರಗಳನ್ನು ಮಾಡಿ ಕಣ್ವನು ಅವನನ್ನು ಬೆಳೆಸಿದನು. ಆ ಕುಮಾರನ ಹಸ್ತದಲ್ಲಿ ಚಕ್ರರೇಖೆಗಳಿದ್ದವು. ಸಿಂಹ ಸಂಹನನು, ಶುಭಲಕ್ಷಣ ಲಕ್ಷಿತನು ಆದ ಬಾಲಕನು ಬೆಳೆದು ಆರು ವರ್ಷದವ ನಾದನು. ಮಹಾಬಲನಾದ ಕುಮಾರನು ಕ್ರೀಡಿಸುತ್ತಾ, ವನದ ಸಿಂಹ, ವ್ಯಾಘ್ರ ಮಹಿಷಾದಿಗಳನ್ನು ಹಿಡಿದು, ಗಿಡಗಳಿಗೆ ಕಟ್ಟಿಹಾಕುತ್ತಿದ್ದನು. ಅದನ್ನು ಕಂಡು ಋಷಿ ಗಳವನನ್ನು ಸರ್ವದಮನನೆಂದು ಕರೆದರು. ಕ್ರಮವಾಗಿ ವಿವರ್ಧಮಾನನಾದ ಸರ್ವದಮನನ ವಿಕ್ರಮ ತೇಜೋಬಲಗಳಿಂದ ಪ್ರೀತನಾಗಿ ಕಣ್ವನು, ಅವನಿಗೆ ಯುವರಾಜ್ಯಾಭಿಷೇಕ ಸಮಯವೆಂದರಿತು, ಶಕುಂತಲಾ ಸರ್ವದಮನರನ್ನು ಹಸ್ತಿನಾವತಿಗೆ ಶಿಷ್ಯರೊಡನೆ ಕಳಿಸಿದನು.

ಅಮರ ಕುಮಾರನಂತೆ ಕಂಗೊಳಿಸುವ ಕುಮಾರನಿಂದ ತನ್ನ ಸಭೆಯನ್ನು ಪ್ರವೇಶಿಸಿದ ಶಕುಂತಲೆಯನ್ನು ನೋಡಿದ ದುಷ್ಯಂತನು ಅವಾಕ್ಕಾದನು. ತನ್ನ ಮರವಿಗಾಗಿ ಪಶ್ಚಾತ್ತಾಪದಿಂದ ನೊಂದನು. ಋಷಿಗಳು ಅವಳನ್ನೂ ಸರ್ವದಮನ ನನ್ನೂ ರಾಜನಿಗೆ ಪತ್ನಿಪುತ್ರರೆಂದು ಸಮರ್ಪಿಸಿ, ತಾವು ಆಶ್ರಮಕ್ಕೆ ಹಿಂದಿರುಗಿದರು. ಶಕುಂತಲೆ 'ರಾಜನ್! ಇವನು ನಿನ್ನ ಮಗನು. ಕಣ್ವಾಶ್ರಮದಲ್ಲಿ ನನ್ನ ಕೈಹಿಡಿದಾಗ ಕೊಟ್ಟಮಾತಿನಂತೆ, ಇವನನ್ನು ಯುವರಾಜನನ್ನಾಗಿ ಪಟ್ಟಕಟ್ಟು!' ಎಂದು ಲಜ್ಜಾ ಭಯಗಳಿಂದ ತಲೆಬಾಗಿ, ಕೈಮುಗಿದು, ಬೇಡಿಕೊಂಡಳು. ರಾಜನು, ತನ್ನ ಸುಂದರ

ಸುತಸಂದರ್ಶನದಿಂದ ಆನಂದಿತನಾದನು; ಎದ್ದುಹೋಗಿ ಬಿಗಿದಪ್ಪಲು ತವಕಿಸಿದನು; ಆದರೆ ಪ್ರಜರೇನೆಂದು ತಿಳಿಯುವರೋ! ಎಂಬ ಭೀತಿಯಿಂದ, ಶಕುಂತಲೆಯನ್ನು ಅರಿಯದವನಂತೆ, ಇಂತೆಂದನು—ದುಷ್ಟತಾಪಸಿ! ನೀನಾರೋ ನನಗೆ ಗೊತ್ತಿಲ್ಲ. ಧರ್ಮದಿಂದಲಾಗಲಿ, ಕಾಮದಿಂದಲಾಗಲಿ, ಅರ್ಥದಿಂದಲಾಗಲಿ ನಿನ್ನ ಸಂಬಂಧವೇನ ಗಿರುವಂತೆ ನನಗೆ ಹೊಳೆಯುತ್ತಿಲ್ಲ. ಬೇಕಾದಲ್ಲಿ ಹೋಗು! ಅಥವಾ ನಿನಗೆ ಧೈರ್ಯ ವಿಶ್ವಾಸಗಳಿದ್ದರೆ ನಮ್ಮ ಪುರೋಹಿತರ ಮನೆಯಲ್ಲಿ ಸುರಕ್ಷಿತವಾಗಿರು! ನಮ್ಮ ಅಂತಃಪುರದಲ್ಲಿ ನಿನಗೆ ಸ್ಥಳವಿಲ್ಲ.'

ದುಷ್ಯಂತನ ವಚನಗಳು ಸಿಡಿಲಂತೆ ಬಡಿದು ಶಕುಂತಲೆ ಮೂರ್ಛೆ ಹೊಂದಿದಂತೆ ಆದಳು. ಗರಬಡಿದಂತೆ ನಿಶ್ಚಲಳಾಗಿ ನಿಂತು, ಸ್ವಲ್ಪ ಚೇತರಿಸಿಕೊಂಡು, ಉಕ್ಕೇರಿ ಒರುವ ಶೋಕ ರೋಷಗಳನ್ನು ಹಿಡಿದಿಟ್ಟಳು. ಅವಳ ಕಣ್ಣುಗಳು ಕೆಂಪಡರಿದವು. ತುಟಿ ರೋಷಕಂಪಿತವಾಯಿತು; ಕಡೆಗಣ್ಣಿನ ನೋಟವೆಂಬ ಕಿಡಿಯಿಂದ ಸುಡುವ ಳಂಬಂತೆ ರಾಜನನ್ನು ನೋಡಿದಳು. ರಾಜನ ಮಾತಿನಿಂದ ತನಗಾದ ಅವಮಾನ ದಿಂದ ನೊಂದು, ಕಣ್ಣೀರಿಡುತ್ತಾ, ಗಂಡನನ್ನು ಕಂಡು ಇಂತೆಂದಳು—

"ಮಹಾರಾಜ! ಎಲ್ಲವನ್ನು ತಿಳಿದಿದ್ದೂ, ಏನೂ ಅರಿಯದವನಂತೆ ನಟಿಸುವುದು ನಿನಗುಚಿತವೇ? ನನ್ನ ಮಾತಿನ ಸತ್ಯಾಸತ್ಯತೆಗಳು ನಿನ್ನ ಹೃದಯಕ್ಕೆ ಗೊತ್ತಿಲ್ಲವೇ? ಹೇಳು! ನನಗಾದ ಅವಹೇಳನವು ನಿನಗೂ ಆದೀತು! ತಿಳಿ! ಚೋರನಂತೆ ಮನಸ್ಸಿಗೆ ಬಂದಂತೆ ಮಾತನಾಡುವುದು ಸಾಮಾನ್ಯರಿಗೆ ಶೋಭಿಸದು; ಅಂದಮೇಲೆ ಪೌರವ ಕುಲಾಲಂಕಾರನೆಂದು ಕೊಚ್ಚಿಕೊಳ್ಳುವ ನಿನ್ನಂತಹ ಮಹಾರಾಜನಿಗೆ ಶೋಭಿಸುವುದೆ? ನೀನು ಏಕಾಂತದಲ್ಲಿ ಮಾಡಿದ ಅಕೃತ್ಯವನ್ನು ಯಾರೂ ಅರಿತಿಲ್ಲವೆಂದು ತಿಳಿದಿರುವೆ! ಹೃದಯಗುಹಾವಾಸಿಯಾದ ವಾಸುದೇವನು ನಿನ್ನಲ್ಲಿ ನನ್ನಲ್ಲಿ ಸರ್ವರಲ್ಲಿಯೂ ಇರು ವನು. ಸಾಕ್ಷಾತ್ತಾಗಿ ನೋಡುವ ಆ ಪ್ರಭುವಿನ ಕಣ್ಣನ್ನು ಮುಚ್ಚುವುದು ನಿನ್ನಿಂದಾ ಗುವುದೆ? ದೇವತೆಗಳು, ಆಶ್ರಮ ಮೃಗ ಪಕ್ಷಿಗಳು, ಸಾಕ್ಷಿಯಾಗಿರುವಾಗ, ನನ್ನ ಕೈಪಿಡಿದು, ನೀನು ಮಾಡುವ ವಂಚನೆಯನ್ನು ಯಾರೂ ತಿಳಿದಿಲ್ಲವೆಂಬ ಆತ್ಮಘಾತ ವೇತಕ್ಕೆ? ಆದಿತ್ಯ, ಚಂದ್ರ, ವಾಯು, ಅಗ್ನಿ, ಆಕಾಶ, ಭೂಮಿ, ಜಲ, ಹೃದಯ, ಯಮ, ಅಹೋರಾತ್ರಿಗಳು, ಸಂಧ್ಯಾದ್ವಯ, ಧರ್ಮ—ಈ ಹನ್ನೆರಡು ದೇವತೆ ಗಳು, ನರರ ಪಾಪ ಪುಣ್ಯ ಕರ್ಮಗಳ ಸಾಕ್ಷಿಗಳಾಗಿರುವರು. ಮೇಲಾಗಿ ಕ್ಷೇತ್ರಜ್ಞ ನಾದ ನಾರಾಯಣನು ಮಾತಿಗೆ ತಪ್ಪುವ ದುರ್ಜನರಿಗೆ ಪ್ರೀತನಾಗನು; ಅವರವರ ಕರ್ಮಗಳಿಗೆ ತಕ್ಕ ಫಲವನ್ನು ಬಿಡದೆ ಉಣಿಸುವನು. ಪಾಪ ಫಲವನ್ನು ಕೊಡುವ ಸಮವರ್ತಿಯಾದ ಯಮನಿಗಾದರೂ ಹೆದರು! ಅರ್ಧಾಂಗಿಯಾದ ನನ್ನನ್ನು ಹೀಯಾಳಿಸಿದರೆ, ಉಳಿದ ಅರ್ಧಾಂಗವಾದ ನಿನಗೇ ಹಾನಿ ನಿಂದೆಗಳು ತಪ್ಪುವವೆ? ಪತಿವ್ರತೆಯೂ ವೀರಮಾತೆಯೂ ಆದ ನನ್ನನ್ನು ತಿರಸ್ಕರಿಸಬೇಡ! ಸಭೆಯಲ್ಲಿ ನಿಂದಿಸ ಬೇಡ! ನನ್ನ ಗೋಳು ನಿನ್ನ ಕಿವಿಗೆ ಬೀಳುವುದಿಲ್ಲವೆ? ನಿನ್ನ ಬುದ್ಧಿ ನನ್ನನ್ನೂ

ಈ ನಿನ್ನ ಪುತ್ರನನ್ನೂ ಮರೆತುಬಿಡುವಷ್ಟು ದುರ್ಬಲವಾಯಿತೆ? ಜಾಯೆಯಲ್ಲಿ ಒಂದಂಶದಿಂದ ತಾನೇ ಜನಿಸುವ ನರನು ತನ್ನನ್ನು ತಾನೇ ಮರೆತಂತೆ ಪುತ್ರನನ್ನು ಕೈ ಬಿಡಬಹುದೇ? ರಾಜನ್! ಪುತ್ರನಿಂದ ನರಕೋದ್ಧಾರ, ಪುತ್ರನಿಂದ ಸದ್ಗತಿ, ಪುತ್ರ ನಿಂದ ಪಿತೃಗಳು ಪ್ರೀತರಾಗುವರು; ಪೌತ್ರನಿಂದ ಪ್ರಪಿತಾಮಹರು ಸ್ವರ್ಗತಿಯನ್ನೈದು ವರು; ಪ್ರಪೌತ್ರನಿಂದ ಪಿತಾಮಹರು ವೈಕುಂಠವನ್ನು ಹೊಂದಿ ಸುಖಿಸುವರು. ಅಂತಹ ಸತ್ಪುತ್ರನು ಮುಂದೆ ಬಂದು ನಿಂತಾಗ, ಅವನನ್ನೆತ್ತಲು ನಿನ್ನ ಕೈಗಳು ಮುಂದೆ ಬಾಗವೇ? ಮುದ್ದಾಡಲು ಮನ ಬಾರದೇ? ನೋಡಿವನ ಮುದ್ದುಮುಖವನ್ನು! ಪ್ರತಿಬಿಂಬದಂತೆ ಕಾಣುವ ಬಾಲಕನೇ ನೀನವನ ತಂದೆ ಎಂಬುವ ವಿಷಯದಲ್ಲಿ ನಿದರ್ಶನ ವಾಗಿರುವಾಗ ಇಲ್ಲದ ಸಲ್ಲದ ಶಂಕೆಯು ಆತಂಕವೇಕೆ? ಹೆಂಡತಿಯಿಂದ ಮನೆಗೆ ಬೆಳಕು! ಭಾರ್ಯಳಿಂದ ಸಂತಾನದ ಸದ್ಗತಿ ಸಂಸಾರ ಸುಖಗಳು! ಕಳತ್ರದಿಂದ ಕಳೆ, ಪುರುಷಾರ್ಥ ಸಾಧನಗಳು. ಪತಿವ್ರತೆ, ಧರ್ಮಚಾರಿಣಿಯಾದ ಸತಿಯನ್ನು ಪಡೆದವಳೇ ಧನ್ಯರು. ಸದಾರರಿಗೇ ಸದಾ ರತಿ; ಏಕಾಂತದಲ್ಲಿ ಪ್ರಿಯಂವದೆಯಾಗಿ, ಅರ್ಥ ಕಾಮ ಗಳಲ್ಲಿ ಅನಸೂಯೆಯಾಗಿ, ಮೋಕ್ಷಮಾರ್ಗದಲ್ಲಿ ಅರುಂಧತಿಯಾಗಿ, ಕಾಂತಾರ ಕಷ್ಟ ಕಾರ್ಪಣ್ಯಗಳಲ್ಲಿ ಸಹಚರಿಯಾಗಿ, ವ್ಯವಹಾರದಲ್ಲಿ ನರ್ಮದೆಯಾಗಿ ನಡೆದ ಮಡದಿ ಯನ್ನು ಗೃಹಾಶ್ರಮದ ಮೂಲ ಕಂದವೆಂದು ತಿಳಿ! ಮೃತನಾದ ಪತಿಯೊಡನೆ ಚಿತೆ ಯನ್ನೇರುವ ಪ್ರೀಯ ಸಾಹಸಿ ಯಾರು? ಮೊದಲು ಪತಿ ಮೃತನಾದರೆ, ತಾನು ದೃಢವ್ರತಳಾಗಿದ್ದು ಕೊನೆಗೆ ಸತ್ತು ಅವನನ್ನು ಸ್ವರ್ಗದಲ್ಲಿ ಕಲೆಯುವವಳಾರು? ತಾನು ಮೊದಲು ಮೃತಳಾದರೆ ಪತಿಯ ಆಗಮನವನ್ನು ನಿರೀಕ್ಷಿಸುವ ಪ್ರೇಯಸಿ ಯಾರು? ಧರ್ಮಪತ್ನಿ ಅಲ್ಲವೇ? ಕೈಹಿಡಿದು ಧರ್ಮಾರ್ಥ ಕಾಮಗಳಲ್ಲಿ ವಂಚನೆ ಮಾಡುವುದಿಲ್ಲವೆಂದು ಮಾತುಕೊಟ್ಟ ಪುರುಷನು ಕೃತಘ್ನನಾಗಬಹುದು. ಆದರೆ ನಾರಿ ಎಂದಿಗೂ ಸುಗುಣಕವಚ ಧಾರಿಣಿಯಾಗಿ ಕೃತಜ್ಞಳಾಗೇ ಇರುವಳು. ಮನೋವ್ಯಥೆ ಯಿಂದ ತೊಳಲುವ ನರನು ದಾರಾಸುತರನ್ನು ಕಂಡು, ತನ್ನ ವ್ಯಸನವನ್ನು ಮರೆತು, ಸುಖವನ್ನು ಹೊಂದಿ ಬಾಳ ಹೊಳೆಯನ್ನು, ಅವರ ಪ್ರೀತಿಯ ತರಣಿಯಲ್ಲಿ ಸುಖವಾಗಿ ದಾಟಿಬಿಡುವನು. ಋಷಿವರರು ಕೂಡ ಸದ್ಗತಿಪ್ರದವಾದ ಸಂತಾನವನ್ನು ಬಯಸಿ ಸತಿಯರ ಕೈಹಿಡಿಯಲಿಲ್ಲವೇ? ಸತಿಯರಿಲ್ಲದೆ ಸೃಷ್ಟಿ ವಿಧಾನವನ್ನಾರಾದರೂ ಕಂಡಿರು ವರೇ? ಧರಣೀರೇಣುಗುಂಠಿತಗಾತ್ರನಾದ ಪುತ್ರನ ಪರಿಷ್ವಂಗ ಸುಖವು ತಾನಾಗಿ ಒದಗಿಬಂದರೆ, ನಿನ್ನ ಕಡೆ ಸಾಭಿಲಾಷನಾಗಿ ನೋಡುವ ನಿನ್ನ ಕಂದನನ್ನು ಬಿಗಿದಪ್ಪುವ ಅಭಿಲಾಷೆ ಎಂಬ ಪ್ರೇಮನದಿ ನಿನ್ನ ಮನಸ್ಸಿನ ಕಠಿನ ಮರುಭೂಮಿಯಲ್ಲಿ ಇಂಗಿ ಹೋಯಿತೇ? ಅಂಡಗಳನ್ನು ರಕ್ಷಿಸುವ ಪಕ್ಷಿಗಳು, ಶಿಶುಗಳಿಗೆ ಪಾಲೆರೆವ ಪಶುಗಳು ತೋರುವ ಪುತ್ರಸ್ನೇಹ ಮನುಜಪಾಲನಾದ ನಿನಗೇಕೆ ಸೂಸಿಬರದೆ ಬತ್ತಿಹೋಗಿದೆ? ರಾಜನ್! ದ್ವಿಪದರಲ್ಲಿ ವಿಪ್ರನು ಶ್ರೇಷ್ಠನು: ಚತುಷ್ಪದಗಳಲ್ಲಿ ಗೋವು ಶ್ರೇಷ್ಠ; ಗೌರವನೀಯರಲ್ಲಿ ಗುರುವು ಶ್ರೇಷ್ಠನು; ಸ್ಪರ್ಶಸುಖಗಳಲ್ಲಿ ಪುತ್ರಗಾತ್ರ ಪರಿಷ್ವಂಗವೇ

ಶ್ರೇಷ್ಠ; ಚಂದನ, ಮಲಯಾನಿಲ, ಸುಮ, ನಾರೀ, ಶಯ್ಯಾಸ್ತರಣಗಳ ಕೋಮಲತೆ ಶೀತಲತೆ, ಮಾಧುರ್ಯ, ಪ್ರೇಮರಸಗಳನ್ನು ಸೂರೆಗೊಂಡು ಒಂದಾಗಿ ಮೂರ್ತೀಭವಿಸಿ ನಿಂತಿರುವ ಕುಮಾರನನ್ನು ಸ್ವೀಕರಿಸು ! ಇವನು ಹುಟ್ಟಿದಾಗ 'ನೂರಶ್ವಮೇಧಗಳನ್ನು ಮಾಡಿ, ವಂಶಕರ್ತನೆನಿಸುವನೀ ಕುಮಾರ'ನೆಂದು ಆಕಾಶವಾಣಿ ನುಡಿಯಿತು. ವೇದದಲ್ಲಿರುವ ಜಾತಕರ್ಮ ಸಂಸ್ಕಾರಮಂತ್ರವನ್ನು ನೀನರಿತೇ ಇರುವೆ. 'ಅಂಗದಿಂದ ಬಂದೆ-ಹೃದಯದ ಅಂಶವಾಗಿರುವೆ. ನನ್ನ ಒಂದಂಶವಾದ ನೀನು ಮಗನೇ ! ನೂರು ವರ್ಷ ಸುಖವಾಗಿ ಬಾಳು!' ಪುತ್ರನು ತಂದೆಯ ನೆರಳಿನಂತೆ ಅನುವ್ರತನಾಗಿ, ವಂಶ ಪರಂಪರೆಯನ್ನು ಉಳಿಸಿ ಪಿತೃರಕ್ಷಕನಾಗಿ, ಸದ್ಗತಿಪ್ರದನೂ ಆಗುವನು. ರಾಜನ್! ಊರ್ವಶೀ, ಪೂರ್ವಚಿತ್ತಿ, ಸಹಜನ್ಯಾ, ಮೇನಕಾ, ವಿಶ್ವಾಚೀ, ಘೃತಾಚೀ ಇವರು ಆರು ತರುಣಿಯರು ಅಪ್ಸರೆಯ ಶ್ರೇಷ್ಠೆಯರು; ನಿತ್ಯ ನೂತನ ತರುಣಿಯರು; ಅಂತಹ ಮೇನಕೆಗೆ ರಾಜರ್ಷಿವರನಾದ ವಿಶ್ವಾಮಿತ್ರನಿಂದ ಜನಿಸಿದ ನನ್ನ ಅಭಿಜಾತ್ಯವನ್ನು ಶಂಕಿಸುವುದು ನಿನ್ನ ತಪ್ಪಲ್ಲ. ಹಿಮವತ್ಪರ್ವತದ ತಪ್ಪಲಿನಲ್ಲಿ ತಬ್ಬಲಿಯನ್ನಾಗಿಸಿ ಪೋದ ನನ್ನ ತಾಯಿಯ ತಪ್ಪು! ಕಂಡು ಬೇಡಿದೊಡನೆ, ಹಿರಿಯರನ್ನು ಜರೆದು, ಗಾಂಧರ್ವವೆಂದು ಹಿರಿದು ಹಿಗ್ಗಿ, ನಿನ್ನ ಮಧುರೆ ವಂಚನೆಗೆ ಮನಸೋತ ನನ್ನ ತಪ್ಪು! ಹಾ! ದೇವ ! ಯಾವ ಜನುಮದ ಪಾಪಕ್ಕೆ ನನಗೀ ಶಿಕ್ಷೆ? ಹುಟ್ಟುತ್ತಲೇ ತಾಯಿಗೆಡೆಯಾದೆ, ಬಾಂಧವರು ಬಿಟ್ಟರು. ಪಾಣಿಗ್ರಹಣವನ್ನು ಮಾಡಿದ ಪತಿಯಿಂದಲೂ ಪರಿತ್ಯಕ್ತಳಾದೆ. ಇನ್ನು ಳಿದೇನು ಪ್ರಯೋಜನ ? ಈ ಪುತ್ರನನ್ನಾದರೂ ಸ್ವೀಕರಿಸು."

ದುಷ್ಯಂತನ ಮನವು ಕರಗಲಿಲ್ಲ. ಶಿಲಾನಿಷ್ಠುರನಾದ ಮಹಾರಾಜನು ರಾಜಧರ್ಮ ಬದ್ಧನಾಗಿ ಇಂತೆಂದನು—

"ನಿನ್ನ ಪುತ್ರನಿಗೂ ನನಗೂ ಸಂಬಂಧವಿಲ್ಲ. ಸತಿಯರು ಅಸತ್ಯವಚನರೆಂಬುವುದು ನಿಜ. ಮೇನಕೆ ಎಂಬ ದೇವವೇಶ್ಯೆ ಪಡೆದು, ನಿನ್ನ ಬಿಡಲು ಕಾರಣವೇನು ? ನಿಮ್ಮ ತಂದೆ ಎಂದೆ ವಿಶ್ವಾಮಿತ್ರನನ್ನು ! ಅವನೇಕೆ ನಿನ್ನನ್ನು ತ್ಯಜಿಸಿದ ? ಒಂದು ವೇಳೆ ನೀನವರ ಮಗಳಾಗಿದ್ದರೆ, ದೇವಸ್ತ್ರೀ ಮುನಿಗಳ ಮಗಳಂತೆ ನಿನ್ನ ವಚನಗಳಿರಬೇಕಿತ್ತು! ಆದರೆ ವ್ಯಭಿಚಾರಿಣಿಯಂತೆ 'ನೀನೇ ನನ್ನ ಗಂಡ'ನೆಂಬ ದಿಟ್ಟತನ ನಿನ್ನಲ್ಲಿ ಎದ್ದು ಕಾಣುತ್ತಿದೆ. ದುಷ್ಟತಾಪಸಿ! ಸಾಕಿನ್ನು ನಡೆ! ನೀನು ನನ್ನ ಪತ್ನಿಯೂ ಅಲ್ಲ; ಅತಿ ಕಾಯನೂ, ಅತಿ ಬಲನೂ ಆದ ಈ ಬಾಲಕನು ನನ್ನ ಸುತನೂ ಅಲ್ಲ, ಎಲ್ಲಿ ಬೇಕಾದರೂ ಹೋಗು !"

ಆ ವಿಷವಚನಗಳಿಂದ ಕೆರಳಿ ವ್ಯಾಘ್ರಿಣಿಯಂತಾದ ಶಕುಂತಲೆ ರಾಜನನ್ನು ನೋಡಿ ಇಂತೆಂದಳು—

"ರಾಜನ್ ! ಪರರ ದೋಷ ಸಾಸಿವೆಯಷ್ಟಾದರೂ ನೋಡುವ ನಿನಗೆ ಕುಂಬಳಕಾಯಿಯಷ್ಟು ದೊಡ್ಡದಾದ ನಿನ್ನ ದೋಷ ಕಾಣಿಸದಾಗಿದೆ. ಮೇನಕೆ ವೇಶ್ಯೆಯಾದಳೇ ? ದುಷ್ಯಂತ ! ತ್ರಿದಶರಲ್ಲಿ ಅತಿಪ್ರಿಯಳಾದ ನಿತ್ಯ ನೂತನಳಾದ

ನನ್ನ ತಾಯಿಯ ಹೆಸರನ್ನೆತ್ತಲು ನಿನಗೆ ಅಧಿಕಾರವಿಲ್ಲ. ಮಾನವ ನೀನೆಲ್ಲಿ? ದೇವ ವನಿತಾ ಜಾತಳಾದ ನಾನೆಲ್ಲಿ? ಅಂತರಿಕ್ಷದಲ್ಲಿ ವಿಹರಿಸುತ್ತಾ, ಇಂದ್ರ ಕುಬೇರ ಯಮ ಲೋಕಗಳಲ್ಲಿರಲು ಶಕ್ತಳಾದ ನನ್ನ ಪ್ರಭಾವವನ್ನು ನೀನರಿಯೆ. ಇದು ಜಂಬದ ಮಾತಲ್ಲ. ನಿನ್ನಲ್ಲಿ ನನಗೆ ದ್ವೇಷವಿಲ್ಲ. ಕೇವಲ ವಿಶ್ವಾಸಾರ್ಥವಾಗಿ ಮಾತಾಡುವ ನನ್ನ ಅತಿವಚನವನ್ನು ಕ್ಷಮಿಸು! ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿ ಕೊಳ್ಳುವವರೆಗೂ ಕುರೂಪಿಯು, ತಾನು ಸುಂದರನೆಂದು ಭ್ರಾಂತನಾಗಿರುವನು. ಅತಿ ರೂಪವಂತನು ಇನ್ನೊಬ್ಬರ ವಿರೂಪವನ್ನು ಅವಗಣಿಸುವುದಿಲ್ಲ; ಗುಣವಂತನು ಪರರ ಗುಣ ದೋಷಗಳನ್ನು ಎಣಿಸಿ ನಿಂದಿಸುವುದಿಲ್ಲ; ಹಂಸವು ನೀರನ್ನು ಬಿಟ್ಟು ಕ್ಷೀರ ವನ್ನು ಮಾತ್ರ ಸ್ವೀಕರಿಸುವಂತೆ, ಸಜ್ಜನನು ಪರಗುಣವನ್ನೇ ನೋಡಿ ಸಂತೋಷ ಪಡುವನು. ದುರ್ಜನನು ಸೂಕರವು ಅಮೇಧ್ಯವನ್ನಂತೆ ಪರದೋಷವನ್ನೇ ಅರಸು ವನು. ದುರ್ಜನರು ಕಲೆತು ಸುಜನನನ್ನು ನಿಂದಿಸುವಾಗ ಗುಣಗಳನ್ನೂ ದೋಷ ಗಳನ್ನಾಗಿಸುವರು. ಲೋಕದಲ್ಲಿ ಇದಕ್ಕಿಂತ ಪಾಪ ಉಂಟೆ? ವಂಶ ಪ್ರತಿಷ್ಠೆಗೆ ಕಾರಣರಾದ ಪತ್ನೀಜಾತ, ಲಬ್ಧ, ಕ್ರೀತ, ವರ್ಧಿತ, ದತ್ತರೆಂಬ ಐದು ವಿಧರಾದ ಪುತ್ರರಲ್ಲಿ, ಸ್ವಪತ್ನೀಜಾತನು ಉತ್ತಮನು. ರಾಜನ್! ವಂಶಕರನು, ಶುಭಲಕ್ಷಣನು, ಸ್ವಪತ್ನಿಯಾದ ನನ್ನಲ್ಲಿ ಜನಿಸಿದವನು ಆದ ಈ ನಿನ್ನ ಮಗನನ್ನು ಬಿಡಬೇಡ! ಸತ್ಯ ವಂತನಾಗಿ ಧರ್ಮದಿಂದ ರಾಜ್ಯವಾಳುವ ನಿನಗೆ ವಂಚನೆ ಉಚಿತವಲ್ಲ. ಕೂಪಶತದಿಂದ ಮೇಲಾದುದೊಂದು ಪುಷ್ಕರಿಣಿ; ವಾಪೀಶತಕ್ಕೆ ಮಿಗಿಲಾದುದೊಂದು ಕ್ರತುವು; ಕ್ರತು ಶತವನ್ನು ಮೀರಿದವನೊಬ್ಬ ಸುತನು; ಅಂತಹ ಸುತ ಶತರೂ ಸತ್ಯಕ್ಕೆ ಎಣೆ ಅಲ್ಲ. ಅಶ್ವಮೇಧ ಸಹಸ್ರಫಲವನ್ನೂ ಸತ್ಯವನ್ನೂ ತೂಗಿದಾಗ ಸತ್ಯವೇ ಗುರುತರವಾಯಿ ತೆಂಬ ವೇದವಚನವನ್ನು ಕಡೆಗಣಿಸಬೇಡ! ಸತ್ಯಸಮಾನ ಧರ್ಮವಿಲ್ಲ. ಅಸತ್ಯ ಸಮಾನ ಪಾಪವಿಲ್ಲ. ತಲೆಯಲ್ಲಿ ಧರ್ಮವನ್ನೂ, ಗಲದಲ್ಲಿ ಮಾಂಗಲ್ಯವನ್ನೂ, ಹೃದಯದಲ್ಲಿ ಕಾಮವನ್ನೂ, ಹಸ್ತಗಳಲ್ಲಿ ಅರ್ಥವನ್ನೂ, ಉದರದಲ್ಲಿ ಪುತ್ರನನ್ನೂ, ಪಾದಗಳಲ್ಲಿ ಅನುಗಮನವನ್ನೂ ಧರಿಸಿ ಬೆಳೆದುನಿಂತ ಪುರುಷಾರ್ಥಸ್ವರೂಪಿಣಿಯಾದ ನಿನ್ನ ಪತ್ನಿ ನಾನೆಂದು ತಿಳಿ! ನಿನ್ನ ಮನಸ್ಸಿನ್ನೂ ಕರಗಲಿಲ್ಲ. ಹೋಗಲಿ ಬಿಡು! ದುಷ್ಯಂತ! ನಿನ್ನ ಅನಂತರ ಚತುರಂತವಾದ ಭೂಮಂಡಲವನ್ನು ಅವ್ಯಾಹತವಿಕ್ರಮ ನಾಗಿ ಪಾಲಿಸುವನು ಈ ನನ್ನ-ನಿನ್ನ ಪುತ್ರರತ್ನ! ಇದು ನಿಜ!"

ಇಷ್ಟು ನುಡಿದು ಶಕುಂತಲೆ ಕಣ್ಣೀರಿಡುತ್ತ ಕಂದನೊಡನೆ ಅಲ್ಲಿಂದ ಹೊರಡಲನು ವಾದಳು. ದಿಕ್ಕೆಟ್ಟವನಾಗಿ ರಾಜನು ಶಿಲಾಪ್ರತಿಮೆಯಂತಿದ್ದನು. ಸಭಿಕರು ಸ್ತಂಭೀ ಭೂತರಾದರು. ಆಗ ಆಕಾಶವಾಣಿಯು ಇಂತು ಕೇಳಿಬಂತು—

'ರಾಜನ್! ಶಕುಂತಲೆ ಹೇಳಿದುದೆಲ್ಲವೂ ಸತ್ಯವಾಗಿದೆ. ಶಂಕೆ ಮಾಡದೆ ಸತಿ ಸುತರನ್ನು ಸ್ವೀಕರಿಸು. ನಿನಗೆ ಲೋಕದಲ್ಲಿ ಅಪಯಶವಾಗದಿರಲೆಂದೇ ದೇವತೆಗಳು ನುಡಿಯುತ್ತಿರುವರು. ತಂದೆಯು ಬೀಜಪ್ರದನು. ತಾಯಿಯು ಗರ್ಭದಲ್ಲಿರುವ

ಅರ್ಭಕನ ಶರೀರಾಭಿವರ್ಧಕಳು. ಅಗ್ನಿಯನ್ನೂದಿ ಬೆಳಸುವ ಭಸ್ತ್ರದಂತೆ ಮಾತೆ ಪುತ್ರಧಾರಕಳಾಗಿರುವಳು. ಇವನು ನಿನ್ನ ಮಗನೇ ದಿಟ! ಭರಿಸು ಇವನನ್ನು. ಇನ್ನುಮೇಲೆ ಇವನಿಗೆ ಭರತನೆಂಬ ಹೆಸರಾಗಲಿ ! ಶಕುಂತಲೆಯನ್ನು ತಿರಸ್ಕರಿಸಬೇಡ!'

ಈ ಮಾತನ್ನು ಕೇಳಿದೊಡನೆ ಸಭಿಕರೆಲ್ಲರೂ ನಿರಾತಂಕರಾಗಿ ರಾಜನನ್ನು ಕುರಿತು ಶಕುಂತಲೆಯನ್ನು ಸ್ವೀಕರಿಸುವಂತೆ ಬೇಡಿಕೊಂಡರು. ರಾಜನೂ ಪ್ರಹೃಷ್ಟ ವದನನಾಗಿ, ಆಸನದಿಂದ ಕೆಳಗಿಳಿದುಬಂದು, 'ಸಭಿಕರೇ! ಇವಳು ನನ್ನ ಪತ್ನಿಯು; ಇವನು ನನ್ನ ಮಗನು; ಇದು ನನಗೆ ತಿಳಿದಿದ್ದೂ, ಪರೋಕ್ಷದಲ್ಲಿ ನಡೆದ ಈ ವಿಷಯ ದಲ್ಲಿ ಪ್ರಜಾಶಂಕೆಗೆ ಗುರಿಯಾಗಬಾರದೆಂದು, ಬಹು ಕಷ್ಟವನ್ನು ಸಹಿಸಿದೆನು. ದೇವ ದೂತನ ವಚನಗಳಿಂದ ನನ್ನ ಮನಸ್ಸು ಹಗುರವೂ, ನಿರಾತಂಕವೂ ಆಯಿತು. ಈ ನನ್ನ ಮಗನು ನಾಳೆ ಚಕ್ರವರ್ತಿಯಾಗುವವನು. ಅನ್ಯಜಾತನೆಂಬ ಶಂಕೆ ನಿಮಗೆ ಬಂದರೆ ಬರಬಹುದು. ಇಂದು ಇವನು ಶುದ್ಧನೆಂಬ ದೈವನಿದರ್ಶನದಿಂದ ಆನಂದವಾಗಿದೆ.' ಎಂದು ಹೇಳಿ ಶಕುಂತಲೆಯನ್ನು ತನ್ನ ಕಠಿನ ವರ್ತನವನ್ನು ಕ್ಷಮಿಸೆಂದು ಬೇಡಿ, ಕುಮಾರನನ್ನೆತ್ತಿ ಬಿಗಿದಪ್ಪಿ, ಮುದ್ದಾಡಿ, ಅವರಿಂದ ಕೂಡಿ ಸಂತೋಷದಿಂದಿದ್ದನು. ಪ್ರಣಯಕೋಪದಿಂದ ಸತಿಯಾಡಿದ ಸತ್ಯ ಕಟೂಕ್ತಿಗಳನ್ನು ಕ್ಷಮಿಸಿ, ಅವಳ ಶುದ್ಧತೆ ಯನ್ನೆತ್ತಿತೋರಲು ತಾನಾಡಿದ ವಿಷನುಡಿಗಳನ್ನು ಮರೆಯುವಂತೆ ಪ್ರಾರ್ಥಿಸಿದನು. ಪುತ್ರನಾದ ಭರತನನ್ನು ಯುವರಾಜನನ್ನಾಗಿ ಪಟ್ಟಗಟ್ಟಿದನು.

ಮುಂದೆ ಭರತನು ಚಕ್ರವರ್ತಿಯಾದನು. ಕಣ್ವನು ಹೋತೃವಾಗಿರಲು ಅಶ್ವ ಮೇಧಾದಿ ಬಹು ಯಜ್ಞಗಳನ್ನು ಮಾಡಿ, ಭೂರಿ ದಕ್ಷಿಣೆಗಳಿಂದ ಬ್ರಾಹ್ಮಣರನ್ನು, ಮೃಷ್ಟಾನ್ನದಿಂದ ಸರ್ವಪ್ರಜರನ್ನು ಸಂತೋಷಪಡಿಸಿದನು. ಆ ಮಹಾನುಭಾವನ ಹೆಸರಿನಿಂದಲೇ ಈ ನಮ್ಮ ದೇಶವು ಭರತಖಂಡವೆಂದು ಖ್ಯಾತವಾಗಿದೆ. ಅವನ ಕುಲ ದಲ್ಲಿ ದೇವಕಲ್ಪರಾದ ರಾಜನ್ಯರು ಹುಟ್ಟಿ ಸತ್ಯಾರ್ಜವ ಧರ್ಮಗಳಿಂದ ರಾಜ್ಯವನ್ನಾಳಿ ಕೀರ್ತಿಶೇಷರಾಗಿಹೋದರು.

ಭರತನು ಕಾಶಿರಾಜನ ಸುತೆಯಾದ ಸುನಂದೆಯನ್ನು ಮದುವೆಯಾಗಿ ಭೂಮನ್ಯು ನೆಂಬ ಸುತನನ್ನು ಪಡೆದನು. ಭೂಮನ್ಯುವಿಗೆ ವಿಜಯಳಲ್ಲಿ ಸುಹೋತ್ರನು, ಅವನಿಗೆ ಸುವರ್ಣೆಯಲ್ಲಿ ಹಸ್ತಿಯು ಜನಿಸಿದರು. ಹಸ್ತಿರಾಜನು ಹಸ್ತಿನಾವತಿಯನ್ನು ನಿರ್ಮಾಣ ಮಾಡಿದನು. ಅವನಿಗೆ ಯಶೋಧರೆಯಲ್ಲಿ ವಿಕುಂಠನನು, ಅವನಿಗೆ ಸುದೇವಳಲ್ಲಿ ಅಜಮೀಢನು, ಅಜಮೀಢನಿಗೆ ಕೈಕೇಯಿಯಲ್ಲಿ ಸಂವರಣನು, ಅವನಿಗೆ ತಪತಿಯಲ್ಲಿ ಕುರುರಾಜನು ಜನಿಸಿದರು. ಕುರುರಾಜನ ವಂಶದಲ್ಲಿ ಹುಟ್ಟಿರುವುದರಿಂದ ಕೌರವರೆನಿಸಿದ ರಾಜನ್ಯರು ವಂಶಾನುಕ್ರಮವಾಗಿ ವಿದೂರ, ಅನಶ್ವ, ಪರೀಕ್ಷಿತ, ಭೀಮಸೇನ, ಪ್ರತಿಶ್ರವಸರೆಂಬುವರು. ಪ್ರತಿಶ್ರವನ ಪುತ್ರನೇ ಪ್ರತೀಪನು. ಆ ಮಹಾರಾಜನಿಗೆ ಸುನಂದೆಯಲ್ಲಿ ದೇವಾಪಿ, ಶಂತನು, ಬಾಹ್ಲೀಕರೆಂಬ ಮೂವರು ಸುತ ರಾದರು. ಶಂತನು ವಂಶದಲ್ಲಿ ಕೌರವ ಪಾಂಡವರು ಜನಿಸಿದರು. ಜನಮೇಜಯಾ!

ನೀನು ಪಾಂಡವ ಮಧ್ಯಮ ಸುತನಾದ ಅಭಿಮನ್ಯುವಿಗೆ ಪೌತ್ರನಾಗಿರುವೆ. ಇನ್ನು ಶಂತನು ರಾಜನ ಕಥೆಯನ್ನು ವಿಸ್ತಾರವಾಗಿ ಹೇಳುವೆನು. ಕೇಳು—

## ಶಂತನು ಚರಿತೆ

ವೈಶಂಪಾಯನನು ಜನಮೇಜಯನಿಗೆ ಶಂತನು ಚರಿತೆಯನ್ನು ನಿರೂಪಿಸಿದನು—ಇಕ್ಷ್ವಾಕು ವಂಶದಲ್ಲಿ ಮಹಾಭಿಷಕ್ ಎಂಬ ರಾಜನಿದ್ದನು. ಅವನು ವರುಣಾಂಶನು. ಹಿಂದೆ ಬ್ರಹ್ಮದೇವನು ಭೂಲೋಕದ ಗಂಗಾಸಾಗರ ಸಂಗಮಸ್ಥಲದಲ್ಲಿ ಬಂದು ತಂಗಿದ್ದನು. ಗಂಗಾಸಂಗದಿಂದ ಉಬ್ಬಿ ಸಮುದ್ರರಾಜನಾದ ವರುಣನು ತನ್ನ ನೀರನ್ನು ಮೇಲಕ್ಕೆ ಉಕ್ಕೇರಿಸಿದನು. ಆಗ ಕೆಲ ಹನಿಗಳು ಬ್ರಹ್ಮನಮೇಲೆ ಬಿದ್ದವು. ಬ್ರಹ್ಮನು 'ಶಾಂತೋಭವ ! ಮಹಾಭಿಷಕ್!' ಎಂದು ವರುಣನಿಗೆ ಮಹಾಭಿಷನಾಗಿ ಮನುಜಯೋನಿಯಲ್ಲಿ ಹುಟ್ಟುವಂತೆ ಶಪಿಸಿದನು. ಅಭಿಷೇಕವನ್ನು ಮಾಡಿದುದರಿಂದ ಮಹಾಭಿಷಕ್ ಎನಿಸಿದ ವರುಣನೇ, ಇನ್ನೊಂದು ಜನ್ಮದಲ್ಲಿ 'ಶಾಂತೋಭವ' ಎಂದುದರಿಂದ ಶಂತನುರಾಜನಾಗಿ ಜನಿಸಿದನು.

ಮಹಾಭಿಷಗ್ರಾಜನು ರಾಜಸೂಯಾಶ್ವಮೇಧಗಳನ್ನು ಮಾಡಿದನು. ಮುಂದೆ ಮೃತನಾಗಿ ಸತ್ಯಲೋಕವನ್ನು ಸೇರಿದನು. ಒಂದು ದಿನ ಬ್ರಹ್ಮನ ಸಭೆಯಲ್ಲಿ ದೇವಋಷಿ ಗಂಧರ್ವರು ನೆಲಸಿರುವಾಗ, ಗಂಗಾದೇವಿಯು ಬ್ರಹ್ಮದರ್ಶನಕ್ಕೆಂದು ಬಂದಳು. ಅಕಸ್ಮಾತ್ತಾಗಿ ಅವಳ ಧವಳಾಂಬರಾಂಚಲವು ಗಾಳಿಯಿಂದ ಸಡಿಲವಾಯಿತು. ಸಂಭ್ರಮಕಾತರಳಾದ ಗಂಗೆ ವಸ್ತ್ರವನ್ನು ಸರಿಮಾಡಿಕೊಳ್ಳುತ್ತಿರುವಾಗ, ಸಭಿಕರೆಲ್ಲರು ಕಣ್ಣು ಮುಚ್ಚಿ ಕೂತರು. ಆದರೆ ಮಹಾಭಿಷಕನು ಭಾಗೀರಥಿಯನ್ನು ಅನುರಾಗದಿಂದ ನೋಡುತ್ತಿದ್ದನು. ಅದನ್ನರಿತು ಬ್ರಹ್ಮದೇವನು ಮತ್ತೆ ಮನುಜನಾಗೆಂದು ಅವನಿಗೆ ಶಾಪವನ್ನಿತ್ತನು. ಆಗ ವರುಣನು ಪ್ರತೀಪರಾಜನ ತೃತೀಯ ಪುತ್ರನಾಗಿ ಜನಿಸಿದನು.

ಪ್ರತೀಪನ ಪ್ರಥಮಪುತ್ರನಾದ ದೇವಾಪಿಯು ತ್ವಗ್ದೋಷ ದೂಷಿತನಾಗಿ, ರಾಜ್ಯವನ್ನು ತ್ಯಜಿಸಿ, ತಪಸ್ಸಿಗೆಂದು ವನವನ್ನು ಸೇರಿದನು. ಮುಂದೆ ಕಲಿಯುಗಾಂತ್ಯದಲ್ಲಿ ಅವನು ಕಲಾಪ ಗ್ರಾಮದಿಂದ ಬಂದು ಧರ್ಮವನ್ನು ಸ್ಥಾಪಿಸುವನು. ದ್ವಿತೀಯ ಪುತ್ರನಾದ ಬಾಹ್ಲೀಕನು ಹುಟ್ಟಿದಾಗ ಅವನ ಭಾರಕ್ಕೆ ಭೂತಲವು ಸೀಳಿತು. ಭೂಭಾರಹರಣ ಚರಣನಾದ ಶ್ರೀಕೃಷ್ಣನ ಸೇವೆಗಾಗಿ, ಪ್ರಹ್ಲಾದನೇ ಬಾಹ್ಲೀಕನಾಗಿ ಜನಿಸಿದನು. ಅವನು ಪುತ್ರಿಕಾ ಧರ್ಮದಿಂದ ತನ್ನ ತಾಯಿಯ ತಂದೆಗೆ ಮಗನೆಂದು ಕೊಡಲ್ಪಟ್ಟು ಬಾಹ್ಲೀಕ ದೇಶ ರಾಜನಾದನು. ಅವನ ಮಗನೇ ಸೋಮದತ್ತನು. ಪತ್ರತಾಪನೆಂಬ ರುದ್ರಾಂಶದಿಂದ ಜನಿಸಿದ ಸೋಮದತ್ತನಿಗೆ ಅಜೈಕಪಾತ್, ಅಹಿರ್ಬುಧ್ನಿ, ವಿರೂಪಾಕ್ಷರೆಂಬ ರುದ್ರರೇ ಭೂರಿ, ಭೂರಿಶ್ರವ, ಶಲ ಎಂಬ

ಸುತರಾಗಿ ಜನಿಸಿದರು. ಭೂರಿಶ್ರವನು ಮಹಾದೇವಾವೇಶದಿಂದ ಯುಕ್ತನಾಗಿ ಮಹಾ ಬಲವಂತನೆನಿಸಿದನು.

ಶಪ್ತನಾಗಿ ಶಂತನುನಾಗುವ ವರುಣನನ್ನು ನೆನೆಯುತ್ತಾ ಗಂಗಾದೇವಿಯು ಸತ್ಯಲೋಕದಿಂದ ಬರುವಾಗ ಹಾದಿಯಲ್ಲಿ ಅಷ್ಟವಸುಗಳನ್ನು ಕಂಡಳು. ನಷ್ಟತೇಜ ರಾಗಿದ್ದು ವ್ಯಸನಪಡುವ ವಸುಗಳನ್ನು ನೋಡಿ, ಗಂಗೆ ವ್ಯಸನ ಕಾರಣವನ್ನು ಕೇಳಿದಳು. ಆ ವಸುಗಳಿಂತು ನಿವೇದಿಸಿದರು—

"ದ್ರೋಣ, ಪ್ರಾಣ, ಧ್ರುವ, ಅರ್ಕ, ಅಗ್ನಿ, ದೋಷಾ, ವಿಭಾವಸು, ದ್ಯು ಎಂಬ ಹೆಸರುಳ್ಳ ಅಷ್ಟ ವಸುಗಳು ನಾವು. ದ್ಯು ಎಂಬುವನ ಪತ್ನಿ ವರಾಂಗಿ; ಅವಳಿಗೆ ವರಾಂಗಿ ಎಂಬ ಸುವಿಂದ ರಾಜಪತ್ನಿ ಸಖಿಯಾಗಿದ್ದಳು. ಅವಳ ಕೋರಿಕೆಯಂತೆ ದೇವವರಾಂಗಿ ಜರಾಮರಣ ದೂರೀಕರಣ ಸಮರ್ಥವಾದ ಕ್ಷೀರವನ್ನು ಕೊಡುವ ವಸಿಷ್ಠರ ನಂದಿನಿ ಧೇನುವನ್ನು ಕದ್ದುತರುವುದೆಂದು ತನ್ನ ಗಂಡನಾದ ದ್ಯುವನ್ನು ಪೀಡಿಸಿದಳು. ಆ ಚೌರ್ಯದಲ್ಲಿ ಅವನಿಗೆ ಇತರ ವಸುಗಳೂ ಸಹಾಯಕರಾದೆವು. ವಸುಗಳು ಕಟ್ಟಿಸೆಳೆವಾಗ ನಂದಿನಿಯು 'ಅಂಬಾ' ಎಂದು ಆರ್ತನಾದವನ್ನು ಮಾಡಿತು. ಅದನ್ನು ಕೇಳಿ ವಸಿಷ್ಠನು ಬಂದನು. ದೇವತೆಗಳು ಮಾಡಬಾರದ ಚೌರ್ಯದಲ್ಲಿ ನಿರತರಾದ ವಸುಗಳನ್ನು ನೋಡಿ ಕುಪಿತನಾಗಿ, ಅವರಿಗೆ ಶಾಪವನ್ನಿತ್ತನು. ವಸುಗಳಿಗೆ ಅವರನಾದ ವಸಿಷ್ಠನಲ್ಲಿದ್ದ ಬ್ರಹ್ಮದೇವನೇ ದ್ಯುಪ್ರಮುಖ ವಸುಗಳನ್ನು ಕುರಿತು ಇಂತೆಂದನು—

'ಗೋಬಂಧನ ರೂಪ ಅಧರ್ಮ ನಿರತರಾದ ನೀವು ಮನುಷ್ಯರಾಗಿರಿ ! ದ್ಯು ನಾಮಕನು ಮುಖ್ಯಾಪರಾಧಿಯಾದುದರಿಂದ ನಿಮ್ಮ ಎಂಟು ಜನರ ಆಯುಷ್ಯವನ್ನು ಹೊಂದಿ ಪಾಪಫಲವನ್ನು ಅನುಭವಿಸಲಿ ! ಎಂಟು ಜನರ ಮರಣಕಾಲೀನ ದುಃಖವೂ ಅವನಿಗೇ ಆಗಲಿ ! ಅಲ್ಪಾಪರಾಧಿಗಳಾದ ಮಿಕ್ಕ ನೀವು ಏಳು ಜನ ಬೇಗನೆ, ದೇವತೆಗಳಿಗೆ ನಿರಯ ಸಮಾನವೆನಿಸಿದ ಮನುಜತ್ವದಿಂದ ಮುಕ್ತರಾಗಿ, ಸ್ವರೂಪವನ್ನು ಸೇರುವಿರಿ. ವರಾಂಗಿಯೇ ಈ ಅನರ್ಥ ಕಾರಣಳಾದುದರಿಂದ ಅವಳೂ ಮನುಜ ಳಾಗಲಿ ! ಅಲ್ಲಿ ಪತಿದೂರಳಾಗಿ, ಕೆಲಕಾಲ ಪುರುಷ ಶರೀರವನ್ನು ಹೊಂದಿ, ಮುಂದೆ ಮೃತಳಾಗಿ, ಸ್ವರೂಪವನ್ನು ಹೊಂದಲಿ ! ದ್ಯುವಸುವು ಕೂಡ ಬ್ರಹ್ಮಚಾರಿಯಾಗಿ ಪತ್ನೀದೂರನಾಗಲಿ !'

ಆಗ ವಸುಗಳು ಏಳು ಜನ ನಾವು ಬ್ರಹ್ಮದೇವನಿಗಿಂತು ವಿಜ್ಞಾಪಿಸಿದೆವು. 'ಸ್ವಾಮಿ ! ಮನುಜವೀರ್ಯದಿಂದ ದೇವತಾಗರ್ಭದಲ್ಲಿ ನಾವು ಜನಿಸುವಂತೆ ಅನುಗ್ರಹಿಸು. ಶಾಪ ಖಿನ್ನನಾದ ದ್ಯು ವಸುವಿಗೂ ನಿನ್ನ ಅನುಗ್ರಹವಿರಲಿ ! ಅವನು ನಿನ್ನಾವೇಶಯುಕ್ತನಾಗಿ ನಮ್ಮೆಲ್ಲರ ಬಲ ವೀರ್ಯತೇಜಸ್ಸುಗಳಿಂದ ಪ್ರಕಾಶಿಸಲಿ ! ಮಹಾರಥಿಕನೆಂದು ಪ್ರಖ್ಯಾತನಾಗಲಿ !' ಎಂದು ಕೇಳಿಕೊಂಡೆವು. ವಸಿಷ್ಠಸ್ಥ ಚತುರ್ಮುಖನು 'ಹಾಗೇ ಆಗಲಿ' ಎಂದು ಕರುಣಿಸಿರುವನು.

ತಾಯಿ ಭಾಗೀರಥಿ ! ನಾವು ಶಂತನುವಿನ ಪುತ್ರರಾಗಬಯಸುವೆವು. ನೀನವನ ನಿಯತ ಪತ್ನಿಯಾದ ದೇವಕಾಂತೆಯೂ ಆಗಿರುವೆ. ನಮ್ಮನ್ನು ನೀನು ಹಡೆದ ತತ್ಕ್ಷಣ ಗಂಗೆಯಲ್ಲಿ ಒಗೆದು ಸಂಹರಿಸಿ, ನಮಗೆ ಮನುಜತ್ವವನ್ನು ಬೇಗ ಕಳೆ! ನಮ್ಮನ್ನು ಕೊಂದೆ ಎಂಬ ದ್ವೇಷವನ್ನು ನಾವು ಮಾಡುವುದಿಲ್ಲ. ನಮಗೆ ಪರಮೇಷ್ಟವನ್ನು ಕೊಡಿಸಿದ ನಿನ್ನನ್ನು ಪ್ರೀತಿಸುವೆವು. ನಿನಗೆ ಅದರಿಂದ ಶಿಶುಹತ್ಯಾ ಪಾಪವೂ ಬರದಿರಲಿ! ಕೊನೆಯ ಮಗನಾದ ಭೀಷ್ಮನು ದೀರ್ಘಾಯುಷ್ಮಂತನಾಗಿ ಗಾಂಗೇಯನೆನಿಸಿ, ನಿನಗೆ ಕೀರ್ತಿಯನ್ನು ತರುವನು.

ಇಂತು ವಿಜ್ಞಾಪಿಸಿದ ವಸುಗಳ ಮಾತಿಗೆ ಸಮ್ಮತಿಸಿ, ಗಂಗೆ ಮುಂದೆ ಶಂತನು ಪತ್ನಿಯಾಗಿ, ವಸುಗಳ ಮುಕ್ತಿಯನ್ನು ಸಾಧಿಸುವ ವಿಷಯದಲ್ಲಿ ವಿಘ್ನವು ಬರದಿರಲೆಂದು ಒಂದುದಿನ ಸಕಾಮರಾದ ಮನುಜ ವನಿತೆಯರಂತೆ, ಗಂಗಾ ತೀರದಲ್ಲಿ ವಿಶ್ರಮಿಸಿದ್ದ ಪ್ರತೀಪರಾಜನ ಬಲತೊಡೆಯ ಮೇಲೆ ಬಂದು ಕುಳಿತಳು. ಬಲತೊಡೆಯನ್ನಾಶ್ರಯಿಸಿದವಳು ಮಗಳಾಗಬಹುದು ಅಥವಾ ಸೊಸೆಯಾಗುವುದು ಧರ್ಮವೆಂದರಿತ ಪ್ರತೀಪನು 'ನೀನು ನನಗೆ ಪತ್ನಿಯಾಗಲಾರೆ, ಸೊಸೆಯಾಗು' ಎಂದನು. ಗಂಗೆ 'ರಾಜನ್! ನಿನ್ನ ಮೂವರು ಸುತರಲ್ಲಿ ನಾನು ಶಂತನುಪತ್ನಿಯಾಗಲಿಚ್ಛಿಸುವೆನು. ಆದರೆ ನಿನ್ನ ಮಗನು ನೀನಾರು? ಎಂದು ಕೇಳಕೂಡದು. ನಾನು ಮಾಡುವ ಕಾರ್ಯವನ್ನು ತಡೆಯಬಾರದು. ಅಯೋಗ್ಯವೇ ಮಾಡಿದರೂ ಅದರ ಕಾರಣವನ್ನು ಕೇಳಬಾರದು ಎಂದು ಮೂರು ನಿಬಂಧನೆಗಳನ್ನು ಪಾಲಿಸಿದರೆ ಮಾತ್ರ ನಾನವನಲ್ಲಿ ಇರುವೆನು. ಒಂದಾದರೂ ನಿಬಂಧನವನ್ನು ಮುರಿದರೆ ತತ್‌ಕ್ಷಣವೇ ನಾನು ಅವನನ್ನು ತ್ಯಜಿಸಿ ಹೊರಟುಹೋಗುವೆನು' ಎಂದಳು. ಪ್ರತೀಪನು ಸರಿ ಎಂದು ಅಂಗೀಕರಿಸಿದನು. ತಂದೆಯ ಮಾತು ಮಗನಿಗೂ ಮೀರುವಂತಾಗಲಿಲ್ಲ. ಪ್ರತೀಪನು ತನ್ನ ಮಗನಾದ ಶಂತನುನಿಗೆ ಪಟ್ಟಾಭಿಷೇಕ ಮಾಡಿ, ಏಕಾಂತದಲ್ಲಿ 'ಒಬ್ಬಳು ದೇವಕಾಂತೆಯು ಪುತ್ರಾರ್ಥಿನಿಯಾಗಿ ನಿನ್ನಲ್ಲಿ ಬರುವಳು. ವತ್ಸ! ಅವಳನ್ನು ಸ್ವೀಕರಿಸು! ನೀನಾರು? ಹೀಗೇಕೆ ಮಾಡುವೆ ? ಬೇಡ, ಬಿಡು—ಎಂಬ ಮೂರು ಪ್ರತಿಕ್ಷೇಪಗಳನ್ನು ಮಾಡದೆ, ಅವಳ ಕೂಡಿ ಸುಖದಿಂದಿರು ! ನಿನಗೆ ಶ್ರೇಯಸ್ಸಾಗುವುದು ' ಎಂದು ಹೇಳಿ ಸಪತ್ನೀಕನಾಗಿ ವಾನಪ್ರಸ್ಥನಾದನು.

ಶಂತನುರಾಜನು ಒಂದುದಿನ ಬೇಟೆಯಾಡಲು ಹೋದನು. ಗಂಗಾತೀರದಲ್ಲಿ ಅವನಿಗೊಬ್ಬಳು ದಿವ್ಯ ಸುಂದರಿ ಕಾಣಿಸಿದಳು. ಸೂಕ್ಷ್ಮಾಂಬರ ಧಾರಿಣಿಯು, ಪದ್ಮಗರ್ಭಾರುಣೇಕ್ಷಣೆಯು, ರೂಪರಾಶಿಯು ಆದ ಅವಳ ಸೌಂದರ್ಯಾಮೃತವನ್ನು ಕಣ್ಣುಗಳಲ್ಲಿ ತುಂಬಿ ಕುಡಿವವನಂತೆ ನೋಡುವ ರಾಜನಲ್ಲಿ ಅವಳೂ ಅನುರಕ್ತಳಾಗಿ ಸಮೀಪಿಸಿದಳು. ವರಿಸೆಂದು ಬೇಡಿದ ರಾಜನಿಗೆ ಅವಳಿಂತೆಂದಳು—'ರಾಜನ್! ನಿನ್ನ ವರಿಸಲೆಂದೇ ಬಂದಿರುವೆನು. ನಿಮ್ಮ ತಂದೆಯು ಕೊಟ್ಟ ಭಾಷೆಯಂತೆ ನೀನು ನಡೆ! ನೀನಾರೆನಬೇಡ! ಹೀಗೇಕೆ ಮಾಡುವೆ ಎಂದು ಕೇಳಬೇಡ! ಮಾಡುವ ಕಾರ್ಯವು

ಅಯೋಗ್ಯವೆಂದು ತೋರಿದರೂ ತಡೆಯಬೇಡ! ತಡೆದರೆ ಬಿಟ್ಟುಹೋಗುವೆನು.' ನಿನ್ನನ್ನು ವರಿಸುವೆನೆಂದ ಗಂಗೆಯನ್ನು ಅವಳ ಮಾತಿಗಂಗೀಕರಿಸಿ, ವರಿಸಿ, ಶಂತನು ರಾಜನು ಅವಳಿಂದ ಕೂಡಿ ಅತಿ ಸಂತೋಷಪರವಶನಾಗಿ ಕಾಲವನ್ನು ಕಳೆದನು. ಮನುಜವಿಗ್ರಹವನ್ನು ತಳೆದ ದೇವಗಂಗೆ, ಶೀಲವೃತ್ತ ರೂಪೌದಾರ್ಯ ಗುಣಗಳಿಂದ ಸೇವಿಸಿ, ಶಂತನುವಿನ ಮನವನ್ನು ಸೂರೆಗೊಂಡಳು. ಅವಳು ಪ್ರತಿ ಸಂವತ್ಸರವೂ ಒಂದು ಪುತ್ರ ಶಿಶುವನ್ನು ಪ್ರಸವಿಸಿ, ತತ್‌ಕ್ಷಣ ಆ ಶಿಶುವನ್ನು ಗಂಗೆಯಲ್ಲಿ ಬಿಡುತ್ತಿದ್ದಳು. ಪುತ್ರಘಾತಿನಿಯಾದ ಪತ್ನಿಯನ್ನು ತಡೆಯಲಾರದೆ, ಪುತ್ರನಾಶವನ್ನು ಸಹಿಸಲಾರದೆ, ರಾಜನು ಚಿಂತಾಕ್ರಾಂತನಾದನು. ಹೀಗೆ ಏಳು ಜನ ಸುತರು ಮುಕ್ತರಾದರು. ಎಂಟನೆ ಮಗನನ್ನೂ ನೀರುಪಾಲು ಮಾಡುವ ಮಡದಿಯನ್ನು ನೋಡಿ, ಕಡು ಕೋಪವು ಉಕ್ಕೇರಿ ತಡೆಯಲಾರದೆ, ರಾಜನು ಅವಳನ್ನು ತಡೆದು ಇಂತೆಂದನು— 'ನಿಲ್ಲು! ಕೊಲ್ಲಬೇಡ ಇವನನ್ನು! ಯಾರು ನೀನು? ನನ್ನ ಮಕ್ಕಳನ್ನು ಹಿಂಸಿಸಲು ಕಾರಣವೇನು?' ಆ ಮಾತನ್ನಾಲಿಸಿ ತಾನು ಬಂದ ದೇವಕಾರ್ಯವಾಯಿತೆಂದರಿತು ಗಂಗೆ, ರಾಜನಿಗೆ ತನ್ನ ವೃತ್ತಾಂತವನ್ನರುಹಿದಳು. 'ನಾನು ಗಂಗೆ. ಇವರು ಅಷ್ಟ ವಸುಗಳು. ವಸಿಷ್ಠ ಶಾಪದಿಂದ ಮನುಜರಾಗಿ ಪುಟ್ಟಿದ್ದ ಇವರಲ್ಲಿ ಏಳು ಜನರಿಗೆ ಸ್ವರೂಪ ಪ್ರಾಪ್ತಿಯಾಗುವಂತೆ ಗಂಗೆಯಲ್ಲಿ ಬಿಟ್ಟು, ಅವರ ಬೇಡಿಕೆಯನ್ನು ಪೂರೈಸಿ ದೆನು. ಅಷ್ಟ ವಸುಗಳಿಗೆ ತಂದೆ ಎನಿಸಿದ ನಿನಗೆ ಶ್ರೇಷ್ಠ ಲೋಕಗಳು ಕಾದಿವೆ. ನಿನಗೆ ಸ್ವಸ್ತಿಯಾಗಲಿ! ಈ ಎಂಟನೇ ಮಗನು ಉಳಿದು ನಿನ್ನ ಸುತನಾಗಿ ಚಿರಕಾಲ ಬಾಳುವನು. ಇವನು ಕೆಲಕಾಲ ನನ್ನಲ್ಲಿದ್ದು, ವಿದ್ಯಾಶೌರ್ಯಗಳನ್ನಾರ್ಜಿಸಲಿ! ಮುಂದೆ ಮತ್ತೆ ಇವನನ್ನು ನಿನ್ನಲ್ಲಿ ತಂದು ಬಿಡುವೆನು' ಎಂದು ಗಂಗೆ, ದೇವವ್ರತ ನೆಂಬ ಎಂಟನೇ ಮಗನಿಂದ ಕೂಡಿ ಹೊರಟುಹೋದಳು. ಶಂತನುವು ಮನೆಗೆ ಬಂದು, ಮಗನನ್ನೇ ನೆನೆಯುತ್ತಾ, ಕಾಲವನ್ನು ಕಳೆಯುತ್ತಿದ್ದನು.

ಧರ್ಮಾರ್ಥ ಕುಶಲನು, ಭರತವಂಶ ವರ್ಧನನು, ಗುಣಗಣನಿಲಯನು, ಆದ ಶಂತನುವು ತನ್ನ ಕೈಯಿಂದ ಮುಟ್ಟುವದರಿಂದಲೇ ಜನರಿಗೆ ಸುಖವನ್ನು ಕೊಡುತ್ತಾ, ಶಂತನು ನಾಮವನ್ನು ಸಾರ್ಥಕಗೊಳಿಸಿದನು. ಅವನ ರಾಜ್ಯದಲ್ಲಿ ಪ್ರಜರು ಧರ್ಮ ತತ್ಪರರಾಗಿದ್ದರು. ದೇವರಾಜ ಸದೃಶನಾದ ಅವನಿಗೆ ಮಿಕ್ಕ ರಾಜರು ಸಾಮಂತರಾಗಿ ಕಪ್ಪಕಾಣಿಕೆಯನ್ನಿತ್ತು ಸೇವಿಸಿದರು. ನಯ ವಿನಯ ಧರ್ಮ, ವೀರ್ಯೌದಾರ್ಯಾದಿ ಗುಣ ಖನಿಯಾದ ಶಂತನು ದೇವಾನುಗ್ರಹದಿಂದ ಸ್ವಚ್ಛಂದಮರಣಿಯಾಗಿದ್ದನು. ಒಂದುದಿನ ಶಂತನು ಚಕ್ರವರ್ತಿಯು ಬೇಟೆಗಾಗಿ ಹೊರಟು ಗಂಗಾತೀರವನ್ನು ಸೇರಿ ದನು. ಭರಪೂರವಾಗಿ ಹರಿವ ಸರಿದ್ವರೆ ಅಂದು ಕೃಶಳಾಗಿ, ಜೀವನ ದೀನಳಂತೆ ಇರು ವುದನ್ನು ಕಂಡು, ರಾಜನು ಆಶ್ಚರ್ಯಗೊಂಡನು. ಕಾರಣವನ್ನರಸುತ್ತಾ ಅರಸನು, ಹೊಳೆಯ ಮೇಲ್ಭಾಗದಲ್ಲಿ ಒಂದು ವಿಚಿತ್ರವನ್ನು ಕಂಡನು.

ಒಬ್ಬ ಸುಂದರ ರಾಜಕುಮಾರನು ಶರಜಾಲದಿಂದ ಸೇತುವೆಯನ್ನು ಕಟ್ಟಿ ಗಂಗಾನದಿಯ ಜಲವನ್ನು ಬಂಧಿಸಿದ್ದನು. ಆ ಕುಮಾರನು ತನ್ನ ಮಗನೇ ಎಂದು ರಾಜನು ತಿಳಿಯಲಾರದೆ ಗಂಗೆಯನ್ನು ಸ್ಮರಿಸಿದನು. ಗಂಗಾದೇವಿಯು ಬಲಗೈಯಿಂದ ಬಾಲಕನ ಕೈಹಿಡಿದು ಕರೆತಂದು ರಾಜನಿಗೊಪ್ಪಿಸಿ 'ರಾಜನ್! ಇವನು ನಿನ್ನ ಅಷ್ಟಮ ಪುತ್ರನು. ಬೃಹಸ್ಪತ್ಯಾಚಾರ್ಯರಲ್ಲಿ ವೇದಗಳನ್ನು ಐವತ್ತು ವರ್ಷಗಳ ಕಾಲ ಕಲಿತಿರುವನು. ಭೃಗುಕುಲತಿಲಕನು, ಸಾಕ್ಷಾನ್ನಾರಾಯಣಾವತಾರನು ಆದ ಶ್ರೀ ಪರಶುರಾಮನಲ್ಲಿ ಐವತ್ತು ವರ್ಷ ಹರಿತತ್ವವನ್ನರಿತಿರುವನು; ಹಾಗೂ ಇಪ್ಪತ್ತೈದು ವರ್ಷಗಳಲ್ಲಿ ಅಸ್ತ್ರವಿದ್ಯೆಯನ್ನೂ ಗಳಿಸಿರುವನು. ಇವನು ಬಲವೀರ್ಯೋಪಪನ್ನನಾಗಿರುವನು. ಶುಕ್ರನಂತೆ ನಿಪುಣನೂ, ಗುರುವಿನಂತೆ ಪಂಡಿತನೂ ಆದ ನಿನ್ನ ಮಗನನ್ನು ಸ್ವೀಕರಿಸು' ಎಂದು ಹೇಳಿ ಗಂಗೆ ಅಂತರ್ಧಾನಳಾದಳು.

ಗುಣವಂತನಾದ ಪುತ್ರನನ್ನು ಯುವರಾಜ ಪದವಿಯಲ್ಲಿ ಅಭಿಷೇಕಿಸಿ, ಶಂತನು ನಿಶ್ಚಿಂತನಾಗಿದ್ದನು. ಮುಂದೆ ದೇವವ್ರತನು ತಂದೆಯ ಅಪ್ಪಣೆಯನ್ನು ಪಡೆದು, ಐವತ್ತು ವರ್ಷಗಳು ಬೃಹಸ್ಪತಿಯಲ್ಲಿ ವೇದಗಳನ್ನು ಮತ್ತೆ ಕಲಿತನು. ಶ್ರೀ ಭಾರ್ಗವನಲ್ಲಿ ಐವತ್ತು ವರ್ಷ ಅಸ್ತ್ರ ಶಸ್ತ್ರಗಳನ್ನೂ, ಮುನ್ನೂರು ವರ್ಷಗಳ ಕಾಲ ತತ್ವಶಾಸ್ತ್ರವನ್ನೂ ಅಭ್ಯಸಿಸಿ, ಮಹಾಚತುರನೆನಿಸಿದನು. ತಂದೆಯನ್ನು ಮರೆಸುವನೆಂಬಂತೆ ಪ್ರಜರನ್ನು ರಂಜಿಸಿದನು.

ಒಂದುದಿನ ಶಂತನುರಾಜನು ಬೇಟೆಯಾಡಲು ಹೋದವನು ಒಂದು ಹುಲ್ಲಿನ ಪೊದೆಯಲ್ಲಿ ಇಬ್ಬರು ಶಿಶುಗಳನ್ನು ಕಂಡು ಕೃಪೆಗೊಂಡು ತಂದು ಸಾಕಿಕೊಂಡನು. ಆಗ ಶರದ್ವಂತನೆಂಬ ಗೌತಮಗೋತ್ರಜ ಮುನಿಯು ಬಂದು, ಅವರು ತನ್ನ ಮಕ್ಕಳೆಂದೂ ಊರ್ವಶೀ ದರ್ಶನದಿಂದ ಸ್ಖಲಿತವಾದ ವೀರ್ಯದಿಂದ ಜನಿಸಿದರೆಂದೂ ತಿಳಿಸಿದನು. ಗಂಡುಕೂಸಿಗೆ ಕೃಪ (ವಿಷ್ಕಂಭರುದ್ರಾಂಶ) ನೆಂದೂ, ಹೆಣ್ಣಿಗೆ ಕೃಪಿ (ತಾರಾಂಶ) ಎಂದೂ ಹೆಸರಿಟ್ಟು, ಬ್ರಾಹ್ಮಣ ಜಾತಿ ಸಂಸ್ಕಾರಗಳನ್ನು ಮಾಡಿ, ರಾಜನಿಗರ್ಪಿಸಿ ತಾನು ವನಕ್ಕೆ ಹೋದನು. ಕೃಪನು ವಿಶ್ವಾಮಿತ್ರ ಮುನಿಯಿಂದ ವೇದಶಾಸ್ತ್ರಗಳನ್ನೂ ತಂದೆಯಿಂದ ಸರ್ವ ಶಸ್ತ್ರಾಸ್ತ್ರ ವಿದ್ಯೆಗಳನ್ನೂ ಕಲಿತು ಸರ್ವಜ್ಞನೆನಿಸಿದನು. ಅದೇಕಾಲದಲ್ಲಿ ಭರದ್ವಾಜರಿಗೆ ಘೃತಾಚಿ ದರ್ಶನದಿಂದ ಕುಂಭ (ದ್ರೋಣ) ದಲ್ಲಿ ದ್ರೋಣನೆಂಬ ಸುತನು ಜನಿಸಿದನು. ಭರದ್ವಾಜನು ಸುತನನ್ನು ವೇದಶಾಸ್ತ್ರ ಶಸ್ತ್ರಾಸ್ತ್ರ ಕುಶಲನನ್ನಾಗಿ ಮಾಡಿದನು. ಪಾಂಚಾಲ ದೇಶಾಧಿಪನಾದ ಪೃಷತ ರಾಜನು ತಪಸ್ಸನ್ನು ಮಾಡುತ್ತಾ, ಅಪ್ಸರೋದರ್ಶನದಿಂದ ರೇತಸ್ ಸ್ಖಲನವಾಗಲು, ನಾಚಿಕೆಯಿಂದ ಅದನ್ನು ಕಾಲಿನಿಂದ ಮುಚ್ಚಿದನು. ಅಲ್ಲಿಂದ ದ್ರುಪದನೆಂಬ ಮಗನು ಹುಟ್ಟಿದನು. ಅವನು ಭಾರದ್ವಾಜನ ಶಿಷ್ಯನಾಗಿ ದ್ರೋಣನಿಂದ ಕೂಡಿ ವೇದಶಾಸ್ತ್ರ ಶಸ್ತ್ರಗಳನ್ನು ಕಲಿತನು. ದ್ರೋಣನು ಕೃಪಿಯನ್ನು ಮದುವೆಯಾಗಿ, ಹಸ್ತಿನಾವತಿಯಲ್ಲಿ, ಪರರನ್ನು ಬೇಡದೇ ಉಂಛವೃತ್ತಿಯಿಂದ ಜೀವಿಸುತ್ತಿದ್ದನು. ಅವನು

ದೇವವ್ರತನ ಸಖ್ಯವನ್ನು ಸಂಪಾದಿಸಿದನು. ಇವರಿಗೆ ವಯಸಾ ಸಮಾನನಾದ ವಿರಾಟನು ಮತ್ಸ್ಯದೇಶಾಧಿಪನಾಗಿದ್ದನು.

ಒಂದುದಿನ ಶಂತನುರಾಜನು ಬೇಟೆಗೆಂದು ಹೋದನು. ಯಮುನೆಯನ್ನು ದಾಟಿಸುತ್ತಿದ್ದ ದಿವ್ಯಕನ್ಯೆಯನ್ನು ನೋಡಿದನು. ಅವಳು ಪೂರ್ವಸರ್ಗದಲ್ಲಿ ಅಗ್ನಿಷ್ವಾತ್ತರೆಂಬ ದೇವ ಪಿತೃಗಳ ಮಗಳಾದ ಅಚ್ಛೋದೆ ಎನಿಸಿ, ಶ್ರೀಹರಿಯನ್ನು ಮಗನಾಗೆಂದು ಬೇಡಿ ತೀವ್ರ ತಪವನ್ನು ಮಾಡಿ, ಪ್ರೀತನಾದ ಸ್ವಾಮಿಯಿಂದ ಅಂತಹ ವರವನ್ನು ಪಡೆದಿದ್ದಳು. ಅವಳೇ ಈಗ ದಾಶರಾಜನ ಮನೆಯಲ್ಲಿ ಬೆಳೆಯುತ್ತಿದ್ದಳು. ಶ್ರೀಹರಿಯು ಪರಾಶರರಿಂದ ಅವಳಲ್ಲಿ ಅವತರಿಸಿದ್ದನು. ಅಂತಹ ಯೋಜನಗಂಧಿಯನ್ನು ಕಂಡು ಮೋಹಿಸಿದ ಶಂತನು, ಅವಳ ತಂದೆ ಎನಿಸಿದ ದಾಶರಾಜನನ್ನು ಅವಳನ್ನು ತನಗೆ ಕೊಟ್ಟು ವಿವಾಹ ಮಾಡಿಕೊಡೆಂದು ಕೇಳಿದನು. ದಾಶರಾಜನು 'ಇವಳು ನನ್ನ ಮಗಳಲ್ಲ. ವಸುರಾಜನ ಮಗಳು. ಕ್ಷತ್ರಿಯಳಾದ ಇವಳಿಗೆ ನೀನು ತಕ್ಕ ವರನಿರುವೆ. ಆದರೆ ಇವಳಿಗೆ ಹುಟ್ಟುವ ಮಗನಿಗೆ ಪಟ್ಟಗಟ್ಟುವದಾದರೆ ಮಾತ್ರ ಸ್ವೀಕರಿಸು, ಇಲ್ಲದಿದ್ದರೆ ಬೇಡ' ಎಂದನು. ಮದನಪೀಡಿತನಾದ ರಾಜನು ದೇವವ್ರತನನ್ನು ನೆನೆದು, ಇಂತಹ ವರವನ್ನು ಕೊಟ್ಟು ಪುತ್ರನಿಗೆ ಅನ್ಯಾಯ ಮಾಡಲಾರದೆ, ಹಸ್ತಿನಾವತಿಗೆ ಹಿಂದಿರುಗಿಬಂದನು. ಚಿಂತಾಕ್ರಾಂತನಾಗಿ, ರಾಜ್ಯಕಾರ್ಯವಿಮುಖನಾದ ತಂದೆಯ ಚಿಂತೆಗೆ ಕಾರಣವೇನೆಂದು ಚಿಂತಿಸಿ, ದೇವವ್ರತನು, ತಂದೆಯ ಸೂತನಿಂದ ನಡೆದುದೆಲ್ಲವನ್ನರಿತನು. ತಂದೆಯನ್ನು ನೋಡಿ 'ತಾತ ಚಿಂತೆ ಏತಕ್ಕೆ? ನಿನ್ನ ಮನೋರಥವನ್ನು ನಾನು ಪೂರೈಸಿಕೊಡುವೆನು' ಎಂದನು. ಶಂತನು ಇಂತೆಂದನು—' ವತ್ಸ! ನೀನು ಶಸ್ತ್ರಾಸ್ತ್ರ ಕುಶಲನು, ವಿದ್ಯಾವಂತನು ಆಗಿರುವೆ. ನಿನ್ನಂತಹ ಒಬ್ಬ ಮಗನೇ ಸಾಕು! ಸಾವಿರ ಸುತರಿದ್ದೇನು ಫಲ? ಆದರೂ ಒಬ್ಬ ಮಗ ಮಗನಲ್ಲ; ಒಂದು ಕಣ್ಣು ಕಣ್ಣಲ್ಲ ಎಂಬುವ ಗಾದೆ ನಿನಗೂ ತಿಳಿದಿದೆ.' 'ದಾಶರಾಜ ಸುತೆಯನ್ನು ಪಡೆದು, ಅಲ್ಲಿ ಸುತರನ್ನು ಪೊಂದಲು ಆಶಿಸುವೆ'ನೆಂದ ತಂದೆಯನ್ನು ಸಂತೈಸಿ, ದೇವವ್ರತನು ದಾಶರಾಜನನ್ನು ಯೋಜನಗಂಧಿಗಾಗಿ ಯಾಚಿಸಿದನು. ತನ್ನ ಕನ್ಯಾಜಾತನಿಗೇ ರಾಜ್ಯವಿರಬೇಕೆಂಬ ದಾಶನ ಮಾತಿಗೆ ನಸುನಕ್ಕು ದೇವವ್ರತನು, ವೃದ್ಧರಾಜ ವಿದ್ವದ್ವಿಪ್ರಸಭೆಯಲ್ಲಿ ದಾಶರಾಜನಿಗಿಂತೆಂದನು—'ಕನ್ಯಾಪಿತೃವಿನ ಕಷ್ಟ ನನಗೂ ಗೊತ್ತಿದೆ. ಬಲವಂತನಾದ ನಾನು ರಾಜನೂ ಆದರೆ ಸತ್ಯವತಿಯ ಸುತರು ಉಳಿಯಲಾರರೆಂಬ ಶಂಕೆ ನಿನಗಿದೆ, ಒಳ್ಳೆಯದು. ನನ್ನ ಶಪಥವನ್ನು ಎಲ್ಲರೂ ಕೇಳಿ! ದೇವತೆಗಳೂ ಇದಕ್ಕೆ ಸಾಕ್ಷಿಯಾಗಿರಲಿ! ನಾನು ರಾಜ್ಯಾಧಿಕಾರವನ್ನು ಬಿಟ್ಟಿರುವೆನು. ಸತ್ಯವತೀದೇವಿಯ ಮಕ್ಕಳಿಗೆ ಪಟ್ಟವಕಟ್ಟಿ ಅವರಿಗೆ ವಿಧೇಯನಾಗಿರುವೆನು.' ಹೀಗೆ ಪ್ರತಿಜ್ಞೆಗೈದ ದೇವವ್ರತನನ್ನು ಸರ್ವರೂ ಪ್ರಶಂಸಿದರು. ಆಗ ದಾಶರಾಜನಿಂತೆಂದನು—'ರಾಜಪುತ್ರ! ನೀನೇನೋ ರಾಜ್ಯವನ್ನು ಬಿಟ್ಟುಕೊಟ್ಟೆ.

ಆದರೆ ನಿನ್ನ ಸುತರು ರಾಜ್ಯಕ್ಕಾಗಿ ಕಲಹವನ್ನು ಹೂಡಿ, ನನ್ನ ಮಗಳ ಸಂತಾನಕ್ಕೆ ಹಾನಿಮಾಡುವರಾದ್ದರಿಂದ ನನ್ನ ಮಗಳ ಆಶೆ ಬಿಡು.'

ಆಗ ಗಾಂಗೇಯನು ತಂದೆಗಾಗಿ ಭಯಂಕರವಾದ ಶಪಥವನ್ನು ಮಾಡಿದನು. 'ರಾಜ್ಯವನ್ನು ಮೊದಲೇ ಬಿಟ್ಟಿರುವೆನು. ಈಗ ಮದುವೆಯನ್ನೂ ಬಿಡುತ್ತಿರುವೆನು. ಮದುವೆಯಾದರೆ ತಾನೆ ಮಕ್ಕಳು! ನಾನು ಆಜನ್ಮ ಬ್ರಹ್ಮಚಾರಿಯಾಗಿದ್ದು ಕೌರವ ಕುಲಸೇವೆಯಿಂದ ಕಾಲ ಕಳೆಯುವೆನು.' ಆ ಸಮಯದಲ್ಲಿ ಅಂತರಿಕ್ಷದಿಂದ ಪುಷ್ಪವೃಷ್ಟಿಯಾಯಿತು. ದೇವತೆಗಳು ವಿಮಾನಗಳಲ್ಲಿ ನಿಂತು ದೇವವ್ರತನ ಭಯಂಕರ ಪ್ರತಿಜ್ಞೆಯನ್ನು ಕೇಳಿ, ಅವನನ್ನು ಭೀಷ್ಮನೆಂದು ಕರೆದು ಪ್ರಶಂಸಿದರು. ಭೀಷ್ಮನು ದಾಶಕನ್ಯೆಯನ್ನು ತಂದು, ತಂದೆಗೊಪ್ಪಿಸಿ ಧನ್ಯನಾದನು. ಅವನ ಲೋಕೋತ್ತರ ಮಹೌದಾರ್ಯವನ್ನು ಜನರು ಬಾಯಾರ ಪೊಗಳಿದರು. ಪ್ರೀತನಾದ ತಂದೆಯು ಸುತನಿಗೆ ಸ್ವಚ್ಛಂದಮರಣವರವನ್ನಿತ್ತು ಹರಸಿದನು.

ಶಂತನುವಿಗೆ ಸತ್ಯವತಿಯಲ್ಲಿ ಚಿತ್ರಾಂಗದ ವಿಚಿತ್ರವೀರ್ಯರೆಂಬ ಇಬ್ಬರು ಸುತರು ಜನಿಸಿದರು. ಅವರು ಚಿಕ್ಕವರಿರುವಾಗಲೇ ಶಂತನುರಾಜನು ವಿರಕ್ತನಾಗಿ, ವನವನ್ನು ಸೇರಿದನು. ತೀವ್ರತಪೋನಿರತನಾಗಿ ಕೊನೆಗೆ ಆ ಮಹಾನುಭಾವನು ಸ್ವಚ್ಛಂದದಿಂದಲೇ ದೇಹವನ್ನು ಬಿಟ್ಟು, ವರುಣಲೋಕವನ್ನೈದಿದನು.

## ಭೀಷ್ಮ ಕಥಾ

ಅನಂತರ ಭೀಷ್ಮನು ಚಿತ್ರಾಂಗದನಿಗೆ ಪಟ್ಟಕಟ್ಟಿದನು. ಚಿತ್ರಾಂಗದನು ವೀರ್ಯದರ್ಪದಿಂದ ಕಲಹಶೀಲನಾಗಿ ದೇವಾಸುರ ಮಾನವರನ್ನು ಧಿಕ್ಕರಿಸಿ ನಡೆಯುತ್ತಿದ್ದನು. ಚಿತ್ರಾಂಗದನೆಂಬ ಗಂಧರ್ವರಾಜನಿಗೂ ಅವನಿಗೂ ಕುರುಕ್ಷೇತ್ರದಲ್ಲಿ ಯುದ್ಧವಾಯಿತು. ಮೂರು ವರ್ಷಗಳ ಆ ಘೋರ ಯುದ್ಧದಲ್ಲಿ ಕೌರವ ಚಿತ್ರಾಂಗದನು ಮೃತನಾದನು. ಆಗ ವಿಧಿಯಿಲ್ಲದೆ ವಿಚಿತ್ರವೀರ್ಯನನ್ನು ರಾಜ್ಯದಲ್ಲಿ ನಿಲ್ಲಿಸಿ, ಭೀಷ್ಮನೇ ಸಕಲ ಕಾರ್ಯಗಳನ್ನು ನಡೆಸುತ್ತಿದ್ದನು. ಕಾಲಕ್ರಮದಿಂದ ವಿಚಿತ್ರವೀರ್ಯನು ವಿವಾಹಯೋಗ್ಯನಾದನೆಂದು ಭೀಷ್ಮನು ಸತ್ಯವತಿಯ ಅನುಮತಿಯನ್ನು ಪಡೆದು ಕಾಶಿದೇಶಕ್ಕೆ ಕನ್ಯಾರ್ಥಿಯಾಗಿ ಹೋದನು.

ಕಾಶಿರಾಜನಿಗೆ ಅಂಬೆ, ಅಂಬಿಕೆ, ಅಂಬಾಲಿಕೆ ಎಂಬುವ ದುಹಿತೆಯರಿದ್ದರು. ಅವರ ಸ್ವಯಂವರ ನಡೆದಿರುವಲ್ಲಿ ಬಂದು ಭೀಷ್ಮನು, ಅಲ್ಲಿ ನೆರೆದಿದ್ದ ರಾಜರನ್ನುದ್ದೇಶಿಸಿ ಇಂತು ಸಾರಿದನು—'ಕರೆದು ಸಾಲಂಕೃತ ಕನ್ಯೆಯನ್ನಿತ್ತರೆ ಬ್ರಾಹ್ಮ ವಿವಾಹವೆನಿಸುವುದು. ಗೋಮಿಥುನವನ್ನಿತ್ತು ಕನ್ಯೆಯನ್ನು ಪಡೆದರೆ ಆರ್ಷವಾಗುವುದು. ವಿತ್ತದಿಂದ ಕೊಂಡರೆ ಆಸುರವೂ, ಬಲದಿಂದ ಅಪಹರಿಸಿದರೆ ರಾಕ್ಷಸವೂ, ಒಪ್ಪಿಸಿ ಕೈ ಹಿಡಿದರೆ ಗಾಂಧರ್ವವೂ, ಮಲಗಿದ್ದ ಪ್ರಮತ್ತಳನ್ನು ಕೂಡಿದರೆ ಪೈಶಾಚಕವೂ, ಪ್ರಜೆಗೆಂದು ಮಾತ್ರ ಕಲೆತರೆ ಪ್ರಾಜಾಪತ್ಯವೂ, ಅಗ್ನಿಯಲ್ಲಿ ಹೋಮಿಸಿ ಸ್ವೀಕರಿಸಿದರೆ

ದ್ವೈವವೂ ಆಗುವುವು. ಈ ಎಂಟು ವಿಧ ವಿವಾಹಗಳಲ್ಲಿ ರಾಜನ್ಯರಿಗೆ ರಾಕ್ಷಸ ವಿವಾಹವು ಪ್ರಶಸ್ತವಾಗಿದೆ. ಈ ಮೂರುಜನ ಕನ್ಯೆಯರನ್ನು ನನ್ನ ತಮ್ಮನಿಗಾಗಿ ಅಪಹರಿಸಿ ಕೊಂಡು ಹೋಗುತ್ತಿರುವೆನು. ನಿಮ್ಮೆದುರಿಗೆ ನಿಂತು ಯುದ್ಧಕ್ಕೂ ಸಿದ್ಧನಾಗಿರುವೆನು. ಕನ್ಯಾಪಹಾರವನ್ನು ವಿರೋಧಿಸುವವರು ನನ್ನ ಬಾಣಗಳ ರುಚಿ ನೋಡುವರು!' ಇಂತು ಹೇಳಿ, ಭೀಷ್ಮನು ಕನ್ಯಾತ್ರಯವನ್ನೂ ತನ್ನ ರಥದಲ್ಲಿ ಕೂಡಿಸಿಕೊಂಡು, ರಾಜನ್ಯರು ಸುರಿಯುವ ಶಸ್ತ್ರವರ್ಷವನ್ನು ಲೆಕ್ಕಿಸದೆ, ಅವರನ್ನೆಲ್ಲ ಸೋಲಿಸಿ, ಹಸ್ತಿ ನಾವತಿಯ ಮಾರ್ಗವನ್ನು ಹಿಡಿದನು. ಸಾಲ್ವರಾಜನು ಇದನ್ನು ಸಹಿಸದೆ ಭೀಷ್ಮ ನನ್ನು ತಡೆದು ಭಯಂಕರ ಶರವರ್ಷದಿಂದ ಅವನ ರಥವನ್ನು ಮುಚ್ಚಿ, ಆರ್ಭಟಿಸಿದನು. ಭೀಷ್ಮನು ವಾರುಣಾಸ್ತ್ರದಿಂದ ಅವನ ಕುದುರೆಗಳನ್ನು ಪೀಡಿಸಿ, ಐಂದ್ರಾಸ್ತ್ರದಿಂದ ಅವನ ಸಾರಥಿಯನ್ನು ಕೊಂದು, ಸಾಲ್ವನನ್ನು ರಣರಂಗದಿಂದ ಓಡಿಸಿದನು.

ತನ್ನ ವಕ್ಷದ ಹೂಮಾಲೆ ಬಾಡದೆ ಭೀಷ್ಮನು ರಾಜರನ್ನು ಗೆದ್ದು ಬಹು ವೇಗ ದಿಂದ ಪಯಣಿಸಿ, ಹಸ್ತಿನಾವತಿಯನ್ನು ಮುಟ್ಟಿದನು ತಂಗಿಯರನ್ನು ಅಥವಾ ಸುತೆಯರನ್ನು ಕರತರುವಂತೆ ಮೂವರು ಕಾಶಿರಾಜ ಕನ್ಯೆಯರನ್ನು, ನಿರ್ವಿಕಾರನಾಗಿ ತಂದ ಭೀಷ್ಮನು ಅವರನ್ನು ತನ್ನ ತಮ್ಮನಿಗೆ ಮದುವೆಮಾಡಿಕೊಡಲೆಣಿಸಿದನು. ಆಗ ಅಂಬೆಯು—'ರಾಜನ್! ನಾನು ಸೌಭಪತಿಯಾದ ಸಾಲ್ವನನ್ನು ಮನಸಾ ವರಿಸಿದ್ದೆನು. ನನ್ನ ತಂದೆಯೂ ನನ್ನನ್ನು ಅವನಿಗೆ ಕೊಡಬೇಕೆಂದಿದ್ದನು. ಧರ್ಮ ವನ್ನರಿತ ನೀನು ಯೋಗ್ಯವಾದ ರೀತಿಯಲ್ಲಿ ನಡೆ!' ಆ ಮಾತನ್ನಾಲಿಸಿ ಭೀಷ್ಮನು ಅವಳನ್ನು ಸಾಲ್ವನಲ್ಲಿಗೇ ಕಳುಹಿಸಿಕೊಟ್ಟನು. ಅಂಬಿಕಾಂಬಾಲಿಕೆಯರನ್ನು ತಮ್ಮ ನಿಗೆ ಕೊಟ್ಟು ಮದುವೆ ಮಾಡಿದನು. ದೇವಕನ್ಯಾ ಸದೃಶರಾದ ಸುಂದರ ಸತಿಯರನ್ನು ಕೂಡಿ ದೇವತುಲ್ಯರೂಪನಾದ ವಿಚಿತ್ರವೀರ್ಯನು ಏಳು ವರ್ಷಗಳ ಕಾಲ ಅವ್ಯಾಹತ ಕಾಮಭೋಗಲಾಲಸನಾಗಿ ಕ್ಷಣದಂತೆ ಕಳೆದನು; ಅವನು ಕ್ಷಯರೋಗಗ್ರಸ್ತನಾಗಿ, ಸಾಯಂಕಾಲವಾದಾಗ ಸೂರ್ಯನಂತೆ ಅಸ್ತಗತನಾದನು. ಭೀಷ್ಮನು ಅವನ ಪ್ರೇತ ಕಾರ್ಯಗಳನ್ನು ಮುಗಿಸಿ, ರಾಜ್ಯದ ಉತ್ತರಾಧಿಕಾರಿ ಇಲ್ಲದೆಹೋಯಿತಲ್ಲ ಎಂದು ಚಿಂತಾಕ್ರಾಂತನಾದನು. ಸತ್ಯವತಿಯು ಸೊಸೆಯರನ್ನು ಕೂಡಿ ಶೋಕಸಾಗರ ನಿಮಗ್ನಳಾದಳು.

ಒಂದುದಿನ ವಂಶವರ್ಧನ ಪರಾಯಣೆಯಾದ ಸತ್ಯವತಿ ಭೀಷ್ಮನನ್ನು ಕರೆಸಿ 'ದೇವವ್ರತ! ಈಗ ನಿನ್ನಿಂದ ಕುಲದ ಕೀರ್ತಿ, ಸಂತಾನ, ಊರ್ಧ್ವಗತಿಗಳು ಉಳಿಯ ಬೇಕಾಗಿವೆ. ಧರ್ಮಹಾನಿಯಾಗದಂತೆ ಈಗ ನಾವು ವಂಶವನ್ನುಳಿಸುವ ಬಗೆ ಹೇಗೆ? ನಿನ್ನ ತಮ್ಮನು ಅಕಾಲಮೃತ್ಯುವಿಗೆ ತುತ್ತಾದನು. ರೂಪಯೌವನಯುತರಾದ ಅವನ ಸತಿಯರು ಸಂತಾನವನ್ನು ಕಾಣದಾದರು. ನೀನು ದೇವರನ್ಯಾಯದಿಂದ ಅವರಿಗೆ ಸಂತಾನಪ್ರದನಾಗು, ಪಿತೃಗಳನ್ನು ಉದ್ಧರಿಸು!' ಎಂದು ಬೇಡಿದಳು. ಭೀಷ್ಮನಾಮಾತನ್ನಾಲಿಸಿ, ಕಿವಿ ಮುಚ್ಚಿಕೊಂಡು 'ಹರಿ ಹರೀ!' ಎಂದನು.

ಬ್ರಹ್ಮಚಾರಿಯಾದ ತನ್ನಿಂದ ಎಂದಿಗೂ ಅಂತಹ ಅಕಾರ್ಯವಾಗಲಾರದೆಂದನು. ದೇವರಾಜ್ಯವನ್ನಾದರೂ ತ್ಯಜಿಸುವೆನಾಗಲಿ ಸತ್ಯವನ್ನು ಬಿಡಲಾರೆನೆಂದನು. ಶಂತನುವಂಶವು ಬೆಳೆಯುವ ಉಪಾಯವನ್ನೂ ಸೂಚಿಸಿದನು. 'ಹಿಂದೆ ಭಗವಂತ ಪರಶುರಾಮನು ದುಷ್ಟ ರಾಜರನ್ನು ಹುಡುಕಿಹುಡುಕಿ ಕೊಂದಾಗ ಭೂಮಂಡಲವು ಅರಾಜಕವಾಯಿತು. ವೇದಪಾರಗರಾದ ಬ್ರಾಹ್ಮಣ ಋಷಿಗಳನ್ನು ಸಂತಾನಕ್ಕಾಗಿ ಹೊಂದಿ, ಕ್ಷತ್ರಿಯ ತರುಣಿಯರು ತಮ್ಮ ಋತುಕಾಲದಲ್ಲಿ ಒಂದುಸಲ ಮಾತ್ರ ಸ್ಪರ್ಶದಿಂದ ಮಕ್ಕಳನ್ನು ಪಡೆದರು. ವಿಪ್ರರೂ ಧರ್ಮದಲ್ಲಿ ಮನವಿಟ್ಟು, ಹುಟ್ಟುವ ಸುತರು ಕ್ಷತ್ರಿಯ ತರುಣೀ ಸುತರೇ ಆಗಲಿ ಎಂಬ ಭಾವನೆಯಿಂದಲೂ ರಾಜನ್ಯ ವಂಶಗಳು ಉಳಿಯಬೇಕೆಂಬ ಅಭಿಲಾಷೆಯಿಂದಲೂ ಅವರಲ್ಲಿ ಪುತ್ರರನ್ನು ಉತ್ಪಾದಿಸಿ, ತಾವು ನಿರ್ಲಿಪ್ತವಾಗಿ ಹೊರಟುಹೋದರು. ಬೃಹಸ್ಪತಿಯು ಉತಥ್ಯನೆಂಬ ತನ್ನ ಅಣ್ಣನ ಸತಿಯರಲ್ಲಿ ರಮಿಸಿ ಗರ್ಭಗತನಾದ ಅರ್ಭಕನು ಕುರುಡನಾಗುವಂತೆ ಶಪಿಸಿದನಂತೆ. ಅವನೇ ಮುಂದೆ ದೀರ್ಘತಮನೆನಿಸಿ ಮಹಾ ತಪಸ್ವಿಯಾದನು. ಅವನ ಪತ್ನಿಯು ಪ್ರದ್ವೇಷಿಣಿ. ಅವಳು ಮಕ್ಕಳನ್ನು ಪಡೆದು ಕೂಡ ಗಂಡನಲ್ಲಿ ಅನುವ್ರತಳಾಗದೇ ಸಾರ್ಥಕ ನಾಮಧೇಯಳಾಗಿದ್ದಳು. ದೀರ್ಘತಮನು ಅವಳ ದುರ್ಗುಣವನ್ನರಿತು, ಸ್ತ್ರೀಯರು ಆಮರಣವೂ ಏಕಪತಿಕರಾಗಿ ಇರುವಂತೆ ನಿಯಮಿಸಿದನು. ಶ್ರುತಿಯಲ್ಲಿದ್ದ ವಿಧಿಯನ್ನು ಪುನರುಚ್ಚರಿಸಿ, ಸ್ತ್ರೀಯರು ಬಹುಭರ್ತೃರಾಗಬಾರದೆಂದು ವಿಧಿಸಿದನು. ಮತ್ತೆ ಮದುವೆಯಾಗುವ ಪುಂಶ್ಚಲಿಯರಿಗೆ ನರಕವಾಗುವುದೆಂದು ಶಪಿಸಿದನು. ಆಗ ಆ ದುಷ್ಟ ಸತಿಯು ಗಂಡನನ್ನು ಗಂಗೆಯಲ್ಲಿ ನೂಕಿಸಿ, ತನ್ನ ಸುತರಿಂದ ಕೂಡಿ ಬೇರೆ ಆಶ್ರಮಕ್ಕೆ ಹೊರಟುಹೋದಳು. ಅದೃಷ್ಟವಶಾತ್ ಒಂದು ಹಲಗೆಯಲ್ಲಿ ಕೂತು ಋಷಿವರನು ತೀರವನ್ನು ಮುಟ್ಟಿದ್ದನು. ಅಲ್ಲಿ ಬಲಿ ಎಂಬ ರಾಜನು ಬಂದಿದ್ದನು. ಆ ಮುನಿವರನ ಕಥೆಯನ್ನು ಕೇಳಿ, ಆ ರಾಜನು ಅವನನ್ನು ತನ್ನ ಅಂತಃಪುರಕ್ಕೆ ಕರೆದುಕೊಂಡು ಹೋದನು. ತನ್ನ ಪತ್ನಿಯಾದ ಸುದೇಷ್ಣೆಗೆ ಸಂತಾನವನ್ನು ನೀಡೆಂದು ಬೇಡಿದ ರಾಜನ ಮಾತನ್ನು ಮನ್ನಿಸಿ, ಮೈಮುಟ್ಟುವ ಮಾತ್ರದಿಂದ ದೀರ್ಘತಮನು ಅಂಗ, ವಂಗ, ಕಳಿಂಗ, ಪುಂಡ್ರ, ಸುಹ್ಮರೆಂಬ ಸುತರನ್ನು ದಯಪಾಲಿಸಿದನು. ಅವರು ತಮ್ಮ ಹೆಸರಿನ ಪೂರ್ವ ಸಮುದ್ರ ತೀರದ ದೇಶಗಳಿಗೆ ರಾಜರಾದರು. ಆದುದರಿಂದ ಉತ್ತಮ ಗುಣನಾದ ವಿಪ್ರನಿಂದ ಅಂಬಾ ಅಂಬಾಲಿಕೆಯರು ಸುತರನ್ನು ಪಡೆಯಲಿ' ಎಂದು ನುಡಿದ ಮಗನ ಮಾತಿಗೆ ಮೆಚ್ಚಿ ಸತ್ಯವತಿಯು ತನ್ನ ಸುತನಾದ ಭಗವಾನ್ ವೇದವ್ಯಾಸನಿಂದ ಕುರುವಂಶವನ್ನು ಉಳಿಸಲೆಣಿಸಿ, ಆ ಮಹಾನುಭಾವನನ್ನು ಸ್ಮರಿಸಿದಳು. ತತ್‌ಕ್ಷಣ ಪ್ರತ್ಯಕ್ಷನಾದ ಸ್ವಾಮಿಗೆ ಸರ್ವವನ್ನೂ ನಿವೇದಿಸಿ, ತನ್ನ ಸೊಸೆಯರಿಗೆ ಸುತರನ್ನು ನೀಡೆಂದಳು.

ರಮಾರಮಣನಿಂತೆಂದನು—'ಅಂಬ! ಸಕಲಧರ್ಮವನ್ನು ಅರಿತಿರುವೆ. ನಿನ್ನಾಜ್ಞೆಯಿಂದ ನಿಯೋಗವಿಧಿಯಲ್ಲಿ ನಿನಗೆ ಮೊಮ್ಮಕ್ಕಳನ್ನು ನಾನು ಸೃಜಿಸಿಕೊಡುವೆನು.

ಆದರೆ ಕೇಳು, ನನ್ನ ಸಂಗವು ರಮೆಗಲ್ಲದೆ ಮತ್ತಾರಿಗೂ ಅಲಭ್ಯವಾಗಿದೆ. ಒಂದು ವರ್ಷ ಕಾಲ ಅಂಬಿಕಾಂಬಾಲಿಕೆಯರು ನಾ ಹೇಳುವ ವ್ರತವನ್ನು ಮಾಡಿ ಶುದ್ಧ ರಾಗಲಿ! ಏಕಾದಶೀದ್ವಯ, ದರ್ಶ, ಪೂರ್ಣಿಮಾ, ಶ್ರವಣ ನಕ್ಷತ್ರದ ತಿಥಿ ಈ ಐದು ದಿನ ಶುದ್ಧೋಪವಾಸವನ್ನು ವಿಷ್ಣುಪಂಚಕವೆಂಬುವರು. ಅದನ್ನು ಮಾಡಲಿ!' ಆ ಮಾತನ್ನು ಕೇಳಿ, ಸತ್ಯವತಿಯು ರಾಜ್ಯವು ಅರಾಜಕವಾಗಿ ಹಾಳಾಗುವುದಾದ್ದರಿಂದ ತತ್‌ಕ್ಷಣವೇ ಪುತ್ರರನ್ನು ದಯಪಾಲಿಸೆಂದ ತಾಯಿಗೆ ವ್ಯಾಸನಿಂತೆಂದನು—

'ತಮ್ಮನಾದ ವಿಚಿತ್ರವೀರ್ಯನ ಕ್ಷೇತ್ರದಲ್ಲಿ ಮಗನು ಈಗಲೇ ಆಗಬೇಕೆಂದಿದ್ದರೆ, ನಾನು ವಿರೂಪನು, ವಿಕೃತವೇಷನು, ದುರ್ಗಂಧಯುಕ್ತನು ಆದಂತೆ ತೋರುವೆನು. ಆಗ ನನ್ನ ಸೇವೆಯನ್ನು ಸಹನೆಯಿಂದ ಮಾಡಿದ ನಿನ್ನ ಸೊಸೆ ಕೌಶಲ್ಯೆ ಸುಪುತ್ರನನ್ನು ಹೊಂದುವಳು. ಈ ಸೌಮ್ಯ ಸುಂದರ ರೂಪದಿಂದ ನಾನು ಬರುವುದಿಲ್ಲ. ನಿನ್ನ ಸೊಸೆಗೆ ಶಯನಗೃಹದಲ್ಲಿ ನನ್ನ ವಿಕೃತೀಕೃತ ವೇಷ ದರ್ಶನವಾದೀತು' ಎಂದು ಕೃಷ್ಣ ದ್ವೈಪಾಯನನು ಅಂತರ್ಹಿತನಾದನು. ಸತ್ಯವತಿಯು ಅಂಬಿಕೆಗೆ ತಿಳಿಹೇಳಿದಳು. ಭೀಷ್ಮನು ನಿನ್ನ ಮಗನಿಗೆ ಸಂರಕ್ಷಕನಾಗುವನೆಂದಳು. ಸುಮುಹೂರ್ತವನ್ನರಸಿ, ವಿಪ್ರರಿಗೆ ತಿಲ ಹಿರಣ್ಯ ಗೋ ಭೂದಾನಗಳನ್ನು ಮಾಡಿ, ಮೃಷ್ಟಾನ್ನಗಳಿಂದ ಉಣಿಸಿ ದಳು. ನಿಶೀಥದಲ್ಲಿ ಶಯನಾಗಾರದಲ್ಲಿ ಕುರುಪುಂಗವರ ಚಿಂತನಾಮಗ್ನಳಾಗಿದ್ದ ಅಂಬಿಕೆಗೆ ಸತ್ಯವಂತನಾದ ವ್ಯಾಸನು ಸಂದರ್ಶನವನ್ನಿತ್ತನು. ಅವನ ಜಟೆ ಕೆಂಪಗಿತ್ತು. ಕಣ್ಣು ಗಳು ಹೊಳೆಯುತ್ತಿದ್ದವು. ಗಡ್ಡ ಮೀಸೆಗಳಿಂದ ಆಕ್ರಾಂತವಾದ ಅವನ ಮುಖ, ಕಿರಣ ಜಾಲದಿಂದುರಿಯುವ ಸೂರ್ಯಮಂಡಲದಂತಿತ್ತು. ಅಂಬಿಕೆ ಭಯದಿಂದ ಕಣ್ಣು ಮುಚ್ಚಿದಳು. ಕೃಷ್ಣನು ಅವಳಲ್ಲಿ ರಮಾವೇಶವನ್ನಿಟ್ಟು ಮುಟ್ಟಿ ಹೊರಬಂದು, ಸತ್ಯವತಿಗೆ 'ಮಹಾಬಲನು, ಬುದ್ಧಿವಂತನು, ಕುರುವಂಶ ವಿವರ್ಧನನು ಆದ ಮಗ ನಾಗುವನು. ಆದರೆ ಮಾತೃದೋಷದಿಂದ ಅವನು ಅಂಧನಾಗುವ'ನೆಂದನು.

'ಕುರುಗಳಿಗಧಿಪತಿಯು ಅಂಧನಾಗಬಹುದೆ ? ಕೃಷ್ಣ ! ಜ್ಞಾತಿಗಳನ್ನು ರಕ್ಷಿಸಿ ಪೊರೆವ ಮತ್ತೊಬ್ಬ ಮಗನನ್ನು ನನ್ನ ಎರಡನೆಯ ಸೊಸೆಗಿತ್ತು ಕಾಪಾಡು' ಎಂದು ಸತ್ಯವತಿ ಬೇಡಿದಳು. ಅಂಬಾಲಿಕೆಯು ಅತ್ತೆಯ ಮಾತಿನಂತೆ ಅಲಂಕೃತಳಾಗಿ, ಶಯನಗೃಹದಲ್ಲಿ ಕಾದಿದ್ದಳು. ಅದೇ ವಿಕೃತ ವೇಷದಿಂದ ಕೃಷ್ಣನು ಬಂದನು. ಭಯ ದಿಂದ ಅಂಬಾಲಿಕೆಯ ಮೈ ಬಿಳುಪೇರಿತು. 'ಅವಳಿಗೆ ಪಾಂಡುವರ್ಣನಾದ ಸುತನು ಜನಿಸುವನು. ಅವನು ಮಹಾಪರಾಕ್ರಮಿ ಎನಿಸಿ ರಾಜ್ಯವನ್ನು ವಿಸ್ತರಿಸುವನು' ಎಂದು ತಾಯಿಗೆ ಹೇಳಿ ವ್ಯಾಸನು ಹೊರಡಲನುವಾದನು. ಆಗ ಸತ್ಯವತಿಯು ದೀನಳಾಗಿ ಮಗನಿಗಿಂತೆಂದಳು—

'ಒಬ್ಬನು ಕುರುಡನು, ಮತ್ತೊಬ್ಬನು ಪಾಂಡುವರ್ಣನು; ಮತ್ತೆ ಅಂಬಿಕೆಯಲ್ಲಿ ಪುತ್ರನುತ್ಪನ್ನನಾಗಲಿ! ಆಗ ನನಗೆ ಸಮಾಧಾನವಾಗುವುದು.' 'ಒಳ್ಳೆಯದೆ'ಂದು ಹೇಳಿ ವ್ಯಾಸನು ಹೊರಟುಹೋದನು. ಕಾಲಕ್ರಮದಿ ಅಂಬಿಕೆ ಧೃತರಾಷ್ಟ್ರನನ್ನು

ಪಡೆದಳು. ಅನಂತರ ಒಂದು ವರ್ಷವಾದ ಮೇಲೆ ಅಂಬಾಲಿಕೆಯು ಪಾಂಡುರಾಜನನ್ನು ಪಡೆದಳು. ಆಗ ತಾಯಿಯ ಮಾತನ್ನು ನಡೆಸಿಕೊಡಲು ಶ್ರೀ ವ್ಯಾಸನು ಮತ್ತೊಮ್ಮೆ ಅಂಬಿಕೆಯ ಅಂತಃಪುರದಲ್ಲಿ ಬಂದನು. ಅವಳು ಭಯದಿಂದ ತಾನಲ್ಲಿರದೆ, ಭೂಷಣ ದಿವ್ಯವಸ್ತ್ರ ಗಂಧಮಾಲ್ಯಯುತಳಾದ ತನ್ನ (ಸವತಿ) ಶೂದ್ರದಾಸಿಯನ್ನು ನಿಲ್ಲಿಸಿದ್ದಳು. ಅವಳು ಭಯಭಕ್ತಿಗಳಿಂದ ಎದುರ್ಗೊಂಡು, ವ್ಯಾಸನನ್ನು ಪೂಜಿಸಿದಳು. ವ್ಯಾಸನು ಅವಳ ದಾಸೀತ್ವವನ್ನು ಕಳೆದು, ಧರ್ಮಾತ್ಮನಾದ ಪುತ್ರನನ್ನು ಅವಳಿಗೆ ದಯಪಾಲಿಸಿದನು. ದಶಮಾಸಗಳಾಗುತ್ತಿರಲು, ದಾಸಿಯು ವಿದುರನನ್ನು ಪಡೆದಳು. ವಿಧಿವಿಲಾಸವನ್ನು ನೆನೆದು ಸತ್ಯವತಿ ಸುಮ್ಮನಾದಳು. ಇಂತು ವಿಚಿತ್ರವೀರ್ಯ ಕ್ಷೇತ್ರಗಳಲ್ಲಿ ಶ್ರೀಕೃಷ್ಣದ್ವೈಪಾಯನನಿಂದ ಪುಟ್ಟ ಧೃತರಾಷ್ಟ್ರ, ಪಾಂಡು, ವಿದುರರು ಕುರುಕುಲ ವಿವರ್ಧನರಾದರು.

ಧೃತರಾಷ್ಟ್ರನು ತನ್ನಾಮಕ ಗಂಧರ್ವನ ಅಂಶದಿಂದಲು, ಪಾಂಡುವು ಪರಾವಹ ಮರುದಂಶದಿಂದಲು ಹುಟ್ಟಿದವರು. ಅವರೀರ್ವರಲ್ಲಿ ಮುಖ್ಯವಾಯುವಿನ ಆವೇಶವಿತ್ತು. ವಿದುರನು ಯಮರಾಜನೇ ಸರಿ! ಮಾಂಡವ್ಯ ಶಾಪದಿಂದ ಅವನು ಶೂದ್ರಯೋನಿಯಲ್ಲಿ ಹುಟ್ಟಬೇಕಾಯಿತು. ಹಿಂದೆ ಮಾಂಡವ್ಯನು ತಪಸ್ಸು ಮಾಡುತ್ತಿರುವಲ್ಲಿ ಕೆಲಚೋರರು ಬಂದು ಅಡಗಿಕೊಂಡರು. ಅವರೆಲ್ಲಿಗೆ ಹೋದರೆಂದು ಕೇಳಿದ ರಾಜಭಟರಿಗೆ ಸಮಾಧಿಯಲ್ಲಿದ್ದ ಮಾಂಡವ್ಯನು ಉತ್ತರಿಸಲಿಲ್ಲ. ಇವನೂ ಕಳ್ಳನೇ ಇರಬೇಕೆಂದು ಋಷಿಯನ್ನೂ ಚೋರರೊಡನೆ ಬಂಧಿಸಿ, ರಾಜಭಟರು ಆಸ್ಥಾನದಲ್ಲಿ ನಿಲ್ಲಿಸಿದರು. ಅವರೆಲ್ಲರನ್ನೂ ಶೂಲಕ್ಕೆ ಹಾಕಿ! ಎಂದು ರಾಜಾಜ್ಞೆ ಆಯಿತು. ಮಾಂಡವ್ಯನು ಶೂಲಕ್ಕೇರಿಸಿದ್ದರೂ ಸಾಯದೇ ಇದ್ದನು. ಇದನ್ನು ನೋಡಿ, ಭಯಪಟ್ಟ ಭಟರು ರಾಜನಿಗೆ ಆ ವೃತ್ತಾಂತವನ್ನು ಹೇಳಿ, ಋಷಿಯನ್ನು ಬಿಟ್ಟುಬಿಟ್ಟರು. ತತ್‌ಕ್ಷಣವೇ ಮಾಂಡವ್ಯನು ಯಮರಾಜನ ಸಂಯಮನಿಪುರಕ್ಕೆ ಹೋಗಿ, 'ಯಾವ ಪಾಪಕ್ಕೆ ನನಗೆ ಶೂಲಶಿಕ್ಷೆ ಆಗುವಂತೆ ಮಾಡಿದೆ?' ಎಂದು ಯಮಧರ್ಮನನ್ನು ಕೇಳಿದನು. ವಶಿಷ್ಠ ಸಾಮ್ಯವನ್ನು ಹೊಂದುವ ವಿಷಯದಲ್ಲಿ ಅಯೋಗ್ಯೋಪಾಸನೆ ಮಾಡಿದುದರಿಂದ ನಿನಗೆ ಶಿಕ್ಷೆ ವಿಧಿಸಿದೆನೆನ್ನ ಬಹುದಾಗಿತ್ತು. ಆದರೂ ಯಮನು ಆ ಋಷಿಯಿಂದ ಶಾಪವನ್ನು ಸ್ವೀಕರಿಸಬೇಕೆಂತಲೇ, ನೀನು ಬಾಲ್ಯದಲ್ಲಿ ಮಕ್ಷಿಕವಧೆ ಮಾಡಿದುದರಿಂದ ನಿನಗೆ ಶೂಲಾರೋಪಣವಾಯಿತೆಂದನು. ಅದೂ ಸತ್ಯವಾದದ್ದೇ. ಮಕ್ಷಿಕವನ್ನು ಮುಳ್ಳಿನಿಂದ ಚುಚ್ಚಿ ಕೊಂದ ಪಾಪಕ್ಕೆ ಶೂಲಾರೋಪವು ಹೆಚ್ಚಿನ ಶಿಕ್ಷೆ. ಆದುದರಿಂದ ನೀನು ಶೂದ್ರ ಯೋನಿಯಲ್ಲಿ ಹುಟ್ಟು ಎಂದು ಮಾಂಡವ್ಯನು ಶಾಪವನ್ನಿತ್ತನು. ಆದ್ದರಿಂದ ಯಮರಾಜನು ವೇದವ್ಯಾಸರ ಅನುಗ್ರಹದಿಂದ ವಿಚಿತ್ರವೀರ್ಯನ ಪತ್ನಿಯಾದ ಶೂದ್ರಳಲ್ಲಿ ಹುಟ್ಟಿದನು. ವ್ಯಾಸನವನಿಗೆ ವಿದುರನೆಂದು ಹೆಸರಿಟ್ಟು ಸರ್ವಜ್ಞನಾಗುವಂತೆ ಅನುಗ್ರಹಿಸಿದನು. ಮತ್ತೆ ಅಂಬಿಕೆಗೆ ಪುತ್ರನನ್ನು ನೀಡೆಂದು ಕೇಳಿದ ತಾಯಿಗೆ 'ಅದಾಗದು' ಎಂದು ಹೇಳಿ ದ್ವೈಪಾಯನನು ಅದೃಶ್ಯನಾದನು.

ಭೀಷ್ಮನು ಆ ಸುತರೀರ್ವರಿಗೂ ಕ್ಷತ್ರಿಯಯೋಗ್ಯ ಕರ್ಮಗಳನ್ನು ನಡೆಸಿ, ಎಲ್ಲಾ ವಿದ್ಯೆಗಳನ್ನೂ ಉಪದೇಶಿಸಿದನು. ವಿದುರನು ಶೂದ್ರಧರ್ಮದಂತೆ ಸಂಸ್ಕೃತನಾಗಿ ವಿದ್ಯಾರತನಾಗಿರುವುದರಿಂದ ಸಾರ್ಥಕ ನಾಮಧೇಯನಾದನು. ವಿಚಿತ್ರವೀರ್ಯನ ಸಾರಥಿಯಾದ ಗವಲ್ಗಣನಿಗೆ ಸಂಜಯನೆಂಬ ಸುತನು ಜನಿಸಿ, ಇವರೊಡನೆ ಬೆಳೆದು, ಧೃತರಾಷ್ಟ್ರನ ಸಾರಥಿಯಾದನು. ಸಂಜಯನು ತುಂಬುರುನೆಂಬ ಗಂಧರ್ವ ರಾಜನ ಅಂಶದಿಂದ ಹುಟ್ಟಿ, ಉದ್ವಹನೆಂಬ ಮರುದಂಶಯುಕ್ತನೂ ಆಗಿದ್ದನು. ಧೃತರಾಷ್ಟ್ರನು ಗಾಂಧಾರರಾಜನ ಮಗಳಾದ ಗಾಂಧಾರಿಯನ್ನು (ಮತಿ) ಮದುವೆಯಾದನು. ಅವಳ ತಮ್ಮನೇ ದ್ವಾಪರನೆಂಬ ತತ್ತ್ವನಿಶ್ಚಯ ವಿರೋಧಿ ದೈತ್ಯನ ಅಂಶದಿಂದ ಹುಟ್ಟಿದ ಶಕುನಿಯು. ಅವನು ನಾಸ್ತಿಕನೂ, ಮಿಥ್ಯಾಜ್ಞಾನಿಯೂ, ಕುತ್ಸಿತ ಕರ್ಮನೂ ಆಗಿ ಬೆಳೆದನು. ತನ್ನ ಪತಿಯು ಕುರುಡನಾಗಿರುವುದರಿಂದ ತನಗೂ ನೇತ್ರ ಸಂಪತ್ತಿ ಇರಬಾರದೆಂದು ಗಾಂಧಾರಿಯು ತನ್ನ ಕಣ್ಣುಗಳನ್ನು ಕಟ್ಟಿಕೊಂಡಳು.

ಪಾಂಡುರಾಜನು ಶೂರಸೇನನ ಮಗಳಾದ ಪೃಥಾದೇವಿಯನ್ನು ಮದುವೆಯಾದನು. ಕೂರ್ಮನಾಮಕ ಮರುದಂಶನಾದ ಕುಂತೀಭೋಜನಿಂದ ಮಗಳಂತೆ ಸಾಕಲ್ಪಟ್ಟುದರಿಂದ ಅವಳಿಗೆ ಕುಂತಿ ಎಂಬ ಹೆಸರೂ ಬಂತು. ಕುಂತಿಯಲ್ಲದೆ ಪಾಂಡುರಾಜನಿಗೆ ಋತಾಯನನೆಂಬ ಮದ್ರದೇಶ ಪತಿಯ ಮಗಳಾದ ಮಾದ್ರಿಯೂ ಪತ್ನಿಯಾದಳು. ಕುಂತಿ ಮಾದ್ರಿಯರು ಹಿಂದೆ ಸಿದ್ಧಿ, ಧೃತಿ ಎಂಬ ಪರಾವಹನಾಮಕ ವಾಯುವಿನ ಪತ್ನಿಯರು. ಈಗಲೂ ಪರಾವಹಾಂಶನಾದ ಪಾಂಡುರಾಜನಿಗೇ ಅವರು ಪತ್ನಿಯರಾದರು. ಪ್ರಾಯಃ ನಿಯತ ಪತಿಕರಲ್ಲವೇ ದೇವಾಂಗನೆಯರು! ವಿದುರನು ಶೂರಸೇನರಾಜನ ಶೂದ್ರಸತಿಯಲ್ಲಿ ಜನಿಸಿದ ಆರುಣೀ ಎಂಬ ದೇವಿಯನ್ನು ಮದುವೆಯಾದನು.

## ಪಾಂಡುರಾಜ ಚರಿತೆ

ಸುತರು ದೊಡ್ಡವರಾಗಿರುವುದನ್ನು ಕಂಡು ಭೀಷ್ಮನು ತಾನು ರಾಜ ಪ್ರತಿನಿಧಿಯಾಗಿ ಧರ್ಮದಿಂದ ಪಾಲಿಸಿ, ಸಕಲವಿಧ ಸಂಪತ್ಸಮೃದ್ಧವನ್ನಾಗಿ ಬೆಳೆಸಿದ ರಾಜ್ಯವನ್ನು ಪಾಂಡುರಾಜನಿಗೆ ಕೊಟ್ಟು, ಎಂದಿನಂತೆ ತಾನು ವಿಧೇಯನಾಗಿರುತ್ತಿದ್ದನು. ಧೃತರಾಷ್ಟ್ರನು ಹುಟ್ಟುಕುರುಡನಾದುದರಿಂದ ರಾಜ್ಯಾನರ್ಹನಾದನು. ಆದರೂ ಅವನ ಕುಲ, ಬಲ, ಖ್ಯಾತಿ, ಬುದ್ಧಿಗಳನ್ನು ಕಂಡು ಸುಬಲರಾಜನು ಮಗಳಾದ ಗಾಂಧಾರಿಯನ್ನು ಧೃತರಾಷ್ಟ್ರನಿಗೆ ಕೊಟ್ಟನು. ಗಾಂಧಾರಿಯು ಶಿವನನ್ನು ತಪದಿಂದ ಮೆಚ್ಚಿಸಿ ನೂರು ಮಕ್ಕಳ ಮಾತೆಯಾಗುವಂತೆ ವರವನ್ನು ಹೊಂದಿದ್ದಳು. ಈ ವಿಷಯವನ್ನರಿತೇ ಭೀಷ್ಮನು ವಂಶವೃದ್ಧಿ ಕಾರಣಳಾಗುವ ಗಾಂಧಾರಿಯನ್ನು ತನ್ನ ಮನೆಗೆ ತಂದುಕೊಂಡನು; ಅಂತೆಯೇ ಕುಂತಿಯೂ ದೂರ್ವಾಸರಿಂದ ಸಂತಾನಕಾರಣವಾದ ದಿವ್ಯ ಮಂತ್ರವನ್ನು ಪಡೆದಿದ್ದಳೆಂದೇ ಅವಳನ್ನು ಪಾಂಡುರಾಜನಿಗೆ ತಂದುಕೊಂಡನು.

ಕುಂತಿಭೋಜನ ಮನೆಗೆ ಒಂದುಸಲ ದೂರ್ವಾಸನು ಬಂದನು. ಶಂಸಿತ ವ್ರತನು, ಉಗ್ರಕೋಪಿಯು ಆದ ಋಷಿವರನನ್ನು ಪಚರಿಸಲು ಭೋಜನು ಕುಂತಿ ಯನ್ನು ನಿಯಮಿಸಿದನು. ಸರ್ವಪ್ರಯತ್ನದಿಂದ ಅಪ್ರಮತ್ತಳಾಗಿ ತನ್ನನ್ನು ಸೇವಿಸಿದ ಕುಂತಿಯಲ್ಲಿ ಪ್ರಸನ್ನನಾಗಿ ದೂರ್ವಾಸನು, ವಶ್ಯಕರ್ಷಣಾದಿ ಫಲವಂತವಾದ ಒಂದು ದಿವ್ಯಮಂತ್ರವನ್ನು ಅವಳಿಗೆ ಉಪದೇಶಿಸಿದನು. ಆ ಮಂತ್ರವನ್ನುಚ್ಚರಿಸಿ ಕರೆದ ಕೂಡಲೆ ಕರೆಯಲ್ಪಟ್ಟ ದೇವಪುರುಷನು ಒಂದು ಸಂತಾನ ಕಾರಣನಾಗಿ, ತಾನೇ ಒಂದಂಶದಿಂದ ಮಗನಾಗಿ ಹುಟ್ಟುವನೆಂದು ತಿಳಿಹೇಳಿ, ಸಂತಾನ ಪ್ರತಿಬಂಧಕ ಮಹಾ ವಿಪತ್ಸಮಯದಲ್ಲಿ ಮಾತ್ರ ಆ ಮಂತ್ರವನ್ನು ಉಪಯೋಗಿಸಬೇಕೆಂದು ನಿಯಮಿಸಿ, ಋಷಿಯು ಹೊರಟುಹೋದನು. ತ್ರಿಕಾಲಜ್ಞರಲ್ಲವೆ ಮಹರ್ಷಿಗಳು!

ಒಂದುದಿನ ಋತುಸ್ನಾತಳಾಗಿದ್ದ ಕುಂತಿಯು ದಿವ್ಯಮಂತ್ರದ ಶಕ್ತಿಯನ್ನು ಪರೀಕ್ಷಿಸುವ ಕುತೂಹಲದಿಂದ ಉದ್ಯತನಾಗಿ ಬರುವ ತೇಜೋರಾಶಿಯಾದ ಸೂರ್ಯ ನನ್ನು ಭಕ್ತಿಯಿಂದ ಕರೆದಳು. ತತ್‌ಕ್ಷಣವೇ ಸೂರ್ಯದೇವನು ಅದ್ಭುತರೂಪ ಸಮನ್ವಿತನಾಗಿ ಕುಂತಿಗೆ ಪ್ರತ್ಯಕ್ಷನಾದನು. ಭಯಚಕಿತಳಾದ ರಾಜಕನ್ಯೆ 'ಬ್ರಾಹ್ಮಣ ವರ ಪರೀಕ್ಷೆಗೆಂದು ಕರೆದೆನು. ನನ್ನ ಅಪರಾಧವನ್ನು ಕ್ಷಮಿಸು! ಕನ್ಯೆಯಾದ ನನಗೆ ಸಂತಾನಪ್ರದನಾಗಬೇಡ! ಹೋಗು!' ಎಂದು ಬೇಡಿಕೊಂಡಳು. ಮಂತ್ರವೂ ಅಮೋಘವಾಗಿ ದೇವದರ್ಶನವೂ ಅಮೋಘವಾಗಿರುವಾಗ ಅವಳು ಸೂರ್ಯನನ್ನು ನಿವಾರಿಸಲು ಅಶಕ್ತಳಾದಳು. ಸೂರ್ಯನು 'ನನ್ನ ಪ್ರಸಾದದಿಂದ ನಿನಗೆ ಆವ ದೋಷವೂ ಬಾರದಿರಲಿ! ನಾನೇ ಒಂದಂಶದಿಂದ ನಿನಗೆ ಮಗನಾಗುವೆನು. ನಿನ್ನ ಕನ್ಯಾತ್ವವು ಯಥಾಪ್ರಕಾರವಾಗಿ ಕೆಡದಿರುವುದು' ಎಂದು ಅಭಯವನ್ನಿತ್ತನು. ತತ್‌ಕ್ಷಣವೇ ಕುಂತಿಯು, ಅತ್ಯಂತ ತೇಜೋವಿರಾಜಿತನಾದ ಪುತ್ರನನ್ನು ಪಡೆದಳು. ದೇವಕುಮಾರ ನಂತಿದ್ದ ಅವನು ಸಹಜ ಕವಚ ಕುಂಡಲಾನ್ವಿತನಾಗಿ ಸುದರ್ಶನೀಯ ಕರ್ಣನಾದುದ ರಿಂದ ಕರ್ಣನೆನಿಸಿದನು. ಕುಂತಿಯು ತಾನು ಕನ್ಯೆಯಾಗಿದ್ದುದನ್ನು ಕಂಡರೂ, ಕಾನೀನ ನನ್ನು ಲೋಕಭೀತಿಯಿಂದ ಒಂದು ಮಂಜೂಷೆಯಲ್ಲಿ, ನಾನಾ ರತ್ನಾಭರಣಗಳೊಡನೆ ಮಲಗಿಸಿ ಮೆಲ್ಲನೆ ಯಮುನಾನದಿಯಲ್ಲಿ ತೇಲಿಬಿಟ್ಟಳು.

ಮುಂದೆ ಆ ಶಿಶುವು ರಾಧಾಭರ್ತನಾದ ಅತಿರಥನೆಂಬ ಸೂತಪತಿಗೆ ಸಿಕ್ಕು, ಅವನ ಮನೆಯಲ್ಲಿ ಬೆಳೆಯಿತು. ರಾಧೆಯು ಸಾಕಿದುದರಿಂದ ರಾಧೇಯನೆನಿಸಿ, ಧನರತ್ನ ಗಳಿಂದ ಕೂಡಿ ಬಂದುದರಿಂದ ವಸುಷೇಣನೆನಿಸಿ, ಕರ್ಣನು ಅಭಿವೃದ್ಧನಾದನು. ನಿತ್ಯವೂ ಮಧ್ಯಾಹ್ನ ವೇಳೆ ಮೀರುವವರೆವಿಗೂ ಸೂರ್ಯನನ್ನು ಉಪಾಸಿಸಿ, ತೇಜೋ ವಂತನಾದ ಕರ್ಣನು, ಬ್ರಾಹ್ಮಣರಿಗೆ ಬೇಡಿದುದನ್ನು ಇಲ್ಲವೆನ್ನದೆ ಕೊಟ್ಟು, ದಾನ ಶೂರನೆಂದು ಪ್ರಖ್ಯಾತನೂ ಆದನು.

ಕೆಲ ಕಾಲವಾದ ನಂತರ ಪಾಂಡುರಾಜನನ್ನು ಕುಂತಿಯು ಸ್ವಯಂವರದಲ್ಲಿ ವರಿಸಿ, ಕೌರವಕುಲ ಮಹಿಷಿಯಾದಳು. ಭೀಷ್ಮನು ಮದ್ರರಾಜನಾದ ಋತಾಯನ

ನಿಗೂ ಅವನ ಮಗನಾದ ಶಲ್ಯನಿಗೂ (ಸಂಹ್ಲಾದ+ವಾಯ್ವಾವೇಶ) ಬೇಕಾದ ಧನ ಕನಕ ರತ್ನ ವಾಹನಾದಿ ಕನ್ಯಾಶುಲ್ಕವನ್ನಿತ್ತು ಶಲ್ಯನ ತಂಗಿಯಾದ ಮಾದ್ರಿಯನ್ನು ಪಾಂಡುರಾಜನಿಗೆ ತಂದು ಮದುವೆ ಮಾಡಿದನು.

ಪಾಂಡುರಾಜನು ಭೀಷ್ಮಾದಿ ವೃದ್ಧಜನರ ಆಶೀರ್ವಾದವನ್ನು ಪಡೆದು, ಚತು ರಂಗಬಲ ಸಮನ್ವಿತನಾಗಿ ದಿಗ್ವಿಜಯವನ್ನು ಸಾಧಿಸಲು ಹೊರಟನು; ಚತುಸ್ಸಮುದ್ರ ಮುದ್ರಿತ ಧರಾವಲಯವು ಅವನ ವಶವಾಯಿತು. ಸಕಲ ರಾಜನ್ಯರು ಕಪ್ಪಕಾಣಿಕೆ ಗಳನ್ನರ್ಪಿಸಿ, ಕುರು ಚಕ್ರವರ್ತಿಗಳಿಗೆ ಸಾಮಂತರಾದರು. ದೇವತೆಗಳಲ್ಲಿ ಇಂದ್ರನಂತೆ ಕಂಗೊಳಿಸಿದ ಪಾಂಡುರಾಜನ ಪರಾಕ್ರಮ ಧೈರ್ಯ ಸಾಹಸಗಳನ್ನು ಕಂಡು ಭೀಷ್ಮನು ಸಂತುಷ್ಟನಾದನು ; ಅವನು ತಂದ ಧನ ರತ್ನರಾಶಿಗಳಿಂದ ಬೊಕ್ಕಸವು ತುಂಬಿ ಕಿಕ್ಕಿರಿ ಯಿತು. ಅವನು ಗೆದ್ದ ರಾಜರು ಒಡ್ಡೋಲಗದಿ ಕೈಕಟ್ಟಿ ಸೇವಿಸಿದರು. ಅವನ ಪರಿಪಾಲನೆಯಲ್ಲಿ ಪ್ರಜರು ಪರಮಾನಂದಭರಿತರಾದರು. ತಾನು ತಂದ ಧನವನ್ನು ಭೀಷ್ಮನಿಗೂ, ಮಾತೆಯರಿಗೂ, ಸತ್ಯವತಿಗೂ ಸಮರ್ಪಿಸಿ, ನಮಸ್ಕರಿಸಿದ ಪಾಂಡು ರಾಜನನ್ನು ಅವರ ಆನಂದಬಾಷ್ಪಗಳು ಹರಸಿದವು. ಪಾಂಡುರಾಜನು ಅಣ್ಣನಾದ ಧೃತರಾಷ್ಟ್ರನಿಗೂ ತಮ್ಮನಾದ ವಿದುರನಿಗೂ ಅಪಾರ ಧನವನ್ನಿತ್ತನು. ಸಹಸ್ರಶತ ದಕ್ಷಿಣೆಗಳನ್ನಿತ್ತು ಧೃತರಾಷ್ಟ್ರನು ಆ ಧನದಿಂದ ಬ್ರಾಹ್ಮಣರನ್ನು ಸಂತೋಷಪಡಿಸಿ ದನು. ಅನೇಕ ಯಜ್ಞಗಳನ್ನೂ ಮಾಡಿದನು. ಅವನಿಗೆ ರಾಜ್ಯವನ್ನೊಪ್ಪಿಸಿ, ಪಾಂಡು ರಾಜನು ಮೃಗಯಾವಿಹಾರ ಲೋಲನಾಗಿ ತನ್ನ ಲೋಲಾಕ್ಷಿಯರನ್ನೀರ್ವರನ್ನೂ ಕೂಡಿ ಹಿಮವತ್ಪರ್ವತ ಕಂದರಗಳಲ್ಲಿ ವಾಸಿಸುತ್ತಿದ್ದನು. ಅರಣ್ಯದಲ್ಲಿ ಕರೇಣುದ್ವಯ ಯುತವಾದ ಭದ್ರಗಜದಂತೆ ವಿಹಾರಶೀಲನಾದ ಪಾಂಡುರಾಜನು ಹಸ್ತಿನಾವತಿ ಯನ್ನು ಮರೆತು ಅರಣ್ಯದಲ್ಲೇ ಇರುತ್ತಿದ್ದನು.

ಖಡ್ಗ ಬಾಣ ಧರನು, ವಿಚಿತ್ರ ಕವಚನು, ದುಷ್ಟಮೃಗ ಬಾಧಾ ನಿವಾರಕನು ಆದ ಪಾಂಡುರಾಜನನ್ನು ನೋಡಿ, ಆಶ್ರಮಗಳಲ್ಲಿದ್ದ ಋಷಿಗಳು ದೇವಾವತಾರನೆಂದು ಪೊಗಳಿ ಹರಸಿದರು. ಧೃತರಾಷ್ಟ್ರನು ತಮ್ಮನಿಗೆ ಬೇಕಾದ ಭೋಗವಸ್ತುಗಳನ್ನು ಎಡೆಬಿಡದೆ ಕಳುಹಿಸಿಕೊಡುತ್ತಿದ್ದನು.

ಒಂದು ದಿನ ಕೃಷ್ಣದ್ವೈಪಾಯನನು ಗಾಂಧಾರಿಯ ಮನೆಗೆ ಬಂದನು. ಅವಳು ಆ ಮಹರ್ಷಿಯನ್ನು ಅರ್ಘ್ಯಪಾದ್ಯ ಜಲ ಫಲಗಳಿಂದ ಸತ್ಕರಿಸಿ, ಅವನ ಶ್ರಮವನ್ನು ನಿವಾರಿಸಿದಳು. ಸ್ವಾಮಿಯು ಪ್ರೀತನಾಗಿ ವರವನ್ನು ಬೇಡೆಂದನು. ಧೃತರಾಷ್ಟ್ರನಿಗೆ ತಕ್ಕ ನೂರು ಜನ ಸುತರನ್ನು ಬೇಡಿದ ಗಾಂಧಾರಿಗೆ, ಆ ವರವನ್ನಿತ್ತು ವ್ಯಾಸನು ಮರೆ ಯಾದನು. ಗಾಂಧಾರಿಯು ಧೃತರಾಷ್ಟ್ರನಿಂದ ಗರ್ಭವನ್ನು ಧರಿಸಿದಳು. ಎರಡು ವರ್ಷಗಳಾದರೂ ಅವಳು ಪ್ರಸವಿಸಲಿಲ್ಲ.

ಅರಣ್ಯದಲ್ಲಿದ್ದ ಪಾಂಡುರಾಜನೊಮ್ಮೆ ಬೇಟೆಗಾಗಿ ತಿರುಗುತ್ತಾ ಮಿಥುನೀಭಾವ ದಲ್ಲಿದ್ದ ಜಿಂಕೆಗಳನ್ನು ಕಂಡು, ಬಾಣದಿಂದ ಅವನ್ನು ಹೊಡೆದು ಕೆಡಹಿದನು. ತತ್

ಕ್ಷಣವೇ ಜಿಂಕೆಗಳ ರೂಪವನ್ನು ಬಿಟ್ಟು ಕಿಂದಮನೂ, ಅವನ ಪತ್ನಿಯೂ ಮರಣವೇದನೆ ಯಿಂದ ನರಳುತ್ತಾ ಪಾಂಡುರಾಜನಿಗೆ ಕಾಣಿಸಿದರು. ಕಿಂದಮನು—'ರಾಜನ್! ವಿಶಿಷ್ಟಬುದ್ಧಿ ರಹಿತವಾದ ಪಶುಗಳಿಗೂ ಕಾಮೇಚ್ಛೆ ಅನಿವಾರ್ಯವಾಗಿದೆ. ಕಾಮ ಮೋಹಿತರಾಗಿ ವಿವಶರಾದ ದಂಪತಿಗಳನ್ನು ಯಾರೂ ಹಿಂಸಿಸುವುದಿಲ್ಲ. ನಮ್ಮನ್ನು ಕೊಂದ ನೀನು ಅತ್ಯಂತ ಪಾಪಿಯು. ವಿಧಿಗೆ ಮೀರಿದ ಪ್ರಜ್ಞೆಯಿಲ್ಲ. ಧರ್ಮವಂತರ ಕುಲದಲ್ಲಿ ಹುಟ್ಟಿದರೇನು? ಸ್ವಯಂ ಪ್ರಜ್ಞಾವಂತನಾದರೇನು! ನಿನ್ನ ವಿವೇಕ ವೆಲ್ಲವೂ ಕಾಮಲೋಭಗಳಿಂದ ಹಾಳಾಯಿತು. ಮೃಗವಧೆ ಕ್ಷತ್ರಿಯರಿಗೆ ವಿಹಿತವೇ ಇರಬಹುದು. ಆದರೆ ಸರ್ವಭೂತಗಳಿಗೆ ಪ್ರಿಯಕರವಾದ ಮೈಥುನ ಸಮಯದಲ್ಲಿ ನಮ್ಮನ್ನು ಕೊಂದ ಕಾರಣ, ನೀನೂ ನಿನ್ನ ಸತಿಯನ್ನು ಕೂಡಿದ ತತ್‌ಕ್ಷಣವೇ ಮೃತನಾಗು! ನಾನು ಕಿಂದಮನೆಂಬ ಋಷಿಯು; ಕಾಮರೂಪಿಗಳಾದ ನಾವೀರ್ವರು ಮೃಗರೂಪದಿಂದಿದ್ದೆವು. ನಮಗೆ ಮಹಾ ದುಃಖವನ್ನಿತ್ತೆ, ಆದುದರಿಂದ ನಿನಗೂ ಇಂತಹ ದುಃಖವು ಒದಗಲಿ!' ಎಂದು ಘೋರ ಶಾಪವನ್ನಿತ್ತು ಮೃತನಾದನು. ಇದನ್ನು ಕಂಡು, ಪಾಂಡುರಾಜನು ಅತ್ಯಂತ ಖಿನ್ನನಾಗಿ, ಆಶ್ರಮಕ್ಕೆ ಬಂದು, ಪತ್ನಿ ಯರಿಗೆ ಆ ವೃತ್ತಾಂತವನ್ನು ನಿವೇದಿಸಿದನು. ತಾನು ಸನ್ಯಾಸಿಯಾಗಿ ಹೋಗುವೆ ನೆಂದನು. ವೃಕ್ಷಮೂಲಗಳಲ್ಲಿದ್ದು, ಮೂಲಫಲಾಹಾರನಾಗಿ, ಸಮದುಃಖಸುಖ ನಿವಸಿಸಿ, ತಪವಗೈಯುವೆನೆಂದನು. ನಡೆದ ವೃತ್ತಾಂತವನ್ನು ಭೀಷ್ಮಾದಿ ವೃದ್ಧಜನ ರಿಗೆ ತಿಳಿಸಿ, ಅರಣ್ಯದಲ್ಲಿ ತಪಸ್ಸನ್ನು ಪ್ರಾರಂಭಿಸಿದನು. ಅವನ ಧರ್ಮಪತ್ನಿಯರಾದ ಕುಂತಿ ಮಾದ್ರಿಯರು ಭರ್ತೃದುಃಖವನ್ನು ಸಮನಾಗಿ ಸ್ವೀಕರಿಸಿ ಅವನನ್ನು ಸೇವಿಸು ತ್ತಿದ್ದರು.

ಮುಂದೆ ಮಹಾಯುದ್ಧಾದ್ಯನರ್ಥಗಳನ್ನು ನೋಡಬಾರದೆಂಬ ಕರುಣೆಯಿಂದ ವ್ಯಾಸನು ಸತ್ಯವತಿಯನ್ನು ಬದರಿಕಾಶ್ರಮಕ್ಕೆ ಕರೆದುಕೊಂಡು ಹೋದನು. ಅತ್ತೆಯ ಹಿಂದೆ ಅಂಬಿಕಾಂಬಾಲಿಕೆಯರೂ, ವಿದುರ ಮಾತೆಯೂ ಕೂಡ ಹೊರಟು, ತಪದಿಂದ ವ್ಯಾಸ ಪ್ರಸಾದವನ್ನು ಗಳಿಸಿದರು. ಭಕ್ತ್ಯತಿಶಯಯುತರಾದ ಸತ್ಯವತೀ ದಾಸಿಯರು ಶ್ರೀಹರಿಲೋಕವನ್ನು ಸೇರಿದರು. ಅಂಬಿಕೆಯು ಅತ್ಯಂತ ಸೇವಾರತಳಾದುದರಿಂದ ಮೊದಲು ಸ್ವರ್ಗವನ್ನು ಹೊಂದಿ, ಅನಂತರ ಸ್ವಯೋಗ್ಯ ಮುಕ್ತಿಯನ್ನೂ ಹೊಂದಿ ದಳು. ಅಂಬಾಲಿಕಾ ದೇವಿಯು ಭಕ್ತಳಾದುದರಿಂದ ಸಾರೂಪ್ಯವನ್ನು ಹೊಂದಿ, ಅವರೆಲ್ಲರೂ ಉತ್ತಮ ಲೋಕಗಳಲ್ಲಿ ಸುಖದಿಂದಿದ್ದರು. ಶ್ರೀಹರಿಸೇವಾಭಾಗ್ಯವಂತರಿಗೆ ಅನ್ಯಥಾಗತಿಯಾಗುವುದೇ?

ಪಾಂಡುರಾಜನು ಶತಶೃಂಗ ಪರ್ವತ ಮಧ್ಯಸ್ಥವಾದ ನಾರಾಯಣಾಶ್ರಮದಲ್ಲಿ ಪತ್ನಿಯರಿಂದ ಕೂಡಿ ತಪೋನಿರತನಾಗಿರುತ್ತಿದ್ದನು. ಪಾಂಡುಕೇಶ್ವರ ಕ್ಷೇತ್ರದ ಅಲಕನಂದಾ ಸ್ನಾನದಿಂದ ಅವರ ದೇಹಗಳೂ, ಶ್ರೀ ವ್ಯಾಸ ಭಗವಂತನ ಧ್ಯಾನದಿಂದ ಅವರ ಚಿತ್ತಗಳೂ ಪಾವನವಾದವು. ದೇವತಾವರರಾದ ಪಂಚೇಂದ್ರರು ಅವರಲ್ಲಿ

ಅವತರಿಸುವ ಇಚ್ಛೆಯನ್ನು ಮಾಡಿದರು. ಭಕ್ತಾಗ್ರೇಸರನಾದ ಬ್ರಹ್ಮನ ಪ್ರಾರ್ಥನೆಯಂತೆ, ಭೂಭಾರವನ್ನಿಳುಹಲು ಶ್ರೀಹರಿಯು ದೇವಕೀ ವಸುದೇವರಲ್ಲಿ ಜನಿಸುವೆನೆಂದು ದೇವತೆಗಳಿಗೆ ಅಭಯವನ್ನಿತ್ತನು. ಹಿಂದೆ ದೇವಾಸುರ ಯುದ್ಧದಲ್ಲಿ ಸಂಹೃತರಾದ ಶಂಬರ, ವಿಪ್ರಚಿತ್ತಿ, ಕಾಲನೇಮಿ ಮುಂತಾದ ರಾಕ್ಷಸರು ಮತ್ತೆ ದ್ವಾಪರದಲ್ಲಿ ಶಂಬರ, ಜರಾಸಂಧ, ಕಂಸ ಮುಂತಾದ ರಾಜರಾಗಿ ಹುಟ್ಟಿರುವುದರಿಂದ ಅವರನ್ನು ಸಂಹರಿಸಿ, ಸುಜನರನ್ನು ಸಲಹುವೆನೆಂದನು.

ಅದರಂತೆ ದೇವತೆಗಳು ಭೂಮಿಯಲ್ಲಿ ಒಂದಂಶದಿಂದ ಅವತರಿಸಿದರು. ಕಶ್ಯಪನು ಅದಿತಿ, ಸುರಭಿ ಎಂಬ ತನ್ನ ಈರ್ವರು ಮಡದಿಯರ ಮಾತಿನಿಂದ ತನ್ನ ಮಗನಾದ ವರುಣನ ಗೋವುಗಳನ್ನು ಹರಿಸಿದನು. ವರುಣನು ಬ್ರಹ್ಮನಿಗೆ ಮೊರೆಯಿಡಲು ಚತುರ್ಮುಖನು ಕಶ್ಯಪನಿಗೆ ಗೋಜೀವನನಾದ ಕ್ಷತ್ರಿಯನಾಗಿ ಪತ್ನಿಯಿಂದ ಕೂಡಿ ಮನುಜಯೋನಿಯಲ್ಲಿ ಜನಿಸೆಂದು ಶಾಪವನ್ನಿತ್ತನು. ಕಶ್ಯಪನು ಶೂರಸೇನ ಸುತನಾಗಿ ವಸುದೇವನೆನಿಸಿದನು. ಅದಿತಿಯು ದೇವಕಿಯಾದಳು. ಸುರಭಿಯು ರೋಹಿಣಿಯಾಗಿ ಜನಿಸಿದಳು. ಹಿಂದೆ ಮರೀಚಿ ಋಷಿಗಳ ಮಕ್ಕಳು ಆರು ಜನ ದೇವಲರನ್ನು (ಕೃಶರಾಗಿರುವುದನ್ನು) ನೋಡಿ ನಕ್ಕರು. ಅವರ ಶಾಪದಿಂದ ಅವರು ಅಸುರಯೋನಿಯಲ್ಲಿ ಕಾಲನೇಮಿಯ ಸುತರ್ರಾದರು. ಅವರು ಬ್ರಹ್ಮನನ್ನು ಕುರಿತು ತಪವನ್ನು ಮಾಡಿ ಅವಧ್ಯತ್ವವನ್ನು ಪಡೆದರು ; ಅಂದರೆ ಮರೀಚಿಪುತ್ರರಾಗಿ ಶಾಪವಿಮುಕ್ತಿಯಾದ ಮೇಲೆ ಅವಧ್ಯರಾಗುವಂತೆ ಬ್ರಹ್ಮನು ಅನುಗ್ರಹಿಸಿದನು. ಇದನ್ನರಿತು ಹಿರಣ್ಯಕಶಿಪು, ತನ್ನಿಂದಲ್ಲದೆ ಬ್ರಹ್ಮನಿಂದ, ತನ್ನಂತೆ ಅವಧ್ಯತ್ವವನ್ನು ಬೇಡಿ ಪಡೆದ ಅವರನ್ನು ನೋಡಿ ಕುಪಿತನಾಗಿ, ನಿಮ್ಮ ತಂದೆಯಿಂದಲೇ ನಿಮಗೆ ಸಾವು ಬರಲೆಂದು ಶಪಿಸಿದನು. ಅಂತೆಯೇ ಅವರು ದೇವಕಿಯಲ್ಲಿ ಜನಿಸಿ, ಪೂರ್ವಜನಕನಾದ ಕಾಲನೇಮಿಯ ಅಂಶನಾದ ಕಂಸನಿಂದ ಸಂಹರಿಸಲ್ಪಟ್ಟರು. ದುರ್ಗಾದೇವಿಯು ಆರು ಜನ ಕಾಲನೇಮಿ ಪುತ್ರರನ್ನು ಜೀವಮಾತ್ರದಿಂದ ಸೆಳೆದು, ದೇವಕಿಯಲ್ಲಿ ಹುಟ್ಟಿಸಿದಳು. ಅನಂತರ ಕಂಸನು ಅವರನ್ನು ಕೊಂದನು. ಶಿಶುಹತ್ಯಾದಿ ಮಹಾಪಾಪಗಳಿಗೆ ಕೈಯೊಡ್ಡದಿದ್ದರೆ ಅವನು ಶ್ರೀಶನಿಂದ ಹತನಾಗುವ ಬಗೆಯಾದರೂ ಹೇಗೆ ?

ಆ ಕಾಲದಲ್ಲಿ ಗಂಧಮಾದನ ಪರ್ವತದ ತಪ್ಪಲಿನಲ್ಲಿದ್ದ ಆಶ್ರಮಗಳಿಂದ ಋಷಿಗಳು ಮೇರುಪರ್ವತದ ಬ್ರಹ್ಮಸಭೆಗೆ ಹೊರಡುತ್ತಿದ್ದರು. ಅದನ್ನು ಪಾಂಡುರಾಜನು ನೋಡಿ, ತಾನೂ ಪತ್ನಿಯರಿಂದ ಕೂಡಿ ಹೊರಡಲನುವಾದನು. ರಾಜವೇಷಭೂಷಣಗಳನ್ನೂ, ಪತ್ನೀಸಂಗವನ್ನೂ ಬಿಟ್ಟು ವಿರಕ್ತನಾಗಿ ತಪೋವ್ರತ ನಿಯಮಗಳಿಂದ ಪರಿಶುದ್ಧಗಾತ್ರನಾಗಿದ್ದ ಪಾಂಡುವಿಗೆ ಆ ಯೋಗ್ಯತೆ ಇತ್ತು. ಸುಕುಮಾರಿಯರಾದ ಕುಂತಿ ಮಾದ್ರಿಯರೂ ಅವನ ಹಿಂದೆ ಹೊರಟರು. ದುರ್ಗಮ ದೇವಮಾರ್ಗದಲ್ಲಿ ಶ್ರಮದಿಂದ ಪರ್ಯಟಿಸುವ ತರುಣಿಯರನ್ನು ನೋಡಿ ಋಷಿಗಳು ಅವರನ್ನು ತಡೆದು, ಹಿಂದಿರುಗಿರೆಂದರು. ಪಾಂಡುರಾಜನು ಅವರನ್ನು ನೋಡಿ ದುಃಖದಿಂದ—

'ಋಷಿವರರೇ ! ನಾನು ಅಪ್ರಜನಾಗಿರುವೆನೆಂದು ನನ್ನನ್ನು ತಡೆದಿರಾ ಏನು ? ಈ ನನ್ನ ದೇಹವು ಅಬೀಜವಾಯಿತು. ಮನುಜನು ಹುಟ್ಟುವಾಗಲೆ ಋಣಪಂಚಕ ವನ್ನು ಹೊತ್ತುಬರುವನು. ಯಜ್ಞಗಳಿಂದ ದೇವ ಋಣವನ್ನು, ವೇದಾಧ್ಯಯನದಿಂದ ಋಷಿ ಋಣವನ್ನು, ಶ್ರಾದ್ಧ ಸಂತಾನಗಳಿಂದ ಪಿತೃ ಋಣವನ್ನು, ದಯಾ ಧರ್ಮ ಗಳಿಂದ ಮನುಜ ಋಣವನ್ನು, ಬಲ್ಯಾದಿಗಳಿಂದ ಭೂತ ಋಣವನ್ನು ತೀರಿಸದ ಮನುಜ ನಿಗೆ ಸದ್ಗತಿಯಾಗುವುದಿಲ್ಲ. 'ಅಪುತ್ರಸ್ಯ ಗತಿರ್ನಾಸ್ತಿ' ಎಂದು ವೇದವೇ ಸಾರುತ್ತಿದೆ. ಪಿತೃ ಋಣದಿಂದ ಮಾತ್ರ ಮುಕ್ತನಾಗದ ನನ್ನ ಗತಿ ಏನು ?' ಎಂದು ಕೇಳಿದಾಗ ಪಾಂಡುರಾಜನಿಗೆ ಋಷಿವರರು—

'ರಾಜನ್ ! ಧರ್ಮಾತ್ಮನಾದ ನಿನಗೆ ದೇವ ವರದಿಂದ ದಿವ್ಯಸಂತಾನವು ಪ್ರಾಪ್ತವಾಗುವುದಿದೆ. 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ವಚನವು ಯಾರಿಗೆ ಪುತ್ರ ರಿಂದಲೇ ಗತಿಯು ವಿಧಾಯಕವಾಗಿದೆಯೋ ಅಂತಹ ಜೀವರಿಗೆ ಮಾತ್ರವೇ ! ಧರ್ಮಾಂಗದ ರಾಜನು ಅಪುತ್ರಕನಾದರೂ ಸದ್ಗತಿಯನ್ನು ಹೊಂದಲಿಲ್ಲವೆ ? ಯಾರು ಯಾವ ಕಾರ್ಯವನ್ನು ಮಾಡಲು ಶ್ರೀಹರೀಚ್ಛೆಯಿಂದ ಪ್ರೇರಿತರಾಗಿ ಜನಿಸಿರುವರೋ, ಅವರು ಆ ಕಾರ್ಯವನ್ನು ಮಾಡಿಕೊಂಡೇ ಸದ್ಗತಿಯನ್ನು ಹೊಂದಬೇಕಾಗಿದೆ. ರಾಜನ್ ! ದೇವವರರು ನಿನಗೆ ಸುತರಾಗಲು ಬಯಸಿರುವರು. ಅವರ ವರದಿಂದ ಅವರನ್ನು ಮಕ್ಕಳನ್ನಾಗಿ ಪಡೆದು, ಮುಂದೆ ನೀನೂ ಸ್ವರ್ಗವನ್ನು ಹೊಂದುವೆ. ಸಂಶಯವು ಬೇಡ ! ಹಿಂದಿರುಗು !' ಎಂದು ಹೇಳಿ, ಪಾಂಡುರಾಜನನ್ನೂ ಅವನ ಪತ್ನಿ ಯರನ್ನೂ ಪಾಂಡುಕೇಶ್ವರಕ್ಕೆ ಕಳಿಸಿ, ತಾವು ಬ್ರಹ್ಮಸಭೆಗೆ ಹೊರಟುಹೋದರು.

## ಪಾಂಡವ ಕೌರವ ಜನನ

ಒಂದುದಿನ ಪಾಂಡುರಾಜನು ಏಕಾಂತದಲ್ಲಿ ಕುಂತಿಯನ್ನು ಕೂಡಿ ಆಲೋಚಿ ಸಿದನು—'ನನಗೆ ಮೃಗಶಾಪದಿಂದ ಮೈಥುನ ಧರ್ಮವು ಮರಣಪ್ರದವಾಗಿದೆ. ಧರ್ಮಸಂತಾನವಿಲ್ಲದಿದ್ದರೆ ನಮಗೆ ಸುಗತಿ ಇಲ್ಲ. ಯಜ್ಞ, ದಾನ, ತಪಃಕ್ರಿಯಾದಿ ಗಳೆಲ್ಲವೂ ಸಂತಾನಲಾಭಕ್ಕೆ ಸಮವಲ್ಲ. ನಿಯೋಗದಿಂದ ನಾನು ವ್ಯಾಸರಿಂದ ಜನಿಸಿ ರುವಂತೆ, ನೀನೂ ನಿಯೋಗಧರ್ಮವನ್ನವಲಂಬಿಸಿ, ದೇವವರರಿಂದ ಸತ್ಸಂತಾನವನ್ನು ಪಡೆದು ಕುಲವನ್ನುದ್ಧರಿಸು ! ಗಾಂಧಾರಿಯೂ ಗರ್ಭವತಿಯಾಗಿರುವಳೆಂದು ಮುನಿ ಜನರು ಹೇಳುತ್ತಿದ್ದಾರೆ. ಸ್ವಯಂ ಪುತ್ರವಂತನಾಗುವ ಆಸೆ ನನಗಿದ್ದಂತೆ ನಿನಗೂ ಇಲ್ಲವೆ ? ಕೇಳಿಲ್ಲಿ—ಸ್ವಯಂಜಾತ (ಹೆಂಡತಿ ಮಗ), ಪ್ರಣೀತ (ಉತ್ತಮರ ಅನುಗ್ರಹ ದಿಂದ ಹೆಂಡತಿ ಮಗ), ಪರಿಕ್ರೀತ (ಕೊಂಡವ), ಪೌನರ್ಭವ (ಮತ್ತೆ ಮದುವೆ ಆದವಳಿಂದ ಹುಟ್ಟಿದವನು), ಕಾನೀನ (ಕನ್ಯಾಜಾತ), ಸ್ವೈರಿಣೀಜಾತ ಎಂಬ ಆರು ಸುತರು ಧನ ದಾಯಾದಿಗಳೆನಿಸುವರು ; ದತ್ತ, ಕ್ರೀತ, ಕೃತ್ರಿಮ, ಉಪಗತ, ಸಹೋಢಜ, ಹೀನಜ ಎಂಬ ಆರು ಸುತರು ಅಬಂಧು ದಾಯಾದಿಗಳಾದ ಸುತರು.

ಇವರಲ್ಲಿ ಸ್ವಯಂಜಾತನು ಉತ್ತಮನು, ಎರಡನೆಯವನಾಗಿ ಪ್ರಣೀತನು ಕುಲವರ್ಧನನಾದ ಸತ್ಸುತನು, ಮಿಕ್ಕವರೆಲ್ಲ ನಾಮಮಾತ್ರ ಸುತರು. ಕುಂತಿ! ಪ್ರಜನನ ಶ್ರೇಯದಿಂದ ದೂರರಾದ ನಮಗೆ ಪ್ರಣೀತನೆ ಉತ್ತಮ ಗತಿಪ್ರದನಾಗಿರುವನು. ಬೇರೆ ಮಾರ್ಗವಿಲ್ಲ. ಹಿಂದೆ ಶಾರದಂಡಾಯಿನಿಯು ಗಂಡನ ಅಪ್ಪಣೆ ಪಡೆದು ಸಿದ್ಧ ದ್ವಿಜನಿಂದ ದುರ್ಜಯಾದಿ ಪುತ್ರತ್ರಯವನ್ನು ಪಡೆದಳು. ನೀನೂ ನನಗಿಂತಲೂ ಉತ್ತಮರಾದ ದೇವತೆಗಳಿಂದ ನಿಯೋಗಧರ್ಮದಲ್ಲಿ ಸತ್ಪುತ್ರರನ್ನು ಹೊಂದು. ನನ್ನನ್ನು ಪುನ್ನರಕದಿಂದ ಉಳಿಸು.' ಹೀಗೆ ಕೇಳಿದ ಗಂಡನಿಗೆ ಕುಂತಿ ಇಂತೆಂದಳು. —'ನಾಥ! ಧರ್ಮಜ್ಞನಾದ ನೀನು ಧರ್ಮಜ್ಞಳಾದ ನನಗೆ ಇಂತಹ ಅಕಾರ್ಯವನ್ನು ಮಾಡೆನ್ನಬಹುದೆ? ಅಪತ್ಯವೇ ಬೇಕೆಂಬ ಹಠವಿದ್ದರೆ ನಿನ್ನಿಂದ ನಾನು ಮಗನನ್ನು ಪಡೆಯುವೆನು; ಆಗ ನಿನಗೆ ಸ್ವರ್ಗತಿಯಾದರೆ ನಾನೂ ಸುತನನ್ನು ತಾತನಿಗಿತ್ತು, ನೆರಳಿನಂತೆ ನಿನ್ನನ್ನು ಹಿಂಬಾಲಿಸುವೆನು. ಮನಸಾ ಆದರೂ ಅನ್ಯಮನುಜರನ್ನು ನಾನು ಸ್ಮರಿಸದಿರುವೆನು. ನಿನಗಿಂತಲೂ ಉತ್ತಮರು ಈ ಲೋಕದಲ್ಲಿ ಇಲ್ಲ. ಹಿಂದೆ ವ್ಯುಷಿತಾಶ್ವನೆಂಬ ರಾಜರ್ಷಿಯು ಬಹು ಯಾಗಗಳನ್ನು ಮಾಡಿದನು. ಅವನ ಹವಿರ್ಭಾಗವನ್ನುಂಡು, ಇಂದ್ರಾದಿಗಳು ಮುದಿತರಾದರು. ಅವನ ಪತ್ನಿ ಭದ್ರೆ ಎಂಬವಳು ಕಕ್ಷೀವಂತನ ಮಗಳು. ವ್ಯುಷಿತಾಶ್ವನು ಅವಳಲ್ಲಿ ಅತ್ಯಂತ ರತನಾಗಿ, ಕ್ಷಯದಿಂದ ಮೃತನಾದನು. ಭದ್ರೆಯು ಶೋಕಸಂತಪ್ತಳಾಗಿ ಸಹಗಮನ ಮಾಡಲೆಣಿಸಿದಳು. ಅಂದು ರಾತ್ರಿ ಶವ ಸಮೀಪದಲ್ಲಿ ಮಲಗಿದ್ದ ಅವಳಿಗೆ ಅಶರೀರವಾಣಿಯು 'ಭದ್ರೆ! ಏಳು! ಋತುಸ್ನಾತಳಾಗಿ ಎಂಟನೆಯ ದಿನದ ರಾತ್ರಿ, ಮತ್ತು ಹದಿನಾಲ್ಕನೆಯ ದಿನದ ರಾತ್ರಿ ನನ್ನ ಶಯನಗೃಹದಲ್ಲಿರು. ನಿನಗೆ ನಾನು ಪುತ್ರಸಂತತಿಯನ್ನೀಯುವೆನು' ಎಂದು ಕೇಳಿಸಿತು. ಅಂತೆಯೇ ಅವಳು ಶವದಿಂದ ಕೂಡಿ ವ್ಯುಷಿತಾಶ್ವನ ಶಯನದಲ್ಲಿದ್ದಳು. ಆಗ ಅವಳಿಗೆ ಮೂರು ಜನ ಶಾಲ್ವರು, ನಾಲ್ಕು ಜನ ಮದ್ರರು ಸುತರಾದರು. ಹಾಗೆಯೇ ಮನೋಬಲದಿಂದ ನೀನು ನನ್ನಲ್ಲಿ ಪುತ್ರೋತ್ಪಾದನವನ್ನು ಮಾಡು.'

ಆಗ ಪಾಂಡುವಿಂತೆಂದನು—'ಶ್ವೇತಕೇತುವಿನ ಶಾಪದಿಂದ ಅಂಗನೆಯರು ಸ್ವಪತಿಮಾತ್ರ ವೃತ್ತರಾಗುವಂತೆ ರಕ್ಷಿತರಾದರು, ನಿಜ. ತೇಜಸ್ವಿಗಳಾದ ದೇವತೆಗಳಿಗೆ ದೋಷ ಶಂಕೆ ಮಾಡಲಾಗದು. ಸೌದಾಸನಿಗೆ ಬ್ರಾಹ್ಮಣೀಶಾಪದಿಂದ ಸತೀಸಂಗವು ಮರಣಾಪಾದಕವಾದಾಗ ಅವನ ಪತ್ನಿ ಮದಯಂತಿ, ವಸಿಷ್ಠರಿಂದ ಸಂತಾನವನ್ನು ಪಡೆದಳು. ಅವಳು ಮಹಾ ಪತಿವ್ರತೆಯಲ್ಲವೆ? ಕುರುವಂಶ ವರ್ಧನಳಾಗುವೆ ಎಂದೇ ನಿನ್ನನ್ನು ಭೀಷ್ಮ-ವ್ಯಾಸರು ನನಗೆ ತಂದುಕೊಂಡರು. ನನ್ನ ವಚನದಂತೆ ಉತ್ತಮ ದೇವತೆಗಳನ್ನು ಕರೆದು, ಅವರನ್ನು ಸುತರನ್ನಾಗಿ ಪಡೆ. ಇದು ಅಧರ್ಮವಲ್ಲ.'

ಕುಂತಿಯು ಪಾಂಡುವಿನ ನಿರ್ಬಂಧವನ್ನರಿತು, ದೈವೇಚ್ಛೆಗೆ ಶಿರಬಾಗಿ ತನಗೆ ದೂರ್ವಾಸನಿತ್ತ ವರವನ್ನು ತಿಳಿಸಿ, 'ಯಾವ ದೇವರನ್ನು ಕರೆಯಲಿ?' ಎಂದು ಕೇಳಿದಳು.

ಆಗ ಪಾಂಡುರಾಜನು 'ಪುಣ್ಯವಂತನು, ಸಮವರ್ತಿಯು, ಧರ್ಮಪಾಲಕನು ಆದ ಯಮಧರ್ಮನನ್ನು ಕರೆ. ಅವನು ನಿನಗೆ ಮಗನಾಗಿ ಧರ್ಮದಿಂದ ರಾಜ್ಯವಾಳುವನು. ಧರ್ಮದಿಂದ ಸಕಲವೂ ಸುಲಭವಾಗಿದೆ' ಎಂದನು. ಗಾಂಧಾರಿಯು ಗರ್ಭವನ್ನು ಧರಿಸಿ ವರ್ಷವಾಗಿರುವ ಸಮಯದಲ್ಲಿ, ಕುಂತಿಯು, ಪತಿಯ ಆಜ್ಞೆಯಂತೆ ಧರ್ಮನನ್ನು ಆವಾಹಿಸಿದಳು. ಬಂದ ಯಮಧರ್ಮನನ್ನು ಪೂಜಿಸಿ, ಅವನಿಂದ ಧರ್ಮನನ್ನೇ ಪುತ್ರನನ್ನಾಗಿ ಪಡೆದಳು. ಅವನು ಧರ್ಮರಾಜನೆಂದು ಖ್ಯಾತನಾದನು. ಜ್ಯೇಷ್ಠಾ ನಕ್ಷತ್ರದಲ್ಲಿ, ಅಭಿಜಿನ್ಮುಹೂರ್ತದಲ್ಲಿ, ಮಧ್ಯಂದಿನದ ಶುಭವೇಳೆಯಲ್ಲಿ ಜನಿಸಿದ ಮಗ ನನ್ನು ದೇವತೆಗಳು ಪುಷ್ಪವೃಷ್ಟಿಯಿಂದ ಹರಸಿದರು. 'ಇವನು ಧರ್ಮವಂತರಲ್ಲಿ ಉತ್ತಮನೆನಿಸುವನು. ವಿಕ್ರಮ, ಶೀಲ, ಸತ್ಯ, ವಿರಾಗಗಳಿಗೆ ಖನಿಯಾಗಿ ಪ್ರಜಾ ರಂಜಕನಾಗಿ ರಾಜ್ಯವಾಳುವನು. ಯುಧಿಷ್ಠಿರನೆಂದು ಖ್ಯಾತನಾಗುವನು' ಎಂದು ಆಕಾಶವಾಣಿ ನುಡಿಯಿತು. ಕುಂತಿ ಪಾಂಡುರಾಜರು ಆನಂದತುಂದಿಲರಾದರು.

ಕುಂತಿ ಸುತವಂತಳಾದ ವೃತ್ತಾಂತವು ಗಾಂಧಾರಿಯ ಕಿವಿಗೆ ಶೂಲವಾಯಿತು. ಅಸೂಯೆಯಿಂದ ನೊಂದ ಗಾಂಧಾರಿಯು ಹೊಟ್ಟೆಯ ಮೇಲೆ ಕುಟ್ಟಿಕೊಂಡು ಅತ್ತಳು. ಅವಳಿಗೆ ಗರ್ಭಪಾತವಾಗಿ ಒಂದು ಲೋಹದ ಗುಂಡಿನಂತಿರುವ ಗರ್ಭವು ಕೆಳಗೆ ಬಿತ್ತು. ಆಗ ದೇವಕಾರ್ಯಾರ್ಥಿಯಾಗಿ ಕೃಷ್ಣದ್ವೈಪಾಯನನು ಅಲ್ಲಿಗೆ ಬಂದು ಗಾಂಧಾರಿಯನ್ನು ಬೈದು 'ಗಾಂಧಾರಿ ! ಕುಂತಿಸುತನು ಕುಲಜ್ಯೇಷ್ಠನಾದುದ ರಿಂದ ಅವನಿಗೇ ರಾಜ್ಯವು ಸೇರುವುದನ್ನು ಸಹಿಸದೆ ಈ ಅಕಾರ್ಯವನ್ನು ಮಾಡಿದೆ. ಆದರೆ ನನ್ನ ವಚನದಂತೆ ನಿನಗೆ ನೂರು ಜನ ಸುತರಾಗುವರು' ಎಂದು ಸಮಾಧಾನ ಪಡಿಸಿದನು. ನೂರು ತುಪ್ಪದ ಗಡಿಗೆಗಳನ್ನು ತರಿಸಿ, ಗರ್ಭದಿಂದ ಒಂದೊಂದೇ ಪೇಶಿಯನ್ನೆತ್ತಿ, ಒಂದೊಂದರಲ್ಲಿಟ್ಟು, ಕೊನೆಗೆ ಉಳಿದ ಚೂರನ್ನು ನೂರೊಂದನೆಯ ಗಡಿಗೆಯಲ್ಲಿಟ್ಟನು. ಅವುಗಳನ್ನು ಚನ್ನಾಗಿ ರಕ್ಷಿಸೆಂದು ಹೇಳಿ ಹೋದಮೇಲೆ ಮತ್ತೊಂದು ವರ್ಷವಾಯಿತು. ಗಡಿಗೆಗಳಿಂದ ಕ್ರಮವಾಗಿ ನೂರು ಜನ ಸುತರು ಜನಿಸಿದರು. ಕಲಿಯೇ ರುದ್ರವರದಿಂದ ಅವಧ್ಯನೆನಿಸಿ ದುರ್ಯೋಧನನೆಂಬ ಹೆಸರಿನಿಂದ ಧೃತರಾಷ್ಟ್ರನ ಪ್ರಥಮ ಪುತ್ರನಾದನು. ಅವನು ಹುಟ್ಟಿದಾಗ ಸಕಲಾವಲಕ್ಷಣ ಯುತನಾದ ಅವನಿಗೆ ತಕ್ಕಂತೆ ದುಶ್ಶಕುನಗಳು ತಲೆದೋರಿದವು.

ದುರ್ಯೋಧನನು ಹುಟ್ಟಿದಕೂಡಲೆ ಕತ್ತೆಯಂತೆ ಒದರಿ ಅತ್ತನು. ಅವನ ಕರ್ಕಶ ರಾವವನ್ನು ಕೇಳಿ ಕತ್ತೆಗಳು, ಹದ್ದುಗಳು, ನರಿಗಳು ಪ್ರತಿರಾವವನ್ನು ಮಾಡಿದವು. ಬಿರುಗಾಳಿ ಬೀಸಿ ಗಿಡಗಳನ್ನು ಸಮೂಲವಾಗಿ ಕಿತ್ತೊಗೆಯಿತು. ದಿಕ್ಕುಗಳು ಸುಡು ತ್ತಿರುವಂತೆ ಕಂಡವು. ಇದನ್ನು ನೋಡಿ ಧೃತರಾಷ್ಟ್ರನು ಭೀತನಾಗಿ 'ಏನಿದೆಂದು' ಗುರುಹಿರಿಯರನ್ನು ಕೇಳಿದನು. 'ಧರ್ಮಜನು ವಂಶಕ್ಕೆ ಜ್ಯೇಷ್ಠಸುತನೆನಿಸಿರುವನು. ಅವನಿಗೇ ರಾಜ್ಯವು ಸಲ್ಲುವುದು. ಇರಲಿ, ಈಗ ಹುಟ್ಟಿದ ಇವನೂ ಅವನ ಅನಂತರ ರಾಜ್ಯವನ್ನಾಳುವನೆ ? ಹೇಗೆ ?' ಎಂದು ಕೇಳಿದ ರಾಜನಿಗೆ ವಿಪ್ರರು, ವಿದುರ ಭೀಷ್ಮ

ರಿಂದ ಕೂಡಿ ಆಲೋಚಿಸಿ, 'ರಾಜನ್! ಇವನು ಕುಲನಾಶಕನಾಗುವನು. ಇವನಿಂದ ಸಕಲ ಸುಜನರು ಪೀಡಿತರಾಗುವರು. ಭೂಮಿಯು ರಕ್ತನದೀಮಯವಾಗಲು ಇವನೇ ಕಾರಣನಾಗುವನು. ಈ ಪಾಪಿಯೊಬ್ಬನನ್ನು ಬಿಟ್ಟು, ಮಿಕ್ಕ ಮಕ್ಕಳಿಂದ ಸುಖ ವಾಗಿರು. ಕುಲಕ್ಕಾಗಿ ಒಬ್ಬನನ್ನು ಬಿಡಬೇಕು. ಗ್ರಾಮಕ್ಕಾಗಿ ಕುಲ ಅಂದರೆ ಗುಂಪನ್ನೇ ಬಿಡಬೇಕು. ದೇಶಕ್ಕಾಗಿ ಗ್ರಾಮವನ್ನು ಬಿಡಬೇಕು. ಧೀರನು ತನ್ನ ಉದ್ಧಾರಕ್ಕಾಗಿ ಪೃಥಿವಿಯನ್ನೇ ಬಿಟ್ಟು ವಿರಕ್ತನಾಗಿರಬೇಕು' ಎಂದು ಹೇಳಿದರು. ಧೃತರಾಷ್ಟ್ರನು ಪುತ್ರಸ್ನೇಹದಿಂದ ಆ ಕಾರ್ಯವನ್ನು ಮಾಡಲಾರದೆ ಸುಮ್ಮನಿದ್ದನು. ಒಂದು ತಿಂಗಳಾಗುವ ವೇಳೆಗೆ ನೂರು ಪೇಶಿಗಳೂ ಮಕ್ಕಳಾದವು. ಕೊನೆಯ ಗಡಿಗೆ ಯಿಂದ ವೃಷಾ ಎನ್ನುವ ಅಸುರತರುಣಿಯೇ ದುಶ್ಶಲೆಯಾಗಿ ಹುಟ್ಟಿದಳು. ಎರಡನೇ ಗಡಿಗೆಯಿಂದ ಬಂದವನೇ ದುಶ್ಶಾಸನನು. ಅವನು ಇಂದ್ರಜಿತನಾಗಿದ್ದ ದುರ್ಮಾರ್ಗನು. ಇಂತು ಹರಿ ಗುರು ಸುಜನದ್ವೇಷಿಗಳಾದ ಅಸುರರು ಧೃತರಾಷ್ಟ್ರ ಪುತ್ರರಾಗಿ ಜನಿಸಿ ದರು. ಗಾಂಧಾರಿಯು ಗರ್ಭವತಿಯಾಗಿದ್ದಾಗ ರಾಜಸೇವೆಯನ್ನು ಮಾಡುತ್ತಿದ್ದ ವೈಶ್ಯಪತ್ನಿಯು ತಾನೂ ರಾಜನಿಂದ ಗರ್ಭವನ್ನು ಧರಿಸಿ, ಯುಯುತ್ಸುವೆಂಬ ಮಗ ನನ್ನು ಪಡೆದಳು. ಅವನು ನಿರ್ಋತಿ ಎಂಬ ದೇವನ ತಮ್ಮನಾದ ನಿರ್ಋತಿ ಎಂಬ ದೇವನ ಅಂಶದಿಂದಲೂ, ನಾಸಿಕ್ಯ ವಾಯುವಿನ ಆವೇಶದಿಂದಲೂ ವಿರಾಜಿಸಿದನು. ವಿಕರ್ಣನೇ ಅತಿಕಾಯ ರಾಕ್ಷಸನು. ಖರನೇ ಚಿತ್ರಸೇನನು; ಕಾಲಕೇಯನೇ ಸೈಂಧವನು. ಅವನು ಅಭಿಮನ್ಯು ವಧೆಗಾಗಿ ತಪವನ್ನು ಮಾಡಿ ರುದ್ರವರದಿಂದ ಅವ ನನ್ನು ನಿಸ್ಸಹಾಯನಾಗಿ ಮಾಡುವ ಮಟ್ಟಿಗೆ ವಧೆಗೆ ಕಾರಣನಾದನು. ಗಾಂಧಾರಿಯು ತಪಸ್ಸು ಸತ್ಯ ದಾನ ಫಲವನ್ನೆರೆದು ಪ್ರಾರ್ಥಿಸಿದಂತೆ, ಅವಳಿಗೆ ದುಹಿತೃದಾನ ಫಲ ವನ್ನು, ದೌಹಿತ್ರ ಸುಖವನ್ನು ನೀಡಲು, ಶ್ರೀವ್ಯಾಸನು ಪೇಶಿಯನ್ನು ಏಕೋತ್ತರ ಶತಭಾಗವನ್ನಾಗಿ ನಿರ್ಮಿಸಿ ವಿಭಜಿಸಿದನು. ಸಕಲ ಜಗತ್ತಿನ ನಿರ್ಮಾಣ, ಪೋಷಣ, ಸಂಹಾರರೂಪ ಲೀಲಾಮನೋಹರನಾದ ಪ್ರಭುವಿಗೆ ಅಸಾಧ್ಯ ಒಂದುಂಟೆ!

ಈಗ ದುರ್ಯೋಧನಾದಿಗಳ ನಾಮಗಳನ್ನು ಕೇಳು.

ದುರ್ಯೋಧನ, ಯುಯುತ್ಸು, ದುಶ್ಶಾಸನ, ದುಸ್ಸಹ, ದುಶ್ಶಲ, ಜಲಸಂಧ, ಸಮ, ಸಹ, ವಿಂದ, ಅನುವಿಂದ, ದುರ್ಧರ್ಷ, ಸುಬಾಹು, ದುಃಪ್ರದರ್ಷಣ, ದುರ್ಮರ್ಷಣ, ದುರ್ಮುಖ, ದುಃಕರ್ಣ, ವಿವಿಂಶತಿ, ವಿಕರ್ಣ, ಶಲ, ಸತ್ವ, ಸುಲೋಚನ, ಚಿತ್ರ, ಉಪಚಿತ್ರ, ಚಿತ್ರಾಕ್ಷ, ಚಾರುಚಿತ್ರ, ಶರಾಸನ, ದುರ್ಮದ, ದುರ್ವಿಗಾಹ, ವಿವಿತ್ಸು, ವಿಕಟಾನನ, ಊರ್ಣನಾಭ, ಸುನಾಭ, ನಂದ, ಉಪನಂದಕ, ಚಿತ್ರಬಾಣ, ಚಿತ್ರವರ್ಮ, ಸುವರ್ಮ, ದುರ್ವಿಮೋಚನ, ಅಯೋಬಾಹು, ಚಿತ್ರಾಂಗ, ಚಿತ್ರಕುಂಡಲ, ಭೀಮವೇಗ, ಭೀಮಬಲ, ಬಲಾಕೀ, ಬಲವರ್ಧನ, ಉಗ್ರಾಯುಧ, ಸುಷೇಣ, ಕುಂಡಧಾರ, ಮಹೋದರ, ಚಿತ್ರಾಯುಧ, ನಿಷಂಗೀ, ವೃಂದಾರಕ, ದೃಢವರ್ಮ, ದೃಢಕ್ಷತ್ರ, ಸೋಮಕೀರ್ತಿ, ಅನೂದರ, ದೃಢಸುಧ, ಜರಾಸಂಧ,

ಸತ್ಯಸಂಧ, ಸದಸ್ಸುವಾಕ್, ಉಗ್ರಶ್ರವ, ಉಗ್ರಸೇನ, ದುಷ್ಕರಾಜಯ, ಕುಂಡಶಾಯಿ, ವಿಶಾಲಾಕ್ಷ, ದುರಾಧರ, ದೃಢಹಸ್ತ, ಸುಹಸ್ತ, ವಾತವೇಗ, ಸುವರ್ಚಸ, ಆದಿತ್ಯಕೇತು, ಬಹ್ವಾಶಿ, ನಾಗದತ್ತ, ಉಗ್ರಯಾಯಿ, ಕವಚಿ, ಕಥನ, ಕುಂಡ, ಕುಂಡಾಧಾರ, ಧನುರ್ಧರ, ಉಗ್ರ, ಭೀಮರಥ, ವೀರಬಾಹು, ಅಲೋಲುಪ, ಅಭಯ, ರೌದ್ರಕರ್ಮ, ದೃಢರಥಾಶ್ರಯ, ಅನಾಧೃಷ್ಯ, ಕುಂಡಭೇದಿ, ವಿರಾವಿ, ಚಿತ್ರಕುಂಡಲ, ಪ್ರಮಥ, ಪ್ರಮಾಥೀ, ದೀರ್ಘರೋಮ, ವೀರ್ಯವಾನ್, ದೀರ್ಘಬಾಹು, ಮಹಾಬಾಹು, ವ್ಯೂಢೋರ, ಕನಕಧ್ವಜ, ಕುಂಡಾಶಿ, ವಿರಜ ಎಂಬುವರು ನೂರಒಂದು ಜನರು ಧೃತರಾಷ್ಟ್ರ ಪುತ್ರರು. ಇವರೆಲ್ಲರೂ ಮಹಾವೀರರು, ಅತಿರಥರು, ವೇದವಿದ್ಯಾ ವಿಶಾರದರು, ಸರ್ವಾಸ್ತ್ರ ಕುಶಲರು ಆಗಿ ಬೆಳೆದರು.

ಅಲ್ಲಿ ಪಾಂಡುರಾಜನು ಕುಂತಿಯನ್ನು ನೋಡಿ, 'ಧರ್ಮವನ್ನು ಜ್ಞಾನದಿಂದಲೂ, ಬಲದಿಂದಲೂ ಸಂರಕ್ಷಿಸದಿದ್ದರೆ ಅದು ನಿರರ್ಥಕವಾಗುವುದು. ಆದ್ದರಿಂದ ಧರ್ಮರಾಜ ನನ್ನು ಜ್ಞಾನ ಬಲಗಳಿಂದ ರಕ್ಷಿಸುವ ಸುತನನ್ನು ವಾಯುದೇವನಿಂದ ಹೊಂದು ; ಅವ ನಿಗೆ ಜ್ಞಾನಬಲಗಳಲ್ಲಿ ಸಮಾನರಿಲ್ಲ. ಶ್ರೀನಾರಾಯಣನು ವ್ಯಾಸರೂಪದಿಂದ ನನಗೆ ತಂದೆಯಾದ್ದರಿಂದ ಅವನನ್ನು ಕರೆಯಲಾಗದು' ಎಂದನು. ಕುಂತಿಯು ಭಕ್ತಿಯಿಂದ ಮುಖ್ಯಪ್ರಾಣನನ್ನು ಕರೆಯಲು, ಸುರವರನಾದ ವಾಯುದೇವನು ಅವಳನ್ನು ಮುಟ್ಟು ವುದರಿಂದಲೇ ಸಂತಾನವನ್ನು ಅನುಗ್ರಹಿಸಿದನು. ಭೀಮಪರಾಕ್ರಮನಾದ ಭೀಮನು ಜನಿಸಿದಾಗ ಪುಷ್ಪವೃಷ್ಟಿಯಾಯಿತು. 'ಈ ಪುತ್ರನು ಸರ್ವಬಲವಂತರಲ್ಲಿ ಶ್ರೇಷ್ಠ ನಾಗುವನು ; ಜ್ಞಾನದಲ್ಲಿ ಸರ್ವಜ್ಞನೆನಿಸುವನು; ಶತ್ರುದರ್ಪಭಂಜಕನಾದ ಪ್ರಭಂಜನ ಸುತನು ಶ್ರೀ ಕೃಷ್ಣ ಉಭಯರ ಪ್ರೀತಿಯನ್ನು ಗಳಿಸಿ ಭಾಗವತೋತ್ತಮನೆನಿಸುವನು' ಎಂದು ಅಶರೀರವಾಣಿ ಕೇಳಿಸಿತು.

ರಾಜನ್ ! ಆಗ ನಡೆದ ಆಶ್ಚರ್ಯವನ್ನು ಕೇಳು. ಆಗಲೇ ಹುಟ್ಟಿದ ಶಿಶು ವನ್ನು ತೆಗೆದುಕೊಂಡು ಕುಂತಿ ಬರುತ್ತಿದ್ದಳು. ವ್ಯಾಘ್ರಗರ್ಜನೆಯನ್ನು ಕೇಳಿ ಭೀತ ಳಾದ ಕುಂತಿಯ ಕೈಯಿಂದ ಕೂಸು ಜಾರಿ ಕೆಳಗೆ ಪರ್ವತದ ಕೋಡಿನಲ್ಲಿ ಬಿತ್ತು. ಅದರಿಂದ ಮೊದಲೇ ಶತಶೃಂಗವೆಂಬ ನಾಮದಿಂದ ಖ್ಯಾತವಾದ ಪರ್ವತದ ಕೋಡು ನೂರು ಚೂರಾಗಿ ಸಾರ್ಥಕನಾಮಧೇಯವೆನಿಸಿತು. ದೇವಗುರ್ವನುಗ್ರಹದಿಂದಲ್ಲವೇ ಸುಜನರ ನಾಮ ರೂಪಗಳು ಉಳಿದು ಸಾರ್ಥಕವಾಗುವುವು ! ಭೀಮನು ಹುಟ್ಟಿದ ಕೂಡಲೇ ಪಾತಾಳಗತ ರಾಕ್ಷಸರು, ಅವರ ಅಂಶದಿಂದ ಭೂಮಿಯಲ್ಲಿ ಜನಿಸಿದ ರಾಜರು ಕೂಡ ಭಯದಿಂದ ರಕ್ತವನ್ನು ಕಾರಿಕೊಂಡರು. ಅವನು ವರ್ಧಮಾನನಾಗುತ್ತಾ ದೇವತೆಗಳ ಸಂತೋಷವನ್ನು ಬೆಳೆಸಿದನು. ಭೀಮನು ಹುಟ್ಟಿದ ಹಿಂದಿನ ದಿನವೇ ದುರ್ಯೋಧನನು ಹುಟ್ಟಿದನು. ಭೀಮನು ಹುಟ್ಟಿದ ಎರಡು ತಿಂಗಳಿಗೆ ಬಲ- ರಾಮದೇವನು ರೋಹಿಣಿಯಲ್ಲಿ ಜನಿಸಿದನು. ಮುಂದೆ ಮೂರು ತಿಂಗಳಿಗೆ

ಶ್ರೀನಾರಾಯಣನು ದೇವಕೀ ವಸುದೇವರ ದೆಸೆಯಿಂದ, ಸ್ತಂಭದಿಂದ ನರಸಿಂಹನಾಗಿ ಬಂದಂತೆ, ಪ್ರಾದುರ್ಭೂತನಾದನು.

ಪಾಂಡುರಾಜನು ಮತ್ತೆ ವೀರ್ಯಶೌರ್ಯಯುತನಾದ ಪುತ್ರನನ್ನಪೇಕ್ಷಿಸಿ, ಕುಂತಿಯನ್ನು ಕರೆದು, ದೇವರಾಜನಾದ ಇಂದ್ರನನ್ನು ಪುತ್ರನನ್ನಾಗಿ ಪಡೆಯುವಂತೆ ಆಜ್ಞಾಪಿಸಿದನು. ತಾನೂ ಉಗ್ರತಪೋನಿರತನಾದನು. ಇಂದ್ರನು ಅವನಿಗೆ ಪ್ರತ್ಯಕ್ಷ ನಾಗಿ 'ದುಷ್ಟ ಶತ್ರು ಮರ್ದನನೂ ಸರ್ವ ಬಂಧು ಸುಜನವರ್ಧನನೂ ಆದ ಪುತ್ರನು ನಿನಗಾಗುವನು' ಎಂದು ವರವನ್ನಿತ್ತನು. ಅಂತೆಯೇ ಕುಂತಿಯು ಶಚೀಕಾಂತನನ್ನು ಕರೆದು, ಅವನಿಂದ ಅರ್ಜುನನನ್ನು ಪಡೆದಳು. ಆಗ ಪುಷ್ಪವೃಷ್ಟಿಯೊಡನೆ ಅಶರೀರ ವಾಣಿಯು 'ಈ ಕುಮಾರನು ಶಿವ ಸಮ ಪರಾಕ್ರಮನು, ಶಕ್ರನಂತೆ ಅಜೇಯನು, ವಿಷ್ಣುಭಕ್ತನು ಆಗುವನು. ಖಾಂಡವವನವನ್ನು ಅಗ್ನಿಗಿತ್ತು, ಇಂದ್ರನನ್ನು ಜಯಿಸು ವನು. ತ್ರಿನೇತ್ರನನ್ನು ತಪೋವೀರ್ಯ ಧೈರ್ಯಗಳಿಂದ ಮೆಚ್ಚಿಸಿ, ಅನ್ಯದುರ್ಲಭ ವಾದ ಪಾಶುಪತಾಸ್ತ್ರವನ್ನು ಹೊಂದುವನು. ನಿವಾತಕವಚ ದುರ್ಭಯಾದಿ ರಾಕ್ಷಸ ಗಣವನ್ನು ಗೆಲ್ಲುವನು.' ಎಂದು ನುಡಿಯಿತು. ಆ ಮಾತನ್ನಾಲಿಸಿ ಕುಂತಿ, ಪಾಂಡು ರಾಜ, ಆಶ್ರಮದ ಋಷಿಜನರು ಸಂತೋಷಪರವಶರಾದರು. ಮರೀಚ್ಯಾದಿ ಪ್ರಜೇಶರು, ಕಶ್ಯಪಾದಿ ಋಷಿಗಳು, ತುಂಬುರು ನಾರದಾದಿ ಗಂಧರ್ವರು, ರಂಭಾದ್ಯಪ್ಸರೆಯರು, ವಸುರುದ್ರಾದಿತ್ಯಾದಿ ದೇವತೆಗಳು ಆಕಾಶದಲ್ಲಿ ನೆರೆದು, ಪಾಂಡುಕುಮಾರರನ್ನು ಹರಸಿ ಹಾಡಿದರು. ಅರ್ಜುನನು ಶ್ರೀಹರಿ ವಾಯು ಶೇಷರ ಅಂಶಗಳಿಂದ ವಿರಾಜಿಸಿದನು.

ಕೆಲ ಕಾಲವಾದಮೇಲೆ ಪಾಂಡುರಾಜನು ಕುಂತಿಯನ್ನು ಕುರಿತು, ಮತ್ತೊಬ್ಬ ಮಗನನ್ನು ಪಡೆ ಎನ್ನಲು, ಅವಳು 'ನನ್ನಲ್ಲಿ ಇನ್ನೊಂದು ಮಂತ್ರಫಲವಿದೆ ನಿಜ ! ಆದರೆ ನನಗದು ಸಮ್ಮತವಲ್ಲ. ನಾನು ಸ್ವೈರಿಣಿಯಂತಾಗಲಾರೆನು. ಕ್ಷಮಿಸು !' ಎಂದು ನಿರಾಕರಿಸಿದಳು. ಈ ವಿಷಯವನ್ನರಿತು ಮಾದ್ರಿಯು ಪಾಂಡುರಾಜನನ್ನು — ಆ ಮಂತ್ರಫಲವನ್ನು ತನಗೆ ಕೊಡಿಸಿ, ತನಗೂ ಸಂತಾನದಿಂದ ಆಗುವ ಸದ್ಗತಿಗೆ ಕಾರಣನಾಗುವಂತೆ ಬೇಡಿದಳು. ಅವಳ ಮನೋವ್ಯಥೆಯನ್ನರಿತ ಪಾಂಡುರಾಜನು ಕುಂತಿಯನ್ನು ಪ್ರಾರ್ಥಿಸಿ, ಮಹೋದಾರ ಮನಸ್ಕಳಾದ ಅವಳಿಂದ ಮಂತ್ರವನ್ನು ಮಾದ್ರಿಗೆ ಕೊಡಿಸಿದನು. ಒಂದೇಸಲ ಒಬ್ಬ ದೇವನನ್ನು ಕರೆದು ಸಂತಾನವನ್ನು ಪಡೆಯಲು ಸಮ್ಮತಿಸಿ ಮಾದ್ರಿಯು ಕುಂತಿಗೆ ಮಾತನ್ನು ಕೊಟ್ಟು ಬಂದಳು. ಮಂತ್ರಫಲವು ಒಂದೇಸಲವಾಗುವುದು ಆದರೆ ತನಗೆ ಇಬ್ಬರು ಸುತರು ಪುಟ್ಟದರೆ ಲೇಸು, ಆದುದರಿಂದ ಅಶ್ವಿನೀ ದೇವತೆಗಳು ಏಕನಾಮರು, ನಾಸತ್ಯದಸ್ರರು ಅವಿನಾ ಯೋಗರು, ಅವರನ್ನು ಕರೆದರೆ ಪುತ್ರದ್ವಯರನ್ನು ಪಡೆಯಬಹುದೆಂಬ ಲೋಭದಿಂದ ಮಾದ್ರಿಯು ನಾಸತ್ಯದಸ್ರರನ್ನು ಕರೆದು, ಅವರಿಂದ ನಕುಲ ಸಹದೇವರೆಂಬ ಸುತ ರೀರ್ವರನ್ನು ಪಡೆದಳು. ಒಂದೇ ಮಂತ್ರದಿಂದ ಇಬ್ಬರು ಸುತರನ್ನು ಪಡೆದ ಮಾದ್ರಿ ಯಲ್ಲಿ ಮೊದಲು ಕುಪಿತಳಾದರೂ ಕುಂತಿ ಅವಳನ್ನು ಕ್ಷಮಿಸಿ, ಇನ್ನೊಂದು ಮಂತ್ರ

ವನ್ನು ಕೊಡಲು ನಿರಾಕರಿಸಿದಳು. ನಿಜವಾಗಿ ನೋಡಲು ದೂರ್ವಾಸರ ವಚನದಂತೆ ಐದುಸಲ ಮಾತ್ರ ಪ್ರಯೋಗಿಸಲು ಬರುವ ಮಂತ್ರವನ್ನು ಕುಂತಿ ಮಾದ್ರಿಯರು ಉಪಯೋಗಿಸಿದ್ದುದರಿಂದ ಮಂತ್ರಫಲವಿದ್ದೇ ಇರಲಿಲ್ಲ.

ಆಶ್ರಮದ ಋಷಿವರರು ದಿವ್ಯಜ್ಞಾನದಿಂದ ಪಾಂಡುರಾಜನ ಕುಮಾರರು ದೇವ ಶ್ರೇಷ್ಠರ ಅವತಾರವೆಂದರಿತರು. ಅವರಿಗೆ ಕ್ರಮವಾಗಿ ಧರ್ಮರಾಜ, ಭೀಮಸೇನ, ಅರ್ಜುನ, ನಕುಲ, ಸಹದೇವ ಎಂದು ಹೆಸರಿಟ್ಟು, ಅನುದಿನ ವರ್ಧಮಾನರಾಗುವ ಕುಮಾರರನ್ನು ನೋಡಿ ಆನಂದಿಸಿದರು.

## ಹಸ್ತಿನಾಪುರಗಮನ, ವಿದ್ಯಾಭ್ಯಾಸ

ಒಂದುದಿನ ಪಾಂಡುರಾಜನು ಮಾದ್ರಿಯೊಡನೆ ವನದಲ್ಲಿ ವಿಹರಿಸುತ್ತಿದ್ದನು. ವಸಂತ ಶೋಭೆಯು ಮನಮೋಹಕವಾಗಿತ್ತು. ಪಲಾಶ ತಿಲಕ ಚೂತ ಚಂಪಕ ಪಾರಿಭದ್ರ ಜಂಬೂರಾದಿ ವೃಕ್ಷಗಳು ಫಲಪುಷ್ಪಭರಿತವಾಗಿದ್ದವು. ಕಮಲಗಳು ಅರಳಿ ನಿಂತು ವನಶೋಭೆಯನ್ನು ತಲೆದೂಗಿ ಮೆಚ್ಚುವಂತೆ ಹೊಯ್ದಾಡುತ್ತಿದ್ದವು. ಪಾಂಡು ರಾಜನ ಮನಸ್ಸು ಆ ವಸಂತ ವನಶೋಭೆ, ಮನಮೋಹಿನಿಯಾದ ಮಡದಿಯ ಸಾನ್ನಿಧ್ಯಗಳಿಂದ ಮದನ ವಶವಾಯಿತು. ಏಕಾಂತದಲ್ಲಿ ಕಾಂತೆಯಿಂದ ನಿಂತ ಪಾಂಡು ರಾಜನ ಮೋಹತಟಾಕವು ನಿಗ್ರಹಿಸಿದರೂ ನಿಲ್ಲದೆ ಕಟ್ಟೆಯೊಡೆದಂತಾಯಿತು. ರಾಜೀವ ಲೋಚನೆಯಾದ ಮಾದ್ರಿಯ ಸೋಜಿಗೆ ಮರುಳಾಗಿ, ಅವಳು ನಿವಾರಿಸಿದರೂ ಕೇಳದೆ ಪಾಂಡುರಾಜನು ಬಲಾತ್ಕಾರವಾಗಿ ಅವಳನ್ನು ಕಲೆತನು. ವಿಧಿಮೋಹಿತನಾದ ರಾಜನು ಶಾಪವನ್ನು ಕೂಡ ಲೆಕ್ಕಿಸದಾದನು. ಇಷ್ಟು ದಿನದ ನಿಗ್ರಹವು ಹಾಳಾಯಿತು.

ಪರಾವಹನಾಮಕ ಮರುತ್ತನು ಒಂದುಸಲ ಇಂದ್ರನನ್ನು ನೋಡಲು ಬಂದನು. ಅದರಿಂದ ಅಂತಃಪುರದಲ್ಲಿ ಶಚೀ ಸಕ್ತನಾದ ಪುರಂದರನಿಗೆ ರತಿಭಂಗವಾಯಿತು. ಸ್ವಲ್ಪ ಅಪರಾಧವಾದರೂ ಮಹಜ್ಜನರಲ್ಲಿ ದ್ರೋಹವಾದುದರಿಂದ ಪರಾವಹನೇ ಪಾಂಡು ರಾಜನಾಗಿ ತಾನೂ ರತಿಸಮಾಪ್ತಿ ಆಗದ ಮುನ್ನ ಮರಣವನ್ನು ಹೊಂದಬೇಕಾ ಯಿತು. ಇದಕ್ಕೆ ಕಿಂದಮಋಷಿ ಶಾಪವೂ ಜೋಡಾಗಿ ಫಲಿಸಿತು. ಪಾಂಡುವು ಮೃತ ನಾಗಿ ಬಿದ್ದನು. ಮಾದ್ರಿಯು ಪುತ್ರರಿಗೋಸ್ಕರ ಕುಂತಿಯಂತೆ ತನ್ನ ಪತಿಗಿಂತಲೂ ಉತ್ತಮ ದೇವತೆಗಳನ್ನು ಕರೆಯದೆ, ಪತಿಗಧಿಕರಲ್ಲದ (ಸಮಾನ ಕಕ್ಷದವರಾದ) ಅಶ್ವಿನಿ ದೇವರನ್ನು ಕರೆದುದರಿಂದ ಅವಳ ಅಪರಾಧ ಇಮ್ಮಡಿ ಆಗಿ, ಪಶ್ಚಾತ್ತಾಪ ದಿಂದ ಮರ್ತ್ಯಶರೀರವನ್ನು ಪತಿಯೊಡನೆ ಅಗ್ನಿಗಾಹುತಿಯಾಗಿತ್ತು ಶುದ್ಧಳಾಗಿ, ಪತಿ (ಪರಾವಹ) ಲೋಕವನ್ನು ಹೊಂದಲು ಅವಳು ನಿಶ್ಚಯಿಸಿದಳು. ಪತಿಯ ಶರೀರದ ಸಮೀಪದಲ್ಲಿ ಕುಳಿತು, ದುಃಖಭರದಿಂದ ಮಾದ್ರಿಯು ಹಾ! ಎಂದು ರೋದಿಸಿದಳು. ಆ ಧ್ವನಿಯನ್ನು ಕೇಳಿ ಕುಂತಿಯೂ ಕುಮಾರರೂ ಓಡಿಬಂದರು. ಮಾದ್ರಿಯು ನಡೆದ ವೃತ್ತಾಂತವನ್ನು ಹೇಳಿದಳು. ವಿಧಿವಿಲಾಸಕ್ಕೆ ಎದುರಿಲ್ಲವೆಂದು ಬಗೆದು ಕುಂತಿಯು

*

'ನಾನು ಜ್ಯೇಷ್ಠ ಪತ್ನಿ, ಧರ್ಮದಲ್ಲಿಯೂ ಜ್ಯೇಷ್ಠ ಭಾಗವು ನನ್ನದಲ್ಲವೆ, ಹೊದ್ರಿ! ಒಂದುಸಲವಾದರೂ ಶೋಕವಿರಹಿತನಾಗಿ ಆನಂದದಿಂದ ನಿನ್ನೊಡನಿದ್ದ ಪಾಂಡುರಾಜನ ವದನಕಮಲದರ್ಶನದಿಂದ ನೀನು ಧನ್ಯಳಾದೆ. ಈ ಪುತ್ರಪಂಚಕವು ನಿನ್ನ ರಕ್ಷಣೆ ಯಲ್ಲಿರಲಿ! ಪಂಚತ್ವವನ್ನು ಹೊಂದಿದ ಆರ್ಯಪುತ್ರನೊಡನೆ ನಾನು ಸಹಗಮನ ವನ್ನು ಮಾಡುವೆ' ಎಂದಳು. ಅದಕ್ಕೊಪ್ಪದೆ ಮಾದ್ರಿಯು 'ಜ್ಯೇಷ್ಠಳಾದ ನೀನು ಪುತ್ರರಕ್ಷಣದಲ್ಲಿ ದಕ್ಷಳಿರುವೆ. ನನ್ನಿಂದ ಆದ ಅಪರಾಧಕ್ಕಾಗಿ ನಾನೇ ಪತಿಯೊಡನೆ ಪರಲೋಕವನ್ನೈದುವೆನು. ಈ ನಕುಲ ಸಹದೇವರು ನನ್ನ ಮಕ್ಕಳಲ್ಲ. ನಿನ್ನ ಮಕ್ಕಳೆಂದೇ ತಿಳಿ!' ಎಂದು ಬಿನ್ನವಿಸಿ, ತಾನು ಸಹಗಮನಮಾಡಿ ಪತಿಲೋಕವನ್ನು ಸೇರಿದಳು.

ಆಶ್ರಮದ ಋಷಿವರರು ಮಹಾಯಶಸ್ವಿಯಾದ ಪಾಂಡುರಾಜನ ಮೃತಿಯನ್ನು ಕಂಡು ದುಃಖಿತರಾದರು. ಅವನ ಚಿಕ್ಕಮಕ್ಕಳಿಗಾಗಿ ಮರುಗಿದರು. ಕುಂತಿಯನ್ನು ಸಮಾಧಾನಪಡಿಸಿದರು. ಪಾಂಡವರನ್ನೂ ಕುಂತಿಯನ್ನೂ ಕರೆದುಕೊಂಡು ಯೋಗ ಪ್ರಭಾವಯುತರಾದ ಮಹರ್ಷಿಗಳು, ಬೇಗನೆ ಹಸ್ತಿನಾವತಿಯನ್ನು ಮುಟ್ಟಿದರು. ತಾವು ಬಂದ ವೃತ್ತಾಂತವನ್ನು ದ್ವಾರಪಾಲರಿಂದ ಹೇಳಿ ಕಳಿಸಿದರು. ಭೀಷ್ಮ, ಬಾಹ್ಲಿಕ, ಸೋಮದತ್ತ, ಧೃತರಾಷ್ಟ್ರ, ವಿದುರಾದಿಗಳು ಋಷಿಗಳನ್ನೂ ಪಾಂಡು ಸುತರನ್ನೂ ಎದುರ್ಗೊಂಡು ರಾಜಸಭೆಗೆ ಕರೆತಂದರು. ಋಷಿಗಳಿಗೆರಗಿ ಪುರಜನರು ಕಿಕ್ಕಿರಿದ ಸಭೆಯಲ್ಲಿ ಭೀಷ್ಮನು ಆ ಮಹಾನುಭಾವರಿಗೆ ಸರ್ವಸ್ವವನ್ನೂ ನಿವೇದಿಸಿ, ಅವರು ಬಂದ ಕಾರ್ಯವೇನೆಂದು ಕೇಳಿದನು. ಅವರಲ್ಲಿ ವೃದ್ಧ ತಾಪಸನೋರ್ವನು ನಿಂತು 'ಪಾಂಡುರಾಜನು ವಿರಕ್ತನಾಗಿ ನಮ್ಮ ಆಶ್ರಮದ ಸಮೀಪದಲ್ಲಿದ್ದುದು ನಿಮಗೆಲ್ಲ ತಿಳಿದೇ ಇದೆ. ಅವನಿಗೆ ಧರ್ಮ, ವಾಯು, ಶಕ್ರ, ನಾಸತ್ಯ, ದಸ್ರರೆಂಬ ದೇವ ಶ್ರೇಷ್ಠರ ವರಪ್ರಭಾವದಿಂದ ಜನಿಸಿದವರು ಈ ಧರ್ಮಜ, ಭೀಮ, ಅರ್ಜುನ, ನಕುಲ, ಸಹದೇವರು. ಇಂತು ಪೈತಾಮಹ ವಂಶವನ್ನು ಉದ್ಧರಿಸಿ, ಧರ್ಮಿಷ್ಠನಾದ ಪಾಂಡು ರಾಜನು ಋಷಿಶಾಪದಿಂದ ಮೃತನಾದನು. ಮಾದ್ರೀದೇವಿಯು ಅವನೊಡನೆ ಸಹ ಗಮನ ಮಾಡಿದಳು. ಅವರೀರ್ವರ ಅಸ್ಥಿಗಳನ್ನು ಪುರಬಹಿದ್ವಾರದಲ್ಲಿ ಸ್ಥಾಪಿಸಿ ಬಂದಿರುವೆವು. ಮುಂದೆ ಉತ್ತರಕರ್ಮಗಳನ್ನು ಮಾಡಿ, ಉಳಿದಿರುವ ಕುಂತಿ, ಕುಂತಿ ಸುತರು, ಮಾದ್ರೀಸುತರನ್ನು ಪೊರೆವ ಭಾರ ನಿಮ್ಮದು. ಇಂದಿಗೆ ಪಾಂಡುರಾಜನು ಮೃತನಾಗಿ ಹದಿನೇಳು ದಿನಗಳಾದವು. ಪಾಂಡವರಿಂದ ನಿಮ್ಮ ವಂಶವೇ ಪಾವನ ವಾಗುವುದು' ಎಂದು ಹೇಳಿದನು. ತತ್‌ಕ್ಷಣವೇ ಋಷಿಗಳೆಲ್ಲರೂ ಮರೆಯಾಗಿ ಹೋದರು. ಆಗ ಧೃತರಾಷ್ಟ್ರನು ಸುಮ್ಮನಿದ್ದನು. ಭೀಷ್ಮನೂ ಮಾತಾಡಲಿಲ್ಲ. ವಿದುರನು ಮಾತ್ರ ಸಂತೋಷದಿಂದ ಬಾಲಕರನ್ನು ಸ್ವೀಕರಿಸಬೇಕೆಂದು ನುಡಿದನು. ಶಕುನಿ ದುರ್ಯೋಧನಾದಿಗಳಿಗೆ ಅದು ಸಮ್ಮತವಾಗಲಿಲ್ಲ. 'ಪಾಂಡುರಾಜನು ಮೃತ ನಾದಮೇಲೆ ಹುಟ್ಟಿದ ಮಕ್ಕಳು ಪಾಂಡವರಾಗಲಾರರು; ಪಾಂಡುಕ್ಷೇತ್ರಜರೂ

ಇವರಲ್ಲ ; ನಿಯೋಗವನ್ನು ಸ್ವಕೀಯ ಜನರಿಂದ ಹೊಂದಿ ಪಡೆದವರಲ್ಲ ; ಆದ್ದರಿಂದ ಅವರನ್ನು ಸ್ವೀಕರಿಸಬಾರದು' ಎಂದು ಆ ದುಷ್ಟರು ನಿರೂಪಿಸಿದರು. ಆಗ ಆಕಾಶ ವಾಣಿಯು 'ಪಾಂಡುರಾಜನು ಜೀವಂತನಾಗಿರುವಾಗ ಅವನ ಸಮ್ಮತಿಯಮೇರೆಗೆ ನಿಯೋಗಧರ್ಮದಿಂದ ಧರ್ಮ, ವಾಯು, ಇಂದ್ರ, ಅಶ್ವಿನೀ ದೇವತೆಗಳ ಅಂಶದಿಂದ ಜನಿಸಿದುದರಿಂದ ಆ ಬಾಲಕರು ಪಾಂಡವರೇ ಅಹುದು' ಎಂದು ನುಡಿಯಿತು.

'ಗಾಳಿಯ ಮಾತು' ಎಂದು ನಂಬದಿದ್ದ ಕೌರವರಿಗೆ, ಶ್ರೀ ವ್ಯಾಸನು ಪ್ರತ್ಯಕ್ಷ ನಾಗಿ 'ಧರ್ಮರಾಜಾದಿಗಳು ಪಾಂಡುಕುಮಾರರೇ' ಎಂದು ತಿಳಿಹೇಳಿ, ಅವರನ್ನು ಕರೆದುಕೊಂಡು ಪಾಂಡುರಾಜನ ಮಂದಿರದಲ್ಲಿ ಸ್ಥಾಪಿಸಿದನು. ಅದನ್ನು ಕಂಡು ಬೆರಗಾದ ಭೀಷ್ಮಾದಿಗಳು, ಕುಮಾರರನ್ನು ಸ್ವೀಕರಿಸಿ ಆನಂದಿತರಾದರು. ಧೃತರಾಷ್ಟ್ರ ರಾಜನ ಅಪ್ಪಣೆಯಂತೆ ವಿದುರನು ನಿಂತು ಮಾಡ್ರಿ, ಪಾಂಡುರಾಜ ಇವರ ಉತ್ತರಕ್ರಿಯೆ ಗಳನ್ನು ಮಾಡಿಸಿದನು. ಪಶು, ವಸ್ತ್ರ, ಹಿರಣ್ಯ, ರತ್ನ, ಗೋ, ಧಾನ್ಯಗಳನ್ನು ಯಥೇಚ್ಛವಾಗಿ ಪಾತ್ರವಿಪ್ರರಿಗೆ ಕೊಟ್ಟು, ಮಿಕ್ಕವರ್ಣದ ಪ್ರಜರನ್ನೂ ಯಥೇಚ್ಛ ಯೋಗ್ಯವಸ್ತುದಾನಗಳಿಂದ ಸಂತೋಷಪಡಿಸಿದನು. ಭೀಷ್ಮ, ವಿದುರಾದಿಗಳು ಚಿಕ್ಕವ ನಾದ ಪಾಂಡುರಾಜನ ಅಕಾಲಮೃತಿಗಾಗಿ ಶೋಕಸಂತಪ್ತರಾದರು. ಪೌರರು, ಜಾನ ಪದರು ಕೂಡ ಪಾಂಡುರಾಜನ ಗುಣಗಣವನ್ನು ವರ್ಣಿಸಿ ರೋದಿಸಿದರು. ಹನ್ನೆರಡು ದಿನಗಳ ಕ್ರಿಯಾಕಲಾಪವೆಲ್ಲವೂ ಮುಗಿದಮೇಲೆ, ಮೃಷ್ಟಾನ್ನ ಭೋಜನವನ್ನಿತ್ತು ಭೀಷ್ಮನು ವಿಪ್ರಾದಿ ಸಮಸ್ತ ಪ್ರಜರನ್ನು ತೃಪ್ತಿಪಡಿಸಿ, ಶ್ರಾದ್ಧವನ್ನು ಸಂಪೂರ್ಣ ಗೊಳಿಸಿದನು.

ವರ್ಧಮಾನರಾಗುತ್ತಿರುವ ಪಾಂಡವರು ಭೀಷ್ಮನಿಂದ ಸಂಸ್ಕೃತರಾದರು. ಕೃಪಾ ಚಾರ್ಯರಿಂದ ವೇದಾದಿ ವಿದ್ಯೆಗಳನ್ನು ಕಲಿಯುತ್ತಾ, ಬಾಲಕ್ರೀಡೆಗಳಲ್ಲಿ ಧಾರ್ತರಾಷ್ಟ್ರ ರೊಡಗೂಡಿ ನಿರತರಾಗಿದ್ದರು. ಓಡುವುದು, ಲಕ್ಷ್ಯವಾದ ಫಲವನ್ನು ಸ್ವೀಕರಿಸುವುದು, ಕುಪ್ಪಳಿಸುವುದು, ಹಾರುವುದು, ಈಜಾಟ, ಮಲ್ಲಯುದ್ಧ, ಮೊದಲಾದ ಬಾಲಕ್ರೀಡೆ ಗಳಲ್ಲಿ ಭೀಮಸೇನನು ಸರ್ವಬಾಲಕರನ್ನೂ ಸೋಲಿಸಿ, ಸರ್ವಶ್ರೇಷ್ಠನೆನಿಸಿದನು.

ಭೀಮನು ಅತಿಹರ್ಷದಿಂದ ಆಡುತ್ತಿರುವ ಬಾಲಕರನ್ನು ಹಿಡಿದು, ಬಿಡಿಸಿಕೊಳ್ಳ ಲಾಗದೆ ಅವರು 'ಹೋ' ಎಂದು ಅಳುವಾಗ ಅವರನ್ನು ಭೂಮಿಯಮೇಲೆ ಉರುಳಿಸಿ ಸೆಳೆಯುತ್ತಿದ್ದನು. ನೂರಾರು ಹುಡುಗರು ಕಲೆತು ಮೇಲೇರಿಬಂದರೂ ಬಿಡದೆ ಅವ ರನ್ನು ಕೆಡಹಿ ಕಾಲು ಹಿಡಿದು ಸೆಳೆದಾಡುತ್ತಿದ್ದನು. ಒಂದೊಂದು ಭುಜದಲ್ಲಿ ಹತ್ತು ಬಾಲಕರನ್ನೆತ್ತಿಕೊಂಡು ಯಮುನೆಯಲ್ಲಿಳಿದು ಆಡುತ್ತಾ, ಅವರನ್ನು ನೀರಿನಲ್ಲಿ ಮುಳು ಗಿಸಿ ಮೊರ್ರೋ ಎಂದು ಚೀರಿದಾಗ ಬಿಡುತ್ತಿದ್ದನು. ಬಾಲರು ಫಲವೃಕ್ಷಗಳನ್ನೇರಿ ಹಣ್ಣನ್ನರಸುವಾಗ ತಾನು ಆ ಗಿಡದ ಬುಡವನ್ನೇ ಕಿತ್ತೆಸೆದು, ಅವರೆಲ್ಲರೂ ನೆಲಕ್ಕುರು ಳಿದಾಗ ನೋಡಿ ನಗುತ್ತಿದ್ದನು. ಯಾವ ಆಟದಲ್ಲಿಯೂ ಮಿಕ್ಕ ಬಾಲಕರು ಭೀಮನಿಗೆಣೆ ಯಾಗದೆ ಅವನಿಗೆ ಹೆದರುತ್ತಿದ್ದರು. ದ್ರೋಹಬುದ್ಧಿಯಿಂದಲ್ಲದಿದ್ದರೂ ಆಟಕ್ಕಾಗಿ

ತಮ್ಮನ್ನು ಪೀಡಿಸುವ ಭೀಮನಲ್ಲಿ ಧೃತರಾಷ್ಟ್ರ ಪುತ್ರರು ಕುಪಿತರಾದರು. ದುರ್ಯೋಧನನು ಅಸೂಯೆಯಿಂದ ಬೆಂದು ಭೀಮನನ್ನು ಕೊಂದುಬಿಡಬೇಕೆಂದು ನಿಶ್ಚಯಿಸಿದನು. ಬಲವಂತನಾದ ಅವನನ್ನು ಕಪಟೋಪಾಯಗಳಿಂದ ಕೊನೆಗಾಣಿಸುವ ಪಾಪಬುದ್ಧಿಯನ್ನು ಮಾಡಿ ದುರ್ಯೋಧನನು ಶುಕ್ರಾಚಾರ್ಯನಿಂದ ಶಕುನಿ ಸ್ವೀಕರಿಸಿದ ಮಂತ್ರ ಪ್ರಭಾವದಿಂದ, ಎಂಟು ವಾಸುಕಿ ತಕ್ಷಕಾದಿ ಜಾತಿಜ ಮಹಾಸರ್ಪಗಳನ್ನು ಆಹ್ವಾನಿಸಿ ಪಂಜರದಲ್ಲಿರಿಸಿ, ಮಲಗಿದ್ದ ಭೀಮನ ವಕ್ಷಸ್ಥಲದಲ್ಲಿ ಆ ಸರ್ಪಗಳು ಬೀಳುವಂತೆ ತನ್ನ ಸಾರಥಿಯಿಂದ ಮಾಡಿಸಿದನು. ಭಯಂಕರ ಸರ್ಪಗಳು ಬುಸುಗುಟ್ಟುತ್ತಾ ರೋಷದಿಂದ ಭೀಮನನ್ನು ಕಚ್ಚಿದವು ; ಅದರಿಂದ ಭೀಮನಿಗೆ ಹಾನಿಯಾಗದೆ ಆ ಸರ್ಪಗಳ ದಂತಗಳು ಪುಡಿಯಾದವು. ಭೀಮನು ಮಹಾಸರ್ಪಗಳನ್ನು ಕೃಪೆಯಿಂದ ಕೊಲ್ಲದೆ ಬಿಸಾಡಿ, ಮಿಕ್ಕೆಲ್ಲ ವಿಷ ಸರ್ಪಗಳನ್ನು ಇರುವೆಗಳನ್ನಂತೆ ಸಂಹರಿಸಿದನು.

ಪಾಪಬುದ್ಧಿಯಾದ ದುರ್ಯೋಧನನು ನಿದ್ರಿಸುತ್ತಿದ್ದ ಭೀಮನನ್ನು ಕಟ್ಟಿ, ಹೊಳೆಗೆ ನೂಕಿ, ಧರ್ಮಜನನ್ನು ಬಂಧಿಸಿ ಸೆರೆಯಲ್ಲಿಟ್ಟು ತಾನೇ ರಾಜ್ಯಾಧಿಕಾರಿಯಾಗಬೇಕೆಂದು ಹವಣಿಸಿದನು. ಒಂದುದಿನ ಜಲಕ್ರೀಡೆಗೆಂದು ರಾಜಕುಮಾರರು ಗಂಗೆಯ ಪ್ರಮಾಣಕೋಟಿ ಎಂಬ ಮಡುವಿಗೆ ಬಂದರು. ಪಟಗೃಹಗಳು ನಿರ್ಮಿತವಾದವು. ಭಕ್ಷ್ಯ ಭೋಜ್ಯ ಚೋಷ್ಯ ಪಾನೀಯಗಳು ಸಮೃದ್ಧವಾಗಿ ತರಲ್ಪಟ್ಟವು. ಬಾಲಕರು ಗಂಗೆಯಲ್ಲಿ ಇಳಿದು ಜಲಕ್ರೀಡೆಯಲ್ಲಿ ಬಹುಕಾಲ ಕಳೆದು ಶ್ರಾಂತರಾದರು. ಮೇಲೇರಿ ಬಂದು ಉತ್ಸಾಹಪೂರಿತರಾದ ಬಾಲಕರು ಭೋಜನವನ್ನು ಪ್ರಾರಂಭಿಸಿದರು. ಒಬ್ಬರಿಗೊಬ್ಬರು ಉಣಿಸುತ್ತಾ, ಕೇಕೆಹಾಕುತ್ತಾ, ಕುಣಿಯುತ್ತಾ, ನಲಿಯುತ್ತಾ ಬಾಲಕರು ಕ್ರೀಡಾಮಗ್ನರಾಗಿದ್ದರು. ಆಗ ಪಾಪಿ ದುರ್ಯೋಧನನು ತನ್ನ ಕೈಯಿಂದಲೇ ಭಕ್ಷ್ಯಗಳನ್ನು ಭೀಮನಿಗೆ ತಿನಿಸಿದನು. ಆ ಭಕ್ಷ್ಯಗಳಲ್ಲಿ ಭಯಂಕರ ಕಾಲಕೂಟ ವಿಷವನ್ನು ಬೆರೆಸಿದ್ದರೆಂದು ತಿಳಿಯದೆ, ಭೀಮಸೇನನು ಅವನ್ನೆಲ್ಲಾ ತಿಂದುಬಿಟ್ಟನು. ದುರ್ಯೋಧನನ ಆನಂದವನ್ನು ಹೇಳತೀರದು. ಇನ್ನೇನು ಭೀಮನು ಮೃತನಾಗುವನೆಂದು ತಿಳಿದು ಆ ದುರಾತ್ಮನು ಜಲಕ್ರೀಡೆಯನ್ನಾಡುವ ನೆವದಿಂದ ಎಲ್ಲರನ್ನೂ ನೀರಿಗಿಳಿಸಿದನು. ಭೀಮನಾದರೂ ವಿಷಾನ್ನ ಭುಕ್ತಿಯಿಂದ ಸ್ವಲ್ಪವಾದರೂ ಕಳೆಗುಂದದೆ ಚನ್ನಾಗಿ ನೀರಾಟವನ್ನಾಡಿ ಶ್ರಮಪಟ್ಟು ಹೊರಬಂದನು. ತೀರದ ಮರಳಿನಮೇಲೆ ಮಲಗಿದ್ದೇ ತಡ, ಅವನಿಗೆ ಶೀತಲ ಸುಗಂಧ ವಾತಸ್ಪರ್ಶದಿಂದ ಮೈಮರೆವ ನಿದ್ದೆ ಬಂತು.

ಇದೇ ಸಮಯವೆಂದು ದುರ್ಯೋಧನನು ಅನುಜರಿಂದ ಕೂಡಿ ಭೀಮನನ್ನು ಬಲವತ್ತಾಶಗಳಿಂದ ಕಟ್ಟಿಸಿ, ಪ್ರಮಾಣಕೋಟಿಯಲ್ಲಿ ನೂಕಿಸಿದನು. ಆಳವಾದ ಮಡುವಿನ ಬುಡದಲ್ಲಡಗಿದ್ದ ವಿಷಸರ್ಪಗಳು ಅವನನ್ನು ಕಚ್ಚಿದವು. ದೈವಾನುಗ್ರಹಪಾತ್ರರಾದ ಸುಜನರಿಗೆ ದುರ್ಜನರು ಮಾಡಿದ ಕೇಡಿನಿಂದಲೂ ಮೇಲಾಗುವುದು ! ಭೀಮಸೇನನು ತಿಂದ ಸ್ಥಾವರ ವಿಷವು ನಾಗಗಳ ಜಂಗಮ ವಿಷದಿಂದ ಸತ್ತು ನಿರ್ವೀರ್ಯವಾಯಿತು. ಎರಡು ವಿಷಗಳನ್ನು ಜೀರ್ಣಿಸಿಕೊಂಡು ಭೀಮನು ನಾಗಲೋಕವನ್ನು

ಸೇರಿದನು. ವಾಸುಕಿಯೂ ಆರ್ಯಕನೂ ಭೀಮನನ್ನು ಆಲಿಂಗಿಸಿ, ಸತ್ಕರಿಸಿದರು. ಆರ್ಯಕನಾಗನ ದೌಹಿತ್ರನಾದ ಶೂರಸೇನನಿಗೆ ದೌಹಿತ್ರನಾದ ಭೀಮನಿಗೆ ಮಹಾ ಸೇವೆ ಎಂತಾದೀತೆಂದು ನಾಗರಾಜರು ಚಿಂತಿಸಿದರು. ಹತ್ತುಸಾವಿರ ಆನೆಗಳ ಬಲವನ್ನು ತುಂಬಿಕೊಡುವ ರಸವನ್ನು ಭೀಮನಿಗೆ ಕೊಡಲು ಅವರು ನಿಶ್ಚಯಿಸಿ, ಅವನನ್ನು ಪೂಜಿಸಿ ರಸಕುಂಡಗಳನ್ನು ಮುಂದಿರಿಸಿ, ಬೇಕಾದಷ್ಟು ಕುಡಿಯಬಹುದೆಂದು ನಿವೇದಿಸಿದರು. ಒಂದು ಗುಟುಕಿಗೆ ಒಂದು ಗಡಿಗೆಯಂತೆ, ಎಂಟು ಗಡಿಗೆಗಳ ರಸವನ್ನು ಕುಡಿದು ನಾಗ ರಿತ್ತ ಸುಖಶಯನದಲ್ಲಿ ಭೀಮನು ಮಲಗಿದನು. ಒಂದು ಗಡಿಗೆ ರಸವೇ ಅಯುತಗಜ ಬಲ ದಾನ ಸಮರ್ಥವಾಗಿರಲು ಭೀಮನು ಎಂಟು ಕುಂಡಗಳ ರಸ ಪಾನದಿಂದ, ಅನೇಕ ಸಹಸ್ರ ಗಜ ಬಲನಾಗಿ, ವಿರಾಜಿಸಿದನು. ವಿಶ್ವಚೇಷ್ಟಾಪ್ರವರ್ತಕನಾದ ಮುಖ್ಯ ಪ್ರಾಣಾವತಾರ ಭೀಮಸೇನನಿಗೆ ಸ್ವಭಾವದಿಂದಲೇ ಅಮಿತ ಬಲವಿತ್ತು. ರಸಪಾನ ದಿಂದ ನಾಗರನ್ನು ಅನುಗ್ರಹಿಸಿ, ಭೀಮಸೇನನು ಅವರ ಮೆಚ್ಚುಗೆಯನ್ನು ಪಡೆದನು.

ಅಲ್ಲಿ ಗಂಗಾತೀರದಲ್ಲಿ ಬಾಲಕರು ಜಲಕ್ರೀಡೆಯನ್ನು ಮುಗಿಸಿ, ರಥಾದಿ ವಾಹನಾ ರೂಢರಾಗಿ ಹಸ್ತಿನಾವತಿಗೆ ಹೊರಟರು. ಧರ್ಮರಾಜನು ಭೀಮನನ್ನು ವಿಚಾರಿಸಿದಾಗ 'ಮೊದಲೇ ಹೊರಟಿರುವ'ನೆಂದು ತಿಳಿಸಿ ದುರ್ಯೋಧನನು ತನ್ನ ಸೋದರರಿಂದ ಕೂಡಿ ಪುರವನ್ನು ಸೇರಿದನು. ಭೀಮನು ಹೊರಟೇಹೋಗಿ ಮೃತನಾಗಿರುವನೆಂಬ ನಂಬುಗೆಯು ಅವನಿಗೆ ಎಲ್ಲಿಲ್ಲದ ಆನಂದವನ್ನು ತಂದಿತ್ತು. ತನ್ನ ಆಶಾವೃಕ್ಷಕ್ಕೆ ಮೂರೆಲೆ ಆರು ಹಣ್ಣಾದಂತೆ ಎಣಿಸಿ ಅವನು ನಿಶ್ಚಿಂತನಾಗಿದ್ದನು.

ಧರ್ಮರಾಜನು ಮನೆ ಸೇರಿ ತಾಯಿಗೆರಗಿ ಭೀಮನ ಆಗಮನವನ್ನು ಕೇಳಿದನು. ಇಲ್ಲವೆಂದ ಅವಳ ಮಾತಿಗೆ ನೊಂದು ಅವನಿಗಾಗಿ ಹುಡುಕಿದನು. ಕುಂತಿಯು ವಿದುರ ನಿಗೆ ವಾರ್ತೆಯನ್ನು ತಿಳಿಸಿ ಆರ್ತಳಾಗಿ, ತಾನು ದುರ್ಯೋಧನನ ಅಸೂಯಾ ಪಿಶಾಚಿಗೆ ಹೆದರುವೆನೆಂದರುಹಿದಳು. ವಿದುರನು ಅವಳಿಗೆ ಧೈರ್ಯವನ್ನು ತುಂಬಿ, 'ಅಂಬ ! ನಿನ್ನ ಮಕ್ಕಳು ದೀರ್ಘಾಯುಷ್ಯರೆಂದು ಋಷಿಗಳು ಹೇಳಿದ್ದು ಸುಳ್ಳಾಗುವು ದಿಲ್ಲ ! ಬರುವನು ಭೀಮಸೇನ' ಎಂದು ಸಂತೈಸುತ್ತಿದ್ದನು.

ಸರ್ಪಲೋಕದಲ್ಲಿ ರಸಪಾನದಿಂದ ಮತ್ತನಾದಂತೆ ಮಲಗಿದ್ದ ಕುಂತಿಸುತ ಮಧ್ಯ ಮನು ಎಂಟು ದಿನಗಳಾದಮೇಲೆ ಎದ್ದು ಕುಳಿತನು. ರಸವು ಜೀರ್ಣವಾಗಿ ಭೀಮನು ಅಪ್ರಮೇಯ ಬಲನೂ ವಜ್ರಕಾಯನೂ ಆಗಿದ್ದನು. ನಾಗರಾಜರು ಅವನನ್ನು ಸತ್ಕರಿಸಿ ಮಹೋತ್ಸವವನ್ನು ಮಾಡಿದರು. ಶತ್ರುಗಳನ್ನು ಜಯಿಸಿ ಬಹುಬಲನೆನಿಸಿ ಕೀರ್ತಿ ಯಿಂದ ಮೆರೆಯುವಂತೆ ಹರಸಿ, ನಾನಾ ರತ್ನಾಭರಣಾಂಬರಾದಿಗಳಿಂದ ಬಹುಮಾನಿಸಿ ಕಳುಹಿಸಿದರು. ಆ ಜಲರುಹೇಕ್ಷಣನು ಜಲದಿಂದ ಮೇಲಕ್ಕೆ ಬಂದು ವಾಸುಕಿ ಪ್ರಮುಖ ನಾಗರಾಜರನ್ನು ಬೀಳ್ಕೊಟ್ಟು, ಮನೆಸೇರಿದನು. ಮಾತೆಗೆರಗಿ, ಅಣ್ಣನಿಗೆ ವಂದಿಸಿ, ತಮ್ಮಂದಿರನ್ನು ತಲೆಮೂಸಿ ಮುದ್ದಾಡಿ ಭೀಮಸೇನನು ಅವರಿಗೆ ಹರ್ಷವನ್ನುಂಟು ಮಾಡಿದನು. ದುರ್ಯೋಧನನ ದುಷ್ಟಚೇಷ್ಟಿತನವನ್ನೂ ನಾಗಲೋಕದಲ್ಲಿ ನಡೆದ

ತಮ್ಮನ್ನು ಪೀಡಿಸುವ ಭೀಮನಲ್ಲಿ ಧೃತರಾಷ್ಟ್ರ ಪುತ್ರರು ಕುಪಿತರಾದರು. ದುರ್ಯೋಧನನು ಅಸೂಯೆಯಿಂದ ಬೆಂದು ಭೀಮನನ್ನು ಕೊಂದುಬಿಡಬೇಕೆಂದು ನಿಶ್ಚಯಿಸಿದನು. ಬಲವಂತನಾದ ಅವನನ್ನು ಕಪಟೋಪಾಯಗಳಿಂದ ಕೊನೆಗಾಣಿಸುವ ಪಾಪಬುದ್ಧಿಯನ್ನು ಮಾಡಿ ದುರ್ಯೋಧನನು ಶುಕ್ರಾಚಾರ್ಯನಿಂದ ಶಕುನಿ ಸ್ವೀಕರಿಸಿದ ಮಂತ್ರ ಪ್ರಭಾವದಿಂದ, ಎಂಟು ವಾಸುಕಿ ತಕ್ಷಕಾದಿ ಜಾತಿಜ ಮಹಾಸರ್ಪಗಳನ್ನು ಆಹ್ವಾನಿಸಿ ಪಂಜರದಲ್ಲಿರಿಸಿ, ಮಲಗಿದ್ದ ಭೀಮನ ವಕ್ಷಸ್ಥಲದಲ್ಲಿ ಆ ಸರ್ಪಗಳು ಬೀಳುವಂತೆ ತನ್ನ ಸಾರಥಿಯಿಂದ ಮಾಡಿಸಿದನು. ಭಯಂಕರ ಸರ್ಪಗಳು ಬುಸುಗುಟ್ಟುತ್ತಾ ರೋಷದಿಂದ ಭೀಮನನ್ನು ಕಚ್ಚಿದವು ; ಅದರಿಂದ ಭೀಮನಿಗೆ ಹಾನಿಯಾಗದೆ ಆ ಸರ್ಪಗಳ ದಂತಗಳು ಪುಡಿಯಾದವು. ಭೀಮನು ಮಹಾಸರ್ಪಗಳನ್ನು ಕೃಪೆಯಿಂದ ಕೊಲ್ಲದೆ ಬಿಸಾಡಿ, ಮಿಕ್ಕೆಲ್ಲ ವಿಷ ಸರ್ಪಗಳನ್ನು ಇರುವೆಗಳನ್ನಂತೆ ಸಂಹರಿಸಿದನು.

ಪಾಪಬುದ್ಧಿಯಾದ ದುರ್ಯೋಧನನು ನಿದ್ರಿಸುತ್ತಿದ್ದ ಭೀಮನನ್ನು ಕಟ್ಟಿ, ಹೊಳೆಗೆ ನೂಕಿ, ಧರ್ಮಜನನ್ನು ಬಂಧಿಸಿ ಸೆರೆಯಲ್ಲಿಟ್ಟು ತಾನೇ ರಾಜ್ಯಾಧಿಕಾರಿಯಾಗಬೇಕೆಂದು ಹವಣಿಸಿದನು. ಒಂದುದಿನ ಜಲಕ್ರೀಡೆಗೆಂದು ರಾಜಕುಮಾರರು ಗಂಗೆಯ ಪ್ರಮಾಣಕೋಟಿ ಎಂಬ ಮಡುವಿಗೆ ಬಂದರು. ಪಟಗೃಹಗಳು ನಿರ್ಮಿತವಾದವು. ಭಕ್ಷ್ಯ ಭೋಜ್ಯ ಚೋಷ್ಯ ಪಾನೀಯಗಳು ಸಮೃದ್ಧವಾಗಿ ತರಲ್ಪಟ್ಟವು. ಬಾಲಕರು ಗಂಗೆಯಲ್ಲಿ ಇಳಿದು ಜಲಕ್ರೀಡೆಯಲ್ಲಿ ಬಹುಕಾಲ ಕಳೆದು ಶ್ರಾಂತರಾದರು. ಮೇಲೇರಿ ಬಂದು ಉತ್ಸಾಹಪೂರಿತರಾದ ಬಾಲಕರು ಭೋಜನವನ್ನು ಪ್ರಾರಂಭಿಸಿದರು. ಒಬ್ಬರಿಗೊಬ್ಬರು ಉಣಿಸುತ್ತಾ ಕೇಕೆಹಾಕುತ್ತಾ ಕುಣಿಯುತ್ತಾ ನಲಿಯುತ್ತಾ ಬಾಲಕರು ಕ್ರೀಡಾಮಗ್ನರಾಗಿದ್ದರು. ಆಗ ಪಾಪಿ ದುರ್ಯೋಧನನು ತನ್ನ ಕೈಯಿಂದಲೇ ಭಕ್ಷ್ಯಗಳನ್ನು ಭೀಮನಿಗೆ ತಿನಿಸಿದನು. ಆ ಭಕ್ಷ್ಯಗಳಲ್ಲಿ ಭಯಂಕರ ಕಾಲಕೂಟ ವಿಷವನ್ನು ಬೆರೆಸಿದ್ದರೆಂದು ತಿಳಿಯದೆ, ಭೀಮಸೇನನು ಅವನ್ನೆಲ್ಲಾ ತಿಂದುಬಿಟ್ಟನು. ದುರ್ಯೋಧನನ ಆನಂದವನ್ನು ಹೇಳತೀರದು. ಇನ್ನೇನು ಭೀಮನು ಮೃತನಾಗುವನೆಂದು ತಿಳಿದು ಆ ದುರಾತ್ಮನು ಜಲಕ್ರೀಡೆಯನ್ನಾಡುವ ನೆವದಿಂದ ಎಲ್ಲರನ್ನೂ ನೀರಿಗಿಳಿಸಿದನು. ಭೀಮನಾದರೂ ವಿಷಾನ್ನ ಭುಕ್ತಿಯಿಂದ ಸ್ವಲ್ಪವಾದರೂ ಕಳೆಗುಂದದೆ ಚನ್ನಾಗಿ ನೀರಾಟವನ್ನಾಡಿ ಶ್ರಮಪಟ್ಟು ಹೊರಬಂದನು. ತೀರದ ಮರಳಿನಮೇಲೆ ಮಲಗಿದ್ದೇ ತಡ, ಅವನಿಗೆ ಶೀತಲ ಸುಗಂಧ ವಾತಸ್ಪರ್ಶದಿಂದ ಮೈಮರೆವ ನಿದ್ದೆ ಬಂತು.

ಇದೇ ಸಮಯವೆಂದು ದುರ್ಯೋಧನನು ಅನುಜರಿಂದ ಕೂಡಿ ಭೀಮನನ್ನು ಬಲವತ್ಪಾಶಗಳಿಂದ ಕಟ್ಟಿಸಿ, ಪ್ರಮಾಣಕೋಟಿಯಲ್ಲಿ ನೂಕಿಸಿದನು. ಆಳವಾದ ಮಡುವಿನ ಬುಡದಲ್ಲಡಗಿದ್ದ ವಿಷಸರ್ಪಗಳು ಅವನನ್ನು ಕಚ್ಚಿದವು. ದೈವಾನುಗ್ರಹಪಾತ್ರರಾದ ಸುಜನರಿಗೆ ದುರ್ಜನರು ಮಾಡಿದ ಕೇಡಿನಿಂದಲೂ ಮೇಲಾಗುವುದು ! ಭೀಮಸೇನನು ತಿಂದ ಸ್ಥಾವರ ವಿಷವು ನಾಗಗಳ ಜಂಗಮ ವಿಷದಿಂದ ಸತ್ತು ನಿರ್ವೀರ್ಯವಾಯಿತು. ಎರಡು ವಿಷಗಳನ್ನು ಜೀರ್ಣಿಸಿಕೊಂಡು ಭೀಮನು ನಾಗಲೋಕವನ್ನು

ಸೇರಿದನು. ವಾಸುಕಿಯೂ ಆರ್ಯಕನೂ ಭೀಮನನ್ನು ಆಲಿಂಗಿಸಿ, ಸತ್ಕರಿಸಿದರು. ಆರ್ಯಕನಾಗನ ದೌಹಿತ್ರನಾದ ಶೂರಸೇನನಿಗೆ ದೌಹಿತ್ರನಾದ ಭೀಮನಿಗೆ ಮಹಾ ಸೇವೆ ಎಂತಾದೀತೆಂದು ನಾಗರಾಜರು ಚಿಂತಿಸಿದರು. ಹತ್ತುಸಾವಿರ ಆನೆಗಳ ಬಲವನ್ನು ತುಂಬಿಕೊಡುವ ರಸವನ್ನು ಭೀಮನಿಗೆ ಕೊಡಲು ಅವರು ನಿಶ್ಚಯಿಸಿ, ಅವನನ್ನು ಪೂಜಿಸಿ ರಸಕುಂಡಗಳನ್ನು ಮುಂದಿರಿಸಿ, ಬೇಕಾದಷ್ಟು ಕುಡಿಯಬಹುದೆಂದು ನಿವೇದಿಸಿದರು. ಒಂದು ಗುಟುಕಿಗೆ ಒಂದು ಗಡಿಗೆಯಂತೆ, ಎಂಟು ಗಡಿಗೆಗಳ ರಸವನ್ನು ಕುಡಿದು ನಾಗ ರಿತ್ತ ಸುಖಶಯನದಲ್ಲಿ ಭೀಮನು ಮಲಗಿದನು. ಒಂದು ಗಡಿಗೆ ರಸವೇ ಅಯುತಗಜ ಬಲ ದಾನ ಸಮರ್ಥವಾಗಿರಲು ಭೀಮನು ಎಂಟು ಕುಂಡಗಳ ರಸ ಪಾನದಿಂದ, ಅನೇಕ ಸಹಸ್ರ ಗಜ ಬಲನಾಗಿ, ವಿರಾಜಿಸಿದನು. ವಿಶ್ವಚೇಷ್ಟಾಪ್ರವರ್ತಕನಾದ ಮುಖ್ಯ ಪ್ರಾಣಾವತಾರ ಭೀಮಸೇನನಿಗೆ ಸ್ವಭಾವದಿಂದಲೇ ಅಮಿತ ಬಲವಿತ್ತು. ರಸಪಾನ ದಿಂದ ನಾಗರನ್ನು ಅನುಗ್ರಹಿಸಿ, ಭೀಮಸೇನನು ಅವರ ಮೆಚ್ಚುಗೆಯನ್ನು ಪಡೆದನು.

ಅಲ್ಲಿ ಗಂಗಾತೀರದಲ್ಲಿ ಬಾಲಕರು ಜಲಕ್ರೀಡೆಯನ್ನು ಮುಗಿಸಿ, ರಥಾದಿ ವಾಹನಾ ರೂಢರಾಗಿ ಹಸ್ತಿನಾವತಿಗೆ ಹೊರಟರು. ಧರ್ಮರಾಜನು ಭೀಮನನ್ನು ವಿಚಾರಿಸಿದಾಗ 'ಮೊದಲೇ ಹೊರಟಿರುವ'ನೆಂದು ತಿಳಿಸಿ ದುರ್ಯೋಧನನು ತನ್ನ ಸೋದರರಿಂದ ಕೂಡಿ ಪುರವನ್ನು ಸೇರಿದನು. ಭೀಮನು ಹೊರಟೇಹೋಗಿ ಮೃತನಾಗಿರುವನೆಂಬ ನಂಬುಗೆಯು ಅವನಿಗೆ ಎಲ್ಲಿಲ್ಲದ ಆನಂದವನ್ನು ತಂದಿತ್ತು. ತನ್ನ ಆಶಾವೃಕ್ಷಕ್ಕೆ ಮೂರೆಲೆ ಆರು ಹಣ್ಣಾದಂತೆ ಎಣಿಸಿ ಅವನು ನಿಶ್ಚಿಂತನಾಗಿದ್ದನು.

ಧರ್ಮರಾಜನು ಮನೆ ಸೇರಿ ತಾಯಿಗೆರಗಿ ಭೀಮನ ಆಗಮನವನ್ನು ಕೇಳಿದನು. ಇಲ್ಲವೆಂದ ಅವಳ ಮಾತಿಗೆ ನೊಂದು ಅವನಿಗಾಗಿ ಹುಡುಕಿದನು. ಕುಂತಿಯು ವಿದುರ ನಿಗೆ ವಾರ್ತೆಯನ್ನು ತಿಳಿಸಿ ಆರ್ತಳಾಗಿ, ತಾನು ದುರ್ಯೋಧನನ ಅಸೂಯಾ ಪಿಶಾಚಿಗೆ ಹೆದರುವೆನೆಂದರುಹಿದಳು. ವಿದುರನು ಅವಳಿಗೆ ಧೈರ್ಯವನ್ನು ತುಂಬಿ, 'ಅಂಬ ! ನಿನ್ನ ಮಕ್ಕಳು ದೀರ್ಘಾಯುಷ್ಯರೆಂದು ಋಷಿಗಳು ಹೇಳಿದ್ದು ಸುಳ್ಳಾಗುವು ದಿಲ್ಲ ! ಬರುವನು ಭೀಮಸೇನ' ಎಂದು ಸಂತೈಸುತ್ತಿದ್ದನು.

ಸರ್ಪಲೋಕದಲ್ಲಿ ರಸಪಾನದಿಂದ ಮತ್ತನಾದಂತೆ ಮಲಗಿದ್ದ ಕುಂತಿಸುತ ಮಧ್ಯ ಮನು ಎಂಟು ದಿನಗಳಾದಮೇಲೆ ಎದ್ದು ಕುಳಿತನು. ರಸವು ಜೀರ್ಣವಾಗಿ ಭೀಮನು ಅಪ್ರಮೇಯ ಬಲನೂ ವಜ್ರಕಾಯನೂ ಆಗಿದ್ದನು. ನಾಗರಾಜರು ಅವನನ್ನು ಸತ್ಕರಿಸಿ ಮಹೋತ್ಸವವನ್ನು ಮಾಡಿದರು. ಶತ್ರುಗಳನ್ನು ಜಯಿಸಿ ಬಹುಬಲನೆನಿಸಿ ಕೀರ್ತಿ ಯಿಂದ ಮೆರೆಯುವಂತೆ ಹರಸಿ, ನಾನಾ ರತ್ನಾಭರಣಾಂಬರಾದಿಗಳಿಂದ ಬಹುಮಾನಿಸಿ ಕಳುಹಿಸಿದರು. ಆ ಜಲರುಹೇಕ್ಷಣನು ಜಲದಿಂದ ಮೇಲಕ್ಕೆ ಬಂದು ವಾಸುಕಿ ಪ್ರಮುಖ ನಾಗರಾಜರನ್ನು ಬೀಳ್ಕೊಟ್ಟು, ಮನೆಸೇರಿದನು. ಮಾತೆಗೆರಗಿ, ಅಣ್ಣನಿಗೆ ವಂದಿಸಿ, ತಮ್ಮಂದಿರನ್ನು ತಲೆಮೂಸಿ ಮುದ್ದಾಡಿ ಭೀಮಸೇನನು ಅವರಿಗೆ ಹರ್ಷವನ್ನುಂಟು ಮಾಡಿದನು. ದುರ್ಯೋಧನನ ದುಷ್ಟಚೇಷ್ಟಿತನವನ್ನೂ ನಾಗಲೋಕದಲ್ಲಿ ನಡೆದ

ಸತ್ಕಾರಸಮಾರಂಭವನ್ನೂ ನಿವೇದಿಸಿದ ಭೀಮನಿಗೆ ಧರ್ಮಜನಿಂತೆಂದನು—'ಭೀಮ! ಇದನ್ನು ಯಾರಿಗೂ ಹೇಳಬೇಡ. ಇನ್ನುಮೇಲೆ ನಾವು ಜಾಗರೂಕರಾಗಿರಬೇಕು. ದುರ್ಯೋಧನ, ಕರ್ಣ, ಶಕುನಿ ಪ್ರಮುಖರು ಅನೇಕ ಕುಹಕೋಪಾಯಗಳಿಂದ ನಮ್ಮನ್ನು ಕೊಲ್ಲಲೆಣಿಸಿರುವರು. ಕೋಪವನ್ನೂ ಬಲವನ್ನೂ ಪ್ರದರ್ಶಿಸಲು ಸಮಯ ಇದಲ್ಲ. ಕಾದುನೋಡೋಣ.'

ಭೀಷ್ಮನು ಪಾಂಡವ ಕೌರವ ಬಾಲಕರನ್ನು ಶರದ್ವಂತನ ಮಗನಾದ ಕೃಪಾ ಚಾರ್ಯರಿಗೊಪ್ಪಿಸಿ, ಅವರಿಗೆ ವೇದಶಾಸ್ತ್ರ ಶಸ್ತ್ರಧನುರಾದಿ ವಿದ್ಯೆಗಳನ್ನು ಕಲಿಸುವಂತೆ ಪ್ರಾರ್ಥಿಸಿದನು. ಕುರುಬಾಲಕರಲ್ಲದೆ, ವೃಷ್ಣಿವಂಶದ ರಾಜಸುತರು, ನಾನಾದೇಶ ಗಳ ರಾಜಕುಮಾರರು ಕೂಡ ಕೃಪನನ್ನು ಸೇವಿಸಿ, ವಿದ್ಯೆಯನ್ನು ಕಲಿತರು. ಕುರು ಪಾಂಡವರು ವಿಶೇಷ ಶಸ್ತ್ರಾಸ್ತ್ರಕುಶಲರಾಗಬೇಕಾದರೆ, ದೇವಾಂಶನಾದ ಆಚಾರ್ಯ ನಿಂದಲೇ ಎಂದರಿತು ಭೀಷ್ಮನು, ಅವರನ್ನು ದ್ರೋಣಾಚಾರ್ಯನಿಗೆ ಸಮರ್ಪಿಸಿದನು. ಅಚಿರ ಕಾಲದಲ್ಲಿ ದ್ರೋಣ ಶಿಷ್ಯರು ಸರ್ವಶಾಸ್ತ್ರ ವಿಶಾರದರಾದರು.

ದ್ರೋಣನು ಬೃಹಸ್ಪತಿಯ ಅಂಶದಿಂದ ಭರದ್ವಾಜ ಮುನಿಗೆ ಸುತನಾಗಿ ಜನಿಸಿ ದವನು. ತನ್ನ ತಂದೆಯಿಂದ ಆಗ್ನೇಯಾಸ್ತ್ರವನ್ನು ಹೊಂದಿದ್ದ ಅಗ್ನಿಪುತ್ರ ಅಗ್ನಿವೇಶ ನಿಂದ ತಾನು ಅದೇ ಅಸ್ತ್ರವನ್ನು ಪಡೆದು ಮಹಾವೀರನೆನಿಸಿದನು. ಭರದ್ವಾಜನಿಗೆ ಸ್ನೇಹಿತನಾದ ಪೃಷತನೆಂಬ ರಾಜನು ತನ್ನ ಮಗನಾದ ದ್ರುಪದನನ್ನು ಭರದ್ವಾಜ ಆಶ್ರಮದಲ್ಲಿ ಬಿಟ್ಟದ್ದನು. ಆಗ ದ್ರೋಣ ದ್ರುಪದರು ಸಹಾಧ್ಯಾಯಿಗಳಾಗಿ ಅತ್ಯಂತ ಸೌಹಾರ್ದದಿಂದಿದ್ದರು. ಒಂದುದಿನ ದ್ರುಪದನು ಪ್ರೀತ್ಯತಿಶಯ ಯುಕ್ತನಾಗಿ ತಾನು ರಾಜನಾದಮೇಲೆ ಬಂದರೆ ದ್ರೋಣನಿಗೆ ಅರ್ಧ ರಾಜ್ಯವನ್ನಾದರೂ ಕೊಡುವೆನೆಂದು ಭಾಷೆ ಕೊಟ್ಟದ್ದನು. ದ್ರೋಣನು ಮಹಾತಪಸ್ವಿ ಎನಿಸಿದನು. ತಂದೆಯಲ್ಲಿ ಬೇಕಾದ ಶಾಸ್ತ್ರ ಶಸ್ತ್ರಾಸ್ತ್ರಗಳನ್ನು ಕಲಿತು ಪಂಡಿತನಾದನು. ಶರದ್ವಂತನ ಪುತ್ರಿಯಾದ ಕೃಪಿ ಯನ್ನು ಮದುವೆ ಆಗಿ ಅವಳಲ್ಲಿ ರುದ್ರಾವತಾರನಾದ ಮಗನನ್ನು ಪಡೆದನು. ಹುಟ್ಟಿದ ಕೂಡಲೆ ಕುದುರೆಯಂತೆ ಕೆನೆದುದರಿಂದ, ಆ ಕೂಸಿಗೆ ಅಶ್ವತ್ಥಾಮ ಎಂಬ ಹೆಸರಿಟ್ಟು ಬೆಳೆಸುತ್ತಿದ್ದನು. ಪರಶುರಾಮದೇವನು ಸಕಲ ಕ್ಷತ್ರಿಯ ಸಂಹಾರಾನಂತರದಲ್ಲಿ ಶಾಂತ ನಾಗಿ, ಮಹೇಂದ್ರಗಿರಿಯಲ್ಲಿ ನೆಲೆಸಿ, ವಿಪ್ರರಿಗೆ ಬೇಕಾದುದನ್ನೆಲ್ಲ ಮುಕ್ತಹಸ್ತನಾಗಿ ನೀಡುತ್ತಿರುವನೆಂದು ಕೇಳಿ ದ್ರೋಣನು ಭಾರ್ಗವನನ್ನು ಸೇರಿ, ಸಾಷ್ಟಾಂಗವೆರಗಿ, ದರಿದ್ರನಾದ ತನಗೆ ಧನಸಮೃದ್ಧಿಯನ್ನು ಕೊಡಬೇಕೆಂದು ಪ್ರಾರ್ಥಿಸಿದನು. ಸರ್ವಜ್ಞ ನಾದ ಶ್ರೀ ಪರಶುರಾಮನು ಸಕಲವನ್ನೂ ದಾನವಾಗಿ ಕೊಟ್ಟಿರುವುದರಿಂದ ತನ್ನಲ್ಲಿ ಧನವಿಲ್ಲವೆಂದನು.

ಆಗ ದ್ರೋಣನು 'ಸ್ವಾಮಿನ್! ಸರ್ವಜ್ಞ! ನನ್ನ ಮಗನು ಹಸ್ತಿನಾವತಿ ಯಲ್ಲಿ ಕೌರವ ಬಾಲಕರಿಂದ ಕೂಡಿ ಆಡುತ್ತಿದ್ದನು. ಅವರು ಹಾಲನ್ನು ಕುಡಿಯಲು ಪ್ರಾಸಾದಗಳಿಗೆ ಹೋದಾಗ, ನನ್ನ ಮಗನು ಮನೆಗೆ ಬಂದು ಹಾಲಿಗಾಗಿ ತಾಯಿ

ಯನ್ನು ಕಾಡುತ್ತಿದ್ದನು. ದರಿದ್ರರೂ, ಪ್ರತಿಗ್ರಹರಹಿತರೂ ಆದ ನಮ್ಮ ಮನೆಯಲ್ಲಿ ಆಕಳೆಲ್ಲಿ ಬರಬೇಕು? ಹಾಲಂತೂ ದೂರವೇ ಆಯಿತು! ಅವಳು ದೀನಳಾಗಿ ಮಗನಿಗೆ ಇಲ್ಲವೆನ್ನಲಾರದೆ ಹಿಟ್ಟನ್ನು ಕದಡಿ ಹಾಲೆಂದು ಕೊಡುತ್ತಿದ್ದಳು. ಅದೇ ಹಾಲೆಂದು ಅವನೂ ಕುಡಿಯುತ್ತಿದ್ದನು. ಒಂದುದಿನ ದುರ್ಯೋಧನಾದಿಗಳು ಅವನಿಗೂ ಸ್ವಲ್ಪ ಹಾಲನ್ನಿತ್ತರು. ಅಂದು ಹಾಲೆಂದರೇನೆಂದು ಗೊತ್ತಾದ ಬಾಲಕನು ಮರುದಿನ ಕೃಪಿ ಕೊಟ್ಟ ಪಿಷ್ಟವನ್ನು ಚೆಲ್ಲಿ ತನಗೆ ಹಾಲೇ ಬೇಕೆಂದು ಹಠಹಿಡಿದನು. ಅವನು ಅಳುವುದನ್ನು ಕೇಳಿದ ನನಗೆ ವ್ಯಸನವಾಗಿ, ನಿಮ್ಮಲ್ಲಿ ಬೇಡಲು ಬಂದಿರುವೆನು. ಅಪ್ರತಿಗ್ರಹವ್ರತನಾದ ನನಗೆ ಪರಮಾತ್ಮನಾದ ನಿನ್ನಿಂದ ಏನು ಸ್ವೀಕರಿಸಿದರೂ ಪ್ರತಿಗ್ರಹವೆನಿಸುವುದಿಲ್ಲ. ಒಂದು ಆಕಳನ್ನಾದರೂ ಕೊಡು.

ಆ ಮಾತಿಗೆ ಶ್ರೀಭಗವಂತನು ತನ್ನ ಮನದಲ್ಲಿ ಇಂತಾಲೋಚಿಸಿದನು—'ಈ ದ್ರೋಣ, ಅಶ್ವತ್ಥಾಮರಿಂದ ಭೂಭಾರಹರಣಕಾರ್ಯದಲ್ಲಿ ಭಗವತ್ಸೇವೆ ಆಗಬೇಕಾಗಿದೆ. ಅದೇ ಇವರಿಗೆ ಸಾಧನವು. ದೇವತೆಗಳು ಭೂಮಿಯಲ್ಲಿ ಅವತರಿಸಿರುವಾಗ ಅವರ ಸಂತಾನವು ಕಲಿಯುಗದಲ್ಲಿ ಬಹುಕಾಲ ಉಳಿಯಬಾರದು. ಕಲಿಯಲ್ಲಿ ಹುಟ್ಟಿದ ದೇವವಂಶದವರು ಕೂಡ ಪಾಪಿಷ್ಠರಾಗುವುದು ತಪ್ಪದು. ಆದ್ದರಿಂದಲೂ ದೇವಾಂಶಸಂಭೂತರು ಹಾಗೆಯೇ ಹುಟ್ಟುತ್ತಿರಲು, ಕಲಿವ್ಯಾಪಾರವು ಅವ್ಯಾಹತವಾಗಿ ನಡಿಯದೇಹೋದೀತೆಂಬ ಕಾರಣದಿಂದಲೂ ಇವನಿಗೆ ನಾನು ಧನವನ್ನು ಕೊಡದಿರುವೆನು.' ಇಂತಾಲೋಚಿಸಿ, ದೇವನು 'ವಿಪ್ರವರ! ಈಗ ನನ್ನಲ್ಲಿರುವ ಮೂರು ವಸ್ತುಗಳಲ್ಲಿ ಯಾವುದಾದರೊಂದನ್ನು ಬೇಡು. ನಾನು, ತತ್ವವಿದ್ಯೆ, ಶಸ್ತ್ರ (ಪರಶು, ಶಾರ್ಙ್ಗ ಮೊದಲಾದ ಆಯುಧಗಳು) ಗಳು—ಇವು ಬಿಟ್ಟರೆ ನನ್ನಲ್ಲಿ ಮತ್ತೇನಿಲ್ಲ' ಎಂದನು.

ದ್ರೋಣನು 'ಸ್ವಾಮಿ! ಸರ್ವೇಶನಾದ ನಿನ್ನನ್ನು ಬೇಡುವುದೆಂದರೆ ನಿನಗೆ ಪ್ರಭುವಾಗುವುದು. ಮನಸಾಪಿ ಸ್ಮರಿಸಲಾಗದ ಆ ಮಹಾಪರಾಧವೆನ್ನಿಂದಲಾಗದು. ಅದು ಅಂಧಂತಮಃಪ್ರಾಪ್ತಿಗೆ ಕಾರಣವು. ಮಹಾಬಲರಿಗೆ ಬಲನಾದ ನಿನ್ನ ಆಯುಧಗಳನ್ನು ಎತ್ತಿಹಿಡಿಯುವ ಶಕ್ತಿಯೂ ನಮಗಿಲ್ಲ. ನನಗೆ ವಿದ್ಯೆಯನ್ನೇ ದಯಪಾಲಿಸು! ಕೃತಾರ್ಥನಾಗುವೆನು' ಎಂದು ಪ್ರಾರ್ಥಿಸಿದನು. ಪರಶುರಾಮನು ನಸುನಕ್ಕು ದ್ರೋಣನಿಗೆ ಅಸ್ತ್ರ ಶಸ್ತ್ರಗಳನ್ನೂ, ತತ್ವವಿದ್ಯೆಯನ್ನೂ ದಯಮಾಡಿ ಉಪದೇಶಿಸಿದನು. ಹನ್ನೆರಡು ವರ್ಷಗಳಕಾಲ ಶ್ರೀಹರಿಯಲ್ಲಿದ್ದು ದ್ರೋಣನು ಅಸಮಾನ ವೀರನೂ, ಮಹಾಪಂಡಿತನೂ ಆದನು. ಅರ್ಧ ರಾಜ್ಯವನ್ನೇ ಕೊಡುವೆನೆಂದ ದ್ರುಪದನಿಂದ ಒಂದು ಗೋವನ್ನಾದರೂ ಪಡೆಯುವ ಆಶೆಯಿಂದ ದ್ರೋಣನು ಉತ್ತರ ಪಾಂಚಾಲವನ್ನಾಳುತ್ತಿದ್ದ ದ್ರುಪದನ ಸಭೆಗೆ ಬಂದು 'ನಿನ್ನ ಸ್ನೇಹಿತನಾದ ದ್ರೋಣನು ನಿನ್ನನ್ನು ಕಾಣಲು ಬಂದಿರುವನು' ಎಂದು ಹೇಳಿಕಳಿಸಿದನು. ಆಗ

ದ್ರೋಣನನ್ನು ಕರೆಯಿಸಿ ಸಭೆಯಲ್ಲಿ ದ್ರುಪದನು, ರಾಜನೆಂಬ ದುರಹಂಕಾರದಿಂದ ಇಂತು ನಿಂದಿಸಿದನು—'ದರಿದ್ರನಾದ ನೀನೆಲ್ಲಿ? ಪಾಂಚಾಲ ಚಕ್ರವರ್ತಿಯಾದ ನಾನೆಲ್ಲಿ? ನಿನ್ನ ನನ್ನ ಸ್ನೇಹವು ಈಗಿಲ್ಲ. ನಿಮ್ಮ ತಂದೆಯಲ್ಲಿ ಓದುವಾಗ ಸ್ನೇಹವಿದ್ದರೆ, ಅದು ಶಾಶ್ವತವೆಂದು ತಿಳಿದೆಯಾ? ನಿರ್ಧನರು ರಾಜಸಖರಾಗುವರೇ? ಶೂರನಿಗೆ ನಪುಂಸಕರು ಸುಹೃದರಾಗುವರೇ? ಮೂರ್ಖರು ಪಂಡಿತರ ಒಡನಾಡಬಲ್ಲರೇ? ನಡೆ.' ಹೀಗೆ ತಿರಸ್ಕರಿಸಿದ ದ್ರುಪದನಲ್ಲಿ ಕುಪಿತನಾಗಿ ದ್ರೋಣನು ಕೌರವ ರಾಜಧಾನಿಗೆ ಬಂದನು. ಕೌರವ ಪಾಂಡವರಿಗೆ ಶಸ್ತ್ರವಿದ್ಯಾ ಗುರುವಾಗಿ, ಶಿಷ್ಯರಿಂದ ದ್ರುಪದನ ದರ್ಪವನ್ನು ಮುರಿಯಲೆಣಿಸಿ, ಶಿಷ್ಯರಿಂದ ಧನವೂ ಸ್ವೀಕರಿಸಬಹುದೆಂದು ಆಲೋಚಿಸುತ್ತಾ ಬರುವಾಗ, ನಗರದ ಬಹಿರುದ್ಯಾನದಲ್ಲಿ ಆಡುತ್ತಿದ್ದ ರಾಜಕುಮಾರರನ್ನು ನೋಡಿದನು.

ಅವರು ಕಂದುಕದಿಂದ ಆಡುತ್ತಿದ್ದರು. ಆಗ ಕಂದುಕವು ಧರ್ಮರಾಜನಿಂದೆಸೆಯಲ್ಪಟ್ಟು, ಅವನ ಮುದ್ರಿಕೆಯೊಂದಿಗೆ ಒಂದು ಬಾವಿಯಲ್ಲಿ ಬಿತ್ತು. ಭೀಮಸೇನನು ದಿಕ್ಕುತೋಚದೆ ನಿಂತಿರುವ ಬಾಲಕರನ್ನು ಸಮುದಾಯಿಸಿ, 'ಆಳವಾದ ಬಾವಿಗೆ ಹಾರಿ ಚೆಂಡನ್ನೂ ಉಂಗುರವನ್ನೂ ತರುವೆ'ನೆಂದು ಹೇಳಿ, ಬಾವಿಯಲ್ಲಿ ಧುಮುಕಲು ಸಿದ್ಧನಾದನು. ಆ ಸಮಯವನ್ನರಿತು ದ್ರೋಣನು ಬಾಲಕರನ್ನು ಸಮೀಪಿಸಿ, ಭೀಮನನ್ನು ಹಿಡಿದುನಿಲ್ಲಿಸಿ—'ಭರತ ಕುಲದಲ್ಲಿ ಹುಟ್ಟಿದ ಬಾಲಕರು ಅಸ್ತ್ರವಿದ್ಯೆಯನ್ನು ಕಲಿಯದಿದ್ದುದು ಆಶ್ಚರ್ಯವೇ ಸರಿ! ಅಸ್ತ್ರಬಲದಿಂದ ಈ ಚೆಂಡನ್ನು ಈಗ ತೆಗೆದುಕೊಡುವೆನು. ನೋಡಿ!' ಇಂತು ನುಡಿದು ದ್ರೋಣನು ಹಂಚಿಕಡ್ಡಿಗಳನ್ನು ತಂದನು. ಅಸ್ತ್ರಬಲದಿಂದ ಕಡ್ಡಿಗಳನ್ನು ಚೆಂಡಿಗೆ ಹೊಡಿ, ಹಗ್ಗದಂತೆ ಮಾಡಿ, ಚೆಂಡನ್ನು, ಉಂಗುರವನ್ನು ಕೂಡ ಮೇಲಕ್ಕೆತ್ತಿ, ಧರ್ಮಜನಿಗೆ ಕೊಟ್ಟನು. ಪ್ರೀತರಾದ ಬಾಲಕರು 'ನೀವಾರು? ನಿಮಗೇನು ಬೇಕು? ಕೇಳಿ!' ಎಂದರು. 'ನಾನಾರೆಂದು ಭೀಷ್ಮನಿಗೆ ಗೊತ್ತು! ನನಗೆ ಭುಕ್ತಿ ಬೇಕಾಗಿದೆ' ಎಂದ ದ್ರೋಣನಿಗೆ ವಂದಿಸಿ, ಧರ್ಮರಾಜನು ನಿಸ್ಸಂಶಯನಾಗಿ ಅವರಿಗೆ ಯಥೇಚ್ಛ ಜೀವನ ಸಮೃದ್ಧಿಯನ್ನು ಕಲ್ಪಿಸಿಕೊಡುವೆನೆಂದು ಪ್ರತಿಜ್ಞೆ ಮಾಡಿದನು. ಕುಮಾರರಿಂದ ಈ ವೃತ್ತಾಂತವನ್ನು ಕೇಳಿ ಭೀಷ್ಮನು 'ದ್ರೋಣನು ಪರಶುರಾಮನಲ್ಲಿ ವಿದ್ಯಾಸಮಾಪ್ತಿಯನ್ನು ಮಾಡಿ ಬಂದಿರುವನು. ಕ್ಲಿಷ್ಟದೆಶೆಯಲ್ಲಿರುವ ಉತ್ತಮ ವಿಪ್ರರನ್ನು ಪೋಷಿಸುವುದರ ಜೊತೆಗೆ ಬಾಲರ ವಿದ್ಯಾಭ್ಯಾಸವೂ ಆಗುವು'ದೆಂದು ಚಿಂತಿಸಿ, ದ್ರೋಣನನ್ನು ಸಮೀಪಿಸಿ, ಅವನನ್ನು ಉಪಾಧ್ಯಾಯನಾಗುವಂತೆ ಬೇಡಿಕೊಂಡನು. ಭೀಷ್ಮನಲ್ಲಿರುವ ಸೌಹಾರ್ದವು, ದ್ರುಪದನಲ್ಲಿರುವ ರೋಷವು, ಆತ್ಮದಾರಿದ್ರ್ಯವು ಕಲೆತು ದ್ರೋಣನನ್ನು ಸೇವಾವೃತ್ತಿಗಿಳಿಸಿತು. ಭೀಷ್ಮನು ದ್ರೋಣನನ್ನು ಪೂಜಿಸಿ, ಅವನಿಗೆ ಆಚಾರ್ಯ ಪದವಿಯೊಂದಿಗೆ ಸಕಲ ಭೋಗಗಳನ್ನಿತ್ತು ಸಂತೋಷಪಡಿಸಿದನು. ತಾನೂ ಕೃತಾರ್ಥನಾದೆನೆಂದು ನಿಶ್ಚಿಂತನಾದನು.

## ವಿದ್ಯಾಸಮುಪಾರ್ಜನೆ

ಭೀಮಾರ್ಜುನರು ಕೃಪಾಚಾರ್ಯಶಿಕ್ಷಿತರಾಗಿದ್ದರಲ್ಲದೆ ವೇದವ್ಯಾಸರಿಂದ ತತ್ವ ಜ್ಞಾನವನ್ನೂ ಪಡೆದಿದ್ದರು. ಭೀಮನು ಅರ್ಜುನಸಹಿತನಾಗಿ ದಿಗ್ವಿಜಯವನ್ನು ಮಾಡಿ, ಶಿಶುಪಾಲ, ದಂತವಕ್ತ್ರ, ಪೌಂಡ್ರಕ, ರುಕ್ಮಿ (ಇಲ್ವಲ ದೈತ್ಯ+ಶುಚಿನಾಮಕ ವಹ್ನಿಸುತ), ಏಕಲವ್ಯ, ಸಾಲ್ವ, ಹಂಸಡಿಭಿಕರು ಮೊದಲಾದವರನ್ನೂ ಪರೀಕ್ಷೆಗಾಗಿ ಹೋರಾಡಿದ ಶಲ್ಯನನ್ನೂ ಗೆದ್ದು ಹಸ್ತಿನಾವತಿಯನ್ನು ಸೇರಿದನು. ಅವರೀರ್ವರ ಪರಾಕ್ರಮವನ್ನು ನೋಡಿ ಧರ್ಮಜ, ಭೀಷ್ಮ, ವಿದುರ, ನಕುಲ, ಸಹದೇವರು, ಪುರಜನರು, ಅಲ್ಲದೆ ಯಾದವರು ಕೂಡ ಸಂತೋಷಪಟ್ಟರು. ದುರ್ಜನರಿಗೆ ಅದರಿಂದ ದುಃಖವಾಯಿತು. ಆಗ ಅಕ್ರೂರನು ಧೃತರಾಷ್ಟ್ರನ ವೃತ್ತವನ್ನು ತಿಳಿದುಬರಲು ಶ್ರೀಕೃಷ್ಣನಿಂದ ಕಳಿಸಲ್ಪಟ್ಟು ಹಸ್ತಿನಾವತಿಗೆ ಬಂದನು. ಧೃತರಾಷ್ಟ್ರನಿಗೆ 'ಪಾಂಡವರು ಭಗವದ್ಭಕ್ತರು, ಅವರಿಗೆ ಎರಡು ಬಗೆಯಬೇಡ. ದುರ್ಜನರಾದ ದುರ್ಯೋಧನಾದಿ ಸುತರ ಮಾತಿಗೆ ಸೋತು, ಪಾಂಡವದ್ರೋಹವನ್ನು ನಡೆಯಗೊಡಿಸುವುದು ಒಳಿತಲ್ಲ. ನಿಷ್ಪಕ್ಷಪಾತಿಯಾಗಿ ಇರು!' ಎಂದು ಉಪದೇಶಿಸಿದನು. ಅಂಧರಾಜನು ಪುತ್ರಾಭಿಮಾನದಿಂದ 'ಎಲ್ಲವೂ ಶ್ರೀಹರಿಯ ಇಚ್ಛೆಯಂತಾಗುವುದು' ಎಂದು ಹೇಳಿ ಕಳಿಸಲು, ಅಕ್ರೂರನು ಶ್ರೀಕೃಷ್ಣನಿಗೆ ಸಮಸ್ತ ವೃತ್ತಾಂತವನ್ನು ನಿವೇದಿಸಿದನು. ಶ್ರೀಕೃಷ್ಣನು ತನ್ನ ಭಕ್ತರಾದ ಪಾಂಡವರ ಯೋಗಕ್ಷೇಮವನ್ನು ತಾನೇ ವಹಿಸುವೆನೆಂದು ನಿಶ್ಚಯಿಸಿದನು.

ಭೀಮಾರ್ಜುನರು ಮೂರು ವರ್ಷಗಳಕಾಲ ಶ್ರೀಕೃಷ್ಣನ ಮಧುರೆಯಲ್ಲಿದ್ದು, ವಿದ್ಯಾನಿಪುಣರಾದರು. ಶ್ರೀಕೃಷ್ಣನನ್ನು ಮನಸಾಪಿ ವಿರೋಧಿಸಲಾರದ ಭೀಮನು, ಅಭ್ಯಾಸಕಾಲದಲ್ಲಿ ಪ್ರತ್ಯುದ್ಗಮವನ್ನು ಮಾಡಲಾದೀತೆಂಬ ಶಂಕೆಯಿಂದ, ಶ್ವೇತ-ಕೇಶಾವಿಷ್ಟನಾದ ಬಲರಾಮನಿಂದ ಗದಾಯುದ್ಧವನ್ನು ಕಲಿತನು. ಅರ್ಜುನನು ಸಕಲಾಸ್ತ್ರಗಳನ್ನು ತಿಳಿದು ವೀರನಾದನು. ಆಗ ಸಹದೇವನು ಉದ್ಧವನಿಂದ ನೀತಿ ಶಾಸ್ತ್ರವನ್ನು ಕಲಿತನು.

ಇಂತು ಸ್ವತಃ ವೀರ್ಯಶೌರ್ಯ ಧುರ್ಯರಾದ ಪಾಂಡವರು ಸ್ವರ್ಣದಲ್ಲಿಟ್ಟ ಮಣಿಗಳಂತೆ ದ್ರೋಣನಲ್ಲಿ ಸೇರಿ ಅವನ ಪ್ರೀತಿಯನ್ನು ಗಳಿಸಿದರು. ಅವರ ವೀರ್ಯ ವಿನಯ ಶೌರ್ಯ ಭಕ್ತಿಗಳಿಂದ ದ್ರೋಣನು ಪ್ರಸನ್ನನಾದನು. ಒಂದುದಿನ ದ್ರೋಣನು ಸಕಲ ರಾಜಕುಮಾರರ ಸಭೆಯಲ್ಲಿ 'ಯಾರು ನನ್ನ ಅಭೀಷ್ಟವನ್ನು ಪೂರೈಸುವ ಪ್ರತಿಜ್ಞೆ ಮಾಡುವರೋ, ಅವರನ್ನು ನಾನು ಅತ್ಯಂತ ಶ್ರೇಷ್ಠ ಧನುರ್ವಿದ್ಯಾ ಪಾರಗನನ್ನಾಗಿ ಮಾಡುವೆನು' ಎಂದನು. ಭೀಮಸೇನನು ಸ್ವತಃ ಅಸ್ತ್ರಗಳನ್ನರಿತಿದ್ದುದರಿಂದಲೂ ಭೀಷ್ಮಾದಿ ಗುರುಗಳಿಂದ ನಿತ್ಯ ಯುದ್ಧರೂಪವಾದ ಗುರುಜನ ದ್ರೋಹ ಮಾಡಬಾರದೆಂತಲೂ ಇಂದಿರೇಶನ ಹೊರತು ಮತ್ತಾರಿಂದಲೂ ಮಂತ್ರೋಪದೇಶ

ಅಸ್ತ್ರ ಸ್ವೀಕಾರಗಳು ತನಗೆ ಅನಾವಶ್ಯಕವೆಂತಲೂ ಅನುಜನಾದ ಅರ್ಜುನನು ಕೀರ್ತಿ ಶಾಲಿಯಾಗಲಿ ಎಂಬ ದಯದಿಂದಲೂ ತಾನು ಪ್ರತಿಜ್ಞೆ ಮಾಡಲಿಲ್ಲ. ಪ್ರತಿಜ್ಞೆ ಮಾಡದೆಯೇ ದ್ರೋಣಕಾರ್ಯವನ್ನು ಮಾಡುವುದಾಗಿ ಮನದಿ ನಿಶ್ಚಯಿಸಿ ಸುಮ್ಮ ನಿದ್ದನು. ಆಗ ಅರ್ಜುನನು ದ್ರೋಣರ ಅಭೀಷ್ಟವನ್ನು ನೆರವೇಸಿಕೊಡುವುದಾಗಿ ಪ್ರತಿಜ್ಞೆ ಮಾಡಿದನು. ಇತರ ರಾಜಕುಮಾರರು ಅಭೀಷ್ಟವು ದುಷ್ಕರವಾಗಿರಬಹು ದೆಂಬ ಭಯದಿಂದ ಸುಮ್ಮನಿದ್ದರು. ದ್ರೋಣನು ಅಂದಿನಿಂದ ಅರ್ಜುನನನ್ನು ಬಹು ಪ್ರೀತಿಯಿಂದ ನೋಡುತ್ತಾ, ಅವನಿಗೆ ಸಕಲ ಧನುರಾದಿ ವಿದ್ಯೆಗಳನ್ನು ಕಲಿಸಿದನು. ದ್ರೋಣನ ಕೀರ್ತಿಯು ಹರಡಿದಂತೆ, ನಾನಾ ದೇಶದ ರಾಜಕುಮಾರರು ದ್ರೋಣ ಪಾಠಶಾಲೆಗೆ ಬಂದು ವಿದ್ಯಾಪಾರಂಗತರಾಗುತ್ತಿದ್ದರು. ಭರತ, ಮಾಂಧಾತೃ, ಮರು ದ್ರಾಜರ ನಂತರ ಇಂತಹ ವೀರರಿದ್ದಿಲ್ಲವೆಂದು ಪ್ರಶಂಸೆಯನ್ನು ಗಳಿಸಿ, ರಾಜಕುಮಾರರು ಮಹೋದಾರ ವಿಕ್ರಮ ನೈಪುಣ್ಯ, ಧೈರ್ಯ, ಬಲಗಳಿಂದ ವಿರಾಜಿಸಿದರು.

ಅರ್ಜುನನಲ್ಲಿ ಸ್ಪರ್ಧೆಯಿಂದ ಅವನನ್ನು ಮೀರಿಸುವ ಧನುರ್ವೀರನಾಗಲು ಹವಣಿಸಿ ಸೂತಪುತ್ರನಾದ ಕರ್ಣನು ಬಂದನು. ಅವನು ಪಾಂಡುಕುಮಾರರ ದ್ವೇಷಿ ಯಾದುದರಿಂದ ದುರ್ಯೋಧನನು ಅವನನ್ನು ತನ್ನ ಪ್ರಿಯ ಮಿತ್ರನನ್ನಾಗಿ ಸ್ವೀಕರಿಸಿ ದನು. ವಿದ್ಯಾಪ್ರದಾನ ಮಾಡಿರೆಂದ ಕರ್ಣನನ್ನೂ, ಏಕಲವ್ಯನನ್ನೂ, ದ್ರೋಣನು ಸೂತಪುತ್ರ ನಿಷಾದರೆಂಬ ಕಾರಣದಿಂದ ರಾಜಕುಮಾರರ ಪಾಠಶಾಲೆಯಲ್ಲಿ ಸೇರಿಸಿ ಕೊಳ್ಳದೆ ನಿರಾಕರಿಸಿದನು. ಅದರಿಂದ ಸಿಟ್ಟಾಗಿ ಕರ್ಣನು ಪರಶುರಾಮನನ್ನು ಸೇವಿಸಿ ಅಸ್ತ್ರವಿದ್ಯೆಯನ್ನು ಕಲಿತನು. ಏಕಲವ್ಯನು ಪೈಶಾಚಿ ಮಂತ್ರಬಲದಿಂದಲೂ, ದ್ರೋಣನ ಮೃತ್ಪ್ರತಿಮೆಯ ಸೇವಾಭಕ್ತಿಗಳಿಂದಲೂ ನಿಖಿಲಾಸ್ತ್ರ ವಿದ್ಯಾಪಾರಂಗತ ನಾದನು.

ರಾಜಕುಮಾರರು ವಿದ್ಯಾಭ್ಯಾಸ ಮಾಡುವಾಗ ದ್ರೋಣನು ಅವರಿಗೆ ನೀರನ್ನು ತರುವ ನಿಯೋಗವನ್ನಿಟ್ಟು, ಗಿಂಡಿಗಳನ್ನು ಕೊಡುತ್ತಿದ್ದನು. ಅವನ್ನು ತುಂಬಲು ತಡವಾಗಿ, ಸ್ವತಃ ಅಶ್ರದ್ಧೆಯಿಂದ ಕೂಡಿ ಮಿಕ್ಕಬಾಲಕರು ಬರದಿದ್ದಾಗ, ಅಶ್ವತ್ಥಾಮನು ತಂದೆ ಕೊಟ್ಟ ತಂಬಿಗೆಯನ್ನು ಬೇಗನೇ ತುಂಬಿಕೊಂಡು ಮನೆಗೆ ಬಂದುಬಿಡುತ್ತಿದ್ದನು. ಆಗ ಅವನಿಗೆ ಧನುರ್ವಿದ್ಯಾಮರ್ಮಗಳನ್ನು ದ್ರೋಣನು ತಿಳಿಸಿಕೊಡುವುದನ್ನು ನೋಡಿ ಅರ್ಜುನನು ವರುಣಾಸ್ತ್ರಬಲದಿಂದ ಗಿಂಡಿಯನ್ನು ಬೇಗನೆ ತುಂಬಿಕೊಂಡು ಬಂದು ತಾನು ಗುರುಪುತ್ರನ ಜೊತೆಗೆ ಎಲ್ಲ ವಿದ್ಯೆಗಳನ್ನು ಶ್ರದ್ಧೆಯಿಂದ ಕಲಿತನು. ಇಂತು ಶ್ರದ್ಧಾ ಭಕ್ತಿಗಳಿಂದ ಸೇವಿಸುವ ಅರ್ಜುನನಲ್ಲಿ ಪ್ರೀತನಾಗಿ ಅವನಿಗೆ ಶಬ್ದವೇಧಿ ಯನ್ನು ಗ್ರಹಿಸಲು ಒಂದು ಉಪಾಯವನ್ನು ಮಾಡಿದನು.

ದ್ರೋಣನು ಅಡಿಗೆಯವನಿಗೆ ಹೇಳಿದನು—'ಅರ್ಜುನನಿಗೆ ಅಂಧಕಾರದಲ್ಲಿ ಬಡಿಸಬೇಡ ! ಏಕೆ ಎಂದು ಕೇಳಿದರೆ 'ಅನ್ನದ ಕಬಳ ಬಾಯಲ್ಲಿ ಬೀಳದೇ ಹೋದೀತು' ಎಂದು ಹೇಳು'. ಅಂತೆಯೇ ದೀಪವಾರಿದಾಗ ಭೋಜನ ಮಾಡುತ್ತಿದ್ದ ಅರ್ಜುನನು

ಅಡಿಗೆಯವನ ಮಾತನ್ನು ಕೇಳಿ, ಪರೀಕ್ಷೆಗೆಂದು ಕಬಳವನ್ನು ಮುಖದಲ್ಲಿ ಹಾಕಿಕೊಂಡನು. ಅಭ್ಯಾಸಬಲದಿಂದ ಕತ್ತಲಲ್ಲಿ ಉಣ್ಣಲು ಬರುವುದನ್ನು ಕಂಡು, ಅದರಂತೆಯೇ ಕಣ್ಣಿಗೆ ಕಾಣದ ದೂರದ ಲಕ್ಷ್ಯವನ್ನು ಶಬ್ದದಿಂದ ತಿಳಿದು ಹೊಡೆಯುವ ಅಭ್ಯಾಸವನ್ನು ಮಾಡಿ ಅರ್ಜುನನು ಶಬ್ದವೇಧಿಯನ್ನು ಕಲಿತನು. ಇದರಿಂದ ದ್ರೋಣನು ಪ್ರೀತನಾಗಿ ಅರ್ಜುನನನ್ನು ಬಿಗಿದಪ್ಪಿ 'ನಿನ್ನನ್ನು ಭೂಲೋಕದಲ್ಲಿ ಅಪ್ರತಿಮ ಧನುರ್ವೀರನೆನಿಸುವೆನು' ಎಂದು ಭಾಷೆಕೊಟ್ಟನು. ಇಂತು ರಾಜಕುಮಾರರು ರಥಯುದ್ಧ, ಗಜಯುದ್ಧ, ಅಶ್ವಯುದ್ಧ, ಗದಾಚಾಲನ, ಖಡ್ಗಖೇಲನ, ತೋಮರ ಪ್ರಾಸಕೂಲ ಶಕ್ತಿಪ್ರಯೋಗಗಳನ್ನು ಕಲಿತು, ಮಹಾವೀರರೆನಿಸಿ ಪ್ರಖ್ಯಾತರಾದರು.

ಒಂದುಸಲ ಧರ್ಮಜಾದಿ ರಾಜಕುಮಾರರು ಬೇಟೆಗೆಂದು ಅರಣ್ಯದಲ್ಲಿ ಸಂಚರಿಸುತ್ತಿದ್ದರು. ಧರ್ಮರಾಜನ ನಾಯಿಯು ಮುಂದೆಹೋಗಿ ಅಲ್ಲಿ ಅಸ್ತ್ರಾಭ್ಯಾಸವನ್ನು ಮಾಡುತ್ತಿದ್ದ ನಿಷಾದರಾಜ ಸುತನಾದ ಏಕಲವ್ಯನನ್ನು ಕಂಡು ಬೊಗಳಿತು. ಅವನ ಕಪ್ಪುಮೈಬಣ್ಣ, ಕೃಷ್ಣಾಜಿನ, ಕೆಂಪು ಜಟೆ, ಕೈಯಲ್ಲಿದ್ದ ಬಿಲ್ಲು ಬಾಣಗಳನ್ನು ನೋಡಿ ಬೊಗಳುವ ನಾಯಿಯನ್ನು ಹುಲ್ಲುಕಡ್ಡಿಗಳನ್ನು ಪ್ರಯೋಗಿಸಿ ಬಾಯಿತುಂಬಿ ಮುಚ್ಚಿ ಅದು ಬೊಗಳದಂತೆ ಮಾಡಿ ಏಕಲವ್ಯನು ಅದನ್ನು ಓಡಿಸಿದನು. ನಾಯಿಯು ಧರ್ಮಜನಲ್ಲಿಗೆ ಬಂತು. ಬಾಯಿಗೆ ವ್ರಣವಾಗದಂತೆ, ಬಾಣ ಕಡ್ಡಿಗಳಿಂದ ಮುಚ್ಚಿದ ಚಾತುರ್ಯವನ್ನು ಕಂಡು ರಾಜಸುತರು ವಿಸ್ಮಿತರಾದರು. ಬಂದು ಕೇಳಿದಾಗ ಏಕಲವ್ಯನು ತಾನು ನಿಷಾದರಾಜ ಸುತನೆಂತಲೂ ದ್ರೋಣನ ಶಿಷ್ಯನೆಂತಲೂ ಹೇಳಿಕೊಂಡನು. ಅರ್ಜುನನಾಗ ತನಗೂ ಹೆಚ್ಚಾದ ಧನುರ್ವಿದ್ಯಾ ನಿಪುಣತೆಯನ್ನವನಿಗಿತ್ತ ತನ್ನ ಗುರುಗಳಲ್ಲಿ ಪ್ರೀತನಾಗದೆ, ಮನೆಗೆ ಬಂದು ದ್ರೋಣನನ್ನು ಕಂಡು—'ನಿನಗೆ ಸಾಟಿಯಾದ ಧನುರ್ಧರರೀಲೋಕದಲ್ಲೇ ಇಲ್ಲವೆನಿಸುವೆ'ನೆಂದ ದ್ರೋಣನ ಮಾತು ಸುಳ್ಳಾಯಿತೆಂದು ಹಂಗಿಸಿ, 'ನಿಷಾದ ಶಿಷ್ಯನಿಗೆ ರಹಸ್ಯವಾಗಿ ಉಪದೇಶವನ್ನಿತ್ತುದು ನ್ಯಾಯವೇ ?' ಎಂದು ಕೇಳಿದನು.

ಆಗ ದ್ರೋಣನು ಅರ್ಜುನನೊಡಗೂಡಿ ಏಕಲವ್ಯನ ವನಕ್ಕೆ ಬಂದನು. ಏಕಲವ್ಯನು ಬಂದು ಗುರುವಿಗೆ ವಂದಿಸಿ ಪೂಜಿಸಿ ತನ್ನನ್ನೂ, ತನ್ನ ಸರ್ವಸಂಪತ್ತನ್ನೂ ನಿವೇದಿಸಿದನು. 'ನೀನಾರೆ'ಂದ ದ್ರೋಣನಿಗೆ 'ತಮ್ಮ ಶಿಷ್ಯ'ನೆಂದನು. 'ಹಾಗಾದರೆ ಗುರುದಕ್ಷಿಣೆ ಎಲ್ಲಿ ?' ಎಂದ ದ್ರೋಣನಿಗೆ 'ಸರ್ವವೂ ನಿಮಗರ್ಪಿತ'ವೆಂದನು. ಆಗ ದ್ರೋಣನು 'ನಿನ್ನ ಬಲಗೈ ಹೆಬ್ಬೆರಳನ್ನು ಕತ್ತರಿಸಿಕೊಡು' ಅಂದನು. ತತ್ಕ್ಷಣವೇ ಏಕಲವ್ಯನು ತನ್ನ ಬೆರಳನ್ನು ತುಂಡರಿಸಿ, ತಟ್ಟೆಯಲ್ಲಿಟ್ಟು ಗುರುವಿನ ಪಾದದಲ್ಲಿ ಸಮರ್ಪಿಸಿದನು. ನಿರ್ವಿಕಾರನೂ, ಹೃಷ್ಟವದನನೂ ಆಗಿದ್ದ ಏಕಲವ್ಯನನ್ನು ಮನದಿ ಮೆಚ್ಚಿ ದ್ರೋಣನು ಅವನನ್ನು ಅಭಿನಂದಿಸಿದನು. ಇಂತು ಅಂಗುಷ್ಠ ಹೀನನಾದ ಏಕಲವ್ಯನು ಅರ್ಜುನನನ್ನು ಧನುರ್ವಿದ್ಯೆಯಲ್ಲಿ ಮೀರಿಸಲಾರದೆ

ಹೋದನು. ಅರ್ಜುನನು ಇದರಿಂದ ಸಂತೋಷಪಟ್ಟು, ಗುರುಗಳಿಂದ ಕೂಡಿ ಹಸ್ತಿನಾವತಿಗೆ ಹಿಂದಿರುಗಿದನು. ಆದರೆ ದ್ರೋಣನು ಏಕಲವ್ಯನ ಭಕ್ತಿ, ಶ್ರದ್ಧೆ ಅಭ್ಯಾಸಬಲಗಳನ್ನು ಕಂಡು ಮೆಚ್ಚಿ, ಮುಂದೆ ರೈವತಪರ್ವತದಲ್ಲಿ ಕಲೆತಾಗ, ಏಕಲವ್ಯನಿಗೆ ಸಕಲ ಶಸ್ತ್ರಾಸ್ತ್ರಗಳನ್ನು ಉಪದೇಶಿಸಿ, ಅನುಗ್ರಹಿಸಿದನು.

ದ್ರೋಣನ ಶಿಷ್ಯರಲ್ಲಿ ಭೀಮಸೇನ ದುರ್ಯೋಧನರು ಗದಾವಿಶಾರದರಾಗಿ ಪರಸ್ಪರ ಜಿಗೀಷುಗಳಾಗಿ ಬೆಳೆದರು. ಅರ್ಜುನನು ಸಾಟಿಯಿಲ್ಲದ ಧಾನುಷ್ಕನೆನಿಸಿದನು. ಸಕಲಾಸ್ತ್ರ ಶಸ್ತ್ರ ವಿದ್ಯಾವಿಶಾರದನಾಗಿ ಅರ್ಜುನನೂ, ಖಡ್ಗಯುದ್ಧ ನಿಪುಣರಾಗಿ ನಕುಲ ಸಹದೇವರೂ, ರಥಯುದ್ಧ ಪಂಡಿತನಾಗಿ ಪಾಂಡವ ಜ್ಯೇಷ್ಠನೂ ಪ್ರಖ್ಯಾತ ರಾದರು. ಪ್ರಾಣಾಧಿಕನಾದ ಭೀಮಸೇನನೂ ಅತಿರಥನಾದ ಅರ್ಜುನನೂ ಸೇವಿಸು ತ್ತಿರಲು ಅಪ್ರತಿಹತನಾಗಿ ಮೆರೆವ ಧರ್ಮರಾಜನ ವಿದ್ಯಾವೀರ್ಯ ಶೋಭಾವಿಶೇಷ ದಿಂದ ದುರ್ಯೋಧನನ ಮನವು ಅಗ್ನಿ ಕುಂಡವಾಯಿತು ; ಅವನ ಹೃದಯವು ಹಾಲಾ ಹಲವಾಯಿತು.

ಒಂದು ದಿನ ದ್ರೋಣನು ಆ ಬಾಲಕರ ಲಕ್ಷ್ಯಭೇದನ ಶಕ್ತಿಯನ್ನು ಪರೀಕ್ಷಿಸಲು ನಿಶ್ಚಯಿಸಿದನು. ಒಂದು ರೆಂಬೆಗೆ ಪಕ್ಷಿಯಾಕಾರದ ಲಕ್ಷ್ಯವನ್ನು ಕಟ್ಟಿ, ಒಬ್ಬೊಬ್ಬ ನನ್ನಂತೆ ತರುಣರನ್ನು ಕರೆದು, ಅದನ್ನು ಗುರಿಯಿಟ್ಟು ಕೆಡಹುವಂತೆ ಆಜ್ಞಾಪಿಸಿದನು. ಧರ್ಮರಾಜನು ಬಾಣವನ್ನು ಹೂಡಿ ನಿಂತಿರಲು, ದ್ರೋಣನು ಅವನನ್ನು ನೋಡಿ 'ನೋಡುತ್ತಿರುವೆಯಾ ಭಾಸವನ್ನು ?' ಎಂದನು ; 'ನೋಡುವೆ'ನೆಂದ ಧರ್ಮಜ ನನ್ನು 'ನೋಡುತ್ತಿರುವೆಯಾ ಗಿಡವನ್ನು, ನನ್ನನ್ನು' ಎಂದು ಕೇಳಿದನು. ಆಗ ಧರ್ಮರಾಜನು 'ಗಿಡವನ್ನೂ, ನಿಮ್ಮನ್ನೂ, ನನ್ನ ಸೋದರರನ್ನೂ ನೋಡುತ್ತಿರುವೆ' ನೆಂದನು. 'ಸರಿ ! ನೀನು ಗುರಿ ತಪ್ಪುವೆ' ಎಂದು ದ್ರೋಣನು ಎಲ್ಲ ಕುಮಾರರನ್ನು ಇಂತೇ ಪ್ರಶ್ನಿಸಿದನು. ದುರ್ಯೋಧನಾದಿ ತರುಣರೆಲ್ಲರೂ 'ಎಲ್ಲವನ್ನೂ ನೋಡುವೆ' ವೆಂದರು. ಕೊನೆಗೆ ಅರ್ಜುನನ ಸರದಿ ಬಂತು. ದ್ರೋಣನ ಪ್ರಶ್ನೆಗಳಿಗೆ ಅವನು 'ನಾನಿನ್ನೇನನ್ನೂ ನೋಡುತ್ತಿಲ್ಲ. ಭಾಸದ ಕಣ್ಣನ್ನು ಮಾತ್ರ ನೋಡುತ್ತಿರುವೆ' ನೆಂದನು. ಅವನನ್ನು ಮೆಚ್ಚಿ ದ್ರೋಣನು 'ಹೊಡಿ !' ಎಂದು ಅಪ್ಪಣೆಯನ್ನಿತ್ತನು. ಅರ್ಜುನನು ಪಕ್ಷಿಯ ಕಣ್ಣನ್ನು ಕೆಡಹಿ, ಎಲ್ಲರ ಪ್ರಶಂಸೆಗೂ, ದುರ್ಯೋಧನಾದಿಗಳ ಅಸೂಯೆಗೂ ಪಾತ್ರನಾದನು. ದ್ರೋಣನಾಗ ಅರ್ಜುನ ಭೀಮರಿಂದ ತನ್ನ ಕೆಲಸ ವಾಗುವುದೆಂದು ನಿಶ್ಚಯಿಸಿ, ಸಂತುಷ್ಟನಾದನು.

ಒಂದು ದಿನ ಗಂಗೆಯಲ್ಲಿ ಸ್ನಾನಮಾಡುತ್ತಿರುವ ದ್ರೋಣನನ್ನು ಒಂದು ಮೊಸಳೆಯು ಹಿಡಿಯಿತು ; ಸಮರ್ಥನಾದ ಆಚಾರ್ಯನು ಶಿಷ್ಯರನ್ನು ಪರೀಕ್ಷಿಸ ಲೆಣಿಸಿ, ತನ್ನನ್ನು ತಾನು ಬಿಡಿಸಿಕೊಳ್ಳದೆ ಕೂಗಿಕೊಂಡನು. ದುರ್ಯೋಧನಾದಿಗಳು ಸಂಭ್ರಮಕಾತರರಾಗಿ ಓಡುತ್ತಿದ್ದರು. ಆಗ ಅರ್ಜುನನು ಐದು ಬಾಣಗಳಿಂದ ಗ್ರಾಹವನ್ನು ಹೊಡೆದು ತುಂಡರಿಸಿದನು. ಅದಕ್ಕೆ ಮೆಚ್ಚಿ ದ್ರೋಣನು ಅರ್ಜುನನಿಗೆ

ಬ್ರಹ್ಮಶಿರವೆಂಬ ದಿವ್ಯಾಸ್ತ್ರವನ್ನು ಪ್ರಯೋಗೋಪಸಂಹಾರಸಹಿತವಾಗಿ ಅನುಗ್ರಹಿಸಿ ಅದನ್ನು ನಿಷ್ಕಾರಣವಾಗಿ, ಸಾಮಾನ್ಯಜನರ ಮೇಲೆ ಪ್ರಯೋಗಿಸಬೇಡ, ಅದು ಜಗತ್ತನ್ನೇ ಸುಟ್ಟುಬಿಡುವ ಶಕ್ತಿಯುಳ್ಳದ್ದೆಂದು ಎಚ್ಚರಿಸಿದನು. ಅಸ್ತ್ರರಾಜವನ್ನು ಸ್ವೀಕರಿಸಿ, ಅರ್ಜುನನು ದುರ್ನಿರೀಕ್ಷ್ಯ ತೇಜೋ ವಿರಾಜಮಾನನಾದನು.

## ವಿದ್ಯಾ ಪರೀಕ್ಷೆ

ಸಕಲಕಲಾಕುಶಲರಾದ ರಾಜಕುಮಾರರ ವಿದ್ಯಾಪ್ರದರ್ಶನವನ್ನು ಮಾಡಲೆಣಿಸಿ ದ್ರೋಣನು ಧೃತರಾಷ್ಟ್ರ, ಭೀಷ್ಮ, ಬಾಹ್ಲೀಕ, ಸೋಮದತ್ತ, ಕೃಪಾಚಾರ್ಯರ ಅಪ್ಪಣೆಯನ್ನು ಪಡೆದು, ರಂಗಸ್ಥಲವನು ನಿರ್ಮಿಸಿದನು. ರಾಜಾಜ್ಞೆಯಂತೆ ಮಹಾ ರಂಗವು ಸಜ್ಜಿತವಾಯಿತು.

ವಿದುರ, ಕೃಪ, ದ್ರೋಣರ ಪರ್ಯವೇಕ್ಷಣದಲ್ಲಿ ರಂಗವು ನಿರ್ಮಿತವಾಯಿತು. ದೊಡ್ಡ ಬಯಲಿನಲ್ಲಿ ಗಿಡಗಂಟೆಗಳನ್ನು ಕಡಿದು, ನೆಲವನ್ನು ಸಮಮಾಡಿದರು. ಪಟ ಮಂದಿರಗಳನ್ನು, ರಂಗಸಜ್ಜಿಕೆಗಳನ್ನು, ಸ್ತ್ರೀಜನರಿಗಾಗಿ ರಹಸ್ಯವೇದಿಕೆಗಳನ್ನು, ಜನರಿಗಾಗಿ ಮಂಚಗಳನ್ನು ನಿರ್ಮಿಸಿದರು. ಪೂಮಾಲೆಗಳಿಂದ ರಂಗವನ್ನು ಅಲಂಕರಿಸಿ, ತೋರಣಗಳನ್ನೂ ಧ್ವಜಪತಾಕೆಗಳನ್ನೂ ಕಟ್ಟಿದರು.

ಪರೀಕ್ಷಾದಿನವು ಬಂತು. ಭೀಷ್ಮ, ಕೃಪರನ್ನು ಮುಂದೆಮಾಡಿಕೊಂಡು ಸರ್ವ ರಾಜಪುರುಷರು ಯಥಾಯೋಗ್ಯ ದಿವ್ಯಾಸನಗಳಲ್ಲಿ ಮಂಡಿಸಿದರು. ಶ್ರೀ ವ್ಯಾಸನು ವಿದುರಸಹಿತನಾಗಿ ಉನ್ನತಾಸನದಲ್ಲಿ ವಿರಾಜಿಸಿದನು. ಕುಂತಿ ಗಾಂಧಾರ್ಯಾದಿ ರಾಜಸ್ತ್ರೀ ಜನವು, ಜನರ ಕಣ್ಣಿಗೆ ಬೀಳದಂತೆ, ಪ್ರೇಕ್ಷಾಗಾರ ಗವಾಕ್ಷಗಳಲ್ಲಿ ಬಂದು ಕೂತರು. ಪೌರ ಜಾನಪದರೂ ಕಿಕ್ಕಿರಿದು ರಂಗದಲ್ಲಿ ತುಂಬಿದ್ದರು. ರಂಗದ್ವಾರದಲ್ಲಿ ಮೇಳ ತಾಳಗಳು, ಭೇರೀ ಭಾಂಕಾರಗಳು ಮೊಳಗಿದವು. ಮಹಾಸಮುದ್ರವೇ ಉಕ್ಕೇರಿಬಂದಂತೆ ಮೊರೆಯುತ್ತಿರುವ ರಂಗದಲ್ಲಿ ದ್ರೋಣನು ತನ್ನ ಶಿಷ್ಯರೊಡನೆ ಪ್ರವೇಶಿಸಿದ ಕೂಡಲೆ ಸಕಲವೂ ನಿಶ್ಶಬ್ದವಾಯಿತು. ಬಿಳಿಕೂದಲಿನ ವೃದ್ಧಶಿರಸ್ಸು, ಬಿಳಿಯ ಮೀಸೆ ಗಡ್ಡಗಳು, ಬಿಳಿ ಹೂಮಾಲೆ, ಬಿಳಿಯ ವಸ್ತ್ರಗಳು, ಯಜ್ಞೋಪವೀತ ಇವುಗಳಿಂದ ಧಾವಳ್ಯವೇ ಮೂರ್ತಿವೆತ್ತಂತಿದ್ದ ದ್ರೋಣನು, ತನ್ನ ಪುತ್ರ ಅಶ್ವತ್ಥಾಮನಿಂದ ಕೂಡಿ ರಂಗದಲ್ಲಿ ಅಂಗಾರಕಯುಕ್ತನಾದ ಚಂದ್ರನಂತೆ ಮೆರೆದನು. ಅವರ ಹಿಂದೆಯೇ ಬದ್ಧಾಂಗುಲಿತ್ರಾಣರು ಧನುರ್ಬಾಣಧರರು ಆದ ರಾಜಪುತ್ರರು ಧರ್ಮ ಭೀಮ ಅರ್ಜುನ ದುರ್ಯೋಧನಾದಿಗಳನ್ನು ಮುಂದೆ ಮಾಡಿಕೊಂಡು ಪ್ರವೇಶಿಸಿದರು. ರಕ್ತ ಚಂದನ ಪುಷ್ಪ ವಸ್ತ್ರಗಳಿಂದ ಪರಶುರಾಮನನ್ನು ಪೂಜಿಸಿ, ಪ್ರದರ್ಶನವು ಆರಂಭವಾಗಲೆಂದು ದ್ರೋಣನು ಶಂಖವನ್ನೂದಿದನು. ರಾಜಪುತ್ರರು ಅಶ್ವಾರೋಹಣ, ಲಕ್ಷ್ಯಭೇದನ, ಗದಾಯುದ್ಧ, ಅಸ್ತ್ರಲಾಘವ ಮುಂತಾದ ವಿದ್ಯೆಗಳನ್ನು ತಮ್ಮ ಶಕ್ತಿಯಂತೆ ಪ್ರದರ್ಶಿಸಿ, ಪ್ರಜರ ಮೆಚ್ಚುಗೆ ಗಳಿಸಿದರು.

ದ್ರೋಣನು ರಂಗಮಧ್ಯದಲ್ಲಿ ಅರ್ಜುನನನ್ನು ಪ್ರಶಂಸಿಸಿ, ಅವನು ಅಸ್ತ್ರವಿದ್ಯೆಯನ್ನು ಪ್ರದರ್ಶಿಸುವನೆಂದು ಘೋಷಿಸಿದನು. ಅರ್ಜುನನು ನಾನಾ ವಿಚಿತ್ರಾಸ್ತ್ರವಿದ್ಯೆಗಳನ್ನು ತೋರಿಸಿದನು. ಕನಕಕವಚ ತೂಣೀರ ಧನುರ್ಧಾರಿಯಾಗಿದ್ದ ಅರ್ಜುನನು ಅಪೂರ್ವವಾದ ಸೂರ್ಯಮಂಡಲ, ತಟಿಲ್ಲತಾ, ಶಕ್ರಧನುಗಳನ್ನು ಹೊಂದಿದ ಸಂಧ್ಯಾಭ್ರದಂತೆ ವಿರಾಜಿಸಿದನು. ಹಿರಿಯರಿಗೆ ವಿನಯದಿಂದ ವಂದಿಸಿ, ವಿವಿಧ ಚಾತುರ್ಯಗಳನ್ನು ತೋರಿದ ಅರ್ಜುನನನ್ನು ನೋಡಿ ಕುಂತಿಗೆ ಆನಂದವು ಉಕ್ಕೇರಿ ಕಣ್ಣಿನ ತಣ್ಣೀರಾಗಿ ಹರಿಯಿತು. ವಿದುರನಿಂದ ವಿಜಯನ ಚಾತುರ್ಯವನ್ನು ಕೇಳಿ ತಿಳಿಯುತ್ತಿದ್ದ ಧೃತರಾಷ್ಟ್ರನಿಗೂ ಆನಂದವಾಗಿ 'ಆಹಾ! ಧನ್ಯನಾದೆ! ಪಾಂಡವ ಕುಮಾರರಿಂದ ನನ್ನ ವಂಶವೇ ಬೆಳಗಿತು!' ಎಂದುಸುರಿದನು. ಅರ್ಜುನನು ಆಗ್ನೇಯಾಸ್ತ್ರದಿಂದ ವಹ್ನಿಯನ್ನು ಸೃಜಿಸಿ, ವಾರುಣಾಸ್ತ್ರದ ನೀರಿನಿಂದ ಅದನ್ನು ಆರಿಸಿದನು. ಪರ್ಜನ್ಯಾಸ್ತ್ರದ ಮೇಘಗಳನ್ನು ವಾಯವ್ಯಾಸ್ತ್ರದಿಂದ ಚದರಿಸಿದನು. ಭೌಮಾಸ್ತ್ರದಿಂದ ಭೂಮಿಯನ್ನು ಹೊಕ್ಕು, ಪರ್ವತಾಸ್ತ್ರದಿಂದ ಗಿರಿಯಂತೆ ಬೆಳೆದು ನಿಂತು, ಅಂತರ್ಧಾನಾಸ್ತ್ರದಿಂದ ಮರೆಯಾಗಿ, ಒಂದು ಕ್ಷಣದಿ ರಥಮಧ್ಯದಲ್ಲಿ ಕಾಣುತ್ತಾ, ಮರುಕ್ಷಣದಲ್ಲಿ ಭೂಮಿಯ ಮೇಲೆ ನಿಂತಿರುತ್ತಾ, ವಿವಿಧ ವಿದ್ಯಾಪ್ರದರ್ಶನವನ್ನು ಮಾಡಿದ ಫಲ್ಗುನನನ್ನು ಸರ್ವಜನರು ಕರತಾಡನಗಳಿಂದ ಸಂಭಾವಿಸಿ ಜಯಜಯಘೋಷವನ್ನು ಮಾಡಿದರು.

ಆಗ ದ್ವಾರದೇಶದಲ್ಲಿ ವಜ್ರಾಘಾತ ಸಮವಾದ ಭುಜಸ್ಫಾಲ ಶಬ್ದವು ಕೇಳಿಬಂತು. ಸರ್ವರ ನೇತ್ರಗಳೂ ಅತ್ತ ಹೊರಳಿದವು. ಆಜಾನುಬಾಹುವು, ಅತಿಸುಂದರನು, ಭಾಸ್ಕರಸಮ ಪ್ರಕಾಶನು, ಸಹಜ ಕವಚಕುಂಡಲ ವಿಭ್ರಾಜಮಾನನು, ಪರಶುರಾಮನಿಂದ ಮಹಾಸ್ತ್ರ ಸಂಪಾದಕನು ಆದ ಕರ್ಣನು ಅಲ್ಲಿ ನಿಂತು, ತಾನು ಅರ್ಜುನನನ್ನು ಮೀರಿಸುವ ವಿದ್ಯೆಯನ್ನು ತೋರುವೆನೆಂದನು. ಅವನ ಮಾತಿನಿಂದ ಗೆದ್ದವನಂತೆ ಎದ್ದು ನಿಂತ ದುರ್ಯೋಧನನನ್ನೂ ಅವನ ತಮ್ಮಂದಿರನ್ನೂ ಭೀಮನು ಗದಾಮಾತ್ರ ಸಹಾಯನಾಗಿ ತಡೆದು ನಿಲ್ಲಿಸಿದನು. ಸಭಿಕರ ಅಪ್ಪಣೆಯನ್ನು ಪಡೆದು ಕರ್ಣನು ರಂಗವನ್ನು ಪ್ರವೇಶಿಸಿ, ಅರ್ಜುನನು ತೋರಿದ ಎಲ್ಲಾ ವಿದ್ಯೆಗಳನ್ನೂ ಇನ್ನೂ ಚೆನ್ನಾಗಿಯೇ ಪ್ರದರ್ಶಿಸಿದನು. ಪರಶುರಾಮದೇವನ ಅನುಗ್ರಹದಿಂದ ಬಂದ ಚಾತುರ್ಯವು ಕರ್ಣನನ್ನು ಅರ್ಜುನಾಧಿಕನೆಂಬಂತೆ ಮಾಡಿತು. ಅದನ್ನು ಕಂಡು ಕುಂತಿಯು ಆನಂದದಿಂದಲೂ ಕರ್ಣನು ತನ್ನ ಮಗನೇ ಎಂದು ತಿಳಿದೂ ಹೇಳಲಾರದ ಚಿಂತೆಯಿಂದಲೂ ಹೊಯ್ದಾಡುವ ಮನದಿಂದ ಸುಮ್ಮನಿದ್ದಳು. ದುರ್ಯೋಧನನಿಗೆ ಕರ್ಣನಲ್ಲಿ ಪ್ರೀತಿಯು ಹುಟ್ಟಿತು. ಅವನು ಸೂರ್ಯಸುತನನ್ನಪ್ಪಿ, ತನ್ನ ಕುರುರಾಜ್ಯವನ್ನೇ ಅವನಿಗೆ ಅರ್ಪಿಸಿ, ಪ್ರಶಂಸಿದನು; ಶತ್ರುಗಳ ಶಿರಸ್ಸಿನಲ್ಲಿ ಕಾಲಿಟ್ಟು ತನ್ನೊಡಗೂಡಿ ಒಡಹುಟ್ಟಿದವನಂತೆ ಸುಖವಾಗಿರೆಂದು ಬೇಡಿಕೊಂಡನು.

ಅರ್ಜುನನದನ್ನು ಸಹಿಸದೆ 'ಕರ್ಣ! ಅನಾಹೂತನಾಗಿ ಬಂದ ನಿನಗೆ ಪುಣ್ಯಲೋಕಗಳುಂಟೆ?' ಎಂದಾಕ್ಷೇಪಿಸಲು, ಕರ್ಣನು 'ರಂಗಸ್ಥಲವಿದು! ಇಲ್ಲಿ ಸರ್ವರಿಗೂ

ಪ್ರದರ್ಶನಾಧಿಕಾರವಿದೆ. ದರ್ಪದಿಂದ ಕೊಚ್ಚಿಕೊಳ್ಳಬೇಡ! ಶರಗಳಿಂದ ಮಾತಾಡು! ಬಾಯಿಂದ ಅಲ್ಲ. ನಿನ್ನ ಗುರುವಿನ ಸಮಕ್ಷದಲ್ಲೇ ನಿನ್ನ ತಲೆಯನ್ನು ಉರುಳಿಸಿ ಬಿಡುವೆನು ನೋಡು!' ಎಂದನು. ದುರ್ಯೋಧನನು ಆ ಮಾತಿಗೆ ಮೆಚ್ಚಿ ತನ್ನ ಸೋದರರಿಂದ ಕೂಡಿ ಕರ್ಣನ ಹಿಂದೆ ನಿಂತನು. ಕರ್ಣನೊಡನೆ ಅರ್ಜುನನೂ ನಿಂತನು. ಇಂದ್ರನು ದೇವತೆಗಳಿಂದ ಕೂಡಿ ಆಕಾಶದಲ್ಲಿ ವಿಮಾನಸ್ಥನಾಗಿ ನಿಂತನು. ಸೂರ್ಯಮಂಡಲವು ಮೇಘಗಳ ಮರೆಯಲ್ಲಡಗಿತು; ಆದರೂ ಕರ್ಣನಮೇಲೆ ಬಿಸಿಲು ಬಿದ್ದೇ ಇರುತ್ತಿತ್ತು. ಕರ್ಣಾರ್ಜುನರ ಯುದ್ಧಕಾಲದಲ್ಲಿ ರಂಗಸ್ಥಲದ ಜನರೇ ಅಲ್ಲದೆ, ಗಗನದಲ್ಲಿ ನೆರೆದ ದೇವತೆಗಳೂ ಇಂದ್ರ ಸೂರ್ಯರ ಪಕ್ಷಗಳನ್ನು ವಹಿಸಿ ಎರಡು ಗುಂಪಾಗಿ ಸ್ಪರ್ಧಿಸುತ್ತಾ ಮಾತಾಡಿದರು. ಕುಂತಿಗೆ ಇಬ್ಬರೂ ಮಕ್ಕಳಾದುದರಿಂದ ಅವರ ಯುದ್ಧವನ್ನು ನೋಡಲಾರದೆ ಅವಳು ಮೂರ್ಛೆಹೋದಳು. ವಿದುರನು ಅವಳಿಗೆ ಉಪಚರಿಸಿ ಸಮಾಧಾನಪಡಿಸಿದನು.

ಆಗ ಕೃಪನು ಕರ್ಣನನ್ನು ನೋಡಿ 'ಕರ್ಣ! ಈಗ ಕುಂತಿ-ಪಾಂಡು-ಸುತ ಮಧ್ಯಮನು, ಕೌರವ ಕುಲಾಲಂಕಾರನು ಆದ ಅರ್ಜುನನು ನಿನ್ನೊಡನೆ ದ್ವಂದ್ವ ಯುದ್ಧ ಮಾಡಲಿರುವನು. ಆದರೆ ನೀನಾರ ಮಗನು? ನಿನ್ನ ಅಭಿಜಾತ್ಯ ಶೀಲಾದಿ ಗಳನ್ನರಿತು, ಆಮೇಲೆ ಪಾರ್ಥನು ಕಾದುವನು' ಎಂದನು. ಆ ಮಾತನ್ನಾಲಿಸಿ ಕರ್ಣನ ವದನವು ಬಾಡಿತು. ಅವನು ತಲೆ ತಗ್ಗಿಸಿ ನಿಂತನು. ವರ್ಷಾಕಾಲದಲ್ಲಿ ಕ್ಲಿನ್ನವಾದ ಕಮಲದಂತೆ ಕಳಾರಹಿತವಾದ ವದನದಿಂದ ನೊಂದ ಕರ್ಣನನ್ನು ವಹಿಸಿ ಕೊಂಡು, ದುರ್ಯೋಧನನು 'ಆಚಾರ್ಯ! ಅಭಿಜಾತ್ಯವು ಮೂರು ವಿಧವಾಗಿದೆ. ಕುಲೀನತೆ, ಶೂರತ್ವ, ಸೇನಾಚಾಲನ ಸಾಮರ್ಥ್ಯಗಳಿಂದ ಸರ್ವವಿಧವಾಗಿ ಶ್ರೇಷ್ಠನಾದ ಕರ್ಣನಿಗೆ ಅಭಿಜಾತ್ಯವಿಲ್ಲವೇ? ಇರಲಿ! ರಾಜನಲ್ಲದವನಿಂದ ಪಾರ್ಥನು ಯುದ್ಧ ವನ್ನು ಮಾಡುವುದಿಲ್ಲವೆಂದರೆ, ಈಗಲೆ ನಾನು ಮಿತ್ರನಾದ ಕರ್ಣನಿಗೆ ಅಂಗರಾಜ್ಯ ವನ್ನಿತ್ತು ಪಟ್ಟಗಟ್ಟುವೆನು' ಎಂದು ಹೇಳಿ ತತ್‌ಕ್ಷಣವೇ ಕರ್ಣನಿಗೆ ಅಂಗರಾಜ್ಯ ಸಿಂಹಾಸನವನ್ನಿತ್ತು ಪಟ್ಟಾಭಿಷೇಕ ಮಾಡಿದನು. ಅತ್ಯಂತ ಕೃತಜ್ಞನಾಗಿ 'ಏನು ಮಾಡಲು ನಿನ್ನ ಸೇವೆಯಾಗುವುದು' ಎಂದ ಕರ್ಣನನ್ನು 'ನಿನ್ನ ಸ್ನೇಹಭಾಗ್ಯವೇ ನನಗೆ ಸಾಕೆಂದು' ಸಂತೈಸಿದನು. ಆ ಸಮಯದಲ್ಲಿ ರಂಗದಲ್ಲಿ ಬಂದು ನಿಂತ ಅತಿರಥ ನಿಗೆ ಕರ್ಣನು ಭಕ್ತಿಯಿಂದ ವಂದಿಸಿದನು. ಅದನ್ನು ಕಂಡು ಭೀಮಸೇನನು ನಗುತ್ತಾ, 'ಸೂತಪುತ್ರ! ನಿನಗೆ ಧನುರ್ಬಾಣಗಳೇಕೆ? ಈ ಚಾಟಿಯೇ ಸಾಕು' ಎಂದು ಚಾಟಿ ಯನ್ನು ಕೊಟ್ಟು 'ನಿನಗೆ ಅಂಗರಾಜ್ಯವೇಕೆ? ಅರ್ಜುನನೊಡನೆ ಯುದ್ಧವನ್ನು ಮಾಡುವ ಹಠವೇಕೆ?' ಎಂದು ನಿಂದಿಸಿದನು. ಕರ್ಣನು ತಲೆ ಎತ್ತಿ ಸೂರ್ಯಮಂಡಲ ವನ್ನು ನೋಡಿ ಮತ್ತೆ ತಲೆ ತಗ್ಗಿಸಿದನು. ದುರ್ಯೋಧನನು ಸಿಟ್ಟಿಗೆದ್ದು, ಭೀಮ ನನ್ನು ಗದಾಯುದ್ಧಕ್ಕಾಗಿ ಆಹ್ವಾನಿಸಿದನು.

ಭೀಮ ದುರ್ಯೋಧನರ ಗದಾಯುದ್ಧವು ಭಯಂಕರವಾಯಿತು. ಅವರ ಪಕ್ಷವನ್ನು ವಹಿಸಿ ಜಗತ್ತೇ ಇಬ್ಭಾಗವಾಯಿತು. ದೇವತೆಗಳು ದೇವಾನುಕೂಲ ಸುಜನರು ಭೀಮನಿಗೆ ಜಯವನ್ನು ಕೋರಿದರು. ರಾಕ್ಷಸರು, ಮಿಕ್ಕ ಕುಜನರು ದುರ್ಯೋಧನನ ಜಯವನ್ನಾಶಿಸಿದರು. ಅವರ ಕೇಕೆಗಳಿಂದ ನಭೋಮಂಡಲವು ಪ್ರತಿಧ್ವನಿಸಿತು. ಭೀಮ ದುರ್ಯೋಧನರ ಗದಾಘಾತ ಶಬ್ದವು ಸಿಡಿಲಿನಂತೆ ಭೂ ನಭೋಂತರವನ್ನು ತುಂಬಿದಾಗ, ಪ್ರಳಯವೇ ಆಗುವುದೆಂದು ಹೆದರಿ, ದ್ರೋಣನು ತನ್ನ ಮಗನನ್ನು ಕಳಿಸಿ ಅವರ ಯುದ್ಧವನ್ನು ನಿಲ್ಲಿಸಿದನು.

ದುರ್ಯೋಧನನು 'ವೃಕೋದರ! ನೀವು ಹುಟ್ಟಿದ ವಿಷಯ ಮರೆತು, ಇನ್ನೊಬ್ಬರ ಕುಲವನ್ನು ಹೀಯಾಳಿಸಬೇಡ! ವ್ಯಾಘ್ರಿಯು ಗರ್ಭದಲ್ಲಿ ಜಿಂಕೆ ಮರಿ ಹುಟ್ಟುವುದೇ? ನೋಡು! ಸಹಜ ಕವಚ ಕುಂಡಲನು, ಮಹಾಸ್ತ್ರವೇತ್ತನು, ಸೂರ್ಯ ಪ್ರಕಾಶನು ಆದ ಕರ್ಣನು ಸೂತನಾಗಬಲ್ಲನೇ? ಇವನು ಅಂಗರಾಜ್ಯಕ್ಕೇ ಏತಕ್ಕೆ, ಸಮಸ್ತ ಭೂಮಿಗೇ ರಾಜನಾಗಲು ಅರ್ಹನಾಗಿರುವನು. ನಾನು ಮಾಡಿದ ಅಂಗ ರಾಜ್ಯ ದಾನವನ್ನು ಸಹಿಸದವನು ನಿಲ್ಲಲಿ ನನ್ನ ಮುಂದೆ, ಅವನ ತಲೆಯನ್ನು ಕೆಡಹಿ ಚೆಂಡಾಡುವೆ'ನೆಂದನು. ಅದನ್ನು ಕೇಳಿ ವೃಕೋದರನು ಸಿಂಹದಂತೆ ಗರ್ಜಿಸಿ, ಗದೆಯನ್ನೆತ್ತಿದನು. ರಂಗಾಕಾರದಲ್ಲಿ ಹಾಹಾಕಾರವು ತುಂಬಿತು. ದ್ರೋಣನು ಭೀಮ ದುರ್ಯೋಧನರನ್ನು ದೂರ ಮಾಡಿದನು. ಅಷ್ಟರಲ್ಲಿ ಸೂರ್ಯನು ಅಸ್ತಂಗತನಾದನು. ದುರ್ಯೋಧನನು ಕರ್ಣನನ್ನು ಕೈಯಿಂದ ಹಿಡಿದು ಕರೆದುಕೊಂಡು ತನ್ನ ಮಂದಿರವನ್ನು ಹೊಕ್ಕನು. ಅರ್ಜುನನ ಪ್ರತಿವೀರನು ತನಗೆ ಸಿಕ್ಕಿದನೆಂದು ಹಿಗ್ಗಿ, ತಾನು ವೃಕೋದರನನ್ನು ಸಂಹರಿಸಿ, ರಾಜ್ಯವನ್ನು ನಿಷ್ಕಂಟಕವನ್ನಾಗಿಸಿ ಆಳುವೆನೆಂದು ಚಿಂತಿಸಿದನು. ಇಲ್ಲಿ ಭೀಮಸೇನನು ಅರ್ಜುನನಿಂದ ಕರ್ಣನ ಸಂಹಾರವೂ, ನನ್ನಿಂದ ದುರ್ಯೋಧನಾದಿ ದುರ್ಜನ ವಧವೂ ಆಗಿ, ಶ್ರೀಕೃಷ್ಣ ಸೇವೆ ಪೂರ್ಣವಾಗುವುದೆಂದು ನೆಮ್ಮದಿಯಿಂದಿದ್ದನು. ಪಾಪ! ಕರ್ಣನು ನಿಜವಾಗಿ ಕ್ಷತ್ರಿಯನೇ ಆದರೂ, ಕ್ಷತ್ರಿಯ ಸಂಸ್ಕಾರವಿಲ್ಲದೆ ಸೂತಕುಲ ಸಂಸ್ಕಾರವಾದುದರಿಂದ ಅವನು ಸೂತನೆಂದೇ ಪ್ರಖ್ಯಾತನಾದನು. ಹಿಂದಿನ ಜನ್ಮದಲ್ಲಿ ಸುಗ್ರೀವನಾಗಿ ಮಾಡಿದ ಸೇವೆ ಹೆಚ್ಚಾಗಿ, ಅಧಿಕ ಪುಣ್ಯವನ್ನು ಕಳೆಯಲು ಸೂರ್ಯನನ್ನು ವಿಧಾತನು ಕರ್ಣನನ್ನಾಗಿಸಿ, ವಾಲಿಗೆ ಸಾಧನವನ್ನು ಪೂರ್ಣಮಾಡಲು ಅರ್ಜುನನನ್ನಾಗಿಸಿ, ಸಮನೆನಿಸಿದನು. ವಾಯು ಸುತನನ್ನಾಶ್ರಯಿಸಿ ಸುಗ್ರೀವನು ಶ್ರೇಯಃಪಾಪ್ತಿ ಪಡೆದರೆ, ಅದೇ ವಾಯುಸುತನ ಬೆನ್ನಲ್ಲಿ ಜನಿಸಿ ಅರ್ಜುನನು ಶ್ರೇಯಸ್ಸನ್ನು ಹೊಂದಿದನು. ಮುಖ್ಯಪ್ರಾಣನನ್ನು ನಂಬಿದವರಿಗೇ ಅಲ್ಲವೆ ಭಗವತ್ಪ್ರಸಾದ!

ಕರ್ಣನು ಪರಶುರಾಮನನ್ನು ವಿದ್ಯಾಭ್ಯಾಸಕ್ಕಾಗಿ ಹೊಂದಿ ತಾನು ಬ್ರಾಹ್ಮಣ, ಭೃಗುಕುಲದವನು ಎಂದು ಹೇಳಿಕೊಂಡು ಸೇವಿಸುತ್ತಿದ್ದನು. ಅವನ ಆಶ್ರಯ ಬಲವಿಲ್ಲದಿರೆ ದುರ್ಯೋಧನನು ಪಾಂಡವರನ್ನು ಧಿಕ್ಕರಿಸಿ ಕೆಡಲಾರನೆಂದು ಬಗೆದು,

ಭಗವಂತನು ಕರ್ಣನನ್ನು ಬಲವೀರ್ಯಯುತನಾಗಿ ಮಾಡಲು ನಿಶ್ಚಯಿಸಿ, ಶಿಷ್ಯನಾಗಿ ಸ್ವೀಕರಿಸಿದನು. ವಿನಯಭಯಭಕ್ತಿಯುತನಾದ ಕರ್ಣನು ನಾಲ್ಕು ವರ್ಷ ರಾಮ ಸೇವೆಯನ್ನು ಮಾಡಿ ಸಕಲಾಸ್ತ್ರಶಸ್ತ್ರಗಳನ್ನೂ ಭಗವತ್‌ಜ್ಞಾನವನ್ನೂ ಸಂಪಾದಿಸಿ, ಅತುಲವೀರನೆನಿಸಿದನು. ಒಂದು ದಿನ ಕರ್ಣನ ತೊಡೆಯಲ್ಲಿ ತಲೆಯಿಟ್ಟು ಸತ್ಯಸಂಕಲ್ಪ ನಾದ ರಾಮನು ನಿದ್ರಿಸುತ್ತಿರಲು, ಇಂದ್ರನು ಸುರಕಾರ್ಯಾರ್ಥವಾಗಿ ಹೇತಿ ಎಂಬ ಅಸುರಸುಜೀವನು ಕೀಟವಾಗಿರಲು, ಅವನನ್ನು ಆವೇಶಿಸಿ, ಕರ್ಣನ ತೊಡೆ ಯನ್ನು ಕೊರೆದನು. ರಕ್ತಸ್ಪರ್ಶವಾಗಲು ಶ್ರೀಶನು ಎಚ್ಚೆತ್ತನು—'ನೀನು ಬ್ರಾಹ್ಮಣ ನಲ್ಲ! ಇಂತು ರಕ್ತವು ಹರಿದರೂ ನನ್ನನ್ನು ಎಬ್ಬಿಸದೆ ಧೈರ್ಯದಿಂದ ಸಹಿಸುವ ಸಾಹಸಿ ನೀನಾರು?' ಎಂದನು. ಕರ್ಣನು ತಲೆಬಾಗಿ 'ನಾನು ಸೂತಸುತ'ನೆಂದು ವಿಜ್ಞಾಪಿಸಿ, ಶಿಷ್ಯನು ಮಗನ ಸಮಾನ ಎಂದಮೇಲೆ ತಾನು ಭಾರ್ಗವಕುಲಜ ವಿಪ್ರ ನೆಂದು ಹೇಳಿದ್ದು ಸತ್ಯವೇ ಎಂದನು. ರಾಮನ ಕಟಾಕ್ಷದಿಂದಲೇ ಕೀಟಜನ್ಮದಿಂದ ಮುಕ್ತನಾಗಿ, ಹೇತಿಯು ಸ್ವರ್ಗವನ್ನು ಸೇರಿದನು. ರಾಮನು ಕರ್ಣನನ್ನು ನೋಡಿ ಸಿಟ್ಟಾದವನಂತೆ ಇಂತೆಂದನು—'ಕರ್ಣ! ಇನ್ನು ನನ್ನಲ್ಲಿರುವ ಯೋಗ್ಯತೆ ನಿನಗಿಲ್ಲ, ಹೋಗು. ನಿನ್ನ ಭಕ್ತಿಗೆ ಮೆಚ್ಚಿರುವೆ. ನಿನಗಾಗಿ ಸ್ಪರ್ಧಿಸದೆ ಹೋರಾಡುವಾಗ ನಿನಗೆ ಜಯವಾಗಲಿ! ಆದರೆ ಅಸೂಯೆಯಿಂದ ಕಾದಾಡುವಾಗ ನಿನಗೆ ನಾನು ಕಲಿಸಿದ ಅಸ್ತ್ರಗಳು ಮರೆತುಹೋಗಲಿ!' ಆ ಮಾತಿಗೆ ನೊಂದು, ಕರ್ಣನು ಅಲ್ಲಿಂದ ಹೊರಟು, ದುರ್ಯೋಧನನ ಪುರವನ್ನು ಸೇರಿದನು.

ಮತ್ತೊಂದು ಸಲ ಕರ್ಣನು ದೈವಪ್ರೇರಿತನಾಗಿ ಒಬ್ಬ ವಿಪ್ರನ ಕರುವನ್ನು ತಿಳಿಯದೆ ಬಾಣಪ್ರಯೋಗದಿಂದ ಕೊಂದಿದ್ದನು. ಆ ವಿಪ್ರನು 'ಕರ್ಣ! ನಿನ್ನ ರಥವು ಭೂಮಿಯಲ್ಲಿ ಹೂತುಹೋದಾಗ ನಿನಗೆ ಮರಣವು ಬಂದಿದೆ ಎಂದು ತಿಳಿ!' ಎಂದು ಶಾಪವಿತ್ತನು. ಇಂತು ಕರ್ಣನು ದೈವವಿಲಾಸದಿಂದ ಅಪ್ರತಿಮವೀರನಾಗಿದ್ದೂ ನಿರ್ವಿಣ್ಣನಾಗಿಯೇ ಇರುತ್ತಿದ್ದನು.

ಆಗ ದ್ವಾರಕಿಯನ್ನು ನಿರ್ಮಿಸಿ ಶ್ರೀಕೃಷ್ಣನು ಅಲ್ಲಿ ವಾಸಿಸುತ್ತಿದ್ದನು. ಜರಾ ಸಂಧನನ್ನು ಗೆದ್ದು, ದುಂಧುಮೈತ್ಯನ ಅಂಶದಿಂದ ಹುಟ್ಟಿದ ಸೃಗಾಲನನ್ನೂ ವೇನನಾದ ಪೌಂಡ್ರಕನನ್ನೂ ಕೊಂದು, ಕಾಲಯವನನನ್ನು ತನ್ನ ಮುಚುಕುಂದನೆಂಬ ಭಕ್ತನಲ್ಲಿ ನಿಂತು ಸಂಹರಿಸಿ, ಅಪ್ರತಿಮವೈಭವನಾಗಿ, ರುಕ್ಮಿಣಿಯನ್ನು ಮದುವೆಯಾಗಿದ್ದನು. ಅವನ ಮಹಿಮೆಯನ್ನರಿಯಲು ಭೀಮಸೇನನೊಬ್ಬನೇ ಸಮರ್ಥನಾಗಿ ಅವಿಚ್ಛಿನ್ನ ಭಕ್ತನೆನಿಸಿದನು. ದೇವತೆಗಳು ಕೂಡ ಕೆಲಸಲ ಶ್ರೀಕೃಷ್ಣನನ್ನು ತಮ್ಮಂತೆ ಮನುಜ ನೆಂದು ತಿಳಿದು ನಗೆಯಾಡಿ ಅವಮಾನಿಸಿ, ಅಪರಾಧ ಮಾಡಿದ್ದೂ ಉಂಟು. ದೇವಕೀ ವಸುದೇವರು ಅವನನ್ನು ಮಗನೆಂದು ತಿಳಿದರು. ಬಲರಾಮನು ಸ್ಯಮಂತಕಮಣಿ ಗಾಗಿ ಕೃಷ್ಣವಿರೋಧಿಯಾದನು. ವಿಪ್ರಶಿಶುವನ್ನು ತಂದುಕೊಡುವೆನೆಂದ ಅರ್ಜುನನ ಬಾಯಲ್ಲಿ ಕೃಷ್ಣನು ಕೆಲಸಕ್ಕೆಬಾರದ ಸ್ತ್ರೀಲೋಲನಾಗಿದ್ದನು. ಗೋಪಾಲತರುಣಿ

*

ಯರು ಅವನು ತಮ್ಮ ಸೌಂದರ್ಯಕ್ಕೆ ಮಾರುಹೋಗಿರುವನೆಂದು ತಿಳಿದರು. ಅರ್ಜುನನು ಸುಭದ್ರೆಯನ್ನು ತರುವಾಗ, ಅದು ಭಗವಂತನಿಗೆ ಅಭಿಮತವೆಂದು ಅರಿತೂ, ಪ್ರದ್ಯುಮ್ನ, ಸಾಂಬ, ಅನಿರುದ್ಧ, ಉದ್ಧವಾದಿ ಯದುವೀರರು ಅರ್ಜುನ ನೊಡನೆ ಕಾದು, ಕೃಷ್ಣವಿರೋಧವನ್ನು ಮಾಡಿದರು. ಸಾತ್ಯಕಿಯೂ ಕೃಷ್ಣನನ್ನು ಅರ್ಜುನನಿಗೆ ಸಮನೆಂದು ತಿಳಿದಿದ್ದನು. ನಕುಲನು ವಿಜಯಯಾತ್ರೆಯಲ್ಲಿ ಕೃಷ್ಣನಿಗೆ ಕಪ್ಪವನ್ನು ಕೊಡು ಎಂದಾಜ್ಞಾಪಿಸಿದನು. ಸಹದೇವನು ಯದುಕುಲ ನಾಶವನ್ನು ಕೇಳಿ, ಕೃಷ್ಣನನ್ನು ಮನುಜನೆಂದು ಅಪಹಾಸ್ಯಮಾಡಿದನು. ಭೀಷ್ಮನು ಭಗವಂತ ನಾದ ಪರಶುರಾಮನೊಡನೆ ಕಾದಾಡಿದನು. ದ್ರೋಣ, ಕರ್ಣ, ದ್ರೌಣಿ, ಕೃಪರು ಕೃಷ್ಣನನ್ನು ಕೊಲ್ಲಲು ಹವಣಿಸಿದರು. ಇಂತು ದೇವಾಂಶರೇ ಶ್ರೀಶನನ್ನು ಅರಿಯದೆ ಹೋದರೆಂದಮೇಲೆ, ದೈತ್ಯರಾದ ದುರ್ಯೋಧನಾದಿ ದುಷ್ಟರಿಗೆ ನಮ್ಮ ಸ್ವಾಮಿಯ ಮಹಿಮಾಜ್ಞಾನವಾಗುವುದೇ ? ಆದರೆ ಮುಖ್ಯಪ್ರಾಣಾವತಾರನಾದ ಭೀಮಸೇನನು ಅಚ್ಛಿನ್ನ ವಿಷ್ಣುಭಕ್ತನು, ನಿರಂತರ ಭಗವದ್ಧರ್ಮ ಪರಾಯಣನು, ಮಹಾಜ್ಞಾನಿಯು ಆಗಿ ಶ್ರೀಕೃಷ್ಣನನ್ನು ಸೇವಿಸಿ ಸಂತೋಷಪಡಿಸಿದನು.

ಭೀಮಸೇನನು ಅಸ್ತ್ರಗಳನ್ನು ಸ್ವತಃ ಬಲ್ಲವನಾದುದರಿಂದ ದ್ರೋಣಾಚಾರ್ಯ ರಲ್ಲಿ ಲಕ್ಷ್ಯಭೇದಾದಿ ವಿದ್ಯೆಗಳನ್ನು ಕಲಿಯಲು ಇಚ್ಛಿಸಲಿಲ್ಲ. ಅಸ್ತ್ರದೇವತೆಗಳಿಗೆ ಆಜ್ಞಾಪಿಸುವ ಮಹಾಸಾಮರ್ಥ್ಯವಿದ್ದುದರಿಂದ ಪ್ರಾರ್ಥಿಸಲಿಲ್ಲ. ಅಶ್ವತ್ಥಾಮ, ಅಲಂಬುಸ ಇವರೀರ್ವರನ್ನು ಬಿಟ್ಟು, ಇನ್ನೊಬ್ಬರಮೇಲೆ ಅಸ್ತ್ರಯುದ್ಧ ಮಾಡಲಿಲ್ಲ. ಅವರಲ್ಲಿ ಅಸ್ತ್ರ ಪ್ರಯೋಗವನ್ನು ಮಾಡಿದುದೂ ಭಗವದಾಜ್ಞೆಯಿಂದಲೇ. ಭೀಮನು ಕಾಮ್ಯಕರ್ಮವನ್ನು ಮಾಡಲಿಲ್ಲ. ಭಗವಂತನನ್ನು ಕ್ಷಣವಾದರೂ ಮರೆಯಲಿಲ್ಲ. ಶ್ರೀಕೃಷ್ಣನಲ್ಲದೆ ಮತ್ತೊಬ್ಬ ದೇವತೆಯನ್ನು ಭಜಿಸಲಿಲ್ಲ; ಅವನಿಗೆ ಕಪಟವಿಲ್ಲ; ಅವೈಷ್ಣವರಲ್ಲಿ ಸ್ನೇಹವಿಲ್ಲ; ವೈಷ್ಣವರಲ್ಲಿ ದ್ವೇಷವೂ ಇಲ್ಲ; ತನ್ನ ಪರೋಕ್ಷದಲ್ಲಿ ಹರಿನಿಂದೆ ಮಾಡುವವರ ನಾಲಿಗೆ ಸೀಳಿಬಿಡುವುದಾಗಿ ಭೀಮನು ಪ್ರತಿಜ್ಞೆಮಾಡಿ, ಅದರಂತೆಯೇ ನಡೆದನು. ವಿದ್ಯೆಯನ್ನು ಮಾರಿ ಜೀವಿಸಲಿಲ್ಲ (ನಹುಷ-ಅಜಗರ ಪ್ರಶ್ನೆಗಳಿಗೂ ಯಮ—ಪಕ್ಷಿ ಪ್ರಶ್ನೆಗಳಿಗೂ ಉತ್ತರವನ್ನು ಹೇಳಿ, ಬದುಕಲು ಕೋರಲಿಲ್ಲ). ಸ್ವಭಾವದಿಂದಲೇ ಬಲ, ವೀರ್ಯ, ಜ್ಞಾನ, ವಿರಾಗಪೂರ್ಣನಾದ ಭೀಮಸೇನನು ಶ್ರೀಕೃಷ್ಣನಿಗೆ ಅತ್ಯಂತ ಪ್ರೀತಿಪಾತ್ರನಾಗಿದ್ದನು.

## ಗುರುದಕ್ಷಿಣೆ

ವಿದ್ಯಾಚತುರರಾದ ಕುರುಕುಮಾರರನ್ನು ನೋಡಿ, ದ್ರೋಣನು 'ಗುರು- ದಕ್ಷಿಣೆಯನ್ನು ಅರ್ಪಿಸುವ ಸಮಯವಾಗಿದೆ. ನನಗೆ ಬೇಕಾದ ದಕ್ಷಿಣೆ ಎಂದರೆ, ದ್ರುಪದ ನನ್ನು ಯುದ್ಧದಲ್ಲಿ ಸೋಲಿಸಿ, ಹಿಡಿದು ತನ್ನಿ' ಎಂದನು. ಕುರುವೀರರು ದ್ರೋಣ ನೊಡನೆ ಪಾಂಚಾಲಪುರಿಯನ್ನು ಸೇರಿದರು. ಭೀಮನು ಗುರುವನ್ನು ನೋಡಿ

'ಆಚಾರ್ಯ ! ದುರ್ಯೋಧನಾದಿಗಳು ಹೋಗಿ, ಪರಾಕ್ರಮಿಸಲಿ. ಅವರು ದ್ರುಪದ ನಿಗೆ ಸೋತುಬರಲಿ ! ಅವರ ದರ್ಪವು ಹಾಗಾದರೆ ಮುರಿದೀತು ! ಆಮೇಲೆ ನಾವು ನಿಮ್ಮ ಕಾರ್ಯವನ್ನು ಸಾಧಿಸಿಕೊಡುವೆವು ಸುಮ್ಮನಿರಿ !' ಎಂದು ಹೇಳಿ ಆಚಾರ್ಯ ರೊಡನೆ ತಾನು, ಅಣ್ಣತಮ್ಮಂದಿರೊಡನೆ ನಗರದಿಂದ ಅರ್ಧಕ್ರೋಶ ದೂರದಲ್ಲಿ ನಿಂತನು.

ದುರ್ಯೋಧನ, ಯುಯುತ್ಸು, ಕರ್ಣ ಮುಂತಾದವರು ಸಿಂಹಗರ್ಜನ ಮಾಡುತ್ತಾ ಉದ್ಯತಾಯುಧರಾಗಿ ದ್ರುಪದನ ನಗರವನ್ನು ಪ್ರವೇಶಿಸಿದರು. ಅದನ್ನು ನೋಡಿ ಕೋಪದಿಂದ ದ್ರುಪದನು ಮೂರು ಅಕ್ಷೌಹಿಣೀ ಸೈನ್ಯದಿಂದ ಮನೆಯಿಂದ ಹೊರಬಂದು, ಕೌರವ ಸೈನ್ಯವನ್ನು ನುಚ್ಚುನೂರಾಗಿ ಬಾಣಗಳಿಂದ ಖಂಡಿಸಿದನು. ಅವನಿಗೆ ಸೂರ್ಯನ ವರದಿಂದ ತನ್ನ ನಗರದ ಒಂದು ಯೋಜನ ಪರಿಧಿಯಲ್ಲಿ ನಿಂತ ಶತ್ರುಗಳನ್ನು ಗೆಲ್ಲುವ ಶಕ್ತಿಯಿತ್ತು ; ಆ ಪ್ರದೇಶದಲ್ಲಿ ಅವನನ್ನು ಯಾರೂ ಎಂತಹ ವೀರರೇ ಆಗಲಿ ಗೆಲ್ಲುವಂತಿರಲಿಲ್ಲ. ಅವನ ಸೈನ್ಯಕ್ಕೆ ಊರಿನ ಸ್ತ್ರೀ ಬಾಲವೃದ್ಧರು ಕೂಡ ಕಿಚ್ಚಿಗೆ ಗಾಳಿಯಂತೆ ಸಹಾಯಕರಾದರು ; ಒನಿಕೆ, ದೊಣ್ಣೆ, ಪೊರಕೆಗಳಿಂದ ಹೊಡೆದು ಕೌರವರನ್ನು ಓಡಿಸಿದರು. ಸುಕುಮಾರರು, ಕಷ್ಟಸಹನಶಕ್ತಿಹೀನರು ಆದ ಕೌರವರು, ಮೊದಲ ಯುದ್ಧದಲ್ಲೇ ಪರಾಜಿತರಾಗಿ, ದಿಕ್ಕೆಟ್ಟು ಓಡಿ, ಪಾಂಡವರಿಗೆ ಶರಣಾದರು. ಭೀಮಾ ! ಅರ್ಜುನಾ ! ಎಂದು ಕೂಗುತ್ತಾ ಬಂದ ಅವರಿಗೆ ಅಭಯ ವನ್ನಿತ್ತು, ಭೀಮಾರ್ಜುನರು ರಥಾರೂಢರಾಗಿ ಹೊರಟರು. ಧರ್ಮರಾಜನನ್ನು ಗುರುವಿನ ಹತ್ತಿರ ನಿರೀಕ್ಷಕನಾಗಿರೆಂದು ಬಿಟ್ಟು, ನಕುಲ ಸಹದೇವರು ಇಕ್ಕೆಲಗಳಲ್ಲಿ ಬರುತ್ತಿರಲು ಹೊರಟು, ಉಪಾಯದಿಂದ ದ್ರುಪದನನ್ನು, ಅವನ ಸೈನ್ಯವನ್ನು ಊರಿನಿಂದ ಯೋಜನ ದೂರ ದಾಟಿಸಿಕೊಂಡು ಬಂದು, ಭೀಮಸೇನನು ಹಠಾತ್ತಾಗಿ ಹಿಂದಿರುಗಿ ಸೈನ್ಯದಮೇಲೆ ಎರಗಿದನು. ಅರ್ಜುನನು ಬಾಣವರ್ಷದಿಂದ ಸೈನ್ಯವನ್ನು ಚದುರಿಸಿದನು. ದ್ರುಪದನು ಸಿಟ್ಟಿನಿಂದ ಕೂಡಿ, ತನ್ನ ಸುತರನ್ನು ಕರೆದುಕೊಂಡು ಪಾಂಡವರನ್ನು ಮುತ್ತಿದನು. ಅವನ ಚಕ್ರರಕ್ಷಕರು ಯುಧಾಮನ್ಯು ಉತ್ತಮೌಜರು. ಅವರು ಧಾತೃ ಅರ್ಯಮ ಎಂಬ ಆದಿತ್ಯರ ಆವೇಶದಿಂದ ಯುಕ್ತರಾದ ವಿಶ್ವಾವಸು ಪರಾವಸುಗಳೆಂಬ ಗಂಧರ್ವಾಂಶ ಸಂಭೂತರು. ಸತ್ಯಜಿತ್ ಎಂಬ ದ್ರುಪದಸುತನು ಮಿತ್ರನೆಂಬ ಸೂರ್ಯನ ಅಂಶ ಯುತನಾದ ಚಿತ್ರಸೇನನೆಂಬ ಗಂಧರ್ವನು. ಚಿತ್ರರಥ ಗಂಧರ್ವನೇ ತ್ವಷ್ಟನ ಆವೇಶ ದಿಂದ ಕೂಡಿ ಜನಮೇಜಯನೆಂಬ ದ್ರುಪದಸುತನಾಗಿ ಜನಿಸಿದ್ದನು. ಶಿಖಂಡಿಯು (ಅಂಬ+ಯಕ್ಷ) ಕೂಡ ದ್ರುಪದನ ಸಹಾಯಕ್ಕಾಗಿ ಬಂದಿದ್ದನು. ಇಂತು ಸುತಪಂಚ ರಿಂದ ಕೂಡಿ ಮುತ್ತಿದ ದ್ರುಪದನ ಸೈನ್ಯವನ್ನು ಅರ್ಜುನನು ಬಾಣವರ್ಷದಲ್ಲಿ ಮುಳುಗಿಸಿದನು. ಭೀಮನು ಶಿಖಂಡಿ ಜನಮೇಜಯರ ರಥಗಳನ್ನು ಮುರಿದುಹಾಕಿ, ಧನುಸ್ಸುಗಳನ್ನು ತುಂಡರಿಸಿ, ಅವರ ಸೈನ್ಯವನ್ನು ಸಂಹರಿಸಿದನು. ಯುಧಾಮನ್ಯು ಉತ್ತಮೌಜರನ್ನೂ ವಿರಥರನ್ನಾಗಿ ಮಾಡಿ, ಅವರ ಆಯುಧಗಳನ್ನು ಪುಡಿಮಾಡಿ,

ಹಾರಿಹೊಡೆಯಲು ಗದೆಯನ್ನೆತ್ತಿದ ಭೀಮನನ್ನು ತಡೆಯಲಾರದೆ, ಅವರಿಬ್ಬರೂ ಪಲಾಯನ ಮಾಡಿದರು. ದ್ರುಪದನು ಕೈಗೆ ಸಿಕ್ಕಿದನು. ಆದರೂ ಭೀಮನು ತಮ್ಮನಿಗೆ ಕೀರ್ತಿಯನ್ನು ಗಳಿಸಿಕೊಡಲೆಣಿಸಿ ಅವನ ಪ್ರತಿಜ್ಞೆಯು ಸತ್ಯವಾಗಲೆಂದು ಉದಾಸೀನನಾಗಿದ್ದನು. ಆಗ ಅರ್ಜುನನು ವಿಜೃಂಭಿಸಿ, ದ್ರುಪದನ ರಥದಮೇಲೆ ಹಾರಿ, ಅವನ ಧನುಸ್ಸನ್ನು ಮುರಿದು, ಅವನನ್ನು ಹಿಡಿದು, ಹೆಡಮುಡಿಕಟ್ಟಿ, ತನ್ನ ರಥದಲ್ಲಿರಿಸಿಕೊಂಡು, ಆಚಾರ್ಯನಲ್ಲಿಗೆ ಬರುತ್ತಿದ್ದನು. ಆಗ ದ್ರುಪದನ ಸೈನ್ಯವು ರೋಷದಿಂದ ಗರ್ಜಿಸುತ್ತಾ, ಅವನ ಮೇಲೆರಗಿತು. ಭೀಮನು ಅದರ ವೇಗವನ್ನು ತಡೆದು ಗದೆಯಿಂದ ವೀರರನೇಕರನ್ನು ಅಂತಕನ ಮನೆಗೆ ಕಳುಹಿಸಿದನು. ಸತ್ಯಜಿತ ನನ್ನು ಸೋಲಿಸಿ, ಅರ್ಜುನನು ಭೀಮನು ಇನ್ನೂ ಭಟರನ್ನು ಕೊಲ್ಲುವುದನ್ನು ಕಂಡು, 'ದ್ರುಪದರಾಜನು ನಮಗೆ ಬಂಧುವಾಗಬೇಕಾಗಿರುವುದರಿಂದ ವ್ಯರ್ಥವಾಗಿ ಸೇನೆಯನ್ನು ನಾಶಪಡಿಸಬೇಡ' ಎಂದು ಪ್ರಾರ್ಥಿಸಿದನು. ಆಗ ಭೀಮಾರ್ಜುನರು ದ್ರೋಣನನ್ನು ಸಮೀಪಿಸಿ ದ್ರುಪದನನ್ನು ಅವನೆದುರಿಗೆ ನಿಲ್ಲಿಸಿದರು. 'ಈಗಲಾದರೂ ನಾನು ನಿನ್ನ ಮಿತ್ರನೆಂದು ಒಪ್ಪುವೆಯೋ ಇಲ್ಲವೋ ಹೇಳು, ನೀನು ಮಾತ್ರ ಎಂದಿಗೂ ನನ್ನ ಮಿತ್ರನೇ ಸರಿ. ನಿನ್ನ ಮಿತ್ರನಾಗಬೇಕಾದರೆ ರಾಜನಾಗೇ ಇರಬೇಕೆಂದೆ. ಆದುದರಿಂದ ಉತ್ತರ ಪಾಂಚಾಲವನ್ನು ಮಾತ್ರ ನಾನು ಉಳಿಸಿಕೊಂಡು, ಅಹಿಚ್ಛತ್ರ ನಗರಪರ್ಯಂತವೂ, ಚರ್ಮಣ್ವತೀಕೂಲ ಸೀಮಾವಿಶಿಷ್ಟವೂ ಆದ ದಕ್ಷಿಣ ಪಾಂಚಾಲ ವನ್ನು ನಿನಗೆ ಕೊಟ್ಟಿರುವೆನು. ರಾಜ್ಯವಿಲ್ಲದಿರೆ ರಾಜನಲ್ಲದ ನೀನು ನನ್ನ ಸ್ನೇಹಿತ ನಾಗಬಹುದೇ ? ಚಿಂತೆಯಿಲ್ಲ. ನನಗೆ ನೀನು ನಿಜವಾದ ಸ್ನೇಹಿತನೇ ಇರುವೆ' ಎಂದನು ದ್ರೋಣ. ಆ ಮಾತಿಗೆ ದ್ರುಪದನು 'ದ್ವಿಜವರ ! ಬ್ರಹ್ಮತೇಜಸ್ಸಿಗೆ ಅಸಾಧ್ಯವಾದುದಿಲ್ಲ. ನಾನು ನಿನ್ನ ಮೈತ್ರಿಯನ್ನು ಬಯಸುವೆ'ನೆಂದು ಹೇಳಿ, ಬಂಧಮುಕ್ತನಾಗಿ ತನ್ನ ರಾಜ್ಯಕ್ಕೆ ಹೊರಟುಹೋದನು. ಪಾಂಡವರು ಗುರುದಕ್ಷಿಣೆ ಗಾಗಿ ಮಾಡಿದ ಪ್ರತಿಜ್ಞೆಯನ್ನು ನೆರವೇರಿಸಿದ ಅರ್ಜುನನೊಡನೆ ನಾಗಪುರಿಯನ್ನು ಸೇರಿದರು.

ದ್ರುಪದನು ತನಗಾದ ಅವಮಾನದಿಂದ ಬೆಂದು, ಅರ್ಜುನನ ಕೈಹಿಡಿಯುವ ಕನ್ಯೆಯನ್ನೂ ದ್ರೋಣನನ್ನು ಕೊಲ್ಲುವ ಮಗನನ್ನೂ ಪಡೆಯಲೆಣಿಸಿ ಯಾಜೋಪ-ಯಾಜರೆಂಬ ತಪೋಧನರನ್ನು ಕರೆಸಿ, ಅವರಿಗೆ ಹತ್ತು ಲಕ್ಷ ಗೋಗಳನ್ನಿತ್ತು ಸಂತೈಸಿ, ಪುತ್ರಕಾಮೇಷ್ಟಿಯನ್ನು ಮಾಡಿದನು. ಅವರು ಹೋತೃಗಳಾಗಿ ನಿಂತು ಪೂರ್ಣಾಹುತಿ ಯನ್ನೀಯುವಾಗ ದ್ರುಪದ ಪತ್ನಿಯನ್ನು ಕರೆದರು. ಅವಳು ತಾನಿಲ್ಲದಿರೆ ಈ ಬ್ರಾಹ್ಮಣ ರಿಂದ ಸಂತಾನವಾಗುವುದೇ ಎಂದು ದುರಹಂಕಾರದಿಂದ ತಡಮಾಡಿದಳು. ದ್ವಿಜ ವರರು ಕುಪಿತರಾಗಿ ಆಹುತಿಯನ್ನು ವೈಷ್ಣವ ಮಂತ್ರದ್ವಯವನ್ನು ಉಚ್ಚರಿಸುತ್ತಾ, ಅಗ್ನಿಕುಂಡದಲ್ಲಿ ಹೋಮಿಸಿದರು. ತತ್‌ಕ್ಷಣವೇ ಅಗ್ನಿಕುಂಡದಿಂದ ಇಬ್ಬರು ಮಕ್ಕಳು ಎದ್ದುಬಂದರು; ಕಿರೀಟ ಕುಂಡಲ ಕವಚ ಮಾಲಾ ಖಡ್ಗ ದಿವ್ಯರಥಯುಕ್ತನಾಗಿ ಸೂರ್ಯ

ಸಮತೇಜನಾದ ಸುತನು ಧಾಷ್ಟ್ಯರ್ದಿಂದ ಬೆಳಗುತ್ತಾ ಬಂದ ಕಾರಣದಿಂದಧೃಷ್ಟದ್ಯುಮ್ನ ನೆನಿಸಿದನು. ಮಗಳು ಸಾಕ್ಷಾದ್ಭಾರತಿಯೇ ಅವತರಿಸಿ ದ್ರೌಪದಿ, ಕೃಷ್ಣೆ ಎನಿಸಿ ಖ್ಯಾತ ಳಾದಳು. ಭರತನೆಂದರೆ ಪ್ರಾಣನು ; ಅವನ ಪತ್ನಿಯು ಭಾರತಿಯಲ್ಲವೇ ! ಇಬ್ಬರೂ ಕೂಡ ಭ ಎಂದರೆ ಪ್ರಕಾಶ ಜ್ಞಾನಾನಂದ ರೂಪನಾದ ಶ್ರೀಹರಿ ; ಅವನಲ್ಲಿ ಭಕ್ತಿಯಿಂದ ರತರಾದವರಾದುದರಿಂದ, ಅವರ ನಾಮವು ಅನ್ವರ್ಥವಾಗಿತ್ತು. ಶಂ ಎಂಬ ವಾಯು ವಿನ ಪತ್ನಿಯಾಗಿ ಆಶ್ರಯಿಸಿದುದರಿಂದ ಭಾರತಿಗೆ ಶ್ರೀ ಎಂಬ ಹೆಸರೂ ಉಂಟು.

ದ್ರೌಪದಿಯಲ್ಲಿ ಐದು ಜೀವರು. ಸಾಕ್ಷಾದ್ಭಾರತೀದೇವಿಯು ಭೀಮಸೇನನ ಪತ್ನಿಯು. ಧರ್ಮಜನಲ್ಲಿ 'ಸೌಮ್ಯ'ನಾಗಿಯೂ ಅರ್ಜುನನಲ್ಲಿ 'ವೀರ' ಎಂಬ ರೂಪದ ಆವೇಶದಿಂದಲೂ ನಕುಲನಲ್ಲಿ 'ಸೌಂದರ್ಯ' ರೂಪದಿಂದಲೂ ಸಹದೇವ ನಲ್ಲಿ 'ನೀತಿ' ಎಂಬ ತನ್ನ ರೂಪದಿಂದಲೂ ಮುಖ್ಯಪ್ರಾಣಾವತಾರನಾದ ಭೀಮನು ಇದ್ದು, ದ್ರೌಪದಿಯಲ್ಲಿದ್ದ ಭಾರತಿಯನ್ನೇ ಹೊಂದುತ್ತಿದ್ದನು. ಅದೇ ದೇಹದಲ್ಲಿದ್ದ ಶ್ಯಾಮಲಾದೇವಿಯನ್ನು ಧರ್ಮಜನು, ಶಚಿಯನ್ನು ಅರ್ಜುನನು, ಉಷೆಯನ್ನು ನಕುಲನು, ಸಹದೇವನು ಹೊಂದಿ, ಅನ್ಯ ಸಂಪರ್ಕವಿಲ್ಲದೆ, ಸ್ವಪತ್ನೀ ಮಾತ್ರ ನಿರತ ರಾಗಿದ್ದರು. ಹೀಗೆ ದೇವವನಿತೆಯರಾದ ಶಚ್ಯಾದಿಗಳು ಭಾರತೀ ಪ್ರಾಣರ ಅನುಗ್ರಹ ದಿಂದ, ಒಂದೇ ದೇಹದಲ್ಲಿ ಸಂಭವಿಸಬಹುದಾದ ದುಃಖಕರ ವ್ಯಭಿಚಾರದೋಷದಿಂದ ಮುಕ್ತರಾದರು. ಪಾರ್ವತಿಯೂ ಅದೇ ದೇಹದಲ್ಲಿದ್ದರೂ ಬ್ರಹ್ಮವರದಿಂದ ಮೂರ್ಛೆ ಯಲ್ಲಿರುತ್ತಾ, ಕೊನೆಗೆ ಕೈಲಾಸದಲ್ಲಿ ತನ್ನ ಪತಿಯನ್ನು ಸೇರಲು, ಮೂಲರೂಪದಲ್ಲಿ ಐಕ್ಯವನ್ನು ಹೊಂದಿದಳು.

ಹಿಂದೆ ಬ್ರಹ್ಮದೇವನ ಸನ್ನಿಧಿಯಲ್ಲಿ ಭರ್ತೃಯುಕ್ತರಾದ ಪಾರ್ವತೀ, ಶಚೀ, ಶ್ಯಾಮಲಾ, ಉಷಾದೇವಿಯರು ಅತ್ಯಧಿಕ ವಿಲಾಸವನ್ನು ತೋರಿದರು. ಅದನ್ನು ಸಹಿಸದೆ ಚತುರ್ಮುಖನು ಅವರನ್ನು ಮನುಜರಲ್ಲಿ ಹುಟ್ಟುವಂತೆ ಶಪಿಸಿದನು ; ಆಗ ಪರಪುರುಷ ಸ್ಪರ್ಶ ಮಾತ್ರವೂ ಆಗಿ ನಿಮಗೆ ಬುದ್ಧಿ ಬರುವುದೆಂದ ಬ್ರಹ್ಮನ ಮಾತಿಗೆ ಹೆದರಿ, ಅವರು ಭಾರತೀದೇವಿಗೆ ಶರಣಾದರು. ವಾಯುಸ್ಪರ್ಶದಿಂದ ನಮಗೆ ಹಾನಿಯಿಲ್ಲವೆಂದರಿತ ದೇವಿಯರು ಆಕೆಗೆ ತಮ್ಮ ತಪ್ಪನ್ನು ತಿಳಿಸಿ, ಒಂದು ಸಾವಿರ ವರ್ಷ ಸೇವಿಸಿದರು. 'ಸೊಸೆಯರಂತೆ ಇರುವ ನಮ್ಮನ್ನು ತಂದೆ (ಮಾವ) ಯಂತಾಗಿರುವ ಪ್ರಾಣನು ಭೋಗಿಸನು. ಮುಟ್ಟುವುದರಿಂದ ಮಾತ್ರ ಶಾಪವನ್ನು ನಡೆಸಿಕೊಟ್ಟು ಬಿಡಿಸುವನು. ಹಿಂದೆ ಮಾಡಿದ ತಪ್ಪಿಗೆ ಮತ್ತೊಂದು ಬ್ರಹ್ಮನ ಶಾಪವಿದೆ ಕೇಳು. ನಾವು ನಾಲ್ವರು ಇನ್ನೊಬ್ಬರ ಒಂದೇ ದೇಹದಲ್ಲಿ ಇರಬೇಕೆಂದು ಆ ಶಾಪ. ಆದುದರಿಂದ ನಮ್ಮನ್ನೆಲ್ಲ ನಿನ್ನಲ್ಲಿಟ್ಟುಕೊಂಡು ಕಾಪಾಡು. ನಾವು ನಾಲ್ವರು ಒಂದೇ ದೇಹದಿಂದ ಬ್ರಹ್ಮನನ್ನು ವಂಚಿಸಬೇಕೆಂದು ಮೂರುಸಲ ಪ್ರಯತ್ನಿಸಿದ ಪಾಪದಿಂದ, ಮೂರಾವೃತ್ತಿ ಮನುಜ ದೇಹದಲ್ಲಿ ಕಲೆತು ಹುಟ್ಟಬೇಕಾಯಿತು. ಒಂದೇ ಶರೀರದಲ್ಲಿ ನಿಂತು ರುದ್ರನನ್ನು ನಾವು ಪ್ರಾರ್ಥಿಸಿದೆವು. 'ಪತಿಂ ದೇಹಿ' ಎಂದ ನಮಗೆ ಒಂದೇ ಶರೀರದಲ್ಲಿ ಸ್ವಪತಿ

ಪ್ರಾಪ್ತಿಯನ್ನು ಕೊಟ್ಟಿರುವನು. ಮನುಜರು ಮೋಹಿಸುವ ದೇವವನಿತೆಯರಾದುದರಿಂದ ನಾಲ್ಕನೇ ಸಲವು ನಿನ್ನ ಒಂದೇ ದೇಹದಲ್ಲಿ ನಮ್ಮನ್ನಿಟ್ಟು ಸ್ವಪತಿಸಂಯೋಗ ಮಾತ್ರದಿಂದ ನಮ್ಮ ಪಾತಿವ್ರತ್ಯವನ್ನು ಕಾಪಾಡು' ಎಂದು ಬೇಡಿಕೊಂಡರು. ಅಂತೆಯೇ ಅನುಗ್ರಹಿಸಿ, ಭಾರತಿಯು ದ್ರೌಪದಿ ಆಗಿ ಜನಿಸಿದಳು.

ಮೊದಲು ವಿಪ್ರಕನ್ಯೆಯಾದಾಗ ಭಾರತಿಯು ರುದ್ರಾಂತರ್ಗತ ರುದ್ರನಾಮಕ ಹರಿಯನ್ನು ತಪಸ್ಸಿನಿಂದ ಸೇವಿಸಿದಳು. ಇತರರು ರುದ್ರನನ್ನು ಸೇವಿಸಿದರು. ಆಗ ಸಂರಕ್ಷಣನು ಸಕಲ ಜನ್ಮಗಳಲ್ಲಿಯೂ ಪ್ರಾಣನಿಂದ ಕೂಡಿ, ವಿಷ್ಣುಸೇವೆಯನ್ನು ಮಾಡುವೆ ಎಂದು ಅವಳಿಗೆ ವರವನ್ನಿತ್ತನು. ರುದ್ರನು ಮಿಕ್ಕ ಸ್ತ್ರೀಯರಿಗೆ ಒಂದು ಜನ್ಮದಲ್ಲಿ ಮಾತ್ರ ಸ್ವಪತಿ ಸಂಯೋಗ ರೂಪವಾದ ವರವನ್ನಿತ್ತನು. ಎರಡನೆಯ ಜನ್ಮದಲ್ಲಿ ನಳ ನಂದಿನಿಯಾದಾಗ ಭಾರತಿಯು ಆ ಶರೀರವನ್ನು ಬೇಗನೆ ಸ್ವೇಚ್ಛೆಯಿಂದಲೇ ತ್ಯಜಿಸಿಬಿಟ್ಟಳು. ಆಮೇಲೆ ಅವರು ಇಂದ್ರಸೇನೆ ಎಂಬ ದೇಹದಲ್ಲಿ ಒಂದರು. ಅದು ಮೂರನೆಯ ಜನ್ಮ. ಮೂರನೇ ಜನ್ಮದಲ್ಲಿ ಇಂದ್ರಸೇನೆಯಾದಾಗ ಮುದ್ಗಲನಲ್ಲಿದ್ದ ವಾಯುದೇವನು ಭಾರತಿಯನ್ನು ಮಾತ್ರ ಹೊಂದಿದನು. ಬ್ರಹ್ಮಶಾಪದಿಂದ, ದೇವಸ್ತ್ರೀ ರತಿಪಾಪದಿಂದ, ನರಕಭಾಗಿಯಾಗಲಿರುವ ಮುದ್ಗಲನಿಗೆ ಬ್ರಹ್ಮವಿಶಾಪದಿಂದ ಮೂರ್ಚ್ಛೆಯನ್ನಿತ್ತು ಸಂರಕ್ಷಿಸಿದನು. ಇಂದ್ರಸೇನೆಯು ಮತ್ತೆ ಪಾರ್ವತ್ಯಾದಿಗಳಿಗೋಸುಗ ಹರಿಯನ್ನು ಕುರಿತು ತಪಸ್ಸನ್ನು ಮಾಡಿದಳು. ಆಗ ಇಂದ್ರಸೇನೆಯಲ್ಲಿದ್ದ ಪಾರ್ವತ್ಯಾದಿಗಳು ರುದ್ರನನ್ನು ತಪಸ್ಸಿನಿಂದ ಸಂತೋಷಪಡಿಸಿದರು. ಶಿವನೂ ಅಂತರ್ಯಾಮಿ ಶ್ರೀಶನೂ ಕೂಡ ಪ್ರತ್ಯಕ್ಷರಾದರು. ಭಾರತಿಯಂತೆ ಆದರೂ 'ಪತಿಂ ದೇಹಿ' ಎಂದಾಗ, ಅವರೈದು ಮಂದಿ ಐದು ಸಲ 'ಪತಿಂ ದೇಹಿ' ಎಂದಂತೆ ಆಯಿತು. ಅದರಿಂದ ಒಂದೇ ದೇಹದಲ್ಲಿ ಅವರಿಗೆ ಐದು ಜನ ಪತಿಗಳಾಗಬೇಕಾಯಿತು. ಶರ್ವ ಶ್ರೀಶರು ಹಾಗೆಯೇ ಆಗಲಿ, ಅಂದರೆ ಐದು ಜನ ಪತಿಗಳಾಗುವ ಒಂದು ದೇಹದಲ್ಲಿ ಹುಟ್ಟಿರಿ ಎಂದು ಅನುಗ್ರಹಿಸಿದರು. ಆಗ ಇಂದ್ರಸೇನೆ ಒಬ್ಬಳಿಗೆ ಐದು ಜನ ಪತಿಯರು ಹೇಗೆ ಎಂದು ಅನುಮಾನಿಸಿ ಅಳುತ್ತಿದ್ದಾಗ, ಇಂದ್ರನು ಅವಳನ್ನು ನೋಡಿ, 'ಏಕೆ ಅಳುವೆ' ಎಂದನು. 'ಈ ವಟುವು ಐದು ಪತಿಗಳನ್ನು ಹೊಂದು ಎಂದು ವರವಿತ್ತುದರಿಂದ ಅಳುವೆ'ನೆಂದು ಇಂದ್ರಸೇನೆ ನುಡಿದಳು. ವಟುರೂಪಿಯಾದ ಶಿವನನ್ನು ತಿಳಿಯದೆ ಅವನನ್ನು ಇಂದ್ರನು ಭರ್ಜಿಸಿದನು. ಶಿವನು ಕುಪಿತನಾಗಿ 'ಇಂದ್ರ ! ನಾನು ರುದ್ರನು. ನನ್ನ ದ್ರೋಹದಿಂದ ಗಿರಿಯ ಕೆಳಗೆ ಬಿದ್ದಿರುವ ನಿನ್ನಂತಹ ಸುರೇಂದ್ರರನ್ನು ನೋಡು. ನೀನೂ ಮನುಜನಾಗಿ ಇವಳಿಗೆ ಪತಿಯಾಗು' ಎಂದನು. ಬಂಡೆಯನ್ನೆತ್ತಿ ನೋಡಿದಾಗ ಇಂದ್ರನಿಗೆ ಮಾರುತ, ಧರ್ಮ, ನಾಸತ್ಯ, ದಸ್ರರು ಕಂಡರು. ಅವರು ಪೂರ್ವೇಂದ್ರರಲ್ಲವೇ ! ಮನುಜರಾಗಿ ಅವತರಿಸುವುದಕ್ಕಾಗಿ ಮಂತ್ರಾಲೋಚನೆಯಲ್ಲಿ ನಿರತರಾದ ದೇವತೆಗಳನ್ನು 'ನನ್ನ ದ್ರೋಹದಿಂದ ಬಿದ್ದಿರುವರು' ಎಂದು ರುದ್ರನಲ್ಲಿ ಕುಪಿತನಾಗಿ ಬ್ರಹ್ಮನು 'ರುದ್ರ ! ನೀನೂ ಭೂಮಿಯಲ್ಲಿ ಹುಟ್ಟು ! ಇಂದ್ರನ ಅಂಶದಿಂದ ಹುಟ್ಟಿದ

ಅರ್ಜುನನಿಂದ ನಿನಗೆ ಸೋಲಾಗಲಿ! ನಾನಿತ್ತ ಶಾಪವನ್ನು ತಿರಸ್ಕರಿಸಿ, ಪತಿಸಂಬಂಧ ರೂಪ ವರವನ್ನಿತ್ತುದರಿಂದ, ನಿನ್ನ ಸತಿಯು ದ್ರೌಪದೀದೇಹದಲ್ಲಿದ್ದಾಗ, ಅವಳ ಯೋಗ ನಿನಗಾಗದಿರಲಿ! ನೀನೂ ಬ್ರಹ್ಮಚಾರಿಯಾಗಿಯೇ ಇರು! ಪೂರ್ವೇಂದ್ರರು ಕೂಡ ದ್ರೌಪದೀ ಪತಿಗಳಾಗಿ, ಸ್ವಪತ್ನೀ ಸಮಾಗಮವನ್ನು ಹೊಂದಲಿ' ಎಂದು ಶಾಪವಿತ್ತನು. ಆದುದರಿಂದ ದ್ರೌಪದೀದೇಹಸ್ಥಳಾದ ಉಮೆಗೆ ಸದಾ ಮೂರ್ಚ್ಛೆಯೇ. ರುದ್ರನು ಅಶ್ವತ್ಥಾಮನಾಗಿ ಜನಿಸಿ ಬ್ರಹ್ಮಚಾರಿಯಾಗೇ ಇದ್ದನು. ಇಂತು ಜನಿಸಿದ ಕುಮಾರಿ ಕುಮಾರ-ರನ್ನು ಕಂಡು ಪಾಂಚಾಲ ರಾಜ್ಯದ ಪ್ರಜರೆಲ್ಲರೂ ಪ್ರಮೋದಭರಿತರಾದರು. ಧೃಷ್ಟದ್ಯುಮ್ನನು ಅಸ್ತ್ರಲೋಭದಿಂದ ದ್ರೋಣರನ್ನಾಶ್ರಯಿಸಿದನು. ಆಚಾರ್ಯನು ಯಶೋಲೋಭದಿಂದ ಅವನಿಗೆ ದಿವ್ಯಾಸ್ತ್ರಗಳನ್ನು ಕೊಟ್ಟನು. ಅವನು ತನ್ನನ್ನು ಕೊಲ್ಲಲು ಹುಟ್ಟಿರುವನೆಂದು ತಿಳಿದೂ ದ್ರೋಣನು ಹಿಂಜರಿಯಲಿಲ್ಲ. ಮಹಾತ್ಮರು ಮಹೋದಾರ ಮನಸ್ಕರಲ್ಲವೇ? ಭೀಮಾರ್ಜುನರ ಬಲ ಪರಾಕ್ರಮಗಳನ್ನರಿತು, ಅಂದಿನಿಂದ ರಾಜನ್ಯರು ಪಾಂಡವ ಪಕ್ಷವನ್ನು ಹೊಂದಿ, ವಿಧಿಯಿಲ್ಲದೆ ವಿಧೇಯರಾಗಿ ಗೌರವಿಸುತ್ತಿದ್ದ ಜರಾಸಂಧನನ್ನು ತ್ಯಜಿಸಿದರು. ಶ್ರೀಕೃಷ್ಣನು, ಪಾಂಡವರು ದ್ರುಪದನನ್ನು ಗೆದ್ದ ಸಮಾಚಾರವನ್ನು ಕೇಳಿ, ಸಂತೋಷಪಟ್ಟನು. ಕೃತವರ್ಮನನ್ನು ಪಾಂಡವರಲ್ಲಿಗೆ ಕಳಿಸಿ ಬಹುಮಾನಿಸಿ, ಪಾಂಡವ ಪ್ರೀತಿಯನ್ನು ಪ್ರಕಟಿಸಿದನು. ಆಗ ಧೃತರಾಷ್ಟ್ರನು ಬಹು ಹರ್ಷಪರವಶನಾಗಿ ಧರ್ಮರಾಜನನ್ನು ಯುವರಾಜನನ್ನಾಗಿ ಅಭಿಷೇಕಿಸಿದನು. ಭೀಮಾರ್ಜುನರ ಭಯದಿಂದ ಸರ್ವರಾಜರೂ ಧೃತರಾಷ್ಟ್ರನಿಗೆ ಕಪ್ಪಕಾಣಿಕೆಗಳನ್ನು ಅರ್ಪಿಸುತ್ತಿದ್ದರು. ಪಾಂಡುಕುಮಾರರ ಕೀರ್ತಿ ದಿಗಂತದಲ್ಲಿ ಹರಡಿತು. ಅವರ ಸುಗುಣ ಗಣದಿಂದ ಪೌರಜಾನಪದಾದಿ ಸರ್ವರೂ ಪ್ರೀತರಾದರು.

## ವಾರಣಾವತ—ಹಿಡಿಂಬ ವಧೆ

ಕಣಿಕನೆಂಬುವನು ಧೃತರಾಷ್ಟ್ರನ ಮಂತ್ರಿಯು. ಅವನು ಅಸುರನಾದುದರಿಂದ ಪಾಂಡವರಲ್ಲಿ ದ್ವೇಷದಿಂದ ಕುದಿಯುತ್ತಿದ್ದನು. ಶುಕ್ರನಿಂದ ವಕ್ರನೀತಿಯನ್ನು ಮಾತ್ರ ಕಲಿತಿದ್ದ ಆ ಬ್ರಾಹ್ಮಣಾಧಮನು ಶಕುನಿಗೆ ಗುರುವಾಗಿದ್ದನು; ದುರ್ಯೋಧನಾದಿಗಳಿಗೂ ಅವನು ಕುತ್ಸಿತಬುದ್ಧಿಯನ್ನು ಹುಟ್ಟಿಸಿದನು. 'ಕಾಪಟ್ಯವೇ ಉತ್ತಮ ನೀತಿಯು, ಸುರರನ್ನು ಪೂಜಿಸಿ ಫಲವಿಲ್ಲ; ಸುರೇಶರೆಲ್ಲರೂ ಸ್ವಾರ್ಥಿಗಳು, ವಂಚಕರು; ಧರ್ಮ ಕಾರ್ಯವನ್ನು ಇತರರನ್ನು ವಂಚಿಸುವುದಕ್ಕಾಗಿಯೇ ಮಾಡಬೇಕು. ಅತ್ಯಂತ ಕಾಪಟ್ಯವೆ ಉತ್ತಮ ದೈತ್ಯಲಕ್ಷಣ' ಇತ್ಯಾದಿ ದುರ್ನೀತಿಯನ್ನು ಬೋಧಿಸಿ, ಕಣಿಕನು ಧೃತರಾಷ್ಟ್ರ ದುರ್ಯೋಧನಾದಿಗಳ ಮನವನ್ನು ಕಲುಷಗೊಳಿಸಿದನು. ಸ್ವಭಾವದಿಂದಲೇ ಪಾಪಿಯಾದ ದುರ್ಯೋಧನನಿಗೆ ಅವನ ಉಪದೇಶವು ಹಿತವೆನಿಸಿತು. 'ದಂಡದಿಂದಲೇ ಸರ್ವಕಾರ್ಯಗಳು; ಪರಚ್ಛಿದ್ರವನ್ನು ಹುಡುಕುತ್ತಾ, ಕೂರ್ಮದಂತೆ ತನ್ನ ಛಿದ್ರಗಳನ್ನು ಪರರಿಗೆ ಕಾಣದಂತೆ ಜಾಗರೂಕನಾಗಿರಬೇಕು, ಪ್ರಾರಂಭಿಸಿದ ಕಾರ್ಯವನ್ನು ಪೂರ್ಣ

ವಾಗಿ ಮುಗಿಸಿಬಿಡಬೇಕು. ಶತ್ರುವಿನನ್ನು ಉಳಿಸಬಾರದು. ವಧೆಯೇ ಶತ್ರು ನಿವಾರ ಣೌಷಧ. ಕುರುಡನಂತೆ, ಕಿವುಡನಂತೆ, ನೋಡಿ ನೋಡದೆ, ಕೇಳಿ ಕೇಳದೆ, ಲಜ್ಜೆ ಯನ್ನು ಬಿಟ್ಟು, ಸ್ವಕಾರ್ಯವನ್ನು ಸಾಧಿಸಬೇಕು. ದಯೆ ತೋರುವುದು ತಪ್ಪು. ಅಗ್ನಿಯನ್ನು ಇಟ್ಟಾಗಲಿ, ವೇಷಾಂತರದಿಂದ ವಂಚಿಸಿಯಾಗಲಿ ಹಗೆಯನ್ನು ಬಗೆ ಹರಿಸುವುದು ತಪ್ಪಲ್ಲ. ಸಮಯ ಬಂದಾಗ ಶತ್ರುವನ್ನು ಗಡಿಗೆಯನ್ನಂತೆ ತಲೆಗೇರಿಸಿ, ಕಾರ್ಯವಾದ ಮೇಲೆ, ಕೆಳಗೆ ಬಂಡೆಯ ಮೇಲೆ ಒಡೆದಂತೆ, ಸಂಹರಿಸಬೇಕು. ಸಾಮ, ದಾನ, ಭೇದಗಳಿಂದ ಕಾರ್ಯವಾಗದಿದ್ದಾಗ, ದಂಡವನ್ನಾದರೂ ತೋರಿ, ನಮ್ಮ ಕಾರ್ಯ ಸಾಧಿಸಬೇಕು' ಎಂದು ಧೃತರಾಷ್ಟ್ರನಿಗೆ ಕಣಿಕನು ಉಪದೇಶಿಸಿದನು. ರಾಜನು "ಪಾಂಡವರಿಗೆ ನಾನು ಹೆದರುವೆನು. ಅವರು ಬಹು ಪ್ರಬಲರಾಗಿರುವುದರಿಂದ ನನ್ನ ಮಕ್ಕಳಿಗೆ ಮುಪ್ಪು ತಪ್ಪದು. ಅವರನ್ನು ನಾಶಮಾಡುವುದು ಹೇಗೆ?" ಎಂದು ಕೇಳಿದನು.

ಕಣಿಕನಿಂತೆಂದನು—"ರಾಜನ್! ಒಂದು ನರಿಯು ತನ್ನ ಮಿತ್ರರಾದ ಹುಲಿ, ಇಲಿ ತೋಳ, ಮುಂಗಿಗಳಿಂದ ಕೂಡಿ ವನದಲ್ಲಿದ್ದು, ಬೇಟೆಯಾಡುವಾಗ ಒಂದು ದೊಡ್ಡ ಜಿಂಕೆಯನ್ನು ನೋಡಿತು. ಅದನ್ನು ಕೊಂದು ತಿನ್ನಲು ಅವರು ಒಂದು ಉಪಾಯ ವನ್ನು ಮಾಡಿದರು. ಇಲಿಯು ಮಲಗಿರುವ ಜಿಂಕೆಯ ಕಾಲುಗಳನ್ನು ಕಡಿಯಿತು. ಆಗ ಹುಲಿಯು ಅದನ್ನು ಕೊಂದಿತು. ನರಿಯು ಸತ್ತ ಜಿಂಕೆಯನ್ನು ಕಾಯುತ್ತಾ, ಅವ ರನ್ನು ಸ್ನಾನಮಾಡಿ ಬನ್ನಿರೆಂದು ನದಿಗೆ ಕಳಿಸಿತು. ಮೊದಲು ಹಿಂದಿರುಗಿದ ಹುಲಿಯು ನರಿಯು ಚಿಂತಾಕ್ರಾಂತವಾಗಿರುವುದನ್ನು ನೋಡಿ 'ಏಕೆ ಚಿಂತಿಸುವೆ' ಎಂದಿತು. ನರಿಯು "ಹುಲಿರಾಜಾ! ಇಲಿಯು ನುಡಿದ ಮಾತಿಗೆ ನನಗೆ ನೋವಾಗಿದೆ. 'ನಾನು ಕಡಿದಮೇಲೆ ಕುಂಟಾದ ಜಿಂಕೆಯನ್ನು ಕೊಂದುದೇನು ಪರಾಕ್ರಮ ? ಅಂತಹ ಮಾಂಸ ವನ್ನು ತಿನ್ನಲು ಬರುವ ಹುಲಿಗೆ ನಾಚಿಕೆಯಿಲ್ಲ' ಎಂದಿತು. ಇದನ್ನು ಕೇಳಿ ನಾನು ಕೂಡ ಜಿಂಕೆಯನ್ನು ತಿನ್ನಬಾರದೆಂದು ನಿಶ್ಚಯಿಸಿರುವೆನು" ಎಂದಿತು. ಹುಲಿಯು ರೋಷದಿಂದ ತನ್ನ ಬಾಹುಬಲದಿಂದ ಸಂಪಾದಿಸಿದ ಆಹಾರವನ್ನೇ ಸ್ವೀಕರಿಸಲು ನಿಶ್ಚಯಿಸಿ ಹೊರಟುಹೋಯಿತು. ಆಗ ಇಲಿಯು ಬಂದು, 'ಏಕೆ ಚಿಂತಿಸುವೆ ?' ಎಂದು ನರಿಯನ್ನು ಕೇಳಿತು. 'ಅಯ್ಯೋ ! ಮುಂಗಿಗೆ ಇಲಿ ಕಡಿದು ಕೊಂದ ಮಾಂಸ ವಿಷ ವಂತೆ. ಅದು ನಿನ್ನನ್ನೇ ಕೊಂದು ತಿನ್ನುವೆನೆಂದಿತು. ಪಾಪ! ನಿನಗಾಗಿ ಚಿಂತಿಸುವೆನು' ಎಂದ ನರಿಯ ಮಾತನ್ನು ಕೇಳಿ ಇಲಿಯು ಮುಂಗಿಯ ಭಯದಿಂದ, ತನ್ನ ಬಿಲವನ್ನು ಸೇರಹೋಯಿತು. ಆಗ ಬಂದ ತೋಳನಿಗೆ ನರಿ 'ಹುಲಿಗೆ ಸಿಟ್ಟುಬಂದಿದೆ. ತನ್ನ ಸತಿ ಸುತರನ್ನು ಕರೆತರಲು ಹೋಗಿದೆ. ಈ ಮಾಂಸವನ್ನು ಬೇಡಿದವರನ್ನು ಅದು ಕೊಲ್ಲದೆ ಬಿಡದು' ಎಂದು ಹೆದರಿಸಿತು. ತೋಳವೂ ಓಡಿಹೋಯಿತು. ಆಗ ಮುಂಗಿಯು ಬಂದುದನ್ನು ನೋಡಿ ನರಿ—'ಎಲವೋ ಮುಂಗಿ ! ನನ್ನ ಬಾಹುಬಲದಿಂದ ಹುಲಿ, ತೋಳ, ಇಲಿಗಳನ್ನು ಗೆದ್ದು, ಓಡಿಸಿದೆನು. ಮಾಂಸವನ್ನು ಬೇಡುವ ಆಶೆಯಿದ್ದರೆ,

ನನ್ನೊಡನೆ ಯುದ್ಧಮಾಡು' ಎಂದಿತು. ಆ ಮಾತಿಗೆ ಮುಂಗಿ 'ಹುಲಿ ತೋಳಗಳೇ ಓಡಿದಾಗ ನನ್ನನ್ನು ಕಾಪಾಡುವರಾರು' ಎಂದು ಓಡಿಹೋಯಿತು. ಇಂತು ಉಪಾಯ ದಿಂದ ನರಿಯು ಸಕಲ ಮಾಂಸವನ್ನೂ ತಾನೇ ಸಂಪಾದಿಸಿ, ಸುಖದಿಂದಿತ್ತು. ಅಂತೆಯೇ ಶತ್ರುಗಳನ್ನು ನಾನಾ ಉಪಾಯಗಳಿಂದ ಸೋಲಿಸಿ, ಸಂಹರಿಸಿ ನೀನೂ ನಿಶ್ಚಿಂತನಾಗು; ಮಾಡಿದ ಅಪರಾಧವನ್ನು ಬೆಟ್ಟವನ್ನು ಮಂಜು ಮುಚ್ಚಿದಂತೆ, ಸ್ವಲ್ಪ ಧರ್ಮದಿಂದ ಮುಚ್ಚು! ಪುತ್ರರೆಂದು ಶಂಕಿಸಬೇಡ. ಮನೆ ದೀಪವೆಂದು ಮುತ್ತಿಟ್ಟರೆ ಮೀಸೆಗಳು ಸುಡುವವು."

ಕಣಿಕನ ಮಾತಿನಿಂದ ಶೋಕಾರ್ತನಾಗಿದ್ದ ಧೃತರಾಷ್ಟ್ರನನ್ನು ದುರ್ಯೋಧನ, ದುಶ್ಶಾಸನ, ಕರ್ಣ, ಶಕುನಿಗಳು ಸಮೀಪಿಸಿ, ವಂದಿಸಿ, ಕೂತರು. ದುರ್ಯೋಧನನು ತಂದೆಯನ್ನು ನೋಡಿ, ನಿಟ್ಟುಸಿರು ಬಿಡುತ್ತ—"ತಾತ! ಕೇಳಿದೆಯಾ ಪುರಜನರ ಮಾತನ್ನು? ಕುರುಡನಾದುದರಿಂದ ರಾಜ್ಯವು ನಿನ್ನದಲ್ಲವಂತೆ. ಪಾಂಡುರಾಜನು ನ್ಯಾಯವಾಗಿ ರಾಜನಂತೆ. ಅವನು ಬೆಳೆಸಿದ ಸಾಮ್ರಾಜ್ಯವನ್ನು ಪಾಂಡವರೇ ಹೊಂದ ಬೇಕಂತೆ. ಪುರಜನರು ಈ ವಿಷಯವನ್ನು ಸಾಧಿಸಿಬಿಡುವರಂತೆ! ಇದಕ್ಕೆ ತಕ್ಕಂತೆ, ನೀನೂ ನಮ್ಮನ್ನು ದೂರೀಕರಿಸಿ, ಧರ್ಮಜನಿಗೆ ಯುವರಾಜ್ಯವನ್ನಿತ್ತೆ. ಇನ್ನು ನಮಗೆ ಪರಪಿಂಡವೇ ಗತಿಯಾಯಿತು. ರಾಜ್ಯವೇ ಅವರದಾಗಿ ಅವರು ರಾಜರಾದ ಮೇಲೆ ಕೌರವರು ಭಿಕ್ಷುಕರಾಗಬೇಕಲ್ಲವೇ? ಇದು ನಿನಗೆ ಸಮ್ಮತವೇ?" ಎಂದ ಮಾತಿಗೆ, ಕಣಿಕನ ದುರುಪದೇಶವೂ ಜೋಡಾಗಿ ಧೃತರಾಷ್ಟ್ರನ ಶೋಕಾಗ್ನಿ ಇಮ್ಮಡಿ ಸಿತು. ಅವನು "ಪಾಂಡವರು ಧರ್ಮಿಷ್ಠರಾಗಿರುವರು. ದಾನಮಾನಗಳಿಂದ ಪ್ರಜರ ಪ್ರೀತಿಯನ್ನು ಗಳಿಸಿರುವರು. ಧರ್ಮಜನು ಲೋಕದಲ್ಲಿ ಗುಣವಂತನೆಂದು ವಿಖ್ಯಾತ ನಾಗಿರುವನು. ಇಂತಹ ಪ್ರಬಲಶತ್ರುಗಳನ್ನು ನಿವಾರಿಸುವುದೆಂತು?" ಎಂದು ಮರುಗಿ ದಾಗ ದುರ್ಯೋಧನನು ಅವನನ್ನು ಸಮಾಧಾನಪಡಿಸಿದನು. "ಆ ಚಿಂತೆಯನ್ನು ಬಿಡು! ಪ್ರಜರನ್ನು ನಾವು ಅರ್ಥವನ್ನಿತ್ತು ಸಂತೋಷಪಡಿಸಿ ಅವರ ಪ್ರೀತಿಯನ್ನು ಗಳಿಸಿರುವೆವು. ಅಮಾತ್ಯರು ಸೇನಾನಿಗಳು ಬಹುಮಾನಿತರಾಗಿ, ನನ್ನ ಕಡೆ ನಿಂತಿರು ವರು. ಪಾಂಡವರು ದೂರದಲ್ಲಿದ್ದರೆ, ಅವರಿಗೆ ಪ್ರಜಾಪ್ರೀತಿಯೂ ದೂರವಾಗುವುದು. ಒಳ್ಳೆಯ ಮಾತಿನಿಂದ ಅವರನ್ನು ವಾರಣಾವತಕ್ಕೆ ಕಳಿಸಿ, ನಾನು ಸಿಂಹಾಸನದಲ್ಲಿಯೂ ಪ್ರಜಾಹೃದಯದಲ್ಲಿಯೂ ಪ್ರತಿಷ್ಠಿತನಾಗುವಂತೆ ಮಾಡು! ಭೀಷ್ಮನು ಮಧ್ಯಸ್ಥನಾಗಿ ಸುಮ್ಮನಿರುವನು. ಅಶ್ವತ್ಥಾಮನು ನನ್ನ ಪಕ್ಷದಲ್ಲಿರುವುದು ನಿಜ. ಗುರುಪುತ್ರ ನಿದ್ದಲ್ಲಿ ಗುರುವೂ ಇರುವನು. ಅವನನ್ನು ಅನುಸರಿಸಿ ಕೃಪನೂ ನಿಲ್ಲುವನು. ವಿದುರನು ಮಾತ್ರ ನಮಗೆ ವಿರೋಧಿಯಾಗಿರುವನು. ಅವನೊಬ್ಬನ ವಿರೋಧಕ್ಕೆ ಹೆದರದೆ ಶತ್ರುಗಳಾದ ಪಾಂಡವರನ್ನು ಮೊದಲು ಊರಿನಿಂದ ಹೊರಕಳಿಸು! ಆಗ ನಾವು ನಿಶ್ಚಿಂತೆಯಿಂದ ಸುಖನಿದ್ರೆ ಮಾಡುವೆವು" ಎಂದು ತಂದೆಯನ್ನೊಪ್ಪಿಸಿದನು.

ಆ ಸಮಯದಲ್ಲಿ ವಾರಣಾವತದಲ್ಲಿ ಜಯಂತ ಮಹಾದೇವರ ರಥೋತ್ಸವಗಳು ನಡೆಯುವುದಿತ್ತು. ಅದನ್ನು ದುರ್ಯೋಧನನ ಕುಮಂತ್ರಿಗಳು ಪಾಂಡವರಿಗೆ ತಿಳಿಸಿ, ಉತ್ಸವವನ್ನು ಪ್ರಶಂಸಿಸಿದರು. ಪಾಂಡವರು ಉತ್ಸವದರ್ಶನಕ್ಕಾಗಿ ಹಾತೊರೆದರು. ಧೃತರಾಷ್ಟ್ರನು ಅವರಿಗೆ ವಾರಣಾವತಕ್ಕೆ ಹೋಗಲು ಅಪ್ಪಣೆಯನ್ನಿತ್ತು, ಬೇಕಾದ ರತ್ನಾಭರಣ ವಸ್ತ್ರ ವಾಹನಗಳನ್ನು, ಧನ ಧಾನ್ಯಾದಿಗಳನ್ನು ಕೊಟ್ಟು ಕಳಿಸಿದನು. ಕೆಲವು ಕಾಲ ಅಲ್ಲಿದ್ದು ಬರುವುದೆಂದು ಆಶಿಸಿದನು. ಆಗ ಭೀಮನು ದುರ್ಯೋಧನನ ಕುತಂತ್ರವನ್ನರಿತು ಈಗ ರಾಜ್ಯವನ್ನು ಬಿಟ್ಟುಹೋದರೆ ತಮಗೆ ಭಿಕ್ಷಾಟನವೇ ಗತಿ ಯಾಗುವುದೆಂದನು. ಕಳ್ಳರಂತೆ ವರ್ತಿಸುವ ಕೌರವರನ್ನು ಕೊಂದುಬಿಡುವೆನೆಂದನು. ಧರ್ಮರಾಜನಾಗ ಅವನನ್ನು ತಡೆದು, ಗುರುವಿರೋಧದಿಂದ ತಮ್ಮ ಕೀರ್ತಿ ನಶಿಸುವು ದೆಂದು ಸಮಾಧಾನಪಡಿಸಿದನು. ಅಣ್ಣನ ಮಾತಿಗೆ ಎದುರಾಡಲಾರದೆ ಭೀಮನು, ಮುಂದೆ ಕೌರವರು ಮಾಡುವ ದ್ರೌಪದೀ ಕೇಶಗ್ರಹಣ, ಮಾಯಾದ್ಯೂತ, ಶ್ರೀಕೃಷ್ಣ ಬಂಧನ ಮುಂತಾದ ವಿಷ್ಣು ವೈಷ್ಣವ ದ್ರೋಹ ಕಾರ್ಯಗಳಿಗೆಡೆಕೊಟ್ಟು ಸುಮ್ಮ ನಾದನು. ಸ್ವಸ್ತಿ ವಾಚನವನ್ನು ಮಾಡಿ, ಹಿರಿಯರ ಆಶೀರ್ವಾದಗಳನ್ನು ಪೊಂದಿ ಪಾಂಡವರು ವಾರಣಾವತಕ್ಕೆ ಹೊರಟರು. ಕುಂತಿಯೂ ಅವರ ಹಿಂದೆ ಹೊರಟಳು.

ಅಷ್ಟರಲ್ಲೇ ಪುರೋಚನನೆಂಬ ದುರ್ಯೋಧನನ ಮಂತ್ರಿಯು ವಾರಣಾವತದಲ್ಲಿ ಪಾಂಡವರಿಗಾಗಿ ಒಂದು ಅರಮನೆಯನ್ನು ಕಟ್ಟಿಸಿದ್ದನು. ಮೇಲೆ ಕಾಣಲು ರಾಜಮಂದಿರ ದಂತೆ ನವರತ್ನ ಖಚಿತವಾಗಿ ಕಾಣುವ ಆ ಮನೆಯ ಗೋಡೆಗಳಲ್ಲಿ ಶಣ, ಸರ್ಜರ, ಘೃತ, ತೈಲ, ವಸಾಗಳನ್ನು ತುಂಬಿ ಮೇಲೆ ಅರಗಿನ ನಯಗಾರಿಕೆಯಿಂದ ಮುಚ್ಚಿ, ಮನೋಹರ ವರ್ಣಗಳಿಂದ ಅಲಂಕೃತವಾಗಿರಿಸಿದ್ದನು. ಮನೆಯ ಸ್ತಂಭಗಳು, ವಾತಾಯನಗಳು, ಮಾಳಿಗೆ, ನೆಲಕಟ್ಟು ಮೊದಲಾದುವನ್ನು ಬೇಗ ಉರಿಯುವ ದಾರು ವಿಶೇಷದಿಂದ ನಿರ್ಮಿಸಿದ್ದನು. ಪಾಂಡವರಿಗೆ ತಿಳಿಯಬರದಂತೆ, ಚಿತ್ರಗಳಿಂದ ಸಿಂಗರಿಸಿ, ಮಂದಿರದಲ್ಲಿ ಆಸನ ಶಯನಗಳನ್ನಳವಡಿಸಿ, ತೋರಣ ಧ್ವಜಗಳನ್ನು ಕಟ್ಟಿದ್ದನು.

ಪಾಂಡವರು ಹೊರಡಲನುವಾದರು. ಪೌರಜನರು ಪಾಂಡವರನ್ನು ಹೊರಗಟ್ಟುವ ದುರ್ಯೋಧನನಲ್ಲಿ ಕುಪಿತರಾದರು. 'ರಾಜ್ಯವು ಪಾಂಡವರಿಗೇ ಸಲ್ಲತಕ್ಕದ್ದು ನ್ಯಾಯ ವಾಗಿದೆ. ಅನ್ಯಾಯದಿಂದ ದುರ್ಯೋಧನನು ಅದನ್ನು ಅಪಹರಿಸಲು ಈ ತಂತ್ರವನ್ನು ಹೂಡಿರುವನು. ಬಲವಂತನಾದ ಭೀಮಸೇನನು ಇದನ್ನೆಂತು ಸಹಿಸಿ ಸುಮ್ಮನಿರುವನು? ವೀರನಾದ ಅರ್ಜುನನೇಕೆ ಕೌರವರನ್ನು ಧಿಕ್ಕರಿಸದಿರುವನು ? ಪಾಪ ! ನಿರ್ಮಾಯಿಕ ರಾದ ಪಾಂಡವರಿಗೆ ಇವರ ಕುಹಕದ ಅರಿವಿಲ್ಲ. ನಾವಿದನ್ನು ಸಹಿಸಲಾರೆವು. ಪಾಂಡು ರಾಜಕುಮಾರರ ಹಿಂದೆಯೇ ನಾವೂ ಹೊರಡುವೆವು' ಎಂದು ಕೆಲವರು ವಿಪ್ರಾದಿ ಪ್ರಜರು ಧರ್ಮರಾಜನನ್ನು ಅನುಸರಿಸಿದರು. ಆಗ ಯುಧಿಷ್ಠಿರನು 'ಪಿತ್ರಾಜ್ಞಾ ಪರಿಪಾಲನವು ಕರ್ತವ್ಯವಾಗಿರುವುದರಿಂದ ಹೊರಟುನಿಂತ ನಮ್ಮನ್ನು ಆಶೀರ್ವದಿಸಿ ಹಿಂದಿರುಗುವುದು ನಿಮಗೆ ಉಚಿತವು. ನಿಮ್ಮ ಹಿತವನ್ನು ಬಯಸಿ ಹೇಳುವೆನು.

ಮನೆಗಳಿಗೆ ಹಿಂದಿರುಗಿ ಸದಾ ನಮ್ಮ ಶ್ರೇಯಃಪ್ರಾರ್ಥನೆಯನ್ನು ಮಾಡಿ !' ಎಂದು ಅವರನ್ನು ಕಳಿಸಿಕೊಟ್ಟನು.

ಆಗ ವಿದುರನು ಪಾಂಡವರನ್ನು ಕಂಡು, ಏಕಾಂತದಲ್ಲಿ ಕುಶಲವಚನ ಚತುರನಾದ ಧರ್ಮರಾಜನಿಗೆ ಮ್ಲೇಂಛಭಾಷೆಯಲ್ಲಿ ಹಿತವನ್ನುಪದೇಶಿಸಿದನು—'ಪರ ಪ್ರಜ್ಞಾ ವಿಚಕ್ಷಣನಾದ ಪುರುಷನು ಶತ್ರುಗಳಿಂದ ಬರುವ ಆಪತ್ತನ್ನು ಮುಂಚಿತವಾಗಿ ಊಹಿಸಿ, ಉಪಾಯದಿಂದ ತಾನು ಪಾರಾಗುವ ಯತ್ನವನ್ನು ಮಾಡಬೇಕು. ಕೇಳು ! ಅಲೋಹ ನಿರ್ಮಿತ ಶಸ್ತ್ರವು ಶರೀರ ನಿಬಿಡವಾಗಿರುವುದರಿಂದ ತಾಪಪ್ರದವಾಗುವುದು. ಯೋಗಿಯು ಅಂತಃಪುರವನ್ನೇ ಬಿಟ್ಟು ಗಂಗಾತೀರದಲ್ಲಿ ಕುಜನದೂರನಾಗಿ ಸುಖಿಸುವನು. ಅಂತಶ್ಶತ್ರುಜಯವನ್ನು ಸಂಪಾದಿಸಿ ಸುಖದಿಂದಿರು ! ಮನಸಾ ಚಿಂತಿಸಿ, ಮಾರ್ಗಾಂತರ ದಿಂದ, ಸುಷುಮ್ನಾ ನಾಡಿಯನ್ನು ಮುಟ್ಟಿ ಧ್ಯಾನಿಸು ! ವಾಸುದೇವನ ದರ್ಶನವಾಗು ವುದು'. ಆ ಮಾತನ್ನು ಮಥಿಸಿ ಮನಗಂಡು ಧರ್ಮಜನು ವಿದುರನಿಗೆ ಕೃತಜ್ಞನಾಗಿ, ಮನಸಾ ನಮಿಸಿದನು. ಅಷ್ಟಮಿಯ ದಿನ ರೋಹಿಣೀ ನಕ್ಷತ್ರದಲ್ಲಿ ಪಾಂಡವರು ಪಯಣಿಸಿ, ವಾರಣಾವತವನ್ನು ದಶಮಿಯ ದಿನ ಮುಟ್ಟಿದರು. ವಾರಣಾವತದ ಪುರ ಜನರು ಸ್ತ್ರೀ ಬಾಲ ವೃದ್ಧರಿಂದ ಕೂಡಿ, ವಾದ್ಯ ವೈಭವಗಳಿಂದ ಪಾಂಡವರನ್ನೆದುರು ಗೊಂಡು, ಕರೆತಂದು, ಲಾಕ್ಷಾಮಂದಿರದಲ್ಲಿ ಇಳಿಸಿದರು. ವಿಪ್ರರು ಆಶೀರ್ವದಿಸಿದರು. ಪುರಜನರು ಹೋದಮೇಲೆ ಪುರೋಚನನು ಬಂದು ವಂದಿಸಿ, ಧರ್ಮರಾಜನನ್ನು ನೋಡಿ 'ದುರ್ಯೋಧನನು ಮಾಯಾವಿಯು ; ಅವನ ಪಾಪ ಕೃತ್ಯಗಳಿಗೆ ರೋಸಿ, ಪುಣ್ಯವಂತ ರಾದ ನಿಮ್ಮನ್ನು ಸೇವಿಸಲು ಬಂದಿರುವೆನು. ಸ್ವರ್ಗಸದೃಶವಾಗಿರುವ ಈ ಮಂದಿರ ವನ್ನು ನಾನೇ ನಿಮಗಾಗಿ ಕಟ್ಟಿಸಿರುವೆನು. ಇಲ್ಲಿ ಸುಖವಾಗಿರಿ !' ಎಂದನು. ಅವನು ಪಾಪಿಯಾದ ಪ್ರಹಸ್ತನಲ್ಲವೇ ? ಅವನ ದುರ್ಬುದ್ಧಿಯನ್ನು ಊಹಿಸಿದ ಭೀಮಸೇನನು ಏಕಾಂತದಲ್ಲಿ ಸಹೋದರರನ್ನು ಕರೆದು, ವಾಸನೆಯಿಂದ ಅರಗು, ಕೊಬ್ಬು, ತುಪ್ಪ ಮೊದಲಾದ ವಸ್ತುಗಳಿಂದ ಮಾಡಿದ ಮನೆಯನ್ನು ತಿಳಿದು, ಅವರಿಗೆ ತೋರಿಸಿದನು. ಅಗ್ನಿ ವಿಷಗಳಿಂದ ಜಾಗರೂಕರಾಗಿರಲು ಹೇಳಿ, ಕುಂತಿಯು ಮಕ್ಕಳ ಕ್ಷೇಮಕ್ಕಾಗಿ ಶ್ರೀಹರಿಯನ್ನು ಪ್ರಾರ್ಥಿಸುತ್ತಿದ್ದಳು.

ವಿದುರನು ಪಾಂಡವರ ಹಿತವನ್ನು ಬಗೆದು ಕಳಿಸಿದ ಖನಕನು, ಮಂದಿರ ಪ್ರಾಕಾರ ವನ್ನು ನಿರ್ಮಿಸುವ ನೆವದಿಂದ ಮನೆಯಲ್ಲಿಂದ ಗಂಗಾತೀರದವರೆಗೂ ದೊಡ್ಡ ಸುರಂಗ ವನ್ನು ನಿರ್ಮಿಸಿದನು. ಅದರ ದ್ವಾರವು ಕಾಣಬರದಂತೆ ಮುಚ್ಚಿಸಿದನು. ಪುರೋಚನನು ಮಹಾಪಾಪಿಯಾಗಿದ್ದುದರಿಂದ, ತಪ್ಪಿಸಿ ಹಸ್ತಿನಾವತಿಗೆ ಹೊರಡುವದು ದುಶ್ಶಕ್ಯ ವೆಂತಲೂ ಹಾಗೆ ಪಾರಾಗಲು ಯತ್ನಿಸುವುದನ್ನು ಕಾದುನೋಡುತ್ತಿದ್ದ ಆ ದುರ್ಮಾರ್ಗನು ತಮ್ಮನ್ನು ಮಾಯೋಪಾಯದಿಂದ ಹತ್ಯೆಗೈಯಲೂ ಹೇಸನೆಂತಲೂ ತಿಳಿದು ಧರ್ಮರಾಜನು ಪ್ರತಿಮೋಸದಿಂದ ತಪ್ಪಿಸಿಕೊಂಡು, ಕೆಲಕಾಲದ ವರೆಗೂ

ಅಜ್ಞಾತರಾಗಿರುವುದು ಒಳಿತೆಂದು ಭೀಮನನ್ನು ಒಪ್ಪಿಸಿ, ಸಮಯವನ್ನು ಕಾಯುತ್ತಿದ್ದನು. ಹೀಗೆ ಒಂದು ವರ್ಷವಾಯಿತು.

ಒಂದುದಿನ ಪುರೋಚನನ ಅಕ್ಕನೂ ಅವಳ ಐವರು ಸುತರೂ ಅಲ್ಲಿಗೆ ಬಂದರು. ಆ ರಾಕ್ಷಸಿಯು ಹಿಂದೆ ತಾನು ಅದಿತಿಯಾಗಬೇಕೆಂತಲೂ ತನ್ನ ಸುತರು ದೇವತೆಗಳಾಗ ಬೇಕೆಂತಲೂ ಘೋರ ತಪಸ್ಸನ್ನು ಮಾಡಿದ್ದಳು. ಒಂದು ವರ್ಷವಾದ ಮೇಲೆ ರುದ್ರನು ಅವಳಿಗೆ ಪ್ರತ್ಯಕ್ಷನಾಗಿ 'ನೀನೂ ನಿನ್ನ ಸುತರೂ ಒಂದೇಸಲ ಸಾವನ್ನಪ್ಪದಿದ್ದರೆ, ನೀನು ಅದಿತಿಯಾಗು. ಅವರೂ ಸುರರಾಗುವರು' ಎಂದು ವರವನ್ನಿತ್ತಿದ್ದನು. ಅವಳು ಬರುತ್ತಾ ತಂದ ಭಕ್ಷ್ಯಗಳನ್ನು ಪುರೋಚನನು ಪಾಂಡವರಿಗೆ ಕೊಟ್ಟು 'ಭುಜಿಸಿ' ಎಂದನು. ಅವು ವಿಷಮಿಶ್ರವಾಗಿರುವುದೆಂದು ತಿಳಿದ ಭೀಮನು, ಅವನ್ನೆಲ್ಲ ತಾನೇ ತಿಂದು ಜೀರ್ಣಿಸಿಕೊಂಡನು. ಭೀಮ ಪುರೋಚನರು ಪರಸ್ಪರ ವಧಾಕಾಂಕ್ಷಿಗಳಾಗಿ ಸಮಯವನ್ನು ಕಾಯುತ್ತಿದ್ದರು.

ಕೃಷ್ಣಪಕ್ಷದ ಚತುರ್ದಶಿಯಂದು ಅವರನ್ನು ಸುಡಬೇಕೆಂದು ಕಾದಿದ್ದ ಪುರೋಚನನನ್ನು ವಂಚಿಸಿ, ಭೀಮಸೇನನು ಹಿಂದಿನ ದಿನವೇ ತಾವು ಪಾರಾಗುವ ಸನ್ನಾಹವನ್ನು ನಡೆಸಿದನು. ಮಧ್ಯರಾತ್ರಿಯಲ್ಲಿ ಮೆಲ್ಲನೆ ಸಹೋದರರನ್ನೂ ತಾಯಿಯನ್ನೂ ಎಬ್ಬಿಸಿ, ಸುರಂಗದಲ್ಲಿ ಇಳಿಸಿದನು. ತಾನೂ ಲಾಕ್ಷಾಗೃಹಕ್ಕೆ ನಾಲ್ಕು ನಿಟ್ಟನಲ್ಲಿ ಬೆಂಕಿಯನ್ನಿಟ್ಟು ಪಾರಾದನು. ಸುರಂಗಮಾರ್ಗವನ್ನು ಮುಚ್ಚಿ, ಧರ್ಮ ಪಾರ್ಥರನ್ನು ಬಲಭುಜದ ಮೇಲೂ, ಕುಂತಿ ಯಮಳರನ್ನು ಎಡಭುಜದ ಮೇಲೂ ಕೂಡಿಸಿಕೊಂಡು ಸುರಂಗದಿಂದ ಪಯಣಿಸಿ ಗಂಗಾತೀರವನ್ನು ಸೇರಿದನು. ವಿದುರನಿಟ್ಟಿದ್ದ ಜಾಲರು ಅವರನ್ನು ಗಂಗೆಯ ಆಚೆ ದಡವನ್ನು ಮುಟ್ಟಿಸಿದರು. ದೋಣಿಯಿಂದಿಳಿದು ಪಾಂಡವರು ಮಾತೆಯಿಂದೊಡಗೂಡಿ, ಸರಸರನೆ ಅರಣ್ಯವನ್ನು ಮುಟ್ಟಿದರು.

ವಾರಣಾವತದಲ್ಲಿ ಲಾಕ್ಷಾಗೃಹವು ಭಗಭಗನೆ ಉರಿದೆದ್ದು, ಒಳಗೆ ಮಲಗಿದ್ದ ಪುರೋಚನನನ್ನೂ, ಅವನ ಸೋದರಿಯರನ್ನೂ, ಅವಳ ಸುತರನ್ನೂ ಸುಟ್ಟು ಬೂದಿ ಮಾಡಿತು. ಮಹಜ್ಜನಾಪಚಾರವು ಆತ್ಮಾಪಘಾತಕವಾಗದಿರುವುದೇ ? ಬೆಳಗಾಯಿತು. ಪುರಜನರು ಬಂದು ನೋಡಿ, ಪಾಂಡವರು ಪುರೋಚನನೊಡನೆ ಸುಟ್ಟುಹೋದರೆಂದು ತಿಳಿದರು. ಅವರಿಗಾಗಿ ಮರುಗಿದರು. ದುರ್ಯೋಧನನನ್ನು ನಿಂದಿಸಿದರು. ಈ ವಾರ್ತೆ ಮುಟ್ಟಿ ಹಸ್ತಿನಾವತಿಯೇ ಗಗ್ಗೋಲಾಯಿತು. ಭೀಷ್ಮಾದಿಗಳು, ಅಂಧರಾಜನೊಡನೆ ರೋದಿಸಿ, ಪಾಂಡವರಿಗೆ ಕರ್ಮಕಲಾಪಗಳನ್ನು ಮಾಡಿಸಿದರು. ಪಾಂಡವ ನಾಶದಿಂದ ಸಂತಸಿಸಿದ ಕೌರವ ಜ್ಯೇಷ್ಠನು ದುಃಖವನ್ನು ನಟಿಸಿ ಅತ್ತಂತೆ, ಪಾಂಡವರ ಕುಶಲವನ್ನರಿತಿದ್ದ ವಿದುರನೂ ದುಃಖ ನಟನೆಯನ್ನು ಮಾಡಿ ಅತ್ತನು.

ಅತ್ತ ಪಾಂಡವರು ವನದಲ್ಲಿ ಒಂದು ಗಿಡದ ಬುಡವನ್ನು ಸೇರಿ, ರಾತ್ರಿಶೇಷವನ್ನು ಕಳೆದರು. ಕುಂತಿಯೂ ಸಹೋದರರೂ ನಿದ್ರಿಸುತ್ತಿರಲು, ಭೀಮಸೇನನು ಅವರಿಗೆ ಮೃಗ ರಾಕ್ಷಸ ಭಯವಾಗದಂತೆ ಕಾವಲಿದ್ದನು.

ವಾರಣಾವತದಲ್ಲಿ ಒಂದು ವರ್ಷಕಾಲ ಪುರೋಚನನ ಭಯದಿಂದ ನಿದ್ರಾಹಾರ ಗಳನ್ನೂ ಚೆನ್ನಾಗಿ ಮಾಡದಿದ್ದ ಕುಂತಿ-ಪಾಂಡವರಿಗೆ ವೈಶಾಖದ ರಾತ್ರಿಯ ವನದ ತಂಪಾದ ಗಾಳಿ ಮೈಮೇಲೆ ನುಸುಳಿತು. ಸರೋವರದಲ್ಲಿ ಮಿಂದು, ನೀರನ್ನು ಕುಡಿದು ಮಲಗಿದವರಿಗೆ ಮೈಮರೆತು ನಿದ್ರೆಬಂತು. ಕೌರವರಿಂದ ಬಂದ ಕುತ್ತುಗಳನ್ನು ಮನ ದಲ್ಲಿ ಮೆಲಕುಹಾಕುವ ಭೀಮನಿಗೆ ಮಾತ್ರ ಎಚ್ಚರವಿತ್ತು.

'ಹಾ ! ವಾಸುದೇವನ ಸೋದರತ್ತೆಗೆ ಈ ಗತಿ ಬಂತೇ ? ಅಂತಃಪುರಗಳಲ್ಲಿ ಸುಪ್ಪತ್ತಿಗೆಯಮೇಲೆ ಮಲಗುವ ಸೋದರರು ನೆಲದಮೇಲೆ ಮಲಗಿರುವರಲ್ಲ! ವಿಧಿಯೆ! ತ್ರಿಲೋಕಾಧಿಪತ್ಯಕ್ಕೆ ಅರ್ಹನಾದ ಅಣ್ಣನು ಕಾಡಿನಲ್ಲಿ ಪರಿಶ್ರಾಂತನಾಗಿ ಬಡವನಂತೆ ನಿದ್ರಿಸುವಂತೆ ಮಾಡಿದೆಯಾ ? ಅರ್ಜುನ ಧರ್ಮಾಶ್ವಿನೀ ಪುತ್ರರು ಅಡವಿಯ ಗಿಡದಡಿ ಯಲ್ಲಿ ಮೈಮರೆತು ನಿದ್ರಿಸುವುದನ್ನು ನೋಡಿ ನನಗೆ ಕರುಳು ಕಿವಿಚಿದಂತಾಗುತ್ತಿದೆ. ಧೃತರಾಷ್ಟ್ರನಿಂದಲೂ ಅವನ ಸುತರಿಂದಲೂ ನಿವಾಸಿತರಾಗಿ, ದಿಕ್ಕೆಟ್ಟು ಓಡಿಬಂದಿರುವ ನಮಗೆ ಮುಂದೇನು ಗತಿ ? ದುರ್ಯೋಧನ ! ಬದುಕಿದೆ, ನಮ್ಮ ಅಣ್ಣನ ಅಪ್ಪಣೆ ಸಿಗದೆ ಸುಮ್ಮನಿರುವ ನನ್ನ ಗದೆಯಿಂದ' ಎಂದು ಮುಮ್ಮರಿಯಂತೆ ಮರುಗುವ ಭೀಮನು ಚಿಂತಿಸುತ್ತಿರುವಾಗ ಪ್ರತ್ಯೂಷ ಪವನಾಂಕುರಗಳು ಅವನ ಮೈ ಸೋಕಿ, ರಾತ್ರಿಯಂತೆ, ಕಷ್ಟ ಸಮಯವೂ ಕೊನೆಗಾಣುವುದೆಂದು ಸೂಚಿಸಿತು.

ಅಲ್ಲಿ ಅನತಿದೂರದ ಶಾಲವೃಕ್ಷವನ್ನಾಶ್ರಯಿಸಿ ಹಿಡಿಂಬನೆಂಬ ಕ್ರೂರ ರಾಕ್ಷಸ ನಿದ್ದನು. ಭಯಂಕರಾಕಾರನಾದ ಆ ರಾಕ್ಷಸನು ಮಲಗಿದ್ದ ಪಾಂಡವರನ್ನು ಕಂಡನು. ಪಿಂಗನೇತ್ರನು, ಕರಾಳಮುಖನು, ತಾಮ್ರಕೇಶನು, ಲಂಬಜಠರನು, ತೀಕ್ಷ್ಣ ನಖನು, ವಿಶಾಲವಕ್ತ್ರನು ಆದ ಹಿಡಿಂಬನಿಗೆ ನರಮಾಂಸವು ಲಭಿಸಿತೆಂಬ ಆನಂದವಾಯಿತು. ತನ್ನ ತಂಗಿಯಾದ ಹಿಡಿಂಬೆಯನ್ನು ಕರೆದು, ಅವನು 'ಭದ್ರೇ ! ಮನುಷ್ಯಮಾಂಸದ ಗಂಧವು ಬಡಿಯುತ್ತಿದೆ. ಬಹುಕಾಲದಿಂದ ನರಮಾಂಸವಿಲ್ಲದೆ ರುಚಿಗೆಟ್ಟ ನಾಲಿಗೆಗೆ ಇಂದು ಹಬ್ಬವಾಗಲಿ ! ಅಲ್ಲಿ ಮಲಗಿರುವ ನರಪಶುಗಳನ್ನು ಕೊಂದು ಇಲ್ಲಿಗೆ ಎಳೆದುಕೊಂಡು ಬಾ ! ಹೋಗು' ಎಂದಾಜ್ಞಾಪಿಸಿದನು.

ಅವಳು ಪಾಂಡುಸುತರನ್ನು ಸಮೀಪಿಸಿ, ಅಲ್ಲಿ ಕೂತು ಕಾವಲಿದ್ದ ಭೀಮಸೇನ ನನ್ನು ನೋಡಿದಳು. ಅವಳ ಮನಸ್ಸು ಅವಶವಾಯಿತು. 'ಶ್ಯಾಮನು, ಮಹಾ ಬಾಹುವು, ಸಿಂಹಸ್ಕಂಧನು, ಕಂಬುಗ್ರೀವನು, ಪುಷ್ಕರಾಕ್ಷನು ಆದ ಈ ಮಹಾಪುರುಷ ನಾರಿರಬಹುದು? ಇವನು ನನ್ನ ಪತಿಯಾದರೆ ನಾನೆಂತಹ ಧನ್ಯಳು! ಭ್ರಾತೃ ವಚನ ದಂತೆ ಇವರನ್ನು ಸಂಹರಿಸಲಾರೆ. ಭರ್ತೃಸ್ನೇಹವು ಭ್ರಾತೃಸ್ನೇಹಕ್ಕಿಂತಲೂ ಉತ್ತಮ ವಲ್ಲವೇ?' ಎಂದು ಹಿಡಿಂಬೆ ಚಿಂತಿಸಿ, ಕಾಮರೂಪಿಣಿಯಾದುದರಿಂದ, ಸುಂದರಿಯಾಗಿ, ಭೀಮನ ಮುಂದೆ ಬಂದು ನಿಂತಳು. ಮಂದಸ್ಮಿತವನ್ನು ಬೀರಿ, ಅವಳು "ಮಹಾನು ಭಾವ! ನೀನಾರು? ಮಲಗಿರುವ ಈ ಸಾಧ್ವಿ ನಿನಗೇನಾಗಬೇಕು? ಇವರು ನಿನ್ನ ತಮ್ಮಂದಿರೇನು? ಇಲ್ಲೇಕೆ ಬಂದು ಮಲಗಿದಿರಿ? ಈ ವನವು ಹಿಡಿಂಬನೆಂಬ ಕ್ರೂರ

ರಾಕ್ಷಸನ ನಿವಾಸ ಭೂಮಿ ಎಂದು ತಿಳಿಯಿರಿ! ಅವನ ತಂಗಿಯಾದ ನನ್ನನ್ನು ಹಿಡಿಂಬೆ ಎನ್ನುವರು. ನಿಮ್ಮನ್ನು ಕೊಂದು ನರಮಾಂಸವನ್ನು ತಾರೆಂದು ಅಣ್ಣನು ಕಳಿಸಿದುದರಿಂದ ಬಂದೆನು. ನಿನ್ನ ಮನೋಹರ ರೂಪ ದರ್ಶನದಿಂದ ನನ್ನ ಮನವು ನಿನ್ನನ್ನು ಬಯಸುತ್ತಿದೆ. ನಿನ್ನ ಹೊರತು ಅನ್ಯರನ್ನು ಗಂಡನನ್ನಾಗಿ ಸ್ವೀಕರಿಸಲಾರೆನು. ಇದು ನಿಜ" ಎಂದಳು.

ಭೀಮನು ನಸುನಕ್ಕು ಅವಳಿಗಿಂತೆಂದನು—"ರಾಕ್ಷಸಿ! ಸುಖಸುಪ್ತರಾದ ಸೋದರರನ್ನೂ ತಾಯಿಯನ್ನೂ ಬಿಟ್ಟು ಬರುವುದು ಸರಿಯಲ್ಲ. ನಿಮ್ಮ ಅಣ್ಣನಾದ ಹಿಡಿಂಬನಿಂದ ನನಗೆ ಭಯವೂ ಇಲ್ಲ; ನಿನ್ನಲ್ಲಿ ನನಗೆ ಪ್ರೀತಿಯೂ ಇಲ್ಲ. ಹೊರಟುಹೋಗು! ಕಳಿಸು ನಿನ್ನ ಅಣ್ಣನನ್ನು; ನಾನವನನ್ನು ಯಮಪುರಿಗೆ ಕಳಿಸುವೆನು." ಇಂತು ಮಾತಾಡುತ್ತಾ ತಂಗಿಯು ತಡಮಾಡಿದಾಗ, ತಡೆಯಲಾರದೆ, ಕಡುಕೋಪಿಸಿ, ಹಿಡಿಂಬನು ದಡದಡನೆ ನಡೆದು ಬಂದನು. ಅವನನ್ನು ನೋಡಿ, ಭಯದಿಂದ ನಡುಗುತ್ತಾ ಹಿಡಿಂಬೆಯು ಭೀಮನನ್ನು ಶರಣುಹೊಂದಿ, ಅವನ ಹಿಂದೆ ಅವಿತು ನಿಂತಳು. ಇದನ್ನು ಕಂಡು ಕಿಡಿಕಿಡಿಯಾಗಿ ರಾಕ್ಷಸನು ಹಿಡಿಂಬೆಯನ್ನು ಬೈದು, ಭೀಮನ ಮೇಲೇರಿ ಬಂದನು. ಭೀಮನು ಅವನನ್ನು ತಡೆದು—"ಪಾಪಾತ್ಮ! ನಿಲ್ಲು. ನಿನ್ನ ಕೂಗಿನಿಂದ ನನ್ನ ಬಂಧುಗಳಿಗೆ ನಿದ್ರಾಭಂಗವಾಗುತ್ತಿದೆ. ತಂಗಿಯ ಮೇಲೆ ಕೈ ಮಾಡಬೇಡ! ಬಾ! ನಿನ್ನ ಪರಾಕ್ರಮವನ್ನು ತೋರು ನನ್ನಲ್ಲಿ! ಇಂದೇ ನಿನ್ನನ್ನು ಯಮದ್ವಾರದಲ್ಲಿ ನಿಲ್ಲಿಸುವೆನು" ಎಂದು ಘರ್ಜಿಸಿ ಆ ವನವನ್ನು ಮುಕ್ತರಾಕ್ಷಸವನ್ನಾಗಿಸಲು ನಿಶ್ಚಯಿಸಿದನು. ಕೈ ಎತ್ತಿಕೊಂಡು ಬರುವ ಹಿಡಿಂಬನನ್ನು ಹಿಡಿದುಕೊಂಡು, ಅವನನ್ನು ದೂರ ಪ್ರದೇಶಕ್ಕೆ ಸೆಳೆದುಕೊಂಡು ಹೋದನು. ಅಲ್ಲಿ ಅವರೀರ್ವರೂ ಗಿಡಗಳನ್ನು ಕಿತ್ತಿ ಹೋರಾಡಿ, ಚೀರಾಡುವ ಶಬ್ದದಿಂದ, ಮಲಗಿದ್ದ ಪಾಂಡವರಿಗೂ, ಕುಂತಿಗೂ ಎಚ್ಚರವಾಯಿತು. ಅವರು ಪಕ್ಕದಲ್ಲಿ ನಿಂತಿದ್ದ ಸುಂದರಿಯನ್ನು 'ಯಾರು ನೀನು? ಏಕೆ ಬಂದೆ?' ಎಂದು ಕೇಳಿ, ವೃತ್ತಾಂತವನ್ನೆಲ್ಲ ತಿಳಿದರು. ದೂರದಲ್ಲಿ ವಧಾಕಾಂಕ್ಷಿಗಳಾಗಿ ಸಿಂಹಗಳಂತೆ ಗರ್ಜಿಸುತ್ತಾ, ಹುಲಿಗಳಂತೆ ಹೋರಾಡುವ ಭೀಮ ಹಿಡಿಂಬರನ್ನು ನೋಡಿ, ಧರ್ಮರಾಜಾದಿಗಳು, ಭಯಚಕಿತರಾಗಿ, ಅಲ್ಲಿಗೆ ಹೋದರು. ಸಹಾಯಕರಾಗಲು ಹವಣಿಸುವ ಸೋದರರನ್ನು ನಿವಾರಿಸಿ, ಭೀಮನು ವಿಜೃಂಭಿಸಿ, ಪ್ರಾಚೀಸಂಧ್ಯಾಕಾಲವು ಸಮೀಪಿಸದ ಮುನ್ನ ರಾಕ್ಷಸನನ್ನು ಕೊಂದುಬಿಡಲು ನಿಶ್ಚಯಿಸಿದನು. ರುದ್ರವರದಿಂದ ಗರ್ವಿತನಾಗಿ, ಶ್ರೀಕೃಷ್ಣನೊಡನೆ ಹೋರಾಡಿ, ಸೋತುಬಂದ ಭಗವದ್ವಿರೋಧಿಯನ್ನು ಉಳಿಸಬಾರದೆಂದು ಭೀಮನು ಅವನ ಎದೆಯ ಮೇಲೆ ಗುದ್ದಿ ಅವನನ್ನು ನೆಲಕ್ಕೆ ಕೆಡಹಿದನು. ಅವನು ರಕ್ತವನ್ನು ಕಾರಿ ಸತ್ತನು. ಅವನು ಸ್ವಯೋಗ್ಯವಾದ ಅಂಧಂತಮೋಲೋಕವನ್ನು ಸೇರಿದನು.

ಧರ್ಮಜಾದಿಗಳು ಭೀಮನ ಪರಾಕ್ರಮದಿಂದ ಪ್ರಹರ್ಷಿತರಾಗಿ, ಅವನನ್ನು ಬಿಗಿದಪ್ಪಿ ಪ್ರಶಂಸಿದರು. ಸ್ವಲ್ಪ ದೂರದಲ್ಲೆ ಕಾಣುವ ನಗರವನ್ನು ಸೇರಲು ಹೊರಟರು.

ಹಿಡಿಂಬೆಯೂ ಅವರನ್ನು ಅನುಸರಿಸಿದಳು. ಅದನ್ನು ನೋಡಿ ಭೀಮನು ಕುಪಿತನಾಗಿ, ಅವಳನ್ನೂ ಅವಳ ಅಣ್ಣನ ಹಿಂದೆ ಕಳಿಸುವೆನೆಂದನು. ಧರ್ಮಜನು ಸ್ತ್ರೀವಧವು ಪಾತಕವೆಂದು ನಿವಾರಿಸಿದನು. ಹಿಡಿಂಬೆಯು ಕುಂತಿಗೆ ವಂದಿಸಿ ಸ್ವಜನರನ್ನು, ಸುಹೃಜ್ಜನರನ್ನು ವರ್ಜಿಸಿ, ಭೀಮನನ್ನು ವರಿಸುವ ಆಶೆಯಿಂದ ಬಂದ ನನ್ನನ್ನು ಸೊಸೆಯನ್ನಾಗಿ ಸ್ವೀಕರಿಸು! ಕಾಮರೂಪಿಣಿಯು, ಕಾಮಗಮನಳು ಆದ ನನ್ನ ಕೈಹಿಡಿದ ಭೀಮನಿಗೆ ಸುರವಿಹಾರ ಭೂಮಿಗಳಲ್ಲಿ ಸರ್ವಭೋಗಗಳನ್ನರ್ಪಿಸಿ, ಮತ್ತೆ ಹೊತ್ತು ತರುವೆನು. ನಿಮ್ಮ ವ್ಯಸನಕಾಲವೂ ಮುಗಿಯುವುದಿದೆ ಎಂದು ಬೇಡಿಕೊಂಡಳು. ತಾನು ಸ್ವರ್ಗಲೋಕ ಶ್ರೀ ಎಂದು ತೋರಲು ಪ್ರಾತಃಕಾಲವಾಗುತ್ತಲೇ ಶ್ರೀವ್ಯಾಸರ ದರ್ಶನವು ನಿಮಗೆ ಸಿಗುವುದು. ಅವರ ಮಾತಿನಿಂದಲಾದರೂ ನನ್ನನ್ನು ಭೀಮನಿಗೇ ಭಾರ್ಯಳನ್ನಾಗಿ ಸ್ವೀಕರಿಸುವ ಅನುಗ್ರಹಮಾಡಿ! ಎಂದು ನುಡಿದ ಮಾತಿಗೆ, ಧರ್ಮರಾಜನು ಸಮ್ಮತಿಸಿದನು. ಪ್ರಾತಃಕಾಲವಾಯಿತು. ಶ್ರೀ ವೇದವ್ಯಾಸನು ಬಂದನು. ಭೀಮನಿಗೆ ತಿಳಿಯಹೇಳಿ, ಸ್ವರ್ಗಶ್ರೀಯಾಗಿದ್ದು ಶಚಿಶಾಪದಿಂದ ರಾಕ್ಷಸ ಯೋನಿಯಲ್ಲಿ ಜನಿಸಿದ ಹಿಡಿಂಬೆಯನ್ನವನಿಗಿತ್ತು ಅಂತರ್ಧಾನನಾದನು.

ಹಿಡಿಂಬೆಯು ಭೀಮನೊಡನೆ ಹಗಲೆಲ್ಲ ವನಗಳಲ್ಲಿ ವಿಹರಿಸಿ, ಸಾಯಂಕಾಲವಾಗುತ್ತಲೇ ಅವನನ್ನು ಬಂಧುಜನರಲ್ಲಿ ತಂದುಬಿಡುತ್ತಿದ್ದಳು. ಭೀಮನಿಂದ ಅವಳಿಗೆ ಘಟೋತ್ಕಚನೆಂಬ ಪುತ್ರನು ಜನಿಸಿದನು. ಅವನ ತಲೆ ಗಡಿಗೆಯಂತೆ ದೊಡ್ಡದಾಗಿತ್ತು. ಅವನ ಶಿರೋರುಹಗಳು ಮೇಲಕ್ಕೆದ್ದು ನಿಂತಿದ್ದವು. ಆದ್ದರಿಂದಲೇ ಅವನು ಘಟೋತ್ಕಚನೆನಿಸಿ, ತನ್ನ ತಾಯಿಯಿಂದ ಕೂಡಿ ವನಕ್ಕೆ ಪೊರಮಟ್ಟನು. ಭೀಮನು ಸ್ಮರಣಮಾತ್ರದಿಂದ ಬರಬೇಕೆಂದು ಅವರಿಗೆ ಕಟ್ಟಳೆ ಮಾಡಿ ಕಳಿಸಿದನು. ಘಟೋತ್ಕಚನು ನಿರ್ಋತಿಯ ಅಂಶದಿಂದಲೂ ರುದ್ರಾವೇಶದಿಂದಲೂ ಕೂಡಿ ಜನಿಸಿದವನಾಗಿ, ಮಹಾವೀರನೆನಿಸಿದನು.

ಆಗ ಶ್ರೀವ್ಯಾಸನು ರುದ್ರವರದಿಂದ ಇತರಾವಧ್ಯನಾಗಿ, ಭೀಷ್ಮ ಜರಾಸಂಧಾದಿಗಳಿಗೂ ದುರ್ಜಯನಾಗಿ, ಏಕಚಕ್ರನಗರ ನರರ ಪ್ರಾಣಗಳನ್ನು ಹೀರುತ್ತಿದ್ದ ದುಷ್ಟ ಬಕನನ್ನು ಸಂಹರಿಸುವ ಮಹಾಪುಣ್ಯವನ್ನು ಭೀಮನಿಗೆ ಕೊಡಲು ನಿಶ್ಚಯಿಸಿ, ಅವರನ್ನು ಸಮೀಪದ ಏಕಚಕ್ರನಗರಕ್ಕೆ ಕರೆದೊಯ್ದನು. ಅಲ್ಲಿ ಒಬ್ಬ ಬ್ರಾಹ್ಮಣರ ಮನೆಯಲ್ಲಿ ಅವರನ್ನು ಸ್ಥಾಪಿಸಿದನು. ಆಪತ್ಕಾಲವು ಮುಗಿಯುವವರೆಗೂ ಭೈಕ್ಷ ವೃತ್ತಿಯನ್ನನುಸರಿಸಿ, ಬ್ರಾಹ್ಮಣವೇಷದಿಂದ ಪಾಂಡವರು ಅಲ್ಲಿ ವಾಸಿಸಿದರು. ವ್ಯಾಸ-ಶಿಷ್ಯರೆಂದು ತಿಳಿದು ಅವರನ್ನು ಎಲ್ಲರೂ ಗೌರವಿಸುತ್ತಿದ್ದರು.

ಒಂದುದಿನ ಕುಲಾಲನೊಬ್ಬನ ಮನೆಗೆ ಬೆಂಕಿಬಿದ್ದಾಗ, ಮನೆಯನ್ನೇ ಮೇಲಕ್ಕೆತ್ತಿ ಹಿಡಿದು, ಸುಡದಂತೆ ಕಾಪಾಡಿದ ಭೀಮನನ್ನು ಮೆಚ್ಚಿ, ಅವನಿಗೆ ದೊಡ್ಡಗಡಿಗೆಯನ್ನು ಬಹುಮಾನವಾಗಿ ಕೊಟ್ಟಿದ್ದನು. ಅದನ್ನೇ ಕೈಯಲ್ಲಿ ಪಿಡಿದು, ದೀನನಾಗಿ ಬೇಡುವ ಬ್ರಾಹ್ಮಣ ವೃತ್ತಿಯು ತನಗೆ ತಕ್ಕುದಲ್ಲವೆಂದು, ಭೀಮನು ಹುಂಕಾರ

ದಿಂದಲೇ ವೈಶ್ಯಸದನಗಳಲ್ಲಿ ಭಿಕ್ಷಾ ಸ್ವೀಕಾರ ಮಾಡಿ ಪುಷ್ಕಲಾನ್ನವನ್ನು ತರುತ್ತಿದ್ದನು. ಇದನ್ನು ನೋಡಿ ಧರ್ಮಜನು, ಸುಯೋಧನನಿಗೆ ತಿಳಿದೀತೆಂಬ ಶಂಕೆಯಿಂದ ಭೀಮನನ್ನು ಮನೆಯಲ್ಲೇ ಇರಲು ಹೇಳಿ, ತಾವು ನಾಲ್ವರು ದೀನರಾಗಿ ಬೇಡದೆ ತಂದ ಅನ್ನವನ್ನು ತಾಯಿಯ ಮುಂದೆ ಇಡುತ್ತಿದ್ದರು. ಕುಂತಿಯು ವೃಕೋದರನಿಗೆ ತದರ್ಧಭಾಗವನ್ನಿತ್ತು ಮಿಕ್ಕ ಅರ್ಧವನ್ನು ತಾವು ಐವರು ಭುಂಜಿಸಿ ಕಾಲವನ್ನು ಕಳೆಯುತ್ತಿದ್ದರು.

## ಬಕ ವಧೆ

ಒಂದುದಿನ ಧರ್ಮರಾಜಾದಿ ಸೋದರರು ಭಿಕ್ಷೆಗೆಂದು ಹೋಗಿದ್ದರು. ಮನೆಯಲ್ಲಿ ಭೀಮನು ಮಾತೆಯೊಡನಿದ್ದನು. ಆಗ ಅವರಿದ್ದ ಬ್ರಾಹ್ಮಣನ ಮನೆಯಿಂದ ರೋದನ ಧ್ವನಿಯು ಬಂದು ಅವರು ಬೆರಗಾದರು. ಕುಂತಿ, ಕರುಣೆಯಿಂದ ವಿಪ್ರನ ದುಃಖವನ್ನು ನಿವಾರಿಸುವುದು ಸಾಧ್ಯವಾದಲ್ಲಿ, ಆ ಪುಣ್ಯಕಾರ್ಯವನ್ನು ಮಾಡಿ, ತಮಗೆ ಆಶ್ರಯವನ್ನಿತ್ತ ವಿಪ್ರನನ್ನು ಕಾಪಾಡುವುದು ಕರ್ತವ್ಯವೆಂದಳು. ಭೀಮನು ಆ ಮಾತನ್ನು ಒಪ್ಪಿ, ವ್ಯಸನ ಕಾರಣವನ್ನರಿತುಬರಲು ತಾಯಿಯನ್ನು ಕಳಿಸಿದನು.

ಕುಂತಿಯು ಬ್ರಾಹ್ಮಣಗೃಹ ದ್ವಾರದಲ್ಲಿ ಬಂದಾಗ, ಆ ಬ್ರಾಹ್ಮಣನು ಆರ್ತನಾಗಿ ಇಂತು ನುಡಿಯುತ್ತಿದ್ದನು. ಅವನ ಪತ್ನಿ, ಮಗಳು, ಚಿಕ್ಕಮಗನು ಅವನ ಹತ್ತಿರ ಚಿಂತಾಮಗ್ನರಾಗಿ ಕುಳಿತಿದ್ದರು. "ಸಾಧ್ವಿ! ಪರಾಧೀನವಾದ ನಮ್ಮ ಜೀವಿಕೆಗೆ ಧಿಕ್ಕಾರವಿರಲಿ! ಅರ್ಥಕಾಮಪರತರಾದ ನಮಗೆ ಮೋಕ್ಷವು ದೂರವಾಯಿತು. ಈಗ ಇಹಲೋಕದ ಅರ್ಥಕಾಮಗಳಿಗೂ ಕುಂದು ಬಂದಿದೆ. ಎಷ್ಟೋಸಲ ಉಪದ್ರವ ಸಹಿತವಾದ ಈ ನಗರವನ್ನು ಬಿಟ್ಟು, ಬೇರೆಕಡೆಗೆ ಹೋಗುವುದೊಳಿತೆಂದ ನನ್ನ ಮಾತಿಗೆ ಕಿವಿಗೊಡದೆ, ಬಂಧುಬಳಗವನ್ನು ಬಿಡಲಾರೆನೆಂದು ಹಠದಿಂದ ಇಲ್ಲೇ ನಿಂತೆ. ಈಗ ನಮ್ಮ ಮನೆಯ ಮುಂದೆ ಮೃತ್ಯುವು ಬಂದು ನಿಂತಿದೆ. ಅದನ್ನು ಮೀರಲಾಗದೆ, ಯಾರು ಅದರ ಬಾಯಿಗೆ ತುತ್ತಾಗಬೇಕೆಂದು ತಿಳಿಯದೆ, ಮಿಡುಕುತ್ತಿರುವೆನು. ಸಾಧ್ವಿಯೂ, ಅನುವ್ರತಳು, ಅಪತ್ಯವತಿಯೂ, ಅನಪರಾಧಿನಿಯೂ ಆದ ನಿನ್ನನ್ನು ಬಿಟ್ಟು ನಾನು ಬದುಕಲಾರೆನು. ಮುಂದೆ ಸರಿಯಾದ ವರನಿಗಿತ್ತು, ಸ್ವಕುಲವನ್ನು ಬೆಳಸುವ ಬೆಳಕಾಗಿರುವ ಮಗಳನ್ನು ಹೇಗೆ ಸಾಯಲು ಕಳುಹಲಿ? 'ಆತ್ಮಾವೈ ಪುತ್ರನಾಮಾಸಿ' ಎಂದು ವೇದದಲ್ಲಿ ಗೀತವಾದಂತೆ, ನನ್ನ ಕರುಳಿನಂತಿರುವ ಮಗನನ್ನು ಬಲಿಕೊಟ್ಟು ನಾವು ಬದುಕಿರಲಾಗುವುದೆ? ಉಭಯಕುಲ ತಾರಿಣಿಯಾದ ಮಗಳನ್ನೂ, ಚಿಕ್ಕಕೂಸಾದ ಮಗನನ್ನೂ, ಸಹಧರ್ಮಿಣಿಯಾದ ನಿನ್ನನ್ನೂ ಸಾಯಗೊಡಲಾರೆ. ನಾನೇ ನಾಳೆ ಮೃತ್ಯುವಿಗೆ ತುತ್ತಾಗಿ ಹೋಗುವೆನು."

ಆ ಮಾತಿಗೆ ಅಳುತ್ತಾ ಬ್ರಾಹ್ಮಣಿಯು ಇಂತೆಂದಳು—"ವಿದ್ಯಾವಂತನಾದ ನಿನಗೆ ದುಃಖವು ತರವಲ್ಲ. ವಿಧಿಯು ತಂದೊಡ್ಡಿದ ವ್ಯಸನವನ್ನು ದಾಟಲಾಗದು. ಎಂದಾದರೂ ಜೀವನು ದೇಹತ್ಯಾಗವನ್ನು ಮಾಡಬೇಕಾಗಿರುವುದು. ಭರ್ತೃಹಿತ

ಕ್ಕಿಂತಲೂ ನಾರಿಗೆ ಧರ್ಮವಿಲ್ಲ. ನೀನು ಮಕ್ಕಳೊಡನೆ ಸುಖವಾಗಿರು. ನಾನು ಬಲಿಯಾಗಿಹೋಗುವೆನು. ವಿಧವೆಯಾಗಿ ಬಾಳಲಾರೆನು. ನಿನ್ನ ಕಣ್ಣ ಮುಂದೆ ಸದ್ಗತಿ ಕಾಣಲಿರುವ ನನ್ನನ್ನು ತಡೆಯಬೇಡ! ನೀನು ಹೋದರೆ, ಆ ದುಃಖದಿಂದ ನಾನೂ ಉಳಿಯಲಾರೆನು. ಮಗಳನ್ನೂ ದುಷ್ಟರಿಂದ ರಕ್ಷಿಸಲಾರೆನು. ಮಗನನ್ನು ವಿದ್ಯಾವಂತನಾಗಿ ಮಾಡಲಾರೆನು. ಯಜ್ಞ ದಾನ ತಪೋವ್ರತಗಳಿಂದಲೂ ಪ್ರಿಯತರನಾದ ನಿನ್ನ ಪಾದಸೇವೆಗೆ ದೂರವಾಗಿರುವುದಕ್ಕಿಂತ ಸಾಯುವುದೇ ಲೇಸು. ನಾನೇ ಹೋಗುವೆನು."

ಅವಳ ಮಾತಿಗೆ ದುಃಖವು ಉಕ್ಕೇರಿಬರಲು, ಅವಳ ತಲೆ ಸವರಿ ಅಳುವ ತಂದೆಯನ್ನು ನೋಡಿ ಮಗಳು ಮರುಗುತ್ತಾ, ಮಾತನಾಡಿದಳು—"ಅಪ್ಪ! ಅಮ್ಮ! ನೀವಿಬ್ಬರೂ ಹೋಗಬೇಡಿ! ಮಗನೊಡನೆ ನೀವು ಸುಖವಾಗಿದ್ದರೆ ಸಾಕು. ಎಂದಿಗಾದರೂ ಪರರ ಸ್ವತ್ತಾಗಲಿರುವ ನನ್ನನ್ನು ಇಂದೇ ಕಳಿಸಿಬಿಡಿ. ಕಷ್ಟಕ್ಕಾದುನಿಲ್ಲದ ಮಕ್ಕಳಿಂದ ಏನು ಪ್ರಯೋಜನ! ಎಂದೋ ಆಗುವ ದೌಹಿತ್ರನಿಂದಲ್ಲದೆ, ಇಂದೇ ನಿಮ್ಮನ್ನು ನಾನೇ ನನ್ನ ಜೀವತೆತ್ತು ಉದ್ಧರಿಸುವ ಸೌಭಾಗ್ಯವನ್ನು ನನಗೆ ಕೊಡಿ! ನೀವು ಮೃತರಾದರೆ, ನಿರ್ಗತಿಕಳಾಗಿ ನಷ್ಟಳಾಗುವುದೊಳಿತಲ್ಲ. ಮುಂದೆ ಪಿಂಡಾದಿಗಳನ್ನಿತ್ತು, ತಾರಕನೆನಿಸುವ ಮಗನನ್ನು ಕಾಪಾಡಿಕೊಂಡು ನೀವು ಜೀವಿಸಿರಿ. ಸಂಶಯವನ್ನು ಬಿಟ್ಟು, ನನ್ನನ್ನು ಕಳಿಸಿಬಿಡಿ. ನಿಮಗಾಗಿ ಸತ್ತು ಪುಣ್ಯಲೋಕವನ್ನು ಹೊಂದುವೆನು."

ವಿಪ್ರ ದಂಪತಿಗಳಿಗೆ ಅವಳ ವಚನಶ್ರವಣದಿಂದ ದುಃಖವು ಇಮ್ಮಡಿಯಾಗಿ ಅವರು ಅವಳನ್ನು ಅಪ್ಪಿ ರೋದಿಸತೊಡಗಿದರು. ಆಗ ಬಾಲಕನು ಕೈಯಲ್ಲಿ ಕೋಲನ್ನು ಹಿಡಿದು, ಕಲಭಾಷೆಯಿಂದ ಇಂತೆಂದನು—"ತಂದೆ! ರೋದಿಸಬೇಡ. ಅಮ್ಮಾ! ಬಿಡು ದುಃಖವನ್ನು. ಈ ಕೋಲಿನಿಂದ ಆ ರಾಕ್ಷಸನನ್ನು ಕೊಂದು, ನಿಮ್ಮ ಕಷ್ಟವನ್ನು ನೀಗಿಸುವೆನು. ನನ್ನನ್ನು ಕಳಿಸಿ." ಅಂತಹ ದುಃಖ ಸಮಯದಲ್ಲಿಯೂ, ಆ ಬಾಲಕನ ವಚನತತಿಯು ಅವರ ಮುಖದಲ್ಲಿ ಮಂದಹಾಸರೇಖೆಯನ್ನು ಮೂಡಿಸಿತು. ಇದೇ ಸಮಯವೆಂದರಿತು, ಕುಂತಿಯು ಒಳಬಂದಳು. ಸತ್ತವರನ್ನು ಎಬ್ಬಿಸುವ ಸಂಜೀವಿನಿಯಂತೆ, ಬೇಕಾದ ಅಭೀಷ್ಟವನ್ನು ಸುರಿವ ಸುರಧೇನುವಿನಂತೆ ಪಾಂಡುರಾಜ ಮಹಿಷಿಯು ಅವರನ್ನು ನೋಡಿ, ಸಾಂತ್ವನವಾಕ್ಯಗಳಿಂದ ಅವರ ದುಃಖಕ್ಕೆ ಕಾರಣವೇನೆಂದು ಕೇಳಿದಳು. ಸಾಧ್ಯವಹುದಾದರೆ ಅವರ ಕಷ್ಟವನ್ನು ತಾನು ನಿವಾರಿಸುವೆನೆಂದು ಸಂತೈಸಿದಳು. ಬ್ರಾಹ್ಮಣನು—"ಸಾಧ್ವಿ! ಈ ನಿನ್ನ ಮಾತುಗಳು ಸಜ್ಜನರಾದ ನಿಮಗೆ ಅರ್ಹವಾಗಿವೆ. ಆದರೆ ನಮ್ಮ ದುಃಖವನ್ನು ಯಾವ ಮನುಜನೂ ನಿವಾರಿಸಲಾರನು. ಕೇಳು, ಈ ನಗರ ಸಮೀಪದಲ್ಲಿ ಬಕನೆಂಬ ಒಬ್ಬ ರಾಕ್ಷಸನಿರುವನು. ಅವನು ರಾಮಾಯಣದ ಕಾಲದವನಂತೆ; ರಾವಣನ ಮಾತುಲನಂತೆ. ಶ್ರೀರಾಮನ ಬಾಣಗಳಿಗೆ ಹೆದರಿ, ಅವನು ಜಲದಲ್ಲಿ ಅಡಗಿದ್ದು,

*

ಮುಂದೆ ಇಲ್ಲಿಗೆ ಬಂದು, ಈ ದೇಶವನ್ನು ಅಧೀನದಲ್ಲಿಟ್ಟುಕೊಂಡಿರುವನಂತೆ. ಪ್ರತಿ ನಿತ್ಯವೂ ಅವನಿಗೆ ಒಂದು ಬಂಡಿಯ ಅನ್ನಾದಿ ಭೋಜ್ಯಗಳು, ಎರಡೆಮ್ಮೆಗಳು, ಒಬ್ಬ ಪುರುಷ ಇಷ್ಟು ಬಲಿಯನ್ನು ಕಳಿಸಿಕೊಡಬೇಕಾಗಿದೆ. ತಪ್ಪಿದಲ್ಲಿ, ಈ ಜನಸಮೃದ್ಧ ನಗರವನ್ನೆಲ್ಲ ನಾಶಮಾಡುವನೆಂದು ಹೆದರಿ, ಈ ಊರ ರಾಜನು ಪ್ರತಿದಿನವೂ ಒಂದು ಮನೆಯಿಂದ ಈ ಬಲಿ ತೆರಲ್ಪಡಬೇಕೆಂದು ಕಟ್ಟಳೆ ಮಾಡಿರುವನು. ಬಕನು ಬಲಿ ತೃಪ್ತನಾಗಿ ಶತ್ರು ಜನರಿಂದ ಈ ದೇಶವನ್ನು ಕಾಪಾಡುತ್ತಿರುವನು. ಅಂತೆಯೇ ಜರಾಸಂಧ, ನರಕ ಮುಂತಾದವರು ಇವನಿಗೆ ಹೆದರಿ ಇತ್ತ ಬಂದು ಮುತ್ತಿಲ್ಲ. ನರ ಮಾಂಸ ಪುಷ್ಟನಾದ ಆ ದುಷ್ಟ ರಾಕ್ಷಸನಿಗೆ ಬಲಿ ಕೊಡುವ ಸರದಿ ನಮ್ಮ ಮನೆಗೆ ಬಂದಿದೆ. ಸುಹೃಜ್ಜನರ ವಿನಾಶವನ್ನು ನೋಡಲಾರದೆ, ನಾನೇ ಬಲಿಯಾಗಿ ಹೋಗ ಬೇಕೆಂದಿರುವೆನು. ಇಂತಹ ಪ್ರಾಣಾಂತಕ ವಿಪತ್ತನ್ನು ತಪ್ಪಿಸಿ ಕಾಪಾಡುವವರನ್ನು ಕಾಣದೆ, ಸಾಯಲು ಹೋಗಲಾರದೆ, ದುಃಖಪಡುತ್ತಿರುವೆವು" ಎಂದನು.

ಕುಂತಿಯು ಅನುತಾಪದಿಂದ ಇಂತೆಂದಳು—"ಬ್ರಾಹ್ಮಣೋತ್ತಮ ! ದುಃಖ ವನ್ನು ಬಿಡು. ರಾಕ್ಷಸನಿಂದ ನಿಮ್ಮನ್ನು ರಕ್ಷಿಸುವ ಉಪಾಯವನ್ನು ಕೇಳು. ನಿನಗೆ ಒಬ್ಬನೇ ಮಗನು. ನನಗೆ ಐವರು ಪುತ್ರರಿರುವರು. ಅವರಲ್ಲಿ ಒಬ್ಬನನ್ನು ಬಲಿಯನ್ನದೊಡನೆ ಕಳಿಸುವೆನು ಚಿಂತಿಸಬೇಡ."

ಆ ಮಾತನ್ನು ಕೇಳಿ "ರಾಮ ರಾಮ ! ಎಂತಹ ಮಾತಾಡಿದೆ ? ನನ್ನ ಜೀವಿತ ಕ್ಕೆಂದು ಪರಪ್ರಾಣವನ್ನು ತೆರುವುದು ನಿಂದನೀಯವೇ ಸರಿ. ಅದರಲ್ಲಿ ಅತಿಥಿಯಾ ಗಿರುವ ಬ್ರಾಹ್ಮಣನನ್ನು ರಕ್ಕಸರ ಬಾಯ ತುತ್ತಾಗಲು ಕಳುಹಿ ಯಾವ ನರಕದ ಪಾಲಾಗಲಿ? ಬ್ರಹ್ಮವಧೆಗಿಂತಲು ಆತ್ಮವಧೆಯೇ ಶ್ರೇಯಸ್ಕರವು. ಇಂತಹ ಪಾಪದ ಕಾರ್ಯವು ನನ್ನಿಂದಾಗದು" ಎಂದ ವಿಪ್ರನಿಗೆ ಕುಂತಿಯಿಂತೆಂದಳು—"ವಿಪ್ರವರ! ಹೆದರುವ ಕಾರಣವಿಲ್ಲ. ವಿಪ್ರರಕ್ಷಣೆಯು ನಮ್ಮ ಆದ್ಯ ಕರ್ತವ್ಯವಾಗಿದೆ. ಆದರೆ ಮಗನನ್ನು ಕೊಂದುಕೊಳ್ಳುವ ಅವಿವೇಕಿಯಲ್ಲ ನಾನು. ನನ್ನ ಮಗನನ್ನು ಕೊಲ್ಲಲು, ಇಂತಹ ರಾಕ್ಷಸರು ಸಾವಿರ ಬಂದರೂ, ಅವರನ್ನೇ ಅವನು ಕೊಲ್ಲಬಲ್ಲನು. ನನ್ನ ಮಗನ ವೀರ್ಯ ಬಲ ತೇಜಃ ಪ್ರಭಾವಗಳನ್ನು ನಾನರಿತಿರುವೆನು. ಅವನು ಎಷ್ಟೋ ದುಷ್ಟ ರಾಕ್ಷಸರ ಗಂಟಲಗಾಳವಾಗಿರುವನು. ಆದರೆ ಈ ವಿಷಯವನ್ನು ಯಾರಿಗೂ ಉಸುರಬೇಡ. ನನ್ನ ಮಾತನ್ನು ನಂಬು" ಎಂದು ಹೇಳಿ ಕುಂತಿಯು ಭೀಮನಿಗೆ ಆ ವೃತ್ತಾಂತವನ್ನು ತಿಳಿಸಿ, ಬಕಾಸುರನನ್ನು ಸಂಹರಿಸಿ ಏಕಚಕ್ರನಗರ ಜನರಿಗೆ ಅಸು ಪ್ರದಾನ ಮಾಡೆಂದು ಬೇಡಿದಳು. ಭೀಮನು ಶ್ರೀವ್ಯಾಸ ಪ್ರೀತಿಕರವಾದುದೆಂದು ತಿಳಿದು ಅದಕ್ಕೊಪ್ಪಿದನು. ಯುದ್ಧ ಸಂರಂಭದಿಂದ ಕುಣಿದಾಡುವ ಭೀಮನನ್ನು ನೋಡಿ ಧರ್ಮಜನು ಅಮ್ಮನನ್ನು ಕೇಳಿ, ವಿಷಯವನ್ನೆಲ್ಲ ತಿಳಿದನು.

ಧರ್ಮಜನು ತಾಯಿ ಮಾಡಿದುದು ಸರಿಯಲ್ಲವೆಂದು ತಿಳಿದನು. ಪರರ ಕುತ್ತಿಗೆ ತಾವು ತುತ್ತಾಗುವುದೆತ್ತ ಎಂದು ಚಿಂತಿಸಿ "ಅಮ್ಮಾ! ಎಂತಹ ಕಾರ್ಯವೆಸಗಿದೆ?

ಯಾರ ಬಾಹುಬಲವನ್ನು ನಂಬಿ, ನಾವು ಅನೇಕ ಕಷ್ಟ ಸಮುದ್ರಗಳ ಪಾರಗಂಡೆವೋ, ಯಾರ ಬಲ ಪರಾಕ್ರಮ ನಾವೆಯಲ್ಲಿ ಕೂತು ಕೌರವ ಭೀಕರ ಸಾಗರವನ್ನು ದಾಟುವ ವಿಸ್ರಂಭದಿಂದಿರುವೆವೋ, ಅಂತಹ ಭೀಮನನ್ನು ರಕ್ಕಸನಿಗೆ ಕೊಟ್ಟುಕಳಿಸುವ ಸಾಹಸ ವೇಕೆ? ದುಃಖಗಳಿಗೆ ಸಿಕ್ಕ ನಿನ್ನ ಬುದ್ಧಿ ಮದಡಾಯಿತೇ ಏನು?" ಎಂದನು. ಕುಂತಿ ಆ ಮಾತಿಗೆ ನಕ್ಕಳು. "ಧರ್ಮಜ ! ಕೇಳು ! ಬುದ್ಧಿದೌರ್ಬಲ್ಯದಿಂದ ಮಾಡಿಲ್ಲ; ಭೀಮಸೇನನ ವಿಕ್ರಮವನ್ನರಿತೇ ಈ ಕೆಲಸ ಮಾಡಿರುವೆನು. ಹಿಂದೆ, ಹುಟ್ಟಿದ ತತ್ಕ್ಷಣವೇ ಕೈಜಾರಿ ಬೀಳಿಸಿದಾಗ, ಕೂಸಾಗಿದ್ದ ಭೀಮನ ವಜ್ರಕಾಯ ಸ್ಪರ್ಶದಿಂದ ಪರ್ವತವೇ ಸೀಳಿ, ಶತಶೃಂಗವಾಗಲಿಲ್ಲವೇ? ಹಿಡಿಂಬನನ್ನು ಕೊಂದ ಭೀಮನಿಗೆ ಭಯವೇ? ನಾನು ಲೋಭದಿಂದ ಅಥವಾ ಅಜ್ಞಾನದಿಂದ ಪ್ರವರ್ತಿಸಿಲ್ಲ. ಯುಧಿಷ್ಠಿರ! ಬಕವಧೆಯಿಂದ ನಗರ ಕ್ಷೇಮವಲ್ಲದೆ, ನಮ್ಮ ಆಶ್ರಿತನಾದ ವಿಪ್ರ ಪ್ರಾಣ ರಕ್ಷಣವೂ ಆಗಲಿದೆ. ರಾಜನಾದವನು ವಿಪ್ರ ರಕ್ಷಣೆಯಿಂದ ಅಕ್ಷಯ ಪುಣ್ಯಲೋಕವನ್ನೂ ಕ್ಷತ್ರಿಯ ಪ್ರಾಣರಕ್ಷಣೆಯಿಂದ ಅತುಲ ಕೀರ್ತಿಯನ್ನೂ, ವೈಶ್ಯ ರಕ್ಷಣೆಯಿಂದ ಪ್ರಜಾನುರಾಗವನ್ನೂ, ಶೂದ್ರ ರಕ್ಷಣೆಯಿಂದ ಉತ್ತಮ ಜನ್ಮವನ್ನೂ ಹೊಂದುವ ನೆಂದು ಶ್ರೀವ್ಯಾಸನೇ ಹೇಳಿರುವನು." ಯುಧಿಷ್ಠಿರನದಕ್ಕೆ ಸಮ್ಮತಿಸಿ, ನಗರ ಜನರಿಗೆ ತಿಳಿಯದಂತೆ ಭೀಮನು ರಕ್ಕಸನನ್ನು ಸಂಹರಿಸಿ, ಗುಪ್ತವಾಗಿರಬೇಕೆಂದನು.

ಮರುದಿನ ಬೆಳಗುಮುಂಜಾವದಲ್ಲೇ ಭೀಮನು ಬಂಡಿಯಲ್ಲಿ ಭಕ್ಷ್ಯಗಳನ್ನಿಟ್ಟು, ಪಯಣಿಸಿ, ರಕ್ಕಸನ ವನವನ್ನು ಸೇರಿದನು. ಅವನನ್ನು ಕೂಗಿ ಕರೆದು, ಅಷ್ಟರಲ್ಲೇ ತಾನೇ ಬಂಡಿಯ ಅನ್ನವನ್ನು ಉಣಲು ಪ್ರಾರಂಭಿಸಿದನು. ಅದನ್ನು ನೋಡಿ ಬಕಾಸುರನು ಸಿಟ್ಟಿನಿಂದ ಗರ್ಜಿಸುತ್ತಾ, ಆವನ ಮೇಲೇರಿ ಬಂದನು. ಮಹಾ ಕಾಯನು, ಲೋಹಿತಾಕ್ಷನು, ಕರಾಳ ವದನನು ಆಗಿದ್ದ ಬಕಾಸುರನು ಸಿಟ್ಟಿನಿಂದ ಹುಬ್ಬನ್ನು ಗಂಟಿಕ್ಕಿ ಭೀಮನನ್ನು ಸಮೀಪಿಸಿ "ನನ್ನ ಅನ್ನವನ್ನು ನನ್ನೆದುರಿಗೆ ತಿನ್ನುವ ನಿನ್ನನ್ನು ಈಗ ಯಮನ ಮನೆ ಸೇರಿಸುವೆನು ನೋಡು" ಎನ್ನುತ್ತಾ ತನ್ನನ್ನು ಲೆಕ್ಕಿಸದೆ ಭುಂಜಿಸುತ್ತಿದ್ದ ಭೀಮನನ್ನು ಮುಷ್ಠಿಯಿಂದ ಗುದ್ದಿದನು. ಅದನ್ನೂ ಸಹಿಸಿ ನಗುತ್ತಿದ್ದ ಭೀಮನನ್ನು ಕಂಡು ಬಕನು ಕಿಡಿಕಿಡಿಯಾಗಿ, ಕೇಕೆ ಹಾಕಿ, ಗಿಡ ವನ್ನೊಂದನ್ನು ಕಿತ್ತು ಹೊಡೆಯಲು ಬಂದನು. ಭೀಮನು ಮೇಲಕ್ಕೆದ್ದು 'ನಿಲ್ಲು! ಬರುವೆ'ನೆಂದು ಹತ್ತಿರದ ಹೊಳೆಯಲ್ಲಿ ಕೈ ತೊಳೆದು, ಹಿಂದಿರುಗಿ, ಅವನ ಕೈಲಿದ್ದ ಗಿಡವನ್ನು ಎಡಗೈಯಿಂದ ಕಸಿದು ಬಿಸುಟನು. ಅಸುರನು ಇನ್ನೊಂದು ಗಿಡವನ್ನು ಕಿತ್ತು ಬಂದನು. ಆಗ ಭೀಮನೂ ಅವನನ್ನು ಗಿಡಕಿತ್ತು ಹೊಡೆದನು. ವೃಕ್ಷಗಳೆಲ್ಲ ನಾಶವಾಗಲು, ಅವರೀರ್ವರೂ ಮುಷ್ಟಿಯುದ್ಧಕ್ಕಿಳಿದರು. ತುಮುಲವಾದ ಮಲ್ಲ ಯುದ್ಧವು ನಡೆದು ಅವರ ಪದಾಘಾತಗಳಿಂದ ಭೂಮಿಯು ನಡುಗಿತು. ಕೊನೆಗೆ ಭೀಮನು ಆ ದುಷ್ಟನನ್ನು ನೆಲಕ್ಕೆ ಕೆಡಹಿ, ಬೆನ್ನು ಮುರಿದು, ಕುತ್ತಿಗೆಯನ್ನು ಹಿಡಿದು ಬಗ್ಗಿಸಿಗುದ್ದಿ ಕೊಂದುಹಾಕಿದನು. ಬಕಾಸುರನು ಗಟ್ಟಿಯಾಗಿ ಒದರಿ ರಕ್ತಕಾರಿ ಸತ್ತನು.

ಭೀಮಸೇನನು ಅವನ ಶರೀರವನ್ನು ಸೆಳೆದುತಂದು ನಗರದ್ವಾರ ದೇಶದಲ್ಲಿ ಗೋಡೆಗೆ ಆನಿಸಿ ನಿಲ್ಲಿಸಿ, ತಾನು ಸ್ನಾನ ಮಾಡಿ, ನಗರ ಜನರು ಬರುವ ಮುನ್ನ ವಿಪ್ರನ ಮನೆ ಸೇರಿ, ನಡೆದುದೆಲ್ಲವನ್ನೂ, ಬಕವಧೆಯನ್ನೂ ತನ್ನವರಿಗೂ, ವಿಪ್ರನಿಗೂ ತಿಳಿಸಿದನು. ಆಗ ವಿಪ್ರನಿಗಾದ ಸಂತೋಷಕ್ಕೆ ಪಾರವೇ ಇಲ್ಲವಾಯಿತು. ಅವನು ಭೀಮನನ್ನು ಬಹುವಾಗಿ ಪ್ರಶಂಸಿಸಿ, 'ನಮ್ಮೆಲ್ಲರನ್ನುಳಿಸಿ, ಮಹೋಪಕಾರ ಮಾಡಿದೆ' ಎಂದು ವಂದಿಸಿದನು. ಭೀಮನು ಬಕಾಸುರನನ್ನು ಲೀಲೆಯಾಗಿ ಕೊಂದುದನ್ನು ಕಂಡು, ಬಕಾಸುರನ ಬಂಧುಗಳಾದ ರಾಕ್ಷಸರು, ಭಯದಿಂದ ದಿಕ್ಕೆಟ್ಟು ಓಡಿಹೋದರು. ಉಳಿದ ಕೆಲ ರಾಕ್ಷಸರನ್ನು ಇನ್ನುಮುಂದೆ ಸೌಮ್ಯರಾಗಿರುವಂತೆ ಕಟ್ಟೆಪ್ಪಣೆಯನ್ನಿತ್ತು ಭೀಮನು ನಗರಭಯವನ್ನು ನಿವಾರಿಸಿದನು.

ಬೆಳಗಾದಮೇಲೆ ನಾಗರಿಕರು ಊರ ಹೆಬ್ಬಾಗಿಲಿನಲ್ಲಿದ್ದ ಬಕನ ಶವವನ್ನು ನೋಡಿ ಬಕನೇ ಬಂದನೆಂದು ಭಯದಿಂದ ಓಡಿಹೋದರು; ಎಷ್ಟು ಹೊತ್ತಾದರೂ ಕದಲದಿದ್ದುದರಿಂದ ಅವರು ಧೈರ್ಯದಿಂದ ಸಮೀಪಿಸಿ, ಸತ್ತಿರುವನೆಂದು ತಿಳಿದು, ಆನಂದೋದ್ರೇಕದಿಂದ ಕುಣಿಯುತ್ತಾ, ಎಲ್ಲ ಜನರಿಗೂ ಆ ಸಂತೋಷದ ಸುದ್ದಿಯನ್ನು ಮುಟ್ಟಿಸಿದರು. ಊರಿನ ನರ ನಾರೀ ಜನರು ಬಂದು ಬಕನ ಮೃತಿಯನ್ನು ಕಣ್ಣಾರೆ ನೋಡಿ, ಇಂತಹ ಲೋಕೋಪಕಾರವನ್ನು ಮಾಡಿದ ಮಹನೀಯನಾರೆಂದು ವಿಚಾರಿಸಿದರು. ಸರದಿ ಯಾರದೆಂದು ತಿಳಿದು, ಜನರು ಬ್ರಾಹ್ಮಣನ ಮನೆಗೆ ಬಂದರು. ಅವನ ಮನೆಯಲ್ಲಿದ್ದ ವಟುವಿನಿಂದ ಬಕನು ಸಂಹೃತನಾದನೆಂದರಿತು, ಪುರಜನರು ಅತ್ಯಂತ ಹರ್ಷಿತರಾಗಿ, ಭೀಮನನ್ನು ಸತ್ಕರಿಸಿದರು. ಅವರು ಇನ್ನು ಮುಂದೆ ಬಕನಿಗೆ ಕೊಡಲಿರುವ ಅನ್ನವನ್ನು ಅವನಿಗೇ ಕೊಡುವೆವೆಂದರು. ಭೀಮಸೇನನು ಅನ್ನಾದಿಗಳನ್ನು ಆ ಗ್ರಾಮದ ನೃಸಿಂಹದೇವರಿಗೆ ಕೊಡುವಂತೆ ಆಜ್ಞಾಪಿಸಿ, ಅವರನ್ನು ಸಂತೈಸಿ ಕಳಿಸಿದನು.

## ಚಿತ್ರರಥ ವೃತ್ತಾಂತ

ಒಂದುದಿನ ಶ್ರೀವ್ಯಾಸನು ಪಾಂಡವರನ್ನು ಕಂಡು 'ದ್ರುಪದ ರಾಜಪುತ್ರಿಯ ಸ್ವಯಂವರಕ್ಕೆ ಹೋಗಿ! ನಿಮಗೆ ಶ್ರೇಯಸ್ಸಾಗುವುದು' ಎಂದು ಅವರನ್ನು ಪಾಂಚಾಲ ನಗರಿಗೆ ಕಳಿಸಿದನು. ಮೃಷ್ಟಾನ್ನ ಭೋಜನದಾಶೆಯಿಂದ ಹೊರಟು ನಿಂತಿದ್ದ ವಿಪ್ರರೊಡಗೂಡಿ ಪಾಂಡವರೂ ತಮ್ಮ ಮಾತೆಯೊಡನೆ ಪ್ರಯಾಣಿಸಿದರು. ಶ್ರೀಕೃಷ್ಣನು ತನ್ನ ಮಾವನನ್ನು (ಸತ್ರಾಜಿತನನ್ನು) ಕೊಂದ ಪಾಪಿ ಶತಧನ್ವನನ್ನು ಸಂಹರಿಸುವ ಪ್ರತಿಜ್ಞೆಮಾಡಿ, ಸರ್ವರಾಜರೂ ದ್ರುಪದ ಪುತ್ರಿಯ ಸ್ವಯಂವರಕ್ಕೆಂದು ಹೊರಡುವುದನ್ನು ಕಂಡು, ತಾನೂ ಪಾಂಚಾಲಪುರಿಯನ್ನು ಸೇರಹೊರಟನು.

ಭೀಮಾದಿಗಳು ವಿಪ್ರರಿಂದ ಕೂಡಿ ಪಯಣಿಸುವಾಗ ಒಬ್ಬ ಪಂಡಿತದ್ವಿಜನು ಅವರಿಗೆ ಮಾರ್ಗಾಯಾಸವಾಗದಂತೆ ಅನೇಕ ಕಥೆಗಳನ್ನು ಹೇಳುತ್ತಿದ್ದನು.

ಧೃಷ್ಟದ್ಯುಮ್ನ ದ್ರೌಪದಿಯರ ಜನನ ವೃತ್ತಾಂತವನ್ನು ಕೇಳಿದ ಪಾಂಡವರಿಗೆ ಅವನಿಂತೆಂದನು—"ಭಾರದ್ವಾಜನಾದ ದ್ರೋಣನು ಪರಶುರಾಮನಿಂದ ದಿವ್ಯಾಸ್ತ್ರ ವಿದ್ಯೆಯನ್ನು ಕಲಿತು, ಪಾಂಡವಾದಿ ರಾಜಕುಮಾರರಿಗೆ ಆಚಾರ್ಯನಾಗಿ ಹಸ್ತಿನಾವತಿ ಯಲ್ಲಿದ್ದನು. ಅವನು ದ್ರುಪದನನ್ನು ಶಿಷ್ಯರದ್ವಾರಾ ಗೆದ್ದು, ಅವನಿಂದ ಉತ್ತರ ಪಾಂಚಾಲ ದೇಶವನ್ನು ಕಸಿದಿದ್ದನು. ದ್ರುಪದನು ದ್ರೋಣನು ತನ್ನ ಮಿತ್ರನಹು ದೆಂದು ಅಂಗೀಕರಿಸಿ, ತನ್ನ ರಾಜ್ಯಕ್ಕೆ ಹೊರಟುಹೋದನು. ಅವಮಾನದಿಂದ ಬೆಂದ ಅವನ ಹೃದಯವು ದ್ರೋಣಹಂತಕನಾಗುವ ಮಗನನ್ನೂ, ಅರ್ಜುನನಿಗೆ ಪತ್ನಿ ಯಾಗುವ ಮಗಳನ್ನೂ ಬಯಸಿತು. ಅವನು ಯಾಜೋಪಯಾಜರನ್ನು ಕಂಡು, ತನ್ನ ಮನೋರಥ ಸಮರ್ಪಕವಾದ ಯಜ್ಞವನ್ನು ಮಾಡಿಸುವಂತೆ ಬೇಡಿದನು. ಬೇಕಾದಷ್ಟು ದಕ್ಷಿಣೆ, ಗೋವುಗಳನ್ನು ಕೊಡುವೆನೆಂದನು. ಉಪಯಾಜನಿಂತೆಂದನು— "ರಾಜನ್! ನಿನ್ನ ದಾನ ದಕ್ಷಿಣೆಗಳ ಆಶೆಗೆ ಸಿಕ್ಕು ಬ್ರಹ್ಮಹತ್ಯೆಯನ್ನು ಮಾಡಲಾರೆನು. ನನ್ನ ಅಣ್ಣನನ್ನು ಕೇಳು. ಈ ಕಾರ್ಯವು ಅವನಿಂದಾದೀತು. ಒಂದುದಿನ ಅವನು ಹಾದಿಯಲ್ಲಿ ಅಶುಚಿಯಾದಲ್ಲಿ ಬಿದ್ದ ಫಲವನ್ನು ತೆಗೆದು ತಿಂದುದನ್ನು ನೋಡಿರುವೆನು. ದ್ರೋಣನಂತಹ ಮಹಾನುಭಾವನನ್ನು ಸಂಹರಿಸುವ ಕುಯಾಗವೆನ್ನ ಕೈಲಾಗದು. ಯಾಜನು ನಿನ್ನ ಧನದಾಶೆಗೆ ಆ ಕೆಲಸವನ್ನು ಮಾಡುವನು ಹೋಗು." ದ್ರುಪದನ ಮಾತಿಗೆ ಯಾಜನು ಸಮ್ಮತಿಸಿ, ಅವನಿತ್ತ ಅರ್ಬುದ ಗೋದಾನವನ್ನು ಸ್ವೀಕರಿಸಿದನು. ಉಪಯಾಜನನ್ನೂ ಬಹು ಧನದಿಂದ ಸಂತೋಷಪಡಿಸಿ ಯಾಜನು ದ್ರುಪದನ ಯಜ್ಞಶಾಲೆಗೆ ಕರೆತಂದನು. ದ್ರೋಣ ಹಂತಕ ಕುಮಾರನನ್ನು ಯಾಜನು, ಅರ್ಜುನ ಪತ್ನಿ ಕುವರಿಯನ್ನು ಉಪಯಾಜನು ಸಂಕಲ್ಪಿಸಿ, ಹೋಮಿಸಿದರು. ಆಗ ಜನಿಸಿ ದವರೇ ಧೃಷ್ಟದ್ಯುಮ್ನ ದ್ರೌಪದಿಯರು. ಧೃಷ್ಟದ್ಯುಮ್ನನು ಅಗ್ನಿಯ ಅಂಶದಿಂದ ಜನಿಸಿ, ದ್ರುಪದರಾಜನಿಗೆ ಹರ್ಷಪ್ರದನಾದನು. ಸುಭಗಳು, ಸುರೂಪಳು, ನೀಲ ಕುಂಚಿತ ಮೂರ್ಧಜಳು, ತಾಮ್ರತುಂಗನಖಿಯು ಆದ ದ್ರೌಪದಿಯು ದೇವ ದಾನವ ಮಾನವರ ಮನವನ್ನು ಸೆಳೆಯುವ ತರುಣೀಮಣಿಯಾಗಿ ಬೆಳೆದಳು. ಯಾಜೋಪ ಯಾಜರಂತಹ ಮಹಾತ್ಮರು ನುಡಿದ ಮಾತು ಸುಳ್ಳಾಗದೆಂದು ನಂಬಿ, ದ್ರುಪದನು ಈಗ ಸ್ವಯಂವರವನ್ನು ಸಾರಿರುವನು. ಅದಕ್ಕೆ ಪಾಂಡವರು ಬರುವರೆಂದು ಅವನು ನಂಬಿದನು. ವಿಧಿಯು ಬಲವತ್ತರವಾಗಿರುವುದೆಂದರಿತು ದ್ರೋಣನು ತನ್ನನ್ನು ಕೊಲ್ಲಲು ಹುಟ್ಟಿದ ಧೃಷ್ಟದ್ಯುಮ್ನನಿಗೆ ಸಕಲಾಸ್ತ್ರಗಳನ್ನು ಕಲಿಸಿ ಕೀರ್ತಿಗಳಿಸಿದನು. ದ್ರೌಪದಿಯ ಕೈಪಿಡಿವ ಪಾರ್ಥನು ಎಲ್ಲಿ ಪ್ರಚ್ಛನ್ನನಾಗಿರುವನೋ? ಪಾಂಡವರು ಕ್ಷೇಮದಿಂದಿದ್ದು, ತಮ್ಮ ರಾಜ್ಯವನ್ನು ತಾವು ಹೊಂದಿ ಸುಖಿಸುವುದನ್ನು ನಮ್ಮ ಕಣ್ಣಿಂದ ನೋಡುವ ಭಾಗ್ಯವನ್ನು ಶ್ರೀಶನು ನಮಗೆ ದಯಪಾಲಿಸಲಿ!" ಎಂದು ಆ ವಿಪ್ರನು ನುಡಿದನು.

ಭೀಮಸೇನನು ಅವನ ಶರೀರವನ್ನು ಸೆಳೆದುತಂದು ನಗರದ್ವಾರ ದೇಶದಲ್ಲಿ ಗೋಡೆಗೆ ಆನಿಸಿ ನಿಲ್ಲಿಸಿ, ತಾನು ಸ್ನಾನ ಮಾಡಿ, ನಗರ ಜನರು ಬರುವ ಮುನ್ನ ವಿಪ್ರನ ಮನೆ ಸೇರಿ, ನಡೆದುದೆಲ್ಲವನ್ನೂ, ಬಕವಧೆಯನ್ನೂ ತನ್ನವರಿಗೂ, ವಿಪ್ರನಿಗೂ ತಿಳಿಸಿದನು. ಆಗ ವಿಪ್ರನಿಗಾದ ಸಂತೋಷಕ್ಕೆ ಪಾರವೇ ಇಲ್ಲವಾಯಿತು. ಅವನು ಭೀಮನನ್ನು ಬಹುವಾಗಿ ಪ್ರಶಂಸಿಸಿ, 'ನಮ್ಮೆಲ್ಲರನ್ನುಳಿಸಿ, ಮಹೋಪಕಾರ ಮಾಡಿದೆ' ಎಂದು ವಂದಿಸಿದನು. ಭೀಮನು ಬಕಾಸುರನನ್ನು ಲೀಲೆಯಾಗಿ ಕೊಂದುದನ್ನು ಕಂಡು, ಬಕಾಸುರನ ಬಂಧುಗಳಾದ ರಾಕ್ಷಸರು, ಭಯದಿಂದ ದಿಕ್ಕೆಟ್ಟು ಓಡಿಹೋದರು. ಉಳಿದ ಕೆಲ ರಾಕ್ಷಸರನ್ನು ಇನ್ನುಮುಂದೆ ಸೌಮ್ಯರಾಗಿರುವಂತೆ ಕಟ್ಟಪ್ಪಣೆಯನ್ನಿತ್ತು ಭೀಮನು ನಗರಭಯವನ್ನು ನಿವಾರಿಸಿದನು.

ಬೆಳಗಾದಮೇಲೆ ನಾಗರಿಕರು ಊರ ಹೆಬ್ಬಾಗಿಲಿನಲ್ಲಿದ್ದ ಬಕನ ಶವವನ್ನು ನೋಡಿ ಬಕನೇ ಬಂದನೆಂದು ಭಯದಿಂದ ಓಡಿಹೋದರು; ಎಷ್ಟು ಹೊತ್ತಾದರೂ ಕದಲದಿದ್ದುದರಿಂದ ಅವರು ಧೈರ್ಯದಿಂದ ಸಮೀಪಿಸಿ, ಸತ್ತಿರುವನೆಂದು ತಿಳಿದು, ಆನಂದೋದ್ರೇಕದಿಂದ ಕುಣಿಯುತ್ತಾ, ಎಲ್ಲ ಜನರಿಗೂ ಆ ಸಂತೋಷದ ಸುದ್ದಿ ಯನ್ನು ಮುಟ್ಟಿಸಿದರು. ಊರಿನ ನರ ನಾರೀ ಜನರು ಬಂದು ಬಕನ ಮೃತಿಯನ್ನು ಕಣ್ಣಾರೆ ನೋಡಿ, ಇಂತಹ ಲೋಕೋಪಕಾರವನ್ನು ಮಾಡಿದ ಮಹನೀಯನಾರೆಂದು ವಿಚಾರಿಸಿದರು. ಸರದಿ ಯಾರದೆಂದು ತಿಳಿದು, ಜನರು ಬ್ರಾಹ್ಮಣನ ಮನೆಗೆ ಬಂದರು. ಅವನ ಮನೆಯಲ್ಲಿದ್ದ ವಟುವಿನಿಂದ ಬಕನು ಸಂಹೃತನಾದನೆಂದರಿತು, ಪುರಜನರು ಅತ್ಯಂತ ಹರ್ಷಿತರಾಗಿ, ಭೀಮನನ್ನು ಸತ್ಕರಿಸಿದರು. ಅವರು ಇನ್ನು ಮುಂದೆ ಬಕನಿಗೆ ಕೊಡಲಿರುವ ಅನ್ನವನ್ನು ಅವನಿಗೇ ಕೊಡುವೆವೆಂದರು. ಭೀಮ ಸೇನನು ಅನ್ನಾದಿಗಳನ್ನು ಆ ಗ್ರಾಮದ ನೃಸಿಂಹದೇವರಿಗೆ ಕೊಡುವಂತೆ ಆಜ್ಞಾಪಿಸಿ, ಅವರನ್ನು ಸಂತೈಸಿ ಕಳಿಸಿದನು.

## ಚಿತ್ರರಥ ವೃತ್ತಾಂತ

ಒಂದುದಿನ ಶ್ರೀವ್ಯಾಸನು ಪಾಂಡವರನ್ನು ಕಂಡು 'ದ್ರುಪದ ರಾಜಪುತ್ರಿಯ ಸ್ವಯಂವರಕ್ಕೆ ಹೋಗಿ! ನಿಮಗೆ ಶ್ರೇಯಸ್ಸಾಗುವುದು' ಎಂದು ಅವರನ್ನು ಪಾಂಚಾಲ ನಗರಿಗೆ ಕಳಿಸಿದನು. ಮೃಷ್ಟಾನ್ನ ಭೋಜನದಾಶೆಯಿಂದ ಹೊರಟು ನಿಂತಿದ್ದ ವಿಪ್ರರೊಡಗೂಡಿ ಪಾಂಡವರೂ ತಮ್ಮ ಮಾತೆಯೊಡನೆ ಪ್ರಯಾಣಿಸಿದರು. ಶ್ರೀಕೃಷ್ಣನು ತನ್ನ ಮಾವನನ್ನು (ಸತ್ರಾಜಿತನನ್ನು) ಕೊಂದ ಪಾಪಿ ಶತಧನ್ವನನ್ನು ಸಂಹರಿಸುವ ಪ್ರತಿಜ್ಞೆಮಾಡಿ, ಸರ್ವರಾಜರೂ ದ್ರುಪದ ಪುತ್ರಿಯ ಸ್ವಯಂವರಕ್ಕೆಂದು ಹೊರಡುವುದನ್ನು ಕಂಡು, ತಾನೂ ಪಾಂಚಾಲಪುರಿಯನ್ನು ಸೇರಹೊರಟನು.

ಭೀಮಾದಿಗಳು ವಿಪ್ರರಿಂದ ಕೂಡಿ ಪಯಣಿಸುವಾಗ ಒಬ್ಬ ಪಂಡಿತದ್ವಿಜನು ಅವರಿಗೆ ಮಾರ್ಗಾಯಾಸವಾಗದಂತೆ ಅನೇಕ ಕಥೆಗಳನ್ನು ಹೇಳುತ್ತಿದ್ದನು.

ಧೃಷ್ಟದ್ಯುಮ್ನ ದ್ರೌಪದಿಯರ ಜನನ ವೃತ್ತಾಂತವನ್ನು ಕೇಳಿದ ಪಾಂಡವರಿಗೆ ಅವನಿಂತೆಂದನು—"ಭಾರದ್ವಾಜನಾದ ದ್ರೋಣನು ಪರಶುರಾಮನಿಂದ ದಿವ್ಯಾಸ್ತ್ರ ವಿದ್ಯೆಯನ್ನು ಕಲಿತು, ಪಾಂಡವಾದಿ ರಾಜಕುಮಾರರಿಗೆ ಆಚಾರ್ಯನಾಗಿ ಹಸ್ತಿನಾವತಿ ಯಲ್ಲಿದ್ದನು. ಅವನು ದ್ರುಪದನನ್ನು ಶಿಷ್ಯರದ್ವಾರಾ ಗೆದ್ದು, ಅವನಿಂದ ಉತ್ತರ ಪಾಂಚಾಲ ದೇಶವನ್ನು ಕಸಿದಿದ್ದನು. ದ್ರುಪದನು ದ್ರೋಣನು ತನ್ನ ಮಿತ್ರನಹು ದೆಂದು ಅಂಗೀಕರಿಸಿ, ತನ್ನ ರಾಜ್ಯಕ್ಕೆ ಹೊರಟುಹೋದನು. ಅವಮಾನದಿಂದ ಬೆಂದ ಅವನ ಹೃದಯವು ದ್ರೋಣಹಂತಕನಾಗುವ ಮಗನನ್ನೂ, ಅರ್ಜುನನಿಗೆ ಪತ್ನಿ ಯಾಗುವ ಮಗಳನ್ನೂ ಬಯಸಿತು. ಅವನು ಯಾಜೋಪಯಾಜರನ್ನು ಕಂಡು, ತನ್ನ ಮನೋರಥ ಸಮರ್ಪಕವಾದ ಯಜ್ಞವನ್ನು ಮಾಡಿಸುವಂತೆ ಬೇಡಿದನು. ಬೇಕಾದಷ್ಟು ದಕ್ಷಿಣೆ, ಗೋವುಗಳನ್ನು ಕೊಡುವೆನೆಂದನು. ಉಪಯಾಜನಿಂತೆಂದನು— "ರಾಜನ್! ನಿನ್ನ ದಾನ ದಕ್ಷಿಣೆಗಳ ಆಶೆಗೆ ಸಿಕ್ಕು ಬ್ರಹ್ಮಹತ್ಯೆಯನ್ನು ಮಾಡಲಾರೆನು. ನನ್ನ ಅಣ್ಣನನ್ನು ಕೇಳು. ಈ ಕಾರ್ಯವು ಅವನಿಂದಾದೀತು. ಒಂದುದಿನ ಅವನು ಹಾದಿಯಲ್ಲಿ ಅಶುಚಿಯಾದಲ್ಲಿ ಬಿದ್ದ ಫಲವನ್ನು ತೆಗೆದು ತಿಂದುದನ್ನು ನೋಡಿರುವೆನು. ದ್ರೋಣನಂತಹ ಮಹಾನುಭಾವನನ್ನು ಸಂಹರಿಸುವ ಕುಯಾಗವೆನ್ನ ಕೈಲಾಗದು. ಯಾಜನು ನಿನ್ನ ಧನದಾಶೆಗೆ ಆ ಕೆಲಸವನ್ನು ಮಾಡುವನು ಹೋಗು." ದ್ರುಪದನ ಮಾತಿಗೆ ಯಾಜನು ಸಮ್ಮತಿಸಿ, ಅವನಿತ್ತ ಅರ್ಬುದ ಗೋದಾನವನ್ನು ಸ್ವೀಕರಿಸಿದನು. ಉಪಯಾಜನನ್ನೂ ಬಹು ಧನದಿಂದ ಸಂತೋಷಪಡಿಸಿ ಯಾಜನು ದ್ರುಪದನ ಯಜ್ಞಶಾಲೆಗೆ ಕರೆತಂದನು. ದ್ರೋಣ ಹಂತಕ ಕುಮಾರನನ್ನು ಯಾಜನು, ಅರ್ಜುನ ಪತ್ನಿ ಕುವರಿಯನ್ನು ಉಪಯಾಜನು ಸಂಕಲ್ಪಿಸಿ, ಹೋಮಿಸಿದರು. ಆಗ ಜನಿಸಿ ದವರೇ ಧೃಷ್ಟದ್ಯುಮ್ನ ದ್ರೌಪದಿಯರು. ಧೃಷ್ಟದ್ಯುಮ್ನನು ಅಗ್ನಿಯ ಅಂಶದಿಂದ ಜನಿಸಿ, ದ್ರುಪದರಾಜನಿಗೆ ಹರ್ಷಪ್ರದನಾದನು. ಸುಭಗಳು, ಸುರೂಪಳು, ನೀಲ ಕುಂಚಿತ ಮೂರ್ಧಜಳು, ತಾಮ್ರತುಂಗನಖಿಯು ಆದ ದ್ರೌಪದಿಯು ದೇವ ದಾನವ ಮಾನವರ ಮನವನ್ನು ಸೆಳೆಯುವ ತರುಣೀಮಣಿಯಾಗಿ ಬೆಳೆದಳು. ಯಾಜೋಪ ಯಾಜರಂತಹ ಮಹಾತ್ಮರು ನುಡಿದ ಮಾತು ಸುಳ್ಳಾಗದೆಂದು ನಂಬಿ, ದ್ರುಪದನು ಈಗ ಸ್ವಯಂವರವನ್ನು ಸಾರಿರುವನು. ಅದಕ್ಕೆ ಪಾಂಡವರು ಬರುವರೆಂದು ಅವನು ನಂಬಿದನು. ವಿಧಿಯು ಬಲವತ್ತರವಾಗಿರುವುದೆಂದರಿತು ದ್ರೋಣನು ತನ್ನನ್ನು ಕೊಲ್ಲಲು ಹುಟ್ಟಿದ ಧೃಷ್ಟದ್ಯುಮ್ನನಿಗೆ ಸಕಲಾಸ್ತ್ರಗಳನ್ನು ಕಲಿಸಿ ಕೀರ್ತಿಗಳಿಸಿದನು. ದ್ರೌಪದಿಯ ಕೈಪಿಡಿವ ಪಾರ್ಥನು ಎಲ್ಲಿ ಪ್ರಚ್ಛನ್ನನಾಗಿರುವನೋ? ಪಾಂಡವರು ಕ್ಷೇಮದಿಂದಿದ್ದು, ತಮ್ಮ ರಾಜ್ಯವನ್ನು ತಾವು ಹೊಂದಿ ಸುಖಿಸುವುದನ್ನು ನಮ್ಮ ಕಣ್ಣಿಂದ ನೋಡುವ ಭಾಗ್ಯವನ್ನು ಶ್ರೀಶನು ನಮಗೆ ದಯಪಾಲಿಸಲಿ!" ಎಂದು ಆ ವಿಪ್ರನು ನುಡಿದನು.

ಪಾಂಡವರು ಉತ್ತರಕ್ಕೆ ಪಯಣಿಸಿ ಗಂಗಾತೀರವನ್ನು ಸೇರಿದಾಗ ರಾತ್ರಿಯಾಗಿತ್ತು. ಎಲ್ಲರೂ ದೂರದಲ್ಲಿ ಬರುತ್ತಿದ್ದರು. ಎಲ್ಲರಿಗೂ ಮುಂದಾಗಿ ಅರ್ಜುನನು ಸಂರಕ್ಷಿಸುತ್ತಾ ಇರಲು ಭೀಮನು ಗುಂಪಿನ ಹಿಂದೆ ರಕ್ಷಕನಾಗಿ ಬರುತ್ತಿದ್ದನು. ಕೈಯಲ್ಲಿ ಉರಿಯುವ ಕೊಳ್ಳಿಯನ್ನೆತ್ತಿ ಹಾದಿ ನೋಡಿ ನಡೆವ ಅರ್ಜುನನನ್ನು, ಗಂಗೆಯಲ್ಲಿ ಜಲಕ್ರೀಡೆಯಾಡುತ್ತಿದ್ದ ಚಿತ್ರರಥನೆಂಬ ಗಂಧರ್ವನು ನೋಡಿದನು. ನಿಶೀಥದಲ್ಲಿ ಬಂದ ಮನುಜರ ಸಾಹಸವನ್ನು ಸಹಿಸದೆ, ಅವನು ಧನುಷ್ಟಂಕಾರವನ್ನು ಮಾಡುತ್ತಾ, 'ಮನುಜ ಸಂಚಾರಯೋಗ್ಯವಲ್ಲದ ಅರ್ಧರಾತ್ರಿಯಲ್ಲಿ ಜಲವನ್ನು ಸೇರಬರುವ ನಿಮ್ಮನ್ನು ವಧಿಸುವೆನು. ಇಂದ್ರಭೃತ್ಯನು, ಕುಬೇರಸಖನು ಆದ ಚಿತ್ರರಥನೆಂದು ನನ್ನನ್ನು ತಿಳಿಯಿರಿ! ಈ ವನವು, ಈ ಗಂಗಾತೀರವು ನನ್ನದಾಗಿದೆ. ನಿಲ್ಲಿ!' ಎಂದು ಗುಡುಗಿದನು. ಅರ್ಜುನನು ಅವನನ್ನು ನೋಡಿ ನಗುತ್ತಾ "ಎಲವೋ ದುರಹಂಕಾರಿ! ಗಂಗೆಯನ್ನು ಸೇವಿಸಲು ಕಾಲನಿಯಮವಿಲ್ಲ. ಅರ್ಧರಾತ್ರಿಯು ಅಕಾಲದಲ್ಲಿ ನಿರಾಘೋಷವಾಗಿ ಸರ್ವದೇಶವನ್ನು ಚರಿಸಲು ಸಮರ್ಥರಾದ ನಮ್ಮಲ್ಲಿ ನಿನ್ನ ದರ್ಪ ಉಳಿಯದು. ಗಂಗಾ, ಯಮುನೆ, ಸರಸ್ವತಿ, ಗೋದಾ, ಸರಯೂ, ಗೋಮತಿ, ಗಂಡಕಿ, ಕೃಷ್ಣಾ, ಕಾವೇರಿ, ತುಂಗಭದ್ರಾ ಎಂಬ ನದಿಗಳಲ್ಲಿ ಅತಿ ಪಾವನೆ ಎನಿಸಿದ ಗಂಗೆಯಲ್ಲಿ ನಿರೋಧವಿಲ್ಲ. ನಿನ್ನ ಪರಾಕ್ರಮಕ್ಕೆ ನಾವು ಹೆದರುವುದಿಲ್ಲ" ಎಂದು ತಾನೂ ಧನುಷ್ಟಂಕಾರವನ್ನು ಮಾಡಿದನು. ಗಂಧರ್ವನು ಬಿಟ್ಟ ಬಾಣಗಳನ್ನೆಲ್ಲ ತುಂಡರಿಸಿ, ಕ್ರುದ್ಧನಾದ ಪಾರ್ಥನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಆ ದಿವ್ಯಾಸ್ತ್ರವು ಅವನ ರಥವನ್ನು ಸುಟ್ಟು, ಅವನನ್ನೂ ದಹಿಸಲು ತೊಡಗಿದಾಗ, ಅರ್ಜುನನು ಹಾರಿ, ಅವನನ್ನು ಕೇಶದಿಂದ ಹಿಡಿದು, ತಂದು ಧರ್ಮರಾಜನ ಮುಂದೆ ನಿಲ್ಲಿಸಿದನು. ಅದನ್ನು ನೋಡಿ ಭೀತಳಾಗಿ ಗಂಧರ್ವಿ ಕುಂಭೀನಸಿಯು ಧರ್ಮರಾಜನಿಗೆ ಪಾದಾಕ್ರಾಂತಳಾದಳು. ಪತಿಭಿಕ್ಷೆಯನ್ನು ಬೇಡಿದ ಅವಳನ್ನು ಮನ್ನಿಸಿ, ಧರ್ಮಜನು ಗಂಧರ್ವನನ್ನು ಬಿಡುವಂತೆ ಪಾರ್ಥನಿಗೆ ಅಪ್ಪಣೆ ಇತ್ತನು. ಗಂಧರ್ವರಾಜನು ಶಿರಬಾಗಿ ಪಾರ್ಥರಿಗೆ ನಮಿಸಿದನು. ಸ್ವರ್ಣವರ್ಣನಾಗಿದ್ದ ಚಿತ್ರರಥನು ಅಂದಿನಿಂದ ಆಗ್ನೇಯಾಸ್ತ್ರದ ದಾಹದಿಂದ ಕೆಂಬಣ್ಣದವನಾಗಿ ಅಂಗಾರವರ್ಣನೆನಿಸಿದನು. ಅವನೂ ಅಗ್ನಿಯ ಬಾಣವನ್ನರಿತಿದ್ದನು. ಆದರೆ ಅಷ್ಟು ಚನ್ನಾಗಿ ತಿಳಿಯದ ಗಂಧರ್ವನು ತನ್ನ ಚಾಕ್ಷುಷೀವಿದ್ಯೆಯನ್ನು ಸ್ವೀಕರಿಸಿ, ಆಗ್ನೇಯಾಸ್ತ್ರವನ್ನು ಉಪದೇಶಿಸೆಂದು ಅರ್ಜುನನನ್ನು ಬೇಡಿದನು. ವಿದ್ಯಾವಿನಿಮಯವು ಕೂಡದೆಂದು ತಿಳಿದ ಅರ್ಜುನನು ಧರ್ಮಾರ್ಥವಾಗಿಯೇ ಆಗ್ನೇಯವನ್ನು ಅವನಿಗೆ ಕೊಟ್ಟು, ಮುಂದೆ ಎಂದಾದರೂ ಧರ್ಮದಿಂದಲೇ ನಿನ್ನ ಅಂತರ್ಧಾನ ವಿದ್ಯೆಯನ್ನು ಸ್ವೀಕರಿಸುವೆನೆಂದು ಹೇಳಿದನು. ಅಂಗಾರವರ್ಣನು ಕೃತಜ್ಞನಾಗಿ ಪಾಂಡವರಿಗೆ ಒಬ್ಬೊಬ್ಬರಿಗೆ ಒಂದು ನೂರು ದಿವ್ಯಾಶ್ವಗಳನ್ನು ಬೇಕಾದಾಗ ತಂದು ಸಮರ್ಪಿಸುವೆನೆಂದನು. ಅರ್ಜುನನು ಅವನ ಸೌಹಾರ್ದದಿಂದ ಪ್ರೀತನಾಗಿ ಅವನನ್ನು ತನ್ನ ಮಿತ್ರನೆಂದು ಸ್ವೀಕರಿಸಿದನು.

ಚಿತ್ರರಥನಾಗ ಅರ್ಜುನನಿಗಿಂತೆಂದನು—"ಅಯ್ಯಾ! ನೀವು ವಿಪ್ರರಿಂದ ಕೂಡಿ ಬಂದಿದ್ದರೆ ನಿಮಗೆ ಯಕ್ಷ ರಾಕ್ಷಸ ಗಂಧರ್ವಾದಿ ಉಪದ್ರವವಿರುತ್ತಿದ್ದಿಲ್ಲ. ಅವಿವಾಹಿತ ರಾದ್ದರಿಂದ ಅನಗ್ನಿಗಳೂ ಆಗಿದ್ದು, ನೀವು ನನ್ನ ಘರ್ಷಣೆಗೆ ಒಳಗಾದಿರಿ. ನೀವಾರು ಎಂಬುದನ್ನು ನಾರದಾದಿಗಳಿಂದ ಕೇಳಿ ತಿಳಿದಿರುವೆನು. ಧರ್ಮ ವಾಯು ಶಕ್ರ ನಾಸತ್ಯ ದಸ್ರರ ದಿವ್ಯಾಂಶಗಳಿಂದ ಜನಿಸಿದ ನೀವು ಸಾಮಾನ್ಯರಲ್ಲ. ಆದರೂ ಸ್ತ್ರೀಜನ ಸಮಕ್ಷದಲ್ಲಿ ದರ್ಪದಿಂದ ನಿಮ್ಮ ಮೇಲೇರಿಬಂದಿದ್ದು ನಿಜ. ತಪ್ಪಾಯಿತು. ನೀವು ಇನ್ನು ಮೇಲೆ ಪುರೋಹಿತ ಸಹಾಯರಾಗಿ ಪ್ರವರ್ತಿಸಿ! ಇದರಿಂದ ನಿಮಗೆ ಭೀತಿಯೂ ಇರಲಾರದು; ಬ್ರಾಹ್ಮಣ ಪ್ರಮುಖವಾದ ರಾಜ್ಯವು ಸ್ಥಿರವಾಗಿ ನಿಲ್ಲುವುದು. ಬ್ರಾಹ್ಮಣರ ಅನುಗ್ರಹದಿಂದ ಧರ್ಮವೃದ್ಧಿ, ಪ್ರಜಾಲಾಭ, ಶತ್ರು ಜಯಗಳು ಕರತಲಾಮಲಕವಾಗುವುದಲ್ಲದೆ, ಸದ್ವಿಪ್ರರು ಮೋಕ್ಷಸಾಧನಜ್ಞಾನವನ್ನೂ ನೀಡಿ ಉದ್ಧರಿಸುವರು.

"ಹಿಂದೆ ನಿಮ್ಮ ವಂಶದವನಾದ ಸಂವರಣನೆಂಬ ರಾಜವರನಿದ್ದನು. ಅವನು ಬೇಟೆಯಾಡಲು ಹಿಮವತ್ಪರ್ವತ ಕಂದರವನ್ನು ಸೇರಿದನು. ಸೈನ್ಯವನ್ನು ಬಿಟ್ಟು ಮೃಗ ಪರಿಧಾವನನಾದ ರಾಜನು ಒಂಟಿಗನಾದನು. ಅವನ ಕುದುರೆಯು ಶ್ರಾಂತವಾಗಿ ಬಿದ್ದು ಮೃತವಾಗಲು ರಾಜನು ಪದಾತಿಯಾಗಿ ಸಂಚರಿಸುತ್ತ, ಒಬ್ಬ ಕನ್ಯೆಯನ್ನು ಕಂಡನು. ಸೂರ್ಯನ ಕಿರಣಗಳನ್ನು ಬಂಗಾರದ ಬಟ್ಟಲಲ್ಲಿಟ್ಟು ಕರಗಿಸಿ, ಅಚ್ಚೊತ್ತಿದ ಪ್ರತಿಮೆ ಯಂತಿದ್ದ ಅಸಿತನಯನೆಯನ್ನು ನೋಡಿದ ರಾಜನು ಅವಳನ್ನು ಸಮೀಪಿಸಿ ತನ್ನನ್ನು ವರಿಸೆಂದು ಪ್ರಾರ್ಥಿಸಿದನು. ಅವಳು—"ರಾಜನ್! ನನ್ನ ಮನವೂ ನಿನ್ನ ದಿವ್ಯ ದರ್ಶನದಿಂದ ಪರವಶವಾಗಿದೆ. ಆದರೆ ನಾನು ಅಸ್ವತಂತ್ರಳು. ಕನ್ಯೆಗೆ ತಂದೆಯ ಅಪ್ಪಣೆಯಿಂದಲ್ಲದೆ ತಾನಾಗಿ ವರನನ್ನು ವರಿಸಿ ದುಡುಕಿ ಕೆಡಲಹುದೇ ? ಸೂರ್ಯನ ಪುತ್ರಿ ತಪತಿ ಎಂದು ನನ್ನನ್ನು ತಿಳಿ. ನಮ್ಮಪ್ಪನನ್ನು ಕೇಳಿ ನನ್ನ ಕೈ ಪಿಡಿ" ಎಂದು ಹೇಳಿ ಅಂತರ್ಧಾನಳಾದಳು. ತತ್‌ಕ್ಷಣವೇ ರಾಜನು ವಿರಹಾಗ್ನಿಯಿಂದ ಬೆಂದು ಮೂರ್ಛೆ ಹೊಂದಿ ಬಿದ್ದನು. ಮಂತ್ರಿಗಳು ಮಹಾರಾಜನನ್ನು ಹುಡುಕುತ್ತಾ ಬಂದು, ಅವನನ್ನು ಆ ಸ್ಥಿತಿಯಲ್ಲಿ ಕಂಡು ದಿಗ್ಭ್ರಾಂತರಾದರು. ರಾಜನನ್ನು ನಗರಕ್ಕೆ ಕರೆತಂದು, ಪುರೋಹಿತನಾದ ವಸಿಷ್ಠನಿಗೆ ವಿಷಯವನ್ನರುಹಿ, ರಾಜನನ್ನು ಕಾಪಾಡಲು ಕೇಳಿಕೊಂಡರು. ವಸಿಷ್ಠನು ದಿವ್ಯದೃಷ್ಟಿಯಿಂದ ರಾಜನು ತಪತಿ ಸಂಸಕ್ತ ಮಾನಸನಾಗಿರುವುದನ್ನರಿತು, ಸೂರ್ಯನನ್ನು ತಪದಿಂದ ಮೆಚ್ಚಿಸಿದನು. ಸೂರ್ಯನು ಸಮರ್ಪಿಸಿದ ತಪತಿಯನ್ನು ಸಂವರಣನಿಗಿತ್ತು ಮಹಾರಾಜನನ್ನು ಸಂರಕ್ಷಿಸಿದನು. ಸಂವರಣನ ರಾಜ್ಯದಲ್ಲಿ ಅನಾವೃಷ್ಟಿಯು ತಲೆದೋರಿ ಪ್ರಜರು ಹಾಹಾಕಾರವನ್ನು ಮಾಡುತ್ತಿದ್ದಾಗ, ವಸಿಷ್ಠನು ತಪೋಬಲದಿಂದ ಇಂದ್ರನನ್ನು ಸಂತೋಷಪಡಿಸಿ, ಸುಭಿಕ್ಷವಾಗುವಂತೆ ಮಾಡಿದನು.

"ವಸಿಷ್ಠನೆಂದರೆ ಸಾಮಾನ್ಯ ಮುನಿಯಲ್ಲ. ಅವನು ಬ್ರಹ್ಮದೇವನ ಮಾನಸ ಪುತ್ರನು. ಆ ಮಹಾನುಭಾವನ ಚರಣ ದಾಸರಂತಿದ್ದರು ಕಾಮ-ಕ್ರೋಧಾದಿ ಶತ್ರುಗಳು. ವಿಶ್ವಾಮಿತ್ರನು ಪೂರ್ವ ದ್ವೇಷದಿಂದ ತನ್ನ ಮಕ್ಕಳನ್ನು ಸೌದಾಸನಿಂದ ಕೊಲ್ಲಿಸಿದಾಗಲೂ, ಕುಶಿಕವಂಶೋನ್ಮೂಲನಕ್ಕೆ ತೊಡಗಲಿಲ್ಲ. ಶಕ್ತನಾಗಿದ್ದೂ, ವಿಧಿಗೆ ತಲೆಬಾಗಿ, ಯಮನಿಂದ ಸುತರ ಪುನರ್ಜೀವನವನ್ನೂ ಬೇಡಲಿಲ್ಲ. ಅವನ ಅನುಗ್ರಹದಿಂದ ಇಕ್ಷ್ವಾಕುವಂಶಪ್ರಭವರಾದ ಪ್ರಭುಗಳು ಸಕಲ ಸಂಪತ್ಸಮೃದ್ಧರಾಗಿ ಬಾಳಿದರು. ಇಂದ್ರಾಂಶ ಸಂಭೂತನಾದ ಗಾಧಿರಾಜನ ಮಗನಲ್ಲವೇ ವಿಶ್ವಾಮಿತ್ರ ! ಒಂದು ಸಲ ವಿಶ್ವಾಮಿತ್ರನು ಬೇಟೆಯಾಡಲು ಹೋಗಿ ವಸಿಷ್ಠಾಶ್ರಮವನ್ನು ಸೇರಿದನು. ಬಂದ ರಾಜನಿಗೆ ವಸಿಷ್ಠನು ನಂದಿನಿ ಧೇನುವಿನ ಅನುಗ್ರಹದಿಂದ ಮೃಷ್ಟಾನ್ನವನ್ನಿತ್ತು ತಣಿಸಿದನು. ವಿಶ್ವಾಮಿತ್ರನಿಗೆ ನಂದಿನಿಯನ್ನು ಅಪಹರಿಸುವ ಕೇಡುಬುದ್ಧಿ ಅಂಕುರಿಸಿತು. ಅದನ್ನು ಕೊಡಲೊಲ್ಲದ ಮುನಿಯನ್ನು ಧಿಕ್ಕರಿಸಿ, ಬಲಾತ್ಕಾರವಾಗಿ ಸೆಳೆದುಕೊಂಡು ಹೋಗುವಾಗ, ನಂದಿನಿಯು ಮುನಿವರನಿಗೆ ಮೊರೆಯಿಟ್ಟಳು. 'ಬ್ರಾಹ್ಮಣನಾದುದರಿಂದ ನಾನೇನೂ ಮಾಡಲಾರೆನು. ನಿನ್ನನ್ನು ನೀನೇ ರಕ್ಷಿಸಿಕೋ' ಎಂದು ನುಡಿದ ವಸಿಷ್ಠನ ಶಮದಮಾದಿಗಳಿಗೆ ಮೆಚ್ಚಿ, ಸುರ ಸುರಭಿ ತನ್ನ ಅವಯವಗಳಿಂದ ದ್ರಾವಿಡ, ಶಕ, ಪುಳಿಂದಾದಿ ಭಟರನ್ನು ಸೃಜಿಸಿತು. ಅವರು ವಿಶ್ವಾಮಿತ್ರನನ್ನು ಸದೆಬಡಿದು ಓಡಿಸಿದರು. ಸಸೈನ್ಯವಾಗಿ ಹಿಂದಿರುಗಿದ ವಿಶ್ವಾಮಿತ್ರನು ಬ್ರಾಹ್ಮಣ ಬಲವೇ ಬಲವೆಂದೆಣಿಸಿ, ತೀವ್ರ ತಪದಿಂದ ಬ್ರಾಹ್ಮಣನಾದನು. ಬ್ರಾಹ್ಮಣನಿಗೆ ನರಮಾಂಸವನ್ನಿತ್ತ ಪಾಚಕನ ಅಪರಾಧದಿಂದಲೂ, ಸ್ವಯಂಶಕ್ತಿಯನ್ನು ಧಿಕ್ಕರಿಸಿ ಕಶಾಘಾತದಿಂದ ನೋಯಿಸಿದುದರಿಂದಲೂ, ಮಿತ್ರಸಹನು ರಾಕ್ಷಸನಾಗೆಂದು ಶಪಿಸಲ್ಪಟ್ಟಿದ್ದನು. ಇದನ್ನರಿತು ವಿಶ್ವಾಮಿತ್ರನು ಕಿಂಕರನೆಂಬ ರಕ್ಕಸನನ್ನು ಮಿತ್ರಸಹನಲ್ಲಿದ್ದು, ವಸಿಷ್ಠನಿಗೆ ಕೇಡು ಮಾಡೆಂದು ಹೇಳಿಕಳಿಸಿದನು. ರಾಕ್ಷಸವೇಷದಿಂದ ಮಿತ್ರಸಹನು ವಿವೇಕರಹಿತನಾಗಿ, ವಸಿಷ್ಠನ ಪುತ್ರರಾದ ಶಕ್ತಿಪ್ರಮುಖಮುನಿವರರು ನೂರು ಜನರನ್ನು ಸಂಹರಿಸಿದನು. ಪುತ್ರಶೋಕದಿಂದ ಸಾಯಲು ಬಗೆದು ನದಿಯಲ್ಲಿ ಬಿದ್ದ ವಸಿಷ್ಠನನ್ನು ಕೊಲ್ಲಲೊಲ್ಲದೆ, ಆ ನದಿಯು ನೂರು ಸರಳಾಗಿ, ಶತದ್ರು ಎನಿಸಿತು; ಕಟ್ಟಿಕೊಂಡು ಇನ್ನೊಂದು ನದಿಯಲ್ಲಿ ಬಿದ್ದ ವಸಿಷ್ಠನ ಪಾಶಗಳನ್ನು ಬಿಡಿಸಿ ಆ ನದಿಯು ವಿಪಾಶಾ ಎನಿಸಿತು. ಪುನಃ ಬ್ರಹ್ಮರ್ಷಿಯು ಆತ್ಮಹತ್ಯೆಗೆಂದು ಪರ್ವತಾಗ್ರವನ್ನು ಏರಿ ಬೀಳಲಿದ್ದಾಗ, ಆಕಾಶವಾಣಿಯು ಅವನನ್ನು ನಿವಾರಿಸಿ 'ವಂಶಾಂಕುರವಿದೆ' ಎಂದು ಅಭಯವನ್ನಿತ್ತಿತು. ಶಕ್ತಿಪತ್ನಿಯಲ್ಲಿದ್ದ ಕೂಸು ದೇವ ವಚನದಂತೆ, ತನ್ನನ್ನು ಕೊಲ್ಲಲು ಬರುತ್ತಿದ್ದ ಸೌದಾಸನನ್ನು ಧಿಕ್ಕರಿಸಿ, ವೇದಘೋಷವನ್ನು ಮಾಡುತಾ, ಬೆಳೆದು, ಜನಿಸಿತು. ಆ ಕೂಸಿಗೆ ಪರಾಶರನೆಂದು ಹೆಸರಿಟ್ಟು, ವಸಿಷ್ಠನು ಸಮಾಧಾನ ಹೊಂದಿದನು. ಮತ್ತು ದ್ರೋಹಿಯಾದ ಸೌದಾಸನನ್ನು ಕ್ಷಮಿಸಿ, ವಿಶಾಪವನ್ನಿತ್ತನು. ಆಗ ಸೌದಾಸನು ತನ್ನಿಂದ ನಡೆದ

ಬ್ರಹ್ಮದ್ರೋಹವನ್ನು ನೆನೆದು ನೊಂದು, ವಸಿಷ್ಠನ ಪಾದಗಳಿಗೆ ಬಿದ್ದು, ಕ್ಷಮಿಸೆಂದು ಬೇಡಿದನು. ವಸಿಷ್ಠನು ಅವನನ್ನು ಕ್ಷಮಿಸಿ ಪುತ್ರರಹಿತನಾದ ರಾಜನಿಗೆ ಮಿತ್ರಾವರುಣೇಷ್ಟಿಯಿಂದ ಸತ್ಪುತ್ರನನ್ನೂ ಕರುಣಿಸಿದನು. ಅವನೇ ಅಶ್ಮಕನೆನಿಸಿ ಪ್ರಖ್ಯಾತನಾದನು.

"ಪರಾಶರನು ತನ್ನ ತಂದೆಯನ್ನು ಸಂಹರಿಸಿದ ಕ್ರೂರ ರಾಜನ ವೃತ್ತಾಂತವನ್ನು ಕೇಳಿದನು. ಕುಪಿತನಾಗಿ ಆ ಮಹಾನುಭಾವನು ಸರ್ವಲೋಕ ನಾಶವಾಗಲೆಂದು ತಪವನ್ನು ಕೈಕೊಂಡನು. ಆಗ ವಸಿಷ್ಠನು ತನ್ನ ಪೌತ್ರನನ್ನು ಶಾಂತನನ್ನಾಗಿ ಮಾಡಿ—ಹಿಂದೆ ಭೃಗು ಕುಲದ ಔರ್ವನೂ ನಿನ್ನಂತೆಯೆ, ತನ್ನ ಪೂರ್ವಜರನ್ನೆಲ್ಲ ಧನಾಶಾಗ್ರಸ್ತ ಮಾನಸರಾಗಿ ಸಂಹರಿಸಿ, ಅವರ ಧನವನ್ನು ಕದ್ದ ಕೃತವೀರ್ಯನ ವಂಶಜರಾದ ದುಷ್ಟರಾಜರನ್ನು ನಾಶಮಾಡಲೆಣಿಸಿ ತಪಸ್ಸನ್ನು ಮಾಡಿದನು. ಅವನು ಪಿತೃಜನರ ಮಾತಿನಿಂದ ಕ್ರೂರವಾದ ತಪಸ್ಸನ್ನು ನಿಲ್ಲಿಸಿ, ಈಗ ಔರ್ವಾಗ್ನಿ ಎಂಬ ರೂಪದಿಂದ ಸಮುದ್ರದಲ್ಲಿರುವನು. ಪಾಪದ ಶಿಕ್ಷೆ ಆಗದಿದ್ದರೆ ಪಾಪಿಷ್ಠರು ಪ್ರಬಲರಾಗುವರು ನಿಜ ! ಆದರೂ ಅದು ವಿಪ್ರರ ಕೆಲಸವಲ್ಲ. ಔರ್ವನ ವಂಶದಲ್ಲಿ ಜನಿಸಿದ ಪರಶುರಾಮನು ಸಕಲ ಕ್ಷತ್ರಿಯಸಂಹಾರ ಮಾಡಿ, ಆ ಪಾಪವನ್ನು ಕಳೆಯಲು, ಲೋಕದ ಜನರಂತೆ, ತಾನೂ ತೀರ್ಥಯಾತ್ರೆಯನ್ನು ಮಾಡಿರುವನು. ಆದುದರಿಂದ ಪರಾಶರನೇ ! ನಿನ್ನ ತೀವ್ರ ತಪವನ್ನು ನಿಲ್ಲಿಸು !—ಎಂದು ವಸಿಷ್ಠನು ಮೊಮ್ಮಗನ ಹಿಂಸಾ ಕಾರ್ಯವನ್ನು ತಡೆದನು. ಇಂತಹ ವಸಿಷ್ಠನ ಮಹಿಮೆಯನ್ನು ನಿನಗೆ ಹೇಳಿರುವೆನು.

"ಅರ್ಜುನ ! ನೀವೂ ಪವಿತ್ರನು, ತಪೋಧನನು, ಶಾಂತನು, ಬ್ರಹ್ಮಜ್ಞಾನಿಯು ಆದ ಪುರೋಹಿತನನ್ನು ವರಿಸಿ, ಅವನಿಂದ ಸಕಲ ಶ್ರೇಯಸ್ಸನ್ನೂ ಸಂಪಾದಿಸಿರಿ ! ದೇವಲನ ತಮ್ಮನಾದ ಧೌಮ್ಯನು ಸರ್ವ ಶಮದಮಾದಿ ಗುಣವಿಶಿಷ್ಟನಾಗಿರುವನು. ವಸಿಷ್ಠನಂತೆ ತಪೋನಿಧಿಯಾದ ಆ ಮಹರ್ಷಿಯು ಸಮೀಪದಲ್ಲೇ ಉತ್ಕೋಚಕತೀರ್ಥದಲ್ಲಿ ನೆಲಸಿರುವನು. ಅವನನ್ನು ನೀವು ಪುರೋಹಿತನನ್ನಾಗಿ ಪಡೆಯಿರಿ !" ಎಂದು ಗಂಧರ್ವನು ನುಡಿದು, ಅವರನ್ನು ಬೀಳ್ಕೊಂಡನು.

ಪಾಂಡವರು ಉತ್ಕೋಚಕತೀರ್ಥವನ್ನು ಸೇರಿ, ಧೌಮ್ಯನನ್ನು ಪುರೋಹಿತನಾಗಿ ರಕ್ಷಿಸೆಂದು ಬೇಡಿದರು. ಆ ಮಹರ್ಷಿಯು ಸಂತೋಷದಿಂದ ಪಾಂಡವಪುರೋಹಿತನಾಗಿ, ಅವರನ್ನು ಕರೆದುಕೊಂಡು, ಪಾಂಚಾಲಪುರಿಗೆ ಹೊರಟನು. ಸ್ವಸ್ತಿವಾಚನದಿಂದ ಪ್ರಹರ್ಷಿತರಾದ ಪಾಂಡವರು, ವಿಪ್ರಾಶೀರ್ವಾದಗಳನ್ನು ಸ್ವೀಕರಿಸಿ ದ್ರೌಪದೀಕರಗ್ರಹಣ ರಾಜ್ಯಲಾಭಗಳು ಪ್ರಾಪ್ತವಾದಂತೇ ತಿಳಿದು, ಸ್ವಯಂವರೋತ್ಸವ ದರ್ಶನಾಕಾಂಕ್ಷಿಗಳಾದ ವಿಪ್ರವರರನ್ನು ಕೂಡಿ, ಪಾಂಚಾಲ ನಗರವನ್ನು ಮುಟ್ಟಿದರು. ಶ್ರೀ ವ್ಯಾಸನು ಅವರಿಗೆ ಕಾಣಿಸಿ 'ಕಲ್ಯಾಣವಾಗಲಿ !' ಎಂದು ಹರಸಿ, ಮತ್ತೆ ಮದುವೆಯ ಕಾಲದಲ್ಲಿ ದರ್ಶನವೀಯುವೆನೆಂದು ಅಭಯವನ್ನಿತ್ತನು.

## ದ್ರೌಪದೀ ಸ್ವಯಂವರ

ಪಾಂಡವರು ಕುಂತಿಯೊಡನೆ ಪಾಂಚಾಲಪುರಿಯನ್ನು ಮುಟ್ಟಿ, ಒಬ್ಬ ಕುಂಭಕಾರನ ಮನೆಯಲ್ಲಿ ತಂಗಿದರು. ದ್ರುಪದನು ಅರ್ಜುನನಿಗೆ ಕೊಡಲು ಪಡೆದ ಕನ್ಯೆಯನ್ನು ಇತರರಿಗೆ ಕೊಡಲು ಇಷ್ಟವಿಲ್ಲದೆ, ದೊಡ್ಡ ಧನುಸ್ಸನ್ನೂ, ಮತ್ಸ್ಯಯಂತ್ರವನ್ನೂ ಮಾಡಿಸಿ, ಸ್ವಯಂವರವನ್ನು ಸಾರಿದ್ದನು. ಅರ್ಜುನಾದಿ ಪಾಂಡವರು ಸ್ವಯಂವರಕ್ಕೆ ಬರುವರೆಂಬ ವಿಶ್ವಾಸಭರದಿಂದ, ದ್ರುಪದನು ಮತ್ಸ್ಯಯಂತ್ರವನ್ನು ಛೇದಿಸಿದವನಿಗೇ ಕುಮಾರಿಯನ್ನು ಕೊಟ್ಟು ಮದುವೆ ಮಾಡುವೆನೆಂದು ಘೋಷಿಸಿದನು.

ಸ್ವಯಂವರಕ್ಕೆಂದು ರಾಜರು ನಾನಾದೇಶಗಳಿಂದ ಬಂದರು. ವಿಪ್ರರು ಭೋಜನ ದಕ್ಷಿಣೆಗಳಿಗಾಗಿ ನೆರೆದಿದ್ದರು. ಪೌರರು ಜಾನಪದರು ಉಕ್ಕಿಬರುವ ಸಾಗರದಂತೆ ಯಜ್ಞಸೇನನ ವಿವಾಹಮಂಟಪದಲ್ಲಿ ತುಂಬಿದ್ದರು. ಅಪರಾಜಿತವೆನಿಸಿದ ಈಶಾನ್ಯದಿಕ್ಕಿನ ದ್ವಾರದಿಂದ ಪ್ರವೇಶಿಸಿ, ರಾಜನ್ಯರು ಸಿಂಹಾಸನಗಳಲ್ಲಿ ಸುಖಾಸೀನರಾದರು. ತೋರಣ ಮಂಡಿತವು, ಪುಷ್ಪಮಾಲಾ ಸಮಲಂಕೃತವು, ಅಗರುಧೂಪ ಧೂಪಿತವು, ಚಂದನಗಂಧ ಜಲ ಸೇಚಿತವು ಆದ ಮಂಟಪವು ಕೈಲಾಸದ ಉಪವನದಂತಿತ್ತು. ದ್ವಾರದೇಶದ ತೂರ್ಯ ಭೇರೀ ಕಾಹಳಗಳು ಮೊಳಗಿದ ಶಬ್ದವು ಮುಗಿಲು ಮುಟ್ಟಿ, ದೇವತೆಗಳಿಗೆ ಆಹ್ವಾನವಿತ್ತಿತು. ಸುತ್ತಮುತ್ತಿನ ಹತ್ತಾರು ಪ್ರಾಸಾದಗಳು ತಲೆ ಎತ್ತಿ ಮಹೋತ್ಸವವನ್ನು ನೋಡಲು ಬಂದ ದೇವಜನರಂತೆ ಕಂಗೊಳಿಸಿದವು. ವಿಪ್ರವರರು ತಮಗಾಗಿದ್ದ ವಿಶಾಲಾವರಣದಲ್ಲಿ ಕುಳಿತರು. ಅವರ ಮಧ್ಯದಲ್ಲಿ ಪಂಚಪಾಂಡವರೂ ಮೇಘಮಂಡಲದಿ ಹೊಳೆಯುವ ಕವಿ, ಕಾವ್ಯ, ಶಶಿ, ರವಿ, ಬುಧರಂತೆ ವಿರಾಜಿಸಿದರು. ಪೌರರು ಜಾನಪದರು ಯಥಾಯೋಗ್ಯ ಮಂಚಗಳಲ್ಲಿ ನೆರೆದು, ಎವೆಯಿಕ್ಕದೆ ಉತ್ಸವವನ್ನು ನೋಡುತ್ತಿದ್ದರು.

ತೂರ್ಯಘೋಷದ ಸೂಚನೆಯೊಂದಿಗೆ ದ್ರುಪದನಂದಿನಿ ರಂಗಸ್ಥಲವನ್ನು ಪ್ರವೇಶಿಸಿದಳು. ಸ್ನಾತಾಲಂಕೃತಳು, ಸುವಿಭೂಷಿತಳು, ಪಟ್ಟೆ ಪೀತವಸನಳು ಆದ ಕೃಷ್ಣೆ ಕೈಯಲ್ಲಿ ಕಾಂಚನ ಕುಸುಮಮಾಲೆಯನ್ನು ಪಿಡಿದು ಬಂದಾಗ ಸರ್ವರ ನೇತ್ರ ಚಕೋರಗಳು, ಆ ಸುಂದರಿಯ ವದನೇಂದು ದರ್ಶನದಿಂದ ಆನಂದಿತವಾದವು. ಜನರ ಕಲಕಲನಾದವು ಮುಗಿಲಿಗೆದ್ದು, ನೋಡಲು ಬಂದ ದೇವತೆಗಳ ಭಾಷಣ ಘೋಷದಲ್ಲಿ ಲೀನವಾಯಿತು. ಪುರೋಹಿತನು ಯಜ್ಞಕುಂಡದಲ್ಲಿ ಆಹುತಿಗಳನ್ನರ್ಪಿಸಿ, ಸ್ವಸ್ತಿವಾಚನ ಮಾಡಿ, ವಿಪ್ರರನ್ನು ಪೂಜಿಸಿದನು. ಆಗ ಧೃಷ್ಟದ್ಯುಮ್ನನು ತಂಗಿಯನ್ನು ಕರಪಂಕಜದಿಂದ ಪಿಡಿದು ಕರೆತಂದು, ವಾದ್ಯಗಳನ್ನು ನಿಲ್ಲಿಸಿ, ಸಭೆಯನ್ನು ನೋಡಿ, ಮೇಘಗಂಭೀರರವದಿಂದ ಇಂತೆಂದನು—

"ರಾಜನ್ಯರೇ! ವಿಪ್ರವರರೇ! ನೋಡಿ ಈ ಧನುವನ್ನು! ಇದೇ ಮತ್ಸ್ಯಯಂತ್ರವು. ಇವು ಬಾಣಗಳು. ಕೇಳಿ! ಯಂತ್ರದ ಛಿದ್ರದಿಂದ ಗುರಿಯಿಟ್ಟು, ಐದು

ಶರಗಳಿಂದ ಗಿರಗಿರ ತಿರುಗುತ್ತಿರುವ ಮತ್ಸ್ಯವು ಕೆಳಗೆ ಬೀಳುವಂತೆ ಹೊಡೆಯುವ ವೀರನು ನನ್ನ ತಂಗಿಯಾದ ಕೃಷ್ಣೆಯನ್ನು ಪಡೆಯಲು ಅರ್ಹನಾಗುವನು.' ಇಂತು ಸಾರಿ, ಧೃಷ್ಟದ್ಯುಮ್ನನು ತನ್ನ ಭಗಿನಿಯನ್ನು ನೋಡಿ "ಕೃಷ್ಣೇ! ನೋಡಿದೆಯಾ ನೆರೆದಿರುವ ರಾಜನ್ಯರನ್ನು! ದುರ್ಯೋಧನಾದಿ ಕೌರವರು ಇಲ್ಲಿ ಕೂತಿರುವರು. ಕರ್ಣನೂ ಅವರ ಸಮೀಪದಲ್ಲೇ ಇರುವನು. ಇವರು ಗಾಂಧಾರ ರಾಜರು. ವಿರಾಟ ಪುತ್ರರಾದ ಕಂಕ ಭೂಮಿಂಜಯರಿವರು. ಚೇದಿಪ ಶಿಶುಪಾಲನಿವನು. ಮದ್ರರಾಜ ನಾದ ಶಲ್ಯನನ್ನು ನೋಡು! ಸುದಕ್ಷಿಣ, ಪೌಂಡ್ರಕ, ಜರಾಸಂಧರೂ ಮಹಾ ಪರಾಕ್ರಮಿಗಳು. ಯದುವಂಶರಾದ ಕೃಷ್ಣ ಬಲರಾಮರೂ ಅಲ್ಲಿ ಕೂತಿರುವರು ಈ ರಾಜರೆಲ್ಲರೂ ನಿನಗಾಗಿ ಬಂದಿರುವರು. ಇವರಲ್ಲಿ ಮತ್ಸ್ಯಭೇದನವನ್ನು ಮಾಡುವ ಮಹಾವೀರನು ನಿನ್ನ ಕೈ ಪಿಡಿಯುವ ಭಾಗ್ಯವನ್ನು ಹೊಂದುವನು" ಎಂದು ನಸು ನಕ್ಕು ಸುಮ್ಮನಾದನು.

ಆಗ ದೇವತೆಗಳು ವಿಮಾನಗಳಲ್ಲಿ ಸಸ್ತ್ರೀಕದಂಬರಾಗಿ ಕೂತು, ಅಂಬರವನ್ನು ತುಂಬಿದರು. ದೈತ್ಯ, ದಾನವ, ಗಂಧರ್ವ, ಯಕ್ಷಕಿನ್ನರಾದಿಗಳೂ ಆಕಾಶದಲ್ಲಿ ನೆರೆದು ಉತ್ಸವದರ್ಶನ ಕುತುಕರಾಗಿದ್ದರು. ಶ್ರೀಕೃಷ್ಣನು ವಿಪ್ರಮಧ್ಯದಲ್ಲಿ ಕೂತಿರುವ ಪಾರ್ಥರನ್ನು ಗುರ್ತಿಸಿ, ಬಲರಾಮನಿಗೆ ರಹಸ್ಯವಾಗಿ ತಿಳಿಸಿದನು. ಬಲರಾಮನೂ ಹರ್ಷಿತನಾದನು. ಶ್ರೀಕೃಷ್ಣನಾಜ್ಞೆಯಂತೆ ಯದುವೀರರು ಮತ್ಸ್ಯಯಂತ್ರ ಭೇದನ ವನ್ನು ಮಾಡಲೆಣಿಸದೆ, ಪ್ರೇಕ್ಷಕರಾಗಿದ್ದರು. ಧರ್ಮಜ, ಭೀಮ, ಪಾರ್ಥ, ನಕುಲ ಸಹದೇವರ ಹೃದಯಕುಂಚಕವು ದ್ರೌಪದಿಯ ದರ್ಶನದಿಂದ ಮನ್ಮಥನ ಪಂಚಬಾಣ ಗಳಿಂದ ವಿದ್ಧವಾಗಿ, ಕೃಷ್ಣಾರೂಪವನ್ನು ವಿವರಗಳಿಂದ ತಂದು ತುಂಬಿಕೊಂಡು, ಆನಂದತುಂದಿಲವಾಯಿತು. ಶ್ರೀಕೃಷ್ಣನಿಗೆ ಮನಸಾ ನಮಿಸಿ, ತಮ್ಮ ಮನದ ಕೋರಿಕೆಯನ್ನು ಸಫಲವಾಗಿಸೆಂದು ಅವರು ಬೇಡಿದರು.

ಕೆಲ ರಾಜರು ಧನುಸ್ಸನ್ನು ಸಮೀಪಿಸಿ, ಅದನ್ನು ನೋಡಿ, ಸುಮ್ಮನೆ ಹಿಂದಿರುಗಿ ಹೋದರು. ಕೆಲವರು ರೋಷಪೂರಿತರಾಗಿ ಧನುಸ್ಸನ್ನು ಎತ್ತಲು ಪ್ರಯತ್ನಿಸಿ, ಅದು ಮೇಲೆ ಬಿದ್ದಾಗ ಜನಾಪಹಾಸಕ್ಕೆ ಗುರಿಯಾದರು. ಇಂತು ಅನೇಕ ರಾಜರು ಪ್ರಯತ್ನಿಸಿ ಬಿಲ್ಲಿಗೆ ಹೆದೆಯನ್ನೇರಿಸಲಾಗದೆ ಹಿಂದಿರುಗಿದರು. ಗರ್ಜಿಸಿದಷ್ಟು ಮಳೆಯಾಗುವುದೇ? ಆಗ ಶಿಶುಪಾಲನು ಬಂದು ಧನುಸ್ಸನ್ನು ಬಗ್ಗಿಸಿ ಜ್ಯಾಬಂಧನವನ್ನೂ ಮಾಡಲೆಣಿಸಿ, ಒಂದು ಮಾಷಾಂತರವಿರುವಾಗ ಹೆದೆಬಿಟ್ಟು, ಧನುಸ್ತಾಡಿತನಾಗಿ ಬಿದ್ದನು. ಶಲ್ಯನು ಮುದ್ಗಮಾತ್ರಾಂತರವಿದ್ದಾಗ ಬಿಲ್ಲು ಬಡಿದು ಕೆಳಗುರುಳಿದನು. ಮಾಗಧನು ಸರ್ಷಪಮಾತ್ರಾಂತರವಿರುವಾಗ ಧನುಸ್ತಾಡಿತನಾಗಿ ಬಿದ್ದನು. ಅವನು ಲಜ್ಜಿತನಾಗಿ ತನ್ನ ಪರಿವಾರದೊಡನೆ ಮಗಧೆಗೆ ಹೊರಟು ಹೋದನು. ಬಲವಂತನಾದ ಜರಾಸಂಧನ ಪಾಡನ್ನು ಕಂಡು, ಇತರ ರಾಜರು ಸುಮ್ಮನಿದ್ದರು. ದುರ್ಯೋಧನನ ಅನುಜ್ಞೆಯಿಂದ ಅವನಿಗಾಗಿ ಕರ್ಣನು ಧನುವನ್ನು

ಹಿಡಿದು ಜ್ಯಾಬಂಧವನ್ನು ಮಾಡುತ್ತಾ, ರೋಮಮಾತ್ರಾಂತರದಲ್ಲಿ ಬಿಲ್ಲು ಬಡಿದು ಬಿದ್ದನು. 'ಅರ್ಜುನನಿಗಲ್ಲದೆ ಬೇರೆಯವರಿಗೆ ಧನುರ್ಬಂಧನವು ಅಶಕ್ಯವಾಗಲಿ !' ಎಂಬ ರುದ್ರವರವಿದ್ದುದರಿಂದ ಆ ಕಾರ್ಯವು ಪರಶುರಾಮಶಿಕ್ಷಿತಾಸ್ತ್ರನಾದ ಕರ್ಣನಿಗೂ ಸಾಧ್ಯವಾಗಲಿಲ್ಲ.

ಆಗ ವಿಪ್ರಗಣದ ಮಧ್ಯದಿಂದ ಅರ್ಜುನ-ಭೀಮರು ಎದ್ದು ನಿಂತರು. ಅದನ್ನು ನೋಡಿ ವಿಪ್ರರು 'ಭೋಜನಸಮಯವಾಗಿಲ್ಲ ಕೂಡೆ'ಂದು ಒದರಿದರು. ಕೆಲ ವಿಪ್ರರು 'ಕರ್ಣ, ಶಲ್ಯ ಮುಂತಾದ ವೀರರಿಂದಾಗದ ಕಾರ್ಯ ಇವನಿಂದಾಗುವುದೇ ? ಅಪ ಹಾಸ್ಯಕ್ಕೆ ಗುರಿಯಾಗಲಿರುವ ಈ ದುರ್ಬಲ ವಟುವಿನನ್ನು ಹಿಡಿದು ನಿಲ್ಲಿಸಿ ! ನಮ್ಮೆಲ್ಲರ ಮಾನವನ್ನುಳಿಸಿ !' ಎಂದರು. ಕೆಲವರು 'ಇದೇನು ಮಾತು ? ಯುವಕನು, ತೇಜಸ್ವಿಯು ಮತ್ತು ನಾಗೇಂದ್ರ ವಿಕ್ರಮನು ಆದ ಬಾಲಕನು ಹೋಗಲಿ ! ಅವನು ತನ್ನ ಬಲ ವೀರ್ಯಗಳ ಅರಿವಿಲ್ಲದೆ ಸಾಹಸಕ್ಕೆ ತೊಡಗಿರುವನೇ ? ತಪೋನಿಧಿಗಳಾದ ವಿಪ್ರರಿಗಸಾಧ್ಯವಿಲ್ಲ. ಕ್ಷತ್ರಿಯ ಕುಲಾಂತಕವಾದ ಪರಶುರಾಮ, ಸಮುದ್ರವನ್ನೇ ಕುಡಿದ ಅಗಸ್ತ್ಯ ಈ ಮೊದಲಾದವರು ವಿಪ್ರರಲ್ಲವೇ ?' ಎಂದು ಅರ್ಜುನನನ್ನು ಹುರಿದುಂಬಿದರು.

ಅರ್ಜುನನು ಧನುಸ್ಸನ್ನು ಸಮೀಪಿಸಿ, ಅದಕ್ಕೆ ಪ್ರದಕ್ಷಿಣವಾಗಿ, ವಂದಿಸಿ, ಶ್ರೀಕೃಷ್ಣನಿಗೆ ಮನಸಾ ಅಭಿನಮಿಸಿದನು : ಬಿಲ್ಲನ್ನೆತ್ತಿ ಅನಾಯಾಸವಾಗಿ ಸಜ್ಜವನಾಗಿ ಮಾಡಿದನು : ಬಾಣವನ್ನು ಹೂಡಿ, ಉದಕಸ್ಥ ಪ್ರತಿಬಿಂಬವನ್ನು ನೋಡುತ್ತಾ, ಮತ್ಸ್ಯಯಂತ್ರವನ್ನು ಭೇದಿಸಿದನು : ದ್ರೌಪದಿಯ ಕಣ್ಣನ್ನು ಸ್ಪರ್ಧಿಸಿದ ದೋಷಕ್ಕೆ ಶಿಕ್ಷೆ ಎಂಬಂತೆ ಮೀನನ್ನು ತುಂಡರಿಸಿ ಕೆಳಗೆ ಕೆಡಹಿದನು. ವಿಪ್ರರು ಆನಂದೋದ್ರೇಕದಿಂದ ಮೇಲಕ್ಕೆದ್ದು, ಕೃಷ್ಣಾಜಿನಗಳನ್ನು, ಅಂಗವಸ್ತ್ರಗಳನ್ನು ಹಾರಿಸುತ್ತಾ, ಜಯ ಜಯ ಧ್ಯಾನವನ್ನು ಮಾಡಿದರು. ದೇವತೆಗಳು ಇಂದ್ರಸುತನ ಮೇಲೆ ಪುಷ್ಪವೃಷ್ಟಿಯನ್ನು ಕರೆದು, ದುಂದುಭಿಗಳನ್ನು ಬಾರಿಸಿದರು. ಸೂತಮಾಗಧವಂದಿಗಳ ಪ್ರಶಂಸಾ ವಾಕ್ಯಗಳು ತೂರ್ಯನಾದ ವಾದ್ಯಘೋಷಗಳಿಂದ ಮೇಳವಿಸಿದವು. ದ್ರುಪದನು ಮಹಾನಂದಪರವಶನಾಗಿ ಪಾರ್ಥನ ಸಹಾಯಕ್ಕೆಂದು ಸೈನ್ಯತತಿಯಿಂದ ಕೂಡಿ ಬಂದು ನಿಂತನು. ದ್ರೌಪದಿಯು ಬಿದ್ದ ಮೀನನ್ನು, ಎದುರಿಗಿದ್ದ ಪಾರ್ಥನ ಶಕ್ರಸಮರೂಪವನ್ನು ನೋಡಿ, ಹಿಡಿದ ನವ ಕಂಜಮಾಲೆಯನ್ನು ಅವನ ಕೊರಳಿಗೆ ಹಾಕಿ, ತಲೆಬಾಗಿ ನಿಂತಳು.

ಇದನ್ನು ಕಂಡು ದುರ್ಯೋಧನಾದಿ ರಾಜರು ಕುಪಿತರಾದರು. ತಮ್ಮನ್ನು ಅಲ್ಲಗೆಳೆದು ಬಡ ಹಾರವನಿಗೆ ಮಗಳನ್ನು ಕೊಡುವ ದ್ರುಪದನಲ್ಲಿ ಸಿಟ್ಟಿನಿಂದ ಸೈನ್ಯಸಮೇತರಾಗಿ, ಅವರನ್ನು ಮುತ್ತಿದರು. ಕ್ಷತ್ರಿಯರಿಗೇ ಸ್ವಯಂವರವು, ವಿಪ್ರರಿಗಲ್ಲವೆಂದರು. ಚಾಪಲ್ಯದಿಂದ ಬಿಲ್ಲನ್ನು ಬಗಿದು, ಕಾಕತಾಳೀಯವಾಗಿ, ಮೀನನ್ನು ಕೆಡಹಿದ ಬಾಲಬ್ರಹ್ಮಚಾರಿಗೆ ಗೋ ಭೂದಾನಗಳನ್ನಿತ್ತು, ಕನ್ಯೆಯನ್ನು ಸ್ವೀಕರಿಸುವೆ

ನೆಂದು ಮೇಲೇರಿ ಬರುವ ರಾಜರನ್ನು ನೋಡಿ, ಭೀತನಾಗಿ ದ್ರುಪದನು ವಿಪ್ರರೂಪೀ ಪಾರ್ಥರಿಗೆ ಶರಣಾದನು. ಅದ್ಭುತ ಭೀಮಕರ್ಮನಾದ ಭೀಮಸೇನನು ರಾಜನ್ಯಾಪ ಸದರ ಸೊಕ್ಕನ್ನು ಮುರಿಯಲೆಣಿಸಿ, ವೃಕ್ಷವನ್ನು ಕಿತ್ತಿ, ಅವರನ್ನು ಸದೆಬಡಿದು, ಸೈನಿಕರನ್ನು ಸಂಹರಿಸಿದನು. ಪಾರ್ಥನು ಅಣ್ಣನ ಪರಾಕ್ರಮವನ್ನು ನೋಡಿದನು. ತಾನೂ ಧನುರ್ಬಾಣ ಪಾಣಿಯಾಗಿ ಶರಜಾಲದಿಂದ ಶತ್ರುಜಾಲದಿಂದ ಶತ್ರು ಜನರನ್ನು ಕೊಂದನು.

ಆಗ ಕೃಷ್ಣನು ಪರಮಾನಂದದಿಂದ ಪಾರ್ಥರನ್ನು ಪ್ರತ್ಯೇಕವಾಗಿ ಹಲಾಯುಧ ನಿಗೆ ತೋರಿಸಿ ಯುಧಿಷ್ಠಿರ ಯಮಳರನ್ನನುಸರಿಸಿ ಕುಲಾಲಗೃಹಕ್ಕೆ ತೆರಳಿದನು. ಬ್ರಾಹ್ಮಣರು ಉತ್ಸಾಹದಿಂದ ಸಾಲಾಗಿ ನಿಂತು, ದಂಡಕಾಷ್ಟ ಕೃಷ್ಣಾಜಿನಗಳನ್ನೆತ್ತಿ, ಕೇಕೆಗಳನ್ನು ಹಾಕಿದರು. ಮಂತ್ರಬಲದಿಂದ ರಾಜರನ್ನು ಕೊಂದುಬಿಡುವೆವೆಂದರು. ಭೀಮಸೇನನು ತನ್ನನ್ನೆದುರಿಸಿದ ಶಲ್ಯನನ್ನು ಮೇಲಕ್ಕೆತ್ತಿದನು. ಮಾವನೆಂದು ಸ್ಮರಿಸಿ, ಮೆಲ್ಲಕ್ಕೆ ಕೆಳಗೆ ಒಗೆದನು. ಶಲ್ಯನು ನಾಚಿ ತನ್ನ ರಾಜ್ಯಕ್ಕೆ ಹೊರಟು ಹೋದನು. ಕರ್ಣನು ಫಲ್ಗುನನೊಡನೆ ಕಾದು, ಅವನ ಶರಸಂಧಾನ ದಿವ್ಯಾಸ್ತ್ರ ನೈಪುಣ್ಯವನ್ನು ಕಂಡು 'ನೀನಾರು ? ಅರ್ಜುನನೋ ? ಇಂದ್ರನೋ ? ವಿಪ್ರರ ತಪವೇ ಮೂರ್ತಿವೆತ್ತ ಧನುರ್ವಿದ್ಯೆಯೋ ? ಅಲ್ಲದಿರೆ ನನ್ನನ್ನು ಸರಿಹೋಲುವದಿತರ ರಿಗೆ ಶಕ್ಯವೇ !' ಎಂದು ಕೇಳಿದನು. ಅರ್ಜುನನದಕ್ಕೆ 'ಕರ್ಣ ನಾನು ಆ ಮೂವರಲ್ಲಿ ಒಬ್ಬನಿರುವೆನೆಂದಾದರೇನು ? ಯಾರಾದರೇನು ? ಯುದ್ಧಕ್ಕೆ ನಿಲ್ಲು !' ಎಂದು ಹಂಗಿಸಿ, ಬಾಣವರ್ಷದಿಂದ ಕರ್ಣನನ್ನು ಪೀಡಿಸಿದನು. 'ಬ್ರಾಹ್ಮಣ ವಿರೋಧವೆನಗೆ ಬೇಡ' ಎಂದು ಕರ್ಣನು ವಿಮುಖನಾದನು. ಕೌರವ ರಾಜನು ಅವನೊಡನೆ ಕೂಡಿ ಅಸೂಯಾ ವಹ್ನಿಜ್ವಾಲೆಯಲ್ಲಿ ಕುದಿಯುತ್ತ ಹಸ್ತಿನಾವತಿಗೆ ಹೋದನು.

ಶ್ರೀಕೃಷ್ಣನ ಅನುನಯ ವಚನಗಳಿಂದ ಕೆಲ ರಾಜರು ಮೊದಲೇ ಹೊರಟು ಹೋಗಿದ್ದರು. ಭೀಮಸೇನ ಧನಂಜಯರು ವಿಪ್ರಮಧ್ಯದಿಂದ ಪ್ರಯಾಣಿಸಿ, ದ್ರೌಪದಿ ಯೊಡನೆ ಮನೆಗೆ ಹೊರಟರು. ಅಲ್ಲಿ ಕುಂತಿಯು ಮಕ್ಕಳ ಕ್ಷೇಮ ವಿಚಾರವನ್ನು ಮಾಡುತ್ತಿರುವಾಗ ಧರ್ಮಜನು ಸಹೋದರರಿಂದಲೂ ದ್ರೌಪದಿಯಿಂದಲೂ ಕೂಡಿ ಮನೆಗೆ ಬಂದು 'ಅಮ್ಮಾ ! ಭಿಕ್ಷೆಯನ್ನು ತಂದಿರುವೆ'ವೆಂದನು. ಒಳಗಿನಿಂದ ಕುಂತಿಯು 'ಐವರು ಹಂಚಿಕೊಂಡು ತಿನ್ನಿರಿ !' ಎಂದಳು ; ಹೊರಗೆಬಂದು ನೋಡಿದ ಕುಂತಿಗೆ ತಂದ ಭಿಕ್ಷೆಯು ಹೆಣ್ಣೆಂದು ತಿಳಿದಾಗ ದಿಗ್ಭ್ರಾಂತಳಾದಳು. ದ್ರೌಪದಿಯನ್ನು ನೋಡಿ ಸಾನಂದಳಾದ ಕುಂತಿ, ಅವಳನ್ನು ಒಳಗೆ ಕರೆದುಕೊಂಡು ಹೋದಳು. ಧರ್ಮ ರಾಜಾದಿಗಳನ್ನು ನೋಡಿ ಅವಳಿಂತೆದಳು—

'ಕಾಣದೆ ನಾನು ಏನು ಹೇಳಿದರೂ, ಕಂಡಮೇಲೆ ಅದನ್ನು ಹಿಂದೆಗೆದುಕೊಳ್ಳ ಲಾರೆ. ಇವಳು ನಿಮ್ಮ ಐವರಿಗೂ ಸತಿಯಾಗಿರಲಿ ! ನನ್ನ ಮಾತು ಸುಳ್ಳಾಗಿಲ್ಲ ; ಆಗಕೂಡದು. ಇದು ಅಧರ್ಮವಲ್ಲವೆಂದು ನನ್ನ ಮನಸ್ಸು ಹೇಳುತ್ತಿದೆ.' ಈ ಮಾತನ್ನು

ಕೇಳಿದ ಪಾಂಡುನಂದನರು ತಮ್ಮ ಚಿತ್ತವವಳಲ್ಲಿ ಹತ್ತಿರುವುದು ನಿಜವೆಂದರಿತರು. ಅರ್ಜುನನೂ ಮಾತೆಯ ಮಾತಿನಂತೆ ನಡೆಯುವುದು ಶ್ರೇಯಸ್ಕರವೆಂದನು. ಆಗ ಶ್ರೀಕೃಷ್ಣ ಬಲರಾಮರು ಅಲ್ಲಿಗೆ ಬಂದರು. ಶ್ರೀಕೃಷ್ಣನು ಧರ್ಮಜನಿಗೂ ಕುಂತಿಗೂ ವಂದಿಸಿ, ಭೀಮಾರ್ಜುನರನ್ನಪ್ಪಿ, ಯಮಳರನ್ನೂ ದ್ರೌಪದಿಯನ್ನೂ ಹರಸಿ, ಅವರ ಸಮೀಪದಲ್ಲಿ ಬಲರಾಮನೊಡಗೂಡಿ ಆಸೀನನಾದನು. 'ಕಸ್ತೂರಿಯನ್ನು ಬಚ್ಚಿಟ್ಟರೂ ಸುವಾಸನೆಯನ್ನು ತಡೆಯಲಾಗುವುದೇ ? ಅಗ್ನಿಯನ್ನು ಹಚ್ಚಡದಿಂದ ಮುಚ್ಚಲಾಗುವುದೇ ? ಧರ್ಮರಾಜ ! ನೀವು ಪಾಂಡುಕುಮಾರರೆಂದು ಮೊದಲೇ ತಿಳಿದೆನು. ಅದೃಷ್ಟದಿಂದ ಅಗ್ನಿದಾಹವನ್ನು ಹೊಂದದೇ ಪಾರಾದಿರಿ ; ಪಾಪಿ ದುರ್ಯೋಧನನ ಕುತಂತ್ರವೂ ವಿಫಲವಾಯಿತು. ನಿಮಗೆ ಮಂಗಳವಾಗಲಿ ! ನಾನು ಶತಧನ್ವ ಸಂಹಾರಕ್ಕಾಗಿ ದ್ವಾರಕೆಗೆ ಹೋಗಬೇಕಾಗಿದೆ. ಅಪ್ಪಣೆಕೊಡಿ !' ಎಂದು, ಅವರನ್ನು ಬೀಳ್ಕೊಂಡು, ಬಲರಾಮ ಸಾತ್ಯಕಿ ಪ್ರಮುಖರನ್ನೂ ಕರೆದುಕೊಂಡು ದ್ವಾರಕೆಗೆ ಹೊರಟನು.

ಸಾಯಂಕಾಲವಾಯಿತು. ಧೃಷ್ಟದ್ಯುಮ್ನನು ಕೃಷ್ಣಾ ದೇವಿಯನ್ನು ಪಡೆದ ಬಾಡಬರ ವಿಷಯವನ್ನು ತಿಳಿಯಲೆಣಿಸಿ, ಕುಲಾಲ ಗೃಹಸಮೀಪದಲ್ಲಿ ಅಡಗಿಕೂತು, ನಡೆವ ವೃತ್ತವನ್ನು ನೋಡುತ್ತಿದ್ದನು. ಭೀಮಾದಿಗಳು ಭಿಕ್ಷಾನ್ನವನ್ನು ತಂದು ಧರ್ಮನಿಗೊಪ್ಪಿಸಿದರು. ಆಗ ಕುಂತಿಯು ಕೃಷ್ಣೆಗೆ 'ವತ್ಸೆ ! ಈ ಅನ್ನವನ್ನು ಬಂದ ಬ್ರಾಹ್ಮಣರಿಗೆ ಅತಿಥಿಗಳಿಗೆ ಅನ್ನಾರ್ಥಿಗಳಿಗೆ ನೀಡು. ಮಿಕ್ಕಿದ್ದನ್ನು ಎರಡು ಭಾಗವಾಗಿಸಿ, ಒಂದರ್ಧವನ್ನು ವೃಕೋದರನಿಗೆ ಕೊಡು ! ಇನ್ನರ್ಧದಲ್ಲಿ ಆರು ಭಾಗವಾಗಿಸಿ, ನಾವು ಭುಜಿಸೋಣ'ವೆಂದು ಹೇಳಿದಳು. ಗೌರವರ್ಣನು, ಗಜರಾಜ ಪ್ರತಿಮನು ಆದ ಭೀಮನಿಗೆ ಅರ್ಧವನ್ನಿತ್ತು, ಮಿಕ್ಕವರೆಲ್ಲರು ವಿಪ್ರಶೇಷ ಪವಿತ್ರವಾದ ಅನ್ನವನ್ನುಂಡರು. ಸಹದೇವನು ತೃಣದರ್ಭೆಗಳಿಂದ ಶಯನಗಳನ್ನು ಸಿದ್ಧಮಾಡಿದನು. ಅಜಿನವಸ್ತ್ರಗಳಿಂದ ಸುಸ್ಪರ್ಶವಾದ ಶಯನಗಳಲ್ಲಿ ಪಾಂಡವರೈವರು, ಅವರ ತಲೆಯ ಕಡೆ ಕುಂತಿ, ಪಾದಸಮೀಪದಲ್ಲಿ ದ್ರೌಪದಿ ಮಲಗಿದರು. ನಿದ್ರೆಬಾರದ ಮುನ್ನ ಪಂಚ ಸೋದರರು ನುಡಿವ ಯುದ್ಧ ವಿಚಾರಗಳನ್ನು ಧೃಷ್ಟದ್ಯುಮ್ನನು ಕೇಳಿದನು ; ಇವರು ವಿಪ್ರರಲ್ಲ ; ಸುಕ್ಷತ್ರಿಯರೇ ಎಂದು ಊಹಿಸಿ, ಧೃಷ್ಟದ್ಯುಮ್ನನು ರಾಜ ಪ್ರಾಸಾದವನ್ನು ಮುಟ್ಟಿ ತಂದೆಗೆ ವಾರ್ತೆಯನ್ನು ಮುಟ್ಟಿಸಿದನು.

ಪ್ರಾತಃಕಾಲವಾಗಲು ದ್ರುಪದನು ಸಂತುಷ್ಟನಾಗಿ ತನ್ನ ಪುರೋಹಿತನನ್ನು ಪಾಂಡವರಲ್ಲಿಗೆ ಕಳುಹಿಸಿದನು. ವಚನವಿಶಾರದನಾದ ಪುರೋಹಿತನು, ಧರ್ಮರಾಜನ ಅರ್ಘ್ಯಪಾದ್ಯಾದಿ ಸತ್ಕಾರವನ್ನು ಸ್ವೀಕರಿಸಿ "ದ್ರುಪದಪುತ್ರಿಯು ನಿಮ್ಮವಳಾದುದರಿಂದ ಧನ್ಯಳಾಗಿರುವಳು. ದ್ರುಪದರಾಜನೂ ಪರಮಾನಂದಭರಿತನಾಗಿರುವನು, ಆದರೆ-ತಾವು ಯಾವ ಕುಲದವರು ? ನಿಮ್ಮ ಬಂಧು ಜನರೆಲ್ಲಿರುವರು ? ನಮ್ಮ

ರಾಜನು ಪ್ರಿಯಸಖನಾದ ಪಾಂಡುರಾಜನ ಮನೆಗೆ ಕನ್ಯಾಮಣಿಯನ್ನು ಕೊಡಲೆಣಿಸಿದ್ದನು. ಆ ಮಹಾನುಭಾವನ ಕಾಮಿತವು ಸತ್ಯವಾಗಿ ಫಲಿಸಿದೆ ಎಂದು ನಾನು ತಿಳಿಯಲಾ ?'' ಎಂದು ವಿನಯದಿಂದ ಕೇಳಿದನು. 'ಮೊದಲು ಧನುಸ್ಸನ್ನು ಬಗಿದು ಯಂತ್ರವನ್ನು ಹೊಡೆದವನಿಗೆ ಕೊಡುವೆನೆಂದ ದ್ರುಪದನ ಮಾತಿಗೆ ತಕ್ಕಂತೆ ನಾವು ನಡೆದು, ಕನ್ಯೆಯನ್ನು ಸ್ವೀಕರಿಸಿರುವೆವು. ಈಗೇಕೆ ವರ್ಣವಿಚಾರ ?'' ಎಂದು ಧರ್ಮರಾಜನು, ದ್ರುಪದರಾಜನ ಮನೋರಥವು ಈಡೇರುವುದೆಂದು ವಿಪ್ರನನ್ನು ಸಂತೈಸುತ್ತಿದ್ದನು. ಆ ಸಮಯದಲ್ಲಿ ವಿವಾಹಭೋಜನವು ಸಿದ್ಧವಾಗಿದೆ ಎಂದು ಕರೆಯಲು ಬಂದ ದೂತನ ವಚನವನ್ನು ಕೇಳಿ, ಪುರೋಹಿತನು ಪಾಂಡವರನ್ನು ದಿವ್ಯಕಾಂಚನ ರಥಗಳಲ್ಲಿ ಕರೆತಂದನು.

ಅರಮನೆಯ ಮುಖಶಾಲೆಯು ತೋರಣ ಧ್ವಜ ಪತಾಕೆಗಳಿಂದ ಸಮಲಂಕೃತವಾಗಿತ್ತು. ಅದರಲ್ಲಿ ನಾಲ್ಕು ನಿಟ್ಟಿನಲ್ಲಿ ವಿವಿಧ ಪದಾರ್ಥಗಳು ಕಂಗೊಳಿಸುತ್ತಿದ್ದವು. ಒಂದೆಡೆ ಮಾಲ್ಯ ಫಲಮೂಲಗಳು, ಕೃಷ್ಣಾಜಿನಗಳು, ಪುಸ್ತಕಗಳು, ಭಕ್ಷ್ಯಭೋಜ್ಯಗಳು ; ಮತ್ತೊಂದುಕಡೆ ಧನುರ್ಬಾಣಾದಿ ಆಯುಧಗಳು ; ಇನ್ನೊಂದುಕಡೆ ಗೋವುಗಳು, ಧಾನ್ಯಗಳು ; ಬೇರೊಂದೆಡೆ ಶಿಲ್ಪಕಲಾ ಸಾಧನಗಳು, ಕೃಷ್ಯುಪಕರಣಗಳು ಇಡಲ್ಪಟ್ಟಿದ್ದವು.

ಕುಂತಿಯು ದ್ರೌಪದಿಯೊಡನೆ ರಥದಿಂದಿಳಿದು ಅಂತಃಪುರವನ್ನು ಪ್ರವೇಶಿಸಿದಳು. ರಾಜವನಿತೆಯರು ಅವರನ್ನು ಯಥೋಚಿತವಾಗಿ ಸತ್ಕರಿಸಿದರು. ಪಾಂಡವರು ಮುಖಶಾಲೆಯನ್ನು ಸೇರಿ, ಸಹಜವಾಗಿಯೇ ಸಾಂಗ್ರಾಮಿಕ ಮಂಟಪವನ್ನು ಹೊಕ್ಕರು. ಅಲ್ಲಿದ್ದ ಗದಾ ಖಡ್ಗ ಧನುರ್ಬಾಣಾದಿ ವಿವಿಧಾಯುಧಗಳನ್ನು ಅವರು ಪರೀಕ್ಷಿಸುತ್ತಿದ್ದುದನ್ನು ನೋಡಿ, ದ್ರುಪದರಾಜನು ಅವರು ಕ್ಷತ್ರಿಯರೇ ಇರಬೇಕೆಂದು ನಿಶ್ಚಯಿಸಿ, ಅವರಿಗೆ ಸ್ವಾಗತವಿತ್ತು, ದಿವ್ಯಸಿಂಹಾಸನಗಳಲ್ಲಿ ಕೂಡಿಸಿ, ಮಾಲ್ಯ ಚಂದನಾದಿಗಳಿಂದ ಪೂಜಿಸಿದನು.

"ತಾವು ಬ್ರಾಹ್ಮಣರೋ, ಕ್ಷತ್ರಿಯರೋ ನನಗೆ ತಿಳಿಯದಂತಾಗಿದೆ. ವಿಪ್ರವೇಷದಲ್ಲಿ ಬಂದ ವೃಂದಾರಕರಂತೆ ಮೆರೆಯುವ ನೀವು ಪಂಚಪಾಂಡವರೇ ಎಂದು ನನ್ನ ಮನಸ್ಸಾಕ್ಷಿ ನುಡಿಯುತ್ತಿದೆ. ನನ್ನ ಭಾಗಧೇಯವು ಫಲಿಸಿದೆ. ಸಂಶಯವನ್ನು ಬಿಡಿಸಿ ! ಮುಂದಿನ ವಿವಾಹದ ಶುಭಕಾರ್ಯವು ನಡೆಯುವಂತೆ ಅನುಗ್ರಹಿಸಿ !" ಎಂದು ಪ್ರಾರ್ಥಿಸಿದ ದ್ರುಪದನಿಗೆ ಧರ್ಮರಾಜನು ಅಭಿನಮಿಸಿ, ಆನಂದದಿಂದ ಇಂತು ಪ್ರತಿ ನುಡಿದನು—"ರಾಜನ್ ! ನಾವು ಪಾಂಡವರು ನಿಜ. ಚಿಂತಿಸಬೇಡ. ನಿನ್ನ ಕಾಮಿತವು ಸಫಲವಾಗಿದೆ ಎಂದು ತಿಳಿ." ಧರ್ಮರಾಜನ ವಚನಾಮೃತಪಾನದಿಂದ, ಗತಸಂತಾಪನಾಗಿ ದ್ರುಪದನು ಧರ್ಮರಾಜನಿಂದ ಜತುಗೃಹದಾಹಾದಿ ಸರ್ವವೃತ್ತಾಂತವನ್ನರಿತು ಆನಂದಭರಿತನಾದನು. ಕುಂತೀಸುತರನ್ನು ಸಂತೈಸಿ ರಾಜ್ಯಲಾಭಕ್ಕಾಗಿ ಬೇಕಾದ ಸಹಾಯವನ್ನು ಮಾಡುವ ಭರವಸವಿತ್ತನು. 'ಪಾಣಿಗ್ರಹಣ

ಮಹೋತ್ಸವದಲ್ಲಿ ಕೃಷ್ಣೆಯನ್ನು ಅರ್ಜುನನು ಸ್ವೀಕರಿಸಲಿ' ಎಂದು ಬಿನ್ನವಿಸಿದ ರಾಜನಿಗೆ ಧರ್ಮರಾಜನಿಂತೆಂದನು—"ರಾಜನ್! ನಮ್ಮ ಮಾತೆಯ ಮಾತಿನಂತೆ ನಾವು ಐವರೂ ನಿನ್ನ ಮಗಳ ಪಾಣಿಗ್ರಹಣ ಮಾಡುವೆವು." ದ್ರುಪದನು ವಿಸ್ಮಿತನಾಗಿ "ಧರ್ಮಜ! ವರನೊಬ್ಬನಿಗೆ ಬಹುಪತ್ನಿಯರಾಗಬಹುದಾಗಲಿ, ಪತ್ನಿಯೊಬ್ಬಳಿಗೆ ಬಹುಪತಿಗಳಾಗುವುದು ಧರ್ಮವಿರುದ್ಧವಾಗಿದೆ. ಎಲ್ಲವನ್ನರಿತ ನೀನು ಈ ರೀತಿ ಧರ್ಮವಿರುದ್ಧವಾಗಿ ನುಡಿಯುವುದು ಸರಿಯೇ?" ಎಂದು ಕೇಳಿದನು.

ಆಗ ಭಗವಾನ್ ವ್ಯಾಸನು ಅಲ್ಲಿಗೆ ಆಗಮಿಸಿದನು. ಬಂದ ಮುನಿಚಂದ್ರನಿಗೆ ಚಂದವಾದ ಆಸನವಿತ್ತು ಪೂಜಿಸಿ, ದ್ರುಪದನು ತನ್ನ ಸಂಶಯವನ್ನು ತಿಳಿಸಿ, ಕರ್ತವ್ಯ ವೇನೆಂದು ಪ್ರಶ್ನಿಸಿದನು. 'ಲೋಕ ರೀತಿಯಿಂದಲೂ ವೇದವಚನದಿಂದಲೂ ನಿಷಿದ್ಧ ವಾದ ಬಹುಭರ್ತೃತ್ವವು ಗರ್ಹಿತವಾದುದರಿಂದ ನಾನು ಮಗಳನ್ನು ಪಾಂಡವರಲ್ಲಿ ಒಬ್ಬನಿಗೆ ಮದುವೆ ಮಾಡಿಕೊಡುವೆ'ನೆಂದನು. ಧೃಷ್ಟದ್ಯುಮ್ನನು 'ತಮ್ಮನಾದ ಅರ್ಜುನನು ಗೆದ್ದ ವಧುವನ್ನು ಅಣ್ಣನಾದ ಧರ್ಮರಾಜನೆಂತು ಸ್ವೀಕರಿಸಬಹುದು? ಐದು ಜನರಿಗೆ ಕೃಷ್ಣೆ ಪತ್ನಿಯಾಗುವುದು ಸರಿಯೇ?' ಎಂದು ಕೇಳಿದನು. ಆ ಮಾತಿಗೆ ನಸುನಕ್ಕ ದ್ವೈಪಾಯನನಿಂತು ನುಡಿದನು—

"ದ್ರುಪದ! ಕುಂತಿ ಧರ್ಮರಾಜರು ಜೇಡಿದುದು ತಪ್ಪಲ್ಲ, ಕೇಳು. ಹಿಂದೆ ಪ್ರಾಚೇತಸರು ಹತ್ತು ಜನರು ಮಾರಿಷೆ ಎಂಬ ಸೋಮಪುತ್ರಿಯನ್ನು ಮದುವೆ ಯಾಗಿ ದಕ್ಷನೆಂಬೊಬ್ಬ ಸುತನನ್ನು ಅವಳಲ್ಲಿ ಪಡೆದರು. ದೇವಗುರು ವಚನದಿಂದ ಲೋಕದವರು ಅಧರ್ಮವೆಂದು ತಿಳಿದುದು ಧರ್ಮವೇ ಆಗುತ್ತಿದೆ, ಅಸಾಮಾನ್ಯವಾದ ಈ ವಿಷಯದಲ್ಲಿ ಶಂಕೆ ಬೇಡ!

"ಹಿಂದೆ ನೈಮಿಷಾರಣ್ಯದಲ್ಲಿ ಸತ್ರಯಾಗವು ನಡೆಯಿತು. ಆಗ ಯಮನು ಅಲ್ಲಿ ಶಾಮಿತ್ರಕರ್ಮನಿರತನಾಗಿದ್ದನು. ಆದುದರಿಂದ ಅಂತಕ ವ್ಯಾಪಾರವು ನಿಂತು ಹೋಯಿತು. ಪ್ರಜರು ಸಾಯದಾದರು. ಜನಸಂಖ್ಯೆ ಮಿತಿಮೀರಿ, ಭೂಭಾರ ವಾದಾಗ, ದೇವತೆಗಳು ಬ್ರಹ್ಮನಿಗೆ ಶರಣಾಗತರಾದರು. ಆಗ ಬ್ರಹ್ಮನಿಂತೆಂದನು— 'ಯಮನು ಯಜ್ಞನಿರತನಾಗಿ ಸಂಹಾರಕಾರ್ಯವು ನಿಂತಿದೆ. ಅವನು ತನ್ನ ಅಂಶದಿಂದ ಹುಟ್ಟಿ ಭೂಭಾರಹರಣ ಕಾರ್ಯವನ್ನು ಮಾಡುವನು. ಚಿಂತಿಸಬೇಡಿ!' ಆ ಮಾತನ್ನು ಕೇಳಿ ದೇವೇಂದ್ರನಿಂದ ಕೂಡಿದ ಬೃಂದಾರಕರು ಭೂಮಿಗಿಳಿದು, ಗಂಗಾ ತೀರವನ್ನು ಸೇರಿದರು. ಅಲ್ಲಿ ಒಂದದ್ಭುತ ಕಮಲವನ್ನು ನೋಡಿ, ಇಂದ್ರನು ಸಮೀಪಿಸಿದಾಗ, ಆ ಕಮಲದಿಂದ ಹೊರಬಂದ ಕಮಲನೇತ್ರಿಯನ್ನು ಕಂಡನು. ಅವಳು ಅಳುತ್ತಿದ್ದಳು. ಅವಳ ಕಣ್ಣೀರು ಗಂಗೆಯಲ್ಲಿ ಬಿದ್ದಾಗ ಕಮಲವಾಗಿ ಅರಳು ತ್ತಿತ್ತು. ಇಂದ್ರನು ಅವಳನ್ನು ನೋಡಿ ರೋದನ ಕಾರಣವನ್ನು ಕೇಳಿದನು. ಆಕೆಯು ಅವನನ್ನು ಹಿಮವದ್ಗಿರಿಯ ಶಿಖರಕ್ಕೆ ಕರೆದೊಯ್ದಳು. ಅಲ್ಲಿ ಸುಂದರ ತರುಣನೋರ್ವನು ತರುಣಿಯೊಡನೆ ಪಗಡೆಯಾಡುತ್ತಿದ್ದನು. ಅವನನ್ನು ತೋರಿ,

ಆ ತರುಣಿಯು, ಅವನೇ ವ್ಯಸನಕಾರಣನೆಂದಳು. ಇಂದ್ರನು ಕುಪಿತನಾಗಿ 'ಎಲವೋ! ತ್ರಿಲೋಕೇಶನಾದ ನನ್ನ ಪಾಲನೆಯಲ್ಲಿರುವ ಈ ತರುಣೀಮಣಿಯನ್ನು ಏಕೆ ಅಳಿಸುವೆ ?' ಎಂದನು. ತತ್‌ಕ್ಷಣವೇ ಶಿವನು 'ಇಂದ್ರ ! ದುರಹಂಕಾರಿಯಾದೆ, ಕೆಳಗೆ ಬೀಳು !' ಎಂದು ಶಾಪವಿತ್ತು 'ಗಿರಿ ಕಂದರಲ್ಲಿ ಬಂಡೆಯು ಅಡಿಯಲ್ಲಿ ನಿನ್ನಂತೆ ಬಿದ್ದಿರುವ ನಾಲ್ವರನ್ನೂ ಕೂಡಿ, ನನ್ನ ಶಾಪದಿಂದ ಈ ರಮಣಿಗೆ ನೀವೈವರೂ ಪತಿ ಗಳಾಗಿ !' ಎಂದು ನುಡಿದನು. ಅಂತೆಯೇ ಇಂದ್ರನು ಪರ್ವತದ ಕೆಳಗೆ ವಿವರದಲ್ಲಿ ಕೂತು, ಅವತಾರ ಕಾರ್ಯವನ್ನಾಲೋಚಿಸುವ ಪೂರ್ವೇಂದ್ರರನ್ನು ನಾಲ್ವರನ್ನು ಕಂಡನು. ಅವರು, ಎರಡನೇ ಇಂದ್ರನಾದ ರೋಚನ (ವಾಯು), ಮೂರನೆಯವ ನಾದ ಸತ್ಯಜಿತ್ (ಯಮ), ನಾಲ್ಕನೆಯವನಾದ ನಾಸತ್ಯ, ಐದನೆಯ ದಸ್ರನೆಂಬ ವರು ; ಅವರಲ್ಲಿ ಮುಖ್ಯವಾಯುವಾದ ರೋಚನನೂ ಬಿದ್ದಿರುವನೆಂದು ಶಿವನು ನುಡಿದು ಸ್ತೋತ್ರಮನಿಂದೆಯಿಂದ ಬ್ರಹ್ಮಶಪ್ತನಾಗಿ, ಅಶ್ವತ್ಥಾಮನಾಗಿ ಜನಿಸಿರುವನು. ಮೊದಲನೆ ಇಂದ್ರನು ಸಾಕ್ಷಾದ್ವಿಷ್ಣುವೇ ಅಲ್ಲವೆ ? ಆ ಯಜ್ಞನೇ ಈಗ ಶ್ರೀಕೃಷ್ಣ ನಾಗಿರುವನು. ಅವನ ಶುಕ್ಲಕೇಶಾವೇಶಯುಕ್ತನಾದ ಶೇಷನೇ ಬಲರಾಮನು. ಪುರಂದರನು ಒಂದಂಶ(ತೇಜಸ್ವಿ)ದಿಂದ ಅರ್ಜುನನಾಗಿ ಜನಿಸಿರುವನು. ರೋಚನನೇ ಭೀಮಸೇನನು. ಸತ್ಯಜಿತನೇ ಧರ್ಮರಾಜನು. ನಾಸತ್ಯ ದಸ್ರರೇ ನಕುಲ ಸಹದೇವರು. ಆ ತರುಣಿ ವಿಪ್ರಕನ್ಯೆ; ಅವಳೇ ನಾಲ್ಕನೆಯ ಜನ್ಮದಲ್ಲಿ ದ್ರೌಪದಿಯಾಗಿ ಜನಿಸಿರುವಳು. ಇವಳು ಭಾರತಿಯ ಅಂಶಸಂಭೂತಳು. ಇವಳಲ್ಲಿ ಪಾರ್ವತೀ, ಶಚೀ, ಶ್ಯಾಮಲಾ, ಉಷಾದೇವಿಯರಿರುವರು. ಅವರಲ್ಲಿ ಪಾರ್ವತಿಗೆ ಬ್ರಹ್ಮಶಾಪದಿಂದ ಪತಿಸಂಯೋಗವಿಲ್ಲ. ಮಿಕ್ಕ ದೇವರಮಣಿಯರಿಗೆ ಇಂದ್ರ, ಯಮ, ನಾಸತ್ಯ, ದಸ್ರರೇ ಪತಿಗಳಾಗುವರು. ಭೀಮಸೇನನು ಮುಖ್ಯಪ್ರಾಣನಾದುದರಿಂದ ದೌಪದೀರಮಣನಾಗಿರುವನು. ಮಿಕ್ಕ ಪಾಂಡವರು ನಿತ್ಯವೂ ಕನ್ಯಾವಸ್ಥೆಯನ್ನು ಹೊಂದುವ ತಮ್ಮ ತಮ್ಮ ಸತಿಯರ ರಮಣ ರಾಗಿ ಏಕ ದೇಹ ರತಿಶೀಲರಾಗುವರು. ಇದು ದೇವರ ರಹಸ್ಯವು. ದ್ರುಪದರಾಜ ! ನಿನಗೆ ವಿಶ್ವಾಸವು ಜನಿಸಲಿ ಎಂದು ದಿವ್ಯದೃಷ್ಟಿಯನ್ನಿತ್ತಿರುವೆನು, ನೋಡು !" ಎಂದು ದಿವ್ಯದೃಷ್ಟಿಯನ್ನು ದಯಪಾಲಿಸಿದನು.

ವ್ಯಾಸಾನುಗ್ರಹದಿಂದ ದ್ರುಪದರಾಜನು ಪಂಚೇಂದ್ರರನ್ನೂ, ತನ್ನ ಮಗಳ ಶರೀರದಲ್ಲಿ ಪ್ರತ್ಯೇಕವಾಗಿರುವ ಭಾರತೀ ಸಮಾಶ್ರಿತರಾದ ಶಚೀ, ಶ್ಯಾಮಲಾ, ಉಷಾ ದೇವಿಯರನ್ನೂ ನೋಡಿದನು. ಅವನ ಸಂಶಯವು ದೂರವಾಯಿತು. ಅವನು ಶ್ರೀ ವ್ಯಾಸನಿಗೆ ಕೃತಜ್ಞನಾಗಿ ವಂದಿಸಿ, ದ್ರೌಪದಿಯನ್ನು ಪಂಚಪಾಂಡವರಿಗೆ ಮದುವೆ ಮಾಡಿಕೊಡಲೊಪ್ಪಿದನು.

ಬಂಧುಯುಕ್ತನಾಗಿ ದ್ರುಪದನು ಶ್ರೀವ್ಯಾಸನ ಸನ್ನಿಧಾನದಲ್ಲಿ ಸರ್ವಾಭರಣ ಭೂಷಿತಳಾದ ದ್ರೌಪದಿಯನ್ನು ವಿಧಿಪುರಸ್ಸರವಾಗಿ ಧರ್ಮ, ಭೀಮ, ಪಾರ್ಥ, ನಕುಲ ಸಹದೇವರಿಗೆ ಧಾರೆಯೆರೆದು ಕೊಟ್ಟನು. ಮೃಷ್ಟಾನ್ನಭೋಜನಗಳಿಂದಲೂ ವಿವಿಧ

*

ದಾನಗಳಿಂದಲೂ ಬಹುದಕ್ಷಿಣೆಗಳಿಂದಲೂ ವಿಪ್ರಜನರನ್ನು ಸಂತೋಷಪಡಿಸಿದನು. ಪಾಂಡವರಿಗೆ ವಿವಿಧಾಭರಣಾಂಬರ, ಮಾಲ್ಯ, ಫಲ ತಾಂಬೂಲ, ಶಯ್ಯಾಸನಾದಿ ಗಳನ್ನಿತ್ತು ಸತ್ಕರಿಸಿದನು. ಪಂಚಪತಿಗಳಿಂದ ಪಂಚರೂಪಗಳಾಗಿ ನಿತ್ಯ ನೂತನ ಶೋಭೆಯಿಂದ ಕಂಗೊಳಿಸಿದ ಕೃಷ್ಣೆಯನ್ನು ನೋಡಿ ಸರ್ವಜನರು ವಿಸ್ಮಿತರಾಗಿ, ವ್ಯಾಸದೇವನಿಗೆ ವಂದಿಸಿದರು. ದ್ರುಪದನು ಜಾಮಾತೃವೃಂದವನ್ನು ರಥ ಗಜ ತುರಗ ಪದಾತಿ ಸೈನ್ಯವನ್ನಿತ್ತು ಪೂಜಿಸಿ, ದಾಸೀ ಸಹಸ್ರರೊಡನೆ ಅವರಿಗಾಗಿ ನಿರ್ಮಿಸಿದ ಭವ್ಯ ಮಂದಿರಗಳಿಗೆ ಕಳಿಸಿಕೊಟ್ಟನು. ಅವರು ದಿನಕ್ರಮದಂತೆ ಕೃಷ್ಣಾ ರಮಣಿಯೊಡನೆ ಸುಖದಿಂದಿರುತ್ತಿದ್ದರು. ಕುಂತಿಯು ಸಂತೋಷಿತಳಾದಳು. ತನಗೆ ವಂದಿಸಿ ನಿಂತ ಸೊಸೆಯನ್ನೂ ಪುತ್ರರನ್ನೂ ಆಶೀರ್ವದಿಸಿದಳು—'ಅಮ್ಮಾ! ಕೃಷ್ಣೆ! ಇಂದ್ರನಲ್ಲಿ ಶಚಿಯಂತೆ, ಅಗ್ನಿಯಲ್ಲಿ ಸ್ವಾಹಾದೇವಿಯಂತೆ, ಚಂದ್ರನಲ್ಲಿ ರೋಹಿಣಿ ಯಂತೆ, ವಸಿಷ್ಠನಲ್ಲಿ ಅರುಂಧತಿಯಂತೆ, ನಾರಾಯಣನಲ್ಲಿ ಲಕ್ಷ್ಮಿಯಂತೆ ಪತಿಗಳಲ್ಲಿ ಅನುರಕ್ತಳಾಗಿ, ಶುಚಿ ಸುಮಂಗಲಿಯಾಗಿ ಬಾಳು! ವೀರರನ್ನು ಪುತ್ರರನ್ನಾಗಿ ಪಡೆದು, ಭರತವಂಶದ ಕೀರ್ತಿಯನ್ನು ಮೆರೆಯಿಸು! ಸಾಧು ಸಜ್ಜನ ವೃದ್ಧ ಗುರುಜನರ ಸೇವೆಯಲ್ಲಿ ನಿನ್ನ ಬಾಳು ಸಫಲವಾಗಲಿ! ಪುತ್ರರೇ! ಪೃಥಿವಿಯಲ್ಲಿರುವ ರತ್ನಗಳನ್ನು ಪೊಂದಿ, ರಾಜ್ಯವನ್ನು ರಾಮಚಂದ್ರನಂತೆ ಆಳುತ್ತಾ, ವರ್ಧಿಸಿರಿ!'

ಶ್ರೀಕೃಷ್ಣನು ಪಾಂಡವರಿಗೆ ವಿವಾಹದ ಉಡುಗೊರೆಯನ್ನು ತಂದುಕೊಟ್ಟನು. ವೈಡೂರ್ಯಮಣಿಚಿತ್ರಿತ ನಾನಾಭರಣಗಳು, ಮಹಾರ್ಘವಸ್ತ್ರಗಳು, ರತ್ನಕಂಬಳಗಳು, ರೂಪವದ್ದಾಸ ದಾಸೀ ಜನರು, ಗಜ ತುರಗ ರಥಗಳು, ಮೊದಲಾದ ಅಮೂಲ್ಯ ವಸ್ತುಸಮುದಾಯವನ್ನರ್ಪಿಸಿದ ಕೃಷ್ಣನ ಪ್ರೀತಿಗೆ ಪಾತ್ರರಾಗಿ, ಪಾಂಡವರು ದ್ರುಪದಪುರಿಯಲ್ಲಿ ಸುಖವಾಗಿದ್ದರು. ಶ್ರೀಶನು ತನ್ನವರೊಡನೆ ಕೆಲ ತಿಂಗಳಗಳಲ್ಲಿಯೇ ವಾಸಮಾಡಿ, ಆಮೇಲೆ ಅವರನ್ನು ಬೀಳ್ಕೊಂಡು ತನ್ನ ಪುರಿಗೆ ಪಯಣಿಸಿದನು.

## ರಾಜ್ಯಪ್ರಾಪ್ತಿ

ಪಾಂಡವರು ದ್ರೌಪದಿಯನ್ನು ಮದುವೆಯಾಗಿ ಆನಂದದಿಂದಿರುವ ವಾರ್ತೆ ಯನ್ನು ಚಾರುಮುಖದಿಂದ ಕೇಳಿದ ದುರ್ಯೋಧನಾದಿಗಳು ಕಳೆಗುಂದಿ, ಚಿಂತಾ-ಕ್ರಾಂತರಾದರು. ಅಗ್ನಿದಾಹದಿಂದುಳಿದುದಲ್ಲದೆ, ಕೃಷ್ಣಾಪ್ರಾಪ್ತಿಯನ್ನೂ ಪಡೆದ ಪಾಂಡವರಲ್ಲಿ ಅಸೂಯೆಯಿಂದ, ದೈವವನ್ನು ನಿಂದಿಸಿದರು. ವಿದುರನು ಪಾಂಡುಸುತರ ಕ್ಷೇಮವನ್ನರಿತು, ಹರ್ಷಭರಿತನಾಗಿ, ಧೃತರಾಷ್ಟ್ರನಿಗೆ ಆನಂದದ ಸುದ್ದಿಯನ್ನು ಮುಟ್ಟಿಸಿದನು. ಅಂಧರಾಜನು "ಅಹುದು! ದೈವಾನುಗ್ರಹದಿಂದ ಉಳಿದು ಪಾಂಡವರು ಸುಖವಾಗಿರುವರು. ಅವರಿಗೆ ತಕ್ಕ ಉಡುಗೊರೆಯನ್ನು ಕಳಿಸಿರಿ. ಅವರನ್ನು ನವ ವಧುವಿನೊಡನೆ ಕರೆತನ್ನಿ!" ಎಂದು ಆಜ್ಞಾಪಿಸಿದನು. ವಿದುರನಾ ಮಾತನ್ನಾಲಿಸಿ "ಅಣ್ಣಾ! ಇಂತಹ ನ್ಯಾಯಬುದ್ಧಿಯು ನಿನಗೆ ಸರ್ವೇಶನು ಸರ್ವದಾ ದಯಪಾಲಿಸಬಾರದೇ? ನಾನೇ ಹೋಗಿ ಕುಮಾರರನ್ನು ಕರತರುವೆ"ನೆಂದನು.

ದುರ್ಯೋಧನನಿಗೆ ಅದು ಸಹಿಸದಾಯಿತು. ಅವನು ಕರ್ಣ ಶಕುನಿ ದುಶ್ಶಾಸನ ರಿಂದ ಕೂಡಿ ಆಲೋಚಿಸಿ, ತಂದೆಗೆ ಏಕಾಂತದಲ್ಲಿ ಇಂತು ಬೋಧಿಸಿದನು—"ಎಂತಹ ಅಕಾರ್ಯವನ್ನು ಮಾಡುತ್ತಿರುವೆ ! ಊರ ಹೊರಗಿನ ಮಾರಿಯನ್ನು ಮನೆಯಲ್ಲಿ ಕರೆ ತಂದಂತೆ ಆ ದುಷ್ಟ ಪಾಂಡವರನ್ನು ಮತ್ತೆ ನಾಗಪುರಿಗೆ ಕರೆಸುವುದು ತರವಲ್ಲ. ನಿನ್ನ ಮಕ್ಕಳಿಗೆ ಜೀವದಿಂದಿರಬೇಕಾದರೆ ಭೀಮಾದಿಗಳು ದೂರದಲ್ಲೇ ಇರಲಿ ಅಥವಾ ಅಲ್ಲೇ ಸಾಯಲಿ !" ಎಂದ ಮಗನಿಗೆ ಧೃತರಾಷ್ಟ್ರನು "ಅಹುದು ! ನಾನೂ ಪಾಂಡವರನ್ನು ದೂರವಿಡುವುದೇ ಲೇಸೆಂದು ಅರಿತಿರುವೆನು. ಆದರೆ ವಿದುರನನ್ನು ನೋಯಿಸದಿರಲು ಅವನಂತೆ ಮಾತಾಡುವೆನು. ಶತ್ರುನಾಶಕ್ಕೆ ಏನು ಮಾಡಬೇಕೆಂದಿರುವೆ ?" ಎಂದು ಕೇಳಿದನು. ಮಾಯೋಪಾಯಗಳಿಂದ ಪಾಂಡವರನ್ನು ದ್ರುಪದನಿಂದ ಬೇರ್ಪಡಿಸಿ, ಅವರವರಲ್ಲೆ ದ್ರೌಪದಿನಿಮಿತ್ತವಾದ ದ್ವೇಷಾಗ್ನಿಯನ್ನು ಹುಟ್ಟಿಸಿ, ಅವರನ್ನು ಕೊಲ್ಲುವದು ಕ್ಷೇಮಕರವೆಂದ ದುರ್ಯೋಧನನ ಮಾತನ್ನು ಮನ್ನಿಸದೆ, ವೀರನಾದ ಕರ್ಣನು "ರಾಜನ್ ! ಪಾಂಡವರು ಏಕಮತಿಗಳು. ಭೇದೋಪಾಯವು ಅವರಲ್ಲಿ ಫಲಿಸಲಾರದು. ಸಮೃದ್ಧ ಸಂಪದ್ಯುಕ್ತರಾದ ದ್ರುಪದಾದಿಗಳಲ್ಲಿ, ದಾನೋ ಪಾಯವೂ ನಿರರ್ಥಕವೇ ಅಹುದು. ಭೀಮಸೇನನು ಬದುಕಿರುವವರೆಗೂ ಸಾಮಕ್ಕೆ ಎಡೆಯಿಲ್ಲ. ಅವನೇ ಪಾಂಡವರಲ್ಲಿ ಬಲಾಧಿಕನು. ಬಕ ಹಿಡಿಂಬಾದಿ ರಾಕ್ಷಸರನ್ನು ಕೊಂದು ಬಲವಂತನೆಂದು ಖ್ಯಾತನಾಗಿರುವ ಭೀಮನಿಂದು ದ್ರುಪದರಾಜನ ಅಳಿಯ ನಾಗಿ ದುರ್ಜೇಯನೆನಿಸಿರುವನು. ಇನ್ನೂ ಪ್ರಬಲರಾಗದ ಮುನ್ನ ಪಾಂಡವರನ್ನು ದಂಡೋಪಾಯದಿಂದ ಗೆದ್ದು, ಸಂಹರಿಸಿ, ನಿಶ್ಚಿಂತನಾಗು ! ಕೃಷ್ಣನೂ ಸಹಾಯವಾಗಿ ಬಂದರೆ, ಕಿಚ್ಚಿಗೆ ಗಾಳಿ ನೆರವಾದಂತೆ, ಭೀಮಾರ್ಜುನರು ಉರಿದೆದ್ದು ಕೌರವ ವಂಶ ವನ್ನೇ ನಾಶಪಡಿಸುವರು. ಇಂದೇ ಸೈನ್ಯವನ್ನು ಹೊರಡಿಸು !" ಎಂದನು. ದುರ್ಯೋಧನಾದಿಗಳು ಕರ್ಣನ ವಚನದಂತೆ ಪಾಂಚಾಲಪುರಿಯನ್ನು ಮುತ್ತಲು ಹೊರಟರು.

ಇದನ್ನರಿತು ಪಿತಾಮಹನಾದ ಭೀಷ್ಮನು, ಅವರನ್ನು ತಡೆದು, ರಾಜನಿಗೆ ಇಂತು ಉಪದೇಶಿಸಿದನು—"ಧೃತರಾಷ್ಟ್ರ ! ರಾಜ್ಯವು ನ್ಯಾಯವಾಗಿ ನಿನ್ನದಲ್ಲ; ಪಾಂಡುರಾಜನದು. ಪಾಂಡವರಿಗೆ ಸೇರುವ ರಾಜ್ಯವನ್ನು ಅಪಹರಿಸಿದ ನಿಮಗೆ, ಅಧರ್ಮದ ಭೀತಿಯೂ ಇಲ್ಲ. ಧೃತರಾಷ್ಟ್ರನ ಪಾಲು ದುರ್ಯೋಧನನಿಗಾದರೆ, ಪಾಂಡುರಾಜನ ಪಾಲು ಧರ್ಮನಿಗಾಗಬೇಕಲ್ಲವೇ ? ಪಾಂಡವರಿಗೆ ಅನ್ಯಥಾ ನಡೆ ಯುವ ನಿನ್ನ ಕೀರ್ತಿಯು ಹಾಳಾದೀತು. ಸಂಭಾವಿತನಿಗೆ ಅಪಕೀರ್ತಿಯು ಮರಣಾ ಧಿಕವೆನಿಸುವುದು. ಧರ್ಮದಿಂದ ನಡೆ: ಹಿರಿಯರ ಸನ್ಮಾರ್ಗವನ್ನು ದೂಷಿಸಿ ಕೆಡಬೇಡ ! ಪಾಂಡವ ವೈರವು ಒಳಿತಲ್ಲ. ಅವರನ್ನು ಕರೆಸಿ, ಅವರ ರಾಜ್ಯಭಾಗವನ್ನು ಅವರಿಗೆ ಕೊಡು." ಆಗ ದ್ರೋಣನು "ರಾಜನ್ ! ನಿನಗೆ ಹಿತರೆನಿಸಿದ ನಾವು ಧರ್ಮಾರ್ಥಕಾಮ ಸಮೃದ್ಧಿಯನ್ನು ನಿಮಗೆ ಬಯಸುವುದುಚಿತವಾಗಿದೆ. ಪಾಂಡವರು

ದುರ್ಜಯರು. ಅವರು ರಾಜ್ಯಾರ್ಥವನ್ನು ಬಿಡರು ; ವಜ್ರಧರನಾಗಿ ಬಂದ ಇಂದ್ರನನ್ನೂ ಲೆಕ್ಕಿಸದೆ ತಮ್ಮದಾದ ದಾಯವನ್ನು ಸ್ವೀಕರಿಸುವರು. ಪ್ರೀತಿಯಿಂದ ಕರೆಯಿಸಿ ಆಶೀರ್ವದಿಸು ! ತಂದೆಯಿಲ್ಲದ ಪುತ್ರರನ್ನು ತಂದೆಯಂತೆ ಕಾಣುವುದನ್ನು ಬಿಟ್ಟು, ದುರ್ಯೋಧನಾದಿ ಕುಜನರ ಮಾತಿಗೆ ಮನವಿತ್ತು, ಕೆಡಿಸಲೆಣಿಸುವುದು ಸರ್ವಥಾ ಹಾನಿಕರವೆಂದು ತಿಳಿ !" ಎಂದನು.

ವಿದುರನು ಅಣ್ಣನಿಗೆ ಮತ್ತೆ ವಿವೇಕವನ್ನು ಪುಟ್ಟಿಸಲು ಇಂತೆಂದನು— "ರಾಜನ್ ! ಭೀಷ್ಮದ್ರೋಣರು ವೃದ್ಧರು, ಜ್ಞಾನಿಗಳು, ಸ್ವಾರ್ಥಿಗಳಲ್ಲ. ಅಸೂಯಾಪರರಾದ ಕರ್ಣ ಶಕುನಿಗಳ ಮಾತನ್ನು ಪಾಲಿಸಬೇಡ ! ಈ ಯುವಕರು ಮೂರ್ಖತನದಿಂದ ಕಣ್ಣುಕಾಣದೆ, ಸಿಂಹಪಂಚಕವನ್ನು ಕೇಸರಗಳ ಸೆಳೆದು ಕೆಣಕಿ, ಸಾಯಲಿರುವರು. ತಡೆ ಇವರ ದಂಡಯಾತ್ರೆಯನ್ನು ! ಭೀಮಾರ್ಜುನರನ್ನು ರಣದಲ್ಲಿ ಗೆಲ್ಲಲು ಪುರಂದರನಿಗಳವಲ್ಲ. ನಕುಲ ಸಹದೇವರು ಸಾಮಾನ್ಯ ವೀರರಲ್ಲ. ಯುಧಿಷ್ಠಿರನು ಕುಪಿತನಾದನೆಂದರೆ ಕೃತಾಂತನೇ ಸರಿ ! ಮೇಲಾಗಿ ದ್ರುಪದರಾಜನೂ, ಅವನ ವೀರಸುತರು ಪಾಂಡವರಿಗೆ ಸಹಾಯಕರಾಗಿರುವರು. ಮಿಂಚಿಗೆ ಗುಡುಗಿನಂತೆ ನೆರವಾಗಿ ಬಂದು ಶ್ರೀಕೃಷ್ಣನು ಮೇಲೆರಗಿದರೆ ತ್ರಿಲೋಕದ ಯಾವ ವೀರನೂ ಪಾಂಡವರ ಕಡೆ ಕಣ್ಣೆತ್ತಿ ನೋಡಲಾರನೆಂದು ತಿಳಿ ! ಪುರೋಚನನಿಂದಾದ ಅಗ್ನಿ ದಾಹ ಕಳಂಕವನ್ನು ಇಂದು ಪುತ್ರಪ್ರೇಮ ಸತ್ಕಾರ ಜಲದಿಂದ ತೊಳೆದು ಶುದ್ಧನಾಗು !" ಆ ಮಾತನ್ನಾಲಿಸಿ, ಧೃತರಾಷ್ಟ್ರನು ವಿದುರನನ್ನು ಶ್ಲಾಘಿಸಿದನು.

"ನನಗೆ ದುರ್ಯೋಧನಾದಿಗಳಂತೆ ಧರ್ಮರಾಜಾದಿಗಳೂ ಪುತ್ರರೇ ನಿಜ ! ಅವರಿಗೂ ಅವರ ಪಾಲಿನ ರಾಜ್ಯವನ್ನು ಕೊಡುವೆನು. ವಿದುರಾ ! ಇಂದೇ ಹೋಗಿ ತಾಯಿಯಿಂದ ಕೂಡಿದ ಪಾಂಡವರನ್ನೂ ನನ್ನ ಸೊಸೆಯನ್ನೂ ಕರೆದು ತಾ ! ಅವರಿಗೆ ಕೊಡಬೇಕಾದ ಉಡುಗೊರೆಗಳನ್ನು ಯಥೇಚ್ಛವಾಗಿ ತೆಗೆದುಕೊಂಡು ಹೋಗು !" ಎಂದ ರಾಜನ ಮಾತಿಗೆ ಮೆಚ್ಚಿ, ವಿದುರನು ತತ್ಕ್ಷಣವೇ ಪಯಣಿಸಿ, ದಕ್ಷಿಣ ಪಾಂಚಾಲಪುರಿಯನ್ನು ಸೇರಿದನು. ದ್ರುಪದರಾಜ ಸಭೆಯಲ್ಲಿ ಪಾಂಡವರನ್ನು ಕಂಡನು. ಶ್ರೀಕೃಷ್ಣನೂ ಅಲ್ಲಿಗೆ ಬಂದಿದ್ದನು. ಭಗವಂತನಿಗೆ ವಂದಿಸಿ, ಪಾಂಡವರಿಗೆ ರಾಜನಿತ್ತ ಕಾಣಿಕೆಗಳನ್ನಿತ್ತು, ಸರ್ವಶಾಸ್ತ್ರ ವಿಶಾರದನಾದ ವಿದುರನು ಕುಶಲವಾರ್ತೆಯಾದ ನಂತರ ದ್ರುಪದನನ್ನು ನೋಡಿ, ಇಂತು ಮಾತಾಡಿದನು—

"ರಾಜನ್ ! ಧೃತರಾಷ್ಟ್ರನು ನಿನ್ನ ಕುಶಲವನ್ನು ಕೇಳಲಿಚ್ಛಿಸುತ್ತಿರುವನು. ನಿನ್ನ ಸಂಬಂಧವಾದುದಕ್ಕೆ ಕೌರವಾಧಿಪನು ಅತ್ಯಂತಾನಂದಭರಿತನಾಗಿರುವನು. ಭೀಷ್ಮ ದ್ರೋಣಾದಿಗಳು ಪಾಂಡವರನ್ನು ನೋಡಲು ಕಾತರರಾಗಿರುವರು. ಧೃತರಾಷ್ಟ್ರನು ಪಾಂಡವರನ್ನು ಸಬಹುಮಾನವಾಗಿ ಕರೆತರಲು ಹೇಳಿ ನನ್ನನ್ನು ಕಳಿಸಿರುವನು. ಮನೆಯ ಸೊಸೆಯನ್ನು ಮಮತೆಯಿಂದ ಮನೆತುಂಬಿಸಿಕೊಳ್ಳಲಿಚ್ಛಿಸುವ ಅಂಧರಾಜನ ಕೋರಿಕೆಯನ್ನು ನೆರವೇರಿಸು." ಆ ಮಾತನ್ನು ಕೇಳಿ ಪಾಂಡವರು

ಶ್ರೀಕೃಷ್ಣ ದ್ರುಪದಾದಿಗಳಿಂದ ಕೂಡಿ ಆಲೋಚಿಸಿ, "ಒಳ್ಳೆಯದು ! ಬರುವೆ"ವೆಂದು ವಿದುರನಿಗೆ ಹೇಳಿ ಕಳಿಸಿದರು.

ಸುಮುಹೂರ್ತದಲ್ಲಿ ಪಾಂಡವರು ದ್ರುಪದನನ್ನೂ ಧೃಷ್ಟದ್ಯುಮ್ನಾದಿ ವೀರರನ್ನು ಬೀಳ್ಕೊಂಡು, ಶ್ರೀಕೃಷ್ಣನೊಡನೆ ಪ್ರಯಾಣಮಾಡಿ, ಹಸ್ತಿನಾಪುರವನ್ನು ಸೇರಿದರು. ಭೀಷ್ಮ ದ್ರೋಣರು ವಿಕರ್ಣ, ಚಿತ್ರಸೇನಾದಿ ಕುರುಕುಮಾರರೊಡಗೂಡಿ ಬಂದು, ಅವರನ್ನೆದುರ್ಗೊಂಡು, ಪುರಪ್ರವೇಶ ಮಾಡಿಸಿದರು. ಪಾಂಡವರನ್ನು ಮತ್ತೆ ನೋಡಿ ಪುರಜನರು ಆನಂದತುಂದಿಲರಾಗಿ, ಲಾಜ ಅಕ್ಷತ ಪುಷ್ಪಗಳನ್ನೆರೆದು, ಸತ್ಕರಿಸಿದರು. ಅಂದು ಪಾಂಡುರಾಜನೇ ಐದು ರೂಪಗಳಿಂದ ಪುರ ಪ್ರವೇಶಮಾಡಿದಂತೆ ತಿಳಿದು ವಿಪ್ರಾದಿ ಮಹಾಜನರು, ವೇದಘೋಷದಿಂದ, ನೀರಾಜನಗಳಿಂದ, ಫಲ ಕುಸುಮಗಳಿಂದ ಅವರಿಗೆ ಸ್ವಾಗತವನ್ನಿತ್ತರು. ಪಾಂಡುಸುತರು ರಾಜಮಂದಿರವನ್ನು ಸೇರಿ, ಭೀಷ್ಮ ದ್ರೋಣ ಬಾಹ್ಲೀಕಾದಿ ವೃದ್ಧರಿಗೆ, ಧೃತರಾಷ್ಟ್ರನಿಗೆ ವಂದಿಸಿ, ವೇದವ್ಯಾಸದೇವನ ಸ್ವಸ್ತಿವಾಚನದೊಂದಿಗೆ ಪಾಂಡುರಾಜನ ಅಂತಃಪುರವನ್ನು ಪ್ರವೇಶಿಸಿ ಅಲ್ಲೇ ಸುಖದಿಂದಿದ್ದರು.

ಕೃಷ್ಣೆಯ ರೂಪಸಂಪತ್ತಿಗೆ ಮನಸೋತು ಮಗನು ಕೇಡುಮಾಡಿ ಕೆಡುವನೆಂಬ ಭೀತಳಾದ ಗಾಂಧಾರಿಯೂ, ಮಕ್ಕಳ ಮಮತೆಯಿಂದ ಮತ್ತೆಲ್ಲಿ ಕಲಹವಾಗುವುದೋ ಎಂಬ ಭೀತಿಯಿಂದ ಧೃತರಾಷ್ಟ್ರನು ಪಾಂಡವರನ್ನು ಹಸ್ತಿನಾವತಿಯನ್ನು ಬಿಟ್ಟು ಖಾಂಡವಪ್ರಸ್ಥದಲ್ಲಿ ಹೊಸ ನಗರವನ್ನು ನಿರ್ಮಿಸಿಕೊಂಡಿರುವಂತೆ ಒಪ್ಪಿಸಿ, ಅವರಿಗೆ ಅರ್ಧರಾಜ್ಯವನ್ನಿತ್ತು ಧರ್ಮನಿಗೆ ಪಟ್ಟಗಟ್ಟಿ, ಆಶೀರ್ವದಿಸಿ ಕಳಿಸಿದನು.

ಶ್ರೀಕೃಷ್ಣನ ಸಹಾಯವು, ಶ್ರೀವ್ಯಾಸನ ಆಶೀರ್ವಾದವು ಜೋಡಾಗಿ ಖಾಂಡವ ವನವು ಇಂದ್ರಪ್ರಸ್ಥವಾಯಿತು. ವಿಶ್ವಕರ್ಮನು ನಿರ್ಮಿಸಿದ ಆ ನಗರವು ಸ್ವರ್ಗ-ರಾಜಧಾನಿಯಂತೆ ಕಂಗೊಳಿಸಿತು. ಸಾಗರಪ್ರತಿಮ ಪರಿಖೆಗಳು, ಪರಿಖೆಗಳಲ್ಲಿ ತುಂಬಿದ ಗಂಭೀರ ಯಮುನಾಜಲ, ಜಲದಲ್ಲಿ ಬಿಂಬಿಸಿದ ಕೋಟೆಯ ಕೊತ್ತಲಗಳು, ಕೊತ್ತಲಗಳ ಮೇಲೆ ಹಾರುವ ಧ್ವಜಪತಾಕೆಗಳು, ಪತಾಕೆಗಳನ್ನು ಸ್ಪರ್ಧಿಸುವಂತೆ ಆಗಸವನ್ನು ಚುಂಬಿಸುವ ಸೌಧಗಳು, ಸೌಧಗಳಲ್ಲಿ ನಿಂತು ಸ್ವರ್ಗರಮಣಿಯರನ್ನು ನಗೆಯಾಡುವ ಸುಂದರಿಯರು, ರಾಜಬೀದಿಗಳು, ಗಜ ರಥ ತುರಗ ಶಾಲೆಗಳು, ದೇವಮಂದಿರಗಳು, ಪಾಂಡವರ ಸಭೆಗಳು, ವ್ಯವಸ್ಥಿತ ರೀತಿಯಲ್ಲಿ ಕಂಗೊಳಿಸಿದವು. ನಾನಾದೇಶದ ಜನರು ತುಂಬಿ ನಗರವು ಜನ ಧನ ಸಮೃದ್ಧವಾಯಿತು. ಅಲಕಾವತಿಯೋ, ಅಮರಾವತಿಯೋ ಎಂಬಂತೆ ಶೋಭಿಸುವ ನಗರದ ಮಧ್ಯದಲ್ಲಿ ಪಂಚ ಪ್ರಾಸಾದಗಳು ಪಾಂಡವರ ನಿಲಯವಾಗಿ ಭೋಗವತಿಯ ಮಂದಿರಗಳಂತೆ ವಿರಾಜಿಸಿದವು. ಇಂತು ಪಾಂಡವರನ್ನು ಅವರ ರಾಜ್ಯದಲ್ಲಿ ನಿಲ್ಲಿಸಿ, ಶ್ರೀಕೃಷ್ಣನು ಬಲರಾಮನೊಡನೆ ಕೂಡಿ ದ್ವಾರಕೆಗೆ ಹೊರಟುಹೋದನು. ಕೃಷ್ಣೆಯಿಂದ ಕೂಡಿ ಪಾಂಡವರು ಪಿತೃದತ್ತ ರಾಜ್ಯವನ್ನಾಳುತ್ತಾ ಪ್ರಜಾರಂಜಕರೆನಿಸಿ, ಸುಖದಿಂದಿದ್ದರು.

## ನಾರದೋಪದೇಶ

ಒಂದುದಿನ ನಾರದನು ಪಾಂಡವರ ಮನೆಗೆ ಬಂದನು. ಧರ್ಮರಾಜನು ದೇವರ್ಷಿಯನ್ನು ಪೂಜಿಸಿದನು. ದ್ರೌಪದಿಯು ನಮಸ್ಕರಿಸಿ, ಅವಗುಂಠಿತವದನಳಾಗಿ ನಿಂತಿದ್ದಳು. ಅವಳಿಗೆ ಆಶೀರ್ವದಿಸಿ ಕಳಿಸಿ, ದೇವರ್ಷಿಯು ಪಾಂಡವರನ್ನು ಏಕಾಂತದಲ್ಲಿ ಕುಳ್ಳಿರಿಸಿಕೊಂಡು ಇಂತೆಂದನು—

"ದ್ರೌಪದಿಯು ನಿಮ್ಮ ಐವರಿಗೂ ಸತಿಯಾಗಿರುವಳಲ್ಲವೇ ? ಈ ವಿಷಯದಲ್ಲಿ ನಿಮ್ಮಲ್ಲಿ ಪರಸ್ಪರ ವಿರೋಧವಾಗುವ ಸಂಭವವಿದೆ. ಹಿಂದೆ ಸುಂದೋಪಸುಂದರೆಂಬ ರಾಕ್ಷಸ ಸಹೋದರರಿದ್ದರು. ಅವರು ದೇಹಗಳೆರಡು, ಒಂದು ಜೀವವೆಂಬಂತೆ ಸೌಹಾರ್ದ ದಿಂದ ಏಕ ಶಯ್ಯಾಸನ ಭೋಜನ ವಿಹಾರಯುತರಾಗಿದ್ದರು. ಹಿರಣ್ಯಕಶಿಪು ವಂಶಜ ನಾದ ನಿಕುಂಭನ ಮಕ್ಕಳವರು. ಅವರು ತ್ರೈಲೋಕ್ಯ ವಿಜಯವನ್ನು ಪಡೆಯಲು ತೀವ್ರ ತಪವನ್ನು ಮಾಡಿದರು. ಆತ್ಮಮಾಂಸವನ್ನು ಕತ್ತರಿಸಿ ಅವರು ಹೋಮಿಸುತ್ತಿದ್ದರು. ದೇವತೆಗಳು ಹೆದರಿ ಬ್ರಹ್ಮನಿಗೆ ಮೊರೆಯಿಟ್ಟರು. ಪಿತಾಮಹನು ಪ್ರತ್ಯಕ್ಷನಾಗಿ ವರ ವನ್ನು ಬೇಡಿರಿ ಎಂದನು. ಅವರು ಅಮರತ್ವವನ್ನು ವಿಜಯ ವಿಕ್ರಮಗಳನ್ನು ಬೇಡಿ ದರು. ಅಮರತ್ವವನ್ನು ಕೊಡಲಾಗದೆಂದಾಗ ಅವರು "ಅನ್ಯೋನ್ಯವಾಗಿ ಮರಣವು ಬರಲಿ, ಇತರರಿಂದ ನಮಗೆ ಮರಣ ಬೇಡ" ಎಂದರು. 'ತಥಾಸ್ತು' ಎಂದು ಬ್ರಹ್ಮನು ಮರೆಯಾದನು. ವರಬಲ ಗರ್ವಿತರಾದ ಸುಂದೋಪಸುಂದರು ದೈತ್ಯ ಸೈನ್ಯದಿದ ಕೂಡಿ ದಂಡೆತ್ತಿ, ಭೂಮಿಯ ಸರ್ವರಾಜರನ್ನು, ಪಾತಾಳದ ನಾಗರನ್ನು, ಸ್ವರ್ಗ ದೇವತೆಗಳನ್ನು ಗೆದ್ದು ತ್ರಿಲೋಕ ವಿಜಯಿಗಳಾಗಿ, ಪ್ರಜಾ ಪೀಡೆಗೆ ತೊಡಗಿದರು. ಆಶ್ರಮಗಳನ್ನು ಸುಟ್ಟರು, ಫಲವೃಕ್ಷಗಳನ್ನು ಕಡಿದರು. ಮನೆಗಳಿಗೆ ಬೆಂಕಿಹಚ್ಚಿ, ಮಡದಿಯರನ್ನು ಕದ್ದರು. ಮಕ್ಕಳನ್ನು ಕೊಂದರು. ಅವರು ವಿಷಯಲೋಲುಪರಾಗಿ ಕಣ್ಣುಕಾಣದೆ ಪಾನ ವೇಶ್ಯಾದ್ಯೂತಲೋಲುಪರಾದರು.

"ಮಹರ್ಷಿಗಳು ಕೊಟ್ಟ ಶಾಪವೂ ಅವರಲ್ಲಿ ಫಲಿಸಲಿಲ್ಲ. ರಾಜನ್ಯರ ಅಸ್ತ್ರಗಳೂ ಪುಸಿಯಾದವು. ಸ್ವಧಾಸ್ವಾಹಾಕಾರಗಳಿಲ್ಲದೆ, ಪ್ರಜಾರಕ್ಷಕ ರಾಜರಿಲ್ಲದೆ, ವಿಪಣ ವ್ಯಾಪಾರಗಳು ನಿಂತು, ಕೃಷಿ ಕಡೆಗೆಂಡು, ದೇಶವೆಲ್ಲವೂ ಮಸಣದಂತೆ ಭಯಂಕರ ಶೂನ್ಯವಾಯಿತು. ದೇವಋಷಿಗಳು ಬ್ರಹ್ಮನಿಗೆ ಮೊರೆಯಿಟ್ಟರು. ಬ್ರಹ್ಮನು ವಿಶ್ವಕರ್ಮ ನಿಂದ ಪ್ರಮದಾರತ್ನವನ್ನು ಒಂದನ್ನು ಸೃಜಿಸಿಸಿದನು. ತ್ರಿಲೋಕಾದ್ಭುತವೂ, ರೂಪ ಲಕ್ಷಣ ಸಂಪನ್ನವೂ ಆದ ಆ ನಾರೀರತ್ನವನ್ನು ಕರೆದು ಬ್ರಹ್ಮನು ತಿಲೋತ್ತಮೆ ಎಂದು ಹೆಸರಿಟ್ಟನು. ವಿಗ್ರಹವನ್ನು ಧರಿಸಿನಿಂತ ಸೌಂದರ್ಯವೋ, ಕಾಮನ ತಪಃಫಲವೋ, ಚತುರ್ದಶರತ್ನಗತತಿಲಾಂಶ ಸಮ್ಮಿತವೋ, ಎನ್ನುವಂತಿದ್ದ ಸ್ತ್ರೀರತ್ನವನ್ನು ನೋಡಿ ಇಂದ್ರನು ಸಹಸ್ರನಯನಗಳು ಸಾಲವೆಂದನು ; ರುದ್ರನು ಪಂಚಮುಖನಾದನು : ಬ್ರಹ್ಮನ ಸೃಷ್ಟಿಯ ಅಪೂರ್ವಕಲೆಯನ್ನು ಎವೆಯಿಕ್ಕದೆ ನೋಡುವ ಋಷಿವರರು, 'ಆಯಿತವಳಿಂದ ದೇವಕಾರ್ಯವೆಂ'ದು ತಿಳಿದು ಆನಂದಿಸಿದರು. ಅವಳನ್ನು ರಾಕ್ಷಸ

ರಲ್ಲಿಗೆ ಕಳಿಸಿ ಪಿತಾಮಹನು, ಯಮುನಿಗೆ ಸುಂದೋಪಸುಂದರ ಜೀವನಗಾಥೆಯನ್ನು ಮುಗಿಸೆಂದು ಹೇಳಿಕಳಿಸಿದನು.

"ಸುಂದೋಪಸುಂದರು ವಿಂಧ್ಯಪರ್ವತದ ಸುಂದರ ಕಂದರದಲ್ಲಿ ವಿಹಾರಮಗ್ನ ರಾಗಿದ್ದರು. ಪಾನಮತ್ತರಾದ ಅವರ ಸಮೀಪವನ್ನು ಸಾರಿ ತಿಲೋತ್ತಮೆ, ಕಟಾಕ್ಷ ವನ್ನು ಬೀರಿದಳು. ಯಮಪಾಶದಂತೆ ದುರ್ನಿವಾರವಾದ ಕಟಾಕ್ಷದಿಂದ ಆಕರ್ಷಿತರಾಗಿ ರಾಕ್ಷಸರು ಅವಳನ್ನು ಸಮೀಪಿಸಿದರು. ಅವರಿಗೆ ಪರಸ್ಪರ ಕಲಹವಾಯಿತು. 'ಇವಳು ನನ್ನ ಮಡದಿ; ನೀನು ದೂರಸರಿ' ಎಂದು ಇಬ್ಬರೂ ಒಂದೇಸಲ ಗರ್ಜಿಸಿದರು. ಮಾತಿನಿಂದ ಕೈಗಳಿಗೆ ಬಂದು, ಅವರೀರ್ವರೂ ಘೋರ ಕದನಕ್ಕಿಳಿದು, ಗದೆಗಳಿಂದ ಬಡಿದುಕೊಂಡು ಪರಸ್ಪರ ಹತರಾದರು. ಆಗ ತ್ರಿಲೋಕ ಜನರಿಗೆ ಆನಂದವಾಯಿತು.

"ಆದುದರಿಂದ ನೀವು, ಎಷ್ಟೇ ಅನ್ಯೋನ್ಯ ಮೈತ್ರಿಯಿಂದ ನಡೆಯುತ್ತಿದ್ದರೂ, ಸ್ತ್ರೀ ವಿಷಯದಲ್ಲಿ ಕಲಹವು ಬಂದೇಬರುವುದು. ಇದಕ್ಕೆ ಪರಿಹಾರವಾಗಿ ನಾನೊಂದು ಉಪಾಯವನ್ನು ಸೂಚಿಸುವೆನು. ವರ್ಷಕ್ಕೆ ಒಬ್ಬರಂತೆ ನೀವು ದ್ರೌಪದೀಸಹಿತರಾಗಿರ ಬೇಕು. ದ್ರೌಪದೀಸಹಾಸೀನನಾದವನನ್ನು ಇತರನು ನೋಡಿದೊಡೆ, ಪ್ರಾಯಶ್ಚಿತ್ತ ವಾಗಿ ಅವನು ಒಂದು ವರ್ಷ ವನದಲ್ಲಿ ಬ್ರಹ್ಮಚಾರಿಯಾಗಿರಬೇಕು. ಪ್ರತಿದಿನವೂ ದೇಹಾಭಿಮಾನ ತ್ಯಾಗರೂಪ ಮರಣವನ್ನು ಹೊಂದಿ, ಕನ್ನಿಕೆಯೇ ಆಗುವ ಪಂಚದೇವೀಯುತ ದ್ರೌಪದಿಗೆ ಯಾವ ದೋಷವೂ ಇಲ್ಲ" ಎಂದು ಪಾಂಡವರನ್ನು ಸಮಯಬಂಧರನ್ನಾಗಿ ಮಾಡಿ, ನಾರದನು ಹೊರಟುಹೋದನು.

ರಾಜನಾದ ಧರ್ಮರಾಜನು ಯಜ್ಞ ದಾನಗಳು, ರಾಜಪೂಜಾ ಸ್ವೀಕಾರ, ಧರ್ಮ ಪ್ರಶ್ನೆ, ಋಷಿ ಪೂಜಾಕಾರ್ಯಗಳನ್ನು ನೋಡಿಕೊಳ್ಳುತ್ತಿರಲು ; ಭೀಮನು ಪ್ರಜಾರಕ್ಷಣ, ಧರ್ಮಾನುಶಾಸನ, ಪರಮಾತ್ಮತತ್ತ್ವ ಕೀರ್ತನ, ಮೊದಲಾದ ಕಾರ್ಯಗಳಲ್ಲಿ ನಿರತನಾಗಿ ಯುವರಾಜನೆನಿಸಿದನು. ಸ್ತ್ರೀಧರ್ಮಕಥನ, ಭೃತ್ಯರಕ್ಷಣ, ಕೋಶವೃದ್ಧಿ, ದಾನಕಾರ್ಯ ಅಂತಃಪುರ ಪರಿಶೀಲನಗಳು ದ್ರೌಪದಿಯ ಕಾರ್ಯ ಗಳಾಗಿದ್ದವು. ಪರರಾಜ ವಿಜಯ, ಧನ ಸಂಪಾದನಗಳು ಅರ್ಜುನನ ಕೃತ್ಯಗಳು. ನಕುಲನು ವೇತನ ವಿತರಣದಲ್ಲಿ ನಿಯಮಿತನಾಗಿದ್ದನು. ಸಹದೇವನು ಅಮಿತ್ರಭೇದ ಮಿತ್ರಸಂಧಾನದಲ್ಲಿ ನಿರತನಾಗಿ, ಸದಾ ಖಡ್ಗ ಪಾಣಿಯಾಗಿ, ಧರ್ಮರಾಜನ ಅಂಗ ರಕ್ಷಕಾಗ್ರಣಿಯಾಗಿದ್ದನು. ಧೃಷ್ಟದ್ಯುಮ್ನನು ಸರ್ವ ಸೈನ್ಯಾಧಿಪತಿಯಾಗಿ, ಭೀಮ ನಲ್ಲಿ ಸ್ನೇಹದಿಂದ ಇಂದ್ರಪ್ರಸ್ಥದಲ್ಲೇ ವಾಸಮಾಡಿದ್ದನು.

ಧರ್ಮರಾಜನ ರಾಜ್ಯವು ಸುಭಿಕ್ಷವಾಗಿತ್ತು. ವ್ಯಾಧಿಗಳು, ಅಕಾಲಮರಣಗಳು, ದಾರಿದ್ರ್ಯ, ಧರ್ಮಹಾನಿಗಳು ಹೇಳಹೆಸರಿಲ್ಲದೆ ಹಾಳಾದವು. ಬಂದ ವಿಪ್ರರು ಬೇಕಾದ ಭೋಜನ, ದ್ರವ್ಯ, ಯಜ್ಞ, ಸಹಕರಣಗಳನ್ನು ಬೇಡಿ, ಭೀಮನಿಂದಲೇ ಎಲ್ಲವನ್ನೂ ಪಡೆದು ತೃಪ್ತರಾಗಿ ಹೋಗುತ್ತಿದ್ದರು. ಪಾಂಡವರಲ್ಲಿ ಅಭಿಮಾನದಿಂದ

ಪ್ರಾಯಃ ಇಂದ್ರಪ್ರಸ್ಥದಲ್ಲೇ ಇರುತ್ತಿದ್ದ ಶ್ರೀಕೃಷ್ಣನನ್ನು ಪೂಜಿಸಲು ದೇವಋಷಿಗಳು ಬಂದು ಪಾಂಡವರನ್ನೂ ಆಶೀರ್ವದಿಸಿ ಹೋಗುತ್ತಿದ್ದರು.

ಧರ್ಮರಾಜನು ಶಿಶುಪಾಲ ಪುತ್ರಿಯೂ, ಧೃಷ್ಟಕೇತು (ಅನುಹ್ಲಾದ+ಸವಿತನ ಅಂಶ) ವಿನ ತಂಗಿಯೂ ಆದ ದೇವಕಿಯನ್ನು ಮದುವೆ ಆಗಿ, ಅವಳಲ್ಲಿ ಸುಹೋತ್ರ (ಚಿತ್ರಗುಪ್ತ)ನೆಂಬ ಮಗನನ್ನು ಹೊಂದಿದನು. ಭಾರತಿಯೇ ಪ್ರತ್ಯೇಕವಾಗಿ ಕಾಳಿ ಎನಿಸಿ ಕಾಶಿ ರಾಜನ ಮಗಳಾಗಿದ್ದಳು. ಅವಳು ಸ್ವಯಂವರದಲ್ಲಿ ಭೀಮಸೇನನನ್ನು ವರಿಸಿದಳು. ಇದರಿಂದ ಕುಪಿತರಾಗಿ ಬಂದ ಜರಾಸಂಧಾದಿ ದುಷ್ಟಶೈವರನ್ನು ಭೀಮನು ಮೊದಲು ವಾದದಲ್ಲಿ ಜಯಿಸಿ, ಶ್ರೀಹರಿಯೇ ಸರ್ವೋತ್ತಮನು, ವೇದಗಳು ನಿರ್ದೋಷ ಪ್ರಮಾಣಗಳೂ ಎಂದು ಸ್ಥಾಪಿಸಿದ ನಂತರ, ಬಾಹುಯುದ್ಧದಲ್ಲಿಯೂ ಸೋಲಿಸಿ ಓಡಿಸಿಬಿಟ್ಟನು. ಕಾಳಿದೇವಿಯಲ್ಲಿ ಭೀಮನಿಗೆ ಶರ್ವತ್ರಾತನೆಂಬ ಮಗ ನಾದನು.

ದುರ್ಯೋಧನನು ಕಾಶಿರಾಜನ ಮಗಳಾದ (ಇನ್ನೊಬ್ಬ ಕಾಶಿರಾಜ) ಭಾನುಮತಿ ಯನ್ನು ಸ್ವಯಂವರದಲ್ಲಿ ಅಪಹರಿಸಿ ತಂದನು. ಕರ್ಣನು ಆಗ ಯುದ್ಧಮಾಡಲು ನಿಂತ ಜರಾಸಂಧಾದಿ ರಾಜರನ್ನು ಪರಶುರಾಮಾನುಗ್ರಹದಿಂದ ಗೆದ್ದು, ಮೆಚ್ಚಿ ಜರಾಸಂಧನಿತ್ತ ಅಂಗರಾಜ್ಯದ ಶೇಷಾರ್ಧಭಾಗವನ್ನು ಸ್ವೀಕರಿಸಿ, ಬಂದನು. ಅಶ್ವತ್ಥಾಮನು ರುದ್ರಾಂಶನೆಂದರಿತ ಜರಾಸಂಧನು ಕೌರವ ರಾಜಧಾನಿಯನ್ನು ಮುತ್ತಲೊಲ್ಲದೆ, ಕರ್ಣನಿಗೆ ಅತಿರಥನಿಂದ ತಾನು ಜಯಿಸಿದ್ದ ಅರ್ಧರಾಜ್ಯವನ್ನಿತ್ತು ಕಳಿಸಿದ್ದನು. ಕರ್ಣನ ಸಹಾಯವಿದೆ ಎಂದು ಮದಿಸಿ, ದುರ್ಯೋಧನನು ಕಳಿಂಗ ರಾಜನಾದ ಸುವ್ರಜನ ಮಗಳನ್ನೂ ಅಪಹರಿಸಿದಾಗ, ರುದ್ರವರದಿಂದ ಬಲಿಷ್ಠನಾದ ಸುವ್ರಜನು, ಕರ್ಣ ದುರ್ಯೋಧನಾದಿಗಳನ್ನು ಗೆದ್ದು ಬಂಧಿಸಿಟ್ಟನು. ಆಗ ಭೀಷ್ಮಾದಿ ವೃದ್ಧಜನರ ಮಾತನ್ನು ಮೀರಲಾರದೆ, ಭೀಮಸೇನನು ಸುವ್ರಜನನ್ನು ರಣದಲ್ಲಿ ಸಂಹರಿಸಿ, ಕರ್ಣ ದುರ್ಯೋಧನಾದಿಗಳನ್ನು ಬಿಡಿಸಿಕೊಂಡು ತಂದನು. ದುರ್ಯೋಧನನು ಆಗ ಧೃತರಾಷ್ಟ್ರನಿಂದ ಪಟ್ಟಾಭಿಷೇಕವನ್ನು ಪಡೆದು, ಗರ್ವಿತನಾಗಿ, ಪಾಂಡವ ದ್ವೇಷವನ್ನು ದ್ವಿಗುಣವಾಗಿ ಮಾಡುತ್ತಿದ್ದನು. ಅವನಿಗೆ ಭಾನುಮತಿ ಯಲ್ಲಿ (ಅಲಕ್ಷ್ಮಿ+ಪಾರ್ವತೀ ಆವೇಶ) ಲಕ್ಷಣ (ಅಕ್ಷರಾಕ್ಷಸ)ನೆಂಬ ಮಗನೂ, ಲಕ್ಷಣೆ (ದೇವಸೇನಾ=ಷಣ್ಮುಖ ಪತ್ನಿ) ಎಂಬ ಮಗಳೂ ಹುಟ್ಟಿದರು. ದುಶ್ಯಾಸನ ನಿಗೆ ದೇವಾಂತಕನೆಂಬ ದೈತ್ಯನು ಮಗನಾಗಿ ಜನಿಸಿದನು.

[ವೇದಗಳು ಸ್ವತಃಪ್ರಮಾಣಗಳು. ಶೈವಾಗಮಗಳಲ್ಲಿಯೂ ವಿಷ್ಣು ಸರ್ವೋತ್ತ-ಮತ್ವವು ಕಥಿತವಾಗಿದೆ. ಸ್ಕಾಂದ, ಸೌರ, ಗಾಣಾಪತ್ಯ, ಶಾಕ್ತ ಮತಗಳು ಶೈವಾಗಮ ಗಳಲ್ಲಿ ನಿಂದಿತವಾಗಿವೆ. ವೇದಗಳಲ್ಲಿ ಶಿವಾಧಿಕ್ಯವು ಎಲ್ಲಿಯೂ ಹೇಳಿಲ್ಲ. ಬೌದ್ಧ ಜೈನಾದಿಗಳು ಕೂಡ ವಿಷ್ಣುವೇ ಭಗವಂತನೆಂದು ಒಪ್ಪಿರುವರು. ಚಾರ್ವಾಕರು ತಮ್ಮ ಮತ ಪ್ರವರ್ತಕನಾದ ಬೃಹಸ್ಪತಿಗೆ ವಿಷ್ಣುವೇ ಗುರುವೆನ್ನುತ್ತಾರೆ. ಶೈವಾಗಮಗಳು

ಪರಸ್ಪರ ವಿರುದ್ಧವಾಗಿವೆ; ಆದುದರಿಂದ ಅವು ಪ್ರಮಾಣವಲ್ಲ. ಭೀಮಸೇನನೆ ಮುಖ್ಯಪ್ರಾಣನು. ಗಂಗಾನದಿಯು ಅವನ ವಿಷ್ಣು ಪೂಜೆಗೆ ವಿಘ್ನ ತರಲು ಉಕ್ಕಿದಾಗ, ಆ ಮಹಾಬಲನು ಅದನ್ನು ಹಿಂದಕ್ಕೆ ಒತ್ತಿದನು. ಆಗ ವಿರೋಧಿಸಿ ವ್ಯಾಘ್ರಾಕಾರ ನಾಗಿ ಬಂದ ರುದ್ರನು, ಕಪಿಲೆಯ ರೂಪದಿಂದಿದ್ದ ಉಮೆಯನ್ನು ಕೊಲ್ಲಲೆಂಬಂತೆ ಎರಗಿದಾಗ, ಭೀಮನು ರುದ್ರನನ್ನು ಸೋಲಿಸಿದನು; ಭಯದಿಂದ ಲಿಂಗವನ್ನು ಹೊಕ್ಕ ರುದ್ರನು ಹಸ್ತಿನಾವತಿಯ ಸಮೀಪದಲ್ಲಿ ವ್ಯಾಘ್ರೇಶ್ವರನೆನಿಸಿರುವನು. ಇನ್ನೊಂದುಸಲ ಹಿಮವತ್ಪರ್ವತದಿಂದ ಹರಿವ ಗೋಮತಿ ತೀರದಲ್ಲಿ ಭೀಮನಿಂದ ಪರಾಜಿತನಾಗಿ, ಲಿಂಗದಲ್ಲಡಗಿದ ಶಿವನು ಶಾರ್ದೂಲೇಶ್ವರನೆನಿಸಿರುವನು. ಕೇದಾರ ದಲ್ಲಿ ವಾದವಿಜಿತನಾಗಿ, ಅಲ್ಲಿಯೂ ಲಿಂಗದಲ್ಲಡಗಿರುವನು. 'ವೇದಜ್ಞಾನಿಗಳು ಕೇದಾರಕ್ಕೆ ಬರದಿರಲಿ' ಎಂದು ಶಾಪವನ್ನಿತ್ತುದರಿಂದ, ಆ ಕ್ಷೇತ್ರಕ್ಕೆ ಅನ್ಯಥಾ ಜ್ಞಾನಿಗಳೇ ಹೋಗುತ್ತಿರುವರು—ಇವೇ ಮೊದಲಾದ ತತ್ವಗಳ ಯಥಾರ್ಥಜ್ಞಾನ ದಿಂದ ಸಜ್ಜನರ ತೇಜಸ್ಸು ಹೆಚ್ಚಾಗಿ, ಆ ಕಾಲದಲ್ಲಿ ಜರಾಸಂಧ, ದುರ್ಯೋಧನಾದಿ ದುರ್ಜನರು ಮೂಲೆಗೆ ಬಿದ್ದು ನಿಸ್ತೇಜಸ್ಕರಾಗಿದ್ದರು.

ಶ್ರೀಕೃಷ್ಣನು ಪಾಂಡವರನ್ನು ಬೀಳ್ಕೊಂಡು ದ್ವಾರಾವತಿಗೆ ಹೋದನು. ಅಲ್ಲಿ ಶತಧನ್ವನನ್ನು ಹಿಂಬಾಲಿಸಿ, ಅವನನ್ನು ವಿದೇಹನಗರ ಸಮೀಪದಲ್ಲಿ ಸಂಹರಿಸಿದನು. ಸ್ಯಮಂತಕ ಮಣಿಯನ್ನು ಅವನಲ್ಲಿ ಕಾಣದೆ ಕೃಷ್ಣನು ಬಂದು ರಥದಲ್ಲಿದ್ದ ಬಲರಾಮ ನಿಗೆ "ವ್ಯಥಾ ಶತಧನ್ವನನ್ನು ಕೊಂದುದಾಯಿತು. ಮಣಿ ಅವನಲ್ಲಿಲ್ಲ"ವೆಂದನು. ಅಸುರಾವೇಶದಿಂದ ಬಲರಾಮನು ಕೃಷ್ಣನೇ ಅದನ್ನು ಬಚ್ಚಿಟ್ಟುಕೊಂಡಿರುವನೆಂದು ತಿಳಿದು, ಸಿಟ್ಟಿನಿಂದ ವಿದೇಹರಾಜನ ಮನೆಗೆ ಹೋದನು. ಕೃಷ್ಣನು ದ್ವಾರಕೆಗೆ ಹೊರಟುಹೋದನು. ಬಲರಾಮನೊಬ್ಬನೇ ಇರುವನೆಂದು ತಿಳಿದು ದುರ್ಯೋಧನನು ವಿದೇಹನಗರಕ್ಕೆ ಬಂದು, ಬಲರಾಮನಲ್ಲಿ ಗದಾವಿದ್ಯೆಯನ್ನು ಕಲಿತನು. ಐದು ವರ್ಷ ಗಳಾದ ಮೇಲೆ ಬಲರಾಮನು ಯಥಾರ್ಥವನ್ನರಿತು ದ್ವಾರಕೆಗೆ ಹೊರಡಲನು ವಾದಾಗ, ದುರ್ಯೋಧನನು ತನಗೆ ಸುಭದ್ರೆಯನ್ನು ಕೊಡೆಂದು ಬೇಡಿಕೊಂಡನು. ಬಲರಾಮನು ಶಿಷ್ಯ ಪ್ರೀತಿಯಿಂದ 'ಆಗಲಿ' ಎಂದು ಹೇಳಿದನು. ಸೀತೆಯ ಸೇವೆಯನ್ನು ಮಾಡಿದ್ದ ತ್ರಿಜಟೆಯೇ ವಿಷ್ಣುಭಗಿನಿಯಾಗಿ ಉಮಾವೇಶಯುತಳಾಗಿ ಜನಿಸಿದ್ದಳು. ಅವಳನ್ನು ಮದುವೆಯಾದರೆ ತನಗೆ ರಾಮಕೃಷ್ಣರ ಸಹಾಯವು ಸಿಕ್ಕು, ಪಾಂಡವರು ನಿರ್ಗತಿಕರಾಗುವರೆಂಬ ದುರಾಶೆಯಿಂದ ದುರ್ಯೋಧನನು ಬಲರಾಮನನ್ನೊಲಿಸಿ, ಭಾಷೆಪಡೆದು, ಹಸ್ತಿನಾವತಿಗೆ ಹೊರಟನು.

ಶ್ರೀಕೃಷ್ಣನು ಅಷ್ಟಮಹಿಷಿಯುತನಾಗಿ ರೈವತಕದಲ್ಲಿರುವಾಗ, ನಾರದನು ಬಂದು 'ಆಶ್ಚರ್ಯ ! ಧನ್ಯ !' ಎಂದು ಪ್ರಶಂಸಿದನು. ಶ್ರೀಕೃಷ್ಣನು 'ದಕ್ಷಿಣಾಭಿ ಸ್ನಾಕಂ' ಎಂದು ಸೇರಿಸಿ, ನನ್ನ ಮಹಿಮೆಯನ್ನು ವಿವರಿಸು ಎಂದಾಗ ನಾರದನು ಅಲ್ಲಿ ನೆರೆದ ರಾಜಸಭೆಯಲ್ಲಿ, "ಶ್ರೀಕೃಷ್ಣನೇ ನಾರಾಯಣನು, ಲಕ್ಷ್ಮಿಯು ಅವನನ್ನು

ದಕ್ಷಿಣದಲ್ಲಿ ಮಾಡಿ ವಾಮಾರ್ಧಶರೀರವನ್ನು ಹೊಂದಿರುವುದರಿಂದ ಅವಳಿಗೆ ದಕ್ಷಿಣೆ ಎಂದು ಹೆಸರು. ಇಂತು ಸರ್ವೋತ್ತಮನು ಸರ್ವಪ್ರೇರಕನಾದ ಕೃಷ್ಣನನ್ನೂ ಅಂತೆಯೇ ಅಪ್ರಾಕೃತಳು, ಅವಿನಾಯೋಗಿನಿಯೂ, ಸರ್ವಜೀವಾಧಾರಳು ಆದ ರುಕ್ಮಿಣಿಯನ್ನೂ ಪೂಜಿಸಿದವರು ಧನ್ಯರಾಗುವರು" ಎಂದನು. ಕುಂತಿಯ ಮನದಲ್ಲಿ ವಿಶ್ವಾಸವನ್ನು ಹುಟ್ಟಿಸಲು, ಅಲ್ಲಿ ನೆರೆದಿದ್ದ ಸರ್ವರಾಜರನ್ನು ಕ್ಷಣದಲ್ಲಿ ಸೋಲಿಸಿ, ಶ್ರೀಕೃಷ್ಣನು ಭೀಮಸೇನನಿಗಿಂತಲು ತನಗೆ ಇತರರು ಪ್ರೀತಿಪಾತ್ರರಿಲ್ಲವೆಂದು ಕುಂತಿಗೆ ಹೇಳಿದನು. ಮುಂದೆ ಶ್ರೀಕೃಷ್ಣನು ನರಕಾಸುರನನ್ನು ಕೊಂದು, ಅವನ ಮಗನಿಗೆ ಪಟ್ಟಕಟ್ಟಿದನು. ಸ್ವರ್ಗದಿಂದ ಪಾರಿಜಾತವನ್ನು ತಂದು ಸತ್ಯಭಾಮೆಗಿತ್ತನು.

## ಅರ್ಜುನ ತೀರ್ಥಯಾತ್ರೆ—ಸುಭದ್ರಾಪರಿಣಯ

ಇಂದ್ರಪ್ರಸ್ಥದಲ್ಲಿ ಪಾಂಡವರು ಸುಖದಿಂದಿರುವಾಗ, ಒಂದುದಿನ ರಾತ್ರಿ, ಒಬ್ಬ ಬ್ರಾಹ್ಮಣನು ಬಂದು "ನನ್ನ ಗೋಧನವನ್ನು ತಸ್ಕರರು ಅಪಹರಿಸಿಕೊಂಡು ಹೋಗುತ್ತಿರುವರು. ವಿಪ್ರರನ್ನು ರಕ್ಷಿಸದ ರಾಜನಿಗೆ ಧಿಕ್ಕಾರವಿರಲಿ ! ಪಾಂಡುರಾಜ ಪುತ್ರರಾಗಿದ್ದರೆ ಕಳ್ಳರನ್ನು ದಂಡಿಸಿ ಗೋಧನವನ್ನು ತಂದುಕೊಡಿ ! ಅಥವಾ ಬಳೆತೊಟ್ಟು ಕೂಡಿ !" ಎಂದು ಅಂಗಲಾಚಿದನು. ಆರ್ತನಾದವನ್ನು ಕೇಳಿ ಅರ್ಜುನನು ಆಯುಧಾಗಾರವನ್ನು ಹೊಗಲು ಬರುವಾಗ ದ್ರೌಪದಿಯು ಧರ್ಮರಾಜರಲ್ಲಿರುವುದನ್ನು ಕಂಡನು. ವಿಪ್ರನ ಗೋವನ್ನು ಸಂರಕ್ಷಿಸದಿರೆ ವಿಪ್ರಶಾಪವು, ಅಧರ್ಮದೋಷವು ಬರುವುದೆಂದು ಹೆದರಿ ಪಾರ್ಥನು, ಅಣ್ಣನನ್ನು ಕೇಳಿ, ಆಯುಧಶಾಲೆಯನ್ನು ಪ್ರವೇಶಿಸಿದನು. ಶಸ್ತ್ರಗಳನ್ನು ಪಿಡಿದು, ರಥಾರೂಢನಾಗಿ ಅರ್ಜುನನು ವೇಗವಾಗಿ ಹೋಗಿ, ತಸ್ಕರರನ್ನು ಕೊಂದು ಗೋಧನವನ್ನು ವಿಪ್ರನಿಗೆ ತಂದುಕೊಟ್ಟನು. ಸಮಯಭಂಗವಾಯಿತೆಂದು ತಿಳಿದು, ಪ್ರಾಯಶ್ಚಿತ್ತರೂಪವಾದ ತೀರ್ಥಯಾತ್ರೆಗೆ ಹೊರಟುನಿಂತ ಅರ್ಜುನನನ್ನು ಧರ್ಮರಾಜನು "ನಿನ್ನಿಂದ ಧರ್ಮ ಲೋಪವಾಗಿಲ್ಲ. ಚಿಕ್ಕವನಾದ ನಿನ್ನ ಅನುಪ್ರವೇಶದಿಂದ ನಾನು ನೊಂದಿಲ್ಲ. ತೀರ್ಥಯಾತ್ರೆಗೆಂದು ಹೊರಟು, ನಮ್ಮನ್ನು ನಿನ್ನ ವಿಯೋಗ ದುಃಖಕ್ಕೆಡೆಮಾಡಬೇಡ" ಎಂದು ಅಭಯವಿತ್ತನು. ಆದರೂ ಅರ್ಜುನನು "ಧರ್ಮ ನಿರ್ವಹಣೆ ಕಠಿನವು. ಅದನ್ನು ನೆಪದಿಂದ ಮಾಡಿ ನಟಿಸಿ ನಡೆಯಲಾಗದು. ಹೋಗಿ ಬರುವೆ"ನೆಂದು, ವಿಪ್ರರಿಂದ ಕೂಡಿ ತೀರ್ಥಯಾತ್ರೆಗೆ ಹೊರಟನು. ಮಹಾತ್ಮರಿಗೆ ವನವಾಸ ಮರಣಗಳಿಗಿಂತ ಧರ್ಮತ್ಯಾಗವು ಕಷ್ಟತರವಲ್ಲವೇ ?

ಹರಿದ್ವಾರದಲ್ಲಿ ಅರ್ಜುನನು ಸ್ನಾನಮಾಡುತ್ತಿದ್ದನು. ಉಲೂಪಿ ಎಂಬ ನಾಗವನಿತೆ ಅವನನ್ನು ಮೋಹಿಸಿ, ನಾಗಲೋಕಕ್ಕೆ ಕೊಂಡುಹೋದಳು. "ನಾನು ಆರ್ತವದಲ್ಲಿರುವೆನು. ನಿನ್ನಿಂದ ಸುತ ಭಿಕ್ಷೆಯನ್ನು ಬೇಡುವೆನು. ನಿನಗೆ ದ್ರುಪದರಾಜಪುತ್ರಿಯ ವಿಷಯದಲ್ಲಿ ಬ್ರಹ್ಮಚರ್ಯದ ನಿರ್ಬಂಧವಿದೆ ; ಆದರೆ ಇತರತ್ರ ಅಲ್ಲ. ಗರುಡಭಕ್ಷಿತನಾದ ಪತಿಯಿಂದ ರಹಿತಳಾಗಿರುವೆನು. ನನ್ನ ತಂದೆಗೆ ಈ ನಿಯೋಗವು, ಸಮ್ಮತ

ವಾಗಿದೆ. ನೀನು ಸ್ವೀಕರಿಸದಿದ್ದರೆ ನನ್ನ ಪ್ರಾಣ ಉಳಿಯಲಾರದೆಂದು ಬೇಡಿದ ನಾಗ ತರುಣಿಯನ್ನು ಅವಳ ತಂದೆಯ ಪ್ರಾರ್ಥನೆಯಿಂದ ಸ್ವೀಕರಿಸಿ, ಅರ್ಜುನನು ಇರಾವಂತ ನೆಂಬ ಪುತ್ರನನ್ನು ಅವಳಿಗಿತ್ತನು. ಮುಂದೆ ಕುಜಾಂಶಜಾತನು ವರುಣಾವೇಶಯುಕ್ತ ನಾದ ಇರಾವಂತನು ತನ್ನ ತಾಯಿಯೊಡನೆ ನಾಗಲೋಕದಿಂದ ಬಹಿಷ್ಕೃತನಾಗಿ ಸ್ವರ್ಗದಲ್ಲಿರುತ್ತಿದ್ದನು.

ಮರುದಿನವೇ ಅರ್ಜುನನಲ್ಲಿಂದ ಪಯಣಿಸಿ, ಗಂಗಾತೀರದ ಅನೇಕ ತೀರ್ಥಕ್ಷೇತ್ರ ಗಳನ್ನು ನೋಡುತ್ತಾ, ಮಣಿಪುರವನ್ನು ಸೇರಿದನು. ತ್ವಷ್ಟನ ಅಂಶಜನಾದ ವೀರಸೇನ ನೆಂಬ ಮಣಿಪುರದರಸನನ್ನು ಕಂಡು, ಅವನ ಮಗಳಾದ ಚಿತ್ರಾಂಗದೆಯನ್ನು ತನಗೆ ಕೊಡೆಂದು ಪ್ರಾರ್ಥಿಸಿದನು. ಅವಳು ಶಚೀದೇವ್ಯಂಶಜಾತಳಾಗಿದ್ದಳು. ಸುಗ್ರೀವ ಸಂಗ ದೋಷದಿಂದ ಅವಳಿಗೆ ಅರ್ಜುನನ ಚಿರಸಂಗವಾಗಲಿಲ್ಲ. ಸಕೃತ್ಸಂಗದಿಂದ ಬಭ್ರುವಾಹನ ನೆಂಬ (ಜಯಂತ+ಕಾಮ) ಸುತನನ್ನು ಪಡೆದು, ಅರ್ಜುನನು ಅವನನ್ನೂ, ಚಿತ್ರಾಂಗದೆಯನ್ನೂ ದೌಹಿತ್ರನ್ಯಾಯದಿಂದ, ವೀರಸೇನನಿಗೊಪ್ಪಿಸಿ, ಅಲ್ಲಿಂದ ಹೊರಟು, ಪ್ರಭಾಸವನ್ನು ಮುಟ್ಟಿದನು. ಅಲ್ಲಿ ಸಮುದ್ರತೀರದಲ್ಲಿ ಅಗಸ್ತ್ಯ, ಸೌಭದ್ರ, ಪೌಲೋಮ, ಕಾರಂಧಮ, ಭಾರದ್ವಾಜ ತೀರ್ಥಗಳನ್ನು ಕಂಡು, ಅವು ಜನಶೂನ್ಯ ವಾಗಿದ್ದುದಕ್ಕೆ ಆಶ್ಚರ್ಯಪಟ್ಟನು. ತಾಪಸರು ಆ ತೀರ್ಥಗಳಲ್ಲಿ ಭಯಂಕರ ಮೊಸಳೆ ಗಳಿರುವುದರಿಂದ ಯಾರೂ ಅಲ್ಲಿ ಸ್ನಾನಾರ್ಥಿಗಳಾಗಿ ಇಳಿಯುವುದಿಲ್ಲವೆಂದು ತಿಳಿಸಿದರು. ಅರ್ಜುನನು ಆ ತೀರ್ಥಗಳನ್ನು ನಿರುಪದ್ರವ ಮಾಡಲೆಣಿಸಿ, ನಿರ್ಭಯನಾಗಿ ಒಳಗಿಳಿದು ಮಹಾಗ್ರಾಹಗಳನ್ನು, ಹಲ್ಲಿಗಳನ್ನೆಂಬಷ್ಟು ಲೀಲಾಜಾಲವಾಗಿ ಹೊರಗೆಸೆದನು. ತತ್ ಕ್ಷಣವೇ ಮಕರ ದೇಹಗಳಿಂದ ಪಂಚಾಪ್ಸರೆಯರು ಬಂದು, ಅರ್ಜುನನಿಗೆ ವಂದಿಸಿದರು. ಅವರಲ್ಲಿ ವರ್ಗೆ ಎಂಬವಳಿಂತೆಂದಳು—

"ಪಾರ್ಥ! ಹಿಂದೆ ನಾನು, ಸೌರಭೇಯಿ, ಸಮೀಚಿ, ಬುದ್ಬುದಾ, ಲತಾ ಎಂಬುವ ನನ್ನ ಸಖಿಯರೊಡನೆ ವಿಹರಿಸುತ್ತಾ, ವನದಲ್ಲಿ ತಪೋನಿರತನಾದ ಮುನಿ ವರನನ್ನು ನೋಡಿದೆನು. ರೂಪಸಂಪನ್ನದಮತ್ತರಾಗಿ, ಅವನ ತಪಸ್ಸನ್ನು ಕೆಡಿಸಲು ತೊಡಗಿದ ನಮ್ಮಲ್ಲಿ ಕುಪಿತನಾಗಿ ಋಷಿಯು 'ಪ್ರಭಾಸದ ಮಡುವಿನಲ್ಲಿ ಮೊಸಳೆ ಗಳಾಗಿ' ಎಂದು ಶಪಿಸಿದನು. ನಾವು ಭಯ ವಿನಯಗಳಿಂದ ವಿಶಾಪಕ್ಕಾಗಿ ಪ್ರಾರ್ಥಿ ಸಿದೆವು. ಆಗ ಮುನಿಯು ಕರುಣಿಸಿ 'ಅರ್ಜುನನು ಬಂದು ನಿಮ್ಮನ್ನು ಮೇಲಕ್ಕೆತ್ತಿ ಎಸೆದಾಗ, ನಿಮಗೆ ಶಾಪ ಮೋಕ್ಷವಾಗಲಿ' ಎಂದನುಗ್ರಹಿಸಿದನು. ಇಂದು ನಿನ್ನ ದಯದಿಂದ ನಾವು ಉದ್ಧೃತರಾದೆವು. 'ನಿನಗೆ ಕಲ್ಯಾಣವಾಗಲಿ!' ಎಂದು ನುಡಿದು ವರ್ಗೆ, ಅಪ್ಸರೋವರ್ಗದಿಂದ ಸ್ವರ್ಗವನ್ನು ಸೇರವೋದಳು.

ಪ್ರಭಾಸದಲ್ಲಿರುವಾಗ ಶ್ರೀಕೃಷ್ಣನು ಅರ್ಜುನನನ್ನು ನೋಡಲು ಬಂದನು. ಅನ್ಯೋನ್ಯ ದರ್ಶನದಿಂದ ಪ್ರೀತರಾಗಿ, ಆಲಿಂಗಿಸಿ, ಕುಶಲವಾರ್ತೆಯಾದಮೇಲೆ ಅರ್ಜುನನು ಶ್ರೀಶನಿಗಿಂತೆಂದನು—"ಕೃಷ್ಣ! ನಿನ್ನ ತಂಗಿ ಸುಭದ್ರೆಯನ್ನು ನಿನ್ನ

ಅಣ್ಣ ದುರ್ಯೋಧನನಿಗೆ ಕೊಡಲಿರುವನೆಂದು ವಿಪ್ರಮುಖದಿಂದ ತಿಳಿದಿರುವೆನು. ವಸುದೇವಸುತೆಯು, ವಾಸುದೇವ ಭಗಿನಿಯು, ಅಪ್ರತಿಮ ರೂಪಸಂಪನ್ನಳು ಆದ ಸುಭದ್ರೆಯನ್ನು ಪ್ರಾಣಸಮನಾದ ನನಗೆ ಕೊಡಿಸದೆ, ಉಪೇಕ್ಷಿಸುವುದು ನಿನಗುಚಿತವೇ ? ಅವಳನ್ನು ನಾನು ಪಡೆಯಲು ಉಪಾಯವನ್ನು ನನಗೆ ತಿಳಿಸಿಕೊಡು ! ನಿನ್ನ ಮಗ ಕಾಮನ ಬಾಣವಹ್ನಿಯಿಂದ ನನ್ನನ್ನು ಕಾಪಾಡು !" ಆ ಮಾತನ್ನಾಲಿಸಿ, ಶ್ರೀಕೃಷ್ಣನು ನಸುನಕ್ಕು "ಅರ್ಜುನಾ ! ಶೂರನಾದ ನಿನಗೆ ಒಂದೇ ಮಾರ್ಗ ಉಳಿದಿದೆ. ಸಾಮದಿಂದ, ಸಮ್ಮತಿಯಿಂದ, ಸ್ವಯಂವರದಿಂದ ಸುಭದ್ರೆ ನಿನ್ನವಳಾಗುವಂತಿಲ್ಲ. ಅವಳನ್ನು ಮಾಯೋಪಾಯದಿಂದ ಹರಿಸಿ, ವರಿಸು !" ಎಂದನು. "ವಾಸುದೇವ ! ನಿನ್ನ ಕೃಪೆ ಇರಲಿ ಸಾಕು. ತ್ರಿಲೋಕಗಳಲ್ಲಿ ನನಗೆ ದುರ್ಲಭವಿಲ್ಲ" ವೆಂದು ಅರ್ಜುನನು ಶ್ರೀಶನ ಸಲಹೆಯಂತೆ ತ್ರಿದಂಡಸನ್ಯಾಸಿ ವೇಷವನ್ನು ಧರಿಸಿ, ದ್ವಾರಕೆಯ ಸಮೀಪದ ರೈವತಕ ಪರ್ವತದಲ್ಲಿ ವಾಸಿಸುತ್ತಿದ್ದನು.

ಶ್ರೀಕೃಷ್ಣನು ರುಕ್ಮಿಣೀ ಸತ್ಯೆಯರಿಗೆ ಎಲ್ಲವನ್ನು ತಿಳಿಸಿ, ಅವರೊಡಗೂಡಿ ರೈವತಕದಲ್ಲಿ ಬಂದಿದ್ದ ಸನ್ಯಾಸಿಯನ್ನು ನೋಡಿ ಬರುವೆನೆಂದು ತೆರಳಿದನು. ಬಲರಾಮಾದಿ ಯಾದವರೂ ಬಂದರು. ಬಲರಾಮನು ಯತಿಗೆ ನಮಸ್ಕರಿಸಿದಾಗ, ಕಪಟಯತಿಯು ಅವನಿಗೆ ತಾನೂ ವಂದಿಸಿ 'ನೀನು ಜ್ಞಾನ ಭಕ್ತ್ಯಾದಿಗುಣಗಳಿಂದ ಜ್ಯೇಷ್ಠನೆ'ಂದು ಸಮಾಧಾನಪಡಿಸಿದನು. ವಾಗ್ಮಿಯು, ಸುಂದರನು ಆದ ಯತಿಯನ್ನು ಬಲರಾಮನು ಪೂಜಿಸಿ, ಕರೆತಂದು, ಕನ್ಯಾಂತಃಪುರದಲ್ಲಿ ಬಿಡಾರ ಮಾಡಿಕೊಟ್ಟು, ಒಂದು ವರ್ಷವಲ್ಲೇ ಇದ್ದು, ಉಪದೇಶಾಮೃತವನ್ನು ನೀಡಬೇಕೆಂದು ಪ್ರಾರ್ಥಿಸಿದನು. ಶ್ರೀಕೃಷ್ಣನು ಯುವಕನಾದ ಯತಿಯನ್ನು ಕನ್ಯಾಶಾಲೆಯಲ್ಲಿಡುವುದು ಉಚಿತವಲ್ಲವೆಂದನು. ಬಲರಾಮನು "ಕೃಷ್ಣ ! ಸರ್ವತಃ ಶಂಕಿಯಾಗಬೇಡ ! ಸುಗುಣನೂ, ವಿದ್ಯಾವಂತನೂ ಆದ ಯತಿಯು ನಮಗೆ ಶ್ರೇಯಃಪ್ರದನಾಗುವನು. ನಮ್ಮ ಕನ್ಯೆ ಸುಭದ್ರೆಗೆ ಕಲ್ಯಾಣವಾಗುವುದು" ಎಂದು ಸುಭದ್ರೆಯನ್ನು ಯತಿಸೇವೆಗಾಗಿ ನಿಯಮಿಸಿದನು.

ಕೃಷ್ಣನು ಎಲ್ಲವೂ ಅನುಕೂಲವಾಗಿ ನಡೆಯುವುದನ್ನು ಕಂಡು, ಮನದಿ ಸಂತಸಿಸಿ ಸಮಯವನ್ನು ನೋಡಿ ಸುಭದ್ರೆಯನ್ನು ಹರಿಸಿಕೊಂಡು ಹೋಗುವಂತೆ ಪಾರ್ಥನಿಗೆ ಸೂಚನೆಯನ್ನಿತ್ತನು. ಪಾರ್ಥಶಿಷ್ಯನಾದ ಸಾತ್ಯಕಿಗೂ, ತನ್ನ ಶಿಷ್ಯನಾದ ವಿಪೃಥುವಿಗೂ ಮಾತ್ರ ನಿಜವನ್ನು ತಿಳಿಸಿ, ಪಾರ್ಥನ ಕಾರ್ಯದಲ್ಲಿ ವಿರೋಧಿಸಬೇಡಿ ಎಂದು ಆಜ್ಞಾಪಿಸಿದ್ದನು. ಒಂದುದಿನ ಬಲರಾಮ, ಪ್ರದ್ಯುಮ್ನ ಸಾಂಬೋದ್ಧವಾದಿ ಸರ್ವ ಯಾದವರು ಪಿಂಡೋದ್ಧಾರಕ್ಕೆ ಹೊರಟು, ಅಲ್ಲಿ ಮಹಾದೇವನ ಉತ್ಸವದಲ್ಲಿ ನಿರತರಾಗಿದ್ದರು.

ಯತಿಪೂಜೆಯನ್ನು ಶ್ರದ್ಧೆಯಿಂದ ಮಾಡುತ್ತಿದ್ದ ಸುಭದ್ರೆ, ಒಂದುದಿನ ಪಾಂಡವರ ಯೋಗಕ್ಷೇಮವನ್ನು ವಿಚಾರಿಸಿದಳು. ಯತಿಯು "ಅವರೆಲ್ಲರೂ

ಶ್ರೀಕೃಷ್ಣಾನುಗ್ರಹದಿಂದ ಸುಕ್ಷೇಮಿಗಳೆಂ"ದನು. "ಪಾಂಡವಮಧ್ಯಮನು ತೀರ್ಥ-ಯಾತ್ರೆಗೆ ಹೊರಟಿರುವನಂತೆ ! ಅವನನ್ನು ನೀವು ಎಲ್ಲಿಯಾದರೂ ಕಂಡಿರೇ ?" ಎಂದ ಸುಭದ್ರೆಯ ಮನವನ್ನರಿತು ಪಾರ್ಥನು ಸಂತೋಷಿಸಿ "ನೋಡಿದೆನು ಅವನಿಗೂ ನನಗೂ ಏಕದೇಹನ್ಯಾಯದಂತಿದೆ" ಎಂದು ನಸುನಕ್ಕನು. ಮತ್ತೆ ಸುಭದ್ರೆಯು "ಎಲ್ಲಿ ನೋಡಿದಿರಿ ?" ಎಂದು ಕೇಳಿದಳು. ಪಾರ್ಥ "ಇಲ್ಲೇ, ಇಲ್ಲೇ ನೋಡು. ನಾನೇ ಅರ್ಜುನನೆಂ"ದು ಅವಳ ಕರಪಲ್ಲವವನ್ನು ಪಿಡಿದನು. ಆನಂದಾಶ್ಚರ್ಯಭರಿತಳಾಗಿ ಸುಭದ್ರೆ ಕೈಬಿಡಿಸಿಕೊಂಡು "ಶ್ರೀವಾಸುದೇವನ ಆಜ್ಞೆ, ಜನನಿ ಜನಕರ ಸಮ್ಮತಿ ಗಳನ್ನು ಪಡೆದು, ನನ್ನ ಪಾಣಿಯನ್ನು ಸ್ವೀಕರಿಸಬಹು"ದೆಂದಳು. ಅರ್ಜುನನು ಶ್ರೀಕೃಷ್ಣನನ್ನು ಸ್ಮರಿಸಿದನು.

ಶ್ರೀಕೃಷ್ಣನು ಸತ್ಯಭಾಮಾ ರುಕ್ಮಿಣೀ, ವಸುದೇವ ದೇವಕಿಯರಿಂದ ಕೂಡಿ, ಬಲರಾಮಾದಿಗಳನ್ನು ವಂಚಿಸಿ, ಅಂತಃಪುರಕ್ಕೆ ಬಂದನು. ಶಚೀ ಪುರಂದರರೂ ಬಂದರು. ನಾರದಾದಿ ಮುನಿಸನ್ನಿಧಿಯಲ್ಲಿ ಶ್ರೀಕೃಷ್ಣನು ಸುಭದ್ರಾರ್ಜುನರ ವಿವಾಹಮಹೋತ್ಸವವನ್ನು ರಹಸ್ಯವಾಗಿ ನಡೆಸಿ, ದಿವ್ಯರಥವನ್ನಿತ್ತು ಮತ್ತೆ ಪಿಂಡೋದ್ಧಾರವನ್ನು ಸೇರಿ, ಏನೂ ತಿಳಿಯದವನಂತೆ ನಿದ್ರಿಸಿದನು. ಇಂದ್ರಾದಿಗಳೂ ಅಂತರ್ಹಿತರಾದರು.

ಅರ್ಜುನನಾಗ ಸುಭದ್ರೆಯು ಸಾರಥ್ಯವನ್ನು ಮಾಡುತ್ತಿರಲು, ರಥಾರೂಢನಾಗಿ, ಇಂದ್ರನಿತ್ತ ದಿವ್ಯಕುಂಡಲ ಕವಚ ವಸ್ತ್ರಾಭರಣ ಭೂಷಿತನೂ ಆಗಿ ದ್ವಾರಕಾ ನಗರ ದ್ವಾರದಲ್ಲಿ ಬಂದು ಅಲ್ಲಿ ತನ್ನನ್ನೆದುರಿಸಿದ ವೀರಭಟರನ್ನು ಸೋಲಿಸಿ, ಓಡಿಸಿದನು. ಶ್ರೀಕೃಷ್ಣನು ಆಜ್ಞಾಪಿಸಿದಂತೆ ವಿಪೃಥು(ಸೌಮ್ಯಮರುತ್)ವು ಬಹು ಸೈನ್ಯದಿಂದ ಬಂದು, ಪಾರ್ಥನನ್ನು ತಡೆದು, ಯುದ್ಧವನ್ನು ಮಾಡಿದನು. ಆದರೆ ಪಾರ್ಥನು ಅವನು ಯುದ್ಧಮಾಡುವಾಗ, ತೀವ್ರಯುದ್ಧವನ್ನು ಮಾಡುತ್ತಿಲ್ಲ, ಕೇವಲ ತೋರಿ-ಕೆಯ ಹೋರಾಟವೆಂದರಿತು, ಅವನನ್ನು, ಸೈನ್ಯವನ್ನು, ಬಾಣವರ್ಷದಲ್ಲಿ ಮುಳುಗಿಸಿದನು. ಅರ್ಜುನನ ಚಾತುರ್ಯದಿಂದ ಆ ಬಾಣಗಳು ಅವರ ಚರ್ಮ ಮಾತ್ರ ಮುಟ್ಟಿ ಗಾಯಮಾಡದೆ ಕೆಳಗುರುಳಿದವು. ಅರ್ಜುನನ ಅಭಿಮಾನವನ್ನು ಕಂಡು, ಕೃತಜ್ಞನಾಗಿ, ವಿಪೃಥುವು ಮುಷ್ಟಿಯುದ್ಧವನ್ನು ಮಾಡುವವನಂತೆ ಪಾರ್ಥನನ್ನು ಸಮೀಪಿಸಿ, ಕರ್ಣ ಮೂಲದಲ್ಲಿ ಇಂತೆಂದನು ; "ಪಾರ್ಥ ! ಶ್ರೀಕೃಷ್ಣಾನುಗ್ರಹಪಾತ್ರನಾಗಿರುವೆ. ಹೋಗು, ಶ್ರೀಕೃಷ್ಣನು ಹೇಳಿದಂತೆ ನಿನ್ನಿಂದ ಯುದ್ಧಮಾಡಿದಂತೆ ನಟಿಸಿದೆನು. ಕ್ಷಮಿಸು ನನ್ನಿಂದ ಅಪರಾಧವಾಗಿದ್ದರೆ ; ಬಲರಾಮಾದಿಗಳು ಬಾರದ ಮುನ್ನ ಬೇಗ ಬೇಗ ಪಯಣಿಸು !" ಇಂತು ಹೇಳಿ, ವಿಪೃಥುವು ಸೋತವನಂತೆ, ಹಿಂದಿರುಗಿದನು. ಸೈನ್ಯವೆಲ್ಲವೂ ಪಲಾಯಿತವಾಯಿತು. ವಿಪೃಥುವು ಪಿಂಡಾರಕ್ಕೆ ಬಂದು ಬಲರಾಮನಿಗೆ ನಡೆದ ವೃತ್ತಾಂತವನ್ನು ತಿಳಿಸಿದನು. ಬಲರಾಮನು ಕುಪಿತನಾಗಿ, ಮಾಯಾ ಯತಿ

ಯಾಗಿ ಬಂದು, ಕನ್ಯೆಯನ್ನಪಹರಿಸಿದ ಅರ್ಜುನನನ್ನು ಕೊಲ್ಲುವೆನೆಂದು ಸಂಕಲ್ಪಿಸಿ, ದ್ವಾರಕೆಗೆ ಬಂದನು.

ಶ್ರೀಕೃಷ್ಣನ ಅಭಿಮತಕ್ಕೆ ವಿರುದ್ಧವಾಗಿದ್ದರೂ, ಬಲರಾಮನ ಇಚ್ಛೆಯಂತೆ ಸುಭದ್ರೆಯನ್ನು ದುರ್ಯೋಧನನಿಗೇ ಕೊಡಬೇಕೆಂದು ಹಠಹಿಡಿದ ಪ್ರದ್ಯುಮ್ನ, ಸಾಂಬ, ಉದ್ಧವ ಮೊದಲಾದ ಯದುವೀರರು, ಅಸುರಾವೇಶದಿಂದ ಪಾರ್ಥ ವಿರೋಧ ವನ್ನು ಮಾಡಿದರು. ಅವರು ಸಭೆಕಲೆತರು. ಶ್ರೀಶನೂ ಆ ಸಭೆಗೆ ಬಂದು, ತಲೆತಗ್ಗಿಸಿ ಕೂತಿದ್ದನು. ಪಾರ್ಥನು ಮಾಡಿದ ವಂಚನೆಗೆ ವಧೆಯೇ ತಕ್ಕ ಶಿಕ್ಷೆ ಎಂದು ಕೂಗಾಡು ತ್ತಿರುವ ಪ್ರದ್ಯುಮ್ನಾದಿಗಳನ್ನು ನಿಲ್ಲಿಸಿ, ಬಲರಾಮನು "ಕೃಷ್ಣನ ಅಪ್ಪಣೆಯಿಲ್ಲದೆ ಪಾರ್ಥನ ಮೇಲೇರಿ ಹೋಗಲಾಗದು. ಹರಿ ವಿರೋಧದಿಂದ ನಮಗೆ ಜಯವಾಗದು. ಮೊದಲು ಕೃಷ್ಣನ ಅಭಿಪ್ರಾಯವನ್ನು ತಿಳಿಯುವುದೊಳಿತು" ಎಂದನು ; ಅವರೆಲ್ಲರೂ ಕೃಷ್ಣನಿಗೆ ನಮಿಸಿ ಕರ್ತವ್ಯವೇನೆಂದರು.

ಶ್ರೀಕೃಷ್ಣನಿಂತೆಂದನು—"ಕೇಳಿ ನನ್ನ ಮಾತನ್ನು ! 'ಮಾಯಾಸನ್ಯಾಸಿಯನ್ನು ಕರೆತರುವುದೊಳಿತಲ್ಲ ; ಕರೆತಂದರೂ ಕನ್ಯಾಂತಃಪುರದಲ್ಲಿಡುವುದು ಬೇಡ ; ಇಟ್ಟರೂ ಸುಭದ್ರೆಯನ್ನು ಸೇವೆಗೆಂದು ಒಪ್ಪಿಸುವುದು ಸರಿಯಲ್ಲ' ಎಂದು ನಾನು ಮೊದಲೇ ಹೇಳಿದೆನು. ನಿಮಗಾರಿಗೂ ನನ್ನ ಮತ ರುಚಿಸಲಿಲ್ಲ. ಈಗ ನಿಮ್ಮ ಕ್ರಿಯಾಫಲವನ್ನು ಉಣ್ಣಬೇಕಾಯಿತು. ಕೈಮೀರಿದಮೇಲೆ ಮಾಡುವುದಾದರೂ ಏನು ? ಕನ್ಯೆಯನ್ನು ಅಪಹರಿಸಿದ ಅರ್ಜುನನು ನಮಗೆ ಭಯಪಟ್ಟು ಓಡಿಹೋಗಿರುವುದರಿಂದ ಅವನಿಗೇ ಮಾನಭಂಗವಾಯಿತಾಗಲಿ ನಮಗಲ್ಲ. ಮಾಯಾಯತಿಯು ಮತ್ತಾರಲ್ಲದೆಅರ್ಜುನನೇ ಆಗಿರುವನೆಂದು ವಿಪೃಥುವು ಹೇಳುತ್ತಿರುವುದರಿಂದ ಸ್ವಲ್ಪ ಸಮಾಧಾನವೇ ಆಗಿದೆ. ಅಂತಹ ವೀರವರನಿಗೆ ನಾವೇ ಕೊಡಬೇಕಾದ ಕನ್ಯೆಯನ್ನು ಅವನು ತಾನಾಗಿ ಕರೆದು ಕೊಂಡು ಹೋಗಿರುವನು ; ಆದ ಹಾನಿಯಾದರೂ ಏನು ? ಒಂದು ವೇಳೆ ನೀವು ಅವನ ಮೇಲೇರಿಹೋಗಿ, ಯುದ್ಧದಲ್ಲಿ ಸೋತುಬಂದರೆ ನಿಮಗೆ ಕೀರ್ತಿನಾಶವೂ ಆದೀತು ! ನೀವು ಗೆದ್ದು, ಕನ್ಯೆಯನ್ನು ಹಿಂದೆ ಕರತಂದರೂ, ಅವಳನ್ನು ಅರ್ಜುನ ಪರಾಮೃಷ್ಟಳೆಂಬ ಕಾರಣದಿಂದ ಯಾರೂ ಸ್ವೀಕರಿಸುವುದಿಲ್ಲ. ಸರ್ವಪ್ರಕಾರದಿಂದಲೂ ಅರ್ಜುನನನ್ನು ದಂಡಿಸುವೆವೆಂಬ ನಿಮ್ಮ ಹಠ ಸಲ್ಲದೆಂದು ನನಗೆ ತೋರುತ್ತಿದೆ ; ನಿಮ್ಮ ಇಷ್ಟ !"

ಆ ಮಾತನ್ನಾಲಿಸಿ, ಬಲರಾಮನು "ನನಗೆ ಇಂತಾಗುವುದೆಂದು ಅನುಮಾನವಿದ್ದೇ ಇತ್ತು. ಎಲ್ಲಿ ಪಾರ್ಥನೋ ಎಲ್ಲಿ ಕೃಷ್ಣನೋ ಅಲ್ಲಿ ವಿಜಯ ನೀತಿ ವಿಭೂತಿಗಳು ನೆಲ ಸಿರುವವು. ಒಳ್ಳೆಯದಾಯಿತು. ದುರ್ಯೋಧನನಿಗೆ ಸುಭದ್ರಾಪ್ರಾಪ್ತಿಯೋಗವಿಲ್ಲ. ಶ್ರೀಕೃಷ್ಣನ ಚಿತ್ತದಂತೆ ವರ್ತಿಸುವುದರಿಂದ ನಮಗೆಲ್ಲ ಶ್ರೇಯಃಪ್ರಾಪ್ತಿಯಾಗುವುದು. ಶಾಂತಿಕಾರಣವಾದ ಸುಭದ್ರಾರ್ಜುನರ ವಿವಾಹವನ್ನು ನಡೆಸಿಕೊಟ್ಟು, ಶ್ರೀಕೃಷ್ಣನ ಅನುಗ್ರಹವನ್ನೂ ಪಡೆಯುವುದೇ ನಮ್ಮ ಕರ್ತವ್ಯ !" ಎಂದು, ಧನ, ಕನಕ, ರತ್ನ,

ವಸ್ತ್ರ, ವಾಹನಾದಿ ಪಾರಿಬರ್ಹದ್ರವ್ಯಗಳನ್ನು ತೆಗೆದುಕೊಂಡು, ಬಲರಾಮನು ಕೃಷ್ಣಾದಿ ಯದುವೀರರಿಂದಲೂ ರುಕ್ಮಿಣ್ಯಾದಿ ನಾರೀಜನರಿಂದಲೂ ಕೂಡಿ, ಇಂದ್ರಪ್ರಸ್ಥವನ್ನು ಸೇರಿದನು. ದ್ರೌಪದೀಪ್ರಮುಖ ತರುಣಿಯರಿಗೂ ಧರ್ಮಜ ಮುಖ್ಯ ಪಾಂಡವ ರಿಗೂ ಅನರ್ಘ್ಯ ವಸ್ತ್ರಾಭರಣಗಳನ್ನಿತ್ತು ಸತ್ಕರಿಸಿ, ಸುಭದ್ರಾರ್ಜುನ ವಿವಾಹವನ್ನು ಮಹಾ ವೈಭವದಿಂದ ಮಾಡಿಕೊಟ್ಟನು. ಶ್ರೀಕೃಷ್ಣನೂ ಪಾರ್ಥರನ್ನು ಅಭಿನಂದಿಸಿ ಆನಂದಭರಿತನಾದನು. ಬಲರಾಮನು ಕೆಲ ತಿಂಗಳು ಅಲ್ಲೇ ಇದ್ದು, ಪಾಂಡವರಿಗೆ ಸಂತಸವನ್ನಿತ್ತು, ದ್ವಾರಕೆಗೆಂದು ಹೊರಟನು. ಶ್ರೀಕೃಷ್ಣನು ಸತ್ಯಾದೇವಿಯೊಡನೆ ಅಲ್ಲೇ ಕೆಲ ವರ್ಷಗಳು ಭೀಮಾರ್ಜುನರೊಡನೆ ವಿಹರಿಸುತ್ತಿದ್ದನು.

ದ್ರೌಪದೀದೇವಿಯು ಧರ್ಮರಾಜನಿಂದ ಪ್ರತಿವಿಂಧ್ಯನೆಂಬ ಸುತನನ್ನು, ಭೀಮ ನಿಂದ ಶ್ರುತಸೋಮನನ್ನು, ಅರ್ಜುನನಿಂದ ಶ್ರುತಕೀರ್ತಿಯನ್ನು, ನಕುಲನಿಂದ ಶ್ರುತಾನೀಕನನ್ನು, ಸಹದೇವನಿಂದ ಶ್ರುತಕ್ರಿಯನನ್ನು ಪಡೆದಳು. ಈ ಪಂಚ ದ್ರೌಪದೇಯರು ಚಿತ್ರರಥ, ಅಭಿತಾಮ್ರ, ಕಿಶೋರ, ಗೋಪಾಲ, ಬಲ ಎಂಬುವ ಗಂಧರ್ವಾವೇಶಯುಕ್ತರಾದ ವಿಶ್ವೇದೇವಾಂಶರು. ಶ್ರುತಸೋಮ ಜನಿಸಿದ ನಂತರ ಜನಿಸಿದವನು ಸುಭದ್ರಾಸುತನಾದ ಅಭಿಮನ್ಯುವು. ಇವನು ಬುಧನ ಅವತಾರನಾಗಿ, ಚಂದ್ರನ ಆವೇಶದಿಂದಲೂ ಹಾಗೂ ಯಮ, ವಾಯು, ಶಕ್ರ, ನಾಸತ್ಯ, ದಸ್ರರ ಆವೇಶದಿಂದಲೂ ಕೂಡಿ, ಮಹಾವೀರನೆನಿಸಿದನು. ಅವನಲ್ಲಿ ಶ್ರೀಕೃಷ್ಣನ ಸನ್ನಿ ಧಾನವೂ ಇತ್ತು. ಅವರೆಲ್ಲರೂ ವೀರ್ಯವಂತರು, ವಿಷ್ಣುಭಕ್ತರು, ಸರ್ವಶಾಸ್ತ್ರ ಶಸ್ತ್ರ ಚತುರರು ಆಗಿ ಮಹಾರಥರೆಂದು ಪ್ರಖ್ಯಾತರಾದರು.

## ಖಾಂಡವ ದಾಹ ; ಮಯಸಭಾ ನಿರ್ಮಾಣ

ಶ್ರೀಕೃಷ್ಣಾರ್ಜುನರೊಂದುದಿನ ಸತ್ಯಾ ಸುಭದ್ರೆಯರೊಗೂಡಿ, ಪರಿಚಾರಕ ವರ್ಗವು ಸೇವಾರ್ಥವಾಗಿ ಹಿಂಬಾಲಿಸಲು, ರಥಾರೂಢರಾಗಿ ಖಾಂಡವವನಕ್ಕೆ ಹೋದರು. ಗಂಧರ್ವಗಾನವು ಶ್ರುತಿಮನೋಹರವಾಗಿ, ಮಂದಮಲಯಾನಿಲ ಗಂಧ ಗಂಧಿತವಾದ ವನದಲ್ಲಿಯೂ ಕಮಲಕುಸುಮ ಪರಾಗ ಶೀತಲ ಪುಲಿನತಲೆ ಯಾದ ಯಮುನೆಯ ತಟದಲ್ಲಿಯೂ ಸತ್ಯಾ ಕೃಷ್ಣರು, ಸುಭದ್ರಾ ಅರ್ಜುನರು ವಿಹರಿಸುತ್ತಿದ್ದರು.

ಒಂದು ಸುಮನೋಹರ ಸ್ಥಳದಲ್ಲಿ ಪಾರ್ಥ ಕೃಷ್ಣರು ಆಸೀನರಾಗಿರುವಾಗ ವಿಪ್ರ ನೋರ್ವನು ಅವರನ್ನು ಸಮೀಪಿಸಿದನು. ಕನಕಪ್ರಭನು, ಸಾಲಪ್ರಾಂಶುದೇಹನು, ಪೀತಶ್ಮಶ್ರುವು, ಚೀರವಾಸನು, ಜಟಾಧರನು, ಪದ್ಮನೇತ್ರನು ಆಗಿದ್ದ ವಿಪ್ರನನ್ನು ಕಂಡು ಕೃಷ್ಣಾರ್ಜುನರು ಎದ್ದುನಿಂತು, ಸ್ವಾಗತವನ್ನಿತ್ತು, ಅವನನ್ನು ಅರ್ಘ್ಯಪಾದ್ಯಾ ಸನಗಳಿಂದ ಪೂಜಿಸಿದರು. ಅರ್ಜುನನು ಕೃಷ್ಣನ ಸಮ್ಮತಿಯನ್ನು ಪಡೆದು "ಬ್ರಾಹ್ಮಣವರ! ನಿನಗೇನು ಬೇಕು ? ಕೊಡುವೆ"ನೆಂದನು. ಅಗ್ನಿಯೇ ವಿಪ್ರ

ರೂಪದಿಂದ ಬಂದಿದ್ದನಾದ್ದರಿಂದ "ನನಗೆ ಅನ್ನಬೇಕು. ತೃಪ್ತಿಯಾಗುವ ವರೆವಿಗೂ ನನಗೆ ಅನ್ನವನ್ನು ನೀಡು" ಎಂದನು. "ಎಂತಹ ಅನ್ನವನ್ನು ನೀನು ಬೇಡುವೆ ?" ಎಂದ ಅರ್ಜುನನಿಗೆ ಅಗ್ನಿಯು "ನಾನು ವಹ್ನಿದೇವನು. ನನಗೆ ಅನ್ನವೆಂದರೆ ಖಾಂಡವವನವು. ಉಣ್ಣುವುದೆಂದರೆ ಅದನ್ನು ಸುಡುವುದು. ಆ ವನದಲ್ಲಿ ತಕ್ಷಕನು ವಾಸಿಸಿರುವನು. ಅವನು ಇಂದ್ರಸಖನಾದುದರಿಂದ ನಾನು ವನವನ್ನು ಸುಡಲು ತೊಡಗಿದಾಗೆಲ್ಲ, ಇಂದ್ರನು ಸುಹೃದ್ರಕ್ಷಣೆಗೆ ಧಾವಿಸಿ ಬಂದು, ಮೇಘಜಾಲವನ್ನು ಹರಡಿ, ಮಳೆಗರೆದು, ಅಗ್ನಿಶಿಖೆಗಳನ್ನು ಆರಿಸಿಬಿಡುತ್ತಿರುವನು. ನೀವು ಇಂದ್ರನ ವರ್ಷಧಾರೆಗಳನ್ನು ತಡೆಯುವ ಉತ್ತಮಾಸ್ತ್ರಗಳನ್ನರಿತಿರುವ ಮಹಾನುಭಾವರೆಂದು ತಿಳಿದೇ ನಿಮಗೆ ಶರಣು ಬಂದಿರುವೆನು.

"ಹಿಂದೆ ಶ್ವೇತಕಿ ಎಂಬ ರಾಜನಿದ್ದನು. ಆ ಮಹಾರಾಜನು ನಿತ್ಯ ಯಜ್ಞ ತತ್ಪರನಾಗಿದ್ದನು. ಅಂತಹ ಯಜ್ಞ ದಾನ ಶೌಂಡನನ್ನು ನಾನೆಲ್ಲಿಯೂ ಕಂಡಿಲ್ಲ. ಅವನ ಋತ್ವಿಜರು ಯಜ್ಞಧೂಮಾಕ್ರಾಂತನಯನರಾಗಿ, ಇನ್ನು ಯಜ್ಞಗಳನ್ನು ಮಾಡಿಸಲಾರೆವೆಂದರು. ಮಹಾತ್ಮನಾದ ಶ್ವೇತಕಿಯು ಎಷ್ಟು ಬೇಡಿದರೂ, ಎಷ್ಟು ಕೊಡುವೆನೆಂದರೂ, ಒಬ್ಬನಾದರೂ ವಿಪ್ರನು ಅವನ ಯಜ್ಞವನ್ನು ನಡೆಸಿಕೊಡಲು ಮುಂದಾಗಲಿಲ್ಲ. 'ರಾಜನ್ ! ನಿನ್ನ ಯಜ್ಞಗಳು ನಿರಂತರವಾಗಿ ನಡೆಯುತ್ತಲಿವೆ. ನಾವು ಶ್ರಾಂತರಾಗಿರುವೆವು. ನಿನ್ನ ಯಜ್ಞಕರ್ಮಗಳನ್ನು ನಡೆಸಿ, ಶ್ರಮದಿಂದ ನೊಂದಿರುವ ನಮ್ಮನ್ನು ನೀನು ಪೀಡಿಸುವುದೊಳಿತಲ್ಲ. ಅಷ್ಟು ಯಜ್ಞಕರಣ ಹಠವಿದ್ದರೆ ಮಹಾದೇವನನ್ನು ಬೇಡು ! ಅವನು ನಿನಗೆ ಪುರೋಹಿತನಾಗಿ ಬರಲಿ ! ನಮಗೆ ಬೇಕಾಗಿಲ್ಲ, ನಿನ್ನ ದಾನ ದಕ್ಷಿಣೆಗಳು' ಇಂತು ಅಧಿಕ್ಷೇಪಿಸಿದ ಬ್ರಾಹ್ಮಣರ ಮಾತಿಗೆ ನೊಂದು, ಶ್ವೇತಕಿಯು ಕೈಲಾಸವನ್ನು ಸೇರಿ, ತೀವ್ರ ತಪದಿಂದ ಶಂಕರ ನನ್ನು ಮೆಚ್ಚಿಸಿದನು. 'ವರವನ್ನು ಬೇಡು' ಎಂದ ದೇವದೇವನನ್ನು ನೋಡಿ ಶ್ವೇತಕಿಯು 'ನನ್ನ ಪುರೋಹಿತನಾಗಿ ಬಂದು ನನ್ನ ಯಜ್ಞಗಳನ್ನು ಮಾಡಿಸು !' ಎಂದನು. ಮಂದಸ್ಮಿತವದನನಾಗಿ ಇಂದುಧರನು 'ನೀನು ಬಿಡದೆ ಹನ್ನೆರಡು ವರ್ಷಗಳವರೆಗೂ ಸಂತತಾಜ್ಯಧಾರೆಯನ್ನಿತ್ತು ಹೋಮಿಸುವುದಾದರೆ ನಾನು ಪುರೋಹಿತನಾಗುವೆ' ಎಂದನು. ಅದಕ್ಕೊಪ್ಪಿ ಶ್ವೇತಕಿಯು ಅಂತೆಯೇ ಉಮಾ ಕಾಂತನು ಹೋತೃವಾಗಿರಲು ದ್ವಾದಶ ವರ್ಷದ ಸತ್ರದಲ್ಲಿ ಸಂತತಾಜ್ಯಧಾರಾ ಹೋಮದೊಡನೆ, ಸಂತತ ದಾನ ಧಾರೆಯನ್ನೂ ಸುರಿಸುವ ಸಿದ್ಧತೆಯನ್ನು ನಡೆಸಿ, ಶಂಕರನನ್ನು ಕರೆಯಲು ಆ ಮಹಾದೇವನಿಂತೆಂದನು— 'ಯಾಜನವು ವಿಪ್ರರ ಧರ್ಮವು, ದೇವತೆಗಳದಲ್ಲ. ನಿನಗೆ ವಚನವಿತ್ತಂತೆ ನಾನೇ ಅಂದರೆ ವಿಪ್ರಾಂಶದಿಂದ ಬಂದು ನಿನ್ನ ಯಜ್ಞವನ್ನು ನಡೆಸಿಕೊಡುವೆ'ನೆಂದು ಹೇಳಿ, ದೂರ್ವಾಸಮುನಿ ಯನ್ನು ಕಳಿಸಿದನು. ಯಾಗವೂ ಸಮಾಪ್ತವಾಯಿತು. ಶ್ವೇತಕಿಯು ದಿವ್ಯ ಲೋಕವನ್ನು ಹೊಂದಿದನು.

"ನನಗೆ ಆಜ್ಯಧಾರಾಹುತಿಗಳ ನಿರಂತರ ಭಕ್ಷಣದಿಂದ ಅಜೀರ್ಣವಾಯಿತು. ತೇಜಸ್ಸು ಕಡಿಮೆಯಾಯಿತು. ಆಗ ನಾನು ಬ್ರಹ್ಮನಿಗೆ ಶರಣಾಗತನಾಗಿ ತೇಜಃಪ್ರಾಪ್ತಿಯನ್ನು ಬೇಡಿದೆನು. ಆದಿದೇವನು 'ಖಾಂಡವವನದಲ್ಲಿ ದೇವಶತ್ರುಗಳು ಕೋಟಿಗಟ್ಟಲೆ ಇರುವರು. ಅವರ ಮೇದಸ್ಸಿನಿಂದ ನಿನ್ನ ಅಜೀರ್ಣರೋಗವು ನಶಿಸುವುದು. ಲೋಕಕ್ಷೇಮವೂ ಆಗುವುದು. ಖಾಂಡವವನವನ್ನು ಸುಡು ನಡೆ !' ಎಂದಪ್ಪಣೆ ಇತ್ತನು. ನಾನು ಖಾಂಡವವನವನ್ನು ಸುಡುವ ಪ್ರಯತ್ನವು ಏಳು ಸಲ ಇಂದ್ರನ ವರ್ಷಧಾರೆಗಳಿಂದ ನಿವಾರಿತವಾಗಿದೆ. ಪುನಃ ಬ್ರಹ್ಮನನ್ನು ಬೇಡಲು ಆತನು 'ನರನಾರಾಯಣರೇ ಅರ್ಜುನ ವಾಸುದೇವರಾಗಿ ಜನಿಸಿರುವರು. ಅವರೀಗ ಖಾಂಡವದಲ್ಲೇ ವಿಹರಿಸುತ್ತಿರುವರು. ಅವರು ಇಂದ್ರನನ್ನೂ ಜಯಿಸಲು ಸಮರ್ಥರು. ಅವರಿಂದ ನಿನ್ನ ಕಾರ್ಯವಾಗುವು'ದೆಂದನು. ಆದುದರಿಂದ ನಿಮಗೆ ಶರಣಾಗತನಾಗಿ ಬಂದಿರುವೆನು. ನನ್ನನ್ನು ಕಾಪಾಡಿ" ಎಂದನು. ಪ್ರಯಾಜ, ಅನುಯಾಜಗಳೆಂಬ ಆಹುತಿಗಳನ್ನು ವೇತನವಾಗಿ ಕೇಳಿದ ಅಗ್ನಿಯಲ್ಲಿ ಕುಪಿತರಾಗಿ ದೇವತೆಗಳು ಶಾಪವಿತ್ತುದರಿಂದಲೂ, ಅಗ್ನಿಗೆ ಬಲತೇಜಗಳು ಕುಂದಿದ್ದವು. ಅದಕ್ಕೆ ಖಾಂಡವ ದಾಹವೇ ಮದ್ದು ಎಂದು ಬ್ರಹ್ಮದೇವನ ವರವಿತ್ತು. ಆಗ ಅಗ್ನಿಯ ಮಾತನ್ನಾಲಿಸಿ ಅರ್ಜುನನು 'ನನ್ನಲ್ಲಿ ಅಸ್ತ್ರಗಳಿವೆ ನಿಜ ! ಆದರೆ ನನಗೆ ತಕ್ಕ ರಥ, ಧನುಸ್, ತುರಗಗಳಿಲ್ಲದೆ ನಾನು ನಿನ್ನನ್ನು ದೇವೇಂದ್ರನಿಂದ ರಕ್ಷಿಸಲಾರೆನು. ನಿನ್ನ ಕರ್ಮಸಿದ್ಧಿಗಾಗಿ ಉಪಾಯವನ್ನು ಹುಡುಕು' ಎಂದನು.

ಅಗ್ನಿದೇವನು ಜಲೇಶನಾದ ವರುಣನನ್ನು ಪ್ರಾರ್ಥಿಸಿ, ಅವನಿಂದ ದಿವ್ಯರಥವನ್ನು, ಅಕ್ಷಯ ತೂಣೀರ ದ್ವಯವನ್ನು, ದಿವ್ಯ ತುರಗಗಳನ್ನು; ಕೃಷ್ಣನಿಗಾಗಿ ಬದರೀ ನಾರಾಯಣನಿಂದ ಚಕ್ರವನ್ನು ಕೂಡ ಪಡೆದು, ಅವರಿಗೆ ತಂದುಕೊಟ್ಟನು. ಶಕ್ರವಿರೋಧವನ್ನು ತಡೆಯಲು ಶಕ್ರಾಂಶನಾದ ಅರ್ಜುನನಿಂದಲೇ ಆಗುವುದು ಮತ್ತು ಕೃಷ್ಣ ಸಹಾಯದಿಂದಲೇ ಅರ್ಜುನನು ಖಾಂಡವ ದಹನ ಸಮರ್ಥನಾಗುವುದೆಂದು ತಿಳಿದೇ ಅಗ್ನಿಯು ಕೃಷ್ಣನನ್ನು ಬೇಡದೆ, ಅರ್ಜುನನನ್ನು ಪ್ರಾರ್ಥಿಸಿದ್ದನು. ಅವನಿತ್ತ ಧನುಸ್ತೂಣೀರಗಳನ್ನು ಧರಿಸಿ ಪಾರ್ಥನು ಅತ್ಯಂತ ಶೋಭಾಸಂಪನ್ನನಾದನು. ಶ್ರೀಕೃಷ್ಣನಾದರೂ ತನ್ನ ಚಕ್ರವನ್ನೇ ರೂಪಾಂತರದಿಂದ ಅಗ್ನಿಯು ತಂದುಕೊಟ್ಟದ್ದನ್ನು ಸ್ವೀಕರಿಸಿ, ಅಗ್ನಿಕಾರ್ಯನಿರತನಾದನು.

ಅರ್ಜುನನ ಧನುಸ್ಸಿಗೆ ಗಾಂಡೀವವೆಂದು ಹೆಸರು. ಅದನ್ನು ಬ್ರಹ್ಮದೇವನೊಬ್ಬನೇ ಧರಿಸಬಲ್ಲನಾದರೂ, ಅವನ ವರದಿಂದ ರುದ್ರ, ಇಂದ್ರ, ಚಂದ್ರ, ವರುಣರೂ ಕ್ರಮವಾಗಿ ಆ ಧನುವನ್ನು ಹೊಂದಿದ್ದರು. ಇಂದ್ರಾಂಶನಾದುದರಿಂದಲೂ ನರಾವೇಶಯುತನಾದುದರಿಂದಲೂ, ಲಕ್ಷಭಾರವಾದ ಗಾಂಡೀವವನ್ನು ಅರ್ಜುನನು ಧರಿಸಲು ಶಕ್ತನಾದನು. ಅಗ್ನಿಯು ತಂದಿತ್ತ ರಥವು ಇಂದ್ರ ರಥವೇ ಆಗಿತ್ತು. ಅದನ್ನೇರಿ ಶ್ರೀರಾಮನು ರಾವಣನನ್ನು ಜಯಿಸಿದ್ದನು. ಆ ರಥವನ್ನು ಇಂದ್ರನು

*

ರೂಪದಿಂದ ಬಂದಿದ್ದನಾದ್ದರಿಂದ "ನನಗೆ ಅನ್ನಬೇಕು. ತೃಪ್ತಿಯಾಗುವವರೆವಿಗೂ ನನಗೆ ಅನ್ನವನ್ನು ನೀಡು" ಎಂದನು. "ಎಂತಹ ಅನ್ನವನ್ನು ನೀನು ಬೇಡುವೆ ?" ಎಂದ ಅರ್ಜುನನಿಗೆ ಅಗ್ನಿಯು "ನಾನು ವಹ್ನಿದೇವನು. ನನಗೆ ಅನ್ನವೆಂದರೆ ಖಾಂಡವವನವು. ಉಣ್ಣುವುದೆಂದರೆ ಅದನ್ನು ಸುಡುವುದು. ಆ ವನದಲ್ಲಿ ತಕ್ಷಕನು ವಾಸಿಸಿರುವನು. ಅವನು ಇಂದ್ರಸಖನಾದುದರಿಂದ ನಾನು ವನವನ್ನು ಸುಡಲು ತೊಡಗಿದಾಗೆಲ್ಲ, ಇಂದ್ರನು ಸುಹೃದ್ರಕ್ಷಣೆಗೆ ಧಾವಿಸಿ ಬಂದು, ಮೇಘಜಾಲವನ್ನು ಹರಡಿ, ಮಳೆಗರೆದು, ಅಗ್ನಿಶಿಖೆಗಳನ್ನು ಆರಿಸಿಬಿಡುತ್ತಿರುವನು. ನೀವು ಇಂದ್ರನ ವರ್ಷಧಾರೆಗಳನ್ನು ತಡೆಯುವ ಉತ್ತಮಾಸ್ತ್ರಗಳನ್ನರಿತಿರುವ ಮಹಾನುಭಾವರೆಂದು ತಿಳಿದೇ ನಿಮಗೆ ಶರಣು ಬಂದಿರುವೆನು.

"ಹಿಂದೆ ಶ್ವೇತಕಿ ಎಂಬ ರಾಜನಿದ್ದನು. ಆ ಮಹಾರಾಜನು ನಿತ್ಯ ಯಜ್ಞ ತತ್ಪರನಾಗಿದ್ದನು. ಅಂತಹ ಯಜ್ಞ ದಾನ ಶೌಂಡನನ್ನು ನಾನೆಲ್ಲಿಯೂ ಕಂಡಿಲ್ಲ. ಅವನ ಋತ್ವಿಜರು ಯಜ್ಞಧೂಮಾಕ್ರಾಂತನಯನರಾಗಿ, ಇನ್ನು ಯಜ್ಞಗಳನ್ನು ಮಾಡಿಸಲಾರೆವೆಂದರು. ಮಹಾತ್ಮನಾದ ಶ್ವೇತಕಿಯು ಎಷ್ಟು ಬೇಡಿದರೂ, ಎಷ್ಟು ಕೊಡುವೆನೆಂದರೂ, ಒಬ್ಬನಾದರೂ ವಿಪ್ರನು ಅವನ ಯಜ್ಞವನ್ನು ನಡೆಸಿಕೊಡಲು ಮುಂದಾಗಲಿಲ್ಲ. 'ರಾಜನ್ ! ನಿನ್ನ ಯಜ್ಞಗಳು ನಿರಂತರವಾಗಿ ನಡೆಯುತ್ತಲಿವೆ. ನಾವು ಶ್ರಾಂತರಾಗಿರುವೆವು. ನಿನ್ನ ಯಜ್ಞಕರ್ಮಗಳನ್ನು ನಡೆಸಿ, ಶ್ರಮದಿಂದ ನೊಂದಿರುವ ನಮ್ಮನ್ನು ನೀನು ಪೀಡಿಸುವುದೊಳಿತಲ್ಲ. ಅಷ್ಟು ಯಜ್ಞಕರಣ ಪರವಿದ್ದರೆ ಮಹಾದೇವನನ್ನು ಬೇಡು ! ಅವನು ನಿನಗೆ ಪುರೋಹಿತನಾಗಿ ಬರಲಿ ! ನಮಗೆ ಬೇಕಾಗಿಲ್ಲ, ನಿನ್ನ ದಾನ ದಕ್ಷಿಣೆಗಳು' ಇಂತು ಅಧಿಕ್ಷೇಪಿಸಿದ ಬ್ರಾಹ್ಮಣರ ಮಾತಿಗೆ ನೊಂದು, ಶ್ವೇತಕಿಯು ಕೈಲಾಸವನ್ನು ಸೇರಿ, ತೀವ್ರ ತಪದಿಂದ ಶಂಕರ ನನ್ನು ಮೆಚ್ಚಿಸಿದನು. 'ವರವನ್ನು ಬೇಡು' ಎಂದ ದೇವದೇವನನ್ನು ನೋಡಿ ಶ್ವೇತಕಿಯು 'ನನ್ನ ಪುರೋಹಿತನಾಗಿ ಬಂದು ನನ್ನ ಯಜ್ಞಗಳನ್ನು ಮಾಡಿಸು !' ಎಂದನು. ಮಂದಸ್ಮಿತವದನನಾಗಿ ಇಂದುಧರನು 'ನೀನು ಬಿಡದೆ ಹನ್ನೆರಡು ವರ್ಷಗಳವರೆಗೂ ಸಂತತಾಜ್ಯಧಾರೆಯನ್ನಿತ್ತು ಹೋಮಿಸುವುದಾದರೆ ನಾನು ಪುರೋಹಿತನಾಗುವೆ' ಎಂದನು. ಅದಕ್ಕೊಪ್ಪಿ ಶ್ವೇತಕಿಯು ಅಂತೆಯೇ ಉಮಾ ಕಾಂತನು ಹೋತೃವಾಗಿರಲು ದ್ವಾದಶ ವರ್ಷದ ಸತ್ರದಲ್ಲಿ ಸಂತತಾಜ್ಯಧಾರಾ ಹೋಮದೊಡನೆ, ಸಂತತ ದಾನಧಾರೆಯನ್ನೂ ಸುರಿಸುವ ಸಿದ್ಧತೆಯನ್ನು ನಡೆಸಿ, ಶಂಕರನನ್ನು ಕರೆಯಲು ಆ ಮಹಾದೇವನಿಂತೆಂದನು— 'ಯಾಜನವು ವಿಪ್ರರ ಧರ್ಮವು, ದೇವತೆಗಳದಲ್ಲ. ನಿನಗೆ ವಚನವಿತ್ತಂತೆ ನಾನೇ ಅಂದರೆ ವಿಪ್ರಾಂಶದಿಂದ ಬಂದು ನಿನ್ನ ಯಜ್ಞವನ್ನು ನಡೆಸಿಕೊಡುವೆ'ನೆಂದು ಹೇಳಿ, ದೂರ್ವಾಸಮುನಿ ಯನ್ನು ಕಳಿಸಿದನು. ಯಾಗವೂ ಸಮಾಪ್ತವಾಯಿತು. ಶ್ವೇತಕಿಯು ದಿವ್ಯ ಲೋಕವನ್ನು ಹೊಂದಿದನು.

"ನನಗೆ ಆಜ್ಯಧಾರಾಹುತಿಗಳ ನಿರಂತರ ಭಕ್ಷಣದಿಂದ ಅಜೀರ್ಣವಾಯಿತು. ತೇಜಸ್ಸು ಕಡಿಮೆಯಾಯಿತು. ಆಗ ನಾನು ಬ್ರಹ್ಮನಿಗೆ ಶರಣಾಗತನಾಗಿ ತೇಜಃಪ್ರಾಪ್ತಿಯನ್ನು ಬೇಡಿದೆನು. ಆದಿದೇವನು 'ಖಾಂಡವವನದಲ್ಲಿ ದೇವಶತ್ರುಗಳು ಕೋಟಿಗಟ್ಟಲೆ ಇರುವರು. ಅವರ ಮೇದಸ್ಸಿನಿಂದ ನಿನ್ನ ಅಜೀರ್ಣರೋಗವು ನಶಿಸುವುದು. ಲೋಕ ಕ್ಷೇಮವೂ ಆಗುವುದು. ಖಾಂಡವವನವನ್ನು ಸುಡು ನಡೆ !' ಎಂದಪ್ಪಣೆ ಇತ್ತನು. ನಾನು ಖಾಂಡವವನವನ್ನು ಸುಡುವ ಪ್ರಯತ್ನವು ಏಳು ಸಲ ಇಂದ್ರನ ವರ್ಷಧಾರೆಗಳಿಂದ ನಿವಾರಿತವಾಗಿದೆ. ಪುನಃ ಬ್ರಹ್ಮನನ್ನು ಬೇಡಲು ಆತನು 'ನರನಾರಾಯಣರೇ ಅರ್ಜುನ ವಾಸುದೇವರಾಗಿ ಜನಿಸಿರುವರು. ಅವರೀಗ ಖಾಂಡವದಲ್ಲೇ ವಿಹರಿಸುತ್ತಿರುವರು. ಅವರು ಇಂದ್ರನನ್ನೂ ಜಯಿಸಲು ಸಮರ್ಥರು. ಅವರಿಂದ ನಿನ್ನ ಕಾರ್ಯವಾಗುವು'ದೆಂದನು. ಆದುದರಿಂದ ನಿಮಗೆ ಶರಣಾಗತನಾಗಿ ಬಂದಿರುವೆನು. ನನ್ನನ್ನು ಕಾಪಾಡಿ" ಎಂದನು. ಪ್ರಯಾಜ, ಅನುಯಾಜಗಳೆಂಬ ಆಹುತಿಗಳನ್ನು ವೇತನವಾಗಿ ಕೇಳಿದ ಅಗ್ನಿಯಲ್ಲಿ ಕುಪಿತರಾಗಿ ದೇವತೆಗಳು ಶಾಪವಿತ್ತುದರಿಂದಲೂ, ಅಗ್ನಿಗೆ ಬಲ ತೇಜಗಳು ಕುಂದಿದ್ದವು. ಅದಕ್ಕೆ ಖಾಂಡವ ದಾಹವೇ ಮದ್ದು ಎಂದು ಬ್ರಹ್ಮದೇವನ ವರವಿತ್ತು. ಆಗ ಅಗ್ನಿಯ ಮಾತನ್ನಾಲಿಸಿ ಅರ್ಜುನನು 'ನನ್ನಲ್ಲಿ ಅಸ್ತ್ರಗಳಿವೆ ನಿಜ ! ಆದರೆ ನನಗೆ ತಕ್ಕ ರಥ, ಧನುಸ್, ತುರಗಗಳಿಲ್ಲದೆ ನಾನು ನಿನ್ನನ್ನು ದೇವೇಂದ್ರನಿಂದ ರಕ್ಷಿಸಲಾರೆನು. ನಿನ್ನ ಕಾರ್ಯಸಿದ್ಧಿಗಾಗಿ ಉಪಾಯವನ್ನು ಹುಡುಕು' ಎಂದನು.

ಅಗ್ನಿದೇವನು ಜಲೇಶನಾದ ವರುಣನನ್ನು ಪ್ರಾರ್ಥಿಸಿ, ಅವನಿಂದ ದಿವ್ಯರಥವನ್ನು, ಅಕ್ಷಯ ತೂಣೀರ ದ್ವಯವನ್ನು, ದಿವ್ಯ ತುರಗಗಳನ್ನು; ಕೃಷ್ಣನಿಗಾಗಿ ಬದರೀ ನಾರಾಯಣನಿಂದ ಚಕ್ರವನ್ನು ಕೂಡ ಪಡೆದು, ಅವರಿಗೆ ತಂದುಕೊಟ್ಟನು. ಶಕ್ರ ವಿರೋಧವನ್ನು ತಡೆಯಲು ಶಕ್ರಾಂಶನಾದ ಅರ್ಜುನನಿಂದಲೇ ಆಗುವುದು ಮತ್ತು ಕೃಷ್ಣ ಸಹಾಯದಿಂದಲೇ ಅರ್ಜುನನು ಖಾಂಡವ ದಹನ ಸಮರ್ಥನಾಗುವುದೆಂದು ತಿಳಿದೇ ಅಗ್ನಿಯು ಕೃಷ್ಣನನ್ನು ಬೇಡದೆ, ಅರ್ಜುನನನ್ನು ಪ್ರಾರ್ಥಿಸಿದ್ದನು. ಅವನಿತ್ತ ಧನುಸ್ತೂಣೀರಗಳನ್ನು ಧರಿಸಿ ಪಾರ್ಥನು ಅತ್ಯಂತ ಶೋಭಾಸಂಪನ್ನನಾದನು. ಶ್ರೀಕೃಷ್ಣನಾದರೂ ತನ್ನ ಚಕ್ರವನ್ನೇ ರೂಪಾಂತರದಿಂದ ಅಗ್ನಿಯು ತಂದುಕೊಟ್ಟದ್ದನ್ನು ಸ್ವೀಕರಿಸಿ, ಅಗ್ನಿಕಾರ್ಯನಿರತನಾದನು.

ಅರ್ಜುನನ ಧನುಸ್ಸಿಗೆ ಗಾಂಡೀವವೆಂದು ಹೆಸರು. ಅದನ್ನು ಬ್ರಹ್ಮದೇವನೊಬ್ಬನೇ ಧರಿಸಬಲ್ಲನಾದರೂ, ಅವನ ವರದಿಂದ ರುದ್ರ, ಇಂದ್ರ, ಚಂದ್ರ, ವರುಣರೂ ಕ್ರಮವಾಗಿ ಆ ಧನುವನ್ನು ಹೊಂದಿದ್ದರು. ಇಂದ್ರಾಂಶನಾದುದರಿಂದಲೂ ನರಾವೇಶಯುತನಾದುದರಿಂದಲೂ, ಲಕ್ಷಭಾರವಾದ ಗಾಂಡೀವವನ್ನು ಅರ್ಜುನನು ಧರಿಸಲು ಶಕ್ತನಾದನು. ಅಗ್ನಿಯು ತಂದಿತ್ತ ರಥವು ಇಂದ್ರ ರಥವೇ ಆಗಿತ್ತು. ಅದನ್ನೇರಿ ಶ್ರೀರಾಮನು ರಾವಣನನ್ನು ಜಯಿಸಿದ್ದನು. ಆ ರಥವನ್ನು ಇಂದ್ರನು

*

ವರುಣನಿಗಿತ್ತು, ಅದನ್ನು ಅರ್ಜುನನಿಗೆ ಕೊಡುವಂತೆ ಹೇಳಿದ್ದನು. ಕಪಿಧ್ವಜ ಸಮಲಂಕೃತವು, ಧವಳ ತುರಗವಾಯಿತವು ಆದ ದಿವ್ಯರಥವನ್ನೇರಿ, ಕೃಷ್ಣಸಾರಥಿಯಾಗಿ, ಗಾಂಡೀವಪಾಣಿಯಾಗಿ ನಿಂತ ಅರ್ಜುನನನ್ನು ನೋಡಿ, ವಹ್ನಿಯು ಉತ್ಸಾಹದಿಂದ ಏಳು ನಾಲಿಗೆಗಳನ್ನು ಚಾಚಿ ಉರಿದೆದ್ದು, ಖಾಂಡವವನವನ್ನು ಸುಡಲು ಪ್ರಾರಂಭಿಸಿದನು.

ಇಂದ್ರನದನ್ನು ಸಹಿಸದೆ, ಮೇಘಮಾಲೆಗಪ್ಪಣೆಯನ್ನಿತ್ತು, ಗಜಶುಂಡಾದಂಡಗಳಂತೆ ಜಲಧಾರೆಗಳಿಂದ ಮಳೆಗರೆದನು. ಅರ್ಜುನನು 'ಅಗ್ನಿದೇವ ! ಹೆದರಬೇಡ ! ವಿಜೃಂಭಿಸು ! ಚಕ್ರಪಾಣಿಯಾದ ಶ್ರೀಕೃಷ್ಣನಿಗೆ ಮೂರು ಲೋಕಗಳಲ್ಲಿ ಪ್ರತಿವೀರರಿಲ್ಲ. ಅವನ ಸಹಾಯವನ್ನು ಪೊಂದಿ ನಿಂತಿರುವ ಗಾಂಡೀವ ಧನುರ್ಧಾರಿಗೆ ಅಸಾಧ್ಯವಿಲ್ಲ' ಎಂದು ಖಾಂಡವವನವನ್ನು ನಾಲ್ಕು ದಿಕ್ಕುಗಳಲ್ಲಿಯು, ಉಪರಿಭಾಗದಲ್ಲಿಯೂ, ಶರಪಂಜದಿಂದ ಮುಚ್ಚಿ, ಬಿಂದುಮಾತ್ರ ಜಲವೂ ಪ ವೇಶಿಸದಂತೆ ಮಾಡಿದನು.

ಖಾಂಡವವು ಉರಿಯತೊಡಗಿತು. ಅಗ್ನಿಯೂ ವಿಜೃಂಭಿಸಿದನು. ವನದ ದುಷ್ಟ ಪ್ರಾಣಿಗಳು ಪ್ರಾಯಃ ಮೃತವಾದವು. ಒಂದು ಪ್ರಾಣಿಯನ್ನೂ ತಪ್ಪಿಸಿಕೊಳ್ಳಲು ಬಿಡದೆ, ಅಗ್ನಿಗಾಹುತಿಯನ್ನಾಗಿಸಲು ಪಟತೊಟ್ಟ ಅರ್ಜುನನು, ಹಾರುವ ಹಕ್ಕಿಗಳನ್ನು, ಓಡುವ ಮೃಗಗಳನ್ನು, ಮೇಲೇರಿಬರುವ ಅಸುರರನ್ನು ಬಾಣಗಳಿಂದ ಸಂಹರಿಸಿ, ಬೆಂಕಿಯಲ್ಲಿ ಕೆಡಹುತ್ತಿದ್ದನು. ಮಾಂಸಮಾಂಸಗಳು ಸುಡುವ ದುರ್ಗಂಧವು ವ್ಯಾಪಿಸಿ, ಅಸಹ್ಯವಾಯಿತು. ದೇವರಾಜನು ಕುಪಿತನಾಗಿ ಇಂದ್ರಾಸ್ತ್ರವನ್ನು ಬಿಟ್ಟನು. ಅರ್ಜುನನು ಹೆದರದೆ ವಾಯವ್ಯಾಸ್ತ್ರದಿಂದ ಅದನ್ನು ನಿವಾರಿಸಿದನು. ಇಂತು ಮಗನನ್ನು ಪರೀಕ್ಷಿಸಿ ಅವನ ಧೈರ್ಯಕ್ಕೆ ತಲೆತೂಗಿ ಇಂದ್ರನು, ತನ್ನ ಮಿತ್ರನಾದ ತಕ್ಷಕನು ವನದಲ್ಲಿಲ್ಲವೆಂದು ತಿಳಿದು ಶಾಂತನಾದನು.

ಇಷ್ಟರಲ್ಲೇ ತಕ್ಷಕ ಸುತನಾದ ಅಶ್ವಸೇನನು ಅಗ್ನಿಯಿಂದ ಪಾರಾಗಲು ಪ್ರಯತ್ನಿಸಿ ವಿಫಲನಾಗಿ, ತನ್ನ ತಾಯಿಯ ಕಾಯದಲ್ಲಿ ಪ್ರವೇಶಿಸಿದನು. ಅವಳು ಅವನನ್ನು ಬಾಲದವರೆಗೂ ನುಂಗಿ ಹಾರಿ ಪಾರಾಗಲು ಯತ್ನಿಸಿದಾಗ, ಅರ್ಜುನನು ನೋಡಿ ಬಾಣದಿಂದ ಅವಳ ದೇಹವನ್ನು ತುಂಡರಿಸಿದನು. ತಾಯಿಯು ಸಂಹೃತಳಾಗಿ ಮಗ ಅಶ್ವಸೇನನು ಬಾಲವಿಹೀನನಾಗಿ, ಅವನನ್ನು ಇಂದ್ರನು ಕಾಪಾಡಿದುದರಿಂದ ಉಳಿದನು. ಆದರೆ ಅವನು ಅರ್ಜುನನನ್ನು ಸಂಹರಿಸುವ ಹಗೆಯಿಂದ ಕರ್ಣನ ತೂಣೀರದಲ್ಲಿ ಬಾಣರೂಪದಿಂದಿದ್ದು, ಸಮಯವನ್ನು ಕಾಯುತ್ತಿದ್ದನು.

ಆಗ ಇಂದ್ರ, ಬ್ರಹ್ಮ, ರುದ್ರರು ಭೂಮಿಗಿಳಿದುಬಂದು, ಶ್ರೀಕೃಷ್ಣನಿಗೆ ವಂದಿಸಿ, ಅರ್ಜುನವಿಜಯವನ್ನಭಿನಂದಿಸಿ, ಕಾಲದಲ್ಲಿ ತಮ್ಮ ಅಸ್ತ್ರಗಳನ್ನು ಅವನಿಗೆ ಅನುಗ್ರಹಿಸುವಂತೆ ವರವಿತ್ತು, ತಮ್ಮ ಲೋಕಗಳನ್ನು ಸೇರಿದರು.

ಖಾಂಡವವು ಹದಿನೈದು ದಿನಗಳು ನಿಲ್ಲದೆ ಉರಿಯಿತು. ಅಲ್ಲಿಂದ ತಪ್ಪಿಸಿಕೊಂಡು ಉಳಿದವರೆಂದರೆ ಆರು ಜನ ಮಾತ್ರ. ಅಶ್ವಸೇನನೊಬ್ಬನು. ಮಯನು ದ್ವಿತೀಯನು.

ಅವನು ಚಕ್ರಪಾಣಿಗೆ ಹೆದರಿ, ದೇವರಾಜಸುತನಿಗೆ ಶರಣಾಗತನಾದನು. ನಿಜಭಕ್ತನಾದುದರಿಂದ ಶ್ರೀಕೃಷ್ಣನು ದೈತ್ಯಶಿಲ್ಪಿಯನ್ನು ಕ್ಷಮಿಸಿದನು. ಅರ್ಜುನನಿಗೆ ಶ್ರೀಕೃಷ್ಣನ ಅನುಮತಿಯಿಂದ ಅಭಯವನ್ನಿತ್ತನು. ಮಿಕ್ಕ ನಾಲ್ವರು ಪಕ್ಷಿಗಳು.

ಮಂದಪಾಲನೆಂಬ ಮಹರ್ಷಿಯು ಇದ್ದನು. ಅವನು ಬಹು ತಪಸ್ವಿಯಾಗಿಯೂ ಪ್ರಜಾರಹಿತನಾದುದರಿಂದ ಪುಣ್ಯಲೋಕ ದೂರನಾಗಿದ್ದನು. ಬೇಗನೆ ಸಂತಾನವನ್ನು ಪಡೆಯಲೆಣಿಸಿ, ಅವನು ಪಕ್ಷಿರೂಪನಾಗಿ ಜರಿತಾ ಎಂಬುವ ಪಕ್ಷಿಣಿಯಲ್ಲಿ ನಾಲ್ಕು ಸುತರನ್ನು ಪಡೆದನು. ಮುಂದೆ ಅವನು ಲಪಿತಾ ಎಂಬುವ ಪಕ್ಷಿಣಿಯಲ್ಲಿ ರತವಾಗಿ ಬೇರೆಡೆಗೆ ಹೋದನು. ಜರಿತೆ ಸುತರೊಡನೆ ಖಾಂಡವದಲ್ಲೇ ಇದ್ದಳು. ಆಗ ಅಗ್ನಿಯು ಖಾಂಡವವನ್ನು ಸುಡಲು ಬರುತ್ತಿರುವುದನ್ನು ಮಂದಪಾಲನು ನೋಡಿ, ಪುತ್ರ ರಕ್ಷಣಾತುರನಾಗಿ ಅಗ್ನಿದೇವನನ್ನು ಸ್ತುತಿಸಿದನು. ಅವನಿಂದ ಪುತ್ರರನ್ನು ಸುಡದೆ ಬಿಡುವೆನೆಂಬ ವರವನ್ನೂ ಪಡೆದನು.

ಖಾಂಡವವನವು ಸುಡಲು ಪ್ರಾರಂಭಿಸಲು ಜರಿತೆಯು ಮಕ್ಕಳಿಗಾಗಿ ಚಿಂತಿಸಿದಳು. 'ಅಜಾತಪಕ್ಷರಾಗಿರುವ ನನ್ನ ಮಕ್ಕಳನ್ನು ರಕ್ಷಿಸು. ಅಗ್ನಿದೇವ ! ವಿಪುಲವನವಿದೆ, ಬಾಹ್ಯಾಕಾಶವಿದೆ—ಸುಡು ! ವ್ಯಾಪಿಸು ! ನನ್ನ ಸುತರನ್ನು ಉಳಿಸು !' ಇಂತು ಚಿಂತಿಸುತ್ತಾ, ಮಕ್ಕಳನ್ನು ಬಿಡಲೊಲ್ಲದೆ ಅಲ್ಲೇ ನಿಂತಳು. ಅವಳ ಮಕ್ಕಳಲ್ಲಿ ಜರಿತಾರನು ಕುಲಪ್ರತಿಷ್ಠಾಪಕನು. ಸಾರಿಸೃಕ್ಕನು ವಂಶವರ್ಧನನು, ಸ್ತಂಬಮಿತ್ರನು ತಪಸ್ವಿಯು, ದ್ರೋಣನು ಬ್ರಹ್ಮಜ್ಞಾನಿಯು ಆಗಿದ್ದರು. ಅವರು ತಮ್ಮ ಚಿಂತೆ ಮಾಡದೆ, ಹಾರಿಹೋಗಿ ಪ್ರಾಣ ಉಳಿಸಿಕೋ ! ಎಂದು ಮಾತೆಗೆ ಹೇಳಿದರು. ಜರಿತೆ ಅವರನ್ನು ಗಿಡದ ಬುಡದಲ್ಲಿರುವ ಚಿಕ್ಕಿನ ಬಿಲದಲ್ಲಿ ಬಚ್ಚಿಟ್ಟು, ಮಣ್ಣಿನಿಂದ ಮುಚ್ಚಿ, ಅಗ್ನಿಬಾಧೆಯಾಗದಂತೆ ಕಾಪಾಡುವೆನೆಂದಳು. ಪಕ್ಷಿಗಳನ್ನು ಕೊಂದು ತಿನ್ನುವ ಬೆಕ್ಕು ಅಲ್ಲಿಲ್ಲವೆಂದಳು. ಅದನ್ನು ಒಂದು ಗಿಡಗವು ಹೊತ್ತುಕೊಂಡು ಹೋದುದನ್ನು ತಾನು ನೋಡಿದೆನೆಂದಳು. ಇಷ್ಟಾದರೂ ಅವಳ ಸುತರಿಗೆ ಧೈರ್ಯ ಬರಲಿಲ್ಲ. ಬೆಕ್ಕಿಗೆ ಸಿಕ್ಕು ಆಹಾರವಾಗುವುದಕ್ಕಿಂತ, ಅಗ್ನಿಗಾಹುತಿಯಾಗುವುದು ಲೇಸೆಂದು ನಿಶ್ಚಯಿಸಿ, ಅವರು ಕೈಮುಗಿದು ಅಗ್ನಿಯನ್ನು ಸ್ತುತಿಸಿದರು. ಅಗ್ನಿ ಬಾರದ ಮುನ್ನ ಜರಿತೆಯು ಅದಕ್ಕೆ ಹೆದರಿ ಮಕ್ಕಳನ್ನು ಬಿಟ್ಟು ಹಾರಿ ಹೋದಳು. ಆಗ ಅಗ್ನಿಯು ಉರಿಯುತ್ತಾ ಬಂದನು.

ಜರಿತಾರನು 'ಅಗ್ನಿದೇವ ! ವಾಯುಪುತ್ರನು, ಜಲಗಳಿಗೆ ಜನ್ಮಭೂಮಿಯು, ವೃಕ್ಷಾದಿಶರೀರನು ಆದ ನಿನಗೆ ನಮಸ್ಕಾರವು. ಸೂರ್ಯನ ಕಿರಣಗಳಂತೆ ಸರ್ವತ್ರ ವ್ಯಾಪಿಸಿ ಬರುವ ನಿನ್ನ ಜ್ವಾಲೆಗಳಿಂದ ನಮ್ಮನ್ನು ರಕ್ಷಿಸು' ಎಂದು ನುತಿಸಿದನು.

ಸಾರಿಸೃಕ್ಕನು 'ತಾಯಿ ಬಿಟ್ಟುಹೋದಳು. ತಂದೆಯನ್ನರಿಯೆವು. ರೆಕ್ಕೆಗಳು ಬಂದಿಲ್ಲ. ಬೇರೆ ಗತಿಕಾಣದೆ ನಿನಗೆ ಶರಣಾಗಿ ಬಂದಿರುವೆವು' ಎಂದು ಬೇಡಿಕೊಂಡನು.

ಸ್ತಂಬಮಿತ್ರನು 'ಅಗ್ನಿದೇವ ! ನಿನ್ನನ್ನು ದೇವತೆಗಳ ಮುಖವೆನ್ನುವರು. ಈ ಜಗವು ನಿನ್ನಿಂದ ಜೀವಿಸುತ್ತಿದೆ. ಹವ್ಯವನ್ನು ವಹಿಸಿ ದೇವತೆಗಳಿಗೀವೆ. ಕಾಲ ಕಾಲದ ಪಚನಕ್ರಿಯೆಯು ನಿನ್ನಿಂದ ಆಗುತ್ತಿದೆ. ನಿನಗೆ ವಂದನ'ವೆಂದನು.

ದ್ರೋಣನು 'ವಹ್ನಿದೇವ ! ವೈಶ್ವಾನರನೆನಿಸಿದ ಪರಬ್ರಹ್ಮನ ಸನ್ನಿಧಾನ ದಿಂದ ನೀನು ಸಮಸ್ತ ಜೀವರಲ್ಲಿದ್ದು ಅನ್ನಪಾಚನವನ್ನು ಮಾಡುತ್ತಿರುವೆ. ನೀನಿಲ್ಲದಿರೆ ಯಾರೂ ಬದುಕಿರಲಾರರು. ಮಂಗಳಕರನು, ಸಕಲ ಜಲ, ವೃಕ್ಷವೀರುಧಾದಿ ಜಗನ್ನಿಯಾಮಕನಾದ ನಿನಗೆ ನಮಸ್ಕಾರವು ! ಕಾಪಾಡು ನಮ್ಮನ್ನು !' ಎಂದು ಸ್ತುತಿಸಿದನು.

ಅವರ ಸ್ತುತಿಯನ್ನು ಕೇಳಿ, ಅಗ್ನಿದೇವನು 'ನಿಮ್ಮ ತಂದೆ ಮಂದಪಾಲ ಋಷಿ ವರನು ! ಅವನ ಪ್ರಾರ್ಥನೆಯಂತೆ ನಿಮ್ಮನ್ನು ಸುಡದೇ ಕಾಪಾಡುವೆನು. ನಿಮ್ಮ ಸ್ತುತಿ ಯಿಂದಲೂ ಪ್ರೀತನಾಗಿರುವೆನು. ನಿಮ್ಮನ್ನು ಕೊಲ್ಲುವ ಈ ಬೆಕ್ಕನ್ನು ದಹಿಸುವೆನು. ನೀವು ಬಿಲದಲ್ಲಿ ಸುಡದೆ ಅಡಗಿರಿ !' ಎಂದು, ಅಂತೆಯೇ ಅವರನ್ನು ಕಾಪಾಡಿದನು. ಜರಿತೆಯು ವನವೆಲ್ಲ ಶಾಂತವಾದಾಗ ಮಕ್ಕಳನ್ನು ನೋಡಿ, ಆನಂದಿಸಿದಳು ; ಲಪಿತಾ ಲಗ್ನವಾದ ಮಂದಪಾಲನನ್ನು ನಿಂದಿಸಿದಳು. ಆಗ ಮಂದಪಾಲನು ಅವಳನ್ನೂ ಮಕ್ಕಳನ್ನೂ ಸಂತೈಸಿ ಅವರಿಂದ ಕೂಡಿ, ಆನಂದದಿಂದಿದ್ದನು.

ಇಂತು ಪಾರ್ಥನು ಶ್ರೀಕೃಷ್ಣಸಹಾಯನಾಗಿ, ಖಾಂಡವವನ್ನು ದಹಿಸಿ, ದುಷ್ಟ ವಧೆಯಿಂದಾದ ಲೋಕಹಿತವನ್ನು ಸಾಧಿಸಿದನು. ಅಗ್ನಿದೇವನು ತೃಪ್ತನಾಗಿ, ಕೃಷ್ಣಾರ್ಜುನರನ್ನು ಹರಸಿಹೋದನು. ಆಗ ಕೃಷ್ಣಾರ್ಜುನರು ಮಯನಿಂದ ಕೂಡಿ ರಮಣೀಯ ನದೀಕೂಲದಲ್ಲಿ ದಿವ್ಯಾಸನಾಸೀನರಾಗಿ ಆನಂದದಿಂದ ವಿರಾಜಿಸಿದರು.

ಆದಿಪರ್ವವು ಮುಗಿಯಿತು

|| ಶ್ರೀಮಧ್ವೇಶಾರ್ಪಣಮಸ್ತು ||



# ೨. ಸಭಾಪರ್ವ

## ಸಭಾ ನಿರ್ಮಾಣ

ವೈಶಂಪಾಯನನು ಜನಮೇಜಯನಿಗೆ ಹೇಳಿದನು—ರಾಜನ್ ! ಶಾರ್ಙ್ಗಪಕ್ಷಿಗಳು ಜ್ಞಾನಬಲದಿಂದ ವಿಪತ್ತನ್ನು ಕಳೆದುಕೊಂಡು ಸುಖದಿಂದಿದ್ದವೆಂದು ಹೇಳಿದೆನು. ಜ್ಞಾನವು ಭಕ್ತಿರಹಿತವಾದರೆ ಶೋಭಿಸದು. ಭಕ್ತಿಯಿಂದಲೇ ಪಾಂಡವರು ಭಗವದನುಗ್ರಹಪಾತ್ರರಾಗಿ, ಮಯಸಭೆಯನ್ನೂ ಮಹದೈಶ್ವರ್ಯವನ್ನೂ ಹೊಂದಿ, ರಾಜಸೂಯಯಾಗವನ್ನು ಮಾಡಿದರು. ಸ್ವಭಾವದಿಂದ ಭಕ್ತನಾಗಿದ್ದುದರಿಂದಲೇ ಶಿಶುಪಾಲನ ದೋಷಗಳನ್ನು ಕ್ಷಮಿಸಿ, ಭಗವಂತನವನಿಗೆ ಸಾಯುಜ್ಯವನ್ನಿತ್ತು, ಉದ್ಧರಿಸಿದನು. ಭಕ್ತರಲ್ಲದ ದುರ್ಯೋಧನಾದಿಗಳು ಭಗವದ್ಭಕ್ತರ ದ್ವೇಷದಿಂದ ಅಕಾರ್ಯಗಳನ್ನು ಮಾಡಿ, ನರಕಭಾಜನರಾದರು. ಅಪಕಾರಿಗೂ ಉಪಕಾರವನ್ನೇ ಮಾಡುವ ಭಕ್ತರು ಉಪಕಾರಿಗಳನ್ನು ಮರೆಯುವುದಿಲ್ಲ. ಅಂತಹ ಭಕ್ತರನ್ನು ಭಗವಂತನು ಕೈಬಿಡದೆ ರಕ್ಷಿಸುವನು.

ಮಯನು ಶ್ರೀಕೃಷ್ಣಪಾರ್ಥರನ್ನು ನೋಡಿ ಕೃತಜ್ಞನಾಗಿ ಶಿರಬಾಗಿ "ಅರ್ಜುನ ! ಚಕ್ರಪಾಣಿಯಾದ ಹರಿಯಿಂದಲೂ ಉರಿಯುವ ಅಗ್ನಿಯಿಂದಲೂ ನನ್ನನ್ನು ಪೊರೆದೆ. ದಾನವಶಿಲ್ಪಿಯೂ ಮಹಾಚತುರನೂ ಆದ ನನ್ನಿಂದ ಸ್ವಲ್ಪವಾದರೂ ಸೇವೆ ಎಂತಾದೀತು ?" ಎಂದು ಪ್ರಾರ್ಥಿಸಿದನು. ಅರ್ಜುನನು "ಶ್ರೀಕೃಷ್ಣನು ಹೇಳಿದ್ದನ್ನು ಮಾಡು !" ಎಂದನು. ಶ್ರೀಕೃಷ್ಣನು ಸ್ವಲ್ಪಕಾಲ ಚಿಂತಿಸಿ, "ಮಾಯಾಸುರ ! ಶಿಲ್ಪಿವರ ! ಪ್ರತ್ಯುಪಕಾರೇಚ್ಛೆಯಿಂದ ನಾವು ನಿನ್ನನ್ನು ರಕ್ಷಿಸಲಿಲ್ಲ. ನಿನಗೆ ಸರಿದೋರಿದರೆ ಒಂದು ಸಭೆಯನ್ನು ನಿರ್ಮಿಸಿ, ನಮ್ಮ ಧರ್ಮರಾಜನಿಗೆ ಅರ್ಪಿಸು. ಆಸುರೀ ದೈವೀ ಮಾನುಷೀ ವಿದ್ಯೆಗಳನ್ನು ಬಳಸಿ ಅಭೂತಪೂರ್ವವೂ ಅತ್ಯಂತಾಶ್ಚರ್ಯಕರವೂ ಆದ ಸಭೆಯನ್ನು ನಿರ್ಮಿಸು ! ನಡೆ, ಇಂದ್ರಪ್ರಸ್ಥ ನಗರಕ್ಕೆ" ಎಂದು ಆಜ್ಞಾಪಿಸಿ, ಅವರು ಮೂವರೂ ಸಪರಿವಾರರಾಗಿ ಇಂದ್ರಪ್ರಸ್ಥವನ್ನು ಮುಟ್ಟಿದರು. ಶ್ರೀಕೃಷ್ಣನು ಧರ್ಮರಾಜನಿಗೆ ಮಯನು ನಿರ್ಮಿಸುವ ಸಭಾವಿವರವನ್ನು ತಿಳಿಸಿದನು.

ಒಂದು ಸುಮುಹೂರ್ತದಲ್ಲಿ ಮಯನು ಸಭಾನಿರ್ಮಾಣವನ್ನು ಪ್ರಾರಂಭಿಸಿದನು. ಸ್ವಸ್ತಿವಾಚನವನ್ನು ನುಡಿಸಿ, ಧರ್ಮರಾಜನು ಮೃಷ್ಟಾನ್ನ ದಕ್ಷಿಣಾ ದಾನಾದಿಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿದನು. ಮಯನಿಗೆ ಪುಷ್ಕಲ ದ್ರವ್ಯವನ್ನಿತ್ತು ಮಯನಿಂದ ದಿವ್ಯಸಭಾಪ್ರಾಸಾದಗಳನ್ನು ಕಟ್ಟಿಸಿದನು. ಆ ಸಭೆಯು ಬಹುಪ್ರಾಸಾದ ಮಂಡಿತವೂ ದಿವ್ಯರೂಪಮನೋಹರವೂ ಅನೇಕಾಶ್ಚರ್ಯಕರವಸ್ತುವಿಲಸಿತವೂ ಆಗಿತ್ತು. ಅದರ ಸುತ್ತಳತೆ ಹತ್ತುಸಾವಿರ ಮೊಳವಿತ್ತು. ಬಿಸಿಲುಕಾಲದಲ್ಲಿ ತಂಪಾಗಿಯೂ ಚಳಿಗಾಲದಲ್ಲಿ ಬೆಚ್ಚಗೂ ಇರುತ್ತಿತ್ತು. ಸರ್ವಋತುಸಿದ್ಧಫಲಪುಷ್ಪವನಗಳು

ಆ ಮಂದಿರದ ಸುತ್ತಲೂ ಹರಡಿ ನಿಂತಿದ್ದವು. ಶೀತಲಜಲಾಕರಗಳಲ್ಲಿ ಮೂಡಿದ ಪ್ರಾಸಾದ ಬಿಂಬಗಳು ಪಾತಾಳದಿಂದೆದ್ದುಬರುವ ಭೋಗವತಿಯಂತೆ ತೋರುತ್ತಿದ್ದವು. ರಾಜಮಾರ್ಗಗಳಲ್ಲಿ ಅಸೂರ್ಯಂಪಶ್ಯೆಯರು ನಡೆಯಾಡಲನುವಾಗಲು ಅಂಬರಚುಂಬಿ ಸಾಲತರುಜಾಲವಿಕ್ಕೆಲಗಳಲ್ಲಿ ಛತ್ರಧಾರಿಯಂತೆ ನಿಂತಿತ್ತು. ಜನಸಂಬಾಧಾರಹಿತವು, ಏಕಾಂತಸುಂದರವು, ರಸಿಕಜನ ಮನೋಭಿರಾಮವು ಆದ ಆ ಸಭೆಯನ್ನು ನಿರ್ಮಿಸಿ ಧರ್ಮರಾಜನಿಗಿತ್ತು, ಮಯನು ಶ್ರೀಕೃಷ್ಣನಿಗೆ ವಂದಿಸಿ ಹೊರಟುಹೋದನು.

ಎರಡು ವರ್ಷಗಳಾದಮೇಲೆ ಶ್ರೀಕೃಷ್ಣನು ದ್ವಾರಕೆಗೆ ಹೊರಡಲನುವಾದನು. ತಂಗಿಯನ್ನಾಲಿಂಗಿಸಿ, ದ್ರೌಪದಿಯನ್ನು ಹರಸಿ, ಭೀಮಧರ್ಮರನ್ನು ಅಪ್ಪಿ, ಅರ್ಜುನ ನಕುಲಸಹದೇವರನ್ನು ಆಶೀರ್ವದಿಸಿದನು. ಕುಂತಿಗೆ ಪಾದಾಭಿವಂದನವನ್ನು ಮಾಡಿ ದನು. ಧೌಮ್ಯನಿಗೆ ನಮಿಸಿ, ಪುನಃ ದ್ರೌಪದಿಯನ್ನು ಸಂತೈಸಿ, ಶ್ರೀಕೃಷ್ಣನು ಸಾತ್ಯಕಿಪ್ರಮುಖ ಬಂಧುಜನರಿಂದ ಕೂಡಿ, ದ್ವಾರಕೆಗೆ ಹೊರಟನು. ಧರ್ಮಜನಿತ್ತ ಪೂಜೆ ಕೈಕೊಂಡು ಶೈಬ್ಯ ಸುಗ್ರೀವ ಮೇಘಪುಷ್ಪ ಬಲಾಹಕಗಳೆಂಬ ಉತ್ತಮಾಶ್ವ ಗಳನ್ನು ಕಟ್ಟಿ, ಗರುಡಕೇತನವನ್ನೆತ್ತಿ ಸುದರ್ಶನಾದ್ಯಾಯುಧಗಳನ್ನು ತುಂಬಿ, ದಾರುಕನು ತಂದ ರಥವನ್ನಾರೋಹಿಸಿದನು. ವಿಪ್ರವರರ ಆಶೀರ್ವಾದಗಳನ್ನು ಸ್ವೀಕರಿಸಿ, ಧರ್ಮ ಭೀಮರನ್ನು ಮತ್ತೆ ಬರುವೆನೆಂದು ಸಂತೈಸಿ, ಮಿಕ್ಕ ಅರ್ಜುನಾದಿ ಬಂಧುಜನರು ಬಿಡದೆ ಬರುತಿರೆ, ಹಿಂದಿರುಗಿಸಿ, ಪ್ರಯಾಣಿಸಿದನು.

ಶ್ರೀಶನನ್ನು ನೋಡುತ್ತಾ ನಿಂತ ಪಾಂಡವರು ಚಿತ್ರಗಳಂತೆ ಕದಲದೆ ನಿಂತಿದ್ದರು. ಕಣ್ಣಲ್ಲಿ ಬರುವ ನೀರನ್ನು ಅಶುಭವೆಂದು ತಡೆಯುವ ಅವರ ತಿತಿಕ್ಷೆ ವ್ಯರ್ಥವಾಗುತ್ತಿತ್ತು. ದೇಹವಿಲ್ಲಿ, ಮನವಲ್ಲಿ ಶ್ರೀರಮಣನಲ್ಲಿ ಆಯಿತು ಅವರ ದಶೆ. ಕೇಶವದರ್ಶನಸಂಗಮಸಂಲಾಪಗಳು ದೂರವಾಯಿತೆಂದು ಅವರ ಹೃದಯವು ಶೂನ್ಯ ವಾದಂತಾಗಿ, ಮುಖಕಮಲಗಳು ಕಮಲಾಪತಿವಿರಹದಿಂದ ಕಳೆಗುಂದಿದವು. ನೇತ್ರಾ ನಂದಕರನಾದ ನಂದನಂದನನ ಸ್ಯಂದನವು ಕಾಣದಾದಾಗ, ಅವರು ಹಿಂದಿರುಗಿ ಮಂದಿರಗಳಿಗೆ ಬಂದರು.

ಒಂದುಸಲ ರವಿಗ್ರಹಣಪುಣ್ಯಕಾಲಕ್ಕೆಂದು ಶ್ರೀಕೃಷ್ಣನು ಸಮಸ್ತ ಯಾದವ ರೊಡನೆ ಕುರುಕ್ಷೇತ್ರಕ್ಕೆ ಹೋದನು. ಅಲ್ಲಿಗೆ ಬಂದಿದ್ದ ಪಾಂಡವರನ್ನೂ ಕಂಡನು. ದುರ್ಯೋಧನಾದಿಗಳೂ ಬಂದಿದ್ದರು. ನಂದಗೋಪ ಯಶೋದೆಯರು ಚಿರಕಾಲಾ ನಂತರದ ಶ್ರೀಕೃಷ್ಣದರ್ಶನದಿಂದ ಆನಂದಿತರಾದರು. ಬಂದ ಮುನಿಗಳನ್ನು ಪೂಜಿಸಿ, ಶ್ರೀಶನು ರವಿಗ್ರಹಣದಲ್ಲಿ ಅನೇಕ ದಾನಗಳನ್ನು ಮಾಡಿದನು. ಶ್ರೀಕೃಷ್ಣ, ವೇದವ್ಯಾಸ ಪರಶುರಾಮರೆಂಬ ಮೂರು ರೂಪಗಳಿಂದ ದರ್ಶನವನ್ನು ಪೊಂದಿ, ತಿಳಿದ ಜ್ಞಾನಿಗಳು ಧನ್ಯರಾದರು. ಅಲ್ಲಿಯೇ ವಸುದೇವನಿಂದ ಯಾಗವನ್ನು ಮಾಡಿಸಿ, ಪೂರ್ಣ ದಕ್ಷಿಣೆ ಗಳನ್ನು ಕೊಡಿಸಿ, ಶ್ರೀಕೃಷ್ಣನು ಪಾಂಡವರನ್ನು ಕರೆದುಕೊಂಡು ಸ್ವಪುರಿಯನ್ನು ಸೇರಿದನು.

ಅಲ್ಲಿ ಶ್ರೀಕೃಷ್ಣನು ಒಂದೇದಿನದಲ್ಲಿ ಮುಗಿಸಲು ಯೋಗ್ಯವಾದ ಅಶ್ವಮೇಧ ಯಾಗವನ್ನು ಮಾಡಲೆಣಿಸಿದನು. ಅಘಟ್ಯಘಟನಾಪಟಿಷ್ಠನಾದ ಭಗವಂತನಿಗೆ ಅಸಾಧ್ಯವುಂಟೇ ? ಅವನ ಅನುಗ್ರಹದಿಂದ ಪ್ರದ್ಯುಮ್ನಾದಿ ಹರಿಸುತರು ಭೀಮಾ-ರ್ಜುನ ಸಹಾಯರಾಗಿ ಹೊರಟು ಜರಾಸುತಾದಿ ಸಮಸ್ತ ರಾಜರನ್ನು ಗೆದ್ದು ಮಧ್ಯಾಹ್ನದಲ್ಲಿ ಹಿಂದಿರುಗಿಬಂದರು. ಆ ಕುದುರೆಯು, ಅದರ ರಕ್ಷಕರು, ದಿನಕ್ಕೆ ಲಕ್ಷ ಯೋಜನ ದೂರ ಹೋಗಿಬರಲು ಶಕ್ತರಾಗಿದ್ದರು.

ಶ್ರೀ ವ್ಯಾಸನು ಕೃಷ್ಣನಿಗೆ ದೀಕ್ಷೆಯನ್ನಿತ್ತನು. ಯಜ್ಞವು ಪ್ರಾರಂಭವಾಯಿತು. ಆಗ ಒಬ್ಬ ದ್ವಿಜನು ತೃಣವನ್ನು ಬಾಯಿಯಲ್ಲಿ ಕಚ್ಚಿಕೊಂಡು, ಯಜ್ಞಶಾಲೆಯ ಮುಂಭಾಗದಿ ನಿಂತು 'ನನ್ನ ಮಕ್ಕಳು ಹುಟ್ಟಿದ ಕ್ಷಣದಲ್ಲಿಯೇ ಅದೃಶ್ಯರಾಗುತ್ತಿರುವರು ! ನನ್ನನ್ನು ಕಾಪಾಡುವ ವೀರರಿಲ್ಲವೇ ?'' ಎಂದು ರೋದಿಸಿದನು. ಅರ್ಜುನನು 'ನಾನು ರಕ್ಷಿಸುವೆನು ನಡೆ !' ಎಂದನು. ದ್ವಿಜನು—'ನೀನು ಕೃಷ್ಣನಲ್ಲ ! ರಾಮನಲ್ಲ ! ಪ್ರದ್ಯುಮ್ನನಲ್ಲ. ನಿನ್ನಿಂದ ನನ್ನ ಮಕ್ಕಳ ರಕ್ಷಣೆ ಆಗಲಾರದೆ'ಂದು ಹೀಯಾಳಿಸಿದನು. ಅದನ್ನು ಸಹಿಸದೆ ಅರ್ಜುನನು—'ನಾನು ಕೃಷ್ಣನಲ್ಲ ನಿಜ. ಆದರೆ ಖಾಂಡವವನ್ನು ಸುಟ್ಟು, ದೇವತೆಗಳನ್ನು ಗೆದ್ದ ಅರ್ಜುನನು. ಗಾಂಡೀವಧನು-ರ್ಧಾರಿಯಾದ ಪಾಂಡವಮಧ್ಯಮನು. ಒಂದು ವೇಳೆ ನಿನ್ನ ಮಗನನ್ನು ರಕ್ಷಿಸಲಾರೆನಾದರೆ ಅಗ್ನಿಪ್ರವೇಶಮಾಡುವೆನು' ಎಂದು ಪ್ರತಿಜ್ಞೆಮಾಡಿ, ಹೊರಟನು. ಬ್ರಾಹ್ಮಣ ಸ್ತ್ರೀಯು ಪ್ರಸವಿಸುವಾಗ ಪಾರ್ಥನು ಸುತ್ತು ದಿಗ್ಬಂಧನಮಾಡಿ, ಶರಪಂಜರವನ್ನು ನಿರ್ಮಿಸಿದನು. ಆದರೂ ಕೂಸು ಹುಟ್ಟಿದಕ್ಷಣವೇ ಕಾಣದಾಯಿತು. ಇದನ್ನು ನೋಡಿ, ವಿಪ್ರನು ನಿಂದಿಸುತ್ತಿರಲು, ಪಾರ್ಥನು ಕೃಷ್ಣನ ಹತ್ತಿರ ಬಂದು, ಅಗ್ನಿ ಪ್ರವೇಶವನ್ನು ಮಾಡಲು ಅಪ್ಪಣೆ ಕೇಳಿದನು. ಅವನನ್ನು ತಡೆದು ಶ್ರೀಕೃಷ್ಣನು ಅವನ ಆಸುರಾವೇಶದಿಂದಾದ ತಪ್ಪನ್ನು ಮನ್ನಿಸಿ, ವಿಪ್ರಾರ್ಜುನಸಮೇತನಾಗಿ, ರಥವನ್ನೇರಿ, ಸಪ್ತವಾರಿಧಿಗಳನ್ನು ದಾಟಿಹೋದನು. ಉತ್ತರದಿಕ್ಕಿಗೆ ಪಯಣಿಸಿ, ಶ್ರೀಶನು ಅಂಧಂತಮಸ್ಸನ್ನು ಚಕ್ರದಿಂದ ಸೀಳಿ, ಘನೋದಕವನ್ನೂ ದಾಟಿ, ಅನಂತಾಸನವನ್ನು ಮುಟ್ಟಿದನು.

ಉತ್ಕೃಷ್ಟಾನಂದಾದಿಗುಣಪೂರ್ಣವು, ರತ್ನಖಚಿತದಿವ್ಯಾಭರಣಸಮಲಂಕೃತವು ಶೇಷಪರ್ಯಂಕವಿಲಸಿತವು, ರಮಾಲಾಲಿತಪಾದಾರವಿಂದವು ಆದ ಮೂಲರೂಪದಲ್ಲಿ ಐಕ್ಯವನ್ನು ಹೊಂದಿ, ಬ್ರಹ್ಮಾದಿಪೂಜಿತನಾಗಿ, ಶ್ರೀ ಕೃಷ್ಣನು ವಿಪ್ರಸುತರನ್ನು ಕರೆದು ಕೊಂಡು ಹೊರಬಂದನು. ಜಯ ವಿಜಯ ನಂದ ಸುನಂದರೆಂಬ ಅಮುಕ್ತ ವಿಷ್ಣು-ಲೋಕದ್ವಾರಪಾಲಕರೇ ಬ್ರಾಹ್ಮಣಶಿಶುಗಳಾಗಿ ಜನಿಸಿದ್ದರು. ಅವರನ್ನು ಬ್ರಾಹ್ಮಣನಿಗಿತ್ತು, ಶ್ರೀಕೃಷ್ಣನು ಮತ್ತೆ ಹಿಂದಿರುಗಿ, ದ್ವಾರಕೆಗೆ ಬಂದನು. ದೀಕ್ಷಾಚಾಲನ ಪ್ರಾಯಶ್ಚಿತ್ತವನ್ನು ಲೋಕಶಿಕ್ಷಾರ್ಥವಾಗಿ ಮಾಡಿ, ಯಜ್ಞವನ್ನು ಮುಗಿಸಿದನು. ಯಮುನೆಯಲ್ಲಿ ಅವಭೃಥವನ್ನು ಮಾಡಿ ಬರುವಾಗ ದಂಡೆತ್ತಿ ಬಂದು ಮುತ್ತಿದ

ದಂತವಕ್ತ್ರನನ್ನು ಕೊಂದು, ಅವನಲ್ಲಿದ್ದ ವಿಜಯನಿಗೆ ಮೋಕ್ಷವನ್ನಿತ್ತು, ಅಸುರರಾದ ದಂತವಕ್ತ್ರ ವಿದೂರಥರನ್ನು ಅಂಧಂತಮಸ್ಸಿನಲ್ಲಿ ಕೆಡಹಿದನು. ಅರ್ಜುನನಿಗೆ 'ಪಂಚಾಶತ್ಕೋಟಿ ಯೋಜನಾತ್ಮಕ ಭೂಮಂಡಲದಲ್ಲಿಯೂ ಹೊರಗೂ ನಾನು ವ್ಯಾಪ್ತನಾಗಿ ಸ್ವಾಮಿಯಾಗಿರುವೆನು. ಅನಂತರೂಪಗುಣಗಳಿಂದ ಅಭಿನ್ನನಾದ ನಾನು ಇತರ ಜೀವಜಡವಿಲಕ್ಷಣನಾಗಿರುವೆನು. ನನ್ನಿಂದ ಜೀವರಿಗೆ ವಿಜಯ, ಬಲ, ಐಶ್ವರ್ಯ, ರೂಪಾದಿಗಳು. ನನ್ನ ಅಧೀನವೆಲ್ಲ ಜೀವಜಡಜಾತವು. ನಾನು ಸ್ವತಂತ್ರನು—ಇಂತು ತಿಳಿದವನೇ ಜ್ಞಾನಿಯು. ಅರ್ಜುನಾ! ದರ್ಪಮಾಡಿ ಕೆಡಬೇಡ. ನನ್ನ ಪರಮಪ್ರಿಯ ಭಕ್ತನಾದುದರಿಂದ ನಿನಗೆ ನನ್ನ ಮಹಿಮೆಯನ್ನು ಕಣ್ಣಾರೆನೋಡುವ ಅವಕಾಶವನ್ನು ಕೊಟ್ಟಿರುವೆನು. ನನ್ನನ್ನು ಧ್ಯಾನಿಸು! ನನ್ನನ್ನು ಪ್ರೀತಿಸು! ನನ್ನನ್ನು ಪೂಜಿಸು! ನನಗೆ ವಂದಿಸು!' ಎಂದು ಉಪದೇಶಿಸಿ, ಶ್ರೀಕೃಷ್ಣನು ಪಾಂಡವರಿಗೆ ಅಪ್ಪಣೆಯನ್ನಿತ್ತು ಅವರನ್ನು ಇಂದ್ರಪ್ರಸ್ಥನಗರಕ್ಕೆ ಕಳಿಸಿಕೊಟ್ಟನು. ಅವರು ಶ್ರೀಶಚರಣಾರವಿಂದ ಸ್ಮರಣದಲ್ಲಿ ನಿರತರಾಗಿ ಅಲ್ಲಿ ಸುಖವಾಗಿದ್ದರು.

ಮಯನು ಅರ್ಜುನನಾಜ್ಞೆಯಿಂದ ಹೊರಟು, ಉತ್ತರಕೈಲಾಸವನ್ನು ಸೇರಿದನು. ಅಲ್ಲಿ ಬಿಂದುಸರಸ್ತೀರದಲ್ಲಿ ವೃಷಪರ್ವನ ಯಜ್ಞಕಾಲದಲ್ಲಿ ತಾನು ನಿರ್ಮಿಸಿದ ಮಣಿಮಯ ಭಾಂಡಜಾಲಗಳನ್ನು ಹುದಿಗಿಟ್ಟಿದ್ದನ್ನು ತೆಗೆದು ತಂದನು. ಸುವರ್ಣಬಿಂದು ಚಿತ್ರವು, ಕನಕಮಯವು, ಸಹಸ್ರಶತ್ರುಸಂಹಾರಕವು ಆದ ಗದೆಯೊಂದನ್ನು ತಂದು ಭೀಮಸೇನನಿಗೆ ಸಮರ್ಪಿಸಿದನು. ದೇವದತ್ತವೆಂಬ ಮಹಾಶಂಖವನ್ನು ಅರ್ಜುನನಿಗಿತ್ತನು. ಸ್ಫಟಿಕ, ವೈಡೂರ್ಯ, ಕನಕಯೂಪ, ಧ್ವಜಸ್ತಂಭ, ರಜತಪ್ರಮುಖ ಮಹಾವಸ್ತುಜಾಲವನ್ನು ತಂದು ದಿವ್ಯಸಭೆಯನ್ನು ಅಲಂಕರಿಸಿ, ಪಾಂಡವರಿಗಿತ್ತನು.

ಮೂರು ಮೈಲಿಗಳ ಆವರಣದಲ್ಲಿ ಸಭೆಯು ವಿರಾಜಿಸಿತು. ಮೇಘಮಂಡಲವು ತಿರುಗಿ, ಸಾಕಾಗಿ, ನೆಲಕ್ಕಿಳಿದು ವಿಶ್ರಮಿಸುತ್ತಿದ್ದಂತಿದ್ದ ಮಂದಿರಗಳು, ಸೋಮಸೂರ್ಯ ನಗರಗಳನ್ನು ಧಿಕ್ಕೊಡಲೆಂಬಂತೆ ಅಂಬರಚುಂಬಿಗಳಾಗಿದ್ದವು. ಅವುಗಳಲ್ಲಿ ತುಂಬಿದ ಧನಧಾನ್ಯಗಳ ರಾಶಿಗಳು ಮೇರುಹಿಮಗಿರಿಗಳಂತಿದ್ದವು. ಬ್ರಹ್ಮಸಭೆಯನ್ನು ಸುಧರ್ಮಸಭೆಯನ್ನು ಧಿಕ್ಕರಿಸುವ ಶೋಭೆಯಿಂದ ಬೆಳಗುವ ಮಯಸಭೆಗೆ ಬುನಾದಿಯಾಗಿ, ಎಂಟುಸಾವಿರ ಯಕ್ಷಕಿಂಕರರು ಹೊತ್ತು ನಿಂತಿದ್ದರು. ಆ ಸಭೆಯ ಮಧ್ಯದಲ್ಲಿ ಸರೋವರವು ಅಚ್ಛೋದಪೂರ್ಣವಾಗಿತ್ತು. ವೈಡೂರ್ಯಪತ್ರಗಳಿಂದಲೂ ಮರಕತಮಣಿಮಯನಾಳಗಳಿಂದಲೂ ಮಾಣಿಕ್ಯದಳಗಳಿಂದಲೂ ಗೋಮೇದ ಕಿಂಜಲ್ಕಗಳಿಂದಲೂ ಶೋಭಿಪ ಕಮಲಗಳಲ್ಲಿ ಅರಳಿ ದಿವ್ಯಸುಗಂಧಯುಕ್ತ ಬಂಭರಾರಾವದಿಂದ, ಬಂದ ಜನರಿಗೆ ಸ್ವಾಗತವಿತ್ತು ಕರೆಯುವಂತಿದ್ದವು. ಮುತ್ತಿನ ಸೋಪಾನಗಳು, ವಜ್ರಾಸನಗಳು, ಪುಷ್ಯರಾಗ ವಿತಾನಗಳು ಕಲೆತು ಧಾವಲ್ಯವನ್ನು ಚೆಲ್ಲುತ್ತಾ, ಪ್ರತಿಬಿಂಬಶತವನ್ನರ್ಪಿಸಿ, ಪಾತ್ರರಿಗಿತ್ತ ದಾನವು ಶತಧಾ ವೃದ್ಧವಾಗುವದೆಂದು ಸಾರುತ್ತಿದ್ದವು. ಸುತ್ತುಮುತ್ತಿದ್ದ ವನರಮೆ ಮುಡಿದಿದ್ದ ಪೂಮಾಲೆಗಳ ಗಂಧ

ವನ್ನು ಮಂದಾನಿಲನು ಹೊತ್ತು, ಭಾರದಿಂದೆಂಬಂತೆ ಮೆಲ್ಲನೆ ಬರುತ್ತಿದ್ದನು. ಮಣಿ ಗಣಗಳ ಚಿತ್ರಮೇಳನದಿಂದ ವಿಭ್ರಮಾಸ್ಪದನಾದ ಮಹಾಮಂದಿರ ಮಣಿಸರೋವರ ಗಳು ಅನ್ಯೋನ್ಯಾಕಾರವನ್ನು ಹೊಂದಿ, ಅಜ್ಞಪತನಕಾರಣವಾಗಿದ್ದವು. ಸರೋವರ ಗಳಲ್ಲಿ ವಿಹರಿಸುವ ಹಂಸ-ಚಕ್ರವಾಕಗಳು ತೀರದಿ ಹರಿಸುವ ಧವಳಾಂಬರ ಲಿಕುಚ ಸ್ತನಿಯರನ್ನು ನೋಡಿ, ನರ್ಮಾಲಾಪಗಳನ್ನಾಡುತ್ತಿದ್ದವು. ಇಂತಹ ಸಭೆಯನ್ನು ಹದಿನಾಲ್ಕು ತಿಂಗಳಿಗೆ ಪೂರೈಸಿ, ಮಯನು ಧರ್ಮಜನಿಗರ್ಪಿಸಿದನು.

ಸುಮುಹೂರ್ತದಲ್ಲಿ ಚಿತ್ರಾನ್ನ-ಮುದ್ಗಾನ್ನಗಳನ್ನಿತ್ತು ಆಯುತ ವಿಪ್ರರನ್ನು ತಣಿಸಿ ಮಾಂಸಾದಿ ವಿವಿಧ ಭಕ್ಷ್ಯಗಳಿಂದ ಇತರ ಜನರನ್ನೂ ತೃಪ್ತಿಪಡಿಸಿ, ಗೋದಾನ ಮಾಡಿ, ವೇದ-ವಾದ್ಯಘೋಷದೊಂದಿಗೆ ಧರ್ಮಜಾದಿ ಪಾಂಡವರು ಮಯನಿರ್ಮಿತ ದಿವ್ಯಮಂದಿರಗಳಲ್ಲಿ ಪ್ರವೇಶಿಸಿದನು.

ಅವರು ದೇವಾಲಯಗಳಲ್ಲಿ ದೇವತೆಗಳನ್ನರ್ಚಿಸಿದರು. ಬಂದು ನಿಂತಿದ್ದ ನಟ, ಮಲ್ಲ, ಸೂತ, ವೈತಾಳಿಕಾದಿಗಳನ್ನು ಯಥಾಯೋಗ್ಯವಾಗಿ ಧರ್ಮಜನು ಸತ್ಕರಿಸಿದನು. ಸಭೆಯಲ್ಲಿ ಸಿಂಹಾಸನಾಸೀನನಾದ ಧರ್ಮರಾಜನ ಅನುಜ ಚತುಷ್ಟಯವು ಪರಿಸರಾ ಸೀನವಾಗಿತ್ತು. ನಾನಾ ದೇಶದ ನರೇಂದ್ರರು ವಿವಿಧ ವಿಚಿತ್ರ ವಸ್ತುಸಮುದಾಯವನ್ನು ಸಮರ್ಪಿಸಿ, ಧರ್ಮರಾಜನ ಅನುಮತಿಯಿಂದ ಸಭೆಯಲ್ಲಾಸೀನರಾದರು. ವ್ಯಾಸ, ದೇವಲ, ಮೈತ್ರೇಯ, ಶುನಕ, ಬಲಿ, ಬಕದಾಲ್ಭ್ಯ, ಸ್ಥೂಲಶಿರ, ಶುಕ, ಸುಮಂತು ಜೈಮಿನಿ, ಪೈಲ (ನಾನು), ವೈಶಂಪಾಯನ, ಯಾಜ್ಞವಲ್ಕ್ಯ, ರೋಮಹರ್ಷಣ, ಧೌಮ್ಯ, ಮಾಂಡವ್ಯ, ಕೌಶಿಕ, ಪರ್ಣಾದ, ಜಾತುಕರ್ಣ, ಮಾರ್ಕಂಡೇಯ, ಗಾಲವ, ರೈಭ್ಯ, ಭೃಗು, ಕೌಂಡಿನ್ಯ, ಕಕ್ಷೀವಾನ್, ಗೌತಮ, ಪೈಂಗ, ಕೌಂಡಿಲ್ಯ, ಕಠ ಮೊದ ಲಾದ ಋಷಿವರರು ; ಸಂಗ್ರಾಮಜಿತ್, ಉಗ್ರಸೇನ, ಕಕ್ಷಸೇನ, ಕುಂತಿರಾಜ, ಪುಲಿಂದ, ಪಾಂಡ್ಯ, ಆಂಧ್ರ, ಅಂಗ, ವಂಗ, ಶೈಬ್ಯ, ಭೀಮರಥ, ಜಯಸೇನ, ಚೇಕಿತಾನ, ಶಿಶುಪಾಲ, ಆಹುಕ, ಗದ, ಸಾರಣ, ಅಕ್ರೂರ, ಕೃತವರ್ಮ, ಸಾತ್ಯಕಿ, ಭೀಷ್ಮಕ, ಯಜ್ಞಸೇನ ಮುಂತಾದ ಕ್ಷತ್ರಿಯರಾಜರು ಧರ್ಮರಾಜನ ಸಭೆಯಲ್ಲಿ ಸುಖಾಸೀನ ರಾಗಿದ್ದರು. ಅರ್ಜುನನಲ್ಲಿ ಧನುರ್ವಿದ್ಯೆಯನ್ನು ಕಲಿತ ಪ್ರದ್ಯುಮ್ನ, ಸಾಂಬ, ಸಾತ್ಯಕಿ, ಸುಧರ್ಮ, ಅನಿರುದ್ಧ, ಶೈಬ್ಯ, ಮುಂತಾದ ರಾಜಪುತ್ರರು ಅರ್ಜುನನ್ನನುಸರಿಸಿ, ಒಡ್ಡೋಲಗದಲ್ಲಿ ಕೂತಿದ್ದರು. ಚಿತ್ರಸೇನನು ಇಪ್ಪತ್ತೇಳು ಗಣ ಯುತ ಗಂಧರ್ವರಿಂದ ಕೂಡಿ, ಅರ್ಜುನಮಿತ್ರನಾದುದರಿಂದ ಸಭೆಯಲ್ಲಿ ಆಸೀನನಾಗಿದ್ದನು. ತುಂಬುರು ಗಂಧರ್ವನೂ ಅರ್ಜುನಸಖನಾಗಿ ಕೂತಿದ್ದನು.

ಗೀತ ವಾದಿತ್ರ ತಾಳ ಮೇಳ ನಿಸ್ವನವು ತುಮುಲವಾಗಿ ಅಂಬರದಲ್ಲಿ ತುಂಬಿತು. ಕಿನ್ನರರು ಪಾಡಿದರು. ಅಪ್ಸರೆಯರಾಡಿದರು. ದೇವತೆಗಳು ಪೂಮಳೆಗರೆದರು. ಸತ್ಯ ಸಂಗರರಾದ ಭೀಮಸೇನಾದಿ ಪಾಂಡವರು ಧರ್ಮರಾಜನನ್ನು ಉಪಾಸಿಸುತ್ತಿರಲು, ಸಭೆಯು ಸ್ವರ್ಗಸಭೆಯಂತೆ ಕಂಗೊಳಿಸಿತು. ಆಗ ದೇವರ್ಷಿವರ ನಾರದನು ಅಲ್ಲಿಗೆ

ಬಂದನು. ಇತಿಹಾಸಪುರಾಣಜ್ಞನು, ಕಥಾಕಲ್ಪಚತುರನು, ನ್ಯಾಯವೇತ್ತನು, ಧರ್ಮಶಾಸ್ತ್ರಮರ್ಮಜ್ಞನು, ಚತುರವಚನರಚನಾಧುರೀಣನು, ಜೀವಜಡೇಶರೂಪ-ತ್ರಿವಿಧಭಿನ್ನಪದಾರ್ಥತತ್ವಜ್ಞಾನಿಯು, ಬ್ರಹ್ಮವೇದಾಂತಪಾರಂಗತನು ತ್ರಿಕಾಲಜ್ಞನು ಮಹಾಭಗವದ್ಭಕ್ತನು ಆದ ನಾರದಮುನಿಯನ್ನು ಎದುರ್ಗೊಂಡು ಕರತಂದು, ಪಾಂಡವರು ಅರ್ಘ್ಯ-ಪಾದ್ಯಗಳನ್ನಿತ್ತು ಪೂಜಿಸಿ, ಸಿಂಹಾಸನದಲ್ಲಿ ವ್ಯಾಸದೇವನ ಚರಣಸನ್ನಿಧಿಯಲ್ಲಿ ಕೂಡಿಸಿದರು.

## ರಾಜಸೂಯ ನಿಶ್ಚಯ

ಲೋಕಸಂಚಾರ ಮಾಡಿಕೊಂಡು ಬಂದ ನಾರದಮುನಿವರನು ವ್ಯಾಸಾದಿ ಮುನಿಗಳಿಗಭಿನಮಿಸಿ, ಧರ್ಮರಾಜಾದಿ ಪಾರ್ಥರನ್ನು ಆಶೀರ್ವದಿಸಿದನು—

"ಧರ್ಮರಾಜ ! ನಿಮ್ಮ ಪೂರ್ವಜರು ಮಹಾ ಧರ್ಮಾತ್ಮರು. ಅವರು ತೋರಿದ ಸದ್ಧರ್ಮಪಥದಲ್ಲಿ ನೀನೂ ಪ್ರವರ್ತಿಸುತ್ತಿರುವೆಯಾ ? ಧರ್ಮಾರ್ಥಕಾಮಗಳನ್ನು ಮೋಕ್ಷಾವಿರೋಧವಾಗುವಂತೆ ಕಾಲವನ್ನು ಅನುಸರಿಸಿ ನಡೆಸುವಿಯಾ ? ಯೋಗ್ಯರನ್ನು ರಾಜಕಾರ್ಯಗಳಲ್ಲಿ ನಿಯಮಿಸಿ, ನಿನ್ನ ಅನುಜರ ಪರ್ಯವೇಕ್ಷಣದಲ್ಲಿ ಇಟ್ಟಿರುವೆಯಾ ? ರಾಜರಿಗೆ ಮಂತ್ರರಕ್ಷಣೆಯೇ ವಿಜಯಸಾಧನವು. ಮಂತ್ರಗುಪ್ತಿಯಿಲ್ಲದ ರಾಜನ ಕಾರ್ಯಗಳು ವಿಫಲವಾಗುವವು. ನಿನ್ನ ಪುರೋಹಿತರು, ಪಂಡಿತರು, ಧೀರರು ಧರ್ಮಾಧರ್ಮವಿಚಕ್ಷಣರು, ಬಹುಶ್ರುತರು ಆಗಿರುವರೇ ? ನಿನ್ನ ಯಜ್ಞಗಳು ಯೋಗ್ಯ ಋತ್ವಿಗ್ವರರಿಂದ ಅನವರತವಾಗಿ ನಡೆಯುವವೇ ? ಅವದ್ಯಗುಣರು ಅವಾರ್ಯವೀರ್ಯರು, ವಿಜಯನಿಪುಣರು ಆದ ನಿನ್ನ ಸೇನಾಪತಿಗಳು ನಿನಗೆ ಹಿತರಾಗಿರುವರೇ ? ಪುರುಷಕಾರವನ್ನರಿತು, ದಕ್ಷರಾಗಿ, ರಾಜಕಾರ್ಯವನ್ನು ನಡೆಸುವರೇ ನಿನ್ನ ಮಂತ್ರಿಗಳು ? ದೈವಜ್ಞರು ಭೌಮಾಂತರಿಕ್ಷಮಹೋತ್ಪಾತಗಳನ್ನು ಶಾಸ್ತ್ರದೃಷ್ಟಿಯಿಂದರಿತು ಅವನ್ನು ನಿವಾರಿಸುವ ಶಾಂತಿಕರ್ಮಗಳನ್ನು ಮಾಡಿ, ನಿನ್ನ ಕ್ಷೇಮಸಂಪಾದಕರಾಗಿರುವರೇ? ಆಯುರ್ವೇದವಿಶಾರದರಾದ ವೈದ್ಯರು ನಿನ್ನಲ್ಲಿಯೂ ಪ್ರಜರಲ್ಲಿಯೂ ಅನುರಕ್ತರಾಗಿ ಹಿತಾರೋಗ್ಯಸಾಧಕರಾಗಿರುವರೇ ? ಅರ್ಥಾರ್ಜನಾದಿ ರಾಜಕಾರ್ಯಗಳಲ್ಲಿ ಶುದ್ಧವರ್ತನರು, ಕುಲೀನರು, ಪಾಪದೂರರು, ವಿನೀತರು ಆಗಿರುವ ಅಧಿಕಾರಿಗಳನ್ನು ಪರೀಕ್ಷಿಸಿ, ನಿಯಮಿಸಿರುವೆಯಾ ? ಉದ್ಯೋಗಕ್ಕೆ ತಕ್ಕಂತೆ ಯೋಗ್ಯತೆ ಇಲ್ಲದ ಜನರನ್ನು ನಿಯಮಿಸದೆ, ಭೃತ್ಯಕೋಟಿಯಲ್ಲಿ ಉದಾರನಾಗಿ, ವೇತನಾದಿ ಸೌಲಭ್ಯಗಳನ್ನು ಒದಗಿಸಿ, ಸಂರಕ್ಷಿಸುವೆಯಾ ? ಕುಲಗುಣವಿನಯಶೀಲವಂತರನ್ನು ಗೌರವಿಸುವುದೆಷ್ಟು ಆವಶ್ಯಕವೋ ಅಷ್ಟೇ ಆವಶ್ಯಕವಾಗಿದೆ ದುಷ್ಟಶಿಕ್ಷಣೆ !

"ನಿನಗಾಗಿ ಹೋರಾಡಿ, ವೀರಸ್ವರ್ಗವನ್ನಲಂಕರಿಸಿದ ಭಟರ ದಾರಾಪುತ್ರಾದಿಗಳ ಯೋಗಕ್ಷೇಮವನ್ನು ವಿಚಾರಿಸಿ ಸಹಾಯ ನೀಡುವಿಯಾ ? ಲೋಭಿಗಳು, ಚೋರರು, ಚಾಡಿಕೋರರು, ಶತ್ರುಪಕ್ಷಪಾತಿಗಳು, ಭೀರುಗಳು ಇಂತಹ ಕುಜನರನ್ನು ರಾಜ

ಕಾರ್ಯದಲ್ಲಿ ನಿಯಮಿಸಬಾರದು. ಚೋರಾದಿದುಷ್ಟರಿಂದ ಧನವನ್ನು ಸ್ವೀಕರಿಸಿ, ನಿನ್ನ ಭೃತ್ಯರು ಪ್ರಜೋಪದ್ರವ ಕಾರಣರಾದ ಚೋರರನ್ನು ರಕ್ಷಿಸುವ ಪಾಪದಲ್ಲಿ ತೊಡಗಿಲ್ಲವಲ್ಲ ?

"ಕೆರೆ, ಬಾವಿ, ತಟಾಕಗಳನ್ನು ನಿರ್ಮಿಸಿ, ಕರ್ಷಕಜನರ ಕ್ಷೇಮವನ್ನು ವಹಿಸು ವೆಯಾ ? ದೀನರಾದ ರೈತರಿಗೆ ಧಾನ್ಯಬೀಜಗಳನ್ನು, ಭೂ ಸೌಕರ್ಯವನ್ನು ವರ್ತಕ ಜನರಿಗೆ ಧನಋಣವನ್ನು ಕೊಟ್ಟು, ದೇಶದ ಸಂಪದಭಿವೃದ್ಧಿಗೆ ಕಾರಣನಾಗಿರುವೆಯಾ? ಪಂಗು-ಮೂಕ-ಅಂಧ-ಬಧಿರ-ವ್ಯಂಗಾದಿ ದೀನಜನರಲ್ಲಿ ದಯದೋರಿ ರಕ್ಷಿಸುವೆಯಾ ? ಶರಣಾಗತರ ರಕ್ಷಣವನ್ನು ಬಿಡದೆ ಮಾಡುವೆಯಾ ? ಉತ್ತಮವರ್ತನರ ಪ್ರಶಂಸೆ ಯನ್ನು ಮಾಡಿ, ನೀಚರನ್ನು ತೆಗಳಿ, ಕೃತಜ್ಞನೆನಿಸಿರುವ ರಾಜನು ಪ್ರಜಾಪ್ರೀತಿಗೆ ಪಾತ್ರನಾಗುವನು. ಬಂದ ರಾಜ್ಯಾದಾಯದಲ್ಲಿ ಅರ್ಧವನ್ನು ಬದಿಗಿಟ್ಟು, ಮಿಕ್ಕುದ ರಲ್ಲಿ ಮಿತವ್ಯಯವನ್ನು ಮಾಡಲು ಮರೆತಿಲ್ಲವಲ್ಲ ! ಆಯುಧಾಗಾರ, ಧನಶಾಲೆ, ವಾಜಿ ಗಜ ಸಂಗ್ರಹಣದಲ್ಲಿ ಪರಮ ವಿಶ್ವಾಸಪಾತ್ರರನ್ನು ಮಾತ್ರ ನಿಯಮಿಸಿ ರುವೆಯಾ ?

"ಗುರುಜನರು, ವಿಪ್ರರು, ಶಿಲ್ಪಿಗಳು, ಉಪಾಧ್ಯಾಯರು, ದೈವಜ್ಞರು, ವಣಿಗ್ ಜನರು, ಆಶ್ರಿತರು ಮುಂತಾದ ಸಾಧುಶೀಲರನ್ನು ದಾರಿದ್ರ್ಯಪೀಡಿತರಾಗದಂತೆ ಪೋಷಿಸುವೆಯಾ ? ನಿನ್ನ ಚಾರರು ಜಾಗರೂಕರಾಗಿರುವರೇ ? ಲೋಕವ್ಯವಹಾರ ಪರೀಕ್ಷಕರು, ವಾರ್ತಾಹರರು, ಅಪರಾಧಶಿಕ್ಷಕರು ಅಪ್ರಮತ್ತರಾಗಿ ನಿನ್ನ ಕಾರ್ಯಾನುಕೂಲರಾಗಿರುವರೇ ? ಧರಣೀಶ ! ದಾರಸಂಗ್ರಹವು ರತಿಪುತ್ರಫಲ ವಾಗಿದೆ. ವಿದ್ಯೆ ಶೀಲವೃತ್ತಫಲವಾಗಿದೆ. ಧನವು ದತ ಭುಕ್ತಫಲವಾಗಿದೆ. ವೇದವು ಅಗ್ನಿಹೋತ್ರಫಲವಾಗಿದೆ.

"ಧನಧಾನ್ಯಗಳ ಶೇಖರಣೆ, ಆಯುಧಸಮೃದ್ಧಿ, ನಿರಂತರ ಜಲ, ತೃಣ, ಕಾಷ್ಠ-ಸಂಗ್ರಹ, ಯಂತ್ರ ನಿರ್ಮಾಣ ನೈಪುಣ್ಯ, ದುರ್ಗಸೀಮಾ ಸಂರಕ್ಷಣೆಗಳನ್ನು ಪೊಂದಿರುವ ರಾಜವರನನ್ನು ಶತ್ರುಜನರು ಕಣ್ಣೆತ್ತಿ ನೋಡಲಾರರೆಂದು ತಿಳಿ !

"ಬಾಹ್ಯಶತ್ರುಗಳನ್ನಂತೆ ಅಂತಃಶತ್ರುಗಳನ್ನೂ ಗೆದ್ದು, ಜಿತೇಂದ್ರಿಯನೆನಿಸಿ, ದೈವ ಬಲವನ್ನರಿತು, ಸಾಧಿಸಿ, ದೇಶಕಾಲವನ್ನನುಸರಿಸಿ, ಶತ್ರುಜಯವನ್ನು ಸಂಪಾದಿಸಿ, ಮದಮತ್ತನಾಗದೆ, ವ್ಯಸನದೂರನಾದ ರಾಜವರನು ಪ್ರಜಾರಂಜಕನಾಗುವನು. ರಿಪುಜನರಲ್ಲಿ ಚತುರುಪಾಯ ಚತುರಪ್ರಣಿಧಿಗಳನ್ನು ಕಳಿಸಿ, ಮಿತ್ರಭೇದವನ್ನು ಸಾಧಿಸಿ ಜಯಶಾಲಿಯಾಗಿರುವೆಯಾ ?

"ನಾಸ್ತಿಕ್ಯ, ಅನೃತವಚನ, ಪ್ರಮಾದ, ಆಲಸ್ಯ, ಕ್ರೋಧ, ದೀರ್ಘಚಿಂತೆ, ದೀರ್ಘಸೂತ್ರತೆ, ಅರ್ಥಕುಶಲಜನ ವರ್ಜನ, ಮೂಢಮಂತ್ರಿತ್ವ, ಮಂತ್ರರಕ್ಷಣ ರಾಹಿತ್ಯ, ಶುಭಕಾರ್ಯ ಪರಿಹರಣ, ವಿಷಯಲೋಲುಪತೆ, ನಿಶ್ಚಿತಕಾರ್ಯದ

ಔದಾಸೀನ್ಯ, ಅರ್ಥಾನರ್ಥವಿವೇಕ ದೂರತೆ ಎಂಬ ಹದಿನಾಲ್ಕು ರಾಜದೋಷ ಗಳನ್ನು ಪರಿಹರಿಸಿದ ನರವರನು ಸುಖಿಯಾಗಿ, ಪ್ರಜಾಸುಖವನ್ನೂ ಸಾಧಿಸುವನು."

ಇಂತು ನುಡಿದ ಮುನಿವರನಿಗೆ ಧರ್ಮರಾಜನು "ಸ್ವಾಮೀ! ನನ್ನ ಶಕ್ತಿ ಯೋಗ್ಯತೆಗಳನ್ನನುಸರಿಸಿ, ಅನ್ಯಾಯವನ್ನು ಪರಿಹರಿಸಿ, ಶುಭವನ್ನು ಅನುಷ್ಠಿಸಿ, ಹಿರಿಯರ ಸನ್ಮಾರ್ಗದಲ್ಲಿ ನಡೆಯುತ್ತಿರುವೆನು. ಮುನೀಂದ್ರಾ! ಮೂರು ಲೋಕ ಗಳನ್ನು ನೋಡಿರುವ ನಿಮ್ಮನ್ನು ಒಂದು ವಿಷಯದಲ್ಲಿ ಪ್ರಶ್ನಿಸುವೆನು. ಈ ಮಯ ಸಭೆಯು ಅತ್ಯದ್ಭುತವೆಂಬುವರು. ಇಂತಹ ಸಭೆಯನ್ನು ಮತ್ತೆಲ್ಲಾದರೂ ಕಂಡಿರುವಿರಾ?" ಎಂದು ಕೇಳಿದನು. ನಾರದನು ನಸುನಕ್ಕು, ಮಯಸಭೆಯನ್ನು ನೋಡಿ, ಪ್ರೀತನಾಗಿ, ಇಂತೆಂದನು—

"ರಾಜನ್! ಈ ನಿನ್ನ ಸಭೆಯು ಅಪೂರ್ವವಾಗಿದೆ. ಇಂತಹ ಸಭೆಯನ್ನು ಭೂಲೋಕದ ಯಾವ ರಾಜರಲ್ಲಿಯೂ ನಾನು ನೋಡಿಲ್ಲ. ಆದರೆ ಇದನ್ನು ಸರಿ ಪೋಲುವ ಸಭೆಗಳನ್ನು ನಾನು ಯಮ, ವರುಣ, ಕುಬೇರ, ಶಕ್ರ, ಬ್ರಹ್ಮಲೋಕಗಳಲ್ಲಿ ನೋಡಿರುವೆನು. ಅತ್ಯಂತ ವೈಭವ ಸೌಂದರ್ಯ ವಿಲಾಸ ವಿಭ್ರಮಕರವಾದ ನಿನ್ನ ಸಭೆಯು ಇನ್ನೂ ಚೆನ್ನಾಗಿದೆಯೆನ್ನಬಹುದು. ಕೇಳು ಇಂದ್ರಸಭಾವಿಭವವನ್ನು!— ವಾಮನೋಪಾಸಕ ಇಂದ್ರನ ಸುಧರ್ಮ ಸಭೆಯು ದಿವ್ಯರತ್ನಖಚಿತ ಕನಕರಚಿತ ವಾಗಿದೆ; ಲೋಕತ್ರಯದ ಲಕ್ಷ್ಮೀವಿಲಾಸಕ್ಕೆ ನೆಲೆಯಾಗಿದೆ. ಅದು ನೂರು ಯೋಜನ ಅಗಲವು, ನೂರೈವತ್ತು ಯೋಜನ ಉದ್ದವು, ಐದು ಯೋಜನ ಎತ್ತರವು ಉಳ್ಳದ್ದಾಗಿ, ಕಾಮಗಮನವಾಗಿದೆ. ಶೀತಾತಪಬಾಧೆಯಿಲ್ಲದ ಆ ಸಭೆಯು ಸಕಲ ಕಾಲಫಲಕುಸುಮಭರಿತವಾಗಿರುವ ವೃಕ್ಷವಾಟಿಕಾಪರಿವೃತವಾಗಿದೆ. ಅಲ್ಲಿ ಶಚೀ ಸಮೇತನಾದ ಶಕ್ರನನ್ನು ದಿವಿಜೋತ್ತಮರು ಸೇವಿಸುವರು. ಅಪ್ಸರೋನರ್ತನ ದಿಂದಲೂ ಗಂಧರ್ವಗಾನದಿಂದಲೂ ವಿವಿಧ ವಾದ್ಯನಿಃಸ್ವನದಿಂದಲೂ ಆನಂದಿಸುವ ದೇವವೃಂದದಲ್ಲಿ ವಿರಾಜಿಸುತ್ತಿರುವದು. ರಣದಲ್ಲಿ ರಾಜನಿಗಾಗಿ ಮಡಿದ ವೀರ ಭಟರು, ಕುಲಧರ್ಮಗಳನ್ನು ಚೆನ್ನಾಗಿ ನಡಸಿದ ಗೃಹಸ್ಥರು, ಯಜ್ಞದೀಕ್ಷಿತರಾದ ರಾಜನ್ಯರು, ವೇದವಿದರಾದ ವಿಪ್ರರು, ಪರಹಿತರತರಾದ ಸುಜನರು, ಪುಣ್ಯವಿಭವ ದಿಂದ ಭಯ, ಕ್ಷುತ್ಪಿಪಾಸಾ, ರೋಗ, ಮರಣಾದಿ ದೋಷವರ್ಜಿತರಾಗಿ, ಅಲ್ಲಿ ಸುಖ ವಾಗಿರುವರು. ಆ ಸಭೆಯಲ್ಲಿ ಅಗ್ನೀಷೋಮರು, ಶುಕ್ರಬೃಹಸ್ಪತಿಗಳು, ಅಶ್ವಿನೀ ದೇವರು, ವಿಶ್ವೇದೇವರು, ಧಾತವಿಧಾತರು ಮತ್ತು ಹರಿಶ್ಚಂದ್ರರಾಜರ್ಷಿಯು, ಇಂದ್ರಪ್ರೀತಿಪಾತ್ರರಾಗಿ ವಾಸಿಸಿರುವರು.

"ರಾಮರತನಾದ ಯಮಧರ್ಮನ ಸಭೆಯು ಶತಯೋಜನಾಯಾಮ ರಮ ಣೀಯವಾಗಿದೆ. ಸೂರ್ಯನಂತೆ ಹೊಳೆಯುವ ಆ ಸಭೆಯು ಸರ್ವಸುಖ ಸಂಪಾದಕ ವೆನಿಸಿದೆ. ಅಲ್ಲಿ ಅಗಸ್ತ್ಯ ಮತಂಗ ಲಿಖಿತಾದಿ ಮುನಿವರರು, ಪಿತೃದೇವತೆಗಳು, ಕಾಲ ಕಿಂಕರರು, ಕ್ರತು, ದಿಕ್, ದಕ್ಷಿಣಾ, ಕಾಲ, ಮತ್ಯುನಿಯಾಮಕ ದೇವತೆಗಳು

ನೆಲೆಸಿರುವರು. ಕೃತವೀರ್ಯ, ಜನಮೇಜಯ, ಜನಕ, ಬ್ರಹ್ಮದತ್ತ, ಶಂತನು, ವೈನ್ಯ, ಇಂದ್ರದ್ಯುಮ್ನ, ಉಪರಿಚರ, ಮಧುಕಂದಾದಿ ರಾಜರು ಮತ್ತು ನಿಮ್ಮ ತಂದೆ ಪಾಂಡು ರಾಜನೂ ವಿರಾಜಿಸಿರುವರು. ರಾಜವರ ಮುನಿವರ ಸೇವಿತನಾದ ಯಮಧರ್ಮನು ದಿವ್ಯಸಿಂಹಾಸನಾಸೀನನಾಗಿ, ಸಮಸ್ತಜೀವರ ಶುಭಾಶುಭಕರ್ಮಗಳನ್ನು ವಿಚಾರಿಸುತ್ತಿರುವನು.

"ಮತ್ಸ್ಯೋಪಾಸಕನಾದ ವರುಣನ ಸಭೆಯು ಧವಳಮಣಿನಿರ್ಮಿತವಾಗಿದೆ. ವರುಣಾನೀಪತಿವರುಣನಲ್ಲಿ ಸುಖಾಸೀನನಾಗಿ, ಚತುಃಸಮುದ್ರದೇವತೆಗಳಿಂದಲೂ ಕಾಳಿಂದೀ, ನರ್ಮದಾ, ಗಂಗಾ, ಗೋದಾ, ಕೃಷ್ಣಾ, ಕಾವೇರೀ, ವಿಪಾಶಾ, ವಿದಿಶಾ, ಸರಸ್ವತೀ, ಪಿನಾಕಿನೀ, ಇರಾವತೀ ಪ್ರಮುಖ ಸರಿದ್ದೇವಿಯರಿಂದಲೂ ಸೇವಿತನಾಗುತ್ತಿರುವನು. ಮಕರ, ಕೂರ್ಮ, ಶಿಂಶುಮಾರ, ತುರಗ, ಸಿಂಹ, ಸಾಮಜಾದಿ ಜಲಜಂತು ಸಂತಾನದಿಂದಲೂ, ಬಲಿ, ವಿರೋಚನ, ನಮುಚಿ, ವಿಪ್ರಚಿತ್ತಿ, ನರಕ, ಕೈಟಭ, ವಿಶ್ವರೂಪ, ರಾವಣಾದಿ ದೈತ್ಯದಾನವರಿಂದಲೂ ಸೇವಿತನಾಗಿ ವರುಣನು ದುಷ್ಟದಮನನು, ಶಿಷ್ಟಪಾಲಕನು ಆಗಿ ಮಹಾಶೋಭೆಯಿಂದಿರುವನು.

"ಕಲ್ಕಿಭಕ್ತನಾದ ಕುಬೇರನ ಸಭೆಯು ನೂರು ಯೋಜನ ಉದ್ದ, ಎಪ್ಪತ್ತು ಯೋಜನ ಅಗಲವಾಗಿ, ಧವಳಕಾಂತಿಕಾಂತವಾಗಿರುವುದು. ಕನಕಮಯ ತರುಗಳಲ್ಲಿ ರತ್ನಮಯ ಫಲಪುಷ್ಪವಿಲಸಿತವಾಗಿರಲು ಆ ಸಭೆಯು ತಪ್ಪಲ್ಲತಾವಿರಾಜಿತವಾದ ಅಂಬರದಂತೆ ಕಂಗೊಳಿಸುವುದು. ಮಂದಾರ ಪಾರಿಜಾತ ಸುಮ ಗಂಧಮನೋಹರ ಮಂದಾನಿಲ ಸೇವಿತನಾದ ಕುಬೇರನು ನರ ಕಿನ್ನರ ಗಂಧರ್ವ ಯಕ್ಷ ಸೇವಿತನಾಗಿರುವನು. ಊರ್ವಶೀ ತಿಲೋತ್ತಮಾದಿ ಅಪ್ಸರೆಯರು ಅವನ ಸೇವಾನಿರತರಾಗಿ ನಲಕೂಬರ ಮಣಿಗ್ರೀವಾದಿ ಸುಂದರ ತರುಣ ಸಮೇತರಾಗಿ ವಿಹರಿಸುತ್ತಿರುವರು. ಕುಬೇರಸಖನಾದ ಮಹಾದೇವನೂ ಅವನಿಗೆ ಪ್ರೀತಿಯನ್ನೀಯಲು, (ಸದಾ ಅಲ್ಲಿ ಉಮಾ ಗಣೇಶ ಸ್ಕಂದ ನಂದಿ ಪ್ರಮಥಗಣ ಸಹಿತನಾಗಿ ನೆಲಸಿ, ಲೋಕಹಿತವಾದ ತಪಸ್ಸಿನಲ್ಲಿ ನಿರತನಾಗಿರುವನು. ನೃಸಿಂಹದೇವನೇ ಮಹಾದೇವೋಪಾಸ್ಯನು.)

"ಒಂದುಸಲ ನಾನು ಸೂರ್ಯನ ಮುಖದಿಂದ ಬ್ರಹ್ಮಸಭೆಯ ವರ್ಣನವನ್ನು ಕೇಳಿ ಅದನ್ನು ನೋಡಲು ಹೋದೆನು. ಆ ಪಿತಾಮಹನು ನಮ್ಮಪ್ಪನಲ್ಲವೇ! ಆ ಸತ್ಯಲೋಕದ ಬ್ರಹ್ಮಸಭೆಯನ್ನು ವರ್ಣಿಸಲು ಶೇಷನಿಗಸದಳವು. ಅಲ್ಲಿ ವಿವಿಧ ಜೀವಗಣ ಸೃಜನ ನಿಪುಣನಾದ ಬ್ರಹ್ಮನು ಮರೀಚಿ, ಭೃಗು, ಭರದ್ವಾಜ, ದಕ್ಷ, ವಸಿಷ್ಠ, ವಾಲಖಿಲ್ಯ, ಪುಲಸ್ತ್ಯ, ಪುಲಹ, ಕ್ರತು, ಕಶ್ಯಪ, ಗೌತಮಾಂಗೀರಸ ಪ್ರಮುಖಪ್ರಜೇಶರಿಂದ ಸೇವಿತನಾಗಿರುವನು. ವಿಶ್ವೇದೇವ, ವಸು, ರುದ್ರಾದಿತ್ಯರು, ಐವತ್ತುಸಾವಿರ ಮುನಿಗಳು, ಅಶ್ವಿನಿಗಳು, ಪಿತೃದೇವತೆಗಳು, ವಿಶ್ವಕರ್ಮ ಮೊದಲಾದ ದೇವಗಣವು ಸುತ್ತು ನಿಂತಿರೆ, ಶಬ್ದ-ಸ್ಪರ್ಶ-ರೂಪ-ರಸ-ಗಂಧ; ತಪ-ಶಮ-ದಮ-ಧೃತಿ-ಸ್ಮೃತಿ-ಮೇಧಾ-ಬುದ್ಧಿ-ಕ್ಷಮಾ ಕೀರ್ತಿಗಳು; ಸಂಕಲ್ಪ ವಿಕಲ್ಪಗಳು; ಪ್ರಣವ,

ತ್ರುಟಿ-ಲವ-ಮುಹೂರ್ತ ರಾತ್ರಿಂದಿವಗಳು, ಪಕ್ಷ, ಮಾಸ, ಋತು, ವತ್ಸರಗಳು, ಯುಗಗಳು, ಕಾಲಚಕ್ರ, ಋಗ್ಯಜುಸಾಮಾಥರ್ವವೇದಗಳು, ವೇದಾಂಗಗಳು, ಪುರಾಣೇತಿಹಾಸಗಳು, ಭಾಷಾವಿಶೇಷಗಳು, ಮೂರ್ತಿವಂತರಾಗಿ ಬ್ರಹ್ಮನ ಆಣತಿಯನ್ನು ಶಿರಸಾವಹಿಸಿ, ಪ್ರವರ್ತಿಸುತ್ತಿರುವರು. ಪಿತಾಮಹನು ಸರಸ್ವತೀದೇವಿಯೊಡನೆ ಪದ್ಮಾಸನಾಸೀನನಾಗಿ ಪ್ರಕಾಶಿಸುತ್ತಿರುವನು."

ಧರ್ಮಜನು ಆಗ "ನಾರದ ! ಹರಿಶ್ಚಂದ್ರನು ದೇವೇಂದ್ರಸಭೆಯಲ್ಲಿ ಅತುಲ ಮಹಿಮನಾಗಿರಲು ನಮ್ಮ ತಂದೆಯು ಯಮಸಭೆಯಲ್ಲಿ ಇರುವನೆಂದೆ. ಇದಕ್ಕೆ ಕಾರಣವೇನು? ನಮ್ಮ ತಂದೆಗೂ ಇಂದ್ರಸಭಾಪ್ರವೇಶವಾಗದಿರಲು ಬಂಧಕವೇನು?" ಎಂದು ಕೇಳಿದನು. ನಾರದನಿಂತು ಉತ್ತರಿಸಿದನು—

"ರಾಜನ್! ಸತ್ಯಸಂಧನು, ಧರ್ಮಪರಾಯಣನು, ಭಾಸ್ಕರಕುಲದೀಪಕನು, ದಿವ್ಯಕೀರ್ತಿಸಂಪನ್ನನು ಆದ ಹರಿಶ್ಚಂದ್ರನ ಮಹಿಮೆ ಕೇಳು! ಜಯಶೀಲನಾದ ಆ ಚಕ್ರವರ್ತಿಯು ಧರಣೀಮಂಡಲದ ರಾಜನ್ಯರನ್ನೆಲ್ಲ ಗೆದ್ದನು. ಭೂರಿದಕ್ಷಿಣೆಗಳನ್ನಿತ್ತು ದಿವ್ಯ ರಾಜಸೂಯ ಯಾಗವನ್ನು ಮಾಡಿದನು. ರಾಜರಲ್ಲಿ ಇಂತಹ ಲೋಕೋತ್ತರ ಧರ್ಮವಂತನು ತೇಜೋವಂತನು ಇಲ್ಲವೆಂದು ಬ್ರಾಹ್ಮಣರು ಅವನನ್ನು ಪೊಗಳಿದರು. ರಾಜಸೂಯ ಯಾಗವನ್ನು ಮಾಡಿದ ರಾಜನ್ಯರು ಇಂದ್ರಸಭೆಯನ್ನು ಸೇರಿ ಇಂದ್ರಾದಿ ವೃಂದಾರಕಗೌರವಿತರಾಗಿ, ಸಕಲಕಾಮಿತಪ್ರಾಪ್ತಿಯನ್ನೈದುವರು. ಇದು ನಿಜ. ಇದನ್ನರಿತು ನಿಮ್ಮ ತಂದೆ ಪಾಂಡುರಾಜ ನನ್ನಿಂದ ನಿಮಗೀ ಸಂದೇಶವನ್ನು ಕಳಿಸಿರುವನು, ಕೇಳು !—

'ನಾರದ ! ಭೂಲೋಕದಲ್ಲಿ ಇಂದ್ರಪ್ರಸ್ಥಕ್ಕೆ ಹೋದಾಗ ನನ್ನ ಮಗನಾದ ಧರ್ಮರಾಜನಿಗೆ ನನ್ನ ಯಮಸಭಾ ನಿವಾಸವನ್ನು ತಿಳಿಸು! ರಾಜಸೂಯ ಯಾಗವನ್ನು ಅವನು ಭೀಮಸೇನನ ಸಹಾಯದಿಂದಲೂ, ಶ್ರೀಕೃಷ್ಣಾನುಗ್ರಹದಿಂದಲೂ ಮಾಡಲು ಸಮರ್ಥನಾಗುವನು. ನನ್ನ ಮಕ್ಕಳೈವರು ತಾವಾಗಿ ನಿಶ್ಚಯಿಸಿ ನಿಂತರೆ ಚತುರ್ದಶ ಲೋಕವನ್ನೇ ಗೆಲ್ಲಲು ಸಮರ್ಥರು. ಅವರು ದೇವಾಂಶಸಂಭೂತರು ಮತ್ತು ದೇವದೇವನ ಬೆಂಬಲವಿದೆ ಅವರಿಗೆ ಎಂದು ನಾ ಬಲ್ಲೆ. ಅಂತಾದರೆ ನನಗೂ ಇಂದ್ರಸಭಾ ವಾಸ ಭಾಗ್ಯವು ಕೈಗೂಡಿಬರುವದು. ಪಿತೃಪಿತಾಮಹರೂ ಉದ್ಧೃತರಾಗುವರು.'

"ಇಂತು ಪೇಳಿರುವನು ನಿಮ್ಮ ತಂದೆ. ನೀನು ರಾಜಸೂಯವನ್ನು ಮಾಡಿ, ಪಿತೃಜನ ಸ್ವರ್ಗಪ್ರಾಪ್ತಿಯನ್ನೂ, ಧವಳಕೀರ್ತಿಯನ್ನೂ ಸಾಧಿಸು ! ದಿಗ್ವಿಜಯವನ್ನು ಮಾಡಿ ಸಾಮ್ರಾಜ್ಯರಕ್ಷಣವನ್ನು, ದಾನಗಳಿಂದ ಬ್ರಾಹ್ಮಣತರ್ಪಣವನ್ನು, ಧರ್ಮದಿಂದ ಚಾತುರ್ವರ್ಣ್ಯದ ಸುಜನರ ಕ್ಷೇಮವನ್ನು ಸಂಪಾದಿಸು! 'ಶ್ರೇಯಾಂಸಿ ಬಹು ವಿಘ್ನಾನಿ' ಧರ್ಮರಾಜ! ಯಾಗವಿಘ್ನವನ್ನು ಮಾಡಲೆಣಿಸಿ, ರಾಕ್ಷಸರು ಕಾದಿರುವರು. ಅಸುರಾರಿಯ ಆಧ್ವರ್ಯದಲ್ಲಿ ಅದನ್ನು ನೀನು ನಿರ್ವಿಘ್ನವಾಗಿ

ಮಾಡುವೆ ಚಿಂತಿಸಬೇಡ!" ಎಂದು ನಿರೂಪಿಸಿ ನಾರದನು ನಾರಾಯಣ ಗುಣಗಾನ ವನ್ನು ಮಾಡುತ್ತಾ ಹೋದನು.

ಪಿತ್ರಾಜ್ಞಾ ಪಾಲನವು ಕರ್ತವ್ಯವೆಂದರಿತು ಧರ್ಮರಾಜನು ರಾಜಸೂಯವನ್ನು ಮಾಡಲು ನಿಶ್ಚಯಿಸಿದನು. ಅನುಜರು ಸಮ್ಮತಿಯನ್ನಿತ್ತರು. ಮುಂದಾಗುವದು ಪ್ರಜಾಕ್ಷಯಕಾರಕವಾದ ಸಂಗ್ರಾಮವೆಂದಂಜದೆ, ಸರ್ವಸಂಪತ್ಪ್ರಾಪ್ತಿಕಾರಣವು ನಿಖಿಲದೋಷನಿವಾರಕವಾದ ರಾಜಸೂಯವನ್ನು ಮಾಡುವುದೇ ಶ್ರೇಯಸ್ಕರವೆಂದು ಧೌಮ್ಯಾದಿ ವಿಪ್ರವರರು ಉತ್ಸಾಹವನ್ನು ತುಂಬಿದರು. ಅವರ ಮಾತಿನಿಂದ ಪ್ರಹರ್ಷಿತನಾದ ಧರ್ಮರಾಜನು ರಾಜಸೂಯ ಯಾಗವನ್ನು ಮಾಡಲು ನಿಶ್ಚಯಿಸಿ ಅದು ನಿರ್ವಿಘ್ನವಾಗಿ ನಡೆಯಬೇಕಾದರೆ ಅನಾದಿನಿಧನನು, ಆದಿಪುರುಷನು, ಜಗದ್ಧಿತಾವತಾರನು ಆದ ಶ್ರೀಕೃಷ್ಣನ ಸಹಾಯವು ಅತ್ಯವಶ್ಯಕವೆಂದರಿತು ತನ್ನ ಸಾರಥಿಯನ್ನು ಶ್ರೀಕೃಷ್ಣನನ್ನು ಕರೆತರಲೋಸುಗ ದ್ವಾರಕೆಗೆ ಕಳಿಸಿದನು.

ಸಾರಥಿಯು ಧರ್ಮಜನ ರಥದಲ್ಲಿ ಪಯಣಿಸಿ, ದ್ವಾರಕೆಯನ್ನು ಮುಟ್ಟಿ, ಶ್ರೀಶನಿಗೆ ಧರ್ಮರಾಜನ ಬಿನ್ನಹವನ್ನು ನಿವೇದಿಸಿದನು. ಅದೇ ಸಮಯದಲ್ಲಿ ಜರಾಸಂಧನಿಂದ ಬಂಧಿತರಾದ ರಾಜರು ಕಳಿಸಿದ ದೂತನೂ ಬಂದು ಇಂತು ಬಿನ್ನವಿಸಿದನು— "ಶ್ರೀಕೃಷ್ಣ ! ನಿನ್ನ ಪತ್ನಿಯರ ಅಣ್ಣಂದಿರು, ತಂದೆಯರು ಆದ ಇಪ್ಪತ್ತೆರಡು ಸಾವಿರದ ಎಂಟುನೂರು ರಾಜರನ್ನು ಪರ್ವತಲಿಂಗಕ್ಕೆ ಬಲಿಕೊಡಲು ಜರಾಸಂಧನು ಬಂಧಿಸಿರುವನು. ಅವರು ನಿನ್ನ ಬಂಧುಗಳಾಗಿರುವುದರಿಂದಲೇ ಅವನಿಗೆ ಅವರಲ್ಲಿ ದ್ವೇಷ. ಅವರು ತಮ್ಮನ್ನು ಕಾಪಾಡೆಂದು ನಿನಗೆ ಶರಣಾಗತರಾಗಿರುವರು." ಶ್ರೀಕೃಷ್ಣನು ಸಾರಥಿ-ದೂತರ ವಚನಗಳನ್ನಾಲಿಸಿ, ಕರ್ತವ್ಯವೇನೆಂದು ಉದ್ಧವನನ್ನು ಕೇಳಿದನು. ಬುದ್ಧಿವಂತನಾದ ಉದ್ಧವನು "ಕೃಷ್ಣ! ಧರ್ಮಜನ ರಾಜಸೂಯವೂ ರಾಜಮೋಕ್ಷಣವೂ ಎರಡೂ ನೆರವೇರುವುವು; ರಾಜರನ್ನು ಗೆದ್ದು, ರಾಜಸೂಯವನ್ನು ಮಾಡಬೇಕಲ್ಲವೇ? ನೀನು, ಅರ್ಜುನ, ಭೀಮಸೇನ, ಮೂವರೂ ವಿಪ್ರವೇಷದಿಂದ ಜರಾಸಂಧನನ್ನು ಕಂಡು, ಯುದ್ಧಭಿಕ್ಷೆಯನ್ನು ಬೇಡಿರಿ. ಭೀಮಸೇನನು ಜರಾಸುತನನ್ನು ಕೊಲ್ಲುವನು. ಜರಾಸಂಧಬಂಧಿತ ರಾಜರನ್ನು ಬಿಡಿಸುವುದಲ್ಲದೆ, ಮಹಾಮಲ್ಲಭಂಗನ್ಯಾಯದಿಂದ ಜರಾಸುತಪರಾಜಯವನ್ನು ಕೇಳಿ, ಇತರ ರಾಜರೂ ವಶಂವದರಾಗುವುದರಿಂದ ರಾಜಸೂಯವೂ ಸಾಂಗವಾಗಿ ನಡೆಯುವುದು" ಎಂದು ಸಲಹೆ ಇತ್ತನು. ಶ್ರೀ ಕೃಷ್ಣನು ಅದೇ ಸರಿ ಎಂದು ನಿಶ್ಚಯಿಸಿ, ದೂತನಿಗೆ ಅಭಯವನ್ನಿತ್ತು ಕಳುಹಿಸಿದನು. ಸಾರಥಿಯೊಡನೆ ತಾನೂ ಪಯಣಿಸಿ ಇಂದ್ರಪ್ರಸ್ಥವನ್ನು ಮುಟ್ಟಿದನು. ಬಂದ ಸ್ವಾಮಿಯನ್ನು ಕರೆತಂದು ಧರ್ಮಜಾದಿಗಳು ಪೂಜಿಸಿ, ಸುಖಾಸೀನನಾದ ಕೃಷ್ಣನಿಗೆ ತಮ್ಮ ರಾಜಸೂಯನಿಶ್ಚಯವನ್ನು ತಿಳಿಸಿದರು. ಅದಕ್ಕೆ ಸಂತೋಷಿಸಿ, ಶ್ರೀಕೃಷ್ಣನು ಇಂತೆಂದನು—

"ಧರ್ಮರಾಜ! ರಾಜಸೂಯಯಾಗವನ್ನು ಋಜುಗಣಸ್ಥನಾದ ಸುಜೀವನು ಮಾಡಿದರೆ ಅವನು ಬ್ರಹ್ಮಪದವಿಯನ್ನು ಹೊಂದುವನು. ಋಜುಗಣವಲ್ಲದ ದೇವತೆಯೋ ಅಥವಾ ಚಕ್ರವರ್ತಿಯೋ ಮಾಡಿದರೆ, ಅವನು ಸ್ವಗಣದಲ್ಲಿ ಅಧಿಕ ಗೌರವಪಾತ್ರನಾಗಿ, ಮುಂದೆ ಅಧಿಕತರ ಸುಖವಿಶಿಷ್ಟವಾದ ಉತ್ತಮಲೋಕವನ್ನು ಹೊಂದುವನು. ಅಂತೆಯೇ ಹರಿಶ್ಚಂದ್ರನು ಇತರ ಸಮಯೋಗ್ಯಚಕ್ರವರ್ತಿಗಳನ್ನು ಮೀರಿಸುವ ರಾಜಸೂಯಪುಣ್ಯದಿಂದ ಇಂದ್ರಲೋಕದಲ್ಲಿ ಸುಖದಿಂದಿರುವನು. ನಿಮ್ಮ ತಂದೆಯು ದೇವತಾಂಶನಾದರೂ ರಾಜಸೂಯಫಲವಿಲ್ಲದುದರಿಂದಲೂ ಎದ್ದುನಿಂತು ಗೌರವಿಸದೆ, ತಪೋರತನಾಗಿದ್ದ ಮೂಲರೂಪ ಪರಾವಹನಿಗಿತ್ತ ಇಂದ್ರಶಾಪದಿಂದಲೂ ಪರಾವಹ-ವಾಯುವಿನ ಪ್ರವೇಶವನ್ನು ಹೊಂದಲಾರದೆ, ಯಮಲೋಕದಲ್ಲಿರುವನು. ರಾಜಸೂಯವು ಮಾಡಿದೊಡೆ ಪಾಂಡುರಾಜನು ಮೂಲರೂಪಪ್ರಾಪ್ತಿಯನ್ನು ಹೊಂದುವುದಲ್ಲದೆ, ಸ್ವರ್ಗನಿವಾಸಾರ್ಹನಾಗುವನು. ಆದುದರಿಂದ ಧರ್ಮರಾಜ! ರಾಜಸೂಯವು ಅವಶ್ಯಕರ್ತವ್ಯವೇ ಆಗಿದೆ. ನೀನೂ ಈ ಯಾಗವನ್ನು ಮಾಡಲು ಅರ್ಹನಾದ ಚಕ್ರವರ್ತಿಯಾಗಿರುವೆ" ಇಂತು ನುಡಿದು ಶ್ರೀಕಾಂತನು ತನ್ನ ಮನದಲ್ಲಿ ರಾಜಸೂಯಯಾಗದ ಮುಖ್ಯಫಲವು ಭೀಮಸೇನನಿಗೇ ಸಲ್ಲುವುದು; ಅವನೇ ಮುಂದೆ ಬ್ರಹ್ಮನಾಗುವ ಮುಖ್ಯಪ್ರಾಣಾಂಶನಲ್ಲವೇ? ಎಂದು ಚಿಂತಿಸಿ, ಧರ್ಮರಾಜ ನನ್ನು ನೋಡಿ ಮತ್ತಿಂತೆಂದನು—

"ಕೌಂತೇಯ! ರಾಜಸೂಯಯಾಗವನ್ನು ಮಾಡುವುದರಲ್ಲಿ ಒಂದು ಪ್ರತಿಬಂಧಕ ವಿದೆ, ಕೇಳು! ಜರಾಸಂಧನಿರುವಾಗ ನಾವು ರಾಜಸೂಯವನ್ನು ಮಾಡುವುದಾದರೂ ಹೇಗೆ? ಅವನನ್ನು ಜಯಿಸಿ, ಕಪ್ಪವನ್ನು ತಂದಲ್ಲವೇ ಮುಂದೆ ಯಾಗಪ್ರಾರಂಭ? ನಮ್ಮ ಅಣ್ಣನಾದ ಬಲರಾಮನೂ ಅವನನ್ನು ಕೊಲ್ಲಲು ಸಮರ್ಥನಾಗದೆ ಹೋದನು. ಆ ದುರ್ಮಾರ್ಗನು ಬ್ರಹ್ಮವರದಿಂದಲೂ ರುದ್ರವರದಿಂದಲೂ ಅಜೇಯನಾಗಿರು ವನು. ನಾನು ಕಂಸನನ್ನು ಕೊಂದ ಕಾರಣದಿಂದ ಜರಾಸಂಧನು ನನ್ನಲ್ಲಿ ದ್ವೇಷ ವನ್ನು ಮಾಡುತ್ತಿರುವನು. ಅವನ ಉಪಟಳವನ್ನು ಸಹಿಸಲಾರದೆ ನಾವು ಮಧುರೆ ಯನ್ನು ತೊರೆದು ದ್ವಾರಕೆಗೆ ಹೋಗಿ ನೆಲೆಸಿರುವೆವು.

"ಹಿಂದೆ ಪರಶುರಾಮನು ಕ್ಷತ್ರಿಯಕುಲವನ್ನೇ ಸವರಿದನು. ಆಗ ಐಲ-ಇಕ್ಷ್ವಾಕುವಂಶಜರಲ್ಲದ ಇತರ ರಾಜನ್ಯರು ಕೆಲವರು ಕಾಂದಿಶೀಕರಾಗಿಯೋ, ಬಳೆ ತೊಟ್ಟು ಸ್ತ್ರೀಮಧ್ಯದಿ ಅಡಗಿಯೋ ಉಳಿದರು. ಅವರು ಆ ಎರಡು ವಂಶದ ರಾಜ ರನ್ನು ಚಕ್ರವರ್ತಿಗಳೆಂದು ತಿಳಿದು ಗೌರವಿಸುತ್ತಿದ್ದರು. ಅವೆರಡೇ ಕ್ರಮವಾಗಿ, ನೂರೊಂದು ಶಾಖೆಗಳಾಗಿ ಬೆಳೆದಿವೆ. ಯಯಾತಿ-ಭೋಜವಂಶಗಳು ಹದಿನಾಲ್ಕು ಪ್ರಸಿದ್ಧವಾಗಿವೆ. ಈ ಎಲ್ಲ ರಾಜರನ್ನೂ ಗೆದ್ದು, ವಶದಲ್ಲಿಟ್ಟ ಜರಾಸಂಧನು ಸಾಮಾನ್ಯನಲ್ಲ.

"ಅತಿದರ್ಪನು, ಮಹಾಬಲನು ಆದ ಚೇದಿರಾಜ ಶಿಶುಪಾಲನು ಅವನಿಗೆ ಮಗನಂತೆ ಪ್ರಿಯನಾಗಿ, ಅವನ ಸೇನಾಪತಿಯಾಗಿರುವನು. ಮಾಯಾಯುದ್ಧವಿಶಾರದರಾದ ಹಂಸ-ಡಿಬಿಕರು ಕೌಶಿಕ-ಚಿತ್ರಸೇನರೆಂಬ ಹೆಸರಿನಿಂದ ಅವನಿಗೆ ಸೇನಾನಿಗಳಾಗಿ ಭುಜದ್ವಯದಂತೆ ಪುಷ್ಟೀಕರಿಸಿ ನಿಂತಿರುವರು. ಅವರು ರುದ್ರವರದಿಂದ ಆಯುಧನಿಹತರಾಗಿರುವರು. ಭಗದತ್ತನು ಪಾಂಡುರಾಜಮಿತ್ರನಾಗಿ ಮನದಲ್ಲಿ ನಿನ್ನ ಹಿತವನ್ನು ಬಯಸಿದರೂ, ಭಯದಿಂದ ಜರಾಸಂಧನಿಗೆ ವಿಧೇಯನಾಗಿರುವನು. ಪೌಂಡ್ರಕ ವಾಸುದೇವನು ನನ್ನ ನಾಮವನ್ನು ಧರಿಸಿ, 'ಅಹಂ ಬ್ರಹ್ಮ ಅಸ್ಮಿ' ಎಂದು ಜಪಿಸುತ್ತ ಜರಾಸಂಧನಿಗೆ ಅನುಕೂಲನಾಗಿರುವನು. ಪುರುಜಿತ್, ಕರೂಶ, ಕಲಭ, ಮನೋದತ್ತ, ಸಾಲ್ವ, ಯವನ ರಾಜರೂ ಅವನನ್ನು ಸೇವಿಸುತ್ತಿರುವರು. ಪಾಂಚಾಲ, ಶೂರಸೇನ, ಕುಂತಿ, ಮತ್ಸ್ಯ, ಕಳಿಂಗ, ಅಂಗದೇಶದ ರಾಜರು ಅವನಿಗೆ ಹೆದರಿ ದೇಶಗಳನ್ನು ಪರಿತ್ಯಜಿಸಿರುವರು.

"ಅಸುರದಾರುಣನು, ಬಂಧುಜನಪೀಡಾಕಾರಣನು, ಶಿಶುಸಂಹರಣನು ಆದ ಕಂಸನನ್ನು ನಾನು ಕೊಂದುದರಿಂದ ವಿಧವೆಯರಾದ ಅಸ್ತಿ, ಪ್ರಾಸ್ತಿ ಎನ್ನುವ ಜರಾಸಂಧಸುತೆಯರು, ನಿತ್ಯವೂ ಅವನ ವೈಷ್ಣವ ವೈರಾಗ್ನಿಯನ್ನು ಬಾಷ್ಪಾಜ್ಯಧಾರೆಗಳಿಂದ ಉರಿಸುತ್ತಿರುವರು. ಇಂತಹ ವೀರ ಜರಾಸಂಧನನ್ನು ಗೆಲ್ಲುವ ಬಗೆ ಹೇಗೆ? ಮುಂದಿನ ಮಾತಾಯಿತು ಯಾಗದ ಕತೆ."

ಆ ಮಾತನ್ನಾಲಿಸಿ, ಧರ್ಮರಾಜನು ನಿರುತ್ಸಾಹನಾದನು. ಶ್ರೀಕೃಷ್ಣನಂತಹವನೇ ಹೆದರಿ, ದ್ವಾರಕೆಗೆ ಓಡಿಹೋದನೆಂದಮೇಲೆ, ಜರಾಸಂಧನಿಗೆ ಪ್ರತಿವೀರರಿಲ್ಲವೆಂದು ತಿಳಿದು, ಶ್ರೀಕೃಷ್ಣನಿಗಿಂತೆಂದನು—"ಕೃಷ್ಣ! ನೀನು ಹೇಳುವುದು ನಿಜ. ಹಿಂದೆ ರಾಜರು ಬಹುಸಂಖ್ಯಾಕರಿದ್ದರೂ ಅವರಲ್ಲಿ ಒಬ್ಬನಾದರೂ ರಾಜಸೂಯವನ್ನು ಮಾಡುವ ಸಾಮ್ರಾಟನಿರಲಿಲ್ಲ. ಚಕ್ರವರ್ತಿಗಳಾದ ಹರಿಶ್ಚಂದ್ರಾದಿಗಳು ಆ ಯಾಗವನ್ನು ಮಾಡಿದರೆಂದರೆ ಆಗ ಜರಾಸಂಧನಂತಹ ಶತ್ರುಗಳು ಇರಲಿಲ್ಲವೆಂದೇ ಅಲ್ಲವೆ? ಸಾಕು, ನನಗೆ ರಾಜಸೂಯವನ್ನು ಮಾಡುವ ಕೋರಿಕೆ ಇಲ್ಲ."

ಆಗ ಭೀಮಸೇನನು ಧರ್ಮರಾಜನಿಗೆ ಧೈರ್ಯವನ್ನು ತುಂಬುತ್ತಾ ಇಂತೆಂದನು—"ಅಣ್ಣ! ರಾಜಸೂಯವೇ ಏಕೆ? ಬ್ರಹ್ಮಪದವಿಯನ್ನಾದರೂ ಮಹಾಪ್ರಯತ್ನದಿಂದ ಸಾಧಿಸಬಹುದಾಗಿದೆ. ಸ್ವಭಾವಸಾಮರ್ಥ್ಯ ಮತ್ತು ಶ್ರೀಶಾನುಗ್ರಹಗಳಿದ್ದೂ, ಮಹಾಪ್ರಯತ್ನವನ್ನು ಮಾಡದವನು ಯಾವ ಮಹಾಕಾರ್ಯವನ್ನೂ ಮಾಡಲಾರನು. ನನ್ನಲ್ಲಿ ನಿಶ್ಚಲಸಾಮರ್ಥ್ಯವಿದೆ. ಪರಮಾತ್ಮನ ಅನುಗ್ರಹವೂ ಇದೆ ಎನ್ನಲು ಬಕ-ಹಿಡಿಂಬಾದಿ ದುಷ್ಟಸಂಹಾರವೇ ಸಾಕ್ಷಿ. ಪ್ರಯತ್ನವನ್ನು ಮಾಡಿದೊಡೆ ಮಹೈಶ್ವರ್ಯಪ್ರಾಪ್ತಿಯು ಸುಲಭವೇ ಎಂದು ತಿಳಿ!"

ಆಗ ಕೃಷ್ಣನು ಭೀಮನನ್ನು ಮೆಚ್ಚಿ, ಧರ್ಮನಿಗಿಂತೆಂದನು—"ಧರ್ಮರಾಜ! ಭೀಮನಲ್ಲಿ ಸಾಮರ್ಥ್ಯವಿದೆ. ನಿನ್ನಲ್ಲಿ ದೈವಾನುಗ್ರಹವಿದೆ. ಈಗ ವಿರೋಧವೆಂದರೆ

*

ಜರಾಸುತನೊಬ್ಬನಿಂದಲೇ. ಅವನು ನಿಖಿಲಸಜ್ಜನವಿರೋಧಿಯೂ ನಿಖಿಲದುಷ್ಟಜನ ಪ್ರಮುಖನೂ ಆಗಿರುವನು. ಅವನು ಕಲಿಯ ಅನಂತರ ಗಣ್ಯನಾದ ದುಷ್ಟನು. ಅಂತಹವನನ್ನು ಕೊಲ್ಲಬೇಕಾದರೆ ನಿಖಿಲ ಸಜ್ಜನಪ್ರಮುಖನು, ನಿಖಿಲ ದುಷ್ಟಜನ ವಿರೋಧಿಯು ಆದ ಭೀಮಸೇನನೇ ಸಮರ್ಥನು. ಭೀಮಸೇನನ ಜಯವು ಸಜ್ಜನ ಜಯವೆಂದೇ ತಿಳಿ! ಅನ್ಯಥಾ ಆದೊಡೆ ಅಸಜ್ಜನಜಯವೂ ಆದೀತು! ಯಾವ ವೀರನು ಜರಾಸಂಧಾಂತಕನೋ, ಅವನೇ ಬ್ರಹ್ಮಪದವಿಯನ್ನೈದುವನು. ಅವನೇ ವೇದವನ್ನು ಧರ್ಮವನ್ನು ರಕ್ಷಿಸುವವನು. ಶರ್ವವರದಿಂದ ಮದಿಸಿ, ಶಿವನೇ ಸರ್ವೋತ್ತಮನೆಂಬ ಹಟದಿಂದ ಭ್ರಾಂತನಾಗಿರುವ ಜರಾಸಂಧನನ್ನು ಸಂಹರಿಸುವವನೇ ವಿಷ್ಣುಭಕ್ತಸತ್ತಮನೆನಿಸುವನು. ಅವನಿಂದಲೇ ತತ್ವಜ್ಞಾನವು ಪಸರಿಸುವುದು. ಆದುದರಿಂದ ನಾನು ಭೀಮಾರ್ಜುನರೊಡಗೂಡಿ, ಗಿರಿವ್ರಜವನ್ನು ಸೇರುವೆನು. ಭೀಮನು ಮಾಗಧನನ್ನು ಕೊಂದರೆ, ವೃಥಾ ಸೈನ್ಯನಾಶವು ತಪ್ಪುವುದಲ್ಲದೆ ಇತರ ರಾಜವಿಜಯವೂ ಕೈಗೂಡಿದಂತಾಗಿ, ರಾಜಸೂಯವು ಅಡೆತಡೆಗಳಿಲ್ಲದೆ ಸಾಗುವುದು. ಜಗವೆಲ್ಲವು ನಿನ್ನ ಅಧೀನವಾಗುವುದು." ಆ ಮಾತಿಗೆ ಸಮ್ಮತಿಸಿ ಭೀಮಸೇನನು ತಾನು ಮಾಗಧನನ್ನು ರಣದಲ್ಲಿ ಸಂಹರಿಸುವೆನೆಂದನು.

ಶ್ರೀಕೃಷ್ಣನು "ಧರ್ಮರಾಜ! ಜರಾಸಂಧ-ಹಂಸ-ಡಿಬಿಕರು ಉದ್ದಾಮಭುಜ ಬಲಸಂಪನ್ನರು. ಅವರಿಗೆ ಮೂರು ಲೋಕದಲ್ಲಿಯು ಸಮರಿಲ್ಲ. ಆದರೆ ಈಗ ಹಂಸ ಡಿಬಿಕರಿಲ್ಲ. ಮಧುರಾನಗರವನ್ನು ಅವರು ಮುತ್ತಿದರು. ನಮ್ಮ ಚಾರರು ಹಂಸನು ರಣನಿಹತನಾದನೆಂದು ಸಾರಿದರು. ಅದು ನಿಜವೆಂದರಿತು ಡಿಬಿಕನು ಹಂಸನಿಲ್ಲದ ಜೀವನವೇಕೆಂದು ತಪಿಸಿ, ಯಮುನಾಹ್ರದದಲ್ಲಿ ಬಿದ್ದನು. ಅಲ್ಲಿದ್ದ ಮಹಾಗ್ರಾಹಗಳವನನ್ನು ತಿಂದುಬಿಟ್ಟವು. ಇದನ್ನು ಕೇಳಿ, ಹಂಸನು ಅಲ್ಲಿಗೆ ಬಂದು ಡಿಬಿಕನ ಘೋರ ಮೃತಿಯನ್ನು ಕಂಡು, ಎದೆಯೊಡೆದು, ನಾಲಿಗೆ ಕಿತ್ತುಕೊಂಡು ಸತ್ತನು. ಇಂತು 'ಆಯುಧಮರಣವೆಮಗೆ ಆಗದಿರಲಿ' ಎಂದು ಅವರು ಶಿವನಿಂದ ಪಡೆದ ವರವು ಸತ್ಯವಾಯಿತು. ಜರಾಸಂಧನು ನಿಸ್ಸಹಾಯನಾಗಿ, ಗಿರಿವ್ರಜವನ್ನು ಸೇರಿದನು. ಸೇಡಿನಿಂದ ನನ್ನ ಹದಿನಾರು ಸಾವಿರ ನಾರಿಯರ ಬಂಧುಗಳನ್ನು ಗಿರಿವ್ರಜದಲ್ಲಿಟ್ಟಿರುವನು. ಲಿಂಗವೆಂದು ತಿಳಿದು ತಾನು ಪೂಜಿಸುವ ಗುಂಡಿಗೆ ಅವರನ್ನು ಬಲಿ ಕೊಡಲಿರುವನು. ಈಗ ಅವನ ಬಲವು ಕುಂದಿದಂತಾಗಿದೆ. ಅವನನ್ನು ಭೀಮನು ಸಂಹರಿಸುವನು. ರಾಜರೂ ಬಂಧಮುಕ್ತರಾಗಿ, ನಿನಗೆ ವಿಧೇಯರಾಗುವರು. ಕ್ರೂರವಾದ ಆಭಿಚಾರಿಕ ಯಾಗವು ನಿಂತು, ನಿನ್ನ ರಾಜಸೂಯಯಾಗದಿಂದ ಲೋಕಶ್ರೇಯಸ್ಸಾಗುವುದು" ಎಂದು ಮತ್ತೆ "ರಾಜನ್! ಜರಾಸಂಧನನ್ನು ಸಂಹರಿಸದೇ ಯಾಗವು ನಡೆಯುವುದೆಂಬುವುದು ಬರಿ ಭ್ರಮೆ. ಕಳಿಸು ಭೀಮಾರ್ಜುನರನ್ನು! ನನ್ನನ್ನು ನಂಬು! ನಿನ್ನ ಕಾರ್ಯವನ್ನು ಜಯಪ್ರದವೆನಿಸುವೆವು." ಎಂದು ಹುರಿದುಂಬಿಸಿದನು.

ಅದನ್ನೊಪ್ಪದೆ ಧರ್ಮರಾಜನಿಂತೆಂದನು—“ಕೃಷ್ಣ! ರಾಜಸೂಯವನ್ನು ಮಾಡಿ ಸಮ್ರಾಟನಾಗಬೇಕೆಂಬ ಹಂಬಲದಿಂದ, ನಿಮ್ಮನ್ನು ಆ ದುಷ್ಟ ಸಿಂಹದ ಗುಹೆಗೆಂತು ಕಳಿಸಲಿ? ಪರ್ವತಕಂದರದಲ್ಲಿ ಸಿಂಹಬದ್ಧವಾಗಿ ನೀರವವಾಗಿರುವ ಭದ್ರ ಗಜಯೂಥದಂತೆ, ಅವನಿಗೆ ಸಿಕ್ಕು ಸೆರೆಯಲ್ಲಿರುವ ರಾಜರಂತೆ ನಿಮ್ಮ ಗತಿಯಾದರೆ ನಾನು ಜೀವಿಸಲಾಪೆನೆ? ಪೃಥಿವಿ ವಿಶಾಲವಾಗಿದೆ; ಅದು ಬಹುರತ್ನಪೂರ್ಣವಾಗಿಯೂ ಇದೆ. ಸಾಕೀ ರಾಜ್ಯವೆನಗೆ. ಸಾಮ್ರಾಜ್ಯ ಬೇಡ, ಜರಾಸಂಧನಿಗೆ ಹೆದರಿ ನೀನೇ ಪಲಾಯಿತನಾದಮೇಲೆ ನಮ್ಮ ಪಾಡೇನು? ಭೀಮಾರ್ಜುನರೆಂದರೆ ನನ್ನ ಎರಡು ಕಣ್ಣುಗಳು. ನೀನು ನನ್ನ ಹೃದಯವಾಗಿರುವೆ. ಬೇಡ ನನಗೆ ರಾಜಸೂಯ! ಬ್ರಹ್ಮಪದವಿಯೂ ಬೇಡ! ಜೀವನ್ ಭದ್ರಾಣಿ ಪಶ್ಯತಿ” ಎಂದು ಸುಮ್ಮನೆ ಕೂತನು.

ಆಗ ಭೀಮಸೇನನು—“ರಾಜನ್! ಮಹಾಬಲಶಾಲಿಯಾದ ಸಿಂಹವೂ ಮಹಾ ಪ್ರಯತ್ನದಿಂದ ಹಸ್ತಿಮಸ್ತಕಮಸ್ತಿಷ್ಕವನ್ನು ಪಡೆದು ಸುಖಿಸುತ್ತದೆ. ಬಲಾಧಿಕ ನನ್ನು ಕೂಡಿ ಕಾದು ಜಯಿಸಿದವನನ್ನು ಪೌರುಷವಂತನೆಂಬುವರು; ಹೀನರನ್ನು ಹಿಂಸಿಸುವುದು ಪೌರುಷವಲ್ಲ. ನಮ್ಮ ಶ್ರೀಕೃಷ್ಣನ ಕರುಣೆ, ಅರ್ಜುನನ ಸಾಹಾಯ್ಯ ವಿರಲಿ ಸಾಕು. ನಿನ್ನಾಶೀರ್ವಾದದಿಂದ ನಾನು ಜಗಜ್ಜನದ್ರೋಹಿಯು, ಖಲವರನು ಆದ ಜರಾಸಂಧನನ್ನು ಸಂಹರಿಸಿ, ಕ್ಷೇಮವಾಗಿ ಬರುವೆನು. ನಾವು ಮೂವರು ತ್ರೇತಾಗ್ನಿಗಳಂತೆ ಉರಿದೆದ್ದು, ಜರಾಸಂಧ ಪಶುವನ್ನು ಭಸ್ಮೀಕರಿಸಿ, ಜಯಲಕ್ಷ್ಮಿ ಯನ್ನು ತರುವೆವು” ಎಂದನು. ಅರ್ಜುನನು “ಆರ್ಯ! ಧನುಶ್ಶಸ್ತ್ರಗಳಿವೆ; ಶ್ರೀ ಕೃಷ್ಣನ ಆಶ್ರಯವಿದೆ, ಅಣ್ಣ ಭೀಮನ ಬಲವಿದೆ; ಇನ್ನು ದುರ್ಲಭವಾವುದು? ಉತ್ಸಾಹ ಭರಿತನಾಗು. ಕಾರ್ತವೀರ್ಯನ ವಂಶಜನು ಕೂಡ ಉತ್ಸಾಹವಿಲ್ಲದಿರೆ ಅವ ನತನಾಗುವನು. ಸಾಮಾನ್ಯನೂ ಉತ್ಸಾಹದಿಂದ ಉನ್ನತನಾಗುವನು. ಕ್ಷತ್ರಿಯನು ಶತ್ರುಜಯದಲ್ಲಿ ಸದೋತ್ಸಾಹವಂತನಾಗಿರಬೇಕು. ಜರಾಸಂಧವಿಜಯದಿಂದ ಸರ್ವ-ಲೋಕಶ್ರೇಯವಾಗುವಾಗ ಸಂಶಯವೇಕೆ” ಎಂದನು.

ಶ್ರೀಕೃಷ್ಣನು ಭೀಮಾರ್ಜುನರ ಮಾತಿಗೆ ಪ್ರೀತನಾಗಿ, ಧರ್ಮರಾಜನನ್ನು ನೋಡಿ, ಇಂತೆಂದನು—“ಧರ್ಮಜ! ಶತ್ರುಜಯದಿಂದ ಮಾಂಧಾತನು, ಪ್ರಜಾಹಿತ ದಿಂದ ಭಗೀರಥನು, ತಪೋಬಲದಿಂದ ಕಾರ್ತವೀರ್ಯನು, ಬಲದಿಂದ ಭರತನು, ಸಂಪತ್ತಿನಿಂದ ಮರುತ್ತನು ಸಾಮ್ರಾಜ್ಯವನ್ನು ಕಟ್ಟಿದರು. ನಿನ್ನಲ್ಲಿ ಐದು ಗುಣಗಳೂ ಸಮೃದ್ಧವಾಗಿವೆ. ಭರತವಂಶದ ಕೀರ್ತಿಯನ್ನು ಹರಡಿಸುವ ಭೀಮಾರ್ಜುನರ ಮಾತನ್ನು ಕೇಳು! ಯುದ್ಧಕ್ಕೆ ಹೆದರಿ ಮನೆಯಲ್ಲಿ ಕೂತವರು ಅಮರರಾಗುವರೇ? ಸಂಶಯದೂಷಿತಮನಸ್ಕರಿಗೆ ತತ್ವನಿಶ್ಚಯದಂತೆ ರಣವಿಜಯವೂ ದುರ್ಲಭವಾಗಿದೆ. ನದೀರಯವು ವೃಕ್ಷಮೂಲವನ್ನು ಕೊರೆದು ಕೆಡಹುವಂತೆ, ನಯದಿಂದ ಜರಾಸಂಧ ನನ್ನು ಸೇರಿ, ಅವನನ್ನು ಅಂಧಂತಮಸ್ಸಿಗೆ ಸೇರಿಸುವ ನಮ್ಮನ್ನು ಹರುಷದಿಂದ ಕಳಿಸು.”

ಆಗ ಧರ್ಮರಾಜನು "ಕೃಷ್ಣ! ಇಷ್ಟು ಮಹಿಮಾಯುತನಾದ ಜರಾಸಂಧನು ಯಾರು? ಮಹಾದಾವವನ್ನು ಹೊಕ್ಕು ಹೊರಬಂದ ಶಲಭದಂತೆ, ನಿನ್ನನ್ನು ಮುತ್ತಿ ಬದುಕಿಹೋದನೆಂದರೆ ಸಾಮಾನ್ಯನಿರಲಾರನು. ಅವನ ಕಥೆಯನ್ನು ಕೇಳಲಿಚ್ಛಿಸು ವೆನು." ಎಂದನು.

## ಜರಾಸಂಧ ವಧೆ

ಶ್ರೀಕೃಷ್ಣನು ಧರ್ಮರಾಜನಿಗೆ ಜರಾಸುತನ ಕಥೆಯನ್ನು ಹೇಳಿದನು—"ಮಗಧ ದೇಶದಲ್ಲಿ ಬೃಹದ್ರಥನೆಂಬ ರಾಜನಿದ್ದನು. ರೂಪ ವೀರ್ಯ ವಿಕ್ರಮ ಬಲ ಸಂಪನ್ನ ನಾದ ಆ ರಾಜವರನು ಕಾಶಿರಾಜನ ದುಹಿತೆಯರೀರ್ವರನ್ನು ಮದುವೆಯಾದನು. ಯಮಳರಾದ ಅವರಲ್ಲಿ ಯಾರಿಗೂ ಪಕ್ಷಪಾತವನ್ನು ಮಾಡದೆ ಕರೇಣುದ್ವಯ ಯುತ ಭದ್ರಗಜದಂತೆ ಸುಖಸಾಮ್ರಾಜ್ಯವನ್ನಾಳುತ್ತಾ, ಬೃಹದ್ರಥನು ತಾರುಣ್ಯ ವನ್ನು ಕಳೆದನು. ವಂಶಕರನಾದ ಪುತ್ರನನ್ನು ಪಡೆಯದೆ ಅವನು ಬಹು ದಾನ ವ್ರತ ನಿಯಮಗಳನ್ನು ಮಾಡಿದನು. ಆದರೂ ಕುಲವರ್ಧನನನ್ನು ಕಾಣಲಾರದೆ ಕಾಕ್ಷೀವಂತನ ಮಗನಾದ ಚಂಡಕೌಶಿಕನೆಂಬ ಮುನಿರಾಜನಿಗೆ ಶರಣಾಗಲು ನಿಶ್ಚಯಿಸಿ, ತಪೋವನವನ್ನು ಸೇರಿದನು. ಚಂಡಕೌಶಿಕನನ್ನು ಪತ್ನೀಸಮೇತನಾಗಿ ಪೂಜಿಸಿ, "ಭಗವನ್! ಪುತ್ರಲಾಭವನ್ನು ಕಾಣದೆ ನಿರಾಶನಾಗಿ ರಾಜ್ಯವನ್ನು ತೊರೆದು ಬಂದಿರು ವೆನು. ಅಪುತ್ರನಾದ ನನಗೆ ರಾಜ್ಯವೇಕೆ? ನನ್ನಲ್ಲಿ ಕರುಣಿಸಿ ಪುತ್ರನನ್ನು ಪಡೆಯು ವಂತೆ ಅನುಗ್ರಹಿಸಿರಿ" ಎಂದನು. ಅವನ ಪ್ರಾರ್ಥನೆಯನ್ನು ಕೇಳಿದ ಮುನಿಯು ಅನುತಾಪದಿಂದ ಚಿಂತಿಸುತ್ತಿರಲು, ಮುನಿಯು ಕೂತಿದ್ದ ಮಾವಿನ ಮರದಿಂದ ಒಂದು ಹಣ್ಣು ಉದುರಿ, ಅವನ ತೊಡೆಯಮೇಲೆ ಬಿತ್ತು. ಸರಸವೂ ಶುಕದಂಶನರಹಿತವೂ ಆದ ಆ ಹಣ್ಣನ್ನು ಕೈಲಿ ಪಿಡಿದು ಅಭಿಮಂತ್ರಿಸಿ, ದೈವಲೀಲೆಗೆ ನಮಿಸಿ ಕೌಶಿಕನು ಅದನ್ನು ರಾಜನಿಗಿತ್ತನು. 'ರಾಜನ್! ಹೋಗು ನಿನ್ನ ನಗರಕ್ಕೆ! ಕೃತಾರ್ಥನಾದೆ. ನಿನ್ನ ಕೋರಿಕೆಯಂತೆ ನಿನಗೆ ಮಗನಾಗುವನು. ಈ ಫಲವನ್ನು ನಿನ್ನ ಕಾಂತೆಗೆ ಕೊಡು!' ಎಂದನು. ಆನಂದಭರಿತನಾದ ರಾಜನು ನಗರವನ್ನು ಸೇರಿ, ಪತ್ನೀದ್ವಯ ರನ್ನು ಕರೆದು ಅವರಿಗೆ ಆ ಹಣ್ಣನ್ನಿತ್ತು, ಭಕ್ಷಿಸಿರೆಂದನು. ಅವರು ಅದನ್ನು ಎರಡು ಹೋಳಾಗಿಸಿ, ಇಬ್ಬರೂ ತಿಂದರು. ಭವಿತವ್ಯವು ಬಲೀಯವಲ್ಲವೇ? ಗರ್ಭವತಿ ಯರಾದ ರಾಣಿಯರು ಪ್ರಸವಿಸಿದಾಗ ಒಬ್ಬೊಬ್ಬರಿಗೆ ಅರ್ಧ ಕೂಸು ಜನಿಸಿತು. ಒಂದು ಕಣ್ಣು, ಒಂದು ಕೈ, ಒಂದು ಕಾಲು, ಅರ್ಧ ಹೊಟ್ಟೆ, ಅರ್ಧ ಮುಖ, ಅರ್ಧ ನಾಸಿಕೆಯಿಂದ ಬಂದ ವಿಚಿತ್ರ ಶಿಶುವನ್ನು ಕಂಡು ದಾದಿಯರು ಗಡ-ಗಡ ನಡುಗಿದರು. ಬದುಕಿರುವ ದೇಹಶಕಲಗಳನ್ನು ಭೂತಗಳೆಂಬ ಭಯದಿಂದ ದಾದಿಯರು ಅಂತಃಪುರದ ಹೊರಗೆ ತಂದು ಚತುಷ್ಪಥದಲ್ಲಿ ಬಿಸಾಡಿಹೋದರು. ರಾತ್ರಿಯಲ್ಲಿ ಸಂಚರಿಸುತ್ತಾ ಬಂದ ರಾಕ್ಷಸಿಯು ಅವುಗಳನ್ನು ನೋಡಿ, ಹೊತ್ತುಕೊಂಡು ಹೋಗಲು ಅನುಕೂಲ ವಾಗಲೆಂದು ಜೋಡಿಸಿದಾಗ, ಆ ಹೋಳುಗಳು ಕಲೆತು ಉಜ್ಜೀವಿತ ಶಿಶುವಾಯಿತು.

ಜರೆ ಎಂಬ ಆ ರಾಕ್ಷಸಿಯು ವಿಸ್ಮಯ ವಿಶಾಲ ಲೋಚನೆಯಾಗಿ, ಕೂಸನ್ನು ಹೊರ ಲಾರದೆ ಕೆಳಗಿಟ್ಟಳು. ಶಿಶುವು ಕೆಂಬಣ್ಣದ ಕೈಯನ್ನೆತ್ತಿ ಬಾಯಲ್ಲಿಟ್ಟು ಅಳತೊಡಗಿತು. ಅದರ ರೋದನವು ಮೇಘಗರ್ಜನದಂತಿತ್ತು. ಅದನ್ನು ಕೇಳಿ, ಅಂತಃಪುರದ ಜನರು ಹೊರಗೋಡಿ ಬಂದರು. ಜರೆಯು ತಾನು ವಾಸಿಸುವ ದೇಶದ ಅರಸನ ಅಪರೂಪದ ಕೂಸನ್ನು ಕೊಲ್ಲಬಾರದೆಂದು ಚಿಂತಿಸಿ, ಮನುಜವನಿತೆಯಂತೆ ರೂಪವನ್ನು ಧರಿಸಿ, ರಾಜನಿಗಿಂತೆಂದಳು—'ರಾಜನ್ ! ಇವನು ನಿನ್ನ ಮಗನು. ವಿಪ್ರವಚನವು ವ್ಯರ್ಥವಾಗುವುದೇ ! ಧಾತ್ರೀಜನರು ತಿಳಿಯದೇ ಶಕಲಗಳನ್ನು ಬಿಸಾಡಿದ್ದರು. ದೈವವಶದಿಂದ ಶಕಲಗಳು ಜೋಡಾಗಿ ನಿನ್ನ ವಂಶವು ನಿಲ್ಲಲು ನಾನು ನಿಮಿತ್ತಮಾತ್ರವೆಂದು ತಿಳಿ ! ನಾನು ಜರೆಯೆಂಬ ರಾಕ್ಷಸಿಯು. ಗೃಹದೇವಿ ಎನಿಸಿ, ಮನುಜಗೃಹಗಳಲ್ಲಿ ಪೂಜಿಸಲ್ಪಡು ! ಎಂದು ಬ್ರಹ್ಮನು ನನ್ನನ್ನು ಸೃಜಿಸಿರುವನು. ನಿನ್ನ ಮನೆದೇವತೆಯಾಗಿ ಕುಡ್ಯದಲ್ಲಿ ಚಿತ್ರರೂಪಿಣಿಯಾಗಿ ನಿಂತು ಪೂಜಾಸ್ವೀಕಾರ ಮಾಡಿದುದಕ್ಕೆ, ಇಂದು ನಿನಗೆ ಪ್ರತ್ಯುಪಕಾರ ಮಾಡಿದಂತಾಯಿತು.' ಇಂತು ಹೇಳಿ ಶಿಶುವನ್ನಿತ್ತ ರಾಕ್ಷಸಿಗೆ ವಂದಿಸಿ, ರಾಜನು, ಅವನಿಗೆ ಜರಾಸಂಧನೆಂದು ಹೆಸರಿರಿಸಿ ಸಾಕಿದನು.

"ಒಂದು ದಿನ ಚಂಡಕೌಶಿಕನು ಮಗಧರಾಜಧಾನಿಯಾದ ಗಿರಿವ್ರಜಕ್ಕೆ ಬಂದನು. ಅವನನ್ನು ಸತ್ಕರಿಸಿ, ರಾಜನು ತನ್ನ ಸುತನನ್ನು ಅವನ ಪಾದದಲ್ಲೆರಗಿಸಿದನು. ದಿವ್ಯಜ್ಞಾನಿಯಾದ ಕೌಶಿಕನು 'ರಾಜನ್ ! ಇದೆಲ್ಲವೂ ನನಗೆ ತಿಳಿದಿತ್ತು ; ಈ ನಿನ್ನ ಮಗನು ಬಹು ಬಲ ವೀರ್ಯ ಧೈರ್ಯ ಸಂಪನ್ನನಾಗುವನು. ಇವನ ಶತ್ರುಗಳು ನಷ್ಟರಾಗುವರು. ದೇವ ರಾಕ್ಷಸರಿಗೆ ಅಜೇಯನಾಗಿ, ಸರ್ವರಾಜರನ್ನು ಗೆದ್ದು, ಅಸಂಖ್ಯ ಸೈನ್ಯನಾಯಕನೆನಿಸಿ ಮೆರೆವನು. ಸರ್ವಲೋಕೇಶ್ವರನು, ತ್ರಿಪುರಾಂತಕನು ಆದ ಮಹಾದೇವನನ್ನು ಪೂಜಿಸಿ, ಅವನ ಮಹಿಮೆಯನ್ನು ಮೆರೆಸುವನು. ಇವನಿಗೆ ಪಟ್ಟಗಟ್ಟಿ ನೀನು ವಾನಪ್ರಸ್ಥನಾಗು!' ಎಂದು ಆದೇಶಿಸಿ, ಮುನಿವರನು ಹೊರಟು ಹೋದನು. ಬೃಹದ್ರಥನು ಅವನ ಆಜ್ಞೆಯಂತೆ ತನಯನ ಪಟ್ಟಾಭಿಷೇಕವನ್ನು ನಡೆಸಿ, ಸತೀದ್ವಯಯುತನಾಗಿ ವನದಲ್ಲಿ ತಪಸ್ಸನ್ನು ಮಾಡಿ ಸ್ವಯೋಗ್ಯಗತಿಯನ್ನು ಪೊಂದಿದನು.

"ಜರಾಸಂಧನು ಮಗಧರಾಜನಾಗಿ, ಚಂಡಕೌಶಿಕವಚನದಂತೆ ರಾಜರನ್ನೆಲ್ಲ ಗೆದ್ದು ಪ್ರಖ್ಯಾತನಾದನು.

"ಜರಾಸಂಧನು ಕಂಸನನ್ನೂ, ಹಂಸಡಿಬಿಕರನ್ನೂ ಸಂಹರಿಸಿದ ಕೃಷ್ಣನನ್ನು ಕೊಲ್ಲಲೆಣಿಸಿ ರುದ್ರದೇವನನ್ನು ತಪಸ್ಸಿನಿಂದ ಸಂತೋಷಪಡಿಸಿ, ಆ ಸ್ವಾಮಿಯಿಂದ ಅಮೋಘವಾದ ಒಂದು ಗದೆಯನ್ನು ಪಡೆದನು. ಆ ಗದೆಯು ಒಂದುಸಲ ಮಾತ್ರ ಪ್ರಯೋಗಿಸಲು ಬರುತ್ತಿತ್ತು. ಶತ್ರುಸಂಹಾರವನ್ನು ಮಾಡಿದ ಗದೆಯು ಮಹಾದೇವನನ್ನೇ ಸೇರುವುದಾಗಿತ್ತು. ಇದನ್ನರಿತು ಜರಾಸುತನು ಕೃಷ್ಣಾದಿ ಯಾದವರನ್ನು

ನಾಶವಾಡಲೆಣಿಸಿ, ನಾರದನನ್ನು ವುಧುರೆಯ ಅಂತರವೆಷ್ಟೆಂದು ಕೇಳಿದನು. ಒಂದು ನೂರು ಯೋಜನವೆಂದನು ನಾರದನು. ನೂರೆಂದು ತಿಳಿದು ಜರಾಸುತನು ಪ್ರಯೋಗಿಸಿದ ಗದೆ, ಅವನನ್ನು ಸಂಧಿಸಿದ ಜರೆ ಎಂಬ ಪಾಪಿರಾಕ್ಷಸಿಯನ್ನು ಕೊಂದು ಮಹಾದೇವನನ್ನು ಸೇರಿತು. ಇಂತು ಗದೆಯನ್ನೂ, ತಾಯಿಯನ್ನೂ ಕಳೆದುಕೊಂಡ ಜರಾಸಂಧನು, ಹಂಸ ಡಿಬಿಕ ಕಾಲಯವನರೂ ನಿಹತರಾದುದರಿಂದ ಕೋರೆಕಿತ್ತೊಗೆದ ಹಾವಿನಂತೆ ಹಣ್ಣಾಗಿರುವನು. ಅವನ ಕಾಲವೂ ಸಮೀಪಿಸಿದೆ. ಭೀಮನು ನಿಸ್ಸಂಶಯವಾಗಿ ಆ ಪಾಪಿಯನ್ನು ಜಯಿಸಿ ಸಂಹರಿಸುವನು" ಎಂದು ನುಡಿದ ಶ್ರೀಕೃಷ್ಣನ ಮಾತನ್ನು ಕೇಳಿ, ಭೀಮಸೇನನು ಇಂತೆಂದನು—

"ಧರ್ಮಜ ! ಸಂಶಯಿಸಬೇಡ ! ರಮಾ ವಿರಿಂಚ ರುದ್ರ ಶಕ್ರಾದಿ ಸರ್ವದೇವ ವಂದಿತನಾದ ಶ್ರೀಕೃಷ್ಣನಿರಲು ನಮಗೇತರ ಭಯವು ? ಸುರಾಸುರನರರು ಬಲವಂತರೆನಿಸುವುದು ಇವನ ಬಲದಿಂದ. ಶ್ರೀಕೃಷ್ಣನೆಲ್ಲಿ ? ಬಾರ್ಹದ್ರಥನೆಲ್ಲಿ ? ನಾಗಲೋಕವೆಲ್ಲಿ? ನರಿ ಎಲ್ಲಿ? ನನ್ನ ಬಲವೂ ಜರಾಸಂಧ ಸಂಹಾರ ಸಮರ್ಥವಾಗಿದೆ. ಅರ್ಜುನನು ಕೃಷ್ಣನೊಡನಿರುವಾಗ ಅವನನ್ನು ಯಾರೂ ಜಯಿಸಲಾರರು. ಕಳಿಸು ನಮ್ಮನ್ನು ಆಶೀರ್ವದಿಸಿ ! ಕೃಷ್ಣಭಕ್ತನಾದ ನನಗೆ ಜರಾಸಂಧಸಂಹಾರರೂಪ ಮಹತ್ಪುಣ್ಯವನ್ನು ಶ್ರೀಶನಿಗೆ ಸಾಕ್ಷಾತ್ತಾಗಿ ಸಮರ್ಪಿಸುವ ಮಹಾಭಾಗ್ಯವನ್ನು ಒದಗಿಸಿಕೊಡು" ಶ್ರೀಕೃಷ್ಣನೂ ಭೀಮಾರ್ಜುನರ ಯೋಗಕ್ಷೇಮಗಳನ್ನು ತಾನು ವಹಿಸುವೆನೆಂದಮೇಲೆ ಧರ್ಮರಾಜನು "ಅಚ್ಯುತ ! ನಮಗೆ ನೀನೇ ಗತಿಯು, ನೀನೇ ತಂದೆ, ನೀನೇ ನಮ್ಮ ಸರ್ವಸ್ವವು ! ನಿನ್ನ ಮಾತಿಗೆ ಎದುರುಂಟೇ ? ನಿನ್ನ ನಂಬಿದವರಿಗೆ ಕೇಡುಂಟೇ ? ಆಗಲಿ ! ಹೋಗಿ ಬನ್ನಿ ! ಬಲವಂತನಾದ ಭೀಮನಲ್ಲಿ ನನ್ನ ಪ್ರಾಣಗಳನ್ನಿಟ್ಟಿರುವೆನು. ನಿನ್ನ ನಯ, ಭೀಮನ ಬಲ, ಅರ್ಜುನನ ವೀರ್ಯ ಇವು ಮೂರೂ ಒಂದಾದಾಗ ಕಾರ್ಯಸಿದ್ಧಿಯು ನಿಶ್ಚಯವು. ಜಯವಾಗಲಿ !" ಎಂದು ಹರಸಿ ವೀರತ್ರಯರನ್ನು ಕಳಿಸಿಕೊಟ್ಟನು.

ಅವರು ವಿಪ್ರವೇಷಧರರಾದರು. ಭೀಮಕೃಷ್ಣರು ಸರ್ವಲೋಕೇಶ್ವರರಲ್ಲವೇ ? ಧರ್ಮಕಾಮಾರ್ಥಗಳಿಗೆ ಪ್ರಭುಗಳಾದ ಮುಖ್ಯಪ್ರಾಣ ನಾರಾಯಣರು ಅಧರ್ಮಪ್ರಭುವಾದ ವಿಪ್ರಚಿತ್ತಿದೈತ್ಯನನ್ನು ಸಂಹರಿಸಿ, ಲೋಕಕ್ಷೇಮವನ್ನು ಮಾಡಲೋಸುಗ ತೆರಳಿ ನಿಂತು, ಜನರ ನಯನ ಚಿತ್ತಗಳಿಗಾನಂದಕರರಾದರು. ಅರ್ಜುನನು ಕೃಷ್ಣಸಹಾಯನಾಗಿ ನಿಂತಾಗ, ಪ್ರಜರು ಜರಾಸಂಧನು ಹತನಾದನೆಂದೇ ತಿಳಿದರು. ಅವರು ಮೂವರು ಪ್ರಯಾಣಮಾಡಿ ಸರಯೂ, ಗಂಡಕಿಗಳನ್ನು ದಾಟಿ, ಪೂರ್ವ ಕೋಸಲವನ್ನತಿಕ್ರಮಿಸಿ, ಗಂಗಾತೀರದ ಪ್ರಾಕ್ತೀರವನ್ನನುಸರಿಸಿ ಮಗಧ ದೇಶದ ಗಿರಿವ್ರಜದುರ್ಗವನ್ನು ಮುಟ್ಟಿದರು.

ಗಿರಿವ್ರಜವನ್ನು ವೈಹಾರ, ವಿಪುಲ, ವರಾಹ, ವೃಷ, ಋಷಿಗಳೆಂಬ ಗಿರಿಗಳು ಸುತ್ತುಮುತ್ತಿ ಅಭೇದ್ಯ ದುರ್ಗಗಳಂತೆ ಸಂರಕ್ಷಿಸುತ್ತಿದ್ದವು. ಪಿಪ್ಪಲ ಲೋಧ್ರ

ವನರಾಜಿಯು ಅದನ್ನು ಸುಮಗಂಧ ಮನೋಹರವಾಗಿಸಿತು. ಗೌತಮನು ಔಶೀನರಿಯಲ್ಲಿ ಪಡೆದ ಅಂಗ, ವಂಗ, ಮಗಧಾದಿ ರಾಜರು, ಬಲಶಾಲಿಗಳಾಗಿ ಆ ಪರಿಸರ ದೇಶಗಳನ್ನು ಪಾಲಿಸುತ್ತಿದ್ದರು. ಹೃಷ್ಟಪುಷ್ಟ ಜನನಿಬಿಡವು, ಚಾತುರ್ವರ್ಣ್ಯ ಪ್ರಜಾಸಂಕುಲ ದೇವ ಮಹೋತ್ಸವವು ಆದ ಗಿರಿವ್ರಜದ ದ್ವಾರವನ್ನು ಸೇರಿ, ಅಲ್ಲಿ ಮೂರು ಭೇರಿಗಳನ್ನು ಕಂಡು ಬೆರಗಾಗಿ ಕೇಳಿದ ಅರ್ಜುನನಿಗೆ ಕೃಷ್ಣನಿಂತೆಂದನು—

"ಅರ್ಜುನ ! ಈ ಐದು ಬೆಟ್ಟಗಳನ್ನು ಲಿಂಗಗಳೆಂದು ತಿಳಿದು, ಜರಾಸಂಧನು ನಿತ್ಯವೂ ಇವನ್ನು ವಸ್ತ್ರ ಮಾಲ್ಯ ಗಂಧಗಳಿಂದ ಪೂಜಿಸುತ್ತಿರುವನು. ಈ ಭೇರಿತ್ರಯವು ಮಾಷನೆಂಬ ಅಸುರನ ಕಂಠನಾಳದಿಂದ ನಿರ್ಮಿತವಾಗಿವೆ. ಅದರ ಧ್ವನಿಯು ವ್ಯಾಪಿಸುವ ದೇಶದ ಜನರೆಲ್ಲ ಬಲದರ್ಪಿತರಾಗುತ್ತಿರುವರು."

ಕೃಷ್ಣಭೀಮಾರ್ಜುನರು ಭೇರಿಗಳನ್ನು ಒಡೆದು, ಬೆಟ್ಟಗಳನ್ನು ಕೆಡಹಿದರು. ಆ ದ್ವಾರದಿಂದ ನಗರ ಪ್ರವೇಶವನ್ನು ಮಾಡಿ, ಆಪಣಗಳಿಂದ ಮಾಲ್ಯಗಂಧಗಳನ್ನು ಬಲಾತ್ಕಾರವಾಗಿ ಹರಿಸಿ, ಧರಿಸಿದರು. ನಿರಾಯುಧರಾಗಿ ಮಾಗಧನ ಅಂತಪುರವನ್ನು ಸಮೀಪಿಸಿದರು. ಜರಾಸಂಧಸಂಹಾರೇಚ್ಛುಗಳಾಗಿ ವೀರರು ಮೂವರು ಬರುವಾಗ ಜರಾಸಂಧನ ಪುರೋಹಿತರು ದುರ್ನಿಮಿತ್ತಗಳನ್ನು ಕಂಡು, ತಮ್ಮ ರಾಜನಿಗೆ ತಿಳಿಸಿದರು. ಅವನೂ ಶಾಂತಿಕರ್ಮಗಳನ್ನು ಮಾಡಲು ದೀಕ್ಷಿತನಾದನು.

ಅದೇ ಸಮಯದಲ್ಲಿ ಸ್ನಾತಕರಂತೆ ಬಂದ ಕೃಷ್ಣಭೀಮಾರ್ಜುನರು ಅವನನ್ನು ಕಂಡರು. ಚಂದನಗಂಧಲಿಪ್ತವಾದ ಅವರ ಬಾಹುದಂಡಗಳನ್ನು, ಕಿಣಾಂಕಿತ ಭುಜ ಕರತಲಗಳನ್ನು, ವಿಶಾಲವಕ್ಷಗಳನ್ನು ನೋಡಿದ ಜರಾಸುತನು, ಅವರು ತೀರ್ಥಯಾತ್ರೆಗಾಗಿ ವಿಪ್ರರಂತೆ ವೇಷ ಪೊತ್ತ ಕ್ಷತ್ರಿಯ ವೀರರೆಂದು ತಿಳಿದನು. ಪ್ರತ್ಯುತ್ಥಾನ ಮಾಡಿ, ಆಸನವನ್ನಿತ್ತು, ಅರ್ಘ್ಯಪಾದ್ಯಾದಿಗಳನ್ನೀಯಲು ತೊಡಗಿದಾಗ ನಿರಾಕರಿಸಿದ ವೀರರನ್ನು ನೋಡಿ 'ಏನಿದು' ಎಂದನು. 'ಅರ್ಧರಾತ್ರಿಯಾಗುವವರೆಗೂ ಮೌನ ನಿಯಮವಿರುವ ಇವರೀರ್ವರು ನಿನ್ನೊಡನೆ ಮಾತನಾಡರು' ಎಂದನು ಕೃಷ್ಣ. ಅಂತೆಯೇ ಜರಾಸಂಧನು ಅವರನ್ನು ಅರ್ಧರಾತ್ರಿ ಆದಮೇಲೆ ಬಂದು ಕಂಡನು ಮತ್ತು ಅವರ ವೇಷವನ್ನು, ಅವರು ಮಾಡಿದ ಅವಿನಯವನ್ನು ಸಹಿಸದೆ, ಇಂತು ಅಧಿಕ್ಷೇಪಿಸಿದನು—

"ನೀವು ಸ್ನಾತಕರಾದರೆ, ಮಾಲ್ಯಗಂಧಗಳನ್ನು ಧರಿಸಬಹುದೆ ? ವಿಪ್ರರಾದರೆ ಬಲಾತ್ಕರಿಸಿ ಅಪಹರಿಸಬಹುದೆ ? ನೀವಾರು ? ಕ್ಷತ್ರಿಯರೆಂದು ತೋರುತ್ತದೆ. ಸತ್ಯವನ್ನು ಬಚ್ಚಿಡದೆ ಹೇಳಿ. ಅದ್ವಾರದಲ್ಲಿ ಬಂದುದೇಕೆ ? ಲಿಂಗಗಳನ್ನೇಕೆ ಕೆಡಹಿದಿರಿ ? ನಾನಿತ್ತ ಸತ್ಕಾರವನ್ನು ಸ್ವೀಕರಿಸದಿರಲು ಕಾರಣವೇನು ? ನನಗೆ ಹೆದರದೆ ಇಂತಹ ಸಾಹಸವನ್ನು ಮಾಡಿದ ನೀವು ಕ್ಷಂತವ್ಯರಲ್ಲ"

ಆ ಮಾತಿಗಂಜದೆ ಸ್ನಿಗ್ಧಗಂಭೀರವಚನನಾಗಿ ಕೃಷ್ಣನಿಂತೆಂದನು—

"ಶತ್ರುವಿಗೆ ಸಕಲವೂ ವಿರೋಧವಾಗಿಯೇ ತೋರುವುದು. ನೀನು ನಮ್ಮ ಶತ್ರುವಾಗಿರುವೆ. ನಿನಗೆ ಪ್ರತೀಕಾರ ಮಾಡಲೆಣಿಸಿ, ನಾವು ಭೇರಿಗಳನ್ನು ಒಡೆದೆವು; ಬೆಟ್ಟಗಳ ಕೋಡನ್ನು ಉರುಳಿಸಿದೆವು; ಅದ್ವಾರದಿಂದ ಬಂದೆವು; ನೀನಿತ್ತ ಸತ್ಕಾರ ದಿಂದ ನಮಗೆ ಪ್ರಯೋಜನವಿಲ್ಲ. ನಾವು ನೀನೆಣಿಸಿದಂತೆ ಬ್ರಾಹ್ಮಣರಲ್ಲ; ನಾನು ನಿನ್ನ ಆಗರ್ಭವೈರಿಯಾದ ಕೃಷ್ಣನು; ಇವರು ಭೀಮಾರ್ಜುನರು; ಆಯುಧರಹಿತರಾಗಿ ಕ್ಷತ್ರಿಯರು ಶತ್ರುಮಧ್ಯದಲ್ಲಿ ಇರಬಾರದೆಂದಿದೆ. ಆಯುಧವನ್ನು ಪಿಡಿದು, ನಿನ್ನಲ್ಲಿ ಬರ ಲಿಷ್ಟವಿಲ್ಲದೆ ನಿರಾಯುಧರಾಗಿ, ವಿಪ್ರವೇಷದಿಂದ ಬಂದೆವು. ನಮ್ಮ ಭೀಮಸೇನನು ಆಯುಧಸಹಾಯ ಪಡೆಯದೆ, ನಿನ್ನನ್ನು ಸಂಹರಿಸಬಲ್ಲನೆಂದು ತಿಳಿ!

"ಮಹಾರಾಜನಾದ ಧರ್ಮರಾಜನು ರಾಜಸೂಯಯಾಗ ಮಾಡಲಿರುವನು. ಅದಕ್ಕೆ ರಾಜವಿಜಯವೂ, ಧನಬಾಹುಲ್ಯವೂ ಅವಶ್ಯಕವಾಗಿದೆ. ಮಹಾಮಲ್ಲನೆನಿಸಿದ ನಿನ್ನನ್ನು ಜಯಿಸುವುದರಿಂದ ನಮ್ಮ ಕಾರ್ಯವೂ ಸುಕರವಾಗುವುದಿದೆ. 'ಜಿತೋಸ್ಮಿ' ಎಂದು ಶರಣಾಗತನಾಗು! ಧರ್ಮಜನಿಗೆ ಕಪ್ಪ-ಕಾಣಿಕೆಗಳನ್ನು ಕೊಡು!

"ಇನ್ನೊಂದು ವಿಷಯವಿದೆ ಕೇಳು! ನೀನು ಅನ್ಯಾಯದಿಂದ ಜಯಿಸಿ, ಸೆರೆ ಯಿಟ್ಟು ಮಹಾದೇವನಿಗೆ ಅಪ್ರೀತಿಕರವೂ, ಅವೇದವಿಹಿತವೂ ಆದ ನರಮೇಧವನ್ನು ಮಾಡಿ ಕೊಲ್ಲಲಿರುವ ರಾಜನ್ಯರು ನಮ್ಮ ಬಂಧುಜನರೂ ಭಕ್ತರೂ ಆಗಿರುವರು. ಅವರನ್ನು ಧರ್ಮಜ್ಞನಾದ ನೀನು ಕೊಲ್ಲಲೆಣಿಸುವುದು ಉಚಿತವಲ್ಲ. ಒಂದುವೇಳೆ ಅಧರ್ಮಕ್ಕೊಳಗಾಗಿ ನೀನು ಅವರನ್ನು ಕೊಂದರೆ, ನಿನ್ನ ಪಾಪವು ಧರ್ಮರಕ್ಷಕರಾದ ನಮಗೆ ಸೋಕೀತು! ಲೋಕಹಿತಂಕರನಾದ ಶಂಕರನು ಮನುಜಬಲಿಯನ್ನು ಸ್ವೀಕರಿ ಸನು. ಶರಣಾಗತರಾಗಿ ಬೇಡಿದ ರಾಜರನ್ನು ರಾಕ್ಷಸನಂತಿರುವ ನಿನ್ನಿಂದ ತಪ್ಪಿಸಿ ಕಾಪಾಡುವುದು ಕ್ಷತ್ರಿಯರ ಪವಿತ್ರ ಕರ್ತವ್ಯವಾಗಿದೆ. ಆ ಕರ್ತವ್ಯಕರಣದಲ್ಲಿ ನಾವು ಸಮರ್ಥರೂ ಆಗಿರುವೆವು. ನಿನ್ನ ಸಮಾನರಾದ ವೀರರಿಲ್ಲವೆಂದು ದುರಹಂಕಾರಿ ಯಾಗಿ ಕೆಡುತ್ತಿರುವೆ. ನಿನ್ನ ಕುಕರ್ಮಗಳ ಫಲವನ್ನುಣ್ಣುವ ಕಾಲವು ಸಮೀಪಿಸಿದೆ. ಮಾಡಲೆಣಿಸಿದ ನರಮೇಧವನ್ನು ನಿಲ್ಲಿಸು! ನೀನು ಬಂಧಿಸಿಟ್ಟಿರುವ ರಾಜರನ್ನು ಬಿಡು! ಅಥವಾ ರಣಕಣದಲ್ಲಿ ಮರಣವನ್ನಪ್ಪು!"

ಜರಾಸಂಧನು ಕಿಡಿಕಿಡಿಯಾದನು. ಕೃಷ್ಣನನ್ನು ನೋಡಿ "ಎಲವೋ! ಯದುಕುಲಪಾಂಸನ! ಶಿವಯಾಗಕ್ಕಾಗಿ ಕಟ್ಟಿಟ್ಟ ಪಶುಗಳನ್ನು ನಾನು ಬಿಡುವುದಿಲ್ಲ. ನನಗೆ ಸೋತು ಓಡಿಹೋದ ನಿನ್ನ ದಾಸನಾದ ಧರ್ಮರಾಜನಿಗೆ ವಿಧೇಯನಾಗಿ, ಕಪ್ಪ ವನ್ನೂ ಕೊಡುವದಿಲ್ಲ. ನಿಮ್ಮ ಮೂವರಿಂದ ಕಲೆತು ನಾನೊಬ್ಬನೇ ಹೋರಾಡಲೋ! ಅಥವಾ ಒಬ್ಬೊಬ್ಬನಿಂದಲೋ? ಇಲ್ಲದಿದ್ದರೆ ಸೈನ್ಯಸಹಿತರಾಗಿ ಬರುವಿರೋ?" ಎಂದು ಕೇಳಿದನು. ಶ್ರೀಕೃಷ್ಣನಾಗ ನಸುನಕ್ಕು, "ನಮ್ಮಲ್ಲಿ ಯಾರೊಬ್ಬರಿಂದಲಾ ದರೂ ಕಾದಾಡಿ ಗೆದ್ದರೆ, ನಮ್ಮ ಯಾದವ-ಪಾಂಡವರಾಜ್ಯಗಳು ನಿನಗೆ ಸೇರುವುವು. ನಿರಾಯುಧನಾಗಿಯಾದರೂ, ಅಥವಾ ನಿನಗೆ ಇಷ್ಟವಾದ ಆಯುಧ ಪಿಡಿದಾಗಲೀ

ಯುದ್ಧಸನ್ನದ್ಧನಾಗು ! ಮೂವರಲ್ಲಿ ಯಾರಿಂದ ಕಾದುವೆ ಹೇಳು ?" ಎಂದು ಕೇಳಿದನು.

'ಶ್ರೀಕೃಷ್ಣನನ್ನು ಜಯಿಸಲಾರೆ'ನೆಂದು ಜರಾಸಂಧನಿಗೆ ಗೊತ್ತಿತ್ತು. ಅವನು ಅರ್ಜುನನನ್ನು ಬಾಲಕನೆಂದು ತಿಳಿದಿದ್ದನು. ಆದುದರಿಂದ ಭೀಮನನ್ನೇ ಎದುರಿಸುವುದ ರಿಂದ ಭೀಮನ ಕೀರ್ತಿಯು ಹೆಚ್ಚಲಿ! ಎಂದು ಕೃಷ್ಣನು 'ಯಾರನ್ನಾದರೂ ಒಬ್ಬ ನನ್ನು ಕೋರು' ಎಂದು ಧೈರ್ಯವಾಗಿ ಹೇಳಿದನು. ಅದನ್ನು ಕೇಳಿ ಅರ್ಜುನನು ತನ್ನನ್ನು ಜರಾಸುತನು ಕೋರುವನೆಂದು ಹೆದರಿ ಹಿಂಜರಿದನು.

ಆಗ ಜರಾಸಂಧನು "ಅರ್ಜುನನು ಬಲಹೀನನು ! ಅವನನ್ನು ಗೆದ್ದರೂ ಕೀರ್ತಿ ಕರವಲ್ಲ ! ಐವತ್ತೈದುವರ್ಷದವನಾದರೂ ಬಲಹೀನನಾದ ಅರ್ಜುನನು ನನ್ನ ಮುಂದೆ ನಿಲ್ಲಲಾರನು. ಅವನಿಂದ ನನಗೆ ಯುದ್ಧ ಬೇಡ. ನೀನು ಗೋಪಾಲಕನು. ನನಗೆ ಎಷ್ಟೋ ಸಲ ಸೋತಿರುವ ನಿನ್ನಿಂದ ಮತ್ತೆ ರಣವೇಕೆ ? ಬಲ ಪರಾಕ್ರಮ ಗಳಿಂದ ಸಮನಾದ ಭೀಮನಿಂದ ಗದೆ ಹಿಡಿದು ಕಾದುವೆನು" ಎಂದು ನುಡಿದು 'ಕೃಷ್ಣನು ಮಹಾಘೋರಬಲನು. ದೈತ್ಯಾರಿಯಿಂದ ಯುದ್ಧವು ಪ್ರಾಣಾ ಪಾಯಕರವು. ಅರ್ಜುನನಿಂದ ಕಾದು ಗೆದ್ದರೂ, ಮುಂದಾದರೂ ಭೀಮನು ಕೊಲ್ಲದೇ ಬಿಡನು' ಎಂದು ಚಿಂತಿಸಿದನು. ತನ್ನ ಮಗನಾದ ಸಹದೇವನಿಗೆ ರಾಜ್ಯಪಟ್ಟವನ್ನು ಕಟ್ಟಿದನು. ಬಲದಿಂದ ಅಧಿಕನಾದರೂ ಗದಾಯುದ್ಧದಲ್ಲಿ ಭೀಮನನ್ನು ಗೆಲ್ಲುವೆ ನೆಂದನು. ಗದಾಪಾಣಿಯಾಗಿ ಗಿರಿವ್ರಜದ ಬಹಿಃಪ್ರದೇಶದಲ್ಲಿ ಶತ್ರುಗಳನ್ನು ಸಂಧಿಸಿ ದನು. ಅವನ ಪುರೋಹಿತನು ನಿರ್ವೃತಿ ನಿರ್ವೇದನವೆಂಬ ಔಷಧಗಳನ್ನು ತಂದು, ಜರಾಸಂಧನಿಗೆ ಸಹಾಯಕನಾಗಿ ನಿಂತಿದ್ದನು.

ಬ್ರಾಹ್ಮಣರು ಸ್ವಸ್ತಿವಾಚನವನ್ನು ನಡೆಸಿದರು. ಶ್ರೀಕೃಷ್ಣನೂ ಭೀಮನಿಗೆ ಆಶೀರ್ವದಿಸಿದನು. ಪುರಜನರು ಕಿಕ್ಕಿರಿದು ನಿಂತಿದ್ದರು. ತೀರವನ್ನು ಮೀರಿ ಉಕ್ಕೇರಿ ಬರುವ ನೀರಧಿಗಳಂತೆ ಭೀಮ-ಜರಾಸಂಧರು ಪರಸ್ಪರ ವಧಾಕಾಂಕ್ಷಿಗಳಾಗಿ, ರಣರಂಗ ಕ್ಕಿಳಿದರು. ಮೊದಲು ಜರಾಸಂಧನು ವೇದಗಳ ಅಪ್ರಾಮಾಣ್ಯ, ಶಿವಪಾರಮ್ಯಗಳನ್ನು ಅಧಿಕರಿಸಿ, ಭೀಮನಿಂದ ವಾದಮಾಡಿದನು. ವಿಷ್ಣುಸರ್ವೋತ್ತಮತ್ವ, ವಾಯು ಜೀವೋತ್ತಮತ್ವ, ಜಗತ್ಸತ್ಯತ್ವ, ತಾರತಮ್ಯ, ಜೀವತ್ರೈವಿಧ್ಯಗಳನ್ನು ಪ್ರತ್ಯಕ್ಷ ಆಗಮ ಯುಕ್ತಿಗಳಿಂದ ಸ್ಥಾಪಿಸಿ, ಭೀಮಸೇನನು ಅವನನ್ನು ನಿರುತ್ತರನನ್ನಾಗಿ ಮಾಡಿದನು. ಅವರೀರ್ವರು ಗದಾಯುದ್ಧಕ್ಕಿಳಿದು ಭಯಂಕರವಾಗಿ ಹೊಡೆದಾಡಿದರು.

ವಜ್ರಸದೃಶಗಾತ್ರರಾದ ವೀರರಿಬ್ಬರ ಭುಜವಕ್ಷಗಳಲ್ಲಿ ಬೀಳುವ ಗದೆಗಳು ಭಂಡೆಯ ಮೇಲೆ ಬಿದ್ದ ಮಣ್ಣಿನ ಪಿಂಡಗಳಂತೆ ಚೂರಾದವು. ಅವರ ಸಿಂಹಗರ್ಜನೆ ಗಳಿಂದ ದಿಕ್ಕುಗಳು ಪ್ರತಿಧ್ವನಿಸಿದವು. ಪ್ರಜರು ಸಂಭ್ರಮಕಾತರರಾಗಿ ನೋಡುತ್ತಾ ನಿಶ್ಚೇಷ್ಟರಾಗಿದ್ದರು.

ಭೀಮ-ಜರಾಸುತರು ಬಾಹುಯುದ್ಧಕ್ಕಿಳಿದು, ಕೇಶವ ಕೈಟಭರಂತೆ ಹೋರಾಡಿದರು. ಅವರ ಮುಷ್ಟಿಘಾತಗಳು ಸಿಡಿಲುಬಡಿದಂತೆ ಎರಗಿದವು. ಅವರ ಪದಘಟ್ಟನಗಳಿಂದ ಧರೆಯು ಥರಥರ ನಡುಗಿತು. ಗಿರಿಗಳುರಳಾಡಿದವು ; ಜಲಧಿಗಳುಕ್ಕೇರಿದವು; ಬ್ರಹ್ಮರುದ್ರಾದಿ ದೇವತೆಗಳು ಅಂಬರದಿ ವಿಮಾನಗಳಲ್ಲಿ ಕೂತು ವೀಕ್ಷಿಸುತ್ತಿರುವಾಗ, ಜಗವೇ ಸುರಾಸುರ ಪಕ್ಷಪಾತದಿಂದ ಇಬ್ಭಾಗವಾಯಿತು. ಸುರರೆಲ್ಲರು ಭೀಮಸೇನನ ವಿಜಯವನ್ನು, ದೈತ್ಯರು ಜರಾಸುತನ ಜಯವನ್ನು ಕೋರಿ, ಮಾತಾಡಿದರು. ಆಗ ಭೀಮಸೇನ ಜರಾಸುತರು ಬಾಹಾಬಾಹವಿ, ಕಚಾಕಚಿ, ಮುಷ್ಟಾಮುಷ್ಟಿಯಾಗಿ ಘೋರ ಸಮರದಲ್ಲಿ ಹದಿನೈದು ದಿನಗಳನ್ನು ಕಳೆದರು. ಮುಂದೆ ಶ್ರೀಕೃಷ್ಣನ ಅನುಮತಿಯನ್ನು ಪಡೆದು ಭೀಮನು ಶತ್ರುಹನನದಲ್ಲಿ ಮನಸ್ಸನ್ನು ಮಾಡಿ, ಹದಿನಾರನೆಯ ದಿನದ ರಣಕ್ಕಿಳಿದನು.

ಅಂದು ಕಾರ್ತಿಕ ಬಹುಳ ಪ್ರತಿಪತ್ತಿಥಿಯು ದಿನವಾಗಿತ್ತು. ಶ್ರೀಕೃಷ್ಣನು— "ಭೀಮಸೇನ ! ಶತ್ರುವು ಶ್ರಾಂತನಾಗಿರುವನು. ಇದೇ ಸಮಯವು. ಇಂದು ಅವನನ್ನು ಸಂಹರಿಸು ! ಬಿಡಬೇಡ ! ಮಾತರಿಶ್ವನ ಬಲವೀರ್ಯಯುತನಾದ ನಿನಗೆ ಜಯವು ಆಗುವುದು !" ಎಂದು ಆಶೀರ್ವದಿಸಿದನು. ಭೀಮನು ಹರ್ಷೋತ್ಸಾಹಸಮನ್ವಿತನಾಗಿ ಅರ್ಜುನನನ್ನು ಆಲಿಂಗಿಸಿ, ಕೃಷ್ಣನಿಗೆ ವಂದಿಸಿ, ಜರಾಸಂಧನನ್ನು ಸಂಧಿಸಿದನು. ಭಯಂಕರ ಸಮರವು ಬಹಳ ಹೊತ್ತು ನಡೆಯಿತು. ಭ್ರಮಣ ಪರಿಭ್ರಮಣಗಳಿಂದ, ಮುಷ್ಟಿಕರ್ಷಣಗಳಿಂದ, ವಕ್ಷೋಘಾತಗಳಿಂದ, ಕಟಿಗ್ರಹಣಗಳಿಂದ, ಕಾದು ಕಾದು, ಮಾಗಧ-ಪಾಂಡವವರನು ಶ್ರಾಂತರಾದರು. ಭೀಮಸೇನನು ವಿಜೃಂಭಿಸಿ, ಜರಾಸುತನನ್ನು ಕೆಡಹಿ, ಬೆನ್ನಿಗೆ ಮೊಳಕಾಲನ್ನೂರಿ ಬಾಗಿಸಿ, ಎಲಬುಗಳನ್ನು ಮುರಿದನು. ಪ್ರಚಂಡ ವಾತಘಾತಗಳಿಂದ ತೃಣಖಂಡವು ಚದರುವಂತೆ ಜರಾಸುತನ ದೇಹದ ನಾಸಿಕಾ-ಕರ್ಣ-ಮುಖಗಳಿಂದ ರಕ್ತಧಾರೆಗಳು ಹೊರಬಂದವು. ಅಸಾಧಾರಣ ಬಲನಾದ ಭೀಮಸೇನನು ಮರ್ಮಗಳನ್ನು ಭೇದಿಸದೆ, ಕೇವಲ ಸ್ವರೂಪಬಲದಿಂದಲೇ ಅವನ ಕಾಲನ್ನು ಪಿಡಿದೆತ್ತಿ, ತಲೆಯವರೆಗೂ ಎರಡು ಹೋಳಾಗಿ ಸೀಳಿ, ಬಿಸುಟಿದನು. ಜರಾಸುತನ ದೇಹವನ್ನು ಸೀಳಿದ ಶಬ್ದವು, ಭೀಮಸೇನನ ಸಿಂಹಗರ್ಜನೆಯಿಂದ ಕೂಡಿ ರೋದಸೀಕುಹರವನ್ನು ತುಂಬಿ ಪ್ರತಿಧ್ವನಿಸಿತು. ಬ್ರಹ್ಮಾಂಡವೇ ಸ್ಫೋಟವಾದಂತಿದ್ದ ಆ ಭಯಂಕರ ಘೋಷವನ್ನು ಕೇಳಿ, ನಗರ ಬಹಿರ್ದ್ವಾರದಲ್ಲಿ ಭೀಮನು ತಂದಿಟ್ಟ ಜರಾಸುತನ ದೇಹವನ್ನು ಕಂಡು, ಪುರಜನರು ಭ್ರಾಂತರಾದರು.

ಇಂತು ಶ್ರೀಕೃಷ್ಣ ಶತ್ರುವು, ರಾಜನ್ಯಲೋಕದ್ರೋಹಿಯು, ಪಾಪಿಜನಸಮಾಶ್ರಯಣನು, ಮಹಾಪಾಪಿರನು ಆದ ಜರಾಸಂಧನನ್ನು ಸಂಹರಿಸಿ, ಭೀಮನು 'ಶ್ರೀಕೃಷ್ಣ ಇದು ನಿನ್ನ ಸೇವೆ' ಎಂದು ಶ್ರೀಹರಿಯ ಚರಣಕ್ಕೆರಗಿ ಲೋಕಭೀಕರ ದೈತ್ಯವಧ-ಪುಣ್ಯವನ್ನು ಸಮರ್ಪಿಸಿದನು. ಶ್ರೀಕೃಷ್ಣನು ಆನಂದದಿಂದ ಭೀಮನನ್ನಪ್ಪಿ,

'ರಾಜಸೂಯವು ಸಾಂಗವಾಯಿತೆಂದು ತಿಳಿ'ಎಂದು ಅರ್ಜುನನನ್ನು ಸಮಾಶ್ವಸಿಸಿದನು. ಮಗಧದೇಶದ ಜನರಿಗೆ ದುಷ್ಟರಾಜನ ಉಪಟಳವನ್ನು ತಪ್ಪಿಸಿ, ಪುರಜನರಿಗೆ ಅಭಯ ವನ್ನಿತ್ತು, ಶ್ರೀಕೃಷ್ಣನು ಕಾರಾಗಾರದಲ್ಲಿ ಬಿದ್ದಿದ್ದ ರಾಜರನ್ನು ಬಿಡಿಸಿದನು. ಅವರಿಗೆ ವಸ್ತ್ರಾಲಂಕಾರಾದಿಗಳನ್ನಿತ್ತು ಸಹದೇವನು ಅವರನ್ನು ಪೂಜಿಸಿದನು. ತಾನು ಶ್ರೀಕೃಷ್ಣ ನಿಗೆ ಶರಣಾಗಿ, ತನ್ನ ತಂಗಿಯನ್ನು ಭೀಮನಿಗೆ ಸಮರ್ಪಿಸಿದನು. ಭೀಮಸೇನನು ಅವಳನ್ನು ಸಹದೇವನ ಪತ್ನಿಯೆಂದು ಸ್ವೀಕರಿಸಿದನು. ಜರಾಸುತ ಸಹದೇವನು ಅನೇಕ ರತ್ನಗಳಿಂದ ಶ್ರೀಕೃಷ್ಣನನ್ನು ಪೂಜಿಸಿ, ದಿವ್ಯರಥವನ್ನು ಸಮರ್ಪಿಸಿದನು. ಅದು ಶ್ರೀನಾರಾಯಣನ ರಥವೇ ಆಗಿತ್ತು. ನಾರಾಯಣನಿಂದ ತ್ರಿಪುರಸಂಹಾರಿ ಶಿವನು ಪೊಂದಿದ್ದ ಆ ರಥವು ಕ್ರಮವಾಗಿ ಇಂದ್ರನನ್ನು, ವಸುರಾಜನನ್ನು ಅದೇ ವಂಶದ ಜರಾಸುತನನ್ನು ಸೇರಿ, ಈಗ ಮತ್ತೆ ಶ್ರೀನಾರಾಯಣನನ್ನೇ ಸೇರಿತು. ಶ್ರೀಕೃಷ್ಣನು ಗರುಡನನ್ನು ಸ್ಮರಿಸಿದನು. ಬಂದ ಗರುಡನನ್ನು ರಥಧ್ವಜದಲ್ಲಿ ನೆಲೆಸಿರುವಂತೆ ಆಜ್ಞಾಪಿಸಿದನು.

ಸಹದೇವನು ತಂದೆಗೆ ಉತ್ತರಕ್ರಿಯೆಗಳನ್ನು ಮಾಡಿ, ಶ್ರೀಕೃಷ್ಣನಿಗೆ ವಂದಿಸಿ, ಅವನಿಂದ ಮಗಧ ರಾಜನಾಗಿ ಪ್ರತಿಷ್ಠಿತನಾದನು. ಜರಾಸುತನು ಸ್ವಯೋಗ್ಯವಾದ ಅಂಥಂತಮವನ್ನು ಕ್ರಮವಾಗಿ ಹೊಂದಿದನು. ಅವನ ಸುತನಿಂದ ಪೂಜಿತರಾಗಿ ಕೃಷ್ಣ ಭೀಮಾರ್ಜುನರು ರಥಾರೂಢರಾಗಿ ಇಂದ್ರಪ್ರಸ್ಥನಗರವನ್ನು ಸೇರಿದರು. ಧರ್ಮಜನಿಗೆ ವಿಜಯವಾರ್ತೆಯನ್ನು ತಿಳಿಸಲು ಶ್ರೀಕೃಷ್ಣನು ಶಂಖವನ್ನೂದಿದನು. ಜರಾಸಂಧಾಂತಕ ನಾದ ಭೀಮಸೇನನ ಮಹಾಸಾಹಸದಿಂದ ಲೋಕಕ್ಷೇಮವನ್ನು ಸಾಧಿಸಿ, ಬಂದ ವೀರರನ್ನು ಧರ್ಮರಾಜಾದಿ ಸಮಸ್ತ ಪುರಜನರು ಎದುರ್ಗೊಂಡು ಪೂಜಿಸಿದರು. ಧರ್ಮಸಾಮ್ರಾಜ್ಯವು ನಿರಂತರ ಪೂಜ್ಯವಾಯಿತೆಂದು ಸಂತಸದಿಂದ ಲೋಕವೇ ಆನಂದಿತವಾಯಿತು. ಆಯುಧನಿಹತನಾಗದ ಜರಾಸುತನನ್ನು ಸಂಹರಿಸಿ, ವಿಜಯಶ್ರೀ ಸಮೇತನಾಗಿ ಬಂದ ಭೀಮಸೇನನನ್ನು ಪುರಜನರು ಅನುರಾಗಸಾರ್ದ್ರನಯನ ಮೌಕ್ತಿಕನೀರಾಜನಗಳಿಂದ ಸತ್ಕರಿಸಿ, ವಿಜಯನನ್ನಭಿನಂದಿಸಿ, ವಂದಿಸಿದರು.

## ದಿಗ್ವಿಜಯ

ಭೀಮಸೇನನು ಜರಾಸಂಧಸುತೆಯನ್ನು ಸಹದೇವನಿಗಿತ್ತು ಮದುವೆಮಾಡಿದನು. ನಕುಲನು ಮದ್ರಾರಾಜಸುತೆಯಾದ ಕರೇಣುಮತಿಯನ್ನು ಮದುವೆಯಾದನು. ಅಶ್ವಿನೀದೇವದ್ವಯರಾದ ನಕುಲಸಹದೇವರಿಗೆ ಅಶ್ವಿಪತ್ನಿ ಉಷೆಯೇ ರೂಪದ್ವಯು ದಿಂದ ಮನುಜಲೋಕದಲ್ಲಿ ಅವತರಿಸಿ, ಭಾರ್ಯೆಯಾದಳು. ಮುಂದೆ ನಕುಲ ಸಹದೇವರು ದ್ರೌಪದಿಯನ್ನು ಅತ್ತಿಗೆಯಂತೆ ನೋಡಿ ನಡೆದುಕೊಂಡರು. ಅಂತೆಯೇ ಧರ್ಮಾರ್ಜುನರು ಕೂಡ ತಮ್ಮ ನಿಯತ ಸತಿಯರಾದ ಪೌರವೀ, ಸುಭದ್ರಾ, ಚಿತ್ರಾಂಗದೆಯರಿಂದಲೇ ಕೂಡಿ ಇರುತ್ತಿದ್ದರು.

ಶ್ರೀಕೃಷ್ಣನು ಕಾರಾಗಾರವಿಮುಕ್ತರಾದ ರಾಜರಿಗೆ ಧರ್ಮರಾಜನ ರಾಜಸೂಯ ಯಾಗದಲ್ಲಿ ಸಹಾಯರಾಗಿ ನಿಲ್ಲಬೇಕೆಂದು ಆಜ್ಞಾಪಿಸಿ, ಅವರವರ ದೇಶಕ್ಕೆ ಅವರನ್ನು ಕಳಿಸಿಕೊಟ್ಟನು. ಸರ್ವಶ್ರೇಯಸ್ಸಂಪಾದಕನಾದ ಕೃಷ್ಣನಿಗೆ ಧರ್ಮಜಾದಿಗಳು ವಂದಿಸಿ ವಿವಿಧ ರತ್ನ ವಸ್ತ್ರ ಮಾಲ್ಯಗಳಿಂದ ಪೂಜಿಸಿದರು. ಶ್ರೀಶನು ಅವರನ್ನು ಬೀಳ್ಕೊಂಡು ದ್ವಾರಕೆಗೆ ಪಯಣಿಸಿದನು.

ಒಂದು ದಿನ ಭಗವಾನ್ ಬಾದರಾಯಣನು ಪಾಂಡವರನ್ನು ಕಾಣಬಂದನು. ರಾಜಸೂಯವನ್ನಲ್ಲದೆ ಅಶ್ವಮೇಧವನ್ನೂ ಮಾಡುವಂತೆ ಆಜ್ಞಾಪಿಸಿ, ಅದಕ್ಕಾಗಿ ಸರ್ವ ರಾಜರನ್ನೂ ಗೆದ್ದುಬರಲು ಅಪ್ಪಣೆಯಿತ್ತನು. ಜರಾಸಂಧನ ಸಂಹಾರಕನೇ ರಾಜ-ಸೂಯಯಾಗದ ಮುಖ್ಯಫಲವಾದ ಬ್ರಹ್ಮಪದವಿಯನ್ನು ಪಡೆಯುವನು. ಅಂತಹ ಮಹಾಫಲವು ಭೀಮನಿಗೇ ಸಲ್ಲುವುದು. ಬ್ರಹ್ಮಗುರುವಾದ ವ್ಯಾಸನು ಚಿಂತಿಸಿದನು ; ಶ್ರೀವಿಷ್ಣುವು ಪಾಪಪುಣ್ಯಕರ್ಮಫಲರಹಿತನು. ಅವನಿಗೆ ಸ್ವರ್ಗನರಕಾದಿ ಭೋಗವಿಲ್ಲ. ದೇವತೆಗಳಿಗೆ ಜೀವರು ಮಾಡಿದ ಪಾಪದ ಫಲವಿಲ್ಲ. ಅದು ಪ್ರೇರಕರಾದ ದೈತ್ಯರಿಗೆ ಸೇರುವುದು. ಪ್ರೇರಕರಾಗಿದ್ದರೂ ದೇವತೆಗಳಿಗೆ ಸೇರುವುದಿಲ್ಲ. ದೈತ್ಯರಿಗೆ ಪುಣ್ಯಫಲ ವಿಲ್ಲ. ಅಲ್ಪಫಲ ಬಂದರೂ ಅದು ಬಹುಕಾಲೀನವಲ್ಲ. ಮನುಜರ ಪಾಪಪುಣ್ಯಗಳಲ್ಲಿ ದೈತ್ಯದೇವತೆಗಳ ಭಾಗವು ಹೋಗಿ, ಉಳಿದ ಸ್ವಲ್ಪಫಲವೇ ಮನುಜರಿಗಾಗುವುದು.

ವ್ಯಾಸನಿಂದ ಆಜ್ಞಪ್ತರಾದ ಪಾಂಡವರು ದಿಗ್ವಿಜಯಕ್ಕೆಂದು ಸಸೈನ್ಯರಾಗಿ ಹೊರಟರು. ಕೀಚಕಾದಿಗಳು, ಕರ್ಣ, ಶಿಶುಪಾಲ ಮೊದಲಾದ ಬಲಿಷ್ಠರಾಜರಿದ್ದ ಪೂರ್ವದಿಕ್ಕಿಗೆ ಭೀಮನನ್ನು, ದಿವ್ಯ ರಥ ತುರಗ ಗಾಂಡೀವ ತೂಣೀರ ಯುಕ್ತನಾದ ಅರ್ಜುನನನ್ನು ಉತ್ತರದಿಕ್ಕಿಗೂ, ನಕುಲನನ್ನು ಪಶ್ಚಿಮದಿಕ್ಕಿಗೂ, ಸಹದೇವ ನನ್ನು ದಕ್ಷಿಣದಿಕ್ಕಿಗೂ ಕಳಿಸಿ, ಶ್ರೀವ್ಯಾಸನು ಅವರಿಗೆ ದಿಗ್ವಿಜಯವಾಗುವಂತೆ ಆಶೀರ್ವದಿಸಿದನು.

ಭೀಮಸೇನನು ಧರ್ಮರಾಜನ ಅಪ್ಪಣೆಯನ್ನೂ, ವ್ಯಾಸಾಶೀರ್ವಚನವನ್ನೂ, ಪಡೆದು ಮಹಾಸೈನ್ಯದಿಂದ ಪೂರ್ವದಿಕ್ಕಿಗೆ ಹೊರಟನು. ಶತ್ರುಶೋಕವರ್ಧನನಾದ ಪಾಂಡವವೀರನು ಮೊದಲು ಪಾಂಚಾಲರಾಜರನ್ನು ಸಾಮದಿಂದ ವಶಪಡಿಸಿಕೊಂಡನು. ಗಂಡಕ ವಿದೇಹ ರಾಜರನ್ನು ಗೆದ್ದು, ದಶಾರ್ಣರಾಜನಾದ ಸುಧರ್ಮನನ್ನು ಮಲ್ಲ ಯುದ್ಧದಲ್ಲಿ ಸೋಲಿಸಿದನು. ಅವನನ್ನು ಸೇನಾಪತಿಯನ್ನಾಗಿ ಮಾಡಿಕೊಂಡು, ಭೀಮನು ಅಶ್ವಮೇಧಕರ್ತನಾದ ರೋಚಮಾನನನ್ನೆದುರಿಸಿ, ಅವನಿಂದ ಕಪ್ಪವನ್ನು ಸ್ವೀಕರಿಸಿದನು. ಪುಲಿಂದದೇಶದ ಸುಕುಮಾರ ಸುಮಿತ್ರರೂ ಭೀಮನಿಗೆ ವಶರಾದರು. ಚೇದಿದೇಶದ ಶಿಶುಪಾಲನು ಭೀಮನನ್ನೆದುರ್ಗೊಂಡು ಪೂಜಿಸಿದನು. ಅವನ ಮಾತೆ, ಕುಂತೀದೇವಿಯ ತಂಗಿಯಲ್ಲವೆ ? ಅವಳ ಮಾತಿನಿಂದಲೂ ಭೀಮಬಲನಾದ ಭೀಮನ ಭಯದಿಂದಲೂ ಶಿಶುಪಾಲನು ಒಂದು ತಿಂಗಳು ಭೀಮನನ್ನು ತನ್ನ ಮನೆಯಲ್ಲಿರಿಸಿ ಕೊಂಡು ಸತ್ಕರಿಸಿ, ವಿಪುಲ ರತ್ನ ಕನಕಾಂಬರಗಳನ್ನು ಯಾಗಕ್ಕಾಗಿ ಸಮರ್ಪಿಸಿದನು.

ಭೀಮನಲ್ಲಿಂದ ಸ್ಕಂಧಾವಾರದೊಡನೆ ಪಯಣಿಸಿ, ಉತ್ತರಕೋಸಲದ ಗೋಪಾಲಕಕ್ಷನನ್ನು, ಮಲ್ಲಾಧಿಪನನ್ನು, ವತ್ಸರಾಜನನ್ನು, ವಿದೇಹದ ಜನಕರಾಜನನ್ನು, ಕಿರಾತಾಧಿಪನಾದ ಏಕಲವ್ಯನನ್ನು, ಅವನಿಗೆ ಸಹಾಯಕನಾದ ಕಾಶಿರಾಜ ಪೌಂಡ್ರಕನನ್ನು, ಮತ್ಸ್ಯದೇಶದ ಕೀಚಕವಿರಾಟರನ್ನು, ಮಣಿಮತ್ಪ್ರಮುಖಪಾರ್ವತೀಯರನ್ನೂ, ಸುಹ್ಮ ಪ್ರಸುಹ್ಮರನ್ನೂ ಗೆದ್ದು, ಅವರಿಂದ ವಿಪುಲ ದ್ರವ್ಯರತ್ನಪರ್ವತಗಳನ್ನು ಪಡೆದನು. ಮಗಧೇಶನಾದ ಸಹದೇವನನ್ನು ಸಾಂತ್ವನದಿಂದಲೇ ವಶೀಕರಿಸಿಕೊಂಡನು. ಮುಂದೆ ಅಂಗದೇಶವನ್ನು ಸೇರಿ ಕರ್ಣನಿಂದ ಹೋರಾಡಿ, ಅವಲೀಲೆಯಿಂದ ಅವನನ್ನು ಗೆದ್ದು, ಕಪ್ಪವನ್ನು ಸ್ವೀಕರಿಸಿದನು. ಕೋಟಿಗಟ್ಟಲೆ ದ್ರವ್ಯವನ್ನು, ರತ್ನರಾಶಿಗಳನ್ನು ಇಂದ್ರಪ್ರಸ್ಥಕ್ಕೆ ಕಳಿಸಿಕೊಟ್ಟು, ಭೀಮನು ಅಂಬುಧಿಯನ್ನು ದಾಟಿ ಬಾಣಪುರವನ್ನು ಸೇರಿದನು.

ಬಾಣಪುರದಲ್ಲಿ ಗಜರೂಪಿಯಾದ ರುದ್ರನನ್ನು ಯುದ್ಧದಲ್ಲಿ ಜಯಿಸಿ ಕ್ರೀಡಾರ್ಥವಾಗಿ ಹೋರಾಡಿ ಪ್ರೀತನಾದ ಶಂಕರನ ವಚನದಂತೆ ಬಲಿಸುತನಿತ್ತ ರತ್ನಧನ ಪರ್ವತಗಳನ್ನು ಪಡೆದನು. ಹಿಮವಚ್ಛಿಖರದಲ್ಲಿ, ಭೀಮಸೇನನು ಮಹಾಪರಾಕ್ರಮಿ ಎಂದು ಜಗದ ಜನರಿಗೆ ತೋರಗಲು ಹೋರಾಡಿದ ಇಂದ್ರ, ಶೇಷ, ಗರುಡರನ್ನೂ ಸೋಲಿಸಿದನು. ಅವರು ಸಿಂಹ ವ್ಯಾಘ್ರ ಗಜರೂಪದಿಂದ ಭೀಮನಿಗೆ ಸೋತು, ಪ್ರೀತರಾಗಿ, ಸ್ವರೂಪದಿಂದ ಭೀಮನನ್ನಪ್ಪಿ, ರತ್ನರಾಜಿಯನ್ನಿತ್ತು ಕಳುಹಿದರು. ಇಂತು ಧನ ಕನಕ ರತ್ನ ಪರ್ವತಗಳನ್ನು ತಂದು ಭೀಮನು ಶ್ರೀಕೃಷ್ಣ-ವ್ಯಾಸರಿಗೆ ಸಮರ್ಪಿಸಿದನು. ಭೀಮನ ದಿಗ್ವಿಜಯ ವಾರ್ತೆಯನ್ನು ಕೇಳಿ, ವ್ಯಾಸನು 'ಭೀಮಸೇನ! ಬ್ರಹ್ಮದೇವನಂತೆ ವಿಜಯಶಾಲಿಯಾಗಿರುವೆ, ಬ್ರಹ್ಮನೇ ಆಗುವೆ. ಯಜ್ಞಸಾಧನಗಳು ಸಂಪೂರ್ಣವಾಯಿತೆ'ಂದು ಅವನನ್ನಪ್ಪಿ ಹರಸಿದನು. ಧರ್ಮರಾಜನೂ ಪ್ರೀತನಾಗಿ ತಮ್ಮನನ್ನಪ್ಪಿ ಆಶೀರ್ವದಿಸಿದನು.

ಅರ್ಜುನನು ಉತ್ತರದಿಕ್ಕಿಗೆ ದಿಗ್ವಿಜಯಕ್ಕಾಗಿ ಹೊರಟು, ದಿವ್ಯರಥವನ್ನೇರಿ, ಗಾಂಡೀವಪಾಣಿಯಾಗಿ ಮಹಾಸೈನ್ಯದಿಂದ ಭೂಮಿಯು ಕಂಪಿಸುತ್ತಿರಲು ಪ್ರಯಾಣ ಮಾಡಿದನು. ಅವನ ಕಪಿಧ್ವಜವನ್ನು ನೋಡಿ ಹೆದರಿದ ರಾಜರು ಅನೇಕರು ಅವನಿಗೆ ಮಣಿದು ಕಾಣಿಕೆಗಳನ್ನರ್ಪಿಸಿದರು. ಪಾರ್ವತೀಯರಾದ ನಿಷಾದರಾಜರು ಅವನಿಂದ ಕಾದಾಡಿ, ಸೋತು, ಕಪ್ಪಗಳನ್ನಿತ್ತರು. ಕುಲಿಂದರು, ಕಾಲಕೂಟರು, ಶಾಕಲ ದ್ವೀಪದ ರಾಜರು ವಿಧೇಯರಾದರು. ಅರ್ಜುನನು ಪ್ರಾಗ್ಜ್ಯೋತಿಷವನ್ನು ಮುತ್ತಿ, ಭಗದತ್ತನಿಂದ ಕಾದಾಡಿದನು. ಚೀನಕಿರಾತರಿಂದ ಕೂಡಿ ಬಂದ ಭಗದತ್ತನು ಅರ್ಜುನನಿಂದ ಎಂಟು ದಿನಗಳವರೆಗೂ ಹೋರಾಡಿ, ಶ್ರಾಂತನಾದನು; ಶ್ರಾಂತನಾಗದ ಪಾರ್ಥನನ್ನು ಕಂಡು ಮೆಚ್ಚಿದನು. "ಪಾರ್ಥ! ನಾನು ಇಂದ್ರಸಖನಾಗಿರುವೆನು. ಇಂದ್ರನು ನನ್ನ ಗುರುವೂ ಆಗಿರುವನು. ಗುರುಪುತ್ರನಾದ ನೀನೂ ಗುರುವಿನಂತೆ ಗೌರವನೀಯನೇ ಸರಿ! ಅಜೇಯನಾದ ನಿನಗೆ ಬೇಕಾದುದೇನು, ಹೇಳು!" ಎಂದನು. ಅರ್ಜುನನು

'ರಾಜನ್ ! ಪಿತೃಸಮನಾದ ನಿನ್ನಿಂದ ಯುದ್ಧವಾರಿಗೆ ಬೇಕು? ಆದರೆ ಧರ್ಮರಾಜನ ರಾಜಸೂಯವನ್ನು ಪೂರೈಸಲು ಬೇಕಾಗುವ ಧನವನ್ನು ಕಾಣಿಕೆಯಾಗಿಕೊಡು!' ಎಂದನು. ಆ ಮಾತಿಗೆ ಭಗದತ್ತನು 'ಅರ್ಜುನ! ವರಾಹರೂಪಿಯಾದ ಶ್ರೀಹರಿಯು, ನಮ್ಮ ತಂದೆಯು, ತನ್ನ ಮಗನು ಆದ ನರಕನಿಗಿತ್ತವೈಷ್ಣವಾಸ್ತ್ರವು ನನ್ನಲ್ಲಿದೆ. ಅದರ ಪ್ರಭಾವದಿಂದ ನಾನು ನಿನಗೆ ಅಜೇಯನಾಗಿರುವೆನು. ಆದರೂ ಕಲಹಕ್ಕಲ್ಲದೆ ಯಜ್ಞಕ್ಕಾಗಿ ಬಂದಿರುವ ನಿನಗೆ ಸ್ನೇಹದಿಂದ ಕಪ್ಪವನ್ನು ಕೊಡುವೆನು' ಎಂದು, ಬಹುಕೋಟಿ ಧನರಾಶಿಯನ್ನಿತ್ತು ಕಳಿಸಿದನು.

ಅರ್ಜುನನಲ್ಲಿಂದ ಹೊರಟು, ಅಂತರ್ಗಿರಿ ಬಹಿರ್ಗಿರಿ ಪರ್ವತರಾಜಗಳ ದೊರೆಗಳನ್ನು ಉವಾಕಸೇನಾಬಿಂದುರನ್ನು ಗೆದ್ದನು. ಪಂಚಗಣರನ್ನು ಸೋಲಿಸಿದನು. ಮೋದಾಪುರ ಕಾಶ್ಮೀರದೇಶದ ವೀರರಾಜರನ್ನು ವಶಪಡಿಸಿಕೊಂಡು, ಚಿತ್ರಾಯುಧ ಸಿಂಹಪುರವನ್ನು, ತ್ರಿಗರ್ತರ ಮಾಂಡಲದೇಶವನ್ನು ಜಯಿಸಿದನು. ಬಾಹ್ಲೀಕರನ್ನು, ದರರನ್ನು, ಕಾಂಬೋಜ ಮೊದಲಾದ ಪ್ರಾಗುತ್ತರದೇಶಗಳ ರಾಜರನ್ನು ರಣರಂಗದಲ್ಲಿ ಗೆದ್ದು, ಕಪ್ಪಗಳನ್ನು ಪಡೆದನು. ಋಷಿಕರೆಂಬ ಪಶ್ಚಿಮದೇಶಾಧಿಪತಿಗಳಿಂದ 8000 ಜವನಾಶ್ವಗಳನ್ನು ಕಪ್ಪವಾಗಿ ಸ್ವೀಕರಿಸಿದನು. ಶ್ವೇತಪರ್ವತವನ್ನು ದಾಟಿ, ದ್ರುಮಪುತ್ರನೆಂಬ ವೀರರಾಜನನ್ನು ಗೆದ್ದನು. ಕಿಂಪುರುಷಖಂಡದ ಮಾನಸಸರಸ್ಸನ್ನು ಸೇರಿ, ಅಲ್ಲಿಯ ಗಂಧರ್ವರನ್ನೂ ಗೆದ್ದನು. ಹರಿವರ್ಷದಲ್ಲಿ ಗಂಧರ್ವರು ಅರ್ಜುನನನ್ನು ಸತ್ಕರಿಸಿ ದುಷ್ಪ್ರವೇಶವಾದ ದೇಶವಿದೆಂದು ವಿಜ್ಞಾಪಿಸಿದರು. ಅವರಿತ್ತ ಧನ, ರತ್ನ, ದಿವ್ಯವಸ್ತ್ರ, ಅಜಿನ, ಕಂಬಳ ಸಮೂಹವನ್ನು ಅರ್ಜುನನು ಸ್ವೀಕರಿಸಿ, ಮುಂದೆ ಕಿಂಪುರುಷಾದ್ಯಷ್ಟವರ್ಷಗಳನ್ನು, ಸಪ್ತದ್ವೀಪಗಳನ್ನೂ ಗೆದ್ದು, ನಾಲ್ಕುನೂರು ಯೋಜನದ ಧನರತ್ನಪರ್ವತವನ್ನು ತಂದು ಧರ್ಮಜ ವ್ಯಾಸರಿಗೂ, ಶ್ರೀಕೃಷ್ಣನಿಗೂ ಸಮರ್ಪಿಸಿದನು. ಒಂದು ವರ್ಷದ ದಂಡಯಾತ್ರೆ ಮುಗಿಸಿಕೊಂಡು ಅರ್ಜುನ ಭೀಮ ಸಹದೇವ ನಕುಲರು ವಿಜಯಶೀಲರಾಗಿ ಹಿಂದಿರುಗಿದಾಗ, ಅವರ ವಿಜಯೋತ್ಸಾಹದಲ್ಲಿ ಪಾಲ್ಗೊಳ್ಳಲು ಶ್ರೀಕೃಷ್ಣನು ದಾರೆಯರೊಡನೆ ಇಂದ್ರಪ್ರಸ್ಥಕ್ಕೆ ಬಂದಿದ್ದನು.

ಸಹದೇವನು ದಕ್ಷಿಣಕ್ಕೆ ಪಯಣಿಸಿದನು. ಪ್ರಚಂಡಸೇನೆಯೊಡನೆ ಕದಲಿ, ಆ ವೀರನು, ಶೂರಸೇನರಾಜರನ್ನು ಗೆದ್ದು, ಮತ್ಸ್ಯದೇಶದ ವಿರಾಟನನ್ನು ಸಾಮದಿಂದ ವಶೀಕರಿಸಿದನು. ಮಹಾಬಲನಾದ ಕರೂಷಪತಿ ದಂತವಕ್ರನನ್ನು ರಣದಲ್ಲಿ ಗೆದ್ದು, ಅವನಿಗೆ ಅವನ ರಾಜ್ಯವನ್ನಿತ್ತು, ಕಪ್ಪವನ್ನು ಸ್ವೀಕರಿಸಿದನು. ಸುಕುಮಾರ, ಪಟಚ್ಚರರನ್ನು ಗೆದ್ದನು. ಚರ್ಮಣ್ವತಿಯನ್ನು ದಾಟಿ, ಜಂಭಕಾಸುರ ಪುತ್ರನನ್ನು ಗೆದ್ದು, ಸಹದೇವನು ನರ್ಮದೆಯತೀರದ ವಿಂದಾನುವಿಂದರನ್ನು ಸೋಲಿಸಿ, ಅವರಿಂದ ಬಹು ರತ್ನಗಳನ್ನು ಪಡೆದನು. ಭೋಜಕಟದ ಭೀಷ್ಮಕನನ್ನು, ಪುಲಿಂದರನ್ನು ಪಾಂಡ್ಯರನ್ನು ಗೆದ್ದು, ಕಪ್ಪಗಳನ್ನು ಪಡೆದು, ಮುಂದೆ ಕಿಷ್ಕಿಂಧೆಯನ್ನು ಸೇರಿದನು. ಅಲ್ಲಿ ಏಳುದಿನ ಯುದ್ಧಮಾಡಿ ಮೈಂದದ್ವಿವಿದರು ಮೆಚ್ಚಿಕೊಟ್ಟ ರತ್ನರಾಶಿಗಳನ್ನು ಹೊಂದಿ

ದನು. ಮಾಹಿಷ್ಮತೀನಗರದ ರಾಜನನ್ನೆದುರಿಸಿ ಹೋಗುವಾಗ, ಸಹದೇವನು ವಿಜಯ-ಸಂಶಯವನ್ನು ಹೊಂದಬೇಕಾಯಿತು.

ಆ ದೇಶದ ರಾಜನಿಗೆ ನೀಲನೆಂಬುವರು. ಅವನ ಸುತೆ ಸುರಸುಂದರಿಯಂತಿದ್ದಳು. ಅವಳನ್ನು ಕಾಮಿಸಿ, ಸಾಕ್ಷಾದಗ್ನಿದೇವನೇ ವಿಪ್ರರೂಪನಾಗಿ ಬಂದನು. ಅವಳು ಅವ ನನ್ನು ವರಿಸಿದಳು. ನೀಲನು ವಿಪ್ರನನ್ನು ನೋಡಿ ಕೋಪದಿಂದ ಶಿಕ್ಷಿಸಲು ಹೋದಾಗ ಅಗ್ನಿದೇವನು ಉರಿಯುತ್ತಾ ಪ್ರತ್ಯಕ್ಷನಾದನು. ಆಗ ನೀಲನು ತನ್ನ ಮಗಳನ್ನವನಿ ಗಿತ್ತು ಮದುವೆಮಾಡಿದನು. ಪ್ರೀತನಾದ ಅಗ್ನಿಯು ವರವನ್ನು ಬೇಡೆನ್ನಲು, ನೀಲನು ತನ್ನ ಸೈನ್ಯಕ್ಕೆ ಅಭಯವಿರಲೆಂದು ಬೇಡಿದನು. ಅಂತೆಯೇ ವರವಿತ್ತು, ಅಗ್ನಿಯು ಅಂದಿ ನಿಂದ ಮಾಹಿಷ್ಮತೀನಗರವನ್ನು ಮುತ್ತುವ ಶತ್ರುಸೈನ್ಯಾದಿಗಳನ್ನು ಸುಡುತ್ತಿದ್ದನು.

ಅಂದೂ ಸಹದೇವನ ಸೈನ್ಯವು ಅಗ್ನಿಜ್ವಾಲೆಗಳಿಗೆ ಸಿಕ್ಕು ನಾಶವಾಗತೊಡಗಿತು. ಮಾದ್ರೀಸುತನು ಚಿಂತಾಕ್ರಾಂತನಾಗಿ, ಪ್ರಾಂಜಲಿಪುಟನಾಗಿ, ಅಗ್ನಿದೇವನನ್ನಿಂತು ಸ್ತುತಿಸಿದನು—"ವೈಶ್ವಾನರ! ನಿನಗಾಗಿ ರಾಜಸೂಯ, ಹವಿಸ್ಸುಗಳನ್ನು ಕೊಡುವುದು ನಿನಗಾಗಿ, ದೇವತೆಗಳಿಗೆ ಮುಖದಂತಿರುವೆ, ಪಾವನನು, ಹವ್ಯದ್ರವ್ಯವಾಹಕನು ಆಗಿ ವಿರಾಜಿಸುವೆ. ವೇದಾರ್ಥಗಳನ್ನರಿತ ನಿನ್ನನ್ನು ಜಾತವೇದನೆಂಬುವರು. ಶಿಖಾ ಜಾಲದಿಂದ ಉರಿದೆದ್ದು ಹವ್ಯವನ್ನು ಸ್ವೀಕರಿಸಿ, ಯಜಮಾನಾದಿಗಳಿಗೆ ಸ್ವರ್ಗದ್ವಾರ ವನ್ನು ತೆಗಿಸುವೆ. ಕುಮಾರಸ್ವಾಮಿಯನ್ನು ಧರಿಸಿ, ರುದ್ರಗರ್ಭನೆನಿಸುವೆ. ಅಗ್ನಿಯಿಂದ ತೇಜವು, ವಾಯುವಿನಿಂದ ಬಲವು, ಪೃಥಿವಿಯಿಂದ ಅನ್ನವು, ಜಲಗಳಿಂದ ಮಂಗಳವು ಬರುವುದಲ್ಲವೇ ? ಜಲಜನಕನಾದ ನಿನಗೆ ವಂದನವು. ದೇವ ದಾನವ ಮಾನವ ಋಷಿಗಳೆಲ್ಲರೂ ನಿತ್ಯವೂ ನಿನ್ನಲ್ಲಿ ಹೋಮಿಸಿ, ಪವಿತ್ರರಾಗುತ್ತಿರುವರು. ಸತ್ಯನಾಮಕ ನಾದ ನಿತ್ಯನಿರ್ದುಃಖಜ್ಞಾನಾನಂದಮೂರ್ತಿ, ಮುಕುಂದನ ಭಕ್ತನಾದ ನನ್ನನ್ನು ಸುಡಬೇಡ ! ಕಾಪಾಡು !" ಇಂತು ನುತಿಸಿ, ಮಾದ್ರೇಯನು ಕುಶಗಳನ್ನು ಹರಡಿ ಅಗ್ನಿಕುಂಡವನ್ನು ಹೊತ್ತಿಸಿ, ಹೋಮಿಸಲು ಪ್ರಾರಂಭಿಸಿದನು. ಆಗ ವಹ್ನಿಯು ಶಾಂತನಾದನು. "ಕೊಟ್ಟ ವರದ ತಪ್ಪಿಗಾಗಿ, ಮಾವನಾದ ನೀಲರಾಜನಿಗೆ ಸಹಾಯ ಮಾಡಿದೆನು. ನಿಮ್ಮ ರಾಜಸೂಯವು ನಿರ್ವಿಘ್ನವಾಗಲಿ ! ಏಳು ! ಕೇಳಬೇಕಾದ ಕಪ್ಪವನ್ನು ನೀಲನಿಂದ ಕೊಡಿಸುವೆನು" ಎಂದ ಅಗ್ನಿಯನ್ನು ಸಹದೇವನು ಪೂಜಿಸಿ, ಕಳಿಸಿದನು. ನೀಲನಿತ್ತ ಕಾಣಿಕೆಯನ್ನು ಸ್ವೀಕರಿಸಿ, ಮುಂದೆ ಸಹದೇವನು, ರುಕ್ಮಿಯು ಕೃಷ್ಣಭಯದಿಂದಲು, ರುದ್ರನಿತ್ತ ಧನುರ್ಲೋಭದಿಂದಲು, ತಂಗಿಯಾದ ರುಕ್ಮಿಣಿ ಯಲ್ಲಿ ಪ್ರೀತಿಯಿಂದಲು ಸಂಗರಕ್ಕೆ ನಿಲ್ಲದೆ ಸಮರ್ಪಿಸಿದ ಬಹುರತ್ನಗಳನ್ನು ಪಡೆದು, ದಕ್ಷಿಣಕ್ಕೆ ಪ್ರಯಾಣಿಸಿದನು. ಸಹದೇವನು ಶೂರ್ಪಾರಕಕ್ಷೇತ್ರವನ್ನು, ಕೋಲ್ಲಗಿರಿ ಯನ್ನು, ದಂಡಕವನ್ನು ನೋಡಿ ಕೇರಳ, ಪಾಂಡ್ಯ, ದ್ರಾವಿಡಾಂಧ್ರರನ್ನು ಗೆದ್ದು, ವಿಭೀಷಣನಿಂದ ಕಾಣಿಕೆಯನ್ನು ತರಲು ಘಟೋತ್ಕಚನನ್ನು ಲಂಕೆಗೆ ಕಳಿಸಿದನು. ಶ್ರೀರಾಮನಿಂದ ಎಲ್ಲವನ್ನೂ ಅರಿತಿದ್ದ ವಿಭೀಷಣನು 'ಭೀಮಪಾರ್ಥರು ಬಲಯುತರು,

ಶ್ರೀಕೃಷ್ಣನು ಶ್ರೀರಾಮನೇ ; ಹನುಮಂತನೇ ಭೀಮನು ; ಪಾಂಡವರು ದೇವಾಂಶ ಜಾತರು ; ಇವರಿಗೆ ಕಪ್ಪವನ್ನು ಕೊಡುವುದು ಇಹ-ಪರ ಸುಖಸಾಧನವು !' ಎಂದು ಚಿಂತಿಸಿ, ಅನಂತಕೋಟಿರತ್ನ ಧನಗಳನ್ನಿತ್ತು, ಘಟೋತ್ಕಚನನ್ನು ಸತ್ಕರಿಸಿ ಕಳಿಸಿದನು. ಇಂತು ದಕ್ಷಿಣದಿಕ್ಕಿನ ರಾಜರಿತ್ತ ಧನರತ್ನವ್ರಾತದಿಂದಲೂ ಚಂದನಾಗರು ಕಾಷ್ಠರಾಶಿಯಿಂದಲೂ ಸಹದೇವನು ಇಂದ್ರಪ್ರಸ್ಥವನ್ನು ಸೇರಿ, ಧರ್ಮಜ-ವ್ಯಾಸರಿಗೆ ವಂದಿಸಿದನು.

ಪಶ್ಚಿಮದಿಕ್ಕಿಗೆ ಪಯಣಿಸಿದ ನಕುಲನು ಶತ್ರುಜನ ಭಯಂಕರ ಸೇನಾಸಮೇತನಾಗಿ ದತ್ತಮಯೂರಕಾದಿ ರಾಜರನ್ನು ಗೆದ್ದನು. ಮರು, ಮಾಳವ, ಬರ್ಬರ, ಕರ್ಪರ, ದಾಶ ದೇಶಗಳ ರಾಜರನ್ನು ಜಯಿಸಿ, ಪುಷ್ಕರಾರಣ್ಯ ನಿವಾಸಿಗಳಾದ ಆಭೀರರನ್ನು, ಸಿಂಧುಕೂಲದ ಗ್ರಾಮಣೀಯರನ್ನು, ಪಂಚನದ ಅಮರಪರ್ವತ ನಿವಾಸಿ, ಕಾಡುರಾಜರನ್ನು ವಶೀಕರಿಸಿ, ಅವರಿಂದ ವಿಪುಲದ್ರವ್ಯವನ್ನು ಪಡೆದನು. ವಾಸುದೇವನಿಗೆ ತನ್ನ ದಿಗ್ವಿಜಯ ವಾರ್ತೆಯನ್ನು ತಿಳಿಸಿ, ಶಾಲಕ್ಯಪುರವನ್ನು ಸೇರಿದನು. ಅಲ್ಲಿ ತನ್ನ ಸೋದರ ಮಾವನಾದ ಶಲ್ಯನನ್ನು ಕಂಡು, ತಾನು ಬಂದ ಕಾರ್ಯವನ್ನು ನಿವೇದಿಸಿದನು. ಶಲ್ಯನು ಸತ್ಕಾರಪೂರ್ವಕವಾಗಿ ಕೊಟ್ಟ ವಸ್ತುವಾಹನಾದಿಗಳನ್ನು ಕೈಗೊಂಡು, ನಕುಲನು ಪಶ್ಚಿಮ ಸಮುದ್ರ ತೀರದ ಕಿರಾತವೀರರನ್ನು ಜಯಿಸಿದನು. ಹತ್ತು ಸಾವಿರ ಒಂಟೆಗಳ ಮೇಲೆ ಹೇರಲ್ಪಟ್ಟ ಧನಕನಕ ವಸ್ತುವಾಹನ ರಾಜಿಯನ್ನು ಸ್ವೀಕರಿಸಿ, ತನ್ನ ಸೈನ್ಯದ ಪದಘಟ್ಟನಗಳಿಂದ ಭೂಮಿಯು ಕಂಪಿಸುತ್ತಿರಲು, ಇಂದ್ರಪ್ರಸ್ಥವನ್ನು ಮುಟ್ಟಿದನು.

ಇಂತು ಭೀಮಾರ್ಜುನ ನಕುಲ ಸಹದೇವರು ದಿಗ್ವಿಜಯವನ್ನು ಮಾಡಿ, ಚತುಸ್ಸಮುದ್ರಮುದ್ರಿತ ಧರಾವಲಯದ ರಾಜರಿಂದ ಅಸಂಖ್ಯಾತ ಧನ ಕನಕ ರತ್ನ ವಾಹನಾದಿ ವಸ್ತುತತಿಯನ್ನು ತಂದು ಧರ್ಮರಾಜನಿಗೆ ಸಮರ್ಪಿಸಿದರು. ವರುಣ ಧನೇಶರ ನಿಧಿಯಂತೆ ಶೋಭಿಸುವ ಧನರಾಶಿಯು ರಾಜಸೂಯ ಯಾಗ ಸಮಾರಂಭವನ್ನು ತ್ವರೆಗೊಳಿಸಲು ಧರ್ಮರಾಜನು ಶ್ರೀಕೃಷ್ಣ-ವ್ಯಾಸರ ಅನುಮತಿಯನ್ನು ಪಡೆದು, ಯಾಗವನ್ನು ಪ್ರಾರಂಭಿಸಲು ನಿಶ್ಚಯಿಸಿದನು.

ಅವನ ರಾಜ್ಯದಲ್ಲಿ ಸತ್ಯಧರ್ಮಗಳು ಸುರಕ್ಷಿತವಾಗಿದ್ದವು. ದುಷ್ಟಶಾಸನದಿಂದ ಶತ್ರುಗಳಿದ್ದಿಲ್ಲ. ಪ್ರಜರು ಸ್ವಕರ್ಮ ನಿರತರಾಗಿದ್ದುದರಿಂದ ಕಾಲಕ್ಕೆ ತಕ್ಕ ಮಳೆ ಬಂದು ಜನಪದವೆಲ್ಲ ಸಸ್ಯಶಾಮಲವು ಸಂಪತ್ಸಮೃದ್ಧವು ಆಗಿತ್ತು. ವಣಿಜರು ದಸ್ಯುಭಯ ರಹಿತರಾಗಿ ಗೋರಕ್ಷಾ, ವ್ಯವಹಾರಕರ್ಮಗಳನ್ನು ಚೆನ್ನಾಗಿ ನಡೆಸಿದರು. ಧರ್ಮದಿಂದ ಬಂದ ಧನವೃದ್ಧಿಯು ದಾನ ದೀನ ಪೋಷಣದಲ್ಲಿ ಸದ್ವಿನಿಯುಕ್ತವಾಗಿತ್ತು. ಸ್ವಕೋಶ ಸಮೃದ್ಧಿಯನ್ನು, ಸ್ವಸೋದರ ಸಹಾಯವನ್ನು, ವಾಸುದೇವ ವ್ಯಾಸರ ಅನುಗ್ರಹವನ್ನು ಕಂಡು ಧರ್ಮರಾಜನ ಯಾಗೋತ್ಸಾಹವು ಇಮ್ಮಡಿಸಿತು.

ಧರ್ಮರಾಜನು ಕೃಷ್ಣನನ್ನು ಸಂಭಾವಿಸಿ ಇಂತೆಂದನು—"ವಾಸುದೇವ ! ನಿನ್ನ ದಯದಿಂದ ಭೂಮಂಡಲವೆಲ್ಲ ನನ್ನ ವಶವಾಗಿದೆ. ಧನರತ್ನಗಳಿಗೆ ಕೊರತೆ ಇಲ್ಲ.

ವಿಪ್ರರನ್ನು, ಹವ್ಯವಾಹನನ ದ್ವಾರಾ ನಿನ್ನನ್ನು, ದೇವತೆಗಳನ್ನು ಸಂತೋಷಪಡಿಸ ಲಿಚ್ಛಿಸುವೆನು. ರಾಜಸೂಯದಲ್ಲಿ ನನ್ನನ್ನು ದೀಕ್ಷಿತನನ್ನಾಗಿ ಮಾಡಿ ಅದು ನಿರ್ವಿಘ್ನ ವಾಗಿ ನೆರವೇರುವಂತೆ ಪರಿವೀಕ್ಷಿಸಿ, ನನ್ನನ್ನು ಧನ್ಯನನ್ನಾಗಿಸು !" ಧರ್ಮರಾಜನ ಪ್ರಾರ್ಥನೆಯನ್ನು ಮನ್ನಿಸಿ, ಶ್ರೀವೇದವ್ಯಾಸನು ಅವನಿಗೆ ಯಜ್ಞದೀಕ್ಷೆಯನ್ನಿತ್ತನು. ಭೀಮಸೇನನು ಯಾಗಮುಖ್ಯಫಲಭಾಜನನಾದುದರಿಂದ ತಾನೂ ದೀಕ್ಷಿತನಾದನು. ಅರ್ಜುನ-ನಕುಲ-ಸಹದೇವರು ಯಜಮಾನನಾದ ಧರ್ಮರಾಜನೊಂದಿಗೆ ಕೂತು ಕೊಂಡರು. ಸರಸ್ವತೀಪದವೀ ಯೋಗ್ಯಳಾದ ದ್ರೌಪದಿಯು ಯಜ್ಞಪತ್ನಿಯಾದಳು. ಇತರ ಪಾಂಡವಪತ್ನಿಯರು ಆಕೆಗೆ ಸಹಾಯಕರಾಗಿದ್ದರು.

## ರಾಜಸೂಯ ಯಾಗ–ಶಿಶುಪಾಲ ವಧೆ

ಶ್ರೀಕೃಷ್ಣನ ಸನ್ನಿಧಾನದಲ್ಲಿ ಧರ್ಮರಾಜನು ರಾಜಸೂಯಯಾಗವನ್ನು ಪ್ರಾರಂಭಿಸಿದನು. ಸಹದೇವನು ಧರ್ಮರಾಜನ ಆಜ್ಞೆಯಿಂದ ಯಜ್ಞಸಾಧನ ದ್ರವ್ಯ ಗಳನ್ನು ಶೇಖರಿಸಿದನು. ಧೌಮ್ಯವಚನದಂತೆ ಸಮಿತ್ ಆಜ್ಯ ಚಮಸಾದಿಗಳನ್ನು ಸಿದ್ಧಪಡಿಸಿದನು. ಇಂದ್ರಸೇನಾದಿ ಶಿಲ್ಪಿವರರಿಂದ ಯಜ್ಞಶಾಲೆಯು ನಿರ್ಮಿತ ವಾಯಿತು. ಅಲ್ಲಿ ಯಥಾಸ್ಥಾನಗಳಲ್ಲಿ ಕುಂಡಗಳು, ವೇದಿಕೆಗಳು, ಪತ್ನೀಶಾಲೆ, ಆಗ್ನೀಯಶಾಲೆ, ವಾಪೀತಟಾಕಗಳು, ವಿರಾಮಗೃಹಗಳು, ಎಲ್ಲವೂ ಮನೋಹರವಾಗಿ ನಿರ್ಮಿತವಾದವು.

ಸಹದೇವನ ಆಹ್ವಾನವನ್ನು ಮನ್ನಿಸಿ, ಪುತ್ರ-ಮಿತ್ರ-ಭ್ರಾತೃ ಸಮೇತರಾದ ರಾಜವರರು ಬಂದರು. ವಿರಾಟ, ದ್ರುಪದ, ಶಿಶುಪಾಲ, ಭಗದತ್ತ, ಶಕ, ಸಾಲ್ವ, ಚಂದ್ರಸೇನ, ಕುಂತಿಭೋಜ, ವಸುದೇವ, ಬಲದೇವ, ಪ್ರದ್ಯುಮ್ನ ಸಾಂಬಾದಿ ಕ್ಷತ್ರಿಯ ವರರು ; ಅಂಗ, ವಂಗ, ಕಳಿಂಗ, ಕಾಶ್ಮೀರ, ಕಾಂಭೋಜ, ಗೌಡ, ಆಂಧ್ರ, ಸಿಂಹಳ, ಕೇರಳ, ಕುಂತಲ, ದ್ರವಿಡ ಮುಂತಾದ ದೇಶದ ರಾಜರು, ಪಾರ್ವತೀಯರು, ಸಾಗರ ತೀರಪಾಲಕರು, ಯಜ್ಞವನ್ನು ನೋಡಲು ಬಂದು, ಧರ್ಮರಾಜನಿಂದ ಸತ್ಕೃತರಾಗಿ, ಬಿಡದಿಮನೆಗಳಲ್ಲಿ ನೆಲೆಸಿದರು. ವೇದವೇದಾಂಗ ಪಾರಂಗತರಾದ ವಿಪ್ರರು, ಸ್ವಧರ್ಮ ನಿರತರಾದ ವೈಶ್ಯ ಶೂದ್ರರು, ಯಥಾಕಲ್ಪಿತ ನಿವೇಶನಗಳಲ್ಲಿ ಇಳಿದರು.

ನಕುಲನು ಹಸ್ತಿನಾವತಿಗೆ ಹೋಗಿ, ಧೃತರಾಷ್ಟ್ರಾದಿಗಳನ್ನು ಕರೆದು ಬಂದನು. ಅನುಪಮ ಧನರಾಶಿಯನ್ನು ಕೊಂಡು, ಭೀಷ್ಮ ಧೃತರಾಷ್ಟ್ರ ಬಾಹ್ಲಿಕರು, ದುರ್ಯೋಧನ, ಕರ್ಣ, ಶಕುನಿ, ಸೈಂಧವ, ವಿಕರ್ಣರನ್ನು ಕರೆದುಕೊಂಡು ಯಜ್ಞ ವನ್ನು ನೋಡಲು ಬಂದರು. ಧರ್ಮರಾಜನು ಅವರನ್ನೆದುರ್ಗೊಂಡು ಕರೆತಂದು ಪೂಜಿಸಿದನು. 'ಹಿರಿಯರಾದ ನಿಮ್ಮ ಅನುಗ್ರಹದಿಂದ ಈ ಮಹಾಯಜ್ಞವನ್ನು ಮಾಡಲಿರುವ ನನ್ನಲ್ಲಿ ಕರುಣಿಸಿ, ಯಾಗವನ್ನು ಸಾಂಗವಾಗಿ ನಡೆಸಿಕೊಡಿ !' ಎಂದು ಪ್ರಾರ್ಥಿಸಿದನು.

*

ದೀಕ್ಷಿತನಾದ ಧರ್ಮರಾಜನು ವಿವಿಧಾಧಿಕಾರಗಳನ್ನು ವಿವಿಧ ಯೋಗ್ಯ ಜನರಿಗಿತ್ತನು. ಹಿರಣ್ಯರತ್ನಗಳನ್ನು ನೋಡಿಕೊಳ್ಳುತ್ತಾ, ದಾನಗಳನ್ನು ಕೊಡಲು ಕೃಪನು ನಿಯಮಿತನಾದನು. ಭಕ್ಷ್ಯಭೋಜ್ಯಾಧಿಕಾರವು ದುಶ್ಶಾಸನನ ಕಡೆಯಾಗಿತ್ತು. ವಿಪ್ರರನ್ನು ಸತ್ಕರಿಸುವ ಕೆಲಸ ಅಶ್ವತ್ಥಾಮನದಾಯಿತು. ರಾಜರನ್ನು ಪೂಜಿಸಲು ಸಂಜಯನು ನಿಯುಕ್ತನಾದನು. ಭೀಷ್ಮದ್ರೋಣರು ಕೃತಾಕೃತ ಪರೀಕ್ಷಣವನ್ನು ವಹಿಸಿಕೊಂಡರು. ಬಾಹ್ಲಿಕ ಧೃತರಾಷ್ಟ್ರ ಸೋಮದತ್ತರು ನಿರೀಕ್ಷಕರಾಗಿದ್ದರು. ವಿದುರನು ವ್ಯಯವನ್ನು ನೋಡಿಕೊಂಡನು. ಉಡುಗೊರೆಗಳನ್ನು ಸ್ವೀಕರಿಸುವುದು ದುರ್ಯೋಧನನದ್ದು ಆಯಿತು. ವಿಪ್ರವರ ಚರಣ ಕ್ಷಾಳನವನ್ನು ಶ್ರೀಕೃಷ್ಣನು ಸ್ವೀಕರಿಸಿದನು. ಅದರಿಂದ ಸರ್ವಲೋಕಗಳು ಪ್ರೀತವಾದವು.

ಧರ್ಮರಾಜನ ಯಜ್ಞವನ್ನು ನೋಡಲು ಬಂದವರಲ್ಲಿ ಸಹಸ್ರನಾಣ್ಯಗಳಿಕಿಂತ ಕಡಿಮೆ ಉಡುಗೊರೆ ತಂದವರಿದ್ದಿಲ್ಲ. ಯಜ್ಞಕ್ಕಾಗಿ ತಂದ ಧನವು ಪಾತ್ರವಿನಿಯುಕ್ತವಾಗುವುದೆಂದು ತಿಳಿದು ಎಲ್ಲರೂ ಪರಸ್ಪರ ಸ್ಪರ್ಧೆಯಿಂದೆಂಬಂತೆ, ವಿಶೇಷ ಧನರಾಶಿಯನ್ನು ತಂದೊಪ್ಪಿಸಿದಾಗ, ಸ್ವೀಕರಿಸುವ ದುರ್ಯೋಧನನಿಗಾದ ಶ್ರಮವನ್ನು ಹೇಳತೀರದು. ಕೌಂತೇಯನ ಯಜ್ಞಸಭೆಯು ಆರಂಭಣೀಯ, ಕ್ಷತ್ರ, ಧೃತಿ, ವ್ಯುಷ್ಟಿ, ದ್ವಿರಾತ್ರ, ದಶಪೇಯಗಳೆಂಬ ಆರು ಅಗ್ನಿಗಳಿಂದ ವಿರಾಜಿಸಿತು. ಬಹುಭಕ್ಷ್ಯಗಳೊಂದಿಗೆ ಮೃಷ್ಟಾನ್ನವನ್ನಿತ್ತು ಆಚಂಡಾಲಾಂತವಾದ ಸರ್ವ ಮಾನವವೃಂದವೂ ಇಡಾಜ್ಯ ಹೋಮಾಹುತಿಗಳಿಂದ ಇಂದ್ರಪ್ರಮುಖ ವೃಂದಾರಕವೃಂದವೂ ತೃಪ್ತವಾಯಿತು. ಸರ್ವಜನರೂ ಸಂತೋಷಭರಿತರಾದರು.

ಕೊನೆಗೆ ರಾಜಸೂಯಯಾಗಕ್ಕೆ ಅಂಗವಾದ ಸೋಮಯಾಗವು ಆರಂಭವಾಯಿತು. ಅಂದು ಧರ್ಮನ ಸಭೆಯಲ್ಲಿ ನೆರೆದಿದ್ದ ಋಷಿ ರಾಜವೃಂದವು ಬ್ರಹ್ಮಸಭೆಯಲ್ಲಿ ನೆರೆದ ದೇವತೆಗಳಂತೆ ಕಂಗೊಳಿಸಿತು. ಗಂಗಾಯಮುನೆಯರ ಅಂತರ್ವೇದಿಯಲ್ಲಿ ನಿರ್ಮಿಸಲ್ಪಟ್ಟದ್ದ ಯಜ್ಞಶಾಲೆಯಲ್ಲಿ ಸದಸಸ್ಪತಿಗಳಾದ ವೇದವ್ಯಾಸ ಪರಶುರಾಮರು ಶಾರದಾಭ್ರದಲ್ಲಿ ಹೊಳೆಯುವ ಸೂರ್ಯಚಂದ್ರರಂತೆ ವಿರಾಜಿಸುತ್ತಿದ್ದರು. ನಾರದನು ಸಭೆಯನ್ನು ನೋಡಿ ಆನಂದಭರಿತನಾಗಿ, ಮನಸ್ಸಿನಲ್ಲಿ ಇಂತು ಚಿಂತಿಸಿದನು— 'ಬ್ರಹ್ಮಾದಿ ದೇವ ಪ್ರಾರ್ಥಿತನಾದ ನಾರಾಯಣನು ಭೂಭಾರ ಹರಣಾರ್ಥಿಯಾಗಿ. ಯದುಕುಲದಲ್ಲಿ ಶ್ರೀಕೃಷ್ಣನಾಗಿ, ಅವತರಿಸಿರುವನು. ಅಂತೆಯೇ ದೈತ್ಯರೂ ಧರ್ಮವನ್ನು ಕೆಡಿಸಲೆಣಿಸಿ, ರಾಜರಾಗಿ ಹುಟ್ಟಿರುವರು. ಭಾರತ ರಣವಾಗದೆ ಭೂಭಾರವು ನಾಶವಾಗದು. ಇಂದು ಭಾರತ ರಣ ಯಜ್ಞದ ನಾಂದಿಯಾಗುತ್ತಿದೆ.'

ಸಭೆಯಲ್ಲಿ ನಾನಾಶಾಸ್ತ್ರ ಪಾರಂಗತರು ವಿವಿಧ ವಾದಗಳಲ್ಲಿ ನಿರತರಾಗಿದ್ದರು. ಸರ್ವಜ್ಞನಾದ ವ್ಯಾಸದೇವನು ಪ್ರಾಶ್ನಿಕನಾಗಿ ಸಕಲಸಜ್ಜನರ ಸಂಶಯವನ್ನು ನಿವಾರಿಸಿ, ದುರ್ಮತಗಳನ್ನು ಖಂಡಿಸಿ, 'ಶ್ರೀಹರಿಯೇ ಸರ್ವೋತ್ತಮನು. ಅವನಿಗೆ ಸದೃಶರಿಲ್ಲ, ಅಧಿಕರಿನ್ನೆಲ್ಲಿ? ಜೀವಜಾತವೆಲ್ಲವು ಅಸ್ವತಂತ್ರವು; ಅಜ್ಞಾನವು ಜೀವನಿಗೆ, ಶ್ರೀಹರಿ

ಗಲ್ಲ; ಜೀವನ ಬಂಧವು ಅಜ್ಞಾನದಿಂದ, ಕಾವ್ಯ ಕರ್ಮದಿಂದ; ಬಂಧವು ಸತ್ಯವಾಗಿದೆ, ಅದು ಶ್ರೀಹರಿಯ ಪ್ರಸಾದದಿಂದ ಮಾತ್ರ ಹೋಗುವದು; ಪ್ರಸಾದವು ಭಕ್ತಿಯಿಂದ ; ಭಕ್ತಿಗೋಸುಗ ಗುರುದ್ವಾರಾ ಶ್ರವಣ ಮನನ ಧ್ಯಾನಗಳನ್ನು ಮಾಡಿ, ಶ್ರೀಹರಿ ಮಹಿಮಾಜ್ಞಾನವನ್ನು ಸಂಪಾದಿಸುವುದು ಮುಮುಕ್ಷುಜನರ ಕರ್ತವ್ಯ—ಎಂದಿತ್ಯಾದಿ ಸತ್ತತ್ವನಿರ್ಣಯವಾಗುತ್ತಿರಲು ನೋಡಿ, ನಾರದನು ಪರಮಾನಂದಭರಿತನಾದನು. ಶ್ರೀಕೃಷ್ಣನೇ ನಾರಾಯಣನೆಂಬ ಜ್ಞಾನವಾಗಿ, ಸರ್ವಸುಜನರು ಸಂತಸಿಸಿದರು. ಮನುಜರು ಸಂಶಯಗ್ರಸ್ತರಾದರು. ದೈತ್ಯರು ಹಠದಿಂದ ಅನ್ಯಥಾಜ್ಞಾನಿಗಳಾಗಿ ಕೃಷ್ಣನನ್ನು ಮನುಜಮಾತ್ರನೆಂದು ತಿಳಿದರು. ಸ್ವಭಾವವು ದುರತಿಕ್ರಮವಲ್ಲವೇ ?

ಆಗ ಭೀಷ್ಮನು ಧರ್ಮರಾಜನಿಗಿಂತೆದನು—"ರಾಜನ್ ! ಸ್ನಾತಕ, ಋತ್ವಿಜ, ಗುರು, ಇಷ್ಟ, ಮಹಾರಾಜ, ಯಜ್ಞಕರ್ತ, ಎಂತೆಂಬ ಪೂಜನೀಯರಲ್ಲಿ ಬಹುಗುಣ ಸಂಪನ್ನನಾದ ಮಹನೀಯನೊಬ್ಬನನ್ನು ಅಗ್ರಪೂಜೆಯಿಂದ ಸತ್ಕರಿಸುವುದು ವಿಹಿತ ವಾಗಿದೆ. ನೀನು ಅಂತಹ ಮಹಾನುಭಾವನನ್ನು ಪೂಜಿಸಿ, ಧನ್ಯನಾಗು" ಎಂದನು. ಧರ್ಮರಾಜನಾವಮಾತಿಗೆ ಸಮ್ಮತಿಸಿ, "ತಾತ ! ಅಂತಹ ಪೂಜ್ಯನಾರು ? ನೀನೇ ನಿರ್ದೇಶಿಸು !" ಎಂದು ಕೇಳಿದನು.

ಭೀಷ್ಮನು ಆಲೋಚಿಸಿ, ತಲೆತೂಗಿ, ಆನಂದದಿಂದ—"ಧರ್ಮಜ ! ಆಕಾಶ ದಲ್ಲಿ ನಕ್ಷತ್ರಮಧ್ಯದಿ ಬೆಳಗುವ ಚಂದ್ರನಂತೆ ನಿನ್ನ ಸಭೆಯಲ್ಲಿ ರಾಜರ ಮಧ್ಯದಲ್ಲಿ ವಿರಾಜಿಸುವ ಯಾದವ ಚಂದ್ರಮ ಕೃಷ್ಣನಲ್ಲದೆ ಅಗ್ರಪೂಜೆಗೆ ಇನ್ನಾರು ಅರ್ಹರು ? ಪೂಜಿಸು ಪುರುಷೋತ್ತಮನನ್ನು ! ಅಂಧಕಾರದಲ್ಲಿ ತಡಕಾಡುವವರಿಗೆ ಸೂರ್ಯನಾಗಿ, ನಿದಾಘಬಿಸಿಲಿನಲ್ಲಿ ನೊಂದವರಿಗೆ ಗಾಳಿಯಾಗಿ, ಆನಂದವನ್ನೀವ ಶ್ರೀಕೃಷ್ಣನು ಸದಾ ಸರ್ವಥಾ ವಂದ್ಯನಾಗಿರುವನು" ಎಂದು ನಿರ್ದೇಶಿಸಲು, ಧರ್ಮರಾಜನು ಶ್ರೀಕೃಷ್ಣ ನಿಗೆ ಅಗ್ರಪೂಜೆಯನ್ನಿತ್ತು ಪೂಜಿಸಿದನು. ಸಹದೇವನು ಕನಕಪಾತ್ರೆಗಳಲ್ಲಿ ತಂದಿತ್ತ ಜಲದಿಂದ ಶ್ರೀಗಂಗಾಜನಕನ ಪಾದಗಳನ್ನು ತೊಳೆದು ಗಂಧವನ್ನು ಲಕ್ಷ್ಮೀವಕ್ಷನಿಗೆ ಹಚ್ಚಿ, ಶಂಖಚಕ್ರಧರನಿಗೆ ಪೂಮಾಲೆಯನ್ನು ಹಾಕಿ, ಶ್ರೀರಮಣನಿಗೆ ತಾಂಬೂಲ-ವಿತ್ತು, ಸಕಲಕರ್ಮಫಲದಾತನಿಗೆ ಫಲಗಳನ್ನು ಸಮರ್ಪಿಸಿ, ಸೂರ್ಯಚಂದ್ರವಹ್ನಿ ನೇತ್ರನಿಗೆ ನೀರಾಜನವನ್ನು ಮಾಡಿ, ಧರ್ಮರಾಜನು ನಿರ್ಭರಾನಂದಪರವಶ ನಾದನು. ಅವನ ಕಣ್ಣುಗಳು ಆನಂದಬಾಷ್ಪಪೂರ್ಣವಾಗಿ, ಅಲಂಕೃತನಾದ ಶ್ರೀಹರಿ ಯನ್ನು ನೋಡಗೊಡದಾದವು. ಯಜ್ಞದ ಪೂರ್ಣಫಲವು ಕೈಗೂಡಿದಂತಾಗಲು ಧರ್ಮರಾಜನು ಧನ್ಯನಾದೆನೆಂದು ಮೈಮರೆತು ನಿಂತನು. ಶ್ರೀಶನಾಪೂಜೆಯನ್ನು ಸ್ವೀಕರಿಸಿದನು.

ಶ್ರೀವೇದವ್ಯಾಸ ಶ್ರೀಪರಶುರಾಮರಿರಲು, ಶ್ರೀಕೃಷ್ಣನನ್ನು ಪೂಜಿಸಿದುದರಿಂದ ಕ್ರೋಧೋದ್ದೀಪಿತನಾಗಿ ಶಿಶುಪಾಲನು ಸಭೆಯಲ್ಲಿ ಎದ್ದುನಿಂತು ಭೀಷ್ಮ ಧರ್ಮಜ ಕೃಷ್ಣರನ್ನು ಕುರಿತು—

"ಇಷ್ಟು ಜನ ಶ್ರೇಷ್ಠಗುಣರಿಲ್ಲಿರಲು, ಈ ನಿಕೃಷ್ಟನಿಗೆ ಪೂಜೆ ಸಲ್ಲಿಸಿದುದು ಅನ್ಯಾಯವಾಯಿತು. ಧರ್ಮಜ! ಗಾಂಗೇಯನ ದುರುಪದೇಶದಿಂದ ನೀನು ವಿವೇಕ ಹೀನನಾದೆ. ಪೂಜಾರ್ಹನಲ್ಲದ ದಾಶಾರ್ಹನನ್ನು ಗೌರವಿಸಿ, ಪೂಜ್ಯರಾದ ವಿಪ್ರವರ ರಿಗೂ, ವೀರರಾದ ಕ್ಷತ್ರಿಯರಾಜರಿಗೂ ಅಪರಾಧವನ್ನೆಸಗಿದೆ. ಭರತಕುಲದಲ್ಲಿ ಹುಟ್ಟಿರುವ ನಿನಗೆ ಕ್ಷತ್ರಿಯಕುಲ ಕಲಂಕನಾದ ಈ ದುರ್ಮಾರ್ಗನ ಪೂಜೆ ಸಲ್ಲದು. ಜಡನದಿಗೆ ಹುಟ್ಟಿದ ಮುದಿ ಭೀಷ್ಮನಿಗೆ ತಿಳಿಯದೇಹೋದರೆ ಧರ್ಮರಾಜನೆಂಬ ನಿನಗಾದರೂ ತಿಳಿಯಬೇಕಿತ್ತು. ಧರ್ಮತತ್ವವು ಎಲ್ಲರಿಗೂ ತಿಳಿಯುವುದಿಲ್ಲ. ಬೇಕಾದವ ನಾಗಿದ್ದರೆ ಈ ಮೂಢನಿಗೆ ಮನೆಯಲ್ಲಿ ಕೂಡಿಸಿ, ನೀಡು ಭಕ್ಷ್ಯಗಳನ್ನು ; ಕೊಡು ರತ್ನ ಗಳನ್ನು ; ಆದರೆ ಮಹಾತ್ಮರ ಸಭೆಯಲ್ಲಿ ವಿಧಿದೃಷ್ಟವಾದ ಅಗ್ರಪೂಜೆಯನ್ನು ಕೊಡಬಹುದೇ ? ನೀನು ತಿಳಿಯದೆ ಕೊಟ್ಟರೆ ಅಯೋಗ್ಯನಾದ ಈ ಯಾದವಕುಲ ಪಾಂಸನನು ಸ್ವೀಕರಿಸಬಾರದಿತ್ತು. ವಸುದೇವನಂತೆ ವೃದ್ಧನೇ ? ದ್ವೈಪಾಯನನಂತೆ ಸದಸಸ್ಪತಿಯೇ ? ದ್ರೋಣಕೃಪರಂತೆ ಆಚಾರ್ಯನೇ ? ಯಾದವರು ರಾಜರೇ ಅಲ್ಲ ವೆಂಬುದನ್ನು ಮರೆತೆಯಾ ? ರಾಜನೇ ಬೇಕಿದ್ದರೆ ಪೂಜಿಸಬಾರದಿತ್ತೇ ದುರ್ಯೋಧನ ನನ್ನು ? ಬಂಧುವಾಗಬೇಕಿದ್ದರೆ ಶಲ್ಯನಿಲ್ಲವೇ ? ವೀರವರನು ಪರಶುರಾಮನ ಶಿಷ್ಯನು ಆದ ಕರ್ಣನನ್ನು ಪೂಜಿಸದಿರಲು ಕಾರಣವೇನು ? ನಮ್ಮಂತಹ ಮಹಾರಾಜ ರನ್ನು ಯಜ್ಞಕ್ಕೆಂದು ಕರೆಯಿಸಿ, ನಮ್ಮ ಕಣ್ಣಮುಂದೆ ಕಳ್ಳನು, ಜಾರನು ಆದ ಕೃಷ್ಣ ನನ್ನು ಪೂಜಿಸಿ, ನಮಗೆ ಅವಮಾನವನ್ನೆಸಗಿದೆ. ಮಾವನನ್ನು ಕೊಂದವನು ಮಾನ್ಯ ನಾದನೇ ? ಜರಾಸಂಧನನ್ನು ಗೆಲ್ಲಲಾರದೆ, ಭೀಮನಿಂದ ಕೊಲ್ಲಿಸಿದವನು ವೀರನೇ ? ಇವನಿಗೆ ಕುಲವೆಲ್ಲಿ ? ಗುಣವೆಲ್ಲಿ ? ಇವನ ಕರ್ಮಗಳನ್ನು ಅರಿತವರಾರು ? ಇವನನ್ನು ಪೂಜಿಸಿ, ನೀನು ಧರ್ಮರಾಜ ಎಂಬ ಹೆಸರಿಗೆ ಕುಂದು ತಂದೆ" ಎಂದು ನಿಂದಿಸಿ, ಶಿಶುಪಾಲನು ಕೃಷ್ಣನನ್ನು ನೋಡಿ, "ಎಲವೊ ಗೋಪಾಲ ! ಭೀತನಾಗಿ ಪಾಂಡವ ಜ್ಯೇಷ್ಠನು ಕೊಟ್ಟ ಪೂಜೆಯನ್ನು ನಿರ್ಭೀತನಾಗಿ ಕೊಂಡ ನಿನಗೆ ನಾಚಿಕೆ ಇಲ್ಲ. ನಾಯಿಯು ಹವಿಸ್ಸನ್ನು ಮುದ್ದಂತಾಯಿತು ನಿನಗಿತ್ತ ಪೂಜೆ ! ಷಂಡನಿಗೆ ಹೆಂಡಿರ- ನ್ನಿತ್ತಂತೆ, ಕುರುಡನಿಗೆ ಕನ್ನಡಿ ನೀಡಿದಂತೆ, ಕಿವುಡನಿಗೆ ಮಧುರಗೀತೆಯನ್ನು ಪಾಡಿ ದಂತೆ, ನಿನಗೆ ಮಾಡಿದ ಸತ್ಕಾರವು ವ್ಯರ್ಥವಾಯಿತು. ಗೊತ್ತಾಯಿತು ಧರ್ಮರಾಜನ ಯೋಗ್ಯತೆ ! ಇನ್ನಿಲ್ಲಿ ನಿಲ್ಲಬಾರದು" ಎಂದು ಗೋವಿಂದನನ್ನು ಬೈದು, ಸಭೆಯನ್ನು ಬಿಟ್ಟುಹೋದನು. ಕೆಲರಾಜರೂ ಅವನ ಹಿಂದೆ ಹೋದರು.

ಆಗ ಧರ್ಮರಾಜನು ಶಿಶುಪಾಲನನ್ನು ಅನುಸರಿಸಿ, ಕರೆತಂದು ಅನುನಯ ವಚನ ಗಳಿಂದಿಂತೆಂದನು—"ರಾಜನ್! ಭೂರಿಗುಣಸಂಪನ್ನನು, ಧೀರನು, ಬಂಧುಸತ್ತಮನು ಆದ ನಿನಗೆ ಇಂತಹ ಪರುಷವಚನಗಳು ಶೋಭಿಸವು. ಬ್ರಹ್ಮದೇವನಿಗೂ ಆದಿಯಾಗಿ, ವೇದಾದಿ ಸಚ್ಛಾಸ್ತ್ರ ಪ್ರತಿಪಾದಿತನಾದುದರಿಂದ ತ್ರಿಲೋಕಪೂಜ್ಯನೆಂದರಿತು ಪಿತಾಮಹನು ಶ್ರೀಕೃಷ್ಣನ ಪೂಜೆಯನ್ನು ಮಾಡೆಂದನು ; ಅದು ತಪ್ಪೇ ? ತತ್ವಜ್ಞ

ನಾದ ಭೀಷ್ಮನು ಅರಿತಂತೆ, ಶಿಶುಪಾಲ ! ನಿನಗೆ ವಿಷ್ಣುಮಹಿಮೆ ತಿಳಿಯಲಹುದೇ ? ಸೂರ್ಯಪ್ರಭೆಯನ್ನು ಹೊನ್ನೇಹುಳ ಅಳೆಯುವುದೇ ? ಸಮಸ್ತರಾಜರು ಶ್ರೀಕೃಷ್ಣ ಸಪರ್ಯೆಯು ಸರಿಯಾದುದೆಂದು ತಿಳಿದು ಸುಮ್ಮನಿರೆ, ನೀನದನ್ನ ಅಭಿನಂದಿಸದಿರ ಬಹುದೇ ?"

ಇಂತು ಶಿಶುಪಾಲನನ್ನು ಅನುನಯಿಸಿ ಬೇಡುವ ಧರ್ಮನನ್ನು ನಿವಾರಿಸಿ, ಭೀಷ್ಮನಿಂತೆಂದನು—

"ಶಿಶುಪಾಲನಂತಹ ಮೂರ್ಖನನ್ನು ಇಷ್ಟೇಕೆ ಬೇಡುವೆ ? ಇವನಿಗೆ ಧರ್ಮ ಸ್ವರೂಪವಾದರೂ ತಿಳಿದಿರುವುದೇ ? ಲೋಕೋತ್ತರಚರಿತನಾದ ಮುರಾರಿಯ ಪೂಜೆಯನ್ನು ನಿರಾಕರಿಸುವ ಪಾಪಿ ಇವನು." ಇಂತೆಂದು ಶಿಶುಪಾಲನನ್ನು ನೋಡಿ ಭೀಷ್ಮನು "ಶಿಶುಪಾಲ ! ಅವಿನಯದಿಂದ ಶ್ರೀಕೃಷ್ಣನು ಪೂಜಾರ್ಹನಲ್ಲವೆಂದೆ. ಈಗ ಕೇಳು ! ಇಲ್ಲಿ ನೆರೆದಿರುವ ಧರಣೀಶರಲ್ಲಿ ಅವನಿಂದ ವಿಜಿತರು, ಅವನ ದಯದಿಂದ ಪರಿಮುಕ್ತರು, ಅವನಿಗೆ ಶರಣಾಗತರು ಆಗದ ವೀರರಿರುವರೇ ? ಉತ್ತಮಜ್ಞಾನಿಯಾದ ಬ್ರಾಹ್ಮಣನು ಪೂಜ್ಯನಾಗುವನು. ಕ್ಷತ್ರಿಯನು ಅಮಿತವಿಕ್ರಮಯುತನಾದೊಡೆ ಕ್ಷತ್ರಿಯರಿಂದ ಪೂಜಿತನಾಗಲರ್ಹನು. ಜ್ಞಾನದಿಂದಲು, ವಿಕ್ರಮದಿಂದಲು ಮಾತ್ರವಲ್ಲದೆ ಸಕಲಕಲ್ಯಾಣಗುಣಗಳಿಂದಲು ವೃದ್ಧನಾದ ಶ್ರೀಕೃಷ್ಣನು ತ್ರಿಲೋಕ-ಜನರಿಗೂ ಪೂಜ್ಯನಾಗಿರುವನು. ಸಾವಿರ ವೃದ್ಧರಿದ್ದರೇನು ? ಗುಣವೃದ್ಧನನ್ನೇ ಪೂಜಿಸಬೇಕೆಂದು ತಿಳಿದು ಶ್ರೀಕೃಷ್ಣನನ್ನು ಸತ್ಕರಿಸಿದೆವು. ಅಚ್ಯುತನೊಬ್ಬನ ಪೂಜೆಯಿಂದ ಸರ್ವದೇವಮುನಿಗಳು, ಸರ್ವಸುಜನರು ತೃಪ್ತರಾಗುವರು. ಬಂಧುವೆಂದಲ್ಲ, ಉಪಕಾರಿ ಎಂದಲ್ಲ, ಸಜ್ಜನಾರ್ಚಿತನೆಂದು ತಿಳಿದು, ಶ್ರೀಶನ ಗುಣ ವೀರ್ಯ ಜಯ ಪ್ರಭಾವ ಗಳನ್ನು ತಿಳಿದು ಪೂಜಿಸಿರುವೆವು. ದಾನ, ದಾಕ್ಷ್ಯ, ಶ್ರುತ, ಶೌರ್ಯ, ತೇಜ, ಶ್ರೀ, ಕೀರ್ತಿ, ಬುದ್ಧಿ, ಧೃತಿ, ತುಷ್ಟಿ, ಪುಷ್ಟಿ ಮುಂತಾದ ಗುಣಾಳಿಗೆ ನಿಧಿಯಾದ ಕೃಷ್ಣ ನಲ್ಲದೆ ಮತ್ತಾರು ಪೂಜಾರ್ಹರು ಹೇಳು ? ಹೃಷೀಕೇಶನೆಂದರೆ ಏನೆಂದು ತಿಳಿದೆ ? ಮೂರ್ಖ! ಇವನು ಸರ್ವ ಬ್ರಹ್ಮರುದ್ರೇಂದ್ರಾದಿ ದೇವವಂದ್ಯನಾಗಿರುವನು. ಋತ್ವಿಕ್, ಗುರು, ನೃಪತಿ, ಪ್ರಿಯ, ಬಂಧು, ಪ್ರಭು ಸರ್ವವೂ ಶ್ರೀಕೃಷ್ಣನೆಂದು ತಿಳಿ ! ಪ್ರಕೃತಿ ಯನ್ನು ಉಪಾದಾನವಾಗಿರಿಸಿ, ಮಹದಾದಿ ತತ್ತ್ವಗಳನ್ನು ಭೂತದೇಹಗಳನ್ನು ಇಂದ್ರಿಯ ಮನೋಬುದ್ಧ್ಯಾದಿಗಳನ್ನು ಸೃಜಿಸಿ, ಉದ್ಭಿಜ್ಜ, ಅಂಡಜ, ಸ್ವೇದಜ, ಜರಾಯುಜ ರೆಂಬ ಚತುರ್ವಿಧ ಭೂತಗಳನ್ನು ಪುಟ್ಟಿಸಿ, ಸರ್ವಚರಾಚರಜಗತ್ಪ್ರಭುವಾಗಿರುವ ಕೃಷ್ಣನು ನಿನ್ನಂತಹ ಮೂರ್ಖನಿಗೆ ಪೂಜಾರ್ಹನಾಗನೆಂದರೆ ಯುಕ್ತವೇ ಆಗಿದೆ. ವೇದಗಳಲ್ಲಿ ಗಾಯತ್ರಿ, ಮನುಜರಲ್ಲಿ ನೃಪವರ, ನದಿಗಳಲ್ಲಿ ಗಂಗೆ, ನಕ್ಷತ್ರಗಳಲ್ಲಿ ಚಂದ್ರ, ತೇಜಸ್ಸು ಗಳಲ್ಲಿ ಸೂರ್ಯ, ಪಕ್ಷಿಗಳಲ್ಲಿ ಗರುಡ ಉತ್ತಮರೆನಿಸಿರುವಂತೆ, ಸಪ್ತದ್ವೀಪ ಲೋಕ ಗಳಲ್ಲಿ ದೇವ, ಮುನಿ ಮೊದಲಾದ ಸಮಸ್ತರಲ್ಲಿಯು ಶ್ರೀಕೃಷ್ಣನು ಸರ್ವೋತ್ತಮ ನಾಗಿರುವನು. ಅವನ ಮಹಿಮೆಯನ್ನು ಬಾಲನಾದ ನೀನರಿಯೆ ! ಸರ್ವ ಸುಜನರು

ಕೃಷ್ಣನೆಂದರೆ ವಂದಿಸುವರು; ಮುಕುಂದನೆಂದು ಪೂಜಿಸುವರು. ಅಂತೆಯೇ ಅರಿತರಿತು ನಾವೂ ಪೂಜಿಸಿರುವೆವು" ಎಂದು ಧಿಕ್ಕರಿಸಿ ನುಡಿದನು.

ಪರಶುರಾಮ ವೇದವ್ಯಾಸರನ್ನು ಪೂಜಿಸಿದರೂ ಕೃಷ್ಣನನ್ನು ಪೂಜಿಸಿದಂತೆಯೇ ಆಗುತ್ತಿತ್ತು. ಆದರೂ ಶ್ರೀಕೃಷ್ಣನು ವಿಷ್ಣುವೆಂಬ ವಿಷಯದಲ್ಲಿ ಕೆಲವರಿಗೆ ಸಂಶಯ ವಿತ್ತು. ಕೆಲ ದುಷ್ಟರು ಅವನು ಮನುಜನೆಂದೇ ತಿಳಿದಿದ್ದರು. ಅವರು ಪೂಜ್ಯರೆಂದು ಒಪ್ಪಿದ ವಿಪ್ರವರರಾದ ವ್ಯಾಸ ಭಾರ್ಗವರ ಪೂಜೆಯನ್ನು ಮೊದಲು ಮಾಡಿದ್ದರೆ, ಶ್ರೀಕೃಷ್ಣನು ಪ್ರಸಿದ್ಧನಾಗದೆಹೋಗಬೇಕಿತ್ತು. ದುಷ್ಟವಿವಾದವಿಲ್ಲದೆ ತತ್ವನಿಶ್ಚಯ ವಾಗದು. ಇಷ್ಟನ್ನು ಚಿಂತಿಸಿ, ಭೀಷ್ಮನು ಶ್ರೀಕೃಷ್ಣಪೂಜೆಯನ್ನು ಸಮರ್ಥಿಸಿದನು. ಭೀಷ್ಮನು ಸರ್ವಶಾಸ್ತ್ರವಿದನೆಂಬ ವಿಶ್ವಾಸವು ಎಲ್ಲರಿಗೂ ಇತ್ತು. ಕೇವಲ ವಿಷ್ಣು ದ್ರೋಹದಿಂದ ಶಿಶುಪಾಲನು ಕೃಷ್ಣನಿಂದೆಯನ್ನು ಮಾಡಿ, ಸುಜನರ ಕೋಪಕ್ಕೆ ತುತ್ತಾದನು.

ಆಗ ಸಹದೇವನು ಸಭೆಯಲ್ಲಿ ನಿಂತು "ಕೇಶಿಹಂತನಾದ ಕೃಷ್ಣನ ಪೂಜೆಯನ್ನು ನಾವು ತಿಳಿದೇ ಮಾಡಿರುವೆವು. ಇದನ್ನು ಸಹಿಸದೆ ಪ್ರತಿಭಟಿಸುವವನ ತಲೆಯಲ್ಲಿ ಈ ನನ್ನ ಎಡಗಾಲನ್ನಿಡುವೆನು" ಎಂದು ಗರ್ಜಿಸಿದನು. ಸಭೆಯಲ್ಲಿ ಯಾರೂ ಮಾತನಾ ಡದೆ ಸುಮ್ಮನಿದ್ದರು. ಆಕಾಶದಿಂದ ಸಹದೇವನ ಶಿರಸ್ಸಿನಲ್ಲಿ ಪುಷ್ಪವೃಷ್ಟಿಯನ್ನು ಕರೆದು ದೇವತೆಗಳು ಅಭಿನಂದಿಸಿದರು. ಸಾಧು! ಸಾಧು! ಎಂದು ಪಾಂಡವರನ್ನು ಪೊಗಳಿದರು. ಸಭಾಸದರೆಲ್ಲರೂ ವಿಸ್ಮಿತರಾದರು. ನಾರದನು ಆನಂದಭರಿತನಾಗಿ "ಕಮಲಪತ್ರಾಕ್ಷನಾದ ಶ್ರೀಕೃಷ್ಣನನ್ನು ಪೂಜಿಸದವನು ಜೀವನ್ಮೃತನೇ ಸರಿ! ಅಂತಹ ಪಾಪಿಯೊಡನೆ ಮಾತಾಡುವುದೂ ಹೇಯವೇ ಅಹುದು" ಎಂದು ನುಡಿದನು.

ಧರ್ಮರಾಜನು ವೇದವ್ಯಾಸ ಪರಶುರಾಮರನ್ನೂ ಅಂತರಿಕ್ಷದ ಬ್ರಹ್ಮರುದ್ರ ಶಕ್ರಾದಿಸುರರನ್ನೂ ಪೂಜಿಸಿ, ಯಜ್ಞ ಕರ್ಮವನ್ನು ಸಮಾಪ್ತಿಗೊಳಿಸಿದನು. ಆಗ ಶಿಶುಪಾಲನ ಸೇನಾನಿಯಾದ ಸುನೀಥನು ರೋಷಾರುಣಿತ ನೇತ್ರನಾಗಿ "ಬನ್ನಿ, ಕೃಷ್ಣಪಕ್ಷಪಾತಿಗಳಾದ ದುರ್ಮಾರ್ಗರನ್ನು ಕಾಲಿಂದ ಸವರಿಕೊಳ್ಳುವೆನು" ಎಂದು ಸಸೈನ್ಯನಾಗಿ ಯುದ್ಧಸನ್ನದ್ಧನಾದನು. ಯಜ್ಞಕ್ಕೆ ವಿಘ್ನಮಾಡಲು ಹವಣಿಸಿದ ದುಷ್ಟರನ್ನು ಕಂಡು, ಸಾಗರದಂತೆ ಉಕ್ಕೇರಿಬರುವ ಅವರ ಸೈನ್ಯವನ್ನು ನೋಡಿ, ಭೀಮಸೇನನು ಕಿಡಿಕಿಡಿಯಾದನು. ಧರ್ಮರಾಜನು ಎಲ್ಲವನ್ನು ವೀಕ್ಷಿಸಿ ಭಯಭ್ರಾಂತ ನಾಗಿ ಭೀಷ್ಮನಿಗೆ ಶರಣಾಗತನಾಗಿ "ತಾತ! ರಾಜರು ಕುಪಿತರಾಗಿ ಸಾಗರದಂತೆ ವಿಜೃಂಭಿಸುತ್ತಿರುವರು. ಯಜ್ಞ ವಿಘ್ನವಾಗುವುದೆಂದು ಹೆದರುತ್ತಿರುವೆನು. ಏನು ಗತಿ?" ಎಂದನು. ಭೀಷ್ಮನವನನ್ನು ಸಂತೈಸಿ "ಯಜ್ಞಕ್ಕೆ ಯಾವ ವಿಘ್ನವೂ ಬರುವುದಿಲ್ಲ. ಶ್ರೀಕೃಷ್ಣನಿರುವನು, ಭಯಪಡಬೇಡ! ನಾಯಿಯ ಬೊಗಳಿಕೆಗೆ ಸಿಂಹವು ಅಂಜುವುದೇ? ನಿದ್ರಿಸುವಾಗ ಬೊಗಳುವ ನಾಯಿಗಳು, ಸಿಂಹವು ಎಚ್ಚತ್ತು ಬಂದಾಗ ನಿಲ್ಲುವವೇ? ಶಿಶುಪಾಲನನ್ನು ಅನುಸರಿಸುವ ಈ ರಾಜಾಧಮರಿಗೂ ಕೇಡುಗಾಲ

ಬಂದಿದೆ. ಶಿಶುಪಾಲಾದಿಗಳಿಗೆ ವಿನಾಶಕಾಲದಲ್ಲಿ ವಿಪರೀತಬುದ್ಧಿಯು ಹುಟ್ಟಿದೆ. ಶ್ರೀಕೃಷ್ಣನು ಆರನ್ನು ಕೆಡಿಸಲಿರುವನೋ ಅವರ ಬುದ್ಧಿ ಮೊದಲು ಕೆಡುವುದು. ಚತುರ್ವಿಧ ಭೂತಗಳ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದ ಕೇಶವನಿಗೆದುರಿಲ್ಲ" ಎಂದು ಸಮಾಧಾನಪಡಿಸಿದನು.

ಭೀಷ್ಮನ ಮಾತಿಗೆ ಸಿಟ್ಟಾಗಿ ಶಿಶುಪಾಲನು "ಮುದಿಗೊಡ್ಡೆ ! ಕುಲಗೇಡಿ ! ವ್ಯರ್ಥ ಪ್ರಲಾಪಗಳಿಂದ ರಾಜರನ್ನು ಅಂಜಿಸುತ್ತಿರುವೆಯಾ? ಮುಪ್ಪಿಗೆ ಬುದ್ಧಿಕೆಟ್ಟು, ಅಧರ್ಮ ವಚನಗಳನ್ನಾಡುವ ನಿನ್ನನ್ನು ಯಾರೂ ಲೆಕ್ಕಿಸರು. ಧರ್ಮಸ್ವರೂಪವನ್ನು ನಿನ್ನ ಹೊರತನ್ಯರಾರೂ ತಿಳಿಯರೆಂದೆಣಿಸಿದ ನಿನ್ನ ಕುರುಡತನವಿಂದು ಹೊರಬಿತ್ತು. ಹಡಗಿಗೆ ಇನ್ನೊಂದನ್ನು ಕಟ್ಟಿದಾಗ, ಮೊದಲಿನ ಹಡಗು ಒಡೆದು ಮುಣಿಗಿದರೆ ಎರಡನೆಯದೂ ಅದರೊಂದಿಗೆ ಮುಣುಗುವಂತೆ, ನಿನ್ನ ಮಾತಿನಿಂದ ಕೃಷ್ಣಪೂಜೆಯನ್ನು ಮಾಡಿ ಪಾಂಡವರೂ ಕೆಟ್ಟರು. ನಿನ್ನಂತಹ ದುರಾತ್ಮಕರಿನ್ನಿಲ್ಲ. ಕೇಳು ! ಕೃಷ್ಣನನ್ನು ಪರಮಾತ್ಮನೆಂದೆ ! ಹೆಂಗಸನ್ನು ಕೊಂದು, ಬಂಡಿಯನ್ನು ಮುರಿದು, ಮುದಿಗಿಡಗಳನ್ನು ಕೆಡಹಿ, ಹುತ್ತಿನಷ್ಟು ಬೆಟ್ಟವನ್ನೆತ್ತಿ ಹಿಡಿದು, ಎತ್ತನ್ನು ಕುದುರೆಯನ್ನು ಕೊಂದು, ವೀರ ನೆಂದು ಮೆರೆಯುವ ಈ ಗೊಲ್ಲನನ್ನು ಅತಿರೇಕವಾಗಿ ಹೊಗಳಿದ ನಿನ್ನ ನಾಲಿಗೆಯನ್ನು ಸಾವಿರ ಹೋಳಾಗಿ ಮಾಡಿದರೂ ಅವನನ್ನು ಹೊಗಳುತ್ತಿರುವೆಯಲ್ಲವೇ ? ಅವನ ಮಹಿಮೆ ನನಗೆ ತಿಳಿಯದೇ? ಸ್ತ್ರೀಹತ್ಯ, ಗೋಹತ್ಯ, ಮಾತುಲಹತ್ಯ ಮಾಡಿದ ಪಾಪಿಗೆ ಅರ್ಘ್ಯವನ್ನು ಕೊಡಿಸಿದ ನೀನು ಸಾಮಾನ್ಯನೇ ? ಸಾಲ್ವನನ್ನು ವರಿಸಿದ್ದ ಅಂಬೆ ಯನ್ನು ಹಿಡಿದುತಂದ ನಿನ್ನ ಅನ್ಯಾಯವನ್ನು ಸಹಿಸದೆ ವಿಚಿತ್ರವೀರ್ಯನು ಅವಳನ್ನು ಬಿಡಿಸಿ ಕಳಿಸಿದನು. ಅಪುತ್ರಕನಾದ ನಿನ್ನಿಂದ ಧರ್ಮೋಪದೇಶವೇ ನಮಗೆ ?

"ಸಮುದ್ರತೀರದಲ್ಲಿ ಹಂಸಪಕ್ಷಿಯೊಂದು ನಿವಸಿಸಿ, ಅಲ್ಲಿ ಪಕ್ಷಿಗಣಗಳಿಗೆ ಧರ್ಮ ವನ್ನು ಉಪದೇಶಿಸಿ, ಅವರಿತ್ತ ಭಕ್ಷ್ಯಂಗಳನ್ನು ತಿಂದು ಕಾಲವನ್ನು ಕಳೆಯುತ್ತಿತ್ತು. ಒಂದು ದಿನ ಪಕ್ಷಿಗಳೆಲ್ಲವೂ ಆಹಾರಾರ್ಥವಾಗಿ ಹೋಗಿರುವಾಗ ಆ ಹಂಸವು ಅವುಗಳ ಅಂಡಗಳನ್ನು ಭಕ್ಷಿಸಿತು. ಇದನ್ನು ತಿಳಿದು ಪಕ್ಷಿಗಳು ದುಃಖಿಸಿ, ಆ ಹಂಸವನ್ನು ಹಿಡಿದು ಸಂಹರಿಸಿದವು. ನೀನೂ ಹಂಸದಂತೆ ಅಧರ್ಮವರ್ತಿಯಾಗಿದ್ದು ಇತರರಿಗೆ ಧರ್ಮೋಪ ದೇಶವನ್ನು ಮಾಡುತ್ತಿರುವೆ. ನಿನ್ನನ್ನು ನಂಬಿ ಕುರುಪಾಂಡವರು ಕೆಡುತ್ತಿರುವರು. ಉಪೇಂದ್ರನೆಲ್ಲರನ್ನೂ ಗೆದ್ದಿರುವನೆಂದೆ ! ಬೆರಳೆಟ್ಟು ತೋರು ಇವನಿಗೆ ಸೋತ ರಾಜ ನನ್ನು ! ಇವನ ಬಲ ಪರಾಕ್ರಮಗಳನ್ನು ನಾನರಿಯೆನೇ? ಹದಿನೇಳುಸಲ ಜರಾಸಂಧನಿಗೆ ಸೋತು ಓಡಿಹೋದ ಇವನೊಬ್ಬ ವೀರನೇ ? ಮೂರನೆಯಸಲ ಮುಂದೆ ನಿಂತಿರುವ ನನ್ನ ಕಣ್ಣಿನಿಂದ ನುಸುಳಿಹೋಗಲಹುದೇ ಇವನಿಗೆ? ಅನ್ಯಕೀರ್ತನದಂತೆ ಆತ್ಮ ನಿಂದೆಯೂ ಆತ್ಮಸ್ತುತಿಯಂತೆ ಅನ್ಯನಿಂದೆಯೂ ಆರ್ಯವರ್ತನವಲ್ಲವೆಂದು ತಿಳಿದೂ, ವಂದಿಯಂತೆ ನಂದನಂದನನನ್ನು ಹೊಗಳುವ ನಿನ್ನನ್ನೂ ನಿನ್ನ ಕೃಷ್ಣನನ್ನೂ ಈಗ ಸಂಹರಿಸುವೆನು" ಎಂದು ಆಯುಧವನ್ನೆತ್ತಿ ನಿಂತನು.

ಕೃಷ್ಣನೆಂದರೆ ವಂದಿಸುವರು; ಮುಕುಂದನೆಂದು ಪೂಜಿಸುವರು. ಅಂತೆಯೇ ಆರಿತರಿತು ನಾವೂ ಪೂಜಿಸಿರುವೆವು" ಎಂದು ಧಿಕ್ಕರಿಸಿ ನುಡಿದನು.

ಪರಶುರಾಮ ವೇದವ್ಯಾಸರನ್ನು ಪೂಜಿಸಿದರೂ ಕೃಷ್ಣನನ್ನು ಪೂಜಿಸಿದಂತೆಯೇ ಆಗುತ್ತಿತ್ತು. ಆದರೂ ಶ್ರೀಕೃಷ್ಣನು ವಿಷ್ಣುವೆಂಬ ವಿಷಯದಲ್ಲಿ ಕೆಲವರಿಗೆ ಸಂಶಯ ವಿತ್ತು. ಕೆಲ ದುಷ್ಟರು ಅವನು ಮನುಜನೆಂದೇ ತಿಳಿದಿದ್ದರು. ಅವರು ಪೂಜ್ಯರೆಂದು ಒಪ್ಪಿದ ವಿಪ್ರವರರಾದ ವ್ಯಾಸ ಭಾರ್ಗವರ ಪೂಜೆಯನ್ನು ಮೊದಲು ಮಾಡಿದ್ದರೆ, ಶ್ರೀಕೃಷ್ಣನು ಪ್ರಸಿದ್ಧನಾಗದೆಹೋಗಬೇಕಿತ್ತು. ದುಷ್ಟವಿವಾದವಿಲ್ಲದೆ ತತ್ವನಿಶ್ಚಯ ವಾಗದು. ಇಷ್ಟನ್ನು ಚಿಂತಿಸಿ, ಭೀಷ್ಮನು ಶ್ರೀಕೃಷ್ಣಪೂಜೆಯನ್ನು ಸಮರ್ಥಿಸಿದನು. ಭೀಷ್ಮನು ಸರ್ವಶಾಸ್ತ್ರವಿದನೆಂಬ ವಿಶ್ವಾಸವು ಎಲ್ಲರಿಗೂ ಇತ್ತು. ಕೇವಲ ವಿಷ್ಣು ದ್ರೋಹದಿಂದ ಶಿಶುಪಾಲನು ಕೃಷ್ಣನಿಂದೆಯನ್ನು ಮಾಡಿ, ಸುಜನರ ಕೋಪಕ್ಕೆ ತುತ್ತಾದನು.

ಆಗ ಸಹದೇವನು ಸಭೆಯಲ್ಲಿ ನಿಂತು "ಕೇಶಿಹಂತನಾದ ಕೃಷ್ಣನ ಪೂಜೆಯನ್ನು ನಾವು ತಿಳಿದೇ ಮಾಡಿರುವೆವು. ಇದನ್ನು ಸಹಿಸದೆ ಪ್ರತಿಭಟಿಸುವವನ ತಲೆಯಲ್ಲಿ ಈ ನನ್ನ ಎಡಗಾಲನ್ನಿಡುವೆನು" ಎಂದು ಗರ್ಜಿಸಿದನು. ಸಭೆಯಲ್ಲಿ ಯಾರೂ ಮಾತನಾ ಡದೆ ಸುಮ್ಮನಿದ್ದರು. ಆಕಾಶದಿಂದ ಸಹದೇವನ ಶಿರಸ್ಸಿನಲ್ಲಿ ಪುಷ್ಪವೃಷ್ಟಿಯನ್ನು ಕರೆದು ದೇವತೆಗಳು ಅಭಿನಂದಿಸಿದರು. ಸಾಧು! ಸಾಧು! ಎಂದು ಪಾಂಡವರನ್ನು ಪೊಗಳಿದರು. ಸಭಾಸದರೆಲ್ಲರೂ ವಿಸ್ಮಿತರಾದರು. ನಾರದನು ಆನಂದಭರಿತನಾಗಿ "ಕಮಲಪತ್ರಾಕ್ಷನಾದ ಶ್ರೀಕೃಷ್ಣನನ್ನು ಪೂಜಿಸದವನು ಜೀವನ್ಮೃತನೇ ಸರಿ! ಅಂತಹ ಪಾಪಿಯೊಡನೆ ಮಾತಾಡುವುದೂ ಹೇಯವೇ ಅಹುದು" ಎಂದು ನುಡಿದನು.

ಧರ್ಮರಾಜನು ವೇದವ್ಯಾಸ ಪರಶುರಾಮರನ್ನೂ ಅಂತರಿಕ್ಷದ ಬ್ರಹ್ಮರುದ್ರ ಶಕ್ರಾದಿಸುರರನ್ನೂ ಪೂಜಿಸಿ, ಯಜ್ಞ ಕರ್ಮವನ್ನು ಸಮಾಪ್ತಿಗೊಳಿಸಿದನು. ಆಗ ಶಿಶುಪಾಲನ ಸೇನಾಪತಿಯಾದ ಸುನೀಥನು ರೋಷಾರುಣಿತ ನೇತ್ರನಾಗಿ "ಬನ್ನಿ, ಕೃಷ್ಣಪಕ್ಷಪಾತಿಗಳಾದ ದುರ್ಮಾರ್ಗರನ್ನು ಕಾಲಿಂದ ಸವರಿ ಕೊಲ್ಲುವೆನು" ಎಂದು ಸಸೈನ್ಯನಾಗಿ ಯುದ್ಧಸನ್ನದ್ಧನಾದನು. ಯಜ್ಞಕ್ಕೆ ವಿಘ್ನಮಾಡಲು ಹವಣಿಸಿದ ದುಷ್ಟರನ್ನು ಕಂಡು, ಸಾಗರದಂತೆ ಉಕ್ಕೇರಿಬರುವ ಅವರ ಸೈನ್ಯವನ್ನು ನೋಡಿ, ಭೀಮಸೇನನು ಕಿಡಿಕಿಡಿಯಾದನು. ಧರ್ಮರಾಜನು ಎಲ್ಲವನ್ನು ವೀಕ್ಷಿಸಿ ಭಯಭ್ರಾಂತ ನಾಗಿ ಭೀಷ್ಮನಿಗೆ ಶರಣಾಗತನಾಗಿ "ತಾತ! ರಾಜರು ಕುಪಿತರಾಗಿ ಸಾಗರದಂತೆ ವಿಜೃಂಭಿಸುತ್ತಿರುವರು. ಯಜ್ಞ ವಿಘ್ನವಾಗುವುದೆಂದು ಹೆದರುತ್ತಿರುವೆನು. ಏನು ಗತಿ?" ಎಂದನು. ಭೀಷ್ಮನವನನ್ನು ಸಂತೈಸಿ "ಯಜ್ಞಕ್ಕೆ ಯಾವ ವಿಘ್ನವೂ ಬರುವುದಿಲ್ಲ. ಶ್ರೀಕೃಷ್ಣನಿರುವನು, ಭಯಪಡಬೇಡ! ನಾಯಿಯು ಬೊಗಳಿಕೆಗೆ ಸಿಂಹವು ಅಂಜುವುದೇ? ನಿದ್ರಿಸುವಾಗ ಬೊಗಳುವ ನಾಯಿಗಳು, ಸಿಂಹವು ಎಚ್ಚತ್ತು ಬಂದಾಗ ನಿಲ್ಲುವವೇ? ಶಿಶುಪಾಲನನ್ನು ಅನುಸರಿಸುವ ಈ ರಾಜಾಧಮರಿಗೂ ಕೇಡುಗಾಲ

ಬಂದಿದೆ. ಶಿಶುಪಾಲಾದಿಗಳಿಗೆ ವಿನಾಶಕಾಲದಲ್ಲಿ ವಿಪರೀತಬುದ್ಧಿಯು ಪುಟ್ಟಿದೆ. ಶ್ರೀಕೃಷ್ಣನು ಆರನ್ನು ಕೆಡಿಸಲಿರುವನೋ ಅವರ ಬುದ್ಧಿ ಮೊದಲು ಕೆಡುವುದು. ಚತುರ್ವಿಧ ಭೂತಗಳ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದ ಕೇಶವನಿಗೆದುರಿಲ್ಲ" ಎಂದು ಸಮಾಧಾನಪಡಿಸಿದನು.

ಭೀಷ್ಮನ ಮಾತಿಗೆ ಸಿಟ್ಟಾಗಿ ಶಿಶುಪಾಲನು "ಮುದಿಗೊಡ್ಡೆ ! ಕುಲಗೇಡಿ ! ವ್ಯರ್ಥ ಪ್ರಲಾಪಗಳಿಂದ ರಾಜರನ್ನು ಅಂಜಿಸುತ್ತಿರುವೆಯಾ? ಮುಪ್ಪಿಗೆ ಬುದ್ಧಿ ಕೆಟ್ಟು, ಅಧರ್ಮ ವಚನಗಳನ್ನಾಡುವ ನಿನ್ನನ್ನು ಯಾರೂ ಲೆಕ್ಕಿಸರು. ಧರ್ಮಸ್ವರೂಪವನ್ನು ನಿನ್ನ ಹೊರತನ್ಯರಾರೂ ತಿಳಿಯರೆಂದೆಣಿಸಿದ ನಿನ್ನ ಕುರುಡತನವಿಂದು ಹೊರಬಿತ್ತು. ಹಡಗಿಗೆ ಇನ್ನೊಂದನ್ನು ಕಟ್ಟಿದಾಗ, ಮೊದಲಿನ ಹಡಗು ಒಡೆದು ಮುಣಿಗಿದರೆ ಎರಡನೆಯದೂ ಅದರೊಂದಿಗೆ ಮುಣುಗುವಂತೆ, ನಿನ್ನ ಮಾತಿನಿಂದ ಕೃಷ್ಣಪೂಜೆಯನ್ನು ಮಾಡಿ ಪಾಂಡವರೂ ಕೆಟ್ಟರು. ನಿನ್ನಂತಹ ದುರಾತ್ಮಕರಿನ್ನಿಲ್ಲ. ಕೇಳು ! ಕೃಷ್ಣನನ್ನು ಪರಮಾತ್ಮನೆಂದೆ ! ಹೆಂಗಸನ್ನು ಕೊಂದು, ಬಂಡಿಯನ್ನು ಮುರಿದು, ಮುದಿಗಿಡಗಳನ್ನು ಕೆಡಹಿ, ಹುತ್ತಿನಷ್ಟು ಬೆಟ್ಟವನ್ನೆತ್ತಿ ಪಿಡಿದು, ಎತ್ತನ್ನು ಕುದುರೆಯನ್ನು ಕೊಂದು, ವೀರ ನೆಂದು ಮೆರೆಯುವ ಈ ಗೊಲ್ಲನನ್ನು ಅತಿರೇಕವಾಗಿ ಪೊಗಳಿದ ನಿನ್ನ ನಾಲಿಗೆಯನ್ನು ಸಾವಿರ ಹೋಳಾಗಿ ಮಾಡಿದರೂ ಅವನನ್ನು ಪೊಗಳುತ್ತಿರುವೆಯಲ್ಲವೇ ? ಅವನ ಮಹಿಮೆ ನನಗೆ ತಿಳಿಯದೇ? ಸ್ತ್ರೀಹತ್ಯ, ಗೋಹತ್ಯ, ಮಾತುಲಹತ್ಯ ಮಾಡಿದ ಪಾಪಿಗೆ ಅರ್ಘ್ಯವನ್ನು ಕೊಡಿಸಿದ ನೀನು ಸಾಮಾನ್ಯನೇ ? ಸಾಲ್ವನನ್ನು ವರಿಸಿದ್ದ ಅಂಬೆ ಯನ್ನು ಪಿಡಿದುತಂದ ನಿನ್ನ ಅನ್ಯಾಯವನ್ನು ಸಹಿಸದೆ ವಿಚಿತ್ರವೀರ್ಯನು ಅವಳನ್ನು ಬಿಡಿಸಿ ಕಳಿಸಿದನು. ಅಪುತ್ರಕನಾದ ನಿನ್ನಿಂದ ಧರ್ಮೋಪದೇಶವೇ ನಮಗೆ ?

"ಸಮುದ್ರತೀರದಲ್ಲಿ ಹಂಸಪಕ್ಷಿಯೊಂದು ನಿವಸಿಸಿ, ಅಲ್ಲಿ ಪಕ್ಷಿಗಣಗಳಿಗೆ ಧರ್ಮ ವನ್ನು ಉಪದೇಶಿಸಿ, ಅವರಿತ್ತ ಭಕ್ಷ್ಯಂಗಳನ್ನು ತಿಂದು ಕಾಲವನ್ನು ಕಳೆಯುತ್ತಿತ್ತು. ಒಂದು ದಿನ ಪಕ್ಷಿಗಳೆಲ್ಲವೂ ಆಹಾರಾರ್ಥವಾಗಿ ಪೋಗಿರುವಾಗ ಆ ಹಂಸವು ಅವುಗಳ ಅಂಡಗಳನ್ನು ಭಕ್ಷಿಸಿತು. ಇದನ್ನು ತಿಳಿದು ಪಕ್ಷಿಗಳು ದುಃಖಿಸಿ, ಆ ಹಂಸವನ್ನು ಹಿಡಿದು ಸಂಹರಿಸಿದವು. ನೀನೂ ಹಂಸದಂತೆ ಅಧರ್ಮವರ್ತಿಯಾಗಿದ್ದು ಇತರರಿಗೆ ಧರ್ಮೋಪ ದೇಶವನ್ನು ಮಾಡುತ್ತಿರುವೆ. ನಿನ್ನನ್ನು ನಂಬಿ ಕುರುಪಾಂಡವರು ಕೆಡುತ್ತಿರುವರು. ಉಪೇಂದ್ರನೆಲ್ಲರನ್ನೂ ಗೆದ್ದಿರುವನೆಂದೆ ! ಬೆರಳಿಟ್ಟು ತೋರು ಇವನಿಗೆ ಸೋತ ರಾಜ ನನ್ನು ! ಇವನ ಬಲ ಪರಾಕ್ರಮಗಳನ್ನು ನಾನರಿಯೆನೇ? ಹದಿನೇಳುಸಲ ಜರಾಸಂಧನಿಗೆ ಸೋತು ಓಡಿಹೋದ ಇವನೊಬ್ಬ ವೀರನೇ ? ಮೂರನೆಯಸಲ ಮುಂದೆ ನಿಂತಿರುವ ನನ್ನ ಕಣ್ಣಿನಿಂದ ನುಸುಳಿಹೋಗಲಹುದೇ ಇವನಿಗೆ? ಅನ್ಯಕೀರ್ತನದಂತೆ ಆತ್ಮ ನಿಂದೆಯೂ ಆತ್ಮಸ್ತುತಿಯಂತೆ ಅನ್ಯನಿಂದೆಯೂ ಆರ್ಯವರ್ತನವಲ್ಲವೆಂದು ತಿಳಿದೂ, ವಂದಿಯಂತೆ ನಂದನಂದನನನ್ನು ಪೊಗಳುವ ನಿನ್ನನ್ನೂ ನಿನ್ನ ಕೃಷ್ಣನನ್ನೂ ಈಗ ಸಂಹರಿಸುವೆನು" ಎಂದು ಆಯುಧವನ್ನೆತ್ತಿ ನಿಂತನು.

ಶಿಶುಪಾಲನ ಭಗವನ್ನಿಂದೆಯನ್ನೂ ಭಗವದ್ಭಕ್ತನಿಂದೆಯನ್ನೂ ಸಹಿಸಲಾರದೆ, ಶುದ್ಧ ಭಾಗವತ ಧರ್ಮ ನಿರತನಾದ ವೃಕೋದರನು ಅಗ್ನಿ ಪರ್ವತದಂತೆ ಉರಿದೆದ್ದನು. ಸ್ವಭಾವವಿಶಾಲ ಭೀಮಲೋಚನಕಮಲಗಳು ತಾಮ್ರರಕ್ತವಾದವು. ಗಂಟಿಕ್ಕಿದ ಹುಬ್ಬಿನಿಂದ ತ್ರಿಕೂಟವಾಯಿತು ಲಲಾಟ ; ದಂತಗಳು ಕಟಕಟಾತ್ಕಟಿಸಿದವು ; ಕೈಗಳು ಗದೆಯನ್ನು ಪರಾಮರ್ಶಿಸಿದವು. ಶಿಶುಪಾಲನು ಶ್ರೀಹರಿಯಿಂದಲೇ ನಿಗ್ರಹಿಸಲ್ಪಡತಕ್ಕ ವನೆಂದು ತಿಳಿದಿದ್ದರೂ, ಭೀಮನು ಭಗವದ್ದ್ರೋಹಿಶಾಸನವನ್ನು ವಚನದಿಂದಲಾದರೂ ಮಾಡಲೆಣಿಸಿ ಗದೆಯನ್ನೆತ್ತಿ ಶಿಶುಪಾಲನಮೇಲೆರಗಿದನು. ಅಷ್ಟರಲ್ಲಿ ಅವನನ್ನು ಹಿಡಿದು ನಿಲ್ಲಿಸಿ, ಭೀಷ್ಮನು ಶಾಂತಪಡಿಸಿದನು. ಶಿಶುಪಾಲನದನ್ನು ನೋಡಿ ನಕ್ಕು "ಭೀಷ್ಮ ! ಬಿಡು ಆ ಬಕಾರಿಯನ್ನು ! ನನ್ನ ಪರಾಕ್ರಮಾಗ್ನಿಗೆ ಶಲಭವಾಗಲಿರುವ ಅವನನ್ನು ತಡೆಯಲೇಕೆ ? ಈ ತಿಂಡಿಬಾಕನ ವೃಥಾಪ್ರಲಾಪಗಳಿಗಂಜುವನೇ ಈ ಶಿಶುಪಾಲ ?" ಎಂದು ತಾನೂ ಮುಂದೆ ಬಂದನು.

ಭೀಷ್ಮನು, ಭೀಮನಿಗೆ ಸಮೀಪದಲ್ಲಿ ಕೂತು ಅವನಿಗೆ ಶಿಶುಪಾಲವೃತ್ತಾಂತ ವನ್ನು ಹೇಳಿದನು—

"ಈ ಶಿಶುಪಾಲನು ಚೇದಿರಾಜನಾದ ದಮಘೋಷನಿಗೆ ಸಾತ್ವತಿಯೆಂಬ ವಸುದೇವಸೋದರಿಯಲ್ಲಿ ಜನಿಸಿದನು. ಹುಟ್ಟುವಾಗಲೇ ಇವನಿಗೆ ಮೂರು ಕಣ್ಣುಗಳು, ನಾಲ್ಕು ಭುಜಗಳಿದ್ದವು. ರಾಸಭದಂತೆ ಕೂಗಿ, ಅಳುವ, ಕೂಸಿನ ವಿಚಿತ್ರ ರೂಪವನ್ನು ಕಂಡು, ವಿಸ್ಮಿತರಾದ ತಂದೆ-ತಾಯಿಯರಿಗೆ ಅಶರೀರವಾಣಿ ಕೇಳಿಸಿತು— 'ಆಶ್ಚರ್ಯಪಡಬೇಡಿ ! ಯಾರು ಎತ್ತಿಕೊಂಡ ಸಮಯದಲ್ಲಿ ಇವನ ಬಾಹುದ್ವಯ, ಅಧಿಕನೇತ್ರಗಳು ಉದುರಿಬೀಳುವುವೋ ಅವನೇ ಇವನಿಗೆ ಮಾರಕನಾಗುವನು.' ಆ ಮಾತಿಗೆ ಆಶ್ಚರ್ಯಚಕಿತರಾದ ರಾಜದಂಪತಿಗಳು ಆ ಬಾಲನನ್ನು ಸಲಹುತ್ತಿದ್ದರು. ಈ ವಿಚಿತ್ರವನ್ನು ನೋಡಲು ಬಂದ ರಾಜರಿಗೆಲ್ಲ ಅವನನ್ನು ಕೊಟ್ಟು, ಮಾರಕನಾ ರೆಂದು ಪರೀಕ್ಷಿಸುತ್ತಿದ್ದರು. ಒಂದು ದಿನ ಕೃಷ್ಣಬಲರಾಮರು ಸೋದರತ್ತೆಯನ್ನು ನೋಡಲು ಬಂದರು. ಸಾತ್ವತಿಯು ಬಲರಾಮನ ಕೈಯಲ್ಲಿ ಕೂಸನ್ನಿತ್ತು, ಅನಂತರ ಶ್ರೀಕೃಷ್ಣನ ಕೈಯಲ್ಲಿ ಕೊಟ್ಟಳು. ಕೃಷ್ಣನು ಅವನನ್ನೆತ್ತಿಕೊಂಡ ತತ್ಕ್ಷಣವೇ ಮೂರನೆಯ ಕಣ್ಣು, ಹೆಚ್ಚಾದ ಕೈಗಳು ಉದುರಿ ಬಿದ್ದವು. ಅದನ್ನು ಕಂಡು, ಸಾತ್ವತಿಯು ಅಶರೀರ ವಾಕ್ಕನ್ನು ಸ್ಮರಿಸಿ, ಭೀತಳಾಗಿ, ಶ್ರೀಕೃಷ್ಣನನ್ನು ನೋಡಿ, 'ಕೃಷ್ಣ ! ಇವನು ಅಧರ್ಮಪ್ರವೃತ್ತನಾಗಿ, ನಿನಗೆ ಅಪರಾಧಗಳನ್ನು ಮಾಡಿದರೂ ಮೈದುನನೆಂದು ಅವನ್ನು ಮರೆತು ಮಮತೆಯಿಂದ ಕ್ಷಮಿಸು.'ಎಂದು ಕೇಳಿಕೊಂಡಳು. ಒಂದು ನೂರು ತಪ್ಪುಗಳನ್ನು ಸಹಿಸುವೆನೆಂದು ಕೃಷ್ಣನೂ ಮಾತುಕೊಟ್ಟನು. ಆದುದರಿಂದ ಶತಾಪರಾಧಿಯಾಗಲು ಶಿಶುಪಾಲನು ಕೃಷ್ಣನಿಂದಲೇ ಸಾಯುವನು. ಇದನ್ನರಿತೇ ಈ ದುರ್ಮದನು ಮೃತ್ಯುವಿನಿಂದ ಆಡುತ್ತಿರುವನು. ಅಂತೆಯೇ ನಿನ್ನನ್ನು ನಿರ್ಲಕ್ಷಿಸಿಯೂ ಬದುಕಿರುವನು, ಭೀಮಸೇನ !"

ಭೀಷ್ಮನು ಹೇಳಿದುದನ್ನು ಕೇಳಿ ಅವನನ್ನು ನಿರ್ಲಕ್ಷಿಸಿ, ಶಿಶುಪಾಲನು ಇಂತೆಂದನು—"ಕೇಶವನನ್ನು ವಂದಿಯಂತೆ ಪೊಗಳುವ ನಿನ್ನ ನಾಲಿಗೆಗೆ, ಮಾನ್ಯರಾದ ಬಾಹ್ಲೀಕ, ಕರ್ಣ, ದ್ರೋಣಾಚಾರ್ಯ, ದ್ರೌಣಿಗಳ ಸ್ತುತಿ ಬರದೇಹೋಯಿತು. ಪೃಥಿವೀಸರ್ವಸ್ವಪತಿಯಾದ ದುರ್ಯೋಧನನು ನಿನಗನ್ಯನಾದನು. ಜಯದ್ರಥ ನಂತಹ ವೀರನನ್ನು, ಆಚಾರ್ಯನಾದ ಕೃಪನನ್ನು, ಧನುರ್ಧರವರನಾದ ರುಕ್ಮಿಯನ್ನು ಪೊಗಳಬಾರದೇ ? ಹೊಗಳಬೇಕೆಂದಿದ್ದರೆ ಭೀಷ್ಮಕ, ಭಗದತ್ತ, ವಿರಾಟ, ದ್ರುಪದರಂತಹ ಮಹಾನುಭಾವರಿಲ್ಲವೇ ? ಸಿಂಹದ ಬಾಯಿಯಿಂದ ಮಾಂಸದ ಖಂಡಗಳನ್ನು ಆರಿಸಿ ತೆಗೆದು ತಿನ್ನುವ ಶಕುನಪಕ್ಷಿಯಂತೆ ಬೊಗಳುವ ನೀನು, ಸಿಂಹದ ಕೋಪದಿಂದ ಒಂದು ದಿನ ಅದಕ್ಕೆ ತುತ್ತಾಗುವಂತೆ ರಾಜಸಿಂಹರ ಸಹನೆಯಿಂದ ಬದುಕಿರುವೆ. ಇನ್ನು ಬದುಕಗೊಡೆವು. ನೀನು, ನಿನ್ನ ಪಾಂಡವರು, ನಿನ್ನ ದೇವ ಕೃಷ್ಣ ಎಲ್ಲರೂ ಇಲ್ಲವೆಂದೇ ತಿಳಿ !"

ಆ ಮಾತನ್ನಾಲಿಸಿ, ಭೀಷ್ಮನು ಗರ್ಹಿಸಿ ನಕ್ಕು "ಕೃಷ್ಣನೇ ಇಂದು ನಿನ್ನನ್ನು ಇಲ್ಲವೆನಿಸುವನು. ಮರಣವು ಸಮೀಪಿಸಿದವನು ಶ್ರೀಹರಿಗೆ ಎದುರಾಗಿ ನಿಲ್ಲಲಿ ! ಕೃಷ್ಣಪೂಜೆಯನ್ನು ನಾವು ಮಾಡಿರುವೆವು ; ನಿಜ" ಎಂದು ನುಡಿದನು.

ಶಿಶುಪಾಲನು ಕೃಷ್ಣಾಭಿಮುಖನಾಗಿ, "ಕೃಷ್ಣ ! ನಿಲ್ಲು, ಪ್ರತಿವೀರನಾಗಿ. ಇಂದು ನಿನ್ನ ಆಟವನ್ನು ಮುಗಿಸುವೆನು, ನಿನ್ನದಾಸರಾದ ಪಾಂಡವರನ್ನೂ ಕೊಲ್ಲುವೆನು" ಎಂದು ಉದ್ಯತಖಡ್ಗನಾಗಿ, ಮೇಲೆರಗಿದನು. ಆಗ ಕೃಷ್ಣನು ರಾಜರನ್ನು ನೋಡಿ, ಹೇತುಪೂರ್ಣವಾಗಿ ಇಂತು ನುಡಿದನು—

"ಈ ಸಾತ್ವತೀಸುತನು, ನಮಗೆ ಪರಮ ಶತ್ರುವೆಂದು ವಿದಿತವಾಯಿತಲ್ಲ; ನೀತಿ ನ್ಯಾಯಗಳಿಲ್ಲದ ಈ ದುರ್ಮಾರ್ಗನುಮಾಡಿದ ಅಪರಾಧಗಳು ನೂರಿಗೆ ಮೀರಿವೆ. ನಾನು ಪ್ರಾಗ್ಜ್ಯೋತಿಷಕ್ಕೆ ಹೋದಾಗ ಇವನು ಕಳ್ಳನಂತೆ ಬಂದು ದ್ವಾರಕೆಯನ್ನು ಸುಟ್ಟನು. ರೈವತ ಪರ್ವತದಲ್ಲಿ ಕ್ರೀಡಾಮಗ್ನರಾಗಿದ್ದ ನಿರಪರಾಧಿ ಯಾದವರನ್ನು ಕೊಂದು ಓಡಿ ಹೋದನು. ನಮ್ಮ ತಂದೆಯು ಅಶ್ವಮೇಧವನ್ನು ಮಾಡಲು ಬಿಟ್ಟ ಹಯವನ್ನು ಕದ್ದು ಬಚ್ಚಿಟ್ಟನು. ಹಸ್ತಿನಾವತಿಯಿಂದ ಸೌವೀರ ದೇಶಕ್ಕೆ ಹೋಗುತ್ತಿದ್ದ ಬಭ್ರು ಭಾರ್ಯಳನ್ನು ಅಪಹರಿಸಿದನು. ಕರೂಷರಾಜನಿಗೆಂದು ಸೋದರಮಾವನನ್ನೂ ಗೌರವಿಸದೆ ವೈಶಾಲಿಯನ್ನು ಮಾಯೋಪಾಯದಿಂದ ಕದ್ದನು. ನಮ್ಮ ಅತ್ತೆ ಸಾತ್ವತಿಯು ನನ್ನನ್ನು ಪ್ರಾರ್ಥಿಸಿದುದರಿಂದ ಈ ದುರಾತ್ಮನು ಮಾಡಿದ ಅಪರಾಧಶತಂಗಳನ್ನು ಸಹಿಸಿದೆನು. ಈಗ ನೀವೆಲ್ಲರೂ ನೋಡುತ್ತಿರುವಂತೆ ನಿಷ್ಕಾರಣವಾಗಿ ನನ್ನನ್ನೂ ಮಹಾತ್ಮನಾದ ಭೀಷ್ಮನನ್ನೂ ನಿಂದಿಸಿ, ಮಹಾಪರಾಧವೆಸಗಿರುವನು. ಇನ್ನು ಇವನನ್ನು ಸಹಿಸಲಾರೆನು" ಎಂದನು.

ಶಿಶುಪಾಲನಾಮಾತನ್ನು ಲೆಕ್ಕಿಸದೆ, ತನ್ನನ್ನು ಗರ್ಹಿಸುತ್ತಿರುವ ರಾಜನ್ಯರ ಮಾತಿಗೆ ಕಿವಿಗೊಡದೆ, ಕೃಷ್ಣನನ್ನು ಅಪಹಸಿಸಿ ಇಂತೆಂದನು—

"ಕೃಷ್ಣ ! ನಿನ್ನ ಕ್ಷಮಾಸಹನೆಗಳನ್ನು ಗಣಿಸುವವರಾರು ? ನಿನ್ನ ಪ್ರೀತಿ ನಿನ್ನ ಕೋಪ ಎರಡೂ ನನಗೆ ಬೇಕಿಲ್ಲ ; ನನಗಿತ್ತವಳನ್ನು ಅಪಹರಿಸಿದ ನಿನಗೆ ರೋಷವಿಲ್ಲ ; ನಾಚಿಕೆಯಿಲ್ಲ, ನಿನಗಂಜುವವನಲ್ಲ ಈ ಶಿಶುಪಾಲ."

ಇಂತು ಪರುಷವಚನಗಳನ್ನಾಡಿದ ಶಿಶುಪಾಲನನ್ನು ಕೂಡಲೆ ಕೊಲ್ಲಲು ನಿಶ್ಚಯಿಸಿ, ಶ್ರೀಕೃಷ್ಣನು ತನ್ನ ಚಕ್ರವನ್ನು ಸ್ಮರಿಸಿದನು. ತತ್‌ಕ್ಷಣವೇ ಕೈಗೆಬಂದ ಚಕ್ರವನ್ನೆತ್ತಿ ಕೃಷ್ಣನು ಉಚ್ಚಸ್ವರದಿಂದ 'ರಾಜನ್ಯರೇ ! ನೋಡಿ ನನ್ನ ಭಕ್ತರಾದ ಪಾಂಡವರನ್ನು ನಿಂದಿಸುವ ಪಾಪಿಯ ಗತಿಯನ್ನು!' ಎಂದು ನುಡಿದು, ಚಕ್ರವನ್ನು ಪ್ರಯೋಗಿಸಿದನು. ಅನಲಜ್ವಾಲಾಭೀಲವಾದ ಸುದರ್ಶನವು ಶಿಶುಪಾಲನ ಶಿರವನ್ನು ಕತ್ತರಿಸಿ ರಕ್ತಧಾರೆಗಳೊಂದಿಗೆ ಕೆಳಗುರುಳಿಸಿತು. ವಜ್ರಘಾತದಿಂದ ಉರುಳುವ ಬೆಟ್ಟದಂತೆ ಶಿಶುಪಾಲನು ಭೂಮಿಯಲ್ಲಿ ಬಿದ್ದನು. ಅವನ ದೇಹದಿಂದ ದಿವ್ಯತೇಜವೊಂದು ಹೊರಟು, ದಿಕ್ಕುಗಳನ್ನು ಬೆಳಗುತ್ತಾ, ಶ್ರೀಹರಿಯ ಪಾದಾರವಿಂದವನ್ನು ಹೊಕ್ಕಿತು. ಅದನ್ನು ಕಂಡು ಸಭಾಸದರು ಆಶ್ಚರ್ಯಸಂಭ್ರಮಾನ್ವಿತರಾಗಿ, ಎದ್ದುನಿಂತು, 'ಅನಂತ ! ಕೇಶವ ! ಅಂಬುಜನಾಭ ! ಗೋವಿಂದ ! ಜಯ ಜಯ !' ಎಂದು ಪ್ರೀತಿಯಿಂದ ಹೊಗಳಿದರು. ಅಂಬರದಿ ವಿಮಾನಗಳಲ್ಲಿ ತುಂಬಿನಿಂತ ಸುರಕದಂಬವು ಅಂಭುಜನಾಭನ ಮೇಲೆ ಸುಮವೃಷ್ಟಿಕರೆದು ಕೊಂಡಾಡಿತು. ಅಮರದುಂದುಭಿಗಳು ಮೊಳಗಿದವು. ಶಿಶುಪಾಲನ ದೇಹದಲ್ಲಿದ್ದ ಜಯನೆಂಬ ವಿಷ್ಣುಪಾರ್ಷದನು ಶಾಪಮುಕ್ತನಾಗಿ ಹರಿಲೋಕವನ್ನೂ, ಹಿರಣ್ಯಕಶಿಪುನೆಂಬ ದೈತ್ಯನು ಅಂಧಂತಮವನ್ನೂ ಹೊಂದಿದರು. ಸಭೆಯ ರಾಜರು ಕೆಲವರು ಶ್ರೀಕೃಷ್ಣನ ವಿಕ್ರಮ ಭಕ್ತವಾತ್ಸಲ್ಯಗಳನ್ನು ಪೊಗಳಿ ನಮಿಸಿದರು. ಕೆಲವರು ಕೈ ಕೈ ಹಿಸುಕಿ, ಮನದಲ್ಲೆ ಮರುಗಿದರು.

ಶಿಶುಪಾಲನಿಗೆ ಸಂಸ್ಕಾರವನ್ನು ಮಾಡಿಸಿ, ಶ್ರೀಶನು ಅವನ ಮಗನಿಗೆ ಚೇದಿ-ರಾಜ್ಯದಲ್ಲಿ ಅಭಿಷೇಕಿಸಿದನು. ಇಂತು ಪ್ರಶಾಂತವಿಘ್ನವೂ, ಶುಭಸಂರಂಭವೂ ಆದ ಯಜ್ಞವನ್ನು ಮುಗಿಸಿ, ಧರ್ಮರಾಜನು ರಾಜಸೂಯಯಾಗ ರಕ್ಷಕನಾದ ಅಧೋಕ್ಷಜನ ಕೃಪೆಯಿಂದ ಕೃತಾರ್ಥನಾದನು. ಅವಭೃಥಸ್ನಾನವನ್ನು ಮಾಡಿ, ಚಕ್ರಧರನಿಂದಲು ಅನುಜಚಕ್ರದಿಂದಲು ವಿರಾಜಿಸುವ ಧರ್ಮಜನನ್ನು ಸಮೀಪಿಸಿ, ಸಮಸ್ತರಾಜನ್ಯರು 'ರಾಜನ್ ! ಧರ್ಮಜ್ಞನಾದ ನೀನು ಸಾಮ್ರಾಜ್ಯವನ್ನು ಹೊಂದಿ, ರಾಜಸೂಯ-ಯಾಗವನ್ನೂ ಮಾಡಿ, ಅಜಮೀಢವಂಶವನ್ನು ಬೆಳಗಿಸಿದೆ. ಬಹುಪುಣ್ಯವನ್ನೂ ಸಂಪಾದಿಸಿದೆ. ನಿನ್ನ ಯಾಗದ ಮಹೋತ್ಸವವನ್ನು ಕಂಡು, ನಿನ್ನ ಸತ್ಕಾರಗೌರವಗಳನ್ನು ಪಡೆದು ನಾವು ಕೃತಾರ್ಥರಾದೆವು. ಉತ್ತಮಶ್ಲೋಕನ ಭಕ್ತರಾದ ನಿಮಗೆ ದುರ್ಲಭವಿಲ್ಲ. ಒಳ್ಳೆಯದು ! ಅಪ್ಪಣೆ ಕೊಡು !' ಎಂದು ಪ್ರಶಂಸಿಸಿ, ತಮ್ಮ ತಮ್ಮ ದೇಶಗಳಿಗೆ ಹೊರಟುಹೋದರು. ಪಾಂಡವರು ಅವರನ್ನು ಅನುಗಮನ ಸತ್ಕಾರಗಳಿಂದ ಪೂಜಿಸಿ ಕಳಿಸಿದರು.

ಧರ್ಮರಾಜನ ಆಜ್ಞೆಯಂತೆ ಧೃಷ್ಟದ್ಯುಮ್ನನು ವಿರಾಟನನ್ನು, ಧನಂಜಯನು ದ್ರುಪದನನ್ನು, ಭೀಮಸೇನನು ಭೀಷ್ಮಧೃತರಾಷ್ಟ್ರರನ್ನು, ಸಹದೇವನು ದ್ರೋಣಾಶ್ವತ್ಥಾಮರನ್ನು, ನಕುಲನು ಸಪುತ್ರಸುಬಲನನ್ನು, ಶಲ್ಯನನ್ನು, ದ್ರೌಪದೇಯರು ಪಾರ್ವತೀಯರನ್ನು, ದೇಶಸೀಮಾಪರ್ಯಂತವಾಗಿ ಅನುಗಮಿಸಿ ಬಂದರು. ವಿಪ್ರವರರು ಧರ್ಮಜನನ್ನು ಆಶೀರ್ವದಿಸಿ, ಮನೆಗಳಿಗೆ ಹೋದರು. ಆಗ ಶ್ರೀಕೃಷ್ಣನು ದ್ವಾರಕೆಗೆ ಹೊರಡಲನುವಾಗಿ ಧರ್ಮರಾಜನನ್ನು ಕಂಡನು. ಅವನು "ಶ್ರೀಕೃಷ್ಣ! ನಿನ್ನ ಪ್ರಸಾದದಿಂದ ಮಹಾಯಜ್ಞವು ಸಮಾಪ್ತಿಯಾಯಿತು. ಸಕಲ ಕ್ಷತ್ರಿಯರೂ ನನ್ನ ಅಧೀನರಾದರು! ಕೀರ್ತಿ ದಿಗಂತವ್ಯಾಪ್ತವಾಯಿತು. ಸುಗುಣಗಣನಿಧಿಯಾದ ನಿನ್ನಿಂದ ನನ್ನ ವಂಶವೇ ಪಾವನವಾಯಿತು. ದ್ವಾರಕೆಯಲ್ಲಿದ್ದರೂ ನಮ್ಮನ್ನು ಮರೆಯದೆ ಸಲುಹುವ ಭಾರ ನಿನ್ನದು ಪ್ರಭೂ! ನಾವು ನಿನ್ನನ್ನಗಲಿ ಕ್ಷಣವಾದರೂ ಇರಲಾರೆವು. ಹೊರಡಲನುವಾದವನನ್ನು ಬೇಡ ಎನಲಾರೆವು. ಕೃಷ್ಣ! ನಿನ್ನ ಚರಣ ದಾಸರನ್ನು ಮತ್ತೆ ಶುಭದರ್ಶನದಿಂದ ಉದ್ಧರಿಸು" ಎಂದು ಕಷ್ಟದಿಂದ ಕಳುಹಿಸಿದನು.

ಶ್ರೀಕೃಷ್ಣನು ಕುಂತಿಗೆ ವಂದಿಸಿ, ಧರ್ಮಜನಿಗೆ "ಸಾಮ್ರಾಜ್ಯವು ಪ್ರಾಪ್ತವಾಯಿತು. ಸರ್ವಜೀವರಿಗೆ ಪರ್ಜನ್ಯನಂತೆ, ಪಕ್ಷಿಗಳಿಗೆ ಫಲವೃಕ್ಷದಂತೆ, ಅಮರರಿಗೆ ಇಂದ್ರನಂತೆ ರಕ್ಷಕನಾಗಿ, ಪ್ರಜಾರಂಜನವನ್ನು ಮಾಡು! ಧರ್ಮವನ್ನು ಅಪ್ರಮತ್ತನಾಗಿ ನಡೆಸು" ಎಂದು ಹಿತನುಡಿದು, ದ್ರೌಪದೀಸುಭದ್ರೆಯರನ್ನು ಸಂತೈಸಿ, ರಥಾರೋಹಣ ಮಾಡಿದನು. ಸ್ವಸ್ತಿವಾಚನವನ್ನು ಮಾಡಿ, ವೇದಘೋಷದಿಂದ ಆಶೀರ್ವದಿಸಿದ ಬ್ರಾಹ್ಮಣವರರಿಗೆ ಸಂತೃಪ್ತಿಯಾಗಿ ದಕ್ಷಿಣೆಗಳನ್ನಿತ್ತು, ಗರುಡಕೇತನವಾದ ರಥದಲ್ಲಿ ಪ್ರಯಾಣಿಸಿದನು. ಪಾದಚಾರಿಗಳಾಗಿ ಪಾಂಡವರು ಪ್ರಿಯನಾದ ಕೃಷ್ಣನನ್ನು ಅನುಗಮಿಸಿ, ಪ್ರೇಮಬಾಷ್ಪತುಂದಿಲನಯನರಾಗಿ ನೋಡುತ್ತಾ ನಿಂತು, ಅವನನ್ನು ಹೃದಯಮಂದಿರದಿ ನಿಲ್ಲಿಸಿ, ಹಿಂದಿರುಗಿ, ಅವನ ಚಿಂತೆಯಲ್ಲೇ ವಾಸಮಾಡಿದರು. ಅವರು ಯಜ್ಞಸಮಾಪ್ತಿಯನ್ನು ಮಾಡಿಸಿದ ಶ್ರೀವೇದವ್ಯಾಸನನ್ನು ಪೂಜಿಸಿದರು. ಆ ಮಹರ್ಷಿಯು 'ಧರ್ಮರಾಜ! ಹದಿಮೂರುವರ್ಷಗಳಾದ ಮೇಲೆ ಮಹಾಯುದ್ಧವಾಗಲಿರುವುದು. ಅದರಿಂದ ಭೂಭಾರಹರಣಾವತಾರನಾದ ಶ್ರೀಕೃಷ್ಣನು ಸಂತುಷ್ಟನಾಗುವನು. ದೈವೇಚ್ಛೆಗೆ ಎದುರಿಲ್ಲ! ದುರ್ಯೋಧನಾಪರಾಧದಿಂದ ಜರುಗುವ ಯುದ್ಧದಲ್ಲಿ ಭೀಮಾರ್ಜುನರು ವಿಜೃಂಭಿಸಿ, ಶತ್ರುನಾಶವನ್ನು ಮಾಡುವರು. ರಾಜ್ಯವು ನಿನ್ನದಾಗುವುದು. ಇಂದು ಸ್ವಪ್ನದಲ್ಲಿ ಕೈಲಾಸಪತಿ ಮಹಾರುದ್ರನು ದಕ್ಷಿಣಾಮುಖನಾಗಿ ಕೂತಿರುವುದನ್ನು ನೋಡುವೆ, ಚಿಂತಿಸಬೇಡ! ಅಪರಿಹಾರ್ಯವನ್ನು ಚಿಂತಿಸಿ, ಫಲವಿಲ್ಲ. ಅಪ್ರಮತ್ತನಾಗಿರು! ನಿನಗೆ ಒಳ್ಳೆಯದಾಗಲಿ!' ಎಂದು ಆಶೀರ್ವದಿಸಿ, ಬದರಿಕಾಶ್ರಮಕ್ಕೆ ಹೋದನು.

ದುರ್ಯೋಧನನು ಶಕುನಿದುಶ್ಶಾಸನರಿಂದ ಕೂಡಿ, ಮಯಸಭೆಯ ವಿಚಿತ್ರಗಳನ್ನು ನೋಡುವ ಕುತೂಹಲದಿಂದ ಇಂದ್ರಪ್ರಸ್ಥದಲ್ಲೇ ನಿಂತನು. ಧರ್ಮರಾಜನ

ವೈಭವವು ಹೃದಯಜ್ವಾಲೆಯಾಗಿ, ಅಗ್ನಿನಿಕ್ಷಿಪ್ತ ಕಮಲದಂತೆ ಅವನು ಬಾಡಿ, ಚಿಂತಾಕ್ರಾಂತನಾದನು.

ಧರ್ಮರಾಜನು ತನ್ನಿಂದ ಮುಂದಾಗುವ ಸಮರಘೋರವನ್ನು ಚಿಂತಿಸಿ, ತಾನು ಕ್ಷಮಾದೀಕ್ಷೆಯನ್ನು ವಹಿಸಿ, ಅನುಜರನ್ನೂ ಅಪ್ರಮತ್ತರಾಗಿರುವಂತೆ ಶಾಸಿಸಿದನು.

## ದುರ್ಯೋಧನ ಪರಾಭವ

ದುರ್ಯೋಧನನು ರಾಜಸೂಯಾವಭೃಥವಾದನಂತರ ಹೋಗದೆ ಮಯಸಭೆಯನ್ನು ನೋಡಲು ಉಳಿದಿದ್ದನೆಂದೆನಲ್ಲವೇ ? ಆಗ ಒಂದುದಿನ ಶ್ರೀಕೃಷ್ಣನು ವಿಚಿತ್ರ ರತ್ನಸ್ಥಗಿತವಾಗಿ ಚಿತ್ರಪದಾರ್ಥಗಳಿಂದ ತುಂಬಿದ ಮಯಸಭೆಯಲ್ಲಿ ಧರ್ಮರಾಜನ ಹತ್ತಿರ ದಿವ್ಯಸಿಂಹಾಸನದಿ ಕುಳಿತಿದ್ದನು. ರುಕ್ಮಿಣಿ ಮುಂತಾದ ಕೃಷ್ಣರಮಣಿಯರು ದಿವ್ಯಾಲಂಕಾರಮಂಡಿತೆಯರಾಗಿ, ದ್ರೌಪದಿಯ ಹತ್ತಿರ ಕುಳಿತಿದ್ದರು. ಬಲರಾಮ ಸಾತ್ಯಕಿಯರೂ ಪಾಂಡವರೊಡನೆ ಧರ್ಮರಾಜನನ್ನು ಸುತ್ತುಗಟ್ಟಿ ಆಸೀನರಾಗಿದ್ದರು. ವಿಷ್ಣುವಿನಿಂದಧಿಷ್ಠಿತವಾದ ಬ್ರಹ್ಮಸಭೆಯಂತೆ ಆ ಸಭೆಯು ಶೋಭಿಸುತ್ತಿತ್ತು.

ಆಗ ಶುಭ್ರವಸನಧಾರಿಗಳು ಕಿರೀಟಕುಂಡಲಧಾರಿಗಳು ಆದ ರಾಜರ ಸಭೆಯಲ್ಲಿ ಕು ರು ರಾ ಜ ನು ಅನುಜರೊಡನೆ ಪ್ರವೇಶಿಸಿದನು. ಖಡ್ಗಧಾರಿಯಾಗಿ ಬಂದ ದುರ್ಯೋಧನನು ಹರಿನೀಲನಿರ್ಮಿತವಾಗಿ ಬೇಗ ಗೋಚರವಾಗದಿರುವ ಮಹಾದ್ವಾರವನ್ನು ಬಿಟ್ಟು, ಸ್ಫಟಿಕನಿರ್ಮಿತವಾಗಿ ಅಂತಃಪದಾರ್ಥಸ್ಫೋರಕವಾದ ಕೃತ್ರಿಮದ್ವಾರದಲ್ಲಿ ಪ್ರವೇಶಿಸಲು ಹೋಗಿ, ತಲೆತಗುಲಿಸಿಕೊಂಡನು. ಇದನ್ನು ನೋಡಿ, ನಕುಲ ಸಹದೇವರು ಅವನನ್ನು ಒಳಗೆ ತಂದುಬಿಟ್ಟರು. ಅವಮಾನಿತನಾದ ದುರ್ಯೋಧನನು ಅವರನ್ನು ದೂರಮಾಡಿ, ಹರ್ಮ್ಯದ ಭರ್ಮಾದಿಶಿರಿಯನ್ನು ನೋಡಿ ಉರಿಯುತ್ತಾ ಕೃತ್ರಿಮ ಸರೋವರವನ್ನು ಕಂಡು, ವಸ್ತ್ರದ ಅಂಚಲವನ್ನೆತ್ತಿಪಿಡಿದು ನಡೆಯಲು ಹೋದನು. ತನ್ನ ಅವಿವೇಕಕ್ಕೆ ನಾಚಿದ ದುರ್ಯೋಧನನು ಮುಂದೆ ನೀಲರತ್ನಕಾಂತಿಯಿಂದ ತೋರದಿದ್ದ ಜಲಾಕರವನ್ನು ಕೃತ್ರಿಮವೆಂದು ತಿಳಿದು ಬೇಗ ಬೇಗ ನಡೆದು ಅದರಲ್ಲಿ ಬಿದ್ದನು.

ಶ್ರೀಕೃಷ್ಣನು ಭೂಭಾರಹರಣಕಾರಣವಾದ ಭಾರತಯುದ್ಧಕ್ಕೆ ಬೀಜವನ್ನು ಬಿತ್ತಲೆಣಿಸಿ, ಸೂಚಿಸಲು, ಭೀಮನು ಗಟ್ಟಿಯಾಗಿ ನಕ್ಕನು. ಅವನನ್ನನುಸರಿಸಿ, ದ್ರೌಪದಿ ಮುಂತಾದ ವನಿತೆಯರು ಕಿಲಕಿಲ ನಕ್ಕು, ಕೃಷ್ಣನ ವದನಚಂದ್ರವನ್ನು ನೋಡಿದರು. ಶ್ರೀಹರಿಯು ಭೀಮನನ್ನೀಕ್ಷಿಸಿ, ಮಾತಾಡಲಿದ್ದವನಂತೆ ತೋರಿ, ಮತ್ತೆ ನಸುನಕ್ಕು ಸುಮ್ಮನಿದ್ದನು. ಅವರ ಅಪಹಸನವನ್ನು ವಾರಿಸಿ, ಧರ್ಮಜನು ದೂತರಿಂದ ವಸ್ತ್ರಮಾಲ್ಯಗಳನ್ನು ದುರ್ಯೋಧನನಿಗೆ ಕಳಿಸಿದನು. ದ್ರೌಪದಿ ಭೀಮರಲ್ಲಿ ಕ್ರೋಧದಿಂದಲೂ, ಬಿದ್ದ ಲಜ್ಜೆಯಿಂದಲೂ, ವಸ್ತ್ರಮಾಲ್ಯಗಳನ್ನು ತಿರಸ್ಕರಿಸಿ, ದುರ್ಯೋಧನನು ಶಕುನಿಯನ್ನು ಕರೆದುಕೊಂಡು ಹೊರಟು ಹಸ್ತಿನಾವತಿ ಸೇರಿದನು.

ಶ್ರೀಕೃಷ್ಣನೂ ತನ್ನ ಕಾರ್ಯವಾಯಿತೆಂದು ತರುಣೀಸೋದರಸಹಿತನಾಗಿ ದ್ವಾರಕೆಗೆ ಹೋದನು. ದುರ್ಯೋಧನನು ಶಕುನಿಯನ್ನು ಏಕಾಂತದಲ್ಲಿ ನೋಡಿದನು. ಚಿಂತೆಗೆ ಕಾರಣವೇನೆಂದು ಕೇಳಿದ ಶಕುನಿಗೆ 'ಮಾವ ! ವೃಕೋದರನನ್ನು ಕೊಂದು, ಕೃಷ್ಣನ ಅಗ್ರಪೂಜೆಯನ್ನೂ ನಿವಾರಿಸಬೇಕೆಂದಿತ್ತು. ಏನು ಮಾಡಲಿ ! ಅಂಜಿ ಸುಮ್ಮನಾದೆನು. ಪಾಂಡವರು ಐಶ್ವರ್ಯಮದಮತ್ತರಾಗಿ ನನ್ನನ್ನು ಅಬಲೆಯರ ಮಧ್ಯದಲ್ಲಿ ನಕ್ಕು, ಗೇಲಿಮಾಡಿರುವರು. ಸರ್ವಭೂಪಾಲರಿಂದ ಕಪ್ಪಕಾಣಿಕೆಗಳನ್ನು ಸ್ವೀಕರಿಸಿ ಮದಾಂಧರಾಗಿರುವ ಇವರ ಐಶ್ವರ್ಯವನ್ನು ಕಸಿದು, ರಾಜ್ಯಭ್ರಷ್ಟರನ್ನಾಗಿಸದಿದ್ದೆಡೆ ನಾನು ಬದುಕಿ ಫಲವೇನು ? ಅವಮಾನಿತನಾಗಿ ಜೀವಿಸಿರುವುದಕ್ಕಿಂತ ಸಾಯುವುದು ಲೇಸಲ್ಲವೇ ? ಇಂದ್ರನಾದರೂ ರಣದಲ್ಲಿ ಪಾಂಡವರನ್ನು ಜಯಿಸಲಾರನು. ಇನ್ನು ನಾವಿವರನ್ನು ಬಾಹುಬಲದಿಂದ ಜಯಿಸಿ, ಸಿರಿಯನ್ನು ಕಸಿಯಲಾಗುವುದೇ ?' ಇಂತು ನುಡಿದು, ತಲೆ ತಗ್ಗಿಸಿ ಕೂತಿದ್ದ ಕೌರವೇಶನಿಗೆ ಶಕುನಿಯು—

"ದುರ್ಯೋಧನ ! ಅವನೀರಾಜ್ಯವ್ಯಾಪಾರವಿಹೀನನಾಗಿ ಕುಂದಿರುವ ನಿನ್ನನ್ನು ಕಂಡು ಖೇದವಾಗಿದೆ. ನಿಟ್ಟುಸಿರಿಡುವ ನಿನ್ನ ಮುಖಕಮಲವು ನೀರಿನಿಂದ ಹೊರಗೆಸೆದ ಕಮಲದಂತೆ ಬಾಡಿದೆ. ನಿನಗೇನು ಕಡಿಮೆ ?" ಎಂದನು. ಹೀಗೆಂದ ಶಕುನಿಯ ಮಾತಿಗೆ ಸ್ವಲ್ಪ ಧೈರ್ಯ ಬಂದು ದುರ್ಯೋಧನನು "ಮಾವ ! ನೋಡಲಿಲ್ಲವೇ ಧರ್ಮಜನ ಸಭೆಯನ್ನು ? ಇಂತಹ ಮನೋಜ್ಞವಾದ ಸಭೆಯು ಮತ್ತೆಲ್ಲಾದರೂ ಇರುವುದೇ ? ಎಂತು ಪಡೆದನೀಸಭೆಯನ್ನು ಧರ್ಮಜ ? ಭೂಮೀಶರೆಲ್ಲರೂ ವೈಶ್ಯರಂತೆ ಬಾಗಿ, ಭಯಭಕ್ತಿಗಳಿಂದ ಅವನಿಗೆ ಕಾಣಿಕೆ ಇತ್ತು, ಅವನನ್ನು ಚಕ್ರವರ್ತಿಯೆಂದು ಸ್ವೀಕರಿಸಿದರು ! ಅವನ ಕೀರ್ತಿ ದಿಗಂತವ್ಯಾಪ್ತವಾಯಿತು. ಚಕ್ರದಿಂದ ಶಿಶುಪಾಲನನ್ನು ಕೊಂದ ಪಶುಪಾಲನನ್ನುಯಾವ ರಾಜನೂ ಧಿಕ್ಕರಿಸಲಿಲ್ಲ. ಎಲ್ಲರೂ ಅವನನ್ನು ಜಯ ಜಯಧ್ವಾನದಿಂದ ಹೊಗಳಿದರೇ ಆಗಲಿ, ತೆಗಳಿ ಎದುರಿಸಲಿಲ್ಲ. ಬಲಪರಾಕ್ರಮ ಸಮನ್ವಿತರಾಗಿ ಭೀಮಾದಿಗಳು ತಂದ ಧನದಿಂದ ಧರ್ಮರಾಜನ ಸಿರಿ ನನಗೆ ಉರಿಯಾಗಿದೆ. ಅವನ ಸಭೆ ನನಗೆ ಅಗ್ನಿಪರ್ವತವಾಗಿದೆ. ಮಾನಧನನಾದ ಮಾನವ-ನಾಥನು ಶತ್ರುವೃದ್ಧಿಯನ್ನೂ ಆತ್ಮಹಾನಿಯನ್ನೂ ಸಹಿಸಿ, ಸುಮ್ಮನಿರಬಹುದೇ ? ಅವರ ಸಂಪತ್ತು ನನ್ನದಾಗಲು ನಾನೇನು ಮಾಡಲಿ ?" ಎಂದ ಪ್ರಧಾನದೈತ್ಯ ರೂಪನಾದ ದುರ್ಯೋಧನನಿಗೆ, ನಾಸ್ತಿಕ್ಯಮಾನಿಯಾದ ದ್ವಾಪರ ದೈತ್ಯನಾದ ಶಕುನಿಯು—

"ರಾಜನ್ ! ಧೃತರಾಷ್ಟ್ರನ ಅನುಮತಿಯೊಂದನ್ನು ಪಡೆ ! ನಮ್ಮ ಕಾರ್ಯ ವಾಯಿತೆಂದು ತಿಳಿ ! ಕ್ಷಣಾರ್ಧದಲ್ಲಿ ಪಾಂಡುಕುಮಾರರ ಸಕಲೈಶ್ವರ್ಯವೂ ನಿನ್ನದೆನಿಸುವೆನು" ಎಂದೊಪ್ಪಿಸಿ, ಅವನನ್ನು ಕರೆದುಕೊಂಡು, ಧೃತರಾಷ್ಟ್ರನನ್ನು ಸಮೀಪಿಸಿ, ಶಕುನಿಯು ಇಂತೆಂದನು—

"ಮಹಾರಾಜ! ನಿನ್ನ ಮಗನು ಚಿಂತಾಕುಲನಾಗಿ ಅನ್ನಪಾನಂಗಳನ್ನು ಬಿಟ್ಟಿರುವನು. ಅವನು ಕೃಶನಾಗಿ, ವಿವರ್ಣನಾಗಿ, ದುಷ್ಪರಿಹರವಾದ ಆಪತ್ತಿಗೆ ತುತ್ತಾಗಿರುವನು. ನಿನ್ನಯ ಪ್ರೀತಿಪುತ್ರನನ್ನು ಸಂತೈಸು !"

ಆ ಮಾತನ್ನಾಲಿಸಿ, ಧೃತರಾಷ್ಟ್ರನು ಕಡುದುಃಖದಿಂದ ಮಗನನ್ನಪ್ಪಿ, ಹತ್ತಿರ ಕೂಡಿಸಿಕೊಂಡು,

"ಕುರುಕುಲೇಶ ! ನಮ್ಮ ರಾಜ್ಯವು ಸಕಲಸಂಪದ್ಭಾಜ್ಯವಾಗಿದೆ. ಅನುಜರು, ಮಿತ್ರರು, ಹಿತರು ನಿನಗೆ ಪಿ ಯವನ್ನೇ ಚಿಂತಿಸುವರಾಗಲಿ, ಅಪ್ರಿಯರಾರೂ ಇಲ್ಲ. ಇಂದ್ರನಿಗಿರುವಂತೆ ಸಕಲ ಭೋಗಸಾಮಗ್ರಿಗಳು ನಿನಗಿವೆ. ಸಕಲರಾಜರು ನಿನ್ನ ಶಾಸನವನ್ನು ವಹಿಸಿ ನಡೆಯುತ್ತಿರಲು ರಾಜರಾಜನೆಂದು ಪ್ರಖ್ಯಾತನಾಗಿರುವೆ. ವತ್ಸ ! ಬಡವಾಗಲು ಕಾರಣವಾದರೂ ಏನು ? ಧರಣೀರಾಜ್ಯ ಸುಖಭೋಗ ವಿಮುಖನಾಗಿರುವುದೇಕೆ ?" ಎಂದು ಮುದ್ದಿಸಿ ಕೇಳಿದನು.

ಆಗ ದುರ್ಯೋಧನನು ಕಣ್ಣೀರನ್ನೊರೆಸಿಕೊಂಡು ನಿಧಾನವಾಗಿ ಇಂತು ನುಡಿದನು—"ತಂದೆ! ಪಾಂಡವರ ವೈಭವವನ್ನು ನೋಡಿ ಸಹಿಸಲಾರದೆ ಬಡವಾಗಿರುವೆನು. ಶತ್ರುಸಮೃದ್ಧಿ ಕಂಡ ನನಗೆ ಯಾವ ಭೋಗಗಳೂ ರುಚಿಸುತ್ತಿಲ್ಲ. ಅವರ ಐಶ್ವರ್ಯವು ಮನೆಯಲ್ಲಿಯು, ಅವರ ಕೀರ್ತಿಯು ದಿಕ್ಕುವಿದಿಕ್ಕುಗಳಲ್ಲಿಯೂ ತುಂಬಿ ನಿಂತಿದೆ. ಉತ್ತರ ಕುರು ಭೂಮಿಯ ವರೆಗಿರುವ ಸಕಲ ದೇಶಗಳನ್ನು ಕೈವಶಮಾಡಿಕೊಂಡು, ಸವ್ಯಸಾಚಿ ಚಕ್ರಪಾಣಿಯ ಮೈತ್ರಿಯಿಂದ ಪ್ರಬಲರಾಗಿರುವರು. ಸಕಲರಾಜರು ಸಭೆಯಲ್ಲಿ ಧರ್ಮರಾಜನಿಗೆ ಶಿರಬಾಗಿ ನಮಿಸಿ, ಕಾಣಿಕೆಯನ್ನೊಪ್ಪಿಸಿದುದನ್ನು ನೋಡಿ ನೋಡಿ, ನನ್ನ ಕಣ್ಣುಗಳು ನೊಂದಿವೆ. ಅವರಿತ್ತ ಕಾಣಿಕೆಯನ್ನು ಸ್ವೀಕರಿಸಿ ತೆಗೆದಿಡುವ ಅಧಿಕಾರವು ನನ್ನದಾಗಿತ್ತು. ಆ ವಸ್ತುಚಯವನ್ನು ತೆಗೆದಿಟ್ಟು, ನನ್ನ ಕೈಗಳು ಸೋತು ಹೋಗಿವೆ. ಶೈಲ ಕಾನನ ದ್ವೀಪ ವಿಶಾಲವಾದ ಸಕಲ ಭೂಮಿಯು ಅವರದಾಗಿರುವಾಗ, ಸಾಮಾನ್ಯರಾಜಮಾತ್ರನಾದ ನನಗೆ ನಿದ್ರೆಯಾದರೂ ಬರುವುದೇ ? ಯಜ್ಞದೀಕ್ಷಿತನಾದ ಧರ್ಮರಾಜನಿಗೆ, ಗೌಡ, ಕಾಂಭೋಜರಾಜರು ಅನೇಕ ವರ್ಣವಿಚಿತ್ರ ಕಂಬಳಿಗಳನ್ನು, ಗಿಳಿಬಣ್ಣದ ಕುದುರೆಗಳನ್ನು ಕೊಟ್ಟು ವಂದಿಸಿದರು. ಸಿಂಹಳ, ಕೇರಳ, ಚೋಳ, ಪಾಂಡ್ಯ ದೇಶಗಳ ರಾಜರು ಮಯಸಭಾ ವಿಹಾರಿಯಾದ ಅಜಾತಶತ್ರುವಿಗೆ ಮುತ್ತುಗಳು, ವಿದ್ರುಮಗಳು, ಅಗರುಚಂದನಗಳು ತಂದು ಸಮರ್ಪಿಸಿದರು. ಜನನುತ ಕೀರ್ತಿಯು ಪುಣ್ಯಮೂರ್ತಿಯು ಆದ ಧರ್ಮರಾಜನಿಗೆ ಹದಿನಾಲ್ಕು ಸಾವಿರ ಮಣಿಹಾರಾಲಂಕೃತ ಮತ್ತಗಜಗಳನ್ನು ಶ್ರೀಕೃಷ್ಣನು ಕಾಣಿಕೆ ಇತ್ತನು. ಹರಿಯು, ಕಿರೀಟಿಯು ದೇಹಂಗಳೆರಡು, ಆತ್ಮ ಒಂದೆಂಬಂತೆ, ಅನ್ಯೋನ್ಯಮೈತ್ರಿಯಿಂದಿರುವರು. ಕಾಡುಕಿಚ್ಚಿಗೆ ಬಿರುಗಾಳಿಯು ನೆರವಾದಂತೆ ಅವರಿಗೆ ವೃಕೋದರನು ಸಹಾಯಕನಾಗಿರುವನು.

"ವಿರಾಟನು ಎರಡುಸಾವಿರ ಆನೆಗಳನ್ನಿತ್ತನು. ದ್ರುಪದನು ಸಾವಿರ ಆನೆಗಳನ್ನು, ಹತ್ತುಸಾವಿರ ಕುದುರೆಗಳನ್ನು, ಹದಿನಾಲ್ಕುಸಾವಿರ ತರುಣಿಯರನ್ನು, ಹದಿನಾರು ಸಾವಿರ ದಾಸಿಯರನ್ನು ತಂದಿತ್ತನು. ಕುರು, ಕುಕರ, ಕೇಕಯ, ಕಾಶ್ಮೀರ, ಗಾಂಧಾರ, ಮದ್ರ, ದ್ರವಿಡ, ಮಗಧ, ಮಾಳವ, ಕಳಿಂಗ, ವಂಗ, ಗೌಡ, ಆಂಧ್ರ, ಕೋಸಲಾದಿ ದೇಶಗಳ ರಾಜರು ತಂದಿತ್ತ ದ್ರವ್ಯನಿಚಯವು ಪರ್ವತೋಪಮವಾಗಿತ್ತು. ಭಗದತ್ತ, ಚೇದೀಶರು, ಪಾರಶೀಕರು, ಹೂಣರು ಮುಂತಾದವರು ಬೆಟ್ಟದಂತಿದ್ದ ಆನೆಗಳನ್ನು, ದಿವ್ಯಾಂಬರಾಭರಣಗಳನ್ನು, ಸ್ತ್ರೀಸಹಸ್ರವನ್ನು, ಅಜ ಗೋ ಮಹಿಷಗಳನ್ನು, ಹಿರಣ್ಯ ರತ್ನ ರಜತ ಕಂಬಳ, ವಸ್ತ್ರಗಳನ್ನು ಸಮರ್ಪಿಸಿದರು. ಮೇರು ಮಂದರ ಮಧ್ಯವಾಸಿ ಗಳಾದ ಕೀಚಕ, ಬರ್ಬರ, ಪಾರದ, ತುರುಷ್ಕ, ಟಂಕಣ, ಕೊಂಕಣೇಶರು ಧರ್ಮ ರಾಜನಿಗೆ ವಿಧೇಯರಾಗಿ ರಾಮಶೈಲ, ಹಿಮಶೈಲಸಂಭವಗಳಾದ ಕುಸುಮ, ಮಧು, ದಿವ್ಯೌಷಧಗಳನ್ನು, ಇಂದ್ರನೀಲ, ಇಂದ್ರಗೋಪ, ಪಿಕಚಂದ್ರ, ಮಯೂರ, ಶುಕ ವರ್ಣಗಳಾದ ತುರಗಗಳನ್ನು; ನಿಶಿತದೀರ್ಘನಿಸ್ತ್ರಿಂಶಾದಿ ದಿವ್ಯಾಯುಧಗಳನ್ನು; ಗಜ-ದಂತಮಯ ಶಿಬಿಕಾಸನರಾಜಿಯನ್ನು ತಂದೊಪ್ಪಿಸಿ, ಸಾಲಾಗಿ ನಿಂತು ವಂದಿಸಿದರು. ಗಂಧರ್ವರಾಜನಾದ ಚಿತ್ರರಥನು ನಾಲ್ಕುನೂರು ಗಂಧರ್ವಾಶ್ವಗಳನ್ನು ತಂದು ಕೊಟ್ಟನು. ತುಂಬುರುನೆಂಬುವನು ನೂರು ಕುದುರೆಗಳನ್ನಿತ್ತನು.

"ಧರ್ಮರಾಜನ ಐಶ್ವರ್ಯವು, ವಿಭವ ಕೀರ್ತಿಗಳು, ಅಭೂತಪೂರ್ವವಾಗಿವೆ. ಹಿಂದೆ ಯಾವ ಚಕ್ರವರ್ತಿಯೂ ಕಾಣದ, ಮುಂದಿನ ರಾಜರು ಸಂಪಾದಿಸಲಳವಲ್ಲದ ಅತುಲ ಸಿರಿಸಂಪತ್ತನ್ನು ನೋಡಿ ನೋಡಿ, ನಾನು ಚಿಂತೆಯಿಂದ ವಿವರ್ಣನಾಗಿರು ವೆನು. ಕೃಶನಾದ ನನಗೆ ಭೋಗದ ಹಂಬಲವಿಲ್ಲ. ಜೀವನವೇ ಸಾಕೆನಿಸಿದೆ.

"ಹದಿನೈದು ದಿನಗಳ ಕಾಲವು ಎಡಬಿಡದೆ ಮೊಳಗುವ ಶಂಖವೇ ಧರ್ಮರಾಜನ ವಿಭವವನ್ನು ಸ್ವರ್ಗದ್ವಾರದಲ್ಲಿ ಮುಟ್ಟಿಸಿತು. ಲಕ್ಷ ಬ್ರಾಹ್ಮಣರ ಊಟವಾದೊಡನೆ ಒಂದುಸಲ ಮೊಳಗುವ ಶಂಖವಂತೆ ಅದು! ಅದೆಷ್ಟು ವಿಪ್ರರು ಉಂಡರೋ ಅತ್ಯಂತ ಆಶ್ಚರ್ಯವಾಗಿದೆ! ಕೇಳು, ಯಜ್ಞವನ್ನು ನೋಡಲು ಬಂದ ವಿಪ್ರರನ್ನೇ ಅಲ್ಲದೆ, ಕ್ಷತ್ರಿಯ, ವೈಶ್ಯ, ಶೂದ್ರರನ್ನೂ ಆದರದಿಂದ ಸ್ವೀಕರಿಸಿ, ಅವರಿಗೆ ನಿವಾಸಗಳನ್ನು ಕಲ್ಪಿಸಿ, ಸಕಲ ಸಪರ್ಯಗಳನ್ನು ಮಾಡುವ ದಾಸದಾಸೀಜನರು, ನಿರೀಕ್ಷಕರಾದ ಬಂಧುಮಿತ್ರರು ಅಪ್ರಮತ್ತರಾಗಿ ನಿಂತು, ಸ್ವಕಾರ್ಯನಿರತರಾಗಿದ್ದರು. ಬಡಬಗ್ಗರು, ಕುಂಟಕುರುಡರು, ದೀನಜನರ ದುಃಖವನ್ನು ಸ್ವಯಂ ವಿಚಾರಿಸಿ ನಿವಾರಿಸುವ ಸೇವಕರನ್ನು ಧರ್ಮರಾಜನೇ ನಿರೀಕ್ಷಿಸುತ್ತಿದ್ದನು. ದ್ರೌಪದಿಯು ಸಕಲ ಜನ ಭೋಜನವಾದಮೇಲೆ ಕೊನೆಗೆ ಮಧ್ಯರಾತ್ರಿಯಲ್ಲಿ ಭುಜಿಸುತ್ತಿದ್ದಳು. ಆ ಮಹಾ ಯಜ್ಞದಲ್ಲಿ ಎಂತಹವನನ್ನೂ ಪ್ರೇಮದಿಂದ ಪೂಜಿಸಿದರಾಗಲಿ ಧಿಕ್ಕರಿಸಿದವರಿಲ್ಲ. ಹಿಂದೆ ಹರಿಶ್ಚಂದ್ರನು ಸುರುಚಿರ ವಿಭವದಿಂದ ರಾಜಸೂಯವನ್ನು ಮಾಡಿದ್ದನಂತೆ. ಇಂದು ಧರ್ಮರಾಜನು ಅವನ ಯಜ್ಞವೈಭವವನ್ನು ಮರೆಸಿ, ಅವಭೃತಸಮಯದಲ್ಲಿ

ಸರ್ವಸ್ವವನ್ನೂ ದಾನವಿತ್ತನು. ಬ್ರಹ್ಮರ್ಷಿ-ರಾಜರ್ಷಿ-ಲೋಕಪಾಲರಿಂದ ಸೇವಿತ ಮಹೇಂದ್ರನಂತೆ ಧರ್ಮರಾಜನು ವಿಪ್ರಕ್ಷತ್ರಿಯವರರಿಂದ ಕೂಡಿ ಅತಿಶೋಭಾ ಸಂಪನ್ನನಾಗಿದ್ದನು. ಧೌಮ್ಯನು ಸರ್ವಪುಣ್ಯತೀರ್ಥಗಳ ಜಲವನ್ನು ಅಭಿಮಂತ್ರಿಸಿ, ಅಭಿಷೇಕಿಸಿದಾಗ ಧರ್ಮಜನ ವೈಭವವನ್ನು ವರ್ಣಿಸಲಾಗದು. ಸಾತ್ಯಕಿ ಶ್ವೇತಛತ್ರ ವನ್ನು ಎತ್ತಿಪಿಡಿದಿದ್ದನು. ಭೀಮಾರ್ಜುನರು ಮಣಿಮಯ ಚಾಮರಗಳನ್ನು ಬೀಸು ತ್ತಿದ್ದರು. ಕೃಷ್ಣನು ಸಮೀಪದಲ್ಲಿ ಸುಖಾಸೀನನಾಗಿ, ಬಂದ ರಾಜರ ವಂದನೆಗಳನ್ನು ಕಾಣಿಕೆಗಳನ್ನು ಕೊಡಿಸುತ್ತಿದ್ದನು. ಧೃಷ್ಟದ್ಯುಮ್ನ ನಕುಲ ಸಹದೇವರು ದರ್ಪ ದಿಂದ ಸುತ್ತು ವಿಹರಿಸಿ, ಉತ್ಸವ ವಿಚಾರಕರಾಗಿದ್ದರು.

"ಇದೆಲ್ಲವನ್ನೂ ನೋಡುತ್ತಾ ಬೆರಗಾಗಿ ನಿಂತ ನಮ್ಮಂತಹ ರಾಜರನ್ನು ನೋಡಿ ಕೃಷ್ಣನೂ, ದ್ರೌಪದೀ ಭೀಮರೂ ನಕ್ಕು ತಿರಸ್ಕರಿಸಿದರು. ಇದನ್ನು ಸಹಿಸಲಾರದೆ ಮಾನಧನನಾದ ಸುಯೋಧನನು ದುಃಖಿಸುತ್ತಿರುವನೆಂದರೆ ಆಶ್ಚರ್ಯವೇ ? ಅಂದಿ ನಿಂದ ನೊಂದು ಜೆಂದ ನನ್ನ ಹೃದಯವು ಶಾಂತಿಗಾಣದಾಗಿದೆ. ಪ್ರತಿದಿನವು ಧರ್ಮಜನ ಮಂದಿರದಲ್ಲಿ ಮಧ್ಯಾಹ್ನವಾಗುತ್ತಿರಲು ಮದಿರಾಕ್ಷಿ ದ್ರೌಪದಿ ಬಡಿಸಿದ ಮೃಷ್ಟಾನ್ನವನ್ನು ಎಂಭತ್ತೆಂಟು ಸಾವಿರ ಸ್ನಾತಕವರರು ಬಂಗಾರದ ಪಾತ್ರೆಗಳಲ್ಲಿ ಭುಜಿಸಿ, ಧರ್ಮಜನಿತ್ತ ದಿವ್ಯಗೃಹಗಳಲ್ಲಿ ವಸಿಸಿ, ಸುಖಿಸುವರೆಂದರೆ ಸಾಮಾನ್ಯವೇ ? ಇಂತಹ ಸಿರಿಯು ಕಣ್ಣಿಗೆ ಕಂಟಕವಾಗಿ ಚುಚ್ಚುತ್ತಿರುವಾಗ, ಕಡುಬಡವನಾಗಿ ತೋರುವ ನನಗೆ ಸಮಾಧಾನವೆಲ್ಲಿ ? ಸುಖವೆಲ್ಲಿ ?"

ಆ ಮಾತನ್ನಾಲಿಸಿ, ದುಃಖಿಸುವ ಧೃತರಾಷ್ಟ್ರನಿಗೆ ಶಕುನಿ "ಮಗನ ದುಃಖ ವನ್ನು ದೂರೀಕರಿಸುವುದು ನಿನಗೆ ದುಷ್ಕರವಲ್ಲ. ನೀನು ಸಮ್ಮತಿಯನ್ನಿತ್ತರೆ ದುರ್ಯೋಧನನಿಗಾಗಿ ಜೂಜನ್ನಾಡಿ, ಪಾಂಡವ ರಾಜ್ಯ ಲಕ್ಷ್ಮಿಯನ್ನು ನಿನ್ನ ಮನೆ ಯಲ್ಲಿ ನಿಲ್ಲಿಸುವೆನು. ಮಾಯಾದುರೋದರ ನಿಪುಣನಾದ ನನಗೆ ಇದೊಂದು ದುಷ್ಕರ ಕಾರ್ಯವಲ್ಲ" ಎಂದು ದುರ್ಯೋಧನನನ್ನು ನೋಡಿ ಇಂತೆಂದನು—

"ದುರ್ಯೋಧನ ! ಧೃತರಾಷ್ಟ್ರನು, ಪರಿಣತಪ್ರಜ್ಞನು. ಜಿತೇಂದ್ರಿಯನು ಆಗಿರುವನಾಗಲಿ ನಿನ್ನ ವಿಷಯದಲ್ಲಿ ಅವನಿಗೆ ಶ್ರದ್ಧೆ ಇಲ್ಲ. ಪಾಂಡವರೆಂದರೆ ಹಿತ ರೆಂದು ತಿಳಿದು, ಅವರ ಅಭಿವೃದ್ಧಿಯನ್ನು ನೋಡಿ ಆನಂದದಿಂದಿರುವನು. ಉಕ್ಕಿ ಬರುವ ಹೊಳೆಯನ್ನು ನೋಡಿ ತೀರದ ತರುಗಳು ತಣಿದಂತಿರುವ ಇವನ ಆನಂದವು, ಪಾಂಡವರಿಂದ ಸಮೂಲನಾಶವಾದಾಗ ಅಡಗುವುದು. ಲೋಕವೃತ್ತವೇ ಬೇರೆ, ರಾಜವೃತ್ತವೇ ಬೇರೆ. ರಾಜನು ಸ್ವಾರ್ಥಕುಶಲನಾಗದಿದ್ದರೆ ಜಯಶ್ರೀ ಕೀರ್ತಿಗಳಿಗೆ ದೂರನಾಗುವನು. ಧರ್ಮಾಧರ್ಮಗಳ ವಿಚಾರಮಾಡುವ ಮೂರ್ಖನಿಗೆ ಸ್ವಾರ್ಥ ಲಾಭವಾಗಲಾರದು. ವಿಪ್ರರು ವೇದಜೀವಿಗಳಾದರೆ, ಕ್ಷತ್ರಿಯರು ಶಸ್ತ್ರಜೀವಿಗಳು. ಶಸ್ತ್ರವೆಂದರೆ ಖಡ್ಗಾದಿಗಳು ಮಾತ್ರವಲ್ಲ; ಶತ್ರುಗಳನ್ನು ಛೇದಿಸುವುದೆಲ್ಲವೂ ಶಸ್ತ್ರವೇ! ದ್ಯೂತಾದಿ ಉಪಾಯಗಳಿಂದ ಶತ್ರುಸಂಪದಹರಣವು ಆತ್ಮವೃದ್ಧಿಗೆ ಕಾರಣವಾಗಿದೆ.

ದ್ಯೂತಾದಿಗಳು ರಾಜರಿಗೆ ವಿಹಿತವೇ ಆಗಿವೆ. ತಪಸ್ಸನ್ನು ಮಾಡುತ್ತಿದ್ದ ನಮುಚಿಯನ್ನು ಕೊಲ್ಲಲಿಲ್ಲವೇ ಇಂದ್ರ! ತಪೋಬಲದೃಪ್ತನಾಗುವವರೆಗೆ ಕಾದಿದ್ದರೆ ಆ ರಾಕ್ಷಸನನ್ನು ಗೆಲ್ಲಬಹುದಿತ್ತೇ? ಶತ್ರುಗಳೆಂದರೆ ರಾಕ್ಷಸರಲ್ಲ. ಬಂಧುಗಳೂ ಸಂತಾಪ ಕಾರಣರಾದೊಡೆ ಶತ್ರುಗಳೆನಿಸುವರು. ವಿರೋಧವೆಂದು ಹೆದರುವ ರಾಜನನ್ನು, ಪಟ್ಟಣಗಳಲ್ಲಿದ್ದು ಕದಲದಿರುವ ಸನ್ಯಾಸಿಯನ್ನು, ಸರ್ಪವು ಹುತ್ತಿನ ಹುಳುಗಳನ್ನಂತೆ ಭೂಮಿ ನುಂಗಿ ನಾಶಮಾಡುವುದು. ಹುಟ್ಟನಿಂದ ಶತ್ರುಗಳಾರೂ ಅಲ್ಲ. ನಮ್ಮ ವೃತ್ತಿ, ನಮ್ಮ ಧನಾಗಮವನ್ನು ಅನುಸರಿಸುವವರೆಲ್ಲರೂ ಶತ್ರುಗಳೇ ಸರಿ! ಶತ್ರು-ವೃದ್ಧಿಯನ್ನು ಉಪೇಕ್ಷಿಸಿದವನು ಹುತ್ತವನ್ನು ಬೆಳೆಯಗೊಟ್ಟ ಗಿಡದಂತೆ ನಷ್ಟವಾಗುವನು. ಆದುದರಿಂದ ಪಾಂಡುಪುತ್ರರ ಸಂಪತ್ತನ್ನು ಕಸಿದು ಯುದ್ಧವಿಲ್ಲದ, ಬಂಧು-ಹತ್ಯೆ ಇಲ್ಲದ, ಜಯವನ್ನು ನಿನಗೆ ಕೊಡುವೆನು. ನನಗೆ ಅಕ್ಷವಿದ್ಯೆ ಇದೆ; ಧರ್ಮಜನಿಗೆ ಚಾಪಲ್ಯವಿದೆ, ಪಾಂಡಿತ್ಯವಿಲ್ಲ; ನನಗೆ ಶರಗಳೆಂದರೆ ಪಗಡೆಗಳು; ಪಣಗಳೇ ಧನುಸ್ಸು; ಪಗಡೆಯ ಹಾಸು ನನ್ನ ರಣರಂಗ; ಅಕ್ಷವಿದ್ಯಾಮಾಯೆಯೇ ನನ್ನ ಬಿಲ್ಲ ನಾದ. ಜೂಜನ್ನಾಡು, ಪಾಂಡವರಾಜ್ಯವೇ ನಿನ್ನದಾಗುವುದು."

ಧೃತರಾಷ್ಟ್ರನ ಮನಸ್ಸು ದೋಲೆಯಂತೆ ತೂಗಿತು. ಕರ್ತವ್ಯಾಕರ್ತವ್ಯ-ಜ್ಞಾನವು ಕಲ್ಯಾವೇಶದಿಂದ ನಷ್ಟವಾಯಿತು. ದ್ವಾಪರ ಕಲಿ ರಾಕ್ಷಸರ ಮಾಯೆಗೆ ಸಿಲುಕಿ, ಸ್ವಭಾವಸುಜನನಾದರೂ ಅವನ ಬುದ್ಧಿ ಕಲುಷಿತವಾಯಿತು. "ಪುತ್ರ! ವಿದುರನನ್ನು ಕೇಳಿ ನಿನಗೆ ದ್ಯೂತಾಜ್ಞೆಯನ್ನು ನೀಡುವೆನು. ಮಹಾತ್ಮನಾದ ವಿದುರನು ಹಿತವನ್ನೇ ನುಡಿವನು" ಎಂದ ತಂದೆಯನ್ನು ದುರ್ಯೋಧನನು ಕುತ್ಸನೆಗೈದು ಇಂತೆಂದನು—"ರಾಜನ್! ಆಯಿತು, ವಿದುರನನ್ನು ಕೇಳಿದರೆ ನಮ್ಮ ನಾಶವನ್ನು ನಾವೇ ಕೋರಿದಂತಾಯಿತು. ಪಾಂಡವಹಿತಂಕರನಾದ ಆ ದಾಸೀಪುತ್ರನಿಗೆ ನನ್ನಲ್ಲಿ ಪ್ರೇಮವಿಲ್ಲವೆಂದರಿತೂ ಮರೆಯುತ್ತಿರುವೆ. ನಮ್ಮ ಹಿತದ ಚಿಂತೆ ನಮಗೆ. ಬೇಕಾದರೆ ಪಾಂಡವರನ್ನು ಜೂಜಾಡಲು ಅವನು ಕರೆದು ತರಲಿ, ಕಳಿಸು"ಎಂದ ಮಗನಿಗೆ, ರಾಜನು ಚಿಂತಾಭಯಗ್ರಸ್ತನಾಗಿ "ಬೇಡ, ದುರ್ಯೋಧನ! ದ್ಯೂತವೆಂದರೆ ಕಲಹಕಾರಣವು. ಅದು ಶಾಸ್ತ್ರನಿಷಿದ್ಧವಾಗಿದೆ. ಅನರ್ಥವನ್ನು ಅರ್ಥವೆಂದು ಭ್ರಮಿಸಿ ಕೆಡುತ್ತಿರುವೆ. ಬಲವದ್ವಿರೋಧವು ಒಳಿತಲ್ಲ" ಎಂದನು.

ದುರ್ಯೋಧನನು "ದ್ಯೂತವು ನಿಷಿದ್ಧವಲ್ಲ. ಪುರಾಣಗಳಲ್ಲಿ ದ್ಯೂತಪ್ರಸಕ್ತರಾದ ರಾಜರ ಕಥೆಗಳನ್ನು ಕೇಳಿಲ್ಲವೇ? ದ್ಯೂತದಿಂದ ಕಲಹವಾಗುವುದಿಲ್ಲ. ಅಲ್ಲಿ ಖಡ್ಗಾದ್ಯಾಯುಧಗಳಿಲ್ಲ, ಯುದ್ಧವಿಲ್ಲ; ಶಕುನಿಯ ವಾಕ್ಯವನ್ನು ಮನ್ನಿಸು; ಕರೆಯಿಸು ಪಾಂಡವರನ್ನು; ಹಾಗಾಗದೆಂದರೆ ನಾವು ಬದುಕಿ ಪ್ರಯೋಜನವಿಲ್ಲವಾದುದರಿಂದ ಆತ್ಮಘಾತವನ್ನು ಮಾಡಿಕೊಳ್ಳಲು ನನಗೆ ಅಪ್ಪಣೆಯನ್ನು ಕೊಡು" ಎಂದನು. ವಿಧಿಯಿಲ್ಲದೆ ಧೃತರಾಷ್ಟ್ರನು "ಸರಿ, ನಿನ್ನಿಷ್ಟದಂತೆ ಆಗಲಿ! ಆದರೆ ಆಮೇಲೆ ಪಶ್ಚಾತ್ತಾಪ ಪಡಬೇಕಾದೀತು. ಇದರಿಂದ ಶ್ರೇಯಸ್ಸಾಗುವುದಿಲ್ಲ, ತಿಳಿ!"

*

ಎಂದು ಹೇಳಿ ಸುಮ್ಮನಾದನು. ಧೃತರಾಷ್ಟ್ರನ ಮಾತನ್ನು ಕೇಳಿ ಶಕುನಿ ದುರ್ಯೋಧನರಿಗೆ ಸಂತೋಷವಾಯಿತು.

ರಾಜಾಜ್ಞೆಯಂತೆ ದ್ಯೂತಸಭೆ ನಿರ್ಮಿತವಾಯಿತು. ಸಾವಿರ ಸ್ತಂಭಗಳು, ವೈಡೂರ್ಯ ಕುಟ್ಟಿಮಗಳು, ಮಣಿಮಯ ದ್ವಾರಶತ, ಸ್ಫಾಟಿಕ ಭಿತ್ತಿಗಳು, ದಿವ್ಯಾಸನಗಳಿಂದ ನಿರ್ಮಿತವಾದ ಸಭೆಯಲ್ಲಿ ಸಕಲ ಭೋಗಸಾಮಗ್ರಿಗಳು ಸಿದ್ಧವಾಗಿರಿಸಲ್ಪಟ್ಟವು. ಆಗ ದುರ್ಯೋಧನನ ಮಾತಿನಂತೆ ಧೃತರಾಷ್ಟ್ರನು ವಿದುರನನ್ನು ಕರೆಯಿಸಿ "ವಿದುರ! ದಿವ್ಯಸಭಾನಿರ್ಮಾಣವಾಗಿದೆ. ಇದರಲ್ಲಿ ದ್ಯೂತಕ್ರೀಡಾರತರಾಗಿ ಉಲ್ಲಾಸದಿಂದಿರುವ ಮಕ್ಕಳನ್ನು ನೋಡಿ ಆನಂದಭಾಗಿಯಾಗಲೆಣಿಸಿರುವೆನು. ಪಾಂಡವರನ್ನು ಕ್ರೀಡೆಗಾಗಿ ಕರೆತರುವ ಭಾರ ನಿನ್ನದು" ಎಂದಾಜ್ಞಾಪಿಸಿದನು.

ವಿದುರನಿಗೆ ಆ ಮಾತು ರುಚಿಸಲಿಲ್ಲ. ಅವನು ವಿಷಣ್ಣನಾಗಿ, "ರಾಜನ್! ನನಗೀದ್ಯೂತವು ಸಮ್ಮತವಲ್ಲ. ನನ್ನನ್ನು ಧರ್ಮರಾಜನಲ್ಲಿಗೆ ಈ ಪಾಪಕಾರ್ಯಕ್ಕಾಗಿ ಕಳಿಸಬೇಡ! ದ್ಯೂತವು ಯುದ್ಧಕ್ಕಿಂತ ಭೀಕರವು. ಕುಲನಾಶಕರವಾದ ದ್ಯೂತದಿಂದ ಆಗುವ ಅನರ್ಥವನ್ನು ತಡೆ!" ಎಂದು ಅಂಗಲಾಚಿದನು. ಆದರೆ ಧೃತರಾಷ್ಟ್ರನು "ವಿದುರ! ಕ್ರೀಡೆಗಾಗಿ ಜೂಜಾಡಿದರೆ ಕಲಹವಾಗುವುದೇ? ದೈವವಶವಾಗಿ ಆಗುವ ಕಲಹವನ್ನು ತಪ್ಪಿಸಲು ನಮ್ಮ ಕೈಲಾಗುವುದೇ ? ಎಲ್ಲ ಜಗತ್ತು ಬ್ರಹ್ಮಾಧೀನವಾಗಿ ವರ್ತಿಸುತ್ತದೆ. ಹೋಗು, ಧರ್ಮರಾಜನನ್ನು ನನ್ನ ಶಾಸನದಂತೆ ಜೂಜಾಡಲು ಬರಹೇಳು" ಎಂದು ದಟ್ಟಿಸಿದನು.

## ದ್ಯೂತ

ಮಹಾವೇಗದ ಜವನಾಶ್ವಗಳ ರಥದಲ್ಲಿ ಕೂತು, ವಿದುರನು ಧೃತರಾಷ್ಟ್ರನ ಬಲಾತ್ಕಾರದಿಂದ ಪಯಣಿಸಿ, ಇಂದ್ರಪ್ರಸ್ಥವನ್ನು ಸೇರಿದನು. ರಾಜಗೃಹದಲ್ಲಿ ವಿವಿಧಸತ್ಕಾರಗಳಿಂದ ಪೂಜಿತನಾದನು. ಪ್ರೀತಿಯಿಂದ ನೋಡುತ್ತಾ ಧರ್ಮರಾಜನು "ಚಿಕ್ಕಪ್ಪ! ಏಕೆ ಚಿಂತಾಕ್ರಾಂತನಾಗಿರುವೆ? ಆರೋಗ್ಯವಾಗಿರುವೆಯಲ್ಲ? ಹಸ್ತಿನಾವತಿಯಲ್ಲಿ ಸರ್ವರೂ ಕ್ಷೇಮವೇ? ಕಾಲನ ಕಾಲಿಗೆ ಸಿಕ್ಕು ನರಳದ ಜೀವರಿರುವರೇ? ನಮ್ಮ ದೊಡ್ಡಪ್ಪನು ಕುಶಲಿಯೇ ?" ಎಂದು ಕೇಳಿದನು. ವಿದುರನು ತಡೆದು ಉತ್ತರವಿತ್ತನು—"ಧರ್ಮಜ! ಧೃತರಾಷ್ಟ್ರನು ಕುಶಲಿಯೇ! ಅವನ ಪುತ್ರಪೌತ್ರರೂ ಚೆನ್ನಾಗಿರುವರು. ವಿನೀತನಾದ ನಿನ್ನಲ್ಲಿಯೂ ರಾಜನು ಪ್ರೀತನಾಗಿರುವನು. ಅವನು ನಿನ್ನ ಕುಶಲವನ್ನು ಕೇಳಬಯಸಿ, ಒಂದು ಸಂದೇಶವನ್ನು ನಿನಗೆ ಕಳಿಸಿರುವನು—'ದಿವ್ಯಸಭೆಯನ್ನು ನಿನ್ನ ಮಯಸಭೆಯಂತೆ ನಿರ್ಮಿಸಿರುವೆನು. ಪುತ್ರ! ಆ ಸಭೆಯಲ್ಲಿ ನೀವೈವರು ಬಂದು, ನನ್ನ ಮಕ್ಕಳನ್ನು ಕೂಡಿ, ವಿಹರಿಸಿ, ಕೇವಲ ಕ್ರೀಡೆಗಾಗಿ ಒಂದೆರಡುಸಲ ಜೂಜಾಡುವುದನ್ನು ನೋಡಬೇಕೆನಿಸಿದೆ.' ಇದು ನಿಮ್ಮ ದೊಡ್ಡಪ್ಪನ ಆಜ್ಞೆ! ಇದನ್ನು ತಂದ ನನ್ನ ಸಾಹಸವನ್ನು ಕ್ಷಮಿಸು!"

ಆ ಮಾತನ್ನಾಲಿಸಿ, ಧರ್ಮರಾಜನು ಆಲೋಚಿಸಿ, ನಗುತ್ತಾ "ಕ್ಷತ್ತ! ಜೂಜೆನ್ನುವುದು ಕ್ರೀಡೆಯಲ್ಲ; ಅದು ಕಲಹ ಮಹಾವಿಷವೃಕ್ಷದ ಬೀಜವಾಗಿದೆ. ನಿನಗೆ ಜೂಜು ಸಮ್ಮತವಾದರೆ ನಾವು ಶಿರಸಾವಹಿಸಿ ಬರುವೆವು" ಎಂದನು. ವಿದುರನು ಸಂಭ್ರಮಕಾತರನಾದನು. "ಧರ್ಮಜ! ನನಗೆ ದ್ಯೂತದಿಂದ ಆಗುವ ಅನರ್ಥ ಪರಂಪರೆ ಗೊತ್ತಿಲ್ಲದಿಲ್ಲ. ನಿವಾರಿಸಲು ನಾನು ಮಾಡಿದ ಯತ್ನಗಳು ಬೂದಿಯಲ್ಲಿ ಮಾಡಿದ ಹೋಮದಂತೆ ವ್ಯರ್ಥವಾದವು. ರಾಜನು ಹಠದಿಂದ ಕರೆದುತಾರೆಂದು ನನ್ನನ್ನು ಕಳಿಸಿರುವನು. ನಿನಗೆ ಶ್ರೇಯಸ್ಸೆಂದು ತೋರಿದಂತೆ ಮಾಡು" ಎಂದನು.

ಧರ್ಮರಾಜನು ದ್ಯೂತವು ಸಪ್ತವ್ಯಸನಗಳಲ್ಲಿ ಪಾಪತಮವೆಂದರಿತಿದ್ದನು. ಆದರೂ ಒಂದುದಿನ ಅವನು ಕಲ್ಯಾವೇಶಕ್ಕೊಳಗಾಗಿ 'ನನ್ನನ್ನು ಜೂಜಿಗೆ ಕರೆದೊಡೆ ನಿರಾಕರಿಸುವುದಿಲ್ಲ'ವೆಂದು ಪ್ರತಿಜ್ಞೆಗೈದಿದ್ದನು. ಅವನು ವಿದುರನಿಂದ, ಶಕುನಿ ವಿವಿಂಶತಿ ಚಿತ್ರಸೇನರು ಜೂಜಿನಲ್ಲಿ ಭಾಗವಹಿಸುವರೆಂದು ತಿಳಿದು ಭಯಗ್ರಸ್ತನಾದನು. ಅವನು ದೈವಶಾಸನಕ್ಕೆ ವಶನಾಗಿ "ವಿದುರ! ಧೃತರಾಷ್ಟ್ರನ ಆಜ್ಞೆಯು ನನಗೆ ಶಿರೋಧಾರ್ಯವಾಗಿದೆ. ಬರುವೆನು, ನನ್ನ ಪ್ರತಿಜ್ಞೆಯಂತೆ ಜೂಜಿಗೆ" ಎಂದು ವಿದುರನನ್ನು ಕಳಿಸಿದನು.

ಮರುದಿನ ಧರ್ಮರಾಜನು ಅನುಜರಿಂದಲೂ ದ್ರೌಪದ್ಯಾದಿ ತರುಣಿಯರಿಂದಲೂ ಕೂಡಿ ಹಸ್ತಿನಾವತಿಯನ್ನು ಸೇರಿದನು. ಕಣ್ಣಿದ್ದೂ ಪ್ರಖರತೇಜದಿಂದ ಮಂಜಾಗುವಂತೆ ದೈವವಿಲಾಸದಿಂದ ಧರ್ಮಜನ ಬುದ್ಧಿಗೆ ಮಂಕುಬಡಿದಂತಾಯಿತು. ವಿಧಿಯು ದುರ್ಲಂಘ್ಯವಲ್ಲವೇ? ಪಾಶದಿಂದ ಸೆಳೆಯಲ್ಪಟ್ಟವನಂತೆ, ನಿಯಮಿತ ದಿನದಲ್ಲಿ ಹಸ್ತಿನಾವತಿಯನ್ನು ಮುಟ್ಟಿ ಭೀಷ್ಮ, ಧೃತರಾಷ್ಟ್ರ, ದ್ರೋಣಾದಿಗಳನ್ನು ಕಂಡು ವಂದಿಸಿದನು. ಅಶ್ವತ್ಥಾಮನಿಗೆ ನಮಿಸಿ, ದುರ್ಯೋಧನ ಕರ್ಣಾದಿಗಳನ್ನು ಅಭಿನಂದಿಸಿದನು. ತಮಗಾಗಿ ನಿರ್ಮಿಸಿದ ರತ್ನಮಯಮಂದಿರಗಳನ್ನು ಸಪರಿವಾರನಾಗಿ ಪ್ರವೇಶಿಸಿ, ಆ ರಾತ್ರಿಯನ್ನು ಕಳೆದನು.

ಪ್ರಾತಃಕಾಲವಾಗಲು ಧರ್ಮಜನು ಕೃತಾಹ್ನಿಕನಾದನು. ಅನುಜರಿಂದ ಕೂಡಿ ಸಭೆಗೆ ಬಂದಾಗ, ಅಲ್ಲಿ ದುರ್ಯೋಧನಾದಿ ಕೌರವರು, ಕರ್ಣಶಕುನಿಗಳೊಂದಿಗೆ ಸುಖಾಸೀನರಾಗಿ ಕೂತಿದ್ದನ್ನು ನೋಡಿ, ತಾನು ತಮ್ಮಂದಿರೊಡನೆ ಯಥಾರ್ಹ ಸಿಂಹಾಸನಗಳಲ್ಲಿ ಕೂತನು. ಜೂಜನ್ನು ಪ್ರಾರಂಭಿಸುವಂತೆ, ಶಕುನಿಯು ಧರ್ಮಜನನ್ನು ಅಕ್ಷ-ಕ್ರೀಡಾ ವೇದಿಕೆಗೆ ಕರೆದನು.

ಧರ್ಮರಾಜನು ಅವನನ್ನು ನಿಕೃಷ್ಟದೃಷ್ಟಿಯಿಂದ ನೋಡಿ, "ಗಾಂಧಾರರಾಜ! ಜೂಜನ್ನು ಮಾಯಾಮಯವೆನ್ನುವರು; ಇದು ಕ್ಷತ್ರಿಯಯೋಗ್ಯವಲ್ಲ; ದ್ಯೂತವನ್ನು ಆಡಲೇಬೇಕೆಂದರೆ, ಸರಿಯಾದ ನೀತಿಯುಕ್ತನಾಗಿ ಆಡು!" ಎಂದನು. ಶಕುನಿಯು ನಕ್ಕನು. "ಆಲಸ್ಯವೇಕೆ? ಬಾ! ಪಣವನ್ನಿಡು. ದ್ಯೂತಾಭಿಜ್ಞನಾದ ನಿನಗೆ

ಪರಾಜಯದ ಹೆದರಿಕೆಯೇ ? ದ್ಯೂತದಲ್ಲಿ ಕಪಟವಿಲ್ಲದಿರೆ ನಡೆಯುವುದೇ ? ಏನು ಪಣ ?" ಎಂದು ಮೂದಲಿಸಿದನು.

"ದೇವಲನು ಕಪಟಗಳಿಂದ ದ್ಯೂತವಾಡುವುದನ್ನು ನಿಷೇಧಿಸಿ, ಅದನ್ನು ಪಾಪ ವೆಂದೇ ತಿಳಿಸಿರುವನು. ಯುದ್ಧವು ಪ್ರಾಣಾಪಹಾರವಾದರೂ ದೇವನದ ಜಯ ಕ್ಕಿಂತಲೂ ಲೇಸು. ಶಕ್ತಿಯಿದ್ದಂತೆ ಬ್ರಾಹ್ಮಣರಕ್ಷಣೆಗೆ, ಧರ್ಮರಕ್ಷಣೆಗೆ ಹೋರಾಡ ಬಹುದು. ಮೋಸದಿಂದ ಜೂಜನ್ನಾಡಬಾರದು" ಎಂದ ಧರ್ಮನಿಗೆ ಶಕುನಿ "ಅದ ರಲ್ಲೇನು ತಪ್ಪಿದೆ ? ಕೇಳು ! ಶ್ರೋತ್ರಿಯರು ವಾದವಾಡುವಾಗ ವಿದ್ವಾಂಸನು ಅಪಂಡಿತನನ್ನು ಗೆಲ್ಲುವನು. ಅಕ್ಷವಿದ್ವಾಂಸನು ಅಕ್ಷವಿದ್ಯಾವಿಹೀನನನ್ನು ಸೋಲಿಸು ವುದು ಅನ್ಯಾಯವೆಂದು ನಾನು ಒಪ್ಪಲಾರೆ. ಅಷ್ಟು ಹೆದರುವೆಯಾದರೆ ಜೂಜಾಟವೇ ಬೇಡ ಬಿಡು !" ಎಂದು ಗಟ್ಟಿಯಾಗಿ ನಕ್ಕು ದುರ್ಯೋಧನನನ್ನು ವೀಕ್ಷಿಸಿದನು.

ಕೌರವರಾಜನಾಗ ನಾನು ಧನಾದಿಗಳನ್ನು ಪಣವಾಗಿರಿಸುವವನು. ಶಕುನಿ ಕೇವಲ ನನಗಾಗಿ ಆಡುವನು. ನನ್ನೊಡನಾಡಿದಂತೆ ತಿಳಿ ! ಎಂದನು. ಧರ್ಮರಾಜ "ಒಬ್ಬನಿಗಾಗಿ ಇನ್ನೊಬ್ಬನು ಜೂಜಾಡುವುದು ಇನ್ನೂ ಅನ್ಯಾಯ, ಆಗಲಿ, ನಿನ್ನಿಷ್ಟ !" ಎಂದು ಪಗಡೆಕಾಯಿಗಳನ್ನು ಸ್ವೀಕರಿಸೆಂದನು. ಶಕುನಿಯು ಅಬ್ಬರಿಸಿ ಕೂತನು. ಭೀಷ್ಮ ದ್ರೋಣ ಕೃಪ ವಿದುರರು ಸಮಾಧಾನವಿಲ್ಲದೆ ಸುಮ್ಮನೆ ಕೂತು ನೋಡುತ್ತಿದ್ದರು. ದೇವಸಭೆಯಲ್ಲಿ ವೃಂದಾರಕರಂತೆ ವಿರಾಜಿಸುವ ಪಾಂಡವರು ಸುಹೃದ್ಯೂತವೆಂದು ಭ್ರಮಿಸಿ, ಆಟವನ್ನಾರಂಭಿಸಿದರು. ಸಂಜಯನು ಕುತೂಹಲ ದಿಂದ ಕೇಳುವ ಅಂಧರಾಜನಿಗೆ ನಡೆದುದೆಲ್ಲವನ್ನೂ ವಿವರಿಸಿ ಹೇಳುತ್ತಿದ್ದನು.

ವೇದವೇದಾಂಗ ಚತುರರು ಆಹವಮಲ್ಲರು ಆದ ಕುರು ಪಾಂಡವರು ಕುಹಕ ದ್ಯೂತವನ್ನಾಡಿ ಕೆಟ್ಟ ರೀತಿಯನ್ನು ವರ್ಣಿಸುವೆನು, ಕೇಳು ! ಜನಮೇಜಯ !

ಧರ್ಮರಾಜನು ಸಾಗರ ಸಂಭೂತ ಮಣಿ ರತ್ನ ನಿರ್ಮಿತವಾದ ಹಾರವನ್ನೂ ಭೂಷಣಗಳನ್ನೂ ದ್ರವ್ಯರಾಶಿಯನ್ನೂ ಪಣವಾಗಿಟ್ಟನು. ದುರ್ಯೋಧನನೂ ಸಮಾನ ದ್ರವ್ಯಗಳನ್ನಿಟ್ಟನು. ಶಕುನಿಯು ಅಕ್ಷಗಳನ್ನು ಒಗೆದು ಗೆದ್ದೆನೆಂದನು. ಇಂತು ಒಡ್ಡುತ್ತಿದ್ದಂತೆ ಸೋತುಹೋಗುತ್ತಿದ್ದ ಧರ್ಮರಾಜನಿಗೆ ಹಠವು ಹೆಚ್ಚಾಯಿತು. ಕ್ರಮವಾಗಿ ಆ ಮಹಾರಾಜನು, ನಿಷ್ಕ ಸಹಸ್ರ ಭಾಂಡಗಳನ್ನು, ಅಕ್ಷಯ ಹಿರಣ್ಮಯ ಕೋಶವನ್ನು, ರಾಜರಥ ಗಜ ತುರಗಗಳನ್ನು, ಸರ್ವಸೈನ್ಯವನ್ನು, ಮಂದಿರಾರಾಮ ಗಳನ್ನು, ರತ್ನಾಭರಣಭೂಷಿತ ದಾಸದಾಸೀ ಸಹಸ್ರವನ್ನು, ಅಮಾತ್ಯಾದಿನಿಯೋಗ ವರ್ಗವನ್ನು, ಅರವತ್ತುಸಾವಿರ ವೀರಭಟರನ್ನು, ಚತುಶ್ಶತನಿಧಿಗಳನ್ನು, ಸೋತು ಕೂತನು.

ಏನುಗೆದ್ದನೇನುಗೆದ್ದನೆಂದು ಮಗನ ವಿಜಯವನ್ನಾಲಿಸುತ್ತಿದ್ದ ಧೃತರಾಷ್ಟ್ರನನ್ನು ನೋಡಿ, ಜೂಜಾಟವು ಪ್ರಕೋಪಿಸುತ್ತಿರುವುದನ್ನರಿತು ವಿದುರನು ಭಯಚಕಿತನಾಗಿ ಇಂತೆಂದನು—

"ರಾಜನ್ ! ನಿಲ್ಲಿಸು, ಸರ್ವಸ್ವಾಪಹಾರಕವಾದ ಈ ಘೋರ ದ್ಯೂತವನ್ನು ! ಸಾಯಲಿರುವವನಿಗೆ ದಿವ್ಯೌಷದಂತೆ, ನನ್ನ ಮಾತು ಈಗ ನಿನಗೆ ರುಚಿಸದು. ಆದರೂ ಹೇಳಿಬಿಡುವೆನು. ಹುಟ್ಟಿದಾಗಲೆ ನರಿಯಂತೆ ಅತ್ತ ಪಾಪಿ ದುರ್ಯೋಧನ ನಿಂದ ಕುಲನಾಶವಾಗುವುದೆಂದು ದೈವಜ್ಞರು ಹೇಳಿದರು. ಇಂದು ಅದು ನಿಜ ವಾಯಿತು. ಮನೆಯಲ್ಲಿರುವ ಮಾರಿಯನ್ನು ಮಗನೆಂದು ಸಾಕಿದೆ. ಜೇನಿನಾಶೆಗೆ ಗಿಡ ವನ್ನೇರಿದ ಮೂಢನು, ಕೆಳಗಿನ ಪ್ರಪಾತವನ್ನು ಕಾಣಲಾರದೆ ಬಿದ್ದು ಸಾಯುವನು. ಅಂತೆಯೇ ಗೆದ್ದುದೇನೆಂದು ಕೇಳಿ ಆನಂದಪಡುವ ನೀನೂ ಮುಂದಾಗುವ ಭಯಂಕರ ಪರಿಣಾಮವನ್ನು ಕಾಣದಿರುವೆ.

"ಹಿಂದೆ ಪ್ರಜಾಪೀಡಾರತನಾದ ಅಸಮಂಜನನ್ನು ಸಗರನು ಹೊರಗಟ್ಟಿ ಸುಖಿ ಸಿದನು. ಕಂಸನನ್ನು ಕೊಂದು ಕೃಷ್ಣನು ಯಾದವ ಕ್ಷೇಮ ಸಂಪಾದಕನಾದನು. ಅಂತೆಯೇ ಕುಲಪಾಂಸನನಾದ ನಿನ್ನ ಮಗನೊಬ್ಬನನ್ನು ನಿಗ್ರಹಿಸಿ, ಉಳಿದವರಿಂದ ಸುಖವಾಗಿರು ! ಪಾಂಡವರ ದ್ರೋಹವು ಒಳಿತಲ್ಲ. ಅವರನ್ನು ಸ್ವೀಕರಿಸಿ, ಮುಂದೆ ಕಾದಿರುವ ಶೋಕಸಮುದ್ರವನ್ನು ಹಿಂಗಿಸು ! ಬಂಗಾರವನ್ನುಗುಳುವ ಪಕ್ಷಿಗಳನ್ನು ಲೋಭದಿಂದ ಕೊಂದ ರಾಜನಂತೆ ಉಭಯ ಲೋಕ ಸುಖ ದೂರನಾಗಬೇಡ ! ಈಗ ನಗುವೆ ನಿಜ, ಆಮೇಲೆ ಪಶ್ಚಾತ್ತಾಪಾಗ್ನಿಯಿಂದ ನೊಂದಾಗ ಗತಜಲ ಸೇತು ಬಂಧನ ವಾಗುವುದು.

"ಈ ಜೂಜಿನ ಬೀಜದಿಂದ ಕಲಹ ಮಹಾವೃಕ್ಷವೇಳುವುದು. ಈ ವಿಷವೃಕ್ಷಕ್ಕೆ ನೀರೆರೆಯುವ ನಿನ್ನ ಮಗನೇ ಆ ವಿಷಫಲವನ್ನು ಉಣಬೇಕೆಂದು ತಿಳಿ ! ಸಭೆಯಲ್ಲಿದ್ದು ಅನ್ಯಾಯವನ್ನು ನಿವಾರಿಸದಿರುವ ಭೀಷ್ಮ, ದ್ರೋಣ, ಬಾಹ್ಲಿಕಾದಿಗಳು ಕೂಡ ಅನರ್ಥಭಾಜನರಾಗುವರು. ಇದರಿಂದ ದೇಶವೇ ಹಾಳಾಗುವುದು. ದುರ್ಯೋಧನನನ್ನು ನಂಬಿ, ದ್ಯೂತವನ್ನು ಅಭಿನಂದಿಸುವ ಅವಿವೇಕಿಗಳು, ಪಾಂಡವದಾವಾನಲದಲ್ಲಿ ಶಲಭೀ ಕೃತರಾಗಿ ಸಾಯುವರು. ಧರ್ಮರಾಜನಿಂದ ಕಲಹವಾಗುವ ಮುನ್ನ ಎಚ್ಚತ್ತು, ನಿಲ್ಲಿಸು ಜೂಜನ್ನು ! ಭೀಮಾರ್ಜುನರು ವಿಜೃಂಭಿಸಿ, ಅನ್ಯಾಯವನ್ನು ಶಿಕ್ಷಿಸಬಂದರೆ, ರಕ್ಷಕರಾರೂ ಇಲ್ಲ. ಮಹಾರಾಜ ! ಬೇಕಾದಷ್ಟು ಸಂಪತ್ತಿರುವ ನಿನಗೆ ಅನ್ಯಾಯದ ಜೂಜಿನ ಧನವೇಕೆ ? ಶಕುನಿ ಮೋಸಗಾರನೆಂದು ತಿಳಿದೇಇರುವೆ. ಅವನನ್ನು ತಡೆದು ಜೂಜಿನಲ್ಲಿ ಗೆದ್ದುದನ್ನು ಧರ್ಮನಿಗೆ ಹಿಂದಿರುಗಿಸಿ, ಶಕುನಿಯನ್ನು ಅವನ ದೇಶಕ್ಕೆ ಅಟ್ಟು ! ಅವನೇ ಸರ್ವಾನರ್ಥಕಾರಣನು. ಅವನಿಲ್ಲದಿರೆ ಪಾಂಡವಕೌರವರು ಸೌಹಾರ್ದದಿಂದ ಸುಖಿಸುವರು."

ಇಂತು ನುಡಿಯುವ ವಿದುರನನ್ನು ಕಿಡಿಗಣ್ಣಿಂದ ನೋಡಿ, ದುರ್ಯೋಧನನು "ದಾಸೀಪುತ್ರ ! ಪರರನ್ನು ಭಟ್ಟಂಗಿಯಂತೆ ಪೊಗಳುವ ನಿನ್ನ ಕೀಳುಬುದ್ಧಿಯನ್ನು ಕೇಳುವ ಮೂರ್ಖರು ಯಾರೂ ಇಲ್ಲ. ಪಕ್ಷಪಾತಿಯಾದ ನಿನಗೆ ಗುಣದೋಷ ವಿಚಾರವಿಲ್ಲ. ನಿನ್ನ ಹಾಳು ಮನಸ್ಸು ನಿನ್ನ ನಾಲಿಗೆಯಲ್ಲಿ ಕಾಣುತ್ತಿದೆ. ವಿಷಸರ್ಪವನ್ನು

ಹಾಲೆರದು ಸಾಕಿದಂತಾಯಿತು ನಿನ್ನನ್ನು ಸಲಹಿದುದು. ಬೆಕ್ಕು ಮನೆಯ ಹಾಲನ್ನು ಕದ್ದುಂಡು, ಮನೆಯೊಡತಿಯನ್ನು ಕರುಡಾಗಲೆಂದು ಶಪಿಸಿದಂತೆ, ಸ್ವಾಮಿದ್ರೋಹಿ ಯಾಗಿರುವೆ. ಸಾಕುಮಾಡು ನಿನ್ನ ಹಿತೋಪದೇಶವನ್ನು ! ಬಾಯಿಗೆಬಂದಂತೆ ಬೊಗ ಳುವ ನಿನಗೆ ನಾಚಿಕೆ, ಕೃತಜ್ಞತೆ, ವಿವೇಕ, ಯಾವುದೂ ಇಲ್ಲ. ನಿನ್ನನ್ನು ಹಿತವಾವು ದೆಂದು ನಾನು ಕೇಳಲಿಲ್ಲ. ಕರೆಯದೆ ಬಂದ ಕಂಗಾಲನಂತೆ ಅಹುದೆಂದು ಮುಂದೆ ಬಂದು, ಪ್ರಲಾಪಚತುರನಾಗಬೇಡ ! ನನಗೆ ಶಾಸಕರು ಮತ್ತಾರಿಲ್ಲ. ಮಾತೃಗರ್ಭ ದಲ್ಲಿ ಪ್ರೇರಕನಾರೋ ಅವನೇ ನನಗೆ ಪ್ರೇರಕನು. ಅವನು ಪ್ರೇರಿಸಿದಂತೆ ಬೇಕಾದ ದ್ದನ್ನು ಮಾಡುವೆನು ; ತಲೆಯನ್ನು ಬಂಡೆಗೆ ಗಟ್ಟಿಸುವೆನು ; ಹಾವಿನ ಹುತ್ತದಲ್ಲಿ ಕೈ ಯಿಕ್ಕುವೆನು ; ಕಾಲಕೂಟವನ್ನು ಗಟಗಟ ಕುಡಿಯುವೆನು ; ನನಗಡ್ಡಿಯಾರು ? ವ್ಯಭಿಚಾರಿಣಿಯಾದ ವನಿತೆಯಂತೆ ವರ್ತಿಸುವ ಸ್ವಾಮಿದ್ರೋಹಿಯು ತನಗೆ ಬೇಕಾ ದಲ್ಲಿ ಹೋಗಬಹುದು. ನಮಗೆ ಅವನು ಬೇಕಿಲ್ಲ !" ಎಂದು ಧಿಕ್ಕರಿಸಿದನು.

ವಿದುರನಾಮಾತಿಗೆ ನೊಂದನು. ಬಾಯಲ್ಲಿ ಅಮೃತವನ್ನು ಸುರಿಸಿ, ಕೈಯಿಂದ ದೊಣ್ಣೆ ಎತ್ತಿ ಹೊಡೆಯುವ ರಾಜರನ್ನು ನಂಬಿ, ಹಿತವನ್ನು ಅವರಿಗೆ ಹೇಳಬಾರದೆಂದು ಮನಗಂಡನು. ವ್ಯಾಧಿಯನ್ನು ನಿರ್ಮೂಲಿಸುವ ಔಷಧವು ಕಹಿಯಾಗಿದ್ದರೂ ಸೇವ್ಯ ವೆಂದು ತಿಳಿದವನು ಬದುಕುವನು ; ಬಿಸಾಟಿದವನು ಸಾಯುವನು. ದುರ್ಯೋಧನನ ಹಿತವನ್ನು ಬಯಸಿದುದು ತಪ್ಪಾಯಿತೆಂದು ಸುಮ್ಮನಾದನು.

ದ್ಯೂತದ ಕಾವು ಏರಿದಂತೆ ಸಭೆಯೇ ತಪಿಸಿತು. ಎಲ್ಲರೂ ಚಿತ್ರಪ್ರತಿಮೆಗಳಂತೆ ನಿರೀಕ್ಷಿಸುತ್ತಿದ್ದರು. ಶಕುನಿ "ಧರ್ಮರಾಜ ! ಬಹಳ ಸೋತೆ. ಇನ್ನು ಉಳಿದಿದ್ದರೆ ಪಣವನ್ನಿಡು !" ಎಂದನು. ಧರ್ಮಜನು ಅಯುತ, ನಿಯುತ, ಪ್ರಯುತ ಸಂಖ್ಯಾ ಧನವನ್ನಿಟ್ಟನು. ಶಕುನಿ 'ಜಿತಂ' ಎಂದೊದರಿದನು. ಗೋಧನವನ್ನು, ರಾಜ್ಯವನ್ನು, ಪುತ್ರರನ್ನು ಪಣವಾಗಿಟ್ಟು ಧರ್ಮಜನು ಸೋತಾಗ, ಸಭಿಕರು ಹಾಹಾಕಾರ ಮಾಡಿ ದರು. ಧರ್ಮಜನು ಬಿಡದೆ ನಕುಲನನ್ನು ಸಹದೇವನನ್ನು ಪಣವಿಟ್ಟು ಅವರನ್ನೂ ಸೋತನು. ಶಕುನಿಯು "ರಾಜನ್ ! ಪ್ರಿಯರಾದ ನಕುಲ ಸಹದೇವರು ನನ್ನ ದಾಸರಾದರು. ಪ್ರಿಯತಮರಾದ ಭೀಮಾರ್ಜುನರನ್ನು ಒಡ್ಡು ! ಮತ್ತನಾದವನು ಹಾಳುಬಾವಿಯಲ್ಲಿ ಬೀಳುವನು. ಅಧರ್ಮವಶನಾದವನು ನರಕದಲ್ಲಿ ಬೀಳುವನು. ಜೂಜುಗಾರರು ಸ್ವಪ್ನವನ್ನು ನೋಡುತ್ತಿರುವಂತೆ ಮೈಮರೆತು ಆಡಿ, ಸೋತಮೇಲೆ ಎಚ್ಚತ್ತವರಂತೆ ಆಗಿ ಪ್ರಲಪಿಸುವರು. ಏನು ಪಣ ಹೇಳು" ಎಂದು ಹುರಿದುಂಬಿಸಿದನು. ಧರ್ಮಜನಾಗ ಗರಬಡಿದವನಂತೆ ದಿಙ್ಮೂಢನಾಗಿ ಅರ್ಜುನನನ್ನು, ಭೀಮಸೇನನನ್ನು ಕೊನೆಗೆ ತನ್ನನ್ನು ತಾನೆ ಒಡ್ಡಿ, ಪರಾಜಿತನಾದನು. ಮಾಯಾವಿಯಾದ ಶಕುನಿಯು "ಎಂತಹ ಅನ್ಯಾಯ ಮಾಡಿದೆ ! ನಿನ್ನದಾದ ವಸ್ತುವಿರಲು, ನೀನು ನಿನ್ನನ್ನೇ ಪಣವಾ ಗಿಟ್ಟು ಸೋತೆ. ಆತ್ಮಪರಾಜಯವು ಮಹಾಪಾಪವು. ನಿನಗೆ ಪ್ರಿಯವಾದ ಇನ್ನೊಂದು ವಸ್ತುವಿದೆ. ದ್ರೌಪದಿಯನ್ನು ಪಣವಾಗಿಟ್ಟು, ಕೊನೆ ಆಟ ಆಡು !" ಎಂದು

ಕೆರಳಿಸಿದಾಗ, ಧರ್ಮಜನು ವಿಧಿವಿಮೋಹಿತನಾಗಿ, ನೀಲಕುಂಚಿತಕೇಶಳು, ಶಾರದೋತ್ಪಲಪತ್ರಾಕ್ಷಿಯು, ಪಾಟಲಸುಮಗಂಧಿಯು, ಶ್ರೀಸಮರೂಪ ವಿಲಾಸವತಿಯು ಆದ ಕೃಷ್ಣೆಯನ್ನು ಪಣವಿಟ್ಟು ಮತ್ತೆ ಸೋತನು. ಸಭಿಕರು ಧಿಕ್ ಧಿಕ್ ! ಎಂದೊದರಿದರು. ಭೀಷ್ಮಾದಿಗಳು ಸಂಕ್ಷುಭಿತರಾದರು ! ಅವರ ಮೈಗಳು ಬೆವರಿಟ್ಟವು, ಕಣ್ಣುಗಳು ಅಶ್ರುಪೂರ್ಣವಾದವು. ವಿದುರನು ತಲೆಯನ್ನು ಕೈಯಲ್ಲಿ ಹಿಡಿದು, ಅಳುತ್ತಾ ಕೂತನು. ಧೃತರಾಷ್ಟ್ರನು ಮಾತ್ರ ಸಂತೋಷದಿಂದ 'ಏನು ಗೆದ್ದರು ? ಏನು ಗೆದ್ದರು?' ಎಂದು ಕೇಳುತ್ತಿದ್ದನು. ಕರ್ಣಾದಿಗಳ ಹರ್ಷಸಾಗರವು ಉಕ್ಕೇರಿತು. ಇತರ ಸಭಿಕರು 'ಅಯ್ಯೋ ! ವೇದಿಮಧ್ಯದಿಂದ ಜನಿಸಿಬಂದು, ಪಾಂಚಾಲರಾಜನ ಪುತ್ರಿ ಎನಿಸಿ, ಪಾಂಡವರ ಮನೆತುಂಬಿದ ಪತಿವ್ರತೆಗೆ ದಾಸೀತ್ವವೇ ? ಅಕಟಕಟ !' ಎಂದು ಮರುಗಿದರು.

ದುರ್ಯೋಧನನು, ದುಃಖಿಸುವ ವಿದುರನನ್ನು ಕರೆದು "ವಿದುರ ! ಪಾಂಡವರ ಪತ್ನಿಯು ನಮಗೆ ದಾಸಿಯಾದಳು ; ಹೋಗಿ ಅವಳನ್ನು ಕರೆದು ತಾ ! ನಮ್ಮ ಮಂದಿರಮಾರ್ಜನರತಳಾಗಿ, ದಾಸಿಯರಿಂದ ಕೂಡಿರಲಿ ಆ ನಿರ್ಭಾಗ್ಯಳು !" ಎಂದು ಪ್ರಹಸಿಸಿ ನುಡಿದನು.

ವಿದುರನು ಆ ಮಾತಿಗೆ ಸಿಟ್ಟಾಗಿ "ಮಂದಬುದ್ಧಿಯಾದ ನಿನಗೆ ಕುತ್ತಿಗೆಗೆ ತಗಲಿರುವ ಪಾಶದ ಅರಿವೇ ಇಲ್ಲ! ಈ ಸಭೆಯಲ್ಲಿ ದಾಳಶಬ್ದದಿಂದ ಕಿವುಡಾದ ನಿನಗೆ ಯಮ-ರಾಜ ಮಹಿಷ ಕಂಠ ಘಂಟಿಕಾ ನಿನಾದ ಕೇಳುತ್ತಿಲ್ಲ! ನಾಲಿಗೆಗೆ ಬಂದಂತೆ ಮಾತಾಡುವ ನಿನಗೆ ವಿವೇಕವಿಲ್ಲ. ಸಿಂಹ ವ್ಯಾಘ್ರಗಳನ್ನು ಕೆಣಕಿ ಆಡುತ್ತಿರುವೆ ! ನಡುನೆತ್ತಿಯಲ್ಲಿ ಹಾವನ್ನು ಸುತ್ತಿದ ನಿನಗೆ ಯಮಮಂದಿರವು ಸಮೀಪಸವಾಗಿದೆ. ಮಹಾತ್ಮರಾದ ಪಾಂಡವರ ದ್ರೋಹವು ಒಳಿತಲ್ಲ ! ಕೃಷ್ಣೆ ನಿನಗೆ ದಾಸಿಯಲ್ಲ ! ಪಣದಲ್ಲಿ ತನ್ನನ್ನು ತಾನು ಸೋತ ಧರ್ಮನಿಗೆ ಅವಳನ್ನೊಡ್ಡುವ ಅಧಿಕಾರವಿಲ್ಲ. ವೇನನಂತೆ ದುಷ್ಟನಾದ ನಿನಗೆ ಉಳಿಗಾಲವಿಲ್ಲ. ಈ ನನ್ನ ಮಾತುಗಳು ಕೊನೆಗೆ ಸಾಯುವಾಗ ನೆನೆಯುವೆ! ನೀಚ ಕರ್ಮವನ್ನು ಮಾಡಿ ಪರರಿಗೆ ಹಿಂಸೆಯನ್ನೀವ ದುರಾತ್ಮನಿಗೆ ಉಭಯ ಲೋಕ ಸುಖವೂ ದೂರಾಗುವುದು. ಮರ್ಮಭೇದಕವಾದ ಪರರ ಮಾತಿಗೆ ತಾನು ನೊಂದಂತೆ ತನ್ನ ಹೀನ ವಚನಗಳಿಂದ ಪರರೂ ನೋಯುವರೆಂದು ತಿಳಿದವನೇ ವಿವೇಕಿಯು.

"ಒಂದು ಮೇಕೆಯು ಅಕಸ್ಮಾತ್ತಾಗಿ ಶಸ್ತ್ರವೊಂದನ್ನು ನುಂಗಿತು. ಆ ಶಸ್ತ್ರವು ಕಂಠವನ್ನು ಭೇದಿಸಿಕೊಂಡು ಹೋದಾಗ ಆ ಪಶುವು ಸಾವನ್ನಪ್ಪಿತು. ಅಂತೆಯೇ ಪಾಂಡವದ್ರೋಹಶಸ್ತ್ರವನ್ನು ನುಂಗುವ ನಿನಗೆ ಕೇಡು ತಪ್ಪದು. ವಿದ್ಯಾಪೂರ್ಣನಾದ ಋಷಿಯನ್ನು ನೋಡಿ ಬೀದಿಯ ನಾಯಿಯು ಬೊಗಳುವಂತೆ, ಶಾಂತರಾಗಿರುವ ಪಾಂಡುಪುತ್ರರನ್ನು ನಿಂದಿಸುತ್ತಿರುವೆ. ನನ್ನ ಹಿತವಚನವು ನಿನಗೆ ರುಚಿಸದು. ಆದರೂ ಕುರುವಂಶದ ನಾಶವಾಗುವಂತೆ ವರ್ತಿಸುವ ನಿನ್ನಲ್ಲಿ ಮರುಕದಿಂದ ಮಾತಾಡುತ್ತಿರುವೆನು" ಎಂದು ನಿರ್ಭಯನಾಗಿ ನುಡಿದು, ಸುಮ್ಮನೆ ಕೂತನು.

## ದ್ರೌಪದೀ ರಕ್ಷಣ

ದುರ್ಯೋಧನನು ವಿದುರನನ್ನು ನಿರ್ಲಕ್ಷಿಸಿ, ಪ್ರಾತಿಕಾಮಿಯನ್ನು ಕರೆದು "ಎಲವೋ! ಹೋಗಿ ದಾಸಿಯಾದ ದ್ರೌಪದಿಯನ್ನು ಸಭೆಗೆ ಕರೆದುಕೊಂಡು ಬಾ! ಈ ಪಾಂಡವಾಧಮರಿಗೆ ಹೆದರಬೇಡ! ನಮ್ಮ ವೃದ್ಧಿಯನ್ನು ಸಹಿಸದ ಈ ವಿದುರನು ಬೊಗಳುತ್ತಿರಲಿ, ಹೋಗು!" ಎಂದಾಜ್ಞಾಪಿಸಿದನು. ಪ್ರಾತಿಕಾಮಿಯು ಪಾಂಡವ ಮಹಿಷಿಯರ ಮಂದಿರವನ್ನು ಸಿಂಹ ಗುಹೆಯನ್ನು ನಾಯಿಯಂತೆ ಪ್ರವೇಶಿಸಿ, ಕೃಷ್ಣೆಯನ್ನು ಕಂಡು—"ಯುಧಿಷ್ಠಿರನು ದ್ಯೂತಮತ್ತನಾಗಿ ನಿನ್ನನ್ನು ಪಣಕ್ಕಿಟ್ಟು ಸೋತಿರುವನು. ಧೃತರಾಷ್ಟ್ರನ ಮನೆಕೆಲಸಗಾರ್ತಿಯಾಗಿರಲು ನಿನ್ನನ್ನು ಕರೆತರಲು ಅಪ್ಪಣೆಯಾಗಿದೆ, ಹೊರಡು" ಎಂದನು.

ಕಲ್ಯಾವೇಶದಿಂದ ವಿವೇಕಹೀನರಾಗಿ ಭೀಷ್ಮಾದಿಗಳು ನಿವಾರಿಸದಿರಲು, ಕಲ್ಯಾವೇಶರಹಿತರಾಗಿದ್ದ ಭೀಮಾದಿ ಸೋದರರು, ಕುಂತೀ ವಿದುರರು ವಿಧಿಗೆ ತಲೆಬಾಗಿ ಸುಮ್ಮನಿರಲು, ನಡೆದುಹೋದ ಮಹಾನರ್ಥವನ್ನರಿತು, ದ್ರೌಪದಿಯು ಸಿಡಿಲು ಬಡಿದಂತೆ ನಿಶ್ಚೇಷ್ಟಳಾದಳು. ಆಮೇಲೆ ತಿಳಿದು "ಏನೆಂದೆ? ಭಾರ್ಯಳನ್ನು ಪಣವಾಗಿಟ್ಟು ಜೂಜಾಡಿದನೇ ಧರ್ಮರಾಜ! ಇಲ್ಲೇನೋ ಮೋಸವಿದೆ. ಹೋಗು ಆ ಕಿತವನನ್ನು ಕೇಳು! ಮೊದಲು ತನ್ನನ್ನು ಸೋತು, ನನ್ನನ್ನು ಸೋತನೋ? ಅಥವಾ ನನ್ನನ್ನು ಸೋತಮೇಲೆ ತನ್ನನ್ನೋ? ಅವನ ಉತ್ತರವನ್ನು ನಿರೀಕ್ಷಿಸಿ, ಯುಕ್ತವಾದೊಡೆ ದುಃಖಿನಿಯಾಗಿ ಸಭೆಗೆ ಬರುವೆನು" ಎಂದು ದ್ರೌಪದಿ ಪ್ರಾತಿಕಾಮಿಯನ್ನು ಕಳಿಸಿ ಕಣ್ಣೀರಿನಿಂದ ಕೈತೊಳೆಯುತ್ತಾ ಕೂತಳು.

ಪ್ರಾತಿಕಾಮಿಯು ಸಭೆಯನ್ನು ಮುಟ್ಟಿ, ಧರ್ಮರಾಜನಿಗೆ ದ್ರೌಪದಿಯ ಸಂಶಯವನ್ನು ತಿಳಿಸಿದನು. ಆ ಪ್ರಶ್ನೆಯನ್ನು ಕೇಳಿ, ಯುಧಿಷ್ಠಿರನು ನಿಶ್ಚೇತನನಾದನು. ಅವನು ಉತ್ತರವನ್ನೀಯದಿರಲು ದುರ್ಯೋಧನನು "ಇಲ್ಲಿಗೆ ಬಂದು ಪಾಂಚಾಲಿ ತನ್ನ ಪ್ರಶ್ನೆಯನ್ನು ಕೇಳಲಿ! ಅವಳ ಮಾತನ್ನೂ ಇವನ ಉತ್ತರವನ್ನೂ ಎಲ್ಲರೂ ಕೇಳೋಣ" ಎಂದು ಅವನನ್ನು ಮತ್ತೆ ಕಳಿಸಿದನು. ಪ್ರಾತಿಕಾಮಿಯು ದ್ರೌಪದಿಗೆ ನಡೆದುದನ್ನು ತಿಳಿಸಿ, 'ಸಭೆಗೆ ಬರಬೇಕು' ಎಂದು ಬಿನ್ನವಿಸಿದನು. "ಹಾ! ಹತವಿಧಿ! ಸುಖ-ದುಃಖಗಳು ಪಂಡಿತಪಾಮರರಿಗೀರ್ವರಿಗೂ ಬರುವುವು. ಬರಲಿ! ಧರ್ಮ-ಸಂರಕ್ಷಣದಿಂದ ನಾವು ರಕ್ಷಿತರಾಗುವೆವು. ಧರ್ಮರಾಜನಿಗೇ ಧರ್ಮಸಂಶಯವು ಬಿಡಿಸಲಾಗದೆಹೋಯಿತೇ? ಹೋಗಲಿ, ಸಭೆಯಲ್ಲಿರುವ ಜ್ಞಾನವೃದ್ಧರನ್ನು ಕೇಳು! ಅವರು ಹೇಳಿದಂತೆ ಮಾಡುವೆನು" ಎಂದು ಹೇಳುತ್ತಾ ಪ್ರಾತಿಕಾಮಿಯನ್ನು ಕಳಿಸಿ, ದ್ರೌಪದಿಯು ತಳಮಳಿಸುತ್ತಿದ್ದಳು. ಆಗ ಧರ್ಮರಾಜನು ಒಬ್ಬ ದೂತನನ್ನು ಕಳಿಸಿ 'ಏಕವಸನಳು, ಏಕವ್ಯಸನಳು ಆಗಿ ಸಭೆಗೆ ಬಂದು, ಮಾವನ ಮುಂದೆ ನಿಲ್ಲು' ಎಂದು ಹೇಳಿಕಳಿಸಿದನು. ಆಗ ದುರ್ಯೋಧನನು ಪ್ರಾತಿಕಾಮಿಯು ಭೀಮನಿಗೆ

ಹೆದರುತ್ತಿರುವುದನ್ನು ಕಂಡು, ಧರ್ಮರಾಜನ ದೂತನನ್ನು ತಡೆದು, ದ್ರೌಪದಿಯನ್ನು ಸಭೆಗೆ ಸೆಳೆದು ತರುವಂತೆ ದುಶ್ಶಾಸನನಿಗೆ ಆಜ್ಞಾಪಿಸಿದನು.

ದುಷ್ಟಶ್ರೇಷ್ಟನಾದ ದುಶ್ಶಾಸನನು ಅಣ್ಣನ ಅಪ್ಪಣೆಯಂತೆ ಅಂಗನಾಗಾರದಲ್ಲಿ ಹೊಕ್ಕು, ದ್ರೌಪದಿಯನ್ನು ಕಂಡನು. "ಪಾಂಚಾಲಿ! ದಾಸಿಯಾಗಿರುವೆ, ಏಳು! ಸುಂದರಿ! ನಮ್ಮನ್ನು ಸೇವಿಸಿ ಜೀವಿಸು, ಬಾ!" ಎಂದು ನುಡಿದು, ಹಿಡಿಯಲು ದುಡುಕುವ ದುಶ್ಶಾಸನನಿಗೆ, ಹುಲಿಗೆ ಹುಲ್ಲೆಯಂತೆ ಹೆದರಿ ಓಡಿ, ಸಭಾಂಗಣದಲ್ಲಿ ಸ್ತ್ರೀಜನರ ಕಡೆಗೆ ಸಾರಿ, ದ್ರೌಪದಿ ಮುಖವನ್ನು ಮುಚ್ಚಿ 'ಹೋ' ಎಂದು ರೋದಿಸಿದಳು. ದುಶ್ಶಾಸನನು ಬಿಡದೆ ಮುತ್ತಿ, ರಾಜಸೂಯಯಾಗದ ಅವಭೃತಸ್ನಾನದಿಂದ ಪವಿತ್ರವಾದ ಅವಳ ನೀಲಕುಂಚಿತ ದೀರ್ಘಕೇಶಗಳನ್ನು ಹಿಡಿದು, ಪಾಂಡವರನ್ನು ನಿರ್ಲಕ್ಷಿಸಿ, ಸಭೆಯಲ್ಲಿ ದ್ರೌಪದಿಯನ್ನು ಸೆಳೆದು ತಂದನು. ಸಿಂಹಪತ್ನಿಯನ್ನು ಕೆದಕುವ ಕೋತಿಯಂತೆ, ದುಶ್ಶಾಸನನು ಐವರು ಪತಿಗಳ ಸಮಕ್ಷಮದಲ್ಲಿ ಅನಾಥಳಂತಾದ ದ್ರೌಪದಿಯನ್ನು ಸೆಳೆದು ತಂದಾಗ ಸಭೆಯು ಗಗ್ಗೋಲಾಯಿತು. ಹಾ ಹಾ ಕಾರಗಳು, ಧಿಕ್ಕಾರಗಳು ತುಂಬಿ ಸಭೆ ಪ್ರತಿಧ್ವನಿಸಿತು. 'ರಜಸ್ವಲೆಯಾಗಿ, ಏಕವಸನಳಾಗಿರುವೆ'ನೆಂದು ಮೆಲ್ಲಗೆ ಉಸುರುವ ಕೃಷ್ಣೆಯ ಪ್ರಾರ್ಥನೆಯನ್ನು ಮನ್ನಿಸದೆ, ಮಂದಬುದ್ಧಿಯಾದ ಬಾಲನು ನಾಗರಹಾವಿನಿಂದಾಡುವಂತೆ, ದುಶ್ಶಾಸನನು "ರಜಸ್ವಲೆಯಾಗಿದ್ದರೇನು? ಏಕಾಂಬರೆಯಾದರೇನು? ವಿವಸ್ತ್ರಳಾದರೇನು? ನಮ್ಮ ದಾಸಿಯಾಗಿರುವೆ" ಎಂದು ಹೀಯಾಳಿಸಿದನು.

ದ್ರೌಪದಿಯು ರೋಷಶೋಕಮೋಹಪರೀತಳಾದಳು. ಅವಳ ಮುಖ ಕಣ್ಣೀರಿನಿಂದ ಕಪ್ಪಾಯಿತು. ಕೇಶಪಾಶವು ಬಿಚ್ಚಿ ಹಾರಾಡಿತು. ಏಕವಸನಳಾದ ತನ್ವಂಗಿಯು ಕಪ್ಪು ನಾಗರಹಾವಿನಂತೆ ಕಂಡಳು. ಕೃಷ್ಣೆಯು ಒಂದು ಸಲ ಸಭೆಯನ್ನೆಲ್ಲ ನೋಡಿದಾಗ ಎಲ್ಲರೂ ತಲೆ ತಗ್ಗಿಸಿದರು. ಸಿಡಿಲಾದುರುವಂತೆ ಕಡುಕೋಪದ ಕೆಂಗಣ್ಣಿನಿಂದ ನೋಡುತ್ತ ದ್ರೌಪದಿ ಇಂತೆಂದಳು—

"ಶಸ್ತ್ರಶಾಸ್ತ್ರವಿಚಕ್ಷಣರು, ಗುರುಸ್ಥಾನಾಪನ್ನರು, ನೀತಿಕೋವಿದರು ನೆರೆದಿರುವ ಸಭೆಗೆ ಶರಣಾಗಿರುವೆನು! ದುಶ್ಶಾಸನನಿಂದ ನನ್ನನ್ನು ಬಿಡಿಸಿ! ಏಕವಸನಳಾಗಿರುವ ನನ್ನ ಗೋಳು ಯಾರಿಗೂ ಕೇಳಿಸದೆಹೋಯಿತೆ? ಧರ್ಮಸೂಕ್ಷ್ಮವನ್ನು ತಿಳಿಯುವುದು ಬಹುಕಷ್ಟ. ಧರ್ಮರಾಜನು ಎಂದಿಗೂ ಅಧರ್ಮಕಾರಿಯಾಗಲಾರನು! ತ್ರಿಕರಣದಿಂದಲೂ ಪತಿಗಳ ಅಪರಾಧವಾಯಿತೆಂದು ನಾನು ಭಾವಿಸಿಲ್ಲ. ಈ ಅಕಾರ್ಯವನ್ನು ನೋಡುತ್ತಾ ಸುಮ್ಮನಿರುವುದು ನಿಮಗುಚಿತವಲ್ಲ. ನನ್ನ ಪತಿಗಳು ಸಿಡಿದೆದ್ದರೆ ಇಂದ್ರಾದಿಗಳು ಸಹಾಯವಾಗಿ ನಿಂತರೂ ಪಾಪಿ ಕೌರವರು ಉಳಿಯಲಾರರು. ಇದು ನಿಜ! ಇಂತಹ ಸಭೆಯಲ್ಲಿ ಕುಲವಧುವಿನ ಅವಹೇಳನವು ಶ್ರೇಯಸ್ಕರವಲ್ಲ! ಇಷ್ಟುಮಾತ್ರ ಧರ್ಮವನ್ನು ಹೇಳುವ ಸಭಿಕರಿಲ್ಲದ ಈ ಸಭೆಗೆ ಧಿಕ್ಕಾರವಿರಲಿ! ಇದು ಭರತಕುಲದವರು ಮಾಡುವ ಕೃತ್ಯವೇ? ಕ್ಷತ್ರಧರ್ಮವೇ ನಷ್ಟವಾಯಿತೇ?

ಭೀಷ್ಮ, ದ್ರೋಣ, ವಿದುರರು ಧರ್ಮದ್ರೋಹವನ್ನು ಸಹಿಸಿ, ಸುಮ್ಮನಿರುವರಲ್ಲ! ಮಾವನಾದ ಧೃತರಾಷ್ಟ್ರನಿಗೆ, ಮನೆಯ ಸೊಸೆಗಾಗುತ್ತಿರುವ ಅವಮಾನವು ಹಿತ ವಾಯಿತೇ? ಹಾಲಾಹಲವು ಅಮೃತವೆನಿಸಿತೇ? ಅಕಟಕಟ! ಸಭೆಯಲ್ಲಿದ್ದು ಅಧರ್ಮವನ್ನು ತಡೆಯದವರು ಕ್ಷತ್ರಿಯರಲ್ಲ. ತಡೆಯಲಾಗದಿದ್ದರೆ ಅಧರ್ಮವೆಂದು ಧಿಕ್ಕರಿಸದವರು ಮನುಷ್ಯರೇ ಅಲ್ಲ. ಇದು ಸಭೆಯೇ?"

ದ್ರೌಪದಿಯು ದುಃಖರೋಷಗಳಿಂದ ಕೂಡಿ, ಅಶ್ರುಕಟಾಕ್ಷ ಪೂರ್ಣನೇತ್ರ ಗಳಿಂದ ಪಾಂಡವರನ್ನು ವೀಕ್ಷಿಸಿ, ಸಭೆಯನ್ನು ಉದ್ದೇಶಿಸಿ ಮತ್ತೆ ಇಂತು ನುಡಿದಳು—

"ಅಸ್ಥಿ ವಿಶೇಷ ನಿರ್ಮಿತಗಳಾದ ದಾಳಗಳಿಂದ ಮಾಯಾದ್ಯೂತಚತುರನಾದ ಶಕುನಿ ಗೆದ್ದರೆ, ಅದು ಜಯವೆನಿಸುವುದೇ? ಮಲಗಿದ್ದವನನ್ನು ಕೊಂದರೆ ಯುದ್ಧವು ಜಯವಾಗಲಾರದು. ಅಂತೆಯೇ ಅಮಾಯಕನಾದ ಧರ್ಮರಾಜನನ್ನು ಶಕುನಿ ಮೋಸದಿಂದ ಗೆಲ್ಲುವುದು ಜಯವಲ್ಲ. ದ್ಯೂತವು ಧರ್ಮಿಷ್ಠರಿಗೆ ಸಮ್ಮತವಲ್ಲ. ಕ್ಷತ್ರಿಯರಿಗೆ ವಿಶೇಷವಾಗಿ ಅದು ಅಧರ್ಮವೆನಿಸಿರುವುದು. ಒಂದುವೇಳೆ ಧರ್ಮರಾಜನು ಸಮ್ಮತಿಸಿ ಆಡಿರುವುದರಿಂದ ಅದು ಜಯವೇ ಎಂದು ತಿಳಿದರೂ ಅದು ಕೌರವರ ಜಯವಲ್ಲ. ಶಕುನಿಯು ಮಾಯಾಕ್ಷಗಳಿಂದ ಆಡಿದುದರಿಂದ ಅದು ಶಕುನಿಯ ಜಯವೂ ಅಲ್ಲ. ಇಂತು ಧರ್ಮಜನು ಅಪರಾಜಿತನಾಗಿರುವನು. ಅವನು ಸೋಲ ದಿರುವಾಗ ನಾನು ಪರಾಜಿತಳಾಗುವೆನೇ? ಸಮಾನ ಧರ್ಮಿಣಿಯಾದ ನನ್ನನ್ನೂ ಕೌರವರು ಧರ್ಮದಿಂದ ಗೆದ್ದಿಲ್ಲ.

"ಒಂದು ವೇಳೆ ಗಂಡನು ಸೋತರೆ ಅವನು ದಾಸನಾಗುವನು. ಪ್ರತ್ಯೇಕವಾಗಿ ಸೋತಮೇಲೆ ಅವನ ಹೆಂಡತಿಯು ದಾಸಿಯಾಗಬೇಕಿಲ್ಲ. ಅವನು ದಾಸನಾದೊಡನೆ ಅವಳೂ ದಾಸಿಯಾಗಿ, ಪಾತಿವ್ರತ್ಯಭಂಗವಿಲ್ಲದಂತೆ ಅವನ ಸೇವಾವೃತ್ತಿಯಲ್ಲಿ ಭಾಗಿನಿ ಯಾಗಿರುವುದೇ ಧರ್ಮವು. ಆದುದರಿಂದಲೇ ಧರ್ಮವನ್ನರಿತವರು ಹೇಳಿ! ಧರ್ಮಜನು ತನ್ನನ್ನು ಸೋತು, ನನ್ನನ್ನು ಸೋತರೆ ಅದು ವ್ಯರ್ಥವೇ ಆಯಿತು. ನನ್ನನ್ನು ಸೋತು ತನ್ನನ್ನು ಸೋತನೆಂಬುದು ಅವಾಸ್ತವವು. ನನಗೆ ಪತಿಸೇವೆಯೇ ಕರ್ತವ್ಯವಾಗಲಿ, ದುರಾತ್ಮರಾದ ಕೌರವಹತಕರ ದಾಸ್ಯವಲ್ಲ."

ಆ ಮಾತನ್ನಾಲಿಸಿ ಭೀಷ್ಮನು "ಅಮ್ಮಾ ದ್ರೌಪದಿ! ಧರ್ಮಸೂಕ್ಷ್ಮವನ್ನು ತಿಳಿಯುವುದು ಕಷ್ಟ; ತಾನು ಸೋತಮೇಲೆ ಏನೂ ಉಳಿದಿರುವುದಿಲ್ಲ. ಅಂತಹ ದಾಸನು ಪರಧನವನ್ನಾಗಲಿ, ತನ್ನ ವಶದಾಗಿರುವ ಸ್ತ್ರೀಜನವನ್ನಾಗಲಿ ಪಣವಿಡ ಲಾರನೆಂದು ತೋರುತ್ತಿದೆ. ಈ ಧರ್ಮಸೂಕ್ಷ್ಮವನ್ನು ಧರ್ಮರಾಜನೇ ಅರಿತಿರು ವನು. ಅವನನ್ನು ಕೇಳು! ಸರ್ವಸಂಪತ್ಸಮೃದ್ಧ ಪೃಥಿವಿಯನ್ನು ಬಿಡುವನಾಗಲಿ, ಧರ್ಮರಾಜನು ಧರ್ಮವನ್ನು ಬಿಡಲಾರನು. ಅವನು ಜಿತನಾಗಿರುವೆನೆಂದು ಒಪ್ಪಿರು ವನು. ಶಕುನಿಯು ದ್ಯೂತನಿಪುಣನು. ನೀನು ಅಜಿತಳಾಗಿರುವೆಯೆಂದೇ ನಿನ್ನ

ನ್ನೊಡ್ಡುವಂತೆ ಅವನು ಧರ್ಮನಿಗೆ ಹೇಳಿದನು. ಧರ್ಮನು ತನ್ನನ್ನು ಸೋತು ಪರದಾಸನಾಗಿದ್ದುದರಿಂದ ಪರದಾಸನಿಗೆ ಪಣವನ್ನಿಡುವ ಅಧಿಕಾರವಿಲ್ಲ. ನೀನು ಅಪರಾಜಿತೆಯೇ ಅಹುದು. ಆದರೂ ಶಕುನಿಯು ನಿನ್ನನ್ನು ದಾಸಿಯಾಗಿ ಜಿತಳೆಂದೇ ಸಾಧಿಸುತ್ತಿರುವನು. ಕೇಳು ಧರ್ಮರಾಜನನ್ನು" ಎಂದು ಚಿಂತೆಯಿಂದ ತಲೆತಗ್ಗಿಸಿ ಕೂತನು. ಧರ್ಮರಾಜನೂ ಸುಮ್ಮನಿದ್ದನು.

ಕರ್ಣ ದುಶ್ಯಾಸನರು ದ್ರೌಪದಿಯನ್ನು ನೋಡಿ, ಗಟ್ಟಿಯಾಗಿ 'ಪಾಂಚಾಲಿ! ದಾಸಿಯಾಗಿರುವೆ' ಎಂದು ನಕ್ಕರು. ಭೀಮಸೇನನು ಉಕ್ಕೇರಿಬರುವ ಕೋಪವನ್ನು ತಡೆಯಲಾರದೆ ಎದ್ದುನಿಂತು ಧರ್ಮರಾಜನನ್ನು ನೋಡಿ "ರಾಜನ್! ಜೂಜುಗಾರರು ಜೂಜನ್ನಾಡುವರು. ಆದರೆ ತಮ್ಮ ಮನೆಯ ದಾಸಿಯರನ್ನೂ ಇಟ್ಟು ಜೂಜಾಡುವುದಿಲ್ಲ. ನೀನು ರಾಜ್ಯ, ಧನ, ಸೈನ್ಯ, ರತ್ನ, ಕನಕಾದಿ ಸರ್ವಸ್ವವನ್ನೂ ಪಣವಾಗಿಟ್ಟು, ಪರವಶಮಾಡಿದೆ! ನನಗೆ ಸಿಟ್ಟಿಲ್ಲ; ಅನುಜರಾದ ನಮ್ಮನ್ನೂ ಶತ್ರುಗಳಿಗೆ ದ್ಯೂತದಾಸರನ್ನಾಗಿರಿಸಿದೆ; ನನಗೆ ಸಿಟ್ಟಿಲ್ಲ; ನೀನು ಸರ್ವೇಶನಾಗಿರುವೆ, ಪೂಜ್ಯನಾದ ಅಣ್ಣನಾಗಿರುವೆ. ಆದರೆ ಕೃಷ್ಣೆಯನ್ನು ಪಣವಾಗಿಟ್ಟು ಜೂಜಾಡಿದೆ! ಇದನ್ನು ನಾನು ಸಹಿಸಿ, ಸುಮ್ಮನಿರಲಾರೆನು! ನಿನ್ನಿಂದ ನಿರಪರಾಧಿಯು, ಪಾಂಡವ ಮಹಿಷಿಯು ಪತಿವ್ರತೆಯು ಆದ ಇವಳು ಪಾಪಿ ಕೌರವರ ಪೀಡೆಗೆ ಗುರಿಯಾಗಿರುವಳು! ಧರ್ಮವನ್ನು ಅತಿಕ್ರಮಿಸಿ, ಧರ್ಮಪತ್ನಿಯನ್ನು ಪಣವಿಟ್ಟ ನಿನ್ನ ಕೈಗಳನ್ನು ಸುಟ್ಟುಬಿಡಬೇಕು! ಸಹದೇವ! ತಾ ಅಗ್ನಿಯನ್ನು" ಎಂದು ಕೂಗಾಡಿದನು. ಸಭೆಯು ಭೀಮನ ವಿಜೃಂಭಣದಿಂದ ನಿಶ್ಚೇಷ್ಟವಾಯಿತು. ಆಗ ಅರ್ಜುನನು ಭೀಮನನ್ನು ಸಮಾಧಾನಪಡಿಸಿ ನುಡಿದನು. "ಭೀಮಸೇನ! ಹಿಂದೆಂದೂ ಆಡದ ಕಟುವಚನಗಳನ್ನೇಕೆ ಆಡುವೆ? ಪರರಿಟ್ಟ ಕಷ್ಟದಿಂದ ಮತಿಗೆಟ್ಟು ನಿನಗೆ ಧರ್ಮಗೌರವವೇ ಹೋಯಿತೇ? ಧಾರ್ಮಿಕನಾದ ಅಣ್ಣನ ದಂಡನವು ನಿನಗುಚಿತವಲ್ಲ." ಆ ಮಾತಿಗೆ ಭೀಮಸೇನನು ಅಹುದೆಂದೊಪ್ಪಿ, "ಅರ್ಜುನ! ಧರ್ಮವನ್ನರಿಯದವನಲ್ಲ. ಹಾಗಿದ್ದರೆ ಎಂದೋ ಹೇಳಿದಂತೆ ಮಾಡುತ್ತಿದ್ದೆನು. ಹಿರಿಯರು ತಪ್ಪಿನಡೆದರೆ, ಮಹಾರಾಜನು ಅಧರ್ಮವನ್ನತಿಕ್ರಮಿಸಿದರೆ, ಕಿರಿಯನು ಮತ್ತು ಯುವರಾಜನು, ಅವರನ್ನು ವಚಸಾ ಶಾಸಿಸಬೇಕು, ಕ್ರಿಯೆಯಿಂದಲ್ಲ. ಅಂತೆಯೇ ನಾನು ಧರ್ಮವನ್ನು ಉಳಿಸಲು ಮಾತಾಡಿರುವೆನು" ಎಂದು ತಿಳಿಹೇಳಿದನು.

ಇಂತು ಪಾಂಡವರ ವ್ಯಸನವನ್ನು ಕಂಡು ವಿದುರನು "ಇದು ಧರ್ಮವಲ್ಲ, ದ್ರೌಪದಿಯ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳಿ!" ಹೀಗೆಂದ ಅವನ ಮಾತನ್ನು ಯಾರೂ ಲೆಕ್ಕಿಸಲಿಲ್ಲ. ದೇವತೆಗಳಿಗೆ ಈ ಅಧರ್ಮದ ಸಾಕ್ಷಿಗಳಾಗಿ ಇರಿ! ಎಂದು ಹೇಳುವಂತೆ, ವಿದುರನು ಕೈಗಳನ್ನೆತ್ತಿ "ಇದು ಧರ್ಮವಲ್ಲ. ಅಧರ್ಮದಿಂದ ಕೌರವನು ಗೆದ್ದಿರುವನು" ಎಂದು ಕೂಗಿದನು. ಅವನು ಕೃಷ್ಣೆಯನ್ನು ನೋಡಿ, ಅಮ್ಮಾ ಕೃಷ್ಣೆ! ನೀನು ಅಧರ್ಮದಿಂದ ಜಿತಳಾಗಿರುವೆ, ಅಧರ್ಮದ ಕತ್ತಲು

ಕವಿದು, ಈ ಸಭೆಯೇ ಕುರುಡಾಗಿದೆ" ಎಂದು ನುಡಿದನು. ಅದನ್ನು ಕೇಳಿ ವಿಕರ್ಣನು ವಿದುರನನ್ನು ಅಣಕಿಸುತ್ತ "ಅಹುದು ಇದು ಅಧರ್ಮವು! ಪಾಂಚಾಲಿಯ ಪ್ರಶ್ನೆಗೆ ಉತ್ತರವನ್ನು ಹೇಳಿ!" ಎಂದು ಸಭೆಯನ್ನು ನೋಡಿ, ಅಪಹಸಿಸಿದನು. ಅವನ ಮಾತು ನಿಜವೆಂದರಿತು ಕರ್ಣನು "ವಿಕರ್ಣ! ಮುಚ್ಚು ಬಾಯಿ; ದ್ರೌಪದಿಯು ಧರ್ಮದಿಂದ ಜಿತಳಾಗಿರುವಳು. ಬಾಲಕನಾದ ನಿನಗೆ ಧರ್ಮದ ಸ್ವರೂಪವೆಂತು ತಿಳಿಯುವುದು? ದ್ರೌಪದಿಯನ್ನು ಪಣವಿಟ್ಟು ಸೋತ ಧರ್ಮರಾಜನೇ ಸುಮ್ಮನಿರುವನು" ಎಂದು ಅವನನ್ನು ಕೂಡಿಸಿದನು. ಅವನು ದೈತ್ಯಾವೇಶದಿಂದ ದೂಷಿತ ಮನಸ್ಕನಾಗಿ "ಕೃಷ್ಣೆ! ದಾಸರಾದ ಪಾಂಡವರನ್ನು ಬಿಡು, ದುರ್ಯೋಧನನ ಮನೆಯನ್ನು ಸೇರು!" ಎಂದನು. ದುರ್ಯೋಧನನು ಪಾಂಡವರಿಗೆ ಪರಸ್ಪರ ವಿರೋಧವನ್ನು ಪುಟ್ಟಿಸಲೆಣಿಸಿ ದ್ರೌಪದಿಯನ್ನು ನೋಡಿ, ನಗುತ್ತಾ! "ಪಾಂಚಾಲಿ! ನಿನ್ನ ದುಃಖಕ್ಕೆ ಕಾರಣನು ಯುಧಿಷ್ಠಿರನಲ್ಲವೇ? ಅವನು ನಮಗೆ ಪೂಜ್ಯನಲ್ಲವೆಂದು ಭೀಮನಾಗಲಿ, ಅರ್ಜುನನಾಗಲಿ ಹೇಳಲಿ; ಆಗ ನಿನ್ನನ್ನು ದಾಸ್ಯಮುಕ್ತಳನ್ನಾಗಿಸಿ ಬಿಡುವೆನು" ಎಂದು ನುಡಿದನು.

"ಧರ್ಮಜನು ನಮಗೆಲ್ಲರಿಗೂ ಪೂಜ್ಯನು. ಅವನು ನಡೆಸಿದಂತೆ ನಾವು ನಡೆಯುವೆವು. ನಾನು ನಿಮಗೆಲ್ಲ ಪೂಜ್ಯನು. ಬಲದಿಂದ ದೊಡ್ಡವರೇ ಕ್ಷತ್ರಿಯರಲ್ಲಿ ಪೂಜ್ಯರಾದುದರಿಂದ ಬಲಾಧಿಕನಾದ ನನಗೆ ನೀವು ಸಮರಲ್ಲ; ಸಂಶಯವಿದ್ದೆಡೆ ವೀರರಾರೇ ಆಗಲಿ ನಿಲ್ಲಲಿ! ಅಂತಹವನ ತಲೆಯನ್ನು ಕಾಲಿನಿಂದ ಸವರಿಬಿಡುವೆನು" ಎಂದು ಗರ್ಜಿಸಿದ ವೃಕೋದರನನ್ನು ಭೀಷ್ಮದ್ರೋಣಾದಿಗಳು ಸಮುದಾಯಿಸಿದರು. ಧರ್ಮರಾಜನ ಆಜ್ಞೆಯಿಲ್ಲದುದರಿಂದ ಭೀಮನು ದುರ್ಯೋಧನಾದಿಗಳನ್ನು ಕೂಡಿ ಸಂಹರಿಸಲಿಲ್ಲ. ಸರ್ವಜ್ಞನಾದ ಭೀಮನು ಶ್ರೀಶೇಚ್ಛೆಯನ್ನರಿತು, ವಿಷ್ಣು ವೈಷ್ಣವ ದ್ರೋಹದಿಂದ ಕೌರವಪಾಪಘಟವು ತುಂಬಲೆಂದು, ಶಾಂತನಾಗಿ ಕೂತನು.

ಸ್ವಭಾವದುಷ್ಟನಾದ ದುರ್ಯೋಧನನು, ದ್ರೌಪದಿಗೆ ತನ್ನ ಬಲತೊಡೆಯನ್ನು ತೋರಿಸಿ ನಕ್ಕನು. ಅದನ್ನು ಕಂಡು ಭೀಮನು ಸಟಾಜಾಲವನ್ನು ಜಗ್ಗಲು ಕೆರಳುವ ಸಿಂಹದಂತೆ ರೇಗಿ, "ಪಾಪಿ! ಆ ನಿನ್ನ ತೊಡೆಯನ್ನು ನನ್ನ ಗದೆಯಿಂದ ಮುರಿಯುವೆನು! ಹಾಗೆ ಮಾಡದಿದ್ದರೆ, ಪುಣ್ಯಲೋಕಗಳಿಗೆ ದೂರನಾಗುವೆನು" ಎಂದು ಘೋರಪ್ರತಿಜ್ಞೆಯನ್ನು ಮಾಡಿದನು.

ದುರ್ಯೋಧನನು ಅವನನ್ನು ತಿರಸ್ಕರಿಸಿ "ಧರ್ಮರಾಜ! ಎಲ್ಲವೂ ಸೋತಿರುವೆ. ಆದರೂ ನಿಮ್ಮವನಾದ ಕೃಷ್ಣನಿರುವನು. ಅವನನ್ನು ಪಣವಾಗಿಡು!" ಎಂದು ಭಗವನ್ನಿಂದೆಯನ್ನು ಮಾಡಿದನು. ಭೀಮನಾ ಮಾತನ್ನು ಸಹಿಸದೆ, "ದುರಾತ್ಮ! ನಿನ್ನನ್ನು ರಣರಂಗದಲ್ಲಿ ಕೆಡಹಿ, ಶ್ರೀಹರಿಯನ್ನು ನಿಂದಿಸುವ ನಿನ್ನ ತಲೆಯನ್ನು ಎಡಗಾಲಿನಲ್ಲಿ ಒದೆದು ಮರ್ದಿಸುವೆನು" ಎಂದು ಮತ್ತೊಂದು ಪ್ರತಿಜ್ಞೆಯನ್ನು ಮಾಡಿದನು.

"ಭೀಮ ! ವೃಥಾ ಪ್ರತಿಜ್ಞೆ ಮಾಡಬೇಡ ! ನೀನು ದಾಸನಾಗಿರುವೆ, ತಿಳಿ !" ಎಂದು ಹಂಗಿಸಿ, ಕರ್ಣನು ದ್ರೌಪದಿಗಿಂತೆಂದನು—"ಪಾಂಚಾಲಿ ! ಪಂಚಭರ್ತೃಕಳಾಗಿರುವ ನಿನಗೆ ಪಾತಿವ್ರತ್ಯವೆಲ್ಲಿಯದು? ಸೂಳೆಯಂತೆ ಅನೇಕರ ವಶಳಾಗಿರುವ ನಿನ್ನನ್ನು ಸಭೆಯಲ್ಲಿ ತಂದುದು ತಪ್ಪಲ್ಲ ; ಏಕಾಂಬರಳಾದರೂ ವಿವಸ್ತ್ರಳಾದರೂ ಚಿತ್ರವಲ್ಲ" ಎಂದು ವಾಗ್ಬಾಣಗಳಿಂದ ನೋಯಿಸಿದನು. ದುರ್ಯೋಧನನಾಗ ದುಶ್ಶಾಸನನಿಗೆ ಪಾಂಡವರ ವಸನಗಳನ್ನೂ ದ್ರೌಪದಿಯ ವಸ್ತ್ರವನ್ನೂ ಕಸಿಯಲು ಆಜ್ಞಾಪಿಸಿದನು. ಧರ್ಮಬದ್ಧರಾದ ಪಾಂಡವರು, ನಾರುಮಡಿಗಳನ್ನುಟ್ಟು, ವಸ್ತ್ರಾಭರಣಾದಿಗಳೆಲ್ಲವನ್ನೂ ಕೆಳಗಿಟ್ಟು ಸಭೆಯಲ್ಲಿ ಸುಮ್ಮನೆ ಕೂತರು. ದುರ್ಯೋಧನನು ಮತ್ತೆ ಪ್ರೇರಿಸಲು ದುಷ್ಟದುಶ್ಶಾಸನನು ದ್ರೌಪದಿಯನ್ನು ಸಮೀಪಿಸಿ, ಆ ಮಹಾಸಾಧ್ವಿಯ ಪುಟ್ಟವನ್ನು ಸೆಳೆಯತೊಡಗಿದನು. ಧರ್ಮಬದ್ಧನಾಗಿದ್ದರೂ ಭೀಮಸೇನನು ದುಶ್ಶಾಸನನ ಅವಿನಯವನ್ನು ಸಹಿಸದೆ "ಮಹಾಧರ್ಮಿಷ್ಠರಾದ ಕುರುರಾಜರ ವಂಶದಲ್ಲಿ ಕೆಟ್ಟ ಹುಳುವಾಗಿ ಜನಿಸಿ, ಮಹಾಪಾಪಿಯಾದ ದುಶ್ಶಾಸನನ ಎದೆಯನ್ನು ರಣರಂಗದಲ್ಲಿ ಗದೆಯಿಂದ ಒಡೆದು, ಅವನ ಬಿಸಿನೆತ್ತರವನ್ನು ಕುಡಿಯುವೆನು. ಹಾಗಾಗದಿದ್ದರೆ, ಪಿತೃಗಳಿಂದ ನಾನು ನರಕದಲ್ಲಿ ಪತಿತನಾಗುವಂತಾಗಲಿ !" ಎಂದು ಪ್ರತಿಜ್ಞೆ ಮಾಡಿದನು.

ದುಶ್ಶಾಸನನು ಧರ್ಮಬದ್ಧರಾದ ಪಾಂಡುಕುಮಾರರ ಅಶಕ್ತತೆಯನ್ನರಿತು, ಧೈರ್ಯದಿಂದ ಸಾಹಸಿಸಿ, ದ್ರೌಪದಿಯ ಸೀರೆಯನ್ನು ಸೆಳೆಯಲಾರಂಭಿಸಿದನು. ಅನನ್ಯಗತಿಕಳಾಗಿ ದ್ರೌಪದಿಯು ಶ್ರೀಕೃಷ್ಣನಿಗೆ ಶರಣಾಗಿ ಅವನನ್ನಿಂತು ನುತಿಸಿದಳು—

"ಗೋವಿಂದ ! ದ್ವಾರಕಾವಾಸಿನ್ ! ಕೃಷ್ಣ ! ಗೋಪೀವಲ್ಲಭ ! ಕೌರವರಿಂದ ಅವಮಾನಿತಳಾಗುತ್ತಿರುವ ನನ್ನ ಮೊರೆ ಕೇಳಿಸದೆ? ಪ್ರಭೂ! ನಾಥ! ರಮಾನಾಥ! ವ್ರಜನಾಥ! ಕಾಪಾಡು ! ಆರ್ತಿನಾಶನನಲ್ಲವೆ ನೀನು? ಪುಣ್ಯಮೂರ್ತೇ ! ಪಾಪಿ ಕೌರವ ಪಾರಾವಾರದ ಪಾರಗಾಣಿಸು! ಕೃಷ್ಣ ! ನೀನು ಮಹಾಸಮರ್ಥನು. ನಿನಗೆ ದುಶ್ಶಕವಿಲ್ಲ. ದುರ್ಮಾರ್ಗರ ಸಭೆಯಲ್ಲಿ ಕಷ್ಟಪಡುವ ನನ್ನನ್ನು ಉದ್ಧರಿಸು !

"ಸತ್ಯವ್ರತರು ಎನ್ನ ಪತಿಗಳೈವರು ಸುಮ್ಮನಿಹರು ಕೃಷ್ಣಾ ! ನೀನೇ ಸಲಹಬೇಕು! ಅತಿಕ್ಲೇಶಪಡುತಿಹರು ವಿದುರಭೀಷ್ಮಾದಿಗಳು. ಪದ್ಮೇಶ! ನೀನೇ ಕಾಪಾಡಬೇಕು! ಸುತಮೋಹಯುತನಾಗಿ ಗತನೇತ್ರ ಧೃತರಾಷ್ಟ್ರ ಸುಮ್ಮನಿಹ ಗೋವಿಂದ! ಕಾಯಬೇಕು ! ಕಪಟಿಗಳು ಗಾಂಧಾರ ಕರ್ಣ ಕೌರವರು. ಇನ್ನು ಗತಿಕಾಣೆ ಎನ್ನಾಣೆ ಕಮಲನಾಭ ! ಧರ್ಮರಕ್ಷಣಚಣ ! ದುಷ್ಟದೈತ್ಯಮಥನ ! ದೇವ ! ವಸುದೇವತನಯ ! ಮಹಾನುಭಾವ ! ತಾಪಸಾಧಾರ ! ದೀನಮಂದಾರಧೀರ ! ಬೇಗ ಬಾರಯ್ಯ ! ಬಂದೆನ್ನ ಬಿಡಿಸು ಜೀಯ್ಯ ! ಅಗ್ನಿಯಲಿ ಹಾರಲಹುದಬ್ಬರದ ಹೆಬ್ಬಾವ ಹೆಡೆಯ ಪಿಡಿದಾಡಬಹುದು ! ಗರಳಸೇವಿಸಬಹುದು, ಕೊರಳ ಕೊಯ್ದಿಡ

ಬಹುದು, ಮಡುವಿನಲ್ಲಿ ಬೀಳಬಹುದು ! ಸಿಂಹದ ಗುಹೆಯೊಳಹೊಕ್ಕು ಸೆಣಸಾಡಿ ಬರಬಹುದು, ಜಲಧಿ ಕೈಲೀಜಬಹುದು ; ಮದ್ದಾನೆ ಶುಂಡಾಗದಲಿ ಸಿಕ್ಕಬಹುದಯ್ಯ! ಬೆಟ್ಟದಿಂದ ಬೀಳಬಹುದು, ಕೃಷ್ಣ ! ಜೀವದಿ ನಿಂತಂತೆ ಲಜ್ಜೆ ತೊರೆಯಲಾರೆ. ದೊರೆ ! ಎಂದು ನಿನಗಾನು ಮೊರೆಯನಿಡುತ ಕೂಗಿ ಕರೆಯುವೆ ದೇವಾಧಿದೇವ ! ಕಾಯೊ ! ಭಕ್ತರಕ್ಷಣದಕ್ಷ ! ಕೃಪಾಕಟಾಕ್ಷ !

"ಗಾಂಧಾರಿದೇವಿ ! ನನ್ನತ್ತೆಯಲ್ಲವೆ ತಾಯೆ ! ಮೃತ್ಯುವಂತೆಳೆವ, ನೀ ಬಿಡಿಸ ಬಾರೆ ! ಭಾನುಮತಿ ನೆಗೆಹೆಣ್ಣೆ ! ಸರಿಹೆಣ್ಣ ಪರಿತಾಪ ಚಿತ್ತಕ್ಕೆ ನಿನಗೇಕೆ ಹತ್ತಲಿಲ್ಲ ! ಸಭೆಯಲ್ಲಿ ನೆರೆದಿರುವ ಸಜ್ಜನರಿಗೆನ್ನಂಥ ಹೆಮ್ಮಕ್ಕಳೂ ಸೊಸೆಯರಾದುದಿಲ್ಲೆ ! ಇಷ್ಟು ಜನ ಪುರವಾಸರಿಲ್ಲಿರುವರವರೆಲ್ಲ ಸತ್ಯಬಾಹಿರರಾದರೇ ! ಯಾರಿಗೊದರಿದರೇನೆನ್ನ ದೂರು ಕೇಳಿ, ಪಾರುಗಾಣಿಪರಿಲ್ಲ ಕಂಸಾರಿ ! ಸಾರಿ ಪೊರೆಯಲಿನ್ನಾರು ? ಬೇಗು ಬಂದಾಪ್ತ ಬಂಧು ! ರಕ್ಷಿಸೈ ನಂದಕಂದ ! ಮುಕುಂದ ! ಕೃಷ್ಣ !

"ಧರ್ಮದೇವನು ನೀನೆಂದು ತಿಳಿದು ಎನ್ನ ವಲ್ಲಭರು ಧರ್ಮಕಂಜಿ ಕೈ ಬಿಟ್ಟರಯ್ಯಾ! ಭಾರ ನಿನ್ನದು ನೀರೊಳಗದ್ದು ಕೃಷ್ಣ ! ಕ್ಷೀರದೊಳದ್ದು! ಗತಿ ನೀನೆ ನೀರಜಾಕ್ಷ ! ಅಸುರನು ಬೆನ್ನಟ್ಟುತ ಬರೆ ಪಶುಪತಿ ದಿಕ್ಕೆಟ್ಟು ಓಡಿ, ಗೋವಿಂದಾ ! ಎಂದುಸುರಲು ಬಂದಾ ದುಷ್ಟನ ಬಸುಮಾಗಿಸಿ ಪೊರೆದೆ ಶಿವನ ! ಬಾರೈ ಕೃಷ್ಣ ! ಅಕ್ಕಸದ ಋಷಿಯ ಶಕ್ತಿಯು ಮುಕ್ಕಬರಲು ಚಕ್ರದಿಂದ ವಾರಿಸಿ ದೇವಾ! ಅಕ್ಕರದ ಅಂಬರೀಷಗೆ ದಿಕ್ಕಾದೆಯೊ! ಈಗ, ನನಗೆ ದಿಕ್ಕಾಗು ಪ್ರಭೂ ! ಕಲ್ಲಾಗಿ ಬಿದ್ದ ತರುಣಿಯ, ಫುಲ್ಲಾಂಬುಜ ಲೋಚನಾ ! ಸನಾಥಳಗೈದೈ, ತಲ್ಲಣಿಸುವಾನು ಮೊರೆಯಿಡೆ, ಕಲ್ಲಾಯಿತೆ ನಿನ್ನ ಹೃದಯ ಲಕ್ಷ್ಮೀ ನಿಲಯಾ ! ತರಳನು ತೋರಿದ ಕಂಬದಿ ಪೊರವಟ್ಟು ಹಿರಣ್ಯಕನನು ಕೊಂದೆಯೊ ತಂದೇ ! ಕರುಳನ್ನು ಮಾಲೆಧರಿಸಿದೆ ; ಕರಗದೇ ನಿನ್ ಕರುಳು ಕಣ್ಣ ಕಾಣದೆ ! ಕೃಷ್ಣಾ ಪಂಚಾಬ್ದನಾದ ಬಾಲನಿಗಂಚಿತ ಧ್ರುವಪದವಿಯಿತ್ತೆ ನಾರಾಯಣ ! ಧೀಸಂಚಿತಭಕ್ತಿ ಭರಿತರಿಗೆ ವಂಚನೆ ಏಕಯ್ಯ, ಬೇಗ ಬಾರೈ ಕೃಷ್ಣ ! ದಶಕಂಠನನುಜ ನಿನಗೆ ವಶನಾಗಲು, ಅವನಿಗಿತ್ತೆ ಸ್ಥಿರರಾಜ್ಯವ ; ದುರ್ದಶಳಾಗಿ ನೀನೆ ಗತಿಯೋ ದಶರಥಸುತ ! ಎಂದೆನಲು ಕರುಣೆಬಾರದೇ ಕೃಷ್ಣಾ ! ಘೋರದುರಿತನಾ ಅಜಮಿಲ ನಾರಾಯಣ ಎಂದು ಸುತನ ನಾಮವ ನುಡಿಯಲ್ ಕಾರುಣ್ಯಪೂರ ! ನರಕದ ಪಾರವ ಸೇರಿಸಿದೆ ನನ್ನ ಪಾಪವದೇನೈ !

"ಲಕ್ಷ್ಮೀನಾಥ, ಮನೋಜತಾತ, ಕಮಲಾಬ್ರಹ್ಮೇಶವಂದ್ಯಾಂಘ್ರಿ, ಸಲ್ಲಕ್ಷ್ಮಾನವದ್ಯಗುಣೈಕದೇಹ, ಸದಸದ್ವ್ಯಾಪ್ತಾವ್ಯಯ, ಬ್ರಹ್ಮಜಾತಕ್ಷ್ಮಾನಾಥನಿಷೇವಿತ, ಸುಜನರಕ್ಷಾದೀಕ್ಷ,ಮಾಯಾಧವಾ, ಸೂಕ್ಷ್ಮಸ್ಥೂಲಜಗದ್ವಿಧಾತಾ, ಕರುಣಾಪಾರೀಣ, ಭೋ! ರಕ್ಷ ಮಾಂ! ನೀನೇ ತಂದೆಯು ತಾಯಿಯು ನೀನೇ ಎನಗಾಪ್ತಬಂಧು ಗುರು, ಕುಲದೈವಂ ನೀನೇ ಎಂದೆ ಮುಕುಂದಾ, ಸಂದೇಹವದೇಕೆ? ಕುಂದುಬಿಡಿಸೋ ಕೃಷ್ಣಾ !"

ಎಂದೊರಲಿ, ದ್ರೌಪದಿಯು ಕಂಗಳನ್ನು ಮುಚ್ಚಿ, ಕರಗಳೆರಡನು ಮುಗಿದು, ಶರೀರ ವನ್ನೇ ಬಿಡಲು ನಿಶ್ಚಯಿಸಿ 'ಕೃಷ್ಣಾ ! ಗೋವಿಂದಾ !' ಎಂದು ಕೂಗಿ, ಮೈ ಮರೆತಳು. ಅಂತು ಶರಣಾಗತಳಾದ ಕಾಂತೆಯ ಕೂಗು, ಅಂತಃಪುರದಲ್ಲಿ ಕಾಂತೆಯೊಡನಿದ್ದ ಶ್ರೀಕೃಷ್ಣನಿಗೆ ಮುಟ್ಟಿತು. ತಂಗಿಯ ಅಂಗಲಾಚುವಿಕೆಗೆ ರಂಗನ ಕಂಗಳು ತುಂಬಿ ಬಂದವು; ಅವನು 'ಕುಂತಿನಂದರ ಸತಿ ವಸನವಕ್ಷಯ'ವೆಂದನು. ಜನಮೇಜಯಾ ! ಲಕ್ಷ್ಮೀಕಾಂತನ ಕರುಣೆಯೆಂತು ವರ್ಣಿಸಲಿ ! ಕೃಷ್ಣೆಯುಟ್ಟ ವಸನಗಳಕ್ಷಯವಾಗಿ ಬೆಳೆಯಲಾರಂಭಿಸಲು, ಸೆಳೆಯುತ್ತಿದ್ದ ಖಳನಿಗೆ ಕೈಗಳು ಸೋತವು. ಸೆಳೆದಂತೆ ಬೆಳೆಯುವ ಸೀರೆಗಳ ಚಿತ್ರವಿಚಿತ್ರ ಬಣ್ಣಗಳಿಂದ ಕಣ್ಣುಗಳು ತಿರುಗಿದಂತಾಗಿ, ಪಾಪಿ ದುಶ್ಯಾಸನನು ಇಳೆಯಲ್ಲಿ ಬಿದ್ದು ಸೋತು ಕೂತನು.

ದುರ್ಯೋಧನನು ಮರಮರಿಸುವ ಜರಿಯಸಿರಿಸೀರೆಗಳನ್ನು ಬೊಕ್ಕಸಕ್ಕೆ ಕಳುಹು ಎಂದಾಗ, ಇಂದುಮುಖಿ ಸಿಟ್ಟಿನಿಂದ ಕಣ್ತೆರೆದು ನೋಡಿದಳು. ವಸ್ತ್ರ ರಾಶಿಯು, ದುರ್ಯೋಧನನ ಪುಣ್ಯರಾಶಿಯೊಡನೆ ಸುಟ್ಟು ಬೂದಿಯಾಯಿತು. ಆ ಮಹಾಪತಿವ್ರತೆಯ ಶಾಪಾಗ್ನಿಯು ಪ್ರಳಯಾಭೀಲಜ್ವಾಲೆಯಾಗಿ ಅರಮನೆಯನ್ನು ಸುಟ್ಟಿತು. ಕಮಲಮುಖಿ ದ್ರೌಪದಿಯು ಅರುಣಾಕ್ಷಿಯಾಗಿ, "ಪಾಪಿ ! ನಿನ್ನೆರಡು ತೊಡೆಗಳನ್ನು ಭೀಮನು ರಣದಲ್ಲಿ ಮುರಿದು, ನಿನ್ನನ್ನು ಕೊಲ್ಲುವನು! ಪಾರ್ಥನು ಕರ್ಣನನ್ನು ಸಂಹರಿಸುವನು ! ಸಹದೇವನು ದ್ಯೂತಧೂರ್ತನಾದ ಶಕುನಿಯನ್ನು ಯಮಪುರಿಗಟ್ಟುವನು. ನಕುಲನು ಶಾಕುನೇಯನನ್ನು ಕೊಲ್ಲುವನು. ಭೀಮ ಸೇನನು ದುಶ್ಯಾಸನನ ರಕ್ತದಿಂದ ನನ್ನ ಕೇಶಪಾಶವನ್ನು ಬಂಧಿಸುವವರೆಗೂ ಈ ನನ್ನ ಕೇಶರಾಶಿಗಳು ಕೌರವಜೀವವಾಯುಗಳಿಗೆ ಹಾತೊರೆಯುವ ನಾಗರಹಾವು ಗಳಂತೆ ಹಾರಾಡುತ್ತಿರುವುವು" ಎಂದಳು. ಪಾಂಡವರೆಲ್ಲರೂ ಅವಳ ಪ್ರತಿಜ್ಞೆಯನ್ನು ಪುನರುಚ್ಚರಿಸಿದರು. ಆಗ ದುರ್ಯೋಧನನು ಕೋಪದಿಂದ ದ್ರೌಪದಿಯನ್ನು ಅಂತಃ ಪುರದಲ್ಲಿ ಕರೆದೊಯ್ಯಲು ದುಶ್ಯಾಸನನಿಗೆ ಆಜ್ಞಾಪಿಸಿದನು.

ಭೀಮನಾ ಅಕಾರ್ಯವನ್ನು ಸಹಿಸಲಾರದೆ ಎದ್ದುನಿಂತು "ಅರ್ಜುನ! ಅರ್ಜುನ! ಇನ್ನಿವರ ದೌಷ್ಟ್ಯವನ್ನು ಸಹಿಸಬಾರದು. ಪತಿವ್ರತೆಯಾದ ಪತ್ನಿಗೆ ಅವಮಾನ ವಾದೊಡೆ ನಾವು ಬದುಕಿದ್ದು ಪ್ರಯೋಜನವಿಲ್ಲ ! ವೃದ್ಧಸ್ವಾಮೇಧ್ಯಗಳಲ್ಲಿ ಒಂದಾಗಿ ಹೋಗುವ ದೇಹವು ನಾಶವಾಗುವುದು ; ಆದರೂ ಅದಕ್ಕೂ ಫಲಗಳು ಮೂರು ಅವಶಿಷ್ಟವಾಗುವುವು. ವಿದ್ಯಾ, ಕರ್ಮ, ಸುತರೆಂಬ ಫಲಗಳಲ್ಲಿ ಸುತರಾಗಬೇಕಾದರೆ ನಿರ್ದುಷ್ಟಳಾದ ಪತ್ನಿಯಿಂದಲೇ ! ಈಗ ನಮ್ಮ ಸತಿಯು ದುಷ್ಟಳಾದರೆ ಸಂತಾನವೂ ದುಷ್ಟವಾಗುವುದು. ದುಷ್ಟಪತ್ನಿಯ ದರ್ಶನವು ನರಕಸಮಾನದುಃಖಪ್ರಾಪಕ ವಾಗಿದೆ. ಆದುದರಿಂದ ಈ ಅನ್ಯಾಯವನ್ನು ತಡೆಯದಿದ್ದರೆ ಪ್ರಮಾದವಾದೀತು ! ಇಂದೇ ಸರ್ವ ಕೌರವ ನಾಶವನ್ನು ಮಾಡಿಬಿಡುವೆನು" ಎಂದು ಪರಿಘವನ್ನು ಸ್ವೀಕರಿ ಸಿದನು. ಅವನ ನಡುಗುವ ಮೈ, ಉರಿಯುವ ಕಣ್ಣು, ಎತ್ತಿದ ಪರಿಘ, ಕಟಕಟ

ಧ್ವನಿಗೈವ ದಂತಗಳು, ಗಂಟಿಕ್ಕಿದ ಹುಬ್ಬು ನೋಡಿ, ಪ್ರಳಯಕಾಲವೇ ಸಮೀಪಿಸಿದೆ ಎಂದು ಸಭಿಕರು ಹಾಹಾಕಾರ ಮಾಡಿದರು.

ಆಗ ದುರ್ಯೋಧನನ ಅಗ್ನಿಹೋತ್ರಮಂದಿರದ ದೆಶೆಯಿಂದ ನರಿಗಳು ವಿಕೃತ ರಾವಗೈದವು. ಪ್ರತಿಸೂರ್ಯಮಂಡಲಗಳು ಅಂಬರದಿ ತೋರಿದವು. ಧೂಮಕೇತು ಗಳು ಮೂಡಿದವು. ಅಂತರಿಕ್ಷದಿಂದ ಉಲ್ಕಾಪಾತವಾಯಿತು. ಗಗನದಲ್ಲಿ ಹದ್ದು ಕಾಗೆಗಳು ಹಾರಾಡಿದವು. ಇಳೆ ನಡುಗಿತು. ದೇವಪ್ರತಿಮೆಗಳು ಚಲಿಸಿದವು. ಇಂತಹ ದುಶ್ಶಕುನಗಳನ್ನು ಕಂಡು ಜನರೆಲ್ಲರು 'ಕೌರವಗೆ ಕೇಡು ತಪ್ಪದೆ'ಂದು ತಮ್ಮತಮ್ಮೊಳಗೆ ಮಾತಾಡಿದರು. ಅಲ್ಲಿ ಸಭೆಯಲ್ಲಿ ನಿಲ್ಲದೆ ಪ್ರಜರು ಮನೆಗಳಿಗೆ ತೆರಳಿದರು.

ದುಶ್ಶಕುನಗಳನ್ನು ನೋಡಿ ವಿದುರನು ಭೀತನಾದನು. ಕಲಕಲಶಬ್ದವನ್ನು ಕೇಳಿ ಧೃತರಾಷ್ಟ್ರನೂ ಭೀತನಾದನು. ಅವನು ವಿದುರನನ್ನು ಕರೆದು, 'ಏನಿದು?' ಎಂದನು. ವಿದುರನವನನ್ನು ನೋಡಿ, ನಕ್ಕು, ವಿಷಾದಪರೀತನಾಗಿ, ಇಂತೆಂದನು—

"ಉತ್ಪಾತಗಳನ್ನು ನೋಡಿ, ಭೀಷ್ಮದ್ರೋಣಕೃಪರು 'ಸ್ವಸ್ತಿ! ಸ್ವಸ್ತಿ!' ಎನ್ನು ತ್ತಿರುವರು. ನಿನ್ನ ಮನೆಗೆ ಬೆಂಕಿ ಬಿದ್ದಿದೆ. ಇದು ಸರ್ವನಾಶವಾಗುವವರೆಗೂ ಆರುವುದಿಲ್ಲ. ಇದೇ ಕ್ಷಣದಲ್ಲಿ ಭೀಮಸೇನನು ನಿನ್ನ ಪುತ್ರರನ್ನೆಲ್ಲ ಸಂಹರಿಸಲು ಸಿದ್ಧನಾಗಿರುವನು. 'ಕಿಂ ಜಿತಂ ಕಿಂ ಜಿತಂ' ಎಂದು ಕೇಳುತ್ತಾ, ಮಕ್ಕಳ ವಿಜಯ ದಿಂದ ಉಬ್ಬಿ ಮಾತಾಡುವ ನಿನಗೆ ಲಜ್ಜೆಯಾಗುವುದಿಲ್ಲವೇ? ದ್ಯೂತದಲ್ಲಿ ಗೆದ್ದ ಧನವು ಮತ್ತೆ ಸೋತವಗೆ ಸೇರಬೇಕೆಂಬ ವಿದ್ವಾಂಸರ ನುಡಿ ನಿನ್ನ ಕಿವಿಗೆ ಬಿದ್ದಿಲ್ಲ ವೆಂದು ತೋರುತ್ತದೆ. ದ್ಯೂತಜಯವು ಜಯವೇ ಅಲ್ಲ, ತಿಳಿ! ಆದರೂ ನಿನ್ನ ದುಷ್ಟಪುತ್ರರ ದುರ್ಗುಣವನ್ನು ಜನರು ತಿಳಿಯಲೆಂದು ಆ ಧನವನ್ನು ಪಡೆಯದಿರು ವರು. ಅವರು ಸತ್ಯಬದ್ಧರು. ತಪೋವೃದ್ಧಿಯನ್ನು ಬಯಸಿ, ಸುಮ್ಮನಿರುವರು. ದ್ರೌಪದಿಯ ಪ್ರಶ್ನೆಗೆ ಪ್ರತ್ಯುತ್ತರವನ್ನು ಹೇಳದಿರುವ ಸಭಿಕರಿಗೆಲ್ಲ ಮಹಾಪಾಪವು ಪ್ರಾಪ್ತವಾಗಿದೆ. ಈ ಅಧರ್ಮದ ವಿಷಫಲವನ್ನು ಇವರೆಲ್ಲರೂ ಉಣ್ಣುವರು. ಇದು ತಪ್ಪದು. ಅಕ್ಷಯವಸನಗಳನ್ನಿತ್ತು, ಕೃಷ್ಣಾದೇವಿಯನ್ನು ಕಾಪಾಡಿದ ಜಗತ್ಪ್ರಭು ಶ್ರೀಕೃಷ್ಣನು ಧರ್ಮರಕ್ಷಕನಾಗಿ, ಪಾಂಡವರನ್ನು ತನ್ನ ಪಂಚಪ್ರಾಣ ಸಮರೆಂದು ತಿಳಿದಿರುವನು. ಅವನು, ಅವರು ಮಾಡಿದ ಪ್ರತಿಜ್ಞೆಗಳನ್ನೆಲ್ಲ ಸತ್ಯವಾಗಿಸುವನು.

"ಹಿಂದೆ ಪ್ರಹ್ಲಾದಪುತ್ರನಾದ ವಿರೋಚನನು ಕೇಶಿನಿಯೆಂಬ ಕನ್ಯೆಗಾಗಿ, ಸುಧನ್ವನೆಂಬ ಆಂಗಿರಸಗೋತ್ರ ಮುನಿಯೊಡನೆ ಕಲಹವಾಡಿದನು. ಅವಳು 'ನಿಮ್ಮಲ್ಲಿ ಕುಲಶೀಲಗಳಿಂದ ದೊಡ್ಡವನಾರೆಂದು ನಿಶ್ಚಯವಾಗಲಿ; ಅವನನ್ನು ನಾನು ವರಿಸುವೆನು' ಎಂದಳು. ಅವರೀರ್ವರೂ ಪ್ರಹ್ಲಾದನನ್ನು ಸಂಶಯಪರಿಹಾರ ಕ್ಕೆಂದು ಬೇಡಿದರು. ಇಬ್ಬರೂ 'ನಾನು ದೊಡ್ಡವನು, ನಾನು ದೊಡ್ಡವನು' ಎಂದು ಜಗಳವಾಡುತ್ತಿರಲು, ಪ್ರಹ್ಲಾದನು ಸುಮ್ಮನಿದ್ದನು. ಆಗ ಸುಧನ್ವನು—

'ದೈತ್ಯರಾಜ! ಪ್ರಶ್ನೆವನ್ನು ತಿಳಿದೂ ಹೇಳದಿದ್ದರೆ ಅವನು ಅನೃತಫಲದಲ್ಲಿ ಅರ್ಧವನ್ನು ಹೊಂದುವನು. ತಿಳಿದೂ ಅಧರ್ಮವನ್ನು ನುಡಿದವನು ಅನೃತದ ಪೂರ್ಣಪಾಪ ಭಾಜನನಾಗುವನು' ಎಂದನು. ಆ ಮಾತನ್ನಾಲಿಸಿ, ಭಾಗವತೋತ್ತಮನಾದ ಪ್ರಹ್ಲಾದನು 'ಇವರೀರ್ವರು ಪ್ರಾಣಪಣವನ್ನಿಟ್ಟು ಕಾದುವರು. ಮಗನಿಗಾಗಿ ಸುಳ್ಳನಾಡಲಾರೆ. ನಿಜವಾಡಿದರೆ ಮಗನ ಪ್ರಾಣವೇ ಪಣವಾಗಿರುವುದರಿಂದ, ಅವನಿಗೆ ವಿಪತ್ತೊದಗುವುದು. ಏನು ಮಾಡಲಿ?' ಇಂತು ಚಿಂತಿಸಿ ತನ್ನ ಧರ್ಮಸಂಕಟವನ್ನು ತನ್ನ ತಾತನಾದ ಕಶ್ಯಪನಿಗೆ ತಿಳಿಸಿದನು. ಆಗ ಕಶ್ಯಪ ನಿಂತೆಂದನು—'ತಿಳಿದು ಧರ್ಮವನ್ನು ಹೇಳದವನು ಮತ್ತು ಸ್ಪಷ್ಟವಾಗಿ ಹೇಳದವನು ಕೂಡ ನರಕದಲ್ಲಿ ಸಾವಿರವರ್ಷ ತಪಿಸುವರು. ಅಧರ್ಮದಿಂದ ಧರ್ಮಪೀಡೆಯಾಗು ವಲ್ಲಿ ಸಭಾಸದರು ಆ ಪಾಪದಲ್ಲಿ ಭಾಗಿಗಳಾಗುವರು. ಆದರೆ ನಿಂದಾರ್ಹರನ್ನು ನಿಂದಿಸಿದಾಗ ಅವರಿಗೆ ಆ ಪಾಪದ ಲೇಪವಾಗುವುದಿಲ್ಲ.' ಹೀಗೆ ನುಡಿದ ಕಶ್ಯಪನ ಮಾತಿನಂತೆ, ಪ್ರಹ್ಲಾದನು, ಸುಧನ್ವವಿರೋಚನರಲ್ಲಿ ಕುಲದಿಂದಲೂ ಶೀಲದಿಂದಲೂ ಕೂಡ ಸುಧನ್ವನೇ ಶ್ರೇಷ್ಠನೆಂದು ಹೇಳಿದನು. ಸುಧನ್ವನು ಅವನ ಧರ್ಮಸತ್ಯ ನಿಷ್ಠೆಗಾಗಿ ಪ್ರೀತನಾಗಿ, ವಿರೋಚನನಿಗೆ ಪ್ರಾಣಭಿಕ್ಷೆಯನ್ನಿತ್ತು ಹೋದನು. ಆದುದ ರಿಂದ ಧರ್ಮಭ್ರಷ್ಟರಾಗಿರುವ ಈ ಸಭಿಕರೆಲ್ಲ ಮೃತ್ಯುಮುಖಪ್ರವಿಷ್ಟರೆಂದೇ ತಿಳಿ!"

ಭೀಷ್ಮನು ದ್ರೌಪದಿಯನ್ನು ನೋಡಿ, "ವತ್ಸೆ! ಮಹಾತ್ಮರಿಗೂ ಧರ್ಮ ಸೂಕ್ಷ್ಮವು ತಿಳಿಯದಾಗಿದೆ. ನೀನು ಧರ್ಮಿಷ್ಠಳಾಗಿರುವೆ. ನಿನ್ನ ಪತಿಗಳೂ ಧರ್ಮ ಶೀಲಿಗಳಾದುದರಿಂದಲೇ ಇಂತಹ ವಿಪತ್ತಿನಲ್ಲಿಯೂ ಚಲಿಸದೆ ದೃಢಶಾಂತರಾಗಿರುವರು. ಕೇಳು! ಕೌರವಕುಲ ವಿನಾಶವು ಸಮೀಪಿಸಿದೆ; ಉತ್ಪಾತಗಳೇ ನಾಶಸಾಕ್ಷಿಗಳಾಗಿವೆ" ಎಂದನು. ಆ ಮಾತನ್ನಾಲಿಸಿ, ಧೃತರಾಷ್ಟ್ರನು ಭೀತನಾಗಿ, "ವಿದುರ! ಉತ್ಪಾತ ಪ್ರತೀಕಾರವಾಗಿ ನಾನೇನು ಮಾಡಲಿ!" ಎಂದು ಕೇಳಿದನು. "ಧೃತರಾಷ್ಟ್ರ! ಮೊದಲು ದ್ರೌಪದಿಯನ್ನು ಬಂಧಮುಕ್ತಳನ್ನಾಗಿ ಮಾಡು! ಅವಮಾನಿತಳಾದ ಗೃಹವಧುವನ್ನು ಸಂತೋಷಪಡಿಸು" ಎಂದ ವಿದುರನ ಮಾತಿನಂತೆ ರಾಜನು ದ್ರುಪದ ಪುತ್ರಿಯನ್ನು ವಿಮುಕ್ತಳೆಂದು ಘೋಷಿಸಿ, ಅವಳನ್ನು, 'ವರವೇನು ಬೇಕು ಬೇಡು' ಎಂದನು.

ದ್ರೌಪದಿಯು ಭಾಗವತಧರ್ಮನಿರತಳಾಗಿ ಶ್ರೀಕೃಷ್ಣಮುಖ್ಯಪ್ರಾಣರನ್ನು ಹೊರತು ಮತ್ತೊಬ್ಬರಿಂದ ಏನೂ ಬೇಡದವಳಾದುದರಿಂದ ಕೇವಲ ಪತಿಗಳ ವಿಮುಕ್ತಿ ಯನ್ನು ಕೋರಿ, ಇಂತೆಂದಳು—"ಪ್ರತಿವಿಂಧ್ಯನು ದಾಸಪುತ್ರನೆಂದಾಗದಂತೆ ಧರ್ಮ ರಾಜನನ್ನು ದಾಸ್ಯಮುಕ್ತನನ್ನಾಗಿ ಮಾಡು!' ದ್ವಿತೀಯವರವನ್ನು ಬೇಡೆನಲು ಕೃಷ್ಣೆ 'ರಥಧನುರಾದಿವಸ್ತುಸಮೇತರಾದ ಭೀಮಾರ್ಜುನಯಮಳರೂ ಮುಕ್ತ ರಾಗಲಿ!' ಎಂದಳು. 'ತಥಾಸ್ತು' ಎಂದು ತೃತೀಯವರವೀವ ಮಾವನಿಗೆ ದ್ರೌಪದಿ 'ಅಪಹೃತರಾಜ್ಯಾದಿಗಳು ಅವರಿಗೆ ಧರ್ಮದಿಂದಲೇ ಬಂದಿವೆ. ದ್ಯೂತಾಪಜಯವೂ,

*

ದಾಸತ್ವವೂ ಧರ್ಮ ಸಂಪ್ರಾಪ್ತವಲ್ಲ; ನಾನು ಕ್ಷತ್ರಿಯಾಣಿ, ಆದುದರಿಂದ ಮಾವ ನಾದ ನಿನ್ನಿಂದ ಇನ್ನು ವರ ಬೇಡುವುದು ಉಚಿತವಲ್ಲ' ಎಂದು ಸುಮ್ಮನಾದಳು. ಧೃತರಾಷ್ಟ್ರನು ಆ ವಧೂಮಣಿಯನ್ನು ಮೆಚ್ಚಿ, ಪಾಂಡವರನ್ನು ಸಂತೈಸಿ, ಅವರನ್ನು ಇಂದ್ರಪ್ರಸ್ಥಕ್ಕೆ ಕಳಿಸಿಕೊಟ್ಟನು. 'ಧರ್ಮರಾಜ! ಉತ್ತಮರು ವಿರೋಧವನ್ನು ಬೆಳೆಸುವುದಿಲ್ಲ, ಆದದ್ದನ್ನು ಮರೆತುಬಿಡು! ಸಜ್ಜನರು ಪ್ರತಿಕ್ರಿಯಾಶೀಲರಾಗು ವುದಿಲ್ಲ. ಧರ್ಮಜ್ಞನಾದ ನಿನಗೆ ಹೇಳುವದೇನು? ಸುಖವಾಗಿ ಹೋಗಿ ಬಾ' ಎಂದ ರಾಜನಿಗೆ ವಂದಿಸಿ, ಪಾಂಡವರು ಮೇಘಶೋಭಾಯುತ ರಥಗಳಲ್ಲಿ ಕೂತು, ಕೃಷ್ಣಾದಿತರುಣಿಯರೊಡನೆ ಇಂದ್ರಪ್ರಸ್ಥಕ್ಕೆ ತೆರಳಿದನು.

## ಪುನರ್ದ್ಯೂತ

ಜನಮೇಜಯ! ಇಂತು ಅನುಜ್ಞಾತರಾಗಿ, ಧೃತರಾಷ್ಟ್ರಾದಿ ವೃದ್ಧರಿಗೆ ವಂದಿಸಿ ಧನರತ್ನ ವಸ್ತ್ರರಾಜ್ಯಾದಿಗಳನ್ನು ಯಥಾಪೂರ್ವವಾಗಿ ಪಡೆದು ಪೋದ ಪಾಂಡವರನ್ನು ನೋಡಿ, ದುಶ್ಯಾಸನನು ದುಃಖದಿಂದ, ದುರ್ಯೋಧನನಿಗೆ ಇಂತು ಬೋಧಿಸಿದನು —"ಅಣ್ಣ! ಬಹು ಕಷ್ಟದಿಂದ ಸಾಧಿಸಿದ ಪಾಂಡವ ಸಿರಿಯನ್ನು, ಮುದುಕ ಒಂದು ಕ್ಷಣದಲ್ಲಿ ನಾಶಮಾಡಿದನು. ಶತ್ರುಗಳು ಸಂಪತ್ಸಮೃದ್ಧರಾಗಿ ಹೋದರು." ಆಗ ದುರ್ಯೋಧನನು, ಕರ್ಣಶಕುನಿಗಳಿಂದ ಆಲೋಚಿಸಿ, ತ್ವರಿತವಾಗಿ ಧೃತರಾಷ್ಟ್ರ ನನ್ನು ಕಂಡು ಇಂತೆಂದನು—"ರಾಜನ್! ಎಂತಹ ಕೆಲಸ ಮಾಡಿದೆ! ಬೃಹಸ್ಪತಿಯು ಹೇಳಿರುವ ನೀತಿಯ ಮಾತನ್ನು ಮರೆತೆಯಾ? ಶತ್ರುಗಳ ಸಂಪತ್ತನ್ನು ಕಸಿದು, ಅವರು ಯುದ್ಧಕ್ಕೆ ಬಾರದ ಮುನ್ನ, ಬಲವಂತರಾಗದ ಮುನ್ನ ಸಂಹರಿಸುವುದೊಳಿತು! ಹಲ್ಲು ಕಿತ್ತದ ಹಾವನ್ನು ಕೊಲ್ಲದೆ, ಕಂಠಮಾಲೆಯಾಗಿಸಿ ಕಡಿಸಿಕೊಂಡ ಮೂರ್ಖ ನಂತೆ, ಸಿರಿಸಂಪತ್ತಿಗೆ ದೂರರಾಗಿ ಹಣ್ಣಾಗಿದ್ದ ಪಾಂಡವರನ್ನು, ಮತ್ತೆ ರಾಜ್ಯಾದಿಗಳ ನ್ನಿತ್ತು ಕಳಿಸಿದುದು ಪ್ರಮಾದವಾಯಿತು! ಈಗ ಅವರು ಅವಮಾನ ಕುಪಿತರಾಗಿ, ಸೇಡಿನಿಂದ ಹೋಗಿರುವರು. ಸಶೇಷವಹ್ನಿಯಂತೆ ಬೆಳೆದು ನಮ್ಮ ಶತ್ರುಗಳು ಶಸ್ತ್ರಾಸ್ತ್ರ ಸಮೇತರಾಗಿ ಬಂದು ನಮ್ಮನ್ನು ನಿಶ್ಶೇಷವಾಗಿ ನಿರ್ಮೂಲ ಮಾಡದೆಬಿಡರು. ಗಾಂಡೀವಟಂಕಾರವನ್ನು ಮಾಡುತ್ತಾ ಅರ್ಜುನನು, ಗದಾಪಾಣಿಯಾಗಿ ಭೀಮನು, ಕೋಪಾರುಣಿತನೇತ್ರರಾಗಿ, ತಿರುಗಿ ನೋಡುತ್ತಾ ಹೋದರಂತೆ! ನಕುಲ ಸಹದೇವರೂ ಖಡ್ಗವನ್ನೆತ್ತಿ ಝಳಪಿಸುತ್ತಾ, ಕುದುರೆಗಳನ್ನು ಚಡಿಯಿಂದ ಹೊಡೆಯುತ್ತಾ ವೇಗವಾಗಿ ಪಯಣಿಸಿದರು. ಧರ್ಮರಾಜನು ಕೂಡ ಸಭೆಯಲ್ಲಿ ನಾವು ಮಾಡಿದ ದ್ರೌಪದೀಪರಿಭವವನ್ನು ಮರೆಯುವುದಿಲ್ಲ. ಭೀಮನು ತನ್ನ ಪ್ರತಿಜ್ಞೆಗಳನ್ನು ನೆರವೇರಿಸಿ ಕೊಳ್ಳಲು ಅನುಕೂಲ ಮಾಡಿಕೊಟ್ಟೆ! ಈಗೇನಾಯಿತು! ಕರೆಸು ಪಾಂಡವರನ್ನು! ದ್ಯೂತಚಪಲನಾದ ಧರ್ಮರಾಜನು ಮತ್ತೆ ಜೂಜನ್ನಾಡಲಿ! ದ್ಯೂತದಲ್ಲಿ ಸೋತವರು ಅವರಾಗಲಿ ನಾವಾಗಲಿ, ರಾಜ್ಯಭ್ರಷ್ಟರಾಗಿ, ಅರಣ್ಯದಲ್ಲಿ ಹನ್ನೆರಡು

ವರ್ಷಗಳಿರಬೇಕು; ಅನಂತರ ನಾತಿದೂರವು, ಜನಸಮೃದ್ಧವು ಆದ ನಗರದಲ್ಲಿ ಅವರು ಒಂದು ವರ್ಷ ಅಜ್ಞಾತರಾಗಿರಬೇಕು. ಅಜ್ಞಾತವಾಸದಲ್ಲಿ ಪಾಂಡವರೆಂದು ತಿಳಿಯಲ್ಪಟ್ಟರೆ, ಮತ್ತೆ ಹನ್ನೆರಡು ವರ್ಷ ವನವಾಸವಾಗಿರಬೇಕು—ಇದು ಪಣ. ಜೂಜಾಡುವವನು ನನಗಾಗಿ ಶಕುನಿ.

"ಶಕುನಿಯ ದ್ಯೂತಪಾಂಡಿತ್ಯದಿಂದ ನಮಗೆ ಜಯವು ಸಿದ್ಧ. ಹದಿಮೂರು ವರ್ಷ, ಪಾಂಡವರು ವನವಾಸಾಜ್ಞಾತಗಳನ್ನು ಮುಗಿಸಿ, ಬದುಕಿದ್ದು ಬಂದರೆ, ಆ ವೇಳೆಗೆ ರಾಜ್ಯಪಾಲಕರಾಗಿರುವ ನಾವು ಸೈನ್ಯ ಸಮೃದ್ಧರಾಗಿ, ಅವರನ್ನು ಜಯಿಸಿ, ಶಾಶ್ವತ ಸುಖಿಗಳಾಗಿರಬಹುದು! ನೋಡು! ನಿನಗಿಷ್ಟವಿದ್ದರೆ, ಸುತರ ಹಿತವು ಬೇಕಾಗಿದ್ದರೆ ಇಂತು ಮಾಡು!"

ದುರ್ಯೋಧನ ವಚನ ವಿಷ ಕಲುಷಿತಾಂತಃಕರಣನಾದ ಧೃತರಾಷ್ಟ್ರನು ಮತ್ತೆ ಪಾಂಡವರಿಗೆ ಹೇಳಿಕಳಿಸಿದನು. ಭೀಷ್ಮ ಸೋಮದತ್ತ ಬಾಹ್ಲಿಕಾದಿ ಬಂಧುಜನರು, ದ್ರೋಣ ಕೃಪಾದಿ ಗುರುಜನರು, 'ದ್ಯೂತವು ಅನರ್ಥಕಾರಣವು, ಬೇಡ' ಎಂದು ವಿವಿಧರೀತಿಗಳಲ್ಲಿ ಹೇಳಿದರೂ ಕೇಳದೆ ಸುತವಶನಾದ ಧೃತರಾಷ್ಟ್ರನು ಪಾಂಡವರನ್ನು ಕರೆಯಿಸಿದನು.

ಆಗ ಗಾಂಧಾರಿಯು ಧೃತರಾಷ್ಟ್ರನನ್ನು ನೋಡಿ "ರಾಜನ್! ಮತ್ತೆ ಜೂಜೆ? ಶಾಂತವಾಗಿ ಹೋಗಿದ್ದ ವಹ್ನಿಯನ್ನು ಮತ್ತೆ ಹೊತ್ತಿಸಿ, ಮನೆ ಸುಟ್ಟುಕೊಂಬುವರುಂಟೇ? ಬಾಲಬುದ್ಧಿಗಳ ಮಾತಿಗೆ ವಶನಾಗಿ ದುಃಖ ಸಮುದ್ರ ಮಗ್ನನಾಗಬೇಡ! ಪಾಪಿ ದುರ್ಯೋಧನನು ಹುಟ್ಟಿದಾಗಲೇ 'ಅವನನ್ನೊಬ್ಬನನ್ನು ತ್ಯಜಿಸಿ, ಕುಲವನ್ನುಳಿಸು' ಎಂದು ದೈವಜ್ಞರು ಹೇಳಿದರು. ಬುದ್ಧಿಶುದ್ಧನಾದ ವಿದುರನೂ ಅಂತೆಯೇ ಉಪದೇಶಿಸಿದನು. ಸುತಸ್ನೇಹದಿಂದ ಪ್ರಮಾದವನ್ನು ಮಾಡುತ್ತಿರುವೆ. ಕೈಯಾರ ತಲೆಯನ್ನು ಬಂಡೆಗೆ ಘಟ್ಟಿಸುತ್ತಿರುವ ಮೂರ್ಖರಂತೆ ನಿನ್ನ ಮಕ್ಕಳು ತಾವೂ ಉಳಿಯರು; ಮತ್ತು ಲೋಕನಾಶಕರೂ ಆಗುವರು. ಈ ಅಪಕೀರ್ತಿಯು ನಿನಗೆ ಬರುವುದು. ಶಮವನ್ನವಲಂಬಿಸು! ಧರ್ಮದಲ್ಲಿ ನಡೆ!" ಎಂದು ಹಿತವನ್ನು ಹೇಳಿದಳು. ಆ ಮಾತಿಗೆ ಕಿವಿಗೊಡದೆ, ಕುಲಾಂತವಾದರೂ ಆಗಲಿ! ಜೂಜನ್ನು ನಿವಾರಿಸಲಾರೆನೆಂದು ಧೃತರಾಷ್ಟ್ರನು ಪ್ರಾತಿಕಾಮಿಯನ್ನು ಧರ್ಮಜಾದಿಗಳನ್ನು ಕರೆತರಲು ಕಳಿಸಿದನು.

ಅವನ ಆಹ್ವಾನವನ್ನು ಕೇಳಿ, ಧರ್ಮರಾಜನು "ಆಗಲಿ! ವಿಧಿನಿಯಮವನ್ನು ಉಲ್ಲಂಘಿಸಿ ನಡೆಯಲು ಯಾರೂ ಶಕ್ತರಲ್ಲ. 'ಹಿರಿಯನಾದ ಧೃತರಾಷ್ಟ್ರನು ಜೂಜಾಡು ಎಂದು ಕರೆದನಂತೆ! ಧರ್ಮರಾಜನು ಒಲ್ಲೆನೆಂದನಂತೆ' ಎಂಬ ಮಾತನ್ನು ಕೇಳಲಾರೆನು. ಸರ್ವನಾಶಕಾರಣವಾದುದೆಂದರಿತೂ, ಜೂಜಿಗೆ ಬರುವೆನು ಎಂದು ಮಧ್ಯೇಮಾರ್ಗದಿಂದಲೇ ಹಿಂದಿರುಗಿದನು. ದ್ರೌಪದೀ ಭೀಮಸೇನರು ನಿವಾರಿಸಿದರೂ ಅರ್ಜುನ ನಕುಲ ಸಹದೇವರು ಬೇಡಿದರೂ ಕೇಳದೆ ಧರ್ಮರಾಜನು

ವಿಧಿವಿಲಾಸವಶನಾಗಿ, ಕೌರವಸಭೆಗೆ ಬಂದು, ಜೂಜಾಡಲು ಕುಳಿತನು. ಅದನ್ನು ಕಂಡು ಸುಹೃಜ್ಜನರು ದುಃಖಿತರಾದರು.

ಹರ್ಷೋನ್ಮತ್ತನಾದ ಶಕುನಿ ಧರ್ಮರಾಜನನ್ನು ನೋಡಿ, "ಹಿಂದಿನಂತೆ ಪಣವಿಡಲು ಬೇಡ; ಮಹಾಪಣವನ್ನು ಒಡ್ಡಿ ಒಂದೇಸಲ ಆಡೋಣ. ಸೋತವರು ಹನ್ನೆರಡುವರುಷ ವನದಲ್ಲಿ ವಸಿಸಿ, ಮತ್ತೊಂದು ವರುಷ ಬಹುದೂರವಾಗದ ನಗರ ದಲ್ಲಿ ಅಜ್ಞಾತವಾಸವನ್ನು ಮಾಡಬೇಕು. ಅಜ್ಞಾತಕಾಲದಲ್ಲಿ ತಿಳಿಯಲ್ಪಟ್ಟರೆ, ಅವರು ನಾವಾಗಲಿ ನೀವಾಗಲಿ ಸೋತವರು ಮತ್ತೆ ಹನ್ನೆರಡು ವರುಷ ವನವಾಸವಿರಬೇಕು. ಮುಂದೆ ರಾಜ್ಯಪ್ರಾಪ್ತಿವಿಚಾರ !" ಎಂದನು.

ಆ ಮಾತನ್ನಾಲಿಸಿ, ಸಭಾಸದರು ದಿಗ್ಭ್ರಾಂತರಾಗಿ ಹಾಹಾಕಾರ ಗೈದರು. 'ಬಂಧುಜನರು ಮಾಡುವ ಕೆಲಸವೇ' ಎಂದು ಆಶ್ಚರ್ಯಶೋಕಪರೀತರಾದರು. ಶಕುನಿಯ ಪಣವನ್ನೊಪ್ಪಿಕೊಂಡು ಧರ್ಮರಾಜನು ಕೂತನು ; ಶಕುನಿ ದಾಳವನ್ನೊ ಗೆದು ಗೆದ್ದೆನೆಂದನು. ಪರಾಜಿತರಾದ ಪಾರ್ಥರು ವನವಾಸಸಿದ್ಧತೆಯನ್ನು ನಡೆಸಿದರು. ಅಜಿನೋತ್ತರೀಯಗಳನ್ನುಟ್ಟ ಸಿಂತ ಧರ್ಮಜಾದಿಗಳನ್ನು ಜನರು ನೋಡಿ, ಮಮ್ಮಲ ಮರುಗಿದರು. ದುಶ್ಶಾಸನನು ಆನಂದದಿಂದ ಕುಣಿದಾಡುತ್ತ—ಪಾಂಡವರು ಹಾಳಾ ದರು. ಧನಮತ್ತರಾಗಿ, ಧಾರ್ತರಾಷ್ಟ್ರರಾದ ನಮ್ಮನ್ನು ನೋಡಿ ನಗೆಯಾಡಿದುದಕ್ಕೆ ತಕ್ಕ ಶಾಸ್ತಿ ಆಯಿತು ! ನಮ್ಮ ಸಮಾನ ವೀರರಿಲ್ಲವೆಂದು ಜಂಬದಿಂದ ಮೆರೆದ ಪಾಂಡವರು ಇಂದು ಷಂಢತಿಲರಾದರು. ಇಂತಹ ನಪುಂಸಕರಿಗೆ ಕನ್ಯೆಯನ್ನಿತ್ತು ಮಹಾಪ್ರಾಜ್ಞನಾದ ದ್ರುಪದನು ದಡ್ಡನಾದನು. ಅವನ ಪಾಪ ಅವನುಣ್ಣಲಿ ! 'ದ್ರೌಪದಿ ! ಇಂತಹ ಷಂಢರಿಂದ ನಿನಗೇನು ಪ್ರಯೋಜನ ? ಅರಣ್ಯದಲ್ಲಿ ನಾರುಡುಗೆ ಯನ್ನುಟ್ಟ ಇವರೊಡನೆ ಇರುವುದೇನು ಸುಖ ? ನಮ್ಮಲ್ಲಿ ಒಬ್ಬ ವೀರನನ್ನು ವರಿಸಿ, ಸುಖವಾಗಿರು !' ಎಂದು ಪ್ರಲಪಿಸಿದನು.

ಭೀಮಸೇನನು ಕೋಪೋದ್ದೀಪಿತನಾಗಿ "ಎಲವೋ ಪಾಪಿ ! ಗೆದ್ದುದು ಜೂಜಿ ನಲ್ಲಿ. ಯುದ್ಧದಲ್ಲಿ ಸೋಲುವುದು ಕಾದಿದೆ. ಗೆದ್ದವನು ಶಕುನಿ ! ನೀವಲ್ಲ. ನೀನು ವಾಗ್ಬಾಣಗಳಿಂದ ನೋಯಿಸಿದೆ. ಅದರ ಫಲವನ್ನು ರಣರಂಗದಲ್ಲಿ ಅನುಭವಿಸುವೆ. ನಿನ್ನನ್ನೂ, ನಿನ್ನ ವಿಕಟಾಟ್ಟಹಾಸವನ್ನು ನೋಡಿ, ಅನುಮೋದಿಸುವ ನಿನ್ನ ಸೋದರ ಶತವನ್ನೂ, ನಿನ್ನನ್ನು ರಕ್ಷಿಸಲು ಬರುವ ಮಹಾ ವೀರರನ್ನೂ, ನನ್ನ ಈ ಗದಾದಂಡವು ಚೂರ್ಣೀಕೃತಾಂಗರನ್ನಾಗಿ ಮಾಡದೆ ಬಿಡದು !" ಎಂದು ಗರ್ಜಿಸಿದನು.

ದುಶ್ಶಾಸನನು ಭೀಮನನ್ನಪಹಸಿಸಿ "ಗೌಃ ಗೌಃ' ಎಂದು ಕೂಗಾಡಿದನು. 'ಅಂತಕಾತಿಥಿಗೆ ನಿವೇದಿತರಾದ ಪಾಂಡವ ಪಶುಗಳು !' ನೀವು ಸತ್ತಂತೆ ನಿಮ್ಮ ಪ್ರತಿಜ್ಞೆಯೂ ಸತ್ತಿತು" ಎಂದನು. ಭೀಮಸೇನನು "ಕಾಪುರುಷ ! ಜೂಜಿನಲ್ಲಿ ಗೆದ್ದು, ಬಾಯಿಗೆ ಬಂದಂತೆ ಬೊಗಳುವ ನಿನ್ನನ್ನು ರಣದಲ್ಲಿ ಕೆಡವಿ, ಎದೆ ಸೀಳಿ, ನಿನ್ನ ರಕ್ತವನ್ನು ಕುಡಿಯುವೆನು ! ತಿಳಿ " ಎಂದು ಶಪಥಗೈದನು.

ದುರ್ಯೋಧನನು ಭೀಮಸೇನನ ಸಿಂಹಗಂಭೀರಗಮನವನ್ನು ಅಣಕಿಸುತ್ತಾ ನಡೆಯಾಡಲು ನೋಡಿ ವೃಕೋದರನು, ಸಭೆಯನ್ನು ದಾಟಿ ಹೋಗುವವನು ಮತ್ತೆ ಹಿಂದಿರುಗಿ, ಬಾಗಿ, "ಅವಸರಪಡಬೇಡ ! ಹದಿಮೂರುವರ್ಷಗಳಾಗಲಿ ! ದುರ್ಯೋಧನ ! ರಣದಲ್ಲಿ ನಿನ್ನನ್ನು ತೊಡೆಮುರಿದು ಕೆಡಹಿ, ನಿನ್ನ ತಲೆಯನ್ನು ನನ್ನ ಈ ಎಡ ಪಾದದಿಂದ ಮರ್ದಿಸುವೆನು. ದುರ್ಯೋಧನ ದುಶ್ಶಾಸನ ಕರ್ಣ ಶಕುನಿಯರ ಬಿಸಿ ನೆತ್ತರನ್ನು ಭೂಮಿಯು ಹೀರುವುದು" ಎಂದು ಉದ್ಘೋಷಿಸಿದನು.

ಅರ್ಜುನನೂ "ಭೀಮಸೇನ ! ನಿನ್ನ ಆಜ್ಞೆಯಂತೆ ನಾನು ಪಾಪಿ ಕರ್ಣನನ್ನು ಸಂಹರಿಸುವೆನು. ಹಿಮವತ್ಪರ್ವತವು ಚಲಿಸಿದರೂ, ದಿವಾಕರನು ತಣ್ಣಗಾದರೂ ನಾನು ಕರ್ಣನನ್ನೂ ಅವನ ಸಹಾಯಕರನ್ನೂ ರಣದಲ್ಲಿ ಕೊಲ್ಲದೇಬಿಡೆನು" ಎಂದು ಪ್ರತಿಜ್ಞೆ ಮಾಡಿದನು. ಸಹದೇವನು ಕುಪಿತನಾಗಿ "ಗಾಂಧಾರರಾಜಕುಲಕಲಂಕ ! ಅಕ್ಷಕ್ರೀಡೆ ಮುಗಿಯಿತು. ಬಾಣಕ್ರೀಡೆ ಕಾದಿದೆ. ನಮ್ಮಣ್ಣನ ಅನುಜ್ಞೆಯಿಂದ ನಿನ್ನನ್ನು ಕೊಲ್ಲುವೆನು. ಕಾದಿರು, ತ್ರಯೋದಶ ವರ್ಷಗಳು. ಇನ್ನಾರ ಮನೆ ಹಾಳುಮಾಡುವೆಯೋ ಅದೂ ಮಾಡಿರು !" ಎಂದು ಪ್ರತಿಜ್ಞೆಮಾಡಿದನು. ನಕುಲನು ಕೂಡ "ದುರ್ಯೋಧನನಿಗೆ ಪ್ರಿಯವಾಗಲೆಂದು ದ್ರೌಪದಿಯನ್ನು ಅಪಹಾಸಮಾಡಿದ ದುಷ್ಟರನ್ನೆಲ್ಲ ಸಂಹರಿಸುವೆನು" ಎಂದು ಶಪಥ ಮಾಡಿದನು.

ಧರ್ಮರಾಜನು ಭೀಷ್ಮ ಧೃತರಾಷ್ಟ್ರ ಸೋಮದತ್ತ ಬಾಹ್ಲೀಕ ದ್ರೋಣ ಕೃಪರಿಗೆ ವಂದಿಸಿ, ವನವಾಸಾನುಜ್ಞೆಯನ್ನು ಬೇಡಿದನು. ಅವರು ಮಾತನಾಡದೆ ಸುಮ್ಮನಿದ್ದರು. ಭೀಷ್ಮಾದಿಗಳವರನ್ನು ಮನಸಾ ಹರಸಿದರು. ವಿದುರನು "ಧರ್ಮರಾಜ! ಪೂಜ್ಯಳಾದ ಕುಂತಿಯು ಅರಣ್ಯದಲ್ಲಿರಲಾರಳು. ಅವಳನ್ನು ಮಾತೆಯಂತೆ ರಕ್ಷಿಸುವೆನು. ಅವಳು ನನ್ನ ಮನೆಯಲ್ಲಿರಲಿ ! ನಿನಗೆ ಶುಭವಾಗಲಿ ! ಹೋಗಿ ಬನ್ನಿ" ಎಂದು ಆಶಾಶಿಸಿದನು. ಭೀಮಾರ್ಜುನರ ಪ್ರತಿಜ್ಞೆ ಸಂಪೂರ್ಣವಾಗುವುದೆಂದನು. ದ್ರೌಪದಿಯನ್ನು ಚನ್ನಾಗಿ ರಕ್ಷಿಸಲು ಎಚ್ಚರಿಸಿದನು. ಧೌಮ್ಯರ ಮಾತಿನಂತೆ ವರ್ತಿಸಿ, ಹಿತವನ್ನು ಹೊಂದಿರೆಂದು ಕೋರಿದನು. ಅವನ ಸೌಹಾರ್ದ ಪ್ರೀತಿಗಳಿಗೆ ಸಂತಸಿಸಿ, ಪಾಂಡವರು ವನವಾಸಕ್ಕೆಂದು ತೆರಳಲನುವಾದರು.

## ವನ ಗಮನ

ಆಗ ದ್ರೌಪದಿಯು ಕುಂತೀದೇವಿಗೆ ವಂದಿಸಿ, ಬಾಷ್ಪಾಕುಲನಯನಳಾಗಿ, ಎಲ್ಲರ ಅನುಜ್ಞೆಯನ್ನು ಪಡೆದಳು. ಕುಂತೀದೇವಿ "ವತ್ಸೆ! ದ್ರೌಪದಿ, ನಮಗೆ ಮಹದ್ವ್ಯಸನವು ಬಂದೊದಗಿತು. ಚಿಂತೆಪಡಬೇಡ! ಧರ್ಮಜ್ಞಳು, ಶೀಲಾಚಾರ ಸಂಪನ್ನಳು ಆದ ನಿನಗೆ ಹೆಚ್ಚು ಹೇಳುವುದೇನಿದೆ? ನಿನ್ನಿಂದ ಪಾಂಚಾಲ ಪಾಂಡವ ಕುಲಗಳು ಪಾವನವಾದವು. ಶುಭವಾಗಲಿ ! ನನ್ನನ್ನು ಸ್ಮರಿಸು !" ಎಂದು ಕಣ್ಣೀರ ನ್ನೊರಸಿಕೊಂಡು, "ಮುಂದೆ ಶ್ರೇಯಸ್ಸಾಗುವುದು. ಸಹದೇವನನ್ನು ಒಂದು

ಕಣ್ಣಿಟ್ಟು ನೋಡಿ, ಸಂರಕ್ಷಿಸು! ಅವನು ಚಿಕ್ಕವನು" ಎಂದು ಆದೇಶಿಸಿದಳು. ಆಗ ವಸ್ತ್ರಾಭರಣ ರಹಿತರಾಗಿ, ನಾರುಮಡಿಗಳನ್ನುಟ್ಟು ರುರುಚರ್ಮಾವೃತರಾದ ಮಕ್ಕಳನ್ನು ನೋಡಿ, ಕುಂತಿಯು 'ಹೋ' ಎಂದು ಮುಕ್ತಕಂಠಳಾಗಿ ರೋದಿಸಿದಳು. "ಆಹಾ! ವಿಧಿಯೇ! ಸದ್ಧರ್ಮಶೀಲರು, ವಿಮಲಚರಿತ್ರರು, ದೇವಬ್ರಾಹ್ಮಣ ಭಕ್ತರು, ಆಗಿರುವ ನನ್ನ ಮಕ್ಕಳಿಗೆ ವನವಾಸವೇ? ಯಾವ ಜನುಮದ ಪಾಪವೋ ಇಂತು ಸಂತಾಪ ಪಡುತ್ತಿರುವೆನು! ಮಕ್ಕಳನ್ನು ದುಃಖಪರಿಭವಗಳಿಗಾಗಿ ಪಡೆದೆನೇ ನಾನು! ವನದಲ್ಲಿ ಮೃಗಮಧ್ಯಧಿ ಎಂತು ನಿವಸಿಸುವಿರಿ? ಇಂತಾಗುವುದೆಂದು ತಿಳಿದಿದ್ದರೆ ಶತಶೃಂಗದಲ್ಲೇ ಇದ್ದುಬಿಡುತ್ತಿದ್ದೆನಲ್ಲ! ಪಾಂಡುಭೂಪಾಲ! ಈ ಕಷ್ಟ ವನ್ನು ನೋಡದೆ ಕಣ್ಣುಮುಚ್ಚಿದ ನೀನೇ ಧನ್ಯನು! ನಿನ್ನನ್ನನುಸರಿಸಿ, ವ್ಯಸನಕ್ಕೆ ಮೀಸಲಾಗಿ ನನ್ನನ್ನುಳಿಸಿಹೋದ ಮಾದ್ರಿ ಪುಣ್ಯವತಿಯೇ ಸರಿ! ಬದುಕಿನಲ್ಲಿ ಸುಖವಿದೆಯೆಂದು ಭ್ರಮಿಸಿ, ಉಳಿದಿರುವ ನನಗೆ ಧಿಕ್ಕಾರವಿರಲಿ! ಕೃಷ್ಣೇ! ನನ್ನನ್ನು ಬಿಟ್ಟು ಹೋಗುವಿಯಾ! ಇನ್ನು ನಾನೆಂತು ಬದುಕಲಿ! ಕೃಷ್ಣ! ಗೋವಿಂದ! ಎಲ್ಲಿರುವೆ? ನಮ್ಮ ದುಃಖದ ಕಣ್ಣೀರು ಹೊಳೆಯಾಗಿದೆ! ಬಾ ಪ್ರಭೂ! ಅದನ್ನು ಹಿಂಗಿಸು! ನಿನ್ನ ಭಕ್ತರಾದ ನನ್ನ ಸುತರಿಗೆ ಇಂತಹ ಕಷ್ಟಪರಂಪರೆಯೇ? ಹಾ! ಭೀಷ್ಮ ಬಾಹ್ಲಿಕರು ಇವರಿಗೆ ಪಿತಾಮಹರಲ್ಲವೇ? ಅವರಿಗೂ ಕರುಣೆ ಬಾರ ದಾಯಿತೇ! ಸಹದೇವ! ಹಿಂದಿರುಗು, ಹೋಗಬೇಡ. ಸತ್ಯಸಂಧರಾದ ನಿನ್ನ ಅಣ್ಣಂದಿರು ಹೋಗಲಿ. ನೀನು ನನ್ನೊಡನಿರು" ಎಂದು ವಿಲಪಿಸುವ ಮಾತೆಯನ್ನು ಕಷ್ಟದಿಂದ ಬೀಳ್ಕೊಂಡು ಪಾಂಡವರು ರಥಗಳನ್ನೇರಿದರು. ಹದಿನಾಲ್ಕು ರಥಗಳು ಅವರಿಗೆ ಉಪರಥಗಳಾಗಿ ಹಿಂಬಾಲಿಸಿದವು. ವಿದುರನು ರೋದನವಿಹ್ವಲಳಾದ ಕುಂತಿ ಯನ್ನು ತನ್ನ ಮನೆಗೆ ಕರೆದೊಯ್ದನು.

ಧೃತರಾಷ್ಟ್ರನು ನಡೆದ ದುರ್ನಯವನ್ನು ಮನದಿ ಚಿಂತಿಸುತ್ತಾ ಉದ್ವಿಗ್ನನಾಗಿ ದ್ದನು. ಅವನು ವಿದುರನಿಗೆ ಹೇಳಿ ಕರೆಸಿದನು. ವಿದುರನು ಶೋಕತಪ್ತನಾಗಿ ಅಣ್ಣ ನನ್ನು ಸಮೀಪಿಸಿದನು. ಧೃತರಾಷ್ಟ್ರನವನನ್ನು ಹತ್ತಿರ ಕುಳ್ಳಿರಿಸಿಕೊಂಡು 'ವಿದುರ! ಧರ್ಮ ಭೀಮ ಅರ್ಜುನ ನಕುಲ ಸಹದೇವರು ವನಕ್ಕೆ ತೆರಳುವಾಗ ಎಂತಿದ್ದರು? ದ್ರೌಪದಿಯು ಧೌಮ್ಯನು ಏನು ಮಾಡುತ್ತಾ ಹೋದರು? ಎಂದು ಕೇಳಿದನು.

ವಿದುರನು—"ರಾಜನ್! ಧರ್ಮರಾಜನು ಮುಖವನ್ನು ವಸ್ತ್ರದಿಂದ ಮುಚ್ಚಿಕೊಂಡು ಹೋದನು. ಭೀಮನು ವಿಶಾಲಬಾಹುವನ್ನೆತ್ತಿ, ವೀಕ್ಷಿಸುತ್ತಾ ಹೋದನು. ಮರಳನ್ನು ಚೆಲ್ಲುತ್ತಾ ಅರ್ಜುನನು, ಮುಖವನ್ನು ತಗ್ಗಿಸಿ ನಕುಲ ಸಹದೇವರು ಹೊರಟರು. ಕೃಷ್ಣೆ ಕೇಶರಾಶಿಯನ್ನು ಮುಖಕ್ಕೆ ಅಡ್ಡವಾಗಿ ಹರಡಿ, ಅಳುತ್ತಾ ಹೋದಳು. ಧೌಮ್ಯನು ಯಾಮ್ಯಸೂಕ್ತಗಳನ್ನು ಹೇಳುತ್ತಾ, ಕುಶ ಪಾಣಿಯಾಗಿ ಹೋದನು" ಎಂದನು. ಧೃತರಾಷ್ಟ್ರನು ಆಶ್ಚರ್ಯ ಭಯ ಭರಿತನಾಗಿ 'ಅದೇಕೆ ಅವರಂತು ಹೋದರೆಂ'ದು ಕೇಳಿದನು. ವಿದುರನಿಂತು ನುಡಿದನು—

"ದುರಾತ್ಮರಾದ ನಿನ್ನ ಸುತರು ಅಧರ್ಮದಿಂದ ರಾಜ್ಯವನ್ನು ಕಸಿದರೂ, ಧರ್ಮರಾಜನು ಧರ್ಮವನ್ನು ಬಿಡದಿರುವನು. 'ತನ್ನ ಕೋಪಾರುಣಕಟಾಕ್ಷ ವಹ್ನಿಯಿಂದ ಕೌರವರಿಂದೇ ಸುಟ್ಟುಹೋದಾರು; ಹಾಗಾಗದಿರಲೆಂದು' ಧರ್ಮರಾಜನು ಕರುಣಾವಶನಾಗಿ, ಮುಖವನ್ನು ಮುಚ್ಚಿಕೊಂಡು ತೆರಳಿದನು. ಭೀಮನು 'ಈ ನನ್ನ ಬಾಹುಗಳಿಂದಲೇ ಶತ್ರುನಾಶಮಾಡುವೆ'ನೆಂದು ಸೂಚಿಸುತ್ತಾ ಹೋದನು. 'ಮರಳಂತೆ ಶರವರ್ಷವನ್ನು ಸುರಿಸಿ ಶತ್ರುಗಳನ್ನು ನಾಶಮಾಡುವೆ'ನೆಂದು ಅರ್ಜುನನು ಮರಳನ್ನು ಚಲ್ಲುತ್ತಾ ಹೋದನು. ದುರವಸ್ಥೆಯಲ್ಲಿ ತಮ್ಮ ಮುಖವನ್ನು ಶತ್ರುಗಳಿಗೆ ತೋರಬಾರದೆಂದು ಯಮಳರು ಪ್ರಯಾಣಿಸಿದರು. ಶತ್ರುಪತ್ನಿಯರೂ 'ಮುಕ್ತಕೇಶರಾಗಿ, ಹತಭರ್ತೃಕರಾಗಿ ರೋದಿಸುವ'ರೆಂದು ಸೂಚಿಸುತ್ತಾ ದ್ರೌಪದಿಯು ರೋಷವೇ ಮೂರ್ತಿವೆತ್ತಂತೆ ನೋಡುತ್ತಾ ಹೋದಳು. ಧೌಮ್ಯನು 'ಹದಿನಾಲ್ಕನೆಯ ವರ್ಷ ಪ್ರಾರಂಭವಾದಾಗ, ಪಾಂಡವಶತ್ರುಗಳ ಪ್ರೇತಕಾರ್ಯಗಳನ್ನು ಮಾಡಿಸುವೆ'ನೆಂದು ಸೂಚಿಸುತ್ತಾ ಪ್ರೇತಪತಿಸೂಕ್ತಗಳನ್ನುಚ್ಚರಿಸುತ್ತಾ ಹೊರಟನು.

ಇದನ್ನು ನೋಡಿ ಪೌರರು ದುಃಖಮಗ್ನರಾದರು. 'ಹಾ ! ಪಾಂಡವರನ್ನು ದುರ್ಮಾರ್ಗನಾದ ದುರ್ಯೋಧನನು ಅನ್ಯಾಯದ ಜೂಜಿನಲ್ಲಿ ಗೆದ್ದು, ಅರಣ್ಯಕಟ್ಟಿರುವನು. ಲೋಭಿಯು ಪಾಪಿಯು ಅಧರ್ಮಶೀಲನು ಆದ ದುರ್ಯೋಧನನ ರಾಜ್ಯದಲ್ಲಿ ಇರಬಾರದು. ದುಶ್ಶಕುನಗಳನ್ನು ಕಂಡಿರೇ ? ಭೂಮಿಯು ಕಂಪಿಸುತ್ತಿದೆ ; ಪರ್ವವಲ್ಲದಿದ್ದರೂ ರಾಹುವು ಸೂರ್ಯನನ್ನು ಮುಚ್ಚಿದ್ದಾನೆ! ಉಲ್ಕೆಗಳು ಅಭ್ರದಿಂದ ಉದುರುತ್ತಿವೆ ! ಭರತ ವಂಶದವರಿಗೆ ಕೇಡುಗಾಲ ಬಂದಂತಿದೆ!' ಎಂದು ಗೋಳಾಡಿದರು. ಇಂತೆಂದು ವಿದುರನು ಹೇಳುತ್ತಿರಲು, ಅಲ್ಲಿಗೆ ನಾರದನು ಬಂದನು. ಅವನು 'ರಾಜನ್! ಇಂದಿನಿಂದ ಹದಿನಾಲ್ಕು ವರ್ಷಗಳಿಗೆ ಘೋರಯುದ್ಧವಾಗುವುದು. ದುರ್ಯೋಧನಾಪರಾಧದಿಂದ ಕೌರವರೆಲ್ಲರು ನಷ್ಟರಾಗುವರು' ಎಂದು ನುಡಿದು ಅಂತರ್ಹಿತನಾದನು. ಅದನ್ನು ನೋಡಿ ದುಷ್ಟ ಚತುಷ್ಟಯವು ದ್ರೋಣನಿಗೆ ಶರಣಾಗಿ, ಅವನಿಗೆ ರಾಜ್ಯಸರ್ವಸ್ವವನ್ನೂ ಒಪ್ಪಿಸಿದರು. ಆಗ ದ್ರೋಣನು ಅವರಿಗಿಂತೆಂದು ವಚನವಿತ್ತನು—'ರಾಜನ್! ದೇವಾಂಶರಾದ ಪಾಂಡವರು ಅವಧ್ಯರಾಗಿರುವರು. ಭೀಮಬಲ ಗುಪ್ತರಾದ ಅವರನ್ನು ಇಂದ್ರನೂ ಗೆಲ್ಲಲಾರನು. ಯುದ್ಧವಾದಾಗ, ನನ್ನ ಶಕ್ತಿಗೆ ಮೀರಿ ಹೋರಾಡಿ, ನಿಮ್ಮನ್ನು ರಕ್ಷಿಸಲು ಯತ್ನಿಸುವೆನು. ಆದರೂ ದ್ರುಪದಪುತ್ರನು ನನ್ನ ಸಂಹಾರಕ್ಕಾಗಿಯೇ ಹುಟ್ಟಿರುವನು. ಅವನ ಭಯವೆನಗಿದ್ದೇ ಇದೆ. ಗಾಂಡೀವ ಧನುರ್ಧಾರಿಯಾದ ಅರ್ಜುನನಿಗೆ ಕೃಷ್ಣನು ರಕ್ಷಕನಾಗಿರುವನು. ಅವಾರ್ಯವಿಕ್ರಮನಾದ ಭೀಮನನ್ನು ಗೆಲ್ಲುವವರು ಮೂಲೋಕಗಳಲ್ಲೂ ಇಲ್ಲ. ಕೇವಲ ಬಾಹುಬಲದಿಂದಲೇ ಆ ಮಹಾನುಭಾವನು ಶತ್ರುಸಂಹಾರವನ್ನು ಮಾಡಲು ಸಮರ್ಥನು. ಧರ್ಮಜ ಯಮಳರೂ ಸಾಮಾನ್ಯರಲ್ಲ. ಇರುವ ಅಲ್ಪಕಾಲಾವಧಿಯಲ್ಲಿ ಭೋಗಗಳನ್ನು ಹೊಂದಿ, ಯಜ್ಞದಾನಗಳನ್ನು **ಮಾಡಿ,**

ಸುಖದಿಂದಿರಿ! ಮುಂದೆ ಕಾದಿದೆ ಕಾಲಪುರುಷನ ಕರಾಳವದನ ಜ್ವಾಲೆಯಂತಿರುವ ಯುದ್ಧ!' ಇಂತು ದ್ರೋಣನು ನುಡಿದಾಗ ಧೃತರಾಷ್ಟ್ರನು ಚಿಂತಾಕುಲನಾಗಿ, ನಿಟ್ಟುಸಿರಿಡುತ್ತಾ ಕೂತನು.

ಸಂಜಯನು ಅವನಿಗೆ ಇಂತೆಂದನು—"ರಾಜನ್! ಪಾಂಡವರು ವನಕ್ಕೆ ತೆರಳಿದರು. ಅವರ ರಾಜ್ಯವೂ ನಿನ್ನದಾಯಿತು. ಸಿರಿಯ ಸೋಸಿನಿಂದಿರದೆ ಚಿಂತೆಯನ್ನೇಕೆ ಮಾಡುತ್ತಿರುವೆ?" ಆ ಮಾತನ್ನು ಕೇಳಿ, ಅಂಧರಾಜನು "ಸಂಜಯ! ಬಲವಂತರಾದ ಪಾಂಡವರ ದ್ವೇಷವನ್ನು ಉಡಿಯಲ್ಲಿ ಕಟ್ಟಿಕೊಂಡ ನಮಗೆ ಚಿಂತೆಯಲ್ಲದೆ ಮತ್ತೇನು?" ಎಂದನು. ಸಂಜಯನು "ಮತ್ತೇನು? 'ಮಾಡಿದ್ದುಣ್ಣೊ ಮಹಾರಾಯ!' ಎಂಬ ಗಾದೆಯಂತೆ, ಕೈಯಾರ ಪಾಪವನ್ನು ಮಾಡಿ, ಕಾಲಕರ್ಮ ಸಂಯೋಗದಿಂದ ಫಲವನ್ನು ಉಣ್ಣುವಾಗ ಬೇಡವೆಂದು ನೂಕಲಾಗುವುದೇ? ಹಾವು ಕಚ್ಚಿದೆಡೆ, ಹಚ್ಚಡದಿಂದ ಒರೆಸಿದೊಡೆ ಹೋಗುವುದೇ? ಸರ್ವಲೋಕವೂ ನಾಶವಾಗುವುದನ್ನು ದೇವನು ನಿಶ್ಚಯಿಸಿರಲು, ನೀನು ಸಪುತ್ರನಾಗಿ ಉಳಿಯುವೆಯಾ? ಭೀಷ್ಮದ್ರೋಣ ವಿದುರರ ಹಿತನುಡಿಯು ನಿನಗೆ ವಿಷವಾಯಿತು. ಶಕುನಿ ದುರ್ಯೋಧನರ ವಿಷವಚನವು ರುಚಿಯಾಯಿತು. ಪಾಂಡವ ಪ್ರಿಯಳಾದ ದ್ರೌಪದಿಯನ್ನು ಸಭೆಗೆ ತರಬಹುದೇ? ತಂದರೆ ನಿಂದಿಸಿ ಅವಮಾನಿಸಬಹುದೇ? ನಿಂದಿಸಿದರೂ, ಸೀರೆಯನ್ನು ಸೆಳೆಯಬಹುದೇ? ಇಷ್ಟು ಘೋರಪಾಪವಿನ್ನೊಂದುಂಟೇ? ಇದನ್ನು ಭಗವಂತನು ಸಹಿಸುವನೇ? ಭಗವಂತನಲ್ಲಿ ವಿಶ್ವಾಸವೂ ನಿನಗಿಲ್ಲದಾಯಿತೇ? ಮಹಾರಾಜ! ಅನರ್ಥವನ್ನು ಅರ್ಥವೆಂದು ತಿಳಿದೆ! ಅನುಭವಿಸೆನೆಂದರೆ ಬಿಡುವುದೇ ಪಾಪ ಫಲ! ಕಾಲನು ಕಲ್ಲನ್ನೆತ್ತಿ ತಲೆ ಮೇಲೆಸೆದು ಕೊಲ್ಲುವುದಿಲ್ಲ, ಕೊಲ್ಲಲಿಚ್ಛಿಸಿದವರ ತಲೆಯನ್ನು ಕೆಡಿಸಿ, ಅವರಿಂದ ಪಾಪವನ್ನು ಮಾಡಿಸಿ, ಆ ಪಾಪದಿಂದ, ಅವರು ಸಾಯುವಂತೆ ಮಾಡುವನು. ಅಯೋನಿಜೆಯು, ಕುಲವಧೂಮಣಿಯು, ಧರ್ಮಜ್ಞಳು, ಪತಿವ್ರತೆಯು ಆದ ದ್ರೌಪದಿಯು ಅವಮಾನಿತಳಾದ ಬಗೆಯನ್ನು ಕಂಡು ರಾಕ್ಷಸಹೃದಯಗಳೂ ಕರಗುವಾಗ, ರಾಜನ್! ಕ್ಷಮಿಸು, ಅವಳ ಮಾವನಾದ ನಿನಗೆ ದಯೆ ಪುಟ್ಟಿತೇ? ರಾಜ್ಯ ಧನ ವಸ್ತ್ರ ಸಂಪತ್ತುಗಳನ್ನು ಅಧರ್ಮದ್ಯೂತದಲ್ಲಿ ಕಳೆದುಕೊಂಡು, ತಲೆ ತಗ್ಗಿಸಿ ಕೂತ ಪತಿಗಳನ್ನು ನೋಡಿ, ದೀನಳಾಗಿ ಆ ಮಹಾಸಾಧ್ವಿ ಸುರಿಸಿದ ಕಣ್ಣೀರು ಮುನ್ನೀರಾಗಿ ನಿನ್ನ ವಂಶವೃಕ್ಷವನ್ನು ಉನ್ಮೂಲಿಸದೆ ಬಿಡದು. ತಂದೆಯಾಗಿ, ಕುಪಥವರ್ತನರಾದ ದುಷ್ಟ ಸುತರನ್ನು ತಡೆಯದೆ, ತನ್ನ ಕಾಲಮೇಲೆ ತಾನಾಗಿ ಬಂಡೆ ಎಸೆದುಕೊಂಡಂತಾಗಿ, ಈಗ ತಲ್ಲಣಿಸಿದರೆ ಪ್ರಯೋಜನವೇನು? ಧರ್ಮದಿಂದ ನಿಂತು, ಶಾಂತರಾದರಾಗಲಿ, ಇಲ್ಲದಿರೆ ಎಂದೋ ನಿನ್ನ ಸುತರೆಲ್ಲರೂ ಹತರಾಗುತ್ತಿದ್ದರು; ದೈವಲೀಲೆಗೆದುರಿಲ್ಲ!"

ಧೃತರಾಷ್ಟ್ರನು ಸಂಜಯನ ವಚನಗಳಿಗೆ ಎದೆಗುಂದಿದನು. ಅವನು "ಸಂಜಯಾ! ಅಹುದು, ನೀನಾಡಿದುದು ನಿಜ. ಕೌರವರು ಉಳಿಯುವುದಿಲ್ಲ. ಆದ

ಅಪಶಕುನಗಳೇ ಅದಕ್ಕೆ ಸಾಕ್ಷಿ! ವರವನ್ನು ಬೇಡೆಂದು ನಾನೆಂದರೆ, ಆ ಮಹಾ ಗುಣವತಿ ತನ್ನ ಪತಿಗಳ ದಾಸ್ಯ ಮುಕ್ತಿಯನ್ನು ಬೇಡಿದಳಾಗಲಿ, ಮತ್ತೊಂದನ್ನಲ್ಲ! ಅವಳ ಪರಿಕ್ಲೇಶವನ್ನು ಪಾಂಡವರು ಎಂದಿಗೂ ಮರೆಯಲಾರರು. ಅವರ ಕೋಪಾಗ್ನಿ ಕಾಡುಗಿಚ್ಚಾಗಿ ಕೌರವ ವಂಶ ವನವನ್ನು ನಾಶಮಾಡದೆಬಿಡದು. ಭೀಮಸೇನನು ಗದೆಯನ್ನಾಡಿಸುತ್ತಾ ಬಂದನೆಂದರೆ, ನಿಲ್ಲುವವರಿರುವರೇ? ಗಾಂಡೀವ ನಿರ್ಮುಕ್ತ ಬಾಣಜಾಲಗಳಿಗೆದುರುಂಟೆ? ಏನು ಮಾಡಲಿ?" ಎಂದು ಮರುಗಿದನು. ಸಂಜಯನಾ ಮಾತಿಗೆ ನಸು ನಕ್ಕು "ರಾಜನ್! ಆದುದಾಯಿತು, ಇನ್ನಾದರೂ ಶಾಂತಬುದ್ಧಿ ಯಾಗು! ಉಭಯ ಪಕ್ಷಗಳಿಗೂ ಹಿತಂಕರನಾಗು! ಇಂತಾದರೆ, ಪಾಂಡವ ಕೌರವರು ಒಂದಾಗಿ, ಲೋಕಹಿತವೂ ಆಗುವುದು!" ಎಂದು ನುಡಿದನು.

ಸಭಾಪರ್ವವು ಮುಗಿಯಿತು

|| ಶ್ರೀಮಧ್ವೇಶಾರ್ಪಣಮಸ್ತು ||



# ೩. ವನಪರ್ವ

## ವನವಾಸಾರಂಭ – ಅಕ್ಷಯ ಪಾತ್ರೆ

ವೈಶಂಪಾಯನನು ಜನಮೇಜಯನಿಗೆ ಹೇಳಿದನು—ಇಂತು ದ್ಯೂತದಲ್ಲಿ ಪರಾಜಿತರಾಗಿ, ಪಾಂಡವರು ಕೃಷ್ಣೆಯಿಂದ ಕೂಡಿ, ಗಜಪುರಿಯಿಂದ ವನಕ್ಕೆಂದು ವರ್ಧಮಾನದ್ವಾರದಿಂದ ತೆರಳಿದರು. ಇಂದ್ರಸೇನಾದಿಸಾರಥಿಗಳು ಹದಿನಾಲ್ಕು ಉಪ ರಥಗಳಲ್ಲಿ ಇತರ ರಾಜವನಿತೆಯರನ್ನು ಕರೆದುಕೊಂಡು, ಅವರನ್ನು ಅನುಸರಿಸಿದರು. ಧೌಮ್ಯನೂ ರಥಾರೂಢನಾಗಿ ತೆರಳಿದನು.

ಪುರಜನರು ಪಾಂಡವರ ದುರ್ದಶೆಯನ್ನು ಕಂಡು—'ಕೌರವಕುಲನಾಶವು ಸಮೀಪಿಸಿದೆ. ಭೀಷ್ಮ, ದ್ರೋಣ, ವಿದುರ, ಗೌತಮರೂ ಸುಮ್ಮನಿರುವರಲ್ಲ! ದುಷ್ಟ-ಚತುಷ್ಟಯವು ಕಾಪಟ್ಯದಿಂದ ಪಾಂಡವರ ರಾಜ್ಯವನ್ನು ಕಸಿದು ಅವರನ್ನು ವನಕ್ಕೆ ಅಟ್ಟಿದಾಗ 'ಇಂತಹ ನೀಚರ ರಾಜ್ಯದಲ್ಲಿ ನಾವಿರಬಾರದು. ನಿಷ್ಕರುಣನಾದ ದುರ್ಯೋಧನನ ರಾಜ್ಯದಲ್ಲಿ ನಮಗೆ ಸುಖವಿಲ್ಲ. ಮಹಾತ್ಮರು, ದಯಾಳುಗಳಾದ ಪಾಂಡವರಿದ್ದಲ್ಲಿ ನಾವೂ ಇರೋಣ'—ಎಂದು ನಿಶ್ಚಯಿಸಿ, ಪಾಂಡುಕುಮಾರರನ್ನು ಹಿಂಬಾಲಿಸಿದರು. "ಧರ್ಮರಾಜ! ಅಧರ್ಮದಿಂದ ಪರಾಜಿತನಾಗಿ ವನವಾಸಕ್ಕೆಂದು ಹೋಗುವ ನಿಮ್ಮ ಹಿಂದೆ ನಮ್ಮನ್ನೂ ಕರೆದುಕೊಂಡುಹೋಗು! ನಾವು ದುಷ್ಟನಾದ ದುರ್ಯೋಧನನ ಪಾಲನೆಯಲ್ಲಿರಲಾರೆವು. ಮೂಢಸಮಾಗಮವು ಅಜ್ಞಾನಕಾರಣವು; ಆದರೆ ಸಜ್ಜನ ಸಂಗವು ಧರ್ಮಜ್ಞಾನಸಾಧನವಾಗಿದೆ. ನೀವು ಸಜ್ಜನರು. ನಿಮ್ಮ ಆಶ್ರಯದಲ್ಲಿರುವ ನಮಗೆ ಸಾಧುಸಂಗವು ಸುಲಭವಾಗುವುದು. ವಿದ್ಯಾ, ಆಭಿಜಾತ್ಯ, ಸತ್ಕರ್ಮಗಳುಳ್ಳವರ ಸೇವೆ ಶಾಸ್ತ್ರಪಠಣದಿಂದಲೂ ಸುಲಭ ಜ್ಞಾನಸಂಪಾದಕವು. ಅಸಜ್ಜನರ ದರ್ಶನ, ಸ್ಪರ್ಶನ, ಸಂಭಾಷಣ, ಸಹಾಸನಗಳಿಂದ ಧರ್ಮಬುದ್ಧಿಯು ಕೆಡುವುದು. ಸುಜನರ ಸಂಗದಿಂದ ಅನಾಯಾಸವಾಗಿ ಪುಣ್ಯವು ಸಿಗುವುದು. ಲೋಕಾಚಾರದಿಂದಲು ವೇದಶಾಸ್ತ್ರದಿಂದಲು ಖ್ಯಾತವಾಗಿರುವ ಸದ್ಗುಣಗಳು ನಿಮ್ಮಲ್ಲಿ ನೆಲೆಯಾಗಿ ನಿಂತಿವೆ. ಗುಣವಂತರ ಮಧ್ಯದಲ್ಲಿ ಇರಲು ಕೋರುವ ನಮಗೆ ವನವಾಸಾನುಜ್ಞೆಯನ್ನು ನೀಡು! ವೇತನಗಳನ್ನು ಬೇಡದೆ, ನಿಮ್ಮನ್ನು ಪೀಡಿಸದೆ ನಾವೂ ವನದಲ್ಲಿರುವೆವು" ಎಂದು ಬೇಡುವ ಪುರಜನರನ್ನು ನೋಡಿ, ಕೃತಜ್ಞನಾಗಿ ಧರ್ಮಜನು ಅವರನ್ನು ಕುರಿತು—

"ಬ್ರಾಹ್ಮಣಪ್ರಮುಖರಾದ ಪುರಜನರಿಗೆ ನಾವು ಋಣಿಗಳಾಗಿರುವೆವು. ಇತರರ ಗುಣಗಳನ್ನು ಮಾತ್ರ ಗ್ರಹಿಸುವ ಸುಜನರು ಗಂಧವನ್ನು ವಾಯುವಂತೆ ಗುಣಗಳನ್ನು ವಿಸ್ತರಿಸುವರು. ಇದು ಸುಜನರ ಲಕ್ಷಣವು. ಆದರೆ ನಮ್ಮ ಹಿತವನ್ನು ಬಯಸುವವರಾದರೆ ನೀವೆಲ್ಲರೂ ಹಸ್ತಿನಾವತಿಗೆ ಹಿಂದಿರುಗಿಹೋಗಿ ನಮ್ಮವರಾದ ಭೀಷ್ಮ,

ವಿದುರ, ಕುಂತಿದೇವಿಯರು ಹಸ್ತಿನಾವತಿಯಲ್ಲೇ ಇರುವರು; ಇಷ್ಟವಿಯೋಗದಿಂದ ನೊಂದಿರುವ ಅವರನ್ನು ಸಂತೈಸುತ್ತ, ಅಲ್ಲೇ ಇರುವುದು ನಿಮ್ಮ ಕರ್ತವ್ಯವೆಂದು ತಿಳಿಯಿರಿ! ಇದರಿಂದ ನಮ್ಮ ಸತ್ಕಾರಮಾಡಿದಂತಾಗುವುದು. ವನಕ್ಕೆ ಬರಬೇಡಿ, ಹಿಂದಿರುಗಿ" ಎಂದು ಹೇಳುತ್ತಾ ಪುರಜನರನ್ನು ಹಿಂದಿರುಗಿಸಿದನು. ಅವರು ಪಾಂಡವಗುಣಗಳನ್ನು ಪ್ರಶಂಸಿಸುತ್ತಾ, ಇಷ್ಟವಿಲ್ಲದೆ ತಂತಮ್ಮ ಮನೆಗಳಿಗೆ ತೆರಳಿದರು.

ಪಾಂಡವರು ವನವನ್ನು ಹೊಕ್ಕು, ಅಲ್ಲಿ ಪ್ರಮಾಣವೆಂಬ ವಟವೃಕ್ಷದ ನೆರಳಲ್ಲಿ ದಿನಶೇಷವನ್ನು ಕಳೆದರು. ಸಾಯಂಕಾಲವಾಗುತ್ತಿರಲು ಕೆಲವರು ಬ್ರಾಹ್ಮಣರು ಶಿಷ್ಯ ಕಳತ್ರಬಂಧು ಸಮೇತರಾಗಿ ಅಲ್ಲಿಗೆ ಬಂದರು. ಅವರಲ್ಲಿ ಅಗ್ನಿಹೋತ್ರಿಗಳು, ತಮ್ಮ ಅಗ್ನಿಕಾರ್ಯಗಳನ್ನು ಮಾಡಿ, ವೇದಘೋಷ, ಶಾಸ್ತ್ರ ವಿಚಾರ ಮಾಡುತ್ತಾ ಇತರ ದ್ವಿಜರಿಂದಲೂ ಪಾಂಡವರಿಂದಲೂ ಕೂಡಿ ರಾತ್ರಿಯನ್ನು ಕಳೆದರು. ಬೆಳಗಾಗುತ್ತಲೇ ಧರ್ಮರಾಜನು ಅವರನ್ನು ನೋಡಿ "ವಿಪ್ರವರರೇ! ನಾವು ವನಕ್ಕೆಂದು ಹೊರಟಿರುವೆವು. ಫಲಮೂಲಾಹಾರಿಗಳಾಗಿ ದುಃಖದಿಂದ ಈ ಘೋರಮೃಗವ್ಯಾಲಾಕುಲವಾದ ಅಟವಿಯಲ್ಲಿ ವಸಿಸುವ ನಮ್ಮಿಂದ ನಿಮಗೆ ಸುಖವಾಗದು; ಆದುದರಿಂದ ದಯಮಾಡಿ ಹಿಂದಿರುಗಿ!" ಎಂದು ಬೇಡಿದನು. ಬ್ರಾಹ್ಮಣರು—"ರಾಜನ್! ನಿಮಗಾಗುವ ಗತಿಯೇ ನಮಗೂ ಆಗಲಿ! ಧರ್ಮದರ್ಶಿಗಳಾಗಿ ನಿನ್ನನ್ನನುಸರಿಸುವ ನಮ್ಮನ್ನು ಕೈಬಿಡಬೇಡ!" ಎಂದು ಪ್ರಾರ್ಥಿಸಿದರು.

ಧರ್ಮರಾಜನೂ ವಿಪ್ರಸಂಗವನ್ನು ಬಿಡಲಾರದವನಾಗಿದ್ದನು. ಆದರೆ ರಾಜ್ಯಾಪಹರಣ, ದ್ಯೂತಾವಮಾನಗಳಿಂದ ಭೀಮ ಅರ್ಜುನ ಯಮಳರ ಮನಸ್ಸು ನೊಂದಿದೆ. ದ್ರೌಪದಿಯೂ ಪರಿಕ್ಲೇಶಖಿನ್ನಳಾಗಿರುವಳೆಂದು ಅವನು ಮನಗಂಡು ಹಿಂಜರಿದನು. ವಿಪ್ರರ ಸಂಗದಲ್ಲಿ ಸತ್ಕಥಾಶ್ರವಣವು ಜಪತಪಾದಿಗಳು ಜರುಗಿ, ಅವರ ಆಶೀರ್ವಾದದಿಂದ ಶ್ರೇಯಸ್ಸಾಗುವುದೆಂದೂ ತಿಳಿದು, ದೋಲಾಂದೋಲಿತಮನಸ್ಕನಾಗಿರುವ ಧರ್ಮಜನಿಗೆ ಅಧ್ಯಾತ್ಮವಿದನಾದ ಶೌನಕನೆಂಬ ದ್ವಿಜವರನು ಇಂತೆಂದನು—

"ರಾಜನ್! ಮನುಜರಿಗೆ ಶೋಕಸ್ಥಾನಗಳು ಸಾವಿರ, ಭಯಸ್ಥಾನಗಳು ನೂರು! ಮೂಢರದಕ್ಕಂಜುವರು. ಬುದ್ಧಿವಂತರು ಧನನಾಶ, ದುರ್ಗವಾಸ ಮುಂತಾದ ಕಾಯಕ್ಲೇಶಗಳನ್ನೂ ದುಷ್ಟಜನಕೃತ ಅವಮಾನಾದಿ ಮನಸ್ತಾಪಗಳನ್ನೂ ಲೆಕ್ಕಿಸದೆ, ಸಹಿಸಿ ತಿತಿಕ್ಷಾಬಲದಿಂದ ನಾಶಪಡಿಸುವರು. ಹಿಂದೆ ಜನಕರಾಜನು ಶಾರೀರದುಃಖಕ್ಕೆ ನಾಲ್ಕು ಕಾರಣಗಳೆಂದನು. ಅವುಗಳಾವುವೆಂದರೆ ವ್ಯಾಧಿ, ಕಂಟಕ, ಶ್ರಮ, ಅನ್ನ-ವರ್ಜನ; ಅವುಗಳ ಪ್ರತೀಕಾರವೆನಿಸುವ ಔಷಧ, ನಿರ್ಮೂಲನ, ವಿರಾಮ, ಆಹಾರಗಳಿಂದ ಬುದ್ಧಿವಂತರು ದುಃಖವನ್ನು ಕಳೆದುಕೊಂಡು ಸುಖಿಸುವರೇ ಆಗಲಿ, ಚಿಂತೆ ಮಾಡುತ್ತಾ ಕೂತಿರುವುದಿಲ್ಲ. ಅಯಃಪಿಂಡವು ಅಗ್ನಿತಪ್ತವಾಗಿ ಕೆಂಪಗಾದಂತೆ, ಶರೀರವು ಮಾನಸಿಕ ದುಃಖ ತಪ್ತವಾಗುವುದು ನಿಜ! ಅದನ್ನು ಜ್ಞಾನದಿಂದ, ಅಗ್ನಿಯನ್ನು ನೀರಿನಿಂದಂತೆ ಆರಿಸಿ ಶಾಂತನಾಗು! ಮಾನಸಿಕ ದುಃಖಕ್ಕೆ ಅಭಿಮಾನವೇ

ಕಾರಣವು. ರಾಗದ್ವೇಷಗಳೆಂಬ ಎರಡು ಬಗೆಯ ಅಭಿಮಾನವು ಧರ್ಮಾರ್ಥನಾಶಕ ವಾಗಿರುವುದು. ವಿಷಯ ದೋಷವನ್ನು ಪರೀಕ್ಷಿಸಿ ರಾಗವನ್ನು, ಗುಣವನ್ನು ಕಂಡು ದ್ವೇಷವನ್ನು, ತ್ಯಜಿಸಿ ವೈರಾಗ್ಯವನ್ನು ಭಜಿಸುವವನು ಮೋಕ್ಷವನ್ನು ಹೊಂದುವನು. ಅಂತಹ ಜ್ಞಾನಿಯು ನೀರಿನಲ್ಲಿರುವ ತಾವರೆಯ ಎಲೆಯಂತೆ ನಿರ್ಲಿಪ್ತನಾಗಿರುವನು. ಕಾಮದಿಂದ ತೃಷ್ಣೆ, ಅದರಿಂದ ಉದ್ವೇಗ, ಪಾಪಾಚರಣೆಗಳು ಸಂಭವಿಸುವುವು. ಕಾಮನಿಗೆ ಮೀರಿದ ಶತ್ರುವಿಲ್ಲ.

ವಿತ್ತವಂತನನ್ನು ರಾಜರು, ಬಂಧುಗಳು, ಚೋರರು ಕಸಿದು ಪೀಡಿಸುವರು; ಜಲಾಗ್ನಿಗಳು ಅವನ ವಿತ್ತವನ್ನು ನಾಶಮಾಡುವುವು. ಆಕಾಶದಲ್ಲಿ ಪಕ್ಷಿಗಳಿಂದಲು, ನೆಲ ದಲ್ಲಿ ಮೃಗಗಳಿಂದಲು, ನೀರಿನಲ್ಲಿ ಮೀನುಗಳಿಂದಲು ಭಕ್ಷಿಸಲ್ಪಡುವ ಮಾಂಸದಂತೆ ಧನಿಕನು ಸರ್ವತ ಪೀಡಿತನಾಗುವನು. ವಿತ್ತದಲ್ಲಿ ಲೋಭಿಯು ಕಣ್ಣು ಕಾಣದೆ ಪರರಿಗೆ ಕೊಡನು, ತಾನೂ ಉಣ್ಣನು! ಅರ್ಥವನ್ನು ಸಂಪಾದಿಸುವುದು ಕಷ್ಟ ; ವ್ಯಯವಾದರೆ ದುಃಖ ; ಅದನ್ನು ಬೆಳೆಸಬೇಕೆಂಬ ಲೋಭ ; ಹೆರರಿಗೆ ಕೊಡಲು ಕಾರ್ಪಣ್ಯ ; ನನಗೇ ಇದೆ ಎಂಬ ದರ್ಪ ; ಯಾರು ಕಸಿಯುವರೋ ಎಂಬ ಭಯ ; ಅರ್ಥ ಕಲಹದಲ್ಲಿ ಮರಣ ; ಇಷ್ಟು ಅನರ್ಥಗಳಿಗೆ ಕಾರಣವಾದ ಅರ್ಥವನ್ನು ವಿವೇಕಿಯು ಮಿತಿಮೀರದೆ ತಂದಿಟ್ಟು ತೃಪ್ತನಾಗಿ ಸಂತೋಷದಿಂದಿರುವನು. ಸಂಚಯವಂತನಿಗೆ ಸಂತೋಷವಿಲ್ಲ.

"ಧರ್ಮರಾಜ ! ಸಂತುಷ್ಟನಾಗಿರು. ಶ್ರೀಹರಿ ಸಂರಕ್ಷಕನಾಗಿರುವನು. ಕೆಸರು ತುಳಿಯಲೇಕೆ? ಕಾಲು ತೊಳೆಯಲೇಕೆ? ಅರ್ಥವನ್ನು ಧರ್ಮಕ್ಕೆಂದೂ ಬೇಡಬೇಡ!"

ಆ ಮಾತಿಗೆ ಧರ್ಮರಾಜನು "ಅಹುದು ! ಧನವನ್ನು ನನಗಾಗಿ ಅಭಿಲಷಿಸೆ. ಆದರೂ ಆಶ್ರಿತರಾದ ವಿಪ್ರರ ರಕ್ಷಣೆಗಾದರೂ ಧನವು ವಾಂಛಿತವೇ ಅಲ್ಲವೇ ? ಸಜ್ಜ ನರ ಮನೆಯಲ್ಲಿ ಕೂಡಲು ಚಾಪೆ, ಕುಡಿಯಲು ನೀರು, ಮಲಗಲು ಸ್ಥಳ, ಒಳ್ಳೆಯ ಮಾತು ಈ ನಾಲ್ಕು ಸಮೃದ್ಧವಾಗಿರಬೇಕು. ಆರ್ತನಿಗೆ ಶಯನ, ಶ್ರಾಂತನಿಗೆ ಆಸನ, ತೃಷಿತನಿಗೆ ಜಲ, ಹಸಿದವನಿಗೆ ಅನ್ನ ಇವನ್ನು ಕೂಡ ಕೊಡದವನ ಮನೆ ಪ್ರೇತಾ ವಾಸಸಮವೆನಿಸುವುದು. ಕಣ್ಣಿನಿಂದ ನೋಡಿ, ಮನಸ್ಸಿನಿಂದ ಅಭಿನಂದಿಸಿ, ಮಾತಿ ನಿಂದ ತಣಿಸಿ, ಅತಿಥಿಯನ್ನು ಪೂಜಿಸದಿರೆ, ಅವನು ಆ ಮನೆಯ ಸಿರಿ ಸಂಪತ್ತನ್ನು, ಪಶು ಪುತ್ರರನ್ನು; ಇಷ್ಟಾಪೂರ್ತಗಳನ್ನು ನಾಶಪಡಿಸಿಹೋಗುವನೆಂಬರು. ಆತ್ಮಾರ್ಥ ವಾಗಿ ಅನ್ನವನ್ನು ಮಾರಿಕೊಂಡವನು, ಯಜ್ಞ ಶ್ರಾದ್ಧಾದಿಗಳಿಲ್ಲದೆ ನಿಷ್ಕಾರಣ ವಾಗಿ ಪಶುಹಿಂಸೆ ಮಾಡಿದವನು ಮಹಾಪಾಪಿಗಳಾಗುವರು. ಚಂಡಾಲರಿಗೂ ಶ್ವಾನಾದಿಪಶುಗಳಿಗೂ ನೀಡಿ, ಉಂಡವನು ವಿಘಸಾಶಿ ಎನಿಸಿ ಅಮೃತಭೋಜನ ನಾಗುವನು. ಇಂತು ಧರ್ಮ ವಿಧಾನವಿರಲು, ವಿಪ್ರರಿಗೀಯಲಾರದ ನನ್ನ ಸ್ಥಿತಿಗಾಗಿ ಮರುಗುವೆನು" ಎಂದು ನುಡಿದನು.

ಶೌನಕನು "ಆಹಾ! ನಿರಪರಾಧಿ ಸುಜನರಿಗೆ ಕಷ್ಟ ಬಂದದ್ದನ್ನು ನೋಡಿ, ದುರ್ಜನನು ಸಂತಸಿಸುವಂತಾಯಿತಲ್ಲ ! ವಿಧಿಗೇನೆಂಬೆನು ? ಮಾನವನು ಷಡಿಂದ್ರಿಯ

ವಶನಾಗುವನು. ಮನಸ್ಸು ಸಂಕಲ್ಪವನ್ನು ಮಾಡುವುದು. ಸಂಕಲ್ಪದಿಂದ ಕಾಮ ; ಕಾಮದಿಂದ ಪ್ರವೃತ್ತಿ ; ಇಂತು ವಿಷಯಲಾಲಸನಾಗಿ ನರನು ಲೋಭಾಗ್ನಿಯಲ್ಲಿ ಪತಂಗದಂತೆ ಬಿದ್ದು ಹಾಳಾಗುವನು. ಅವಿದ್ಯಾಕಾಮ್ಯಕರ್ಮಗಳೇ ಸಂಸಾರಮೂಲ ವಾಗಿವೆ. ಜೀವನದರಿಂದ ಅನೇಕ ಯೋನಿಗಳಲ್ಲಿ ಹುಟ್ಟಿ, ಸತ್ತು, ನರಳುತ್ತಿರುವನು. ಅಭಿಮಾನತ್ಯಾಗವೇ ಸಂಸಾರ ರೋಗ ನಿವಾರಣೌಷಧವು ; ಆ ಔಷಧದಲ್ಲಿ ಯಜ್ಞ, ಅಧ್ಯಯನ, ದಾನ, ತಪಸ್ಸು, ಸತ್ಯ, ಕ್ಷಮಾ, ದಮ, ಅಲೋಭ ಎಂಬ ಎಂಟು ಅಂಗಗಳಿದ್ದೊಡೆ, ಅದು ವೀರ್ಯವಂತವಾಗಿ ಮನಶ್ಶುದ್ಧಿಯನ್ನು ಹುಟ್ಟಿಸಿ, ಸಂಸಾರ ರೋಗವನ್ನು ನಿರ್ಮೂಲಿಸಲು ಶಕ್ತವಾಗುವುದು. ಗುರು ಸೇವೆ ಮಾಡಿ, ವೇದಗಳನ್ನು ಓದಿ ಅರ್ಥವನ್ನರಿತು, ಹರಿಯ ಭಜಿಸಿ, ಕರ್ಮಫಲವನ್ನವನಿಗರ್ಪಿಸಿದವನು ಮನೋ ಜಯವನ್ನು ಪಡೆದು ಸುಖಿಸುವನು. ಧರ್ಮರಾಜ ! ತಪವನ್ನು ಮಾಡು ! ಸಿದ್ಧಿಯನ್ನು ಪಡೆದು ನಿನ್ನ ನಂಬಿ ಬಂದ ಬ್ರಾಹ್ಮಣಾದಿ ಪ್ರಜರನ್ನು ಭರಿಸು !" ಎಂದು ನುಡಿದನು.

ಧರ್ಮರಾಜನು ತನ್ನ ಪುರೋಹಿತನಾದ ಧೌಮ್ಯನಿಗೆಲ್ಲವನ್ನೂ ಹೇಳಿ, ತಪಸ್ಸಿ ಗಾಗಿ ಹೊರಡುವೆನೆಂದನು. ಆಗ ಧೌಮ್ಯನು "ಧರ್ಮರಾಜ ! ನಿನಗೆ ಶುಭವಾಗಲಿ ! ಉತ್ತರಾಯಣದಲ್ಲಿ ನೀರನ್ನು ಹೀರಿದ ರವಿಯು ದಕ್ಷಿಣಾಯಣದಲ್ಲಿ ಹಿಂದಿರುಗಿಸುವನು. ಮಳೆಯಿಂದ ಬೆಳೆಯು ಬರುವುದು. ಸರ್ವಜೀವರಿಗೆ ಷಡ್ರಸೋಪೇತವಾಗುವಂತೆ ಓಷಧಿಗಳನ್ನು ಕಲೆಗಳಿಂದ ಪೋಷಿಸುವನು ಚಂದ್ರ. ಇಂತು ಚಂದ್ರಸೂರ್ಯರಲ್ಲಿ ರುವ ಭಾರತಿ ಪ್ರಾಣರೇ ಸರ್ವಪೋಷಕರು. ಸೂರ್ಯನನ್ನಾರಾಧಿಸು. ನಿನ್ನ ಇಷ್ಟವು ನೆರವೇರುವುದು" ಎಂದು ಆಶೀರ್ವದಿಸಿ ಕಳಿಸಿದನು.

ಧರ್ಮರಾಜನು ಧೌಮ್ಯನಿಂದ ಸೂರ್ಯಾಷ್ಟೋತ್ತರಶತನಾಮ ಸ್ತುತಿಯನ್ನು ಕಲಿತನು. ಸೂರ್ಯ, ಅರ್ಯಮಾ, ಭಗ, ತ್ವಷ್ಟಾ, ಪೂಷಾ, ಅರ್ಕ, ಸವಿತಾ, ರವಿ, ಗಭಸ್ತಿಮಾನ್, ಅಜ, ಕಾಲ, ಮೃತ್ಯು, ಧಾತಾ, ಪ್ರಭಾಕರ, ಪೃಥಿವೀಜಲತೇಜೋ ವಾಯುಗಗನಪರಾಯಣ, ಸೋಮ, ಬೃಹಸ್ಪತಿ, ಶುಕ್ರ, ಬುಧ, ಅಂಗಾರಕ, ಇಂದ್ರ, ವಿವಸ್ವಾನ್, ದೀಪ್ತಾಂಶು, ಶುಚಿ, ಶೌರಿ, ಶನೈಶ್ಚರ, ಬ್ರಹ್ಮಾ, ವಿಷ್ಣು, ರುದ್ರ, ಸ್ಕಂದ, ವೈವಸ್ವತ, ವರುಣ, ಯಮ, ವೈದ್ಯುತ, ಜಾಠರ, ಅಗ್ನಿ, ಐಂಧನ, ತೇಜಸಾಂಪತಿ, ಧರ್ಮಧ್ವಜ, ವೇದಕರ್ತಾ, ವೇದಾಂಗ, ವೇದವಾಹನ, ಕೃತ, ತ್ರೇತಾ, ದ್ವಾಪರ, ಕಲಿ ಸರ್ವಾಮಲಾಶ್ರಯ, ಕಲಾ ಕಾಷ್ಠ ಮುಹೂರ್ತ ರಾತ್ರಿ ದಿನ ಪಕ್ಷ ಮಾಸ ಸಂವತ್ಸರ ಕಾರಣ, ಅಶ್ವತ್ಥ, ಕಪಿಲ, ಭಾನು, ಕಾಮದ, ಸರ್ವತೋಮುಖ, ಜಯ, ವಿಶಾಲ, ವರದ, ಸರ್ವಧಾತುನಿಷೇಚಿತಾ, ಮನಃ, ಸುಪರ್ಣ ಭೂತಾದಿ, ಶೀಘ್ರಗ, ಪ್ರಾಣ-ಧಾರಣ, ಧನ್ವಂತರಿ, ಧೂಮಕೇತು, ಆದಿದೇವ, ಅದಿತಿಸುತ, ದ್ವಾದಶಾತ್ಮಾ, ಅರವಿಂದಾಕ್ಷ, ಪಿತಾ, ಮಾತಾ, ಪಿತಾಮಹ, ಸ್ವರ್ಗದ್ವಾರ, ಪ್ರಜಾದ್ವಾರ, ಮೋಕ್ಷ ದ್ವಾರ, ತ್ರಿವಿಷ್ಟಪದೇಹಕರ್ತಾ, ಪ್ರಶಾಂತಾತ್ಮಾ, ವಿಶ್ವಾತ್ಮಾ, ವಿಶ್ವತೋಮುಖ,

ಚರಾಚರಾತ್ಮಾ, ಸೂಕ್ಷ್ಮಾತ್ಮಾ, ಮೈತ್ರೇಯ, ಕರುಣಾನ್ವಿತ—ಎಂಬೀ ಸೂರ್ಯ ನಾಮಗಳನ್ನು ವಿಧಾತನಿಂದ ಪರಂಪರವಾಗಿ ಧೌಮ್ಯನು ಸ್ವೀಕರಿಸಿದ್ದನು. ಸುರಗಣ ಪಿತೃ ಯಕ್ಷ ಸೇವಿತನು, ಅಸುರ ನಿಶಾಚರ ಸಿದ್ಧ ವಂದಿತನು, ವರಕನಕ ಹುತಾಶನ ಪ್ರಭನು, ಜಗದ್ಧಿತನು ಆದ ಭಾಸ್ಕರನಿಗೆ ಶತ ನಮಸ್ಕಾರವು. ಇಂತಹ ಸರ್ವ ಸಂಪತ್ ಪ್ರದಾಯಕವಾದ ಮಂತ್ರವನ್ನು ಕಲಿತು, ಧರ್ಮರಾಜನು ತಪವನ್ನು ಮಾಡಿದನು. ವಿಶುದ್ಧಾತ್ಮನು, ಜಿತೇಂದ್ರಿಯನು ಆಗಿ ಧರ್ಮರಾಜನು ದಿವಾಕರ ನನ್ನು ಪುಷ್ಪ, ಅರ್ಘ್ಯ, ಫಲ, ಬಲಿಗಳಿಂದ ಪೂಜಿಸಿದನು. ದೇವನಿಗಭಿಮುಖವಾಗಿ ಕೈಜೋಡಿಸಿ ಇಂತು ಸ್ತುತಿಸಿದನು—

ಪ್ರಕಾಶಮಯನಾದ ದೇವ! ಜಗತ್ತಿಗೆ ಕಣ್ಣಾಗಿರುವೆ. ಎಲ್ಲ ದೇಹಧಾರಿ ಗಳಿಗೂ ಅನ್ನಾದಿಗಳನ್ನಿತ್ತು ಪೋಷಿಸುವ ಪ್ರಭುವಾಗಿರುವೆ. ಕ್ರಿಯಾಶೀಲರು ನಿನ್ನನ್ನು ಅರ್ಘ್ಯವಿತ್ತು ಪೂಜಿಸಿ ಕೃತಾರ್ಥರಾಗುವರು. ಮುಮುಕ್ಷುಗಳಿಗೆ ಮೋಕ್ಷ ದ್ವಾರವಾಗಿ, ಪವಿತ್ರತಮನು, ಲೋಕಧಾರಕನು ಆದ ನಿನಗೆ ನಮಸ್ಕಾರವು. ವೇದ ಪಾರಂಗತರಾದ ವಿಪ್ರರು ಮಂತ್ರಗಳಿಂದ ಸ್ತುತಿಸಿ, ನಿನ್ನ ದಿವ್ಯರಥವನ್ನು ನಿರಾಘಾಟ ವಾಗಿ ಹೋಗುವಂತೆ ಮಂದೇಹಾದಿ ದುಷ್ಟಪೀಡೆಯನ್ನು ದೂರೀಕರಿಸುತ್ತಿರುವರು. ನಿನ್ನನ್ನು ಪೂಜಿಸಿ ಸಕಲದೇವತೆಗಳು ಸ್ವಾಭೀಷ್ಟಸಿದ್ಧಿಯನ್ನು ಹೊಂದಿರುವರು. ವಸುರುದ್ರಾದಿತ್ಯರು ಸಿದ್ಧಸಾಧ್ಯಮರೀಚಪರು, ವಾಲಖಿಲ್ಯರು, ನಿನ್ನ ಅನುಗ್ರಹ ದಿಂದ ಶ್ರೇಷ್ಠರೆನಿಸಿರುವರು. ನಿನ್ನಂತೆ ಪ್ರಕಾಶಕನಾದ ದೇವ ಮತ್ತೊಬ್ಬನಿಲ್ಲ. ನಿನ್ನ ತೇಜವೇ ಚಕ್ರರೂಪವಾಗಿ, ದೈತ್ಯದಾನವಧ್ವಂಸಕವಾಗಿದೆ. ನಿನ್ನಿಂದ ಬಿಸಿಲು, ನಿನ್ನಿಂದ ಮಳೆ. ಶೀತವಾತಾದಿ ಬಾಧೆಯನ್ನು ನಿವಾರಿಸಲು ನಿನ್ನಂತೆ ಸಮರ್ಥರು ಬೇರಿಲ್ಲ. ಲೋಕಬಂಧೋ! ಕರ್ಮಸಾಕ್ಷಿಯಾಗಿ, ಸಾಕ್ಷಾತ್ತಾಗಿ ಜಗವನ್ನೀಕ್ಷಿಸುವ ನಿನಗೆ ಮರೆ ಇಲ್ಲ. ಪ್ರಳಯಕಾಲದಲ್ಲಿ ನೀನು ಪ್ರಚಂಡಭಾನುವಾಗಿ ಜಗವನ್ನು ನಾಶಮಾಡುವೆ. ಇಂದ್ರ, ರುದ್ರ, ಚಂದ್ರ, ಪ್ರಜಾಪತ್ಯಾದಿಗಳು ನಿನ್ನ ಅಂತರ್ಯಾಮಿ ಯಾದ ಶ್ರೀನಾರಾಯಣನಿಂದ ಪ್ರವರ್ತಿಸುತ್ತಿರುವರು. ಹಿತದಿಂದ ಮಿತ್ರನೆನಿಸಿ, ವೇದನಿಧಿಯಾಗಿ, ತಮಸ್ಸನ್ನು ಹರಿಸಿ, ಕಾಲಚಕ್ರವನ್ನು ಪ್ರವರ್ತಿಸುವ ಲೋಕನಾಥ! ನಿನಗೆ ನಮಃ.

ನಿನ್ನ ಅನುಚರರಾದ ಮಾಠರ ದಂಡಾರುಣರಿಗೂ ವಂದಿಸುವೆನು. ಮೈತ್ರಿ ಯಾದ ಸಂಜ್ಞಾದೇವಿಗೆ ನಮಃ ; ಶರಣಾಗತನಾಗಿರುವೆನು. ತಂದೆ! ವಿಪ್ರಪ್ರಮುಖ ಸರ್ವ ಪರಿವಾರದವರಿಗೆ ಆತಿಥ್ಯವನ್ನು ಪೂರೈಸಲು ಬೇಕಾಗುವ ಅನ್ನಸಂಪತ್ತನ್ನು ದಯಮಾಡಿ ಕೊಡು!

ಇಂತು ಸ್ತುತನಾದ ದಿವಾಕರನು ಪ್ರೀತನಾಗಿ ದಿವ್ಯಪ್ರಕಾಶಶರೀರನಾಗಿ ಧರ್ಮ ರಾಜನಿಗೆ ಪ್ರತ್ಯಕ್ಷನಾದನು. "ಧರ್ಮರಾಜ! ಪ್ರೀತನಾಗಿರುವೆನು. ಹನ್ನೆರಡು ವರ್ಷಗಳ ಕಾಲವೂ ನಿನಗೆ ಬೇಕಾದಷ್ಟು ಅನ್ನಸಂಪತ್ತನ್ನು ಕೊಟ್ಟಿರುವೆನು. ಈ

ಅಕ್ಷಯ ಪಾತ್ರೆಯನ್ನು ಸ್ವೀಕರಿಸು! ಇದನ್ನು ನಿನ್ನ ಮಹಾನಸದಲ್ಲಿಟ್ಟು ಪಾಂಚಾಲಿಯು ಪೂಜಿಸಲಿ! ಆಕೆ ತಾನುಣ್ಣುವವರೆಗೂ ಇದರಿಂದ ಬೇಕಾದ ಅನ್ನ, ಭಕ್ಷ್ಯ, ಪೇಯ, ಚೋಷ್ಯ, ಫಲ, ಮೂಲ, ಶಾಕಗಳನ್ನು ಅಕ್ಷಯವಾಗಿ ಪಡೆಯು ವಳು! ನೀನೂ ಇಂದಿನಿಂದ ಹದಿಮೂರು ವರ್ಷಗಳಾದ ಮೇಲೆ ರಾಜ್ಯವನ್ನು ಹೊಂದುವೆ!' ಎಂದು ನುಡಿದು, ತಾಮ್ರಮಯ ಪಾತ್ರೆಯನ್ನಿತ್ತು, ಸೂರ್ಯನು ಅಂತರ್ಹಿತನಾದನು.

ಬ್ರಹ್ಮ ಇಂದ್ರ ನಾರದ ಧೌಮ್ಯರಿಂದ ಕ್ರಮವಾಗಿ ಪ್ರಾಪ್ತವಾದ ಈ ದಿವ್ಯ ಮಂತ್ರವನ್ನು ನಿತ್ಯವೂ ಪಠಿಸುವವರಿಗೆ, ಅನ್ನಾದಿ ಸಂಪತ್ತು, ಆರೋಗ್ಯ, ಆಯು ರ್ವಿಪುಲತೆ ಪ್ರಾಪ್ತವಾಗುವುವು.

ಕೌಂತೇಯನು ಧೌಮ್ಯರಿಗೆ ವಂದಿಸಿ, ಭಾನು ತಂದ ಅಕ್ಷಯಪಾತ್ರೆಯನ್ನು ತೋರಿ ಅದನ್ನು ದ್ರೌಪದಿಗಿತ್ತನು. ಮಹಾನಸದಲ್ಲಿ ಅದನ್ನು ಸ್ಥಾಪಿಸಿ, ಆ ಸಾಧ್ವಿ ಅದರಿಂದ ಸರ್ವವಿಧಾನ್ನವನ್ನು ಪಡೆದು, ನಿತ್ಯವೂ ವಿಪ್ರಾದಿ ಸರ್ವ ಪ್ರಜರನ್ನು ಸಂತೋಷಪಡಿಸುತ್ತಿದ್ದಳು. ಎಲ್ಲರೂ ಉಂಡನಂತರ ವಿಘಸಪವಿತ್ರಾನ್ನವನ್ನು ಧರ್ಮ ಜಾದಿಗಳಿಗಿತ್ತು, ಕೊನೆಗೆ ತಾನು ಭುಜಿಸುತ್ತಿದ್ದಳು. ಆಕೆ ಉಂಡನಂತರ ಅಂದಿಗೆ ಅಕ್ಷಯಪಾತ್ರೆಯಿಂದ ಅನ್ನವು ಲಭಿಸುತ್ತಿದ್ದಿಲ್ಲ. ಧರ್ಮರಾಜನಿಂತು ತನ್ನ ಆಶ್ರಿತ ರನ್ನು ಪೋಷಿಸುತ್ತಾ, ಕೆಲಕಾಲದ ಮೇಲೆ, ಸಕಲ ಪರಿವಾರ ವಿಪ್ರಾನುಜಭಾರ್ಯಾ ಸಮೇತನಾಗಿ ಕಾಮ್ಯಕವನವನ್ನು ಸೇರಿದನು.

ಹಸ್ತಿನಾವತಿಯಲ್ಲಿ ಧೃತರಾಷ್ಟ್ರನು ಪಾಂಡವದುಃಖದಿಂದ ದುಃಖಿತನಾಗಿ, ವಿದುರನನ್ನು ಕಂಡು, ಇಂತು ಪ್ರಶ್ನಿಸಿದನು—"ವಿದುರ! ನೀನು ಶುಕ್ರನಂತೆ ಸಕಲ ಧರ್ಮವನ್ನೂ ಚನ್ನಾಗಿ ತಿಳಿದಿರುವೆ. ಪಥ್ಯವಾಗಿ, ಹಿತವಾಗಿ ಮಾತಾಡುವ ನೀನಲ್ಲದೆ ನನಗಾರು ಆಪ್ತರು? ಪಾಂಡವರು ವನಕ್ಕೆ ತೆರಳಿದರು. ಪೌರರು ಕುಪಿತ ರಾಗಿ ನಮ್ಮನ್ನು ನಾಶಮಾಡದಂತೆ ನಾವೇನು ಮಾಡಲಾದೀತು? ಹೇಳು! ಎಂತು ಜನರು ನಮ್ಮನ್ನು ಪ್ರೀತಿಸುವರು?" ಆ ಮಾತಿಗೆ ವಿದುರನಿಂತೆಂದನು—"ರಾಜನ್! ಧರ್ಮದಿಂದ ಅರ್ಥಕಾಮಗಳು, ಧರ್ಮದಿಂದ ರಾಜ್ಯ, ಧರ್ಮವೇ ಸರ್ವಾಪತ್ತಾರಕವು. ಅಂತಹ ಧರ್ಮವನ್ನು ವಂಚಿಸಿ, ಶಕುನಿಯ ದುರ್ಬುದ್ಧಿಯಂತೆ ವರ್ತಿಸಿ, ಅನ್ಯಾಯ ಮಾಡಿರುವೆ. ನಿನ್ನ ಮಗನು ಪಾಪಮುಕ್ತನಾಗಿ, ಪ್ರಜಾಪ್ರಿಯನಾಗುವಂತೆ ಪಾಂಡವರನ್ನು ಕರೆಯಿಸಿ ಅವರ ರಾಜ್ಯವನ್ನು ಅವರಿಗೆ ಕೊಡು. ಪರರ ದ್ರವ್ಯವನ್ನು ಆಶಿಸಿ, ದುಷ್ಕಾರ್ಯರತನಾದವನಿಗೆ ಮನಸ್ತುಷ್ಟಿ ದೊರೆಯಲಾರದು. ಧರ್ಮವನ್ನು ಮನ್ನಿಸದಿದ್ದರೆ ಆ ಧರ್ಮವೇ ಕುಪಿತವಾಗಿ, ಸರ್ವನಾಶವನ್ನು ಮಾಡದೇಬಿಡದು. ಭೀಮಾರ್ಜುನರನ್ನು ಜಯಿಸುವ ವೀರರು ಈ ಲೋಕದಲ್ಲಿಯೇ ಏಕೆ? ಚತುರ್ದಶ ಭುವನಗಳಲ್ಲಿಯೂ ಇಲ್ಲ. ಬಲಶಾಲಿ ಭೀಮನಿಗೆ ದುಷ್ಪ್ರಾಪ್ಯವಿಲ್ಲ. ಗಾಂಡೀವ ಪಾಣಿ ಧನಂಜಯನಿಗೆ ದುರ್ಜೇಯವಿಲ್ಲ. ಇಂತಹ ಪ್ರಬಲಶತ್ರುಗಳನ್ನೆದುರಿಸಿ,

ನಿನ್ನ ಮಕ್ಕಳು ಉಳಿಯಲಾರರು. ದುರ್ಯೋಧನನೊಬ್ಬನನ್ನು ತ್ಯಜಿಸು. ಮಿಕ್ಕ ಸರ್ವರನ್ನು ಉಳಿಸು. ಕರೆಸು ಪಾಂಡವರನ್ನು! ದುಶ್ಶಾಸನನು ಸಭಾಮಧ್ಯದಲ್ಲಿ ಭೀಮದ್ರೌಪದಿಯರನ್ನು ಕ್ಷಮಿಸೆಂದು ಬೇಡಲಿ! ಧರ್ಮರಾಜನು ರಾಜ್ಯಾಧಿಪತಿಯಾಗಲಿ! ನೀನು ಧರ್ಮಾದಿಸುತ ಸೇವಿತನಾಗಿ, ಇಂದ್ರನಂತೆ ಸುಖವಾಗಿರು."

ವಿದುರನ ಮಾತು ಹಿತವೆನಿಸದೆ ಕುಪಿತನಾಗಿ, ಧೃತರಾಷ್ಟ್ರನು "ವಿದುರ! ನನ್ನವರಿಗೆ ಅಹಿತವನ್ನು ಬಗೆದ ನೀನು ಹಿತಶತ್ರುವೆನಿಸಿರುವೆ. ಪಾಂಡವರೂ ನನ್ನ ಮಕ್ಕಳೇ; ಆದರೂ ದುರ್ಯೋಧನನು ನನ್ನ ಶರೀರದಿಂದ ಹುಟ್ಟಿಬಂದವನು. ಅವನನ್ನು ಇನ್ನೊಬ್ಬರಿಗಾಗಿ ಬಿಡುವುದೆಂದರೆ, ನನ್ನ ದೇಹವನ್ನೇ ಬಿಟ್ಟಂತಾಗುವುದು. ಇಂತಹ ಮಾತನ್ನು ನೀನು ನಿಷ್ಪಕ್ಷಪಾತಿಯಾಗಿದ್ದಿದ್ದರೆ ಹೇಳುತ್ತಿದ್ದಿಲ್ಲ. ನೀನು ಕಪಟಿಯೂ ಅಹುದು. ನಮ್ಮಲ್ಲಿದ್ದು ಪರರ ಹಿತವನ್ನು ಬಯಸುವ ನೀನು ಪರರಲ್ಲಿರುವುದೇ ಲೇಸು!" ಎಂದು ನಿಂದಿಸಿದನು.

ಅಲ್ಲಿ ಪಾಂಡವರು ಕುರುಕ್ಷೇತ್ರವನ್ನು ನೋಡಿ, ಸರಸ್ವತೀ ದೃಷದ್ವತಿಗಳನ್ನು ಸೇವಿಸಿ, ಪಶ್ಚಿಮದಿಶೆಗೆ ತೆರಳಿ ಕಾಮ್ಯಕವನವನ್ನು ಮುಟ್ಟಿದರು. ಅಲ್ಲಿ ನೆಲಸಿರುವ ಪಾಂಡವರನ್ನು ಸೇರಲು, ಧೃತರಾಷ್ಟ್ರನ ದುರ್ವಚನಗಳಿಂದ ನೊಂದ ವಿದುರನು ರಥಾರೂಢನಾಗಿ ಬಂದನು. ಅವನನ್ನು ನೋಡಿ, ಧರ್ಮರಾಜನು 'ಮತ್ತೆ ಜೂಜಾಡಲು ಕರೆಯಬಂದಿರುವನೋ ಅಥವಾ ದುಷ್ಟನ ಸಹವಾಸದಿಂದ ಬೇಸತ್ತು ಬಂದಿರುವನೋ' ಎಂದು ಭೀಮನೊಡನೆ ಆಲೋಚಿಸಿದನು. ಎದ್ದುಬಂದು ವಿದುರನನ್ನು ಕರೆದುಕೊಂಡು ಹೋಗಿ ಕೂಡಿಸಿ, ಪೂಜಿಸಿದನು. ಸತ್ಕರಿಸಿ, ಬಂದ ಕಾರಣವೇನೆಂದ ಧರ್ಮರಾಜನಿಗೆ, ವಿದುರನು ಸರ್ವಸ್ವವನ್ನೂ ನಿವೇದಿಸಿ ರೋಗಾರ್ತನಿಗೆ ಪಥ್ಯವು ಒಗ್ಗದಿರುವಂತೆ ತನ್ನ ಹಿತನುಡಿಯು ಅಂಧರಾಜನಿಗೆ ರುಚಿಸಲಿಲ್ಲವೆಂದು ತಿಳಿಸಿದನು. ಧರ್ಮರಾಜನನ್ನು ಸೇವಿಸಿ, ವನದಲ್ಲೇ ಇರುವೆನೆಂದನು. ಶತ್ರುತಾಪವನ್ನು ಶಾಂತರಾಗಿ ಸಹಿಸಿ, ಕಾಲವನ್ನು ಕಳೆಯುತ್ತಾ, ತಪೋಬಲದಿಂದ ಅಭಿವೃದ್ಧರಾಗಿ ಪಾಂಡವರು ಶತ್ರುನಾಶವನ್ನು ಸಂಪಾದಿಸಿ, ರಾಜ್ಯವನ್ನು ಹೊಂದುವುದು ತಥ್ಯವೆಂದು ಬಿನ್ನವಿಸಿದನು. ಧರ್ಮರಾಜನು ವಿದುರನನ್ನು ಸರ್ವವಿಧದಿಂದಲೂ ಸತ್ಕರಿಸಿ, ಅವನನ್ನು ತನ್ನಲ್ಲೇ ಇರಿಸಿಕೊಂಡನು.

ವಿದುರನು ಪಾಂಡವರಲ್ಲಿಗೆ ತೆರಳಿದುದನ್ನು ತಿಳಿದು, ಧೃತರಾಷ್ಟ್ರನು ಸಂತಾಪವಿಹ್ವಲನಾದನು. ಇದರಿಂದ ಪಾಂಡವರು ವಿದುರನೀತಿ ಲಾಭದಿಂದ ಬಲವತ್ತರರಾಗುವರೆಂದು ಹೆದರಿದನು. ತಮ್ಮನನ್ನು ಬಿಟ್ಟಿರಲಾರದೆ ಚಿಂತಿಸಿ, ಸಂಜಯನನ್ನು ಕರೆದು "ಸಂಜಯ! ನನ್ನ ತಮ್ಮನನ್ನು ಬಿಟ್ಟಿರಲಾರೆನು. ಅವನು ಪಂಡಿತನು. ಅಣ್ಣನೆಂಬ ಅಭಿಮಾನದಿಂದ ಅವನು ಹಿತವಚನಗಳನ್ನು ಬಚ್ಚಿಡದೆ ಆಡಿದನು. ಅದನ್ನು ತಿಳಿಯದೆ, ಮೂಢನಾಗಿ ನಾನು ಅವನನ್ನು ನೋಯಿಸಿದೆನು, ಅವನನ್ನು ಕರೆದು ತಾ!" ಎಂದು ಕಳಿಸಿದನು. ಸಂಜಯನು ರಥಾರೂಢನಾಗಿ ಪಯಣಿಸಿ,

ಕಾಮ್ಯಕವನದಲ್ಲಿ ಚರ್ಮವಲ್ಕಲಧಾರಿಯಾಗಿ, ಪಾಂಡವರೊಡನಿದ್ದ ವಿದುರನಿಗೆ ರಾಜ ಸಂದೇಶವನ್ನು ತಿಳಿಸಿದನು. ವಿದುರನು ಸೌಭ್ರಾತೃಪರವಶನಾಗಿ, ಧರ್ಮರಾಜನ ಅನುಮತಿಯನ್ನು ಪಡೆದು, ಹಸ್ತಿನಾವತಿಗೆ ಹಿಂದಿರುಗಿ ಬಂದನು. ಬಂದ ವಿದುರ ನನ್ನಪ್ಪಿ, ಕಣ್ಣೀರಿನಿಂದ ತಲೆತೊಯಿಸಿ, ಧೃತರಾಷ್ಟ್ರನು 'ಕ್ಷಮಿಸೆಂದು' ಬೇಡಿದನು. ಪರಸ್ಪರ ಸಮಾಗಮದಿಂದ ಸೋದರರು ಆನಂದಿತರಾದರು.

## ವ್ಯಾಸ-ಮೈತ್ರೇಯ ಹಿತವಚನ, ಕಿರ್ಮೀರ ವಧೆ

ವಿದುರನ ಪುನರಾಗಮನವನ್ನರಿತು, ದುರ್ಯೋಧನನು ಪರಿತಪಿಸಿದನು. ದುಶ್ಶಾಸನ ಶಕುನಿ ಕರ್ಣರೊಡನೆ ಅವನು ಮಂತ್ರಾಲೋಚನೆ ಮಾಡಿದನು— 'ಪಾಂಡುಪುತ್ರರಿಗೆ ಹಿತನು, ನಮಗೆ ಅಹಿತನು ಆದ ಈ ವಿದುರನು ಮತ್ತೆ ವಕ್ರಿಸಿದ ನಲ್ಲ! ವಂಚಕನಾದ ಇವನ ಧರ್ಮ ಪ್ರಲಾಪಗಳಿಂದ ರಾಜನು ತಿಳಿಗೇಡಿಯಾಗಿ, ಹೋದ ಮಾರಿಯನ್ನು ಮತ್ತೆ ಕರೆಯಿಸುವನು. ಆ ಪಾಂಡವರು ಬಂದರೆಂದರೆ, ನಾವು ಉಳಿಯಲಾರೆವು. ಇನ್ನು ನನಗೆ ವಿಷಪಾನವೋ, ಪಾಶವೋ ಅಥವಾ ಅಗ್ನಿ ಪ್ರವೇಶವೋ ಗತಿ! ಅವರ ವೃದ್ಧಿಯನ್ನು ನಾನೀ ಕಣ್ಣಿನಿಂದ ನೋಡುತ್ತಾ ಜೀವಿಸುತ್ತಿರುವುದಕ್ಕಿಂತ, ಮರಣವೇ ಲೇಸು!' ಎಂದಾಡಿದ ರಾಜರಾಜನಿಗೆ ಶಕುನಿಯು, 'ಪಾಂಡವರು ಎಂದಿಗೂ ಸಮಯಬಂಧವನ್ನು ಮುರಿಯುವುದಿಲ್ಲ; ಅವರು ಹಿಂದಿರುಗಿ ಬರರು. ಸತ್ಯಸಂಧರಾದುದರಿಂದ ಧೃತರಾಷ್ಟ್ರನ ಮಾತಿಗೆ ಮರುಳಾಗಿ ಬರುವುದಿಲ್ಲ. ಒಂದುವೇಳೆ ಬಂದರೆ ನನ್ನ ಪಗಡೆಕಾಯಿಯ ಸವಿಯನ್ನಿನ್ನೊಮ್ಮೆ ನೋಡುವರು' ಎಂದು ಭರವಸೆ ಇತ್ತನು. ಕರ್ಣದುಶ್ಶಾಸನರೂ ಅದು ನಿಜವೆಂದರು.

ದುರ್ಯೋಧನನು ಸಂತುಷ್ಟನಾಗದಿರಲು ನೋಡಿ, ಕರ್ಣನು 'ನಮ್ಮ ಮಹಾರಾಜನಿಗೆ ಪ್ರಿಯವನ್ನು ಮಾಡದ ನಮ್ಮ ಜೀವನವೇಕೆ? ಈ ಕ್ಷಣವೇ ಸರ್ವಸೈನ್ಯ ಸಮೇತರಾಗಿ, ಕಾಮ್ಯಕವನ್ನು ಮುಟ್ಟಿ, ಪಾಂಡವಹತಕರನ್ನು ಸಂಹರಿಸೋಣ! ಅವರೀಗ ದೀನದರಿದ್ರರಾಗಿರುವರು. ಅವರಿಗೆ ಮಿತ್ರರಾರೂ ಸಮೀಪದಲ್ಲಿಲ್ಲ. ಅವರ ಸಂಹಾರದಿಂದ ರಾಜ್ಯವು ನಿಷ್ಕಂಟಕವಾಗುವದು' ಎಂದು, ಎದ್ದು ಯುದ್ಧಸನ್ನದ್ಧ ನಾದನು. ಅವನ ಮಾತಿನಂತೆ ಕೌರವರೆಲ್ಲರೂ ರಥಾರೂಢರಾಗಿ, ಪಾಂಡವಹಿಂಸಾ ಮನಸ್ಕರಾಗಿ ತೆರಳಿದರು.

ಶ್ರೀವೇದವ್ಯಾಸರು ದುಷ್ಟಚತುಷ್ಟಯದ ಕುಚೇಷ್ಟೆಯನ್ನು ದಿವ್ಯದೃಷ್ಟಿಯಿಂದ ತಿಳಿದು ಹಸ್ತಿನಾವತಿಗೆ ಬಂದರು. ಅವರನ್ನು ತಡೆದು, ಧೃತರಾಷ್ಟ್ರನಿಗೆ ಇಂತು ಬೋಧಿಸಿದರು—"ರಾಜನ್! ಸರ್ವಕೌರವರ ಹಿತವಾಗಲೆಂದು ಹೇಳುತ್ತಿರುವೆನು. ಪಾಂಡವರನ್ನು ವನವಾಸಕ್ಕೆ ಅಟ್ಟಿದುದು ನನಗೆ ಸಮ್ಮತವಲ್ಲ. ಮೋಸದಿಂದ ಗೆದ್ದು ವನಕ್ಕೆ ಕಳಿಸಿದುದಲ್ಲದೆ, ಅವರನ್ನು ಪೀಡಿಸಲು ಹೊರಟಿರುವ ನಿನ್ನ ಸುತರನ್ನು ತಡೆ! ಹದಿಮೂರು ವರ್ಷಗಳಾದಮೇಲೆ, ಪಾಂಡವರು ಮಹಾನಾಗರಂತೆ ವಿಷವನ್ನು

*

ಕಾರುತ್ತಾ ಬರುವರು. ಅವರನ್ನು ಇಂದೇ ಸಂಹರಿಸಲು ಹೊರಟಿರುವ ನಿನ್ನ ದುಷ್ಟ ಸುತನನ್ನು ವಾರಿಸು! ಇಲ್ಲದಿದ್ದರೆ ನೀನಿಂದೇ ಪುತ್ರಶೋಕದಿಂದ ನರಳಬೇಕಾಗುವುದು! ಸ್ವಜನಕಲಹವು ಗರ್ಹಿತವಲ್ಲವೇ? ಸ್ವಭಾವದುಷ್ಟರಾದ ನಿನ್ನ ಸುತರು ಸಾಯುವ ವರೆಗೂ ದುಷ್ಟಗುಣವನ್ನು ಬಿಡರು. ಅವರನ್ನು ವಹಿಸಿ ಕೆಡಬೇಡ!"

ಧೃತರಾಷ್ಟ್ರನು ಆ ಮಾತಿಗೆ ತಲೆ ಬಾಗಿದನು. ಆದರೆ "ಸ್ವಾಮಿನ್! ಪುತ್ರರು ದುರ್ಮಾರ್ಗರು ನಿಜ! ಜೂಜಾಡಿ ಧರ್ಮಿಷ್ಠರಾದ ಪಾಂಡವರನ್ನು ವನವಾಸಕ್ಕೆ ಕಳಿಸಿದುದು ಅನ್ಯಾಯವೆಂದು ಭೀಷ್ಮ, ದ್ರೋಣ, ಕೃಪ, ವಿದುರರೂ, ಗಾಂಧಾರಿಯೂ ಹೇಳಿರುವರು. ಪುತ್ರಸ್ನೇಹದಿಂದ ದುರ್ಯೋಧನನನ್ನು ಪರಿತ್ಯಾಗ ಮಾಡಲಾರ ದಿರುವೆನು" ಎಂದು ನಿವೇದಿಸಿದನು.

ವ್ಯಾಸನು "ಅಹುದು! ಪುತ್ರಸ್ನೇಹವು ದುರ್ನಿವಾರವಾಗಿದೆ ನಿಜ! ಕಾಮ ಧೇನುವು ತನ್ನ ಪುತ್ರನ ಕಷ್ಟವನ್ನು ಕಂಡು, ಇಂದ್ರನಿಗೆ ತನ್ನ ರೋದನಕಾರಣವನ್ನು ಇಂತು ಹೇಳಿತು—'ಇಂದ್ರ! ನೋಡು ಆ ಕರ್ಷಕನನ್ನು! ಅವನು ಕಟ್ಟಿದ ಎರಡೆತ್ತುಗಳಲ್ಲಿ ಒಂದು ಬಲವಾಗಿದೆ, ಪ್ರಾಯದಲ್ಲಿದೆ; ಆದುದರಿಂದ ಭಾರವನ್ನು ಚೆನ್ನಾಗಿ ಎಳೆಯುತ್ತಿದೆ. ಇನ್ನೊಂದು ಮುದಿಯೆತ್ತು, ಅದು ನಿಧಾನವಾಗಿ ಕಷ್ಟ ದಿಂದ ಎಳೆಯುವುದನ್ನು ಸಹಿಸದೆ, ಕರ್ಷಕನು ಅದನ್ನು ಛಡಿಯಿಂದ ಹೊಡೆದು, ಬಾಲಮುರಿದು ಪೀಡಿಸುತ್ತಿರುವನು. ಆ ಎತ್ತಿನ ಕಷ್ಟವನ್ನು ಕಣ್ಣಿಂದ ನೋಡ ಲಾರದೆ ಅಳುತ್ತಿರುವೆನು. ಸಾವಿರ ಪುತ್ರರಲ್ಲಿಯು ಸಮವಾದ ಪ್ರೀತಿಯು ಇದ್ದರೂ, ದೀನನಾಗಿ ದುಃಖಪಡುವ ಮಗನನ್ನು ತಂದೆತಾಯಂದಿರು ಹೆಚ್ಚಾಗಿ ಪ್ರೀತಿಸುವುದು ಸಹಜವಲ್ಲವೆ?' ಎಂದು ನುಡಿದ ಸುರಭಿಯ ಮಾತಿಗೆ ಮರುಗಿ, ಇಂದ್ರನು ವರ್ಷ ವನ್ನು ಸುರಿದು, ಕರ್ಷಕನಿಗೆ ವಿಘ್ನವನ್ನೊಡ್ಡಿದನು. ಅದರಿಂದ ಮುದಿ ಎತ್ತಿಗೆ ವಿಶ್ರಾಂತಿ ದೊರೆಯಿತು.

"ಧೃತರಾಷ್ಟ್ರ! ನೀನು ನನ್ನ ವರಪುತ್ರನಹುದು, ಅಂತೆಯೇ ಪಾಂಡುರಾಜನೂ ನನ್ನ ಮಗನಲ್ಲವೆ? ಅವನ ಸುತರು ಕಾಡಿನಲ್ಲಿ ನಾನಾ ಕಷ್ಟಭಾಗಿಗಳಾಗಿರಲು, ಅವರನ್ನು ನೋಡಿ ಕನಿಕರಿಸುವುದು ತಪ್ಪೇ? ಅವರಿಂದ ಕೂಡಿ ನೀವೆಲ್ಲರೂ ಸುಖ ವಾಗಿದ್ದರಲ್ಲವೆ ಹಿರಿಯರಾದ ನಮಗೆ ಸಮಾಧಾನ?" ಎಂದನು. ದುರ್ಯೋಧನನಿಗೆ ಉಪದೇಶಿಸಿ, ಅವನ ದುಷ್ಟಬುದ್ಧಿಯನ್ನು ಕಳೆಯಲು ಪ್ರಾರ್ಥಿಸಿದ ಧೃತರಾಷ್ಟ್ರ ನನ್ನು ನೋಡಿ, ವ್ಯಾಸರು "ರಾಜನ್! ಆ ಕಾರ್ಯವನ್ನು ಮೈತ್ರೇಯನು ಮಾಡು ವನು. ಅವನು ನನ್ನ ಮಿತ್ರನು. ಅವನು ಹೇಳಿದಂತೆ ಮಾಡಿದರೆ ನಿನಗೂ, ನಿನ್ನ ಸುತರಿಗೂ ಶ್ರೇಯಸ್ಸಾಗುವುದು" ಎಂದು ನುಡಿದು ವ್ಯಾಸದೇವನು ಹೊರಟು ಹೋದನು.

ವ್ಯಾಸವಚನದಂತೆ ಬಂದ ಮೈತ್ರೇಯನನ್ನು ಪೂಜಿಸಿ, "ಮಹರ್ಷೇ! ಕುಶಲವೆ? ಕುರುಜಾಂಗಲದಿಂದ ಬಂದಿರುವಿರೇ? ನಮ್ಮ ಪಾಂಡವರು ಸುಖಿಗಳೇ? ಅವರು

ಕಷ್ಟಕ್ಕಂಜಿ ಸಮಯಭಂಗ ಮಾಡುವುದಿಲ್ಲವಲ್ಲ?" ಎಂದು ಕೇಳಿದನು. ಅವನ ಕುಟಿಲಮತಿಯನ್ನು ಕಂಡು ನಕ್ಕು ಮೈತ್ರೇಯನಿಂತೆಂದನು—"ರಾಜನ್! ತೀರ್ಥ ಯಾತ್ರೆ ಮಾಡುತ್ತಾ, ಕಾಮ್ಯಕವನದಲ್ಲಿ ಧರ್ಮರಾಜಾದಿಗಳನ್ನು ಕಂಡೆನು. ಜಟೆಗಳನ್ನು ಧರಿಸಿ ಅಜಿನಸಂವೀತರಾದ ಆ ಮಹಾತ್ಮರು ಮುನಿಗಳಿಂದ ಕೂಡಿ, ಭಗವತ್ಕಥಾಶ್ರವಣರತರಾಗಿದ್ದರು. ಅಲ್ಲಿ ನಿನ್ನ ಸುತರ ಮಾಯಾದ್ಯೂತವನ್ನು ಅದರಿಂದ ನಡೆದ ಅನರ್ಥವನ್ನು ಕೇಳಿ ತಿಳಿದೆನು. ನೀನೂ, ಭೀಷ್ಮ ದ್ರೋಣರೂ ಇದ್ದೂ, ಇಂತಹ ಅಕಾರ್ಯವಾದುದು ತರವಲ್ಲ. ಉಭಯರಿಗೆ ಮಧ್ಯವರ್ತಿಯಾಗಿ, ಉಭಯ ಹಿತಕಾರಿಯಾಗಿರಬೇಕಾದ ನಿನಗೆ, ಕಳ್ಳರಂತೆ ಪಾಂಡವೈಶ್ವರ್ಯವನ್ನು ಕೊಳ್ಳೆ ಹೊಡೆದ ಕ್ಷುಲ್ಲಕ ಸುತರಲ್ಲಿ ಪಕ್ಷಪಾತವು ಒಳಿತಲ್ಲ" ಎಂದು ದುರ್ಯೋಧನನನ್ನು ಪಲಕ್ಷಿಸಿ ಮೈತ್ರೇಯನು ನಿರ್ಭಯನಾಗಿ ಇಂತು ನುಡಿದನು—

"ದುರ್ಯೋಧನ! ನಿನ್ನ ಹಿತಕ್ಕಾಗಿ ಹೇಳುವೆನು, ಪಾಂಡವರಿಗೆ ದ್ರೋಹ ಬಗೆಯಬೇಡ! ಅದರಿಂದ ನೀನೇ ಕೆಡುವೆ. ಸತ್ಯವ್ರತರೂ, ಬಲವಂತರೂ, ದೇವ ಸದೃಶರೂ ಆದ ಪಾಂಡವರನ್ನು ನೀನು ಗೆಲ್ಲಲಾರೆ! ಹಿಡಿಂಬ, ಬಕರನ್ನು ಕೊಂದ ಭೀಮನು ನಾಗಾಯುತಬಲನು. ಇಲ್ಲಿಂದ ತೆರಳಿದರಾತ್ರಿಯೇ ಅವನು ದುಷ್ಟನಾದ ಕಿರ್ಮೀರರನ್ನು ಪಶುವಿನಂತೆ ಸಂಹರಿಸಿದನು. ಜರಾಸಂಧನನ್ನು ಸೀಳಿದ ಬಲವಂತನಿಗೆ ನೀನು ಸಾಟಿ ಅಲ್ಲ. ಅರ್ಜುನನಂತಹ ಧನುರ್ವೀರನೆಲ್ಲಿಯೂ ಇಲ್ಲ. ಪಾಂಡವರ ರಕ್ಷಕನಾಗಿ ಕೃಷ್ಣನಿರುವನು, ಅವರ ವಿರೋಧವನ್ನು ಬಿಡು! ಈರ್ಷೆಗೆ ವಶನಾಗಬೇಡ." ಈ ಉಪದೇಶವನ್ನಾಲಿಸಿ ದುರ್ಯೋಧನನು ನಕ್ಕುಬಿಟ್ಟನು. ಕೈಯಿಂದ ತೊಡೆಯನ್ನು ತಟ್ಟಿ, ನೆಲದಮೇಲೆ ಕಾಲನ್ನು ತಿಕ್ಕುವ ದುರ್ಬುದ್ಧಿಯನ್ನು ನೋಡಿ, ಮೈತ್ರೇಯನು ವಿಧಿಪ್ರೇರಿತನಾಗಿ 'ದುರಭಿಮಾನದಿಂದ ಮತ್ತನಾಗಿ, ನಿನಗೆ ಹಿತವನ್ನು ನುಡಿದ ನನ್ನ ಮಾತನ್ನು ಕೇಳದೆ, ವಿಕಾರವರ್ತನನಾದೆ. ಆದಕಾರಣ ರಣರಂಗದಲ್ಲಿ ನಿನ್ನ ತೊಡೆಗಳನ್ನು ಭೀಮನು ಗದೆಯಿಂದ ಮುರಿದು ಕೆಡಹಲಿ!' ಎಂದು ಶಾಪವಿತ್ತನು. ಕೋಪಪರೀತನಾದ ಮಹರ್ಷಿಯನ್ನು ಧೃತರಾಷ್ಟ್ರನು ಕಾಲುಹಿಡಿದು, 'ಹಾಗಾಗದಿರಲಿ' ಎಂದು ಪ್ರಾರ್ಥಿಸಿದನು. 'ಆಗಲಿ! ನಿನ್ನ ಮಗನು ಪಾಂಡವರಿಂದ ಸಂಧಿಮಾಡಿಕೊಂಡರೆ ಮಾತ್ರ, ನನ್ನ ಶಾಪವು ಫಲಿಸದಿರಲಿ. ಭೀಮಪರಾಕ್ರಮವನ್ನು ಪಾಂಡವರಲ್ಲಿದ್ದುಬಂದ ವಿದುರನನ್ನು ಕೇಳಿ ತಿಳಿ! ಕಿರ್ಮೀರಮಿತ್ರನಾದ ದುರ್ಯೋಧನನೂ ತಿಳಿಯಲಿ!' ಎಂದು ನುಡಿದು, ಮೈತ್ರೇಯನು ಹೊರಟು ಹೋದನು.

ಕಿರ್ಮೀರ ವಧೆಯನ್ನು ಕೇಳಬಯಸಿದ ಧೃತರಾಷ್ಟ್ರನಿಗೆ ವಿದುರನು, ಅದನ್ನು ಮುನಿಜನರು ಪೇಳಲು ತಿಳಿದಿದ್ದು, ವರ್ಣಿಸಿದನು. "ರಾಜನ್! ದ್ಯೂತನಿರ್ಜಿತರಾಗಿ ಪಾಂಡವರು ಇಲ್ಲಿಂದ ತೆರಳಿ ಮೂರನೆಯ ರಾತ್ರಿ, ಒಂದು ನಿರ್ಜನವನದಲ್ಲಿ ತಂಗಿದರು. ಅದು ಕಾಮ್ಯಕವನದ ರಾಕ್ಷಸಪ್ರದೇಶವಾಗಿತ್ತು. ಅಲ್ಲಿ ಕಿರ್ಮೀರನೆಂಬ ದುಷ್ಟ

ರಾಕ್ಷಸನು ಅವರನ್ನು ಕಂಡು, ಕೈಗಳನ್ನೆತ್ತಿ, 'ಹೋ!' ಎಂದು ಗರ್ಜಿಸುತ್ತಾ ಅವರ ಮೇಲೇರಿಬಂದನು. ಎಂಟು ಕೋರೆಗಳಿಂದಲೂ, ಕಿಡಿಕಾರುವ ಕಣ್ಣುಗಳಿಂದಲೂ, ಕೆಂಪಾದ ಜಟೆಯಿಂದಲೂ ಭಯಂಕರನಾದ ರಾಕ್ಷಸನು ಬಿರುಗಾಳಿಯಂತೆ ವೇಗದಿಂದ ಬರುವಾಗ ಲತೆಗಳು ಕಂಪಿಸಿದವು. ಪಕ್ಷಿಗಳು ಭಯದಿಂದ ಕೂಗುತ್ತಾ ಹಾರಿ ಹೋದವು. ಅವನನ್ನು ನೋಡಿ ದ್ರೌಪದಿಯು ಭಯಭ್ರಾಂತಳಾದಳು. ಅವನ ರಾಕ್ಷಸೀಮಾಯೆಯನ್ನು ಧೌಮ್ಯನು ರಕ್ಷೋಘ್ನಮಂತ್ರಗಳನ್ನುಚ್ಚರಿಸಿ ನಾಶಮಾಡಿದನು. ಧರ್ಮರಾಜನವನನ್ನು ನೀನಾರೆಂದು ಕೇಳಿದನು. 'ನಾನು ಬಕನ ತಮ್ಮನಾದ ಕಿರ್ಮೀರನು. ಇಲ್ಲಿಗೆ ಬಂದವರು ಹುಲಿಗುಹೆಯನ್ನು ಹೊಕ್ಕ ಮೇಕೆಗಳಂತೆ ನನಗೆ ಆಹಾರವಾಗುವರು. ನೀವಾರು? ನಿರ್ಭಯರಾಗಿ ಇಲ್ಲಿ ತಂಗಿದರೇಕೆ?' ಎಂದು ರಾಕ್ಷಸನು ನುಡಿದನು. ಧರ್ಮರಾಜನು 'ನಾವು ಪಾಂಡವರು, ರಾಜ್ಯವನ್ನು ಶತ್ರುಗಳು ಕಸಿದರು, ವನವಾಸಕ್ಕೆಂದು ಬಂದಿರುವೆವು' ಎಂದನು. ಆ ಮಾತಿನಿಂದ ಕಿರ್ಮೀರನ ಕೋಪಾಗ್ನಿಯು ಆಜ್ಯಾಹುತಿಯಿಂದಂತೆ ವಿಜೃಂಭಿಸಿತು. ಬಕವೈರಿಯಾದ ಭೀಮನಲ್ಲಿ ಸೇಡನ್ನು ತೀರಿಸಲು ಹವಣಿಸುತ್ತಿದ್ದನು. 'ಹಿಡಿಂಬನೆಂಬ ನನ್ನ ಮಿತ್ರನನ್ನು ಕೊಂದು, ಅವನ ತಂಗಿಯನ್ನು ಕದ್ದ ಕಳ್ಳನು, ಅಣ್ಣನಾದ ಬಕನನ್ನು ವಿಪ್ರರೂಪನಾಗಿ ಮೋಸದಿಂದ ಕೊಂದ ದುಷ್ಟನು ಆದ ಭೀಮನನ್ನು ಇಂದು ಸಂಹರಿಸಿ, ಅನೃಣಿಯಾಗುವೆ'ನೆಂದು ಆ ಪಾಪಾತ್ಮನು ಗಿಡವನ್ನು ಕಿತ್ತಿ ಹಿಡಿದು, ಭೀಮನನ್ನೆದುರಿಸಿದನು. ಭೀಮಸೇನನು ವೃಕ್ಷಾಯುಧನಾಗಿ ಬಂದನು. ಅರ್ಜುನನೂ ಗಾಂಡೀವವನ್ನು ಸಜ್ಜನ್ನಾಗಿಸಿ ನಿಂತನು.

"ಭೀಮನು ವೃಕ್ಷದಿಂದ ತಲೆಯಮೇಲೆ ಹೊಡೆದರೂ ಲೆಕ್ಕಿಸದೆ ಕಿರ್ಮೀರನು ಅವನನ್ನು ಗಿಡದಿಂದ ಹೊಡೆದನು. ವನದ ಗಿಡಗಳು ಮುರಿದುಬಿದ್ದಮೇಲೆ ಅವರೀರ್ವರು ವಾಲಿ-ಸುಗ್ರೀವರಂತೆ ಮುಷ್ಟಿಯುದ್ಧಕ್ಕಿಳಿದರು. ಹುಲಿಗಳಂತೆ ಗರ್ಜಿಸುವ ಭೀಮಕಿರ್ಮೀರಸಂಗ್ರಾಮವು ದಾರುಣವಾಯಿತು. ಕೊನೆಗೆ ಭೀಮನು ರಾಕ್ಷಸನನ್ನು ಹಿಡಿದೆತ್ತಿ, ಗಿರಗಿರತಿರುಗಿಸಿ, ನೆಲಕ್ಕೆ ಅಪ್ಪಳಿಸಿದನು. ಬೆನ್ನಲ್ಲಿ ತುಳಿದು ಕುತ್ತಿಗೆಯನ್ನು ಮುರಿದನು. ಆಗ ಕಿರ್ಮೀರನು ರಕ್ತವನ್ನು ಕಾರಿ, ಘೋರಶಬ್ದವನ್ನುಮಾಡಿ ಮೃತನಾದನು. ಅವನನ್ನು ಹಿಡಿಂಬಕರು ಹೋದ ಅಂಧಂತಮಸ್ಸಿಗೆ ಕಳಿಸಿ, ಭೀಮಸೇನನು ತನ್ನವರನ್ನು ಕಾಪಾಡಿದನು. ಧರ್ಮರಾಜನೂ ದ್ರೌಪದಿಯೂ ಭೀಮನನ್ನು ಪ್ರಶಂಸಿಸಿ, 'ಭೀಮಸೇನ! ನಿನ್ನಿಂದ ಉಳಿದೆವು. ರಾಕ್ಷಸಶ್ರೇಷ್ಠರಾದ ಬಕಹಿಡಿಂಬಕಿರ್ಮೀರರ ವಧೆಯಿಂದ ಶ್ರೀಕೃಷ್ಣನು ಪ್ರೀತನಾದನು. ಈ ವನವೂ ನಿರುಪದ್ರವವಾಯಿತು. ಸರ್ವಭೂತಗಳಿಗೂ ಸುಖವಾಯಿತು' ಎಂದು ಅಭಿನಂದಿಸಿದರು. ಅಂದಿನಿಂದ ಪಾಂಡವರು ನಿರ್ಭಯರಾಗಿ, ಕಾಮ್ಯಕವನದಲ್ಲಿ ಆನಂದದಿಂದ ವಾಸಿಸುತ್ತಿದ್ದರು. ಇಂತು ನಾನು ಮುನಿವರ್ಣಿತವಾದ ಭೀಮಪರಾಕ್ರಮವನ್ನು ಕೇಳಿದೆನು. ಅಕ್ಷಯಪಾತ್ರದ ಪ್ರಭಾವದಿಂದ ವಿಪ್ರಾದಿಗಳನ್ನು ಚೆನ್ನಾಗಿ

ಪೋಷಿಸುತ್ತಾ, ಪಾಂಡವರು ಅತ್ಯಂತ ಭಕ್ತಿಭರಿತರಾಗಿ, ಶ್ರೀಹರಿಯ ಮಂಗಳಕಥಾ ಶ್ರವಣಾಸಕ್ತರಾಗಿ ಸುಖದಿಂದಿರುವರು" ಎಂದು ವಿದುರನು ನುಡಿದನು.

## ಶ್ರೀಕೃಷ್ಣ ಸಮಾಗಮ

ವೈಶಂಪಾಯನನು ಜನಮೇಜಯನಿಗೆ ಹೇಳಿದನು—

ಪಾಂಡವರು ರಾಜ್ಯದೂರರಾಗಿ, ವನದಲ್ಲಿರುವರೆಂದು ಕೇಳಿ, ಭೋಜ ವೃಷ್ಣ್ಯಂಧಕರು, ಚೇದಿರಾಜ ಧೃಷ್ಟಕೇತು, ಕೈಕಯರಾಜರು, ಕಾಶಿರಾಜ ಮುಂತಾದ ಬಂಧುಗಳು ಬಲು ದುಃಖಿತರಾಗಿ, ಅವನನ್ನು ನೋಡಲು ಬಂದರು. ಶ್ರೀಕೃಷ್ಣನು ಸತ್ಯಾದೇವಿಯಿಂದ ಕೂಡಿ ಬಂದನು. ಎಲ್ಲರೂ ಧರ್ಮರಾಜನನ್ನು ಸುತ್ತುವರಿಸಿ ಕೂತರು. ಆಗ ಶ್ರೀಕೃಷ್ಣನು ವಿಷಾದರೋಷಪರೀತನಾಗಿ, ಪಾಂಡವರಿಗಿಂತೆಂದನು— "ದುರ್ಯೋಧನ ದುಶ್ಶಾಸನ ಶಕುನಿ ಕರ್ಣರ ರಕ್ತವನ್ನು ಭೂದೇವಿಗೆ ಕುಡಿಸದೆ ಬಿಡುವುದಿಲ್ಲ. ಪಾಪಿ ಮೋಸಗಾರನು ಆದ ದುರ್ಯೋಧನನು ವಧ್ಯನೇ ಸರಿ! ಅವನನ್ನೂ ಅವನ ಅನುಚರರನ್ನೂ ವಧಿಸಿ, ಧರ್ಮನಿಗೆ ಪಟ್ಟಗಟ್ಟುವುದೇ ಈಗ ನಮ್ಮ ಕರ್ತವ್ಯವು" ಎಂದು ಪಾಂಡವರ ಕಷ್ಟದಿಂದ ನೊಂದು ನುಡಿದ ಮುಕುಂದ ನನ್ನು ಅರ್ಜುನನು ಸಮಾಧಾನಪಡಿಸಿದನು. ಹಿಂದಿನ ಅವತಾರಗಳಲ್ಲಿ ಶ್ರೀಶನು ಮಾಡಿದ ದುಶ್ಚರ ತಪೋಮಹಿಮೆಯನ್ನು ವರ್ಣಿಸುತ್ತಿಂತೆಂದನು—

"ಶ್ರೀಶ! ನಾರಾಯಣಮುನಿಯಾಗಿ ಗಂಧಮಾದನದಲ್ಲಿ ತಪಸ್ಸನ್ನು ಲೋಕ ಕ್ಷೇಮಾರ್ಥವಾಗಿ ಮಾಡಿದೆ. ಅಬ್ಭಕ್ಷನಾಗಿ ಪುಷ್ಕರದಲ್ಲಿ ಹತ್ತುಸಾವಿರ ವರ್ಷ ತಪಸ್ಸನ್ನು ಮಾಡಿದೆ. ಬದರಿಕಾಶ್ರಮ, ಸರಸ್ವತೀತೀರ, ಪ್ರಭಾಸ, ಮುಂತಾದ ಕ್ಷೇತ್ರಗಳಲ್ಲಿ ತಪಸ್ಸನ್ನು ಮಾಡಿ, ಅಲ್ಲಿಯ ಋಷಿಗಳಿಗೆ ಕಲಿಸಿದೆ ಎಂದು ಶ್ರೀವ್ಯಾಸನು ನಿನ್ನ ಮಹಿಮೆಯನ್ನು ವರ್ಣಿಸಿದುದನ್ನು ಕೇಳಿರುವೆನು. ಬ್ರಹ್ಮ, ರುದ್ರಾದಿ ದೇವವಲ್ಲಭನು ನೀನು. ಕ್ಷೇತ್ರಜ್ಞನಾಗಿ ಕ್ಷೇತ್ರವೆನಿಸುವ ಇಪ್ಪತ್ತೈದು ತತ್ವ ಗಳನ್ನು, ಏಳು ವಿಕಾರಗಳನ್ನು, ಜೀವರನ್ನು ನಡೆಸುವೆ. ನರಕಾದಿ ದುಷ್ಟದಾನವ ರನ್ನು ನಾಶಪಡಿಸಿ, ಲೋಕಕ್ಷೇಮವನ್ನು ಸಾಧಿಸುವೆ. ಬ್ರಹ್ಮೇಂದ್ರಾದಿ ದೇವತೆ ಗಳಿಂದ ಪ್ರಾರ್ಥಿತನಾಗಿ, ಭೂಲೋಕದಲ್ಲಿ ವಸುದೇವನ ಸುತನಾದೆ. ಮನುಜರ ಮಧ್ಯದಲ್ಲಿ ಮನುಜನಂತೆ ನಟಿಸುವ ನಿನ್ನ ಮಹಾ ಮಹಿಮೆಗೆ ನಮೋ ನಮಃ. ವಾಯು, ರುದ್ರ, ಚಂದ್ರ, ಪೃಥಿವಿ, ಸೂರ್ಯ, ಅಗ್ನಿ ಮೊದಲಾದ ಸರ್ವ ಶಬ್ದಗಳು ಪರಮ ಮುಖ್ಯ ವೃತ್ತಿಯಿಂದ ನಿನ್ನ ಹೆಸರುಗಳಾಗಿವೆ. ನಿನ್ನ ಹೆಸರನ್ನು ಹೇಳಿ, ನೀನಿತ್ತ ಪದವಿಯಲ್ಲಿ ನಿಂದು ಸರ್ವದೇವತೆಗಳು ಲೋಕಹಿತಸಾಧಕರಾಗಿರುವರು. ನಿನಗೆ ಕ್ರೋಧವಿಲ್ಲ; ಮಾತ್ಸರ್ಯವಿಲ್ಲ; ವೈಷಮ್ಯವಿಲ್ಲ; ಕರುಣಾಮಯನಾದ ನೀನು ವಿವಿಧ ಜೀವರ ಯೋಗ್ಯತೆಗೆ ಮೀರಿದ ಫಲವನ್ನು ಕೊಡುವುದಿಲ್ಲ. ದುಷ್ಟ ಶಿಕ್ಷಣದಿಂದ ಶಿಷ್ಟರಕ್ಷಣೆಗೈದು ಸಮನೆಂದು ಖ್ಯಾತನಾಗಿರುವೆ. ಚತುರ್ಮುಖನು

ನಿನ್ನ ವಿಜ್ಞಾನ ಶಕ್ತಿಯು ಭಿನ್ನಾಂಶನು. ರುದ್ರನು ಕ್ರೋಧಸಮುದ್ಭವನು. ನಿನ್ನ ಕ್ರೋಧವು ನಮ್ಮ ಕ್ರೋಧದಂತೆ ಜ್ವಲನಾತ್ಮಕವಲ್ಲ; ಅದು ಜ್ಞಾನಾತ್ಮಕವು. ನಿನ್ನ ಸಿಟ್ಟಿಗೆ ಕೌರವರೇಕೆ, ಸಕಲಭುವನವೂ ಭಸ್ಮೀಭೂತವಾಗುವುದು! ನಿನ್ನ ದುಷ್ಟ ಸಂಹರಣ ಕಾರ್ಯದಲ್ಲಿ ನಮಗೂ ಪಾಲಿತ್ತು, ನಮ್ಮ ಸೇವೆಯನ್ನು ಸ್ವೀಕರಿಸು"

ಆ ಮಾತಿಗೆ ನಸುನಕ್ಕು, ಶಾಂತನಾದ ಕೃಷ್ಣನಿಂತೆಂದನು—"ನನ್ನ ಭಕ್ತನು ನೀನು! ನಿನ್ನ ಸ್ವಾಮಿಯು ನಾನು! ನಿನ್ನ ದ್ವೇಷಿಗಳೆನ್ನ ಶತ್ರುಗಳು. ನಿನ್ನ ಹಿತರು ನನ್ನ ಸ್ನೇಹಿತರು. ನರ ನೀನಾಗಿರುವೆ! ನಾರಾಯಣನು ನಾನು! ಈ ಸತ್ಯವನ್ನರಿತವರು ನಮ್ಮಿಬ್ಬರಿಗೂ ಪ್ರಿಯರೆನಿಸುವರು." ಆಗ ದ್ರೌಪದಿಯು ತನ್ನ ಪಾಡನ್ನು ನೆನೆದು ದುಃಖಿತಳಾಗಿ ಕೃಷ್ಣನಿಗೆ ಶರಣಾಗತಳಾಗಿ ನಮಿಸಿದಳು.

"ಶ್ರೀಕೃಷ್ಣ! ಪ್ರಜಾಪತಿಗಳಿಗೂ ಸೃಷ್ಟಿಕರ್ತನು, ಮಧುದೈತ್ಯಹರ್ತನು, ಲೋಕ ಭರ್ತನು ಆದ ನಿನ್ನನ್ನು ಕಶ್ಯಪ ನಾರದ ದೇವಲರು ತಿಳಿದು ವರ್ಣಿಸುತ್ತಿರುವರು. ಬ್ರಹ್ಮ ಶಂಕರ ಶಕ್ರಾದಿ ದೇವವೃಂದದಿಂದ ಕೂಡಿ ಲೋಕದಂತೆ ಆಡುವ ನಿನ್ನ ಅಚಿಂತ್ಯ ಮಹಿಮೆಯನ್ನು ಯಾರೂ ಸಾಕಲ್ಯೇನ ತಿಳಿಯಲಾರರು. ವಿದ್ಯಾ ತಪೋ ವೈರಾಗ್ಯ ಭೂಷಿತರಾದ ಋಷಿಗಳು, ಧರ್ಮಯುದ್ಧ ವಿಮುಖರಲ್ಲದ ರಾಜರ್ಷಿಗಳು, ಸ್ವವಿಹಿತ ಕರ್ಮದಕ್ಷರಾದ ವೈಶ್ಯರು, ನಿನ್ನ ಸೇವಾ ನಿಪುಣರಾದ ಶೂದ್ರರು, ಎಲ್ಲ ಸಜ್ಜನರೂ 'ನೀನೇ ಗತಿ' ಎಂದು ನಂಬಿ ಉದ್ಧೃತರಾಗಿರುವರು. ಚರಾಚರ ಜಗವೆಲ್ಲವೂ ನಿನ್ನಲ್ಲಿ ಪ್ರತಿಷ್ಠಿತವಾಗಿದೆ.

"ಶ್ರೀರಮೆಯು ನಿನ್ನ ಅನಂತ ಕಲ್ಯಾಣ ಗುಣಗಳನ್ನು ಗಣಿಸಿ ಮುಗಿಸಲಾರಳು. ಪರಿಪೂರ್ಣ ನಿರ್ದುಷ್ಟ ಕಲ್ಯಾಣ ಗುಣದೇಹನಾದ ನೀನು ಸ್ವತಂತ್ರನು. ಮುಕ್ತ ಬ್ರಹ್ಮಾದಿ ಸರ್ವ ಜೀವರು ನಿನ್ನ ಭಕ್ತರು. ಜೀವರ ಶರೀರ ವ್ಯಾಪಾರವು ನಿನ್ನಿಂದ. ಪ್ರಾಣನಿಗೂ ಚೇಷ್ಟಾಪ್ರದನಾದ ನಿನಗೆ ಮತ್ತೊಬ್ಬ ಸ್ವಾಮಿಯಿಲ್ಲ. ಸರ್ವಜ್ಞನಾದ ನಿನಗೆ ತಿಳಿಯದುದಿಲ್ಲ. ಸರ್ವಶಕ್ತನಿಗೆ ನಿವಾರಿಸಲಾಗದ ವಿಪತ್ತಿಲ್ಲ. ಭಕ್ತಳಾದ ನನ್ನ ಪ್ರಾರ್ಥನೆಯನ್ನು ಲಾಲಿಸಿ ಕೇಳು!

"ಯಜ್ಞಕುಂಡದಿಂದ ಬಂದೆ; ಯಜ್ಞಸೇನನ ಮನೆಯಲ್ಲಿ ಬೆಳೆದೆ; ಪಾಂಡುರಾಜನ ಸೊಸೆಯಾದೆ; ನಿನಗೆ ತಂಗಿ ಎನಿಸಿದೆ. ನನಗೆ ಬಂದ ವಿಪತ್ತು ಲೋಕದ ಯಾವ ನಾರಿಯರಿಗೂ ದುಸ್ಸಹವು. ಏಕವಸನಳು, ರಜಸ್ವಲೆಯಾದ ನನ್ನನ್ನು, ಕೃಷ್ಣ! ರಾಜಸೂಯಾವಭೃಥದಿಂದ ಪವಿತ್ರವಾದ ಕೇಶಗಳಿಂದ ಸೆಳೆದು, ಒಬ್ಬ ದುರ್ಮಾರ್ಗನು ಸಭೆಯಲ್ಲಿ ಅವಮಾನಿಸಿದನೆಂದರೆ, ಇದಕ್ಕಿಂತ ಕಷ್ಟ ಉಂಟೇ? ಪಾಪಿಷ್ಠರು ನಗುವಂತಾಯಿತೇ ಪಾಂಡವಪತ್ನಿಯ ಪಾಡು! ಪತಿಗಳೈವರು ಜೀವಿಸಿರಲು, ಎದುರಿಗಿರಲು, ಭೀಷ್ಮಾದಿವೃದ್ಧರು ನೋಡುತ್ತಿರಲು, ಮನೆತುಂಬಿ ಬೆಳಗಿದ ಮಾನಿನಿಗೆ ಮಾನಹಾನಿಯೇ? ಯಾರನ್ನು ನಿಂದಿಸಿ ಏನು ಪ್ರಯೋಜನ? ಧರ್ಮಪತ್ನಿಯ ಮೊರೆಯನ್ನು ಕೇಳಿ, ನೋಡುತ್ತಾ, ನಿಸ್ಸಹಾಯಕರಾಗಿದ್ದ ಪಾಂಡವರನ್ನು

ದೂರುವೆನು. ಭೀಮನ ಬಲ, ಪಾರ್ಥನ ಗಾಂಡೀವ, ನಕುಲ ಸಹದೇವರ ಶೌರ್ಯ ಸಾಹಸಗಳು, ಧರ್ಮಜನ ಧರ್ಮ—ಯಾವುವೂ ನನ್ನ ಭಂಗಕ್ಕೊದಗಲಿಲ್ಲ! ಅಲ್ಪಬಲರಾದ ಪತಿಗಳೂ ಆತ್ಮಪತ್ನಿಯ ಅವಮಾನವನ್ನು ಸಹಿಸುವುದಿಲ್ಲ. ಸತಿಯನ್ನು ಸಂರಕ್ಷಿಸಲು ಪಾಪಿಗೂ ಹೆದರುವುದಿಲ್ಲ. ಸತಿಯು ರಕ್ಷಿತಳಾದರೆ ಸತ್ಸಂತಾನ; ಅದರಿಂದ ವಂಶವೃದ್ಧಿ! ನನ್ನ ದುರದೃಷ್ಟವೇನು ಹೇಳಲಿ! ಪರಾಕ್ರಮಸಿಂಹರಾದ ಪತಿ ಸುತರಿದ್ದೂ, ದಾಸಿಯಂತಾದೆ. ಇಂತು ನನ್ನನ್ನು ಅವಮಾನಿಸಿದ ದುರ್ಯೋಧನನು ಇನ್ನೂ ಜೀವಂತನಿದ್ದಾನೆಂದರೆ ಇದಕ್ಕೂ ಆಶ್ಚರ್ಯವುಂಟೇ?

"ದುರ್ಯೋಧನನ ದುರ್ನಯಗಳನ್ನು ಕೇಳು! ಭೀಮಸೇನನ ಮೇಲೆ ಅವನ ಪಾಪಿ ಕಣ್ಣು. ಅನ್ನದಲ್ಲಿ ವಿಷವಿಟ್ಟನು; ಕಟ್ಟಿ ಮಡುವಿನಲ್ಲಿ ನೆಟ್ಟದನು; ಅರಗಿನ ಮನೆಯಲ್ಲಿಟ್ಟು ಸುಟ್ಟನು. ನಿನ್ನ ದಯದಿಂದ ಪಾಂಡವರು ಪಾರಾದರು. ಭೀಮನ ಬಲದಿಂದ ಹಿಡಿಂಬ ಬಕರ ಬಾಧೆ ತಪ್ಪಿತು; ಅರ್ಜುನ ವಿಕ್ರಮದಿಂದ ನಾನಿವರ ಮನೆ ತುಂಬಿದೆ; ಇಂದ್ರಪ್ರಸ್ಥವೂ ಲಭಿಸಿತು; ಮಯಸಭೆಯೂ ನಿರ್ಮಿತವಾಯಿತು; ರಾಜಸೂಯವು ಸಂಪನ್ನವಾಯಿತು. ಆಯಿತೆಂಬುವುದರಲ್ಲಿ ದುರ್ಯೋಧನನ ಕಣ್ಣು ಕುಕ್ಕುವಂತಾಗಬೇಕೇ? ಅದರಿಂದ ಅನರ್ಥಪರಂಪರೆಯನ್ನು ಅನುಭವಿಸಿ, ರಾಜ್ಯ ಭ್ರಷ್ಟರಾಗಿ, ಇಂತು ದೀನದಶೆಯಲ್ಲಿ ಇರುವೆವು. ನನ್ನ ದುಃಖಸಾಗರವು ಸಂತತವಾಗಿ ಕಣ್ಣೀರಾಗಿ ಹರಿಯುತ್ತಿದೆ. ಅದನ್ನು ಒರೆಸಿ ಸಂತೈಸುವವರಾರೂ ಇಲ್ಲ. ಕ್ಷುದ್ರರಿಂದ ಪೀಡಿತಳಾದ ನನ್ನನ್ನು ಕಾಪಾಡದ ಪತಿಗಳಿಂದೇನು? ಅಣ್ಣಂದಿರಿಂದೇನು? ನನಗೆ ಯಾರೂ ಇಲ್ಲ! ನೀನೆನಗೆ ಬಂಧುವಾಗಿರುವೆ! ನನಗೆ ನಿನ್ನಲ್ಲಿ ಭಕ್ತಿ ಇದೆ, ವಿಶ್ವಾಸವಿದೆ. ಕೇಶವ! ನಿನ್ನಿಂದ ನಾನುಳಿದೆ. ನನ್ನ ಮಾನ ಪ್ರಾಣಗಳು ಉಳಿದವು. ನೀನೇ ಪ್ರಭುವೆಂದು ಶರಣಾಗತಳಾದ ನನ್ನ ಮೊರೆ ಕೇಳು! ನನ್ನ ಕಣ್ಣೀರನ್ನು ಒರೆಸು!" ಎಂದು ಕೃಷ್ಣೆ ತನ್ನ ವದನಚಂದ್ರನನ್ನು ಅಂಚಲಮೇಘ ಮುಚ್ಚಿ, ಆರ್ತಳಾಗಿ ರೋದಿಸಿದಳು.

ಶ್ರೀಕೃಷ್ಣನು ಅನುತಾಪದಿಂದ ಬಂದ ಕಣ್ಣೀರನ್ನು ತಡೆದು, ದ್ರೌಪದಿಯನ್ನು ಸಂತೈಸುತ್ತಿಂತೆಂದನು—

"ಕೃಷ್ಣೆ! ಅಳಬೇಡ! ನಿನ್ನ ಶತ್ರುಪತ್ನಿಯರು ಅಳುವ ಕಾಲವು ಸಮೀಪಿಸಿದೆ. ಭೀಭತ್ಸುಶರಜಾಲದಿಂದ ಸತ್ತು ಛಿದ್ರಗಾತ್ರರಾದ ಪತಿಗಳನ್ನಪ್ಪಿ, ಕೇಶರಾಶಿಗಳನ್ನು ಬಿಚ್ಚಿಕೊಂಡು ರೋದಿಸುವ ಕೌರವ ಯುವತಿಯರನ್ನು ನಿನಗೆ ನಾನು ನೋಡಿಸುವೆನು. ಸಂಶಯ ಪಡಬೇಡ! ಆಕಾಶವು ಕಳಚಿಬಿದ್ದರೂ, ಮೇರುವು ಪುಡಿಯಾದರೂ, ಸಮುದ್ರವು ಬತ್ತಿದರೂ, ಈ ಕೃಷ್ಣನ ವಚನವು ತಪ್ಪದು! ನಿನ್ನ ಪತಿಗಳಿಗೆ ಜಯವಾಗುವುದು." ಆ ಮಾತನ್ನು ಭೀಮಾರ್ಜುನರು ಸತ್ಯವೆಂದರು. ಧೃಷ್ಟದ್ಯುಮ್ನನು ರೋಷಕಷಾಯಿತ ನೇತ್ರನಾಗಿ "ನಾನು ದ್ರೋಣನನ್ನು ಕೊಲ್ಲುವೆನು. ಶಿಖಂಡಿಯು ಭೀಷ್ಮಸಂಹಾರಕನಾಗುವನು. ದುರ್ಯೋಧನನನ್ನು ಭೀಮ

ನಿನ್ನ ವಿಜ್ಞಾನ ಶಕ್ತಿಯು ಭಿನ್ನಾಂಶನು. ರುದ್ರನು ಕ್ರೋಧಸಮುದ್ಭವನು. ನಿನ್ನ ಕ್ರೋಧವು ನಮ್ಮ ಕ್ರೋಧದಂತೆ ಜ್ವಲನಾತ್ಮಕವಲ್ಲ; ಅದು ಜ್ಞಾನಾತ್ಮಕವು. ನಿನ್ನ ಸಿಟ್ಟಿಗೆ ಕೌರವರೇಕೆ, ಸಕಲಭುವನವೂ ಭಸ್ಮೀಭೂತವಾಗುವುದು! ನಿನ್ನ ದುಷ್ಟ ಸಂಹರಣ ಕಾರ್ಯದಲ್ಲಿ ನಮಗೂ ಪಾಲಿತ್ತು, ನಮ್ಮ ಸೇವೆಯನ್ನು ಸ್ವೀಕರಿಸು"

ಆ ಮಾತಿಗೆ ನಸುನಕ್ಕು, ಶಾಂತನಾದ ಕೃಷ್ಣನಿಂತೆಂದನು—"ನನ್ನ ಭಕ್ತನು ನೀನು! ನಿನ್ನ ಸ್ವಾಮಿಯು ನಾನು! ನಿನ್ನ ದ್ವೇಷಿಗಳೆನ್ನ ಶತ್ರುಗಳು. ನಿನ್ನ ಹಿತರು ನನ್ನ ಸ್ನೇಹಿತರು. ನರ ನೀನಾಗಿರುವೆ! ನಾರಾಯಣನು ನಾನು! ಈ ಸತ್ಯವನ್ನರಿತವರು ನಮ್ಮಿಬ್ಬರಿಗೂ ಪ್ರಿಯರೆನಿಸುವರು." ಆಗ ದ್ರೌಪದಿಯು ತನ್ನ ಪಾಡನ್ನು ನೆನೆದು ದುಃಖಿತಳಾಗಿ ಕೃಷ್ಣನಿಗೆ ಶರಣಾಗತಳಾಗಿ ನಮಿಸಿದಳು.

"ಶ್ರೀಕೃಷ್ಣ! ಪ್ರಜಾಪತಿಗಳಿಗೂ ಸೃಷ್ಟಿಕರ್ತನು, ಮಧುದೈತ್ಯಹರ್ತನು, ಲೋಕ ಭರ್ತನು ಆದ ನಿನ್ನನ್ನು ಕಶ್ಯಪ ನಾರದ ದೇವಲರು ತಿಳಿದು ವರ್ಣಿಸುತ್ತಿರುವರು. ಬ್ರಹ್ಮ ಶಂಕರ ಶಕ್ರಾದಿ ದೇವವೃಂದದಿಂದ ಕೂಡಿ ಲೋಕದಂತೆ ಆಡುವ ನಿನ್ನ ಅಚಿಂತ್ಯ ಮಹಿಮೆಯನ್ನು ಯಾರೂ ಸಾಕಲ್ಯೇನ ತಿಳಿಯಲಾರರು. ವಿದ್ಯಾ ತಪೋ ವೈರಾಗ್ಯ ಭೂಷಿತರಾದ ಋಷಿಗಳು, ಧರ್ಮಯುದ್ಧ ವಿಮುಖರಲ್ಲದ ರಾಜರ್ಷಿಗಳು, ಸ್ವವಿಹಿತ ಕರ್ಮದಕ್ಷರಾದ ವೈಶ್ಯರು, ನಿನ್ನ ಸೇವಾ ನಿಪುಣರಾದ ಶೂದ್ರರು, ಎಲ್ಲ ಸಜ್ಜನರೂ 'ನೀನೇ ಗತಿ' ಎಂದು ನಂಬಿ ಉದ್ಧೃತರಾಗಿರುವರು. ಚರಾಚರ ಜಗವೆಲ್ಲವೂ ನಿನ್ನಲ್ಲಿ ಪ್ರತಿಷ್ಠಿತವಾಗಿದೆ.

"ಶ್ರೀರಮೆಯು ನಿನ್ನ ಅನಂತ ಕಲ್ಯಾಣ ಗುಣಗಳನ್ನು ಗಣಿಸಿ ಮುಗಿಸಲಾರಳು. ಪರಿಪೂರ್ಣ ನಿರ್ದುಷ್ಟ ಕಲ್ಯಾಣ ಗುಣದೇಹನಾದ ನೀನು ಸ್ವತಂತ್ರನು. ಮುಕ್ತ ಬ್ರಹ್ಮಾದಿ ಸರ್ವ ಜೀವರು ನಿನ್ನ ಭಕ್ತರು. ಜೀವರ ಶರೀರ ವ್ಯಾಪಾರವು ನಿನ್ನಿಂದ. ಪ್ರಾಣನಿಗೂ ಚೇಷ್ಟಾಪ್ರದನಾದ ನಿನಗೆ ಮತ್ತೊಬ್ಬ ಸ್ವಾಮಿಯಿಲ್ಲ. ಸರ್ವಜ್ಞನಾದ ನಿನಗೆ ತಿಳಿಯದುದಿಲ್ಲ. ಸರ್ವಶಕ್ತನಿಗೆ ನಿವಾರಿಸಲಾಗದ ವಿಪತ್ತಿಲ್ಲ. ಭಕ್ತಳಾದ ನನ್ನ ಪ್ರಾರ್ಥನೆಯನ್ನು ಲಾಲಿಸಿ ಕೇಳು!

"ಯಜ್ಞಕುಂಡದಿಂದ ಬಂದೆ; ಯಜ್ಞಸೇನನ ಮನೆಯಲ್ಲಿ ಬೆಳೆದೆ; ಪಾಂಡುರಾಜನ ಸೊಸೆಯಾದೆ; ನಿನಗೆ ತಂಗಿ ಎನಿಸಿದೆ. ನನಗೆ ಬಂದ ವಿಪತ್ತು ಲೋಕದ ಯಾವ ನಾರಿಯರಿಗೂ ದುಸ್ಸಹವು. ಏಕವಸನಳು, ರಜಸ್ವಲೆಯಾದ ನನ್ನನ್ನು, ಕೃಷ್ಣ! ರಾಜಸೂಯಾವಭೃಥದಿಂದ ಪವಿತ್ರವಾದ ಕೇಶಗಳಿಂದ ಸೆಳೆದು, ಒಬ್ಬ ದುರ್ಮಾರ್ಗನು ಸಭೆಯಲ್ಲಿ ಅವಮಾನಿಸಿದನೆಂದರೆ, ಇದಕ್ಕಿಂತ ಕಷ್ಟ ಉಂಟೇ? ಪಾಪಿಷ್ಟರು ನಗುವಂತಾಯಿತೇ ಪಾಂಡವಪತ್ನಿಯ ಪಾಡು! ಪತಿಗಳೈವರು ಜೀವಿಸಿರಲು, ಎದುರಿಗಿರಲು, ಭೀಷ್ಮಾದಿವೃದ್ಧರು ನೋಡುತ್ತಿರಲು, ಮನೆತುಂಬಿ ಬೆಳಗಿದ ಮಾನಿನಿಗೆ ಮಾನಹಾನಿಯೇ? ಯಾರನ್ನು ನಿಂದಿಸಿ ಏನು ಪ್ರಯೋಜನ? ಧರ್ಮ ಪತ್ನಿಯ ಮೊರೆಯನ್ನು ಕೇಳಿ, ನೋಡುತ್ತಾ, ನಿಸ್ಸಹಾಯಕರಾಗಿದ್ದ ಪಾಂಡವರನ್ನು

ದೂರುವೆನು. ಭೀಮನ ಬಲ, ಪಾರ್ಥನ ಗಾಂಡೀವ, ನಕುಲ ಸಹದೇವರ ಶೌರ್ಯ ಸಾಹಸಗಳು, ಧರ್ಮಜನ ಧರ್ಮ—ಯಾವುವೂ ನನ್ನ ಭಂಗಕ್ಕೊದಗಲಿಲ್ಲ! ಅಲ್ಪಬಲರಾದ ಪತಿಗಳೂ ಆತ್ಮಪತ್ನಿಯ ಅವಮಾನವನ್ನು ಸಹಿಸುವುದಿಲ್ಲ. ಸತಿಯನ್ನು ಸಂರಕ್ಷಿಸಲು ಸಾವಿಗೂ ಹೆದರುವುದಿಲ್ಲ. ಸತಿಯು ರಕ್ಷಿತಳಾದರೆ ಸತ್ಸಂತಾನ; ಅದರಿಂದ ವಂಶವೃದ್ಧಿ! ನನ್ನ ದುರದೃಷ್ಟವೇನು ಹೇಳಲಿ! ಪರಾಕ್ರಮಸಿಂಹರಾದ ಪತಿ ಸುತರಿದ್ದೂ, ದಾಸಿಯಂತಾದೆ. ಇಂತು ನನ್ನನ್ನು ಅವಮಾನಿಸಿದ ದುರ್ಯೋಧನನು ಇನ್ನೂ ಜೀವಂತನಿದ್ದಾನೆಂದರೆ ಇದಕ್ಕೂ ಆಶ್ಚರ್ಯವುಂಟೇ ?

"ದುರ್ಯೋಧನನ ದುರ್ನಯಗಳನ್ನು ಕೇಳು! ಭೀಮಸೇನನ ಮೇಲೆ ಅವನ ಪಾಪಿ ಕಣ್ಣು. ಅನ್ನದಲ್ಲಿ ವಿಷವಿಟ್ಟನು; ಕಟ್ಟಿ ಮಡುವಿನಲ್ಲಿ ನೆಟ್ಟದನು; ಅರಗಿನ ಮನೆಯಲ್ಲಿಟ್ಟು ಸುಟ್ಟನು. ನಿನ್ನ ದಯದಿಂದ ಪಾಂಡವರು ಪಾರಾದರು. ಭೀಮನ ಬಲದಿಂದ ಹಿಡಿಂಬ ಬಕರ ಬಾಧೆ ತಪ್ಪಿತು; ಅರ್ಜುನ ವಿಕ್ರಮದಿಂದ ನಾನಿವರ ಮನೆ ತುಂಬಿದೆ; ಇಂದ್ರಪ್ರಸ್ಥವೂ ಲಭಿಸಿತು; ಮಯಸಭೆಯೂ ನಿರ್ಮಿತವಾಯಿತು; ರಾಜಸೂಯವು ಸಂಪನ್ನವಾಯಿತು. ಆಯಿತೆಂಬುವುದರಲ್ಲಿ ದುರ್ಯೋಧನನ ಕಣ್ಣು ಕುಕ್ಕುವಂತಾಗಬೇಕೇ ? ಅದರಿಂದ ಅನರ್ಥಪರಂಪರೆಯನ್ನು ಅನುಭವಿಸಿ, ರಾಜ್ಯ ಭ್ರಷ್ಟರಾಗಿ, ಇಂತು ದೀನದಶೆಯಲ್ಲಿ ಇರುವೆವು. ನನ್ನ ದುಃಖಸಾಗರವು ಸಂತತವಾಗಿ ಕಣ್ಣೀರಾಗಿ ಹರಿಯುತ್ತಿದೆ. ಅದನ್ನು ಒರೆಸಿ ಸಂತೈಸುವವರಾರೂ ಇಲ್ಲ. ಕ್ಷುದ್ರರಿಂದ ಪೀಡಿತಳಾದ ನನ್ನನ್ನು ಕಾಪಾಡದ ಪತಿಗಳಿಂದೇನು ? ಅಣ್ಣಂದಿರಿಂದೇನು ? ನನಗೆ ಯಾರೂ ಇಲ್ಲ! ನೀನೆನಗೆ ಬಂಧುವಾಗಿರುವೆ! ನನಗೆ ನಿನ್ನಲ್ಲಿ ಭಕ್ತಿ ಇದೆ, ವಿಶ್ವಾಸವಿದೆ. ಕೇಶವ! ನಿನ್ನಿಂದ ನಾನುಳಿದೆ. ನನ್ನ ಮಾನ ಪ್ರಾಣಗಳು ಉಳಿದವು. ನೀನೇ ಪ್ರಭುವೆಂದು ಶರಣಾಗತಳಾದ ನನ್ನ ಮೊರೆ ಕೇಳು! ನನ್ನ ಕಣ್ಣೀರನ್ನು ಒರೆಸು!" ಎಂದು ಕೃಷ್ಣೆ ತನ್ನ ವದನಚಂದ್ರನನ್ನು ಅಂಚಲಮೇಘ ಮುಚ್ಚಿ, ಆರ್ತಳಾಗಿ ರೋದಿಸಿದಳು.

ಶ್ರೀಕೃಷ್ಣನು ಅನುತಾಪದಿಂದ ಬಂದ ಕಣ್ಣೀರನ್ನು ತಡೆದು, ದ್ರೌಪದಿಯನ್ನು ಸಂತೈಸುತ್ತಿಂತೆಂದನು—

"ಕೃಷ್ಣೆ! ಅಳಬೇಡ! ನಿನ್ನ ಶತ್ರುಪತ್ನಿಯರು ಅಳುವ ಕಾಲವು ಸಮೀಪಿಸಿದೆ. ಭೀಭತ್ಸುಶರಜಾಲದಿಂದ ಸತ್ತು ಛಿದ್ರಗಾತ್ರರಾದ ಪತಿಗಳನ್ನಪ್ಪಿ, ಕೇಶರಾಶಿಗಳನ್ನು ಬಿಚ್ಚಿಕೊಂಡು ರೋದಿಸುವ ಕೌರವ ಯುವತಿಯರನ್ನು ನಿನಗೆ ನಾನು ನೋಡಿಸುವೆನು. ಸಂಶಯ ಪಡಬೇಡ! ಆಕಾಶವು ಕಳಚಿಬಿದ್ದರೂ, ಮೇರುವು ಪುಡಿಯಾದರೂ, ಸಮುದ್ರವು ಬತ್ತಿದರೂ, ಈ ಕೃಷ್ಣನ ವಚನವು ತಪ್ಪದು! ನಿನ್ನ ಪತಿಗಳಿಗೆ ಜಯವಾಗುವುದು." ಆ ಮಾತನ್ನು ಭೀಮಾರ್ಜುನರು ಸತ್ಯವೆಂದರು. ಧೃಷ್ಟದ್ಯುಮ್ನನು ರೋಷಕಷಾಯಿತ ನೇತ್ರನಾಗಿ "ನಾನು ದ್ರೋಣನನ್ನು ಕೊಲ್ಲುವೆನು. ಶಿಖಂಡಿಯು ಭೀಷ್ಮಸಂಹಾರಕನಾಗುವನು. ದುರ್ಯೋಧನನನ್ನು ಭೀಮ

ಸೇನನು ವಧಿಸುವನು. ಅರ್ಜುನನು ಕರ್ಣನನ್ನು ಕೊಲ್ಲುವನು. ತಂಗಿ! ರಾಮ ಕೃಷ್ಣರ ಅನುಗ್ರಹದಿಂದ ಇಂದ್ರಾದಿದೇವರನ್ನೂ ಗೆಲ್ಲುವೆವೆಂದಮೇಲೆ ಇನ್ನು ಪಾಪಿ ಕೌರವರ ಲೆಕ್ಕವೇನು?" ಎಂದು ಪ್ರತಿಜ್ಞೆಗೈದನು. 'ತಥಾಸ್ತು' ಎಂದು ಶ್ರೀಕೃಷ್ಣನವರನ್ನಾಶೀರ್ವದಿಸಿದನು.

ಅನಂತರ ಶ್ರೀಕೃಷ್ಣನು ಧರ್ಮರಾಜನನ್ನು ನೋಡಿ, "ರಾಜನ್! ನಾನಿಲ್ಲಿದ್ದಿದ್ದರೆ ಇಷ್ಟು ಅನರ್ಥವಾಗುತ್ತಿದ್ದಿಲ್ಲ. ದ್ವಾರಕೆಯಲ್ಲೂ ಇದ್ದಿಲ್ಲ. ಹಾಗಿದ್ದಿದ್ದರೆ, ಅನಾಹೂತನಾದರೂ ಬಿಡದೆ ಬಂದು ದ್ಯೂತವನ್ನು ನಿವಾರಿಸಿಬಿಡುತ್ತಿದ್ದೆನು. ದುಷ್ಟಕಾಮದಿಂದ ಹುಟ್ಟುವ ಅನರ್ಥಗಳು ನಾಲ್ಕು—ವೇಶ್ಯೆಯರ ಸಂಗ, ದ್ಯೂತ, ಮದ್ಯಪಾನ, ಮೃಗಹಿಂಸೆ ಎಂಬ ವ್ಯಸನಗಳಿಗೆ ಸಿಲುಕಿದ ನರನು ಸರ್ವಶ್ರೇಯೋದೂರನಾಗುವನು. ಒಂದು ದಿನದಲ್ಲಿ ನಡೆದ ಅಕಾರ್ಯದಿಂದ ಆದ ಹಾನಿಯನ್ನು ತಿಳಿ! ರಾಜ್ಯದೂರನಾಗಿ, ಅವಮಾನಿತನಾಗಿ, ಇನ್ನೂ ನುಡಿಯಲಾಗದ ಕಷ್ಟಕ್ಕೀಡಾದೆ! ದುಷ್ಟಜನರು ಮೋಸದಿಂದ ಜೂಜಾಡುವಾಗ ನೋಡುತ್ತಾ ನಿವಾರಿಸದವರೂ ವಧ್ಯರಾಗುವರು.

"ನನ್ನನ್ನು ನೆನೆದು ಕರೆಸದೆ, ನೀವು ಇಷ್ಟು ಕಷ್ಟಗಳಿಗೀಡಾದಿರಿ. ನಡೆದುದೆಲ್ಲವನ್ನು ಸಾತ್ಯಕಿಯು ನಾನು ದ್ವಾರಕೆಗೆ ಹಿಂದಿರುಗಿ ಬಂದಾಗ ತಿಳಿಸಿದನು. ತತ್‌ಕ್ಷಣವೇ ತಡಮಾಡದೆ, ವನವಾಸ ಕ್ಲೇಶ ಭಾಜನರಾದ ನಿಮ್ಮನ್ನು ನೋಡಲು ಬಂದೆನು. ನೋಡಿದೆನು ನಿಮ್ಮ ದುಃಖವನ್ನು! ಇನ್ನು ನಿಮಗೆ ದುಃಖವಿಲ್ಲವೆಂದು ತಿಳಿ! ನಿಮ್ಮ ಯೋಗಕ್ಷೇಮಗಳು ನನ್ನವಾಗಿವೆ!" ಎಂದು ನುಡಿದನು.

ಧರ್ಮಜನು "ಕೃಷ್ಣ! ದ್ವಾರಕೆಯಲ್ಲೂ ಇರದೆ ನೀನೆಲ್ಲಿಗೆ ಹೋಗಿದ್ದೆ? ಏತಕ್ಕೆ?" ಎಂದು ಕೇಳಿದನು.

ಶ್ರೀಕೃಷ್ಣನಿಂತೆಂದನು—"ಧರ್ಮರಾಜ! ನಿನ್ನ ರಾಜಸೂಯ ಸಮಯದಲ್ಲಿ ಜರಾಸಂಧನು ಭೀಮಸಿಂದ ಹತನಾದನು. ನಾನು ಶಿಶುಪಾಲನನ್ನು ಸಂಹರಿಸಿದೆನು. ಅವರೀರ್ವರಿಗೂ ಮಿತ್ರನಾದ ಸಾಲ್ವನು ನನ್ನ ಮೇಲಿನ ಸೇಡಿನಿಂದ ನಾನಿಲ್ಲಿರುವಾಗ ದ್ವಾರಕೆಯನ್ನು ಮುತ್ತಿದನು. ರುದ್ರದತ್ತವಾದ ಸೌಭವೆಂಬ ವಿಮಾನವನ್ನೇರಿ ಬಂದು ನಮ್ಮವರನ್ನು ಹೆದರಿಸಿದನು. ದ್ವಾರಗಳನ್ನು ಮುರಿದು, ಕೊತ್ತಳಗಳನ್ನು ಕೆಡಹಿ, ಅವನ ಸೈನ್ಯವೂ ವಿಜೃಂಭಿಸಿತು. ಅಟ್ಟಾಲಕಗಳನ್ನು ಕೆಡಹಿ ಭೇರಿಪಣವಗಳನ್ನು ಒಡೆದರು. ತೋಮರ ಧ್ವಜಪತಾಕೆಗಳನ್ನು ಮುರಿದು ಬಿಸುಟದರು. ಉಗ್ರಸೇನೋದ್ಧವಾದಿಗಳು ಅಪ್ರಮತ್ತರಾಗಿ ನಗರದ ರಕ್ಷಣೆಗೆ ನಿಂತರು. ಪರಿಖಾ ತೋರಣಗಳನ್ನು ಸರಿಮಾಡಿಸಿದರು. ನಟನರ್ತಕಗಾಯಕರನ್ನು ಹೊರಹಾಕಿ ಕುಟಿಲರನ್ನು ದೂರ ಮಾಡಿದರು. ಕೀಲಶೃಂಖಳಗಳನ್ನು ಬಿಗಿಸಿ, ಯಂತ್ರಗಳನ್ನು ಸಜ್ಜುಗೊಳಿಸಿದರು. ನದಿಯನ್ನು ದಾಟಿಸುವ ನಾವೆಗಳನ್ನು ನಿರೋಧಿಸಿದರು. ರಾಜಮುದ್ರೆಯಿಲ್ಲದವರನ್ನು

ಹೊರಗೆ ಕಳುಹುವುದನ್ನು ಒಳಗೆ ಬಿಡುವುದನ್ನು ನಿಲ್ಲಿಸಿಬಿಟ್ಟರು. ಪ್ರಭೂತಗಜವಾಜಿ ಯುತವಾದ ಸೈನ್ಯವು ಯುದ್ಧಸನ್ನದ್ಧವಾಗಿ ನಿಂತಿತು.

"ಸಾಲ್ವನು ಚತುರಂಗಬಲಯುತನಾಗಿ ಬಂದನು. ಶ್ಮಶಾನಗಳನ್ನೂ ದೇವಾಲಯ ಗಳನ್ನೂ ಹುತ್ತಗಳನ್ನೂ ವರ್ಜಿಸಿ, ಸಮವಾದ ಭೂಪ್ರದೇಶದಲ್ಲಿ ಬಿಡಾರ ಮಾಡಿ. ಸಮಯನೋಡಿ, ಸಾಲ್ವನು ದ್ವಾರಕೆಯನ್ನು ಮುತ್ತಿದನು. ವೃಷ್ಣಿವೀರರೂ ಅವನ-ನ್ನೆದುರೊಡ್ಡಿ ನಿಂತರು. ಚಾರುದೇಷ್ಣ, ಸಾಂಬ, ಪ್ರದ್ಯುಮ್ನರಿಗೂ ಸಾಲ್ವಸೇನಾನಿ ಗಳಿಗೂ ಭಯಂಕರ ಯುದ್ಧವಾಯಿತು. ಕ್ಷೇಮವೃದ್ಧಿಯೆಂಬ ಸಾಲ್ವಸಚಿವನು ಸಾಂಬನಿಂದ ಬಾಣಯುದ್ಧದಲ್ಲಿ ಸೋತು ಪಲಾಯಿತನಾದನು. ಆಗ ವೇಗವಂತನೆಂಬ ಸೇನಾನಿಯು ಸಾಂಬನನ್ನು ಬಾಣವರ್ಷದಲ್ಲಿ ಮುಳುಗಿಸಿದನು. ಸಾಂಬನು ಗದೆಯನ್ನೆತ್ತಿ ಹೊಡೆಯಲು ಅವನು ಬೇರುಕಡಿದ ಗಿಡದಂತೆ ಕೆಳಗೆ ಬಿದ್ದು ಮೃತನಾದನು.

"ಚಾರುದೇಷ್ಣನಿಗೂ ವಿವಿಂಧ್ಯನಾಮಕದಾನವನಿಗೂ ತುಮುಲಯುದ್ಧ ವಾಯಿತು. ಚಾರುದೇಷ್ಣನು ಅಗ್ನಿಪ್ರಭವಾದ ಬಾಣವನ್ನು ಹೂಡಿ, ಅಭಿಮಂತ್ರಿಸಿ, ಅದರಿಂದ ವಿವಿಂಧ್ಯನನ್ನು ಸಂಹರಿಸಿದನು. ಸಾಲ್ವನ ಸೈನ್ಯವು ವಿವಿಂಧ್ಯ ವೇಗವಂತರ ನಾಶದಿಂದ ಎದೆಗುಂದಿ ಓಡತೊಡಗಿತು. ಕಾಮಗಮನವಾದ ಸೌಭದಲ್ಲಿ ಕೂತು, ಸಾಲ್ವನು ರಣರಂಗದಲ್ಲಿ ವೀರವಿಹಾರವನ್ನು ಮಾಡಲು, ನಮ್ಮ ಸೈನಿಕರು ವಿಹ್ವಲ ರಾದರು. ಅವರನ್ನು ಹುರಿದುಂಬಿಸುತ್ತ, ಪ್ರದ್ಯುಮ್ನನಿಂತೆಂದನು—

"ವೀರವರರೇ ! ಹೆದರಬೇಡಿರಿ. ಈ ಸಾಲ್ವನ ದರ್ಪವನ್ನು ಕ್ಷಣದಲ್ಲಿ ಮುರಿ ಯುವೆನು. ಅವನ ಸೈನ್ಯವನ್ನೂ ನಾಶಮಾಡುವೆನು ಎಂದು ವೀರ್ಯೋತ್ಸಾಹ ಗಳಿಂದ ನುಡಿಯುವ ಪ್ರದ್ಯುಮ್ನನ ಮಾತಿಗೆ ಕೆರಳಿ ಸಾಲ್ವನು ರೋಷಕಷಾಯಿತ ನೇತ್ರ ನಾಗಿ, ಅವನನ್ನು ನೂರು ಬಾಣಗಳಿಂದ ಪೀಡಿಸಿ ಆರ್ಭಟಿಸಿದನು. ಪ್ರದ್ಯುಮ್ನನನ್ನು ಬಾಲಕನೆಂದು ನಿರ್ಲಕ್ಷಿಸಿ, ಸಾಲ್ವನು ರಥಾರೂಢನಾಗಿ ಬಂದು ಅಗ್ನಿಯಂತೆ ಉರಿಯುವ ಬಾಣಗಳನ್ನು ಪ್ರಯೋಗಿಸಿ, ಪ್ರದ್ಯುಮ್ನನನ್ನು ಕೊಲ್ಲಲೆಣಿಸಿದನು. ಪ್ರದ್ಯುಮ್ನನು ಅವನ ಬಾಣಗಳನ್ನೆಲ್ಲ ಛೇದಿಸಿ, ಕಾಂಚನಪುಂಖವಾದ ದಿವ್ಯಬಾಣಗಳಿಂದ ಅವನ ಎದೆಗೆ ಗುರಿಯಿಟ್ಟು ಹೊಡೆದನು. ಸಾಲ್ವನ ಎದೆಯು ಸೀಳಿ, ಅವನು ಮೂರ್ಛಾ ಕ್ರಾಂತನಾದನು. ದಾನವ ಸೈನ್ಯವು ದಿಕ್ಕೆಟ್ಟು ಓಡಿತು. ಸ್ವಲ್ಪ ಹೊತ್ತಾದಮೇಲೆ ಎಚ್ಚತ್ತ ಸಾಲ್ವನು ಕ್ರೋಧಾವಿಷ್ಟನಾಗಿ ಗರ್ಜಿಸಿ, ಪ್ರದ್ಯುಮ್ನನನ್ನು ತೀಕ್ಷ್ಣಬಾಣ ಗಳಿಂದ ಹೊಡೆಯಲು ಅವನೂ ಮೂರ್ಛೆಹೊಂದಿ ರಥದಲ್ಲಿ ಬಿದ್ದನು. ಅದನ್ನು ಕಂಡು ಯಾದವವೀರರು ಖಿನ್ನರಾದರು. ಅವನ ಸಾರಥಿಯು ಪ್ರದ್ಯುಮ್ನರಥವನ್ನು ರಣ ಭೂಮಿಯಿಂದ ಹೊರತಂದು ನಿಲ್ಲಿಸಿದನು. ಪ್ರದ್ಯುಮ್ನನಿಗಾಗ ಎಚ್ಚರವಾಯಿತು. ಅವನು ತನ್ನ ಸಾರಥಿಯ ಕೃತ್ಯವನ್ನು ಮೆಚ್ಚದೆ ಇಂತೆಂದನು—'ಸೂತ! ಏಕೆ ರಣರಂಗ ದಿಂದ ಹೊರಬಂದೆ ? ವೃಷ್ಣಿವೀರರಿಗಿದು ಉಚಿತವಲ್ಲ. ಸಾಲ್ವನಿಗೆ ಹೆದರಿ ಓಡಿಹೋದ

ನೆಂಬ ಅಪನಿಂದೆಯನ್ನು ನನಗೆ ತಂದೆ! ಅಥವಾ ನೀನು ರಣಭೀತನಾಗಿ ಪಲಾಯಿತ ನಾದೆಯಾ? ನಿಜ ಹೇಳು!' ಆ ಮಾತಿಗೆ ಸೂತಪುತ್ರನು 'ಪ್ರದ್ಯುಮ್ನ! ನನಗೆ ಮೋಹವಿಲ್ಲ, ನಾನು ಹೆದರಿ ಬಂದವನಲ್ಲ. ರಥಿಕನು ಮೂರ್ಛಿತನಾದಾಗ ಸಾರಥಿಯ ಕರ್ತವ್ಯವೆಂದರೆ ಅವನ ಪ್ರಾಣರಕ್ಷಣೆಯೇ. ನೀನೊಬ್ಬನು, ಸಾಲ್ವನ ಭಟರನೇಕರಿಂದಲು, ಸಾಲ್ವನಿಂದಲು ಹೊಡೆದಾಡುವಾಗ ಮೂರ್ಛಿತನಾದೆ. ಆದುದ ರಿಂದ ನಾನು ರಥವನ್ನು ದೂರ ಸರಿಸಿದೆ' ಎಂದು ನುಡಿದನು.

"ಪ್ರದ್ಯುಮ್ನನು ರಥವನ್ನು ಹಿಂದಿರುಗಿಸಿ, ರಣರಂಗವನ್ನು ಹೊಕ್ಕನು; 'ದಾರುಕಾತ್ಮಜ! ರಣಮರಣವು ಶ್ರೇಯವಾಗಲಿ ಪಲಾಯನವಲ್ಲ. ವೃಷ್ಣಿವೀರರು ರಣಾಪಯಾನವನ್ನು ಅರಿತಿಲ್ಲ. ಮತ್ತೆ ಹೀಗೆ ಮಾಡಬೇಡ! ಸಾಲ್ವದುರಾತ್ಮನಿಗಭಿ ಮುಖವಾಗಿ ನನ್ನ ರಥವನ್ನು ಹೊಡೆ!' ಎಂದು ಸೂತನಿಗೆ ಆಜ್ಞಾಪಿಸಿದನು.

"ಮಂಡಲಾಕಾರವಾಗಿ ತಿರುಗುತ್ತಾ ಮೀನಕೇತನನ ರಥವು ಮಹಾವೇಗದಿಂದ ಸಾಲ್ವನನ್ನು ಸಮೀಪಿಸಿತು. ಮತ್ತೆ ಬಂದ ಮದನನನ್ನು ತೀಕ್ಷ್ಣದೃಷ್ಟಿಯಿಂದ ವೀಕ್ಷಿಸಿ ಸಾಲ್ವನು, ಅವನ ಸಾರಥಿಯನ್ನು ಮೂರು ಬಾಣಗಳಿಂದ ಹೊಡೆದನು. ಪ್ರದ್ಯುಮ್ನನಲ್ಲಿ ಶತ ಬಾಣಗಳನ್ನು ಪ್ರಯೋಗಿಸಿದನು. ನನ್ನ ಪುತ್ರನು ಅವನ ಬಾಣ ಗಳನ್ನೆಲ್ಲ ಕಡಿದು, ಅವನನ್ನು ನೂರು ಶರಗಳಿಂದ ಹೊಡೆದನು. ಆಗ ಸೌಭರಾಜನು ದಾರುಣವಾದ ಆಸುರೀಮಾಯೆಯನ್ನು ನಿರ್ಮಿಸಿ, ದೈತೇಯಾಸ್ತ್ರಗಳನ್ನು ಬಿಟ್ಟನು. ಪ್ರದ್ಯುಮ್ನನು ಅವನ್ನು ಬ್ರಹ್ಮಾಸ್ತ್ರದಿಂದ ವಿಫಲಗೊಳಿಸಿ, ದಾವಾಗ್ನಿಯಂತೆ ಉರಿಯುವ ದಿವ್ಯಶರವನ್ನು ಬಿಲ್ಲಿಗೇರಿಸಿದನು. ಆ ಶರವನ್ನು ನಾನವನಿಗೆ ಕೊಟ್ಟಿದ್ದೆನು. ಅದು ಅಮೋಘವಾದುದು. ಆಗ ಪ್ರದ್ಯುಮ್ನನನ್ನು ವಾರಿಸಿ, ಆಕಾಶವಾಣಿಯು 'ಪ್ರದ್ಯುಮ್ನ! ಆ ಶರವನ್ನು ಉಪಸಂಹರಿಸು! ಇವನು ನಿನ್ನಿಂದ ಹತನಾಗು ವನಲ್ಲ. ಶ್ರೀಕೃಷ್ಣನೇ ಇವನಿಗೆ ಮಾರಕನು!' ಎಂಬ ವಾಯುವಚನವನ್ನು ಶಿರಸಾ ಧರಿಸಿ, ಬಾಣವನ್ನು ಹಿಂದೆಗೆದುಕೊಂಡನು. ಅಂತೆಯೇ ತಿಳಿದು ಪರಶುರಾಮನು ಸಾಲ್ವನನ್ನು ಸಂಹರಿಸಲಿಲ್ಲ; ಅವನು ಶ್ರೀಕೃಷ್ಣನಿಂದ ಸಂಹೃತನಾಗುವನೆಂದರಿತು ಭಾರ್ಗವನು ಸಾಲ್ವನನ್ನು ಓಡಿಸಿದ್ದನಾಗಲಿ ಕೊಲ್ಲಲಿಲ್ಲ; ಸಾಲ್ವನು ಆಕಾಶವಾಣಿಯ ಶ್ರವಣದಿಂದ ಲಜ್ಜಿತನಾಗಿ, ದ್ವಾರಕಾನಗರದ ಮುಟ್ಟಡಿಯನ್ನೆತ್ತಿ, ಸಸೈನ್ಯನಾಗಿ ಹೊರಟುಹೋದನು. 'ನಾನು ಬಾಲಕರಿಂದ ಯುದ್ಧವಾಡಲಿಚ್ಛಿಸುವುದಿಲ್ಲ! ಕೃಷ್ಣನು ಬರಲಿ!' ಎಂದು ಜಂಭವನ್ನು ಕೊಚ್ಚಿಕೊಳ್ಳುತ್ತಾ ಅವನು ತನ್ನ ನಗರವನ್ನು ಸೇರ ಹೋದನು. ಪ್ರದ್ಯುಮ್ನಾದಿವೀರರು ಜಯಹರ್ಷಿತರಾಗಿ ದ್ವಾರಕೆಯನ್ನು ಪ್ರವೇಶಿ ಸಿದರು. ನಾನೂ ಇಲ್ಲಿಂದ ಹೊರಟು ದ್ವಾರಕೆಗೆ ಸೇರಿದಾಗ ನಡೆದ ಕಥೆಯನ್ನು ಅವರು ತಿಳಿಸಿದರು. ದ್ವಾರಕಾನಗರವನ್ನು ವಿರೂಪಗೊಳಿಸಿದ ಸಾಲ್ವನನ್ನು ಸಂಹರಿಸದೆ ಬಿಡ ನೆಂದು, ಪ್ರತಿಜ್ಞೆಗೈದು, ನಾನು ಆ ದುರಾತ್ಮನ ನಗರವನ್ನು ಮುಟ್ಟಿದೆನು. ಚತುರಂಗ

ಸೈನ್ಯದಿಂದ ಕೂಡಿ, ಪಾಂಚಜನ್ಯವನ್ನು ಊದಿ, ಸಿಂಹನಾದವಮಾಡಿದೆನು. ಅಲ್ಲಿ ಸಮುದ್ರಸಮೀಪದಲ್ಲಿ ಸೌಭವನ್ನೇರಿ ಮೆರೆಯುವ ಸಾಲ್ವನನ್ನು ಬಾಣವೃಷ್ಟಿಯಿಂದ ಪೀಡಿಸಿದೆನು. ಅವನೂ ಕೋಪೋದ್ದೀಪಿತನಾಗಿ ನನ್ನನ್ನೂ, ನನ್ನ ಸೂತನನ್ನೂ ಕುದುರೆಗಳನ್ನೂ ಬಾಣವರ್ಷದಲ್ಲಿ ಮುಳುಗಿಸಿದನು. ಸಾಲ್ವನ ಅನುಚರರಿಗೂ ನನ್ನ ಸೈನಿಕರಿಗೂ ಭೀಕರ ಸಮರವಾಯಿತು ; ಉಭಯ ಸೈನಿಕರೂ ಅನೇಕರು ಹತರಾದರು. ನನ್ನ ಶರೀರದಲ್ಲಿ ನಟ್ಟಿದ ಬಾಣಗಳು ಅಗ್ನಿಯಲ್ಲಿ ಬಿದ್ದ ಶಲಭಗಳಂತೆ, ನಷ್ಟವಾದವು. ನಾನು ಕ್ರೋಧತಾಮ್ರಾಕ್ಷಕನಾಗಿ ರಾಕ್ಷಸಾಪಸದನನ್ನೂ ಅವನ ಸೈನ್ಯವನ್ನೂ ಶರಜಾಲದಿಂದ ಪೀಡಿಸಿದೆನು. ಅವರು ಮಾಯಾಯುದ್ಧವನ್ನಾರಂಭಿಸಿದರು.

"ಆಕಾಶದಿಂದ ಅಂಗಾರವೃಷ್ಟಿ ಆಯಿತು. ಶಕ್ತಿ, ಕುಲಿಶ, ಪರಶು, ಪಟ್ಟಿಶ, ಖಡ್ಗಗಳು ಅನಿರೀಕ್ಷಿತವಾಗಿ ಮಳೆಗರೆದಂತೆ ನಾನಾ ದಿಕ್ಕುಗಳಿಂದ ಹಾರಿಬಂದವು. ದಿಕ್ಕುಗಳಲ್ಲಿ ಕತ್ತಲು ಕವಿಯಿತು. ಮರಳು ಮಳೆಯಾಗಿ ಉದುರಿತು. ಇದೆಲ್ಲವೂ ಆ ದುರ್ಮಾರ್ಗನ ಮಾಯೆ ಎಂದರಿತು ನಾನು ಸ್ವರೂಪಭೂತವಾದ ವೈಷ್ಣವ ಮಾಯೆಯಿಂದ, ಅದನ್ನು ನಾಶಪಡಿಸಿದೆನು. ಕಣ್ಣಿಗೆ ಗೋಚರಿಸದೆ ಶರವರ್ಷವನ್ನು ಸುರಿಸುತ್ತಿದ್ದ ಸಾಲ್ವನು, ಮಾಯೆ ನಷ್ಟವಾಗಲು, ಸೌಭದಲ್ಲಿ ಕಾಣಿಸಿದನು. ಅವನ ನಿಶಿತ ಬಾಣಗಳಿಂದ ಗಾಯಗೊಂಡು ನೊಂದ ದಾರುಕನನ್ನು, ನನ್ನ ಕೈಯಿಂದ ಮುಟ್ಟಿ ಸ್ವಸ್ಥಗೊಳಿಸಿದೆನು.

"ಆಗ ನಡೆದ ಆಶ್ಚರ್ಯವನ್ನು ಕೇಳು ! ಆಹುಕರಾಜನು ದ್ವಾರಕೆಯಿಂದ ಕಳಿಸಿದ ದೂತನೊಬ್ಬನು ಬಂದು, 'ಕೃಷ್ಣ ! ಮಾಯಾಯುದ್ಧವಿಶಾರದನಾದ ಸಾಲ್ವನು ಬಂದು, ಯಾರಿಗೂ ತಿಳಿಯಗೊಡದಂತೆ ವಸುದೇವನನ್ನು ಕೊಂದು, ಅವನ ದೇಹವನ್ನೆತ್ತಿಕೊಂಡು, ಪಲಾಯನಗೈದನು. ಇನ್ನು ಯುದ್ಧವನ್ನು ನಿಲ್ಲಿಸಿ, ಬೇಗ ಹಿಂದಿರುಗು' ಎಂದು ಆಹುಕರಾಜನ ಸಂದೇಶವನ್ನು ನನಗೆ ತಿಳಿಸಿದನು. ಅದೇ ಸಮಯದಲ್ಲಿ ಸಾಲ್ವನು ಸೌಭದಲ್ಲಿ ನಿಂತು, 'ಕೃಷ್ಣಾ ! ನೋಡಿಲ್ಲಿ ! ಎಂದು ಒದರಿ ವಸುದೇವನ ಶರೀರವನ್ನು ಕೆಳಗೆ ಕೆಡಹಿದನು. ಆ ಘೋರವನ್ನು ನೋಡಿ ನನಗೆ ಕಣ್ಣಿಗೆ ಕತ್ತಲು ಕವಿದಂತಾಯಿತು. ದಿಕ್ಕು ತೋಚದೆ, ಅವಶನಾಗಿ ರಥದಲ್ಲಿ ಬಿದ್ದು ಮೂರ್ಛೆ ಹೊಂದಿದೆನು. ಕೇಳು ಧರ್ಮರಾಜ ! ಸ್ವಲ್ಪ ಹೊತ್ತಾದಮೇಲೆ ಎಚ್ಚೆತ್ತು ನೋಡಲು ಸೌಭವೂ ಇಲ್ಲ ; ದೂತನೂ ಇಲ್ಲ ; ಸಾಲ್ವನೂ ಮಾಯವಾಗಿದ್ದನು. ಇದನ್ನೆಲ್ಲವನ್ನೂ ನಂಬದ ಸರ್ವಜ್ಞನಾದ ನನಗೆ ಮೂರ್ಛೆ ಬಂದಿತೆಂದರೆ ಸಾಲ್ವನನ್ನು ವಂಚಿಸಲೆಂದೇ ತಿಳಿ ! ಅಪ್ರಾಕೃತ ಮಂಗಳವಿಗ್ರಹನಾದ ನನಗೆ ಕ್ಷತಿಯಿಲ್ಲ ; ಮೋಹವಿಲ್ಲ ; ಸೋಲಿಲ್ಲ ; ಆದರೂ ದುಷ್ಟಜನ ಮೋಹಕನಾಗಿ, ಇಂತು ನಟಿಸುವುದೆನ್ನ ಲೀಲೆ !

"ಮತ್ತೆ ಯುದ್ಧಸನ್ನದ್ಧನಾದ ನನ್ನನ್ನು ನೋಡಿ, ಸಾಲ್ವನು ಪರ್ವತವರ್ಷವನ್ನು ಮಾಡಿದನು. ಲೋಕೋಪದ್ರವಕಾರಿಯಾದ ಆ ದುಷ್ಟನನ್ನು ಸಂಹರಿಸಲು ನಿಶ್ಚಯಿಸಿ, ನಾನು ಇಂದ್ರಾಸ್ತ್ರದಿಂದ ಬೆಟ್ಟಗಳನ್ನು ನಾಶಮಾಡಿದೆನು ; ಚಕ್ರದಿಂದ

ಸಾಲ್ವನ ಸೈನ್ಯವನ್ನು ಸಂಹರಿಸಿದೆನು. ಯುಗಾಂತ ಪಾವಕನಂತೆ ಜಿಹ್ವಾಮಾಲಾ ಭೀಲವಾದ ಚಕ್ರವನ್ನು ಪ್ರಯೋಗಿಸಿ, ಪಾಪಿ ದೈತ್ಯನ ಸೌಭವಿಮಾನವನ್ನು ಎರಡು ಹೋಳಾಗಿಸಿ, ಸಮುದ್ರದಲ್ಲಿ ಕೆಡಹಿದೆನು. ಆಗ ಸಾಲ್ವನು ಗದೆಯನ್ನೆತ್ತಿ ಮೇಲೇರಿ ಬರುವುದನ್ನು ಕಂಡು, ಬಾಣದಿಂದ ಅವನ ಕೈಯನ್ನು ಕತ್ತರಿಸಿ, ಗದೆಯಿಂದ ರಥ ವನ್ನು ಮುರಿದು, ಚಕ್ರದಿಂದ ಅವನ ಶಿರಸ್ಸನ್ನು ಖಂಡಿಸಿದೆನು. ದಾನವರು ಹಾಹಾ ಕಾರ ಮಾಡುತ್ತಾ ಓಡಿಹೋದರು. ಪಾಂಚಜನ್ಯನಾದವನ್ನು ಮಾಡಿ ನಾನು ನಮ್ಮ ವರ ಮನಸ್ಸಿಗೆ ಹರ್ಷವನ್ನುಂಟುಮಾಡಿ, ಅವರಿಂದ ಕೂಡಿ ದ್ವಾರಕೆಗೆ ಬಂದೆನು. ಅಲ್ಲಿ ನೀವು ವನವಾಸದಲ್ಲಿರುವುದನ್ನರಿತು, ಶೀಘ್ರವಾಗಿ ನಿಮ್ಮನ್ನು ನೋಡಿ ಸಂತೈ ಸಲು ಬಂದೆನು."

ಇಂತು ನುಡಿದು ಲೀಲಾಮನುಜನಾದ ಶ್ರೀಕೃಷ್ಣನು ತಾನಿದ್ದರೆ, ಈ ಅನರ್ಥ ಗಳಾಗುತ್ತಿದ್ದಿಲ್ಲವೆಂದು, ಪಾಂಡವರನ್ನು ಸಮಾಧಾನ ಪಡಿಸಿದನು. ಕೆಲದಿನವಿದ್ದು ಶ್ರೀಶನು ಧರ್ಮರಾಜನಿಗೆ ವಂದಿಸಿ, ಭೀಮಸೇನನನ್ನು ಪ್ರೀತಿಯಿಂದ ಆಲಂಗಿಸಿ, ಅರ್ಜುನನನ್ನು ಬಿಗಿದಪ್ಪಿ, ನಕುಲ ಸಹದೇವರನ್ನಾಶೀರ್ವದಿಸಿದನು. ದ್ರೌಪದಿಯನ್ನು 'ಬರುವೆ'ನೆಂದು ಬೀಳ್ಕೊಂಡನು. ಧೌಮ್ಯನಿಗೆ ನಮಸ್ಕರಿಸಿ, ಸುಭದ್ರಾಭಿಮನ್ಯು ಕುಮಾರರನ್ನು ರಥದಲ್ಲಿ ಕೂಡಿಸಿಕೊಂಡು, ದ್ವಾರಕೆಗೆ ತೆರಳಿದನು. ಧೃಷ್ಟದ್ಯುಮ್ನನು ದ್ರೌಪದೀ ಸುತರನ್ನು ಕರೆದುಕೊಂಡು ಪಾಂಚಾಲಪುರಿಗೂ, ಧೃಷ್ಟಕೇತುವು ತಂಗಿ ಯಾದ ದೇವಕಿಯನ್ನು(ಧರ್ಮಪತ್ನಿ) ಕರೆದುಕೊಂಡು ಚೇದಿಪುರಿಗೂ, ಕಾಶಿರಾಜನು ಕಾಳೀದೇವಿ (ಭೀಮಪತಿ) ಯನ್ನು ಕರೆದುಕೊಂಡು ಕಾಶಿಗೂ ಹೊರಟರು. ನಕುಲ ಪತ್ನಿಯಾದ ಪಾರ್ವತಿಯೂ (ಊರ್ವಶೀ ಅವತಾರ) ಮತ್ತು ಶಲ್ಯ ರಾಜ ಪುತ್ರಿಯು, ಸಹದೇವನ ಹೆಂಡತಿಯಾದ ಮಗಧ ರಾಜಪುತ್ರಿಯು ಕುಂತಿಯನ್ನು ಸೇವಿಸುತ್ತಾ, ವಿದುರನ ಮನೆಯಲ್ಲೇ ಇದ್ದರು. ದ್ರೌಪದೇಯರೂ ಕೆಲದಿನ ಪಾಂಚಾಲಪುರಿಯಲ್ಲಿದ್ದು, ಅನಂತರ ದ್ವಾರಕೆಗೆ ಹೋಗಿ, ಶ್ರೀಕೃಷ್ಣ ಸನ್ನಿಧಿಯಲ್ಲಿ ನಿವಸಿಸುತ್ತಿದ್ದರು.

ಶ್ರೀಕೃಷ್ಣನು ಮನುಜಮಧ್ಯದಿ ಅವತಾರವನ್ನೆತ್ತಿ ಬಂದಾಗ ಮನುಜರಂತೆ ವರ್ತಿಸುವನು. ಭಗವಂತನ ಸಂಕಲ್ಪವೇ ಅಂತು ; ಅವನು ದೇಶ ಕಾಲ ಗುಣಗಳಿಂದ ಅಪರಿಚ್ಛಿನ್ನನು–ನಿರ್ದೋಷನು. ಆದರೂ ದುಷ್ಟಜನ ಮೋಹನನಾಗಿ ಅವನು ಮೂರ್ಖಾದಿಗಳನ್ನು ಪ್ರದರ್ಶಿಸುವನು. ಅವನ ಬಂಧಕ ಶಕ್ತಿಯನ್ನರಿಯದೆ ಶ್ರೀಕೃಷ್ಣನು ಸಾಮಾನ್ಯ ಮನುಜನೆಂದು ತಿಳಿದು, ದುಷ್ಟರು ಅವನನ್ನು ಜಯಿಸಲು ಮತ್ತು ವಧಿಸಲು ಪ್ರಯತ್ನಿಸಿ ವಿಫಲರಾಗಿ, ಭಗವದ್ದ್ವೇಷದಿಂದ ತಮಸ್ಸನ್ನು ಹೊಂದು ವರು. ಸಜ್ಜನರೂ ಅವನನ್ನು ಮನುಜನೆಂದು ತಿಳಿದು ಅಪಚರಿಸಿದರೂ, ಮತ್ತೆ ತಿಳಿದು ಭಜಿಸಿ, ಮುಕ್ತರಾಗುವರು. ಅವರ ಯೋಗ್ಯತೆಗೆ ಮೀರಿದ ಪುಣ್ಯವನ್ನು ಕಸಿದು, ಅದನ್ನು ಉತ್ತಮರಿಗೆ ನೀಡುವ ದೇವನು ವಿಷಮನಲ್ಲ ; ರಾಜರಿಗೆ ಅಧರ್ಮವಾದ

ದ್ಯೂತದಲ್ಲಿ ಪ್ರವೃತ್ತನಾದ ಧರ್ಮರಾಜನ ರಾಜಸೂಯಯಾಗ ಪ್ರಾಪ್ತವಾದ ಪುಣ್ಯವನ್ನು ಯೋಗ್ಯತೆಗೆ ತಕ್ಕಂತೆ ಕೊಟ್ಟು, ಹೆಚ್ಚಾದುದನ್ನು, ಧರ್ಮನ ಅನುಸರಣದಿಂದ ಗುಣಾಧಿಕರಾದ ಭೀಮಾದಿಗಳಿಗೆ ಕೊಟ್ಟು, ಸರ್ವಸಮನಾದ ದೇವನು ನಿಷ್ಕರುಣನೂ ಅಲ್ಲ. ದ್ರೌಪದಿಯು ಮಹಾಸಂಕಟದಲ್ಲಿಯೂ ಧರ್ಮಾನುಸರಣವನ್ನವಲಂಬಿಸಿ ಸುಮ್ಮನಿದ್ದ ಭೀಮನ ಮನಸ್ಸನ್ನರಿತು, ಕೌರವರಿಗೆ ಶಾಪವನ್ನು ಕೊಡಲಿಲ್ಲ; ಆದುದರಿಂದಲೇ ಪಾಪವನ್ನು ತಡೆಯದೆ ಸುಮ್ಮನಿದ್ದ ಭೀಷ್ಮದ್ರೋಣರ ಯೋಗ್ಯತಾತಿರಿಕ್ತಪುಣ್ಯವನ್ನು ಕಸಿದು, ಸ್ವಾಮಿಯು ಆಕೆಗಿತ್ತನು. ಗುಣದೋಷ ವಿಚಾರಶೀಲನಲ್ಲವೇ ನಿಷ್ಪಕ್ಷಪಾತಿ ಎನಿಸುವುದು !

ಅಂದಿನಿಂದ ಧರ್ಮರಾಜನು ನಿರ್ವಿಣ್ಣನಾಗಿ, ದ್ರೌಪದಿಯ ಸಂಗವನ್ನು ಬಿಟ್ಟು ಆಕೆಯನ್ನು ಭೀಮಪತ್ನಿ ಎಂದೇ ತಿಳಿದಿದ್ದನು. ಅವನ ಆಜ್ಞಾಪ್ರಕಾರ ಭೀಮಾದಿಗಳು ವಿಪ್ರಭೋಜನವಾದಮೇಲೆ ತಾವು ಉಣ್ಣುತ್ತಿದ್ದರು. ಅನಂತರ ಧರ್ಮರಾಜನು, ಆಮೇಲೆ ದ್ರೌಪದಿಯು ಭುಜಿಸುತ್ತಿದ್ದರು. ಇಂತು ಶ್ರೀಹರಿ ಸಮರ್ಪಿತ ವ್ಯಾಖ್ಯಾನ್ನವನ್ನು ಸ್ವೀಕರಿಸಿ, ಶ್ರೀಹರಿಕಥಾ ಶ್ರವಣಾಸಕ್ತರಾಗಿ ಪಾಂಡವರು ಒಂದು ವರ್ಷವನ್ನು ಕಾಮ್ಯಕವನದಲ್ಲಿ ಕಳೆದರು.

## ದ್ರೌಪದೀ-ಭೀಮ-ಧರ್ಮ ಸಂವಾದ

ಪಾಂಡವರು ಕಾಮ್ಯಕವನವನ್ನು ಬಿಟ್ಟು ದ್ವೈತವನಕ್ಕೆ ಪ್ರಯಾಣಮಾಡಲೆಣಿಸಿ, ವಿಪ್ರರಿಗೆ ಹಿರಣ್ಯರತ್ನವಸ್ತ್ರಗಳನ್ನು ದಾನಮಾಡಿ, ತಮ್ಮತಮ್ಮ ಆಯುಧಗಳಿಂದ ಕೂಡಿ ಹೊರಟರು. ಇಂದ್ರಸೇನಾದಿ ಸಾರಥಿಗಳು ಸುಭದ್ರಾಪರಿವಾರದಿಂದಲೂ ಅವರ ದಿವ್ಯಾಭರಣವಸ್ತ್ರಾದಿಗಳಿಂದಲೂ ಕೂಡಿ, ರಥಗಳಲ್ಲಿ ಕೂತು, ದ್ವಾರಕೆಗೆ ತೆರಳಿದರು. ಕುರುಜಾಂಗಲದ ಪೌರಜಾನಪದರು ಧರ್ಮಾದಿಗಳ ವಿಯೋಗವನ್ನು ತಡೆಯಲಾರದೆ ಅವರನ್ನು ತಡೆಯಲು ಯತ್ನಿಸಿದರು. ಹಾ! ಎಂದು ರೋದಿಸಿ, ದುರ್ಯೋಧನನನ್ನು ನಿಂದಿಸಿದರು. ಅರ್ಜುನನು 'ಹದಿಮೂರುವರ್ಷಗಳಾಗಲಿ ! ನಿಸ್ತೀರ್ಣಪ್ರತಿಜ್ಞರಾಗಿ ನಾವು ಶತ್ರುಸಂಹಾರವನ್ನು ಮಾಡುವೆವು. ನಿಮಗೆ ಶುಭವಾಗುವುದೆಂದು, ಅವರನ್ನು ಸಂತೈಸಿ, ಹಿಂದಿರುಗಿಸಿದನು. ಅನೇಕ ಪೌರರು, ಜಾನಪದರು, ಹಿಂದಿರುಗಿ ಹಸ್ತಿನಾವತಿ ಮುಂತಾದ ತಮ್ಮ ನಗರಗಳಿಗೆ ಹೋದರು. ಪಾಂಡವರು ದ್ರೌಪದೀ ಧೌಮ್ಯ ಸಮೇತರಾಗಿ ಪುಣ್ಯಜಲ ಸಮೃದ್ಧವೂ, ಶೋಕಮೋಹಾದಿ ದೋಷನಾಶಕವೂ, ಶಾಂತವೂ ಆದ ದ್ವೈತವನವನ್ನು ಕುರಿತು ತೆರಳಿದರು. ಅನೇಕ ಯತಿಗಳು ಸದ್ಗೃಹಸ್ಥರೂ ಆದ ವಿಪ್ರರು ಅವರನ್ನು ಹಿಂಬಾಲಿಸಿದರು. ಸತ್ಯಸಂಧನಾದ ಧರ್ಮರಾಜನ ಆಶ್ರಯದಲ್ಲಿ ಅವರು ಸುಖವಾಗಿ ದ್ವೈತವನದಲ್ಲಿದ್ದು ಅವನಿಗೆ ಪುಣ್ಯಕಥೆಗಳನ್ನು ಹೇಳುತ್ತಿದ್ದರು.

ಸಾಲ್ವನ ಸೈನ್ಯವನ್ನು ಸಂಹರಿಸಿದೆನು. ಯುಗಾಂತ ಪಾವಕನಂತೆ ಜಿಹ್ವಾಮಾಲಾ ಭೀಲವಾದ ಚಕ್ರವನ್ನು ಪ್ರಯೋಗಿಸಿ, ಪಾಪಿ ದೈತ್ಯನ ಸೌಭವಿಮಾನವನ್ನು ಎರಡು ಹೋಳಾಗಿಸಿ, ಸಮುದ್ರದಲ್ಲಿ ಕೆಡಹಿದೆನು. ಆಗ ಸಾಲ್ವನು ಗದೆಯನ್ನೆತ್ತಿ ಮೇಲೇರಿ ಬರುವುದನ್ನು ಕಂಡು, ಬಾಣದಿಂದ ಅವನ ಕೈಯನ್ನು ಕತ್ತರಿಸಿ, ಗದೆಯಿಂದ ರಥ ವನ್ನು ಮುರಿದು, ಚಕ್ರದಿಂದ ಅವನ ಶಿರಸ್ಸನ್ನು ಖಂಡಿಸಿದೆನು. ದಾನವರು ಹಾಹಾ ಕಾರ ಮಾಡುತ್ತಾ ಓಡಿಹೋದರು. ಪಾಂಚಜನ್ಯನಾದವನ್ನು ಮಾಡಿ ನಾನು ನಮ್ಮ ವರ ಮನಸ್ಸಿಗೆ ಹರ್ಷವನ್ನುಂಟುಮಾಡಿ, ಅವರಿಂದ ಕೂಡಿ ದ್ವಾರಕೆಗೆ ಬಂದೆನು. ಅಲ್ಲಿ ನೀವು ವನವಾಸದಲ್ಲಿರುವುದನ್ನರಿತು, ಶೀಘ್ರವಾಗಿ ನಿಮ್ಮನ್ನು ನೋಡಿ ಸಂತೈ ಸಲು ಬಂದೆನು."

ಇಂತು ನುಡಿದು ಲೀಲಾಮನುಜನಾದ ಶ್ರೀಕೃಷ್ಣನು ತಾನಿದ್ದರೆ, ಈ ಅನರ್ಥ ಗಳಾಗುತ್ತಿದ್ದಿಲ್ಲವೆಂದು, ಪಾಂಡವರನ್ನು ಸಮಾಧಾನ ಪಡಿಸಿದನು. ಕೆಲದಿನವಿದ್ದು ಶ್ರೀಶನು ಧರ್ಮರಾಜನಿಗೆ ವಂದಿಸಿ, ಭೀಮಸೇನನನ್ನು ಪ್ರೀತಿಯಿಂದ ಆಲಂಗಿಸಿ, ಅರ್ಜುನನನ್ನು ಬಿಗಿದಪ್ಪಿ, ನಕುಲ ಸಹದೇವರನ್ನಾಶೀರ್ವದಿಸಿದನು. ದ್ರೌಪದಿಯನ್ನು 'ಬರುವೆ'ನೆಂದು ಬೀಳ್ಕೊಂಡನು. ಧೌಮ್ಯನಿಗೆ ನಮಸ್ಕರಿಸಿ, ಸುಭದ್ರಾಭಿಮನ್ಯು ಕುಮಾರರನ್ನು ರಥದಲ್ಲಿ ಕೂಡಿಸಿಕೊಂಡು, ದ್ವಾರಕೆಗೆ ತೆರಳಿದನು. ಧೃಷ್ಟದ್ಯುಮ್ನನು ದ್ರೌಪದೀ ಸುತರನ್ನು ಕರೆದುಕೊಂಡು ಪಾಂಚಾಲಪುರಿಗೂ, ಧೃಷ್ಟಕೇತುವು ತಂಗಿ ಯಾದ ದೇವಕಿಯನ್ನು (ಧರ್ಮಪತ್ನಿ) ಕರೆದುಕೊಂಡು ಚೇದಿಪುರಿಗೂ, ಕಾಶಿರಾಜನು ಕಾಳೀದೇವಿ (ಭೀಮಸತಿ) ಯನ್ನು ಕರೆದುಕೊಂಡು ಕಾಶಿಗೂ ಹೊರಟರು. ನಕುಲ ಪತ್ನಿಯಾದ ಪಾರ್ವತಿಯು (ಊರ್ವಶೀ ಅವತಾರ) ಮತ್ತು ಶಲ್ಯ ರಾಜ ಪುತ್ರಿಯು, ಸಹದೇವನ ಹೆಂಡತಿಯಾದ ಮಗಧ ರಾಜಪುತ್ರಿಯು ಕುಂತಿಯನ್ನು ಸೇವಿಸುತ್ತಾ, ವಿದುರನ ಮನೆಯಲ್ಲೇ ಇದ್ದರು. ದ್ರೌಪದೇಯರೂ ಕೆಲದಿನ ಪಾಂಚಾಲಪುರಿಯಲ್ಲಿದ್ದು, ಅನಂತರ ದ್ವಾರಕೆಗೆ ಹೋಗಿ, ಶ್ರೀಕೃಷ್ಣ ಸನ್ನಿಧಿಯಲ್ಲಿ ನಿವಸಿಸುತ್ತಿದ್ದರು.

ಶ್ರೀಕೃಷ್ಣನು ಮನುಜಮಧ್ಯದಿ ಅವತಾರವನ್ನೆತ್ತಿ ಬಂದಾಗ ಮನುಜರಂತೆ ವರ್ತಿಸುವನು. ಭಗವಂತನ ಸಂಕಲ್ಪವೇ ಅಂತು ; ಅವನು ದೇಶ ಕಾಲ ಗುಣಗಳಿಂದ ಅಪರಿಚ್ಛಿನ್ನನು—ನಿರ್ದೋಷನು. ಆದರೂ ದುಷ್ಟಜನ ಮೋಹನನಾಗಿ ಅವನು ಮೂರ್ಭಾದಿಗಳನ್ನು ಪ್ರದರ್ಶಿಸುವನು. ಅವನ ಬಂಧಕ ಶಕ್ತಿಯನ್ನರಿಯದೆ ಶ್ರೀಕೃಷ್ಣನು ಸಾಮಾನ್ಯ ಮನುಜನೆಂದು ತಿಳಿದು, ದುಷ್ಟರು ಅವನನ್ನು ಜಯಿಸಲು ಮತ್ತು ವಧಿಸಲು ಪ್ರಯತ್ನಿಸಿ ವಿಫಲರಾಗಿ, ಭಗವದ್ದ್ವೇಷದಿಂದ ತಮಸ್ಸನ್ನು ಹೊಂದು ವರು. ಸಜ್ಜನರೂ ಅವನನ್ನು ಮನುಜನೆಂದು ತಿಳಿದು ಅಪಚರಿಸಿದರೂ, ಮತ್ತೆ ತಿಳಿದು ಭಜಿಸಿ, ಮುಕ್ತರಾಗುವರು. ಅವರ ಯೋಗ್ಯತೆಗೆ ಮೀರಿದ ಪುಣ್ಯವನ್ನು ಕಸಿದು, ಅದನ್ನು ಉತ್ತಮರಿಗೆ ನೀಡುವ ದೇವನು ವಿಷಮನಲ್ಲ ; ರಾಜರಿಗೆ ಅಧರ್ಮವಾದ

ದ್ಯೂತದಲ್ಲಿ ಪ್ರವೃತ್ತನಾದ ಧರ್ಮರಾಜನ ರಾಜಸೂಯಯಾಗ ಪ್ರಾಪ್ತವಾದ ಪುಣ್ಯ ವನ್ನು ಯೋಗ್ಯತೆಗೆ ತಕ್ಕಂತೆ ಕೊಟ್ಟು, ಹೆಚ್ಚಾದುದನ್ನು, ಧರ್ಮನ ಅನುಸರಣ ದಿಂದ ಗುಣಾಧಿಕರಾದ ಭೀಮಾದಿಗಳಿಗೆ ಕೊಟ್ಟು, ಸರ್ವಸಮನಾದ ದೇವನು ನಿಷ್ಕರುಣನೂ ಅಲ್ಲ. ದ್ರೌಪದಿಯು ಮಹಾಸಂಕಟದಲ್ಲಿಯೂ ಧರ್ಮಾನುಸರಣವನ್ನ ವಲಂಬಿಸಿ ಸುಮ್ಮನಿದ್ದ ಭೀಮನ ಮನಸ್ಸನ್ನರಿತು, ಕೌರವರಿಗೆ ಶಾಪವನ್ನು ಕೊಡ ಲಿಲ್ಲ; ಆದುದರಿಂದಲೇ ಪಾಪವನ್ನು ತಡೆಯದೆ ಸುಮ್ಮನಿದ್ದ ಭೀಷ್ಮದ್ರೋಣರ ಯೋಗ್ಯತಾತಿರಿಕ್ತ ಪುಣ್ಯವನ್ನು ಕಸಿದು, ಸ್ವಾಮಿಯು ಆಕೆಗಿತ್ತನು. ಗುಣದೋಷ ವಿಚಾರಶೀಲನಲ್ಲವೇ ನಿಷ್ಪಕ್ಷಪಾತಿ ಎನಿಸುವುದು !

ಅಂದಿನಿಂದ ಧರ್ಮರಾಜನು ನಿರ್ವಿಣ್ಣನಾಗಿ, ದ್ರೌಪದಿಯ ಸಂಗವನ್ನು ಬಿಟ್ಟು ಆಕೆಯನ್ನು ಭೀಮಪತ್ನಿ ಎಂದೇ ತಿಳಿದಿದ್ದನು. ಅವನ ಆಜ್ಞಾಪ್ರಕಾರ ಭೀಮಾದಿ ಗಳು ವಿಪ್ರಭೋಜನವಾದಮೇಲೆ ತಾವು ಉಣ್ಣುತ್ತಿದ್ದರು. ಅನಂತರ ಧರ್ಮರಾಜನು, ಆಮೇಲೆ ದ್ರೌಪದಿಯು ಭುಜಿಸುತ್ತಿದ್ದರು. ಇಂತು ಶ್ರೀಹರಿ ಸಮರ್ಪಿತ ನೈಷ್ಟಾನ್ನ ವನ್ನು ಸ್ವೀಕರಿಸಿ, ಶ್ರೀಹರಿಕಥಾ ಶ್ರವಣಾಸಕ್ತರಾಗಿ ಪಾಂಡವರು ಒಂದು ವರ್ಷ ವನ್ನು ಕಾಮ್ಯಕವನದಲ್ಲಿ ಕಳೆದರು.

## ದ್ರೌಪದೀ-ಭೀಮ-ಧರ್ಮ ಸಂವಾದ

ಪಾಂಡವರು ಕಾಮ್ಯಕವನವನ್ನು ಬಿಟ್ಟು ದ್ವೈತವನಕ್ಕೆ ಪ್ರಯಾಣಮಾಡ ಲೆಣಿಸಿ, ವಿಪ್ರರಿಗೆ ಹಿರಣ್ಯರತ್ನವಸ್ತ್ರಗಳನ್ನು ದಾನಮಾಡಿ, ತಮ್ಮ ತಮ್ಮ ಆಯುಧ ಗಳಿಂದ ಕೂಡಿ ಹೊರಟರು. ಇಂದ್ರಸೇನಾದಿ ಸಾರಥಿಗಳು ಸುಭದ್ರಾ ಪರಿವಾರದಿಂದಲೂ ಅವರ ದಿವ್ಯಾಭರಣವಸ್ತ್ರಾದಿಗಳಿಂದಲೂ ಕೂಡಿ, ರಥಗಳಲ್ಲಿ ಕೂತು, ದ್ವಾರಕೆಗೆ ತೆರಳಿ ದರು. ಕುರುಜಾಂಗಲದ ಪೌರಜಾನಪದರು ಧರ್ಮಾದಿಗಳ ವಿಯೋಗವನ್ನು ತಡೆಯ ಲಾರದೆ ಅವರನ್ನು ತಡೆಯಲು ಯತ್ನಿಸಿದರು. ಹಾ! ಎಂದು ರೋದಿಸಿ, ದುರ್ಯೋಧನ ನನ್ನು ನಿಂದಿಸಿದರು. ಅರ್ಜುನನು 'ಹದಿಮೂರುವರ್ಷಗಳಾಗಲಿ ! ನಿಸ್ತೀರ್ಣಪ್ರತಿಜ್ಞ ರಾಗಿ ನಾವು ಶತ್ರುಸಂಹಾರವನ್ನು ಮಾಡುವೆವು. ನಿಮಗೆ ಶುಭವಾಗುವುದೆಂದು, ಅವರನ್ನು ಸಂತೈಸಿ, ಹಿಂದಿರುಗಿಸಿದನು. ಅನೇಕ ಪೌರರು, ಜಾನಪದರು, ಹಿಂದಿರುಗಿ ಹಸ್ತಿನಾವತಿ ಮುಂತಾದ ತಮ್ಮ ನಗರಗಳಿಗೆ ಹೋದರು. ಪಾಂಡವರು ದ್ರೌಪದೀ ಧೌಮ್ಯ ಸಮೇತರಾಗಿ ಪುಣ್ಯಜಲ ಸಮೃದ್ಧವೂ, ಶೋಕಮೋಹಾದಿ ದೋಷ ನಾಶಕವೂ, ಶಾಂತವೂ ಆದ ದ್ವೈತವನವನ್ನು ಕುರಿತು ತೆರಳಿದರು. ಅನೇಕ ಯತಿ ಗಳು ಸದ್ಗೃಹಸ್ಥರೂ ಆದ ವಿಪ್ರರು ಅವರನ್ನು ಹಿಂಬಾಲಿಸಿದರು. ಸತ್ಯಸಂಧನಾದ ಧರ್ಮರಾಜನ ಆಶ್ರಯದಲ್ಲಿ ಅವರು ಸುಖವಾಗಿ ದ್ವೈತವನದಲ್ಲಿದ್ದು ಅವನಿಗೆ ಪುಣ್ಯ ಕಥೆಗಳನ್ನು ಹೇಳುತ್ತಿದ್ದರು.

ಒಂದು ದಿನ ಮಾರ್ಕಂಡೇಯನು ಅವರ ಆಶ್ರಮಕ್ಕೆ ಬಂದನು. ಧರ್ಮರಾಜನು ಆ ಪುರಾಣಋಷಿಯನ್ನು ಪೂಜಿಸಿ ಆಸನವಿತ್ತನು. ಮಾರ್ಕಂಡೇಯನು ದ್ರೌಪದಿಯನ್ನು ನೋಡಿ, ಪಾಂಡವರು ಅಜಿನಾಂಬರಗಳನ್ನು ಧರಿಸಿರುವುದನ್ನು ನೋಡಿ, ಮನ ನೊಂದನು. ಶ್ರೀರಾಮನ ವನವಾಸವನ್ನು ನೆನೆದು, ಆ ಮಹಾಮುನಿಯು ತನ್ನಲ್ಲಿ ತಾನೇ ನಕ್ಕು, ಧರ್ಮರಾಜನಿಗಿಂತೆಂದನು—"ರಾಜನ್ ! ಹಿಂದೆ ದಶರಥ ಸುತನಾದ ರಾಮನು ತಂದೆಯ ಮಾತಿಗೆ ಶಿರಬಾಗಿ, ಸೀತಾಲಕ್ಷ್ಮಣರೊಡನೆ ವನವಾಸವನ್ನು ಮಾಡಿದನು. ಇಂದ್ರ ಸಮಾನ ತೇಜನು, ಯಮ ರುದ್ರ ವಿರಿಂಚಾದಿ ದೇವ ನಿಯಾಮಕನು, ನಮುಚಿ ಹಿರಣ್ಯಕಾದಿ ದೈತ್ಯ ಸಂಹಾರಕನು ಆದ ಶ್ರೀರಾಮನಿಗೆ ವನವಾಸವಾಯಿತಲ್ಲ ಎಂದು ಮನದಲ್ಲೇ ನಕ್ಕನು. ಶ್ರೀಭಗವಂತನೂ ಸತ್ಯಬದ್ಧನಾಗಿ ನಡೆದನೆಂದರೆ ಇತರರ ಪಾಡೇನು ? ನಾಭಾಗ ಭಗೀರಥ ಹರಿಶ್ಚಂದ್ರ ಪ್ರಮುಖ ರಾಜನ್ಯರು ಸತ್ಯಕ್ಕಾಗಿ ತಮ್ಮ ತಮ್ಮ ರಾಜ್ಯಾದಿ ಸರ್ವಸ್ವವನ್ನೂ ಪರಿತ್ಯಜಿಸಿದರು. ಭದ್ರಗಜಗಳು ವನದಲ್ಲೇ ಸಂಚರಿಸುತ್ತಿವೆ. ಸಮುದ್ರವು ವೇಲೆಯನ್ನು ದಾಟದೆ ಇದೆ. ಸಪ್ತರ್ಷಿಗಳು ತಮ್ಮ ಕಕ್ಷವನ್ನು ಬಿಡದೆ ಸೂರ್ಯ ಮೇರು ಪ್ರದಕ್ಷಿಣವನ್ನು ಮಾಡುತ್ತಿರುವರು. ಬಲವಂತ ನಾನೆಂದು ಸತ್ಯಧರ್ಮಗಳನ್ನು ಮೀರಿ ನಡೆಯದಿರುವವರೆಲ್ಲ ಸುಜನರು. ನೀನು ಸತ್ಯ ಧರ್ಮರತನಿರುವೆ. ಅಗ್ನಿ ಭಾಸ್ಕರ ತೇಜಸ್ಕರಾದ ನಿಮಗೆ ವನವಾಸವು ನಿರಾಯಾಸವಾಗಿ ಕಳೆಯುವುದು. ಕೊನೆಗೆ ದುಷ್ಟ ಕೌರವರನ್ನು ಗೆದ್ದು, ನಿನ್ನ ರಾಜ್ಯವನ್ನು ನೀನು ಹೊಂದುವೆ, ಚಿಂತಿಸಬೇಡ !" ಎಂದು ಉಪದೇಶಿಸಿ, ಮಾರ್ಕಂಡೇಯನು ಹೊರಟುಹೋದನು.

ಋಗಾದಿಚತುರರಾದ ಬ್ರಾಹ್ಮಣವರರ ವೇದಘೋಷದಿಂದಲೂ ಪಾಂಡವರ ದುಷ್ಟಜನ ಭಯಂಕರ ಜ್ಯಾಘೋಷದಿಂದಲೂ ದ್ವೈತವನವು ಪ್ರತಿಧ್ವನಿಸಿತು. ಬಕ-ದಾಲ್ಭ್ಯನೆಂಬ ಮಹರ್ಷಿಯು ಒಂದು ದಿನ ಸಾಯಂಕಾಲ ಅಲ್ಲಿಗೆ ಬಂದನು. ಧರ್ಮರಾಜಾಶ್ರಯದಲ್ಲಿ ಬ್ರಾಹ್ಮಣರು ನಿತ್ಯಪೂಜಾ, ಹೋಮ, ವೇದಾಧ್ಯಯನಗಳನ್ನು ನಿರ್ವಿಘ್ನವಾಗಿ ನಡೆಸುತ್ತಿರುವುದನ್ನು ಕಂಡು, ಆ ಮಹಾನುಭಾವನಿಗೆ ಸಂತಸವಾಯಿತು. "ಪಾರ್ಥ ! ಬ್ರಾಹ್ಮಣರನ್ನು ಪೋಷಿಸಿ, ಅವರ ಪುಣ್ಯಕಾರ್ಯಗಳನ್ನು ನಿರ್ವಿಘ್ನವಾಗಿ ನಡೆಯಗೊಡುವ ರಾಜನು ಉಭಯಲೋಕಸುಖಭಾಜನನಾಗುವನು. ವಿಪ್ರವಿದ್ವೇಷಿ ರಾಜನಿಗೆ ಈ ಲೋಕದಲ್ಲಿ ಅಪಕೀರ್ತಿಯು, ಪರಲೋಕದಲ್ಲಿ ನರಕವು ತಪ್ಪದು. ವಿಪ್ರರಿಗೆ ರಾಜರು ಆಶ್ರಿತರು ; ರಾಜರಿಗೆ ವಿಪ್ರರು ಶ್ರೇಯೋದಾಯಕರು. ಪರಸ್ಪರಾಶ್ರಯವಾಗಿ ವಿಪ್ರಕ್ಷತ್ರವು ಶೋಭಿಸುವುದು. ಮುಖಬಾಹುಗಳಂತೆ ಅನ್ಯೋನ್ಯರಕ್ಷಕರಾಗಿದ್ದ ವಿಪ್ರಕ್ಷತ್ರಿಯರಿಂದ ಅಂಗಪ್ರಾಯರಾದ ಸರ್ವಜನರು ಸುಖಿಸುವರು. ಧರ್ಮಜ ! ನಿನ್ನ ವಿಪ್ರಭಕ್ತಿಯಿಂದ ಪ್ರೀತನಾಗಿರುವನು ಶ್ರೀಹರಿ !" ಎಂದು ಪ್ರಶಂಸಿಸಿ, ದಾಲ್ಭ್ಯನು ತನ್ನ ಆಶ್ರಮಕ್ಕೆ ತೆರಳಿದನು.

ಒಂದು ದಿನ ಭೀಮಸೇನನು ದ್ರೌಪದಿಯನ್ನು ಪ್ರೇರಿಸಿ, ಧರ್ಮರಾಜನನ್ನು ಸಂವಾದ ವ್ಯಾಜದಿಂದ ಶತ್ರುಸಂಹಾರ ದೀಕ್ಷಿತನನ್ನಾಗಿ ಮಾಡಲೆಣಿಸಿದನು ; ಇಲ್ಲದಿದ್ದರೆ ಮೃದುಭಾವನಾದ ಧರ್ಮನು ಧರ್ಮಯುದ್ಧವನ್ನೂ ಮಾಡದೆ, ಶ್ರೀಕೃಷ್ಣನ ಭೂಭಾರಹರಣ ಕಾರ್ಯದಲ್ಲಿ ತನ್ನ ಪಾಲಿನ ಸೇವೆಗೆ ಎರವಾಗುವನೆಂಬ ಶಂಕೆ ಭೀಮನಿಗೆ ಮೂಡಿತು. ಅವನು ಕಳಿಸಿದ ಕೃಷ್ಣೆ ಸಾಯಂಕಾಲದ ಕಥಾಪ್ರಸಂಗದಲ್ಲಿ ಧರ್ಮರಾಜನಿಗಿಂತೆಂದಳು—

"ರಾಜನ್ ! ನಿನ್ನನ್ನು ನೋಡಿ ನನಗೆ ವ್ಯಸನವಾಗುತ್ತಿದೆ. ಆ ಪಾಪಿ ದುರ್ಯೋಧನನಿತ್ತ ಅಸಹ್ಯ ವೇದನೆಯನ್ನೆಲ್ಲ ಮರೆತು ಸುಮ್ಮನಿರುವ ನಿನ್ನಲ್ಲಿ ಕನಿಕರವೂ ಮೂಡುತ್ತಿದೆ. ನಿನ್ನಂತಹ ಧರ್ಮಪರನಿಗೆ ಅಂತಹ ಕಟುವಚನಗಳನ್ನಾಡಿದ ಪಾಪಿಯ ನಾಲಿಗೆ ಸೀಳಿಬೀಳಲಿಲ್ಲ. ನೀನು ವನವಾಸಕ್ಕೆಂದು ವಲ್ಕಲಾಜಿನಗಳನ್ನು ಧರಿಸಿ ನಿಂತಾಗ ದುರ್ಯೋಧನ, ಪಾಪಿ ದುಶ್ಶಾಸನ, ಕರ್ಣ, ಶಕುನಿ ಈ ನಾಲ್ವರನ್ನು ಬಿಟ್ಟು, ಕಣ್ಣೀರಿಡದವರಿಲ್ಲ. ಹಂಸತೂಲಿಕಾತಲ್ಪದಲ್ಲಿ ಮಲಗುವ ಮಹಾರಾಜನಿಗೆ ಈ ಅಡವಿಯ ಹುಲ್ಲಿನ ಹಾಸಿಗೆಯೆ ? ಸಭೆಯಲ್ಲಿ ರತ್ನಸಿಂಹಾಸನಾಸೀನನಾಗಿದ್ದ ಚಕ್ರವರ್ತಿಗೆ ಕುಶಬೃಸಿಗಳಲ್ಲಿ ಕೂಡಬೇಕಾಯಿತೆ ? ರಾಜಮಧ್ಯದಲ್ಲಿ ವಂದಿತನಾಗಿ ಮೆರೆದ ಪಾಂಡುರಾಜ ಪುತ್ರನಿಗೆ ಕಾಡುಮೃಗಗಳು ಪರಿವಾರವಾಯಿತೆ ? ಚಂದನಗಂಧರೂಷಿತಬಾಹುವಾದ ಕುಂತೀಸುತನು ಅರಣ್ಯರಜಃಪಂಕದಿಗ್ಧಾಂಗನಾಗುವಂತಾಯಿತೆ ? ಸಾವಿರಾರು ಯತಿಗಳಿಗೆ ರುಕ್ಮಪಾತ್ರಗಳಲ್ಲಿ ಮೃಷ್ಟಾನ್ನವನ್ನಿತ್ತ ಮಹಾತ್ಮನು ಅನ್ನವಿರಹಿತನಾಗಿ ತಪಸ್ಸನ್ನು ಗೈದು, ಅಕ್ಷಯಪಾತ್ರೆಯನ್ನು ಪಡೆಯಬೇಕಾಯಿತೆ ? ಇಷ್ಟು ಕಷ್ಟಗಳನ್ನು ಕಣ್ಣಾರೆ ಕಂಡು ಒಡೆಯದೆ ಇರುವ ನನ್ನ ಗುಂಡಿಗೆ ಕಲ್ಲಿಗೂ ಕಠಿನವೆಂದು ತೋರುತ್ತದೆ. ಪಟ್ಟುಪುಟ್ಟವನ್ನುಟ್ಟು ಸರ್ವಾಭರಣಗಳನ್ನಿಟ್ಟು, ದಾಸೀಸಹಸ್ರವನ್ನು ಕಣ್ಣುಸನ್ನೆಯಲ್ಲಿಟ್ಟು ಮಯಸಭೆಯಲ್ಲಿ ಮೆರೆದ ಮಹಾರಾಣಿಗೆ, ನಿನ್ನನ್ನು ತನ್ನನ್ನು ವನವಾಸಕ್ಲೇಶದಿಂದ ನೊಂದು ನೋಡಿದಾಗ ಮನಶ್ಶಾಂತಿಯಾಗುವುದೆ ?

"ರತ್ನಕಂಕಣಾಲಂಕೃತಕರಪಲ್ಲವಗಳಿಂದ ಮೃಷ್ಟಾನ್ನವನ್ನು ಆದರದಿಂದ ನಿಮಗೆ ಬಡಿಸುವ ನಾನು ಈಗ ಕಂದಮೂಲ ಫಲಗಳನ್ನು ನೀಡುವಾಗ ಆಗುವ ದುಃಖವನ್ನು ಹೇಗೆ ತಡೆಯಲಿ ? ಸುಖಾರ್ಹನಾದ ಭೀಮಸೇನನು ವನವಾಸ ದುಃಖಿತನಾಗಿರಲು ನೋಡಿ ನಿನಗೆ ಒಮ್ಮೆಯಾದರೂ ಅನುತಾಪವಾಗದೆ ? ಸರ್ವ ಕೌರವರನ್ನು ರಣದಲ್ಲಿ ಕೊಲ್ಲಲು ಸಮರ್ಥನಾದ ಭೀಮನು ನಿನ್ನನ್ನು ಸತ್ಯಪ್ರತಿಜ್ಞನಾಗಿಸಲು ಸುಮ್ಮನಿರುವನು. ಇವನು ಶತ್ರುಬಾಣವನ್ನು ಲೆಕ್ಕಿಸದೆ, ಕೈಗಳಿಂದಲೇ ಕಸಿಮಸೆದುಕಾದು, ಪ್ರಳಯಾಂತಕನಂತೆ ಶತ್ರುಗಳನ್ನು ಸಂಹರಿಸಿ, ನಿನಗೆ ಜಯಲಕ್ಷ್ಮಿಯನ್ನು ತಂದು ಕೊಡುವನು. ದೇವ ದಾನವ ಜಯಶಾಲಿಯಾದ ಅರ್ಜುನನ ದುಃಖವೂ ಕೂಡ ನಿನಗೆ ಕಣ್ಣೀರ ತರಿಸಲಾರದಾಯಿತೆ? ಒಂದೇ ಸಲ ಐನೂರು ಬಾಣಗಳನ್ನು

ಕಾರುವ ಗಾಂಡೀವ ಧನುಸ್ಸನ್ನು ಹಿಡಿದು, ಶತ್ರುಜಯವನ್ನು ಪಡೆಯುವ ಅರ್ಜುನ ನನ್ನು ವನವಾಸ ಖಿನ್ನನಾಗಿರುವಂತೆ ಮಾಡಿದ ಕೌರವಹತಕರ ಮೇಲೆ ನಿನಗೇಕೆ ಸಿಟ್ಟಿಲ್ಲ? ದರ್ಶನೀಯನು ಶೂರನು ಆದ ನಕುಲನ ವನವಾಸದಿಂದ ನೀನು ನೊಂದಿಲ್ಲವೆ? ಸಹದೇವನ ಕಷ್ಟಪರಂಪರೆಗೆ ಕಾರಣರಾದ ಕೌರವರಮೇಲೂ ಕೃಪೆಯೆ? ದ್ರುಪದನ ಮನೆಯಲ್ಲಿ ಹುಟ್ಟಿ, ಪಾಂಡುರಾಜನ ಮನೆಯನ್ನು ಮೆಟ್ಟಿ, ಧೃಷ್ಟದ್ಯುಮ್ನನ ಬೆನ್ನು ಮುಟ್ಟಿ, ಪತಿಗಳೈವರಿಗೆ ಪತ್ನೀಕಂಕಣವನ್ನು ಕಟ್ಟಿ, ರಾಜಸೂಯಾವಭೃಥದಲ್ಲಿ ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನಿಟ್ಟ, ಈ ನಿನ್ನ ಸತಿಯು ಕೊರಗು ನಿನಗರ್ಥವಾಗದೆಹೋಯಿತೆ? ಬ್ರಾಹ್ಮಣನು ಕ್ಷಮಾಶರಣನು; ಕ್ಷತ್ರಿಯನು ಶಸ್ತ್ರಶರಣನು ಎಂದು ಕೇಳಿದ್ದೆನು. ಆ ಮಾತು ನಿನ್ನಲ್ಲಿ ಸುಳ್ಳಾಯಿತೆ? ದುಷ್ಟರಲ್ಲಿಯೂ ಕ್ರೋಧವಿಲ್ಲದ ಕ್ಷತ್ರಿಯನು ಸದಾ ಪರಿಭವಪಾತ್ರನಾಗುವನು. ಸಜ್ಜನರಲ್ಲಿ ಕ್ಷಮೆಯು ಪುಣ್ಯಹೇತುವಾಗುವುದು. ದುರ್ಜನರನ್ನು ಕ್ಷಮಿಸುವುದು ಪಾಪಹೇತುವಾಗಿದೆ. ನೀನು ಸುಜನ ದುರ್ಜನರನ್ನು ಸಮನಾಗಿ ಸರ್ವದಾ ಕ್ಷಮಿಸುತ್ತಿರುವೆ. ಇದು ವ್ಯರ್ಥವಲ್ಲವೆ?

"ಹಿಂದೆ ಪ್ರಹ್ಲಾದನನ್ನು ಬಲಿರಾಜನು ಕ್ಷಮಾತೇಜಗಳಲ್ಲಿ ಶ್ರೇಯಸ್ಕರವಾವು ದೆಂದು ಕೇಳಿದನು. ಪ್ರಹ್ಲಾದನಿಂತೆಂದನು—'ವತ್ಸ! ಸರ್ವರಲ್ಲಿ ಕ್ಷಮೆಯಂತೆ ಸರ್ವರಲ್ಲಿ ಕ್ರೋಧವೂ ಶ್ರೇಯಸ್ಕರವಲ್ಲ. ನಿತ್ಯ ಕ್ಷಮಾಶೀಲ ರಾಜನಿಗೆ ಭೃತ್ಯರು ವಿಧೇಯರಾಗಿರುವುದಿಲ್ಲ. ಶತ್ರುಗಳವನನ್ನು ನಿರ್ಲಕ್ಷಿಸುವರು. ಅಧಿಕಾರಿಗಳು ಅಂತಹ ವನನ್ನು ತೃಣೀಕರಿಸಿ, ಅವನ ಯಾನ ವಸ್ತ್ರ ಶಯನ ಆಸನ ಭೂಷಣಾದಿಗಳನ್ನು ಅಪ ಹರಿಸುವರು. ದಂಡನಾರ್ಹರನ್ನು ದಂಡಿಸದ ರಾಜನು ಅಚಿರಕಾಲದಲ್ಲೇ ರಾಜ್ಯ ಭ್ರಷ್ಟನಾಗುವನು. ಅವನ ಅಂತಃಪುರವು ದುಷ್ಟವಾಗುವುದು. ಅಂತಹ ನಿರ್ಬಲ ನಿಗೆ ಮರಣವೇ ಲೇಸೆನಿಸುವುದು. ನಿತ್ಯವೂ ಕ್ರೋಧವಶನಾಗಿರುವುದೂ ಉಚಿತ ವಲ್ಲ. ಅಂತಹ ರಾಜನನ್ನು ನೋಡಿ ಸರ್ವರೂ ಹೆದರಿ ದೂರರಾಗುವರು. ಭೃತ್ಯರು ಅವನ ಚಂಡಶಾಸನವನ್ನು ತಾಳಲಾರದೆ ಅವನನ್ನು ತೊರೆದು ಶತ್ರುಸಹಾಯಕ ರಾಗುವರು! ಅವನ ಪ್ರಾಣಗಳಿಗೆ ಹೊಂಚುಹಾಕಿ, ಅವನ ಐಶ್ವರ್ಯವನ್ನು ನಾಶ ಪಡಿಸುವರು. ಸರ್ಪದಂತೆ ಉದ್ವೇಜಕನಾದ ರಾಜನು ಶೀಘ್ರದಲ್ಲೇ ಅವಮಾನ ವನ್ನು, ಅರ್ಥಹಾನಿಯನ್ನು, ನಿಂದೆಯನ್ನು ಹೊಂದಿ ಹಾಳಾಗುವನು. ಆದುದರಿಂದ ಬುದ್ಧಿವಂತನಿಗೆ ಕಾಲಾಕಾಲಗಳನ್ನರಿತು ಕ್ಷಮಾ ಕ್ರೋಧಗಳನ್ನು ತೋರಿ, ಉಭಯ ಲೋಕ ಸುಖಗಳನ್ನು ಹೊಂದುವುದವಶ್ಯಕವಾಗಿದೆ.' ರಾಜನ್! ಈಗ ಕೌರವರಲ್ಲಿ ಕ್ಷಮೆತೋರಿ, ವ್ಯರ್ಥವಾಗಿ ವನವಾಸ ಕ್ಲೇಶಪಡುವುದು ತರವಲ್ಲ. ಕ್ರೋಧಕಾಲ ದಲ್ಲಿ, ದುರ್ಜನರನ್ನು ಶಿಕ್ಷಿಸದೆ ದಯೆದೋರಿದವನಿಗೆ ಸುಖವಿಲ್ಲ."

ಆ ಮಾತನ್ನಾಲಿಸಿ ಧರ್ಮರಾಜನು ಸ್ವಲ್ಪ ಕೋಪದಿಂದ ದ್ರೌಪದಿಯನ್ನೀಕ್ಷಿಸಿ ಇಂತೆಂದನು—"ಸಾಧ್ವಿ! ಕ್ರೋಧದಂತಹ ಶತ್ರುವಿಲ್ಲ. ಆಶ್ರಯಿಸಿದ ನರನನ್ನು

ಕೋಟರಾಗ್ನಿಯಂತೆ ಸುಟ್ಟುಬಿಡುವ ಕ್ರೋಧವು ಸದಾ ಕರ್ತವ್ಯವಲ್ಲ. ಕ್ರುದ್ಧನು ಮಾಡದ ಪಾಪವುಂಟೆ? ಕ್ರುದ್ಧನು ಗುರುಹತ್ಯೆಯನ್ನೂ ಮಾಡಿಬಿಡುವನು; ಅವನಿಗೆ ಹಿರಿಯರೆಂಬ ವಿವೇಕ ಭಯಗಳಿರುವುದಿಲ್ಲ. ಅವಾಚ್ಯವನ್ನಾಡಲು ಕೋಪಿಯು ಹಿಂಜರಿಯನು. ಅತಿಕ್ರುದ್ಧನು ಆತ್ಮಹತ್ಯೆಗೂ ಹೆದರನು. ಅಂತಹ ಕ್ರೋಧವನ್ನು ವರ್ಜಿಸುವುದು ಶ್ರೇಯಸ್ಕರವು. ನನ್ನಂತಹನಿಗೆ ಕ್ರೋಧವನ್ನು ಉಪದೇಶಿಸುವುದು ನಿನಗೆ ಯೋಗ್ಯವಲ್ಲ. ಮೂಢನು ಸಿಟ್ಟಾಗಿ ಅಪಕರಿಸಿದರೆ ಪ್ರತ್ಯುಪಕಾರವನ್ನು ಮಾಡುವವನೂ ಮೂಢನೇ ಸರಿ; ಸಿಟ್ಟಿಗೆ ಔಷಧವು ಕ್ಷಮೆಯೇ! ವಿದ್ವಾಂಸನು ಶಕ್ತನಾಗಿದ್ದೂ ಪರರ ಅಪರಾಧವನ್ನು ಕ್ಷಮಿಸಿ ಅಕ್ಷಯ ಪುಣ್ಯವನ್ನು ಹೊಂದುವನು. ಕ್ಷಮಾವಂತನಿಗೆ ಜಯವು; ಕ್ಷಮಾವಂತನಿಗೆ ಜ್ಞಾನವು. ಕ್ಷಮಾರಹಿತನು ಕಾರ್ಯಾ ಕಾರ್ಯಗಳನ್ನು ತಿಳಿಯಲಾರನು. ಕ್ರೋಧವು ಲೋಕನಾಶಕ್ಕಾಗಿ ಪ್ರವೃತ್ತವಾದ ರಜೋಗುಣಕಾರ್ಯವು. ಆದುದರಿಂದ ತೇಜಃಕ್ರೋಧಗಳ ಅಂತರವನ್ನರಿತು, ತೇಜಸ್ಸಿನಿಂದ ದಕ್ಷನೂ, ಶೂರನೂ, ವೇಗವಂತನೂ ಆಗಬಹುದು. ಕ್ರೋಧವನ್ನು ಸದಾ ಪರಿತ್ಯಜಿಸಿ, ಸುಖಿಸಲೂಬಹುದು. ಸ್ವಧರ್ಮವನ್ನು ಬಿಟ್ಟರೂ ಚಿಂತೆಯಿಲ್ಲ. ಕ್ಷಮಾವರ್ಜನವು ಬಲು ಪಾಪವು. ಭೂದೇವಿಯಂತೆ ಕ್ಷಮಾಶೀಲರಾದ ಮಹಾತ್ಮ ರಿಂದ ಲೋಕಕ್ಷೇಮವಾಗುತ್ತಿದೆ.

"ಕಾಶ್ಯಪನು ನುಡಿದ ಕ್ಷಮಾಗುಣಪ್ರಶಂಸೆಯನ್ನು ಕೇಳು! 'ಕ್ಷಮೆಯೇ ಧರ್ಮ; ಕ್ಷಮೆಯೇ ಯಜ್ಞ; ಕ್ಷಮೆಯೇ ವೇದಾಧ್ಯಯನ.' ಇಂತು ತಿಳಿದವನು ಸರ್ವರನ್ನೂ ಕ್ಷಮಿಸುವನು. ತಪಶ್ಶೌಚದಾನವ್ರತ ಯಜ್ಞಗಳಿಂದೊದಗುವ ಪುಣ್ಯವು ಕ್ಷಮೆಯಿಂದಲೇ ಎಂದು ತಿಳಿ. ವೇದವನ್ನೋದಲೇನು? ಯಜ್ಞ ಮಾಡಲೇನು? ಕ್ಷಮೆಯಿಲ್ಲದವನ ಸರ್ವ ಪುಣ್ಯಕಾರ್ಯಗಳು ವ್ಯರ್ಥವಾಗುವುವು. ಕ್ಷಮೆಯಿಂದ ಶ್ರೀಹರಿಯು ತುಷ್ಟನಾಗುವನು. ಭೀಷ್ಮ ದ್ರೋಣ ವಿದುರಾದಿಗಳೆಲ್ಲರೂ ನಮ್ಮ ಹಿತವನ್ನು ಕೋರಿ, ಕ್ಷಮೆಯನ್ನೇ ಉಪದೇಶಿಸಿರುವರು. ರಾಜ್ಯವನ್ನಾಶಿಸಿ, ಕ್ಷಮಾ ಗುಣವನ್ನು ತೊರೆದು, ನಾನು ಯುದ್ಧಕ್ಕೆ ತೊಡಗಲಾರೆ. ಭರತವಂಶ ನಾಶ ಕಾರಣ ನೆನಿಸಿ, ಅಪನಿಂದೆಯನ್ನು ಹೊರಲಾರೆನು. ಸರ್ವಜಗವನ್ನು ನಿರ್ಮಿಸಿದ ಶ್ರೀನಾರಾ ಯಣನೇ ಸರ್ವಜೀವರ ದುಃಖಸುಖಗಳನ್ನೂ ಕೊಡುತ್ತಿರುವನು. ಅವನು ಸ್ವತಂತ್ರನು. ಜೀವರು ಅಸ್ವತಂತ್ರರಾದಕಾರಣ ಶ್ರೀಹರಿಯು ಜೀವಯೋಗ್ಯತೆ ಯನ್ನನುಸರಿಸಿ ಕೊಟ್ಟ ಸುಖದುಃಖಗಳನ್ನು ಶಾಂತವಾಗಿ ಅನುಭವಿಸುವವನು ಮುಕ್ತ ನಾಗುವನು! ಶ್ರೀಹರಿಯೇ ಕರ್ತನು, ಜೀವರಲ್ಲ. ಆದುದರಿಂದ ಯಾವ ಇತರ ಜೀವರೂ ನಮಗೆ ಸುಖದುಃಖಗಳನ್ನು ಕೊಡಲಾರರು. ಇತರರು ನಮಗೆ ಅಪಕಾರಿ ಗಳೆಂದು ತಿಳಿಯುವುದು ತಪ್ಪು. ಅವರಲ್ಲಿ ಕೋಪಿಸುವುದು ಇನ್ನೂ ಅಪರಾಧ. ಅದು ಭಗವದ್ದ್ರೋಹವೆನಿಸುವುದು. ಪುರುಷನು ಕ್ಷಮೆಯನ್ನು ತ್ಯಜಿಸಲಾಗದು."

ಆ ಮಾತನ್ನಾಲಿಸಿ, ನಕ್ಕು, ದ್ರೌಪದಿಯು "ರಾಜನ್! ನಿನಗೆ ಈ ವಿಪರೀತ ಬುದ್ಧಿಯನ್ನಿತ್ತ ಭಗವಂತನಿಗೆ ನಮೋ ನಮಃ. ಪೂರ್ವಕರ್ಮಾನುಸಾರಿಣಿಯಾಗಿ ಬುದ್ಧಿ ವರ್ತಿಸುವುದೆಂಬುದು ನಿಜ! ನಿಮ್ಮ ತಂದೆ-ತಾತಂದಿರು ನಡೆದ ಧರ್ಮಮಾರ್ಗವು ಕ್ರೋಧಕಂಟಕಮಯವಾಯಿತೇ ನಿನ್ನ ಪಾಲಿಗೆ? ಜೀವನು ಮಾಡದ ಕರ್ಮಗಳಿಗೆ ಈಶ್ವರನು ಫಲ ಕೊಡುವನೆಂಬ ಅನ್ಯಥಾಮತಿ ನಿನಗೇಕೆ ಬಂತು? ಹಾಗಾದೊಡೆ ಶ್ರೀಹರಿಯು ವಿಷಮನು, ನಿಷ್ಕರುಣನು ಎಂದೊಪ್ಪಿದಂತಾಯಿತಲ್ಲವೆ ? ಜೀವನ ಕರ್ಮಾನುಸಾರವಾಗಿಯೇ ಫಲದನೆಂದರೆ, ಜೀವನಿಗೆ ಕರ್ತೃತ್ವವೇ ಇಲ್ಲವೆನ್ನುವ ನೀನು ಕರ್ಮಗಳನ್ನು ಮಾಡಬೇಕೆನ್ನುವೆಯೋ? ಕರ್ಮಭ್ರಷ್ಟನಾಗಿ ನಷ್ಟನಾಗ ಬೇಕೆನ್ನುವಿಯೋ? ಕರ್ಮಗಳನ್ನು ಮಾಡದೇ ಕ್ಷಣವಾದರೂ ಇರಲು ಜಡಭಿನ್ನ ನಾದ ಜೀವನಿಗೆ ಸಾಧ್ಯವಿಲ್ಲ! ಕರ್ಮಗಳನ್ನೂ ಈಶ್ವರನೇ ಮಾಡುವನೆಂದರೆ, ಶಾಸ್ತ್ರದ ವಿಧಿನಿಷೇಧಗಳೂ ಜೀವನಿಗಲ್ಲದೆ, ಈಶನಿಗೇ ಎನ್ನುವೆಯಾ? ವಿಚಾರಮಾಡು! ವಿಷ್ಣುವು ಸರ್ವಪ್ರವರ್ತಕನು ನಿಜ ! ಆ ರಮಾ ವಿರಿಂಚ ರುದ್ರಾದಿ ಸರ್ವಜೀವರು ಅವನ ವಶದಲ್ಲಿರುವರು. ಆದರೂ ಅವರು ಜಡರಲ್ಲ; ಅವರಿಗೆ ಕರ್ತೃತ್ವವಿದೆ. ಅಸ್ವತಂತ್ರಕರ್ತರಾದ ಜೀವರು ಸ್ವಯೋಗ್ಯವಾದ ಸ್ವಭಾವಾನುಗುಣವಾದ ಕರ್ಮ ಗಳನ್ನು ಮಾಡುವರು; ಆಯಾ ಕರ್ಮಫಲಗಳನ್ನು ಅವರಿಗೆ ಶ್ರೀಹರಿಯು ಕೊಡುವ ನಾದುದರಿಂದ, ಶಾಸ್ತ್ರವಿಧಿನಿಷೇಧಗಳೂ ಸಾರ್ಥಕವಾದವು ಮತ್ತು ಶ್ರೀಹರಿಯು ವೈಷಮ್ಯ ನೈರ್ಘೃಣ್ಯ ದೋಷ ರಹಿತನೆಂದು ಸಿದ್ಧವಾಗುವುದು.

"ಸ್ವಧರ್ಮವೆಂದರೆ ಪ್ರಾಣಗಳಿಗೂ ಪ್ರಿಯತರವೆಂದು ತಿಳಿದ ನಿನಗೆ ಹೇಳಬೇಕಿಲ್ಲ. ರಾಜನಾದವನಿಗೆ ಕ್ಷಮೆ ಭೂಷಣವಲ್ಲ. ದುಷ್ಟರಲ್ಲಿಯೂ ಕ್ಷಮೆದೋರುವುದು ರಾಜ ಧರ್ಮವಲ್ಲ. ದುಷ್ಟಶಿಕ್ಷೆಯೇ ಇಲ್ಲವೆಂತಾದರೆ ಕೃಷಿ, ವಾಣಿಜ್ಯ, ತಪಸ್ಸು, ಮೊದಲಾದ ಲೋಕವ್ಯವಹಾರವೇ ನಿಂತುಹೋಗುವುದು. ಚೋರರು ಜಗವನ್ನೇ ಹಾಳು ಮಾಡುವರು. ಧರ್ಮವನ್ನು ರಕ್ಷಿಸು ! ಅದು ನಿನ್ನನ್ನು ರಕ್ಷಿಸುವುದು. ಸಮಸ್ತ ಪೃಥಿವಿಗೆ ದೊರೆಯಾಗಿದ್ದೆ! ರಾಜಸೂಯಾದಿಗಳನ್ನು ಮಾಡಿ ದೇವಬ್ರಾಹ್ಮಣರನ್ನು ಸಂತೋಷಪಡಿಸಿದೆ! ಇಲ್ಲವೆಂಬ ಮಾತು ನಿನ್ನ ಮುಖದಿಂದ ಬಂದಿಲ್ಲ. ಇಂತಹ ಧರ್ಮಪರನಿಗೆ ರಾಜ್ಯವನ್ನು, ಸೋದರರನ್ನು, ಪತ್ನಿಯನ್ನೂ ಪಣವಾಗಿಟ್ಟು ದ್ಯೂತ ವಾಡುವುದು ಹಿತವಾಯಿತೆ? ಅವರಿಂದ ತಾನು ವನದಲ್ಲಿ ನಾನಾ ಕ್ಲೇಶಗಳನ್ನನು ಭವಿಸುವುದು ಹಿತವಾಯಿತೆ? ಸೂತ್ರದಲ್ಲಿ ನಿಂತ ಮಣಿಯಂತೆ, ದಾರದಿಂದ ಬಂಧಿಸಿ ಬಿಟ್ಟ ಪಕ್ಷಿಯಂತೆ ಕುಹಕನ ಕೈಯಲ್ಲಾಡುವ ಕಟ್ಟಿಗೆಯ ಗೊಂಬೆಯಂತೆ, ಮೂಗು ದಾಣಿಯನ್ನು ಪಿಡಿದು ನಡೆಸುವ ಕರ್ಷಕನಿಗೆ ವಶವಾಗಿರುವ ವೃಷಭದಂತೆ ಜೀವರು ತಮ್ಮ ತಮ್ಮ ಕರ್ಮಫಲವನ್ನು ಈಶವಶರಾಗಿ ಭುಜಿಸುತ್ತಿರುವರೆಂದು ತಿಳಿದು ಸಕಲ ಕಷ್ಟಗಳನ್ನು ಸಹಿಸಿರುವೆನು. ನಿನ್ನನ್ನು ನಿಂದಿಸಬೇಕೆಂದಲ್ಲ, ಕೇಳು! ನಿನಗೆ ಕ್ಷಮೆ

ಯನ್ನಿತ್ತು, ಪಾಪಿಯೂ, ಕ್ರೂರನು, ಧರ್ಮದ್ರೋಹಿಯೂ ಆದ ದುರ್ಯೋಧನನಿಗೆ ಸಕಲ ಸಿರಿಯನ್ನಿತ್ತ ವಿಧಾತನನ್ನು ನಿಂದಿಸಬೇಕಾಗಿದೆ" ಎಂದಳು.

ಧರ್ಮರಾಜನು ದ್ರೌಪದಿಯ ಮಾತನ್ನಾಲಿಸಿ, "ಸಾಧ್ವಿ! ನಾನು ಕರ್ಮವನ್ನು ಬಿಟ್ಟವನಲ್ಲ. ಫಲಾಸಕ್ತಿಯಿಲ್ಲದೇ ಕರ್ಮವನ್ನಾಚರಿಸುವೆನು. ಸ್ವಭಾವದಿಂದಲೇ ನನ್ನ ಮನವು ಧರ್ಮರತವಾಗಿದೆ. ಶೌರ್ಯ, ತೇಜ, ಧೃತಿ, ದಾಕ್ಷ್ಯ, ಅಪಲಾಯನ, ದಾನ, ಹರಿಭಕ್ತಿಗಳೇ ಕ್ಷತ್ರಿಯ ಧರ್ಮಗಳೆಂದು ತಿಳಿಯದವನಲ್ಲ. ಧರ್ಮದ ಫಲವು ಶ್ರೀಹರಿಪ್ರೀತಿಯೇ ; ಸ್ವರ್ಗಾದಿ ನಶ್ವರಫಲಗಳಲ್ಲ. ಧರ್ಮದಿಂದ ಮಾರ್ಕಂಡೇಯನು ಚಿರಜೀವಿಯಾಗಿರುವನು. ವಿಷಯಫಲಾಶಾರಹಿತವು, ಶ್ರೀಹರಿ ಸಮರ್ಪಿತವು ಆದ ಧರ್ಮವು ಮೋಕ್ಷಾಖ್ಯ ಅನಂತ ಫಲಪ್ರದವಾಗುವುದು. ಧರ್ಮದಿಂದ ಫಲವಿಲ್ಲವೆನ್ನಬೇಡ! ವಿಧಾತನನ್ನು ನಿಂದಿಸಬೇಡ! ಇಂದ್ರಿಯಪ್ರೀತಿಗಾಗಿ ಮಾತ್ರ ಬದುಕುವ ಪಶುಗಳಲ್ಲ ನಾವು. ವಸಿಷ್ಠಾದಿ ಮುನಿವರರು, ದೇವ ಗಂಧರ್ವ ಸಿದ್ಧರು ಧರ್ಮದಿಂದ ಮಹಾಮಹಿಮರೆನಿಸಿರುವರು. ಆದರೆ ಧರ್ಮಫಲವು ಅಲ್ಪವೆಂದು ದುರಾಶೆಗೊಳಗಾಗಿ ಪರರನ್ನು ಹಿಂಸಿಸುವುದು ತರವಲ್ಲ; ಕರ್ಮಗಳು ಸ್ಥಿರವಲ್ಲ; ಕ್ಷಣಿಕಗಳು, ನಷ್ಟವಾದ ಕರ್ಮಗಳು ಧರ್ಮವನ್ನು ಪುಟ್ಟಿಸಿ ಹೋಗುವುವು. ಧರ್ಮದಿಂದ ಪ್ರೀತನಾದ ಸರ್ವೇಶನು, ಪುಣ್ಯಕರ್ಮಗಳನ್ನು ನೋಡಿ, ಸುಖವನ್ನೀಯುವನು. ಪಾಪಕರ್ಮಗಳಿಂದ ರುಷ್ಟನಾದ ಸರ್ವೇಶನು ದುಃಖವನ್ನೀಯುವನು. ಈಶನನ್ನು ನಿಂದಿಸಬೇಡ! ಶಾಸ್ತ್ರಗಳಿಂದಲೂ ಆಚಾರ್ಯರ ಉಪದೇಶದಿಂದಲೂ ಧರ್ಮರಕ್ಷಕನಾದ ಶ್ರೀಹರಿ ಮಹಿಮೆಯನ್ನು ತಿಳಿ! ನಾಸ್ತಿಕರಂತೆ ಇಲ್ಲದ ಕರ್ತೃತ್ವವನ್ನು ತಲೆ ಮೇಲಿಟ್ಟು ಕೆಡಬೇಡ!" ಎಂದು ಅವಳನ್ನು ಜಬರಿಸಿದನು.

ಆಗ ಭೀಮಸೇನನು ಅಣ್ಣನನ್ನು ನೋಡಿ, "ರಾಜನ್! ನೀನು ನುಡಿದಂತೆ ವಿಷ್ಣುವೇ ಸರ್ವಕರ್ತನು, ಶ್ರೀಶನೇ ಸ್ವತಂತ್ರನು. ಆದರೂ ಜೀವರು ಸ್ವಹಿತ ಕಾರ್ಯವನ್ನು ಬಿಟ್ಟು ಕೂಡಬಾರದು; ಪರಸ್ತ್ರೀಗಮನಾದಿ ನಿಷಿದ್ಧ ಕಾರ್ಯಗಳನ್ನು ಮಾಡಬಾರದು. ಸಂಧ್ಯಾ ಪೂಜಾ ಜಪ ಹೋಮಾದಿಗಳನ್ನು ನೀನೇ ಮಾಡುತ್ತಿರುವೆ—ಶ್ರೀಹರಿಯು ನಿನಗೆ ಪ್ರೇರಕನಾಗಿ, ಸ್ವಭಾವ ಪೂರ್ವ ಕರ್ಮ ಕಾಲಗಳಿಗನುವಾಗಿ ಸತ್ಕರ್ಮಗಳನ್ನು ಮಾಡಿಸಿ ಶ್ರೇಯಸ್ಸನ್ನು; ದುಷ್ಕರ್ಮವನ್ನು ಮಾಡಿಸಿ ದುಃಖವನ್ನು ಕೊಡುವನು. ವಿಷ್ಣುಪ್ರೇರಣೆ ಇಲ್ಲದೆ ದೇವ ದಾನವ ಮಾನವರು ಯಾವ ಕರ್ಮವನ್ನೂ ಮಾಡಲಾರರು. ವಿಹಿತಕರ್ಮವನ್ನು ಮಾಡಿ, ಶ್ರೀಹರಿಗೆ ಸಮರ್ಪಿಸುವವನು ಜ್ಞಾನಿಯಾಗಿ ಹರಿಪ್ರಸಾದದಿಂದ ಮುಕ್ತನಾಗುವನು. ಶ್ರೀಹರಿಯು ಪಠವೆನಿಸುವ ಜೀವಸ್ವಭಾವವನ್ನು ಪ್ರೇರಿಸಿ, ಶ್ರದ್ಧೆಯನ್ನು ಪುಟ್ಟಿಸಿ, ಶುಭ ಕರ್ಮಗಳನ್ನು ಮಾಡಿಸಿ ಉದ್ಧರಿಸುವನು. ಸ್ವಕರ್ಮವನ್ನು ಬಿಟ್ಟು, ಶ್ರದ್ಧೆಯಿಲ್ಲದ ತಾಮಸನು ತಮಸ್ಸನ್ನು ಹೊಂದುವನು. ಜೀವಕರ್ತೃತ್ವವು ವಿಷ್ಣುವಿಗಧೀನವಾಗಿದೆ. ಭೋಕ್ತೃತ್ವವೂ ಶ್ರೀಹರಿಗೆ ಅಧೀನವಾಗಿದೆ. ಜೀವರಿಗೆ ಕರ್ತೃತ್ವವೇ

ಇಲ್ಲವೆಂದರೆ ಅದು ಪ್ರತ್ಯಕ್ಷ ವಿರೋಧವಾಗಿದೆ. 'ನಾನು ಉಣ್ಣುವೆನು' ಎನ್ನುವ ಅನುಭವವು ಜೀವನಿಗೇ ಆಗಲಿ ಕರ್ಮಫಲ ಸಂಬಂಧವಿಲ್ಲದ ಈಶನಿಗಲ್ಲ. ಈಶ್ವರನು ಸ್ವತಂತ್ರಕರ್ತನು. ಜೀವನು ಅಸ್ವತಂತ್ರಕರ್ತನು ಎಂಬೀ ವಿಷಯವು ಶ್ರುತಿ ಪ್ರತ್ಯಕ್ಷ ಅನುಮಾನಗಳೆಂಬ ಪ್ರಮಾಣತ್ರಯದಿಂದಲೂ ಸಿದ್ಧವಾಗಿದೆ.

"ಪ್ರಮಾಣತ್ರಯ ವಿರೋಧವಾದುದರಿಂದ 'ವಿಶ್ವಂ ಮಿಥ್ಯಾದೃಶ್ಯತ್ವಾತ್' ಎಂಬ ಅನುಮಾನವು ಅಪ್ರಮಾಣವಾಗಿದೆ; ವಿಶ್ವವು ಘಟದಂತೆ ಪ್ರತ್ಯಕ್ಷ ಸಿದ್ಧವಾಗಿದೆ. ವಿಶ್ವಂ ಸತ್ಯಂ ಎಂಬ ವೇದವು ಜಾಗ್ರತವಾಗಿದೆ. ವಿಶ್ವವು ಅರ್ಥಕ್ರಿಯಾಕಾರಿಯಾಗಿರುವುದರಿಂದ ಸತ್ಯವೇ ಎಂಬ ಅನುಮಾನವೂ ಇದೆ. ಆದುದರಿಂದ ಪ್ರಮಾಣತ್ರಯ ವಿರೋಧವಾಗದಿರುವುದೇ ಸಮ್ಮತವು. ಅಜ್ಞನು ಪ್ರತ್ಯಕ್ಷವನ್ನು ಮರೆತು, ದೈವವೆಂದು ನಂಬಿ ಸುಮ್ಮನೆ ಕೂತು, ಸ್ವಕರ್ಮಭ್ರಷ್ಟನಾಗುವನು. ಜ್ಞಾನಿಯು ವಿಷ್ಣುವಶವೆಲ್ಲವೆಂದರಿತು, ಕರ್ತವ್ಯ ಕರ್ಮವನ್ನು ಬಿಡದೆ ಮಾಡಿ ಸುಖಿಸುವನು.

"ಜೀವರ ಸ್ವರೂಪಭೂತವಾದ ಯೋಗ್ಯತೆಗೆ ಹಠವೆನ್ನುವರು. ಯೋಗ್ಯತೆಯೇ ಜೀವರ ಕರ್ಮಪ್ರವೃತ್ತಿಗೆ ಮುಖ್ಯ ಕಾರಣವು. ಅನಾದಿಕರ್ಮವು ದ್ವಿತೀಯ ಕಾರಣವು. ಚೇತನಸಂಬಂಧಿಯಾದ ಪುರುಷಪ್ರಯತ್ನವು ಮೂರನೆಯ ಕಾರಣವು. ಈ ಮೂರು ಕಾರಣಗಳೂ ಸಂಸಾರದಶೆಯಲ್ಲಿಯೂ, ಮುಕ್ತದಶೆಯಲ್ಲಿಯೂ ಸರ್ವದಾ ಜೀವಾಧೀನವಾಗಿರದೆ ವಿಷ್ಣ್ವಧೀನವಾಗಿರುವುವು. ಆ ಮಹಾಪ್ರಭುವು ಇತರಾಧೀನನಾಗದೆ ಸ್ವತಃ ಸರ್ವದಾ ಸ್ವತಂತ್ರನಾಗಿರುವನು. ಹಠದಲ್ಲಿಯೂ ತಾರತಮ್ಯವಿದೆ. ಬ್ರಹ್ಮನು ಮೊದಲ್ಗೊಂಡು ಕಲಿಪರ್ಯಂತವಾದ ಎಲ್ಲ ತ್ರಿವಿಧ ಜೀವರೂ ಕೂಡ ಹಠದಿಂದ ಪ್ರೇರಿತರಾಗಿ ಕರ್ಮಗಳನ್ನು ಮಾಡುವರು. ಕರ್ಮದಿಂದ ತಾತ್ಕಾಲಿಕವಾದ ಪುರುಷಪ್ರಯತ್ನವು ಹುಟ್ಟುವುದು. ಪುರುಷಪ್ರಯತ್ನದಿಂದಲೇ ಯೋಗ್ಯತೆಯನ್ನನುಸರಿಸಿದ ಪೂರ್ವಕರ್ಮದ ಫಲವು ಅಭಿವ್ಯಕ್ತವಾಗುವುದು.

"ಉತ್ತಮಜೀವರು ಜ್ಞಾನಭಕ್ತ್ಯಾದಿ ಗುಣಗಳಿಂದ ತುಂಬಿ, ಮನುಷ್ಯೋತ್ತಮರನ್ನಾರಂಭಿಸಿ, ಚಕ್ರವರ್ತಿ, ಪಿತೃ, ಋಷಿ, ದೇವ, ರುದ್ರ, ಬ್ರಹ್ಮದೇವನ ವರೆಗೂ ತಾರತಮ್ಯಯುಕ್ತರಾಗಿರುವರು. ವಿಷ್ಣುದ್ವೇಷ ಮೊದಲಾದ ದೋಷಗಳಿಂದ ತುಂಬಿದ ಅಧಮಜೀವರು ಮನುಜಾಧಮರಿಂದ ಕಲಿಪರ್ಯಂತವಾಗಿ ತಾರತಮ್ಯಯುಕ್ತರಾಗಿರುವರು. ಗುಣದೋಷ ಮಿಶ್ರಸ್ವಭಾವದವರಾದ ಮಧ್ಯಮ ಜೀವರೂ ಇರುವರು. ಸಂಸಾರದಲ್ಲಿ ಹೇಗೋ ಹಾಗೆಯೇ ಮುಕ್ತಿಯಲ್ಲಿಯೂ ತಾರತಮ್ಯವು ಉಂಟು. ಅಧಮರು ತಮಸ್ಸನ್ನೇ ಹೊಂದುವರು. ಉತ್ತಮರಿಗೇ ಮೋಕ್ಷಾನಂದವು. ಮಧ್ಯಮರು ನಿತ್ಯ ಸಂಸಾರಿಗಳಾಗಿರುವರು. ಯತ್ನವಿಲ್ಲದಿರೆ ಹಠವು ಸುಮ್ಮನಿರುವುದು; ಯತ್ನ ಮಾಡದೆ ಕರ್ಮ ಸಿದ್ಧಿಯೇ ಇಲ್ಲ: ಹಠ ಪ್ರಯತ್ನಗಳನ್ನು ಅನುಸರಿಸಿ ಕರ್ಮಫಲವನ್ನು ಕೊಡುವ ವಾಸುದೇವನು ಸ್ವತಂತ್ರನು. ಮೂರು ಕಾರಣಗಳನ್ನು ಪ್ರೇರಿಸಿ, ಫಲಶಕ್ತಿಯನ್ನು ಅವುಗಳಿಗೆ ಕೊಡುವ ಸರ್ವತಂತ್ರಸ್ವತಂತ್ರನಾದ ಹರಿಗೆ ಕರ್ಮ

ಲೇಪವಿಲ್ಲ. ಅವನು ಕರ್ಮಾದಿಗಳಿಗಧೀನನಲ್ಲ. ಸಮರ್ಥನಾದುದರಿಂದ ಪಕ್ಷಪಾತವಿಲ್ಲದಿರಲು ನಿಷ್ಕರುಣಿ ಎನಿಸದಿರಲು ಸಂಕಲ್ಪಿಸಿ, ತತ್ತದ್ಯೋಗ್ಯಫಲಗಳನ್ನೇ ಕೊಡುತ್ತಾನೆ. ಆದುದರಿಂದ ಜೀವನಿಗೂ ಕರ್ತೃತ್ವವಿದೆ. ಜೀವನು ಸ್ವವಿಹಿತಕರ್ಮವನ್ನು ಹರಿಪೂಜೆ ಎಂದು ತಿಳಿದು ಮಾಡಿದರೇನೇ ಮುಕ್ತನಾಗುವನು; ಇಲ್ಲದಿದ್ದರೆ ನರಕಭಾಜನನಾಗುವನು.

"ವಿಪ್ರನು ಮುಖದಿಂದ ಹುಟ್ಟಿ, ಮುಖಕಾರ್ಯವಾದ ಜಪೋಪದೇಶಗಳನ್ನು ಮಾಡಲು ಬೇಕು. ಕ್ಷತ್ರಿಯನು ವಿಷ್ಣು ಬಾಹುಜಾತನಾದುದರಿಂದ ಕೈಗಳಿಂದ ಪಾಪ ಪ್ರತಿವಾರಣರೂಪ ದುಷ್ಟಶಿಕ್ಷೆಯನ್ನು ಮಾಡಬೇಕು. ಅವನು ಧರ್ಮವನ್ನು ರಕ್ಷಿಸುವುದೂ ವಿಹಿತವಾಗಿದೆ. ವೈಶ್ಯನು ವಿಷ್ಣು ಊರುಜ ನಾದುದರಿಂದ ಪ್ರಜಾಭಿವೃದ್ಧಿ ಕಾರಣಗಳಾದ ಕೃಷಿ, ಗೋರಕ್ಷೆ, ವಾಣಿಜ್ಯಗಳು ವಿಹಿತವೆಂದು ತಿಳಿದು ಅವನ್ನೇ ವಿಷ್ಣು ಪೂಜೆ ಎಂದು ಮಾಡಬೇಕು. ವಿಷ್ಣು ಪಾದ ಸಂಭವನಾದ ಶೂದ್ರನಿಗೆ ತ್ರಿವರ್ಣ ಸೇವಾರೂಪವಾದ ಕೃಷಿ, ವ್ಯಾಪಾರ, ಶಿಲ್ಪಗಳು ವಿಹಿತವಾಗಿವೆ. ವಿಪ್ರಕ್ಷತ್ರರು ಜ್ಞಾನನಿಪುಣರಾದರೆ ವೈಶ್ಯ-ಶೂದ್ರರು ಕರ್ಮನಿಪುಣರಾಗಿರುವರು. ಮುಕ್ತಿಯೋಗ್ಯರೆಲ್ಲರೂ ಯಾವ ವರ್ಣದವರೇ ಆಗಲಿ, ಸ್ವವಿಹಿತಕರ್ಮದಿಂದ ಜ್ಞಾನವನ್ನು ಹೊಂದಿ ಮುಕ್ತರಾಗುವರು. ದೇವತೆಗಳಿಗೆ ಎಲ್ಲ ಕರ್ಮವೂ ಪ್ರಾಯಃ ಧರ್ಮವೇ ಆಗಿದೆ. ಶ್ವಪಚ, ಚಾಂಡಾಲರಿಂದ ಮೊದಲ್ಗೊಂಡು ಎಲ್ಲ ಸುಜೀವರೂ ಜ್ಞಾನಭಕ್ತಿಗಳಿಂದಲೇ ಹರಿಪ್ರಸಾದವನ್ನು ಪಡೆದು ಮುಕ್ತರಾಗಬೇಕು.

"ವಿಷ್ಣುವು ಸರ್ವಸುಜನರಿಗೆ ತಂದೆ, ತಾಯಿ, ಗುರು. ಅವನು ಸರ್ವೋತ್ತಮನು. ಅವನ ಭಕ್ತರಾದುದರಿಂದ ದೇವತೆಗಳೂ ಪೂಜ್ಯರಾಗಿರುವರು. ರಮಾ ಬ್ರಹ್ಮರುದ್ರಾದಿಗಳು ಶ್ರೀಹರಿಪರಿವಾರವೆನಿಸಿ ವಿಶೇಷ ಪೂಜ್ಯರಿರುವರು. ವಿಹಿತ ಕರ್ಮವೇ ಶ್ರೀಹರಿಪೂಜೆ. ಅಂತಹ ಕರ್ಮವನ್ನು ಮಾಡಿದರೆ ಅವನು ಪ್ರೀತನಾಗುವನು. ಸುಖ-ದುಃಖ ಪ್ರದಾನಸಮರ್ಥನಾದ ಶ್ರೀಶನು ಸ್ವತಂತ್ರನು, ಸುಖಜ್ಞಾನಪೂರ್ಣನು, ಸರ್ವದೋಷರಹಿತನು, ಅನಂತಶಕ್ತಿಯುತನಾದ ನಾರಾಯಣನಂತೆ ಪೂಜ್ಯತಮನಿನ್ನೊಬ್ಬನಿಲ್ಲ. ನಾವು ಕ್ಷತ್ರಿಯರು. ಯುದ್ಧವೇ ನಮ್ಮ ಕರ್ತವ್ಯ, ಹರಿಪೂಜೆ. ಧರ್ಮಕ್ಕಾಗಿ ಯುದ್ಧವು ಮಾಡದಿರೆ, ಅವನು ಧರ್ಮಭ್ರಷ್ಟನೆನಿಸುವನು. ಪಾಪಿಗಳನ್ನು ಸಂಹರಿಸುವುದರಿಂದ ಮುಕ್ತಿಯಲ್ಲಿ ಆನಂದವೃದ್ಧಿಯಾಗುವುದು.

"ಜೂಜಿನಿಂದ ಗೆದ್ದು, ಮೊದಲಿನಿಂದಲೂ ನಿರಪರಾಧಿಗಳಾದ ನಮಗೆ ಕೃಷ್ಣ ಭಕ್ತರಿಗೆ ದ್ರೋಹವೆಸಗಿದ ಕೌರವರು ಮಹಾಪಾಪಿಗಳು. ಗರ್ಹಿತವಾದ ಅಕ್ಷದ್ಯೂತವನ್ನು ಮಾಯಾಪಿಯಾದ ಶಕುನಿಯೊಡನೆ, ಧರ್ಮಜ್ಞನಾದ ನೀನು ಮಾಡಿದುದು ಶೋಚನೀಯವೇ ಸರಿ! ದ್ಯೂತದತ್ತವೂ, ಕಾಮಿನೀದತ್ತವೂ, ಭೀತದತ್ತವೂ ಆಗಿರುವ ಧನವನ್ನು ಕಸಿದು ಹಿಂದಕ್ಕೆ ಪಡೆಯುವುದು ಪಾಪವಲ್ಲ. ನೀನು ಧರ್ಮನಿಷ್ಠನು. ನಮ್ಮೆಲ್ಲರಿಗೂ ಜ್ಯೇಷ್ಠನು. ಪೂಜ್ಯನಾದುದರಿಂದ ನಿನ್ನ ಅಪ್ಪಣೆ

ಯಿಲ್ಲದೆ ನಾನು ಕೌರವರನ್ನು ಕೊಂದು, ನಮ್ಮ ರಾಜ್ಯವನ್ನು ಪಡೆಯಲು ಪ್ರಯತ್ನಿಸಲಿಲ್ಲ. ಈಗಲೂ ನಿನ್ನ ಮಾತಿಗೆ ಶಿರಬಾಗಿ, ಸಮರ್ಥನಾಗಿದ್ದೂ ವನದಲ್ಲಿ ಸುಮ್ಮನಿರುವೆನು.

"ಈಗ ನಮ್ಮ ವನವಾಸಕಾಲದಲ್ಲಿ ಹನ್ನೆರಡು ತಿಂಗಳುಗಳು ಸಂದಿವೆ. ವೇದ ಪ್ರಮಾಣದಿಂದ ಸಾಸಿರ ವರ್ಷದ ಸತ್ರಯಾಗವನ್ನು ಸಾವಿರ ತಿಂಗಳಿಗೆ ಮುಗಿಸಿ ಪೂರ್ಣಫಲವನ್ನು ಪಡೆಯುವುದು ಕಂಡಿದೆ. ನಾವೂ ಹನ್ನೆರಡು ವರ್ಷ ವನವಾಸ ಮುಗಿಸಿದಂತೆ ತಿಳಿದು, ಇನ್ನೊಂದು ತಿಂಗಳು ಅಜ್ಞಾತವಾಗಿದ್ದು, ಮುಂದೆ ಶತ್ರುಗಳನ್ನು ನಾಶಗೈದು, ರಾಜ್ಯವನ್ನೇಕೆ ಹೊಂದಬಾರದು? ಹೇಳು! ನಮ್ಮನ್ನು ಅಶಕ್ತರೆಂದು ತಿಳಿದು, 'ಷಂಡತಿಲ'ರೆಂದು ಒದರಿದ ಪಾಪಿಗಳನ್ನು ಏಕೆ ಕೊಲ್ಲಬಾರದು? ಅವಮಾನಕ್ಕಿಂತ ಯುದ್ಧಮರಣವೇ ಲೇಸು! ನಿನ್ನ ನಂಬಿದ ಮಿತ್ರರಿಗೆ ತಾಪಪ್ರದನು, ದ್ರೋಹಿಗಳಿಗೆ ಸುಖಪ್ರದನು ಆಗಿರುವ ನಿನ್ನನ್ನು ನೋಡಿ ಆಶ್ಚರ್ಯವಾಗಿದೆ. ಮಿತ್ರರಿಗೆ ಸುಖವಿತ್ತು, ಶತ್ರುಗಳ ನೆತ್ತಿಯಲ್ಲಿ ಕಾಲಿಟ್ಟು, ಉರಿದೇಳು! ಅದೇ ಶ್ರೀಕೃಷ್ಣಪೂಜೆ. ಶ್ರೀಕೃಷ್ಣನು ಬ್ರಹ್ಮರುದ್ರಾದಿ ವರದರ್ಪಿತರಾದ ಜರಾಸುತಾದಿ ದೈತ್ಯರನ್ನು ಗೆದ್ದು, ಕೊಂದು, ತಾನು ಸರ್ವೋತ್ತಮನೆಂದು ಸಾರಿ ತೋರಿರುವನು. ವ್ಯಾಸಭಗವಂತನು ನಮಗೆ ದಿವ್ಯದೃಷ್ಟಿಯನ್ನಿತ್ತು ಲಕ್ಷ್ಮೀ, ಬ್ರಹ್ಮರುದ್ರಾದಿಗಳೆಲ್ಲ ತನ್ನ ದೇಹದಲ್ಲಿ ಆಶ್ರಿತರಾಗಿರುವರೆಂಬ ಜ್ಞಾನವನ್ನು ಪ್ರಸಾದಿಸಿರುವಾಗ ಸಂಶಯ ವೇಕೆ? ಏಳು! ಶತ್ರುಗಳನ್ನು ಸಂಹರಿಸಲು ತೆರಳು! ನನ್ನ ಗದೆಯು ವೀರ ವಿಹಾರವನ್ನು ಮಾಡಲು ಹಾತೊರೆಯುತ್ತಿದೆ. ವಾಸುದೇವನ ಪ್ರಸಾದವಿದೆ ನಮ್ಮಲ್ಲಿ. ಗೆಲ್ಲು ಶತ್ರುಗಳನ್ನು! ಆಳು ಸಾಮ್ರಾಜ್ಯವನ್ನು! ಗಾಂಡೀವ ಧನುರ್ಧಾರಿ ಅರ್ಜುನನಿರಲು, ಗದಾಪಾಣಿಯಾಗಿ ನಾನಿರಲು, ನಮ್ಮ ಪ್ರಭುವಾಗಿ ಶ್ರೀಕೃಷ್ಣನಿರಲು ಜಯವನ್ನು ಹೊಂದುವೆವು, ಸಂಶಯ ಬೇಡ!

"'ಧರ್ಮ ಧರ್ಮ' ಎಂದು ಸುಮ್ಮನೆ ಕೂತ ರಾಜನನ್ನು ಧರ್ಮಾರ್ಥಗಳು—ಸುಖದುಃಖಗಳು ಶವವನ್ನಂತೆ ಬಿಟ್ಟುಹೋಗುವುವು. ಧರ್ಮಕ್ಕಾಗಿ ಧರ್ಮವಲ್ಲ—ಅದು ಕ್ಲೇಶಮಾತ್ರ ಫಲವಾಗುವುದು. ಅರ್ಥಕ್ಕಾಗಿ ಅರ್ಥವಲ್ಲ—ಅದು ಗೊಲ್ಲ ಅಡವಿಯಲ್ಲಿ ಆಕಳ ಮಂದೆ ಕಾಯುತ್ತಿದ್ದಂತೆ. ಕಾಮಕ್ಕೆ ಕಾಮವಲ್ಲ—ಅದರಿಂದ ಧರ್ಮಾರ್ಥಗಳು ಹಾಳಾಗುವುವು. ತಿಳಿದು ಧರ್ಮಾರ್ಥ ಕಾಮಗಳನ್ನು ಸಂಪಾದಿಸಿದವನು ಸುಖಿಸುವನು. ಮೇಘ ಸಮುದ್ರಗಳಂತೆ ಧರ್ಮಾರ್ಥಗಳು ಪರಸ್ಪರ ವೃದ್ಧಿ ಕಾರಣವಾಗಿರಬೇಕು. ಕಾಮಕ್ಕೆ ಕಾಮವೇ ಫಲವು, ಬೇರೆ ಫಲವಿಲ್ಲ. ಕಟ್ಟಿಗೆಯಿಂದ ಭಸ್ಮ ಬರುವುದು. ಆದರೆ ಭಸ್ಮದಿಂದ ಭಸ್ಮಾಂತರವು ಪಡೆಯಲಾಗದು. ಬುದ್ಧಿವಂತನು ಪ್ರತಿದಿನದ ಆದಿಯಲ್ಲಿ ಧರ್ಮವನ್ನು, ಮಧ್ಯದಲ್ಲಿ ಅರ್ಥವನ್ನು, ಅಂತ್ಯಭಾಗದಲ್ಲಿ ಕಾಮವನ್ನು, ಸಂಪಾದಿಸಬೇಕು! ವಯಸ್ಸಿನ ಆದಿಯಲ್ಲಿ ಕಾಮವನ್ನು, ಮಧ್ಯದಲ್ಲಿ ಧನವನ್ನು, ಕೊನೆಯಲ್ಲಿ ಧರ್ಮವನ್ನು ಸಂಪಾದಿಸಬೇಕು.

ದಾನ ಯಜ್ಞ ಸಜ್ಜನಪೂಜಾದಿ ಧರ್ಮವನ್ನು ಅರ್ಥಹೀನನು ಮಾಡಲು ಶಕ್ತನಾಗುವುದಿಲ್ಲ. ಅರ್ಥವು ವನವಾಸಾಯಾಸ ಖಿನ್ನರಾದ ನಮ್ಮಿಂದ ಸಾಧ್ಯವಲ್ಲ. ಭಿಕ್ಷಾವೃತ್ತಿಯು ನಮಗೆ ವಿಹಿತವಲ್ಲ. ಮಹಾಧರ್ಮವು ಪ್ರಾಪ್ತವ್ಯವಾದಾಗ ಅಲ್ಪ ಧರ್ಮವನ್ನು ಬಿಡಬೇಕು. ಬೀಜವನ್ನು ಚೆಲ್ಲಿ ಕರ್ಷಕನು ಧಾನ್ಯರಾಶಿಯನ್ನು ಪಡೆಯುವುದಿಲ್ಲವೆ? ಅಂತೆಯೇ ಯುದ್ಧಕ್ಕೆ ಅಂಜಿ ಮಹಾಫಲವಾದ ಸ್ವಧರ್ಮವನ್ನು ಬಿಡಬಾರದು. ಪೂರ್ವಜರಂತೆ ದುಷ್ಟಶಿಕ್ಷಣವೇ ಕರ್ತವ್ಯವೆಂದು ತಿಳಿದು, ಅದರಿಂದ ಬಂದ ಅಲ್ಪ ಪಾಪವನ್ನು ಸುಜನರಕ್ಷಣ, ಯಜ್ಞ, ದಾನಗಳಿಂದ ಸುಲಭವಾಗಿ ನಾಶ ಮಾಡಿ, ನಾವೂ ಸುಖಿಸುವಂತೆ, ಕೀರ್ತಿಶಾಲಿಗಳಾಗುವಂತೆ ನಡೆ! ನಾಯಿಯ ಚರ್ಮದಲ್ಲಿ ಹಾಲಿಟ್ಟಂತೆ, ವೇದವನ್ನು ವೃಷಲನಿಗಿತ್ತಂತೆ, ಕಳ್ಳನಿಗೆ ಸತ್ಯೋಪದೇಶದಂತೆ, ಅಬಲೆಗೆ ಮೀಸೆ ತೀಡಿದಂತೆ, ನಿಷ್ಫಲವಾಗಿ ನಿರುಪಯುಕ್ತವಾಗಿದೆ ರಾಜ್ಯವು, ದುರ್ಯೋಧನನಲ್ಲಿ."

ಭೀಮನ ನುಡಿಯನ್ನಾಲಿಸಿ ಧರ್ಮಜನು ಮನದಲ್ಲಿ ನೊಂದನು; ಆದರೂ ಆ ಮಾತುಗಳ ಪರಮಸತ್ಯತೆಯನ್ನೂ, ಹಿತವನ್ನೂ ಅರಿತು ಸ್ವಲ್ಪ ಸುಮ್ಮನಿದ್ದು ಮತ್ತೆ ಇಂತೆಂದನು—

"ಭೀಮಸೇನ! ನಿನ್ನ ಮಾತುಗಳು ಕಟುವಾಗಿದ್ದರೂ ಸತ್ಯವಾಗಿರುವುವು. ನನ್ನ ಅವಿವೇಕದಿಂದ ವ್ಯಸನಾಕ್ರಾಂತನಾಗಿ ನೊಂದು ಮಾತಾಡುವ ನಿನ್ನಲ್ಲಿ ನನಗೆ ಸಿಟ್ಟಿಲ್ಲ. ಏನು ಮಾಡಲಿ! ಪಾಪಿ ಶಕುನಿಯು ಮೋಸದಿಂದ ಗೆದ್ದು, ಅಮಾಯಿಕನಾದ ನನ್ನ ರಾಜ್ಯಾದಿ ಸರ್ವವನ್ನೂ ಅಪಹರಿಸಿ, ದುರ್ಯೋಧನನಿಗಿತ್ತನು. ನಾನು ಮನಸ್ಸನ್ನು ನಿಗ್ರಹಿಸಿ, ಜೂಜಾಡದಿದ್ದಿದ್ದರೆ, ಇಷ್ಟು ಅನರ್ಥವಾಗುತ್ತಿದ್ದಿಲ್ಲ; ದೈವೇಚ್ಛೆಯೇ ಹಾಗಿತ್ತೆಂದೆನಿಸುತ್ತಿದೆ. ಎರಡನೆಯಸಲ ಜೂಜಾಡಿದಾಗ ಇಟ್ಟ ಪಣವು ನಿನಗೆ ತಿಳಿದೇ ಇದೆ. ಅದರಂತೆ ನಾವು ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸ ಮಾಡಿ, ಸತ್ಯಪ್ರತಿಜ್ಞರಾಗೋಣ! ನಂಬು ನನ್ನನ್ನು! ಧರ್ಮವನ್ನು ತೃಣೀಕರಿಸಿ, ಪಣವನ್ನು ಮರೆತು, ಕೌರವರನ್ನು ಕೊಂದು, ರಾಜ್ಯವಾಳುವುದು ನನಗೆ ಸಮ್ಮತವಲ್ಲ.

"ಜೂಜಾಡುವಾಗ ಪರಿಘವನ್ನು ಪಿಡಿದೆತ್ತಿ ಕೌರವನಾಶ ಮಾಡಲು ಹವಣಿಸಿದೆ! ನನ್ನ ಪಾಪಿ ಕೈಗಳನ್ನು ಸುಡಲು ಸಿದ್ಧನಾದೆ! ಆಗಲೇ ಹಾಗೆ ಮಾಡಬೇಕಿತ್ತು! ಸಮಯಬಂಧವನ್ನು ಒಪ್ಪದೆ ನಿಷೇಧಿಸಬಹುದಿತ್ತು! ಈಗ ಸಮಯಭಂಗವನ್ನು ಮಾಡಲೆಣಿಸುವುದು ನ್ಯಾಯವಲ್ಲ. ಅಸತ್ಯ-ಮರಣಗಳಲ್ಲಿ ಈ ಧರ್ಮನು ಮರಣವನ್ನು ವರಿಸುವನು, ಅಸತ್ಯವನ್ನಲ್ಲ; ಮಡದಿಯಾದ ದ್ರೌಪದಿಯ ಮಾನಹಾನಿಯನ್ನು ಉಪೇಕ್ಷಿಸಿದೆನೆಂದು ನೀವು ತಿಳಿದರೆ ಅದಕ್ಕಿಂತ ದುಃಖವಿನ್ನೆನಗಿಲ್ಲ. ವೈರಿವೃಕ್ಷವು ಫಲಪುಷ್ಪಭರಿತವಾಗಲಿ! ಬೆಳೆದುನಿಂತ ಅದನ್ನು ಖಂಡಿಸಿ, ಸುಖವಾಗಿರುವುದು ವೀರಲಕ್ಷಣವು! ನಾನು ನಿನ್ನ ಮಾತಿನಂತೆ ನಡೆಯುವೆನು, ಹದಿಮೂರು ವರ್ಷ ತಾಳು!"

ಭೀಮಸೇನನು ಆ ಮಾತಿಗೆ ಸಮ್ಮತಿಸಿ "ರಾಜನ್ ! ನಿನ್ನನ್ನು ನೋಯಿಸ ಲೆಂದಲ್ಲ; ದುರ್ಯೋಧನನಿಗೆ ರಾಜ್ಯವನಿತ್ತ ನಾವು ಕತ್ತೆಯನ್ನು ತುರಿಸಿದ ಮೂಢನಂತೆ ಅವಿವೇಕಿಗಳಾದೆವು. ವೈರಿಗಳನ್ನು ನಿರ್ಜಿಸಿ, ಸೇಡನ್ನು ತೀರಿಸಿದ ನನ್ನನ್ನು ನರಕಕ್ಕೆ ಕಳಿಸಲಿ ! ಅದೇ ನನಗೆ ಸ್ವರ್ಗವಾಗುವುದು. ನಿನ್ನ ಅತ್ಯಂತ ಸಹನವನ್ನು ಕುಂತೀ ದ್ರೌಪದಿಯರಾಗಲಿ, ನಾವಾಗಲಿ ಮೆಚ್ಚಿರುವೆವೆಂದು ತಿಳಿಯಬೇಡ ! ಬ್ರಾಹ್ಮಣನಿಗೆ ಕರುಣೆ ವಿಹಿತವು, ನಿನಗಲ್ಲ; ದುಷ್ಟನು, ಅಲ್ಪಬಲನು, ಮಾಯಾವಿಯು ಆದ ದುರ್ಯೋಧನನಿಗೆ ರಾಜ್ಯವನ್ನು ಮುಡುಪಿಟ್ಟು, ಮೂಲೆಗೆ ಕೂತಿರುವ ನಮಗಿನ್ನು ಹೆಚ್ಚಿನ ವಿಪತ್ತಾವುದು ? ಅಜಗರದಂತೆ ಬಿದ್ದಿರುವುದು ಕ್ಷತ್ರಿಯನ ಧರ್ಮವಲ್ಲವೆಂದು ಮನ್ವಾದಿ ಧರ್ಮಶಾಸ್ತ್ರಗಳನ್ನು ಚೆನ್ನಾಗಿ ತಿಳಿದಿರುವ ನಿನಗೆ ಗೊತ್ತೇ ಇದೆ.

"ಅಜ್ಞಾತವಾಸವೂ ದುಷ್ಕರವೆಂದು ತಿಳಿ ! ಆಬಾಲಗೋಪಾಲವಾಗಿ ಎಲ್ಲರೂ, ನೋಡುವಮಾತ್ರದಿಂದ ನನ್ನನ್ನು ಭೀಮನೆಂದು ತಿಳಿಯದಿರುವರೇ? ವಿಶಾಲಬಾಹುಬಲ ಯುಕ್ತನಾದ ಗಾಂಡೀವ ಕೋವಿದನಾದ ಅರ್ಜುನನನ್ನು ತೃಣಮುಷ್ಟಿಯಿಂದ ಬೆಟ್ಟ ವನ್ನಂತೆ, ಮುಚ್ಚಿಡಲಾಗುವುದೇ ? ಸೂರ್ಯನನ್ನು ಕೈಯಿಂದ ಮುಚ್ಚಿಡಲಾಗ ದಂತೆ, ಪ್ರಭಾಪ್ರತಿಭಾಸಂಪನ್ನನಾದ ನೀನು ಅಜ್ಞಾತನಾಗಿರಲಾಗುವುದೇ ? ವೀರ ರಾದ ನಕುಲ ಸಹದೇವರು, ಸುಂದರಿಯಾದ ದ್ರೌಪದಿಯು ಅಜ್ಞಾತರಾಗಿ ಚರಿಸುವು ದಾದರೂ ಎಂತು ? ಶತ್ರುವಧವನ್ನು ಸಾಧಿಸಿ, ರಾಜ್ಯಾದಿ ಸುಖಗಳನ್ನು ಹೊಂದು ವುದೆಂತು ?" ಎಂದು ನುಡಿದನು.

ಧರ್ಮರಾಜನು—"ಅಹುದು ! ನೀನಾಡಿದುದೆಲ್ಲ ನಿಜ. ಆದರೆ ಕಾರ್ಯವನ್ನು ಆಲೋಚಿಸಿ, ಚೆನ್ನಾಗಿ ಮಾಡುವುದರಿಂದ ಸಿದ್ಧಿಯಾಗುವುದು. ದೈವಸಹಾಯವೂ ದೊರೆಯುವುದು. ಭೂರಿಶ್ರವ, ಶಲ್ಯ, ಭೀಷ್ಮ, ದ್ರೋಣ, ಕೃಪ, ಗುರುಪುತ್ರರೇ ಮುಂತಾದವರು ಅಸ್ತ್ರಕುಶಲರಾಗಿರುವರು. ರಾಜಸೂಯದಲ್ಲಿ ನಮಗೆ ಸೋತ ರಾಜರೂ ಆ ದ್ವೇಷದಿಂದ ಕೌರವರಿಗೆ ಸಹಾಯಕರಾಗಿರುವರು. ರಾಜ್ಯವನ್ನಾಳು ತ್ತಿರುವ ದುರ್ಯೋಧನನು ಪ್ರಜಾಪ್ರಭುವಾಗಿ, ಪೂರ್ಣಕೋಶನಾಗಿ, ಮಹಾಬಲ ಯುಕ್ತನಾಗಿರುವನು. ಮಾನಿತನಾಗಿ ಕರ್ಣನೂ ಕೌರವರಾಜನ ಹಿತಸಾಧಕನಾಗಿ ರುವನು. ದುರ್ಯೋಧನನೊಡನೆ ಸಂಗ್ರಾಮವಾದರೆ ಇವರೆಲ್ಲ ನಮಗೆ ಶತ್ರುಗಳಾಗಿ ಪ್ರಾಣವನ್ನೇ ಒಡ್ಡಿ ಕಾದುವರು. ಗುರುಜನರಾದ ಭೀಷ್ಮದ್ರೋಣರೊಡನೆ ನೀನು ಬಾಹುಯುದ್ಧವನ್ನು ಮಾಡುವುದಿಲ್ಲ. ಅಸ್ತ್ರಜ್ಞನಾಗಿದ್ದೂ ನೀನು ಎಂದೂ ಕಾವ್ಯ ವಾದ ಅಸ್ತ್ರಪ್ರಯೋಗವನ್ನು ಮಾಡುವವನಲ್ಲ. ಇನ್ನು ನಾವು ಕೌರವರನ್ನು ಜಯಿ ಸುವ ಬಗೆ ಹೇಗೆ ? ಅರ್ಜುನನು ಅಸ್ತ್ರಸಂಪಾದನವನ್ನು, ತಪಸ್ಸಿನಿಂದ ಮಾಡಿ ಬರಲಿ ! ಅನಂತರದಲ್ಲಿ ಯುದ್ಧದ ಮಾತು" ಎಂದನು.

ಭೀಮನು ಅಷ್ಟೇ ಸಾಕೆಂದು ಸುಮ್ಮನಾದನು. ಆಗ ಅಲ್ಲಿಗೆ ಶ್ರೀವೇದವ್ಯಾಸನು ಬಂದನು. "ಯುಧಿಷ್ಠಿರ ! ನಿನ್ನ ಮನಶ್ಚಿಂತೆಯನ್ನು ತೀರಿಸುವೆನು. ಭೀಷ್ಮಾದಿ

ಗುರುಜನರನ್ನು, ದುರ್ಯೋಧನಾದಿ ದುಷ್ಟರನ್ನು ಎಂತು ಜಯಿಸುವುದೆಂದು ಚಿಂತಿಸುವೆ. ಬಿಡು ಚಿಂತೆಯನ್ನು !" ಎಂದು ವ್ಯಾಸನು ನುಡಿದು, ಧರ್ಮರಾಜನನ್ನು ಏಕಾಂತದಲ್ಲಿ ಕೂಡಿಸಿ ಇಂತೆಂದನು—"ರಾಜನ್ ! ನಿನಗೆ ಶ್ರೇಯಃಕಾಲವು ಪ್ರಾಪ್ತವಾಯಿತು. ನಿನ್ನ ವೈರಿಗಳು ನಿರ್ನಾಮವಾಗುವರು. 'ಪ್ರತಿಸ್ಮೃತಿ' ಎಂಬುವ ವಿದ್ಯೆಯನ್ನು ಸ್ವೀಕರಿಸು ! ಅದನ್ನು ನೀನು ನಿನ್ನ ತಮ್ಮನಾದ ಅರ್ಜುನನಿಗೆ ಉಪದೇಶಿಸು ! ಸ್ಮರಿಸಿದ ದೇವತೆಗಳು ಕಂಡು ವರವೀಯುವಂತೆ ತಪಸ್ಸಿದ್ಧಿಯನ್ನೀವ ಈ ಮಂತ್ರದಿಂದ ಅರ್ಜುನನು ಶಂಕರನಿಂದ ಪಾಶುಪತವನ್ನು, ಇಂದ್ರ, ವರುಣ, ಕುಬೇರ, ಯಮರಿಂದ ಅವರವರ ದಿವ್ಯಾಸ್ತ್ರಗಳನ್ನು ಸಂಪಾದಿಸಿ ಬರಲಿ ! ಅರ್ಜುನನು ನಾರಾಯಣಋಷಿಯ ಸಖನಾದ ನರನೆಂದು ತಿಳಿ ! ಅವನಿಂದ ನಿನಗೆ ಶತ್ರುಜಯವು ಕರಗತವಾಗುವುದು. ನೀನು ಇಲ್ಲಿಗೆ ಬಂದು ಬಹುದಿನಗಳಾದವು. ಈ ವನವನ್ನು ಬಿಟ್ಟು ಇನ್ನೊಂದು ವನವನ್ನು ಸೇರಿ, ವಿಪ್ರಾದಿಗಳಿಂದ ಸುಖವಾಗಿರು !" ಎಂದಾಜ್ಞಾಪಿಸಿ, ವ್ಯಾಸನು ಧರ್ಮರಾಜನಿಗೆ ಆ ಮಂತ್ರವನ್ನು ಉಪದೇಶಿಸಿದನು. ತಾನೇ ಉಪದೇಶವಿತ್ತರೆ, ಅರ್ಜುನನಿಗೆ ಫಲಾಧಿಕ್ಯವಾಗುವುದು. ಭೀಷ್ಮ ದ್ರೋಣ ಕರ್ಣಾದಿಗಳನ್ನು ಜಯಿಸಲು ಬೇಕಾಗುವ ವೀರ್ಯವಿತ್ತರೆ ಸಾಕೆಂದು ನಿಶ್ಚಯಿಸಿ, ಮಂತ್ರವನ್ನು ಧರ್ಮರಾಜನ ದ್ವಾರಾ ಕೊಟ್ಟುಹೋದನು. ಆಗ ಧರ್ಮರಾಜನು ಆ ಮಂತ್ರವನ್ನು ಅರ್ಜುನನಿಗಿತ್ತನು. ಧರ್ಮರಾಜನು ಸಪರಿವಾರನಾಗಿ ಕಾಮ್ಯಕ ವನವನ್ನು ಸೇರಿ, ಯಮುನಾಕೂಲದಲ್ಲಿ ವಸಿಸುತ್ತಿದ್ದನು.

## ಕಿರಾತಾರ್ಜುನೀಯ

ಒಂದುದಿನ ಧರ್ಮಜನು ಅರ್ಜುನನನ್ನು ಏಕಾಂತದಲ್ಲಿ ಕಲೆತು ಇಂತೆಂದನು. "ಕೌರವರು ಭೀಷ್ಮ ದ್ರೋಣ ಕರ್ಣ ಪ್ರಮುಖ ಮಹಾವೀರರ ಸಹಾಯದಿಂದ ಬಲವಂತರಾಗಿ ದುರ್ಜೇಯರೆನಿಸಿರುವರು. ಅಶ್ವತ್ಥಾಮ, ದ್ರೋಣ, ಭೀಷ್ಮ, ಕರ್ಣ, ಕೃಪರಲ್ಲಿ ಧನುರ್ವೇದವು ನಾಲ್ಕುಪಾದಗಳಿಂದ ಸಂಪೂರ್ಣವಾಗಿ ನಿಂತಿದೆ. ಮಹೀಮಂಡಲವು ದುರ್ಯೋಧನನ ವಶವಾಗಿದೆ. ಇಂತಹ ಶತ್ರುಜಯವೆಂತು ನಮಗೆ ಸಾಧ್ಯವೆಂಬ ಚಿಂತೆಗೊಳಗಾಗಿರುವೆನು. ಭೀಮನು ಸರ್ವಾಸ್ತ್ರ ವಿಶಾರದನು, ಗದಾಯುದ್ಧ ನಿಪುಣನು, ಅಸಹಾಯ ಶೂರನು ಆಗಿ ಕೌರವ ಬಲವನ್ನು ನಾಶಗೊಳಿಸಲು ಶಕ್ತನು ನಿಜ; ನೀನೂ ಸರ್ವಶಸ್ತ್ರಾಸ್ತ್ರ ನಿಪುಣನಾಗುವುದೂ ಶತ್ರುಜಯ ಸಾಧಕವಾಗಿದೆ. ಸರ್ವದೇವತಾ ಪ್ರಸಾದ ಸಂಪಾದಕವಾದ ಒಂದು ದಿವ್ಯ ಪವಿತ್ರ ಮಂತ್ರವನ್ನು ಶ್ರೀ ಕೃಷ್ಣದ್ವೈಪಾಯನನು ನನಗುಪದೇಶಿಸಿರುವನು. ಅದನ್ನು ನನ್ನಿಂದ ಸ್ವೀಕರಿಸು ! ರುದ್ರೇಂದ್ರಾದಿದೇವ ಪ್ರಸಾದವನ್ನು ತೀಕ್ಷ್ಣ ತಪವನ್ನು ಮಾಡಿ ಸಂಪಾದಿಸು; ಧನುಃಖಡ್ಗಬಾಣಗಳನ್ನು ಧರಿಸಿ, ಯಾರಿಗೂ ತಿಳಿಯದ ನಿರ್ಜನ ದುರ್ಗದಲ್ಲಿ ತಪವನ್ನು ಮಾಡಿ, ದಿವ್ಯಾಸ್ತ್ರಗಳನ್ನು ತಂದು, ಭೀಮನಿಗೆ, ಗಾಳಿಗೆ

ಬೆಂಕಿಯಂತೆ, ನೆರವಾಗು! ಇಂದ್ರನು ವೃತ್ರವಧ ಮಾಡುವಾಗ ಸಕಲದೇವತೆಗಳು ತಮ್ಮತಮ್ಮ ಅಸ್ತ್ರಗಳನ್ನು ಅವನಿಗಿತ್ತರು. ಇಂದ್ರನಲ್ಲಿ ಆ ಎಲ್ಲ ಅಸ್ತ್ರಗಳು ಶೇಖರ ವಾಗಿವೆ. ಅವನ್ನು ಇಂದ್ರಾನುಗ್ರಹದಿಂದ ಸಂಪಾದಿಸು! ಇಂತು ಹೇಳಿ ದೀಕ್ಷಿತ ನಾದ ಅರ್ಜುನನಿಗೆ ಧರ್ಮರಾಜನು ಮಂತ್ರವನ್ನು ಕೊಟ್ಟು ಆಶೀರ್ವದಿಸಿ ಕಳಿಸಿದನು.

ಗಾಂಡೀವವನ್ನು ಧರಿಸಿ ನಿಂತಿರುವ ಪಾರ್ಥನನ್ನು ಕಂಡು ದ್ರೌಪದಿಯು "ಕೌಂತೇಯ! ನೀನು ಹುಟ್ಟಿದಾಗ ಆಕಾಶವಾಣಿಯು ನುಡಿದುದನ್ನು ಸತ್ಯವನ್ನಾಗಿಸು! ನಿಮ್ಮ ಮಾತೆಯ ಕಷ್ಟವನ್ನು ಕಳೆ! ಪಾಪಿ ದುರ್ಯೋಧನನು ನುಡಿದ ಕಟು ವಚನಗಳು ಮನಸ್ಸಿನಲ್ಲಿ ಬಾಣಗಳಂತೆ ನೆಟ್ಟು ನೋಯಿಸುತ್ತಿವೆ, ಅವನ್ನು ಕಿತ್ತೊಗೆ! ನೀನು ತಪಸ್ಸಿಗೆಂದು ತೆರಳಿದಮೇಲೆ, ನಿನ್ನ ವಿಯೋಗದಿಂದ ನಿದ್ರಾಹಾರಗಳನ್ನು ತೊರೆದು, ನಿನ್ನ ಚಿಂತೆಯಲ್ಲೇ ದಿವಸಗಳನ್ನು ಕಳೆಯುವೆವು. ನಮ್ಮ ಭವಿಷ್ಯಜೀವನ ಸುಖಗಳನ್ನೆಲ್ಲ ನಿನ್ನಲ್ಲಿ ಹುದುಗಿಟ್ಟು ಕಾದಿರುವೆವು. ಬೇಗನೆ ತಪಸ್ಸಿದ್ಧನಾಗಿ ಬಾ! ಧಾತೃವಿಧಾತೃಗಳು ನಿನ್ನ ಬೆಂಬಲಿಗಳಾಗಿ ರಕ್ಷಿಸಲಿ! ಶ್ರೀಹ್ರೀ ಪುಷ್ಟಿ ಕೀರ್ತಿರೂಪ ಶ್ರೀದೇವಿಯು, ಸರಸ್ವತಿಯು ಸರ್ವದಾ ನಿನ್ನನ್ನು ಕಾಪಾಡಲಿ! ಸರ್ವದೇವತೆ ಗಳು ನಿನಗೆ ಶುಭಕರರಾಗಲಿ!" ಎಂದು ಹರಸಿ ಕಳಿಸಿದಳು.

ಅರ್ಜುನನು ಬ್ರಾಹ್ಮಣರಿಗೂ, ಅಣ್ಣನಿಗೂ ವಂದಿಸಿ, ಧೌಮ್ಯರ ಅಪ್ಪಣೆ ಪಡೆದನು. ತಮ್ಮಂದಿರನ್ನಪ್ಪಿದನು. ಭೀಮನಿಗೆ ನಮಿಸಿ ಅವನ ಆಶೀರ್ವಾದವನ್ನು ಹೊಂದಿ ಪಯಣಿಸಿದನು.

ಅರ್ಜುನನು ಹಿಮವಂತವನ್ನು ದಾಟಿ ಗಂಧಮಾದನವನ್ನು ಸೇರಿದನು. ಅಲ್ಲಿ ಇಂದ್ರಕೀಲಶಿಖರದ ತಪ್ಪಲಿನಲ್ಲಿ ಆಶ್ರಮವನ್ನು ನಿರ್ಮಿಸಿಕೊಂಡು, ತಪವನ್ನಾರಂಭಿ ಸಿದನು. ಆಗ ಅವನಿಗೆ "ನಿಲ್ಲು! ನಿಲ್ಲು!" ಎಂದು ಶಬ್ದವು ಕೇಳಿಸಲು, ದಿಟ್ಟಿಸಿ ನೋಡಿದ ಅರ್ಜುನನಿಗೆ ವೃಕ್ಷಮೂಲದಲ್ಲಿದ್ದ ವಿಪ್ರನೋರ್ವನು ಕಾಣಿಸಿದನು. ಅವನು ಅರ್ಜುನನನ್ನು ನೋಡಿ ಇಂತೆಂದನು—"ಯಾರು ನೀನು? ಏಕಿಲ್ಲಿಗೆ ಬಂದೆ? ಇದು ಶಾಂತಾಶ್ರಮವು. ಇಲ್ಲಿ ಧನುರ್ಬಾಣಗಳ ಕಾರ್ಯವಿಲ್ಲ. ತಪಸ್ಸನ್ನು ಗೈವ ನಿನಗೆ ಶಸ್ತ್ರಗಳೇಕೆ? ಬಿಸಾಡು ಅವನ್ನು!" ಆ ಮಾತನ್ನಾಲಿಸಿ, ಚಲಿಸದೆ ಅರ್ಜುನನು ಕ್ಷತ್ರಧರ್ಮರತನಾದ ತನಗೆ ತಪಸ್ಸಿನಲ್ಲೂ ಧನುರಾದಿಗಳು ತ್ಯಾಜ್ಯವಲ್ಲವೆಂದನು. ವಿಪ್ರನು ಅವನ ಧೈರ್ಯವನ್ನು ಮೆಚ್ಚಿ ಇಂದ್ರರೂಪವಾಗಿ ಪ್ರತ್ಯಕ್ಷನಾದನು. ಅರ್ಜುನನು ಆ ಸುರೇಂದ್ರನಿಂದ ಅಸ್ತ್ರದಾನವನ್ನು ಬೇಡಿದನು. ಇಂದ್ರನು "ಅರ್ಜುನ! ಕಾಮಲೋಭಗಳಿಂದ ಅಸ್ತ್ರಲಾಭವಾಗಲಾರದು. ಶಂಕರನನ್ನು ಕುರಿತು ತಪವನ್ನು ಮಾಡು! ದೇವದೇವನ ದಯದಿಂದ ಪಾಶುಪತವನ್ನು ಪಡೆದು ಸ್ವರ್ಗಕ್ಕೆ ಬಾ! ಆಗ ನನ್ನಿಂದ ದಿವ್ಯಾಸ್ತ್ರಗಳನ್ನೆಲ್ಲ ಪಡೆಯಲು ಅರ್ಹನಾಗುವೆ" ಎಂದು ನುಡಿದು ಅಂತರ್ಹಿತನಾದನು.

ಇಂದ್ರಕೀಲ ಪರ್ವತದಲ್ಲಿ ಇಂದ್ರನಂದನನು ಇಂದ್ರಾಜ್ಞೆಯಂತೆ ತೀವ್ರತಪವನ್ನು ಕೈಗೊಂಡನು. ದಂಡ ಅಜಿನ ಚೀರಗಳನ್ನು ಧರಿಸಿದನು; ಮೂರುದಿನಕ್ಕೊಮ್ಮೆ ಉದುರಿದ ಎಲೆಗಳನ್ನು, ತಿಂಗಳಿಗೊಮ್ಮೆ ಫಲವನ್ನು ಸ್ವೀಕರಿಸಿ ಎರಡು ತಿಂಗಳು ಕಳೆದನು. ಮೂರನೇ ತಿಂಗಳಲ್ಲಿ ಪಕ್ಷಾಹಾರಿಯಾದನು. ನಾಲ್ಕನೆಯ ತಿಂಗಳಲ್ಲಿ ಕೊನೆಗೊಂದುದಿನ ಪಾರಣೆ ಮಾಡಿದನು. ಐದನೆಯ ತಿಂಗಳಲ್ಲಿ ವಾಯುಭಕ್ಷ ನಾದನು. ಕೈಗಳನ್ನೆತ್ತಿ ನಮಿಸಿ, ಪಾದಾಂಗುಷ್ಠದಮೇಲೆ ನಿಂತು, 'ಶಿವ ! ಶಿವ ! ಶಿವಪ್ರಭುಸಂಕರ್ಷಣ! ನಮೋ ನಮಃ' ಎಂದು ಜಪಿಸುತ್ತ ತಪಸ್ಸನ್ನು ಮಾಡಿದನು. ಆಗ ಋಷಿಗಳು ಶಂಕರನನ್ನು ಕಂಡು, ಅರ್ಜುನನ ಅಭೀಷ್ಟವನ್ನು ಕೊಟ್ಟು, ಅವನ ತೀವ್ರತಪದಿಂದ ಆಗುವ ಲೋಕತಾಪವನ್ನು ನಿಲ್ಲಿಸೆಂದು ಬೇಡಿದರು. ಮಹಾದೇವನು ಅರ್ಜುನನ ಕಾಂಕ್ಷಿತವನ್ನು ಕೊಡಲು ನಿಶ್ಚಯಿಸಿ, ಋಷಿಗಳಿಗಭಯವಿತ್ತು ಕಳಿಸಿದನು. ಅರ್ಜುನನು ಆರು ತಿಂಗಳು ತೀವ್ರತಪವನ್ನು ಮುಗಿಸುತ್ತಿರಲು, ಭಗವಾನ್ ಶಂಕರನು ಕಿರಾತವೇಷವನ್ನು ಧರಿಸಿದನು. ಮೇರುವಿನಂತೆ ಮೆರಗುವ ಮೈಯಲ್ಲಿ ಕೃಷ್ಣಮೃಗ ಚರ್ಮವನ್ನು ಧರಿಸಿ, ಕೈಯಲ್ಲಿ ಪಿನಾಕವನ್ನು ಪಿಡಿದು, ಶಿರದ ಜಟೆಯಲ್ಲಿ ಶಶಾಂಕ ನನ್ನು ಮುಚ್ಚಿಟ್ಟು, ಉಕ್ಕಿ ಹರಿಯುವ ಗಂಗೆಯನ್ನು ನಿಲ್ಲಿಸಿ, ದೇಹವನ್ನು ಧರಿಸಿ ಬಂದ ಅಗ್ನಿಯಂತೆ ಪ್ರಕಾಶಮಾನನಾಗಿ ಶಿವನು, ಕಿರಾತರಾಣಿಯಾಗಿ ಶಿವೆಯು ಹಿಂಬಾಲಿಸಿ ಬರಲು, ಪಾರ್ಥನ ಆಶ್ರಮವನ್ನು ಸಮೀಪಿಸಿದನು.

ಅದೇ ಸಮಯದಲ್ಲಿ ದನುಪುತ್ರನಾದ ಮೂಕನೆಂಬ ರಾಕ್ಷಸನು ವರಾಹರೂಪ ದಿಂದ ಅರ್ಜುನನನ್ನು ಕೊಲ್ಲಲೆಣಿಸಿ, ಮೇಲೇರಿ ಬಂದನು. ಅವನ ದುರಾಕ್ರಮಣ ವನ್ನು ಸಹಿಸದೆ, ಪಾರ್ಥನು ಧನುಸ್ಸಿಗೆ ಬಾಣವನ್ನು ಹೂಡಿ, ಮೂಕಾಸುರನನ್ನು ಯಮಸದನಕ್ಕಟ್ಟಲು ಸಿದ್ಧನಾದನು. ಆಗ ಶಂಕರಕಿರಾತನು ಅವನನ್ನು ನಿವಾರಿಸಿ ಇಂತೆಂದನು—"ಹಂದಿಯು ನನ್ನದು. ಅದನ್ನು ಮೊದಲು ನೋಡಿ ಹೊಡೆಯ ಬಂದವನು ನಾನು ! ತಡೆ!" ಹೀಗೆಂದ ಕಿರಾತನ ಮಾತನ್ನು ಲೆಕ್ಕಿಸದೆ, ಅರ್ಜುನನು ಹಂದಿಯನ್ನು ಬಾಣದಿಂದ ಹೊಡೆದನು. ಅದೇ ಕಾಲದಲ್ಲಿ ಕಿರಾತನೂ ಹೊಡೆದನು. ಎರಡು ಬಾಣಗಳು ಎರಡೂ ಪಕ್ಕಗಳಲ್ಲಿ ಬಡಿಯಲು, ಗಿರಗಿರ ತಿರುಗಿ ಆ ವರಾಹವು ವಜ್ರಾಘಾತದಿಂದ ಉರುಳುವ ಪರ್ವತದಂತೆ ಬಿದ್ದು ಸತ್ತಿತು. ಮೂಕಾಸುರನು ಶಂಕರ-ಪಾಂಡವರ ಬಾಣಗಳಿಗೆ ತುತ್ತಾಗಿ ಮೃತನಾದನು. ಆಗ ಅರ್ಜುನನು ತನ್ನೆದುರಿನಲ್ಲಿ ಸ್ತ್ರೀಸಹಾಯನಾಗಿರುವ ಕಿರಾತನನ್ನು ಕಂಡು, ನಕ್ಕು, "ಯಾರು ನೀನು ? ನನ್ನ ಹಂದಿಯನ್ನು ನೀನೇಕೆ ಹೊಡೆದೆ ? ಬೇಟೆಯ ಬಗೆಯನ್ನರಿಯದೆ, ಅಪರಾಧವೆಸಗಿದ ನಿನ್ನನ್ನು ಜೀವದಿಂದ ಬಿಡುವುದಿಲ್ಲ. ಯುದ್ಧಕ್ಕೆ ನಿಲ್ಲು" ಎಂದು ಧನುಷ್ಟಂಕಾರಗೈದನು. ಕಿರಾತನು ನಕ್ಕುಬಿಟ್ಟು, ಅರ್ಜುನನನ್ನು ನಿರ್ಲಕ್ಷಿಸಿ, ಮಧುರವಚನನಾಗಿ, "ವೀರ! ವನವೆಲ್ಲವೂ ನಮ್ಮದು, ಸದಾ ವನರತರಾದ ನಮಗೆ

ವನವ್ಯಾಗಭಯವಿಲ್ಲ. ನೀನು ನೋಡಲು ಸುಕುಮಾರನು, ಸುಖೋಚಿತನಾಗಿ ಕಾಣುವೆ. ನೀನೇಕೆ ವನದಲ್ಲಿರುವೆ ಹೇಳು !" ಎಂದು ಕೇಳಿದನು.

ಅರ್ಜುನನು "ಗಾಂಡೀವಧಾರಿಯು ಅಕ್ಷಯತೂಣೀರದ್ವಯನಾದ ಅರ್ಜುನ ನಿಗೆ ಎಲ್ಲಿರಲೇನು ಭಯ ? ನನ್ನ ಹಂದಿಯನ್ನು ಹೊಡೆದ ತಪ್ಪಿಗೆ ನಿನ್ನನ್ನೇ ಹೊಡೆಯುವೆನು. ನನ್ನ ಬಾಣಗಳಿಂದ ನಿನ್ನನ್ನು ಕಾದುಕೋ" ಎಂದು ನಿಶಿತ ನಾರಾಚಗಳನ್ನು ಪ್ರಯೋಗಿಸಿದನು. ಕಿರಾತನೂ ಬಿಡದೆ ಬಾಣವರ್ಷದಲ್ಲಿ ಅರ್ಜುನ ನನ್ನು ಮುಳುಗಿಸಿ, "ಬಿಡು, ಬಿಡು ಶರಗಳನ್ನು" ಎಂದು ಗರ್ಜಿಸಿದನು. ಅರ್ಜುನನು ಭಯಪಡದೆ ಬಾಣಗಳನ್ನು ಕಿರಾತನ ದೇಹದಲ್ಲಿ ನಾಟುವಂತೆ ಪ್ರಯೋಗಿಸಿದನು. ಪಾರ್ಥನ ಬಾಣಗಳು ಬಂಡೆಗೆ ತಗುಲಿದ ಹುಲ್ಲುಕಡ್ಡಿಗಳಂತೆ ವ್ಯರ್ಥವಾಗಿ ಕೆಳಗೆಬಿದ್ದವು. ಕಿರಾತನು ಅಕ್ಷತನಾಗಿ, ನಗುನಗುತ ನಿಂತನು. ಅದನ್ನು ನೋಡಿ, ಅರ್ಜುನನು ವಿಸ್ಮಿತನಾದನು. ಸಾಧು ! ಭಾಪು! ಎಂದು ಪ್ರಶಂಶಿಸಿದನು. ಗಾಂಡೀವಮುಕ್ತವಾದ ಬಾಣಗಳು ವ್ಯರ್ಥವಾಗಬೇಕಾದರೆ ಇವನು ಸಾಮಾನ್ಯಕಿರಾತನಲ್ಲ! ದೇವತೋತ್ತಮ ನಾದ ರುದ್ರನೋ, ಮತ್ತಾವ ಮಹಾತ್ಮನೋ ಎಂದು ಚಿಂತಿಸಿ, ಎದೆಗುಂದದೆ ಮತ್ತೆ ದಿವ್ಯಬಾಣಗಳನ್ನು ಗಾಂಡೀವದಿ ಹೂಡಿ, ಬಿಟ್ಟನು. ಪರ್ವತದ ಘೋರ್ಗಲ್ಲ ಮೇಲೆ ಮಳೆಗರೆದಂತೆ ಅವೂ ವ್ಯರ್ಥವಾದವು. ಅರ್ಜುನನು ಬಾಣಗಳಿಗೆ ಕೈ ಯಿಟ್ಟಾಗ ಅವನ ಅಕ್ಷಯ ತೂಣೀರಗಳು ಬರಿದಾಗಿದ್ದವು. ಭೀತನಾದ ಅರ್ಜುನನು ಗಾಂಡೀವವನ್ನೆತ್ತಿ ಹೊಡೆಯಲು ಕಿರಾತನು ಅದನ್ನು ನುಂಗಿ ನಿಂತನು. ಕೋಪೋ ದ್ದೀಪಿತನಾಗಿ, ಅರ್ಜುನನು ಖಡ್ಗವನ್ನೆತ್ತಿ ಹೊಡೆಯಲು, ಕಿರಾತನು ಅದನ್ನೂ ಚೂರಾಗಿಸಿದನು. ಶಿಲಾವರ್ಷಗಳಿಂದ ಹೊಡೆದಾಗ ಅವು ಪುಡಿಯಾದವು.

ಕೊನೆಗೆ ಅರ್ಜುನನು ಮುಷ್ಟಿಯುದ್ಧಕ್ಕಿಳಿದನು. ಛಟಛಟಾತ್ಕಾರ ನಿಷ್ಠುರ ವಾದ ಮುಷ್ಟಿಯುದ್ಧದಲ್ಲಿ ಅರ್ಜುನನು ನೊಂದನು. ಕಿರಾತನಿಗೆ ಕುಂದಾಗಲಿಲ್ಲ. ಅರ್ಜುನನು ಉಳಿದಿದ್ದ ಬಲವನ್ನೆಲ್ಲ ಕೂಡಿಸಿ, ಮುಷ್ಟಿಯಿಂದ ಕಿರಾತನ ಎದೆಗೆ ಹೊಡೆ ದನು. ಕಿರಾತನು ಅವನನ್ನು ಗುದ್ದಿ, ನಿರುಚ್ಛ್ವಾಸನನ್ನಾಗಿಸಿ; ನೆಲದಮೇಲೆ ಉರುಳಿ ಸಿದನು. ಅರ್ಜುನನ ಕಣ್ಣಿಗೆ ಕತ್ತಲುಗವಿಯಿತು. ಮೂರ್ಛೆಬಂದು ನೊಂದು ಎಚ್ಚೆತ್ತ ಪಾರ್ಥನು ಭಕ್ತಿಯಿಂದ ರುದ್ರನನ್ನು ಸ್ಮರಿಸಿ, ವೇದವ್ಯಾಸರಿತ್ತ ಮಂತ್ರವನ್ನು ಪಠಿಸುತ್ತಾ, ಪುಷ್ಪಗಳಿಂದ ರುದ್ರಲಿಂಗವನ್ನು ತದಂತರ್ಗತ ಶ್ರೀಹರಿಯನ್ನು ಪೂಜಿ ಸಿದನು. ಆವನು ಪೂಜಿಸಿದ ಪುಷ್ಪಗಳು ಕಿರಾತನ ತಲೆ ಏರಿ ಕೂತವು. ಈ ವಿಚಿತ್ರ ವನ್ನು ಕಂಡು ಅರ್ಜುನನು ಕಿರಾತನೇ ರುದ್ರನೆಂದು ತಿಳಿದು, ಎದ್ದು ನಿಂತು, ಕೈ ಜೋಡಿಸಿ ನಮಿಸಿ, ಫಾಲೇಂದುಮಂಡಲನನ್ನು ಸ್ತುತಿಸಿ, ಶರಣಾಗತನಾದನು. ಅದರಿಂದ ಪ್ರೀತನಾದ ಮಹಾದೇವನು " ಅರ್ಜುನ ! ಪ್ರಸನ್ನನಾಗಿರುವೆನು ! ನಿನ್ನ ವೀರ್ಯಶೌರ್ಯಸಾಹಸಗಳನ್ನು ಮೆಚ್ಚಿರುವೆನು. ನೀನು ನರನಲ್ಲವೆ ? ನಾರಾಯಣ

ಸಖನಾದ ನಿನ್ನಿಂದ ಲೋಕಹಿತವಾಗಲಿದೆ. ಶತ್ರುಗಳನ್ನು ಜಯಿಸುವೆ! ನಿನಗೆ ದಿವ್ಯಾಸ್ತ್ರಗಳನ್ನು ಕೊಡಲಿರುವೆನು" ಎಂದು ನಿಜರೂಪವನ್ನವನಿಗೆ ತೋರಿದನು.

ಭಕ್ತವಂದಿತಪಾದಾರವಿಂದನು, ಗಜಚರ್ಮಾಂಬರನು, ಭುಜಗಭೂಷಣನು, ಶೂಲ ಪಿನಾಕ ಡಮರು ವರದಹಸ್ತನು, ಕಪಾಲಮಾಲಿಯು, ಗರಳಕಂಠನು, ಧವಳ-ಗಾತ್ರನು, ಪರಮಪವಿತ್ರನು, ಕರುಣಾಕಟಾಕ್ಷನು, ತ್ರ್ಯಕ್ಷನು, ಖಂಡೇಂದುಧರನು, ಗೌರೀ ವರನು, ಗಂಗಾಭರಣನು, ಭಕ್ತಶರಣನು ಆದ ಶಂಕರನನ್ನು, ಕಮನೀಯ ರೂಪ ಗುಣ ಸೌಭಾಗ್ಯ ಸಂಪದ್ವಿಲಸಿತೆಯಾದ ಹಿಮಗಿರಿಜಾತೆಯನ್ನು ಅನುಸರಿಸಿ, ನಿಂತ ಪ್ರಮಥರನ್ನು ನೋಡಿ, ಆನಂದದಿಂದ ಮೈ ಮರೆದು, ಅರ್ಜುನನು ಪಾದಾರವಿಂದಗಳಿಗೆ ಮುಟ್ಟಿ ನಮಿಸಿ, ಭಕ್ತಿಯಿಂದ ಸ್ತುತಿಸಿದನು—

"ಶಂಕರ! ಭಕ್ತ ಶುಭಂಕರ! ಅಹಂಕಾರ ಮನೋ ಗಗನಾದಿ ತತ್ವನಿಯಾಮಕನು, ಲೋಕಸಂಹಾರಕಾರಣನು ಆದ ನಿನಗೆ ನಮೋ ನಮಃ. ಶ್ರೀಹರಿಯು ನಿನ್ನಲ್ಲಿ ಶಿವ-ರೂಪದಿಂದ ನಿಂತು ಲೋಕವನ್ನು ಪಾಲಿಸುತ್ತಿರುವನು. ನೀನು ವಿಷ್ಣುವಿನಲ್ಲಿ ನಿಂತು ಅವನ ಅಪ್ಪಣೆಯಂತೆ ಸರ್ವರಕ್ಷಕನೂ ಆಗಿರುವೆ. ವಾಸುದೇವನ ಪ್ರೀತಿಪಾತ್ರನಾದ ನಿನಗೆ ಪುನಃ ವಂದಿಸುವೆನು. ನಾನು ಕಿರಾತನೆಂದು ತಿಳಿದು, ಮಾಡಿದ ಅಪರಾಧವನ್ನು ಕ್ಷಮಿಸು. ತಂದೇ! ನಿನ್ನ ದರ್ಶನಕಾಂಕ್ಷಿಯಾಗಿ ಈ ಗಿರಿಗೆ ಬಂದೆ. ನಿನ್ನ ಪಾಶುಪತಾಸ್ತ್ರವನ್ನು ಪಡೆಯಲು ತೀವ್ರತಪವನ್ನು ಮಾಡುತ್ತ ನಿಂದೆ. ಅದನ್ನೂ ಇತರ ಶತ್ರುವಿಜಯಸಾಧಕವಾದ ದಿವ್ಯಾಸ್ತ್ರಗಳನ್ನೂ ಎನಗಿತ್ತು ಕಾಪಾಡು" ಎಂದು ಪ್ರಾರ್ಥಿಸಿದ ಅರ್ಜುನನಿಗೆ ರುದ್ರನು ಪ್ರೀತನಾಗಿ ತಾನು ನಾರಾಯಣನಿಂದ ತಪಗೈದು ಪಡೆದ ಪಾಶುಪತಾಸ್ತ್ರವನ್ನು ಅರ್ಜುನನಿಗೆ ದಯಪಾಲಿಸಿದನು. "ಅರ್ಜುನ! ನಾರಾಯಣ ಸಖನಾದ ನೀನು ಜಗದ್ಧಿತವನ್ನು ಸಾಧಿಸಲು ಬದರಿಕಾಶ್ರಮದಲ್ಲಿ ತಪವನ್ನು ಮಾಡಿದೆ. ಹಿಂದೆ ಇಂದ್ರನ ಗಾಂಡೀವವು ಅಗ್ನಿದ್ವಾರಾ ನಿನಗೆ ಬಂತು. ನೀನು ಇಂದ್ರಸುತನಿರುವೆ; ನಿನ್ನ ಅಕ್ಷಯ ತೂಣೀರಗಳನ್ನು ಗಾಂಡೀವವನ್ನು ಕೂಡ ಹಿಂದಿರುಗಿಸಿ ಕೊಡುತ್ತಿರುವೆನು. ನನಗೆ ಕೃಷ್ಣನು 'ಭೂಮಿಯಲ್ಲಿ ಅವತರಿಸುವ ಇಂದ್ರಾದಿಗಳು ಅಜೇಯರಾಗದಿರಲಿ!' ಎಂದು ವರವನ್ನಿತ್ತಿರುವನು. ಆದುದರಿಂದ ನೀನು ನನಗೆ ಸೋತೆ. ಕೃಷ್ಣಯುತನಾಗಿರುವಾಗ ನೀನು ದೇವಾಂಶರಾದ ವೀರರಿಗೆಲ್ಲರಿಗೂ ಅಜೇಯನಾಗುವೆ. ಪಾಶುಪತದ ಬಲದಿಂದ ಕರ್ಣ, ಭೀಷ್ಮ, ದ್ರೋಣಾದಿ ವೀರರನ್ನು ಜಯಿಸುವೆ. ಇದನ್ನು ಅಲ್ಪರಲ್ಲಿ ಪ್ರಯೋಗಿಸಿದರೆ ಜಗತ್ಪ್ರಳಯವಾಗುವುದು." ಎಂದು ಮಹಾದೇವನು ಮೂರ್ತಿಮಂತವಾದ ಅಂತಕನಂತೆ ಪ್ರಜ್ವಲಿಸುವ ಪಾಶುಪತವನ್ನಿತ್ತು ಕೈಯಿಂದ ಮುಟ್ಟಿ ಅರ್ಜುನನನ್ನು ಅಕ್ಷತಗಾತ್ರನನ್ನಾಗಿಸಿದನು. "ಸ್ವರ್ಗವನ್ನು ಸೇರಿ ಅಲ್ಲಿ ಕೆಲಕಾಲವಿದ್ದು, ಇಂದ್ರಪ್ರಸಾದವನ್ನೂ ಸಂಪಾದಿಸು" ಎಂದು ಆದೇಶವಿತ್ತು ಶೂಲಪಾಣಿಯು ಮರೆಯಾದನು. ವಿಷ್ಣುದೇವತಾಕವೂ, ರುದ್ರಋಷಿಕವೂ ಆದ ಪಾಶುಪತಾಸ್ತ್ರವಿತ್ತ ಮಹಾದೇವನ ದಿವ್ಯದರ್ಶನದಿಂದ ಅರ್ಜುನನು ಆನಂದತುಂದಿಲ

ನಾದನು. ಅವನ ನೇತ್ರಗಳಲ್ಲಿ ಆನಂದಬಾಷ್ಪಗಳು ತುಂಬಿಬಂದವು. ಗಾತ್ರವು ಪುಲಕಾಂಚಿತವಾಯಿತು. ಶ್ರೀಕಂಠನ ಕರಸ್ಪರ್ಶದಿಂದ ಅವನು ಪಾವನನಾದನು. ಆಗ ವರುಣ, ವಾಯು, ವಹ್ನಿ, ಕುಬೇರ, ಇಂದ್ರರು ಸಪರಿವಾರರಾಗಿ ಅರ್ಜುನನನ್ನು ನೋಡಿ ಅನುಗ್ರಹಿಸಲು ಬಂದರು. ಶ್ರೀನಿಕೇತನನು ಪ್ರಸನ್ನನಾಗಿರಲು ಹೊಂದಲಾಗದ ಶುಭವುಂಟೇ ? ಅವರು ಅರ್ಜುನನಿಗೆ ದಿವ್ಯದೃಷ್ಟಿಯನ್ನಿತ್ತು, ಕಾಣಿಸಿಕ್ಕು ಅವನನ್ನು ಆಶೀರ್ವದಿಸಿದರು. ಮಹಾದೇವನ ಪರಮಾನುಗ್ರಹವನ್ನು ಹೊಂದಿ, ತೇಜಃಪುಂಜನಾದ ಅರ್ಜುನನಿಗೆ ಆ ದೇವತೆಗಳು ತಮ್ಮ ದಿವ್ಯಾಸ್ತ್ರಗಳನ್ನಿತ್ತರು. ಮಂತ್ರ ಪ್ರಯೋಗ, ಉಪಯೋಗ, ಉಪಸಂಹಾರ ಸಹಿತವಾದ ಇಂದ್ರಾದಿ ದಿವ್ಯಾಸ್ತ್ರಗಳನ್ನು ಸ್ವೀಕರಿಸಿ, ಅರ್ಜುನನು ಆ ಮಹಾನುಭಾವರಿಗೆ ವಂದಿಸಿದನು.

ಆಗ ಇಂದ್ರನು ಅರ್ಜುನನಿಗಿಂತೆಂದನು—"ಪಾರ್ಥ ! ಮಹಾದೇವ ಮಾಧವರ ದಯುದಿಂದ ದೇವತೆಯಂತಾದೆ ! ನಿನಗೆ ದುಷ್ಕರವಿಲ್ಲ. ಸ್ವರ್ಗಕ್ಕೆ ಬಂದು ದೇವ ಕಾರ್ಯವನ್ನು ಸಾಧಿಸಬೇಕಾಗಿದೆ. ಮಾತಲಿಯು ನನ್ನ ದಿವ್ಯರಥದಲ್ಲಿ ನಿನ್ನನ್ನು ಸ್ವರ್ಗಕ್ಕೆ ಕರೆತರುವನು. ಸ್ವರ್ಗದಲ್ಲಿ ಇತರಾಸ್ತ್ರಗಳನ್ನೂ ನಿನಗೆ ಉಪದೇಶಿಸಿ ಕೊಡುವೆನು." ಅರ್ಜುನನು ಶಿರಸಾ ಇಂದ್ರಾಜ್ಞೆಯನ್ನು ಸ್ವೀಕರಿಸಿದನು. ದೇವ ಪರಿವೃಢರನ್ನು ಭಕ್ತಿಯಿಂದ ಪೂಜಿಸಿದನು. ಅವರೆಲ್ಲರೂ ಅರ್ಜುನನನ್ನಭಿನಂದಿಸಿ, ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

ಕೆಲಕಾಲವಾದಮೇಲೆ ಮಾತಲಿಯು ಇಂದ್ರರಥವನ್ನು ತಂದನು. ಮೇಘಗಳನ್ನು ಸೀಳಿಕೊಂಡು, ಕಿಂಕಿಣೀಜಾಲನಿಕ್ವಣ ಮನೋಹರವಾದ ಕಾಂಚನರಥವು ಬರಲು ನೋಡಿ, ಅರ್ಜುನನು ಅದಕ್ಕೆ ಪ್ರದಕ್ಷಿಣಿಸಿ, ನಮಿಸಿ, ಆರೋಹಿಸಿದನು. ರಥ ಬದ್ಧವಾದ ದಶಸಹಸ್ರತುರಗಗಳು ಮೇಘಗರ್ಜನದಂತೆ ಹೇಷಾರವವನ್ನು ಮಾಡಿ, ರತ್ನಮಯವು, ನಾಗಬಂಧಯುತವು, ಮಹಾರಯವು ವೈಜಯಂತಧ್ವಜ ವಿರಾಜಿತವು ಆದ ದಿವ್ಯರಥವನ್ನು ವಹಿಸಿ, ಸ್ವರ್ಗಕ್ಕೆ ಹಾರಿದವು. ಇಂದ್ರಸುತನು ಗಂಗಾಸ್ನಾನ ದಿಂದ ಶುದ್ಧದೇಹನಾದನು. ಇಂದ್ರನಿತ್ತ ಮಂತ್ರಬಲದಿಂದ ರಥದಲ್ಲಿ ಕೂತು ಸ್ವರ್ಗಾಭಿಗಮನ ಸಮರ್ಥನಾದನು. ತಾನು ನಿವಸಿಸಿದ ಮಂದರಪರ್ವತವನ್ನು ವಂದಿಸಿ, ಅಲ್ಲಿ ನೆಲೆಸಿದ್ದ ಋಷಿವರರಿಗೆ ಮನಸಾ ನಮಸ್ಕರಿಸಿದನು.

ಅದ್ರಿಕುಂಜಗಳಲ್ಲಿಯು, ನದೀಪುಲಿನಗಳಲ್ಲಿಯು ವಿಹರಿಸುತ್ತಾ ಫಲಗಳನ್ನಾಸ್ವಾದಿಸಿ, ಅಮೃತಜಲವನ್ನು ಕುಡಿದು, ಪುಷ್ಪಗಂಧವನ್ನಾಘ್ರಾಣಿಸಿ, ಶಾದ್ವಲಗಳಲ್ಲಿ ತಂದೆಯ ತೊಡೆಯಮೇಲಂತೆ ಸುಖವಾಗಿ ಮಲಗಿ ಕಳೆದ ಕಾಲವನ್ನು ಕೃತಜ್ಞನಾಗಿ ನೆನೆದನು. ಕ್ರಮವಾಗಿ ಸೂರ್ಯ ಚಂದ್ರಮಂಡಲಗಳನ್ನು ದಾಟಿ, ಇಂದ್ರರಥವು ಸ್ವರ್ಗವನ್ನು ಪ್ರವೇಶಿಸಿತು. ಸ್ವಪ್ರಭೆಯಿಂದ ನಕ್ಷತ್ರಗಳಂತೆ ಬೆಳಗುವ ರಾಜರ್ಷಿಗಳನ್ನು, ತಪೋಬಲದಿಂದ ದೇವಮಾನ್ಯರಾದ ವಿಪ್ರಋಷಿವರರನ್ನು, ದಾನಧರ್ಮಗಳಿಂದ ಸಿದ್ಧರಾದ ವೈಶ್ಯಶೂದ್ರಾದಿ ಪುಣ್ಯವಂತರನ್ನು ನೋಡುತ್ತಾ ಅರ್ಜುನನು ಇಂದ್ರಭವನ

ವನ್ನು ಸೇರಿದನು. ನಂದನೋದ್ಯಾನದ ದಿವ್ಯ ಕುಸುಮ ಗಂಧವನ್ನು ಹೊತ್ತುಬಂದ ಮಂದಮಾರುತವು ಅವನಿಗೆ ಸ್ವಾಗತವಿತ್ತಿತು. ಇಂದ್ರಾದಿ ದೇವತೆಗಳು ಅವನನ್ನು ಎದುರ್ಗೊಂಡು ಅವನನ್ನು ಕರೆದೊಯ್ದರು. ಪಾರ್ಥನು ಇಂದ್ರನ ಪಾದಗಳಿಗೆ ಶಿರಬಾಗಿ ಮುಟ್ಟಿ ನಮಿಸಿದನು. ಅವನು ಅವನನ್ನೆತ್ತಿ, ಬಿಗಿದಪ್ಪಿ, ಮೂರ್ಧವನ್ನಾಘ್ರಾಣಿಸಿ, ಸಭೆಯಲ್ಲಿ ತನ್ನ ಸಿಂಹಾಸನದಲ್ಲಿ ತನ್ನ ಅಂಕದಲ್ಲಿ ಕೂಡಿಸಿಕೊಂಡನು ; ಸಾವಿರ ಕಣ್ಣುಗಳಿಂದ ಎವೆಯಿಕ್ಕದೆ ನೋಡಿದನು. ವಜ್ರಧಾರಾಕಠಿನ ಕರಗಳಿಂದ ಬೆನ್ನು ಸವರಿ, ತಲೆ ಮುಟ್ಟಿದನು. ಏಕಾಸನದಲ್ಲಿ ಆಸೀನರಾದ ಇಂದ್ರಾರ್ಜುನರು ಚಂದ್ರ-ಸೂರ್ಯರಂತೆ ಪ್ರಕಾಶಿಸಿದರು.

## ಇಂದ್ರಲೋಕಾಭಿಗಮನ

ಇಂದ್ರಾಸನಾಸೀನನಾದ ಪಾರ್ಥನನ್ನು ಪ್ರಶಂಸಿಸಿ, ಗಂಧರ್ವರು ಪಾಡಿಪೊಗಳಿದರು. ಘೃತಾಚೀ, ಮೇನಕಾ, ರಂಭಾ, ಪೂರ್ವಚಿತ್ತಿ, ಸ್ವಯಂಪ್ರಭೆ, ಊರ್ವಶೀ, ವರೂಥಿನೀ, ಪ್ರಮದ್ವರಾ, ಗೋಪಾಲೀ, ಸಹಜನ್ಯಾ, ಚಿತ್ರಸೇನಾ, ಚಿತ್ರಲೇಖಾ, ಮಧುರಸ್ವರಾ, ಮುಂತಾದ ಅಪ್ಸರೆಯರು ಹಾವಭಾವ ವಿಲಾಸಗಳನ್ನು ತೋರಿ ನಾಟ್ಯನಾಡಿದರು. ಆಗ ದೇವತೆಗಳು ಶಕ್ರಾಭಿಮತವನ್ನರಿತು, ಪಾರ್ಥನಿಗೆ ದಿವ್ಯಾರ್ಘ್ಯವನ್ನಿತ್ತು ಸತ್ಕರಿಸಿದರು. ಇಂದ್ರನ ಆದೇಶದಂತೆ ಚಿತ್ರಸೇನನು ಪಾರ್ಥನಿಗೆ ವಾದಿತ್ರ ನೃತ್ಯಗಳನ್ನು ಕಲಿಸಿದನು. ಆ ಗಂಧರ್ವರಾಜನ ಸ್ನೇಹಿತನಾಗಿ ಪಾರ್ಥನು ಸ್ವರ್ಗದಲ್ಲಿ ಸುಖವಾಗಿದ್ದನು. ಒಮ್ಮೊಮ್ಮೆ ದುಶ್ಶಾಸನನ ದುರಾಗತವು, ಶಕುನಿಯ ವಂಚನೆಯು, ಕರ್ಣನ ದೌರಾತ್ಮ್ಯವು ಮುಮ್ಮಲಿಸಿ, ಕಲಕಿ ಅವನ ಮನವನ್ನು ಚಿಂತೆಗೀಡು ಮಾಡಿತು. ಇಂದ್ರನು ಅದನ್ನರಿತು ಶತ್ರುಜಯ ಕಾರಣವಾದ ಅನೇಕ ದಿವ್ಯಾಸ್ತ್ರಗಳನ್ನವನಿಗಿತ್ತು, ಮಾನಸೋಲ್ಲಾಸಕ್ಕೆಂದು ಊರ್ವಶಿಯನ್ನವನಿಗೆ ಸಮರ್ಪಿಸಲು ನಿಶ್ಚಯಿಸಿದನು. ಅದರಂತೆ ಆಜ್ಞಪ್ತನಾದ ಚಿತ್ರಸೇನನು ಊರ್ವಶಿಯನ್ನು ಅರ್ಜುನನಲ್ಲಿಗೆ ಕಳಿಸಿದನು.

ಪಾಕಶಾಸನನಿತ್ತ ಮಣಿಮಯಮಂದಿರದಲ್ಲಿ ಅರ್ಜುನನು ಸುಖವಾಗಿರಲು ಒಂದು ರಾತ್ರಿ ಊರ್ವಶಿಯು ಅವನ ಮಂದಿರವನ್ನು ಪ್ರವೇಶಿಸಿದಳು. ಸಾಂದ್ರ-ಚಂದ್ರಿಕಾ ವಿಲಾಸವತಿಯಾದ ದಿಗ್ವನಿತೆಯಂತೆ ಧವಳಾಂಬರವನ್ನುಟ್ಟು, ದೇವರಮಣೀಮಣಿಯು ಮೃಗಮದ ಕರ್ಪೂರ ಕೇಸರಗಂಧವನ್ನು ಮೈಗೆ ಪೂಸಿ, ವಿವಿಧ ಸುಗಂಧ ಸುಮ ಮಾಲೆಗಳನ್ನು ಧರಿಸಿ ಮಣಿಮಯ ಭೂಷಣಾಲಂಕೃತೆಯಾಗಿ, ನಡೆದುಬಂದ ಮಿಂಚಿನ ಬಳ್ಳಿಯಂತೆ ಬೆಡಗನ್ನು ತೋರುತ್ತಾ ಮಣಿಮಂಜೀರ ನಾದವನ್ನು ಮೇಳವಿಸಿ ನುಡಿವ ಕೈಗಳ ಕಂಕಣಝಣತ್ಕಾರವು ಮದನ ಸುಮ ಧನುರ್ಜ್ಯಾಘೋಷದಂತೆ ಮೊಳಗುತ್ತಿರಲು ಪುರಂದರ ನಂದನನನ್ನು ಸಮೀಪಿಸಿದಳು. ಆ ಪುರುಷಪ್ರವರನು ಅವಳನ್ನು ಭಯಭಕ್ತಿಗಳಿಂದ ಕರೆತಂದು ಸಾಷ್ಟಾಂಗವೆರಗಿ, ಕೈಮುಗಿದು—'ಜನನಿ !

ಪುತ್ರಸ್ನೇಹದಿಂದ ನನ್ನನ್ನು ಕರುಣಿಸಿ, ಪೊರೆಯಲು ಬಂದೆ ! ನಾನು ಕೃತಾರ್ಥ ನಾದೆನು' ಎಂದು ನುಡಿದ ಅರ್ಜುನನ ಲಾವಣ್ಯರಸವನ್ನು ಕಣ್ಣದುಂಬಿಗಳಿಂದ ಹೀರುತ್ತಾ ಧರ್ಮರಚನಾವಚನಗಳನ್ನು ಮೆಚ್ಚದೆ ಊರ್ವಶಿಯು 'ನಿರುಪಮಶೌರ್ಯ ಧುರ್ಯ ! ನಾರದಾದಿಮುನಿಗಳು ವರ್ಣಿಸಲು ನಿನ್ನ ಗುಣಗಳನ್ನು ಕೇಳಿ, ನಿನಗೆ ವಶ ವಾದ ನನ್ನ ಮನವು ಈಗ ನಿನ್ನನ್ನು ನೋಡಿ, ನಿನ್ನ ಸಂಗಕ್ಕಾಗಿ ತಲ್ಲಣಿಸುತ್ತಿದೆ. ಇಂತಹ ನನ್ನನ್ನು ಕಾಂತೆಯೆಂದು ಸ್ವೀಕರಿಸದೆ ಮಾತೆಯೆಂದು ನೋಡುವ ನಿನ್ನ ಜಡತೆಗೇ-ನೆಂಬೆ ! ನಿನಗೆ ನಾನೆಂದು ಮಾತೆಯಾದೆನೋ ಹೇಳು ! ದೇವವೇಶ್ಯೆಯರಾದ ನಮಗೆ ವಾವಿವರಸೆಗಳಿಲ್ಲ. ಇಂದ್ರನ ಮಡದಿಯರಾದ ವೇಶ್ಯೆಯರು ನಿತ್ಯ ತರುಣಿಯರು. ದಿವ್ಯಪುರುಷರು, ಪುಣ್ಯಪ್ರಭಾವದಿಂದ ನಮ್ಮನ್ನು ಕೂಡಿ ವಿಹರಿಸುವರು. ಮೇರು-ಮಂದರ ಕಂದರಗಳಲ್ಲಿ ಮಂದ ಪವನ ಕಿಶೋರನು ತಂಪಾಗಿ ಸೂಸಿಬರುತ್ತಿರಲು ನನ್ನಿಂದ ಕೂಡಿ ವಿಹರಿಸು ! ಇಂದ್ರಸುತನು ನಾನೆಂಬ ಇಲ್ಲದ ಸಲ್ಲದ ವಾವಿಯನ್ನೆತ್ತ ಬೇಡ ! ಮಂದಾಕಿನೀತೀರ ಮಣಿಮಯ ವೇದಿಕೆಯಲ್ಲಿಯೂ, ಮಂದಾರಪಾರಿಜಾತ ಕುಂಜದಲ್ಲಿಯೂ, ನಂದನವನ ಶಾದ್ವಲಗಳಲ್ಲಿಯೂ ಕ್ರೀಡಿಸುವ ಬಾ !' ಎಂದು ಮುಂದೆ ಬಂದು ಪಾರ್ಥನ ಕೈಹಿಡಿದಳು.

ಪಾರ್ಥನು ನಿರ್ವಿಕಾರನಾಗಿ, ಅವಳ ಮಾತಿಗೆ ಅಳುಕದೆ, 'ಆಹಾ ! ಏನಿದಚ್ಚರಿ, ನಮ್ಮಪ್ಪನ ನೆಚ್ಚಿನ ಮಡದಿಯಿಂದ ಇಂತಹ ಧರ್ಮದ್ರೋಹವೇ ? ಹರಿ ! ಹರೀ ! ಮನಸಾ ಚಿಂತಿಸಲಾಗದ ಅಕಾರ್ಯದಲ್ಲಿ ನನ್ನನ್ನಿಳಿಸುವುದು ನಿನಗೆ ತರವಲ್ಲ ! ದೇವತೆಗಳು ಸಮರ್ಥರು. ಅವರೆಂತು ನಡೆದರೂ ಚಿಂತೆಯಿಲ್ಲ. ಮನುಜನಾದ ನಾನು ನಮ್ಮ ಪೂರ್ವಜನಾದ ಪುರೂರವನ ಪತ್ನಿಯೂ, ಇಂದ್ರನ ಪರಿಚಾರಿಕೆಯೂ ಆದ ನಿನ್ನನ್ನು ತಾಯಿ ಎಂದೇ ತಿಳಿದಿರುವೆನು. ಅನ್ಯಥಾ ಭಾವಿಸಬೇಡ ! ನನ್ನಲ್ಲಿ ಪುತ್ರ-ವಾತ್ಸಲ್ಯವಿಟ್ಟು ಇಲ್ಲಿಂದ ನಡೆ !' ಎಂದನು. ಊರ್ವಶಿಯು ದಂಡತಾಡಿತ ಭುಜಂಗಿನಿಯಂತೆ ಕೆರಳಿ, ಕೆಂಗಣ್ಣಿನಿಂದ ಕಿರೀಟಿಯನ್ನೀಕ್ಷಿಸುತ್ತಾ 'ನಾನಾಗಿ ಕಾಮಿಸಿ ಬಂದಿರೆ, ತಿರಸ್ಕರಿಸಿದ ನೀನು ನಪುಂಸಕನಾಗು ! ಮಾನಿನಿಯರ ಮಧ್ಯದಲ್ಲಿ ನಿನ್ನ ಮಾನವಳಿಸಿ ಹೋಗಲಿ !' ಎಂದು ಶಪಿಸಿ, ಹೊರಟುಹೋದಳು.

ಈ ವೃತ್ತಾಂತವನ್ನು ಸುರರಾಜನು ಚಿತ್ರಸೇನನಿಂದ ತಿಳಿದನು. ಮರುದಿನವೇ ಮರುದ್ವಲ್ಲಭನು ಪಾಂಡವಮಧ್ಯಮನನ್ನು ಕಲೆತು, ಅವನ ಶೀಲಧೈರ್ಯಗಳನ್ನು ಮೆಚ್ಚಿ—'ಪಾರ್ಥ ! ನಿನ್ನಂತಹ ಧೀರನನ್ನು ಕಾಣೆವು. ಊರ್ವಶಿಯಂತಹ ಸುರ್ವಸುಂದರಿಯನ್ನು ಧರ್ಮದೃಷ್ಟಿಯಿಂದ ವರ್ಜಿಸಿದ ನಿನ್ನ ಮನಸ್ಥೈರ್ಯವು ಪ್ರಶಂಸನೀಯವಾಗಿದೆ. ಊರ್ವಶಿಯಿತ್ತ ಶಾಪಕ್ಕೆ ಚಿಂತಿಸಬೇಡ ! ನಿನಗೆ ಹದಿಮೂರ ನೆಯ ವರ್ಷದ ಅಜ್ಞಾತವಾಸವು ಸಮೀಪಿಸುತ್ತಿದೆ. ಆಗ ಒಂದು ವರ್ಷ ಮಾತ್ರ ನಪುಂಸಕನಾಗಿರುವೆ. ಅಂತು ಕಾಂತೆಯರ ಮಧ್ಯದಿ ಕಲೆಗೀತನೃತ್ಯಗಳನ್ನು ಕಲಿಸಿ ಕೊಡುವ ನಿನ್ನನ್ನು ಯಾರೂ ತಿಳಿಯಲಾರರು. ಈ ರೀತಿಯಾಗಿ ಊರ್ವಶಿಯ

ಶಾಪವು ನಿನಗೆ ವರವೇ ಎಂದು ತಿಳಿ! ಮುಂದೆ ನಿನ್ನ ಪುರುಷತ್ವವೂ ಸ್ವಯಂ ಪ್ರಾಪ್ತವಾಗಲಿ!' ಎಂದು ವರವಿತ್ತು ಅರ್ಜುನನಿಗೆ ವಜ್ರಾದ್ಯನೇಕ ದಿವ್ಯಾಸ್ತ್ರಗಳನ್ನು ಉಪದೇಶಿಸಿದನು. ಚಿತ್ರಸೇನನಿಂದ ಕೂಡಿ ಅರ್ಜುನನು ಗಾಂಧರ್ವವೇದ ವಿದ್ಯಾ ವಿವಿಧ ಧರ್ಮಗಳನ್ನು ಕಲಿತು, ಕಡುಮುದದಿಂದ ಐದು ವರ್ಷಗಳನ್ನು ಕಳೆದನು.

ಒಂದು ದಿನ ಲೋಮಶನೆಂಬ ಮುನಿಚಂದ್ರನು ಇಂದ್ರಸಭೆಗೆ ಬಂದನು. ಸುರೇಂದ್ರನಿಂದ ಪೂಜಿತನಾದ ಆ ಮುನಿಯು ಇಂದ್ರನಿಂದ ಕೂಡಿ ಏಕಾಸನದಲ್ಲಿದ್ದ ಪಾರ್ಥನನ್ನು ನೋಡಿ ವಿಸ್ಮಿತನಾದನು. ಅದನ್ನು ತಿಳಿದು ಇಂದ್ರನು ಲೋಮಶನಿಗೆ ಇಂತೆಂದನು—'ಮುನೀಂದ್ರಾ! ಇವನು ಪಾಂಡವಮುಖ್ಯನು. ನನ್ನ ಅಂಶದಿಂದ ನರ ಲೋಕದಲ್ಲಿ ಜನಿಸಿರುವನು. ನರಋಷಿಯ ಆವೇಶವೂ ಇವನಲ್ಲಿದೆಯಾಗಿ ನಾರಾಯಣ ನಾದ ಕೃಷ್ಣನಿಗೆ ಪ್ರಾಣಾಧಿಕನಾಗಿರುವನು. ಶಿವನಿವನಿಗೆ ಪಾಶುಪತವನ್ನಿತ್ತು ಕರುಣಿಸಿರುವನು. ನಾನು ಮತ್ತು ದೇವತೆಗಳೆಲ್ಲರೂ ದಿವ್ಯಾಸ್ತ್ರಗಳನ್ನಿತ್ತಿರುವೆವು. ದೇವ ಕಾರ್ಯವಿವನಿಂದಾಗಬೇಕಾಗಿದೆ. ದೈತ್ಯದಾನವಮರ್ದನ ಜನಾರ್ದನನೇ ಕೃಷ್ಣನು. ಸಕಲಜಗದ್ವಲ್ಲಭನಾದ ಜೀವರೊಡೆಯ ಮುಖ್ಯಪ್ರಾಣನೇ ಭೀಮನು. ನರನೇ ಇವನು. ಇವನಿಂದ ಭೂಭಾರವು ಇಳಿದು ಸುಜನರು ಸುಖಿಸಬೇಕಾಗಿದೆ. ನಮಗೆ ನಿರತಾಪಕಾರಿ ಗಳು, ನಮ್ಮಿಂದ ಅವಧ್ಯರು, ಆಗಿರುವ ನಿವಾತಕವಚರನ್ನು ಇವನು ವಧಿಸಿ, ನಮಗೂ ಸುಖಕರನಾಗಬೇಕಾಗಿದೆ. ಲೋಮಶ! ನೀನು ಭೂಲೋಕವನ್ನು ಮುಟ್ಟಿ, ಧರ್ಮಜ ನನ್ನು ಕಂಡು ಅವನಿಗೆ ಪಾರ್ಥನ ಕುಶಲವಾರ್ತೆಯನ್ನರುಹಿ, ಬೇಗ ಬರುವನೆಂದು ತಿಳಿಸು. ಭೀಷ್ಮಾದಿ ವೀರರನ್ನು ಗೆಲ್ಲಲು ಬೇಕಾದ ಎಲ್ಲ ದಿವ್ಯಾಸ್ತ್ರಗಳನ್ನು ಸಂಪಾದಿಸಿ, ಶತ್ರುಕಂಟಕೋನ್ಮೂಲನ ಕಾರ್ಯದಲ್ಲಿ ಭೀಮಸಹಾಯನಾಗುವನೆಂದು ಹೇಳಿ, ಪಾಂಡವರ ಪಾರ್ಥವಿಯೋಗವ್ಯಥೆಯನ್ನು ಕಳೆ. ನೀನೂ ಧರ್ಮರಾಜನನ್ನು ತೀರ್ಥ ಯಾತ್ರೆಗೆಂದು ತೆರಳಿಸಿ, ಅವನಿಗೆ ಸಹಾಯನಾಗಿ ನಿನ್ನ ತಪೋಬಲದಿಂದ ರಾಕ್ಷಸಾದಿ ಪೀಡೆಯನ್ನು ನಿವಾರಿಸಿ, ಪಾಂಡವರನ್ನು ರಕ್ಷಿಸುತ್ತಾ, ತೀರ್ಥಮಹಿಮೆಗಳನ್ನು ತಿಳಿಸುತ್ತಾ ತಿರುಗು' ಎಂದು ಲೋಮಶನನ್ನು ಧರ್ಮಜನಲ್ಲಿಗೆ ಕಳಿಸಿದನು.

ಭೂಲೋಕದಲ್ಲಿ ವೇದವ್ಯಾಸನಿಂದ ಅರ್ಜುನನ ದಿವ್ಯಾಸ್ತ್ರಸಂಪಾದನವನ್ನು ಕೇಳಿ ತಿಳಿದ ಧೃತರಾಷ್ಟ್ರನು ಸಂಜಯನಿಗಿಂತೆಂದನು—'ಸಂಜಯ! ಖಾಂಡವವನ್ನು ದಹಿಸಿದನು. ಗಾಂಡೀವ ಅಕ್ಷಯತೂಣೀರಗಳನ್ನು ಪಡೆದನು. ರಾಜರನ್ನೆಲ್ಲ ಗೆದ್ದು, ಧನಂಜಯನೆನಿಸಿ, ಅಣ್ಣನ ರಾಜಸೂಯವನ್ನು ನೆರವೇರಿಸಿದನು. ಇಂತಹ ಮಹಾ ವೀರನಾದ ಅರ್ಜುನನಿಗೆ ಮತ್ತೆ ದೇವಾದಿದೇವನು ಪಾಶುಪತವನ್ನಿತ್ತನಂತೆ! ಇಂದ್ರಾದಿದೇವತೆಗಳ ಮಹಾಸ್ತ್ರಗಳನ್ನೆಲ್ಲ ಪಡೆದು, ಇವನು ಇಂದ್ರಾಸನಾಸೀನನಾಗಿ ಮೆರೆದನಂತೆ. ಸಿಂಹನಖಗಳಿಗೆ ವಜ್ರಕವಚವನ್ನು ಜೋಡಿಸಿದಂತಾಯಿತಲ್ಲ! ಧರ್ಮ ಮಾರ್ಗವನ್ನು ತಪ್ಪದೇ ನಡೆಯುವ ವೀರಪಾಂಡವರಿಗೆ ಪಡೆಯಲಾಗದ ಪದಾರ್ಥವು ಉಂಟೇ? ಪ್ರಳಯಕಾಲಾಭೀಲ ವಹ್ನಿಯಂತೆ ಉರಿದೆದ್ದು ಬರುವ ಪಾರ್ಥನಿಗೆ

*

ಸಿಕ್ಕು ದುರ್ಯೋಧನ ಕರ್ಣಾದಿಗಳು ಶಲಭಗಳಂತೆ ನಾಶವಾಗುವರಿದು ನಿಜ ! ಏನು ಮಾಡಲಿ ! ಪಾಪಿ ದುರ್ಯೋಧನನಿಗೆ ಎಷ್ಟು ಜನರೆಷ್ಟು ಹೇಳಿದರೂ ಕೇಳಿದನೇ ? ಅವನಿನ್ನು ಬದುಕುವ ಬಗೆ ಹೇಗೆ ?' ಎಂದು ದುಃಖಿಸುವ ಧೃತರಾಷ್ಟ್ರನಿಗೆ ಸಂಜಯ ನಿಂತೆಂದನು—'ಮಹಾರಾಜ! ನಿನ್ನ ಪುತ್ರಸ್ನೇಹದಿಂದ ಇಷ್ಟು ಅನರ್ಥವಾಯಿತು. ಸಭೆಯಲ್ಲಿ ನಡೆದ ಅನ್ಯಾಯಗಳನ್ನು ತಡೆಯದೆ ಉಪೇಕ್ಷಿಸಿ, ಮಗನ ಮಹಾರಾಜ್ಯಲಾಭವನ್ನು ಆಶಿಸಿದೆ. ಕೃಷ್ಣಾದೇವೀ ಪರಿಭವವನ್ನು ಕೇಳಿ, ಶ್ರೀಕೃಷ್ಣನು ಕಡುಕೋಪದಿಂದ ಇಂದೇ ಕೌರವರನ್ನೆಲ್ಲ ಕೊಲ್ಲುವೆನೆಂದು ಚಕ್ರವನ್ನೆತ್ತಿದ್ದನಂತೆ. ಸಮಯವನ್ನು ಪಾಲಿಸುವ ಪಾಂಡವರಿಂದ ನಿವಾರಿತನಾಗಿ ಶಾಂತನಾದನಂತೆ! ಕೇಶವನ ಸಹಾಯದಿಂದ ವಿಜೃಂಭಿಸಿ, ಗದಾಪಾಣಿಯಾದ ವೃಕೋದರನು, ಗಾಂಡೀವಧಾರಿಯಾದ ಪಾರ್ಥನು, ತಮ್ಮತಮ್ಮ ಪ್ರತಿಜ್ಞೆಗಳನ್ನು ಪೂರೈಸದೆ ಬಿಡರು. ಹದಿಮೂರನೆಯ ವರ್ಷವಾಗಲಿ! ಕೌರವ ಪರಿಕ್ಷಯವನ್ನು ಸಾಧಿಸಿ, ಧರ್ಮರಾಜನು ಸಕಲ ಧರಾಮಂಡಲಾಧಿಪನಾಗುವನು !'

'ಸಂಜಯ ! ನಾನು ಕುರುಡನು ! ಬುದ್ಧಿಹೀನನು ಎಂದರಿತು ದುಷ್ಪುತ್ರನು ನನ್ನನ್ನು ಕಡೆಗಣಿಸಿ, ಹಿತವನ್ನು ಹೇಳಿದರೂ ಕೇಳದೆ ಕೆಪಲಿರುವನು. ಕರ್ಣ ಶಕುನಿ ದುಶ್ಶಾಸನರು ಅವನಿಗೆ ಆಪ್ತರು. ನಾನೇನು ಮಾಡಲಿ! ದೈವೇಚ್ಛೆಯಂತಾಗಲಿ!' ಎಂದು ಧೃತರಾಷ್ಟ್ರನು ಸುಮ್ಮನಾದನು.

ಕಾಮ್ಯಕ ವನದಲ್ಲಿ ಧರ್ಮಜನು ಅರ್ಜುನವಿಯೋಗದಿಂದ ನೊಂದು ಭೀಮಸೇನನಿಗಿಂತೆಂದನು—"ಪಾಂಡವ ಮಧ್ಯಮನು ರುದ್ರೇಂದ್ರಾದಿ ದೇವರಿಂದ ದಿವ್ಯಾಸ್ತ್ರಗಳನ್ನು ಪಡೆದು ಬರಲು ಹೊರಟವನು ಮತ್ತೆ ಹಿಂದಿರುಗಿ ಬರಲಿಲ್ಲ. ಆ ಸುಗುಣಮಣಿಯನ್ನೆಂದು ನೋಡುವೆವೊ? ಎಂತು ಕೌಂತೇಯನು ದುರ್ಧಾಂತವೀರನಾಗಿ, ಶತ್ರು ಸಂಹಾರವನ್ನು ಮಾಡಿ, ನಮಗೆ ಸುಖವೀವನೋ?" ಆ ಮಾತಿಗೆ ಭೀಮಸೇನನು "ಅಣ್ಣ ! ಚಿಂತಿಸಬೇಡ ! ನೀನಿತ್ತ ಮಂತ್ರರಾಜವು ಅವನಿಗೆ ರಕ್ಷಕವಾಗಿದೆ. ನಿನ್ನಾ-ಶೀರ್ವಾದ ಕವಚವನ್ನು ತೊಟ್ಟ ಪಾರ್ಥನಿಗೆ ಅಪಾಯವಿಲ್ಲ. . ಅವನಿಲ್ಲದ ದಿನಗಳು ಯುಗಗಳಂತೆ ತೋರುತ್ತಿವೆ. ಪಾಂಡವ ಯಾದವ ವೀರರ ನಯನಾನಂದಕರನಾದ ಅರ್ಜುನನು ಬರುವನು. ಸರ್ವಾಸ್ತ್ರಸಜ್ಜಿತನಾಗಿ ಬಂದು, ನಿರ್ಜಿತಶತ್ರುವೃಂದನಾಗಿ ನಮಗೆ ಆನಂದವನ್ನೀಯುವನು.

"ನಿನಗೆ ಸಮ್ಮತವಾದರೆ ಹೇಳು. ಇಂದೇ ಸಂಗ್ರಾಮರಂಗದಲ್ಲಿ ಧೃತರಾಷ್ಟ್ರಸುತರನ್ನೆಲ್ಲ ಪ್ರೇತಪತಿ ಸದನದ ಅತಿಥಿಗಳನ್ನಾಗಿಸುವೆನು. ನಕುಲಸಹದೇವರು ಬಿರುಗಾಳಿಯಂತೆ ನೆರವಾಗಿರಲು ಕಾಡುಕಿಚ್ಚಿನಂತೆ ವಿಜೃಂಭಿಸಿ, ಕೌರವ ವಂಶ ವೃಂದವನ್ನೆಲ್ಲ ನಾಶಪಡಿಸಿ, ಶ್ರೀಕೃಷ್ಣನ ಅನುಗ್ರಹದಿಂದ ಜಯಲಕ್ಷ್ಮಿಯನ್ನು ಸಂಪಾದಿಸುವೆನು. ಅಭಿಮನ್ಯುನಿಗೆ ಪಟ್ಟಗಟ್ಟಿ, ನಾವೆಲ್ಲರೂ ಹದಿಮೂರು ವರ್ಷಗಳಲ್ಲಿ ನಿಸ್ತೀರ್ಣಪ್ರತಿಜ್ಞರಾಗೋಣ ! ಮುಂದೆ ನಿನ್ನನ್ನು ರಾಜ್ಯದಲ್ಲಿ ಪಟ್ಟಗಟ್ಟಿ ನಿಲ್ಲಿಸುವೆನು" ಎಂದನು.

ಭೀಮಸೇನನ ಭ್ರಾತೃವಾತ್ಸಲ್ಯವನ್ನು ಕಂಡು ಧರ್ಮರಾಜನು ಪ್ರೇಮಾರ್ದ್ರ ನಯನನಾದನು. ಅವನನ್ನು ಕರೆದಪ್ಪಿ, ತಲೆಮೂಸಿ, ಮೈದಡವಿ, ಆ ವೀರನ ಮಹಾ ಸಂರಂಭವನ್ನು ತಡೆದು "ಭೀಮಸೇನ! ಸರ್ವಸಮರ್ಥನಾದ ನಿನಗೆ ದುಃಶಕವಿಲ್ಲ. ಆದರೆ ಕೋಪಸಂರಂಭಗಳಿಗಿದು ಸಮಯವಲ್ಲ. ಆಗಲಿ, ಪ್ರತಿಜ್ಞಾಪೂರ್ತಿ ! ಬರಲಿ ಪಾರ್ಥ ! ಪರನೃಪರನ್ನೆಲ್ಲ ಸಂಹರಿಸಿ, ವಿಜಯಶ್ರೀಯುತರಾಗಿ ಧರ್ಮವನ್ನು ರಕ್ಷಿಸಿ, ಶ್ರೀಕೃಷ್ಣ ನನ್ನೂ ನನ್ನನ್ನೂ ಸಂತೋಷಪಡಿಸಿರಿ" ಎಂದು ನುಡಿದು ಭೀಮನನ್ನನುನಯಿಸಿ ಶಾಂತಪಡಿಸಿದನು.

## ನಲಾಖ್ಯಾನ, ವಿವಾಹ

ಧರ್ಮರಾಜನಿಂತು ಭೀಮನ ಕೋಪಾಟೋಪವನ್ನು ಅಡಗಿಸುತ್ತಿರುವಾಗ ಬೃಹದಶ್ವನೆಂಬ ಮಹರ್ಷಿಯು ಅಲ್ಲಿಗೆ ಬಂದನು. ಬಂದ ಮುನಿಚಂದ್ರನಿಗೆ ವಂದಿಸಿ, ಧರ್ಮರಾಜನು ಅರ್ಘ್ಯಪಾದ್ಯಗಳನ್ನಿತ್ತು ಪೂಜಿಸಿದನು. ಆಸೀನನಾದ ಋಷಿವರನಿಗೆ ವ್ಯಸನದಿಂದ ಧರ್ಮರಾಜನಿಂತು ವಿಜ್ಞಾಪಿಸಿದನು—"ಪೂಜ್ಯನೇ ! ದುರ್ಮಾರ್ಗರಿಂದ ರಾಜ್ಯವು ಮಾಯಾದ್ಯೂತದಲ್ಲಿ ಅಪಹೃತವಾಯಿತು. ಪ್ರಾಣಾಧಿಕೆಯಾದ ಪತ್ನಿಯು ಸಭೆಯಲ್ಲಿ ಸಂಕಟಕ್ಕೀಡಾದಳು. ಅರಣ್ಯದಲ್ಲಿ ಮೃಗಗಳಂತೆ ವಸಿಸುತ್ತಾ ಬಲು ದುಃಖಪಡುತ್ತಿರುವೆವು. ಅಂದು ಕೌರವ ಸಭೆಯಲ್ಲಿ ಕುಟಿಲಮತಿಗಳಾಡಿದ ಕೆಡು ನುಡಿಗಳು ಮನದಲ್ಲಿ ನಟ್ಟಿ ನಿಂತಿವೆ. ಆ ಚಿಂತೆಗೆ ಅರ್ಜುನನ ವಿರಹತಾಪವೂ ಜೋಡಾಗಿ ಎರಡು ಕಡೆಯಿಂದ ಉರಿಯುವ ಕೊಲಿನಂತೆ ಕೊರಗುತ್ತಿರುವೆನು. ನನ್ನಂಥಹ ಅಲ್ಪಭಾಗ್ಯನಾದ ರಾಜನನ್ನು ನೀವು ಕಂಡು ಕೇಳಿರಲಿಕ್ಕಿಲ್ಲ !"

ಬೃಹದಶ್ವನಾವಾತನ್ನಾಲಿಸಿ ನಕ್ಕು, ತಲೆಯಾಡಿಸಿ, ಧರ್ಮರಾಜನಿಗಿಂತೆಂದನು—"ರಾಜನ್ ! ನಿಜ ! ನಿಮ್ಮ ದುಃಖವು ಅಪಾರವಾಗಿದೆ. ಆದರೆ ನಿನಗಿಂತಲು ಕಷ್ಟಗಳನ್ನು ಕಂಡ ಚಕ್ರವರ್ತಿಯೋರ್ವನು ಇದ್ದನು. ಕೇಳು ಅವನ ಕಥೆಯನ್ನು—

ನಿಷಧಪತಿಯಾದ ವೀರಸೇನನಿಗೆ ನಲನೆಂಬ ಕುಮಾರನಿದ್ದನು. ಗುಣವಂತನು ರೂಪವಂತನು ಅಶ್ವಶಾಸ್ತ್ರಪಂಡಿತನು ಆದ ನಲನು ಸರ್ವರಾಜರನ್ನು ಗೆದ್ದು ಚಕ್ರವರ್ತಿಯಾದನು. ಅಕ್ಷೌಹಿಣೀಶತಪತಿಯಾದ ನಲನು ಅಕ್ಷವಿದ್ಯಾಲೋಲನಾಗಿದ್ದನು. ಅದೇಕಾಲದಲ್ಲಿ ವಿದರ್ಭರಾಜನಾದ ಭೀಮನು ಪ್ರಜಾರಂಜಕನಾಗಿ ಪಾಲಿಸುತ್ತಿದ್ದನು. ದಮನನೆಂಬ ಬ್ರಹ್ಮರ್ಷಿಯ ವರದಿಂದ ಆ ರಾಜನ್ಯನು ದಮಯಂತಿಯೆಂಬ ಕನ್ಯಾಮಣಿಯನ್ನೂ, ದನು, ದಾಂತ, ದಮನರೆಂಬ ಸುತರನ್ನೂ ಪಡೆದನು. ದಮಯಂತಿಯು ರೂಪ ಲಾವಣ್ಯ ಯಶೋ ವಿಭವ ವಿಲಾಸಗಳಿಂದ ಅಸಮಳೆನಿಸಿದಳು. ಪೊಡವಿಗಿಳಿದ ಬೆಡಗಿನ ಮಿಂಚೋ, ನಡೆದುಬರುವ ಕನಕಲತೆಯೋ, ರಾಶಿಸುರಿದ ಸೌಂದರ್ಯನಿಧಿಯೋ ಎಂಬಂತೆ ಕಂಗೊಳಿಸುವ ದಮಯಂತಿಗೆ ಸರಿಬರುವ ವರನಾರಿಯರು ದೇವ ಯಕ್ಷ-ನಾಗ ಲೋಕಗಳಲ್ಲಿ ಇದ್ದಿಲ್ಲ. ಅವಳು ಮೂರ್ತಿವೆತ್ತ ಕಂದರ್ಪನಂತಿರುವ ನಲನ

ವಿಕ್ರಮಾದಿಗುಣಗಳನ್ನು ವಾರ್ತಾಹರರಿಂದ ಕೇಳಿ ತಿಳಿದು, ನಲನೇ ನನಗೆ ತಕ್ಕ ಪತಿಯೆಂದು ಚಿಂತಿಸಿ, ಅನುರಕ್ತಳಾಗಿದ್ದಳು. ನಲನೂ ಅವಳ ಶೀಲರೂಪಸಂಪತ್ತಿಗೆ ಮನಸೋತು, ನಿರಂತರ ದಮಯಂತೀ ಚಿಂತಾ ಪರವಶನಾಗಿದ್ದನು.

ಒಂದು ದಿನ ನಲನು ಅಂತಃಪುರೋದ್ಯಾನ ಭೂಮಿಯಲ್ಲಿ ವಿಹರಿಸುತ್ತಿರುವಾಗ ಕೆಲ ರಾಜಹಂಸಗಳನ್ನು ಕಂಡನು. ಅಂತರಿಕ್ಷದಿಂದ ಜಾರಿಬಿದ್ದ ತಾರಹಾರದಂತೆ ಮನೋಹರವಾದ ಹಂಸಸಮೂಹವನ್ನು ಸಮೀಪಿಸಿ, ನಲನು ಒಂದು ರಾಜಮರಾಳವನ್ನು ಕೈಲಿ ಹಿಡಿದನು. ಮಿಕ್ಕ ಹಕ್ಕಿಗಳು ಗಗನಕ್ಕೆ ಹಾರಿ ದಿಕ್ಕೆಟ್ಟು ಅರಚುತ್ತಾ, ಬಿರುಗಾಳಿಗೆ ಚೆದರಿ ತುಂಡಾದ ಬಿಳಿಮುಗಿಲ ಶಕಲಗಳಂತೆ ತಿರುಗುತ್ತಿದ್ದವು. ಆಗ ರಾಜಹಂಸವು ನಲನ ಕೈಗೆ ಸಿಕ್ಕು ಹೆದರಿ, ಮನುಜಭಾಷೆಯಿಂದ ಇಂತೆಂದಿತು—"ರಾಜಾ! ನಾನು ದೇವ ಮರಾಳ ರಾಜನು. ನನ್ನನ್ನು ಬಿಡು, ಕೊಲ್ಲಬೇಡ! ನಿನಗೆ ಪ್ರಿಯಳಾದ ದಮಯಂತಿಯನ್ನು ಕಂಡು, ನಿನ್ನ ರೂಪ ವಿಕ್ರಮ ವಿಭವಾತಿಶಯಗಳನ್ನು ವರ್ಣಿಸಿ, ಅವಳು ನಿನ್ನಲ್ಲೇ ಅನುರಕ್ತಳಾಗುವಂತೆ ಮಾಡುವೆನು." ಮರಾಳದ ಮಾತುಗಳು ಮಧುರಸುಧೆಯಾಗಿ ಹೃದಯಾನಂದಸಂಧಾಯಕವಾಗಲು ನಲನು ದಯೆಯಿಂದ ಆ ಮರಾಳವನ್ನು ಬಿಟ್ಟುಬಿಟ್ಟನು.

ರಾಜಹಂಸವು ಇತರ ಮರಾಳಗಳಿಂದ ಕೂಡಿ, ವಿದರ್ಭವನ್ನು ಮುಟ್ಟಿ, ಉಪವನದಲ್ಲಿ ಸಖೀಶತಪರಿವೃತಳಾದ ದಮಯಂತಿಯನ್ನು ಸಮೀಪಿಸಿತು. ದಮಯಂತಿಯು ಮೆಲ್ಲನೆ ಸಮೀಪಿಸಿ, ಅದನ್ನು ಹಿಡಿದಳು. ಅದು ಅವಳಿಗೆ ಇಂತೆಂದಿತು—"ರಾಜಪುತ್ರಿ! ನಿಷಧದೇಶದ ರಾಜನು ನಲನು, ಅವನು ರೂಪದಲ್ಲಿ ಕಂದರ್ಪನು. ಅವನಂತಹ ಕಾಂತನನ್ನು ಪಡೆಯದಿಹ ಕಾಂತೆಯ ರೂಪು ವ್ಯರ್ಥ! ದೇವಗಂಧರ್ವಮನುಜರಲ್ಲಿ ನಲನಂತಹ ಸುಂದರನಿಲ್ಲ. ನಿನ್ನಂತಹ ಸುಂದರಿಯೂ ಇಲ್ಲ. ನಾರೀರತ್ನವಾದ ನಿನಗೆ ನರವೈಡೂರ್ಯನಾದ ನಲನ ಸಂಗವಾದೊಡೆ ನಿನ್ನ ಜನ್ಮವೇ ಸಫಲವಾಗುವುದು." ಆ ಮಾತನ್ನಾಲಿಸಿ, ನಲಾಸಕ್ತಚಿತ್ತಳಾದ ದಮಯಂತಿ 'ನಲನಿಗೂ ತನ್ನ ರೂಪ ಗುಣಗಳನ್ನು ಬಣ್ಣಿಸೆ'ಂದು ಬೇಡಿ ಆ ಹಂಸವನ್ನು ಕಳಿಸಿದಳು. ಹಂಸವು ನಿಷಧವನ್ನು ಮುಟ್ಟಿ ದಮಯಂತೀಸಮಾಸಕ್ತಚಿತ್ತನಾದ ನಲನಿಗೆ ನಡೆದುದೆಲ್ಲವನ್ನೂ ತಿಳಿಸಿ, ತನ್ನ ಪರಿವಾರದೊಡನೆ ಮಾನಸ ಸರೋವರಕ್ಕೆ ತೆರಳಿತು.

ದಮಯಂತಿಯು ಸದಾ ನಲಚಿಂತಾಕ್ರಾಂತಳಾಗಿ, ವಿರಹತಾಪದಿಂದ ಕೃಶಳಾದಳು. ಅವಳ ಮುಖಕಮಲವು ಬಾಡಿತು. ಮೈ ಬಿಳುಚಾಯಿತು. ನಿಟ್ಟುಸಿರು ನಿರಂತರವಾಯಿತು. ಮೇಲೆ ನೋಡಿ ಧ್ಯಾನಮಾಡುವ ರಾಜಪುತ್ರಿಗೆ ಶಯನಾಸನಭೋಗಗಳು ಬೇಗಟಾದವು. ಅಸ್ಪಷ್ಟಳಾದ ಮಗಳ ವೃತ್ತಾಂತವನ್ನು ಅವಳ ಸಖಿಯರಿಂದ ತಿಳಿದು ಭೀಮರಾಜನು ದಮಯಂತೀಸ್ವಯಂವರವನ್ನು ದೇಶವಿದೇಶಗಳ ರಾಜರಿಗೆ ಸಾರಿ ತಿಳಿಸಿದನು. ಬಂದ ರಾಜರಿಗೆ ತಕ್ಕಂತೆ ಬಿಡದಿಗಳನ್ನಿತ್ತು, ಯಥಾವಿಧಿಯಾಗಿ ಪೂಜಿಸಿದನು.

ಆ ಸಮಯದಲ್ಲಿ ನಾರದ ಪರ್ವತ ಎಂಬ ಸುರಮುನಿವರರು ಮನುಜಲೋಕದಿಂದ ಇಂದ್ರಲೋಕವನ್ನು ಸೇರಿ ಸುರಸಭೆಯಲ್ಲಿ ದಮಯಂತೀಸ್ವಯಂವರ ವೃತ್ತಾಂತವನ್ನು ಹೇಳಿದರು. ನಾರದನು ಇಂದ್ರನಿಗಿಂತೆಂದನು—"ಸುರರಾಜ ! ವಿಧರ್ಭರಾಜ ಸುತೆಯಾದ ದಮಯಂತಿಯ ಸ್ವಯಂವರಕ್ಕೆಂದು ಸನ್ನದ್ಧರಾಗುತ್ತಿರುವ ರಾಜರು ಯುದ್ಧ ವಿಮುಖರಾಗಿರುವರು. ಅಂತೆಯೇ ರಣದಲ್ಲಿ ಮೃತರಾಗಿ ನಿನ್ನ ಲೋಕಕ್ಕೆ ಬರುವವರಿಲ್ಲದಾಗಿದೆ. ಕನ್ಯಾರತ್ನವನ್ನು ಕಾಂಕ್ಷಿಸಿ ವಿದರ್ಭನಗರಕ್ಕೆ ತೆರಳುತ್ತಿರುವ ರಾಜರ ಸಡಗರ ಹೇಳತೀರದು". ನಾರದನ ಮಾತನ್ನಾಲಿಸಿ ಇಂದ್ರ ಅಗ್ನಿ ಯಮ ವರುಣರು ಸ್ವಯಂವರಾವಲೋಕನ ಕುತೂಹಲದಿಂದ ಸಪರಿವಾರರಾಗಿ ಭೂಮಿಗಿಳಿದು ಬಂದರು. ನಿಷಧರಾಜನಾದ ನಲನೂ ಬರುತ್ತಿದ್ದು, ಮಾರ್ಗದಲ್ಲಿ ಅವರಿಗೆ ಕಂಡನು. ರೂಪುವೆತ್ತ ಚಿತ್ತಜನಂತಿದ್ದ ನಲನನ್ನು ನೋಡಿ, ದೇವರಾಜಾದಿಗಳು ಬೆರಗಾದರು. ಅವರು ನಲರಾಜನನ್ನು ಸಮೀಪಿಸಿ ಇಂತೆಂದರು—"ನಿಷಧೇಶ! ಸತ್ಯವ್ರತನಾದ ನಿನ್ನ ಸಹಾಯವನ್ನು ಬೇಡಿ ಬಂದಿರುವೆವು, ಮಾಡುವೆಯಾ ನಮ್ಮ ದೌತ್ಯವನ್ನು?" ನಲನು ಸಮ್ಮತಿ ಇತ್ತು, ಕೈಜೋಡಿಸಿ, 'ತೇಜೋಮಯರಾದ ತಾವು ಯಾರು? ದೂತನಾಗಿ ನಾನು ನಿಮಗೆ ಮಾಡಿಕೊಡಬೇಕಾದ ಕಾರ್ಯವಾವುದು !' ಎಂದು ಕೇಳಿದನು. ಆಗ ಇಂದ್ರನು 'ರಾಜನ್ ! ನಾನು ಇಂದ್ರನು, ಇವನು ಅಗ್ನಿಯು, ಇವರು ಯಮ ವರುಣರು. ದೇವತೆಗಳಲ್ಲಿಯೂ ದುರ್ಲಭವಾದ ರೂಪಸಂಪತ್ತಿಗೆ ನಿಧಿಯಾಗಿರುವ ದಮಯಂತಿಗಾಗಿ ನಾವು ಬಂದಿರುವೆವೆಂದು ತಿಳಿ! ನಮ್ಮ ದೂತನಾಗಿ ದಮಯಂತಿಗೆ ನಮ್ಮ ವಾಂಛೆಯನ್ನು ಅರುಹಿ, ಅನಿತರ ಲಾವಣ್ಯರಾಶಿಯು ನಮ್ಮಲ್ಲಿ ಒಬ್ಬರನ್ನು ವರಿಸುವಂತೆ ಮಾಡು !' ಎಂದನು. 'ನಾನೂ ದಮಯಂತಿಯ ಕರಗ್ರಹಣವನ್ನು ಅಪೇಕ್ಷಿಸಿ ಬಂದಿರುವಾಗ, ಇನ್ನೊಬ್ಬರಿಗಾಗಿ ಇಂತಹ ಮಾತನ್ನು ದಮಯಂತಿಗೆ ಹೇಳಲಾರೆನು. ಈ ದೌತ್ಯವು ನನ್ನಿಂದಾಗದು' ಎಂದ ನಲನಿಗೆ ಇಂದ್ರನು ಮತ್ತೆ 'ರಾಜನ್! ಮಾಡುವೆನೆಂದು ಮಾತಿತ್ತು ಮತ್ತೆ ಮಾತಿಗೆ ತಪ್ಪುವುದು ನಿನ್ನಂತಹ ಸತ್ಯವ್ರತನಿಗೆ ನ್ಯಾಯವೇ ?' ಎಂದು ಕೇಳಿದ ಪುರಂದರನ ನಿರ್ಬಂಧವನ್ನರಿತು ನಲನು 'ಆಗಲಿ ! ದೂತನಾಗಿ ಹೋಗುವೆನು. ಆದರೆ ರಾಣೀವಾಸಗಳು ದುಷ್ಪ್ರವೇಶಗಳು. ನಾನು ದಮಯಂತಿಯನ್ನು ಕಾಣುವ ಬಗೆ ಹೇಗೆ ?' ಎಂದು ಕೇಳಿದನು. ಪುರಂದರನು ನಲನಿಗೆ ಒಂದು ಮಣಿಯನ್ನಿತ್ತು 'ಇದನ್ನು ಧರಿಸಿ ಹೋದರೆ ನೀನಾರಿಗೂ ಕಾಣದಂತೆ ಅಂತಃಪುರವನ್ನು ಪ್ರವೇಶಿಸುವೆ. ಮಣಿಯನ್ನು ಕಂಠದಿಂದ ತೆಗೆಯಲು ಕಾಣಿಸುವೆ. ಹೋಗು, ನಮ್ಮ ಕಾರ್ಯವನ್ನು ಹಣ್ಣು ಮಾಡಿಕೊಂಡು ಬಾ !' ಎಂದು ಕಳಿಸಿದನು.

ನಲನು ಅಂತಃಪುರವನ್ನು ಪ್ರವೇಶಿಸಿದನು. ಅಲ್ಲಿ ಪ್ರಮದಾರತ್ನಗಳ ಮಧ್ಯದಲ್ಲಿ ನಾಯಕಮಣಿಯಂತೆ ಕಂಗೊಳಿಸುವ ದಮಯಂತಿಯನ್ನು ನೋಡಿ, ಸುಕುಮಾರಿಯು ಸಿಂಹಮಧ್ಯೆಯು, ಕಮಲಲೋಚನೆಯು, ಚಂದ್ರವದನೆಯು, ಮಂದಹಾಸವಿಲಾಸ-

ಮನೋಹಾರಿಣಿಯು ಆದ ದಮಯಂತಿಯ ರೂಪಸಂಪತ್ತಿಗೆ ಮಾರುಹೋದನು. ಅವನ ಮನವು ಕಾಮವಶವಾಯಿತು. ಇಂದ್ರಾದಿಗಳಿಗಿತ್ತ ಮಾತನ್ನು ನೆನೆದು, ಉಕ್ಕಿ ಬರುವ ಮೋಹವನ್ನಡಗಿಸಿ, ನಲನು ಧೈರ್ಯಸ್ಥೈರ್ಯಗಳು ಮೂರ್ತಿವೆತ್ತಂತೆ ರಾಜಪುತ್ರಿಯ ಮುಂದೆ ನಿಂತನು. ಅನಿರೀಕ್ಷಿತನಾಗಿ ಬಂದ ಸುಂದರ ರಾಜಕುಮಾರ ನನ್ನು ಕಂಡು ಲಲನೆಯರು ಚಕಿತರಾಗಿ ಎದ್ದುನಿಂತರು. ಆಶ್ಚರ್ಯ ಭಯ ಸಂಭ್ರಮ ಗಳು ಮನದಿ ಮುಪ್ಪುರಿಯಾಗಿ ಮೂಡಿಬರಲು ನಲನನ್ನು ದಿಟ್ಟಿಸಿ ನೋಡುತ್ತಾ, ಚಿತ್ರದಂತೆ ನಿಶ್ಚಲರಾಗಿ ನಿಂತರು. ಅವನ ರೂಪ, ಕಾಂತಿ, ಧೈರ್ಯ, ಸಾಹಸಗಳನ್ನು ಮನಸಾ ಮೆಚ್ಚಿದರು. ಅವನ ತೇಜಃಪುಂಜವನ್ನು ಕಂಡು, ದೇವಗಂಧರ್ವ ಚಕ್ರವರ್ತಿ ಗಳಲ್ಲಿ ಇವನಾರೆಂದು ಚಿಂತಿಸಿ, ಭಯದಿಂದ ಮಾತಾಡಲಾರದೆ ಸುಮ್ಮನೆ ನಿಂತರು. ಆಗ ಧೈರ್ಯವಹಿಸಿ, ದಮಯಂತಿಯು ಅವನಿಗೆ ಆಸನಾದಿಸತ್ಕಾರಗಳನ್ನು ಸಮರ್ಪಿಸಿ, 'ನೀನಾರು ? ದೇವನಂತೆ ಬೆಳಗುವ ನಿನ್ನನ್ನು ಕಂಡು ನನ್ನ ಮನವು ನೀನು ನಲರಾಜ ನೆಂದು ಶಂಕಿಸುತ್ತಿದೆ! ನಿಜವನ್ನು ಹೇಳು! ಇಲ್ಲಿಗೆ ಬರಲು ಕಾರಣವೇನು? ಯಾರಿಗೂ ಕಾಣದೆ ಪ್ರವೇಶಿಸಿದುದೆಂತು ? ಉಗ್ರಶಾಸನನಾದ ನಮ್ಮ ತಂದೆಯ ಅಂತಃಪುರ ರಕ್ಷಕರು ನಿನ್ನನ್ನು ತಡೆಯಲಿಲ್ಲವೇ ?' ಎಂದು ಪ್ರಶ್ನಿಸಿದಳು. ಅವಳ ವಿನಯ, ನಯ ಮಧುರ ವಚನಗಳಿಗೆ ಮನದಿ ಮೆಚ್ಚಿ, ನಲನು 'ಕಲ್ಯಾಣಿ ! ನಾನು ನಲನು. ಈಗ ದೇವದೂತನಾಗಿ ನಿನ್ನಲ್ಲಿ ಬಂದಿರುವೆನು. ಇಂದ್ರಾಗ್ನಿಯಮವರುಣರು ನಿನ್ನ ಶೀಲ ರೂಪವಿಲಾಸಗಳನ್ನು ಕೇಳಿ ನಿನ್ನನ್ನು ವರಿಸಲು ಬಂದಿರುವರು. ಅವರ ಪ್ರಭಾವದಿಂದ ನಾನು ಯಾರ ಕಣ್ಣಿಗೂ ಬೀಳದೆ, ನಿನ್ನ ಅಂತಃಪುರವನ್ನು ಪ್ರವೇಶಿಸಿದೆನು. ಅಂತಹ ಮಹಾನುಭಾವರಲ್ಲಿ ಒಬ್ಬನನ್ನು ವರಿಸು. ಇದ್ದ ವಿಷಯವನ್ನು ತಿಳಿಸಿರುವೆನು. ನಿನ್ನ ಇಚ್ಛೆಯಂತೆ ನಡೆ !' ಎಂದು ಸುಮ್ಮನಾದನು.

ಆ ಮಾತನ್ನಾಲಿಸಿ, ದಮಯಂತಿಯು ದಿಗ್ಭ್ರಾಂತಳಾದಳು. ಆ ಬಂದ ದೇವತೆಗಳಿಗೆ ವಂದಿಸಿ, ಮುಂದೆ ನಿಂದ ನಲನಿಗೆ ತನ್ನನ್ನು, ತನ್ನ ಸರ್ವಸ್ವವನ್ನು ಸಮರ್ಪಿಸಿ, 'ರಾಜನ್ ! ರಾಜಹಂಸ ವಚನದಿಂದ ನಿನ್ನಲ್ಲಿ ಮನವಿಟ್ಟು ನಿನ್ನ ವಿರಹ ದಿಂದ ಬೆಂದ ನನಗೆ ಇಂದು ನಿನ್ನ ಸಂದರ್ಶನದಿಂದ ಆನಂದವಾಗಿದೆ. ನೀನು ಬರಲೆಂದೇ ನಮ್ಮ ತಂದೆಯು ಸ್ವಯಂವರವೆಂದು ಸಾರಿರುವನು. ನೀನೇ ನನ್ನನ್ನು ತಿರಸ್ಕರಿಸಿ, ಬೇರೊಬ್ಬನನ್ನು ವರಿಸೆಂದು ನುಡಿಯುವುದು ಉಚಿತವಲ್ಲ. ನಿನ್ನನ್ನು ವರಿಸಲಾರೆನಾ ದೊಡೆ, ವಿಷವನ್ನು ನುಂಗುವೆನು. ಅಗ್ನಿಯಲ್ಲಿ ಬೀಳುವೆನು. ಅಥವಾ ಸಮುದ್ರವನ್ನು ಹೊಗುವೆನು. ಕೊನೆಗೆ ಉರುಲು ಹಾಕಿಕೊಂಡಾದರೂ ಸಾಯುವೆನಾಗಲಿ ಪರರನ್ನು ಕಣ್ಣೆತ್ತಿ ನೋಡಲಾರೆನು' ಎಂದು ತನ್ನ ನಿಶ್ಚಿತವನ್ನು ತಿಳಿಸಿದಳು. ಆ ಮಾತನ್ನು ಮೆಚ್ಚದೆ ದೂತನಾದ ನಲನು ' ಸುಂದರಿ ! ಲೋಕವಿಭುದೇವತೆಗಳು ತಾವಾಗಿ ನಿನ್ನನ್ನು ಬೇಡಬಂದರೆ ಅಂತಹ ತೇಜೋಬಲೈಶ್ವರ್ಯಸಮೃದ್ಧರನ್ನು ಬಿಟ್ಟು, ಅವರ ಪಾದಧೂಳಿಗೂ ಸರಿತಾಕದ ನನ್ನಂತಹ ಮನುಜಮಾತ್ರನನ್ನು ಬೇಡಿ

ಕೆಡಬೇಡ. ಸುರವರರು ಪ್ರಸನ್ನರಾಗಿರಲು, ಅವರನ್ನು ತಿರಸ್ಕರಿಸಿದವರು ಅಧಃಪತಿತರಾಗುವರು. ನನ್ನ ವಚನವನ್ನು ಮನ್ನಿಸು. ಅವರಲ್ಲೊರ್ವನನ್ನು ವರಿಸು' ಎಂದು ಅನುನಯಿಸಿದನು.

ದಮಯಂತಿಯು ನಲನ ವದನ ನಲಿನವನ್ನು ದಿಟ್ಟಿಸಿ ನೋಡಿ, ನಯನಯುಗಳ ಗಲಿತಬಾಷ್ಪಧಾರೆಯನ್ನೊರೆಸಿಕೊಂಡು ಚಿಂತಿಸಿ, ಮತ್ತೆ ಇಂತೆಂದಳು—"ಪ್ರಾಣೇಶ! ನಿನಗಿತ್ತ ಮನವನ್ನು ಮತ್ತೊಬ್ಬನಿಗಿಡಲಾರೆನು. ನಿನ್ನ ಅಭಿಪ್ರಾಯವನ್ನರಿತು ನಿರಪಾಯವಾದ ಉಪಾಯವನ್ನು ಕಂಡಿರುವೆನು. ಕೇಳು! ಇಂದ್ರಾದಿಗಳು ನನ್ನ ಸ್ವಯಂವರಕ್ಕೆಂದು ಬಂದರೆ ಆ ಬೃಂದಾರಕರ ಸನ್ನಿಧಿಯಲ್ಲಿಯೇ ನಿನ್ನನ್ನು ವರಿಸುವೆನು. ನೀನೂ ನಿರ್ದೋಷವೆನಿಸುವೆ. ಸುರೇಶರು ಸಂತುಷ್ಟರಾಗಿ ನಮ್ಮೀರ್ವರನ್ನು ಹರಸುವರು." ಆ ಮಾತಿಗೆ ಮನದಿ ಸಂತಸದ ಹೊನಲು ಹರಿದಂತಾಗಲು ನಲನು ಹಿಂದಿರುಗಿ ಇಂದ್ರಾದಿದೇವರನ್ನು ಕಂಡನು. ದಮಯಂತಿ ನುಡಿದ ವಚನವನ್ನು ನಿರೂಪಿಸಿ ಕೃತಕೃತ್ಯನಾದನು. ದೇವಚತುಷ್ಟಯವು ತಮ್ಮನ್ನು ತಿರಸ್ಕರಿಸಿದ ದಮಯಂತಿ ನಲನನ್ನೆಂತು ವರಿಸುವಳೋ ನೋಡುವೆವೆಂದಿತು; ಪಂಥದಿಂದ ನಾಲ್ವರೂ ನಲರೂಪರಾಗಿ ಸ್ವಯಂವರ ಮಂಟಪದಲ್ಲಿ ನಲನ ಸಮೀಪದಲ್ಲೇ ಉಪವಿಷ್ಟರಾದರು.

ಧವಳದಿವ್ಯ ಸುಮಾಲೆಯನ್ನು ಕೈಲಿ ಪಿಡಿದು, ದಮಯಂತಿಯು ಸ್ವಯಂವರ ಮಂಟಪವನ್ನು ಪ್ರವೇಶಿಸಿ, ನಾಲ್ಕೂ ನಿಟ್ಟಿಗೂ ದೃಷ್ಟಿಯನ್ನು ಪಸರಿಸಿ, ಬಂದ ರಾಜನ್ಯರನ್ನೆಲ್ಲ ವೀಕ್ಷಿಸಿ, ಅವರ ಮಧ್ಯದಿ ಸುಖಾಸೀನರಾದ ಐವರು ನಲರನ್ನು ಕಂಡು, ವಿಸ್ಮಯಶೋಕಭಯಪರೀತಳಾದಳು. ಇಂದ್ರಾದಿಗಳನ್ನು ನಿಂಗಡಿಸಿ ತಿಳಿಯಲಾರದೆ ದೀನಳಾಗಿ, ತನ್ನ ಮನದಲ್ಲಿಯೇ ದೇವಪರಿವೃಢರಿಗೆ ನಮಿಸಿ 'ಸುರೇಶರೇ! ನನ್ನಲ್ಲಿ ಕರುಣಿಸಿ, ನಲನ ತಿಳಿಯುವ ಬಗೆ ತೋರಿಸಿ, ತಾವು ನಿಜರೂಪಧರರಾಗಿ, ಅನುಗ್ರಹಿಸಬೇಕೆ'ಂದು ಬೇಡಿ, ಕೈಮುಗಿದಳು. ಅವಳ ಪವಿತ್ರಭಾವನೆಗೆ ಮನಕರಗಿ, ಸುರವರರು ನಿಜರೂಪದಿಂದ ಪ್ರತ್ಯಕ್ಷರಾದರು. ಎವೆಯಿಕ್ಕದ ಪದ್ಮನೇತ್ರಗಳನ್ನು ಅಸ್ವೇದಗಾತ್ರಗಳನ್ನು ಕಂಡು, ಭೂತಲವನ್ನು ಮುಟ್ಟದೆ ನಿಂತಿದ್ದ ಅವರ ದೇವಮಹಿಮೆಯನ್ನರಿತು, ನಮಿಸಿ, ದಮಯಂತಿಯು ಧವಳಸುಮಹಾರವನ್ನು ನಲರಾಜನ ಕಂಠಸೀಮೆಯಲ್ಲಿ ಹಾಕಿ, ಅವನನ್ನು ವರಿಸಿದಳು. ದೇವಚತುಷ್ಟಯವು ತುಷ್ಟವಾಗಿ ಹರಸಿತು. ವಿಪ್ರಾಶೀರ್ವಾದ ವೇದಘೋಷದಿಂದ ತೂರ್ಯಪಟಹಶಂಖಾರಾವಗಳು ಮೇಳವಿಸಿದವು.

ನಲರಾಜನು ಪ್ರಹೃಷ್ಟಾಂತರಂಗನಾಗಿ 'ಪ್ರಿಯೆ! ದೇವತೆಗಳನ್ನೊಲ್ಲದೆ ಮನುಜಮಾತ್ರನಾದ ನನ್ನನ್ನು ವರಿಸಿದ ನಿನ್ನಲ್ಲಿ, ಪ್ರೀತನಾಗಿರುವೆನು. ನನ್ನ ಪ್ರಾಣವಿಯೋಗವಾಗುವವರೆವಿಗೂ ಕ್ಷಣವಾದರೂ ನಿನ್ನನ್ನಗಲದೆ ಅನನ್ಯರತನಾಗಿರುವೆ'ನೆಂದು ವಚನವಿತ್ತು, ದೇವಾನುಜ್ಞೆಯನ್ನು ಪಡೆದು, ಅಗ್ನಿಸಾಕ್ಷಿಕವಾಗಿ ದಮಯಂತಿಯನ್ನು ವಿವಾಹವಾದನು.

ಇಂತು ವಿವಾಹಿತರಾಗಿ ನಿಂತ ದಮಯಂತೀ ನಲ ಭೂಕಾಂತರಲ್ಲಿ ಪ್ರಸನ್ನರಾಗಿ ದೇವವರರು ಅವರಿಗೆ ವರಗಳನ್ನಿತ್ತರು. ಯಜ್ಞಶಾಲೆಯಲ್ಲಿ ನಲನಿತ್ತ ಹವಿರ್ದಾನವನ್ನು ಪ್ರತ್ಯಕ್ಷವಾಗಿ ಸ್ವೀಕರಿಸಿ ಪೊರೆಯುವಂತೆ ಇಂದ್ರನು; ಬೇಕಾದೆಡೆ ಅಗ್ನಿ ಜಲಗಳನ್ನು ತ್ಪ್ರಾದಿಸುವ ಶಕ್ತಿಯನ್ನು ಅಗ್ನಿವರುಣರು, ಧರ್ಮ ಬುದ್ಧಿಯು ಕೆಡದಿರುವಂತೆ ಧರ್ಮನು ವರಗಳನ್ನಿತ್ತು, ಸ್ವರ್ಗ ಮಾರ್ಗವನ್ನು ಹಿಡಿದು ಪೋಗುತ್ತಿದ್ದರು. ಅಲ್ಲಿ ಕಲಿದ್ವಾಪರರನ್ನು ಕಂಡು ಇಂದ್ರನು 'ಎಲ್ಲಿಗೆ ಹೋಗುತ್ತಿರುವಿರಿ'ಎಂದು ಕೇಳಿದನು. ಕಲಿಯು 'ದಮಯಂತಿಯನ್ನು ಸ್ವಯಂವರದಲ್ಲಿ ವರಿಸಿ, ಹರಸಲು ಹೋಗುತ್ತಿರುವೆ'ನೆಂದನು ಅವನ ಮಾತಿಗೆ ನಕ್ಕು ದೇವವರರು 'ಅಯ್ಯಾ ! ದಮಯಂತೀ ಸ್ವಯಂವರವು ಮುಗಿಯಿತು. ಅವಳು ನಿಸಧ ಪತಿಯ ಸತಿಯಾದಳು. ಆ ಉತ್ಸವವನ್ನು ನೋಡಿ ಬರುತ್ತಿರುವೆವು' ಎಂದರು. ದುಷ್ಟಕಲಿಯು ಆ ವೃತ್ತಾಂತವನ್ನು ಕೇಳಿ ಕೆರಳಿ 'ನಲನನ್ನು ರಾಜ್ಯಭ್ರಷ್ಟನನ್ನು ಮಾಡುವೆನು ಮತ್ತು ನಲ-ದಮಯಂತಿಯರಿಗೆ ವಿಯೋಗವನ್ನು ತಂದೊಡ್ಡುವೆ'ನೆಂದು ನಿಶ್ಚಯಿಸಿ, ಅಕ್ಷವಿನೋದಲೋಲನಾದ ನಲನನ್ನು ತಿಳಿದು, ದ್ವಾಪರನಿಗೆ ನಲನ ಅಕ್ಷಗಳಲ್ಲಿ ಆವಿಷ್ಟನಾಗಿರಲು ಹೇಳಿ ಕಳಿಸಿದನು. ತಾನು ನಲನಲ್ಲಿ ಸೇರಿ, ಅವನನ್ನು ಮತಿಗೆಡಿಸಿ ಹಾಳುಮಾಡಲು ಸಮಯವನ್ನು ಕಾಯುತ್ತಿದ್ದನು. ನಲನು ದಮಯಂತಿಯಲ್ಲಿ ಇಂದ್ರಸೇನನೆಂಬ ಸುತನನ್ನೂ ಇಂದ್ರಸೇನೆಯೆಂಬ ಸುತೆಯನ್ನೂ ಪಡೆದು ಅತ್ಯಂತ ಸುಖದಿಂದ ಬಹು (ಹನ್ನೆರಡು ವರ್ಷ) ಕಾಲ ಕಳೆದನು.

## ದ್ಯೂತ–ಅಷ್ಟಕಷ್ಟಗಳು

ಒಂದು ದಿನ ನಲರಾಜನು ಕೃತಮೂತ್ರನಾಗಿ, ಜಲೋಪಸ್ಪರ್ಶನವಾಗಿಸಿ, ಪಾದ ಶೌಚವನ್ನು ಮಾಡಲು ಮರೆತು, ಸಂಧ್ಯೆಯನ್ನಾಚರಿಸಿದನು. ಸಮಯವನ್ನರಿತು ಕಲಿಯು ಅವನಲ್ಲಿ ಪ್ರವೇಶಿಸಿದನು. ನಲದಾಯಾದನಾದ ಪುಷ್ಕರನನ್ನು ಸಮೀಪಿಸಿ 'ವೃಷನೆಂಬುವರು ನನ್ನನ್ನು ; ನನ್ನ ಸಹಾಯದಿಂದ ನಲನನ್ನು ಜೂಜಿನಲ್ಲಿ ಗೆಲ್ಲುವೆ. ಬಾ ! ನಿಷಧಪುರಿಗೆ' ಎಂದು ರೂಪಾಂತರದಿಂದ ಅವನನ್ನು ಕೂಡಿ ನಲನಲ್ಲಿಗೆ ಬಂದನು. ಪುಷ್ಕರನು 'ಅಕ್ಷಕ್ರೀಡೆಯಾಡುವ ಬಾರೆಂ'ದು ನಲನನ್ನು ಕರೆದನು. ದ್ಯೂತ-ಯುದ್ಧಗಳಲ್ಲಿ ಆಹ್ವಾನವನ್ನು ಮನ್ನಿಸಬೇಕೆಂದು ನಲರಾಜನು ವೃಷ–ಸಹಿತನಾದ ಪುಷ್ಕರನಿಂದ ಜೂಜಾಡಿ, ಹಿರಣ್ಯರತ್ನಗಳನ್ನು ರಥಗಜತುರಗಗಳನ್ನು, ವಸ್ತ್ರಭೂಷಣಗಳನ್ನು ಸೋತನು. ಕಲ್ಯಾವಿಷ್ಟನಾಗಿ ವಿಧಿವಿಲಾಸದಿಂದ ಮತಿಗೆಟ್ಟು ಅಧರ್ಮವಾದ ದ್ಯೂತವನ್ನು ಹಿತವೆಂದು ಭ್ರಮಿಸಿ, ಸರ್ವಸ್ವವನ್ನು ಸೋಲುತ್ತಿರುವ ನಲನನ್ನು ದ್ಯೂತದಿಂದ ನಿವಾರಿಸಲು ಯಾವ ಹಿತರಿಗೂ ಶಕ್ಯವಾಗಲಿಲ್ಲ.

ನಡೆಯುತ್ತಿರುವ ಅನರ್ಥವನ್ನು ಸೂತನು ದಮಯಂತಿಗೆ ತಿಳಿಸಿ, ಧರ್ಮಾರ್ಥ ಕುಶಲನಾದ ರಾಜನಿಗೆ ಪ್ರಾಪ್ತವಾಗುತ್ತಿರುವ ವ್ಯಸನವನ್ನು ನಿವಾರಿಸೆಂದು ಪೌರ ಜಾನಪದ ಮಂತ್ರಿ ಸುಹೃಜ್ಜನರ ಪರವಾಗಿ ಬೇಡಿದನು. ದಮಯಂತಿಯು ಶೋಕಭರ

ದಿಂದ ದಾವಾಗ್ನಿಗೆ ಸಿಲುಕಿದ ಪಾರಿಜಾತ ಲತೆಯಂತೆ ಬೆಂದು, ಕಣ್ಣೀರಿಡುತ್ತಾ ನಲನನ್ನು ಕಂಡು, ಗದ್ಗದಕಂಠದಿಂದ ಮೆಲ್ಲನೆ ಇಂತೆಂದಳು—"ಮಹಾರಾಜ ! ಪುರಜನರು ಮಂತ್ರಿಗಳು ನಿನ್ನ ಹಿತಾರ್ಥಿಗಳಾಗಿ ಬಂದು, ರಾಜದ್ವಾರದಲ್ಲಿ ಕಾದಿರುವರು. ಬಂದು ಅವರ ಪ್ರಾರ್ಥನೆಯನ್ನು ಆಲಿಸಿ ಪಾಲಿಸು !" ಇಂತು ಬೇಡುವ ಮಡದಿಯ ಕಣ್ಣೀರ ಕೋಡಿಯನ್ನು ಲೆಕ್ಕಿಸದೆ ನಲನು, ಕಲಿಪ್ರಭಾವದಿಂದ ದುಷ್ಟಚಿತ್ತನಾಗಿ ದ್ಯೂತಮತ್ತನಾದ ಪುಷ್ಕರನಿಂದ ಬಹುಕಾಲ ಜೂಜಾಡಿ ಸರ್ವ ರಾಜ್ಯವನ್ನೂ ಸಕಲ ಸಂಪತ್ತನ್ನೂ ಪಣವಿಟ್ಟು ಸೋತನು.

ಇಷ್ಟಾಗುವುದೆಂದು ತಿಳಿದ ದಮಯಂತಿಯು ಮೊದಲೇ ಎಚ್ಚತ್ತು, ತನ್ನ ದಾದಿಯಾದ ಬೃಹತ್ಸೇನೆಯನ್ನು ಕಳಿಸಿ ನಲಸೂತನಾದ ವಾರ್ಷ್ಣೇಯನನ್ನು ಕರೆಸಿ, ಅವನಿಗಿಂತೆಂದಳು—"ವಾರ್ಷ್ಣೇಯ ! ನಿನ್ನಲ್ಲಿ ಸದಾಪ್ರೀತನಾದ ನಲರಾಜನಿಗೆ ವಿಪತ್ತು ಬಂದಿದೆ. ಪುಷ್ಕರನಿಂದ ಜೂಜಾಡುತ್ತಿರುವ ನಲನಿಗೆ ಸೋಲಿನಂತೆ ಹಠವೂ ಹೆಚ್ಚಾಗುತ್ತಿದೆ. ನಲನು ಒಂದುಸಲವಾದರೂ ಗೆದ್ದನೆಂದು ಕೇಳಿಬಂದಿಲ್ಲ. ಮಹಾರಾಜನು ಸುಹೃದ್ಬಂಧು ಜನರ ಹಿತನುಡಿಗೆ ಕಿವಿಗೊಡುವ ಸ್ಥಿತಿಯಲ್ಲಿಲ್ಲ; ನನ್ನ ಮಾತೂ ರುಚಿಸಲೊಲ್ಲದಾಮಹಾನುಭಾವನಿಗೆ ! ಏನು ವಿಧಿವಿಲಾಸವೋ ತಿಳಿಯದಂತಾಗಿ ಭಯವಾಗುತ್ತಿದೆ. ನಾನು ನಿನಗೆ ಶರಣಾಗಿರುವೆನು. ದುಃಖಭರದಿಂದ ಶೂನ್ಯವಾದ ಹೃದಯದ ಮೊರೆಯನ್ನು ಕೇಳಿ ಕಾಪಾಡು ! ನಲನ ರಥದಲ್ಲಿ ಅವನ ಪ್ರಿಯಕರತುರಗಗಳನ್ನು ಹೂಡಿ, ನನ್ನ ಮಕ್ಕಳನ್ನಿರ್ವರನ್ನೂ ಕರೆದುಕೊಂಡು ವೇಗವಾಗಿ ಕುಂಡಿನ ನಗರವನ್ನು ಸೇರಿ, ಅವರ ಮಾತಾಮಹನಿಗೆ ಅವರನ್ನೊಪ್ಪಿಸು ! ಈಗಲೇ ಹೊರಡು !" ರಾಣಿಯ ಆಜ್ಞೆಯನ್ನು ಮನ್ನಿಸಿ ಸೂತನು ಮಂತ್ರಿಜನರ ಅಪ್ಪಣೆಯನ್ನೂ ಪಡೆದು ಇಂದ್ರಸೇನೆ ಇಂದ್ರಸೇನರನ್ನು ಭೀಮಪುರಿಗೆ ಕರೆದುಕೊಂಡು ಹೋಗಿ, ಅವರನ್ನೂ, ರಥತುರಗಗಳನ್ನೂ ಭೀಮರಾಜನಿಗೆ ಸಮರ್ಪಿಸಿದನು. ನಲರಾಜನ ವಿಪತ್ತಿಗೆ ಮನಗುಂದಿ ವಾರ್ಷ್ಣೇಯನು ಕಣ್ಣೀರಿಟ್ಟು, ಬಾಲಕರನ್ನು ಬೀಳ್ಕೊಂಡು ಅಯೋಧ್ಯೆಯನ್ನು ಸೇರಿ, ಅಲ್ಲಿ ಋತುಪರ್ಣ ಮಹಾರಾಜನ ಸಾರಥಿಯಾಗಿ ಕಾಲವನ್ನು ಕಳೆಯುತ್ತಿದ್ದನು.

ನಲನು ರಾಜ್ಯವನ್ನು ಕಳೆದುಕೊಂಡು ನಿರ್ವಿಣ್ಣನಾಗಿ ಕೂತಾಗ ಪುಷ್ಕರನು ಅವನನ್ನು ನೋಡಿ, ನಗುತ್ತಾ, 'ನಲ ! ಇದ್ದುದೆಲ್ಲವನ್ನೂ ಪಣವಿಟ್ಟು ಸೋತೆ, ದಮಯಂತಿ ಮಾತ್ರ ಉಳಿದಿರುವಳು ; ಅವಳನ್ನೂ ಪಣವಾಗಿಡುವುದಾದರೆ ಇಡು ! ಇಲ್ಲದಿದ್ದರೆ ರಾಜ್ಯವನ್ನು ಬಿಟ್ಟು ನಡೆ !' ಎಂದನು. ಆ ಮಾತಿಗೆ ಎದೆ ಒಡೆದು, ಬರುವ ದುಃಖರೋಷಗಳನ್ನು ನುಂಗಿ ನಲನು ತನ್ನ ವಸ್ತ್ರ ಭೂಷಣಗಳನ್ನೂ ಆ ಖಲನಿಗಿತ್ತು ಏಕವಸನನಾಗಿ ನಗರಬಹಿಃಪ್ರದೇಶದಲ್ಲಿ ದಮಯಂತೀ ಸಹಿತನಾಗಿ ಮೂರುದಿನ ವಸಿಸಿದನು. ಪುಷ್ಕರನು ನಲನನ್ನು ಸತ್ಕರಿಸುವವರನ್ನು ಸಂಹರಿಸುವಂತೆ ಕಟ್ಟಪ್ಪಣೆ

ನೀಡಿ ಸಾರಿದ್ದರಿಂದ ಪುರಜನರು ಹೆದರಿ ಸರ್ವೈಶ್ವರ್ಯ ಪರಿಭ್ರಷ್ಟನಾಗಿ ಕಷ್ಟಪಡುವ ರಾಜಶ್ರೇಷ್ಠನನ್ನು ನೋಡದೆ, ಮನದಲ್ಲಿ ಅವನಿಗಾಗಿ ಮರುಕಪಟ್ಟು ಕೊರಗುತ್ತಿದ್ದರು.

ನಲನು ಸತಿಯನ್ನು ಕರೆದುಕೊಂಡು, ವನವನ್ನು ಪ್ರವೇಶಿಸಿದನು. ಜಲಮಾತ್ರಾಹಾರನಾಗಿ ಮೂರು ದಿನಗಳನ್ನು ಕಳೆದ ನಲನು ಹಸಿವೆಯಿಂದ ಪೀಡಿತನಾಗಿ ವನದಲ್ಲಿ ಹಾರಾಡುವ ಕೆಲಪಕ್ಷಿಗಳನ್ನು ಕಂಡು, ಅವನ್ನು ಹಿಡಿಯಲು ತವಕಿಸಿದನು. ಬಂಗಾರದಂತೆ ಹೊಳೆಯುವ ಹಕ್ಕಿಗಳನ್ನು ಪಡೆದು ತನ್ನ ಸತಿಯ ಹಸಿವನ್ನು ಹಿಂಗಿಸಲು ಹವಣಿಸಿ, ತನ್ನ ವಸ್ತ್ರದಿಂದ ಅದನ್ನು ಮುಚ್ಚಿ ಹಿಡಿಸೆಳೆಯುವ ನಲನ ವಸ್ತ್ರವನ್ನು ಹಾರಿಸಿಕೊಂಡು ಪಕ್ಷಿಗಳು ಗಗನಕ್ಕೆ ಹಾರಿದವು. ನಲನು ದಿಗಂಬರನಾಗಿ, ತಲೆ ತಗ್ಗಿಸಿ ನಿಂತನು. ಅವನನ್ನು ನೋಡಿ ಪಕ್ಷಿಗಳು 'ನಲ! ನಾವು ಅಕ್ಷಗಳು, ನಿನ್ನ ರಾಜ್ಯ ಧನ ಮಹಾವಿಭವಗಳನ್ನು ಕದ್ದೆವು. ಈಗ ನಿನ್ನ ವಸ್ತ್ರವನ್ನೂ ಅಪಹರಿಸಿರುವೆವು' ಎಂದು ನುಡಿದು ಹಾರಿಹೋದವು.

ಪುಣ್ಯಶ್ಲೋಕನಾದ ನಲನು ಖಿನ್ನನಾಗಿ ದಮಯಂತಿಗಿಂತೆಂದನು—'ಪ್ರಿಯೆ! ನಮ್ಮ ದುರದೃಷ್ಟದಿಂದ ರಾಜ್ಯವನ್ನು ಕಳೆದುಕೊಂಡೆ; ನೀನು ನಿವಾರಿಸಿದರೂ ಕೇಳದೆ ಸರ್ವಸಂಪತ್ತನ್ನು ಪಣವಾಗಿಟ್ಟು ಕೆಟ್ಟೆ; ದ್ಯೂತಕ್ರಿಯಾಲೋಲುಪನಾದ ನನ್ನನ್ನು ಪ್ರಜರು ಮನ್ನಿಸಿ ಸತ್ಕರಿಸಲಿಲ್ಲ. ಕ್ಷುಧೆಯ ಬಾಧೆಯನ್ನು ತಡೆಯಲಾರದೆ, ಹಿಡಿಯಲು ಪೋದ ಹಕ್ಕಿಗಳು ವಸ್ತ್ರವನ್ನೂ ಕಸಿದುಬಿಟ್ಟವು. ದುಃಖಪರಂಪರೆಗೆ ಸಿಲುಕಿರುವ ನನ್ನ ಮನವು ದಿಕ್ಕೆಟ್ಟು ಶೂನ್ಯವಾಗಿದೆ. ಅತಿಕೋಮಲಗಾತ್ರಿಯಾದ ನಿನಗೆ ನನ್ನಿಂದ ಬಂದ ಕಷ್ಟಗಳಿಗೆ ಕೊನೆ ಇಲ್ಲದಾಗಿದೆ. ನಿನಗೆ ಹಿತವಾಗಲು ನುಡಿಯುವ ನನ್ನ ವಚನದಂತೆ ನಡೆ! ನೋಡೀಮಾರ್ಗವು ದಕ್ಷಿಣಾಪಥದ ಅವಂತಿಯನ್ನು ಮುಟ್ಟಿ ವಿಂಧ್ಯ ಪರ್ವತದವರೆಗೂ ವ್ಯಾಪಿಸಿದೆ. ಈ ಮಾರ್ಗವು ನರ್ಮದೆಯನ್ನು ಸೇರಿಸುವುದು. ಇದು ವಿದರ್ಭನಗರದ ಹಾದಿ. ಇದು ಕೋಶಲವನ್ನು ಮುಟ್ಟುವುದು. ಈ ಮಾರ್ಗಗಳಲ್ಲಿ ಯಾವ ಮಾರ್ಗವನ್ನು ಹಿಡಿದುಪೋದರೆ ನಿನಗೆ ಹಿತವಾಗುವದು?" ಇಂತು ಆರ್ತನಾಗಿ ಕಣ್ಣೀರಿಟ್ಟು ನುಡಿದ ನಲನನ್ನು ನೋಡಿ, ದಮಯಂತಿಯ ಶೋಕಸಾಗರವು ಉಕ್ಕಿ ಬಂತು. ಅವಳು ವದನಪಂಕಜದಿಂದ ಹರಿದ ಕಣ್ಣೀರನ್ನೊರೆಸಿಕೊಂಡು, ನಿಟ್ಟುಸಿರಿಟ್ಟು "ರಾಜನ್; ಮಾರ್ಗಗಳನ್ನು ತೋರಿದ ನಿನ್ನ ಸಂಕಲ್ಪವನ್ನು ತಿಳಿದು ನಾನು ಹೌಹಾರಿರುವೆನು. ರಾಜ್ಯದ್ರವ್ಯಗಳನ್ನು ಕಳೆದುಕೊಂಡು, ವಿವಸ್ತ್ರನಾಗಿ, ಹಸಿವೆಯಿಂದ ಬಳಲಿ ಬೆಂಡಾದ ನಿನ್ನನ್ನು ನಿರ್ಜನವನದಲ್ಲಿ ಬಿಟ್ಟು ನಿನ್ನ ಪ್ರಾಣಾಧಿಕಸತಿಯು ಹೊರಟುಹೋಗುವಳೇ? ಹೋಗಿ ಜೀವದಿಂದಿರಬಲ್ಲಳೇ? ಬಿಡು ಆ ಚಿಂತೆಯನ್ನು! ಅಧಿಕ ದುಃಖವೆಂಬ ರೋಗಕ್ಕೆ ಭಾರ್ಯಾಹಿತವಚನವೇ ಮದ್ದು; ಭಾರ್ಯಾಸಹಿತನಿಗೆ ಎಂತಹ ವಿಪತ್ತಾದರೂ ಹಗುರವಾಗಿಹೋಗುವುದು. ಶ್ರಮವಾದಾಗ, ಹಸಿವೆ ತೃಷೆಗಳಿಂದ ಬಳಲಿದಾಗ, ಚಿಂತಾಮಗ್ನನಾದಾಗ ಪುರುಷನಿಗಾಸರೆಯಾಗಿ, ಎಡೆಬಿಡದೆ ನಿಂತು, ಮಡದಿ, ಅವನ ಮನಃಕ್ಲೇಶವನ್ನು ನಾಶಪಡಿಸುವಳು. ನಿನ್ನಧೀನಳು,

ಅನುವ್ರತಳು, ದಯನೀಯಳು ಆದ ನನ್ನನ್ನು ಬಿಡದೆ, ನಿನ್ನ ಹಿಂದೆ ಛಾಯೆಯಂತೆ ಅನುಸರಿಸಲು ಸಮ್ಮತಿಸಿ ಕರುಣಿಸು !" ಎಂದು ನುಡಿದ ಸುಂದರಿಯನ್ನು ಸಂತೈಸುತ್ತ ನಲನಿಂತೆಂದನು—ನಿಜ! "ಭಾರ್ಯೆಳಿಗೆ ಸಮಮಿತ್ರರಿಲ್ಲ. ದುಃಖಭಾರದಿಂದ ಮತಿಗೆಟ್ಟು ನುಡಿದ ಮಾತಿಗೆ ಹೆದರಬೇಡ ! ನಿನ್ನನ್ನು ಬಿಟ್ಟು ನಾನು ಜೀವಿಸಬಲ್ಲೆನೆ ?" ಆ ಮಾತನ್ನು ನಂಬಲಾರದೆ ದಮಯಂತಿ "ರಾಜನ್ ! ಬಿಟ್ಟಿರಲಾರದವನಾದರೆ ನೀನೇಕೆ ನನಗೆ ವಿದರ್ಭಪುರಿಯ ದಾರಿಯನ್ನು ಮತ್ತೆ ಮತ್ತೆ ತೋರಿಸಿದೆ ? ದುಃಖಾವೇಗವನ್ನು ತಡೆಯಲಾರದೆ, ಮಮತೆಯನ್ನು ದೂಡಿ, ನನ್ನನ್ನು ಬಿಡಬೇಡ ! ಜ್ಞಾತಿಜನರಲ್ಲಿ ಇರುವುದಾದರೆ, ನಾವಿಬ್ಬರೂ ಜತೆ ಬಿಡದೆ, ನಮ್ಮ ಜನಕನ ಮನೆಯಲ್ಲಿ ನಿನಗೆ ಸಮ್ಮತ ವಾದರೆ, ಸುಖವಾಗಿರೋಣ ! ಅಲ್ಲಿ ವಿದರ್ಭರಾಜನು ನಿನ್ನನ್ನು ದೇವನನ್ನಂತೆ ಗೌರವಿಸುವನು. ಮಕ್ಕಳೂ ಅಲ್ಲೇ ಇರುವರಲ್ಲವೇ ?" ಎಂದು ವಿಜ್ಞಾಪಿಸಿದಳು.

ನಲನು "ಪ್ರಿಯೆ ! ನಿಮ್ಮ ತಂದೆಯ ರಾಜ್ಯವೆಂದರೆ ನಮ್ಮ ರಾಜ್ಯವೇ ಸರಿ ! ಆದರೆ ಈಗ ವಿಪತ್ಸಮುದ್ರಮಗ್ನನಾದ ನಾನು ವಿದರ್ಭೆಗೆ ಬರಲಾರೆನು. ಹಿಂದೆ ಮಹಾ ವಿಭವದಿಂದ ವಿದರ್ಭ ನಗರದ ಮಹಾಜನರಿಗೆ ನಯನಾನಂದಕರನಾಗಿದ್ದ ನಾನು, ಇಂದು ಇಂತು ಸರ್ವಸ್ವಹೀನನು, ದೀನನು ಆಗಿ ಬಂಧುಜನಶೋಕವರ್ಧನನಾಗ ಲಾರೆನು" ಎಂದನು. ಆಗ ದಮಯಂತಿಯು ತಾನುಟ್ಟ ಪೀತವಸನದಿಂದ ನಲನ ಮೈಸುತ್ತುವರಿಸಿ, ಅವನನ್ನಪ್ಪಿ ದುಃಖಬಾಷ್ಪಗಳಿಂದ ಅವನ ವಕ್ಷಸ್ಥಲವನ್ನು ನಲನ ಹೃದಯದ ಚಿಂತಾಸಂತಾಪವನ್ನು ಕಡಿಮೆಮಾಡಲೆಂಬಂತೆ ತೋಯಿಸಿ, ರೋದಿಸಿದಳು.

ಏಕವಸನಧಾರಿಗಳಾಗಿ ನಲ-ದಮಯಂತಿಯರು ಅರಣ್ಯದಲ್ಲಿ ಹಾಳುಬಿದ್ದಿದ್ದ ಸಭೆಯೊಂದರಲ್ಲಿ ಸೇರಿ, ಶ್ರಾಂತರಾಗಿದ್ದುದರಿಂದ ನಿದ್ರೆ ಮಾಡಿದರು. ಸುಕುಮಾರಿ ಯಾದ ದಮಯಂತಿಯು ಕಷ್ಟಾಘಾತದಿಂದ ಮೈಮರೆತು ನಿದ್ರಿಸುತ್ತಿದ್ದಳು. ಶೋಕ ಪರೀತಚೇತಸ್ಕನಾದ ನಲನಿಗೆ ನಿದ್ರೆ ಬರಲಿಲ್ಲ ; ಅವನು ನಡೆದುದನ್ನು ನೆನೆದು ನಿರ್ವಿಣ್ಣನಾದನು. 'ಹಾ ! ದಮಯಂತಿ ! ಎಂತಹ ಕಷ್ಟಕ್ಕೊಳಗಾದೆ ! ರಾಜ್ಯ ಧನ ಗಳು ಅಪಹೃತವಾದವು ; ಬಂಧು ಜನರು ಕೈಬಿಟ್ಟರು ; ವನದಲ್ಲಿ ಕಾಡು ನೆಲದಮೇಲೆ ಮಲಗಿರುವಳು. ಅಂತಃಪುರದ ಪರಿಚಾರಿಕೆಯರು ಸುತ್ತುಗಟ್ಟಿ ವ್ಯಜನಚಾಮರ ಗಳಿಂದುಪಚರಿಸುತ್ತಿರಲು ಸುಪ್ಪತ್ತಿಗೆಯ ಮೇಲೆ ಶಯನಿಸುವ ಮಹಾರಾಣಿ ! ಹತ ವಿಧಿ ! ಏನು ಮಾಡಲಿ ? ಹೃದಯವಿದ್ರಾವಕವಾದ ಪ್ರಿಯಸತೀವ್ಯಸನವನ್ನು ಎಂತು ಸಹಿಸಲಿ ! ಅಥವಾ ಇವಳನ್ನು ಬಿಟ್ಟು ಹೋಗಿಬಿಡಲೇ ? ಅನುರಕ್ತಳಾದ ಸತೀಮಣಿಯನ್ನು ನಾನಾಕ್ಲೇಶಪಡಿಸಿದ ನನ್ನಂತಹ ಪಾಪಿ ಮತ್ತಿರುವನೇ ? ನನ್ನಿಂದ ಕಷ್ಟಪಡುತ್ತಿರುವ ದಮಯಂತಿಯು ನನ್ನ ವಿಯೋಗದಿಂದ ನೊಂದರೂ, ಸ್ವಜನರನ್ನು ಸೇರಿ ನಿರುಪದ್ರವಳಾಗಿರಬಹುದಲ್ಲವೇ? ಇವಳನ್ನು ಬಿಡುವುದೇ ಲೇಸು. ಪತಿವ್ರತೆಯು, ತೇಜಃಪರಿಪೂತಳು ಆದ ಇವಳು ಮಾರ್ಗದಲ್ಲಿ ದುಷ್ಟರಿಂದ ತನ್ನನ್ನು ತಾನು

ರಕ್ಷಿಸಕೊಳ್ಳಬಲ್ಲಳು.' ಇಂತು ಚಿಂತಿಸಿ, ನಲನು ಕಲಿಕಲುಷಿತ ಚಿತ್ತನಾಗಿ, ದಮಯಂತಿಯನ್ನು ಬಿಟ್ಟುಹೋಗಲು ನಿಶ್ಚಯಿಸಿದನು.

ಉಡಲು ವಸ್ತ್ರವಿಲ್ಲದುದರಿಂದ, ಅವಳ ಸೀರೆಯನ್ನು ಸಭೆಯಲ್ಲಿ ಹುಡುಕಿ ತಂದ ಖಡ್ಗದಿಂದ ಎರಡು ಭಾಗಗಳಾಗುವಂತೆ ಮೆಲ್ಲನೆ ಖಂಡಿಸಿ, ನಲನು ಅದನ್ನುಟ್ಟು ಹೊರಡಲನುವಾದನು. ಮಲಗಿರುವ ಮಡದಿಯಲ್ಲಿ ಮಮತೆಯನ್ನು ಬಿಟ್ಟು, ಸ್ವಲ್ಪ ದೂರ ಹೋದ ನಲನು, ತನ್ನ ಕಠೋರ ಹೃದಯವನ್ನು ನಿಂದಿಸಿ, ಮತ್ತೆ ಹಿಂದಿರುಗಿದನು. ಮಲಗಿದ್ದ ಸತಿಯ ಸಮೀಪದಲ್ಲಿ ಕುಳಿತು, ಬಿಕ್ಕಿ ಬಿಕ್ಕಿ ಅತ್ತನು. 'ಹಾ ವಿಧಿಯೇ ! ಸೂರ್ಯನ ಬಿಸಿಲನ್ನು ಕಾಣದ ನನ್ನ ಪ್ರಿಯಸತಿಯು ಅರಣ್ಯದಲ್ಲಿ ನೆಲದ ಧೂಳಿಯಮೇಲೆ ಮಲಗಿರುವಂತೆ ಮಾಡಿದೆಯಾ ? ನಾನು ಹೊರಟುಹೋದಮೇಲೆ ಎಚ್ಚರವಾದಾಗ ದಮಯಂತಿಯು ನನ್ನನ್ನು ಕಾಣದೆ ಎಷ್ಟು ಪರಿತಪಿಸುವಳೋ ? ನನ್ನ ವಿರಹದಿಂದ ಉನ್ಮತ್ತಳಂತಾದ ನನ್ನ ಮತ್ತಕಾಶಿನಿಯನ್ನು ಸಂತೈಸುವರಾರು? ಮೃಗವ್ಯಾಲಭೀಕರವಾದ ಗೊಂಡಾರಣ್ಯದಲ್ಲಿಂದ ಎಂತು ಪಾರಾಗುವಳು ? ಆದಿತ್ಯ ವಸು ರುದ್ರರೇ ! ಅಶ್ವಿನೀದೇವತೆಗಳಿರಾ ! ಈ ನನ್ನ ಧರ್ಮಪತ್ನಿಯನ್ನು ಕಾಪಾಡಿ ! ಹತಭಾಗ್ಯನಾದ ನನ್ನ ಸತಿಯನ್ನು ರಕ್ಷಿಸಲು ಬೇಡಿ ನಿಮಗೆ ವಂದಿಸುತ್ತಿರುವೆನು' ಎಂದು ಗೋಳಾಡಿ, ನಲನು ಅಪ್ರತಿಮರೂಪನಿಧಿಯನ್ನು ಅರಣ್ಯದಲ್ಲಿ ಬಿಟ್ಟು ತೆರಳಿದನು.

ಕಲಿಯು ಮುಂದೂಡಲು ಹೋಗುತ್ತಿರುವ ನಲನ ಮನವು ಪ್ರೇಮಪಾಶಬದ್ಧವಾಗಿ ಹಿಂಜರಿಯುತ್ತಿತ್ತು. ಅವನ ಹೃದಯವೇ ದುಃಖಧಾರೆಯಿಂದ ಎರಡು ಹೋಳಾಯಿತು. ಅವನ ನೇತ್ರಗಳಲ್ಲಿ ಬಾಷ್ಪಜಲವು ಸಂತತವಾಗಿ ಹರಿದುಬಂತು. ಮನಸ್ಸು ಡೋಲೆಯಂತೆ ಜೊಯ್ದಾಡಿ ಅವನನ್ನು ಮತ್ತೆ ಸಭೆಯ ಕಡೆ ಕರೆತಂದಿತು. ಕಲಿಯಿಂದ ಮೋಹಿತನಾಗಿ ನಲನು ಮನಸ್ಸನ್ನು ಕಲ್ಲಾಗಿಸಿ, ಶೂನ್ಯವನದಲ್ಲಿ ಸುಂದರಿಯನ್ನು ತ್ಯಜಿಸಿ, ಹುಚ್ಚನಂತೆ ದಿಕ್ಕೆಟ್ಟು ಹೊರಟುಹೋದನು.

ನಲನು ಹೋದಮೇಲೆ ಸ್ವಲ್ಪ ಹೊತ್ತಾಯಿತು. ಆಗ ದಮಯಂತಿಯು ಎಚ್ಚೆತ್ತಳು. ಗಂಡನನ್ನು ಕಾಣದೆ ಶೋಕದುಃಖಸಮನ್ವಿತಳಾದಳು. ಗಟ್ಟಿಯಾಗಿ 'ಮಹಾರಾಜ ! ನೈಷಧ ! ಎಲ್ಲಿರುವೆ ಬಾ !' ಎಂದು ಕೂಗಿದಳು. 'ಹಾ ನಾಥ ! ನನ್ನನ್ನು ಬಿಟ್ಟು ಹೋದೆಯಾ? ಸ್ವಾಮಿನ್ ಭಯವಾಗುತ್ತಿದೆ. ಧರ್ಮಜ್ಞನಾದ ನಿನಗೆ ಧರ್ಮಪತ್ನಿಯ ತ್ಯಾಗವು ಸರಿಯೇ ? ಮಲಗಿರುವ ಪ್ರಿಯಸತಿಯನ್ನು ಬಿಟ್ಟು ಹೋಗಲು ನಾ ಮಾಡಿದ ಅಪರಾಧವೇನು? ನನ್ನ ಕೂಗು ಅರಣ್ಯರೋದನವಾಯಿತೇ? ಏನು ಮಾಡಲಿ ಅಯ್ಯೋ ! ಇನ್ನೇನು ಗತಿ ? ಲೋಕಪಾಲರ ಸನ್ನಿಧಿಯಲ್ಲಿ ಎಂದಿಗೂ ಬಿಟ್ಟಿರುವನಲ್ಲವೆಂದು ಉಸುರಿದ ನಿನ್ನ ಮಾತೇನಾಯಿತು ? ಸತ್ಯವಚನನಾದ ನಿನ್ನ ವಚನವನ್ನುಳಿಸಿಕೋ ! ಇಷ್ಟು ಕಷ್ಟದ ಸಿಡಿಲು ಬಡಿದೂ ಬದುಕಿರುವೆನಲ್ಲ ! ಪ್ರಾಣನಾಥ ! ನಿನ್ನನ್ನಗಲಿ ಕ್ಷಣವಾದರೂ ಬದುಕಿರಲಾರೆನು. ಅಥವಾ ಪರಿಹಾಸಕ್ಕೆಂದು

ಮರೆಯಾಗಿರುವುದಾದರೆ ಸಾಕೀವಿಷಮಪರೀಕ್ಷೆ! ಬಂದು ನನ್ನನ್ನು ಸಂತೈಸು ! ಓ ಎಂದು ಬದಲು ಉತ್ತರವನ್ನಿತ್ತು ನನ್ನ ಹಾರಿಹೋಗುವ ಜೀವವನ್ನು ಉಳಿಸು ! ನನ್ನ ಚಿಂತೆಯೂ ನನಗಿಲ್ಲ. ಒಬ್ಬಂಟಿಗನಾಗಿ ಕಂಟಕಾರಣ್ಯದಲ್ಲಿ ಎಂತು ಚರಿಸುವೆ ? ನಿನಗೆ ಹಸಿವೆ ನೀರಡಿಕೆ ಶ್ರಮವಾದಾಗ ಉಪಚರಿಸುವರಾರು ? ಅಕಟಕಟಾ ! ಸುಡುವ ದುಃಖದಾವದಿಂದ ಎಂತು ಪಾರಾಗುವೆನು? ಇಂತಹ ದುಃಖವನ್ನು ನಿರಪರಾಧಿಯಾದ ನಲಮಹಾರಾಜನಿಗೆ ಕೊಡುತ್ತಿರುವ ಪಾಪಿಗಳಿಗೆ ಇನ್ನೂ ದುಃಖವಾಗಲಿ ! ಹಾ ಪ್ರಾಣವಲ್ಲಭ! ಎಲ್ಲಿರುವೆ?' ಎಂದು ಗೋಳಾಡಿ, ದಮಯಂತಿ ಹುಚ್ಚರಂತೆ ತಿರುಗುತ್ತಾ ವನವೆಲ್ಲ ಹುಡುಕಿದಳು. ಅವಳ ಹಾ ಹಾ ಕಾರದಿಂದ ಅರಣ್ಯವು ಪ್ರತಿಧ್ವನಿಸಿತು. ಕಲ್ಲು ಮುಳ್ಳೆನ್ನದೆ ನಲನ ಕಾಣಲು ಹುಡುಕಲು ಓಡುವ ತಲೋದರಿಯ ದುಃಖಜಲ ಧಾರೆಯು ಹೊಳೆಯಾಯಿತು. ಕುರರಿಯಂತೆ ಅಳುವ ರೋದನ ಧ್ವನಿಯು ಕಲ್ಲನ್ನು ಕರಗಿಸಿತು.

ಇಂತು ಮೈಮರೆತುಬರುತ್ತಿದ್ದ ದಮಯಂತಿಯನ್ನು ಹಸಿವೆಯಿಂದ ಹಾತೊರೆದು, ತೆರೆದ ಬಾಯಿಂದ ಒಂದು ಅಜಗರವು ಹಿಡಿದು ನುಂಗಲಾರಂಭಿಸಿತು. 'ಹಾ ನಾಥ! ಹೆಬ್ಬಾವಿಗೆ ತುತ್ತಾಗಲಿರುವ ನನ್ನ ಮೊರೆ ಕೇಳಿಸದೆ ? ಬೇಗ ಬಾ ! ನೀನು ಸಹಾಯಕನಾಗಿದ್ದರೆ ನನಗೆ ಇಂತಹ ದುರ್ಮರಣವು ಬರುತ್ತಿತ್ತೇ ? ಪ್ರಿಯಾ, ಬಂದು ಬಿಡು ! ನನ್ನನ್ನು ಬಿಡಿಸು ! ಅಯ್ಯೋ ! ಸಾಯಲಿರುವೆನು' ಎಂದು ರೋದಿಸುವ ದಮಯಂತಿಯ ಆರ್ತರಾವವನ್ನು ಕೇಳಿ ವ್ಯಾಧನೊಬ್ಬನು ವೇಗದಿಂದ ಅಲ್ಲಿಗೆ ಬಂದನು. ಹೆಬ್ಬಾವಿನ ಬಾಯಲ್ಲಿ ಸಿಕ್ಕು ನರಳುವ ತರುಣೀಮಣಿಯನ್ನು ಕಂಡು, ವ್ಯಾಧನು ಸಂಭ್ರಮದಿಂದ ನಿಶ್ಚೇಷ್ಟನಾದನು. ಕೊನೆಗೆ ಚೇತರಿಸಿಕೊಂಡು ವ್ಯಾಧನು ಖಡ್ಗದಿಂದ ಹಾವನ್ನು ತುಂಡರಿಸಿ, ದಮಯಂತಿಯನ್ನು ರಕ್ಷಿಸಿದನು. ರಕ್ತಸಿಕ್ತವಾದ ಶರೀರವನ್ನು ತೊಳೆಯಲು ನೀರನ್ನು ತಂದಿತ್ತನು. ಆಹಾರವನ್ನೂ ಕೊಟ್ಟು 'ಸುಂದರಿ, ಏನಿದು ! ಏಕಿಲ್ಲಿ ಬಂದೆ ? ಹೆಬ್ಬಾವಿಗೆಂತು ಸಿಕ್ಕೆ ?' ಎಂದು ಕೇಳಿದನು. ದಮಯಂತಿಯು ಅವನಿಗೆ ನಡೆದುದೆಲ್ಲವನ್ನೂ ತಿಳಿಸಿ, ರಕ್ಷಕನಾದ ನಿನಗೆ ಕೃತಜ್ಞಳೆಂದು ಅಭಿನಂದಿಸಿದಳು.

ಅರ್ಧವಸ್ತ್ರಸಂವೀತಳು, ಉತ್ತುಂಗಶ್ರೋಣೀವಿಲಸಿತಳು, ಸುಕುಮಾರಶರೀರಳು ಪೂರ್ಣಚಂದ್ರನಿಭವದನಳು ಆದ ದಮಯಂತಿಯ ರೂಪದಿಂದ ಬೇಡನು ಹೆಂಡಕುಡಿದಂತಾದನು. ಅವಳ ಮಧುರ ವಚನಗಳಿಂದ ಅವನು ಕಾಮವಶನಾದನು. ಮಧುರ ವಚನಗಳಿಂದ ಅವಳನ್ನು ವಶಪಡಿಸಿಕೊಳ್ಳಲಾರದೆ ವ್ಯಾಧನು ಬಲಾತ್ಕಾರದಿಂದ ಉಪಭೋಗಿಸಲು ನಿಶ್ಚಯಿಸಿ, ಕೈ ಹಿಡಿಯಲು ಬಂದನು. ಅವನ ದುರ್ಮತಿಯನ್ನರಿತ ದಮಯಂತಿಯು, ಧರ್ಮವಚನಗಳನ್ನರುಹಿ ನಿವಾರಿಸಲು ಯತ್ನಿಸಿದಳು. ಆದರೆ ಪಾಪಮತಿಯಾದ ಬೇಡನು ಕೈ ಹಿಡಿದಾಗ ಆ ಪತಿಪರಾಯಣೆ ತಡೆಯಲಾರದೆ ಕಡು ಕೋಪದಿಂದ ಅಗ್ನಿಕುಂಡವಾಗಿ ಉರಿದೆದ್ದು, 'ನಾನು ನಲನನ್ನು ಬಿಟ್ಟು ಅನ್ಯರನ್ನು

ಮನಸಾಪಿ ಸ್ಮರಿಸದ ಪತಿವ್ರತೆಯಾಗಿದ್ದರೆ—ಆ ಸತ್ಯದ ಬಲದಿಂದ ಈ ಪಾಪಿಯು ಮೃತನಾಗಲಿ! ಎಂದು ಶಾಪವನ್ನಿತ್ತಳು. ತತ್ ಕ್ಷಣವೇ ಮೃಗವ್ಯಾಧನು, ಅಗ್ನಿ ದಗ್ಧವಾದ ವೃಕ್ಷದಂತೆ ಕೆಳಗೆ ಬಿದ್ದು ಸತ್ತನು.

ದಮಯಂತಿಯು ಮುಂದೆಸಾಗಿ, ಭಯಂಕರಾರಣ್ಯದಲ್ಲಿ ನಲನನ್ನು ಹುಡುಕುತ್ತಾ 'ನಲ! ನಲ!' ಎಂದು ಜಪಿಸುತ್ತಾ ತಿರುಗಿದಳು. ಸಿಂಹ ಶರಭ ವ್ಯಾಘ್ರ ಭಲ್ಲೂಕ ಗಣ ಸಂಕುಲವು; ನಾನಾ ಪಕ್ಷಿಗಣ ಕಲಕಲಾರಾವ ಬೃಂಹಿತವು; ಸಾಲ, ತಮಾಲ, ತಾಲ, ಕಿಂಶುಕಾಮ್ಲ ಚೂತ, ಪಾರಿಜಾತ, ಖದಿರ, ವೇತ್ರ ವೇಣುಗುಲ್ಮಾದಿ ತರು ಲತಾ ನಿಬಿಡವು; ಅಮೃತ ಸ್ವಚ್ಛ ಜಲಪೂರ್ಣ ಕಮಲಾಕರ ಮನೋಹರವು; ಪದ್ಮ, ಕಲ್ಹಾರ, ನಂದ್ಯಾವರ್ತ, ಚಂಪಕಾದಿ ಕುಸುಮ ಗಂಧಿತವು—ಆದ ಗಂಭೀರ ವನದಲ್ಲಿ ನಲದತ್ತ ಚಿತ್ತಳಾದ ದಮಯಂತಿ ಭಯರಹಿತಳಾಗಿ ಚರಿಸಿದಳು.

'ನಿಷಧರಾಜ! ಎಲ್ಲಿ ಹೋದೆ? ನನ್ನನೇಕೆ ಬಿಟ್ಟೆ? ಅಶ್ವಮೇಧಾದಿಯಜ್ಞಗಳನ್ನು ಭೂರಿದಕ್ಷಿಣೆಯಿತ್ತು ಮಾಡಿದ ಮಹಾನುಭಾವನು ಸುಳ್ಳಾಡಬಹುದೇ? ಹಂಸಪಕ್ಷಿಯ ನುಡಿಯಂತೆ ನಿರ್ದೋಷ ನಿರುಪಮ ಸುಂದರನಾದ ನಿನ್ನನ್ನು ವರಿಸಿ, ದೇವರಾಜರನ್ನೂ ತ್ಯಜಿಸಿದ, ನಿನ್ನ ಪ್ರಿಯಸತಿಗೆ ಈ ಪಾಡೇ? ಇಂದ್ರಾದಿಗಳ ಮುಂದೆ ಆಡಿದ ವಚನವನ್ನು ಮರೆತೆಯಾ? ಸಾಂಗೋಪಾಂಗ ವೇದಾಧ್ಯಯನ ಫಲವು ಒಂದು ಸತ್ಯವಚನವನ್ನು ಮೀರಲಾರದೆಂಬ ಧರ್ಮವಚನವನ್ನು ಪಾಲಿಸುವ ಮಹನೀಯನಾದ ನೀನು ಸುಳ್ಳಿಗಂಜದೆ ನನ್ನನ್ನು ಬಿಟ್ಟುಹೋದೆ ಎಂದರೆ ಅದು ನನ್ನ ದುಷ್ಕೃತದ ಫಲವೆಂದೇ ಭಾವಿಸಿರುವೆನು. ಹೆಂಡತಿಯನ್ನು ಹುಡುಕುವರಿರುವರು ರಾಮಾದಿಗಳು; ಗಂಡನನ್ನೇ ಹುಡುಕಬೇಕಾಯಿತೇ ನನ್ನಂತಹ ಪಾಪಿನಿಗೆ? ಹಾ ವೀರ! ನನಗಿಂತಲೂ ಪ್ರಿಯರಿಲ್ಲವೆಂದ ನಿನ್ನ ಮಾತನ್ನು ಸತ್ಯವಾಗಿಸು! ಆ ಪ್ರೀತಿ ಎಲ್ಲಿ ಹೋಯಿತು? ಅನಾಥಳಂತೆ ಅಳುವ ಅರ್ಧಾಂಗಿಯ ಆರ್ತನಾದವನ್ನು ಆಲಿಸು! ಎಲ್ಲಿರುವೆ? ಯಾರನ್ನು ಕೇಳಲಿ?

'ಎಲವೋ ಸಿಂಹವೇ? ಹೇಳು ನಿಷಧೇಶನೆಲ್ಲಿರುವನು? ಕಂಡಿರುವೆಯಾ ನನ್ನ ಗಂಡನನ್ನು! ಇಲ್ಲದಿದ್ದರೆ ನನ್ನನ್ನು ಕೊಂದು ತಿಂದುಬಿಡು! ಪಾರವಿಲ್ಲದ ದುಃಖದಿಂದ ಉದ್ಧರಿಸು! ಗಿರಿರಾಜ! ದಿವ್ಯದರ್ಶನ! ಶರಣ್ಯ! ಮೃಗ ಪಕ್ಷಿ ವೃಕ್ಷ ಮಂಡಿತ! ಅತ್ಯಂತೋನ್ನತ! ನೀನಾದರೂ ಹೇಳು, ನಲನೆಲ್ಲಿ ಅಡಗಿರುವನು? ನೋಡು ತಲೆಯೆತ್ತಿ! ರಾಜಸೂಯಾದಿ ಬಹುಯಜ್ಞಕರ್ತನು, ವಿದರ್ಭದೇಶಭಕ್ತನು ಆದ ಭೀಮರಾಜನು ನನ್ನ ತಂದೆ. ಅತಿಪ್ರಖ್ಯಾತನು, ನಿಷಧೇಶನು ಆದ ವೀರಸೇನನು ನನ್ನ ಮಾವ. ಸತ್ಯಪರಾಕ್ರಮನು ಚಕ್ರವರ್ತಿಯು ಆದ ನಲ ಮಹಾರಾಜನೇ ನನ್ನ ಪತಿ. ದ್ಯೂತದಲ್ಲಿ ದುಷ್ಟಪುಷ್ಕರನಿಗೆ ಸೋತು ನಲನು ಅರಣ್ಯವನ್ನು ಪ್ರವೇಶಿಸಿದನು. ಪತಿಯನ್ನು ನೆರಳಂತೆ ನಾನು ಅನುಸರಿಸಿ ಬಂದೆನು. ಅಂತಹ ಧರ್ಮಿಷ್ಠನು ಪಾಪಿಷ್ಠಳಾದ ನನ್ನನ್ನೂ ಬಿಟ್ಟು ಮರೆಯಾಗಿರುವನು. ಕೇಳಿತೇ ನನ್ನ ದೀನಾಲಾಪ? ಬಂತೇ ಕರುಣೆ?

ಹೇಳು ಎಲ್ಲಿರುವನು ನನ್ನ ನಲ್ಲ ?' ಎಂದು ಹುಚ್ಚಳಂತೆ ಪ್ರಲಪಿಸುವ ದಮಯಂತಿಗೆ ಸ್ವಲ್ಪ ದೂರದಲ್ಲಿದ್ದ ತಾಪಸಾಶ್ರಮವು ಗೋಚರವಾಯಿತು.

ವಸಿಷ್ಠ ಭೃಗು ಭರದ್ವಾಜಾದಿ ಮುನಿವೃಂದಮಂಡಿತವಾದ ದಿವ್ಯಾಶ್ರಮವನ್ನು ಕಂಡೊಡನೆ ದಮಯಂತಿಯು ಸ್ವಲ್ಪ ಸಮಾಧಾನಗೊಂಡಳು. ಆಶ್ರಮವನ್ನು ದ್ವಿತೀಯ ವನಲಕ್ಷ್ಮಿಯಂತೆ ಪ್ರವೇಶಿಸುವ ನೈಷಧ ರಮಣಿಗೆ ಮುನಿಗಳು ಸ್ವಾಗತ ವಿತ್ತು ಸತ್ಕರಿಸಿ, ಕೂಡಿಸಿದರು. ಅವರ ಕುಶಲವನ್ನು ವಿಚಾರಿಸಿ, ತನ್ನ ವೃತ್ತಾಂತವ ನ್ನೆಲ್ಲ ಅವರಿಗೆ ತಿಳಿಸಿದಾಗ ದಮಯಂತಿಯ ಹೃದಯವು ಹಗುರವಾಯಿತು. ನಲನನ್ನು ಹುಡುಕುತ್ತಾ ಬಂದ ಪರಮಪತಿವ್ರತೆಯನ್ನು ಋಷಿವರರು ಸಮಾಶ್ವಸಿಸಿ, 'ಸತೀಮಣಿ ! ಶೀಘ್ರದಲ್ಲಿಯೆ ನಿನ್ನ ಪತಿಯನ್ನು ಪೊಂದುವೆ. ತಪೋಬಲದಿಂದ ತಿಳಿದು ಪೇಳುತ್ತಿರುವ ನಮ್ಮ ಮಾತನ್ನು ನಂಬು ! ನಿನ್ನ ಕಷ್ಟಗಳು ಕೊನೆಯಾಗಲಿವೆ. ಅಳಬೇಡ ! ಪುಷ್ಕರ ನನ್ನು ಸೋಲಿಸಿ ನಿಷಧಪುರಿಯಲ್ಲಿ ಮತ್ತೆ ಮೆರೆಯುವ ನಿನ್ನ ಪತಿಯನ್ನು ನೀನು ನೋಡುವೆ ; ಚಿಂತಿಸಬೇಡ ! ನಿನಗೆ ಮಂಗಳವಾಗಲಿ !' ಎಂದು ಹರಸಿ, ಮುನಿಗಳು ಅಂತರ್ಹಿತರಾದರು. ನೋಡನೋಡುತ್ತಿರುವಾಗ ಮುನಿಗಳು, ಅಗ್ನಿಹೋತ್ರ, ಕುಟೀರ, ಪರಿವಾರ ಮುಂತಾದ ಸರ್ವವು ಅಂತರ್ಹಿತವಾಗಲು ದಮಯಂತಿ ಮುಂದಿ ನಂತೆ ಮಹಾರಣ್ಯದಲ್ಲಿ ನಿಂತಿದ್ದಳು. 'ಏನಿದು ಸ್ವಪ್ನವೋ ? ಅಥವಾ ಎಚ್ಚರದಿಂದಿರು ವೆನೋ ? ಎಲ್ಲಿ ಹೋದರು ತಾಪಸಶ್ರೇಷ್ಠರು ? ಆಶ್ರಮವೇನಾಯಿತು ?' ಎಂದು ಚಿಂತಿಸುತ್ತಾ, ದಮಯಂತಿಯು ಮುಂದೆ ನಡೆದಳು.

ವನದ ಅಶೋಕಾದಿ ವೃಕ್ಷಗಳನ್ನು, ಸರಸ್ಸುಗಳನ್ನು, ಮೃಗಪಕ್ಷಿಗಳನ್ನು ನೋಡಿ ನಲನನ್ನು ಕಂಡಿರೇ ? ಎಂದು ಕೇಳುತ್ತಾ ವ್ಯಸನಭರದಿಂದ ಕಣ್ಣೀರಿಡುತ್ತಾ, ಪೋಗುವ ದಮಯಂತಿಯು, ಕೊನೆಗೆ ಒಂದು ಮಹಾಸಾರ್ಥವನ್ನು ಕಂಡಳು.

ಸಾರ್ಥವಾಹರು ಸಪರಿವಾರ ರಕ್ಷಕ ಭಟ ವಸ್ತುಸಂಗ್ರಹರಾಗಿ, ರಥಗಳಲ್ಲಿ, ಆನೆ ಕುದುರೆಗಳ ಮೇಲೆ ಕೂತು ಪಯಣಿಸುತ್ತಾ, ಒಂದು ನದಿಯನ್ನು ದಾಟುವ ಸನ್ನಾಹ ದಲ್ಲಿದ್ದರು. ಅರ್ಧವಸನವನ್ನುಟ್ಟು, ಕೇಶಪಾಶವು ಹಾರಾಡುತ್ತಿರಲು ಬರುತ್ತಿರುವ ದಮಯಂತಿಯನ್ನು ನೋಡಿ, ವರ್ತಕ ಸಮೂಹದ ಕೆಲಜನರು ಭೀತರಾಗಿ ಓಡತೊಡ ಗಿದರು; ಕೆಲವರು ಕೇಕೆಗಳನ್ನು ಹಾಕಿದರು; ಕೆಲವರು ಚಿಂತಾಗ್ರಸ್ತರಾದರು; ಕೆಲವರು 'ಅಯ್ಯೋ ! ಪಾಪ !' ಎಂದು ಮರುಗಿದರು. ವರ್ತಕರು ದಮಯಂತಿಯನ್ನು ಸಮೀಪಿಸಿ 'ಅಮ್ಮಾ ! ನೀನಾರು ? ಯಕ್ಷಿಣಿಯೋ ? ರಾಕ್ಷಸಿಯೋ ? ಅಥವಾ ಈ ವನದ ದೇವತೆಯೋ ? ನಮ್ಮನ್ನು ರಕ್ಷಿಸು ! ಭಕ್ಷಿಸಬೇಡ ಎಂದು ಬೇಡಿಕೊಂಡರು. ಅವರ ಮಾತನ್ನಾಲಿಸಿ ದಮಯಂತಿಯು ತನ್ನ ಪಾಡನ್ನು, ನಲನನ್ನು ನೆನೆದು ಕಣ್ಣೀರಿಟ್ಟಳು. ತನ್ನ ವೃತ್ತಾಂತವನ್ನು ಇದ್ದಕ್ಕಿದ್ದಂತೆ ಅವರಿಗೆ ತಿಳಿಸಿ 'ನಲನನ್ನು ಕಂಡಿರೇನು !' ಎಂದು ಕೇಳಿದಳು. ಆಗ ಸಾರ್ಥಪತಿಯಾದ ಶುಚಿಯು 'ಕಲ್ಯಾಣಿ ! ಕೇಳು ! ಈ ವನದಲ್ಲಿ ನಲನೆಂಬಾತನನ್ನು ನಾವೆಲ್ಲಿಯೂ ಕಂಡಿಲ್ಲ. ವ್ಯಾಪಾರಕ್ಕೆಂದು

ಪಯಣಿಸುವ ನಾವು ಈಗ ಧರ್ಮಾತ್ಮನಾದ ಸುಬಾಹು ರಾಜನು ಪಾಲಿಸುವ ಚೇದಿ ನಗರಕ್ಕೆಂದು ಹೋಗುತ್ತಿರುವೆವು. ನೀನೂ ನಮ್ಮ ಸಂಗಡ ಕೂಡಿ, ಕ್ಷೇಮದಿಂದ ಪಯಣಿಸಿ, ಚೇದಿನಗರವನ್ನು ಸೇರಬಹುದು. ಅಲ್ಲಿ ನಿನ್ನ ಪತಿಯ ವಾರ್ತೆಯೂ ತಿಳಿದೀತು! ಇಷ್ಟವಾದೊಡೆ ಬಾ!' ಎಂದನು. ದಮಯಂತಿಯು ಅದಕ್ಕೆ ವಿಧಿಯಿಲ್ಲದೆ ಸಮ್ಮತಿಸಿ, ಸಾರ್ಥದೊಡನೆ ಹೋಗುತ್ತಿದ್ದಳು.

ಬಹುದಿನಗಳು ಕಳೆದಮೇಲೆ ಸಾರ್ಥವು ಪರ್ವತದ ತಪ್ಪಲಿನಲ್ಲಿದ್ದ ಒಂದು ಮಹಾಸರೋವರದ ತೀರದಲ್ಲಿ ಬಿಡಾರಮಾಡಿತು. ನಿರ್ಮಲ ಸಲಿಲ ಪೂರ್ಣವಾದ ತಟಾಕ, ತಟಾಕದಲ್ಲಿ ಪ್ರತಿಬಿಂಬಿಸಿ, ಮಲಗಿದಂತಿದ್ದ ಬೆಟ್ಟದ ಸಾಲು, ಬೆಟ್ಟದ ಸಾಲಿನಿಂದ ಹರಿದು ಬಂದು ಬೀಳುವ ಝರೀ ಪ್ರವಾಹಗಳು, ಪುಲಿನತಲಗಳು, ವಿಕಸಿಸಿದ ಕಮಲಾದಿ ಕುಸುಮಗಳು ಕಲೆತು ಪರ್ವತಕಂದರದ ಸೌಂದರ್ಯವನ್ನು ಇಮ್ಮಡಿಯಾಗಿಸಿತ್ತು. ಅಂತಹ ರಮಣೀಯ ಪ್ರದೇಶದಲ್ಲಿ ತಂಗಿ, ಕೆಲ ದಿನವಿರಲು ನಿಶ್ಚಯಿಸಿ, ಸಾರ್ಥವಾಹರು ತಟಾಕದ ಪಶ್ಚಿಮ ತೀರದಲ್ಲಿ ಬಿಡಾರ ಹೂಡಿ ನೆಲಸಿದರು.

ಅರ್ಧ ರಾತ್ರವಾಯಿತು. ಗಟ್ಟಿ ಕಟ್ಟಿದ ಕಾಡಿಗೆಯಂತೆ ಕತ್ತಲು ವ್ಯಾಪಿಸಿತು. ಸಾರ್ಥವೆಲ್ಲವೂ ನಿದ್ರಿಸುತ್ತಿತ್ತು. ಆಗ ಸರೋವರದ ನೀರನ್ನು ಕುಡಿಯಲು ವನಗಜ ಸಮೂಹವು ಅಲ್ಲಿಗೆ ಧಾವಿಸಿ ಬಂತು. ಸಾರ್ಥದಲ್ಲಿದ್ದ ಗ್ರಾಮ್ಯಗಜಗಳನ್ನು ಕಂಡು, ವನಗಜಗಳ ಮದವೇರಿ ವಿಜೃಂಭಿಸಿ, ಸಾರ್ಥದ ಮೇಲೇರಿ ಬಂದವು. ಕೋಡುಗಲ್ಲುಗಳು ಉರುಳಿ ಬಂದಂತೆ ಮೇಲೆಬೀಳುವ ಮದ್ದಾನೆಗಳ ಕಾಲಿಗೆ ಸಿಕ್ಕು ಸಾರ್ಥದಲ್ಲಿ ಮಲಗಿ ಮೈಮರೆತಿದ್ದ ಜನರು ನುಚ್ಚುನೂರಾದರು. ಹಾಹಾಕಾರವು ರಾತ್ರಿಯ ಕತ್ತಲನ್ನು ಸೀಳಿ ಕೊಂಡು ಕೇಳಿಬಂತು. ಜನರು ದಿಕ್ಕೆಟ್ಟು ಓಡುವಾಗ ಆನೆಗಳು ಅವರನ್ನು ಕಾಲಿನಿಂದ ತುಳಿದು, ಕೋರೆಗಳಿಂದ ತಿವಿದು, ಸೊಂಡಿಲಿನಿಂದ ಎತ್ತಿ ಒಗೆದು ಸಂಹರಿಸಿದವು. ಒಂಟೆ ಕುದುರೆಗಳು ಗೋಣುಮುರಿದು ಬಿದ್ದವು. ಆಕ್ರಂದನ ಧ್ವನಿಯು ಮುಗಿಲು ಮುಟ್ಟಿತು. ಜನರು ಭಯಭ್ರಾಂತರಾಗಿ ಗುಲ್ಮಗಳಲ್ಲಡಗಿ ವೃಕ್ಷಗಳನ್ನೇರಿದರು. ದಮಯಂತಿಯು ಇದನ್ನೆಲ್ಲವನ್ನು ಕಂಡು ಭಯವಿಹ್ವಲಳಾದಳು. ಇಂತು ಸರ್ವನಾಶವನ್ನು ಮಾಡಿ ಆನೆಗಳು ಸಾಯದೆ ಉಳಿದ ಸಾರ್ಥದ ಜನರ ದೈವದಿಂದ ಅರಣ್ಯವನ್ನು ಹೊಕ್ಕು ಮರೆಯಾದವು.

ಬೆಳಗಾಯಿತು. ಸಾರ್ಥವಾಹರು ಹತಶೇಷರಿಂದ ಕೂಡಿ, ಚೇದಿಪುರಕ್ಕೆ ತೆರಳಿದರು. ದಮಯಂತಿಯು 'ಅಕಟಕಟ! ನಾನೆಂತಹ ನಿರ್ಭಾಗ್ಯಳು! ಇಂತು ಕಷ್ಟ ಪರಂಪರೆಗೆ ಸಿಲುಕಿದ ರಾಜಪುತ್ರಿ ಮತ್ತಾವಳಾದರೂ ಇರುವಳೆ? ಈ ಭದ್ರಗಜಗಳಾದರೂ ನನ್ನನ್ನು ತುಳಿದು ಕೊಲ್ಲಬಾರದಿತ್ತೇ? ಹಾ! ಅಕಾಲದಲ್ಲಿ ಮೃತ್ಯುವು ದುರ್ಲಭವಾಗಿದೆ. ನನ್ನ ಪಾಪದಿಂದ ಸಾರ್ಥವೇ ಹಾಳಾಯಿತಲ್ಲ! ಎಂದು ಕೊರಗುತ್ತಾ ವರ್ತಕರಿಂದ ಕೂಡಿ, ಚೇದಿ ನಗರವನ್ನು ಮುಟ್ಟಿದಳು.

ವರ್ಷಾಕಾಲದ ಚಂದ್ರರೇಖೆಯಂತೆ ಮಲಿನಾರ್ಧವಸನದಲ್ಲಡಗಿದ್ದ ಸೌಂದರ್ಯ ರಾಶಿಯನ್ನು ನೋಡಿ, ಚೇದಿ ನಗರದ ಜನರು ಆಶ್ಚರ್ಯಶೋಕಭರಿತರಾದರು. ಅವಳನ್ನು ಹುಚ್ಚಿ ಎಂದು ತಿಳಿದು, ಹುಡುಗರು ಕಲ್ಲೆಸೆಯುತ್ತಾ ಹಿಂಬಾಲಿಸಿದರು. ಸಾರ್ಥವು ರಾಜಮಂದಿರವನ್ನು ಹಾದು ಹೋಗುವಾಗ ರಾಜಮಾತೆಯು ದುಃಖವೇ ಮೂರ್ತಿವೆತ್ತಂತಿದ್ದ ದಮಯಂತಿಯನ್ನು ನೋಡಿ, ಧಾತ್ರಿಯನ್ನು ಕಳಿಸಿ, ದಮಯಂತಿ ಯನ್ನು ಅಂತಃಪುರಕ್ಕೆ ಕರೆಸಿ, ಇಂತೆಂದಳು—"ಕಲ್ಯಾಣಿ! ಯಾರೇ ನೀನು? ಶ್ರೀದೇವಿಯಂತೆ ಶೋಭಾಸಂಪನ್ನೆಯಾದ ನೀನು ಹುಚ್ಚಿಯಂತೆ ಈ ಸಾರ್ಥದ ಹಿಂದೆ ಹೋಗುತ್ತಿರಲು ಕಾರಣವೇನು? ಮಿಂಚನ್ನು ಮುಗಿಲಲ್ಲಿ ಹುದುಗಿಟ್ಟಂತೆ ಮಲಿನ ವಸನದಲ್ಲಿಡಗಿರುವೆ. ಭಯಪಡಬೇಡ! ಹೇಳು!" ಆ ಮಾತಿಗೆ ದಮಯಂತಿಯು ಇಂತೆಂದಳು—"ಅಮ್ಮಾ! ನಾನೊಬ್ಬ ನಿರ್ಭಾಗ್ಯಮನುಜನ ಕಾಂತೆ. ನನ್ನ ಪತಿ ಯಲ್ಲಿ ಅನುವ್ರತಳಾಗಿ, ಅವನನ್ನು ಹುಡುಕುತ್ತಾ ಹುಚ್ಚಿಯೇ ಆಗಿರುವೆನು. ನನ್ನ ಪತಿಯು ಬಹುಗುಣಭರಿತನು. ದೈವವಶನಾಗಿ ಜೂಜಾಡಿ ಸರ್ವವನ್ನೂ ಕಳೆದು ಕೊಂಡು ವನವನ್ನು ಪ್ರವೇಶಿಸಿದನು. ನೆರಳಿನಂತೆ ಬಿಡದೆ ನಾನೂ ಅವನನ್ನನುಸರಿಸಿ ದೆನು. ಒಂದು ದಿನ ಆಹಾರಕ್ಕೆಂದು ಪ್ರಯತ್ನಿಸುತ್ತಿದ್ದ ನನ್ನ ಪತಿಯ ವಸ್ತ್ರವೂ ಅಪಹೃತವಾಯಿತು. ಅವನ ಕಣ್ಣೀರಿಗೆ ಕೈತೊಳೆದೆ. ನನಗೆ ನಿದ್ರಾಹಾರಗಳು ಬೇಡವಾ ದವು. ನಾನು ಶ್ರಮದಿಂದ ಮಲಗಿರುವಾಗ ನನ್ನ ಅರ್ಧವಸನವನ್ನು ಖಂಡಿಸಿ, ಉಟ್ಟು, ನನ್ನನ್ನು ಕಾಡುಪಾಲುಮಾಡಿ ಪತಿಯು ಹೊರಟುಹೋದನು. ಅವನು ನಿರ್ದಯನಲ್ಲ; ನನ್ನ ದುರ್ದೈವವೇ ಅಂತು ಮಾಡಿಸಿತು. ಅವನನ್ನು ಹುಡುಕುತ್ತಾ ಬಂದಿರುವೆನು."

ಇಂತು ನುಡಿದು ರೋದಿಸುವ ದಮಯಂತಿಯನ್ನು ಹತ್ತಿರ ಕರೆದು ಕಣ್ಣೀರೊ ರಿಸಿ ರಾಜಮಾತೆ "ವತ್ಸೇ! ಇಲ್ಲೇ ಇರು! ನಿನ್ನನ್ನು ನೋಡುತ್ತಲೇ ಅದೇಕೋ ನನಗೆ ನಿನ್ನಲ್ಲಿ ಪ್ರೇಮವು ಉಕ್ಕಿಬರುತ್ತಿದೆ. ಚಿಂತಿಸಬೇಡ! ನನ್ನ ಭಟರು ನಿನ್ನ ಭರ್ತನನ್ನು ಹುಡುಕಿ ತರುವರು. ನಿನಗೆ ಕಲ್ಯಾಣವಾಗುವುದು. ಅಚಿರಕಾಲದಲ್ಲೇ ಪತಿಯನ್ನು ಕಾಣುವೆ!" ಎಂದು ಸಮಾಶ್ವಸಿಸಿದಳು. ದಮಯಂತಿಯು "ಆಗಲಿ. ನಾನು ಸೈರಂಧ್ರೀವೃತ್ತಿಯಿಂದ ನಿನ್ನಲ್ಲಿರುವೆನು. ಉಚ್ಛಿಷ್ಟವನ್ನು ಉಣ್ಣಲಾರೆನು; ಇನ್ನೊಬ್ಬರ ಪಾದವನ್ನು ತೊಳೆಯಲಾರೆನು; ಇನ್ನೋರ್ವಪುರುಷನಿಂದ ಮಾತ ನಾಡೆನು; ನನ್ನನ್ನು ಕಾಮಿಸಿ ಬೇಡಿದ ದುಷ್ಟನನ್ನು ಸಂಹರಿಸುವುದಾದರೆ ನಾನಿಲ್ಲಿ ನಿವಸಿಸುವೆನು. ನನ್ನ ಪತಿಯನ್ನು ಹುಡುಕುವ ಬ್ರಾಹ್ಮಣರಿಂದ ಮಾತ್ರ ಮಾತ ನಾಡುವೆನು. ಈ ನಿಬಂಧನೆಗಳನ್ನು ಪಾಲಿಸುವುದಾದರೆ ಇರುವೆನು. ಇಲ್ಲದಿದ್ದರೆ ಇರಲಾರೆನು" ಎಂದು ನುಡಿಯಲು, ರಾಜಮಾತೆ ಅವಳ ಸಮಯವನ್ನು ಪಾಲಿಸಲು ಸಮ್ಮತಿಸಿ, ದಮಯಂತಿಯನ್ನು ತನ್ನಲ್ಲಿಟ್ಟುಕೊಂಡು ತನ್ನ ಮಗಳಾದ ಸುನಂದೆಗೆ ಸಖಿಯಾಗಿರುವಂತೆ ಹೇಳಿ, ಅವಳಿಗೊಪ್ಪಿಸಿದಳು. ದಮಯಂತಿಯು ಸುನಂದೆಗೆ ಪ್ರಿಯಸಖಿ ಎನಿಸಿ, ಅವಳಿಂದ ಪೂಜಿತಳಾಗಿ ಸುಖದಿಂದಿದ್ದಳು.

*

## ನಲೋಪಾಖ್ಯಾನ—ಅನ್ವೇಷಣ

ಬೃಹದಶ್ವನು ನಲಚರಿತೆಯನ್ನು ಮುಂದುವರಿಸಿದನು—

ಧರ್ಮರಾಜ ! ಕೇಳು. ನಲನು ದಮಯಂತಿಯನ್ನು ಬಿಡಲಾರದೆ ಬಿಟ್ಟು, ವನದಲ್ಲಿ ಹೋಗುತ್ತಾ, ಪ್ರಳಯಾಗ್ನಿಯಂತಿದ್ದ ದಾವವನ್ನು ನೋಡಿದನು. ದಾವ ಮಧ್ಯದಿಂದ ಬರುವ ಆರ್ತನಾದವನ್ನು ಕೇಳಿ, ಕಿವಿಗೊಟ್ಟಾಲಿಸಿದನು. 'ನಲರಾಜ ! ಬೇಗ ಬಂದು ನನ್ನನ್ನು ರಕ್ಷಿಸು !' ಎಂದು ಕೂಗುವ ಪ್ರಾಣಿಯನ್ನು ಕಾಪಾಡಲು ನಲನು ಧಾವಿಸಿ ಹೋದನು. ಅಲ್ಲಿ ಸುತ್ತುಗಟ್ಟಿಕೊಂಡು ಕೂತಿರುವ ಸರ್ಪರಾಜನನ್ನು ಕಂಡನು. ಸರ್ಪವು ನಲನಿಗೆ ಇಂತೆಂದಿತು—"ರಾಜನ್ ! ನಾನು ಕರ್ಕೋಟಕನೆಂದು ತಿಳಿ ! ನಾರದನ ಶಾಪದಿಂದ ಕದಲಲಾರದೆ ಇಲ್ಲಿ ಬಿದ್ದಿರುವೆನು. ನಲನಿಂದ ನನಗೆ ಮೋಕ್ಷವೆಂದು ಆ ಬ್ರಹ್ಮಪುತ್ರನು ಕರುಣಿಸಿರುವನು. ಕರುಣಿಸಿ ನನ್ನನ್ನು ಹೊತ್ತು ದಾವದಿಂದ ಪಾರುಮಾಡಿ ರಕ್ಷಿಸು ! ನಿನ್ನ ಉಪಕಾರವನ್ನು ಮರೆಯದೆ ನಿನಗೆ ಸ್ನೇಹಿತನಾಗಿ ಶ್ರೇಯಸ್ಸನ್ನು ಕೊಡುವೆನು. ಹೊರಲು ಭಾರವೆಂದು ಹಿಂಜರಿಯಬೇಡ ! ಲಘುವಾಗಿರುವೆನು" ಎಂದು ಬೇಡುವ ಕರ್ಕೋಟಕನನ್ನು ನಲನು ಹೊತ್ತು ದಾವಾಗ್ನಿಯಿಂದ ತಪ್ಪಿಸಿ, ಹೊರತಂದನು. ಸರ್ಪವನ್ನು ಕೆಳಗಿಡಲು ತೊಡಗಿದಾಗ ನಲನಿಗೆ ನಾಗರಾಜನಿಂತೆಂದನು—'ಇನ್ನೂ ಸ್ವಲ್ಪದೂರ ನಡೆ ! ನಿನ್ನ ಹೆಜ್ಜೆಗಳನ್ನು ಎಣಿಸುತ್ತಾ ಹೋಗು ! ಆಗ ನಿನಗೆ ಪ್ರತ್ಯುಪಕಾರ ಮಾಡುವೆನು.' ಆ ಮಾತಿನಂತೆ ನಲನು ಹೆಜ್ಜೆಗಳನ್ನು ಎಣಿಸುತ್ತಾ, 'ದಶ' ಎಂದು ನುಡಿದಾಗ, ಕರ್ಕೋಟಕನು ನಲನನ್ನು ಕಚ್ಚಿದನು. ದಶ ಎಂದರೆ ಕಚ್ಚು ಎಂದರ್ಥವಲ್ಲವೇ ? ಆಜ್ಞೆ ಇಲ್ಲದೆ ಸರ್ಪವು ಕಚ್ಚದಂತೆ ಆಗ ನಲನ ರೂಪವು ಹಾಳಾಗಿ, ಅವನು ಅತ್ಯಂತ ವಿಕಾರ ರೂಪನಾದನು.

ಆಶ್ಚರ್ಯ ಶೋಕಪರೀತನಾಗಿ ನೋಡುವ ನಲನಿಗೆ ನಿಜರೂಪದಿಂದ ಪ್ರತ್ಯಕ್ಷನಾಗಿ ಕರ್ಕೋಟಕನಿಂತೆಂದನು—"ರಾಜನ್! ನಿನ್ನನ್ನು ಜನರು ತಿಳಿಯಬಾರದೆಂದೇ ನಾನು ನಿನ್ನನ್ನು ಕಚ್ಚಿ, ವಿರೂಪಗೊಳಿಸಿರುವೆನು. ನಿನ್ನಲ್ಲಿರುವ ಕಲಿಯು ನಿನಗೆ ಈ ಕಷ್ಟಗಳನ್ನು ತಂದೊಡ್ಡಿರುವನು. ನನ್ನ ವಿಷದಿಂದ ಆ ಪಾಪಿಯು ಬೆಂದು ಬೆಂಡಾಗಿ, ಬೇಗನೆ ನಿನ್ನನ್ನು ಬಿಟ್ಟು ಹೋಗುವನು. ಎಂದಿನವರಿವಿಗೂ ನಿನ್ನನ್ನು ಪೀಡಿಸುವನೋ ಅಂದಿನವರಿವಿಗೂ ಅವನಿಗೆ ಮಹಾದುಃಖವಾಗುತ್ತಿರುವುದೆಂದು ತಿಳಿ. ಪಾಪ ! ನಿರಪರಾಧಿಯಾದ ನಿನ್ನನ್ನು ಸುಮ್ಮನೆ ಪೀಡಿಸುವ ಕಲಿಯಿಂದ ನಿನ್ನನ್ನು ರಕ್ಷಿಸಲು ಕಚ್ಚಿರುವೆನು, ಸಿಟ್ಟಿನಿಂದಲ್ಲ ; ನಾನು ಕೃತಘ್ನನಲ್ಲ ; ನನ್ನ ಪ್ರಸಾದದಿಂದ ನಿನಗೆ ನರವ್ಯಾಘ್ರ ಸರ್ಪಭಯವು ಉಂಟಾಗದಿರಲಿ ! ವಿಷವು ನಿನ್ನಲ್ಲಿ ವ್ಯರ್ಥವಾಗಲಿ ! ಸಂಗ್ರಾಮಜಯವಂತನಾಗುವೆ, ಹೋಗು" ಎಂದು ವರವಿತ್ತು, ಮತ್ತೆ "ಇಂದೇ ಅಯೋಧ್ಯೆಗೆ ಹೋಗು. ಅಲ್ಲಿ ಇಕ್ಷ್ವಾಕುಕುಲಭೂಷಣನಾದ ಋತುಪರ್ಣನಿರುವನು.

ಬಾಹುಕನೆಂಬ ನಾಮವನ್ನು ಧರಿಸಿ ಅವನ ಸೂತನಾಗಿರು. ಅವನಿಗೆ ಅಕ್ಷಹೃದಯವು ಗೊತ್ತು. ನಿನ್ನ ಅಶ್ವಹೃದಯವನ್ನು ಅವನಿಗಿತ್ತು, ಅವನಿಂದ ಅಕ್ಷಹೃದಯವನ್ನು ಸ್ವೀಕರಿಸು. ಮುಂದೆ ಶ್ರೇಯಸ್ಸಾಗುವುದು. ದಾರಾಪುತ್ರರಿಂದ ಕೂಡಿ, ರಾಜ್ಯವನ್ನೂ ಹೊಂದಿ, ಸುಖಿಯಾಗಿರುವೆ. ನನ್ನ ವಚನವನ್ನು ನಂಬು. ಈ ವಸ್ತ್ರಯುಗ್ಮವನ್ನು ಕೊಡುತ್ತಿರುವೆನು. ಇದನ್ನು ಧರಿಸಿ ನನ್ನನ್ನು ಸ್ಮರಿಸಿದಾಗ ತತ್‌ಕ್ಷಣವೇ ನಿನ್ನ ವಿಕೃತರೂಪವು ಹೋಗಿ, ನಿಜ ಸುರೂಪವಂತನಾಗುವೆ' ಎಂದು ನಲನನ್ನು ಸಂತೈಸಿ, ನಾಗರಾಜನು ಅಂತರ್ಹಿತನಾದನು.

ನಲನು ಅಲ್ಲಿಂದ ಹೊರಟು ಹತ್ತನೆ ದಿನ ಋತುಪರ್ಣನ ಅಯೋಧ್ಯೆಯನ್ನು ಪ್ರವೇಶಿಸಿದನು. ಋತುಪರ್ಣನನ್ನು ಕಂಡು "ಮಹಾರಾಜ ! ನನ್ನನ್ನು ಬಾಹುಕನೆಂಬುವರು. ಅಶ್ವಚಾಲನ ವಿದ್ಯೆಯಲ್ಲಿ ನನಗೆ ಸಮರಿಲ್ಲವೆಂದು ತಿಳಿ ! ಅಡಿಗೆ ಮಾಡುವುದನ್ನು ಚೆನ್ನಾಗಿ ಅರಿತಿರುವೆನು. ಬೇಕಾದ ಶಿಲ್ಪಕಲೆ ಕೈಯಲ್ಲಿದೆ. ನನ್ನನ್ನು ಸೂತನನ್ನಾಗಿ ಸ್ವೀಕರಿಸು !" ಎಂದು ಬೇಡಿದನು. ಋತುಪರ್ಣನು "ನನಗೆ ಶೀಘ್ರಯಾನವೆಂದರೆ ಬಲು ಪ್ರೀತಿ. ನನ್ನ ರಥ ತುರಗ ಸೂತರಿಗೆ ಅಧ್ಯಕ್ಷನಾಗಿರು. ಈಗ ನನ್ನ ಸೂತರಾಗಿರುವ ವಾರ್ಷ್ಣೇಯ ಜೀವನರೇ ನಿನ್ನ ಅನುಚರರಾಗಿರುವರು" ಎಂದು ಅಪ್ಪಣೆಯಿತ್ತನು.

ನಲನು ಋತುಪರ್ಣನ ಸಾರಥಿಯಾಗಿ ನಿವಸಿಸುತ್ತಾ, ನಿತ್ಯವೂ ಸಾಯಂಕಾಲವಾಗುತ್ತಿರಲು, ಒಂದೆಡೆ ಕೂತು 'ಪ್ರಿಯತಮೆ ! ಎಲ್ಲಿರುವೆ ? ಎಷ್ಟು ಕಷ್ಟಪಟ್ಟೆ ! ಮಂದ ಬುದ್ಧಿಯ ಬಲು ಮೋಸದ ಮನದಿ ನೆನೆದು, ನೊಂದು ಸುಂದರಿ ! ಏನೆಂದೆ ? ಕಾಡಿನಿಂದ ತಂದೆ ನಗರವ ಸೇರಿದೆ ! ತರುಣಿಮಣಿಯೆ' ಎಂಬ ಪದ್ಯವನ್ನು ಹಾಡಿಕೊಳ್ಳುತ್ತಿದ್ದನು. ಅವನು ನಿದ್ರೆಯನ್ನೂ ಮಾಡದೆ ಚಿಂತಾಕ್ರಾಂತನಾಗಿರುವುದನ್ನು ಲಕ್ಷಿಸಿ, ಜೀವನನೆಂಬ ಸೂತನು ನಕ್ಕು 'ಆಹಾ ಇವನ ರೂಪಕ್ಕೆ ತಕ್ಕ ಸುಂದರಿ ಅದಾರೋ ? ಗಿಡ್ಡ ಕೈ ಗಳು, ಕುಳ್ಳದೇಹ! ನೋಡಲಾರದ ಇವನಿಗೂ ಮನ್ಮಥ ಪೀಡೆಯೇ ?' ಎಂದು ಚಿಂತಿಸಿದನು. ಅವನು ಬಾಹುಕನನ್ನು ನೋಡಿ "ಬಾಹುಕ ! ನೀನು ಚಿಂತಿಸಿ ಪಾಡುವ ಸುಂದರಿ ಎಲ್ಲಿರುವಳು ? ಅವಳನ್ನು ಬಿಟ್ಟೇಕೆ ಬಂದೆ ?" ಎಂದು ಕೇಳಿದನು. ನಲನು ಲಜ್ಜಿತನಾಗಿ "ಜೀವನ ! ನಾನೆಲ್ಲಿ ? ನಲಿನಾಕ್ಷಿಯರೆಲ್ಲಿ ? ಇನ್ನು ವಿಯೋಗವೆಂತು ಬಂತು ? ನನ್ನನ್ನು ನೋಡಿ ನಗುವವರು ಸಿಗುವರಾಗಲಿ, ನಲ್ಲನೆಂದು ಬಳಿಸಾರುವ ನಾರಿಯರುಂಟೇ? ಹಿಂದೆ ನನ್ನ ಹಿತನೊಬ್ಬನಿದ್ದನು. ಅವನು ಮಂದಬುದ್ಧಿಯೆಂದು ಖ್ಯಾತನಾಗಿದ್ದನು. ತನ್ನ ಸತಿಯನ್ನು ಅಗಲಿ ಬಂದು, ಹುಡುಕಿ, ಕಾಣದೆ ಅವನು ಪಾಡುತ್ತಿದ್ದ ಗೀತೆಯನ್ನು ನಾನು ಕೇಳಿದೆನು. ಅದನ್ನು ಸುಮ್ಮನೆ ಅನುಕರಿಸುತ್ತಿರುವೆ"ನೆಂದು ಜೀವನನನ್ನು ಕಳಿಸಿದನು. ನಲನು ದಮಯಂತೀ ವಿರಹ ಕಾತರನಾಗಿ ಅಜ್ಞಾತವಾಸವನ್ನು ಮಾಡುತ್ತಾ, ಋತುಪರ್ಣರಾಜನ ಸಾರಥಿಯೂ, ಆಗಾಗ ಪಾಚಕನೂ ಆಗಿ, ಅವನನ್ನು ಸಂತೋಷಪಡಿಸಿ, ಕಾಲಕಳೆಯುತ್ತಿದ್ದನು.

ಇತ್ತ ಭೀಮರಾಜನು ನಲನು ರಾಜ್ಯಭ್ರಷ್ಟನಾಗಿ, ಕಾಡನ್ನು ಸೇರಿದನೆಂದರಿತು ನಲ-ದಮಯಂತಿಯನ್ನು ಹುಡುಕಿ ತರಲು, ಪುಷ್ಕಲ ಧನವನ್ನಿತ್ತು, ಬ್ರಾಹ್ಮಣರನ್ನು ನಾನಾ ದೇಶಗಳಿಗೆ ಕಳಿಸಿದನು. ಅಳಿಯನನ್ನು, ಮಗಳನ್ನು ಕರೆತಂದವರಿಗೆ ವಿಶೇಷ ಧನವನ್ನು, ಗ್ರಾಮಗಳನ್ನು, ಸಹಸ್ರಗೋವುಗಳನ್ನು ಕೊಡುವುದಾಗಿ ವಚನವಿತ್ತನು. ಕೊನೆಗೆ ತಿಳಿದುಬಂದವರಿಗೂ ಅಗ್ರಹಾರ ಗೋಧನಗಳನ್ನೀಯುವೆನೆಂದನು. ಅವರಲ್ಲಿ ಸುದೇವನೆಂಬ ದ್ವಿಜನು ಚೇದಿಪುರಿಯನ್ನು ಸೇರಿ, ರಾಜಮಂದಿರದಲ್ಲಿದ್ದ ವೈದರ್ಭಿಯನ್ನು ಕಂಡನು. ಪುಣ್ಯಾಹಸಮಯದಲ್ಲಿ ಸುನಂದೆಯೊಡನೆ ಕುಳಿತಿದ್ದು, ಧೂಮಜಾಲಸಮಾವೃತವಾದ ವಹ್ನಿಜ್ವಾಲೆಯಂತೆ ಕಡುಬೆಳಗದಿರುವ ದಮಯಂತಿಯನ್ನು ಕಂಡು 'ಆಹಾ! ಇವಳು ನಮ್ಮ ರಾಜಪುತ್ರಿ ನಿಜ. ಪೂರ್ಣಚಂದ್ರವದನೆಯು, ಕುಂದರದನ್ನೆಯು, ಚಾರುಪದ್ಮವಿಶಾಲಲೋಚನೆಯು, ಸರ್ವಾಂಗಸುಂದರಿಯು ಆದ ನಮ್ಮ ದಮಯಂತಿಯನ್ನು ಕಂಡು, ಕೃತಾರ್ಥನಾದೆನು. ರಾಹುಗ್ರಸ್ತಚಂದ್ರಮನಂತೆ ಶೋಕಾಕುಲಿತ ವದನಳಾಗಿ, ನಿದಾಘ ನದಿಯಂತೆ ಕೃಶಳಾಗಿ, ಹಸ್ತಿಹಸ್ತಧ್ವಸ್ತ ಕಮಲದಂತೆ ವ್ಯಾಕುಲಳಾಗಿ ದುಃಖವೇ ಮೂರ್ತಿವೆತ್ತಂತಿರುವ ದಮಯಂತಿಯನ್ನು ನೋಡಿ, ನನಗೂ ವ್ಯಸನವಾಗುತ್ತಿದೆ. ಭರ್ತೃದೂರಳಾಗಿ, ಬಂಧುಜನರನ್ನು ಬಿಟ್ಟು, ಪಾಪ! ಗಂಡನನ್ನು ಕಾಣುವ ಆಶೆಯಿಂದ ದೇಹವನ್ನು ಧರಿಸಿ, ಜೀವಿಸಿರುವಳು. ಇವಳನ್ನು ಬಿಟ್ಟು ನಲನೆಷ್ಟು ದುಃಖಿಸುವನೋ? ಎಂತು ಜೀವಿಸುವನೋ?' ಎಂದು ಚಿಂತಿಸಿ, ಸುದೇವನು ಅವಳನ್ನು ಆಶ್ವಾಸಿಸಿದನು.

ಸುದೇವನು "ಅಮ್ಮಾ ವೈದರ್ಭಿ! ನಿಮ್ಮ ಅಣ್ಣನ ಸ್ನೇಹಿತನು ನಾನು. ಸುದೇವನೆಂಬರು ನನ್ನನ್ನು. ಭೀಮರಾಜನ ವಚನದಿಂದ ನಿನ್ನನ್ನು ಹುಡುಕಿಕೊಂಡು ಬಂದಿರುವೆನು. ನಿಮ್ಮ ತಂದೆ, ತಾಯಿ ಸೋದರರೆಲ್ಲರೂ ಕುಶಲಿಗಳು. ನಿನ್ನ ಮಕ್ಕಳು ಸುಕ್ಷೇಮದಿಂದಿರುವರು. ಬಹುಜನ ವಿಪ್ರರು ನಿನ್ನನ್ನು ನಿನ್ನ ಪತಿಯನ್ನು ಹುಡುಕಲು ಹೊರಟಿರುವರು. ನನ್ನ ಅದೃಷ್ಟದಿಂದ ನಿನ್ನನ್ನು ಕಂಡೆನು" ಎಂದನು. ದಮಯಂತಿ ಬಂಧುವಾರ್ತೆಯನ್ನು ಕೇಳಿ, ಕುರರಿಯಂತೆ ಅತ್ತಳು. ಕಣ್ಣೀರೊರೆಸಿಕೊಂಡು ತನ್ನವರ ಕ್ಷೇಮವನ್ನು ವಿಚಾರಿಸಿದಳು. ಆಗ ಸುನಂದೆಯು ತಿಳಿಸಲು, ರಾಜಮಾತೆ ಅಲ್ಲಿಗೆ ಬಂದು, ಸುದೇವನಿಂದ ಎಲ್ಲವನ್ನೂ ತಿಳಿದಳು. ದಮಯಂತಿಯ ಹುಬ್ಬಿನ ನಡುವಿರುವ ಮಚ್ಚೆಯನ್ನು ನೋಡಿ, ಅವಳನ್ನು ಗುರ್ತಿಸಿದೆನೆಂದು ಸುದೇವನು ಹೇಳಲು, ರಾಜಮಾತೆ ಪರೀಕ್ಷಿಸಿ ದಮಯಂತಿಯನ್ನು ಬಿಗಿದಪ್ಪಿ ಅತ್ತಳು; ಸುನಂದೆಯೂ ದುಃಖದಿಂದ ರೋದಿಸಿದಳು. ಆಗ ರಾಜಮಾತೆ ದಮಯಂತಿಗೆ ಇಂತೆಂದಳು—"ವತ್ಸೇ! ದಾಶಾರ್ಣಪತಿಯಾದ ಸುದಾಮ ಮಹಾರಾಜನ ದುಹಿತೆಯರು ನಾನೂ ನಿಮ್ಮ ಮಾತೆಯು; ನನಗೆ ನೀನು ಮಗಳಂತಾದೆ. ವೀರಬಾಹುರಾಜನ ಮಡದಿಯಾದೆ ನಾನು; ಭೀಮರಾಜನಿಗೆ ಕೊಟ್ಟರು ನಿಮ್ಮಮ್ಮನನ್ನು. ನೀನು ನಮ್ಮ ಜನಕನ ಮನೆಯಲ್ಲಿ ಜನಿಸಿದಾಗ ನಾನು ಅಲ್ಲೇ ಇದ್ದೆನು. ನಿನ್ನ ಹುಬ್ಬಿನ

ನಡುವಿನ ಮಚ್ಚೆಯನ್ನು ನೋಡಿದ್ದೆನಾದುದರಿಂದಲೇ, ದೇವವಚನವನ್ನು ನಂಬಿದೆನು. ನನ್ನ ಮನೆಯನ್ನು ನಿನ್ನದೆಂದು ತಿಳಿ ! ಬೇಕಾದಷ್ಟು ದಿವಸ ಸುಖವಾಗಿ ಇಲ್ಲಿರು ! ಅಥವಾ ಬಂಧುಜನರನ್ನು ಮಕ್ಕಳನ್ನು ನೋಡುವ ಕುತೂಹಲವು ಸಹಜವಾದುದರಿಂದ ನಿನ್ನನ್ನು ವಿದರ್ಭೆಗೆ ಕಳಿಸಿಕೊಡುವೆನು ನಿನ್ನ ಇಷ್ಟದಂತೆ ಮಾಡುವೆನು." ಆ ಮಾತಿಗೆ ಸಂತೋಷಿಸಿ, ದಮಯಂತಿಯು ವಿದರ್ಭೆಯನ್ನು ಸೇರಲಿಚ್ಛಿಸಿದಳು. ರಾಜಮಾತೆಯು ದಿವ್ಯಪಲ್ಲಕ್ಕಿಯಲ್ಲಿ ದಮಯಂತಿಯನ್ನು ಕೂಡಿಸಿ, ಪರಿವಾರಭೃತ್ಯರೊಡನೆ ಕಳಿಸಿದಳು. ದಮಯಂತಿಯು ವಿದರ್ಭನಗರವನ್ನು ಸೇರಿ, ತಾಯಿ ತಂದೆಯರನ್ನೂ ಸುತಸುತೆಯರನ್ನೂ ನೋಡಿ ಆನಂದಭರಿತಳಾದಳು. ದೇವತೆಗಳಿಗೆ ವಿಶೇಷ ಪೂಜೆಗಳನ್ನು ನಡೆಸಿದಳು. ಭೀಮರಾಜನು ಸುದೇವನಿಗೆ ಗೋಸಹಸ್ರವನ್ನೂ ಅಗ್ರಹಾರವನ್ನೂ ಇತ್ತು ಗೌರವಿಸಿದನು.

ಮರುದಿನ ಬೆಳಗಾಗುತ್ತಲೇ ದಮಯಂತಿ ತನ್ನ ಮಾತೆಯನ್ನು ನೋಡಿ "ನಾನು ಜೀವಂತಳಿರಬೇಕೆಂದರೆ ನನ್ನ ಸ್ವಾಮಿಯನ್ನು ಹುಡುಕಲು ವಿಪ್ರರನ್ನು ಕಳಿಸು" ಎಂದು ಪ್ರಾರ್ಥಿಸಿದಳು. ಅವಳ ದುಃಖವನ್ನು ನೋಡಿ, ಪಟ್ಟ ಕಷ್ಟಗಳನ್ನು ಕೇಳಿ, ರಾಜಾಂತಃಪುರಜನರೆಲ್ಲ ಅನುತಾಪದಿಂದ 'ಹೋ' ಎಂದು ರೋದಿಸಿದರು. ಮಗಳನ್ನು ಸಮಾಶ್ವಸಿಸಿ, ರಾಜಪತ್ನಿಯು ಭೀಮರಾಜನಿಗೆ ದಮಯಂತಿಯ ಪ್ರಾರ್ಥನೆಯನ್ನು ತಿಳಿಸಿದಳು. ತತ್ಕ್ಷಣವೇ ಭೀಮನು ಸರ್ವದೇಶಗಳಿಗೂ ಕುಶಲರಾದ ವಿಪ್ರರನ್ನು ನೇಮಿಸಿ, ನಲಾನ್ವೇಷಣವನ್ನು ಮಾಡಿ ತಿಳಿಸಲು ಕಳಿಸಿದನು. ಆ ವಿಪ್ರರನ್ನು ತನ್ನ ಅಂತಃಪುರಕ್ಕೆ ಕರೆಯಿಸಿ, ದಮಯಂತಿ ಅವರಿಗೆ ಒಂದು ಸಂದೇಶವನ್ನಿತ್ತು, ಅದನ್ನು ಜನಸಭೆಗಳಲ್ಲಿ, ರಾಜಾಸ್ಥಾನಗಳಲ್ಲಿ ಕೀರ್ತಿಸಿರೆಂದು ವಿಜ್ಞಾಪಿಸಿದಳು.

'ವಸನದರ್ಧವ ಕಸಿದೆನ್ನ ವನದಿ ಬಿಟ್ಟು |
ಎಲ್ಲಿ ಪೋದೆಯೋ ಪ್ರಿಯತಮ ! ಇಲ್ಲಿ ಮಿಕ್ಕ ||
ವಸನದರ್ಧವನುಟ್ಟು ನಾ ವ್ಯಸನ ಪಡುವೆ |
ಒಡೆಯ ! ಬಂದೆನ್ನ ಕಣ್ಣೀರನೊರಸು ಬೇಗ ||'

ಎಂದೀ ಸಂದೇಶವನ್ನು ವಹಿಸಿ ಪೋಗುವ ವಿಪ್ರರಿಗೆ "ಈ ಸಂದೇಶವನ್ನು ಕೇಳಿ, ಪ್ರತಿವಚನವನ್ನಿತ್ತವನನ್ನು ನಲನೆಂದು ತಿಳಿಯಿರಿ. ವಿಪತ್ಕಾಲವಾದುದರಿಂದ ಸ್ವರೂಪದಿಂದಿರದೆ ಪ್ರಚ್ಛನ್ನನಾಗಿದ್ದರೂ, ಬಡವನಂತೆ ಹುಚ್ಚನಂತೆ ಕಂಡರೂ, ಪ್ರತಿವಚನ-ವಿತ್ತವನ ವೃತ್ತವನ್ನು ಪರೀಕ್ಷಿಸಿ, ಬಂದು ತಿಳಿಸಿರಿ" ಎಂದು ಬಿನ್ನವಿಸಿ ಕಳಿಸಿದಳು. ಅಂತೆಯೇ ಅನೇಕ ದೇಶಗಳಲ್ಲಿ ವಿಪ್ರರು ಸಾರಿ, ಎಲ್ಲಿಯೂ ನಲನನ್ನು ಕಾಣಲಾರದೆ ಹಿಂತಿರುಗಿ ಬಂದರು.

ಆದರೆ ಅವರಲ್ಲಿ ಪರ್ಣಾದನೆಂಬ ದ್ವಿಜನು ಅಯೋಧ್ಯಾನಗರವನ್ನು ಮುಟ್ಟಿ, ಸಂದೇಶ ಪ್ರತಿವಚನವನ್ನು ಪಡೆದುಬಂದು, ದಮಯಂತಿಗೆ ಅದನ್ನರುಹಿ ಇಂತೆಂದನು—"ಅಯೋಧ್ಯೆಯನ್ನು ಮುಟ್ಟಿ, ರಾಜಸಭೆಯಲ್ಲಿ ನಾನು ನಿನ್ನ

ಸಂದೇಶವನ್ನು ಸಾರಿದೆನು. ಋತುಪರ್ಣನು ಏನೂ ಮಾತಾಡದೆ ಸುಮ್ಮನಿದ್ದನು. ಋತುಪರ್ಣನ ಸಾರಥಿಯಾದ ಬಾಹುಕನೆಂಬ ವಿಕೃತರೂಪನು ಮಾತ್ರ ನನ್ನನ್ನು ಸಂಧಿಸಿ, ನಿಟ್ಟುಸುರಿಟ್ಟು, ಕಣ್ಣಲ್ಲಿ ನೀರು ಹರಿಯುತ್ತಿರಲು ಇಂತೆಂದನು—"ದೈವ ವಶವಾಗಿ ವಿಷಮಾವಸ್ಥೆಯಲ್ಲಿ ನಿಂದು ಬಹು ದುಃಖಗಳನ್ನು ಕಂಡರೂ ಕುಲಸತಿಯರು ಸಹಿಸಿ, ಬಾಯಿಬಿಡದಿರುವರು. ಅಂತಹವರಿಗೆ ಸ್ವರ್ಗವು ಸುಲಭವಾಗಿದೆ. ಶೀಲಕವಚದಿಂದ ರಕ್ಷಿಸಿಕೊಂಡು, ಭರ್ತೃಹಿತವನ್ನು ಬಯಸಿ, ಬದುಕಿರುವ ರಮಣಿಯರು ಕಷ್ಟಗಳಿಂದ ಮತಿಗೆಟ್ಟು ಬಿಟ್ಟುಹೋದ ರಮಣರಮೇಲೆ ಸಿಟ್ಟಾಗುವದಿಲ್ಲ. ರಾಜ್ಯಭ್ರಷ್ಟನು, ಪ್ರಾಣಯಾತ್ರಾಸಂಶಯಗ್ರಸ್ತನು, ಪಕ್ಷಿಗಣಾಪಹೃತವಸ್ತ್ರನು ಚಿಂತಾಕರ್ಷಿತನು ಆದ ಪತಿಯನ್ನು ನಿಂದಿಸಿ ಪ್ರಯೋಜನವಿಲ್ಲ." ಈ ಮಾತನ್ನು ನಿನಗೆ ಕಳಿಸಿರುವೆನು; ಮುಂದಿನ ಕಾರ್ಯವನ್ನಾಲೋಚಿಸು !" ಎಂದು ಪರ್ಣಾದ ನುಡಿದು ಸುಮ್ಮನಾದನು. ದಮಯಂತಿಯು ತನ್ನ ಮಾತೆಯನ್ನು ಕಂಡು "ಅಮ್ಮಾ ! ನನ್ನ ಹಿತವನ್ನು ಕೋರಿದವಳಾದರೆ ನನ್ನ ವಚನದಂತೆ ನಡೆ ; ತಂದೆಗೆ ಈ ವಿಷಯವನ್ನು ಈಗ ತಿಳಿಸಬೇಡ ! ನಿನ್ನೆದುರಿಗೆ ಸುದೇವನನ್ನು ನಾನು ನಲನಲ್ಲಿಗೆ ವಿಚಿತ್ರಸಂದೇಶವನ್ನಿತ್ತು ಕಳಿಸುವೆನು. ನನ್ನನ್ನು ಕರೆತಂದಂತೆ ಸುದೇವನು ನಲನನ್ನೂ ಕರೆತರಲು ಅರ್ಹನಾಗಿರುವನು" ಎಂದು ತಾಯಿಯೊಡನೆ ತನ್ನ ಮಂದಿರಕ್ಕೆ ಬಂದಳು. ವಿಶ್ರಾಂತನಾದ ಪರ್ಣಾದನನ್ನು ವಿಪುಲದ್ರವ್ಯದಿಂದ ಸತ್ಕರಿಸಿ "ಮಹಾನುಭಾವ ! ನಿನ್ನ ಉಪಕಾರವನ್ನು ನಾನು ಎಂದಿಗೂ ಮರೆಯಲಾರೆನು ; ನನ್ನ ಪತಿ ಸಮಾಗಮವಾಗಲಿ ! ಮುಂದೆ ನಿನಗೆ ಹೆಚ್ಚಾಗಿ ಗ್ರಾಮಧನಗಳನ್ನಿತ್ತು ಸತ್ಕರಿಸುವೆನು" ಎಂದು ಅವನನ್ನು ಕಳಿಸಿದಳು.

ಅನಂತರ ಸುದೇವನನ್ನು ಕರೆಯಿಸಿ, ದಮಯಂತಿ, ತನ್ನ ತಾಯಿಯ ಸಮಕ್ಷದಲ್ಲಿ ಅವನಿಗಿಂತೆಂದಳು—"ವಿಪ್ರವರ ! ಅಯೋಧ್ಯೆಗೆ ಹೋಗು. 'ದಮಯಂತಿಯು ನಲನ ಆಶೆಯನ್ನು ತೊರೆದು, ದ್ವಿತೀಯ ಸ್ವಯಂವರವನ್ನು ಸಾರಿರುವಳು. ಅನೇಕ ರಾಜರೂ ಬರಲಿರುವರು. ನಾಡಿದ್ದು ಸ್ವಯಂವರ ಮುಹೂರ್ತವಿದೆ. ಆಕೆಯನ್ನು ವರಿಸಬೇಕೆಂದಿದ್ದರೆ ಬೇಗ ಹೋಗು !' ಎಂದು ಋತುಪರ್ಣನಿಗೆ ಮಾತ್ರ ತಿಳಿಸು !" ಎಂದು ಸಂದೇಶವನ್ನಿತ್ತು, ಅವನನ್ನು ಸತ್ಕರಿಸಿ, ಕಳಿಸಿದಳು. ಸುದೇವನು ಅಂತೆಯೇ ಋತುಪರ್ಣನಿಗೆ ತಿಳಿಸಿದನು.

ಋತುಪರ್ಣನು ಸಂಭ್ರಮಾಶ್ಚರ್ಯಭರಿತನಾಗಿ ಬಾಹುಕನನ್ನು ಕರೆದು "ದಮಯಂತಿಯ ದ್ವಿತೀಯ ಸ್ವಯಂವರವಂತೆ ! ನಾಳೆ ಅಲ್ಲ ನಾಡಿದ್ದಂತೆ ! ಒಂದೇ ದಿನದಲ್ಲಿ ವಿದರ್ಭ ನಗರವನ್ನು ಸೇರುವಂತೆ ಮಾಡಬಲ್ಲೆಯಾ ?" ಎಂದು ಅನುನಯಿಸಿ ಕೇಳಿದನು. ಆ ವಾರ್ತೆ ಸಿಡಿಲಿನಂತೆ ಬಡಿಯಲು ನಲನು ಅಗ್ನಿಪರ್ವತದಂತೆ ಮನದಲ್ಲೇ ಕುದ್ದು, ದುಃಖಿಸಿದನು. 'ಆಹಾ ! ದಮಯಂತಿಯೂ ? ದ್ವಿತೀಯ ಸ್ವಯಂವರವಾ ? ಹತವಿಧಿ ! ನನ್ನನ್ನೇಕೆ ಬದುಕಿಸಿರುವೆ ? ಅಥವಾ ನನ್ನನ್ನು ಕರೆಸಲು ಈ ಉಪಾಯ

ವನ್ನು ಹೂಡಿರುವಳಾ ? ಅಥವಾ ಕ್ಷುದ್ರನಾಗಿ ಬಿಟ್ಟುಬಂದ ಪಾಪಿಯನ್ನು ಪರಿತ್ಯಜಿಸಿದಳಾ ? ದುಃಖಭರದಿಂದ ವಿವೇಕಹೀನಳಾಗಿ ಇಂತು ಭರ್ತೃದ್ರೋಹವನ್ನು ಮಾಡಬಹುದೇ ? ಸ್ತ್ರೀಸ್ವಭಾವವೇ ಇಂತಹದು ! ನನ್ನ ದೋಷವೂ ಅಕ್ಷಮ್ಯವಾಗಿದೆ. ಇಲ್ಲ, ನನ್ನ ಸತಿ ಅಂತಹವಳಲ್ಲ! ಪತಿವ್ರತೆಯು, ಪುತ್ರವತಿಯು ಆದ ದಮಯಂತಿಯು ಎಂದಿಗೂ ಕೃತಘ್ನಳಾಗುವುದಿಲ್ಲ. ಇದರ ಸತ್ಯಾಸತ್ಯತೆಗಳನ್ನು ಅಲ್ಲಿ ಹೋಗಿ ಪರೀಕ್ಷಿಸುವೆನು ; ಆಗಲಿ ಋತುಪರ್ಣನ ಮನೋರಥದಂತೆ, ವೇಗವಾಗಿ ವಿದರ್ಭನಗರವನ್ನು ಸೇರಲು ನಾನೂ ಕುತುಕನಾಗಿರುವೆನು.' ಇಂತು ಮನದಿ ಚಿಂತಿಸಿ, ನಲನು ಋತುಪರ್ಣನಿಗೆ ಒಂದೇ ದಿನ ವಿದರ್ಭನಗರವನ್ನು ಮುಟ್ಟಿಸುವೆನೆಂದು ತಿಳಿಸಿದನು.

ನಲನು ಕುದುರೆಯ ಶಾಲೆಯನ್ನು ಸೇರಿ ಚೆನ್ನಾಗಿ ಪರೀಕ್ಷಿಸಿ, ಕೃಶಗಾತ್ರವೂ, ಮಹಾಹನುವೂ, ಮಹಾನಾಸಿಕವೂ, ದುರ್ಲಕ್ಷಣಹೀನವೂ, ದಶದುಷ್ಟಾವರ್ತರಹಿತವೂ, ಆದ ಅಶ್ವಚತುಷ್ಟಯವನ್ನಾರಿಸಿ, ರಥಕ್ಕೆ ಕಟ್ಟಿದನು.

## ಪುನಸ್ಸಮಾಗಮ

ಋತುಪರ್ಣನು ಆ ಬಡ ಕುದುರೆಗಳನ್ನು ನೋಡಿ, ಸ್ವಲ್ಪ ಕೋಪದಿಂದ— "ಬಾಹುಕ ! ಅಲ್ಪಬಲಗಳಾದ ಕುದುರೆಗಳು ಅಷ್ಟುದೂರವನ್ನು ಒಂದು ದಿನದಲ್ಲಿ ಹೋಗಬಲ್ಲವೇ ? ನನ್ನ ಪ್ರಾರ್ಥನೆಯನ್ನು ನೆರವೇರಿಸುವ ಇಷ್ಟ ನಿನಗಿಲ್ಲವೆಂದು ತೋರುತ್ತಿದೆ !" ಎಂದ ರಾಜನಿಗೆ, ನಲನು "ಮಹಾರಾಜ ! ಅಶ್ವಹೃದಯವನ್ನು ಚೆನ್ನಾಗಿ ಅರಿತಿರುವೆನು. ಈ ಕುದುರೆಗಳಿಗೆ ಸರ್ವ ಶುಭ ಲಕ್ಷಣಗಳಿವೆ. ನೋಡು ! ಲಲಾಟದಲ್ಲಿ ಒಂದು, ತಲೆಯಮೇಲೆ ಎರಡು, ಬಗಲುಗಳಲ್ಲಿ ಎರಡು, ಬೆನ್ನಲ್ಲಿ ಎರಡು, ಎದೆಯಲ್ಲಿ ಎರಡು, ಹೊಟ್ಟೆಯ ಕೆಳಗೆ ಎರಡು, ಬಾಲದಮೇಲೆ ಒಂದು, ಇಂತು ಹನ್ನೆರಡು ಪ್ರದಕ್ಷಿಣಾವರ್ತಗಳು ಇವೆ. ಇವು ನಿಶ್ಚಯವಾಗಿ ನಾಳೆ ಸಾಯಂಕಾಲವೇ ವಿದರ್ಭೆಗೆ ಸೇರಿಸುವುವು. ಸಂಶಯ ಪಡಬೇಡ ! ಅಥವಾ ನಿನ್ನಿಷ್ಟಬಂದ ಕುದುರೆಗಳನ್ನು ತೋರು ! ಅವನ್ನೇ ಯೋಜಿಸುವೆನು" ಎಂದು ನುಡಿದನು. ಋತುಪರ್ಣನು "ಸರೀ ಇವೇ ಇರಲಿ ! ಬೇಗನೆ ಹೊರಡು !" ಎಂದು ರಥವನ್ನೇರಿದನು. ವಾರ್ಷ್ಣೇಯನು ಅವನ ಬದಿಯಲ್ಲಿ ಕೂತನು. ಬಾಹುಕನು ಸಾರಥಿಯ ಸ್ಥಾನದಲ್ಲಿ ಕೂತು, ಕುದುರೆಗಳನ್ನು ಕೈಯಿಂದ ಮುಟ್ಟಿ ಸೂಚಿಸಿದನು. ತತ್ಕ್ಷಣವೇ ಆ ಕುದುರೆಗಳು ಆಕಾಶದಲ್ಲಿ ಹಾರುವಂತೆ ಓಡತೊಡಗಿದವು. ನೆಲವನ್ನು ಮುಟ್ಟುವುದೇ ಇಲ್ಲವೇನೋ ಎಂಬಂತೆ ಧಾವಿಸುವ ಜವನಾಶ್ವಗಳ ವೇಗವನ್ನು ಕಂಡು ಋತುಪರ್ಣನು ವಿಸ್ಮಿತನಾದನು.

ರಥಘೋಷವನ್ನು, ಹಯಚಾಲನ ಚಾತುರ್ಯವನ್ನು ಕಂಡು, ಸೂತ ವಾರ್ಷ್ಣೇಯನು ವಿಸ್ಮಿತನಾಗಿ, ತನ್ನ ಮನದಿ ಇಂತು ಚಿಂತಿಸಿದನು—'ಆಹಾ ! ಇವನೇನು ಮಾತಲಿಯೋ ? ಅಥವಾ ಅಶ್ವಶಾಸ್ತ್ರಕರ್ತನಾದ ಶಾಲಿಹೋತ್ರನೋ ? ಇಲ್ಲದಿದ್ದರೆ

ರೂಪಾಂತರದಿಂದ ಬಂದಿರುವ ನನ್ನ ಸ್ವಾಮಿ ನಲನೋ? ಇನ್ನೊಬ್ಬರಿಗೆ ಇಂತಹ ಸಾರಥ್ಯಪಾಂಡಿತ್ಯವು ಉಂಟೇ? ಮಹಾತ್ಮರು ಮಹದ್ವಿಪತ್ತಿನಲ್ಲಿ ಪ್ರಚ್ಛನ್ನರಾಗಿರುವರಂತೆ! ಶರೀರವೈರೂಪ್ಯವೊಂದು ಬಿಟ್ಟರೆ, ಇನ್ನೆಲ್ಲ ರೀತಿಯಿಂದಲು ಬಾಹುಕನು ನಲನಂತೇ ತೋರುತ್ತಿರುವನು.'

ಇಂತು ನಲನ ರಥವು ನದೀ ಪರ್ವತ ಸರೋವರಪರಿಸರ ಮಾರ್ಗದಿಂದ ಬಹು ವೇಗವಾಗಿ ಹೋಗುತ್ತಿರುವಾಗ ಮಾರ್ಗದಲ್ಲಿ ಕಾಣುವ ಪರ್ವತಗಳು ನೋಡ ನೋಡುತ್ತಾ, ಸಮೀಪಿಸಿ, ಕಣ್ಣುಮುಚ್ಚಿತೆಗೆಯುವಷ್ಟರಲ್ಲಿ ಹಿಂದೆಸರಿದು ಕಾಣದಾಗುತ್ತಿದ್ದವು. ಇದು ಸೂರ್ಯರಥವೋ? ಇವನು ಅನೂರನೋ, ಎಂದು ಆಶ್ಚರ್ಯಮಗ್ನನಾಗಿದ್ದ ಋತುಪರ್ಣನು ತನ್ನ ಉತ್ತರೀಯವು ಬೆನ್ನಮೇಲಿಲ್ಲದುದನ್ನು ಕಂಡು, "ಬಾಹುಕ! ನಿಲ್ಲಿಸು ರಥವನ್ನು! ನನ್ನ ಉತ್ತರೀಯವು ಕೆಳಗೆ ಬಿದ್ದಿರಬೇಕು. ವಾರ್ಷ್ಣೇಯನು ಹೋಗಿ ಅದನ್ನು ತರಲಿ!" ಎಂದನು. ಆ ಮಾತಿಗೆ ನಕ್ಕು ನಲನು "ರಾಜನ್! ನಿನ್ನ ಉತ್ತರೀಯವು ಬಿದ್ದ ಸ್ಥಲದಿಂದ ಯೋಜನದೂರ ಇನ್ನೂ ಹೆಚ್ಚೇ ಬಂದಿರುವೆವು. ಬಿಡು ಉತ್ತರೀಯದ ಆಸೆಯನ್ನು!" ಎಂದು 'ಬಿಡು, ದಮಯಂತಿಯ ಆಸೆಯನ್ನು ಕೂಡ!' ಎಂದು ಮನದಿ ನುಡಿದುಕೊಂಡನು.

ಆಗ ರಥವು ನಿಂತಿರಲು, ಋತುಪರ್ಣನು ಅಲ್ಲಿದ್ದ ಒಂದು ವಿಭೀತಕ ವೃಕ್ಷವನ್ನು ನಲನಿಗೆ ತೋರಿ "ಬಾಹುಕ! ಎಲ್ಲರೂ ಎಲ್ಲವನ್ನೂ ಅರಿತಿರಲಾಗದು. ನನ್ನ ಸಂಖ್ಯಾನ ಶಕ್ತಿಯನ್ನು ನೋಡು! ಈ ವೃಕ್ಷದ ಬುಡದಲ್ಲಿ ಬಿದ್ದಿರುವ ಹಣ್ಣುಗಳು ನೂರಒಂದು, ಮೇಲಿರುವ ದೊಡ್ಡಕೊಂಬೆಗಳಲ್ಲಿ ಐದು ಸಾವಿರ ಪತ್ರಗಳು, ಸಣ್ಣರೆಂಬೆಗಳಲ್ಲಿ ಎರಡು ಸಾವಿರದ ಐನೂರು ಒಂದು ಪತ್ರಗಳಿವೆ. ಒಟ್ಟು ಗಿಡದಲ್ಲಿರುವ ಹಣ್ಣುಗಳು ಎರಡು ಸಾವಿರದ ತೊಂಭತ್ತೈದಿವೆ. ನೋಡು ಬೇಕಾದರೆ! ನನ್ನ ವಿದ್ಯೆಗೆ ಅಕ್ಷಹೃದಯವೆಂದು ಹೆಸರು. ಇದನ್ನರಿತವನು ಸಂಖ್ಯಾಚತುರನೂ, ಪಾಪರಹಿತನೂ ಆಗುವನು." ಎಂದನು. ನಲನಿಗಾಶ್ಚರ್ಯವಾಯಿತು. ಅವನು ರಥದಿಂದಿಳಿದು, "ಮಹಾರಾಜ! ನಿನ್ನ ಸಂಖ್ಯಾಜ್ಞಾನವನ್ನು ಪರೀಕ್ಷಿಸುವವರಿವಿಗೂ ನಂಬಲಾರೆನು. ಸ್ವಲ್ಪ ನಿಲ್ಲು! ಪತ್ರ-ಫಲಗಳನ್ನೆಣಿಸಿ ಬರುವೆನು. ಆಲಸ್ಯವಾಗುವುದೆಂದು ಚಿಂತಿಸಬೇಡ! ಸಾಯಂಕಾಲವಾಗುವ ಮುನ್ನ ಶತಯೋಜನದ ವಿದರ್ಭನಗರವನ್ನು ಮುಟ್ಟಿಸುವೆನು" ಎಂದು ಅನುನಯಿಸಿದನು. ಆ ಗಿಡವನ್ನು ಕೆಡಹಿ ಫಲಪರ್ಣಗಳನ್ನೆಣಿಸಿದಾಗ ಋತುಪರ್ಣ ನುಡಿದಷ್ಟೇ ಇರುವುದನ್ನು ತಿಳಿದು ನಲನು ಅತ್ಯಾಶ್ಚರ್ಯಭರಿತನಾಗಿ "ಮಹಾರಾಜ! ನಿನ್ನ ಮಾತು ನಿಜ! ಈ ವಿದ್ಯೆಯನ್ನು ನನಗುಪದೇಶಿಸು. ಬದಲಾಗಿ ನನ್ನ ಅಶ್ವಹೃದಯವನ್ನು ಕೊಡುವೆನು" ಎಂದು ಬೇಡಿದನು. ಋತುಪರ್ಣನು ಅಯೋಧ್ಯೆಯನ್ನು ಬೇಗ ಸೇರಲಿಚ್ಛಿಸಿ, ಬಾಹುಕನಿಗೆ ಅಕ್ಷಹೃದಯವನ್ನು ಉಪದೇಶಿಸಿದನು. ಅವನ ಅಶ್ವಹೃದಯವನ್ನು ಮುಂದೆ ಬೇಕಾದಾಗ ಸ್ವೀಕರಿಸುವೆನೆಂದು ನಲನನ್ನು ತ್ವರೆಪಡಿಸಿದನು.

ಅಕ್ಷಹೃದಯವನ್ನು ಸ್ವೀಕರಿಸಿದ ತತ್‌ಕ್ಷಣವೇ ನಲನು ಕಲಿದೋಷಮುಕ್ತನಾದನು. ದಮಯಂತಿಯ ಶಾಪಾಗ್ನಿಯಿಂದ ಬೇಯುತ್ತಿದ್ದ ಕಲಿಗೆ ಕರ್ಕೋಟಕ ವಿಷವು ಉಗುರುಸುತ್ತಿನ ಮೇಲೆ ಒನಕೆಯ ಪೆಟ್ಟಾಗಿ ಪೀಡಿಸುತ್ತಿತ್ತು. ಈಗ ಅಕ್ಷವಿದ್ಯಾ ಪ್ರಭಾವದಿಂದ ಪರಿಪೂತನಾದ ನಲನಲ್ಲಿ ನಿಲ್ಲಲಾರದೆ, ಆ ಪಾಪಿಯು, ವಿಷವನ್ನು ಕಾರುತ್ತಾ, ಅಳುತ್ತಾ ಹೊರಬಂದು, ನಲನಿಗೆ ಕೈಮುಗಿದು ತನ್ನ ಅಕಾರ್ಯವನ್ನು ತಿಳಿಸಿ, ಕ್ಷಮಿಸೆಂದು ಬೇಡಿದನು. ನಲನು ಕುಪಿತನಾಗಿ ಕಲಿಯನ್ನು ಶಪಿಸಲು ಉದ್ಯುಕ್ತನಾದನು. ಕಲಿಯು ಭೀತನಾಗಿ, ನಡುಗುತ್ತಾ, "ಮಹಾರಾಜ! ಶಪಿಸಬೇಡ! ದಮಯಂತಿಯ ಶಾಪದಿಂದಲೇ ಸಾಕಷ್ಟು ನೊಂದಿರುವೆನು. ನಾಗರಾಜನ ವಿಷದಿಂದ ಬೆಂದಿರುವೆನು. ಮತ್ತೆ ಶಿಕ್ಷಿಸಬೇಡ! ಕ್ಷಮಿಸು! ನಿನ್ನನ್ನೂ ಕರ್ಕೋಟಕ, ಋತುಪರ್ಣರನ್ನೂ ದಮಯಂತಿಯನ್ನೂ ಸ್ಮರಿಸುವ ನರನು ಕಲಿಭಯದಿಂದ ಮುಕ್ತನಾಗಲೆಂದು ಮಾತು ಕೊಟ್ಟಿರುವೆನು" ಎಂದು ಹೇಳಿ, ನಲನನ್ನು ಶಾಂತಪಡಿಸಿ, ವಿಭೀತಕವೃಕ್ಷವನ್ನು ಪ್ರವೇಶಿಸಿದನು. ಅಂದಿನಿಂದ ವಿಭೀತಕವು ಕಲಿಸಂಗದಿಂದ ಅಪವಿತ್ರವೆನಿಸಿದೆ. ಋತುಪರ್ಣ ವಾರ್ಷ್ಣೇಯರು ರಥದಲ್ಲಿದ್ದು, ನಲನ ಕಲಿನಿರಾಕರಣ ವೃತ್ತಾಂತವನ್ನು ಅರಿಯದೆ, ಅವನು ಬಂದು ರಥವನ್ನೇರಿದಾಗ, ಬೇಗ ಹೊರಡೆಂದು ತ್ವರೆಮಾಡಿದರು. ನಲನು ರಾಹುಮುಕ್ತ ಚಂದ್ರನಂತೆ, ಕಲಿಮುಕ್ತನಾಗಿ, ದಿವ್ಯ ತೇಜಸ್ಸಂಪನ್ನನಾದನು. ರಥವನ್ನು ಸಾಯಂಕಾಲವಾಗುವ ಮುನ್ನ ವಿದರ್ಭ ನಗರದ ಬಹಿರ್ದ್ವಾರವನ್ನು ಸೇರಿಸಿ, ಕೃತಕೃತ್ಯನಾದನು. ಭೀಮರಾಜನ ಅನುಮತಿಯಿಂದ ಋತುಪರ್ಣನು ವಿದರ್ಭನಗರವನ್ನು ಪ್ರವೇಶಿಸಿ, ಬಿಡದಿಯ ಮನೆಯಲ್ಲಿಳಿದು, ಸೂತರೀರ್ವರಿಗೆ ವಿಶ್ರಾಂತಿಗೈಯಲು ಅಪ್ಪಣೆಯಿತ್ತನು.

ದಮಯಂತಿಯು ರಥಘೋಷವನ್ನು ಕೇಳಿ, ನಲನೇ ಬಂದನೆಂದು ತಿಳಿದು ವಿಸ್ಮಯಾನಂದ ಭರಿತಳಾದಳು. ಅಶ್ವಶಾಲೆಯಲ್ಲಿ ಕಟ್ಟಿದ್ದ ನಲನ ಕುದುರೆಗಳು ಹೇಷಾರವದಿಂದ ತಮ್ಮ ಸ್ವಾಮಿಯ ಸನ್ನಿಧಾನವನ್ನು ಸೂಚಿಸಿ ಕುಣಿದಾಡಿದವು. ದಮಯಂತಿಯ ಮನದಲ್ಲಿ ಶಂಕಾಶತವು ಮೂಡಿಬರುತ್ತಿರಲು ಅವಳು ಇಂತು ಚಿಂತಿಸಿದಳು—'ಈ ರಥಧ್ವಾನವು ನನ್ನ ಕಷ್ಟವು ತೀರಿತೆಂದು ಹೇಳುವಂತಿದೆ. ಸುಗುಣಖನಿಯಾದ ನಲನಿಗಲ್ಲದೆ ಶತಯೋಜನ ದೂರವನ್ನೊಂದೇ ದಿನದಲ್ಲಿ ಬಂದು ಸೇರಲು ಮತ್ತೊಬ್ಬರಿಗೆ ಶಕ್ಯವೇ ಅಲ್ಲ. ಒಂದು ವೇಳೆ ನಲನು ಬಾರದಿದ್ದರೆ ನಾನಿನ್ನು ಜೀವಿಸಿ ಫಲವೇನು? ನಲಬಾಹುಪಂಜರದ ಗಿಳಿಯಾಗದಿದ್ದರೆ, ಅನಲನೇ ನನಗೆ ಗತಿ. ನನ್ನ ಸ್ವಾಮಿಯು ಸತ್ಯಶೀಲನು; ಆಡಿದ ಮಾತು ಸಮಯದಲ್ಲಿ ಪೂರೈಸುವ ಸಮರ್ಥನು; ಕ್ಷಮಾದಾನ ಚತುರನು; ಪರದಾರ ಪರಾಙ್ಮುಖನು; ದಿವಾನಿಶವೂ ಅವನ ಸ್ಮರಣೆಯೇ ಅಶನಪಾನಗಳಾಗಿ ಜೀವಿಸಿರುವೆನು; ಅವನ ದರ್ಶನವಾದರೆ ಸಾಕೆಂದು ನನ್ನ ಹೃದಯವು ಹಾತೊರೆಯುತ್ತಿದೆ.'

ಸೌಧಾಗ್ರಮಂದಿರದಿ ನಿಂತ ದಮಯಂತಿಯು ಅಂಗಳದಲ್ಲಿದ್ದ ರಥಶಾಲೆಯಲ್ಲಿ ಕೂತಿದ್ದ ಬಾಹುಕನನ್ನೂ ವಾರ್ಷ್ಣೇಯನನ್ನೂ ನೋಡಿ ಚಿಂತಿಸಿದಳು—'ನಲನ ರಥಶಬ್ದದಂತೆ ರಥಧ್ವಾನವಿತ್ತು. ಆದರೆ ನಲನು ಕಾಣದಿರುವನಲ್ಲ! ವಾರ್ಷ್ಣೇಯನು ನಲನಿಂದ ಅಶ್ವವಿದ್ಯೆಯನ್ನು ಕಲಿತಿರುವನಾದ್ದರಿಂದ ರಥಧ್ವನಿವು ಅಂತಿತ್ತೋ ಏನು? ಅಥವಾ ಋತುಪರ್ಣನೂ ನಲನಂತೆ ಅಶ್ವವಿದ್ಯಾಚತುರನಾಗಿರುವನೋ? ತಿಳಿಯದಾಗಿರುವೆನು. ಇವನಾರು? ವಿಕೃತರೂಪನಾದರೂ ನಡೆಯಲ್ಲಿ, ತೇಜದಲ್ಲಿ ನಲನಂತೆಯೇ ಇರುವನು!' ಎಂದು ತರ್ಕಿಸಿ ದಮಯಂತಿಯು ನಿಜಸ್ಥಿತಿಯನ್ನು ತಿಳಿಯಲು ನಿಶ್ಚಯಿಸಿ, ಕೇಶಿನಿ ಎಂಬ ಚತುರದಾಸಿಯನ್ನು ಬಾಹುಕನನ್ನು ಪರೀಕ್ಷಿಸಿ ಬರಲು ಕಳಿಸಿದಳು.

ಬಿಡದಿಯ ಮನೆಯಲ್ಲಿದ್ದ ಋತುಪರ್ಣನಿಗೆ ಸ್ವಯಂವರದ ಸಮಾರಂಭ ಕೋಲಾಹಲಗಳು ಕಾಣದೆ ಮಹದಾಶ್ಚರ್ಯವಾಯಿತು. ತಾನಲ್ಲದೆ ಮತ್ತಾವ ರಾಜರೂ ಬಂದಿರಲಿಲ್ಲ; ಸ್ವಯಂವರ ಕಥಾಲಾಪವೇ ಇಲ್ಲ. ಇಂತು ಚಿಂತಿಸುತ್ತಿದ್ದ ಋತುಪರ್ಣನನ್ನು ಭೀಮರಾಜನು ಕಂಡು, ಸ್ವಾಗತವಿತ್ತು ಬಂದ ಕಾರಣವೇನೆಂದು ಕೇಳಿದನು. ಆಗ ಋತುಪರ್ಣನಿಗಾದ ವಿಸ್ಮಯ ವಿಭ್ರಮಗಳನ್ನು ವರ್ಣಿಸಲಾಗದು. ಸ್ತ್ರೀಜನರು ಮಾಡಿದ ತಂತ್ರವನ್ನರಿಯದ ಭೀಮನು ಅಯೋಧ್ಯಾಧಿಪತಿಯು ಹಠಾತ್ತಾಗಿ ಬಂದುದೇತಕ್ಕೆಂದು ತಿಳಿಯದೆ ಆಶ್ಚರ್ಯಭರಿತನಾಗಿದ್ದನು. ಬುದ್ಧಿವಂತನು, ಸತ್ಯಪರಾಕ್ರಮನು ಆದ ಋತುಪರ್ಣನು, ವಿಚಾರಿಸಿ ತಿಳಿಯಲಿಚ್ಛಿಸಿ, ಸ್ವಯಂವರದ ಸುದ್ದಿಯನ್ನೆತ್ತದೆ, ಸುಮ್ಮನೆ ಹಿರಿಯನಾದ ಭೀಮನಿಗೆ ನಮಸ್ಕರಿಸಿ ನೋಡಿ ಹೋಗಲು ಬಂದೆನೆಂದು ಉತ್ತರವಿತ್ತನು. ಒಂದೇ ದಿನದಲ್ಲಿ ಅಷ್ಟುದೂರ ಬಂದವನು ಸುಮ್ಮನೆ ಬಂದಿರಲಾರನೆಂದು ತರ್ಕಿಸಿ, ಭೀಮನು ನಿಜವು ಮುಂದೆ ತಾನಾಗಿ ಹೊರಬೀಳದಿರದೆಂದು ನಿಶ್ಚಯಿಸಿ, 'ಆಗಲಿ! ವಿಶ್ರಾಂತನಾಗು! ಮತ್ತೆ ಕಾಣುವೆ'ನೆಂದು ಹೇಳಿ, ಹೊರಟುಹೋದನು. ಋತುಪರ್ಣನೂ ಭೀಮನಿತ್ತ ರಾಜೋಪಚಾರಗಳನ್ನು ಹೊಂದಿ, ವಿಶ್ರಮಿಸಿದನು.

ಕೇಶಿನಿಯು ಬಾಹುಕನನ್ನು ಸಮೀಪಿಸಿ, "ಮನುಜಶ್ರೇಷ್ಠ! ನಿನಗೆ ಸ್ವಾಗತವು. ಕುಶಲವೇ ನಿನಗೆ? ದಮಯಂತಿಯ ಆಜ್ಞೆಯಿಂದ ಬಂದಿರುವೆನು. ನಿನ್ನನ್ನು ತಿಳಿಯಲಿಚ್ಛಿಸಿರುವಳು ನಮ್ಮ ರಾಜಪುತ್ರಿ. ಎಂದು ಹೊರಟಿರಿ ಅಯೋಧ್ಯೆಯಿಂದ? ಇಲ್ಲಿ ಸೇರಿದುದು ಆವಾಗ? ನಿನ್ನ ಹೆಸರೇನು?"

ಆವಳ ಮಾತಿನ ಅಂತರಾರ್ಥಕ್ಕೆ ಬೆಚ್ಚಿಬಿದ್ದ ಬಾಹುಕನು ಚೇತರಿಸಿ, ಧೈರ್ಯದಿಂದ "ನಾಳೆ ದ್ವಿತೀಯಸ್ವಯಂವರವೆಂದು ಕೇಳಿ, ಋತುಪರ್ಣನು ಅದಕ್ಕಾಗಿ ಬರಲೆಣಿಸಿದನು. ಅಶ್ವಕುಶಲನಾದ ನಾನು ಆವನ ಸಾರಥಿಯಾಗಿ, ಕರೆತಂದಿರುವೆನು. ಇನ್ನೊಬ್ಬ ಸೂತನೂ ಬಂದಿರುವನು. ಅವನನ್ನು ವಾರ್ಷ್ಣೇಯನೆಂಬುವರು. ಅವನು ಹಿಂದೆ ನಲನ ಸಾರಥಿಯಾಗಿದ್ದು ಋತುಪರ್ಣನಲ್ಲಿರುವನು" ಎಂದು ನುಡಿದನು.

ಕೇಶಿನಿಯು " ಇರಲಿ ! ನಿನ್ನ ಹೆಸರೇನು ? ವಾರ್ಷ್ಣೇಯನಿಗೆ ನಲನ ವಿಷಯ ತಿಳಿದಿದೆ ಯಂತೇನು ?" ಎಂದು ಕೇಳಿದಳು. ಬಾಹುಕನು "ನನ್ನನ್ನು ನ-(ಅಲ್ಲ)-ಬಾಹುಕ ನೆಂಬುವರು. ನಲನ ಮಕ್ಕಳನ್ನಿಲ್ಲೇ ಬಿಟ್ಟು, ಅಯೋಧ್ಯೆಯನ್ನು ಸೇರಿದ ವಾರ್ಷ್ಣೇಯ ನಿಗೆ ನಲನ ವಿಷಯ ಗೊತ್ತಾಗುವುದಾದರೂ ಹೇಗೆ ? ನಲನು ತನ್ನನ್ನು ತಾನರಿ ತಿಹನು. ಅನ್ಯರಿಗೆ ಅವನನ್ನರಿಯಲು ಶಕ್ಯವಲ್ಲ" ಎಂದನು. ಕೇಶಿನಿಯು ನಸುನಕ್ಕು "ರಾಜವರನೇ ! ನೀನು ನ-ಬಾಹುಕನೇ ! ಅಂದರೆ ಬಾಹುಕನಲ್ಲವೆಂದೇ ತಿಳಿಯಲೇ ? ಹಿಂದೆ ಪರ್ಣಾದನು ಅಯೋಧ್ಯೆಯ ರಾಜಸಭೆಯಲ್ಲಿ ಹೇಳಿದ

ಗೀ || ವಸನದರ್ಧವ ಕಸಿದೆನ್ನ ವನದಿ ಬಿಟ್ಟು
ಎಲ್ಲಿ ಪೋದೆಯೋ ಪ್ರಿಯತಮ ! ಇಲ್ಲಿ ಮಿಕ್ಕ
ವಸನದರ್ಧವನುಟ್ಟು ನಾ ವ್ಯಸನಪಡುವೆ
ಒಡೆಯ ! ಬಂದೆನ್ನ ಕಣ್ಣೀರನೊರಸು ಬೇಗ

ಎಂಬ ಪದ್ಯಕ್ಕೆ ನೀನು ಏಕಾಂತದಲ್ಲಿ ಪ್ರತಿವಚನವಿತ್ತೆಯಂತೆ ! ಹೌದಾ ? ಹಾಗಾದರೆ ಆ ಪ್ರತಿವಚನವನ್ನು ನಿನ್ನಿಂದ ಇನ್ನೊಮ್ಮೆ ಕೇಳಲು ಕಾತರಳಾಗಿರುವಳು ನಮ್ಮ ದಮಯಂತಿ" ಎಂದಳು.

ಆ ಮಾತನ್ನಾಲಿಸಿದ ಬಾಹುಕನ ಮುಖವು ಬಾಷ್ಪಾಕ್ರಾಂತವಾಯಿತು. ದುಃಖದ ತೆರೆಗಳು ತೋರೆಯಾಗಲು ರೋದಿಸಿ ತಡೆದು ಅವನು "ಕೇಶಿನಿ ! ಕೇಳು ನನ್ನ ಕರುಣಗೀತೆಯನ್ನು !

ಗೀ || ದೈವವಶನಾಗಿ ಕಷ್ಟದಿ ಮತಿಗೆಟ್ಟು
ಬಿಟ್ಟುಹೋದರೆ ಸಹಧರ್ಮಚಾರಿಣಿಯರು
ಸಹಿಸಿ, ನಡೆದೊಡೆ, ಯಶವನ್ನು ಸ್ವರ್ಗವನ್ನು
ಪಡೆವರದಬಿಟ್ಟು ನಿಂದಿಸಿ ಫಲವೇನು ?

ಎಂದು ನುಡಿದು, ಮುಂದೆ ಮಾತಾಡಲಾರದೆ ಬಿಕ್ಕಿ ಅಳತೊಡಗಿದನು. ಅದನ್ನು ಕಂಡು ಕೇಶಿನಿಯು ದುಃಖಾಕ್ರಾಂತಳಾದಳು. ಅವಳು ಅಲ್ಲಿಂದ ತೆರಳಿ, ದಮಯಂತಿಗೆ ಎಲ್ಲ ವಿಚಾರಗಳನ್ನು ತಿಳಿಸಿ, ಬಾಹುಕನೇ ವೇಷಾಂತರದಿಂದ ಬಂದ ನಲನಿರಬಹುದೆಂದು ವಿಜ್ಞಾಪಿಸಿದಳು. ಆಗ ದಮಯಂತಿಯು ದುಃಖವೇ ತಾನಾಗಿ ಮೂಡಿಬಂದಂತೆ 'ಹೋ' ಎಂದು ರೋದಿಸಿ, ಮತ್ತೆ ಧೈರ್ಯವನ್ನು ತಂದುಕೊಂಡು ಕೇಶಿನಿಯನ್ನು ಮತ್ತೆ ಬಾಹುಕನಲ್ಲಿಗೆ ಕಳಿಸಿ, ಅವನು ಮಾಡುವ ಸರ್ವಕಾರ್ಯಗಳನ್ನು ಸೂಕ್ಷ್ಮ ವಾಗಿ ಪರಿಶೀಲಿಸೆಂದಳು. ಬಾಹುಕನಿಗೆ ನೀರನ್ನೂ ಬೆಂಕಿಯನ್ನೂ ಕೊಡಿಸಬೇಡ ವೆಂದಳು. ನಡೆದುದೆಲ್ಲವನ್ನೂ ತನಗೆ ತತ್‌ಕ್ಷಣವೇ ತಿಳಿಸೆಂದಳು. ಸ್ವಲ್ಪಹೊತ್ತಾದ ಮೇಲೆ ಕೇಶಿನಿಯು ತಿರುಗಿ ಬಂದು ಇಂತೆಂದಳು—

"ಅವನು ಜಲಸ್ಥಲಶುದ್ಧಿಯನ್ನು ಮಾಡಿದನು. ಅಂತಹ ಶುಚಿವ್ರತನನ್ನು ನಾನು ದೇವತೆಯೆಂದೇ ತಿಳಿದಿರುವೆನು. ಅವನು ಗಿಡ್ಡಬಾಗಿಲಲ್ಲಿಯೂ ಬಾಗದೇ

ಸೌಭಾಗ್ಯಮಂದಿರದಿ ನಿಂತ ದಮಯಂತಿಯು ಅಂಗಳದಲ್ಲಿದ್ದ ರಥಶಾಲೆಯಲ್ಲಿ ಕೂತಿದ್ದ ಬಾಹುಕನನ್ನೂ ವಾರ್ಷ್ಣೇಯನನ್ನೂ ನೋಡಿ ಚಿಂತಿಸಿದಳು—'ನಲನ ರಥಶಬ್ದದಂತೆ ರಥಧ್ವಾನವಿತ್ತು. ಆದರೆ ನಲನು ಕಾಣದಿರುವನಲ್ಲ! ವಾರ್ಷ್ಣೇಯನು ನಲನಿಂದ ಅಶ್ವವಿದ್ಯೆಯನ್ನು ಕಲಿತಿರುವನಾದ್ದರಿಂದ ರಥಧ್ವಾನವು ಅಂತಿತ್ತೋ ಏನು? ಅಥವಾ ಋತುಪರ್ಣನೂ ನಲನಂತೆ ಅಶ್ವವಿದ್ಯಾಚತುರನಾಗಿರುವನೋ? ತಿಳಿಯದಾಗಿರುವೆನು. ಇವನಾರು? ವಿಕೃತರೂಪನಾದರೂ ನಡೆಯಲ್ಲಿ, ತೇಜದಲ್ಲಿ ನಲನಂತೆಯೇ ಇರುವನು!' ಎಂದು ತರ್ಕಿಸಿ ದಮಯಂತಿಯು ನಿಜಸ್ಥಿತಿಯನ್ನು ತಿಳಿಯಲು ನಿಶ್ಚಯಿಸಿ, ಕೇಶಿನಿ ಎಂಬ ಚತುರದಾಸಿಯನ್ನು ಬಾಹುಕನನ್ನು ಪರೀಕ್ಷಿಸಿ ಬರಲು ಕಳಿಸಿದಳು.

ಬಿಡದಿಯ ಮನೆಯಲ್ಲಿದ್ದ ಋತುಪರ್ಣನಿಗೆ ಸ್ವಯಂವರದ ಸಮಾರಂಭ ಕೋಲಾಹಲಗಳು ಕಾಣದೆ ಮಹದಾಶ್ಚರ್ಯವಾಯಿತು. ತಾನಲ್ಲದೆ ಮತ್ತಾವ ರಾಜರೂ ಬಂದಿರಲಿಲ್ಲ; ಸ್ವಯಂವರ ಕಥಾಲಾಪವೇ ಇಲ್ಲ. ಇಂತು ಚಿಂತಿಸುತ್ತಿದ್ದ ಋತುಪರ್ಣನನ್ನು ಭೀಮರಾಜನು ಕಂಡು, ಸ್ವಾಗತವಿತ್ತು ಬಂದ ಕಾರಣವೇನೆಂದು ಕೇಳಿದನು. ಆಗ ಋತುಪರ್ಣನಿಗಾದ ವಿಸ್ಮಯ ವಿಭ್ರಮಗಳನ್ನು ವರ್ಣಿಸಲಾಗದು. ಸ್ತ್ರೀಜನರು ಮಾಡಿದ ತಂತ್ರವನ್ನರಿಯದ ಭೀಮನು ಅಯೋಧ್ಯಾಧಿಪತಿಯು ಹಠಾತ್ತಾಗಿ ಬಂದುದೇತಕ್ಕೆಂದು ತಿಳಿಯದೆ ಆಶ್ಚರ್ಯಭರಿತನಾಗಿದ್ದನು. ಬುದ್ಧಿವಂತನು, ಸತ್ಯಪರಾಕ್ರಮನು ಆದ ಋತುಪರ್ಣನು, ವಿಚಾರಿಸಿ ತಿಳಿಯಲಿಚ್ಛಿಸಿ, ಸ್ವಯಂವರದ ಸುದ್ದಿಯನ್ನೆತ್ತದೆ, ಸುಮ್ಮನೆ ಹಿರಿಯನಾದ ಭೀಮನಿಗೆ ನಮಸ್ಕರಿಸಿ ನೋಡಿ ಹೋಗಲು ಬಂದೆನೆಂದು ಉತ್ತರವಿತ್ತನು. ಒಂದೇ ದಿನದಲ್ಲಿ ಅಷ್ಟುದೂರ ಬಂದವನು ಸುಮ್ಮನೆ ಬಂದಿರಲಾರನೆಂದು ತರ್ಕಿಸಿ, ಭೀಮನು ನಿಜವು ಮುಂದೆ ತಾನಾಗಿ ಹೊರಬೀಳದಿರದೆಂದು ನಿಶ್ಚಯಿಸಿ, 'ಆಗಲಿ! ವಿಶ್ರಾಂತನಾಗು! ಮತ್ತೆ ಕಾಣುವೆ'ನೆಂದು ಹೇಳಿ, ಹೊರಟುಹೋದನು. ಋತುಪರ್ಣನೂ ಭೀಮನಿತ್ತ ರಾಜೋಪಚಾರಗಳನ್ನು ಹೊಂದಿ, ವಿಶ್ರಮಿಸಿದನು.

ಕೇಶಿನಿಯು ಬಾಹುಕನನ್ನು ಸಮೀಪಿಸಿ, "ಮನುಜಶ್ರೇಷ್ಠ! ನಿನಗೆ ಸ್ವಾಗತವು. ಕುಶಲವೇ ನಿನಗೆ? ದಮಯಂತಿಯ ಆಜ್ಞೆಯಿಂದ ಬಂದಿರುವೆನು. ನಿನ್ನನ್ನು ತಿಳಿಯಲಿಚ್ಛಿಸಿರುವಳು ನಮ್ಮ ರಾಜಪುತ್ರಿ. ಎಂದು ಹೊರಟಿರಿ ಅಯೋಧ್ಯೆಯಿಂದ? ಇಲ್ಲಿ ಸೇರಿದುದು ಆವಾಗ? ನಿನ್ನ ಹೆಸರೇನು?"

ಅವಳ ಮಾತಿನ ಅಂತರಾರ್ಥಕ್ಕೆ ಬೆಚ್ಚಿಬಿದ್ದ ಬಾಹುಕನು ಚೇತರಿಸಿ, ಧೈರ್ಯದಿಂದ "ನಾಳೆ ದ್ವಿತೀಯಸ್ವಯಂವರವೆಂದು ಕೇಳಿ, ಋತುಪರ್ಣನು ಅದಕ್ಕಾಗಿ ಬರಲೆಣಿಸಿದನು. ಅಶ್ವಕುಶಲನಾದ ನಾನು ಅವನ ಸಾರಥಿಯಾಗಿ, ಕರೆತಂದಿರುವೆನು. ಇನ್ನೊಬ್ಬ ಸೂತನೂ ಬಂದಿರುವನು. ಅವನನ್ನು ವಾರ್ಷ್ಣೇಯನೆಂಬುವರು. ಅವನು ಹಿಂದೆ ನಲನ ಸಾರಥಿಯಾಗಿದ್ದು ಋತುಪರ್ಣನಲ್ಲಿರುವನು" ಎಂದು ನುಡಿದನು.

ಕೇಶಿನಿಯು "ಇರಲಿ! ನಿನ್ನ ಹೆಸರೇನು? ವಾರ್ಷ್ಣೇಯನಿಗೆ ನಲನ ವಿಷಯ ತಿಳಿದಿದೆಯಂತೇನು?" ಎಂದು ಕೇಳಿದಳು. ಬಾಹುಕನು "ನನ್ನನ್ನು ನ-(ಅಲ್ಲ)-ಬಾಹುಕನೆಂಬುವರು. ನಲನ ಮಕ್ಕಳನ್ನಿಲ್ಲೀ ಬಿಟ್ಟು, ಅಯೋಧ್ಯೆಯನ್ನು ಸೇರಿದ ವಾರ್ಷ್ಣೇಯನಿಗೆ ನಲನ ವಿಷಯ ಗೊತ್ತಾಗುವುದಾದರೂ ಹೇಗೆ? ನಲನು ತನ್ನನ್ನು ತಾನರಿತಿಹನು. ಅನ್ಯರಿಗೆ ಅವನನ್ನರಿಯಲು ಶಕ್ಯವಲ್ಲ" ಎಂದನು. ಕೇಶಿನಿಯು ನಸುನಕ್ಕು "ರಾಜವರನೇ! ನೀನು ನ-ಬಾಹುಕನೇ! ಅಂದರೆ ಬಾಹುಕನಲ್ಲವೆಂದೇ ತಿಳಿಯಲೇ? ಹಿಂದೆ ಪರ್ಣಾದನು ಅಯೋಧ್ಯೆಯ ರಾಜಸಭೆಯಲ್ಲಿ ಹೇಳಿದ

ಗೀ || ವಸನದರ್ಧವ ಕಸಿದೆನ್ನ ವನದಿ ಬಿಟ್ಟು
ಎಲ್ಲಿ ಪೋದೆಯೋ ಪ್ರಿಯತಮ! ಇಲ್ಲಿ ಮಿಕ್ಕ
ವಸನದರ್ಧವನುಟ್ಟು ನಾ ವ್ಯಸನಪಡುವೆ
ಒಡೆಯ! ಬಂದೆನ್ನ ಕಣ್ಣೀರನೊರಸು ಬೇಗ

ಎಂಬ ಪದ್ಯಕ್ಕೆ ನೀನು ಏಕಾಂತದಲ್ಲಿ ಪ್ರತಿವಚನವಿತ್ತೆಯಂತೆ! ಹೌದಾ? ಹಾಗಾದರೆ ಆ ಪ್ರತಿವಚನವನ್ನು ನಿನ್ನಿಂದ ಇನ್ನೊಮ್ಮೆ ಕೇಳಲು ಕಾತರಳಾಗಿರುವಳು ನಮ್ಮ ದಮಯಂತಿ" ಎಂದಳು.

ಆ ಮಾತನ್ನಾಲಿಸಿದ ಬಾಹುಕನ ಮುಖವು ಬಾಷ್ಪಾಕ್ರಾಂತವಾಯಿತು. ದುಃಖದ ತೆರೆಗಳು ತೊರೆಯಾಗಲು ರೋದಿಸಿ ತಡೆದು ಅವನು "ಕೇಶಿನಿ! ಕೇಳು ನನ್ನ ಕರುಣಗೀತೆಯನ್ನು!

ಗೀ || ದೈವವಶನಾಗಿ ಕಷ್ಟದಿ ಮತಿಗೆಟ್ಟು
ಬಿಟ್ಟುಹೋದರೆ ಸಹಧರ್ಮಚಾರಿಣಿಯರು
ಸಹಿಸಿ, ನಡೆದೊಡೆ, ಯಶವನ್ನು ಸ್ವರ್ಗವನ್ನು
ಪಡೆವರದಬಿಟ್ಟು ನಿಂದಿಸಿ ಫಲವೇನು?

ಎಂದು ನುಡಿದು, ಮುಂದೆ ಮಾತಾಡಲಾರದೆ ಬಿಕ್ಕಿ ಅಳತೊಡಗಿದನು. ಅದನ್ನು ಕಂಡು ಕೇಶಿನಿಯು ದುಃಖಾಕ್ರಾಂತಳಾದಳು. ಅವಳು ಅಲ್ಲಿಂದ ತೆರಳಿ, ದಮಯಂತಿಗೆ ಎಲ್ಲ ವಿಚಾರಗಳನ್ನು ತಿಳಿಸಿ, ಬಾಹುಕನೇ ವೇಷಾಂತರದಿಂದ ಬಂದ ನಲನಿರಬಹುದೆಂದು ವಿಜ್ಞಾಪಿಸಿದಳು. ಆಗ ದಮಯಂತಿಯು ದುಃಖವೇ ತಾನಾಗಿ ಮೂಡಿಬಂದಂತೆ 'ಹೋ' ಎಂದು ರೋದಿಸಿ, ಮತ್ತೆ ಧೈರ್ಯವನ್ನು ತಂದುಕೊಂಡು ಕೇಶಿನಿಯನ್ನು ಮತ್ತೆ ಬಾಹುಕನಲ್ಲಿಗೆ ಕಳಿಸಿ, ಅವನು ಮಾಡುವ ಸರ್ವಕಾರ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸೆಂದಳು. ಬಾಹುಕನಿಗೆ ನೀರನ್ನೂ ಬೆಂಕಿಯನ್ನೂ ಕೊಡಿಸಬೇಡವೆಂದಳು. ನಡೆದುದೆಲ್ಲವನ್ನೂ ತನಗೆ ತತ್‌ಕ್ಷಣವೇ ತಿಳಿಸೆಂದಳು. ಸ್ವಲ್ಪಹೊತ್ತಾದ ಮೇಲೆ ಕೇಶಿನಿಯು ತಿರುಗಿ ಬಂದು ಇಂತೆಂದಳು—

"ಅವನು ಜಲಸ್ಥಲಶುದ್ಧಿಯನ್ನು ಮಾಡಿದನು. ಅಂತಹ ಶುಚಿವ್ರತನನ್ನು ನಾನು ದೇವತೆಯೆಂದೇ ತಿಳಿದಿರುವೆನು. ಅವನು ಗಿಡ್ಡಬಾಗಿಲಲ್ಲಿಯೂ ಬಾಗದೇ

ದೂರಿದನು. ಬಾಗಿಲೇ ಎದ್ದು ದೊಡ್ಡದಾಯಿತು. ಸಣ್ಣ ಕಿಟಕಿಯು ಅವನು ಹೋಗುವಾಗ ವಿಶಾಲವಾಯಿತು. ಅಡಿಗೆ ಮಾಡುವಾಗ ಆ ಮಹಾನುಭಾವನು ಮಾಂಸ ಶಾಕಗಳನ್ನು ತೊಳೆಯಲು ನೀರನ್ನು ಹುಡುಕಿದನು. ನಿನ್ನ ಅಪೇಕ್ಷೆಯಂತೆ ಪಾಕಶಾಲೆಯಲ್ಲಿ ಬರಿ ಕುಂಭಗಳನ್ನೇ ಇಟ್ಟಿದ್ದೆವು. ಅವನು ನೋಡುವ ಮಾತ್ರದಿಂದಲೇ ಪಾತ್ರೆಗಳಲ್ಲಿ ನೀರು ತುಂಬಿ ಹರಿಯಿತು. ಬೆಂಕಿ ಬೇಕಾದಾಗ ಹುಲ್ಲಿನ ಕಂಟೆಯನ್ನು ಕೈಲಿ ಹಿಡಿದು ಸೂರ್ಯನಿಗೆ ತೋರಿಸಿದಾಕ್ಷಣ ಅದು ಉರಿಯತೊಡಗಿತು. ಇನ್ನೂ ಆಶ್ಚರ್ಯವಾದುದನ್ನು ಕೇಳು ! ಬೆಂಕಿಯನ್ನು ಬರಿಗೈಲಿ ಮುಟ್ಟಾಡಿಸುವ ಅವನ ಕೈ ಬೊಬ್ಬೆ ಏಳಲಿಲ್ಲ. ಕೈಗಳಲ್ಲಿ ಹೂವುಗಳನ್ನು ಹಿಡಿದು ಹಿಸುಕಿದರೂ ಅವು ಬಾಡಲಿಲ್ಲ ; ಇನ್ನೂ ಕೋಮಲವೂ ಸುಗಂಧಿತವೂ ಆದವು."

ದಮಯಂತಿಯು ಆಗ ಬಾಹುಕನೇ ನಲನೆಂದರಿತಳು. ಹರ್ಷಶೋಕಗಳು ಇಕ್ಕೆಲಗಳಿಂದ ಉಕ್ಕಿಬರುವ ಅವಳ ಹೃದಯವು ವೇಗವಾಗಿ ಬಡಿಯತೊಡಗಿತು. ಅವಳು ಅಳುತ್ತಾ ಕೇಶಿನಿಯನ್ನು ಕಳಿಸಿ, ಪಾಕಶಾಲೆಯಲ್ಲಿ ನಲನು ಮಾಡಿದ ಶಾಕವನ್ನು ಸ್ವಲ್ಪ ತರಿಸಿದಳು. ಅದನ್ನು ರುಚಿನೋಡಿ, ದಮಯಂತಿಯು ಸಂಶಯದೂರಳಾದಳು. ಆಗ ಅವಳು ಕೇಶಿನಿಯೊಡನೆ ತನ್ನ ಮಕ್ಕಳನ್ನೂ ನಲನಲ್ಲಿಗೆ ಕಳಿಸಿದಳು. ಅವರನ್ನು ನೋಡಿ ನಲನ ದುಃಖದ ಕೆರೆಯ ಕಟ್ಟೆ ಒಡೆದಂತಾಯಿತು. ಅವನು ಧಾವಿಸಿ, ಮಕ್ಕಳನ್ನು ತಬ್ಬಿ, ತೊಡೆಗಳಮೇಲೆ ಕೂಡಿಸಿ, ಮುದ್ದಾಡಿದನು. ಸಹಜವಾದ ಪಿತೃಭಾವವನ್ನು ತೋರಿದ ನಲನು ಕೇಶಿನಿಯನ್ನು ನೋಡಿ ಲಜ್ಜಿತನಾದನು. ಮಕ್ಕಳನ್ನು ಕೆಳಗಿಳಿಸಿ, ಅವಳಿಗಿಂತೆಂದನು--"ಕೇಶಿನಿ ! ಅನ್ಯಥಾ ತಿಳಿಯಬೇಡ ! ಇವರು ನನ್ನ ಮಕ್ಕಳಂತೆ ಇರುವರು. ಇವರನ್ನು ನೋಡಿ ಅವರು ಸ್ಮೃತಿಪಟಲದಲ್ಲಿ ಹಾದುಹೋದಂತಾಯಿತು. ಇರಲಿ ! ನೀನು ಮತ್ತೆ ಇಲ್ಲಿಗೆ ಬರಬೇಡ ! ದೇಶಾಂತರದ ಅತಿಥಿಗಳಾದ ನಮಗೆ ಅಂತಃಪುರ ರಮಣಿಯರ ಕೂಡ ಸಂವಾದ ಉಚಿತವಲ್ಲ !" ಎಂದು ಅವಳನ್ನು ಕಳಿಸಿದನು.

ಕೇಶಿನಿಯ ಮುಖದಿಂದ ಸರ್ವವನ್ನರಿತು ದಮಯಂತಿಯು ತಾಯಿಯೊಡನೆ ಆಲೋಚಿಸಿ, ಮುಂದಿನ ಕಾರ್ಯವನ್ನು ನಿಶ್ಚಯಿಸಿದಳು. ಭೀಮರಾಜನ ಅನುಮತಿಯಿಂದ ಬಾಹುಕನನ್ನು ತನ್ನ ಅಂತಃಪುರಕ್ಕೆ ಕರೆತರಿಸಿದಳು.

ನಲನು ದಮಯಂತಿಯನ್ನು ನೋಡಿ, ದುಃಖವನ್ನು ತಡೆಯಲಾರದೆ ದಳದಳ ಕಣ್ಣೀರು ಸುರಿಸಿದನು. ಅದೇ ಅರ್ಧವಸನ ಉಟ್ಟು, ಕೃಶಳಾದ ದಮಯಂತಿಯೂ ನಲನ ವಿಕೃತವೇಷವನ್ನು ಕಂಡು, ತೀವ್ರಶೋಕಾಕುಲಳಾಗಿ, ಕಣ್ಣೀರಿನಿಂದ ಅವನ ಕಾಲನ್ನು ತೊಳೆದು, ಮೆಲ್ಲನೆ ಅವನಿಗಿಂತೆಂದಳು—"ಮಹನೀಯನೇ ! ವಿಪಿನದಲ್ಲಿ ನಿರಪರಾಧಿನಿಯು, ಅನುವ್ರತಳು ಆದ ಪತ್ನಿಯನ್ನು ಮಲಗಿದಾಗ ಬಿಟ್ಟುಹೋದ ನಲನಂತೆ ನಿಷ್ಕರುಣರನ್ನು ನೀನೆಲ್ಲಾದರೂ ಕಂಡಿರುವೆಯಾ? ನನ್ನಿಂದ ಆದ ಅಪರಾಧವಾದರೂ ಏನು ? ದೇವಪರಿವೃಢರನ್ನು ಬಿಟ್ಟು, ನಲನನ್ನು ವರಿಸಿದೆನು. ಅವನನ್ನು

ನೆರಳಿನಂತೆ ಅನುಸರಿಸಿದೆನು. ಅವನಿಂದ ಮಕ್ಕಳನ್ನೂ ಪಡೆದಿರುವೆನು. ಅವನಿಗೋಸ್ಕರ ತಪಿಸಿ, ಅವನಲ್ಲಿ ಮನವಿಟ್ಟು, ಅವನವಳಾಗಿ, ಅವನ ವಿಯೋಗವಹ್ನಿಯಿಂದ ಬೆಂದು ನೊಂದಿರುವೆನು. ಮದುವೆಯ ಕಾಲದಲ್ಲಿ ನನ್ನನ್ನಗಲಿ ಕ್ಷಣವಾದರೂ ಇರೆನೆಂದು ಮಾಡಿದ ಪ್ರತಿಜ್ಞೆ ಏನಾಯಿತು ?" ಎಂದು ರೋದಿಸಿದ ಪತ್ನಿಯ ದುಃಖದಿಂದ ನಲನ ಶೋಕವಹ್ನಿಯು ಉರಿದೆದ್ದಂತಾಯಿತು. ಅವನು ಧಾರಾಕಾರವಾಗಿ ಸುರಿಯುವ ಕಣ್ಣೀರನ್ನು ಒರೆಸಿಕೊಂಡು ಗದ್ಗದಿತಕಂಠದಿಂದ ಇಂತೆಂದನು—"ದಮಯಂತಿ ! ನಾನೇನು ಮಾಡಲಿ ಹೇಳು ? ರಾಜ್ಯವು ನಷ್ಟವಾಯಿತು. ಪ್ರಜರು ಮಾತಾಡಿಸ ದಾದರು. ಅರಣ್ಯದಲ್ಲಿ ನಿನ್ನ ಕಷ್ಟಗಳನ್ನು ನೋಡಿ, ಸಹಿಸಲಾರದೆ ನಾನು ಬಿಟ್ಟು ಹೋದರೆ, ಏಕಾಕಿಯಾದ ನೀನು ವಿಧಿಯಿಲ್ಲದೆ, ವಿದರ್ಭವನ್ನು ಸೇರಿ, ಮಕ್ಕಳೊಡನೆ ಕ್ಷೇಮದಿಂದಿರಲು ಅನುಕೂಲವಾದೀತೆಂದು ಓಡಿಹೋದುದು ನಿಜ ! ಆದರೆ ಅದು ನನ್ನಲ್ಲಿದ್ದ ಪಾಪಿ ಕಲಿಯ ಕೆಲಸವೆಂದು ತಿಳಿ ! ನಿನ್ನ ಶಾಪದಿಂದ ಅವನು ಬಹುದುಃಖ ದಿಂದ ನನ್ನಲ್ಲಿದ್ದನು. ನನ್ನ ತಪೋಬಲದಿಂದಲು, ಮಹಾಪ್ರಯತ್ನದಿಂದಲು ಅವನನ್ನು ನಿರ್ಜಿಸಿರುವೆನು. ಆ ಪಾಪಿಯು ನನ್ನನ್ನು ಬಿಟ್ಟುಹೋದನು. ನಿನ್ನನ್ನು ನೋಡಿ ಮಕ್ಕಳನ್ನೂ ಕಂಡು ದ್ವಿತೀಯ ಸ್ವಯಂವರದಲ್ಲಿ ನೀನಾರಿಂದಲೋ ಕೂಡಿ ಹೋದ ಮೇಲೆ, ಸಾಯಲೆಣಿಸಿ, ನಾನು ಋತುಪರ್ಣನ ಮಾತಿಗೆ ಸಮ್ಮತಿಸಿ, ಸಾರಥಿಯಾಗಿ ಅವರನ್ನಿಲ್ಲಿಗೆ ಒಂದು ದಿನದಲ್ಲೇ ಕರೆತಂದೆನು. ಆಯಿತು ! ನಿನ್ನನ್ನು ಸುತರನ್ನು ನೋಡಿದೆನು. ಆದರೆ ಅನುರಕ್ತನಾದ ಪ್ರಿಯ ಭರ್ತನನ್ನು ಪರಿಭವಿಸಿ, ಬಿಟ್ಟು, ಬೇರೆ ಗಂಡನನ್ನು ವರಿಸಲೆಣಿಸುವುದು ಸಾಧ್ವಿಯ ಲಕ್ಷಣವೇನೋ ವಿಚಾರಿಸಿ ನೋಡು !"

ಆ ಮಾತನ್ನಾಲಿಸಿ ದಮಯಂತಿಯು ಬಿರುಗಾಳಿಗೆ ಸಿಕ್ಕಿದ ಬಾಳೆಯ ಮರದಂತೆ ಗಡಗಡ ನಡುಗಿದಳು. ಭಯದಿಂದ ಅವಳ ಮುಖವು ಬಿಳುಪೇರಿತು. ಕಣ್ಣಲ್ಲಿ ನೀರು ನಿಲ್ಲದೆ ಹರಿದು ಬಂತು. ಅವಳು ನಲನಿಗೆ ಕೈಜೋಡಿಸಿ, ಇಂತೆಂದಳು—"ಪ್ರಿಯ, ನಾನು ನಿರ್ದೋಷಿಯಾಗಿರುವೆನು. ದೇವಶ್ರೇಷ್ಠರನ್ನು ಪರಿತ್ಯಜಿಸಿ, ನಿನ್ನನ್ನು ವರಿಸಿದ ದಮಯಂತಿ ಎರಡನೇ ಸ್ವಯಂವರದಲ್ಲಿ, ಬೇರೆ ಪತಿಯನ್ನರಸುವಳೇ ? ನೀನು ಬರು ವಂತೆ ಉಪಾಯವನ್ನು ಹೂಡಿದೆನು. ಪರ್ಣಾದನು ನಿನ್ನ ಪ್ರತಿವಚನವನ್ನು ತಂದು ನಿವೇದಿಸಿದಾಗ ವೇಷಾಂತರದಿಂದ ನೀನು ಅಯೋಧ್ಯೆಯಲ್ಲಿರಬಹುದೆಂದೂಹಿಸಿದೆನು. ನಿನಗಲ್ಲದೆ ಮತ್ತೊಬ್ಬರಿಗೆ ನೂರು ಯೋಜನ ದೂರವನ್ನು ಒಂದು ದಿನದಿ ಕ್ರಮಿಸಿ ಬರಲು ಶಕ್ಯವಿಲ್ಲವೆಂದರಿತೇ, ನಾಳಿದ್ದು ಮದುವೆ ಎಂದು ಹೇಳಿಕಳಿಸಿದೆನು. ಇದು ಸತ್ಯವು. ಮನಸಾ ನಿನಗಪಚಾರಮಾಡಿಲ್ಲವೆಂದು ನಿನ್ನ ಪಾದಪದ್ಮಗಳನ್ನು ಮುಟ್ಟಿ, ಆಣೆ ಮಾಡಿ ಹೇಳುವೆನು. ನಾನು ಪಾಪವನ್ನೆಣಿಸಿದ್ದರೆ ಭೂತಸಾಕ್ಷಿಯಾದ ವಾಯು ದೇವನು ನನ್ನನ್ನು ಕೊಂದು ಕೆಡಹಲಿ. ಸೂರ್ಯಚಂದ್ರಾದಿದೇವತೆಗಳು ನನ್ನನ್ನು ಸುಟ್ಟುಬಿಡಲಿ. ಆ ದೇವತೆಗಳೇ ನನ್ನ ಪಾತಿವ್ರತ್ಯಕ್ಕೆ ಸಾಕ್ಷಿಗಳಾಗಿರುವರು" ಎಂದು ದಮಯಂತಿಯು ಅನ್ನುತ್ತಲೇ ಆಕಾಶದಿಂದ ವಾಯುದೇವನು ಇಂತೆಂದನು—

"ರಾಜನ್ ! ಇವಳು ಪರಿಶುದ್ಧಳು. ಈ ಮೂರು ವರ್ಷಗಳ ಕಾಲ ಇವಳ ಪಾವಿತ್ರ್ಯ ವನ್ನು ನಾವು ಪರೀಕ್ಷಿಸಿ, ಕಾಪಾಡಿರುವೆವು. ನೀವೀರ್ವರೂ ಪರಸ್ಪರ ಪ್ರೇಮದಿಂದ ಶುದ್ಧರಾಗಿರುವಿರಿ. ದಮಯಂತಿಯನ್ನು ಸ್ವೀಕರಿಸು !"

ಆಗ ಆಕಾಶದಿಂದ ಪುಷ್ಪವೃಷ್ಟಿಯಾಯಿತು. ದೇವದುಂದುಭಿಗಳು ಮೊಳಗಿದವು. ಅದನ್ನು ಕಂಡು, ಶಂಕಾರಹಿತನಾದ ನಲನು ನಾಗರಾಜನನ್ನು ನೆನೆದು, ವಸ್ತ್ರದ್ವಯವನ್ನುಟ್ಟು, ತನ್ನ ಸ್ವರೂಪದಿಂದ ವಿರಾಜಿಸಿದನು. ನಲನನ್ನು ನೋಡಿ, ಗಟ್ಟಿಯಾಗಿ ಅಳುತ್ತಾ ಬಂದು 'ಹಾ ! ಮಹಾರಾಜ ! ಹಾ ಪ್ರಾಣನಾಥ !' ಎಂದು ದಮಯಂತಿಯು ನಲನನ್ನು ಆಲಿಂಗಿಸಿ, ಸಹಕಾರವನ್ನಾಶ್ರಯಿಸಿದ ಪಾರಿಜಾತಲತೆಯಂತೆ ಶೋಭಿಸಿದಳು. ನಲನು ತನ್ನ ಮಕ್ಕಳನ್ನಪ್ಪಿ, ಮುದ್ದಾಡಿ, ಮೂರ್ಧವನ್ನಾಘ್ರಾಣಿಸಿ, ಮಹಾನಂದಭರಿತನಾದನು. ದಮಯಂತೀ-ನಿಷಧರಾಜರು ಹಿಂದಿನ ಕಥಾಸಲ್ಲಾಪದಿಂದ ಅಂದಿನ ರಾತ್ರಿಯನ್ನು ಸುಖವಾಗಿ ಕಳೆದರು. ಒಣಗಿನಿಂತ ಸಸ್ಯಜಾಲವು ವರ್ಷಾಜಲದಿಂದ ಮತ್ತೆ ಬದುಕಿ ಬೆಳೆಯುವಂತೆ, ದಮಯಂತಿಯು ನಲಸಮಾಗಮದಿಂದ ಆನಂದಕಂದಳಿತ ಹೃದಯಾರವಿಂದಳಾದಳು. ಭೀಮರಾಜನು ಎಲ್ಲ ಸಮಾಚಾರವನ್ನು ಕೇಳಿ ತಿಳಿದು ಸಂತೋಷಪಟ್ಟನು.

ಮರುದಿನ ಬೆಳಗಾಗಲು ನಲನು ಅಲಂಕೃತನಾಗಿ, ಭೀಮರಾಜನನ್ನು, ಋತುಪರ್ಣನನ್ನು, ಕಂಡನು. ಅಳಿಯನನ್ನಪ್ಪಿ, ಸತ್ಕರಿಸಿ, ಭೀಮರಾಜನು ದೇವಾಲಯಗಳಲ್ಲಿ ಪೂಜೆಗಳನ್ನು ನಡೆಸಿದನು. ನಗರ ಜನರು ಸಂತೋಷದಿಂದ ಮನೆಗಳನ್ನು ಧ್ವಜಪತಾಕಾತೋರಣಗಳಿಂದ ಅಲಂಕರಿಸಿ, ಮಹೋತ್ಸವಗಳನ್ನು ನಡೆಸಿದರು. ಋತುಪರ್ಣನು ಬಾಹುಕನೇ ನಲನೆಂದು ತಿಳಿದು ಆ ದಂಪತಿಗಳ ಪುನಃಸಮಾಗಮವಾದುದಕ್ಕೆ ಸಂತಸಿಸಿದನು. ನಲನನ್ನು ಸತ್ಕರಿಸಿ, ಋತುಪರ್ಣನು "ಮಹಾರಾಜ ! ಒಳ್ಳೇದಾಯಿತು. ದೇವಾನುಗ್ರಹದಿಂದ ಸತೀಸುತರನ್ನು ಕೂಡಿದೆ. ಮುಂದೆ ರಾಜ್ಯವನ್ನೂ ಹೊಂದಿ ಸುಖವಾಗಿರು ! ನಾನು ಹೋಗಿಬರುವೆನು. ನನ್ನಲ್ಲಿದ್ದಾಗ ನಿನ್ನನ್ನರಿಯದೆ ನಾನು ಮಾಡಿರಬಹುದಾದ ಅಪರಾಧಗಳನ್ನು ಕ್ಷಮಿಸು !" ಎಂದು ಪ್ರಾರ್ಥಿಸಿದನು. ನಲನು ಅಯೋಧ್ಯಾಪತಿಗೆ ಇಂತೆಂದನು—"ರಾಜನ್ ! ನಿನ್ನಿಂದ ಯಾವ ಅಪರಾಧವೂ ನಡೆದಿಲ್ಲ. ಹಿಂದಿನಂತೆ ಪ್ರಿಯಸಖನಾಗಿ, ನನ್ನ ಅಪಚಾರಗಳನ್ನು ಮರೆತು, ನಿನ್ನ ಅಕ್ಷ ಹೃದಯಕ್ಕೆ ತಕ್ಕ ಪ್ರತಿನಿಧಿಯಲ್ಲದಿದ್ದರೂ ನನ್ನ ಅಶ್ವಹೃದಯವನ್ನು ಸ್ವೀಕರಿಸು" ಎಂದು ಅವನಿಗೆ ಅಶ್ವವಿದ್ಯೆಯನ್ನು ಕೊಟ್ಟನು. ಋತುಪರ್ಣನು ವಾರ್ಷ್ಣೇಯನನ್ನು ನಲನಿಗೊಪ್ಪಿಸಿ, ಬೇರೆ ಸೂತನಿಂದ ಕೂಡಿ ಅಯೋಧ್ಯೆಗೆ ತೆರಳಿದನು.

ನಲರಾಜನು ವಿದರ್ಭಪುರಿಯಲ್ಲಿ ಒಂದು ತಿಂಗಳಿದ್ದು, ಮಾವನ ಅಪ್ಪಣೆಯನ್ನು ಪಡೆದು, ನಿಷಧಪುರಿಗೆ ಬಂದನು. ಒಂದೇ ರಥದಿಂದ, ಕೆಲಪರಿವಾರದಿಂದ, ಹದಿನಾರು ಗಜಗಳಿಂದ, ಐವತ್ತು ಕುದುರೆಸವಾರರಿಂದ, ಆರುನೂರು ಕಾಲ್ಬಲದಿಂದ ಕೂಡಿ

ಬಂದ ನಲರಾಜನಿಗೆ ಪುರಜನರು ಸ್ವಾಗತವಿತ್ತು ಸತ್ಕರಿಸಿದರು. ನಲನು ಪುಷ್ಕರನನ್ನು ಕಂಡು, ಮತ್ತೆ ಜೂಜಿಗೆಂದು ಕರೆದನು. ಒಂದೇ ಪಣದಲ್ಲಿ ಸರ್ವಸ್ವವನ್ನಿಟ್ಟು ಉಭಯರು ಮಹಾರೋಷದಿಂದ ಲೆತ್ತವಾಡತೊಡಗಿದರು. ಯುದ್ಧವಾದರೂ ಸರೀ ಎಂದು ನಲನು ದ್ವಂದ್ವಯುದ್ಧಕ್ಕೆ ಕರೆದಾಗ ಪುಷ್ಕರನು ಅವನ ಶೌರ್ಯವನ್ನರಿತು ಹೆದರಿ, ಜೂಜಿಗೆ ಸಮ್ಮತಿಸಿ ಇಂತೆಂದನು—

"ನಲರಾಜ ! ದ್ಯೂತವೇ ಆಗಲಿ ! ಎಲ್ಲವನ್ನೂ ಒಂದೇ ಪಣದಲ್ಲಿಟ್ಟು ಆಡೋಣ! ದಮಯಂತಿಯು ಈಗಲಾದರೂ ನನ್ನ ಪಾಲಾಗುವಳು" ಎಂದು ನುಡಿದ ಪುಷ್ಕರನ ಮಾತಿಗೆ ಕಟಕಟ ಹಲ್ಲು ಕಡಿದು ಕೆಂಗಣ್ಣನಾಗಿ, ನಲನು ಅವನನ್ನು ಸಂಹರಿಸಿಬಿಡಲು ಹವಣಿಸಿ ಮತ್ತೆ ತಡೆದು, ಜೂಜಿಗೆ ಕೂತನು. ರತ್ನ ಕೋಶಗಳು ಸೇನಾ ರಾಜ್ಯಗಳು, ನಗರ ದೇಶಗಳು ಎಲ್ಲವನ್ನೂ ಕೊಟ್ಟು ಪುಷ್ಕರನು ಸೋತನು. ಆಗ ನಲನು ನಗುತ್ತಾ ಇಂತೆಂದನು—"ನೀಚಾ ! ನನ್ನದಾದ ರಾಜ್ಯಾದಿಗಳನ್ನು ಕಪಟೋಪಾಯದಿಂದ ಅಪಹರಿಸಲೆಣಿಸಿದ ನಿನಗೆ ವಧೆಯೇ ತಕ್ಕ ಶಿಕ್ಷೆ ! ನನ್ನ ಪ್ರಾಣಾಧಿಕಳಾದ ದಮಯಂತಿಯ ಮೇಲೆ ಮನಸ್ಸಿಟ್ಟ ನಿನ್ನ ಗುಂಡಿಗೆಯನ್ನು ಸೀಳಬೇಕಿತ್ತು. ಆದರೆ ಇನ್ನೋರ್ವರ ದೋಷವನ್ನು ಎಣಿಸದ ನನ್ನಿಂದ ಪ್ರಾಣದಾನವನ್ನು ಪೊಂದಿರುವೆ ; ದಮಯಂತೀದಾಸನಾಗಿ ಜೀವಿಸುಹೋಗು ! ಹಿಂದೆ ನೀನು ಗೆದ್ದುದು ನಿನ್ನ ಜಾಣತನವಲ್ಲ; ಕಲಿಯು ನಿನ್ನಲ್ಲಿದ್ದು ಗೆದ್ದನು. ಮೂಢ! ನಿನ್ನ ರಾಜ್ಯವೂ ನನಗೆ ಬೇಡ. ಹಿಂದೆ ಮಾಡಿದಂತೆ ಬಂಧು ಪ್ರೀತಿಯನ್ನು ಮಾಡಿ, ಬಿಟ್ಟಿರುವೆನು. ಹೋಗಿ ಸುಖದಿಂದಿರು !" ಆ ಮಾತನ್ನಾಲಿಸಿ ಪುಷ್ಕರನು ಲಜ್ಜಿತನಾದನು. ಎದ್ದು ನಲನಿಗೆ ವಂದಿಸಿ, "ಪುಣ್ಯಶ್ಲೋಕ ! ನಿನ್ನಂತಹ ದಯಾಮಯರೂ, ನನ್ನಂತಹ ಪಾಪಿಗಳೂ ಇಲ್ಲ. ಸಾವಿರ ವರ್ಷ ಬಾಳು! ನಿನ್ನ ಕೀರ್ತಿಯು ಮೂಲೋಕಗಳಲ್ಲಿ ಬೆಳಗಲಿ! ಪ್ರಾಣದಾನ ರಾಜ್ಯದಾನಗಳಿಗೆ ಕೃತಜ್ಞನಾಗಿರುವೆನು" ಎಂದು ಸ್ತುತಿಸಿ, ಬೀಳ್ಕೊಂಡು ತನ್ನ ದೇಶಕ್ಕೆ ಪಯಣಿಸಿದನು.

ನಲನು ಪುರಜನರನ್ನು ಯಥೋಚಿತವಾಗಿ ಸತ್ಕರಿಸಿ, ಇಂದ್ರನು ದೇವತೆಗಳನ್ನಂತೆ ಅವರನ್ನು ಸಂತೋಷಪಡಿಸಿದನು. ಪುರಜನರು ಆನಂದದಿಂದ ನಗರವನ್ನು ಅಲಂಕರಿಸಿ, ಮಹೋತ್ಸವವನ್ನು ಮಾಡಿ ಕೃತಾರ್ಥರಾದರು.

ಭೀಮರಾಜನು ಎಲ್ಲ ಸುದ್ದಿಯನ್ನು ತಿಳಿದು ಆನಂದಪಟ್ಟನು. ಸುದೇವ-ಪರ್ಣಾದರನ್ನು ವಿಶೇಷವಾಗಿ ಸತ್ಕರಿಸಿ, ಅವರ ಆಶೀರ್ವಾದ ಪಡೆದ ದಮಯಂತಿಯನ್ನೂ ಮಕ್ಕಳನ್ನೂ ವಾರ್ಷ್ಣೇಯನಿಂದ ನಿಷಧಪುರಿಗೆ ಕಳಿಸಿದನು. ಪ್ರಿಯಸತೀಸುತಯುತ ನಲನು ಬಹುಕಾಲ ಸುಖದಿಂದಿದ್ದನು. ಜಂಬೂದ್ವೀಪವನ್ನು ಗೆದ್ದು, ಚಕ್ರವರ್ತಿಯಾದನು. ಅನೇಕ ಯಜ್ಞಗಳನ್ನು ಮಾಡಿ ಪ್ರಖ್ಯಾತನಾದನು.

ಧರ್ಮರಾಜ ! ನಲನಂತೆ ಶತ್ರುಗಳನ್ನು ಗೆದ್ದು, ನಿನ್ನ ರಾಜ್ಯವನ್ನು ಪಡೆದು, ಸತೀಸೋದರ ಸಹಿತನಾಗಿ ಸುಖಿಯಾಗಿರುವೆ. ಶ್ರೀಕೃಷ್ಣನ ದಯವಿದೆ ನಿನ್ನಲ್ಲಿ.

ಜೂಜಿನಿಂದ ಕಷ್ಟಪಟ್ಟ ನಲನಂತೆ ನೀನೂ ಕಷ್ಟಪಟ್ಟೆ, ನಿಜ ! ಆದರೆ ಅವನು ಏಕಾಕಿಯಾದ, ವಸ್ತ್ರರಹಿತನಾದ, ನಾನಾ ಪೀಡೆಗೊಳಗಾದನು. ನೀನು ದೇವಸದೃಶರಾದ ತಮ್ಮಂದಿರಿಂದಲು, ದ್ರೌಪದೀದೇವಿಯಿಂದಲು ಕೂಡಿರುವೆ. ಮಹಾರಣ್ಯದಲ್ಲಿಯೂ ನಿಮಗೆ ಸುಖವೇ ಲಭಿಸುತ್ತಿದೆ. ಬ್ರಾಹ್ಮಣರು ನಿನ್ನನ್ನಾಶೀರ್ವದಿಸುತ್ತ, ಹೋಮ ಜಪ ಸ್ವಾಧ್ಯಾಯ ನಿರತರಾಗಿ, ನಿಮ್ಮ ಶ್ರೇಯಃಕಾಂಕ್ಷಿಗಳಾಗಿರುವರು. ಇನ್ನೇಕೆ ನಿನಗೆ ಚಿಂತೆ ?

ಕರ್ಕೋಟಕ ನಾಗರಾಜ ! ದಮಯಂತೀ ದೇವಿ ! ನಲರಾಜ ! ಋತುಪರ್ಣ-ರಾಜರ್ಷೇ ! ಎಂದು ಸ್ಮರಿಸಿದ ನರನು ಕಲಿಬಾಧಾನಿರ್ಮುಕ್ತನಾಗುವನು. ಈ ಇತಿಹಾಸವನ್ನು ಕೇಳಿ, ಮನುಜನು ಕಲಿಯನ್ನು ನಾಶಗೊಳಿಸಲು ಶಕ್ತನಾಗುವನು. ಅವನ ವ್ಯಸನಗಳೆಲ್ಲವೂ ಪರಿಹೃತವಾಗುವವು. ನಲಚರಿತ್ರೆಯನ್ನು ಹೇಳಿದವರು, ಕೇಳಿದವರು ಕೂಡ ಸರ್ವಾನಿಷ್ಟಪರಿಹಾರವನ್ನು, ಇಷ್ಟಪ್ರಾಪ್ತಿಯನ್ನು ಪೊಂದುವರು. ಅವರು ಪುತ್ರ ಪೌತ್ರಾದಿ ಸಂಪದ್ಭರಿತರಾಗಿ, ಆರೋಗ್ಯದಿಂದ ಚಿರಕಾಲ ಸುಖವಾಗಿ ಬಾಳುವರು. ಧರ್ಮರಾಜ ! ನನ್ನಿಂದ ಅಕ್ಷಹೃದಯವನ್ನು ಸ್ವೀಕರಿಸು. ಮುಂದೆ ಶಕುನಿಯ ಭಯವೂ ನಿನಗಿಲ್ಲದಾಗುವುದು, ಎಂದು ಬೃಹದಶ್ವನು ನಲಚರಿತ್ರೆಯನ್ನು ಮುಗಿಸಿ, ಧರ್ಮಜನಿಗೆ ಅಕ್ಷಹೃದಯವನ್ನಿತ್ತು, ಪಾಂಡವರನ್ನು ಬೀಳ್ಕೊಂಡು ತೀರ್ಥದರ್ಶನಕ್ಕೆಂದು ಹೊರಟುಹೋದನು.

## ತೀರ್ಥಯಾತ್ರೆ—ಪ್ರಯಾಗಾದಿ ಕ್ಷೇತ್ರಗಳು

ಧರ್ಮರಾಜನು ತೀರ್ಥಯಾತ್ರೆ ಮಾಡಿಕೊಂಡು ಬಂದ ಬ್ರಾಹ್ಮಣರಿಂದ ಅರ್ಜುನನು ವಾಯುಭಕ್ಷನಾಗಿ ಕಡು ತೀವ್ರ ತಪವನ್ನು ಮಾಡುತ್ತಿರುವನೆಂದು ತಿಳಿದು ಪ್ರಿಯ ಸೋದರನಾದ ಅವನ ವಿರಹದಿಂದ ನೊಂದನು. ಅವನ ತೀವ್ರ ತಪೋನಿರತಿಯನ್ನು ಕೇಳಿ ಅನುತಾಪದಿಂದ ವಿಹ್ವಲನಾದನು. ಇಂದ್ರಸಮ ವಿಕ್ರಮನು, ಸಂಗ್ರಾಮ ವಿಜಯಿಯು ಆದ ವಿಜಯನ ವಿರಹದಿಂದ ಪಾಂಡವರು ದುಃಖಶೋಕ ಮಗ್ನರಾದರು. ಪಕ್ಕಗಳನ್ನು ಕಡಿದ ಪಕ್ಷಿಗಳಂತೆ, ದಾರದಿಂದ ಜಾರಿಬಿದ್ದ ಮಣಿಗಳಂತೆ ದಿಕ್ಕೆಟ್ಟು ಮನೋಮೋದರಹಿತರಾದರು. ಅವನ ಬರುವಿಕೆಯನ್ನೇ ಎದುರು ನೋಡುತ್ತಾ, ಮಳೆಗಾಗಿ ಕಾದಿರುವ ಚಾತಕಗಳಂತೆ ಹಂಬಲಿಸುತ್ತಿದ್ದರು.

ಒಂದು ದಿನ ಪಾಂಚಾಲಿಯು ಭೀಮನನ್ನು ನೋಡಿ, ಅರ್ಜುನವಿರಹಕರ್ಶಿತಳಾಗಿ ಇಂತೆಂದಳು—"ಕಾರ್ತವೀರ್ಯಾರ್ಜುನ ತುಲ್ಯನಾದ ನಮ್ಮ ಅರ್ಜುನನಿಲ್ಲದೆ, ವನವೆಲ್ಲವೂ ಶೂನ್ಯವಾಗಿ, ನಿರಾನಂದವಾಗಿದೆ. ಮದಗಜಗಮನನು, ರಮಣೀಯನು ಆದ ಸವ್ಯಸಾಚಿಯ ಧನುಷ್ಟಂಕಾರವು ಪ್ರತಿಧ್ವನಿಸುತ್ತಿದ್ದ ಕಾಮ್ಯಕವನವು ನಿಶ್ಶಬ್ದವಾಗಿ, ಪುಷ್ಪಫಲಭರಿತವಾಗಿದ್ದರೂ ಮನೋಮೋದಜನಕವಾಗಿಲ್ಲ. ಎಂದು ಬರುವನೋ ಪಾರ್ಥ ?" ಅವಳ ಮಾತನ್ನು ಅನುಮೋದಿಸಿ, ಭೀಮನು, "ಭದ್ರೆ! ನಿಜ.

ಅರ್ಜುನನ ಸ್ಮರಣೆಯೇ ನನಗೆ ಅಮೃತಪ್ರಾಶನದಂತೆ ಆನಂದಕರವಾಗಿದೆ. ಪಾಂಚಾಲ ಪಾಂಡು ವೀರರು ಅವನ ಬಾಹುಯುಗವನ್ನಾಶ್ರಯಿಸಿ, ಸುರರನ್ನೂ ಲೆಕ್ಕಿಸದೆ ವೀರ ವಿಹಾರವನ್ನು ಮಾಡಿದರು. ಅವನ ಪರಾಕ್ರಮವನ್ನವಲಂಬಿಸಿ, ನಾವು ಸಕಲ ಕೌರವಾದಿ ಶತ್ರುಗಳನ್ನು ಗೆಲ್ಲಬೇಕೆಂದಿರುವೆವು. ಅಂತಹ ಅರ್ಜುನನಿಲ್ಲದೆ ಕಾಮ್ಯಕವು ಅಸಾರ್ಥಕ ನಾಮಧೇಯವಾಗಿದೆ" ಎಂದು ನುಡಿದನು. ನಕುಲಸಹದೇವರೂ ಕೂಡ ಅರ್ಜುನನ ದಿಗ್ವಿಜಯ, ಶೀಲ, ವಿನಯಾದಿಗುಣಗಳನ್ನು ನೆನೆದು ಬಹು ಶೋಕಾಕುಲರಾದರು. ಧರ್ಮರಾಜನೂ ಖಿನ್ನನಾಗಿ ಚಿಂತಿಸುತ್ತಿರುವಾಗ ಅಲ್ಲಿಗೆ ನಾರದನು ಬಂದನು.

ಧರ್ಮಜನು ಸೋದರರಿಂದ ಕೂಡಿ, ನಾರದನನ್ನು ಕರೆತಂದು, ಕೂಡಿಸಿ, ಪೂಜಿಸಿದನು. ನಾರದನು ಮುಕ್ತವಚನಗಳಿಂದ ಪಾಂಡವರನ್ನು ಸಮಾಧಾನಪಡಿಸುತ್ತಾ, ಇಂತೆಂದನು—"ಧರ್ಮರಾಜ! ಸಮಾಶ್ವಸಿಸು! ಬರುವನು ಅರ್ಜುನನು. ನನ್ನಿಂದ ಏನಾಗಬೇಕಾಗಿದೆ ಹೇಳು!" ಆ ಮಾತಿಗೆ ಧರ್ಮಜನು ಕೈಮುಗಿದು ದೇವಮುನಿಗೆ ಇಂತೆಂದನು—"ಮಹಾನುಭಾವ! ನಿನ್ನ ಪ್ರಸಾದದಿಂದ ನಾವು ಧನ್ಯರಾಗಿರುವೆವು. ಮೂರು ಲೋಕಗಳ ಸಿರಿಯು ನಮ್ಮ ಕೈಸೇರಿದಂತೆ, ನಿನ್ನ ದರ್ಶನ ಸಂಭಾಷಣಗಳು. ಪೃಥಿವಿಯಲ್ಲಿ ಇರುವ ಪುಣ್ಯ ಕ್ಷೇತ್ರಗಳ ಮತ್ತು ತೀರ್ಥಗಳ ಮಹಿಮೆಯನ್ನು ನಮಗೆ ದಯಮಾಡಿ ತಿಳಿಸು!" ಆಗ ನಾರದನು "ರಾಜನ್! ಹಿಂದೆ ಬುದ್ಧಿಸತ್ತ್ವಮನಾದ ಭೀಷ್ಮನು ಪುಲಸ್ತ್ಯಋಷಿವರನಿಂದ ತಿಳಿದ ಕ್ಷೇತ್ರತೀರ್ಥ ಮಹಿಮೆಯನ್ನು ನಿನಗೆ ಹೇಳುವೆನು"—

ಭೀಷ್ಮನು ಹರಿದ್ವಾರವನ್ನು ಸೇರಿ, ಅಲ್ಲಿ ಸ್ನಾನ, ಜಪ, ದಾನ, ತರ್ಪಣ, ಹೋಮಗಳನ್ನು ಮಾಡುತ್ತಿದ್ದನು. ಒಂದು ದಿನ ಅವನಲ್ಲಿಗೆ ಬ್ರಹ್ಮಪುತ್ರನಾದ ಪುಲಸ್ತ್ಯನು ಬಂದನು. ಋಷಿವರನನ್ನು ಪೂಜಿಸಿ, "ದಾಸನಾದ ಭೀಷ್ಮನು ನಮಿಸುತ್ತಿರುವನು" ಎಂದು ನಾಮಗೋತ್ರಗಳನ್ನು ಹೇಳಿ ನಮಿಸಿದನು. ಅವನ ವಿನಯ ದಮ ಸತ್ಯ ಧರ್ಮಾದಿ ಗುಣಗಳಿಗೆ ಮೆಚ್ಚಿ, ಪುಲಸ್ತ್ಯನು "ಏನು ಕೊಡಲಿ? ಏನು ಹೇಳಲಿ?" ಎಂದು ಅಭಯವಿತ್ತನು. ಆಗ ಭೀಷ್ಮನು ತೀರ್ಥಕ್ಷೇತ್ರಗಳ ಮಹಿಮಾ, ವಿಧಾನ, ಫಲಗಳನ್ನು ತಿಳಿಯಲಿಚ್ಛಿಸಿ ಪ್ರಾರ್ಥಿಸಲು, ಅವನಿಗೆ ಮಹಾಮುನಿಯು ಆನಂದದಿಂದ ಇಂತು ವರ್ಣಿಸಿದನು—

ಏಕಾಗ್ರಮನಸ್ಕನಾಗಿ ಕೇಳು! ತೀರ್ಥಫಲವನ್ನು ವರ್ಣಿಸುವೆನು. ದುಷ್ಟ ಪ್ರತಿಗ್ರಹರಹಿತನಾಗಿ ಹಸ್ತಗಳನ್ನು, ದೃಷ್ಟಿಪೂತನಾಗಿ ನಡೆದು ಪಾದಗಳನ್ನು, ಪರಾನಿಷ್ಟವನ್ನೆಣಿಸದೆ ಮನಸ್ಸನ್ನು ಶುದ್ಧವಾಗಿಟ್ಟುಕೊಂಡು, ಜ್ಞಾನಪೂರ್ವಕವಾಗಿ, ಸತ್ಪಾತ್ರರಿಂದ ಕೂಡಿ, ತೀರ್ಥಯಾತ್ರೆಯನ್ನು ಗೈದವನು ಸಂಪೂರ್ಣತೀರ್ಥಯಾತ್ರಾಫಲವನ್ನು ಹೊಂದಲು ಅರ್ಹನಾಗುವನು. ಜಿತೇಂದ್ರಿಯನು, ಹಿತಮಿತಾಹಾರನು, ನಿರಹಂಕಾರಿಯು ಆದವನು ತೀರ್ಥಫಲಭಾಜನನಾಗುವನು. ಸತ್ಯ

ಶೀಲನು, ಕ್ರೋಧವರ್ಜಿತನು, ಸಕಲಭೂತಹಿತನು ಆದ ನರನು ತೀರ್ಥಯಾತ್ರೆಯ ಸಮಗ್ರಫಲವನ್ನು ಹೊಂದುವನು.

ಯಜ್ಞದಾನಾದಿಗಳು ಬಹುದ್ರವ್ಯಸಾಧ್ಯವಾಗಿವೆಯಾಗಿ ದರಿದ್ರರು ಅವನ್ನು ಮಾಡಲಾರರಲ್ಲವೇ? ಆದರೆ ತೀರ್ಥಯಾತ್ರಾತತ್ಪರನು ಯಜ್ಞದಾನಾದಿ ಫಲಕ್ಕೂ ಮಿಕ್ಕಿದ ಪುಣ್ಯವನ್ನು ಹೊಂದುವನು. ಸ್ವರ್ಣದಾನವನ್ನು ಮಾಡದೆ ನರನು ದರಿದ್ರನಾಗುವನು. ಅಂತಹ ದರಿದ್ರನು ತ್ರಿರಾತ್ರ ವ್ರತವನ್ನೂ, ತೀರ್ಥಯಾತ್ರೆಯನ್ನೂ ಮಾಡಿದರೆ ಮುಂದೆ ಧನವಂತನಾಗುವನು.

ಮನುಜಲೋಕದಲ್ಲಿ ಬಹುಪಾವನವಾದುದು ಪುಷ್ಕರವು. ಅದು ದೇವದೇವನ ತೀರ್ಥರಾಜವು. ಅದರಲ್ಲಿ ದಶಕೋಟಿ ಪಾವನತೀರ್ಥಗಳಿರುವುವೆಂದು ತಿಳಿ! ಅಲ್ಲಿ ದೇವ ಮುನಿ ಗಂಧರ್ವರು ತಪವನ್ನಾಚರಿಸಿ, ಸಿದ್ಧರಾಗಿರುವರು. ಚತುರ್ಮುಖನು ಪರಮಪ್ರೀತನಾಗಿ ಅಲ್ಲಿ ನಿತ್ಯವೂ ಸನ್ನಿಹಿತನಾಗಿರುವನು. ಅಲ್ಲಿ ಸ್ನಾನವನ್ನು ಮಾಡಿ ದೇವ ಮುನಿ ಪಿತೃ ಪೂಜನವನ್ನಾಚರಿಸಿದವನು ಅಶ್ವಮೇಧ ದಶಗುಣ ಪುಣ್ಯವನ್ನು ಹೊಂದುವನು. ಒಬ್ಬನಿಗಾದರೂ ವಿಪ್ರನಿಗೆ ಶಾಕಮೂಲಗಳನ್ನಿತ್ತರೂ, ಪುಷ್ಕರ ಮಹಿಮೆಯಿಂದ ಕೋಟಿಗುಣಿತವಾಗಿ, ಅನಂತಪುಣ್ಯ ಕಾರಣವಾಗುವುದು. ಸಾಯಂ ಪ್ರಾತಃ ಸಮಯಗಳಲ್ಲಿ 'ತೀರ್ಥರಾಜಾಯ ನಮಃ' ಎಂದು ಪುಷ್ಕರವನ್ನು ಸ್ಮರಿಸಿದವನು ಸರ್ವತೀರ್ಥಸ್ನಾನ ಫಲವನ್ನು ಪಡೆದು ಸರ್ವಪಾಪ ಮುಕ್ತನಾಗುವನು. ದೇವತೆಗಳಲ್ಲಿ ಶ್ರೀಹರಿಯಂತೆ, ಪುಷ್ಕರವು ತೀರ್ಥಗಳಲ್ಲಿ ಸರ್ವೋತ್ತಮವಾಗಿದೆ. ಒಂದುನೂರು ವರ್ಷ ಬಿಡದೆ ಅಗ್ನಿಹೋತ್ರವನ್ನಿಟ್ಟವನಿಗಾಗುವ ಫಲವು ಕಾರ್ತಿಕ ಮಾಸಮಾತ್ರ ಪುಷ್ಕರವಾಸಿಯಾದ ಮನುಜನಿಗೆ ಸಿಗುವುದು. ಜನನವಿಲ್ಲದೆ ಅನಾದಿಯು ಅಸಿವರಣಾ ಗಂಗೆಯರಂತೆ ಸರಸ್ವತೀತ್ರಯಯುಕ್ತವು, ಮರಣಕಾಲದಲ್ಲಿ ತಾರಕಬ್ರಹ್ಮೋಪದೇಶವನ್ನು ಕೊಟ್ಟು ಉದ್ಧರಿಸುವ ಮಹಾದೇವನ ಸನ್ನಿಧಾನ ಪಾವನವಾದ ಕಾಶಿಯಂತೆ, ಮೋಕ್ಷಸಾಧಕವು ಆದ ಪುಷ್ಕರತೀರ್ಥಕ್ಕೆ ಸಮಾನವಾದ ತೀರ್ಥ ಇನ್ನೊಂದಿಲ್ಲ.

## ತೀರ್ಥಕ್ಷೇತ್ರ ವರ್ಣನೆ

ಧರ್ಮರಾಜ! ಪುಷ್ಕರದಂತಹ ಪುಣ್ಯಕ್ಷೇತ್ರ ದರ್ಶನವು ಕೂಡ ಬಹುಜನ್ಮ ತಪಃಫಲವಾಗಿದೆ. ಅಲ್ಲಿಂದ ಹೊರಟು ಜಂಬುಮಾರ್ಗವೆಂಬುವ ಕ್ಷೇತ್ರದಲ್ಲಿ ಒಂದು ರಾತ್ರಿಯಾದರೂ ವಸಿಸಬೇಕು. ಮುಂದೆ ತಂದುಲಿಕಾಶ್ರಮವು ಸಿಗುವುದು. ಅಲ್ಲಿಯೇ ಅಗಸ್ತ್ಯರ ಆಶ್ರಮವೂ ಇದೆ. ಅಲ್ಲಿಂದ ಕಣ್ವಾಶ್ರಮವನ್ನು ಸುತ್ತಿಕೊಂಡು ಧರ್ಮಾರಣ್ಯವನ್ನು ಸೇರಬಹುದು. ಯಯಾತಿಪತನ, ಮಹಾಕಾಲ, ಕೋಟಿತೀರ್ಥ, ಸ್ಥಾಣುತೀರ್ಥ, ರುದ್ರವಟಗಳೆಂಬ ಕ್ಷೇತ್ರತೀರ್ಥಗಳನ್ನು ನೋಡಿ ನರ್ಮದೆಯನ್ನು ಸೇರುವುದು. ನರ್ಮದೆಯು ದಕ್ಷಿಣಸಮುದ್ರವನ್ನು ಸೇರಿದಲ್ಲಿ ಭೃಗುಕಚ್ಛವೆಂಬ

ಕ್ಷೇತ್ರವಿದೆ. ಉತ್ತರದಲ್ಲಿ ಚರ್ಮಣ್ವತಿಯು ಸಿಗುವಳು. ಆ ನದೀತೀರದಲ್ಲಿ ರಂತಿ-ದೇವಾಶ್ರಮವಿದೆ.

ಮುಂದೆ ವಸಿಷ್ಠಾಶ್ರಮವಿದೆ. ಅಲ್ಲಿ ಪಿಂಗಳತೀರ್ಥವನ್ನು ಸೇವಿಸಿದ ನರನು ನೂರು ಕಪಿಲಾ ದಾನಮಾಡಿದ ಪುಣ್ಯವನ್ನು ಹೊಂದುವನು. ಅಲ್ಲಿಂದ ದಕ್ಷಿಣಕ್ಕೆ ಹೊರಟರೆ ಪ್ರಭಾಸವು ಸಿಗುವುದು. ಸರಸ್ವತೀಸಾಗರ ಸಂಗಮಸ್ಥವಾದ ಪ್ರಭಾಸವು ಅಸಮಾನ ಪುಣ್ಯಪ್ರದವಾಗಿದೆ. ವಿಷ್ಣುವು ದೂರ್ವಾಸನಿಗೆ ಪ್ರಸನ್ನನಾಗಿ ವರವಿತ್ತ ಸ್ಥಲವಾದ ವರದಾನವೆಂಬ ತೀರ್ಥವೂ ಅಲ್ಲೇ ಇದೆ. ಪ್ರಭಾಸದಿಂದ ದ್ವಾರಾವತಿಯನ್ನು ಸೇರಬೇಕು. ದ್ವಾರಾವತೀ ಸಮೀಪದ ಪಿಂಡಾರಕಕ್ಷೇತ್ರವು ಪಾವನವಾಗಿದೆ. ಅಲ್ಲಿಯ ತೀರ್ಥದಲ್ಲಿ ಪದ್ಮಲಕ್ಷಣ ಲಕ್ಷಿತವಾದ ಚಂಕ್ರಾಂಕನಗಳು ಈಗಲೂ ಸಿಗುತ್ತಿವೆ. ತ್ರಿಶೂಲಾಂಕಿತಗಳೂ ಸಿಗುವುವು. ಮುಂದೆ ಹೋದರೆ ಸಿಂಧುಸಾಗರ ಸಂಗಮ ಸ್ಥಲದಲ್ಲಿ ಶಂಕುಕರ್ಣೇಶ್ವರನ ದರ್ಶನವಾಗುವುದು. ಅಲ್ಲಿ ದಮಿಯೆಂಬ ತೀರ್ಥವಿದೆ. ಅಲ್ಲಿ ಸ್ನಾನಮಾಡಿ, ಸನಕಾದಿಮುನಿಗಳು ಶಿವನನ್ನು ಪೂಜಿಸಿ, ಇಂದ್ರಿಯ ಜಯವನ್ನು ಪಡೆದಿರುವರು. ಅಲ್ಲಿಂದ ಹೊರಟು, ವಸುಧಾರಾ ಎಂಬ ತೀರ್ಥವನ್ನು ಸೇವಿಸಿ, ಸಿಂಧೂತ್ತಮವೆಂಬ ತೀರ್ಥವನ್ನು ಮುಟ್ಟುವುದು. ಭದ್ರತುಂಗ, ಕುಮಾರಿಕಾತೀರ್ಥ, ರೇಣುಕಾತೀರ್ಥ, ಪಂಚನದಗಳನ್ನು ಸೇವಿಸಿ, ಭೀಮಾನದಿಯನ್ನು ದಾಟಿ, ವಿಮಲತೀರ್ಥದಿ ಮಿಂದು, ಕಾಶ್ಮೀರದ ವಿತಸ್ತಾನದಿಯನ್ನು ಸೇವಿಸುವುದು. ವಡವಾತೀರ್ಥವು ಅಲ್ಲಿ ಸಿಗುವುದು. ಅದಕ್ಕೆ ಪಶ್ಚಿಮದಲ್ಲಿ ಸಪ್ತಚರು ತೀರ್ಥವಿದೆ. ಬ್ರಹ್ಮದೇವನು ಅಲ್ಲಿ ಏಳೇಳು ಋಕ್ಕುಗಳಿಂದ ಶ್ರೀಹರಿಯ ಪ್ರೀತಿಗಾಗಿ ಚರುವನ್ನು ಹೋಮಿಸಿ, ಶ್ರೀಶನನ್ನು ಪ್ರತ್ಯಕ್ಷೀಕರಿಸಿಕೊಂಡಿದ್ದನು. ಶ್ರೀಶನು ಆ ಜೀವನಾಥನಿಗೆ ಅಷ್ಟೈಶ್ವರ್ಯಗಳನ್ನು ದಯಪಾಲಿಸಿದನು. ಮುಂದೆ ಬರುವುದು ರುದ್ರಪದತೀರ್ಥವು. ಅಲ್ಲಿಯೇ ಮಣಿಮಂತನಿರುವನು. ಅಲ್ಲಿಂದ ದೇವಿಕಾ, ಕಾಮೇಶ್ವರ, ದೀರ್ಘಸತ್ರ, ವಿನಶನ ಶಶಯಾನಗಳನ್ನು ಮುಟ್ಟುವುದು. ದೇವಿಕಾತೀರ್ಥವು ಅರ್ಧಯೋಜನ ಅಗಲವಾಗಿಯೂ ಐದು ಯೋಜನ ಉದ್ದವಾಗಿಯೂ ಇದೆ. ವಿನಶನ ತೀರ್ಥದಲ್ಲಿ ಸರಸ್ವತೀ ನದಿಯು ಅಂತರ್ಧಾನಳಾಗುವಳು; ಅಲ್ಲಿಂದ ಚಮಸೋದ್ಭೇದ, ಶಿವೋದ್ಭೇದ, ನಾಗೋದ್ಭೇದಗಳೆಂಬ ಮೂರು ತೀರ್ಥಗಳಲ್ಲಿ ಮತ್ತೆ ಕಾಣಿಸಿ, ಮೇಲೆ ಕಂಡುಬರುವಳು.

ರುದ್ರಕೋಟಿ ಎಂಬಲ್ಲಿ ಕೋಟಿ ಲಿಂಗಗಳಿರುವುವು. ಕೋಟಿ ಮುನಿಗಳು ನಾನು ನಾನೆಂದು ಒಮ್ಮೆಲೇ ನೋಡಲು ಬಂದಾಗ, ಶಿವನು ಅವರಿಗೆ ಪ್ರಸನ್ನನಾಗಿ, ಅಷ್ಟು ರೂಪಗಳಿಂದ ಅಭಿವ್ಯಕ್ತನಾದನಂತೆ. ಅಂತೆಯೇ ಕುಮಾರಕೋಟಿಯೆಂಬ ತೀರ್ಥವು ಅಲ್ಲಿಯೇ ಪಾವನವಾಗಿದೆ. ಅಲ್ಲಿಂದ ಉತ್ತರದಲ್ಲಿರುವುದು ಕುರುಕ್ಷೇತ್ರವು. ಕುರುಕ್ಷೇತ್ರದ ಮಾರ್ಗಮಧ್ಯದಲ್ಲಿ ಕಾಣಬರುವ ಸರಸ್ವತೀಸಂಗಮವೆಂಬ ತೀರ್ಥವು ಪರಮಪಾವನವಾಗಿದೆ. ಅಲ್ಲಿ ಬ್ರಹ್ಮಾದಿದೇವತೆಗಳು ಶ್ರೀಕೇಶವನನ್ನು ಪೂಜಿಸಿ,

ಪ್ರಸನ್ನೀಕರಿಸಿಕೊಂಡರಂತೆ. ಚೈತ್ರ ಶುಕ್ಲ ಚತುರ್ದಶಿಯು ದಿನದಿ ಅಲ್ಲಿ ಮಿಂದವರು ಸರ್ವಪಾಪ ವಿಮುಕ್ತರಾಗುವರು. ಕುರುಕ್ಷೇತ್ರದ ದರ್ಶನದಿಂದಲೇ ಪಾಪಪರಿಹಾರ ವಾಗುವುದೆಂದು ತಿಳಿ.

ಯಾವ ಮನುಜನು ಕುರುಕ್ಷೇತ್ರಕ್ಕೆ ಹೋಗಲಿಚ್ಛಿಸುವನೋ, ಯಾವ ನರನು ಅಲ್ಲಿ ವಾಸಮಾಡಲಿಚ್ಛಿಸುವನೋ ಅಂತಹವನು ಕೂಡ ಕುರುಕ್ಷೇತ್ರ ದರ್ಶನ ವಸನ ಪುಣ್ಯಭಾಜನನಾಗುವನು. ಕುರುಕ್ಷೇತ್ರದ ಭೂರಜವು ಗಾಳಿಯಲ್ಲಿ ತೇಲಿಬಂದು ಸೋಕಿದರೆ ಸಾಕು, ಅಂತಹ ಪುಣ್ಯವಂತನು ಉತ್ತಮಗತಿಯನ್ನೇ ಪೊಂದುವನು. ಸರಸ್ವತಿಗೆ ದಕ್ಷಿಣವೂ, ದೃಷದ್ವತಿಗೆ ಉತ್ತರವೂ ಆಗಿರುವ ಪ್ರದೇಶವೆಲ್ಲವೂ ಕುರು ಕ್ಷೇತ್ರವೆನಿಸುವುದು. ಅಲ್ಲಿ ವಾಸಿಸುವವರ ಪುಣ್ಯವು ಅಗಣ್ಯವಾಗಿವೆ. ಅದರ ನಾಲ್ಕು ನಿಟ್ಟಿನಲ್ಲಿ ನಾಲ್ಕುಜನ ದ್ವಾರಪಾಲಕರಿರುವರು. ಪೂರ್ವದಲ್ಲಿ ಮಂಕಣಕನೆಂಬ ಯಕ್ಷನಿರುವನು. ಅವನ ಅಪ್ಪಣೆಯಿಂದ ಸತತವೆಂಬ ವೈಷ್ಣವತೀರ್ಥವನ್ನು ಸೇವಿಸ ಬೇಕು. ಅಲ್ಲಿ ಸ್ನಾನಮಾಡಿದವನು ಪಾಪಮುಕ್ತನಾಗಿ, ಶ್ರೀಹರಿಲೋಕವನ್ನು ಸೇರುವನು. ಮುಂದೆ ಪಾರಿಪ್ಲವವೆಂಬ ತೀರ್ಥವು ಸಿಗುವುದು. ಕ್ರಮವಾಗಿ ಪೃಥಿವೀ, ಶಾಲೂಕಿನೀ, ದಶಾಶ್ವಮೇಧ, ಸರ್ಪದೇವಿ, ಪಂಚನದಗಳನ್ನು ಸೇವಿಸಿ ಅಲ್ಲಿ ದಕ್ಷಿಣದ ತರಂತುಕನೆಂಬ ದ್ವಾರಪಾಲಕನಿಗೆ ನಮಿಸಿ, ಮುಂದೆ ಸಾಗಬೇಕು. ಕೋಟಿತೀರ್ಥ, ಅಶ್ವಿನೀತೀರ್ಥ, ವರಾಹ, ಸೋಮ, ಏಕಹಂಸ, ಮುಂಜವಟ, ಯಕ್ಷಿಣೀ ತೀರ್ಥಗಳು ಬರುವುವು. ಅನಂತರ ಸಮಂತಪಂಚಕ ಕ್ಷೇತ್ರವೂ, ಐದು ಸರೋವರಗಳೂ ಕಾಣ ಬರುವುವು.

ಪರಶುರಾಮನು ಕ್ಷತ್ರಿಯಕುಲದ ದುರ್ಮಾರ್ಗರನ್ನೆಲ್ಲ ಸಂಹರಿಸಿ, ಅವರ ರಕ್ತ ದಿಂದ ಆ ಮಡುವುಗಳನ್ನು ತುಂಬಿಸಿ, ತನ್ನ ಪಿತೃಗಳಿಗೆ ತರ್ಪಣವಿತ್ತನಲ್ಲವೆ ? ಆಗ ಪಿತೃದೇವತೆಗಳು ಪ್ರೀತರಾಗಿ ವರವನ್ನು ಬೇಡು ಎಂದರು. ಭಾರ್ಗವರಾಮನು ಕೈ ಜೋಡಿಸಿ 'ತಾವು ಪ್ರೀತರಾಗಿದ್ದರೆ ಕ್ಷತ್ರಹಿಂಸಾ ಪಾಪದಿಂದ ನಾನು ಮುಕ್ತನಾಗು ವಂತೆ ಅನುಗ್ರಹಿಸಿ! ಈ ಐದು ಮಡುವುಗಳು ಪರಶುರಾಮತೀರ್ಥ, ಅಗ್ನಿತೀರ್ಥ, ಸೂರ್ಯತೀರ್ಥ, ಸೋಮತೀರ್ಥ, ಪಿತೃತೀರ್ಥಗಳೆಂದು ಖ್ಯಾತವಾಗಿರಲಿ! ಇಲ್ಲಿ ಸ್ನಾನದಾನಾದಿಗಳನ್ನು ಮಾಡುವವರ ಪುಣ್ಯವು ಅನಂತವಾಗಲಿ! ಅವರ ಪಿತೃಗಳು ಮುಕ್ತರಾಗಲಿ!' ಎಂದು ಬೇಡಿದನು. ಪಿತೃದೇವತೆಗಳು ಹರ್ಷಪರವಶರಾಗಿ ರಾಮ ನಿಗೆ ಆ ವರವನ್ನಿತ್ತರು. ಅಂತಹ ಕುರುಕ್ಷೇತ್ರವನ್ನು ಮೂರು ದಿನಗಳಾದರೂ ನಿವಾಸ, ಸ್ನಾನದಾನಾದಿಗಳಿಂದ ಸೇವಿಸಿದವನು ಪಾಪಮುಕ್ತನು, ಪರಿಶುದ್ಧ ಗಾತ್ರನು ಆಗಿ ಮುಂದೆ ಕ್ರಮವಾಗಿ ಜ್ಞಾನವನ್ನಾರ್ಜಿಸಿ ಮುಕ್ತನಾಗುವನು.

ಮುಂದೆ ಶ್ರೀತೀರ್ಥ, ಲೋಕೋದ್ಧಾರತೀರ್ಥ, ಕಪಿಲಾತೀರ್ಥ, ಸೂರ್ಯ ಸರಗಳನ್ನು, ಗೋಭವನ ಕ್ಷೇತ್ರವನ್ನು ನೋಡಿ, ತರಂತಕನೆಂಬ ದ್ವಾರಪಾಲಕನಿಗೆ ನಮಿಸಿ, ಪಶ್ಚಿಮದಲ್ಲಿರುವ ಅಂಬುಮತೀತೀರ್ಥದಲ್ಲಿ ಮಿಂದು, ಕಾಶ್ಮೀರವನ್ನು

ಪ್ರವೇಶಿಸಬೇಕು. ಅಲ್ಲಿ ಮಾತೃತೀರ್ಥ, ಶೀತವನ, ಶ್ವಾವಿಲ್ಲೋಮಹರ, ದಶಾಶ್ವ ಮೇಧ, ಆಪಗಾ, ಬ್ರಹ್ಮೋದುಂಬುರ, ಕಪಿಲ, ಕೇದಾರ, ಸರಕ, ಇಲಾಸ್ಕಂದಗಳೆಂಬ ತೀರ್ಥಗಳನ್ನು ಸೇವಿಸಬೇಕು. ಅಲ್ಲಿರುವ ಶ್ವಾವಿಲ್ಲೋಮಾಪಹರತೀರ್ಥದಲ್ಲಿ ಸ್ನಾನ ಮಾಡಿದವನಿಗೆ ಪಶುಯೋನಿಯು ಬರಲಾರದು. ಕಪಿಲ ಕೇದಾರ ಸ್ನಾನದಿಂದ ಅಂತರ್ಧಾನವಿದ್ಯೆಯು ಲಭಿಸುವುದು. ಸರಕತೀರ್ಥದಲ್ಲಿ ಮೂರುಕೋಟಿ ವಿವಿಧ ತೀರ್ಥಗಳಿವೆ. ಅಲ್ಲಿ ಕೃಷ್ಣ ಚತುರ್ದಶಿಯದಿನ ಸ್ನಾನಮಾಡಿದವನು ದುರ್ಗತಿಯನ್ನು ಹೊಂದುವುದಿಲ್ಲ.

ಕ್ರಮವಾಗಿ ಕಲಶ, ಅಂಬಾಜನ್ಮ, ಪುಂಡರೀಕ ತೀರ್ಥಗಳಲ್ಲಿ ಮಿಂದು ವೈತರಣಿ ಎಂಬ ನದಿಯ ತೀರದ ಶೂಲಪಾಣಿಯನ್ನು ಪೂಜಿಸಬೇಕು. ಮುಂದೆ ಫಲಕೀವನವು ಸಿಗುವುದು. ಅಲ್ಲಿ ದೇವತೆಗಳು ತಪವನ್ನು ಮಾಡುತ್ತಿರುವರು. ದೃಷದ್ವತೀ ನದಿಯು ಹರಿಯುತ್ತಿರುವುದು. ಸಮೀಪದಲ್ಲಿ ಸಹಸ್ರ ತೀರ್ಥವಿದೆ. ಪಾಣಿಖಾತವೆಂಬ ತೀರ್ಥ ದಲ್ಲಿ ಮಿಂದವನು ಅಗ್ನಿಷ್ಟೋಮಫಲವನ್ನು ಪಡೆಯುವನು. ವ್ಯಾಸನು ಕರುಣಾ ವಶನಾಗಿ ಸಮಸ್ತ ತೀರ್ಥಗಳನ್ನು ಬೆರೆಸಿ ನಿರ್ಮಿಸಿದ ಮಿಶ್ರತೀರ್ಥದಲ್ಲಿ ಸ್ನಾನ ದಾನಾದಿಗಳಿಂದ ಸರ್ವತೀರ್ಥ ಪುಣ್ಯವು ಲಭ್ಯವಾಗಿದೆ. ವ್ಯಾಸವನದಲ್ಲಿ ಮನೋ ಜವವೆಂಬ ತೀರ್ಥವಿದೆ. ಮಧುವಟೀ, ದೇವೀತೀರ್ಥಗಳೂ ಇವೆ. ಅವೆಲ್ಲಾ ಪಾವನತೀರ್ಥಗಳು.

ವ್ಯಾಸಸ್ಥಲಿ ಎಂಬ ಕ್ಷೇತ್ರದಲ್ಲಿ ಶ್ರೀವ್ಯಾಸನು ಪುತ್ರವಿರಹದಿಂದ ನೊಂದು, ದೇಹವನ್ನು ಬಿಡಲು ಹವಣಿಸಿದನಂತೆ. ದೇವತೆಗಳು ಬಂದು ವಾರಿಸಿ, ಶೋಕನಿವಾರಕ ವಾದ ತೀರ್ಥವನ್ನು ನಿರ್ಮಿಸಿಕೊಟ್ಟರಂತೆ! ಲೋಕನಾಥನ ವಿಡಂಬನೆಯನ್ನು ಕೇಳಿದೆಯಾ? ಅಲ್ಲೇ ತಿಲಪ್ರಸ್ಥವೆಂಬ ಕೂಪವಿದೆ. ವೇದೀತೀರ್ಥ, ಮೃಗಧೂಮ ವೆಂಬ ತೀರ್ಥಗಳೂ ಪಾಪಹಾರಕವಾಗಿವೆ. ಗಂಗಾನದಿಯ ದಡದಲ್ಲಿದೆ ಮೃಗ ಧೂಮ. ಅಲ್ಲಿ ಮಹಾದೇವನು ನೆಲೆಸಿರುವನು. ವಾಮನತೀರ್ಥ, ಕುಲಂಪುನ ತೀರ್ಥಗಳೂ ಅಲ್ಲೇ ಸಿಗುವುವು.

ಮುಂದೆ ಸಾಗಿದಾಗ ಕ್ರಮವಾಗಿ ಪವನ, ದೇವ, ಶಾಲಿಹೋತ್ರ ತೀರ್ಥಗಳೂ ಶ್ರೀಕುಂಜ, ನೈಮಿಷ ಕುಂಜಗಳೆಂಬ ವನಗಳೂ ಬರುವುವು. ಸರಸ್ವತೀ ಕುಂಜವೆಂಬ ವನದಲ್ಲಿ ಕನ್ಯಾತೀರ್ಥವಿದೆ. ಅಲ್ಲಿಂದ ಬ್ರಹ್ಮತೀರ್ಥವು ಸ್ವಲ್ಪ ದೂರದಲ್ಲಿದೆ. ಅಲ್ಲಿ ಸ್ನಾನಮಾಡಿದವನು ಮುಂದೆ ಬ್ರಹ್ಮಯೋನಿಯಲ್ಲಿ ಹುಟ್ಟುವನು. ಸಪ್ತಸಾರಸ್ವತ ವೆಂಬ ತೀರ್ಥದಲ್ಲಿ ಹಿಂದೆ ಮಂಕಣನೆಂಬುವ ಮುನಿಯು ತಪಸ್ಸಿದ್ಧನಾದನು. ಮಂಕಣನು ಒಂದು ದಿನ ಕುಶಗಳನ್ನು ತೆಗೆಯುವಾಗ ದರ್ಭಾಗ್ರದಿಂದ ಅವನ ಕೈ ಗಾಯವಾಗಿ, ಅದರಿಂದ ಶಾಕರಸವೇ ಹರಿಯತೊಡಗಿತು. ಈ ವಿಚಿತ್ರವನ್ನು ಕಂಡು ಮಂಕಣನು ಆಶ್ಚರ್ಯಾನಂದಭರಿತನಾಗಿ, ತನ್ನ ಮಹಿಮೆಗೆ ತಾನೇ ಮಾರುಹೋಗಿ, ಕುಣಿಯಲಾರಂಭಿಸಿದನು. ಅವನ ತೇಜಃಪ್ರಭಾವದಿಂದ, ಮೈಮರೆತು ನೃತ್ಯಗೈವ

ಅವನನ್ನನುಕರಿಸಿ, ಸ್ಥಾವರ ಜಂಗಮ ಜಗವೆಲ್ಲಾ ಕುಣಿಯಲಾರಂಭಿಸಿತು. ಇದನ್ನು ಕಂಡು ದೇವತೆಗಳು ಶಿವನಿಗೆ ಶರಣರಾಗಿ ಮಂಕಣನ ಮಂಕುತನವನ್ನು ಬಿಡಿಸೆಂದು ಬೇಡಿದರು. ಆಗ ಮಹಾದೇವನು ವಿಪ್ರವೇಷದಿಂದ ಮಂಕಣನನ್ನು ಸಮೀಪಿಸಿ "ಎಲವೋ ಹುಚ್ಚ! ಏಕೆ ಕುಣಿಯುತ್ತಿರುವೆ ?" ಎಂದು ಕೇಳಿದನು. ಮಂಕಣನು ನಕ್ಕು "ವಿಪ್ರ! ಕಣ್ತೆಗೆದು ನೋಡು! ದರ್ಭಾಗ್ರವು ತಗುಲಿದ ನನ್ನ ಕೈಯಿಂದ ಶಾಕ ರಸವು ಹರಿಯುತ್ತಿದೆ ರಕ್ತವಲ್ಲ! ನೋಡು ನನ್ನ ತಪೋವಿಭವವನ್ನು" ಎಂದನು. ಮಹಾದೇವನು ಹುಸಿನಗೆಯನ್ನು ಬೀರಿ "ಮಂಕೆ! ನಿನ್ನ ಮಹಿಮೆಗೆ ನಾನು ವಂಚಿತ ನಾಗಿಲ್ಲ. ನೋಡಿಲ್ಲಿ!" ಎಂದು ತನ್ನ ಬೆರಳಿನಿಂದ ಇನ್ನೊಂದು ಕೈಯ ಹೆಬ್ಬೆರಳಿನ ಕೊನೆಯನ್ನು ಹೊಡೆದನು. ಆಹಾ ! ಏನು ಹೇಳಲಿ ! ಧರ್ಮರಾಜ ! ಆ ಬೆರಳ ಕೊನೆ ಗಾಯದಿಂದ ಬಿಳಿಯ ಭಸ್ಮವೇ ಸುರಿಯಲಾರಂಭಿಸಿತು. ಅದನ್ನು ನೋಡಿ ವಿಸ್ಮಿತನಾದ ಮಂಕಣನು ಬಂದವನು ಮಹಾದೇವನೆಂದರಿತು, ಎದ್ದು ವಂದಿಸಿ, ಕೈಮುಗಿದು ನಿಂತು—"ಶಂಕರ! ಭಕ್ತರಿಗೆ ಅಭಯಂಕರ! ಸುರಾಸುರರಿಗೆ ವಂದ್ಯನು, ಅಹಂಕಾರಾದಿ ಜಗನ್ನಿರ್ಮಾಣ ಧುರೀಣನು, ಸರ್ವಸಂಹಾರಕನು ಆದ ನಿನಗೆ ನಮಸ್ಕಾರವು. ಇಂದ್ರಾದಿ ದೇವರು, ಸನಕಾದಿ ಮುನಿಗಳು ನಿನ್ನ ಮಹಿಮೆ ಯನ್ನು ಸಾಕಲ್ಯೇನ ತಿಳಿಯಬಾರರೆಂದಮೇಲೆ ನನ್ನಂತಹ ಪಾಮರನೆಂತು ತಿಳಿಯು ವನು ? ಪ್ರಭೋ! ದುರಹಂಕಾರವನ್ನು ದೂರೀಕರಿಸಿ, ಶ್ರೀಹರಿಭಕ್ತಿಯಿತ್ತು ಕಾಪಾಡು! ಅಹಂಕಾರಿಯಾಗಿ ಜಗವನ್ನೆಲ್ಲ ಕುಣಿಸಿ, ಪೀಡಿಸಿದ ನನ್ನ ತಪಸ್ಸು ನಷ್ಟ ವಾಗದಂತೆ ಸಲಹು!" ಎಂದು ಪ್ರಾರ್ಥಿಸಿದನು. ಅವನ ತಪಸ್ಸು ಹೆಚ್ಚಾಗುವಂತೆ ವರವಿತ್ತು ಶಂಕರನು ಅವನ ಆಶ್ರಮದಲ್ಲಿ ಲಿಂಗರೂಪವಾಗಿ ನಿಂತಿರುವನು.

ಮುಂದೆ ಕುರುಕ್ಷೇತ್ರವನ್ನು ಪ್ರದಕ್ಷಿಣಿಸಿ ಹೋಗುವಾಗ ಸಾರಸ್ವತತೀರ್ಥ, ಶುಕ್ರತೀರ್ಥ, ಕಾರ್ತಿಕೇಯಸಾನ್ನಿಧ್ಯಪೂತವಾದ ಕಪಾಲಮೋಚನತೀರ್ಥ, ಅಗ್ನಿ ತೀರ್ಥ, ವಿಶ್ವಾಮಿತ್ರತೀರ್ಥ, ಪೃಥೂದಕತೀರ್ಥಗಳು ಸಿಗುವುವು. ಕುರುಕ್ಷೇತ್ರಾ ವರಣದಲ್ಲಿ ಪೃಥೂದಕವು ಬಲು ದೊಡ್ಡತೀರ್ಥವೆನಿಸಿದೆ. ಅಲ್ಲೇ ಮಧುಸ್ರವವೆಂಬ ತೀರ್ಥವಿದೆ. ಸಮೀಪದಲ್ಲೇ ಸರಸ್ವತಿಯು ಅರುಣಾನದಿಯೊಡನೆ ಕಲೆಯುವ ಸಂಗಮ ವಿದೆ. ಅಗ್ನಿಕೀಲವೆಂಬ ತೀರ್ಥವೂ ಅಲ್ಲೇ ವಿರಾಜಿಸಿದೆ. ರೇಣುತೀರ್ಥ, ಪಂಚವಟಿ ಗಳನ್ನು ನೋಡಿಕೊಂಡು ವರುಣತೀರ್ಥದಲ್ಲಿ ಮಿಂದು, ಕುರುತೀರ್ಥವನ್ನು ಸೇವಿಸಿ ದವನು ನರಕವನ್ನು ನೋಡುವುದಿಲ್ಲ. ಅಲ್ಲೇ ವಿಷ್ಣುಚಕ್ರನಿರ್ಮಿತವಾದ ಸುದರ್ಶನ ತೀರ್ಥವಿರುವುದು. ಇಂತಹ ಪವಿತ್ರವಾದ ಅವಿಮುಕ್ತಕ್ಷೇತ್ರದಲ್ಲಿ ವಿಶ್ವೇಶ್ವರನು, ಅನ್ನಪೂರ್ಣೆಯು, ಬಿಂದುಮಾಧವನು, ವಿಘ್ನರಾಜ ಕಾರ್ತಿಕೇಯರು, ವೀರಭದ್ರ ಕಾಲಭೈರವರು ಸನ್ನಿಹಿತರಾಗಿ, ಬಂದು ಸೇವಿಪ ಭಕ್ತರ ಪಾಪರಾಶಿಯನ್ನು ದರ್ಶನ ದಿಂದಲೇ ನಾಶಪಡಿಸುತ್ತಿರುವರು. ವಟವೃಕ್ಷದ ಮಧ್ಯಭಾಗವು ಇಲ್ಲಿದೆ. ಅದರ ಬುಡವು ಪ್ರಯಾಗದಲ್ಲಿಯು, ವೃಕ್ಷಶಾಖೋಪಶಾಖೆಗಳು ಗಯೆಯಲ್ಲಿಯು ವಿರಾಜಿ

ಸುತ್ತಿವೆ. ಬದರೀಪಾಚನ, ಪಾಪಮೋಚನ, ಪಿಶಾಚವಿಮೋಚನ ತೀರ್ಥಗಳನ್ನು ಸೇವಿಸಿದವನು ಪುನರ್ಜನ್ಮ ರಹಿತನಾಗುವನು. ಇಂತಹ ಕಾಶಿಯಲ್ಲಿ ಮೂರು ರಾತ್ರಿಗಳಾದರೂ ವಾಸ ಮಾಡದವನ ಯಾತ್ರೆಯು ನಿಷ್ಫಲವೆಂದು ತಿಳಿ !

ಮುಂದೆ ರುದ್ರಮಾರ್ಗದಲ್ಲಿ ಪಯಣಿಸಿ, ಏಕರಾತ್ರ, ಆದಿತ್ಯ, ಸೋಮ, ದಧೀಚ, ಕನ್ಯಾಶ್ರಮ, ಸನ್ನಿಹತೀತೀರ್ಥಗಳನ್ನು ಸೇವಿಸಬೇಕು. ಪ್ರತಿ ಅಮಾವಾಸ್ಯೆಯು ಸನ್ನಿಹತೀತೀರ್ಥದಲ್ಲಿ ಪ್ರಪಂಚದ ಸರ್ವತೀರ್ಥದೇವತೆಗಳು ಸನ್ನಿಹಿತರಾಗಿರುವರು. ಅಲ್ಲಿ ಸ್ನಾನ, ದಾನ, ಪಾನಗಳನ್ನು ಮಾಡಿದ ಜನರು ಸರ್ವಪಾಪ ವಿನಿರ್ಮುಕ್ತರಾಗಿ, ಕೊನೆಗೆ ಪದ್ಮವರ್ಣ ವಿಮಾನಗಳಲ್ಲಿ ಕೂತು ಬ್ರಹ್ಮಲೋಕವನ್ನು ಸೇರುವರು. ಇಂತು ಕುರುಕ್ಷೇತ್ರದ ಸರ್ವದಿಕ್ಕಿನ ತೀರ್ಥಗಳನ್ನು ನಿನಗೆ ವರ್ಣಿಸಿದೆನು. ಈ ಕ್ಷೇತ್ರತೀರ್ಥಗಳ ನಾಮವನ್ನು ಉಚ್ಚರಿಸುವ ಮಾತ್ರದಿಂದ ಸ್ತ್ರೀಪುರುಷರು ಯೋಗ್ಯರಾದರೆ ವಿಷ್ಣುಭಕ್ತಿಯನ್ನು ಹೊಂದಿ, ಮನಃಶುದ್ಧಿ, ಕರ್ಮಸಿದ್ಧಿ, ಜ್ಞಾನಲಾಭ, ಭಕ್ತಿಭಾಗ್ಯಗಳನ್ನು ಕ್ರಮವಾಗಿ ಪಡೆದು, ಕೊನೆಗೆ ಶ್ರೀಹರಿಪ್ರಸಾದ ಪಾತ್ರರಾಗಿ ಮುಕ್ತರಾಗುವರು. ಹರಿಭಕ್ತಿವರ್ಜಿತನ ತೀರ್ಥಯಾತ್ರೆಯು ಗಂಗಾಮಂಡೂಕ ನ್ಯಾಯದಂತೆ ವ್ಯರ್ಥವೆಂದು ತಿಳಿ !

ಧರ್ಮರಾಜ ! ಧರ್ಮತೀರ್ಥ, ಜ್ಞಾನಪಾವನ, ಪ್ಲಕ್ಷಾದೇವಿ, ಸೌಗಂಧಿಕವನ, ಈಶಾನ, ಶಾಕಂಭರೀ, ಸುವರ್ಣವೆಂಬ ತೀರ್ಥಕ್ಷೇತ್ರಗಳೂ ಸೇವ್ಯವಾಗಿವೆ. ಶಾಕಂಭರೀ ಕ್ಷೇತ್ರದಲ್ಲಿ, ದೇವಿಯು ಶಾಕಮಾತ್ರಾಹಾರಳಾಗಿ ತಪವನ್ನು ಮಾಡಿ, ಮಹಾದೇವನ ಮಡದಿಯಾದಳು. ಸುವರ್ಣತೀರ್ಥದ ದಡದಲ್ಲಿ ಕೃಷ್ಣನು ತಪಸ್ಸು ಮಾಡಿ ಮಹಾದೇವನಿಂದ ತನ್ನ ಮಗನಾದ ಪ್ರದ್ಯುಮ್ನನನ್ನು ವರವಾಗಿ ಪಡೆದನು. ಶ್ರೀಹರಿಯ ಬಂಧಕಶಕ್ತಿಗೆ ನಮೋ ನಮಃ. ಅಂತೆಯೇ ಕೃಷ್ಣನಿಗೆ ವರವಿತ್ತ ಶಂಕರನೇ ಸರ್ವೋತ್ತಮನೆಂದು ಭ್ರಮಿಸಿ ದೈತ್ಯರು ಅನ್ಯಥಾಜ್ಞಾನಿಗಳಾಗಿ ಕೆಟ್ಟರು. ಶ್ರೀಶಿವನಾದರೋ ಶ್ರೀಕೃಷ್ಣನನ್ನು ಪಾದಾಭಿವಂದನಾದಿಗಳಿಂದ ಪೂಜಿಸಿ, ಪುನೀತನಾದೆನೆಂದನು. ತನ್ನಲ್ಲಿದ್ದ ಮನ್ಮಥನನ್ನು ಮತ್ತೆ ಮಾಧವನಿಗೆ ಸಮರ್ಪಿಸಿ ಧನ್ಯನಾದನು. ಇಂತು ಚಿಂತಿಸಿ ಶ್ರೀಹರಿಯ ಸಾನ್ನಿಧ್ಯದಿಂದ ಪಾವನವಾದ ಸುವರ್ಣತೀರ್ಥವನ್ನು ಸೇವಿಸಿದವನು ಯಥಾರ್ಥಜ್ಞಾನದಿಂದ ಮುಕ್ತಿಭಾಗ್ಯವನ್ನು ಪೊಂದುವನು.

ಮುಂದೆ ಹರಿದ್ವಾರವೆಂಬ ಪಾವನಕ್ಷೇತ್ರವು ಸಿಗುವುದು. ಅದನ್ನು ತಿಳಿದವರು ಸ್ವರ್ಗದ್ವಾರವೆಂದು ಪರಿಗಣಿಸುವರು. ಅಲ್ಲಿ ಸಪ್ತಗಂಗಾ, ತ್ರಿಗಂಗಾ, ಕಪಿಲ, ನಾಗರಾಜವಾಸುಕಿ, ಲಲಿತ, ಕನಖಲವೆಂಬ ತೀರ್ಥಗಳಿರುವುವು. ಅವುಗಳ ಸ್ನಾನವು ಪರಮಪುಣ್ಯಪ್ರದವಾಗಿದೆ. ಮುಂದೆ ಗಂಗಾಯಮುನೆಯರ ಉದ್ಭವಸ್ಥಾನಗಳಿರುವುವು. ಅಲ್ಲಿ ರುದ್ರಾವರ್ತ, ಸರಸ್ವತಿ, ಕುಬ್ಜಾಮ್ರಕ, ಭದ್ರಕರ್ಣೇಶ್ವರ, ಅರುಂಧತೀವಟ, ಸಿಂಧು ಎಂಬ ತೀರ್ಥಕ್ಷೇತ್ರಗಳಿರುವುವು. ಋಷಿಕುಲ್ಯಾತೀರದಲ್ಲಿ ವಸಿಷ್ಠನ

ಆಶ್ರಮವಿದೆ. ಅಲ್ಲಿ ಒಂದು ತಿಂಗಳು ವಾಸಮಾಡಿ, ಸುಸಂಗದಿಂದ ಶ್ರೀಹರಿಕಥಾ ಶ್ರವಣ ರತನಾದವನು ಮುಕ್ತನಾಗುವನು. ಭೃಗುತುಂಗವೆಂಬ ದೊಡ್ಡ ಬೆಟ್ಟದ ತಪ್ಪಲಿನಲ್ಲಿ ತುಂಗನಾಥೇಶ್ವರನಿರುವನು. ಅವನು ದೈತ್ಯರಿಗೆ ಅನ್ಯಥಾಜ್ಞಾನ ವನ್ನೀಯಲೆಂದೇ ಅಲ್ಲಿ ನೆಲೆಸಿರುವನು. ಮುಂದೆ ವೇತಸಿಕಾವನದಲ್ಲಿ ಸುಂದರಿಕಾ ತೀರ್ಥವಿದೆ. ಅಲ್ಲಿ ಸ್ನಾನಮಾಡಿದವರು ಸುಂದರಾಂಗರಾಗಿ ಜನಿಸುವರು.

ಕ್ರಮವಾಗಿ ಗಂಗೋದ್ಭೇದವನ್ನು, ಸರಸ್ವತೀತೀರ್ಥವನ್ನು ಸೇವಿಸಿ, ಬಾಹುದಾ ನದಿಯಲ್ಲಿ ಮಿಂದು, ಕ್ಷೀರವತಿಯನ್ನು ಭಜಿಸಿ, ಗೋಪ್ರತಾರವನ್ನು ಕಂಡವನು ತನ್ನ ಏಳೇಳು ಕುಲಗಳನ್ನು ಉದ್ಧರಿಸುವನು. ಅವಿಮುಕ್ತದಿಂದ ತೆರಳಿ, ಪೂರ್ವಕ್ಕೆ ಪ್ರಯಾಣಿಸಿದರೆ ಗಯಾಕ್ಷೇತ್ರವು ಸಿಗುವುದು. ಅಲ್ಲಿ ಪಿತೃಶ್ರಾದ್ಧವನ್ನು ಭಕ್ತಿಯಿಂದ ಆಚರಿಸಿದವನು ಅಶ್ವಮೇಧಫಲವನ್ನು ಪೊಂದುವನು. ಅಕ್ಷಯವಟದಲ್ಲಿ ಪಿತೃ ಶ್ರಾದ್ಧವು ಅಕ್ಷಯಫಲದಾಯಕವಾಗಿದೆ. ಫಲ್ಗುನದಿಯಲ್ಲಿ ಮಿಂದು, ವಿಷ್ಣುಪಾದ ವನ್ನು ಪೂಜಿಸಿ, ಪಿಂಡದಾನಮಾಡಿದವನು ಅಕ್ಷಯಪಿಂಡದಾನದಿಂದ ಪಿತೃಗಳನ್ನು ಉದ್ಧರಿಸಿ, ತಾನೂ ಅಕ್ಷಯಪುಣ್ಯಭಾಜನನಾಗುವನು.

ಮುಂದೆ ಮಹಾನದಿ, ಬ್ರಹ್ಮಸರೋವರ, ಯೂಪಸರಸ್ಸು, ಧೇನುಕ ತೀರ್ಥ ಗಳು ಸಿಗುವುವು. ಬ್ರಹ್ಮಸರೋವರದಲ್ಲಿ ಬ್ರಹ್ಮದೇವನಿಂದ ಪ್ರತಿಷ್ಠಿತವಾದ ಯೂಪ ಸ್ತಂಭವಿದೆ. ಧೇನುಕತೀರ್ಥದಲ್ಲಿ ಕಾಮಧೇನು, ನಂದಿನಿಧೇನುಗಳು ಸಂಚರಿಸಿದ ಹೆಜ್ಜೆಯ ಗುರ್ತುಗಳಿವೆ. ಅಲ್ಲಿ ಸ್ನಾನ ಮಾಡಿದವನು ಸಾವಿರ ಗೋದಾನದ ಫಲ ವನ್ನು ಹೊಂದುವನು. ಅಲ್ಲೇ ಗೃಧ್ರವಟವೆಂಬ ಕ್ಷೇತ್ರದಲ್ಲಿ ಭಸ್ಮಸ್ನಾನಮಾಡಿ ಮಹೇಶನನ್ನು ಭಜಿಸಿದವನು ಹನ್ನೆರಡುವರುಷದ ಉಪವಾಸವ್ರತಫಲವನ್ನು ಪೊಂದು ವನು. ಮುಂದೆ ಸಾವಿತ್ರೀತೀರ್ಥವಿದೆ. ಉದಯಪರ್ವತದ ಬುಡದಲ್ಲಿರುವ ಆ ತೀರ್ಥದಲ್ಲಿ ಸಂಧ್ಯಾವಂದನವನ್ನು ಮಾಡಿದವನು, ಅನಂತಪುಣ್ಯವನ್ನು ಪಡೆದು, ಜ್ಞಾನಿಯೆನಿಸುವನು. ಇಂತು ಗಯಾಪರಿಸರವನ್ನು ವರ್ಣಿಸಿದೆನು. ಬಹುಪುತ್ರ ರನ್ನು ವಾಂಛಿಸುವುದೇಕೆಂದರೆ ಕೇಳು! ಅವರಲ್ಲಿ ಒಬ್ಬನಾದರೂ ಗಯೆಯಲ್ಲಿ ಪಿಂಡ ದಾನ ಮಾಡುವವನಾಗಲಿ! ಒಬ್ಬನಾದರೂ ವೇದವಿದ್ಯಾನಿಷ್ಣಾತನಾಗಲಿ! ಒಬ್ಬ ನಾದರೂ ನೀಲವೃಷೋತ್ಸರ್ಗವನ್ನು ಮಾಡಲಿ ಎಂಬ ಆಶೆಯಿಂದಲೇ ಎಂದು ತಿಳಿ!

ಧರ್ಮರಾಜ! ಮುಂದೆ ಧರ್ಮಪ್ರಸ್ಥವೆಂಬ ಕ್ಷೇತ್ರವು ಸಿಗುವುದು. ಅಲ್ಲಿ ಧರ್ಮರಾಜನ ದಿವ್ಯಸಾನ್ನಿಧ್ಯವಿದೆ. ಅಲ್ಲೇ ಮತಂಗಾಶ್ರಮವೂ ಇದೆ. ಬ್ರಹ್ಮಸ್ಥಾನ, ರಾಜಗೃಹಗಳೂ ಸಮೀಪದ ಕ್ಷೇತ್ರಗಳು. ಮಣಿನಾಗತೀರ್ಥದಲ್ಲಿ ಮಿಂದವನು ದುಷ್ಟ ಸರ್ಪಪೀಡೆಗೆ ಗುರಿಯಾಗದಿರುವನು. ಉದಪಾನತೀರ್ಥ, ಜನಕಕೂಪ, ವಿನಶನ ಗಳಲ್ಲಿ ಮಿಂದು ಸಾಗಿಹೋದರೆ ಗಂಡಕೀ ನದಿಯು ಸಿಗುವುದು. ವಿಶಲ್ಯಾನದಿಯೂ ಬರುವುದು. ಅವುಗಳ ಸ್ನಾನದಿಂದ ಅಗ್ನಿಷ್ಟೋಮಫಲವು ಲಭ್ಯವಾಗಿದೆ. ಮುಂದೆ ವಂಗದೇಶದ ಕಂಪನಾತೀರ್ಥ, ಮಾಹೇಶ್ವರಿಧಾರೆ, ಸೋಮಪದ, ಕೋಟಿತೀರ್ಥ,

ಕೂರ್ಮಕ್ಷೇತ್ರ, ಶಾಲಗ್ರಾಮ ಕ್ಷೇತ್ರಗಳು ಸಿಗುವುವು. ಶಾಲಗ್ರಾಮರೂಪೀ ನಾರಾಯಣನನ್ನು ಭಜಿಸಿದವರು ವಿಷ್ಣುಲೋಕಯೋಗ್ಯರಾಗುವರು.

ಕ್ರಮವಾಗಿ ಮಾಹೇಶ್ವರ, ಜಾತಿಸ್ಮರತೀರ್ಥ, ಕುಶಿಕಾಶ್ರಮ, ಚಂಪಕಾರಣ್ಯ, ಜೇಷ್ಠಿಲತೀರ್ಥ, ಮಿತ್ರಾವರುಣತೀರ್ಥ, ವಸಿಷ್ಠಾಶ್ರಮ, ದೇವಕೂಟಗಿರಿ, ಅಗ್ನಿಧಾರಾತೀರ್ಥ, ಬ್ರಹ್ಮಸರ, ತಾಮ್ರಾರುಣ, ಕಾಲಿಕಾಸಂಗಮ, ಊರ್ವಶೀತೀರ್ಥ, ಶಕ್ರನಂದಾನದಿ, ಔದ್ದಾಲಕತೀರ್ಥಗಳು ಸಿಗುವುವು.

ಮುಂದೆ ಸಂವೇದ್ಯವೆಂಬ ತೀರ್ಥವು ಸೇವ್ಯವಾಗಿದೆ. ಕರತೋಯಾ ನದಿಯು, ಗಂಗಾಸಾಗರ ಸಂಗಮಗಳು ಪುಣ್ಯಲಭ್ಯವಾಗಿವೆ. ಶೋಣಾನದಿಯನ್ನನುಸರಿಸಿ ಪಶ್ಚಿಮಕ್ಕೆ ಪಯಣಿಸಿದರೆ ಕೋಸಲದೇಶವು ಸಿಗುವುದು. ಅಲ್ಲಿ ವಂಶಗುಲ್ಮ, ವೃಷಭ ತೀರ್ಥಗಳು ಪಾವನವೆನಿಸಿವೆ. ದಕ್ಷಿಣಕ್ಕೆ ತಿರುಗಿಹೋದರೆ ಬದರಿಕಾ, ಚಂಪಾ, ದಂಡ, ಲಪೇಟಿಕಾ, ರಾಮತೀರ್ಥಗಳು ಸಿಗುವುವು. ಮತಂಗಕೇದಾರವನ್ನು ನೋಡಿ ಶ್ರೀಪರ್ವತದಲ್ಲಿ ಮಲ್ಲಿಕಾರ್ಜುನೇಶ್ವರನನ್ನು ಸೇವಿಸಿದವನು ಪರಿಶುದ್ಧ ಮನಸ್ಕನಾಗುವನು. ಕೃಷ್ಣಾಸ್ನಾನ ಮಾಡಿ, ದಕ್ಷಿಣಕ್ಕೆ ಹೋದರೆ ಕ್ರಮವಾಗಿ ಪಿನಾಕಿನೀ, ಬಾಹುದಾ, ಕಾವೇರಿ, ತಾಮ್ರಪರ್ಣೀ ನದಿಗಳು ಸಿಗುತ್ತವೆ. ಸಮುದ್ರತೀರದಲ್ಲಿರುವ ಕನ್ಯಾತೀರ್ಥವು ಅಶ್ವಮೇಧ ಫಲದಾಯಕವಾಗಿದೆ. ಮುಂದೆ ಗಾಯತ್ರೀ ತೀರ್ಥದಲ್ಲಿ ಮಿಂದು, ಸಂಧ್ಯೆಯನ್ನು ಜಪಿಸಿದವನು ಬ್ರಹ್ಮಯೋನಿಯನ್ನು ಹೊಂದಿ ಜನಿಸುವನು. ಅನಂತರ ತುಂಗಾನದಿಯನ್ನೂ, ಗೋದಾವರೀ ನದಿಯನ್ನೂ ಸೇವಿಸಿ, ಉತ್ತರಕ್ಕೆ ಪ್ರಯಾಣಿಸಬೇಕು. ಅಲ್ಲಿ ಶರಭಂಗಾಶ್ರಮವಿದೆ. ಶೂರ್ಪಾರಕವೂ ಅಲ್ಲೇ ನೆಲೆಸಿದೆ. ಸಪ್ತಗೋದಾ ತೀರ್ಥವು ಮಹಾಪುಣ್ಯಪ್ರದವಾಗಿದೆ.

ಮುಂದೆ ತುಂಗಾರಣ್ಯವಿದೆ. ಅಲ್ಲಿ ಬ್ರಹ್ಮಶಿವರು ಶ್ರೀವಿಷ್ಣುವಿನಿಂದ ವೇದಗಳನ್ನು ಸಾಂಗವಾಗಿ ಕಲಿತರು. ಪಾಪನಾಶಕವಾದ ತುಂಗಾರಣ್ಯದಿಂದ ಕಾಲಂಜರ ಪರ್ವತವು ಸ್ವಲ್ಪ ದೂರದಲ್ಲಿದೆ. ಅಲ್ಲೇ ಚಿತ್ರಕೂಟವೆಂಬ ಕೋಡಿನಿಂದ ಮಂದಾಕಿನಿಯು ಹರಿದುಬರುವಳು. ಅದರಲ್ಲಿ ಮಿಂದವನು ಅಶ್ವಮೇಧ ಪುಣ್ಯಭಾಜನನಾಗುವನು. ಅಲ್ಲಿಂದ ಗುಹನ ವಾಸವಾದ ಮಹಾಗಿರಿಯು ಕಾಣುವುದು. ಅದನ್ನು ಪ್ರದಕ್ಷಿಣಿಸಿ, ಶೃಂಗವೇರ ಪುರವನ್ನು ಸೇರಬಹುದು. ಅಲ್ಲೇ ಅಲ್ಲವೇ ಶ್ರೀರಾಮನನ್ನೂ ಸೀತಾಲಕ್ಷ್ಮಣರನ್ನೂ ಗುಹನು ಗಂಗೆಯ ದಕ್ಷಿಣ ದಡವನ್ನು ಸೇರಿಸಿದುದು? ಗಂಗಾನದಿಯಲ್ಲಿ ಮಿಂದು, ಮುಂಜವಟವನ್ನು ಅತಿಕ್ರಮಿಸಿ ಹೋದರೆ ಪ್ರಯಾಗವು ಸಿಗುವುದು. ಅಲ್ಲಿ ಬ್ರಹ್ಮಾದಿ ದೇವರು, ಇಂದ್ರಾದಿ ಲೋಕಪಾಲರು, ವಸಿಷ್ಠ ಭರದ್ವಾಜಾದಿ ಮುನಿಗಳು ಸನ್ನಿಹಿತರಾಗಿರುವರು. ವಾಸುಕಿಪ್ರಮುಖ ನಾಗರೂ ಅಲ್ಲಿ ನೆಲಸಿಹರು. ಆ ಕ್ಷೇತ್ರದ ಮೂರು ಕೋಣಗಳಲ್ಲಿ ಮೂರು ಅಗ್ನಿಕುಂಡಗಳಿವೆ. ಅವುಗಳ ಮಧ್ಯದಿಂದ ಜಾಹ್ನವಿಯು ಹರಿದು ಬಂದು, ಯಮುನೆಯನ್ನು ಕಲೆಯುವಳು. ಅಂತರ್ವಾಹಿನಿಯಾದ ಸರಸ್ವತಿಯು ಸಂಗಮಸ್ಥಾನದಲ್ಲಿ **ಮೇಲೇರಿ**

ಕಾಣಬರುವಳು. ಇಂತಹ ತ್ರಿವೇಣಿಸಂಗಮವು ಬಹು ಪುಣ್ಯಪ್ರದವೂ, ಸರ್ವಪಾಪ ನಾಶಕವೂ ಆಗಿದೆ. ಪೃಥಿವೀದೇವಿಗೆ ಮೇರುಪೃಷ್ಠವೇ ತಲೆಯಾಗಿದೆ. ಪ್ರಯಾಗದ ಗಂಗಾಯಮುನಾ ಮಧ್ಯದೇಶವೇ ಯೋನಿಸ್ಥಾನವಾಗಿದೆ. ಸಾಗರಸಂಗಮವೇ ಪಾದ ಗಳಾಗಿವೆ. ವೇದಯಜ್ಞಗಳು, ದೇವಮುನಿಗಳು ಅಲ್ಲಿ ಮೂರ್ತಿಮಂತರಾಗಿ ನಿಂತಿರು ವರು. ಪ್ರಯಾಗವು ಬಹು ಪುಣ್ಯಕ್ಷೇತ್ರವು. ಅಲ್ಲಿಯ ಮಣ್ಣಿನ ಸ್ಪರ್ಶವೇ ಸಾಕು ಸರ್ವಪಾಪಕ್ಷಾಲನಕ್ಕೆ! ತ್ರಿವೇಣೀಸಂಗಮ ಸ್ನಾನದಿಂದ ರಾಜಸೂಯಾಶ್ವಮೇಧ ಫಲಗಳು ಸಿಗುತ್ತವೆ.

ಪ್ರಯಾಗಮರಣವು ಯಾದೃಚ್ಛಿಕವಾಗಿ ಬಂದೊದಗುವುದು. ಬಹುಜನ್ಮ ಸಂಚಿತಸುಕೃತ ಫಲವೆಂದು ತಿಳಿ! ಪ್ರಯಾಗ ಎಂದು ಸ್ಮರಿಸಿದ ನರನು ನರಕಭಾಜನ ನಾಗುವುದಿಲ್ಲ.

"ಸಿತಾಸಿತೇ ಸರಿತೇ ಯತ್ರ ಸಂಗತೇ ತತ್ರಾಪ್ಲುತಾಸೋ ದಿವಮುತ್ಪತಂತಿ |
ಯೇ ವೈ ತನ್ವಂ ವಿಸೃಜಂತಿ ಧೀರಾಃ ತೇ ಜನಾಸೋ ಅಮೃತತ್ವಂ ಭಜಂತೇ ||

ಬಿಳಿಯ ಕರಿಯ ನದಿಗಳೆರಡು ಕಲೆಯುವಲ್ಲಿ ಕಲುಷಬಿಟ್ಟು |
ನಳಿನನಾಭನೆನುತ ನೆನೆದು ಜಳಕವಾಡಲು |
ಒಲಿದು ವೇಣಿಮಾಧವನು ಸಲಹುತಿಹನು ಸ್ವರ್ಗವಿತ್ತು |
ಛಲದಿ ಮುಣುಗಿ ಸತ್ತರೇನು ? ಖಲರ ಪೊರೆವನೇ ||
ಧೀರರಲ್ಲಿ ಕಾಲಕರ್ಮಸೇರಿ ಮರಣ ಸಮಯ ಬರಲು |
ಚಾರು ಶೌರಿಗುಣಗಳನ್ನು ಕೋರಿ ಸ್ಮರಿಸುತಾ |
ಪಾರುಗಾಣಿಸೆಂದು ಬೇಡಿ ಘೋರ ಸಂಸಾರ ತೊರೆದು |
ನೀರಜಾಕ್ಷನಿಲಯನನ್ನು ಸೇರಿ ಸುಖಿಪರು ||

ಅಲ್ಲಿ ಆರು ಕೋಟಿ ತೀರ್ಥಗಳ ಸನ್ನಿಧಾನವಿದೆ ಎಂದು ತಿಳಿ! ಭೋಗವತಿ ಎಂಬ ವಾಸುಕಿ ತೀರ್ಥದ ಸ್ನಾನವು ಪರಮಪುಣ್ಯಪ್ರದವು. ಗಂಗಾತೀರದಲ್ಲಿ ಕನಖಲವು ಶ್ರೇಷ್ಠ. ಅದಕ್ಕಿಂತಲೂ ಪ್ರಯಾಗ ಶ್ರೇಷ್ಠ. ಗಂಗಾಜಲದಿಂದ ನಾಶವಾಗದ ಪಾಪವಿಲ್ಲ. ಕೃತಯುಗದಲ್ಲಿ ಸರ್ವಸ್ಥಲವೂ ಕ್ಷೇತ್ರವೇ. ತ್ರೇತಾಯುಗದಲ್ಲಿ ಪುಷ್ಕರ, ದ್ವಾಪರದಲ್ಲಿ ಕುರುಕ್ಷೇತ್ರ, ಕಲಿಯುಗದಲ್ಲಿ ಗಂಗಾತೀರವೇ ಕ್ಷೇತ್ರ. ಪುಷ್ಕರದಲ್ಲಿ ತಪಸ್ಸು, ಹಿಮಾಲಯದಲ್ಲಿ ದಾನ, ಮಲಯದಲ್ಲಿ ಯಜ್ಞ, ಭೃಗುತುಂಗದಲ್ಲಿ ಉಪ ವಾಸ, ಗಂಗೆಯಲ್ಲಿ ಸ್ನಾನ, ಇವು ಸಪ್ತ ಕುಲತಾರಕಗಳೆಂದು ತಿಳಿ! ನರನ ಅಸ್ಥಿ ಗಂಗೆಯಲ್ಲಿ ಬಿದ್ದಿರುವವರೆವಿಗೂ, ಅವನು ಸ್ವರ್ಗದಲ್ಲಿ ಸುಖದಿಂದಿರುವನು. ಗಂಗೆಗೆ ಸಮಾನವಾದ ತೀರ್ಥವಿನ್ನೊಂದಿಲ್ಲ. ಗಂಗಾಸ್ಮರಣೆಯಿಂದಲೇ ಸರ್ವಪಾಪಗಳು ಸೂರ್ಯನ ಕಿರಣದಿಂದ ಮಂಜಿನಂತೆ ನಾಶವಾಗುವುವು. ಗಂಗೆ ಹರಿಯುವ ದೇಶ ವೆಲ್ಲವೂ ತಪೋವನವೆಂದು ತಿಳಿ! ಅದೇ ಸಿದ್ಧ ಭೂಮಿ! ನಿಜವಾದ ಸ್ನೇಹಿತನು

ಯಾರೆಂದರೆ ಕೇಳು ! ಮರಣ ಸಮಯದಲ್ಲಿ ಗಂಗಾಜಲವನ್ನು ಮುಖದಲ್ಲಿ ಹಾಕು ವವನು ಮತ್ತು ಕಿವಿಯಲ್ಲಿ ಶ್ರೀಹರಿನಾಮೋಚ್ಚಾರಣೆಯನ್ನು ಮಾಡುವವನು.

ಇಂತು ನಿನಗೆ ಧರ್ಮರಾಜ ! ತೀರ್ಥಗಳನ್ನೂ, ಕ್ಷೇತ್ರಗಳನ್ನೂ ವರ್ಣಿಸಿದೆನು. ತೀರ್ಥಮಹಿಮೆಯನ್ನು ಆದರದಿಂದ ಕೇಳಿದವನು ವಂಶವೃದ್ಧಿಯನ್ನೂ, ಸಿರಿಸಂಪತ್ತನ್ನೂ, ಆರೋಗ್ಯ ಶಾಂತಿಗಳನ್ನೂ ಪಡೆದು ಸುಖಿಸುವನು. ನೀನೂ ಈ ತೀರ್ಥಗಳನ್ನು ಸೇವಿಸು. ಜ್ಞಾನಿಜನರ ಕೂಡ ಯಾತ್ರೆಯು ಶ್ರೇಯಸ್ಕರವು. ತೀರ್ಥಮಹಿಮೆಯೊಡನೆ ಶ್ರೀಹರಿ ಶ್ರೀಶಭಕ್ತರ ಚರಿತ್ರೆಗಳನ್ನೂ ಕೇಳುತ್ತಾ ಪಾತ್ರವಿಪ್ರರಿಂದ ಯಾತ್ರೆಯನ್ನು ಮಾಡಿದವನು ನಿಷ್ಪಾಪನಾಗಿ, ಪುಣ್ಯಲೋಕಗಳನ್ನು ಹೊಂದುವನು. ಇಂತು ಪುಲಸ್ತ್ಯರು ಹೇಳಿದ ತೀರ್ಥಮಹಿಮೆಯನ್ನಾಲಿಸಿ, ನಿಮ್ಮ ತಾತನಾದ ಭೀಷ್ಮನು ದಿವ್ಯ ತೀರ್ಥಗಳನ್ನು ಸೇವಿಸಿ, ಧನ್ಯನಾದನು. ನೀನೂ ಪುಣ್ಯವಂತನಿರುವೆ. ಮಹಾನುಭಾವರಾದ ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಅಸಿತದೇವಲ, ಮಾರ್ಕಂಡೇಯ, ಗಾಲವ, ಉದ್ದಾಲಕ ಮುಂತಾದ ಮುನಿವರರು ನಿನ್ನೊಟ್ಟಿಗೂಡಿ, ರಾಕ್ಷಸಪಿಶಾಚಾದಿಪೀಡಾಭಯವಿಲ್ಲದೆ ತೀರ್ಥಯಾತ್ರೆಯನ್ನು ಮಾಡಬೇಕೆಂದು ಉತ್ಸುಕರಾಗಿರುವರು. ಇವರಿಂದ ಕೂಡಿ ಯಾತ್ರೆಗೆ ಹೊರಡು. ಲೋಮಶನೆಂಬ ಮಹರ್ಷಿಯು ಬರಲಿರುವನು. ಅವನು ಸರ್ವತೀರ್ಥಮಹಿಮಾಜ್ಞಾನಿಯಾಗಿರುವನು. ಅವನಿಂದ ಕೂಡಿ, ನೀವೆಲ್ಲರೂ ಸುಖವಾಗಿ ಯಾತ್ರೆಯನ್ನು ಮಾಡಿಕೊಂಡು ಬರುವಿರಿ. ಮಾಂಧಾತೃ-ಯಯಾತಿ-ಭಗೀರಥರಂತೆ ಧವಳಕೀರ್ತಿಸಂಪನ್ನನಾದ ನೀನು ಅಕ್ಷಯ ಸುಖಭಾಜನನಾಗುವೆ. ಯಾತ್ರೆಯ ನೆವದಲ್ಲಿ ಅರ್ಜುನವಿರಹತಾಪವೂ ದೂರವಾಗುವುದು. ಶ್ರೀಕೃಷ್ಣನು ನಿಮ್ಮಲ್ಲಿ ಪ್ರೀತನಾಗಿರುವನು. ನಿಮ್ಮೆಲ್ಲ ಕಾರ್ಯಗಳು ಕೈಗೂಡುವುವು. ನಿಮಗೆ ಜಯವಾಗಲಿ! ಎಂದು ಪಾಂಡವರನ್ನು ಬೀಳ್ಕೊಂಡು ನಾರದನು ಹೊರಟುಹೋದನು.

ಆಗ ಧರ್ಮರಾಜನು ಪುರೋಹಿತನಾದ ಧೌಮ್ಯನಿಗೆ ವಿನಯದಿಂದಿಂತೆಂದನು. "ಆರ್ಯ ! ಅರ್ಜುನವಿರಹದಿಂದ ನೊಂದಿರುವ ನಮಗೆ ಕಾಮ್ಯಕವು ಬೇಡವಾಗಿದೆ. ಎಲ್ಲೆಡೆಯೂ ಅವನ ನೆನಪನ್ನು ತಂದುಕೊಡುವ ಈ ವನವನ್ನು ಬಿಟ್ಟು, ಬೇರೊಂದು ವನವನ್ನು ಸೇರಲಿಚ್ಛಿಸುವೆನು. ನಿನಗೆ ತೋರಿದ ಪುಣ್ಯಾಶ್ರಮ ತೀರ್ಥಗಳನ್ನು ಪೆಸರಿಸು!" ಆ ಮಾತಿಗೆ ಧೌಮ್ಯನಿಂತೆಂದನು—"ಧರ್ಮರಾಜ ! ಸತ್ಯಪರಾಕ್ರಮನಾದ ಜಿಷ್ಣುವಿನ ಯೋಚನೆ ಏಕೆ? ವಾಸುದೇವ ಧನಂಜಯರೆಂದರೆ, ಸಾಮಾನ್ಯರಲ್ಲ. ನರನಾರಾಯಣರೇ ಭೂಭಾರಹರಣಾರ್ಥವಾಗಿ ಅವತರಿಸಿರುವ ಅವರೀರ್ವರ ಮಹಿಮೆಯನ್ನು ಶ್ರೀವ್ಯಾಸನು ಬಲ್ಲನು. ನಾನೂ ಸ್ವಲ್ಪ ಅರಿತಿರುವೆನು. ಭೀಷ್ಮದ್ರೋಣ ಕರ್ಣಾದಿಗಳು ಮಹಾರಥರು. ಅಸ್ತ್ರಕುಶಲರಾದ ಅವರನ್ನು ಗೆಲ್ಲಲು, ಮಹಾಸ್ತ್ರ ಸಂಪಾದನೆಯು ನಮಗೆ ಅವಶ್ಯವೆಂದಲ್ಲವೆ, ನೀನು ಅರ್ಜುನನನ್ನು 'ಪಾಶುಪತಾದಿ ದಿವ್ಯಾಸ್ತ್ರ ಪೊಂದಿ ಬಾ' ಎಂದಾಶೀರ್ವದಿಸಿ ಕಳಿಸಿರುವೆ? ಧಾರ್ತರಾಷ್ಟ್ರ

ರೆಂಬ ಗಾಳಿಯಿಂದ ವಿಜೃಂಭಿಸಿ, ಅಸ್ತ್ರಶಸ್ತ್ರಗಳೆಂಬ ಜ್ವಾಲೆಗಳನ್ನು ಉಗುಳುತ್ತಾ ಉರಿದೆದ್ದುಬರುವ ಕರ್ಣನೆಂಬ ಕಾಲಾಗ್ನಿಯನ್ನು, ಶ್ವೇತವಾಹಗಳೆಂಬ ಬಲಾಕೆಗಳಿಂದ ಕೂಡಿ, ಗಾಂಡೀವವೆಂಬ ಇಂದ್ರಧನುಸ್ಸಿನಿಂದ ಪೊಳೆಯುವ ಅರ್ಜುನ ಮೇಘವು, ಭೀಮ ಮಾರುತ ಸಂಯೋಗದಿಂದ ಘರ್ಘರಧ್ವನಿಗೈಯುತ್ತಾ, ಮೇಘಶ್ಯಾಮನ ಬೆಂಬಲದಿಂದ ವಿಜೃಂಭಿಸಿ, ಬಾಣವರ್ಷದಿಂದ ಅಡಗಾರಿಸಿ ಬಿಡುವುದು ; ಸಂಶಯವಿಲ್ಲ. ಕಾಮ್ಯಕವನವಲ್ಲದ ಬೇರೊಂದು ಸುಂದರ ವನವನ್ನು ಪೇಸರಿಸೆಂದೆ. ಕೇಳು ! ನೈಮಿ ಶಾರಣ್ಯವು ಗೋಮತೀ ನದಿಯಿಂದಲು, ಚಕ್ರತೀರ್ಥದಿಂದಲು ಪಾವನವಾಗಿದೆ. ಅಲ್ಲಿ ಋಷಿವರರು ಕರೆಯಲು ಬಂದು ಶ್ರೀನೃಸಿಂಹನೇ ಅವರ ಯಜ್ಞದಲ್ಲಿ ಶಾಮಿತ್ರಕರ್ಮ ವನ್ನು ವಹಿಸಿರುವನು. ಗಯಾರಣ್ಯವಿದೆ. ಫಲ್ಗು ನದಿಯಿಂದ ಪಾವನವಾದ ಆ ಕ್ಷೇತ್ರ ದಲ್ಲಿ ಶ್ರೀಹರಿಯ ಬಲಪಾದವಿದೆ. ಅದನ್ನರ್ಚಿಸಿದವನು ಪುನರ್ಜನ್ಮವನ್ನು ಹೊಂದು ವುದಿಲ್ಲ. ಅಕ್ಷಯ ವಟದಲ್ಲಿ ಪಿತೃಶ್ರಾದ್ಧವು ಅಕ್ಷಯ ಪುಣ್ಯಪ್ರದವಾಗಿದೆ. ಪಾಂಚಾಲ ದಲ್ಲಿ ಉತ್ಪಲವನವಿದೆ. ಅಲ್ಲಿ ತಪವನ್ನು ಮಾಡಿ ವಿಶ್ವಾಮಿತ್ರನು ಬ್ರಹ್ಮರ್ಷಿ ಯಾದನು. ಗಂಗಾ ಯಮುನಾ ಸಂಗಮದಲ್ಲಿ ಪಾವನವಾದ ಭರದ್ವಾಜಾಶ್ರಮವಿದೆ. ಅಲ್ಲಿ ಹಿಂದೆ ಬ್ರಹ್ಮದೇವನು ಯಜ್ಞಗಳನ್ನು ಮಾಡಿದನಂತೆ! ದಕ್ಷಿಣದಲ್ಲಿ ಅಗಸ್ತ್ಯಾ ಶ್ರಮವಿದೆ, ಶುಕಾಶ್ರಮವಿದೆ; ಕೇದಾರಖಂಡದಲ್ಲಿ ಬದರಿಕಾಶ್ರಮವಿದೆ. ಗೋದಾ ವರೀತೀರದ ಗೌತಮಾಶ್ರಮ, ಕೃಷ್ಣವೇಣೀತಟದ ನೃಗರಾಜಾಶ್ರಮ, ಪಯೋಷ್ಣೀ ತೀರದ ಮಹಾದೇವಾರಣ್ಯ, ಮಾಠರವನ, ಕಣ್ವಾಶ್ರಮ, ಶೂರ್ಪಾರಕದಲ್ಲಿರುವ ಬ್ರಹ್ಮವೇದಿ, ಪಾಂಡ್ಯದೇಶದ ಕುಮಾರೀವನ, ಗೋಕರ್ಣ, ದ್ವಾರವತೀ ಸಮೀಪದ ಪಿಂಡಾರಕ ಕ್ಷೇತ್ರ, ಅವಂತಿಯಲ್ಲಿ ಮಹಾಕಾಲವನ, ನರ್ಮದಾತೀರದಲ್ಲಿ ಆಮ್ರವನ, ವಿಶ್ವಾಮಿತ್ರನದೀತೀರದ ಯಯಾತಿ ಪತನ, ಹರಿದ್ವಾರದ ಮೈತ್ರೇಯಾಶ್ರಮ, ಹಿಮಾಲಯದ ಪ್ಲಕ್ಷವನ, ಭರತಚಕ್ರವರ್ತಿಯು ನೂರು ಮೂವತ್ತು ಮೂರು ಅಶ್ವಮೇಧಯಾಗಗಳನ್ನು ಮಾಡಿದ ಸಾರಸ್ವತಾಶ್ರಮ, ದಾಲ್ಭ್ಯಋಷಿಯ ನ್ಯಗ್ರೋ ಧಾಶ್ರಮ, ಒಂದೇ, ಹತ್ತೇ, ಸಾವಿರಾರು ಪುಣ್ಯಾರಣ್ಯಗಳಿವೆ. ಭೂಮಂಡಲವೇ ಶ್ರೀಹರಿಯ ಸ್ಥೂಲಪ್ರತಿಮಾರೂಪವೆಂದು ತಿಳಿದವಗೆ ತಾನಿರುವುದೇ ಕಾಶಿ; ಅದೇ ಬದರಿಯಲ್ಲವೆ? ಎಂದು ನುಡಿದ ಧೌಮ್ಯನನ್ನಭಿನಂದಿಸಿ, ಧರ್ಮರಾಜನು ತೀರ್ಥ ಯಾತ್ರೋನ್ಮುಖನಾಗಿರುವಾಗ ಸ್ವರ್ಗದಿಂದ ಲೋಮಶಮುನಿಯು ಬಂದನು. ಅವನನ್ನು ಪೂಜಿಸಿ, ಧರ್ಮರಾಜನು "ಮುನಿವರ ! ಎಲ್ಲಿಂದ ಬಂದೆ? ಕಂಡಿರುವೆಯಾ ನಮ್ಮ ಅರ್ಜುನನನ್ನು?" ಎಂದು ಪ್ರಶ್ನಿಸಿದನು.

ಲೋಮಶನು ಧರ್ಮರಾಜನಿಗಿಂತೆಂದನು—"ಧರ್ಮಜ ! ಬಂದಿರುವೆನು ಸ್ವರ್ಗ ಲೋಕದಿಂದ; ಕಂಡಿರುವೆನು ಅಲ್ಲಿ ಸುಖವಾಗಿರುವ ಪಾರ್ಥನನ್ನು; ಚಿಂತಿಸಬೇಡ! ದೇವಕಾರ್ಯಶೇಷವಿದೆ, ಅದನ್ನು ಮುಗಿಸಿ ಅರ್ಜುನನು ಬರುವನು. ಅವನೀಗ ಮಹಾದೇವನಿಂದ ಪಾಶುಪತವನ್ನೂ, ಇಂದ್ರಾದಿಗಳಿಂದ ಸಕಲ ವಜ್ರಾದಿದಿವ್ಯಾಸ್ತ್ರ

ಗಳನ್ನೂ ಸಂಪಾದಿಸಿ, ಅತುಲತೇಜಃಪ್ರಭಾವಬಲವೀರ್ಯವಿರಾಜಿತನಾಗಿ, ದೇವತೆಗಳಿಂದ ಪೂಜೆಗೊಳ್ಳುತ್ತಾ, ಇಂದ್ರನ ಅರ್ಧಸಿಂಹಾಸನದಲ್ಲಿ ಆಸೀನನಾಗಿರುವನು. ಅರ್ಜುನಸಮಾಗಮವನ್ನು ಬೇಗನೆ ಹೊಂದುವೆ. ಅಲ್ಲಿಯವರೆಗೂ ನೀನು ವಿರಹ ವ್ಯಥೆಯನ್ನು ಮರೆಯಲು ತೀರ್ಥಯಾತ್ರೆಯನ್ನು ಮಾಡು; ನಿಮ್ಮೊಡಗೂಡಿ ಯಾತ್ರೆಗಳನ್ನು ಮಾಡಿಸಲು ಇಂದ್ರನಿಂದ ಆಜ್ಞಪ್ತನಾಗಿ, ನಾನು ಬಂದಿರುವೆನು. ಸರ್ವ ತೀರ್ಥಗಳನ್ನು ಎರಡು ಸಲ ಪ್ರದಕ್ಷಿಣಾಕಾರವಾಗಿ ಸುತ್ತಿ ಸೇವಿಸಿರುವ ನನಗೆ ಸಕಲ ತೀರ್ಥಗಳ ಮಹಿಮೆ ಚೆನ್ನಾಗಿ ಗೊತ್ತಿದೆ. ಈಗ ಮೂರನೆಯ ಸಲ ನಿಮ್ಮಂತಹ ಮಹಾನುಭಾವರ ಕೂಡ ಯಾತ್ರೆಮಾಡುವ ಸುಯೋಗವು ಒದಗಿಬಂದಿದೆ. ನನ್ನ ತಪಃಪ್ರಭಾವದಿಂದ ನಿಮಗೂ ಅಸುರಪಿಶಾಚಾದಿ ಪೀಡಾನಿವಾರಣವನ್ನು ಮಾಡುವೆನು. ಅರ್ಜುನನು ಕೂಡ 'ನಮ್ಮ ಸೋದರರು ತೀರ್ಥಯಾತ್ರೆಗೈಯಲಿ' ಎಂದು ನಿಮ್ಮನ್ನು ಪ್ರಾರ್ಥಿಸಿರುವನು. ತೀರ್ಥಯಾತ್ರೆಯನ್ನು ಕೈಕೊಂಡವನು ಇಂದ್ರಿಯ ಜಯವಂತನು, ಅಕ್ರೋಧನನು, ಲೋಭವರ್ಜಿತನು, ಸತ್ಯವಚನನು, ವಿದ್ಯಾಶೀಲನು, ಶ್ರದ್ಧಾಯುಕ್ತನು ಆಗಿರಬೇಕು. ನೀನು ಸರ್ವಸುಗುಣಯುಕ್ತನಾಗಿರುವೆ. ಭೀಮಸೇನನ ಸಹಾಯದಿಂದ ನಮಗೆ ಯಾತ್ರೆಯು ಸುಖಕರವಾಗುವುದು".

ಲೋಮಶನ ಮಾತಿನಿಂದ ಪರಮಾನಂದಭರಿತನಾದ ಯುಧಿಷ್ಠಿರನು "ಧನ್ಯನಾದೆ ಮುನಿವರ! ದೇವರಾಜನ ಸ್ಮರಣೆಗೆ ಬಂದ ನನ್ನ ಕಷ್ಟಗಳೆಲ್ಲವೂ ಕೊನೆಗಂಡವು. ನಿನ್ನಂತಹ ಮುನಿವರನ ಸಂಗಡ ಯಾತ್ರೆಯನ್ನು ಮಾಡುವ ಮಹದ್ಭಾಗ್ಯ ನನ್ನದಾಯಿತು. ಧೌಮ್ಯನೂ ಯಾತ್ರಾತತ್ಪರನಾಗಿರುವನು. ತಮಗೆ ಸರಿದೋರಿದ ಮುಹೂರ್ತದಲ್ಲಿ ಯಾತ್ರೆ ಪ್ರಾರಂಭಿಸೋಣ!" ಎಂದನು. ಮುಂದೆ ಧರ್ಮರಾಜನು ತನ್ನೊಡನಿದ್ದ ಹೆಚ್ಚಿನ ಪರಿವಾರವನ್ನು, ಸೂದರನ್ನು, ದಾಸದಾಸಿಯರನ್ನು ಧೃತರಾಷ್ಟ್ರನಲ್ಲಿಗೆ ಹಾಗೂ ದ್ರುಪದನಲ್ಲಿಗೆ ಕಳಿಸಿದನು. ಯಾತ್ರೆಯ ಕಷ್ಟಗಳನ್ನು ಸಹಿಸಲಾರದ ವಿಪ್ರರನ್ನು ಭೂರಿಧನನಿತ್ತು ಅವರವರ ಆಶ್ರಮಗಳಿಗೆ ಕಳಿಸಿ, ಕೆಲವು ಬುಧರು ಬಿಡದೆ ಹಿಂಬಾಲಿಸಿ ಬರಲು ಅವರನ್ನು ಕರೆದುಕೊಂಡು, ಭೀಮಸೇನಾದಿ ವೀರರು ರಾಕ್ಷಸಾದಿಗಳಿಂದ ರಕ್ಷಿಸುತ್ತಿರಲು, ತೀರ್ಥಯಾತ್ರೆಗೆ ಹೊರಟನು.

## ತೀರ್ಥಯಾತ್ರೆ; ಅಗಸ್ತ್ಯಮಹಿಮೆ

ಆ ಸಮಯದಲ್ಲಿ ಶ್ರೀವ್ಯಾಸನು ಪರ್ವತನಾರದರಿಂದ ಕೂಡಿ ಪಾಂಡವರ ಆಶ್ರಮಕ್ಕೆ ಬಂದನು. ಪಾಂಡವರಿಗೆ ಯಾತ್ರಾದೀಕ್ಷೆಯನ್ನಿತ್ತು ವ್ಯಾಸನು ಆಶೀರ್ವದಿಸಿದನು. ಧೌಮ್ಯಾದಿಮುನಿಗಳು ಸ್ವಸ್ತಿಪುಣ್ಯಾಹವಾಚನವನ್ನು ಮಾಡಿ ಮಾರ್ಗಶಿರ ಮಾಸದ ಕೊನೆಯಲ್ಲಿ ಸುಮುಹೂರ್ತದಲ್ಲಿ ಯಾತ್ರೆಯನ್ನು ಪ್ರಾರಂಭಿಸಿದರು. ಚೀರಗಳನ್ನುಟ್ಟು, ಜಟೆಗಳನ್ನು ಧರಿಸಿ, ಕೈಲಿ ಕೋಲುಗಳನ್ನು, ಮೈಮೇಲೆ

ಕವಚಗಳನ್ನು ಧರಿಸಿ, ಪಾಂಡವರು ತೀರ್ಥಯಾತ್ರೆಗೆ ಹೊರಟರು. ಇಂದ್ರಸೇನಾದಿ ಸೂತರು, ಪಾಕಕಾರರು, ಪರಿಚಾರಕರು, ಹದಿನೈದು ರಥಗಳಲ್ಲಿ ಹಿಂಬಾಲಿಸಿದರು. ಖಡ್ಗಾದಿ ಆಯುಧಗಳನ್ನು ಧರಿಸಿ, ವೀರಪಾಂಡವರು ಪ್ರಾಙ್ಮುಖರಾಗಿ ಹೊರಟರು.

ಧರ್ಮರಾಜನು ಲೋಮಶನನ್ನು ನೋಡಿ "ಮಹಾತ್ಮ! ಧರ್ಮವೆಂದರೆ ಜೀವಕ್ಕಿಂತಲು ಹೆಚ್ಚೆಂದು ತಿಳಿದು ಆಚರಿಸುವ ನಮಗೆ ಇಂತಹ ಕಷ್ಟಪರಂಪರೆಯೇ? ಗುಣಹೀನರಾದವರು ಲೋಕದಲ್ಲಿ ಸುಖಿಗಳಾಗಿರುವರು! ಇದಕ್ಕೆ ಕಾರಣವೇನು?" ಎಂದು ಕೇಳಿದನು. ಲೋಮಶನಿಂತೆಂದನು—"ರಾಜನ್ ಹಾಗೆ ತಿಳಿಯಬೇಡ. ಅಧರ್ಮದಿಂದ ಬರುವ ಜಯ ವಿಭವಗಳು ಶಾಶ್ವತವಲ್ಲ. ಅಧರ್ಮವು ಕೊನೆಗೆ ಸಮೂಲನಾಶಕಾರಣವಾಗುವುದು. ಸುರರು ಧರ್ಮವನ್ನೂ, ದೈತ್ಯರು ಅಧರ್ಮವನ್ನೂ ಆರಿಸಿಕೊಂಡರು. ದೇವತೆಗಳು ತೀರ್ಥಯಾತ್ರೆಗಳನ್ನು, ಯಜ್ಞಗಳನ್ನೂ ಮಾಡಿದರು. ಅಸುರರು ಅಧರ್ಮದಿಂದ ಗರ್ವಿಷ್ಠರಾದರು. ಆತ್ಮಪೂಜಾಕಾಂಕ್ಷೆಯಿಂದ ಕೊಬ್ಬಿದ ದೈತ್ಯರು, ಪೂಜಿಸದವರನ್ನು ಪೀಡಿಸಿದರು. ನಿಷಿದ್ಧಕರಣಲಜ್ಜೆಯನ್ನು ತೊರೆದು ಅಕಾರ್ಯಗಳನ್ನು ಮಾಡಿದರು. ಆದರಿಂದ ಸುಜನದ್ವೇಷಿಗಳಾಗಿ, ನಷ್ಟರಾದರು. ಅಧರ್ಮವೃಕ್ಷದ ಫಲವು ಸರ್ವನಾಶವೆಂದು ತಿಳಿ! ಕಲಿದೂಷಿತರಾದ ದೈತ್ಯರು ಅಲಕ್ಷ್ಮೀನಿಲಯರಾಗಿ, ಕುಕರ್ಮದಿಂದ ಅಪಕೀರ್ತಿಯನ್ನು ಪಡೆದು ಕೊನೆಗೆ ಹಾಳಾಗುವರು. ಧರ್ಮವು ಕೊನೆಗೆ ಜಯಿಸುವುದು. ಶಿಬಿ, ನೃಗ, ಭಗೀರಥರಂತೆ ಪುಣ್ಯಶೀಲನಾದ ನೀನು ಶತ್ರುಗಳನ್ನು ಗೆದ್ದು, ರಾಜ್ಯವನ್ನು ಸಂಪಾದಿಸುವೆ. ಸತೀಸೋದರರಯುತನಾಗಿ ಸುಖದಿಂದಿರುವೆ! ಧಾರ್ತರಾಷ್ಟ್ರರು ಅಧರ್ಮದಿಂದ ವಿಷ್ಣುವೈಷ್ಣವ ದ್ರೋಹವನ್ನೆಸಗುತ್ತಿರುವರು. ದೈತ್ಯರಂತೆ ಅವರೂ ಬೇಗನೆ ನಾಶವಾಗಲಿರುವರು!" ಎಂದು ಸಮಾಧಾನಪಡಿಸಿದನು.

ಕ್ರಮವಾಗಿ ಪಾಂಡವರು ನೈಮಿಷಾರಣ್ಯವನ್ನು ಸೇರಿದರು. ಅಲ್ಲಿ ಗೋಮತಿಯಲ್ಲಿ ಮಿಂದು ಗೋದಾನ ಮಾಡಿದರು. ದೇವಪಿತೃಕಾರ್ಯಗಳನ್ನು ನೆರವೇರಿಸಿದರು. ಮುಂದೆ ಪ್ರಯಾಗವನ್ನು ಸೇರಿ ಅಲ್ಲಿ ಸಂಗಮಸ್ನಾನತತ್ಪರರಾಗಿ ಕೆಲಕಾಲವಿದ್ದು, ತಪಸ್ಸನ್ನು ಮಾಡಿದರು. ಅಲ್ಲಿಂದ ಗಯಾಕ್ಷೇತ್ರವನ್ನು ಮುಟ್ಟಿ ಅಕ್ಷಯವಟಚ್ಛಾಯೆಯಲ್ಲಿ ಪಿಂಡದಾನ; ಗೋ, ತಿಲ, ಸ್ವರ್ಣದಾನಗಳನ್ನು ಮಾಡಿದರು. ಮುಂದೆ ಅಗಸ್ತ್ಯಾಶ್ರಮದ ಬ್ರಹ್ಮಸರಸ್ತೀರದಲ್ಲಿ ಚಾತುರ್ಮಾಸ್ಯವನ್ನು ಕಳೆದರು. ಅಲ್ಲಿ ಶಮಠನೆಂಬ ಬ್ರಾಹ್ಮಣನು ಧರ್ಮರಾಜಾದಿಗಳಿಗೆ ಗಯಾಮಹಿಮೆಯನ್ನು ತಿಳಿಸಿದನು.

ಅಮೂರ್ತರಯನ ಪುತ್ರನಾದ ಗಯಮಹಾರಾಜನು ಇಲ್ಲಿ ಯಜ್ಞವನ್ನು ಮಾಡಿದನು. ನೂರಾರು ಅನ್ನಪರ್ವತಗಳು, ತುಪ್ಪದ ನದಿಗಳು, ಮೊಸರಿನ ಕಾಲುವೆಗಳು, ವ್ಯಂಜನಗಳ ರಾಶಿಗಳು ನೋಡಲು ಅದ್ಭುತವಾಗಿ ಆ ಯಜ್ಞವು ಸಕಲ ಭೂತಗಳಿಗೂ ತೃಪ್ತಿಯನ್ನು ನೀಡಿತು. ವಿಪ್ರರ ವೇದಘೋಷವು ಮುಗಿಲು

ಮುಟ್ಟಿತು. ಗಯನ ಕೀರ್ತಿ ಮೂರ್ಲೋಕದಲ್ಲಿ ಹರಡಿತು. ಅವನಿತ್ತ ದಕ್ಷಿಣೆಗಳನ್ನು ವಿಪ್ರರು ಹೊರಲಾರದೆ ಹೊತ್ತುಕೊಂಡು ಹೋದರು. ಭೂಮಿಯ ಮರಳಿನ ಕಣಗಳಷ್ಟು, ವರ್ಷಧಾರೆಯ ಜಲಬಿಂದುಗಳಷ್ಟು, ಆಕಾಶದ ತಾರಕೆಗಳಷ್ಟು ಅಸಂಖ್ಯಾಕವಾದ ದಕ್ಷಿಣೆಗಳನ್ನಿತ್ತ ಗಯನ ಯಜ್ಞವು 'ನ ಭೂತೋ ನ ಭವಿಷ್ಯತಿ' ಎನಿಸಿತು. ಇಂತು ಶಮಠನು ನುಡಿಯಲು ಧರ್ಮಜನು ಅವನನ್ನು ಪೂಜಿಸಿ, ಅಗಸ್ತ್ಯನ ಮಹಿಮೆಯನ್ನು ತಿಳಿಯಲಿಚ್ಛಿಸಿ, ಲೋಮಶನನ್ನು ಪ್ರಶ್ನಿಸಿದನು. ಆಗ ಲೋಮಶನು ಇಂತೆಂದನು—

ಮಣಿಮತಿಯಲ್ಲಿ ಇಲ್ವಲನೆಂಬ ದೈತ್ಯರಾಜನಿದ್ದನು. ಅವನ ತಮ್ಮನೇ ವಾತಾಪಿ. ಒಂದು ದಿನ ಇಲ್ವಲನು ತಪೋನಿಧಿಯಾದ ಒಬ್ಬ ವಿಪ್ರನನ್ನು ಕಂಡು 'ನನಗೆ ಇಂದ್ರ-ಸಮಾನನಾದ ಪುತ್ರನಾಗುವಂತೆ ಅನುಗ್ರಹಿಸು' ಎಂದನು. ಆ ಮುನಿಯು ಅವನ ಅಯೋಗ್ಯವಾಂಛೆಯನ್ನು ತಿರಸ್ಕರಿಸಿದನು. ಅಂದಿನಿಂದ ಇಲ್ವಲನು ಬ್ರಹ್ಮದ್ವೇಷಿಯಾಗಿ, ಮನೆಗೆ ಬಂದ ಬ್ರಾಹ್ಮಣಾತಿಥಿಗಳನ್ನು ಕೊಂದುಬಿಡುತ್ತಿದ್ದನು. ತಮ್ಮನಾದ ವಾತಾಪಿಯನ್ನು ಮೇಕೆಯನ್ನಾಗಿಸಿ, ಅದನ್ನು ಕೊಂದು ಶಾಕರೂಪವಾಗಿ ಬೇಯಿಸಿದ ಅದರ ಮಾಂಸವನ್ನು ಅತಿಥಿಗೆ ಕೊಡುತ್ತಿದ್ದನು. ಅತಿಥಿ ಉಂಡು ಕೈ ತೊಳೆಯುವಾಗ 'ವಾತಾಪಿ, ಬಾ!' ಎಂದು ಕೂಗುತ್ತಿದ್ದನು. ಕಾಮರೂಪಿಯಾದ ವಾತಾಪಿಯು ಬ್ರಾಹ್ಮಣನ ಹೊಟ್ಟೆಯನ್ನು ಸೀಳಿಕೊಂಡು ಹೊರಬರುತ್ತಿದ್ದನು. ಆಗ ದೈತ್ಯಸೋದರರು ವಿಪ್ರಧನವನ್ನು ಅಪಹರಿಸಿ ಅವನನ್ನು ಭಕ್ಷಿಸುತ್ತಿದ್ದರು. ಇಂತು ಅವರು ಬಹುಧನವಂತರಾಗಿದ್ದರು.

ಒಂದು ಸಲ ಅಗಸ್ತ್ಯನು ಹಿಮವತ್ಕಂದರದ ಗರ್ತದಲ್ಲಿ ತಲೆಕೆಳಗಾಗಿ ಜೋತಾಡುತ್ತಿದ್ದ ತನ್ನ ಪಿತೃಗಳನ್ನು ಕಂಡನು. ಅವನು ಮದುವೆಯಾಗಿ ಮಕ್ಕಳನ್ನು ಕಂಡರೆ ಮಾತ್ರ ಅವರು ಗರ್ತದಲ್ಲಿ ಬೀಳದಂತೆ ಉದ್ಧೃತರಾಗಿ ದಿವ್ಯಲೋಕವನ್ನು ಪೊಂದಬಹುದಾಗಿತ್ತು. ಅವರ ಮಾತಿನಂತೆ ಅಗಸ್ತ್ಯನು ಮದುವೆಯಾಗಲು ನಿಶ್ಚಯಿಸಿ ತನಗೆ ತಕ್ಕ ತರುಣೀಮಣಿಯನ್ನರಸಿ ಕಾಣಲಾರದಾದನು. ಸಿಂಹ ಕುರಂಗಾದಿ ಸರ್ವ ಪ್ರಾಣಿಗಳ ಕಟಿಕಟಾಕ್ಷಾದಿ ಸುಂದರ ಸಾರ ವಸ್ತುಗಳನ್ನು ಸಂಗ್ರಹಿಸಿ, ಆ ಸೌಂದರ್ಯರಾಶಿಯಿಂದ ಸುಂದರಿಯೊಬ್ಬಳನ್ನು ನಿರ್ಮಿಸಿದನು. ಆ ಸುಂದರಿಯು ಭೌತಿಕ ದೇಹವನ್ನು ಹೊಂದಲು, ವಿದರ್ಭ ರಾಜನ ಮನೆಯಲ್ಲಿ ಅವನ ಮಗಳಾಗಿ ಹುಟ್ಟಿದಳು. ಮಿಂಚಿನ ಬಳ್ಳಿಯಂತೆ ಬೆಳಗುವ ಮಗಳಿಗೆ ಲೋಪಾಮುದ್ರೆ ಎಂದು ಹೆಸರಿಟ್ಟು, ವಿದರ್ಭ ರಾಜನು ಆನಂದದಿಂದ ಅವಳನ್ನು ಬೆಳೆಸಿದನು. ನೀರಿನಲ್ಲಿ ಕಮಲದಂತೆ ಬಳಕುತ್ತಾ, ಕುಂಡದಲ್ಲಿ ಅಗ್ನಿಯಂತೆ ಮಿನುಗುತ್ತಾ ಲೋಪಾಮುದ್ರೆ ಕಾಲಕ್ರಮದಿ ವಯೋಲಾವಣ್ಯನಿಧಿಯಾದಳು. ಅಗಸ್ತ್ಯನ ಭಯದಿಂದ ಆ ಸುಂದರಿಯನ್ನು ವರಿಸಲು, ಯಾವ ರಾಜಕುಮಾರನೂ ಬರಲಿಲ್ಲ. ಚಿಂತಾಕ್ರಾಂತನಾದ ಭೂಕಾಂತನನ್ನು ಅಗಸ್ತ್ಯನು ಕಂಡು ತನಗೆ ಲೋಪಾಮುದ್ರೆಯನ್ನು ಕೊಡಲು

ಬೇಡಿದನು. ರಾಜನು ದರಿದ್ರನಾದ ಮುನಿಗೆ ರಾಜಪುತ್ರಿಯನ್ನು ಕೊಡಲಾರದೆ, ಕೊಡುವುದಿಲ್ಲವೆಂದರೆ ಶಾಪವನ್ನು ಸ್ವೀಕರಿಸಬೇಕೆಂಬ ಭಯದಿಂದ ಇಲ್ಲವೆನ್ನಲಾರದೆ, ಚಿಂತಾಕರ್ಶಿತನಾದನು. ಇದನ್ನರಿತು ಲೋಪಾಮುದ್ರೆ ತಾನಾಗಿ ತಂದೆಯನ್ನು ಕಂಡು, ತನ್ನನ್ನು ಅಗಸ್ತ್ಯನಿಗೆ ಮದುವೆ ಮಾಡಿಕೊಡೆಂದು ಬೇಡಿದಳು. ಅಂತೆಯೇ ರಾಜನು ಅವಳನ್ನು ಮುನಿವರನಿಗಿತ್ತು ಕಳಿಸಿದನು.

ಅಗಸ್ತ್ಯನ ಅಪ್ಪಣೆಯಂತೆ ಮಹಾ ಪತಿವ್ರತೆಯಾದ ಲೋಪಾಮುದ್ರೆ ಅನರ್ಘ್ಯಾಭರಣಗಳನ್ನು, ಪಟ್ಟದುಕೂಲಗಳನ್ನು ಬಿಟ್ಟು, ಚೀರವಸನಗಳನ್ನುಟ್ಟು, ಭರ್ತೃಸಮಾನವ್ರತಳಾಗಿ, ಅವನ ಆಶ್ರಮವನ್ನು ಸೇರಿದಳು. ಗಂಗಾದ್ವಾರದ ತನ್ನ ಆಶ್ರಮದಲ್ಲಿ ಪತ್ನೀಯುತನಾಗಿ ಅಗಸ್ತ್ಯನು ತೀವ್ರತಪೋನಿರತನಾಗಿದ್ದನು. ಅನುವ್ರತಳಾದ ಲೋಪಾಮುದ್ರೆಯ ಪರಿಚರ್ಯೆಗೆ ಮೆಚ್ಚಿ ಒಂದು ದಿನ ಮುನಿವರನು ಅವಳ ಸಂಗಮವನ್ನು ಬಯಸಿದನು. ಸತಿಯು ಕೈಜೋಡಿಸಿ, ಪ್ರೇಮವಿನಯ ಶ್ರೀರೂಪಿಣಿಯಾಗಿ ತನ್ನ ಪತಿಯನ್ನು ಕುರಿತು—"ಸ್ವಾಮಿ! ಪ್ರಜಾರ್ಥಿಯಾಗಿ ನೀನು ನನ್ನ ಕೈಹಿಡಿದಿದ್ದು ನಿಜ! ನಾನೂ ನಿನ್ನಲ್ಲಿ ಅನುರಕ್ತಳಾಗಿರುವೆನು. ಆದರೆ ಚೀರಕಾಷಾಯಾದಿ ತಪಸ್ಸಾಧನಸಾಮಗ್ರಿಯು ಭೋಗ ಯೋಗ್ಯವೆನಿಸುವುದಿಲ್ಲ. ನನ್ನ ತಂದೆಯ ಮನೆಯಲ್ಲಿದ್ದಂತೆ ಪರ್ಯಂಕದುಕೂಲಹಾರಭೂಷಣಾದಿ ಭೋಗ ಸಾಮಗ್ರಿಯನ್ನು ಸಜ್ಜುಗೊಳಿಸಿ, ಅಲಂಕೃತನಾಗಿ ಬಾ! ನಾನೂ ಆನಂದದಿಂದ ದಿವ್ಯಾಭರಣ ಭೂಷಿತಳಾಗಿ ನಿನ್ನನ್ನು ಸೇರುವೆನು" ಎಂದಳು. ಮುನಿಯು "ಅಂತಹ ಭೋಗ ಸಾಧನಗಳು ಧನಸಾಧ್ಯವಾಗಿವೆ ; ನನಗೆ ಧನವಿಲ್ಲ" ಎಂದನು. ಅದಕ್ಕೆ ಅವಳು "ನಿನಗೆ ತಪೋಧನವಿದೆ! ಕ್ಷಣದಲ್ಲಿ ಎಲ್ಲ ಭೋಗ ಸಾಮಗ್ರಿಯನ್ನು ಸೃಜಿಸಿ ರಮಿಸು" ಎಂದಳು. ತಪೋಧನವನ್ನು ವೆಚ್ಚಿಸಲಿಚ್ಛಿಸದ ಪತಿಗೆ ಸತಿ "ಸ್ವಾಮಿ! ಋತುಕಾಲವು ಮುಗಿಯುವುದರಲ್ಲೇ ನಿನ್ನಿಚ್ಛೆಯಂತೆ ಸುಖಸಾಧನಗಳನ್ನು ಸಾಧಿಸಿಕೊಂಡು ಬಾ! ನಿನ್ನ ಧರ್ಮಲೋಪವೂ ಬೇಡ!" ಎಂದಳು. ಅಗಸ್ತ್ಯನು ಭಿಕ್ಷೆಬೇಡಿ ಧನವನ್ನು ತರಲೆಣಿಸಿ, ಶ್ರುತರ್ವಾ ಎಂಬ ರಾಜನಲ್ಲಿಗೆ ಹೋದನು. ಬಂದ ಮುನಿಯನ್ನು ಪೂಜಿಸಿ, ಬಂದ ಕಾರಣವೇನೆಂದ ಶ್ರುತರ್ವನಿಗೆ ಅಗಸ್ತ್ಯನು "ಧನವನ್ನು ಬೇಡಿ ಬಂದಿರುವೆನು. ಪರಹಿಂಸೆಯಾಗದಂತೆ ವಿಪ್ರಾರ್ಥವಾಗಿ ವಿಭಜಿಸಿ ತೆಗೆದಿಟ್ಟ ಧನವಿದ್ದರೆ ಕೊಡು!" ಎಂದನು. ರಾಜನು ತನ್ನ ಆಯ-ವ್ಯಯವನ್ನು ತೋರಿಸಿ, ಏನೂ ಮಿಕ್ಕಿಲ್ಲವೆಂದನು.

ಅಲ್ಲಿಂದ ತೆರಳಿ ಶ್ರುತರ್ವಸಹಿತನಾದ ಅಗಸ್ತ್ಯನು ಬ್ರಧ್ನಶ್ವನೆಂಬ ರಾಜನನ್ನು ಕಂಡು, ಅವನನ್ನೂ ಯಾಚಿಸಿದನು. ಅವನ ಆಯ-ವ್ಯಯಗಳು ಪೂರ್ಣವಾಗಿ ಮಿಕ್ಕಿಲ್ಲದಿರುವುದನ್ನು ತಿಳಿದು, ಮುನಿಯು ಪುರುಕುತ್ಸ ಸುತನಾದ ತ್ರಸದ್ದಸ್ಯುವನ್ನು ಕಂಡನು. ಅವನು ಬಂದ ಮುನಿಯನ್ನೂ ಶ್ರುತರ್ವ ಬ್ರಧ್ನಶ್ವರನ್ನೂ ಪೂಜಿಸಿ, ಅವರು ಮೂವರೂ ಧನಕ್ಕಾಗಿ ಬಂದಿರುವುದನ್ನು ಕೇಳಿ ತಿಳಿದನು. ತನ್ನ

ಆಯು-ವ್ಯಯಗಳೂ ಪೂರ್ಣವಾಗಿರುವುದನ್ನು ತೋರಿ, ತ್ರಸದ್ದಸ್ಯುವೂ ಅವರೊಡನೆ ತಾನೂ ಪ್ರಯಾಣ ಬೆಳಸಿದನು. ಇಲ್ವಲನನ್ನು ಬೇಡಲೆಣಿಸಿ ಅವರು ನಾಲ್ವರೂ ಮಣಿಮತೀ ಪುರವನ್ನು ಸೇರಿ, ಇಲ್ವಲನನ್ನು ನೋಡಿ, ಧನಾರ್ಥಿಗಳೆಂದು ತಿಳಿಸಿದರು.

ಇಲ್ವಲನು ಸಾಮಾತ್ಯನಾಗಿ ಅವರನ್ನು ಪೂಜಿಸಿ, ಆತಿಥ್ಯವನ್ನು ನೀಡಿದನು. ವಾತಾಪಿಯು ಮೇಕೆಯಾದನು. ಇಲ್ವಲನು ಅವನನ್ನು ಕೊಂದು, ಅಡಿಗೆಯವರಿಂದ ಶಾಕವಾಗಿ ಸಿದ್ಧಪಡಿಸಿ, ಅತಿಥಿಗಳಿಗಿತ್ತನು. ಮೂವರು ರಾಜರೂ ವಾತಾಪಿಯನ್ನು ತಿಂದು ಸಾಯುವೆವೆಂದು ಹೆದರಿ ಸುಮ್ಮನಿರಲು, ಅವರಿಗೆ ಅಭಯವಿತ್ತು ಅಗಸ್ತ್ಯನು ಶಾಕವನ್ನೆಲ್ಲ ತಾನೇ ತಿಂದುಬಿಟ್ಟನು. ನಗುತ್ತಾ ಬಡಿಸಿದ ಇಲ್ವಲನ ಕುಕೃತ್ಯ ಗಳನ್ನು ಕೊನೆಗೊಳಿಸಲೆಣಿಸಿ ಮುನಿರಾಜನು ಸರ್ವಶಾಕವನ್ನು ಭಕ್ಷಿಸಿ, ಕೈತೊಳೆ ಯುತ್ತಾ 'ವಾತಾಪಿ! ಜೀರ್ಣೋ ಭವ!' ಎಂದನು. ತತ್‌ಕ್ಷಣವೇ ವಾತಾಪಿ ಜೀರ್ಣ ನಾಗಿಹೋದನು. ಅಗಸ್ತ್ಯನು ತೇಗು ವಾಯುರೂಪದಿಂದ ಪಾಪಿ ವಾತಾಪಿಯನ್ನು ಜೀರ್ಣಿಸಿಕೊಂಡು, ಸಂಹರಿಸಿದನು. ಇಲ್ವಲನು ತನ್ನ ಪದ್ಧತಿಯಂತೆ 'ವಾತಾಪಿ ! ಬಾ' ಎಂದು ಕೂಗಿ ಕೂಗಿ, ಅವನು ಬರದಿರಲು ಬೆರಗಾದನು. ಆಗ ಅಗಸ್ತ್ಯನು ಅವನನ್ನು ನೋಡಿ, ನಗುತ್ತಾ "ನಿನ್ನ ತಮ್ಮ ಜೀರ್ಣವಾಗಿದ್ದಾನೆ. ಇನ್ನು ಬರ ಲಾರನು. ಇನ್ನು ಮುಂದೆ ನಿನ್ನ ಕುತಂತ್ರವು ನಡೆಯಲಾರದು" ಎಂದನು. 'ಬಂದ ರಾಜರಿಗೂ ನನಗೂ ಬೇಕಾಗಿರುವಷ್ಟು ಮಾತ್ರ ಧನವನ್ನು ಕೊಡು' ಎಂದು ಬೇಡಿದ ಮುನಿಗೆ ದೈತ್ಯನು 'ನಾನೇನು ಕೊಡಲಿರುವೆನೆಂಬುದು ನಿನಗೆ ತಿಳಿದಿದೆಯಾ ?' ಎಂದು ಕೇಳಿದನು.

"ಒಬ್ಬೊಬ್ಬ ರಾಜನಿಗೆ ಹತ್ತುಸಾವಿರ ಗೋವುಗಳನ್ನು, ಅಷ್ಟೇ ಬಂಗಾರನಾಣ್ಯ ಗಳನ್ನು ಕೊಡಲಿರುವೆ ಅಲ್ಲವೇ ? ನನಗೆ ಅದರ ಎರಡರಷ್ಟು ಗೋ ಸುವರ್ಣ ಗಳನ್ನೀಯುವೆ ! ಕೇಳು ! ಒಂದು ಸುವರ್ಣರಥವೂ ನನಗಾಗಿ ಕಾದಿದೆ" ಎಂದ ಅಗಸ್ತ್ಯನ ದಿವ್ಯಜ್ಞಾನವನ್ನು ಮೆಚ್ಚಿ, ಮುನಿಯ ತಪಶ್ಶಕ್ತಿಗೆ ಹೆದರಿ, ಇಲ್ವಲನು ಇನ್ನೂ ಹೆಚ್ಚಾಗಿ ಧನಾದಿಗಳನ್ನಿತ್ತನು. ವಿರಾವ ಸುರಾವಗಳೆಂಬ ಕುದುರೆಗಳನ್ನು ಕಟ್ಟಿದ ರಥದಲ್ಲಿ ಕೂತು, ಅಗಸ್ತ್ಯನು ರಾಜರ್ಷಿಗಳನ್ನು ಬೀಳ್ಕೊಂಡು, ತನ್ನ ಆಶ್ರಮಕ್ಕೆ ಬಂದನು. ಲೋಪಾಮುದ್ರೆಯೂ ಪ್ರೀತಳಾದಳು. ಭೋಗಸುಮುಖ ಳಾದ ಸತಿಗೆ ಮುನಿಯು ಇಂತೆಂದನು—

"ಪ್ರಿಯೆ! ನಿನಗೆ ಸಾವಿರ ಸುತರು ಬೇಕೋ ? ನೂರು ಸುತರು ದಶಗುಣರು ಬೇಕೋ ? ಹತ್ತು ಸುತರು ಶತಗುಣರು—ಅಥವಾ ಒಬ್ಬನೇ ಸುತ ಸಹಸ್ರಗುಣನು ಬೇಕೋ" ಎಂದು ಕೇಳಿದ ಪತಿಗೆ ಸತಿ ಅವನತಳಾಗಿ, "ಸ್ವಾಮಿನ್ ! ಸಹಸ್ರಗುಣ ವಂತನಾದ ಸುತನೊಬ್ಬನೇ ಸಾಕು! ಅಸಾಧು ಸುತ ಸಹಸ್ರಕ್ಕಿಂತಲೂ ಸಾಧುಸುತ ನೊಬ್ಬನೇ ಲೇಸು" ಎಂದಳು. ಅವಳಲ್ಲಿ ಗರ್ಭವನ್ನಿಟ್ಟು ಮುನಿಯು ತಪೋವನಕ್ಕೆಂದು ಹೊರಟುಹೋದನು. ಏಳು ವರ್ಷ ಕಾಲವಾದ ಮೇಲೆ ಲೋಪಾಮುದ್ರೆ ದೃಢಸ್ಯು

*

ನೆಂಬ ತೇಜಸ್ವೀ ಸುತನನ್ನು ಪಡೆದಳು. ವೇದವೇದಾಂಗಚತುರನಾದ ದೃಢಸ್ಯುನಿಗೆ ಇಧ್ಮವಾಹನೆಂಬ ಮಹರ್ಷಿಯು ಸುತನು. ಇಂತು ಪ್ರಹ್ಲಾದಕುಲಜನಾದ ವಾತಾಪಿಯನ್ನು ಸಂಹರಿಸಿ, ದೃಢಸ್ಯುನಂತಹ ಮಗನನ್ನು ಪಡೆದು, ಅಗಸ್ತ್ಯನು ತನ್ನ ಪಿತೃಗಳಿಗೆ ಉತ್ತಮ ಲೋಕಗಳನ್ನು ಸಂಪಾದಿಸಿದನು. ಅವನ ಆಶ್ರಮವಿದು. ದೇವ-ಗಂಧರ್ವಸೇವಿತಳಾದ ಗಂಗೆ ಇಲ್ಲಿ ಹರಿಯುತ್ತಿರುವಳು. ತಾಯಿಯಂತೆ ಮನುಜರ ಸರ್ವಾಭೀಷ್ಟಗಳನ್ನು ಪೂರ್ಣಗೊಳಿಸುವ ಪುಣ್ಯನದಿಯಲ್ಲಿ ಸ್ನಾನಮಾಡಿ ಧನ್ಯನಾಗು!

ಧರ್ಮರಾಜ! ಇದು ಭೃಗು ತೀರ್ಥವು. ಇಲ್ಲಿ ಮಿಂದು ಪರಶುರಾಮನು ದಿವ್ಯ ತೇಜೋಯುತನಾದನು. ಹಿಂದೆ ತ್ರೇತಾಯುಗದಲ್ಲಿ ಶ್ರೀ ವಿಷ್ಣುವು ಬ್ರಹ್ಮರುದ್ರೇಂದ್ರಾದಿದೇವಪ್ರಾರ್ಥಿತನಾಗಿ, ರಾವಣಾದಿದುಷ್ಟಸಂಹಾರಮಾಡಲು ರಾಮನಾಗಿ ಪ್ರಾದುರ್ಭೂತನಾದನು. ಶ್ರೀರಾಮನು ಶಿವಧನುರ್ಭಂಗಮಾಡಿದನೆಂದು ಕೇಳಿ ಭಾರ್ಗವರಾಮನು ಕ್ಷತ್ರಿಯಾಂತಕರವಾದ ತನ್ನ ವಿಷ್ಣುಧನುವನ್ನು ಕೈಲಿ ಪಿಡಿದು, ಸೀತಾಸಮೇತನಾಗಿ, ಅಯೋಧ್ಯೆಗೆ ಬರುತ್ತಿದ್ದ ರಾಮನನ್ನು ಸಂಧಿಸಿದನು. ಶಿವಧನುವಿನನ್ನಂತೆ ವಿಷ್ಣುಧನುವನ್ನೂ ಬಾಗಿಸಿ, ಪರಾಕ್ರಮವನ್ನು ತೋರೆಂದ ಭಾರ್ಗವನಿಗೆ ರಾಮನು ವಿನಯದಿಂದ ಇಂತೆಂದನು—'ಭಗವನ್! ಇಕ್ಷ್ವಾಕುಕುಲಜನಾದ ನನಗೆ ಆತ್ಮಪ್ರಶಂಸೆ ಒಳಿತಲ್ಲ. ಆದರೂ ನಿನ್ನ ದರ್ಪವನ್ನು ಸಹಿಸಲಾರೆನು. ನಾನಾರೆಂದು ತಿಳಿದೆ? ನೋಡು!' ಎಂದು ಶ್ರೀರಾಮನು ತನ್ನ ವಿಶ್ವರೂಪವನ್ನು ತೋರಿಸಿದನು. ಭಾರ್ಗವನು ರಾಮಶರೀರದಲ್ಲಿ ಸಕಲದೇವದಾನವಮಾನವರನ್ನೂ, ಋಷಿಗಂಧರ್ವಕಿನ್ನರರನ್ನೂ, ನದೀಪರ್ವತವನೋದ್ದೇಶಗಳನ್ನೂ, ವೇದಶಾಸ್ತ್ರ ಪುರಾಣಗಳನ್ನೂ ನೋಡಿ ಆಶ್ಚರ್ಯಪಡುತ್ತಿರಲು ಶ್ರೀರಾಮನು ಅವನಿತ್ತ ಧನುವನ್ನು ಬಿಗಿಸಿ, ಕಟ್ಟಿ, ಶರವನ್ನು ಸಂಧಿಸಿ, ಪರಶುರಾಮನಲ್ಲಿ ಅಡಗಿದ್ದ ಅತುಲನೆಂಬ ದಾನವನನ್ನು ಸಂಹರಿಸಿದನು. ಇಂತು ರೂಪದ್ವಯದಿಂದ ಕ್ರೀಡಿಸಿ, ರಾಮ-ಭಾರ್ಗವರು ದುಷ್ಟಜನರನ್ನು ಮೋಹಪಡಿಸಿದರು. ಭಾರ್ಗವನು ಮಹೇಂದ್ರಗಿರಿಯನ್ನು ಸೇರಿ, ತಪಸ್ಸನ್ನು ಮಾಡುತ್ತಿರುವನು. ಪಿತ್ರಾಜ್ಞೆಯಂತೆ ತೀರ್ಥಯಾತ್ರೆಯನ್ನು ಮಾಡುತ್ತಾ, ಇಲ್ಲಿಗೆ ಬಂದು, (ಭೃಗುತೀರ್ಥ) ಮಿಂದು ಭಾರ್ಗವನು ಯಥಾಪೂರ್ವವಾಗಿ ದಿವ್ಯ ತೇಜಸ್ಸಂಪನ್ನನಾದನು. ನಿತ್ಯಸಮಿದ್ಧತೇಜನಾದ ಭಾರ್ಗವನು ಈ ಕ್ಷೇತ್ರಕ್ಕೆ ಪ್ರಾಶಸ್ತ್ಯವನ್ನೀಯಲು ಮಾಡಿದ ವಿಡಂಬನೆಯನ್ನು ನಿನಗೆ ವರ್ಣಿಸಿದೆನು. ಆ ರಮಾರಮಣನಿಗೆ ನಮಸ್ಕಾರ!

ಅಗಸ್ತ್ಯನ ಮಹಿಮಾಂತರವನ್ನು ಹೇಳುವೆನು ಕೇಳು!—ಕಾಲಕೇಯರೆಂಬ ದಾನವರು ವೃತ್ರನನ್ನು ಅನುಸರಿಸಿ, ಪ್ರಬಲರಾಗಿ, ಲೋಕಪೀಡಾಕಾರಕರಾಗಿದ್ದರು. ವೃತ್ರಪೀಡಿತರಾದ ದೇವತೆಗಳು ಬ್ರಹ್ಮನಿಗೆ ಶರಣಾಗತರಾದರು. ಆದಿದೇವನ ಆದೇಶದಂತೆ ಇಂದ್ರಾದಿಗಳು ದಧೀಚನನ್ನು ಕಂಡು ಅವನ ಅಸ್ಥಿಗಳನ್ನು ಯಾಚಿಸಿದರು. ಪರೋಪಕಾರವಾಗುವುದೆಂದರಿತು ದಧೀಚಿಋಷಿಯು ತನ್ನ ಶರೀರವನ್ನು ಯೋಗಬಲ

ದಿಂದ ಪರಿತ್ಯಜಿಸಿದನು. ನಾರಾಯಣವರ್ಮ ಮಂತ್ರ ಸಿದ್ಧನಾದ ಅವನ ಎಲುಬು ಗಳಿಂದ ವಿಶ್ವಕರ್ಮನು ಅಸ್ತ್ರಗಳನ್ನು ಮಾಡಿ, ದೇವತೆಗಳಿಗಿತ್ತನು. ಬೆನ್ನೆಲುಬಿ ನಿಂದ ಮಾಡಿದ ವಜ್ರಾಯುಧವು ಆರು ಮೂಲೆಗಳಿಂದ ಶೋಭಿಸಿ, ಭಯಂಕರ ನಿಃಸ್ವನವನ್ನು ಮಾಡುವುದಾಗಿತ್ತು. ವಜ್ರಾಯುಧವನ್ನು ಪಿಡಿದು ಇಂದ್ರನು ಶ್ರೀಹರಿಸಹಾಯದಿಂದ ವೃತ್ರಾಸುರನನ್ನು ಸಂಹರಿಸಿದನು. ದೇವತೆಗಳು ವಿಜೃಂಭಿಸಿ, ಮಿಕ್ಕ ದೈತ್ಯರನ್ನು ನಾಶಮಾಡಿದರು. ಆಗ ಕಾಲಕೇಯರು ಭೀತರಾಗಿ, ಸಮುದ್ರವನ್ನು ಹೊಕ್ಕು ಪ್ರಾಣಗಳನ್ನುಳಿಸಿಕೊಂಡರು. ವೃತ್ರಹತ್ಯೆಯಿಂದ ಬಂದ ಬ್ರಹ್ಮವಧೆ ಪಾಪವನ್ನು ಋತಂಭರನಾಮಕ ಲಕ್ಷ್ಮೀನೃಸಿಂಹ ಮಂತ್ರಜಪದಿಂದ ಕಳೆದುಕೊಂಡು ಇಂದ್ರನು ರಾಹುಮುಕ್ತ ಚಂದ್ರನಂತೆ ಪ್ರಕಾಶಿಸಿ, ಸುರಸಾಮ್ರಾಜ್ಯ ವನ್ನು ಸುಖವಾಗಿ ಪಾಲಿಸಿದನು.

ಕಾಲಕೇಯರು ವೃತ್ರವಧದಿಂದ ರೆಕ್ಕೆಗಳು ಕಡಿದ ಪಕ್ಷಿಗಳಂತಾದರು. ಸಭೆ ಗೂಡಿ, ಅವರು ಇಂತು ಚಿಂತಿಸಿದರು—'ವಿದ್ಯಾವಂತರು, ತಪೋನಿರತರು ಆದ ಜನರನ್ನು ಮೊದಲು ನಾವು ಸರ್ವೋಪಾಯಗಳಿಂದ ಸಂಹರಿಸಬೇಕು. ತಪಸ್ಸಿನಿಂದ ಲೋಕಗಳು ನಿಂತಿವೆ. ಲೋಕನಾಶವನ್ನು ಸಾಧಿಸಬೇಕಾದರೆ ಬೇಗನೆ ತಪಸ್ಸನ್ನು ಕೆಡಿಸಬೇಕು. ತಪಸ್ವಿಗಳು, ವಿದ್ಯಾರತರು, ಕರ್ಮಕುಶಲರು ಆದ ವಿಪ್ರರು ನಮ್ಮ ಪ್ರಥಮ ಶತ್ರುಗಳು. ಅವರು ನಷ್ಟರಾದರೆ, ಉಪದೇಶಕರಿಲ್ಲದೆ ಲೋಕವೇ ಹಾಳಾಗಿ, ನಮಗೆ ಇಷ್ಟಸಿದ್ಧಿಯಾಗುವುದೆಂದು ಆ ದುರ್ಮಾರ್ಗರು ಆಲೋಚಿಸಿದರು. ಹಗಲೆಲ್ಲ ಸಮುದ್ರದ ವಿವರಗಳಲ್ಲಿ ಅಡಗಿದ್ದು, ಕಾಲಕೇಯರು ರಾತ್ರಿಯಾಗಲು ಮೇಲೇರಿಬಂದು ಆಶ್ರಮಗಳನ್ನು ಹೊಕ್ಕು, ಬ್ರಾಹ್ಮಣರನ್ನು ಕೊಂದು ತಿನ್ನುತ್ತಿದ್ದರು. ಫಲ-ಮೂಲಾಶನರು, ವಾಯುಭಕ್ಷರು ಆದ ನೂರಾರು ಜನ ಋಷಿಗಳು ಅವರ ಭೀಕರ ಮಾಯೆಗೆ ತುತ್ತಾಗಿ ಸತ್ತರು. ಆಶ್ರಮಗಳು ಶ್ಮಶಾನದಂತಾದವು. ಫಲವೃಕ್ಷಗಳು ಕಡಿಯಲ್ಪಟ್ಟು ನೆಲಕ್ಕುರುಳಿದವು. ವಸಿಷ್ಠ ವಿಶ್ವಾಮಿತ್ರ ಗಾಲವ ಗೌತಮರ ತಪೋವನಗಳು ಶೂನ್ಯವಾದವು. ನೆಲವೆಲ್ಲವೂ ಕಂಕಾಳಗಳಿಂದ ಹರಡಲ್ಪಟ್ಟು ಬೀಭತ್ಸ ವಾಗಿತ್ತು. ಅಗ್ನಿಹೋತ್ರಗಳು ಕಳಾಹೀನವಾದವು. ಮುನಿಗಳು ನಡೆದ ದುರಂತದ ಕಾರಣವನ್ನರಿಯಲಾರದೆ ಭೀತರಾದರು. ಜಗವೆಲ್ಲವೂ ಯಜ್ಞಯಾಗಗಳಿಲ್ಲದೆ ನಷ್ಟ ಮಂಗಳವಾಯಿತು. ಅವರು ಇಂದ್ರಾದಿದೇವತೆಗಳಿಂದ ಕೂಡಿ, ಶ್ರೀಹರಿಗೆ ಶರಣಾಗತರಾದರು.

'ಜಗಜ್ಜನ್ಮಸ್ಥೇಮ ಪ್ರಲಯ ರಚನಾ ಚತುರನಾದ ಶ್ರೀನಾರಾಯಣ! ನಮ್ಮನ್ನು ಕಾಪಾಡು! ಚರಾಚರ ಜಗವೆಲ್ಲವೂ ನಿನ್ನಧೀನವಾಗಿದೆ. ವರಾಹನಾಗಿ ಹಿರಣ್ಯಾಕ್ಷನನ್ನು ಕೊಂದು ಭೂಮಿಯನ್ನು ಉದ್ಧರಿಸಿದೆ. ನೃಸಿಂಹನಾಗಿ ಹೇಮಕಶಿಪು ನನ್ನು ಸಂಹರಿಸಿ, ಭಕ್ತನನ್ನು ಪೊರೆದೆ; ವಾಮನನಾಗಿ ಬಲಿಯನ್ನು ಪಾತಾಳಕ್ಕಟ್ಟಿದೆ. ಜಂಭಾಸುರನನ್ನು ಸಂಹರಿಸಿ ಇಂದ್ರನನ್ನು ಕಾಪಾಡಿದೆ. ದೇವದೇವ! ಈಗ

ಬಂದಿರುವ ಮಹಾವಿಪತ್ತಿನಿಂದ ಲೋಕಗಳನ್ನು ಪಾರುಗಾಣಿಸಿ ರಕ್ಷಿಸು!' ಎಂದು ಬೇಡಿದ ಇಂದ್ರಾದಿದೇವರನ್ನು, ಭಾರದ್ವಾಜಾದಿ ಮುನಿಗಳನ್ನು ನೋಡಿ ವಿಷ್ಣುವು ಇಂತೆಂದನು—"ವೃತ್ರವಧೆಯಿಂದ ಅನಾಥರಾದ ಕಾಲಕೇಯರ ಕುತಂತ್ರವಿದು. ಸಮುದ್ರದಲ್ಲಿ ಅಡಗಿ ರಾತ್ರಿಕಾಲದಲ್ಲಿ ಹೊರಬಂದು ವಿಪ್ರರನ್ನು ನಾಶಮಾಡುವ ಕಾಲಕೇಯರನ್ನು ಕೊಲ್ಲುವುದು ಸುಕರವಲ್ಲ. ಸಮುದ್ರವನ್ನು ಶೋಷಿಸಿ, ಹೊರ ಬಿದ್ದ ಆ ದುಷ್ಟರನ್ನು ಸಂಹರಿಸಿರಿ! ಅಗಸ್ತ್ಯನು ಸಮುದ್ರವನ್ನೆಲ್ಲ ಕುಡಿದು, ಬರಿದಾಗಿಸಲು ಸಮರ್ಥನಿರುವನು. ಅವನಿಗೆ ಶರಣಾಗಿ ಬೇಡಿರಿ?" ಅಂತೆಯೇ ದೇವಮುನಿಗಳು ಅಗಸ್ತ್ಯನಲ್ಲಿಗೆ ಬಂದು ಇಂತು ಬೇಡಿದರು—"ಮಹಾನುಭಾವ! ವರುಣಪುತ್ರನು, ದೀಪ್ತತೇಜನು ಆದ ನೀನು ದೇವತೆಗಳಲ್ಲಿ ಬ್ರಹ್ಮನಂತೆ ಮುನಿ ಮಧ್ಯದಿ ಶೋಭಿಸುವೆ. ತಪೋಧನನಾದ ನಿನಗೆ ದುಷ್ಕರವಾದುದಿಲ್ಲ. ಹಿಂದೆ ದುರ್ಮದನಾದ ನಹುಷನ ಪೀಡೆಯಿಂದ ನಮ್ಮನ್ನು ಕಾಪಾಡಿದೆ. ಸಿಟ್ಟಿನಿಂದ ಬೆಳೆದು ಲೋಕವೆಲ್ಲವೂ ಅಂಧಕಾರ ಬಂಧುರವಾಗುವಂತೆ ಸೂರ್ಯಗತಿಯನ್ನು ನಿಲ್ಲಿಸಿದ ವಿಂಧ್ಯಪರ್ವತದ ಸೊಕ್ಕನ್ನು ಮುರಿದೆ. ಈಗ ಕಾಲಕೇಯರ ಹಾವಳಿ ಯಿಂದ ಹಾಳಾಗುತ್ತಿರುವ ಲೋಕಗಳನ್ನು ಉಳಿಸು! ಸಮುದ್ರ ಜಲವನ್ನು ಶೋಷಿಸು! ಹೊರಬಿದ್ದು ದಿಕ್ಕೆಟ್ಟು ಓಡುವ ದೈತ್ಯರನ್ನು ನಾವು ಸಂಹರಿಸಲು ಅನು ಕೂಲನಾಗು." ಆ ಮಾತನ್ನಾಲಿಸಿ ಅಗಸ್ತ್ಯನು ಲೋಕಹಿತಕ್ಕಾಗಿ ಸಮುದ್ರವನ್ನು ಕುಡಿಯಲೆಣಿಸಿ, ದೇವ ಮುನಿವೃಂದಯುತನಾಗಿ ವೇಲೆಯನ್ನು ಸೇರಿದನು.

ಭಯಂಕರವಾದ ಅಲೆಗಳು ತೆರೆತೆರೆಯಾಗಿ ಬರುತ್ತಿರಲು ಮೇಘದಂತೆ ಗರ್ಜಿಸುವ ಸಮುದ್ರವು ದುಷ್ಪಾರವಾಗಿತ್ತು. ಬಿರುಗಾಳಿಗೆ ತೆರೆಗಳು ತೀರವನ್ನು ದಾಟಿ ಮೇಲೇರಿ ಬರುತ್ತಿದ್ದವು. ಸಮುದ್ರರಾಜನ ನಗುವಿನಂತೆ ನೊರೆಯು ತೀರದಲ್ಲಿ ಹೆಪ್ಪುಗಟ್ಟಿತ್ತು. ಮಕರ ತಿಮಿಂಗಿಲ ಮತ್ಸ್ಯಾದಿ ಜಲಜಂತುಗಳು ನೀರಿನಲ್ಲಿ ಮೇಲೇರಿ ಕೆಳಗಿಳಿದು ನರ್ತಿಸುವಂತಿದ್ದವು. ಪಕ್ಷಿಗಣವು ಹಾರಾಡುತ್ತಾ ತಿರುತಿರುಗಿ ತೀರವನ್ನು ಸೇರುತ್ತಿದ್ದವು. ಇಂತಹ ಸಮುದ್ರದ ಜಲವನ್ನೆಲ್ಲ ಅಗಸ್ತ್ಯನು ಲೋಕಹಿತಾರ್ಥವಾಗಿ ಕುಡಿದುಬಿಟ್ಟನು. ಅರ್ಣವವೆಲ್ಲವೂ ಬರಿದಾಯಿತು. ಜಲಜಂತುಗಳು ಉಸಿರಾಡದೆ ಹಾರಾಡಿದವು. ಕಾಲಕೇಯರು ಹೊರಬಿದ್ದು, ದೃಗ್ಗೋಚರರಾದರು. ಆಗ ದೇವತೆ ಗಳು ದಿವ್ಯಾಯುಧಪಾಣಿಗಳಾಗಿ, ದಾನವರನ್ನೆಲ್ಲರನ್ನೂ ಸಂಹರಿಸಿದರು. ಬ್ರಹ್ಮ ದ್ರೋಹದಿಂದ ಗತಶ್ರೀಕರು, ಗತಾಯುಷ್ಕರು ಆದ ದಾನವರು ಕಡಿದಾಡಿ, ದೇವತೆ ಗಳನ್ನು ಗೆಲ್ಲಲಾರದೆ ಮೃತರಾದರು. ಕೆಲವರು ಹತಶೇಷರು ಪಾತಾಲತಲವನ್ನು ಹೊಕ್ಕು ಉಳಿದರು. ಇಂತು ದೇವತೆಗಳು ಲೋಕಕಂಟಕರಾದ ಕಾಲಕೇಯರನ್ನು ನಾಶಪಡಿಸಿ, ಲೋಕಪ್ರಜರ ಕಲ್ಯಾಣವನ್ನು ಸಾಧಿಸಿದರು. ಇಂತಹ ಮಹತ್ಕಾರ್ಯ ದಲ್ಲಿ ಸಹಾಯಕನಾದ ಅಗಸ್ತ್ಯನಮೇಲೆ ಹೂಮಳೆಗರೆದರು. ಸುರರು ಮುನಿಗಳು ಅವನನ್ನು ಬಹುರೀತಿಯಾಗಿ ಪ್ರಶಂಸಿಸಿದರು. ಮತ್ತೆ ಸಮುದ್ರವನ್ನು ಕುಡಿದ

ನೀರನ್ನು ಬಿಟ್ಟು ಪೂರಿಸೆಂದು ಬೇಡಿದ ಸುರರಿಗೆ ಅಗಸ್ತ್ಯನು ಕುಡಿದ ಜಲವೆಲ್ಲವೂ ಜೀರ್ಣವಾಗಿಹೋಗಿದೆ. ಮತ್ತೆ ಜಲವನ್ನು ಬಿಡಲಾರೆನು. ಸಮುದ್ರಪೂರಣವನ್ನು ಮಾಡಲು ಬೇರೊಂದು ಉಪಾಯವನ್ನು ಚಿಂತಿಸಿ" ಎಂದು ಹೇಳಿ ತನ್ನ ಆಶ್ರಮಕ್ಕೆ ಹೊರಟುಹೋದನು.

ದೇವತೆಗಳು ಸಮುದ್ರಪೂರಣವನ್ನು ಬಯಸಿ ಬ್ರಹ್ಮನನ್ನು ಬೇಡಿದರು. ಪಿತಾಮಹನು 'ಮುಂದೆ ಕಾಲಯೋಗದಿಂದ ಸಮುದ್ರವು ತಾನೇ ತುಂಬುವುದು, ಚಿಂತಿಸಬೇಡಿ! ಭಗೀರಥನೆಂಬ ಇಕ್ಷ್ವಾಕುವಂಶದ ರಾಜನು, ಕಪಿಲಕೋಪಾಗ್ನಿಯಿಂದ ದಗ್ಧರಾದ ತನ್ನ ಪೂರ್ವಜರನ್ನು ಉದ್ಧರಿಸಲು ಸ್ವರ್ಗದಿಂದ ಮಂದಾಕಿನಿಯನ್ನು ತರುವನು. ಆಗ ಗಂಗಾಜಲದಿಂದ ಸಮುದ್ರವು ಪೂರ್ಣವಾಗುವುದು' ಎಂದು ಹೇಳಿ, ಅಮರರನ್ನು ಕಳಿಸಿದನು.

ಅಗಸ್ತ್ಯನು ವಿಂಧ್ಯವನ್ನು ಬೆಳೆಯದಂತೆ ನೆಲಸಮ ಮಾಡಿದನೆಂದೆನಲ್ಲವೇ ? ಆ ಕಥೆಯನ್ನು ಕೇಳು !—

ಸೂರ್ಯನು ಮೇರುವಿಗೆ ಪ್ರದಕ್ಷಿಣವಾಗಿ ಬರುವುದನ್ನು ಕಂಡು, ವಿಂಧ್ಯ ಪರ್ವತವು ತನ್ನನ್ನೂ ಸುತ್ತುಗಟ್ಟಿ ಹೋಗೆಂದು ಸೂರ್ಯನಿಗೆ ಹೇಳಿತು 'ಮೇರುವನ್ನು ಸುತ್ತುವುದು ನನ್ನಿಚ್ಛೆಯಿಂದಲ್ಲ. ವಿಂಧ್ಯರಾಜ! ಜಗನ್ನಿರ್ಮಾತನ ಆಜ್ಞೆಯಿಂದ ಎಂದು ತಿಳಿ! ನಿನ್ನನ್ನು ಸುತ್ತುವುದು ನನ್ನಿಂದಾಗದು'—ಎಂದ ಸೂರ್ಯನ ಮಾರ್ಗವನ್ನು ಅಡ್ಡಗಟ್ಟುವಂತೆ ವಿಂಧ್ಯಪರ್ವತವು ಬೆಳೆದು ನಿಂತಿತು. ಆಗ ಲೋಕವು ಅಂಧಕಾರಾವೃತವಾಯಿತು. ದೇವ ಮುನಿಗಳು ಅಗಸ್ತ್ಯನಿಗೆ ಶರಣಾದರು. ಹರಿದ್ವಾರದ ಆಶ್ರಮದಿಂದ ದಕ್ಷಿಣ ದಿಕ್ಕಿಗೆ ಹೊರಟು ಅಗಸ್ತ್ಯನು, ಅಡ್ಡವಾಗಿ ನಿಂತಿದ್ದ ವಿಂಧ್ಯಪರ್ವತವನ್ನು 'ಮಾರ್ಗವನ್ನು ಕೊಡು' ಎಂದನು. 'ದಕ್ಷಿಣದಲ್ಲಿ ಕೆಲಸ ವಿದೆ. ನೆಲಸಮನಾಗಿ ಮಾರ್ಗವನ್ನಿತ್ತು, ಮತ್ತೆ ನಾನು ಉತ್ತರಕ್ಕೆ ಹೋಗುವ ವರೆಗೂ ಹಾಗೇ ಇರು!' ಎಂದ ಮುನಿರಾಜನ ಕೋಪ ಶಾಪಗಳಿಗೆ ಹೆದರಿ ವಿಂಧ್ಯವು ನೆಲಸಮವಾಯಿತು. ಅಗಸ್ತ್ಯನು ದಕ್ಷಿಣದಲ್ಲಿ ಶಾಶ್ವತವಾಗಿ ನೆಲೆಸಿ, ಉತ್ತರಕ್ಕೆ ಹೋಗಲೇ ಇಲ್ಲ. ವಿಂಧ್ಯವೂ ಬೆಳೆಯಲಿಲ್ಲ. ಇಂತು ವಿಂಧ್ಯಪರ್ವತದೇವನ ಗರ್ವವನ್ನು ಮುರಿದು, ಅಗಸ್ತ್ಯನು ಲೋಕಹಿತವನ್ನು ಸಾಧಿಸಿ, ಮಹಾಮಹಿಮನೆನಿಸಿರುವನು.

ಸಾಗರವು ಗಂಗಾಜಲಪೂರ್ಣವಾದ ಬಗೆಯನ್ನು ವರ್ಣಿಸುವೆನು—ಇಕ್ಷ್ವಾಕು ಕುಲದಲ್ಲಿ ಸಗರನೆಂಬ ಚಕ್ರವರ್ತಿಯು ಇದ್ದನು. ಹೈಹಯ ತಾಲಜಂಘ ಯವನ ರನ್ನು ಗೆದ್ದು, ಆಯೋಧ್ಯೆಯಲ್ಲಿ ಏಕಚ್ಛತ್ರಾಧಿಪನಾಗಿ ಪಾಲಿಸುತ್ತಿದ್ದನು. ಅವನಿಗೆ ವೈದರ್ಭಿ, ಶೈಬ್ಯೆ ಎಂಬ ಇಬ್ಬರು ಮಹಾರಾಣಿಯರಿದ್ದರು. ಬಹುಕಾಲವಾದರೂ ಸಂತಾನ ಕಾಣದೆ ಮಹಾರಾಜನು ಪತ್ನಿಯರಿಂದ ಕೂಡಿ ಕೈಲಾಸಗಿರಿಯಲ್ಲಿ ತೀವ್ರ-ತಪವನ್ನು ಮಾಡಿದನು. ಶಂಕರನು ಪ್ರಸನ್ನನಾಗಿ 'ಮಹಾರಾಜ! ಈಗ ನಡೆಯುವ

ಮುಹೂರ್ತಬಲದಿಂದ ನಿನಗೆ ಒಬ್ಬ ಪತ್ನಿಯಲ್ಲಿ ಅರುವತ್ತು ಸಾವಿರ ಸುತರಾಗುವರು. ಅವರು ದರ್ಪದಿಂದ ನಷ್ಟರಾಗುವರು. ಇನ್ನೊಬ್ಬ ಪತ್ನಿಯಲ್ಲಿ ವಂಶಧರನಾದ ಸುತನೊಬ್ಬನುದಿಸುವನು' ಎಂದು ಹೇಳಿ ಅಂತರ್ಹಿತನಾದನು. ಸಗರನು ಸಂತುಷ್ಟನಾಗಿ ಅಯೋಧ್ಯೆಗೆ ಬಂದನು. ಸುಮತಿ ಕೇಶಿನಿಯರು (ವೈದರ್ಭಿ ಶೈಬ್ಯೆಯರು) ಗರ್ಭಿಣಿಯರಾದರು. ಸುಮತಿಯು ಕಾಲದಲ್ಲಿ ಒಂದು ಸೋರೆಕಾಯಿಯಂತಿರುವ ಪಿಂಡವನ್ನು ಹೆತ್ತಳು. ಅದನ್ನು ಬಿಸುಡಲು ಹವಣಿಸಿದ ರಾಜನನ್ನು ವಾರಿಸಿ, ಆಕಾಶವಾಣಿ ಇಂತೆಂದಿತು—'ರಾಜನ್! ಸಾಹಸ ಬೇಡ! ಅಲಾಬುಮಧ್ಯದಿಂದ ಬೀಜಗಳನ್ನು ತೆಗೆದು ತುಪ್ಪದ ಗಡಿಗೆಗಳಲ್ಲಿಡು. ಅರುವತ್ತುಸಾವಿರ ಸುತರನ್ನು ಪಡೆಯುವೆ.' ಅಂತೆಯೇ ಬೀಜಗಳಿಂದ ಉದ್ಭೂತರಾದ ಸುತರನ್ನು ದಾದಿಯರ ಕೈಯಿಂದ ಸಾಕಿಸಿ ಸಗರನು, ಕೇಶಿನಿಯ ಮಗನಾದ ಅಸಮಂಜಸನಿಗೆ ಯುವರಾಜ್ಯವನ್ನಿತ್ತು, ಸುಖದಿಂದಿದ್ದನು. ಅರುವತ್ತುಸಾವಿರ ಸುತರು ದೊಡ್ಡವರಾದರು. ಸ್ವಭಾವ ದುಷ್ಟರಾದ ರಾಜಪುತ್ರರು ಸಂಖ್ಯಾಬಲದಿಂದ ಗರ್ವಿಸಿ, ದೇವಮಾನವರನ್ನು ಬಾಧಿಸಿದರು. ಶರಣಾಗತರಾದ ದೇವ ಮುನಿ ಗಂಧರ್ವರನ್ನು ಬ್ರಹ್ಮನು ರಾಜಪುತ್ರರೆಲ್ಲರೂ ಶೀಘ್ರದಲ್ಲಿಯೇ ಕಪಿಲಹರಿಯ ಕೋಪಾಗ್ನಿಗೆ ತುತ್ತಾಗಿ ಸಾಯುವರೆಂದು ಸಂತೈಸಿ ಕಳಿಸಿದನು.

ಸಗರರಾಜನು ಅಶ್ವಮೇಧವನ್ನು ಮಾಡಲೆಣಿಸಿ, ಹಯವನ್ನು ಪ್ರೋಕ್ಷಿಸಿ, ದೇಶಗಳಲ್ಲಿ ತಿರುಗಿಬರಲು ಬಿಟ್ಟನು. ಅಶ್ವರಕ್ಷಕರಾಗಿ ಅರುವತ್ತುಸಾವಿರ ರಾಜಪುತ್ರರು ಸಾಯುಧರಾಗಿ ಹಿಂಬಾಲಿಸಿದರು. ಕುದುರೆಯು ಸಮುದ್ರವನ್ನು ಪ್ರವೇಶಿಸಿತು. ಜಲರಹಿತವಾಗಿ ಶುಷ್ಕವಾಗಿದ್ದ ಸಮುದ್ರದ ವಿವರದಲ್ಲಿ ಕಾಣಬರದಿದ್ದ ಕುದುರೆಯನ್ನು ಹುಡುಕುತ್ತಾ, ರಾಜಸುತರು ಕುದ್ದಾಲಕಗಳಿಂದ ಸಮುದ್ರವನ್ನು ತೋಡಿ, ತೋಡಿ ಪಾತಾಳವನ್ನು ಪ್ರವೇಶಿಸಿದರು. ಅವರು ತೋಡುವಾಗ ಸಾವಿರಾರು ಜಲಜಂತುಗಳು ಭಿನ್ನಾಂಗಗಳಾಗಿ ಸತ್ತವು. ಈಶಾನ್ಯದೇಶದಲ್ಲಿ ಕುದುರೆಯನ್ನು ಕಂಡು ಅದರ ಸಮೀಪದಲ್ಲಿ ತಪೋನಿರತನಾದ ಕಪಿಲನನ್ನೂ ಕಂಡರು. ಅವನೇ ಕುದುರೆಯ ಕಳ್ಳನೆಂದು ಭ್ರಮಿಸಿ, ಆ ದುರ್ಮಾರ್ಗರು ಅವನ ಮೇಲೇರಿಹೋದರು. ಕಪಿಲನು ಕಣ್ಣು ತೆಗೆದು ನೋಡುವ ಮಾತ್ರದಿಂದಲೇ ರಾಜಪುತ್ರರ ಪಾಪವೇ ಅಗ್ನಿಯಾಗಿ ಅವರನ್ನು ಸುಟ್ಟು ಕೆಡಹಿತು. ಮಹಾರಾಜ! ಭಗವದ್ದ್ರೋಹಿಗಳಿಗೆ ಕ್ಷೇಮ ಉಂಟೇ ?

ನಾರದನು ಪೇಳಲು ಮಕ್ಕಳ ಗತಿಯನ್ನರಿತು ಸಗರನು ಚಿಂತಾಕ್ರಾಂತನಾದನು. ಮಹಾದೇವನ ವಚನವು ಸುಳ್ಳಾಗದೆಂದು ಸಮಾಧಾನಹೊಂದಿ ಅವನು ಅಸಮಂಜಸನ ಮಗನಾದ ಅಂಶುಮಂತನನ್ನು ಕುದುರೆಗಾಗಿ ಕಳಿಸಿದನು.

ಅಸಮಂಜಸನು ನಿಜವಾಗಿ ಅಸಮಂಜಸ ಕಾರ್ಯವನ್ನೇ ಮಾಡಿದನು. ಅವನು ತನ್ನೊಡನಾಡುವ ಪುರಬಾಲಕರನ್ನು ಸರಯೂ ನದಿಯಲ್ಲಿ ಮುಳುಗಿಸಿ

ಕೊಲ್ಲುತ್ತಿದ್ದನು. ಅವನ ಪೀಡೆಯನ್ನು ತಾಳಲಾರದ ಪ್ರಜರ ಮೊರೆಯನ್ನಾಲಿಸಿ, ಸಗರನು ತನ್ನ ದುಷ್ಟ ಸುತನನ್ನು ರಾಜ್ಯದಿಂದ ಹೊರಹಾಕಿಸಿದನು. ಯೋಗೀಶನಾದ ಅಸಮಂಜಸನಿಗೂ ಅದೇ ಬೇಕಿತ್ತು. ಅವನು ತಾನು ನೀರಿನಲ್ಲಿ ಮುಳುಗಿಸಿದ ಬಾಲಕರನ್ನೆಲ್ಲ ಕೂಗಿ ಕೂಗಿ ನೀರಿನಿಂದ ಹೊರಬಂದ ಅವರನ್ನು ಅವರವರ ಜನಕರಿಗೊಪ್ಪಿಸಿ, ತಾನು ಅವಧೂತನಾಗಿ, ತಪವನ್ನು ಗೈದು ಮುಕ್ತನಾದನು. ಅವನ ಮಗನಾದ ಅಂಶುಮಂತನು ತಾತನ ಆಜ್ಞೆಯಂತೆ ಸಮುದ್ರದ ದಡದಲ್ಲಿದ್ದ ಕಪಿಲನನ್ನು ಕಂಡು, ಶಿರಸಾ ವಂದಿಸಿ ಕೈ ಜೋಡಿಸಿ, ಕುದುರೆಯನ್ನು ಒಯ್ಯಲು ಅಪ್ಪಣೆ ಕೇಳಿದನು. ಭಗವಂತನು ಪ್ರೀತನಾಗಿ 'ಯಜ್ಞಕಾರಣವಾದ ತುರಗವನ್ನು ಕೊಂಡು ಹೋಗು! ನಿನ್ನ ಪಿತೃವ್ಯರು ತಮ್ಮ ದರ್ಪದಿಂದ ತಾವು ನಷ್ಟರಾಗಿರುವರು. ಸ್ವರ್ಗದಿಂದ ಮಂದಾಕಿನಿಯನ್ನು ತಂದು ಅವರ ಶರೀರಭಸ್ಮರಾಶಿಗಳ ಮೇಲೆ ಹರಿಸು. ಅವರಿಗೆ ಸದ್ಗತಿಯಾಗುವುದು' ಎಂದು ಅವನನ್ನು ಹರಸಿ ಕಳಿಸಿದನು.

ಅಂಶುಮಂತನು ತಂದ ಹಯದಿಂದ ಯಜ್ಞವನ್ನು ಮುಗಿಸಿ, ಸಗರನು ಪೌತ್ರನಿಗೆ ಪಟ್ಟಗಟ್ಟಿ, ತಾನು ತಪವನ್ನು ಗೈದು ಮುಕ್ತನಾದನು. ಅಂಶುಮಂತನು ರಾಜ್ಯವನ್ನಾಳಿ, ತನ್ನ ಮಗನಾದ ದಿಲೀಪನಿಗೆ ಪಟ್ಟಗಟ್ಟಿ, ತಪೋವನದಲ್ಲಿ ಗಂಗೆಯನ್ನು ತರಲು ತಪಸ್ಸನ್ನು ಮಾಡಿದನು. ಅವನು ಸದ್ಗತಿಯನ್ನು ಹೊಂದಿದನು. ದಿಲೀಪನೂ ಅಂತೆಯೇ ಪ್ರಯತ್ನಿಸಿ, ಕೈಲಾಗದೆ ಕೊನೆಗೆ ಸ್ವರ್ಗವನ್ನೈದಿದನು. ಅವನ ಮಗನಾದ ಭಗೀರಥನು ಸರ್ವಲೋಕ ಮನೋನಯನ ನಂದನನಾಗಿ ರಾಜ್ಯವಾಳಿದನು. ರಾಜ್ಯವನ್ನು ಮಂತ್ರಿಗಳಿಗೊಪ್ಪಿಸಿ, ಭಗೀರಥನು ಹಿಮವತ್ಕಂದರದಲ್ಲಿ ಗಂಗಾವತರಣಕ್ಕಾಗಿ ತೀವ್ರತಪವನ್ನಾಚರಿಸಿದನು.

ಅಂಬರಚುಂಬಿ ಶೃಂಗಗಳಿಂದಲೂ, ಶೃಂಗಗಳನ್ನು ಸುತ್ತಿ ವಸ್ತ್ರಗಳಂತಿರುವ ಮೇಘಮಾಲೆಗಳಿಂದಲೂ ಶೃಂಗಗಳಿಂದ ಹರಿದುಬರುವ ಝರಿಗಳಿಂದಲೂ ಝರಿಗಳಲ್ಲಿ ಅರಳಿದ ಕಮಲಕಲ್ಹಾರಾದಿ ಕುಸುಮಗಂಧದಿಂದಲೂ ಕುಸುಮ ರಸವನ್ನು ಸವಿಯಲು ಬರುವ ದುಂಬಿಗಳ ಝಂಕಾರದಿಂದಲೂ ಗುಹಾಕಂದರ ನಿವಾಸಿಗಳಾದ ಸಿಂಹಾದಿ ಮೃಗಧ್ವಾನಗಳಿಂದಲೂ ಚಿತ್ರವಿಚಿತ್ರ ಫಲಪುಷ್ಪ ವೃಕ್ಷ ಲತಾ ಗುಲ್ಮಗಳಿಂದಲೂ ಕಲಕಲ ರವವನ್ನು ಮಾಡುವ ನಾನಾ ವಿಧ ವಿಹಗಗಳಿಂದಲೂ, ಗರಿ ಬಿಚ್ಚಿ ನರ್ತಿಸುವ ಮಯೂರಗಳಿಂದಲೂ ಪಂಚಮಸ್ವರದಲ್ಲಿ ಅಂಚಿತವಾಗಿ ಕೂಗುವ ಕೋಗಿಲೆಗಳಿಂದಲೂ ಕಿನ್ನರ ವಿದ್ಯಾಧರ ಯುವತೀ ಸಹಚರರಿಂದಲೂ ಶೋಭಿಸುವ ಹಿಮವತ್ಪರ್ವತವನ್ನು ಸೇರಿ ಭಗೀರಥನು ಒಂದುಸಾವಿರ ವರ್ಷ ತಪಸ್ಸನ್ನು ಮಾಡಿ, ಪ್ರಸನ್ನಳಾಗಿ ಬಂದು ನಿಂದ ಮಂದಾಕಿನಿಯನ್ನು ಕಂಡನು. ಸಾಷ್ಟಾಂಗವೆರಗಿ, ಕಣ್ಣಲ್ಲಿ ಆನಂದ ಬಿಂದುಗಳು ತುಂಬಿ ನಿಲ್ಲಲು, ಕೈಜೋಡಿಸಿ ಭಗೀರಥನು 'ತಾಯೇ! ವರುಣಜಾಯೇ! ಕಪಿಲನ ಕಟ್ಟಪ್ಪಣೆಯಂತೆ ನಿನ್ನನ್ನು ನನ್ನ ಪೂರ್ವಜರ ಭಸ್ಮರಾಶಿಗಳ ಮೇಲೆ ಹರಿದು ಉದ್ಧರಿಸೆಂದು ಬೇಡಿ, ತಪವನ್ನಾಚರಿಸಿದೆನು.

ಪ್ರಸನ್ನಳಾದೆ ಜನನಿ! ಧನ್ಯನಾದೆನು, ಇಳಿದು ಬಾರಮ್ಮ! ಗಂಗೆ! ಸರ್ವ ಮಾನವರನ್ನು ನಿನ್ನ ಸ್ನಾನಪಾನಗಳಿಂದ ಉದ್ಧರಿಸಿ ಶ್ರೀಹರಿಪಾದವನ್ನು ಸೇರಿಸು!' ಎಂದು ಪ್ರಾರ್ಥಿಸಿದನು. ಆಗ ಗಂಗೆಯು 'ನಾನು ಇಳಿದು ಬರುವ ವೇಗವನ್ನು ಧರಿಸಲು ಮಹಾದೇವನೊಬ್ಬನೇ ಸಮರ್ಥನು. ಅವನನ್ನು ತಪಸ್ಸಿನಿಂದ ಮೆಚ್ಚಿಸಿ, ಗಂಗಾಧರನಾಗುವಂತೆ ಬೇಡು!' ಎಂದಳು. ಅಂತೆಯೇ ಭಗೀರಥನು ಕೈಲಾಸಗಿರಿಯನ್ನು ಸೇರಿ ತಪವನ್ನುಗೈದನು. ಶಂಕರನು ಪ್ರಸನ್ನನಾಗಿ ಬಂದು, 'ರಾಜನ್! ಸಾಕ್ಷಾದ್ವಿಷ್ಣುಪಾದಸಂಭವಳಾದ ಗಂಗೆಯನ್ನು ಆನಂದದಿಂದ ನನ್ನ ಶಿರದಲ್ಲಿ ಧರಿಸುವೆನು. ನಾನು ಪವಿತ್ರನಾದೆನು. ನೀನೂ ನಿನ್ನ ಪೂರ್ವಜರೂ ಉದ್ಧೃತರಾದಿರಿ' ಇಂತು ಹೇಳಿ, ಸ್ವರ್ಗದಿಂದಿಳಿದುಬಂದ ಮಂದಾಕಿನಿಯನ್ನು ಜಟೆಯಲ್ಲಿ ಧರಿಸಿ, ಮೆಲ್ಲನೆ ಕೆಳಗೆ ಹರಿಯಬಿಟ್ಟನು. ಮಹಾದೇವನ ಮಹದದ್ಭುತಸಾಮರ್ಥ್ಯವನ್ನು ದೇವ ಗಂಧರ್ವರು ಪೊಗಳಿ, ಹೂಮಳೆಗರೆದರು.

ಗಂಗೆಯು ಭೂಮಿಗಿಳಿದುಬಂದಳು. ಫೇನಗಳಿಂದ ನಗುವಳೋ, ಅಲೆಗಳಿಂದ ಕುಲುಕುವಳೋ, ಸುಳಿಗಳಿಂದ ಬಳುಕುವಳೋ, ಮೇಲೆ ತೇಲಾಡುವ ಹಂಸಗಳಿಂದ ಜಲಕ್ರೀಡೆಯಾಡುವಳೋ, ಜಂಬಾಲಗಳಿಂದ ಕೇಶರಾಶಿಯನ್ನು ತೋಳೆಯುವಳೋ, ಅರಳಿನಿಂತ ಕಮಲಗಳಿಂದ ನೋಡುವಳೋ, ಚಕೋರ ಚಕ್ರವಾಕ ಕಲಕಲರವಗಳಿಂದ ನುಡಿಯುವಳೋ! ಎಂಬಂತೆ ಹರಿದುಬರುವ ಗಂಗೆಯನ್ನು ಕರೆದುಕೊಂಡು ಭಗೀರಥನು ಗಂಗೋತ್ರಿಯಿಂದ ಹೊರಟು, ಹರಿದ್ವಾರದಲ್ಲಿ ಶಾದ್ವಲವನ್ನು ಪ್ರವೇಶಿಸಿ, ಗಂಗಾ ಸಾಗರ ಸಂಗಮವನ್ನು ಸಾಧಿಸಿ, ತನ್ನ ಪೂರ್ವಜರನ್ನು ಉದ್ಧರಿಸಿ, ಧನ್ಯನಾದನು. ಅಂದಿನಿಂದ ಸಮುದ್ರನು ಸಗರಕುಲ ವರ್ಧಿತನಾಗಿ, ಸಾಗರನೆನಿಸಿದನು. ಗಂಗೆಯು ಭಾಗೀರಥಿ ಎನಿಸಿ, ಸಕಲ ಭಕ್ತ ಪಾಪಕ್ಷಾಲನ ಸಮರ್ಥಳಾಗಿ, ಪ್ರಖ್ಯಾತಿಯನ್ನು ವಹಿಸಿರುವಳು—ಎಂದು ಲೋಮಶನು ಅಗಸ್ತ್ಯಮಹಿಮೆಯನ್ನು ವರ್ಣಿಸಿದನು. ಅಲ್ಲಿಂದ ಧರ್ಮರಾಜನು ನಂದಾ ಅಲಕನಂದೆಗಳನ್ನು ಸೇರಿ, ಅಲ್ಲಿ ಮಿಂದು, ಹೇಮಕೂಟವನ್ನು ಸೇರಿದನು. ಅತ್ಯುನ್ನತವು, ಗಹನವು ಆದ ಹೇಮಕೂಟವು ಭಯಂಕರವಾಗಿ ಕಾಣಿಸಿತು. ಅಲ್ಲಿ ಶಬ್ದವನ್ನು ಮಾಡಿದೊಡನೆ ಮೇಘಗಳು ಮೂಡಿ, ಕೋಡುಗಲ್ಲುಗಳು ಉರುಳಿ ಬೀಳುತ್ತಿದ್ದವು. ನಿತ್ಯವೂ ಬಿರುಗಾಳಿ ಬೀಸುವ ಆ ಕಂದರಗಳಲ್ಲಿ ಮಳೆ ಬಿಡದೆ ಬರುತ್ತಿತ್ತು. ವೇದಘೋಷವು ಕೇಳಿ ಬರುತ್ತಿತ್ತಾಗಲಿ ಯಾರೂ ಕಣ್ಣಿಗೆ ಕಾಣಿಸುತ್ತಿರಲಿಲ್ಲ. ಅಗ್ನಿಹೋತ್ರವು ಉಭಯ ಸಂಧ್ಯೆಗಳಲ್ಲಿ ತಾನಾಗಿ ಉರಿದೇಳುತ್ತಿತ್ತು. ಇಂತಹ ವಿಚಿತ್ರವನ್ನು ಕಂಡು ಧರ್ಮರಾಜನು ಪ್ರಶ್ನಿಸಲು ಲೋಮಶನಿಂತು ವಿವರಿಸಿದನು—

"ರಾಜನ್! ಇದನ್ನು ಋಷಭಕೂಟವೆನ್ನುವರು. ಇಲ್ಲಿ ಋಷಭನೆಂಬ ತೀವ್ರಕೋಪನ ಮುನಿಯು ಬಹುಕಾಲ ತಪವನ್ನು ಮಾಡಿ ಸಿದ್ಧನಾದನು. ಯಾರಾದರೂ ಮಾತಾಡಿದರೆ ಸಹಿಸದೆ, ಅವನು ಗಿರಿರಾಜನಿಗೆ ಕಲ್ಲುಮಳೆಗರೆವಂತೆ ಕಟ್ಟಪ್ಪಣೆ

ಇತ್ತಿದ್ದನು. ಗಾಳಿಗೆ ಇತರ ಶಬ್ದ ಕೇಳಿಬರದಂತೆ ಬೀಸುತ್ತಿರಲು ಆಜ್ಞೆ ಮಾಡಿದ್ದನು. ಮೇಘಗಳನ್ನು ಮಳೆಗರೆದು ಇತರರು ಬರದಂತೆ ಮಾಡಲು ನಿಯಮಿಸಿದ್ದನು. ದೇವತೆಗಳೂ ಇಲ್ಲಿ ಸಂಚರಿಸಲು ಬಂದು ತಾವು ಪರ ನರರಿಗೆ ಕಾಣದಿರಬೇಕೆಂದು ಈ ಪರ್ವತವನ್ನು ದುರ್ಗಮವಾಗಿಸಿರುವರು. ಮನುಜರು ಇದನ್ನು ಸಮೀಪಿಸುವುದೇ ದುಷ್ಕರವಾಗಿದೆ. ಇನ್ನು ಆರೋಹಿಸುವುದಂತೂ ಅಶಕ್ಯವೇ ಸರಿ. ಕೌಂತೇಯ! ಮೌನದಿಂದ ಬಾ. ಇಲ್ಲಿ ನೋಡು. ಇದು ದೇವತಾ ಯಜ್ಞಪ್ರದೇಶವು. ವೃಕ್ಷಗಳೆಲ್ಲವೂ ಯೂಪಗಳಂತಿವೆ. ಗರಿಕೆ ಹುಲ್ಲು ಕೂಡ ಕುಶಾಕಾರವಾಗಿದೆ. ಭೂಮಿಯು ಯಜ್ಞಮಂಗಳವಾಗಿದೆ. ಇಲ್ಲಿ ಅಲಕನಂದೆಯಲ್ಲಿ ಸ್ನಾನಮಾಡಿದವನು ಸರ್ವಪಾಪರಹಿತನಾಗುವನು."

ಆಗ ಪಾಂಡವರು ಅಲಕನಂದೆಯಲ್ಲಿ ಮಿಂದು, ಮುಂದೆ ವಿಶ್ವಾಮಿತ್ರಾಶ್ರಮವನ್ನು ನೋಡಿ, ಅಲ್ಲಿಂದ ಕಾಶ್ಯಪಾಶ್ರಮವನ್ನು ಸೇರಿದರು.

ಅಲ್ಲಿ ಕೌಶಿಕೀನದಿಯು ಹರಿಯುತ್ತಿದ್ದಳು. ಕಾಶ್ಯಪನಾದ ವಿಭಾಂಡಕನು ತನ್ನ ಮಗನಾದ ಋಷ್ಯಶೃಂಗನೊಡನೆ ಅಲ್ಲೇ ನಿವಸಿಸುತ್ತಿದ್ದನು. ಋಷ್ಯಶೃಂಗನಿಗೆ ತನ್ನ ಮಗಳನ್ನಿತ್ತು, ಅಂಗದೇಶದ ರೋಮಪಾದ ರಾಜನು, ಅನಾವೃಷ್ಟಿಯನ್ನು ನೀಗಿ, ದೇಶವು ಸುಭಿಕ್ಷವಾಗುವಂತೆ ಮಾಡಿದನು. ಋಷ್ಯಶೃಂಗನ ಪಾವನ ಚರಿತವನ್ನು ವರ್ಣಿಸುವೆನು ಕೇಳು! ಕ್ಷೇತ್ರಮಹಿಮಾಜ್ಞಾನವು ಸ್ನಾನಕ್ಕಿಂತಲೂ ಹೆಚ್ಚು ಪುಣ್ಯಪ್ರದವಾಗಿದೆ.

ಇಲ್ಲಿಗೆ ವನಪರ್ವದ ಪೂರ್ವಭಾಗವು ಸಮಾಪ್ತವು.

|| ಮಧ್ವೇಶಾರ್ಪಣಮಸ್ತು ||

# ವನಪರ್ವ–ದ್ವಿತೀಯ ಭಾಗ

## ತೀರ್ಥಯಾತ್ರೆ—ಋಷ್ಯಶೃಂಗ ಚರಿತೆ

ಧರ್ಮರಾಜ ! ಈ ಕಾಶ್ಯಪಾಶ್ರಮದಲ್ಲಿ ವಿಭಾಂಡಕನೆಂಬ ಕಾಶ್ಯಪಗೋತ್ರಜ ನಿದ್ದನು. ಅಮೋಘವೀರ್ಯನಾದ ಆ ಋಷಿವರನು ಒಂದುದಿನ ಕೌಶಿಕೀನದಿಯಲ್ಲಿ ಸ್ನಾನಮಾಡುವಾಗ ಊರ್ವಶೀದರ್ಶನದಿಂದ ಅವನಿಗೆ ರೇತಸ್ಸ್ಖಲನವಾಯಿತು. ಬ್ರಹ್ಮಶಾಪದಿಂದ ಮೃಗೀರೂಪದಲ್ಲಿದ್ದ ಅಪ್ಸರೆಯೋರ್ವಳು ಜಲಪಾನಮಾಡುವಾಗ ಆ ವೀರ್ಯವು ಅವಳ ಉದರವನ್ನು ಹೊಕ್ಕು ಬೆಳೆದು ಗಂಡುಕೂಸಾಗಿ ಜನಿಸಿತು. ತತ್ಕ್ಷಣವೇ ಜಿಂಕೆಯು ಶಾಪಮುಕ್ತವಾಗಿ ಅಪ್ಸರೆಯಾಗಿ ಸ್ವರ್ಗವನ್ನು ಸೇರಿತು. ವಿಭಾಂಡಕನು ಋಷ್ಯ (ಜಿಂಕೆ) ದಂತೆ ಕೋಡುಗಳಿಂದ ಶೋಭಿಸುವ ಮಗನಿಗೆ ಋಷ್ಯ ಶೃಂಗನೆಂದು ಹೆಸರಿಟ್ಟು, ತಾನೇ ತಾಯಿಯಾಗಿ ಸಾಕಿದನು. ಋಷ್ಯಶೃಂಗನು ತಂದೆ ಯನ್ನು ಹೊರತು ಅನ್ಯ ಮಾನವರನ್ನು ಕಾಣದೆ ಅಲ್ಲೇ ಬೆಳೆದು, ತಪೋಯಜ್ಞ ಸ್ವಾಧ್ಯಾಯ ನಿರತನಾಗಿದ್ದನು.

ಆ ಕಾಲದಲ್ಲಿ, ಅಂಗದೇಶದಲ್ಲಿ ರೋಮಪಾದನೆಂಬ ರಾಜರ್ಷಿಯು ಪಾಲಿಸು ತ್ತಿದ್ದನು. ಅನಿರೀಕ್ಷಿತವಾಗಿ ನಡೆದ ಪುರೋಹಿತ ಅಪಚಾರದಿಂದಲು, ವಿಪ್ರನಿಗೆ ದಾನ ಕೊಡುವೆನೆಂದು ಹೇಳಿ ಮರೆತುದರಿಂದಲು ಅವನ ದೇಶದಲ್ಲಿ ಮಳೆ ಬಾರದೆ ಕ್ಷಾಮ ಡಾಮರಗಳು ತಲೆದೋರಿದವು. ವಿಪ್ರರನ್ನು ಕರೆದು ಕೇಳಲಾಗಿ ಅವರು ಮೊದಲು ಬ್ರಾಹ್ಮಣಾವಮಾನದ ನಿಷ್ಕೃತಿಯನ್ನು ಮಾಡೆಂದರು. ಅಂತೆಯೇ ರಾಜನು ದಾನ ವನ್ನಿತ್ತು, ಪುರೋಹಿತನನ್ನು ಸತ್ಕರಿಸಿ ಪ್ರಾಯಶ್ಚಿತ್ತಶುದ್ಧನಾಗಿ ಬರಲು, ಸದಸಸ್ಪತಿ ಗಳು ಅವನಿಗಿಂತೆಂದರು—“ ರಾಜನ್ ! ಋಷ್ಯಶೃಂಗನು ಮಹಾನುಭಾವನು. ಅವನು ಬಂದರೆ, ನಿನ್ನ ದೇಶದಲ್ಲಿ ಮಳೆಬಂದು ಸುಭಿಕ್ಷವಾಗುವುದು. ಅವನಿಗೆ ಅಪ ಚಾರವಾಗದಂತೆ ನಿನ್ನ ಮಗಳನ್ನು ಅವನಿಗಿತ್ತು, ವಿವಾಹ ಮಾಡು!” ಅಂತೆಯೇ ನಿರ್ಧರಿಸಿ, ರೋಮಪಾದನು ನಿಪುಣರಾದ ಸಚಿವರಿಂದ ಆಲೋಚಿಸಿ, ಕೆಲ ವೇಶ್ಯೆ ಯರನ್ನು ಋಷ್ಯಶೃಂಗನನ್ನು ಕರೆತರಲು ಕಳಿಸಿದನು.

ಒಬ್ಬ ವೃದ್ಧವೇಶ್ಯೆ ಆ ಮಹತ್ಕಾರ್ಯವನ್ನು ಸಾಧಿಸಲು ನಿಶ್ಚಯಿಸಿ, ರಾಜ ನಿಂದ ಬಹುಧನವನ್ನು ಸ್ವೀಕರಿಸಿ, ಪರಿವಾರದೊಡನೆ ಹೊರಟಳು. ಒಂದು ದೊಡ್ಡ ನೌಕೆಯಲ್ಲಿ ಆಶ್ರಮವನ್ನು ನಿರ್ಮಿಸಿ, ಅನೇಕ ವಾರಯುವತಿಯರನ್ನು ಕರೆದು ಕೊಂಡು ಕಾಶ್ಯಪಾಶ್ರಮದ ಹತ್ತಿರವೇ ನದಿಯಲ್ಲಿ ನೌಕಾಶ್ರಮದಲ್ಲಿರುತ್ತಿದ್ದಳು. ನೋಡುವವರಿಗೆ ಅದೊಂದು ಆಶ್ರಮದಂತೆ ಕಾಣಿಸುತ್ತಿತ್ತು. ಚಾರರಿಂದ ವಿಭಾಂಡಕ ನಿಲ್ಲದ ಸಮಯವನ್ನರಿತು ಜರಜ್ಜಾರಿಣಿ ತನ್ನ ಮಗಳನ್ನು ಋಷ್ಯಶೃಂಗನಲ್ಲಿಗೆ ಕಳಿಸಿದಳು. ನಿಪುಣಮತಿಯು ಋಷ್ಯಶೃಂಗನನು ಸಮೀಪಿಸಿ ಇಂತೆಂದಳು—

'ಮುನಿಕುಮಾರ ! ಕುಶಲವೇ ನಿನಗೆ ? ಆಶ್ರಮದಲ್ಲಿ ಫಲ ಮೂಲ ಕುಶಗಳ ಕೊರತೆ ಇಲ್ಲವಲ್ಲ ! ನಿನಗಿಲ್ಲಿ ಸುಖವಿದೆಯೇ ? ಅಥವಾ ಇನ್ನೂ ಚೆನ್ನಾಗಿರುವ ನಮ್ಮ ಆಶ್ರಮಕ್ಕೆ ಬರುವೆಯಾ ? ನಿಮ್ಮ ತಂದೆಯು ನಿನ್ನಲ್ಲಿ ಪ್ರೇಮದಿಂದಿರುವನೇ ? ಏನು ಓದು ನಡೆದಿದೆ ?' ಅವಳ ಮಾತಿಗೆ ಚಕಿತನಾಗಿ, ಅವಳ ನೋಟದಿಂದ ಪುಲಕಿತನಾಗಿ, ಋಷ್ಯಶೃಂಗನು "ಆಹಾ ಋಷಿಕುಮಾರ! ಏನು ಪ್ರಕಾಶ ನಿನ್ನದು? ಇದಿಗೋ ಪಾದ್ಯ! ಇಕ್ಕೋ ಫಲಮೂಲಗಳು. ಸ್ವೀಕರಿಸಿ ನನ್ನನ್ನು ಧನ್ಯ ನನ್ನಾಗಿಸು" ಎಂದನು.

ವೇಶ್ಯೆಯು ನಕ್ಕು "ಸ್ವೀಕರಿಸು ನನ್ನನ್ನು. ಕೃತಾರ್ಥನನ್ನಾಗಿಸು ! ಸುಂದರ ! ನಾನು ವಿಚಿತ್ರನಿಯಮದಿಂದಿರುವೆನು. ಇನ್ನೊಬ್ಬರಿತ್ತ ಪಾದ್ಯಾದಿಗಳನ್ನು ನಾನು ಸ್ವೀಕರಿಸಲಾರೆನು. ಇನ್ನೊಬ್ಬರಿಗೆ ನಮಿಸುವೆನಾಗಲಿ ಅವರ ವಂದನಾದಿಗಳಿಗೆ ವಿಮುಖನೆಂದು ತಿಳಿ ! ಬೇಕಾದರೆ ಆಲಿಂಗನವನ್ನು ಮಾಡಿ ಸತ್ಕರಿಸು! ಅಷ್ಟೇ ಸಾಕು !" ಆ ಮಾತನ್ನಾಲಿಸಿದ ಮುನಿತನಯನು ದಿಗ್ಭ್ರಾಂತನಾದನು. ಫಲ ಮೂಲಗಳನ್ನು ತಂದಿತ್ತು ಸ್ವೀಕರಿಸೆಂದಾಗ ಆ ಸುಂದರಾಂಗಿಯು ಅವುಗಳನ್ನೆಲ್ಲ ದೂರ ಬಿಸುಟು, ತಾನು ತಂದ ಭಕ್ಷ್ಯಗಳನ್ನು ಅವನಿಗೆ "ಇವು- ದಿವ್ಯ ಫಲಗಳು ; ನಮ್ಮ ಆಶ್ರಮದಲ್ಲಿ ಬೇಕಾದಷ್ಟಿವೆ. ನಮ್ಮ ವಸಂತಾರಾಮವು ಇಲ್ಲಿಗೆ ಮೂರು ಯೋಜನ ದೂರವಿದೆ" ಎಂದು ಹೇಳಿ ತಿನಿಸಿದಳು. ಅಪೂರ್ವ ಭಕ್ಷ್ಯಗಳನ್ನು ತಿಂದ ಮುನಿಕುಮಾರನು ಮೈಮರೆತು, ಅವಳಿತ್ತ ಪುಷ್ಪಮಾಲೆಗಳನ್ನೂ ದಿವ್ಯ ದುಕೂಲ ವನ್ನೂ ಧರಿಸಿ, ಕುಣಿದಾಡಿದನು. ಮಧುರಸವನ್ನು ಸೇವಿಸಿ, ಅವಳೊಂದ ಕೂಡಿ ಕಂದುಕವನ್ನಾಡಿದನು. ತನ್ನನ್ನಪ್ಪಿ, ಚುಂಬಿಸಿದ ಅವಳ ಸುಖಸ್ಪರ್ಶದಿಂದ ಮೂರ್ಛಿತ ನಂತಾದನು.

ಇಂತು ನಿಪುಣಮತಿಯು ಮುನಿಸುತನ ಚಿತ್ತದಲ್ಲಿ ಕಾಮಬೀಜಗಳನ್ನು ಚಲ್ಲಿ, ಅಗ್ನಿಹೋತ್ರದ ವೇಳೆಯೆಂದು ನೆಪವಿಟ್ಟು ತೆರಳಿ, ನೌಕಾಶ್ರಮವನ್ನು ಸೇರಿದಳು. ಇತ್ತ ಋಷ್ಯಶೃಂಗನು ಚಿತ್ತವಿಕಾರದಿಂದ ಚಿಂತಾಕುಲನಾಗಿ, ಜಡನಂತೆ ಕೂತು, ಅವಳನ್ನೇ ನೆನೆಯುತ್ತಿದ್ದನು. ಆಗ ಮೈತುಂಬ ರೋಮಗಳಿಂದೊಪ್ಪುವ ಕೆಂಗಣ್ಣ ನಾದ ವಿಭಾಂಡಕನು ಫಲಮೂಲಹಸ್ತನಾಗಿ ಆಶ್ರಮನ್ನು ಹೊಕ್ಕು ಮಗನು ನಿರ್ವಿಣ್ಣನಾಗಿ, ನಿಟ್ಟುಸಿರಿಡುತ್ತಾ ಕೂತಿರುವುದನ್ನು ಕಂಡು—

"ಕುಮಾರ ! ಏಕೆ ಸುಮ್ಮನೆ ಕೂತಿರುವೆ ? ಸಮಿಧವನ್ನು ತಯಾರಿಸಲಿಲ್ಲವೇ ? ಅಗ್ನಿಹೋತ್ರವನ್ನು ಆಹುತಿಗಳಿತ್ತು ಸೇವಿಸಿದೆಯಾ ? ಸ್ರುಕ್ ಸ್ರುವಗಳನ್ನು ತೊಳೆದಿಡಲಿಲ್ಲವೇ ? ಹೋಮಧೇನುವನ್ನು ಕರೆಸಿದೆಯಾ ? ಏಕೆ ಮಾತಾಡದಿರುವೆ ? ಏನು ಚಿಂತೆ ? ಯಾರಾದರೂ ಬಂದಿದ್ದರೇ ?" ಇಂತು ಕೇಳಿದ ತಂದೆಗೆ ಕುವರ ನಿಂತೆಂದನು—

"ಅಹುದು ! ಬಂದಿದ್ದನೋರ್ವ ಬ್ರಹ್ಮಚಾರಿ ! ಅವನು ಹ್ರಸ್ವನೂ ಅಲ್ಲ, ದೀರ್ಘನೂ ಅಲ್ಲ. ಸಮಾನ ಸುಂದರ ಸರ್ವಾವಯವನಾಗಿದ್ದನು. ಮೈಬಣ್ಣವು ಬಂಗಾರದಂತಿತ್ತು. ಕಣ್ಣುಗಳು ಕಮಲದಂತಿದ್ದವು. ದೇವತೆಯೆಂದು ಕಾಣಿಸು ತ್ತಿತ್ತು. ಆಹಾ ! ಸೂರ್ಯನೇ ಬಂದಂತಾಯಿತು, ನನ್ನ ಕಣ್ಣಿಗೆ ! ಅವನ ಕಪ್ಪು ಕಣ್ಣುಗಳು, ನೀಲಕುಂಚಿತ ದೀರ್ಘಕೇಶರಾಶಿ, ಸಣ್ಣನಡುವು, ಗಭೀರನಾಭಿ, ಮೃದುಹಸ್ತಗಳು ಕಣ್ಣಿಗೆ ಕಟ್ಟಿದಂತಿವೆ ! ಕುತ್ತಿಗೆಯಲ್ಲಿ ಜನಿವಾರವಿದ್ದಿಲ್ಲ. ಬದಲಾಗಿ ಬಂಗಾರದ ಹಾರಗಳಿದ್ದವು. ಅವನ ವಕ್ಷದ ವಿಚಿತ್ರವನ್ನು ಕೇಳು ! ಮನೋಹರವು ರೋಮರಹಿತವು ಆದ ಎರಡು ಕನಕಕುಂಭಗಳಂತಿರುವ ಮಾಂಸಪಿಂಡಗಳು ಹತ್ತಿ ಕೊಂಡಿದ್ದವು. ಉಟ್ಟಚೀರವು ಬಂಗಾರದ್ದಾಗಿತ್ತು. ಮೇಲೆ ನಾನಿಟ್ಟ ಮೇಖಲೆಯಂತೆ ಬಂಗಾರದ ತಗಡಿತ್ತು. ಇನ್ನೊಂದಾಶ್ಚರ್ಯವೇನೆಂದರೆ, ಕಾಲಲ್ಲಿಟ್ಟ ಭೂಷಣಗಳು ಕಲಕಲ ಮಾತಾಡುತ್ತಿದ್ದವು. ಮುಖವು ಚಂದ್ರಮನಂತೆ ದರ್ಶನೀಯವಾಗಿತ್ತು. ಗಂಡು ಕೋಗಿಲೆಯಂತೆ ರಮಣೀಯ ಸ್ವರದಿಂದ ಮಾತನಾಡಿದ ಮಧುರ ವಚನಗಳು ನನ್ನ ಕಿವಿಯಲ್ಲಿ ಈಗಲೂ ಪ್ರತಿಧ್ವನಿಸುತ್ತಿವೆ. ವಸಂತದಲ್ಲಿ ಮಧುವನದಂತೆ ಸುಗಂಧಿ ತವಾದ ಅವನ ದೇಹದ ಸ್ಪರ್ಶದಿಂದ ಪುಲಕಿತನಾಗಿರುವೆನು. ತಾತ ! ಎರಡಾಗಿ ವಿಭಜಿ ಸಲ್ಪಟ್ಟ ಅವನ ಕೇಶರಾಶಿಯು ನಡುವಿನ ಮಾರ್ಗದಲ್ಲಿ ಧವಳವಾಗಿ, ಕುಂಕುಮರಾಗ ರಂಜಿತವಾಗಿತ್ತು. ಅವನ ಕೈಲಿದ್ದ ಫಲವನ್ನು ನಾನೆಂದೂ ಕಂಡಿಲ್ಲ. ಅದು ನೆಲದ ಮೇಲೆ ಬಿದ್ದು, ಮತ್ತೆ ಮೇಲಕ್ಕೆ ಹಾರಿ, ಕೈಸೇರುತ್ತಿತ್ತು. ಅಮರ ಕುಮಾರನಂತಿರುವ ಅವನಲ್ಲಿ ನನ್ನ ಚಿತ್ತವು ಹತ್ತಿನಿಂತಿದೆ. ಅವನು ನನ್ನನ್ನು ಮತ್ತೆ ಮತ್ತೆ ಬಿಗಿದಪ್ಪಿ, ಮುಖದಲ್ಲಿ ಮುಖವಿಟ್ಟು, ವಿಚಿತ್ರ ಮನೋಹರ ವಚನಗಳನ್ನಾಡಿದನು. ನಾನಿತ್ತ ಪಾದ್ಯಫಲಗಳನ್ನು ಸ್ವೀಕರಿಸಲಿಲ್ಲ. ಅದೇನೋ ವ್ರತವಂತೆ ! ಅವನಿತ್ತ ಫಲಗಳನ್ನು ತಿಂದೆನು. ಅವು ವಿಚಿತ್ರವಾಗಿ, ಬಹುರುಚ್ಯವಾಗಿ, ರಸಭರಿತವಾಗಿ ಇದ್ದವು. ಅವನಿತ್ತ ನೀರನ್ನು ಕುಡಿದಾಕ್ಷಣ ಮನಸ್ಸು ಹರ್ಷ ಚಂಚಲವಾಯಿತು. ಭೂಮಿಯೇ ಚಲಿಸಿದಂತಾಯಿತು ! ಇಕ್ಕೋ ! ನೋಡಿಲ್ಲಿ ! ಅವನಿತ್ತ ಸುಮದಾಮಗಳಿಲ್ಲಿವೆ. ಆದರೆ ನನ್ನ ಮನಸ್ಸನ್ನೇ ಅವನು ಕದ್ದುಕೊಂಡು ಹೋದಂತಿದೆ !"

ಮಗನ ಮಾತನ್ನಾಲಿಸಿ ವಿಭಾಂಡಕನು ದಿಗ್ಭ್ರಾಂತನಾದನು. "ವತ್ಸ ! ರಕ್ಷೋ ಜನರು ಮನೋಹರ ರೂಪರಾಗಿ ಬಂದು ತಪೋವಿಘ್ನವನ್ನು ಮಾಡುವರೆಂದು ಕೇಳಿ ದ್ದೆನು. ಅದು ನಿಜವಾಯಿತು. ಅಂತಹ ಕಾಮಪಿಶಾಚಿಗಳ ಬಾರಿಗೆ ಸಿಗಬೇಡ ! ಅವ ರನ್ನು ನಂಬಿ ಕೈಹಿಡಿದವನು ಪುಣ್ಯಲೋಕಗಳಿಂದ ಪರಿಭ್ರಷ್ಟನಾಗುವನು. ಮಧು ಪಾನವು ಮಹಾಪಾಪವು. ಮಾಲ್ಯಗಂಧಗಳು ನಮ್ಮಂತಹ ತಾಪಸರಿಗಲ್ಲ. ಬಿಡು ಆ ಚಿಂತೆಯನ್ನು !" ಎಂದು ಮಗನಿಗೆ ಉಪದೇಶಿಸಿ ವಿಭಾಂಡಕನು ವನವೆಲ್ಲವೂ ಹುಡುಕಿ ದನು. ಮೂರು ದಿನಗಳು ನೋಡಿದರೂ ಅವನಿಗೆ ಯಾರೂ ಕಾಣಿಸಲಿಲ್ಲ. ನೌಕಾ ಶ್ರಮವು ಅವನ ಸುಳಿವನ್ನು ತಿಳಿದು ದೂರ ಸರಿದಿತ್ತು. ವಿಭಾಂಡಕನು ನಿಶ್ಚಿಂತನಾಗಿ

ಯಥಾಪ್ರಕಾರವಿದ್ದನು. ಒಂದು ದಿನ ಅವನು ಫಲ ಸಮಿತ್ತುಗಳನ್ನು ತರಲು ದೂರ ಹೋದಾಗ, ನೌಕಾಶ್ರಮವು ಹತ್ತಿರ ಬಂತು. ನಿಪುಣಮತಿಯು ಋಷ್ಯಶೃಂಗನನ್ನು ಸಮೀಪಿಸಿದಳು. ಒಡನೆ ಸಂಭ್ರಾಂತನಾದ ಮುನಿಕುಮಾರನು ಅವಳನ್ನು ನೋಡಿ, "ನಮ್ಮ ತಂದೆ ಬಾರದ ಮುನ್ನ ನಿನ್ನ ಆಶ್ರಮಕ್ಕೆ ನನ್ನನ್ನು ಕರೆದುಕೊಂಡು ಹೋಗು. ನಿನ್ನನ್ನು ಬಿಟ್ಟಿರಲಾರೆ"ನೆಂದನು. ಇಂತು ಋಷ್ಯಶೃಂಗನನ್ನು ಕರೆತಂದು, ನಿಪುಣಮತಿಯು, ನೌಕಾಶ್ರಮವನ್ನು ಸೇರಿಸಿದಳು. ಅವನಿಗೆ ತಿಳಿಯದೆ ನೌಕೆಯು ಕದಲಿ ಅಂಗದೇಶವನ್ನು ಸೇರಿತು. ನೌಕಾಶ್ರಮದಿಂದ ಅಂತಃಪುರದ ಉದ್ಯಾನವನ್ನು ಸೇರಿಸಿ, ನಿಪುಣಮತಿಯು ರಾಜನಿಂದ ಸತ್ಕೃತಳಾಗಿ ತನ್ನ ಮನೆಗೆ ಹೋದಳು.

ಋಷ್ಯಶೃಂಗನು ಬಂದೊಡನೆ ಮಳೆಯೂ ಬಂತು. ದೇಶವು ಸುಭಿಕ್ಷವಾಯಿತು. ರೋಮಪಾದನು ಸಂತುಷ್ಟನಾಗಿ ಋಷ್ಯಶೃಂಗನಿಗೆ ತನ್ನ ಮಗಳಾದ ಶಾಂತಾದೇವಿಯನ್ನಿತ್ತು, ಮದುವೆ ಮಾಡಿದನು. ಈ ವೃತ್ತಾಂತವನ್ನರಿತು ವಿಭಾಂಡಕನು ಸಿಟ್ಟಾಗಿ ಬರುವನೆಂದರಿತು ತಕ್ಕ ಉಪಾಯವನ್ನೂ ಮಾಡಿ ರೋಮಪಾದನು ಋಷಿಯ ನಿರೀಕ್ಷಣದಲ್ಲಿದ್ದನು. ಅತ್ತ ವಿಭಾಂಡಕನು ಆಶ್ರಮದಲ್ಲಿ ಮಗನನ್ನು ಕಾಣದೆ, ಕುಪಿತನಾಗಿ, ಹುಡುಕುತ್ತಾ ಬರುತ್ತಿದ್ದನು. ಮಾರ್ಗದಲ್ಲಿ ಶ್ರಾಂತನಾದ ಋಷಿವರನಿಗೆ ಗೊಲ್ಲರ ಹಟ್ಟಿಗಳು ಸಿಕ್ಕವು. ಅಲ್ಲಿ ಗೋಪರು ಹಾಲಿತ್ತು ಅವನನ್ನು ಸತ್ಕರಿಸಿದರು. 'ಯಾರವರು ನೀವು? ಏಕೆ ನನ್ನನ್ನು ಪೂಜಿಸಿದಿರಿ?' ಎಂದು ಕೇಳಿದ ಕಾಶ್ಯಪನಿಗೆ ಗೋಪರು ವಿನಯದಿಂದ 'ಸ್ವಾಮಿನ್! ನಾವು ನಿನ್ನವರು. ಆಕಳುಗಳೆಲ್ಲವೂ ನಿನ್ನ ಮಗನವು. ಅವನ ಆಜ್ಞೆಯಂತೆ ನಿನ್ನನ್ನು ಪೂಜಿಸಿದೆವು. ಆ ಮಹಾನುಭಾವನು ನಮ್ಮ ರಾಜಪುತ್ರಿ ಶಾಂತಾದೇವಿಯನ್ನು ಮದುವೆಯಾಗಿ, ಅಂಗಪುರದಲ್ಲಿ ನಿನಗಾಗಿ ಕಾದಿರುವನು' ಎಂದು ಮತ್ತೆ ಸತ್ಕರಿಸಿ, ಕಳಿಸಿದರು. ಮಾರ್ಗದಲ್ಲಿ ನಡೆದ ಸತ್ಕಾರದಿಂದ ಸರ್ವನಾಶವನ್ನು ಸಂಕಲ್ಪಿಸಿಬಂದ ವಿಭಾಂಡಕನ ಚಂಡಕೋಪವು ಶಾಂತವಾಯಿತು. ಅವನು ರಾಜಾಂತಃಪುರವನ್ನು ಸೇರಿ, ನಮಸ್ಕರಿಸಿ, ಕೈಜೋಡಿಸಿ ನಿಂತ ಸೊಸೆಯನ್ನು ಮಗನನ್ನು ಕಂಡು, ಆನಂದ ಬಾಷ್ಪಗಳಿಂದ ಅವರನ್ನು ಅಭಿಷೇಕಿಸಿ, ಇಂತೆಂದನು—'ಒಳ್ಳೆಯದಾಯಿತು! ವತ್ಸ! ಇದು ಶಾಶ್ವತವಲ್ಲ. ಕಾಶ್ಯಪನೆಂದು ಮರೆಯಬೇಡ! ಮಗನನ್ನು ಪಡೆದು, ವಾನಪ್ರಸ್ಥನಾಗಿ ಬಾ! ಆಶ್ರಮವು ನಿನಗೆ ಮುಕ್ತದ್ವಾರವಿದೆ' ಎಂದು ಹೇಳಿ, ಅವರನ್ನೂ, ರಾಜನನ್ನೂ ಹರಸಿ, ತನ್ನ ಆಶ್ರಮಕ್ಕೆ ಹೊರಟುಹೋದನು.

ಶಾಂತಾದೇವಿಯು ಋಷ್ಯಶೃಂಗನನ್ನು ರೋಹಿಣಿಯು ಚಂದ್ರನನ್ನಂತೆ ಸೇವಿಸಿ ಧನ್ಯಳಾದಳು. ಆ ದಂಪತಿಗಳು ಅರುಂಧತೀ ವಸಿಷ್ಠರಂತೆ ಧರ್ಮಿಷ್ಠರಾಗಿ, ಲೋಪಾಮುದ್ರಾ ಅಗಸ್ತ್ಯರಂತೆ ಅನುವ್ರತರಾಗಿ, ದಮಯಂತೀ ನಿಷಧೇಶರಂತೆ

ಅವಿನಾಯೋಗರಾಗಿ, ಶಚೀ ಸುರೇಶರಂತೆ ವಿಭವೋಪೇತರಾಗಿ, ಇಂದ್ರಸೇನಾ ಮುದ್ಗಲ ಸ್ಥಿತ ಮುಖ್ಯಪ್ರಾಣರಂತೆ ಸುಖರತರಾಗಿ, ಬಹುಕಾಲ ಸುಖವಾಗಿ ಬಾಳಿದರು.

ಇಂತು ಋಷ್ಯಶೃಂಗಚರಿತವನ್ನು ಕೇಳಿ, ಪಾಂಡವರು ಮುದಿತರಾದರು. ಅಲ್ಲಿಂದ ತೆರಳಿ, ಅವರೆಲ್ಲರೂ ಗಂಗಾ ಸಾಗರ ಸಂಗಮಸ್ಥಾನವನ್ನು ಸೇರಿದರು ನೂರಾರು ನದಿಗಳ ಪ್ರಯಾಗದಲ್ಲಿ ಮಿಂದು ಧನ್ಯರಾಗಿ, ಅವರು ಕಳಿಂಗದೇಶವನ್ನು ಮುಟ್ಟಿದರು. ಅಲ್ಲಿ ವೈತರಣೀ ನದಿಯನ್ನು ಸೇವಿಸಿದರು. ಧರ್ಮನು ಯಜ್ಞವನ್ನಾ ಚರಿಸಿದ ಕ್ಷೇತ್ರವನ್ನೂ ರುದ್ರನು ಪಶುಹರಣವನ್ನು ಮಾಡಿ, ಮುನಿಗಳಿಂದ ಪ್ರಾರ್ಥಿತ ನಾಗಿ, ಪ್ರಸನ್ನತೆಯಿಂದ ಅವರವರ ಭಾಗವನ್ನವರಿಗಿತ್ತು ಸಲಹಿದ ರುದ್ರತೀರ್ಥ ವನ್ನೂ ಸೇವಿಸಿದರು. ಅಲ್ಲಿ ಮಿಂದು ಪಾಂಡವರು ಮನುಜ ಸಹಜವಾದ ವಿಷಯ-ಲೋಲುಪತೆಯನ್ನು ತ್ಯಜಿಸಿ ಪಾವನತೇಜಸ್ಸಂಪನ್ನರಾದರು. ಅವರಿಗೆ ವೈಖಾನಸರ ವೇದಘೋಷವು ಕೇಳಿಬಂತು. ಮೂರುಸಾವಿರ ವೈಖಾನಸರು ಅಲ್ಲಿ ಅದೃಶ್ಯ ರಾಗಿದ್ದು ಉಚ್ಚರಿಸುವ ಪಾವನ ವೇದಘೋಷವನ್ನಾಲಿಸಿ, ಪಾಂಡವರು ಚಕಿತರಾದರು. ಹಿಂದೆ ಬ್ರಹ್ಮದೇವನು ಭೂಮಿಯನ್ನೆಲ್ಲ ಕಶ್ಯಪನಿಗೆ ಧಾರೆಯೆರೆದು ದಾನಮಾಡಿದಾಗ ಭೂದೇವಿಯು 'ಮನುಜಮಾತ್ರನಿಗೆ ನನ್ನನ್ನಿತ್ತೆ' ಎಂದು ಸಿಟ್ಟಾಗಿ, ರಸಾತಲ ವನ್ನು ಸೇರಿದಳು. ಕಶ್ಯಪನು ಪ್ರಾರ್ಥಿಸಲು ಮತ್ತೆ ಮೇಲೆದ್ದು ಬಂದು, ಅವನ ಮಗ ಳಾಗಿ 'ಕಾಶ್ಯಪಿ' ಎನಿಸಿದಳು. ಅಂತಹ ಬ್ರಹ್ಮಸರೋವರವಿದು. ಇಲ್ಲಿ ಮಿಂದು ಮಡಿ ಯಾಗಿ ಅಲ್ಲಿ ಕಾಣುವ ಸಮುದ್ರವನ್ನು ಸೇವಿಸು ! ಮೊದಲು ಸಮುದ್ರರಾಜನನ್ನು ಇಂತು ಪ್ರಾರ್ಥಿಸು—'ಓಂ ನಮೋ ವಿಶ್ವಗುಪ್ತಸಮುದ್ರರಾಜಾಯ !' ವಿಶ್ವವನ್ನು ರಕ್ಷಿಸಿ, ವಿಶ್ವವನ್ನೆಲ್ಲ ಪ್ರಳಯದಲ್ಲಿ ಉದರದಿ ಧರಿಸಿದ ಶ್ರೀಹರಿಯನ್ನು ಧರಿಸಿ, ಮೆರೆವ ಮಹಾನುಭಾವನಲ್ಲವೇ ನೀನು ? ಬಡಬಾಗ್ನಿಗೆ ಮಿತ್ರನು, ನೀರಗಳ ನಿಧಿಯು, ಜೀವದೇಹಧಾರಕನು, ರತ್ನಾಕರನು, ಅಮೃತನಿಲಯನು ಆದ ಶ್ರೀಶನಿಗೂ, ನಿನಗೂ ನಮಸ್ಕಾರ. ವರುಣದೇವ ! ನನ್ನನ್ನು ಸರ್ವಪಾಪಪ್ರಶಮನನಾಗಿ, ಸರ್ವಶುಭ ವನ್ನಿತ್ತು ಉದ್ಧರಿಸು !' ಇಂತು ಜಪಿಸಿ ಅವರೆಲ್ಲರೂ ಪೂರ್ವಸಮುದ್ರಸ್ನಾನವನ್ನು ಮಾಡಿ, ಸ್ವಸ್ತಿವಾಚನಗೈದು ಮಹಾದಾನಗಳನ್ನು ಮಾಡಿದರು.

## ತೀರ್ಥಯಾತ್ರೆ—ಪರಶುರಾಮ ಚರಿತೆ

ಅಲ್ಲಿಂದ ತೆರಳಿ ಪಾಂಡವರು ಮಹೇಂದ್ರಗಿರಿಯ ಬುಡದ ಭಾರ್ಗವಾಶ್ರಮದಲ್ಲಿ ತಂಗಿದರು. ಅಲ್ಲಿದ್ದ ತಾಪಸರನ್ನು ಸತ್ಕರಿಸಿ, ಧರ್ಮರಾಜನು ಅಲ್ಲೇ ಒಂದು ರಾತ್ರಿ ವಾಸಮಾಡಿದನು. ಅಕೃತವ್ರಣನೆಂಬ ರಾಜರ್ಷಿಯು ಪರಶುರಾಮಚರಿತವನ್ನು ಧರ್ಮಜನಿಗೆ ಹೇಳಿದನು—

ಹೈಹಯದೇಶದಲ್ಲಿ ಕಾರ್ತವೀರ್ಯಾರ್ಜುನನೆಂಬ ರಾಜನಿದ್ದನು. ಅವನು ದತ್ತಾತ್ರೇಯನನ್ನು ಭಜಿಸಿ ಆ ವಿಷ್ಣುವರದಿಂದ ಸಾವಿರ ಬಾಹುಗಳನ್ನು ಪಡೆದಿದ್ದನು.

ದಿವ್ಯ ಕಾಂಚನ ವಿಮಾನದಲ್ಲಿ ಅವ್ಯಾಹತಗಮನನಾಗಿ, ಕಾರ್ತವೀರ್ಯನು ಮದ-ಮತ್ತನಾದನು. ಅವನು ದೇವ ಮುನಿ ಗಂಧರ್ವರನ್ನು ಪೀಡಿಸಿದನು. ಶಕ್ರಾದಿ ದೇವತೆಗಳು ಅವನನ್ನು ಸಂಹರಿಸೆಂದು ವಿಷ್ಣುವಿನನ್ನು ಬೇಡಿದರು. ಭಗವಂತನು ಅಂತೆಯೇ ತಾನಾಗಿ ಆ ಕಾಪುರುಷನನ್ನು ಸಂಹರಿಸಲು ಅವತರಿಸುವೆನೆಂದು ಅಭಯ ವಿತ್ತು, ಅವರನ್ನು ಕಳುಹಿದನು.

ಆ ಕಾಲದಲ್ಲಿ ಕಾನ್ಯಕುಬ್ಜದಲ್ಲಿ ಗಾಧಿ ಎಂಬ ರಾಜನಿದ್ದನು. ಅವನು ಇಂದ್ರಾಂಶನು. ಅವನಿಗೆ ಸತ್ಯವತಿ ಎಂಬ ಸುಂದರ ದುಹಿತೆ ಇದ್ದಳು. ಅವಳನ್ನು ಮದುವೆಯಾಗಲಿಚ್ಛಿಸಿ, ಋಚೀಕನೆಂಬ ಭೃಗುವಂಶದ ಋಷಿವರನು ಬಂದು ಗಾಧಿಯನ್ನು ಪ್ರಾರ್ಥಿಸಿದನು. ಒಂದು ಕಿವಿ ಮಾತ್ರ ಕಪ್ಪಾಗಿರುವ ಬಿಳಿಯ ಕುದುರೆಗಳನ್ನು ಒಂದು ಸಾವಿರ ತಂದಿತ್ತು, ತನ್ನ ಕನ್ಯೆಯನ್ನು ಸ್ವೀಕರಿಸೆಂದ ಗಾಧಿಗೆ ಋಚೀಕನು ವರುಣನನ್ನು ಬೇಡಿ, ಅಂತಹ ಸಾವಿರ ಕುದುರೆಗಳನ್ನು ತಂದು, ಕನ್ಯಾಶುಲ್ಕವಾಗಿ ಕೊಟ್ಟು, ಸತ್ಯವತಿಯನ್ನು ಮದುವೆಯಾದನು. ತನ್ನ ಆಶ್ರಮದಲ್ಲಿ ಋಚೀಕನು ಪತ್ನೀಸಹಿತನಾಗಿ ಸುಖದಿಂದಿದ್ದನು. ಒಂದುದಿನ ಭೃಗುಮಹರ್ಷಿಯು ಮಗನಾದ ಋಚೀಕನ ಆಶ್ರಮಕ್ಕೆ ಬಂದನು. ನಮಸ್ಕರಿಸಿದ ಸೊಸೆಯನ್ನು ಆಶೀರ್ವದಿಸಿ ವರವನ್ನು ಬೇಡೆಂದನು. ಸತ್ಯವತಿಯು ತನಗೂ, ತನ್ನ ಮಾತೆಗೂ ಪುತ್ರಸಂತಾನವಾಗಲೆಂದು ಬೇಡಿದಳು.

ಭೃಗುವಿಂತೆಂದನು—"ಋತುಸ್ನಾತಳಾಗಿ ಉದುಂಬರವನ್ನಾಲಿಂಗಿಸು. ನಿನ್ನ ತಾಯಿ ಅಶ್ವತ್ಥವನ್ನಾಲಿಂಗಿಸಲಿ ! ಇದೋ ಚರುದ್ವಯವು ! ಇದರಲ್ಲಿ ವಿಶ್ವನಾಮಕ ಶ್ರೀಹರಿಯ ಸನ್ನಿಧಾನವಿದೆ. ಮೊದಲಿನ ಚರುವನ್ನು ನೀನು ಸೇವಿಸು ! ಇದನ್ನು ನಿಮ್ಮ ಮಾತೆಗೆ ಕೊಡು ! ಎಂದು ಹೇಳಿ ಭೃಗುವು ಹೊರಟುಹೋದನು. ತಾಯಿಯ ಮಾತಿಗೆ ಮನಸೋತು, ಸತ್ಯವತಿಯು ಅಶ್ವತ್ಥವನ್ನಾಲಿಂಗಿಸಿ, ಎರಡನೇ ಚರುವನ್ನು ತಿಂದಳು. ಅವಳ ಮಾತೆಯು ಉದುಂಬರವನ್ನಾಲಿಂಗಿಸಿ, ಮೊದಲನೇ ಚರುವನ್ನು ತಿಂದಳು. ಅವರೀರ್ವರೂ ಗರ್ಭವತಿಯರಾದರು.

ಒಂದುದಿನ ಭೃಗುವು ಮಗನ ಆಶ್ರಮಕ್ಕೆ ಬಂದನು. ದಿವ್ಯ ದೃಷ್ಟಿಯಿಂದ ಅವನು ನಡೆದ ಚರು-ತರು ವ್ಯತ್ಯಾಸವನ್ನರಿತು ಸೊಸೆಗಿಂತೆಂದನು.—"ವತ್ಸೇ ! ಅನ್ಯಾಯಮಾಡಿದೆ. ಚರು-ತರು ವ್ಯತ್ಯಾಸದಿಂದ ನಿನಗೆ ಹಿಂಸಾರತನಾದ ಪುತ್ರನು, ನಿನ್ನ ತಾಯಿಗೆ ಶಾಂತನಾದ ಕುಮಾರನು ಹುಟ್ಟುವರು." ಮಾವನಿಗೆ ವಂದಿಸಿ ಸತ್ಯವತಿ "ನನ್ನ ಮಗನು ಶಾಂತನಿರಲಿ ! ಮೊಮ್ಮಗನು ಘೋರನಾಗಲಿ !" ಎಂದು ಬೇಡಿದಳು. 'ತಥಾಸ್ತು' ಎಂದು ಭೃಗುವು ಅನುಗ್ರಹಿಸಿ ಹೋದನು. ಸತ್ಯವತಿಯು ಜಮದಗ್ನಿಯನ್ನು, ಗಾಧಿಪತ್ನಿಯು ವಿಶ್ವಾಮಿತ್ರನನ್ನು ಪಡೆದರು. ವಿಶ್ವಾಮಿತ್ರನು ಬ್ರಹ್ಮಚರು ಜನಿತನಾದುದರಿಂದ ಮುಂದೆ ಬ್ರಹ್ಮರ್ಷಿಯಾದನು. ಜಮದಗ್ನಿಯು

ಮಗನು ಶ್ರೀಪರಶುರಾಮನು. ಅವನು ಘೋರದಂಡಧರನಾಗಿ ಸಕಲ ದುಷ್ಟ ಕ್ಷತ್ರಿಯರನ್ನು ಸಂಹರಿಸಿದನು.

ಜಮದಗ್ನಿಯು ವೇದವೇದಾಂಗ ಪಾರಂಗತನಾಗಿ, ಪ್ರಸೇನಜಿತನ ಮಗಳಾದ ರೇಣುಕೆಯನ್ನು ಮದುವೆಯಾದನು. ಅವನಿಗೆ ರುಮಣ್ವಂತ, ಸುಷೇಣ, ವಸು, ವಿಶ್ವಾವಸು, ಪರಶುರಾಮರೆಂಬ ಐವರು ಸುತರಾದರು. ಒಂದು ದಿನ ರೇಣುಕೆ ನರ್ಮದಾನದಿಯಲ್ಲಿ ಸ್ನಾನಕ್ಕೆಂದು ಹೋದಳು. ಅಲ್ಲಿ ಜಲಕ್ರೀಡಾರತನಾದ ಚಿತ್ರರಥ ನೆಂಬ ಮೃತ್ತಿಕಾವತೀ ರಾಜನನ್ನು ನೋಡಿದಳು. ಸುಂದರನಾದ ಅವನ ದರ್ಶನ ದಿಂದ, ಅದೇನು ವಿಧಿವಿಲಾಸವೋ! ರೇಣುಕೆಯ ಮನವು ವಿಕೃತವಾಯಿತು. ಆಶ್ರಮಕ್ಕೆ ಹಿಂದಿರುಗಿಬಂದ ಸತಿಯ ಮಾನಸಿಕ ವ್ಯಭಿಚಾರವನ್ನು ಅರಿತು ಧಿಕ್, ಧಿಕ್! ಎಂದು ಸಿಟ್ಟಾಗಿ, ಜಮದಗ್ನಿಯು ತನ್ನ ಸತಿಯನ್ನು ಸಂಹರಿಸುವಂತೆ ನಾಲ್ಕು ಜನ ಮಕ್ಕಳನ್ನು ಕರೆದು ಆಜ್ಞಾಪಿಸಿದನು. ಅವರು ಅಂತಹ ಅಕಾರ್ಯವನ್ನು ಮಾಡಲಾರದೆ ತಿರಸ್ಕರಿಸಲು, ಅವರನ್ನು ಜಡರಾಗುವಂತೆ ಶಪಿಸಿ, ಜಮದಗ್ನಿಯು ಆ ಸಮಯದಿ ವನದಿಂದ ಬಂದು ಆಶ್ರಮವನ್ನು ಪ್ರವೇಶಿಸಿದ ರಾಮನನ್ನು ಅವನ ತಾಯಿಯನ್ನು ಕೊಲ್ಲಲು ಕಟ್ಟಪ್ಪಣೆಯಿತ್ತನು. ತತ್‌ಕ್ಷಣವೇ ರಾಮನು ತಾಯಿಯ ಕೊರಳನ್ನು ಕೊಡಲಿಯಿಂದ ಕಡಿದುಬಿಟ್ಟನು. ಜಮದಗ್ನಿಯು ಪ್ರೀತನಾಗಿ 'ವರ ವನ್ನು ಬೇಡು' ಎಂದನು. ಶ್ರೀರಾಮನಾಗ 'ನನ್ನ ಮಾತೆ ಬದುಕಲಿ! ನಾ ಕೊಂದೆ ನೆಂಬುದನ್ನು ಮರೆಯಲಿ! ನನ್ನ ಸೋದರರು ಸ್ವಭಾವ ಶಾಂತರಾಗಲಿ!' ಎಂದು ಬೇಡಿದನು. ಲೀಲಾಮನುಜವಿಗ್ರಹನಾದ ಭಾರ್ಗವರಾಮನ ಮಹಿಮೆ ಬ್ರಹ್ಮಾದಿ ಗಳರಿಯರು. ಇನ್ನು ನಮ್ಮಂತಹ ಪಾಮರರ ಪಾಡೇನು!

ಒಂದುದಿನ ಕಾರ್ತವೀರ್ಯಾರ್ಜುನನು ಜಮದಗ್ನಿಯ ಆಶ್ರಮಕ್ಕೆ ಬಂದನು. ರಾಮಾದಿಸುತರು ಫಲಸಮಿತ್ಕುಶಾರ್ಥಿಗಳಾಗಿ ವನಕ್ಕೆ ತೆರಳಿದ್ದರು. ಜಮದಗ್ನಿಯು ಸಪರಿವಾರನಾದ ರಾಜನಿಗೆ ಹೋಮಧೇನುವಿತ್ತ ದ್ರವ್ಯಗಳಿಂದ ರಾಜಾತಿಥ್ಯವನ್ನು ಮಾಡಿದನು. ದುಷ್ಟನಾದ ಕಾರ್ತವೀರ್ಯನು ಕಾಮಧೇನುವಿನ ವತ್ಸವನ್ನು ಅಪ ಹರಿಸಿಕೊಂಡು ಹೊರಟು ಮಾಹಿಷ್ಮತೀಪುರವನ್ನು ಸೇರಿದನು. ಕೆಲಹೊತ್ತಾದಮೇಲೆ ಬಂದ ರಾಮನು ರಾಜನ ದೌಷ್ಟ್ಯವನ್ನು ತಂದೆಯಿಂದ ತಿಳಿದು, ಪ್ರಳಯನೃಸಿಂಹ ನಾದನು. ಕೈಲಿ ಹಿಡಿದ ಕೊಡಲಿಯನ್ನು ಕೆಳಗಿಡದೆ, ಮಾಹಿಷ್ಮತಿಯನ್ನು ಸೇರಿ, ರಣದಲ್ಲಿ ಕಾರ್ತವೀರ್ಯನ ಬಾಹು ಸಹಸ್ರವನ್ನು ತುಂಡರಿಸಿ, ಅವನನ್ನು ಕೊಂದು, ನಂದಿನೀಧೇನುವನ್ನು ಹಿಂತಂದು, ತಂದೆಗೊಪ್ಪಿಸಿದನು. ಕಾರ್ತವೀರ್ಯನ ಸುತರು ರಾಮನ ಮೇಲಿನ ಹಗೆಯಿಂದ, ಅವನಿಲ್ಲದ ಸಮಯದಲ್ಲಿ, ಜಮದಗ್ನಿಯನ್ನು ಕೊಂದು ಓಡಿಹೋದರು. ರಾಮ! ರಾಮ! ಎಂದು ಆಕ್ರೋಶಿಸುವ ತಾಯಿಯ ಆರ್ತನಾದವನ್ನು ಕೇಳಿ, ರಾಮನು ಆಶ್ರಮಕ್ಕೆ ಬಂದು, ನಡೆದುದನ್ನರಿತು, ಭೂಮಂಡಲದಲ್ಲಿ ಕ್ಷತ್ರಿಯರಿನ್ನಿಲ್ಲವೆಂದು ಅನಿಸಿಬಿಡುವೆನೆಂದು ಪಣತೊಟ್ಟನು.

ಪರಶುಹಸ್ತನಾಗಿ, ಭೂಮಂಡಲವನ್ನು ಸುತ್ತಿ, ಸಿಕ್ಕ ಸೊಕ್ಕಿದ ರಾಜಾಧಮರನ್ನೆಲ್ಲ ಸಂಹರಿಸಿದನು. ಪ್ರಳಯಕಾಲಾಭೀಲ ವಹ್ನಿ ಜ್ವಾಲೆಯಂತೆ ಸುಡುತ್ತಾ ಬರುವ ಪರಶುರಾಮನ ಕೋಪಾಗ್ನಿಗೆ, ಕೆಲ ರಾಜನ್ಯರನ್ನು ಬಿಟ್ಟು, ಮಿಕ್ಕೆಲ್ಲ ದುಷ್ಟರಾಜರು ಶಲಭಗಳಾಗಿ, ನಷ್ಟರಾದರು. ತಪಸ್ವಿಯೂ, ಸರ್ವಭೂತದಯಾಪರನು, ಪ್ರತೀಕಾರ ಪರಾಙ್ಮುಖನು ಆದ ಜಮದಗ್ನಿಯೊಬ್ಬನ ಹತ್ಯೆಯಿಂದ ಕ್ಷತ್ರಿಯ ಕುಲವೇ ನಿರ್ಮೂಲ ವಾಯಿತು. ಭಾರ್ಯಾವಧದೋಷದಿಂದ ಜಮದಗ್ನಿಯೂ ಅಂತಹ ಶಿರಶ್ಛೇದರೂಪ ವಾದ ಮರಣಕ್ಕೀಡಾದನು. ದೇವಶಾಸನವು ಅನುಲ್ಲಂಘ್ಯವಾಗಿದೆ.

ರಾಮನು ರಾಜರಕ್ತದಿಂದ ತುಂಬಿದ ಸಮಂತಪಂಚಕವೆಂಬ ಐದು ಸರಸ್ಸು ಗಳನ್ನು ನಿರ್ಮಿಸಿ, ಅಲ್ಲಿ ಪಿತೃತರ್ಪಣವಿತ್ತನು. ತಾನು ಗೆದ್ದ ಭೂಮಿಯನ್ನು ಕಶ್ಯಪ ನಿಗೆ ದಾನಮಾಡಿ, ತಾನು ಮಹೇಂದ್ರಗಿರಿಯಲ್ಲಿ ತಪೋನಿರತನಾದನು. ಬಂಗಾರದ ವೇದಿಯೊಡನೆ ರಾಮನಿತ್ತ ಭೂಮಿಯನ್ನು ಬ್ರಾಹ್ಮಣರು ಕಶ್ಯಪನಿಂದ ದಾನವಾಗಿ ಪಡೆದರು. ಭಗವಾನ್ ಪರಶುರಾಮನು ಚತುರ್ದಶಿ ಮತ್ತು ಅಷ್ಟಮಿ—ಈ ಎರಡು ದಿನಗಳಲ್ಲಿ ನಮ್ಮ ಆಶ್ರಮಕ್ಕೆ ಬರುವನು. ನಾಳೆ ಚತುರ್ದಶಿ. ನಿನಗೆ ಭಗವಂತನ ದರ್ಶನವಾಗುವುದು.

ಇಂತು ರಾತ್ರಿ ಕಳೆಯಲು ಮರುದಿನ ಭಾರ್ಗವರಾಮನು ಬಂದನು. ಧರ್ಮ- ರಾಜಾದಿಗಳು ಅವನನ್ನು ಪೂಜಿಸಿದರು. ರಾಮನ ಆಜ್ಞೆಯಂತೆ ಅವರು ಮರುದಿನ ದಕ್ಷಿಣದಿಕ್ಕಿಗೆ ಪ್ರಯಾಣ ಮಾಡಿದರು. ಅಲ್ಲಿ ಅಗಸ್ತ್ಯತೀರ್ಥವನ್ನು, ಕನ್ಯಾತೀರ್ಥ ವನ್ನು ಸೇವಿಸಿ, ಗ್ರಾಹರೂಪಿಣಿಯರಾಗಿದ್ದ ಅಪ್ಸರೆಯರನ್ನು ಅರ್ಜುನನು ಕನ್ಯಾ- ತೀರ್ಥದಿಂದ ಹೊರಹಾಕಿ ಶಾಪದಿಂದ ಬಿಡಿಸಿದ ಕಥೆಯನ್ನು ಕೇಳಿ, ಆನಂದ ತುಂದಿಲರಾದರು. ಸಮುದ್ರತೀರದ ನಾನಾ ಕ್ಷೇತ್ರಗಳನ್ನು ನೋಡಿಕೊಂಡು ಪಾಂಡವರು ಶೂರ್ಪಾರಕವನ್ನು ಮುಟ್ಟಿದರು. ಅಲ್ಲಿ ಸುತ್ತಮುತ್ತು ವಿರಾಜಿಸುವ ವಸುತೀರ್ಥ, ಮರುತ್ತೀರ್ಥ, ಅಶ್ವಿನೀತೀರ್ಥ, ಯಮ, ಕುಬೇರ, ಸೂರ್ಯ, ಇಂದ್ರ, ವಿಷ್ಣು, ಭವ, ಚಂದ್ರ, ವರುಣ, ಪಿತೃ, ಧಾತೃತೀರ್ಥಗಳಲ್ಲಿ ಮಿಂದು, ಯಥೇಚ್ಛ ವಾಗಿ ಗೋ ಭೂ ತಿಲ ಹಿರಣ್ಯಾದಿಗಳನ್ನು ದಾನಮಾಡಿದರು. ಮುಂದೆ ಪ್ರಭಾಸ ವನ್ನು ಸೇರಿ, ಅಲ್ಲಿ ಹದಿನೈದು ದಿನಗಳು ತಪವನ್ನು ಮಾಡಿ ಧರ್ಮರಾಜನು ಪಿತೃ- ಕಾರ್ಯವನ್ನು ನೆರವೇರಿಸಿದನು.

ಧರ್ಮರಾಜಾದಿಗಳು ಪ್ರಭಾಸಕ್ಕೆ ಬಂದಿರುವರೆಂದು ತಿಳಿದು ಕೃಷ್ಣ ಬಲರಾಮರು ಸಕಲ ಯಾದವರೊಡನೆ ಅವರನ್ನು ನೋಡಲು ಬಂದರು. ಭೂಮಿಯಲ್ಲಿ ಮಲಗಿ ಹಣ್ಣು ಹಂಪಲಗಳನ್ನು ತಿಂದು ಕೃಶಗಾತ್ರರಾಗಿರುವ ಪಾಂಡವರನ್ನು, ಸುದುಃಖಿತಳಾದ ದ್ರೌಪದಿಯನ್ನು ಕಂಡು, ಕೃಷ್ಣ ಬಲರಾಮಾದಿ ಯಾದವರು ಶೋಕವನ್ನು ತಡೆಯ ಲಾರದೆ ಗೋಳಾಡಿದರು. ಧರ್ಮರಾಜನು ಕೃಷ್ಣ ಬಲರಾಮ ಸಾತ್ಯಕಿ ಪ್ರದ್ಯುಮ್ನ ಸಾಂಬ ಚಾರುದೇಷ್ಣ ಅನಿರುದ್ಧಾದಿ ಯಾದವರನ್ನು ತಕ್ಕಂತೆ ಪೂಜಿಸಿ, ಅರ್ಜುನನು

ದಿವ್ಯಾಸ್ತ್ರಗಳನ್ನು ಸಂಪಾದಿಸಿ ಇಂದ್ರಲೋಕದಲ್ಲಿ ಸುಖವಾಗಿರುವ ಸುದ್ದಿಯನ್ನು ತಿಳಿಸಿದನು.

ಧರ್ಮರಾಜಾದಿ ಪಾಂಡವರ ಸ್ಥಿತಿಯನ್ನು ಕಂಡು, ಅವನ ಮಾತನ್ನಾಲಿಸಿ, ಬಲರಾಮನು ದುಃಖದಿಂದ ಮರುಗಿದನು. ಅವನ ಮುಖಪದ್ಮವು ಬಾಷ್ಪಜಲಕಲು ಷಿತವಾಯಿತು. ಗೋಕ್ಷೀರ, ಕುಂದಪುಷ್ಪ, ಚಂದ್ರ, ಮೃಣಾಳ ರಜತಗಿರಿಗಳಂತೆ ಧವಳ ಗಾತ್ರನಾದ ಬಲರಾಮನು, ಪಾಂಡವಕಷ್ಟಕಾರಣನಾದ ದುರ್ಯೋಧನನ ದೌರಾತ್ಮ್ಯ ವನ್ನು ನೆನೆದು ಸಿಟ್ಟಿನಿಂದ ಇಂತು ಮಾತನಾಡಿದನು—"ಕೃಷ್ಣ ! ಧರ್ಮಕ್ಕೇ ಜಯ, ಅಧರ್ಮಕ್ಕೆ ಜಯವಿಲ್ಲವೆಂಬರು; ಅದು ಸುಳ್ಳಾಯಿತು. ಧರ್ಮರಾಜನು ಚೀರವಸನನಾಗಿ ಅರಣ್ಯದಲ್ಲಿರುವನು; ಪಾಪಿ ದುರ್ಯೋಧನನು ಅನ್ಯಾಯದ ಜೂಜಿನಿಂದ ಗೆದ್ದ ರಾಜ್ಯವನ್ನು ಪಾಲಿಸುತ್ತ ಸುಖದಿಂದಿರುವನು. ಧರ್ಮಕ್ಕಿಂತ ಅಧರ್ಮವೇ ಸಂಪತ್ಕರವೆಂದು ತಿಳಿದು ವರ್ತಿಸುವ ಅಲ್ಪಬುದ್ಧಿಗಳಿಗೆ ಅನುಕೂಲವಾದಂತಾಯಿತು ! ರಾಜ್ಯವು ಹೋಯಿತು ; ಸುಖಗಳು ದೂರವಾದವು. ಆದರೂ ಧರ್ಮವನ್ನು ಬಿಡದಿರುವ ನಮ್ಮ ಯುಧಿಷ್ಠಿರನನ್ನು ವನಕ್ಕಟ್ಟಿ, ತಾವು ಹಸ್ತಿನಾವತಿಯಲ್ಲಿ ಸುಖದಿಂದಿರಬೇಕೆಂಬ ಭೀಷ್ಮಾದಿ ಕುರುವೃದ್ಧರಿಗೆ ಧಿಕ್ಕಾರವಿರಲಿ! ಅವರಂತೆ ಕುಣಿದು, ಅನ್ಯಾಯ ವಿಮುಖರಾಗದಿರುವ ದ್ರೋಣ ಕೃಪರ ವಿದ್ಯೆಗೂ ಧಿಕ್ಕಾರವಿರಲಿ ! ಅಮಾಯಿಕರಾದ ಪುತ್ರರ ರಾಜ್ಯವನ್ನು ಕಸಿದುಕೊಂಡ ಕುರುಡರಾಜ, ಪರಲೋಕದಲ್ಲಿ ಪಿತೃಗಣ ಸಮಕ್ಷದಲ್ಲಿ ಏನೆಂದು ಸಮಾಧಾನ ಹೇಳುವನು ! ಅವನು ಅಂತರ್ನೇತ್ರವನ್ನೂ ಕಳೆದುಕೊಂಡಿರುವಂತೆ ತೋರುತ್ತದೆ. ಯಾವ ಜನ್ಮದ ದುಷ್ಕರ್ಮದಿಂದಲೋ ಈಗ ಕುರುಡನಾಗಿದ್ದರೂ, ಅವನಿಗೆ ತನ್ನ ಅನ್ಯಾಯದ ಅರಿವಿದ್ದಂತಿಲ್ಲ. "ವಿನಾಶಕಾಲೇ ವಿಪರೀತಬುದ್ಧಿಃ" ಎಂಬ ನಾಡನುಡಿಗೆ ಗುರಿಯಾಗಿರುವ ಧೃತರಾಷ್ಟ್ರನ ಅವಿವೇಕ ಆಶ್ಚರ್ಯಕರವಾಗಿದೆ! ಪರಸೈನ್ಯಗಳನ್ನು ನಿರಾಯುಧನಾಗಿ ಕೇವಲ ಭುಜಬಲದಿಂದಲೇ ನಾಶಮಾಡಲು ಸಮರ್ಥನಾದ ಭೀಮಸೇನನ ವೈರವಹ್ನಿಯು, ಕೌರವ ಕಕ್ಷವನ್ನು ಸುಡದೆ ಬಿಡದು. ವೃಕೋದರನ ಸಿಂಹಗರ್ಜನಶ್ರವಣಮಾತ್ರದಿ ವೈರಿಸೈನಿಕರು, ಗಜತುರಗಾದಿಜಂತುಗಳು ಕೂಡ ಶಕೃನ್ಮೂತ್ರಗಳನ್ನು ಬಿಟ್ಟು ಎದೆಗುಂದುವರು. ವನವಾಸದ ಕಷ್ಟಗಳಿಂದ ನೊಂದ ಭೀಮಸೇನನು, ಸೇಡಿನಿಂದ ಉರಿದೆದ್ದು, ಕೌರವ ಸೈನ್ಯವನ್ನು ನಿಶ್ಶೇಷವಾಗಿ ನಾಶಮಾಡದೆ ಬಿಡನು. ವೀರ್ಯಬಲಪರಾಕ್ರಮಾದಿ ಗುಣಗಳಿಂದ ಭೀಮಸೇನನಿಗೆ ಸಮರಾದವರು ಪೃಥಿವೀಮಂಡಲದಲ್ಲಿ ಮತ್ತೊಬ್ಬರಿಲ್ಲ. ಏಕರಥನಾಗಿ ಪ್ರಾಚೀದಿಕ್ಕಿನ ರಾಜಮಂಡಲವನ್ನು ಗೆದ್ದು, ರಾಜಸೂಯಯಾಗದ ಪ್ರಧಾನ ಸಾಧಕನಾದ ಜರಾಸಂಧಾಂತಕನು ವನದಲ್ಲಿ ಕ್ಲೇಶಭಾಜನನಾಗಿರುವನೇ ? ಹತವಿಧೀ ! ದಕ್ಷಿಣದೇಶದ ರಾಜರನ್ನು ಸೋಲಿಸಿದ ಸಹದೇವನು ತಾಪಸವೇಷಧಾರಿಯಾಗಿರುವುದನ್ನು ಕಂಡು ನನ್ನ ಮನವು ಅನುಕಂಪಾಕುಲವಾಗಿದೆ. ಪ್ರತೀಚಿಯ ನರಪಾಲರನ್ನು ಗೆದ್ದುಬಂದ ಯುದ್ಧಪಂಡಿತ ನಕುಲನು ವನದಲ್ಲಿ ಗಡ್ಡೆಗೆಣಸುಗಳನ್ನು

ತಿಂದಿರುವನೆಂದರೆ ಅಯ್ಯೋ ! ಎನಿಸುತ್ತದೆ. ಹಾ ! ದ್ರುಪದ ಮಹಾರಾಜನ ಯಜ್ಞ ವೇದಿಯಿಂದ ಬಂದು, ಕಣ್ಣು ಬಿಸಿಲ ಕಾಣದೆ ಬೆಳೆದು, ಪಾಂಡುರಾಜನ ಮನೆ ಹೊಚ್ಚಲ ತುಳಿದು ಬಂದು, ನಮ್ಮ ತಂಗಿಗೂ ಪ್ರಿಯತರಳಾಗಿರುವ ದ್ರೌಪದಿಯ ಕ್ಲೇಶವನ್ನು ನಾನು ನೋಡಲಾರೆನು. ದೇವತನಯರು, ಧರ್ಮನಿರತರು ಆದ ಪಾಂಡವರಿಗೆ ವನವಾಸವಂತೆ ! ಪಾಪಿ ಕೌರವರಿಗೆ ರಾಜ್ಯದ ಸುಖವಂತೆ ! ಆ ದುರ್ಯೋಧನನ ಪಾಪಭಾರದಿಂದ ಭೂಮಿಯು ಕುಗ್ಗಿ ಪಾತಾಳಕ್ಕಿಳಿಯಲಿಲ್ಲವೆಂದರೆ ಆಶ್ಚರ್ಯವಾಗಿದೆ."

ಬಲರಾಮನ ನುಡಿಗಳಿಂದ ಸಾತ್ಯಕಿಯು ರೋಷಶೋಕಪರೀತನಾದನು. "ಅಣ್ಣ ! ಬರಿಯ ಮಾತಿನಿಂದ ಪ್ರಯೋಜನವಿಲ್ಲ. ಶೋಕಾಕುಲರಾಗಿ ಕೂಡುವ ಕಾಲವೂ ಅಲ್ಲ. ನಿನ್ನ ಮಾತಿಗೆ ಬದಲಿಡದೆ ಧರ್ಮರಾಜನು ಸುಮ್ಮನಿರುವನು. ಆದರೂ ಅವನ ಬಂಧುಗಳು ನಾವು ಜೀವಂತರಾಗಿದ್ದು, ಅವರ ಕಷ್ಟಗಳನ್ನು ನಿವಾರಿಸದಿದ್ದರೆ ಇನ್ನು ಬಂಧು ಜನರನ್ನು ಏಕೆ ಬಯಸಬೇಕು ? ಇಂದೇ ಹೊರಡಲಿ ಯಾದವಸೇನೆ! ಧೃತರಾಷ್ಟ್ರಪುತ್ರರ ಮದವನ್ನಿಳಿಸಿ, ಅವರನ್ನು ಯಮಸದನಕ್ಕೆ ಕಳಿಸೋಣ. ಆಲಸ್ಯ ವೇಕೆ ? ನೀನೊಬ್ಬನೇ ಸಾಕು ಸಕಲಮಹೀಮಂಡಲವನ್ನು ಗೆಲ್ಲಲು ! ವೃಥಾ ಗರ್ವಿತನಾದ ದುರ್ಯೋಧನನು ನಿನ್ನ ಮುಸಲಕ್ಕೆ ಸಿಕ್ಕು ದೇವೇಂದ್ರನ ವಜ್ರಕ್ಕೆ ಸಿಕ್ಕ ವೃತ್ರನಂತೆ ಸಾಯದಿರುವನೇ ? ಅರ್ಜುನನ ಶಿಷ್ಯನು, ಪ್ರಿಯಸಖನು ಆದ ನನ್ನ ದಿವ್ಯಾಸ್ತ್ರಗಳೇ ಸಾಕು, ಸಕಲ ಕೌರವಕುಲ ನಾಶಕ್ಕೆ ! ಪ್ರಳಯಾಗ್ನಿಯಂತೆ ವಿಜೃಂಭಿ ಸುವ ಪ್ರದ್ಯುಮ್ನ, ಸಾಂಬ, ಚಾರುದೇಷ್ಣರ ಮುಂದೆ ಕೌರವರು ನಿಲ್ಲಲಾಪರೆ ? ನಮ್ಮ ವಾಸುದೇವನೇನು ಸಾಮಾನ್ಯನೇ ? ಅವನ ಚಕ್ರವನ್ನು ಕಂಡೊಡನೆ ಭೀಷ್ಮ, ದ್ರೋಣ, ಸೋಮದತ್ತ ಪ್ರಮುಖ ಕೌರವ ಸೈನಿಕರೆಲ್ಲರೂ ಎದೆಯೊಡೆದು ಓಡ ದಿರುವರೇ ? ಏಳಿ ! ಕೌರವರನ್ನು ಗೆದ್ದು ರಾಜ್ಯವನ್ನು ಸಂಪಾದಿಸಿ, ಅಭಿಮನ್ಯು ವಿನನ್ನು ಸಿಂಹಾಸನದಲ್ಲಿ ನಿಲ್ಲಿಸೋಣ ! ಮುಂದೆ ನಿಸ್ತೀರ್ಣಪ್ರತಿಜ್ಞನಾಗಿ ಬಂದ ಧರ್ಮರಾಜನು ರಾಜ್ಯವಾಳಲಿ" ಎಂದು ನುಡಿದ ಸಾತ್ಯಕಿಯ ಮಾತನ್ನಾಲಿಸಿ ನಸು ನಕ್ಕು ಶ್ರೀಕೃಷ್ಣನಿಂತೆಂದನು—

"ಸಾತ್ಯಕೀ ! ನಿಜ. ನೀನು ನುಡಿದಂತೆ ನಾವು ಕೌರವರನ್ನು ಗೆದ್ದು, ರಾಜ್ಯ ವನ್ನು ತಂದಿತ್ತರೆ, ಪಾಂಡವರು ಭಿಕ್ಷುಕರಂತೆ ಅದನ್ನು ಸ್ವೀಕರಿಸುವರೇ ? ವಿಚಾರಿಸಿ ನೋಡು ! ಅದು ಅವರಿಗೆ ಅಯಶಸ್ಕರವಲ್ಲವೇ ? ನಿಜಭುಜವೀರ್ಯದಿಂದ ಬಂದ ರಾಜ್ಯವನ್ನಾಳಲಿ ಕುರುಕುಲತಿಲಕರು ! ಆಗ ಅಂತಹ ಸಮಯ ಬಂದಾಗ ನೀನು, ನಾನು, ನಮ್ಮಣ್ಣ ಎಲ್ಲರೂ ಅವರಿಗೆ ಸಹಾಯಕರಾಗೋಣ !" ಕೃಷ್ಣನ ವಚನಗಳು ಕರ್ಣಾನಂದವಾಗಲು, ಧರ್ಮರಾಜನು "ಅಹುದು ಸ್ವಾಮೀ ! ನನಗೆ ರಾಜ್ಯವಲ್ಲ— ಧರ್ಮ-ಸತ್ಯಗಳೇ ಮುಖ್ಯವಾಗಿವೆ. ನನ್ನನ್ನರಿತು ನುಡಿದಿರುವೆ ಪ್ರಭೂ ! ನಮ್ಮ ವನವಾಸ ಅಜ್ಞಾತವಾಸಗಳು ಮುಗಿಯಲಿ ! ಆಗ ಕೌರವರೊಡನೆ ಹೋರಾಡಲು

ರಣರಂಗದಲ್ಲಿ ನಿಂತ ನಮಗೆ ನೀನು, ಸಾತ್ಯಕಿ ಮುಂತಾದ ಬಂಧುಗಳಲ್ಲದೆ ಮತ್ತಾರು ಹಿತಸಾಧಕರು? ದಯವಿರಲಿ ದಾವೋದರ!" ಎಂದು ಯಾದವರನ್ನು ದ್ವಾರಕೆಗೆ ಕಳಿಸಿ, ತಾನು ಸಪರಿವಾರನಾಗಿ, ವಿದರ್ಭದೇಶದಲ್ಲಿ ಹರಿಯುವ ಪಯೋಷ್ಣೀ ನದಿಯನ್ನು ಕುರಿತು ಪ್ರಯಾಣಮಾಡಿದನು. ನೃಗರಾಜ, ಗಯರಾಜರು ಯಜ್ಞ ಮಾಡಿದ ತಪತಿಯಲ್ಲಿ ಮಿಂದು ಬ್ರಾಹ್ಮಣರಿಗೆ ಗೋ-ಹಿರಣ್ಯಗಳನ್ನು ದಾನಮಾಡಿದನು. ವೈಡೂರ್ಯ ಪರ್ವತವನ್ನು ಸುತ್ತಿ, ನರ್ಮದಾತೀರದ ಭಾರ್ಗವಾಶ್ರಮವನ್ನು (ಭೃಗುಕಚ್ಛ) ಸೇರಿದನು. ಭೃಗುವಂಶಪ್ರವರನಾದ ಚ್ಯವನನ ಮಹಿಮೆಯನ್ನು ಲೋಮಶನು ಧರ್ಮಜನಿಗೆ ತಿಳಿಸಿದನು.

## ತೀರ್ಥಯಾತ್ರೆ—ಚ್ಯವನ ಚರಿತೆ

ಭೃಗುಕಚ್ಛದಲ್ಲಿ ಭೃಗುಕುಲತಿಲಕನಾದ ಚ್ಯವನನೆಂಬುವ ಋಷಿಯು ತೀವ್ರ ತಪೋನಿರತನಾಗಿದ್ದನು. ಅವನ ಸುತ್ತು ಹುತ್ತ ಬೆಳೆಯಿತು. ಒಂದು ದಿನ ಶರ್ಯಾತಿ ರಾಜನು ತನ್ನ ಮಗಳಾದ ಸುಕನ್ಯೆಯೊಡನೆ ಅಲ್ಲಿ ಬಂದು ತಂಗಿದನು. ಆಶ್ರಮವು ಶೂನ್ಯವಾಗಿತ್ತು. ರಾಜನ ಪರಿವಾರದವರು ಸೈನಿಕರು ಡೇರೆಗಳನ್ನು ನಿರ್ಮಿಸಿ, ಅಲ್ಲಿದ್ದರು. ಸುಕನ್ಯೆಯು ಸಖಿಯರಿಂದ ಕೂಡಿ ವನದಲ್ಲಿ ವಿಹರಿಸುವಾಗ ಹುತ್ತವನ್ನು ನೋಡಿದಳು. ಹುತ್ತದೊಳಗಿದ್ದ ಚ್ಯವನನೂ ನೇತ್ರರಂಧ್ರಗಳಿಂದ ನೋಡಿ, ಅವಳನ್ನು ಕಾಮಿಸಿದನು. ಬಾಲ್ಯಚಾಪಲ್ಯದಿಂದ ಸುಕನ್ಯೆಯು ಒಳಗಿರುವ ಮುನಿಯನ್ನರಿಯದೆ, ಮುಳ್ಳುಗಳಿಂದ ಹುತ್ತದಲ್ಲಿದ್ದ ಎರಡು ರಂಧ್ರಗಳಲ್ಲಿ ತಿವಿದಳು. ಹುತ್ತದಿಂದ ರಕ್ತವು ಹರಿಯಲು ಅವಳು ಭೀತಳಾಗಿ, ಓಡಿ ಶಿಬಿರವನ್ನು ಸೇರಿದಳು.

ಚ್ಯವನನು ಸಿಟ್ಟಾಗಿ, ಶರ್ಯಾತಿಜನರ ಶಕೃನ್ಮೂತ್ರಗಳನ್ನು ಬಂಧಿತವಾಗುವಂತೆ ಶಪಿಸಿದನು. ಜನರ ಹೊಟ್ಟೆ ಉಬ್ಬಿತು. ರಾಜನೂ ಕಷ್ಟಪಟ್ಟು 'ಭಾರ್ಗವಾಶ್ರಮವಿದು, ತಿಳಿದೋ–ತಿಳಿಯದೆಯೋ ಯಾರಾದರೂ ಅಪಚಾರವೆಸಗಿದ್ದರೆ ಹೇಳಿ!' ಎಂದನು. ಕೊನೆಗೆ ಮಗಳು ಮಾಡಿದ ಅಪರಾಧವನ್ನರಿತು, ಶರ್ಯಾತಿಯು ಹುತ್ತದಿಂದ ಮುನಿಯನ್ನು ಹೊರಬರುವಂತೆ ಮಾಡಿ, ಕ್ಷಮಿಸೆಂದು ಬೇಡಿದನು. ಚಂಡಕೋಪನನಾದ ಮುನಿಯು ತನಗೆ ಸುಕನ್ಯೆಯನ್ನಿತ್ತರೆ ಅಪರಾಧದೋಷದಿಂದ ಬಿಡಿಸುವೆನೆಂದನು. ಶರ್ಯಾತಿಯು ಬದುಲಾಡದೆ ಮಗಳನ್ನವನಿಗೆ ಧಾರೆಎರೆದಿತ್ತು, ರಾಜಧಾನಿಗೆ ತೆರಳಿದನು.

ಸುಕನ್ಯೆಯು ಪತಿಯ ಇಂಗಿತವನ್ನರಿತು, ಭಕ್ತಿಯಿಂದ ಅವನನ್ನು ಸೇವಿಸಿದಳು. ಚ್ಯವನನಿಗಾಗ ಎಂಬತ್ತೆಂಟು ವರ್ಷಗಳಾಗಿದ್ದವು. ಅಂತಹ ಮುದುಕನನ್ನು ಸೇವಿಸುತ್ತಾ ರಾಜಪುತ್ರಿಯು ತನ್ನ ಶೀಲ, ವಿನಯ, ದಮ, ಭಯ, ಭಕ್ತಿಗಳಿಂದ ಅವನನ್ನು ಸಂತೋಷಪಡಿಸಿದಳು. ಒಂದು ದಿನ ನರ್ಮದೆಯಲ್ಲಿ ಮಿಂದು ಬರುತ್ತಿದ್ದ ಆ ಸುಂದರಿಯನ್ನು ನೋಡಿ, ಅಶ್ವಿನೀದೇವತೆಗಳು ಕಾಮಿಸಿದರು. ಮುದುಕ

ಪತಿಯನ್ನು ಬಿಟ್ಟು, ತಮ್ಮಲ್ಲಿ ಒಬ್ಬನನ್ನು ವರಿಸೆಂದು ಬೇಡಿದರು. "ನಾನು ಪತಿ-ವ್ರತೆಯು. ಚ್ಯವನನ ಪತ್ನಿಯನ್ನು ಇಂತು ವಂಚಿಸುವುದು ದೇವತೆಗಳಿಗೆ ಸರಿಯಲ್ಲ" ವೆಂದ ಸುಕನ್ಯೆಯ ಗುಣವನ್ನು ಮೆಚ್ಚಿ, ಸುರವೈದ್ಯರು ಚ್ಯವನನನ್ನು ಯುವಕನನ್ನಾಗಿ ಮಾಡುವೆವೆಂದರು. ಚ್ಯವನನೊಡನೆ ಅವರೀರ್ವರೂ ಅಲ್ಲಿದ್ದ ಒಂದು ಹ್ರದದಲ್ಲಿಳಿದರು. ಮೇಲೇರಿಬಂದಾಗ ಸುಕನ್ಯೆಯು ಮೂವರೂ ಸಮಾನ ದಿವ್ಯ ರೂಪರು, ದಿವ್ಯಾಭರಣರು, ದಿವ್ಯವಸನರು ಆಗಿರುವುದನ್ನು ಕಂಡು, ದಿಗ್ಭ್ರಾಂತಳಾದಳು. ಆದರೂ ದೇವ-ಮಾನವ ವೈಲಕ್ಷಣ್ಯವನ್ನರಿತವಳಾದುದರಿಂದ ಭೂಮಿಯನ್ನು ಮುಟ್ಟದೆ ನಿಂತಿದ್ದ ನಾಸತ್ಯ ದಸ್ರರನ್ನು ಬಿಟ್ಟು, ತನ್ನ ಪತಿಯನ್ನೇ ಸ್ವೀಕರಿಸಿದಳು. ಅಶ್ವಿನೀದೇವತೆಗಳು ಮಾಡಿದ ಮಹೋಪಕಾರಕ್ಕೆ ತಕ್ಕಂತೆ ಅವರಿಗೆ ಸೋಮಭಾಗವನ್ನು ಕೊಡಿಸುವೆನೆಂದು ಚ್ಯವನನು ಮಾತಿತ್ತು, ಅವರನ್ನು ಪೂಜಿಸಿ, ಕಳಿಸಿದನು.

ಚ್ಯವನನ ಯೌವನಪ್ರಾಪ್ತಿಯನ್ನು ಕೇಳಿ, ಶರ್ಯಾತಿಯು ಚ್ಯವನಾಶ್ರಮಕ್ಕೆ ಬಂದು, ದುಹಿತೃಜಾಮಾತೃಗಳನ್ನು ಕಂಡು ಪರಮಾನಂದಭರಿತನಾದನು. ಅವನಿಂದ ಬೃಹಸ್ಪತಿ ಸವನವನ್ನು ಮಾಡಿಸುತ್ತಾ, ಚ್ಯವನನ ಹೋತೃವಾಗಿದ್ದನು. ಅವನು ಸೋಮವನ್ನು ಹಿಡಿದು ಅಶ್ವಿನಿಗಳಿಗೆಂದು ಹೋಮಿಸತೊಡಗಲು, ಇಂದ್ರನು ಅವನನ್ನು ವಾರಿಸಿದನು. ವೈದ್ಯರಾದುದರಿಂದಲೂ, ಮನುಜಲೋಕ ಸಂಚಾರಿಗಳಾಗಿರುವುದರಿಂದಲೂ ನಾಸತ್ಯ ದಸ್ರರಿಗೆ ಯಜ್ಞಭಾಗವನ್ನು ಕೊಡಬಾರದೆಂದು ವಾರಿಸಿದರೂ ಕೇಳದೆ ಚ್ಯವನನು ದೇವವೈದ್ಯರಿಗೆ ಹವಿಸ್ಸನ್ನು ಕೊಡಲು ಕೈ ಮುಂದೆ ಮಾಡಿದನು. ಇಂದ್ರನು ಕುಪಿತನಾಗಿ ಚ್ಯವನನ ಮೇಲೆ ವಜ್ರವನ್ನೆಸೆಯಲಿಚ್ಛಿಸಿ, ಕೈ ಎತ್ತಿದನು. ಚ್ಯವನನು ನಗುತ್ತಾ ಅವನ ಕೈಯನ್ನು ಹಾಗೇ ನಿಲ್ಲುವಂತೆ ಸಂಸ್ತಂಭಿಸಿ, ದಕ್ಷಿಣಾಗ್ನಿಯಲ್ಲಿ ಒಂದು ಭಯಂಕರ ಕೃತ್ಯೆಯನ್ನು ಸೃಜಿಸಿದನು. ಮದವೆಂಬ ಹೆಸರುಳ್ಳ ಕೃತ್ಯೆಯು ಭೀಕರವಾಗಿ ಮೇಲೇರಿ ಬರಲು ನೋಡಿ, ಇಂದ್ರನು ಹೆದರಿ ಚ್ಯವನನಿಗೆ ಶರಣಾದನು. ಅಶ್ವಿನೀ ದೇವತೆಗಳು ಯಜ್ಞಭಾಗವನ್ನು ಹೊಂದಿದರು. ಚ್ಯವನನು ಇಂದ್ರನನ್ನು ಕ್ಷಮಿಸೆಂದು ಬೇಡಿ, ತಾನು ಸೃಜಿಸಿದ ಮದವನ್ನು ಪಾನ, ದ್ಯೂತ, ವೇಶ್ಯಾ, ಮೃಗಯಾದಿ ವ್ಯಸನಗಳಲ್ಲಿ ವಿಭಜಿಸಿದನು. ಅಂತೆಯೇ ಇಂದಿಗೂ ಭೋಜನಾಂತದಲ್ಲಿ ಕಣ್ಣಿಗೆ ತಣ್ಣೀರನ್ನು ಅಂಗುಷ್ಠದಿಂದ ಹಚ್ಚಿ ಶರ್ಯಾತಿ, ಸುಕನ್ಯಾ, ಚ್ಯವನ, ಮಹೇಂದ್ರ, ನಾಸತ್ಯ ದಸ್ರರನ್ನು ನೆನೆದವರು ಆರೋಗ್ಯವಂತರು ಭಾಗ್ಯ ಶಾಲಿಗಳು ಆಗುವರೆಂಬ ಪ್ರಥೆ ಇದೆ.

ಮುಂದೆ ಪಾಂಡವರು ಸೈಂಧವಾರಣ್ಯವನ್ನು ದಾಟಿ ಸದಾಸ್ರೋತೆಯಲ್ಲಿ ಮಿಂದು ಚಂದ್ರತೀರ್ಥವನ್ನು ಸೇರಿದರು. ಯಮುನಾನದಿಯ ಪ್ರಕ್ಷಾವತರಣವೆಂಬ ತೀರ್ಥವನ್ನು ಸೇವಿಸಿದರು. ಅಲ್ಲಿ ಶಂತನು, ಮಾಂಧಾತೃ, ಸೋಮಕಾದಿ ರಾಜನ್ಯರು ಯಜ್ಞಗಳನ್ನು ಮಾಡಿ, ಪುಣ್ಯಲೋಕವನ್ನೈದಿದ್ದರು.

ಯುವನಾಶ್ವನು ಇಕ್ಷ್ವಾಕುವಂಶ ಪ್ರಭವನಾದ ರಾಜನು. ಮಕ್ಕಳಿಲ್ಲದ ಚಿಂತೆಯಿಂದ ಅವನು ವನವನ್ನು ಸೇರಿ ಅಲ್ಲಿ ಭಾರ್ಗವಾಶ್ರಮದಲ್ಲಿ ವಾಸಿಸುತ್ತಿದ್ದನು. ಭಾರ್ಗವನು ಅವನಿಗೆ ಸಂತಾನವಾಗುವಂತೆ ಪುತ್ರೇಷ್ಟಿಯನ್ನು ಮಾಡಿಸುತ್ತಿದ್ದನು. ಒಂದು ದಿನ ರಾತ್ರಿ ಯುವನಾಶ್ವನು ನೀರಡಿಸಿ, ಯಜ್ಞಶಾಲೆಯಲ್ಲಿ ಅಭಿಮಂತ್ರಿಸಿ ಇಟ್ಟಿದ್ದ ಗಡಿಗೆಯ ನೀರನ್ನು ಕುಡಿದುಬಿಟ್ಟನು. ಪುಂಸವನ ಜಲವನ್ನು ರಾಜನು ತಿಳಿಯದೆ ಕುಡಿದನೆಂದು ತಿಳಿದು ಭಾರ್ಗವನು ವಿಷಾದಾಶ್ಚರ್ಯಭರಿತನಾಗಿ 'ಶ್ರೀಹರಿಯೇ ರಕ್ಷಕನು' ಎಂದು ಪ್ರಾರ್ಥಿಸಿದನು. ಯುವನಾಶ್ವನು ಗರ್ಭವತಿಯಂತಾಗಿ, ದಶಮಾಸಗಳಾಗುತ್ತಿರಲು ಎಡ ಹೊಟ್ಟೆಯಿಂದ ಮಗನನ್ನು ಪಡೆದನು. ದೈವಾನು-ಗ್ರಹದಿಂದ ರಾಜನು ಸಾಯಲಿಲ್ಲ. ಕೂಸು ಯಾರ ಹಾಲನ್ನು ಕುಡಿಯಬೇಕೆಂದು ಚಿಂತಿಸುತ್ತಿದ್ದಾಗ ಇಂದ್ರನು, ತನ್ನ ತರ್ಜನಿಯನ್ನು ಅವನ ಬಾಯಲ್ಲಿಟ್ಟು ಅಮೃತವನ್ನುಣಿಸಿದಂತೆ, ಅವನನ್ನು 'ಮಾಂಧಾತ'—ನನ್ನನ್ನು ಅವಲಂಬಿಸಿ ಜೀವಿಸು—ಎಂದು ತಣಿಸಿದನು. ಆ ಬಾಲನೇ ಮಾಂಧಾತನೆನಿಸಿ ಬೆಳೆದು ಮುಂದೆ ಸಪ್ತದ್ವೀಪಗಳಿಗೆ ಚಕ್ರವರ್ತಿಯಾದನು. ಈ ಕ್ಷೇತ್ರದಲ್ಲಿ ಭೂರಿದಕ್ಷಿಣೆಗಳನ್ನಿತ್ತು, ಅಶ್ವಮೇಧಾದಿ ಅನೇಕ ಯಜ್ಞಗಳನ್ನು ಮಾಡಿದನು.

ಸೋಮಕನೆಂಬ ರಾಜನು ನೂರುಜನ ರಾಣಿಯರಿಂದ ಕೂಡಿ, ಮಕ್ಕಳಿಗಾಗಿ ಅನೇಕ ವ್ರತ ತೀರ್ಥ ದಾನಗಳನ್ನು ಮಾಡಿದನು. ಕೊನೆಗೆ ಅವನಿಗೆ ವೃದ್ಧಾಪ್ಯದಲ್ಲಿ ಜಂತುನೆಂಬ ಮಗನಾದನು. ನೂರು ಜನ ರಾಣಿಯರೂ ಅವನನ್ನು ಪ್ರೇಮಿಸಿದರು. ಆಶ್ಚರ್ಯತರವೆಂದರೆ ಕೂಸು ಒಂದು ಹುಳದಷ್ಟೇ ಇದ್ದನು. ಒಂದು ದಿನ ಮಶಕವು ಅವನನ್ನು ಕಡಿಯಿತು. ಕೂಸು ಅಳತೊಡಗಲು, ರಾಣಿಯರೆಲ್ಲರೂ ಅವನ ಸುತ್ತಲು ಕೂತು, ತಾವೂ ರೋದಿಸುತ್ತಿದ್ದರು. ಅವರ ರೋದನಧ್ವನಿಯನ್ನು ಕೇಳಿ, ಸೋಮಕ ರಾಜನು ಬಂದು, ನಡೆದುದನ್ನು ತಿಳಿದು ಕೂಸನ್ನು ಸಂತೈಸಿದನು.

ಸೋಮಕನು ರಾಜಸಭೆಯಲ್ಲಿ ಮಂತ್ರಿ ಋತ್ವಿಗ್ಜನರನ್ನು ಕರೆಯಿಸಿ 'ಜಂತುನಿಗಾದ ಬಾಧೆ ಕೇಳಿದಿರಾ? ಇಂತಹ ಮಗನಿಂದ ನಮಗೆ ಪ್ರಯೋಜನವೇನು? ಒಳ್ಳೆಯ ಮಕ್ಕಳು ನನಗಾಗಬೇಕಾದರೆ ನಾನೇನು ಮಾಡಲಿ?' ಎಂದು ತನ್ನ ದುಃಖವನ್ನು ವಿವರಿಸಿದನು. ಆಗ ಋತ್ವಿಜನೊಬ್ಬನು "ರಾಜನ್! ನಿನಗೆ ನೂರು ಜನ ಸುತರಾಗುವಂತೆ ಮಾಡುವೆನು. ನೀನು ಧೈರ್ಯದಿಂದ ಈ ಜಂತುನನ್ನು ಪಶುವನ್ನಾಗಿರಿಸಿ ಯಜ್ಞವನ್ನು ಮಾಡು! ಅವನ ವಪೆಯನ್ನು ಹೋಮಿಸುವಾಗ ಬಂದ ಗಂಧವನ್ನಾಘ್ರಾಣಿಸಿ, ನಿನ್ನ ರಾಣಿಯರು ಎಲ್ಲರೂ ಗರ್ಭವತಿಯರಾಗುವರು" ಎಂದಾಗ ಸೋಮಕನು ಜಂತುನ ದೆಶೆಯಿಂದ ರೋಸಿ, ಆ ಯಜ್ಞವನ್ನು ಮಾಡಲೊಪ್ಪಿದನು. ಪುರೋಹಿತರು ಜಂತುನನ್ನು ಬಲಿಕೊಡಲೆಣಿಸಿ ಬಂದಾಗ, ರಾಣಿಯರು 'ಹೋ' ಎಂದು ರೋದಿಸಿ ತಡೆದರು. ಬಲಾತ್ಕಾರದಿಂದ ಹಿಡಿದೆಳೆದು ತಂದ ಜಂತುನ ವಪೆಯನ್ನು ಋತ್ವಿಜನು ಹೋಮಿಸಿದಾಗ ಅವರು ಅದರ ಗಂಧವನ್ನಾಘ್ರಾಣಿಸಿ,

ಗರ್ಭವತಿಯರಾಗಿ, ನೂರು ಜನ ಬಲಿಷ್ಠ ತನಯರನ್ನು ಪಡೆದರು. ಪುರೋಹಿತನು ಜಂತುನೇ ಮತ್ತೆ ನಿನಗೆ ಮಗನಾಗುವನು. ಇವನಿಗಿದ್ದಂತೆ ಅವನಿಗೂ ಎಡಪಕ್ಕದಲ್ಲಿ ಬಂಗಾರಬಣ್ಣದ ಮಚ್ಚೆ ಇರುವುದು' ಎಂದು ನುಡಿದಿದ್ದಂತೆ ಜಂತುನೇ ಹಿರಿಯ ರಾಣಿಯ ಮಗನಾಗಿ ಜನಿಸಿದನು.

ಕಾಲಕ್ರಮದಿಂದ ರಾಜ, ಪುರೋಹಿತ ಮೃತರಾದರು. ಯಮರಾಜನು ಪುರೋಹಿತನನ್ನು ನರಕದಲ್ಲಿ ಹಾಕಿಸಿ, ಸೋಮಕನನ್ನು ಸ್ವರ್ಗವನ್ನು ಸೇರಿಂದನು. ರಾಜನು ಪುರೋಹಿತನಿಗೆ ಅಭಿಚಾರಹೋಮದಿಂದ ನರಕವಾಗಿರುವುದನ್ನರಿತು ಯಮರಾಜನನ್ನು—'ನಾನು ಮಾಡೆಂದಾಗ ಪುರೋಹಿತನು ಜಂತುವಿನನ್ನು ಬಲಿ ಯಿತ್ತು ಅಭಿಚಾರ ಹೋಮವನ್ನು ಮಾಡಿರುವನು. ನನ್ನನ್ನು ನರಕದಲ್ಲಿಟ್ಟು, ನಿರಪರಾಧಿಯಾದ ಋತ್ವಿಜನನ್ನು ಬಿಟ್ಟುಬಿಡಿ!' ಎಂದು ಬೇಡಿದಾಗ, ಯಮನು 'ರಾಜನ್! ಒಬ್ಬರ ಕರ್ಮಫಲವನ್ನು ಮತ್ತೊಬ್ಬರು ಉಣ್ಣಲಾಗದು. ನೀನು ಸುರಲೋಕಯೋಗ್ಯನಿರುವೆ' ಎಂದನು. ಆಗ ಸೋಮಕನು ಯಮನನ್ನು ನೋಡಿ 'ಪ್ರಭೂ! ನನಗೆ ಸ್ವರ್ಗ ಬೇಡ! ನನಗಾಗಿ ಹೋಮಿಸಿ, ನರಕಾಗ್ನಿಯಲ್ಲಿ ಬೆಂದು ಕಷ್ಟಪಡುವ ಋತ್ವಿಜನ ಜೊತೆಗೇ ನಾನೂ ಸ್ವರ್ಗವನ್ನು ಸೇರುವೆನು' ಎಂದು ಹೇಳಿ, ನರಕದಲ್ಲೇ ಇದ್ದನು. ಪಾಪಫಲವು ಸವೆಯಲು ಋತ್ವಿಜನು ಮುಕ್ತನಾದಾಗ ರಾಜ-ಪುರೋಹಿತರೀರ್ವರೂ ಸ್ವರ್ಗವನ್ನು ಸೇರಿದರು. ಅಂತಹ ವಿಪ್ರವತ್ಸಲನಾದ ಸೋಮಕರಾಜನು ಈ ಕ್ಷೇತ್ರಗಳಲ್ಲಿ ಅನೇಕ ಯಜ್ಞಗಳನ್ನು ಮಾಡಿದನು. ಪಾಂಡವರು ಅಲ್ಲಿ ಆರು ದಿವಸಗಳಿದ್ದು ಮುಂದೆ ಅಂಬರೀಷ, ಯಯಾತಿಗಳು ಯಜ್ಞ ತಪೋ ದಾನಗಳನ್ನು ಮಾಡಿದ ಪ್ರಸರ್ಪಣವೆಂಬ ತೀರ್ಥವನ್ನು ಸೇರಿದರು.

ಆ ತೀರ್ಥದಲ್ಲಿ ಒಂದು ಪಿಶಾಚವಿತ್ತು. ಅದು ಸ್ತ್ರೀಯರ ಕರ್ಣಾಭರಣವು (ಬೆಂಡೋಲೆಯು) ಒರಳಿನಂತೆ ಇರುವುದೆಂದು ಕೇಳಿ, ದೊಡ್ಡ ಒರಳುಗಳನ್ನೇ ಕಿವಿ ಗಳಲ್ಲಿ ಜೋತುಬಿಟ್ಟು, ಅಲ್ಲಿಗೆ ಬಂದವರನ್ನು ಹೆದರಿಸುತ್ತಿತ್ತು. ಒಂದು ದಿನ ಒಬ್ಬ ಬ್ರಾಹ್ಮಣಿಯು ಸಪುತ್ರಳಾಗಿ ಅಲ್ಲಿಗೆ ಬಂದಳು. ಪಿಶಾಚಿಯು ಅವಳನ್ನು ನೋಡಿ, "ಯುಗಂಧರದಲ್ಲಿ ಮೊಸರನ್ನು ಕುಡಿದು, ಅಚ್ಯುತ ಸ್ಥಲದಲ್ಲಿ ನಿವಸಿಸಿ, ಭೂತಲಯ ದಲ್ಲಿ ಸ್ನಾನಮಾಡಿ ಬಂದ ನಿನಗೆ ಇಲ್ಲಿ ವಾಸವು ಅರ್ಹವಲ್ಲ; ಒಂದು ರಾತ್ರಿ ಇಲ್ಲಿರು; ಇನ್ನೊಂದು ಹಗಲು ಉಳಿದರೆ ಬಟ್ಟೆ ಕಸಿದು, ಪಾತ್ರೆ ಒಡೆದು, ಬಡಿಯುವೆನು; ಮತ್ತೆ ರಾತ್ರಿ ತಂಗಿದರೆ ಪ್ರಾಣಾಪಹಾರವನ್ನೂ ಮಾಡುವೆನು" ಎಂದು ಬೆದರಿಸಿ, ಓಡಿಸಿತು. ಯುಗಂಧರ ಅಂದರೆ ಬೆಟ್ಟದಂತಿರುವ ಡುಬ್ಬವುಳ್ಳ ಒಂಟೆ. ಅದರ ಮೊಸರು ನಿಷಿದ್ಧ. ಅಚ್ಯುತಸ್ಥಲವೆಂದರೆ ಸಂಕರಜಾತಿಜನರ ಗ್ರಾಮ. ಅಲ್ಲಿ ನಿವಸಿಸುವುದು ನಿಷಿದ್ಧ. ಭೂತಲಯವೆಂದರೆ ಸತ್ತವರನ್ನು ಸಂಸ್ಕಾರಮಾಡದೆ ಹಾಗೇ ನದಿಯಲ್ಲಿ ಬಿಸುಡುವ ಕಳ್ಳರ ಹಳ್ಳಿ. ಆ ಹಳ್ಳಿಯ ನದಿಯ ಸ್ನಾನವೂ ನಿಷಿದ್ಧ. ಮೂರೂ ನಿಷಿದ್ಧಗಳನ್ನು ಆಚರಿಸಿ ಬಂದವರು ಇಲ್ಲಿ ಪ್ರಾಯಶ್ಚಿತ್ತದಿಂದ ಗತಪಾಪ

ರಾಗದೆ ನಿಂತರೆ, ಪಿಶಾಚಬಾಧೆ ತಪ್ಪದೆಂದು ತಾತ್ಪರ್ಯ. ದೋಷವಂತರಿಗೆ ಈ ತೀರ್ಥವಾಸವು ದುರ್ಲಭವೆಂದರ್ಥ. ಕುರುದೇಶದ ದ್ವಾರವಾದುದರಿಂದ ಯಮುನಾ ತೀರದ ಪ್ಲಕ್ಷಾವತರಣ, ಪ್ರಸರ್ಪಣಾದಿ ತೀರ್ಥಗಳು ಬ್ರಹ್ಮಜ್ಞಾನವಂತರಿಗೆ ಸುಲಭ ವೆನಿಸಿದೆ.

ಪುಣ್ಯತೀರ್ಥಗಳಲ್ಲಿ ನಿಂತ ಜನರನ್ನು ದೇವತೆಗಳು ಪರೀಕ್ಷಿಸದೆ ಬಿಡರು. ದಿಟ ವಾಗಿ ನಿಂತ ಯೋಗ್ಯಜನರು ಪಾಪಪ್ರಾಯಶ್ಚಿತ್ತವನ್ನು ಮಾಡಿಕೊಂಡು ಸೇವಿಸಿದರೆ ಅವರು ಒಲಿದು, ಇತರ ದುಷ್ಟ ಪಿಶಾಚ ರಾಕ್ಷಸಾದಿ ವಿಘ್ನಗಳನ್ನು ನಿವಾರಿಸಿ, ಅವರಿಗೆ ಪುಣ್ಯಪ್ರದಾನ ಮಾಡುವರು. ಯುಗಂಧರವೆಂದರೆ ಜೀವಜಡರನ್ನು ಧರಿಸಿದ ಪರಮಾತ್ಮನು. ಅವನಿರುವುದು ಅಚ್ಯುತಸ್ಥಲವೆಂದರೆ ಕಾಶ್ಯಾದಿಪುಣ್ಯಕ್ಷೇತ್ರ. ಅಲ್ಲಿ ಭೂತಲಯವೆಂದರೆ ದೇಹತ್ಯಾಗಮಾಡುವವರಿಗೆ ಭೂತಲಯಕಾರಣನಾದ ವಿಶ್ವನಾಥ ದೇವನು ಬಲಗಿವಿಯಲ್ಲಿ ರಾಮನಾಮವನ್ನು ಉಪದೇಶಿಸಿ, ಅವರನ್ನು ಅಚ್ಯುತಸ್ಥಲ ವೆಂದರೆ ವೈಕುಂಠವನ್ನು ಸೇರಿಸುವನೆಂದು ತಿಳಿದವರಿಗೆ ಪಿಶಾಚಾದಿ ಬಾಧೆಯಿಲ್ಲ. ಯುಗಂಧರ ಎಂದರೆ ಜೀವಪರಮಾತ್ಮರನ್ನು ತಿಳಿದ ಜ್ಞಾನಿಯು, ದಧಿಪ್ರಾಶನವೆಂದರೆ ವಿವಾಹಾದಿ ಸಂಸ್ಕಾರವನ್ನು ಹೊಂದಿ, ಭೂತಲಯೇ ಅಂದರೆ ಪ್ರಳಯಕಾಲದವರೆಗೂ ಸಂಪಾದಿತ ಜ್ಞಾನ ಭಕ್ತಿ ವಿರಕ್ತಿ ಪ್ರಮುಖ ಗುಣನಾಗಿ ಆಗ ವಿರಜಾನದಿಯಲ್ಲಿ ಮಿಂದು, ಅಚ್ಯುತಸ್ಥಲೇ ಅಂದರೆ ವೈಕುಂಠದಲ್ಲಿ ಸ್ವಯೋಗ್ಯ ಸ್ವರೂಪಜ್ಞಾನ ಆನಂದಾದಿಗಳ ಚ್ಯುತಿ ಇಲ್ಲದೆ ಸುಖವಾಗಿರುವನು. ಇದಕ್ಕೆ ಮೂಲಶ್ಲೋಕ—

ಯುಗಂಧರೇ ದಧಿ ಪ್ರಾಶ್ಯ ಉಷಿತ್ವಾ ಚಾಚ್ಯುತಸ್ಥಲೇ |
ತದ್ವದ್ಭೂತಿಲಯೇ ಸ್ನಾತ್ವಾ, ಸಪುತ್ರಾ ವಸ್ತುಮರ್ಹತಿ ||

## ತೀರ್ಥಯಾತ್ರೆ—ಶಿಬಿ ಅಷ್ಟಾವಕ್ರ ಚರಿತೆ

ವೈಶಂಪಾಯನನು ಜನಮೇಜಯನಿಗೆ ಧರ್ಮರಾಜಾದಿಗಳ ಪ್ಲಕ್ಷಾವತರಣ ಪ್ರಸರ್ಪಣ ಮುಂತಾದ ತೀರ್ಥಸೇವನವನ್ನು ವರ್ಣಿಸಿ, ಮುಂದೆ ಉತ್ತರ ಕುರು-ಕ್ಷೇತ್ರದ ಸರಸ್ವತಿಯನ್ನು, ವಿನಶನ ಸಿಂಧು ತೀರ್ಥಗಳನ್ನು ನಿರೂಪಿಸಿದನು.

ಲೋಮಶನು ಧರ್ಮರಾಜಾದಿಗಳಿಂದ ಕೂಡಿ, ಸರಸ್ವತಿಯಲ್ಲಿ ಮಿಂದನು. ವಿನಶನದಲ್ಲಿ ಕಣ್ಣಿಗೆ ಕಾಣದಾಗಿ, ಚಮಸೋದ್ಭೇದದಲ್ಲಿ ಮತ್ತೆ ಹೊರಬಂದ ಸರಸ್ವತಿಯ ಮಹಿಮೆಯನ್ನು ವರ್ಣಿಸಿದನು. ಅಲ್ಲಿರುವ ಅಗಸ್ತ್ಯತೀರ್ಥವನ್ನು ಸೇವಿಸಿ, ಪಾಂಡವರು ಮುಂದೆ ಸಾಗಿ, ಭಾಸ್ಕರತೀರ್ಥ, ವಸಿಷ್ಠನ ಪಾಶಗಳನ್ನು ಕಡಿದುಹಾಕಿದ ವಿಪಾಶಾ ನದಿಯನ್ನು, ರುದ್ರಸರೋವರವನ್ನು, ಭೃಗುತುಂಗ ಗಿರಿಯನ್ನು, ವಿತಸ್ತಾ ನದಿಯನ್ನು ಕಂಡು, ಮಿಂದು, ದಾನಗಳನ್ನು ಮಾಡಿದರು.

ಯಮುನಾ ನದಿಯಲ್ಲಿ ಸೇರುವ ವಿತಸ್ತಾ ನದೀತೀರದಲ್ಲಿ ಔಶೀನರನು ಅನೇಕ ಯಜ್ಞಗಳನ್ನು ಮಾಡಿದನು. ಅವನನ್ನು ಪರೀಕ್ಷಿಸಲೆಣಿಸಿ, ಇಂದ್ರಾಗ್ನಿಗಳು ಶ್ಯೇನ-ಕಪೋತರೂಪರಾಗಿ ಬಂದರು. ಪಾರಿವಾಳವು ಗಿಡಿಗದ ಭಯದಿಂದ ನಡುಗುತ್ತಾ, ರಾಜನನ್ನು ಸೇರಿ, ಶರಣಾಗತವಾಯಿತು. ಗಿಡಿಗವು ಅದನ್ನಟ್ಟಿಕೊಂಡು ಬಂದು, ರಾಜನ ತೊಡೆಯಲ್ಲಿ ಕೂತಿದ್ದ, ಅವನಿಂದ ಅಭಯವನ್ನು ಪಡೆದಿದ್ದ ಪಾರಿವಾಳವನ್ನು ನೋಡಿ, ರಾಜನಿಗಿಂತೆಂದಿತು—"ಮಹಾರಾಜ! ಧರ್ಮಾತ್ಮನೆಂದು ಖ್ಯಾತನಾದ ನಿನಗೆ ಅಧರ್ಮವು ಯೋಗ್ಯವಲ್ಲ. ಹಸಿವೆಯಿಂದ ನೊಂದು ನನಗೆ ವಿಹಿತಭಕ್ಷ್ಯವಾದ ಪಾರಿವಾಳವನ್ನು ಬೆನ್ನಟ್ಟಿಬಂದೆನು. ಅದನ್ನು ರಕ್ಷಿಸುವುದು ಧರ್ಮವೆಂದು ತಿಳಿಯ ಬೇಡ! ಬಿಡು ಅದನ್ನು!" ಆ ಮಾತನ್ನಾಲಿಸಿ, ಕರುಣಾಪರನಾದ ಶಿಬಿರಾಜನು "ಶ್ಯೇನ! ನಿನ್ನಿಂದ ಭಯಪಟ್ಟು ಪ್ರಾಣವನ್ನು ರಕ್ಷಿಸೆಂದು, ನನ್ನ ತೊಡೆಯಲ್ಲಿ ಬಂದು ಕೂತಿರುವ ಪಾರಿವಾಳವನ್ನು ದಯಾಹೀನನಾಗಿ, ನಿನಗೆ ಒಪ್ಪಿಸುವುದು ಧರ್ಮವಲ್ಲ. ಪ್ರಾಣಭಯದಿಂದ ಶರಣಾದ ಸಾಧುಪ್ರಾಣಿಗಳನ್ನು ಕೈಬಿಡುವುದು ಮಹಾಪಾಪವು" ಎಂದನು. ಗಿಡಿಗವು "ರಾಜನ್! ಕೇಳು. ಆಹಾರದಿಂದ ಪ್ರಾಣಿಗಳು ಜೀವಿಸಿರುವುವು, ಆಹಾರದಿಂದ ಬೆಳೆಯುವುವು, ಆಹಾರವಿಲ್ಲದಿರೆ ಸಾಯುವುವು. ಅರ್ಥ ವಸನಾದಿ ಗಳಿಲ್ಲದೆ ಇರಬಹುದು. ಆಹಾರವಿಲ್ಲದೆ ಚಿರಕಾಲ ಉಳಿಯಲಾರವು. ಕಪೋತವು ಶ್ಯೇನಾಹಾರವೆಂದು ವಿಹಿತವಾಗಿದೆ. ನನ್ನ ಆಹಾರವನ್ನು ನನಗೆ ಕೊಡದಿರೆ, ನಾನು ಸಾಯುವೆನು. ನನ್ನಿಂದ ಪೋಷಿತರಾಗಿರುವ ಪುತ್ರಕಳತ್ರರೂ ಸಾಯುವರು. ಒಂದು ಕಪೋತವನ್ನು ರಕ್ಷಿಸಿ, ಇಷ್ಟು ಜನರ ಜೀವ ತೆಗೆಯುವುದು ನಿನಗೆ ಧರ್ಮ ವಲ್ಲ. ಧರ್ಮವನ್ನು ಕೆಡಿಸುವ ಧರ್ಮವನ್ನು ಅಧರ್ಮವೆಂದೇ ತಿಳಿ! ಒಂದು ಧರ್ಮಕ್ಕೆ ನಿರೋಧವಾಗದಂತೆ ಇನ್ನೊಂದು ಧರ್ಮವನ್ನು ಮಾಡು! ಅಂತಹ ಧರ್ಮಸಂಕಟವು ಒದಗಿಬಂದಾಗ ಸಣ್ಣದನ್ನು ಬಿಟ್ಟು ದೊಡ್ಡ ಧರ್ಮವನ್ನು ಮಾಡು ವುದು ವಿಹಿತವು. ಕೊಡು ಕಪೋತವನ್ನು! ಉಳಿಸು ನಮ್ಮೆಲ್ಲರನ್ನು" ಎಂದಿತು. ರಾಜನು "ಶ್ಯೇನ! ಬಹು ಧರ್ಮಸಮ್ಮತವಾಗಿ ಮಾತಾಡಿದೆ. ನೀನು ಗರುಡನೋ ಏನು? ನಿನಗೆ ಗೊತ್ತಿಲ್ಲದ ಧರ್ಮವಿಲ್ಲ. ಹೇಳು! ಶರಣಾಗತ ಪರಿತ್ಯಾಗವು ಧರ್ಮವೆನಿಸುವುದೇ? ಪಾರಿವಾಳವನ್ನು ರಕ್ಷಿಸಿ, ನಿನ್ನ ಪ್ರಾಣಹಾನಿಯಾಗದಂತೆ ಬೇರೆ ಆಹಾರವನ್ನು ಕಲ್ಪಿಸಿಕೊಡುವುದು ಸರಿಯಲ್ಲವೇ! ಗೋ ಮಹಿಷ ವರಾಹಾದಿ ಮಾಂಸವನ್ನು ಬೇಕಾದಷ್ಟು ನಿನಗೆ ತರಿಸಿಕೊಡುವೆನು. ಸ್ವೀಕರಿಸು!" ಎಂದನು.

ಆ ಮಾತನ್ನೊಪ್ಪದೆ ಶ್ಯೇನವು "ಮಹಾರಾಜ! ನನಗೆ ಗೋ ಮಹಿಷಾದಿ-ಮಾಂಸವಾವುದೂ ಬೇಡ! ದೇವವಿಹಿತವಾಗಿರುವ ಪಾರಿವಾಳವನ್ನೇ ನನಗೆ ಕೊಡು! ವೃಥಾ ಕಪೋತರಕ್ಷಕನಾಗಿ ಧರ್ಮವನ್ನು ಕೈಬಿಡಬೇಡ. ಜೋಳದ ದಂಟಿನಿಂದ ಕಬ್ಬಿನ ರಸ ಬರುವುದಿಲ್ಲ" ಎಂದು ನುಡಿಯಿತು. ಶಿಬಿಯು "ಪಕ್ಷಿರಾಜ! ಕಪೋತವನ್ನು ಬಿಟ್ಟು ಮತ್ತೇನನ್ನಾದರೂ ಕೊಡುವೆನು. ರಾಜ್ಯವನ್ನು ಬೇಡು! ಧನಾದಿಗಳನ್ನು

ಬೇಡು! ನನ್ನ ಪ್ರಾಣವನ್ನಾದರೂ ಕೊಡುವೆನಾಗಲಿ ಶರಣಾಗತವಾಗಿರುವ ಕಪೋತ ವನ್ನು ಕೊಡಲಾರೆನು" ಎಂದನು. ಆಗ ಶ್ಯೇನವು "ಕಪೋತಸಮಾನ ಮಾಂಸ ವನ್ನು ನಿನ್ನ ಶರೀರದಿಂದ ತೆಗೆದುಕೊಡು!" ಎಂದಿತು. ಉಶೀನರನಿಗೆ ಆ ಮಾತು ಅಮೃತಪ್ರಾಶನವಾಯಿತು. ಆ ಮಹಾನುಭಾವನು ತುಲೆಯನ್ನು ತರಿಸಿ, ಅದರಲ್ಲಿ ಪಾರಿವಾಳವನ್ನಿಟ್ಟು, ಇನ್ನೊಂದು ಕಡೆ ತನ್ನ ಮಾಂಸವನ್ನು ಕಡಿದು ಇಡತೊಡ ಗಿದನು. ಎಷ್ಟೇ ಮಾಂಸವನ್ನಿಡುತ್ತಿದ್ದರೂ ಕಪೋತಸಮವಾಗದೆಹೋದಾಗ, ಶಿಬಿ ರಾಜನು ಮತ್ತಿಷ್ಟು ಸ್ವಮಾಂಸವನ್ನು ಖಂಡಿಸಿ, ತುಲೆಯಲ್ಲಿಟ್ಟನು. ಈ ಘೋರವನ್ನು ಕಂಡು, ರಾಜಾಂತಃಪುರಜನರು, ಅಮಾತ್ಯರು ಹಾಹಾಕಾರ ಮಾಡಿ ಗೋಳಾಡಿದರು. ಅಲ್ಲಿಗೂ ಪಾರಿವಾಳವೇ ಭಾರವಾಗಿರುವುದನ್ನು ಕಂಡು ರಾಜನು ತಾನೇ ತುಲಾ ರೋಹಣಮಾಡಿದನು. ಅವನ ಕೀರ್ತಿಯು ಅತುಲವಾಗಿ, ಸ್ವರ್ಗಾದಿಲೋಕಾ ರೋಹಣ ಮಾಡಿತು.

ಇಂದ್ರಾಗ್ನಿಗಳು ರಾಜನ ಧರ್ಮನಿಷ್ಠೆಗೆ ಮೆಚ್ಚಿ, ನಿಜರೂಪದಿಂದ ಪ್ರತ್ಯಕ್ಷ ರಾದರು. ಇಂದ್ರನಿಂತೆಂದನು—"ರಾಜನ್! ನಾನು ದೇವೇಂದ್ರನು. ಕಪೋತ ರೂಪನಾಗಿ ಬಂದವನೇ ಅಗ್ನಿಯು. ನಾವೀರ್ವರು ನಿನ್ನನ್ನು ಪರೀಕ್ಷಿಸಿದೆವು. ನೀನು ಧರ್ಮವನ್ನು ಬಿಡದೆ, ನಮ್ಮ ಮೆಚ್ಚಿಗೆಯನ್ನು ಗಳಿಸಿರುವೆ. ನಿನ್ನ ಧವಳ ಕೀರ್ತಿಯು ಆಚಂದ್ರಾರ್ಕವಾಗಿ ಬೆಳಗಲಿ! ಅಕ್ಷಯ ಪುಣ್ಯಲೋಕಗಳು ನಿನಗಾಗಿ ಕಾದಿವೆ" ಎಂದು ದೇವರಾಜನು ತನ್ನ ಕರಸ್ಪರ್ಶದಿಂದ ಶಿಬಿಯು ಸರ್ವಾಂಗಸುಂದರ ನಾಗುವಂತೆ ಮಾಡಿದನು. ಇಂತಹ ಶಿಬಿರಾಜನು ಯಜ್ಞಗಳನ್ನು ಮಾಡಿದ ಪವಿತ್ರ ಕ್ಷೇತ್ರವಿದು.

ಇದು ಶ್ವೇತಕೇತುವಿನ ಆಶ್ರಮವು. ಇಲ್ಲಿ ಶ್ರೀಸರಸ್ವತಿಯು ಮನುಜರೂಪ ದಿಂದ ಒಲಿದುಬಂದು ಅವನಿಗೆ ಕಾಣಿಸಿದಳಂತೆ! ಅವನ ಅಕ್ಕನ ಮಗನಾದ ಅಷ್ಟಾವಕ್ರನ ಆಶ್ರಮವಿದು. ಆ ಮಾವ ಅಳಿಯಂದಿರು ಜನಕರಾಜನ ಆಸ್ಥಾನ ದಲ್ಲಿದ್ದ ವಂದಿ ಎಂಬ ದರ್ಪಿತವಿದ್ವಾಂಸನನ್ನು ವಾದದಲ್ಲಿ ಸೋಲಿಸಿ, ಪ್ರಖ್ಯಾತ ರಾದರು. ಬಾಲರಾದರೂ ಅಬಾಲರಂತೆ ವಿದ್ಯಾವಿಶಾರದರಾದ ಮಾತುಲ ಭಾಗಿ- ನೇಯರ ಕಥೆಯನ್ನು ಹೇಳುವೆನು ಕೇಳು!—

ಉದ್ದಾಲಕನೆಂಬುವ ಮುನಿವರನಲ್ಲಿ ಕಹೋಡನೆಂಬುವ ಶಿಷ್ಯನಿದ್ದನು. ಅವನ ವಿದ್ಯಾ ವಿನಯ ಸೌಶೀಲ್ಯಗಳಿಗೆ ಮೆಚ್ಚಿ, ಉದ್ದಾಲಕನು ತನ್ನ ಮಗಳಾದ ಸುಜಾತೆ ಯನ್ನು ಅವನಿಗಿತ್ತು ಮದುವೆ ಮಾಡಿದನು. ಅವಳು ಗರ್ಭವತಿಯಾದಳು. ಒಂದುದಿನ ಗರ್ಭಗತನಾದ ಅರ್ಭಕನು ಅಧ್ಯಯನ ನಿರತನಾಗಿದ್ದ ತಂದೆಗಿಂತೆಂದನು— "ಪಿತ! ರಾತ್ರಿಯೆಲ್ಲವೂ ಬಿಡದೆ ಅಧ್ಯಯನವನ್ನು ಮಾಡುವೆ; ಆದರೆ ನಿನ್ನ ವೇದೋಚ್ಚಾರಣವು ಸಮೀಚೀನವೆನಿಸುವುದಿಲ್ಲ. ನಿನ್ನ ದಯದಿಂದ ಗರ್ಭದಲ್ಲೇ ವೇದವನ್ನೆಲ್ಲ ಚೆನ್ನಾಗಿ ಅರಿತಿರುವೆನು." ಗರ್ಭಗತನಿಂದ ಈ ನಿಂದೆಯನ್ನು ಕೇಳಿದ

ಕಹೋಡನು ಸಿಟ್ಟಾಗಿ "ನನ್ನ ವೇದಾಧ್ಯಯನವನ್ನು ವಕ್ರವೆಂದ ಕಾರಣದಿಂದ ನೀನು ಅಷ್ಟಾವಕ್ರನಾಗು!" ಎಂದು ಮಗನನ್ನು ಶಪಿಸಿದನು. ಎಂಟು ಕಡೆ ವಕ್ರವಾದ ಶರೀರದಿಂದ ಜನಿಸಿದ ಮಗನು ಅಷ್ಟಾವಕ್ರನೆಂದೇ ಪ್ರಸಿದ್ಧನಾದನು.

ಅಷ್ಟಾವಕ್ರನು ಹುಟ್ಟುವ ಮೊದಲೇ, ಗರ್ಭಿಣಿಯಾಗಿದ್ದ ಪತ್ನಿಯು ಪ್ರಾರ್ಥಿಸಿದಂತೆ ಧನವನ್ನು ಬೇಡಿ ತರಲೆಣಿಸಿ, ಕಹೋಡನು ವಿದೇಹ ನಗರವನ್ನು ಸೇರಿದನು. ಜನಕರಾಜನ ಆಸ್ಥಾನದಲ್ಲಿ ವಂದಿಯಿಂದ ವಾದದಲ್ಲಿ ಸೋತನು. ಆಗ ವಂದಿಯು ತನಗೆ ಸೋತ ಇತರ ವಿಪ್ರರನ್ನಂತೆ ಕಹೋಡನನ್ನೂ ನದಿಯಲ್ಲಿ ಮುಳುಗಿಸಿದನು. ಉದ್ದಾಲಕನು ಆ ವಾರ್ತೆಯನ್ನು ಕೇಳಿ ಸುಜಾತೆಗೂ ತಿಳಿಸಿದನು. "ಇಂತಹ ವಿಷಾದವಾರ್ತೆಯನ್ನು ಮುಂದೆ ಹುಟ್ಟುವ ಮಗನಿಗೆ ತಿಳಿಸಬೇಡ" ಎಂದು ಮಗಳಿಗೆ ಕಟ್ಟಪ್ಪಣೆ ಇತ್ತಿದ್ದನು.

ಆದುದರಿಂದ ಅಷ್ಟಾವಕ್ರನು ಉದ್ದಾಲಕನೇ ತನ್ನ ತಂದೆಯೆಂದು ತಿಳಿದು, ಅವನ ಮಗನಾದ ಶ್ವೇತಕೇತುವಿನನ್ನು ಅಣ್ಣನೆಂದು ತಿಳಿದನು. ಹನ್ನೆರಡು ವರ್ಷದವನಿದ್ದಾಗ ಒಂದು ದಿನ ಅಷ್ಟಾವಕ್ರನು ಉದ್ದಾಲಕನ ತೊಡೆಯಮೇಲೆ ಕೂತಿದ್ದನು. ಇದನ್ನು ಸಹಿಸದೆ ಶ್ವೇತಕೇತುವು ಅವನನ್ನು ಹಿಡಿದು ಕೆಳಗಿಳಿಸಿ "ಇವನು ನಿಮ್ಮಪ್ಪನಲ್ಲ ; ನಮ್ಮಪ್ಪ"ನೆಂದು ಗರ್ಹಿಸಿದನು. ಅವನ ವಾಗ್ಬಾಣದಿಂದ ನೊಂದ ಅಷ್ಟಾವಕ್ರನು, ಅಳುತ್ತಾ, ಸುಜಾತೆಯನ್ನು ಸಮೀಪಿಸಿ ನಿಜವನ್ನು ತಿಳಿಸೆಂದನು. ಅವಳು ಸರ್ವವೃತ್ತಾಂತವನ್ನೂ ಅವನಿಗೆ ತಿಳಿಸಿ, ದುಃಖವನ್ನು ತಡೆಯಲಾರದೆ ರೋದಿಸಿದಳು. ತಂದೆಯನ್ನು ನೀರಿನಲ್ಲಿ ಹಾಕಿ ಕೊಂದ ವಂದಿಯನ್ನು ವಾದದಲ್ಲಿ ಸೋಲಿಸಿ, ನೀರಿನಲ್ಲಿ ಮುಳುಗಿಸಿ ಕೊಲ್ಲದೆ ಹಿಂದಿರುಗುವುದಿಲ್ಲವೆಂದು ಅಷ್ಟಾವಕ್ರನು ಶಪಥವನ್ನು ಮಾಡಿ, ಸಮವಯಸ್ಕನೂ ಸೋದರಮಾವನೂ ಆದ ಶ್ವೇತಕೇತುವಿನೊಡನೆ ವಿದೇಹ ನಗರದ ಜನಕನ ಯಜ್ಞಶಾಲೆಯನ್ನು ಸೇರ ಹೊರಟನು.

ಹಾದಿಯಲ್ಲಿ ಜನಕರಾಜನನ್ನು ನೋಡಿ, 'ಹಾದಿ ಬಿಡು' ಎಂದು ಅವನಿಂದ ಆಜ್ಞಾಪಿಸಲ್ಪಟ್ಟ ಅಷ್ಟಾವಕ್ರನು "ರಾಜನ್! ಅಂಧನಿಗೆ ಹಾದಿ ಬಿಡಬೇಕು. ಬಧಿರನಿಗೆ ಹಾದಿ ಬಿಡಬೇಕು. ಸ್ತ್ರೀಯರಿಗೂ ಭಾರವಾಹರಿಗೂ ಮೊದಲು ಹಾದಿ ಬಿಟ್ಟು ತೊಲಗಿರಬೇಕು, ನಿಜ. ಬ್ರಾಹ್ಮಣನ ಸಮೀಪವಲ್ಲದಾಗ ರಾಜನಿಗೆ ಹಾದಿ ಬಿಡಬೇಕು. ಆದರೆ ಬ್ರಾಹ್ಮಣನ ಸಮಕ್ಷಮದಲ್ಲಿ ಬ್ರಾಹ್ಮಣನಿಗೇ ಹಾದಿ ಕೊಡುವುದು ಉಚಿತವಲ್ಲವೇ ರಾಜರಿಗೆ?" ಎಂದು ಕೇಳಿದನು. ರಾಜನು "ಇಂದ್ರನೂ ಕೂಡ ನಿತ್ಯವೂ ಬ್ರಾಹ್ಮಣರಿಗೆ ವಂದಿಸುವನು. ನಿಜ! ಅಗ್ನಿಯಂತೆಯೇ ತೇಜಸ್ವಿಯಾದ ಬ್ರಾಹ್ಮಣನಿಗಾಮಾತು ಇರಲಿ! ನೀನು ಬೇಡಿದ ಮಾರ್ಗವನ್ನು ಬಿಟ್ಟುಕೊಟ್ಟಿರುವೆನು. ಬೇಕಾದಲ್ಲಿ ಹೋಗು!" ಎಂದನು. ಅಷ್ಟಾವಕ್ರನು "ರಾಜನ್! ನಾವು

ನಿನ್ನ ಯಜ್ಞವನ್ನು ನೋಡಲು ಬಂದ ಅತಿಥಿಗಳೆಂದು ತಿಳಿ" ಎನ್ನಲು "ಸರಿ, ಬನ್ನಿ" ಎಂದು ಹೇಳಿ ಜನಕನು ಹೊರಟುಹೋದನು.

ಅಷ್ಟಾವಕ್ರ, ಶ್ವೇತಕೇತು ಯಜ್ಞಶಾಲೆಯ ಪ್ರಧಾನ ದ್ವಾರವನ್ನು ಸೇರಿದರು. ಅವರನ್ನು ದ್ವಾರಪಾಲಕನು ತಡೆದು 'ನಾವು ವಂದಿಯ ಆಜ್ಞೆಯಂತೆ ವರ್ತಿಸುವೆವು. ವಿದ್ಯಾವಿದಗ್ಧರಿಗೆ ಮಾತ್ರ ಈ ದ್ವಾರವು ಪ್ರವೇಶಾರ್ಹವಾಗಿದೆ. ನಿಮ್ಮಂತಹ ಬಾಲಕರಿಗಲ್ಲ' ಎಂದು ನಿಲ್ಲಿಸಿದನು. ಅವರಿಗಿಂತು ಸಂವಾದವಾಯಿತು—

ಅಷ್ಟಾವಕ್ರ—ನಾವೂ ವೃದ್ಧರೇ, ವ್ರತಗಳನ್ನು ಮಾಡಿ, ವೇದಗಳನ್ನು ಪಠಿಸಿ, ಗುರುಶುಶ್ರೂಷೆಯನ್ನು ಮಾಡಿ, ಜ್ಞಾನವನ್ನಾರ್ಜಿಸಿ, ಜಿತೇಂದ್ರಿಯರಾದ ನಾವು ವೃದ್ಧರಲ್ಲವೇ? ವಯಸಾ ಬಾಲರೆಂದು ತಿಳಿದು ಕಡೆಗಣಿಸಬೇಡ! ಸಣ್ಣ ಕೆಂಡವೂ ಸುಡುವುದು.

ದ್ವಾರಪಾಲ—ಮುನಿಸೇವಿತವು, ಮಂತ್ರ ಸ್ತುತಿ ಕ್ರಿಯಾರೂಪವೂ ವಿಶೇಷ ಫಲಪ್ರದವೂ ಕರ್ಮಕಾಂಡದಿಂದಧಿಕವೂ, ಗುಣಪೂರ್ಣ ನಾರಾಯಣ ವಾಚಕವೂ ಆದ ಒಂದು ಅಕ್ಷರವಿದೆ. ಅದಾವುದು ಹೇಳು! ಹುಡುಗನಾಗಿದ್ದೂ ವೃದ್ಧನಂತೆ ಮಾತಾಡಬೇಡ.

ಅಷ್ಟಾವಕ್ರ—ಕಾಯವೃದ್ಧಿಯನ್ನು ಕಾಣದೆ ಹುಡುಗರೆನ್ನುವೆಯಾ? ಶಾಲ್ಮಲಿಯ ಓಟೆ ದೊಡ್ಡದಾದರೇನು? ತುಂಬ ಹತ್ತಿ ಇರುವುದರಿಂದ ನಿಸ್ಸಾರವಾಗಿದೆ. ಫಲಿತವನ್ನು ನೋಡಿ, ಸಾರಾಸಾರಗಳನ್ನು ತಿಳಿ!

ದ್ವಾರಪಾಲ—ವೃದ್ಧರಿಂದ ಕಲಿತು ಬಾಲರು ವಿದ್ಯಾವಂತರಾಗಲು ಕಾಲವು ಬೇಕು. ಅಲ್ಪಕಾಲದಲ್ಲಿ ಮಹಾಜ್ಞಾನವು ಸಿಗಲಾರದು; ಸುಮ್ಮನೆ ಮಾತನಾಡಬೇಡ! ಹೋಗು!

ಅಷ್ಟಾವಕ್ರ—ತಲೆ ನರೆತರೆ ವೃದ್ಧನಲ್ಲ! ಜ್ಞಾನವೃದ್ಧನೇ ವೃದ್ಧನು. ನಮ್ಮಲ್ಲಿ ಸಾಂಗವೇದಾಧ್ಯಯನದಿಂದ ದೊಡ್ಡವನಾಗಬಹುದಾಗಲಿ, ವಯಸ್ಸಿನಿಂದಲ್ಲ, ಧನದಿಂದಲ್ಲ, ಬಂಧುತ್ವದಿಂದಲ್ಲ. ರಾಜಸಭೆಯಲ್ಲಿ ದುಷ್ಟ ವಂದಿಯನ್ನು ನೋಡಲು ಬಂದಿರುವೆನೆಂದು ಸಭಾಲಂಕಾರನಾಗಿರುವ ರಾಜನಿಗೆ ತಿಳಿಸು. ನಮಗೂ ವಂದಿಗೂ ಇರುವ ಮಹದಂತರವನ್ನು ನೋಡಲಿ ಈ ವಿದ್ವತ್ಸಭೆ!

ದ್ವಾರಪಾಲ—ಹತ್ತುವರ್ಷದವನಿಲ್ಲ! ಯಜ್ಞಶಾಲೆಯಲ್ಲಿ ವಂದಿಯಂತಹ ಪ್ರಕಾಂಡ ಪಂಡಿತನೊಡನೆ ವಾದವಂತೆ! ಆಗಲಿ! ಉಪಾಯದಿಂದ ರಾಜನ ದರ್ಶನವನ್ನು ಮಾಡಿಸುವೆನು. ,ಶಾಲೆಯಲ್ಲಿ ಅಲ್ಲ. ರಾಜನು ಹೊರಬಂದಾಗ ಕಾಣು! ಯಜ್ಞಸಭಾ ಪ್ರವೇಶವನ್ನು ನಿನ್ನ ಬುದ್ಧಿಬಲದಿಂದ ಸಂಪಾದಿಸು!

ಇಂತು ನುಡಿದು ದ್ವಾರಪಾಲಕನು ಮುಂಗಳದಲ್ಲಿ ಬಂದು ನಿಂತಿದ್ದ ರಾಜನ ದರ್ಶನವನ್ನು ಅವರಿಗೆ ಕೊಡಿಸಿದನು.

ತತ್ಕ್ಷಣವೇ ಅಷ್ಟಾವಕ್ರನು ಕೈಗಳನ್ನೆತ್ತಿ ಆಶೀರ್ವದಿಸಿ, ರಾಜನಿಗಿಂತೆಂದನು. "ರಾಜನ್ ಜನಕ! ರಾಜರಲ್ಲಿ ಅತ್ಯಂತಸಮೃದ್ಧನು, ಜ್ಞಾನಿಯು ಆದ ನಿನ್ನ ದರ್ಶನದಿಂದ ಕೃತಾರ್ಥನಾದೆನು. ನಿನ್ನ ಯಜ್ಞವು ಯಯಾತಿಯ ಯಾಗದಂತೆ ಬಹು ಶೋಭಾ ಸಂಪನ್ನವಾಗಿದೆ. ನಿನ್ನ ಆಶ್ರಯದಲ್ಲಿರುವ ವಂದಿ ಎಂಬುವನು ಪಾಂಡಿತ್ಯ ಮತ್ತನಾಗಿ, ಬಂದ ಬ್ರಾಹ್ಮಣರನ್ನು ವಾದದಲ್ಲಿ ಸೋಲಿಸಿ, ನೀರಿನಲ್ಲಿ ಹಾಕಿಸುತ್ತಿರುವನಂತೆ! ಅದನ್ನು ಕೇಳಿ, ಶ್ರೀ ನಾರಾಯಣನ ಸರ್ವೋತ್ತಮತ್ವವನ್ನು ಸ್ಥಾಪಿಸಲು ಬಂದಿರುವೆನು. ಎಲ್ಲಿರುವನು ಆ ವಂದಿ? ಸೂರ್ಯನು ಕತ್ತಲನ್ನು ನಾಶಮಾಡುವಂತೆ, ನಾನು ಅವನ ಸೊಕ್ಕು ಮುರಿಯುವೆನು." ರಾಜನಾಮಾತಿಗೆ ನಕ್ಕು "ಪರರ ವಚನಬಲವನ್ನರಿಯದೆ. ಅವರನ್ನು ಸೋಲಿಸುವೆನೆಂಬುದು ಸರಿಯಲ್ಲ. ವಂದಿಯು ಮಹಾವಿದ್ವಾಂಸನಿರುವನು. ಅವನೆದುರಿಗೆ ಅನೇಕ ಬ್ರಾಹ್ಮಣರು ವಾದದಲ್ಲಿ ನಿಲ್ಲಲಾರದೆ ಸೂರ್ಯನೆದುರಿಗೆ ನಕ್ಷತ್ರಗಳಂತೆ ನಿಸ್ತೇಜಸ್ಕರಾಗಿ ಅಳಿಸಿಹೋದರು. ವಂದಿಯನ್ನು ಗೆಲ್ಲುವೆನೆಂದು ಬಂದ ಪಂಡಿತರು ಸಭಾಸಮಯದಂತೆ ಅವನಿಂದ ನೀರಿಗೆಸೆಯಲ್ಪಟ್ಟು, ಮೃತರಾದರು. ಇದರಲ್ಲಿ ಅವನ ತಪ್ಪಿಲ್ಲ. ಯಾರಾದರೂ ಅವನನ್ನು ಸೋಲಿಸಿ, ಅವನನ್ನೇ ನೀರಿಗೆ ಎಸೆಯಬಹುದಾಗಿದೆ" ಎಂದನು.

ಅಷ್ಟಾವಕ್ರನು "ಅವನು ನಿನ್ನ ಆಶ್ರಯಬಲದಿಂದ ಕೊಬ್ಬಿ, ಸಿಂಹನಂತೆ ನಿರ್ಭಯನಾಗಿ ಬಾಯಿಗೆ ಬಂದಂತೆ ಮಾತನಾಡುತ್ತಿರುವನು. ಬರಲಿ ವಂದಿ! ನಿಲ್ಲಲಿ ನನ್ನ ಮುಂದೆ! ಇರುಸು ಮುರಿದ ಭಂಡಿಯಂತೆ ಅವನ ಮಾಯಾವಾದಮತವು ನಿರಾಧಾರವೆಂದು ತೋರಿಸಿಕೊಡುವೆನು" ಎಂದನು. ರಾಜನು "ಇರಲಿ! ನನ್ನ ಪ್ರಶ್ನೆಗೆ ಉತ್ತರವನ್ನು ಹೇಳು! ಆಮೇಲೆ ವಂದಿಯು ಸರತಿ" ಎಂದು ಪ್ರಶ್ನಿಸಿದನು—

"ತ್ರಿಂಶಕದ್ವಾದಶಾಂಶಕವು ಅಂದರೆ ಮುನ್ನೂರ ಅರುವತ್ತು ಅಂಶಗಳುಳ್ಳ, ಚತುರ್ವಿಂಶತಿಪರ್ವವು ಅಂದರೆ ಇಪ್ಪತ್ತುನಾಲ್ಕು ಪರ್ವಗಳುಳ್ಳ, ಮುನ್ನೂರ ಅರುವತ್ತು ಅರೆಗಳುಳ್ಳ, ಚಕ್ರವಾವುದು? ಇದನ್ನು ತಿಳಿದವನೇ ಕವಿಯು!" ಆ ಮಾತಿಗೆ ಅಷ್ಟಾವಕ್ರನು ಇಂತು ಉತ್ತರಿಸಿದನು—"ಕಾಲಚಕ್ರವನ್ನು ಕುರಿತು ನೀನು ಕೇಳುತ್ತಿರುವೆ. ಕಾಲಚಕ್ರವು ಆರು ನಾಭಿಗಳುಳ್ಳದ್ದಾಗಿದೆ. ಹನ್ನೆರಡು ಅರೆಗಳಲ್ಲಿ ಒಂದೊಂದು ಅರೆಯ ಮಧ್ಯದಲ್ಲಿರುವ ಮೂವತ್ತು ನಾಡಿಗಳಿಂದ ಒಟ್ಟು ಮುನ್ನೂರ ಅರುವತ್ತು ದಿನವಾದರೆ ಅದು ಸಾವನ ವತ್ಸರವೆನಿಸುವುದು. ಕಾಲಚಕ್ರದಲ್ಲಿ ಹುದುಗಿರುವ ನಕ್ಷತ್ರಗಳನ್ನು ಒಂದುಸಲ ಪ್ರದಕ್ಷಿಣೆಮಾಡಿದರೆ ಒಂದು ತಿಂಗಳೆನಿಸುವುದು. ಚಂದ್ರಸೂರ್ಯರ ಅತ್ಯಂತ ಸನ್ನಿಪಾತವೇ ಅಮಾವಾಸ್ಯೆ. ಅತ್ಯಂತ ದೂರವೇ ಪೂರ್ಣಿಮೆ. ತಿಂಗಳಿಗೆ ಪೂರ್ಣಿಮಾಮಾವಾಸ್ಯೆಗಳೆಂಬ ಎರಡು ಪರ್ವಗಳಂತೆ ಹನ್ನೆರಡು ತಿಂಗಳಿಗೆ ಇಪ್ಪತ್ತು ನಾಲ್ಕು ಪರ್ವಗಳಾಗುವುವು. ಅಂದರೆ ಸುಮಾರು ಮುನ್ನೂರಐವತ್ತುನಾಲ್ಕು ದಿನಗಳಾದರೆ ಒಂದು ಚಾಂದ್ರಸಂವತ್ಸರವು. ಸೂರ್ಯನು ಹನ್ನೆರಡು ರಾಶಿಗಳನ್ನು ಸುತ್ತಿಬಂದರೆ ಅಂದರೆ ಮುನ್ನೂರ ಅರುವತ್ತು

ಐದೂಕಾಲು ದಿನಗಳಾದರೆ ಒಂದು ಸೌರ ಪರಿವತ್ಸರವು. ಸೌರವತ್ಸರವನ್ನನುಸರಿಸಿ, ಜನನ ಮರಣಾದಿಗಳನ್ನೂ ಚಾಂದ್ರಸಂವತ್ಸರದಂತೆ ತಿಥಿಪರ್ವಹಬ್ಬಗಳನ್ನೂ ಸಾವನ ವರ್ಷದಂತೆ ಗೋಸವಾದಿ ಯಜ್ಞಗಳನ್ನೂ ತಿಳಿದು ಮಾಡುವದು ಜ್ಞಾನಿಲಕ್ಷಣವು. ಕೇವಲ ಕಾಲವನ್ನರಿತರೆ ಸಾಲದು. ತತ್ತತ್ಕಾಲನಿಯಾಮಕನಾಗಿ, ಕಾಲಚಕ್ರಾಯುಧನಾಗಿ, ಕರ್ಮಫಲಪ್ರದನಾದ ಶ್ರೀಹರಿಯನ್ನು ತಿಳಿದವನೇ ಕವಿಯು."

ಆಗ ಜನಕನಿಂತು ಪ್ರಶ್ನಿಸಿದನು—"ರಥಕ್ಕೆ ಕಟ್ಟಿದ ಕುದುರೆಯ ಜತೆಯಂತೆ ಎಡೆಬಿಡದೆ ಬಂದು ಗಿಡಿಗದಂತೆ ಹಠಾತ್ತಾಗಿ ಮೇಲೆರಗುವ ಎರಡು ವಸ್ತುಗಳಾವುವು? ದೇವತೆಗಳಲ್ಲಿ ಅವೆರಡನ್ನು ಸೃಷ್ಟಿಸುವವನಾರು? ಅವೆರಡು ಹುಟ್ಟಿಸುವುದೇನನ್ನು?" ಅದಕ್ಕೆ ಅಷ್ಟಾವಕ್ರನು ಉತ್ತರಿಸಿದನು—"ರಾಜನ್! ಅವೆರಡರ ಹೆಸರು ಕೂಡ ಅಮಂಗಳಕರವಾಗಿದೆ. ಅವು ನಿನ್ನ ಶತ್ರುಗಳ ಮನೆಯಲ್ಲೂ ಪ್ರವೇಶಿಸದಿರಲಿ! ಅಷ್ಟು ಅತ್ಯಂತ ಅಮಂಗಳಕರವಾದ ದುಃಖ-ಮೃತ್ಯುಗಳು ನಿನ್ನ ಮನೆಯನ್ನು ಹೊಗದಿರಲಿ. ವಾತಸಾರಥಿಯಾದ ಮೇಘವು ವಿದ್ಯುತ್ತನ್ನು, ಅಶನಿಯನ್ನು ಪುಟ್ಟಿಸುವಂತೆ, ವಾತ ಸಾರಥಿಯೆಂದರೆ ಮನಸ್ಸು ದುಃಖ-ಮೃತ್ಯುಗಳನ್ನು ಪುಟ್ಟಿಸುತ್ತದೆ. ಬೀಜಾಂಕುರ ನ್ಯಾಯದಿಂದ ಮನಸ್ಸು ವಾಸನಾಬಲದಿಂದ ದುಃಖ-ಮೃತ್ಯುಗಳನ್ನು ತಂದೊಡ್ಡುತ್ತಿದೆ. ದುಃಖದಿಂದ ಮನಸ್ಸು ವಾಸನಾಮಯವಾಗುತ್ತಿದೆ. ವಿದ್ಯುದಶನಿಗಳು ಆಕಾಶದಿಂದ ಬಂದೆರಗುವಂತೆ ದುಃಖ-ಮೃತ್ಯುಗಳು ಶರೀರ ವಿಯೋಗವನ್ನುಂಟು ಮಾಡುತ್ತಿವೆ. ಮನಸ್ಸಿನಲ್ಲೇ ದುಃಖ-ಮೃತ್ಯುಗಳು ಪುಟ್ಟಿ ಮತ್ತೆ ಮನವನ್ನೇ ಸೃಜಿಸುವಂತೆ ವಿದ್ಯುದಗ್ನಿಗಳು ಮೇಘದಿಂದ ಹುಟ್ಟಿ ಮೇಘವನ್ನೇ ಹುಟ್ಟಿಸುತ್ತವೆ. ಆಕಾಶದಿಂದ ವೃಷ್ಟಿ ಬರುವಾಗ ಪುಟ್ಟುವ ವಿದ್ಯುದಶನಿಗಳಂತೆ ಶರೀರದಲ್ಲಿ ಕರ್ಮಫಲ ಭೋಗಕ್ಕಾಗಿ ದುಃಖ-ಮೃತ್ಯುಗಳು ಶ್ರೀಹರಿ ಮುಖ್ಯಪ್ರಾಣರ ಪ್ರೇರಣೆಯಂತೆ ಬರುತ್ತಿವೆ. ದುಃಖವಾಗದಿರಲು ಮನಸ್ಸು ಶ್ರೀಹರಿಚರಣಾರವಿಂದದಲ್ಲಿ ಮಗ್ನವಾಗಿರಿಸು! ಅಲ್ಪಜಲದಲ್ಲಿದ್ದ ಮೀನಿನಂತೆ ಅಲ್ಪವಿಷಯರತನಾಗಿ ದುಃಖವನ್ನು ತಂದೊಡ್ಡುವ ಮನಸ್ಸನ್ನು ತಿಳಿ. ಶಾಟಿಯು ಗಾಳಿಯಲ್ಲಿ ಹಾರಾಡುವಂತೆ ವಿಷಯಗಳ ಆಸೆಯಿಂದ ಚಂಚಲವಾಗಿರುವ ದುಷ್ಟ ಮನವನ್ನು ಮುಖ್ಯಪ್ರಾಣಾನುಗ್ರಹದಿಂದ ಜಯಿಸಿ ದುಃಖರಹಿತನಾಗು."

ರಾಜನು ಕೇಳಿದನು—"ಮಲಗಿದ್ದರೂ ಕಣ್ಣುಮುಚ್ಚದಿರುವುದಾವುದು? ಹುಟ್ಟಿದ ಮೇಲೂ ಅಲ್ಲಾಡದಿರುವುದಾವುದು? ಹೃದಯವೇ ಇಲ್ಲದುದಾವುದು? ವೇಗದಿಂದ ಬೆಳೆಯುವುದು ಏನು?" ಅಷ್ಟಾವಕ್ರನು ಉತ್ತರವನ್ನಿತ್ತನು—"ಮೀನು ಮಲಗಿದ್ದರೂ ಕಣ್ಣನ್ನು ಮುಚ್ಚದಿರುವುದು. ಗುಡ್ಡು ಹುಟ್ಟಿಯೂ ಅಲ್ಲಾಡದು. ಕಲ್ಲಿಗೆ ಹೃದಯ ವಿಲ್ಲ. ನದಿಯು ವೇಗದಿಂದ ಬೆಳೆದು ಹೆಚ್ಚಾಗುವುದು. ಇಷ್ಟೇ ಅಲ್ಲ. ಕೇಳು! ಮಹಾಮತ್ಸ್ಯನಾದ ಶ್ರೀಶನು ಜಾಗ್ರತ್‌ಸ್ವಪ್ನಗಳಲ್ಲಿ ಶ್ರಾಂತನಾದ ಜೀವನ ನಿದ್ದೆ ಗೋಸ್ಕರ ತಾನು ಅವನ ಶರೀರೇಂದ್ರಿಯ ವ್ಯಾಪಾರ ನಿಲ್ಲಿಸಿ, ಮಲಗಿದ ಜೀವನ

ಸುಷುಪ್ತಿದಶಾ ಪ್ರೇರಕನಾಗಿದ್ದರೂ ಕಣ್ಣು ಮುಚ್ಚದೆ ಮಲಗಿರುವನು. ಪ್ರಳಯದಲ್ಲಿಯು ಶ್ರೀನಾರಾಯಣನು ಯೋಗನಿದ್ರೆಯಲ್ಲಿ ನಮ್ಮಂತೆ ಕಣ್ಣುಮುಚ್ಚದೆ ಮಲಗಿರುವನು. ಹುಟ್ಟಿದಮೇಲೂ ಬ್ರಹ್ಮಾಂಡವು ಚೇಷ್ಟಾಯುಕ್ತವಾಗುವುದಿಲ್ಲ. ಶ್ರೀಹರಿಯೇ ಜೀವಜಡಾತ್ಮಕ ಬ್ರಹ್ಮಾಂಡವನ್ನು ಸೃಜಿಸಿ, ತಚ್ಚೇಷ್ಟಕನಾಗಿರುವನು. ಕಲ್ಲಿನಂತಹ ಶರೀರಕ್ಕೆ ಪ್ರಿಯಾಪ್ರಿಯ ಜ್ಞಾನವು ಶ್ರೀಶನ ಪ್ರೇರಣೆಯಿಂದ, ಜೀವ-ಸಂಯೋಗವಿಲ್ಲದಿದ್ದಾಗ ಹೃದಯಕ್ರಿಯೆಯೇ ಇಲ್ಲ. ಅಸಂಗನಾದ ಯೋಗಿಯು ಹೃದಯದ ಶೋಕಮೋಹಗಳನ್ನು ದಾಟಿ, ಜೀವನ್ಮುಕ್ತನೆನಿಸಿರುವನು. ಅಭಿಮಾನ-ನದಿಯು ಅಹಂಕಾರ ಮಮಕಾರವೆಂಬ ಎರಡು ದಡಗಳಲ್ಲಿ ಹರಿದು ಹೆಚ್ಚಾಗುತ್ತದೆ. ಅಂತೆಯೇ ಭಕ್ತಿನದಿಯು ಜ್ಞಾನಕರ್ಮಗಳಿಂದ ಹೆಚ್ಚಾಗಿ ಹರಿಯುವುದು.

ಅಷ್ಟಾವಕ್ರನ ಪ್ರತ್ಯುತ್ತರಕ್ಕೆ ಮೆಚ್ಚಿ, ಜನಕರಾಜನು "ನೀನು ಮನುಜಮಾತ್ರನಲ್ಲ, ದೇವತೆಗಳಲ್ಲಿ ಒಬ್ಬನಿದ್ದಂತಿದೆ. ಬಾಲನಾದರೂ ಜ್ಞಾನವೃದ್ಧನಾದ ನಿನ್ನಂತಹ ವಚನರಚನಾಚತುರನನ್ನು ನಾನು ಕಂಡಿಲ್ಲ. ಆಗಲಿ! ನಿನಗೆ ವಂದಿಯು ಕಾಣಿಸುವನು. ವಾದಕ್ಕೆ ಸಿದ್ಧನಾಗು" ಎಂದನು.

## ತೀರ್ಥಯಾತ್ರೆ—ಅಷ್ಟಾವಕ್ರ-ವಂದಿ ಸಂವಾದ

ಆಗ ವಂದಿಯು ಅಷ್ಟಾವಕ್ರನಿಗೆ ದರ್ಶನವಿತ್ತನು. ಅವನನ್ನು ನೋಡಿ ಅಷ್ಟಾವಕ್ರನು ತನ್ನ ತಂದೆಯ ಗತಿಯನ್ನು ನೆನೆದು, ಸಿಟ್ಟಿನಿಂದ ಇಂತೆಂದನು— "ಉರಿಯುವ ಪ್ರಳಯಾಗ್ನಿಗೆ ಸಿಲುಕಿ ಬತ್ತಿಹೋಗುವ ನದಿಯಂತೆ, ನನ್ನ ಮುಂದೆ ನಿನ್ನ ದುರ್ವಾದವು ನಿಲ್ಲಲಾರದು. ಸೋತವರು ನೀರಿನಲ್ಲಿ ಸಾಯಬೇಕೆಂಬ ನಿಬಂಧನೆ ಉಂಟೋ ಇಲ್ಲವೋ, ಹೇಳು. ಸುಮ್ಮನೇಕಿರುವೆ? ವಾದದಲ್ಲಿ ಸ್ಥಿರವಾಗಿ ನಿಲ್ಲು! ಮಲಗಿದ್ದ ಹುಲಿಯನ್ನು ಮೀಸೆ ಕಿತ್ತಿ ಎಬ್ಬಿಸಿದಂತೆ, ನನ್ನ ತಂದೆಯನ್ನು ಅವಮಾನಿಸಿ, ಈಗ ನನ್ನನ್ನೂ ಅವಮಾನಿಸಲಿರುವೆ. ದರ್ಪದಿಂದ ಕಣ್ಣು ಕಾಣದ ಮೂರ್ಖನು ಪರ್ವತವನ್ನು ಮುಷ್ಟಿಯಿಂದ ಗುದ್ದಿದನಂತೆ! ಅವನ ಕೈ ಮುರಿಯಿತಾಗಲಿ ಪರ್ವತಕ್ಕೆ ನೋವಾಯಿತೇ? ಹೇಳು! ಪರ್ವತಗಳಲ್ಲಿ ಮೈನಾಕನಂತೆ, ರಾಜರಲ್ಲಿ ಶ್ರೇಷ್ಠನಾದ ಜನಕರಾಜನ ಸಮ್ಮುಖದಲ್ಲಿ ವಾದ ನಡೆಯಲಿ! ನಾನು ಪ್ರಶ್ನೆ ಕೇಳಲಾ? ಅಥವಾ ನಿನ್ನ ಪ್ರಶ್ನೆಯನ್ನು ಉತ್ತರಿಸಲಾ?"

ಆಗ ವಂದಿಯು ಅದ್ವೈತವನ್ನು ಮಂಡಿಸಿ ಇಂತೆಂದನು—"ಒಬ್ಬನೇ ಅಗ್ನಿಯು ಬಹುರೂಪನಾಗಿರುವನು. ಸೂರ್ಯನಂತೆ ಪ್ರಕಾಶಕನಾದ ಬ್ರಹ್ಮನಿಗೆ ಮತ್ತೊಬ್ಬ ಪ್ರಕಾಶಕನಿಲ್ಲ. ಇಂದ್ರನಂತೆ ಇತರ ಶತ್ರುಸಂಹಾರಕನಾಗಿ—ಬೇರೆ ಯಾವ ತತ್ವವು ಇಲ್ಲದಂತೆ ತಾನೇತಾನಾಗಿರುವನು. ಪಿತೃಪ್ರಭುನಾದ ಯಮನಂತೆ ಪಾಲನ ಸಂಹರಣ ಕರ್ತನೂ ಅವನೇ. ಇಂದ್ರ ಸೂರ್ಯ ಯಮ ವಹ್ನಿಗಳೆಲ್ಲರೂ ಅವನೇ. ಅವನು ಬ್ರಹ್ಮನು. ಬ್ರಹ್ಮನೊಬ್ಬನೇ ಇರುವನು. ಮತ್ತಾರೂ ಇಲ್ಲ."

ಅಷ್ಟಾವಕ್ರನು ನಕ್ಕು ಅವನಿಗಿಂತು ನುಡಿದನು—"ಪಕ್ಷಿಗಳೆರಡು, ಕೇಳು! ಒಂದು ಪಕ್ಷಿ ಕರ್ಮಫಲವನ್ನು ಉಂಡೂ ಬಡವಾಗುತ್ತದೆ. ಇನ್ನೊಂದು ಉಣ್ಣದೆ ಆನಂದರೂಪವೂ ಪ್ರಕಾಶವೂ ಆಗಿದೆ. ಇಂದ್ರಾಗ್ನಿಗಳು ಭಿನ್ನಧರ್ಮರು. ಇಂದ್ರನ ವರ್ಷಣಶಕ್ತಿ, ಅಗ್ನಿಯ ದಹನಶಕ್ತಿ, ಯಮನ ಸಂಹರಣಶಕ್ತಿ, ಸೂರ್ಯನ ಪ್ರಕಾಶಕ ಶಕ್ತಿ—ಎಲ್ಲರ ಶಕ್ತಿಗಳೂ ಅವನ ಅಧೀನ. ಅವನೇ ಅಲ್ಲ ಜೀವರು; ಜೀವರು ಬೇರೆ, ಶ್ರೀಹರಿ ಬೇರೆ! ನಾರದ-ಪರ್ವತರೆಂಬ ದೇವರ್ಷಿಗಳಿಬ್ಬರು; ನಾಸತ್ಯ ದಸ್ರರೆಂಬ ಅಶ್ವಿನೀ ದೇವರಿಬ್ಬರು; ರಥದ ಚಕ್ರಗಳೆರಡು; ದಂಪತಿಗಳಿಬ್ಬರು; ಒಬ್ಬನೇ ಅಲ್ಲ. ಸ್ವಪ್ನಾದಿದಶಾ ಪ್ರೇರಕನಾದ ಶ್ರೀಹರಿ ಸ್ವತಂತ್ರನು. ಜನನಾದಿ ವಿಕಾರಗಳು, ಸ್ವಪ್ನಾದ್ಯವಸ್ಥೆಗಳು ಉಳ್ಳ ಜೀವರು ಅಸ್ವತಂತ್ರರು. ಜೀವೇಶರು ಭಿನ್ನರು."

ವಂದಿಯು ಮೀಮಾಂಸಕಮತವನ್ನು ಅವಲಂಬಿಸಿ, ಇಂತೆಂದನು—"ಪುಣ್ಯ-ಕರ್ಮದಿಂದ ದೇವ ಋಷಿ ಮಾನವ ಜನ್ಮಗಳು ಬರುವುವು. ಪಾಪಕರ್ಮದಿಂದ ನರಕ ತಿರ್ಯಕ್ ಸ್ಥಾವರಗಳೆಂಬ ಮೂರು ಜನ್ಮಗಳು ಬರುವುವು. ಸ್ವರ್ಗದಿಂದಲಾಗಲಿ ನರಕದಿಂದಲಾಗಲಿ ಬಂದವನು ತನ್ನ ಪುಣ್ಯಶೇಷದಿಂದಲೋ ಅಥವಾ ಪಾಪಶೇಷ ದಿಂದಲೋ ಯುಕ್ತನಾಗೇ ಜನಿಸುವನು. ಪರ್ಜನ್ಯ, ಮೇಘ, ವರ್ಷಧಾರೆಗಳಿಂದ ಬಂದು ಓಷಧಿಗಳಲ್ಲಿ ನಿಂದು ರೇತಸ್ಸೇಚಕನಾದ ತಂದೆಯಿಂದ ತಾಯಿಯನ್ನು ಸೇರಿ, ಅಲ್ಲಿ ಬೆಳೆದು ಜನಿಸುವನೆಂದು ಮೂರು ವೇದಗಳು ಸಾರುತ್ತಿವೆ. ವೇದವು ಆಶ್ರಮ-ತ್ರಯಕ್ಕೆ ತಕ್ಕ ಕರ್ಮವನ್ನು ಮಾತ್ರ ನಿರೂಪಿಸುತ್ತಿದೆ. ವಿಪ್ರ ಕ್ಷತ್ರಿಯ ವೈಶ್ಯ ರೆಂಬ ತ್ರಿವರ್ಣದವರೇ ಯಜ್ಞಕರ್ಮಾಧಿಕಾರಿಗಳು. ಪ್ರಾತರ್ಮಾಧ್ಯಂದಿನಸಾಯಂ ಸವನಗಳಲ್ಲಿ ವಿಹಿತಕರ್ಮವನ್ನು ಮಾಡಿದರೆ, ಕಾಲಕ್ರಮದಿಂದ ಕರ್ಮವೇ ಸ್ವರ್ಗ ಭೂ ನರಕಗಳೆಂಬ ಫಲಗಳನ್ನು ತಂದುಕೊಡುವುದು. ದೇವನು ಸುಮ್ಮನೇ ನೋಡುತ್ತಿರು ವನು. ಅವನು ಫಲದಾತನಲ್ಲ. ಕರ್ಮವೇ ಫಲದಾಯಿಯು. ಸ್ವಪ್ನ ಜಾಗ್ರತ್ ಸುಷುಪ್ತಿಗಳೆಂಬ ಅವಸ್ಥೆ ಬಿಟ್ಟರೆ ಬೇರೊಂದಿಲ್ಲ."

ಆಗ ಅಷ್ಟಾವಕ್ರನು "ಬ್ರಹ್ಮಜ್ಞಾನಿಗಳಾದವರಿಗೆ ನಾಲ್ಕು ಆಶ್ರಮಗಳಿವೆ. ಮೋಕ್ಷಾಶ್ರಮವಾದ ಸನ್ಯಾಸವೆಂದರೆ ಕಾಷಾಯಧಾರಣ, ಪತ್ನೀಸುತ ಪರಿತ್ಯಾಗ ಮಾತ್ರವಲ್ಲ. ಕಾಮ್ಯಕರ್ಮ ತ್ಯಾಗವೇ ನಿಜವಾದ ಸನ್ಯಾಸವು. ನೀನು ಹೇಳಿದ ಫಲಮಾತ್ರೋದ್ದೇಶಕವಾದ ಪ್ರವೃತ್ತಿಕರ್ಮದಷ್ಟು ಅಧರ್ಮವಿನ್ನೊಂದಿಲ್ಲ. ಕರ್ಮ-ಫಲಪ್ರದಾತನು ಸ್ವತಂತ್ರನಾದ ಶ್ರೀಹರಿಯು. ಜಡಕರ್ಮ ತಾನಾಗಿ ಫಲವನ್ನೀಯ ಲಾರದು. ನಿವೃತ್ತಿಕರ್ಮಾನುಷ್ಠಾನವು ದುಷ್ಕರ್ಮಪರಿಹಾರಕವೂ, ಹರಿಪ್ರೀತಿ-ಜನಕವೂ ಆಗಿದೆ. ಅದನ್ನು ನಾಲ್ಕು ವರ್ಣದವರೂ ಮಾಡಬಹುದು. ಶೂದ್ರರಿಗೆ ಜ್ಞಾನಾಧಿಕಾರವಿದೆ. ವೇದಾಧಿಕಾರವಿಲ್ಲ. ವೇದಸಮಾನಾರ್ಥಬೋಧಕವಾದ ಭಾರತಾದಿ ಸಚ್ಛಾಸ್ತ್ರವು ಪಂಚಮ ವೇದವೆನಿಸಿದೆ. ಅದು ಸ್ತ್ರೀಶೂದ್ರ ಬ್ರಹ್ಮಬಂಧು ಗಳಿಗೆಂದೇ ರಚಿತವಾಗಿದೆ. ಕರ್ಮವನ್ನೇ ಮಾಡದಿದ್ದರೂ ಹರಿಯನ್ನು ನೋಡುವ

ಅಸಂಪ್ರಜ್ಞಾತಸಮಾಧಿರೂಪ ತುರ್ಯಾವಸ್ಥೆ ಇದೆ. ಆಗ ಕರ್ಮಲೋಪದಿಂದ ಬಾಧಕವಿಲ್ಲ. ಕರ್ಮವೆಲ್ಲವೂ ಅಕಾರ, ಉಕಾರ, ಮಕಾರ, ನಾದಗಳೆಂಬ ನಾಲ್ಕು ಅಂಶಗಳುಳ್ಳ ಓಂಕಾರವಾಚ್ಯನಾದ ಶ್ರೀಹರಿಯ ಪ್ರೇರಣೆಯಂತೆ ಸೂತ್ರನಾಮಕ ಮುಖ್ಯಪ್ರಾಣನು ತ್ರಿವಿಧ ಜೀವರಿಂದ ಮಾಡಿಸಿ, ಅವರಿಗೆ ತ್ರಿವಿಧಫಲವನ್ನು ಕೊಡಿಸುವನು. ಚತುರ್ದಿಕ್ಕುಗಳಿಗೆ ಅಭಿಮಾನಿಯಾದ ಶ್ರೀದೇವೀಶನು ಚತುರ್ವಿಧ ಪುರುಷಾರ್ಥಗಳನ್ನು ಕೊಡುವನು. ಕರ್ಮದಿಂದ ಮೋಕ್ಷವಿಲ್ಲ. ಕೇವಲ ಮನಶ್ಶುದ್ಧಿ ಜನಕವಾಗಿ ಸತ್ಕರ್ಮವು ಹರಿಸಮರ್ಪಿತವಾದಾಗ, ಜ್ಞಾನಿಜನಸಂಗವನ್ನಿತ್ತು ಸಲಹುವದು. ಜ್ಞಾನದಿಂದ ಶ್ರೀಹರಿಪ್ರಸಾದ, ಅದರಿಂದ ಮೋಕ್ಷ. ಮೋಕ್ಷವೇ ಮಹಾ-ಪುರುಷಾರ್ಥ" ಎಂದನು.

ವಂದಿಯು "ತುರೀಯನೆಂಬ ಪರಮಾತ್ಮನ ಆವಶ್ಯಕತೆ ಇಲ್ಲ, ಕೇಳು! ಗಾರ್ಹ-ಪತ್ಯ, ದಕ್ಷಿಣ, ಆಹವನೀಯ, ಸಭ್ಯ, ಆವಸಥ್ಯವೆಂಬ ಐದು ಅಗ್ನಿಗಳು. ಪಂಕ್ತಿ ಛಂದಸ್ಸಿಗೆ ಎಂಟೆಂಟಕ್ಷರದ ಐದು ಪಾದಗಳು. ಛಂಧಸ್ಸನ್ನು ಹೇಳುತ್ತಾ, ಅಗ್ನಿಯಲ್ಲಿ ಮಾಡುವ ಯಜ್ಞಗಳೂ ದರ್ಶ, ಪೂರ್ಣಮಾಸ, ಚಾತುರ್ಮಾಸ್ಯ, ಪಶು, ಸೋಮ ಗಳೆಂದು ಐದು ವಿಧ. ಶಬ್ದಾದಿಪಂಚಕವದ್ನು ಕರ್ಣಾದಿ ಪಂಚೇಂದ್ರಿಯಗಳಿಂದ ಸ್ವೀಕರಿಸಿ, ಮನಸ್ಸಿನಿಂದ ಮಾತ್ರ ಪಂಚವಿಧ ಸುಖದುಃಖವನ್ನು ಅನುಭವಿಸುವೆವು. ಮನಸ್ಸಿನ ಹೊರತು ಬೇರೆ ಜೀವನಿಲ್ಲ. ಮನಸ್ಸು ಎಂಬ ಉಪಾಧಿಯಲ್ಲಿ ಕಲ್ಪಿತನಾದ ಜೀವನು ಮಿಥ್ಯಾ. ಬ್ರಹ್ಮನೇ ಜೀವನು. ಮನಸ್ಸಿನಲ್ಲಿ ಕಲ್ಪಿತನಾದ ಚಿತಿರೂಪ ಜೀವನನಾಶವೇ ಮೋಕ್ಷ. ಇದಕ್ಕೆ ಯಾರ ಪ್ರಸಾದವೂ ಬೇಕಿಲ್ಲ. ವಿಷಯಗಳೆಂಬ ಐದು ನದಿಗಳಲ್ಲಿ ಬಿದ್ದು ತೊಳಲಾಡುವಾಗ ಬ್ರಹ್ಮನೇ ಜೀವನೆನಿಸಿ—ನಾನೇ ಬ್ರಹ್ಮನೆಂದು ತಿಳಿಯಲು ಸಮೂಲನಾಶವನ್ನು ಹೊಂದಿ, ಬ್ರಹ್ಮನೇ ಆಗುವನು" ಎಂದನು.

ಅಷ್ಟಾವಕ್ರನು, "ಮನಸ್ಸು ಎಂಬುದು ಆರನೇ ಇಂದ್ರಿಯ. ಅದು ಜೀವನಲ್ಲ. ಜೀವನಿಗೆ ಅನಾದ್ಯವಿದ್ಯಾಕಾಮಕರ್ಮಗಳೆಂಬ ಅಜ್ಞಾನ. ಬ್ರಹ್ಮನಿಗೆ ಅಜ್ಞಾನವೆಂತು ಬಂತು, ಹೇಳಬಲ್ಲೆಯಾ? ಪ್ರಳಯದ ಅನುಭವವು ಬರುವ್ರದರಿಂದ ಚಿತಿ-ಭಿನ್ನನಾದ ಜೀವನು ಸಿದ್ಧನಾದನಲ್ಲವೇ? ಸುಷುಪ್ತಿಯಲ್ಲಿ ಸುಖಾನುಭೂತಿಯು ಜೀವನಿಗೆ, ಮನಸ್ಸಿಗಲ್ಲ. ಮನಸ್ಸಿಗೂ ಆಗ ಲಯವೆಂದು ತಿಳಿ! ಅಸ್ವತಂತ್ರಕರ್ತನಾದ ಜೀವನ ಮನ ಆದಿ ಆರಿಂದ್ರಿಯಗಳಿಂದ ಷಡಾಧಾನಗಳನ್ನು ಮಾಡಿ ಆರು ಋತುಗಳ ಕಾಲಚಕ್ರವನ್ನು ತಿರುಗಿಸಿ, ಋತುಧರ್ಮಗಳಂತೆ ಕರ್ಮಾನುರೂಪ ಫಲವನ್ನೀವ ಸ್ವತಂತ್ರಕರ್ತನಾದ ಶ್ರೀಹರಿಯು, ಸಾಕ್ಷಿಯಾಗಿರುವನು. ಅವನ ಪ್ರಸಾದವಿಲ್ಲದಿರೆ ಮೋಕ್ಷವಿಲ್ಲ. ಮೋಕ್ಷವೆಂದರೆ ಸ್ವರೂಪನಾಶವಲ್ಲ. ಸರ್ವಾನಿಷ್ಟ ನಿವೃತ್ತಿ ವಿಶಿಷ್ಟ ಸ್ವಯೋಗ್ಯ ಸ್ವರೂಪಾನಂದಾವಾಪ್ತಿಯೇ ಮೋಕ್ಷವು. ಅನಾದಿನಿತ್ಯನಾದ ಜೀವನು ಕಲ್ಪಿತನಲ್ಲ. ಅವನಿಗೆ ಬಂದಿರುವ ಬಂಧವೂ ಮಿಥ್ಯೆಯಲ್ಲ. ಸತ್ಯವಾದ

*

ಬಂಧರೂಪಸಂಸಾರವು, ರಾಜ ಪ್ರಸಾದದಿಂದ ಕಾರಾಗಾರ ಬಂಧದಂತೆ, ನಾಶವಾಗುವುದು" ಎಂದು ಅವನ ನಿರೀಶ್ವರ, ಮಿಥ್ಯಾವಾದಗಳನ್ನು ನಿರಾಕರಿಸಿದನು.

ಆಗ ವಂದಿಯು ತರ್ಕಮತದಂತೆ ಇಂತೆಂದನು—"ಗ್ರಾಮ್ಯಸುಖರತವಾಗಿರುವ ಇಂದ್ರಿಯಗಳು ಏಳು—ಪಂಚೇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ. ಇವುಗಳ ವಿಷಯಗಳೂ ಏಳು—ಶಬ್ದಾದಿಗಳು, ಮಂತವ್ಯ, ಬೋದ್ಧವ್ಯಗಳು. ಅಲ್ಲಿ ಆಸಕ್ತರಾದ ಪುರುಷರೂ ಏಳು ವಿಧ ಪಶುಗಳು. ಐಹಿಕ ಪಾರತ್ರಿಕ ವಿಷಯಮಗ್ನ ಜೀವರನ್ನು ಗ್ರಾಮ್ಯ ವನ್ಯ ಪಶುಗಳೆಂಬರು. ಪರಮಾತ್ಮನ ಜ್ಞಾನವಾಗದಂತೆ ಮುಚ್ಚುವ ಏಳು ಛಂದಗಳು ಅಂದರೆ ಅಭಿಮಾನಗಳು. ಅವರನ್ನು ಕರೆದುಕೊಂಡು ಹೋಗುವ ಪ್ರಾಣಋಷಿಗಳು ಏಳು ಜನ; ಏಳು ತಂತಿಗಳ ವೀಣೆಯಂತೆ ಬಾರಿಸಿದಾಗ ಸುಖವನ್ನೀವ ಏಳು ಇಂದ್ರಿಯವೃತ್ತಿಗಳು, ಬಾರಿಸದಾಗ ಸುಮ್ಮನಿರುವಂತೆ ಅವು ಮಲಗಿರುವುವು. ಇಂತು ಜೀವನೇ ಕರ್ತನಾಗಿರುವುದರಿಂದ ಅವನೇ ಭೋಕ್ತನೂ ಆಗಿರುವನು. ಪರಮಾತ್ಮನೆಂಬುವನು ಉದಾಸೀನನು."

ಅಷ್ಟಾವಕ್ರನು—"ಹಾಗಲ್ಲ, ಕೇಳು! ಅಹಂಕಾರವೆಂಬ ಇನ್ನೊಂದು ಅಂತಃಕರಣವಿದೆ. ಅಂತಃಕರಣದಲ್ಲಿದ್ದು ತದ್ಭಿನ್ನನಾದ ಜೀವನು, ತನ್ನ ಮನೋಬುದ್ಧಿ ಅಹಂಕಾರ ಪಂಚೇಂದ್ರಿಯಗಳೆಂಬ ಗೋಣೀಚೀಲಗಳಲ್ಲಿ ವಿಷಯಗಳೆಂಬ ನೂರಾರು ಸೇರು ಕಾಳನ್ನು ತುಂಬಿಕೊಂಡು, ವಿಷಯಗಳಿಗಾಗಿ ಎಂಟು ದಿಕ್ಕಿಗೂ ಓಡುತ್ತಿರುವನು. ಅವನು ಸ್ವತಂತ್ರಕರ್ತನಲ್ಲ. ಶಲಭರಂತೆ ಜೀವರನ್ನು ಸೃಜಿಸಿ, ಪಾಲಿಸಿ, ಸಂಹರಿಸುವ ಶ್ರೀ ಪರಮಾತ್ಮನು ಶರಭನೆನಿಸಿ, ಹಿಂಸಿಸುವುದರಿಂದ ಸಿಂಹವೆನಿಸಿದ ಅದ್ವೈತ ತತ್ವವನ್ನು ನಾಶಪಡಿಸಿ, ಅಷ್ಟವಸುಗಳನ್ನು ಅಂದರೆ ಅಷ್ಟೈಶ್ವರ್ಯವನ್ನು ಕೊಟ್ಟು ಕಾಪಾಡುವನು. ಎಂಟು ಕೋಣಗಳುಳ್ಳ ಯೂಪದಿಂದ ಬಿಡಿಸಿ, ಅಂದರೆ ಎಂಟು ವಿಧ ಅಜ್ಞಾನವನ್ನು ನಾಶಪಡಿಸುವನು. ಜೀವನು ಕರ್ಮಕರಣದಲ್ಲಿ ಅಧಿಕಾರವುಳ್ಳವನು. ಫಲವನ್ನು ತಾನಾಗಿ ಪಡೆಯುವ ಅಧಿಕಾರ ಅವನಿಗಿಲ್ಲ. ಶ್ರೀಹರಿಯು ಉದಾಸೀನನೆಂದರೆ ಕಲ್ಲಿನಂತೆ ಸುಮ್ಮನೆ ನೋಡುತ್ತಿರುವನೆಂದು ತಿಳಿಯಬೇಡ! ಯೋಗ್ಯತಾತಿರೇಕವಾಗಿ ಪಕ್ಷಪರಿಗ್ರಹವನ್ನು ಮಾಡದಿರುವನಾದುದರಿಂದ ಅವನನ್ನು ಉದಾಸೀನನೆಂಬರು. ಅಂದರೆ ನಿಷ್ಪಕ್ಷಪಾತಿ ಎಂದರ್ಥ; ಅವನಿಗೆ ವೈಷಮ್ಯವಿಲ್ಲ. ಅವನು ನಿಷ್ಕರುಣನೂ ಅಲ್ಲ! ಸೃಷ್ಟಿ-ಸ್ಥಿತಿ-ಲಯ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳೆಂಬ ಎಂಟನ್ನೂ ಶ್ರೀಹರಿಯೇ ಸ್ವತಂತ್ರನಾಗಿ ಮಾಡಿ, ಜೀವವೀಣೆಯನ್ನು ಬಾರಿಸಿ, ಅದರಿಂದ ಬರುವ ಸ್ವರಸಹಿತ ಶ್ರುತಿಸಮ್ಮತವು ಅನುರಾಗ ಸಮಂಚಿತವು, ಮನೋಲಯಫಲಕವು ಆದ ಸಂಗೀತವನ್ನು ಕೇಳಿ, ಅವನಿಗೆ ಮುಕ್ತಿಯನ್ನಿತ್ತು ಉದ್ಧರಿಸುವನು" ಎಂದು ನಿರೂಪಿಸಿದನು.

ವಂದಿಯು ಮತ್ತೆ ಇಂತೆಂದನು—"ಪ್ರಧಾನವೇ ಜಗತ್ಕಾರಣವಾಗಿದೆ. ಕೇಳು! 'ಉಶಂತಸ್ತ್ವಾನಿ ಧೀಮಹಿ' ಎಂಬ ಋಕ್ಕನ್ನು ಮೂರಾವರ್ತಿ ಉಚ್ಚರಿಸಿದರೆ ಮೂರು

ಸವಿತ್ಕಗಳಾದ ಒಂಬತ್ತು ಸಾಮಿಧೇನ್ಯಗಳು—ಅಗ್ನಿಯನ್ನು ಉದ್ದೀಪಿಸುವ ಋಕ್ಕುಗಳು ಆಗುವುವು. ಅಂತೇ ಪ್ರಕೃತಿಯು ಒಂದೇ ಆದರೂ ಸತ್ವ ರಜಸ್ ತಮೋಗುಣ ಪರಸ್ಪರ ಸಮ್ಮಿಲನದಿಂದ ಒಂಭತ್ತು ರೂಪವಾಗಿ, ಆರು ಪ್ರಾಕೃತಿಕ, ಮೂರು ವೈಕೃತಿಕವೆಂದು ಒಂಭತ್ತು ವಿಧ ಸೃಷ್ಟಿಯನ್ನು ಮಾಡುವುದು. ಒಂಭತ್ತಕ್ಷರದ ನಾಲ್ಕು ಪಾದಗಳಿಂದ ಬೃಹತೀ ಎಂಬ ಛಂದಸ್ಸು ಉದಯಿಸುವಂತೆ, ಒಂಭತ್ತೇ ಆದ ಸಂಖ್ಯಾವಾಚಕ ಶಬ್ದಗಳಿಂದ ಎಲ್ಲ ಅಂಕೆಗಳೂ ಜನಿಸುವಂತೆ, ಒಂಭತ್ತೂ ವಿಧವಾದ ಪ್ರಕೃತಿಯಿಂದಲೇ ಜಗತ್ತು ಉದಯಿಸುತ್ತದೆ. ಪರಮೇಶ್ವರನು ಕೇವಲ ಸಾಕ್ಷಿಯು."

ಅಷ್ಟಾವಕ್ರನು ಇಂತು ನುಡಿದನು—"ಹತ್ತು ದಿಕ್ಕುಗಳು. ನೂರುಗಳು ಹತ್ತಾದರೆ ಒಂದು ಸಾವಿರ. ಆದುದರಿಂದ ಹತ್ತೆಂಬ ಸಂಖ್ಯೆಯೂ ಉಂಟು. ಗರ್ಭವತಿಯರು ಹತ್ತು ತಿಂಗಳು ಗರ್ಭವನ್ನು ಧರಿಸಿರುವರು. 'ಇಂದ್ರೋಮಾಯಾಭಿಃ ಪುರುರೂಪ ಈಯತೇ'—ಎಂಬ ಶ್ರುತಿಯಂತೆ ಪರಮಾತ್ಮನು ತನ್ನಿಚ್ಛೆಯಂತೆ ತಾನೇ ಅನೇಕ ರೂಪನಾಗಿ ಅವತರಿಸುವನು. ಅವನಿಗೆ ಪ್ರಕೃತಿ ಕಾರಣವಲ್ಲ. ಪ್ರಕೃತಿಯ ಆವರಣವು ಅವನಿಗೆ ಅಲ್ಲ, ಜೀವನಿಗೆ; ಪ್ರಧಾನವು ಜಗತ್ತಿಗೆ ಉಪಾದಾನಕಾರಣವು. ಅದರ ತ್ರಿಗುಣಗಳಿಂದ ರಚಿತವಾದವು ಭೌತಿಕ ಶರೀರಗಳು. ಶರೀರದ ಹತ್ತು ದಿಕ್ಕುಗಳಂತಿರುವ ಹತ್ತು ಇಂದ್ರಿಯಗಳಿಗೆ ಸಿಕ್ಕು, ಅವು ಸೆಳೆದಾಡಿದಂತಾಡುವವನು ಜೀವನು; ಪರಬ್ರಹ್ಮನಲ್ಲ. ಪ್ರಕೃತಿಯು ತಾನಾಗಿ ತನ್ನನ್ನು ಒಂಭತ್ತಾಗಿ ಸೃಜಿಸಿಕೊಳ್ಳಲಾರದು. ಹಾಲು ತಾನಾಗಿ ಮೊಸರಾಗದು. ಇನ್ನೊಬ್ಬ ಚೇತನ ಹೆಪ್ಪುಹಾಕಿದರೇನೇ ಅದು ಮೊಸರಾಗುವುದು. ಪ್ರಕೃತಿಯ ಪರಿಣಾಮಗಳೆಲ್ಲವೂ ಪರಮಾತ್ಮನ ಅಧೀನವಾಗಿವೆ. ಅವನೇ ಸ್ವತಂತ್ರನು, ನಿರ್ವಿಕಾರನು ಆದ ನಿಮಿತ್ತಕಾರಣನು. ಅವನಿಗೆ ಅಜ್ಞಾನವಿಲ್ಲ. ಇತರರ ಅಜ್ಞಾನವನ್ನು ಕಳೆಯುವನು. 'ಅನಾನುಭೂತೀಃ ಅವಧೂನ್ವಾನಃ' ಎಂಬ ಶ್ರುತಿಯು ಇದನ್ನೇ ಹೇಳುತ್ತಿದೆ. ದೇವ ದೈತ್ಯರೆಂದು ಜೀವರು ದ್ವಿವಿಧ. ನಿತ್ಯ ಸಂಸಾರಿಗಳ ಮಾತು ಆಮೇಲೆ. ದೈತ್ಯರ ಸಂಖ್ಯೆ ಹೆಚ್ಚು, ದೇವತೆಗಳ ಸಂಖ್ಯೆ ಕಡಿಮೆ. ದೈತ್ಯರ ಸಖ್ಯವನ್ನು ದೂರ ಮಾಡುವನು ಶ್ರೀಹರಿ; ತನ್ನ ಭಕ್ತರಿಗೆ ದೇವಸಂಗವನ್ನಿತ್ತು ಉದ್ಧರಿಸುವನು. ದೇವತೆಗಳ ಸಖ್ಯವೆಂದರೆ ಶಮದಮಾದಿ ದಶ ಗುಣಗಳು. ದೈತ್ಯಸ್ನೇಹವೆಂದರೆ ಕಾಮಕ್ರೋಧಾದಿ ದಶ ದೋಷಗಳು. ದಶದುಷ್ಟಸಂಗದಿಂದ ಬಂದ ನಾನು-ನನ್ನದು ಎಂಬ ಅವಿದ್ಯೆಯನ್ನು ನಿವಾರಿಸಿ ಜೀವನಿಗೆ ಪರಮಾತ್ಮ ತತ್ವಜ್ಞಾನವನ್ನಿತ್ತು, ಶ್ರೀಹರಿಯು ಅನಾದಿಕಾಲ ಪ್ರವೃತ್ತ-ಕರ್ಮವಾಸನೆಗಳಿಂದ ದೂರಮಾಡಿ ಜೀವನನ್ನು ಪೊರೆಯುವನು. ಹತ್ತಾರು ಜನ ಉಪದೇಶಕರಲ್ಲಿದ್ದು, ಹತ್ತಿತರ ಸುಜನರ ಮಾರ್ಗದಲ್ಲಿ ನಡೆಸಿ, ಹತ್ತು ಪುರಗಳಿಂದ ಬಿಡಿಸಿ, ಮುಕ್ತಿಸುಖವನ್ನೀವ ಶ್ರೀಹರಿಯೇ ಜಗತ್ಕಾರಣನು. 'ಪರಾ ಪೂರ್ವೇಷಾಂ ಸಖ್ಯಾವೃಣಕ್ತಿಃ ಪೂರ್ವೀರಿಂದ್ರಃ ಶರದಸ್ತರ್ತರೀತಿ' ಎಂಬ ಶ್ರುತಿಗಳು ಈ ವಿಷಯವನ್ನು ನಿರೂಪಿಸುವುವು."

ವಂದಿಯು "ಜೀವಪಶುಗಳನ್ನು ಕಟ್ಟುವ ಇಂದ್ರಿಯಗಳು ಹನ್ನೊಂದು. ಪ್ರತ್ಯೇಕ ಹನ್ನೊಂದು ಪಾಶಗಳಿಂದ ಬಿಗಿಸಲ್ಪಟ್ಟ ಜೀವನಿಗೆ ಹರ್ಷಶೋಕಗಳು ಉಂಟು. ದೇವಜೀವರಿಗೇ ಹರ್ಷಶೋಕಗಳಿವೆ ಅಂದಮೇಲೆ ಇನ್ನು ಮನುಜರ ಪಾಡೇನು ? ಜೀವನಂತೆ ದೇಹದಲ್ಲಿರುವ ಈಶನಿಗೂ ಹರ್ಷಶೋಕಗಳಾಗಲಿ ! ಜೀವನಂತೆ ಈಶನಿಗೂ ರಾಗದ್ವೇಷಗಳು ಉಂಟಾದುದರಿಂದ ಜೀವಭಿನ್ನನಲ್ಲ" ಎಂದು ಜೀವಸಮಾನಭೋಗವನ್ನು ದೇವನಿಗೆ ಹೇಳಿದನು.

ಅಷ್ಟಾವಕ್ರನು "ಸಂವತ್ಸರವೆಂದರೆ ಹನ್ನೆರಡು ಮಾಸಗಳು. ಜಗತೀಛಂದಸ್ಸಿಗೆ ಹನ್ನೆರಡು ಅಕ್ಷರಗಳು. ಹನ್ನೆರಡು ದಿನಗಳಿಗೆ ಯಜ್ಞವು ಮುಗಿಯುವುದು. ಹನ್ನೆರಡು ಜನ ಆದಿತ್ಯರಲ್ಲವೇ ? ಕೇಳು ! ಮಾಸಗಳು ಬೇರೆ ಬೇರೆ, ಸಂವತ್ಸರಗಳು ಬೇರೆ ಬೇರೆ, ಅಕ್ಷರಗಳು ಬೇರೆ ಬೇರೆ, ಸಮುದಾಯದಿಂದ ಏರ್ಪಡುವ ಜಗತೀ-ಛಂದಸ್ಸು ಎಂಬುವದು ಬೇರೆ. ಆದರೆ ಮೂಢರು ಮಾಸಗಳೇ ವರ್ಷವೆಂದೂ, ಅಕ್ಷರಗಳೇ ಜಗತೀಛಂದವೆಂದೂ ತಿಳಿದಂತೆ ಜೀವೇಶರು ದೇಹದಲ್ಲಿ ಒಂದೆಡೆ ಇರುವ ಮಾತ್ರದಿಂದ ಅವರೀರ್ವರೂ ಒಂದೇ ಎಂದು ತಿಳಿದು, ಈಶನೂ ಸಮನಾದ ದುಃಖಿಯಾಗಲಿ ಎನ್ನುವರು. ಅದು ಸರಿಯಲ್ಲ. ಸ್ವತಂತ್ರನಾದ ಶ್ರೀಹರಿಗೆ ದುಃಖವಿಲ್ಲ. ತರಂಗವೇ ಸಮುದ್ರವಾಗಲಾರದು. ಸಮುದ್ರದಲ್ಲಿ ತರಂಗಗಳಿವೆ ಎಂದು ಜೀವೇಶರ ಸಮಾನಸ್ಥಾನವನ್ನೂ, ಸಮಾನಭೋಗರಾಹಿತ್ಯರೂಪವಾದ ಭೇದವನ್ನೂ ಮಿಥ್ಯಾವಾದಿಗಳೂ ಒಪ್ಪಿರುವರು. 'ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ' ಎಂಬ ಶ್ರುತಿಯು ಆನಂದಮಯನಾದ ಶ್ರೀಶನು ಆನಂದೋದ್ರೇಕದಿಂದ ಲೀಲೆಗಾಗಿ, ಜೀವರ ಸ್ವರೂಪಸಿದ್ಧಿಗಾಗಿ, ಅವರನ್ನು ಸೃಜಿಸುವನೆಂದು ಸಾರುತ್ತಿದೆ. ಶುಷ್ಕತರ್ಕದಿಂದ ಆವನಿಗೆ ದುಃಖವಿದೆ ಎಂದು ಸಾಧಿಸಲು ಹೋಗಿ ದುಃಖಿಯಾಗಬೇಡ ! ಇಂದ್ರಿಯಗಳನ್ನು ಜಯಿಸಿ ಅಂತರ್ಯಾಮಿಯನ್ನು ಕಂಡ ಸನತ್ಕುಮಾರಾದಿಗಳು ಹನ್ನೆರಡು ಜನ ಜ್ಞಾನಿಗಳು (ದ್ವಾದಶೈತೇ ವಿಜಾನೀಮಃ ಧರ್ಮಂ ಭಾಗವತಂ ಭಟಾಃ-—ಭಾಗ-೬) ಪ್ರಸಿದ್ಧರಾಗಿರುವರು. ಹನ್ನೆರಡು ದಿನ ಅಂದರೆ ವ್ರತಗಳು. ಅವು—ಧರ್ಮ, ಸತ್ಯ, ದಮ, ತಪ, ಅಮಾತ್ಸರ್ಯ, ಹ್ರೀ, ತಿತಿಕ್ಷಾ, ಅನಸೂಯಾ, ಯಜ್ಞ, ದಾನ, ಧೃತಿ, ಯಮಗಳೆಂಬವು ಬ್ರಹ್ಮಜ್ಞಾನಿಗೆ ಅನುಷ್ಠೇಯವೆನಿಸಿವೆ"—ಎಂದನು.

ವಂದಿಯು 'ತ್ರಯೋದಶೀ ತಿಥಿಯು ಪ್ರಶಸ್ತವೆಂದು ಹೇಳಲ್ಪಟ್ಟಿದೆ. ಮಹೀ-ಮಂಡಲದಲ್ಲಿ ತ್ರಯೋದಶ ದ್ವೀಪಗಳಿವೆ" ಎಂದು ಅರ್ಧಶ್ಲೋಕವನ್ನು ಹೇಳಿ, ಮುಂದೆ ತೋಚದೆ ಸುಮ್ಮನಾದನು. "ದೇಶ-ಕಾಲಗಳಿಂದಲೇ ಬರುವ ಚಿತ್ತ-ಶುದ್ಧಿಯು ಪುರುಷಪ್ರಯತ್ನದಿಂದ ಬರಲಾರದು. ಕಾಲದಲ್ಲಿ ತ್ರಯೋದಶೀ ಶುದ್ಧ. ಅದರಂತೆ ದೇಶದಲ್ಲಿ ಬ್ರಹ್ಮಲೋಕವೇ ಶುದ್ಧ. ಅದು ಹದಿಮೂರು ಲೋಕಗಳ ಮೇಲಿದೆ. ತ್ರೇತಾ ದ್ವಾಪರ ಕಲಿಗಳು ದೋಷಯುಕ್ತವಾದುದರಿಂದ ಕೃತಯುಗವೇ ಶುದ್ಧ. ಆಗಲೇ ಬ್ರಹ್ಮಜ್ಞಾನವಾಗುವುದು. ಭೂಃ ಆದಿ ಷಟ್ ಲೋಕಗಳಲ್ಲಿಯೂ

ಅಂದರೆ ಭೂಃ, ಭುವಃ, ಸ್ವಃ, ಮಹಃ, ಜನಃ, ತಪೋಲೋಕಗಳಲ್ಲಿಯೂ ಅತಲ, ವಿತಲ, ಸುತಲ, ತಲಾತಲ, ರಸಾತಲ, ಮಹಾತಲ, ಪಾತಾಳವೆಂಬ ಏಳು ಲೋಕ ಗಳಲ್ಲಿಯೂ ಇರುವ ಜನರಿಗೆ ಸರಿಯಾದ ಬ್ರಹ್ಮಜ್ಞಾನವಾಗಲಾರದು. ಆದುದರಿಂದ ತ್ರಯೋದಶಿಯು ಶುದ್ಧವಾದರೂ ದೇಶ ದುಷ್ಟವಾಗಿದೆ. ಆದುದರಿಂದ ಆತ್ಮತತ್ವ-ವಿಚಾರದಿಂದ ಶ್ರೇಯಸ್ಸೆನಿಸದು. ಸಾಕಿನ್ನು ಚರ್ಚೆ!" ಎಂದು ನುಡಿದ ವಂದಿಗೆ ಅಷ್ಟಾವಕ್ರನು ಮುಂದಿನ ಅರ್ಧಶ್ಲೋಕದಿಂದ ಇಂತೆಂದನು—"ಹದಿಮೂರು ದಿನ ವೆಂದರೆ ಹತ್ತು ಇಂದ್ರಿಯಗಳು, ಮನೋಹಂಕಾರ ಬುದ್ಧಿಗಳನ್ನು, ಅಸಂಗನಾದ ಪರಮಾತ್ಮನ ಸಂಗದಲ್ಲಿಟ್ಟು, ದಿನಗಳನ್ನು ಕಳೆದು, ಅಂದರೆ ಭೋಗಗಳನ್ನು ಸರ್ವವೂ ಶ್ರೀಹರಿಗರ್ಪಿಸಿ, ಹದಿಮೂರು ಛಂದಸ್ಸುಗಳೆಂದರೆ ಜೀವಾಚ್ಛಾದಕವಾಗಿರುವ ಅಜ್ಞಾನವೃತ್ತಿಗಳನ್ನು ಕಳೆದುಕೊಂಡು, ಶುದ್ಧನಾದ ಜೀವನು ಶ್ರೀಹರಿಪ್ರಸಾದಕ್ಕೆ ಪಾತ್ರನಾಗುವನು.

"ಜಗದ್ವೃಕ್ಷ ಒಂದು, ಅಲ್ಲಿರುವ ಪಕ್ಷಿಗಳೆರಡು ಜೀವೇಶರು. ಜಗತ್ತು ಸತ್ವ-ರಜ-ಸ್ತಮೋಗುಣಗಳಿಂದ ಮಾಡಲ್ಪಟ್ಟಿದೆ. ಜೀವರ ವಿಧಗಳು ಮೂರು, ಆಗುವ ಪುರುಷಾರ್ಥಗಳು ನಾಲ್ಕು, ಸ್ವೀಕರಿಸುವ ಇಂದ್ರಿಯ ವಿಷಯಗಳು ಐದು, ಜೀವ ವಿಕಾರಗಳು ಆರು, ಅವನ ಶರೀರ ಧಾತುಗಳು ಏಳು, ತಿಳಿಯಬೇಕಾದ ಶ್ರೀಹರಿಲೀಲೆ ಗಳು ಎಂಟು, ಮಾಡಬೇಕಾದ ಭಕ್ತಿಯ ಕಾರ್ಯಗಳು ಒಂಭತ್ತು, ಕೆಲಸ ಮಾಡುವ ಇಂದ್ರಿಯಗಳ ವೃತ್ತಿಗಳು ಹತ್ತು, ಇಂದ್ರಿಯಗಳು ಹನ್ನೊಂದು, ಕಾಲದ ಅಳತೆಯಾದ ಮಾಸಗಳು ಹನ್ನೆರಡು, ತಿಥಿಗಳಲ್ಲಿ ಶ್ರೇಷ್ಠ ಹದಿಮೂರು, ಲೋಕಗಳು ಹದಿನಾಲ್ಕು, ತಿಥಿಗಳು ಹದಿನೈದು, ಕಲೆಗಳು ಹದಿನಾರು, ಇವೆಲ್ಲಕ್ಕೂ ಪ್ರಭುವಾದ ಶ್ರೀಶನ ಮಹಿಮೆ ಅನಂತ. ಅವನನ್ನು ಯಥಾಮತಿ ವರ್ಣಿಸಿದ ನನ್ನ ಜ್ಞಾನ ಅತ್ಯಲ್ಪ"— ಎಂದು ಅಷ್ಟಾವಕ್ರನು ಸುಮ್ಮನಾದನು.

ಮಹಾಯಜ್ಞ ವಿಚಕ್ಷಣ ವರುಣನ ಮಗನಾದ ಸೂತನು (ವಂದಿಯು) ವಾದ ವಿರಮಣವನ್ನು ಮಾಡಿ, ಅಧೋಮುಖನಾಗಿ ಚಿಂತಾಕುಲನಾಗಿರುವುದನ್ನೂ, ಅಷ್ಟಾವಕ್ರನ ವಿಜಯವನ್ನೂ ಕಂಡು, ಸಭೆಯೆಲ್ಲವೂ ಹರ್ಷದಿಂದ ಅಷ್ಟಾವಕ್ರನನ್ನು ಪೊಗಳಿತು. ವಿಪ್ರರು ಪ್ರಾಂಜಲಿಪುಟರಾಗಿ, ಮುನಿಬಾಲಕರನ್ನು ಪ್ರಶಂಸಿಸಿದರು. ಅಷ್ಟಾವಕ್ರನು ವಂದಿಯನ್ನು ಮುಣುಗಿಸಿ, ಅವನಿಗೆ ತಕ್ಕ ಶಿಕ್ಷೆಯನ್ನು ನೀಡಲು ಜನಕರಾಜನನ್ನು ಬೇಡಿದನು. ಆಗ ವಂದಿಯು "ನಾನು ರಾಜಾ ವರುಣನ ಮಗನು. ಅಲ್ಲಿ ಹನ್ನೆರಡು ವರ್ಷಗಳ ಸತ್ರಯಾಗವು ನಡೆದಿತ್ತು. ಅದನ್ನು ನೋಡಿಸಲು ಬ್ರಾಹ್ಮಣರನ್ನು ವಾದಮಿಷದಿಂದ ಸೋತರೆಂದೆನಿಸಿ, ನೀರಿನಲ್ಲಿಳಿಸಿ, ತಂದೆಯ ಯಜ್ಞ ಶಾಲೆಗೆ ಕಳಿಸಿರುವೆನು. ಅವರು ಸತ್ತಿಲ್ಲ, ಈಗ ಬರುವರು. ಪೂಜ್ಯನಾದ ಅಷ್ಟಾ ವಕ್ರನಿಗೆ ಕೃತಜ್ಞನಾಗಿರುವೆನು. ನನ್ನನ್ನು ನೀರಿನಲ್ಲೇ ಹಾಕಿರಿ, ಚಿಂತೆಯಿಲ್ಲ, ನಮ್ಮ ತಂದೆಯನ್ನು ಸೇರುವೆನು" ಎಂದನು.

ಆಗ ಅಷ್ಟಾವಕ್ರನು ಕುಪಿತನಾಗಿ "ನೀನು ವರುಣನ ಮಗನೇ ಇರಬಹುದು. ಆದರೆ ಬಾಯಿಯ ಚಮತ್ಕಾರದಿಂದ ಬ್ರಾಹ್ಮಣರನ್ನು ಗೆದ್ದು, ನಿನಕಿಂತಲೂ ಪಂಡಿತ ರಾದವರನ್ನು ಕೂಡ ನೀರಿನಲ್ಲಿ ಮುಳುಗಿಸಿದೆ. ವಾದಸಮಯದಂತೆ ನಿನ್ನನ್ನು ನೀರಿ ನಲ್ಲಿ ಹಾಕಿಬಿಡುವುದು ಉಚಿತವಾಗಿದೆ. ಸುಳ್ಳು ನುಡಿಯುವವರನ್ನು ಅಗ್ನಿಯು ಸುಡದೆ ಬಿಡನು. ಬಾಲಕನೆಂದು ತಿಳಿದು ನನ್ನನ್ನು ಅವಮಾನಿಸಿ, ವಂದಿಯನ್ನು ರಕ್ಷಿಸುವ ಜನಕರಾಜನಿಗೆ ಹಾನಿಯಾಗದಿರದು" ಎಂದು ಜನಕನನ್ನು ನೋಡಿ, "ಕೇಳಿಸಿತೇ ನನ್ನ ಮಾತು? ಅಂಕುಶದಿಂದ ತಿವಿದರೂ ಚಲಿಸದಿಹ ನಿನ್ನನ್ನು ಮದಿಸಿದ ಆನೆ ಎಂದು ತಿಳಿಯಲಾ? ಅಥವಾ ಸಾರವಿಲ್ಲದ ಸೋರೇಕಾಯಿ ಎಂದು ನಿಶ್ಚಯಿಸಲಾ?" ಎಂದು ಶಾಪೋದ್ಯುಕ್ತನಾದ ಅಷ್ಟಾವಕ್ರನಿಗೆ ಹೆದರಿ, ಜನಕ ರಾಜನು ವಂದಿಯನ್ನವನಿಗೊಪ್ಪಿಸಿದನು. ಅಷ್ಟಾವಕ್ರನು "ಇವನ ಜೀವನದಿಂದ ಪ್ರಯೋಜನವಿನ್ನಿಲ್ಲ. ವರುಣನ ಮಗನಾದರೆ ಮುಣುಗಲಿ ನೀರಿನಲ್ಲಿ!" ಎಂದನು.

ವಂದಿಯು ನಿರ್ಭಯನಾಗಿ ತಾನು ಮುಣುಗಿಸಿದ ವಿಪ್ರರನ್ನೆಲ್ಲ ಮೇಲಕ್ಕೆ ಕರೆಸಿದನು. ವರುಣಪೂಜಿತರಾಗಿ ಬಂದ ಬ್ರಾಹ್ಮಣರೆಲ್ಲ ಜನಕರಾಜನ ಸಭೆಗೆ ಬಂದರು. ಅವರಲ್ಲಿ ಕಹೋಡನೂ ಇದ್ದನು. ಅವನು ಅತ್ಯಾನಂದದಿಂದ ಮಗ ನನ್ನಪ್ಪಿ, "ತಂದೆ ಮಾಡಲಾರದ್ದನ್ನು ಮಗನು ಮಾಡಿದನು. ಇದಕ್ಕೇ ಅಲ್ಲವೇ ಪುತ್ರರನ್ನು ಬಯಸುವುದು? ಜನಕರಾಜ! ಲೋಕದಲ್ಲಿ ಅಪಂಡಿತನಿಗೆ ಪಂಡಿತನು, ಅಬಲನಿಗೆ ಬಲಿಯು ಜನಿಸುವರಲ್ಲವೆ? ಶತ್ರುಂಜಯನಾದ ನಿನಗೆ ಮಂಗಳವಾಗಲಿ! ನಿನ್ನ ಯಜ್ಞದಲ್ಲಿ ಮುಖ್ಯಪ್ರಾಣವಲ್ಲಭನ ಮಹಿಮೆಯು ಉಕ್ಥಸಾಮದಿಂದ ಗಾನ ಮಾಡಲ್ಪಡುತ್ತಿದೆ. ಸಾಕ್ಷಾತ್ತಾಗಿ ದೇವತೆಗಳು ಬಂದು ಸೋಮಭಾಗವನ್ನು ಸ್ವೀಕರಿ ಸುತ್ತಿರುವರು. ನೀನೇ ಧನ್ಯನು!" ಎಂದು ಹೊಗಳಿದನು.

ಆಗ ವಂದಿಯು ರಾಜನಿಗೂ ವಿಪ್ರರಿಗೂ ವಂದಿಸಿ, ನೀರಿನಲ್ಲಿ ಮುಳುಗಿದನು. ಅವನು ವರುಣಲೋಕವನ್ನು ಸೇರಿದನು. ಇಂತು ಅಷ್ಟಾವಕ್ರನು, ವಂದಿಯನ್ನು ಜಯಿಸಿ, ತಂದೆಯನ್ನು ತಂದು, ತಾಯಿಗೆ ಒಪ್ಪಿಸಿ, ಕೃತಾರ್ಥನಾದನು. ಕಹೋಡನು ಪ್ರೀತನಾಗಿ ಅಷ್ಟಾವಕ್ರನನ್ನು ಆಶ್ರಮದ ಮಧುವಿಲಾ ನದಿಯಲ್ಲಿ ಸ್ನಾನ ಮಾಡೆಂದನು. ಸ್ನಾತನಾದ ಅಷ್ಟಾವಕ್ರನು, ವಕ್ರರಹಿತನಾಗಿ ಸರ್ವಾಂಗಸಮುಪೇತನಾಗಿ ಬಂದನು. ಆ ನದಿಯು ಅಂದಿನಿಂದ ಸಮಂಗಾ ಎಂದು ಪ್ರಖ್ಯಾತವಾಯಿತು. ಅಂತಹ ಪವಿತ್ರಾಶ್ರಮವಿದು.

ಇದು ಕರ್ದಮಾಶ್ರಮವು. ಸಮಂಗಾ ನದಿಯಲ್ಲಿ ಸ್ನಾನಮಾಡಿ, ಇಂದ್ರನು ವೃತ್ರಹತ್ಯಾಪಾಪದಿಂದ ಪರಿಮುಕ್ತನಾದನು. ಮೈನಾಕ ಪರ್ವತವಿದು. ಇಲ್ಲಿ ಪುತ್ರರಿ ಗಾಗಿ ಅದಿತಿಯು ಬಹ್ವನ್ನವನ್ನು ತಯಾರಿಸಿದಳಂತೆ. ಇಲ್ಲಿ ನೋಡು ಗಂಗೆ! ಇದು ಸನತ್ಕುಮಾರಾಶ್ರಮವು. ಭೃಗುತುಂಗ ಪರ್ವತವನ್ನು ನೋಡು! ಇದು ಉಷ್ಣಗಂಗೆ!

ಇದು ಸ್ಥೂಲಶಿರನ ಆಶ್ರಮ. ಇಲ್ಲಿ ಬಂದವನು ಕ್ರೋಧ, ದರ್ಪಗಳಿಂದ ರಹಿತ ನಾಗುವನು. ಇದು ರೈಭ್ಯಾಶ್ರಮವು. ರೈಭ್ಯಭಾರದ್ವಾಜರು ಇಲ್ಲಿ ವಸಿಸುತ್ತಿದ್ದರು.

## ತೀರ್ಥಯಾತ್ರೆ—ಯವಕ್ರೀತನ ಕಥೆ

ಲೋಮಶನು ಧರ್ಮರಾಜನಿಗಿಂತೆಂದನು—

ಈ ರೈಭ್ಯಾಶ್ರಮದಲ್ಲಿ ಭರದ್ವಾಜ ರೈಭ್ಯರೆಂಬುವ ಮುನಿವರರು ಸ್ನೇಹಿತರಾಗಿ ಜೀವಿಸುತ್ತಿದ್ದರು. ರೈಭ್ಯನಿಗೆ ಅರ್ವಾವಸು ಪರಾವಸುಗಳು ಸುತರು. ಯವಕ್ರೀತನು ಭರದ್ವಾಜ ಪುತ್ರನು. ರೈಭ್ಯನೂ, ಅವನ ಸುತರೂ ಪಂಡಿತರಾಗಿ, ಶಿಷ್ಯಸಂಪತ್ತಿ ಯಿಂದ ಪ್ರಖ್ಯಾತರಾಗಿದ್ದರು. ಭಾರದ್ವಾಜನು ಕರ್ಮಠನೂ ತಪಸ್ವಿಯೂ ಆಗಿದ್ದನು. ರೈಭ್ಯನಿಗೆ ನಡೆಯುತ್ತಿದ್ದ ಸತ್ಕಾರವನ್ನು ಕಂಡು, ಯವಕ್ರೀತನು ಅಸೂಯಾದುಃಖ ಪರೀತನಾದನು. ವೇದಜ್ಞಾನವನ್ನು ಪಡೆಯಲು ಅವನು ಘೋರ ತಪಸ್ಸನ್ನು ಮಾಡಿದನು. ಇಂದ್ರನು ಅವನನ್ನು ಕಂಡು ತಪಃಕಾರಣವನ್ನು ಕೇಳಿದನು.

ಯವಕ್ರೀತನು "ದೇವರಾಜ! ಓದದಿದ್ದರೂ ವೇದಗಳೆಲ್ಲವೂ ನನಗೂ ನಮ್ಮ ತಂದೆಗೂ ಪ್ರತಿಭಾತವಾಗಬೇಕೆಂದು ತೀವ್ರತಪವನ್ನು ಕೈಕೊಂಡಿರುವೆನು. ಓದಿ ತಿಳಿಯಲು ಬಹುಕಾಲ ಬೇಕು! ನಾನು ಬೇಗನೆ ತಪೋಬಲದಿಂದ ವೇದವಿದ್ಯೆ ಯನ್ನು ಸಂಪಾದಿಸುವೆನು" ಎಂದನು. ಇಂದ್ರನು ನಕ್ಕು, "ಅದಾಗದು. ಗುರು ಮುಖದಿಂದ ಬಂದ ವಿದ್ಯೆಯೇ ಫಲಿಸುವುದು. ಹೋಗಿ ಗುರುಗಳಲ್ಲಿ ಓದು!" ಎಂದು ಹೇಳಿ, ಅಂತರ್ಹಿತನಾದನು.

ಯವಕ್ರೀತನು ಮಳೆಯಲ್ಲಿ ನೆಂದು, ಬಿಸಿಲಲ್ಲಿ ಒಣಗಿ, ಮಹಾತೀಕ್ಷ್ಣವಾದ ತಪಸ್ಸನ್ನು ಮಾಡಿದನು. ಇಂದ್ರನು ಗುರುಮುಖವಿಲ್ಲದ ವೇದ ವಿದ್ಯಾಸಂಪಾದನವು ಅಶಕ್ಯವೆಂದು ವಾರಿಸಿದನು. ಯವಕ್ರೀತನು ಬಿಡದೆ ತನ್ನ ಶರೀರ ಮಾಂಸ ಖಂಡ ಗಳನ್ನು ಹೋಮಿಸಲು ನಿಶ್ಚಯಿಸಿದನು. ಆಗ ಇಂದ್ರನು ಅವನಿಗೆ ಬುದ್ಧಿ ಕಲಿಸಲು ಒಂದು ಉಪಾಯವನ್ನು ಹೂಡಿದನು—

ಇಂದ್ರನು ಅತ್ಯಂತ ವೃದ್ಧಬ್ರಾಹ್ಮಣರೂಪನಾಗಿ, ಯವಕ್ರೀತನು ಸ್ನಾನ ಮಾಡುವ ಭಾಗೀರಥಿಯ ದಡದ ರೇವಿನಲ್ಲಿ ಕೂತು, ಮರಳಿನ ಕಣಗಳಿಂದ ಸೇತು ವನ್ನು ಕಟ್ಟುತ್ತಿದ್ದನು. ಅವನು ಹಾಕುವ ವಾಲುಕಾಕಣಗಳು ನಿಲ್ಲದೆ, ಹರಿದು ಹೋಗುತ್ತಿದ್ದವು. ಇದನ್ನು ನೋಡಿ ಯವಕ್ರೀತನು ಗಟ್ಟಿಯಾಗಿ ನಕ್ಕು "ಮುದುಕ! ಗಂಗೆಗೆ ಮರಳಿನಿಂದ ಸೇತುವೆ ಕಟ್ಟಲಾಗುವುದೆ ! ವ್ಯರ್ಥ ಪ್ರಯತ್ನವಿದು, ಬಿಡು!" ಎಂದನು. ಇಂದ್ರನೂ ನಕ್ಕು "ಮುನಿಕುಮಾರ! ಓದದೆಯೇ ವೇದಗಳನ್ನು ಕಲಿ ಲೆಣಿಸುವ ನಿನ್ನ ತಪಃಪ್ರಯತ್ನವೂ ವ್ಯರ್ಥವಲ್ಲವೇ !" ಎಂದನು. ಯವಕ್ರೀತನು ಇಂದ್ರನನ್ನರಿತು "ಇರಲಿ! ನಿನ್ನ ಯತ್ನವು ವ್ಯರ್ಥವಾಗುವುದು. ಆದರೆ ನನ್ನ ಯತ್ನ ಸಫಲವಾಗುವುದು ನೋಡುತ್ತಿರು!" ಎಂದು ಇನ್ನೂ ತೀವ್ರತಪವನ್ನು ಮಾಡ

ತೊಡಗಿದನು. ಅದನ್ನು ಕಂಡು ಇಂದ್ರನು ಕರುಣೆಯಿಂದ ಯವಕ್ರೀತನಿಗೂ ಅವನ ತಂದೆಗೂ ವೇದಗಳು ಸ್ವಯಂ ಪ್ರತಿಭಾತವಾಗುವಂತೆ ವರವನ್ನಿತ್ತು ಹೋದನು.

ಯವಕ್ರೀತನು ತಂದೆಯನ್ನು ಕಂಡು ಇಂದ್ರನಿತ್ತ ವರವನ್ನು ತಿಳಿಸಿ, ಇನ್ನು ರೈಭ್ಯಾದಿಗಳಿಗೆ ಹೆದರುವುದಿಲ್ಲವೆಂದನು. ಅವನ ಗರ್ವವನ್ನು ಕಂಡು ಭರದ್ವಾಜನಿಗೆ ಖೇದವಾಯಿತು. ಅವನು ಮಗನಿಗಿಂತೆಂದನು—"ತಾತ! ಬೇಕಾದ ವರಗಳನ್ನು ಪಡೆದೆನೆಂದು ಗರ್ವಿತನಾಗಿರುವೆ, ಇದು ಉಚಿತವಲ್ಲ. ನಿನ್ನ ಕೇಡಿಗಾಗಿ ನಿನಗೆ ದರ್ಪವು ಕಬ್ಬಿಗೆ ಹೂವಿನಂತೆ ಮೂಡಿಬಂದಿದೆ. ಹಿಂದೆ ಬಾಲಧಿ ಎಂಬ ಮುನಿಯು ಇದ್ದನು. ಅವನು ತನ್ನ ಮಗನ ಸಾವಿನ ಶೋಕಕ್ಕೆ ಹೆದರಿ, ಮೇಧಾವಿ ಎಂಬ ತನ್ನ ಮಗನು ಮರಣರಹಿತನಾಗಬೇಕೆಂದು ತಪವನ್ನು ಮಾಡಿದನು. ದೇವತೆಗಳು ಅವನಿಗೆ ಪ್ರತ್ಯಕ್ಷ ರಾಗಿ 'ಮರ್ತ್ಯರಿಗೆ ಸಾವಿಲ್ಲದಿಲ್ಲ. ಆದರೆ ನಿನ್ನ ಮಗನು ಮನುಜರಿಗೆ ಹೆಚ್ಚೆನಿಸಿ, ದೇವತೆಗಳಿಗೆ ಸಮನೆನಿಸಿ ಬದುಕುವನು' ಎಂದರು. ಬಾಲಧಿಯು 'ಹಾಗಾದರೆ ನನ್ನ ಮಗನು, ಅಲ್ಲಿ ಕಾಣುವ ಪರ್ವತಗಳಿರುವವರೆವಿಗೂ ಬದುಕಿರಲಿ' ಎಂದು ಬೇಡಿದನು. ಅಂತೇ ವರವನ್ನಿತ್ತು ದೇವತೆಗಳು ಅಂತರ್ಹಿತರಾದರು. ಮೇಧಾವಿಯು ವರಬಲ ದಿಂದ ದರ್ಪಿತನಾಗಿ, ಋಷಿಗಳನ್ನು ಅವಮಾನಿಸಿ, ಜನರನ್ನು ಪೀಡಿಸತೊಡಗಿದನು. ಒಂದುದಿನ ಮಹಾತೇಜಶ್ಶಾಲಿಯಾದ ಧನುಷಾಕ್ಷನೆಂಬ ಮುನಿಯನ್ನು ತಿರಸ್ಕರಿಸಿ, ಅವಮಾನಿಸಿದನು. ಆ ಮುನಿವರನು ಕುಪಿತನಾಗಿ, ಅವನ ಜೀವನದ ಮರ್ಮ ವನ್ನರಿತು, ಮಹಿಷಗಳಿಂದ ಅಲ್ಲಿದ್ದ ಪರ್ವತಗಳನ್ನು ಕೆಡಹಿಸಿ, ನಿರ್ಮೂಲ ಮಾಡಿದನು. ತತ್‌ಕ್ಷಣವೇ ಮೇಧಾವಿಯು ಮೃತನಾಗಿ ಬಿದ್ದನು. ಅವನನ್ನು ನೋಡಿ ಬಾಲಧಿ ಯನ್ನು ಜ್ಞಾನಿಜನರು ಸಮಾಧಾನಪಡಿಸಿದರು. ವರಬಲದಿಂದ ದರ್ಪಿತರಾದವರಿಗೆ ಎಂದೂ ಮೇಲಾಗಿಲ್ಲ. ಆದುದರಿಂದ ಮಗನೆ! ರೈಭ್ಯನು ಮಹಾತಪಸ್ವಿಯು ಮತ್ತು ಪರಮಕೋಪನು. ಅವನ ಸುತರೂ ಅಷ್ಟೇ. ಅವರ ಗೊಡವೆಗೆ ಹೋಗಬೇಡ."

ತಂದೆಯ ಮಾತನ್ನು ತೃಣೀಕರಿಸಿ, ಅಹಂಕಾರ ಮತ್ಸರಗಳಿಂದ ಮತ್ತನಾದ ಯವಕ್ರೀತನು ರೈಭ್ಯಾಶ್ರಮವನ್ನು ಸೇರಿ, ಅಲ್ಲಿ ವನದಲ್ಲಿ ಏಕಾಂಗಿಯಾಗಿದ್ದ ಪರಾವಸು ಪತ್ನಿಯನ್ನು ಬಲಾತ್ಕಾರದಿಂದ ಸ್ವೀಕರಿಸಿದನು ಅವಳು ಅಳುತ್ತಾ, ತನ್ನ ಮಾವನಿಗೆ ಆ ಸುದ್ದಿಯನ್ನು ತಿಳಿಸಿದಳು. ರೈಭ್ಯನು ಪ್ರಳಯಕಾಲದ ಭೈರವನಂತೆ ಕುಪಿತನಾಗಿ, ತನ್ನ ಜಟೆಯನ್ನುಕಿತ್ತಿ ನೆಲಕ್ಕಪ್ಪಳಿಸಿದನು. ಅಲ್ಲಿಂದ ಒಬ್ಬಳು ನಾರೀ-ರಾಕ್ಷಸಿ ಉತ್ಪನ್ನಳಾದಳು. ಅವಳು ಪರಾವಸು ಪತ್ನಿಯಂತೆ ಇದ್ದಳು. ರೈಭ್ಯನು ಇನ್ನೊಂದು ಜಟೆಯನ್ನು ಒಗೆದಾಗ, ಅಲ್ಲಿಂದ ಒಬ್ಬ ಕ್ರೂರಭಯಂಕರ ರಾಕ್ಷಸನು ಮೇಲೆದ್ದುಬಂದು 'ಆಜ್ಞೆ ಏನು?' ಎಂದು ಕೇಳಿದನು. ರೈಭ್ಯನು 'ಯವಕ್ರೀತ ನನ್ನು ಕೊಂದು ಬನ್ನಿ!' ಎಂದಾಜ್ಞಾಪಿಸಿದನು. ಅವಳು ಯವಕ್ರೀತನನ್ನು ಸೇರಿ, ಉಪಾಯದಿಂದ ಅವನ ಕಮಂಡಲುವನ್ನು ಅಪಹರಿಸಿ, ಅವನಿಂದ ರಮಿಸಿದಳು. ಯವ ಕ್ರೀತನು ರತಿಯಿಂದ ಅಪವಿತ್ರನಾಗಿರುವಾಗ ರಾಕ್ಷಸನು ಶೂಲವನ್ನೆತ್ತಿ, ಅವನನ್ನು

ಕೊಲ್ಲಲು ಧಾವಿಸಿಬಂದನು. ಕೈಕಾಲು ತೊಳೆಯಲು ನೀರಿಲ್ಲದುದನ್ನು ಕಂಡು, ಯವಕ್ರೀತನು ಓಡಿ, ಓಡಿ, ಎಲ್ಲಿಯೂ ನೀರನ್ನು ಕಾಣದೆ, ತಂದೆಯ ಅಗ್ನಿಹೋತ್ರ ಗೃಹವನ್ನಾದರೂ ಹೊಕ್ಕು, ಉಳಿಯಲೆಣಿಸಿ, ಓಡಿಬಂದನು. ಅಲ್ಲಿ ಕಾವಲಿದ್ದ ಅಂಧ ಶೂದ್ರನು ಅವನನ್ನು ತಡೆದನು. ರಾಕ್ಷಸನು ತತ್‌ಕ್ಷಣವೇ ಯವಕ್ರೀತನನ್ನು ಶೂಲ ದಿಂದ ತಿವಿದುಕೊಂದನು. ರೈಭ್ಯನು ರಾಕ್ಷಸದಂಪತಿಗಳನ್ನು ವಿಸರ್ಜಿಸಿ ಶಾಂತನಾದನು.

ಭರದ್ವಾಜನು ಸ್ನಾನವಮಾಡಿ, ಅಗ್ನಿಹೋತ್ರಗೃಹವನ್ನು ಸಮೀಪಿಸಿದನು. ನಿತ್ಯ ದಂತೆ ಅವನಿಗೆ ಅಗ್ನಿದೇವನು ಪ್ರತ್ಯುತ್ಥಾನವನ್ನು ಮಾಡಲಿಲ್ಲ. ಆಶ್ಚರ್ಯಭಯ ಸಮನ್ವಿತನಾದ ಭರದ್ವಾಜನು ಶೂದ್ರನನ್ನು ನೋಡಿ, ಆಶ್ರಮದಲ್ಲಿ ಎಲ್ಲರೂ ಕ್ಷೇಮವೇ ? ಮಂದಮತಿಯಾದ ಯವಕ್ರೀತನು ರೈಭ್ಯನಿಗೆ ಅಪಚಾರವೇನಾದರೂ ಮಾಡಿದನೆ ?" ಎಂದು ಕೇಳಿದನು. ನಡೆದ ವೃತ್ತಾಂತವನ್ನು ಕೇಳಿ ತಿಳಿದ ಭರ ದ್ವಾಜನು ಶೋಕವ್ಯಾಕುಲನಾದನು. ಮಗನ ಮರಣದಿಂದ ನೊಂದು, 'ವೇದ ಪ್ರಾಪ್ತಿಗಾಗಿ ಘೋರ ತಪವನ್ನು ಮಾಡಿದೆ. ವೇದವಿದ್ಯೆಯನ್ನು ಸಂಪಾದಿಸಿದೆ. ಇಂತಹ ನಿನಗೆ ಪರದಾರಗಮನ ಬುದ್ಧಿ ಎಂತು ಬಂತು ? ಅಕಟಾ ! ರೈಭ್ಯಾಶ್ರಮಕ್ಕೆ ಹೋಗಬೇಡವೆಂದ ನನ್ನ ಮಾತನ್ನೇಕೆ ಕೇಳಲಿಲ್ಲ ? ರೈಭ್ಯನೋ ಪರಮಕೋಪನನು! ಮಗನನ್ನೇ ಕೊಂದುಬಿಟ್ಟನಲ್ಲ ! ಹತವಿಧಿಯೇ ! ಮಗನಿಲ್ಲದ ಬದುಕಿನ್ನೇಕೆ ? ಪಾಪಿ ರೈಭ್ಯನೂ ತನ್ನ ಮಗನಿಂದಲೇ ಸಾಯಲಿ !" ಎಂದು ರೈಭ್ಯನನ್ನು ಶಪಿಸಿ, ಭರದ್ವಾಜನು ಮಗನ ಚಿತೆಯಲ್ಲಿ ಬಿದ್ದು, ತಾನೂ ಪ್ರಾಣವನ್ನು ಬಿಟ್ಟನು. ಪುತ್ರ ಶೋಕವು ತೀವ್ರವೇದನವಲ್ಲವೆ ?

ಆ ಕಾಲದಲ್ಲಿ ಬೃಹದ್ಯುಮ್ನನೆಂಬ ರಾಜರ್ಷಿಯು ಸತ್ರಯಾಗವನ್ನು ಮಾಡು ತ್ತಿದ್ದನು. ಅವನು ಕೋರಿದಂತೆ ರೈಭ್ಯಸುತರು ಋತ್ವಿಜರಾಗಿ ಹೋದರು. ಒಂದು ದಿನ ಪರಾವಸುವು ತನ್ನ ಸತಿಯನ್ನು ನೋಡಲಿಕ್ಕೆಂದು ಆಶ್ರಮಕ್ಕೆ ಬಂದನು. ಆಗ ರಾತ್ರಿಯಾಗಿತ್ತು. ರೈಭ್ಯನು ವನದಲ್ಲಿ ಮೃಗಚರ್ಮವನ್ನು ಹೊದ್ದು, ಸುಮ್ಮನೆ ಕೂತು ತೂಕಡಿಸುತ್ತಿದ್ದನು. ಪರಾವಸು ಅವನನ್ನು ಕಾಡುಮೃಗವೆಂದು ಭ್ರಮಿಸಿ, ಕೊಂದುಬಿಟ್ಟನು. ಆಮೇಲೆ ತಾನು ಮಾಡಿದ ತಪ್ಪನ್ನು ತಿಳಿದು, ಪ್ರೇತಕಾರ್ಯ ಗಳನ್ನು ನಡೆಸಿದನು. ಅವನು ಯಜ್ಞಶಾಲೆಗೆ ಬಂದು ಅರ್ವಾವಸುವಿಗೆ ವಿಷಯ ವನ್ನು ತಿಳಿಸಿ, ಬ್ರಹ್ಮಹತ್ಯಾಪ್ರಾಯಶ್ಚಿತ್ತವನ್ನು ಮಾಡುವೆನೆಂದನು. ಕರುಣಾಳು ವಾದ ಅರ್ವಾವಸುವು "ಅಣ್ಣ ! ನೀನು ಯಜ್ಞವನ್ನು ಮಾಡಿಸುತ್ತಿರು, ನಿನಗಾಗಿ ಪ್ರಾಯಶ್ಚಿತ್ತವನ್ನು ನಾನು ಮಾಡಿ ಬರುವೆ"ನೆಂದು, ಅರಣ್ಯದಲ್ಲಿ ಹೋಗಿ, ಪ್ರಾಯ ಶ್ಚಿತ್ತಗಳನ್ನು ನಡೆಸಿ, ಶುದ್ಧನಾದನು. ಅವನು ಯಜ್ಞಶಾಲೆಗೆ ಬಂದಾಗ, ಪರಾ ವಸುವು ರಾಜನಿಗಿಂತೆಂದನು—"ರಾಜನ್! ಈ ನನ್ನ ತಮ್ಮನು ಬ್ರಹ್ಮಹತ್ಯಾಪಾತಕಿ ಇರುವನು. ಇವನನ್ನು ಯಜ್ಞಶಾಲೆಯಲ್ಲಿ ಬರಗೊಡಿಸಬೇಡ.." ಆಗ ರಾಜನು ಭೃತ್ಯರಿಂದ ತಮ್ಮನನ್ನು ಹೊರಹಾಕಿಸಿದನು. ಅರ್ವಾವಸುವು "ಪರಾವಸುವೇ

ಬ್ರಹ್ಮಘಾತುಕನು. ಅವನೇ ಪಿತೃಘಾತುಕನು. ಅವನಿಗಾಗಿ ಪ್ರಾಯಶ್ಚಿತ್ತಮಾಡಿ, ಶುದ್ಧನಾಗಿ ಬಂದಿರುವೆನು ನಾನು" ಎಂದು ಬಹುವಾಗಿ ಹೇಳಿದರೂ, ಕೇಳದೆ, ಹೊರ ಗಟ್ಟಿದರು ರಾಜಸೇವಕರು. ಅರ್ವಾವಸುವು ಅರಣ್ಯವನ್ನು ಸೇರಿ, ಘೃಣಿ, ಸೂರಯ, ಆದಿತ್ಯ ಎಂಬ ಎಂಟಕ್ಷರದ ಪವಿತ್ರ ಮಂತ್ರವನ್ನು ಜಪಿಸಿ, ಸೂರ್ಯನನ್ನಾರಾಧಿಸಿ ದನು. ಸೂರ್ಯನು ಪ್ರಸನ್ನನಾಗಿ ವರವನ್ನು ಬೇಡೆನ್ನಲು, ಮುನಿವರನು "ಕರ್ಮ ಸಾಕ್ಷಿ! ಅಗ್ನ್ಯಾದಿ ದೇವತೆಗಳಿರಾ! ನಮ್ಮ ತಂದೆಯು ಮತ್ತೆ ಬದುಕಲಿ! ನನ್ನ ಅಣ್ಣನು ನಿರಪರಾಧಿ ಎನಿಸಲಿ! ತಂದೆಯನ್ನು ಕೊಂದುದನ್ನು, ಅವನು ಮರೆತು ಬಿಡಲಿ! ಭರದ್ವಾಜ ಯವಕ್ರೀತರೂ ಉಜ್ಜೀವಿತರಾಗಲಿ!" ಎಂದನು. ಅಂತೆಯೇ ವರವಿತ್ತು, ಸೂರ್ಯಾದಿದೇವತೆಗಳು ಅಂತರ್ಹಿತರಾದರು. ಆಗ ರೈಭ್ಯ ಯವಕ್ರೀತ ಭರದ್ವಾಜರು ಪುನಃ ಬದುಕಿ ಬಂದರು. ಗುರುಮುಖದಿಂದ ವೇದಗಳನ್ನರಿತ ರೈಭ್ಯನ ಶಕ್ತಿಯಿಂದ ಸ್ವತಃ ವೇದವನ್ನೋದಿದ ಯವಕ್ರೀತನು ಶಿಕ್ಷಿತನಾದನೆಂಬ ಸತ್ಯ ವನ್ನರಿತು, ಯವಕ್ರೀತನು ಮುಂದೆ ಗುರುಮುಖದಿಂದ ಕಲಿತು ವಿದ್ಯಾವಿಚಕ್ಷಣ ನಾದನು.

"ಧರ್ಮರಾಜ! ಇದು ಮೈನಾಕ. ಇಲ್ಲಿ ಮಾಣಿವರ, ಮಾಣಿಭದ್ರರೆಂಬ ಯಕ್ಷ ಶ್ರೇಷ್ಠರಿರುವರು. ಇದು ಕೈಲಾಸಗಿರಿ. ಇಲ್ಲಿ ಕುಬೇರನ ಭೃತ್ಯರು ಮನುಜ ಪ್ರವೇಶವಾಗದಂತೆ ಕಾವಲಿರುವರು. ನನ್ನ ತಪೋಬಲವೂ, ಭೀಮಸೇನನ ತೇಜೋ ಬಲವೂ ನಿಮಗೆ ಕವಚದಂತೆ ರಕ್ಷಕವಾಗಿರುವಾಗ, ಹೆದರಬೇಡ!" ಎಂದು ಲೋಮಶನು ನುಡಿದನು. ಧರ್ಮರಾಜನು ತಾನು, ನಕುಲ, ಲೋಮಶರು ಮುಂದೆ ಸಾಗಲು ನಿಶ್ಚಯಿಸಿ, ಭೀಮನನ್ನು ಹಿಂದುಳಿದವರಿಗೆ ರಕ್ಷಕನಾಗಿರಬೇಕೆಂದು ಬೇಡಿದನು. ಆದರೆ ಅರ್ಜುನನನ್ನು ಗಂಧಮಾದನದಲ್ಲಿ ನೋಡುವೆವೆಂಬ ಉತ್ಸಾಹದಿಂದಲು, ಧರ್ಮರಾಜನನ್ನು ಬಿಟ್ಟಿರಲಾರದ ಪ್ರೇಮದಿಂದಲು, ಅವರೆಲ್ಲರೂ ಧರ್ಮರಾಜನನ್ನನು ಸರಿಸಿ ಮುಂದೆಸಾಗಿದರು. ಇಂದ್ರಸೇನಾದಿ ಸೂತರು, ಅಡಿಗೆಯವರು, ಪರಿಚಾರಕರು ಮಾತ್ರ ಉಳಿದು, ಅಲ್ಲಿದ್ದ ಕುಳಿಂದರಾಜನ ನಗರದಲ್ಲಿ ಅವನಿಂದ ರಕ್ಷಿತರಾಗಿದ್ದರು.

ಪಾಂಡವರು ಮುಂದೆ ಸಾಗಿ, ವಿಶಾಲಬದರಿಯನ್ನು ಮುಟ್ಟಿದರು. ಕುಬೇರ ಸರದಲ್ಲಿ ಸ್ನಾತರಾಗಿ, ಅವರು ಕಾಲ್ನಡಿಗೆಯಿಂದಲೇ ಸ್ವರ್ಗಸದೃಶವಾದ ಆ ದೇವ-ಭೂಮಿಯಲ್ಲಿ ಸಾಗಿ, ಅನೇಕ ಪುಣ್ಯಸ್ಥಲಗಳನ್ನು ನೋಡುತ್ತಾ, ಆನಂದಭರಿತರಾದರು. ವಾಲಖಿಲ್ಯಾಶ್ರಮದ ಆಕಾಶಗಂಗೆಯನ್ನು ಸೇವಿಸಿ, ಮುಂದೆ ಬೆಳ್ಳಿಯ ಬೆಟ್ಟಗಳನ್ನು ದಾಟಿ, ಅಲ್ಲಿ ಬೆಟ್ಟದಂತಿದ್ದ ನರಕಾಸುರನ ಅಸ್ಥಿರಾಶಿಯನ್ನು ಕಂಡರು.

ಹಿಂದೆ ನರಕನೆಂಬ ದಾನವನು ಇಂದ್ರಪದವಿಯನ್ನು ಕೋರಿ, ಬಹು ಕ್ರೂರ ತಪಸ್ಸನ್ನು ಮಾಡಿದನು. ಇಂದ್ರಪ್ರಾರ್ಥಿತನಾದ ಶ್ರೀಹರಿಯು ಆ ದುಷ್ಟದೈತ್ಯನನ್ನು ಸಂಹರಿಸಿ ಲೋಕಕ್ಷೇಮವನ್ನು ಸಾಧಿಸಿದನು. ಬರಿಗೈಯಿಂದ ಕಪಾಳದಲ್ಲಿ ಹೊಡೆದು ನರಕನನ್ನು ಕೊಂದ ದೈತ್ಯವೈರಿಯನ್ನು ದೇವತೆಗಳು ಪೂಮಳೆಗರೆದು, ಸ್ತುತಿಗೈದು,

ವಂದಿಸಿದರು. ಶ್ರೀಹರಿಯು ವರಾಹರೂಪನಾಗಿ ಮಾಡಿದ ದೈತ್ಯವಧೆಯನ್ನೂ ಕೇಳು!—"ಹಿಂದೆ ಭೂತಲದಲ್ಲಿ ಸಂಹಾರಕಾರ್ಯವು ನಿಂತುಹೋಯಿತು. ಆಗ ಬ್ರಹ್ಮನೇ ಯಮನಾಗಿದ್ದುದರಿಂದ ಸೃಷ್ಟಿಕಾರ್ಯವು ಪ್ರಬಲವಾಯಿತು. ಕ್ರಿಮಿ, ಪಶು, ಪಕ್ಷಿ, ಮನುಜ, ದಾನವರು ವಿಪರೀತನಾಗಿ ಬೆಳೆದು ಭೂಭಾರವಾದರು. ಅದನ್ನು ತಡೆಯಲಾರದೆ ಭೂದೇವಿಯು ಶ್ರೀಹರಿಗೆ ಶರಣಾಗತಳಾದಳು. ಬ್ರಹ್ಮಾದಿ ದೇವತೆಗಳು ಪ್ರಾರ್ಥಿಸಲು, ಶ್ರೀಶನು ವರಾಹನಾಗಿ, ಭಾರದಿಂದ ಪಾತಾಳಕ್ಕೆ ಇಳಿದಿದ್ದ ಮಹೀಮಂಡಲವನ್ನೆತ್ತಿ ಉದ್ಧರಿಸಿದನು. ದುಷ್ಟರನ್ನು ಪಾತಾಳದಲ್ಲೇ ಕೊಂದು, ಪ್ರಜಾಭಾರವನ್ನು ಕಳೆದು, ಭೂದೇವಿಯನ್ನು ಸಂತೈಸಿದನು. ಅಂತಹ ಶ್ರೀಶನೇ ಈಗ ಶ್ರೀಕೃಷ್ಣರೂಪದಿಂದ ಅವತರಿಸಿ, ನಮ್ಮನ್ನು ಸಲಹಲು ಬದ್ಧಕಂಕಣನಾಗಿರುವನು." ಎಂದ ಲೋಮಶನ ವಚನಕಿರಣಗಳಿಂದ ಪಾಂಡವ ಮುಖಪದ್ಮಗಳು ವಿಕಸಿತವಾದವು.

ಮುಂದೆ ಮಾರ್ಗವು ದುರ್ಗಮವಾಯಿತು. ಭೀಮಸೇನನು ದ್ರೌಪದೀ-ನಕುಲ-ಸಹದೇವರನ್ನು ಅವರಿಗೆ ಕೈಲಾಗದಾಗ ಹೊತ್ತು ನಡೆದನು. ಅಲ್ಲಿ ಕಲ್ಲು ಬಂಡೆಗಳು ಉರುಳಿ ಮಳೆಯಂತೆ ಬೀಳುತ್ತಿದ್ದವು. ಛಟಛಟಾಶಬ್ದವು ನಿರಂತರ ವಾಗಿತ್ತು. ಭೀಮಸೇನನು ಸ್ಮರಿಸಲು ಘಟೋತ್ಕಚನು ಬಂದು, ಅವರನ್ನೆತ್ತಿಕೊಂಡು ಕೈಲಾಸಗಿರಿಯ ತಟವನ್ನು ಸೇರಿಸಿದನು.

ಅಲ್ಲಿರುವ ನರನಾರಾಯಣಾಶ್ರಮವು ನಯನಮನೋಹರವಾಗಿತ್ತು. ರಮ್ಯ ವಾದ ಆಶ್ರಮದಲ್ಲಿ ರವಿಯ ಪ್ರಖರ ಕಿರಣಗಳು ಪ್ರವೇಶಿಸದಂತೆ ಅಂಬರಚುಂಬಿ ವೃಕ್ಷ ಗಳು ಛತ್ರಗಳಂತೆ ಬೆಳೆದು ನಿಂತಿದ್ದವು. ಪಕ್ಷಿಗಳು ಕಲಕಲ ನಾದವನ್ನು ಮಾಡಿ, ಬಂದವರಿಗೆ ಸ್ವಾಗತವನ್ನು ಬಯಸುತ್ತಿದ್ದವು. ಮುನಿಗಳು ತಪೋನಿರತರಾಗಿದ್ದರು. ಹರಿಣಗಳ ಹಿಂಡು ಸಂಚರಿಸುತ್ತಿತ್ತು. ವೇದಘೋಷವು ಕಿವಿಗಿಂಪಾಗಿ ಕೇಳಿಬಂತು. ಅಲ್ಲಿ ಪ್ರವೇಶಿಸಿದ ಕೂಡಲೆ ಪಾಂಡವರಿಗೆ ಹಸಿವೆ, ತೃಷೆ, ಶೀತ, ಉಷ್ಣ ಮೊದಲಾದ ಶರೀರದೋಷಗಳು ಮಾಯವಾದವು. ಯಜ್ಞಕುಂಡಗಳಲ್ಲಿ ಬಲ್ಯನ್ನದಿಂದ ಸಮರ್ಚಿತ ನಾದ ಅಗ್ನಿದೇವನು ಪ್ರದಕ್ಷಿಣಾಕಾರ ಜ್ವಾಲೆಗಳಿಂದ ಪ್ರಶಾಂತನಾಗಿ ಪ್ರಜ್ವಲಿಸು ತ್ತಿದ್ದನು. ಫಲಮೂಲಾಹಾರರು, ಇಂದ್ರಿಯಜಯಶೀಲರು, ಸೂರ್ಯಾಗ್ನಿಸಮ ಪ್ರಭರು, ಮೋಕ್ಷಪರರು ಆದ ಮಹರ್ಷಿಗಳ ದರ್ಶನದಿಂದ ಪಾಂಡವರು ಮತ್ತು ದೇವ ಸದೃಶರು, ಪುಣ್ಯಮೂರ್ತಿಗಳು, ಇಂದ್ರವಾಯುತೇಜಸಂಪನ್ನರೂ ಆದ ಪಾಂಡವರ ದರ್ಶನದಿಂದ ಮಹರ್ಷಿಗಳೂ ಹರ್ಷಸಮನ್ವಿತರಾದರು. ಇವರು ಅವರಿಗೆ ನಮಸ್ಕರಿ ಸಲು, ಅವರು ಇವರನ್ನು ಆಶೀರ್ವದಿಸಿದರು. ಭಾಗೀರಥಿ ತುಂಗ ತರಂಗ ಶೀಕರವಾದ ನರನಾರಾಯಣಾಶ್ರಮದಲ್ಲಿ ಪಾಂಡವರು ಕೆಲಕಾಲ ವಾಸಿಸಿದರು. ಗಂಧಮಾದನ ಗಿರಿಯ ತಪ್ಪಲಿನಲ್ಲಿ ಆರು ದಿನಗಳಿರಲು ನಿಶ್ಚಯಿಸಿದರು.

## ತೀರ್ಥಯಾತ್ರೆ—ಸೌಗಂಧಿಕಾಹರಣ

ಒಂದು ದಿನ ಭೀಮಸೇನನು ದ್ರೌಪದಿಯೊಡನೆ ಕೂಡಿ, ವನದಲ್ಲಿ ವಿಹರಿಸು ತ್ತಿದ್ದನು. ವನವು ಸರ್ವಋತು ಫಲ ಪುಷ್ಪ ಶೋಭಿತವಾಗಿತ್ತು. ಫಲಗಳು ಮಧು ಮಧುರರಸ ಪೂರ್ಣವಾಗಿದ್ದವು. ಪುಷ್ಪಗಳ ಗಂಧದಿಂದ ಆಕರ್ಷಿತರಾದ ದೇವವೃಂದ ದಂತೆ ಮಧುಕರವೃಂದಗಳು ಆಗಸದಲ್ಲಿ ಹಾರಾಡುತ್ತಾ ಹಾಡುತ್ತಿದ್ದವು. ಪರ್ವತ-ಶಿಖರವು ಮಂಜಿನಮೇಲೆ ಮೂಡಿದ ರವಿಕಿರಣದಿಂದ ಬಂಗಾರದ ಬೆಟ್ಟವೋ, ಬೆಳ್ಳಿಯ ಶಿಖರವೋ ಎಂಬಂತೆ ಮಿನುಗುತ್ತಿತ್ತು. ವೃಕ್ಷಗಳು ಫಲಭಾರದಿಂದ ಬಾಗಿ, ಪುಷ್ಪ ರಾಶಿಯನ್ನು ನೆಲದಲ್ಲಿ ಹಾಸಿ, ಅತಿಥಿಪೂಜಾತತ್ಪರರಾದ ಮುನಿಗಳನ್ನು ಅನುಕರಿಸು ತ್ತಿದ್ದವು. ಗಂಡು ಕೋಗಿಲೆಗಳು ಪಂಚಮಸ್ವರದಲ್ಲಿ ಹಾಡುತ್ತಿದ್ದವು. ಸರೋವರ ಗಳು ಸ್ವಚ್ಛಜಲಗಳಿಂದ ತುಂಬಿ, ವಿಕಸಿತ ಕಮಲಮುಖಗಳಿಂದ ನಗುತ್ತಿದ್ದವು. ಮಂದಾನಿಲವು ಶೈತ್ಯ ಮಾಂದ್ಯ ಸೌರಭ್ಯಗಳಿಂದ ಸೂಸಿಬಂದು, ಮರುತ್ಕುಮಾರ ನನ್ನು ಸೇವಿಸಿತು. ಯದೃಚ್ಛೆಯಿಂದ ಅದರೊಂದಿಗೆ ಬಂದ ಸಹಸ್ರಪತ್ರ ಕಮಲ ವೊಂದು ಈಶಾನನು ತನ್ನ ತಂದೆತಾಯಿಗಳಿಗರ್ಪಿಸಿದ ಕಾಣಿಕೆ ಎಂಬಂತೆ ದ್ರೌಪದೀ ದೇವಿಯ ಮುಂದೆ ಬಿತ್ತು. ಆ ಶುಭಾಂಗಿಯು ಶುಭಪದ್ಮವನ್ನು ಕೈಲಿ ಹಿಡಿದು ನೋಡಿ, ಸ್ವಲ್ಪಕಾಲ ಅದರ ಸೌಕುಮಾರ್ಯ, ಸೌವರ್ಣ್ಯ, ಸೌಗಂಧ್ಯಗಳಿಗೆ ಮಾರು ಹೋಗಿ ಸುಮ್ಮನಿದ್ದು ಭೀಮನನ್ನು ನೋಡಿ ಇಂತೆಂದಳು—

"ಮಹಾಭಾಗ! ಕಂಡೆಯಾ ಈ ದಿವ್ಯ ಸುಮವನ್ನು? ಗಂಧವೆಲ್ಲ ಒಂದುಕಡೆ ಕೂಡಿ ಕುಸುಮವಾಗಿ ಬಂದಂತಿದೆ! ಇಂತಹ ದಿವ್ಯಪುಷ್ಪವನ್ನು ನಾನೆಂದೂ ಕಂಡಿಲ್ಲ. ಭೀಮಸೇನ! ಇದನ್ನು ಧರ್ಮರಾಜನಿಗೆ ಸಮರ್ಪಿಸಲು ಕೋರಿರುವೆನು. ಇಂತಹ ಪುಷ್ಪಗಳನ್ನು ಅನೇಕವನ್ನು ನನಗೆ ತಂದುಕೊಡು." ಇಂತು ಪ್ರಾರ್ಥಿಸಿದ ಮಹಿಷಿಯ ಮಾತನ್ನು ಮೀರಲಾರದೆ ಸಮೀರಕುಮಾರನು ಮುಗ್ಧೆಯ ಮೂರ್ಧವನ್ನು ತಡವಿ, ಮೃದು ಹಸ್ತ ಪಲ್ಲವವನ್ನು ತನ್ನ ಕೈಯಿಂದ ಮೆಲ್ಲಮೆಲ್ಲನೆ ಹಿಡಿದು, ಮೇದುರ ಪ್ರೀತಿ ಯಿಂದ ಲಾಲಿಸಿ, ಮೈವೆತ್ತು ನಿಂತ ಪರಾಕ್ರಮದಂತೆ ವಿಜೃಂಭಿಸಿ, ಮೇಘಮಾಲೆ ಯಂತೆ ಮೊರಹಿ, ಸೌಗಂಧಿಕುಸುಮವನ್ನು ತಂದುಕೊಡುವೆನೆಂದು ಮೋಹನಾಂಗಿ ಯನ್ನು ಬೀಳ್ಕೊಂಡು, ಗಂಧಮಾದನ ಗೊಂಡಾರಣ್ಯವನ್ನು ಪ್ರವೇಶಿಸಿದನು. ಭೀಮನ ಮೌರ್ವೀನಾದದಿಂದ ಮಹೀಧರವೆಲ್ಲ ಪ್ರತಿಧ್ವನಿಸಿತು.

ಬಾಣ ಗದಾ ಧನು ಖಡ್ಗಧರನಾದ ಭೀಮನನ್ನು ನೋಡಿ, ವನಜಂತುಗಳು ಭಯದಿಂದ ಓಡತೊಡಗಿದವು. ಅಮ್ಲಾನಮುಖ ಪಂಕಜನಾದ ಭೀಮನು ಭಯ ಸಂಭ್ರಮಾಯಾಸಗಳಿಲ್ಲದೆ ಕ್ರುದ್ಧಸಿಂಹದಂತೆ, ಮದ್ದಾನೆಯಂತೆ ಶೈಲವನ್ನು ಆರೋ ಹಿಸಿದನು. ಸರ್ವಭೂಷಣಾಲಂಕೃತವಾದ ಹಸ್ತವನ್ನು ಭೂದೇವಿ ಎತ್ತಿ ತೋರುವ ಳೆಂಬಂತಿದ್ದ ನಾನಾವರ್ಣ ಕುಸುಮ ಫಲ ಭರಿತ ವೃಕ್ಷಗಳು ಬೆಳೆದು ನಿಂತಿದ್ದವು.

ಗಂಧಮಾದನದ ಸುಗಂಧಮಾರುತವು ಅವನ ಆಯಾಸವನ್ನು ಕಳೆಯಲೆಂಬಂತೆ ಸೂಸಿ ಬೀಸಿತು. ಎರಡು ಕಡೆಯ ಬೆಟ್ಟಗಳು ಆಗಲೇ ಸೌಗಂಧಿಕ ಸರೋವರದಿಂದ ಹಾರುತ್ತ ಹೋದ ಗರುಡನ ಪಕ್ಕಗಳಂತಿದ್ದವು. ಸಪ್ತಪರ್ಣಾದಿ ವಿಚಿತ್ರ ವರ್ಣಪತ್ರಗಳು ಅವನ ಪುಕ್ಕಗಳಂತಿದ್ದವು. ಕಾಂಚನಾಂಜನ ರಾಜತ ಧಾತು ತತಿಗಳು ಪಕ್ಷಿರಾಜನ ಮೈಬಣ್ಣ ದಂತೆ ಮೆರೆದವು. ಮೇಲಾಡುವ ಮೇಘವು ಗರುಡನು ಹೊತ್ತು ತಂದ ಮೇಘಶ್ಯಾಮ ನಂತೆ ಕಂಗೊಳಿಸಿತು. ಶಿಖರಗಳಿಂದ ಹರಿದುಬರುವ ಝರಿಗಳು ಅವನು ಧರಿಸಿದ ಮುತ್ತಿನ ಹಾರಗಳಂತಿದ್ದವು. ದರೀಕುಂಜದಲ್ಲಿ ವಿಹರಿಸುವ ದೇವಸುಂದರೀಪುಂಜ ಸಂಗೀತರಾಗವನ್ನನುಸರಿಸಿ, ಮಯೂರಗಳು ನರ್ತಿಸುತ್ತಿದ್ದವು. ಭದ್ರಗಜಗಳ ದಂತ ಘಾತಗಳಿಂದ ಒಡೆದ ಬಂಡೆಗಳ ತುಂಡುಗಳು ನೆಲದಲ್ಲಿ ಹರಡಿದ್ದವು. ಹರಿವ ನೀರನ್ನು ಕುಡಿದು, ಹಸಿರ ಹುಲ್ಲನ್ನು ಮೆಲ್ಲುತ್ತಿದ್ದ ಹರಿಣ ಸಮೂಹವು ಹೆದರಿಕೆಯನ್ನರಿಯದೆ ಬೆಳೆದುದರಿಂದ ಓಡಿಹೋಗದೆ ಭೀಮನನ್ನು ನೋಡುತ್ತಾ ನಿಂತವು. ಕಿನ್ನರ ಗಂಧರ್ವ ಯಕ್ಷಕಾಂತೆಯರು ಅದೃಶ್ಯರಾಗಿ ನಿಂತು ಆ ಚಾರು ಸುಂದರ ಸರ್ವಾಂಗನನ್ನು ನೋಡಿದರು. ಗಂಧಮಾದನ ಸಾನುಗಳಲ್ಲಿ ರೂಪನವಾವತಾರನಾದ ಭೀಮನನ್ನು ಕಂಡು ಸರ್ವಪ್ರಾಣಿಗಳು ಆನಂದತುಂದಿಲವಾದವು.

ಪ್ರಿಯೆಗಾಗಿ ಪುಷ್ಪವನ್ನು ತರುವ ತ್ವರೆಯಿಂದ ಸರಸರ ಹೊರಟ ಭೀಮಸೇನ ನಿಗೆ ದ್ರೌಪದಿಯ ಪ್ರೇಮವಚನಗಳೇ ಪಾಥೇಯವಾದವು. ದುರ್ಯೋಧನನಿತ್ತ ಕಷ್ಟ-ಪರಂಪರೆಯನ್ನು ನೆನೆಯುತ್ತಾ, ಎದುರಾದ ಸಿಂಹ ವ್ಯಾಘ್ರಗಳನ್ನು ಲೆಕ್ಕಿಸದೆ, ಸಿಂಹ ಶರಭ ರೂಪರಾಗಿ ಬಂದು ಮುತ್ತಿದ ರಾಕ್ಷಸರನ್ನು ಕೊಂದು, ಭೀಮನು ಶೈಲದಿಂದ ಶೈಲಕ್ಕೆ ದಾಟುತ್ತಾ ಪ್ರಯಾಣಿಸಿದನು. ಭೀಮನ ಸಿಂಹನಾದವನ್ನು ಕೇಳಿ, ಗುಹೆ ಗಳಿಂದ ಹೊರಬಂದು ಸಿಂಹಗಳು ಪ್ರತಿಗರ್ಜನವನ್ನು ಮಾಡಿದವು ; ಪಕ್ಷಿಗಳು ಹೆದರಿ ಚದರಿದವು ; ಜಿಂಕೆಗಳು ಭಯದಿಂದ ಓಡಿಹೋದವು.

ಮುಂದೆ ಅನೇಕ ಯೋಜನ ವಿಸ್ತೃತವಾದ ಕದಲೀಖಂಡವು ಭೀಮನ ಕಣ್ಣಿಗೆ ಗೋಚರಿಸಿತು. ಅವನು ಮಹಾಗಜದಂತೆ ಕದಲೀಕಂಬಗಳನ್ನು ಕೆಡಹುತ್ತಾ, ವನದಲ್ಲಿ ಹೊಕ್ಕು ಸಿಂಹನಾದವನ್ನು ಮಾಡಿದನು ಮತ್ತು ಪೌಂಡ್ರವೆಂಬ ಶಂಖ ವನ್ನೂದಿದನು. ಅವನ ಶಂಖಧ್ವಾನದಿಂದ ಗಿರಿಯು ನಡುಗಿತು. ಗುಹೆಗಳು ಮಾರ್ಮೊಳಗಿದವು. ಅಲ್ಲಿ ನೆಲೆಸಿದ್ದ ಹನುಮಂತನು ಬಂದವನು ಭೀಮನೆಂದರಿತನು. ಮುಂದಿರುವ ದೇವಮಾರ್ಗವನ್ನು ತಡೆದು ಭೀಮನ ವೀರ್ಯವನ್ನು ಪ್ರಕಟಗೊಳಿಸ ಲೆಣಿಸಿ, ಹನುಮಂತನು ಹಾದಿಗಡ್ಡಲಾಗಿ ಮಲಗಿದನು. ದೊಡ್ಡದಾಗಿ ಆಕಳಿಸುತ್ತಾ, ಬಾಲವನ್ನೆತ್ತಿ, ನೆಲಕ್ಕೆ ಅಪ್ಪಳಿಸುತ್ತಾ, ಕದಲೀಖಂಡವನ್ನೆಲ್ಲ ನಡುಗಿಸುವ ಹನು ಮಂತನ ಸಿಂಹಗರ್ಜನವನ್ನು ಭೀಮನೂ ಕೇಳಿ ಚಕಿತನಾದನು. ಶಬ್ದವನ್ನನುಸರಿಸಿ ಬಂದ ಪಾಂಡವನು ಕದಲೀಖಂಡ ಮಧ್ಯದೇಶದಲ್ಲಿ ಶಿಲಾತಲದಿ ಶಯಿತನಾಗಿದ್ದ ವಾನರ ಪತಿಯನ್ನು ಕಂಡನು. ಮಿಂಚಿನಂತೆ ಹೊಳೆಯುವ ಕಣ್ಣುಗಳು, ಗುಡುಗಿನಂದದಿ

ಲಾಂಗೂಲಶಬ್ದ, ಸೂರ್ಯಪ್ರಭದಂತೆ ಮಿನುಗುವ ದೇಹಕಾಂತಿ, ವಿಶಾಲಭುಜಗಳು, ಸಣ್ಣನಡುವು, ದೀರ್ಘರೋಮ ಸಮಂಚಿತ ದಿವ್ಯದೇಹ, ಧ್ವಜದಂತೆ ಮೇಲೆತ್ತಿ ಹಿಡಿದಿದ್ದ ಬಾಲ, ತಾಮ್ರ ಸುಂದರ ವಾನರ ಮುಖ, ಧವಳದಂತಪಂಕ್ತಿ, ಸಿಂಹಸಂಹನನ ಕಾಯಪುಷ್ಟಿ—ಇವುಗಳಿಂದ ಹೂಬಿಟ್ಟು ನಿಂತ ಅಶೋಕವೃಕ್ಷದಂತಿದ್ದ ಹನುಮಂತನನ್ನು ನೋಡಿ ಹೆದರದೆ ನಿಂತು ಭೀಮನು ಸಿಂಹನಾದವನ್ನು ಮಾಡಿದನು.

ಆಹಾ! ಮರುದ್ದೇವನ ಲೀಲೆ! ಏನೆಂದು ಹೇಳಲಿ! ಹನುಮದ್ಭೀಮರಿಗೆ ಭೇದವೇ ಇಲ್ಲದಿದ್ದರೂ ಯುಗಾನುಸಾರಿಯಾಗಿಯು, ದೇಶಕಾಲಪರಿಸ್ಥಿತಿಗಳಿಗೆ ತಕ್ಕಂತೆ ನಡೆಯಬೇಕೆಂಬ ಶ್ರೀಹರಿಯಾಜ್ಞೆಯಿಂದಲು, ಅಣ್ಣತಮ್ಮಂದಿರಂತೆ ರೂಪ ದ್ವಯದಿಂದ ವಿಹರಿಸುವ ಸಮೀರನ ವಿಡಂಬನೆಯು ಸಜ್ಜನಾನಂದಸಂದಾಯಕವೂ, ದುಷ್ಟಜನಮೋಹಕವೂ ಆಗಿದೆ. ಇಚ್ಛಾಮಾತ್ರದಿಂದಲೇ ಮೂಲಮುಖ್ಯಪ್ರಾಣ ನಷ್ಟು ಬಲಜ್ಞಾನಾದಿಗಳನ್ನು ವ್ಯಕ್ತಮಾಡಲು ಸಮರ್ಥನಾಗಿದ್ದರೂ ಮನುಜರ ಮಧ್ಯದಲ್ಲಿ ತಮ್ಮ ದಿವ್ಯಸ್ವಭಾವವನ್ನು ತೋರಗೊಡದೆ ಭಿನ್ನರಂತೆ ವರ್ತಿಸಬೇಕೆಂಬ ಶ್ರೀಶನು ಮಾಡಿದ ನಿಯಮದಂತೆ ಭೀಮ ವಾನರರಾಜನು ಪರಸ್ಪರ ಭಿನ್ನರಂತೆ ವರ್ತಿಸಿದರು. ಮುಖ್ಯಪ್ರಾಣನು ಮೂರವತಾರಗಳಲ್ಲಿಯೂ ಅಲಂಬಟ್—ಸಂಪೂರ್ಣ ಬಲಜ್ಞಾನಗಳನ್ನು ಅಭಿವ್ಯಕ್ತಮಾಡಲು ಸಮರ್ಥನೆಂದು ತಿಳಿ! ಧರ್ಮರಾಜ! ಇತರ ದೇವತೆಗಳಿಗೆ ಹಾಗಲ್ಲ. ಅವರು ತಮ್ಮ ಗುಣಗಳ ಕೆಲಭಾಗವನ್ನು ಮಾತ್ರ ಹೊಂದಿದ್ದು, ವಿಶೇಷಾಪತ್ಸಮಯದಲ್ಲಿ ಶ್ರೀಹರಿಯನ್ನು, ತಮ್ಮ ಮೂಲರೂಪವನ್ನು ಸ್ಮರಿಸಿ, ವಿಶೇಷ ಬಲಜ್ಞಾನವಂತರಾಗುವರು. ಶ್ರೀಹರಿಗೆ ತನ್ನ ಅವತಾರಗಳಲ್ಲಿ ಸ್ವಗತಭೇದವಿಲ್ಲ. ಭೇದಾಭೇದವೂ ಇಲ್ಲ. ಅವನು ಸರ್ವಾವತಾರಗಳಲ್ಲಿಯೂ ನಿತ್ಯಾನವಚ್ಛಿನ್ನ ಸರ್ವಕಲ್ಯಾಣಗುಣ ಸ್ವರೂಪನೇ ಆಗಿದ್ದೂ ತನ್ನ ಮಹಿಮೆಯನ್ನು ತನ್ನ ಇಚ್ಛಾನುಸಾರವಾಗಿ ತೋರುತ್ತಿರುವನು.

ಆಗ ಹನುಮಂತನು "ಯಾರು ನೀನು? ಏಕೆ ಸುಖಸುಪ್ತನಾಗಿದ್ದ ನನ್ನನ್ನು ಗರ್ಜಿಸಿ ಎಬ್ಬಿಸಿದೆ? ನಮ್ಮಂತಹ ಪ್ರಾಣಿಗಳಲ್ಲಿ ದಯೆ ತೋರುವುದು ಧರ್ಮವಲ್ಲವೆ? ತಿರ್ಯಗ್ಯೋನಿಯಲ್ಲಿ ಜನಿಸಿರುವ ನಮಗೆ ಧರ್ಮಸ್ವರೂಪವು ತಿಳಿಯದೇ ಹೋದರೂ ನರರಾದ ನಿಮಗೆ ತಿಳಿಯಬೇಡವೆ? ವೃದ್ಧರನ್ನು ಸೇವಿಸದೆ ಧರ್ಮಜ್ಞಾನವಿಲ್ಲದೇ ವರ್ತಿಸುವ ಅಲ್ಪಬುದ್ಧಿಗಳಂತೆ ಕ್ರೂರಸಾಹಸಿಯಾಗುವುದುಚಿತವಲ್ಲ" ಎಂದನು. ಮುಂದೆ ದೇವಲೋಕಮಾರ್ಗವಾದುದರಿಂದ ಮನುಜರಿಗೆ ಅಗಮ್ಯವೆಂದು ಎಚ್ಚರಿಸಿ ದನು. ಕದಲೀಖಂಡದ ಫಲಗಳನ್ನು ಆತಿಥ್ಯವಾಗಿ ಸ್ವೀಕರಿಸಿ ಹಿಂದಿರುಗೆಂದನು.

ಆ ಮಾತನ್ನಾಲಿಸಿ, ಭೀಮಸೇನನು "ನೀನಾರು? ಏಕಿಲ್ಲಿರುವೆ? ನಾನು ಸೋಮವಂಶೀಯನು, ಕೌರವನು, ಪಾಂಡುರಾಜನ ದ್ವಿತೀಯಪುತ್ರನು, ವಾಯು-ವರಸಂಜಾತನು, ಭೀಮನೆಂಬರು ನನ್ನನ್ನು" ಎಂದು ನುಡಿದನು. ಆಗ ಹನು ಮಂತನು ನಸುನಕ್ಕು "ನಾನು ವಾನರನು. ನನ್ನ ಮಾತು ಕೇಳಿ ಹಿಂದಿರುಗು.

ಸುಮ್ಮನೆ ಸಾಯಲು ಹೋಗಬೇಡ!" ಎಂದನು. ಭೀಮನು ಸಿಟ್ಟಾದಂತಾಗಿ "ವಾನರ! ನನ್ನ ಚಿಂತೆ ನಿನಗೇಕೆ? ಬಿಡು ಹಾದಿಯನ್ನು!" ಎಂದು ಗುಡುಗಿದನು. ಹನುಮಂತನು "ಅಯ್ಯಾ! ನಾನು ಮುದುಕನು, ಅಶಕ್ತನೂ ಆಗಿರುವೆನು. ಮುಂದೆ ಸಾಗಿ ಹೋಗಲೇಬೇಕೆಂದಿದ್ದರೆ ನನ್ನನ್ನು ದಾಟಿ ಹೋಗು!" ಎಂದನು. ಭೀಮನು "ವಾನರರಾಜ ಕೇಳು! ಸರ್ವಪ್ರಾಣಿಗಳಲ್ಲಿಯೂ ಅಂತರ್ಯಾಮಿಯಾಗಿರುವ ಶ್ರೀಹರಿಯು ಜ್ಞಾನಾನಂದಪೂರ್ಣನಾಗಿರುವನು. ಅವನಿಗೆ ಪ್ರತಿಮೆಯಂತಿದೆ ಶರೀರ. ಆದುದರಿಂದ ಸತ್ವಾದಿ ಪ್ರಾಕೃತಗುಣ ನಿರ್ಮಿತವಾದ ಶರೀರವನ್ನು ಕೂಡ ಪವಿತ್ರವೆಂದು ತಿಳಿದ ನಾನು ದಾಟುವುದು ಹೇಗೆ? ಅದು ಅವನಿಗೆ ಅವಮಾನವಾದಂತೆ ಎಂದು ತಿಳಿದಿರುವೆನು. ಇಲ್ಲದಿದ್ದರೆ ಒಂದೇ ಕ್ಷಣದಲ್ಲಿ ಹನುಮಂತನು ಸಮುದ್ರವನ್ನು ದಾಟಿದಂತೆ ಲೀಲಾಜಾಲವಾಗಿ ನಿನ್ನನ್ನೂ ಆ ಗಿರಿಯನ್ನೂ ಕೂಡಾ ದಾಟಿಬಿಡುತ್ತಿದ್ದೆನು" ಎಂದನು. ಹನುಮಂತನು ನಕ್ಕು, ಹುಬ್ಬನ್ನೇರಿಸಿ ನೋಡಿ, ಇಂತೆಂದನು. —"ಯಾರವನು ಹನುಮಂತನೆಂಬುವನು? ಅವನ ವಿಷಯ ನಿನಗೇನು ತಿಳಿದಿದೆ?" ಭೀಮನು—"ಕೇಳು! ಆ ವಾಯುಪುತ್ರನು ಈ ವಾಯುಪುತ್ರನಿಗೆ ಅಣ್ಣನಾಗಬೇಕು. ಬುದ್ಧಿ ಬಲ ಜ್ಞಾನನಿಧಿಯು, ಪ್ರಶಸ್ತಯಶೋವಿಶಾಲನು, ರಾಮಭಕ್ತನು ಆದ ಹನುಮಂತನ ವಿಷಯ ನಿನಗೆ ತಿಳಿದಿರಬೇಕು. ನೂರಾರು ಯೋಜನ ದೂರದ ಸಮುದ್ರವನ್ನು ಏಕೋತ್ಪಾತದಲ್ಲಿ ದಾಟಿದ ಆ ಮಹಾವೀರನನ್ನು ಅರಿಯದ ನಿರ್ಭಾಗ್ಯರುಂಟೆ? ಬಲ ವೀರ್ಯ ಜ್ಞಾನ ಕಾಂತಿ ಗುಣಗಳಿಂದ ಅವನಿಗೆ ತಕ್ಕ ತಮ್ಮನೆನಿಸಿರುವ ನನ್ನನ್ನು ಕೆಣಕಿ ಕೆಡದವರಿಲ್ಲ. ಬಿಡು ಹಾದಿಯನ್ನು" ಎಂದು ದರ್ಪದಿಂದ ಮಾತಾಡಿದನು. ಹನುಮಂತನು "ಪ್ರಸನ್ನನಾಗು ಮಹಾವೀರ! ನಾನು ಹೇಳಿ ಕೇಳಿ ಬಹು ವೃದ್ಧನು. ನನಗೆ ಏಳಲಾಗದು—ದಯಮಾಡಿ ನನ್ನ ಬಾಲವನ್ನು ಬದಿಗೆ ಸರಿಸಿ, ಅಲ್ಲಿಂದ ಮುಂದೆ ಸಾಗು!" ಎಂದನು.

ಭೀಮಸೇನನು ಬಾಲವನ್ನೆತ್ತಿಡಲು ಸೆಣಸಿ, ವಿಫಲಪ್ರಯತ್ನನಾದನು. ಕಪಿರಾಜನಿಗೆ ಕೈಮುಗಿದು, ತಲೆಬಾಗಿ "ಪ್ರಸನ್ನನಾಗು! ನಾನಾಡಿದ ಕಿಡಿನುಡಿಗಳನ್ನು ಕ್ಷಮಿಸು! ಯಾವ ದೇವ ನೀನು? ನಿನ್ನವನಾದ ನನಗೆ ನಿನ್ನ ಸ್ವರೂಪವನ್ನು ತಿಳಿಸು" ಎಂದು ಭೀಮನು ಬೇಡಿದನು. ಆಗ ಹನುಮಂತನು ಪ್ರಸನ್ನನಾಗಿ, "ಭೀಮಸೇನ! ಕೇಸರಿಯ ಪತ್ನಿ ಅಂಜನಾದೇವಿಯಲ್ಲಿ ವಾಯುದೇವನ ವರದಿಂದ ಜನಿಸಿದ ಹನುಮಂತನೇ ನಾನೆಂದು ತಿಳಿ! ವಾಲಿ ಸುಗ್ರೀವರೆಂಬ ವಾನರರಾಜರಲ್ಲಿ ಸುಗ್ರೀವನು ನನ್ನ ಪ್ರೀತಿಗೆ ಪಾತ್ರನಾದನು. ಅವನಲ್ಲಿ ಕುಪಿತನಾಗಿ ದೇಶಭ್ರಷ್ಟನಾಗಿಸಿದ ವಾಲಿಯು ರಾವಣಮಿತ್ರನಾದನು. ದುಷ್ಟವಾಲಿಯನ್ನು ಸಂಹರಿಸಿ, ಶ್ರೀರಾಮನು ಸುಗ್ರೀವನಿಗೆ ಕಪಿರಾಜ್ಯವಿತ್ತು ಪೊರೆಯುವಂತೆ ಬೇಡಿ ನಾನು ಸುಗ್ರೀವ-ದಾಶರಥಿಗಳ ಮೈತ್ರಿಯನ್ನು ಸಾಧಿಸಿದೆನು. ಶ್ರೀರಾಮನೆಂದರೆ ಸಾಕ್ಷಾದ್ವಿಷ್ಣುವೆಂದು ತಿಳಿ! ಬ್ರಹ್ಮರುದ್ರೇಂದ್ರಾದಿಗಳಿಂದ ಪ್ರಾರ್ಥಿತನಾದ ಆ ದೇವನು ದಶರಥನ ಪತ್ನಿ ಕೌಸಲ್ಯೆ

ಯಲ್ಲಿ ಪ್ರಾದುರ್ಭೂತನಾದನು. ತಂದೆಯ ಮಾತನ್ನು ಳಿಸಲು ಶ್ರೀರಾಮನು ಪತ್ನಿ ಸೀತೆಯೊಡನೆ ತಮ್ಮ ಲಕ್ಷ್ಮಣನೊಡನೆ ಅರಣ್ಯವಾಸವನ್ನು ಕೈಕೊಂಡು, ಜನಸ್ಥಾನ ದಲ್ಲಿದ್ದನು. ಆಗ ರಾವಣನು ಮೋಸದಿಂದ ಸೀತೆಯನ್ನು ಕದ್ದೊಯ್ದು, ಲಂಕೆಯ ಅಶೋಕವನದಲ್ಲಿಟ್ಟನು.

ಮೃಗರೂಪೀ ಮಾರೀಚನನ್ನು ಕೊಂದುಬಂದ ರಾಮಲಕ್ಷ್ಮಣರು ಆಶ್ರಮದಿ ಸೀತಾದೇವಿಯನ್ನು ಕಾಣದೆ, ಚಿಂತಾಕ್ರಾಂತರಾದರು. ಆಕೆಯನ್ನು ಹುಡುಕುತ್ತಾ ಬಂದ ರಾಮನಿಂದ ಸುಗ್ರೀವನಿಗೆ ಸ್ನೇಹವಾಯಿತು. ರಾಮನು ವಾಲಿಯನ್ನು ಒಂದೇ ಬಾಣದಿಂದ ಕೊಂದು, ಸುಗ್ರೀವನನ್ನು ಕಿಷ್ಕಿಂಧಾ ನಗರದಲ್ಲಿ ವಾನರರಾಜ್ಯಕ್ಕೆ ಪಟ್ಟ-ಗಟ್ಟಿದನು. ಸುಗ್ರೀವನು ಸಾವಿರಾರು ವಾನರ ವೀರರನ್ನು ಸೀತಾನ್ವೇಷಣೆಗೈಯಲು ಕಳುಹಿದನು. ನಾನು ಅಂಗದ ಜಾಂಬವದಾದಿ ವಾನರ ವೀರರಿಂದ ಕೂಡಿ, ದಕ್ಷಿಣ ದಿಕ್ಕಿಗೆ ಹೊರಟು, ಸಂಪಾತಿಯೆಂಬ ಗೃಧ್ರರಾಜನ ವಚನದಿಂದ ಸೀತೆಯ ವಾರ್ತೆ ಯನ್ನರಿತೆನು. ಶತಯೋಜನಾಯತ ಸಮುದ್ರವನ್ನು ದಾಟಿ, ಸೀತೆಯನ್ನು ಕಂಡು, ರಾಮನಿತ್ತ ಮುದ್ರಿಕೆಯನ್ನಾಕೆಗಿತ್ತು, ಆಕೆಯ ಚೂಡಾಮಣಿಯನ್ನು ಸ್ವೀಕರಿಸಿ, ಲಂಕೆಯನ್ನು ಸುಟ್ಟು, ರಾಕ್ಷಸರನ್ನು ವಧಿಸಿ, ರಾವಣನನ್ನು ತಿರಸ್ಕರಿಸಿ, ಪುನಃ ಸಮುದ್ರವನ್ನು ದಾಟಿಬಂದು, ಶ್ರೀರಾಮನ ಚರಣಾರವಿಂದಗಳಿಗೆ ಶಿರಬಾಗಿ ನಮಿಸಿ, ಸೀತಾಸಂದೇಶವನ್ನು ತಿಳಿಸಿದೆನು. ಶ್ರೀರಾಮನು ಸೇತುವನ್ನು ಕಟ್ಟಿ, ಸಮುದ್ರ ವನ್ನು ದಾಟಿದನು. ವಾನರ-ರಾಕ್ಷಸ ಯುದ್ಧವು ಭೀಕರವಾಗಿ ನಡೆಯಿತು. ಶ್ರೀರಾಮನು ರಾವಣನನ್ನು ಸಂಹರಿಸಿದನು. ವಿಭೀಷಣನೆಂಬ ತನ್ನ ಭಕ್ತನಿಗೆ ಲಂಕಾ ರಾಜ್ಯವನ್ನಿತ್ತನು. ಅಗ್ನಿಪ್ರವೇಶದಿಂದ ಅಗ್ನಿಯನ್ನೇ ಪವಿತ್ರಗೊಳಿಸಿದ ಪರಮ ಪತಿವ್ರತೆ ಸೀತೆಯೊಡನೆ ಪುಷ್ಪಕವಿಮಾನಾರೂಢನಾಗಿ, ಅಯೋಧ್ಯೆಯನ್ನು ಸೇರಿ ದನು. ಶ್ರೀರಾಮನ ಪಟ್ಟಾಭಿಷೇಕವನ್ನು ನೋಡಿ ನಾವು—ವಾನರರೂ ವಿಭೀಷಣಾದಿ ರಾಕ್ಷಸರೂ ಆನಂದದಿಂದ ಮೈಮರೆತೆವು. ಶ್ರೀರಾಮಕಥೆಯು ಪ್ರಸಿದ್ಧವಾಗಿರುವ ವರೆಗೂ ಜೀವಿಸಿರುವಂತೆ ಶ್ರೀರಾಮನು ನನಗೆ ವರವನ್ನಿತ್ತು ಅವನ ಸಂತತಸ್ಮರಣ ಭಾಗ್ಯವನ್ನೂ ಕೊಟ್ಟು ಅನುಗ್ರಹಿಸಿದನು. ಸೀತಮ್ಮನ ದಯೆಯೂ ಮಗನಾದ ನನ್ನಲ್ಲಿ ಅಪಾರವಾಗಿದೆ. ಇಲ್ಲಿ ಗಂಧಮಾದನದ ಅಪ್ಸರೋಗಂಧರ್ವರು ಶ್ರೀರಾಮಾಯಣ ಗಾನದಿಂದ ಅನಿಶವೂ ನನಗೆ ಆನಂದವನ್ನುಂಟುಮಾಡುತ್ತಿರುವರು.

ಇದು ದೇವಮಾರ್ಗವು; ದುರ್ಗಮವೂ, ರಾಕ್ಷಸಸಂಕುಲವೂ ಆದ ಈ ವನದಲ್ಲಿ ಪೋಗಿ, ನಿನಗೆ ಬೇಕಾದ ಕುಸುಮತತಿಯನ್ನು ಸ್ವೀಕರಿಸು. ನಿನಗೆ ಜಯವಾಗಲಿ!" ಎಂದು ಹರಸಿದನು. ಭೀಮನು ಹರ್ಷಪರವಶನಾಗಿ, ಮತ್ತೆ ಕಪಿರಾಜನಿಗೆ ವಂದಿಸಿ, "ಹನುಮಂತ! ನಿನ್ನ ದರ್ಶನದಿಂದ ನಾನು ಧನ್ಯನಾದೆನು. ನಿನ್ನನ್ನೊಂದು ಬೇಡು ವೆನು. ಸಾಗರವನ್ನು ದಾಟಿದಾಗಿನ ನಿನ್ನ ಮಹದ್ರೂಪವನ್ನು ನನಗೆ ತೋರು! ಹಾಗಾದರೆ ನೀನೇ ಹನುಮಂತನೆಂದು ತಿಳಿದುಬಂದು ಜನರು ನಿಸ್ಸಂಶಯರಾಗುವರು"

ಎಂದು ಬೇಡಿದನು. ತಮ್ಮನ ಮಾತಿಗೆ ಅಣ್ಣನು ನಕ್ಕು "ಯುಗಾನುಸಾರಿಯಾಗಿ ನಮ್ಮ ಶಕ್ತಿಯು ಹೆಚ್ಚುಕಡಿಮೆ ಅಭಿವ್ಯಕ್ತವಾಗುವುದು. ಇದು ದ್ವಾಪರವು. ನನ್ನ ರೂಪವನ್ನು ನೋಡಲು ನಾನೇ ನೀನಾಗಿರುವೆ. ಆದುದರಿಂದ ನೀನು ಶಕ್ತನಾಗಿರುವೆ. ಇತರ ದೇವ ಋಷಿಗಳ ಬಲಜ್ಞಾನಗಳು ಯುಗಯುಗದಿ ಕುಸಿಯುತ್ತಾಹೋಗುವುವು.

ಕೃತಯುಗವು ಪೂರ್ಣಧರ್ಮಯುಕ್ತವಾಗಿತ್ತು. ಎಲ್ಲರೂ ಧರ್ಮವಿಷಯದಲ್ಲಿ ಕೃತಕೃತ್ಯರಾಗಿದ್ದರು. ವ್ಯಾಧಿಗಳಿಲ್ಲ, ಅಸೂಯಾ ಕಾಪಟ್ಯಗಳಿಲ್ಲ, ಕೃಷಿಪ್ರಯಾಸ ವಿಲ್ಲದೆ ಸಸ್ಯಸಂಪತ್ತಿಯು ಸಂಕಲ್ಪಶುದ್ಧಿಯಿಂದ ಸಿದ್ಧವಾಗಿತ್ತು. ಸಾಮಾದಿ ವೇದ ಗಳೆಲ್ಲವೂ ಪರಬ್ರಹ್ಮಪ್ರತಿಪಾದಕವೆಂಬ ವೇದವ್ಯಾಖ್ಯಾರ್ಥಪರಿಜ್ಞಾನವು ಜಾಗೃತ ವಾಗಿತ್ತು. ವರ್ಣಚತುಷ್ಟಯವು ಸಂಕರದೋಷವಿಲ್ಲದೆ ಸ್ವಧರ್ಮತತ್ಪರವಾಗಿತ್ತು. ಶ್ರೀನಾರಾಯಣನೇ ದೇವನು; ಓಂಕಾರವೇ ಮಂತ್ರವು; ನಿವೃತ್ತಿಕರ್ಮಾನುಷ್ಠಾನವೇ ಧರ್ಮವು; ಆಶ್ರಮವಿಹಿತವರ್ತನರಾದ ಪ್ರಜರು ಧರ್ಮವನ್ನು ಸತ್ಯ, ದಾನ, ತಪಸ್, ಶೌಚಗಳೆಂಬ ನಾಲ್ಕು ಪಾದಗಳಿಂದ ಚನ್ನಾಗಿ ನಡೆಸಿದರು.

ತ್ರೇತಾಯುಗದಲ್ಲಿ ಶ್ರೀಹರಿಯು ಶುಕ್ಲವರ್ಣದಿಂದ ರಕ್ತವರ್ಣನಾಗಿ, ಪರಶು-ರಾಮಾದ್ಯವತಾರಗಳನ್ನು ತೋರಿದನು. ಧರ್ಮವು ಒಂದೊಂದು ಕಾಲುಭಾಗ ಕಡಿಮೆಯಾಗಿತ್ತು. ಸತ್ಯಪರಾಯಣರಾದ ಪ್ರಜರು ಯಜ್ಞಗಳನ್ನು ಮಾಡಿ, ಶ್ರೀಹರಿ ಪ್ರೀತಿಯನ್ನು ಗಳಿಸಿದರು.

ದ್ವಾಪರದಲ್ಲಿ ನಾಲ್ಕೂ ಪಾದಗಳ ಅರ್ಧಭಾಗದಷ್ಟು ಧರ್ಮವು ನಶಿಸಿತು. ಶ್ರೀಶನು ಪೀತವರ್ಣದವನಾಗಿ ರಾಮನೆನಿಸಿ, ಪರಿಚರ್ಯಾಪೂಜೆಗಳಿಂದ ಪ್ರೀತನಾಗಿ, ಪ್ರಜರಿಗೆ ಸ್ವಯೋಗ್ಯಫಲವನ್ನಿತ್ತನು. ವೇದವು ಪ್ರವಿಭಕ್ತವಾಗಿ ಸ್ವಲ್ಪಮಾತ್ರ ಅಧ್ಯಯನ ಸಾಧ್ಯವಾಯಿತು. ಮಂದಮತಿಗಳಾದ ಜನರು ಕೊನೆಗೆ ಏಕವೇದರೂ, ಏಕಶಾಖಿಗಳೂ ಮಾತ್ರ ಆದರು. ವಿಪ್ರರು ರಾಜಾಧೀನರಾದರು. ಕಾಮ ರಾಗ ದ್ವೇಷಗಳು ಹೆಚ್ಚಾದವು.

ಕಲಿಯುಗವು ಇನ್ನು ಕೆಲವೇ ವರ್ಷಗಳಲ್ಲಿ ಬರಲಿರುವುದು. ಆಗ ಶ್ರೀಹರಿಯು ನೀಲವರ್ಣನಾಗಿ, ಕೃಷ್ಣನೆನಿಸಿ, ಕೀರ್ತನಪ್ರಾಯವಾದ ಯಜ್ಞಗಳನ್ನು ಮಾಡುವ ಸುಜನರನ್ನು ಪೊರೆದು, ಯೋಗ್ಯಗತಿಯನ್ನು ಕೊಡುವನು. ಅದು ತಾಮಸಯುಗವು. ದಾನವರೇ ಹೆಚ್ಚು. ಅವರಿಗೇ ವೃದ್ಧಿ. ವೇದಾಚಾರಗಳು ಕೆಡುವುವು. ಧರ್ಮವನ್ನು ಅಧರ್ಮವೆಂಬರು. ಅಧರ್ಮವನ್ನೇ ಧರ್ಮವೆಂದು ಹಠದಿಂದ ಆಚರಿಸಿ, ಸುಜನರನ್ನು ಪೀಡಿಸುವರು. ವರ್ಣಾಶ್ರಮಾಚಾರಗಳು ಲೋಪವಾಗುವುವು. ಮುಂದೆ ಶ್ರೀಹರಿಯು ಕಲ್ಕಿರೂಪನಾಗಿ ಅವತರಿಸಿ. ಕುಜನರನ್ನೆಲ್ಲ ಸವರಿ, ಪುನಃ ಕೃತಯುಗವನ್ನು ಸ್ಥಾಪಿಸುವನು.

"ಭೀಮಸೇನ! ನೋಡು ನನ್ನ ಮಹದ್ರೂಪವನ್ನು!" ಎಂದು ನುಡಿದು ಶ್ರೀಹನು ಮಂತನು ಭೀಮನಿಗೆ ತನ್ನ ಮಹದ್ರೂಪವನ್ನು ತೋರಿಸಿದನು. ಕದಲೀಖಂಡ

ವನ್ನು ಮೀರಿ, ಮುಗಿಲನ್ನು ಮುಟ್ಟಿ ಬೆಳೆದ ಹನುಮಂತನ ರೂಪವನ್ನು ನೋಡಿ, ಭೀಮಸೇನನು ವಿಸ್ಮಯಾನಂದಭರಿತನಾದನು. ಪರ್ವತದಂತೆ ಉನ್ನತವಾದ ಶರೀರ, ಕೆಂಪಗೆ ಉರಿಯುವ ಕಣ್ಣುಗಳು, ಮಸೆಯುವ ಕೋರೆಗಳು, ಗಂಟಿಕ್ಕಿ ಹುಬ್ಬು, ಮೇಲೆತ್ತಿದ ಬಾಲ, ದೊಡ್ಡ ಎದೆ, ರೋಮಶವಾದ ಕೈಕಾಲುಗಳು, ಕೈಲಿ ಹಿಡಿದ ಗದೆ—ಇಂತಹ ವಾನರವೀರನನ್ನು ಕಂಡು, ಭೀಮನು ಕಣ್ಣು ಮುಚ್ಚಿದನು. ಅದ್ಭುತಾಕಾರನಾಗಿ ಬೆಳೆಯುತ್ತಿರುವ ಹನುಮಂತನನ್ನು ಕಂಡು, ಹೆದರದೆ ಆನಂದ ವಿಸ್ಮಯಭರಿತನಾಗಿ, ಭೀಮನು "ಎಂತಹ ಮಹಾದ್ಭುತವೀ ರೂಪ! ಇದನ್ನು ಇನ್ನು ನೋಡಲಾರೆನು. ಉಪಸಂಹರಿಸು ಮಹಾತ್ಮಾ, ನಿನ್ನ ಮಹದ್ರೂಪವನ್ನು! ನಿನ್ನಂತಹ ಮಹಾವೀರನ ಸಹಾಯದಿಂದ ಶ್ರೀರಾಮನು ರಾವಣನನ್ನೇ ಏಕೆ? ತ್ರಿಜಗತ್ತನ್ನು ಗೆಲ್ಲಬಲ್ಲನು. ರಾವಣನನ್ನು ಸಗಣವಾಗಿ ಸಂಹರಿಸಲು ನೀನೊಬ್ಬನೇ ಸಮರ್ಥನಿರುವೆ!" ಎಂದು ಮೈಯುಬ್ಬಿ ಪೊಗಳಿದನು.

ಹನುಮಂತನು "ನಿಜ! ಭೀಮಸೇನ! ಆ ರಾಕ್ಷಸಾಧಮನು ನನಗೊಂದು ಲೆಕ್ಕವೆ? ಶ್ರೀರಾಮನ ಬಾಣಾಗ್ನಿಗೆ ಆಹುತಿಯಾಗಲಿರುವ ಅವನನ್ನು ಕೊಂದು, ನನ್ನ ಸ್ವಾಮಿಯ ಕೀರ್ತಿಚಂದ್ರಮನಿಗೆ ಕಳಂಕವನ್ನು ತುಂಬಲಾಗದೆಂದು ನಾನು ಅವನನ್ನು ಸಂಹರಿಸದೇ ಬಿಟ್ಟೆನು. ಒಳ್ಳೆಯದು, ಹೊರಡು. ನಿನಗೆ ಕ್ಷೇಮವಾಗಲಿ! ಸೌಗಂಧಿಕವನದ ಮಾರ್ಗವಿದು. ಮುಂದೆ ಧನದನ ಉದ್ಯಾನವು ಸಿಗುವುದು. ಸಾಹಸಿಸಿ, ದೇವತೆಗಳನ್ನು ಅವಮಾನಿಸಲಾಗದು. ಬಲಿ, ಹೋಮ, ಜಪ, ನಮಸ್ಕಾರಗಳಿಂದ ಸುರರು ಪ್ರಸನ್ನರಾಗಿ, ಬೇಡಿದ್ದನ್ನು ಕೊಡುವರು. ಧರ್ಮವನ್ನು ಓದಿ ತಿಳಿದರೆ ಸಾಲದು. ವೃದ್ಧಜನರಂತೆ ನಡೆದು ಅದನ್ನು ಪಾಲಿಸಿ, ವಿಚಕ್ಷಣನೆನಿಸುವನು. ಧರ್ಮಾಧರ್ಮಜ್ಞಾನವು ದುರ್ಲಭವಾಗಿದೆ. ನೀನು ಎಲ್ಲವನ್ನೂ ಅರಿತಿರುವೆ. ವೇದಾಚಾರಗಳಂತೆ ಯಜ್ಞಧರ್ಮಗಳನ್ನು ನಡೆಸು! ಸ್ವಧರ್ಮದಿಂದ ನಡೆದು ಸುಜನಕ್ಷೇಮವನ್ನು ಸಂಪಾದಿಸು! ದುರ್ಜನರನ್ನು ದಂಡಿಸು, ಬಿಡಬೇಡ. ಅದು ಕ್ಷತ್ರಿಯ ಧರ್ಮವು" ಎಂದು ಹೇಳಿ, ಮಹದ್ರೂಪವನ್ನು ಉಪಸಂಹರಿಸಿದನು.

ಭೀಮನನ್ನಾಲಿಂಗಿಸಿ, ಹನುಮಂತನು ಆನಂದಬಾಷ್ಪದಿಂದ ಅಭಿಷೇಕಿಸಿ, ಇಂತೆಂದನು—"ನಾನಿಲ್ಲಿರುವೆನೆಂದು ಮನುಜರಿಗೆ ತಿಳಿಸಬೇಡ! ಧನದನ ವನದಿಂದ ಕುಸುಮಗಳನ್ನು ತಂದು ಸುಮಗಂಧಿಗೆ ಸಮರ್ಪಿಸು. ನಿನ್ನನ್ನು ಕಂಡು ನನಗೆ ಶ್ರೀರಾಮನ ಪವಿತ್ರಸ್ಮರಣೆ ಒದಗಿತು. ಸೀತಾವದನಕಮಲಸೂರ್ಯನು ಸೂರ್ಯಸುತವಿಭವವಿತರಣನು, ರಣನಿಹತರಾಕ್ಷಸರಾಜನು, ರಾಜಸಭಾಗೇಗೀಯಮಾನ ಯಶೋವಿಶಾಲನು ಆದ ಶ್ರೀರಾಮನ ರಾಮರಕ್ಷೆ ನಿನಗಿರಲಿ! ನಾನೇ ನೀನೆಂದು ತಿಳಿ! ನನ್ನ ದರ್ಶನವು ಅಮೋಘವು, ವಿಜಯಪ್ರದವು ಆಗಿದೆ. ನಿನಗೆ ಬೇಕಾದ ವರವನ್ನು ಬೇಡು. ಹಸ್ತಿನಾವತಿಗೆ ಹೋಗಿ ಒಂದೇ ಕ್ಷಣದಲ್ಲಿ ಕೌರವರನ್ನೆಲ್ಲ ಕೊಂದು, ಹಸ್ತಿನಗರವನ್ನು ಹಾಳುಮಾಡಿ ಬರಲೇನು? ಅಥವಾ ದುರ್ಯೋಧನನನ್ನು ಕಟ್ಟಿ

ತಂದು ಧರ್ಮರಾಜನ ಕಾಲಲ್ಲಿ ಹಾಕಲೆ? ಹೇಳು" ಎಂದನು. ಆ ಮಾತು ಅಮೃತಾಯನವಾಗಿರಲು ಕೇಳಿ, ಭೀಮನು "ವಾನರಪುಂಗವ! ಮಾಡಬೇಕಾದುದನ್ನು ಸರ್ವವನ್ನೂ ಮಾಡಿದಂತಾಗಿದೆ. ನಿನ್ನ ವಾತ್ಸಲ್ಯವಿರಲಿ ಸಾಕು! ನಿನ್ನ ದಯದಿಂದ ನಾವು ಸರ್ವಲೋಕಗಳನ್ನೂ ಜಯಿಸುವೆವು. ಕೌರವರ ಲೆಕ್ಕವೇನು" ಎಂದು ಕೈ ಮುಗಿದನು. ಹನುಮಂತನು "ಆದರೂ ನಾನೀವ ವರವನ್ನು ನೀನು ಸ್ವೀಕರಿಸ ಬೇಕು. ನೀನು ಸಿಂಹಗರ್ಜನವನ್ನು ಮಾಡಿದಾಗ ನಾನೂ ನಿನ್ನೊಡನೆ ಗರ್ಜಿಸಿ, ಅದನ್ನು ಇಮ್ಮಡಿಯಾಗಿಸಿ ಶತ್ರುಭಯಂಕರನಾಗುವೆನು. ವಿಜಯರಥಧ್ವಜದಲ್ಲಿದ್ದು, ದಾರುಣಘೋಷಣವನ್ನು ಮಾಡಿ, ಕೌರವರ ಎದೆ ಬಿಚ್ಚಿ ಬೆದರುವಂತೆ ಮಾಡುವೆನು. ನಿಮಗೆ ಜಯವಾಗುವುದು" ಎಂದು ಭೀಮನನ್ನು ಬೀಳ್ಕೊಂಡನು.

ಭೀಮನು ಗಂಧಮಾದನದ ಸೌಗಂಧಿಕವನವನ್ನು ಹುಡುಕುತ್ತಾ, ನದೀ ಶೈಲ ಕಂದರಗಳನ್ನು ದಾಟಿ, ನಿರ್ಭಯನಾಗಿ ಪಯಣಿಸಿ, ಕಾಂಚನಪದ್ಮಸಮಲಂಕೃತವಾದ ದೇವನದಿಯನ್ನು ಕಂಡನು. ಅಲ್ಲಿ ಸೌಗಂಧಿಕವನವನ್ನೂ ನೋಡಿ, ಭೀಮಸೇನನು ಆನಂದಭರಿತನಾದನು. ಕೈಲಾಸಶಿಖರದ ಸಮೀಪದಲ್ಲಿದ್ದ ಆ ಸುಂದರವನವನ್ನು ನದೀತೀರವನ್ನು ಇತರರು ಪ್ರವೇಶಿಸದಂತೆ ರಾಕ್ಷಸರನೇಕರು ರಕ್ಷಿಸುತ್ತಿದ್ದರು. ಪರ್ವ-ತಾಗ್ರದಿಂದ ಇಳಿದುಬರುವ ನದಿಯಲ್ಲಿ ಬಂಗಾರದ ಕಮಲಗಳು ಅರಳಿ ನಿಂತಿದ್ದವು. ಹಂಸಸಾರಸಚಕ್ರವಾಕಾದಿ ಪಕ್ಷಿಗಳು ತೀರದಲ್ಲಿ ಕಲಕಲನಾದವನ್ನು ಮಾಡುತ್ತಿದ್ದವು. ನದೀಜಲವು ಅಮೃತನಿರ್ಮಲವಾಗಿತ್ತು. ಅಲ್ಲೇ ಸಮೀಪದಲ್ಲಿ ಯಕ್ಷಾಧ್ಯಕ್ಷನ ಪ್ರಾಸಾದವೂ ಕಂಗೊಳಿಸುತ್ತಿತ್ತು. ಲೋಕದ ರಾಮಣೀಯಕತೆ ಎಲ್ಲ ಒಟ್ಟುಗೂಡಿ ನಿಂತಿದ್ದ ಸೌಗಂಧಿಕಪುಷ್ಕರಣಿಯನ್ನು, ಒಳಗೆ ಅರಳಿದ್ದ ಸೌಗಂಧಿಕಪುಷ್ಪಗಳನ್ನು ಕಂಡು ಭೀಮಸೇನನು ನಿಶ್ಶಂಕನಾಗಿ ಪುಷ್ಕರಣಿಯಲ್ಲಿಳಿದನು.

ಕ್ರೋಧವಶರೆಂದು ಹೆಸರಾದ ರಾಕ್ಷಸರು ನೂರುಸಾವಿರ ವೀರರು ಆ ಕೊಳ ವನ್ನು ಹೊಕ್ಕ ಕನಕಾಂಗದನು, ಗದಾಖಡ್ಗಧನುರ್ಧರನು, ಅಜಿನವಸನನು, ನಿರ್ಭಯನು ಆದ ಭೀಮನನ್ನು ನೋಡಿ, ಆಶ್ಚರ್ಯಭಯಸಂಭ್ರಮಾನ್ವಿತರಾಗಿ, ಅವನನ್ನು ಸಮೀಪಿಸಿ, "ನೀನಾರು? ಏಕಿಲ್ಲಿಗೆ ಬಂದೆ?" ಎಂದು ಕೇಳಿದರು. ಭೀಮನು "ನಾನು ಪಾಂಡುಸುತ ಭೀಮಸೇನನು. ನನ್ನ ಪತ್ನಿಯಾದ ಪಾಂಚಾಲಿಯ ಪ್ರಾರ್ಥನೆಯಂತೆ ಸೌಗಂಧಿಕುಸುಮಗಳನ್ನು ಪಡೆಯಲು ಬಂದಿರುವೆನು" ಎಂದನು. ರಾಕ್ಷಸರು ನಕ್ಕು "ಇದು ಕುಬೇರನ ವಿಹಾರಭೂಮಿಯು. ಮನುಜರಿಲ್ಲಿ ಬರಬಾರದು. ಪುಷ್ಪಾಹರಣವಂತೂ ಅಸಾಧ್ಯವೇ ಸರಿ. ಕುಬೇರನಿರೋಧವನ್ನು ಮಾಡಿ ಕೆಡಬೇಡ. ಯಕ್ಷರಾಜನನ್ನು ಕೇಳಿ ಕಮಲಗಳನ್ನು ಸ್ವೀಕರಿಸು. ಇಲ್ಲದಿದ್ದರೆ ಅವನ್ನು ಕಣ್ಣೆತ್ತಿ ನೋಡುವುದೂ ಆಗದು ಹೊರಡಿಲ್ಲಿಂದ" ಎಂದು ಗರ್ಜಿಸಿದರು. ಭೀಮನು "ರಾಕ್ಷಸರೇ! ಕುಬೇರನು ಇಲ್ಲಿಲ್ಲವಲ್ಲ! ಇದ್ದರೂ ಅವನನ್ನು ಕಮಲಗಳಿಗಾಗಿ ಯಾಚಿಸುವವನಲ್ಲ ನಾನು. ಅದು ರಾಜಧರ್ಮವಲ್ಲ. ಕ್ಷತ್ರಧರ್ಮರತನಾದ ನನಗೆ

ಯಾರನ್ನೂ ಏನೂ ಯಾಚಿಸಿ ಅಭ್ಯಾಸವಿಲ್ಲ. ಈ ನದಿಯು ಪರ್ವತದಿಂದ ಹರಿದು ಬರುತ್ತಿದೆ. ಮಹಾತ್ಮನಾದ ಕುಬೇರನ ಭವನದಿಂದಲ್ಲ. ಪರ್ವತ ನದೀ ಶಾದ್ವಲಾದಿಗಳು ಯಾರ ಸೊತ್ತೂ ಅಲ್ಲ. ಇನ್ನು ಪುಷ್ಪಗಳಿಗಾಗಿ ನಾನೇಕೆ ಯಾಚಿಸಲಿ?" ಎಂದು ನುಡಿದು ಕೆಲ ಕುಸುಮಗಳನ್ನು ಆಹರಿಸಿದನು.

ಕ್ರೋಧವಶರು ಕ್ರೋಧವಶರೇ ಆದರು. ಆಯುಧಗಳನ್ನು ಪಿಡಿದೆತ್ತಿ, ಹುಂಕರಿಸುತ್ತಾ, 'ಕಡಿ! ಬಡಿ!' ಎನ್ನುತ್ತಾ ಮೇಲೇರಿಬಂದು ರಾಕ್ಷಸರು ಪಟ್ಟಿಶ ಶೂಲಗದಾಖಡ್ಗಗಳಿಂದ ಭೀಮನನ್ನು ಹೊಡೆದರು. ವಾಯು-ಕುಂತಿ ತನೂಜನು, ಬಲವಂತನು, ಶೌರ್ಯಧೈರ್ಯಸಾಹಸನಿಧಿಯು, ಶತ್ರುಸಂಹರಣ ದಕ್ಷನು, ಸತ್ಯ-ಸಂಧನು, ಧರ್ಮನಿರತನು, ಅಪ್ರಕಂಪ್ಯಪರಾಕ್ರಮನು ಆದ ಭೀಮನು ಅವರನ್ನು ತಡೆದು ನಿಲ್ಲಿಸಿ, ಮೊದಲು ವಾದದಲ್ಲಿ ಅವರನ್ನು ಗೆದ್ದನು.

"ನಾನೇ ಬ್ರಹ್ಮನು, ಜಗವೆಲ್ಲವೂ ಮಿಥ್ಯೆ, ನಾನು ಸಿದ್ಧನು, ನಾನೇ ಭೋಗಿಯು—ನನ್ನ ಹೊರತು ಈಶ್ವರನಿಲ್ಲ" ಎಂಬಿತ್ಯಾದಿ ದುರ್ಮತವನ್ನು ಖಂಡಿಸಿ, ಭೀಮಸೇನನು ಶೈವವರದಿಂದ ಅಜೇಯರೆನಿಸಿದ ಕ್ರೋಧವಶರನ್ನು ಲಕ್ಷವೀರರನ್ನು ಕೇವಲ ವೈಷ್ಣವಾಸ್ತ್ರಗಳಿಂದ ಸಂಹರಿಸಿದನು. ಹತಶೇಷರು ಕೆಲವರು ಕೈಲಾಸ ಗಿರಿಯಕಡೆ ಓಡಿಹೋದರು. ಅವರು ಕುಬೇರನನ್ನು ಕಂಡು, ಭೀಮನ ಪರಾಕ್ರಮವನ್ನು ವರ್ಣಿಸಿ ಅವನಾಡಿದ ಬಿರುನುಡಿಗಳನ್ನೂ ತಿಳಿಸಿದರು. ಕುಬೇರನು ನಕ್ಕು, ಭೀಮನು ಬೇಕಾದಷ್ಟು ಕಮಲಗಳನ್ನು ದ್ರೌಪದೀ ದೇವಿಯರಿಗಾಗಿ ಕೊಂಡೊಯ್ಯಲಿ! ಆ ಮಹಾನುಭಾವನ ಸಾಹಸಧೈರ್ಯಶೌರ್ಯಗಳು ಅಪರಿಮಿತವೆಂದು ನನಗೆ ಗೊತ್ತಿದೆ" ಎಂದು ಅವರನ್ನು ಕಳಿಸಿದನು.

ಭೀಮನು ಅಲ್ಲಿ ಕಮಲಗಳನ್ನಾರಿಸುತ್ತಿರಲು, ಧರ್ಮರಾಜನು ರಣಸೂಚಕ ದುಶ್ಶಕುನಗಳನ್ನು ಕಂಡು, ದ್ರೌಪದಿಯನ್ನು "ಭೀಮನೆಲ್ಲಿ" ಎಂದು ಕೇಳಿದನು. ಸೌಗಂಧಿಕಾಹರಣಾರ್ಥವಾಗಿ ಹೋಗಿರುವನೆಂದರಿತು, ಸಾಹಸಪ್ರಿಯನಾದ ಭೀಮನಿಗೆ ವಿಪತ್ತನ್ನು ಆಶಂಕಿಸಿದನು. ತತ್ಕ್ಷಣವೇ ಘಟೋತ್ಕಚಾದಿ ರಾಕ್ಷಸರು ಪಾಂಡವ ಪರಿವಾರವನ್ನೆಲ್ಲ ಗಂಧಮಾದನದ ಕೈಲಾಸಗಿರಿಕಂದರಕ್ಕೆ ಹೊತ್ತು ತಂದರು. ಸೌಗಂಧಿಕಾವನದಲ್ಲಿ ಭೀಮನನ್ನು ಕಂಡು, ಧರ್ಮರಾಜನು ಆನಂದತುಂದಿಲನಾದನು. ಹತ ರಾಕ್ಷಸರನ್ನು ನೋಡಿ, ಭೀತನಾಗಿ, ಧರ್ಮರಾಜನು "ಭೀಮಸೇನ! ಏನಿದು? ಎಂತಹ ಸಾಹಸ! ದೇವತೆಗಳಿಗೆ ಅಪ್ರಿಯವನ್ನು ಮಾಡಬಾರದು. ಮತ್ತೆ ಎಂದಿಗೂ ಹೀಗೆ ಮಾಡಬೇಡ!" ಎಂದು ತಮ್ಮನನ್ನು ವಾತ್ಸಲ್ಯಪೂರಿತನಾಗಿ ದಂಡಿಸಿದನು. ಪಾಂಡವರು ಕೆಲಕಾಲವಲ್ಲೇ ವಿಪ್ರಾದಿಗಳಿಂದ ಕೂಡಿ ಸುಖವಾಗಿದ್ದರು. ಕಾವಲುಗಾರರಾಗಿದ್ದ ರಾಕ್ಷಸರು ಧರ್ಮರಾಜ ಲೋಮಶರಿಂದ ಅನುನೀತರಾಗಿ ಶಾಂತರಾದರು.

ಇಂತು ಸರ್ವಕ್ಷೇತ್ರಗಳನ್ನು ಸೇವಿಸಿ, ಹರಿದ್ವಾರದಿಂದ ಬದರಿಯನ್ನು, ಅಲ್ಲಿಂದ ಹೊರಟು ನರನಾರಾಯಣಾಶ್ರಮವನ್ನು ಗಂಧಮಾದನ ಗಿರಿಯನ್ನು, ಕುಬೇರನ

ಅಲಕಾಪುರಿಯನ್ನು ಕಂಡು, ಆಕಾಶವಾಣಿಯ ಆದೇಶದಂತೆ ಮುಂದೆ ಸಾಗುವುದನ್ನು ನಿಲ್ಲಿಸಿ, ಹಿಂದಿರುಗಿದ ಪಾಂಡವರು ವೃಷಪರ್ವಾಶ್ರಮವನ್ನು ಸೇರಿದರು. ಅಲ್ಲಿಂದ ಅಲಕೆಯ ದಕ್ಷಿಣಭಾಗವು ಅವರಿಗೆ ಗೋಚರವಾಯಿತು. ಅಲ್ಲಿ ಕೆಲಕಾಲವಿರುತ್ತಿರಲು ಒಂದುದಿನ ವಾಯುವಶವಾಗಿ ಬಂದು ತನ್ನ ಮುಂದೆ ಬಿದ್ದ ಪಂಚವರ್ಣಕಮಲವನ್ನು ನೋಡಿ, ಅದಕ್ಕಾಗಿ ಆಶೆಪಟ್ಟವಳಂತೆ ದ್ರೌಪದಿಯು ಭೀಮನಿಗಿಂತೆಂದಳು—"ನಾಥ! ನೋಡೀ ಪಂಚವರ್ಣಪದ್ಮವನ್ನು. ಇದು ಕುಬೇರನ ಅಂತಃಪುರೋದ್ಯಾನಸೀಮೆ ಯದಿರಬೇಕು. ಇಂತಹ ಪುಷ್ಪಗಳನ್ನು ನನಗೆ ತಂದುಕೊಡು. ನಿನ್ನ ಹೊರತು ಮತ್ತಾರಿಂದಲೂ ಈ ಕಾರ್ಯವು ಸಾಧ್ಯವಲ್ಲ." ಪ್ರಿಯಾಭೀಷ್ಟವನ್ನು ಮಾಡು ವುದಲ್ಲದೆ, ಅಸುರನಾಶವೂ ಸಾಧಿತವಾಗುವುದೆಂದರಿತ ಭೀಮನು ಇತರಾಗಮ್ಯವಾದ ಕೈಲಾಸಗಿರಿಯನ್ನೇರಿ ಅಲಕಾಪುರಿಯ ಉದ್ಯಾನವನ್ನು ಪ್ರವೇಶಿಸಿದನು. ಪದ್ಮ ಸಂಖ್ಯಾಕವಾದ ಸೈನ್ಯಗಳು ಮೂರು, ಮಣಿಮಂತನೆಂಬ ಮಹಾದೈತ್ಯನ ನಾಯಕತ್ವ ದಲ್ಲಿ ಬಂದು, ಭೀಮನನ್ನು ತಡೆದವು. ಶಂಭುವರದಿಂದ ಅಜೇಯನಾದ ಮಣಿ ಮಂತನನ್ನು ಮೊದಲು ವಾದದಲ್ಲಿ ಸೋಲಿಸಿ, ಅನಂತರ ಮಹಾಯುದ್ಧದಲ್ಲಿ ಅವರೆಲ್ಲ ರನ್ನೂ ಭೀಮಸೇನನು ಸಂಹರಿಸಿದನು. ಕ್ರೋಧವಶರೆಂಬ ಆ ದೈತ್ಯರೆಲ್ಲರೂ ಅಂಧಂತಮಸ್ಸನ್ನು ಸೇರಿದರು. ಮಣಿಮಂತನು ಮಾತ್ರ ಮುಂದೆ ಕಲಿಯುಗದಲ್ಲಿ ಹುಟ್ಟಿ, ಮಾಯಾವಾದಮತವನ್ನು ವಿಸ್ತರಿಸಿ, ಕೊನೆಗೆ ಸ್ವಯೋಗ್ಯವಾದ ಅಧಿಕಾಂಧ-ತಮವನ್ನು ಹೊಂದುವನು.

ಮಣಿಮದಾದಿ ಪದ್ಮತ್ರಯಸಂಖ್ಯಾವಿಶಿಷ್ಟ ರಾಕ್ಷಸಬಲವನ್ನು ಸಂಹರಿಸಿದ ಭೀಮಸೇನನನ್ನು ಶಿಕ್ಷಿಸಲೆಣಿಸಿ, ಕುಬೇರನು ರಥಾರೂಢನಾಗಿ ಬಂದನು. ಅದೇ ಸಮಯದಲ್ಲಿ ಧರ್ಮರಾಜಾದಿಗಳೂ ಭೀಮನನ್ನು ಹುಡುಕುತ್ತಾ ಅಲ್ಲಿಗೆ ಬಂದರು. ಭೀಮಪಾಂಚಾಲೀಧರ್ಮರಾಜರನ್ನು ನೋಡಿದ ಕುಬೇರನ ಅಸುರಾವೇಶವು ಕಡಿಮೆ ಆಯಿತು. ಅವನಿಗೆ ಪಾಂಡವರಲ್ಲಿ ಪ್ರೀತಿ ಅಂಕುರಿಸಿತು. ತನ್ನ ಸ್ನೇಹಿತನಾದ ಮಣಿಮಂತನನ್ನು ಭೀಮನು ಕೊಂದುದರಿಂದ ಕುಪಿತನಾದ ಕುಬೇರನು "ಧರ್ಮ ರಾಜ! ನಿನ್ನ ತಮ್ಮನು ಮಣಿಮಂತನನ್ನು ಕೊಲ್ಲಲು ಕಾರಣವನ್ನು ಹೇಳುವೆನು, ಕೇಳು! ಹಿಂದೆ ನಾನು ನರವಾಹನನಾಗಿ, ಆಕಾಶಮಾರ್ಗದಿಂದ ಸ್ವರ್ಗವನ್ನು ಸೇರ ಪೋಗುತ್ತಿದ್ದೆನು. ಆಗ ಮಣಿಮದಾದಿ ಕ್ರೋಧವಶರೆಲ್ಲರೂ ನನ್ನ ಹಿಂದೆ ಬರು ತ್ತಿದ್ದರು. ಮಣಿಮಂತನು ಉಗುಳಿದಾಗ, ಅವನ ಎಂಜಲು ಕೆಳಗೆ ತಪೋನಿರತ ನಾಗಿದ್ದ ಅಗಸ್ತ್ಯನ ಮೇಲೆ ಬಿತ್ತು. ಆ ಮಹಾಮುನಿಯು ಸಿಟ್ಟಾಗಿ 'ಒಬ್ಬಮನುಷ್ಯನು ನಿಮ್ಮನ್ನೆಲ್ಲ ಸಂಹರಿಸುವನು' ಎಂದು ಮೂರುಪದ್ಮ(ನೂರು ಕೋಟಿ=ಒಂದುಪದ್ಮ) ಗಳ ದೈತ್ಯರನ್ನು ಶಪಿಸಿದನು. ಅಂತೆಯೇ ಭೀಮಸೇನನು ಆ ಶಾಪವನ್ನು ಸತ್ಯ ವಾಗಿಸಿರುವನು. ಇದು ನನಗೆ ಮಾಡಿದ ಮಹಾಪಚಾರವು. ಆದರೂ ಧರ್ಮ ರಾಜ! ನಾನದನ್ನು ಕ್ಷಮಿಸಿರುವೆನು. ದೈತ್ಯರ ಕಾಟವನ್ನು ತಪ್ಪಿಸಿದ ಭೀಮನಿಗೆ

ನಾನು ಋಣಿಯಾಗಿರುವೆನು" ಎಂದು ಪಾಂಡವರನ್ನು ತನ್ನ ಪುರದಲ್ಲೇ ಇಟ್ಟುಕೊಂಡು ಸತ್ಕರಿಸಿದನು. ಇಂತು ಪಾಂಡವರು ನಾಲ್ಕು ವರ್ಷಗಳು ಅಲ್ಲಿ ವಾಸಮಾಡುವಾಗ ಒಂದುದಿನ ನಡೆದ ವಿಚಿತ್ರವನ್ನು ಕೇಳು—

ಜಟಾಸುರನೆಂಬ ರಾಕ್ಷಸನು ಬ್ರಾಹ್ಮಣವೇಷದಿಂದ ಬಂದು ಅವರೊಡನೆ ಇರುತ್ತಿದ್ದನು. ಅವನು ದ್ರೌಪದಿಯನ್ನು ಅಪಹರಿಸಲು ಕಾದಿದ್ದನು. ಒಂದುದಿನ ಭೀಮಸೇನನು ಬೇಟೆಗೆಂದು ಹೋಗಿದ್ದನು. ಘಟೋತ್ಕಚಾದಿ ರಾಕ್ಷಸವೀರರೂ ದಿಕ್ಕಿಗೊಬ್ಬರಂತೆ ವಿಹರಿಸಲು ಹೋಗಿದ್ದರು. ಲೋಮಶಾದಿ ತಪೋಧನರು ಸ್ನಾನಕ್ಕೆಂದು ಕೆಲವರು, ಪುಷ್ಪಫಲಗಳಿಗಾಗಿ ಕೆಲವರು ಹೋಗಿದ್ದರು. ಅದೇ ಸಮಯವೆಂದು ತಿಳಿದು ಜಟಾಸುರನು, ಪಾಂಡವರ ಶಸ್ತ್ರಾಯುಧಗಳನ್ನೂ ದ್ರೌಪದಿಯನ್ನೂ ಧರ್ಮ ನಕುಲ ಸಹದೇವರನ್ನೂ ಬಲದಿಂದ ಹಿಡಿದೆತ್ತಿಕೊಂಡು ಓಡತೊಡಗಿದನು. ಸಹದೇವನು ಉಪಾಯದಿಂದ ತಪ್ಪಿಸಿಕೊಂಡು, ಭೀಮನನ್ನು ಕೂಗತೊಡಗಿದನು.

ಧರ್ಮರಾಜನು "ರಾಕ್ಷಸ! ಧರ್ಮವನ್ನು ಪಶುಪಕ್ಷ್ಯಾದಿಗಳೂ ಮೀರಿ ನಡೆಯುವುದಿಲ್ಲ. ಇತರ ಸರ್ವಜೀವರು ಮನುಜರನ್ನವಲಂಬಿಸಿ ಜೀವಿಸುವುವು. ಮನುಜರಿಗೆ ಕೇಡುಮಾಡಲೆಣಿಸಿದವನಿಗೆ ಶ್ರೇಯಸ್ಸಿಲ್ಲ. ನಾವು ಲೋಕರಕ್ಷಕರಾದ ಕ್ಷತ್ರಿಯರು. ನಮಗೆ ಅಹಿತವನ್ನು ಮಾಡಿದರೆ ಲೋಕವು ನಷ್ಟವಾಗುವುದು. ನಾವು ನಿನಗೆ ಅಪಕಾರ ಮಾಡಿಲ್ಲ. ದೇವ ಋಷಿ ವಿಪ್ರ ಪೂಜಕರಾದ ನಮಗೆ ದ್ರೋಹಮಾಡಬೇಡ! ನಮ್ಮ ಮನೆಯಲ್ಲಿ ಸುಖದಿಂದಿದ್ದು, ನಾವಿತ್ತ ಅನ್ನವನ್ನುಂಡು, ನಮಗೇ ಕೇಡನ್ನು ಬಗೆಯುವುದುಚಿತವಲ್ಲ. ನಮ್ಮ ಶಸ್ತ್ರಗಳನ್ನು ಕೊಡು! ಯುದ್ಧಮಾಡಿ ಗೆದ್ದು ದ್ರೌಪದಿಯನ್ನು ಹರಿಸು! ದ್ರೌಪದಿಯನ್ನು ಸ್ವೀಕರಿಸಲೆಣಿಸುವುದೆಂದರೆ, ವಿಷವನ್ನು ಕುಡಿದಂತೆ ಎಂದು ತಿಳಿ" ಎಂದು ಅತಿಭಾರನಾದನು. ಧರ್ಮರಾಜನ ಗುರುತ್ವಗುಣದಿಂದ ಜಟಾಸುರನ ವೇಗವು ಕುಂಠಿತವಾಯಿತು. ಸಹದೇವನು "ನಿಲ್ಲು! ನಿಲ್ಲು! ನಿನ್ನನ್ನು ಕೊಲ್ಲದೆ ಬಿಡೆನು" ಎಂದು ಅವನನ್ನು ಸಮೀಪಿಸಿದನು. ಆಗ ಯದೃಚ್ಛೆಯಿಂದ ಭೀಮಸೇನನು ಅಲ್ಲಿಗೆ ಬಂದನು. ದುಷ್ಟಜಟಾಸುರನ ಕುಚೇಷ್ಟೆಯಿಂದ ಕುಪಿತನಾಗಿ, ಕುಂತೀಸುತ ಮಧ್ಯಮನು ಇಂತೆಂದನು—"ದುರ್ಮಾರ್ಗ! ಶಸ್ತ್ರಗಳ ಮೇಲೆ ಕೆಟ್ಟಕಣ್ಣಿಟ್ಟ ನಿನ್ನನ್ನು ಮೊದಲೇ ಅರಿತಿದ್ದೆನು. ಬ್ರಾಹ್ಮಣರೂಪದಲ್ಲಿದ್ದುದರಿಂದ ಉಳಿದೆ. ನಿನ್ನ ಪಾಪವು ಹಣ್ಣಾಯಿತು. ಮೀನು ಮಾಂಸದ ಆಸೆಗೆ ಗಾಳವನ್ನು ನುಂಗಿದಂತೆ ಸಿಕ್ಕಿಬಿದ್ದಿರುವೆ. ಬಕಹಿಡಿಂಬರ ಹಿಂದೆ ನಿನ್ನನ್ನು ಕಳಿಸುವೆನು. ಕಾದುಕೊ" ಹೀಗೆಂದು ಮೇಲೇರಿಬಂದ ಭೀಮನಿಗೆ ಹೆದರಿ, ಜಟಾಸುರನು ಧರ್ಮನಕುಲಪಾಂಚಾಲಿಯರನ್ನು ಕೆಳಗಿಳಿಸಿ, ಭೀಮನೊಡನೆ ಕಾದಲು ಧಾವಿಸಿ ಬಂದನು. ರೋಷದಿಂದ ತುಟಿಯು ಅಲುಗುತ್ತಿರಲು ಅವನು "ಭೀಮ! ನಿನ್ನ ರಕ್ತದಿಂದ ಬಕ ಹಿಡಿಂಬ ಕಿರ್ಮೀರರಿಗೆ ತರ್ಪಣ ಕೊಡುವೆನು. ನಿಲ್ಲು ಯುದ್ಧದಲ್ಲಿ" ಎಂದು ಕೈಗಳನ್ನು ಚಾಚಿ, ಬಾಹುಯುದ್ಧವನ್ನು ಮಾಡಿದನು.

ತನಗೆ ಸಹಾಯ ಮಾಡಲು ಹವಣಿಸುವ ನಕುಲಸಹದೇವರನ್ನು ನಿವಾರಿಸಿ, ಭೀಮನು ರಾಕ್ಷಸನೊಡನೆ, ಸೆಣಸಿ ಕಾದಿದನು. ವಾಲಿಸುಗ್ರೀವರಂತೆ, ವೃತ್ರವಾಸವರಂತೆ, ಅವರು ತೀವ್ರ ಯುದ್ಧನಿರತರಾದರು. ವೃಕ್ಷಯುದ್ಧದಲ್ಲಿ ಗಿಡಗಳು ಪುಡಿಯಾದವು. ಬಂಡೆಗಳು ನುಚ್ಚಾದವು. ಸಿಂಹನಾದಗಳಿಂದ ದಿಕ್ಕುಗಳು ಮಾರ್ದೊಳಗಿದವು. ಭುಜಾಭುಜಿಯಾಗಿ, ಕಾದುವ ರಾಕ್ಷಸಪಾಂಡವರ ಮುಷ್ಟಿಯುದ್ಧವು ಭಯಾನಕ ವಾಯಿತು. ಜಟಾಸುರನು ಶ್ರಾಂತನಾದುದನ್ನು ಕಂಡು, ಭೀಮನು ವಿಜೃಂಭಿಸಿ, ಅವನನ್ನೆತ್ತಿ ಗಿರಗಿರನೆ ತಿರುಗಿಸಿ, ನೆಲಕ್ಕಪ್ಪಳಿಸಿ, ಕೊಂದನು. ಭೀಮಸೇನನ ಪರಾಕ್ರಮದಿಂದ ಸಂತುಷ್ಟರಾಗಿ, ಮುನಿ ಗಂಧರ್ವರು ಅವನನ್ನು ಪ್ರಶಂಸಿಸಿ ಪಾಡಿದರು.

ಧರ್ಮರಾಜನು ಪ್ರೇಮಾರ್ದ್ರನಯನನಾಗಿ, ಭೀಮನನ್ನಪ್ಪಿದನು. ಪಾಂಡವರು ಐದು ವರ್ಷದ ವನವಾಸವನ್ನು ಕಳೆದರು. ಅರ್ಜುನನು ದೇವಲೋಕದಿಂದ ಬರುವನೆಂದು ಅವನಿಗಾಗಿ, ಮಳೆಗಾಗಿ ಕಾದಿರುವ ಚಾತಕಪಕ್ಷಿಗಳಂತೆ ಮರುಗುತ್ತಿದ್ದರು. ಗಂಧಮಾದನ ಪರ್ವತದ ಕೈಲಾಸ ಮೈನಾಕ ಗಿರಿಗಳ ಕಂದರಗಳಲ್ಲಿ ಸುಖವಾಗಿದ್ದರೂ ಅರ್ಜುನನ ವಿರಹವಹ್ನಿಯು ಅವರ ಹೃದಯಕುಹರದಲ್ಲಿ ಆರದೆ ಉರಿಯುತ್ತಿತ್ತು. ವೃಷಪರ್ವಾಶ್ರಮದಲ್ಲಿ ಮತ್ತೇಳು ದಿನಗಳನ್ನು ಕಳೆದು, ಪಾಂಡವರು ಪ್ರಯಾಣವನ್ನು ಬೆಳೆಸಿ ನಾಲ್ಕನೆ ದಿನ ಕಿಂಪುರುಷಖಂಡವನ್ನು ಸೇರಿದರು. ಕರ್ಣಸುಖಶಬ್ದಗಳನ್ನು ಕೇಳುತ್ತ ಪಾಂಡವವೀರರು ದ್ರೌಪದೀಸಹಿತರಾಗಿ ನಾನಾಫಲಪುಷ್ಪವೃಕ್ಷಮಂಡಿತವಾದ ಗಂಧಮಾದನ ಗಿರಿಯ ಸಾನುಪ್ರದೇಶದಲ್ಲಿ ಕೆಲದಿನ ವಾಸಮಾಡುತ್ತಿದ್ದರು.

"ಭೀಮಸೇನ! ನೋಡು ಈ ವನದ ರಾಮಣೀಯಕತೆಯನ್ನು! ಗಂಧವತ್ಪುಷ್ಪಗಳು, ರಸವತ್ಫಲಗಳು ತುಂಬಿದ ವೃಕ್ಷಖಂಡಗಳು ದಟ್ಟವಾಗಿ ಬೆಳೆದು ನಿಂತು, ವನವನ್ನು ಸಂತಸಚ್ಛಾಯಾಸುಂದರವಾಗಿಸಿವೆ. ಫಲವಿಲ್ಲದ, ಮುಳ್ಳುಳ್ಳ ಗಿಡಗಳಿಲ್ಲಿಲ್ಲ. ಕಮಲೋತ್ಪಲಮಾಲಿನಿಯಾಗಿರುವ ಈ ನಲಿನಿಯನ್ನು ಕಂಡೆಯಾ? ಪೂಮಾಲೆ ಧರಿಸಿ ನಿಂತ ವನರಮಣಿಯಂತಿದೆ. ದೇವಭೂಮಿಯಲ್ಲಿ ಪ್ರವೇಶಿಸಿ, ನಾವೂ ಅಮರಸದೃಶರಾದಂತೆ ನನಗೆ ಭಾಸವಾಗುತ್ತಿದೆ. ತಿಲಕವನ್ನಿಟ್ಟು, ಸಹಕಾರ ಮನೋರಮೆಯಾಗಿ, ಕಲಹಂಸರವದಿಂದ ಸ್ವಾಗತವನ್ನೀವ ವನದೇವತೆಯನ್ನು ವೀಕ್ಷಿಸು! ಅವಳು ಶಿರದಲ್ಲಿಟ್ಟ ಪೂಮಾಲೆಯಂತೊಪ್ಪುವ ಗಿರಿಶಿಖರಗಳ ಮೇಲೆ ಹಬ್ಬಿರುವ ಹೂಬಳ್ಳಿಗಳು ಎಷ್ಟು ಸೊಗಸಾಗಿವೆ!" ಎಂದು ಧರ್ಮರಾಜನು ತಮ್ಮನಿಗೆ ಆ ಗಿರಿಕಂದರವನ್ನು ಬಣ್ಣಿಸಿದನು. ಮುಂದೆ ವೃಷಪರ್ವಾಶ್ರಮದಿಂದ ಬಂದ ಪಾಂಡವರು ಅಕೃತವ್ರಣನ ಆಶ್ರಮವನ್ನು ಸೇರಿದರು. ಅಲ್ಲಿ ಪರ್ವತಗುಹೆಗಳಿಂದ ಭೇರಿ ಶಂಖ ನಾದಗಳು ಕೇಳಿಬರುತ್ತಿದ್ದವು. ಪರ್ವಕಾಲಗಳಲ್ಲಿ ವೈಶ್ರವಣನು ಯಕ್ಷರಿಂದ ಕೂಡಿ, ಅಲ್ಲಿ ಸ್ನಾನದಾನಾದಿಗಳನ್ನು ಮಾಡಲು ಬರುತ್ತಿದ್ದನು. ಆವನ ದರ್ಶನದಿಂದ ದೇವ ದಾನವ ಸಿದ್ಧ ರಾಕ್ಷಸರು ಪಾವನರಾಗುವರು. ಕುಬೇರನು ಪಾಂಡವರನ್ನು ನೋಡಿ ಪ್ರೀತನಾಗಿ, ಅವರಿಗೆ ಅನ್ನಪಾನ ಶಯನಾದಿ ಸಕಲಸೌಕರ್ಯಗಳನ್ನು ಒದಗಿಸುವಂತೆ ಅನೇಕ

ಯಕ್ಷಭಟರಿಗೆ ಆಜ್ಞಾಪಿಸಿದನು. ಧರ್ಮ ವಾಯು ಶಕ್ರ ಅಶ್ವಿನೀ ವರಸಂಜಾತರೂ ತದಂಶರೂ ಆದ ಪಾಂಡವರ ಗುಣಗಳನ್ನು ಪ್ರಶಂಸಿಸಿ, ಅರ್ಜುನನು ಶಕ್ರಲೋಕದಲ್ಲಿ ಸುಖವಾಗಿರುವನೆಂದು ತಿಳಿಸಿದನು. ಬೇಗನೆ ಬರುವನೆಂದು ಭರವಸೆ ಇತ್ತು ಸಂತೋಷಪಡಿಸಿದನು. ಶತ್ರುಮರ್ದನನೂ, ಸುಹೃಜ್ಜನಾನಂದವರ್ಧನನೂ ಆಗೆಂದು ಭೀಮನನ್ನು ಹರಸಿ, ಕುಬೇರನು ಸಪರಿವಾರನಾಗಿ ಅಲಕಾನಗರಕ್ಕೆ ತೆರಳಿದನು.

ಒಂದುದಿನ ಧೌಮ್ಯನು ಧರ್ಮರಾಜನನ್ನು ನೋಡಿ, ಆ ಪುಣ್ಯದೇಶವನ್ನು ವರ್ಣಿಸುತ್ತಾ, ಇಂತು ನುಡಿದನು—'ಧರ್ಮರಾಜ! ಇದು ಮಂದರಗಿರಿಯು. ಪೂರ್ವದಲ್ಲಿ ಇಂದ್ರಾಗ್ನಿಗಳು, ದಕ್ಷಿಣದಲ್ಲ ಯಮ ನಿರ್ಋತಿಗಳು, ಪಶ್ಚಿಮದಲ್ಲಿ ವರುಣ ವಾಯುಗಳು, ಉತ್ತರದಲ್ಲಿ ಕುಬೇರ ಶಿವರು, ತಮ್ಮ ನಗರದಲ್ಲಿ ವಿರಾಜಿಸುತ್ತಾ, ಮೇರುಮಂದರ ಕಂದರಗಳಲ್ಲಿ ಸುಂದರೀಸಹಿತರಾಗಿ ಕ್ರೀಡಿಸುತ್ತಿರುವರು. ಮೇರು ವಿನ ಶಿಖರದಲ್ಲಿ ಶತಕೋಟಿಯೆಂಬ ಬ್ರಹ್ಮಸಭೆ ಇದೆ. ಬ್ರಹ್ಮದೇವನಿರುವ ಸತ್ಯ ಲೋಕವು ಬೇರೆ. ಅದು ಎಲ್ಲ ಲೋಕಗಳಲ್ಲಿಯೂ ಉತ್ತಮವೆನಿಸಿದೆ. ಸತ್ಯಲೋಕ ದಿಂದಲು ಮೇಲಿರುವ ವೈಕುಂಠವು ಶ್ರೀವಿಷ್ಣುವಿನ ಆವಾಸವಾಗಿದೆ. ಅಲ್ಲಿ ಸೇರಿದ ಪುಣ್ಯವಂತರಿಗೆ ಮತ್ತೆ ಜನನ ಮರಣ ರೂಪ ಸಂಸಾರಬಂಧವಿಲ್ಲ. ಅಲ್ಲಿ ಶ್ರೀನಾರಾ ಯಣನೇ ಪ್ರಭಾಕರನಾಗಿ, ಆ ಲೋಕವನ್ನು ಬೆಳಗುವನು. ಮೇರುವಿನ ಪೂರ್ವ ಶಿಖರಲ್ಲಿ ಶ್ರೀಹರಿಯ ಸ್ಥಾನವಿನ್ನೊಂದಿದೆ. ಅಲ್ಲಿ ಸರ್ವಸ್ವತಂತ್ರನಾದ ಶ್ರೀಹರಿಯು ಯೋಗಿ ಸಿದ್ಧ ಸೇವಿತ ಚರಣಾರವಿಂದನಾಗಿ, ಲಕ್ಷ್ಮೀದೇವಿಯೊಡಗೂಡಿ, ಭಕ್ತಾಭೀಷ್ಟ- ಪ್ರದನಾಗಿರುವನು. ಮೇರುಪರ್ವತವನ್ನು ಸುತ್ತುವ ಸೂರ್ಯಚಂದ್ರಾದಿಗ್ರಹ ಗಳು, ಶಿಂಶುಮಾರಗತಿವಿಶೇಷದಿಂದ ತನ್ನ ಸುತ್ತು ತಾನೇ ತಿರುಗುವ ಭೂಮಿಯ ಪ್ರಜರಿಗೆ ದಿವಾರಾತ್ರಗಳನ್ನು ವಿಂಗಡಿಸುವರು. ಗ್ರೀಷ್ಮದಲ್ಲಿ ಸೆಳೆದ ನೀರನ್ನು ವರ್ಷಾಕಾಲದಲ್ಲಿ ಕೊಡುವ ಸೂರ್ಯನಂತೆ ಶ್ರೀವಿಷ್ಣುವು ಪ್ರಳಯಕಾಲದಿ ನುಂಗಿದ ಜಗತ್ತನ್ನು ಮತ್ತೆ ಸೃಷ್ಟಿಕಾಲದಲ್ಲಿ ಹೊರಹಾಕಿ, ಸಕಲಜೀವರ ಸಾಧನವು ನಡೆಯು ವಂತೆ ಉಪಕರಿಸುವನು. ಸದಾ ನಿರ್ನಿದ್ರನಾಗಿ, ಲೋಕಮಂಗಳವನ್ನು ಸಾಧಿಸುವ ಶ್ರೀನಾರಾಯಣನಿಗೆ ನಮಸ್ಕಾರವು. ಕಲಾ ಕಾಷ್ಠಾ ದಿವಾ ರಾತ್ರಗಳೆಂಬ ವಿಭಾಗ ದಿಂದ ವಿರಾಜಿಸುವ ಕಾಲಚಕ್ರವನ್ನು ನಡೆಸುವ ಪುಂಡರೀಕಾಕ್ಷನಿಗೆ ನಮಃ.

## ಅರ್ಜುನಾಗಮನ—ನಿವಾತಕವಚರ ಸಂಹಾರ

ವೈಶಂಪಾಯನನು ಜನಮೇಜಯನಿಗೆ ಅರ್ಜುನವಿಕ್ರಮವನ್ನು ವರ್ಣಿಸುತ್ತಾ ಇಂತೆಂದನು—

ರಾಜನ್! ನಿಮ್ಮ ಪೂರ್ವ ಪಿತಾಮಹರು ಗಂಧಮಾದನದಲ್ಲಿ ಆನಂದದಿಂದ ವಾಸಮಾಡುತ್ತಾ, ಅರ್ಜುನಾಗಮನವನ್ನು ನಿರೀಕ್ಷಿಸುತ್ತಿದ್ದರು. ಅರ್ಜುನನು ನಾಗ- ಲೋಕದಲ್ಲಿ ಐದು ವರ್ಷವಿದ್ದು ದಿವ್ಯಾಸ್ತ್ರಗಳನ್ನು ಇಂದ್ರಾದಿ ದೇವ ಪ್ರಸಾದದಿಂದ

ಸಂಪಾದಿಸಿ ಹಿಂದಿರುಗಿಬಂದನು. ಆಗ್ನೇಯ, ವಾರುಣ, ಸೌಮ್ಯ, ವಾಯವ್ಯ, ಐಂದ್ರ, ಪಾಶುಪತ, ಬ್ರಾಹ್ಮ, ಪಾರಮೇಷ್ಠ್ಯ, ಪ್ರಾಜಾಪತ್ಯ, ಕೌಬೇರ, ಯಾಮ್ಯ, ಪರ್ಜನ್ಯ, ಪರ್ವತ, ವಜ್ರ, ತ್ವಾಷ್ಟ್ರವೆಂಬ ಹದಿನೈದು ದಿವ್ಯಾಸ್ತ್ರಗಳನ್ನು ಪಡೆದು, ದಿವ್ಯತೇಜೋವಿರಾಜಮಾನನಾಗಿ ಬಂದ ಅರ್ಜುನನ ದರ್ಶನದಿಂದ ಪಾಂಡವರು ಪರಮಪ್ರೀತರಾದರು. ಮಿಂಚಿನಂತೆ ಹೊಳೆಯುವ ರಥದಿಂದ ಮೇಘಮಂಡಲ ದಿಂದಿಳಿದ ಮಹೋಲ್ಕೆಯಂತೆ ಕೆಳಗಿಳಿದು ಬಂದ ಅರ್ಜುನನು ಧರ್ಮ ಭೀಮರಿಗೆ ವಂದಿಸಿ ನಕುಲ ಸಹದೇವರಿಗಾಶೀರ್ವದಿಸಿ, ದ್ರೌಪದಿಯನ್ನು ಪ್ರೇಮಾರ್ದ್ರನಯನ ನಾಗಿ ವೀಕ್ಷಿಸಿ ಸೋದರರ ಸಮೀಪದಲ್ಲಿದ್ದ ಧೌಮ್ಯಾದಿ ವಿಪ್ರರಿಗೆ ಅಭಿನಮಿಸಿ, ಸುಖಾಸೀನನಾದನು. ಮಾತಲಿಯು ಹೃಷ್ಟರಾದ ಪಾಂಡವರು ಪರಮಾದರದಿಂದ ಮಾಡಿದ ಸತ್ಕಾರವನ್ನು ಸ್ವೀಕರಿಸಿ, ಮತ್ತೆ ತ್ರಿದಿವೇಶನಲ್ಲಿಗೆ ತೆರಳಿದನು. ಅರ್ಜುನನು ಪ್ರಿಯತಮಳಾದ ದ್ರೌಪದಿಗೆ ದೇವೇಂದ್ರನು ಕೊಟ್ಟುಕಳಿಸಿದ ದಿವ್ಯಾಭರಣ ಗಳನ್ನಿತ್ತನು. ಅರ್ಜುನನ ಅಮರಾವತೀ ವಾಸ ಕಾಲದ ಕಥಾಲಾಪದಿಂದ ಪಾಂಡ ವರು ಆ ರಾತ್ರಿಯನ್ನು ಆನಂದದಿಂದ ಕ್ಷಣದಂತೆ ಕಳೆದರು.

ಮರುದಿನ ಬೆಳಗಾಗಲು ಕಾಲ್ಯಕೃತ್ಯಗಳನ್ನು ಮಾಡಿ ಅಗ್ನಿಗಾಹುತಿಗಳನ್ನಿತ್ತು ಮಾತಾಡುತ್ತಿದ್ದ ಪಾಂಡವರನ್ನು ನೋಡಲು, ದೇವರಾಜನು ಸ್ವರ್ಗದಿಂದಿಳಿದು ಬಂದನು. ಬಂದ ಸಂಕ್ರಂದನನಿಗೆ ಅಭಿಗಮಿಸಿ, ಕರೆತಂದು, ಅಭಿನಮಿಸಿ, ಪಾಂಡು ರಾಜಕುಮಾರರು, ಆಸನವಿತ್ತು ಕೂಡಿಸಿದರು. ಅವರಿತ್ತ ಪೂಜೆಯನ್ನು ಸ್ವೀಕರಿಸಿ, ದೇವೇಂದ್ರನು ಆನಂದಭರಿತನಾಗಿ ಧರ್ಮರಾಜನಿಗಿಂತೆಂದನು—"ಧರ್ಮರಾಜ ! ನಿನಗೆ ಮಂಗಳವಾಗಲಿ! ವನಾಜ್ಞಾತವಾಸಗಳು ಮುಗಿಯುತ್ತಿರಲು, ರಣದಲ್ಲಿ ಕೌರವ ರನ್ನು ಗೆದ್ದು ಸಕಲ ಭೂಮಂಡಲವನ್ನು ಏಕಛತ್ರಾಧಿಪನಾಗಿ ಆಳುವೆ. ಶ್ರೀ ಶಂಕರ ನಿಂದಲು, ನಮ್ಮಿಂದಲು ದಿವ್ಯಾಸ್ತ್ರಗಳನ್ನು ಪಡೆದುಬಂದಿರುವ ಅರ್ಜುನನು ದಾವಾಗ್ನಿ ಯಂತೆ ಉರಿದೆದ್ದು ರಣಾಟವಿಯಲ್ಲಿ ಕಂಟಕಕರ್ಕಶನಾಗಿ ಬೆಳೆದಿರುವ ಕೌರವವಂಶ ಜಾತವನ್ನು ನಾಶಮಾಡುವನು. ಭೀಮಸೇನ ಪ್ರಭಂಜನನು ಮಹಾವೇಗದಿಂದ ವಿಜೃಂಭಿಸಿದಾಗ ಕೌರವ ವೀರ ಪಲಾಲಜಾತವು ದಿಕ್ಕೆಟ್ಟು ಚದರಿ ಪೋಗುವುದು, ಸಂಶಯವಿಲ್ಲ. ಕುಬೇರಾವಾಸವನ್ನು ಬಿಟ್ಟು ಮತ್ತೆ ಕಾಮ್ಯಕವನದಲ್ಲಿ ಕೆಲದಿನವಿರು" ಇಂತು ಶುಭಾಶಾಸನವಿತ್ತು, ಪಾಕಶಾಸನನು ಸ್ವರ್ಗಲೋಕಕ್ಕೆ ಹಿಂದಿರುಗಿದನು.

ಆಗ ತನಗೆ ನಮಸ್ಕರಿಸಿದ ಅರ್ಜುನನನ್ನು ಆಶೀರ್ವದಿಸಿ, ಅಪ್ಪಿ, ತಲೆಮೂಸಿ, ಸಮೀಪದಲ್ಲಿ ಕೂಡಿಸಿಕೊಂಡು, ಧರ್ಮರಾಜನು, "ಅರ್ಜುನ! ಸ್ವರ್ಗಲೋಕವನ್ನು ಸೇರದ ಮುನ್ನ ಪರಮೇಶನ ಪರಮಾನುಗ್ರಹದಿಂದ ಪಾಶುಪತವನ್ನು ಪಡೆದ ಬಗೆ ಹೇಗೆ? ಸ್ವರ್ಗಲೋಕದಲ್ಲಿ ಇಂದ್ರಾದಿ ವೃಂದಾರಕ ಪರಿವೃಢರು ನಿನ್ನಲ್ಲಿ ದಯೆ ದೋರಿ ಇತ್ತ ದಿವ್ಯಾಸ್ತ್ರಗಳಾವುವು ? ಅಲ್ಲಿ ವರ್ಷ ಪಂಚಕವನ್ನು ಎಂತು ಕಳೆದೆ ? ನೀನು ದೇವೇಂದ್ರನ ಸೇವೆಯನ್ನು ಮಾಡಿದ ರೀತಿಯನ್ನು ನಮಗೆ ಕರ್ಣಾನಂದವಾಗಿ

ತಿಳಿಸು" ಎಂದು ಕೇಳಿದನು. ಅರ್ಜುನನು ಶ್ರೀ ಶಿವನಿಂದ ತಾನು ಪಡೆದುಬಂದ ಪಾಶುಪತ ದಿವ್ಯಾಸ್ತ್ರವನ್ನು ಅವರೆಲ್ಲರಿಗೆ ತೋರಿಸಿ, ಶ್ರೀ ಶಂಕರನು ಕಿರಾತರೂಪಿಯಾಗಿ ಬಂದು, ಮೂಕಾಸುರನನ್ನು ಕೊಂದು, ತನ್ನನ್ನೂ ಪರೀಕ್ಷಿಸಿ, ತನ್ನ ಧೈರ್ಯಸಾಹಸ ಗಳಿಗೆ ಮೆಚ್ಚಿ, ವಿಷ್ಣು ದೇವತಾಕವೂ, ರುದ್ರರ್ಷಿಕವೂ ಆದ ಪಾಶುಪತವನ್ನು ಕರುಣಿಸಿದ ಬಗೆಯನ್ನು ವಿಸ್ತಾರವಾಗಿ ವರ್ಣಿಸಿದನು. ಮುಂದೆ ದೇವೇಂದ್ರನು ಶಂಕರಕರಸ್ಪರ್ಶ ದಿಂದ ಪಾವಿತನಾದ ತನ್ನನ್ನು ದೇವಲೋಕಕ್ಕೆ ಕರೆತರಿಸಿದ ವೃತ್ತಾಂತವನ್ನು, ಊರ್ವಶಿ ಕೊಟ್ಟ ಶಾಪವು ಕೂಡ ಅಜ್ಞಾತವಾಸ ಕಾಲದಲ್ಲಿ ಉಪಕಾರಕವಾಗುವಂತೆ ಅನುಗ್ರಹಿಸಿದ ದೇವರಾಜನ ದಯಾಪೂರ್ಣ ಗಾಥೆಯನ್ನು ಇಂದ್ರ, ಅಗ್ನಿ, ಯಮ, ವರುಣ, ವಾಯು, ಕುಬೇರಾದಿ ದೇವವಲ್ಲಭರು ತಂತಮ್ಮ ದಿವ್ಯಾಸ್ತ್ರಗಳನ್ನು ತನಗಿತ್ತು ಅನುಗ್ರಹಿಸಿದ ವಿವರವನ್ನು ಅಣ್ಣನಿಗೆ ನಿವೇದಿಸಿದನು. ಸಾಮಾನ್ಯ ಮನುಜರಿಂದ ಯುದ್ಧವಾದಾಗ ಪ್ರಯೋಗಿಸಬಾರದೆಂಬ ದೇವೇಂದ್ರನ ಕಟ್ಟಪ್ಪಣೆಯಂತೆ, ಆ ದಿವ್ಯಾಸ್ತ್ರಗಳನ್ನು ಮಹಾ ಆಪತ್ತಿನಲ್ಲಲ್ಲದೆ ಪ್ರಯೋಗಿಸೆನೆಂದು ತಿಳಿಸಿ, ಅಂತಹ ದಿವ್ಯಾಸ್ತ್ರದ ಬಲದಿಂದಲೂ, ವೃಕೋದರನ ಬಲ ಸಹಾಯಗಳಿಂದಲೂ ಕೌರವ ವೀರರನ್ನು ಗೆದ್ದು, ಧರ್ಮಸಿಗೆ ಪಟ್ಟಗಟ್ಟುವೆನೆಂದು ದಿಟ್ಟತನದಿಂದ ನುಡಿದನು. ವಿಶ್ವಾವಸು ಪುತ್ರನಾದ ಚಿತ್ರಸೇನನಿಂದ ತಾನು ಕಲಿತುಬಂದ ಗಾಂಧರ್ವ ವಿದ್ಯಾ-ಪಾಟವವನ್ನು ಸದುಪಯೋಗಪಡಿಸಿ, ಸಮಯ ನಿರ್ವಹ ಮಾಡುವೆನೆಂದನು.

ಇಂತು ನುಡಿದ ಅರ್ಜುನನು, ದೇವೇಂದ್ರನು ತನಗಿತ್ತ ದಿವ್ಯ ಕಿರೀಟ, ಕುಂಡಲ, ಕವಚ, ಶಂಖಗಳನ್ನು ಸಹೋದರರಿಗೆ ತೋರಿ, ತಾನು ಇಂದ್ರನ ಸೇವೆ ಮಾಡಿದ ರೀತಿಯನ್ನು ಪ್ರೀತಿಯಿಂದ ವರ್ಣಿಸುತ್ತ ಇಂತೆಂದನು—

"ಅಣ್ಣ! ಒಂದು ದಿನ ಮಾತಲಿಯು ಬಂದು ದೇವರಾಜನು ನನ್ನನ್ನು ನೋಡಲು ಕೋರಿ, ಹೇಳಿಕಳಿಸಿರುವನೆಂದನು. ನಾನಾಗ ಮಹೇಂದ್ರನ ಮಮತೆಗೆ ಮಾರುಹೋಗಿ, ಮಾತಲಿಯು ತಂದ ಮಹಾರಥದಲ್ಲಿ ಕೂತು, ದೇವೇಂದ್ರನ ದಿವ್ಯ ಪ್ರಾಸಾದವನ್ನು ಸೇರಹೊರಟೆನು. ಕೇಳು! ಮಾತಲಿಯು ನನಗೆ ಸ್ವರ್ಗಸೀಮೆಯ ಕೆಲ ವಿಶೇಷಗಳನ್ನು ತೋರಿಸಿದನು. ಅವನ್ನು ಕಂಡು ನಾನು ಆನಂದಾಶ್ಚರ್ಯ ತರಂಗತುಂದಿಲಮನಸ್ಕನಾದೆನು.

"ದಿವ್ಯ ತುರಗ ವೇಗದಿಂದ ರಥವು ಸ್ವರ್ಗ ಭೂತಲವನ್ನು ಬಿಟ್ಟು, ಆಕಾಶದಲ್ಲಿ ಹಾರಿಹೋಗುವ ವಿಮಾನದಂತಿತ್ತು. ಅಷ್ಟು ವೇಗದಿಂದ ಚಲಿಸುವ ರಥದಲ್ಲಿದ್ದರೂ, ನಿಶ್ಚಲನಾಗಿರುವ ನನ್ನ ಧೈರ್ಯವನ್ನು ಮೆಚ್ಚಿ ಮಾತಲಿಯು 'ತಂದೆಗೆ ತಕ್ಕ ತನಯ' ನೆಂದು ನನ್ನನ್ನು ಪ್ರಶಂಸಿಸಿದನು.

"ನಾನು ದಿವ್ಯ ವಿಮಾನಗಳನ್ನು, ವಿಮಾನಾರೂಢರಾದ ದೇವರಮಣೀರಮಣ ರನ್ನು, ಇಂದ್ರಾದಿದೇವ ಸುಂದರ ಮಂದಿರಗಳನ್ನು ಕಂಡು ಆಶ್ಚರ್ಯಚಕಿತನಾದೆನು. ಗಂಧರ್ವರ ಇಂಪಾದ ಗಾನದ ಜೊತೆಗೆ ಅಪ್ಸರೋವನಿತೆಯರ ನೂಪುರ, ಮಂಜೀರ

ಮಂಜುಳನಿನಾದವು ಕರ್ಣಸುಖದಾಯಕವಾಗಿತ್ತು. ನಂದನಾದಿ ದೇವೋದ್ಯಾನಗಳಿಂದ, ಮಂದಾರಾದಿ ಸುಮಸುಗಂಧವನ್ನು ಹೊತ್ತು, ಮೇಲೆ ಸೂಸಿ ಬಂದ ಮಂದಮಾರುತವು ಹಾಯೆನಿಸಿತು. ಬೇಡಿದ್ದನ್ನೆಲ್ಲ ನೀಡುವ ಕಲ್ಪವೃಕ್ಷಗಳು ಫಲಪುಷ್ಪಭರಿತವಾಗಿ, ಬಾಗಿ ನನಗೆ ಪುರಂದರ ಮಂದಿರಾಂಗಣದಲ್ಲಿ ಸ್ವಾಗತವನ್ನಿತ್ತವು. ಅಲ್ಲಿ ಸೂರ್ಯನ ತಾಪವಿಲ್ಲ. ಚಂದ್ರನ ಶೈತ್ಯವಿಲ್ಲ. ದೇಹದ ಬೆವರಿಲ್ಲ. ಶ್ರಮಗ್ಲಾನಿ ಖೇದ ಚಿಂತಾ ಸಂತಾಪಗಳು ಅಲ್ಲಿ ಸುಳಿಯುವುದಿಲ್ಲ. ರಾಗದ್ವೇಷಗಳ ಉಪಟಳವಿಲ್ಲ. ಪುಷ್ಪರಾಜಿಯಿಂದ ತುಂಬಿದ ಭೂತಲವು ರತ್ನಕಂಬಳದಂತೆ ಮೃದುಸ್ಪರ್ಶವಾಗಿರಲು, ಶೈತ್ಯ ಮಾಂದ್ಯ ಸೌರಭ್ಯಗಳಿಂದ ಮಂದಮಾರುತವು ಬೀಸುತ್ತಿರಲು, ಪುಷ್ಪಗಾತ್ರಿಯರು ಕುಸುಮ ಚಾಮರಗಳನ್ನು ಹಿಡಿದು, ಪಾಡಿ, ಸ್ವಾಗತವೀಯುತ್ತಿರಲು, ನಾನು ನಮ್ಮ ತಂದೆಯಾದ ಪುರಂದರನ ದಿವ್ಯಮಂದಿರವನ್ನು ಪ್ರವೇಶಿಸಿದೆನು. ಗಂಧರ್ವ ಕಿನ್ನರ ಸಿದ್ಧ ಸಾಧ್ಯ ವಸು ರುದ್ರಾದಿತ್ಯಾದಿ ಪರಿವಾರದೊಡನೆ ದೇವೇಂದ್ರನು ನನಗೆ ಸ್ವಾಗತವನ್ನಿತ್ತು, ಕೈಯಿಂದ ಕೈಪಿಡಿದು ಲಾಲಿಸಿ, ನನ್ನನ್ನು ತನ್ನ ಅರ್ಧಾಸನವನ್ನಿತ್ತು ಗೌರವಿಸಿದನು. ಪ್ರೀತಿಯಿಂದ ನನ್ನನ್ನು ನೋಡಿ, ದೇವೇಂದ್ರನಾಡಿದ ವಚನವನ್ನು ಕೇಳು—

"ವತ್ಸ! ಶ್ರೀಶಾನುಗ್ರಹದಿಂದ ಮಹಾವೀರನಾದೆ. ಈಗ ನಿನ್ನನ್ನು ಪ್ರತಿಭಟಿಸಿ, ಗೆಲ್ಲಲು ದೇವತೆಗಳಿಗೇ ಸಾಧ್ಯವಲ್ಲವೆಂದಮೇಲೆ ಇನ್ನು ಮನುಜರ ಪಾಡೇನು! ರಣರಂಗದಲ್ಲಿ ನಿನಗೆದುರಿಲ್ಲ. ಅಸ್ತ್ರಶಸ್ತ್ರಗಳೂ ನಿನಗೆ ಕರಗತಬದರಿಕಾಪ್ರಾಯವಾಗಿವೆ. ಪ್ರಯೋಗ, ಆವೃತ್ತಿ, ಪ್ರಾಯಶ್ಚಿತ್ತ, ಪ್ರತಿಘಾತ, ಉಪಸಂಹಾರಗಳೆಂಬ ಐದು ವಿಧಾನಗಳಿಂದೊಪ್ಪುವ ಹದಿನೈದು ದಿವ್ಯಾಸ್ತ್ರಗಳು ನಿನಗೆ ಗರ್ವಾಪಾದಕವಾಗದಿರಲಿ! ನನಗೆ ಗುರುದಕ್ಷಿಣೆಯಾಗಿ, ಒಂದು ಮಹತ್ಕಾರ್ಯವನ್ನು ನೀನು ಸಾಧಿಸಿಕೊಡು! ದೇವಶತ್ರುಗಳಾದ ನಿವಾತಕವಚರೆಂಬ ದುಷ್ಟದಾನವರು ಮೂರು ಕೋಟಿ ಸಂಖ್ಯಾವಿಶಿಷ್ಟರು ಸಮುದ್ರಕುಕ್ಷಿಯ ದುರ್ಗದಲ್ಲಿ ನಿವಾಸವಾಗಿರುವರು. ಅವರೆಲ್ಲರೂ ತುಲ್ಯರೂಪರು; ಮಹಾಬಲರು; ಮತ್ತು ಪ್ರಭಾವಂತರಾಗಿರುವರು. ಬ್ರಹ್ಮವರದಿಂದ ಅವರು ಸುರರಿಗಜೇಯರಾಗಿದ್ದರೂ ಅವರನ್ನು ಮನುಜರೂಪದಿಂದ ಸಂಹರಿಸಲು ಸಾಧ್ಯವಾಗುವಂತೆ ನಾನೂ ಬ್ರಹ್ಮವರವನ್ನು ಪಡೆದಿರುವುದರಿಂದ—ನೀನು ಅವರನ್ನು ಸಂಹರಿಸಬಲ್ಲೆ.

"ಇಂತು ನುಡಿದು ದೇವಕಾಂತನು ನನಗೆ ದಿವ್ಯರಥವನ್ನಿತ್ತನು. ಅದಕ್ಕೆ ಮಯೂರವರ್ಣದ ದಿವ್ಯತುರಗಗಳನ್ನು ಕಟ್ಟಿ, ಮಾತಲಿಯು ಸಾರಥಿಯಾಗಿ ಬಂದನು. ಇಂದ್ರನು ನನಗೆ ವರವಜ್ರಸಮಂಚಿತವಾದ ದಿವ್ಯಕಿರೀಟವನ್ನು ತೊಡಿಸಿದನು. ನನ್ನ ಗಾಂಡೀವದಲ್ಲಿ ಅಜರ ಎಂಬುವ ಅಭೇದ್ಯ ಜ್ಯಾಪಾಶವನ್ನು ಬಿಗಿಸಿದನು. ದೇವರಾಜನು ಬಲಿರಾಜನನ್ನು ಗೆಲ್ಲಲು ಏರಿಹೋದ ದಿವ್ಯಸ್ಯಂದನವನ್ನಧಿರೋಹಿಸಿ, ಹೊರಟ ನನ್ನನ್ನು ನೋಡಿ, ಬೃಂದಾರಕರು ಸಂಕ್ರಂದನನೆಂದೇ ಭ್ರಮಿಸಿ,

ಪೊಗಳಿದರು. ಮಾತಲಿಯು ಅವರಿಗೆ ನನ್ನನ್ನು ತಿಳಿಸಿ, ನಿವಾತಕವಚ ನಿರ್ಮೂಲನ ಮಾಡಲು ಹೊರಟಿರುವೆನೆಂದನು. ದೇವತೆಗಳು ನನಗೆ ದೇವದತ್ತವೆಂಬ ಶಂಖರಾಜ ವನ್ನಿತ್ತು, ಹರಸಿ, ಕಳಿಸಿದರು. ಆಗ ನಾನು ದೇವಋಷಿಗಂಧರ್ವರ ಸ್ವಸ್ತಿವಚನ ಗಳನ್ನಾಲಿಸುತ್ತಾ, ಪ್ರಯಾಣಿಸಿ, ಸಮುದ್ರದ ದಡವನ್ನು ಮುಟ್ಟಿದೆನು.

"ಸಮುದ್ರವು ಭೀಮವಿಸ್ಮಯಕರವಾಗಿತ್ತು. ಅಲೆಗಳು ಮೇಲೇರಿಬೀಳುತ್ತಿದ್ದವು. ನೊರೆಯು ತೇಲಿಬಂದು, ದಡದಲ್ಲಿ ಹೆಪ್ಪುಗಟ್ಟಿತ್ತು. ರತ್ನಮೌಕ್ತಿಕಾದಿ ಭಾರವನ್ನು ಹೊತ್ತ ನೌಕೆಗಳು ಸಾವಿರಾರು ಸಮುದ್ರದ ಆಚೆಯ ದಡವನ್ನು ಸೇರಹೋಗುತ್ತಾ, ಕಣ್ಣಿಗೆ ಕಾಣದಂತಾಗುತ್ತಿದ್ದವು. ಬಿರುಗಾಳಿ ಭಯಂಕರವಾಗಿ ಬೀಸುತ್ತಿತ್ತು. ತಿಮಿತಿಮಿಂಗಿಲಾದಿ ಜಲಜಂತುಗಳು ಅಪಾರಪಾರಾವಾರನನ್ನಳೆಯುವ ಯತ್ನವೆಲ್ಲ ವ್ಯರ್ಥವಾಗುತ್ತಿತ್ತು. ನೀರಿನಲ್ಲಿ ಮುಳುಗಿರುವ ಬೆಟ್ಟಗಳಂತೆ ಮಕರ ಕೂರ್ಮಗಳು ಬೃಹದಾಕಾರಗಳಾಗಿದ್ದವು. ಸಾವಿರಾರು ಶಂಖಗಳು, ರತ್ನಗಳು, ಅಲೆಗಳ ಮೇಲೆ ತೇಲಿಬರುವಾಗ ನೀಲಾಕಾಶದಿ ಹೊಳೆವ ತಾರೆಗಳಂತೆ ಮಿನುಗುತ್ತಿದ್ದವು. ಶ್ರೀಹರಿಯ ಗುಣನಿಧಿಯಂತೆ ಅಪ್ರಮೇಯಪಾರವಾದ ಜಲನಿಧಿಯನ್ನು ಕಂಡು ಅದರಲ್ಲಿದ್ದ ದಾನವ ಪುರಿಯನ್ನು ನಾನು ಪ್ರವೇಶಿಸಿದೆನು.

ನನ್ನ ರಥಘೋಷವನ್ನು ಕೇಳಿ, ಕೆರಳಿದ ನಿವಾತಕವಚರು ದೇವರಾಜನೇ ದಂಡೆತ್ತಿಬಂದನೆಂದು ಪ್ರಧನಸಿದ್ಧರಾಗಿ, ಉದ್ಯತ ನಾನಾಯುಧಪಾಣಿಗಳಾಗಿ, ತಮ್ಮ ಪತ್ತನದ್ವಾರದಿಂದ ಹೊರಬಂದು ನನ್ನನ್ನೆದುರಿಸಿ ಕಾದತೊಡಗಿದರು. ಮಾತಲಿಯು ನನ್ನ ರಥವನ್ನು ಸಮಪ್ರದೇಶದಲ್ಲಿ ದಾನವಾಭಿಮುಖವಾಗಿ ನಿಲ್ಲಿಸಿದನು. ಭಯಂಕರ ನಿನಾದವನ್ನು ಮಾಡುತ್ತಾ, ವಿಕೃತಾಕಾರರಾದ ದೈತ್ಯರು ನನ್ನನ್ನು ಮುತ್ತಿ, ಬಾಣ ಗಳಿಂದ ನೋಯಿಸಿದರು. ಆ ದೇವವಿರೋಧಿಗಳನ್ನು ಹತ್ತಿಕ್ಕಲನುವಾದ ನನ್ನನ್ನು ಋಷಿ ಗಂಧರ್ವ ಸಿದ್ಧರು ಸ್ತುತಿಸುತ್ತಾ, ಅಂಬರದಲ್ಲಿ ತುಂಬಿ ನಿಂತರು. ಶೂಲ ಗಳೊಂದು ಲಕ್ಷ ಒಂದೇ ಸಲ ನನ್ನ ರಥವನ್ನು ಸುತ್ತಿ ಮುತ್ತುತ್ತಾ ಬರುವಾಗ ನಾನು ಬಾಣವರ್ಷದಿಂದ ಅವನ್ನು ಮುರಿದು, ಲಕ್ಷ್ಯವಿಲ್ಲದೆ ಲಕ್ಷಗಟ್ಟಲೆ ದಾನವರನ್ನು ಸಂಹರಿಸಿ, ಯಮಸದನಕ್ಕಟ್ಟಿದೆನು. ಅದನ್ನು ಕಂಡು ಮಾತಲಿಯು ಪ್ರೀತನಾಗಿ 'ತಂದೆಗೆ ಮಿಗಿಲಾದ ಮಗ'ನೆಂದು ನನ್ನನ್ನು ಪ್ರಶಂಸಿಸಿದನು. ಬ್ರಹ್ಮಮಂತ್ರದಿಂದ ಅಭಿಮಂತ್ರಿಸಿ, ಚಿಕ್ಕ ಚಿಕ್ಕ ಬಾಣಗಳಿಂದ, ನಾನು ಅನೇಕ ಲಕ್ಷ ದಾನವರನ್ನು ನಾಶ ಪಡಿಸಿ ವೀರವಿಹಾರಗೈದೆನು.

ಆಗ ನಿವಾತಕವಚರು ಮಾಯಾಯುದ್ಧವನ್ನು ಪ್ರಾರಂಭಿಸಿದರು. ಬೆಟ್ಟ ದಂತಿರುವ ದೊಡ್ಡ ಬಂಡೆಗಳು ಆಕಾಶದಿಂದ ಉರುಳಿಬಿದ್ದವು. ನಾನು ವಜ್ರಾಸ್ತ್ರ ದಿಂದ ಆ ಬಂಡೆಗಳನ್ನು ಪುಡಿಮಾಡಿದೆನು. ಇದ್ದಕ್ಕಿದ್ದಂತೆ ಆನೆ ಸೊಂಡಿಲದಂತೆ ಸ್ಥೂಲವಾದ ಮಳೆಯ ಧಾರೆಗಳು ಇಳೆಗಿಳಿದವು. ದಿಕ್ಕುಗಳಲ್ಲಿ ಕತ್ತಲು ಕವಿದು ಕಣ್ಣು ಕಾಣದಂತಾಯಿತು. ಭೀಕರವಾದ ಬಿರುಗಾಳಿಯೊಡನೆ ದಾನವರ ಕೂಗಾಟವು ಸೇರಿ

ಕಿವಿ ಗಡಚಿಕ್ಕಿದವು. ದಿಕ್ಕುತೋಚದೆ, ಕಾದುವ ದಾನವರನ್ನು ಕಾಣದೆ, ದಿಗ್ಭ್ರಾಂತ ನಾಗಿ ನಿಂತ ನನ್ನನ್ನು ನೋಡಿ, ಮಾತಲಿಯು ಬೆನ್ನುತಟ್ಟಿ, ಹುರಿದುಂಬಿಸಿದನು. ನಾನು ಇಂದ್ರದತ್ತವಾದ ವಿಶೋಷಣವೆಂಬ ದಿವ್ಯಾಸ್ತ್ರವನ್ನು ಪ್ರಯೋಗಿಸಿ ಜಲಧಾರೆ ಗಳನ್ನು ಹಿಂಗಿಸಿದೆನು. ಆಗ ದಾನವರು ವಿಜೃಂಭಿಸಿ ಉರಿಯುತ್ತಾ ಬರುವ ಅಗ್ನಿ ಜ್ವಾಲೆಗಳನ್ನು ಸೃಜಿಸಿದರು. ನಾನು ವಾರುಣಾಸ್ತ್ರದಿಂದ ಅಗ್ನಿಯನ್ನು ಆರಿಸಿ, ಶೈಲಾಸ್ತ್ರದಿಂದ ಬಿರುಗಾಳಿಯನ್ನು ತಡೆದು, ಘೋರಾಸ್ತ್ರಶಸ್ತ್ರಗಳನ್ನು ಮಳೆಗರೆಯುವ ದಾನವರನ್ನು ಮೋಹನಾಸ್ತ್ರದಿಂದ ಮೂರ್ಛೆಗೆಡಹಿದೆನು. ಅಮೃತಕ್ಕೆಂದು ಬಂದ ಗರುಡನಿಂದಲೂ ಶಂಬರನಿಂದಲೂ ವೃತ್ರನಿಂದಲೂ ಕೂಡ ಇಂತಹ ಸಮರ ವಿಜೃಂಭಣೆ ಯನ್ನು ಕಾಣೆನೆಂದು ಹೆದರಿದ ಮಾತಲಿಯನ್ನು ಧೈರ್ಯವಚನಗಳಿಂದ ಹುರಿ ದುಂಬಿಸಿ, ನಾನೂ ಹೆದರದೆ ಕೃಷ್ಣ-ಭೀಮರನ್ನೂ ನಿನ್ನನ್ನೂ ನೆನೆದು, ಗಾಂಡೀವ ನಿರ್ಮುಕ್ತಬಾಣವರ್ಷದಿಂದ ರಾಕ್ಷಸಕೋಟಿಯನ್ನು ಕೊಂದುಕೆಡಹಿದೆನು. ಐಂದ್ರಾಸ್ತ್ರ ದಿಂದ ಮಿಕ್ಕ ದಾನವರನ್ನೂ ಕೊಂದು, ನಾನು ದೈತ್ಯಪುರಿಯನ್ನು ಪ್ರವೇಶಿಸಿದೆನು.

"ಒಂದು ಸಾವಿರ ಮಯೂರವರ್ಣದ ದಿವ್ಯ ತುರಗಗಳ ರಥದಲ್ಲಿ ಕೂತು ಬರುವ ದಿಗ್ವಿಜಯಶಾಲಿಯಾದ ನಿನ್ನ ತಮ್ಮನನ್ನು ನೋಡಿ, ಭೀತರಾಗಿ ಮನೆಗಳಲ್ಲಡಗಿದ ದೈತ್ಯರ ಮಡದಿಯರು, ಗವಾಕ್ಷದಿಂದ ನನ್ನನ್ನು ನೋಡಿ ಆಶ್ಚರ್ಯ ಭಯ ಸಂಭ್ರ ಮಾನ್ವಿತೆಯರಾದರು. ಅವರ ನಗರದ ಸೊಬಗನ್ನು ಕಂಡು ನಾನು ಮಹದಾಶ್ಚರ್ಯ-ಭರಿತನಾಗಿ ಮಾತಲಿಯನ್ನು ಪ್ರಶ್ನಿಸಲು ಆ ಮಹಾನುಭಾವನಿಂತೆಂದನು—'ಅರ್ಜುನ! ಈ ದಿವ್ಯ ನಗರವು ದೇವರಾಜನದಾಗಿತ್ತು. ಅಲ್ಲಿದ್ದ ಸುರರನ್ನು ಓಡಿಸಿ, ಅಸುರರದನ್ನು ವಶಪಡಿಸಿಕೊಂಡರು. ಅವರು ಬ್ರಹ್ಮವರದಿಂದ ದೇವರಾಕ್ಷಸರಿಗೆ ಅವಧ್ಯರಾಗಿದ್ದರು. ಅವರ ಉಪದ್ರವವನ್ನು ಸಹಿಸಲಾರದೆ, ದೇವೇಂದ್ರನು ಬ್ರಹ್ಮನಿಗೆ ಶರಣಾದನು. ಇನ್ನೊಂದು ದೇಹದಿಂದ ಮನುಜನಾಗಿ ಅವತರಿಸಿ, ಇಂದ್ರನು ಅವರನ್ನು ಕೊಲ್ಲು ವಂತೆ ಚತುರ್ಮುಖನು ಅನುಗ್ರಹಿಸಿದನು. ಅಂತೆಯೇ ಇಂದ್ರಾವತಾರನಾದ ನಿನ್ನಿಂದ ನಿವಾತಕವಚರು ಇಂದು ಸಂಹೃತರಾದರು. ಲೋಕಕ್ಷೇಮವಾಯಿತು. ಪುಲೋಮೆ, ಕಾಲಕೆ ಎಂಬ ದಾನವ ನಾರಿಯರು ಒಂದು ಸಾವಿರ ವರ್ಷದ ತೀವ್ರತಪದಿಂದ ಬ್ರಹ್ಮ ನನ್ನು ಮೆಚ್ಚಿಸಿ, ಸುರರಾಕ್ಷಸರಿಂದ ಅವಧ್ಯರಾಗುವ ಮೂರು ಕೋಟಿ ತನಯ ರನ್ನು ಬೇಡಿದರು. ಅಂತಹ ಕುನಯ ಭಯಂಕರರಾದ ಪೌಲೋಮಾತನಯರನ್ನು ದೈವಾನುಗ್ರಹದಿಂದ ನೀನು ಸಂಹರಿಸಿದೆ. ಇಂದ್ರನ ಸೇವೆ ಚೆನ್ನಾಗಿ ಸಲ್ಲಿಸಿದೆ. ನಿನ್ನ ಕೀರ್ತಿಯು ಅಜರಾಮರವಾಯಿತು. ಇನ್ನು ಕಾಲಕಾತನಯರಿಲ್ಲಿ ಅಡಗಿರುವರು. ಅವರನ್ನು ಕೂಡ ಸಂಹರಿಸಿ, ನಿನ್ನ ಗುರುಕೃತ್ಯವನ್ನು ಸಂಪೂರ್ಣವಾಗಿಸು.'

"ಮಾತಲಿಯ ಮಾತಿನಂತೆ ನಾನು ವಜ್ರಾಸ್ತ್ರವನ್ನು ಪ್ರಯೋಗಿಸಿ, ಹಿರಣ್ಯಪುರ ವಾಸಿಗಳಾದ ಕಾಲಕೇಯರನ್ನೂ ದುರ್ಜಯದಾನವರನ್ನೂ ಸಂಹರಿಸಿ, ಆ ಶಕ್ತಿ ಯನ್ನು ನನಗೆ ದಯಪಾಲಿಸಿದ ಬ್ರಹ್ಮ ಶಂಕರ ಪುರಂದರರಿಗೆ ವಂದಿಸಿದೆನು.

ಮಾತಲಿಯು ನನ್ನನ್ನು ಸುಖವಾಗಿ, ದೇವಲೋಕದ ಅಮರಾವತಿಗೆ ಮುಟ್ಟಿಸಿ, ದೇವೇಂದ್ರನಿಗೆ ನನ್ನ ವಿಕ್ರಮವಿಜಯ ವೃತ್ತಾಂತವನ್ನು ವಿವರವಾಗಿ ವರ್ಣಿಸಿದನು. ನಾನೂ ಪುರಂದರನ ಚರಣಾರವಿಂದಗಳಿಗೆ ಶಿರಬಾಗಿ ನಮಿಸಿ, ನಿಂತೆನು. ಇಂದ್ರನು ಪ್ರೀತನಾಗಿ ನನ್ನನ್ನು ಕೈಯಿಂದ ಹಿಡಿದು, ಬಿಗಿದಪ್ಪಿ, ತಲೆಮೂಸಿ ಆಶೀರ್ವದಿಸಿದನು. ದೇವತೆಗಳೆಲ್ಲರೂ ನನ್ನನ್ನು ಕೊಂಡಾಡಿ, ದಿವ್ಯವಿಜಯೋತ್ಸವವನ್ನು ಮಾಡಿದರು. ಇಂದ್ರನು ನನ್ನನ್ನು ನೋಡಿ, 'ಅರ್ಜುನ! ದೇವದೈತ್ಯರಿಗೆ ಸಾಧ್ಯವಾಗದ ದುಷ್ಟ-ದಾನವ ಸಂಹಾರವು ನಿನ್ನಿಂದಾಯಿತು. ಗುರುದಕ್ಷಿಣೆ ಪೂರ್ಣವಾಗಿ ಮುಟ್ಟಿತು. ನನ್ನ ಮಹಾಶತ್ರುಗಳು ಹತರಾದರು. ಸರ್ವಲೋಕ ಹಿತವಾಯಿತು. ಇಂತೆಯೇ ನೀನು ರಣರಂಗ ವಿಮುಖನಾಗದೆ ಮುಂದೆ ಸರ್ವಕೌರವ ವಿಜಯಿಯಾಗು! ನಿನ್ನ ಮತ್ತು ಭೀಮಸೇನನ ಬಾಹುಬಲದಿಂದ ಸಮುಪಾರ್ಜಿತವಾದ ಸಾಮ್ರಾಜ್ಯವನ್ನು ನಿಮ್ಮಣ್ಣ ಧರ್ಮರಾಜನು ಪಾಲಿಸಿ, ಲೋಕಸುಖಂಕರನಾಗುವನು!' ಎಂದು ಅಭಿ-ನಂದಿಸಿದನು. ಭೀಷ್ಮ ದ್ರೋಣ ಕರ್ಣ ಶಲ್ಯ ಕೃಪಾದಿ ವೀರರನ್ನು ಸಂಗ್ರಾಮ ರಂಗದಿ ಗೆಲ್ಲುವಂತೆ ಹರಸಿ, ದೇವೇಂದ್ರನು ನನಗೆ ದಿವ್ಯಾಭರಣಗಳನ್ನು, ದಿವ್ಯಸುಮ ಮಾಲೆಗಳನ್ನು ದಿವ್ಯಕಿರೀಟಕವಚಕುಂಡಲಗಳನ್ನು, ದೇವದತ್ತ ಶಂಖವನ್ನು, ವಸ್ತ್ರ ಚಂದನಗಳನ್ನು ಕೊಟ್ಟು ಸತ್ಕರಿಸಿ ಕಳಿಸಿದನು. ಇಂತು ನಾನು ಇಂದ್ರಭವನದಲ್ಲಿ ದ್ವಿತೀಯ ಸುರರಾಜನಂತೆ ಐದು ವರ್ಷಗಳಿದ್ದು, ಇಂದು ಗಂಧಮಾದನದ ಈ ಸುಂದರ ಕಂದರದಲ್ಲಿ ನಿಮ್ಮನ್ನೆಲ್ಲರನ್ನೂ ಮತ್ತೆ ಕಂಡೆನು. ಶ್ರೀಕೃಷ್ಣನ ದಯದಿಂದ ಕೃತಾರ್ಥನಾಗಿ ಬಂದಿರುವೆನು."

ಅರ್ಜುನನ ವಚನಾಮೃತವನ್ನು ಸವಿದು, ಪಾಂಡವರು ಆನಂದಕಂದಲಿತ ಹೃದಯಾರವಿಂದರಾದರು. ಧರ್ಮರಾಜನು "ಅರ್ಜುನ! ದೇವರ ದಯದಿಂದ ಬದುಕಿ ಬಂದೆ! ಅಸ್ತ್ರಗಳನ್ನು ಸಂಪಾದಿಸಿ ತಂದೆ! ದಾನವರನ್ನು ಕೊಂದೆ! ಶಂಕರನು ಪ್ರಸನ್ನನಾದನು! ದೇವರಾಜನ ಅನುಗ್ರಹಮಂದಾಕಿನಿಯಿಂದ ನಾವೆಲ್ಲರೂ ಪುನೀತರಾದೆವು. ಲೋಕೇಶರ ಶ್ರೀಕಾರುಣ್ಯವು ನಮಗೆ ರಕ್ಷಾಕವಚ ವಾಯಿತು. ಇಂದು ಸಕಲ ಸಂಪತ್ಸಮೃದ್ಧ ಭೂಮಂಡಲವನ್ನೇ ಗೆದ್ದಷ್ಟು ಸಂತೋಷ ವಾಗಿದೆ. ಆಯಿತು, ಇನ್ನು ಕೌರವರ ಆಯುರ್ದಾಯವು ಅಲ್ಪಾವಶಿಷ್ಟವೆಂದೇ ತಿಳಿದಿರು ವೆನು. ಎಲ್ಲಿ? ನೀ ತಂದ ದಿವ್ಯಾಸ್ತ್ರ ಬಲವನ್ನು ನೋಡಿ ಆನಂದಿಸಲು ನನ್ನ ಮನಸ್ಸು ತವಕಿಸುತ್ತಿದೆ. ತೋರು ನಿನ್ನ ಅಸ್ತ್ರಪಾಂಡಿತ್ಯವನ್ನು!" ಎಂದು ಕೇಳಿದನು.

ಆಗ ಅರ್ಜುನನು ದೇವತೆಗಳತ್ತ ದಿವ್ಯಾಸ್ತ್ರಗಳನ್ನು ತೋರಲೆಣಿಸಿ, ತನ್ನ ದಿವ್ಯ ರಥವನ್ನೇರಿದನು. ಗಾಂಡೀವವನ್ನು ಹೆದೆ ಏರಿಸಿ ಹಿಡಿದು, ದಿವ್ಯಾಸ್ತ್ರಗಳನ್ನು ಪ್ರಯೋಗಿಸತೊಡಗಿದನು. ಆಗ ಭೂಮಿಯು ನಡುಗಿತು. ಬೆಟ್ಟದ ಕೋಡುಗಳು ಉರುಳಿದವು. ನದಿಗಳು ಉಕ್ಕೇರಿ ಹರಿದವು. ಗಾಳಿ ಬಿಗಡಾಯಿಸಿ ಬೀಸದಾಗಲು ಪ್ರಾಣಿಗಳು ಉಸುರಾಡದೆ ತಲ್ಲಣಿಸಿದವು. ಬ್ರಹ್ಮರ್ಷಿಗಳಿಂದ ಲೋಕೋಪದ್ರವವನ್ನು

ತಿಳಿದು ಬಂದ ಬ್ರಹ್ಮ, ಶಂಕರ ಮತ್ತು ಶಕ್ರಮುಖ ವೃಂದಾರಕರು ನಾರದನನ್ನು ಅರ್ಜುನನಲ್ಲಿಗೆ ಕಳುಹಿಸಿ, ಅವನನ್ನು ನಿವಾರಿಸಿದರು. "ಅರ್ಜುನ! ಅರ್ಜುನ! ಸುಮ್ಮನೆ ಲಕ್ಷ್ಯವೇ ಇಲ್ಲದೆ ದಿವ್ಯಾಸ್ತ್ರಗಳನ್ನು ಉಪಯೋಗಿಸಲಾಗದು. ಅದು ಲೋಕಹಾನಿಕಾರಕವಾಗಿದೆ. ರಕ್ಷಿಸಿ ಕಾದಿಟ್ಟಿರು ದಿವ್ಯಾಸ್ತ್ರಗಳನ್ನು! ಮುಂದೆ ಭಾರತ ಯುದ್ಧದಲ್ಲಿ ಮಹಾಸ್ತ್ರಗಳ ಪ್ರಯೋಗ ಸಮಯವು ಬಂದಾಗ, ಅವು ನಿನಗೆ ಜಯವನ್ನೂ, ದುರ್ಜನರಿಗೆ ನಾಶವನ್ನೂ, ಸುಜನರಿಗೆ ಕ್ಷೇಮವನ್ನೂ ಸಂಪಾದಿಸಿ ಕೊಡುವುವು! ಆಗ ಧರ್ಮರಾಜಾದಿಗಳು ದಿವ್ಯಾಸ್ತ್ರ ಬಲವನ್ನು ಕಣ್ಣಾರೆ ಕಂಡು ಮುದಿತರಾಗುವರು" ಎಂದು ನುಡಿದ ನಾರದವಚನವನ್ನು ಮನ್ನಿಸಿ, ಕಿರೀಟಿಯು ಅಸ್ತ್ರಗಳನ್ನು ಉಪಸಂಹರಿಸಿ ಶಾಂತನಾದನು.

## ಧರ್ಮಜ-ನಹುಷ ಸಂವಾದ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ರಾಜನ್! ಪಾಂಡವರು ಹನ್ನೊಂದನೆಯ ವರ್ಷದ ವನವಾಸವನ್ನು ಪ್ರಾರಂಭಿಸುವವರಿದ್ದರು. ಸ್ವರ್ಗದಿಂದ ಬಂದ ಅರ್ಜುನನ ಸಮಾಗಮದಿಂದಲು, ಅವನು ತಂದ ದಿವ್ಯಾಸ್ತ್ರಲಾಭದಿಂದಲು, ಅವರು ಸಂತೋಷಭರಿತರಾದರು. ಆಗ ಭೀಮನು ಧರ್ಮರಾಜನನ್ನು ಕಂಡು, "ಅಣ್ಣ! ನೀನಾಡಿದ ಪ್ರತಿಜ್ಞಾವಚನವನ್ನು ಸತ್ಯಮಾಡು! ಇನ್ನೆರಡು ವರ್ಷಗಳಾಗುತ್ತಲೆ ಅಜ್ಞಾತವಾಸವನ್ನೂ ಮಾಡಿ, ಅನಂತರ ದುರ್ಮಾರ್ಗರಾದ ಕೌರವರನ್ನು ಗೆದ್ದು, ನಮ್ಮ ರಾಜ್ಯವನ್ನು ಪಡೆದು ಸುಖವಾಗಿರೋಣ! ವೈರವೃಕ್ಷದ ಫಲಪುಷ್ಪಗಳನ್ನು ನಾನು ಅರ್ಜುನನು ಕಲೆತು, ನಿನಗೆ ತಂದು ಸಮರ್ಪಿಸುವೆವು. ಶತ್ರುಸಂಹಾರರೂಪ ಯುದ್ಧ ಯಜ್ಞದಲ್ಲಿ ದೀಕ್ಷಿತನಾಗು! ದೇವರಾಜ ಪ್ರತಿಮನಾದ ಅರ್ಜುನನಿರುವನು. ಅವನ ಬಾಣವಹ್ನಿಗೆ ಮಾರುತನಾಗಿ ನಾನಿರುವೆನು. ದೇವದಾನವರು ಒಟ್ಟುಗೂಡಿ ಬಂದರೂ ಯುಧಿಷ್ಠಿರನಾಗಿ ನೀನಿರುವೆ. ನಕುಲಸಹದೇವರೂ ಶಸ್ತ್ರಾಸ್ತ್ರ ಕೋವಿದರೆನಿಸಿ ಶತ್ರುದುರ್ಧರ್ಷರಾಗಿರುವರು. ನಿನ್ನ ಹಿತಕ್ಕಾಗಿ ಸರ್ವಸ್ವವನ್ನರ್ಪಿಸಲು ಸಿದ್ಧರಾಗಿ ಕೃಷ್ಣ ಸಾತ್ಯಕಿಯರು ನಿಂತಿರುವರು. ಧೃಷ್ಟದ್ಯುಮ್ನನು ಶತ್ರು ಕಕ್ಷಗಳನ್ನು ಸುಡುವ ವಹ್ನಿದೇವನೇ ಸರಿ! ಶತ್ರುಜಯವು ಕರಗತವೆಂದು ತಿಳಿ!" ಎಂದನು.

ಧರ್ಮರಾಜನು ಭೀಮನ ಮಾತಿಗೆ ಸಮ್ಮತಿ ಇತ್ತು, ಇಂದ್ರಾಜ್ಞೆಯಂತೆ, ಗಂಧಮಾದನಗಿರಿಯಿಂದ ತೆರಳಲನುವಾದನು. ಗಿರಿ ಪರ್ವತ ದುರ್ಗ ಕಂದರ ನದೀನದ ಭರಿತವಾದ ಆ ಪುಣ್ಯಪ್ರದೇಶವನ್ನು ಬೀಳ್ಕೊಂಡು ಅಲ್ಲಿರುವ ರುದ್ರಕುಬೇರಾದಿ ದೇವ ವೃಂದಗಳಿಗೆ ವಂದಿಸಿ, ಪ್ರಯಾಣ ಬೆಳೆಸಿದನು. ಘಟೋತ್ಕಚನು ತನ್ನ ಅನುಚರರಿಂದ ಕೂಡಿ, ಅವರನ್ನೆಲ್ಲ ಹೊತ್ತು ತಂದು, ಪುಲಿಂದವನವನ್ನು ಸೇರಿಸಿದನು. ಲೋಮಶನು ಧರ್ಮರಾಜನಿಂದ ಪೂಜಿತನಾಗಿ ತ್ರಿದಿವವನ್ನು ಸೇರಿಹೋದನು.

ವೃಷಪರ್ವ, ಆರ್ಷ್ಟಿಷೇಣ ಮುಂತಾದ ರಾಜರ್ಷಿವರರಿತ್ತ ಆಶೀಃಪ್ರಭಾವದಿಂದ ಪಾಂಡವರು ಸುಖವಾಗಿ ಹಿಮಾಲಯದ ದಕ್ಷಿಣ ಕಂದರವನ್ನು ಸೇರಿ, ಬಿಡಾರ ಹೂಡಿದರು. ಪುಲಿಂದರಾಜನಾದ ಸುಬಾಹು ಕೊಟ್ಟ ಚೀನಾಂಬರ ಕನಕರತ್ನಗಳನ್ನು ಘಟೋತ್ಕಚನ ಪರಿವಾರದವರಿಗಿತ್ತು, ಅವರನ್ನೆಲ್ಲ ಕಳಿಸಿಕೊಟ್ಟು, ಧರ್ಮರಾಜನು ವಿಶಾಖಯೂಪ ನೆಂಬ ಕಾಡು ಕಿರಾತರ ರಾಜನ ಪ್ರಸ್ರವಣವೆಂಬ ವನದಲ್ಲಿ ಕೆಲದಿನವಿದ್ದನು. ಹನ್ನೆರಡನೆಯ ವರ್ಷವಾರಂಭವಾಗುವುದನ್ನರಿತು, ಪಾಂಡವರು ಅಲ್ಲಿಂದ ಹೊರಟು ಮರುಧನ್ವ ದೇಶದ ಪಾರ್ಶ್ವದಲ್ಲಿ ಪಯಣಿಸಿ, ಸರಸ್ವತಿಯನ್ನು ದಾಟಿ, ಕ್ರಮವಾಗಿ ಕಾಮ್ಯಕವನವನ್ನು ಸೇರಿದರು. ಪ್ಲಕ್ಷ, ವೇತಸ, ಬದರೀ, ಖದಿರ, ಶಿರೀಷ, ಬಿಲ್ವ, ಶಮೀ, ಕರೀರ, ಚೂತ ವೃಕ್ಷಗಳಿಂದ ಮಂಡಿತವಾದ ಆ ವನಖಂಡದಲ್ಲಿ ಸುಖವಾಗಿರುತ್ತಿದ್ದರು. ಹಿಮಾಲಯದ ಕಂದರದಲ್ಲಿದ್ದಾಗ ಭೀಮಸೇನನು ಒಂದು ದಿನ ಹೆಬ್ಬಾವಿಗೆ ಸಿಕ್ಕು ಬಿಡಿಸಿಕೊಳ್ಳದಿರಲು, ಧರ್ಮರಾಜನು ಸರ್ಪರಾಜನ ಪ್ರಶ್ನೆಗಳಿಗೆ ಉತ್ತರವನ್ನಿತ್ತು, ತಮ್ಮನನ್ನು ಬಿಡಿಸಿಕೊಂಡು ಬಂದನು.

ಭೀಮಪರಾಕ್ರಮನು, ನಾಗಾಯುತ ಮಹಾಬಲನು, ಕುಬೇರಾದಿ ದೇವ ಪೂಜಿತನು, ಸೌಗಂಧಿಕಾಸುಮಾನಯನ ಚತುರನು, ಮಣಿಮದಾದಿ ದುಷ್ಟದೈತ್ಯ ನಾಶಕನು ಆದ ಭೀಮಸೇನನು ಒಂದು ಹೆಬ್ಬಾವಿನ ಹಿಡಿತಕ್ಕೆ ಸಿಕ್ಕಿದನೆಂದರೆ ಅಕ್ಕಜ ವಲ್ಲವೆ? ಆ ಕಥೆಯನ್ನು ನಿನಗೆ ಹೇಳುವೆನು ಕೇಳು!—ಒಂದು ದಿನ ವೃಷಪರ್ವನ ಆಶ್ರಮದಲ್ಲಿ ಪಾಂಡವರಿದ್ದಾಗ ನಡೆದ ವಿಚಿತ್ರವದು. ಧನುಃಖಡ್ಗಧರನಾಗಿ ವೃಕೋದರನು ಹಿಮಗಿರಿಯಲ್ಲಿ ಸಂಚರಿಸುತ್ತಿದ್ದನು. ಮೇಘಗಳನ್ನು ಹಿಡಿಯಲೆಣಿಸಿ, ಕೈಗಳನ್ನೆತ್ತಿದ ದೇವದಾರು ವನಖಂಡದಲ್ಲಿ ಕುಂತೀ ಸುತ ಮಧ್ಯಮನು ಹರಿಚಂದನಗಳ ಮೇಲೆ ಸೂಸಿ ಬರುವ ಮಂದಾನಿಲವು ಆಯಾಸ ಪರಿಹಾರಕವಾಗಿರಲು, ಅನೇಕ ಮೃಗಗಳನ್ನು ಬೇಟೆಯಾಡಿದನು. ಅವನ ಪದಾಘಾತದಿಂದ ಗಿಡಗಳು ಕೆಳಗುರುಳಿದವು. ಸಿಂಹಗರ್ಜನದಿಂದ ಗಜಾದಿ ಜಂತು ಸಮೂಹವು ದಿಕ್ಕೆಟ್ಟು ಓಡಿತು. ಅಮರವರ ಸದೃಶನು, ಚಿತ್ರಮಾಲ್ಯಾಭರಣನು, ಅಪ್ರತಿಹತ ಪರಾಕ್ರಮಣನು ಆದ ಭೀಮನನ್ನು ನೋಡಿ, ವನಸತ್ವಗಳು ಹೆದರಿ ಪಲಾಯನಗೈದವು.

ಅಲ್ಲಿ ಯದೃಚ್ಛೆಯಿಂದ ಒಂದು ಅಜಗರವು ಭೀಮನನ್ನು ಹಿಡಿದು, ತನ್ನ ದೇಹದಿಂದ ಸುತ್ತಿ, ರೋಷದಿಂದ ಅವನ ಭುಜಗಳನ್ನು ಬಿಗಿಸಿ, ಕೊಲ್ಲಲೆಣಿಸಿತು. ದಶ ನಾಗ ಸಹಸ್ರ ಬಲನಾದ ಭೀಮಸೇನನು, ಅಜಗರನಾಗಿದ್ದ ನಹುಷನಿಗೆ ದೇವತೆಗಳಿತ್ತ ವರದಾನವನ್ನರಿತು, ಕೈಲಾಗದವನಂತೆ, ಅದರ ಭೋಗಬಂಧನದಿ ಸಿಲುಕಿ, ಸುಮ್ಮನಿದ್ದನು.

ವೃತ್ರವಧದಿಂದ ಬಂದ ಬ್ರಹ್ಮಹತ್ಯೆಗೆ ಹೆದರಿ ದೇವೇಂದ್ರನು ಕಮಲನಾಳದಲ್ಲಿ ಅಡಗಿದ್ದು, ಋತಂಭರನಾಮಕ ಶ್ರೀಲಕ್ಷ್ಮೀನೃಸಿಂಹನ ಜಪತತ್ಪರನಾಗಿರಲು, ದೇವತೆಗಳು ಆಯುರಾಜನ ಮಗನಾದ ನಹುಷನನ್ನು ದೇವೇಂದ್ರಪದವಿಯಲ್ಲಿ ಅಭಿಷಿಕ್ತನಾಗಿ

ಮಾಡಿದರು. ಅವನಿಗೆ ತಾನು ನೋಡಿದ ಎಲ್ಲ ಪುರುಷರ ತಪಸ್ಸು, ಬಲವು ಬರುವಂತೆ ವರವನ್ನೂ ಕೊಟ್ಟು, ಇಂದ್ರಪದವಿಗೆ ಸಮರ್ಥನೆನಿಸಿದರು. ಇಂತು ಮುನಿದೇವವರರ ತಪಶ್ಶಕ್ತಿ ಬಲಗಳನ್ನು ಪಡೆದ ನಹುಷನು ಮದಿಸಿ, ತಾನೇ ಇಂದ್ರನೆಂದು ತಿಳಿದನು. ಅವನು ಶಚಿಯನ್ನು ಇಚ್ಛಿಸಿ ಕರೆಯಲು, ಶಚಿಯು ಇಂದ್ರ ಬೃಹಸ್ಪತಿಗಳ ಯುಕ್ತಿಯಂತೆ, ಮಹರ್ಷಿಗಳಿಂದ ಹೊರಲ್ಪಡುವ ಮೇನೆಯಲ್ಲಿ ಕೂತು, ತನ್ನ ಅಂತಃಪುರಕ್ಕೆ ಬರುವುದೆಂದು ನಹುಷನಿಗೆ ಹೇಳಿ ಕಳಿಸಿದಳು. ಪದವೀ ಮತ್ತನಾದ ನಹುಷನು ಅಗಸ್ತ್ಯಾದಿ ಋಷಿವರರನ್ನು ಶಿಬಿಕಾವಾಹಕರನ್ನಾಗಿರಿಸಿ ತಾನು ಶಿಬಿಕೆಯಲ್ಲಿ ಕೂತು ಶಚೀಮಂದಿರಕ್ಕೆಂದು ಹೊರಟನು.

ಅಗಸ್ತ್ಯನು ಶಚೀಸಂಗಮಾಭಿಲಾಷೆಯು ಪಾಪವೆಂದು ತಿಳಿಸಲೋಸುಗ, ವೇದ ಪ್ರಾಮಾಣ್ಯ ವಿಷಯವನ್ನು ಪ್ರಸ್ತಾಪಿಸಿ, ನಹುಷನನ್ನು ಪ್ರಶ್ನಿಸಿದನು. ವೇದವು ಪ್ರಮಾಣವೆಂದರೆ—'ನ ಪರದಾರಾನ್ ಗಚ್ಛೇತ್' ಎಂಬುವ ವೇದವು ಪ್ರಮಾಣವೆನಿಸಿ ಶಚಿಯನ್ನು ಮುಟ್ಟಲೆಣಿಸಬಾರದೆಂದಾಗುವುದು. ವೇದವು ಪ್ರಮಾಣವಲ್ಲವೆಂದರೆ, ಅಗಸ್ತ್ಯನು ವೇದವು ಪ್ರಮಾಣವೆಂದೇ ಸಾಧಿಸುವನು. ಆಗ ನಹುಷನಿಗೆ ಅದು ಇಷ್ಟವಲ್ಲದುದರಿಂದ ಮುನಿವರರಿಗೆ ದ್ರೋಹವನ್ನು ಮಾಡದಿರನು. ಆಗ ಮುನಿಗಳು ಕುಪಿತರಾಗಿ ಶಾಪವನ್ನು ಕೊಡದಿರರು. ಅಂತು ಎರಡು ಬಗೆಯಿಂದಲೂ ತನ್ನ ಪಾತಿವ್ರತ್ಯವು ಉಳಿಯುವುದೆಂದೇ ಶಚಿಯು, ಮುನಿವಾಹನನಾಗಿ ಬರುವಂತೆ ನಹುಷನಿಗೆ ಹೇಳಿಕಳಿಸಿದ್ದಳು. ಶಚಿಯು ಬಗೆದಂತೆ ನಹುಷನು ವೇದವು ಅಪ್ರಮಾಣವೆಂದನು. ಅಗಸ್ತ್ಯನು ಕುಪಿತನಾಗಿ ವೇದವು ಪರಮಪ್ರಮಾಣವೆಂದನು. ನಹುಷನು ಕ್ರೋಧದಿಂದ ಕಣ್ಣುಕಾಣದೆ, ಅಗಸ್ತ್ಯನನ್ನು ಕಾಲಿನಿಂದ ಒದ್ದನು. ಆ ಪೆಟ್ಟು ಅಲ್ಲಡಗಿದ್ದ ಭೃಗುಋಷಿಗೆ ತಾಗಿತು. ಆಗ ನಹುಷನು ಶಾಪಾರ್ಹನಾದನು. ಭೃಗುವಿನ ಹೃದಯದಲ್ಲಿದ್ದ ಚತುರ್ಮುಖ ಬ್ರಹ್ಮನೇ 'ಎಲವೋ ಪಾಪಿ! ಬೇಗನೆ ಬೀಳು! ಸರ್ಪ! ಸರ್ಪ! (ಬೇಗ ನಡೆಯಿರಿ!) ಎಂದು ನುಡಿದ ಕಾರಣ ಸರ್ಪವೇ ಆಗು! ಸಾಯಂಕಾಲದಲ್ಲಿ ಅಥವಾ ಅಂತಿಮ ರಾತ್ರಿಯಲ್ಲಿ ನಿನಗೆ ಸಿಕ್ಕವನು ಬಲಾಧಿಕನಾಗಿದ್ದರೂ ನಿನಗೆ ವಶನಾಗಲಿ! ಅವನ ಬಲವು ವ್ಯರ್ಥವಾಗಲಿ! ಆದರೆ ಯಾವ ಪುರುಷನು ನಿನ್ನ ಕೈಗೆ ಸಿಕ್ಕರೂ, ನಿರ್ಭಯನಾಗಿ ತನ್ನನ್ನು ತಾನು ಬಿಡಿಸಿಕೊಳ್ಳಲು ಯತ್ನಿಸುವುದಿಲ್ಲವೋ, ಅವನನ್ನು ನಿನ್ನ ತಪೋಬಲಗಳು ಸೇರಿ, ನೀನು ನಿರ್ವೀರ್ಯನಾಗು! ಆಗಲೇ ನಿನಗೆ ಶಾಪವಿಮೋಚನ ಕಾಲವೆಂದು ತಿಳಿ! ನಿನ್ನ ಪ್ರಶ್ನೆಗಳಿಗೆ ಉತ್ತರಗಳನ್ನು ಕೊಟ್ಟವನಿಂದಲೂ ನಿನಗೆ ಅಜಗರಜನ್ಮವಿಮೋಕ್ಷವಾಗುವುದು. ನನ್ನ ದಯೆಯಿಂದ ನಿನಗೆ ಭೂತಸ್ಮೃತಿ ಇರಲಿ!' ಎಂದು ಶಾಪವಿತ್ತನು. ನಹುಷನು ತತ್‌ಕ್ಷಣವೇ ಅಜಗರನಾಗಿ ಹಿಮವತ್ಕಂದರದಲ್ಲಿ ಬಿದ್ದನು.

ದೇವೇಂದ್ರನು ವೃತ್ರವಧೆಯಿಂದ ನಿರ್ಮುಕ್ತನಾಗಿ, ಸ್ವರ್ಗವನ್ನು ಸೇರಿ ಸುಖದಿಂದಿದ್ದನು. ವಿಚಾರಿಸಿ ನೋಡಲು ಇಂದ್ರನಿಗೆ ವೃತ್ರವಧೆಯಿಂದ ಬ್ರಹ್ಮಹತ್ಯೆ

*

ಬರಲಿಲ್ಲ. ಇತರರಿಗೆ ಬ್ರಾಹ್ಮಣವಧೆ ವೇದನಿಷಿದ್ಧವಾಗಿ ಪಾಪವೆನಿಸಿದರೂ ಇಂದ್ರನು ವೃತ್ರಸಂಹಾರದಿಂದ ಲೋಕರಕ್ಷಕನಾಗಿ ಪುಣ್ಯವೃದ್ಧಿಯನ್ನೇ ಪಡೆದನು. ದೇವತೆಗಳು, ಮುನಿಗಳು, ಶ್ರೀಹರಿಸೇವೆ ಮಾಡಿದ ಕೆಲಕಾರ್ಯಗಳು ಲೋಕದೃಷ್ಟಿಯಿಂದ ಪಾಪವೆನಿಸಿದರೂ, ಅವರಿಗೆ ಪುಣ್ಯವೃದ್ಧಿಯೇ ಆಗುವುದು. ಮನುಜರಿಗೆ ಹಾಗಲ್ಲ. ಅವರು ವೇದವಚನಬದ್ಧರಾಗಿ ನಡೆಯಬೇಕು. ಅವರ ಪುಣ್ಯವು ಪಾಪವಾಗದು. ಪಾಪವು ಪುಣ್ಯವಾಗುವುದಿಲ್ಲ. ದೈತ್ಯರು ಪುಣ್ಯವನ್ನು ಮಾಡಿದರೂ ಅದು ಪಾಪವೇ ಆಗುವುದು. ಮಹಾವ್ಯಾಘ್ರವು ಮಾಡಿದ ಏಕಾದಶಿಯ ಉಪೋಷಣಕ್ಕೆ ದ್ವಾದಶೀ ಪಾರಣವೆಂದರೆ ಗೋಮಾರಣವಲ್ಲವೆ!

ಇಂದ್ರನಿಲ್ಲದಿರುವಾಗ ತತ್ಸಮಾನನಾದ ಕಾಮಸಿಗೆ ಇಂದ್ರಪದವಿಯನ್ನು ದೇವ ಮುನಿಗಳು ಕೊಡಲಿಲ್ಲ. ಏಕೆಂದರೆ, ಇತರರ ಪದವಿಯನ್ನು ಇತರ ದೇವತೆಗಳು ಎಂದಿಗೂ ಹೊಂದಲಾರರು. ಆದುದರಿಂದಲೇ ಮನುಜನಾದ ನಹುಷನಿಗೆ ಶಕ್ತಿ ಸಾಮರ್ಥ್ಯಗಳನ್ನಿತ್ತು, ದೇವತೆಗಳವನನ್ನು ಇಂದ್ರಸಿಂಹಾಸನದಲ್ಲಿ ಕೂಡಿಸಿದ್ದರು. ಇಂತು ನಹುಷನು ಅಜಗರನಾಗಿರುವಾಗ ಇಪ್ಪತ್ತೆಂಟನೆಯ ದ್ವಾಪರದಲ್ಲಿ ಮುಖ್ಯ ಪ್ರಾಣಾವತಾರನಾದ ಭೀಮಸೇನನಿಂದ ಅವನಲ್ಲಿದ್ದ ದೇವಋಷಿವರರ ತಪಸ್ಸೆಲ್ಲ ಸೆಳೆಯಲ್ಪಟ್ಟು ನಹುಷನು ನಿರ್ವೀರ್ಯನಾದನು. ಹಾಗೂ ಧರ್ಮರಾಜನು ಅವನ ಪ್ರಶ್ನೆಗಳಿಗುತ್ತರವಿತ್ತು, ಅವನಿಗೆ ಶಾಪಮೋಕ್ಷವನ್ನು ತಂದಿತ್ತನು. ನಹುಷನ ತಪಸ್ಸನ್ನೂ ಬಲವನ್ನೂ ಸೆಳೆಯಲೆಣಿಸಿ, ಭೀಮನು ಸಮರ್ಥನಾದರೂ, ಬಿಡಿಸಿ ಕೊಳ್ಳದೆ ಸುಮ್ಮನಿದ್ದನು. ಮುಖ್ಯಪ್ರಾಣನಿಗೆ ಇಚ್ಛಾಮಾತ್ರದಿಂದ ಮೂಲರೂಪದ ಬಲಜ್ಞಾನಗಳು ಪ್ರಕಟವಾಗುವುದು ನಿಜ! ಆದರೆ ಹಾಗೆ ಪ್ರಕಟಿಸದೆ ಭೀಮನು ಸುಮ್ಮನಿದ್ದು, ನಹುಷನನ್ನು ಮೆಲ್ಲಗೆ ನಿರ್ಬಲನನ್ನಾಗಿ ಮಾಡಿದನು. ದೇವದೇವನಾದ ಶ್ರೀಹರಿಯು ನಿತ್ಯವ್ಯಕ್ತ ಬಲಜ್ಞಾನಸ್ವರೂಪನಾಗಿರುವನು. ದೇವತೆಗಳು ಮೂಲ ರೂಪದ ಸ್ಮರಣದಿಂದ ಅಧಿಕ ಬಲವಂತರಾಗುವರು. ದೇವತೆಗಳು ಮನುಜರ ಮಧ್ಯದಲ್ಲಿ ಅವತರಿಸಿರುವಾಗ, ಬಲಜ್ಞಾನಾದಿಗಳನ್ನು ತೋರಿಸದೆ ಅಸಮರ್ಥರಂತೆ ಇರುವುದರಿಂದ ಅವರಿಗೆ ಧರ್ಮವೃದ್ಧಿಯಾಗುವುದಲ್ಲದೆ, ಅದರಿಂದ ಶ್ರೀಹರಿಯೂ ಅವರಲ್ಲಿ ಪ್ರೀತನಾಗುವನು. ಇನ್ನು ತನ್ನನ್ನು ತಾನು ಬಿಡಿಸಿಕೊಳ್ಳಲು, ಪ್ರಶ್ನೆಗಳಿಗೆ ಉತ್ತರವನ್ನು ಹೇಳದೆ ಭೀಮಸೇನನು ಕ್ಷತ್ರಿಯಧರ್ಮವನ್ನು ಪ್ರಕಟಗೊಳಿಸಿದನು. ಬ್ರಾಹ್ಮಣರಿಗೇ ವಿದ್ಯೋಪಜೀವನವು ಧರ್ಮವಲ್ಲವೆಂದಮೇಲೆ ಕ್ಷತ್ರಿಯರಿಗೆ ವಿದ್ಯೆ ಯಿಂದ ಉಪಜೀವನವು ನಿಂದ್ಯವೆಂದು ಹೇಳಬೇಕೆ?

ಇಂತು ನಹುಷನು ಸರ್ಪಬಲದಿಂದ ಯುಕ್ತನಾಗಿದ್ದರೂ, ಭೀಮಸೇನನನ್ನು ಕದಲಾಡಿಸಲು ಕೂಡ ಸಮರ್ಥನಾಗದೆ ಸುಮ್ಮನೆ ಸುತ್ತುಗಟ್ಟಿ ಹಿಡಿದಿದ್ದನು. ತನ್ನ ಸೋದರರಿಗೂ, ಮಾತೆಗೂ, ಕ್ಲೇಶಕಾರಣವಾದ ಅಜಗರಬಂಧದಿಂದ ಬಿಡಿಸಿಕೊಂಡು ಅವರ ದುಃಖವನ್ನು ಕಳೆಯಲಿಚ್ಛಿಸಿದರೂ, ಭೀಮನು ಸುಮ್ಮನಿದ್ದು, ನಹುಷನಲ್ಲಿದ್ದ

ಸರ್ವದೇವಮುನಿಗಳ ತಪೋಬಲಗಳನ್ನು ಮೆಲ್ಲನೆ ಸೆಳೆದುಬಿಟ್ಟನು. ತಾನು ವಜ್ರಕಾಯನಾಗಿರುವುದರಿಂದಲೂ, ಶ್ರೀವಾಸುದೇವನ ಕೃಪಾಪಾತ್ರನಾಗಿರುವುದರಿಂದಲೂ ತನಗೆ ಭಯವಿಲ್ಲವೆಂದು ಚೆನ್ನಾಗಿ ತಿಳಿದೇ ಭೀಮಸೇನನು ಶ್ರೀಹರಿಧ್ಯಾನರತನಾಗಿ ಸುಮ್ಮನಿದ್ದನು. ಅಣ್ಣನು ಬಂದು ಉತ್ತರವನ್ನು ಹೇಳುವನೆಂದೂ, ತನ್ನನ್ನು ಬಿಡಿಸುವನೆಂದೂ, ಆಲೋಚಿಸುವವನಲ್ಲ ಭೀಮಸೇನನು! ಜ್ಞಾನ ಭಕ್ತಿ ಹರಿಪ್ರೀತಿಗಳ ಹೊರತು ಅನ್ಯವೇನನ್ನೂ ಎಂದಿಗೂ ಬೇಡದಿರುವ ಮುಖ್ಯಪ್ರಾಣನಿಗೆ ಪರಮುಖದಿಂದ ವಿದ್ಯೋಪಜೀವನವು ರುಚಿಸಲಿಲ್ಲ. ಇಂತು ಕ್ರಮವಾಗಿ ಬ್ರಹ್ಮವರಾನುಸಾರವಾಗಿ ನಹುಷನಲ್ಲಿರುವ ದೇವಮುನಿಗಳ ಬಲತಪಶ್ಶಕ್ತಿಗಳೆಲ್ಲವೂ ಸೆಳೆಯಲ್ಪಟ್ಟು, ಭೀಮನನ್ನು ಸೇರಿದವು. ನಹುಷಸರ್ಪನು ಶಿಥಿಲಾಂಗನಾಗುತ್ತಿದ್ದನು.

ಭೀಮಸೇನನು "ಎಲವೋ ಮಹಾಸರ್ಪನೇ! ನೀನಾರು? ನನ್ನನ್ನು ಹಿಡಿದುದರಿಂದ ನಿನಗೇನು ಪ್ರಯೋಜನ? ನಾನು ಪಾಂಡುಪುತ್ರನಾದ ಭೀಮಸೇನನು. ಸಿಂಹ ವ್ಯಾಘ್ರಾದಿ ಕ್ರೂರಮೃಗಗಳನ್ನೂ, ಭಯಂಕರ ಹಿಡಿಂಬಾದಿ ರಾಕ್ಷಸರನ್ನೂ ಲೀಲೆಯಿಂದ ಕೊಂದ ನನ್ನನ್ನು ಹಿಡಿದಿಟ್ಟ ನಿನ್ನ ವಿದ್ಯಾಬಲವೆಂತಹದು? ಅಥವಾ ಯಾರ ತಪೋಬಲದಿಂದ ಇಂತು ಬಲವಂತನಾಗಿರುವೆ?" ಎಂದು ಕೇಳಲು, ನಹುಷನು "ಭೀಮಸೇನ! ಪ್ರಾಣಧಾರಣಕ್ಕೆಂದು ನಿನ್ನನ್ನು ಹಿಡಿದೆನು. ಪ್ರಾಣಿಗಳಿಗೆ ಪ್ರಾಣಕ್ಕಿಂತಲೂ ಪ್ರೀತಿವಿಷಯರಿಲ್ಲ. ಕೇಳು! ನಿನ್ನ ಪೂರ್ವಜನಾದ ನಾನು ಅಗಸ್ತ್ಯನ ಶಾಪದಿಂದ ಇಂತು ಪಾಪಯೋನಿಯಲ್ಲಿ ಜನಿಸಿರುವೆನು. ನಹುಷನೆಂಬರು ನನ್ನನ್ನು! ಪ್ರಿಯದರ್ಶನನು, ಅಸ್ಮದ್ವಂಶವರ್ಧನನು, ಆದ ನಿನ್ನನ್ನು ತಿನ್ನಲಾರದೆ, ಹಸಿವೆ ತಾಳಲಾರದೆ ತೊಳಲುತ್ತಿರುವೆನು. ಭೀಮನಾದುದರಿಂದಲೇ ಇನ್ನೂ ಸಾಯದೆ ಬದುಕಿರುವೆ. ಸರ್ಪಯೋನಿಯಿಂದ ಮುಕ್ತಿಯನ್ನು ನಿರೀಕ್ಷಿಸುತ್ತಾ ಬಹುಕಾಲದಿಂದ ಇಲ್ಲಿ ಬಿದ್ದಿರುವೆನು. ನಿನ್ನನ್ನು ಆಶ್ರಯಿಸಿ, ನನ್ನ ದುರ್ಮದವನ್ನು ಕಳೆದುಕೊಂಡು, ಮತ್ತೆ ದೇವಲೋಕವನ್ನು ಸೇರಿ, ಇಂದ್ರಾನುಚರನಾಗಬಹುದೆಂದು ತೋರುತ್ತಿದೆ" ಎಂದು ನುಡಿದನು.

ಆಶ್ರಮದಲ್ಲಿದ್ದ ಪಾಂಡವರು ದುಶ್ಶಕುನಗಳನ್ನು ಕಂಡು ಭೀತರಾದರು. ಧರ್ಮರಾಜನು ದ್ರೌಪದಿಯನ್ನು ನೋಡಿ, 'ಭೀಮನೆಲ್ಲಿ?' ಎಂದು ಕೇಳಿದನು. ಬೇಟೆಗಾಗಿ ಹೋಗಿ, ಬರದೆ ಬಹುವೇಳೆಯಾಯಿತೆಂದು ಹೇಳಿದ ಪಾಂಚಾಲಿಯ ಮಾತಿನಿಂದ ಸಂತಪ್ತನಾಗಿ ಧರ್ಮಜನು, ನಕುಲ ಸಹದೇವ ಧನಂಜಯರನ್ನು ದ್ರೌಪದ್ಯಾದಿ ಪರಿವಾರವನ್ನು ರಕ್ಷಿಸಲು ಅಲ್ಲೆ ಬಿಟ್ಟು, ತಾನು ಧೌಮ್ಯನಿಂದ ಕೂಡಿ ಪೂರ್ವದಿಕ್ಕಿಗೆ ತೆರಳಿದನು. ಹಾದಿಯಲ್ಲಿ ಬಿದ್ದಿದ್ದ ಮೃಗಶರೀರಗಳಿಂದ ಭೀಮನ ಮಾರ್ಗವನ್ನರಿತು ಬಂದು, ಧರ್ಮರಾಜನು ಗಿರಿಗಹ್ವರದಲ್ಲಿ ಭುಜಗಭೋಗಬಂಧನದಲ್ಲಿ ಸಿಲುಕಿದ್ದ ಭೀಮಸೇನನನ್ನು ನೋಡಿದನು. ಪ್ರೀತಿಯ ತಮ್ಮನ ವಿಪತ್ತನ್ನು ಕಂಡು ಧರ್ಮರಾಜನು ಭೀತನಾದನು. ಭೀಮನು ತಿಳಿಸಲು ನಹುಷನೆಂದರಿತು,

ಧರ್ಮನು ಭೀಮನನ್ನು ಬಿಡೆಂದು ಸರ್ಪರಾಜನನ್ನು ಪ್ರಾರ್ಥಿಸಿದನು. ಅಜಗರವು ಇಂತೆಂದಿತು—"ರಾಜನ್! ನನಗೆ ಸಿಕ್ಕ ಆಹಾರವನ್ನು ನಾನೆಂತು ಬಿಡಲಿ? ಹೊರಡಿಲ್ಲಿಂದ! ನಾಳೆ ನೀನೂ ನನಗೆ ಬಲಿಯಾಗಬೇಕಾದೀತು. ಬಹುಕಾಲ ಕಾದ ನನಗೆ ನಿನ್ನ ತಮ್ಮನು ಸಿಕ್ಕಿರುವನು. ಈ ಮಹಾಬಲನಿಂದ ನನ್ನ ಹಸಿವೆ ಹಿಂಗುವುದು, ನಾನೂ ಕೃತಾರ್ಥನಾಗುವೆನು. ನಾನು ನಹುಷನೆಂಬ ರಾಜರ್ಷಿಯು. ಆಯುರಾಜ ಸುತನಾದ ನಾನು ಇಂದ್ರಪದವಿಯನ್ನಧಿರೋಹಿಸಿ, ದರ್ಪಿತನಾದೆನು. ಸಾವಿರ ಮುನಿಗಳು ನನ್ನ ಮೇನೆಯನ್ನು ಹೊತ್ತು ನಡೆಯಲು, ಶಚೀದೇವಿಯ ಮಂದಿರಕ್ಕೆ ಹೋಗುವಾಗ, ವೇದವು ಅಪ್ರಮಾಣವೆಂದು ಬೊಗಳಿ, ಅಗಸ್ತ್ಯನ ಶಾಪಕ್ಕೆ ಗುರಿಯಾಗಿ, ಅಜಗರನಾಗಿ ಬಿದ್ದಿರುವೆನು. ಅಗಸ್ತ್ಯನಲ್ಲಿದ್ದ ಭೃಗುಚತುರ್ಮುಖರು ನನಗೆ ಶಾಪವನ್ನಿತ್ತರೂ, ಪೂರ್ವಸ್ಮೃತಿಯನ್ನೂ, ಸರ್ವಭೂತಗ್ರಹಣಬಲವನ್ನೂ ಅನುಗ್ರಹಿಸಿರುವರು. ನಿನ್ನ ತಮ್ಮನನ್ನು ಬಿಡಿಸಿಕೊಳ್ಳಲು ತವಕಿಸುವ ನಿನ್ನನ್ನು ನೋಡಿ ಕನಿಕರ ಹುಟ್ಟುತ್ತಿದೆ. ಕೇಳು! ನನ್ನ ಪ್ರಶ್ನೆಗಳಿಗೆ ಉತ್ತರವನ್ನು ನೀಡು! ನಿನ್ನ ತಮ್ಮನನ್ನು ಬಿಡುವೆನು. ನನಗೂ ಶಾಪಮೋಕ್ಷವಾಗುವುದು" ಎಂದನು. ಆಗ ಧರ್ಮರಾಜನು ವಿದ್ಯೋಪಜೀವನವು ಕ್ಷತ್ರಿಯರಿಗೆ ಉಚಿತವಲ್ಲವೆಂದು ತಿಳಿದೂ, ತಮ್ಮನ ಮೋಚನವನ್ನೂ, ಸರ್ಪರಾಜನ ಶಾಪಮೋಕ್ಷವನ್ನೂ ಉಪಲಕ್ಷಿಸಿ, ಅವನ ಪ್ರಶ್ನೆಗಳಿಗೆ ಉತ್ತರವಿತ್ತನು.

ಧರ್ಮ—ಸರ್ಪರಾಜ! ಕೇಳು ಪ್ರಶ್ನೆಗಳನ್ನು. ನನ್ನ ಯೋಗ್ಯತೆಯಂತೆ ಪ್ರತ್ಯುತ್ತರ ನೀಡುವೆನು. ಪ್ರೀತನಾಗು! ಬ್ರಹ್ಮಜ್ಞಾನಿಯು ಸರ್ವವನ್ನರಿತಿರುವನು. ಪೂರ್ಣಗುಣನಾದ ನಾರಾಯಣನ ಪ್ರಸಾದದಿಂದ ಜ್ಞಾನವು ಲಭ್ಯವಾಗುವುದು.

ಸರ್ಪ—ಬ್ರಾಹ್ಮಣನ ಲಕ್ಷಣವೇನು? ವೇದ್ಯವಾವುದು?

ಧರ್ಮ—ಸತ್ಯ (ಯಥಾರ್ಥವು, ಹಿಂಸಾ ರಹಿತವು ಆದ ವಚನ), ದಾನ, ಕ್ಷಮಾ, ಶೀಲ, ನಿಷ್ಕೃರತ್ಯಾಗ, ತಪಸ್ಸು, ದಯೆ, ಮೊದಲಾದ ಸುಗುಣಗಳಿದ್ದರೆ ಅವನು ನಿಜವಾದ ಬ್ರಾಹ್ಮಣನು. ಪರಂಬ್ರಹ್ಮನಾದ ಶ್ರೀಹರಿಯೇ ವೇದ್ಯನು. ಅವನು ಕಲ್ಯಾಣಗುಣಪೂರ್ಣನು, ಸರ್ವದೋಷರಹಿತನು, ವೇದಾದಿಸಚ್ಛಾಸ್ತ್ರಮುಖ್ಯ ಪ್ರತಿಪಾದ್ಯನು, ದೇಶ ಕಾಲ ಗುಣಗಳಿಂದ ಅಪರಿಚ್ಛಿನ್ನನು, ಮುಕ್ತಾಮುಕ್ತ ಪ್ರಪಂಚ ನಿಯಾಮಕನು, ಜೀವ ಜಡ ವಿಲಕ್ಷಣನು ಮತ್ತು ರಮಾಪತಿಯು—ಇದೇ ಜ್ಞಾನವು. ಇದಕ್ಕೆ ವಿರುದ್ಧವೆಲ್ಲವೂ ಅಜ್ಞಾನವೇ ಸರಿ.

ಸರ್ಪ—ರಾಜನ್! ಚಾತುರ್ವರ್ಣಗಳು ವೇದವಿಹಿತವಾಗಿವೆ, ಅಲ್ಲವೆ? ಶೂದ್ರಾಚಾರವನ್ನು ನಿರೂಪಿಸುವ ಸ್ಮೃತಿಗಳೂ ವೇದ ಮೂಲಕವಾಗಿವೆ. ಒಂದು ವೇಳೆ ಜಾತ್ಯಾಶೂದ್ರನಲ್ಲಿ ಬ್ರಾಹ್ಮಣಗುಣಗಳಾದ ಸತ್ಯಾದಿಗಳಿದ್ದರೆ ಅವನು ಬ್ರಾಹ್ಮಣನಾಗುವನೆ? ಜಾತ್ಯಾವಿಪ್ರನಲ್ಲಿ ಕಾಮ ಕ್ರೋಧಾದಿಗಳಿದ್ದರೆ ಅವನು ಶೂದ್ರನಾಗುವನೇನು? ಸುಖ ದುಃಖ ರಹಿತವಾದ ಲೋಕವು ಇದೆಯೆ? ಅದಾವುದು?

ಧರ್ಮ—ಜಾತ್ಯಾ ಬ್ರಾಹ್ಮಣನು ಸತ್ಯಾದಿ ಗುಣರಹಿತನಾದರೆ ಅವನು ಗುಣ ದಿಂದ ಶೂದ್ರನೇ ಸರಿ. ಜಾತಿಯಿಂದ ಅಲ್ಲ, ಸತ್ಯಾದಿಗುಣಸಹಿತನಾದರೆ ಶೂದ್ರನು ಗುಣದಿಂದ ಬ್ರಾಹ್ಮಣನೇ ಅಹುದು. ಆದರೂ ಅವನು ಜಾತ್ಯಾ ಬ್ರಾಹ್ಮಣನಾಗ ಲಾರನು. ಅವನನ್ನು ಸಚ್ಛೂದ್ರನೆಂಬುವರು. ಕೇವಲ ಗುಣವನ್ನೇ ಸ್ವೀಕರಿಸಿ, ನಿರ್ಣಯಿಸುವುದಾದರೆ ಜಾತಿಸಂಕರವಾದೀತು. ಅದರಿಂದ ಲೋಕವೆಲ್ಲ ನಾಶವಾಗು ವುದು. ಜಲದಲ್ಲಿ ಶೈತ್ಯವಿದೆ, ಔಷ್ಣ್ಯವಿಲ್ಲ; ಅಗ್ನಿಯಲ್ಲಿ ಔಷ್ಣ್ಯವಿದೆ, ಶೈತ್ಯವಿಲ್ಲ; ಅಂತೆಯೇ ಸುಖದಲ್ಲಿ ದುಃಖವಿಲ್ಲ; ದುಃಖದಲ್ಲಿ ಸುಖವಿಲ್ಲ. ಎಲ್ಲ ಲೋಕಗಳಲ್ಲಿಯೂ ಸುಖ-ದುಃಖಗಳೆರಡೂ ಹೆಚ್ಚು ಕಡಿಮೆಯಾಗಿರುವುವು. ಆದರೆ ವಿಷ್ಣುಲೋಕದಲ್ಲಿ ಸುಖವೇ ಇದೆ; ದುಃಖವಿಲ್ಲ. ಕಲಿಯು ಅಂಧಂತಮದಲ್ಲಿ ದುಃಖವೇ ಇದೆ; ಸುಖ ಲೇಶವೂ ಇಲ್ಲ. ಜಾತ್ಯಾ ವಿಪ್ರನು ಕೂಡ ಜನಿಸುವಾಗ ಶೂದ್ರ ಸಮನಾಗಿದ್ದು, ಉಪನಯನ ಸಂಸ್ಕಾರದಿಂದ ಬ್ರಾಹ್ಮಣ್ಯ ಸಿದ್ಧಿಯನ್ನು ಪಡೆಯುವನು. ಸಂಸ್ಕಾರ ರಹಿತನು ಸದ್ಗುಣರಹಿತನು ಆದ ಬ್ರಾಹ್ಮಣನನ್ನು ಪತಿತನೆಂದು ತಿಳಿದು, ಪರಿವರ್ಜಿಸ ಬೇಕು. ಸದ್ಗುಣಿಯಾದ ಶೂದ್ರನನ್ನು ಸನ್ಮಾನಿಸಬೇಕು. ತಪ್ತಚಕ್ರಾಂಕನ ನಾದ ಶೂದ್ರನು ಮಾನ್ಯನೇ ಸರಿ!

ಧರ್ಮರಾಜನ ವಚನದಿಂದ ಅಜಗರನು ಪ್ರೀತನಾದನು. ವೃಕೋದರನನ್ನು ಹಿಡಿದಿದ್ದ ಅವನ ದೇಹಪಾಶವೂ ಸಡಿಲವಾಯಿತು. ಆಗ ಧರ್ಮರಾಜನು ವೇದ ವೇದಾಂಗಪಾರಂಗತನಾದ ನಹುಷನನ್ನು ಯಾವ ಕರ್ಮದಿಂದ ಸ್ವರ್ಗವಾಗುವುದೆಂದು ಕೇಳಿದನು. ಸರ್ಪನು 'ಪಾತ್ರದಲ್ಲಿ ನೀಡು! ಪ್ರಿಯವಾಗಿ ಮಾತನಾಡು! ಸತ್ಯ ವನ್ನು ನುಡಿ! ಹಿಂಸೆಯನ್ನು ಬಿಡು! ಇದೇ ಸತ್ಯಸಾಧನಮಾರ್ಗವು' ಎಂದನು.

ಧರ್ಮ—ದಾನ ಸತ್ಯಗಳಲ್ಲಿ ಯಾವುದು ಶ್ರೇಯಸ್ಕರವು? ಅಹಿಂಸಾ ಪ್ರಿಯ ವಚನಗಳಲ್ಲಿ ಯಾವುದು ಹೆಚ್ಚು?

ಸರ್ಪ—ದುಷ್ಟರಿಗೆ ಪ್ರಿಯವಾಗುವ ಸತ್ಯವನ್ನು ಬಿಡಬೇಕು. ಸಾಧುಗಳಿಗೆ ಅಪ್ರಿಯವಾಗುವಂತಹ ಅಂದರೆ ಅವರಿಗೆ ಹಿಂಸಾಪ್ರದವಾದ ಸತ್ಯವಾದರೂ ಆಡ ಬಾರದು. ಕಳ್ಳರಿಗೆ ಪ್ರಿಯವಾಗುವ ಸತ್ಯವಚನಕ್ಕಿಂತಲೂ ಅಹಿಂಸೆಯೇ ಲೇಸು! ಸುಳ್ಳು ಹೇಳಿ ಕಳ್ಳರಿಂದ ಪಾಂಥರ ಹಿಂಸೆಯಾಗದಂತೆ ಕಾಪಾಡಬೇಕು. ಅಹಿಂಸೆಗೂ ಮಿಗಿಲಾದದ್ದೆಂದರೆ ಶ್ರೀಹರಿಪ್ರೀತಿಸಾಧಕವಾದ ಬ್ರಹ್ಮೋಪದೇಶ. ಸಮಯವನ್ನರಿತು ಸತ್ಯದಾನಾದಿಗಳ ಗುರುಲಾಘವವನ್ನು ತಿಳಿಯಬೇಕು.

ಧರ್ಮ—ದೇಹನಾಶವಾದಮೇಲೆ ಜೀವನಿಗೆ ಶರೀರವಿಲ್ಲದುದರಿಂದ ಸ್ವರ್ಗ-ಭೋಗಗಳು ಆಗುವುದೆಂತು? ಶರೀರನಾಶದಿಂದ ಆ ಶರೀರದಿಂದ ಮಾಡಿದ ಕರ್ಮ ಗಳಿಗೂ ನಾಶವಾಗುವುದಾದರೆ, ಕರ್ಮಫಲವು ಅನಿವಾರ್ಯವೆಂಬುವ ವೇದವಚನ ಗಳಿಗೆ ಅರ್ಥವೇನು?

ಸರ್ಪ—ಶ್ರೀಹರಿಸಂಕಲ್ಪವು ಸ್ವತಂತ್ರವಾಗಿದೆ. ಕರ್ಮವು ಅಸ್ವತಂತ್ರವೂ, ಜಡವೂ ಆಗಿದೆ. ಅದು ಸ್ವತಃ ಫಲವನ್ನು ಕೊಡಲಾರದು. ಆದರೆ ಕರ್ಮವನ್ನು ನಿಮಿತ್ತಮಾಡಿ, ಶ್ರೀಶನು ಸುರನರತಿರ್ಯಗಾದಿ ದೇಹಗಳನ್ನು ನಿತ್ಯಜೀವರಿಗೆ ಕೊಡು ತ್ತಿರುವನು. ಅಂತೆಯೇ ಹಿಂದಿನ ಜನ್ಮದ ಸಂಸ್ಕಾರದಿಂದ ಜೀವನು ಕರ್ಮಫಲವನ್ನು ಬೇರೆ ದೇಹಗಳಲ್ಲಿ ಭುಂಜಿಸುವನು. ಕರ್ಮವು ನಾಶವಾದರೂ ಫಲಪರ್ಯಂತವೂ ಬೆಳೆಯುತ್ತಾ ಇರುವ ಅಪೂರ್ವವನ್ನು ಹುಟ್ಟಿಸಿ ಹೋಗುವುದು. ದಾನ ಸತ್ಯ ಕ್ಷಮಾದಿ ಗುಣಗಳಿಂದ ಜೀವನು ಸ್ವರ್ಗವನ್ನು ; ಕ್ರೋಧ, ಹಿಂಸಾ, ಲೋಭ, ಪಾರುಷ್ಯಗಳಿಂದ ನರಕವನ್ನು ಅಥವಾ ತಿರ್ಯಗ್ಯೋನಿಯನ್ನು ; ಪುಣ್ಯಪಾಪಗಳು ಸಮವೆನಿಸಿದಾಗ ಮತ್ತೆ ಮನುಜ ಶರೀರವನ್ನು ಹೊಂದುವನು. ತಿರ್ಯಗ್ಜಾತಿಯ ಅಶ್ವಗವಾದಿಗಳು ದೇವಹಿತಾರ್ಥವಾಗಿ ಜೀವಿಸಿದರೆ, ಅದೇ ಯೋನಿಯಿಂದ ಸ್ವರ್ಗ ವನ್ನು ಹೊಂದಬಹುದಾಗಿದೆ. ದೇಹಾಭಿಮಾನದಿಂದ ಕರ್ಮಫಲಾಸಕ್ತಿ, ಆಸಕ್ತಿ ಯಿಂದ ಕರ್ಮಬಂಧನ, ಅದರಿಂದ ಸ್ವರ್ಗಾದಿ ಲೋಕ ಇಂತು ಜನನಮರಣರೂಪ ಸಂಸಾರ ಬಂಧನದಿಂದ ಬಿಡುಗಡೆ ಹೊಂದಬೇಕಾದರೆ, ಶ್ರೀಹರಿಪ್ರಸಾದವೇ ಗತಿ. ನಿತ್ಯವೂ ಭಕ್ತಿಯಿಂದ ಅವನನ್ನು ಚಿಂತಿಸಿ, ಸರ್ವೋತ್ತಮನೆಂದು ಭಾವಿಸುವುದೇ ಮೋಕ್ಷಸಾಧನ.

ಧರ್ಮ—ಶಬ್ದ ಸ್ಪರ್ಶ ರೂಪ ರಸ ಗಂಧಗಳಿಗೆ ಅಧಿಷ್ಠಾನವಾವುದು ? ಒಂದೇ ಸಲ ಎಲ್ಲ ವಿಷಯಗಳನ್ನು ಸ್ವೀಕರಿಸಲಾಗುವುದೇ ಹೇಗೆ ? ಅಂತೂ ವಿಷಯಗಳನ್ನು ಸ್ವೀಕರಿಸುವ ಇಂದ್ರಿಯಗಳು ಬೇರಾದರೂ, ವಿಷಯೋಪಭೋಗವು ಒಬ್ಬನಿಗೆ ಆಗು ವುದಲ್ಲ ! ಅದು ಹೇಗೆ ?

ಸರ್ಪ—ಧರ್ಮರಾಜ ! ಇಂದ್ರಿಯಗಳಿಗೆ ಮುಖ್ಯ ಅಧಿಷ್ಠಾನವು ಮನವು. ಅದು ಜೀವನನ್ನು ಸುತ್ತುಗಟ್ಟಿ ನಿಂತಿದೆ. ಅನಂತ ಜನ್ಮಾಂತರಸಂಸ್ಕಾರಗಳಿಂದ ಲಿಪ್ತವಾಗಿರುವ ಮನಸ್ಸು ಜೀವನಿಗೆ ಪೂರ್ವಸಂಸ್ಕಾರದಿಂದ ಜ್ಞಾತವಾಗುವ ಸುಖ ದುಃಖಾದಿ ಭೋಗವನ್ನು ತಂದುಕೊಡಲು ಸಮರ್ಥವಾಗಿದೆ. ಮನಸ್ಸಿನ ಸಂಕಲ್ಪ ವಿಕಲ್ಪಗಳನ್ನು ನಿಶ್ಚಿಸಿ, ವಿಷಯ ನಿಶ್ಚಯ ಕಾರಣವಾಗಿರುವ ಬುದ್ಧಿಯು ಮನಃಸ್ವಾಮಿ ಯಾಗಿದೆ. ಶ್ರೀಶನು ಕರ್ಮಾನುರೂಪವಾಗಿ ಬುದ್ಧಿಯನ್ನು ಪ್ರೇರಿಸಿ, ಮನಸ್ಸಿನ ದ್ವಾರಾ ವಿಷಯಗಳನ್ನು ತಂದೊಡ್ಡಿ, ಸುಖದುಃಖಾದಿಗಳನ್ನು ಅಭಿಮಾನದ್ವಾರಾ ಉಂಟುಮಾಡುವನು. ವಿಷಯೇಂದ್ರಿಯ ಸಂಯೋಗವಾದರೆ ಸಾಲದು. ಅಭಿಮಾನ ವಿದ್ದರೇನೇ ಮಾತ್ರಾಸ್ಪರ್ಶಗಳು ಅಂದರೆ ವಿಷಯೇಂದ್ರಿಯ ಸಂಯೋಗವು ಸುಖದುಃಖ ಕಾರಣವಾಗುವುದು. ಅಭಿಮಾನವು ಮನಃಕಾರ್ಯವು ; ಅದು ಹುಟ್ಟಿಬೆಳ್ದು. ಅಂತಹ ಅಭಿಮಾನ ಅಂದರೆ ಅಹಂ ಮಮಕಾರಗಳನ್ನು ಬಿಟ್ಟ ಸಾತ್ವಿಕ ಮನವು ಬುದ್ಧಿಗತವಾಗಿ ಶ್ರೀಹರಿಚಿಂತನಾ ಯೋಗ್ಯವಾಗುವುದು. ಮನಸ್ಸಿಗೆ ವಿಷಯ ವಾಸನೆ ಇದೆ. ಅದನ್ನು ಕಳೆದು ಪರಿಶುದ್ಧವಾದ ಮನಸ್ಸನ್ನು ಶ್ರೀಹರಿಯಲ್ಲಿಡಲು ಬುದ್ಧಿ

ಚಿತ್ತಗಳು ಸಹಾಯಕವಾಗಿವೆ. ಬುದ್ಧಿದೇವಿ ಸರಸ್ವತಿಯು ಧ್ಯಾನವನ್ನು, ಚಿತ್ತ ದೇವ ಚತುರ್ಮುಖನು ಅಸಂಪ್ರಜ್ಞಾತ ಸ್ಥಿತಿಯನ್ನು ಕೊಟ್ಟು, ಜೀವೋದ್ಧಾರಣ ಕಾರಣರಾಗಿರುವರು. ಮನಸ್ಸಿನ ಮಹಾದೇವನ ದಿವ್ಯ ದಯದಿಂದ ಮನಶ್ಶುದ್ಧಿ ಯಾಗುವುದು. ಆಗ ಇತರ ಇಂದ್ರಿಯ ತತ್ವದೇವತೆಗಳೂ ಪ್ರಸನ್ನರಾಗುವರು. ಇಂತು ಜೀವನು ಶ್ರೀಹರಿಪ್ರಸಾದ ಪಾತ್ರನಾಗಿ ಸ್ವರೂಪಾನಂದಾವಿರ್ಭಾವಲಕ್ಷಣ ವಾದ ಮೋಕ್ಷವನ್ನು ಹೊಂದುವನು.

ಆಗ ಧರ್ಮರಾಜನು ನಹುಷನಿಗೆ ನಮಿಸಿ, "ಅಯ್ಯಾ! ಇಂತಹ ಬ್ರಹ್ಮಜ್ಞಾನಿ ಯಾದ ನಿನಗೆ ಹಾಳು ಸರ್ಪಯೋನಿ ಬಂದುದಾಶ್ಚರ್ಯವಾಗಿದೆ. ನಿನ್ನ ಜ್ಞಾನಕ್ಕೆ ನಮೋನಮಃ, ನಿನಗೂ ನಮಸ್ಕಾರ" ಎಂದು ವಂದಿಸಿದನು. ಆಗ ನಹುಷನಿಂತೆಂದನು —"ರಾಜನ್! ಐಶ್ವರ್ಯವು ಮತಿಭ್ರಂಶಕರವಾಗಿದೆ. ಎಂತಹ ಬುದ್ಧಿವಂತನೂ ಐಶ್ವರ್ಯವು ಉಕ್ಕೇರಿಬರಲು ಮದಮತ್ತನಾಗಿ, ಮಹಜ್ಜನದ್ರೋಹವನ್ನು ಮಾಡಿ, ಕೊನೆಗೆ ಕೆಡುವನು. ನನ್ನ ಕಥೆಯೇ ಸಾಕ್ಷಿ! ಮನುಜನಾದ ನನಗೆ ಇಂದ್ರಪದವಿ ಬರಬೇಕೆ? ಬಂದರೆ ನಾನು ಮದಮತ್ತನಾಗಿ ಶಚೀಮಾತೆಯನ್ನು ಬಯಸಬಹುದೆ? ಮುನಿವಾಹನನಾಗಿ ಮೆರೆಯಲು ಉಚಿತವೆ? ವೇದವನ್ನೇ ಅಪ್ರಮಾಣವೆನ್ನಲಾಗು ವುದೆ? ಎಲ್ಲವೂ ನಡೆಯಿತು. ನನ್ನ ದುರ್ಮದದಿಂದ ಏನೋ ಬ್ರಹ್ಮ ಭೃಗುಗಳ ದಯದಿಂದ ಅಗಸ್ತ್ಯನು ವಿಶಾಪಪವಿತ್ರನು. ನಿನ್ನನ್ನು ಕಂಡೆನು. ಶಾಪದಿಂದ ಮುಕ್ತ ನಾಗಲು ಭೀಮಸೇನನ ಚರಣವನ್ನು ಪಿಡಿದು ದುರ್ಮದದೂರನಾದೆನು. ಮಹಾ ಬಲನಾದ ಭೀಮನನ್ನು ನಾನೇನೂ ಮಾಡಲಾರದೆ ಸುಮ್ಮನೆ ಪಿಡಿದಿದ್ದೆನು. ಅಕ್ಷತ ನಾಗಿರುವ ನಿನ್ನ ತಮ್ಮನನ್ನು ಸ್ವೀಕರಿಸು! ನಿನಗೆ ಶುಭವಾಗಲಿ! ಹೋಗಿಬರುವೆನು" ಎಂದು ಅಜಗರ ಶರೀರವನ್ನು ಬಿಟ್ಟು, ನಹುಷನು ದಿವ್ಯ ಶರೀರದಿಂದ ಸ್ವರ್ಗವನ್ನು ಸೇರಿದನು.

ಧರ್ಮರಾಜನು ಭೀಮನೊಡನೆ ವೃಷಪರ್ವಾಶ್ರಮವನ್ನು ಸೇರಿ, ನಡೆದುದನ್ನು ದ್ರೌಪದೀ ಪಾರ್ಥ ಯಮಳರಿಗೂ, ಧೌಮ್ಯಾದಿ ವಿಪ್ರರಿಗೂ ತಿಳಿಸಿದನು. ಅವರು ಭೀಮಸೇನನು ಸಮರ್ಥನಾದರೂ ಅಜಗರದಿಂದ ಬಿಡಿಸಿಕೊಳ್ಳಲು ಯತ್ನಿಸದಿದ್ದುದಕ್ಕೆ ಆಶ್ಚರ್ಯವಿಷಾದಭರಿತರಾಗಿ, 'ವೃಕೋದರ! ಇಂತಹ ಸಾಹಸವನ್ನು ಮತ್ತೆ ಮಾಡ ಲಾಗದೆಂ'ದು ಅವನನ್ನು ಬೇಡಿದರು. ನಿರ್ಭಯನಾಗಿ ನಗುತ್ತಿದ್ದ ಭೀಮನನ್ನು ನೋಡಿ ಪರಮಾನಂದವಾಯಿತು.

ಬಿಸಿಲಗಾಲವು ಮುಗಿಯಲು ವರ್ಷಾಕಾಲವು ಬಂತು. ಮೇಘಗಳು ಪರ್ಜನ್ಯ ನೇರಿಬಂದ ಗಜರಾಜರಂತೆ ಅಂಬರದಲ್ಲಿ ತುಂಬಿ ನಿಂತವು. ಗಜಗಳಿಗೆ ಹಾಕಿದ ಹಾರ ಗಳಂತೆ ಆಗಾಗ ಮಿಂಚುಗಳು ಮಿನುಗಿದವು. ಅವು ಕೆಳಗೆ ಚಾಚಿದ ಸೊಂಡಿಲಗಳಂತೆ ಮಳೆಯ ಧಾರೆಗಳು ಇಳಿಗಿಳಿದವು. ಎಡಬಿಡದೆ ಬೀಳುವ ವರ್ಷಧಾರೆಗಳಲ್ಲಿ ದೇವತೆ ಗಳಿತ್ತ ವರದಾನಗಳು ಮನುಜರನ್ನು ತಣಿಸಲು ಮಹೀಮಂಡಲದಲ್ಲಿ ಅವಿತು,

ಧಾನ್ಯಾದಿ ರತ್ನರೂಪಗಳಾಗಿ ಪ್ರಯತ್ನಶೀಲರಿಗೆ ಸಿಗುತ್ತಿದ್ದವು. ಪರ್ಜನ್ಯನಿತ್ತ ಹಸಿರ ಸೀರೆಯನ್ನುಟ್ಟು, ಇಂದ್ರಗೋಪಪುಷ್ಪಗಳನ್ನು ಧರಿಸಿ, ಪಯೋಧಾರಾಸಿಕ್ತ ಪರ್ವತ ಸ್ತನಿಯು, ವಿದ್ಯುದ್ದೀಪಾವಲೀಪ್ರಕಾಶಿತವಿಷ್ಣುಪದೆಯು, ಮಹಾದೇವಶಿರ ಶ್ಚುಂಬಿ ಚಂದ್ರರೇಖಾಸಮಲಂಕೃತ ಮೇಘವೇಣಿಯು, ನದೀಮೇಖಲೆಯು ಆದ ಭೂದೇವಿಯು ಮನೋರಮೆಯಾಗಿದ್ದಳು. ಮೇಲೆ ಹರಿಯುವ ಜಲಪ್ರವಾಹದಲ್ಲಿ ಭೂಮಿಯ ಮಿಟ್ಟೆ ಹಳ್ಳಗಳು ಕಾಣದಾದವು. ಭೋರಿಡುತ್ತಾ ಗಿರಿಗಳಿಂದ ಇಳಿದು ಬರುವ ಮಹಾನದಿಗಳು, ವೇಗದಿಂದೋಡುವ ಮಹಾಸರ್ಪಗಳಂತೆ ಹರಿದಾಡಿದವು. ಮಳೆಗವಿತುಕೂತಿರುವ ಮೃಗಪಕ್ಷಿಗಳ ವಿವಿಧರವಗಳು ಮೆಲ್ಲನೆ ಕೇಳಿಬರುತ್ತಿರಲು, ಮೇಘಮಾಲೆಯನ್ನು ಕಂಡಾಡುವ ನವಿಲಿನ ಕ್ರೇಂಕಾರಾವವು ವನದಲ್ಲಿ ಪ್ರತಿಧ್ವನಿ ಸಿತು. ಕಪ್ಪೆಗಳ ಹಾರಾಟ ಕೂಗಾಟಗಳನ್ನು ಹೇಳತೀರದು. ಮಳೆಗಾಲವು ಮುಗಿದಂತೆ ಶರತ್ಕಾಲವು ತಲೆದೋರಿತು.

ಆಕಾಶವು ನಿರ್ಮಲವಾಯಿತು. ಪ್ರಕೃತಿರಮಣಿಯು ಧವಳಾಂಬರ ವನ್ನುಟ್ಟಳು. ತಾರಾಪುಷ್ಪಗಳನ್ನು ಮೇಘವೇಣೀಜಾಲದಲ್ಲಿಟ್ಟಳು. ಸ್ವಚ್ಛ ಜಲ ಗಳಾದ ನದಿಗಳಲ್ಲಿ ಹಂಸಡೋಲಿಕೆಗಳಲ್ಲಿ ತೂಗಿದಳು. ಸಾಧುವಿಕಸಿತವದನಪಂಕಜ ಳಾಗಿ ಪರಮಪಾವನ ಶ್ರೀಭೂರಮಣನ ಪಾದಸೇವೆಗೆ ಅಣಿಯಾದಳು. ಶರದ್ರಾತ್ರಿಯು ಚಂದ್ರಮನ ಧವಳಜ್ಯೋತ್ಸ್ನಾವಿತಾನದಡಿಯಲ್ಲಿ ಗ್ರಹನಕ್ಷತ್ರರೂಪ ದೇವರಮಣಿ ಯರು ಅಂದಚಂದಗಳಿಂದ ಸಂಚರಿಸಿದರು. ಗಾಳಿಯು ತಂಪಾಗಿ ಬೀಸಿತು. ಉಕ್ಕೇರಿದ್ದ ನದಿಗಳು ಸ್ವಭಾವಸುಂದರವಾದವು. ಕಪ್ಪೆಗಳ ಕೂಗಾಟ ಅಡಗಿತು. ಭೂಮಿಯ ಪಂಕವು ಅಡಗಿ, ಸಂಚಾರವು ಸುಲಭವಾಯಿತು. ವೀರರು ಧನುರ್ಧಾರಿ ಗಳಾಗಿ, ದಂಡಯಾತ್ರೋತ್ಸವ ನಿರತರಾದರು.

ಕಾರ್ತಿಕಮಾಸದಲ್ಲಿ ಪಾಂಡವರು ವೃಷಪರ್ವಾಶ್ರಮದಿಂದ ತೆರಳಿ, ಪೌರೋಗವ, ಸೂದ, ಪರಿಚಾರಕ, ಸೂತರಿಂದ ಕೂಡಿ, ಕಾಮ್ಯಕವನವನ್ನು ಸೇರಿ ಅಲ್ಲಿ ತಂಗಿದರು.

## ಧರ್ಮರಾಜ-ಮಾರ್ಕಂಡೇಯರ ಸಂವಾದ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ಧರ್ಮಾದಿಗಳು ಕಾಮ್ಯಕದಲ್ಲಿ ವಿಪ್ರಾದಿಸಹಿತರಾಗಿ ವಾಸಮಾಡುತ್ತಿರಲು, ಅವರನ್ನು ನೋಡಲು ಶ್ರೀಕೃಷ್ಣನು ಸತ್ಯಭಾಮಾದೇವಿಯೊಡನೆ ಬಂದನು. ಶಚೀ- ಪುರಂದರರಂತೆ ಬಂದ ಸತ್ಯಾಕೃಷ್ಣರನ್ನು ಕರೆತಂದು, ಪಾಂಡವರು ಭಕ್ತಿಯಿಂದ ಪೂಜಿಸಿದರು. ಸತ್ಯಾದೇವಿಗೆರಗಿದ ದ್ರೌಪದಿಯನ್ನು ಆ ಮಹಾದೇವಿ ಆಲಿಂಗಿಸಿ, ಸಾಂತ್ವನಗೊಳಿಸಿದಳು. ಅಸ್ತ್ರಪಂಡಿತನಾಗಿ ಬಂದ ಅರ್ಜುನನನ್ನು ಅಭಿನಂದಿಸಿ, ಶ್ರೀಕೃಷ್ಣನು ಸರ್ವಜ್ಞನಾದರೂ ಲೌಕಿಕೀತನನಾದಕಾರಣ ಅವನಿಂದ ನಡೆದುದೆಲ್ಲ ವನ್ನರಿತು ಮಹಾನಂದಭರಿತನಾದನು. ತನ್ನನ್ನು ಸುತ್ತುಗಟ್ಟಿಕೂತ ತನ್ನ ಪಾಂಡವ

ರನ್ನು ಕಂಡು, ಹಿಗ್ಗಿ, ಶ್ರೀಹರಿಯು "ಧರ್ಮರಾಜ! ಹನ್ನೆರಡನೇ ವರ್ಷದ ಅರಣ್ಯ ವಾಸವು ನಡೆಯುತ್ತಿದೆಯಲ್ಲವೆ? ಅಜ್ಞಾತವಾಸವೂ ನಿರ್ವಿಘ್ನವಾಗಿ ಮುಗಿಯು ವುದು. ಧರ್ಮಸತ್ಯದಯಾತಪೋನಿರತನಾದ ನಿನಗೆ ವಿಜಯವು ನಿಶ್ಚಯವು. ಸಕಲ ಸಂಪತ್ಸಮೃದ್ಧವಾದ ಕುರುರಾಜ್ಯವು ನಿನಗೆ ಕಟ್ಟಿಟ್ಟ ಗಂಟೆಂದು ತಿಳಿ! ನನ್ನ ತಂಗಿ ಯಾದ ದ್ರೌಪದಿಯ ಕೇಶಾಕರ್ಷಣ ಕಾರಣರಾದವರ ಆಯುರ್ದಾಯಾಕರ್ಷಣವೂ ಅಂದೇ ಆಯಿತೆಂದು ತಿಳಿ! ಭೀಮನು ರಣಭೀಮನಾಗಿರಲು, ಗಾಂಡೀವಿಯು ಚಂಡ ಮಹಾಸ್ತ್ರಪಂಡಿತನಾಗಿರಲು, ನಕುಲಸಹದೇವರು ರಣರಂಗ ವಿಹಾರ ಕುಶಲರಾಗಿರಲು, ನಿನಗೆ ರಾಜ್ಯಲಕ್ಷ್ಮಿಯು ಮಾಲೆ ಹಾಕದೆ ಬಿಡಳು. ಅಮ್ಮಾ! ದ್ರೌಪದಿ! ನಿನ್ನ ಮಕ್ಕಳೆಲ್ಲರು ಕುಶಲಿಗಳು. ಪ್ರದ್ಯುಮ್ನನಿಂದ ದಿವ್ಯ ಶಸ್ತ್ರಾಸ್ತ್ರಗಳನ್ನು ಸ್ವೀಕರಿಸಿ ಅವರೆಲ್ಲ ಮಹಾರಥರೆನಿಸಿರುವರು. ವಿಶೇಷ ವಿನಯ ಶೌರ್ಯ ಧುರ್ಯನಾದ ಅಭಿ ಮನ್ಯು ಕುಮಾರನು ಅಸಮಾನ ಶೂರನೆನಿಸಿ, ಸುಖಿಯಾಗಿರುವನು. ಬಲರಾಮ ನಿಂದ ಕೂಡಿ ಮೆರೆವ ಯಾದವ ಸೇನಾಬಲವೆಲ್ಲವೂ ನಿಮ್ಮ ಸೇವೆಗಾಗಿ ಸನ್ನದ್ಧ ವಾಗಿದೆ. ನಿಮಗೆ ಶುಭವಾಗುವುದು" ಎಂದು ನುಡಿದನು.

ವಾಸುದೇವನ ವಚನಾಮೃತ ಪಾನದಿಂದ ಹರ್ಷಚಿತ್ತನಾದ ಯುಧಿಷ್ಠಿರನು, ಶ್ರೀಕೃಷ್ಣನನ್ನು ಪ್ರೇಮಾರ್ದ್ರನಯನನಾಗಿ ನೋಡಿದನು. ಅವನ ಕಂಠವು ಗದ್ಗದಿತ ವಾಯಿತು. ಅವನು ಶ್ರೀಕೃಷ್ಣನಿಗೆ ನಮಿಸಿ "ಶ್ರೀಶಾ! ಸತ್ಯಸಂಕಲ್ಪನಾದ ನಿನ್ನ ಮಾತು ಸುಳ್ಳಾಗದು. ಕೇಶವ! ನಿನ್ನ ಹೊರತಿನ್ನಾರು ನಮಗೆ ಗತಿ? ನಿನ್ನ ಚರಣತರಣಿಕರುಣೆಯಿಂದ ಭವವೈತರಣಿಯನ್ನೇ ದಾಟಲಿರುವ ನಮಗೆ ಕೌರವಸೈನ್ಯ ಸಾಗರದ ಲೆಕ್ಕವೇನು? ಅಜ್ಞಾತಚರ್ಯೆ ಮುಗಿಯಲಿ! ಆಗ ನಮಗೆ ಮಾರ್ಗ ದರ್ಶಕನಾಗಿ ನಮ್ಮನ್ನು ಕಾಪಾಡು! ದಾನ ಧರ್ಮ ಸತ್ಯಗಳಲ್ಲಿ ನಮ್ಮ ಮನವಿರಲಿ! ದಾರಾಪುತ್ರಪರಿವಾರಸಂಪತ್ಸಾಮ್ರಾಜ್ಯಗಳೆಲ್ಲವೂ ನೀನಿತ್ತುದೆಂದು ತಿಳಿವ ಜ್ಞಾನ ವನ್ನು ಕೊಡು!" ಎಂದು ಕೈಮುಗಿದನು.

ಆ ಸಮಯದಲ್ಲಿ ಕಾಮ್ಯಕವನಕ್ಕೆ ಮಾರ್ಕಂಡೇಯನು ಬಂದು, ಪಾಂಡವ ರನ್ನು ಕೃಷ್ಣನನ್ನು ಕಂಡು, ಮಹಾಪ್ರಮೋದಭರಿತನಾದನು. ಧರ್ಮರಾಜಾದಿಗಳು ಚಿರಜೀವಿಯಾದರೂ ಇಪ್ಪತ್ತೈದು ವರ್ಷದವನಂತೆ ತೋರುವ ಮಾರ್ಕಂಡೇಯನನ್ನು ಭಕ್ತಿವಿನಯಗಳಿಂದ ಪೂಜಿಸಿದರು. ಶ್ರೀಕೃಷ್ಣನು ಪೂರ್ವರಾಜರ್ಷಿವಿಪ್ರರ್ಷಿಚರಿತ ಗಳನ್ನು ನಿರೂಪಿಸುವಂತೆ ಮಾರ್ಕಂಡೇಯನಿಗೆ ಆಜ್ಞಾಪಿಸಿದನು. ಮಹರ್ಷಿಯು ನಸುನಕ್ಕು ಮಾಧವನಿಗೆ ಮನಸಾ ಮಹಾದರದಿಂದ ನಮಿಸಿ, ಧರ್ಮರಾಜನಿಗೆ ಇಂತೆಂದನು—"ರಾಜನ್! ಧರ್ಮಿಷ್ಠರಾದ ನಿಮಗೆ ಕಷ್ಟಪರಂಪರೆಯೇ ಒದಗುತ್ತಿದೆ. ಪಾಪಾತ್ಮರಾದ ದುರ್ಯೋಧನಾದಿಗಳಿಗೆ ಸಂಪತ್ಸಮೃದ್ಧಿಯು ಕೂಡಿಬಂದಿದೆ. ಅಂದಮೇಲೆ ಈಶ್ವರನು ಕರ್ಮಫಲಪ್ರದನು ಅಹುದೋ ಅಲ್ಲವೋ? ಶುಭಾಶುಭ ಕರ್ಮಗಳಿಗೂ ಅಶುಭಶುಭಫಲಗಳಾಗುತ್ತವೇನು? ಈ ದೇಹದಿಂದ ಮಾಡಿದ ಕರ್ಮ

ಧಾನ್ಯಾದಿ ರತ್ನ ರೂಪಗಳಾಗಿ ಪ್ರಯತ್ನ ಶೀಲರಿಗೆ ಸಿಗುತ್ತಿದ್ದವು. ಪರ್ಜನ್ಯನಿತ್ತ ಹಸಿರ ಸೀರೆಯನ್ನುಟ್ಟು, ಇಂದ್ರಗೋಪಪುಷ್ಪಗಳನ್ನು ಧರಿಸಿ, ಪಯೋಧಾರಾಸಿಕ್ತ ಪರ್ವತ ಸ್ತನಿಯು, ವಿದ್ಯುದ್ದೀಪಾವಲೀಪ್ರಕಾಶಿತವಿಷ್ಣು ಪದೆಯು, ಮಹಾದೇವಶಿರಶ್ಚುಂಬಿ ಚಂದ್ರರೇಖಾಸಮಲಂಕೃತ ಮೇಘವೇಣಿಯು, ನದೀಮೇಖಲೆಯು ಆದ ಭೂದೇವಿಯು ಮನೋರಮೆಯಾಗಿದ್ದಳು. ಮೇಲೆ ಹರಿಯುವ ಜಲಪ್ರವಾಹದಲ್ಲಿ ಭೂಮಿಯ ಮಿಟ್ಟೆ ಹಳ್ಳಗಳು ಕಾಣದಾದವು. ಭೋರಿಡುತ್ತಾ ಗಿರಿಗಳಿಂದ ಇಳಿದು ಬರುವ ಮಹಾನದಿಗಳು, ವೇಗದಿಂದೋಡುವ ಮಹಾಸರ್ಪಗಳಂತೆ ಹರಿದಾಡಿದವು. ಮಳೆಗವಿತುಕೂತಿರುವ ಮೃಗಪಕ್ಷಿಗಳ ವಿವಿಧರವಗಳು ಮೆಲ್ಲನೆ ಕೇಳಿಬರುತ್ತಿರಲು, ಮೇಘಮಾಲೆಯನ್ನು ಕಂಡಾಡುವ ನವಿಲಿನ ಕ್ರೇಂಕಾರಾವವು ವನದಲ್ಲಿ ಪ್ರತಿಧ್ವನಿಸಿತು. ಕಪ್ಪೆಗಳ ಹಾರಾಟ ಕೂಗಾಟಗಳನ್ನು ಹೇಳತೀರದು. ಮಳೆಗಾಲವು ಮುಗಿದಂತೆ ಶರತ್ಕಾಲವು ತಲೆದೋರಿತು.

ಆಕಾಶವು ನಿರ್ಮಲವಾಯಿತು. ಪ್ರಕೃತಿರಮಣಿಯು ಧವಳಾಂಬರವನ್ನುಟ್ಟಳು. ತಾರಾಪುಷ್ಪಗಳನ್ನು ಮೇಘವೇಣೀಜಾಲದಲ್ಲಿಟ್ಟಳು. ಸ್ವಚ್ಛ ಜಲಗಳಾದ ನದಿಗಳಲ್ಲಿ ಹಂಸಡೋಲಿಕೆಗಳಲ್ಲಿ ತೂಗಿದಳು. ಸಾಧುವಿಕಸಿತವದನಪಂಕಜಳಾಗಿ ಪರಮಪಾವನ ಶ್ರೀಭೂರಮಣನ ಪಾದಸೇವೆಗೆ ಅಣಿಯಾದಳು. ಶರದ್ರಾತ್ರಿಯ ಚಂದ್ರಮನ ಧವಳಜ್ಯೋತ್ಸ್ನಾವಿತಾನದಡಿಯಲ್ಲಿ ಗ್ರಹನಕ್ಷತ್ರರೂಪ ದೇವರಮಣಿಯರು ಅಂದಚಂದಗಳಿಂದ ಸಂಚರಿಸಿದರು. ಗಾಳಿಯು ತಂಪಾಗಿ ಬೀಸಿತು. ಉಕ್ಕೇರಿದ್ದ ನದಿಗಳು ಸ್ವಭಾವಸುಂದರವಾದವು. ಕಪ್ಪೆಗಳ ಕೂಗಾಟ ಅಡಗಿತು. ಭೂಮಿಯ ಪಂಕವು ಅಡಗಿ, ಸಂಚಾರವು ಸುಲಭವಾಯಿತು. ವೀರರು ಧನುರ್ಧಾರಿಗಳಾಗಿ, ದಂಡಯಾತ್ರೋತ್ಸವ ನಿರತರಾದರು.

ಕಾರ್ತಿಕಮಾಸದಲ್ಲಿ ಪಾಂಡವರು ವೃಷಪರ್ವಾಶ್ರಮದಿಂದ ತೆರಳಿ, ಪೌರೋಗವ, ಸೂದ, ಪರಿಚಾರಕ, ಸೂತರಿಂದ ಕೂಡಿ, ಕಾಮ್ಯಕವನವನ್ನು ಸೇರಿ ಅಲ್ಲಿ ತಂಗಿದರು.

## ಧರ್ಮರಾಜ-ಮಾರ್ಕಂಡೇಯ ಸಂವಾದ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ಧರ್ಮಾದಿಗಳು ಕಾಮ್ಯಕದಲ್ಲಿ ವಿಪ್ರಾದಿಸಹಿತರಾಗಿ ವಾಸಮಾಡುತ್ತಿರಲು, ಅವರನ್ನು ನೋಡಲು ಶ್ರೀಕೃಷ್ಣನು ಸತ್ಯಭಾಮಾದೇವಿಯೊಡನೆ ಬಂದನು. ಶಚೀ-ಪುರಂದರರಂತೆ ಬಂದ ಸತ್ಯಾಕೃಷ್ಣರನ್ನು ಕರೆತಂದು, ಪಾಂಡವರು ಭಕ್ತಿಯಿಂದ ಪೂಜಿಸಿದರು. ಸತ್ಯಾದೇವಿಗೆರಗಿದ ದ್ರೌಪದಿಯನ್ನು ಆ ಮಹಾದೇವಿ ಆಲಿಂಗಿಸಿ, ಸಾಂತ್ವನಗೊಳಿಸಿದಳು. ಅಸ್ತ್ರಪಂಡಿತನಾಗಿ ಬಂದ ಅರ್ಜುನನನ್ನು ಅಭಿನಂದಿಸಿ, ಶ್ರೀಕೃಷ್ಣನು ಸರ್ವಜ್ಞನಾದರೂ ಲೌಕಿಕೀತನನಾದಕಾರಣ ಅವನಿಂದ ನಡೆದುದೆಲ್ಲವನ್ನರಿತು ಮಹಾನಂದಭರಿತನಾದನು. ತನ್ನನ್ನು ಸುತ್ತುಗಟ್ಟಿಕೂತ ತನ್ನ ಪಾಂಡವ

ರನ್ನು ಕಂಡು, ಹಿಗ್ಗಿ, ಶ್ರೀಹರಿಯು "ಧರ್ಮರಾಜ! ಹನ್ನೆರಡನೇ ವರ್ಷದ ಅರಣ್ಯ ವಾಸವು ನಡೆಯುತ್ತಿದೆಯಲ್ಲವೆ? ಅಜ್ಞಾತವಾಸವೂ ನಿರ್ವಿಘ್ನವಾಗಿ ಮುಗಿಯು ವುದು. ಧರ್ಮಸತ್ಯದಯಾತಪೋನಿರತನಾದ ನಿನಗೆ ವಿಜಯವು ನಿಶ್ಚಯವು. ಸಕಲ ಸಂಪತ್ಸಮೃದ್ಧವಾದ ಕುರುರಾಜ್ಯವು ನಿನಗೆ ಕಟ್ಟಿಟ್ಟ ಗಂಟೆಂದು ತಿಳಿ! ನನ್ನ ತಂಗಿ ಯಾದ ದ್ರೌಪದಿಯ ಕೇಶಾಕರ್ಷಣ ಕಾರಣರಾದವರ ಆಯುರ್ದಾಯಾಕರ್ಷಣವೂ ಅಂದೇ ಆಯಿತೆಂದು ತಿಳಿ! ಭೀಮನು ರಣಭೀಮನಾಗಿರಲು, ಗಾಂಡೀವಿಯು ಚಂಡ ಮಹಾಸ್ತ್ರಪಂಡಿತನಾಗಿರಲು, ನಕುಲಸಹದೇವರು ರಣರಂಗ ವಿಹಾರ ಕುಶಲರಾಗಿರಲು, ನಿನಗೆ ರಾಜ್ಯಲಕ್ಷ್ಮಿಯು ಮಾಲೆ ಹಾಕದೆ ಬಿಡಳು. ಅಮ್ಮಾ! ದ್ರೌಪದಿ! ನಿನ್ನ ಮಕ್ಕಳೆಲ್ಲರು ಕುಶಲಿಗಳು. ಪ್ರದ್ಯುಮ್ನನಿಂದ ದಿವ್ಯ ಶಸ್ತ್ರಾಸ್ತ್ರಗಳನ್ನು ಸ್ವೀಕರಿಸಿ ಅವರೆಲ್ಲ ಮಹಾರಥರೆನಿಸಿರುವರು. ವಿಶೇಷ ವಿನಯ ಶೌರ್ಯ ಧುರ್ಯನಾದ ಅಭಿ ಮನ್ಯು ಕುಮಾರನು ಅಸಮಾನ ಶೂರನೆನಿಸಿ, ಸುಖಿಯಾಗಿರುವನು. ಬಲರಾಮ ನಿಂದ ಕೂಡಿ ಮೆರೆವ ಯಾದವ ಸೇನಾಬಲವೆಲ್ಲವೂ ನಿಮ್ಮ ಸೇವೆಗಾಗಿ ಸನ್ನದ್ಧ ವಾಗಿದೆ. ನಿಮಗೆ ಶುಭವಾಗುವುದು" ಎಂದು ನುಡಿದನು.

ವಾಸುದೇವನ ವಚನಾಮೃತ ಪಾನದಿಂದ ಹರ್ಷಚಿತ್ತನಾದ ಯುಧಿಷ್ಠಿರನು, ಶ್ರೀಕೃಷ್ಣನನ್ನು ಪ್ರೇಮಾರ್ದ್ರನಯನನಾಗಿ ನೋಡಿದನು. ಅವನ ಕಂಠವು ಗದ್ಗದಿತ ವಾಯಿತು. ಅವನು ಶ್ರೀಕೃಷ್ಣನಿಗೆ ನಮಿಸಿ "ಶ್ರೀಶಾ! ಸತ್ಯಸಂಕಲ್ಪನಾದ ನಿನ್ನ ಮಾತು ಸುಳ್ಳಾಗದು. ಕೇಶವ! ನಿನ್ನ ಹೊರತಿನ್ನಾರು ನಮಗೆ ಗತಿ? ನಿನ್ನ ಚರಣತರಣಿಕರುಣೆಯಿಂದ ಭವವೈತರಣಿಯನ್ನೇ ದಾಟಲಿರುವ ನಮಗೆ ಕೌರವಸೈನ್ಯ ಸಾಗರದ ಲೆಕ್ಕವೇನು? ಅಜ್ಞಾತಚರ್ಯೆ ಮುಗಿಯಲಿ! ಆಗ ನಮಗೆ ಮಾರ್ಗ ದರ್ಶಕನಾಗಿ ನಮ್ಮನ್ನು ಕಾಪಾಡು! ದಾನ ಧರ್ಮ ಸತ್ಯಗಳಲ್ಲಿ ನಮ್ಮ ಮನವಿರಲಿ! ದಾರಾಪುತ್ರಪರಿವಾರಸಂಪತ್ಸಾಮ್ರಾಜ್ಯಗಳೆಲ್ಲವೂ ನೀನಿತ್ತುದೆಂದು ತಿಳಿವ ಜ್ಞಾನ ವನ್ನು ಕೊಡು!" ಎಂದು ಕೈಮುಗಿದನು.

ಆ ಸಮಯದಲ್ಲಿ ಕಾಮ್ಯಕವನಕ್ಕೆ ಮಾರ್ಕಂಡೇಯನು ಬಂದು, ಪಾಂಡವ ರನ್ನು ಕೃಷ್ಣನನ್ನು ಕಂಡು, ಮಹಾಪ್ರಮೋದಭರಿತನಾದನು. ಧರ್ಮರಾಜಾದಿಗಳು ಚಿರಜೀವಿಯಾದರೂ ಇಪ್ಪತ್ತೈದು ವರ್ಷದವನಂತೆ ತೋರುವ ಮಾರ್ಕಂಡೇಯನನ್ನು ಭಕ್ತಿವಿನಯಗಳಿಂದ ಪೂಜಿಸಿದರು. ಶ್ರೀಕೃಷ್ಣನು ಪೂರ್ವರಾಜರ್ಷಿವಿಪ್ರರ್ಷಿಚರಿತ ಗಳನ್ನು ನಿರೂಪಿಸುವಂತೆ ಮಾರ್ಕಂಡೇಯನಿಗೆ ಆಜ್ಞಾಪಿಸಿದನು. ಮಹರ್ಷಿಯು ನಸುನಕ್ಕು ಮಾಧವನಿಗೆ ಮನಸಾ ಮಹಾದರದಿಂದ ನಮಿಸಿ, ಧರ್ಮರಾಜನಿಗೆ ಇಂತೆಂದನು—"ರಾಜನ್! ಧರ್ಮಿಷ್ಠರಾದ ನಿಮಗೆ ಕಷ್ಟಪರಂಪರೆಯು ಒದಗುತ್ತಿದೆ. ಪಾಪಾತ್ಮರಾದ ದುರ್ಯೋಧನಾದಿಗಳಿಗೆ ಸಂಪತ್ಸಮೃದ್ಧಿಯು ಕೂಡಿಬಂದಿದೆ. ಅಂದಮೇಲೆ ಈಶ್ವರನು ಕರ್ಮಫಲಪ್ರದನು ಅಹುದೋ ಅಲ್ಲವೋ? ಶುಭಾಶುಭ ಕರ್ಮಗಳಿಗೂ ಅಶುಭಶುಭಫಲಗಳಾಗುತ್ತವೇನು? ಈ ದೇಹದಿಂದ ಮಾಡಿದ ಕರ್ಮ

ಫಲಭೋಗವು ಇನ್ನೊಂದು ದೇಹದಿಂದಾದರೆ ಕರ್ಮಫಲಜ್ಞಾನವಾಗಲಾರದೆ ಶುಭ ಕರ್ಮವನ್ನೇ ಮಾಡಿ, ಅಶುಭಕರ್ಮವನ್ನು ಬಿಡುವ ಜ್ಞಾನವು ದುರ್ಲಭವಾಗುವು ದಲ್ಲವೆ? ಇಂತು ನಿನ್ನ ಮನದಿ ತರ್ಕಿಸುವೆಯಲ್ಲವೇ? ಕೇಳು! ನೀನೂ ಬ್ರಹ್ಮ ಜ್ಞಾನಿ ಎನಿಸಿರುವೆ. ನಿನಗೆ ತಿಳಿಯದುದಿಲ್ಲ. ಆದರೂ ಶ್ರೀಕೃಷ್ಣನು ಪ್ರೀತನಾಗಲಿ! ಎಂದು ನನಗೆ ತಿಳಿದದ್ದನ್ನು ನಿರೂಪಿಸುವೆನು. ಹಿಂದೆ ಕೃತಯುಗದಲ್ಲಿ ಮನುಜರು ನಿರ್ಮಲಶರೀರಿಗಳಾಗಿ, ನಿರ್ಮಲಕರ್ಮರಾಗಿದ್ದರು. ಅವರು ಧರ್ಮನಿರತರಾದುದ ರಿಂದ ಸ್ವವಿಹಿತವರ್ಣಾಶ್ರಮಾಚಾರನಿರತರಾಗಿ, ಧರ್ಮಫಲವಾದ ಸುಖವನ್ನೇ ಹೊಂದಿದರು. ದೇವತೆಗಳು ಅವರಿಂದ ಕೂಡಿ ಅವರಿತ್ತ ಹವಿರ್ಭಾಗವನ್ನುಂಡು, ವಿಹರಿಸುತ್ತಿದ್ದರು. ಸ್ವಚ್ಛಂದದಿಂದಲೇ ನಿಷಿದ್ಧವರ್ಜನಶೀಲರಾದುದರಿಂದ ಅವರು ಸ್ವಚ್ಛಂದಮರಣರೂ ಆದರು. ಇಂದ್ರಿಯಜಯವಂತರಾದುದರಿಂದ ಅವರಿಗೆ ಉಪ ದ್ರವಗಳಿದ್ದಿಲ್ಲ.

ತ್ರೇತಾದಿಗಳು ಬಂದಾಗ ಅವರಿಗೆ ಕಾಮಕ್ರೋಧಾದಿಗಳೂ ಬಂದವು. ದೈತ್ಯ ಸಂಚಾರವು ನಿಬಿಡವಾಯಿತು. ಅವರ ಸಂಗ ಆವೇಶಗಳಿಂದ ಸುಜನರಲ್ಲಿಯೂ ಲೋಭಮೋಹಗಳು ತಲೆದೋರಿದವು. ಅವರು ಪಾಪಗಳನ್ನು ಮಾಡಿ, ನರಕಭಾಜನ ರಾದರು. ಕೆಲವರು ತಿರ್ಯಗ್ಯೋನಿಯಲ್ಲಿ ಜನಿಸಿದರು. ಪುನಃ ಪುನಃ ಹುಟ್ಟಿ ಸಾಯುತ್ತಾ, ಸಂಸಾರಕೂಪಪತಿತರಾದ ಜನರಿಗೆ ಧರ್ಮವಿವೇಕವು ನಶಿಸಿತು. ಅಧರ್ಮ ರುಚಿಯು ಹೆಚ್ಚಾಯಿತು. ಐಹಿಕವೇ ನಿಜವೆನಿಸಿತು. ಪಾರತ್ರಿಕಸಾಧ ನೇಚ್ಛೆ ಕಡಿಮೆಯಾಯಿತು. ಅವರು ಬೇಡಿ ಬೇಡಿದ ಫಲಗಳಿಗಾಗಿಯೇ ಕರ್ಮ ಗಳನ್ನು ಮಾಡಿ, ಅವನ್ನೇ ಪಡೆದು, ತೃಪ್ತರೂ ದೃಪ್ತರೂ ಆದರು. ದುಷ್ಕುಲ ಜಾತರೂ ದುರಾಚಾರರೂ ಆದ ದುರ್ಮಾರ್ಗರು ಪ್ರಭುಗಳಾದರು. ಅವರಂತೆ ಪ್ರಜರೂ ಕೆಟ್ಟರು. ತತ್ಫಲವಾಗಿ ಅಧರ್ಮದಿಂದ ಐಹಿಕಸುಖವನ್ನು ಹೊಂದಿದರೂ ಅವರು ಅಲ್ಪಾಯುಷ್ಕರು, ಮಂದಪ್ರಜ್ಞರು, ರೋಗಪೀಡಿತರು, ಕ್ರೂರಕರ್ಮರು ಆಗಿ ಕೆಟ್ಟರು. ಕಾಮಿಗಳಾಗಿ ಸ್ವಸುಖಮಾತ್ರ ನಿರತರಾದ ದುಷ್ಟರಿಂದ ಲೋಕೋಪ ದ್ರವವು ಭೀಕರವಾಯಿತು. ಪ್ರಜಾಪೀಡನತತ್ಪರರಾದ ದುರ್ಮಾರ್ಗರು ಕೊನೆಗೆ ತಮ್ಮ ಪಾಪಕ್ಕೆ ತಾವೇ ತುತ್ತಾಗುವರು. ಸುಜನರು ಧರ್ಮಶೀಲರಾಗಿ, ಕೆಲಕಾಲ ಕಷ್ಟಪಡುವರು. ಇದು ನಿಜ. ಕಷ್ಟಗಳಲ್ಲಿಯು ಶ್ರೀಕೃಷ್ಣನ ದಯೆ ಅವರಿಗೆ ದಾರಿದೀಪವಾಗಿ ಪಾಪಕೂಪದಲ್ಲಿ ಬೀಳದಂತೆ ಕಾಪಾಡಿ, ಕೊನೆಗೆ ಸುಖೋದಯ ಕಾರಣವೇ ಆಗುವುದು.

ಮನುಜನು ಮೊದಲನೇ ಕರ್ಮವನ್ನು ಲಿಂಗಶರೀರದ ಮನಸ್ಸಿನಿಂದ ಮಾಡಿ ರುವನು. ಅದರ ವಾಸನೆಯಿಂದ ಮುಂದೆ ದೇಹಪರಂಪರೆ ಬಂದಾಗಲೂ, ತದನು ರೂಪವಾದ ಕರ್ಮವನ್ನು ಮಾಡುತ್ತಲೇ ಇರುವನು. ಕರ್ಮವನ್ನು ಮಾಡದೆ ಕ್ಷಣವಾದರೂ ಸುಮ್ಮನಿರಲಾಗದು. ಜೀವನು ಜಡನಲ್ಲ. ಇಂತು ಕರ್ಮವನ್ನು

ಮಾಡುವಾಗ ಅವನ ಸ್ವರೂಪಯೋಗ್ಯತೆಯೇ ಪ್ರಧಾನ ಕಾರಣವಾಗಿದೆ. ಅದರಂತೆ ಪ್ರೇರಕನಾದ ಶ್ರೀಹರಿಯಿತ್ತ ಅನೇಕ ದೇಹೇಂದ್ರಿಯಗಳಲ್ಲಿ ಬಂದು ಜೀವನು ಅಹಂಕಾರ ವಿಮೂಢನಾಗಿ, ನಾನೇ ಸ್ವತಂತ್ರಕರ್ತನೆಂದು ಭ್ರಮಿಸಿ, ಆಯಾ ಶುಭಾಶುಭ ಕರ್ಮಫಲವನ್ನು ಉಣ್ಣುತ್ತಿರುವನು. ತೃಣಜಲೂಕಾನ್ಯಾಯದಂತೆ ಜೀವನು ಹಿಂದಿನ ಶರೀರವನ್ನು ಬಿಟ್ಟು, ಕರ್ಮಸಂಪಾದಿತ ಶರೀರಾಂತರವನ್ನು ಹೊಂದಿ ಅಲ್ಲಿ ಹಿಂದಿನ ಕರ್ಮಫಲವನ್ನು ಅವಶನಾಗಿ ಭುಜಿಸುವನು. ಇಂತು ಜನನಮರಣರೂಪ ಸಂಸಾರ ಪ್ರವಾಹವು ನಿಲ್ಲಬೇಕಾದರೆ, ಶ್ರೀಹರಿಪ್ರಸಾದವೇ ಕಾರಣವಾಗಿದೆ.

ಸುಶೀಲರು, ಇಂದ್ರಿಯಜಯವಂತರು ಆದವರು ವಿಹಿತ ಕರ್ಮವನ್ನು ಮಾಡಿ ನಿಷಿದ್ಧವನ್ನು ವರ್ಜಿಸುವರು. ಮಾಡಿದ ಸುಕೃತ ಫಲವನ್ನು ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀರಮಣನಿಗೆ ಅರ್ಪಿಸಿದುದರಿಂದ, ಅವರಿಗೆ ಕರ್ಮವು ಬಂಧಕವಾಗದು. ಇಂತು ನಿವೃತ್ತಿ ಕರ್ಮಾನುಷ್ಠಾನದಿಂದ ಅವರು ಶುದ್ಧಾಂತಃಕರಣರಾಗುವರು. ಪ್ರತ್ಯಕ್ಷ, ಆಗಮ, ಅನುಮಾನಗಳೆಂಬ ಪ್ರಮಾಣಗಳಿಂದಲೂ, ವೇದಾದಿ ಸಚ್ಛಾಸ್ತ್ರವನ್ನು ಗುರುಮುಖತಃ ಪಠಿಸುವುದರಿಂದಲೂ, ಅವರು ಜ್ಞಾನವಂತರಾಗುವರು. ಜ್ಞಾನದಿಂದ ಭಕ್ತಿಯು ಹೆಚ್ಚಾಗಿ, ಭಕ್ತಿಯಿಂದ ಭಗವತ್ಪ್ರಸಾದವು ಸಿಕ್ಕು, ಅದರಿಂದ ಜೀವನು ಮುಕ್ತನಾಗುವನು. ಸ್ವರೂಪಾನಂದಾವಿರ್ಭಾವವನ್ನು ಪೊಂದಿ, ಶ್ರೀಹರಿಸೇವಾನಿರತನಾಗಿ, ಅವನು ವೈಕುಂಠದಲ್ಲಿ ಸುಖದಿಂದಿರುವನು. ಅವನಿಗೆ ಮತ್ತೆ ಜನನಮರಣಗಳಿಲ್ಲ.

ಇಂತು ನುಡಿದ ಮುನಿವರನಿಗೆ ಧರ್ಮರಾಜನು "ಸ್ವಾಮೀ! ಮಹಾತ್ಮರಾದ ಬ್ರಾಹ್ಮಣರ ಕಥೆಗಳನ್ನು ನಮಗೆ ತಿಳಿಸಿ" ಎಂದು ಪ್ರಾರ್ಥಿಸಿದನು. ಮಾರ್ಕಂಡೇಯ ನಿಂತೆಂದನು—

ಹಿಂದೆ ಹೈಹಯ ಕುಲದಲ್ಲಿ ಕುಮಾರನೆಂಬ ಮಹಾಬಲನಾದ ರಾಜನು ಬೇಟೆಯಾಡಲು ಹೋದನು. ಅಲ್ಲಿ ಒಬ್ಬ ಮುನಿಯು ಕೃಷ್ಣಾಜಿನವನ್ನು ಹೊದ್ದುಕೊಂಡು ಜಪವನ್ನು ಮಾಡುತ್ತಿದ್ದನು. ಕುಮಾರನವನನ್ನು ಕಂಡು ಮೃಗವೆಂದು ಭ್ರಮಿಸಿ, ಬಾಣದಿಂದ ಹೊಡೆದನು. ಮುನಿಯು ಕೆಳಗೆ ಬಿದ್ದು ಮೃತನಾದನು. ಕುಮಾರನು ತಿಳಿಯದೆ ಬಂದೊದಗಿದ ಬ್ರಹ್ಮಹತ್ಯೆಗೆ ಹೆದರಿ, ಆ ಮುನಿಕುಮಾರನ ತಂದೆಯನ್ನು ಹುಡುಕುತ್ತಾ, ಸಂಗಡಿಗರಿಂದ ಕೂಡಿ, ಅರಿಷ್ಟನೇಮಿಯ ಆಶ್ರಮವನ್ನು ಸೇರಿದನು. ಮುನಿವರನಿಗೆ ವಂದಿಸಿ, ರಾಜಪುತ್ರರು ತಮ್ಮಿಂದಾದ ತಪ್ಪನ್ನು ತಿಳಿಸಿ, ಅವನಾರೆಂದು ಕೇಳಿದರು. ಅರಿಷ್ಟನೇಮಿಯು ಅವರನ್ನು ಸತ್ಕರಿಸಿ, 'ನಿಮ್ಮಿಂದ ಕೊಲ್ಲಲ್ಪಟ್ಟವನನ್ನು ಹುಡುಕಿ ತನ್ನಿ' ಎಂದು ಕಳಿಸಿದನು. ಅರಣ್ಯವೆಲ್ಲವೂ ಜಾಲಿಸಿ ಹುಡುಕಿದರೂ ಮೃತ ಮುನಿದೇಹವು ಅವರಿಗೆ ಸಿಗಲಿಲ್ಲ. ಅವರು ಮತ್ತೆ ಅರಿಷ್ಟನೇಮಿಯನ್ನು ಪೊಂದಿ, ನಡೆದುದನ್ನು ತಿಳಿಸಿ, ಪ್ರಾಯಶ್ಚಿತ್ತವನ್ನು ಮಾಡೆಂದರು. ಕಶ್ಯಪಪುತ್ರನಾದ ಅರಿಷ್ಟನೇಮಿಯು, ಅಲ್ಲೇ ನಿಂತಿದ್ದ ತನ್ನ ಮಗನನ್ನು ಅವರಿಗೆ ತೋರಿ, 'ಇವನನ್ನೇ ನೀವು

ಕೊಂದಿರಿ. ಆದರೆ ನನ್ನ ತಪೋಬಲದಿಂದ ಇವನು ಪುನರುಜ್ಜೀವಿತನಾಗಿರುವನು. ನಿಜವಾದ ಬ್ರಾಹ್ಮಣನನ್ನು ಸಾವು ಬಾಧಿಸಲಾರದು. ನಿಮಗೆ ಬ್ರಹ್ಮಹತ್ಯಾ ದೋಷವಿಲ್ಲ. ಮೃತ್ಯುವನ್ನು ಗೆಲ್ಲುವ ಸಾಧನವನ್ನು ನಾವರಿತಿರುವೆವು. ಅರಿತು ನಡೆಸುತ್ತಿರುವೆವು.

'ನಮಗೆ ಮೃತ್ಯುಭಯವಿಲ್ಲ. ಸತ್ಯವನ್ನೇ ನುಡಿಯುವೆವು. ಅಸತ್ಯವನ್ನು ಮನಸಾ ಎಣಿಸದಿರುವೆವು. ಸ್ವಧರ್ಮವನ್ನು ಬಿಡದೆ ನಡೆಸುವೆವು. ಸದ್ಬ್ರಾಹ್ಮಣರಿಗೆ ಹಿತವಾದುದನ್ನು ಮಾಡಿ, ಅಹಿತವಾದುದನ್ನು ಬಿಡುವೆವು. ಅವರು ಪ್ರಮಾದ ವಶರಾಗಿ ಮಾಡಿದ ತಪ್ಪನ್ನು ಎತ್ತಿ ನುಡಿಯುವುದಿಲ್ಲ. ಅತಿಥಿಗಳಿಗೆ ಅನ್ನಪಾನ ಗಳೀವೆವು. ಭೃತ್ಯಸುತಕಳತ್ರರಿಗೆ ಅನ್ನವನ್ನೂ ವಸ್ತ್ರಭೂಷಣ ಧನಗಳನ್ನೂ ಕೊಟ್ಟು ಸಂತೋಷವಾಗಿಟ್ಟಿರುವೆವು. ಪರಿವಾರವೆಲ್ಲ ಉಂಡದ್ದನ್ನೇ ನಾವೂ ಭುಜಿಸುವೆವು. ಶಾಂತರು, ದಾಂತರು, ಕ್ಷಮಾಶೀಲರು, ತೀರ್ಥಯಾತ್ರಾ ಪರಾಯಣರು, ದಾನ ಶೌಂಡರು, ಪತಿತಸಂಗದೂರರು, ಪವಿತ್ರ ದೇಶವಾಸಿಗಳು ಆದ ನಮಗೆ ಮೃತ್ಯುಭಯ ವಿಲ್ಲ' ಎಂದು ಕಳಿಸಿದನು.

ಧರ್ಮರಾಜ! ಅತ್ರಿಯ ಮಹಿಮೆಯನ್ನು ಕೇಳು! ಅತ್ರಿಯು ಪತ್ನಿ ಪುತ್ರರನ್ನು ಕರೆದು, ಪ್ರತಿಗ್ರಹವು ಪಾಪವಾಗಿದೆ. ತಪೋವೃದ್ಧಿಗಾಗಿ ವನದಲ್ಲಿ ಏಕಾಂತ ವಾಸರಾಗಿ, ಕಂದಮೂಲಫಲಗಳಿಂದ ಜೀವನವನ್ನು ಸಾಗಿಸುವುದು ವಿಹಿತವಲ್ಲವೆ? ಎಂದು ಪ್ರಬೋಧಿಸಿದನು. ಆಗ ಪತ್ನಿಯು—'ನಿಜ! ನೀನು ನುಡಿದಂತೆ ವನವಾಸವು ನಿಷ್ಪಾಪವಾಗಿದೆ. ಗೃಹಸ್ಥನು ದೇವ ಋಷಿ ಭಾರ್ಯಾಪುತ್ರ ಪರಿವಾರಗಳನ್ನು ಪೂಜಿಸಿ, ಪೋಷಿಸಿ, ಅನಂತರ ವನಸ್ಥನಾಗಬೇಕು. ವೈನ್ಯನು ರಾಜನಾಗಿರುವನು. ಆ ಮಹಾನುಭಾವನನ್ನು ಬೇಡಿ, ಧನವನ್ನು ತಂದು, ಪಂಚಧಾ ವಿಭಜನಮಾಡಿ ಕೊಟ್ಟು, ನಾವು ವಾನಪ್ರಸ್ಥರಾಗಿರಬಹುದು' ಎಂದಳು.

ವೈನ್ಯನೇನೋ ಮಹೋದಾರನಿದ್ದನು. ಚಂದನಮರದಡಿಯಲ್ಲಡಗಿರುವ ನಾಗರಹಾವಿನಂತೆ ಅಸೂಯಾಪರರಾದ ವಿಪ್ರರು ಅವನ ಆಸ್ಥಾನದಲ್ಲಿದ್ದರು. ಅತ್ರಿಯು ನುಡಿದ ಮಾತನ್ನು ಸುಳ್ಳೆನಿಸಿ, ಅವನನ್ನು ವಾದದಲ್ಲಿ ಸೋಲಿಸಿ ಕಳುಹುವರೆಂದು ಅತ್ರಿಯು ಹೆದರಿದನು. ಸುಮ್ಮನೆ ವಾದದಲ್ಲಿಯಾದರೂ ವಿಪ್ರನನ್ನು ಪ್ರತಿವಾದ ಮಾಡಿ ಗೆದ್ದು, ಸಭೆಯಲ್ಲಿ ಅವಮಾನಿಸಿದವನು ಬ್ರಹ್ಮರಾಕ್ಷಸನಾಗುವನೆಂದು ಅವನು ಅರಿತಿದ್ದನು. ಆದರೂ ಹೆಂಡತಿಯ ಮಾತೂ ತಪ್ಪೆನ್ನಲಾರದೆ ಅವನು ಪೃಥುರಾಜನ ಆಸ್ಥಾನವನ್ನು ಸೇರಿ, ಮಂಗಳ ವಚನಗಳಿಂದ ಆ ವೈನ್ಯನನ್ನು ಸ್ತುತಿಸಿದನು—

'ರಾಜನ್! ಧನ್ಯನಿರುವೆ! ಆದಿರಾಜನಾದ ನಿನಗೆ ಸಮರಿಲ್ಲ. ಸರ್ವನಿಯಂತನಾದ ನಿನಗೆ ಎದುರಿಲ್ಲ. ಧರ್ಮವನ್ನು ಚನ್ನಾಗಿ ತಿಳಿದು ಪಾಲಿಸುವೆ.' ಇಂತು ನುಡಿದ ಅತ್ರಿಯ ಮಾತನ್ನಾಲಿಸಿ, ಗೌತಮನು ಕೋಪದಿಂದ ಇಂತೆಂದನು— ಅತ್ರಿ! ಏನೆಂದೆ? ರಾಜನೆಂದರೆ ಮಹೇಂದ್ರನೇ! ಮತ್ತೊಬ್ಬನಲ್ಲ. ಅತ್ರಿಯು

—ಪರಲೋಕದಲ್ಲಿ ಇಂದ್ರನಂತೆ ಇಹದಲ್ಲಿ ವೈನ್ಯನೇ ಇಂದ್ರನು. ಅವನೇ ಪ್ರಜಾಪತಿಯು. ನೀನು ಮೋಹವಶನಾಗಿ ಮಾತಾಡುವೆ ಎಂದನು. ಗೌತಮನು—ಇಲ್ಲ ನನಗೆ ಮೋಹವಿಲ್ಲ. ನೀನೇ ದ್ರವ್ಯಮೋಹದಿಂದ ಬುದ್ಧಿಗೆಟ್ಟು ಮನುಜರಾಜನನ್ನು ಮಹೇಂದ್ರನೆಂದೆ. ಅವನಿಂದ ಧನವನ್ನು ಪಡೆಯಲು ಬಂದ ನಿನ್ನ ಮಾತು ಪ್ರಮಾಣವಲ್ಲ ಎಂದನು. ಅವರ ವಾದವನ್ನು ಕೇಳಿ, ಸಭಾಸದರು ಚಕಿತರಾದರು. ಅವರು ಸನತ್ಕುಮಾರನನ್ನು ಬೇಡಲು, ಆ ಮಹಾನುಭಾವನು ಅವರ ಧರ್ಮಸಂಶಯವನ್ನು ಬಿಡಿಸುತ್ತಿಂತೆಂದನು—

'ಬ್ರಾಹ್ಮಣರು ಕ್ಷತ್ರಿಯ ರಕ್ಷಿತರು. ಕ್ಷತ್ರಿಯರೂ ಬ್ರಾಹ್ಮಣ ರಕ್ಷಿತರೇ! ರಾಜನಲ್ಲಿ ವಿಷ್ಣ್ವಾದಿಸರ್ವದೇವಾಂಶಗಳಿವೆ. ಅವರಿತ್ತ ಶಕ್ತಿಯಿಂದಲೇ ರಾಜನು ಸುಜನ ರಕ್ಷಣ, ಕುಜನ ಶಿಕ್ಷಣಗಳನ್ನು ಮಾಡಲು ಸಮರ್ಥನಾಗುವನು. ಅಂತೆಯೇ ರಾಜನೇ ಮಹೇಂದ್ರನು. ಈ ಲೋಕದಲ್ಲಿ ಅವನು ಪ್ರಜಾಪತಿಯು. ಯಮನು ವರುಣನು ಎಲ್ಲವೂ ಅಹುದು. ಆಯಾ ಶಬ್ದಗಳ ಶಕ್ತಿಗಳವನಲ್ಲಿವೆ ಎಂದೇ ರಾಜನನ್ನು ತಿಳಿದು ಗೌರವಿಸಬೇಕು. ಅಧರ್ಮದಿಂದ ಭೀತರಾದ ಋಷಿವರರು ಆದಿತ್ಯನು ತಮಸ್ಸನ್ನು ಕಳೆವಂತೆ ರಾಜನು ಅಧರ್ಮವನ್ನು ಶಿಕ್ಷಿಸುವವನಾಗಲಿ! ಎಂದು ಅವನನ್ನು ಸರ್ವಪ್ರಧಾನನಾಗಿ ಮಾಡಿ ಪಟ್ಟಗಟ್ಟಿದರು.' ಇಂತು ನುಡಿದ ಸನತ್ಕುಮಾರನ ವಚನಗಳಿಂದ ನಿಸ್ಸಂಶಯರಾಗಿ ಸಭಾಸದರು ಅತ್ರಿಯನ್ನು ಪೊಗಳಿದರು. ವೈನ್ಯನೂ ಪ್ರೀತನಾಗಿ, ಅತ್ರಿಗೆ ದಶಕೋಟಿ ಸುವರ್ಣವನ್ನೂ ದಾಸೀಸಹಸ್ರವನ್ನೂ ಲಕ್ಷ ಗೋವುಗಳನ್ನೂ ಕೊಟ್ಟುಕಳಿಸಿದನು.

ನ್ಯಾಯದಿಂದ ಬಂದ ಧನವನ್ನು ತಂದು ಅತ್ರಿಯು ಭಾರ್ಯಾಪುತ್ರಪರಿಚಾರಕರಿಗಿತ್ತು, ತಾನು ವಿರಕ್ತನಾಗಿ, ವನವನ್ನು ಸೇರಿ ತಪೋನಿರತನಾದನು.

ಧರ್ಮರಾಜ! ಸರಸ್ವತೀಗೀತವನ್ನು ಕೇಳು! ಹಿಂದೆ ತಾರ್ಕ್ಷ್ಯನೆಂಬ ಮುನಿಯು ತನ್ನಲ್ಲಿ ಪ್ರೀತಳಾಗಿ. ಅಗ್ನಿಹೋತ್ರದಿಂದ ಆವಿರ್ಭವಿಸಿ ನಿಂತ ಸರಸ್ವತೀದೇವಿಯನ್ನು ಕಂಡು, 'ಅಂಬ! ಪುರುಷನಿಗೆ ಶ್ರೇಯಸ್ಸಾವುದು? ಸ್ವಧರ್ಮಹಾನಿಯಾಗದಂತೆ ನರನು ಏನು ಮಾಡಬೇಕು? ಅಗ್ನಿಪೂಜೆಯು ಎಂತು? ನಾನು ಪಾಪರಹಿತನಾಗಿ, ಪುಣ್ಯಲೋಕವನ್ನು ಪೊಂದುವುದೆಂತು?' ಎಂದು ಪ್ರಶ್ನಿಸಿದನು. ಆಗ ಸರಸ್ವತಿಯು ಅವನ ವಿನಯಶೀಲ ಧರ್ಮಶಮದಮಾದಿ ಗುಣಗಳಿಗೆ ಮೆಚ್ಚಿ ಇಂತು ಉಪದೇಶಿಸಿದಳು. —ಕಾಶ್ಯಪ! ಪ್ರಮಾದವಶನಾಗದೆ ವೇದಾದಿ ಸಚ್ಛಾಸ್ತ್ರವನ್ನು ಗುರುಮುಖತಃ ಅಭ್ಯಾಸಮಾಡಿ, ಸಮುದಾಚಾರನು, ಇಂದ್ರಿಯನಿಗ್ರಹಶೀಲನು ಆಗಿ, ಪರಬ್ರಹ್ಮನನ್ನರಿತವನು, ಪುಣ್ಯಲೋಕಗಳನ್ನು ಪೊಂದುವನು. ಸ್ವರ್ಗದ ವಿಮಲ ಸರಸ್ತೀರಗಳಲ್ಲಿ ಮಂದಾರಾದಿ ಕಲ್ಪವೃಕ್ಷಚ್ಛಾಯೆಗಳಲ್ಲಿ, ಪುಷ್ಪಮಯ ಶಾದ್ವಲಗಳಲ್ಲಿ, ದೇವರಮಣೀಸೇವಿತನಾಗಿ ಅಂತಹ ಪುಣ್ಯವಂತನು ಚಿರಕಾಲ ಸುಖವಾಗಿರುವನು. ಕಪಿಲಾಧೇನುವನ್ನೋ, ಧುರಂಧರವಾದ ವೃಷಭವನ್ನೋ, ಸಾಲಂಕೃತ ಕನ್ಯೆ

ಯನ್ನೋ, ಸುವರ್ಣವನ್ನೋ, ಸಸ್ಯಭರಿತಭೂಮಿಯನ್ನೋ, ವೇದವಿದ್ಯೆಯನ್ನೋ ದಾನಮಾಡಿದವನು ಅಧಿಕಸುಖಭಾಜನನಾಗಿ ಸ್ವರ್ಗಾದಿ ಲೋಕಗಳಲ್ಲಿರುವನು.

ಅಶುಚಿಯು, ಪಾಣಿಪಾದಶೌಚರಹಿತನು, ವೇದವಿದೂರನು, ಶ್ರದ್ಧಾರಹಿತನು ಏನುಮಾಡಿದರೂ ದೇವತೆಗಳ ಪ್ರೀತಿಯನ್ನು ಗಳಿಸಲಾರನು. ಶ್ರೋತ್ರಿಯನಲ್ಲ ದವನು ಹವ್ಯಕವ್ಯಗಳಿಗೆ ಪಾತ್ರನಲ್ಲ. ಕೃಶಗಾತ್ರರು, ವೇದವಿದ್ಯಾಪವಿತ್ರರು, ಸದಾಚಾರರು ಸುಶೀಲರು ಆದ ವಿಪ್ರರೇ ಪೂಜಿತರಾಗಿ, ಪುಣ್ಯಲೋಕಸಂಪಾದಕ ರಾಗುವರು. ಅಂತಹ ವಿಪ್ರವರರಿತ್ತ ಆಹುತಿಗಳಿಂದ ನಾನು ಪ್ರೀತಳಾಗಿ, ಅವರಿಗೆ ಒಲಿದು ಬರುವೆನು. ನನ್ನ ದಯದಿಂದ ಅವರು ಬ್ರಹ್ಮಶಬ್ದವಾಚ್ಯನು, ಸರ್ವವೇದ ಪ್ರತಿಪಾದಿತನು ಆದ ಶ್ರೀರಮಾರಮಣನನ್ನು ಬಾಯಾರ ಹೊಗಳುವ ಶಕ್ತಿಯನ್ನು ಹೊಂದುತ್ತಿರುವರು. ಅಗ್ನಿಯಲ್ಲಿ ಶ್ರದ್ಧೆಯಿಂದ ಹಾಕಿದ ಹವಿರ್ದಾನದಿಂದ ಸರ್ವ ದೇವತೆಗಳು ಪ್ರೀತರಾಗಿ, ಪುರುಷನಿಗೆ ಇಹಪರ ಸುಖಗಳನ್ನೀವರು. ನನಗೆ ಶ್ರದ್ಧೆ ಎಂಬ ಹೆಸರೂ ಉಂಟು. ಶ್ರೀನಾರಾಯಣನಿಂದ ದೊರಕುವ ಮೋಕ್ಷವೇ ಮಹಾ ಪುರುಷಾರ್ಥವು. ಅದು ಜ್ಞಾನಲಭ್ಯವಾಗಿದೆ. ಸಮಿಚ್ಚರುಗಳು, ಸ್ರುಕ್‌ಸ್ರುವಾದಿ ಉಪಕರಣಗಳು, ಆಜ್ಯ-ಪಾಯಸಾದಿ ದ್ರವ್ಯಗಳು, ವ್ರೀಹ್ಯಾದಿ ಧಾನ್ಯಗಳು—ಇವು ಯಜ್ಞಸಾಧನಗಳು. ಪರಲೋಕಸುಖಗಳನ್ನು ಕಾಮಿಸಿ, ಯಜ್ಞವನ್ನು ಮಾಡಿ ದವನು ಸ್ವರ್ಗವನ್ನು ಹೊಂದಿ, ಮತ್ತೆ ಮನುಜಲೋಕವನ್ನು ಸೇರುವನು. ಅವನಿಗೆ ಮುಕ್ತಿ ದೊರೆಯದು. ಮುಮುಕ್ಷುವಾದವನು ಸಕಲಯಜ್ಞಾದಿಕರ್ಮಫಲವನ್ನು ಶ್ರೀಶನಿಗರ್ಪಿಸಿ, ಪಾಪದೂರನಾಗಿ, ಪರಿಶುದ್ಧಾಂತಃಕರಣನಾಗುವನು. ಅವನೇ ಜ್ಞಾನದಿಂದ ಶ್ರೀಹರಿಪ್ರಸಾದವನ್ನು ಗಳಿಸಿ, ಮುಕ್ತನಾಗುವನು.

ಜಗತ್ತೆಂಬ ಮಹಾವೃಕ್ಷವಿದೆ. ಅದನ್ನು ಸೃಜಿಸಿ, ಪಾಲಿಸಿ, ಸಂಹರಿಸುವ ಮಹಾಪ್ರಭುವು ನನ್ನ ಪತಿಯ ಪಿತನು. ಆ ಜಗತ್ಪಿತನನ್ನು ವೇದದಿಂದಲ್ಲದೆ ತಿಳಿಯ ಲಾಗದು. ಜ್ಞಾನಭಕ್ತಿಗಳೇ ಅವನನ್ನು ತಿಳಿಯುವಲ್ಲಿ ಸಾಧನಗಳು. ಜಗದ್ವೃಕ್ಷವು ಪತ್ನೀಪುತ್ರಪೌತ್ರಾದಿರೂಪ ಶಾಖಾಸಹಸ್ರವಾಗಿದೆ. ಅದರ ಪುಷ್ಪಗಳೇ ವಿಷಯಗಳು. ಫಲಗಳೆರಡು; ಸ್ವರ್ಗಾದಿ ನಶ್ವರಲೋಕಗಳು, ಶಾಶ್ವತವೈಕುಂಠ; ಧರ್ಮಜ್ಞಾನ ವೈರಾಗ್ಯಭಕ್ತಿಗಳೆಂಬ ಸಾರವನ್ನರಿತು ಸೇವಿಸಿದವರೇ ಮುಕ್ತರಾಗುವರು. ಮೇಲೆ ಕಾಣುವ ಪಾಯಸ ಕರ್ದಮಗಳು, ಕ್ಷೀರನದಿಗಳು, ದಧಿಕುಲ್ಯಗಳು, ಜೇನಿನ ಹೊಳೆ ಗಳು, ಕೋಗಿಲೆ ಕೂಗುಗಳು, ಮೊದಲಾದುವೆಲ್ಲವೂ ವಿಷಯಗಳೆಂದು ತಿಳಿದು, ಪುಣ್ಯಾರಾಮದಿಂದ ಸೂಸಿಬಂದ ಮಾರುತನ ಸಚ್ಛಾಸ್ತ್ರಗಂಧವನ್ನು ಸೇವಿಸಿ, ಪುರುಷನು ಶ್ರೀಹರಿ ದಯೆಯಿಂದ ಜಗದ್ವೃಕ್ಷವನ್ನು ವೈರಾಗ್ಯಖಡ್ಗದಿಂದ ಕಡಿದು, ಪರಿತ್ಯಜಿಸಿ, ತಾನು ಸ್ವರೂಪಾನಂದಾವಿರ್ಭಾವವನ್ನು ಹೊಂದಿ, ಮುಕ್ತನಾಗುವನು. —ಇಂತು ಸರಸ್ವತೀಗೀತೆಯನ್ನು ಕೇಳಿ ಕಾಶ್ಯಪನು ಧನ್ಯನಾದನು.

ಧರ್ಮರಾಜ! ಹಿಂದೆ ಸತ್ಯವ್ರತನೆಂಬ ರಾಜನು ಕೃತಮಾಲಾ ನದಿಯಲ್ಲಿ ಸಂಧ್ಯಾವಂದನವನ್ನು ಮಾಡುತ್ತಿದ್ದನು. ಅರ್ಘ್ಯಕಾಲದಲ್ಲಿ ಸಣ್ಣ ಮೀನನ್ನೊಂದನ್ನು ಕಂಡನು. ಆಗ 'ನನ್ನ ಕೈಬಿಡಬೇಡ! ದೊಡ್ಡ ಮೀನುಗಳಿಗೆ ತುತ್ತಾಗದಂತೆ ನನ್ನನ್ನು ಕಾಪಾಡು!' ಎಂದು ಬೇಡಿದ ಮೀನನ್ನು ರಾಜನು ತನ್ನ ಕಮಂಡಲು ವಿನಲ್ಲಿಟ್ಟು ಮನೆಗೆ ತಂದನು. ಕಮಂಡಲುವು ಸಾಲದಂತೆ ಬೆಳೆದ ಮೀನನ್ನು ಉದಂಚನದಲ್ಲಿ, ಅಲ್ಲಿಂದ ನದಿಯಲ್ಲಿ, ಕೊನೆಗೆ ಸಮುದ್ರದಲ್ಲಿ ತಂದು ಬಿಟ್ಟನು. ಆಶ್ಚರ್ಯವೆಂದರೆ ಮೀನು ಬಹುಕಾಯವಾಗಿದ್ದರೂ ಹೊರುವ ರಾಜನಿಗೆ ಹಗುರಾಗಿತ್ತು. ಸಮುದ್ರದಲ್ಲಿಟ್ಟು ಸತ್ಯವ್ರತನು 'ಭಗವನ್! ನೀನು ಸಾಮಾನ್ಯ ಮತ್ಸ್ಯನಲ್ಲ. ನೀನಾರು? ಏಕೆ ಇಂತು ನನ್ನನ್ನು ಪರೀಕ್ಷಿಸಿದೆ?' ಎಂದು ಕೇಳಿದನು. ಮಾಯಾ ಮತ್ಸ್ಯನಾಗಿದ್ದ ಶ್ರೀಹರಿಯು 'ರಾಜನ್! ನನ್ನನ್ನು ನೀನು ಹಿಡಿಜಲದಿಂದ ಕಾಪಾಡಿದುದರಿಂದ ನಿನ್ನನ್ನು ನಾನು ಪ್ರಳಯೋದಧಿಯಲ್ಲಿ ಮುಣುಗದಂತೆ ಕಾಪಾಡುವೆನು. ಇಂದಿನಿಂದ ಏಳನೆಯ ದಿನವು ಪ್ರಳಯವಾಗುವುದು. ಅದು ಮನುಪ್ರಳಯವು. ಆಗ ಒಂದು ನೌಕೆ (ಭೂಮಯ) ಬರುವುದು. ನೀನು ಸರ್ವೌಷಧಿ ಬೀಜಗಳನ್ನು ಸಂಗ್ರಹಿಸಿ, ಅದರಲ್ಲಿ ಬಂದು ಕೂಡು. ಅಲ್ಲೇ ಸಪ್ತರ್ಷಿಗಳೂ ಇರುವರು. ಆಗ ನಿಮಗೆ ನಾನು ಮೀನ ರೂಪದಿಂದ ಬಂದು ತತ್ತ್ವೋಪದೇಶವನ್ನು ಮಾಡಿ, ಉದ್ಧರಿಸುವೆನು. ಮುಂದಿನ ಮನ್ವಂತರದಲ್ಲಿ ನೀನು ವೈವಸ್ವತನೆನಿಸಿ(ಸೂರ್ಯಪುತ್ರ), ಏಳನೆ ಮನುವಾಗುವೆ!' ಎಂದು ನುಡಿದು ಅಂತರ್ಹಿತನಾದನು.

ಅಂತೆಯೇ ಪ್ರಳಯವಾಯಿತು. ನೌಕೆಯಲ್ಲಿ ಋಷಿಗಳೂ ಬಂದರು. ರಾಜನು ಬೀಜಗಳೊಡನೆ ಅದನ್ನಧಿರೋಹಿಸಿದನು. ನೌಕೆಯನ್ನು ಹಿಮಾಲಯದ ಶೃಂಗದಲ್ಲಿ ಬಿಗಿಸಿ ಕಟ್ಟಿಸಿ, ಶ್ರೀಮತ್ಸ್ಯನು ಅವರಿಗೆ ತತ್ತ್ವೋಪದೇಶವನ್ನು ಮಾಡಿ, ಉದ್ಧರಿಸಿದನು. ಈ ಮತ್ಸ್ಯಾವತಾರಿ ಹರಿಯ ಶುಭಚರಿತೆಯನ್ನು ಹೇಳಿ, ಕೇಳಿದವರು ಮುಕ್ತರಾಗುವರು.

ಧರ್ಮರಾಜ! ಶ್ರೀಹರಿಯು ನನ್ನಲ್ಲಿ ಪ್ರೀತನಾಗಿ ನನಗಾಗಿ ಪ್ರಳಯವನ್ನು ಸೃಜಿಸಿ ತೋರಿ, ನನಗೆ ತನ್ನ ದಿವ್ಯಮಹಿಮಾಜ್ಞಾನವನ್ನು ಕರುಣಿಸಿದನು. ಈಗ ಆರು ಮನ್ವಂತರಗಳಿಂದಲೂ ನಾನು ಜೀವಿಸಿರುವೆನು. ಇದೂ ಶ್ರೀಶನ ಚರಣಾನುಗ್ರಹವೇ ಸರಿ. ನನ್ನ ಆಯುಸ್ಸೆಲ್ಲವೂ ದೃಢಗಾತ್ರನಾಗಿರುವುದೆಂದು ವರವಿತ್ತ ಮಹಾದೇವನ ದಯದಿಂದ ಶ್ರೀಹರಿಸೇವೆಗೇ ಮೀಸಲಾಗಿ ಸ್ಮಾರಕವೆನಿಸಿದೆ. ಅಂತಹ ಶ್ರೀಹರಿಯೇ ಶ್ರೀಕೃಷ್ಣನಲ್ಲವೆ? ಅವನು ಪ್ರೀತನಾಗುವಂತೆ ಪ್ರಳಯವಲ್ಲದಾಗ ಪ್ರಳಯವನ್ನು ತೋರಿಸಿದ ಶ್ರೀಶನ ಮಹಿಮೆಯನ್ನು ಹೇಳುವೆನು ಕೇಳು!

ಯನ್ನೋ, ಸುವರ್ಣವನ್ನೋ, ಸಸ್ಯಭರಿತಭೂಮಿಯನ್ನೋ, ವೇದವಿದ್ಯೆಯನ್ನೋ ದಾನಮಾಡಿದವನು ಅಧಿಕಸುಖಭಾಜನನಾಗಿ ಸ್ವರ್ಗಾದಿ ಲೋಕಗಳಲ್ಲಿರುವನು.

ಅಶುಚಿಯು, ಪಾಣಿಪಾದಶೌಚರಹಿತನು, ವೇದವಿದೂರನು, ಶ್ರದ್ಧಾರಹಿತನು ಏನುಮಾಡಿದರೂ ದೇವತೆಗಳ ಪ್ರೀತಿಯನ್ನು ಗಳಿಸಲಾರನು. ಶ್ರೋತ್ರಿಯನಲ್ಲ ದವನು ಹವ್ಯಕವ್ಯಗಳಿಗೆ ಪಾತ್ರನಲ್ಲ. ಕೃಶಗಾತ್ರರು, ವೇದವಿದ್ಯಾಪವಿತ್ರರು, ಸದಾಚಾರರು ಸುಶೀಲರು ಆದ ವಿಪ್ರರೇ ಪೂಜಿತರಾಗಿ, ಪುಣ್ಯಲೋಕಸಂಪಾದಕ ರಾಗುವರು. ಅಂತಹ ವಿಪ್ರವರರಿತ್ತ ಆಹುತಿಗಳಿಂದ ನಾನು ಪ್ರೀತಳಾಗಿ, ಅವರಿಗೆ ಒಲಿದು ಬರುವೆನು. ನನ್ನ ದಯೆದಿಂದ ಅವರು ಬ್ರಹ್ಮಶಬ್ದವಾಚ್ಯನು, ಸರ್ವವೇದ ಪ್ರತಿಪಾದಿತನು ಆದ ಶ್ರೀರಮಾರಮಣನನ್ನು ಬಾಯಾರ ಹೊಗಳುವ ಶಕ್ತಿಯನ್ನು ಹೊಂದುತ್ತಿರುವರು. ಅಗ್ನಿಯಲ್ಲಿ ಶ್ರದ್ಧೆಯಿಂದ ಹಾಕಿದ ಹವಿರ್ದಾನದಿಂದ ಸರ್ವ ದೇವತೆಗಳು ಪ್ರೀತರಾಗಿ, ಪುರುಷನಿಗೆ ಇಹಪರ ಸುಖಗಳನ್ನೀವರು. ನನಗೆ ಶ್ರದ್ಧೆ ಎಂಬ ಹೆಸರೂ ಉಂಟು. ಶ್ರೀನಾರಾಯಣನಿಂದ ದೊರಕುವ ಮೋಕ್ಷವೇ ಮಹಾ ಪುರುಷಾರ್ಥವು. ಅದು ಜ್ಞಾನಲಭ್ಯವಾಗಿದೆ. ಸಮಿಚ್ಚರುಗಳು, ಸ್ರುಕ್‌ಸ್ರುವಾದಿ ಉಪಕರಣಗಳು, ಆಜ್ಯ-ಪಾಯಸಾದಿ ದ್ರವ್ಯಗಳು, ವ್ರೀಹ್ಯಾದಿ ಧಾನ್ಯಗಳು—ಇವು ಯಜ್ಞಸಾಧನಗಳು. ಪರಲೋಕಸುಖಗಳನ್ನು ಕಾಮಿಸಿ, ಯಜ್ಞವನ್ನು ಮಾಡಿ ದವನು ಸ್ವರ್ಗವನ್ನು ಹೊಂದಿ, ಮತ್ತೆ ಮನುಜಲೋಕವನ್ನು ಸೇರುವನು. ಅವನಿಗೆ ಮುಕ್ತಿ ದೊರೆಯದು. ಮುಮುಕ್ಷುವಾದವನು ಸಕಲಯಜ್ಞಾದಿಕರ್ಮಫಲವನ್ನು ಶ್ರೀಶನಿಗರ್ಪಿಸಿ, ಪಾಪದೂರನಾಗಿ, ಪರಿಶುದ್ಧಾಂತಃಕರಣನಾಗುವನು. ಅವನೇ ಜ್ಞಾನದಿಂದ ಶ್ರೀಹರಿಪ್ರಸಾದವನ್ನು ಗಳಿಸಿ, ಮುಕ್ತನಾಗುವನು.

ಜಗತ್ತೆಂಬ ಮಹಾವೃಕ್ಷವಿದೆ. ಅದನ್ನು ಸೃಜಿಸಿ, ಪಾಲಿಸಿ, ಸಂಹರಿಸುವ ಮಹಾಪ್ರಭುವು ನನ್ನ ಪತಿಯ ಪಿತನು. ಆ ಜಗತ್ಪಿತನನ್ನು ವೇದದಿಂದಲ್ಲದೆ ತಿಳಿಯ ಲಾಗದು. ಜ್ಞಾನಭಕ್ತಿಗಳೇ ಅವನನ್ನು ತಿಳಿಯುವಲ್ಲಿ ಸಾಧನಗಳು. ಜಗದ್ವೃಕ್ಷವು ಪತ್ನೀಪುತ್ರಪೌತ್ರಾದಿರೂಪ ಶಾಖಾಸಹಸ್ರವಾಗಿದೆ. ಅದರ ಪುಷ್ಪಗಳೇ ವಿಷಯಗಳು. ಫಲಗಳೆರಡು; ಸ್ವರ್ಗಾದಿ ನಶ್ವರಲೋಕಗಳು, ಶಾಶ್ವತವೈಕುಂಠ; ಧರ್ಮಜ್ಞಾನ ವೈರಾಗ್ಯಭಕ್ತಿಗಳೆಂಬ ಸಾರವನ್ನರಿತು ಸೇವಿಸಿದವರೇ ಮುಕ್ತರಾಗುವರು. ಮೇಲೆ ಕಾಣುವ ಪಾಯಸ ಕರ್ದಮಗಳು, ಕ್ಷೀರನದಿಗಳು, ದಧಿಕುಲ್ಯಗಳು, ಜೇನಿನ ಹೊಳೆ ಗಳು, ಕೋಗಿಲೆ ಕೂಗುಗಳು, ಮೊದಲಾದುವೆಲ್ಲವೂ ವಿಷಯಗಳೆಂದು ತಿಳಿದು, ಪುಣ್ಯಾರಾಮದಿಂದ ಸೂಸಿಬಂದ ಮಾರುತನ ಸಚ್ಛಾಸ್ತ್ರಗಂಧವನ್ನು ಸೇವಿಸಿ, ಪುರುಷನು ಶ್ರೀಹರಿ ದಯೆದಿಂದ ಜಗದ್ವೃಕ್ಷವನ್ನು ವೈರಾಗ್ಯಖಡ್ಗದಿಂದ ಕಡಿದು, ಪರಿತ್ಯಜಿಸಿ, ತಾನು ಸ್ವರೂಪಾನಂದಾವಿರ್ಭಾವವನ್ನು ಹೊಂದಿ, ಮುಕ್ತನಾಗುವನು. —ಇಂತು ಸರಸ್ವತೀಗೀತೆಯನ್ನು ಕೇಳಿ ಕಾಶ್ಯಪನು ಧನ್ಯನಾದನು.

ಧರ್ಮರಾಜ! ಹಿಂದೆ ಸತ್ಯವ್ರತನೆಂಬ ರಾಜನು ಕೃತಮಾಲಾ ನದಿಯಲ್ಲಿ ಸಂಧ್ಯಾವಂದನವನ್ನು ಮಾಡುತ್ತಿದ್ದನು. ಅರ್ಘ್ಯಕಾಲದಲ್ಲಿ ಸಣ್ಣ ಮೀನನ್ನೊಂದನ್ನು ಕಂಡನು. ಆಗ 'ನನ್ನ ಕೈಬಿಡಬೇಡ! ದೊಡ್ಡ ಮೀನುಗಳಿಗೆ ತುತ್ತಾಗದಂತೆ ನನ್ನನ್ನು ಕಾಪಾಡು!' ಎಂದು ಬೇಡಿದ ಮೀನನ್ನು ರಾಜನು ತನ್ನ ಕಮಂಡಲು ವಿನಲ್ಲಿಟ್ಟು ಮನೆಗೆ ತಂದನು. ಕಮಂಡಲುವು ಸಾಲದಂತೆ ಬೆಳೆದ ಮೀನನ್ನು ಉದಂಚನದಲ್ಲಿ, ಅಲ್ಲಿಂದ ನದಿಯಲ್ಲಿ, ಕೊನೆಗೆ ಸಮುದ್ರದಲ್ಲಿ ತಂದು ಬಿಟ್ಟನು. ಆಶ್ಚರ್ಯವೆಂದರೆ ಮೀನು ಬಹುಕಾಯವಾಗಿದ್ದರೂ ಹೊರುವ ರಾಜನಿಗೆ ಹಗುರಾಗಿತ್ತು. ಸಮುದ್ರದಲ್ಲಿಟ್ಟು ಸತ್ಯವ್ರತನು 'ಭಗವನ್! ನೀನು ಸಾಮಾನ್ಯ ಮತ್ಸ್ಯನಲ್ಲ. ನೀನಾರು? ಏಕೆ ಇಂತು ನನ್ನನ್ನು ಪರೀಕ್ಷಿಸಿದೆ?' ಎಂದು ಕೇಳಿದನು. ಮಾಯಾ ಮತ್ಸ್ಯನಾಗಿದ್ದ ಶ್ರೀಹರಿಯು 'ರಾಜನ್! ನನ್ನನ್ನು ನೀನು ಹಿಡಿಜಲದಿಂದ ಕಾಪಾಡಿದುದರಿಂದ ನಿನ್ನನ್ನು ನಾನು ಪ್ರಳಯೋದಧಿಯಲ್ಲಿ ಮುಣುಗದಂತೆ ಕಾಪಾಡುವೆನು. ಇಂದಿನಿಂದ ಏಳನೆಯ ದಿನವು ಪ್ರಳಯವಾಗುವುದು. ಅದು ಮನುಪ್ರಳಯವು. ಆಗ ಒಂದು ನೌಕೆ (ಭೂಮಿಯ) ಬರುವುದು. ನೀನು ಸರ್ವೌಷಧಿ ಬೀಜಗಳನ್ನು ಸಂಗ್ರಹಿಸಿ, ಅದರಲ್ಲಿ ಬಂದು ಕೂಡು. ಅಲ್ಲೇ ಸಪ್ತರ್ಷಿ ಗಳೂ ಇರುವರು. ಆಗ ನಿಮಗೆ ನಾನು ಮೀನ ರೂಪದಿಂದ ಬಂದು ತತ್ವೋಪದೇಶ ವನ್ನು ಮಾಡಿ, ಉದ್ಧರಿಸುವೆನು. ಮುಂದಿನ ಮನ್ವಂತರದಲ್ಲಿ ನೀನು ವೈವಸ್ವತ ನೆನಿಸಿ(ಸೂರ್ಯಪುತ್ರ), ಏಳನೆ ಮನುವಾಗುವೆ!' ಎಂದು ನುಡಿದು ಅಂತರ್ಹಿತ ನಾದನು.

ಅಂತೆಯೇ ಪ್ರಳಯವಾಯಿತು. ನೌಕೆಯಲ್ಲಿ ಋಷಿಗಳೂ ಬಂದರು. ರಾಜನು ಬೀಜಗಳೊಡನೆ ಅದನ್ನಧಿರೋಪಿಸಿದನು. ನೌಕೆಯನ್ನು ಹಿಮಾಲಯದ ಶೃಂಗದಲ್ಲಿ ಬಿಗಿಸಿ ಕಟ್ಟಿಸಿ, ಶ್ರೀಮತ್ಸ್ಯನು ಅವರಿಗೆ ತತ್ವೋಪದೇಶವನ್ನು ಮಾಡಿ, ಉದ್ಧರಿಸಿದನು. ಈ ಮತ್ಸ್ಯಾವತಾರಿ ಹರಿಯ ಶುಭಚರಿತೆಯನ್ನು ಹೇಳಿ, ಕೇಳಿದವರು ಮುಕ್ತ ರಾಗುವರು.

ಧರ್ಮರಾಜ! ಶ್ರೀಹರಿಯು ನನ್ನಲ್ಲಿ ಪ್ರೀತನಾಗಿ ನನಗಾಗಿ ಪ್ರಳಯವನ್ನು ಸೃಜಿಸಿ ತೋರಿ, ನನಗೆ ತನ್ನ ದಿವ್ಯಮಹಿಮಾಜ್ಞಾನವನ್ನು ಕರುಣಿಸಿದನು. ಈಗ ಆರು ಮನ್ವಂತರಗಳಿಂದಲೂ ನಾನು ಜೀವಿಸಿರುವೆನು. ಇದೂ ಶ್ರೀಶನ ಚರಣಾನು- ಗ್ರಹವೇ ಸರಿ. ನನ್ನ ಆಯುಸ್ಸೆಲ್ಲವೂ ದೃಢಗಾತ್ರನಾಗಿರುವುದೆಂದು ವರವಿತ್ತ ಮಹಾದೇವನ ದಯದಿಂದ ಶ್ರೀಹರಿಸೇವೆಗೇ ಮೀಸಲಾಗಿ ಸ್ಮಾರಕವೆನಿಸಿದೆ. ಅಂತಹ ಶ್ರೀಹರಿಯೇ ಶ್ರೀಕೃಷ್ಣನಲ್ಲವೆ? ಅವನು ಪ್ರೀತನಾಗುವಂತೆ ಪ್ರಳಯವಲ್ಲದಾಗ ಪ್ರಳಯವನ್ನು ತೋರಿಸಿದ ಶ್ರೀಶನ ಮಹಿಮೆಯನ್ನು ಹೇಳುವೆನು ಕೇಳು!

## ಮಾರ್ಕಂಡೇಯ ಪ್ರಳಯದರ್ಶನ

ಶ್ರೀಹರೇ! ನಮೋ ನಮಃ. ಶ್ರೀಕೃಷ್ಣದ್ವೈಪಾಯನ! ನಮೋ ನಮಃ. ಮಹಾದೇವಜನಕ ಚತುರ್ಮುಖ! ನಮೋ ನಮಃ. ಶಿವ ಶಿವ! ನಮಃ. ಅನಾದಿ ನಿಧನನು, ಜಗಜ್ಜನ್ಮ ರಕ್ಷಣ ನಿಯಮನ ಸಂಹರಣ ಕರ್ತನು, ಸ್ವತಂತ್ರನು, ಅಚಿಂತ್ಯ ಅದ್ಭುತಮಹಾಮಹಿಮನು, ವೇದೈಕವೇದ್ಯನು, ಆದ ಶ್ರೀ ನಾ ರಾ ಯ ಣ ನಿ ಗೆ ನಮಸ್ಕರಿಸಿ, ಕಾಲನಾಮಕನಾದ ಶ್ರೀರಮಣನ ಮಹಿಮೆಯನ್ನು ವರ್ಣಿಸುವೆನು—ದೇವಮಾನದಿಂದ ನಾಲ್ಕು ಸಾವಿರ ವರ್ಷಗಳಾದರೆ ಕೃತಯುಗವು; ತ್ರೇತಾಯುಗವು ಮೂರು ಸಾವಿರ ವರ್ಷಗಳು; ದ್ವಾಪರವು ಎರಡು ಸಾವಿರ ವರ್ಷ ಪರಿಮಿತವು; ಕಲಿಯುಗವು ಒಂದು ಸಾವಿರ ವರ್ಷಗಳು; ಪ್ರತಿಯುಗ ಸಂಧ್ಯೆಯು ಕೃತ ತ್ರೇತಾ ದ್ವಾಪರ ಕಲಿಗಳಲ್ಲಿ ನಾಲ್ಕು ನೂರು, ಮೂರು ನೂರು, ಇನ್ನೂರು, ಒಂದು ನೂರು—ಎಲ್ಲವೂ ಸೇರಿ ಒಂದು ಸಾವಿರದಂತೆ, ಉಭಯ ಸಂಧ್ಯೆಗಳು ಎರಡು ಸಾವಿರ ವರ್ಷಗಳಾಗುವುವು. ಇಂತು ದೇವಮಾನದ ಹನ್ನೆರಡು ಸಾವಿರ ವರ್ಷಗಳಿಗೆ ಒಂದು ಮಹಾಯುಗವಾಗುವುದು. ಮಹಾಯುಗಗಳು ಸಾವಿರವಾದರೆ ಬ್ರಹ್ಮದೇವನ ಹಗಲು, ಮತ್ತೆ ಅಷ್ಟಾದರೆ ಒಂದು ರಾತ್ರಿ. ಇಂತು ಮುನ್ನೂರ ಅರವತ್ತು ದಿನಗಳು, ಒಂದು ವರ್ಷ. ಅಂತಹ ವರ್ಷಗಳು ಒಂದು ನೂರಾದರೆ ಅದು ಬ್ರಹ್ಮದೇವನ ಆಯುರ್ದಾಯ; ಅದನ್ನೇ ಪರವೆಂಬುವರು. ಪರಾಂತಕಾಲದಲ್ಲಿ ಮಹಾಪ್ರಳಯವಾಗುವುದು. ಅದಲ್ಲದೆ ದಿನಪ್ರಳಯವು ಸಾವಿರ ಮಹಾಯುಗಗಳ ಕೊನೆಯಲ್ಲಿ ಆಗುವುದು. ಆಗ ಬ್ರಹ್ಮದೇವನಿಗೆ ನಿದ್ರಾಸಮಯ. ಮನುಪ್ರಳಯವೂ ಉಂಟು. ಒಂದು ಬ್ರಹ್ಮನ ಹಗಲಿನಲ್ಲಿ ಹದಿನಾಲ್ಕು ಮನುಗಳು, ಹದಿನಾಲ್ಕು ಇಂದ್ರರು ಆಗಿ ಹೋಗುವರು. ನಿತ್ಯವೂ ಜನರು ಮರಣವನ್ನಪ್ಪುವುದರಿಂದ ದೈನಂದಿನ ಪ್ರಳಯವೂ ಆಗುತ್ತಿದೆ. ಇಂತು ನಾಲ್ಕು ವಿಧ ಪ್ರಳಯಗಳಲ್ಲಿ ನಾನು ಆರು ಮನುಪ್ರಳಯಗಳಲ್ಲಿ ಉಳಿದು ಶ್ರೀಶಾನುಗ್ರಹದಿಂದ ಬದುಕಿರುವೆನು. ದೃಢಶರೀರನೂ ಆಗಿರುವೆನು.

ಈಗ ನಡೆಯುತ್ತಿರುವ ದ್ವಾಪರವಾದಮೇಲೆ ಕಲಿಯುಗವು ಬರುವುದು. ಅದು ಪಾಪಬಹುಲವೆಂದು ತಿಳಿ! ಯಜ್ಞ ದಾನ ವ್ರತಗಳಿಗೆ ಪ್ರತಿನಿಧಿಗಳನ್ನು ಮಾಡಿಕೊಂಡು ಜನರು ತಾವೂ ಯಜ್ಞ ದಾನ ವ್ರತಗಳನ್ನು ಮಾಡಿದೆವೆಂದು ಹೇಳಿಕೊಂಬುವರು. ಬ್ರಾಹ್ಮಣರು ಶೂದ್ರಕರ್ಮರು, ಅಂದರೆ ನೀಚಸೇವಾವ್ರತರಾಗುವರು. ಶೂದ್ರರು ಸನ್ಯಾಸಿಗಳಂತೆ ವೇಷಧರಿಸಿ, ಉಪದೇಶವನ್ನು ನೀಡುವರು. ಯಜ್ಞವೇದಾಧ್ಯಯನಗಳು ಕಡಿಮೆಯಾಗುವುವು. ಬ್ರಾಹ್ಮಣರು ಸರ್ವಭಕ್ಷಕರಾಗುವರು. ರಾಜರು ಧರ್ಮಬಾಹಿರರಾಗಿ, ವೃಷಾ ದಂಭ ಹಿಂಸಾರತರಾಗಿ, ಪ್ರಜರನ್ನು ಪೀಡಿಸುವರು. ತ್ರಿವರ್ಣದ ಜನರು ಸ್ವಧರ್ಮದಿಂದ ಜೀವಿಸಲಾರದೆ ನಿಂದ್ಯಕರ್ಮಗಳನ್ನು ಮಾಡುವರು. ಜನರು ಅಲ್ಪಾಯುಷ್ಕರು, ಅಲ್ಪಬಲರು, ಅಲ್ಪಬುದ್ಧಿ

ಗಳಾಗುವರು. ಕಸ್ತೂರೀ ಚಂದನ ಘೃತ ಕರ್ಪೂರಾದಿ ದ್ರವ್ಯಗಳು ಗಂಧಶೂನ್ಯ ವಾಗುವುವು. ಪದಾರ್ಥಗಳ ರಸವೇ ಕಡಿಮೆಯಾಗುವುದು. ಆಭಾಸದ್ರವ್ಯಗಳು ಹೆಚ್ಚಾಗಿ, ಸತ್ಪದಾರ್ಥಗಳನ್ನೂ ಹಾಳುಮಾಡುವುವು.

ಗ್ರಾಮ ನಗರಗಳಲ್ಲಿ ಅನ್ನವನ್ನು ಮಾರುವರು. ದ್ರವ್ಯಕ್ಕಾಗಿ ವೇದವನ್ನು ಅನರ್ಹರಿಗೆ ಮಾರುವರು. ಸ್ತ್ರೀಯರು ಶೀಲವರ್ಜಿತರಾಗುವರು. ದ್ವಿಜರು ಭಿಕ್ಷಾಟನಾತತ್ಪರರಾಗಿ, ಸುಮ್ಮನೆ ತಿರುಗುತ್ತಿರುವರು. ಕಪ್ಪಸುಂಕಗಳ ಕಾಟದಿಂದ ಪ್ರಜರು ಗ್ರಾಮಗಳನ್ನು ತೊರೆದು, ವನದಲ್ಲಿ ಮೃಗಗಳಂತೆ ವಾಸಮಾಡುವರು. ಧಾನ್ಯಗಳು ಬೆಳೆಯದೆ ಕ್ಷಾಮಡಾಮರಗಳು ತಲೆದೋರಿ, ಪ್ರಜರು ನಷ್ಟರಾಗುವರು. ವಿಪಣೀವೀಥಿಯಲ್ಲಿ ಅಳತೆ ಪಾತ್ರೆ ಮುಂತಾದುವು ಕೂಟಕಾಪಟ್ಯಮಯವಾಗುವುವು. ವರ್ತಕರು ಮಾಯಿಗಳಾಗುವರು. ಇಂತು ಧರ್ಮವು ಹಾಳಾದಾಗ ಪ್ರಳಯವಾಗಿ, ಲೋಕಗಳೆಲ್ಲವೂ ನಷ್ಟವಾಗುವುವು.

ಒಂದು ನೂರು ವರ್ಷ ಮಳೆ ಬರದೆ ಜಗತ್ತೆಲ್ಲವು ಶುಷ್ಕೇಂಧನಪ್ರಾಯವಾಗು ವುದು. ಸಂವರ್ತಾಗ್ನಿಯು ಉರಿದೆದ್ದು, ಪ್ರಳಯಮಾರುತ ಸಹಾಯದಿಂದ ವಿಜೃಂಭಿಸಿ, ಲೋಕವನ್ನು ಸುಟ್ಟುಬಿಡುವುದು. ಆಗ ಒಂದು ನೂರು ವರ್ಷ ಬಿಡದೆ ಮಳೆ ಸುರಿದು, ಭೂಮಿಯು ಜಲಮಯವಾಗುವುದು. ಭೂಮಿಯು ಜಲದಲ್ಲಿ, ಜಲವು ಅಗ್ನಿಯಲ್ಲಿ, ಅಗ್ನಿಯು ವಾಯುವಿನಲ್ಲಿ, ವಾಯುವು ಆಕಾಶದಲ್ಲಿ, ಆಕಾಶವು ಅಹಂಕಾರ ದಲ್ಲಿ, ಅದು ಬುದ್ಧಿಯಲ್ಲಿ, ಬುದ್ಧಿಯು ಮಹತ್ತತ್ವದಲ್ಲಿ, ಮಹತ್ತು ಅವ್ಯಕ್ತದಲ್ಲಿ ಲಯವಾಗುವುದು. ಅವ್ಯಕ್ತಾಭಿಮಾನಿನಿಯಾದ ರಮೆ ಶ್ರೀರಮಣನ ಸಮೀಪವರ್ತಿನಿ ಯಾಗಿ, ಸರ್ವಜಗದ್ವ್ಯಾಪಾರವಿಮುಖಳಾಗಿರುವಳು. ಅದೇ ಮಹಾಪ್ರಳಯವು. ನಾನು ಶ್ರೀಶಾನುಗ್ರಹದಿಂದ ಮಹಾಪ್ರಳಯವನ್ನು ಅನುಕರಿಸುವ ಪ್ರಳಯವನ್ನು ಕಂಡಿರುವೆನು. ಸ್ವಾಪ್ನಮಹೀಮಹೀಧರಾದಿ ಪ್ರಳಯದಂತೆ ಶ್ರೀಹರಿಯ ಅದ್ಭುತ ಶಕ್ತಿಯಿಂದ ನಿರ್ಮಿತವಾದ ಮಹಾಪ್ರಳಯ ಪ್ರತಿನಿಧಿಯನ್ನು ಕಂಡೆನು. ಅವನ ಉದರದಿ ನಷ್ಟವಾಗದೆ ಇದ್ದ ಸಕಲ ಪ್ರಪಂಚವನ್ನು ಪುನಃ ಶ್ರೀಹರಿಯು ನನಗೆ ತೋರಿಸಿದನು. ಇದೆಲ್ಲವೂ ಆ ಮಹಾಸ್ವಾಮಿಯ ಇಚ್ಛಾವೈಭವವೆಂದು ತಿಳಿ.

ಶ್ರೀನರನಾರಾಯಣರ ವರಪ್ರಭಾವದಿಂದ ನಾನು ಅಂತಹ ಪ್ರಳಯವನ್ನು ನೋಡಿ, ಆಶ್ಚರ್ಯ ಭಯ ಸಂಭ್ರಮಾನ್ವಿತನಾದೆನು. ಪ್ರಳಯಜಲಗಳು ನಾಲ್ಕು ನಿಟ್ಟಿನಿಂದ ಉಕ್ಕೇರಿ ಬರಲು, ನಾನು ಜಲಧಿಯಲ್ಲಿ ಬಿದ್ದು, ಮುಣುಗಿ ತೇಲುತ್ತಾ, ದಿಕ್ಕುಗಾಣದೆ ಹಲಬುತ್ತಾ ಪರಿಭ್ರಮಿಸಿದೆನು. ಕೊನೆಗೆ ಅತ್ಯುನ್ನತವಾದ ಒಂದು ವಟ ಮಹೀರುಹವನ್ನು, ಅದರ ಈಶಾನ್ಯಮೂಲೆಯಲ್ಲಿ ರೆಂಬೆಯನ್ನು, ರೆಂಬೆಯ ಕೊನೆಯ ಒಂದು ವಟಪತ್ರವನ್ನು ಕಂಡೆನು. ಆ ಪತ್ರಪುಟದಲ್ಲಿ ಮಲಗಿ, ತನ್ನ ಕರಾರವಿಂದದಿಂದ ಪಾದಾರವಿಂದವನ್ನೆತ್ತಿ ಮುಖಾರವಿಂದದಲ್ಲಿಟ್ಟು, ಚೀಪುವ ಮುದ್ದು ಕೂಸನ್ನು ನೋಡಿದೆನು. ಮುಖಪ್ರಸನ್ನನು, ಸರ್ವಾಂಗಸುಂದರನು, ನೀಲಜಲದ

## ಮಾರ್ಕಂಡೇಯ ಪ್ರಳಯದರ್ಶನ

ಶ್ರೀಹರೇ! ನಮೋ ನಮಃ. ಶ್ರೀಕೃಷ್ಣದ್ವೈಪಾಯನ! ನಮೋ ನಮಃ. ಮಹಾದೇವಜನಕ ಚತುರ್ಮುಖ! ನಮೋ ನಮಃ. ಶಿವ ಶಿವ! ನಮಃ. ಅನಾದಿ ನಿಧನನು, ಜಗಜ್ಜನ್ಮ ರಕ್ಷಣ ನಿಯಮನ ಸಂಹರಣ ಕರ್ತನು, ಸ್ವತಂತ್ರನು, ಅಚಿಂತ್ಯ ಅದ್ಭುತಮಹಾಮಹಿಮನು, ವೇದೈಕವೇದ್ಯನು, ಆದ ಶ್ರೀನಾರಾಯಣನಿಗೆ ನಮಸ್ಕರಿಸಿ, ಕಾಲನಾಮಕನಾದ ಶ್ರೀರಮಣನ ಮಹಿಮೆಯನ್ನು ವರ್ಣಿಸುವೆನು— ದೇವಮಾನದಿಂದ ನಾಲ್ಕು ಸಾವಿರ ವರ್ಷಗಳಾದರೆ ಕೃತಯುಗವು; ತ್ರೇತಾಯುಗವು ಮೂರು ಸಾವಿರ ವರ್ಷಗಳು; ದ್ವಾಪರವು ಎರಡು ಸಾವಿರ ವರ್ಷ ಪರಿಮಿತವು; ಕಲಿಯುಗವು ಒಂದು ಸಾವಿರ ವರ್ಷಗಳು; ಪ್ರತಿಯುಗ ಸಂಧ್ಯೆಯು ಕೃತ ತ್ರೇತಾ ದ್ವಾಪರ ಕಲಿಗಳಲ್ಲಿ ನಾಲ್ಕು ನೂರು, ಮೂರು ನೂರು, ಇನ್ನೂರು, ಒಂದು ನೂರು —ಎಲ್ಲವೂ ಸೇರಿ ಒಂದು ಸಾವಿರದಂತೆ, ಉಭಯ ಸಂಧ್ಯೆಗಳು ಎರಡು ಸಾವಿರ ವರ್ಷಗಳಾಗುವುವು. ಇಂತು ದೇವಮಾನದ ಹನ್ನೆರಡು ಸಾವಿರ ವರ್ಷಗಳಿಗೆ ಒಂದು ಮಹಾಯುಗವಾಗುವುದು. ಮಹಾಯುಗಗಳು ಸಾವಿರವಾದರೆ ಬ್ರಹ್ಮದೇವನ ಹಗಲು, ಮತ್ತೆ ಅಷ್ಟಾದರೆ ಒಂದು ರಾತ್ರಿ. ಇಂತು ಮುನ್ನೂರ ಅರವತ್ತು ದಿನಗಳು, ಒಂದು ವರ್ಷ. ಅಂತಹ ವರ್ಷಗಳು ಒಂದು ನೂರಾದರೆ ಅದು ಬ್ರಹ್ಮದೇವನ ಆಯುರ್ದಾಯ; ಅದನ್ನೇ ಪರವೆಂಬುವರು. ಪರಾಂತಕಾಲದಲ್ಲಿ ಮಹಾಪ್ರಳಯವಾಗುವುದು. ಅದಲ್ಲದೆ ದಿನಪ್ರಳಯವು ಸಾವಿರ ಮಹಾಯುಗಗಳ ಕೊನೆಯಲ್ಲಿ ಆಗುವುದು. ಆಗ ಬ್ರಹ್ಮದೇವನಿಗೆ ನಿದ್ರಾಸಮಯ. ಮನುಪ್ರಳಯವೂ ಉಂಟು. ಒಂದು ಬ್ರಹ್ಮನ ಹಗಲಿನಲ್ಲಿ ಹದಿನಾಲ್ಕು ಮನುಗಳು, ಹದಿನಾಲ್ಕು ಇಂದ್ರರು ಆಗಿ ಹೋಗುವರು. ನಿತ್ಯವೂ ಜನರು ಮರಣವನ್ನಪ್ಪುವುದರಿಂದ ದೈನಂದಿನ ಪ್ರಳಯವೂ ಆಗುತ್ತಿದೆ. ಇಂತು ನಾಲ್ಕು ವಿಧ ಪ್ರಳಯಗಳಲ್ಲಿ ನಾನು ಆರು ಮನುಪ್ರಳಯಗಳಲ್ಲಿ ಉಳಿದು ಶ್ರೀಶಾನುಗ್ರಹದಿಂದ ಬದುಕಿರುವೆನು. ದೃಢಶರೀರನೂ ಆಗಿರುವೆನು.

ಈಗ ನಡೆಯುತ್ತಿರುವ ದ್ವಾಪರವಾದಮೇಲೆ ಕಲಿಯುಗವು ಬರುವುದು. ಅದು ಪಾಪಬಹುಲವೆಂದು ತಿಳಿ! ಯಜ್ಞ ದಾನ ವ್ರತಗಳಿಗೆ ಪ್ರತಿನಿಧಿಗಳನ್ನು ಮಾಡಿಕೊಂಡು ಜನರು ತಾವೂ ಯಜ್ಞ ದಾನ ವ್ರತಗಳನ್ನು ಮಾಡಿದೆವೆಂದು ಹೇಳಿಕೊಂಬುವರು. ಬ್ರಾಹ್ಮಣರು ಶೂದ್ರಕರ್ಮರು, ಅಂದರೆ ನೀಚಸೇವಾವ್ರತರಾಗುವರು. ಶೂದ್ರರು ಸನ್ಯಾಸಿಗಳಂತೆ ವೇಷಧರಿಸಿ, ಉಪದೇಶವನ್ನು ನೀಡುವರು. ಯಜ್ಞವೇದಾಧ್ಯಯನಗಳು ಕಡಿಮೆಯಾಗುವುವು. ಬ್ರಾಹ್ಮಣರು ಸರ್ವಭಕ್ಷಕರಾಗುವರು. ರಾಜರು ಧರ್ಮಬಾಹಿರರಾಗಿ, ವೃಷಾ ದಂಭ ಹಿಂಸಾರತರಾಗಿ, ಪ್ರಜರನ್ನು ಪೀಡಿಸುವರು. ತ್ರಿವರ್ಣದ ಜನರು ಸ್ವಧರ್ಮದಿಂದ ಜೀವಿಸಲಾರದೆ ನಿಂದ್ಯ ಕರ್ಮಗಳನ್ನು ಮಾಡುವರು. ಜನರು ಅಲ್ಪಾಯುಷ್ಕರು, ಅಲ್ಪಬಲರು, ಅಲ್ಪಬುದ್ಧಿ

ಗಳಾಗುವರು. ಕಸ್ತೂರೀ ಚಂದನ ಘೃತ ಕರ್ಪೂರಾದಿ ದ್ರವ್ಯಗಳು ಗಂಧಶೂನ್ಯ ವಾಗುವುವು. ಪದಾರ್ಥಗಳ ರಸವೇ ಕಡಿಮೆಯಾಗುವುದು. ಆಭಾಸದ್ರವ್ಯಗಳು ಹೆಚ್ಚಾಗಿ, ಸತ್ಪದಾರ್ಥಗಳನ್ನೂ ಹಾಳುಮಾಡುವುವು.

ಗ್ರಾಮ ನಗರಗಳಲ್ಲಿ ಅನ್ನವನ್ನು ಮಾರುವರು. ದ್ರವ್ಯಕ್ಕಾಗಿ ವೇದವನ್ನು ಅನರ್ಹರಿಗೆ ಮಾರುವರು. ಸ್ತ್ರೀಯರು ಶೀಲವರ್ಜಿತರಾಗುವರು. ದ್ವಿಜರು ಭಿಕ್ಷಾಟನಾತತ್ಪರರಾಗಿ, ಸುಮ್ಮನೆ ತಿರುಗುತ್ತಿರುವರು. ಕಪ್ಪಸುಂಕಗಳ ಕಾಟದಿಂದ ಪ್ರಜರು ಗ್ರಾಮಗಳನ್ನು ತೊರೆದು, ವನದಲ್ಲಿ ಮೃಗಗಳಂತೆ ವಾಸಮಾಡುವರು. ಧಾನ್ಯಗಳು ಬೆಳೆಯದೆ ಕ್ಷಾಮಡಾಮರಗಳು ತಲೆದೋರಿ, ಪ್ರಜರು ನಷ್ಟರಾಗುವರು. ವಿಪಣೀವೀಥಿಯಲ್ಲಿ ಅಳತೆ ಪಾತ್ರೆ ಮುಂತಾದುವು ಕೂಟಕಾಪಟ್ಯಮಯವಾಗುವುವು. ವರ್ತಕರು ಮಾಯಿಗಳಾಗುವರು. ಇಂತು ಧರ್ಮವು ಹಾಳಾದಾಗ ಪ್ರಳಯವಾಗಿ, ಲೋಕಗಳೆಲ್ಲವೂ ನಷ್ಟವಾಗುವುವು.

ಒಂದು ನೂರು ವರ್ಷ ಮಳೆ ಬರದೆ ಜಗತ್ತೆಲ್ಲವು ಶುಷ್ಕೇಂಧನಪ್ರಾಯವಾಗು ವುದು. ಸಂವರ್ತಾಗ್ನಿಯು ಉರಿದೆದ್ದು, ಪ್ರಳಯಮಾರುತ ಸಹಾಯದಿಂದ ವಿಜೃಂಭಿಸಿ, ಲೋಕವನ್ನು ಸುಟ್ಟುಬಿಡುವುದು. ಆಗ ಒಂದು ನೂರು ವರ್ಷ ಬಿಡದೆ ಮಳೆ ಸುರಿದು, ಭೂಮಿಯು ಜಲಮಯವಾಗುವುದು. ಭೂಮಿಯು ಜಲದಲ್ಲಿ, ಜಲವು ಅಗ್ನಿಯಲ್ಲಿ, ಅಗ್ನಿಯು ವಾಯುವಿನಲ್ಲಿ, ವಾಯುವು ಆಕಾಶದಲ್ಲಿ, ಆಕಾಶವು ಅಹಂಕಾರ ದಲ್ಲಿ, ಅದು ಬುದ್ಧಿಯಲ್ಲಿ, ಬುದ್ಧಿಯು ಮಹತ್ತತ್ವದಲ್ಲಿ, ಮಹತ್ತು ಅವ್ಯಕ್ತದಲ್ಲಿ ಲಯವಾಗುವುದು. ಅವ್ಯಕ್ತಾಭಿಮಾನಿನಿಯಾದ ರಮೆ ಶ್ರೀರಮಣನ ಸಮೀಪವರ್ತಿನಿ ಯಾಗಿ, ಸರ್ವಜಗದ್ವ್ಯಾಪಾರವಿಮುಖಳಾಗಿರುವಳು. ಅದೇ ಮಹಾಪ್ರಳಯವು. ನಾನು ಶ್ರೀಶಾನುಗ್ರಹದಿಂದ ಮಹಾಪ್ರಳಯವನ್ನು ಅನುಕರಿಸುವ ಪ್ರಳಯವನ್ನು ಕಂಡಿರುವೆನು. ಸ್ವಾಪ್ನ ಮಹೀಮಹೀಧರಾದಿ ಪ್ರಳಯದಂತೆ ಶ್ರೀಹರಿಯ ಅದ್ಭುತ ಶಕ್ತಿಯಿಂದ ನಿರ್ಮಿತವಾದ ಮಹಾಪ್ರಳಯ ಪ್ರತಿನಿಧಿಯನ್ನು ಕಂಡೆನು. ಅವನ ಉದರದಿ ನಷ್ಟವಾಗದೆ ಇದ್ದ ಸಕಲ ಪ್ರಪಂಚವನ್ನು ಪುನಃ ಶ್ರೀಹರಿಯು ನನಗೆ ತೋರಿಸಿದನು. ಇದೆಲ್ಲವೂ ಆ ಮಹಾಸ್ವಾಮಿಯ ಇಚ್ಛಾವೈಭವವೆಂದು ತಿಳಿ.

ಶ್ರೀನರನಾರಾಯಣರ ವರಪ್ರಭಾವದಿಂದ ನಾನು ಅಂತಹ ಪ್ರಳಯವನ್ನು ನೋಡಿ, ಆಶ್ಚರ್ಯ ಭಯ ಸಂಭ್ರಮಾನ್ವಿತನಾದೆನು. ಪ್ರಳಯಜಲಗಳು ನಾಲ್ಕು ದಿಕ್ಕಿನಿಂದ ಉಕ್ಕೇರಿ ಬರಲು, ನಾನು ಜಲಧಿಯಲ್ಲಿ ಬಿದ್ದು, ಮುಣುಗಿ ತೇಲುತ್ತಾ, ದಿಕ್ಕುಗಾಣದೆ ಪಲಬುತ್ತಾ ಪರಿಭ್ರಮಿಸಿದೆನು. ಕೊನೆಗೆ ಅತ್ಯುನ್ನತವಾದ ಒಂದು ವಟ ಮಹೀರುಹವನ್ನು, ಅದರ ಈಶಾನ್ಯಮೂಲೆಯಲ್ಲಿ ರೆಂಬೆಯನ್ನು, ರೆಂಬೆಯ ಕೊನೆಯ ಒಂದು ವಟಪತ್ರವನ್ನು ಕಂಡೆನು. ಆ ಪತ್ರಪುಟದಲ್ಲಿ ಮಲಗಿ, ತನ್ನ ಕರಾರವಿಂದದಿಂದ ಪಾದಾರವಿಂದವನ್ನೆತ್ತಿ ಮುಖಾರವಿಂದದಲ್ಲಿಟ್ಟು, ಚೀಪುವ ಮುದ್ದು ಕೂಸನ್ನು ನೋಡಿದೆನು. ಮುಖಪ್ರಸನ್ನನು, ಸರ್ವಾಂಗಸುಂದರನು, ನೀಲಜಲದ

ಶ್ಯಾಮನು, ಚಂದ್ರವದನನು, ಕುಂದರದನನು, ಪ್ರಭಾಕರಶತತೇಜನು, ಪ್ರಮೋದ ಭಾಜನು ಆದ ಮುಕುಂದನ ದರ್ಶನದಿಂದ ಪುಲಕಿತಗಾತ್ರನಾದೆನು. ನನ್ನ ಕಣ್ಣಲ್ಲಿ ಆನಂದಬಾಷ್ಪಗಳುದುರಿದವು. ಮೆಲ್ಲನೆ ಸುಕುಮಾರನ ಸಮೀಪದಲ್ಲಿ ನಾನು ಹೋದಾಗ, ಆಹಾ! ಏನು ಹೇಳಲಿ! ಧರ್ಮಜ! ಬಾಲಮುಕುಂದನು ಶ್ರಾಂತನಾದ ನನಗೆ ಶಾಂತಿಯನ್ನೀಯಲೆಣಿಸಿ, ನನ್ನನ್ನು ಉಸಿರಿನಿಂದ ಒಳಗೆ ಸೆಳೆದಿಟ್ಟನು. ಅವನ ಉದರದಲ್ಲಿ ನಾನು ಬ್ರಹ್ಮಾಂಡವನ್ನೇ ನೋಡಿದೆನು.

ಗಂಗಾದಿ ನದಿಗಳು, ಮೇರ್ವಾದಿ ಗಿರಿಗಳು, ಲವಣಾದಿ ಸಮುದ್ರಗಳು, ಪತ್ತನ ಖೇಟ ಖರ್ವಟ ಜನಪದಗಳು, ವಿವಿಧಪ್ರಜರು, ದೇವ ದಾನವ ಮಾನವರು, ಪಕ್ಷಿ ಮೃಗ ವ್ಯಾಳ ಪಶು ಮೀನ ಮಕರಾದಿ ಜಂತುಗಳು, ಸೂರ್ಯಾದಿ ಗ್ರಹಗಳು, ಅಶ್ವಿನ್ಯಾದಿ ತಾರಕೆಗಳು, ಗಗನ ಪವನ ಮಾರ್ಗಗಳು, ಶಕ್ರ ಯಮ ವರುಣ ಮಹಾ ದೇವ ಚತುರ್ಮುಖಾದಿ ದೇವವೃಂದಗಳು, ಸರ್ಪ ಕಿನ್ನರ ಕಿಂಪುರುಷ ಯಕ್ಷ ರಕ್ಷೋ ಜಾಲಗಳು, ರಾಕ್ಷಸ ದಾನವಾನೀಕಗಳು, ಎಷ್ಟೆಂದು ಹೇಳಲಿ, ಸರ್ವವನ್ನು ಸರ್ವನಲ್ಲಿ ಕಂಡೆನು. ಆಶ್ಚರ್ಯದಿಂದ ನೋಡುತ್ತಿರುವ ನನ್ನನ್ನು ಶ್ರೀಶನು ಉಸುರಿನಿಂದ ಹೊರ ಹಾಕಿದಾಗ ನಾನು ಸ್ವಸ್ಥ ಚಿತ್ತನಾಗಿ, ಹಿಮಾಲಯದ ಪುಷ್ಪಭದ್ರಾನದಿಯ ದಡದಲ್ಲಿ ನನ್ನ ಆಶ್ರಮದಲ್ಲಿ ಸುಖಾಸೀನನಾಗಿದ್ದೆನು. ಆ ಮುಕುಂದನ ಪಾದಾರವಿಂದಗಳನ್ನು ದೃಢಭಕ್ತಿಯಿಂದ ಬಿಡದೆ ಪಿಡಿದು, ಧ್ಯಾನಿಸುವ ನನಗೆ ಶ್ರೀಶನು ಪ್ರತ್ಯಕ್ಷನಾದನು.

ನಾನವನ ಕೆಂದಾವರೆ ಅಡಿಗಳಿಗೆ ಮುಡಿಯಿಟ್ಟು, 'ದೇವಾ! ನಿನ್ನ ಮಹಾಶಕ್ತಿ ಯನ್ನು ಕಂಡೆನು. ಅದರ ಪಾರವನ್ನರಿಯಲಾರದೆ ಬ್ರಹ್ಮಾದಿಗಳು ಭಕ್ತಿನಮ್ರರಾಗಿರು ವಾಗ ನಮ್ಮಂತಹವರ ಪಾಡೇನು! ಶ್ರೀಶ! ಆ ಮಹಾರ್ಣವ! ಆ ವಟವೃಕ್ಷ! ಆ ಪರ್ಣಪರ್ಯಂಕ! ಅದರಲ್ಲಿ ನೀನು ಬಾಲವೇಷದಿಂದ ಮಲಗಿರುವ ಚಂದ! ಮುಕುಂದ! ಅಂತಹ ನಿನ್ನ ದಿವ್ಯರೂಪವು ಈ ಪಾಮರನ ಮನದಲ್ಲಿ ಸ್ಥಿರವಾಗಿ ನಿಲ್ಲುವಂತೆ ಅನುಗ್ರಹಿಸು ತಂದೇ!' ಎಂದು ಬೇಡಿಕೊಂಡೆನು. ಆಗ ಶ್ರೀಶನು ನನ್ನನ್ನು ಕರುಣಾರಸಭರಿತಕಟಾಕ್ಷಗಳಿಂದೀಕ್ಷಿಸಿ ಇಂತೆಂದನು—

ಮುನಿವರ! ದೇವ ಗಂಧರ್ವ ಮುನಿಗಳಿಗೆ ಸಿಗದ ಮಹಾಭಾಗ್ಯವು ನಿನ್ನ ದಾಯಿತು. ನಿನ್ನ ಪಿತೃಭಕ್ತಿ, ಸದಾಚಾರಗಳಿಗೆ ಮೆಚ್ಚಿರುವೆನು. ನಾರಗಳೆಂದರೆ ಜಲಗಳು. ಅವೇ ನನಗೆ ಮನೆ. ಆದುದರಿಂದ ಪ್ರಳಯಜಲಧಿ ಶಯನನಾದ ನನ್ನನ್ನು ನಿಗಮಚತುರರು 'ನಾರಾಯಣ'ನೆಂದು ಕರೆವರು. ಶಾಶ್ವತನು, ಸಕಲ ಲೋಕ ಪ್ರಭುವರನು, ಮುಖ್ಯಪ್ರಾಣ ವಲ್ಲಭನು, ರಮಾರಮಣನು, ಜೀವರಿಗೆ ಅಮೃತಸೇತುವು ಆದ ನನ್ನಿಂದ ಬ್ರಹ್ಮ ರುದ್ರ ಶಕ್ರ ವರುಣ ಕುಬೇರ ಯಮ ವಹ್ನಿ ಚಂದ್ರಾದಿ ಸರ್ವದೇವತೆಗಳು ವಿವಿಧಾವಯವಗಳಿಂದ ಸೃಷ್ಟರಾಗಿ, ತದ್ಭಿನ್ನರೂ ತದಾಶ್ರಿತರೂ ಆಗಿರುವರು. ಇಂತು ದೇವಪರಿವೃಢನಾದ ನನ್ನನ್ನು ಯಜ್ಞ ವೇದಾ- ಧ್ಯಯನ ದಾನಗಳಿಂದ ಭೂಸುರರು, ಕ್ರತು ದಕ್ಷಿಣಾ ಧರ್ಮರಕ್ಷಣಗಳಿಂದ ಕ್ಷತ್ರಿಯರು,

ಗೋರಕ್ಷಾ ಜನಸುಖಸಾಧನಗಳಿಂದ ವೈಶ್ಯರು, ಸಕಲಲೋಕಧಾರಣ ಸೇವಾರೂಪ ಶಿಲ್ಪಗಳಿಂದ ಶೂದ್ರರು, ಸೇವಿಸಿ ಧನ್ಯರಾಗುವರು.

ಹಿಂದೆ ನಾನು ವರಾಹನಾಗಿ ಭೂಮಂಡಲವನ್ನು ರಸಾತಲದಿಂದುದ್ಧರಿಸಿದೆನು. ಶೇಷನಲ್ಲಿ ಸಂಕರ್ಷಣರೂಪದಿಂದಿದ್ದು ಭೂಮಂಡಲವನ್ನೆತ್ತಿಪಿಡಿದಿರುವೆನು. ಬಡಬಾಗ್ನಿರೂಪನಾಗಿ ಸಮುದ್ರಜಲಗಳನ್ನು ಹೀರುತ್ತಿದ್ದು, ಕೊನೆಗೆ ಪ್ರಳಯದಲ್ಲಿ ಜಲವನ್ನು ಕಾರಿಬಿಡುವೆನು. ಸೃಷ್ಟ್ಯಾದಿಯಲ್ಲಿ ಚತುರ್ವರ್ಣಗಳನ್ನೂ, ಚತುರಾಶ್ರಮಗಳನ್ನೂ, ಚತುರ್ವೇದಗಳನ್ನೂ ಸೃಜಿಸಿ, ಮತ್ತೆ ಪ್ರಳಯದಲ್ಲಿ ಮಹಾಪರಾಕ್ರಮದಿಂದ ಸರ್ವವನ್ನು ನುಂಗಿ ಹೊಟ್ಟೆಯಲ್ಲಿಟ್ಟು ಕಾಪಾಡುವೆನು. ಅಹಂಕಾರ ಕ್ರೋಧ ಮಾತ್ಸರ್ಯರಹಿತರು, ದುಃಸಂಗದೂರರು, ಅಧ್ಯಾತ್ಮನಿಷ್ಠರು, ಸತ್ವಗುಣಭರಿತರು ಆದ ಸಜ್ಜನರು ನನ್ನ ಮಹಿಮೆಯನ್ನು ತಿಳಿದು ಭಜಿಸಿ ಮುಕ್ತರಾಗುವರು. ಸತ್ಯ ದಾನ ತಪೋನಿರತರಿಗೆ ನನ್ನ ಪ್ರಸಾದವು ಮೀಸಲಾಗಿದೆ. ಕೃತಯುಗದಲ್ಲಿ ಶುಕ್ಲನು, ತ್ರೇತೆಯಲ್ಲಿ ರಕ್ತನು, ದ್ವಾಪರದಲ್ಲಿ ಪೀತನು, ಕಲಿಯುಗದಲ್ಲಿ ಕೃಷ್ಣನು ಆಗಿ ವಿವಿಧಾವತಾರಗಳಿಂದ ಅವತರಿಸಿ, ಕೊಬ್ಬಿ ಜಗದುಪದ್ರವವನ್ನು ಮಾಡುವ ದೈತ್ಯರನ್ನು ನಾಶಮಾಡಿ, ಧರ್ಮವನ್ನು ಸ್ಥಾಪಿಸುವೆನು. ಮಹಾಪ್ರಳಯವಾದಾಗ ನಾನು ಶಂಖಚಕ್ರಗದಾಧರನಾಗಿ, ಬಾಲರೂಪದಿಂದ ವಟಪತ್ರಶಯನನಾಗಿ, ಪ್ರಪಂಚವ್ಯಾಪಾರವನ್ನು ಉಪಸಂಹರಿಸುವೆನು. ಅಂತಹ ಕಲ್ಪಪ್ರಳಯವನ್ನೇ ನಿನಗಾಗಿ ಸೃಜಿಸಿ, ನಾನು ತೋರಿದೆನು. ಧರ್ಮಕ್ಕೆ ಗ್ಲಾನಿಯಾದಾಗ, ಹಾಗೂ ಅಧರ್ಮದ ಉಲ್ಬಣವಾದಾಗ ನಾನು ಸ್ವೇಚ್ಛೆಯಿಂದಲೇ ಅವತರಿಸಿ, ದುಷ್ಟಶಿಕ್ಷಣವನ್ನು, ಶಿಷ್ಟರಕ್ಷಣವನ್ನು ಮಾಡುವೆನು. ನನ್ನ ಅವತಾರಗಳಿಂದ ನನಗೆ ಪ್ರಯೋಜನವಿಲ್ಲ; ಆದರೂ ಧರ್ಮಸ್ಥಾಪನೆ, ಸುಜನರಕ್ಷಣೆಗಳನ್ನು ಮಾಡಿ, ಜೀವರ ಹಿತವನ್ನು ಸಾಧಿಸುವೆನು. ಜೀವರಲ್ಲಿ ಚತುರ್ಮುಖಬ್ರಹ್ಮನು ನನ್ನ ಭಕ್ತರಲ್ಲಿ ಶ್ರೇಷ್ಠನು. ಅನಂತರ ರುದ್ರಾದಿಗಳೂ ಭಕ್ತರೆನಿಸಿ, ನನ್ನ ಪ್ರೀತಿಪಾತ್ರರಾಗಿರುವರು. ಮಾರ್ಕಂಡೇಯ! ಪ್ರಳಯದರ್ಶನದಿಂದ ಭಯಪಡಬೇಡ! ಅದು ನನ್ನ ವಿಶೇಷಸಾಮರ್ಥ್ಯದಿಂದ ನಿನಗಾಗಿ ತೋರಿಸಿದ್ದು. ಸತ್ಯವಾದರೂ ತಾತ್ಕಾಲಿಕವಾಗಿ, ನನ್ನ ಮಹಿಮಾಜ್ಞಾನವನ್ನು ಚನ್ನಾಗಿ ತಿಳಿಸಿಕೊಡುವುದಾಗಿದೆ.

ಇಂತು ನುಡಿದು ಅಂತರ್ಹಿತನಾದ ದೇವದೇವನಿಗೆ ನಮಿಸಿ, ನಾನು ಪುಲಕಿತಗಾತ್ರನು, ಬಾಷ್ಪಾಕುಲಿತನೇತ್ರನು ಆಗಿ, ಸ್ವಾಮಿಯ ಮಹಿಮೆಯನ್ನು ನೆನೆಯುತ್ತಾ ಆಶ್ರಮದಲ್ಲಿ ತಪೋನಿರತನಾದೆನು. ಧರ್ಮರಾಜ! ಅಂತಹ ದೇವಾದಿದೇವನು, ನಿನ್ನ ಸೋದರತ್ತೆಯ ಮಗನೆನಿಸಿ, ನಿಮ್ಮನ್ನು ತನ್ನ ಭಕ್ತರೆಂದು ಗಣಿಸಿ, ಸಲಹುತ್ತಿರುವನು. ನೀವೇ ಧನ್ಯರು! ಇದೆಲ್ಲ ವೃತ್ತಾಂತದ ಸ್ಮರಣೆಯು ನನ್ನ ಮನದಲ್ಲಿ ಅಚ್ಚಳಿಯದೇ ಉಳಿದಿದೆ ಎಂದರೆ ಶ್ರೀಶಾನುಗ್ರಹದಿಂದಲೇ ಎಂದು ನಾನು ನಂಬಿರುವೆನು. ಪುರಾಣಪುರುಷನು, ಲೋಕನಾಥನು, ಜಗಜ್ಜನ್ಮಾದಿಕಾರಣನು,

ಬ್ರಹ್ಮಶಂಕರ ಸಂಕ್ರಂದನಾದಿ ದೇವವಂದ್ಯನು, ಶ್ರೀವತ್ಸವಕ್ಷಸ್ಕನು ಆದ ಶ್ರೀಕೃಷ್ಣನಿಗೆ ನಮಸ್ಕಾರವು ; ಶ್ರೀಕೃಷ್ಣನೇ ನಮಗೆಲ್ಲರಿಗೂ ತಂದೆ, ತಾಯಿ, ಗುರು, ಬಂಧು, ಮಿತ್ರ; ಅವನೇ ನಮಗೆ ಗತಿ! ಇಂತು ನುಡಿದು ಮಾರ್ಕಂಡೇಯನು ಶ್ರೀಕೃಷ್ಣನಿಗೆ ನಮಿಸಿದನು. ಧರ್ಮರಾಜಾದಿಗಳೂ ಭಕ್ತಿಯಿಂದ ಹೃಷೀಕೇಶನ ಪಾದಾರವಿಂದಗಳಿಗೆರಗಿ ಧನ್ಯರಾದರು. ಆಗ ಧರ್ಮರಾಜನು ಮುಂದೆ ಬರುವ ಕಲಿಯುಗದ ವಿವರವನ್ನು ಕೇಳಲು, ಮಾರ್ಕಂಡೇಯನು ಇಂತೆಂದನು—

ರಾಜನ್! ಕಲಿಯುಗವು ಪಾಪಬಹುಲವಾದುದು. ಆಗ ಸತ್ಯ, ದಾನ, ದಯಾ, ಶೌಚಗಳೆಂಬ ಧರ್ಮಪಾದಗಳು ಮೂರಂಶಗಳಿಂದ ನ್ಯೂನವಾಗಿ, ಒಂದಂಶದಿಂದ ಮಾತ್ರ ಉಳಿದಿರುವುವು. ಅನೃತ, ಮದ, ಹಿಂಸಾ, ದಂಭ, ಕಾಪಟ್ಯಗಳಿಂದ ಜನಜೀವನ ಕಲುಷಿತವಾಗುವುದು. ಮನುಜರ ಬುದ್ಧಿ, ಸಂಪತ್ತು, ಆಯುಸ್ಸು, ಕಡಿಮೆ ಆಗುವುವು. ಉಪದ್ರವಗಳು ಹೆಚ್ಚಾಗುವುವು. ಧರ್ಮವನ್ನು ನಡೆಸುವವರು ಶ್ರೀಹರಿಪ್ರೀತಿಗಲ್ಲ, ಐಹಿಕಫಲಕ್ಕಾಗಿ. ದಾನಮಾಡುವದು ದಂಭದಿಂದ. ವರ್ಣಗಳ ಧರ್ಮಗಳು ನಷ್ಟವಾಗುವುವು. ವರ್ಣಸಂಕರವಾಗಿ ಪ್ರಜರೆಲ್ಲರೂ ಶೂದ್ರಪ್ರಾಯರಾಗುವರು. ಜನರು ಭಾರ್ಯಾ ಬಂಧು ಪೋಷಕರಾಗಿ, ಪಿತೃ ಸೋದರ ದ್ವೇಷ ಮಾಡುವರು. ಜಪಹೋಮಾದಿ ಪುಣ್ಯಕಾರ್ಯಗಳು ನಶಿಸುವುವು. ಫಲವು ಅಲ್ಪವಾಗಿ ಬೆಳೆದಾಗ ಆಹಾರಾಭಾವದಿಂದ ಜನರು ಅಕಾರ್ಯತತ್ಪರರು, ಹಿಂಸಾವಿಹಾರರು, ಧರ್ಮದೂಷಕರು ಆಗುವರು. ಹೇತುವಾದವು ಬಲವಾಗಲು, ಆಸ್ತಿಕರು ಹಿಂಸಿಸಲ್ಪಡುವರು. ರಾಜರು ಪಾಪರತರಾಗಿ, ಶಿಶ್ನೋದರಪರಾಯಣರಾಗಿ ಕೆಡುವರು. ದುಷ್ಟರು ಶಿಕ್ಷಾಭಯವಿಲ್ಲದೆ ಸ್ತ್ರೀಬಾಲವೃದ್ಧರನ್ನು ಪೀಡಿಸುವರು. ಸಕಲರೂ ಪಂಡಿತಂಮನ್ಯರಾಗಿ, ಗುರುಜನರನ್ನು ಧಿಕ್ಕರಿಸಿ, ಧರ್ಮದೂರರಾಗುವರು. ಜ್ಞಾನವಿಲ್ಲದ ಕ್ರಿಯಾಕಲಾಪವನ್ನು ತಾಂತ್ರಿಕವಾಗಿ ನಡೆಸಿ, ಮೂಢಜನರನ್ನು ವಂಚಿಸುವರು. ಕಳ್ಳಕಾಕರು ಧನಪ್ರಾಣಗಳನ್ನು ಹರಿಸಿಬಿಡಲು, ಸುಜನರು ರಕ್ಷಾಹೀನರಾಗಿ, ಬಲು ಕಷ್ಟಪಡುವರು. ಕೊನೆಗೆ ಸಾಧುತ್ವವು ನಿಷ್ಪ್ರಯೋಜಕವೆಂದು ತಿಳಿದು, ಜನರೆಲ್ಲರು ರಾಜರಂತೆ ದಸ್ಯುಪ್ರಾಯರಾಗುವರು. ಶೂದ್ರರು ವಿಪ್ರರಿಗೆ ಧರ್ಮೋಪದೇಶವನ್ನು ಮಾಡುವರು. ಶೂದ್ರರು ಸ್ವವಿಹಿತವೃತ್ತಿಯನ್ನು ಬಿಟ್ಟು, ಪೂಜಾಮಾನಲೋಭಿಗಳೂ, ಅರ್ಥಮಾತ್ರಜೀವನರೂ ಆಗಿ, ಎಲ್ಲ ಪ್ರಜರನ್ನು ಕರಭಾರಗಳಿಂದ ಪೀಡಿಸಿ, ರಾಜಾಭಾಸರಾಗುವರು. ಯುಗಾಂತ್ಯದಲ್ಲಿ ಜನರ ಹಾಹಾಕಾರದಿಂದ ತುಂಬಿ, ಜಗವು ಭಯಂಕರ ಸ್ಮಶಾನದಂತೆ ಶೂನ್ಯವಾಗುವುದು. ಆಗ ಶ್ರೀಹರಿಯು ಶಂಬಳಗ್ರಾಮದ ವಿಷ್ಣುಯಶನೆಂಬ ವಿಪ್ರನ ಮನೆಯಲ್ಲಿ ಕಲ್ಕಿರೂಪದಿಂದ ಪ್ರಾದುರ್ಭೂತನಾಗಿ, ಸರ್ವದುರ್ಜನರನ್ನು ನಾಶಪಡಿಸಿ, ಸಾಧುಗಳನ್ನು ಉಳಿಸಿ, ಕೃತಯುಗವನ್ನು ಸ್ಥಾಪಿಸುವನು.

ಗುರು ಸೂರ್ಯ ಚಂದ್ರರು ಒಂದೇ ಸಲ ಪುಷ್ಯನಕ್ಷತ್ರದ ಪ್ರಥಮಾಂಶವನ್ನು ಪ್ರವೇಶಿಸಿದಾಗ ಕೃತಯುಗವು ಪ್ರಾರಂಭವಾಯಿತೆಂದು ತಿಳಿ! ಸರ್ವಮ್ಲೇಚ್ಛನಾಶವಾಗಲು ಚತುರ್ವರ್ಣದ ಸುಜನರು ಸುಕ್ಷೇಮಿಗಳಾಗಿ, ಧರ್ಮವನ್ನು ನಾಲ್ಕುಪಾದಗಳಿಂದ ನಡೆಸುವರು. ಮಳೆಬೆಳೆಗಳು ಚನ್ನಾಗಿ ಆಗುವುವು. ಯಜ್ಞಯಾಗಾದಿಗಳು ಮತ್ತೆ ನಡೆಯುವುವು. ರಾಜರು ಧರ್ಮಿಷ್ಠರಾಗಲು ಪ್ರಜರು ಅವರಂತೆ ಧರ್ಮವನ್ನು ನಡೆಸಿ, ಕೃತಾರ್ಥರಾಗುವರು. ಧರ್ಮರಾಜ! ಧರ್ಮರತರಾದ ನಿಮಗೆ ಭಯವಿಲ್ಲ. ಅಧರ್ಮಲೋಲುಪರಾದ ಕೌರವರಿಗೆ ಕ್ಷೇಮವಿಲ್ಲ. ಸದ್ವಿಪ್ರರನ್ನು ಸೇವಿಸು! ನಿನಗೆ ಕ್ಷೇಮವಾಗುವುದು! ಕುರುಕುಲಾಲಂಕಾರನಾದ ನಿನಗೆ ಹೆಚ್ಚಿಗೆ ಹೇಳುವುದೇಕೆ?

## ವಿಪ್ರ ಕ್ಷತ್ರ ಮಹಿಮೆ

ನಿನಗೆ ವಿಪ್ರಮಹಿಮಾ ದ್ಯೋತಕವಾದ ಒಂದು ಚರಿತೆಯನ್ನು ಹೇಳುವೆನು, ಕೇಳು—

ಅಯೋಧ್ಯೆಯಲ್ಲಿ ಪರೀಕ್ಷಿತನೆಂಬ ಇಕ್ಷ್ವಾಕುಕುಲಸಂಭವನಾದ ರಾಜನ್ಯನಿದ್ದನು. ಒಂದು ದಿನ ಅವನು ಬೇಟೆಯಾಡಲು ಹೋಗಿ, ಸೈನ್ಯದಿಂದ ದೂರನಾಗಿ, ಒಂದು ಜಿಂಕೆಯನ್ನು ಬೆನ್ನಟ್ಟಿ ಪೋದನು. ದಟ್ಟವಾದ ವನದಲ್ಲಿ ಮೃಗವು ಕಾಣದೇ ಹೋಯಿತು. ಆಗ ರಾಜನು ಹಸಿವೆ ನೀರಡಿಕೆಗಳಿಂದ ಪೀಡಿತನಾಗಿ, ಶ್ರಾಂತನಾಗಿದ್ದನು. ಅಲ್ಲಿ ನಿರ್ಮಲ ಜಲಪೂರ್ಣಸರೋವರವನ್ನು ಕಂಡು, ಸಾಶ್ವನಾಗಿ, ನೀರಿಗಿಳಿದು, ಜಲವನ್ನು ಕುಡಿದನು. ಅಶ್ವವನ್ನು ಸಮೀಪದ ಆಲದ ಮರದ ಜಟೆಗೆ ಕಟ್ಟಿ, ಕೆಲ ತಾವರೆ ನಾಳಗಳನ್ನು ಅದಕ್ಕೆ ಆಹಾರವಾಗಿ ಕೊಟ್ಟು, ತಾನು ಗಿಡದಡಿಯಲ್ಲಿ ವಿಶ್ರಮಿಸಿದನು. ಮಧುರಗೀತವನ್ನು ಕೇಳಿ, ನಿರ್ಜನ ವನದಲ್ಲಿ ಹಾಡುವರಾರೆಂದು ಹುಡುಕಿ ರಾಜನು ಪರಮಸೌಂದರ್ಯನಿಧಿಯಾದ ಕನ್ಯೆಯನ್ನು ಕಂಡನು. 'ಯಾರವಳು ನೀನು? ನನ್ನನ್ನು ವರಿಸು' ಎಂದು ಕೇಳಿದ ರಾಜನಿಗೆ ವಶಳಾಗಿ ನಗುತ್ತಾ, ರಮಣೀಮಣಿಯು 'ನಾನಾರವಳೂ ಆಗಿಲ್ಲ. ನಿನ್ನವಳಾಗಬೇಕಾದರೆ ಸಮಯಬಂಧದಿಂದ ನನ್ನನ್ನು ವರಿಸು' ಎಂದಳು. ಸಮಯವೇನೆಂದು ಕೇಳಿದ ರಾಜನಿಗೆ 'ರಾಜನ್! ನೀರೆನ್ನ ಕಣ್ಣಿಗೆ ಹಾಕಲಾಗದು. ಜಲಕ್ರೀಡೆಗೆಂದು ಕರೆದರೆ ನಿನ್ನನ್ನು ತ್ಯಜಿಸುವೆ'ನೆಂದಳು. ಅದಕ್ಕೊಪ್ಪಿ ರಾಜನು ಸುಂದರಿಯೊಡನೆ ಮಂದಿರಕ್ಕೆ ಬಂದು, ಸದಾ ಅವಳ ಸನ್ನಿಧಿಯಲ್ಲೇ ಇರುತ್ತಾ, ರಾಜಕಾರ್ಯಗಳನ್ನು ಮರೆತನು. ಪ್ರಧಾನಮಂತ್ರಿಯು ರಾಜನನ್ನು ಸಭಾಸೀಮೆಗೆ ತರುವ ಪ್ರಯತ್ನಗಳೆಲ್ಲವು ವ್ಯರ್ಥವಾದವು. ಅಂತಃಪುರದ ಜನರಿಂದ ಆ ರಾಜನು ನೀರನ್ನು ದೂರಮಾಡಿರುವನೆಂಬ ಮರ್ಮವನ್ನರಿತು, ದಿವ್ಯ ಪ್ರಮದಾವನವನ್ನು ನಿರ್ಮಿಸಿ, ರಾಜನನ್ನು 'ನೂತನ ಸತಿಯೊಡನೆ ಬಂದು ಅಲ್ಲಿ ವಿಹರಿಸೆ'ಂದು ಪ್ರಾರ್ಥಿಸಿದನು. ವನದಲ್ಲಿ ನೀರಿಲ್ಲವೆಂದು ಪೇಳಿದ ಮಂತ್ರಿಯ ಮಾತಿನ ಮೇಲೆ ವಿಶ್ವಾಸದಿಂದ ರಾಜನು ನಿಜರಮಣೀಯುತನಾಗಿ, ಪ್ರಮದಾವನವನ್ನು ಸೇರಿ ಅಲ್ಲಿ ಯಥೇಚ್ಛಾವಿಹಾರರತನಾಗಿದ್ದನು.

ಒಂದುದಿನ ರಾಜನು ವಿಹಾರಶ್ರಾಂತನಾಗಿ ಮೈಬೆವರಿಟ್ಟು, ಸ್ನಾನಮಾಡ ಲೆಣಿಸಿ ನೀರಿಗಾಗಿ ಹುಡುಕಿದನು. ಮಂತ್ರಿವರನು ರಹಸ್ಯವಾಗಿ ನಿರ್ಮಿಸಿಟ್ಟಿದ್ದ ಪದ್ಮ ಷಂಡ ಸುಂದರವಾದ ಸರೋವರವು ಅವನಿಗೆ ಕಾಣಿಸಿತು. ಆನಂದದಿಂದ ರಾಜನು ನೀರಿಗಿಳಿದು ಸತಿಯನ್ನೂ ಜಲಕ್ರೀಡೆಗೆಂದು ಕರೆದನು. ಅವಳು ಒಯ್ಯಾರವಾಗಿ ನೀರಿನಲ್ಲಿಳಿದು ಮುಳುಗಿ, ಮತ್ತೆ ಏಳದಿರಲು ನೋಡಿ, ಭೀತನಾದ ರಾಜನು ಸರೋವರವನ್ನೆಲ್ಲ ಹುಡುಕಿದನು. ಅವಳು ಸಿಗಲಿಲ್ಲ. ಆಕುಲಚಿತ್ತನಾದ ಭೂನಾಥನು ಜಾಲರಿಂದ ಕೆರೆಯ ನೀರನ್ನೆಲ್ಲ ಹೊರಹಾಕಿಸಿ, ತನ್ನ ಪ್ರಿಯಳನ್ನು ಕಾಣದೆ, ಸರೋವರವ ಕಪ್ಪೆಗಳು ಅವಳನ್ನು ತಿಂದುಹಾಕಿರಬೇಕೆಂದು ತಿಳಿದು, ಕಪ್ಪೆಗಳನ್ನೆಲ್ಲ ಕೊಲ್ಲಿಸಿದನು. ತನ್ನ ಪ್ರಿಯಳನ್ನು ಕೊಂದ ಕಪ್ಪೆಗಳ ನಾಮರೂಪವಿಲ್ಲದಂತೆ ಮಾಡಲು ಪಣತೊಟ್ಟು ರಾಜನು ತನ್ನನ್ನು ಕಾಣಲು ಬಂದವರೊಂದು ಮಂಡೂಕ ಶವವನ್ನು ಕಾಣಿಕೆಯಾಗಿ ತಂದಿಡುವಂತೆ ಸಾರಿದನು. ಮಂಡೂಕವಧೆಯು ಘೋರ ವಾಯಿತು. ಮಂಡೂಕಪ್ರಳಯವಾಗುವುದೆಂಬ ಭಯದಿಂದ ಮಂಡೂಕರಾಜನು ವಿಪ್ರವೇಷಧರನಾಗಿ ರಾಜನನ್ನು ಕಂಡು ಇಂತೆಂದನು—

ರಾಜನ್! ಕೋಪವಶನಾಗಿ ಕಪ್ಪೆಗಳನ್ನೆಲ್ಲ ಕೊಲ್ಲಿಸಬೇಡ! ಪ್ರಸನ್ನನಾಗು. ಕಪ್ಪೆಗಳು ನಿರಪರಾಧಿಗಳು. ಕಪ್ಪೆಗಳು ನಿನ್ನ ಪ್ರಿಯಳನ್ನು ತಿಂದಿಲ್ಲ. ನಾನು ಆಯುವೆಂಬ ಮಂಡೂಕರಾಜನು. ಅವಳು ಸುಶೋಭನೆಯೆಂಬ ನನ್ನ ಮಗಳು. ಅವಳಿಂದ ವಂಚಿತರಾಗಿರುವ ರಾಜರಲ್ಲಿ ನೀನೂ ಒಬ್ಬನೆಂದು ತಿಳಿ! ಅವಳನ್ನು ತಂದು ನಿನಗೆ ಒಪ್ಪಿಸುವೆನು. ಬಿಡು ಚಿಂತೆಯನ್ನು—ಇಂತು ಹೇಳಿ, ಆಯುವು ತನ್ನ ಮಗಳನ್ನು ರಾಜನಿಗೊಪ್ಪಿಸಿ, ಮಂಡೂಕಸಂಹಾರವನ್ನು ನಿಲ್ಲಿಸಿದನು. ಆದರೆ ಅವನು ತನ್ನ ಮಗಳ ಅವಿವೇಕದಿಂದ ಆದ ಅನರ್ಥವನ್ನರಿತು, ಸಿಟ್ಟಿನಿಂದ 'ಎಲವೋ ವಂಚಕಿ! ನಿನ್ನಂತೆ ನಿನ್ನ ಮಕ್ಕಳೂ ಅನೃತಪರರು ವಿಪ್ರಾವಮಾನಿತರೂ ಆಗಲಿ!' ಎಂದು ಶಾಪವಿತ್ತನು.

ಪರೀಕ್ಷಿತನು ಅವಳನ್ನು ಪಡೆದು ಲೋಕತ್ರಯರಾಜ್ಯವನ್ನು ಪಡೆದಂತೆ ಸಂತೋಷಪಟ್ಟನು. ಅವಳಿಗೆ ಶಲ, ದಲ, ಬಲರೆಂಬ ಮೂವರು ಸುತರಾದರು. ಶಲನಿಗೆ ಪಟ್ಟಗಟ್ಟಿ, ಪರೀಕ್ಷಿತನು ವನವನ್ನು ಪ್ರವೇಶಿಸಿದನು. ಒಂದು ದಿನ ಶಲನು ಬೇಟೆಯಾಡಲು ಹೋದನು. ಜಿಂಕೆಯನ್ನು ಬೆನ್ನಟ್ಟಹೋಗುತ್ತಾ, ರಥವನ್ನು ಇನ್ನೂ ವೇಗವಾಗಿ ನಡೆಸೆಂದು ತನ್ನ ಸಾರಥಿಗೆ ಹೇಳಿದನು. ಸೂತನು ಮೆಲ್ಲಗೆ 'ಮಹಾರಾಜ! ನಮ್ಮ ಕುದುರೆಗಳಿಗೆ ಹೆಚ್ಚು ವೇಗವಿಲ್ಲ. ವಾಮದೇವನಲ್ಲಿ ವಾಮ್ಯಾಶ್ವ ಗಳಿವೆ. ವಾಮ್ಯಗಳಾದರೆ ಜಿಂಕೆಯ ವೇಗವನ್ನು ಮೀರಿಸಬಲ್ಲವು' ಎಂದು ನುಡಿದನು. ಆ ಕುದುರೆಗಳನ್ನು ಹೊಂದಲಿಚ್ಛಿಸಿ, ಶಲನು ವಾಮದೇವನ ಆಶ್ರಮಕ್ಕೆ ಬಂದು 'ಆ ಕುದುರೆಗಳನ್ನು ಕೊಡೆಂ'ದು ಬೇಡಿದನು. ಮುನಿಯು 'ಸರೀ! ಕುದುರೆಗಳನ್ನು ಉಪಯೋಗಿಸಿ, ನಿನ್ನ ಕಾರ್ಯವಾದ ತತ್‌ಕ್ಷಣವೇ ನನಗೆ ತಿರುಗಿ ಕೊಡು' ಎಂದು

ಆಜ್ಞಾಪಿಸಿ, ವಾಮ್ಯಗಳನ್ನಿತ್ತನು. ಶಲನು ವಾಮ್ಯಗಳನ್ನು ಕಟ್ಟಿ, ರಥದಲ್ಲಿ ಕೂತು ಜಿಂಕೆಯನ್ನು ಮುಟ್ಟಿ, ಸಂಹರಿಸಿದನು. 'ಸೂತ! ವಾಮ್ಯಗಳನ್ನು ಮತ್ತೆ ವಾಮ ದೇವನಿಗೆ ಕೊಡುವ ಕೆಲಸವಿಲ್ಲ. ಬಡ ಹಾರುವನಿಗೆ ಅಶ್ವರತ್ನಗಳೇಕೆ?' ಎಂದು ಶಲನು ತನ್ನ ನಗರವನ್ನು ಸೇರಿ, ನಿಶ್ಚಿಂತನಾಗಿದ್ದನು.

ವಾಮದೇವನು ಕುದುರೆ ಜತೆಗಾಗಿ ಶಿಷ್ಯನನ್ನು ಕಳಿಸಿದನು. ಶಲನು ಶಿಷ್ಯ ನನ್ನು ತಿರಸ್ಕರಿಸಿ ಕಳಿಸಿದನು. ವಾಮದೇವನು ಕುಪಿತನಾಗಿ ತಾನೇ ಅಯೋಧ್ಯೆಗೆ ಬಂದು ರಾಜನನ್ನು ನೋಡಿ, ಅಶ್ವಗಳನ್ನು ಕೊಡೆಂದು ಕೇಳಿದನು. ಶಲನು ನಕ್ಕು, 'ಇಂತಹ ಅಶ್ವರತ್ನಗಳಿಂದ ನಿನಗೇನು ಪ್ರಯೋಜನ? ಬೇಕಾದರೆ ಒಳ್ಳೆಯ ಎತ್ತು ಗಳನ್ನು ಕೊಡುವೆನು, ಕೊಂಡು ಹೋಗು' ಎಂದನು. ವಾಮದೇವನು ಕಿಡಿಕಿಡಿ ಯಾಗಿ 'ಎಲವೋ ರಾಜ! ದುರ್ಮದನಾಗಿ ಕೆಡಬೇಡ! ವಿಪ್ರಸ್ವಾಪಹಾರದಿಂದ ಕ್ಷೇಮವಿಲ್ಲ. ಕೊಟ್ಟುಬಿಡು ಕುದುರೆಗಳನ್ನು!' ಎಂದು ಗುಡುಗಿದನು. 'ಬೇಟೆ ಯಾಡುವ ರಾಜರಿಗೆ ಕುದುರೆಗಳಿರಬೇಕಾಗಲಿ, ತಪಶ್ಶೀಲರಾದ ವಿಪ್ರರಿಗೇಕೆ? ಕೊಡುವುದಿಲ್ಲ'ವೆಂದ ಶಲನನ್ನು ವಾಮದೇವನ ಜಟಾಸಂಭೂತರಾದ ರಾಕ್ಷಸರು ಶೂಲಗಳಿಂದ ತಿವಿದು ಸಂಹರಿಸಿದರು. ಸಾಯುವಾಗಲೂ ಶಲನಿಗೆ ಒಳ್ಳೆಯ ಬುದ್ಧಿ ಬರಲಿಲ್ಲ. 'ಇಕ್ಷ್ವಾಕುವಂಶಪ್ರಭವರಾಗಿದ್ದರೆ ದಲಾದಿ ರಾಜರು ಕುದುರೆಗಳನ್ನು ಕೊಡದಿರಲಿ!' ಎಂದು ಪ್ರಲಪಿಸುತ್ತಾ ಶಲನು ಮೃತನಾದನು.

ಮಂತ್ರಿಗಳು ದಲನಿಗೆ ಪಟ್ಟಗಟ್ಟಿದರು. ವಾಮದೇವನು ಮತ್ತೆ ಬಂದು 'ನನ್ನ ಕುದುರೆಗಳನ್ನು ನನಗೆ ಕೊಡು! ಶಲನಂತೆ ನಡೆದು ಕೆಡಬೇಡ! ಧರ್ಮವನ್ನನುಸರಿಸಿ ನಡೆ!' ಎಂದು ಹೇಳಿದನು. ದಲರಾಜನು ವಾಮದೇವನನ್ನು ನೋಡಿ, ಅಣ್ಣನ ಮೃತಿಯನ್ನು ನೆನೆದು, ಕುಪಿತನಾದನು. ಸಾರಥಿಯನ್ನು ಕರೆದು ವಾಮದೇವನನ್ನು ಕೊಲ್ಲಲು ವಿಷದಿಗ್ಧ ಬಾಣವನ್ನು ತರಿಸಿ, ಬಿಲ್ಲಿನಲ್ಲಿಟ್ಟು ನಿಂತ ದಲನಿಗೆ ವಾಮದೇವನು 'ರಾಜನ್! ಅವಿವೇಕಿಯಾಗಿ ಕೆಡಬೇಡ! ಈ ನಿನ್ನ ಬಾಣವು ನಿನ್ನ ಪುತ್ರ ಶ್ಯೇನ ಜಿತನನ್ನು ಕೊಲ್ಲುವುದು. ನನ್ನನ್ನಲ್ಲ; ಯೋಚಿಸು!' ಎಂದು ಸ್ಥಿರವಾಗಿ ನಿಂತನು. ದಲನು ದರ್ಪದಿಂದ ಬಿಟ್ಟ ಬಾಣವು ಅಂತಃಪುರದಲ್ಲಿ ಆಡುತ್ತಿದ್ದ ರಾಜಪುತ್ರನಿಗೆ ತಗಲಿ, ಅವನನ್ನು ಸಂಹರಿಸಿತು. ಅದನ್ನು ಕಂಡು ದಲನು ರೋಷಭೀಷಣನಾಗಿ, ಮತ್ತೊಂದು ಬಾಣವನ್ನು ಜೋಡಿಸಿ ವಾಮದೇವನಿಗೆ ಗುರಿಯಿಟ್ಟನು. ವಾಮ ದೇವನು 'ರಾಜನ್! ನಿಷ್ಕಾರಣವಾಗಿ ನಿರಪರಾಧಿ ವಿಪ್ರರನ್ನು ಕೊಲ್ಲಲೆಣಿಸುವ ನಿನ್ನ ಕೈಗಳು ಸ್ತಂಭಿತವಾಗಲಿ!' ಎಂದನು. ದಲನು ಕಲ್ಲಿನ ಗೊಂಬೆಯಂತೆ ನಿಂತು ನಿಶ್ಚೇಷ್ಟನಾದನು. ಅದನ್ನು ನೋಡಿ ರಾಜಪತ್ನಿಯು ಭೀತಳಾಗಿ ಓಡಿಬಂದು, ವಾಮದೇವನ ಕಾಲಿಗೆರಗಿ, ಕ್ಷಮೆ ಯಾಚಿಸಿದಳು. ದಲನೂ ಪಶ್ಚಾತ್ತಾಪತಪ್ತನಾಗಿ ಬೇಡಿಕೊಂಡು, ವಾಮ್ಯಾಶ್ವಗಳನ್ನು ಹಿಂದಿರುಗಿಕೊಟ್ಟನು. ವಾಮದೇವನು ಪ್ರೀತ ನಾದನು. ಅವನ ಅನುಗ್ರಹದಿಂದ ರಾಜಪತ್ನಿಯು ತನ್ನ ಮೃತಸುತನನ್ನು ಪಡೆದು

ಪತಿಯ ಸಂಸ್ತಂಭನವನ್ನು ನಿವಾರಿಸಿದಳು. ಪತಿವ್ರತೆಯರಾದ ಪತ್ನಿಯರಿಂದ ಪುರುಷರು ಪಾಪದೂರರಾಗಿ ಉದ್ಧೃತರಾಗುವರಲ್ಲವೆ?

ಇಂತು ವಿಪ್ರಮಹಿಮೆಯನ್ನು ಕೇಳಿ, ಧರ್ಮರಾಜನು 'ಮಾರ್ಕಂಡೇಯ! ನಿನಗಿಂತಲೂ ವಯಸಾ ಹಿರಿಯರಿರುವರೆ? ಅವರ ವೃತ್ತಾಂತವನ್ನು ನಮಗೆ ತಿಳಿಸು' ಎಂದು ಬೇಡಿದನು. ಮಾರ್ಕಂಡೇಯನು ಬಕಋಷಿಯ ಕಥೆಯನ್ನು ಹೇಳಿದನು.

ಹಿಂದೆ ಮಹಾತ್ಮರಾದ ಬಕ ದಾಲ್ಭ್ಯರೆಂಬ ಮುನಿರಾಜರಿದ್ದರು. ಅವರು ನನಗಿಂತಲೂ ಚಿರಜೀವಿಗಳೆಂದು ನಾನು ಕೇಳಿರುವೆನು. ವೃತ್ರವಧದಿಂದ ಲೋಕ ತ್ರಯವು ಹರ್ಷಿತವಾದಾಗ, ದೇವೇಂದ್ರನು ಲೋಕದರ್ಶನ ಕುತೂಹಲನಾಗಿ ಧರೆಗಿಳಿದುಬಂದನು. ಬಕನನ್ನು ಅವನ ಆಶ್ರಮದಿ ನೋಡಿ, ದೇವರಾಜನು ಅವನಿತ್ತ ಸತ್ಕಾರವನ್ನು ಸ್ವೀಕರಿಸಿ, 'ಮುನಿವರ! ಸಾವಿರಾರು ವರ್ಷಗಳಿಂದ ಜೀವಿಸಿ, ದೃಢ ಗಾತ್ರನಾಗಿರುವೆ. ಆದರೆ ಚಿರಜೀವನದ ಸುಖಗಳಾವುವು, ದುಃಖಗಳಾವುವು? ತಿಳಿಯಲಿಚ್ಛಿಸುವೆನು' ಎಂದು ಕೇಳಿದನು.

ಬಕನು ಚಿರಜೀವನದ ಸುಖ-ದುಃಖಗಳನ್ನಿಂತು ವರ್ಣಿಸಿದನು—'ಪ್ರಿಯರಾದ ಜನರನ್ನು ಅಗಲಿ, ಅಪ್ರಿಯರೊಡನೆ ಇರಬೇಕಾಗುವುದು. ಅಸಜ್ಜನರ ಸಂಗವು, ಪುತ್ರದಾರಾವಿಯೋಗವು, ಪರಾಧೀನ ಜೀವನವು, ಧನರಾಹಿತ್ಯವು, ಅವಮಾನವು ಚಿರಜೀವಿಕೆಯ ದುಃಖಗಳು. ಸುಜನರ ದುಃಖವನ್ನು, ದುರ್ಜನರ ಸುಖವನ್ನು ನೋಡುತ್ತಾ ನಿಸ್ಸಹಾಯಕನಾಗಿ ಮಿಡುಕುವುದು, ಲೋಕದ ಅಧರ್ಮವನ್ನು ಕಂಡು ನಿವಾರಿಸಲಾಗದಿರುವುದು, ಇಂದ್ರಿಯಶಕ್ತಿ ಕುಂಠಿತವಾಗುವುದು, ಹಟ ಹೆಚ್ಚಾಗುವುದು ಮೊದಲಾದವು ಚಿರಜೀವನದ ದೋಷಗಳು.

'ದುಷ್ಟರನ್ನಾಶ್ರಯಿಸದೆ ನ್ಯಾಯಾರ್ಜಿತಧನದಿಂದ ಸುಖ ಜೀವನಗೈಯುವುದು, ಸ್ವಗೃಹದಲ್ಲಿ ದೇವನು ಕೊಟ್ಟುದರಿಂದ ತೃಪ್ತನಾಗಿರುವುದು, ಇಂದ್ರಿಯದಾರ್ಢ್ಯತೆ, ಮಾನಸಿಕ ಸ್ಮರಣೆ ಕುಂಠಿತವಾಗದಿರುವುದು, ಪರಾನ್ನ ಭೋಜನ ವರ್ಜನ, ಅತಿಥಿ ಪೂಜನ, ವಿಧೇಯ ಪುತ್ರಮಿತ್ರ ಕಳತ್ರಜನ ಇವು ಮೊದಲಾದ ಸೌಕರ್ಯವಿದ್ದರೆ ಚಿರಜೀವನವು ಸುಖಕರವಾಗುವುದು' ಇಂತು ನುಡಿದ ಬಕನನ್ನಭಿನಂದಿಸಿ ದೇವೇಂದ್ರನು ಸ್ವರ್ಗವನ್ನು ಸೇರಪೋದನು.

ಈಗ ನಿನಗೆ ರಾಜನ್ಯರ ಮಹಿಮೆಯನ್ನು ಹೇಳುವೆನು ಕೇಳು! ವಿದ್ಯಾ ತಪೋ ಯಜ್ಞ ಸದಾಚಾರಗಳಿಂದ ವಿಪ್ರರು ಪೂಜ್ಯರು. ಪ್ರಜಾಪಾಲನ, ದುಷ್ಟಶಿಕ್ಷಣ ಗಳಂತೆಯೇ ದಾನ ಯಜ್ಞ ವಿದ್ಯಾರ್ಜನಗಳನ್ನೂ ಪಡೆದ ಕ್ಷತ್ರಿಯರೂ ಪೂಜ್ಯ ರಾಗಿರುವರು. ಹಿಂದೆ ಸುಹೋತ್ರ ಶಿಬಿರಾಜರು ಮಾರ್ಗದಲ್ಲಿ ಅಭಿಮುಖರಥರಾದರು. ಯಾರು ಯಾರಿಗೆ ಮಾರ್ಗವನ್ನು ಬಿಟ್ಟುಕೊಡಬೇಕೆಂದು ವಿಚಾರಿಸಿದಾಗ ಕುಲ ವೀರ್ಯ ದಾಕ್ಷಿಣ್ಯಾದಿ ಗುಣಗಳಿಂದ ಇಬ್ಬರೂ ಸಮಾನರೆಂದು ಕಂಡು, ನಿರ್ವಿಣ್ಣ

ರಾಗಿದ್ದರು. ಆಗ ನಾರದನು ಅಲ್ಲಿಗೆ ಬಂದನು. ವಿಷಯವನ್ನರಿತು ನಾರದನು ಇಂತೆಂದನು. 'ಮಹಾಭಾಗರಾದ ನಿಮಗೆ ಹೇಳಬೇಕೆ? ಕ್ರೂರನಿಗೆ ಕ್ರೂರನು, ಮೃದುಲನಿಗೆ ಮೃದುಲನು ಆದುದರಿಂದ ಬಂದ ಹಿರಿತನವಿಲ್ಲ. ಅಸಾಧುಗಳಿಗೆ ಸಾಧುವು, ಕ್ರೂರರಿಗೂ ದಯಾಪರನಾದವನೇ ದೊಡ್ಡವನು. ಶಿಬಿರಾಜನು ನಿನ್ನಿಂದ ದೊಡ್ಡವನು. ಅವನು ಲೋಭಿಗಳನ್ನು ದಾನದಿಂದಲು, ಅನೃತಪರರನ್ನು ಸತ್ಯ ದಿಂದಲು, ಕ್ರೂರರನ್ನು ಕ್ಷಮೆಯಿಂದಲು, ಅಸಾಧುಗಳನ್ನು ಸಾಧುವಾಗಿಯು ಜಯಿಸಿ, ತಿದ್ದಿರುವನು.' ಆ ಮಾತನ್ನಾಲಿಸಿ ಸುಹೋತ್ರನು ಶಿಬಿರಾಜನಿಗೆ ಮಾರ್ಗವಿತ್ತು ನಾರದನ ಪ್ರಶಂಸೆಗೆ ಪಾತ್ರನಾದನು.

ಹಿಂದೆ ಯಯಾತಿ ಎಂಬ ರಾಜರ್ಷಿಯನ್ನು ಬ್ರಾಹ್ಮಣನೋರ್ವನು ಯಾಚಿಸಲು ಬಂದು 'ರಾಜನ್! ಕೊಟ್ಟು ಕೆಟ್ಟೆನೆನ್ನದೆ ಕೊಡುವುದಾದರೆ ಕೇಳುವೆನು' ಎಂದನು. ರಾಜನು ವಿಪ್ರೋತ್ತಮ! ಪಾತ್ರನಿಗೆ ಕೊಡಲಾಗದ್ದಿಲ್ಲ. ನನ್ನ ರಾಜ್ಯ ಧನ ದಾರಾ ಸುತಾದಿ ಸರ್ವಸ್ವವು ಪಾತ್ರನಿಗೆ ಸೇರಿಸಿ, ನಾನು ದುಃಖಿಸದೆ ನಿಶ್ಚಿಂತನಾಗಿರಬಲ್ಲೆನು. ಪ್ರಿಯರಾದ ವಿಪ್ರರಿಗೆ ಬೇಕಾದುದನ್ನು ಕೊಡುವೆನು ಕೇಳು !' ಎಂದನು. ಗೋ ಸಹಸ್ರವನ್ನು ಕೇಳಿದ ವಿಪ್ರನಿಗದನ್ನೇ ಇತ್ತು ಯಯಾತಿಯು ಸರ್ವಸ್ವದಾನಪುಣ್ಯ ವನ್ನು ಪಡೆದನು.

ಸೇದುಕ ವೃಷದರ್ಭರೆಂಬ ರಾಜರು ಬಾಲರಿದ್ದಾಗ ರಹಸ್ಯವಾಗಿ ಪ್ರತಿಜ್ಞೆಗಳನ್ನು ಮಾಡಿಕೊಂಡಿದ್ದರು. ಸೇದುಕನು ಸ್ವರ್ಣರೌಪ್ಯಾದಿಗಳನ್ನಲ್ಲದೆ ಮತ್ತೇನನ್ನೂ ಕೊಡುವುದಿಲ್ಲವೆಂತಲು, ವೃಷದರ್ಭನು ಕೋಪನನಲ್ಲವೆಂದು ಪರೀಕ್ಷಿಸದೆ ಏನೂ ಕೊಡುವುದಿಲ್ಲವೆಂತಲು ಪ್ರತಿಜ್ಞೆ ಮಾಡಿದ್ದರು. ಒಂದುದಿನ ವಿಪ್ರನೊಬ್ಬನು ಸೇದುಕ ನನ್ನು ಸೇರಿ, ಅಶ್ವಸಹಸ್ರವನ್ನು ಬೇಡಿದನು. ಸೇದುಕನು ಕೊಡಲಾಗದೆ ಅವನನ್ನು ವೃಷದರ್ಭನಲ್ಲಿಗೆ ಕಳಿಸಿದನು. ವೃಷದರ್ಭನು ಅವನನ್ನು ಕಶೆಯಿಂದ ಹೊಡಿಸಿದನು. ವಿಪ್ರನು ಸಿಟ್ಟಾಗದೆ 'ಅಯ್ಯಾ! ಸೇದುಕನು ಕಳಿಸಲು ಬಂದಿರುವೆನು. ಕೊಟ್ಟರೆ ಕೊಡು ! ಇಲ್ಲದಿದ್ದರೆ ಬಿಡು ! ನನ್ನನ್ನು ಹೊಡಿಸಿದುದು ನಿನಗೆ ಸರಿಯೆ?' ಎಂದನು. ಆಗ ವೃಷದರ್ಭನು ಪ್ರೀತನಾಗಿ, ಆ ವಿಪ್ರನ ಕ್ಷಮೆ ಬೇಡಿ, ಅವನಿಗೆ ಎರಡು ಸಾವಿರ ಕುದುರೆಗಳನ್ನಿತ್ತು ಕಳಿಸಿದನು.

ಶಿಬಿರಾಜನು ತನ್ನ ಮಾಂಸವನ್ನಿತ್ತು ಪಾರಿವಾಳವನ್ನು ಕಾಪಾಡಿ ಶರಣಾಗತ ರಕ್ಷಕನೆನಿಸಿದನು. ಕಪೋತರೋಮನೆಂಬ ಕುಲದೀಪಕಪುತ್ರನನ್ನು ಇಂದ್ರಾಗ್ನಿವರ ದಿಂದ ಪೊಂದಿದನು.

ಇನ್ನು ಅಷ್ಟಕಾದಿಗಳ ಮಹಿಮೆ ಕೇಳು!

ಅಷ್ಟಕ ಪ್ರತರ್ದನ ವಸುಮನಸ್ ಶಿಬಿರಾಜರು ಅಷ್ಟಕನ ಅಶ್ವಮೇಧಯಜ್ಞವು ಮುಗಿಯುತ್ತಿರಲು, ಒಂದೇ ರಥದಲ್ಲಿ ಕೂತು ಹೋಗುತ್ತಿದ್ದರು. ಆಗ ನಾರದನು ಬರಲು ಕಂಡು, ಅವರು ನಾರದನನ್ನು ಕೂಡ ರಥದಲ್ಲಿ ಕೂಡಿಸಿಕೊಂಡು ಹೊರಟರು.

'ನಮ್ಮಲ್ಲಿ ನಾಲ್ವರೇ ಸ್ವರ್ಗವನ್ನು ಮುಟ್ಟಿ ಇರಬೇಕಾಗಿದ್ದರೆ ಯಾರು ಮೊದಲು ಸ್ವರ್ಗದಿಂದ ಕೆಳಗಿಳಿದುಬರಬೇಕೆ'ಂದು ಕೇಳಿದ ರಾಜಪುತ್ರರನ್ನು ನೋಡಿ, ನಾರದನು 'ಅಷ್ಟಕ'ನೆಂದನು. ಕಾರಣವನ್ನು ತಿಳಿಯಲಿಚ್ಛಿಸಿದ ರಾಜರಿಗೆ ನಾರದನಿಂತೆಂದನು. 'ಒಂದು ಸಲ ನಾನು ಅಷ್ಟಕನ ಮನೆಯಲ್ಲಿ ಅತಿಥಿಯಾಗಿದ್ದೆನು. ಅವನೊಡನೆ ರಥದಲ್ಲಿ ಕೂತು ಹೊರಟಾಗ ಅಗ್ರಹಾರದಲ್ಲಿ ಗೋಸಹಸ್ರವನ್ನು ಕಂಡು 'ಯಾರವು ಈ ಗೋವು'ಗಳೆಂದು ಕೇಳಿದೆನು. 'ನಾನು ಬ್ರಾಹ್ಮಣರಿಗಿತ್ತವೆ'ಂದು ಅಷ್ಟಕನು ನುಡಿದನು. ಆತ್ಮಶ್ಲಾಘಾಪರನಾದುದರಿಂದ ಅಷ್ಟಕನು ಇಳಿಯುವನೆ'ಂದು ನಾರದನು ನುಡಿದನು. 'ಮೂವರೇ ನಿಲ್ಲಬೇಕಾದಾಗ ಇಳಿಯಬೇಕಾದವರಾರೆ'ಂದು ಕೇಳಿದಾಗ ದೇವರ್ಷಿಯು 'ಪ್ರತರ್ದನನು ಇಳಿಯುವನು' ಅವನ ಮನೆಯಲ್ಲಿ ನಾನಿದ್ದೆನು. ನಾವೀರ್ವರೂ ರಥದಲ್ಲಿ ಕೂತು ವಿಹಾರಕ್ಕೆಂದು ಹೊರಟೆವು. ಅಡವಿಯಲ್ಲಿ ಒಬ್ಬ ವಿಪ್ರನು ಬಂದು ಕುದುರೆಯೊಂದನ್ನು ಬೇಡಿದನು. ಪ್ರತರ್ದನನು ಮನೆಗೆ ಬಂದರೆ ಕೊಡುವೆನೆಂದನು. ' ತತ್‌ಕ್ಷಣವೇ ಕೊಟ್ಟರೆ ಕೊಡು! ಇಲ್ಲದಿದ್ದರೆ ಬೇಡ ! ' ಎಂದ ವಿಪ್ರನಿಗೆ ಬಲಗಡೆಯ ಕುದುರೆಯನ್ನಿತ್ತು, ಮುಂದೆ ಹೊರಡುವಾಗ ಮತ್ತೊಬ್ಬ ವಿಪ್ರನು ಬೇಡಿದನು. ಅವನಿಗೆ ಎಡಗಡೆಯ ಕುದುರೆಯನ್ನಿತ್ತನು. ಇಂತು ನಾಲ್ವರು ವಿಪ್ರರಿಗೆ ನಾಲ್ಕು ಕುದುರೆಗಳನ್ನೀಯಬೇಕಾಯಿತು. ಇತ್ತ ಪ್ರತರ್ದನನು ತಾನೇ ನಾನು ಕೂತಿದ್ದ ರಥವನ್ನು ಎಳೆದುತರುತ್ತಾ, 'ನೋಡಿದಿಯಾ ನಾರದ! ಬ್ರಾಹ್ಮಣರಿಗೆ ಸಮಯಾಸಮಯಜ್ಞಾನವಿಲ್ಲ' ಎಂದು ನಿಂದಿಸಿದನು. ಕೊಟ್ಟು ಬೈಯುವ ಪ್ರತರ್ದನನು ಇಳಿಯುವ'ನೆಂದು ನಾರದನಂದನು. ಇಬ್ಬರೇ ನಿಲ್ಲಬೇಕಾದರೆ ಯಾರು ಇಳಿಯಬೇಕೆಂದು ಕೇಳಿದ ರಾಜರಿಗೆ ನಾರದನಿಂತೆಂದನು.—'ವಸುಮಾನಸನು ಇಳಿಯುವನು. ಅವನ ಮನೆಯಲ್ಲಿ ನಾನು ಕೆಲಕಾಲವಿದ್ದೆನು. ಗಿರಿ ಗಹನ ಗಗನ ಸಾಗರಗಳಲ್ಲಿ ಅಪ್ರತಿಹತವಾಗಿ ತಿರುಗುವ ರಥವನ್ನು ಪುಷ್ಪರಥವೆನ್ನುವರು. ಅಂತಹ ರಥ ಪ್ರಾರಂಭೋತ್ಸವ ನಡೆದಿತ್ತು. ನಾನು ರಥವನ್ನು ನೋಡಿ, ದಿವ್ಯವಾಗಿದೆ ಎಂದು ಪ್ರಶಂಸಿಸಿದೆನು. ನನ್ನ ಇಂಗಿತವನ್ನರಿತ ರಾಜನು, ಪೂಜ್ಯನೆ!, ರಥವು ಚನ್ನಾಗಿದೆ. ಬೇಕಾದಾಗ ಉಪಯೋಗಿಸಬಹುದು. ನಿನಗೆ ಅಡ್ಡಿ ಇಲ್ಲ! ಎಂದನಾಗಲಿ, ರಥವನ್ನು ನನಗೆ ಕೊಡಲಿಲ್ಲ. ಅಂತಹ ಪುಷ್ಪರಥಗಳು ಮೂರು ಆದಾಗಲೂ ವಸುಮನಸನು ರಥಪ್ರಶಂಸೆಯನ್ನು ಮೆಚ್ಚಿದನೇ ಆಗಲಿ ರಥದಾನವನ್ನು ಮಾಡಲಿಲ್ಲ. ವಿಪ್ರನ ಇಂಗಿತವನ್ನರಿತೂ ಕೊಡದಿದ್ದ ಕಾರಣ ವಸುಮನಸನು ಇಳಿಯುವನು.

'ಒಬ್ಬನೇ ಸ್ವರ್ಗದಲ್ಲಿ ಉಳಿಯಬೇಕಾದರೆ ಇಳಿಯುವರಾರೆ'ಂದು ಕೇಳಿದ ರಾಜಪುತ್ರರಿಗೆ ನಾರದನಿಂತೆಂದನು—ಶಿಬಿಯು ಉಳಿಯುವನು. ನಾನು ಇಳಿಯಬೇಕಾಗುವುದು. ನನಗೂ ಶಿಬಿ ಬಹು ಗುಣವತ್ತರನು. ಅವನ ಮನೆಯಲ್ಲಿ ನಾನಿದ್ದಾಗ ವಿಪ್ರನೋರ್ವನು ಬಂದು ಅನ್ನವನ್ನು ಬೇಡಿದನು. ಶಿಬಿಯು 'ಆಗಲಿ! ಯಾವ ಭಕ್ಷ್ಯವಾಗಬೇಕೆ'ಂದನು. ವಿಪ್ರನು 'ನಿನ್ನ ಮಗನ ಮಾಂಸ'ವೆಂದನು.

ಶಿಬಿಯು ಅಳುಕದೆ ಪುತ್ರಮಾಂಸವನ್ನು ತಯಾರಿಸುತ್ತಿರಲು, ವಿಪ್ರನು ಶಿಬಿಯ ನಗರವನ್ನು ಸುಡುತ್ತಿದ್ದನು. ಆ ವೃತ್ತಾಂತವನ್ನರಿತು ಶಿಬಿಯು ನಿರ್ವಿಕಾರನಾಗಿ, ವಿಪ್ರನನ್ನು ಕರೆತಂದು, ಬಡಿಸಿದನು. ಮೊದಲುಂಡು ತನಗೀಯಲು ಬೇಡಿದ ವಿಪ್ರನ ಮಾತಿಗೆ ಬದುಲಾಡದೆ, ಶಿಬಿಯು ಭುಜಿಸಲು ಸಿದ್ಧನಾದಾಗ ಬ್ರಾಹ್ಮಣನು ಅವನ ಶಾಂತಗುಣವನ್ನು ಕಂಡು ಮೆಚ್ಚಿ, ಕೈಹಿಡಿದು ತಡೆದು, ಇಂತೆಂದನು—'ರಾಜನ್! ನಿನ್ನ ಪೋಲುವ ಜಿತಕ್ರೋಧರಿನ್ನಿಲ್ಲ. ವಿಪ್ರರಿಗಾಗಿ ನೀನು ತ್ಯಜಿಸಲಾರದ ಸೊತ್ತಿಲ್ಲ. ಮೆಚ್ಚಿದೆನು. ನೋಡಿಲ್ಲಿ! ನಿನ್ನ ಮಗನು ಸುಖವಾಗಿರುವನು' ಎಂದು ನುಡಿದು ವಿಪ್ರನು ಶಿಬಿರಾಜನಿಗೆ ಅವನ ಸುತನನ್ನೊಪ್ಪಿಸಿ, ಅಂತರ್ಹಿತನಾದನು. ಆಗ ಮಂತ್ರಿಗಳು ರಾಜನನ್ನು ನೋಡಿ 'ಮಹಾರಾಜ! ಎಂತಹ ಅನುಚಿತವನ್ನು ಮಾಡಿದೆ?' ಎಂದು ಕೇಳಿದರು. ಶಿಬಿಯು ನಗುತ್ತಾ ಅವರಿಗಿಂತೆಂದನು—'ಇನ್ನೊಬ್ಬರ ಹೊಗಳಿಕೆಗೆಂದು ನಾನು ಪುಣ್ಯಕಾರ್ಯಗಳನ್ನು ಮಾಡುವವನಲ್ಲ. ನನ್ನ ಕರ್ತವ್ಯವೆಂದರಿತು ಶ್ರೀಹರಿ ಪ್ರೀತಿಗಾಗಿ ಮಾತ್ರ ದಾನಾದಿಗಳನ್ನು ಮಾಡುವೆನು. ಶ್ರೀಶನೇ ನನಗೆ ಗತಿ!' ಎಂದನು. ಇಂತಹ ಶಿಬಿಯು ಉಳಿಯಲರ್ಹನು' ಎಂದು ಪೇಳಿದನು.

## ಇಂದ್ರದ್ಯುಮ್ನ ಚರಿತೆ—ಕುವಲಾಶ್ವ ಕಥೆ

ಧರ್ಮರಾಜನು ಮಾರ್ಕಂಡೇಯನನ್ನು ನೋಡಿ, 'ಸ್ವಾಮಿ! ನಿನಕಿಂತಲೂ ಚಿರಜೀವನನಿರುವನೆ?' ಎಂದು ಕೇಳಿದನು. ಮಾರ್ಕಂಡೇಯನು ಇಂದ್ರದ್ಯುಮ್ನನೆಂಬ ರಾಜರ್ಷಿ ಇರುವನೆಂದು ಅವನ ಕಥೆಯನ್ನು ಹೇಳಿದನು—

ಇಂದ್ರದ್ಯುಮ್ನನು ಸ್ವರ್ಗದಿಂದ ಕೆಳಗಿಳಿದು ಬಂದು ನನ್ನನ್ನು ಕಂಡನು. 'ಮಾರ್ಕಂಡೇಯ! ಕೀರ್ತಿಯು ನಷ್ಟವಾಗಿ ಸ್ವರ್ಗಭ್ರಷ್ಟನಾಗಿರುವೆನು. ನನ್ನನ್ನು ತಿಳಿದವರಿದ್ದು ನನ್ನ ಕೀರ್ತಿಯು ಭೂಲೋಕದಲ್ಲಿರುವವರೆಗೂ ನಾನು ಸ್ವರ್ಗದಲ್ಲಿರಬಹುದಾಗಿದೆ. ನೀನು ಚಿರಜೀವನು. ನನ್ನನ್ನರಿತಿಲ್ಲವೆ?' ಎಂದು ಕೇಳಿದನು. ಜಪ ತಪ ಸ್ವಾಧ್ಯಾಯ ನಿರತನಾಗಿರುವ ನಾನು ಅವನನ್ನು ತಿಳಿಯದೆ 'ರಾಜನ್! ಹಿಮವತ್ಪ್ರಾವಾರದಲ್ಲಿ ಪ್ರಾವಾರಕರ್ಣನೆಂಬ ಗೂಬೆಗಳ ರಾಜನಿರುವನು. ಅವನು ನನಕಿಂತಲೂ ಹಳೆಯವನು. ಅವನು ನಿನ್ನನ್ನರಿತಿರಬಹುದೆ'ಂದು ನುಡಿದೆನು. ಇಂದ್ರದ್ಯುಮ್ನನು ಅಶ್ವರೂಪನಾಗಿ ನನ್ನನ್ನು ಹೊತ್ತು ಉಲೂಕರಾಜನ ಮನೆ ಸೇರಿದನು. ರಾಜನು ಇಂದ್ರದ್ಯುಮ್ನನೆಂಬ ರಾಜನನ್ನು ತಿಳಿದಿರುವೆಯಾ? ಎಂದು ಕೇಳಲು, ಗೂಬೆ ಸ್ವಲ್ಪ ಧ್ಯಾನಿಸಿ 'ಗೊತ್ತಿಲ್ಲ, ಆದರೆ ಇಂದ್ರದ್ಯುಮ್ನವೆಂಬ ಸರಸ್ಸಿದೆ, ಅದರಲ್ಲಿ ನಾಡೀಜಂಘನೆಂಬ ಬಕನಿರುವನು. ಅವನು ಬಹುಪೂರ್ವಜನಾದುದರಿಂದ ನಿನ್ನನ್ನು ತಿಳಿಯಬಹುದು' ಎಂದು ಹೇಳಲು, ರಾಜನು ನನ್ನನ್ನು, ಪ್ರಾವಾರಕರ್ಣನನ್ನು ಹೊತ್ತುಕೊಂಡು ನಾಡೀಜಂಘನನ್ನು ಸೇರಿದನು. 'ಇಂದ್ರದ್ಯುಮ್ನನೆಂಬ ರಾಜನನ್ನರಿತಿರುವೆಯಾ?' ಎಂದು ರಾಜನು ಕೇಳಿದನು. ಬಕರಾಜನು 'ಇಲ್ಲ!

ನನಗೂ ಪೂರ್ವಜನಾದ ಅಕೂಪಾರನೆಂಬ ಕೂರ್ಮನು ಇದೇ ಸರೋವರದಲ್ಲಿರುವನು. ಅವನು ಇಂದ್ರದ್ಯುಮ್ನನನ್ನು ಕಂಡಿರಬಹುದು' ಎಂದನು. ನಾಡೀಜಂಘನು ಕರೆಯಲು ಬಕವಲ್ಲಭನು ಹೊರಬಂದನು. ರಾಜನು 'ಬಕರಾಜ! ಇಂದ್ರದ್ಯುಮ್ನನನ್ನರಿತಿರುವೆಯಾ?' ಎಂದು ಕೇಳಲು, ಕೂರ್ಮವು ಕಣ್ಣೀರಿಟ್ಟು, ಮೈನಡುಗುತ್ತಿರಲು, ಗದ್ಗದಿತಕಂಠನಾಗಿ, 'ಅಯ್ಯೋ! ಇಂದ್ರದ್ಯುಮ್ನ ಮಹಾರಾಜನನ್ನು ನಾನರಿಯೆನೇ! ಅವನು ಸಾವಿರ ಯೂಪಗಳನ್ನು ನೆಟ್ಟು ಸಾವಿರ ಯಜ್ಞಗಳನ್ನು ಮಾಡಿದನಲ್ಲವೆ? ಅವನಿತ್ತ ಗೋಲಕ್ಷವು ತುಳಿದಾಡಿದಾಗ, ತಗ್ಗಾಗಿ ಏರ್ಪಟ್ಟ ಸರೋವರದಲ್ಲೇ ನಾನು ವಾಸಿಸುತ್ತಿರುವೆನು' ಎಂದು ನುಡಿದನು.

ಅದೇ ಕ್ಷಣದಲ್ಲಿ ದೇವಲೋಕದಿಂದ ದಿವ್ಯರಥವು ಕೆಳಗಿಳಿದುಬಂದಿತು. ದೇವರಾಜನು 'ಇಂದ್ರದ್ಯುಮ್ನ! ನಿನ್ನ ಕೀರ್ತಿಚಂದ್ರಿಕೆಯು ಮಾಸಿಲ್ಲ. ಮೊದಲಿನಂತೆ ಸುಖವಾಗಿ ಸ್ವರ್ಗದಲ್ಲಿ ಇರು!' ಎಂದು ಇಂದ್ರದ್ಯುಮ್ನನನ್ನು ರಥದಲ್ಲಿ ಕೂಡಿಸಿಕೊಂಡು ಹೋದನು. ಪುಣ್ಯವು ಕೀರ್ತ್ಯವಸಾನವಾಗುವವರೆಗೂ ಸುಜನನು ಸ್ವರ್ಗದಲ್ಲಿರುವನು. ಪಾಪಕಥೆ ಅಳಿಸುವವರೆಗೂ ಪಾಪಿಯು ನರಕದಲ್ಲಿರುವನು. ಇದನ್ನರಿತು ನರನು ಪುಣ್ಯಕಾರ್ಯಗಳನ್ನೇ ಮಾಡಿ, ಕೀರ್ತಿವಂತನಾಗಬೇಕು. ರಾಜನು ಸ್ವರ್ಗ ಸೇರಪೋಗುವ ಮುನ್ನ ನನ್ನನ್ನು, ಪ್ರಾವಾರಕರ್ಣನನ್ನು, ನಾಡೀಜಂಘನನ್ನು ಅವರವರ ಮನೆಯಲ್ಲಿ ಬಿಟ್ಟು, ನಮಿಸಿ, ಸ್ವರ್ಗವನ್ನಧಿರೋಹಿಸಿದನು.

ಧರ್ಮರಾಜ! ಧರ್ಮವು ಸೂಕ್ಷ್ಮವಾಗಿ, ಎಲ್ಲರಿಂದ ತಿಳಿಯಲ್ಪಡಲು ಅಶಕ್ಯವಾಗಿದೆ. ದಾನದಿಂದ ಪುಣ್ಯವು ಲಭಿಸುವುದಲ್ಲವೆ? ಆದರೆ ಪತಿತ, ಪಾಷಂಡ, ಪಾಚಕ, ವೃಷಲೀ ಪತಿ, ವೇದ ವಿಕ್ರಯಕ, ಅಸತ್ಯವಚನ, ಕೃತಘ್ನ, ಗ್ರಾಮಯಾಜಕ, ಸನ್ಯಾಸ ಪರಿಭ್ರಷ್ಟ, ತಸ್ಕರ, ಭಾರ್ಯಾಬಂಧು, ಆಚಾರಹೀನ ಮೊದಲಾದವರಿಗೆ ಕೊಟ್ಟ ದಾನವು ವ್ಯರ್ಥವೆಂದು ತಿಳಿ! ಜಪ, ಹೋಮ, ವೇದಾಧ್ಯಯನ, ದೇವತಾ ಪೂಜಾದಿ ಸತ್ಕರ್ಮರತರಾದ ವಿಪ್ರರು ದಾನವಿತ್ತವನನ್ನು ಭವಸಾಗರ ಪಾರವನ್ನು ಸೇರಿಸುವ ನೌಕೆಗಳಾಗಿರುವರು. ತಾವೂ ತರಿಸಿ, ತಮ್ಮನ್ನಾಶ್ರಯಿಸಿದವರನ್ನೂ ಉದ್ಧರಿಸುವರು. ದೀಪ, ಛತ್ರ, ಜಲ, ಸ್ವರ್ಣ, ಗೋದಾನಗಳನ್ನು ಪಾತ್ರರಿಗಿತ್ತರೆ ಬಹು ಪುಣ್ಯಲೋಕಗಳಾಗುವುವು. ಅನ್ನದಾನವು ಎಲ್ಲ ದಾನಗಳಿಗಿಂತಲೂ ಶ್ರೇಷ್ಠವು. ಅದಕ್ಕಿಂತಲೂ ವಿದ್ಯಾದಾನವು ಶ್ರೇಷ್ಠವು.

ಸತ್ಯದಿಂದ ವಚನಶುದ್ಧಿಯನ್ನು, ಆಚಾರದಿಂದ ಕರ್ಮಶುದ್ಧಿಯನ್ನು, ಜಪದಿಂದ ಮನಃಶುದ್ಧಿಯನ್ನು ಸಂಪಾದಿಸಿದ ವಿಪ್ರನು ದೇವಪ್ರಿಯನಾಗುವನು. ತ್ರಿದಂಡ ಧಾರಣ, ಮೌನ, ಜಟಾಭಾರ, ಮುಂಡನ, ವಲ್ಕಲ ಕಾಷಾಯ ಧಾರಣ, ಅಗ್ನಿಹೋತ್ರ, ವನವಾಸ, ವ್ರತನಿಷ್ಠೆ ಮೊದಲಾದವು ಭಕ್ತಿಯುತವಾಗಿದ್ದರೆ ಮಾತ್ರ ಶ್ರೀಶ ಪ್ರೀತಿಸಾಧನವೆನಿಸುವುವು. ಭಕ್ತಿರಹಿತ ದಾನಾದಿಗಳಿಂದ ಏನೂ ಪ್ರಯೋಜನವಿಲ್ಲ. ಗೃಹಸ್ಥನಾದರೂ ಚಿಂತೆಯಿಲ್ಲ. ಶುಚಿ, ಜಿತೇಂದ್ರಿಯ, ಪರದಾರಾಧನಪರಾಙ್ಮುಖ,

ದಯಾವಂತನಾಗಿದ್ದನೆಂದರೆ ಗೃಹಸ್ಥನೂ ಕೂಡ ಮುಕ್ತನಾಗುವನು. ಶುಷ್ಕತರ್ಕವನ್ನು ಬಿಟ್ಟು, ಅಪೌರುಷೇಯವು, ಜೀವದುಃಖನಿವರ್ತಕವು, ಬ್ರಹ್ಮಪ್ರತಿಪಾದಕವು ಆದ ವೇದವನ್ನು ನಂಬಿ, ಅದರ ವ್ಯಾಖ್ಯಾನವಾಗಿರುವ ಸ್ಮೃತಿ ಪುರಾಣೇತಿಹಾಸಗಳನ್ನು ವಿಚಾರಿಸಿ ತಿಳಿದು, ಅದರಂತೆ ನಡೆದವನಿಗೆ ಕಟ್ಟಿಟ್ಟ ಗಂಟೇ ಆಗಿದೆ. ಧರ್ಮರಾಜ! ಮನುಜನು ಯಾವ ದಾನವನ್ನು ಪಾತ್ರನಿಗಿತ್ತಿರುವನೋ ಅದೇ ವಸ್ತುವನ್ನು ಹೆಚ್ಚಾಗಿ ಮತ್ತೆ ಪಡೆಯುವನು. ಅಂದಮೇಲೆ ಪಾತ್ರವನ್ನರಿತು ನ್ಯಾಯಾರ್ಜಿತವಿತ್ತವನ್ನಿತ್ತು ಅನಂತ ಪುಣ್ಯಗಳಿಸುವವನೇ ವಿವೇಕಿಯು.

ಈಗ ನಿನಗೆ ಪುಣ್ಯಕೀರ್ತಿಯಾದ ಕುವಲಾಶ್ವನ ಕಥೆಯನ್ನು ಹೇಳುವೆನು ಕೇಳು!—ವಿಪ್ರರಿಗಾಗಿ ಸುತ, ರಾಜ್ಯ, ಪ್ರಾಣಗಳನ್ನೂ ತ್ಯಜಿಸಲು ಸಿದ್ಧನಾದ ಮಹಾನುಭಾವನಾದ ಕುವಲಾಶ್ವನು ಧರ್ಮಬಲದಿಂದ ಮತ್ತೆ ಸುತ, ರಾಜ್ಯಾದಿಗಳನ್ನು ಪಡೆದನು.

ಉದಂಕನೆಂಬ ಮುನಿವರನು ಮರುಧನ್ವದಲ್ಲಿ ಆಶ್ರಮವನ್ನು ಕಟ್ಟಿಕೊಂಡಿದ್ದನು. ಅವನು ಬಹುವರ್ಷಗಳ ತಪಸ್ಸನ್ನು ಮಾಡಿ, ಅಧೋಕ್ಷಜನನ್ನು ಪ್ರತ್ಯಕ್ಷೀಕರಿಸಿಕೊಂಡನು. ಬಂದ ಗೋವಿಂದನಿಗೆ ವಂದಿಸಿ ಉದಂಕನು 'ದೇವದೇವ! ನಿಗಮೈಕವೇದ್ಯದಿವ್ಯಪ್ರಭಾವ! ಮಾಧವ! ಚರಾಚರ ಜಗನ್ನಿರ್ಮಾಣ ಧುರೀಣ! ಸ್ವತಂತ್ರ-ಕಾರಣ! ನಿರ್ವಿಕಾರ! ರಮಾಚಿತ್ತವಿಹಾರ! ಬ್ರಹ್ಮ, ರುದ್ರ, ಮುಖದೇವಗಣವು ನಿನ್ನಿಂದ ಕೃತಾರ್ಥವಾಗಿದೆ. ನೀ ಸಂತೋಷಪಟ್ಟರೆ ಜಗವೆಲ್ಲವೂ ಸಂತಸಿಸುವುದು. ತರುವಿನ ಬೇರಿಗೆ ನೀರೆರೆದಂತೆ ನಿನ್ನ ಪೂಜೆ! ನೀ ಮುನಿದರೆ ಮಹಾಪ್ರಳಯವಾಗುವುದು. ವಿಶ್ವವೆಲ್ಲವು ವ್ಯಾಪಿಸಿನಿಂತ ನಿನಗೆದುರಿಲ್ಲ. ಶತಾನಂದ, ಶಂಕರ, ಶಕ್ರ, ಶಶಾಂಕ ಮುಂತಾದ ವೃಂದಾರಕರು ನಿನ್ನ ಭಿನ್ನಾಂಶರಾಗಿ, ನಿನ್ನಧೀನರಾಗಿ, ನಿನ್ನ ದಿವ್ಯಾವಯವಗಳಿಂದ ಜನಿಸಿ, ನೀನಿತ್ತ ಶಕ್ತಿ ಪಡೆದು, ಲೋಕಹಿತವನ್ನು ಸಾಧಿಸುತ್ತಿರುವರು. ಸರ್ವಯಜ್ಞ ಫಲಪ್ರದನು, ಸರ್ವವೇದ ಮುಖ್ಯಪ್ರತಿಪಾದ್ಯನು ಆದ ನಿನಗೆ ನಮೋ ನಮಃ' ಎಂದು ಸ್ತುತಿಸಿದನು.

ಶ್ರೀಹರಿಯು ಪ್ರೀತನಾಗಿ 'ವರವನ್ನು ಬೇಡು' ಎನ್ನಲು, ಮುನಿಯು 'ಶ್ರೀಶಾ! ನಿನ್ನ ದಿವ್ಯಮಂಗಳರೂಪವನ್ನು ಕಣ್ಣಾರೆ ಕಂಡು ಧನ್ಯನಾದೆನು. ಇದಕ್ಕಿಂತಲೂ ವರವಿನ್ನಾವುದು? ಆದರೂ ಕೇಳುವೆನು—ನನ್ನ ಮನವು ಸತ್ಯ, ಧರ್ಮ, ಶಮ, ದಮಾನ್ವಿತವಾಗಿರಲಿ! ನಿನ್ನಲ್ಲಿ ದೃಢಭಕ್ತಿ ಎನಗಿರಲಿ! ಇದೇ ನಾ ಬೇಡುವ ವರ!' ಎಂದನು. ಶ್ರೀಹರಿಯು ಮುನಿವರನ ಭಕ್ತಿಗೆ ಮೆಚ್ಚಿ 'ನಿನಗೆ ದಿವ್ಯಜ್ಞಾನವನ್ನಿತ್ತಿರುವೆನು. ನಿನ್ನಿಂದ ತ್ರಿಲೋಕ ಹಿತಕಾರ್ಯವು ಆಗಬೇಕಾಗಿದೆ. ಧುಂಧುನೆಂಬ ದಾನವನು ನಿನ್ನ ಆಶ್ರಮದ ಪರಿಸರದ ಮರುಭೂಮಿಯಲ್ಲಡಗಿ ಮಲಗಿ, 'ಸರ್ವಲೋಕ ನಾಶವಾಗಲಿ! ಸರ್ವದೇವತಾ ನಾಶವಾಗಲಿ!' ಎಂದು ಸಂಕಲ್ಪಿಸಿ, ಮಹಾ ಘೋರ ತಪಸ್ಸನ್ನು ಮಾಡುತ್ತಿರುವನು. ನೀನು ಬೃಹದಶ್ವನ ಮಗನಾದ

ಕುವಲಾಶ್ವನನ್ನು ಧುಂಧು ಸಂಹಾರ ಮಾಡುವಂತೆ ಪ್ರೇರಿಸು! ನಾನು ಅವನಲ್ಲಿ ಆವಿಷ್ಟನಾಗಿದ್ದು, ಆ ಮಹಾರಾಜನಿಗೆ ದಿವ್ಯಶಕ್ತಿಯನ್ನಿತ್ತು ಪೊರೆಯುವೆನು. ಧುಂಧು ಮಾರನೆನಿಸಿ ಕುವಲಾಶ್ವನು ಲೋಕಹಿತವನ್ನು ಸಾಧಿಸಲಿ!' ಎಂದು ಆಜ್ಞಾಪಿಸಿ, ಅಂತರ್ಹಿತನಾದನು.

ಇಕ್ಷ್ವಾಕು ವಂಶದಲ್ಲಿ ಪುಟ್ಟಿದ ಶ್ರಾವಸ್ತಿ ಎಂಬ ರಾಜನ ಮಗನು ಬೃಹದಶ್ವನು. ಅವನಿಗೆ ಕುವಲಾಶ್ವನು ಸುತನು. ಕುವಲಾಶ್ವನಿಗೆ ಶಸ್ತ್ರಾಸ್ತ್ರಕುಶಲರಾದ ತನಯರು ಇಪ್ಪತ್ತೊಂದು ಸಾವಿರ ಸಂಖ್ಯಾಕರು ಇದ್ದರು. ಬೃಹದಶ್ವನು ಕುವಲಾಶ್ವನಿಗೆ ಪಟ್ಟಗಟ್ಟಿ ವನವಾಸಕ್ಕೆಂದು ಹೊರಡಲನುವಾದನು. ಆಗ ಉದಂಕನು ಅವನನ್ನು ಕಂಡು 'ಮಹಾರಾಜ! ವನದಲ್ಲೇನಿದೆ? ಪ್ರಜಾರಕ್ಷಣವನ್ನು ಪೋಲ್ವ ಧರ್ಮ ವಿನ್ನೊಂದಿಲ್ಲ ಸುಕ್ಷತ್ರಿಯರಿಗೆ! ದುರ್ಜನ ಶಿಕ್ಷಣವನ್ನು ಮಾಡು! ಅದರಿಂದ ನಮ್ಮಂತಹ ತಾಪಸರು ನಿಶ್ಚಿಂತರಾಗಿ ತಪೋಯಜ್ಞಾದಿ ಸತ್ಕೃತ್ಯಗಳನ್ನು ಮಾಡಲು ಅನುಕೂಲವಾಗುವುದು. ನಿನಗೆ ಅನಂತ ಪುಣ್ಯವು ಸಿಗುವುದು. ಮಧುಕೈಟಭರ ಮಗನಾದ ಧುಂಧುನೆಂಬ ದಾನವನು ತೀವ್ರತಪದಿಂದ ಬ್ರಹ್ಮನನ್ನು ಮೆಚ್ಚಿಸಿ, ದೇವ ದಾನವ ಗಂಧರ್ವಾದಿಗಳಿಂದ ತನಗೆ ಸಾವಿಲ್ಲದಂತೆ ವರವನ್ನು ಪಡೆದನು. ಅವನೀಗ ನನ್ನ ಆಶ್ರಮ ಸಮೀಪದ ಮರುಭೂಮಿಯಲ್ಲಿ ವಾಲುಕಾ ಪುಲಿನ ತಲದಲ್ಲಿ ಮಹಾ ವಿವರವನ್ನು ಕಲ್ಪಿಸಿ, ಅಲ್ಲಿ ಮಲಗಿರುವನು. ಅವನ ಬಾಯಿಯ ಉಸಿರು ಧೂಮ ಜಾಲ ಸಮಾವೃತ ದಹನ ಜ್ವಾಲೆಯಾಗಿ ಹೊರಬಂದಾಗ ಲೋಕವೆಲ್ಲವೂ ಧೂಳಿ ನಿಂದ ತುಂಬಿ ಕತ್ತಲು ಕವಿದಂತಾಗುವುದು. ಅವನ ಶ್ವಾಸಾಗ್ನಿಗೆ ತುತ್ತಾಗಿ ನರ ಪಶು ಪಕ್ಷ್ಯಾದಿ ಜಂತುಗಳು ನಾಶವಾಗುತ್ತಲಿರುವುವು. ಸರ್ವಲೋಕ ನಾಶವನ್ನು ಸಂಕಲ್ಪಿಸಿ, ಆ ಪಾಪಿಯು ಮಾಡುವ ತಪಸ್ಸಿನಿಂದ ಲೋಕವೆಲ್ಲ ಹಾಳಾಗದ ಮುನ್ನ ಅವನನ್ನು ಸಂಹರಿಸು. ಶ್ರೀಹರಿಯು ನಿನ್ನಲ್ಲಿದ್ದು ನಿನಗೆ ವಿಜಯವನ್ನೀಯುವನು. ಆದರರಿಂದ ಶ್ರೀಶನಾಡಿದ ಮಾತನ್ನು ನಿನಗರುಹಿದೆನು. ಸುಳ್ಳಲ್ಲ. ನಿನಗೆ ಸಮಾನ ವೀರರಿನ್ನಿಲ್ಲ. ಕೊಲ್ಲು ಧುಂಧು ದಾನವನನ್ನು! ಪಡೆ ಅನಂತ ಕೀರ್ತಿಯನ್ನು' ಎಂದು ಪ್ರಾರ್ಥಿಸಿದನು.

ಬೃಹದಶ್ವನು ಉದಂಕನಿಗೆ ನಮಿಸಿ, ವಿನಯದಿಂದ 'ಮುನಿಚಂದ್ರ! ಅಸ್ತ್ರ ಸನ್ಯಾಸವನ್ನು ಮಾಡಿ ತಪೋಭೂಮಿಗೆಂದು ತೆರಳಿರುವ ನನ್ನಿಂದ ಈ ಕೆಲಸವಾಗ ಲಾರದು. ನನ್ನ ಸುತ ಕುವಲಾಶ್ವನು ಮಹಾಬಲನು. ಸುಜನ ಕ್ಷೇಮಂಕರನು, ಮುನಿಜನಕಿಂಕರನು ಆದ ಕುವಲಾಶ್ವನನ್ನು ಬೇಡು! ತನ್ನ ಸುತರಿಂದ ಕೂಡಿ ಬರುವ ಕುವಲಾಶ್ವನಿಗೆ ಧುಂಧು ಸಂಹಾರವು ದುಷ್ಕರವಲ್ಲ' ಎಂದು ನುಡಿದು ವನಕ್ಕೆ ಹೊರಟುಹೋದನು. ಉದಂಕನು ಕುವಲಾಶ್ವನನ್ನು ಕಂಡು ಇಂತೆಂದನು—

'ರಾಜನ್! ಹಿಂದೆ ಮಹಾಪ್ರಳಯದಲ್ಲಿ ಜಗವೆಲ್ಲವು ಏಕಾರ್ಣವವಾಗಿರಲು, ಶ್ರೀಹರಿಯು ಯೋಗನಿದ್ರಾಮುದ್ರಿತ ನಯನನಾಗಿ ಭಾಸುರ ಶೇಷ ಪರ್ಯಂಕದಲ್ಲಿ

ಲಕ್ಷ್ಮೀಲಾಲಿತಪಾದಾರವಿಂದನಾಗಿದ್ದನು. ಮಧುಕೈಟಭರೆಂಬ ಆದಿ ದೈತ್ಯರು ಶ್ರೀಹರಿಯ ನಾಭಿಕಮಲದಲ್ಲಿ ವಿರಾಜಿಸುವ ವಿರಿಂಚನನ್ನು ಕಂಡು ದುರ್ಮದಮತ್ತಚಿತ್ತರಾದುದರಿಂದ ಅವನನ್ನು ಪೀಡಿಸಲು ಮೇಲೇರಿ ಬಂದರು. ಬ್ರಹ್ಮನು ಶ್ರೀಹರಿಪ್ರೀತಿಗಾಗಿ ಭಯಪಟ್ಟವನಂತೆ ಮೊರೆಯಿಟ್ಟು ಕೂಗಲು, ಶ್ರೀಶನು ಮೆಲ್ಲನೆ ನಯನಕುಟ್ಮಲಗಳನ್ನರಳಿಸಿ, ದೈತ್ಯರನ್ನು ಕಂಡು ನಗುತ್ತಾ ಇಂತೆಂದನು—'ನಿಮ್ಮ ಬಲ ಪರಾಕ್ರಮಗಳಿಗೆ ಮೆಚ್ಚಿದೆನು. ಬೇಕಾದ ವರವನ್ನು ಬೇಡಿ!' ಇಂತು ನುಡಿದ ಶ್ರೀಕಾಂತನ ಮಾತಿಗೆ ಮರುಳಾಗಿ ಮಹಾದೈತ್ಯರು ಗಹಗಹಿಸಿ ನಕ್ಕು 'ನೀನೇನು ವರವನ್ನು ಕೊಡುವೆ? ನಾವೇ ನಿನಗೆ ವರವನ್ನು ಕೊಡುವೆವು ಕೇಳು' ಎಂದರು. ಶ್ರೀನಾರಾಯಣನು 'ಓಹೋ! ಹಾಗಾದರೆ ನನ್ನಿಂದ ನೀವು ಸಾಯಬೇಕು! ಇದೇ ನಾ ಬೇಡುವ ವರ' ವೆಂದನು. ದೈತ್ಯರು ದಿಗ್ಭ್ರಾಂತರಾದರು. ಪರಸ್ಪರ ಮುಖಗಳನ್ನು ನೋಡಿ ಅವರು 'ಜನಾರ್ದನ! ಹಾಸ್ಯಕ್ಕಾಗಿಯೂ ನಾವು ಸುಳ್ಳಾಡಿದವರಲ್ಲ. ನಮ್ಮ ಬಲ ಪರಾಕ್ರಮ ಧೈರ್ಯ ಸಾಹಸಗಳಿಗೆ ಎಣೆಯಿಲ್ಲ. ಆದರೆ ಒಂದೇ ಮಾತಿನಲ್ಲಿ ನಮ್ಮನ್ನು ಕೊಂದ ನಿನಗೆ ಸಮರಿಲ್ಲ! ವರವನ್ನಿತ್ತಿರುವೆವು. ಆದರೆ ನಮ್ಮನ್ನು ನೀರಿಲ್ಲದಲ್ಲಿ ಕೊಲ್ಲು!' ಎಂದರು. ಆಗ ಪ್ರಳಯಜಲವು ತುಂಬಿತುಳುಕುತ್ತಿತ್ತು. ನೀರಿಲ್ಲದ ಸ್ಥಳವನ್ನರಸಿ, ಸರ್ವಜ್ಞನಾದ ಶ್ರೀ ರಮಣನು ಅವರನ್ನು ತನ್ನ ತೊಡೆಯ ಮೇಲಿಟ್ಟು ನಿಶಿತಮಹೋಗ್ರಧಾರಾ ಭೀಕರವಾದ ಸುದರ್ಶನಚಕ್ರದಿಂದ ಅವರನ್ನು ಸಂಹರಿಸಿದನು.

ಆ ಮಧುಕೈಟಭರ ವಂಶಭವನಾದ ಧುಂಧುವು ಲೋಕನಾಶವನ್ನು ಸಾಧಿಸಲೆಣಿಸಿ, ತೀವ್ರತಪವನ್ನು ಮಾಡುತ್ತಿರುವನು. ಅವನನ್ನು ನೀನು ಸಂಹರಿಸು! ಎಂದು ಪ್ರೇರೇಪಿಸಿದ ಉದಂಕನ ಮಾತಿನಂತೆ ಕುವಲಾಶ್ವನು ತನ್ನ ಸುತರೊಂದಿಗೆ ಸುಮುಹೂರ್ತದಲ್ಲಿ ತೆರಳಿ, ಧುಂಧು ಇದ್ದ ಮರುಭೂಮಿಯನ್ನು ಸೇರಿದನು. ಆಗ ದೈತ್ಯಮರ್ದನನಾದ ಜನಾರ್ದನನು ಒಂದಂಶದಿಂದ ರಾಜನಲ್ಲಿ ನಿಂತು, ಅವನಿಗೆ ಅತುಲ ಭುಜಬಲ ವೀರ್ಯ ಧೈರ್ಯೋತ್ಸಾಹಗಳನ್ನು ಪ್ರಸಾದಿಸಿದನು.

ಚತುರಂಗಬಲಸಮನ್ವಿತನಾದ ಕುವಲಾಶ್ವನು ಧುಂಧುಸಂಹಾರದೀಕ್ಷಾಧುರನಾಗಿ ಹೊರಟನು. ದೇವತೆಗಳು ಅಂಬರದಿ ನಿಂತು, ಸುಮವರ್ಷವನ್ನವನ ಶಿರದಲ್ಲಿ ಸುರಿಸಿ, ಹರಸಿದರು. ಋಷಿಗಳು ಆಶೀರ್ವದಿಸಿದರು. ಮಂದಮಾರುತವು ಅನುಕೂಲವಾಗಿ ಬೀಸಿತು. ಶುಭಶಕುನಗಳನ್ನು ಕಂಡು ಕುವಲಾಶ್ವನು ಉತ್ಸಾಹಭರಿತನಾದನು. ಅವನ ನಂದನರು ಕುದ್ದಾಲಕಗಳನ್ನು ಪಿಡಿದು ಮರಳನ್ನು ತೋಡಿ, ಧುಂಧುದೈತ್ಯನ ವಿವರವನ್ನು ಕೆಡಹಿದರು. ಅವನು ಹೊರಬೀಳಲು ಶೂಲ ಪಟ್ಟಿಶ ಪರಶುಗಳಿಂದ ರಾಜನಂದನರು ತಿವಿದು ಪೀಡಿಸಿದರು. ದೈತ್ಯನು ವ್ಯೈಮುರಿದೆದ್ದು ಬಾಯ್ದೆರೆದು ಹುಂಕರಿಸಿದನು. ಅವನ ಮುಖದಿಂದ ಬಂದ ಅಗ್ನಿಜ್ವಾಲೆಗಳಿಗೆ ಸಿಕ್ಕು, ದೃಢಾಶ್ವ, ಕಪಿಲಾಶ್ವ, ಚಂದ್ರಾಶ್ವರೆಂಬ ಮೂವರನ್ನುಳಿದು ಮಿಕ್ಕೆಲ್ಲ ರಾಜ

ಕುಮಾರರು—ಕಪಿಲಕೋಪಾಗ್ನಿಗೆ ಆಹುತಿಯಾದ ಸಗರಪುತ್ರರಂತೆ—ಸುಟ್ಟು ಬೂದಿಯಾದರು.

ಕುವಲಾಶ್ವನದನ್ನು ಕಂಡು ಕಡುಕೋಪಗೊಂಡು, ಚಂಡನಾರಾಚಗಳಿಂದ ದೈತ್ಯನನ್ನು ಹೊಡೆದು ಪೀಡಿಸಿದನು. ಧುಂಧುವು ಭೀಕರ ಶೂಲವನ್ನೊಗೆಯಲು, ರಾಜನು ಅದನ್ನು ಮುರಿದು ಕೆಡಹಿ, ಧುಂಧುಮುಖದಿಂದೆದ್ದುಬರುವ ವಹ್ನಿಜ್ವಾಲೆಗಳನ್ನು ಯೋಗವಿದ್ಯಾಸಂಭೂತ ಮಹಾಬಲಗಳಿಂದ ಆರಿಸಿದನು. ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ಆ ದೈತ್ಯನನ್ನು ಸಂಹರಿಸಿದನು.

ದೇವತೆಗಳು "ಮಹಾನುಭಾವ! ದುಷ್ಟದೈತ್ಯನನ್ನು ಕೊಂದೆ! ಲೋಕಕ್ಕೆಲ್ಲ ಹಿತವನ್ನು ತಂದೆ! ಧುಂಧುಮಾರನೆಂದು ಖ್ಯಾತನಾಗು. ನಿನ್ನ ಕೀರ್ತಿಯು ಆಚಂದ್ರಾರ್ಕವಾಗಲಿ!" ಎಂದು ಹೊಗಳಿದರು. ದೇವೇಂದ್ರನು ವರವನ್ನು ಬೇಡೆಂದನು. ಆಗ ಕುವಲಾಶ್ವನು "ನನಗೆ ಶ್ರೀಹರಿಚರಣಭಕ್ತಿಯನ್ನು ಕೊಡು. ಬ್ರಾಹ್ಮಣರಲ್ಲಿ ವಿನಯೌದಾರ್ಯಗಳಿರುವಂತೆ ಅನುಗ್ರಹಿಸು. ದನುಜಾಧಮನ ಮುಖವಹ್ನಿಗೆ ಸಿಕ್ಕು ಮೃತರಾದ ಸುತರೆಲ್ಲರು ಮತ್ತೆ ಬದುಕಲಿ!" ಎಂದು ಬೇಡಿದನು. ಸುರರು ಮಹಾರಾಜನಿಗೆ ಅವನು ಬೇಡಿದ ವರಗಳನ್ನಿತ್ತರು. ರಾಜಸುತರು ಪುನರುಜ್ಜೀವಿತರಾಗಿ ಬಂದರು. ಕುವಲಾಶ್ವನು ನಂದನರಿಂದ ಕೂಡಿ ಆನಂದದಿಂದ ತನ್ನ ಮಂದಿರವನ್ನು ಸೇರಿ, ಸಮೃದ್ಧಸಾಮ್ರಾಜ್ಯಸುಖಭಾಜನನಾದನು. ಬ್ರಾಹ್ಮಣಪೂಜನ ನಿರತನು ಆಗಿ ಚಿರಕಾಲ ಬಾಳಿದನು. ಇಂತು ಧುಂಧುಮಾರನ ಪವಿತ್ರ ಚರಿತ್ರವನ್ನು ನಿನಗರುಹಿದೆನು.

## ಸ್ತ್ರೀಜನ ಮಹಿಮೆ—ಕೌಶಿಕ ಕಥೆ

ಧರ್ಮರಾಜ! ಸದ್ವಿಪ್ರರಂತೆ ಸತ್‌ತರುಣಿಯರೂ ಮಾನ್ಯರಾಗಿರುವರು. ಪತಿವ್ರತೆಯರಿಂದ ಲೋಕಗಳು ಅಳಿಯದೆ ನಿಂತಿವೆ. ಸ್ತ್ರೀಧರ್ಮವು ಕಷ್ಟಾಚರಣವೆನಿಸಿದೆ. ಹತ್ತುತಿಂಗಳು ಹೊಟ್ಟೆಯಲ್ಲಿಟ್ಟು ಭರಿಸುವುದು, ಪಾಲಿತ್ತು ಸಲಹುವುದು, ಸ್ನೇಹದಿಂದ ಬೆಳೆಸುವುದು, ಪತಿಸುತರು ಅನುಕೂಲರಾಗದಿದ್ದರೂ ತಾವು ಅನುವ್ರತೆಯರಾಗಿರುವುದು—ಇವು ದುಷ್ಕರ ಕಾರ್ಯಗಳಲ್ಲವೆ? ತಂದೆಗಿಂತಲು ತಾಯಿಯೇ ಶತಗುಣಿತವಾಗಿ ಗೌರವನೀಯಳಾಗಿರುವಳು. ಮಕ್ಕಳನ್ನು ಪಡೆಯಲು ತಪಿಸಿ, ದೇವತೆಗಳನ್ನು ಪೂಜಿಸಿ, ಕಷ್ಟಗಳನ್ನು ಸಹಿಸಿ, ಹೋಮಜಪಗಳನ್ನು ಮಾಡಿ, ನಾನಾ ಕ್ಲೇಶವನ್ನು ಪೊಂದುವಳು. ಮಗನೆಂತಾಗುವನೋ ಕ್ಷೇಮವಂತನಾಗುವುದೆಂತು! ಯಶೋವಿಶಾಲನಾಗಿ ಬಾಳುವುದು ಹೇಗೆ ಎಂದು ಚಿಂತಿಸಿ, ಸುತರನ್ನು ಸನ್ಮಾರ್ಗದಲ್ಲಿ ನಡೆಸುವಳು. ಅವನು ರೋಗಾರ್ತನಾದರೆ ನಿದ್ರಾಹಾರಗಳನ್ನು ಬಿಟ್ಟು, ಸದಾ ಸುತಸೇವಾಪರಾಯಣಳಾಗುವಳು. ಅವನು ಕೀರ್ತಿವಂತನಾದರೆ ಆನಂದಪಡುವಳು. ಮಾತೆಯಾಗಿ, ಪತ್ನಿಯಾಗಿ, ಸಖಿಯಾಗಿ, ಮಂತ್ರಿಯಾಗಿ, ತರುಣಿಯು ಪುರುಷನ

ಶ್ರೇಯಸ್ಸನ್ನು ಸಾಧಿಸುವಳು. ಅತಿಥಿಪೂಜಾ, ದೇವತಾರಾಧನ, ದಾನ ಯಜ್ಞಗಳಲ್ಲಿ ಸಹಧರ್ಮಚಾರಿಣಿಯಾಗುವಳು. ಇಂತಹ ಪತಿವ್ರತೆಯರಿಂದ ಧರ್ಮವು ರಕ್ಷಿತ ವಾಗಿದೆ.

ಹಿಂದೆ ಕೌಶಿಕನೆಂಬ ಬಾಹ್ಮಣನಿದ್ದನು. ಅವನು ವೇದವನ್ನೋದಿ ಪಂಡಿತ ನೆನಿಸಿದ್ದನು. ಒಂದು ದಿನ ವೃಕ್ಷಮೂಲದಲ್ಲಿ ಕೂತು ವೇದಾಧ್ಯಯನವನ್ನು ಮಾಡು ತ್ತಿದ್ದ ಕೌಶಿಕನ ಮೇಲೆ ವೃಕ್ಷದಲ್ಲಿ ಬಂದು ಕೂತ ಕೊಕ್ಕರೆಯ ಪುರೀಷವು ಬಿತ್ತು. ಕೌಶಿಕನು ಕ್ರುದ್ಧನಾಗಿ, ಕಣ್ಣೆತ್ತಿ ನೋಡಲು, ಆ ಪಕ್ಷಿಯು ಕೆಳಗೆ ಬಿದ್ದು ಮೃತ ವಾಯಿತು. ಕೌಶಿಕನದನ್ನು ಕಂಡು, 'ಕ್ರೋಧವಶನಾಗಿ, ಎಂತಹ ಅಕಾರ್ಯವನ್ನು ಮಾಡಿದೆ'ನೆಂದು ಪಶ್ಚಾತ್ತಾಪಪಟ್ಟನು. ಭಿಕ್ಷೆಗೆಂದು ಅವಂತೀಗ್ರಾಮವನ್ನು ಪ್ರವೇ ಶಿಸಿ, ಮುನಿಯು ಒಬ್ಬ ವಿಪ್ರನ ಮನೆಯ ಮುಂದೆ ನಿಂತು 'ಭಿಕ್ಷಾಂ ದೇಹಿ!' ಎಂದು ಬೇಡಿದನು. 'ತಡೆಯಿರಿ' ಎಂದು ಹೇಳಿ ಬ್ರಾಹ್ಮಣಿಯು ಪಾತ್ರೆಗಳನ್ನು ತೊಳೆಯುವುದನ್ನು ನಿಲ್ಲಿಸಿ, ಹೊರಬಂದಳು. ಅದೇ ಸಮಯದಲ್ಲಿ ಅವಳ ಪತಿಯು ಮನೆಗೆ ಬಂದನು. ಸಾಧ್ವಿಯು ಪತಿಯನ್ನೆದುರ್ಗೊಂಡು ಕರೆತಂದಳು. ಪಾದ್ಯವನ್ನು ಅರ್ಘ್ಯವನ್ನು ಕೊಟ್ಟು, ವಿನಯದಿಂದ ವಂದಿಸಿ, ಹಾಲು ಹಣ್ಣುಗಳನ್ನಿತ್ತು, ಸತ್ಕರಿಸಿ, ಪತಿಯ ಶ್ರಮವನ್ನು ಪರಿಹರಿಸಿದಳು. ಉಳಿದೆಲ್ಲ ಜಗವನ್ನು ಮರೆತು, ಮಮತೆ ಯಿಂದ ಪೂಜಿಸಿ, ಗಂಡನು ವಿಶ್ರಾಂತಿಗೈಯಲು ನೋಡಿ, ಹೊರಗೆ ನಿಂತು ಭಿಕ್ಷಾರ್ಥಿ ಯಾದ ವಿಪ್ರನನ್ನು ನೆನೆದಳು.

ಸಂಭ್ರಮದಿಂದ ಕೈಲಿ ಭಿಕ್ಷೆಯನ್ನು ಪಿಡಿದು ಬರುವ ವಿಪ್ರಪತ್ನಿಯನ್ನು ನೋಡಿ ಕೌಶಿಕನು ಕುಪಿತನಾಗಿ—"ಭವತಿ! ತಡೆ, ಎಂದು ಹೇಳಿ ನನ್ನನ್ನಿಲ್ಲಿ ನಿಲ್ಲಿಸಿದೆ. ಬಹಳ ಹೊತ್ತಾಯಿತು." ಎಂದು ನುಡಿಯಲು, ವಿಪ್ರಸತಿಯು "ವಿದ್ವನ್! ಕ್ಷಮಿಸು. ಸ್ತ್ರೀ ಯರಿಗೆ ಗಂಡನೇ ದೇವರಲ್ಲವೆ? ಅವನು ಶ್ರಾಂತನಾಗಿ ಬಂದುದನ್ನು ಕಂಡೆನು. ಅಂತೆಯೇ ಅವನನ್ನು ಪಚರಿಸಿ ಬಂದೆನು" ಎಂದಳು. ಕೌಶಿಕನು ಕಿಡಿಕಿಡಿಯಾದನು. "ಏನು! ಬ್ರಾಹ್ಮಣರಕಿಂತಲು ನಿನಗೆ ನಿನ್ನ ಪತಿ ದೊಡ್ಡವನಾದನೆ? ಗೃಹಸ್ಥ- ಧರ್ಮವು ವಿಪ್ರಪೂಜೆಯನ್ನು ಸರ್ವಪ್ರಥಮವಾಗಿ ವಿಧಿಸುತ್ತದೆ. ಇಂದ್ರನು ವಿಪ್ರರಿಗೆ ನಮಿಸುತ್ತಿರುವನು. ಗರ್ವಿತಳಂತೆ ಕಾಣುವೆ! ಗುರುಹಿರಿಯರ ಸೇವೆಯನ್ನು ಚೆನ್ನಾಗಿ ಅರಿತಿಲ್ಲವೆಂದು ತೋರುತ್ತಿದೆ. ಬ್ರಾಹ್ಮಣರೆಂದರೆ ಅಗ್ನಿಸಮರೆಂದು ತಿಳಿ! ಅವರು ಕೋಪಿಸಿದರೆ ಜಗವನ್ನೇ ಸುಡಬಲ್ಲರು" ಎಂದು ಗದರಿಸಿದ ಕೌಶಿಕನನ್ನು ನೋಡಿ, ಬ್ರಾಹ್ಮಣಿಯು ನಕ್ಕು "ವಿಪ್ರವರ! ನಾನು ಗಿಡದಿಂದ ಬಿದ್ದು ಸಾಯುವ ಕೊಕ್ಕರೆ ಯಲ್ಲ. ಕೋಪಿಸಬೇಡ! ತಪಸ್ಸನ್ನು ಕೆಡಿಸುವ ಕ್ರೋಧವು ಒಳಿತಲ್ಲ. ನಿನ್ನ ಕೋಪದಿಂದ ನನಗೆ ಹಾನಿಯಿಲ್ಲ" ಎಂದಳು. ದಿಗ್ಭ್ರಾಂತನಾಗಿ ನಿಂತ ಕೌಶಿಕನನ್ನು ಸಮಾಧಾನಪಡಿಸುತ್ತಾ "ವಿಪ್ರರೆಂದರೆ ದೇವತಾಸಮರೆಂದು ನನಗೆ ತಿಳಿಯದಿಲ್ಲ. ಗುರುಹಿರಿಯರನ್ನು ಸೇವಿಸಿ, ಎಲ್ಲ ಧರ್ಮವನ್ನೂ ಅರಿತಿರುವೆನು. ವಿಪ್ರವರರ

*

ಮಹಿಮೆಯನ್ನೂ ತಿಳಿದಿರುವೆನು. ಸಮುದ್ರವನ್ನು ಕುಡಿದನೊಬ್ಬ; ಮತ್ತೋರ್ವನು ಜಗವನ್ನೇ ಪ್ರತಿಸೃಜಿಸಿದನು. ಬ್ರಾಹ್ಮಣರು ಬಹುಪ್ರಭಾವರು. ಅವರ ಕ್ರೋಧ ದಂತೆ ಪ್ರಸಾದವೂ ಫಲಕಾರಿಯಾಗಿದೆ. ಪತಿಶುಶ್ರೂಷಾರತಳಾಗಿ ತಡಮಾಡಿದೆನು. ಕ್ಷಮಿಸು ನನ್ನ ಅತಿಕ್ರಮವನ್ನು! ಭರ್ತನೆಂದರೆ ಶ್ರೀಹರಿಸನ್ನಿಧಾನವೆಂದರಿತು ಸೇವಿಸುವುದೇ ನಾರೀಧರ್ಮವು. ಅಂತಹ ಧರ್ಮಬಲದಿಂದಲೇ ನೀನು ಕೊಕ್ಕರೆಯನ್ನು ಕಣ್ಣಿನ ನೋಟದಿಂದಲೇ ಕೊಂದ ವಿಷಯದ ಅಪರೋಕ್ಷವೆನಗಾಯಿತು. ಕ್ರೋಧಸಮಾನ ಶತ್ರುಗಳಿಲ್ಲ. ಕ್ರೋಧಮೋಹಗಳನ್ನು ಬಿಟ್ಟವನೇ ನಿಜವಾದ ಬ್ರಾಹ್ಮಣನು. ಸತ್ಯವಚನನು, ಗುರುಸೇವಾರತನು, ಜಿತೇಂದ್ರಿಯನು, ಕ್ಷಮಾ-ಶೀಲನು, ವೇದವೇತ್ತನು, ಯಜನ ಯಾಜನ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹಗಳೆಂಬ ಷಟ್ಕರ್ಮನಿರತನು ಆದವನೇ ವಿಪ್ರಸತ್ತಮನು. ಧರ್ಮಸೂಕ್ಷ್ಮವನ್ನು ವೇದಾದಿಸಚ್ಛಾಸ್ತ್ರವನ್ನು ಚೆನ್ನಾಗಿ ವಿಚಾರಿಸಿ ನೋಡಿ, ತಿಳಿಯಬಹುದಾಗಿದೆ. ಅದನ್ನು ಬ್ರಹ್ಮದೇವನು ಶ್ರೀಶಾನುಗ್ರಹದಿಂದ ಚೆನ್ನಾಗಿ ತಿಳಿದಿರುವನು. ಇತರರು ಧರ್ಮಸ್ವರೂಪವನ್ನು ಸಾಕಲ್ಯೇನ ತಿಳಿಯಲಾರರು. ಧರ್ಮವನ್ನು ತಿಳಿಯಬೇಕೆಂದಿದ್ದರೆ ಮಿಥಿಲಾನಗರದ ಧರ್ಮವ್ಯಾಧನನ್ನು ನೋಡಿ ತಿಳಿ! ಮಾತಾಪಿತೃಪೂಜಾರತನು, ಸತ್ಯವಚನನು ಆದ ಧರ್ಮವ್ಯಾಧನು ನಿನಗೆ ಸರಿಯಾದ ಧರ್ಮವನ್ನು ತಿಳಿಸಿ ಕೊಡುವನು. ಹೋಗು, ನಿನಗೆ ಮಂಗಳವಾಗಲಿ!" ಎಂದಳು. ಕೌಶಿಕನು ಅವಳಿಗೆ ನಮಿಸಿ, "ತಾಯೆ ನಿನ್ನ ವಚನಗಂಗೆಯಿಂದ ಪಾವಿತನಾದೆನು. ನನ್ನ ಕ್ರೋಧವೆಲ್ಲವೂ ನಾಶವಾಯಿತು. ಶ್ರೇಯಸ್ಸಾಗಲಿ! ನನ್ನ ಶ್ರೇಯಸ್ಸಾಧನಮಾರ್ಗವನ್ನು ತಿಳಿಸಿದೆ! ಹೋಗಿ ಬರುವೆನು" ಎಂದು ಅಲ್ಲಿಂದ ತೆರಳಿ, ಮಿಥಿಲಾನಗರವನ್ನು ಮುಟ್ಟಿದನು.

ಜನಕರಾಜನಿಂದ ಸುರಕ್ಷಿತವಾದ ಮಿಥಿಲೆಯನ್ನು ಪ್ರವೇಶಿಸಿದ ಕೌಶಿಕನ ಮನಸ್ಸು ಪ್ರಸನ್ನವಾಯಿತು. ಅಲ್ಲಿರುವ ಜನರು ತೃಪ್ತರಾಗಿದ್ದರು. ಸ್ವಧರ್ಮಾಸಕ್ತರಾಗಿದ್ದರು. ಧರ್ಮವ್ಯಾಧನನ್ನು ವಿಚಾರಿಸುತ್ತಾ ನಡೆದು, ಕಟುಕರ ಅಂಗಡಿಯ ಸಾಲಿನಲ್ಲಿ ತನ್ನ ವಿಪಣಿಯಲ್ಲಿ ಮೃಗ ಮಾಹಿಷ ಮೇಷಾದಿ ಮಾಂಸವನ್ನು ಮಾರುತ್ತಿದ್ದ ಧರ್ಮವ್ಯಾಧನನ್ನು ತಿಳಿದನು. ದೂರದಲ್ಲಿ ನಿಂತು, ತನಗಾಗಿ ಕಾಯುತ್ತಿದ್ದ ವಿಪ್ರನನ್ನು ಧರ್ಮವ್ಯಾಧನೂ ನೋಡಿದನು. ತತ್ಕ್ಷಣವೇ ಅವನು ಕೈಕಾಲು ತೊಳೆದುಕೊಂಡು, ಕೌಶಿಕನಿದ್ದಲ್ಲಿಗೆ ಬಂದನು. ಬಂದವನೇ ವಿಪ್ರನಿಗೆ ವಂದಿಸಿ, "ಸ್ವಾಗತವು ನಿನಗೆ! ನಾನೇ ಧರ್ಮವ್ಯಾಧನು. ನನ್ನಿಂದ ನಿನಗೇನಾಗ ಬೇಕು ಹೇಳು? ಅವಂತೀ ನಗರದ ಪತಿವ್ರತೆ ನಿನ್ನನ್ನು ನನ್ನಲ್ಲಿಗೆ ಕಳಿಸಿದಳಲ್ಲವೆ? ನೀನು ಧರ್ಮರಹಸ್ಯಗಳನ್ನು ತಿಳಿಯಬಯಸಿ ಬಂದಿರುವೆ. ನನಗೆ ಗೊತ್ತು" ಎಂದನು. ಆ ಮಾತಿಗೆ ಬೆರಗಾದ ಕೌಶಿಕನು ಇದು ಎರಡನೆಯ ಆಶ್ಚರ್ಯವು! ಇವನು ಕೂಡ ಅಪರೋಕ್ಷವನ್ನರಿತಿರುವನಲ್ಲ! ಎಂದು ಚಿಂತಿಸುವಾಗ, ವ್ಯಾಧನು ಬ್ರಾಹ್ಮಣನನ್ನು

ತನ್ನ ಮನೆಗೆ ಕರೆದುಕೊಂಡುಹೋದನು. ಅಲ್ಲಿ ಸುಖಾಸೀನನಾದ ವಿಪ್ರನನ್ನು ಫಲ ಪಾದ್ಯ ಮಧುರವಚನಗಳಿಂದ ಸತ್ಕರಿಸಿದನು.

ಕೌಶಿಕನು "ವ್ಯಾಧ! ನಿನ್ನ ಯೋಗ್ಯತೆಗೆ ಸರಿಯಲ್ಲದ ಕೆಲಸವನ್ನೇಕೆ ಮಾಡುತ್ತಿರುವೆ? ಘೋರಕರ್ಮರತನಾಗಿರುವ ನಿನ್ನಂತಹ ಧರ್ಮಪರನನ್ನು ನೋಡಿ ಅನುತಾಪವಾಗಿದೆ" ಎಂದು ಕೇಳಿದನು.

ವ್ಯಾಧನು "ಸ್ವಾಮೀ! ನಾನು ಮಾಡುತ್ತಿರುವುದು ಕುಲೋಚಿತವಾದ ಕೆಲಸ. ನನ್ನ ಪಿತೃಪಿತಾಮಹರೂ ಇದನ್ನೇ ಮಾಡಿದರು. ಸ್ವಧರ್ಮವನ್ನು ಬಿಡದೆ ಮಾಡುವ ನನ್ನನ್ನು ನೋಡಿ, ಅಸಹ್ಯಪಡಬೇಡ! ವಿಧಾತೃವಿಹಿತವಾದ ಸ್ವಕುಲವೃತ್ತಿಯು ಪಾಪಕರವಲ್ಲ. ಗುರುಶುಶ್ರೂಷೆಯನ್ನು ಬಿಡದೆ ಮಾಡುವೆನು. ಸತ್ಯವನ್ನೇ ನುಡಿವೆನು. ಪರರ ಗುಣವನ್ನು ನೋಡಿ ಅಸೂಯಾಪರನಾಗಿ ದೋಷಾರೋಪ ಮಾಡುವುದಿಲ್ಲ. ಜೀವನಿತ್ತುದರಲ್ಲಿ ದಾನವನ್ನೂ ಮಾಡುತ್ತಿರುವೆನು. ದೇವಾತಿಥಿಭೃತ್ಯರಿಗಿತ್ತು ಮಿಕ್ಕುದನ್ನು ಭುಜಿಸುವೆನು. ಯಾರ ಸ್ವವೃತ್ತಿಯನ್ನೂ ನೋಡಿ ನಿಂದಿಸುವವನಲ್ಲ. ಪೂರ್ವಕರ್ಮಾನುಸಾರವಾಗಿ ಜನ್ಮವು ಬರುವುದು. ಜನನವಾದ ಕುಲದ ವೃತ್ತಿಯು ದೋಷಸಹಿತವಾದರೂ ವಿಹಿತವಾಗಿರುವುದರಿಂದ ಅತ್ಯಾಜ್ಯವೆನಿಸಿದೆ. ಕೃಷಿ ಗೋರಕ್ಷಾ ವಾಣಿಜ್ಯ ವೃತ್ತಿಗಳಿಂದ ಜೀವನ ನಡೆಯುವುದು. ದಂಡನೀತಿ ವೇದವಿದ್ಯೆಗಳಿಂದ ಲೋಕವು ರಕ್ಷಿತವಾಗುವುದು. ವಿವಿಧ ಕುಶಲಕರ್ಮವನ್ನು ಮಾಡಿ ಶೂದ್ರನು, ಗೋರಕ್ಷಾ ವಾಣಿಜ್ಯರತನಾಗಿ ವೈಶ್ಯನು, ಧರ್ಮರಕ್ಷಕನಾಗಿ ಕ್ಷತ್ರಿಯನು, ವೇದವಿದ್ಯಾ ತಪೋಮಂತ್ರಗಳಿಂದ ಬ್ರಾಹ್ಮಣನು, ಶ್ರೀಹರಿಪ್ರೀತಿಯನ್ನು ಗಳಿಸಿ, ಮುಕ್ತರಾಗುವರು. ನಮ್ಮ ಮಿಥಿಲೆಯಲ್ಲಿ ಧರ್ಮಿಷ್ಠನಾದ ಜನಕರಾಜನು ಆಳುತ್ತಿರುವನು. ಅವನು ದುಷ್ಕರ್ಮರತನಾದ ಮಗನನ್ನೂ ಶಿಕ್ಷಿಸುವನು. ಸರ್ವವರ್ಣದವರು ಸ್ವಕರ್ಮನಿರತರಾಗಿರುವಂತೆ ಶಾಸಿಸುವ ಜನಕನ ರಾಜ್ಯದಲ್ಲಿ ಪ್ರಾಯಃ ದುರಾತ್ಮರಿಲ್ಲ. ನಾನೂ ಸ್ವಕುಲಾಚಾರರತನಾಗಿರುವೆನು. ಪರರು ಕೊಂದು ತಂದ ಪಶುಗಳ ಮಾಂಸವನ್ನು ವಿಕ್ರಯಿಸಿ ಜೀವಿಸುವೆನು. ನಾನು ಸ್ವಯಂ ಪಶುಹಿಂಸೆಯನ್ನು ಮಾಡುವುದಿಲ್ಲ. ಮಾಂಸವನ್ನು ತಿನ್ನುವುದೂ ಇಲ್ಲ. ನನ್ನನ್ನು ಧರ್ಮಬಾಹಿರನೆಂದು ತಿಳಿಯಬೇಡ.

"ರಾಜರು ಸ್ವೈರವಿಹಾರರಾಗುವುದರಿಂದ ಧರ್ಮವು ಕೆಟ್ಟು, ಅಧರ್ಮವು ಹೆಚ್ಚಾಗುವುದು. ಪ್ರಜರೂ ಸಾಂಕರ್ಯದಿಂದ ಧರ್ಮಭ್ರಷ್ಟರಾಗುವರು. ಪ್ರಜರನ್ನು ಸ್ವಧರ್ಮದಲ್ಲಿಟ್ಟು ನಡೆಸುವ ರಾಜನಿಂದ ಲೋಕಕ್ಷೇಮವಾಗುವುದು. ಪ್ರಜರು ಧರ್ಮಿಷ್ಠರಾಗುವರು. ಸುಳ್ಳನ್ನು ತ್ಯಜಿಸಿ, ಔದಾರ್ಯವಂತರಾಗಿ, ಸುಖದುಃಖಗಳಲ್ಲಿ ಉದ್ರೇಕೋದ್ವೇಗಗಳನ್ನು ಹೊಂದದೆ, ಅಯಾಚಿತರಾಗಿ, ಸುಜನಪ್ರಿಯವನ್ನು ಸಾಧಿಸಿ, ಕಾಮಭಯದ್ವೇಷಾಸೂಯೆಗಳಿಂದ ಧರ್ಮವನ್ನು ಬಿಡದೆ, ಪಾಪದೂರರಾಗಿ, ಜನರು ಸುಖವಾಗಿರಬೇಕಾದರೆ, ಶಾಸಕನಾದ ರಾಜನಿಂದಲೇ ಎಂದು ತಿಳಿ!

"ಪರನಿಂದೆಯನ್ನು ಮಾಡದೆ, ತನ್ನನ್ನು ತಾನು ಹೊಗಳಿಕೊಳ್ಳದೆ, ಮಾಡಿದ ಪಾಪದಿಂದ ಪಶ್ಚಾತ್ತಾಪವನ್ನು ಹೊಂದಿ, ಅದನ್ನು ಮತ್ತೆ ಮಾಡದೆ, ಯಥಾರ್ಹವಾಗಿ ಪರರನ್ನು ಕಂಡು ನಡೆಯುವವನು ಕೀರ್ತಿವಂತನಾಗಿ, ಜ್ಞಾನವನ್ನೂ ಪಡೆಯುವನು. ಕಮ್ಮಾರತಿದಿಯಂತೆ ಆತ್ಮಪ್ರಶಂಸೆಯಿಂದ ಉಬ್ಬಿದ ಮನುಷ್ಯನು ಪರೋಪತಾಪಕಾರಣನಾಗುವನು. ಯಶವು ಆತ್ಮಪ್ರಶಂಸೆಯಿಂದ ಬರುವುದಲ್ಲ. ಸಂಪದ್ರಹಿತನಾದರೂ ಕೃತವಿದ್ಯನು ಪ್ರಕಾಶಿಸುವನು.

"ಪ್ರಮಾದದಿಂದ ಪಾಪವನ್ನು ಮಾಡಿದವನು 'ಅಯ್ಯೋ! ಹಾಳಾದೆನಲ್ಲ!' ಎಂದು ಪರಿತಪಿಸಬೇಕು. ಅವನ ಪಶ್ಚಾತ್ತಾಪವು ನೈಜವಾಗಿದ್ದರೆ ತತ್ವದೇವತೆಗಳು ಮತ್ತೆ ಅವನಿಂದ ಪಾಪವಾಗದಂತೆ ಕಾಪಾಡುವರು. ಪಾಪಕಾರಣವೆಂದರೆ ಲೋಭವೇ. ಲೋಭಕ್ಕೆ ಅವಿವೇಕವು ಜತೆಗೂಡಿದರೆ, ಕಿಚ್ಚಿಗೆ ಗಾಳಿ ಬಡಿದಂತೆ, ಪಾಪಾಗ್ನಿಯು ಪ್ರಜ್ವಲಿಸುವುದು. ಪಾಪಾಗ್ನಿಯನ್ನು ಜ್ಞಾನಜಲದಿಂದ ಆರಿಸಿಬಿಡಬೇಕು.

"ಶಿಷ್ಟಾಚಾರವನ್ನು ನಿರೂಪಿಸುವೆನು ಕೇಳು! ಯಜ್ಞ, ದಾನ, ತಪಸ್ಸು, ವೇದಾಧ್ಯಯನ, ಸತ್ಯವಚನ ಇವು ಐದು ಶಾಸ್ತ್ರಸಿದ್ಧವಾದ ಶಿಷ್ಟಾಚಾರಗಳು. ಕಾಮಕ್ರೋಧಗಳಿಗೆ ಕಡಿವಾಣವಿಟ್ಟು, ದಂಭಲೋಭಕಾಪಟ್ಯಗಳನ್ನು ಮಲದಂತೆ ಪರಿವರ್ಜಿಸಿ, ಧರ್ಮವನ್ನು ಶ್ರೀಹರಿಪ್ರೀತಿಗಾಗಿ ಮಾಡಿ, ಸಂತುಷ್ಟರಾಗಿರುವವರೇ ಶಿಷ್ಟರು. ಗುರುಶುಶ್ರೂಷೆ, ಜ್ಞಾನಪಿಪಾಸೆ, ಸಂತುಷ್ಟಿ, ಸದಾಚಾರಗಳು ಶಿಷ್ಟಲಕ್ಷಣ. ಶಿಷ್ಟಾಚಾರದಿಂದ ಬರುವ ಆನಂದವು ಧನ ಮಾನಗಳಿಂದ ಬರಲಾರದು. ವೇದಗಳ ಮುಖ್ಯತಾತ್ಪರ್ಯವು ಪರಬ್ರಹ್ಮಸ್ವರೂಪವು. ಬ್ರಹ್ಮನನ್ನು ತಿಳಿಯದೆ ಸುಮ್ಮನೆ ವೇದವನ್ನು ಪಠಿಸುವುದು ವ್ಯರ್ಥವೇ ಸರಿ! ಇಂದ್ರಿಯನಿಗ್ರಹವಿಲ್ಲದಿರೆ ಬ್ರಹ್ಮಜ್ಞಾನವಾಗಲಾರದು. ಫಲಸಂಗ ತ್ಯಾಗವಿಲ್ಲದಿರೆ ಇಂದ್ರಿಯನಿಗ್ರಹವಾಗದು. ಅಧರ್ಮದಿಂದ ಬುದ್ಧಿರಹಿತರಾಗಿ ನಡೆಯುವ ಕುಜನರು ತಾವು ಕೆಡುವುದಲ್ಲದೆ, ಅನುಚರರನ್ನೂ ನಾಶಪಡಿಸುವರು. ವೇದವನ್ನು ತಿಳಿದು, ತ್ಯಾಗವಂತರೂ ಸತ್ಯಧರ್ಮಪರಾಯಣರೂ ಆದ ಸುಜನರಿಂದ ಸಕಲ ಲೋಕಹಿತವಾಗುವುದು.

"ಕಾಮಕ್ರೋಧಲೋಭಗಳೆಂಬ ಮಕರಗಳಿಂದ ಭಯಂಕರವಾಗಿ, ಪಂಚೇಂದ್ರಿಯ-ವಿಷಯಗಳೆಂಬ ವಿಷಜಲದಿಂದ ಉಕ್ಕಿ ಹರಿವ ತುಚ್ಛಸಂಸಾರದ ಹೊಳೆಯನ್ನು ಧೈರ್ಯ ಧರ್ಮನಿಷ್ಠೆಗಳೆಂಬ ಹುಟ್ಟುಗಳಿಂದ ಮುಂದೆ ಸಾಗುವ ವೈರಾಗ್ಯ ನೌಕೆಯನ್ನಾಶ್ರಯಿಸಿ, ಗುರು ಕರ್ಣಧಾರನ ಸಹಾಯದಿಂದ, ವಾತಾಗಮವನ್ನನುಸರಿಸಿ, ಶ್ರೀಹರಿಪಾದಪಾರವನ್ನು ಸೇರಬೇಕು. ಆಸ್ತಿಕರು, ಅಹಂಕಾರ ಅಸೂಯಾ ಕ್ರೋಧ-ಲೋಭ ವರ್ಜಿತರು, ಬ್ರಾಹ್ಮಣ ಪೂಜಕರು, ಶಿಷ್ಟಾಚಾರ ಸಂಪನ್ನರು ಆದವರಿಗೆ ಪುಣ್ಯಲೋಕಗಳು ಮೀಸಲಾಗಿವೆ. ದೀನಜನ ದಯಾಪರರು, ಸರ್ವಭೂತ ಹಿಂಸಾದೂರರು ದಾನನಿಷ್ಠರು, ವೇದವಿದ್ಯಾಸಂಪನ್ನರು ಆದ ಸುಜನರಿಗೆ ಸ್ವರ್ಗದ್ವಾರವು ಮುಕ್ತವಾಗಿದೆ.. . . .

"ಕೌಶಿಕ ! ನನ್ನ ಕರ್ಮವು ಘೋರವೆಂದೆ, ಹಿಂಸಾಮಯವೆಂದೆ. ನಿಜ, ಆದರೆ ವಿಧಿಯು ಬಲೀಯವಾಗಿದೆ. ಪುರಾಕೃತ ಪಾಪಪುಣ್ಯಗಳಿಂದ ವಿವಿಧ ಯೋನಿಗಳಲ್ಲಿ ಹುಟ್ಟುವ ಜೀವನು ಸ್ವತಂತ್ರನಲ್ಲ. ಆದರೆ ಪುಣ್ಯಪಾಪಗಳನ್ನು ತಿಳಿದು ಪಾಪ ಬಿಟ್ಟು, ಸ್ವಧರ್ಮರತನಾದವನು ಯಾವ ಜಾತಿಯವನಾದರೂ ಸದ್ಗತಿಯನ್ನು ಪಡೆಯಲರ್ಹನಾಗುವನು. ನಾನು ಮಾಂಸವನ್ನು ಮಾರುವುದು ನಿಜ. ಯಾವ ಪಶು ಮಾಂಸದಿಂದ, ದೇವತಾ ಅತಿಥಿ ಪರಿವಾರವು ಪೂಜಿತವಾಗಿ ತೃಪ್ತವಾಗುವುದೋ, ಆ ಪಶುಗಳಿಗೂ ಪುಣ್ಯವಿದೆ. ಪಶುಗಳು, ತೃಣ, ವೀರುಧ, ಧಾನ್ಯ, ಮೃಗ, ಪಕ್ಷಿಗಳು— ಇವು ಜೀವರಿಗೆ ಅನ್ನವೆನಿಸಿ, ಭಕ್ಷಣೀಯವಾಗಿವೆ. ಶಿಬಿರಾಜನು ತನ್ನ ಮಾಂಸವನ್ನು ಗಿಡಗನಿಗೆ ಕೊಡಲಿಲ್ಲವೆ? ರಂತಿದೇವನ ಪಾಕಶಾಲೆಯಲ್ಲಿ ಸಾವಿರಾರು ಪಶುಗಳನ್ನು ಸಂಹರಿಸಿ, ಮಾಂಸವನ್ನು ಕ್ಷಾಮಪೀಡಿತರಾಗಿ ಧಾನ್ಯವನ್ನು ಕಾಣದ ಜನರಿಗೆ ಕೊಡುತ್ತಿದ್ದರಂತೆ! ಯಜ್ಞಗಳಲ್ಲಿ ಪಶುವಿಶಸನವು ವಿಹಿತವಾಗಿ ಪ್ರಸಿದ್ಧವಾಗಿದೆ. ಮಾಂಸವನ್ನು ದೇವನಿಗರ್ಪಿಸಿ ಭುಂಜಿಸಿದವನು ಮಾಂಸಾಹಾರಿಯಲ್ಲ. ಆರ್ತವ ಸಮಯದಲ್ಲಿ ಪತ್ನೀಸಂಗತನು ಬ್ರಹ್ಮಚಾರಿ ಎನಿಸುವನು. ಆದರೆ ಇಲ್ಲಿ ಧರ್ಮ ಸೂಕ್ಷ್ಮವಿದೆ. ಸ್ವಧರ್ಮದಿಂದ ಮಾಂಸಾಹಾರಿಯಾಗದವನು ಎಂದಿಗೂ ಮಾಂಸವನ್ನು ತಿನ್ನಲಾಗದು. ಸೌದಾಸನು ವಿಪ್ರಶಾಪದಿಂದ ರಾಕ್ಷಸನಾದಾಗ ನರಮಾಂಸವನ್ನು ಭಕ್ಷಿಸಿದನು. ಹಾಗೆಂದು ಶಾಪಮುಕ್ತನಾಗಿ ಬಂದಾಗ ಭುಜಿಸಿದನೆ? ಇಲ್ಲ. ಕರ್ತೃತ್ವಾಭಿಮಾನ ಮೂಢನಾದ ಕರ್ಮಠನು ಯಜ್ಞಪಶುಮಾಂಸವನ್ನು ಭುಜಿಸಿದನೆಂದು, ಜ್ಞಾನಿಯು ತಿನ್ನಲಾಗುವುದಿಲ್ಲ. ಮಾಂ=ನನ್ನನ್ನು ಭುಜಿಸುವವ, ಸಃ= ಅವನು ನನ್ನಿಂದ ತಿನ್ನಲ್ಪಡುವನೆಂದು ಮಾಂಸಶಬ್ದಾರ್ಥವಾಗಿದೆ. ಇದನ್ನರಿತು ಜ್ಞಾನಾರ್ಜನತತ್ಪರನು ಮಾಂಸವನ್ನು ಉಣ್ಣಬಾರದು. ಅಂತೆಯೇ ವ್ಯಾಧನಾದರೂ ನಾನು ಮಾಂಸವನ್ನು ಬಿಟ್ಟಿರುವೆನು. ಕುಲವೃತ್ತಿಯಾದುದರಿಂದ ಅದನ್ನು ಮಾರುವೆನು. ಘೋರಕರ್ಮದ ಪಾಪವನ್ನು ಸತ್ಯ, ವಿಪ್ರಪೂಜಾ, ಗುರುಶುಶ್ರೂಷೆಗಳಿಂದ ಕಳೆಯಲು ಯತ್ನಿಸುತ್ತಿರುವೆನು.

"ಹಿಂಸೆಯನ್ನು ಸರ್ವಥಾ ಸರ್ವರೂ ಬಿಡಲಾಗದು. ಕೃಷಿಯಷ್ಟು ಸಾಧು ಕರ್ಮವಿನ್ನೊಂದಿಲ್ಲ; ಆದರೆ ಲಾಂಗಲಾಕರ್ಷಣದಿಂದ ಭೂಮಿಯಲ್ಲಿರುವ ಕ್ರಿಮಿ ಕೀಟಕಾದಿ ಜೀವರಾಶಿಯು ನಾಶವಾಗುವುದು. ಜೀವನಾಶವನ್ನು ತಪ್ಪಿಸಲು, ಕೃಷಿಯನ್ನೇ ಬಿಟ್ಟರೆ ಸರ್ವಜೀವ ನಾಶವಾಗುವುದು. ಹಿಂಸೆಯು ಅಪರಿಹಾರ್ಯವಾಗಿದೆ. ವೃಕ್ಷಚ್ಛೇದನ, ಜಲಪಾನ, ಅನ್ನಭಕ್ಷಣಗಳಲ್ಲಿ ಅನೇಕ ಜೀವರು ಸಾಯುತ್ತಿರುವರು. ಜೀವರಿಗೆ ಜೀವರೇ ಅನ್ನವೆನಿಸಿದಾಗ ಹಿಂಸೆಯನ್ನು ಸರ್ವಥಾ ಬಿಟ್ಟಿರುವೆನೆಂಬ ಮಾತು ಸುಳ್ಳು. ಪರಮಾಣುಪ್ರದೇಶದಲ್ಲಿಯೂ ಅನಂತಜೀವರಿರುವಾಗ ಉಸಿರೆಳೆದಾಗಲೂ ಅವರು ಸಾಯುವರೆಂದು ಉಸಿರೇ ಬಿಡದಿರಲಾಗುವುದೆ? ಅಹಿಂಸೆ ಅಹಿಂಸೆಯೆಂದು ಬೌದ್ಧರಂತೆ ಬಾಯಿಗೆ ಬಟ್ಟೆ ಕಟ್ಟಿದರೆ ಕುಡಿಯುವ ನೀರಿನಲ್ಲಿರುವ ಕ್ರಿಮಿ

ನಾಶವಾಗದಿರುವುದೆ? ಆದುದರಿಂದ ಪ್ರಯತ್ನಶೀಲರಾಗಿ, ಹಿಂಸೆಯನ್ನು ಸಾಧ್ಯವಾದಮಟ್ಟಿಗೆ ಬಿಟ್ಟು, ಪರೋಪಕಾರ, ಹಿತವಚನ, ದಾನ, ಯಜ್ಞಗಳಿಂದ ಹಿಂಸಾಜನ್ಯಪಾಪವನ್ನು ಕಳೆಯುವವರೇ ಕುಶಲಮತಿಗಳು. ಸ್ವಕರ್ಮನಿರತರಾದವನು ನಿಷ್ಪಾಪನಾಗಿ ಸದ್ಗತಿಯನ್ನು ಹೊಂದುವನು.

"ಶ್ರೀಹರಿಯ ಅಧೀನವಾಗಿದೆ ಚರಾಚರ ಜಗವೆಲ್ಲವು. ಪೌರುಷವು ಶ್ರೀಹರಿಯ ಇಚ್ಛಾಧೀನವಾಗೇ ಫಲಿಸುವುದು. ಶ್ರೀಹರಿವಶವಲ್ಲವೆಂದರೆ ಸರ್ವದಾ ಪುರುಷ ಪ್ರಯತ್ನವೆಲ್ಲವು ಪೂರ್ಣಫಲಪ್ರದವಾಗಲೇಬೇಕಾದೀತು! ದಕ್ಷರು ದರಿದ್ರರಾಗಿರುವರು. ಅಲಸರು ಭೋಗಪೂರ್ಣರಾಗಿರುವರು. ಮಹಾಪ್ರಯತ್ನದಿಂದ ಬುದ್ಧಿವಂತನಿಗೆ ಸಿಗದ ಸಿರಿಯು ಮಂಕನಿಗೆ ಸುಮ್ಮನಿದ್ದರೂ ಸಿಗುತ್ತದೆ. ದೇವತೆಗಳನ್ನು ಸೇವಿಸಿ, ತಪಸ್ಸು ಮಾಡಿ, ಕಷ್ಟದಿಂದ ತಂದೆತಾಯಿಂದಿರು ಪಡೆದ ಮಗನು ಕುಲ-ಪಾಂಸನೆನಿಸಿ, ಅವರ ಸಿರಿ ಸಂಪತ್ತನ್ನೆಲ್ಲ ಹಾಳುಮಾಡುವನು. ಪಾಪಕರ್ಮಾನುಸಾರವಾಗಿ ಬಂದ ರೋಗವು ಮನುಜರನ್ನು ಬಿಡದೆ ಕಾಡುವುದು. ನಿಪುಣನಾದ ವೈದ್ಯನಿಂದ ರೋಗವು ನಿವೃತ್ತವಾಗುವುದು. ಬಲವಂತರಿಗೆ ಅನ್ನಾಭಾವವಿರಲು ಧನವಂತರಿಗೆ ವಿಪುಲಾನ್ನವಿದ್ದರೂ ರೋಗದಿಂದ ಭೋಗಾಭಾವವಿದೆ. ಇಂತು ಲೋಕವೆಲ್ಲವೂ ಮೋಹ ಶೋಕ ದುಃಖ ಪೂರ್ಣವಾಗಿದೆ. ಜೀವರು ಸ್ವತಂತ್ರರಾದರೆ ದುಃಖಶೋಕ ಪೂರ್ಣರಾಗುವರೆ? ನೋಡು! ಸಾವಿಲ್ಲದೆ, ಮುಪ್ಪಿಲ್ಲದೆ, ದಾರಿದ್ರ್ಯವಿಲ್ಲದೆ, ಸರ್ವಕಾಮಸಮೃದ್ಧರಾಗಿರಲು ಎಲ್ಲರೂ ಬಯಸುವವರೆ! ಆದರೆ ಹಾಗಿರಲು ಸಾಧ್ಯವೆ? ಕರ್ಮಬಂಧವಶನಾಗಿ ಜೀವನು ಶ್ರೀಹರೀಚ್ಛೆಯಂತೆ ಸುಖದುಃಖಾದಿಗಳನ್ನು ಹೊಂದುತ್ತಿರುವನು.

"ಜೀವನಿಗೆ ಸ್ವರೂಪನಾಶವಿಲ್ಲ. ದೇಹವನ್ನೇ ತಾನೆಂದು ತಿಳಿದ ಅಜ್ಞಾನಿಯು ದೇಹನಾಶದಿಂದ ತಾನು ಸತ್ತನೆಂದು ಭ್ರಮಿಸಿ ದುಃಖಪಡುತ್ತಿರುವನು. ಶ್ರೀಶನು ಪುಣ್ಯವಂತರಿಗೆ ಪುಣ್ಯಶರೀರಗಳನ್ನು, ಪಾಪಿಗಳಿಗೆ ದುಃಖಮಯವಾದ ಅಶುಭಶರೀರಗಳನ್ನು, ಮಿಶ್ರರಿಗೆ ಮಿಶ್ರಶರೀರಗಳನ್ನು ಕೊಡುವನು. ಮೊದಲು ತಿರ್ಯಗ್ಯೋನಿಯಲ್ಲಿ ಹುಟ್ಟಿದ ಜೀವನು ಅಪಥ್ಯವನ್ನೇ ಬಯಸುವ ರೋಗಿಯಂತೆ ವೈಸಯಿಕ ಸುಖವನ್ನು ಬೇಡಿ ಕರ್ಮಗಳನ್ನು ಮಾಡುವನು. ಆ ಕರ್ಮಗಳ ಫಲವಾಗಿ ಬಂದ ಕ್ರಿಮಿಕೀಟಾದಿ ಶರೀರಗಳನ್ನು ಹೊಂದಿ, ದುಃಖಪಡುವನು. ಜನನ, ಮರಣ, ಜರಾ, ದುಃಖ ವ್ಯಾಧಿ ದೂಷಿತವಾಗದಿರುವ ಶರೀರವೇ ಇಲ್ಲ. ದುಃಖವನ್ನು ಕಳೆಯಲು ಪುಣ್ಯವನ್ನು ಸಂಪಾದಿಸಬೇಕು. ಪಾಪದಿಂದ ದುಃಖಾಗ್ನಿಯು ಪ್ರಜ್ವಲಿಸುವುದು. ಆದುದರಿಂದ ಪುಣ್ಯ ಕರ್ಮವನ್ನು ಮಾಡಿ, ಕರ್ಮಫಲವನ್ನು ಶ್ರೀಹರಿಗರ್ಪಿಸಿದವನು ಕರ್ಮಬಂಧ ವಿಮುಕ್ತನಾಗಿ ಪುಣ್ಯಲೋಕವನ್ನು ಹೊಂದಿ ಸುಖವಾಗಿರುವನು. ಪುಣ್ಯವಂತನಿಗೆ ಇಹಲೋಕದ ಸುಖವೂ ಸಿಗುವುದು; ಸಿಗದಿದ್ದರೆ ವೈರಾಗ್ಯಭಾಗ್ಯವಾದರೂ ಸಿಗುವುದು. ಪಾಪಿಗಳಿಗೆ ಇಹಲೋಕದಲ್ಲಿ ಕೀರ್ತಿ ಇಲ್ಲ; ಪರದಲ್ಲಿ ಸುಖವಿಲ್ಲ.

"ಮನಸ್ಸು ಪೂರ್ವಸಂಸ್ಕಾರದಿಂದ ಕಾಮಿತಗಳನ್ನು ಬೇಡುವುದು. ಆಗ ಕಾಮವು ಪುಟ್ಟಿ, ಕಾಮಿತವು ಸಿಗದಾದಾಗ ಕ್ರೋಧವಾಗಿ ಪರಿಣಮಿಸಿ, ತನ್ನ ಆಶ್ರಯ ನಾದ ಮನುಜನನ್ನು ಕೋಟರಾಗ್ನಿಯು ಗಿಡವನ್ನಂತೆ ಸುಡುತ್ತಿರುವುದು. ಕಾಮ ಕ್ರೋಧಗಳಿಂದ ರಾಗದ್ವೇಷಗಳು ಪುಟ್ಟುವುವು. ಆಗ ಮನುಜನು ವಿವೇಕದೂರನಾಗಿ, ಪಾಪಕಾರ್ಯಗಳನ್ನು ಮಾಡುವನು. ಆತನ ಧರ್ಮಬುದ್ಧಿಯು ಹಾಳಾಗುವುದು. ಪಾಪದಿಂದ ದುಃಖವನ್ನು ಪಡುತ್ತಾ, ಹಿತರು ನಿವಾರಿಸಿದರೂ ಕೇಳದೆ ಅವನು ನರಕ ಭಾಜನನಾಗುವನು. ಇಂತು ಪಾಪಿಯು ಸತತ ದುಃಖವನ್ನು ಹೊಂದುತ್ತಾ, ಸಂಸಾರ ವಾಹಿನಿಯಲ್ಲಿ ಹುಟ್ಟಿ ಸಾಯುತ್ತಿರುವನು.

"ಕಾಮಕ್ರೋಧಗಳೆಂಬ ಬೀಜದಳಗಳಿಂದ ಮೇಲೆದ್ದುಬರುವ ದುಃಖಮಯ ಸಂಸಾರವೃಕ್ಷವನ್ನು ಅಸಾರ, ಅನಿತ್ಯವೆಂದು ತಿಳಿದು, ಜ್ಞಾನಿಯು ವಿರಕ್ತನಾಗಿ, ಕಾಮಾದಿ ದೋಷಗಳನ್ನು ಹುಲಿಯಂತೆ ದೂರದಲ್ಲಿಟ್ಟು ಸತ್ಯ, ದಾನ, ತಪಶ್ಶೌಚ ಗಳನ್ನು ಯಥಾಶಕ್ತಿ ನಡೆಸಿ, ಮುಕ್ತನಾಗುವನು.

"ಕೌಶಿಕ ! ಜ್ಞಾನಿವರ್ಗದಲ್ಲಿ ಶ್ರೇಷ್ಠರಾದ ಬ್ರಾಹ್ಮಣಜನರಿಂದ ತಿಳಿದು ನಿನಗೆ ನಾನು ಧರ್ಮಸೂಕ್ಷ್ಮವನ್ನು ಹೇಳುತ್ತಿರುವೆನು. ಈ ಜಗವೆಲ್ಲವು ಪಂಚಭೂತ ವಿಕಾರವು. ಪೃಥಿವೀ, ಜಲ, ವಹ್ನಿ, ವಾಯು, ಗಗನಗಳ ಗುಣಗಳು ಶಬ್ದ ಸ್ಪರ್ಶ ರೂಪ ರಸ ಗಂಧಗಳು. ಮನಸ್ಸು ಇಂದ್ರಿಯಗಳ ಸ್ವಾಮಿಯು. ಅದು ಸಂಕಲ್ಪ-ವಿಕಲ್ಪಾತ್ಮಕವಾಗಿದೆ. ನಿಶ್ಚಯಾತ್ಮಕವಾದ ಬುದ್ಧಿ ಮನಸ್ಸಿಗೂ ದೊಡ್ಡದು. ತ್ರಿವಿಧ ವಾದ ಅಹಂಕಾರತತ್ತ್ವವೂ ಬುದ್ಧಿತತ್ತ್ವಾಧೀನವಾಗಿದೆ. ಬುದ್ಧಿಯು ಮಹತ್ತತ್ತ್ವದ ವಶ ದಲ್ಲಿದೆ. ಮಹತ್ತತ್ತ್ವವು ಸತ್ತ್ವರಜಸ್ತಮೋಗುಣಯುತವಾದ ಅವ್ಯಕ್ತತತ್ತ್ವದಿಂದ ಹುಟ್ಟಿ, ತದಧೀನವಾಗಿದೆ. ಪಂಚ ಭೂತಗಳು, ಪಂಚ ತನ್ಮಾತ್ರಗಳು, ಪಂಚ ಪ್ರಾಣ ಗಳು, ಪಂಚೇಂದ್ರಿಯಗಳು, ಮನೋ(ಬುದ್ಧಿ)ಅಹಂಕಾರ, ಮಹತ್ತು, ಅವ್ಯಕ್ತಗಳೆಂಬ ಇಪ್ಪತ್ತುನಾಲ್ಕು ತತ್ತ್ವಗಳು ಪರಮಾತ್ಮಾಧೀನವಾಗಿವೆ.

"ಆಕಾಶದ ಗುಣವು ಶಬ್ದವು; ವಾಯುಗುಣಗಳು ಶಬ್ದಸ್ಪರ್ಶಗಳು; ಅಗ್ನಿಗುಣ ಗಳು ಶಬ್ದಸ್ಪರ್ಶರೂಪಗಳು; ಜಲತತ್ತ್ವಗುಣಗಳು ಶಬ್ದಸ್ಪರ್ಶರೂಪರಸಗಳು; ಪೃಥಿವೀ ಗುಣಗಳು ಶಬ್ದಸ್ಪರ್ಶರೂಪರಸಗಂಧಗಳು. ಇವುಗಳನ್ನು ಸ್ವೀಕರಿಸುವ ಕರ್ಣ, ಚರ್ಮ, ಚಕ್ಷು, ಜಿಹ್ವಾ, ನಾಸಿಕೆಗಳು ಪಂಚೇಂದ್ರಿಯಗಳು. ಎಲ್ಲ ಕಲಾಭಿಮಾನಿ ದೇವತೆಗಳು ಶರೀರವಿಯೋಗವಾದಾಗ ಸೂಕ್ಷ್ಮರೂಪರಾಗಿ ಜೀವನೊಡನಿದ್ದು, ಇನ್ನೊಂದು ದೇಹ ಬಂದಾಗ, ಅದರಲ್ಲಿ ನಿಯಾಮಕರಾಗಿ ತಮ್ಮತಮ್ಮ ಸ್ಥಾನ ಗಳಲ್ಲಿದ್ದು ಜೀವರಿಗೆ ಸುಖದುಃಖಾನುಭವಗಳನ್ನು ಕೊಡುತ್ತಿರುವರು. ತತ್ತ್ವದೇವತೆ ಗಳಿಗೇ ಶರೀರಕೃತ ದುಃಖಾದಿಗಳಿಲ್ಲವೆಂದಮೇಲೆ ಸ್ವತಂತ್ರನಾದ ಶ್ರೀಹರಿಗೆ ಬಿಂಬನಾಗಿ ಜೀವನಲ್ಲಿದ್ದರೂ ವೈಷಯಿಕ ಸುಖ ದುಃಖ ಭೋಗವಿಲ್ಲವೆಂದು ಹೇಳಬೇಕೆ? ಅಂತಹ ಸುಖಪೂರ್ಣನಾದ ಅಂತರ್ಯಾಮಿಯನ್ನು ತಿಳಿದ ಜ್ಞಾನಿಯು ದುಃಖದೂರನಾಗಿ

ಮುಕ್ತನಾಗುವನು. ಸರ್ವತ್ರ ಸರ್ವಭೂತಾಂತರ್ಯಾಮಿಯಾಗಿ ತತ್ತದ್ಯೋಗ್ಯಫಲ ಪ್ರದನಾಗಿರುವ ಶ್ರೀನಾರಾಯಣನನ್ನು ಶಾಸ್ತ್ರದೃಷ್ಟಿಯಿಂದ ವಿಚಾರಿಸಿ ತಿಳಿದವನು ದುಃಖರಹಿತನಾಗಿ, ಸ್ವರೂಪಾನಂದವನ್ನು ಪಡೆಯುವನು. ಜ್ಞಾನವೇ ಮೋಚಕವು. ಅನಾದಿಮಧ್ಯಲಯನು, ಜಗಜ್ಜನ್ಮಾದಿ ಸ್ವತಂತ್ರಕಾರಣನು, ಜೀವಜಡಾತ್ಯಂತ ವಿಲಕ್ಷಣನು, ಸ್ವತಂತ್ರನು, ಜೀವಮುಕ್ತಿದಾತನು, ಸಮಾನಾಧಿಕರಹಿತನು, ಷಡ್ಗುಣ ಐಶ್ವರ್ಯಪರಿಪೂರ್ಣನು ಆದ ಶ್ರೀಹರಿಯನ್ನು ಅಂತೆಯೇ ತಿಳಿಯುವುದು ಜ್ಞಾನವು. ಅನ್ಯಥಾ ತಿಳಿಯುವುದು ಅಜ್ಞಾನವು. ಅಜ್ಞಾನವು ಸಂಸಾರಕಾರಣವು. ಜ್ಞಾನವು ಮೋಕ್ಷಕಾರಣವು. ಅನ್ಯಥಾಜ್ಞಾನವಂತೂ ತಮಃಪ್ರಾಪ್ತಿಕಾರಣವು.

"ಇಂದ್ರಿಯಗಳೇ ಕುದುರೆಗಳು; ಮನಸ್ಸೇ ಕಡಿವಾಣ; ಬುದ್ಧಿಯೇ ಸಾರಥಿ; ಜೀವನೇ ರಥಿಕನು; ಶರೀರವೇ ರಥವು. ಇಂದ್ರಿಯವಶವಾದ ಮನವು ಬುದ್ಧಿಯನ್ನು ಉಲ್ಲಂಘಿಸಿ, ರಥಿಕನನ್ನು ಪಾಪಗರ್ತದಲ್ಲಿ ಕೆಡಹುವುದು. ಮನಸ್ಸು ಬುದ್ಧಿಯ ಕೈಯಲ್ಲಿದ್ದರೆ ಇಂದ್ರಿಯ ಹಯಗಳು ಜೀವರಥಿಕನಂತೆ ನಡೆದು, ಅವನನ್ನು ಸುಖ-ಮಯಗಮ್ಯಸ್ಥಾನವನ್ನು ಸೇರಿಸುವುವು. ಆದುದರಿಂದ ಮನಸ್ಸಿನಿಂದ ಇಂದ್ರಿಯ ಗಳನ್ನು ನಿಗ್ರಹಿಸಿ, ಅಂತರ್ಮುಖನಾಗು. ಭಗವಚ್ಚಿಂತಾಪೂತವಾದ ಮನಸ್ಸು ಜ್ಞಾನನಿಧಿಯಾಗಬಲ್ಲದು. ಜ್ಞಾನದಿಂದ ಶ್ರೀಹರಿಪ್ರಸಾದವೂ, ಅದರಿಂದ ಮುಕ್ತಿ ಸುಖವೂ ಲಭ್ಯವಾಗಿವೆ.

"ತಮಸ್ಸು, ರಜಸ್ಸು, ಸತ್ವಗಳು ಪ್ರಕೃತಿಯ ಗುಣಗಳು. ಅವಿಲ್ಲದ ಪದಾರ್ಥ ಈ ಪ್ರಪಂಚದಲ್ಲಿಲ್ಲ. ತಮಸ್ಸು ಅಜ್ಞಾನ ಅನ್ಯಥಾಜ್ಞಾನರೂಪವು. ಅದರ ಕಾರ್ಯ ಗಳೆಂದರೆ ಕಾಮಕ್ರೋಧಗಳು. ಆಲಸತೆ, ಅವಿದ್ಯೆ, ವಿಷ್ಣುವೈಷ್ಣವ ದ್ರೋಹಗಳು. ಪ್ರವೃತ್ತಕರ್ಮ, ರಾಗದ್ವೇಷಗಳು, ದಂಭಗಳು ರಾಜಸಕಾರ್ಯಗಳು. ಪ್ರಕಾಶ, ಜ್ಞಾನ, ಶಾಂತಿ, ಕ್ಷಮೆ, ಇಂದ್ರಿಯನಿಗ್ರಹ, ಹರಿಭಕ್ತಿಗಳು ಸತ್ವಗುಣಕಾರ್ಯಗಳು. ಸಾತ್ವಿಕನಾದ ಶೂದ್ರನು ಕ್ರಮವಾಗಿ ಬ್ರಹ್ಮಜಾತಿಯಲ್ಲಿ ಸೇರಲರ್ಹನಾಗುವನು.

"ಈಗ ಪ್ರಾಣನ ಮಹಿಮೆಯನ್ನು ಕೇಳು! ಮುಖ್ಯಪ್ರಾಣನು ಸೂತ್ರ-ನಾಮಕನಾಗಿ ಶರೀರವನ್ನು ನಡೆಸುತ್ತಿರುವನು. ಅವನ ದಾಸರಾದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನರು ಶರೀರಚೇಷ್ಟಾಪ್ರದರಾಗಿರುವರು. ಸರ್ವಜೀವರು ಪ್ರಾಣನ ವಶದಲ್ಲಿರುವರು. ಅವನು ಸದಾ ಶ್ರೀವಿಷ್ಣುವಶನಾಗಿರುವನು. ಪ್ರಾಣನು ಮುಖದಲ್ಲಿಯು ಹೃದಯದಲ್ಲಿಯು ಇದ್ದು, ಸರ್ವಶರೀರವ್ಯಾಪಾರವನ್ನು ಮಾಡಿಸು ತ್ತಿರುವನು. ಅಪಾನನು ಗುದದಲ್ಲಿದ್ದು ವಿಸರ್ಜನ ವ್ಯಾಪಾರವನ್ನು ನಡೆಸುವನು. ಪ್ರಯತ್ನ ಬಲ ಉತ್ಕ್ರಮಣಗಳನ್ನು ಉದಾನನೂ, ಸಂಧಿಸಂಧಿಗಳಲ್ಲಿದ್ದು ಶರೀರದಲ್ಲಿ ಸಂಚರಿಸುವ ವ್ಯಾಪಾರವನ್ನು ವ್ಯಾನನೂ, ಪ್ರಾಣಾಪಾನರ ಮಧ್ಯದ ನಾಭಿಯಲ್ಲಿದ್ದು ಸಮವಾಗಿ ಶರೀರವ್ಯಾಪಾರವನ್ನು ಸಮಾನನೂ, ಮಾಡಿಸುತ್ತಿರುವರು. ಪ್ರಾಣಾನಿಲ ನಿಂದ ಉರಿಯುವ ವೈಶ್ವಾನರವಹ್ನಿಯ ಮಧ್ಯಗತನಾದ ಪರಮಾತ್ಮನನ್ನು ಕ್ಷೇತ್ರಜ್ಞ

ನೆಂಬುವರು. ಜೀವನು ತ್ರಿಗುಣಮಯಶರೀರದಲ್ಲಿ ಫುಟ್ಟಿ, ಇಂದ್ರಿಯಾದಿಗಳಿಂದ ವಿಷಯಗಳನ್ನು ಸ್ವೀಕರಿಸಿ, ಅಭಿಮಾನದಿಂದ ದುಃಖಪಡುತ್ತಿದ್ದರೂ ಜೀವಾಂತರ್ಗತನಾದ ಕ್ಷೇತ್ರಜ್ಞನು ಸ್ವತಂತ್ರನಾದುದರಿಂದ ದುಃಖರಹಿತನಾಗಿರುವನು. ಅವನು ಚತುರ್ದಶ ಭುವನಗಳಿಗಧಿಪನಾಗಿ ಸರ್ವತ್ರ ವ್ಯಾಪ್ತನಾಗಿ, ಸಮಾಧಿಕರಹಿತನಾಗಿ, ದುಃಖ ಜನನ ಮರಣಾದಿ ಜೀವಗತದೋಷದೂರನಾಗಿ ವಿರಾಜಿಸುತ್ತಿರುವನು. ಅವನನ್ನು ಜ್ಞಾನಿಗಳು ಸೂಕ್ಷ್ಮಬುದ್ಧಿಯಿಂದ ತಿಳಿದು ಭಜಿಸಿ, ಮುಕ್ತರಾಗುವರು. ಅಜ್ಞಾನಿಗಳು ತಮ್ಮಲ್ಲೇ ಇರುವ ಅಂತರ್ಯಾಮಿಯನ್ನು ತಿಳಿಯಲಾರದೆ ಸಂಸಾರಬದ್ಧರಾಗುವರು.

"ಲಘುಭೋಜನ, ತಪೋದಾನಾದಿ ಪರಿಶುದ್ಧಕರ್ಮಾನುಷ್ಠಾನ, ಶಾಸ್ತ್ರಚಿಂತನಗಳಿಂದ ಶ್ರೀಶನನ್ನು ಮನಸ್ಸಿನಿಂದ ತಿಳಿದು, ಸುಜನರು ವೈಕುಂಠಾದಿ ಶಾಶ್ವತಲೋಕಗಳನ್ನು ಪೊಂದಿ ಸುಖಿಸುವರು. ತಪಸ್ಸನ್ನು ಕ್ರೋಧದಿಂದ ರಕ್ಷಿಸು! ಧರ್ಮವನ್ನು ಮಾತ್ಸರ್ಯದಿಂದ ಕಾಪಾಡು ! ವಿದ್ಯೆಯನ್ನು ಗೌರವಧನಗಳಿಂದ ಉಳಿಸು! ಜೀವನನ್ನು ಪ್ರಮಾದವಶನಾಗದಂತೆ ರಕ್ಷಿಸು ! ಪಾಪಪರಿತ್ಯಾಗವೇ ಪರಮ ಧರ್ಮವು. ಕ್ಷಮೆಯೇ ಉತ್ತಮ ಬಲವು. ಬ್ರಹ್ಮಜ್ಞಾನವೇ ಪರಮ ಜ್ಞಾನವು. ಸತ್ಯವೇ ಉತ್ತಮ ವ್ರತವು. ಭೂತಹಿತವೇ ಪರಮ ಶ್ರೇಯವು. ವಿಷ್ಣುಭಕ್ತಿಯೇ ಪರಮ ಭಾಗ್ಯವು. ಮನುಜ ಜನ್ಮವು ದುರ್ಲಭವಾಗಿದೆ. ಯಾರೊಡನೆಯೂ ವೈರವನ್ನು ಬೆಳೆಸದೆ, ದೇವನಿತ್ತುದರಿಂದ ಸಂತುಷ್ಟನಾಗಿ, ಇಂದ್ರಿಯಗಳನ್ನು ವಶದಲ್ಲಿಟ್ಟು, ವೇದಾದಿಶಾಸ್ತ್ರವಿಚಾರಶೀಲನಾದವನು ಬ್ರಹ್ಮಜ್ಞಾನವನ್ನು ಪಡೆಯುವನು. ದುಷ್ಟಸಂಗದೂರನಾಗಿ, ಸತ್ಸಂಗನಿರತನಾದವನು ಬ್ರಹ್ಮಜ್ಞಾನವನ್ನು ಪಡೆಯುವನು.

"ವಿಪ್ರವರ ! ನಾನು ವಿಪ್ರಮುಖದಿಂದ ಕೇಳಿದುದನ್ನೇ ನಿನಗೆ ಹೇಳಿದೆನು. ನಿನಗೂ ನಿನ್ನ ಅಂತರ್ಯಾಮಿಯಾದ ಮುಖ್ಯಪ್ರಾಣವಲ್ಲಭ ಶ್ರೀಶನಿಗೂ ನಮಸ್ಕರಿಸುವೆನು."

ಇಂತು ಪೇಳಿದ ಧರ್ಮವ್ಯಾಧನನ್ನಭಿನಂದಿಸಿ, ಕೌಶಿಕನು "ವ್ಯಾಧ ! ನೀನು ಸರ್ವಜ್ಞನಿರುವೆ. ನಿನ್ನ ಜೀವನವು ಧನ್ಯವಾಯಿತು. ನಿನ್ನ ಉಪದೇಶದಿಂದ ನಾನೂ ಕೃತಾರ್ಥನಾದೆನು " ಎಂದನು.

ಆಗ ವ್ಯಾಧನು ಬ್ರಾಹ್ಮಣನನ್ನು 'ಏಳು ! ನಮ್ಮ ಪೂಜ್ಯ ಮಾತಾಪಿತೃಗಳನ್ನು ತೋರುವೆನು. ಅವರ ಸೇವೆಯಿಂದಲೇ ನನಗೆ ಜ್ಞಾನಸಿದ್ಧಿಯಾಗಿದೆ. ಪಾತಿವ್ರತ್ಯ ಪ್ರಭಾವದಿಂದ ಜ್ಞಾನಸಿದ್ಧಳಾದ ಅವಂತೀಬ್ರಾಹ್ಮಣಿಯು ನಿನ್ನ ಬಲಾಕಾವಧವನ್ನರಿತಂತೆ ಪಿತೃಸೇವಾಪ್ರಭಾವದಿಂದ ನಾನೂ ಅವಳು ನಿನ್ನನ್ನು ಕಳಿಸಿದ ವೃತ್ತಾಂತವನ್ನರಿತಿರುವೆನು; ಸ್ವಧರ್ಮನಿರತನಿಗೆ ಸರ್ವವೂ ಕರತಲಾಮಲಕವಾಗಿದೆ' ಎಂದು ಅವನಿಂದ ಕೂಡಿ ನಡುಮನೆಗೆ ಬಂದನು. ಮನೋರಮವೂ, ಶುದ್ಧವು ಆದ

ಧರ್ಮವ್ಯಾಧನ ಮಂದಿರವು ಮನಃಪ್ರಸಾದಜನಕವಾಗಿತ್ತು. ಅಲ್ಲಿ ಶಯನ ಆಸನ ಭಾಜನಗಳು ಸುಸ್ಪರ್ಶವಾಗಿ ಯಥಾಸ್ಥಾನದಲ್ಲಿ ಇಡಲ್ಪಟ್ಟಿದ್ದವು. ವರಾಸನದಲ್ಲಿ ಶ್ವೇತಶುಭ್ರವಸನರಾಗಿ ಕೂತಿದ್ದ ಪಿತೃಗಳನ್ನು ಧರ್ಮವ್ಯಾಧನು ಸಮೀಪಿಸಿ, ಪಾದಾಭಿವಂದನವನ್ನು ಮಾಡಿ, ಕೈಜೋಡಿಸಿ ನಿಂತನು. ವೃದ್ಧರಿಬ್ಬರೂ ಅವನನ್ನಾಶೀರ್ವದಿಸಿ, 'ವತ್ಸ! ನಿನ್ನ ಧರ್ಮವು ನಿನಗೆ ರಕ್ಷಕವಾಗಿರಲಿ! ಪ್ರೀತರಾಗಿರುವೆವು. ದೀರ್ಘಾಯುಷ್ಮಂತನಾಗು!' ಎಂದು ನುಡಿದರು. ಧರ್ಮವ್ಯಾಧನು ಹೇಳಲು ಕೌಶಿಕನನ್ನು ತಿಳಿದು, ಅವರು ಅವನಿಗೆ ಸ್ವಾಗತವನ್ನಿತ್ತು ನಮಿಸಿದರು. 'ವಿಪ್ರ! ಶ್ರೀಹರಿಯ ದಯದಿಂದಲು, ವಿಪ್ರಾಶೀರ್ವಾದದಿಂದಲು ನಾವು ಸುಕ್ಷೇಮಿಗಳು, ನಿನಗೆ ಕುಶಲವೆ?' ಎಂದು ಕೇಳಿದ ದಂಪತಿಗಳಿಗೆ, ಧರ್ಮವ್ಯಾಧನು ಉಪಚರಿಸುವ ವಿಧಾನವನ್ನು ಕಂಡು ನಾಚಿದ ವಿಪ್ರನು 'ಕುಶಲ'ವೆಂದು ಸುಮ್ಮನಿದ್ದನು. ಆಗ ಧರ್ಮವ್ಯಾಧನು ವಿಪ್ರನಿಗಿಂತೆಂದನು. "ಕೌಶಿಕ! ಕೇಳು. ನನಗೆ ತಾಯಿತಂದೆಗಳಿಗಿಂತ ಮಿಗಿಲಾದ ದೈವವಿಲ್ಲ. ನೀವು ದೇವಪೂಜೆ ಮಾಡುವಂತೆ, ನಾನು ತಂದೆ ತಾಯಂದಿರ ಸೇವೆಯನ್ನು ಮಾಡುತ್ತಿರುವೆನು. ಮೂವತ್ತುಮೂರು ಕೋಟಿ ದೇವತೆಗಳೂ ಪಿತೃಸೇವೆಯಿಂದ ಪ್ರೀತರಾಗುವರು. ಇವರ ಪರಿಚರ್ಯೆಯಲ್ಲಿ ನನಗೆ ಆಲಸ್ಯವಿಲ್ಲ; ಅಸಹ್ಯವಿಲ್ಲ; ಪ್ರಮಾದವಿಲ್ಲ; ಪ್ರತಿಫಲಾಪೇಕ್ಷೆಯಿಲ್ಲ. ನಿಮಗೆ ವೇದಾಧ್ಯಯನ ಅಗ್ನಿಹೋತ್ರಗಳಂತೆ ನನಗೆ ಇವರ ಸೇವೆ. ನನ್ನ ಭಾರ್ಯಾ, ಪುತ್ರ, ಮಿತ್ರ, ಭೃತ್ಯವರ್ಗವೆಲ್ಲವೂ ಇವರ ಪರಿಜನ. ಇವರಿಗಾಗಿ ನಾನು ಪ್ರಾಣವನ್ನು ಸಂತೋಷದಿಂದ ಕೊಡಬಲ್ಲೆನು. ಇವರ ಸ್ನಾನ, ಪಾನ, ವಸನ, ಅಶನ, ಶಯನಾದಿ ಸುಖಗಳನ್ನು ನಾನೇ ನಿಂತು ನೋಡಿಕೊಳ್ಳುವೆನು. ಇವರಿಗೆ ಅಪ್ರಿಯವಾಗಿ ನಾನೆಂದಿಗೂ ಮಾತನಾಡುವುದಿಲ್ಲ. ಇವರು ಹೇಳಿದುದೇ ಧರ್ಮವು. ಅದೇ ಕರ್ತವ್ಯವು. ತಂದೆ, ತಾಯಿ, ಗುರು, ಅಗ್ನಿ, ಪರಮಾತ್ಮಾ ಎಂಬ ಐವರೂ ಗುರುಗಳೇ, ಪೂಜನೀಯರೆ! ಅಂತಹ ತಂದೆಯ ಶುಶ್ರೂಷೆ, ತಾಯಿಯ ಸೇವೆ ಬಿಟ್ಟು ಬಂದಿರುವ ನಿನಗೆ ತಪಸ್ಸಿದ್ಧಿಯು ಹೇಗಾಗುವುದು? ತಪಸ್ಸಿನ ಫಲವನ್ನು ಕ್ರೋಧದಿಂದ ಕೆಡಿಸಿಕೊಂಡೆ. ಒಂದು ಕೊಕ್ಕರೆಯನ್ನು ಕೊಂದೆ! ತಪೋದಾನ ವ್ರತಾದಿಗಳೆಲ್ಲವೂ ಪಿತೃಸೇವಾವಿಮುಖರಿಗೆ ವ್ಯರ್ಥವಾಗುವುವು. ಅಂಧರಾಗಿ ನೀನೇ ಗತಿ ಎಂದು ನಂಬಿರುವ ನಿನ್ನ ಮಾತಾಪಿತೃಗಳನ್ನು ಸಂತೈಸು! ಮನೆಗೆ ಹೋಗು! ನಿನಗೆ ಶ್ರೇಯಸ್ಸಾಗಲಿ!"

ಆಗ ವ್ಯಾಧನನ್ನು ನೋಡಿ ಕೌಶಿಕನು "ಪ್ರೀತನಾದೆನು. ನಿನ್ನ ಮಾತೆಲ್ಲವೂ ಸತ್ಯ. ನಿನ್ನ ಧರ್ಮೋಪದೇಶದಿಂದ ಪಾವಿತನಾದೆನು. ಅದೃಷ್ಟದಿಂದ ನಿನ್ನಂತಹ ಸಜ್ಜನ ಶಿಖಾಮಣಿಯ ಸಂಗವಾಯಿತು. ಸಾವಿರ ಜನರಲ್ಲಿ ನಿನ್ನಂತಹ ಧರ್ಮವಿದನು ಒಬ್ಬನಾದರೂ ಸಿಗುವನೋ, ಇಲ್ಲವೋ! ನರಕದಲ್ಲಿ ಬೀಳಲಿದ್ದ ನನ್ನನ್ನು ಉದ್ಧರಿಸಿದೆ. ನಿನ್ನ ಮಾತನ್ನು ಪೂರ್ಣವಾಗಿ ನಡೆಸುವೆನು. ಇರಲಿ! ಇಷ್ಟು ಧರ್ಮರಹಸ್ಯ

ವನ್ನರಿತ ನೀನು ಸಾಮಾನ್ಯ ಶೂದ್ರನಲ್ಲ. ನಿನ್ನ ವೃತ್ತಾಂತವನ್ನು ನನಗೆ ತಿಳಿಸು!" ಎಂದು ಕೇಳಿದನು.

ಧರ್ಮವ್ಯಾಧನಿಂತೆಂದನು—"ಬ್ರಾಹ್ಮಣೋತ್ತಮ! ನಿನ್ನ ಆದೇಶವು ಶಿರಸಾ ಮಾನ್ಯವಾದುರಿಂದ ನನ್ನ ಪೂರ್ವಜನ್ಮದ ಕಥೆಯನ್ನು ನಿನಗೆ ಹೇಳುವೆನು. ನಾನು ಹಿಂದೆ ವೇದವೇದಾಂಗ ಕುಶಲನಾದ ವಿಪ್ರನಾಗಿ ಜನಿಸಿದ್ದೆನು. ನನಗೆ ಸ್ನೇಹಿತನಾದ ರಾಜಶ್ರೇಷ್ಠನೋರ್ವನಿದ್ದನು. ಅವನ ಸಹವಾಸದಿಂದ ನಾನೂ ಧನುರ್ವಿದ್ಯಾ ಪಾರಂಗತನಾಗಿದ್ದೆನು. ಒಂದುದಿನ ಅವನು ಬೇಟೆಗಾಗಿ ಹೊರಟನು. ನಾನೂ ಹೋಗಬೇಕೆ? ಹೋದರೆ, ಬೇಟೆ—ಬ್ರಾಹ್ಮಣನಾಗಿದ್ದೂ—ಬೇಟೆ ಆಡಬೇಕೆ? ಆಡಿದರೂ ಮೃಗವಿರಬಹುದೆಂದು ತಿಳಿದು ಭ್ರಮಿಸಿ ಮುನಿವರರನ್ನು ಬಾಣದಿಂದ ಹೊಡೆಯಬೇಕೆ? ಇವೆಲ್ಲವೂ ನನ್ನ ಪ್ರಾರಬ್ಧಕರ್ಮಾನುಸಾರವಾಗಿ ನಡೆದು ಹೋಯಿತು. ಮುನಿವರನು ಕ್ರುದ್ಧನಾಗಿ 'ವಿಪ್ರನಾಗಿ ಪುಟ್ಟಿ, ವ್ಯಾಧಕರ್ಮರತ ನಾದ ನೀನು ವ್ಯಾಧಜನ್ಮವನ್ನೇ ಹೊಂದು' ಎಂದು ಶಾಪವಿತ್ತನು. ನಾನು ಅವನ ಕಾಲಿಗೆ ಬಿದ್ದು, 'ತಿಳಿಯದೆ ಮಾಡಿದ ತಪ್ಪನ್ನು ಕ್ಷಮಿಸೆ'ಂದು ಬೇಡಿದೆನು. ಕರುಣಾಳು ವಾದ ವಿಪ್ರನು 'ನನ್ನ ವಚನವು ಸುಳ್ಳಾಗದು. ವ್ಯಾಧನಾಗಿದ್ದೂ, ವ್ಯಾಧ ಧರ್ಮ ದಿಂದ ನಡೆ! ಧರ್ಮದ ಜ್ಞಾನವು ನಿನಗೆ ಜಾಗೃತವಾಗಿರಲಿ! ತಂದೆ ತಾಯಂದಿರ ಸೇವೆ ಯಿಂದ ನಿನಗೆ ಜ್ಞಾನಸಿದ್ಧಿ ಆಗುವುದು. ನನ್ನ ಅನುಗ್ರಹದಿಂದ ಜಾತಿಸ್ಮರನಾಗು. ಶಾಪ ಕ್ಷಯವಾದಮೇಲೆ ಮತ್ತೆ ದ್ವಿಜನಾಗಿ, ಮುಂದೆ ಮುಕ್ತನಾಗು!' ಎಂದು ವಿಶಾಪವಿತ್ತನು. ಅವನ ಪಕ್ಕದಲ್ಲಿ ನೆಟ್ಟಿದ್ದ ಬಾಣವನ್ನು ಕಿತ್ತೊಗೆದು ಆಶ್ರಮಕ್ಕೆ ಕರೆತಂದು, ಮುನಿವರನಿಗೆ ಔಷಧಾದ್ಯುಪಚಾರಗಳನ್ನು ನಾನು ಮಾಡಿದೆನು.

ಕೌಶಿಕನು ವ್ಯಾಧನನ್ನು ನೋಡಿ, "ವ್ಯಾಧ! ನೋಡಲು ನೀನು ನಿಜವಾಗಿ ಬ್ರಾಹ್ಮಣಸದೃಶನಾಗಿರುವೆ! ಕುಕರ್ಮನಿರತನು, ದಾಂಭಿಕನು, ಆಚಾರವಿದ್ಯಾ ವಿಹೀನನು ಆದ ವಿಪ್ರನಿಗಿಂತಲೂ ಸ್ವಧರ್ಮನಿರತನು, ಸತ್ಯನಿಷ್ಠನು ಆದ ಶೂದ್ರನೇ ಉತ್ತಮನು. ಅನಿಷ್ಟವು ಬೇಡವಾದರೂ ಬರುವುದು. ಇಷ್ಟವು ಬೇಕೆಂದರೂ ಬಾರದು. ಇದು ಸಂಸಾರ ಲಕ್ಷಣವು. ಆದನ್ನರಿತು ಸುಖದುಃಖಗಳನ್ನು ಕ್ಷಣಿಕವೆಂದು ತಿಳಿದು ಮನೋವಿಕಾರರಹಿತನಾಗುವುದೊಳಿತು! ಮಾನಸದುಃಖವನ್ನು ಪ್ರಜ್ಞಾಬಲದಿಂದಲೂ, ಶಾರೀರ ದುಃಖವನ್ನು ಔಷಧಬಲದಿಂದಲೂ ಕಳೆದುಕೊಂಡು, ಶ್ರೀಹರಿಭಕ್ತನಾದವನು ಶಾಶ್ವತ ಸುಖವನ್ನು ಹೊಂದುವನು" ಎಂದು ಅವನನ್ನು ಬೀಳ್ಕೊಂಡನು. ಕೌಶಿಕನು ತನ್ನ ಮನೆಯನ್ನು ಸೇರಿ, ಮಾತಾಪಿತೃಗಳನ್ನು ಚೆನ್ನಾಗಿ ಸೇವಿಸಿದನು. ಅವನು ಕೊನೆಗೆ ಜ್ಞಾನಸಿದ್ಧನಾಗಿ ಸದ್ಗತಿಯನ್ನು ಪೊಂದಿದನು. ಧರ್ಮರಾಜ! ಇಂತು ನಿನಗೆ ಪತಿವ್ರತಾಮಹಿಮೆಯನ್ನೂ, ಮಾತಾಪಿತೃ ಸೇವಾ-ಭಾಗ್ಯವನ್ನೂ ವರ್ಣಿಸಿದೆನು.

ಧರ್ಮವ್ಯಾಧನ ಮಂದಿರವು ಮನಃಪ್ರಸಾದಜನಕವಾಗಿತ್ತು. ಅಲ್ಲಿ ಶಯನ ಆಸನ ಭಾಜನಗಳು ಸುಸ್ಪರ್ಶವಾಗಿ ಯಥಾಸ್ಥಾನದಲ್ಲಿ ಇಡಲ್ಪಟ್ಟಿದ್ದವು. ವರಾಸನದಲ್ಲಿ ಶ್ವೇತಶುಭ್ರವಸನರಾಗಿ ಕೂತಿದ್ದ ಪಿತೃಗಳನ್ನು ಧರ್ಮವ್ಯಾಧನು ಸಮೀಪಿಸಿ, ಪಾದಾಭಿವಂದನವನ್ನು ಮಾಡಿ, ಕೈಜೋಡಿಸಿ ನಿಂತನು. ವೃದ್ಧರಿಬ್ಬರೂ ಅವನನ್ನಾಶೀರ್ವದಿಸಿ, 'ವತ್ಸ! ನಿನ್ನ ಧರ್ಮವು ನಿನಗೆ ರಕ್ಷಕವಾಗಿರಲಿ ! ಪ್ರೀತರಾಗಿರುವೆವು. ದೀರ್ಘಾಯುಷ್ಮಂತನಾಗು!' ಎಂದು ನುಡಿದರು. ಧರ್ಮವ್ಯಾಧನು ಪೇಳಲು ಕೌಶಿಕನನ್ನು ತಿಳಿದು, ಅವರು ಅವನಿಗೆ ಸ್ವಾಗತವನ್ನಿತ್ತು ನಮಿಸಿದರು. 'ವಿಪ್ರ! ಶ್ರೀಹರಿಯ ದಯದಿಂದಲು, ವಿಪ್ರಾಶೀರ್ವಾದದಿಂದಲು ನಾವು ಸುಕ್ಷೇಮಿಗಳು, ನಿನಗೆ ಕುಶಲವೆ?' ಎಂದು ಕೇಳಿದ ದಂಪತಿಗಳಿಗೆ, ಧರ್ಮವ್ಯಾಧನು ಉಪಚರಿಸುವ ವಿಧಾನವನ್ನು ಕಂಡು ನಾಚಿದ ವಿಪ್ರನು 'ಕುಶಲ'ವೆಂದು ಸುಮ್ಮನಿದ್ದನು. ಆಗ ಧರ್ಮವ್ಯಾಧನು ವಿಪ್ರನಿಗಿಂತೆಂದನು. "ಕೌಶಿಕ! ಕೇಳು. ನನಗೆ ತಾಯಿತಂದೆಗಳಿಗಿಂತ ಮಿಗಿಲಾದ ದೈವವಿಲ್ಲ. ನೀವು ದೇವಪೂಜೆ ಮಾಡುವಂತೆ, ನಾನು ತಂದೆ ತಾಯಂದಿರ ಸೇವೆಯನ್ನು ಮಾಡುತ್ತಿರುವೆನು. ಮೂವತ್ತುಮೂರು ಕೋಟಿ ದೇವತೆಗಳೂ ಪಿತೃಸೇವೆಯಿಂದ ಪ್ರೀತರಾಗುವರು. ಇವರ ಪರಿಚರ್ಯೆಯಲ್ಲಿ ನನಗೆ ಆಲಸ್ಯವಿಲ್ಲ; ಅಸೂಯೆಯಿಲ್ಲ; ಪ್ರಮಾದವಿಲ್ಲ; ಪ್ರತಿಫಲಾಪೇಕ್ಷೆಯಿಲ್ಲ. ನಿಮಗೆ ವೇದಾಧ್ಯಯನ ಅಗ್ನಿಹೋತ್ರಗಳಂತೆ ನನಗೆ ಇವರ ಸೇವೆ. ನನ್ನ ಭಾರ್ಯೆ, ಪುತ್ರ, ಮಿತ್ರ, ಭೃತ್ಯವರ್ಗವೆಲ್ಲವೂ ಇವರ ಪರಿಜನ. ಇವರಿಗಾಗಿ ನಾನು ಪ್ರಾಣವನ್ನು ಸಂತೋಷದಿಂದ ಕೊಡಬಲ್ಲೆನು. ಇವರ ಸ್ನಾನ, ಪಾನ, ವಸನ, ಅಶನ, ಶಯನಾದಿ ಸುಖಗಳನ್ನು ನಾನೇ ನಿಂತು ನೋಡಿಕೊಳ್ಳುವೆನು. ಇವರಿಗೆ ಅಪ್ರಿಯವಾಗಿ ನಾನೆಂದಿಗೂ ಮಾತನಾಡುವುದಿಲ್ಲ. ಇವರು ಪೇಳಿದುದೇ ಧರ್ಮವು. ಅದೇ ಕರ್ತವ್ಯವು. ತಂದೆ, ತಾಯಿ, ಗುರು, ಅಗ್ನಿ, ಪರಮಾತ್ಮ ಎಂಬ ಐವರೂ ಗುರುಗಳೇ, ಪೂಜನೀಯರೆ! ಅಂತಹ ತಂದೆಯ ಶುಶ್ರೂಷೆ, ತಾಯಿಯ ಸೇವೆ ಬಿಟ್ಟು ಬಂದಿರುವ ನಿನಗೆ ತಪಸ್ಸಿದ್ಧಿಯು ಹೇಗಾಗುವುದು? ತಪಸ್ಸಿನ ಫಲವನ್ನು ಕ್ರೋಧದಿಂದ ಕೆಡಿಸಿಕೊಂಡೆ. ಒಂದು ಕೊಕ್ಕರೆಯನ್ನು ಕೊಂದೆ ! ತಪೋದಾನ ವ್ರತಾದಿಗಳೆಲ್ಲವೂ ಪಿತೃಸೇವಾವಿಮುಖರಿಗೆ ವ್ಯರ್ಥವಾಗುವುವು. ಅಂಥರಾಗಿ ನೀನೇ ಗತಿ ಎಂದು ನಂಬಿರುವ ನಿನ್ನ ಮಾತಾಪಿತೃಗಳನ್ನು ಸಂತೈಸು ! ಮನೆಗೆ ಹೋಗು ! ನಿನಗೆ ಶ್ರೇಯಸ್ಸಾಗಲಿ !"

ಆಗ ವ್ಯಾಧನನ್ನು ನೋಡಿ ಕೌಶಿಕನು "ಪ್ರೀತನಾದೆನು. ನಿನ್ನ ಮಾತೆಲ್ಲವೂ ಸತ್ಯ. ನಿನ್ನ ಧರ್ಮೋಪದೇಶದಿಂದ ಪಾವಿತನಾದೆನು. ಅದೃಷ್ಟದಿಂದ ನಿನ್ನಂತಹ ಸಜ್ಜನ ಶಿಖಾಮಣಿಯ ಸಂಗವಾಯಿತು. ಸಾವಿರ ಜನರಲ್ಲಿ ನಿನ್ನಂತಹ ಧರ್ಮವಿದನು ಒಬ್ಬನಾದರೂ ಸಿಗುವನೋ, ಇಲ್ಲವೋ ! ನರಕದಲ್ಲಿ ಬೀಳಲಿದ್ದ ನನ್ನನ್ನು ಉದ್ಧರಿಸಿದೆ. ನಿನ್ನ ಮಾತನ್ನು ಪೂರ್ಣವಾಗಿ ನಡೆಸುವೆನು. ಇರಲಿ ! ಇಷ್ಟು ಧರ್ಮರಹಸ್ಯ

ವನ್ನರಿತ ನೀನು ಸಾಮಾನ್ಯ ಶೂದ್ರನಲ್ಲ. ನಿನ್ನ ವೃತ್ತಾಂತವನ್ನು ನನಗೆ ತಿಳಿಸು!" ಎಂದು ಕೇಳಿದನು.

ಧರ್ಮವ್ಯಾಧನಿಂತೆಂದನು—"ಬ್ರಾಹ್ಮಣೋತ್ತಮ! ನಿನ್ನ ಆದೇಶವು ಶಿರಸಾ ಮಾನ್ಯವಾದುರಿಂದ ನನ್ನ ಪೂರ್ವಜನ್ಮದ ಕಥೆಯನ್ನು ನಿನಗೆ ಹೇಳುವೆನು. ನಾನು ಹಿಂದೆ ವೇದವೇದಾಂಗ ಕುಶಲನಾದ ವಿಪ್ರನಾಗಿ ಜನಿಸಿದ್ದೆನು. ನನಗೆ ಸ್ನೇಹಿತನಾದ ರಾಜಶ್ರೇಷ್ಠನೋರ್ವನಿದ್ದನು. ಅವನ ಸಹವಾಸದಿಂದ ನಾನೂ ಧನುರ್ವಿದ್ಯಾ ಪಾರಂಗತನಾಗಿದ್ದೆನು. ಒಂದುದಿನ ಅವನು ಬೇಟೆಗಾಗಿ ಹೊರಟನು. ನಾನೂ ಹೋಗಬೇಕೆ? ಹೋದರೆ, ಬೇಟೆ—ಬ್ರಾಹ್ಮಣನಾಗಿದ್ದೂ—ಬೇಟೆ ಆಡಬೇಕೆ? ಆಡಿದರೂ ಮೃಗವಿರಬಹುದೆಂದು ತಿಳಿದು ಭ್ರಮಿಸಿ ಮುನಿವರನನ್ನು ಬಾಣದಿಂದ ಹೊಡೆಯಬೇಕೆ? ಇವೆಲ್ಲವೂ ನನ್ನ ಪ್ರಾರಬ್ಧಕರ್ಮಾನುಸಾರವಾಗಿ ನಡೆದು ಹೋಯಿತು. ಮುನಿವರನು ಕ್ರುದ್ಧನಾಗಿ 'ವಿಪ್ರನಾಗಿ ಹುಟ್ಟಿ, ವ್ಯಾಧಕರ್ಮರತ ನಾದ ನೀನು ವ್ಯಾಧಜನ್ಮವನ್ನೇ ಹೊಂದು' ಎಂದು ಶಾಪವಿತ್ತನು. ನಾನು ಅವನ ಕಾಲಿಗೆ ಬಿದ್ದು, 'ತಿಳಿಯದೆ ಮಾಡಿದ ತಪ್ಪನ್ನು ಕ್ಷಮಿಸೆ'ಂದು ಬೇಡಿದೆನು. ಕರುಣಾಳು ವಾದ ವಿಪ್ರನು 'ನನ್ನ ವಚನವು ಸುಳ್ಳಾಗದು. ವ್ಯಾಧನಾಗಿದ್ದೂ, ವ್ಯಾಧ ಧರ್ಮ ದಿಂದ ನಡೆ! ಧರ್ಮದ ಜ್ಞಾನವು ನಿನಗೆ ಜಾಗೃತವಾಗಿರಲಿ! ತಂದೆ ತಾಯಂದಿರ ಸೇವೆ ಯಿಂದ ನಿನಗೆ ಜ್ಞಾನಸಿದ್ಧಿ ಆಗುವುದು. ನನ್ನ ಅನುಗ್ರಹದಿಂದ ಜಾತಿಸ್ಮರನಾಗು. ಶಾಪ ಕ್ಷಯವಾದಮೇಲೆ ಮತ್ತೆ ದ್ವಿಜನಾಗಿ, ಮುಂದೆ ಮುಕ್ತನಾಗು!' ಎಂದು ವಿಶಾಪವಿತ್ತನು. ಅವನ ಪಕ್ಕದಲ್ಲಿ ನಟ್ಟಿದ್ದ ಬಾಣವನ್ನು ಕಿತ್ತೊಗೆದು ಆಶ್ರಮಕ್ಕೆ ಕರೆತಂದು, ಮುನಿವರನಿಗೆ ಔಷಧಾದ್ಯುಪಚಾರಗಳನ್ನು ನಾನು ಮಾಡಿದೆನು.

ಕೌಶಿಕನು ವ್ಯಾಧನನ್ನು ನೋಡಿ, "ವ್ಯಾಧ! ನೋಡಲು ನೀನು ನಿಜವಾಗಿ ಬ್ರಾಹ್ಮಣಸದೃಶನಾಗಿರುವೆ! ಕುಕರ್ಮನಿರತನು, ದಾಂಭಿಕನು, ಆಚಾರವಿದ್ಯಾ ವಿಹೀನನು ಆದ ವಿಪ್ರನಿಗಿಂತಲೂ ಸ್ವಧರ್ಮನಿರತನು, ಸತ್ಯನಿಷ್ಠನು ಆದ ಶೂದ್ರನೇ ಉತ್ತಮನು. ಅನಿಷ್ಟವು ಬೇಡವಾದರೂ ಬರುವುದು. ಇಷ್ಟವು ಬೇಕೆಂದರೂ ಬಾರದು. ಇದು ಸಂಸಾರ ಲಕ್ಷಣವು. ಅದನ್ನರಿತು ಸುಖದುಃಖಗಳನ್ನು ಶ್ರೀಶನಿತ್ತ ವೆಂದು ತಿಳಿದು ಮನೋವಿಕಾರರಹಿತನಾಗುವುದೊಳಿತು! ಮಾನಸದುಃಖವನ್ನು ಪ್ರಜ್ಞಾಬಲದಿಂದಲೂ, ಶಾರೀರ ದುಃಖವನ್ನು ಔಷಧಬಲದಿಂದಲೂ ಕಳೆದುಕೊಂಡು, ಶ್ರೀಹರಿಭಕ್ತನಾದವನು ಶಾಶ್ವತ ಸುಖವನ್ನು ಹೊಂದುವನು" ಎಂದು ಅವನನ್ನು ಬೀಳ್ಕೊಂಡನು. ಕೌಶಿಕನು ತನ್ನ ಮನೆಯನ್ನು ಸೇರಿ, ಮಾತಾಪಿತೃಗಳನ್ನು ಚೆನ್ನಾಗಿ ಸೇವಿಸಿದನು. ಅವನು ಕೊನೆಗೆ ಜ್ಞಾನಸಿದ್ಧನಾಗಿ ಸದ್ಗತಿಯನ್ನು ಪೊಂದಿದನು. ಧರ್ಮರಾಜ! ಇಂತು ನಿನಗೆ ಪತಿವ್ರತಾಮಹಿಮೆಯನ್ನೂ, ಮಾತಾಪಿತೃ ಸೇವಾ- ಭಾಗ್ಯವನ್ನೂ ವರ್ಣಿಸಿದೆನು.

ಇಂತು ಮಾರ್ಕಂಡೇಯನು ವರ್ಣಿಸಿದ ಧರ್ಮವ್ಯಾಧನ ಚರಿತ್ರೆಯನ್ನಾಕರ್ಣಿಸಿ ಧರ್ಮರಾಜನು ಸಂತೋಷಭರಿತನಾಗಿ ಇಂತೆಂದನು—"ಮುನಿವರ! ಧರ್ಮವ್ಯಾಧನ ಕಥೆಯನ್ನಾಲಿಸಿ ಧನ್ಯರಾದೆವು. ಕುಮಾರಸ್ವಾಮಿಯ ಜನನವೃತ್ತಾಂತವನ್ನು ಕೇಳಲಿಚ್ಛಿಸುವೆನು. ಅದನ್ನು ನಮಗೆ ವಿವರಿಸು!"

## ಅಗ್ನಿಕಥೆ

ಧರ್ಮರಾಜನು ಮಾರ್ಕಂಡೇಯನನ್ನು "ಸ್ವಾಮೀ! ಆನಂದವಾಯಿತು. ನಿನ್ನ ಮುಖದಿಂದ ದಿವ್ಯ ಧರ್ಮವನ್ನು ಕೇಳುತ್ತಿರುವ ನನಗೆ ಸಾಕೆನಿಸಲಿಲ್ಲ. ಹಿಂದೆ ಅಗ್ನಿ, ಮಾತೆ, ಪಿತಾ, ಗುರು, ಹರಿ ಎಂಬ ಐವರು ಪೂಜ್ಯರೆಂದೆ. ಮಾತಾಪಿತೃ ಸೇವೆ ಯಿಂದ ಕೃತಾರ್ಥನಾದ ಧರ್ಮವ್ಯಾಧನ ಕಥೆಯನ್ನೂ, ಗುರು, ಹರಿ ಸದೃಶನಾದ ಪತಿಸೇವೆಯಿಂದ ಧನ್ಯಳಾದ ಪತಿವ್ರತೆಯರ ಕಥೆಯನ್ನೂ ಕೇಳಿದೆನು. ಈಗ ಅಗ್ನಿಯ ಮಹಿಮೆಯನ್ನು ನನಗೆ ಹೇಳು! ಅಗ್ನಿಯು ಜಲವನ್ನು ಪ್ರವೇಶಿಸಿದಾಗ ಅಂಗಿರಸನು ಹವ್ಯವನ್ನು ವಹಿಸಿದನಂತೆ. ಅಗ್ನಿಪುತ್ರನಾದ ಸ್ಕಂದನು ರುದ್ರಪುತ್ರನೆಂತಾದನು?" ಎಂದು ಕೇಳಿದನು.

ಮಾರ್ಕಂಡೇಯನಿಂತೆಂದನು—ಕ್ರುದ್ಧನಾಗಿ ಅಗ್ನಿಯು ತಪವನ್ನು ಮಾಡ ಲೆಣಿಸಿ ಜಲಪ್ರವೇಶಮಾಡಿದ ಇತಿಹಾಸವನ್ನು ಹೇಳುವೆನು. ಹಿಂದೆ ಅಂಗಿರಸನು ತೀವ್ರ ತಪವನ್ನು ಮಾಡಿ, ಅಗ್ನಿಗಿಂತಲು ತಾಪಪ್ರಕಾಶಗುಣಗಳಿಂದ ಅಧಿಕವಾಗಿ ಜಗವನ್ನೆಲ್ಲ ಬೆಳಗಿದನು. ನೀರಿನಲ್ಲಿ ಅಡಗಿ ಕೂತು ತಪಸ್ಸನ್ನು ಮಾಡುತ್ತಿದ್ದ ಅಗ್ನಿಯು ಅಂಗಿರಸನ ತಪಸ್ಸಿನ ತಾಪದಿಂದ ನೊಂದು 'ಬ್ರಹ್ಮದೇವನು ಮತ್ತೊಬ್ಬ ಅಗ್ನಿ ಯನ್ನು ಸೃಜಿಸಿದನೋ ಎಂತು? ತಪೋನಿರತನಾಗಿರುವ ನನ್ನ ತೇಜವೆಲ್ಲವು ನಷ್ಟ ವಾಗಿದೆ! ಏನು ಮಾಡಲಿ? ಮತ್ತೆ ನಾನು ಅಗ್ನಿಯಾಗಿ ಬೆಳಗುವುದೆಂತು?' ಎಂದು ಚಿಂತಿಸಿ, ಅಂಗಿರಸನ ಸಮೀಪವನ್ನು ಸೇರಿದನು. ಅಂಗಿರಸನು 'ಅಗ್ನಿದೇವ! ನೀನೇ ಮೊದಲನೆಯ ಅಗ್ನಿಯು. ನಿನ್ನ ಪ್ರಥಮಾಗ್ನಿಪದವಿಯನ್ನು ನೀನು ಸ್ವೀಕರಿಸು. ಲೋಕಗಳನ್ನು ಮೊದಲಿನಂತೆ ಬೆಳಗಿ ಪಾಲಿಸು. ದಿಗ್ದೇಶಕಾಲಕರ್ಮಾದಿಗಳಿಗೆ ಸ್ವಾಮಿಯಾದ ಸೂತ್ರನಾಮಕ ಮುಖ್ಯಪ್ರಾಣನು ಪ್ರಥಮಾಗ್ನಿಯು. ಅವನ ಪುತ್ರನಾದ ರುದ್ರನು ದ್ವಿತೀಯಾಗ್ನಿಯು, ಅವನ ಮಗನಾದ ಇಂದ್ರನು ತೃತೀ- ಯಾಗ್ನಿಯು. ನೀನು ಅವನ ಸನ್ನಿಧಾನದಿಂದ ಅಗ್ನಿಪದಪೀಠಸ್ಥಿತನಾಗಿರುವೆ. ಇಂತು ಲೋಕದಲ್ಲಿ ನಿನ್ನನ್ನು ಪ್ರಥಮಾಗ್ನಿ ಎಂದು ವ್ಯವಹರಿಸುವರು. ನಾನು ನಿನ್ನ ಮಗ ನಾಗಿ, ದ್ವಿತೀಯಾಗ್ನಿ ಎನಿಸುವೆನು. ನನ್ನ ಮಗನಾದ ಬೃಹಸ್ಪತಿಯು ತೃತೀ- ಯಾಗ್ನಿಯಾಗಲಿ!' ಎಂದನು. ಅದಕ್ಕೆ ಸಮ್ಮತಿಸಿ, ಅಗ್ನಿದೇವನು ತನ್ನ ಪದವಿ ಯಲ್ಲಿ ನಿಂತು ಅಂಗಿರಸ ಬೃಹಸ್ಪತಿಗಳನ್ನು ಪುತ್ರಪೌತ್ರರಂತೆ ಪಾಲಿಸಿದನು. ಆಗ ದೇವತೆಗಳು ಬೃಹಸ್ಪತಿಯನ್ನು ಸೇವಿಸಿ, 'ನಿನಗೆ ಕಾರಣನಾದ ಬ್ರಹ್ಮನು ಎಂತಹನು?

ಅವನು ಚತುರ್ಮುಖ ರುದ್ರ ಶಕ್ರ ಪಾವಕಾಂಗಿರಸಾದಿಗಳಿಗೆ ಬೆಳಗುವ ಶಕ್ತಿಯನ್ನಿತ್ತು, ಅವರನ್ನು ಅಗ್ನಿಗಳೆನಿಸಿದ ಬಗೆ ಹೇಗೆ?' ಎಂದು ಕೇಳಿದರು. ಬೃಹಸ್ಪತಿಯು ಸರ್ವಕಾರಣನಾದ ನಾರಾಯಣನ ಸರ್ವೋತ್ತಮತ್ವವನ್ನು ನಿರೂಪಿಸಿ, ಅವನಿಂದ ತಾಪನ ಪಾಚನ ಪ್ರಕಾಶನ ಶಕ್ತಿಗಳನ್ನು ಪೊಂದಿ ಅಗ್ನಿಗಳೆನಿಸಿದ ಬ್ರಹ್ಮ ಶಂಕರ ಸುರಪತಿಗಳ ಮಹಿಮೆಯನ್ನು ಅವರಿಗೆ ನಿರೂಪಿಸಿ, ತಾರತಮ್ಯ ಜ್ಞಾನವನ್ನು ಕರುಣಿಸಿದನು. ಆಗ ದೇವತೆಗಳು ಅವನನ್ನು ಗುರುಸ್ಥಾನದಲ್ಲಿಟ್ಟು ಪೂಜಿಸಿದರು.

ಅಂಗದಲ್ಲಿ ರಸವನ್ನು ತುಂಬಿ, ಜೀವಸುಖಕಾರಣ ಅಂಗಿರಸರೆನಿಸಿದ ಕಾಲಾಭಿಮಾನಿ ದೇವತೆಗಳೆಲ್ಲರೂ ಸೂತ್ರನಾಮಕ ಮುಖ್ಯಪ್ರಾಣನಿಂದ ಜನಿಸಿ ತದಧೀನರಾಗಿರುವರು. ಅಂಗಿರಸನಿಗೆ ಕಲಾ ಎಂಬುವ ಪತ್ನಿಯು ಇದ್ದಳು. ಅವಳಿಗೆ ಸುಭಾ ಎಂದೂ ಹೆಸರಿತ್ತು. ಕರ್ದಮ ದೇವಹೂತಿಯರ ಮಗಳಾದ ಸುಭೆಗೆ ಮಗನು ಬೃಹಸ್ಪತಿಯು. ಅವನು ಕೀರ್ತಿ ಯಶೋ ವಿದ್ಯಾ ತೇಜ ಮಂತ್ರಶಕ್ತಿಗಳಿಂದ ವಿರಾಜಿಸಿದನು. ಅಂಗಿರಸರಿಗೆ ಭಾನುಮತಿ ಎಂಬ ಮಗಳೂ ಇದ್ದಳು. ಅವಳು ದಿವಸಾಭಿಮಾನಿನಿಯು, ಶ್ರಮನಾಶಕಳಾಗಿ ನಿದ್ರೆಯನ್ನಿತ್ತು ರಾಗವನ್ನು ಪುಟ್ಟಿಸುವುದರಿಂದ ರಾಗಾ ಎಂಬುವ ಮಗಳು ರಾತ್ರಿ ಮಾನಿನಿಯಾಗಿ ಜನಿಸಿದಳು. ರುದ್ರನಂತೆ ಸೂಕ್ಷ್ಮ ಚಂದ್ರರೇಖೆಯನ್ನು ಧರಿಸಿದ ಸಿನೀವಾಲಿಯು ಮೂರನೆಯ ಮಗಳು. ಅವಳು ಚತುರ್ದಶೀಯುಕ್ತವಾದ ಅಮಾದೇವತೆಯು. ಪೂರ್ಣಚಂದ್ರೋಪೇತಳಾಗಿ ಎಲ್ಲ ಪದಾರ್ಥಗಳನ್ನು ಕಾಣುವಂತೆ ಬೆಳಗುವ ಅರ್ಚಿಷ್ಮತಿಯು ನಾಲ್ಕನೆಯ ಮಗಳು. ಪ್ರತಿಪದ್ಯುಕ್ತ ಪೂರ್ಣಿಮಾ ದೇವತೆಯಾದ ರಾಕೆಯು ಐದನೆಯವಳು. ದೇವತೆಗಳನ್ನು ಕುರಿತು ಅಂದು ಹವಿಸ್ಸನ್ನು ನೀಡುವುದರಿಂದ, ಅವಳಿಗೆ ಹವಿಷ್ಮತೀ ಎಂದೂ ಹೆಸರಿತ್ತು. ವ್ರತಗಳಿಗೆ ಅರ್ಹವಾಗಿರುವ ಪೂರ್ಣಿಮಾತಿಥಿ ದೇವತೆಯಾದ ಮಹಿಷ್ಮತಿಯು ಆರನೇ ಮಗಳು. ಚತುರ್ದಶೀಯುಕ್ತ ಪೌರ್ಣಮಾತಿಥಿ ದೇವಿಯಾದ ಅನುಮತಿಯೇ ಮಹಿಷ್ಮತಿಯು. ಸೋಮಯಾಗಾದಿ ಯಾಗದೀಕ್ಷೆಯನ್ನು ಧರಿಸಲು ವೃದ್ಧನಾಗುವ ಚಂದ್ರನನ್ನು ತೋರುವ ಕಾರಣದಿಂದ ಅಮಾವಾಸ್ಯಾದೇವತೆಯಾದ ಮಹಾಮತಿಯು ಏಳನೆಯ ಮಗಳು. ಅಲ್ಪಚಂದ್ರಾಂಶವತಿಯಾದ ಪ್ರತಿಪದ್ಯುಕ್ತ ಅಮಾವಾಸ್ಯಾದೇವತೆಯಾದ ಕುಹೂ ಎಂಬುವಳು ಎಂಟನೆಯ ಮಗಳು. ಇಂತು ಕ್ರತುವಿಗೆ ಅಂಗವಾದ ಕಾಲಗಳಿಗೆ ಅಭಿಮಾನಿನಿಯರಾದ ದೇವಿಯರು ಅಂಗಿರಸನಲ್ಲಿ ಜನಿಸಿದರು.

ಬೃಹಸ್ಪತಿಯು ತಾರೆಯಲ್ಲಿ ಶಂಯು ಮುಂತಾದ ಆರು ಜನ ಮಕ್ಕಳನ್ನು ಮತ್ತು ಸ್ವಾಹಾ ಎಂಬ ಕನ್ಯೆಯನ್ನು ಪಡೆದನು. ದರ್ಶದಲ್ಲಿ ಅಷ್ಟಾಕಪಾಲ, ಪೌರ್ಣಮಿಯಲ್ಲಿ ಅಚ್ಯುತ ಎಂಬ ಪ್ರಥಮ ಹವಿಸ್ಸನ್ನು ಸ್ವೀಕರಿಸುವ ಶಂಯುವು ಮೊದಲನೇ ಮಗನು. ಚಾತುರ್ಮಾಸ್ಯದಲ್ಲಿ ಮಾಡುವ ವೈಶ್ವದೇವ, ವರುಣ

ಪ್ರಘಾಸ, ಸಾರಮೇಧ, ಶುನಾಸೀರಿಯುವೆಂಬ ನಾಲ್ಕು ಪರ್ವಗಳು ಅಷ್ಟಾಕಪಾಲ ಸೌಮ್ಯಚರುಗಳನ್ನು ಸ್ವೀಕರಿಸುವವನೂ, ಅಶ್ವಮೇಧೇಷ್ಟಿಯಲ್ಲಿ ಪಶುವಪಾಹುತಿ ಯನ್ನು ಸ್ವೀಕರಿಸುವವನೂ ಶಂಯುವೇ. ಶಂಯುವಿನ ಪತ್ನಿಯು ಧರ್ಮನ ಮಗಳಾದ ಸತ್ಯೆ. ದರ್ಶಾದಿ ಅಧ್ವರಗಳಲ್ಲಿ ಪ್ರಥಮಾಜ್ಯ ಭಾಗವನ್ನು ಸ್ವೀಕರಿಸುವ ಅಗ್ನಿಯು ಶಂಯುಪುತ್ರನು. ಅವನನ್ನೇ ಭರದ್ವಾಜನೆಂಬುವರು. ದರ್ಶ ಪೂರ್ಣಮಾಸೇಷ್ಟಿಗಳಲ್ಲಿ ಸ್ರುಕ್‌ದಿಂದ ಪಶುಸೋಮೀಯುವಾದ ಘೃತವನ್ನು ಸ್ವೀಕರಿ ಸುವ ಭರತನೆಂಬ ಪ್ರಜಾಪತ್ಯಗ್ನಿಯು ಎರಡನೇ ಮಗನು. ಭರತಪುತ್ರನೇ ಪಾವಕನು. ಅವನೇ ಮುಖ್ಯಾಗ್ನಿಯು. ಭರದ್ವಾಜನಿಗೆ ವೀರಳಲ್ಲಿ ವೀರನೆಂಬ ಅಗ್ನಿಯು ಜನಿಸಿದನು. ಅವನು ಅಗ್ನೀಸೋಮರೆಂಬರಲ್ಲಿ ಪ್ರಥಮನಾಗಿರುವನು. ಅವರಿಗೆ ಹವಿಸ್ಸನ್ನು ತುಟಿ ಅಲುಗದಂತೆ ಉಚ್ಚರಿಸಿ ಕೊಡಬೇಕು. ವೀರನಿಗೆ ಸಿದ್ಧಿ ಎಂಬ ಮಗನಾದನು. ಅವನು ತನ್ನ ಜ್ವಾಲೆಗಳಿಂದ ಸೂರ್ಯಕಾಂತಿಯನ್ನು ಮೀರಿ ನಿಂತನು.

ಬೃಹಸ್ಪತಿಯ ದ್ವಿತೀಯ ಪುತ್ರನು ನಿಶ್ಚ್ಯವನೆಂಬ ಅಗ್ನಿಯು. ಅವನು ವಾಗಭಿಮಾನಿಯಾಗಿರುವನು. ಅವನ ಮಗನು ಸತ್ಯನೆಂಬ ಅಗ್ನಿಯು. ಅವನು ವಾಚ್ಯವಾಚಕ ಸಂಬಂಧಕ್ಕೆ ದೇವತೆಯಾಗಿರುವನು. ಗೃಹೇಂದ್ರಿಯಾರಾಮ ಶೋಭಾಕರನಾದ ಸತ್ಯನಿಗೆ ಸ್ವನನೆಂಬ ಅಗ್ನಿಯು ಜನಿಸಿದನು. ಅವನು ವೇದನಾರ್ತ ರಾದ ಜನರ ರೋದನ ನಿಟ್ಟುಸಿರುಗಳ ಕಾರಣನಾಗಿರುವನು. ಬುದ್ಧಿವ್ಯಾಪಾರವನ್ನು ಮಾಡುವ ವಿಶ್ವಜಿದಗ್ನಿಯು ಮೂರನೇ ಮಗನು. ದೇಹಿಗಳು ಭುಜಿಸಿದ ಅನ್ನಾದಿ ಗಳನ್ನು ಪಚನ ಮಾಡುವ ವಿಶ್ವಭುಗಗ್ನಿಯು ನಾಲ್ಕನೇ ಮಗನು. ಅವನು ಶ್ರೀಹರಿ ಮುಖ್ಯಪ್ರಾಣ ಸನ್ನಿಧಿಯುಕ್ತನಾಗಿ, ಪಾಕ ಯಜ್ಞಗಳಲ್ಲಿ ಪೂಜಿತನಾಗು ವನು. ಅವನ ಪತ್ನಿಯು ಗೋಮತಿಯು. ಬೃಹಸ್ಪತಿಯ ಪಂಚಮ ಪುತ್ರನನ್ನು ವಡವಾಗ್ನಿ ಎಂಬುವರು. ಅವನು ಉದಾನ ನಾಡಿಯಲ್ಲಿದ್ದು ಪ್ರಾಣವಾಯುವಿಗೆ ಅಭಿ ಮಾನಿಯಾಗಿರುವನು. ಮುಖ್ಯಪ್ರಾಣನನ್ನು ಆಶ್ರಯಿಸಿ, ಶರೀರೋತ್ಕ್ರಮಣಾದಿ ಮೇಲಿನ ವ್ಯಾಪಾರವನ್ನು ಮಾಡಿಸುವ ವಡವಾಗ್ನಿಯನ್ನು ಊರ್ಧ್ವಭಾಕ್ ಎಂದೂ ಕರೆಯುವರು. ಆರನೆಯ ಮಗನು ಗಾರ್ಹಪತ್ಯನೆನಿಸಿ, ಮನೆಯ ಧರ್ಮ ಪತ್ನಿಯ ಕಾರ್ಯಗಳಲ್ಲಿ ಸಹಕರಿಸುವನು. ಅವನಲ್ಲೇ ಸ್ವಿಷ್ಟಕೃದ್ಧೋಮವನ್ನು ಮಾಡುವರು. ಸ್ವಾಹಾ ಎಂದು ಹೆಸರಾದ ಕನ್ಯೆಯ ಮಕ್ಕಳು ಮೂವರು. ರಾಜಸೀ ಸ್ವಾಹಾದೇವಿಗೆ ಕಾಮನೆಂಬ ಮಗನು, ತಾಮಸೀ ಸ್ವಾಹೆಗೆ ಕ್ರೋಧನೆಂಬ ಮಗನು, ಸಾತ್ವಿಕೀ ಸ್ವಾಹೆಗೆ ಉಕ್ಥನೆಂಬ ಮುಕ್ತಪ್ರಾಣನು ಜನಿಸಿದರು. ಉಕ್ಥನು ಪರಮಾತ್ಮನ ನಿತ್ಯಾಪರೋಕ್ಷಿಯು. ಅಗ್ನಿನಾಮಕ ಶ್ರೀಹರಿ ಪ್ರಸಾದವನ್ನು ಮೋಕ್ಷವನ್ನು ಕೊಡಿಸುವ ವೇದವಿದಾಚಾರ್ಯನಾಗಿರುವನು.

ಮುಖ್ಯಪ್ರಾಣನು ಬಹುಕಾಲದ ತಪವನ್ನು ಮಾಡಿ, ಪಾಂಚಜನ್ಯವೆಂಬ ಮಗ ನನ್ನು ಪಡೆದನು. ಶ್ರೀಶನನ್ನು ಪಂಚರೂಪಗಳಿಂದ ಚಿಂತಿಸಿ, ಭೂಃ ಭುವಃ ಸ್ವಃ

ಮಹಃ ಎಂಬ ನಾಲ್ಕು ವ್ಯಾಹೃತಿಗಳಿಂದ ವಾಚ್ಯನೆಂದು ತಿಳಿದು ಭಜಿಸಿದ ಉಕ್ಥನೆಂಬ ಅಗ್ನಿಗೆ ಸುದರ್ಶನ ರೂಪದಿಂದ ಶ್ರೀಶನು ಪ್ರತ್ಯಕ್ಷನಾಗಿ, ಪುತ್ರನೆನಿಸಿದನು. ಶ್ರೀಹರಿಯು ಹಿರಣ್ಯಕೇಶನು, ಹಿರಣ್ಯಬಾಹು ಸಹಸ್ರನು, ಹಿರಣ್ಯಶ್ಮಶ್ರುವು, ಸರ್ವ ಹಿರಣ್ಮಯನೂ ಆಗಿದ್ದನು. ಸುಖಪೂರ್ಣ ಮಂಗಳತಮ ರೂಪನಾದ ಶ್ರೀಹರಿಯು ಸುದರ್ಶನಚಕ್ರಾಗ್ನಿಯೂ ಉದಯಿಸಿತು. ಸುದರ್ಶನಾಗ್ನಿ ದೇವನು ಹತ್ತುಸಾವಿರ ವರ್ಷಗಳ ತಪವನ್ನು ಮಾಡಿ, ದಕ್ಷಿಣಾಗ್ನಿ ಎಂಬ ಭಯಂಕರ ಪುತ್ರನನ್ನು ಪಡೆದನು. ಅವನು ತನ್ನ ತಲೆಯಿಂದ ರಥಂತರಾಗ್ನಿಯನ್ನೂ ಮುಖದಿಂದ ಅಹೋರಾತ್ರಗಳನ್ನೂ, ನಾಭಿಯಿಂದ ರುದ್ರಾಗ್ನಿಯನ್ನೂ, ಪ್ರಾಣದಿಂದ ವಾಯುವನ್ನೂ ಸೃಜಿಸಿದನು.

ಪ್ರಾಣಾಗ್ನಿಯಿಂದ ಹುಟ್ಟಿದ ಅನುದಾತ್ತನಿಗೆ ಭೀಮ, ಭೀಮಬಲ, ಸುರಪ್ರವೀರ, ಸುರಹಂತ ಮೊದಲಾದ ಇಪ್ಪತ್ತೈದು ದಾನವರು ವಂಶಜರಾದರು. ಅವರು ದೇವತೆಗಳ ಹವಿಸ್ಸನ್ನಪಹರಿಸಿ, ಯಜ್ಞಗಳನ್ನು ಕೆಡಿಸಿದರು. ರಕ್ಷೋಘ್ನ ಮಂತ್ರಗಳಿಂದ ಅವರ ಕಾಟವು ತಪ್ಪುವುದು. ಅವರು ವೇದಿಯ ಒಳಗಡೆ ಯಜ್ಞಶಾಲೆಯಲ್ಲಿ ಪ್ರವೇಶಿಸಲಾರರು. ಶಿವಾಗ್ನಿಯು ತಪೋಲಬ್ಧವಾದ ಐಶ್ವರ್ಯವನ್ನು ಕಾಮಿಸಿ, ಇಂದ್ರನು ಶಿವಪುತ್ರನಾದನು.

ಭಾನುವೆಂಬ ಅಗ್ನಿಯು ಸುಪ್ರಜೆ, ಭಾಸೆ, ನಿಶೆ ಎಂಬ ಪತ್ನಿಯರಲ್ಲಿ ಪಂಚಾಗ್ನಿಗಳನ್ನು ಪಡೆದನು. ಮನುಜ ಪ್ರಾಣಧಾರಕನಾದ ಬಲದ, ಸಿಟ್ಟಿಗೆ ಕಾರಣನಾದ ಮನ್ಯುಮಾನ್, ದರ್ಶಾದಿ ಹವಿರಾದಾನ ಕಾರಣನಾದ ವಿಷ್ಣುನೆಂಬುವರು ಸುಪ್ರಜೆಯ ಮಕ್ಕಳು. ಆಗ್ರಾಯಣಕಾಲದಿ ಇಂದ್ರನಿಂದ ಕೂಡಿಬರುವ ಆಗ್ರಾಯಣ, ವೈಶ್ವದೇವಾದಿ ಹವಿರಾದಾನಕನಾದ ಸ್ತುಭ, ಸ್ತೋತ್ರವನ್ನಾಲಿಸುವ ಸ್ತುಭ—ಇವರು ಮೂವರು ಬೃಹದ್ಭಾಸೆಯ ಸುತರು. ನಿಶೆಯು ಮಗಳು ರೋಹಿಣಿ, ಅಗ್ನಿ, ಸೋಮ, ಪರ್ಜನ್ಯೇಷ್ಟಿಯು ವೈಶ್ವಾನರ, ಅನ್ನಪಾಚಕ, ವಿಶ್ವಪತಿ, ಶಬ್ದ ರೂಪ ರಸ ಗ್ರಹಣ ಸಾಧನನಾದ ಸನ್ನಿಹಿತ, ಶುಕ್ಲ ಕೃಷ್ಣ ಗತಿಗಳೆನಿಸಿದ ಅರ್ಚಿರಾದಿ ವೈಸ್ಕನ್ಯ್ರವಮಾರ್ಗ ಧೂಮಾದಿ ಪ್ರವೃತ್ತಿಮಾರ್ಗಗಳಿಗೆ ಪ್ರಾರಂಭಕನಾದ ಕಪಿಲವಹ್ನಿಯು, ಅಗ್ರಭುಜನಾದ ಅಗ್ರಣಿಯು ನಿಶೆಯ ಮಕ್ಕಳು.

ಇಂತು ಅಗ್ನಿಗಳು ಅನೇಕ ಹೋಮ, ಕ್ರತು, ಪ್ರಾಯಶ್ಚಿತ್ತಗಳಿಗಾಗಿ ವಿವಿಧ ಕಾರ್ಯವಿಹಿತವಾಗಿ ಶ್ರೀಹರಿಯಿಂದ ಸೃಷ್ಟವಾಗಿರುವುವು. ಆಪೋಗ್ನಿಯು ಪಾವಕನನ್ನು ಪಡೆದನಲ್ಲವೆ! ಇಲ್ಲಿ ಪಾವಕನೆಂದರೆ ಶ್ರೀಹರಿಯೆಂದೇ ತಿಳಿ! ಐಶ್ವರ್ಯ, ಜ್ಞಾನ, ಯಶಸ್ಸು, ಶ್ರೀಃ, ವೀರ್ಯ, ವಿಜ್ಞಾನಗಳೆಂಬ ಆರು ಗುಣಗಳಿಂದಲು ಪರಿಪೂರ್ಣನಾದ ಶ್ರೀಶನು ಮುಖ್ಯಪಾವಕನು. ಅವನ ಮಗನು ಮಹದಗ್ನಿಯು. ಅವನ ಮಗನು ಅಹಂಕಾರಾಗ್ನಿಯು. ದೇಹ ಸಂಬಂಧ ರೂಪ ಜನನ ಮೊದಲುಗೊಂಡು ಸಂಸಾರ ಯಜ್ಞವು ಮರಣ ರೂಪ ಅವಭೃಥದ ವರೆಗೂ ನಡೆದಿದೆ. ಶ್ರೀಹರಿ ಪ್ರಸಾದದಿಂದಲೇ ಸಂಸಾರಮೋಚನನೆಂದರಿತು ಬ್ರಹ್ಮಾದಿ ದೇವತೆಗಳು ತಮ್ಮ

ಅಂಗಗಳಿಗೂ ಪ್ರವರ್ತಕನಾದ ಶ್ರೀಹರಿಯನ್ನು ಅಗ್ನಿ ಶಬ್ದದಿಂದ ಉಪಾಸಿಸಿ, ಅಗ್ನಿಯಲ್ಲಿ ಹೋಮಿಸಿ, ಮುಕ್ತರಾಗುವರು.

ಅಂಗಿರಸನು ತೀವ್ರತಪವನ್ನು ಮಾಡುತ್ತಿರಲು ಅಗ್ನಿಯು ಅವನನ್ನು ಕಂಡು, 'ಭೃಗುಶಾಪದಿಂದ ಸರ್ವಭಕ್ಷಕನಾಗಿರುವೆನು. ಅಗ್ನಿಹೋತ್ರಾದಿ ಗೃಹಗಳಲ್ಲಿಯೂ ಸ್ಮಶಾನಾದಿಗಳಲ್ಲಿಯೂ ಇರಬೇಕಾಗಿದೆ. ಅಗ್ನಿತ್ವವೆನಗೆ ಬೇಡವಾಗಿದೆ. ನೀನೇ ಮುಖ್ಯಾಗ್ನಿಯಾಗು!' ಎಂದು ಬೇಡಿ, ನೀರಿನಲ್ಲಿ ಅಡಗಿ ಕೂತನು. ಮೀನಗಳು ಅಂಗಿರಸನಿಗೆ ಅಗ್ನಿಯು ಅಡಗಿರುವ ಸ್ಥಾನವನ್ನು ತಿಳಿಸಿದವು. ಪಾವಕನು ಸಿಟ್ಟಾಗಿ 'ನೀವು ಇತರ ದೇಹಿಗಳಿಗೆ ಭಕ್ಷ್ಯವಾಗಿರಿ!' ಎಂದು ಶಾಪವನ್ನಿತ್ತು, ತಾನು ಅಗ್ನಿ ಪದವಿಯನ್ನು ತ್ಯಜಿಸಿ, ಭೂಮಿಯನ್ನು ಹೊಕ್ಕನು. ಅವನಿಂದ ಭೂಮಿಯಲ್ಲಿ ಸ್ವರ್ಣ ರಜತಮಣಿ ಶಿಲಾದಿ ಧಾತುಗಳು, ಕಾಷ್ಟ ಪಾಷಾಣ ಲೋಹಗಳು, ಪಾದರಸಾದಿ ದ್ರವಗಳು ಉದ್ಭೂತವಾದವು. ಭೃಗು, ಅಂಗಿರ ಮೊದಲಾದವರು ಬಂದು ಬೇಡಲು ಪಾವಕನು ತಪಸ್ಸಿನಿಂದ ಮೇಲೆದ್ದು, ಮತ್ತೆ ಅಗ್ನಿ ಪದವಿಯಲ್ಲಿ ಪ್ರಕಾಶಿಸಿದನು. ಸರ್ವಕರ್ಮವೂ ಅಗ್ನಿಮುಖವಾಗಿದೆ. ಸರ್ವವಿಪ್ರರು ಅಗ್ನಿಸಂತಾನರಾಗಿರುವರು.

ಈಗ ಸ್ಕಂದನ ಚರಿತೆಯನ್ನು ಹೇಳುವೆನು, ಕೇಳು!

## ಕುಮಾರ ಕಥೆ

ಹಿಂದೆ ದೇವ ದಾನವರ ಸಂಗ್ರಾಮವು ಭಯಂಕರವಾಗಿ ನಡೆಯಿತು. ಘೋರ ದಾನವರು ದೇವತೆಗಳನ್ನು ಗೆದ್ದು ಓಡಿಸಿದರು. ಸೈನ್ಯನಾಯಕನಿಲ್ಲದೆ ಹೀಗಾಗುತ್ತಿರುವುದೆಂದರಿತು ದೇವೇಂದ್ರನು ಮಹಾಬಲವೀರ್ಯನಾದ ಸೇನಾನಿಯು ಸಿಗುವುದೆಂತೆಂದು ಚಿಂತಿಸುತ್ತಾ ಮಾನಸಸರೋವರ ತೀರದಲ್ಲಿ ತಿರುಗುತ್ತಿದ್ದನು. ಆಗ ಅವನು "ಬೇಗ ಬನ್ನಿ! ಕಾಪಾಡಿ! ನನ್ನನ್ನು ರಕ್ಷಿಸುವವನನ್ನು ನಾನು ವರಿಸುವೆನು" ಎಂದು ಕೂಗುವ ತರುಣಿಯ ಆರ್ತನಾದವನ್ನು ಕೇಳಿದನು. ಇಂದ್ರನು ಓಡಿಹೋಗಿ ಅವಳಿಗೆ ಅಭಯವಿತ್ತನು. ಅವಳನ್ನು ಪೀಡಿಸುವ ಕೇಶಿ ದೈತ್ಯನನ್ನು ತಡೆದು ಅವನೊಡನೆ ಭಯಂಕರ ಯುದ್ಧಮಾಡಿದನು. ಇಂದ್ರನ ವಜ್ರಾಯುಧವು ದಾನವನು ಒಗೆದ ಪರ್ವತಶೃಂಗವನ್ನು ಮುರಿದು ಕೆಡಹಿತು. ಶೃಂಗವು ಕೇಶಿಗೆ ತಗುಲಿ, ಅವನು ಭಯಪಟ್ಟು ಓಡಿಹೋದನು. ಇಂದ್ರನು 'ನೀನಾರು? ಇಲ್ಲಿಗೇಕೆ ಬಂದೆ?' ಎಂದು ಕೇಳಲು ಕನ್ಯೆ ಇಂತೆಂದಳು—

'ನಾನು ದೇವಸೇನೆ; ಪ್ರಜಾಪತಿಯ ಮಗಳು. ನನ್ನ ತಂಗಿಯಾದ ದೈತ್ಯಸೇನೆಯೆಂಬವಳನ್ನು ಅಪಹರಿಸಿ, ಈಗ ನನ್ನನ್ನೂ ಹರಿಸಲಿದ್ದ ಕೇಶಿ ದೈತ್ಯನನ್ನು ಗೆದ್ದು ನೀನು ನನ್ನನ್ನು ಕಾಪಾಡಿದೆ. ನನಗೆ ಸರಿಯಾದ ಪತಿಯನ್ನರಸು!' ಎಂದು ನುಡಿದ ರಮಣೀಮಣಿಗೆ ಇಂದ್ರನು 'ಸಾಧ್ವಿ! ನಿನ್ನ ತಾಯಿಯು ನನ್ನ ಮಾತೆಯು ಅಕ್ಕತಂಗಿಯರು. ನೀನು ನನ್ನ ತಂಗಿ ಎನಿಸಿದೆ. ನಿನ್ನ ಬಲವೇನು? ಸ್ವರೂಪವೆಂತಹುದು?

ಹೇಳು. ನಿನಗೆ ತಕ್ಕಪತಿಯನ್ನು ತಂದುಕೊಡುವೆ'ನೆಂದನು. ಅದಕ್ಕೆ ದೇವಸೇನೆ 'ನಾನು ಅಬಲೆ. ಆದರೆ ನನ್ನ ಗಂಡನು ಬಲವಂತನು, ಸುರಾಸುರ ನಮಸ್ಕೃತನೆಂದು ನನ್ನ ತಂದೆ ದಕ್ಷನು ತಿಳಿಸಿರುವನು. ಇಲ್ಲಿ ವಿಹರಿಸಲು ಬಂದ ನಮ್ಮವರಿಗೆ ಪೀಡೆ ಯನ್ನು ಕೊಡುವ ದೈತ್ಯರನ್ನು ಸಂಹರಿಸಿ, ನಿನಗೆ ಸ್ನೇಹಿತನೆನಿಸಿ, ಬ್ರಹ್ಮಣ್ಯನಾಗಿ ಮೆರೆವನೇ ನನಗೆ ಪತಿಯಾಗಲರ್ಹನು' ಎಂದು ನುಡಿದಳು.

ಅಂತಹ ವೀರ್ಯ ಧೈರ್ಯ ಶೌರ್ಯಾದಿ ಗುಣನಿಧಿಯನ್ನು ಕಾಣದೆ, ಇಂದ್ರನು ಚಿಂತಾಕ್ರಾಂತನಾದನು. ಆಗ ಸೂರ್ಯೋದಯವಾಗುತ್ತಿತ್ತು. ದೈತ್ಯಾಮರರಕ್ತವು ಚಿಮ್ಮಿ ವ್ಯಾಪಿಸಿ ನಿಂತಂತೆ ಪೂರ್ವದಿಶಾಮುಖವು ರಾಗರಂಜಿತವಾಗಿತ್ತು. ಅಮಾ ವಾಸ್ಯೆಯಾದುದರಿಂದ ಚಂದ್ರಮನು ಸೂರ್ಯನೊಡನೆ ಕಲೆತು ಕಾಣದಂತೆ ನಡೆದು ಬರುತ್ತಿದ್ದನು. ಭೃಗ್ವಾಂಗಿರಸಾದಿಗಳಿತ್ತ ಹವ್ಯವನ್ನು ಸ್ವೀಕರಿಸಿ, ಅಗ್ನಿಯು ಸೂರ್ಯ ಮಂಡಲವನ್ನು ಹೊಕ್ಕು ಸ್ವರ್ಗವನ್ನು ಸೇರಪೋದನು. ಧರ್ಮ ರುದ್ರರಂತೆ ಶಾಂತ ಭೀಕರರಾದ ಚಂದ್ರಸೂರ್ಯರು ಏಕತಾರಾಗತರಾಗಿ ಬರುತ್ತಿದ್ದರು. ಭಯಂಕರ ನಾದ ಅಗ್ನಿಮೂರ್ತಿಯನ್ನು ಕಂಡ ಇಂದ್ರನು 'ಇವನು ಮಗನನ್ನು ಪಡೆದರೆ ಅವನು ದೈತ್ಯರನ್ನು ನಾಶಮಾಡಿ, ದೇವಸೇನಾಪತಿಯಾಗಬಲ್ಲನು!' ಎಂದು ಚಿಂತಿಸಿ, ಬ್ರಹ್ಮಲೋಕವನ್ನು ಸೇರಿದನು. ದೇವಸೇನೆಯೂ ಅಣ್ಣನನ್ನು ಹಿಂಬಾಲಿಸಿದಳು. ಅವಳ ವೃತ್ತಾಂತವನ್ನರಿತು, ಬ್ರಹ್ಮದೇವನು 'ದೇವೇಂದ್ರ! ನಿನ್ನ ಸಂಕಲ್ಪವು ಶ್ರೀಹರಿಯ ಚಿತ್ತಕ್ಕೆ ಬಂದಿದೆ. ಅಂತೆಯೇ ಅಗ್ನಿಪುತ್ರನು ಉದಿಸಿ, ನಿನ್ನ ಸೇನಾನಿ ಯಾಗಿ, ದೈತ್ಯರನ್ನು ಗೆದ್ದು, ಇವಳಿಗೆ ಗಂಡನಾಗುವನು' ಎಂದು ಅವರನ್ನು ಸಮಾ-ಶ್ವಸಿಸಿ ಕಳಿಸಿದನು.

ಇಂದ್ರಾದಿ ದೇವತೆಗಳು ವಸಿಷ್ಠಾದಿ ತಪೋಧನರ ಸಹಾಯದಿಂದ ಅಧ್ವರವನ್ನು ಪ್ರಾರಂಭಿಸಿ, ಹವ್ಯವಾಹನನನ್ನು ಕೂಗಿ ಕರೆದರು. ಅಗ್ನಿಯು ಹವ್ಯವನ್ನು ಸ್ವೀಕರಿಸಿ, ಯಥಾಕ್ರಮವಾಗಿ ದೇವಋಷಿಗಳಿಗೆ ಅದನ್ನು ಹಂಚಿಕೊಟ್ಟನು. ಆಗ ಅಗ್ನಿಯು ಋಷಿವರರ ಪತ್ನಿಯರನ್ನು ನೋಡಿ, ಕಾಮಕಲುಷಿತಚಿತ್ತನಾದನು. 'ಛೀ! ಎಂತಹ ಅನ್ಯಾಯವನ್ನು ಮಾಡುವೆನು! ಅಕಾಮರಾದ ತರುಣಿಯರನ್ನು ಕಾಮಿಸುವುದು ತಪ್ಪಲ್ಲವೆ? ಆದರೂ ಗೃಹಾಗ್ನಿಯಲ್ಲಿ ಪ್ರವೇಶಿಸಿ, ಇವರನ್ನು ನೋಡಿ ಸಂತೋಷ ಪಡುವೆನು.' ಇಂತು ನಿಶ್ಚಯಿಸಿ, ಅಗ್ನಿಯು ಅವರ ಮನೆಯ ಗೃಹಪತ್ಯಗ್ನಿಯಲ್ಲಿ ನಿವಿಷ್ಟನಾದನು. ಅವರನ್ನು ನೋಡಿ, ಅವರು ಅಡಿಗೆ ಮಾಡುವಾಗ ಮುಟ್ಟಿ, ಅಗ್ನಿಯು ಕಾಮಜ್ವರ ಪೀಡಿತನಾದನು. ಅಗ್ನಿಗೆ ಕಾಮದ ಕಾವೇರಿತು. ಋಷಿ ಪತ್ನಿಯರನ್ನು ಮುಟ್ಟುವ ಧೈರ್ಯವಿಲ್ಲದೆ ಅವನು ಹುಚ್ಚನಂತಾಗಿ ವನವನ್ನು ಹೊಕ್ಕನು. ದಕ್ಷಸುತೆಯಾದ ಸ್ವಾಹಾದೇವಿಯು ಅವನ ಪ್ರಥಮಪತ್ನಿಯಾಗಲು ಬಯಸಿ ಅಲ್ಲಿಗೆ ಬಂದಳು.

*

ಸಪ್ತರ್ಷಿಸತೀಸಕ್ತ ಚಿತ್ತನಾದ ಜಾತವೇದನು ಅವಳನ್ನು ಕಣ್ಣೆತ್ತಿ ನೋಡಲಿಲ್ಲ. ಸ್ವಾಹಾದೇವಿಯು ಅವನ ಮನವನ್ನರಿತು, ಅವನನ್ನು ಮೆಚ್ಚಿಸಲು ಋಷಿಪತ್ನೀರೂಪ ದಿಂದ ಬಂದಳು. ಮೊದಲು ಆಂಗಿರಸ ಪತ್ನಿಯಾದ ಶಿವೆಯಂತಾಗಿ ಅವಳು ಅಗ್ನಿ ಯನ್ನು ನೋಡಿ, 'ಅಗ್ನೇ! ನಿನ್ನನ್ನು ಕಾಮಿಸಿ ಬಂದಿರುವೆನು. ನನ್ನಿಚ್ಛೆಯನ್ನು ಪೂರೈಸದಿರೆ ಪ್ರಾಣವನ್ನು ಬಿಡುವೆನು. ನಾವೆಲ್ಲರೂ ನಿನ್ನಲ್ಲಿ ಅನುರಕ್ತೆಯರಾಗಿರು ವೆವು. ಗೃಹಪತ್ಯಗ್ನಿಯಲ್ಲಡಗಿ ನಮ್ಮನ್ನು ಸ್ಪರ್ಶಿಸಿದ ನಿನ್ನ ಇಂಗಿತವನ್ನರಿತು, ಮಿಕ್ಕ ಆರು ಸತಿಯರು ಕಳಿಸಲು ನಾನು ನಿನ್ನ ಸಂಗವನ್ನು ಬಯಸಿ ಬಂದಿರುವೆನು' ಎಂದಳು. ಅಗ್ನಿಯು ಅವಳ ವಾಂಛಿತವು ತನ್ನ ವಾಂಛಿತವಾಗಿರುವುದರಿಂದ ಅವಳಿಂದ ಕೂಡಿ ವಿಹರಿಸಿದನು. ಅಮೋಘ ವೀರ್ಯನಾದ ಹವ್ಯವಾಹನನ ವೀರ್ಯವನ್ನು ಸ್ವಾಹೆಯು ಹಿಮಶೈಲದ ಶರಸ್ತಂಬವನದಲ್ಲಿರುವ ಕಾಂಚನ ಕುಂಡದಲ್ಲಿ ನಿಕ್ಷೇಪಿಸಿದಳು. ಶಿವೆಯ ರೂಪದಿಂದಲೇ ಸಂಚರಿಸಿದರೆ, ಇತರರು ನೋಡಿ ವಿಪ್ರಪತ್ನಿಯರ ಅನೃತವನ್ನೂ, ಅಗ್ನಿಯ ದೋಷವನ್ನೂ ಪ್ರಕಟಿಸುವರೆಂದು ಹೆದರಿ, ಸ್ವಾಹೆಯು ಗರುಡೀ ರೂಪಳಾಗಿ ವೀರ್ಯನಿಕ್ಷೇಪವನ್ನು ಮಾಡಿದಳು. ಇಂತು ಮಿಕ್ಕ ಐದು ಜನ ಋಷಿಪತ್ನಿಯರ ರೂಪವನ್ನು ಧರಿಸಿ, ಅಗ್ನಿಯನ್ನು ಪೊಂದಿದ ಸ್ವಾಹೆಯು ಆರು ಸಲ ಅವನ ಹಿರಣ್ಯ ವೀರ್ಯವನ್ನು ತಂದು ಕುಂಡದಲ್ಲಿಟ್ಟಳು. ಏಳನೆಯವಳಾದ ಅರುಂಧತಿಯ ರೂಪ ವನ್ನು ತಾಳಲಾರದೆ ಅವಳು ಸುಮ್ಮನಾದಳು.

ದಕ್ಷಪ್ರಜೇಶನ ಯಜ್ಞಧ್ವಂಸಕನಾದ ಮಹಾದೇವನು ಸತೀದೇವಿಯ ವಿರಹ ದಿಂದ ತಪೋನಿರತನಾಗಿ, ಹಿಮವದ್ಗಿರಿಯ ಕೈಲಾಸ ಶಿಖರದ ತಪ್ಪಲಿನಲ್ಲಿ ಕೂತು, ನಿಶ್ಚಲನಾಗಿ ಸ್ಥಾಣುವೆನಿಸಿದನು. ಸತಿಯು ಪುನಃ ಶಿವನನ್ನು ಪಡೆಯಲೋಸುಗ ಹಿಮವತ್ಪರ್ವತರಾಜನ ಮಡದಿಯಾದ ಮೇನಾದೇವಿಯಲ್ಲಿ ಪಾರ್ವತಿಯಾಗಿ ಜನಿಸಿ ದಳು. ಪರ್ವತರಾಜನ ಅಪ್ಪಣೆಯನ್ನು ಪಡೆದು ಪಾರ್ವತಿಯು ಪರ್ಣಗಳನ್ನೂ ಕೂಡ ತಿನ್ನಲೊಲ್ಲದೆ ತೀವ್ರತಪದಿಂದ ಮಹೇಶನನ್ನು ಸೇವಿಸಿ ಅಪರ್ಣೆ ಎನಿಸಿದಳು. ಅವರೀರ್ವರ ಸಂಯೋಗವನ್ನು ಸಾಧಿಸಿ, ದೇವಕಾರ್ಯವನ್ನು ನೆರವೇರಿಸಲು ಬಂದ ಕಾಮನು ರುದ್ರನ ನೇತ್ರಾಗ್ನಿಗಾಹುತಿಯಾದನು. ಉಮೆಯು ಮಾತೆಯ ಮಾತನ್ನು ಕೇಳದೆ ಮತ್ತೆ ತೀವ್ರತಪವನ್ನು ಮಾಡತೊಡಗಿದಳು. ಅವಳ ಭಕ್ತಿಗೆ ಮೆಚ್ಚಿ, ಭವನು ಅವಳನ್ನು ಮದುವೆಯಾಗಲು ನಿಶ್ಚಯಿಸಿದನು. ಸಪ್ತರ್ಷಿಗಳನ್ನು ಕಳಿಸಿ 'ಹಿಮವದ್ರಾಜನಿಂದ ಕನ್ಯಾರ್ಥಿಯಾಗಿರುವೆ'ನೆಂದು ಸಂದೇಶವನ್ನು ತಿಳಿ ಸಿದನು. ಪಾರ್ವತೀಪರಮೇಶರು ಪರಸ್ಪರ ತಪಸ್ಸಂಪತ್ಫಲಾಯಿತರಾಗಿ, ಲೋಕ ಹಿತವನ್ನು ಸಾಧಿಸಿದರು. ಮಹಾನುಭಾವನಾದ ಉಗ್ರನ ತೇಜವನ್ನು ಧರಿಸಲಾರದೆ ಉಮೆಯು ಗರ್ಭವನ್ನು ಗಂಗೆಗೊಪ್ಪಿಸಿದಳು. ಗಂಗೆಗೂ ಅದು ದುಃಸಹವಾಗಲು ಆಕೆ ಅದನ್ನು ತೀರದ ಶರಸ್ತಂಭಮಯವಾದ ಕಾಂಚನಕುಂಡದಲ್ಲಿಟ್ಟಳು.

ಪ್ರಥಮವಾಗ್ನಿಯಾದ ಶ್ರೀಹರಿಯ ಪುತ್ರನಾದ ಕಾಮನೇ ಮತ್ತೆ ರುದ್ರಸುತನಾಗಿ ಅಲ್ಲಿ ಬೆಳೆದನು. ಅಗ್ನಿದೇವನ ವೀರ್ಯದಿಂದ ಕನಕದೇಹನಾದನು. ಪ್ರತಿಪತ್ತಿಥಿಯಲ್ಲಿ ಶರಸ್ತಂಭಾವೃತನಾಗಿ, ದ್ವಿತೀಯಾತಿಥಿಯಲ್ಲಿ ಅಭಿವ್ಯಕ್ತನಾದನು. ತದಿಗೆದಿನ ಶಿಶುವಾದನು. ಚತುರ್ಥಿಯಲ್ಲಿ ಅಂಗಪ್ರತ್ಯಂಗಯುಕ್ತನಾದನು. ಪಂಚಮಿಯಲ್ಲಿ ಧನುರ್ಬಾಣ ಶೂಲ ಶಕ್ತಿ ಯುಕ್ತನಾಗಿ ವಿರಾಜಿಸಿದನು. ಷಷ್ಟೀತಿಥಿಯಲ್ಲಿ ಮೇಲಕ್ಕೆದ್ದು ಬಂದು ಪರ್ವತಶಿಖರವನ್ನಾರೋಹಿಸಿ, ಧನುಷ್ಟಂಕಾರವನ್ನು ಮಾಡಿ ಗರ್ಜಿಸಿದನು. ಐರಾವತಾದಿ ದಿಗ್ಗಜಗಳು ಘೀಂಕರಿಸುತ್ತಾ ಮೇಲೇರಿ ಬರಲು, ಹೆದರದೆ ಅವನ್ನು ಎರಡು ಕೈಗಳಿಂದ ಎತ್ತಿ ಬಿಸುಟನು. ಶಕ್ತಿ, ಕುಕ್ಕುಟಗಳನ್ನು ಎರಡು ಕೈಗಳಿಂದ ಹಿಡಿದು, ಎರಡು ಕೈಗಳಿಂದ ಹಿಡಿದ ಶಂಖವನ್ನು ಊದುತ್ತಾ, ಮಿಕ್ಕ ಆರು ಕೈಗಳಿಂದ ಧನುರಾದಿ ವಿವಿಧಾಯುಧಗಳನ್ನು ಧರಿಸಿ, ಬಾಲಾರ್ಕಸಮ ತೇಜೋವಿರಾಜಿತನಾದ ಷಣ್ಮುಖನು ಭೂತಭಯಂಕರನಾಗಿದ್ದನು. ಅವನಿಗೆ ಶರಣಾಗತರಾಗಿ ಬಂದ ಬ್ರಾಹ್ಮಣರನ್ನು ಪಾರಿಷದರನ್ನಾಗಿಸಿ, ಅವನು ಸುಬ್ರಹ್ಮಣ್ಯನೆನಿಸಿದನು. ಕೃತ್ತಿಕಾದೇವಿಯರಾರು ಮಾತೆಯರು ಅವನಿಗೆ ಪಾಲನ್ನಿತ್ತು ಪೋಷಿಸಿದುದರಿಂದ ಕಾರ್ತಿಕೇಯನೆನಿಸಿದನು. ಶರಜಾಲದಿಂದ ಶ್ವೇತನಗದ ಕ್ರೌಂಚಶಿಖರದಲ್ಲಿ ರಂಧ್ರವನ್ನು ಕೊರೆದು, ಹಂಸಗೃಧ್ರಾದಿ ಪಕ್ಷಿಗಳು ಮೇರುವನ್ನು ಸೇರುವ ಸುಗಮ ಮಾರ್ಗವನ್ನು ಕಲ್ಪಿಸಿದನು.

ಮಹಾಸತ್ಯಸಂಪನ್ನನಾದ ಕುಮಾರನನ್ನು ನೋಡಿ, ಚೈತ್ರರಥೋದ್ಯಾನದಲ್ಲಿದ್ದ ಜನರು ಭೀತರಾದರು. 'ಅಗ್ನಿದೇವನು ಋಷಿಪತ್ನಿಯರನ್ನು ಕೂಡಿ ಮಾಡಿದ ಅನರ್ಥ'ವಿದೆಂದು ನಿಂದಿಸಿದರು. ಸ್ವಾಹೆಯು ಋಷಿವರರನ್ನು ಕಂಡು 'ಇವನು ನನ್ನ ಮಗನು. ನಿಮ್ಮ ಪತ್ನಿಯರು ನಿರ್ದೋಷಿಗಳೆ'ಂದು ತಿಳಿಸಿದಳು. ಪತ್ನೀವೇಷದಿಂದ ಅಗ್ನಿಯನ್ನು ವಂಚಿಸಲುಹೋದ ತನ್ನ ಅಪರಾಧವನ್ನು ಕ್ಷಮಿಸಲು ಬೇಡಿದಳು. ವಿಶ್ವಾಮಿತ್ರನು ಇಷ್ಟಿಯನ್ನಾಚರಿಸಿ, ಅಗ್ನಿಯನ್ನು ಹಿಂಬಾಲಿಸಿ ಹೋಗಿ, ಸ್ವಾಹಾವಚನವು ಸತ್ಯವಾಗಿರುವುದನ್ನು ಕಂಡು, ಕುಮಾರನಿಗೆ ಶರಣುಬಂದನು. ಕುಮಾರಸ್ತುತಿಯನ್ನು ಮಾಡಿ, ಅವನಿಗೆ ಜಾತಕರ್ಮ ಮೊದಲ್ಗೊಂಡು ಸಮಾವರ್ತನ ಪರ್ಯಂತವಾದ ತ್ರಯೋದಶ ಸಂಸ್ಕಾರಗಳನ್ನು ಮಾಡಿ, ಕುಮಾರಸ್ವಾಮಿಗೆ ಪ್ರೀತಿಪಾತ್ರನಾದನು. ವಿಶ್ವಾಮಿತ್ರನು ಪ್ರಿಯಪತ್ನಿಯರು ನಿರ್ದೋಷಿಗಳೆಂದು ತಿಳಿಸಿದರೂ, ಮಿಕ್ಕ ಐವರು ಲೋಕಾಪವಾದ ಭಯದಿಂದ ತಮ್ಮ ಪತ್ನಿಯರನ್ನು ಪರಿತ್ಯಜಿಸಿದರು.

ದೇವತೆಗಳು ಸ್ಕಂದನ ವೃತ್ತಾಂತವನ್ನರುಹಲು ಕೇಳಿ, ಭೀತನಾದ ದೇವೇಂದ್ರನು ಕುಮಾರಸ್ವಾಮಿಯನ್ನು ಕೊಲ್ಲಲೆಣಿಸಿ, ದಂಡೆತ್ತಿಬಂದನು. ಅಗ್ನಿಯು ಮಗನ ಪಕ್ಷವನ್ನು ವಹಿಸಿ ನಿಂತನು. ಶಕ್ತಿಧರನು ಪಾರ್ಷದ ಭೂತಪತಿ ಮಾತೃ ರಾಹುಮುಖ ಗ್ರಹಗಳಿಂದ ಕೂಡಿ, ಯುದ್ಧಸನ್ನದ್ಧನಾದನು. ಇಂದ್ರನು ಸಿಂಹನಾದವನ್ನು ಮಾಡಿ ದೇವತೆಗಳಿಂದ ಕೂಡಿ ಮೇಲೇರಿಬರಲು, ಕುಮಾರನೂ ಗರ್ಜಿಸಿ ತನ್ನ ಮುಖಗಳಿಂದ ಅಗ್ನಿಜ್ವಾಲೆಗಳನ್ನು ನಿರ್ಮಿಸಿದನು. ದೇವಸೈನ್ಯವು ಅಗ್ನಿದಗ್ಧವಾಯಿತು.

ಆಕಾಶದಿಂದ ಉದುರಿಬಿದ್ದ ತಾರಾಗಣದಂತೆ ಉರಿಯುತ್ತಿರುವ ದೇವಸೈನಿಕರನ್ನು ಕಂಡು ಇಂದ್ರನು ಕುಪಿತನಾಗಿ ವಜ್ರಾಯುಧವನ್ನು ಪ್ರಯೋಗಿಸಿದನು. ಅದು ಕುಮಾರನ ಬಾಹುವನ್ನು ಭೇದಿಸಿ ಕೆಡಹಿತು. ಆದರೆ ಬಾಹುವೇ ಮತ್ತೊಂದು ಸ್ಕಂದ ರೂಪವನ್ನು ತಾಳಿನಿಂತಾಗ, ಇಂದ್ರನು, ಸ್ಕಂದನು ಅಜರಾಮರನೆಂದರಿತು, ಅವನಿಂದ ಸಂಧಿ ಮಾಡಿಕೊಂಡನು.

ಹಸ್ತಜಾತನಿಗೆ ವಿಶಾಖನೆಂಬುವರು. ವಿಶಾಖ, ಭದ್ರಶಾಖ, ಕೌಶಲ, ಪಾರಿ ಷದ, ಕುಮಾರಿಯರು, ಮಾತೃದೇವತೆಗಳು, ಭಾಗವಕ್ತ್ರ ಮೊದಲಾದ ಭಯಂಕರ ಪರಿವಾರದಿಂದ ಕೂಡಿದ ಸ್ಕಂದನನ್ನು ಕಂಡು ಋಷಿಗಳು ಮತ್ತು ದೇವೇಂದ್ರನು 'ನೀನೇ ಇಂದ್ರನಾಗು! ಸರ್ವಲೋಕವು ನಿನ್ನ ವಶವಾಗಿದೆ. ನಿನಗೆ ಶರಣಾಗತ ರಾದ ನಮಗೆ ನೀನು ಅಭಯಪ್ರದನಾಗಿರುವೆ' ಎಂದು ಬೇಡಿದರು. 'ಇಂದ್ರನೆಂದರೆ ಭೂತಪಾಲಕನು. ಬಲ, ತೇಜ, ಪ್ರಜಾಸುಖಗಳನ್ನು ತನ್ನ ಭಜಕರಿಗೆ ಕೊಡುತ್ತಿರು ವವನು. ದುಷ್ಟಶಾಸಕನು, ಸಜ್ಜನರಕ್ಷಕನು ಆದ ಇಂದ್ರನು ತ್ರಿಲೋಕಾಧಿಪ ನಾಗುವವನು. ಸೂರ್ಯನಿಗೆ ಕಾಂತಿಪ್ರದನು, ಚಂದ್ರನಿಗೆ ಸೌಮ್ಯಪ್ರಕಾಶಪ್ರದನು, ಅಗ್ನಿ, ವಾಯು, ಯಮ, ವರುಣಾದಿಗಳಿಗೆ ತಾಪ, ಸ್ಪರ್ಶನ, ಸಂಹರಣ, ಸೇಚನ, ಶಕ್ತಿಪ್ರದನು ಆದ ಇಂದ್ರನು ಸರ್ವದೇವ ಪೂಜಿತನಾಗಿರುವನು. 'ನೀನೇ ಇಂದ್ರ ನಾಗು!' ಎಂದು ನುಡಿದ ಋಷಿ ದೇವರಾಜರಿಗೆ ಕುಮಾರನಿಂತೆಂದನು—'ಇಂದ್ರ! ನನಗೆ ಇಂದ್ರಪದವಿಯು ಬೇಕಾಗಿಲ್ಲ. ನೀನೇ ಇಂದ್ರನಾಗಿರು! ನಾನು ನಿನ್ನ ಕಿಂಕರ ನೆಂದು ತಿಳಿ! ಹೇಳು! ನನ್ನಿಂದ ಯಾವ ಸಹಾಯವನ್ನು ಬೇಡುವೆ?' ಆ ಮಾತನ್ನಾಲಿಸಿ, ಇಂದ್ರನು ಪ್ರೀತನಾಗಿ ಕುಮಾರನನ್ನು ತನ್ನ ಸ್ನೇಹಿತನೆಂದು ಸ್ವೀಕರಿ ಸಿದನು. ಮತ್ತು 'ನೀನು ಸೇನಾಪತಿಯಾಗಿ, ಸಕಲ ದಾನವರನ್ನು ನಾಶಮಾಡು! ದೇವತೆಗಳನ್ನು ಆಶ್ರಯವಿತ್ತು ಸಲಹು! ಗೋ ಬ್ರಾಹ್ಮಣ ಹಿತವನ್ನು ಸಾಧಿಸು!' ಎಂದು ಅವನಿಗೆ ದೇವಸೇನೆಯನ್ನಿತ್ತು, ಮದುವೆ ಮಾಡಿದನು.

ವಿಶ್ವಕರ್ಮನು ತ್ರಿಪುರಸಂಹಾರ ಕಾಲದಲ್ಲಿ ಮಹಾದೇವನು ಧರಿಸಿದಂತಹ ಕಾಂಚನ ಮಾಲೆಯನ್ನು ನಿರ್ಮಿಸಿ ಕುಮಾರನಿಗೆ ಸಮರ್ಪಿಸಿದನು. ಕಾಂಚನದಂಡ ಮಂಡಿತವಾದ ಪೀತಛತ್ರದಡಿಯಲ್ಲಿ ಕೂತು ಅಭಿಷಿಕ್ತನಾದ ದೇವಸೇನಾಪತಿಯು ಎರಡನೇ ಅಗ್ನಿಯಂತೆ ಪ್ರಕಾಶಿಸಿದನು. ಕುಕ್ಕುಟವು ಅವನ ಧ್ವಜದಲ್ಲಿ ಚಿಹ್ನಿತವಾಗಿ ಶೋಭಿಸಿತು. ಇಂತು ರುದ್ರ, ಅಗ್ನಿ, ಸ್ವಾಹಾ, ಕೃತ್ತಿಕಾ ಷಟ್ಕರಿಗೆ ಮಗನೆನಿಸಿ, ಗಂಗಾ, ಶರವಣಗಳಿಂದ ಧರಿಸಲ್ಪಟ್ಟ ಕುಮಾರನು ಆಗ್ನೇಯ, ಕಾರ್ತಿಕೇಯ, ಗಾಂಗೇಯ, ಶರವಣಭವ, ರುದ್ರಸುತರೆಂಬ ನಾಮಗಳನ್ನು ಪಡೆದನು. ಶಕ್ತಿ, ಧರ್ಮ, ಬಲ, ತೇಜ, ಕಾಂತಿ, ಸತ್ಯ, ಬುದ್ಧಿ, ಬ್ರಹ್ಮಣ್ಯ, ಜ್ಞಾನ, ಕಾರುಣ್ಯ, ಶತ್ರು ನಿಕೃಂತನ, ಲೋಕರಕ್ಷಣಗಳೆಂಬ ಹನ್ನೆರಡು ಗುಣಗಳು ಸ್ಕಂದನ ಸಹಜಗುಣಗಳು. ವಿನತಾ, ಕದ್ರೂ, ಪೂತನಾ, ಕಷ್ಟಾ, ರೇವತಿ, ಕೋಟರಾ ಬಕೀ ಮೊದಲಾದ ಕ್ರೂರ

ಭೂತ ಪ್ರೇತ ಪಿಶಾಚಗಳು ಬಾಲಗ್ರಹಿಗಳಾಗಿ, ಗರ್ಭಸ್ಥ ಶಿಶು ಸಂಹರಣವನ್ನು ದ್ವಾದಶ ವರ್ಷವಾಗದ ಬಾಲ ಬಾಲಿಕೆಯರ ಸಂಹಾರವನ್ನು ಮಾಡುತ್ತಿರುವರು. ಇವರೆಲ್ಲರೂ ಋಷಿಪತ್ನಿಯರಾಗಿದ್ದು, ಅವರಿಂದ ತ್ಯಕ್ತರಾದ ರಾಕ್ಷಸಿಯರು. ಅವರನ್ನು ಬಲಿ ಪೂಜಾದಿಗಳಿಂದ ಪೂಜಿಸಿದರೆ ಅವರು ಪೀಡಾಕರರಾಗುವುದಿಲ್ಲ. ಆಸ್ತಿಕರಿಗೆ, ಆಚಾರವಂತರಿಗೆ ಅವರ ಭಯವಿಲ್ಲ. ಇಂತು ಸ್ಕಂದನಂತಹ ಸುಪುತ್ರನನ್ನು ಪಡೆದು, ಸ್ವಾಹಾದೇವಿಯು ಅವನ ವರದಿಂದ ತನ್ನ ಪತಿಯಾದ ಅಗ್ನಿ ಪ್ರೀತಿಯನ್ನು ಸ್ವಾಹಾ ಸ್ವಾಹಾ! ಎಂದು ಹೋಮಿಸುವುದರಿಂದ ಅಗ್ನಿಯನ್ನು ಎಡೆಬಿಡದಿರುವ ಸೌಭಾಗ್ಯ ವನ್ನು ಪೊಂದಿದಳು.

ಪಿಶಾಚ ಮಾತೃ ಭೂತ ಪರಿವಾರದಿಂದಲು, ದೇವಸೈನ್ಯದಿಂದಲು ಕೂಡಿ ಕುಮಾರನು ಪ್ರಕಾಶಮಾನನಾದನು. ಅವನಿಂದ ಕಾಂಚನ ಶೈಲವೂ, ಮೇರು ಮಂದರ ಕಂದರಗಳೂ ಶೋಭಾಸಂಪನ್ನವಾದವು. ಕುಮಾರನು ಸೇನಾಪತಿ ಪದವಿ ಯಲ್ಲಿ ಅಭಿಷಿಕ್ತನಾದುದನ್ನು ಕೇಳಿ, ಶ್ರೀಶಂಕರನು ಪಾರ್ವತಿಯೊಡನೆ ರಥಾರೂಢ ನಾಗಿ, ಕುಮಾರನಿದ್ದ ಭದ್ರವಟವನ್ನು ಬಂದು ಸೇರಿದನು. ಮಹಾದೇವಸಖನಾದ ಧನೇಶನೂ ನರವಾಹನನಾಗಿ ಬಂದನು. ಐರಾವತಾರೂಢನಾದ ಇಂದ್ರನು ವಿವಿಧ ದಿವ್ಯಾಯುಧಪಾಣಿಗಳಾದ ದೇವಸೈನಿಕರಿಂದ ಕೂಡಿ ಬಂದನು. ಯಮರಾಜನು ಮೃತ್ಯುವ್ಯಾಧಿಗಳಿಂದ ಕೂಡಿ ಮಹಿಷವಾಹನನಾಗಿ ಬಂದನು. ಸಲಿಲೇಶನಾದ ವರುಣನು ಪಾಶಧರನಾಗಿ ಬಂದನು. ಋಷಿಗಂಧರ್ವರೂ ಅನುಸರಿಸಿದರು. ಸುಂದರ ದೇವಾಂಗನೆಯರು ಶಿವನ ಶಿರಸ್ಸಿನಲ್ಲಿ ಸುಮವೃಷ್ಟಿಯನ್ನು ಮಾಡುತ್ತಾ, ಪಾಡುತ್ತಾ, ಹಿಂಬಾಲಿಸಿದರು. ತನಗೆದುರಾಗಿ ಬಂದು ವಂದಿಸಿ ನಿಂತ ಕುಮಾರನನ್ನು ನೋಡಿ, 'ಪುತ್ರ! ನಾನು ನೆನೆಸಿದಾಗ ಬಂದು ನಿಲ್ಲಬೇಕು! ನನ್ನ ದರ್ಶನದಿಂದ ನಿನಗೆ ಶ್ರೇಯಸ್ಸಾಗುವುದು. ನನ್ನ ಭಕ್ತನಾಗಿರು. ನನ್ನ ಅಂತರ್ಯಾಮಿಯಾದ ಶ್ರೀಹರಿ ಯನ್ನು ಮರೆಯದೆ ಭಜಿಸು!' ಎಂದಾಜ್ಞಾಪಿಸಿದನು. ಮಗನನ್ನಪ್ಪಿ, ತಲೆಮೂಸಿ, ಶಂಕರನು ಬೀಳ್ಕೊಳ್ಳಲಿರುವಾಗ ಭಯಂಕರೋತ್ಪಾತಗಳಾದವು. ಆಕಾಶವು ಉರಿ ಯುತ್ತಿರುವಂತೆ ತೋರಿತು. ನಕ್ಷತ್ರಗಳು ಉದುರಿದುವು. ಭೂಮಿಯು ನಡುಗಿತು. ಜಗವೆಲ್ಲ ಕತ್ತಲು ಮುಸುಗಿತು. ಉಮಾಶಂಕರರು ಸಂಭ್ರಮಕಾತರರಾಗಿ ನೋಡು ವಾಗ, ದೈತ್ಯಸೈನ್ಯವು ಬಂದು, ದೇವಸೈನ್ಯವನ್ನು ಮುತ್ತಿತು. ಆಕಾಶದಿ ನಿಂತು, ಮಾಯಾಯುದ್ಧವನ್ನು ಮಾಡುವ ದಾನವರಿಗೆ ಹೆದರಿ ದೇವಸೈನ್ಯವು ಓಡತೊಡಗಿತು.

ಇಂದ್ರನು ತನ್ನ ಸೈನಿಕರನ್ನು ಸಂಬೋಧಿಸಿ, 'ಓಡಬೇಡಿ! ಸ್ಥಿರವಾಗಿ ನಿಲ್ಲಿ! ನಮಗೆ ಭಯವಿಲ್ಲ!' ಎಂದು ಅವರನ್ನು ಹಿಂದಿರುಗಿಸಿದನು. ದೈತ್ಯರೂ ವಿಜೃಂಭಿಸಿ ಕಾದಿದರು. ದೇವದಾನವರ ಭಯಂಕರ ಸಂಗ್ರಾಮವು ಬೀಭತ್ಸವಾಯಿತು. ಕೊಂಬು ಕಹಳೆಗಳನ್ನೂದಿ, ಭೇರೀದುಂದುಬಿಗಳನ್ನು ಬಡಿದು, ಶಸ್ತ್ರಗಳನ್ನು ಪಿಡಿದು, ಕಡಿ- ದಾಡುವ ವೀರಭಟರ ಸಿಂಹನಾದಗಳೊಡನೆ ಕೆಳಗೆ ಬಿದ್ದು ಸಾಯುವವರ ಆರ್ತನಾದ

ಗಳು ಬೆರೆತು, ದಿಕ್ಕು ವಿದಿಕ್ಕುಗಳಲ್ಲಿ ಮಾರ್ನೊಳಗಿದವು. ಆಗ ಮಹಿಷನೆಂಬ ದಾನವನು ಪರ್ವತಶೃಂಗವನ್ನೆತ್ತಿಮುತ್ತಲು, ನೋಡಿ ಹೆದರಿದ ದೇವಗಣವು ದಿಕ್ಕೆಟ್ಟು ಪಲಾಯನ ಮಾಡಿತು. ಅವನೊಗೆದ ಗಿರಿಯ ಬುಡದಿ ಸಿಕ್ಕ, ಸಾವಿರಾರು ದೇವತೆ ಗಳು ನಾಶವಾದರು. ಸಿಂಹವನ್ನು ನೋಡಿ ಚಲ್ಲಾಚದರಾಗುವ ಕುರಿಗಳಂತೆ ದೇವತೆ ಗಳು ರಣರಂಗದಲ್ಲಿ ನಿಲ್ಲದೆ ಓಡಿದರು. ಇಂದ್ರನೂ ಭೀತನಾಗಿ ಓಡಿಹೋದನು. ಮಹಿಷಾಸುರನು ರುದ್ರರಥವನ್ನು ಮುತ್ತಿದಾಗ ರುದ್ರನು ಮಗನನ್ನು ನೆನೆದನು.

ಮಹಿಷಾಸುರನ ಪರಾಕ್ರಮವನ್ನು ಕಂಡು ದೈತ್ಯರು ವೇಲಾತಿಕ್ರಮಣವನ್ನು ಮಾಡುವ ಸಾಗರದಂತೆ ಉಕ್ಕೇರಿ, ದೇವಸೈನ್ಯವನ್ನು ನಾಶಪಡಿಸಿದರು. ಸುರರು ದಿಕ್ಕೆಟ್ಟು ಓಡುತ್ತಿದ್ದರು. ಆಗ ಮಹಾಸೇನನು ಯುದ್ಧಸನ್ನದ್ಧನಾಗಿ ಕುಕ್ಕುಟ ಧ್ವಜಾಲಂಕೃತನಾದ ದಿವ್ಯರಥವನ್ನೇರಿ, ರಣರಂಗವನ್ನು ಪ್ರವೇಶಿಸಿದನು. ರುದ್ರನಿಗೆ ವಂದಿಸಿದನು. ಕುಮಾರನು ಮಹಿಷನನ್ನೆದುರಿಸಿ ನಿಂತನು. ಕುಮಾರನು ತನ್ನ ದಿವ್ಯಶಕ್ತಿಯನ್ನು ಪ್ರಯೋಗಿಸಿ, ಮಹಿಷಾಸುರನ ಕತ್ತನ್ನು ಕತ್ತರಿಸಿ, ಅವನನ್ನು ಸಂಹರಿಸಿದನು. ಅದನ್ನು ಕಂಡು ಭೀತರಾಗಿ ಓಡುತ್ತಿರುವ ದೈತ್ಯರನ್ನೆಲ್ಲ ಕೊಂದು ಕುಮಾರಶಕ್ತಿಯು ಮತ್ತೆ ಹಸ್ತವನ್ನಲಂಕರಿಸಿತು. ಸ್ಕಂದಪರಿವಾರವೂ ಬಿಡದೆ ವಿಜೃಂಭಿಸಿ, ದಾನವ ಸೈನಿಕರನ್ನು ಕೆಡಹಿ ತಿಂದು, ಅವರ ರಕ್ತವನ್ನು ಕುಡಿದು, ರಣ ಭೂಮಿಯನ್ನು ನಿರ್ದಾನವನನ್ನಾಗಿಸಿತು. ಸೂರ್ಯನು ತಮಸ್ಸನ್ನು ಕಳೆದಂತೆ, ದೈತ್ಯದಾನವರನ್ನು ನಿರ್ಮೂಲಿಸಿದ ಸ್ಕಂದನನ್ನು ನೋಡಿ, ದೇವತೆಗಳು ಜಯ ಜಯ ಶಬ್ದಗಳನ್ನು ಮಾಡಿ, ಹೂಮಳೆ ಕರೆದು, ಅವನನ್ನು ಪ್ರಶಂಸಿಸಿದರು. ಮಹಾದೇವನು ಅವನನ್ನಾಶೀರ್ವದಿಸಿ ಕೈಲಾಸಕ್ಕೆಂದು ತೆರಳಿದನು.

ಇಂದ್ರನು ಕುಮಾರನನ್ನಪ್ಪಿ, 'ಸ್ಕಂದ! ಬ್ರಹ್ಮದೇವನ ವರದಿಂದ ಮಹಿಷನನ್ನು ಕೊಂದೆ. ದೇವಕಂಟಕನನ್ನು ಕಿತ್ತೊಗೆದ ನಿನ್ನ ಪರಾಕ್ರಮವು ಅಸದೃಶವಾಗಿದೆ. ಮಹಿಷನಂತೆ ದೇವಶತ್ರುಗಳನ್ನು ಸಾವಿರಾರು ದುಷ್ಟದಾನವರನ್ನು ನೀನು ಸಂಹರಿಸಿ, ನಮಗೆ ಮಹದುಪಕಾರವನ್ನು ಮಾಡಿರುವೆ. ಇದು ನಿನ್ನ ಪ್ರಥಮ ವಿಜಯವು. ಇಂತಹ ವಿಜಯಗಳು ನಿನಗೆ ನಿತ್ಯವಾಗಲಿ! ನಿನ್ನ ಕೀರ್ತಿಯು ಅಕ್ಷಯವಾಗಿ ಮೂರ್ಲೋಕಗಳಲ್ಲಿ ಬೆಳಗಲಿ! ನನ್ನ ಪ್ರಜರಾದ ದೇವಗಂಧರ್ವ ಮುನಿ ಮಾನವರು ನಿನಗೆ ವಶರಾಗಿ, ನಿನ್ನನ್ನು ಪೂಜಿಸುವರು' ಎಂದು ಪೊಗಳಿದನು. ಇಂತು ರುದ್ರಾಗ್ನಿ ಕೃತ್ತಿಕಾ ಪುತ್ರನಾದ ಸ್ಕಂದನ ಪುಣ್ಯಕಥೆಯನ್ನು ನಿನಗೆ ತಿಳಿಸಿದೆನು. ಧರ್ಮರಾಜ! ಇದನ್ನು ಹೇಳಿ ಕೇಳಿದವರು ಪುಷ್ಟಿ ತುಷ್ಟಿ ಬಲಾಯುಸ್ಸುಗಳನ್ನು ಹೊಂದುವರು.

ಆಗ್ನೇಯ, ಸ್ಕಂದ, ದೀಪ್ತಕೀರ್ತಿ, ಅನಾಮಯ, ಮಯೂರಕೇತು, ಧರ್ಮಾತ್ಮ, ಭೂತೇಶ, ಮಹಿಷಾರ್ದನ, ಕಾಮಜಿತ್, ಕಾಮದ, ಕಾಮ, ಸತ್ಯವಾಕ್, ಭುವನೇಶ್ವರ, ಶಿಶು, ಶೀಘ್ರ, ಶುಚಿ, ಚಂಡ, ದೀಪ್ತವರ್ಣ, ಶುಭಾನನ, ಅಮೋಘ, ಅನಘ, ರೌದ್ರ, ಪ್ರಿಯ, ಚಂದ್ರಾನನ, ದೀಪ್ತಶಕ್ತಿ, ಪ್ರಶಾಂತಾತ್ಮ, ಭದ್ರಕೃತ್,

ಕೂಟಮೋಹನ, ಷಷ್ಠೀಪ್ರಿಯ, ಪವಿತ್ರ, ಭ್ರಾತೃವತ್ಸಲ, ಕನ್ಯಾಭರ್ತಾ, ವಿಭಕ್ತ ಸ್ವಾಹೇಯ, ರೇವತೀಸುತ, ಪ್ರಭು, ನೇತಾ, ವಿಶಾಖ, ನೈಗಮೇಯ, ಸುದುಶ್ಚರ, ಸುವ್ರತ, ಸುಲಲಿತ, ಬಾಲಕ್ರೀಡನಕಪ್ರಿಯ, ಖಚಾರಿ, ಬ್ರಹ್ಮಚಾರಿ, ಶೂರ, ಶರವಣೋದ್ಭವ, ವಿಶ್ವಾಮಿತ್ರಪ್ರಿಯ, ದೇವಸೇನಾಪತಿ, ವಾಸುದೇವಪ್ರಿಯ, ಪ್ರಿಯ ಕೃತ್, ವಿಷ್ಣುಭಕ್ತ, ಸುಬ್ರಹ್ಮಣ್ಯ, ಬ್ರಹ್ಮಪ್ರಿಯ, ಬ್ರಾಹ್ಮಣನೇತಾ, ಪರಮಪವಿತ್ರ, ಷಡರ್ಚಿ, ಸಂವತ್ಸರ ಋತುಪ್ರವರ್ತಕ, ಪುಷ್ಕರಾಕ್ಷ, ಅರವಿಂದವದನ, ಸಂಭಾವನ, ಸುರಾಸುರನಾಯಕ, ಪ್ರಚಂಡ, ದ್ವಾದಶನೇತ್ರ, ಕುಮಾರನೆಂಬ ನಾಮಗಳನ್ನು ಪಠಿಸಿದವನು ಆಯುಃ ಪುಣ್ಯ ಶತ್ರುಜಯಗಳನ್ನು ಹೊಂದುವನು.

## ಸತ್ಯಾ-ದ್ರೌಪದೀ ಸಂವಾದ

ವೈಶಂಪಾಯನನು ಜನಮೇಜಯನಿಗೆ ಹೇಳಿದನು—'ರಾಜನ್! ಧರ್ಮಜಾದಿಗಳು ಮಾರ್ಕಂಡೇಯನಿಂದ ನಾನಾಖ್ಯಾನಗಳನ್ನು ಕೇಳಿ ಸಂತೋಷಪಟ್ಟರು. ಒಂದು ದಿನ ಸತ್ಯಾ ದ್ರೌಪದಿ ಒಂದೆಡೆ ಕೂತು ಮಾತಾಡುತ್ತಿದ್ದರು. ಅತ್ತಿಗೆಯು ನಾದಿನಿಯನ್ನು ನಗಿಸುತ್ತಿದ್ದಳು. ನಾದಿನಿಯ ಮಾತಿನ ಮುತ್ತುಗಳು ಸತ್ಯಾದೇವಿಯ ಮಂದಹಾಸದಲ್ಲಿ ಬೆಳಗುತ್ತಿದ್ದವು. ಚಿತ್ರಕಥಾಂತರದಲ್ಲಿ ಸತ್ಯಭಾಮೆಯು ದ್ರೌಪದಿಯನ್ನು ನೋಡಿ, ನಗುತ್ತ ಇಂತು ಪ್ರಶ್ನಿಸಿದಳು—

"ದ್ರೌಪದಿ! ಪಾಂಡವರು ನಿನಗೆ ವಶರಾಗಿ, ನಿನ್ನಲ್ಲಿ ಪ್ರೀತರಾಗಿ, ನಿನ್ನನ್ನು ಕೋಪಿಸದೆ ವರ್ತಿಸುವುದನ್ನು ನೋಡಿರುವೆನು. ಯಾವ ವ್ರತ, ತಪಸ್ಸು, ತೀರ್ಥ, ಮಂತ್ರೌಷಧ ವಿದ್ಯಾ, ಜಪ, ಹೋಮಾದಿಗಳಿಂದ ಅವರ ಪ್ರೀತಿಯನ್ನು ಸಂಪಾದಿಸಿದೆ? ಹೇಳು!"

ಆ ಮಾತನ್ನಾಲಿಸಿ ದ್ರೌಪದಿಯು ದೇವಿಯ ಮುಖವನ್ನು ದಿಟ್ಟಿಸಿ ನೋಡಿದಳು. ಅವಳಿಗೆ ಹುಸಿನಗೆ ಬಂತು. ಆ ಪತಿವ್ರತೆ ಇಂತೆಂದಳು—

"ಸತ್ಯೇ! ದುಷ್ಟ ಸ್ತ್ರೀಯರ ಆಚರಣೆಯನ್ನು ಕೇಳುತ್ತಿರುವೆ, ಅಲ್ಲವೆ? ಅದು ನನ್ನಲ್ಲಿಲ್ಲ. ಈ ಸಂಶಯವು ನಿನಗೇಕೆ ಬಂತು? ಅಥವಾ ಲೋಕವೃತ್ತವನ್ನು ಶಿಕ್ಷಿಸಲೆಣಿಸಿ ಪ್ರಶ್ನಿಸುತ್ತಿರುವೆ ಎಂದು ತೋರುತ್ತಿದೆ. ಕೇಳು—

"ಮಂತ್ರ ತಂತ್ರಗಳನ್ನು ಬಳಸಿ, ಬೇರು ಮದ್ದುಗಳನ್ನಿಟ್ಟು ಗಂಡನನ್ನು ವಶಪಡಿಸಿಕೊಳ್ಳಲು ಹವಣಿಸುವ ಮಡದಿಯ ಮರ್ಮ ಹೊರಬೀಳದಿರದು. ಅಂತಹವಳನ್ನು ನೋಡಿ ಪುರುಷನು ಮನೆಯಲ್ಲಡಗಿದ್ದ ಮಹಾಸರ್ಪವೆಂದು ತಿಳಿದು, ಅಂಜಿ ದೂರನಾಗುವನು. ಅವನಿಗೆ ಮನಶ್ಶಾಂತಿಯು ದೂರವಾಗಲು, ಪತಿಯಂತೆ ಪತ್ನಿಯು ಸುಖದೂರಳಾಗುವಳು. ಮಂತ್ರಾದಿ ದುಷ್ಟೋಪಾಯಗಳಿಂದ ಪತಿಯ ವಶೀಕರಣವು ಎಂದಿಗೂ ಸಾಧ್ಯವಿಲ್ಲ. ತಿನ್ನಲು ಕೊಡುವ ಭಕ್ಷ್ಯದಲ್ಲಿದ್ದ ಮದ್ದು, ಮೈಗೆ ತಿಕ್ಕುವ ಲೇಪನಗಳಿಂದ ಗಂಡನು ಸಾಯುವನು. ಬದುಕಿದ್ದರೂ ಅವನು ಜಲೋದರ,

ಕುಷ್ಟ, ಉನ್ಮಾದಾದಿ ರೋಗಗ್ರಸ್ತನಾಗುವನು. ಜಡನೋ, ಬಧಿರನೋ, ಅಂಧನೋ, ನಪುಂಸಕನೋ ಆಗಿ ಶೀಘ್ರದಲ್ಲೇ ಸಾಯುವನು. ಇಂತಹ ಪಾಪಾಚಾರರತರಾದ ದುಷ್ಟ ತರುಣಿಯರಿಂದ ದೂರವಿರುವುದು ಲೇಸು.

"ಸತ್ಯೆ! ನಾನು ಪಾಂಡವರನ್ನು ಪ್ರೀತಿ ವಿಶ್ವಾಸಗಳಿಂದ ವಶಪಡಿಸಿಕೊಂಡಿರುವೆನು. ಸತ್‌ಸ್ತ್ರೀಯರಿಗೆ ಸತ್‌ಪತಿಗಳು ವಶರಾಗಿ ಕಾಮಧೇನು ಚಿಂತಾಮಣಿಗಳಂತೆ ಸರ್ವಾಭೀಷ್ಟಗಳನ್ನು ಪೂರೈಸುವರು. ಸತ್‌ತರುಣಿಯು ದುರಹಂಕಾರ, ಧರ್ಮನಿಂದಾ, ದರ್ಪ, ಕಾಮ, ಕ್ರೋಧಗಳನ್ನು ಬಿಟ್ಟುಬಿಡುವಳು. ಪತಿಚಿತ್ತವನ್ನರಿತು ಸವತಿಯರನ್ನು ಪ್ರೇಮ ವಿಶ್ವಾಸದಿಂದ ಲಾಲಿಸಿ, ಅವರಿಗೆ ಸಕಾಲದ ಸರ್ವೋಪಚಾರಗಳನ್ನು ಮಾಡುತ್ತಾ, ಕಟುವಾಗಿ ಮಾತನಾಡದೆ, ಕೆಟ್ಟ ಕಣ್ಣಿನಿಂದ ನೋಡದೆ, ಅಕ್ಕಸವಿಲ್ಲದೆ ವರ್ತಿಸುವ ಸತಿಯನ್ನು ಪತಿಯು ಪ್ರೀತಿಸುವನು. ದೇವ ಮನುಜ ಗಂಧರ್ವ ದಾನವಾದಿ ಸರ್ವಪುರುಷರಲ್ಲಿ ಪತಿಗಿಂತ ಸುಂದರರು, ಐಶ್ವರ್ಯವಂತರು, ಅಲಂಕೃತರು ಇರಬಹುದು. ಆದರೆ ನನಗೆ ಪತಿಯೇ ಪುರುಷೋತ್ತಮನು. ಪತಿಯು ಉಂಡಮೇಲೆ ಉಂಡು, ಅವನು ಆಸೀನನಾದಮೇಲೆ ಕೂತು, ಏಳದ ಮುನ್ನ ನಿದ್ರೆಯಿಂದೆದ್ದು, ಕಿಂಕರಶತವಿದ್ದರೂ ನಾನೇ ಉಪಚರಿಸುವೆನು. ಗ್ರಾಮಾಂತರದಿಂದ ಬಂದಾಗ ಎದುರ್ಗೊಂಡು ಪಾದ್ಯಾದಿಗಳನ್ನಿತ್ತು, ಕೂಡಿಸಿ, ಜಲೋಪಹಾರಗಳನ್ನು ಕೊಟ್ಟು ಸೇವಿಸುವೆನು.

"ಮನೆಯನ್ನು, ಪಾತ್ರಾದಿಗಳನ್ನು ಶುಭ್ರವಾಗಿಟ್ಟಿರುವೆನು. ಕಾಲವನ್ನತಿಕ್ರಮಿಸದೆ ಅನ್ನಾದಿಗಳನ್ನು ಕೊಡುವೆನು. ಅವನಿತ್ತ ಧನವನ್ನು ರಕ್ಷಿಸಿ ಮನೆಗೆ ಉಪಯೋಗಿಸುವುದಲ್ಲದೆ, ಕೇಳಿದಾಗ ಅವನಿಗೂ ಕೊಡುವೆನು. ನೀಚವಾಗಿ ಅವ ಹೇಳನದಿಂದ ನಾನು ಎಂದಿಗೂ ಮಾತನಾಡದಿರುವೆನು. ದುಷ್ಟ ಸ್ತ್ರೀಯರ ಕೂಡ ಸ್ನೇಹವನ್ನು ಮಾಡುವುದಿಲ್ಲ, ಅವನು ನಕ್ಕರೆ ನಗುವೆನು. ದ್ವಾರದೇಶದಲ್ಲಿ, ಗೃಹಾರಾಮದಲ್ಲಿ, ಮನೆಯ ಜಗುಲಿಯಲ್ಲಿ ನಿಲ್ಲುವುದಿಲ್ಲ. ಸತ್ಯವನ್ನು ಬಿಡೆನು. ನನ್ನ ಪತಿಗೆ ಇಷ್ಟವಾಗದ ವಸ್ತುವು ನನಗೂ ವರ್ಜನೀಯವಾಗಿದೆ. ಅವನ ಆದೇಶವನ್ನು ಅಲಸಳಾಗದೆ ಬೇಗ ನಡೆಸುವೆನು. ನಿಮ್ಮತ್ತೆ ಹೇಳಿರುವ ಗೃಹಧರ್ಮಗಳನ್ನು ಬಿಡದೆ ಪಾಲಿಸುವೆನು. ಪರ್ವಕಾಲಗಳಲ್ಲಿ, ಹಬ್ಬಗಳಲ್ಲಿ ಹಗಲುರಾತ್ರಿ ಎನ್ನದೆ ದುಡಿದು, ಬಂದ ಅತಿಥಿ ವಿಪ್ರರನ್ನು ಪೂಜಿಸುವ ಪತಿಯ ಸಹಧರ್ಮಚರಿಯಾಗಿ ಪ್ರಸನ್ನವದನಳಾಗಿರುವೆನು.

"ಪತಿಯು ಸಿಟ್ಟಾದಾಗ ಶಾಂತಳಾಗಿ, ಶಾಂತನಾದಾಗ ಪ್ರಸನ್ನಳಾಗಿರುವೆನು. ಪತಿಯೇ ನನ್ನ ದೈವವು. ಪತಿಯೇ ನನಗೆ ಗತಿ. ಪತಿಗಿಂತಲೂ ನನಗೆ ಸೋದರ, ಪುತ್ರ ಮಾತುಲಾದಿಗಳು ಹೆಚ್ಚಲ್ಲ. ಅವರ ಸೇವೆಯಲ್ಲಿ ಸದಾ ಜಾಗೃತಳಾಗಿರುವೆನು. ವಸ್ತ್ರಭೂಷಣ ಭೋಜನಾದಿಗಳಲ್ಲಿ ಪತಿಯನ್ನು ಅತಿಶಯಿಸದಿರುವೆನು. ಅವನಿಗೆ ಹಿತವಾಗುವಂತೆ ವರ್ತಿಸುವೆನು.

"ಧರ್ಮರಾಜನ ಮನೆಯಲ್ಲಿ ನಿತ್ಯವೂ ಎಂಟು ಸಾವಿರ ವಿಪ್ರೋತ್ತಮರು ಬಂಗಾರದ ಪಾತ್ರೆಗಳಲ್ಲಿ ಮೃಷ್ಟಾನ್ನವನ್ನು ಉಣ್ಣುವರು. ಎಂಭತ್ತೆಂಟು ಸಾವಿರ ಸ್ನಾತಕರೂ ಇರುವರು. ವೇದವಾದಿಗಳಾದ ವಿಪ್ರರೆಂದರೆ ನನ್ನ ಪತಿಗೆ ಪ್ರಾಣ ಸಮಾನರು. ಅಂತಹ ಬ್ರಾಹ್ಮಣರನ್ನು ನಾನೆಂದಿಗೂ ಅಪಮಾನಿಸುವುದಿಲ್ಲ. ನನ್ನ ಮನೆಯಲ್ಲಿರುವ ಸಾವಿರಾರು ದಾಸದಾಸಿಯರ ಪರಿಚಯವೆನಗಿದೆ. ಅವರ ನಾಮ, ರೂಪ, ವೃತ್ತಿ ಗುಣ ವೇತನಾದಿಗಳೆಲ್ಲವೂ ನನಗೆ ಕರತಲಾಮಲಕವಾಗಿದೆ. ಧರ್ಮ ರಾಜನ ಪರಿವಾರದ ಯೋಗಕ್ಷೇಮಗಳು ನನ್ನ ವಶವಾಗಿರುವುದರಿಂದ ಮಹಾರಾಜನು ನಿಶ್ಚಿಂತನಾಗಿದ್ದನು. ಒಂದು ಲಕ್ಷ ಕುದುರೆಗಳು, ಹತ್ತು ಸಾವಿರ ಆನೆಗಳು, ದಾಸ ದಾಸೀಜನ ಸಹಸ್ರ, ಅಂತಃಪುರದ ಭೃತ್ಯರು, ಭೀಮಾದಿ ಸೋದರರ ಪರಿವಾರ, ಶಸ್ತ್ರಾಸ್ತ್ರ ವಾಹನಾದಿಗಳು, ಇವೆಲ್ಲವನ್ನೂ ಚನ್ನಾಗಿ ವಿಚಾರಿಸಿ, ಪೋಷಣ ರಕ್ಷಣಾದಿ ಗಳನ್ನು ನಡೆಸುತ್ತಿದ್ದೆನು. ಮಹಾರಾಜನ ಆಯವ್ಯಯಾದಿಗಳೂ ನನಗೆ ಗೊತ್ತಿತ್ತು. ಇಂತು ನಡೆದು ನಾನು ಪತಿಪ್ರೀತಿಯನ್ನು ಸಂಪಾದಿಸಿರುವೆನು. ಇದೇ ನನ್ನ ವಶೀ ಕರಣ ಮಂತ್ರ. ದುಷ್ಟ ತರುಣಿಯರಂತೆ ಮಾಟಮದ್ದುಗಳನ್ನು ಮಾಡಿ ನಾನರಿಯೆನು.

"ಸತ್ಯಭಾಮೆ! ನಿನಗೆ ತಿಳಿಯದುದಿಲ್ಲ, ಮಹಾಪತಿವ್ರತೆಯಾದ ನಿನಗೆ ತಿಳಿಸುವ ಯೋಗ್ಯತೆ ನನಗಿಲ್ಲ. ಆದರೂ ಕೇಳು! ನಮ್ಮಣ್ಣನಾದ ಶ್ರೀಕೃಷ್ಣ ನನ್ನು ವಶಪಡಿಸಿಕೊಳ್ಳುವ ಒಂದು ಮಹಾಮಂತ್ರವಿದೆ. ಅದನ್ನು ಜ್ಞಾನಿಗಳು ಭಕ್ತಿ ಎಂಬುವರು. ಭಕ್ತಿಯಿಂದ ಪತಿಸೇವೆ ಮಾಡಿದ ರಮಣಿಗೆ ದುರ್ಲಭವಾದುದಿಲ್ಲ. ಶಯ್ಯಾ, ಆಸನ, ವಸ್ತ್ರ, ಗಂಧ, ಭಕ್ಷ್ಯ, ಪೇಯ, ಸಂತಾನಾದಿ ಇಹಲೋಕ ಸುಖ ಗಳಲ್ಲದೆ, ಸ್ವರ್ಗಾದಿ ಪರಲೋಕ ಸುಖಗಳೂ ಪತಿವ್ರತೆಗೆ ಹಿತ್ತಲ ಕಾಮಧೇನುವಿನ ಕ್ಷೀರವೆಂದು ತಿಳಿ! ಅಂತಹ ಸುಖವು ಕಷ್ಟಪಟ್ಟು ಪತಿಸೇವೆ ಮಾಡಿದ ಮಡದಿಗೆ ಮೀಸಲಾಗಿದೆ. ಇಂತಹ ಸತಿಗೆ ಪತಿಯಾದೆನೆಂದು ಹೆಮ್ಮೆಪಡುವಂತೆ, ಪತಿಯನ್ನು ಅವನಿತ್ತ ಗಂಧಮಾಲ್ಯಾದಿಗಳಿಂದ ಮನಃಪೂರ್ವಕವಾಗಿ ಸೇವಿಸು! ಪತಿಗೆ ಪ್ರಿಯ ರಾದವರನ್ನು ಭೋಜನಾದ್ಯುಪಚಾರಗಳಿಂದ ಸಂತೋಷಪಡಿಸು! ಪತಿಯು ಪೇಳಿದ ಮಾತನ್ನು ಗುಟ್ಟಾಗಿಟ್ಟು ಕಾಪಾಡು! ಅವನ ದ್ವೇಷಿಗಳ ಕೂಡ ಸಂಭಾಷಣಾದಿ ಸಂಪರ್ಕವನ್ನು ಕಡಿ! ಕುಲೀನರು, ಅಪಾಪರು, ಪತಿವ್ರತೆಯರು ಆದ ರಮಣಿ ಯರನ್ನು ಮಾತ್ರ ಹತ್ತಿರ ಸೇರಿಸು! ಇಂತು ನಡೆದ ವನಿತೆ ಪತಿಪ್ರೀತಿಪಾತ್ರಳಾಗಿ ಉಭಯಲೋಕ ಸುಖವನ್ನು ಸೂರೆಗೊಳ್ಳುವಳು."

ಆ ಮಾತನ್ನಾಲಿಸಿ ಸತ್ಯಾದೇವಿ ದ್ರೌಪದಿಯನ್ನು ಮನದಿ ಮೆಚ್ಚಿ, ಅಭಿನಂದಿ ಸಿದಳು. ಲೋಕಜನನಿಯ ಲೀಲಾಕೌತುಕವನ್ನರಿತು ಪಾಂಚಾಲಿಯು ಧನ್ಯಳಾದಳು. ಜನಾರ್ದನನು ಮಾರ್ಕಂಡೇಯಾದಿ ವಿಪ್ರರನ್ನೂ, ಪಾಂಡವರನ್ನೂ ಬೀಳ್ಕೊಂಡು ರಥಾರೂಢನಾಗಿ ಸತ್ಯಾದೇವಿಯೊಡನೆ ದ್ವಾರಕೆಗೆ ಪೋದನು.

ಕುಷ್ಟ, ಉನ್ಮಾದಾದಿ ರೋಗಗ್ರಸ್ತನಾಗುವನು. ಜಡನೋ, ಬಧಿರನೋ, ಅಂಧನೋ, ನಪುಂಸಕನೋ ಆಗಿ ಶೀಘ್ರದಲ್ಲೇ ಸಾಯುವನು. ಇಂತಹ ಪಾಪಾ ಚಾರರತರಾದ ದುಷ್ಟ ತರುಣಿಯರಿಂದ ದೂರವಿರುವುದು ಲೇಸು.

"ಸತ್ಯೆ! ನಾನು ಪಾಂಡವರನ್ನು ಪ್ರೀತಿ ವಿಶ್ವಾಸಗಳಿಂದ ವಶಪಡಿಸಿಕೊಂಡಿರುವೆನು. ಸತ್‌ಸ್ತ್ರೀಯರಿಗೆ ಸತ್‌ಪತಿಗಳು ವಶರಾಗಿ ಕಾಮಧೇನು ಚಿಂತಾಮಣಿಗಳಂತೆ ಸರ್ವಾಭೀಷ್ಟಗಳನ್ನು ಪೂರೈಸುವರು. ಸತ್‌ತರುಣಿಯು ದುರಹಂಕಾರ, ಧರ್ಮ-ನಿಂದಾ, ದರ್ಪ, ಕಾಮ, ಕ್ರೋಧಗಳನ್ನು ಬಿಟ್ಟುಬಿಡುವಳು. ಪತಿಚಿತ್ತವನ್ನರಿತು ಸವತಿಯರನ್ನು ಪ್ರೇಮ ವಿಶ್ವಾಸದಿಂದ ಲಾಲಿಸಿ, ಅವರಿಗೆ ಸಕಾಲದ ಸರ್ವೋಪಚಾರ ಗಳನ್ನು ಮಾಡುತ್ತಾ, ಕಟುವಾಗಿ ಮಾತನಾಡದೆ, ಕೆಟ್ಟ ಕಣ್ಣಿನಿಂದ ನೋಡದೆ, ಅಕ್ಕಸವಿಲ್ಲದೆ ವರ್ತಿಸುವ ಸತಿಯನ್ನು ಪತಿಯು ಪ್ರೀತಿಸುವನು. ದೇವ ಮನುಜ ಗಂಧರ್ವ ದಾನವಾದಿ ಸರ್ವಪುರುಷರಲ್ಲಿ ಪತಿಗಿಂತ ಸುಂದರರು, ಐಶ್ವರ್ಯವಂತರು, ಅಲಂಕೃತರು ಇರಬಹುದು. ಆದರೆ ನನಗೆ ಪತಿಯೇ ಪುರುಷೋತ್ತಮನು. ಪತಿಯು ಉಂಡಮೇಲೆ ಉಂಡು, ಅವನು ಆಸೀನನಾದಮೇಲೆ ಕೂತು, ಏಳದ ಮುನ್ನ ನಿದ್ರೆಯಿಂದೆದ್ದು, ಕಿಂಕರಶತವಿದ್ದರೂ ನಾನೇ ಉಪಚರಿಸುವೆನು. ಗ್ರಾಮಾಂತರದಿಂದ ಬಂದಾಗ ಎದುರ್ಗೊಂಡು ಪಾದ್ಯಾದಿಗಳನ್ನಿತ್ತು, ಕೂಡಿಸಿ, ಜಲೋಪಹಾರಗಳನ್ನು ಕೊಟ್ಟು ಸೇವಿಸುವೆನು.

"ಮನೆಯನ್ನು, ಪಾತ್ರಾದಿಗಳನ್ನು ಶುಭ್ರವಾಗಿಟ್ಟಿರುವೆನು. ಕಾಲವನ್ನತಿಕ್ರಮಿಸದೆ ಅನ್ನಾದಿಗಳನ್ನು ಕೊಡುವೆನು. ಅವನಿತ್ತ ಧನವನ್ನು ರಕ್ಷಿಸಿ ಮನೆಗೆ ಉಪಯೋಗಿಸುವುದಲ್ಲದೆ, ಕೇಳಿದಾಗ ಅವನಿಗೂ ಕೊಡುವೆನು. ನೀಚವಾಗಿ ಅವ ಹೇಳನದಿಂದ ನಾನು ಎಂದಿಗೂ ಮಾತನಾಡದಿರುವೆನು. ದುಷ್ಟ ಸ್ತ್ರೀಯರ ಕೂಡ ಸ್ನೇಹವನ್ನು ಮಾಡುವುದಿಲ್ಲ, ಅವನು ನಕ್ಕರೆ ನಗುವೆನು. ದ್ವಾರದೇಶದಲ್ಲಿ, ಗೃಹಾರಾಮದಲ್ಲಿ, ಮನೆಯ ಜಗುಲಿಯಲ್ಲಿ ನಿಲ್ಲುವುದಿಲ್ಲ. ಸತ್ಯವನ್ನು ಬಿಡೆನು. ನನ್ನ ಪತಿಗೆ ಇಷ್ಟವಾಗದ ವಸ್ತುವು ನನಗೂ ವರ್ಜನೀಯವಾಗಿದೆ. ಅವನ ಆದೇಶ ವನ್ನು ಅಲಸಳಾಗದೆ ಬೇಗ ನಡೆಸುವೆನು. ನಿಮ್ಮತ್ತೆ ಹೇಳಿರುವ ಗೃಹಧರ್ಮ ಗಳನ್ನು ಬಿಡದೆ ಪಾಲಿಸುವೆನು. ಪರ್ವಕಾಲಗಳಲ್ಲಿ, ಹಬ್ಬಗಳಲ್ಲಿ ಹಗಲುರಾತ್ರಿ ಎನ್ನದೆ ದುಡಿದು, ಬಂದ ಅತಿಥಿ ವಿಪ್ರರನ್ನು ಪೂಜಿಸುವ ಪತಿಯ ಸಹಧರ್ಮಚಾರಿಯಾಗಿ ಪ್ರಸನ್ನವದನಳಾಗಿರುವೆನು.

"ಪತಿಯು ಸಿಟ್ಟಾದಾಗ ಶಾಂತಳಾಗಿ, ಶಾಂತನಾದಾಗ ಪ್ರಸನ್ನಳಾಗಿರುವೆನು. ಪತಿಯೇ ನನ್ನ ದೈವವು. ಪತಿಯೇ ನನಗೆ ಗತಿ. ಪತಿಗಿಂತಲೂ ನನಗೆ ಸೋದರ, ಪುತ್ರ ಮಾತುಲಾದಿಗಳು ಹೆಚ್ಚಲ್ಲ. ಅವರ ಸೇವೆಯಲ್ಲಿ ಸದಾ ಜಾಗೃತಳಾಗಿರುವೆನು. ವಸ್ತ್ರ ಭೂಷಣ ಭೋಜನಾದಿಗಳಲ್ಲಿ ಪತಿಯನ್ನು ಅತಿಶಯಿಸದಿರುವೆನು. ಅವನಿಗೆ ಹಿತವಾಗುವಂತೆ ವರ್ತಿಸುವೆನು.

"ಧರ್ಮರಾಜನ ಮನೆಯಲ್ಲಿ ನಿತ್ಯವೂ ಎಂಟು ಸಾವಿರ ವಿಪ್ರೋತ್ತಮರು ಬಂಗಾರದ ಪಾತ್ರೆಗಳಲ್ಲಿ ಮೃಷ್ಟಾನ್ನವನ್ನು ಉಣ್ಣುವರು. ಎಂಭತ್ತೆಂಟು ಸಾವಿರ ಸ್ನಾತಕರೂ ಇರುವರು. ವೇದವಾದಿಗಳಾದ ವಿಪ್ರರೆಂದರೆ ನನ್ನ ಪತಿಗೆ ಪ್ರಾಣ ಸಮಾನರು. ಅಂತಹ ಬ್ರಾಹ್ಮಣರನ್ನು ನಾನೆಂದಿಗೂ ಅಪಮಾನಿಸುವುದಿಲ್ಲ. ನನ್ನ ಮನೆಯಲ್ಲಿರುವ ಸಾವಿರಾರು ದಾಸದಾಸಿಯರ ಪರಿಚಯವೆನಗಿದೆ. ಅವರ ನಾಮ, ರೂಪ, ವೃತ್ತಿ ಗುಣ ವೇತನಾದಿಗಳೆಲ್ಲವೂ ನನಗೆ ಕರತಲಾಮಲಕವಾಗಿದೆ. ಧರ್ಮ ರಾಜನ ಪರಿವಾರದ ಯೋಗಕ್ಷೇಮಗಳು ನನ್ನ ವಶವಾಗಿರುವುದರಿಂದ ಮಹಾರಾಜನು ನಿಶ್ಚಿಂತನಾಗಿದ್ದನು. ಒಂದು ಲಕ್ಷ ಕುದುರೆಗಳು, ಹತ್ತು ಸಾವಿರ ಆನೆಗಳು, ದಾಸ ದಾಸೀಜನ ಸಹಸ್ರ, ಅಂತಃಪುರದ ಭೃತ್ಯರು, ಭೀಮಾದಿ ಸೋದರರ ಪರಿವಾರ, ಶಸ್ತ್ರಾಸ್ತ್ರ ವಾಹನಾದಿಗಳು, ಇವೆಲ್ಲವನ್ನೂ ಚನ್ನಾಗಿ ವಿಚಾರಿಸಿ, ಪೋಷಣ ರಕ್ಷಣಾದಿ ಗಳನ್ನು ನಡೆಸುತ್ತಿದ್ದೆನು. ಮಹಾರಾಜನ ಆಯುವ್ಯಯಾದಿಗಳೂ ನನಗೆ ಗೊತ್ತಿತ್ತು. ಇಂತು ನಡೆದು ನಾನು ಪತಿಪ್ರೀತಿಯನ್ನು ಸಂಪಾದಿಸಿರುವೆನು. ಇದೇ ನನ್ನ ವಶೀ ಕರಣ ಮಂತ್ರ. ದುಷ್ಟ ತರುಣಿಯರಂತೆ ಮಾಟಮದ್ದುಗಳನ್ನು ಮಾಡಿ ನಾನರಿಯೆನು.

"ಸತ್ಯಭಾಮೆ! ನಿನಗೆ ತಿಳಿಯದುದಿಲ್ಲ, ಮಹಾಪತಿವ್ರತೆಯಾದ ನಿನಗೆ ತಿಳಿಸುವ ಯೋಗ್ಯತೆ ನನಗಿಲ್ಲ. ಆದರೂ ಕೇಳು! ನಮ್ಮಣ್ಣನಾದ ಶ್ರೀಕೃಷ್ಣ ನನ್ನು ವಶಪಡಿಸಿಕೊಳ್ಳುವ ಒಂದು ಮಹಾಮಂತ್ರವಿದೆ. ಅದನ್ನು ಜ್ಞಾನಿಗಳು ಭಕ್ತಿ ಎಂಬುವರು. ಭಕ್ತಿಯಿಂದ ಪತಿಸೇವೆ ಮಾಡಿದ ರಮಣಿಗೆ ದುರ್ಲಭವಾದುದಿಲ್ಲ. ಶಯ್ಯಾ, ಆಸನ, ವಸ್ತ್ರ, ಗಂಧ, ಭಕ್ಷ್ಯ, ಪೇಯ, ಸಂತಾನಾದಿ ಇಹಲೋಕ ಸುಖ ಗಳಲ್ಲದೆ, ಸ್ವರ್ಗಾದಿ ಪರಲೋಕ ಸುಖಗಳೂ ಪತಿವ್ರತೆಗೆ ಹಿತ್ತಲ ಕಾಮಧೇನುವಿನ ಕ್ಷೀರವೆಂದು ತಿಳಿ! ಅಂತಹ ಸುಖವು ಕಷ್ಟಪಟ್ಟು ಪತಿಸೇವೆ ಮಾಡಿದ ಮಡದಿಗೆ ಮೀಸಲಾಗಿದೆ. ಇಂತಹ ಸತಿಗೆ ಪತಿಯಾದೆನೆಂದು ಹೆಮ್ಮೆಪಡುವಂತೆ, ಪತಿಯನ್ನು ಅವನಿತ್ತ ಗಂಧಮಾಲ್ಯಾದಿಗಳಿಂದ ಮನಃಪೂರ್ವಕವಾಗಿ ಸೇವಿಸು! ಪತಿಗೆ ಪ್ರಿಯ ರಾದವರನ್ನು ಭೋಜನಾದ್ಯುಪಚಾರಗಳಿಂದ ಸಂತೋಷಪಡಿಸು! ಪತಿಯು ಪೇಳದ ಮಾತನ್ನು ಗುಟ್ಟಾಗಿಟ್ಟು ಕಾಪಾಡು! ಅವನ ದ್ವೇಷಿಗಳ ಕೂಡ ಸಂಭಾಷಣಾದಿ ಸಂಪರ್ಕವನ್ನು ಕಡಿ! ಕುಲೀನರು, ಅಪಾಪರು, ಪತಿವ್ರತೆಯರು ಆದ ರಮಣಿ ಯರನ್ನು ಮಾತ್ರ ಹತ್ತಿರ ಸೇರಿಸು! ಇಂತು ನಡೆದ ವನಿತೆ ಪತಿಪ್ರೀತಿಪಾತ್ರಳಾಗಿ ಉಭಯಲೋಕ ಸುಖವನ್ನು ಸೂರೆಗೊಳ್ಳುವಳು."

ಆ ಮಾತನ್ನಾಲಿಸಿ ಸತ್ಯಾದೇವಿ ದ್ರೌಪದಿಯನ್ನು ಮನದಿ ಮೆಚ್ಚಿ, ಅಭಿನಂದಿ ಸಿದಳು. ಲೋಕಜನನಿಯ ಲೀಲಾಕೌತುಕವನ್ನರಿತು ಪಾಂಚಾಲಿಯು ಧನ್ಯಳಾದಳು. ಜನಾರ್ದನನು ಮಾರ್ಕಂಡೇಯಾದಿ ವಿಪ್ರರನ್ನೂ, ಪಾಂಡವರನ್ನೂ ಬೀಳ್ಕೊಂಡು ರಥಾರೂಢನಾಗಿ ಸತ್ಯಾದೇವಿಯೊಡನೆ ದ್ವಾರಕೆಗೆ ಪೋದನು.

"ದ್ರೌಪದಿ! ನಿನ್ನಂತಹ ಪತ್ನಿಯಿಂದ ಪಾಂಡವಕುಲವೇ ಪಾವನವಾಯಿತು. ಶೀಲಾದಿ ಗುಣಸಂಪನ್ನಳು, ಶುಭಲಕ್ಷಣಳು, ವಿಪ್ರಸೇವಾಪರಳು ಆದ ನಿನಗೆ ಬೇಗನೆ ಕ್ಲೇಶನಾಶವಾಗಿ, ಸಾಮ್ರಾಜ್ಯಸುಖವು ಕೈಗೂಡುವುದು. ಚಿಂತಿಸಬೇಡ! ಕೌರವ ಕುಲವನ್ನು ಸವರಿ, ಪ್ರತಿಜ್ಞೆಗಳನ್ನು ನೆರವೇರಿಸಿ, ವಿಜಯಶ್ರೀಯುತರಾದ ಪತಿಗಳನ್ನು ಬೇಗ ಕಾಣುವೆ! ನಿಮ್ಮನ್ನು ಅವಮಾನಿಸಿದ ದುರಾತ್ಮರು ರಣರಂಗದಿ ಮಡಿದು, ಹದ್ದು ನಾಯಿಗಳಿಗೆ ಆಹಾರವಾಗುವರು. ನಿನ್ನ ಮಕ್ಕಳಾದ ಪ್ರತಿವಿಂಧ್ಯ, ಶ್ರುತ ಸೋಮ, ಶ್ರುತಕೀರ್ತಿ, ಶ್ರುತಕರ್ಮ, ಶತಾನೀಕರು ಅಭಿಮನ್ಯು ಕುಮಾರನಂತೆಯೇ ನಮಗೆಲ್ಲ ಪ್ರೀತಿ ವಿಷಯರಾಗಿ ಬೆಳೆಯುತ್ತಿರುವರು. ಸುಭದ್ರೆಯೂ ಚೆನ್ನಾಗಿರುವಳು. ಹೋಗಿಬರುವೆನು" ಎಂದು ದ್ರೌಪದಿಯನ್ನು ಸಂತೈಸಿ, ಸತ್ಯಭಾಮೆ ಕೃಷ್ಣರಥ ವನ್ನಧಿರೋಹಿಸಿ ದ್ವಾರಕೆಗೆ ತೆರಳಿದಳು.

ಪಾಂಡವರು ಕಾಮ್ಯಕವನದಲ್ಲಿರುವ ಸರೋವರದ ತೀರದಿಂದ ತೆರಳಿ, ಕೆಲ ಕಾಲವಾದಮೇಲೆ ದ್ವೈತವನವನ್ನು ಸೇರಿ, ಅಲ್ಲಿ ಸರೋವರತೀರದಲ್ಲಿ ಪರ್ಣಶಾಲೆ ಗಳಲ್ಲಿ ಇರುತ್ತಿದ್ದರು. ಅತಿಥಿಸತ್ಕಾರ, ಹೋಮ, ಜಪ, ಸುರಾರ್ಚನೆಗಳಿಂದ ಅವರ ಕಾಲವು ಸುಖಂಕರವಾಗಿ ಕಳೆಯಿತು. ಮಾರ್ಕಂಡೇಯನು ಪಾಂಡವಪೂಜಿತನಾಗಿ ಆಶ್ರಮಕ್ಕೆ ತೆರಳಿದನು.

## ಘೋಷಯಾತ್ರೆ

ಒಂದು ದಿನ ದ್ವೈತವನದಿಂದ ಬಂದ ವಿಪ್ರನೋರ್ವನು ಪಾಂಡವವೈರಿಗಳ ಸಭೆಯಲ್ಲಿ, ಧೃತರಾಷ್ಟ್ರನಿಗೆ ಧರ್ಮರಾಜಾದಿಗಳ ವನವಾಸ ಕ್ಲೇಶಗಳನ್ನು ವಿವರವಾಗಿ ವರ್ಣಿಸಿದನು. ಅದನ್ನು ಕೇಳಿ ಧೃತರಾಷ್ಟ್ರನು ಶೋಕಾಕುಲನಾಗಿ—

'ಹಾ! ಎಂತಹ ದೈವಲೀಲೆ! ಧರ್ಮರಾಜನು ತಮ್ಮಂದಿರಿಂದ ವನವಾಸ ಕ್ಲೇಶಭಾಜನನಾದನೆ? ಮಾಗಧ ಸೂತ ವಂದಿ ಜನರ ಪ್ರಭಾತಗೀತೆಗಳನ್ನು ಕೇಳುತ್ತ ಹಂಸತೂಲಿಕಾತಲ್ಪದಿಂದೇಳುವ ಚಕ್ರವರ್ತಿ ಬರಿನೆಲದಿ ಮಲಗಿ, ವನದ ಕ್ರೂರಮೃಗ ಗರ್ಜನೆಗಳಿಗೆ ಬೆಚ್ಚಿ, ಎಚ್ಚೆತ್ತು ಕೂಡುವನೆ! ಕೃಷ್ಣಾವೃಕೋದರರು ಕಾಡಿನ ಬಾಡಿದ ಪರ್ಣಗಳ ಶಯ್ಯೆಯಲ್ಲಿ ಮಲಗಿ, ಕೋಪದಿಂದ ನಮ್ಮನ್ನು ನೆನೆಯುತ್ತಾ, ನಿಂದಿಸುವರಲ್ಲವೆ? ಭೀಮನ ಭೀಮಗದೆಯು ಭೂಮಿಯಲ್ಲಿ ಬಿದ್ದಿದ್ದು, ಕೌರವರಕ್ತ ವನ್ನು ಕುಡಿಯುವೆನೆಂದು ಭೂದೇವಿಗೆ ಹೇಳುತ್ತಿರುವುದಾ? ಶಸ್ತ್ರಾಸ್ತ್ರಕೋವಿದ ನಾದ ಗಾಂಡೀವಿ ಶತ್ರುನಾಶದ ದಿನಗಳನ್ನು ಎಣಿಸುತ್ತಿರುವನೆ? ನಕುಲಸಹದೇವರು ನಾಗರಂತೆ ನಿಟ್ಟುಸಿರಿಡುತ್ತಾ, ಕಷ್ಟಕಾಲವನ್ನು ಕೈಯಿಂದ ದೂಡುತ್ತಿರುವರೆ? ವಿಪ್ರವರ! ನಾನು ಭೀಮಸೇನನಿಗೆ ಹೆದರುತ್ತಿರುವೆನು. ದ್ರೌಪದೀ ವಚನ ವಾತ ದಿಂದ ವಿಜೃಂಭಿಸಿ, ಭೀಮ ಭಯಂಕರ ವಹ್ನಿಯು ಶರಜಾಲ ಜ್ವಾಲೆಗಳಿಂದ ಕೌರವ ವಂಶವನ್ನು ಸುಡದೆ ಬಿಡದು. ಭೀಮಗಜವು ಸತ್ಯಧರ್ಮಗಳೆಂಬ ಸಂಕೋಲೆಗೆ

ಸಿಕ್ಕು, ಧರ್ಮನ ಕಟ್ಟಪ್ಪಣೆಯಿಂದ ಸುಮ್ಮನಿದೆ. ವನವಾಸ ಅಜ್ಞಾತವಾಸಗಳಾದ ಮೇಲೆ ಅದು ಧರ್ಮಾಂಕುಶವನ್ನು ಲೆಕ್ಕಿಸದೆ, ಕೌರವ ಕದಲೀವನವನ್ನು ನಾಶ ಮಾಡುವುದು. ಏನು ಮಾಡಲಿ! ವನವಾಸವು ಮುಗಿಯುತ್ತಲಿದೆ. ಅಜ್ಞಾತ ವಾಸದ ವರ್ಷವೂ ನಿಮಿಷದಂತೆ ಕಳೆದುಹೋಗುವುದು. ವೇಲಾಭಂಗವನ್ನು ಮಾಡುವ ಪ್ರಳಯಾಭೀಲ ಸಮುದ್ರದಂತೆ ಮೇಲೇರಿ ಬರುವ ಪಾಂಡವರನ್ನು ಎದುರಿಸಿ ಅಗ್ನಿಯಲ್ಲಿ ಬಿದ್ದ ಪತಂಗಗಳಂತೆ ನನ್ನ ಕೌರವರು ನಾಶವಾಗುವರು. ಸಂಧಿಯನ್ನು ಮಾಡಿಕೊಂಡು ಅವರ ರಾಜ್ಯವನ್ನವರಿಗಿತ್ತರೆ ಸುಖವಾದೀತು! ಪಾಪಿ ದುರ್ಯೋಧನನು ನನ್ನ ಮಾತಿಗೆ ಕಿವಿಗೊಡನು. ಅವನಿಗೆ ಶಕುನಿ ಕರ್ಣ ದುಶ್ಯಾಸನರ ದುರ್ಮಂತ್ರವು ಸವಿಯಾಗಿದೆ. ದೈವವು ದುರ್ಲಂಘ್ಯವಾಗಿದೆ! ನಾವೇನೂ ಮಾಡಲಾರೆವು' ಎಂದು ಚಿಂತಿಸುತ್ತಿರುವಾಗ ಶಕುನಿಯು ಅಲ್ಲಿಗೆ ಬಂದನು.

"ಶಕುನಿ! ಕುರುಗಳಿಗೆ ಅಂತ್ಯಕಾಲವು ಸಮೀಪಿಸಿದೆ. ಪುತ್ರವಶನಾಗಿ ಸಾಧು ಪಾಂಡವರಿಗೆ ದ್ರೋಹ ಮಾಡಿದೆನು. ಮಾಯಾದ್ಯೂತ ವಿಶಾರದನಾದ ನಿನ್ನಿಂದ ನಾವೆಲ್ಲರೂ ಕೆಟ್ಟೆವು. ಗಾಳಿಯು ತಾನಾಗಿ ಬೀಸುವುದು; ಗರ್ಭಿಣಿಯು ಕಾಲದಲ್ಲಿ ತಪ್ಪದೆ ಪ್ರಸವಿಸುವಳು; ರಾತ್ರಿ ಮುಗಿಯಲು ದಿನವಾಗುವುದು. ಅಂತೆಯೇ ದುರ್ಯೋಧನಾದಿಗಳ ನಾಶವೂ ಅಪರಿಹಾರ್ಯವಾಗಿದೆ. ಇದೆಲ್ಲವನ್ನೂ ಅರಿತೂ ರಾಜ್ಯಾರ್ಧವನ್ನು ಪಾಂಡವರಿಗೆ ಕೊಡಲಾರದಿರುವ ನನ್ನನ್ನು ಕಂಡು 'ಅರ್ಥ ಪಾಲನೆಯು ಮನುಜಸ್ವಭಾವ'ವೆಂದು ನಾನು ತಿಳಿದಿರುವೆನು. ದೇಹವನ್ನು ಬಿಡುವುದಾಗಲಿ, ಅರ್ಥವನ್ನಲ್ಲ. ನೋಡು! ಧನಂಜಯನು ಅರಣ್ಯದಲ್ಲಿದ್ದೂ, ಸ್ವರ್ಗವನ್ನು ಸಶರೀರನಾಗಿ ಸೇರಿ, ದಿವ್ಯಾಸ್ತ್ರಗಳನ್ನು ಪಡೆದುಬಂದನು. ಇತರ ಮನುಜರಿಗೆ ಹಾಗೆ ಮಾಡಲು ಶಕ್ಯವೆ? ಆದುದರಿಂದ ನಾನು ಪಾಂಡವರನ್ನು ಸಾಮಾನ್ಯ ಮನುಜರೆಂದು ತಿಳಿದಿಲ್ಲ. ಧನುಸ್ಸು ಗಾಂಡೀವವು, ಅದನ್ನು ಹಿಡಿಯುವವನು ಧನಂಜಯನು. ಅವನಿಂದ ಪ್ರಯೋಗಿಸಲ್ಪಡುವವು ಪಾಶುಪತಾದಿ ದಿವ್ಯಾಸ್ತ್ರಗಳು. ಅವನಿಗೆ ಸಹಾಯನು ಗದಾಪಾಣಿಯಾದ ವೃಕೋದರನು! ಇಂತಹ ಪಾಂಡವರಿಂದ ನನ್ನ ಸುತರು ಉಳಿಯುವುದೆಂತು?"

ಇಂತು ನುಡಿದ ರಾಜನ ಮಾತಿಗೆ ಬದುಲಾಡದೆ ಶಕುನಿಯು ಕರ್ಣನಿಗೆ ಅದನ್ನು ತಿಳಿಸಿದನು. ಕರ್ಣ ಸೌಬಲರು ದುರ್ಯೋಧನನನ್ನು ಕಂಡು, ಅವನಿಗಿಂತೆಂದರು—

"ರಾಜನ್! ಪಾಂಡವರು ಕಾಡಿನ ಪಾಲಾದರು. ಮಹಾಸಾಮ್ರಾಜ್ಯವು ನಿನ್ನದಾಯಿತು. ಸರ್ವ ರಾಜರೂ ಸಾಮಂತರಾಗಿ ಕಪ್ಪವನ್ನಿತ್ತರು. ರಾಜಸೂಯ ಯಾಗ ಕಾಲದಲ್ಲಿ ಧರ್ಮರಾಜನ ಮನೆಯಲ್ಲಿದ್ದ ಸಿರಿ ನಿನ್ನ ಮನೆ ಸೇರಿತು. ವಿಪ್ರರಿಂದ ಪೊಗಳಿಸಿಕೊಳ್ಳುತ್ತಾ, ರಾಜರಿಂದ ನಮಿತನಾಗಿ ದೇವೇಂದ್ರನಂತೆ ರಾಜಮಾನ್ಯನಾದ ನಿನಗೆ ಸಮರಿಲ್ಲ. ಇಂತಹ ನಿನ್ನ ಮಹಾವೈಭವವನ್ನು ನಿನ್ನ ವೈರಿಗಳು ನೋಡಿ

ಸಂಕಟಪಡುವಂತಾಗಲಿ! ನಿರ್ಭಾಗ್ಯರಾದ ಪಾಂಡವರು ವನವಾಸಕ್ಲೇಶದಿಂದ ಬಳಲಿ ಬೆಂಡಾಗಿರುವರು. ಈಗ ನಿನ್ನ ಉರಿಯುವ ಸಿರಿಯಿಂದ ಸುಟ್ಟು ಬೂದಿಯಾಗಲಿ! ಮಿತ್ರರಿಗೆ ಆನಂದಪ್ರದವೂ ಶತ್ರುಗಳಿಗೆ ದುಃಖಪ್ರದವೂ ಆಗದ ಸಿರಿ ಸಂಪತ್ತುಗಳಿದ್ದು ಪ್ರಯೋಜನವೇನು? ಐಶ್ವರ್ಯ ಪರ್ವತವನ್ನೇರಿ ಕಷ್ಟಗರ್ತದಲ್ಲಿರುವ ಪಾಂಡವ ರನ್ನು ನೋಡು! ಶತ್ರುವ್ಯಸನ ದರ್ಶನದಿಂದಾಗುವ ಆನಂದವು, ಪುತ್ರಪ್ರಾಪ್ತಿ ಯಿಂದಲಾಗಲಿ, ರಾಜ್ಯಲಾಭದಿಂದಲಾಗಲಿ, ಆಗದು. ಆಶ್ರಮಗಳಲ್ಲಿ ವಲ್ಕಲಾಜಿನ ಧಾರಿಗಳಾಗಿ ದುಃಖಿತರಾಗಿರುವ ಧನಂಜಯ ವೃಕೋದರರನ್ನೂ, ನಾರು ಸೀರೆ ಯನ್ನುಟ್ಟಿರುವ ದ್ರೌಪದಿಯನ್ನೂ ನೋಡಿ, ಆನಂದಿಸುವ ಸೌಭಾಗ್ಯವನ್ನು ನಮಗೆ ಕೊಡು. ಸುವಸನಭೂಷಣಾಲಂಕೃತೆಯರಾದ ನಿನ್ನ ತರುಣಿಯನ್ನು ನೋಡಿ, ಪಾಂಡವಪತ್ನಿಯು ಪಶ್ಚಾತ್ತಾಪ ಪಡಲಿ!" ಆ ಮಾತನ್ನಾಲಿಸಿ, ದುರ್ಯೋಧನನು ಹರ್ಷವಿವಶನಾದನು. ಉತ್ತರಕ್ಷಣದಲ್ಲೇ ಅವನ ವದನವು ವಿಷಾದಛಾಯಾವೃತ ವಾಯಿತು. ಅವನು ಮಿತ್ರರನ್ನು ಕಂಡು "ಕರ್ಣ! ಶಕುನಿ! ನೀವು ನುಡಿದಂತೆ ಮಾಡಲು ನಾನು ಕಾತರನಾಗಿರುವೆನು. ಆದರೆ ಪಾಂಡವರನ್ನು ಅವಮಾನಿಸಲು ಹೋಗುವ ನಮಗೆ ರಾಜನು ಅನುಜ್ಞೆಯನ್ನೀವನೆ? ಅವರನ್ನು ನೆನೆದು ಅವರ ಕಷ್ಟ ಗಳಿಗಾಗಿ ಮರುಗುವ ಮಹಾರಾಜನಿಗೆ ನಮ್ಮ ದ್ವೈತವನಗಮನವು ಸಮ್ಮತವಾಗ ಲಾರದು. ಅವರು ನಮಗಿಂತಲು ತಪೋಯೋಗ ಬಲ ಪರಾಕ್ರಮಗಳಿಂದ ಹೆಚ್ಚೆಂದು ಕೊಚ್ಚುವ ಹುಚ್ಚನನ್ನು ಮೆಚ್ಚಿಸಿ, ನಮ್ಮಿಚ್ಛೆ ಪಡೆಯುವ ಉಪಾಯವಾವುದು? ದ್ವೈತವನದಲ್ಲಿ ಈಗ ನಮಗೆ ಕೆಲಸವಿಲ್ಲ. ಪಾಂಡವರನ್ನು ಕಂಡು ಅಖಂಡ ಸಂಪ ತ್ಸಮೃದ್ಧನಾಗಿ ಮೆರೆದು ಅವರನ್ನು ಉರಿಸದಿದ್ದರೆ ನನ್ನ ಬಾಳಿಗೆ ಫಲವಿಲ್ಲ. ವಿದುರನಂತೆ ನಡೆಯುವ ಅಂಧರಾಜನಿಂದ ನಮ್ಮ ಕಾರ್ಯವಾಗುವುದಿಲ್ಲ. ಕಾಷಾಯವನ್ನುಟ್ಟು ಕಾಡಿನಲ್ಲಿ ಅಲೆಯುವ ಭೀಮಪಾರ್ಥರನ್ನೂ, ದ್ರೌಪದಿಯನ್ನೂ ನೋಡಿ, ಕಾಡಿ ನೋಯಿಸುವುದಕ್ಕಿಂತಲೂ ಹೆಚ್ಚಾದ ಆನಂದವೆನಗಿಲ್ಲ. ಶಕುನಿ! ಚೆನ್ನಾಗಿ ಆಲೋಚಿಸಿ, ಸರಿಯಾದ ಉಪಾಯವನ್ನು ನನಗೆ ತಿಳಿಸು!" ಎಂದು ಹೇಳಿ, ಅಂದಿಗೆ ವಿಶ್ರಮಿಸಲು ಹೋದನು.

ಮರುದಿನ ಕರ್ಣ, ಶಕುನಿ, ದುಶ್ಶಾಸನರು ರಾಜರಾಜನನ್ನು ನೋಡಿ "ಮಹಾ ರಾಜ! ದೊರಕಿದೆ ಸರಿಯಾದ ಉಪಾಯ. ದ್ವೈತವನದಲ್ಲಿ ಈಗ ನಮ್ಮ ಆಕಳ ಮಂದೆಗಳು ಕಲೆತಿವೆ. ಘೋಷಯಾತ್ರೆಗೆಂದು ಹೊರಡುವುದು ಸಂಪ್ರದಾಯವಾಗಿದೆ. ಗೋಸಮುದಾಯವನ್ನು ಕಂಡು, ಎಣಿಸಿ, ಮುದ್ರೆಹಾಕಿಸಿ ಬರುವೆವೆಂದರೆ ಧೃತ ರಾಷ್ಟ್ರನು ಬೇಡವೆನ್ನಲಾರನು" ಎಂದರು. ದುರ್ಯೋಧನನು ಆನಂದದಿಂದ ಅವರ ಕೈಕುಲುಕಿ ಅವರನ್ನೂ ಕರೆದುಕೊಂಡು ಧೃತರಾಷ್ಟ್ರನ ಮಂದಿರವನ್ನು ಸೇರಿದನು. ಶಕುನಿಯಿಂದ ಶಿಕ್ಷಿತನಾದ ಗೊಲ್ಲನೂ ಅಲ್ಲಿಗೆ ಬಂದು, ರಾಜನಿಗೆ ವಂದಿಸಿ "ಮಹಾ ರಾಜ! ಇಲ್ಲೇ ದ್ವೈತವನದಲ್ಲಿ ತಮ್ಮ ಗೋಗಣವೆಲ್ಲವೂ ಸೇಕರಿಸಲ್ಪಟ್ಟು, ನಿಂತಿದೆ.

ಅಂಕನ ಮುದ್ರಣಾದಿಗಳಿಗಾಗಿ ರಾಜಪುತ್ರರನ್ನು ಕಳಿಸು!" ಎಂದು ಬೇಡಿದನು. ಆಗ ಶಕುನಿಯು ಧೃತರಾಷ್ಟ್ರ! ಕಳಿಸು ದುರ್ಯೋಧನನನ್ನು! ಅವನಿಗೆ ಸಹಾಯ ವಾಗಿ ನಾವು ಹೊರಡುವೆವು. ಮೃಗಯಾ, ಘೋಷಯಾತ್ರಾದಿಗಳಿಂದ ಒಳ್ಳೆಯ ಅನುಭವವೂ ಬರುವುದು" ಎಂದನು.

ಧೃತರಾಷ್ಟ್ರನು "ಮೃಗಯಾದಿ ಯಾತ್ರೆಯು ವಿಹಿತವಾಗಿದೆ, ನಿಜ. ಗೊಲ್ಲರ ಮಾತು ನಂಬಬೇಡಿ! ಅವರು ನಮ್ಮನ್ನು ಕಷ್ಟಕ್ಕೀಡುಮಾಡುವರು. ನರವ್ಯಾಘ್ರ ರಾದ ಪಾಂಡವರು ಅಲ್ಲಿರುವರು. ಮೋಸದಿಂದ ಅವರನ್ನು ಸೋಲಿಸಿ ಕಾಡಿಗೆ ಅಟ್ಟಿರುವ ನಿಮ್ಮಲ್ಲಿ ಸೇಡಿನಿಂದ ಅವರು ಕೆಡುಕನ್ನು ಮಾಡಿದೆಡೆ ತಡೆಯುವ ಸಾಮರ್ಥ್ಯವು ನಿಮಗಿಲ್ಲ. ನೀವೂ ದುಡುಕಿ ಕೆಡಬಹುದು. ಅಕೃತಾಸ್ತ್ರನಾಗಿದ್ದ ಧನಂಜಯನು ರಾಜಸೂಯ ಸಮಯದಲ್ಲಿ ಸರ್ವರಾಜರನ್ನೂ ಸೋಲಿಸಿದನೆಂದ ಮೇಲೆ ಈಗ ಕೃತಾಸ್ತ್ರನಾಗಿರುವ ಅರ್ಜುನನು ನಿಮ್ಮನ್ನು ಸಂಹರಿಸದೆ ಬಿಡನು. ಸತ್ಯವ್ರತರಾದ ಪಾಂಡವರಿಂದ ನಮಗೆ ಹಾನಿಯಿಲ್ಲ. ಆದರೂ ವಿಚಾರಿಸಿ ನೋಡಿ" ಎಂದನು.

ಶಕುನಿ ಇಂತೆಂದನು—"ಚಿಂತಿಸಬೇಡ! ಧರ್ಮರಾಜನು ಸತ್ಯಸಂಧನು. ಅವನು ಪ್ರತಿಜ್ಞಾಭಂಗವನ್ನು ಮಾಡಿ ನಮ್ಮನ್ನು ಕೆಡಿಸನು. ಕೆಣಕಿದರೆ ತಾನೇ ಕೆಡುವನು. ಅವನನ್ನು ಅನುಸರಿಸಿರುವ ಅನುಜರಾರೂ ನಮ್ಮ ಗೊಡವೆಗೆ ಬಾರರು. ಪಶುಸಂಖ್ಯಾನಕ್ಕಾಗಿ ಹೋಗುವೆವು. ನಾವು ಪಾಂಡವರಿರುವಲ್ಲಿ ಪೋಗದೆ ದೂರ ರಾಗಿರುವೆವು." ಆಗ ಧೃತರಾಷ್ಟ್ರನು ಇಷ್ಟವಿಲ್ಲದಿದ್ದರೂ, ವಿಧಿಯಿಲ್ಲದೆ ಸಮ್ಮತಿ ಯನ್ನಿತ್ತನು. ತತ್‌ಕ್ಷಣವೇ ದುರ್ಯೋಧನನು ಸಪರಿವಾರನಾಗಿ ಘೋಷಯಾತ್ರೆ ಗೆಂದು ತೆರಳಿದನು. ಅವನ ಹಿಂದೆ ಮಹಾಸೈನ್ಯವು ಹೊರಟಿತು. ದುಶ್ಶಾಸನ, ಕರ್ಣ, ಸೌಬಲ, ಚಿತ್ರಸೇನಾದಿ ವೀರರು ಅಲಂಕೃತರಾಗಿ, ಆಯುಧಸಮನ್ವಿತವಾದ ಕಾಂಚನ ರಥಗಳಲ್ಲಿ ಕೂತು ದ್ವೈತವನವನ್ನು ಸೇರಪೋದರು. ಅಂತಃಪುರ ನಾರೀ ಜನವೂ ಪಲ್ಯಂಕಿಕಾರೂಢವಾಗಿ ಬಂತು. ಪೌರರೂ ದ್ವೈತವನ ದರ್ಶನ ಕುತೂಹಲ ದಿಂದ ಹಿಂಬಾಲಿಸಿದರು.

ದುರ್ಯೋಧನನು ದ್ವೈತವನವನ್ನು ಸೇರಿದನು. ವೃಕ್ಷಚ್ಛಾಯಾನಿಬಿಡವು, ಜಲತೃಣಸಮೃದ್ಧವು, ಸಮಾನ ಶಾದ್ವಲವು ಆದ ಸ್ಥಲದಲ್ಲಿ ಸೇವಕರು ನಿರ್ಮಿಸಿದ್ದ ಪರ್ಣಕುಟೀರಗಳಲ್ಲಿ ತಂಗಿ, ಕೌರವರು ವಿಶ್ರಮಿಸಿದರು. ಮೂರು ದಿನಗಳವರೆಗೂ ಗೋವತ್ಸಗಳ ಸಂಖ್ಯಾನ, ಲೇಖನ, ಮುದ್ರಣಾದಿ ರಾಜಕಾರ್ಯಗಳು ಬಿರುಸಾಗಿ ನಡೆದವು. ರಾಜಕಾರ್ಯವಾಯಿತೆಂದೆನಿಸಿ, ದುರ್ಯೋಧನನು ವನವಿಹಾರಕ್ಕೆಂದು ತರುಣೀಜನ ಸಮನ್ವಿತನಾಗಿ ಹೊರಟನು. ವನವಿಹಾರ ಶ್ರಾಂತರಾಗಿ ಬಂದ ರಾಜ ಪುತ್ರರನ್ನು ಗೋಪಾಲಕರು ಹಾಲಿತ್ತು ಸತ್ಕರಿಸಿದರು. ನರ್ತನ ಗಾನಗಳಿಂದ ಸಂತೋಷಪಡಿಸಿದರು. ದುರ್ಯೋಧನನು ಅವರನ್ನು ಬಹುಮಾನಗಳನ್ನಿತ್ತು

**ಕಳಿಸಿದನು.** ತನ್ನ ಪರಿವಾರದವರು ಬೇಟೆಯಾಡಿ ತಂದ ಮೃಗ ವರಾಹ, ಶಶಾದಿ ಮೃಗಮಾಂಸವನ್ನು ಭುಜಿಸಿ, ಗೋರಕ್ಷವನ್ನು ಸೇವಿಸಿ, ಕರ್ಣಾದಿ ಸುಹೃಜ್ಜನರನ್ನು ಕರೆದುಕೊಂಡು, ದ್ವೈತವನ್ನು ನೋಡುತ್ತಾ ಹೋದನು.

ಕೌರವರು ದ್ವೈತವನದಲ್ಲಿ ತಿರುಗುತ್ತ, ಸರೋವರವನ್ನು ಕಂಡರು. ಸರೋವರವು ಗಗನಕಾಂತೆಗೆ ಹಿಡಿದ ದರ್ಪಣದಂತೆ ಪ್ರಕಾಶಿಸಿತು. ತೀರದ ವೃಕ್ಷಗಳು ಸೂರ್ಯಾದಿ ಗಗನಸಂಚಾರೀ ದೇವಸಮೂಹದ ಶ್ರಮವನ್ನು ನಿವಾರಿಸುವ ಚಾಮರ ವ್ಯಜನಗಳಂತೆ ಅಂಬರಚುಂಬಿಗಳಾಗಿ ನಿಂತಿದ್ದವು. ವೃಕ್ಷಗಳ ಬುಡದ ಹಸಿರುಹುಲ್ಲು ಮೇಲೆ ಉದುರಿದ ಪುಷ್ಪಗಳಿಂದ ರತ್ನಕಂಬಳದಂತೆ ಕಂಗೊಳಿಸಿತು. ಗರಿಬಿಚ್ಚಿ ಕುಣಿಯುವ ನವಿಲಿಗೆ ಕೋಗಿಲೆಗಳು ಹಾಡಿದವು. ದುಂಬಿಗಳು ಮಕರಂದಪಾನ ಮತ್ತವಾಗಿ ಮಾಡುವ ಝುಂಕಾರದಿಂದ ವನವು ಗುಂಯ್‌ಗುಟ್ಟುತ್ತಿತ್ತು. ಅರಳಿನಿಂತ ಕಮಲಪರಾಗದಿಂದ ಸರೋವರ ಜಲವು ಸುಗಂಧಿತವಾಗಿತ್ತು. ಸುಂದರ ಸರೋವರವನ್ನು ನೋಡಿದ ದುರ್ಯೋಧನನಿಗೆ ಅಲ್ಲಿ ಕೆಲದಿನವಿರಲು ಮನಸಾಯಿತು. ಅವನ ಸೇವಕರಿಗೆ ಶಿಬಿರವನ್ನು ನಿರ್ಮಿಸಲು ಆಜ್ಞಾಪಿಸಿದನು.

ಧರ್ಮರಾಜನು ಯದೃಚ್ಛೆಯಿಂದ ಸರೋವರದ ಆಚೆಯ ದಡದಲ್ಲಿ ವೃಕ್ಷಮೂಲದಲ್ಲಿ ಏಕಾಹ್ನಿಕ ಕ್ರತುವನ್ನು ಮಾಡುತ್ತಿದ್ದನು. ಭೀಮಾದಿಗಳು ಅವನಿಗೆ ಸಹಕರಿಸುತ್ತಾ ನಿಂತಿದ್ದರು. ವಿಪ್ರರ ವೇದಘೋಷವು ಪ್ರಶಾಂತ ವನವಾತದಲ್ಲಿ ಚೆನ್ನಾಗಿ ಕೇಳಿಬರುತ್ತಿತ್ತು. ದುರ್ಯೋಧನನ ಸೇವಕರು ಸರೋವರವನ್ನು ಸಮೀಪಿಸಿದಾಗ ಕೆಲಗಂಧರ್ವರು ಅವರನ್ನು ವಾರಿಸಿ, 'ಇಲ್ಲಿ ಚಿತ್ರಸೇನನೆಂಬ ಗಂಧರ್ವರಾಜನು ಬಿಡಾರ ಹೂಡಿರುವನು. ಕುಬೇರಭವನದಿಂದ ಬಂದ ಯಕ್ಷಗಂಧರ್ವರು, ಇಂದ್ರಸಖನಾದ ಚಿತ್ರಸೇನನ ಸೇವೆಗೆಂದು ಬಂದಿರುವರು. ಜಯಂತಾದಿ ದೇವಕುಮಾರರು ಅಪ್ಸರೋವನಿತೆಯರಿಂದ ಸರೋವರದಲ್ಲಿ ಕ್ರೀಡೆಮಾಡಲಿರುವರು. ಇಲ್ಲಿಗೆ ಬರಬೇಡಿ' ಎಂದು ಕಳಿಸಿದರು. ಅವರು ದುರ್ಯೋಧನನಿಗೆ ಆ ಮಾತನ್ನು ತಿಳಿಸಿದರು. ಕುರುರಾಜನು ರೋಷಕಷಾಯಿತ ನೇತ್ರನಾಗಿ ಗಂಧರ್ವರನ್ನು ಹೊಡೆದೋಡಿಸಲು ಸೈನ್ಯವನ್ನು ಕಳಿಸಿದನು. ಸೇನಾಪತಿಗಳು ಗಂಧರ್ವರನ್ನು ಸಮೀಪಿಸಿ ಇಂತೆಂದರು— 'ದುರ್ಯೋಧನನೆಂಬ ಕೌರವ ರಾಜನು ಇಲ್ಲಿಗೆ ಬಂದಿರುವನು. ಅವನನ್ನರಿಯದವರು ಮೂಲೋಕಗಳಲ್ಲಿಲ್ಲ. ವಿಹಾರಶೀಲನಾದ ನಮ್ಮ ರಾಜನಿಗೆ ಬಿಟ್ಟುಕೊಟ್ಟು ಸರಸ್ತೀರದಿಂದ ತೊಲಗಿ!' ಆ ಮಾತನ್ನು ಕೇಳಿ ಗಂಧರ್ವರು ಗಹಗಹಿಸಿ ನಕ್ಕು, 'ನಿಮ್ಮ ರಾಜನೇ ಸುಯೋಧನ! ನಿಮ್ಮಂತೆ ಅವನಿಗೂ ವಿವೇಕವಿಲ್ಲ. ಇಲ್ಲಿಂದ ತೊಲಗಿರೆಂದಾಜ್ಞಾಪಿಸಲು ನಾವೇನು ಕೌರವ ಭೃತ್ಯರೆ? ಕಪ್ಪವಿತ್ತು ಕೈಜೋಡಿಸಿ ನಿಲ್ಲಲು ಅವನ ಸಾಮಂತರೆ? ದೇವತೆಗಳಾದ ನಮಗೆ ಆದೇಶಿಸುವ ನಿಮಗೆ ಕೇಡು ಮೂಡಿಬಂದಂತಿದೆ. ಹೋಗಿ ನಿಮ್ಮ ರಾಜನಲ್ಲಿಗೆ! ಇಲ್ಲದಿರೆ, ಕಳಿಸುವೆವು ಯಮರಾಜನಲ್ಲಿಗೆ!' ಎಂದು ಹೆದರಿಸಿದರು. ಸೇನಾಪತಿಗಳು ಬಾಲ ಮುದುಡಿಕೊಂಡ

ನಾಯಿಗಳಾಗಿ ಹಿಂದಿರುಗಿ ಬಂದು, ನಡೆದುದನ್ನು ತಿಳಿಸಿ, ಅವರು ನುಡಿದುದನ್ನೂ ಅನುವದಿಸಿದರು.

ಗಂಧರ್ವರ ಗರ್ವದ ನುಡಿಗಳಿಂದ ಕೆರಳಿ ಕೆಂಡವಾದ ದುರ್ಯೋಧನನು ಅವರನ್ನು ಶಾಸಿಸಲು ಮಹಾ ಸೈನ್ಯವನ್ನು ಕಳಿಸಿದನು. ಸಿಂಹಾರಾವವನ್ನು ಮಾಡುತ್ತ ಮುನ್ನುಗ್ಗುವ ಕೌರವ ಸೈನಿಕರನ್ನು ಗಂಧರ್ವರು ಸಾಮವಚನಗಳಿಂದ ನಿವಾರಿಸಿದರು. ಅವರನ್ನು ಕಡೆಗಣಿಸಿ, ಸರಸ್ತೀರವನ್ನಾಕ್ರಮಿಸಿದ ಕೌರವರನ್ನು ಕಂಡು, ಗಂಧರ್ವರು ಚಿತ್ರಸೇನನಿಗೆ ವಾರ್ತೆಯನ್ನು ಮುಟ್ಟಿಸಿದರು. ಅವನ ಅಪ್ಪಣೆಯನ್ನು ಪಡೆದ ಗಂಧರ್ವರು ಉದ್ಯತಾಯುಧರಾಗಿ ಕೌರವರನ್ನು ಮುತ್ತಿ ಕ್ಷಣದಲ್ಲಿ ಅವರನ್ನು ಓಡಿಸಿದರು. ಕರ್ಣನು ಧೈರ್ಯದಿಂದ ನಿಂತು ಗಂಧರ್ವರಿಂದ ಕಾದಿದನು. ನೋಡ ನೋಡುತ್ತಿರಲು ವನವೆಲ್ಲವೂ ಗಂಧರ್ವಮಯವಾಯಿತು. ದುರ್ಯೋಧನ, ದುಶ್ಶಾಸನ, ಶಕುನಿ, ಚಿತ್ರಸೇನಾದಿ ವೀರರು ರಥಾರೂಢರಾಗಿ ಗಂಧರ್ವರನ್ನು ಮುತ್ತಿ ಕಾದಿದರು. ಗಂಧರ್ವ ಕೌರವರಿಗೆ ತುಮುಲ ಸಂಗ್ರಾಮವಾಯಿತು. ಇಂದ್ರವರದಿಂದ ಅಜೇಯನಾದ ಚಿತ್ರಸೇನನ ಸೈನ್ಯವು ವಿಜೃಂಭಿಸಿ, ದುರ್ಯೋಧನನ ಪರಿವಾರವನ್ನು ಮುತ್ತಿ ಪೀಡಿಸಿದರು. ಚಿತ್ರಸೇನನೂ ಕುಪಿತನಾಗಿ ಮಾಯಾಸ್ತ್ರದಿಂದ ಕೌರವರನ್ನು ಮೂರ್ಛೆಗೊಳಿಸಿದನು. ಒಬ್ಬ ಕೌರವನಿಗೆ ದಶ ಗಂಧರ್ವರು ಸುತ್ತುಮುತ್ತಿ, ಕುದುರೆಗಳನ್ನು ಬಿಚ್ಚಿ, ಚಕ್ರಗಳನ್ನು ಮುರಿದು, ಸೂತರನ್ನು ಕೊಂದು, ಧ್ವಜಗಳನ್ನು ಕೆಡಹಿ ಆರ್ಭಟಿಸಿದರು. ಕೌರವರು ದಿಕ್ಕೆಟ್ಟು ಓಡಿದರು. ಕರ್ಣನು ವಿರಥನಾಗಿ ಖಡ್ಗ ಚರ್ಮಗಳನ್ನು ಧರಿಸಿ ವಿಕರ್ಣರಥದಲ್ಲಿ ಕೂತು, ಅವನೊಡನೆ ರಣರಂಗವನ್ನು ಬಿಟ್ಟು ಓಡಿಹೋದನು.

ದುರ್ಯೋಧನನು, ಓಡುವ ಸೈನ್ಯವನ್ನು ನೋಡಿ, ಕಂಗೆಡದೆ ಚಿತ್ರಸೇನನನ್ನೆದುರಿಸಿದನು. ಶರವರ್ಷವನ್ನು ಸುರಿಸುವ ದುರ್ಯೋಧನನನ್ನು ಲೆಕ್ಕಿಸದೆ ಗಂಧರ್ವರು ಸಾವಿರ ಯೋಧರು ಅವನನ್ನು ಮುತ್ತಿದರು. ಅವನ ರಥದ ನೊಗೆಯನ್ನು ಮುರಿದರು. ರಥಬಂಧನಗಳನ್ನು ಕಡಿದರು. ಧ್ವಜವನ್ನು ಕೆಡಹಿದರು. ಕುದುರೆಗಳನ್ನು, ಸಾರಥಿಯನ್ನು ಕೊಂದರು. ವಿರಥನಾದ ದುರ್ಯೋಧನನು ನೆಲದಲ್ಲಿ ನಿಂತು ದಿಗ್ಭ್ರಾಂತನಾಗಿರುವಾಗ ಚಿತ್ರಸೇನನು ಅವನನ್ನು ಜೀವಗ್ರಾಹವಾಗಿ ಹಿಡಿದು ರಥಕ್ಕೆ ಬಿಗಿದು ಕಟ್ಟಿ, ಹೊರಡಲನುವಾದನು. ದುಶ್ಶಾಸನ, ವಿವಿಂಶತಿ, ಚಿತ್ರಸೇನ(ಕೌರವ), ವಿಂದ, ಅನುವಿಂದರನ್ನೂ ಗಂಧರ್ವರು ಸೆರೆಹಿಡಿದರು. ಕೆಲ ಗಂಧರ್ವರು ದುರ್ಯೋಧನಾದಿಗಳ ತರುಣಿಯರನ್ನೂ ಹಿಡಿದು ಕಟ್ಟಿ, ತಮ್ಮ ರಾಜನನ್ನು ಅನುಸರಿಸಿ ಹೊರಟರು.

ಕೆಲ ಕೌರವ ಸೇನಾಪತಿಗಳು ಮೊದಲೇ ಪಲಾಯನ ಮಾಡಿದುದರಿಂದ ಉಳಿದಿದ್ದರು. ಅವರು ತಮ್ಮ ರಾಜನಿಗಾದ ದುರ್ಗತಿಯನ್ನು ಕಂಡು, ಭಯಶೋಕಾರ್ತರಾಗಿ ಪಾಂಡವರನ್ನು ಸಮೀಪಿಸಿ, ಅವರ ಕಾಲಿಗೆ ಬಿದ್ದು ಇಂತೆಂದರು—'ಧರ್ಮರಾಜ!

ದುರ್ಯೋಧನ, ದುಶ್ಶಾಸನಾದಿಗಳನ್ನು ಗಂಧರ್ವರಾಜನು ಸೆರೆಹಿಡಿದುಕೊಂಡು ಹೋಗುತ್ತಿರುವನು. ಆಲಸ್ಯಮಾಡದೆ, ಅವರನ್ನು ಬಿಡಿಸಿ! ಅಂತಃಪುರನಾರಿಯರೂ ಸೆರೆಸಿಕ್ಕಿರುವರು. ಬೇಗ ಬನ್ನಿ!' ಎಂದು ಮೊರೆ ಇಡುವ ಸೈನಿಕರ ದೀನಾಲಾಪಗಳಿಂದ ಧರ್ಮರಾಜನ ಮನವು ಕರಗಿತು. ಆ ಮಹಾನುಭಾವನು ಅವರಿಗೆ ಅಭಯವನ್ನಿತ್ತು ಭೀಮಸೇನನಿಗಿಂತೆಂದನು—"ಭೀಮಸೇನ! ಹೊರಡು! ನಮ್ಮವರನ್ನು ಗಂಧರ್ವರಿಂದ ಬಿಡಿಸು".

ಇಂತು ಶಾಸಿಸುವ ಅಣ್ಣನ ಮುಖವನ್ನು ನೋಡಿ ನಕ್ಕು, ಭೀಮಸೇನನು "ಅಣ್ಣ! ರಥ ಗಜ ತುರಗ ಪದಾತಿ ಸೈನ್ಯಯುಕ್ತರಾಗಿ, ಮಹಾಪ್ರಯತ್ನದಿಂದ ಸಾಧಿಸಬೇಕಾಗಿದ್ದ ನಮ್ಮ ಕಾರ್ಯವನ್ನು ಗಂಧರ್ವರು ಕ್ಷಣದಲ್ಲಿ ಸಾಧಿಸಿರುವರು. ಒಂದು ಮಾಡಲೆಣಿಸಿ ಬಂದ ದುರಾತ್ಮಕರಿಗೆ ಮತ್ತೊಂದಾಯಿತು! ದುರ್ಯೋಧನನಿಗೆ ತಕ್ಕ ಶಾಸ್ತಿಯಾಗಿದೆ. ನಪುಂಸಕರನ್ನು ಪೀಡಿಸುವವರನ್ನು ಇತರರು ಬಡಿದು ಕೆಡಹುವರೆಂದು ಕೇಳಿದ್ದೆನು. ಅದು ನಿಜವಾಯಿತು. ನಮಗೆ ಕೈಲಾಗದುದನ್ನು ಗಂಧರ್ವರು ಮಾಡಿರಲು ವ್ಯಸನವೇಕೆ? ಅಂತೂ ಲೋಕದಲ್ಲಿ ನಮಗೆ ಪ್ರಿಯವೆಣಿಸುವ ಮಹಾನುಭಾವರಿರುವರೆಂದು ತಿಳಿದು ಸಂತೋಷವಾಗಿದೆ. ನಾವಿಲ್ಲಿ ಕೂತಿರಲು ಗಂಧರ್ವರು ಹೋರಾಡಿ, ನಮ್ಮ ಶತ್ರುಗಳಿಗೆ ತಕ್ಕ ಶಿಕ್ಷೆ ನೀಡಿದರು. ವನವಾಸಕ್ಲೇಶಭಾಜನರಾಗಿ ದುಃಖಿಸುವ ನಮ್ಮ ಕಣ್ಣಮುಂದೆ ಮಹಾವೈಭವಪೂರ್ಣನೆಂದು ತೋರಿ ಮೆರೆಯಲು ಬಂದ ಖಲನಿಗೇಕೆ ದುಃಖಪಡುವೆ?" ಎಂದನು.

ಆ ಮಾತಿಗೆ ಮೆಚ್ಚದೆ ಧರ್ಮಜನು "ವತ್ಸ! ನಮ್ಮವರು ಭಯಾರ್ತರಾಗಿ ಶರಣು ಬಂದಿರಲು ಇಂತಹ ಪರುಷವಚನವನ್ನಾಡಬಹುದೆ? ನಮ್ಮಿಂದ ಕಲಹ ಮಾಡುವ ಮಾತ್ರದಿಂದ ಅವರು ನಮ್ಮ ವಂಶಜರಾಗದೆಹೋಗುವರೆ? ಹೊರಗಿನವನೊಬ್ಬ ನಮ್ಮವನನ್ನು ಪೀಡಿಸುವಾಗ ಸುಮ್ಮನಿರಬಹುದೆ? ಹೇಳು! ಪಾಪಿಯಾದ ದುರ್ಯೋಧನನು ನಮ್ಮನ್ನು ಪರಿಭವಿಸಲು ಇಲ್ಲಿಗೆ ಬಂದನೆಂಬುದು ನಿಜ! ಆದರೆ ದುರ್ಯೋಧನಗ್ರಹಣದಿಂದಲೂ ಕುಲಸ್ತ್ರೀಬಂಧನದಿಂದಲೂ ನಮ್ಮ ಕುಲವು ಕಳಂಕಿತವಾಗುವುದು ನಿಜ. ನರಶಾರ್ದೂಲ! ಸಿದ್ಧನಾಗು! ಅರ್ಜುನ ನಕುಲ ಸಹದೇವರಿಂದ ಕೂಡಿ ಹೋಗಿ, ಸಾಮದಿಂದ ಗಂಧರ್ವರಿಗೆ ತಿಳಿಸಿ, ನಮ್ಮವರನ್ನು ಬಿಡಿಸು! ಸಾಮದಿಂದ ಕಾರ್ಯವಾಗದಿದ್ದರೆ ದಂಡವನ್ನಾದರೂ ಪ್ರಯೋಗಿಸು! ರಾಜಮಾತ್ರನಿಗೆ ಶರಣಾಗತರಕ್ಷಣವು ವಿಹಿತವಾಗಿರಲು, ನಿನ್ನಂತಹ ಮಹಾವೀರನಿಗೆ ಹೇಳಬೇಕೆ? ಅದು ನಿನಗೆ ದುಷ್ಕರವೂ ಅಲ್ಲ. ವೃಕೋದರ! ಯಜ್ಞದೀಕ್ಷಿತನಾಗಿ ಸುಮ್ಮನಿರಬೇಕಾಗಿದೆ. ಇಲ್ಲದಿರೆ ನಾನೇ ಮೊದಲಿಗನಾಗಿ ದುರ್ಯೋಧನನ ವಿಮೋಚನೆಗಾಗಿ ಓಡುತ್ತಿದ್ದೆನು. ಹೊರಡು!" ಎಂದು ತ್ವರೆಪಡಿಸಿದನು.

ಭೀಮ ಅರ್ಜುನ ಯಮಳರು ಅಜಾತಶತ್ರು ವಚನದಂತೆ ರಥಾರೂಢರಾಗಿ ಧಾವಿಸಿ ಬಂದು, ಗಂಧರ್ವರನ್ನು ತಡೆದು ನಿಲ್ಲಿಸಿದರು. ಸವ್ಯಸಾಚಿಯು ಗಂಧರ್ವರನ್ನು

ನೋಡಿ, "ನಮ್ಮ ಅಣ್ಣನಾದ ಸುಯೋಧನನನ್ನು ಬಿಡಿ! ದೇವಗಂಧರ್ವರಿಗೆ ಪರ ದಾರಾಭಿಮರ್ಶನವು ಉಚಿತವಲ್ಲ. ಮನುಜಸಮಾಗಮವು ಕೂಡ ನಿಮಗೆ ಹಿತವಲ್ಲ. ಕೇಳಿ ನಮ್ಮ ಧರ್ಮರಾಜನ ಆಜ್ಞೆಯನ್ನು! ಬಿಡಿ ದುರ್ಯೋಧನಾದಿಗಳನ್ನು! ಇಲ್ಲದಿರೆ ಈ ಅರ್ಜುನನೇ ವಿಕ್ರಮಿಸಿ, ದುರ್ಯೋಧನನನ್ನು ಬಿಡಿಸಬೇಕಾದೀತು!' ಎಂದನು. ಅವನ ಮಾತನ್ನು ಲೆಕ್ಕಿಸದೆ ಗಂಧರ್ವರು ಉಕ್ಕಿಬಂದು, ಶರವರ್ಷದಿಂದ ಪಾಂಡವ ಚತುಷ್ಟಯವನ್ನು ಪೀಡಿಸಿ, ಅವರ ರಥಗಳನ್ನು ಮುರಿಯಲು ಸಮೀಪಿಸಿ ದರು. ಭೀಮಸೇನನು ಗದಾಪಾಣಿಯಾಗಿ ಅವರನ್ನು ಸದೆಬಡಿದು ಹಿಮ್ಮೆಟ್ಟಿಸಿದನು. ಗಂಧರ್ವರು ಆಕಾಶಕ್ಕೆ ಹಾರಿ ಹೋರಾಡಿದರು. ಅರ್ಜುನನು ಅವರನ್ನು ಕೆಳಗೆ ಕೆಡಹಿ ಕೊಂದನು. ಮಾದ್ರೀಪುತ್ರರೂ ಗಂಧರ್ವಸಹಸ್ರವನ್ನು ಯಮಸದನಕಟ್ಟಿದರು. ಆಗ ಚಿತ್ರಸೇನನು ತನ್ನವರ ಪಾಡನ್ನು ನೋಡಿ ಕುಪಿತನಾಗಿ, ಅರ್ಜುನನನ್ನೆದುರಿಸಿ ನಿಂತನು. ಅರ್ಜುನ ಚಿತ್ರಸೇನರು ಭಯಂಕರ ಯುದ್ಧಮಾಡಿದರು. ಚಿತ್ರಸೇನನು ಗದೆಯನ್ನೊಗೆಯಲು ಅರ್ಜುನನದನ್ನು ಪುಡಿಮಾಡಿ, ಅವನ ಅಸ್ತ್ರಗಳನ್ನು ಪ್ರತ್ಯಸ್ತ್ರ ಗಳಿಂದ ಖಂಡಿಸಿದನು. ಅಂತರ್ಹಿತನಾದ ಚಿತ್ರಸೇನನನ್ನು ಶಬ್ದವೇದಿಯಿಂದ ಕೆಡಹಿ ಅರ್ಜುನ ಸಮೀಪಿಸಿದನು.

ಆಗ ಗಂಧರ್ವರಾಜನು ಪಾಂಡವರನ್ನು ನೋಡಿ ಕಾಣದೆ ಕಡಿದಾಡಿದುದಕ್ಕೆ ಕ್ಷಮೆ ಬೇಡಿದನು. ಗಾಂಧರ್ವ ವಿದ್ಯಾಗುರುವಾದ ಚಿತ್ರಸೇನನಿಗೆ ಅರ್ಜುನನು ಅಭಿವಂದಿಸಿ "ವೀರ! ಏನಿದು? ದುರ್ಯೋಧನಾದಿಗಳನ್ನು ನಿಗ್ರಹಿಸಲು ಕಾರಣ ವೇನು?" ಎಂದು ಕೇಳಿದನು. ಚಿತ್ರಸೇನನು ಭೀಮಾದಿಗಳಿಗಭಿನಮಿಸಿ—"ಕೇಳು ಅರ್ಜುನ! ದುರಾತ್ಮಕನಾದ ದುರ್ಯೋಧನನು ಐಶ್ವರ್ಯಪ್ರದರ್ಶನದಿಂದ ನಿಷ್ಕಿಂಚನ ರಾದ ನಿಮ್ಮನ್ನು ನೋಯಿಸಲು ಬಂದಿರುವುದನ್ನು ಅರಿತು, ದೇವೇಂದ್ರನು ನನ್ನನ್ನು ಕರೆದು, 'ಗಂಧರ್ವರಾಜ! ಪಾಪಿ ದುರ್ಯೋಧನನನ್ನು ಸಪರಿವಾರನಾಗಿ ಕಟ್ಟಿ ಕರೆತಾ! ಪಾಂಡವರು ಅವನನ್ನು ಬಿಡಿಸಲು ಬಂದರೆ ಮೃದುಯುದ್ಧವನ್ನು ಮಾಡು!' ಎಂದು ಕಳಿಸಿದನು. ಈ ದುರಾತ್ಮಕನು ನಿಮಗೆ ಪರಿಭವವನ್ನೀಯಲು ಬಂದು ತಾನು ಬದ್ಧನಾಗಿರುವನು. ಪಾಕಶಾಸನನ ಶಾಸನದಂತೆ ಇವನನ್ನು ಇಂದ್ರನ ಪಾದಗಳಲ್ಲಿ ಕೆಡಹುವೆನು. ಇವನಿಗೆ ತಕ್ಕ ಶಿಕ್ಷೆಯಾಗಲಿ! ನನ್ನನ್ನು ತಡೆಯಬೇಡ!" ಎಂದನು.

ಅರ್ಜುನನು ಅವನನ್ನೂ ದುರ್ಯೋಧನಾದಿಗಳನ್ನೂ ಕರೆದುಕೊಂಡು, ಧರ್ಮರಾಜನಿದ್ದಲ್ಲಿಗೆ ಬಂದು, ಸರ್ವವೃತ್ತಾಂತವನ್ನು ನಿವೇದಿಸಿದನು. ಧರ್ಮರಾಜನು ಗಂಧರ್ವರನ್ನು ಪ್ರಶಂಸಿಸಿ, 'ನೀವು ಮಹಾತ್ಮರು! ಚಿತ್ರಸೇನ! ದುರ್ಯೋಧನಾದಿ ಗಳನ್ನು ಹಿಂಸಿಸದೆ, ಅವರ ತರುಣಿಯರನ್ನು ಮುಟ್ಟದೆ, ನಮಗೆ ಮಹೋಪಕಾರ ಮಾಡಿರುವೆ! ನಿನ್ನ ದರ್ಶನದಿಂದ ಮಹೇಂದ್ರನ ದರ್ಶನದಿಂದಾದಷ್ಟು ಸಂತಸವಾಗಿದೆ. ಸುರೇಶನಿಗೆ ನಮ್ಮ ವಂದನೆಗಳನ್ನು ತಿಳಿಸು!' ಎಂದು ಚಿತ್ರಸೇನಾದಿ ಗಂಧರ್ವರನ್ನು

ಕಳಿಸಿದನು. ಗಂಧರ್ವರಾಜನು ಸತ್ತ ಗಂಧರ್ವರನ್ನು ಅಮೃತವರ್ಷದಿಂದ ಬದುಕಿಸಿ ಕೊಂಡು, ಸಪರಿವಾರನಾಗಿ ಪಾಂಡವ ಗುಣಗಾನ ಮಾಡುತ್ತಾ ಹೊರಟುಹೋದನು.

ಇಂತಹ ದುಷ್ಕರ ಕರ್ಮವನ್ನು ಮಾಡಿ ಪಾಂಡವರು ಹರ್ಷಯುಕ್ತರಾದರು. ಸ್ತ್ರೀ ಕುಮಾರ ಪರಿವಾರಸಹಿತನಾಗಿ ಮುಕ್ತನಾದ ಸುಯೋಧನನು ತಲೆಬಾಗಿಸಿ ನಿಂತಿರಲು, ನೋಡಿ, ಧರ್ಮರಾಜನು 'ಭಾರತ! ಇಂತಹ ಸಾಹಸವನ್ನು ಮತ್ತೆ ಮಾಡಬೇಡ! ದುಸ್ಸಾಹಸಿಗಳಿಗೆ ಸುಖವಿಲ್ಲ. ಮನೆಗೆ ಹೋಗು! ಚಿಂತಿಸಬೇಡ!' ಎಂದು ಅವನನ್ನು ಕಳಿಸಿದನು.

## ಪ್ರಾಯೋಪವೇಶ ತ್ಯಾಗ—ಪೌಂಡರೀಕ ಯಾಗ

ದುರ್ಯೋಧನನಿಗೆ ಧರ್ಮರಾಜನ ಮಾತು ಕೇಳಿ, ಕಾಲಕೆಳಗಿನ ಭೂಮಿಯೇ ಕುಸಿದಂತಾಯಿತು. ಅವನು ಧರ್ಮನಿಗೆ ನಮಿಸಿ, ಸಪರಿವಾರನಾಗಿ ಹಸ್ತಿನಾಪುರಿಯ ಮಾರ್ಗವನ್ನು ಹಿಡಿದನು. ಬಾಗಿದ ತಲೆಯನ್ನೆತ್ತದೆ, ಸಂತತ ಬಾಷ್ಪಬಿಂದುಗಳನ್ನು ಸುರಿಸುತ್ತಾ, ಶೋಕಾಕುಲನಾದ ದುರ್ಯೋಧನನು ಅರಣ್ಯಮಧ್ಯದಲ್ಲಿ ಬಿಡಾರ ಹೂಡಿ, ಅಂದಿಗೆ ಅಲ್ಲೇ ತಂಗಿದನು. ನೆಲದಮೇಲೆ ಕುಥಾಸೀನನಾಗಿದ್ದ ಕೌರವ ರಾಜನನ್ನು ಸಮೀಪಿಸಿ ಕರ್ಣನಿಂತೆಂದನು—

"ರಾಜನ್! ಅದೃಷ್ಟದಿಂದ ಉಳಿದು ಬಂದೆನು. ನೀನೂ ಉಳಿದೆ! ಕಾಮ ರೂಪಿಗಳಾದ ಗಂಧರ್ವರನ್ನು ಗೆದ್ದು ಬಂದಂತಿದೆ. ನಿನ್ನ ಸೋದರರೂ ಬದುಕಿ ಬಂದಿರುವರು. ಒಳ್ಳೆಯದಾಯಿತು. ಗಂಧರ್ವಪೀಡಿತನಾಗಿ ರಣರಂಗದಿಂದ ಓಡಿ ಬರಬೇಕಾಯಿತು. ದೇವಸದೃಶರಾದ ಗಂಧರ್ವರನ್ನು ಸೋಲಿಸಿ, ಸದಾರ ಬಲ ವಾಹನನಾಗಿ ಸುಖವಾಗಿ ಬಂದಿರುವೆ. ನಿನ್ನ ಪರಾಕ್ರಮವು ಅತಿಮಾನುಷವಾಗಿದೆ" ಎಂದ ಕರ್ಣನ ನುಡಿಗಳು ದುರ್ಯೋಧನನ ಶೋಕವಹ್ನಿಗೆ ಆಜ್ಯಧಾರೆ ಎರೆದಂತಾ ದವು. ಯುದ್ಧವಿಮುಖನಾಗಿ ಓಡಿದ ಕರ್ಣನಿಗೆ ನಡೆದ ವಿಷಯ ತಿಳಿಯದೆಂದರಿತ ಸುಯೋಧನನು ಅವನ ಮಾತಿಗೆ ಕೋಪಿಸದೆ, ಮೆಲ್ಲನೆ ನಿಟ್ಟುಸಿರಿಡುತ್ತ ಇಂತೆಂದನು—

"ಸಖ! ನಾವು ಗೆದ್ದುಬಂದಿಲ್ಲ, ಸೋತು ಬಂದಿರುವೆವು. ಸತ್ತಿದ್ದರೂ ಚೆನ್ನಾ ಗಿತ್ತು. ಗೊತ್ತಿಲ್ಲದೆ ನೀನಾಡಿದ ಮಾತಿಗೆ ನನಗೆ ಸಿಟ್ಟಿಲ್ಲ. ಗಂಧರ್ವರು ಮಾಯಾ ಯುದ್ಧದಲ್ಲಿ ನಮ್ಮನ್ನು ಕಟ್ಟಿಕೊಂಡು ಪೋಗುತ್ತಿದ್ದರು. ನಮ್ಮ ಪತ್ನಿಯರೂ ಅವರ ಅಧೀನರಾದರು. ದುಶ್ಯಾಸನಾದಿ ವೀರರೆಲ್ಲರೂ ಸೆರೆ ಸಿಕ್ಕರು. ಆಗ ನಮ್ಮ ಸೈನಿಕರು ಹೋಗಿ, ಧರ್ಮಜನನ್ನು ಬೇಡಿದರಂತೆ! ಧರ್ಮರಾಜನು ಭೀಮಾರ್ಜುನರನ್ನು ಕಳಿಸಿ ನಮ್ಮನ್ನು ಬಿಡಿಸಿದನು. ಚಿತ್ರಸೇನ ಧನಂಜಯರು ಸ್ನೇಹಿತರಂತೆ! ಅವನು ನಮ್ಮನ್ನು ಕಟ್ಟಿತಂದು ಧರ್ಮರಾಜನೆದುರು ನಿಲ್ಲಿಸಿದನು. 'ಧರ್ಮರಾಜ! ಈ ಪಾಪಿ ಕೌರವನು ನಿಮ್ಮನ್ನು ಅವಮಾನಿಸಲು ಬಂದಿರುವನು. ಸುಖದಲ್ಲಿದ್ದು ದುಃಖಿಸುವ ನಿಮ್ಮನ್ನು ಅವಹೇಳನ ಮಾಡಲೆಣಿಸಿದ ದುರಭಿಮಾನಿಗೆ ತಕ್ಕ ಶಾಸ್ತಿ ಮಾಡಿರುವೆನು' ಎಂದು

ನುಡಿದ ದುರ್ಮಾರ್ಗ ಗಂಧರ್ವನ ನುಡಿಯನ್ನು ಕೇಳುತ್ತಿದ್ದ ನನಗೆ ಪಾತಾಳವಿವರ ದಲ್ಲಿ ಅಡಗಿ ಸಾಯಬೇಕೆನಿಸಿತು. ಸ್ತ್ರೀ ಸಮಕ್ಷಮದಲ್ಲಿ ನೀಚಗಂಧರ್ವನೋರ್ವನು ನನ್ನನ್ನು ದುಶ್ಶಾಸನಾದಿ ವೀರರನ್ನು ಕಟ್ಟಿ ನಿಲ್ಲಿಸಿದುದನ್ನು ನೆನೆದು ನನ್ನ ಹೃದಯವು ಪ್ರಳಯಾಗ್ನಿಕುಂಡವಾಗಿದೆ. ಕರ್ಣ ! ರಣರಂಗದಲ್ಲಿ ನಾನು ಸತ್ತಿದ್ದರೆ ಚೆನ್ನಾಗಿರು ತ್ತಿತ್ತು. ನನ್ನ ಶತ್ರುಗಳು ಬಿಡಿಸಿದರು. ಜೀವನಪ್ರದರೆನಿಸಿದರು. ನನ್ನ ಮಾನ, ಕೀರ್ತಿ ಗಳು ಹಾಳಾದವು. ನನಗೆ ಜೀವನವೇ ಸಾಕಾಗಿದೆ. ಇಲ್ಲಿಯೇ ಪ್ರಾಯೋಪವಿಷ್ಟ ನಾಗಿ ಸಾಯುವೆನು. ಹಸ್ತಿನಾವತಿಗೆ ಬರಲಾರೆನು. ಶತ್ರುಹರ್ಷ ವರ್ಧನನು, ಸುಹೃಜ್ಜನ ಶೋಕಕಾರಣನಾದ ನನಗೆ ಸಾವೇ ಹಿತವೆನಿಸಿದೆ.

"ಭೀಷ್ಮದ್ರೋಣಾದಿಗಳು, ವಿಪ್ರಾದಿ ಪ್ರಜರು ಎಲ್ಲರೂ ನನ್ನ ಹಿತಶತ್ರುಗಳೇ ! ಅವರನ್ನು ನಾನು ನೋಡಲಾರೆನು. ಶತ್ರುಶಿರದಲ್ಲಿ ತುಳಿದೆನು. ಹಗೆಗಳ ಎದೆಯನ್ನು ತಿವಿದೆನು. ಈಗ ಇಂತು ಪರಿಭೂತನಾಗಿ ಅವರಿಗೆ ಏನು ಹೇಳಲಿ ! ಮಹಾರಾಜನಿಗೆ ಮುಖವನ್ನೆಂತು ತೋರಲಿ ?

"ದುಶ್ಶಾಸನ ! ನನ್ನ ಆಶೆಯನ್ನು ಬಿಡು ! ನೀನೇ ರಾಜನಾಗಿ ಭೂಮಂಡಲ ವನ್ನು ಪರಿಪಾಲಿಸು ! ಕರ್ಣ ಶಕುನಿಗಳ ಸಹಾಯದಿಂದ ಪ್ರಜರನ್ನು ಶಾಸಿಸು ! ವಿಪ್ರರಿಗೆ, ಬಂಧುಮಿತ್ರರಿಗೆ ಆನಂದಪ್ರದನಾಗು ! ಹೋಗು !"

ಇಂತು ನುಡಿದು ಸುಯೋಧನನು ತಮ್ಮನನ್ನಪ್ಪಿ ಕಣ್ಣೀರಿಟ್ಟನು. ದುಶ್ಶಾಸನನು ದುಃಖದಿಂದ ಕಂಠವು ಗದ್ಗದಿತವಾಗಲು, ಅಣ್ಣನಿಗೆ ಕೈಜೋಡಿಸಿ "ಅಣ್ಣ ! ಪ್ರಸನ್ನ ನಾಗು. ಎಂದಿಗೂ ನಾನು ರಾಜನಾಗಲಾರೆನು. ಭೂಮಿಯು ಸಾವಿರ ಹೋಳಾಗಲಿ, ಆಕಾಶವು ಕಳಚಿಬೀಳಲಿ ! ಸೂರ್ಯನು ತಣ್ಣಗಾಗಲಿ ! ಸಮುದ್ರ ಒಣಗಲಿ ! ಆದರೂ ನಾನು ನಿನ್ನ ಪಾದಸೇವೆಗೆ ದೂರನಾಗಲಾರೆನು. ನೀನೇ ನೂರು ವರ್ಷ ರಾಜನಾಗಿ ಬಾಳು !" ಎಂದು ರೋದಿಸಿದನು.

ಇಂತು ದುಃಖಿಸುವ ಸೋದರದ್ವಯವನ್ನು ಕಂಡು ಕರ್ಣನು—"ರಾಜನ್ ! ಪ್ರಾಕೃತರಂತೆ ಅಳುವುದು ತರವಲ್ಲ. ಅಳುತ್ತಾ ಕೂತರೆ ಪ್ರಯೋಜನವಿಲ್ಲ. ನೀನು ಸಾಯುವಂತಹ ವ್ಯಸನವೇನು ಬಂದಿದೆ ? ಹೇಳು ! ಪಾಂಡವರು ನಿನ್ನನ್ನು ಬಿಡಿಸಿ ದುದರಿಂದ ಕರ್ತವ್ಯವನ್ನು ಪಾಲಿಸಿದಂತಾಯಿತಾಗಲಿ, ಅದು ಅವರಿಗೆ ನಮಗೆ, ಸರ್ವಜನರಿಗೆ ಮಹಾರಾಜನಾದ ನಿನಗೆ ಉಪಕಾರ ಮಾಡಿದಂತಲ್ಲ. ಮಹಾರಾಜ ಮಾನರಕ್ಷಣವು ಪ್ರಜಾಕರ್ತವ್ಯವಾಗಿರುವುದರಿಂದ, ಪಾಂಡವರೂ ನಿನ್ನ ಪ್ರಜರೆಂದ ಮೇಲೆ ನಿನ್ನನ್ನು ಬಿಡಿಸದಿದ್ದರೆ ಕರ್ತವ್ಯಭ್ರಷ್ಟರಾಗಿ ಶಿಕ್ಷಾರ್ಹರೆನಿಸುತ್ತಿದ್ದರು. ಚಿಂತೆ ಬಿಡು ! ಏಳು ! ನಿನ್ನ ಸೋದರರು ನಿನ್ನ ಪ್ರಾಯೋಪವೇಶದಿಂದ ದುಃಖಿತ ರಾಗಿರುವರು. ಅವರನ್ನು ಸಂತೈಸು !" ಎಂದನು. ಪ್ರಾಯೋಪವೇಶವನ್ನು ಬಿಡದಿದ್ದರೆ, ತಾನೂ ಅವನೊಡನೆ ಸಾಯುವೆನೆಂದನು.

ಕರ್ಣನಾಡಿದ ಮಾತಿಗೆ ಮನಗೊಡದೆ ಸಾಯಲು ನಿಶ್ಚಯಿಸಿ ಕೂತಿದ್ದ ಸುಯೋಧನನನ್ನು ಕಂಡು ಶಕುನಿಯು—"ಸುಯೋಧನ ! ಕರ್ಣನಾಡಿದ ಹಿತವಚನ ವನ್ನು ಮನ್ನಿಸು ! ಕಷ್ಟಪಟ್ಟು, ಮೋಸಮಾಡಿ ಸಂಪಾದಿಸಿ ನಾನಿತ್ತ ರಾಜ್ಯ ಸಂಪತ್ತನ್ನು ಕಡೆಗಣಿಸಿ, ಅರಣ್ಯದಲ್ಲಿ ಸಾಯಲೆಣಿಸುವುದು ಮಾನಧನನಾದ ಸುಯೋಧನನಿಗಲ್ಲ. ಉಕ್ಕಿಬರುವ ಸುಖ ದುಃಖಗಳನ್ನು ನಿಗ್ರಹಿಸಿ, ಸಮಚಿತ್ತನಾಗು ವುದು ಬುದ್ಧಿವಂತನ ಲಕ್ಷಣವು. ವಿವೇಕಹೀನನು ವ್ಯಸನವು ಬರಲು ಎದೆಗುಂದಿ, ಕೈಗೆ ಸಿಕ್ಕ ಐಶ್ವರ್ಯಭೋಗವನ್ನು ಉಣ್ಣಲಾರದೆ ಕೆಡುವನು. ಅಂತಹವನ ಸಿರಿಯು ಹಸಿಗಡಿಗೆಯಲ್ಲಿದ್ದ ನೀರಿನಂತೆ, ಸರಿದು ಹೋಗುವುದು. ಅತಿಭೀರು, ಅತಿವ್ಯಸನ ದುಃಖಿತ, ಅತ್ಯಲಸನು ಆದ ರಾಜನನ್ನು ಪ್ರಜರು, ನಪುಂಸಕನನ್ನು ತರುಣಿಯರಂತೆ ಬಿಟ್ಟುಬಿಡುವರು. ನಿನ್ನ ಸೇವಕರಾದ ಪಾಂಡುಸುತರು ಮಾಡಿರುವ ಮಹತ್ಸೇವೆ ಯನ್ನು, ಸತ್ತು ವ್ಯರ್ಥಮಾಡಬೇಡ ! ಆನಂದಪಡುವಲ್ಲಿ ವ್ಯಸನವೇಕೆ ? ಏಳು ! ಬೇಕಾದರೆ ನಿನ್ನನ್ನು ಬಿಡಿಸಿದ ಪಾಂಡವರಿಗೆ ರಾಜ್ಯವಿತ್ತು ಬಹೂಕರಿಸು ! ಸೌಭ್ರಾತ್ರ ವನ್ನು ಪ್ರಕಟಿಸಿ ಯಶೋವಂತನಾಗು !" ಎಂದು ನುಡಿದನು.

ದುರ್ಯೋಧನನು ದುಶ್ಶಾಸನನನ್ನು ಕರೆದಪ್ಪಿ, ತಲೆ ಮೂಸಿದನು. ಕರ್ಣ, ಶಕುನಿಯರ ಮಾತನ್ನು ಮೆಚ್ಚದೆ, ನಿರಾಶಾಪೂರ್ಣನಾಗಿ "ನನಗೆ ರಾಜ್ಯ ಬೇಡ ! ಧನಮಾನಗಳು ಬೇಕಾಗಿಲ್ಲ. ಭೋಗಗಳನ್ನು ನಾನೊಲ್ಲೆನು. ಸಾವೆನಗೆ ಬೇಕಾಗಿದೆ. ನನ್ನನ್ನು ಸಾಯಲು ಬಿಡಿ ! ಊರಿಗೆ ಹೋಗಿ ನಿಶ್ಚಿಂತರಾಗಿರಿ!" ಎಂದು ಪ್ರಾಯೋಪ ವಿಷ್ಟನಾದನು. ಆಗ ಕರ್ಣ, ಶಕುನಿ, ದುಶ್ಶಾಸನರೂ ಅಲ್ಲೇ ಕೂತು "ನಿನಗಾಗುವ ಗತಿಯೇ ನಮಗೂ ಆಗಲಿ ! ನಿನ್ನಲ್ಲಿ ಜೀವವಿಟ್ಟು, ನೀನೇ ಸರ್ವವೆಂದು ನಂಬಿದ ನಾವು ನೀನಿಲ್ಲದ ಪುರವನ್ನು ಪ್ರವೇಶಿಸಲಾರೆವು" ಎಂದು ಹಟ ತೊಟ್ಟು ದುರ್ಯೋಧನ ನಿಗೆ ಉಪಚರಿಸುತ್ತಿದ್ದರು.

ಸುಯೋಧನನು ದರ್ಭಾಸನದಲ್ಲಿ ಕೂತನು. ನಾರವಸ್ತ್ರವನ್ನುಟ್ಟು, ರಾಜ ವೇಷವನ್ನು ಬಿಟ್ಟನು. ಮೌನದಿಂದ ಬಹಿರ್ವ್ಯಾಪಾರವನ್ನು ನಿಲ್ಲಿಸಿದನು. ಮರಣೋ ನ್ಮುಖನಾಗಿರುವ ದುರ್ಯೋಧನನ ನಿಶ್ಚಯವನ್ನರಿತು ಪಾತಾಲತಲವಾಸಿಗಳಾದ ದೈತ್ಯದಾನವರು ನಿರ್ವಿಣ್ಣರಾದರು. ತಮ್ಮ ನಾಯಕನಾದ ದುರ್ಯೋಧನನು ಸತ್ತರೆ, ತಮ್ಮ ಪಕ್ಷವೇ ಸತ್ತಂತಾಗುವುದೆಂದು ಚಿಂತಿಸಿ, ಅಭಿಚಾರ ಹೋಮವನ್ನು ನಡೆಸಿ ದರು. ಅಥರ್ವವೇದ ಮಂತ್ರಗಳಿಂದ ಶತ್ರುಮಾರಣವನ್ನು ಸಾಧಿಸಲೆಣಿಸಿ, ಆಹುತಿ ಗಳನ್ನು ಕೊಟ್ಟರು. ಆಗ ಅಗ್ನಿಕುಂಡದಿಂದ ಭಯಂಕರ ಕೃತ್ಯೆ ಬಂದು 'ಏನು ಮಾಡಲಿ? ಎಂದು ಕೇಳಿತು. ದೈತ್ಯರು ಕೃತ್ಯೆಯ ಸಹಾಯದಿಂದ ಪ್ರಾಯೋಪವಿಷ್ಟನಾಗಿದ್ದ ದುರ್ಯೋಧನನನ್ನು ಪಾತಾಳಕ್ಕೆ ಕರೆತರಿಸಿದರು.

ಅಸುರೀಸಮಯದಲ್ಲಿ ದಾನವರು ದುರ್ಯೋಧನನನ್ನು ಕಂಡು, ಅಭಿಮಾನ ದಿಂದ ಇಂತೆಂದರು—"ಸುಯೋಧನ ರಾಜೇಂದ್ರ ! ಪ್ರಾಯೋಪವೇಶವನ್ನು

ಮಾಡುವಷ್ಟು ಕಷ್ಟ ನಿನಗೇನಾಗಿದೆ? ಆತ್ಮಹತ್ಯೆ ಮಹಾ ಪಾಪವೂ, ಅಯಶಸ್ಕರವೂ ಆಗಿದೆ. ನಿನ್ನಂತಹ ವಿವೇಕಿಗಳು ಮೂಲಘಾತವನ್ನು ವರಿಸಬಹುದೇ ? ನಿನ್ನ ಶತ್ರುಗಳಿಗೆ ಆನಂದವನ್ನೀವ ಆತ್ಮಹತ್ಯೆಯನ್ನು ಮಾಡಲೆಣಿಸುವ ಸಾಹಸವು ಒಳಿತಲ್ಲ, ಕೇಳು ! ನಿನ್ನ ಮಹಿಮೆಯನ್ನು ನೀನರಿಯೆ. ನಿನ್ನ ನಾಭಿಯ ಮೇಲಿನ ಶರೀರವು ವಜ್ರಮಯವಾಗಿದೆ. ಅಸ್ತ್ರಶಸ್ತ್ರಗಳಿಂದ ನೀನು ಅಭೇದ್ಯನಿರುವೆ. ಇಂತು ಪಾರ್ವತೀಪರಮೇಶ್ವರ ವರದಿಂದ, ದಿವ್ಯಮನುಜನಾಗಿರುವ ನಿನಗೆ ಅಪಜಯವಿಲ್ಲ. ಭಗದತ್ತಾದಿ ಮಹಾವೀರರು ನಿನ್ನ ಬೆಂಬಲಿಗರಾಗಿರುವರು. ದಾನವರು ನಿನಗೆ ಅನುವಾಗಲು ಭುವಿಯಲ್ಲಿ ಜನಿಸಿ, ಭೀಷ್ಮದ್ರೋಣ ಕೃಪಾದಿಗಳಲ್ಲಿ ಆವೇಶದಿಂದಿದ್ದು, ನಿನ್ನ ಸೇವೆಯನ್ನು ಮಾಡಲಿರುವರು. ಅವರು ಪುತ್ರ, ಸೋದರ, ಶಿಷ್ಯ, ವೃದ್ಧರೆನ್ನದೆ ನಿರ್ದಯರಾಗಿ ಜನರನ್ನು ಸಂಹರಿಸುವರು. ಕೆಲದೈತ್ಯರು ರಾಜರಾಗಿ ಹುಟ್ಟಿರುವರು. ಸತ್ತ ನರಕಾಸುರನು ಕರ್ಣನಲ್ಲಿ ಆವಿಷ್ಟನಾಗಿರುವನು. ಸಹಸ್ರವರ್ಮನೆಂಬ ದಾನವನೂ ಅಲ್ಲಿರುವನು. ಕರ್ಣನು ಅವರ ಬಲದಿಂದ ವಿಜೃಂಭಿಸಿ, ಅರ್ಜುನನನ್ನು ಕೊಲ್ಲುವನು. ಸಂಶಪ್ತಕರಾಜರಲ್ಲಿ ರಾಕ್ಷಸರು ನಿಂತು ಅರ್ಜುನನೊಡನೆ ಕಾದಾಡುವರು. ಇನ್ನು ಭೀಮನನ್ನು ಗದಾಯುದ್ಧ ಕುಶಲನಾದ ನೀನೇ ಸಂಹರಿಸು ! ವಿಷಾದವನ್ನು ಬಿಡು, ನೀನು ಸಾಕ್ಷಾತ್ಕಲಿಯು. ನಾವು ತಪಸ್ಸನ್ನು ಮಾಡಿ, ನಮ್ಮ ರಾಜನಾದ ನಿನ್ನನ್ನು ಕೌರವವಂಶದಲ್ಲಿ ಪುಟ್ಟುವಂತೆ ಮಾಡಿರುವೆವು. ನಿನ್ನ ಶತ್ರುಗಳು ಸಾಯುವರು. ನೀನು ಮೃತನಾದರೆ ದೈತ್ಯಕಾರ್ಯವೆಲ್ಲವೂ ಹಾಳಾಗುವುದು. ನೀನೇ ನಮಗೆ ಗತಿಯು. ಪಾಂಡವರು ದೇವತೆಗಳಿಗೆ ರಕ್ಷಕರು. ಸ್ಥಿರನಾಗಿ ನಿಲ್ಲು. ಸಾಯುವ ಆಲೋಚನೆಯನ್ನು ಬಿಡು !" ಎಂದು ಅವನನ್ನು ಹುರಿದುಂಬಿ, ದಾನವರು ಕೃತ್ಯೆಯಿಂದ ಮತ್ತೆ ಅದೇ ಸ್ಥಲದಲ್ಲಿ ತಂದಿರಿಸಿದರು.

ದುರ್ಯೋಧನನು ಸ್ವಪ್ನದಂತೆ ತಾನು ಕಂಡ ವೃತ್ತಾಂತವನ್ನು ನೆನೆಯುತ್ತಾ, ನಿಶೀಥವನ್ನು ಕಳೆದನು. ದಾನವ ವಚನದಿಂದ ಪಾಂಡವರನ್ನು ಗೆಲ್ಲುವೆನೆಂದು ನಂಬಿ ಧೈರ್ಯದಿಂದ ಅವನು ಪ್ರಾಯೋಪವೇಶವನ್ನು ಬಿಟ್ಟು ಕರ್ಣನನ್ನೆಬ್ಬಿಸಿ—"ಕರ್ಣ ! ಏನು ಮಾಡಲಿ ? ಹೇಳು !" ಎಂದು ಕೇಳಿದ ಸುಯೋಧನನಿಗೆ ಕೈಮುಗಿದು ಕರ್ಣನು—"ರಾಜನ್ ! ಪ್ರಾಯೋಪವೇಶವನ್ನು ಬಿಡು ! ವಿಷಾದವನ್ನೂ ಬಿಡು ! ಮೃತನಾದವನಿಗೆ ಶತ್ರುಜಯವಿಲ್ಲ, ರಾಜ್ಯಸುಖವೂ ಇಲ್ಲ. ಅರ್ಜುನನು ದಿವ್ಯಾಸ್ತ್ರಯುತನಾಗಿರುವನೆಂದು ಹೆದರಬೇಡ ! ಅವನನ್ನು ನಾನು ರಣದಲ್ಲಿ ಸಂಹರಿಸುವೆನು. ನನ್ನಾಣೆಯಾಗಿಯು, ನನ್ನ ಶಸ್ತ್ರದಾಣೆಯಾಗಿಯೂ ನಾನು ಅರ್ಜುನನನ್ನು ಕೊಲ್ಲುವೆನು !" ಎಂದು ರಾಜರಾಜನ ಕಾಲಿಗೆಬಿದ್ದು ಬೇಡಿದನು. ಆಗ ದುರ್ಯೋಧನನು ಅವನನ್ನು ಬಿಗಿದಪ್ಪಿ, ಹಸ್ತಿನಾವತಿಯ ಮಾರ್ಗವನ್ನು ಹಿಡಿಯುವಂತೆ, ಸೈನ್ಯಗಳಿಗಾದೇಶವಿತ್ತನು. ದುಶ್ಶಾಸನಾದಿಗಳು ಹರ್ಷಿತರಾಗಿ, ಅವನ ಹಿಂದೆ ಸಿಂಹನಾದ ಮಾಡುತ್ತಾ ಹೊರಟರು. ದುರ್ಯೋಧನನು ಪಾಂಡವ ಕೃತೋಪಕಾರವನ್ನು

ಮರೆತು ದೈತ್ಯವಚನಗಳನ್ನು ನಂಬಿ, ಜಯವು ತನಗೇ ಮೀಸಲೆಂದು ನಿಶ್ಚಯಿಸಿ, ಸುಖವಾಗಿದ್ದನು.

ಭೀಷ್ಮನಿಗೆ ನಡೆದುದೆಲ್ಲವೂ ತಿಳಿಯಬಂದಾಗ, ಅವನು ಧೃತರಾಷ್ಟ್ರನನ್ನು ಕಂಡು—"ತಾತ! ನಾವು ತಿಳಿದಂತೆ ನಡೆಯಿತು. ಘೋಷಯಾತ್ರೆಯು ವಿಪತ್ಕರ ನೆಂದು ನಿವಾರಿಸಿದರೂ, ಕೇಳದೆ ಹೋದ ನಿನ್ನ ಕುಪುತ್ರರು ಗಂಧರ್ವರಾಜನ ಸೆರೆ ಸಿಕ್ಕರು. ಭೀಮಾರ್ಜುನರು ಅವರನ್ನು ಬಿಡಿಸಿದರು, ಕರ್ಣನಲ್ಲ. ಅವನು ಮೊದಲೇ ಓಡಿಹೋಗಿದ್ದನು. ಪಾಂಡವ ಸಿಂಹಗಳೆದುರಿನಲ್ಲಿ ಕರ್ಣನೊಂದು ನರಿ ಎಂದು ತಿಳಿ! ಈಗಲಾದರೂ ಪಾಂಡವರೊಂದಿಗೆ ಸಂಧಿ ಮಾಡಿಕೊಂಡು, ಅವರ ರಾಜ್ಯವನ್ನು ಅವರಿಗಿತ್ತು, ಮಕ್ಕಳೊಡನೆ ಸುಖವಾಗಿರು! ಕುಲವನ್ನುಳಿಸು!" ಎಂದು ಹಿತವನ್ನು ನುಡಿದನು. ಅದನ್ನು ಕೇಳಿ ನಗುತ್ತಾ, ದುರ್ಯೋಧನನು ಸಭೆಯಿಂದ ಎದ್ದು ಹೋದನು. ಅವನ ಹಿಂದೆ ಕರ್ಣ, ಶಕುನಿ, ದುಶ್ಶಾಸನರೂ ಹೋದರು. ಧೃತರಾಷ್ಟ್ರನು ಸುಮ್ಮನಿರಲು ನೋಡಿ, ಭೀಷ್ಮನು ಕೌರವ ವಿನಾಶಕಾಲವು ಒದಗಿ ಬಂದಿದೆ, ಎಂದು ಮನದಲ್ಲಿ ನಿಶ್ಚಯಿಸಿ, ತನ್ನ ಮನೆ ಸೇರಪೋದನು.

ದುರ್ಯೋಧನಾದಿಗಳು ಮತ್ತೆ ಸಭೆ ಕಲೆತರು. ಶ್ರೇಯಸ್ಸಾಧನವಾವುದೆಂದು ಚಿಂತಿಸಿದರು. ಕರ್ಣನು—"ಮಹಾರಾಜ! ಪಾಂಡವಪಕ್ಷಪಾತಿಯಾದ ಭೀಷ್ಮನು ನಿನ್ನನ್ನು, ನಿನ್ನ ಅನುಚರನಾದ ನನ್ನನ್ನು ನಿಂದಿಸಿದನು. ಅವನ ಮಾತನ್ನು ನಾನು ಸಹಿಸಲಾರೆನು. ನನಗೆ ಅನುಜ್ಞೆಯನ್ನು ಕೊಡು. ಸರ್ವಭೂಮಂಡಲವನ್ನು ಗೆದ್ದು, ನಿನಗೆ ಸಮರ್ಪಿಸುವೆನು. ನಾಲ್ವರು ಪಾಂಡವರು ಮಾಡಿದ ಭೂವಿಜಯ ವನ್ನು ನಾನೊಬ್ಬನೇ ಸಾಧಿಸಿ, ವಿಜಯಶ್ರೀ ಸಮೇತನಾಗಿ ಬಂದು ನಿನ್ನಡಿಗೆರಗುವೆನು" ಎಂದನು. ದುರ್ಯೋಧನನು ಆನಂದತುಂದಿಲನಾಗಿ, "ಕರ್ಣ! ನಿನಗೆ ಅಸಾಧ್ಯ ವಾದುದಿಲ್ಲ. ಅನಿಂದ್ಯರನ್ನು ನಿಂದಿಸಿ, ಶತ್ರುಗಳನ್ನು ಪೊಗಳುವ ಮುದಿಹದ್ದುಗಳಿಗೆ ಬುದ್ಧಿ ಬರಲಿ! ಹೋಗಿ ವಿಜಯವಂತನಾಗಿ ಬಾ!" ಎಂದು ಚತುರಂಗಬಲವನ್ನಿತ್ತು ಕಳಿಸಿದನು.

ಕರ್ಣನು ಮಹಾಸೈನ್ಯಸಮನ್ವಿತನಾಗಿ ತೆರಳಿ, ದ್ರುಪದರಾಜನ ಕಾಂಪಿಲ್ಯ ಪುರವನ್ನು ಮುತ್ತಿದನು. ಸ್ಪರ್ಧೆಯಿಂದಲ್ಲದೆ ವಿಜಯಾರ್ಥಿಯಾಗಿ ಕರ್ಣನು ದ್ರುಪದ, ಭಗದತ್ತ, ಪಾರ್ವತೀಯ, ವಂಗ, ಕಳಿಂಗ, ಮಾಗಧರನ್ನು ಗೆದ್ದು, ಅವರಿಂದ ಕಪ್ಪ ಕಾಣಿಕೆಗಳನ್ನು ಪಡೆದು, ಅವನ್ನು ದುರ್ಯೋಧನನಿಗೆ ಕಳಿಸಿದನು. ಮೋಹನಪುರ, ಕೋಸಲ, ವತ್ಸ ಪುರಿಗಳು ಕರ್ಣನ ವಶವಾದವು. ದಕ್ಷಿಣದೇಶದಲ್ಲಿ ರುಕ್ಮಿಯು ಕರ್ಣನ ಪರಾಕ್ರಮವನ್ನು ಪ್ರಶಂಸಿಸಿ, ಕಪ್ಪವನ್ನಿತ್ತು ಕಳಿಸಿದನು. ಇಂತು ನಾಲ್ಕು ಸಿಟ್ಟಿನ ರಾಜರನ್ನು ಸಾಮದಂಡಗಳಿಂದ ವಶವಾಗಿಸಿ ಬಂದ ಕರ್ಣನನ್ನೆದುರುಗೊಂಡು ದುರ್ಯೋಧನನು ಸಭೆಗೆ ಕರೆತಂದು, ವಿಶೇಷವಾಗಿ ಸತ್ಕರಿಸಿದನು. "ಕರ್ಣ! ಭೀಷ್ಮ, ದ್ರೋಣ, ಕೃಪ, ಬಾಹ್ಲಿಕರಿಂದಾಗದ ಮಹಾಕಾರ್ಯವನ್ನು ನೀನೊಬ್ಬನೇ

ಸಾಧಿಸಿ, ನನಗೆ ಅತ್ಯಂತ ಶ್ರೇಯವನ್ನು ತಂದೆ! ಸಾವಿರ ಮಾತೇಕೆ? ನಿನ್ನಿಂದ ಇಂದು ನಾನು ಸನಾಥನಾದೆನು. ಪಾಂಡವರೇ ಏಕೆ? ಸರ್ವ ರಾಜರು ದೇವತೆಗಳು ಕೂಡ, ನಿನ್ನ ಮುಂದೆ ನಿಲ್ಲಲಾರರು. ಇನ್ನು ಮುಂದೆ ನೀನೆನಗೆ ತಮ್ಮನಂತಾದೆ! ನಿನ್ನ ಸಹಾಯಯುತನಾದ ನನಗೆ ಪಾಂಡವರು ಕೀಟಗಳಂತಾದರು" ಎಂದು ಪ್ರಶಂಸಿಸಿದನು. ಆ ಮಾತನ್ನಾಲಿಸಿ ಸಭೆಯು ಗಗ್ಗೋಲಾಯಿತು. ಕೆಲವರು ಸುಮ್ಮನಿದ್ದರು; ಮತ್ತೆ ಕೆಲವರು ಹಾಹಾಕಾರವನ್ನು ಮಾಡಿ, ಆ ಮಾತನ್ನಲ್ಲಗಳೆದರು. ಕೆಲವರು ರಾಜ ಕರ್ಣರನ್ನು ಪೊಗಳಿದರು. ದುರ್ಯೋಧನನು ಕರ್ಣನಿಂದ ತನಗೆ ಪಾಂಡವವಿಜಯವು ಸುಲಭವೆಂದರಿತು ಆನಂದದಿಂದಿದ್ದನು.

ಸುಯೋಧನನು ಕರ್ಣನನ್ನು ನೋಡಿ "ಕರ್ಣ! ಸಕಲ ಭೂಮಂಡಲವು ಎನ್ನ ವಶವಾಗುವಂತೆ ಮಾಡಿದೆ! ನಿನ್ನಿಂದ ನಾನು ಕೃತಾರ್ಥನಾದೆನು. ಆದರೆ ಪಾಂಡವರು ರಾಜಸೂಯವನ್ನು ಮಾಡಿದಂತೆ, ನಾನೂ ರಾಜಸೂಯವನ್ನು ಮಾಡಲಿಚ್ಛಿಸುವೆನು. ಕರೆಸು ಪುರೋಹಿತರನ್ನು! ತರಿಸು ಬೇಕಾದ ಸಂಭಾರಗಳನ್ನು!" ಎಂದನು. ಅಂತೆಯೇ ಕರ್ಣನು ಸರ್ವಸಂಭಾರಗಳನ್ನು ಸಿದ್ಧಪಡಿಸಿದನು. ಪುರೋಹಿತನನ್ನು ಕರೆಸಿ, 'ರಾಜಸೂಯವನ್ನು ನಡೆಸಿಕೊಡು' ಎಂದು ಕೇಳಿದ ಸುಯೋಧನನಿಗೆ ಪುರೋಹಿತನು "ರಾಜನ್! ನಿಮ್ಮ ತಂದೆ ಜೀವಂತನಿರುವನು. ಮತ್ತು ರಾಜಸೂಯವನ್ನು ಮಾಡಿರುವ ಧರ್ಮರಾಜನು ನಿನ್ನ ಅಣ್ಣನಾಗಿರುವನು. ಅವನು ಜೀವಿಸಿರಲು, ಇನ್ನೊಬ್ಬರಿಂದ ರಾಜಸೂಯವು ಆಗಲಾರದು. ಆದರೆ ರಾಜಸೂಯಕ್ಕೆ ಸಮವೆನಿಸುವ ಪೌಂಡರೀಕವೆಂಬುವ ಯಾಗವಿದೆ, ಅದನ್ನು ನೀನು ಮಾಡು! ಮುಂದೆ ಯುದ್ಧದಲ್ಲಿ ಪಾಂಡವರನ್ನು ಗೆದ್ದು ಮತ್ತೆ ರಾಜಸೂಯವನ್ನು ಮಾಡು!" ಎಂದನು. ಆ ಮಾತಿಗೆ ಕರ್ಣ, ಶಕುನಿ, ದುಶ್ಶಾಸನರು ಸಮ್ಮತಿಸಿ ಪ್ರೋತ್ಸಾಹಿಸಲು, ದುರ್ಯೋಧನನು ಪೌಂಡರೀಕ ಯಾಗವನ್ನು ಮಾಡಲು ಪ್ರಾರಂಭಿಸಿದನು.

ಪೌಂಡರೀಕವು ರಾಜಸೂಯದ ಸಹಸ್ರಾಂಶವೂ ಆಗದಿದ್ದರೂ, ಪುರೋಹಿತನು ತತ್ಸಮವೆಂದು ಹೇಳುವಾಗ 'ರಾಜಸೂಯಯಾಗ ಕರ್ತೃಗಳು ಇಬ್ಬರು ಜೀವಿಸಿರಲಾಗದು. ಧರ್ಮರಾಜನನ್ನು ಕೊಲ್ಲದೆ ದುರ್ಯೋಧನನಿಗೆ ರಾಜಸೂಯವನ್ನು ಮಾಡಲಾಗದು. ಧರ್ಮರಾಜನನ್ನು ಕೊಲ್ಲಲು ಹೋದರೆ ದುರ್ಯೋಧನನು ಉಳಿಯನು. ಆದುದರಿಂದ ರಾಜನಿಗೆ ಶ್ರೇಯವಾಗಲಿ!' ಎಂದು ಚಿಂತಿಸಿ, ಪೌಂಡರೀಕ ಯಾಗವನ್ನು ಮಾಡಲು ಸಲಹೆ ಇತ್ತನು.

ರಾಜರಾಜನು ಯಜ್ಞವನ್ನು ಪ್ರಾರಂಭಿಸಿ, ದೀಕ್ಷಿತನಾದನು. ವಿದುರನು ಸರ್ವ ಜನರನ್ನು ಯಥಾರ್ಹವಾಗಿ ಅನ್ನಪಾನ, ವಸತಿ, ವಸ್ತ್ರ ರತ್ನ ದಕ್ಷಿಣಾದಿಗಳಿಂದ ಸತ್ಕರಿಸಿದನು. ಯಜ್ಞವನ್ನು ಸಾಂಗಗೊಳಿಸಿ, ದುರ್ಯೋಧನನು ದುಶ್ಶಾಸನ, ಕರ್ಣ, ಶಕುನಿ ಸಮೇತನಾಗಿ ಅಂತಃಪುರವನ್ನು ಪ್ರವೇಶಿಸಿದನು. ಅವನ ಯಜ್ಞ ವೈಭವವನ್ನು ಕಂಡು, ಪ್ರೀತರಾದ ವಿಪ್ರಾದಿ ಪ್ರಜರು 'ಇಂತಹ ಯಾಗವನ್ನು ನಾವು

ಕಂಡಿಲ್ಲ. ಯಯಾತಿ ಮಾಂಧಾತೃ ಭರತರನ್ನೂ ದಾನ ಧರ್ಮಗಳಿಂದ ಮೀರಿಸಿದ ದುರ್ಯೋಧನನಿಂದ ಕುರುಕುಲವು ಪಾವನವಾಯಿತು' ಎಂದು ಪೊಗಳಿದರು. ಅವರ ಶುಭವಚನಗಳನ್ನಾಲಿಸುತ್ತಾ ದುರ್ಯೋಧನನು ಸಂತೃಪ್ತನಾಗಿ, ಹಿರಿಯರಿಗೆ ವಂದಿಸಿ, ಅವರನ್ನೆಲ್ಲ ಪೂಜಿಸಿದನು. ಸಭಾಸೀನನಾಗಿ ನಕ್ಷತ್ರ ಗಣದಲ್ಲಿ ಚಂದ್ರನಂತೆ ಬೆಳಗುವ ರಾಜರಾಜನನ್ನು ನೋಡಿ ಕರ್ಣನು ಹಿಗ್ಗಿ "ಮಹಾರಾಜ ! ನಿನ್ನ ಮಹಿಮೆಯಿಂದ ಪೌಂಡರೀಕವು ಸಾಂಗವಾಯಿತು. ನಿನ್ನ ಪರಾಕ್ರಮದಿಂದ ಪಾಂಡವರು ಹತರಾದಾಗ ರಾಜಸೂಯವನ್ನೂ ಸಾಂಗಗೊಳಿಸಿ ಮೆರೆವ ನಿನ್ನನ್ನು ಕಣ್ಣಾರೆ ಕಂಡು, ನಾನು ಧನ್ಯನಾಗುವೆನು" ಎಂದು ಪ್ರಶಂಸಿಸಿದನು. ದುರ್ಯೋಧನನು ಅವನನ್ನು ಕರೆದಪ್ಪಿ, ದುರ್ಮಾರ್ಗರಾದ ಪಾಂಡವರನ್ನು ಕೊಂದು, ನಾನು ರಾಜಸೂಯವನ್ನು ಮಾಡು ವಂತೆ ನೀನು ಸಹಾಯಕನಾಗೆಂದನು. "ರಾಜನ್ ! ಕೇಳು ನನ್ನ ಪ್ರತಿಜ್ಞೆಯನ್ನು ! ಸಂಗ್ರಾಮದಲ್ಲಿ ಅರ್ಜುನನನ್ನು ಸಂಹರಿಸುವವರೆಗೂ ನಾನು ಮಾಂಸವನ್ನು ಭುಜಿಸೆನು. ಸುರೆಯನ್ನು ಸೇವಿಸೆನು. ನನ್ನ ಪಾದಗಳನ್ನು ಸೇವಕರಿಂದ ತೊಳೆಸೆನು. ಯಾಚಕರಿಗೆ ಇಲ್ಲವೆನ್ನದೆ ಬೇಡಿದ್ದೇನಾದರೂ ಕೊಡುವೆನು" ಎಂದು ಶಪಥವನ್ನು ಮಾಡಿದನು. ಅದನ್ನು ಕೇಳಿ ಕೌರವರು 'ಉಘೇ ! ಉಘೇ ! ಎಂದು ಅವನನ್ನು ಕೊಂಡಾಡಿದರು. ಪಾಂಡವರು ಹತರಾದರೆಂದು ತಿಳಿದು ದುರ್ಯೋಧನಾದಿಗಳು ನಿಶ್ಚಿಂತರಾಗಿದ್ದರು.

## ವ್ರೀಹಿದ್ರೋಣಕಾಖ್ಯಾನ—ದುರ್ವಾಸಪರೀಕ್ಷಾ

ಪಾಂಡವರು ದ್ವೈತವನವನ್ನು ಬಿಟ್ಟು ಮರುಭೂಮಿಯನ್ನನುಸರಿಸಿ, ಕಾಮ್ಯಕ ವನವನ್ನು ಸೇರಿದರು. ಅಲ್ಲಿ ತೃಣಬಿಂದು ಸರೋವರದ ತೀರದಲ್ಲಿ ಪರ್ಣಶಾಲೆಗಳನ್ನು ನಿರ್ಮಿಸಿ, ವಿಪ್ರರಿಂದಲೂ ಇಂದ್ರಸೇನಾದಿಸೂತರಿಂದಲೂ ಪರಿಚಾರಕರಿಂದಲೂ ಕೂಡಿ ವಸಿಸುತ್ತಿದ್ದರು. ದ್ವೈತವನದ ಮೃಗಗಳೂ ಸರ್ವಭೂತ ದಯಾಪರನಾದ ಧರ್ಮ ರಾಜನ ದಯೆಯಿಂದ ಉಳಿದು, ಮತ್ತೆ ವೃದ್ಧಿ ಹೊಂದಿದವು.

ಧರ್ಮರಾಜನು ದ್ಯೂತವನ್ನೂ ದುರ್ಯೋಧನ, ಕರ್ಣಾದಿಗಳ ದುರ್ವಚನ ಗಳನ್ನೂ ನೆನೆದು, ತನ್ನ ಅವಿವೇಕದಿಂದ ಅರಣ್ಯವಾಸವಾಯಿತೆಂದು ಮರುಗಿದಾಗ, ಭೀಮಾರ್ಜುನಯಮಳರು ಅವನನ್ನು ಸಮಾಧಾನಪಡಿಸುತ್ತಿದ್ದರು. ಅರಣ್ಯವಾಸವೂ ಮುಗಿಯುತ್ತಾ ಬಂದಿರುವುದನ್ನರಿತು ಧರ್ಮರಾಜನೂ ಧೈರ್ಯವಹಿಸಿ, ದ್ರೌಪದಿಯು ಸಕಾಲೀನೋಪಚಾರಗಳಿಂದ ಚಿಂತಾಶೋಕದೂರನಾದನು. ಒಂದುದಿನ ಶ್ರೀವ್ಯಾಸ ದೇವನು ಅವರನ್ನು ನೋಡಲು ಬಂದಾಗ ಪಾಂಡವರು ಭಗವಂತನನ್ನು ಕೂಡಿಸಿ, ಪೂಜಿಸಿದರು. ಕೃಶರಾಗಿರುವ ಪೌತ್ರರನ್ನು ಕಂಡು, ಕಣ್ಣೀರು ತಂದು, ಸತ್ಯವತೀ ನಂದನನಿಂತೆಂದನು—ಧರ್ಮಜ ! ಕಷ್ಟಪಡದವನಿಗೆ ಸುಖವಿಲ್ಲ. ಸುಖದುಃಖಗಳು ನಮ್ಮಾಧೀನವಲ್ಲ. ದೈವೇಚ್ಛೆಯಿಂದ ಬರುವ ಸುಖದುಃಖಗಳ ಉದ್ರೇಕೋದ್ವೇಗ ಗಳನ್ನು ತ್ಯಜಿಸಿ, ಶಾಂತನಾದವನೇ ಬುದ್ಧಿವಂತ. ಕರ್ಷಕನು ಪ್ರಯತ್ನಿಸಿ ಕಾಲದಲ್ಲಿ

ಫಲವನ್ನು ಕಾಣುವಂತೆ, ತಪೋನಿರತರಾಗಿ, ಸತ್ಯ, ಆರ್ಜವ, ದಯಾ, ದಾನ, ಶೌಚ, ದಮಗಳಿಂದ ಯುಕ್ತರಾದ ನಿಮಗೆ ಶ್ರೇಯಃಕಾಲವು ಸಮೀಪದಲ್ಲಿದೆ. ಇಲ್ಲಿ ಮಾಡಿದುದನ್ನು ಅಲ್ಲಿ ಉಣ್ಣುವ ನರನು ಪುಣ್ಯಶೀಲನಾಗಿ ಸುಖವನ್ನು ಪಡೆಯುವನು. ಪಾಪಶೀಲನಿಗೆ ಇಲ್ಲಿ ದುಃಖವು, ಅಲ್ಲಿ ನರಕವು ತಪ್ಪದು. ಸತ್ಯವಾದಿಯು ಆಯು ಷ್ಮಂತನಾಗುವನು ; ನಿಷ್ಕಪಟನು ದುಃಖದೂರನಾಗುವನು. ಕ್ರೋಧವರ್ಜಿತನು ಜನಪ್ರಿಯನೆನಿಸುವನು. ಶ್ರೀಹರಿಭಕ್ತನು ಸರ್ವಸುಖಗಳನ್ನು ಪಡೆದು, ಕಷ್ಟಗಳನ್ನು ದಾಟಿ, ಮುಕ್ತನಾಗುವನು. ದಾನವಂತನಿಗೆ ಸರ್ವವೂ ಸುಲಭವಾಗಿದೆ. ಶ್ರೀಹರಿಭಕ್ತಿ ವರ್ಜಿತನ ದಾನವು, ದುರ್ಯೋಧನನ ಯಜ್ಞದಂತೆ ವ್ಯರ್ಥವೇ ಸರಿ. ಅರ್ಥವು ಬಹಿಃಪ್ರಾಣವೆನಿಸಿದೆ. ಅಂತಹ ಅರ್ಥವನ್ನು ಪರೋಪಕಾರಕ್ಕೆಂದು ಪಾತ್ರರಿಗಿತ್ತು, ಶ್ರೀಹರಿಗರ್ಪಿತವೆನ್ನುವ ದಾನವಂತನು ಮನಶ್ಶುದ್ಧಿಯನ್ನು ಹೊಂದುವನು. ಮನ ಶ್ಶುದ್ಧಿಯಿಂದ ಜ್ಞಾನಸಿದ್ಧಿ ; ಅದರಿಂದ ಶ್ರೀಹರಿಪ್ರಸಾದ. ಅದರಿಂದ ಮೋಕ್ಷವೂ ಲಭ್ಯವಾಗಿದೆ.

ಕುರುಕ್ಷೇತ್ರದಲ್ಲಿ ಮುದ್ಗಲನೆಂಬ ಬ್ರಾಹ್ಮಣನಿದ್ದನು. ಅವನು ಶಿಲೋಂಛ ವೃತ್ತಿಯಿಂದ ಜೀವಿಸಿ, ಅತಿಥಿಪೂಜಾತತ್ಪರನೂ ಆಗಿದ್ದನು. ನಿತ್ಯವೂ ಪಶ್ವಾಲಂಭನ ವನ್ನು ಮಾಡದೆ ನಿತ್ಯವೂ ಇಷ್ಟಿಯನ್ನಾಚರಿಸುತ್ತಿದ್ದನು. ಅವನ ಯಜ್ಞಗಳಲ್ಲಿ ಇಂದ್ರಾದಿ ದೇವತೆಗಳು ಬಂದು ಹವಿಸ್ಸನ್ನು ಸ್ವೀಕರಿಸುತ್ತಿದ್ದರು. ಅವನು ಅತಿಥಿ ಗಳನ್ನು ನಗುನಗುತ್ತಾ ಆದರದಿಂದ ಸತ್ಕರಿಸುತ್ತಿದ್ದನು. ಒಂದು ದೊನ್ನೆ ಕಾಳು ಸಿಕ್ಕರೆ ಸಾಕು, ಅಂದಿಗೆ ಅದರಿಂದಲೇ ಅವನು ತೃಪ್ತನಾಗಿರುತ್ತಿದ್ದನು. ಒಂದೇ ದೊನ್ನೆಯ ಅಕ್ಕಿಯನ್ನು ಬೇಯಿಸಿ, ಅನ್ನ ಮಾಡಿ, ಪಂಚಯಜ್ಞಗಳಿಂದ ದೇವ ಋಷಿ ಪಿತೃ ಭೂತ ನರರನ್ನು ತೃಪ್ತಿಪಡಿಸುವ ಆ ಮಹಾನುಭಾವನ ಅನ್ನವು ಬಳಸಿದಂತೆ ಕಡಿಮೆಯಾಗದೆ ಇರುತ್ತಿತ್ತು. ತ್ಯಾಗಶುದ್ಧ ಮನಸ್ಕನಾಗಿ, ಮುದ್ಗಲನು ಬಹ್ವನ್ನವಂತನಾಗಿದ್ದನು.

ಒಂದು ದಿನ ದುರ್ವಾಸಮುನಿಯು ಅವನ ಆಶ್ರಮಕ್ಕೆ ಬಂದನು. ಮುದ್ಗಲನು ಕೋಪನನಾದ ಋಷಿವರನಿಗೆ ಸ್ವಾಗತವಿತ್ತು, ಕಾಲ್ತೊಳೆದು, ಕೂಡಿಸಿ, ಉಣಬಡಿಸಿದನು. ಅನ್ನವನ್ನೆಲ್ಲ ಉಂಡು, ದುರ್ವಾಸನು ತನ್ನ ಎಂಜಲಕೈಯಿಂದ ಮುದ್ಗಲನ ಅಂಗಗಳನ್ನು ಸವರಿ, ಹುಚ್ಚನಂತೆ ನಗುತ್ತಾ, ಹೊರಟುಹೋದನು. ಇಂತು ಆರು ದಿನಗಳು ಬಂದು, ಮುದ್ಗಲನಿಗೆ ಅನ್ನವಿಲ್ಲದಂತೆ ಮಾಡಿ ಪರೀಕ್ಷಿಸಿದನು. ಮುದ್ಗಲನು ವಿಕಾರರಹಿತನಾಗಿರುವುದನ್ನು ನೋಡಿ, ಏಳನೆಯ ದಿನ ದುರ್ವಾಸನು ಪ್ರೀತನಾಗಿ ಇಂತೆಂದನು—'ಬ್ರಾಹ್ಮಣೋತ್ತಮ! ನಿನ್ನಂತಹ ದಾತೃಗಳು ಲೋಕ ದಲ್ಲಿಲ್ಲ. ಅನ್ನವನ್ನೆಲ್ಲ ಕೊಟ್ಟು ಉಪವಾಸವಿದ್ದರೂ, ಅತಿಥಿಯಾದ ನನ್ನನ್ನು ಕೋಪಿಸದೆ, ಶ್ರದ್ಧೆಯಿಂದ ಪೂಜಿಸಿದೆ! ನಾ ಮಾಡಿದ ಅಪರಾಧವನ್ನು ಮರೆತೆ! ಆಹಾರವನ್ನು ಬಿಟ್ಟಿರುವುದು ದುಷ್ಕರ! ಆದರೂ ನೀನು ಶ್ರಮದಿಂದ ಆರಿಸಿ ತಂದ ಕಾಳಿನ ಅನ್ನವನ್ನೆಲ್ಲ ಕೊಟ್ಟು ನಿರ್ವಿಕಾರನಾಗಿರುವೆ. ನಿನ್ನ ಅನ್ನವನ್ನುಂಡು ನಾನು

ಪವಿತ್ರನಾದೆನು. ನೀನು ಸಶರೀರನಾಗಿ ಸ್ವರ್ಗವನ್ನು ಸೇರುವಂತೆ ಅನುಗ್ರಹಿಸಿರುವೆನು.'—ಆಗ ದೇವದೂತನು ದಿವ್ಯವಿಮಾನವನ್ನು ತಂದು, 'ಬಾ! ದೇವಲೋಕಕ್ಕೆ' ಎಂದು ಕರೆದನು.

ಮುದ್ಗಲನು ದೇವದೂತನನ್ನು ಕಂಡು, ನಮಿಸಿ, 'ಸ್ವರ್ಗದಲ್ಲಿ ಏನು ಸುಖವಿದೆ? ಅಲ್ಲಿರುವ ದುಃಖವಾವುದು? ಅಲ್ಲಿ ತಪವೆಂತು ಮಾಡಬಹುದು? ಸಪ್ತಪದೀನವಲ್ಲವೆ ಮೈತ್ರಿ? ಆದುದರಿಂದ ನೀನು ಸಖನೆಂದು ತಿಳಿದು ಕೇಳುತ್ತಿರುವೆನು ನಿಜವಾದುದನ್ನು ತಿಳಿಸು! ವಿಚಾರಿಸಿ ಯೋಗ್ಯವೆಂದು ಕಂಡರೆ ಬರುವೆನು' ಎಂದನು.

ದೇವದೂತನಿಂತೆಂದನು—ಮಹರ್ಷೇ! ನೀನು ಬುದ್ಧಿವಂತನು. ಇತರರು ಬಯಸುವ ಸ್ವರ್ಗದ ಸುಖದುಃಖಗಳನ್ನು ವಿಚಾರಿಸುತ್ತಿರುವೆ! ಸ್ವರ್ಗಕ್ಕಿಂತಲು ಹೆಚ್ಚು ಸುಖಕರವಾದ ಲೋಕಗಳಿವೆ. ಅಲ್ಲಿಗೆ ಹೋಗುವ ಮಾರ್ಗವನ್ನು ದೇವಯಾನವೆನ್ನುವರು. ತಪೋನಿಧಿಗಳು, ಯಜ್ಞನಿಷ್ಠರು, ಇಂದ್ರಿಯಜಯುವಂತರು, ವಿಮತ್ಸರರು, ದಾನಧರ್ಮರತರು, ಆಹವಶೂರರು ಅಲ್ಲಿಗೆ ಹೋಗುವರು. ಅವರು ಆ ವಿಹಿತಕರ್ಮವನ್ನು ಶ್ರೀಹರಿಪ್ರೀತಿಗೆಂದು ಮಾಡಿ, ಫಲವನ್ನು ಶ್ರೀಶನಿಗೆ ಸಮರ್ಪಿಸಿ, ಜ್ಞಾನವನ್ನು ಗುರುದ್ವಾರಾ ಸಂಪಾದಿಸಿ, ದೇವಯಾನ ಮಾರ್ಗವನ್ನು ಹೊಂದುವರು. ಪ್ರವೃತ್ತಿಕರ್ಮರತರು, ನಾಸ್ತಿಕರು, ದಾಂಭಿಕರು ಆ ಮಾರ್ಗವನ್ನು ಹೊಂದಲಾರರು.

ಸ್ವರ್ಗದಲ್ಲಿ ನಂದನೋದ್ಯಾನವಿದೆ ; ಅಲ್ಲಿ ಕಲ್ಪವೃಕ್ಷಗಳಿವೆ; ಸ್ವರ್ಗವಾಸಿಗಳಿಗೆ ಹಸಿವೆ, ನೀರಡಿಕೆ, ಚಿಂತೆ, ಶೋಕ, ಪ್ರಯಾಸ, ಮರಣಗಳಿಲ್ಲ. ಅಲ್ಲಿರುವ ದೇವತೆಗಳಲ್ಲದೆ, ಪುಣ್ಯಕರ್ಮವನ್ನು ಮಾಡಿದವರೂ ತಮ್ಮ ಪುಣ್ಯಾವಸಾನವಾಗುವವರೆಗೂ ಅಲ್ಲಿರುವರು. ಸ್ವರ್ಗವು ಜಾತಿಯಂತೆ ಹುಟ್ಟಿನಿಂದ ಬರುವುದಿಲ್ಲ. ಅದು ಪುಣ್ಯದಿಂದ ಲಭ್ಯವಾಗಿದೆ. ಅಲ್ಲಿರುವವರ ಶರೀರಗಳು ತೇಜೋಮಯಗಳು, ಅವರಿಗೆ ಸ್ವೇದವಿಲ್ಲ. ದೌರ್ಗಂಧ್ಯವಿಲ್ಲ. ಅವರ ಹೂಮಾಲೆ ಬಾಡುವುದಿಲ್ಲ. ಸ್ವರ್ಗಕ್ಕಿಂತಲು ಉಪರಿ ಲೋಕಗಳು ತೇಜೋಮಯವು ಸುಖಮಯವು ಆಗಿವೆ. ಅಲ್ಲಿ ದೇವತೆಗಳಿಗೂ ಪೂಜ್ಯರಾದವರು ಋಭುಗಳು, ಬ್ರಹ್ಮಾದಿಗಳು ಇರುವರು. ಅಮೃತಭೋಜನರು ದಿವ್ಯಶರೀರರು ಆಗಿ ಜನೋಲೋಕದ ಮೇಲಿರುವ ಪುಣ್ಯವಂತರು ಮತ್ತೆ ಜನನ ಮರಣರೂಪವಾದ ಸಂಸಾರಾವರ್ತದಲ್ಲಿ ಸಿಕ್ಕದಿರುವರು.

ಸ್ವರ್ಗದಲ್ಲಿನ ಗುಣಗಳನ್ನು ವರ್ಣಿಸಿದೆನು. ಈಗ ಅದರಲ್ಲಿರುವ ದೋಷಗಳನ್ನೂ ಹೇಳುವೆನು, ಕೇಳು! ಇಲ್ಲಿ ಮಾಡಿದ ಪುಣ್ಯಕರ್ಮದ ಫಲಗಳನ್ನು ಅಲ್ಲಿ ಭೋಗಿಸುವರು. ಅಲ್ಲಿ ಕರ್ಮಗಳ ಸುಖವನ್ನುಂಡು ಕೊನೆಗೆ ಮತ್ತೆ ಮನುಜಭೂಮಿಗೆ ಬೀಳುವರು; ಇದು ನಿಜ. ಅದು ಕರ್ಮಭೂಮಿ ಅಲ್ಲ; ಪುಣ್ಯಸಾಧನವಿಲ್ಲೇ ಆಗಲಿ ಅಲ್ಲಿಲ್ಲ. ಬ್ರಹ್ಮಲೋಕ ಪರ್ಯಂತವಾಗಿರುವ ಲೋಕಗಳು ಪುನರಾವೃತ್ತಿರಹಿತಗಳಲ್ಲ. ವಿಷ್ಣುಲೋಕವೇ ಪುನರಾವೃತ್ತಿ ರಹಿತವು. ಆದರೆ ಸ್ವರ್ಗದಿಂದ ಬಂದವನು ಪುಣ್ಯಶೇಷದಿಂದ ಸಹಿತನಾಗಿ ಮನುಜಜನ್ಮವನ್ನು ಹೊಂದುವನು.

ಅಲ್ಲಿಯೂ ಸುಜೀವನು ಮತ್ತೆ ಪುಣ್ಯಕರ್ಮವನ್ನು ಮಾಡುವನು. ಜ್ಞಾನಿಜನಸಂಗದಿಂದ ಅವನು ಜ್ಞಾನವನ್ನಾರ್ಜಿಸಿ, ಮುಕ್ತನಾಗುವ ಅವಕಾಶವೂ ಉಂಟು. ಆದರೆ ದುಷ್ಟಸಂಗದಿಂದ ಪಾಪಕರ್ಮವನ್ನು ಮಾಡಿದೊಡೆ, ತತ್ಫಲವಾಗಿ, ಅವನು ನರಕಭಾಜನನಾಗಬೇಕಾಗುವುದು.

ಇಂತು ಸ್ವರ್ಗವರ್ಣನವನ್ನು ಮಾಡಿದ ದೇವದೂತನ ಮಾತನ್ನಾಲಿಸಿ, ಮುದ್ಗಲನು ಚೆನ್ನಾಗಿ ಆಲೋಚಿಸಿ, ದೇವದೂತನಿಗಿಂತೆಂದನು—"ಆರ್ಯ! ನಿನಗೆ ನಮಸ್ಕಾರವು. ಸ್ವರ್ಗದಿಂದ ಪುಣ್ಯಕ್ಷಯವಾದಾಗ ಬೀಳಲು ನನಗೆ ಇಷ್ಟವಿಲ್ಲ. ಅಕ್ಷಯ ಸುಖಸಂಪನ್ನವಾದ ವಿಷ್ಣುಲೋಕವನ್ನು ಹೊಂದಲು ತವಕಿಸುವ ನನಗೆ ಬೇರೆ ಯಾವುದೂ ರುಚಿಸದು. ವಿಷಯಾತ್ಮಕರಿಗೆ ಸಿಗದ, ದಂಭ ಲೋಭ ಕ್ರೋಧ ಮೋಹ ಮದಾನ್ವಿತರಿಗೆ ದೊರಕದ, ವಿಷ್ಣುಲೋಕವೆನಗಿರಲಿ!" ಎಂದು ಮುದ್ಗಲನು ದೇವದೂತನನ್ನು ಕಳಿಸಿ ತಾನು ಮೋಕ್ಷಮಾರ್ಗವನ್ನನುಸರಿಸಿ, ಧ್ಯಾನಯೋಗದಿಂದ ಶ್ರೀಹರಿಯನ್ನು ಕಂಡು, ತತ್ಪ್ರಸಾದದಿಂದ ಮುಕ್ತನಾದನು.

ಧರ್ಮರಾಜ! ಮುದ್ಗಲನಂತೆ ಸಂತುಷ್ಟಚಿತ್ತನಾಗು! ರಾಜ್ಯಸುಖವು ದೂರವಾಯಿತೆಂದು ಶೋಕಿಸಬೇಡ! ಅರಣ್ಯವಾಸವು ನಿನಗೆ ತಪಸ್ಸೆನಿಸಿದೆ. ಮುಂದೆ ರಾಜ್ಯವೂ ಸಿಗುವುದು. ಸುಖದುಃಖಗಳು ಚಕ್ರದ ಎಲೆಗಳಂತೆ ಒಂದಾದಮೇಲೆ ಒಂದಾಗಿ ಬಿಡದೆ ಬರುವುವು. ಹದಿಮೂರು ವರ್ಷಗಳಾದಮೇಲೆ ನಿನಗೆ ಮಹೀ ಸಾಮ್ರಾಜ್ಯವು ಕರಗತವಾಗುವುದು.

ಇಂತುಹೇಳಿ, ಶ್ರೀವೇದವ್ಯಾಸನು ಬದರಿಕಾಶ್ರಮಕ್ಕೆಂದು ಹೊರಟುಹೋದನು. ಧರ್ಮರಾಜಾದಿಗಳು ಕಾಮ್ಯಕವನದಲ್ಲಿ ಸುಖವಾಗಿರುತ್ತಿದ್ದರು. ಸೂರ್ಯನಿತ್ತ ಅಕ್ಷಯಪಾತ್ರೆಯಿಂದ ಅತಿಥಿಪೂಜೆಗೆ ಕೊರತೆಯಾಗಲಿಲ್ಲ. ವಿಪ್ರವರರ ಮುಖನಿಃಸೃತ ಪವಿತ್ರಹರಿಚರಿತಸುಧೆಯಿಂದ ಅವರಿಗೆ ವನವಾಸವು ಕಷ್ಟವೆನಿಸಲಿಲ್ಲ. ಆದರೆ ಅವರ ಸುಖಶಾಂತಿಗಳನ್ನು ಕದಡಿ, ಕೆಡಿಸಲೆಣಿಸುವ ಸುಯೋಧನನ ಪಾಪಾಲೋಚನೆಗೆ ಕೊನೆಯಿಲ್ಲ. ಒಂದು ದಿನ ಕೌರವನ ಮನೆಗೆ ಮಹಾತ್ಮನಾದ ದುರ್ವಾಸನು ಬಂದನು. ಅವನ ಹಿಂದೆ ಹತ್ತು ಸಾವಿರ ಶಿಷ್ಯರಿದ್ದರು. ದುರ್ಯೋಧನನು ಅತಿವಿನಯದಿಂದ ದುರ್ವಾಸಾದಿಗಳನ್ನು ಎದುರ್ಗೊಂಡು ಕರೆತಂದನು. ಮುನಿಯು ಮುನಿಯದಂತೆ ವಿವಿಧೋಪಚಾರಗಳಿಂದ ಅವನನ್ನು ಸಂತೋಷಪಡಿಸಿದನು. ಕೆಲದಿನಗಳಾದವು. ಕಿಂಕರನಂತೆ ಸೇವಿಸುವ ಮಹಾರಾಜನನ್ನು ದುರ್ವಾಸನು ಪರೀಕ್ಷಿಸಿದನು—ಹಸಿವೆ ಎಂದು ಅನ್ನಮಾಡಿಸಿ, ಸ್ನಾನಕ್ಕೆಂದು ಹೊರಟುಹೋಗುವನು. ಬಹಳ ಹೊತ್ತಾದ ಮೇಲೆ ಬಂದು ಉಣಿಸೆಂಬುವನು. ಅರ್ಧರಾತ್ರಿಯಲ್ಲಿ ಭಕ್ಷ್ಯಗಳನ್ನು ಬೇಡುವನು. ತಂದಿತ್ತರೆ ದೂರಬಿಸುಟು ನಿಂದಿಸುವನು. ಎಷ್ಟು ಪೀಡಿಸಿದರೂ ಎಳ್ಳಷ್ಟು ವಿಕಾರವಿಲ್ಲದೆ ಸೇವಿಸುವ ದುರ್ಯೋಧನನನ್ನು ಕಂಡು, ದುರ್ವಾಸನು ಪ್ರೀತನಾದನು

'ವರವನ್ನು ಬೇಡು' ಎಂದ ಮುನಿವರನನ್ನು ನೋಡಿ, ಕುರುರಾಜನು ಸಮಾಧಾನದ ನಿಟ್ಟುಸಿರು ಬಿಟ್ಟು, ಆಲೋಚಿಸಿಟ್ಟಂತೆ ವರವನ್ನು ಬೇಡಿದನು.

'ಮುನಿರಾಜ! ನಿನ್ನ ಆತಿಥ್ಯವನ್ನು ಮಾಡುವ ಭಾಗ್ಯವನ್ನಿತ್ತು, ನನ್ನನ್ನು ಉದ್ಧರಿಸಿದೆ. ಧನ್ಯನಾದೆನು. ನಮ್ಮಣ್ಣ ಧರ್ಮರಾಜನೂ ಅತಿಥಿಪೂಜಾತತ್ಪರ ನಾಗಿರುವನು. ಕಾಮ್ಯಕವನದಲ್ಲಿ ಸೋದರಸಹಿತನಾಗಿರುವ ಅವನ ಮನೆಗೆ ಶಿಷ್ಯ ಸಹಿತನಾಗಿ ಹೋಗಿ, ಆತಿಥ್ಯವನ್ನು ಸ್ವೀಕರಿಸೆಂದು ಬೇಡುತ್ತಿರುವೆನು. ಇದೇ ನಾನು ಬೇಡುವ ವರವು. ಆದರೆ ಒಂದು ಮಾತಿದೆ ಕೇಳು! ದ್ವಿಜರನ್ನೂ ಪತಿ ಗಳನ್ನೂ ಅನ್ನಾದಿಗಳಿಂದ ಸತ್ಕರಿಸಿ, ದ್ರೌಪದಿಯು ತಾನುಂಡು, ವಿಶ್ರಾಂತಿ ಪಡೆ ಯುತ್ತಿರುವಾಗ, ಅಲ್ಲಿ ನಿನ್ನ ಆಗಮನವಾಗಲಿ!' ಎಂದು ಬೇಡಿದ ದುರ್ಯೋಧನನಿಗೆ ಅಂತೆಯೇ ಮಾತಿತ್ತು, ದುರ್ವಾಸನು ಅಲ್ಲಿಂದ ಹೊರಟನು. ರಾಜರಾಜನು 'ಪಾಂಡವರು ಸಮೂಲವಾಗಿ ನಷ್ಟರಾದರು; ದುರ್ವಾಸನ ಕೋಪಾಗ್ನಿಗೆ ಅವರು ತುತ್ತಾದರು. ನಾನು ಕೃತಾರ್ಥನಾದೆನು' ಎಂದು ನಿಶ್ಚಯಿಸಿ, ಕರ್ಣ, ಶಕುನಿ, ದುಶ್ಶಾಸನರ ಪ್ರಶಂಸಾವಾಕ್ಯಗಳನ್ನಾಲಿಸುತ್ತಾ, ನಗುತ್ತಾ, ನಿಶ್ಚಿಂತನಾಗಿದ್ದನು.

ಒಂದು ದಿನ ಪಾಂಡವರು ಉಂಡು, ಸುಖಾಸೀನರಾಗಿದ್ದರು. ಕೃಷ್ಣೆಯು ಭುಜಿಸಿ, ಕೂತಿದ್ದಳು. ಆ ಸಮಯವನ್ನರಿತು ದುರ್ವಾಸನು ಸಶಿಷ್ಯನಾಗಿ, ಪಾಂಡವ ರನ್ನು ಸಮೀಪಿಸಿದನು. ತತ್‌ಕ್ಷಣವೇ ಧರ್ಮರಾಜಾದಿಗಳು ಅವರನ್ನೆದುರ್ಗೊಂಡು, ಕರೆತಂದು ಕೂಡಿಸಿ, ಪೂಜಿಸಿದರು. ದುರ್ವಾಸನು 'ಆಹ್ನಿಕವನ್ನು ಮುಗಿಸಿಕೊಂಡು ಬರುವೆನು, ಹತ್ತು ಸಾವಿರ ಶಿಷ್ಯರೂ ಇರುವರು; ಪಾಕವು ಸಿದ್ಧವಾಗಲಿ!' ಎಂದು ಹೇಳಿ, ಯಮುನೆಗೆ ಸ್ನಾನಕ್ಕೆಂದು ಹೊರಟನು. ಮುನಿಜನರು ಸ್ನಾನಾಹ್ನಿಕಗಳನ್ನು ಮಾಡುತ್ತಿದ್ದರು. ಧರ್ಮರಾಜನು, ಇಷ್ಟು ಜನರನ್ನು ಉಣಿಸುವ ಬಗೆ ಹೇಗೆ? ಅಕ್ಷಯ ಪಾತ್ರೆಯು ಕೃಷ್ಣೆಯುಂಡಿರುವುದರಿಂದ ಬರಿದಾಗಿದೆ. ದುರ್ವಾಸನು ಕೋಪನನು. ಏನು ಮಾಡಲಿ?' ಎಂದು ಚಿಂತಿಸುತ್ತಿದ್ದನು. ದ್ರೌಪದಿಯು ಎಲ್ಲ ವನ್ನೂ ಅರಿತು, 'ಅನ್ನವನ್ನು ಕೊಡುವ ಅಣ್ಣ ನಮ್ಮನ್ನು ಕಷ್ಟದಿಂದ ಪಾರು ಮಾಡುವ ದೊರೆ' ಎಂದು ನಿಶ್ಚಯಿಸಿ, ಶ್ರೀಕೃಷ್ಣನನ್ನು ಪ್ರಾರ್ಥಿಸಿದಳು—

'ಕೃಷ್ಣ! ದೇವಕೀನಂದನ! ವಾಸುದೇವ! ಜಗನ್ನಾಥ! ನಂಬಿದವರ ಕಷ್ಟ ಗಳನ್ನು ನಿವಾರಿಸುವ ಪ್ರಭುವಲ್ಲವೇ ನೀನು! ಗೋವಿಂದ! ಸೃಷ್ಟಿಸ್ಥಿತಿಸಂಹರಣ ಚತುರನಾದ ನಿನಗೆ ನಮಗೆ ಅತಿಥಿಪೂಜೆಗಾಗುವಷ್ಟು ಅನ್ನವನ್ನೀಯಲಾಗದೆ? ಸರ್ವಮನಃಪ್ರೇರಕನಾದ ಸರ್ವಜ್ಞನಿಗೆ ನಮ್ಮ ಮಾನಸಿಕ ವ್ಯಥೆಯು ಅರಿವಾಗದೆ? ಪುರಾಣಪುರುಷ! ಸರ್ವಾಧ್ಯಕ್ಷ! ನಿನ್ನ ಚರಣಗಳಿಗೆ ಶರಣಾಗಿ ಬೇಡುವೆನು. ಕೃಪೆ ಯಿಂದ ಕಾಪಾಡು! ನಮ್ಮನ್ನು ವಿಪ್ರಶಾಪರೂಪವಾದ ವಿಪತ್ತಿನಿಂದ ರಕ್ಷಿಸು! ದೀನ- ಬಂಧೋ! ಪೀತಾಂಬರಧರ! ನೀಲಮೇಘ ದಿವ್ಯಶರೀರ! ಕರುಣಾಪಾರಾವಾರ! ಸರ್ವಸಂಪತ್ತು ನಿನ್ನಿಂದ! ನಮ್ಮನ್ನು ಹಿಂದೆ ವಿಪತ್ಪರಂಪರೆಯಿಂದ ಪೊರೆದಂತೆ

ಈಗಲೂ ಸಲಹು! ನಿನ್ನ ಹೊರತನ್ಯರಕ್ಷಕರನ್ನರಿಯೆವು. ದುಶ್ಶಾಸನನಿಂದ ಪರಾಭೂತಳಾಗುತ್ತಿರುವಾಗ ಅಕ್ಷಯವಸನಗಳನ್ನಿತ್ತಂತೆ ಈಗ ಅಕ್ಷಯಾನ್ನವನ್ನಿತ್ತು, ಧರ್ಮಸಂಕಟದಿಂದ ನಮ್ಮನ್ನು ಪಾರುಮಾಡು! ಕಮಲೇಕ್ಷಣ! ವಿಪ್ರರು ಸಂತುಷ್ಟರಾಗಲಿ! ಬಾ ಮುಕುಂದ! ಮುರಹರ! ಮುರಲೀಧರ! ಶ್ರೀಧರ! ನಮೋ ನಮಃ'

ಇಂತು ಕರೆಯುವ ಕೃಷ್ಣೆಯ ಮೊರೆಯನ್ನಾಲಿಸಿ, ದೇವದೇವನು ರುಕ್ಮಿಣೀ ಶಯನದಿಂದ ಥಿಗ್ಗನೆ ಎದ್ದು, ಮೇಲೆ ಹೊದ್ದಿದ್ದ ರತ್ನಾಂಬರವು ಜಾರಿಬೀಳುತ್ತಿರಲು, ಸರಿಮಾಡದೆ, ಯಾರಿಗೂ ಪೇಳದೆ, ಸಡಗರದಿಂದ ಹೊರಟು, ಕ್ಷಣಾರ್ಧದಲ್ಲಿ ದ್ರೌಪದಿಯ ಮುಂದೆ ಬಂದು ನಿಂತನು. ಬಂದ ಗೋವಿಂದನ ಕರುಣೆಗೆ ಮೆಚ್ಚಿ, ಪಾದಾರವಿಂದಗಳಿಗೆ ವಂದಿಸಿ, ಆನಂದದಿಂದ ನಂದನಂದನನನ್ನು ನೋಡುತ್ತಾ, ದ್ರೌಪದೀಸುಂದರಿ ಇಂತೆಂದಳು—

"ಶ್ರೀಕೃಷ್ಣ ! ಬಂದಿರುವನು ದುರ್ವಾಸಮುನಿ, ಹಿಂದಿರುವರು ಹತ್ತುಸಾವಿರ ಶಿಷ್ಯರು. ನಾನು ಉಂಡಮೇಲೆ ಬಂದಿರುವುದರಿಂದ ಮುನಿಗೆ ನೀಡಲು ಅಕ್ಷಯ ಪಾತ್ರೆಯಲ್ಲಿ ಅನ್ನವಿಲ್ಲ. ಅಕ್ಷಯಾನ್ನಪ್ರಚುರನಾದ ನಿನಗೆ ಶರಣಾಗತಳಾಗಿರುವೆನು."

ಹೀಗೆ ನುಡಿದ ತಂಗಿಗೆ ರಂಗನಾಥನು—"ತಂಗಿ! ಹಸಿವಾಗಿದೆ, ಬೇಗನೆ ಉಣಿಸು! ಆಮೇಲೆ ದುರ್ವಾಸನ ಚಿಂತೆ."

ಗೋವಿಂದನ ಮಾತಿಗೆ ದ್ರೌಪದಿ 'ಅನ್ನವಿಲ್ಲ'ವೆಂದು ಪೇಳಲಾರದೆ ನಾಚಿ ತಲೆ ತಗ್ಗಿಸಿ ನಿಂತಳು. ಪರಾವರಜ್ಞನಾದ ಶ್ರೀಕೃಷ್ಣನು 'ಎಲವೋ ವಿಧಿಯೇ! ಪಾಂಡವರ ಮನೆಯಲ್ಲಿ ಅನ್ನವಿಲ್ಲವೆನಿಸಬೇಕೆಂದಿರುವೆಯಾ? ಇರಲಿ ಕೃಷ್ಣೇ! ಹಾಸ್ಯವಲ್ಲ, ಹಸಿವಾಗಿದೆ. ಎಲ್ಲಿ? ಅಕ್ಷಯಸ್ಥಾಲಿಯನ್ನು ತಾ ! ನೋಡಿಸು ನನ್ನ ಕಣ್ಣಿಗೆ !' ಎಂದು ನಿರ್ಬಂಧಿಸಿದನು.

ಕೃಷ್ಣೆ ತಂದ ಥಾಲಿಯನ್ನು ವೀಕ್ಷಿಸಿ, ನಸುನಕ್ಕು, ಶ್ರೀಶನು 'ತಂಗಿ! ನೋಡಿಲ್ಲಿ! ಥಾಲಿಯ ಕಂಠಕ್ಕೆ ಸೊಪ್ಪುಚೂರಂಟಿದೆ. ಅದನ್ನು ನನ್ನ ಕೈಲಿಟ್ಟು ಶ್ರೀಕೃಷ್ಣಾರ್ಪಣ ಮಸ್ತು ಎಂದು ಸಮರ್ಪಿಸು !' ಎಂದನು.

ಕೃಷ್ಣೆ ಭಕ್ತಿಯಿಂದ ಕೊಟ್ಟ ಶಾಕವನ್ನು ಭುಜಿಸಿ, ವಿಶ್ವಭೋಕ್ತನು ತೃಪ್ತನಾಗಿ ತೇಗಿದನು. ಏನೂ ಇಲ್ಲದ ಪರಿಶುಭ್ರವಾದ ಥಾಲಿಯಲ್ಲಿ ಶಾಕವೆಂತು ಬಂತೆಂದು ಆಶ್ಚರ್ಯಪಡುವ ಪಾಂಡವಕಾಂತೆಗೆ ಶ್ರೀಕೃಷ್ಣನು 'ಕೃಷ್ಣೇ ! ಇನ್ನು ಕರೆಸು ದುರ್ವಾಸನನ್ನು; ಹಿಂದೆ ಲಕ್ಷಶಿಷ್ಯರೂ ಬರಲಿ !' ಎಂದನು. ಆಗ ಕೃಷ್ಣಾಜ್ಞೆಯಿಂದ ಭೀಮಸೇನನು ದುರ್ವಾಸಾದಿಗಳನ್ನು ಊಟಕ್ಕೆಂದು ಕರೆಯಲು ಹೊರಟನು.

ನದೀಸ್ನಾನವನ್ನು ಮಾಡುತ್ತಾ, ಅಘಮರ್ಷಣ ಮಂತ್ರಗಳನ್ನು ಜಪಿಸುವ ದುರ್ವಾಸಾದಿ ಸರ್ವ ವಿಪ್ರರ ಮುಖದಿಂದ ತೇಗು ಹೊರಟಿತು. ಅವರ ಉದರಗಳು ಭಕ್ಷ್ಯಗಳಿಂದ ತುಂಬಿದಂತಾಗಿ, ಅವರು ಪರಸ್ಪರ ಮುಖಗಳನ್ನು ಆಶ್ಚರ್ಯದಿಂದ ನೋಡಿಕೊಂಡರು. ಇನ್ನು ಧರ್ಮರಾಜನ ಅನ್ನವನ್ನು ಉಣ್ಣಲಾಗುವುದಿಲ್ಲವೆಂದು

ಮನಗಂಡರು. ದುರ್ವಾಸನು ಭಯಸಂಭ್ರಮಕಾತರನಾಗಿ ಇಂತೆಂದನು—"ಧರ್ಮ ರಾಜನು ಅಡುಗೆ ಮಾಡಿಸಿ ಕರೆಕಳಿಸುವನು. ನಮಗೆ ವೃಷ್ಟಾನ್ನವನ್ನು ಆಕಂಠವಾಗಿ ಉಂಡಂತೆ ತೃಪ್ತಿಯಾಗಿದೆ. ಸುಮ್ಮನೆ ಪಾಕವನ್ನು ಮಾಡಿಸಿ, ಉಣ್ಣುವದಿಲ್ಲವೆಂದರೆ ನಮ್ಮ ಅಪರಾಧವಾಗುವುದು. ಹರಿಪಾದಾಶ್ರಯಜನರನ್ನು ಕಂಡು ನಾನು ಹೆದರು ವೆನು. ಹಿಂದೆ ಅಂಬರೀಷನಿಂದ ಪಟ್ಟಪಾಡು ನೆನೆದರೆ ಭಯವಾಗುತ್ತಿದೆ. ಸದಾಚಾರಿ ಗಳು, ಶೂರರು, ವಾಸುದೇವಪರಾಯಣರು ಆದ ಪಾಂಡವರು—ಅದರಲ್ಲಿ ಭೀಮ ಸೇನನು—ಕೋಪಗೊಂಡರೆ ನಾವು ಉಳಿಯಲಾರೆವು. ಆದುದರಿಂದ ಇಲ್ಲಿರದೆ ಓಡಿ ಹೋಗುವುದೇ ಲೇಸು." ಹೀಗೆ ನುಡಿದ ಗುರುವಿನೊಡನೆ ಶಿಷ್ಯರೆಲ್ಲರೂ ದಿಕ್ಕಾಪಾಲಾಗಿ ಓಡಿಹೋದರು.

ಭೀಮಸೇನನು ಅಲ್ಲಿಗೆಬಂದು, ನಡೆದ ವೃತ್ತಾಂತವನ್ನು ಅಲ್ಲಿದ್ದ ಮುನಿಜನರಿಂದ ತಿಳಿದು, ನಗುತ್ತಾ ಹಿಂದಿರುಗಿದನು. ಧರ್ಮರಾಜನು ದುರ್ವಾಸನ ಪಲಾಯನವನ್ನು ಕೇಳಿ, ಚಿಂತಾಕ್ರಾಂತನಾಗಿರಲು, ಶ್ರೀಕೃಷ್ಣನು ಪಾಂಡವರನ್ನು ಸಮೀಪಿಸಿ— "ಧರ್ಮಜ ! ಪರಮಕೋಪನನಾದ ಋಷಿಯು ನಿಮ್ಮನ್ನು ಅಕಾಲದಲ್ಲಿ ಅನ್ನವನ್ನು ಬೇಡಿ, ಕೊಡಲಾಗದೆ ಶಪಿಸಬೇಕೆಂದು ಬಂದಿದ್ದನು. ಇದು ದುರ್ಯೋಧನನ ಕುತಂತ್ರವು. ದ್ರೌಪದಿಯು ಬೇಡಲು, ಬಂದು, ನಿಮ್ಮ ಅತಿಥಿಗಳನ್ನು ತೃಪ್ತಿಪಡಿಸಿ ದೆನು. ಭಕ್ತಿಯಿಂದ ನನಗೆ ಕೊಟ್ಟ ಪತ್ರವಾದರೂ ಪ್ರಪಂಚವನ್ನೆಲ್ಲ ತೃಪ್ತಿಪಡಿಸಲು ಸಾಕಾಗುವುದೆಂದು ತಿಳಿ! ದುರ್ಯೋಧನನು ತನ್ನ ಕುತಂತ್ರದಿಂದ ತಾನೇ ಕೆಡುವನು. ಧರ್ಮನಿತ್ಯರಾದ ನಿಮಗೆ ಭಯವಿಲ್ಲ." ಇಂತು ಹೇಳಿ ಶ್ರೀಶನು ಮರೆಯಾದನು. ಆಗ ಪಾಂಡವರು ಹರ್ಷಭರಿತರಾಗಿ, ಶ್ರೀಕೃಷ್ಣನನ್ನು ಮನಸಾರೆ ಕೊಂಡಾಡಿ, ಸುಖವಾಗಿ ದ್ದರು. ಇಂತು ವನಸ್ಥರಾದ ಪಾಂಡವರನ್ನು ಪರಿಭವಿಸಲು ದುರ್ಯೋಧನನು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾದವು. ದುರ್ವಾಸನು ದುರ್ಯೋಧನನ ಮಾಯೋಪ ಚಾರಗಳನ್ನು, ಬೇಡಿದ ಕೆಟ್ಟ ವರವನ್ನು, ಅವರಿಂದಾದ ವಿಪತ್ತನ್ನು ನೆನೆದು, ಸಿಟ್ಟಿ ನಿಂದ 'ಕೌರವಾಧಮ ! ನಿರಪರಾಧಿ ಪಾಂಡವರನ್ನು ಕೆಡಿಸಲೆಣಿಸಿದ ನೀನು ಸಮೂಲ ವಾಗಿ, ಹಾಳಾಗು !' ಎಂದು ಶಾಪವನ್ನಿತ್ತನು. ಮಹಾತ್ಮರಿಗೆ ಮಾಡಿದ ದ್ರೋಹವು ಮಾಡಿದವನಿಗೇ ಬಡಿಯುವುದಲ್ಲವೇ ?

## ಜಯದ್ರಥ ಪರಾಭವ

ಶ್ರೀಕೃಷ್ಣಭಕ್ತರಾದ ಪಾಂಡವರು ಕಾಮ್ಯಕವನದಲ್ಲಿ ಕೆಲಕಾಲ ವಾಸಮಾಡಿ, ಮೃಗಯಾವಿಹಾರಕ್ಕೆಂದು ಒಂದು ದಿನ ಎಲ್ಲರೂ ರಥಾರೂಢರಾಗಿ, ವನವನ್ನು ಹೊಕ್ಕರು. ತೃಣಬಿಂದು ಮುನಿಯ ಆಶ್ರಮದಲ್ಲಿ ದ್ರೌಪದಿಯು ಧೌಮ್ಯನೊಡನೆ ಕೃಷ್ಣ ಕಥಾ ಕಥನರತಳಾಗಿದ್ದಳು. ಆಗ ವೃದ್ಧಕ್ಷತ್ರನ ಮಗನಾದ ಜಯದ್ರಥನು ಶಾಲ್ವರಾಜನ ಪುತ್ರಿಯನ್ನು ಮದುವೆಯಾಗಲು ಹೊರಟಿದ್ದು, ಮಾರ್ಗದಲ್ಲಿದ್ದ

ಕಾಮ್ಯಕವನವನ್ನು ಸೇರಿದನು. ಅವನ ಹಿಂದೆ ಅವನ ಮಿತ್ರರಾಜರನೇಕರು ಪಾರಿಬರ್ಹ ಗಳನ್ನು ತೆಗೆದುಕೊಂಡು ಬರುತ್ತಿದ್ದರು. ಜಯದ್ರಥನು ಕಾಮ್ಯಕದಲ್ಲಿ ದ್ರೌಪದಿ ಯನ್ನು ಕಂಡು ವಿಸ್ಮಿತನಾದನು. ಅವನು ಕಾಮಮೋಹಿತನಾಗಿ, ತನ್ನ ಮಿತ್ರನಾದ ಕೋಟಿಕಾಶ್ಯನಿಗಿಂತೆಂದನು—"ಯಾರಿವಳು, ಕೋಟಿಕಾಶ್ಯ? ದೇವವನಿತೆಯಂತೆ ಕಂಗೊಳಿಸುವ ಈ ಮಂಗಳಾಂಗಿ ದೊರೆತಳೆಂದರೆ ಇನ್ನು ನನಗೆ ಶಾಲ್ವಪುತ್ರಿಯೊಡನೆ ಮದುವೆ ಏಕೆ? ಹೋಗಿ ವಿಚಾರಿಸು. ಅವಳು ನನ್ನನ್ನು ವರಿಸುವಂತೆ ಮಾಡು!"

ಆ ದುಷ್ಟನ ಮಾತನ್ನಾಲಿಸಿ, ಕೋಟಿಕಾಶ್ಯನು ರಥದಿಂದಿಳಿದು, ವ್ಯಾಘ್ರ ವಧುವನ್ನು ನರಿಯಂತೆ ಸಮೀಪಿಸಿ, "ಸುಂದರಿ! ಯಾರೆ ನೀನು? ಒಂಟಿಯಾಗಿ ಆಶ್ರಮದಲ್ಲೇಕಿರುವೆ? ಅಗ್ನಿಶಿಖೆಯಂತೆ ಬೆಳಗುವ ನೀನಾರ ತರುಣಿ? ಇಂದ್ರಲೋಕ ದಿಂದ ಕೆಳಗಿಳಿದು ಬಂದ ಅಮರಸುಂದರಿಯಂತೆ ತೋರುತ್ತಿದೆ. ಯಕ್ಷ ಕಿನ್ನರ ನಾಗ ಗಂಧರ್ವ ರಮಣಿಯರಲ್ಲಿ ನೀನಾರು—ರತಿಯೋ? ಸರಸ್ವತಿಯೋ? ನಾನು ಶಿಬಿವಂಶಪ್ರಭವನಾದ ಸುರಥರಾಜನ ಮಗನು. ನನ್ನನ್ನು ಕೋಟಿಕಾಶ್ಯನೆಂಬುವರು. ಅಲ್ಲಿ ಕಾಂಚನ ರಥದಲ್ಲಿ ಕೂತು ನಿನ್ನನ್ನೇ ನೋಡುತ್ತಿರುವವನು ಸೈಂಧವನು. ತ್ರಿಗರ್ತಪತಿಯಾದ ಕ್ಷೇಮಂಕರನು, ಕುಳಿಂದರಾಜನಾದ ಸುಪುಷ್ಪನು, ಅಂಗಾರಕ ಕುಂಜರ ಶತ್ರುಂಜಯ ಭ್ರಮರ ಕುಹನರೇ ಮುಂತಾದ ಅನೇಕ ರಾಜಪುತ್ರರೂ ಸೈಂಧವನ ಮದುವೆಗೆಂದು ಶಾಲ್ವದೇಶಕ್ಕೆ ಹೋಗುತ್ತಿರುವೆವು. ಸೌವೀರಸಿಂಧು ದೇಶದ ರಾಜನಾದ (ಸೈಂಧವ) ಜಯದ್ರಥನನ್ನು, ಅವನ ತಮ್ಮಂದಿರಾದ ಬಲಾಹಕಾನೀಕ ವಿದಾರಣರನ್ನು ತಿಳಿಯದವರಿಲ್ಲ" ಎಂದು ನುಡಿದನು.

ದ್ರೌಪದಿಯು ತಾನು ಪಿಡಿದಿದ್ದ ರೆಂಬೆಯನ್ನು ಬಿಟ್ಟು, ಸೆರಗಿನಿಂದ ಮುಖ ವನ್ನು ಮುಚ್ಚಿ, "ರಾಜಪುತ್ರ! ನಿನಗೆ ಉತ್ತರವೀವರಿಲ್ಲಿಲ್ಲ. ಆದುದರಿಂದ ನಾನೇ ನಿನ್ನ ಪ್ರಶ್ನೆಗಳಿಗೆ ಪ್ರತ್ಯುತ್ತರ ನೀಡಬೇಕಾಗಿದೆ. ಇಲ್ಲದಿರೆ ನಿನ್ನೊಡನೆ ಮಾತನಾಡು ತ್ತಿದ್ದಿಲ್ಲ. ಕೇಳು! ಶಿಬಿರಾಜವಂಶಪ್ರಭವನಾಗಿರುವೆ ಎಂದೇ ನಿನ್ನೊಡನೆ ಮಾತ ನಾಡುತ್ತಿರುವೆನು. ನೀನು ಕೋಟಿಕಾಶ್ಯನೆಂದು ನನಗೆ ಗೊತ್ತಿದೆ. ನನ್ನನ್ನು ಕೃಷ್ಣೆ ಎಂಬರು. ನಾನು ದ್ರುಪದರಾಜನ ಪುತ್ರಿಯು; ಪಾಂಡವರ ಮಹಿಷಿಯೂ ಅಹುದು. ಧರ್ಮರಾಜನು, ಭೀಮನು, ಅರ್ಜುನನು, ಯಮಳರು, ನಾಲ್ಕು ದಿಕ್ಕಿನ ವನದಲ್ಲಿ ಬೇಟೆಗೆಂದು ಹೋಗಿರುವರು. ಅವರು ಬರುವ ಹೊತ್ತಾಗಿದೆ. ದುಶ್ಶಲಾಭರ್ತನಾದ ಜಯದ್ರಥನು ನಮಗೆ ಸಮ್ಮಾನನೀಯನು. ಅವನು ನಮಗೆ ಅಣ್ಣನಂತೆ ಅಲ್ಲವೇ? ಬರಲಿ ಪಾಂಡವರು, ಅವರಿಡುವ ಅತಿಥಿಸತ್ಕಾರವನ್ನು ಸೈಂಧವನು ಸಪರಿವಾರನಾಗಿ ಸ್ವೀಕರಿಸಲಿ!" ಎಂದು ಸುಮ್ಮನಾದಳು. ಅಲ್ಲಿ ನಿಲ್ಲದೆ ಪರ್ಣಶಾಲೆಯನ್ನು ಪ್ರವೇಶಿ ಸಿದ ದ್ರೌಪದಿಯನ್ನು ಕಂಡು, ಕೋಟಿಕಾಶ್ಯನು ಹಿಂದಿರುಗಿ ಬಂದು, ಸೈಂಧವನಿಗೆ ಆ ಸುಂದರಿಯ ವಚನವನ್ನು ತಿಳಿಸಿದನು. ಜಯದ್ರಥನು—ಕೋಟಿಕಾಶ್ಯ! ಅವಳ ಮಧುರ ವಚನಗಳು ಅಮೃತೋಪಮನಾಗಿವೆ. ಅವಳನ್ನು ನೋಡಿ ತಣಿಯದ

ಎನ್ನ ಕಣ್ಣಿಗೆ ಇತರ ನಾರಿಯರು ಕೋತಿಗಳಂತಾಗಿರುವರು. ನನ್ನ ಮನವು ಅವಳಲ್ಲೇ ಲಗ್ನವಾಗಿದೆ. ಅವಳ ಆತಿಥ್ಯವನ್ನೇಕೆ ? ಅವಳನ್ನೇ ಸ್ವೀಕರಿಸುವೆನು" ಎಂದು ನುಡಿದು ಸೈಂಧವನು ದ್ರೌಪದಿಯ ಪರ್ಣಶಾಲೆಯನ್ನು ಸಿಂಹವಿದ್ದ ಗುಹೆಯನ್ನು ನರಿಯು ಪ್ರವೇಶಿಸಿದಂತೆ ಪ್ರವೇಶಿಸಿದನು. ದ್ರೌಪದಿಯು ಅವನಿಗೆ ಅರ್ಘ್ಯಪಾದ್ಯಗಳನ್ನು ಕೊಡಲು ಹವಣಿಸುವುದನ್ನರಿತು, ಆ ಧೂರ್ತನು "ಸುಂದರಿ! ನಿನ್ನ ಅಧರಾಮೃತವೇ ಎನಗೆ ಅರ್ಘ್ಯಪಾದ್ಯಗಳು. ಬಾ, ನನ್ನ ರಥದಲ್ಲಿ ಕೂತು ನನ್ನೊಡನೆ ಸೌವೀರ ಪುರಕ್ಕೆ! ನನ್ನ ರಾಣಿಯಾಗಿ ಸುಖಪಡು! ಅರಣ್ಯದಲ್ಲಿ ಏಕೆ ಕಷ್ಟಪಡುವೆ? ನಿರ್ಭಾಗ್ಯರಾದ ಪಾಂಡವರನ್ನು ಸೇವಿಸಿ, ಅರಣ್ಯಕಷ್ಟಗಳನ್ನು ಅನುಭವಿಸಿ, ಕೃಶಳಾಗಿರುವೆ! ರಾಜ್ಯವಿಲ್ಲ, ಧನವಿಲ್ಲ, ಬುದ್ಧಿಯಿಲ್ಲ. ಇಂತಹ ಪಾಂಡವರಿಂದ ನಿನಗೆ ಸುಖವಿಲ್ಲ. ಅವರನ್ನು ಬಿಟ್ಟು, ನನ್ನನ್ನು ವರಿಸು!" ಎಂದು ಬೇಡಿದನು.

ಅವನ ಮಾತನ್ನು ಕೇಳಿ, ಹುಬ್ಬುಗಂಟಿಕ್ಕಿ "ಛೀ! ಮೂರ್ಖ! ನಿನಗೆ ಈ ಮಾತನ್ನಾಡಲು ನಾಚಿಕೆಯಾಗುವುದಿಲ್ಲವೆ? ದೂರ ಸರಿ!" ಎಂದು ನಿಂದಿಸಿ, ದ್ರೌಪದಿಯು ಪಾಂಡವರಾಗಮನವನ್ನು ಪ್ರತೀಕ್ಷಿಸುತ್ತಿದ್ದಳು. ಅವಳ ಕಣ್ಣುಗಳು ಸಿಟ್ಟಿನಿಂದ ಕೆಂಪಾದವು. ತುಟಿ ಅಲುಗುತ್ತಿತ್ತು. ಮೈ ನಡುಗಿತು. ಮಾತಾಡಲು ಸಮೀಪಿಸಿದ ಸೈಂಧವನನ್ನು ಸಿಟ್ಟಿನ ನೋಟದಿಂದ ನಿಲ್ಲಿಸಿ, ಪಾಂಚಾಲಿಯು ಇಂತೆಂದಳು—"ಮೂಢ! ನಿನಗೆ ಕೇಡುಗಾಲ ಬಂದಿದೆ. ಮಹಾಪರಾಕ್ರಮಿಗಳು, ಶೀಲವಂತರು, ಸ್ವಧರ್ಮನಿಷ್ಠರು ಆದ ಪಾಂಡವರ ಮಹಿಷಿಯನ್ನು ವಾಂಛಿಸಿ, ಬೊಗಳುವ ನಿನ್ನ ನಾಲಿಗೆ ಸಾವಿರ ಹೋಳಾದೀತು! ಪರಿಪೂರ್ಣ ವಿದ್ಯಾವಂತರನ್ನು ನೋಡಿ, ಅರಿಯಲಾರದೆ ನಾಯಿಯು ಬೊಗಳುವುದು. ಅಂತೆಯೇ ಬೊಗಳುವ ನಿನ್ನನ್ನು ನರಕಕೂಪದಲ್ಲಿ ಬೀಳದಂತೆ ನಿವಾರಿಸಿ ಕಾಪಾಡುವ ಸನ್ಮಿತ್ರರನ್ನು ನೀನು ಪಡೆದಿಲ್ಲವೆಂದು ತೋರುತ್ತಿದೆ. ಅನಾರ್ಯ! ದಂಡಮಾತ್ರಾಯುಧನಾಗಿ ಅರಣ್ಯವನ್ನು ಹೊಕ್ಕು ಮತ್ತಗಜಯೂಥವನ್ನು ಹೊಡೆದು ಕೆಡುವ ಮನುಜನಂತೆ ಪಾಂಡವ ಜ್ಯೇಷ್ಠನನ್ನು ಕೆಣಕಿ ಸಾಯಲಿರುವೆ! ಮಲಗಿರುವ ಸಿಂಹದ ಕೇಸರಗಳನ್ನು ಕೈಲಿ ಸೆಳೆದಂತೆ, ಭೀಮದ್ರೋಹವನ್ನು ಮಾಡಿ ಕೆಡಲಿರುವೆ! ಪರ್ವತದಲ್ಲಿ ನಿದ್ರಿಸಿರುವ ಭಯಂಕರ ವ್ಯಾಘ್ರನ ಬಾಲವನ್ನು ತುಳಿದವನಂತೆ ಅರ್ಜುನನಿಗೆ ಅಪಚಾರವೆಸಗಿ ಹಾಳಾಗುವೆ! ಭೀಕರ ಕೃಷ್ಣಸರ್ಪಗಳ ಬಾಲವನ್ನು ಮುಳ್ಳಿನಿಂದ ಚುಚ್ಚುವವನಂತೆ, ನಕುಲ ಸಹದೇವರಿಗೆ ಅಪರಾಧಮಾಡಿ ಸಾಯುವೆ! ವೇಣು ಕದಲೀ ನಲ ಸ್ತಂಬಾದಿ ವೃಕ್ಷಗಳು ಫಲ ಬಿಟ್ಟೊಡನೆ ಸಾಯುವುವು. ಕರ್ಕಟಿಯು ಗರ್ಭಧರಿಸಿ, ಹೆತ್ತು ಸಾಯುವುದು. ಅಂತೆಯೇ ನಿನ್ನ ದುಷ್ಟ ಮನಃಪರಿಪಾಕದಿಂದ, ನನ್ನನ್ನು ಬೇಡಿ, ನೀನೂ ಸಾಯುವೆ ನಿಜ!"

ಆ ಮಾತಿಗೆ ನಕ್ಕು ಜಯದ್ರಥನು "ಕೃಷ್ಣೆ! ಗೊತ್ತು ನನಗೆ ನಿನ್ನ ಪತಿಗಳ ಪರಾಕ್ರಮ! ನನ್ನನ್ನು ಹೆದರಿಸಿ, ಓಡಿಸಲು ಪ್ರಯತ್ನಿಸಬೇಡ! ನಾನು ನಿನ್ನ

ಪತಿಗಳಿಗೆ ಅಂಜುವವನಲ್ಲ. ಕೃಷಿ, ವಾಣಿಜ್ಯ, ಸಂಚಾರಮಾರ್ಗ, ದುರ್ಗ, ಸೇತು, ಕುಂಜರಬಂಧ, ಖನಿ ಆಕರ, ಕರಾದಾನ ಎಂಬ ಎಂಟು ಕರ್ಮಗಳನ್ನರಿತು, ಪ್ರಭು-ಶಕ್ತಿ, ಮಂತ್ರ ಶಕ್ತಿ, ಉತ್ಸಾಹ ಶಕ್ತಿ, ತತ್ರಯ ಸಿದ್ಧಿಗಳು, ತತ್ರಯ ಫಲಗಳು ಎಂಬ ನವಶಕ್ತಿಗಳನ್ನು ಪಡೆದು, ಶೌರ್ಯ, ತೇಜಸ್, ಧೃತಿ, ದಾಕ್ಷಿಣ್ಯ, ದಾನ, ಐಶ್ವರ್ಯ ಎಂಬ ಆರು ಗುಣಗಳನ್ನು ಹೊಂದಿ ಮೆರೆಯುವ ನಾನೆಲ್ಲಿ? ನಿರ್ಭಾಗ್ಯರಾದ ಪಾಂಡವ ರೆಲ್ಲಿ? ಏಳು! ನನ್ನನ್ನನುಸರಿಸು! ಬಾಯಿಮಾತಿನಿಂದ ಓಡಿಹೋಗುವ ಹೇಡಿ ಯಲ್ಲ ನಾನು, ತಿಳಿಯಿತೆ? ನನ್ನ ಕಾಲಿಗೆ ಬಿದ್ದು, ಸ್ವೀಕರಿಸೆಂದು ಬೇಡು!" ಎಂದು ಕೈಹಿಡಿಯಲು ಸಮೀಪಿಸಿದನು.

ದ್ರೌಪದಿಯು—"ಎಲವೋ ಮೂಢ! ನಿಲ್ಲು! ನನ್ನನ್ನು ದುರ್ಬಲೆ ಎಂದು ಭ್ರಮಿಸಿ ಕೆಡಬೇಡ! ಶ್ರೀಕೃಷ್ಣನಿಂದ ಅಕ್ಷಯವಸನವನ್ನು ಪಡೆದು, ದುರ್ವಾಸ ವ್ಯಸನವನ್ನು ದಾಟಿ, ಸಕಲದುಷ್ಟವಿನಾಶಕರಾದ ಪತಿಗಳೈವರನ್ನು ಹೊಂದಿರುವ ಈ ಪಾಂಚಾಲಿಯು ನಿನ್ನ ವಂಚನೆಗೆ ಬಲಿಯಾಗುವಳೆ? ಇಂದ್ರಾಗ್ನಿಗಳಂತೆ ಬರುವ ಕೃಷ್ಣಾರ್ಜುನರ ಮುಂದೆ ನಿಂದು ಕಾದಲು ದೇವೇಂದ್ರನಿಗಳವಲ್ಲ! ನೀಚ ಮನುಜ ರಿನ್ನೆಲ್ಲಿ! ಹುಲ್ಲುಗಾವಲನ್ನು ಸುಡುತ್ತಾ ಬರುವ ದಾವಾಗ್ನಿಯಂತೆ ನಿನ್ನ ಸೈನ್ಯ ವನ್ನು ಬಾಣಾಗ್ನಿಯಿಂದ ಸುಡುವ ಗಾಂಡೀವಧಾರಿಯನ್ನು, ಮೊಲದ ಹಿಂಡನ್ನು ತುಳಿವ ಮದ್ದಾನೆಯಂತೆ ವಿಜೃಂಭಿಸುವ ಗದಾಪಾಣಿ ವೃಕೋದರನನ್ನು, ಕೋಪದಿಂ ದುರಿದೆದ್ದು ಯಮನಂತೆ ಮೇಲೆರಗುವ ಧರ್ಮನನ್ನು, ಹೆಡೆಯೆತ್ತಿ ಹೊಡೆವ ವಾಸುಕಿ ಯಂತೆ ಕೊಲ್ಲುವ ನಕುಲಸಹದೇವರನ್ನು ಕಂಡಾಗ ನಿನ್ನ ಕೇಡುಬುದ್ಧಿಯನ್ನು ನೀನೇ ನಿಂದಿಸುವಂತಾದೀತು! ನಾನು ಸಾಧ್ವಿಯಾಗಿದ್ದರೆ, ಪ ತಿ ಸೇ ವಾ ಪ ರಾ ಯ ಣೆ ಯಾಗಿದ್ದರೆ, ಶ್ರೀಕೃಷ್ಣಭಕ್ತೆಯಾಗಿದ್ದರೆ ನನ್ನನ್ನು ಪಾಂಡವರು ಬಂದು ಬಿಡಿಸಲಿ! ಕುರುಪ್ರವೀರರಿಂದ ಕೂಡಿ ಮತ್ತೆ ಆಶ್ರಮಕ್ಕೆ ಬರುವ ನನ್ನನ್ನು ಧೌಮ್ಯಾದಿ ವಿಪ್ರ ವರರು ಹರಸಲಿ!" ಎಂದು ಪ್ರತಿಜ್ಞೆಮಾಡಿ, ಸೆರಗನ್ನು ಹಿಡಿದು ಸೆಳೆಯುವ ಸೈಂಧವ ನನ್ನು ದೂಡಿ, ನೆಲದಮೇಲೆ ಕೆಡಹಿದಳು. ಮತ್ತೆ ಹಿಡಿಯಲು ಬರುತ್ತಿದ್ದ ಸೈಂಧವ ನನ್ನು ನೋಡಿ ನಿಟ್ಟುಸಿರಿಟ್ಟು, ಧೌಮ್ಯನಿಗೆ ವಂದಿಸಿ, ಸೈಂಧವನ ರಥದಲ್ಲಿ ಹೋಗಿ ಕುಳಿತಳು. ಅಳುತ್ತಿರುವ ಪಾಂಚಾಲಿಯನ್ನು ಕರೆದುಕೊಂಡು ಹೋಗುವ ಜಯ ದ್ರಥನ ರಥದ ಹಿಂದೆಯೇ ಧೌಮ್ಯನು ಬರುತ್ತಾ "ಜಯದ್ರಥ! ಇದು ನ್ಯಾಯವಲ್ಲ. ಕ್ಷತ್ರಿಯ ಧರ್ಮವನ್ನು ಪಾಲಿಸು! ಮಹಾರಥರಾದ ಪಾಂಡವಸಿಂಹರನ್ನು ರಣರಂಗ ದಲ್ಲಿ ಗೆಲ್ಲದೆ ಕಳ್ಳ ರಾವಣನಂತೆ, ಕಾಂತಾಮಣಿಯನ್ನು ಕದ್ದೋಡುವ ಕಾಪುರುಷನಿಗೆ ಕಾಲಪಾಶವು ಕಂಠ ದೇಶದಲ್ಲಿ ಕಾದಿದೆ ಎಂದು ತಿಳಿ! ನಿಲ್ಲು!" ಎಂದು ಒದರುತ್ತಾ ಹಿಂಬಾಲಿಸಿದನು.

ಪಾಂಡವರು ಬೇಟೆಯಿಂದ ಹಿಂದಿರುಗಿ ಬಂದರು. ಮದ್ದಾನೆ ಕಲಕಿದ ಕಮಲಾಕರ ದಂತೆ, ಚಂದ್ರಮನಿಲ್ಲದ ಕಾಳರಾತ್ರಿಯಂತೆ ನಿಸ್ತೇಜಸ್ಕವಾಗಿದ್ದ ಆಶ್ರಮವನ್ನು

ಕಂಡು, ಅವರು ಭೀತರಾದರು. ಆಶ್ರಮದಲ್ಲಿದ್ದ ದ್ರೌಪದಿಯ ದಾಸಿಯು ಅಳುತ್ತಾ ಅವರನ್ನೆದುರ್ಗೊಂಡಳು. ಇಂದ್ರಸೇನನು(ಧರ್ಮಜಸಾರಥಿ)ರಥದಿಂದಿಳಿದು ಅವಳನ್ನು ಸಮೀಪಿಸಿ, 'ಏಕೆ ಅಳುವೆ?' ಎಂದು ಕೇಳಿದನು. ಧಾತ್ರಿಯು ನಡೆದುದನ್ನೆಲ್ಲ ತಿಳಿಸಿದಳು. ಅಸಮಾನ ಸೌಂದರ್ಯರಾಶಿಯು, ವಿಶಾಲನೇತ್ರೆಯು, ಪ್ರಾಣ ಸಮಾನಳು ಆದ ದ್ರೌಪದಿಯ ಹರಣವನ್ನು ಕೇಳಿ, ಮೂಲವನ್ನು ಕಡಿದ ಗಿಡಗಳಂತೆ ಪಾಂಡವರು ಮೂರ್ಛಿತರಾಗಿ ಬಿದ್ದರು. ಸ್ವಲ್ಪ ಹೊತ್ತಿಗೆ ಎಚ್ಚತ್ತು ಧರ್ಮರಾಜಾದಿ ಗಳು ಕೃಷ್ಣಾವಿಮೋಚನವನ್ನು ಸಾಧಿಸಲು ತ್ವರೆಯಿಂದ ಹೊರಟರು. ನಾಗಸರ್ಪ ದಂತೆ ಬುಸುಗುಟ್ಟುತ್ತಾ, ಮದ್ದಾನೆಯಂತೆ ತೂಗಾಡುತ್ತಾ, ಸಿಂಹದಂತೆ ಗರ್ಜಿಸುತ್ತಾ ಪಾಂಡವರು ಮಹಾವೇಗದಿಂದ ಸೈಂಧವನನ್ನು ಬೆನ್ನಟ್ಟಿ, ಮುಟ್ಟಿದರು.

ಪದಾತಿಭಟಮಧ್ಯದಲ್ಲಿ ಆಕ್ರೋಶಿಸುತ್ತಿರುವ ಧೌಮ್ಯನನ್ನು ಕಂಡು, ಭೀಮ ಅರ್ಜುನರು ಅವನನ್ನು ಸಮಾಧಾನಪಡಿಸಿ, ಒಂದುಕಡೆ ನಿಲ್ಲಿಸಿ, ತಾವು ಸೈಂಧವನನ್ನು ಮುತ್ತಿ, ಕಾದಿದರು. ಮಹೇಂದ್ರಸಮ ವಿಕ್ರಮರಾದ ಪಾಂಡುಪುತ್ರರ ಕ್ರೋಧ ವಹ್ನಿಯು ಸೈಂಧವದರ್ಶನದಿಂದ ಉರಿದೆದ್ದಿತು. ಧರ್ಮ ಸಹದೇವರು ಸೈನ್ಯವನ್ನು ತಡೆದು ಅದನ್ನು ನಾಶಪಡಿಸುತ್ತಿರಲು, ನಕುಲನು ವಾಜಿಭಟರೊಡನೆ ಹೋರಾಡಿ ಅನೇಕ ವೀರರನ್ನು ಯಮಸದನಕಟ್ಟಿದನು. ಭೀಮಾರ್ಜುನರು ಸೈಂಧವನನ್ನು, ಮಿತ್ರ ರಾಜರನ್ನು ಬಾಣವರ್ಷದಲ್ಲಿ ಮುಣುಗಿಸಿದರು. ರಾಜರ ಧ್ವಜಗಳು ಕೆಳಗುರುಳಿದವು. ಕುದುರೆಗಳು ಸತ್ತುಬಿದ್ದವು. ಆನೆಗಳು ಸೊಂಡಿಲು ಖಂಡಿತವಾಗಲು ಹುಚ್ಚೆದ್ದು, ಸೈನಿಕರನ್ನು ತುಳಿದು ಕೊಂದವು. ರಥಗಳು ವಿಕಲಾಂಗವಾದವು. ರಣರಂಗದಂತೆ ವನವು ಬೀಭತ್ಸವಾಯಿತು.

ಸೈಂಧವನು ಭೀತನಾಗಿ ದ್ರೌಪದಿಯನ್ನು ನೋಡಿ, 'ಐದು ರಥಗಳಲ್ಲಿ ಕೂತು ಬರುವ ಐವರು ಮಹಾವೀರರನ್ನು ನನಗೆ ತಿಳಿಸಿಕೊಡು!' ಎಂದು ಕೇಳಿದನು. ದ್ರೌಪದಿಯು ನಸುನಕ್ಕು ಅವನಿಗಿಂತೆಂದಳು—'ಮೂಢ! ಅವರನ್ನು ತಿಳಿದುದರಿಂದ ನಿನಗೇನು ಪ್ರಯೋಜನ? ಮಹಾತ್ಮರಿಗೆ ಅಪಚಾರವೆಸಗಿದ ನಿನ್ನ ದುಷ್ಟಕೃತ್ಯಕ್ಕಾಗಿ ಪಶ್ಚಾತ್ತಾಪಪಡುವ ಕಾಲ ಬಂದಿದೆ. ನನ್ನ ಪತಿದೇವರೈವರಿಂದ ನೀನು ಉಳಿಯ ಲಾರೆ. ನಿನ್ನ ಸೈನ್ಯವೂ ಕೋಟಿಕಾಶ್ಯಾದಿ ಕೂಟಮಿತ್ರರೂ ಉಳಿಯರು. ಸಾಯಲಿ ರುವ ನಿನಗೆ ತಿಳಿಸಿಕೊಡುವುದು ಉಚಿತವಾಗಿದೆ. ಕೇಳು! ನನಗೆ ನಿನ್ನ ಭಯವಿಲ್ಲ, ಸಂಭ್ರಮವಿಲ್ಲ. ಮೃದಂಗಧ್ವಜನು, ತಾಮ್ರಪತಾಕನು, ಉನ್ನತನಾಸಿಕನು, ಆದ ಧರ್ಮಸುತನು ಮುಂದೆ ಬರುತ್ತಿರುವವನು. ಅವನಂತಹ ಶರಣ್ಯವತ್ಸಲನು, ಧರ್ಮ ತತ್ಪರನು, ಯಜ್ಞ ದಾನ ತಪಶ್ಶೀಲನು ಆದ ರಾಜನ್ಯನಿಲ್ಲ. ಅವನಿಗೆ ಶರಣಾಗತ ನಾಗಿ ಉಳಿದುಕೋ! ಭೀಮಸೇನನು ಶಾಲವೃಕ್ಷದಂತೆ ಪ್ರಾಂಶುದೇಹನಾಗಿರುವವನು. ಹುಬ್ಬುಗಂಟಿಕ್ಕಿ, ತುಟಿಯನ್ನು ಕಡಿಯುತ್ತಾ, ಗದೆಯನ್ನೆತ್ತಿ ಹಿಡಿದು ಯಮನಂತೆ ಬರುವ ಭೀಮನಿಂದ ನಿನಗೆ ಉಳಿಗಾಲವಿಲ್ಲ. ಅವನಿಗೆ ಅಪರಾಧವೆಸಗಿದವರು

ಜೀವಿತಾಂತವನ್ನು ಮುಟ್ಟುವರು. ಮಾಡಿದ ತಪ್ಪನ್ನು ಶಿಕ್ಷಿಸದೆ ಬಿಡುವವನಲ್ಲ ವೃಕೋದರನು. ಧನುರ್ಧಾರಿಗಳಲ್ಲಿ ಅಗ್ರಣಿ ಎನಿಸಿದ ಅರ್ಜುನನು ಅಸಮಾನ ವೀರನು, ಜಿತೇಂದ್ರಿಯನು, ಕೃಷ್ಣ ಭೀಮ ಭಕ್ತನು ಆಗಿರುವನು. ಕಾಮದಿಂದಾಗಲಿ, ಕ್ರೋಧದಿಂದಾಗಲಿ, ಲೋಭದಿಂದಾಗಲಿ ಅವನು ಧರ್ಮವನ್ನು ಬಿಡನು. ಸರ್ವ ಧರ್ಮಾರ್ಥಕುಶಲನು, ಅತ್ಯಂತ ರೂಪಸಂಪನ್ನನು ಆದ ನಕುಲನನ್ನು ಅಣ್ಣಂದಿರು ಪ್ರಾಣದಂತೆ ರಕ್ಷಿಸುತ್ತಿರುವರು. ಅವನು ಖಡ್ಗವನ್ನು ಧರಿಸಿ ವೀರವಿಹಾರವನ್ನು ಮಾಡುವಾಗ ಕಂಕಗೃಧ್ರಾದಿಗಳಿಗೆ ಹಬ್ಬವಾಗುವುದು. ಸಹದೇವನು ನೀತಿಕುಶಲನು. ಖಡ್ಗಯುದ್ಧವಿಶಾರದನು, ಗೋಗಣ ಸಂವರ್ಧನನು ಆಗಿರುವನು. ಅವನು ಇಂದ್ರನಂತೆ ವಿಕ್ರಮಿಸಿ, ನಿನ್ನ ಭಟರನ್ನು ಸಂಹರಿಸುತ್ತಿರುವನು ನೋಡು ! ಅವನನ್ನು ಕುಂತೀದೇವಿಯು ತನ್ನ ಪ್ರಾಣಗಳಿಗಿಂತ ಹೆಚ್ಚಾಗಿ ಪ್ರೇಮಿಸುವಳು. ಇಂತಹ ನನ್ನ ಪತಿಗಳು ನಿನ್ನ ಸೈನ್ಯಸಾಗರವನ್ನು ಕ್ಷಣದಲ್ಲಿ ಶೋಷಿಸಿಬಿಡುವರು.

ಸೈಂಧವನು ಓಡಿಹೋಗುತ್ತಿರುವ ಸೈನಿಕರನ್ನು ಹುರಿದುಂಬಿಸಿ, ಹಿಂದಿರುಗಿಸಿದನು. 'ಹೊಡಿ ! ಬಡಿ ! ಕಡಿ !' ಎಂಬ ಶಬ್ದಗಳು ಅಂತರಾಳದಿ ಮೊಳಗುತ್ತಿದ್ದವು. ಭೀಮಸೇನನು ಬಂಗಾರದ ಚಿತ್ರಗಳಿಂದ ಅಲಂಕೃತವಾದ ತನ್ನ ಭಯಂಕರ ಗದೆಯನ್ನು ಪಿಡಿದು, ಸೈಂಧವನನ್ನು ಮುತ್ತಿದನು. ನಡುವೆ ತೂರಿಬಂದ ಕೋಟಿಕಾಶ್ಯನನ್ನು ಗದೆಯಿಂದ ಹೊಡೆದೋಡಿಸಿ, ಸೈಂಧವನ ಅಂಗರಕ್ಷಕರಾದ ಹದಿನಾಲ್ಕು ಅಶ್ವಿಕರನ್ನು ಸಂಹರಿಸಿದನು. ಸೈಂಧವನು ಹಿಂಜರಿಯದೆ ನೂರು ಬಾಣಗಳನ್ನು ಬಿಟ್ಟು, ಭೀಮನನ್ನು ಪೀಡಿಸಿದನು. ನಕುಲನು ರಥದಿಂದ ಕೆಳಗಿಳಿದು ಸೈಂಧವನ ಚಕ್ರರಕ್ಷಕರನ್ನು ಕೊಂದನು. ಸಹದೇವನು ಗಜಯೋಧರನ್ನು ಬಾಣದಿಂದ ಹೊಡೆದು ಗಿಡಗಳ ಮೇಲಿಂದ ನವಿಲುಗಳನ್ನಂತೆ ಕೆಳಗೆ ಕೆಡಹಿದನು. ತ್ರಿಗರ್ತನು ಮೇಲೇರಿ ಬರಲು ಕಂಡು, ಧರ್ಮರಾಜನು ಅವನನ್ನು ಅರ್ಧಚಂದ್ರ ಬಾಣದಿಂದ ಹೊಡೆದು ಕೊಂದನು. ಮಳೆಗಾಲದ ಕಾರ್ಮೋಡದಂತೆ ಬಾಣವರ್ಷವನ್ನು ಸುರಿಸುವ ನಕುಲ ಸಹದೇವರನ್ನೆದುರಿಸಿ, ನಿಲ್ಲಲಾರದೆ ಸುರಥಕ್ಷೇಮಕಾಂತಿಗಳು ಯುದ್ಧವಿಮುಖರಾದರು. ನಕುಲನು ಸುರಥನ ಗಜದ ಸೊಂಡಿಲನ್ನು ಕಡಿಯಲು, ಆ ಮದ್ದಾನೆಯು ಕುಣಿದಾಡಿ ಅನೇಕರನ್ನು ತುಳಿದು ಕೊಂದು ತಾನೂ ಸತ್ತಿತು. ಭೀಮನು ಕೋಟಿಕಾಶ್ಯನನ್ನು ತಡೆದು ನಿಲ್ಲಿಸಿ, ನಾಲ್ಕು ಬಾಣಗಳಿಂದ ಅವನ ಸಾರಥಿಯನ್ನು ಕೊಂದು, ಕೋಟಿಕಾಶ್ಯನನ್ನು ಪ್ರಾಸದಿಂದ ಸಂಹರಿಸಿ, ಇತರ ತ್ರಿಗರ್ತರಾಜರನ್ನು ಕೊಂದನು. ಧನಂಜಯನು ಹದಿನಾರು ಸೌವೀರಭಟರನ್ನು ಸಂಹರಿಸಿ, ಶಿಬಿ ತ್ರಿಗರ್ತ ಸಿಂಧುಭಟರನ್ನು ಅನೇಕರನ್ನು ನಾಶಪಡಿಸಿದನು. ವನವೆಲ್ಲವೂ ಶವಗಳಿಂದ ತುಂಬಿ ಭೀಕರವಾಯಿತು. ನಾಯಿ ನರಿ ಹದ್ದುಗಳಿಗೆ ಆನಂದವಾಗಿ ಅವು ಕೂಗುವ ಧ್ವನಿಯು ಎಲ್ಲೆಡೆ ವ್ಯಾಪಿಸಿತು. ಎಲ್ಲ ಮಿತ್ರರೂ ಸಾಯಲು ಸೈಂಧವನು ಭೀತನಾಗಿ, ದ್ರೌಪದಿಯನ್ನು

ಕೆಳಗಿಳಿಸಿ, ತಾನು ಓಡಿಹೋಗಲು ಹವಣಿಸಿದನು. ದ್ರೌಪದಿಯು ಧೌಮ್ಯಸಹಿತ ಳಾಗಿ, ನಕುಲರಥವನ್ನಾರೋಹಿಸಿ, ನಿರ್ಭೀತಳಾಗಿದ್ದಳು.

ಸೈನಿಕರನ್ನು ಬಿಟ್ಟು ಸೈಂಧವನನ್ನು ತಡೆದು, ಬಂಧಿಸಿ ತರಲೆಣಿಸಿ ಭೀಮ ಸೇನನು, "ಅಣ್ಣ! ನೀನೂ ನಕುಲಸಹದೇವರೊಡನೆ ಆಶ್ರಮಕ್ಕೆ ತೆರಳಿ, ಅಲ್ಲಿ ದ್ರೌಪದಿಯನ್ನು ಸಂತೈಸು! ಧೌಮ್ಯನನ್ನೂ ಕರೆದುಕೊಂಡು ಹೋಗು! ನಾನು ಸೈಂಧವನನ್ನು ಹಿಡಿದು ತರುವೆನು. ಪಾತಾಳದಲ್ಲಡಗಿದರೂ, ಇಂದ್ರನ ಸಹಾಯ ಪಡೆದುಬಂದರೂ, ಆ ದುರಾತ್ಮನನ್ನು ಕೊಲ್ಲದೆ ಬಿಡೆನು" ಎಂದು ನುಡಿದು, ಅರ್ಜುನ ನನ್ನೂ ಕರೆದುಕೊಂಡು ಸೈಂಧವನನ್ನು ಬೆನ್ನಟ್ಟಿಪೋದನು. ಧರ್ಮರಾಜನು "ಭೀಮಸೇನ! ಸೈಂಧವನು ಮಹಾಪರಾಧ ಮಾಡಿರುವನು. ಆದರೂ ಅವನನ್ನು ಕೊಲ್ಲಲಾಗದು. ದುಶ್ಶಲೆ ನಮ್ಮ ಮನೆಯ ಹೆಣ್ಣು. ಅವನನ್ನು ಕೊಂದರೆ, ಗಾಂಧಾರಿಯೂ, ದುಶ್ಶಲೆಯೂ ದುಃಖಿತರಾಗುವರು. ದುಶ್ಶಲಾಭರ್ತನಾದ ಸೈಂಧವ ನನ್ನು ಸುಮ್ಮನೆ ಕಟ್ಟಿ ಕರೆತಾ" ಎಂದು ಹೇಳಲು, ದ್ರೌಪದಿಯು ಕುಪಿತಳಾಗಿ "ಪತಿ ದೇವ! ನನಗೆ ಹಿತವಾಗಬೇಕೆಂದಿದ್ದರೆ ಆ ಪಾಪಿಯನ್ನು ಸಂಹರಿಸು! ಕೈಮುಗಿದು ಬೇಡಿದರೂ ಬಿಡಬೇಡ" ಎಂದು ನುಡಿದಳು. ದ್ರೌಪದ್ಯಾದಿಸಹಿತನಾಗಿ ಧರ್ಮ ರಾಜನು ಆಶ್ರಮವನ್ನು ಸೇರಿದನು.

ಭೀಮಾರ್ಜುನರು ರಥಾರೂಢರಾಗಿ ಒಂದು ಕ್ರೋಶ ದೂರ ಹೋಗಲು, ಸೈಂಧವನ ರಥವು ದೂರದಲ್ಲಿ ಕಾಣಿಸಿತು. ಅತಿ ಚಿತ್ರಯುದ್ಧ ವಿಶಾರದನಾದ ಅರ್ಜುನನು, ಅಲ್ಲಿಂದಲೇ ಜಯದ್ರಥನ ಕುದುರೆಗಳನ್ನು ಹೊಡೆದು ಕೊಂದನು. ಸೈಂಧವನು ಬಾಣಹತವಾಗಿ ಬಿದ್ದ ಕುದುರೆಗಳನ್ನು ನೋಡಿ, ಪ್ರಾಣರಕ್ಷಣೆಗೆಂದು ಕೆಳಗೆ ಧುಮುಕಿ, ಓಡಿಹೋದನು. ಪಾರ್ಥನು ಅವನನ್ನು ನೋಡಿ 'ಇಂತಹ ಭೀರುವು ಕಾಂತೆಯನ್ನು ಅಪಹರಿಸಬಹುದೆ? ಹಿಂದಿರುಗು!' ಎಂದು ಅಪಹಸಿಸಿ ಕೂಗಿದರೂ ಸೈಂಧವನು ಕಿವಿಗೊಡದೆ ಓಡುತ್ತಿದ್ದನು. ಭೀಮನು ವೇಗದಿಂದ ಹೋಗಿ ಅವನನ್ನು ಹಿಡಿದು, ಹೆಡಮುಡಕಟ್ಟಿ, ಕರೆತಂದನು. ಚೆನ್ನಾಗಿ ಮರ್ದಿಸಿ ದನು. ಕಾಲಿನಿಂದ ಒದೆದು, ರಥಕ್ಕೆ ಕಟ್ಟಿ, ಆಶ್ರಮಕ್ಕೆ ಕರೆತಂದನು. ದುಶ್ಶಲಾ ಭರ್ತನೆಂಬ ಕಾರಣದಿಂದ ಅವನನ್ನು ಕೊಲ್ಲದೆ ಕರೆತಂದು, ಭೀಮಾರ್ಜುನರು ಧರ್ಮ ರಾಜನ ಕಾಲಲ್ಲಿ ಕೆಡಹಿದರು.

ಭೀಮನು "ಅಣ್ಣ! ಈ ಪಾಪಿಯನ್ನು ಬಿಡಲಾಗದು. ಕೃಷ್ಣೆಗೆ ಕ್ಲೇಶಕಾರಣ ನಾದ ಜಯದ್ರಥನ ಅಪರಾಧವನ್ನು ಸಹಿಸುವ ನಿನ್ನ ಕ್ಷಮಾಗುಣವು ನಿಂದನೀಯ ವಾಗಿದೆ. ಇರಲಿ!" ಎಂದು ಧರ್ಮರಾಜನನ್ನು ವೀಕ್ಷಿಸಿ, ಮತ್ತೆ ಜಯದ್ರಥನಿಗೆ —"ಪಾಪಿ! ಕೇಳಿಲ್ಲಿ! ರಾಜಸಭೆಗಳಲ್ಲಿ ದ್ರೌಪದೀದಾಸನೆಂದು ಹೇಳುವುದಾದರೆ ನಿನ್ನನ್ನು ಜೀವದಿಂದ ಬಿಡುವೆನು" ಎಂದು ಅವನನ್ನು ಹಿಡಿದೆತ್ತಿ, ದ್ರೌಪದಿಯ ಮುಂದೆ ನಿಲ್ಲಿಸಿದನು. ಅವನು ತಲೆ ತಗ್ಗಿಸಿ, ಕಣ್ಣೀರಿಡುತ್ತಾ 'ದ್ರೌಪದೀದಾಸನು ನಾನು'

ಎಂದು ಹೇಳಿ ಕೆಳಗುರುಳಿಬಿದ್ದನು. ಭೀಮನು ಅವನ ರಥಕ್ಕೆ ಅವನನ್ನು ಕಟ್ಟಿ, ಮೂರುಕಡೆ ತಲೆಬೋಳಿಸಿ, ಮೀಸೆಯೊಂದನ್ನು ತೆಗೆದು, ರಥಾಶ್ವಗಳನ್ನು ಹೊಡೆದೋಡಿಸಿದನು. ಧರ್ಮರಾಜನು "ಸೈಂಧವ! ನಿನ್ನನ್ನು ದಾಸ್ಯದಿಂದ ಬಿಡಿಸಿರುವೆನು. ಹೋಗು! ಇನ್ನು ಇಂತಹ ಸಾಹಸವನ್ನು ಮತ್ತೆ ಮಾಡಬೇಡ!" ಎಂದು ದಂಡಿಸಿ ಕಳಿಸಿದನು.

ಜಯದ್ರಥನು ಅವಮಾನದಿಂದ ಸತ್ತಂತಾದನು. ಅವನು ಗಂಗಾದ್ವಾರವನ್ನು ಸೇರಿ, ತೀವ್ರತಪದಿಂದ ಉಮಾಪತಿಯನ್ನು ಮೆಚ್ಚಿಸಿದನು. ಪ್ರೀತನಾದ ವೃಷಧ್ವಜನನ್ನು ನೋಡಿ, ಸೈಂಧವನು "ಶಿವ! ಶಂಕರ! ಪಾಂಡವರನ್ನೈವರನ್ನು ಜಯಿಸುವಂತೆ ಮಾಡು" ಎಂದು ಬೇಡಿದನು. ಶಿವನು "ಅದಾಗದು. ಪಾಂಡವರು ಅವಧ್ಯರು ಅಜಯ್ಯರು ಆಗಿರುವರು. ಅರ್ಜುನನಲ್ಲಿ ನರಾವೇಶವೂ ಇದೆ. ಅದಲ್ಲದೆ ಕೃಷ್ಣನು ಅವನ ಸಾರಥಿಯಾಗಿರುವನು. ಅವನನ್ನು ಬಿಟ್ಟು ಮಿಕ್ಕ ನಾಲ್ವರನ್ನೂ ನೀನು ಒಂದು ದಿನ ಮಾತ್ರ ರಣರಂಗದಲ್ಲಿ ತಡೆದು ನಿಲ್ಲಿಸಲು ಸಮರ್ಥನಾಗುವಂತೆ ವರವಿತ್ತಿರುವೆನು ಹೋಗು! ಭೀಮಸೇನನು ಕೂಡ ನನ್ನ ವರವನ್ನು ಮನ್ನಿಸಿ, ನಿನಗೆ ಸೋತಂತಿರುವನು. ಎಚ್ಚರವಾಗಿರು!" ಎಂದು ಹೇಳಿ ಅಂತರ್ಹಿತನಾದನು.

ಈಶ್ವರನು ಕೈಲಾಸದಲ್ಲಿ ಸನಕಾದಿಗಳಿಗೆ ತಾನು ಜಯದ್ರಥನಿಗಿತ್ತ ವರದ ಮರ್ಮವನ್ನಿಂತು ತಿಳಿಸಿದನು—'ನರನಾರಾಯಣರು ಬದರಿಕಾಶ್ರಮದಲ್ಲಿ ತಪವನ್ನು ಮಾಡುತ್ತಿರುವರು. ನರನೇ ಅರ್ಜುನನು. ನಾನು ಅವನಿಗೆ ಪಾಶುಪತವನ್ನಿತ್ತಿರುವೆನು. ಅಂತೆಯೇ ಅವನನ್ನು ಜಯದ್ರಥನು ಜಯಿಸುವಂತೆ ವರವನ್ನೀಯಲಿಲ್ಲ. ಭೀಮನು ಮುಖ್ಯಪ್ರಾಣನು. ನನ್ನ ತಂದೆಯಾದ ಪ್ರಾಣನನ್ನು ಗೆಲ್ಲುವಂತೆ ನಾನು ವರವನ್ನು ನೀಡಲಾಗುವುದೆ? ಆದರೂ ದೇವಕಾರ್ಯವಿರುವುದರಿಂದ, ಅಭಿಮನ್ಯುವಧವನ್ನು ಉಪೇಕ್ಷಿಸಿ, ಭೀಮನು ಸೋತಿರುವನೆಂದು ನುಡಿದಿರುವೆನು. ನಾರಾಯಣನೇ ಶ್ರೀಕೃಷ್ಣನು. ಅವನು ನನ್ನ ಅಂತರ್ಯಾಮಿಯಾಗಿ ಸಂಕರ್ಷಣನೆನಿಸಿರುವನು. ಶೇಷನ ಹೃದಯಗುಹಾವಾಸಿಯಾದ ಸಂಕರ್ಷಣನ ಮುಖದಿಂದ ಎದ್ದು ಬರುವ ಪ್ರಳಯಾಗ್ನಿ ಜ್ವಾಲೆಗಳಿಂದ ಪ್ರಪಂಚವೆಲ್ಲವೂ ನಷ್ಟವಾಗುವುದು. ಪ್ರಳಯಕಾಲೀನವಾದ ಮೇಘಗಳಿಂದ ಭಯಂಕರವಾದ ಮಳೆ ಬಂದು ಬ್ರಹ್ಮಾಂಡವು ಜಲಮಯವಾಗುವುದು. ಆಗ ಶ್ರೀ ನಾರಾಯಣನು ಸರ್ವಜೀವರನ್ನು ತನ್ನ ಹೊಟ್ಟೆಯಲ್ಲಿಟ್ಟು, ಪ್ರಳಯೋದಧಿಯಲ್ಲಿ ಶೇಷಪರ್ಯಂಕಶಯನನಾಗಿರುವನು. ಕೋಟಿಸೂರ್ಯಪ್ರಭಾ ಸಮಾನನಾದ ವಾಸುದೇವನು ಮತ್ತೆ ನಿದ್ರೆಯನ್ನು ಬಿಟ್ಟು ಶ್ರೀರಮೆಯಿಂದ ಕ್ರೀಡಿಸಿ ಜಗವನ್ನು ಸೃಜಿಸಿದನು. ಆಪಃ ಅಂದರೆ ಜಗತ್ಪರಿಪಾಲಕನಾದ ಶ್ರೀಹರಿಯು. ನಾರ ಅಂದರೆ ಜಲಗಳು. ಜಲದಲ್ಲಿದ್ದು ಜಗತ್ಪಾಲನೆ ಮಾಡುವುದರಿಂದ ಶ್ರೀಹರಿಗೆ ನಾರಾಯಣ ಎಂದು ಹೆಸರು. ಅವನು ವಾಸುದೇವಾದಿ ರೂಪದಿಂದ ಅವತರಿಸುವನು. ಅವತಾರಗಳಿಗೆ ಸ್ವಗತ ಭೇದವಿಲ್ಲ. ಭಿನ್ನಾಂಶರಾದ

ಜೀವರು ಅವನ ಪ್ರತಿಬಿಂಬರೆನಿಸುವರು. ಮುಖ್ಯಪ್ರಾಣನು ಮೊದಲ ಪ್ರತಿಬಿಂಬನಾಗಿ ಜೀವೋತ್ತಮನೆಂದು ಖ್ಯಾತನಾಗಿರುವನು. ಅವನ ಪ್ರತಿಬಿಂಬರು ನಾವೆಲ್ಲರು. ಅವನ ಅಧೀನರಾಗಿ ನಾವು ಲೋಕವ್ಯಾಪಾರವನ್ನು ನಡೆಸುತ್ತಿರುವೆವು. ಶ್ರೀಹರಿಯು ಬ್ರಹ್ಮನೆಂಬ ತನ್ನ ರೂಪದಿಂದ ಬ್ರಹ್ಮನಲ್ಲಿದ್ದು ಸೃಜಿಸುವನು. ರುದ್ರನೆಂಬ ತನ್ನ ರೂಪದಿಂದ ನನ್ನಲ್ಲಿ ನೆಲೆಸಿ, ಜಗವನ್ನು ಸಂಹರಿಸುವನು.

'ಸನಕಾದಿ ಮುನಿವರರೆ! ಶ್ರೀಹರಿಯ ಅದ್ಭುತ ಕರ್ಮವನ್ನು ಕೇಳಿ! ವಾರಾಹನಾಗಿ ಮಹೀಮಂಡಲವನ್ನು ಉದ್ಧರಿಸಿದನು. ಆ ಯಜ್ಞಮೂರ್ತಿಯು ಹಿರಣ್ಯಾಕ್ಷನೆಂಬ ದೈತ್ಯನನ್ನು ಸಂಹರಿಸಿದನು. ನರಸಿಂಗನಾಗಿ ದುಷ್ಟ ಹಿರಣ್ಯಕಶಿಪುವನ್ನು ಸಂಹರಿಸಿ, ಪ್ರಹ್ಲಾದನನ್ನು ಪೊರೆದನು. ಅವನೇ ನಮ್ಮ ಕುಲಸ್ವಾಮಿಯು. ಮುಖ್ಯಪ್ರಾಣನೇ ನಮ್ಮ ಕುಲಗುರುರಾಯನು. ಕಶ್ಯಪನಿಂದ ಅದಿತಿಯಲ್ಲಿ ವಾಮನನಾಗಿ ಜನಿಸಿ, ಬಲಿರಾಜನಿಂದ ಮೂರು ಪಾದದ ಭೂಮಿಯನ್ನು ಬೇಡಿದನು. ದಾನವನ್ನು ಪಡೆದು ತ್ರಿವಿಕ್ರಮನಾಗಿ ಮೂಲೋಕಗಳನ್ನು ಆಕ್ರಮಿಸಿದನು. ತ್ರಿವಿಕ್ರಮನ ವಿಕ್ರಮದಿಂದ ಜಿತವಾದ ಲೋಕತ್ರಯವು ವೈಷ್ಣವವೆನಿಸಿದೆ. ಅವನು ಬಲಿಯನ್ನು ರಸಾತಲದಲ್ಲಿಟ್ಟು, ಸುರಲೋಕದ ಸಿರಿಯನ್ನು ಮಹೇಂದ್ರನಿಗಿತ್ತು ಕಾಪಾಡಿದನು. ಮತ್ಸ್ಯನಾಗಿ ಮನುವಿನನ್ನು ಪ್ರಳಯಜಲಧಿಯಿಂದ ಕಾಪಾಡಿದನು. ಕೂರ್ಮನಾಗಿ ಮಂದರವನ್ನು ಧರಿಸಿ, ದೇವತೆಗಳನ್ನು ಉದ್ಧರಿಸಿದನು. ಭಾರ್ಗವನಾಗಿ ಕ್ಷತ್ರಿಯರಾಕ್ಷಸರನ್ನು ಸಂಹರಿಸಿ, ಸುಜನರಾಜರನ್ನು ಸಲಹಿದನು. ಶ್ರೀರಾಮನಾಗಿ ರಾವಣಾದಿ ದುಷ್ಟರನ್ನು ನಾಶಮಾಡಿದನು. ಇಂದು ಶ್ರೀಕೃಷ್ಣನಾಗಿ ಯದುಕುಲದಲ್ಲಿ ಅವತರಿಸಿರುವನು. ಅನಾದ್ಯನಂತನು, ಲೋಕಪ್ರಭುವು, ದೇವಪ್ರಿಯನು, ಅಸುರಮರ್ದನನು ಆದ ಶ್ರೀಕೃಷ್ಣನು ಭೂಭಾರಹರಣಾರ್ಥವಾಗಿ ಅವತರಿಸಿರುವನು. ಅವನ ಭಕ್ತರಲ್ಲಿ ಅತ್ಯುತ್ತಮನಾದ ಭೀಮನನ್ನು, ಅವನು ಸಾರಥಿಯಾಗಿ ನಡೆಸುವ ಅರ್ಜುನನನ್ನು ದೇವದಾನವರು ಗೆಲ್ಲಲಾಗದೆಂದಮೇಲೆ ಇನ್ನು ಮನುಜರ ಪಾಡೇನು!' ಎಂದು ನುಡಿದು ಶ್ರೀ ಶಿವನು ಕೃಷ್ಣನಿಗೆ ನಮಿಸಿದನು.

## ಶ್ರೀ ರಾಮಾಯಣ—(೧)

ಶ್ರೀ ವೈಶಂಪಾಯನನು ಜನಮೇಜಯನಿಗೆ ಹೇಳಿದನು.

ರಾಜನ್! ಪಾಂಡವರು ಜಯದ್ರಥನಿಂದ ಆದ ಪರಾಭವವನ್ನು ನೆನೆದು, ಚಿಂತಾಕ್ರಾಂತರಾಗಿರಲು, ಅನೇಕ ಮುನಿಗಳು ಬಂದು ಅವರನ್ನು ಸಮಾಧಾನಪಡಿಸಿದರು. ಆಗ ಮಾರ್ಕಂಡೇಯನೂ ಬಂದಿದ್ದನು. ಅವನನ್ನು ನೋಡಿ ಧರ್ಮರಾಜನಿಂತು ನುಡಿದನು—

ಪೂಜ್ಯನೆ! ದ್ರುಪದಸುತೆಯು, ಪಾಂಡುರಾಜನ ಸೊಸೆಯೂ ಆದ ದ್ರೌಪದಿಗೆ ಇಂತಹ ಕಷ್ಟವು ಒದಗಿತಲ್ಲ! ವಿಧಿಸಂಕಲ್ಪಕ್ಕೆ ಎದುರಿಲ್ಲ. ಆದರೆ ವಿಪ್ರಪೂಜಾ

ನಿರತಳು, ಕೃಷ್ಣಭಕ್ತಳು ಆದ ಕೃಷ್ಣೆಯು ಸೈಂಧವಹತಕನಿಂದ ಅವಮಾನಿತಳಾದ ಳೆಂದು ನಮಗೆ ಸಂಕಟವಾಗುತ್ತಿದೆ. ವನವಾಸ, ಮೃಗಯಾಜೀವಿಕೆ, ಜ್ಞಾತಿಜನ ವಂಚನೆಗಳಿಗೆ ಗುರಿಯಾಗಿ ನೊಂದಿರುವ ನಮಗೆ ದಾರಾಹರಣವೂ ಆಗಬೇಕೆ? ನನಗಿಂತ ಅಲ್ಪಭಾಗ್ಯನಾದ ಮನುಜನಿರುವನೆ?'' ಇಂತು ಕೇಳಿದ ಧರ್ಮನಿಗೆ ವಿಪ್ರ ಸಭೆಯ ಮಧ್ಯದಿ ಮಾರ್ಕಂಡೇಯನು ಶ್ರೀರಾಮಾಯಣವನ್ನು ನಿರೂಪಿಸಿದನು—

ಇಕ್ಷ್ವಾಕು ವಂಶಜನಾದ ಅಜನೆಂಬ ಮಹಾರಾಜನಿದ್ದನು. ಅವನ ಮಗನು ದಶರಥನು. ಗುಣಸಂಪನ್ನನು, ಸ್ವಾಧ್ಯಾಯ ಯಜ್ಞಶೀಲನು ಆದ ದಶರಥನಿಗೆ ಕೌಸಲ್ಯೆಯಲ್ಲಿ ಶ್ರೀರಾಮನು, ಕೈಕೇಯಿಯಲ್ಲಿ ಭರತನು, ಸುಮಿತ್ರೆಯಲ್ಲಿ ಲಕ್ಷ್ಮಣ ಶತ್ರುಘ್ನರು ಜನಿಸಿದರು. ಅದೇ ಕಾಲದಲ್ಲಿ ವಿದೇಹರಾಜನಾದ ಜನಕನಿಗೆ ಭೂ ಶೋಧನೆಗೈಯುವಾಗ ಸೀತೆ ಎಂಬ ಸುತೆ ದೊರಕಿದಳು.

ಶ್ರೀ ನಾರಾಯಣನೇ ಶ್ರೀರಾಮನು. ಶ್ರೀದೇವಿಯೇ ಸೀತೆಯು. ಲಕ್ಷ್ಮಣನು ಶೇಷನ ಅಂಶದಿಂದಲು, ಸಂಕರ್ಷಣಾವೇಶದಿಂದಲು ಯುಕ್ತನಾಗಿದ್ದನು. ಭರತನು ಕಾಮನು. ಅವನಲ್ಲಿ ಪ್ರದ್ಯುಮ್ನಾವೇಶವಿತ್ತು. ಶತ್ರುಘ್ನನು ಅನಿರುದ್ಧನು. ಅವ ನಲ್ಲಿ ಅನಿರುದ್ಧಹರಿಯ ಆವೇಶವಿತ್ತು. ಇಂತು ಶ್ರೀದೇವನವತರಿಸಲು ಕಾರಣವನ್ನು ಹೇಳುವೆನು ಕೇಳು !

ಚತುರ್ಮುಖನ ಪುತ್ರನಾದ ಪುಲಸ್ತ್ಯನಿಗೆ ಗೋದೇವಿ ಎಂಬ ಪತ್ನಿಯಲ್ಲಿ ವೈಶ್ರವಣನು ಜನಿಸಿದನು. ಅವನು ತಂದೆಯ ಮನೆಯನ್ನು ಬಿಟ್ಟು ಪಿತಾಮಹನ ಮನೆ ಸೇರಿ ಅವನನ್ನು ಸೇವಿಸುತ್ತಿದ್ದನು. ಪುಲಸ್ತ್ಯನು ಮಗನಮೇಲೆ ಸಿಟ್ಟಾಗಿ, ತಾನೇ ವಿಶ್ರವಸನೆಂಬ ನಾಮದಿಂದ ತನಗೇ ಮಗನಾಗಿ ಪುಟ್ಟಿದನು. ಪಿತಾಮಹನು ವೈಶ್ರವಣನಿಗೆ ಪ್ರೀತನಾಗಿ ಪುಷ್ಪಕ ವಿಮಾನವನ್ನು, ಧನೇಶ ಪದವಿಯನ್ನು ಕೊಟ್ಟು ಅಮರನಾಗಿರಿಸಿದನು. ಬ್ರಹ್ಮಸೇವಾ ಮಹಿಮೆಯಿಂದ ಲೋಕಪಾಲನು, ರಾಜ ರಾಜನು ಆದ ವೈಶ್ರವಣನಿಗೆ ಮಹೇಶನು ಸ್ನೇಹಿತನಾದನು. ಅವನು ಲಂಕೆಯ ರಕ್ಷೋಗಣಗಳಿಗೆ ಒಡೆಯನಾಗಿ, ಪರಿಪಾಲಿಸುತ್ತಿದ್ದನು.

ಪುಲಸ್ತ್ಯ ಕ್ರೋಧಜಾತನಾದ ವಿಶ್ರವಸನನ್ನು ಸಂತೋಷಪಡಿಸಲೆಣಿಸಿ, ಯಕ್ಷಪತಿ ಯಾದ ವೈಶ್ರವಣನು, ಅವನ ಸೇವೆಗೆಂದು ಮೂವರು ರಾಕ್ಷಸ ತರುಣಿಯರನ್ನು ಸಮರ್ಪಿಸಿದನು. ಆ ಸುಂದರಿಯರು ಶ್ರದ್ಧೆಯಿಂದ ವಿಶ್ರವಸನನ್ನು ಸೇವಿಸಿ, ಅವನಿಂದ ಸಂತಾನವನ್ನು ಪಡೆದರು. ಪುಷ್ಪೋತ್ಕಟೆಯು ರಾವಣ ಕುಂಭಕರ್ಣರನ್ನು, ಮಾಲಿನಿಯು ವಿಭೀಷಣನನ್ನು, ರಾಕೆಯು ಖರಶೂರ್ಪಣಖೆಯರನ್ನು ಪಡೆದರು. ರೂಪ ಗುಣ ಶೀಲಗಳಿಂದ ವಿಭೀಷಣನು, ಉತ್ಸಾಹ ವೀರ್ಯಬಲಗಳಿಂದ ರಾವಣನು, ಬಲ ದರ್ಪ ಶೌರ್ಯಗಳಿಂದ ಕುಂಭಕರ್ಣನು, ಮಾಯಾಕ್ರೌರ್ಯ ಬ್ರಹ್ಮದ್ವೇಷಾದಿ ದುರ್ಗುಣಗಳಿಂದ ಖರನು ಪ್ರಖ್ಯಾತರಾದರು. ವೈಶ್ರವಣನ ತೇಜೋ ವಿಕ್ರಾಂತಿ ವೈಭವವನ್ನು ನೋಡಿ ಸಹಿಸದೆ, ರಾವಣಕುಂಭಕರ್ಣರು ಬ್ರಹ್ಮನನ್ನು ಮೆಚ್ಚಿಸಲು

ತಪವನ್ನು ಮಾಡಿದರು. ವಿಭೀಷಣನು ವಿಷ್ಣುಪ್ರೀತಿಗಾಗಿ ತಪಸ್ಸನ್ನು ಮಾಡು ತ್ತಿದ್ದನು. ಶೂರ್ಪಣಖೆ, ಖರನೊಡನೆ ಸೋದರರ ತಪಶ್ಚರ್ಯೆಯು ನಿರ್ವಿಘ್ನವಾಗಿ ನಡೆಯುವಂತೆ ನೋಡಿ, ಸೇವಿಸುತ್ತಿದ್ದಳು. ಒಂದು ಸಾವಿರ ವರ್ಷವಾಗಲು ರಾವಣನು ತನ್ನ ತಲೆಯನ್ನೇ ಕಡಿದು ಆಹುತಿಯಾಗಿಡುತ್ತಿದ್ದನು. ಇಂತು ಹತ್ತು ಸಾವಿರ ವರ್ಷ ಗಳಾದವು. ಆಗ ಬ್ರಹ್ಮದೇವನು ಪ್ರತ್ಯಕ್ಷನಾಗಿ, 'ಪ್ರೀತನಾಗಿರುವೆನು. ಅಮರತ್ವ ವನ್ನು ಬಿಟ್ಟು ಬೇರೇನಾದರೂ ಬೇಡು. ನಿನಗೆ ಹತ್ತು ತಲೆಗಳು, ಇಪ್ಪತ್ತು ಕೈ ಗಳಾಗಲಿ! ಶತ್ರುಭಯಂಕರನಾಗಿ, ಚಿರಕಾಲ ಬಾಳು!' ಎಂದು ಹೇಳಿದನು.

ರಾವಣನು 'ಬ್ರಹ್ಮದೇವ! ನಾನು ಕಾಮರೂಪಧರನಾಗುವಂತೆ ಅನುಗ್ರಹಿಸು! ದೇವದಾನವ ಗಂಧರ್ವ ಕಿನ್ನರ ನಾಗರಿಂದ ನನಗೆ ಮರಣ ಬೇಡ!' ಎಂದು ವರವನ್ನು ಬೇಡಿದನು. ಬ್ರಹ್ಮನು 'ಹಾಗೇ ಆಗಲಿ! ನರ ವಾನರರನ್ನು ಕೆಣಕಿ ಕೆಡಬೇಡ, ಎಚ್ಚರದಿಂದಿರು!' ಎಂದು ವರವನ್ನಿತ್ತು, ಅಂತರ್ಹಿತನಾದನು. ಕುಂಭಕರ್ಣನು ದೇವಮೋಹಿತನಾಗಿ ನಿದ್ರೆಯನ್ನು, ವಿಭೀಷಣನು ವಿಷ್ಣುಭಕ್ತಿಯನ್ನು, ಧರ್ಮರತಿ ಯನ್ನು, ಬ್ರಹ್ಮಾಸ್ತ್ರವನ್ನು ಬ್ರಹ್ಮನಿಂದ ವರವನ್ನಾಗಿ ಪಡೆದರು. ವಿಭೀಷಣನ ಸದ್ಗುಣಗಳಿಗೆ ಮೆಚ್ಚಿ, ಬ್ರಹ್ಮನು ಅವನಿಗೆ ಅಮರತ್ವವನ್ನಿತ್ತು ಅಂತರ್ಹಿತನಾದನು.

ವರಬಲದಿಂದ ಗರ್ವಿತನಾದ ರಾವಣನು ವೈಶ್ರವಣನನ್ನು ರಣದಿ ಗೆದ್ದು ಲಂಕಾ ರಾಜ್ಯವನ್ನು ವಶಪಡಿಸಿಕೊಂಡು ಪರಿಪಾಲಿಸುತ್ತಿದ್ದನು. ವೈಶ್ರವಣನ ಪುಷ್ಪಕ ವಿಮಾನವನ್ನು ಅಪಹರಿಸಿದನು. ಕುಪಿತನಾದ ಕುಬೇರನು 'ಪುಷ್ಪಕವು ನಿನ್ನನ್ನು ವಹಿಸಿ ಹಾರದಿರಲಿ! ನಿನ್ನನ್ನು ರಣದಲ್ಲಿ ಕೊಲ್ಲುವ ಪುಣ್ಯಶ್ಲೋಕನನ್ನು ವಹಿಸಿ ಹಾರಲಿ!' ಎಂದು ಶಾಪವನ್ನಿತ್ತು, ಮಹೇಶನ ದಯದಿಂದ ಬಂದ ಅಲಕಾಪುರಿ ಯನ್ನಾಳುತ್ತಾ, ಸುಖವಾಗಿದ್ದನು.

ರಾವಣನು ರಾಕ್ಷಸೇಶ್ವರನಾಗಿ ಲಂಕೆಯನ್ನಾಳುತ್ತಾ, ದೇವದಾನವ ಮಾನವ ರನ್ನು ಗೆದ್ದು, ಅವರ ರತ್ನಗಳನ್ನು, ಸ್ತ್ರೀರತ್ನಗಳನ್ನು ಅಪಹರಿಸಿ, ಅವರನ್ನು ಅಳಿಸಿ, (ರಾವಣನೆಂದು) ಸಾರ್ಥಕನಾಮಧೇಯನಾದನು. ಅವನ ಪೀಡೆಯನ್ನು ತಡೆಯ ಲಾರದೆ, ಇಂದ್ರಾದಿ ದೇವತೆಗಳು ಬ್ರಹ್ಮನಿಗೆ ಶರಣಾಗತರಾದರು. ಬ್ರಹ್ಮನು ಅವರಿಂದಲು, ಶಂಕರನಿಂದಲು ಕೂಡಿ ಶ್ರೀಹರಿಯನ್ನು ಶರಣುಹೊಂದಿ, ರಾವಣಾದಿ ದುಷ್ಟಸಂಹಾರ, ವಿಭೀಷಣಾದಿ ಶಿಷ್ಟಜನೋದ್ಧಾರವನ್ನು ಮಾಡಲು, ಅವತರಿಸೆಂದು ಬೇಡಿದನು. ಬ್ರಹ್ಮನ ಪ್ರಾರ್ಥನೆಯನ್ನು ಮನ್ನಿಸಿ ನಾರಾಯಣನು ಶ್ರೀರಾಮನಾಗಿ ಅವತರಿಸಿದನು. ಅವನ ಸೇವೆಯಿಂದ ಧನ್ಯರಾಗಬೇಕೆಂದು ಇಂದ್ರಾದಿವೃಂದಾರಕರು ಭೂಮಿಯಲ್ಲಿ ನರರಲ್ಲಿಯು, ವಾನರರಲ್ಲಿಯು ಅಂಶಕದಿಂದ ಅವತರಿಸಿದರು. ಅವರು ನಾಗಾಯುತಬಲರು, ವಾಯುವೇಗರು ಅತ್ಯಂತ ಪರಾಕ್ರಮವಂತರು ಆಗಿದ್ದರು.

ದಶರಥನು ಪುತ್ರಮುಖಪಂಕಜದರ್ಶನದಿಂದ ಜನಿತವಾದ ಆನಂದಸಾಗರಮಗ್ನ ನಾಗಿದ್ದನು. ನಾಲ್ವರು ಸುತರು ಶುಕ್ಲಪಕ್ಷ ಚಂದ್ರನಂತೆ ಬೆಳೆದರು. ಉಪನೀತರಾಗಿ

ವೇದಾದಿ ಶಾಸ್ತ್ರಗಳನ್ನೋದಿದರು. ವಿಶ್ವಾಮಿತ್ರನ ಸಿದ್ಧಾಶ್ರಮವನ್ನು ಸೇರಿ, ರಾಮಲಕ್ಷ್ಮಣರು, ಅವನ ಯಜ್ಞವಿಘ್ನಕಾರಣರಾದ ಮಾರೀಚ ಸುಬಾಹುಗಳನ್ನು ಗೆದ್ದು ಯಜ್ಞವನ್ನು ಸಂರಕ್ಷಿಸಿದರು. ಶ್ರೀರಾಮನು ತಾಟಕೆಯನ್ನು ಸಂಹರಿಸಿ, ಅಹಲ್ಯೆಯನ್ನು ಉದ್ಧರಿಸಿ, ಮಿಥಿಲಾನಗರವನ್ನು ಸೇರಿ, ವಿಶ್ವಾಮಿತ್ರನ ಅಪೇಕ್ಷೆಯಂತೆ ಶಿವಧನುವನ್ನು ಮುರಿದು, ಸೀತೆಯನ್ನು ವರಿಸಿದನು.

ಶ್ರೀರಾಮನು ಮಾರ್ಗಮಧ್ಯದಲ್ಲಿ ಪರಶುರಾಮನನ್ನು ಮೆಚ್ಚಿಸಿ, ಅವನಿಂದ ತನ್ನ ವೈಷ್ಣವಧನುವನ್ನು ಪಡೆದು, ಸೀತೆಯೊಡನೆ ಅಯೋಧ್ಯೆಯನ್ನು ಮುಟ್ಟಿದನು. ಹನ್ನೆರಡು ವರ್ಷಗಳ ಕಾಲವು ಕಳೆಯಿತು. ದಶರಥನು ತನ್ನ ಮುಪ್ಪನ್ನು, ರಾಮನ ಪ್ರಜಾಪ್ರೀತಿಯನ್ನು ಕಂಡು ಶ್ರೀರಾಮನ ಪಟ್ಟಾಭಿಷೇಕವನ್ನೇರ್ಪಡಿಸಿದನು.

ಅಲಕ್ಷ್ಮೀರೂಪಳಾದ ಮಂಥರೆಯು ಶ್ರೀರಾಮನ ರಾಜ್ಯಾಭಿಷೇಕವನ್ನು ನಿಲ್ಲಿಸಿ, ಅಂಥಂತಮಃಪ್ರಾಪ್ತಿರೂಪವಾದ ಮೋಕ್ಷವನ್ನು ಸಾಧಿಸಿದಳು. ಅವಳ ಪ್ರೇರಣೆ ಯಂತೆ ಕೈಕೇಯಿಯು ಶ್ರೀರಾಮನ ವನವಾಸವನ್ನೂ ಭರತನ ರಾಜ್ಯಾಭಿಷೇಕವನ್ನೂ ಕೇಳಿ, ಸತ್ಯಸಂಧನಾದ ದಶರಥನಿಂದ ಎರಡು ವರಗಳನ್ನಾಗಿ ಪಡೆದಳು. ಎರಡು ನಾಲಗೆಯ ಹಾವಿನಂತೆ ತೋರುವ ಅವಳ ವರಗಳನ್ನು ಕೊಟ್ಟು, ಶ್ರೀರಾಮವಿರಹವಿಷ ದಿಂದ ದಶರಥನು ಮೂರ್ಛಿತನಾದನು. ಇದನ್ನರಿತು ಶ್ರೀರಾಮನು ರಾಜನಿಗೆ ರಾಜ್ಯ ವನ್ನಿತ್ತು ತಾನು ಅವನ ವರಗಳನ್ನು ನೆರವೇರಿಸಲು ಹದಿನಾಲ್ಕು ವರ್ಷದ ವನವಾಸ ಕ್ಕೆಂದು ಹೊರಟನು. ಪತಿವ್ರತೆಯಾದ ಸೀತೆಯು ಚಂದ್ರಿಕೆಯಂತೆ ರಾಮಚಂದ್ರ ನನ್ನನುಸರಿಸಿದಳು. ಲಕ್ಷಣವಂತನಾದ ಲಕ್ಷ್ಮಣನೂ ಮುಂದೆ ಸಾಗುವ ಸುಪ್ಪತ್ತಿಗೆ ಯಂತೆ ಅರಣ್ಯವಾಸವನ್ನು ಮಾಡಲು ರಾಮನ ಹಿಂದೆ ಪಯಣಿಸಿದನು.

ಶ್ರೀರಾಮವಿರಹದಿಂದ ದಶರಥನು ಮೃತನಾದನು. ಕೈಕೇಯಿಯು ಭರತ ನನ್ನು ಅವನ ಸೋದರಮಾವನ ಮನೆಯಿಂದ ಕರೆತರಿಸಿ, ತಾನು ವರವಾಗಿ ಪಡೆದ ರಾಜ್ಯವನ್ನು ಪರಿಪಾಲಿಸೆಂದಳು. ಭರತನು 'ಅಣ್ಣನನ್ನು ಅರಣ್ಯಕ್ಕಟ್ಟಿ, ತಂದೆಯನ್ನು ಕೊಂದು, ಧನಾಶೆಯಿಂದ ಸಂಪಾದಿಸಿಟ್ಟ ರಾಜ್ಯವೆನಗೆ ಬೇಡ! ಕೈಕೇಯಿ! ನೀನು ನನ್ನನ್ನು ಹಡೆಯಲಿಲ್ಲ. ನನ್ನ ಅಪಕೀರ್ತಿಯನ್ನು ಪಡೆದೆ. ನಿನ್ನ ಮುಖ ನೋಡ ಬಾರದು' ಎಂದು ನಿಂದಿಸಿದನು. ಶತ್ರುಘ್ನನು ಮಂಥರೆಯನ್ನು ಪಿಡಿದು ಬಡಿದು ದಂಡಿಸಿದನು. ರಾಮಭಕ್ತನಾದ ಭರತನಿಗೆ ಶ್ರೀರಾಮನಿಲ್ಲದ ನಾಡು ಕಾಡಾಯಿತು. ಊರು ದೂರವಾಯಿತು. ಅವನು ಶ್ರೀರಾಮನಿದ್ದ ಚಿತ್ರಕೂಟವನ್ನು ಸಸೈನ್ಯನಾಗಿ, ಸಮಾತ್ಯ ಜನ ಮಂತ್ರಿ ಪರಿವಾರನಾಗಿ ಸೇರಿದನು. ತಾಪಸವೇಷಧರನಾದ ರಾಮನ ದರ್ಶನದಿಂದ ಅವನ ತಾಪವು ಇಮ್ಮಡಿಯಾಯಿತು. ದಶರಥನ ಮರಣವಾರ್ತೆ ಯನ್ನು ತಿಳಿಸಿ, ಶ್ರೀರಾಮನನ್ನು ರಾಜ್ಯವಾಳಲು ಅಯೋಧ್ಯೆಗೆ ಕರೆದನು. ಅವನ ಬದುಲಾಗಿ ತಾನು ವನವಾಸವನ್ನು ಮಾಡುವೆನೆಂದನು. ತಂದೆಯ ವಚನವು ಮಕ್ಕಳಿಗೆಲ್ಲ ಶಿರೋಧಾರ್ಯವೆಂದರುಹಿ, ಹಿಂತಿರುಗಿಬರಲು ನಿರಾಕರಿಸಿದ ಶ್ರೀರಾಮನ

ಪಾದುಕೆಗಳನ್ನು ಭರತನು ಸ್ವೀಕರಿಸಿ, ಅಯೋಧ್ಯೆಯಲ್ಲಿ ಪಾದುಕೆಗಳನ್ನಿಟ್ಟು ಪಟ್ಟ ಕಟ್ಟಿದನು. ತಾನು ರಾಮಪಾದುಕಾ ಪ್ರತಿನಿಧಿಯಾಗಿ, ನಂದಿಗ್ರಾಮದಲ್ಲಿದ್ದು, ರಾಜ್ಯ ಕಾರ್ಯವನ್ನು ನಿರ್ವಹಿಸುತ್ತಿದ್ದನು.

ಶ್ರೀರಾಮನು ಶರಭಂಗನನ್ನು ಮೋಕ್ಷವಿತ್ತು ಸಲಹಿ, ಅತ್ರಿ, ಭರದ್ವಾಜ, ಅಗಸ್ತ್ಯಾದಿ ಮುನಿಗಳ ತಪೋವಿಘ್ನಕರರಾದ ರಾಕ್ಷಸರನ್ನು ಸಂಹರಿಸಿ, ಜನಸ್ಥಾನದಲ್ಲಿ ನಿವಸಿ ಸುತ್ತಿದ್ದನು. ತನ್ನನ್ನು ವರಿಸೆಂದು ಬಂದ ಶೂರ್ಪನಖಿಯ ಮೂಗು, ಕಿವಿಗಳನ್ನು ಲಕ್ಷ್ಮಣನಿಂದ ಕೊಯಿಸಿ, ಅವಳ ಸೇಡಿನಿಂದ ದಂಡೆತ್ತಿಬಂದ ಖರ ದೂಷಣ ತ್ರಿಶಿರ ರನ್ನೂ ಅವರ ಹದಿನಾಲ್ಕು ಸಾವಿರ ವೀರಭಟರನ್ನೂ ಏಕವೀರನಾಗಿ ಸಂಹರಿಸಿದನು. ಶೂರ್ಪನಖಿಯು ಲಂಕೆಯಲ್ಲಿದ್ದ ರಾವಣನನ್ನು ಸೇರಿ, ತನ್ನ ವೈರೂಪ್ಯವನ್ನು ತೋರಿ, ಗೋಳಾಡಿದಳು. ರಾವಣನು ಕ್ರೋಧಾಗ್ನಿಯಿಂದ ಉರಿಯುತ್ತಾ 'ತಂಗಿ ! ಯಾವ ನೀಚನಿಂದ ಇಂತು ವಿಕೃತಳಾದೆ ? ತೀಕ್ಷ್ಣಶೂಲವನ್ನು ಮುತ್ತಿಡುವ ಮೂರ್ಖ ನಾರು ? ಯಾವ ಧೂರ್ತನು ಕೆಂಡವನ್ನು ಎತ್ತಿ ತಲೆಯಲ್ಲಿ ಸುರುವಿಕೊಳ್ಳುವನು ? ಘೋರ ಭುಜಗವನ್ನು ಪಾದದಿಂದ ತುಳಿವ ಧೈರ್ಯವನ್ನಾವನು ವಹಿಸಿರುವನು ? ಕೇಸರಿಯ ಕೋರೆಗಳನ್ನು ಹಿಡಿದು ಕಿತ್ತುವ ದುರ್ಮಾರ್ಗನನ್ನು ಪೆಸರಿಸು ! ಇಂದು ಅವನಿಲ್ಲವೆಂದೆನಿಸುವೆನು' ಎಂದನು. ರಾಮವಿಕ್ರಮವನ್ನು, ರಾಮಾಸೌಂದರ್ಯ ವನ್ನು ವರ್ಣಿಸಿದ ಮಂಗಳದೂರಳಾದ ತಂಗಿಯ ವಚನಗಳಿಂದ ಅವನ ಕಾಮಾಗ್ನಿಯು ಉದ್ದೀಪಿತವಾಯಿತು. ಕಾಮಕ್ರೋಧವಶನಾದ ರಾವಣನು ಕಣ್ಣುಕಾಣದೆ, ವಾಯು ರಥದಲ್ಲಿ ಕೂತು, ಮಹಾದೇವನ ಪ್ರಿಯತಮ ಕ್ಷೇತ್ರವಾದ ಗೋಕರ್ಣವನ್ನು ಮುಟ್ಟಿದನು. ಅಲ್ಲಿ ತಪೋನಿರತನಾದ ಮಾರೀಚನನ್ನು ಕಂಡು, ಎಲ್ಲವನ್ನೂ ತಿಳಿಸಿ 'ಹಿರಣ್ಮಯ ಮೃಗನಾಗಿ ಪೋಗಿ, ಸೀತೆಯನ್ನು ಪ್ರಲೋಭಿಸು ! ರಾಮಲಕ್ಷ್ಮಣರನ್ನು ದೂರ ಮಾಡು ! ಆಗ ನಾನು ನಿರಾತಂಕನಾಗಿ ಸೀತೆಯನ್ನು ಅಪಹರಿಸಿಕೊಂಡು, ಲಂಕೆಗೆ ಹೋಗುವೆನು. ಅಂತೆಯೇ ಸನ್ಯಾಸಿ ವೇಷಧರನಾಗಿ ಬಂದಿರುವೆನು' ಎಂದನು. ಮಾರೀಚನು ಗಡಗಡ ನಡುಗಿದನು. ರಾಮಬಾಣದ ಪರಾಕ್ರಮವನ್ನರಿತಿದ್ದ ಅವನು 'ರಾವಣ ! ಯಾವ ಹಗೆಯು ನಿನಗೀ ಬುದ್ಧಿಯನ್ನುಪದೇಶಿಸಿರುವನು ? ಮಹಾತ್ಮ ನಾದ ರಾಮನ ಬಾಣವು ಅಪ್ರತಿಹತವಾಗಿದೆ. ನಿನಗೆ ವಿನಾಶಕಾಲವು ಒದಗಿಬಂದಂತಿದೆ. ಬಿಡು ಈ ಆಲೋಚನೆಯನ್ನು !' ಎಂದು ಹಿತವನ್ನು ಹೇಳಿದನು. ಅಪ್ರಿಯ ವಚನಗಳನ್ನಾಲಿಸಿ, ರಾಕ್ಷಸೇಶನು ರಾತ್ರಿ ಕಾಡುಕಿಚ್ಚಿಗೆ ಸಿಕ್ಕು ಉರಿಯುವ ಗಿಡದಂತೆ ಉರಿದೆದ್ದು ಒರೆಯಿಂದ ಕತ್ತಿಯನ್ನು ಕಿತ್ತು, ಮಾರೀಚನನ್ನು ತಿವಿದು, 'ನನ್ನ ಆಜ್ಞೆ ಯನ್ನು ಪಾಲಿಸುವೆಯೋ ? ಸಾಯುವೆಯೋ ?' ಎಂದು ಕೇಳಿದನು. ಮಾರೀಚನು ತನಗೆ ಸಾವು ತಪ್ಪದೆಂದು ತಿಳಿದು, ಸ್ವಾತ್ಮಪಿಂಡವನ್ನು ಹಾಕಿಕೊಂಡನು. ಆ ಮಾಯಾವಿ ಬಂಗಾರದ ಜಿಂಕೆಯಾಗಿ, ಶ್ರೀರಾಮನ ಆಶ್ರಮದಲ್ಲಿ ಸಂಚರಿಸುತ್ತಿದ್ದನು.

ಸೀತೆಯು ವಿಧಿಚೋದಿತಳಾಗಿ, ಜಿಂಕೆಯನ್ನು ತಂದುಕೊಡೆಂದು ರಾಮನನ್ನು ಬೇಡಿದಳು. ಪ್ರಿಯಾಭೀಪ್ಸಿತವನ್ನು ಪೂರೈಸಲು ಶ್ರೀರಾಮನು ಲಕ್ಷ್ಮಣನನ್ನು ಅಲ್ಲಿ ನಿಲ್ಲಿಸಿ, ಜಿಂಕೆಯನ್ನು ಬೆನ್ನಟ್ಟಿಪೋದನು. ಬಹು ದೂರ ತನ್ನನ್ನು ಸೆಳೆದೊಯ್ದ ಜಿಂಕೆಯ ಮೋಸವನ್ನರಿತು, ರಾಮನು ಅದನ್ನು ಬಾಣದಿಂದ ಹೊಡೆದು ಕೊಂದನು. ಸಾಯುವಾಗ ಮಾರೀಚನು 'ಹಾ ! ಸೀತೆ ! ಹಾ ! ಲಕ್ಷ್ಮಣ!' ಎಂದು ಕೂಗಿ, ಸತ್ತನು. ದೇಹವು ಸತ್ತರೆ ದುಷ್ಟಸ್ವಭಾವವು ಸಾಯುವುದೇ ? ದುಷ್ಟರು ಮರಣ ಕಾಲದಲ್ಲಿಯೂ ವೈರವನ್ನು ಮರೆಯರು. ಆರ್ತರಾವವನ್ನು ಕೇಳಿದ ಸೀತೆಯು ಭೀತ ಳಾಗಿ, 'ಲಕ್ಷ್ಮಣ ಬೇಗ ಹೋಗು ! ರಾಮನಿಗೆ ವಿಪತ್ತೊದಗಿದಂತಿದೆ. ಅವನನ್ನು ಕಾಪಾಡು !' ಎಂದಳು. ಲಕ್ಷ್ಮಣನು ನಕ್ಕು 'ತಾಯೇ! ರಾಮನನ್ನು ಕೆಣಕಿ ಬದುಕುವ ವೀರರಿಲ್ಲ. ಬರುವನೀಗ ಶ್ರೀರಾಮ ! ಭಯಪಡಬೇಡ !' ಎಂದು ನುಡಿದನು. ಸೀತೆಯು ಲಕ್ಷ್ಮಣನನ್ನು ಅಪಾರ್ಥಮಾಡಿಕೊಂಡು, 'ದುರ್ಮಾರ್ಗ! ನಿನ್ನ ಕೌಟಿಲ್ಯವೆನಗೆ ತಿಳಿದುಬಂತು. ರಾಮನು ಮೃತನಾದರೆ ನನ್ನ ಕೈಪಿಡಿಯಲೆಣಿ ಸಿರುವೆಯಲ್ಲವೇ ? ಗಿರಿಶೃಂಗದಿಂದ ಉರುಳುವೆನು; ಅಗ್ನಿಯಲ್ಲಿ ಬೀಳುವೆನು ; ಅಥವಾ ಶಸ್ತ್ರದಿಂದ ತಿವಿದುಕೊಂಡು ಸಾಯುವೆನಾಗಲಿ ನಿನ್ನನ್ನು ನಾನು ಸೇರುವೆನೆಂದು ಭ್ರಮಿಸಬೇಡ ! ಹೋಗಿಲ್ಲಿಂದ !' ಎಂದು ಬಿರುನುಡಿಗಳನ್ನಾಡಿದಳು. ಸೀತೆಯ ವಾಗ್ಬಾಣಗಳಿಂದ ನೊಂದ ಲಕ್ಷ್ಮಣನು ತನ್ನ ಕಿವಿಗಳನ್ನು ಮುಚ್ಚಿಕೊಂಡು, 'ರಾಮ ರಾಮ !' ಎಂದುಚ್ಚರಿಸಿ, ಧನುರ್ಬಾಣಗಳನ್ನು ಧರಿಸಿ, ಶ್ರೀರಾಮನನ್ನನುಸರಿಸಿ ಹೋದನು.

ಈ ಸಮಯವನ್ನರಿತು ರಾವಣನು ಸನ್ಯಾಸಿರೂಪದಿಂದ ಪರ್ಣಶಾಲೆಯನ್ನು ಸಮೀಪಿಸಿದನು. ಸೀತೆಯು ಧರ್ಮವನ್ನರಿತವಳಾದುದರಿಂದ ಅವನನ್ನು ಫಲ ಮೂಲಾದಿಗಳಿಂದ ಸತ್ಕರಿಸಿದಳು. ರಾವಣನು ಫಲಾದಿಗಳನ್ನು ಕಾಲಿಂದೊದೆದು, ನಿಜಘೋರರೂಪವನ್ನು ಧರಿಸಿ ಸೀತೆಗಿಂತೆಂದನು—"ವೈದೇಹಿ ! ನಾನು ರಾಕ್ಷಸರಾಜ ನಾದ ರಾವಣನು. ನನ್ನ ವೀರ್ಯ ಶೌರ್ಯ ಗಾಂಭೀರ್ಯಾದಿಗಳನ್ನು ಕೇಳದವರಿಲ್ಲ. ಲಂಕಾಧಿಪತಿಯಾದ ನನ್ನ ಐಶ್ವರ್ಯಕ್ಕೆ ಮಿತಿಯಿಲ್ಲ. ನನ್ನನ್ನು ವರಿಸು ! ವನವಾಸ ಕ್ಲಿಷ್ಟನಾದ ರಾಮನನ್ನು ತ್ಯಜಿಸು!" ಹೀಗೆಂದ ರಾಕ್ಷಸನನ್ನು ನೋಡಿ, ಸೀತೆ 'ಮೂರ್ಖ ! ಆಕಾಶವು ಕಳಚಿಬಿದ್ದರೂ ಪೃಥಿವೀತಲವು ಚೂರಾದರೂ, ಅಗ್ನಿಯು ತಣ್ಣಗಾದರೂ ಆದೀತು ; ನಾನು ರಾಘವನನ್ನು ಬಿಡಲಾರೆನು. ಭದ್ರಗಜದಿಂದ ಕೂಡಿ ಪದ್ಮವನದಲ್ಲಿ ವಿಹರಿಸುವ ಕರಿಣಿಯು ಹಂದಿಯೊಡನೆ ತಿರುಗುವುದೇ ?' ಎಂದು ನಿಂದಿಸಿದಳು. ರಾವಣನು ಕೋಪಚಲದ್ಗಾತ್ರನಾಗಿ ಬಲಾತ್ಕಾರದಿಂದ ಭೂಪುತ್ರಿ ಯನ್ನೆತ್ತಿ ರಥದಲ್ಲಿಟ್ಟು, ಆಕಾಶಮಾರ್ಗದಿಂದ ಹೋಗುತ್ತಿದ್ದನು. ಸೀತೆಯು 'ಹಾ ರಾಮ ! ರಾಮ !' ಎಂದು ರೋದಿಸುವ ಧ್ವನಿಯನ್ನಾಲಿಸಿ, ಜಟಾಯುನೆಂಬ ಗೃಧ್ರರಾಜನು, ಕಡುಕೋಪದಿಂದ ಬಂದು ರಾವಣನನ್ನು ತಡೆದು ಹೊಡೆದಾಡಿದನು.

ರಾವಣನ ರಥವು ನುಚ್ಚುನೂರಾಯಿತು. ಅವನ ಧನುರ್ಬಾಣಗಳು ಪುಡಿಯಾದವು. ಕೊಕ್ಕುಪುಕ್ಕಗಳಿಂದ ಬಡಿವ ಜಟಾಯುವನ್ನು ರಾವಣನು ಕತ್ತಿಯನ್ನೆತ್ತಿ ಹೊಡೆದು ಕೆಡಹಿದನು. ಸೀತೆಯನ್ನು ಭುಜದಲ್ಲಿ ಧರಿಸಿ, ರಾವಣನು ಆಕಾಶಮಾರ್ಗದಲ್ಲಿ ಹೋಗುತ್ತಿರುವಾಗ, ಸೀತೆಯು ಋಷ್ಯಮೂಕ ಪರ್ವತಾಗ್ರಭಾಗದಲ್ಲಿ ಕೂತಿದ್ದ ವಾನರ ರನ್ನು ಕಂಡು, ತನ್ನ ಆಭರಣಗಳನ್ನು ಕಳಚಿ, ಮೂಟೆಕಟ್ಟಿ ಕೆಳಗೆ ಹಾಕಿದಳು. ಹನುಮಂತನು ಆ ಗಂಟನ್ನು ತೆಗೆದಿಟ್ಟು ರಾವಣನನ್ನು ಶಿಕ್ಷಿಸಲೆಣಿಸಿ ಹಾರಲಿರುವಾಗ, ಸುಗ್ರೀವನು ಅವನನ್ನು ತಡೆದು ನಿಲ್ಲಿಸಿದನು. ಹನುಮಂತನು ಅವನ ಮಾತನ್ನು ಮನ್ನಿಸಿ ಶ್ರೀರಾಮನಿಗಾಗಿ ಕಾಯುತ್ತಿದ್ದನು. ರಾವಣನು ಲಂಕೆಯನ್ನು ಸೇರಿ ಸೀತೆ ಯನ್ನು ಅಶೋಕವನದಲ್ಲಿಟ್ಟು, ರಾಕ್ಷಸೀಗಣವನ್ನು ಕಾವಲಿರಿಸಿ, ಸೀತೆಯು ತನ್ನನ್ನು ವರಿಸುವ ಕಾಲವನ್ನು ಪ್ರತೀಕ್ಷಿಸುತ್ತಿದ್ದನು.

ಶ್ರೀರಾಮನು ಮಾರೀಚನನ್ನು ಕೊಂದು ಹಿಂದಿರುಗಿ ಬರುತ್ತಾ ಲಕ್ಷ್ಮಣನನ್ನು ನೋಡಿ, ಆಶ್ಚರ್ಯಭಯಾನ್ವಿತನಾಗಿ 'ಲಕ್ಷ್ಮಣ! ವೈದೇಹಿಯನ್ನೇಕೆ ಬಿಟ್ಟುಬಂದೆ? ವನವು ರಾಕ್ಷಸಾಕುಲವಾಗಿದೆ. ಜಿಂಕೆಯ ರೂಪದಿಂದ ಬಂದ ಮಾರೀಚನು ಸಾಯುತ್ತಾ ಕೂಗಿದ ಶಬ್ದದಿಂದ ಹೆದರಿಬಂದಂತಿದೆ. ವೈದೇಹಿಯು ಸುಕ್ಷೇಮವಾಗಿರುವಳೋ ಇಲ್ಲವೋ? ನಡೆ ಬೇಗ!' ಎಂದು ಪರಿತಪಿಸುತ್ತಾ ಆಶ್ರಮವನ್ನು ಹೊಕ್ಕನು. ಶೂನ್ಯವಾಗಿದ್ದ ಆಶ್ರಮವನ್ನು ಕಂಡು, ರಾಮಲಕ್ಷ್ಮಣರು ದಿಗಿಲುಗೊಂಡರು. ನದೀ ತೀರ ವನಪ್ರದೇಶಗಳಲ್ಲಿ ಸೀತೆಯನ್ನು ಕಾಣದೆ ಅವರು ದುಃಖಿತರಾದರು. ಸೀತಾ ನ್ವೇಷಣತತ್ಪರರಾಗಿ 'ಸೀತೇ!' ಎಂದು ಕೂಗುತ್ತಾ ಬರುವ ರಾಘವರಿಗೆ ಜಟಾಯುವು ಕಾಣಿಸಿದನು. 'ನಾನು ದಶರಥನ ಸ್ನೇಹಿತನು; ಜಟಾಯುವೆಂಬರು ನನ್ನನ್ನು! ಸೀತೆಯನ್ನಪಹರಿಸಿಕೊಂಡು ಹೋಗುತ್ತಿದ್ದ ರಾಕ್ಷಸನನ್ನು ಎದುರಿಸಿ, ಹೋರಾಡಿ ದೆನು. ಆ ದುಷ್ಟನು ನನ್ನನ್ನೀಗತಿಗೆ ತಂದು, ಸೀತೆಯೊಡನೆ ಹೋದನು' ಎಂದು ನುಡಿದು, ಮುಂದೆ ಮಾತಾಡಲಾರದೆ ತನ್ನ ತಲೆಯನ್ನು ದಕ್ಷಿಣಕ್ಕೆ ಹೊರಳಿಸಿ, ಮೃತನಾದನು. ಶ್ರೀರಾಮನು ತಂದೆಗೆ ಸಮಾನನಾದ ಜಟಾಯುವಿಗೆ ಲಕ್ಷ್ಮಣ ನಿಂದ ಸಂಸ್ಕಾರವನ್ನು ಮಾಡಿಸಿ, ಅವನಿಗೆ ಸ್ವರ್ಗತಿಯನ್ನಿತ್ತನು.

ದುಃಖಪರೀತನಾಗಿ ಕಣ್ಣೀರಿಡುತ್ತಾ, ವೃಕ್ಷಮೃಗಗಳನ್ನು ಸೀತಾವಾರ್ತೆಯನ್ನು ಕೇಳುತ್ತಾ, ದಿಕ್ಕೆಟ್ಟು ತಿರುಗುವ ರಾಮನನ್ನು ಸಮದುಃಖನಾದ ಲಕ್ಷ್ಮಣನು ಸಮಾ- ಶ್ವಸಿಸುತ್ತಿದ್ದನು. 'ಸೀತೆ!' ಎಂಬ ಶಬ್ದದಿಂದ ದಂಡಕಾರಣ್ಯವೇ ಪ್ರತಿಧ್ವನಿಸಿತು. ಜಿಂಕೆಗಳು ಕಣ್ಣೀರಿಟ್ಟವು. ರಾಮನ ಶೋಕದಿಂದ ವನ್ಯಮೃಗಗಳು ವ್ಯಾಕುಲಿತ ವಾದವು. ಆಗ ಕಬಂಧನೆಂಬ ರಾಕ್ಷಸನು ರಾಮಲಕ್ಷ್ಮಣರನ್ನು ಕೈಗಳಿಂದ ಹಿಡಿದು, ತಿನ್ನಲೆಣಿಸಿದನು. ರಾಮನು ಲಕ್ಷ್ಮಣನ ಭಯವನ್ನು ನಿವಾರಿಸಿ, ಅವನ ಬಲಗೈ ಯನ್ನು ಕಡಿಯುವಂತೆ ಹೇಳಿ, ತಾನು ರಾಕ್ಷಸನ ಎಡಗೈಯನ್ನು ಕಡಿದನು. ಲಕ್ಷ್ಮಣನು ಧೈರ್ಯತಾಳಿ, ಅವನ ಬಲಗೈಯನ್ನು ಖಡ್ಗದಿಂದ ಕಡಿದನು. ಕಬಂಧನ

ದೇಹವು ಕೆಳಗೆ ಬಿತ್ತು. ಅವನ ದೇಹದಿಂದ ದಿವ್ಯರೂಪಸಂಪನ್ನನಾದ ಪುರುಷ ನೋರ್ವನು ಬೆಳಗುತ್ತಾ ಹೊರಬಂದು, ಶ್ರೀರಾಮಲಕ್ಷ್ಮಣರಿಗೆ ನಮಿಸಿ—'ನಾನು ವಿಶ್ವಾವಸುವೆಂಬ ಗಂಧರ್ವನು. ವಿಪ್ರಶಾಪದಿಂದ ಈ ರೂಪ ಬಂದು, ದಂಡಕಾರಣ್ಯ ದಲ್ಲಿ ವಸಿಸುವ ನನ್ನನ್ನು ಶಾಪಮೋಕ್ಷವನ್ನು ನೀಡಿ, ಉದ್ಧರಿಸಿದಿರಿ ! ಧನ್ಯನಾದೆನು ! ಲಂಕಾಧಿಪನಾದ ರಾವಣನು ಸೀತೆಯನ್ನಪಹರಿಸಿರುವನು. ಪಂಪಾಸರಸ್ತೀರದಲ್ಲಿರುವ ಸುಗ್ರೀವನ ಸ್ನೇಹದಿಂದ ನಿಮ್ಮ ಕಾರ್ಯವಾಗುವುದು' ಎಂದು ಹೇಳಿ ದೇವಲೋಕ ವನ್ನು ಸೇರಪೋದನು.

ರಾಮಲಕ್ಷ್ಮಣರು ಪಂಪಾಸರಸ್ಸನ್ನು ನೋಡಿ, ಅದರ ತೀರದಲ್ಲಿ ಆಸೀನರಾಗಿದ್ದರು. ಸೀತಾ ವಿಯೋಗ ದುಃಖ ತಪ್ತನಾದ ರಾಮನನ್ನು, ಪಂಪಾಸರದ ಅರಳಿದ ಕಮಲಗಳ ಗಂಧವನ್ನು ಹೊತ್ತುತಂದ ತಂಗಾಳಿಯು ಸಮಾಧಾನಪಡಿಸಿತು. ಪಂಪಾ ಪವಿತ್ರ ಜಲಗಳಿಂದ ಪಿತೃ ದೇವ ತರ್ಪಣವನ್ನಿತ್ತು, ರಾಮಲಕ್ಷ್ಮಣರು ಋಷ್ಯಮೂಕ ಪರ್ವತದ ಸಮೀಪದಲ್ಲಿ ಪಂಚವಾನರೋತ್ತಮರನ್ನು ಕಂಡರು. ಸುಗ್ರೀವನು ಬುದ್ಧಿ ವಂತನಾದ ಹನುಮಂತನನ್ನು ಕಳಿಸಿ, ಅವರನ್ನು ತಿಳಿಯಲೆಣಿಸಿದನು. ಅಂಜನಾ ಸುತನು ಕಂಜಲೋಚನನಿಗೆ ನಮಿಸಿ, ಸುಗ್ರೀವನ ವೃತ್ತಾಂತವನ್ನವನಿಗೆ ತಿಳಿಸಿ, ಅವರೀರ್ವರನ್ನು ಕರೆತಂದನು ಸಮಾನ ದುಃಖರಾಗಿದ್ದ ಸುಗ್ರೀವ–ರಾಘವರಿಗೆ ಅಗ್ನಿಸಾಕ್ಷಿಕವಾಗಿ ಸಖ್ಯವಾಯಿತು. ಸೀತೆಯನ್ನು ಹುಡುಕಿ ಅವಳ ವಾರ್ತೆಯನ್ನು ತಂದುಕೊಡುವೆನೆಂದ ವಾನರರಾಜನಿಗೆ ರಾಮನು ವಾಲಿಯನ್ನು ಕೊಂದು, ಕಿಷ್ಕಿಂಧಾ ರಾಜ್ಯವನ್ನೀಯುವೆನೆಂದು ಪ್ರತಿಜ್ಞೆ ಮಾಡಿದನು.

ಸುಗ್ರೀವನು ಕಿಷ್ಕಿಂಧೆಯನ್ನು ಸೇರಿ, ವಾಲಿಯನ್ನು ಯುದ್ಧಕ್ಕೆಂದು ಕರೆದನು. ಅವನ ಸಿಂಹಗರ್ಜನವನ್ನು ಕೇಳಿ ವಾಲಿಯು ಸಹಿಸದೆ, ಯುದ್ಧಸನ್ನದ್ಧನಾಗಿ ಹೊರಡುವಾಗ, ತಾರೆ ಅವನನ್ನು ತಡೆದು, ನಾಥ! ಸುಗ್ರೀವನ ಗರ್ಜನವನ್ನು ಕೇಳಿದರೆ ಹೆದರಿಕೆಯಾಗುತ್ತಿದೆ. ಅವನು ಪ್ರಬಲ ಮಿತ್ರಾಶ್ರಯವನ್ನು ಪಡೆದು ಬಂದಿರುವಂತಿದೆ. ರಾಮನು ಹೃತದಾರನಾಗಿ, ಸುಗ್ರೀವನೊಡನೆ ಸ್ನೇಹಬೆಳೆಸಿರುವ ನಂತೆ. ಅವನು ಮಹಾವೀರನಾಗಿರುವನು. ಇಕ್ಷ್ವಾಕುಕುಲಭೂಷಣನಾದ ರಾಮನನ್ನು ಸಾಕ್ಷಾದ್ವಿಷ್ಣುವೆಂಬುವರು. ಅವನ ತಮ್ಮನಾದ ಲಕ್ಷ್ಮಣನು ಕೂಡ ಅತುಲ ಬಲವೀರ್ಯಮಹಿತನಾಗಿರುವನು. ಅವರ ಸಹಾಯವನ್ನು ಪಡೆದು ಬಂದಿರುವ ಸುಗ್ರೀವನು ದುರ್ಧರ್ಷನಾಗಿರುವನು. ಅವನೊಡನೆ ಯುದ್ಧಮಾಡಲು ಹೋಗ ಬೇಡ !' ಎಂದು ಉಪದೇಶಿಸಿದಳು. ಅವಳ ಮಾತನ್ನು ಲೆಕ್ಕಿಸದೆ ವಾಲಿಯು ಸುಗ್ರೀವನನ್ನೆದುರಿಸಿ ಹೋರಾಡಿದನು. ಸಾಲ ತಾಲ ಶಿಲೆಗಳಿಂದ ಬಡಿದಾಡಿ, ಕೊನೆಗೆ ಮುಷ್ಟಿಯುದ್ಧಕ್ಕಿಳಿದರು. ನಖ ದಂತ ಪರಿಕ್ಷತಾಂಗರಾಗಿ, ನೆಲದಲ್ಲಿ ಹೊರಳಾಡಿ, ಕಾದುವ ಸೋದರರನ್ನು ಬೇರ್ಪಡಿಸಿ, ತಿಳಿಯಲಾರದೆ ವಾನರರು ದಿಗ್ಭ್ರಾಂತರಾಗಿ ನೋಡುತ್ತಿದ್ದರು. ಸೋತುಬಂದ ಸುಗ್ರೀವನ ಕೊರಳಲ್ಲಿ ಪೂಮಾಲೆಯನ್ನು ಹಾಕಿ,

ಹನುಮಂತನು ಅವನನ್ನು ಹುರಿದುಂಬಿಸಿ, ಮತ್ತೆ ಯುದ್ಧಮಾಡಲು ಕಳಿಸಿದನು. ಸುಗ್ರೀವನು ವಾಲಿಯನ್ನು ಸಂಹರಿಸುವಂತೆ ಪ್ರಾರ್ಥಿಸಿ, ಶ್ರೀರಾಮನ ಆಶ್ವಾಸನ ವನ್ನು ಪಡೆದು, ವಾಲಿಯೊಡನೆ ಕಾದಿದನು. ಆಗ ರಾಮನು ವಾಲಿಯನ್ನು ಬಾಣ ದಿಂದ ಹೊಡೆದು ಕೆಡಹಿದನು.

ವಾಲಿಯು ರಾಮನನ್ನು ನಿಂದಿಸಲು, ಶ್ರೀರಾಮನು 'ವಾನರರಾಜ ! ಕೇಳು. ಅಗ್ನಿಸಾಕ್ಷಿಕವಾದ ಮೈತ್ರಿಯನ್ನು ರಾವಣನಿಂದ ಪಡೆದಿರುವುದರಿಂದ ನೀನು ಶತ್ರು-ಮಿತ್ರನೆನಿಸಿ, ನನಗೆ ಶತ್ರುವಾದೆ. ಅಂತೆಯೇ ನನಗೆ ಮಿತ್ರನಾದ ಸುಗ್ರೀವನ ಶತ್ರು ವೆನಿಸಿ, ನನಗೂ ಶತ್ರುವಾದೆ. ಸುಗ್ರೀವಭಾರ್ಯೆಯಾದ ರುಮೆಯನ್ನು ಅಪಹರಿಸಿರು ವುದರಿಂದ ವಧ್ಯನಾದೆ. ಇಂದ್ರನಾಗಿ ರಾವಣಸಂಹಾರವನ್ನು ಬೇಡಿದ ನೀನು ವಾಲಿ ಯಾಗಿ ರಾವಣನೊಡನೆ ಆಮರಣಾಂತಸ್ನೇಹವನ್ನು ಮಾಡಿ ನನಗೆ ದ್ರೋಹವನ್ನೆಸ ಗಿದೆ. ರಾವಣಾಪಹೃತ ಧನ ರಾಜ್ಯ ತರುಣಿಯರಲ್ಲಿ, ಸಮಭಾಗವನ್ನು ಬೇಡಿ ಪಡೆದ ನೀನೂ ರಾವಣನಂತೆಯೇ ಶಿಕ್ಷಾರ್ಹನಾಗಿರುವೆ. ನಿನ್ನಂತಹ ಪಾತಕಿಯ ಸ್ನೇಹವನ್ನು ಪಡೆದು, ನನ್ನ ಸತಿಯನ್ನು ನೀ ತಂದುಕೊಡಲು ಸ್ವೀಕರಿಸುವ ಹೇಡಿಯಲ್ಲ ನಾನು. ನಿನ್ನನ್ನು ಶಿಕ್ಷಿಸಿದಂತೆ, ರಾವಣನನ್ನೂ ಕೊಂದು, ನನ್ನ ಸೀತೆಯನ್ನು ನಾನೇ ಪಡೆಯ ಬಲ್ಲೆನು. ನಿನಗೆ ನೀನು ಮಾಡಿದ ತಪ್ಪಿನ ಅರಿವಾಗಿದ್ದರೆ ಹೇಳು ! ನಿನ್ನನ್ನು ಬದುಕಿಸಬಲ್ಲೆನು' ಎಂದುತ್ತರಪಿತ್ತನು. ವಾಲಿಯು ಪಶ್ಚಾತ್ತಾಪದಿಂದ ನೊಂದು, ಆಮರಣಾಂತವಾದ ರಾವಣಸ್ನೇಹದಿಂದ ಹೆದರಿ, ಬದುಕಲೊಲ್ಲದೆ, ಶ್ರೀರಾಮನ ಚರಣವನ್ನು ಮುಟ್ಟಿ, ಹರಿಸ್ಮರಣಯುಕ್ತನಾಗಿ ಪರಲೋಕವನ್ನೈದಿದನು.

ಸುಗ್ರೀವನಿಗೆ ಪಟ್ಟಗಟ್ಟಿ ಶ್ರೀರಾಮನು ಮಾಲ್ಯವತ್ಪರ್ವತದಲ್ಲಿ ವಸಿಸುತ್ತಾ, ವರ್ಷಾಕಾಲವನ್ನು ಕಳೆದನು. ಶರತ್ಕಾಲಾರಂಭದಲ್ಲಿ ಶ್ರೀರಾಮನು ಲಕ್ಷ್ಮಣನನ್ನು ನೋಡಿ, 'ವತ್ಸ ! ಶರತ್ಕಾಲವು ಬಂತು, ಆದರೂ ಸುಗ್ರೀವನು ತನ್ನ ಮಾತಿನಂತೆ ಸೀತೆಯನ್ನು ಹುಡುಕುವ ಪ್ರಯತ್ನವನ್ನು ಮಾಡುವಂತೆ ಕಾಣದು. ರಾಜ್ಯಭೋಗ ಮತ್ತನಾಗಿ, ಅವನು ನಮ್ಮನ್ನು ಮರೆತಂತಿದೆ. ಕಿಷ್ಕಿಂಧೆಗೆ ಹೋಗಿ ಅವನನ್ನೆಚ್ಚರಿಸು' ಎಂದು ಅವನನ್ನು ಕಳಿಸಿದನು. ಲಕ್ಷ್ಮಣನು ಕ್ರೋಧಾವಿಲನಾಗಿ ಸುಗ್ರೀವಾಂತಃಪುರ ವನ್ನು ಸೇರಿ, ವಾನರರಾಜನಿಗಿಂತೆಂದನು—'ಸುಗ್ರೀವ ! ಕಾಣದೆ ಕಂಡ ರಾಜ್ಯಸುಖ ದಿಂದ ಮತ್ತನಾಗಿರುವೆಂತಿದೆ. ಶರತ್ಕಾಲವು ಬಂದರೂ ಸೀತಾದೇವಿಯನ್ನು ಹುಡುಕಿ, ರಾಮನಿಗೆ ಸೇವೆಸಲ್ಲಿಸುವ ಕೃತಜ್ಞತೆ ನಿನಗೆ ಬರಲಿಲ್ಲ. ವಾಲಿಯು ಹೋದ ಮಾರ್ಗವು ಮುಚ್ಚಿಹೋಗಿಲ್ಲ. ಅವನನ್ನು ಕೊಂದ ರಾಮಬಾಣವು ಜಾಗೃತವಾಗಿದೆ.' ಆ ಮಾತನ್ನಾಲಿಸಿ, ಸುಗ್ರೀವನು ಗಡಗಡ ನಡುಗಿದನು. ತಾರೆಯು ಸಮಾಧಾನ ಪಡಿಸಲು ಲಕ್ಷ್ಮಣನು ಶಾಂತನಾದನು. ಸುಗ್ರೀವನು ಲಕ್ಷ್ಮಣನ ಪದಗಳಿಗೆರಗಿ, ವಾನರರನ್ನು ಕರೆತರಲು ದೂತರನ್ನು ಕಳಿಸಿರುವುದಾಗಿ ತಿಳಿಸಿದನು.

ಲಕ್ಷ್ಮಣನು ಸುಗ್ರೀವನೊಡನೆ ರಾಮನನ್ನು ಸೇರಿದನು. ಸುಗ್ರೀವನು ರಾಮನನ್ನು ಸಂತೈಸುತ್ತಿರಲು ವಾನರಯೂಥಗಳು ನಾಲ್ಕುನಿಟ್ಟಿನಿಂದ ಬಂದವು. ಸುಗ್ರೀವನು ವಾನರರನ್ನು ಚತುಃಸಮುದ್ರಮುದ್ರಿತವಾದ ಧರಾವಲಯವನ್ನು ಸುತ್ತಿ, ಸೀತಾದೇವಿಯನ್ನು ಹುಡುಕಿಬರುವಂತೆ ಆಜ್ಞಾಪಿಸಿ, ಒಂದು ತಿಂಗಳಲ್ಲಿ ತಿರುಗಿ ಬರುವಂತೆ ಕಟ್ಟಪ್ಪಣೆ ಮಾಡಿದನು. ದಕ್ಷಿಣದಿಕ್ಕಿಗೆ ಹೋಗಿದ್ದ ಅಂಗದ, ಜಾಂಬವಂತ, ಹನುಮಂತಾದಿ ವಾನರರನ್ನುಳಿದು ಮಿಕ್ಕ ಮೂರು ದಿಕ್ಕಿನಿಂದ ವಾನರರು ಸೀತೆಯನ್ನು ಕಾಣಲಾರದೆ ಹಿಂದಿರುಗಿಬಂದರು. ಕಾಕುತ್ಸ್ಥನು ಹನುಮದಾದಿ ವಾನರರು ಸೀತಾ ವಾರ್ತೆಯನ್ನು ತರುವರೆಂದು ನಂಬಿ, ಸೀತಾಸ್ಮರಣೆಯಲ್ಲಿಯೇ ಕಾಲಕಳೆಯುತ್ತಿದ್ದನು.

ಅಂಗದಪ್ರಮುಖ ವಾನರರು ವಿಂಧ್ಯಾದ್ರಿಯ ದಕ್ಷಿಣದೇಶವನ್ನು ಹುಡುಕುತ್ತಾ, ಒಂದು ಗುಹೆಯನ್ನು ಸೇರಿದರು. ಆ ಗುಹೆಯಲ್ಲಿ ಅವರು ಸ್ವಯಂಪ್ರಭೆಯನ್ನು ಕಂಡು ಅವಳ ಅಪ್ಪಣೆ ಪಡೆದು, ಒಳಗಿದ್ದ ದಿವ್ಯೋದ್ಯಾನದ ಫಲಜಲಗಳಿಂದ ತೃಪ್ತರಾದರು. ಮೇರುಸಾವರ್ಣಿ ಮಹಿತೆಯೂ, ಮಯಪತ್ನಿ ಹೇಮಾಸಖಿಯೂ ಆದ ಸ್ವಯಂಪ್ರಭೆಯ ಸಹಾಯದಿಂದ ಗುಹೆಯಿಂದ ಹೊರಬಂದು, ಸಮುದ್ರತೀರದ ವರೆವಿಗೂ ಸಂಚರಿಸಿದರು. ನಿರ್ವಿಣ್ಣರಾದ ವಾನರರು ಪ್ರಾಯೋಪವೇಶವನ್ನು ಮಾಡಿ, ರಾಮವೃತ್ತಾಂತವನ್ನು ಕೀರ್ತಿಸುತ್ತಾ ಮಲಗಿದ್ದರು. ಅವರನ್ನು ತಿನ್ನಬೇಕೆಂದು ಕಾದಿದ್ದ ಸಂಪಾತಿ ಎಂಬ ಹದ್ದು, ಅವರು ಜಟಾಯುವನ್ನು ರಾವಣನು ಕೊಂದು ಸೀತೆಯನ್ನು ಅಪಹರಿಸಿಕೊಂಡು ಹೋದನೆಂದು ಕೀರ್ತಿಸುವಾಗ ಕೇಳಿ, ಅವರನ್ನು ಸಮೀಪಿಸಿ ಜಟಾಯುವಿನ ವೃತ್ತಾಂತವನ್ನು ಸಂಪೂರ್ಣವಾಗಿ ಕೇಳಿತು. ತಮ್ಮನಾದ ಜಟಾಯುವಿಗಾಗಿ ಶೋಕಿಸಿ, ದೈವಾನುಗ್ರಹದಿಂದ ಮತ್ತೆ ಬೆಳೆದು ಬಂದ ರೆಕ್ಕೆಗಳ ಸಹಾಯದಿಂದ ಪರ್ವತಾಗ್ರವನ್ನೇರಿ ಸಂಪಾತಿಯು "ವಾನರರೇ ಚಿಂತಿಸಬೇಡಿ! ಒಂದುನೂರು ಯೋಜನದಾಚೆಗೆ ಲಂಕೆ ಇದೆ. ಅಲ್ಲಿ ರಾವಣನ ಅಶೋಕವನವಿದೆ. ಅಲ್ಲಿ ಶಿಂಶಪಾವೃಕ್ಷದ ಬುಡದಲ್ಲಿ ಸೀತಾದೇವಿಯು ನನಗೆ ಕಾಣಿಸುತ್ತಿರುವಳು. ಹುಡುಕಿಕೊಂಡು ಹೋಗಿ! ರಾಮಕಾರ್ಯವು ಜಯಪ್ರದವಾಗುವುದು" ಎಂದು ಹೇಳಿ ಹಾರಿಹೋಯಿತು.

ವಾನರರು ಧೈರ್ಯದಿಂದ ಮೇಲೆದ್ದು, ಸಭೆಗೂಡಿದರು. ಯಾರು ಎಷ್ಟೆಷ್ಟು ಹಾರಲು ಸಮರ್ಥರೆಂದು ವಿಚಾರಿಸುತ್ತಿರಲು, ಜಾಂಬವಂತನು ಹನುಮಂತನೊಬ್ಬನೇ ನೂರುಯೋಜನದ ಸಮುದ್ರವನ್ನು ದಾಟಬಲ್ಲನು; ಈ ಕಾರ್ಯವು ಇತರರಿಂದ ಆಗದೆಂದರಿತೇ ಸರ್ವಜ್ಞನಾದ ರಾಮಚಂದ್ರನು ಹನುಮಂತನಿಗೆ ಮುದ್ರಿಕೆಯನ್ನಿತ್ತಿರುವನು' ಎಂದು ನುಡಿದನು. ಆಗ ವಾನರರು ಹನುಮಂತನನ್ನು ಪ್ರಶಂಸಿಸಿ, ಸಕಲ ವಾನರರನ್ನು ರಾಮ-ಸುಗ್ರೀವರ ಕೋಪದಿಂದ ಉಳಿಸೆಂದು ಪ್ರಾರ್ಥಿಸಿದರು. ಹನುಮಂತನು ಶ್ರೀರಾಮಕಾರ್ಯಧುರಂಧರನಾಗಿ ಸಮುದ್ರವನ್ನು ದಾಟಿದನು.

ಶ್ರೀಶಾದಿದೇವತೆಗಳಿಗೆ ವಂದಿಸಿ, ಮಾರುತಾತ್ಮಜನು ಮಹೇಂದ್ರಗಿರಿಯ ಶಿಖರದಿಂದ ಹಾರಿದ ವೇಗವನ್ನು ತಡೆಯಲಾರದೆ ಆ ಗಿರಿಯು ಪಾತಾಳಕ್ಕಿಳಿದು, ನೆಲಸಮ ವಾಯಿತು. ಮಧ್ಯೇಮಾರ್ಗದಲ್ಲಿ ಮೈನಾಕಪರ್ವತರಾಜನ ಆತಿಥ್ಯವನ್ನು ವಚಸಾ ಸ್ವೀಕರಿಸಿ, ಪರೀಕ್ಷೆಮಾಡಲು ಬಂದ ಸುರಸೆಯ ವದನದಲ್ಲಿ ಸೂಕ್ಷ್ಮರೂಪನಾಗಿ ಹೊಕ್ಕು ಹೊರಬಂದು, ಹನುಮಂತನು ಛಾಯಾಗ್ರಾಹಿಯಾದ ಸಿಂಹಿಕೆಯನ್ನು ಸಂಹರಿಸಿ, ಸಾಯಂಕಾಲವಾಗುತ್ತಿರಲು ಲಂಕೆಯನ್ನು ಮುಟ್ಟಿದನು.

ಲಂಕಿಣಿಯನ್ನು ನಿರ್ಜಿಸಿ ಹನುಮಂತನು ಲಂಕಾನಗರವನ್ನು ಪ್ರವೇಶಿಸಿದನು. ಬೆಕ್ಕಿನಷ್ಟು ಸಣ್ಣ ರೂಪದಿಂದ ರಾಕ್ಷಸರಿಗೆ ಗೊತ್ತಾಗದಂತೆ ಅವರ ಪ್ರಾಸಾದೋದ್ಯಾನ ಗಳನ್ನು ಹುಡುಕಿದನು. ರಾವಣನ ಪಾನಶಾಲೆಯಲ್ಲಿ ಪ್ರವೇಶಿಸಿ, ಅಲ್ಲಿಯೂ ಸೀತೆ ಯನ್ನು ಕಾಣದೆ ಚಿಂತಾಕ್ರಾಂತನಾದನು. ರಾವಣವರಸ್ತ್ರೀಗಣವು ವಿಶ್ವಸ್ತವಾಗಿ ಮಲಗಿತ್ತು. ಪರದಾರಾವಲೋಕನದಿಂದ ವಿಕಾರವನ್ನು ಹೊಂದದೆ, ನಿರ್ಮಲಚಿತ್ತ ನಾದ ಮಾರುತಿಯು ನಕ್ಷತ್ರಮಧ್ಯದಲ್ಲಿ ಚಂದ್ರನಂತೆ ಪ್ರಕಾಶಿಸುವ ರಾವಣನನ್ನು ಕಂಡನು. ಅವನ ರೂಪವೈಭವ ಪ್ರತಾಪಗಳನ್ನು ಕಂಡು ಆಶ್ಚರ್ಯಭರಿತನಾದ ಹನುಮಂತನು ಅಲ್ಲಿಂದ ತೆರಳಿ, ಅಶೋಕವನವನ್ನು ಸೇರಿದನು. ಅಲ್ಲಿ ಶಿಂಶಪಾ ವೃಕ್ಷದಡಿಯಲ್ಲಿ ರಾಕ್ಷಸೀಮಧ್ಯದಲ್ಲಿ ದೇವವನಿತೆಯಂತೆ ವಿರಾಜಿಸುವ ವೈದೇಹಿ ಯನ್ನು ನೋಡಿ, ಚಿಂತೆಯಿಂದ ಅವಶನಾಗಿ, ಹನುಮಂತನು ಅದೇ ವೃಕ್ಷದ ಎಲೆ ಗಳ ಮಧ್ಯದಿ ಅಡಗಿಕೂತನು.

ರಾಕ್ಷಸೀಪರಿವೃತಳಾಗಿ ಸೀತೆಯು ಸ್ವಗಣ ದೂರವಾಗಿ ಶ್ವಗಣಾವೃತವಾದ ಮೃಗಿಯಂತೆ ಚಿಂತಿಸುತ್ತಿದ್ದಳು. ರಾಮಧ್ಯಾನಪರಾಯಣೆಯಾದ ಸೀತೆಯನ್ನು ರಾವಣನು ನೋಡಲು ಬಂದನು. ದಿವ್ಯಾಂಬರಧರನು, ಸುಮೃಷ್ಟಮಣಿಕುಂಡಲನು, ವಿಚಿತ್ರಮಾಲ್ಯಮುಕುಟಾಲಂಕೃತನು ಆಗಿದ್ದೂ ರಾವಣನು ಸ್ಮಶಾನಚೈತ್ಯಪ್ರತಿಮ ನಾಗಿ ಭಯಂಕರನೆನಿಸಿದನು. ರೋಹಿಣಿಯನ್ನು ಪೀಡಿಸುವ ಅಂಗಾರಕನಂತೆ ಅವನು ಸೀತೆಯನ್ನು ಸಮೀಪಿಸಿದನು. ಸೀತೆಯು ಕುಂಚಿತಗಾತ್ರಳಾಗಿ, ತಲೆತಗ್ಗಿಸಿ ಕೂತಿ ದ್ದಳು. ರಜನೀಚರನು ಅವಳನ್ನು ನೋಡಿ, ಕಾಮಾರ್ತನಾಗಿ ಇಂತೆಂದನು.—'ಸೀತೆ! ಸಾಕಿನ್ನು ನಿನ್ನ ಪತಿಭಕ್ತಿ; ಸಾಕೀವನವಾಸಕ್ಲೇಶ! ನನ್ನನ್ನು ವರಿಸು! ಅಂತಃಪುರ ಗಳಲ್ಲಿ ನನ್ನ ಪಟ್ಟದ ರಾಣಿಯಾಗಿ ಮೆಸಿಸು! ಗಂಧರ್ವ ದೇವ ನಾರಿಯರಿಂದ ಸೇವೆ ಸ್ವೀಕರಿಸು. ವಿಶ್ರವಸುವಿನ ಮಗನಾದ ನನ್ನನ್ನು ತಿರಸ್ಕರಿಸಬೇಡ! ಭಕ್ಷ್ಯಭೋಜ್ಯ ಗಳನ್ನನುಭವಿಸಿ, ಸುಮುಗಂಧಮನೋಹರವಾದ ನನ್ನ ದಿವ್ಯೋದ್ಯಾನಗಳಲ್ಲಿ ನನ್ನೊಡನೆ ವಿಹರಿಸು! ವನವಾಸಕ್ಲಿಷ್ಟನಾದ ರಾಮನು ಜೀವಿಸಿರುವನೋ ಇಲ್ಲವೋ? ಅವನ ಚಿಂತೆ ಬಿಡು!'

ಸೀತೆಯು ರಾವಣವಚನದಿಂದ ಶೋಕಕೋಪಪರೀತಳಾದಳು. ಆಕೆ ತೃಣ ವನ್ನು ಮಧ್ಯದಲ್ಲಿಟ್ಟು, ತೃಣದಂತೆ ರಾವಣನನ್ನು ನಿರ್ಲಕ್ಷಿಸಿ, ನಿರ್ಲಜ್ಜನಾದ ರಾವಣ

ನನ್ನ ನಿರ್ಭೀಕಳಾಗಿ ನೋಡಿ, ತಲೆ ಎತ್ತದೆ, ಇಂತು ನುಡಿದಳು—ರಾಕ್ಷಸಾಧಮ! ಇಂತಹ ದುರ್ವಚನಗಳನ್ನು ವಿಶ್ರವಸುಪುತ್ರನು ಆಡಬಾರದು. ಪತಿವ್ರತೆಯಾದ ಯಾವ ತರುಣಿಯೂ ಕೇಳಬಾರದು. ನನ್ನ ದೌರ್ಭಾಗ್ಯದಿಂದ ನಿನ್ನ ಕೆಡುನುಡಿಗಳನ್ನು ಆಲಿಸುತ್ತಿರುವೆನು. ಪರದಾರಾರತಿಯು ಪ್ರಾಣಾಂತಕರವಾಗಿದೆ. ಪತಿವ್ರತಾಪಚಾರವು ಕುಲನಾಶಕವಾಗಿದೆ. ಮನುಜಕಾಂತೆಯನ್ನು ರಾಕ್ಷಸನು ಬೇಡಬಾರದು. ಬ್ರಹ್ಮ ವಂಶಜನಾದ ನಿನಗೆ ಅಧರ್ಮವು ಸಲ್ಲದು. ಅಣ್ಣನಾದ ಕುಬೇರನು ಧರ್ಮದಿಂದ ನಡೆದು ಸರ್ವಸಂಪದ್ಭರಿತನು, ಮಹಾದೇವ ಸ್ನೇಹಿತನು ಆಗಿರುವನು. ಅವನ ತಮ್ಮ ನಾದರೂ ನಾಚಿಕೆಯಿಲ್ಲದೆ ನೀನು ಅಧರ್ಮದಿಂದ ವರ್ತಿಸಿ, ಕೆಡಲಿರುವೆ. ಶ್ರೀರಾಮನ ಚರಣಾರವಿಂದ ಸೇವಾ ಸೌಭಾಗ್ಯವನ್ನು ಕಂಡ ನಾನು, ಅನ್ಯ ಪುರುಷನನ್ನು ಕಾಲ ಬೆರಳಿನಿಂದಲೂ ಮುಟ್ಟಲಾರೆನು. ರಾಮಲಕ್ಷ್ಮಣರು ಪರ್ಣಶಾಲೆಯಲ್ಲಿಲ್ಲದ ವೇಳೆ ಯಲ್ಲಿ ಮೋಸದ ಸನ್ಯಾಸಿಯಾಗಿ ಬಂದು ನನ್ನನ್ನು ಕದ್ದು ತಂದ ಅಪರಾಧಕ್ಕೆ ಶಿಕ್ಷೆ ಕಾದಿದೆ. ಸಿಂಹದ್ವಯವನ್ನು ಕೆಣಕಿದ ನರಿಯಂತೆ ರಾಮಲಕ್ಷ್ಮಣರನ್ನೆದುರಿಸಿ, ನೀನು ಬದುಕಲಾರೆ. ಪಾಪಿಯಾದ ನಿನ್ನಿಂದ ಸರ್ವಲಂಕಾನಿವಾಸಿಗಳು ನಾಶವಾಗುವ ಕಾಲ ಬಂದಿದೆ. ಶ್ರೀರಾಮನ ಅಪ್ಪಣೆ ಇಲ್ಲವಾದುದರಿಂದ ನೀನು ಬದುಕಿರುವೆ. ಇಲ್ಲದಿರೆ ನಿನ್ನನ್ನು ನೋಟದಿಂದಲೇ ಸುಟ್ಟು, ನಾಶಮಾಡಿಬಿಡುತ್ತಿದ್ದೆನು.

ಸೀತೆಯ ಮಾತಿಗೆ ಕಿಡಿಕಿಡಿಯಾಗಿ ರಾವಣನು 'ಸೀತೆ! ಎರಡು ತಿಂಗಳು ಅವಧಿಯನ್ನಿತ್ತಿರುವೆನು. ಅಷ್ಟರಲ್ಲಿ ನಿನ್ನ ಮನವನ್ನು ಬದಲಿಸಿ, ರಾಮನ ಚಿಂತೆ ಬಿಟ್ಟು, ನನ್ನ ಶಯನವನ್ನು ಅಧಿರೋಹಿಸು! ಇಲ್ಲದಿದ್ದರೆ ನನ್ನ ಪಾಚಕರು ನಿನ್ನನ್ನು ನನ್ನ ಪ್ರಾತರಾಹಾರಕ್ಕೆಂದು ಕೊಂದುಬಿಡುವರು, ತಿಳಿ' ಎಂದು ತರ್ಜಿಸಿ ಮಂಡೋದರಿಯಿಂದ ಸಮಾಧೀತನಾಗಿ, ತನ್ನ ಪ್ರಾಸಾದವನ್ನು ಕುರಿತು ಹೊರಟು ಹೋದನು.

ರಾಕ್ಷಸಿಯರು ಸೀತೆಯನ್ನು ನೋಡಿ 'ಸೀತೆ! ರಾಮನನ್ನು ಬಿಡು! ರಾವಣ ನನ್ನು ಕೂಡು! ಇಲ್ಲದಿರೆ ನಿನ್ನನ್ನು ಕೊಂದುಬಿಡುವೆವು ನೋಡು' ಎಂದು ಹೆದರಿಸುತ್ತಿದ್ದರು. ಮಧ್ಯರಾತ್ರಿಯಾಯಿತು. ರಾಕ್ಷಸಿಯರೆಲ್ಲರು ಮಲಗಿ ನಿದ್ದೆಮಾಡುತ್ತಿದ್ದರು. ಸೀತೆ ರಾಮನ ವಿರಹದಿಂದಲು, ರಾವಣನ ದುಷ್ಟವಚನ ಶ್ರವಣದಿಂದಲು ನೊಂದು, ಚಿಂತಿಸುತ್ತಾ, ನಿದ್ದೆ ಬಾರದೆ ಆತ್ಮಹತ್ಯೆಯನ್ನಾದರೂ ಮಾಡಿಕೊಂಡು, ಇನ್ನೊಂದು ಜನುಮದಲ್ಲಾದರೂ ರಾಮನ ಪಾದಾರವಿಂದವನ್ನು ಕಾಣುವೆನೆಂದು ನಿಶ್ಚಯಿಸಿ, ಸೆರಗನ್ನು ಪಿಡಿದೆದ್ದುನಿಂತಳು.

ಆಗ ಮಲಗಿದ್ದ ರಾಕ್ಷಸೀಗಣ ಮಧ್ಯದಿಂದ ತ್ರಿಜಟೆ ಎಂಬವಳೆದ್ದು, ಎಲ್ಲ ರಾಕ್ಷಸಿಯರನ್ನು ಎಚ್ಚರಗೊಳಿಸಿ, ಅವರಿಗೆ ತಾನು ಕಂಡ ಸ್ವಪ್ನವನ್ನು ತಿಳಿಸುತ್ತಿಂತೆಂದಳು— 'ಸಖಿಯರೇ, ಕೇಳಿ! ಲಂಕೆಗೆ ಮಹಾಭಯವು ಪ್ರಾಪ್ತವಾಗಿದೆ. ರಾಕ್ಷಸರು ಸರ್ವರೂ ನಷ್ಟರಾಗುವರು. ಶ್ರೀರಾಮನಿಗೆ ಜಯವಾಗುವುದು. ಇಂತು ಸೂಚಿಸುವ ಸ್ವಪ್ನ

ವನ್ನು ಕಂಡೆನು. ಶ್ರೀರಾಮನು ಬಿಳಿಯ ಆನೆಯನ್ನೇರಿ, ಧವಳವಸ್ತ್ರಭೂಷಣಾದಿ ಗಳಿಂದೊಪ್ಪುತ್ತಾ, ಉತ್ತರಕ್ಕೆ ತೆರಳಿದನು. ಲಕ್ಷ್ಮಣ ಸುಗ್ರೀವ ಹನುಮದ್ವಿಭೀಷಣರು ಕೂಡ ಧವಲ ದುಕೂಲಗಳನ್ನುಟ್ಟು, ರಾಮನನ್ನು ಹಿಂಬಾಲಿಸುತ್ತಿದ್ದರು. ರಾವಣನು ತಲೆಬೋಳಿಸಿಕೊಂಡು, ಎಣ್ಣೆಯನ್ನು ಹಚ್ಚಿ, ಕರಿಬಟ್ಟೆಯನ್ನುಟ್ಟು, ಕತ್ತೆಯನ್ನೇರಿ, ದಕ್ಷಿಣದಿಕ್ಕಿಗೆ ಹೊರಟದ್ದನು. ಅವನ ಹಿಂದೆ, ಒಂಟೆಯನ್ನೇರಿ ಇಂದ್ರಜಿತು, ಮಹಿಷವನ್ನೇರಿ ಕುಂಭಕರ್ಣನು ಹೋಗುತ್ತಿದ್ದರು. ರಾಕ್ಷಸರಿಗೆ ವಿನಾಶವು, ರಾಮ ನಿಗೆ ವಿಜಯವು, ತಪ್ಪದು. ಸೀತೆಯನ್ನು ತರ್ಜಿಸಬೇಡಿ ! ಶರಣಾಗತರಾಗಿ, ಕ್ಷಮಿಸಲು ಬೇಡಿ ! ಉಳಿದುಕೊಳ್ಳಿ !' ಎಂದು ಹೇಳಿದ ತ್ರಿಜಟೆಯ ಮಾತನ್ನಾಲಿಸಿ, ಸೀತಾದೇವಿಯ ವದನಾಂಬುಜವು ಪ್ರಫುಲ್ಲವಾಯಿತು. ಮತ್ತೆ ರಾಕ್ಷಸಿಯರು ಮಲಗಿದರು.

ಆಗ ಹನುಮಂತನು ಗಿಡದಿಂದ ಕೆಳಗಿಳಿದು ಬಂದು, ಮಧುರ ವಚನಗಳಿಂದ ಶ್ರೀರಾಮಕಥೆಯನ್ನು ಪೇಳತೊಡಗಿದನು. ಸೀತೆಗೆ ಆನಂದವಾಯಿತು. 'ಅಂಬ ! ರಾಮನ ದೂತನು ನಾನು ; ನನ್ನನ್ನು ಹನುಮಂತನೆಂಬರು. ಸುಗ್ರೀವನು ರಾಮ-ಸ್ನೇಹದಿಂದ ವಾಲಿಯನ್ನು ಜಯಿಸಿ, ಕಿಷ್ಕಿಂಧಾಧಿಪತಿಯಾಗಿರುವನು. ಅವನು ನಮ್ಮ ರಾಜನು. ಅವನ ಆಜ್ಞೆಯಂತೆ ನಿನ್ನನ್ನು ಹುಡುಕಲು ಕೋಟಿ ವಾನರರು ಹೊರಟಿ ರುವರು. ಅದೃಷ್ಟದಿಂದ ನಾನು ನಿನ್ನನ್ನು ಕಂಡೆನು. ಸೀತಮ್ಮ ! ಶ್ರೀರಾಮನು ಕುಶಲಿಯು; ಲಕ್ಷ್ಮಣನೂ ಕುಶಲಿಯು. ಶ್ರೀರಾಮನ ಸಖನಾದ ಸುಗ್ರೀವನು, ಅವನ ವಾನರರೆಲ್ಲರೂ ಕ್ಷೇಮದಿಂದಿರುವರು. ನಿನ್ನ ಕ್ಷೇಮವನ್ನು ತಿಳಿದು ನಾನು ರಾಮನಿಗೆ ಅದನ್ನು ತಿಳಿಸಿ, ಚಾತಕಪಕ್ಷಿಯನ್ನು ಮೇಘಪುಷ್ಪದಂತೆ ಸಂತೋಷಪಡಿಸುವೆನು. ಶ್ರೀರಾಮ ಲಕ್ಷ್ಮಣರು ಸುಗ್ರೀವಾದಿ ವಾನರಕೋಟಿಯಿಂದ ಕೂಡಿ, ಬೇಗನೆ ಬರು ವರು. ಅವರ ಬಾಣಾಗ್ನಿಯಿಂದ ಲಂಕಾನಗರವು ಭಸ್ಮವಾಗುವುದು. ರಾವಣಾದಿ ರಾಕ್ಷಸರು ನಿರ್ಮೂಲರಾಗುವರು. ನಿನಗೆ ದುಃಖಾಂತಕಾಲವು ಬಂದಿದೆ. ಶ್ರೀರಾಮ ನಿತ್ತ ಮುದ್ರಿಕೆಯನ್ನು ಸ್ವೀಕರಿಸಿ, ಆ ಪ್ರಭುವಿಗೆ ನೀನೀವ ಪ್ರತ್ಯಭಿಜ್ಞಾವನ್ನು ನೀಡು ಅಂಬ ! ಈ ಕ್ಷಣದಲ್ಲಿ ನಿನ್ನನ್ನು ವಹಿಸಿ, ಸಮುದ್ರವನ್ನು ದಾಟಿ, ಶ್ರೀರಾಮಚರಣ ದಲ್ಲಿ ನಿಲ್ಲಿಸುವೆನು. ಬರುವೆಯಾ ? ಎಂದು ಕೇಳಿದನು.

ಸೀತೆಯು 'ಹನುಮನ್ ! ನೀನು ಸಮರ್ಥನೆಂದು ನಾನು ಬಲ್ಲೆನು. ಆದರೆ ರಾವಣನು ಮಾಯಾಮೃಗದ ನೆವದಿಂದ ಸೀತೆಯನ್ನು ಕದ್ದರೆ, ರಾಮನು ಶಾಖಾ-ಮೃಗದ ಸಹಾಯದಿಂದ ರಾವಣನನ್ನು ಮೋಸಪಡಿಸಿ, ಸೀತೆಯನ್ನು ಕದ್ದನು—ಎಂಬ ಅಪಕೀರ್ತಿಯು ನನ್ನ ಸ್ವಾಮಿಗೆ ಬರದಿರಲಿ ! ನಾನಾಗಿ ಪರಪುರುಷರನ್ನು ಸ್ಪೃಶಿಸ ಲಾರೆನು. ಶ್ರೀರಾಮನು ವಾನರಸೈನ್ಯಸಮೇತನಾಗಿ ಬಂದು, ರಾವಣಾದಿ ದುಷ್ಟ-ದಾನವರನ್ನು ಕೊಂದು, ನನ್ನನ್ನು ಕರೆದುಕೊಂಡು ಹೋದರೆ, ಆಗ ಶ್ರೀರಾಮನಿಗೆ ಅದು ಕೀರ್ತಿಕರವಾಗುವುದು. ಒಂದು ಕಾಗೆಯು ನನ್ನನ್ನು ಪೀಡಿಸಿದಾಗ ಬ್ರಹ್ಮಾಸ್ತ್ರ

ವನ್ನು ಬಿಟ್ಟು ಅದನ್ನು ದಂಡಿಸಿದ ಕೋದಂಡರಾಮನಿಗೆ ರಾವಣನಮೇಲೆ ಕ್ಷಮೆ ಉಚಿತವಲ್ಲವೆಂದು ಹೇಳು ! ತಿಂಗಳು ಮಾತ್ರ ಜೀವಿಸಿರುವೆನು. ಬೇಗ ಕರೆದುಕೊಂಡು ಬಂದು, ನನ್ನ ದುಃಖವನ್ನು ಕಳೆ !' ಎಂದು ಹೇಳಿದಳು. ಹನುಮಂತನು ಸೀತಾ ಮಾತೆಗೆ ವಂದಿಸಿ, ಅವಳಿತ್ತ ಚೂಡಾಮಣಿಯನ್ನು ಭದ್ರವಾಗಿಟ್ಟುಕೊಂಡು, ಅಲ್ಲಿಂದ ತೆರಳಿ ಅಶೋಕವನವನ್ನು ಸೇರಿದನು.

ದ್ವಾದಶಿಯ ಪಾರಣೆಗೆಂದು ಫಲಗಳನ್ನು ಕಿತ್ತ ಹನುಮಂತನಿಂದ ವನವೆಲ್ಲ ಹಾಳಾಯಿತು. ವನರಕ್ಷಕರು ಮೇಲೇರಿ ಬರಲು ಪರಿಘಪಾಣಿಯಾಗಿ ಪವಮಾನ ನಂದನನು ಅವರನ್ನು ಸಂಹರಿಸಿದನು. ಮಂತ್ರಿಪುತ್ರರೂ ಅಕ್ಷಯಕುಮಾರ ಮೊದಲಾ ದವರೂ ಸತ್ತರು. ಆಗ ಇಂದ್ರಜಿತ್ತು ಬಂದು, ಹನುಮಂತನನ್ನು ಬ್ರಹ್ಮಾಸ್ತ್ರದಿಂದ ಬಂಧಿಸಿದನು. ಮಾರುತಿಯು ಬ್ರಹ್ಮನಿಗೆ ಗೌರವವನ್ನೀಯಲು ಬದ್ಧನಾದಂತಿದ್ದು, ರಾಕ್ಷಸರ ಹಿಂದೆ ರಾವಣನ ಸಭೆಯನ್ನು ಸೇರಿದನು. ಶ್ರೀರಾಮಸಂದೇಶವನ್ನು ಅವನಿಗೆ ತಿಳಿಸುತ್ತಿಂತೆಂದನು—

'ರಾಕ್ಷಸೇಶ ! ಕಪೀಶನಾದ ಸುಗ್ರೀವನ ಮಂತ್ರಿಯು ನಾನು. ಅವನ ದೂತ ನಾಗಿ ಬಂದಿರುವೆನು. ಶ್ರೀರಾಮನು ಸುಗ್ರೀವನಿಗೆ ಸಖನಾಗಿ, ವಾಲಿಯನ್ನು ಕೊಂದು ಸುಗ್ರೀವನಿಗೆ ಕಪಿರಾಜ್ಯವನ್ನಿತ್ತಿರುವನು. ಅವನ ಪತ್ನಿಯನ್ನು ಹುಡುಕಲು ಪ್ರತಿಜ್ಞೆ ಗೈದು ಸುಗ್ರೀವನು ವಾನರಸಹಸ್ರವನ್ನು ನಾಲ್ಕು ದಿಕ್ಕಿಗೂ ಕಳಿಸಿದನು. ದಕ್ಷಿಣ ದಿಕ್ಕಿಗೆ ಬಂದ ಅಂಗದಾದಿ ವಾನರರ ಕೋರಿಕೆಯಂತೆ, ನಾನು ಶತಯೋಜನ ಸಮುದ್ರ ವನ್ನು ದಾಟಿ, ನಿನ್ನ ಲಂಕೆಯನ್ನು ಸೇರಿದೆನು. ಅಶೋಕವನದಲ್ಲಿ ಶೋಕವೇ ಮೂರ್ತೀಭವಿಸಿದಂತಿರುವ ಸೀತಾದೇವಿಯನ್ನು ಕಂಡೆನು. ಲೋಕಜನನಿಯಾದ ಸೀತೆಯ ದ್ರೋಹವನ್ನೆಸಗಿ ಕೆಡಬೇಡ ! ಆಕೆಯು ಸರ್ವಲಂಕಾವಿನಾಶಿನಿಯಾದ ದುರ್ಗೆ ಎಂದು ತಿಳಿ. ದುರ್ಗಾರಮಣನಾದ ಶ್ರೀವಿಷ್ಣುವೇ ರಾಮನಾಗಿ ನಿನ್ನನ್ನೂ, ನಿನ್ನಂತಹ ದುರ್ಮಾರ್ಗರನ್ನೂ ಸಂಹರಿಸಲು ಅವತರಿಸಿರುವನು. ರಾಮಲಕ್ಷ್ಮಣರನ್ನು ಮೋಸಗೊಳಿಸಿ, ಸೀತೆಯನ್ನಪಹರಿಸಿದ ನಿನ್ನ ಕುಕೃತ್ಯದ ಫಲವನ್ನು ಉಣ್ಣುವ ಕಾಲ ಬಂದಿದೆ. ನಿನ್ನನ್ನು ನಾಲ್ಕು ಸಮುದ್ರಗಳಲ್ಲಿ ಅದ್ದಿತೆಗೆದ ವಾಲಿಯನ್ನು ಒಂದೇ ಬಾಣದಿಂದ ಕೊಂದವನು ಶ್ರೀರಾಮ ; ನಿನ್ನನ್ನು ಹೆಡೆಮುಡಿ ಕಟ್ಟಿ, ಸೆರೆಯಲ್ಲಿಟ್ಟ ಕಾರ್ತವೀರ್ಯಾರ್ಜುನನ ಕೈಗಳನ್ನು ಕಡಿದ ಕೊಡಲಿಯನ್ನು ಹಿಡಿದ ಪರಶುರಾಮ ನನ್ನು ಮೆಚ್ಚಿಸಿದ ವಿಷ್ಣುಧನುರ್ಧರನು ಶ್ರೀರಾಮ ; ನಿನ್ನ ಮನೆದೇವರಾದ ಮಹಾದೇವನು ತನ್ನ ಸತಿಗೆ ಉಪದೇಶಿಸುವ ತಾರಕಮಂತ್ರದೇವ ಶ್ರೀರಾಮ ; ಅಂತಹ ರಾಮನನ್ನು ಎದುರಿಸಿ ಕೆಡಬೇಡ ! ಸೀತೆಯನ್ನು ತಂದು ಶ್ರೀರಾಮನಿ ಗೊಪ್ಪಿಸಿ, ತಪ್ಪಾಯಿತೆಂದು ಬೇಡು ! ಕರುಣಾವರುಣಾಲಯನಾದ ರಾಮನು ನಿನ್ನನ್ನು ಕ್ಷಮಿಸುವನು. ಅವನು ನರನು ; ಸುಗ್ರೀವಾದಿಗಳು ವಾನರರು ; ನರವಾನರರಿಂದ ಸಾವು ಬೇಡ ಎಂದು ನೀನು ವರವನ್ನು ಬೇಡಿಲ್ಲ. ಶ್ರೀರಾಮನ

ಕೋಪಾಗ್ನಿಗೆ ತುತ್ತಾಗಲಿರುವವನನ್ನು ಬ್ರಹ್ಮ ರುದ್ರೇಂದ್ರಾದಿಗಳೂ ಕೂಡ ಕಾಪಾಡಲಾರರು. ನನ್ನ ಹಿತದ ನುಡಿಯಂತೆ ನಡೆ !'

ಹನುಮಂತನ ಮಾತಿನಿಂದ ಕುಪಿತನಾದ ರಾವಣನು ಅವನನ್ನು ಕೊಲ್ಲಿರೆಂದು ಆಜ್ಞಾಪಿಸಿದನು. ವಿಭೀಷಣನವನನ್ನು ತಡೆದು 'ದೂತವಧೆ ವಿಗರ್ಹಿತ' ಎಂದು ನುಡಿಯಲು, ವಾನರನ ಬಾಲವನ್ನು ಸುಟ್ಟು ಕಳಿಸುವಂತೆ ರಾವಣನು ಕಟ್ಟಪ್ಪಣೆ ಯಿತ್ತನು. ರಾಕ್ಷಸರು ಹನುಮಂತನ ಬಾಲಕ್ಕೆ ಬಟ್ಟೆಗಳನ್ನು ಸುತ್ತಿ, ಎಣ್ಣೆ ಹುಯಿದು, ಬೆಂಕಿಯಿಟ್ಟರು. ಶ್ರೀರಾಮದೂತನನ್ನು ವಹ್ನಿಯು ಸುಡದೆ, ಸೀತಾದೇವಿಯ ಪ್ರಾರ್ಥನೆಯಂತೆ ಶಾಂತನಾಗಿದ್ದನು. ಇಂತು ತನಗೆ ಉಪಕರಿಸಿದ ಅಗ್ನಿದೇವನಿಗೆ ತಕ್ಕ ಸತ್ಕೃತಿ ಎಂಬಂತೆ, ಹನುಮಂತನು ರಾಕ್ಷಸ ಗೃಹಗಳನ್ನು ಭಯಂಕರ ವಹ್ನಿ ಜ್ವಾಲೆಗೆ ಆಹುತಿಯಾಗಿಸಿ, ತನ್ನ ಬಾಲವನ್ನು ಸಮುದ್ರದಲ್ಲಿ ಆರಿಸಿ, ಪುನಃ ಸೀತೆಯನ್ನು ಕಂಡು ಸಮಾಧಾನಪಡಿಸಿ, ಸಮುದ್ರವನ್ನು ದಾಟಿ, ವಾನರರಿಂದೊಡ ಗೂಡಿ, ಶ್ರೀರಾಮನಲ್ಲಿಗೆ ಬಂದು ಸೇರಿದನು.

'ಕಂಡೆನು ಸೀತೆಯನ್ನು' ಎಂದರುಹಿ, ಸಿಂದ ವಾಯುನಂದನನನ್ನು ಆನಂದ ದಿಂದ ಬಿಗಿದಪ್ಪಿ ರಘುನಂದನನು ಸೀತೆಯ ವೃತ್ತಾಂತವನ್ನೆಲ್ಲ ಕೇಳಿ ತಿಳಿದನು. ಹನುಮಂತನು ಚೂಡಾಮಣಿಯನ್ನು ರಾಮನಿಗರ್ಪಿಸಿ, 'ಕಾಕಾಸುರನ ಕಥೆಯನ್ನು ಹೇಳಿ, ತಿಂಗಳು ಮಾತ್ರ ಜೀವಿಸಿರುವೆನೆಂದಳು ಸೀತಾಮಾತೆ' ಎಂದನು. ಶ್ರೀರಾಮನು—'ಹನುಮನ್ ! ಏನೆಂದೆ ? ತಿಂಗಳು ಜೀವಿಸಿರುವಳಾ ಎನ್ನ ಸೀತೆ ? ಕ್ಷಣವಾದರೂ ಆಕೆಯನ್ನಗಲಿ, ನಾನು ಜೀವಿಸಿರಲಾರೆನಲ್ಲ ! ಈಗ ನನ್ನ ಪ್ರಿಯೆಯಿದ್ದೆ ಡೆಗೆ ನನ್ನನ್ನು ಸೇರಿಸು !' ಎಂದು ವಿರಹತಪ್ತನಾಗಿ ಗೋಳಾಡಿದನು. ಲಕ್ಷ್ಮಣ ಸುಗ್ರೀವಾದಿ ಪರಮಾಪ್ತರು, ಪರಮಾತ್ಮನನ್ನು ಸಾಂತ್ವನವಾಕ್ಯಗಳಿಂದ ಸ್ವಸ್ಥನನ್ನಾ ಗಿಸಿದರು. ಕೇವಲ ಲೀಲೆಗಾಗಿ ನರರಂತೆ ನಡೆಯುವ ನಾರಾಯಣನ ಲೋಕ ವಿಡಂಬನೆಗೆ ನಮೋ ನಮಃ.

## ಶ್ರೀ ರಾಮಾಯಣ—(೨)

ಮಾರ್ಕಂಡೇಯನು ಧರ್ಮರಾಜನಿಗೆ ಹೇಳಿದನು—

ರಾಜನ್ ! ಆಗ ಸುಗ್ರೀವನ ವಚನದಂತೆ ಶ್ರೀರಾಮನು ಕಪಿಸೈನ್ಯ ಸಮೇತ ನಾಗಿ ಲಂಕೆಗೆ ದಂಡಯಾತ್ರೆ ಹೊರಟನು. ಸುಷೇಣ, ಶತಬಲಿ, ಮೈಂದ, ದ್ವಿವಿದ, ಪನಸ, ಗಂಧಮಾದನ, ದಧಿಮುಖ, ಜಾಂಬವಾನ್ ಮೊದಲಾದ ಸಿಂಹವಿಕ್ರಮ ವಾನರವೀರರು, ಕೋಟಿಗಟ್ಟಲೆ ವಾನರ, ಋಕ್ಷ, ಗೋಲಾಂಗೂಲ ಭಟರಿಂದ ಕೂಡಿ ರಾಮನನ್ನನುಸರಿಸಿದರು. ಸುಗ್ರೀವ, ಹನುಮಂತ, ಅಂಗದ, ಜಾಂಬವಂತರು ಶ್ರೀರಾಮಲಕ್ಷ್ಮಣರಿಗೆ ಅಂಗರಕ್ಷಕರಾಗಿ ಬರುತ್ತಿದ್ದರು. ವಾನರಸೈನ್ಯಸಾಗರವು ಉಕ್ಕೇರಿಬರುವ ದಕ್ಷಿಣಸಾಗರವನ್ನು ಮುಟ್ಟಿತು. ಸೈನ್ಯದ ಸಿಂಹನಾದ ಭೇರೀಪಟಹ

ಭಾಂಕಾರಗಳು ಸಮುದ್ರದ ಭೀಷಣ ತರಂಗಗಳ ತುಮುಲನಾದವನ್ನಡಗಿಸಿದವು. ಮಾರ್ಗಶಿರ ಬಹುಳ ಸಪ್ತಮಿಯಂದು ಅಭಿಜಿನ್ಮುಹೂರ್ತದಲ್ಲಿ ಕಿಷ್ಕಿಂಧೆಯನ್ನು ಬಿಟ್ಟು, ಶ್ರೀರಾಮನು ಪುಷ್ಯ ಶುಕ್ಲ ಪಾಡ್ಯದಿನ ಸಮುದ್ರತೀರವನ್ನು ಮುಟ್ಟಿದನು. ತದಿಗೆಯವರೆವಿಗೂ ಸ್ಕಂಧಾವಾರವು ಅಲ್ಲೇ ಬೀಡುಬಿಟ್ಟಿತ್ತು. ಸೈನ್ಯದ ಮುಖದಲ್ಲಿ ಹನುಮಂತನು, ಹಿಂದುಗಡೆ ಲಕ್ಷ್ಮಣನು ನೆಲಸಿ, ಸ್ಕಂಧಾವಾರರಕ್ಷಕರಾಗಿದ್ದರು.

ಕೆಲವರು ನೌಕೆಗಳಿಂದ ಸಮುದ್ರವನ್ನು ದಾಟಬೇಕೆಂದರು ; ಕೆಲವರು ಹಾರಿ-ಹೋಗಬೇಕೆಂದರು. ಶ್ರೀರಾಮನು ಸಮುದ್ರರಾಜನನ್ನು ತಪದಿಂದ ಮೆಚ್ಚಿಸಿ, ನೀರನ್ನು ಹಿಂಗಿಸಿ, ಸೇತುವನ್ನು ನಿರ್ಮಾಣಮಾಡಬೇಕೆಂದು ನಿಶ್ಚಯಿಸಿದನು. ಚೌತಿಯದಿನ ವಿಭೀಷಣನು ರಾವಣನನ್ನು ಪರಿತ್ಯಜಿಸಿ, ಶ್ರೀರಾಮನಿಗೆ ಶರಣಾಗತನಾಗಿ ಬಂದನು. ಸಕೃತ್ ಪ್ರಸನ್ನನಾದ ಭಕ್ತನಿಗೆ ಅಭಯವನ್ನೀವೆನೆಂದು ದೀಕ್ಷಿತನಾದ ರಾಮನು, ಸುಗ್ರೀವಾದಿಗಳು ಬೇಡವೆಂದರೂ ಕೇಳದೆ ಹನುಮಂತನ ವಚನದಂತೆ ಅವನಿಗೆ ಅಭಯವನ್ನಿತ್ತು ಸ್ವೀಕರಿಸಿದನು. ಲಕ್ಷ್ಮಣನಿಂದ ಸಮುದ್ರೋದಕವನ್ನು ತರಿಸಿ, ವಿಭೀಷಣನಿಗೆ ಅಭಿಷೇಕವನ್ನು ಮಾಡಿ, ಲಂಕಾರಾಜನಾಗೆಂದು ಹರಸಿದನು. ವಿಭೀಷಣನು ತನ್ನ ಮಂತ್ರಿವರರಿಂದ ಕೂಡಿ, ಶ್ರೀರಾಮನ ಸೇವೆಗಾಗಿ ದೀಕ್ಷಿತ ನಾದನು.

ಶ್ರೀರಾಮನು ಪಂಚಮಿಯ ದಿನ ದರ್ಭಶಯನದಲ್ಲಿ ಮಲಗಿ, ಸಾಗರೋಲ್ಲಂಘನ ಕ್ರಮವನ್ನು ಸಾಧಿಸಲು, ವರುಣನನ್ನು ಪೂಜಿಸಿದನು. ನವಮಿಯವರೆಗೂ ಕಾದರೂ ಪ್ರಸನ್ನನಾಗದ ಸಾಗರನ ಗರ್ವವನ್ನು ಮುರಿಯಲೆಣಿಸಿ, ಶ್ರೀರಾಮನು ಕೋದಂಡ ಪಾಣಿಯಾಗಿ ಚಂಡಬಾಣವನ್ನು ಹೂಡಿ ನಿಂತಾಗ, ವರುಣನು ಭೀತನಾದನು. ಸಪರಿವಾರನಾಗಿ ಸಮುದ್ರರಾಜನು ರಾಮನಿಗೆ ಕಾಣಿಸಿಕೊಂಡು, ನವರತ್ನಗಳಿಂದ ರಘುವರಚರಣಗಳನ್ನು ಪೂಜಿಸಿ, 'ಶ್ರೀರಾಮ! ಪ್ರಸನ್ನನಾಗು ! ನನ್ನ ಆಲಸ್ಯವನ್ನು ಕ್ಷಮಿಸು ! ಕಟ್ಟು ಸೇತುವೆಯನ್ನು ! ಲಂಕೆಯನ್ನು ಸೇರು ! ವಿಶ್ರವಸನ ಅಪಮೋಹ ದಂತಿರುವ ದುಷ್ಟ ರಾವಣನನ್ನು ಸಂಹರಿಸು ! ಲೋಕಮಾತೆಯಾದ ಸೀತೆಯನ್ನು ಪುನರ್ವರಿಸು ! ನಲನೆಂಬ ವಾನರನು ವಿಶ್ವಕರ್ಮತನಯನು. ಅವನಿಂದ ಸೇತುವೆ ಯನ್ನು ಕಟ್ಟಿಸು ! ಅವನು ಶಿಲೆಯನ್ನಾಗಲಿ, ಕಾಷ್ಠವನ್ನಾಗಲಿ, ತೃಣವನ್ನಾಗಲಿ ಸಮುದ್ರದಲ್ಲಿ ಹಾಕಿದರೆ, ಮುಣುಗದಂತೆ ನಾನದನ್ನು ಧರಿಸಿ, ನಿನಗೆ ಸಹಾಯ ಮಾಡುವೆನು. ಲೋಕಪಿತ ! ಶ್ರೀರಾಮ ! ನಿನ್ನ ಭಕ್ತನಾದೆನ್ನನ್ನು ಕರುಣಿಸಿ ನೋಡು !' ಎಂದು ವಿಜ್ಞಾಪಿಸಿ, ಅಂತರ್ಹಿತನಾದನು.

ಶ್ರೀರಾಮಕೃಪೆಯಿಂದ ನಲನು ದಶಮಿಯ ದಿನ ಸೇತುವನ್ನು ನಿರ್ಮಿಸಿದನು. ಪುಷ್ಯಶುದ್ಧಪೂರ್ಣಿಮೆಗೆ ಸೇತುವು ನಿರ್ಮಿತವಾಗಿ, ವಾನರಸೈನ್ಯವೆಲ್ಲವೂ ಲಂಕೆಯನ್ನು ಪ್ರವೇಶಿಸಿತು. ಶ್ರೀರಾಮನು ಸಕಲಸೇನಾಪತಿಗಳೊಡನೆ ತ್ರಿಕೂಟಪರ್ವತದ ಬುಡದಲ್ಲಿ ಬಿಡಾರಹೂಡಿದನು. ರಾಮನ ಸೈನ್ಯವನ್ನು ಗಣಿಸಿ ತಿಳಿಯಲು ಬಂದ ಗೂಢಚಾರ

ರಾಕ್ಷಸರನ್ನು ವಿಭೀಷಣನು ಪಿಡಿದು, ರಾಮನಿಗೊಪ್ಪಿಸಿದನು. ವಾನರರಂತೆ ವೇಷ ವನ್ನು ಧರಿಸಿದ್ದ ಶುಕಸಾರಣರೆಂಬ ರಾವಣ ದೂತರನ್ನು ವಿರೂಪಗೊಳಿಸಿ, ಜೀವದಿಂದ ಉಳಿಸಿ, ಸುಗ್ರೀವನು ವಾಲಿಪುತ್ರನಾದ ಅಂಗದನನ್ನು ರಾಯಭಾರಕ್ಕೆಂದು ಲಂಕೆಗೆ ಕಳಿಸಿದನು.

ಪ್ರಾಕಾರಪರಿಖಾಸಮಾವೃತವು, ಶಿಲಾಯಂತ್ರ, ಸರ್ಪ, ವಿಷಾದಿ ರಕ್ಷಣೋ ಪಾಯ ಸಹಿತವು, ರಾಕ್ಷಸಕೋಟಿ ರಕ್ಷಿತವು ಆದ ಲಂಕಾನಗರವನ್ನು ವಿಕ್ರಮದಿಂದ ಪ್ರವೇಶಿಸಿ, ಅಂಗದನು ರಾವಣನ ಸಭೆಯನ್ನು ಹೊಕ್ಕನು. ರಾಕ್ಷಸವೀರರ ಮಧ್ಯ ದಲ್ಲಿ ವಿರಾಜಿಸುವ ರಾವಣನನ್ನು ಕಂಡು, 'ರಾಕ್ಷಸರಾಜ! ರಾಘವನ ದೂತನಾಗಿ ಬಂದಿರುವೆನು. ವಾಲಿಪುತ್ರನಾದ ನನ್ನನ್ನು ಅಂಗದನೆಂಬುವರು. ತಿಳಿ! ಅನ್ಯಾಯ ರತನಾದ ರಾಜನಿಂದ ದೇಶ ನಗರಗಳೂ, ನಿರಪರಾಧಿ ಪ್ರಜರೂ ಹಾಳಾಗುವರು. ಪರಸ್ತ್ರೀವಿಷಕ್ತಮತ್ತಚಿತ್ತನಾದ ನಿನ್ನಿಂದ ಲಂಕಾನಗರವೇ ಅಲ್ಲದೆ ನಿನ್ನ ಪ್ರಜರೂ ರಾಮಬಾಣಾಗ್ನಿಗಾಹುತಿಯಾಗಿ ಕೆಡಲಿರುವರು. ಬಲದರ್ಪಿತನಾಗಿ ಋಷಿಗಳನ್ನು, ದೇವತೆಗಳನ್ನು ಹಿಂಸಿಸಿದ ಪಾಪವು ಫಲೋನ್ಮುಖವಾಗಿದೆ. ಸೀತೆಯನ್ನು ಶ್ರೀರಾಮ ನಿಗೆ ಸಮರ್ಪಿಸಿ, ನಿನ್ನನ್ನು ಉಳಿಸಿಕೋ! ಪ್ರಜರನ್ನೂ ಉಳಿಸು!' ಎಂದು ನುಡಿದನು.

ಅಂಗದನ ವಚನದಿಂದ ರಾವಣನು ಕ್ರೋಧಮೂರ್ಛಿತನಾದನು. ಅವನ ಕಣ್ಣುಸನ್ನೆಯನ್ನರಿತು, ನಾಲ್ವರು ರಾಕ್ಷಸರು ಅಂಗದನನ್ನು ಪಿಡಿದು ಬಂಧಿಸಲೆಣಿಸಿದರು. ಅಂಗದನು ಅವರನ್ನೆತ್ತಿಕೊಂಡು ಆಕಾಶಕ್ಕೆ ಹಾರಿ ಅಲ್ಲಿಂದ ಅವರನ್ನು ನೆಲಕ್ಕೆಸೆದು, ಸಂಹರಿಸಿದನು. ಶ್ರೀರಾಮನನ್ನು ಸೇರಿ, ನಡೆದ ವೃತ್ತಾಂತವನ್ನರುಹಿದನು. ಮಾಘ ಶುದ್ಧ ದ್ವಿತೀಯಾ ತಿಥಿಯಿಂದ ಯುದ್ಧವು ಪ್ರಾರಂಭವಾಗಿ, ಏಳು ದಿನಗಳವರಿಗೂ ಎಡಬಿಡದೆ ನಡೆಯಿತು. ವಾನರರು ಲಂಕಾಪ್ರಾಕಾರವನ್ನು ಛೇದಿಸಿದರು. ಸ್ತಂಭ ತೋರಣ ಶಿಖರಗಳನ್ನು ಮುರಿದು ಕೆಡಹಿದರು. ಶಿಲಾಯಂತ್ರಗಳನ್ನು ಚೂರು ಮಾಡಿದರು. ಸರ್ಪಗಳನ್ನು ಕೊಂದರು. ವಿಷಕುಂಭಗಳನ್ನೊಡೆದರು. ಲಂಕಾನಗರ ವಾಸಿಗಳನ್ನು ಪೀಡಿಸಿದರು. ರಾವಣನ ರಾಕ್ಷಸಸೈನ್ಯವು ಎದೆಗುಂದದೆ, ವಾನರರಿಂದ ಕಾದಿ ಲಂಕೆಯ ರಕ್ಷಣದಲ್ಲಿ ಜೀವದಾಶೆ ತೊರೆದು ವಿಕ್ರಮಿಸಿದರು.

ಪರ್ವಣ, ಪತನ, ಜಂಭ, ಖರ, ಕ್ರೋಧವಶ, ಹರಿ, ಪ್ರರುಜ, ರುಜ, ಪ್ರಘಸ ಮೊದಲಾದ ಕ್ಷುದ್ರ ನಿಶಾಚರರು ಅದೃಶ್ಯರಾಗಿ, ಬಂದು ಮುತ್ತಿದಾಗ ಕಪಿಸೈನ್ಯವು ಗಗ್ಗೋಲಾಯಿತು. ವಿಭೀಷಣನು ಅವರ ಅಂತರ್ಧಾನವಿದ್ಯೆಯನ್ನು ವ್ಯರ್ಥಗೊಳಿಸಿ ದನು. ಅವರು ಕಣ್ಣಿಗೆ ಕಂಡುಬರಲು ನೋಡಿ, ವಾನರವೀರರು ಅವರನ್ನು ಸಂಹರಿಸಿ ದರು. ರಾವಣನು ಶುಕ್ರವ್ಯೂಹದಿಂದ ನಿಂತ ಸೈನ್ಯಮಧ್ಯದಿ ನಿಂತು, ರಾಮ ನೊಡನೆ ಕಾದಾಡಿದನು. ಇಂದ್ರಜಿತ್ತು ಲಕ್ಷ್ಮಣನಿಂದ ಕಾದಿದನು. ವಿರೂಪಾಕ್ಷ ಸುಗ್ರೀವರು, ಪನಸ ಪಟುಶರು, ನಲ ತುಂಡರು, ಪರಸ್ಪರ ಪ್ರಹಾರನಿರತರಾದರು. ಶಕ್ತಿ, ಶೂಲ, ಖಡ್ಗಗಳಿಂದ ರಾಕ್ಷಸರು, ಶಿಲಾಸಾಲಗಳಿಂದ ವಾನರರು ಹೋರಾಡು

ತ್ತಿರಲು, ಶ್ರೀರಾಮ-ರಾವಣರು ಬಾಣಯುದ್ಧವನ್ನು ಮಾಡುತ್ತಿದ್ದರು. ಪ್ರಹಸ್ತ-ವಿಭೀಷಣರು ಗದೆಗಳಿಂದ ಬಡಿದಾಡಿದರು. ದೇವಾಸುರ ಸಂಗ್ರಾಮದಂತೆ ಭಯಂಕರವಾದ ವಾನರ-ದಾನವ ಯುದ್ಧವು ಏಳು ದಿನ ಎಡೆಬಿಡದೆ ನಡೆಯಿತು. ವಿಭೀಷಣನು ಶತಘಂಟಾಶಕ್ತಿಯನ್ನು ಪ್ರಯೋಗಿಸಿ ಪ್ರಹಸ್ತನನ್ನು ಸಂಹರಿಸಿದನು. ವಾನರರು ಸಿಂಹನಾದವನ್ನು ಮಾಡುತ್ತಾ ವಿಜೃಂಭಿಸಿದರು. ಅದನ್ನು ಸಹಿಸದ ಧೂಮ್ರಾಕ್ಷನು ವಾನರರನ್ನು ಕಸಿಮಸಗಿ ಕೊಲ್ಲುತ್ತಾ ಉಕ್ಕೇರಿಬರುವ ಸಮುದ್ರದಂತೆ ಪರಾಕ್ರಮಿಸಲು, ವಾನರರು ಪಲಾಯನ ಸೂಕ್ತವನ್ನು ಪಠಿಸಿದರು. ಹನುಮಂತನು ಅವರನ್ನು ತಡೆದು ಹುರಿದುಂಬಿಸಿ, ತಾನು ಧೂಮ್ರಾಕ್ಷನನ್ನು ಸಾಲವೃಕ್ಷದಿಂದ ಹೊಡೆದು ಸಂಹರಿಸಿದನು. ರಾಕ್ಷಸರು ಹೆದರಿ ಲಂಕಾಭಿಮುಖರಾಗಿ ಓಡಿಹೋದರು. ಆಗ ರಾವಣನು ಕುಂಭಕರ್ಣನನ್ನೆಬ್ಬಿಸಿ, ರಣಾಂಗಣಕ್ಕೆ ಕಳಿಸಲು ನಿಶ್ಚಯಿಸಿದನು. ಅವನ ಅಪ್ಪಣೆಯಂತೆ ರಾಕ್ಷಸರು ಪಟಹ ಶಂಖ ಭೇರೀ ಭಾಂಕಾರಗಳಿಂದ ರಾವಣಾನುಜನನ್ನೆಬ್ಬಿಸಿದರು.

ರಾವಣನು ಕುಂಭಕರ್ಣನನ್ನು ಸಭೆಗೆ ಕರೆತರಿಸಿ, 'ಸೋದರ ! ಈಗ ಬಂದಿರುವ ಮಹಾವಿಪತ್ತನ್ನು ನಿದ್ರಾವಶನಾಗಿ ತಿಳಿಯದಿರುವೆ. ರಾಕ್ಷಸವಿನಾಶಕರನಾಗಿ ರಾಮನು ಬಂದು ಮುತ್ತಿರುವನು. ಅವನ ಸತಿಯನ್ನು ಅಪಹರಿಸಿ ತಂದು ನಾನು ಅಶೋಕವನದಲ್ಲಿಟ್ಟಿರುವೆನು. ಅವಳನ್ನು ಪಡೆಯಲೆಣಿಸಿ, ರಾಮನು ಸೇತುವನ್ನು ಕಟ್ಟಿ, ಸಮುದ್ರವನ್ನು ದಾಟಿ, ಸುಗ್ರೀವಾದಿ ವಾನರರೊಡಗೂಡಿ ರಾಕ್ಷಸಸೈನ್ಯದೊಡನೆ ಕಾದುತ್ತಿರುವನು. ನಮ್ಮ ಸೈನ್ಯದಲ್ಲಿ ಅರ್ಧವು ನಿಹತವಾಯಿತು. ನಿನ್ನ ಹೊರತು ರಾಮನನ್ನು ಎದುರಿಸಿ ನಿಲ್ಲುವವರನ್ನು ಕಾಣದೆ ನಿನ್ನ ನಿದ್ರಾಭಂಗವನ್ನು ಮಾಡಿರುವೆನು. ಹೋಗಿ ರಣದಲ್ಲಿ ರಾಮನನ್ನು ಸಂಹರಿಸಿ, ನನಗೆ ಶುಭಪ್ರದನಾಗು !' ಎಂದನು.

ಕುಂಭಕರ್ಣನು, ದೂಷಣ ವಜ್ರವೇಗ ಪ್ರಮಾಥಿ ಪ್ರಮುಖ ದೈತ್ಯನಾಯಕರಿಂದಲು, ಕೋಟಿ ರಾಕ್ಷಸರಿಂದಲು ಕೂಡಿ, ಲಂಕೆಯಿಂದ ಹೊರಹೊರಟು, ಕಪಿಸೇನೆಯನ್ನು ಮುಟ್ಟಿದನು. ವಾನರರು ಗಿಡಗಳಿಂದ ಕುಂಭಕರ್ಣನನ್ನು ಬಡಿದರೂ ಲಕ್ಷ್ಯವಿಲ್ಲದೆ ಅವನು ಅವರನ್ನು ಹಿಡಿದು ನುಂಗಲಾರಂಭಿಸಿದನು. ಅವನ ಅಟ್ಟಹಾಸದಿಂದ ಹೆದರಿ ತಾರಾದಿ ವಾನರರು ಓಡಿಹೋದರು. ಸುಗ್ರೀವನು ಕುಂಭಕರ್ಣನಿಗೆ ಹೆದರದೆ ಸಾಲವೃಕ್ಷದಿಂದ ಹೊಡೆಯಲು ರಾಕ್ಷಸನು ಕೋಪೋದ್ರಿಕ್ತನಾಗಿ, ಸುಗ್ರೀವನನ್ನು ಹಿಡಿದು ಲಂಕೆಗೆ ಹಿಂದಿರುಗಿದನು. ಲಕ್ಷ್ಮಣನ ನಿಶಿತಬಾಣವರ್ಷವೂ ಅವನನ್ನು ತಡೆಯಲಾರದಾಯಿತು. ಹನುಮಂತನು ಸುಗ್ರೀವನನ್ನು ಅವನ ಕೈಯಿಂದ ಬಿಡಿಸಲು ಹಿಂಬಾಲಿಸಿದಾಗ ಸುಗ್ರೀವನು ಧೈರ್ಯವನ್ನು ವಹಿಸಿ, ಕುಂಭಕರ್ಣನ ಕೈ ಮೂಗು ಕಿವಿಗಳನ್ನು ಕಡಿದು, ತಪ್ಪಿಸಿಕೊಂಡು ಬಂದನು.

ಕುಂಭಕರ್ಣನು ದೊಡ್ಡ ಬಂಡೆಯನ್ನೆತ್ತಿ ಲಕ್ಷ್ಮಣನ ಮೇಲೆಸೆಯಲು, ರಾಮಾನುಜನು ಅದನ್ನು ಶರಜಾಲದಿಂದ ಖಂಡಿಸಿದನು. ಆಗ ರಾಮನು ಬ್ರಹ್ಮಾಸ್ತ್ರ

ದಿಂದ ಕುಂಭಕರ್ಣನನ್ನು ಸಂಹರಿಸಿದನು. ವೃತ್ರಾಸುರನಂತೆ ಭಯಂಕರ ಕಾಯನಾದ ಕುಂಭಕರ್ಣನು ತುಂಡುತುಂಡಾಗಿ ಸಮುದ್ರದಲ್ಲಿ ಬಿದ್ದುದನ್ನು ನೋಡಿ, ರಾಕ್ಷಸರು ಭೀತರಾಗಿ, ಲಂಕೆಗೆ ಓಡಿಹೋದರು. ಲಕ್ಷ್ಮಣನು ಮಿಕ್ಕರಾಕ್ಷಸ ಸೇನಾಪತಿಗಳನ್ನು ಬಾಣವರ್ಷದಿಂದ ಚಂಡಾಡಿದನು. ಹನುಮಂತನು ದೂಷಣನನ್ನೂ, ನೀಲನು ಪ್ರಮಾಥಿಯನ್ನೂ ಸುಗ್ರೀವನು ವಜ್ರವೇಗನನ್ನೂ ಕೊಂದರು. ಶೋಕರೋಷಪರೀತ ನಾದ ರಾವಣನು ಇಂದ್ರಜಿತುವನ್ನು ರಣಾಂಗಣಕ್ಕೆ 'ರಾಮಾದಿಗಳನ್ನೆಲ್ಲರನ್ನು ಸಂಹರಿಸಿ, ಹರ್ಷವನ್ನು ತಾ'ರೆಂದು ಕಳಿಸಿದನು. ಕುಂಭಕರ್ಣಾದಿ ಬಂಧುವಧೆಯ ಸೇಡನ್ನು ತೀರಿಸಲೆಣಿಸಿ, ಇಂದ್ರಜಿತು ರಣರಂಗವನ್ನು ಸೇರಿ, ಲಕ್ಷ್ಮಣನನ್ನು ಎದುರಿಸಿ ಭಯಂಕರ ಯುದ್ಧವನ್ನು ಮಾಡಿದನು. ರಾವಣಿಯ ತೋಮರಾದಿಶಸ್ತ್ರ ಗಳನ್ನು ಕಡಿದು ಕೆಡಹಿ, ಲಕ್ಷ್ಮಣನು ತೀವ್ರನಾರಾಚಗಳಿಂದ ಅವನನ್ನು ಪೀಡಿಸಿ ದನು. ಅಂಗದನೂ ಸಾಲವೃಕ್ಷದಿಂದ ಇಂದ್ರಜಿತುವಿನ ರಥವನ್ನು ಪುಡಿಮಾಡಿದನು.

ಇಂದ್ರಜಿತು ರಾಕ್ಷಸೀಮಾಯೆಯಿಂದ ಅಂತರ್ಹಿತನಾಗಿ, ನಾಗಪಾಶದಿಂದ ಬಂಧಿಸಿ, ವಾನರಸೈನ್ಯವನ್ನು ನೆಲಕ್ಕೆ ಕೆಡಹಿದನು. ರಾಮಲಕ್ಷ್ಮಣರೂ ಮೂರ್ಛಿತ ರಾಗಿ ನೆಲಕ್ಕೆ ಬಿದ್ದರು. ಆಗ ಗರುಡನು ಅಲ್ಲಿಗೆ ಬಂದು, ಅವರನ್ನೆಲ್ಲ ತನ್ನ ಪಕ್ಷ-ವಾತ ಸ್ಪರ್ಶದಿಂದಲೇ ಮುಕ್ತರನ್ನಾಗಿಸಿ, ರಾಮನಿಗೆ ವಂದಿಸಿ, 'ನನ್ನ ಅಲ್ಪಸೇವೆಯಿಂದ ಪ್ರೀತನಾಗೆ'ಂದು ಬೇಡಿದನು. ಶ್ರೀರಾಮನು ಅವನನ್ನಾಶೀರ್ವದಿಸಿ ಕಳಿಸಿದನು. ಆಗ ಕುಬೇರನು ದಿವ್ಯಜಲವನ್ನು ವಿಭೀಷಣನ ದ್ವಾರಾ ರಾಮನಿಗೆ ಕಳಿಸಿದನು. ಆ ಜಲವನ್ನು ಕಣ್ಣಿಗೆ ಹಚ್ಚಿಕೊಂಡವರಿಗೆ ಅಂತರ್ಹಿತರಾಗಿರುವ ರಾಕ್ಷಸಾದಿ ಭೂತ ಗಳು ಕಾಣುವಂತಾಗುತ್ತಿದ್ದವು. ನಾಗಪಾಶಮುಕ್ತರಾದ ನರ ವಾನರರ ವೃತ್ತಾಂತ ವನ್ನರಿತು, ಇಂದ್ರಜಿತು ಮತ್ತೆ ಯುದ್ಧಕ್ಕೆಂದು ಬಂದನು. ಅಂದು ಫಾಲ್ಗುಣ ಶುದ್ಧ ಬಿದಿಗೆ. ಇಂದ್ರಜಿತು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ, ರಾಮಸೈನ್ಯವನ್ನು ಮೂರ್ಛೆಗೊಳಿಸಿ, ನಿಕುಂಭಿಲಾಯಾಗವನ್ನು ಮಾಡಲೆಣಿಸಿ, ಪಾತಾಳಗೃಹವನ್ನು ಹೊಕ್ಕನು.

ಶ್ರೀರಾಮಲಕ್ಷ್ಮಣರು ಮತ್ತು ಹನುಮಜ್ಜಾಂಬವಂತರು ಬ್ರಹ್ಮಾಸ್ತ್ರದಿಂದ ಬದ್ಧರಾಗದೆ ಸುಮ್ಮನೆ ಮಲಗಿರಲು, ವಿಭೀಷಣನು ಗೂಢವಾಗಿ ಲಂಕೆಗೆ ಹೋಗಿ ಹಿಂದಿರುಗಿ ಬಂದನು. ಜಾಂಬವಂತನು ವಿಭೀಷಣನನ್ನು ನೋಡಿ, 'ಅಂಜನಾನಂದನನು ಜೀವದಿಂದಿರುವನೇ ?' ಎಂದು ಕೇಳಿದನು. ವಿಭೀಷಣನು ಶ್ರೀರಾಮಲಕ್ಷ್ಮಣರನ್ನೂ ಸುಗ್ರೀವನನ್ನೂ ವಿಚಾರಿಸದೆ ಹನುಮಂತನನ್ನೇಕೆ ವಿಚಾರಿಸಿದೆ ?' ಎಂದನು. ಜಾಂಬವಂತನು 'ಹನುಮಂತನು ಜೀವದಿಂದಿದ್ದರೆ ನಾವೆಲ್ಲ ಸತ್ತಿದ್ದರೂ ಬದುಕಿ ದಂತೆಯೇ ಆಗುವುದು. ಅವನು ಮೃತನಾದರೆ ನಾವು ಬದುಕಿದ್ದೂ ಸತ್ತಂತಾಗುವೆವು. ಅವನಿಂದ ವಾನರಸೈನ್ಯವೀಗ ಪುನರುಜ್ಜೀವಿತವಾಗಬೇಕಾಗಿದೆ' ಎಂದು ಹನುಮಂತ ನನ್ನು ಸಮೀಪಿಸಿದನು. ಅವರ ಪ್ರಾರ್ಥನೆಯಂತೆ ಐವತ್ತು ಸಾವಿರ ಯೋಜನ

ದೂರದಲ್ಲಿದ್ದ ಗಂಧಮಾದನವನ್ನು ಹೊತ್ತು, ಹನುಮಂತನು ಕ್ಷಣದಲ್ಲಿ ಹಿಂದಿರುಗಿ ಬಂದನು. ಅಷ್ಟರಲ್ಲೇ ರಣರಂಗದಲ್ಲಿ ಮಡಿದುಬಿದ್ದಿದ್ದ ರಾವಣಭಟರೆಲ್ಲರನ್ನೂ ವಿಭೀಷಣನು ಸಮುದ್ರದಲ್ಲಿ ಕೆಡಹಿಸಿದನು. ಸಂಜೀವಕರಣಿ, ವಿಶಲ್ಯಕರಣಿ, ಸಾವರ್ಣ ಕರಣಿ, ಸಂಧಾನಕರಣಿ ಎಂಬ ದಿವ್ಯೌಷಧಿಗಳಿಂದ ಕೂಡಿದ ಗಂಧಮಾದನ ಪರ್ವತ ವಾತದಿಂದಲೇ ವಾನರ ಸೈನ್ಯವು ಪುನರುಜ್ಜೀವಿತವಾಯಿತು. ಅಂದು ಫಾಲ್ಗುಣ ಶುಕ್ಲ ದ್ವಾದಶಿ. ವಿಭೀಷಣವಚನದಂತೆ, ಹನುಮಂತನು ಲಕ್ಷ್ಮಣನನ್ನು ಹೊತ್ತು, ಪಾತಾಳಗೃಹವನ್ನು ಸೇರಿದನು. ಅಲ್ಲಿ ನಿಕುಂಭಿಲಾಯಾಗರತನಾದ ಇಂದ್ರಜಿತು ಯಾಗವಿಘ್ನವಾದುದಕ್ಕೆ ನೊಂದು, ಲಕ್ಷ್ಮಣನಿಂದ ಕಾದಿದನು. ಲಕ್ಷ್ಮಣನು ಬ್ರಹ್ಮಾಸ್ತ್ರದಿಂದ ಇಂದ್ರಜಿತುವನ್ನು ಕೊಂದು, ಅವನ ರಥವನ್ನು ಲಂಕೆಗೆ ಕಳಿಸಿದನು. ತ್ರಯೋದಶಿಯ ದಿನ ಇಂದ್ರಜಿತು ಮೃತನಾದನು.

ಪುತ್ರರಹಿತವಾದ ರಥವನ್ನು ಕಂಡು, ರಾವಣನು ಗೋಳಾಡಿದನು. ಖಡ್ಗ ಹಸ್ತನಾಗಿ ಅಶೋಕವನದಲ್ಲಿದ್ದ ಸೀತೆಯನ್ನು ಸಂಹರಿಸಲು ಉದ್ಯುಕ್ತನಾದ ರಾಕ್ಷಸ ರಾಜನನ್ನು ಅವಿಂಧ್ಯನೆಂಬ ಮಂತ್ರಿಯು ತಡೆದನು. ಸೀತಾಭರ್ತನನ್ನು ಸಂಹರಿಸಲು ನಿಶ್ಚಯಿಸಿ ರಣರಂಗಕ್ಕೆ ಹೊರಟನು. ದಿವ್ಯರಥಾರೂಢನಾಗಿ ಬರುವ ರಾವಣನನ್ನು ಕಂಡು, ವಾನರಸೈನ್ಯವು ಗಡಗಡ ನಡುಗಿತು. ಹನುಮಂತ, ಸುಗ್ರೀವ, ನೀಲ, ನಲ, ಜಾಂಬವಂತ, ಅಂಗದರು ಅವನ ಸೈನ್ಯವನ್ನು ಕಲ್ಲು ಗಿಡಗಳಿಂದ ಬಡಿದು ಕೊಂದರು. ರಾಕ್ಷಸ ಮಾಯಾಬಲದಿಂದ ಅನೇಕ ರಾಕ್ಷಸರನ್ನು ದೇಹದಿಂದ ಸೃಜಿಸಿದ ರಾವಣನ ಮಾಯೆಯನ್ನು ಪ್ರಜ್ಞಾಸ್ತ್ರದಿಂದ ಶ್ರೀರಾಮನು ಸಂಹರಿಸಿ, 'ರಾವಣಾ! ಬಳಲಿರುವೆ! ಇಂದು ಲಂಕೆಯನ್ನು ಸೇರಿ, ನಿನ್ನ ಬಂಧುಗಳಿಂದ ಕೊನೆ ಅಪ್ಪಣೆ ಪಡೆದು ನಾಳೆ ರಣರಂಗಕ್ಕೆ ಬಾ ! ನಿನ್ನನ್ನು ಯಮಸದನಕ್ಕೆ ಕಳಿಸುವೆನು. ದುರಾತ್ಮನಾದ ನಿನ್ನ ಪಾಪದ ಫಲವಾದ ಅನಂತ ನರಕಗಳು ನಿನಗಾಗಿ ಕಾದಿವೆ' ಎಂದು ಅವನನ್ನು ನಿರಸ್ತ್ರನನ್ನಾಗಿಸಿ, ಕಳಿಸಿದನು. ರಾವಣನು ಮನೆ ಸೇರಿ ಚಿಂತಾಕ್ರಾಂತನಾಗಿ ಇಂತಾಲೋಚಿಸಿದನು—

'ಆಹಾ ! ರಾಮನಿಂದ ನನಗೆ ಮೃತ್ಯುವು ಕಾದಂತಿದೆ. ಅವನ ಮಂತ್ರಿಮುಖ್ಯನಾದ ಹನುಮಂತನ ಮುಷ್ಟಿಪ್ರಹಾರದಿಂದಲೇ ನನ್ನ ಓಜಸ್ತೇಜೋಬಲಗಳು ಕುಂದಿವೆ. ನಂದಿಯ ಶಾಪ, ನಲಕೂಬರ ಶಾಪ, ಅನರಣ್ಯ ಶಾಪ, ಪಾರ್ವತೀಶಾಪಗಳು ಫಲಿಸುವ ಕಾಲವು ಬಂತೋ ಏನು ?' ಇಂತು ಚಿಂತಿಸುವ ರಾವಣನಿಗೆ ಮಂಡೋದರಿ ವಿನಯದಿಂದ ವಿಹಿತ ವಚನಗಳನ್ನು ಪೇಳಿ, ಸೀತೆಯನ್ನು ಶ್ರೀರಾಮನಿಗೆ ಸಮರ್ಪಿಸಿ, ಉಳಿದುಕೊಳ್ಳುವಂತೆ ಬೇಡಿಕೊಂಡಳು. ಅವಳ ಮಾತನ್ನು ತಿರಸ್ಕರಿಸಿ ರಾವಣನು ಯುದ್ಧರಂಗವನ್ನು ಮುಟ್ಟಿದನು. ಚೈತ್ರ ಶುದ್ಧ ನವಮಿಯ ಘೋರ ಯುದ್ಧದಲ್ಲಿ ರಾವಣನ ಶಕ್ತಿಯು ಪೆಟ್ಟಿಗೆ ಸಿಲುಕಿ, ಲಕ್ಷ್ಮಣನು ಮೂರ್ಛಿತನಾದನು. ಮತ್ತೆ ಹನುಮಂತನು ಗಂಧಮಾದನವನ್ನು ತಂದು ಲಕ್ಷ್ಮಣನ ಪ್ರಾಣದಾತನೆನಿಸಿದನು.

ಶ್ರೀರಾಮನು ಲಕ್ಷ್ಮಣ ಕ್ಷೇಮದಿಂದ ಹರ್ಷಿತನಾಗಿ ಹನುಮಂತನನ್ನು ಅಪ್ಪಿಕೊಂಡು ಕೊಂಡಾಡಿದನು.

ಚೈತ್ರ ಶುದ್ಧ ದ್ವಾದಶಿಯ ದಿನ ಮಾತಲಿಯು ತಂದ ದೇವೇಂದ್ರನ ರಥದಲ್ಲಿ ಕೂತು, ಕೋದಂಡಪಾಣಿಯಾಗಿ ಶ್ರೀರಾಮನು ರಾವಣನೊಡನೆ ಚತುರ್ದಶಿಯ ವರೆಗೂ ಭಯಂಕರ ಯುದ್ಧವನ್ನು ಮಾಡಿದನು. ದೇವತೆಗಳು ಅಂಬರದಿ ನಿಂತು ರಾಮರಾವಣರ ಯುದ್ಧವನ್ನೀಕ್ಷಿಸಿದರು. ರಾಮರಾವಣರ ಯುದ್ಧವು ರಾಮರಾವಣರ ಯುದ್ಧದಂತೆಯೇ ಭಯಾನಕವಾಗಿ ನಡೆಯಿತು. ಶ್ರೀರಾಮನು ಬ್ರಹ್ಮಾಸ್ತ್ರದಿಂದ ರಾವಣನನ್ನು ಸಂಹರಿಸಿದನು. ಸಿದ್ಧಚಾರಣ ಗಂಧರ್ವರು ಶ್ರೀರಾಮನನ್ನು ಪೊಗಳಿ ಪಾಡಿದರು. ಅಪ್ಸರೆಯರಾಡಿದರು. ಬೃಂದಾರಕರು ನಂದನದ ಮಂದಾರಾದಿ ಸುಗಂಧಿತ ಸುಮಗಳಿಂದ ಶ್ರೀರಾಮನಮೇಲೆ ಪೂಮಳೆಗರೆದರು. ಇಂತು ದೇವ ಬ್ರಾಹ್ಮಣ ಸಜ್ಜನ ಪೀಡಾಕರನಾದ ನೀಚ ರಾವಣನನ್ನು ಸಂಹರಿಸಿ, ಶ್ರೀರಾಮನು ಸಕಲ ಸುಜನ ಕ್ಷೇಮಂಕರನಾದನು; ಲಂಕಾರಾಜ್ಯವನ್ನು ವಿಭೀಷಣನಿಗೆ ಕೊಟ್ಟು ಪಟ್ಟಗಟ್ಟಿ ದನು; ರಾವಣ ಪತ್ನಿಯರನ್ನು ಲೋಕರೀತಿಯನ್ನರುಹಿ ಸಮಾಧಾನಪಡಿಸಿದನು. ಅವಿಂಧ್ಯಾದಿ ರಾಕ್ಷಸ ಮಂತ್ರಿವರರ ವಚನದಂತೆ, ಸೀತೆಯನ್ನು ಹನುಮಂತನಿಂದ ಕರೆತರಿಸಿದನು. ಶೋಕಕರ್ಷಿತಳಾಗಿ ಕಣ್ಣೀರಿಡುತ್ತಾ ಬರುವ ಸೀತೆಯನ್ನು ನೋಡಿ ಶ್ರೀರಾಮನು ದುಃಖಿತನಾದನು. ಕಣ್ಣೀರನ್ನು ತಡೆದು ರಾಘವನು ರಮಣಿಗಿಂತೆಂ ದನು—'ಸೀತೆ ! ನಿನ್ನ ಇಚ್ಛೆಯಂತೆ ಬೇಕಾದೆಡೆಗೆ ಹೋಗು ! ನನ್ನಲ್ಲಿ ನಿನಗೆ ಸ್ಥಲವಿಲ್ಲ. ಪರಾಪಹೃತಳಾದ ಭಾರ್ಯೆಯನ್ನು ಶತ್ರುಜಯವನ್ನು ಸಾಧಿಸಿ ಬಿಡಿಸಿದು ದಾಯಿತು. ಪರವೇಶ್ಮನಿವಾಸಿನಿಯಾದ ನಿನ್ನನ್ನು ನಾನೊಲ್ಲೆ. ಶ್ವಾನಾದಿ ಸ್ಪೃಷ್ಟ ವಾದ ಹವಿಯು ಯಜ್ಞಯೋಗ್ಯವಾಗಲಾರದು' ಎಂದು ನುಡಿದ ರಾಮನ ವಾಗ್ವಜ್ರದ ಆಘಾತದಿಂದ ಮೂರ್ಛೆ ಬಂದು, ಸೀತೆ ನೆಲಕ್ಕುರುಳಿದಳು. ರಾಮವಿಜಯ ವಿಕಸಿತ ವಾದ ಆ ಮಾತೆಯ ವದನಪಂಕಜವು ರಾಮವಾಗ್ವಜ್ರಹತವಾಗಿ ಕಳೆಗುಂದಿತು. ಎಚ್ಚೆತ್ತ ಸೀತೆಗೆ ಜಗವೇ ಅಂಧಕಾರಬಂಧುರವಾಯಿತು. ವಾನರರು ರಾಮನ ನೈಷ್ಠುರ್ಯವನ್ನು ಕಂಡು, ಗೋಳಾಡಿದರು. ಲಕ್ಷ್ಮಣ ಮಾರುತಿಯರು ರಾಮನ ಮುಖವನ್ನು ನೋಡುತ್ತಾ ನಿಂತರು. ಶ್ರೀರಾಮನ ಆಜ್ಞೆಯಂತೆ, ಸೀತೆ ಅಗ್ನಿಕುಂಡ ದಲ್ಲಿ ಹಾರಿದಳು. ಸೀತೆಯ ಪವಿತ್ರ ಸ್ಪರ್ಶದಿಂದ ಅಗ್ನಿದೇವನು ಪಾವನನಾದನು.

ಬ್ರಹ್ಮದೇವನು ಹಂಸವಾಹನನಾಗಿ ಬಂದು (ವೈಶಾಖ ಶುದ್ಧ ತೃತೀಯಾ) ಶ್ರೀರಾಮನಿಗೆ ವಂದಿಸಿದನು. ರುದ್ರ ಶಕ್ರ ರವಿ ಚಂದ್ರಾದಿ ದೇವತೆಗಳೂ ಅಲ್ಲಿಗೆ ಬಂದರು. ದಶರಥ ರಾಜನು ದೇವಶರೀರದಿಂದ ಕೆಳಗಿಳಿದು ಬಂದನು. ಪುಷ್ಪಶಯನ ದಿಂದ ಬಂದಂತೆ ಅಗ್ನಿಕುಂಡದಿಂದ ಮೇಲಕ್ಕೆ ಬಂದ ಜಾನಕಿಯನ್ನು ಅವರೆಲ್ಲರೂ ಪ್ರಶಂಸಿಸಿ, 'ಶ್ರೀರಾಮ ! ಸೀತೆಯು ನಿರ್ದೋಷಿಯು, ಅವಳನ್ನು ಸ್ವೀಕರಿಸು' ಎಂದು ಬೇಡಿಕೊಂಡರು. ಆಗ ಅಂತರಿಕ್ಷವಾಣಿಯು 'ಸೀತೆ ನಿರ್ದೋಷಿ. ರಾಘವ! ಮಹಾ

ಪತಿವ್ರತೆಯಾದ ಸೀತಾದೇವಿಯನ್ನು ಸ್ವೀಕರಿಸು' ಎಂದು ನುಡಿಯಿತು. ಅಗ್ನಿಯು 'ಶ್ರೀರಾಮ ! ಸೀತಾದೇವಿಯಲ್ಲಿ ಅಣುವಿನಷ್ಟಾದರೂ ದೋಷವಿಲ್ಲ. ಆಕೆಯಿಂದ ನಾನೂ ಪಾವಿತನಾಗಿರುವೆನು. ಲೋಕನಾಥ ! ಲೋಕಮಾತೆಯನ್ನು ಸ್ವೀಕರಿಸು!' ಎಂದನು. ಬ್ರಹ್ಮದೇವನು 'ಶ್ರೀರಾಮ ! ರಾಜರ್ಷಿವರನಾದ ನಿನ್ನ ಚರಿತೆ ಅಮೋಘವಾಗಿದೆ. ಲೋಕವರ್ತನ ಶಿಕ್ಷಕನಾದ ನಿನ್ನ ದೀಕ್ಷೆ ಅದ್ಭುತವಾಗಿದೆ. ದೇವ ಗಂಧರ್ವ ಗೋ ಸಾಧುಜನ ದ್ರೋಹಿಯಾದ ರಾವಣನನ್ನು ಕೊಂದೆ ! ಅವರಿಗೆ ಹರ್ಷವನ್ನು ತಂದೆ ! ನಮ್ಮ ಪ್ರಾರ್ಥನೆಯನ್ನು ನೆರವೇರಿಸಿದೆ ! ರಾಮಚಂದ್ರ ! ಸರ್ವಜ್ಞನಾದ ನಿನಗೆ ನಾವು ಹೇಳುವುದೇನಿದೆ ? ನಿರ್ದೋಷಿಯಾದ ಸೀತಾಮಾತೆ ಯನ್ನು ಸ್ವೀಕರಿಸು !' ಎಂದು ಬೇಡಿದನು. ದಶರಥನು ಮಗನನ್ನಪ್ಪಿ, 'ರಾಮ ! ರಾಮ ! ನಿನ್ನಿಂದ ನನ್ನ ಕುಲವೇ ಪಾವನವಾಯಿತು. ಅಯೋಧ್ಯೆಯನ್ನು ಸೇರಿ, ಸೀತೆಯಿಂದ ಕೂಡಿ, ಸಾಮ್ರಾಜ್ಯವನ್ನಾಳು ! ನನ್ನನ್ನು ಸಂತೋಷಗೊಳಿಸಿದೆ' ಎಂದು ನುಡಿದನು.

ಶ್ರೀರಾಮನು ಸೀತೆಯನ್ನು ಸ್ವೀಕರಿಸಿದನು. ವಾನರರು ಆನಂದೋದ್ರೇಕ ದಿಂದ ಕುಣಿದಾಡಿದನು. ಸೀತೆಯು ಹನುಮಂತನಿಗೆ ಪ್ರೀತಳಾಗಿ 'ಪುತ್ರ ! ರಾಮನ ಕೀರ್ತಿ ಲೋಕದಿ ನೆಲಸಿರುವವರೆಗೂ ಚಿರಂಜೀವನಾಗಿ ಬಾಳು ! ದಿವ್ಯೋಪಭೋಗ ಸಹಿತನಾಗಿ, ಕಿಂಪುರುಷ ಖಂಡದಲ್ಲಿ ಅಖಂಡ ರಾಮಭಜನರತನಾಗಿರು ! ನಿನ್ನನ್ನು ಭಜಿಪ ಜನರಿಗೆ ಬುದ್ಧಿ, ಬಲ, ಧೈರ್ಯ, ಆರೋಗ್ಯ, ವಾಕ್ಪಾಟವ, ದೀರ್ಘಾಯು, ಜ್ಞಾನಗಳು ಸಿದ್ಧಿಸಲಿ !' ಎಂದು ವರವಿತ್ತಳು. ದೇವತೆಗಳೆಲ್ಲರೂ ಸೀತಾರಾಮರಿಗೆ ನಮಿಸಿ, ತಂತಮ್ಮ ಲೋಕಗಳಿಗೆ ಹೊರಟರು. ಶ್ರೀಶಂಕರನು ಪಾರ್ವತೀದೇವಿಗೆ ರಾಮನಾಮ ಮಹಿಮೆಯನ್ನು ವಿವರಿಸುತ್ತಾ, ಕೈಲಾಸಕ್ಕೆ ತೆರಳಿದನು.

ಶ್ರೀರಾಮನು ಸೀತಾಸಹಿತನಾಗಿ ಪುಷ್ಪಕವಿಮಾನವನ್ನೇರಿ ವೈಶಾಖ ಶುದ್ಧ ಚತುರ್ಥೀ ದಿನ ಭರದ್ವಾಜಾಶ್ರಮವನ್ನು ಮುಟ್ಟಿದನು. ಸುಗ್ರೀವ ವಿಭೀಷಣರು ಕೆಲ ಭಟರಿಂದ ಸಹ ಶ್ರೀರಾಮನನ್ನನುಸರಿಸಿ ಬಂದರು. ಲಕ್ಷ್ಮಣಾಗ್ರಜನು ವೈಶಾಖ ಶುದ್ಧ ಪಂಚಮಿಗೆ ಹದಿನಾಲ್ಕು ವರ್ಷದ ವನವಾಸವು ಮುಗಿಯುವುದನ್ನರಿತು, ಭರತನು ಅಗ್ನಿಪ್ರವೇಶ ಮಾಡದಿರಲೆಂದು, ಹನುಮಂತನನ್ನು ಪೂರ್ವದೂತನಾಗಿ ಕಳಿಸಿದನು. ಶ್ರೀರಾಮನು ಪಂಚಮಿಯ ದಿನ ಭರತನಿದ್ದ ನಂದಿ ಗ್ರಾಮವನ್ನು ಸೇರಿ, ಅವನಿಗೆ ಆನಂದವನ್ನು ತಂದನು. ಭರತನು ರಾಜ್ಯವನ್ನೆಲ್ಲ ಶ್ರೀರಾಮನಿಗೆ ಸಮರ್ಪಿಸಿ, ಧನ್ಯ ನಾದನು. ಪುಷ್ಪಕವಿಮಾನವನ್ನು ಅದರ ಒಡೆಯನಾದ ಕುಬೇರನಿಗೆ ಕಳಿಸಿ, ಶ್ರೀರಾಮಚಂದ್ರನು ಲಕ್ಷ್ಮಣ, ಭರತ, ಶತ್ರುಘ್ನ, ಹನುಮತ್ಸುಗ್ರೀವ, ವಿಭೀಷಣ ಸಮನ್ವಿತನಾಗಿ, ಅಯೋಧ್ಯಾ ನಗರವನ್ನು ಪ್ರವೇಶಿಸಿದನು. ವೈಶಾಖ ಶುದ್ಧ ಸಪ್ತಮಿಯ ದಿನ ಪುಣ್ಯಕರವಾದ ಪುಷ್ಯ ನಕ್ಷತ್ರದಲ್ಲಿ ಶ್ರೀ ಸೀತಾರಾಮರು ಪಟ್ಟಾಭಿಷಿಕ್ತರಾದರು. ವಾಮದೇವ, ಜಾಬಾಲಿ, ಸುಮತಿ, ಶತಾನಂದಾದಿ

ಮುನಿವರರು ವಸಿಷ್ಠನ ಆಧ್ವರ್ಯದಲ್ಲಿ ಪರಮಪಾವನನಾದ ರಾಮನಿಗೆ ಗಂಗಾದಿ ಶತತೀರ್ಥಜಲಗಳಿಂದ ಅಭಿಷೇಕವನ್ನು ಮಾಡಿದರು. ಕೌಸಲ್ಯಾದಿ ರಾಜಮಾತೆಯರು, ಸುಗ್ರೀವಾದಿ ವಾನರರು, ವಿಭೀಷಣಾದಿ ಸಾಧುಜನರು, ಅಯೋಧ್ಯಾನಗರ ನಾರಿಯರೂ ಕೂಡ ಶ್ರೀರಾಮ ಪಟ್ಟಾಭಿಷೇಕೋತ್ಸವವನ್ನು ಕಂಡು ಪರಮಾನಂದ ಭರಿತರಾದರು. ದಾನವ ವಾನರ ರಾಜರನ್ನು ಸತ್ಕರಿಸಿ, ಕಳಿಸಿ, ಶ್ರೀರಾಮನು ಸತೀ-ಸೋದರಸಮೇತನಾಗಿ ಸುಖದಿಂದಿದ್ದನು. ಗೋಮತಿ ತೀರದಲ್ಲಿ ಹತ್ತು ಅಶ್ವಮೇಧಗಳನ್ನು ಮಾಡಿ ಶ್ರೀರಾಮನು ಭೂರಿ ದಕ್ಷಿಣೆಗಳಿಂದ ವಿಪ್ರರನ್ನು, ಅನ್ನ ವಸ್ತ್ರಾದಿ ವಿತರಣದಿಂದ ಸಮಸ್ತ ಪ್ರಜರನ್ನು ಸಂತೋಷಪಡಿಸಿದನು.

ಧರ್ಮರಾಜ ! ಶ್ರೀರಾಮನೆಂದರೆ ಸಾಕ್ಷಾದ್ವಿಷ್ಣುವಲ್ಲವೇ ? ಅಂತಹ ಮಹಾಮಹಿಮನು ಅವತರಿಸಿ, ಮನುಜರಲ್ಲಿದ್ದಾಗ, ಮನುಜರಂತೆ ನಡೆದನಂತೆ ! ಅಂತಹವರೇ ಅಷ್ಟು ಕಷ್ಟಗಳನ್ನು ಸಹಿಸಿ, ಲೋಕಶಿಕ್ಷಕರಾಗಿರುವಾಗ, ನೀನು ನಿನಗೆ ಬಂದ ಕಷ್ಟಗಳಿಗೆ ಹೆದರಬಹುದೇ ? ನಿನ್ನ ತಮ್ಮನಾದ ವೃಕೋದರನು ಬಲವಂತರಲ್ಲಿ ಅಗ್ರಗಣ್ಯನಿರುವನು. ಅರ್ಜುನನು ಕೋದಂಡ ಪಾಂಡಿತ್ಯದಲ್ಲಿ ಅದ್ವಿತೀಯನೆನಿಸಿರುವನು. ನಕುಲ ಸಹದೇವರು ಸಾಟಿಯಿಲ್ಲದ ವೀರರಾಗಿರುವರು. ಇವರ ಸಹಾಯದಿಂದ ಶತ್ರುಜಯವನ್ನು ಸಂಪಾದಿಸುವೆ ! ಸುಖದಿಂದಿರುವೆ ! ಸದಾ ಕತ್ತಲಿರುವುದಿಲ್ಲ. ವಾನರ ಮಾತ್ರ ಸಹಾಯನಾದ ರಾಮನು ಮಾಡಿದಂತಹ ಶತ್ರುಜಯವನ್ನು ಶ್ರೀಕೃಷ್ಣನ ಸಹಾಯದಿಂದ ನೀನು ಗಳಿಸುವೆ ! ಚಿಂತಿಸಬೇಡ !' ಎಂದು ಮಾರ್ಕಂಡೇಯನು ಧರ್ಮರಾಜನಿಗೆ ಶ್ರೀ ರಾಮಾಯಣವನ್ನು ನಿರೂಪಿಸಿದನು. ಈ ರಾಮಕಥೆಯನ್ನು ಹೇಳಿ-ಕೇಳಿದವರಿಗೆ ದೀರ್ಘಾಯುರಾರೋಗ್ಯ ಭಾಗ್ಯ ಭಕ್ತಿಗಳು ಸಂಪನ್ನವಾಗುವವು.

ಶ್ರೀಸೀತಾರಾಮಚಂದ್ರಾಯ ನಮಃ

## ಸಾವಿತ್ರೀ ಸತ್ಯವಂತಂ

ಧರ್ಮರಾಜನು ಮಾರ್ಕಂಡೇಯನಿಗಿಂತೆಂದನು—ಋಷಿವರ! ನಾನು ನನಗಾಗಿ ವ್ಯಸನಪಡುವುದಿಲ್ಲ. ಸೋದರರಿಗಾಗಿಯೂ ದುಃಖಪಡುವುದಿಲ್ಲ. ಆದರೆ ಕೃಷ್ಣೆ ಪಟ್ಟ ಕಷ್ಟಗಳನ್ನು ನೆನೆದರೆ ನನಗೆ ಮಹಾವ್ಯಸನವಾಗುತ್ತಿದೆ. ಅಯೋನಿಜೆಯಾಗಿ ಅಗ್ನಿಕುಂಡದಿಂದ ಜನಿಸಿಬಂದವಳು ; ದ್ರುಪದರಾಜನ ಮನೆಯನ್ನು ಬೆಳಗಿ, ನಮ್ಮ ಮನೆಯನ್ನು ಬೆಳಗಿದಳು ; ಪಂಚ ಪತಿ ಸಿಂಹರನ್ನು ಪಡೆದವಳು ; ರಾಜಸೂಯಾದಿ ಯಾಗ ದೀಕ್ಷಿತಳು ; ಇಂತಹ ದ್ರೌಪದಿಗೆ ಇಷ್ಟು ಕಷ್ಟಗಳೇ ! ದ್ಯೂತದಲ್ಲಿ ಆದ ಪರಾಭವಾಗ್ನಿಗೆ, ಇಂದು ಸೈಂಧವ ಹತಕನ ಪೀಡೆ ಆಜ್ಯಧಾರೆಯಾಯಿತಲ್ಲವೇ ? ಪತಿವ್ರತೆಯಾದ ದ್ರುಪದಾತ್ಮಜೆಯಂತೆ ಕಷ್ಟಪಟ್ಟ ಕಾಂತೆಯರಾರೂ ಇಲ್ಲವೆಂದೇ ನಾನು ಭಾವಿಸಿರುವೆನು'.

ಆ ಮಾತಿಗೆ ನಕ್ಕು ಮಾರ್ಕಂಡೇಯನು—'ಧರ್ಮರಾಜ ! ಕುಲಸ್ತ್ರೀರತ್ನಗಳ ಗುಣ ಶಾಂತಿಯನ್ನು ಬಣ್ಣಿಸುವೆನು, ಕೇಳು —

ಹಿಂದೆ ಮದ್ರದೇಶದಲ್ಲಿ ಅಶ್ವಪತಿ ಎಂಬ ರಾಜನ್ಯನಿದ್ದನು. ಬ್ರಾಹ್ಮಣಭಕ್ತನು, ಸತ್ಯಸಂಧನು, ದಾನಶೀಲನು, ಯಜ್ಞನಿರತನು, ಪೌರ ಜಾನಪದ ಪ್ರಿಯನು ಆದ ಅಶ್ವಪತಿಗೆ ಮಕ್ಕಳಾಗದ ಚಿಂತೆ ಬಿಟ್ಟು, ಮತ್ತಾವ ವ್ಯಸನವೂ ಇರಲಿಲ್ಲ. ಜೀವನದ ಉತ್ತರಾರ್ಧವನ್ನು ಮುಟ್ಟಿದ ಮಹಾರಾಜನು ಸಂತಾನಾರ್ಥಿಯಾಗಿ ತನ್ನ ಸತಿ ಯೊಡನೆ ಅನೇಕ ವ್ರತ ತಪೋದಾನಗಳನ್ನು ಶ್ರದ್ಧೆಯಿಂದ ಮಾಡಿದನು. ದಿನದ ಆರನೆಯ ಭಾಗದಲ್ಲಿ ಮಿತಭೋಜನನಾಗಿರುತ್ತಿದ್ದನು.

ಸೋಽಮೋ ವಧೂಯುರಭವದಶ್ವಿನಾಸ್ತಾಮುಭಾವರಾ |

ಸೂರ್ಯಾಂ ಯತ್ಪತ್ಯೇ ಶಂಸಂತೀಂ ಮನಸಾ ಸವಿತಾ ದದಾತ್ ||

ಎಂಬ ಮಂತ್ರದಿಂದ ಹೋಮವನ್ನು ಮುಗಿಸಿ, ಸತಿಯೊಡನೆ ನಿಯಮದಿಂದ ತಪೋ ನಿರತನಾದ ಅಶ್ವಪತಿ ಹದಿನೆಂಟು ವರ್ಷ ಕಾಲವನ್ನು ಕಳೆದನು. ಆಗ ಸಾವಿತ್ರಿ ದೇವಿಯು ಪ್ರೀತಳಾಗಿ, ಅವನಿಗೆ ಪ್ರತ್ಯಕ್ಷಳಾದಳು. 'ರಾಜನ್ ! ನಿನ್ನ ಶ್ರದ್ಧಾಭಕ್ತಿ ಗಳಿಗೆ ಮೆಚ್ಚಿರುವೆನು, ಬೇಕಾದ ವರವನ್ನು ಬೇಡು!' ಎಂದ ಸಾವಿತ್ರೀದೇವಿಗೆ ನಮಿಸಿ 'ದೇವಿ ! ಕುಲದೀಪಕರಾದ ಪುತ್ರರನ್ನು ದಯಪಾಲಿಸು !' ಎಂದು ಬೇಡಿದನು. ಸಾವಿತ್ರಿದೇವಿಯು 'ನಿನ್ನ ಅಭಿಪ್ರಾಯವನ್ನರಿತು, ನಾನು ಪಿತಾಮಹನನ್ನು ನಿನಗೆ ಪುತ್ರಪ್ರಾಪ್ತಿಯಾಗುವಂತೆ ಬೇಡಿದೆನು. ಬ್ರಹ್ಮದೇವನು ನಿನಗೆ ಸತ್ಪುತ್ರಿಯನ್ನು ಕರುಣಿಸಿರುವನು. ಪುತ್ರರೂ ಆದಾರು ! ಸುಖಿಯಾಗಿರು !' ಎಂದು ವರವಿತ್ತು ಅಂತರ್ಹಿತಳಾದಳು.

ಅಶ್ವಪತಿಯು ಸ್ವಪುರವನ್ನು ಸೇರಿ, ಮೊದಲಿನಂತೆ ಪ್ರಜಾಪಾಲನ ನಿರತನಾಗಿ ದ್ದನು. ಕೆಲಕಾಲವಾಯಿತು ದೈವಾನುಗ್ರಹದಿಂದ ರಾಜಪತ್ನಿಯು ಗರ್ಭಿಣಿಯಾಗಿ ದಶಮಾಸವಾಗಲು ದಿವ್ಯಕನ್ಯಾರತ್ನವನ್ನು ಪಡೆದಳು. ಸಾವಿತ್ರಿದೇವಿಯ ದಯೆಯಿಂದ ಜನಿಸಿದುದರಿಂದ ಆ ಕನ್ಯೆಗೆ ಸಾವಿತ್ರಿ ಎಂದು ಹೆಸರಿಟ್ಟು ರಾಜನು ಅವಳನ್ನು ಬೆಳೆಸಿ ದನು. ಎರಡನೆಯ ಶ್ರೀದೇವಿ ಎಂಬಂತೆ ಬೆಳೆದು, ಯೌವನವತಿಯಾದ ಮಗಳನ್ನು ಕಂಡು, ರಾಜನು ಸರಿಯಾದ ವರವನ್ನು ಹುಡುಕತೊಡಗಿದನು. ಪದ್ಮವಿಶಾಲ ನಯನೆಯು, ಸುಮಧ್ಯೆಯು, ಬಿಂಬೋಷ್ಠಿಯು, ಮಂದಮದವಾರಣಗಮನೆಯು, ಚಂದ್ರವದನೆಯು ಆದ ರಾಜಕುಮಾರಿಯ ಲಾವಣ್ಯ ತೇಜೋವಿಲಾಸಗಳನ್ನು ನೋಡಿ, ಅವಳನ್ನು ವರಿಸಲು ಹೆದರಿ ರಾಜಕುಮಾರರು ಹೊರಟುಹೋಗುತ್ತಿದ್ದರು.

ಒಂದುದಿನ ಸಾವಿತ್ರಿಯು ಸ್ನಾತಳಾಗಿ, ಪೀತಾಂಬರವನ್ನುಟ್ಟು, ವಿಧಿಯಂತೆ ದೇವತೆಗಳನ್ನು ಪೂಜಿಸಿ, ಅವರ ನಿರ್ಮಾಲ್ಯವನ್ನು ಮುಡಿದು, ಮೂರ್ತಿಮಂತಳಾದ ಶ್ರೀದೇವಿಯಂತೆ ಕಂಗೊಳಿಸುತ್ತಾ, ತಂದೆಯ ಸಭೆಗೆ ಬಂದಳು. ಸಾವಿತ್ರಿಯು ತಂದೆಗೆ ವಂದಿಸಿ ನಿಂತಳು. ಆಗ ರಾಜನು 'ಇಂತಹ ಸುಂದರಿಯನ್ನು ಬೇಡುವ

ರಾಜಪುತ್ರನಿಲ್ಲವಲ್ಲ !' ಎಂದು ಚಿಂತಿಸಿ, 'ಪುತ್ರಿ ! ಕನ್ಯೆಯನ್ನು ಸರಿಯಾದ ವರನಿಗೆ ಕೊಡದ ತಂದೆ ; ಋತು ಸಮಯದಿ ಸತಿಯನ್ನು ಸೇರದ ಪತಿ ; ಅಪತಿಕಳಾದ ಮಾತೆಯನ್ನು ರಕ್ಷಿಸದ ಪುತ್ರ ಇವರು ಮೂವರು ನಿಂದ್ಯರೆನಿಸುವರು. ನಿನ್ನ ಸೌಂದರ್ಯಾತಿಶಯಕ್ಕೆ ಸರಿದೂಗಲಾಗದೆ ರಾಜಕುಮಾರರಾರೂ ನಿನ್ನ ಕೈಪಿಡಿಯಲು ಬಂದಿಲ್ಲ. ಚಿಂತೆಯಿಲ್ಲ. ನೀನೇ ಸರಿಯಾದ ವರನನ್ನು ಹುಡುಕಿಕೊಂಡು ಬಾ. ನಿನ್ನಿಚ್ಛೆಯಂತೆ ಆ ರಾಜಕುಮಾರನಿಗೆ ನಿನ್ನನ್ನಿತ್ತು ಮದುವೆ ಮಾಡಿಕೊಡುವೆನು' ಎಂದು ಅವಳನ್ನು ಪರಿವಾರದೊಡನೆ ಕಳಿಸಿದನು.

ಸಾವಿತ್ರಿಯು ಕನಕರಥಾರೂಢಳಾಗಿ ಸಚಿವರು ಪರಿವಾರದವರು ಅನುಸರಿಸಿ ಬರುತ್ತಿರಲು, ವಿವಿಧದೇಶಗಳನ್ನು, ವನಗಳನ್ನು ಅತಿಕ್ರಮಿಸಿ, ಸರಿಯಾದ ವರನನ್ನು ಕಂಡು ಹಿಂದಿರುಗಿಬಂದಳು.

ಅಶ್ವಪತಿಯು ಸಭೆಯಲ್ಲಿ ನಾರದನೊಡನೆ ಮಾತಾಡುತ್ತಿರುವಾಗ ಸಾವಿತ್ರಿ ತಂದೆಯನ್ನು ಕಾಣಲು ಬಂದಳು. ಮುನಿರಾಜನಿಗೂ, ರಾಜನಿಗೂ ವಂದಿಸಿ, ತನ್ನ ವರಯಾತ್ರೆಯು ಸಫಲವಾಯಿತೆಂದು ತಿಳಿಸುತ್ತಿಂತೆಂದಳು—'ಸಾಲ್ವದೇಶದ ರಾಜನಾಗಿದ್ದ ದ್ಯುಮತ್ಸೇನನಿಗೆ ಸತ್ಯವಂತನೆಂಬ ಸುತನಿರುವನು. ಸತ್ಯವಂತನು ಬಾಲನಿರುವಾಗ ದೈವವಿಲಾಸದಿಂದ ದ್ಯುಮತ್ಸೇನನು ಅಂಧನಾದನು. ಅವನ ಪೂರ್ವ ಶತ್ರುಗಳು ಸಮಯವನ್ನರಿತು, ಅವನನ್ನು ವನಕ್ಕಟ್ಟಿ, ರಾಜ್ಯವನ್ನಾಳುತ್ತಿರುವರು. ಸತ್ಯವಂತನೀಗ ಮಾತಾಪಿತೃಸೇವಾಪರನಾಗಿ ವನದಲ್ಲಿರುವನು. ಮಹಾನುಭಾವನಾದ ದ್ಯುಮತ್ಸೇನನು ರಾಜ್ಯಹೀನನಾದರೂ, ನೇತ್ರಹೀನನಾದರೂ ಧರ್ಮಹೀನನಾಗದಿರುವನು. ಅವನ ಪತ್ನಿಯೂ ದುಃಖಾವೇಗದಿಂದ ಅತ್ತತ್ತು ಅಂಧಳಾಗಿರುವಳು. ಅವರಿಗೆ ತಕ್ಕ ಮಗನಾಗಿ ಸತ್ಯವಂತನು ಗುಣಖನಿ ಎನಿಸಿ, ಆಶ್ರಮದ ಋಷಿವರರ ಪ್ರೀತಿಗೆ ಪಾತ್ರನಾಗಿರುವನು. ಅವರನ್ನು ನಾನು ವರಿಸಿ ಬಂದಿರುವೆನು !' ಇಂತು ನುಡಿದ ಸಾವಿತ್ರಿಯ ಮಾತನ್ನಾಲಿಸಿ ನಾಗದನು ಆಶ್ಚರ್ಯಸಂಭ್ರಮಾನ್ವಿತನಾಗಿ ಇಂತೆಂದನು—

ರಾಜನ್ ! ಸತ್ಯಶೀಲರಾದ ಮಾತಾಪಿತೃಗಳ ಪುಣ್ಯಫಲವೆಂದು ತಿಳಿದು ಮುನಿವರರು ಸತ್ಯವಂತನೆಂದು ಹೆಸರಿಸಿದ ಸಾಲ್ವರಾಜಕುಮಾರನು ಸಾರ್ಥಕನಾಮನಾಗಿರುವನು. ಬಾಲ್ಯದಲ್ಲಿ ಅವನು ಮೃಣ್ಮಯಾಶ್ವಗಳನ್ನು ಮಾಡಿ, ಆಡುತ್ತಿದ್ದನಾದುದರಿಂದ, ಅವನನ್ನು ಚಿತ್ರಾಶ್ವನೆಂಬುವರು. ಸೂರ್ಯನಂತೆ ತೇಜಸ್ವಿಯು, ಬೃಹಸ್ಪತಿಯಂತೆ ಬುದ್ಧಿವಂತನು, ಮಹೇಂದ್ರನಂತೆ ವೀರನು, ವಸುಧೆಯಂತೆ ಕ್ಷಮಾಶೀಲನು, ಶಿಬಿಯಂತೆ ದಾನರತನು, ರಂತಿದೇವನಂತೆ ದಯಾವಂತನು, ಅಶ್ವಿನಿಯಂತೆ ರೂಪವಂತನು ಆದ ಸತ್ಯವಂತನನ್ನು ಪೋಲ್ವ ಸುಗುಣಿಗಳು ಭೂಲೋಕದಲ್ಲಿಲ್ಲ. ಆದರೆ ಒಂದು ದೋಷವಿದೆ. ಅದು ಅನಿವಾರ್ಯವಾಗಿದೆ.

ಚಂದ್ರನಲ್ಲಿ ಕಳಂಕವಿದ್ದಂತೆ, ಸತ್ಯವಂತನಲ್ಲಿ ಅಲ್ಪಾಯುದೋಷವಿದೆ. ಇನ್ನೊಂದು ವರ್ಷಕ್ಕೆ ಸರಿಯಾಗಿ ಅವನ ಆಯುರ್ದಾಯವು ಮುಗಿಯಲಿದೆ.

ಆ ಮಾತನ್ನಾಲಿಸಿ, ಅಶ್ವಪತಿಯು ಭಯಚಕಿತನಾದನು. "ಸಾವಿತ್ರಿ! ಸತ್ಯವಂತನಲ್ಲಿರುವ ಮಹಾದೋಷವನ್ನರಿತೆಯಾ? ಬಿಡು ಅವನಾಸೆಯನ್ನು. ಇನ್ನೋರ್ವನನ್ನು ವರಿಸು!" ಎಂದ ತಂದೆಗೆ ಸಾವಿತ್ರಿ ಇಂತೆಂದಳು—"ಜನಕ! ಒಂದು ಸಲ ಕೊಟ್ಟೆನೆಂದಮೇಲೆ ಹಿಂದೆಗೆಯಲಾಗದು. ಕನ್ಯೆಯನ್ನು ಕೊಡುವುದೊಂದೇಸಲ! ಸತ್ಯವಂತನನ್ನು ನಾನು ಮನಸಾ ವರಿಸಿರುವೆನು. ಅಲ್ಪಾಯುವಾಗಲಿ, ದೀರ್ಘಾಯು ವಾಗಲಿ ಅವನೇ ನನ್ನ ಪತಿ. ಅವನನ್ನು ಹೊರತು ಅನ್ಯನನ್ನು ನಾನು ಎಂದಿಗೂ ವರಿಸಲಾರೆನು. ಮನೋವಾಕ್ಕಾಯಗಳೆಂಬ ತ್ರಿಕರಣಗಳಲ್ಲಿ ಮನವೇ ಮುಖ್ಯ ವಾಗಿದೆ. ಮನದಿಂದ ವರಿಸಿಬಂದ ಪತಿಯನ್ನು ಸರ್ವಥಾ ತ್ಯಜಿಸಲಾರೆನು." ಸಾವಿತ್ರಿಯ ಸಾತ್ವಿಕ ಧೈರ್ಯವನ್ನು ಮನಸಾ ಮೆಚ್ಚಿ ನಾರದನು "ರಾಜನ್! ಆಲೋಚಿಸಬೇಡ! ನಿನ್ನ ಮಗಳ ನಿಶ್ಚಯದಂತೆ ಗುಣವಂತನಾದ ಸತ್ಯವಂತನಿಗೆ ಅವಳನ್ನು ಕೊಡು! ಶುಭವಾಗಲಿ ಸಾವಿತ್ರಿಗೆ! ಅವಳ ವೈವಾಹಿಕ ಜೀವನವು ನಿರ್ವಿಘ್ನವಾಗಲಿ! ಶ್ರೀಹರಿಕೃಪೆಯಿಂದ ದುರ್ಲಭವೂ ಸುಲಭವಾಗುವುದು" ಎಂದು ಹೇಳಿ, ಸಾವಿತ್ರಿಯನ್ನಾಶೀರ್ವದಿಸಿ, ಹೊರಟುಹೋದನು.

ಅಶ್ವಪತಿಯು ಕುಟುಂಬ ಪರಿವಾರ ಸಹಿತನಾಗಿ ದ್ಯುಮತ್ಸೇನನ ಆಶ್ರಮವನ್ನು ಸೇರಿದನು. ಮಂತ್ರಿಗಳು ವೈವಾಹಿಕ ಸಾಮಗ್ರಿಗಳನ್ನು ತಂದು ಹಿಂಬಾಲಿಸಿದರು. ಮೇಧ್ಯಾರಣ್ಯದಲ್ಲಿ ತಪಶ್ಶೀಲನಾಗಿದ್ದ ರಾಜನನ್ನು ಕಂಡು, ವಂದಿಸಿ, ಅವನಿತ್ತ ವ್ಯಾಘ್ರಾಜಿನದಲ್ಲಿ ಕೂತು ಅಶ್ವಪತಿಯು ಇಂತೆಂದನು—"ರಾಜರ್ಷಿವರ! ಇವಳು ನನ್ನ ಮಗಳು. ಸಾವಿತ್ರಿ ಎಂಬುವರಿವಳನ್ನು. ಮಹಾನುಭಾವನಾದ ನಿನಗೆ ಸೊಸೆಯನ್ನಾಗಿ ಸಮರ್ಪಿಸಲು ಬಂದಿರುವ ನನ್ನ ಪ್ರಾರ್ಥನೆಯನ್ನು ಮನ್ನಿಸು!" ಆ ಮಾತನ್ನಾಲಿಸಿ ದ್ಯುಮತ್ಸೇನನು ಖಿನ್ನನಾಗಿ, "ರಾಜನ್! ರಾಜ್ಯವನ್ನು ಕಳೆದು ಕೊಂಡು ವನದಲ್ಲಿರುವ ನನ್ನ ಮನೆಯಲ್ಲಿ ಸುಖವಿಲ್ಲ. ರಾಜ್ಯದ ಸಿರಿಸಂಪತ್ತಿನ ಸುಪ್ಪತ್ತಿಗೆಯಲ್ಲಿ ಬೆಳೆದ ನಿನ್ನ ಮಗಳನ್ನು ಸತ್ಯವಂತನಿಗೆ ಕೊಡುವ ಮನಸ್ಸೇಕೆ ಮಾಡಿದೆ?" ಎಂದು ಕೇಳಿದನು. ಅಶ್ವಪತಿಯು ಚಲಿತನಾಗದೆ, "ರಾಜನ್! ಸುಖ ದುಃಖಗಳು ಸ್ಥಿರವಲ್ಲ. ಕರ್ಮಫಲವಾಗಿ ಬರುವ ವಿಪತ್ಸಂಪತ್ತುಗಳು ಧೀರರ ಮನ ವನ್ನು ಕೆಡಿಸಲಾರವು. ಪ್ರೇಮದಿಂದ ವರಿಸಿ ಬಂದ ನನ್ನ ಮಗಳನ್ನು ಸ್ವೀಕರಿಸಿ, ಸ್ನೇಹದಿಂದ ಬೇಡುವ ನನ್ನ ಕೋರಿಕೆಯನ್ನು ನೆರವೇರಿಸು" ಎಂದು ಪ್ರಾರ್ಥಿಸಿದನು.

ದ್ಯುಮತ್ಸೇನನು ಋಷಿವರರನ್ನು ಕರೆತರಿಸಿ, ಅವರ ಅಪ್ಪಣೆಯನ್ನು ಪಡೆದು ಸತ್ಯವಂತನಿಗೆ ಸಾವಿತ್ರಿಯನ್ನು ವಿವಾಹವಿಧಿ ವಿಧಾನದಿಂದ ಸ್ವೀಕರಿಸಿದನು. ಅಶ್ವಪತಿಯು ಮಗಳನ್ನು ಮದುಮಗನಾದ ಸತ್ಯವಂತನಿಗೊಪ್ಪಿಸಿ, ದ್ಯುಮತ್ಸೇನಾದಿ ಗಳನ್ನು, ದುಹಿತೃಜಾಮಾತೃಗಳನ್ನು ಸತ್ಕರಿಸಿದನು. ವಿಪ್ರವರರಿಗೆ ಗೋದಾನ

ದಕ್ಷಿಣೆಗಳನ್ನಿತ್ತು, ತಾನು ಮದ್ರಪುರಿಗೆ ತೆರಳಿದನು. ಸಾವಿತ್ರೀ-ಸತ್ಯವಂತರು ಮುನಿ ಜನರ ಆಶೀರ್ವಾದವನ್ನು ಪಡೆದು ವೈವಾಹಿಕ ಜೀವನವನ್ನಾರಂಭಿಸಿದರು. ಸಾವಿತ್ರಿಯು ತಂದೆಯು ತನಗೆ ಕೊಟ್ಟ ವಸ್ತ್ರಾಭರಣಗಳನ್ನು ದಾನಮಾಡಿ, ವಲ್ಕಲ ಗಳನ್ನು ಧರಿಸಿದಳು. ಶೀಲ ವಿನಯ ದಮ ಪಾತಿವ್ರತ್ಯಾದಿ ಗುಣಗಳಿಂದ ಆಕೆ ಎಲ್ಲರ ಪ್ರೀತಿಯನ್ನು ಗಳಿಸಿದಳು. ಸ್ನಾನ, ಪಾನ, ವಸನ, ಪಾದ ಸಂವಾಹನ ರೂಪ ಶರೀರ ಸೇವೆ ಮಾಡಿ ಅತ್ತೆಯನ್ನು ; ದೇವಪೂಜಾ ಸಾಧನ ಸಂಪಾದನ, ಮೌನ, ನಿಯಮ ರೂಪ ದೇವ ಸೇವೆಯಿಂದ ಮಾವನನ್ನು ; ಪ್ರಿಯವಚನ, ಶಮ, ಪ್ರೇಮೋಪಚಾರ ಗಳಿಂದ ಗಂಡನನ್ನು ; ಸದ್ಗುಣದಿಂದ ಆಶ್ರಮದ ಋಷಿಜನರನ್ನು; ಬಹು ಸಂತೋಷ ಪಡಿಸಿದಳು. ಕಾಲಚಕ್ರವು ಉರುಳುತ್ತಿತ್ತು.

ಸಾವಿತ್ರಿಯು ಅಪ್ರಮತ್ತಳಾಗಿ ದಿನಗಳನ್ನೆಣಿಸುತ್ತಾ, ಒಂದು ವರ್ಷಕ್ಕೆ ಇನ್ನು ನಾಲ್ಕೇ ದಿನ ಉಳಿದಿರುವುದನ್ನರಿತಳು. ತ್ರಿರಾತ್ರವ್ರತವನ್ನು ಪ್ರಾರಂಭಿಸಿ, ಆಕೆ ಸಾವಿತ್ರೀದೇವಿಯನ್ನೂ ಶ್ರೀಲಕ್ಷ್ಮೀನಾಥನನ್ನೂ ನಿಯಮದಿಂದ ಪೂಜಿಸಿದಳು. ದ್ಯುಮತ್ಸೇನನು ಅವಳು ಉಪವಾಸವಿರುವುದನ್ನು ತಿಳಿದು, ನಿವಾರಿಸಿದರೂ ಸಾವಿತ್ರಿಯು ವಿಶೇಷಕಾರಣದಿಂದ ತಾನು ವ್ರತವನ್ನು ಹಿಡಿದಿರುವುದಾಗಿ ವಿಜ್ಞಾಪಿಸಿ, ಸಮಾಧಾನಪಡಿಸಿದಳು. ಸಾವಿತ್ರಿಯು ಕಾಷ್ಠಪ್ರತಿಮೆಯಂತೆ ನಿಂತು ಮೂರು ರಾತ್ರಿ ಗಳನ್ನು ಕಳೆದಳು. ನಾಲ್ಕನೇ ದಿನವು ಉದಿತವಾಗಲು ದುಃಖಾನ್ವಿತಳಾದ ಸಾವಿತ್ರಿಯು ಅಗ್ನಿಯಲ್ಲಿ ಆಹುತಿಗಳನ್ನು ಪತಿಯಿಂದ ಕೂಡಿ ಸಮರ್ಪಿಸಿ, ವಿಪ್ರವೃದ್ಧರನ್ನು ಪೂಜಿಸಿ ಚಿಂತಾಕಾತರಳಾಗಿದ್ದಳು. ವಿಪ್ರರು, ಹಿರಿಯರು ಅವಳನ್ನು 'ದೀರ್ಘಸುಮಂಗಲೀ ಭವ !' ಎಂದು ಹರಸಿ, ಇನ್ನು ಪಾರಣೆಮಾಡೆಂದರು. ನಾರದವಚನದಂತೆ ಪತಿಯ ಮೃತಿಕಾಲವನ್ನು ನಿರೀಕ್ಷಿಸುತ್ತಾ ನಿಂತ ಚಿಂತಾಮೂರ್ತಿಯಾದ ಸಾವಿತ್ರಿಯನ್ನು ಕರೆದು ಅತ್ತೆಮಾವಂದಿರು ವ್ರತವನ್ನು ಮುಗಿಸಿ ಆಹಾರವನ್ನು ಸ್ವೀಕರಿಸೆಂದರು. ಸೂರ್ಯಾಸ್ತಮಯವಾದಮೇಲೆ ಪಾರಣೆಮಾಡುವೆನೆಂದು ಕೂತಿರುವ ಸಾವಿತ್ರಿಗೆ ಪರಶುವನ್ನು ಧರಿಸಿ ಕಾಷ್ಠಗಳನ್ನು ತರಲು ಅಡವಿಗೆ ತೆರಳಿದ ಸತ್ಯವಂತನು ಗೋಚರ ನಾದನು. ಸಾವಿತ್ರಿಯು ತತ್‌ಕ್ಷಣವೇ ಎದ್ದು ಅವನನ್ನು ಹಿಂಬಾಲಿಸಿ ತಾನೂ ಅವನ ಹಿಂದೆ ವನಕ್ಕೆ ಬರುವುದಾಗಿ ತಿಳಿಸಿದಳು. ವ್ರತೋಪವಾಸ ಕೃಶಳಾದ ಸಾವಿತ್ರಿ ಯನ್ನು ತಡೆದು ಸತ್ಯವಂತನು ಹೊರಡಲನುವಾದನು. "ನನಗೆ ಉಪವಾಸದಿಂದ ಶ್ರಮವಾಗಿಲ್ಲ. ನಿನ್ನ ಹಿಂದೆ ಈ ಒಂದು ದಿನ ವನದಲ್ಲಿ ಸಂಚರಿಸಬೇಕೆಂದಿದೆ. ನಿಷೇಧಿಸದೆ ನನ್ನನ್ನು ಕರೆದುಕೊಂಡು ಹೋಗು" ಎಂದು ನಿರ್ಬಂಧಿಸಿದ ಸತಿಗೆ ಸತ್ಯವಂತನು "ಹಿರಿಯರ ಅಪ್ಪಣೆ ಪಡೆದು ಬಾ" ಎಂದನು.

ಅತ್ತೆಮಾವಂದಿರಿಗೆ ನಮಸ್ಕರಿಸಿ ಸಾವಿತ್ರಿ "ಪೂಜ್ಯರೇ ! ಫಲ ಕುಸುಮ ಕಾಷ್ಠ ಗಳನ್ನು ತರಲು ವನಕ್ಕೆ ಹೋಗುವ ನಿಮ್ಮ ಸುತನ ಹಿಂದೆ ಹೋಗಲು ನನಗೆ ಅಪ್ಪಣೆ ಕೊಡಿರಿ. ಒಂದು ವರ್ಷವಾಯಿತು ತಮ್ಮ ಆಶ್ರಮವನ್ನು ಸೇರಿ . ಇಂದಿನವರೆಗೂ

ಫಲಕುಸುಮಭರಿತವಾದ ವನವನ್ನು ನಾನು ನೋಡಿಲ್ಲ. ಇಂದು ನನ್ನ ಕೋರಿಕೆಯನ್ನು ನೆರವೇರಿಸಿರಿ ! ಆರ್ಯಪುತ್ರನೊಂದಿಗೆ ವನವನ್ನು ನೋಡಿಬರುವೆನು" ಎಂದು ಪ್ರಾರ್ಥಿಸಿದಳು. ದ್ಯುಮತ್ಸೇನನು "ಅಮ್ಮಾ ! ಉಪವಾಸವಿರುವೆ, ಪಾರಣೆಯಾದರೂ ಮಾಡಿಲ್ಲ. ಎಂದೂ ಏನನ್ನೂ ಬಯಸಿ ಬೇಡದ ನೀನಿಂದು ವನಗಮನವನ್ನು ಯಾಚಿಸುವೆ, ಅಪ್ರಮತ್ತಳಾಗಿರು ! ಸತ್ಯವಂತನೊಡನೆ ಸುಖವಾಗಿ ಬೇಗ ಬಾ" ಎಂದಾಶೀರ್ವದಿಸಿ ಕಳಿಸಿದನು. ಹಿರಿಯರ ಅಪ್ಪಣೆ ಪಡೆದು ಸಾವಿತ್ರಿಯು ಸತ್ಯವಂತನನ್ನು ಅನುಸರಿಸಿ ವನವನ್ನು ಪ್ರವೇಶಿಸಿದಳು. ಅವಳ ಹೃದಯವು ಅಗ್ನಿಪರ್ವತವಾಗಿದ್ದರೂ ವದನವು ಮಂದಹಾಸ ಚಂದ್ರಮಂಡಲವಾಗಿತ್ತು. ಹರಿಯುವ ನದಿಗಳನ್ನು, ಅಂಬರವನ್ನು ಚುಂಬಿಸುವ ವೃಕ್ಷಗಳನ್ನು, ಕುಣಿಯುವ ಮಯೂರಗಳನ್ನು, ಪಾಡುವ ಕೋಕಿಲೆಗಳನ್ನು ನೋಡುತ್ತಾ ನಡೆವ ಸತ್ಯವಂತನ ಹೊರತಿನ್ನೇನನ್ನೂ ಕಾಣದೆ, ಅವನ ಹೆಜ್ಜೆಯಲ್ಲಿ ಹೆಜ್ಜೆಯನ್ನಿಟ್ಟು ಸಾವಿತ್ರಿ ಕರಾಳಖಡ್ಗಧಾರಾಗ್ರದಲ್ಲಿ ನಡೆಯುವಂತಿದ್ದಳು.

ಸತ್ಯವಂತನು ಫಲಕುಸುಮಗಳನ್ನಾರಿಸಿ, ಸತಿಗಿತ್ತು, ಕಟ್ಟಿಗೆಯನ್ನು ಕಡಿಯಲು ಮರವನ್ನೇರಿದನು. ವ್ಯಾಯಾಮದಿಂದ ಬಳಲಿದ ಸತ್ಯವಂತನು ಕೆಳಗಿಳಿದು ಬಂದು "ಸಾವಿತ್ರೀ ! ಮೈ ಕೈ ನೋಯುತ್ತಿದೆ. ವಿಪರೀತ ತಲೆಶೂಲೆ ಬಾಧಿಸುತ್ತಿದೆ. ನಿಲ್ಲಲಾರೆನು" ಎಂದು ಅವಳ ತೊಡೆಯಲ್ಲಿ ತಲೆಯನ್ನಿಟ್ಟು ಮಲಗಿದನು. ಸಾವಿತ್ರಿಗೆ ನಾರದನ ವಚನದ ನೆನಪು ಬಂತು. ಸತ್ಯವಂತನು ಚೇತನಶೂನ್ಯನಾದನು. ಅವನ ಪಾರ್ಶ್ವದಲ್ಲಿ ಭಯಂಕರ ಪುರುಷನೋರ್ವನು ನಿಂತು, ಪಾಶದಿಂದ ಎಳೆದು ಸತ್ಯವಂತನ ಜೀವವನ್ನು ಸ್ವಾಧೀನಪಡಿಸಿಕೊಂಡನು. ಸಾವಿತ್ರಿ ಅವನನ್ನು ನೋಡಿದಳು. ಶ್ಯಾಮವರ್ಣನು, ಬದ್ಧಕೇಶಜಾಲನು, ರಕ್ತವಸನನು, ಆದಿತ್ಯಸಮ ತೇಜೋವಿರಾಜಿತನು, ಅರುಣನೇತ್ರನು, ದೀರ್ಘಗಾತ್ರನು ಆದ ಮಹಾಪುರುಷನನ್ನು ನೋಡಿ, ಅವಳ ಮೈ ನಡುಗಿತು. ಕಣ್ಣುಗಳಿಗೆ ಕತ್ತಲು ಕವಿಯಿತು. ಅವಳು ಧೈರ್ಯವಹಿಸಿ, ಎದ್ದು ಅವನಿಗೆ ಸಾಷ್ಟಾಂಗವೆರಗಿ "ಮಹಾನುಭಾವ ! ನೀನಾರು ? ದೇವಪುರುಷನಂತಿರುವೆ ? ಏಕೆ ಬಂದೆ ?" ಎಂದು ಕೇಳಿದಳು.

ಯಮರಾಜನು "ಸಾವಿತ್ರೀ ! ನೀನು ಪತಿವ್ರತೆ ಮತ್ತು ವ್ರತನಿರತೆ, ಆದುದರಿಂದಲೇ ನನ್ನನ್ನು ನೋಡಿದೆ ! ನಾನು ಯಮರಾಜನು. ಆಯುರ್ದಾಯವು ಮುಗಿದುಬಂದ ನಿನ್ನ ಪತಿಯನ್ನು ಕರೆದೊಯ್ಯಲು ಬಂದಿರುವೆನು" ಎಂದನು.

ಸಾವಿತ್ರಿ—ಭಗವನ್ ! ಮನುಜ ಜೀವರನ್ನು ಕರೆದುಕೊಂಡು ಹೋಗಲು ನಿನ್ನ ದೂತರು ಬರುವರೆಂದು ಕೇಳಿದ್ದೆನು. ಇಂದು ನೀನೇ ಸ್ವಯಂ ಬಂದುದು ಏತಕ್ಕೆ ?

ಯಮ—ಕೇಳು ! ಸತ್ಯವಂತನು ಧರ್ಮಸಂಯುಕ್ತನಾಗಿರುವನು. ಇಂತಹ ಗುಣವಂತನನ್ನು ನಾನೇ ಒಯ್ಯಲು ಬಂದಿರುವೆನು.

*

ಇಂತು ನುಡಿದು ಯಮರಾಜನು ಸತ್ಯವಂತನ ಜೀವವನ್ನು ಪಾಶದಿಂದ ಬಿಗಿದು ಕಟ್ಟಿ, ಹಿಡಿದುಕೊಂಡು ದಕ್ಷಿಣದಿಕ್ಕಿಗೆ ಹೊರಟನು.

ಆಗ ಪತಿವ್ರತೆಯಾದ ಸಾವಿತ್ರಿಯು ಪ್ರಾಣರಹಿತ ಪತಿಶರೀರವನ್ನು ನೆಲದಲ್ಲಿಟ್ಟು ದುಃಖಾರ್ತಳಾಗಿ ಯಮನನ್ನು ಹಿಂಬಾಲಿಸಿ "ಯಮದೇವ! ನನ್ನ ಪತಿಯನ್ನನುಸರಿಸಿ ಬರುವುದು ನನಗೆ ಧರ್ಮವಾಗಿದೆ. ತಪಸ್ಸು, ಗುರುಭಕ್ತಿ, ಪತಿ ಸ್ನೇಹ, ವ್ರತಮಹಿಮೆ, ನಿನ್ನ ಅನುಗ್ರಹ ಇಷ್ಟಿರಲು ನನಗೆ ಆತಂಕವಿಲ್ಲ. ಮೈತ್ರಿಯು ಸಾಪ್ತಪದೀನವೆಂಬರು. ಮಿತ್ರನೆಂದು ನಂಬಿ ನಿನ್ನನ್ನು ಅನುಸರಿಸಿ ಬರುತ್ತಿರುವೆನು. ಅಜಿತೇಂದ್ರಿಯರಿಗೆ ಧರ್ಮಸಂಗ್ರಹವಾಗಲಾರದು. ಜಿತೇಂದ್ರಿಯರೇ ಧರ್ಮಫಲ ವನ್ನು ಪೊಂದುವರು. ಬ್ರಹ್ಮಚಾರಿಗಳಾಗಿ ಗುರುಸೇವೆಯನ್ನೂ, ಗೃಹಸ್ಥರಾಗಿ ಅತಿಥಿ ವಿಪ್ರ ಗೋ ಸಜ್ಜನ ಪೋಷಣವನ್ನೂ, ಸನ್ಯಾಸಿಗಳಾಗಿ ಪರಬ್ರಹ್ಮ ಜಿಜ್ಞಾಸೆಯನ್ನೂ ಮಾಡಿದವರೇ ಶ್ರೀಹರಿ ಪ್ರಸಾದ ಪಾತ್ರರಾಗುವರು. ಸರ್ವಾಶ್ರಮದವರೂ, ಸರ್ವ ವರ್ಣದವರೂ, ಗುರು ವಿಪ್ರ ದೇವ ಸೇವೆಯನ್ನೂ, ಶ್ರೀಹರಿತತ್ವ ವಿಚಾರವನ್ನೂ ಯಥಾರ್ಥವಾಗಿ ಮಾಡಿ ಮುಕ್ತರಾಗಬಹುದು. ಗೃಹಸ್ಥಾಶ್ರಮವು ಸರ್ವಜನರ ಜೀವಾತುವಾಗಿದೆ. ಪತಿಯನ್ನು ಅಗಲಿ ನಾನು ಧರ್ಮವನ್ನೆಂತು ನಡೆಸಲಿ?" ಎಂದಳು.

ಯಮರಾಜನು "ಸಾಧ್ವಿ! ನಿನ್ನ ಧರ್ಮಸಮ್ಮತ ವಚನದಿಂದ ಆನಂದಿತ ನಾದೆನು. ಸ್ವರಾಕ್ಷರ ವ್ಯಂಜನಗಳನ್ನರಿತು ಯುಕ್ತಿಯುಕ್ತವಾಗಿ ಪ್ರಯೋಗಿಸಿದ ಶಬ್ದವು ಸರ್ವಶ್ರೇಯಸ್ಸಾಧಕವಾಗಿರುವುದು. ಸತ್ಯವಂತನ ಜೀವವನ್ನು ಬಿಟ್ಟು, ಬೇಕಾದ ವರವನ್ನು ಬೇಡು!" ಎಂದನು. ಸಾವಿತ್ರಿಯು "ಧರ್ಮರಾಜ! ರಾಜ್ಯವನ್ನು ಕಳೆದುಕೊಂಡು ಕುರುಡನಾಗಿ ವನದಲ್ಲಿರುವ ನಮ್ಮ ಮಾವನಿಗೂ ನಮ್ಮತ್ತೆಗೂ ಕಣ್ಣು ಬರಲಿ! ಅವನು ತೇಜೋಬಲ ಸಂಪನ್ನನಾಗಲಿ!" ಎಂದು ಬೇಡಿದಳು. ಆ ವರವನ್ನು ಕರುಣಿಸಿ, ಯಮನು ಮುಂದೆ ಸಾಗಿದನು. ಹಿಂದೆ ಬರುವ ಸತಿಯನ್ನು ಕಂಡು ಯಮನು "ಅಮ್ಮಾ ಸಾವಿತ್ರಿ! ಹಿಂದೆ ಬರಬೇಡ! ಈ ಮಾರ್ಗವು ಬಹು ಕಷ್ಟಗಮನವಾಗಿದೆ" ಎಂದನು. ಸಾವಿತ್ರಿ "ಸೂರ್ಯತನಯ! ಭರ್ತೃಸಮೀಪ ದಲ್ಲಿರುವ ನನಗೆ ಶ್ರಮವಿಲ್ಲ. ಕಷ್ಟವೂ ಇಲ್ಲ. ನನ್ನ ಪತಿಯೊಡನೆ ನನ್ನನ್ನೂ ಕರೆದು ಕೊಂಡು ಹೋಗು! ಒಂದು ಸಲ ಮಾತನಾಡುವ ಮಾತ್ರದಿಂದಲೇ ಸಜ್ಜನರು ಜ್ಞಾನಫಲಪ್ರದರಾಗಿ ಮಿತ್ರರೆನಿಸುವರು. ಪರಮಾಪ್ತನಾದ ನಿನ್ನ ಸಹಭಾಷಣದಿಂದ ನಾನು ಪಾವಿತಳಾದೆನು" ಎಂದಳು. ಯಮನಾಮಾತಿಗೆ ಮೆಚ್ಚಿ "ಸಾವಿತ್ರಿ! ಪಂಡಿತ ರಂತೆ ಮಾತನಾಡುವೆ! ನಿನ್ನ ಮಾತನ್ನಾಲಿಸಿ ನನ್ನ ಹೃದಯಸರವು ವಿಕಸಿತ ನೀರಜ ವಾಗಿದೆ. ಸತ್ಯವಜ್ಜೀವಿತವನ್ನು ಬಿಟ್ಟು, ಬೇರೇನಾದರೊಂದನ್ನು ಬೇಡು!" ಎಂದನು. 'ನನ್ನ ಮಾವನಿಗೆ ತನ್ನ ರಾಜ್ಯ ಪ್ರಾಪ್ತಿಯಾಗುವಂತೆ ದಯಮಾಡು! ಅವನ ಮನಸ್ಸು ಧರ್ಮದಿಂದ ಚಲಿಸದಿರಲಿ!' ಎಂದು ಬೇಡಿ, ಸಾವಿತ್ರಿ ಮತ್ತೆ ಯಮರಾಜ ನನ್ನು ಅನುಸರಿಸಿ, ನಡೆದಳು. ವರವನ್ನು ಪಡೆದು ಪೋಗದೆ ಬರುವ ಸಾವಿತ್ರಿಯನ್ನು

ಕಂಡು ಯಮರಾಜನು ಅವಳನ್ನು ಹಿಂದಿರುಗೆಂದನು. ಆಗ ಸಾವಿತ್ರಿ "ಯಮುನಾ ಸಹೋದರ! ಪ್ರಜರನ್ನು ನಿಯಮದಲ್ಲಿಟ್ಟು ನಡೆಸುವುದರಿಂದ ನಿನ್ನನ್ನು ಬುಧರು ಯಮನೆಂದು ಕರೆವರು. ಕೇಳು! ಸರ್ವ ಭೂತಗಳಿಗೆ ಕಾಯೇನ ಮನಸಾ ವಾಚಾ ದ್ರೋಹವನ್ನು ಮಾಡದೆ, ಯಥಾಯೋಗ್ಯವಾಗಿ ದಯೆದೋರುವುದು ಸಜ್ಜನರ ಲಕ್ಷಣ ವಾಗಿದೆ. ಧರ್ಮದೀಕ್ಷೆಯನ್ನು ಸರಿಯಾಗಿ ವಹಿಸಿ ನಡೆಸಲಾರದ ಮನುಜರು ಅಲ್ಪಾ-ಯುಷ್ಕರಾಗುತ್ತಿರುವರು. ಸಜ್ಜನರು ಅಪಕಾರಿಗಳಿಗೂ ಪ್ರತ್ಯಪಕಾರ ಮಾಡದೆ ಶ್ರೀಶನಲ್ಲಿ ವಿಶ್ವಾಸವನ್ನಿಟ್ಟು, ಧರ್ಮವನ್ನು ಬಿಡದೆ ದೀರ್ಘಾಯುಗಳಾಗುವರು" ಎಂದಳು. ಯಮನು "ಸಾವಿತ್ರಿ! ನಿನ್ನ ಮಾತು ಪಿಪಾಸಿತನಿಗೆ ಜಲದಂತೆ ತೃಪ್ತಿಕರ ವಾಗಿದೆ. ಸತ್ಯವಂತನ ಜೀವವನ್ನು ಬಿಟ್ಟು, ಇನ್ನೊಂದು ವರವನ್ನು ಬೇಡು!" ಎಂದನು. ಸಾವಿತ್ರಿಯು "ನನ್ನ ತಂದೆಗೆ ನೂರು ಜನ ಸುತರಾಗಲಿ!" ಎಂದು ಬೇಡಿದಳು. ಅಂತೆಯೇ ವರವಿತ್ತು ಮುಂದೆ ಸಾಗಿದನು.

ಸಾವಿತ್ರಿಯು ಬಿಡದೆ ವೈವಸ್ವತನ ಹಿಂದೆಯೇ ನಡೆದಳು. ಯಮನು "ಸಾವಿತ್ರಿ! ಬಹುದೂರ ಬಂದೆ. ಇನ್ನು ಹಿಂದಿರುಗು?" ಎಂದನು. ಸಾವಿತ್ರಿ "ಶ್ಯಾಮಲಾಪತೇ! ಭರ್ತೃಸನ್ನಿಧಿಯಲ್ಲಿರುವ ನನಗೆ ದೂರವಾವುದು? ಅವನನ್ನು ಬಿಟ್ಟುನಡೆದರೆ ದೂರ ವಾದೀತು! ವಿವಸ್ವಂತನ ಮಗನಾಗಿ ಪ್ರಕಾಶಿಸುವ ನಿನ್ನನ್ನು ಪಂಡಿತರು ವೈವಸ್ವತ ನೆಂಬುವರು. ಧರ್ಮವನ್ನು ನಿಷ್ಪಕ್ಷಪಾತಿಯಾಗಿ ವಿಮರ್ಶಿಸುವೆಯಾದುದರಿಂದ ಧರ್ಮ ರಾಜನೆಂದು ಖ್ಯಾತನಾಗಿರುವೆ. ನಿನ್ನಂತಹ ಸಜ್ಜನರಲ್ಲಿ, ನಿನ್ನಂತಹ ಸರ್ವಭೂತ ಸುಹೃಜ್ಜನರಲ್ಲಿ ವಿಶ್ವಾಸವನ್ನು ಮಾಡುವುದು ಸಹಜವಾಗಿದೆ. ದೇವವರನಾದ ನಿನ್ನ ಪ್ರಣಯವು ವ್ಯರ್ಥವಾಗದಿರುವುದು" ಎಂದಳು. ಯಮರಾಜನು ಪ್ರೀತನಾಗಿ "ಸತ್ಯವಂತನ ಜೀವವನ್ನುಳಿದು ಬೇರೇನಾದರೂ ಬೇಡು" ಎಂದನು. ಸಾವಿತ್ರಿಯು "ಪ್ರಭೋ! ಸತ್ಯವಂತನಿಂದ ನನಗೆ ಕುಲವರ್ಧನರಾದ ನೂರು ಸುತರಾಗಲಿ!" ಎಂದು ಬೇಡಿದಳು. ಯಮರಾಜನು ಆ ವರವನ್ನೂ ಕೊಟ್ಟು "ಸಾವಿತ್ರಿ! ಬಲು ದೂರ ಬಂದೆ. ಶ್ರಮಪಡಲಾರೆ! ಹಿಂದಿರುಗು!" ಎಂದನು. ಸಾವಿತ್ರಿ ಯಮರಾಜ ನಿಗೆ ವಂದಿಸಿ ಇಂತೆಂದಳು—"ಸತ್ಯಪಾಲಕ! ಸಜ್ಜನರು ಧರ್ಮಮಾರ್ಗವನ್ನೆಂದಿಗೂ ಬಿಡುವುದಿಲ್ಲ. ಸುಖದುಃಖಗಳನ್ನು ಹೊಂದಿ, ಅವರು ಹಿಗ್ಗುವುದಿಲ್ಲ, ಕುಗ್ಗುವ ದಿಲ್ಲ. ಅವರ ಸಂಗವು ಮಹಾಫಲಕಾರಿಯಾಗಿದೆ. ಸಜ್ಜನರಿಗೆ ಅಶಕ್ಯವಾದುದಿಲ್ಲ. ಅವರು ಇನ್ನೊಬ್ಬರಿಗೆ ಭಯಪ್ರದರಾಗುವುದಿಲ್ಲ. ಸಜ್ಜನರು ತಮ್ಮ ತಪಸ್ ಸತ್ಯ ಶೌಚ ದಾನಾದಿಗುಣಗಳ ಬಲದಿಂದ ಸೂರ್ಯಚಂದ್ರಾದಿಗಳನ್ನು ನಡೆಸುತ್ತಿರುವರು. ಭೂಮಿ ಯನ್ನು ಧರಿಸಿರುವರು. ಭೂತಭವ್ಯಗಳನ್ನರಿತು, ನಿರ್ವಿಕಾರರಾಗಿ, ಪ್ರತ್ಯುಪಕಾರಾ ಪೇಕ್ಷೆ ಇಲ್ಲದೆ ಪರೋಪಕಾರ ಪರಾಯಣರಾಗಿರುವರು. ಸುಜನರು ಪ್ರಸನ್ನರಾಗಿ ಕೊಡುವರು. ಅವರಿಂದ ಸ್ವೀಕರಿಸುವವನಿಗೆ ಅರ್ಥವೂ ಸಿಗುವುದು, ಮಾನವೂ ದಕ್ಕುವುದು. ದುರ್ಜನದಲ್ಲಿ ಪ್ರಸನ್ನತೆಯೇ ಇಲ್ಲ. ಸುಜನರನ್ನು ಮೀರಿದ ರಕ್ಷಕರಿನ್ನಿಲ್ಲ."

ಆ ಮಾತನ್ನಾಲಿಸಿ ಯಮರಾಜನು—"ಸಾಧ್ವೀಶಿರೋಮಣಿ ! ನಿನ್ನ ವಚನಾಮೃತ ಪಾನದಿಂದ ತೃಪ್ತನಾದಂತಿರುವೆನು. ಬೇಕಾದ ವರವನ್ನು ಬೇಡು !" ಎಂದನು. ಸಾವಿತ್ರಿಯ ನಯನಕಮಲಗಳಿಂದ ಆನಂದಜಲಬಿಂದುಗಳುದುರಿದವು. ಆ ಪತಿ ಪರಾಯಣೆಯು, "ಧರ್ಮರಾಜ ! ಪುಣ್ಯಸಂತಾನವನ್ನು ಬಯಸುವ ನನ್ನ ಮಾತನ್ನು ಲಾಲಿಸು ! ಪತಿರಹಿತಳಾಗಿ ಮೃತಳಾದಂತಿರುವ ನನ್ನನ್ನು ಕರುಣಿಸುವುದಾದರೆ ನನ್ನ ಪತಿಯಾದ ಸತ್ಯವಂತನನ್ನು ಬದುಕಿಸು ! ಭರ್ತೃಜೀವನದ ಹೊರತಿನ್ನೊಂದು ವರವೆನಗೆ ಬೇಡ ! ಭರ್ತನಿಲ್ಲದ ಸ್ವರ್ಗವೂ ನನಗೆ ನರಕಸಮಾನವಾಗಿದೆ. ಶತಪುತ್ರ ರನ್ನು ವರವಾಗಿ ಕರುಣಿಸಿದೆಯಲ್ಲವೇ ? ನನ್ನ ಪತಿಯನ್ನು ನೀನು ಒಯ್ದರೆ ನನಗೆ ಪುತ್ರರಾಗುವ ಬಗೆ ಹೇಗೆ ? ಚತುರ್ಥವರವಾಗಿ ಪವಿತ್ರ ಪುತ್ರರನ್ನು ಕೊಟ್ಟ ನೀನು ಪಂಚಮವರವಾಗಿ ಪತಿಜೀವಿತವನ್ನೂ ಕೊಡು !" ಎಂದು ಬೇಡಿದಳು. ಧರ್ಮರಾಜನ ಮನಃಕಮಲವು ವಿಕಸಿತವಾಯಿತು. ಅವನು — "ಭದ್ರೇ ನಿನ್ನ ಪತಿಭಕ್ತಿಗೆ ಮೆಚ್ಚಿರುವೆನು, ನಿನ್ನ ಪತಿಯ ಜೀವಿತವನ್ನಿತ್ತಿರುವೆನು. ಸತ್ಯವಂತನು ಪುನಃ ಬದುಕುವನು ಹೋಗು" ಎಂದು ಸತ್ಯವಂತನನ್ನು ಪಾಶಬಂಧದಿಂದ ಬಿಟ್ಟು, ಮತ್ತೆ, ಸಾವಿತ್ರಿಗೆ—

"ಸಾವಿತ್ರಿ ! ನಿನ್ನ ಗಂಡನೊಡನೆ ನಾಲ್ಕುನೂರು ವರ್ಷ ಬಾಳು ! ಸತ್ಯವಂತನು ಬಹು ಯಜ್ಞಗಳನ್ನು ಮಾಡಿ, ಬಹುದಾನಿ ಎಂದು ಲೋಕದಲ್ಲಿ ಪ್ರಸಿದ್ಧನಾಗುವನು. ನಿನಗೆ ಸತ್ಯವಂತನಿಂದ ನೂರು ಸುತರಾಗಿ, ಸಾವಿತ್ರರೆಂದು ಖ್ಯಾತರಾಗುವರು. ನಿನ್ನ ಪಾತಿವ್ರತ್ಯಪ್ರಭಾವದಿಂದಲು, ನಾರದನ ಪ್ರಾರ್ಥನೆಯಿಂದಲು ದಯೆದೋರಿ ನಿನ್ನ ಪತಿಯನ್ನು ನಿನಗಿತ್ತಿರುವೆನು. ಸುಖದಿಂದಿರು !" ಎಂದು ನುಡಿದು ಯಮ-ರಾಜನು ಅಂತರ್ಹಿತನಾದನು. ಸಾವಿತ್ರಿಯು ಮತ್ತೆ ಸತ್ಯವಂತನ ದೇಹವಿದ್ದ ವನ ಪ್ರದೇಶಕ್ಕೆ ಹಿಂದಿರುಗಿ ಬಂದಳು. ಅವನ ತಲೆಯನ್ನೆತ್ತಿ ತೊಡೆಯಲ್ಲಿಟ್ಟು ನಿರೀಕ್ಷಿಸು ತ್ತಿರಲು, ಸತ್ಯವಂತನು ಜೀವಂತನಾಗಿ ಮೆಲ್ಲನೆ ಎದ್ದು ಕುಳಿತನು.

"ಸಾವಿತ್ರಿ ! ಬಹುಕಾಲ ಮಲಗಿದ್ದೆನೆಂದು ತೋರುತ್ತಿದೆ. ನನ್ನನ್ನು ಸೆಳೆದು ಕೊಂಡು ಹೋಗುತ್ತಿದ್ದ ಶ್ಯಾಮವರ್ಣದ ಮಹಾಪುರುಷನೆಲ್ಲಿ ಹೋದನು ?" ಎಂದು ಕೇಳಿದ ಪತಿಗೆ ಅವೆಲ್ಲವನ್ನು ವಿವರಿಸದೆ, 'ಭಗವಾನ್ ಯಮನು ಹೊರಟುಹೋದನು ನೀನೆನಗೆ ಮತ್ತೆ ದೊರಕಿದೆ, ಹಿರಿಯರ ಆಶೀರ್ವಾದದಿಂದ ! ಶ್ರಾಂತನಾಗಿರುವೆ ! ವನವೆಲ್ಲವೂ ನಿಶಾಜಟಿಲಾಂಧಕಾರಬಂಧುರವಾಗಿದೆ. ಕೈಲಾದರೆ ಏಳು ! ಮನೆಗೆ ತೆರಳೋಣ ! ಅಲ್ಲಿ ಎಲ್ಲ ವಿವರವನ್ನೂ ತಿಳಿಸುವೆನು. ನಮ್ಮ ಆಗಮನವನ್ನು ನಿರೀಕ್ಷಿ ಸುವ ಹಿರಿಗುರುಗಳ ಮನಶ್ಚಿಂತೆಯನ್ನು ಕಳೆಯುವುದು ಅವಶ್ಯಕವಾಗಿದೆ" ಎಂದು ಸತ್ಯವಂತನ ಕೈಹಿಡಿದು, ಕರೆದುಕೊಂಡು, ಆಶ್ರಮಭೂಮಿಯ ಕಡೆಗೆ ತೆರಳಿದಳು.

ಸತ್ಯವಂತನು ಮೆಲ್ಲಗೆ ನಡೆಯುತ್ತಾ, ಸ್ವಪ್ನದಂತೆ ನಡೆದುದೆಲ್ಲವನ್ನೂ ನೆನೆದು ಚಕಿತನಾದನು. ಸಾವಿತ್ರಿಯು ಅವನನ್ನು ಸಮಾಧಾನಪಡಿಸಿದಳು. ದಾವಾಗ್ನಿಯ

ಬೆಳಕಿನಿಂದಲೇ ಮಾರ್ಗವನ್ನರಸಿ, ಸ್ವಸ್ಥಚಿತ್ತನಾದ ಸತ್ಯವಂತನೊಡನೆ ನಡೆದು ಬರುತ್ತಿದ್ದಳು. ತನಗಾಗಿ ಹುಡುಕಿ, ವಿಯೋಗ ದುಃಖ ತಪ್ತರಾಗಿ, ಕಾತರತೆಯಿಂದ ನಿರೀಕ್ಷಿಸುವ ಅಂಧಪಿತೃಜನರನ್ನು ಸೇರಲು ತವಕಿಸುವ ಸತ್ಯವಂತನನ್ನು ಧೈರ್ಯ ವಚನಗಳಿಂದ ಸಂತೈಸಿ, ಅವನನ್ನು ಬಲಗೈಯಿಂದ ತಬ್ಬಿ ಹಿಡಿದು, ಕೋಲನ್ನೂರಿ ನಡೆಯುತ್ತಾ, ಸಾವಿತ್ರಿ ವನಪ್ರದೇಶವನ್ನು ದಾಟಿ, ತಮ್ಮ ಆಶ್ರಮಪ್ರಾಂತವನ್ನು ಸೇರಿದಳು.

ಆಶ್ರಮದಲ್ಲಿ ದ್ಯುಮತ್ಸೇನನು, ಅವನ ಸತಿಯು ಲಬ್ಧನೇತ್ರರಾಗಿದ್ದರು. ಅವರಿಗೆ ಆಶ್ಚರ್ಯವಾಯಿತು. ಆಶ್ರಮದ ಋಷಿಗಳನ್ನು ಕೂಡಿ, ರಾತ್ರಿಯಾದರೂ ಹಿಂದಿರುಗಿ ಬರದ ಸಾವಿತ್ರೀ ಚಿತ್ರಾಶ್ವರಿಗಾಗಿ ಹುಡುಕಾಡಿದರು. ಯಾವ ಶಬ್ದವಾದರೂ, ಅವರು ಬಂದರೆಂದು ಭ್ರಮಿಸಿ ನೋಡುತ್ತಾ, ಅವರನ್ನು ಹೆಸರು ಹಿಡಿದು ಕೂಗುತ್ತಾ, ಕಾಡೆಲ್ಲ ಹುಡುಕಿ, ಕಾಣಲಾರದೆ ಮಿಡುಕುವ ದಂಪತಿಗಳನ್ನು ಮುನಿವರರು ಪೂರ್ವರಾಜರ್ಷಿ ವರರ ಕಥೆಗಳನ್ನು ಹೇಳಿ ಸಮಾಧಾನಪಡಿಸುತ್ತಿದ್ದರು.

ಸುವರ್ಚನೆಂಬುವ ಋಷಿಯು—'ಸಾವಿತ್ರಿಯು ಪತಿವ್ರತೆಯು; ಅವಳ ತಪಸ್ ಸತ್ಯ ದಮ ಆಚಾರ ಪ್ರಭಾವದಿಂದ ಸತ್ಯವಂತನು ಗಂಡಾಂತರದಿಂದ ಪಾರಾಗಿಬರುವನು' ಎಂದನು. ಗೌತಮನು 'ವೇದಗಳನ್ನೆಲ್ಲ ಓದಿರುವೆನು. ತಪಸ್ಸನ್ನೂ ಮಾಡಿರುವೆನು. ನನ್ನ ವಿದ್ಯಾಬಲದಿಂದ ತಿಳಿದು ಹೇಳುವೆನು ಕೇಳಿ! ಸತ್ಯವಂತನು ಸತಿಯೊಡನೆ ಈಗ ಬರುವನು' ಎಂದನು. ಭರದ್ವಾಜನು 'ಸಾವಿತ್ರಿಯು ವ್ರತಪ್ರಭಾವದಿಂದ ಸತ್ಯವಂತನು ಜೀವಂತನಾಗಿ ಬರುವನು' ಎಂದನು. ದಾಲ್ಭ್ಯ, ಧೌಮ್ಯ, ಆಪಸ್ತಂಬರೂ 'ಮಹಾರಾಜ! ಅಂಧರಾದ ನಿಮಗೆ ಕಣ್ಣು ಬಂದಿದೆ. ಸಾವಿತ್ರೀ ಸತ್ಯವಂತರೂ ಬರುವರು' ಎಂದು ನುಡಿದರು. ಸತ್ಯವಚನರಾದ ವಿಪ್ರರ್ಷಿಗಳ ವಚನವು ಅಮೋಘವಲ್ಲವೇ? ಅಂತೆಯೇ ಸಾವಿತ್ರೀ ಸತ್ಯವಂತರು ಆಶ್ರಮವನ್ನು ಪ್ರವೇಶಿಸಿದರು. ದ್ಯುಮತ್ಸೇನನು ಸತಿಯೊಡನೆ ಬಂದ ಸುತನನ್ನು ಕಂಡು ಆನಂದ ಭರಿತನಾದನು. ಸತ್ಯವಂತನು ಸಾವಿತ್ರಿಯು ಚಕ್ಷುಷ್ಮಂತರಾದ ಹಿರಿಯರನ್ನು ಕಂಡು ಹರ್ಷವಿವಶರಾಗಿ, ಅವರಿಗೂ, ಋಷಿಗಳಿಗೂ ವಂದಿಸಿದರು. ಅಗ್ನಿಯನ್ನು ಪ್ರಜ್ವಲಿಸಿ ಎಲ್ಲರೂ ಸುತ್ತ ಕುಳಿತರು.

ಋಷಿವರರು ಸತ್ಯವಂತನನ್ನು ನೋಡಿ 'ವತ್ಸ! ವನದಿಂದ ಹಿಂದಿರುಗಿ ಬರಲು ಆಲಸ್ಯವಾದುದೇಕೆ? ನಿಮ್ಮ ಹಿರಿಯರ ದುಃಖ ಹೇಳತೀರದು' ಎಂದು ಕೇಳಿದರು. ಸತ್ಯವಂತನು 'ವನದಲ್ಲಿ ಕಾಷ್ಠವನ್ನು ಕಡಿಯುತ್ತಿದ್ದ ನಾನು ತಲೆಶೂಲೆಯಿಂದ ಮೈಮರೆತು ಮಲಗಿದೆ. ಮುಂದಾದುದೇನೆಗೆ ಚನ್ನಾಗಿ ಗೊತ್ತಿಲ್ಲ. ಅದನ್ನು ಸಾವಿತ್ರಿಯೇ ಹೇಳಲಿ!' ಎಂದನು. ಗೌತಮಾದಿ ಋಷಿಗಳ ಮಾತನ್ನು ಮೀರಲಾರದೆ ಸಾವಿತ್ರಿ ನಡೆದುದೆಲ್ಲವನ್ನು ಸಂಗ್ರಹವಾಗಿ ವರ್ಣಿಸಿ, 'ಮಹಾತ್ಮರಾದ ತಮ್ಮ ಮತ್ತು ಹಿರಿಯರ ಅನುಗ್ರಹದಿಂದ ನನ್ನ ಪತಿಯು ಬದುಕಿ ಬಂದನು. ನಾರದ

ಋಷಿವರನ ವಚನದಿಂದ ಇಂದು ಸತ್ಯವಂತನಿಗೆ ಮರಣವಾಗುವುದೆಂಬ ವಿಷಯವನ್ನು ಮೊದಲೇ ಅರಿತಿದ್ದೆನು. ಅಪಮೃತ್ಯುನಿವಾರಕವಾದ ಸಾವಿತ್ರೀ ವ್ರತವನ್ನು ಮೂರು ದಿನದಿಂದ ಉಪವಾಸವಿದ್ದು ಮಾಡಿದೆನು. ಅಂತೆಯೇ ಸತ್ಯವಂತನನ್ನು ಹಿಂಬಾಲಿಸಿ ವನದಲ್ಲಿ ಸಂಚರಿಸುತ್ತಾ, ಮರಣವನ್ನು ನಿರೀಕ್ಷಿಸುತ್ತಿರುವಾಗ, ಯಮರಾಜನು ಬಂದು, ನನ್ನ ಪತಿಯ ಜೀವವನ್ನು ತೆಗೆದುಕೊಂಡು ಹೋಗುತ್ತಿದ್ದನು. ಆ ಮಹಾನು ಭಾವನನ್ನು ಪ್ರಾರ್ಥಿಸಿ, ಐದು ವರಗಳನ್ನು ಪಡೆದೆನು. ನಮ್ಮ ಮಾವನಿಗೆ ಕಣ್ಣನ್ನು, ರಾಜ್ಯಪ್ರಾಪ್ತಿಯನ್ನು, ನನ್ನ ತಂದೆಗೆ ಪುತ್ರಶತವನ್ನು, ನನ್ನ ಭರ್ತೃಜೀವಿತವನ್ನು, ನನಗೆ ಪುತ್ರಶತ ಸಂತಾನವನ್ನು ಕರುಣಿಸಿ, ಯಮದೇವನು ಅಂತರ್ಹಿತನಾದನು. ಇಂತು ಶ್ರೀಶನ ದಯದಿಂದ ಪುನರುಜ್ಜೀವಿತನಾದ ಪತಿಯೊಡನೆ ಬಂದೆನು' ಎಂದು ನುಡಿದು, ಅವರಿಗೆ ಮತ್ತೆ ನಮಸ್ಕರಿಸಿದಳು. ಋಷಿವರರು ಅವರನ್ನಾಶೀರ್ವದಿಸಿ ತಂತಮ್ಮ ಆಶ್ರಮಗಳಿಗೆ ತೆರಳಿದರು.

ಮರುದಿನ ಬೆಳಗಾಗಲು, ದ್ಯುಮತ್ಸೇನನ ಆಶ್ರಮದಲ್ಲಿ ಮತ್ತೆ ಎಲ್ಲರೂ ಕಲೆತು ಸಾವಿತ್ರಿಯ ಪಾತಿವ್ರತ್ಯಮಹಿಮೆಯನ್ನು ಕೊಂಡಾಡುತ್ತಿರಲು, ಸಾಲ್ವನಗರಿಯಿಂದ ಮಂತ್ರಿ ಪುರೋಹಿತರು ಬಂದು ದ್ಯುಮತ್ಸೇನನಿಗೆ ವಂದಿಸಿ, 'ರಾಜನ್! ನಿನ್ನ ಶತ್ರುರಾಜನು ಮಂತ್ರಿಯಿಂದ ಹತನಾದನು. ಆಗ ನಾವೆಲ್ಲರೂ ಐಕಮತ್ಯದಿಂದ ವಿಜೃಂಭಿಸಿ, ಅವನನ್ನು ಸಂಹರಿಸಿ, ಅವನ ಸೈನ್ಯವನ್ನು ಓಡಿಸಿದೆವು. ದೈವಾನುಗ್ರಹ ದಿಂದ ರಾಜ್ಯವು ನಿನ್ನದಾಗಿದೆ. ಪ್ರಜರೆಲ್ಲರು ಅನುರಕ್ತರಾಗಿ ನಿನ್ನ ಆಗಮನವನ್ನು ನಿರೀಕ್ಷಿಸುತ್ತಿರುವರು. ಬಂದು ರಾಜನಾಗಿ ಮೊದಲಿನಂತೆ ನಮ್ಮನ್ನು ಸಲಹು. ನಿನ್ನನ್ನು ಚಕ್ಷುಷ್ಮಂತನಾಗಿ ಕಂಡು ನಮಗೆ ಮಹದಾನಂದವಾಗಿದೆ' ಎಂದು ಬೇಡಿದರು.

ದ್ಯುಮತ್ಸೇನನು ಮುನಿಜನರ ಅಪ್ಪಣೆಯನ್ನೂ ಆಶೀರ್ವಾದಗಳನ್ನೂ ಪಡೆದು ಸತೀ ಸುತ ಸ್ನುಷಾ ಸಹಿತವಾಗಿ, ಸಾಲ್ವನಗರವನ್ನು ಸೇರಿದನು. ಸುಮುಹೂರ್ತದಲ್ಲಿ ಪುರೋಹಿತರಿಂದ ಪಟ್ಟಾಭಿಷಿಕ್ತನಾಗಿ ಪ್ರಜಾಮೋದವನ್ನು ಸಾಧಿಸಿದನು. ಕಾಲಾಂತರ ದಲ್ಲಿ ಸತ್ಯವಂತನು ರಾಜನಾಗಿ, ಪ್ರಜಾರಂಜಕನಾಗಿ ಚಿರಕಾಲವಾಳಿದನು. ಅವನಿಗೆ ನೂರು ಸುತರಾಗಿ ವಂಶವರ್ಧಕರಾದರು. ಅಶ್ವಪತಿಗೂ ನೂರುಜನ ಸುತರಾದರು. ಇಂತು ಸಾವಿತ್ರಿಯು ತನ್ನ ಪಾತಿವ್ರತ್ಯಪ್ರಭಾವದಿಂದ, ಹುಟ್ಟಿದ ಮನೆಯನ್ನೂ ಮೆಟ್ಟಿದ ಮನೆಯನ್ನೂ ಉದ್ಧರಿಸಿ ಚಿರಕೀರ್ತಿವಂತಳಾಗಿರುವಳು. ಅವಳಂತೆಯೇ ಮಹಾಸಾಧ್ವಿಯಾದ ದ್ರೌಪದೀದೇವಿಯಿಂದ ನಿಮ್ಮ ಕುಲವೇ ಉದ್ಧೃತವಾಗಿದೆ. ಧರ್ಮರಾಜ! ಸಾವಿತ್ರೀ ಚರಿತ್ರೆಯನ್ನು ಶ್ರದ್ಧೆಯಿಂದ ಹೇಳಿ, ಕೇಳಿದವರು ಸರ್ವ ದುಃಖ ದೂರವಾಗಿ, ಸುಖಿಸುವರು.

## ಕುಂಡಲಾಹರಣ

ಲೋಮಶನು ಧರ್ಮರಾಜನನ್ನು ನೋಡಿ—ರಾಜನ್ ! ನಿನ್ನ ಮನಸ್ಸಿನ ಭಯವನ್ನರಿತಿಹೆನು. ಕರ್ಣನು ಸಹಜ ಕವಚ ಕುಂಡಲನಾಗಿರುವದರಿಂದ ಅಜೇಯ ನೆನಿಸಿರುವನೆಂಬ ನಿನ್ನ ಮಾನಸಿಕ ಶಂಕೆಯನ್ನು ಬಿಡು ! ಇಂದ್ರನಿಂದಲೇ ಕೇಳಿ ತಿಳಿದ ವರ್ತಮಾನವನ್ನು ನಿನಗೆ ತಿಳಿಸುವೆನು, ಕೇಳು—

ನಿಮ್ಮ ವನವಾಸದ ಹನ್ನೆರಡು ವರ್ಷವು ಮುಗಿಯುತ್ತಾ ಬರುತ್ತಿರಲು ಇಂದ್ರನು ಪಾಂಡವ ಹಿತವನ್ನು ಸಾಧಿಸಲುದ್ಯುಕ್ತನಾಗಿ, ವಿಪ್ರವೇಷದಿಂದ ಕರ್ಣ ನನ್ನು ನೋಡಿ ಕುಂಡಲ ಕವಚಗಳನ್ನು ಕೊಡೆಂದು ಬೇಡಿದನು.

ಇಂದ್ರದೇವನ ಅಭಿಪ್ರಾಯವನ್ನರಿತು ಸೂರ್ಯನು ಇಂದ್ರನು ಬಾರದಮುನ್ನ ತನ್ನ ಮಗನಾದ ಕರ್ಣನಿಗೆ ಸ್ವಪ್ನದಲ್ಲಿ ವಿಪ್ರರೂಪದಿ ಕಾಣಿಸಿಕೊಂಡು—'ವತ್ಸ ! ಕರ್ಣ ! ನಿನಗೆ ಹಿತವನ್ನು ತಿಳಿಸಲು ಬಂದಿರುವೆನು. ಪಾಂಡವಹಿತಾರ್ಥಿಯಾದ ಇಂದ್ರನು ವಿಪ್ರವೇಷಧರನಾಗಿ ಬಂದು, ನಿನ್ನನ್ನು ಕವಚ ಕುಂಡಲಗಳಿಗಾಗಿ ಯಾಚಿಸುವನು. ಅವನಿಗೆ ನಿನ್ನ ದಾನಶೀಲತೆಯು ಅರಿವಿದೆ. ಸದ್ವಿಪ್ರರು ಯಾಚಿಸಿದುದನ್ನು ಇಲ್ಲವೆನ್ನದೆ ತತ್‍ಕ್ಷಣವೇ ಕೊಡುವ ದಾನಶೌಂಡನಾದ ನಿನ್ನನ್ನು ಕವಚ ಕುಂಡಲಗಳನ್ನು ಬೇಡಿ ಯಾಚಿಸುವ ವಿಪ್ರನು ಇಂದ್ರನೆಂದು ತಿಳಿ ! ಅವನಿಗೆ ಅವನ್ನು ಕೊಡಬೇಡ ! ರತ್ನ ಕನಕ ಗೋ ಕರಿ ತುರಗಾದಿಗಳಿತ್ತು ಕಳಿಸು ! ಕವಚ ಕುಂಡಲಗಳನ್ನು ಕೊಡಬೇಡ ! ಕೊಟ್ಟು ಕೆಡಬೇಡ ! ಅವಧ್ಯನಾಗಿರುವ ನೀನು ಕವಚ ಕುಂಡಲಗಳನ್ನಿತ್ತೆಯಾದರೆ, ನಿಶ್ಚಯವಾಗಿ ವಧ್ಯನಾಗುವೆ !' ಎಂದನು. ಆ ಮಾತನ್ನಾಲಿಸಿ ಕರ್ಣನು 'ಮಹಾ ಭಾಗ ! ಇಂತು ನನಗೆ ಹಿತವನ್ನು ಹೇಳುವ ನೀನಾರೆಂದು ನಾನು ತಿಳಿಯಲಿಚ್ಛಿಸು ವೆನು' ಎಂದನು. ವಿಪ್ರನು 'ತಾತ ! ನಾನು ಸೂರ್ಯನು. ನಿನ್ನಲ್ಲಿ ಪ್ರೀತಿಯಿಂದ ಈ ಮಾತನ್ನು ಹೇಳಲು ಬಂದಿರುವೆನು. ನನ್ನ ಮಾತಿನಂತೆ ನಡೆ ! ನಿನಗೆ ಶ್ರೇಯಸ್ಸಾಗುವುದು' ಎಂದನು.

ಕರ್ಣನು 'ಲೋಕಸಾಕ್ಷಿ ! ಪ್ರಭುವಾದ ನಿನ್ನ ಪ್ರೀತಿಗೆ ಪಾತ್ರನಾದ ನಾನೇ ಧನ್ಯನು. ಆದರೆ ಪ್ರಾಣಾಧಿಕವಾದ ವ್ರತಪರಿಪಾಲನೆಯನ್ನು ನಾನು ತ್ಯಜಿಸಲಾರೆನು. ವಿಪ್ರವರರಿಗೆ ಪ್ರಾಣವನ್ನಾದರೂ ಕೊಡುವೆನೆಂದಮೇಲೆ ಕವಚ ಕುಂಡಲಗಳ ಲೆಕ್ಕ ವೇನು ? ಪಾಂಡವ ಹಿತಾರ್ಥಿಯಾಗಿ ತ್ರಿಲೋಕೇಶನು ವಿಪ್ರನಾಗಿ ಬಂದರೆ ನನ್ನ ಕವಚ ಕುಂಡಲಗಳೇ ಬೇಕೆಂದು ಬೇಡಿದರೆ ಈ ಕರ್ಣನು ಅವನ್ನು ಕೊಡಲಾರೆನೆಂಬು ವಂತಹ ಹೇಡಿಯಲ್ಲ. ಸಾಮಾನ್ಯ ಮನುಜನನ್ನು ಯಾಚಿಸುವ ದೇವರಾಜನ ಯಶಕ್ಕೆ ಕುಂದಾಗುವುದಾಗಲಿ, ಕವಚ ಕುಂಡಲಾಹರಣದಿಂದ ನನಗೆ ಹಾನಿ ಇಲ್ಲ. ನನ್ನ ಕೀರ್ತಿಪತಾಕೆಯು ಸ್ವರ್ಗವನ್ನು ಮುಟ್ಟುವಂತಾಗುವುದು. ಜೀವನ ಕೀರ್ತಿಗಳ ಮಧ್ಯದಲ್ಲಿ ನಾನು ಕೀರ್ತಿಯನ್ನೇ ಅರಸುವೆನು. ಕೀರ್ತಿವಂತನು ಮೃತನಾದರೂ

ಬದುಕಿರುವನು ; ಅಕೀರ್ತಿವಂತನು ಬದುಕಿದ್ದರೂ ಸತ್ತಂತೆಯೇ ಸರಿ ! ಇಹಲೋಕ ದಲ್ಲಿ ಕೀರ್ತಿಯನ್ನು, ಪರಲೋಕದಲ್ಲಿ ಪುಣ್ಯವನ್ನು, ಪಡೆಯುವ ನರನೇ ಸಾರ್ಥಕ ಜನ್ಮನು. ಕವಚ ಕುಂಡಲಗಳ ರಕ್ಷಣೆ ಸ್ವಯಂ ವೀರನಾದ ನನಗೆ ಅವಸರವಿಲ್ಲ. ಸಂಗ್ರಾಮರಂಗದಲ್ಲಿ ಶತ್ರುಗಳನ್ನು ಸಂಹರಿಸಿ, ವೀರನಾಗಿ ವಿಹರಿಸಿ, ಶರೀರವನ್ನು ತ್ಯಜಿಸಿ, ಶಾಶ್ವತ ಕೀರ್ತಿಯನ್ನು ಪಡೆಯಲೆಣಿಸುವ ನನ್ನನ್ನು ದಾನವಿಮುಖನಾಗಿಸ ಬೇಡ !' ಎಂದು ತನ್ನ ನಿಶ್ಚಯವನ್ನು ತಿಳಿಸಿದನು. ಸೂರ್ಯನು ಖಿನ್ನನಾಗಿ ಕರ್ಣ ! ಕವಚ ಕುಂಡಲ ದಾನದಿಂದ ನಿನಗೆ ಶರೀರವಿಯೋಗವಾಗುವುದು. ನಿನ್ನ ಶರೀರ ವಿಯೋಗದಿಂದ ನಿನ್ನ ಜೀವಿತನಾಶನೇ ಅಲ್ಲದೆ ಪುತ್ರ ಕಳತ್ರ ಮಿತ್ರ ಬಂಧು ಜನರ ಹಿತ ನಾಶವೂ ಆಗುವುದು. ಶರೀರವನ್ನುಳಿಸಿಕೊಂಡಲ್ಲವೇ ಯಶಃಪ್ರಾಪ್ತಿಗಾಗಿ ಸೆಣಸು ವುದು ? ಶರೀರವನ್ನು ಬಿಟ್ಟವನಿಗೆ ಬರಿಯ ಕೀರ್ತಿಯಿಂದ ಪ್ರಯೋಜನವಿಲ್ಲ. ಕೀರ್ತಿ ಗಾಗಿ ಪ್ರಾಣಬಿಡುವುದು ಸರಿಯಲ್ಲ. ಭಸ್ಮೀಭೂತದೇಹನು ಕೀರ್ತಿಯನ್ನು ಕಂಡು ಆನಂದಿಸಬಲ್ಲನೇ ? ಜೀವಂತನಿಗಲ್ಲವೇ ಯಶೋಜನಿತ ಪ್ರಮೋದ? ನೀನು ನನ್ನ ಭಕ್ತನೆಂಬ ಅಭಿಮಾನದಿಂದ ನಿನ್ನನ್ನು ರಕ್ಷಿಸಲು ಬಂದಿರುವ ನನ್ನ ಮಾತನ್ನು ನಿರ್ಲಕ್ಷಿಸಬೇಡ ! ನನ್ನ ನಿನ್ನ ಪರಸ್ಪರ ಪ್ರೀತಿಯು ಆಧ್ಯಾತ್ಮರಹಸ್ಯಗರ್ಭಿತವಾಗಿದೆ. ಅದನ್ನು ನೀನು ಮುಂದೆ ತಿಳಿಯುವೆ. ರಾಧೇಯ ! ಪುರಂದರನು ವಿಪ್ರನಾಗಿ ಬರು ವನು. ಕವಚ ಕುಂಡಲಗಳನ್ನು ಕೊಡಬೇಡ ! ಬೇರೇನನ್ನಾದನೂ ಕೊಡು ! ಕುಂಡಲ ಸಮನ್ವಿತನಾದ ನಿನ್ನನ್ನು ನಿನ್ನ ಪ್ರಬಲಶತ್ರುವಾದ ಅರ್ಜುನನು ಜಯಿಸ ಲಾರನು. ಅವನನ್ನು ನೀನೇ ಜಯಿಸುವೆ. ಸಹಜ ಕವಚ ಕುಂಡಲಗಳನ್ನಿತ್ತೆಡೆ ನಿನ್ನ ಪರಾಕ್ರಮ ಸೂರ್ಯನೇ ಅಸ್ತಂಗತನಾದನೆಂದು ತಿಳಿ !'

ಕರ್ಣನು 'ಭಗವನ್ ! ಸಹಸ್ರಕಿರಣನಾಗಿ ಜಗಜ್ಜೀವನಪ್ರದನಾದ ನಿನ್ನ ಭಕ್ತನೆನಿಸಿ ನನ್ನನ್ನು ಯಾಚಿಸಿದ ವಿಪ್ರನಿಗೆ ಕೊಡಲಾರೆನೆನಲಾರೆನು. ನಿನಗಿಂತಲು ನನಗೆ ದಾರಾ ಪುತ್ರ ಧನ ಆರಾಮ ರಾಜ್ಯಗಳಿಷ್ಟತರವಲ್ಲ. ಶಿರಸಾ ನಮಿಸಿ ಮತ್ತೆ ಮಾಡುವ ವಿಜ್ಞಾಪನೆಯನ್ನು ಕೇಳಿ ಮನ್ನಿಸು ! ಸಾವಿಗಂಜದ ನಾನು ಅನೃತಕ್ಕಂಜು ತ್ತಿರುವೆನು. ಅದರಲ್ಲಿ ಸರ್ವ ಸಜ್ಜನರ ಪ್ರೀತಿಗಾಗಿ, ವಿಪ್ರಪ್ರೀತಿಗಾಗಿ ಪ್ರಾಣಗಳ ನ್ನಾದರೂ ಕೊಡಲು ನಾನು ಹಿಂಜರಿಯೆನು. ಅರ್ಜುನನು ನನ್ನಿಂದ ಅಜೇಯನೆಂಬ ಶಂಕೆಯನ್ನು ಬಿಡು ! ಪರಶುರಾಮದೇವನಿಂದಲೂ, ದ್ರೋಣನಿಂದಲೂ ಮಹಾಸ್ತ್ರ ಗಳನ್ನು ಪಡೆದಿರುವೆನು. ಅಸ್ತ್ರಬಲದಿಂದ ಶತ್ರುಜಯವನ್ನು ಸಾಧಿಸಲು ಶಕ್ತನಾದ ನನಗೆ ಕವಚ ಕುಂಡಲಗಳು ಅನಿವಾರ್ಯವೆಂದು ತಿಳಿಯಬೇಡ ! ಇಂದ್ರನು ಭಿಕ್ಷುಕ ನಾಗಿ ಬಂದರೆ ಅವನ್ನೇ ಏಕೆ ! ಪ್ರಾಣವನ್ನಾದರೂ ಕೊಡುವೆನು. ದಯಮಾಡಿ, ನನ್ನ ದಾನವ್ರತವನ್ನು ಕೆಡಿಸಬೇಡ !' ಎಂದು ಪ್ರಾರ್ಥಿಸಿದನು.

ಸೂರ್ಯನು 'ಕರ್ಣ ! ಮಿತಿಮೀರಿದ ಔದಾರ್ಯಗುಣದಿಂದ ಕೆಡುವೆ. ಕೊಡು ಕವಚ ಕುಂಡಲಗಳನ್ನು, ಆದರೆ ಬೇಡುವವನು ನಿಜವಾದ ವಿಪ್ರನಲ್ಲ. ಇಂದ್ರನಾಗಿರು

ವನು. ಅವನಿಂದ ಕುಂಡಲ ವಿನಿಮಯವಾಗಿ ಅಮೋಘಶಕ್ತಿಯನ್ನು ಪ್ರಾರ್ಥಿಸಿ ಪಡೆ! ಆ ಶಕ್ತಿಯ ಸಹಾಯದಿಂದ ನೀನು ಶತ್ರುಗಳನ್ನು ಜಯಿಸುವೆ. ದೇವರಾಜನ ಶಕ್ತಿಯು ಸಾವಿರಾರು ದೈತ್ಯರನ್ನು ಕೊಂದು ಮತ್ತೆ ಅವನ ಕೈಸೇರಿ ವಿರಾಜಿಸುವುದನ್ನು ನಾನು ಕಂಡಿರುವೆನು' ಎಂದು ಹಿತನುಡಿಗಳನ್ನಾಡಿ ಅಂತರ್ಹಿತನಾದನು.

ಇಂತು ಸ್ವಪ್ನವನ್ನು ಕಂಡ ಕರ್ಣನು ಪ್ರಾತಃಕಾಲವಾಗಲು ಎಚ್ಚತ್ತು ಸ್ನಾನ ಮಾಡಿ, ಸೂರ್ಯಮಂತ್ರವನ್ನು ಜಪಿಸುತ್ತಾ ನಿಂತಿದ್ದನು. ಸೂರ್ಯನು ಪ್ರಸನ್ನನಾಗಿ ಅವನಿಗೆ ಕಾಣಿಸಿ, ಸ್ವಪ್ನವೃತ್ತವೆಲ್ಲವೂ ತಥ್ಯವೆಂದರುಹಿದನು. ಕರ್ಣನು ಕವಚ ಕುಂಡಲಹಾರಿಯಾದ ಒಲಾರಿಯಿಂದ ದಿವ್ಯಶಕ್ತಿಯನ್ನು ಪಡೆಯಲೆಣಿಸಿ, ಅವನ ಆಗಮನವನ್ನು ನಿರೀಕ್ಷಿಸುತ್ತಿದ್ದನು. ಇಂದ್ರನು ವಿಪ್ರವೇಷಧರನಾಗಿ ರಾಧೇಯನನ್ನು ಸಮೀಪಿಸಿದನು. ಕರ್ಣನವನಿಗೆ ಸ್ವಾಗತವನ್ನಿತ್ತು, ಕೂಡಿಸಿ, ಏನು ಬೇಕು ? ಏನು ಕೊಡಲಿ ? ಮಹಾನುಭಾವ ! ಎಂದು ಕೇಳಿದನು. ಬ್ರಾಹ್ಮಣನು 'ಅಯ್ಯಾ ! ಕರ್ಣ ! ನನಗೆ ಪ್ರಮದೆಯರು ಬೇಕಿಲ್ಲ ; ಹಿರಣ್ಯರಜತಗಳಿಗೆ ಕೊರತೆ ಇಲ್ಲ ; ನಿನ್ನ ಸಹಜ ಕವಚ ಕುಂಡಲಗಳನ್ನು ನನಗೆ ದಾನಮಾಡು!' ಎಂದು ಬೇಡಿದನು. ಕರ್ಣನು 'ವಿಪ್ರವರ ! ಭೂಮಿ, ಪ್ರಮದೆಯರು, ರತ್ನಗಳು, ಇನ್ನೇನಾದರೂ ಬೇಡು ! ಕೊಡುವೆನು. ಅಮೃತಸಮುದ್ರಜನಿತವಾದ ಕವಚಕುಂಡಲಗಳಿಂದ ನಾನು ಅವಧ್ಯನಾಗಿರುವೆನು. ಅವನ್ನಿತ್ತರೆ ನಾನು ಉಳಿಯಲಾರೆನು. ಆದುದರಿಂದ ವಿಶಾಲರಾಜ್ಯವನ್ನಾದರೂ ಬೇಡು ; ಕುಂಡಲಗಳನ್ನು ಕೇಳಬೇಡ !' ಎಂದು ಅಂಗಲಾಚಿದನು. ಬ್ರಾಹ್ಮಣನು ಜಗ್ಗಲಿಲ್ಲ. 'ಕೊಡುವುದಾದರೆ ಅವನ್ನೇ ಕೊಡು ! ಇಲ್ಲವಾದರೆ ಇಲ್ಲವೆನ್ನು !' ಎಂದು ನುಡಿಯುವ ಬ್ರಾಹ್ಮಣನು ದೇವೇಂದ್ರನೇ ಇರಬೇಕೆಂದು ಕರ್ಣನು ನಿಶ್ಚಯಿಸಿದನು. 'ದೇವರಾಜ ! ಪಾಂಡವ ಪಕ್ಷಪಾತಿಯಾದ ನಿನ್ನ ಮನದಿಂಗಿತವನ್ನು ತಿಳಿದೆನು. ಕವಚಕುಂಡಲಗಳನ್ನೇ ಬೇಡುವಿಯಾದರೆ ವಿಪ್ರರೂಪದಿಂದಿರುವ ನಿನಗೆ ಇಲ್ಲವೆನ್ನಲಾರದೆ ಅವನ್ನೇ ಕೊಡುವೆನು. ಆದರೆ ಅವನ್ನಿತ್ತು ನಾನು ವಧ್ಯನಾದರೆ, ನಿನಗೆ 'ಕರ್ಣಗಂಜಿದ ಹೇಡಿ' ಎಂಬ ಅಪಕೀರ್ತಿಯು ತಪ್ಪದೇ ಬರುವುದು. ಆದುದರಿಂದ ಅದಕ್ಕೆ ಪ್ರತಿಫಲವಾಗಿ ನಿನ್ನ ದಿವ್ಯಶಕ್ತಿಯನ್ನು ನನಗೆ ಕೊಡು. ಅದರಿಂದ ನಾನು ನನ್ನ ಶತ್ರುವನ್ನು ಕೊಂದು ಕೌರವರಾಜನಿಗೆ ವಿಜಯವನ್ನು ಸಂಪಾದಿಸುವಂತಾದೀತು !' ಎಂದು ಕರ್ಣನು ನುಡಿಯಲು, ಸಹಸ್ರಾಕ್ಷನು ಒಂದು ಕ್ಷಣಕಾಲ ಚಿಂತಿಸಿ ಮತ್ತೆ ಕಿರುನಗೆಯನ್ನು ಬೀರಿ, ಕರ್ಣನಿಗಿಂತೆಂದನು—

'ಕರ್ಣ ! ಆಗಲಿ ! ಕವಚಕುಂಡಲಗಳನ್ನು ಕಿತ್ತು ಕೊಡು ! ಶಕ್ತಿಯನ್ನು ನಿನಗೆ ಕೊಡುವೆನು. ಒಂದು ನಿಬಂಧನೆಯಿಂದ ಮಾತ್ರ ಶಕ್ತಿ ವಿನಿಮಯವೆಂದು ತಿಳಿ! ಅದನ್ನು ಒಂದು ಸಲ ಮಾತ್ರ ಪ್ರಯೋಗಿಸಬೇಕು. ಆಗ ಅದು ನಿನ್ನ ಶತ್ರುವನ್ನು ಸಂಹರಿಸಿ, ಮತ್ತೆ ನಿನ್ನನ್ನು ಸೇರದೆ ನನ್ನ ಕೈಸೇರುವುದು. ಮಹಾವಿಪತ್ಸಮಯದಲ್ಲಿ ಮಾತ್ರ ಅದನ್ನು ಪ್ರಯೋಗಿಸು. ಇಲ್ಲದಿರೆ ಅದು ವೃಥಾ ಪ್ರಯೋಗಿಸಿದ ನಿನ್ನನ್ನೇ

ಸಂಹರಿಸಿ, ನನ್ನ ಲೋಕವನ್ನು ಸೇರುವುದು' ಎಂದು ಶಕ್ತಿಯನ್ನು ಕರ್ಣನಿಗಿತ್ತು, ಇಂದ್ರನು ಮತ್ತೆ ಇಂತು ಎಚ್ಚರಿಸಿದನು—'ಕರ್ಣ! ನಿನಗೆ ಸೂರ್ಯನೆಲ್ಲವನ್ನೂ ತಿಳಿಸಿರುವನೆಂದು ನನಗೆ ಮೊದಲೇ ಗೊತ್ತಿದೆ. ಅದೆಲ್ಲ ದೇವರಹಸ್ಯವೀಗೇಕೆ ? ಯಾವ ವೀರನನ್ನು ಶಕ್ತಿಯು ಸಹಾಯದಿಂದ ಸಂಹರಿಸಲೆಣಿಸಿರುವಿಯೋ ಅವನನ್ನು ಶ್ರೀವರಾಹನಾಗಿ ಭೂಮ್ಯುದ್ಧಾರವನ್ನು ಮಾಡಿದ ನಾರಾಯಣನೇ ಕೃಷ್ಣ ರೂಪದಿಂದ ರಕ್ಷಿಸುತ್ತಿರುವನೆಂದು ಮರೆಯಬೇಡ! ಅಚಿಂತ್ಯಾದ್ಭುತಮಹಿಮನಾದ ಶ್ರೀಕೃಷ್ಣನು ಯಾರ ಸೇವೆಯನ್ನೆಂತು ಸ್ವೀಕರಿಸುವನೋ, ಯಾರನ್ನೆಂತು ಪೊರೆವನೋ ಯಾರೂ ತಿಳಿಯಲಾರರು. ಆ ವಾಸುದೇವನಿಗೆ ನಮಸ್ಕಾರವು. ಇನ್ನು ಕವಚಕುಂಡಲಗಳನ್ನು ಕೊಡು! ಸಹಜ ಕವಚಕುಂಡಲಗಳನ್ನು ಕಿತ್ತಿಕೊಡುವಾಗ ನಿನಗೆ ನೋವಾಗದಿರಲಿ! ಕೊಟ್ಟಮೇಲೆ ನಿನ್ನ ದೇಹವು ಕಂದಿ ಕುಂದದೆ ಸ್ವರ್ಣಸಮ ಭಾಸ್ವರವಾಗಿ ಬೆಳಗಲಿ!' ಇಂದ್ರವಚನವನ್ನಾಲಿಸಿ, ಕರ್ಣನು ಚಲಿಸದೆ, ಮೇರುಧೀರನಾಗಿ ತನ್ನ ಕೈ ಖಡ್ಗದಿಂದ ಮೈಯಲ್ಲಿ ಮುತ್ತಿದ್ದ ಕವಚವನ್ನು ಸುಲಿದು, ಕಿವಿಯ ಕುಂಡಲಗಳನ್ನು ಕಿತ್ತು ವಿಪ್ರರೂಪೀ ದೇವೇಂದ್ರನಿಗೆ ಧಾರೆ ಎರೆದು ದಾನಮಾಡಿದನು. ಆಗ ದೇವವೃಂದವು ಆಕಾಶದಲ್ಲಿ ನಿಂತು ಕರ್ಣನ ಶಿರದಿ ಪೂಮಳೆಗರೆಯಿತು. ದೇವದುಂದುಭಿಗಳು ಮೊಳಗಿದವು. ವಿಮಾನದಲ್ಲಿ ನಿಂತು ಸುರಕಾಂತೆಯರು ಕರ್ಣನ ದಾನದಾರ್ಢ್ಯವನ್ನು ಕೊಂಡಾಡಿದರು. ವಿಪ್ರರು ವೇದಘೋಷದಿಂದ ಜಯಜಯ ಧ್ವಾನದಿಂದ ಕರ್ಣನನ್ನು ಪ್ರಶಂಸಿಸಿ, ಆಶೀರ್ವದಿಸಿದರು. ರುಧಿರಧಾರಾಸಿಕ್ತವಾದ ಕರ್ಣನ ದೇಹವು ದೈವಾನುಗ್ರಹದಿಂದ ನೋಡನೋಡುತ್ತಿರಲು, ವಜ್ರದೃಢವೂ, ಸರ್ವಾಂಗಸುಂದರವೂ, ಸ್ವರ್ಣವರ್ಣವೂ ಆಗಿ ವಿರಾಜಿಸಿತು. ಇಂದ್ರನು ಕರ್ಣನ ಮಹೌದಾರ್ಯವನ್ನು, ವಿಪ್ರಭಕ್ತಿಯನ್ನು ಕಂಡು, ಪ್ರಹರ್ಷಿತನಾಗಿ, ಪಾಂಡವಹಿತವನ್ನು ಸಾಧಿಸಿ, ತೃಪ್ತನಾಗಿ, ಸ್ವರ್ಗಲೋಕವನ್ನು ಸೇರಿದನು. ಕವಚಕುಂಡಲ ಹೀನನಾದ ಕರ್ಣನ ದುರವಸ್ಥೆಯನ್ನು ಕಂಡು, ಕೌರವರು ದುಃಖಿತರಾದಂತೆ ಪಾಂಡವರು ಹರ್ಷಿತರಾದರು.

## ಕರ್ಣಜನ್ಮ ರಹಸ್ಯ

ಜನಮೇಜಯನು ಕರ್ಣನ ವೃತ್ತಾಂತವನ್ನು ತಿಳಿಯಬಯಸಲು, ವೈಶಂಪಾಯನನು ಅದನ್ನು ತಿಳಿಸುತ್ತಿಂತೆಂದನು—

ಕುಂತಿಭೋಜನ ಮನೆಗೆ ಒಂದು ಸಲ ದುರ್ವಾಸನು ಬಂದನು. ಶ್ಮಶ್ರುದಂಡ ಜಟಾಧರನು, ದಿವ್ಯತೇಜನು ಆದ ಮುನಿಗೆ ಸ್ವಾಗತವಿತ್ತು, ಕರೆತಂದು ಭೋಜನು ಪೂಜಿಸಿದನು. ಅವನು ಕೆಲವುದಿನ ಅಲ್ಲೇ ತಂಗಿರುವಾಗ, ಭೋಜನ ಸಾಕುಮಗಳಾದ ಕುಂತಿಯು ಮುನಿಯನ್ನು ಸೇವಿಸುತ್ತಿದ್ದಳು. ತೀವ್ರಕೋಪನನಾದ ಋಷಿಪುಂಗವನನ್ನು ನಯವಿನಯ ಸೌಶೀಲ್ಯಗಳಿಂದ ಕುಂತಿ ಅನ್ನಾದಿ ಸೌಕರ್ಯಗಳನ್ನು ಅಪ್ರಮತ್ತಳಾಗಿ ಒದಗಿಸಿ ಪರಿಚರಿಸುತ್ತಿರಲು, ದುರ್ವಾಸನು ಸಂತುಷ್ಟನಾದನು.

'ಪೃಥೇ ! ಹುಟ್ಟಿದೆ ವೃಷ್ಣಿ ಕುಲದಲ್ಲಿ. ತಂಗಿಯಾದೆ ವಸುದೇವನಿಗೆ. ಬಾಲ್ಯ ದಿಂದ ಗುರು-ಹಿರಿಯರ ಸೇವೆಯನ್ನು ನಿರ್ಮತ್ಸರಳಾಗಿ ಮಾಡುತ್ತಿರುವೆ. ದೊಡ್ಡ ವಂಶದಲ್ಲಿ ಹುಟ್ಟಿರುವೆನೆಂಬ ಗರ್ವವಿಲ್ಲ. ಅಂತೆಯೇ ನಿನ್ನಲ್ಲಿ ಪ್ರೀತನಾಗಿರುವೆನು. ಒಂದು ವರ್ಷ ಕಾಲ ನಾನು ನಿನ್ನ ಸಹನಗುಣವನ್ನು ಪರೀಕ್ಷಿಸಿದೆನು. ಶಮದಮಾದಿ ಗುಣಸಮನ್ವಿತೆಯಾದ ನಿನಗೆ ವರವನ್ನು ಕೊಡುವೆನು. ನಿನ್ನ ಕೀರ್ತಿಯು ಚಂದ್ರಿಕಾ ಧವಳವಾಗಿ ಬೆಳಗಲಿ !' ಎಂದು ನುಡಿದ ಮುನಿವರನಿಗೆ ನಮಿಸಿ, ಕುಂತಿಯು ಇಂತೆಂದಳು. 'ವಿಪ್ರೇಂದ್ರ ! ನೀನು ಸಂತುಷ್ಟನಾದರೆ ಸಾಕು ! ನನಗಿನ್ನಾವ ವರವೂ ಬೇಡ ! ನನ್ನ ತಂದೆಯ ಆಜ್ಞೆಯಂತೆ ನನ್ನ ಕರ್ತವ್ಯವನ್ನು ನಾನು ಪಾಲಿಸಿ ರುವೆನು.' ಆ ಮಾತಿಗೆ ಸಂತಸಿಸಿ ದುರ್ವಾಸನು 'ಕುಂತಿ ! ಒಂದು ಮಂತ್ರವನ್ನು ನಿನಗೆ ಉಪದೇಶಿಸುವೆನು. ಅದು ದೇವಾಹ್ವಾನ ಸಮರ್ಥವಾಗಿದೆ. ಯಾವ ದೇವ ನನ್ನು ಮಂತ್ರವನ್ನುಚ್ಚರಿಸಿ ಕರೆಯುವೆಯೋ, ಆ ದೇವಪರಿವೃಢನು ನಿನಗೆ ಪ್ರತ್ಯಕ್ಷ ನಾಗಿ, ನಿನ್ನನ್ನು ಸ್ಪರ್ಶಿಸುವ ಮಾತ್ರದಿಂದಲೇ ಒಂದಂಶದಿಂದ ನಿನಗೆ ಮಗನಾಗುವನು. ಮುಂದೆ ಈ ಮಂತ್ರೋಪಯೋಗವಾಗುವ ಕಾಲ ಬರುವುದು' ಎಂದು ಹೇಳಿ, ಬಲಾ ತ್ಕಾರದಿಂದ ಮಂತ್ರೋಪದೇಶವನ್ನು ಮಾಡಿದನು. ಕುಂತಿಭೋಜನನ್ನು ಕಂಡು, ದುರ್ವಾಸನು 'ರಾಜನ್ ! ನಿನ್ನ ಮನೆಯಲ್ಲಿ ಸುಖವಾಗಿದ್ದೆನು. ನಿನ್ನ ಮಗಳ ಸೇವೆ ಯಿಂದ ಪ್ರೀತನಾಗಿರುವೆನು. ನಿನಗೆ ಒಳ್ಳೆಯದಾಗಲಿ !' ಎಂದು ಹರಸಿ, ಅಂತರ್ಹಿತ ನಾದನು.

ಕುಂತಿಯು ಒಂದುದಿನ ಅಥರ್ವವೇದ ಶಿರದಿ ಪ್ರಸಿದ್ಧವಾದ ಮಂತ್ರದ ಬಲ ವನ್ನು ಪರೀಕ್ಷಿಸಿ ನೋಡಲೆಣಿಸಿದಳು. ಹರ್ಮ್ಯತಲದಲ್ಲಿ ಮಹಾರ್ಹಶಯನದಿ ಮಲಗಿದ್ದ ಕುಂತಿಯು ಪ್ರಾಚೀ ದಿಕ್ಕಿನಿಂದ ಮೇಲಕ್ಕೆದ್ದು ಬರುವ ಆದಿತ್ಯಮಂಡಲವನ್ನು ಕಂಡಳು. ಸಂಧ್ಯಾಕಾಲದ ಭಾನುಮಂಡಲದಿಂದ ಹೊರಹೊಮ್ಮಿ ಬಂದ ಹೊಂಬಿಸಿಲಿನ ಕರಗಳು, ಅವಳ ಮೈಯಲ್ಲಿ ವ್ಯಾಪಿಸಿದಾಗ, ಆವಳು ಪುಲಕಾಂಚಿತಗಾತ್ರಳಾದಳು. ಆದಿತ್ಯಮಂಡಲ ಮಧ್ಯಗತನಾದ ಸೂರ್ಯದೇವನ ಪ್ರಭೆಗೆ ಮಾರುಹೋಗಿ. ಪರೀಕ್ಷಿ ಸಲು ಮಂತ್ರವನ್ನುಚ್ಚರಿಸಿ, ಸೂರ್ಯನನ್ನು ಆಹ್ವಾನಿಸಿದಳು. ತತ್‌ಕ್ಷಣವೇ ಸೂರ್ಯನು ಮೂರ್ತಿಮತ್ತೇಜೋರೂಪನಾಗಿ, ಒಂದಂಶದಿಂದ ಧರೆಗಿಳಿದುಬಂದನು. ಮಧುಪಿಂಗವರ್ಣನು, ಮಹಾಬಾಹುಯುಗನು, ಮಂದಹಾಸ ಸುಂದರನು, ಮಾಣಿಕ್ಯ ಮುಕುಟಕುಂಡಲನು, ದಿವ್ಯಹಾರಭೂಷಿತನು ಆದ ಸೂರ್ಯನು ಕುಂತಿಯ ಸಮೀಪ ದಲ್ಲಿ ನಿಂತು 'ಏನು ಮಾಡಲಿ ? ಹೇಳು' ಎಂದನು. ಅವನ ದೇದೀಪ್ಯಮಾನ ಪ್ರಕಾಶದಿಂದ ಕಣ್ಣುಗಳು ಕುಕ್ಕಿ, ಅವನ ಮಧುರ ವಚನ ಶ್ರವಣದಿಂದ ಮೈಮರೆತು ಕುಂತಿಯು ಸುಮ್ಮನಿದ್ದು, ಮತ್ತೆ ಮೈತಿಳಿದು, 'ಭಗವನ್ ! ಕುತೂಹಲದಿಂದ ನಿನ್ನನ್ನು ಕರೆದೆನು. ಪ್ರಸನ್ನನಾಗು ! ಮಂತ್ರಪರೀಕ್ಷೆಗೆಂದು ಕರೆದ ನನ್ನ ತಪ್ಪನ್ನು ಕ್ಷಮಿಸು ! ಹೊರಟುಹೋಗು !' ಎಂದು ಪ್ರಾರ್ಥಿಸಿದಳು. ಸೂರ್ಯನು, 'ಆಗಲಿ

ಹೋಗುವೆನು ! ಆದರೆ ನನ್ನ ಆಗಮನವು ವ್ಯರ್ಥವಾಗಲಾರದು. ಮಂತ್ರಶಕ್ತಿಯೇ ಅಂತಹದಿರುವುದರಿಂದ ನಾನು ಒಂದಂಶದಿಂದ ನಿನಗೆ ಪುತ್ರನಾಗಲು ಬಂದಿರುವೆನು. ನನ್ನ ಪುತ್ರನು ಅಪ್ರತಿಮ ವೀರನೆಂದು ಖ್ಯಾತನಾಗುವನು. ಸಹಜ ಕವಚಕುಂಡಲ ನಾಗಿ ಅವಧ್ಯನೆನಿಸುವನು. ನನ್ನನ್ನು ವೃಥಾ ಕಳಿಸಿದೊಡೆ, ಕುಪಿತನಾಗಿ, ನಿನ್ನನ್ನು ಶಪಿಸಿ ಹೋಗುವೆನು. ನಿನ್ನನ್ನು, ನಿನ್ನ ತಂದೆಯನ್ನು ಕೂಡ ಶಪಿಸಿ, ನಾನು ನಾಶ ಮಾಡಬಲ್ಲೆನು. ಪುರಂದರಾದಿ ದೇವವೃಂದವು ನನ್ನನ್ನು ನೋಡಿ, ನಗದಂತೆ ಮಾಡು! ಅವರೆಲ್ಲರೂ ಸಾಕ್ಷಿಗಳಾಗಿರುವಾಗ ಮಂತ್ರಬಲದಿಂದ ಆಕರ್ಷಿತನಾಗಿ ಬಂದ ನನ್ನನ್ನು ತಿರಸ್ಕರಿಸುವುದು ಶ್ರೇಯಸ್ಕರವಲ್ಲ' ಎಂದು ಕುಂತಿಗೆ ದಿವ್ಯನೇತ್ರವನ್ನು ನೀಡಿದನು. ಆಗ ಕುಂತಿಯು ದೇವಸಮೂಹವನ್ನು ನೋಡಿ, ನಾಚುತ್ತಿಂತೆಂದಳು—

'ಮಹಾನುಭಾವ ! ನಾನು ಕನ್ಯೆ, ತಂದೆ ತಾಯಿ ಇರುವರು. ದೇಹನ್ಯಾಸವು ಅವರಿಂದಾಗಬೇಕಲ್ಲವೇ ! ಲೋಕವೃತ್ತವಿರುದ್ಧವಾಗಿ ನಾನು ನಡೆಯಲಾರೆನು. ಧರ್ಮದೂರಳಾಗಲಾರೆನು. ನನ್ನನ್ನು ಕ್ಷಮಿಸಿ, ಹೊರಟುಹೋಗು ಎಂದು ಅಂಗಲಾಚುವ ಅಂಗನೆಗೆ ಸೂರ್ಯನಿಂತೆಂದನು—'ಕುಂತಿ ! ಕೇಳು ! ಕ್ಷತ್ರಿಯಾಂಗನೆಯರು ಸ್ವಯಂವರಯೋಗ್ಯರಿರುವರು. ನಾನು ಸಾಮಾನ್ಯಮನುಜನಲ್ಲ. ತೇಜೋಮಯನಾದ ನನ್ನ ಸ್ಪರ್ಶದಿಂದ ನಿನ್ನ ಕನ್ಯಾತ್ವವು ಕೆಡದಿರುವುದು. ಅದಿತಿದೇವಿಯು ಮಗನಾದ ನನಗಿತ್ತ ಕವಚಕುಂಡಲಗಳಿಂದ ಸಹಿತನಾದ ಪುತ್ರನು ನಿನಗೆ ಜನಿಸುವನು. ಅವನು ಮಹಾವೀರನೆನಿಸುವನು, ಎಂದು ಯೋಗಶಕ್ತಿಯಿಂದ ಕುಂತಿಯನ್ನು ಸ್ಪರ್ಶಿಸಿ, ಅವಳ ಯೋನಿದೂಷಣವನ್ನು ಮಾಡದೆ, ಸೂರ್ಯನು ತಾನೇ ಒಂದಂಶದಿಂದ ಅವಳ ಗರ್ಭವನ್ನು ಪ್ರವೇಶಿಸಿದನು. ಸೂರ್ಯನು ಅಂತರ್ಹಿತನಾದಮೇಲೆ ಕುಂತಿಯು ಎಚ್ಚತ್ತು, ತಾನು ಗರ್ಭವತಿಯಾಗಿರುವುದನ್ನು ತಿಳಿದಳು. ಕಾಲಕ್ರಮದಿ ಪುತ್ರನೂ ಉದಿತನಾದನು. ಸೂರ್ಯದೇವನ ಅನುಗ್ರಹದಿಂದ ಕುಂತಿಯು ತಾನು ಕನ್ಯೆಯೇ ಆಗಿದ್ದರೂ ಲೋಕಭೀತಿಯಿಂದ ಜಾತಮಾತ್ರಶಿಶುವನ್ನು ಸ್ವರ್ಣಮಂಜೂಷೆಯಲ್ಲಿಟ್ಟು, ಅಶ್ವನದಿಯಲ್ಲಿ ತೇಲಿಬಿಟ್ಟಳು. ಪುತ್ರಸ್ನೇಹದಿಂದ ಕಾತರವಾದ ಅವಳ ಹೃದಯವು ದುಃಖನದಿಯಾಗಿ ಕಣ್ಣೀರಿನ ರೂಪವಾಗಿ ಹರಿಯಿತು.

'ವತ್ಸ ! ನಿನಗೆ ಸ್ವಸ್ತಿಯಾಗಲಿ. ದೇವ ಭೂತ ನರರಿಂದ ನಿನಗೆ ಶುಭವಾಗಲಿ ! ಸಲಿಲೇಶನಾದ ವರುಣ, ನಿನ್ನ ತಂದೆಯಾದ ಸೂರ್ಯ, ನಿನ್ನನ್ನು ರಕ್ಷಿಸುತ್ತಿರಲಿ! ಮಹೇಂದ್ರಾದಿ ದೇವತೆಗಳು ನಿನಗೆ ರಕ್ಷಕರಾಗಲಿ ! ಎಲ್ಲಾದರೂ ಬದುಕಿ ಚಿರಂಜೀವ ನಾಗು ! ನಿನ್ನ ಕವಚ ಕುಂಡಲಗಳಿಂದ ನಿನ್ನನ್ನು ತಿಳಿದು, ಮಾತೃವಾತ್ಸಲ್ಯದಿಂದ ಕಣ್ಣೀರಿಡುವ ಮಾತ್ರ ಪಡೆದುಬಂದಿರುವ ಪಾಪಿ ಕುಂತಿಯನ್ನು ದೇವತೆಗಳು ಕ್ಷಮಿಸಲಿ! ಯಾರ ಮೊಲೆಹಾಲನ್ನುಂಡು ಬೆಳೆಯುವೆ ? ಯಾರ ತೊಡೆಯಲ್ಲಿ ಮಲಗುವೆ ? ಅವರೇ ನಿನಗೆ ತಾಯಿ ತಂದೆಯರಾಗಲಿ ! ಅವರೇ ಧನ್ಯರು ! ಆದಿತ್ಯಸಮತೇಜನಾದ ನಿನ್ನನ್ನು ಕೈಬಿಟ್ಟು ತ್ಯಜಿಸಿದ ಪಾಪಿನಿಯನ್ನು ಎಂದಾದರೂ ಸೇರಿ 'ಅಮ್ಮಾ!'

ಎಂದು ಕರೆದು ಸಂತೈಸು !' ಎಂದು ಗೋಳಾಡುತ್ತ ಹರಸಿ ಕುಂತಿಯು ಅಂತಃಪುರವನ್ನು ಸೇರಿದಳು.

ಇಂತು ಅಮೃತಸಮುದ್ರದಿಂದುದ್ಭವಿಸಿದ ಕವಚ ಕುಂಡಲಗಳಿಂದ ಮೆರೆಯುವ ಕರ್ಣನು ಮಂಜೂಷೆಯಲ್ಲಿ ತೇಲಿಹೋಗುತ್ತಿದ್ದನು. ಅವನೊಡನೆ ಅನೇಕ ರತ್ನಾಭರಣಗಳನ್ನೂ ಇಟ್ಟು ಕುಂತಿ ಕಳಿಸಿದ್ದ ಮಂಜೂಷೆ ಅಶ್ವನದಿಯಿಂದ ಚರ್ಮಣ್ವತಿಯನ್ನು ಸೇರಿತು. ಅಲ್ಲಿಂದ ಕ್ರಮವಾಗಿ ಯಮುನೆಯ ದ್ವಾರಾ ಗಂಗೆಯನ್ನು ಸೇರಿ ಹೋಗುವಾಗ, ಅಂಗದೇಶದ ಚಂಪಾಪುರಿಯನ್ನು ಸೇರಿತು. ಅಲ್ಲಿ ಧೃತರಾಷ್ಟ್ರನ ಮಿತ್ರನಾದ ಅಧಿರಥನೆಂಬ ಸೂತನು ತನ್ನ ಮಡದಿಯಾದ ರಾಧೆಯೊಡನೆ ಜಲಕ್ರೀಡಾರತನಾಗಿದ್ದನು. ರಾಧೆ ಮಂಜೂಷೆಯನ್ನು ನೋಡಿ, ಹಿಡಿದು, ತೀರವನ್ನು ಸೇರಿದಳು. ಆ ಪೇಟಿಕೆಯಲ್ಲಿ ಕೂಸನ್ನು ಕಂಡು ರಾಧಾತಿರಥರು ಅತ್ಯಾನಂದಪರವಶರಾದರು. ಕುಂಡಲಸಮನ್ವಿತನಾಗಿ ಮೆರೆಯುವ ಬಾಲಕನು, ಲೋಕವಿಲಕ್ಷಣವೆಂದರಿತು, ಅವನಿಗೆ ಕರ್ಣನೆಂದು ಪೆಸರಿಟ್ಟು ಸಲಹಿದರು. ರತ್ನಭೂಷಣಸಮೇತನಾಗಿ ಬಂದ ಕರ್ಣನು ವಸುಷೇಣನೆಂದು ಖ್ಯಾತನಾದನು. ಅವನು ಕಾಲಕ್ರಮದಿ ಬೆಳೆದು, ದ್ರೋಣ, ಪರಶುರಾಮರಲ್ಲಿ ಅಸ್ತ್ರಶಸ್ತ್ರ ವಿದ್ಯಾಭ್ಯಾಸವನ್ನು ಮಾಡಿ ಮಹಾವೀರನೆನಿಸಿ ದುರ್ಯೋಧನನ ಸಖನಾದನು. ಅರ್ಜುನನಿಂದ ಸ್ಪರ್ಧಿಸುತ್ತ ಅವನ ವೈರದಿಂದ ಕೌರವಸಖನಾಗಿ ವಿರಾಜಿಸಿದನು. ಮಧ್ಯಂದಿನ ಸಮಯದಲ್ಲಿ ಬಂದ ವಿಪ್ರರು ಬೇಡಿದುದನ್ನು ನೀಡಿ, ದಾನಶೌಂಡನೆಂದು ಪ್ರಖ್ಯಾತನಾದನು.

## ಅರಣೀ ಹರಣ

ಪಾಂಡವರು ಮತ್ತೆ ದ್ವೈತವನವನ್ನು ಸೇರಿ, ಅಲ್ಲಿ ಹನ್ನೆರಡನೆಯ ವರ್ಷದ ವನವಾಸವನ್ನು ಮುಗಿಸಲು ನಿಶ್ಚಯಿಸಿ, ಕುಟೀರಗಳನ್ನು ನಿರ್ಮಿಸಿ, ವಾಸಿಸತೊಡಗಿದರು. ಒಂದು ದಿನ ವಿಪ್ರನೋರ್ವನು ಧಾವಿಸಿ ಬಂದು ಧರ್ಮರಾಜನಿಗಿಂತು ನಿವೇದಿಸಿದನು—'ಮಹಾರಾಜ ! ಅರಣಿದ್ವಯಸಂಮಿತವಾದ ನನ್ನ ಅಗ್ನಿಹೋತ್ರದ ಮಥನ ದಂಡವು ಒಂದು ಜಿಂಕೆಯು ಭೀತವಾಗಿ ಓಡಿಬರುವಾಗ ಅದರ ಕೊಂಬುಗಳಲ್ಲಿ ಸಿಕ್ಕಿಕೊಂಡಿತು. ಜಿಂಕೆಯನ್ನು ಹಿಡಿದು, ಅರಣಿಯನ್ನು ಬಿಡಿಸಿಕೊಳ್ಳುವ ನನ್ನ ಪ್ರಯತ್ನವೆಲ್ಲವೂ ವ್ಯರ್ಥವಾಯಿತು. ನನ್ನ ಅಗ್ನಿಹೋತ್ರಕಾರ್ಯವು ಅರಣಿಗಳಿಲ್ಲದೆ ನಡೆಯಲಾರದು. ಜಿಂಕೆಯು ಬಹುದೂರ ಹೋಗದ ಮುನ್ನ ಅದನ್ನು ಮುಟ್ಟಿ ನನ್ನ ಅರಣಿಯನ್ನು ಸಂಪಾದಿಸಿಕೊಡಿ !' ಎಂದು ಬೇಡಿ, ತ್ವರೆಪಡಿಸುವ ವಿಪ್ರನ ಅರಣಿಯನ್ನು ಸಾಧಿಸಲು ನಿಶ್ಚಯಿಸಿ ಧರ್ಮರಾಜಾದಿ ಪಂಚವೀರರು ಧನುರ್ಬಾಣಧರರಾಗಿ ಜಿಂಕೆಯನ್ನು ಹುಡುಕುತ್ತಾ ವನವೆಲ್ಲ ತಿರುಗಿದರು. ಎಷ್ಟು ಧಾವಿಸಿ ಅನ್ವೇಷಿಸಿದರೂ ಮೃಗವನ್ನು ಕಾಣಲಾರದೆ ಪಾಂಡವರು ಶ್ರಾಂತರಾಗಿ, ಒಂದು ಆಲದ ಮರದ ನೆರಳಿನಲ್ಲಿ ಕೂತು ವಿಶ್ರಮಿಸುತ್ತಿದ್ದರು. ಹಸಿವೆ ನೀರಡಿಕೆಗಳಿಂದ ಬಳಲುವ ಸೋದರರನ್ನು

ಕಂಡು, ನಕುಲನು ಚಿಂತಾಕುಲನಾಗಿ ಅಣ್ಣನಿಗಿಂತೆಂದನು—'ನಮ್ಮ ಕುಲದಲ್ಲಿ ಜನಿಸಿದವರಾರೂ ಧರ್ಮಲೋಪವನ್ನು ಮಾಡಿಲ್ಲ; ಧರ್ಮ ವಿಷಯದಲ್ಲಿ ಆಲಸ್ಯ ವನ್ನೂ ನಾವು ಮಾಡಿ ಅರಿಯೆವು. ಯಾಚಕರಿಗೆ ಇಲ್ಲವೆಂದವರಲ್ಲ. ಆದರೂ ಬ್ರಾಹ್ಮಣನ ಕರ್ಮಲೋಪವಾಗದಂತೆ ಅರಣಿಯನ್ನು ಸಾಧಿಸಿ, ಧರ್ಮರಕ್ಷಣೆಯನ್ನು ಮಾಡಲಾರದೆಹೋದೆವಲ್ಲ! ಇದು ಯಾವ ಪಾಪದ ಫಲವೋ!' ಆ ಮಾತಿಗೆ ಧರ್ಮರಾಜನು ನಕ್ಕು, 'ಅರಣೀಹರಣಕ್ಕೂ ಪಾಪಕ್ಕೂ ಸಂಬಂಧವಿಲ್ಲ. ಕೇಳು! ಪ್ರಾರಬ್ಧಕರ್ಮಾನುರೂಪವಾಗಿ, ಸುಖದುಃಖಗಳು ಒದಗಿಬರುವುವು. ಕರ್ಮಫಲವು ಅವಶ್ಯವಾಗಿ ಅನುಭೋಕ್ತವ್ಯವಾಗಿದೆ' ಎಂದನು.

ಭೀಮನು 'ಧರ್ಮಲೋಪದಿಂದಲೇ ನಮಗೆ ಇಂತಹ ಸಂಕಟವು ಒದಗಿದೆ. ಪ್ರಾತಿಕಾಮಿಯು ದ್ರೌಪದಿಯನ್ನು ದಾಸಿಯಂತೆ ಸಭೆಗೆ ಕರೆತರಲು ಹೋದಾಗ ಅವ ನನ್ನು ಕೊಲ್ಲದೆ ಬಿಟ್ಟ ಪಾಪವೇ ನಮ್ಮನ್ನಿಂತು ಕಾಡುತ್ತಿದೆ' ಎಂದನು. ಅರ್ಜುನನು 'ಅತಿತೀಕ್ಷ್ಣವು, ಹೃದಯವಿದಾರಕವು ಆದ ಸೂತಪುತ್ರನ ದುರ್ವಚನತತಿಯನ್ನು ಕ್ಷಮಿಸಿ, ಸುಮ್ಮನಿದ್ದುದರಿಂದ ನಮಗೆ ಕಷ್ಟಬರುತ್ತಿದೆ' ಎಂದನು. ಸಹದೇವನು 'ಅಕ್ಷದ್ಯೂತದಲ್ಲಿ ಮೋಸದಿಂದ ಗೆದ್ದು ಅಬ್ಬರಿಸುವ ಪಾಪಿ ಶಕುನಿಯನ್ನು ಆಗಲೇ ಕೊಲ್ಲದಿದ್ದುದರಿಂದ ನಾವು ಸಂಕಟಪಡಬೇಕಾಗಿದೆ' ಎಂದನು.

ಆಗ ಧರ್ಮಜನು ನಕುಲನನ್ನು ನೋಡಿ 'ಬಹು ಶ್ರಾಂತರಾಗಿರುವೆವು. ವತ್ಸ! ಈ ಗಿಡವನ್ನೇರಿ ನೋಡು! ಜಲಾಶಯವನ್ನು ಕಂಡರೆ ತಿಳಿಸು! ನೀರು ಕುಡಿಯ ಬೇಕಾಗಿದೆ' ಎಂದು ನುಡಿದನು. ನಕುಲನು ವೃಕ್ಷವನ್ನೇರಿ, ವೃಕ್ಷಖಂಡಮಧ್ಯದಲ್ಲಿದ್ದ ಸರೋವರವನ್ನು ನೋಡಿ, ಅಣ್ಣನಿಗೆ ತಿಳಿಸಿದನು. ಅವನಿಂದಾಜ್ಞಪ್ತನಾಗಿ ನಕುಲನು ಬೇಗಬೇಗನೆ ನಡೆದು, ಆ ಸರೋವರವನ್ನು ಸಮೀಪಿಸಿದನು. ವಿಮಲಸಲಿಲವನ್ನು ಕಂಡು, ಪಿಪಾಸೆಯನ್ನಡಗಿಸಲು ಕೋರಿ, ಕೈಗಳಿಂದೆತ್ತಿ ನೀರನ್ನು ಕುಡಿಯಲಿರುವ ನಕುಲನನ್ನು ವಾರಿಸಿ, ಅಶರೀರ ಯಕ್ಷನಿಂತೆಂದನು—'ತಾತ! ಸಾಹಸವನ್ನು ಬಿಡು. ನನ್ನ ಪ್ರಶ್ನೆಗಳಿಗೆ ಉತ್ತರವನ್ನಿತ್ತು, ಅನಂತರ ನೀರನ್ನು ಕುಡಿಯಬಹುದು. ಇದು ನನ್ನ ನಿಯಮವು. ಆ ಮಾತನ್ನು ನಿರ್ಲಕ್ಷಿಸಿ, ನಕುಲನು ತೃಷಾರ್ದಿತನಾಗಿದ್ದುದ ರಿಂದ, ಪ್ರಶ್ನೆಗಳನ್ನು ಉತ್ತರಿಸದೆ ನೀರನ್ನು ಕುಡಿದನು. ತತ್ಕ್ಷಣವೇ ಅವನು ಮೂರ್ಛಾಕ್ರಾಂತನಾಗಿ ಕೆಳಗೆ ಬಿದ್ದನು.

ಎಷ್ಟುಹೊತ್ತಾದರೂ ನಕುಲನು ಬಾರದಿರಲು ಆಶ್ಚರ್ಯಯುತನಾದ ಧರ್ಮಜನು ನಕುಲನನ್ನೂ ನೀರನ್ನೂ ತಾರೆಂದು ಸಹದೇವನನ್ನು ಕಳಿಸಿದನು. ಸಹದೇವನು ಸರಸ್ಸನ್ನು ಸೇರಿ, ಬಿದ್ದಿರುವ ನಕುಲನನ್ನು ನೋಡಿ ಶೋಕಪರೀತನಾದನು. ನೀರನ್ನು ಕುಡಿಯಲು ಯತ್ನಿಸಿದ ಸಹದೇವನು ಅಶರೀರವಾಣಿಯನ್ನು ಕೇಳಿ, ನಕುಲನಂತೆ ಅದನ್ನು ನಿರ್ಲಕ್ಷಿಸಿ ನೀರನ್ನು ಕುಡಿದು, ತಾನೂ ಕೆಳಗೆ ಬಿದ್ದನು. ಮಾದ್ರೀಸುತರು ತಡಮಾಡಿದ ಕಾರಣವನ್ನರಿಯಲಾರದೆ ಚಿಂತಾಕ್ರಾಂತನಾದ ಧರ್ಮರಾಜನು

ಅರ್ಜುನನನ್ನು ಕಳಿಸಿದನು. ಮಲಗಿದವರಂತೆ ಬಿದ್ದಿರುವ ಯಮಳರನ್ನು ನೋಡಿ, ಅರ್ಜುನನು ಶೋಕ ರೋಷ ಪರೀತನಾದನು. ಬಾಣವನ್ನು ಹೂಡಿ, ಶತ್ರುಗಳನ್ನು ಹುಡುಕಿ ಕಾಣಲಾರದೆ, ತೃಷಾರ್ದಿತನಾಗಿ ನೀರಿಗೆ ಕೈಯೊಡ್ಡಿದಾಗ, ಅವನಿಗೂ ಯಕ್ಷವಚನವು ಕರ್ಣಗೋಚರವಾಯಿತು. ಶಬ್ದವೇಧಿಶರಗಳಿಂದ ಅಶರೀರಭೂತವನ್ನು ಹೊಡೆಯಲು ವಿಕ್ರಮಿಸಿ ವಿಜಯನು ನಿಷ್ಫಲಪ್ರಯತ್ನನಾಗಿ, ನೀರಡಿಕೆಯನ್ನಡಗಿಸಲು ನೀರು ಕುಡಿದು ಮೂರ್ಛಿತನಾದನು.

ಧರ್ಮರಾಜನು ಚಿಂತಾಕ್ರಾಂತನಾಗಿ 'ಭೀಮ ! ಅರ್ಜುನ ಸಹದೇವ ನಕುಲರು ಬಾರದಾದರು. ದಾಹಬಾಧೆಯೂ ಹೆಚ್ಚುತ್ತಿದೆ. ಅವರನ್ನು ಕರೆದುಕೊಂಡು, ನೀರನ್ನೂ ತರಬಾರದೇ?' ಎಂದು ಬೇಡಿದನು. ಭೀಮಸೇನನು ಸರೋವರತೀರವನ್ನು ಸೇರಿದನು. ಅಲ್ಲಿ ಬಿದ್ದಿದ್ದ ಸೋದರರನ್ನು ಕಂಡು ಮರುಗಿದನು. ದಾಹ ಅಮಿತವಾಗಿದ್ದುದರಿಂದ ನೀರು ಕುಡಿಯಲು ಬಾಗಿದ ಭೀಮನು ಅದೇ ಅಶರೀರವಾಣಿಯನ್ನು ಕೇಳಿದನು. ಪ್ರಶ್ನೆಗಳಿಗೆ ಪ್ರತ್ಯುತ್ತರವಿತ್ತು ಬದುಕುವುದು ವಿದ್ಯಾವಿಕ್ರಯವೆನಿಸಿಕೊಳ್ಳುವುದು. ವಿದ್ಯಾವಿನಿಮಯವು ವಿಪ್ರರಿಗೇ ಕೂಡದೆಂದಮೇಲೆ, ಕ್ಷತ್ರಿಯರಿಗೆ ವಿದ್ಯೆಯನ್ನಿತ್ತು ಪ್ರತಿಫಲವನ್ನು ಪಡೆಯುವುದು ಸುತರಾಂ ನಿಷಿದ್ಧವೆಂದು ತಿಳಿದ ಭೀಮಸೇನನು ಶುದ್ಧ ಭಾಗವತಧರ್ಮ ನಿರತನಾದುದರಿಂದ ಪ್ರತ್ಯುತ್ತರವನ್ನು ನೀಡದೆ, ನಿರ್ಲಕ್ಷಿಸಿ, ನೀರನ್ನು ಕುಡಿದು, ಮೂರ್ಛಿತನಾದಂತೆ ಬಿದ್ದನು.

ಧರ್ಮರಾಜನು ತಮ್ಮಂದಿರು ಬಾರದುದನ್ನು ನೋಡಿ, ವಿಷಾದಖಿನ್ನನಾಗಿ, ಅವರನ್ನು ಹುಡುಕಿಕೊಂಡು ಹೊರಟು, ಕೊನೆಗೆ ಸರಸ್ತೀರದಲ್ಲಿ ಮೂರ್ಛಿತರಾಗಿದ್ದ ಭೀಮ ವಿಜಯ ನಕುಲ ಸಹದೇವರನ್ನು ಕಂಡು, ವಿಸ್ಮಿತನಾಗಿ, ನಿಟ್ಟುಸಿರನ್ನಿಟ್ಟು ದುಃಖವನ್ನು ತಡೆಯಲಾರದೆ ಗೋಳಾಡಿದನು. 'ವೃಕೋದರ ! ಏನಿದಾಶ್ಚರ್ಯ ? ಏಕಿಂತು ಬಿದ್ದಿರುವೆ ? ದುರ್ಯೋಧನನ ಊರುಭಂಗವನ್ನು ಸಾಧಿಸಲು ನೀ ಮಾಡಿದ ಪ್ರತಿಜ್ಞೆ ವಿಫಲವಾಯಿತೇ ? ದೇವಸದೃಶನಾದ ನಿನ್ನ ವಚನವು ಎಂದಿಗೂ ಸುಳ್ಳಾಗಿಲ್ಲ. ಇಂದೇಕೆ ಹೀಗಾಯಿತು ? ಧನಂಜಯ ! ಉತ್ತರ ಕುರುಖಂಡವನ್ನು ಗೆದ್ದು ಬಂದ ಮಹಾವೀರನಾದ ನಿನಗೆ ಇಂತಹ ವಿಪತ್ತನ್ನು ತಂದ ಶತ್ರುಗಳಾರು ? ಅಜೇಯನಾದ ವಿಜಯನಿಗೆ ಅಪಜಯವೇ ? ನಿಮ್ಮೀರ್ವರ ಮೃತಿಯಿಂದ ನನ್ನ ಸರ್ವಾಶೆಗಳೂ ಮಣ್ಣುಗೂಡಿದವು. ನಿಮ್ಮ ಬಾಹುಬಲವನ್ನು ಆಶ್ರಯಿಸಿ, ಶತ್ರುಜಯವನ್ನು ಸಾಧಿಸಲೆಣಿಸಿದ ನನ್ನ ಹೆಬ್ಬಯಕೆಯು ಮರೀಚಿಕಾ ಪಯಃ ಪಾನವಾಯಿತು. ಅಯ್ಯೋ ! ಮುದ್ದು ನಕುಲ ! ಯಾವ ಪಾಪಿಯು ನಿನಗೀಗತಿ ತಂದಿರುವನು ? ಸಹದೇವ ! ನೀನಿಲ್ಲದೆ ನಾನು ಬದುಕಿರಲಾರನೇ ? ನೋಡಿದರೆ ಶಸ್ತ್ರಾಘಾತವಿಲ್ಲ ! ರಕ್ತಪಾತವಿಲ್ಲ ! ಕಾಳಗವಾದ ಗುರುತುಗಳಿಲ್ಲ ! ಎಂತಹ ಆಶ್ಚರ್ಯ ! ದೇವಸಮಾನ ವೀರರು ಮಲಗಿದವರಂತೆ ಬಿದ್ದಿರಲು ಕಾರಣವೇನು ? ಇಂತು ಸೋದರರೆಲ್ಲ ಮಡಿದು ಬಿದ್ದಿರುವುದನ್ನು ಕಂಡೂ ಒಡೆಯದಿರುವ ನನ್ನ ಗುಂಡಿಗೆಯು ದೊಡ್ಡ ಬಂಡೆಯೋ ಏನು ?

ಹಾ ಭಗವನ್! ಎಂತಹ ಸಂಕಟವನ್ನು ತಂದೆ? ಏನು ಮಾಡಲಿ!' ಎಂದು ರೋದಿಸಿ, ಧರ್ಮರಾಜನು ದಿಕ್ಕು ತೋಚದಂತಾಗಿ ಸುಮ್ಮನೆ ನಿಂತನು. ಶಕುನಿಯ ಕುತಂತ್ರವೇನೋ, ಎಂದು ಶಂಕಿಸಿದನು. ಸೋದರರ ಮುಖಕಮಲಗಳು ಬಾಡ ದಿರುವದನ್ನು ಕಂಡು, ಧರ್ಮರಾಜನು ವಿಷಜಲವಿರುವುದೆಂಬ ಅನುಮಾನವನ್ನೂ ಬಿಟ್ಟು, ಮೊದಲು ತೃಷೆಯನ್ನಡಗಿಸಿ, ಮುಂದಿನ ಕಾರ್ಯವನ್ನು ಚಿಂತಿಸಲು ನಿಶ್ಚಯಿಸಿ, ಕೈಯೊಡ್ಡಿದನು. ಆಗ ಯಕ್ಷನು "ಧರ್ಮಜ! ನನ್ನ ಪ್ರಶ್ನೆಗಳಿಗೆ ಉತ್ತರವನ್ನಿತ್ತು ನೀರನ್ನು ಕುಡಿ! ಇದು ಈ ಸರೋವರದ ಸ್ವಾಮಿಯಾದ ನನ್ನ ನಿಯಮವು. ಅದನ್ನು ನಿರ್ಲಕ್ಷಿಸಿ, ನಿನ್ನ ಸೋದರರು ಬಿದ್ದಿರುವರು. ಅವರಿಗೆ ಪಂಚಮನಾದ ನೀನು ಪ್ರಶ್ನೆ ಗಳಿಗುತ್ತರವೀಯದೆ ನೀರನ್ನು ಕುಡಿದೆಡೆ ಪಂಚತ್ವವನ್ನೈದುವೆ! ಜೋಕೆ!" ಎಂದನು. ಧರ್ಮರಾಜನು ಕಣ್ಣೆತ್ತಿ ನೋಡಿದನು. ಒಂದು ಬಕಪಕ್ಷಿಯ ರೂಪದಿಂದ ಯಕ್ಷನು (ಯಮರಾಜನು) ಅವನಿಗೆ ಕಾಣಿಸಿದನು. ಧರ್ಮರಾಜನು "ಮಹಾನುಭಾವ! ನೀನಾರು? ಬರಿಯ ಬಕಪಕ್ಷಿಗೆ ದೇವರಾಕ್ಷಸರಿಂದ ಅಜೇಯರಾದ ನನ್ನ ಸೋದರ ರನ್ನು ನಿರ್ಜಿಸುವುದು ಸಾಧ್ಯವಿಲ್ಲ. ಏಕೆ ಹೀಗೆ ಮಾಡಿದೆ? ನನ್ನಲ್ಲಿ ಕೃಪೆಮಾಡಿ ನಿನ್ನ ಸ್ವರೂಪವನ್ನು ತಿಳಿಸು!' ಎಂದು ಬೇಡಿದನು. 'ನಾನು ಯಕ್ಷನು, ಸಾಮಾನ್ಯ ಬಕನಲ್ಲ. ನನ್ನ ಪ್ರಶ್ನೆಗಳಿಗುತ್ತರವನ್ನು ಕೊಡು! ನಿನಗೆ ಶ್ರೇಯಸ್ಸಾಗುವುದು' ಎಂದು ಯಕ್ಷನು ತಾಲವೃಕ್ಷದಂತೆ ಮಹೋನ್ನತವಾದ ದಿವ್ಯದೇಹದಿಂದ ಧರ್ಮಜನಿಗೆ ಕಾಣಿಸಿದನು. ಪರ್ವತೋಪಮನು, ಭಾಸ್ಕರನಿಭಪ್ರಕಾಶನು, ಮೇಘಗಂಭೀರಸ್ವರನು ಆದ ಯಕ್ಷನನ್ನು ಕಂಡು ಧರ್ಮಜನು ಶಿರಸಾ ವಂದಿಸಿ, ಕೈಜೋಡಿಸಿ, 'ಮಹಾತ್ಮ! ಸತ್ಪುರುಷರ ನಿಯಮವನ್ನು ಕೆಡಿಸಲಾರೆನು. ನನಗೆ ಎಲ್ಲವನ್ನೂ ಉತ್ತರಿಸುವಷ್ಟು ಪ್ರಜ್ಞೆ ಇದೆ ಎಂದೂ ಹೇಳಲಾರೆನು. ತೋಚಿದಂತೆ ಉತ್ತರಿಸುವ ನನ್ನಲ್ಲಿ ಕೃಪೆ ದೋರು. ಕೇಳು ಪ್ರಶ್ನೆಗಳನ್ನು!' ಎಂದು ಪ್ರಾರ್ಥಿಸಿದನು.

## ಯಕ್ಷಪ್ರಶ್ನೆಗಳು

ವೈಶಂಪಾಯನನು ಜನಮೇಜಯನಿಗೆ ಯಕ್ಷಪ್ರಶ್ನೆಗಳನ್ನೂ, ಧರ್ಮರಾಜನು ಕೊಟ್ಟ ಪ್ರತ್ಯುತ್ತರಗಳನ್ನೂ ನಿರೂಪಿಸಿದನು. ಅದನ್ನು ನಿನಗೆ ಪೇಳುವೆನು. ಈ ಸಂವಾದವನ್ನು ತಿಳಿದು, ನಡೆದುಕೊಂಡವನು ಸಂಸಾರಶೋಕಮುಕ್ತನಾಗಿ ಜ್ಞಾನ ವನ್ನು ಪೊಂದುವನು.

| ಯಕ್ಷಪ್ರಶ್ನೆ | ಧರ್ಮರಾಜನ ಉತ್ತರ |
|---|---|
| ೧. ಆದಿತ್ಯನನ್ನು ಮೇಲೆತ್ತಿ ಹಿಡಿಯುವವನಾರು? | ಪರಬ್ರಹ್ಮ |
| ಅವನ ಸುತ್ತು ಸಹಾಯಕರಾಗಿ ತಿರುಗುವವರಾರು? | ದೇವತೆಗಳು |
| ಆದಿತ್ಯನು ಅಸ್ತಂಗತನಾಗಲು ಕಾರಣರಾರು? | ಧರ್ಮ |
| ಅವನು ಯಾರಲ್ಲಿ ಪ್ರತಿಷ್ಠಿತನಾಗಿರುವನು? | ಸತ್ಯದಲ್ಲಿ |

ಜೀವನು ಪರಬ್ರಹ್ಮಜ್ಞಾನದಿಂದ ಉದ್ಧೃತನಾಗುವನು. ಶಮದಮಾದಿ ಗುಣಗಳ ವನಿಗೆ ಸಹಾಯಕರು. ಅವನು ಜ್ಞಾನದಿಂದ ಬಂದ ಸ್ವರೂಪಭೂತಾನಂದವನ್ನು ಪಡೆಯಲು ಸ್ತೋತ್ರಮರ ದ್ವಾರಾ ಮುಖ್ಯಪ್ರಾಣನಲ್ಲಿ ಲಯವಾಗುವನು. ಮುಕ್ತನಾಗಿ ಸ್ವರೂಪ ಜ್ಞಾನಾನಂದಾದಿಗಳನ್ನು ಪೊಂದಿ, ಶ್ರೀಹರಿಯ ಮತ್ತು ಸರ್ವೋತ್ತಮರ ಅಧೀನನಾಗಿರುವನು.

೨. ಯಾವ ಗುಣದಿಂದ ಶ್ರೋತ್ರಿಯನೆನಿಸಬಹುದು? ವೇದಾರ್ಥಶ್ರವಣದಿಂದ
ಯಾವ ಗುಣದಿಂದ ದೊಡ್ಡವನಾಗಬಹುದು? ತಪಸ್ಸಿನಿಂದ (ಮನನ)
ಯಾವುದರಿಂದ ದ್ವಿತೀಯವಂತನಾಗುವನು? ಧ್ಯಾನದಿಂದ
ಯಾವುದರಿಂದ ಬುದ್ಧಿವಂತನಾಗುವನು? ವೃದ್ಧಸೇವೆಯಿಂದ

ಗುರುಗಳನ್ನು ಸೇವಿಸಿ ವೇದಾದಿ ಸಚ್ಛಾಸ್ತ್ರಗಳನ್ನು ಶ್ರವಣ ಮನನ ಮಾಡಿ, ಧ್ಯಾನಯೋಗಿಯು, ತನಗೆ ಎರಡನೆಯವನೆಂದರೆ ಭಿನ್ನನು, ಧ್ಯಾನವಿಷಯನು, ಸರ್ವೋತ್ತಮನಾದ ಶ್ರೀಹರಿಯನ್ನು ತಿಳಿಯುವನು.

೩. ಬ್ರಾಹ್ಮಣರು ದೇವಸಮರೆಂತು? ಸ್ವಾಧ್ಯಾಯಪ್ರವಚನಗಳಿಂದ
ಸಜ್ಜನರ ಧರ್ಮವಾವುದು? ತಪಸ್ಸು, ಸದಾಚಾರ
ಅವರು ಮರ್ತ್ಯಮಾತ್ರರಾಗುವುದು ಯಾವುದರಿಂದ? ದೇಹಾಭಿಮಾನದಿಂದ
ಅಸಜ್ಜನರ ಲಕ್ಷಣವೇನು? ದೇವ ಗುರು ವಿಪ್ರನಿಂದೆ; ಅನಾಚಾರ

೪. ಕ್ಷತ್ರಿಯರು ನೃದೇವರೆನಿಸುವುದೆಂತು? ಶಸ್ತ್ರಾಸ್ತ್ರವಿದ್ಯೆ, ರಕ್ಷಣ
ಅವರಲ್ಲಿ ಸುಜನರ ಧರ್ಮವಾವುದು? ಯಜ್ಞಕರಣ, ದುಷ್ಟಶಿಕ್ಷಣ
ಅವರು ಮರ್ತ್ಯಮಾತ್ರರಾಗುವುದು ಯಾವುದರಿಂದ? ಭಯದಿಂದ
ಅವರಲ್ಲಿ ಅಸಜ್ಜನ ಲಕ್ಷಣವೇನು? ಶರಣಾಗತ ಪರಿತ್ಯಾಗ

೫. ಯಜ್ಞಿಯ ಸಾಮವಾವುದು? ಮುಖ್ಯಪ್ರಾಣನು ಸಾಮನೆನಿಸುವನು.
ಯಜುಸ್ಸಾವುದು? ರುದ್ರನು ಯಜುಸ್ಸೆನಿಸುವನು.
ಯಜ್ಞಜ್ಞಾನವಾವುದರಿಂದ? ಋಕ್ಕಿನಿಂದ, ಸರ್ವಜ್ಞನಿಂದ.
ಯಜ್ಞವಾವುದಕ್ಕೆ ವಿಧೇಯವು? ಸರ್ವಜ್ಞ ಹರಿಗೆ ವಿಧೇಯವು.

೬. ತೃಪ್ತಿಜನಕಗಳಲ್ಲಿ ಶ್ರೇಷ್ಠವಾವುದು? ಮಳೆ
ನಿವಾಪದಿಂದ ಫಲವೇನು? ಪಿತೃತೃಪ್ತಿ, ಪುತ್ರಕಳತ್ರ ಸಂಪತ್ತು.
ಪ್ರತಿಷ್ಠಾ ಕಾರಣವಾವುದು? ಗೋ ಧನಗಳು, ಒಳ್ಳೆಯ ಮಾತು.
ಪ್ರಸವಗಳಲ್ಲಿ ಉತ್ತಮವಾವುದು? ಪುತ್ರ, ಜ್ಞಾನ

೭. ಇಂದ್ರಿಯ ವಿಷಯಗಳನ್ನು ಬಿಡದೆ ಬುದ್ಧಿವಂತನೆನಿಸಿ, ಲೋಕಪೂಜಿತರಾಗಿ ಇರುವಲ್ಲಿ ಬದುಕಿದ್ದೂ ಸತ್ತವರಾರು ?

ದೇವಪೂಜೆ, ಪಿತೃಶ್ರಾದ್ಧತರ್ಪಣಗಳು, ಆಶ್ರಿತಭೃತ್ಯಮಿತ್ರಾದಿ ಪೋಷಣೆ, ಭೂತಬಲಿ, ಅತಿಥಿಪೂಜೆ—ಇವುಗಳನ್ನು ಮಾಡದಿರುವವನು ಬದುಕಿದ್ದೂ ಸತ್ತವನೇ ಸರಿ !

೮. ಭೂಮಿಗೂ ಭಾರತರವಾವುದು ? ಮಾತೆ.
ಆಕಾಶಕ್ಕಿಂತಲು ಎತ್ತರವಾವುದು ? ತಂದೆ.
ಗಾಳಿಗಿಂತಲು ವೇಗವತ್ತರವಾವುದು ? ಮನಸ್ಸು.
ತೃಣಕ್ಕಿಂತಲು ಹಗುರವಾವುದು ? ಚಿಂತೆ.

೯. ಮಲಗಿದ್ದೂ ಕಣ್ಣುಮುಚ್ಚದಿರುವುದಾವುದು ಮೀನು (ಆದಿನಾರಾಯಣ)
ಹುಟ್ಟಿದಮೇಲೂ ಕದಲದಿರುವುದಾವುದು ? ಗುಡ್ಡ.
ಯಾರಿಗೆ ಹೃದಯವಿಲ್ಲ ? ಕಲ್ಲಿಗೆ.
ವೇಗದಿಂದ ಬೆಳೆಯುವುದಾವುದು ? ನದಿ.

೧೦. ಪ್ರವಾಸದ ಮಿತ್ರನಾರು ? ಧನ.
ಮನೆಯಲ್ಲಿ ಹಿತರಾರು ? ಭಾರ್ಯೆ.
ಆತುರನಿಗೆ ಸ್ನೇಹಿತನಾರು ? ವೈದ್ಯ
ಸಾಯುವವನಿಗೆ ಹಿತವಾವುದು ? ದಾನ.

೧೧. ಸರ್ವರಿಗೂ ಅತಿಥಿಯಾಗುವನಾರು ? ಅಗ್ನಿ.
ಸನಾತನ ಧರ್ಮ ಯಾವುದು ? ಹಾಲು ತುಪ್ಪಗಳಿಂದ ಹೋಮ.
ಸಾಯದೇ ಇರುವುದಾವುದು ? ಮೋಕ್ಷ.
ಸರ್ವಜಗತ್ತಿಗೆ ಪ್ರಧಾನರಾರು ? ಮುಖ್ಯಪ್ರಾಣ.

೧೨. ಏಕಾಕಿಯಾಗಿ ತಿರುಗುವವನಾರು ? ಸೂರ್ಯ.
ಹುಟ್ಟಿದಮೇಲೆ ಮತ್ತೆ ಹುಟ್ಟುವವನಾರು ? ಚಂದ್ರ.
ಚಳಿಗೆ ಮದ್ದೇನು ? ಅಗ್ನಿ.
ಅಲಂಕರಿಸಿಕೊಳ್ಳಲು ಯೋಗ್ಯವಾವುದು ? ಶರೀರ.

೧೩. ಧರ್ಮ, ಯಶಸ್ಸು, ಸ್ವರ್ಗ, ಸುಖ ಇವುಗಳಿಗೆ ಸಾಧನವಾವುದು ?
ದಕ್ಷತೆ, ದಾನ, ಸತ್ಯ, ಶೀಲ ಇವೇ ಕ್ರಮವಾಗಿ ಸಾಧನಗಳು.

೧೪. ಮನುಜನಿಗೆ ತನ್ನ ಆತ್ಮನಾರು ? ಪುತ್ರ.
ದೇವರಿತ್ತ ಸ್ನೇಹಿತರಾರು ? ಹೆಂಡತಿ.
ಉಪಜೀವನವೆಂತು ? ಪರ್ಜನ್ಯದಿಂದ.
ನರನಿಗೆ ಶ್ರೇಷ್ಠ ಗತಿಯೆಂತು ? ದಾನದಿಂದ.

೧೫. ಯಾವ ಪುರುಷನು ಮೃತನಾಗಿ ಜೀವಿಸುವನು ? ದರಿದ್ರನು.
ಯಾವ ರಾಷ್ಟ್ರವು ಮೃತವಾಗುವುದು ? ಅರಾಜಕವಾದುದು.
ಯಾವ ಶ್ರಾದ್ಧವನ್ನು ಮೃತವೆಂಬರು ? ಅಶ್ರೋತ್ರಿಯವಾದುದನ್ನು.
ಯಾವ ಯಜ್ಞವು ಮೃತವು ? ದಕ್ಷಿಣಾರಹಿತವು.

೧೬. ದಿಕ್ಕು, ಜಲ, ಅನ್ನ, ವಿಷ, ಶ್ರಾದ್ಧಕಾಲ ಇವುಗಳನ್ನು ವಿವರಿಸು.
ಸಜ್ಜನರೇ ದಿಕ್ಕು, ಆಕಾಶವೇ ಜಲ, ಭೂಮಿಯೇ ಅನ್ನ, ಭಿಕ್ಷೆಯೇ ವಿಷ, ಪಾತ್ರನಾದ ವಿಪ್ರನ ಆಗಮನವೇ ಶ್ರಾದ್ಧಕಾಲವು.

೧೭. ತಪ, ದಮ, ಕ್ಷಮೆ, ಲಜ್ಜೆಗಳನ್ನು ತಿಳಿಸು.
ಸ್ವಧರ್ಮ ವರ್ತನವೇ ತಪಸ್ಸು ; ಮನೋಜಯವೇ ದಮ ; ದ್ವಂದ್ವ ಜನಿತ ವಿಕಾರ ರಾಹಿತ್ಯವೇ ಕ್ಷಮೆ ; ಅಕಾರ್ಯಮಾಡಲಂಜುವುದೇ ಲಜ್ಜೆ.

೧೮. ಜ್ಞಾನ, ಶಮ, ದಯಾ, ಆರ್ಜವಗಳನ್ನು ನಿರೂಪಿಸು.
ಜೀವ ಜಡ ಪರಮೇಶರ ಭೇದಜ್ಞಾನವೇ ಜ್ಞಾನ ; ಚಿತ್ತಶಾಂತಿಯೇ ಶಮ, ಸರ್ವಭೂತ ಹಿತಚಿಂತನವೇ ದಯಾ ; ಸಮಚಿತ್ತತ್ವವೇ ಆರ್ಜವ.

೧೯. ದುರ್ಜಯ ಶತ್ರು ಯಾರು ? ಸಾಧು ಯಾರು ? ಅಸಾಧು ಯಾರು ? ಕೊನೆಗಾಣದ ವ್ಯಾಧಿ ಯಾವುದು ?
ಕ್ರೋಧವೇ ದುರ್ಜಯ ಶತ್ರು. ಭೂತಹಿತಚಿಂತಕನೇ ಸಾಧುವು. ನಿರ್ದಯನೇ ಅಸಾಧುವು. ಲೋಭವ್ಯಾಧಿಗೆ ಕೊನೆಯಿಲ್ಲ.

೨೦. ಮೋಹವೆಂದರೇನು ? ಮಾನ, ಆಲಸ್ಯ, ಶೋಕಗಳನ್ನೂ ತಿಳಿಸು.
ಧರ್ಮವನ್ನು ತಿಳಿಯದಿರುವುದೇ ಮೋಹ. ನಾನು ದೊಡ್ಡವನೆಂಬ ದುಷ್ಟ ದೇಹಾದ್ಯಭಿಮಾನವೇ ಮಾನ. ಧರ್ಮ ವರ್ಜನವೇ ಆಲಸ್ಯ. ಅಜ್ಞಾನವೇ ಶೋಕ.

೨೧. ಸ್ಥೈರ್ಯ, ಧೈರ್ಯ, ಸ್ನಾನ, ದಾನಗಳೆಂದರೇನು ?
ಸ್ವಧರ್ಮನಿಷ್ಠತೆಯೇ ಸ್ಥೈರ್ಯ. ಇಂದ್ರಿಯ ನಿಗ್ರಹವೇ ಧೈರ್ಯ. ಮನೋಮಲತ್ಯಾಗವೇ ಸ್ನಾನ. ಭೂತಾಭಯದಾನವೇ ಉತ್ತಮ ದಾನ.

೨೨. ಪಂಡಿತ, ನಾಸ್ತಿಕ, ಮೂರ್ಖ, ಕಾಮ, ಮತ್ಸರ, ಇವನ್ನು ವಿವರಿಸು.

ಧರ್ಮಜ್ಞನೇ ಪಂಡಿತನು. ಪರಲೋಕವಿಲ್ಲೆಂಬುವನೇ ನಾಸ್ತಿಕನು. ಹಟವಾದಿಯೇ ಮೂರ್ಖನು. ಸಂಸಾರಬಂಧಕವೇ ಕಾಮವು. ಮನಸ್ತಾಪ ರೂಪವೇ ಮತ್ಸರವು.

೨೩. ಅಹಂಕಾರ, ದಂಭ, ದೈವ, ಪೈಶುನ್ಯಗಳೆಂದರೇನು ?

ದೊಡ್ಡ ಅಜ್ಞಾನವೇ ಅಹಂಕಾರ ; ಲೋಕಕ್ಕೆತ್ತಿ ತೋರುವುದೇ ದಂಭ ; ದಾನಫಲಪ್ರದನೇ ದೈವವು ; ಪರನಿಂದೆಯೇ ಪೈಶುನ್ಯವು.

೨೪. ಪರಸ್ಪರ ವಿರುದ್ಧವಾದ ಧರ್ಮಾರ್ಥ ಕಾಮಗಳನ್ನು ಕೂಡಿಸಿ ಬಿಡದೆ ನಡೆಸುವುದೆಂತು ?

ಧರ್ಮಕ್ಕೆ ಅನುಕೂಲಳಾದ ಪತ್ನಿಯು ದೊರಕಿದರೆ ಮಾತ್ರ ಅರ್ಥ ಕಾಮಗಳು ಧರ್ಮವಿಧೇಯವಾಗುವುವು. ಅದರಿಂದ ಉಭಯಲೋಕ ಸುಖಗಳೂ ಲಭಿಸುವವು.

೨೫. ಯಾವ ಪಾಪದಿಂದ ಅಕ್ಷಯ ನರಕವಾಗುವುದು ? ಬೇಗನೆ ಹೇಳು.

ತಾನಾಗಿ ಕರೆತಂದ ಬ್ರಾಹ್ಮಣನು ಬೇಡಿದ್ದನ್ನು ಕೊಡದೆ ಮಾತು ತಪ್ಪಿದವನು, ವೇದಶಾಸ್ತ್ರಪುರಾಣಗಳನ್ನು ಮಿಥ್ಯೆ ಎಂಬುವನು, ಧನವಿದ್ದೂ ಭೋಗ ದಾನರಹಿತನು—ಇವರು ಅಕ್ಷಯ ನರಕಭಾಗಿಗಳು.

೨೬. ಬ್ರಾಹ್ಮಣ್ಯವು ಕುಲ, ಶೀಲ, ವೇದಾಧ್ಯಯನ, ವಿದ್ಯೆಗಳಲ್ಲಿ ಯಾವುದರಿಂದ ಸಿದ್ಧಿಸುವುದು ?

ವೃತ್ತ (ನಡತೆ) ದಿಂದಲೇ ಆಗಲಿ ಇತರ ಕಾರಣಗಳಿಂದಲ್ಲ. ಬ್ರಾಹ್ಮಣನು ಸಚ್ಛೀಲನಾಗಿರಬೇಕು. ಶೀಲವಿಲ್ಲದವನು ಸತ್ತಂತೆಯೇ ಸರಿ ! ಸಾವಿರ ಓದಿ, ಹೇಳಿ, ತಿಳಿದವನಲ್ಲ ; ಕ್ರಿಯಾವಂತನೇ ಪಂಡಿತನು. ನಾಲ್ಕು ವೇದಗಳನ್ನು ಕಲಿತು ದುರ್ವೃತ್ತನಾದ ವಿಪ್ರನು ಶೂದ್ರನಿಗಿಂತಲೂ ಕೀಳು. ಇಂದ್ರಿಯ ನಿಗ್ರಹಿ, ಯಜ್ಞತತ್ಪರನೇ ನಿಜವಾದ ವಿಪ್ರನು.

೨೭. ಪ್ರಿಯವಚನನಿಗೂ, ವಿಮರ್ಶಿತಕಾರನಿಗೂ, ಬಹುಮಿತ್ರನಿಗೂ, ಧರ್ಮರತನಿಗೂ ಆಗುವ ಲಾಭವೇನು ?

ಪ್ರಿಯವಚನನು ಜನಪ್ರೀತಿಯನ್ನು ; ವಿಮರ್ಶಿತಕಾರಿಯು ಜಯವನ್ನು ; ಬಹುಮಿತ್ರನು ಸುಖವನ್ನು ; ಧರ್ಮರತನು ಸದ್ಗತಿಯನ್ನು ಪೊಂದುವರು.

೨೮. ಯಾರಿಗೆ ಸುಖ ? ಆಶ್ಚರ್ಯವಾವುದು ? ಮಾರ್ಗವೆಂದರೇನು ? ಜೀವನ ವಾರ್ತೆ ಯಾವುದು ?

ತನ್ನ ಮನೆಯಲ್ಲೇ ಶಾಕವನ್ನೇ ಆದರೂ ಉಣ್ಣುವವನು ಸುಖಿಯು ; ಸಾಲ ಮಾಡದವನು ಸುಖಿಯು ; ಪ್ರವಾಸ ಬಿಟ್ಟವನು ಸುಖಿಯು. ಪ್ರತಿ ದಿನವೂ ಲಕ್ಷಗಟ್ಟಲೆ ಜೀವರು ದೇಹವನ್ನು ಬಿಟ್ಟು, ಯಮಪುರಿಗೆ ಹೋಗುತ್ತಿದ್ದರೂ ನೋಡಿ, ಅವರನ್ನು ಕಳಿಸಿ ಬಂದವರು ತಾವು ಶಾಶ್ವತರೆಂದು ನಿಶ್ಚಿಂತರಾಗಿರುವುದಕ್ಕಿಂತ ಆಶ್ಚರ್ಯವಿಲ್ಲ. ತರ್ಕವು ವ್ಯಭಿಚಾರಿಣಿಯಂತೆ ನಿಶ್ಚಾಯಕವಲ್ಲ. ಶ್ರುತಿಶಾಸ್ತ್ರಗಳನ್ನು ವಿರೋಧಪರಿಹಾರ ಸಹಿತವಾಗಿ ತಿಳಿಯದೆ ಜಗಳಾಡುವ ಮುನಿಗಳು ಹೇಳುವ ಮತಗಳು ಹಲವಿವೆ. ಅವುಗಳಲ್ಲಿ ಯಾವುದು ಸರಿ ಎಂದು ತಿಳಿದು ಹೇಳುವವರು ವಿರಳ. ಧರ್ಮತತ್ತ್ವವು ನಿಗೂಢವಾಗಿದೆ. ಆದುದರಿಂದ ಸುಜನರು ತಿಳಿಸಿರುವಂತೆ ನಡೆಯುವುದೇ ಮಾರ್ಗವು. ಅದೇ ಅನುಸರಣೀಯವು. ಅಜ್ಞಾನವೆಂಬ ಕಟಾಹದಲ್ಲಿ ಸೂರ್ಯಾಗ್ನಿ ಸಹಿತನಾಗಿ ಕಾಲನು ಜೀವರೆಂಬ ಕಾಳನ್ನಿಟ್ಟು ಹಗಲು ರಾತ್ರಿಗಳೆಂಬ ಕಟ್ಟಿಗೆಗಳನ್ನು ಉರಿಸುತ್ತಾ ಮಾಸ ದಿನಾದಿಗಳೆಂಬ ಸೌಟಿನಿಂದ ತಿರುವುತ್ತಾ ಪಾಕವನ್ನು ಮಾಡುತ್ತಿರುವನೆಂಬುದೇ ಜೀವನವಾರ್ತೆ.

೨೯. ಯಕ್ಷ—ಧರ್ಮರಾಜ ! ಸರ್ವಧನಿ ಯಾರು ?

ಧರ್ಮ—ಪ್ರಿಯಾಪ್ರಿಯಗಳು, ಸುಖದುಃಖಗಳು ಬಂದಾಗ ನಿರ್ವಿಕಾರನಾಗಿ ಸರ್ವವೂ ಶ್ರೀಹರಿವಶನೆಂಬುವನೇ ಸರ್ವಧನಿ.

೩೦. ಯಕ್ಷ—ಪುರುಷನೆಂದು ಯಾರನ್ನು ತಿಳಿಯಲಹುದು ?

ಧರ್ಮ—ಯಾವ ನರನು ಮಾಡಿದ ಪುಣ್ಯಕಾರ್ಯದ ಪ್ರಶಂಸೆಯು ಭೂ ಸ್ವರ್ಗ ಲೋಕಗಳಲ್ಲಿ ಕೇಳಬರುತ್ತಿದೆಯೋ ಅಂತಹ ನರನೇ ಪುರುಷನೆಂದು ಖ್ಯಾತನಾಗುವನು. ಅವನೇ ಧನ್ಯನು.

ಇಂತು ಪ್ರತ್ಯುತ್ತರಗಳನ್ನು ನೀಡಿದ ಧರ್ಮರಾಜನಿಗೆ ಪ್ರೀತನಾಗಿ ಯಕ್ಷನು 'ಸರಿ ! ಎಲ್ಲ ಪ್ರಶ್ನೆಗಳಿಗೂ ಸಮರ್ಪಕವಾಗಿ ಉತ್ತರವನ್ನಿತ್ತೆ. ಪ್ರೀತನಾಗಿರುವೆನು. ನಿನ್ನ ಸೋದರರಲ್ಲಿ ಒಬ್ಬನ ಜೀವವನ್ನು ಕೊಡುವೆನು. ಬೇಡು !' ಎಂದನು.

ಧರ್ಮರಾಜನು 'ಸರಿ ! ಹಾಗಾದರೆ ಸಾಲಪ್ರಾಂಶುದೇಹನು, ಸುಂದರನು ಆದ ನಕುಲನು ಬದುಕಲಿ !' ಎಂದನು. ಯಕ್ಷನು 'ಭೀಮನೆಂದರೆ ನಿನಗೆ ಪ್ರಾಣಾಧಿಕನು. ಅರ್ಜುನನೆಂದರೆ ಬಲಭುಜದಂತಿರುವನು. ಅವರೀರ್ವರನ್ನೂ ಬಿಟ್ಟು, ನಕುಲನನ್ನೇಕೆ ಬೇಡುವೆ ? ನಾಗಾಯುತಬಲನಾದ ಭೀಮನಿಂದ ನಿನಗೆ ವಿಜಯ. ಅವನ ಬಾಹುಬಲವನ್ನಾಶ್ರಯಿಸಿಯಲ್ಲವೇ ನೀವು ವಿಪತ್ಪರಂಪರೆಯನ್ನು ದಾಟಿಬಂದಿರುವುದು? ಶಸ್ತ್ರಾಸ್ತ್ರ

ವಿಶಾರದನಾದ ವಿಜಯನಿಂದ ನಿನಗೆ ಕೌರವಜಯವು ಸಾಧ್ಯವಿರುವುದೆಂದರಿತೂ ನಕುಲನನ್ನೇಕೆ ಬೇಡುವೆ?' ಎಂದು ಕೇಳಿದನು. ಧರ್ಮರಾಜನು 'ಅಯ್ಯಾ! ಧರ್ಮವನ್ನು ನಾವು ರಕ್ಷಿಸಿ ನಡೆದರೆ, ಅದು ನಮ್ಮನ್ನು ರಕ್ಷಿಸುವುದು. ಧರ್ಮವನ್ನು ಬಿಟ್ಟು ನಡೆದವನಿಗೆ ಅದರಿಂದಲೇ ವಿನಾಶವು ಒದಗಿ ಬೀಳುವುದು. ವೈಷಮ್ಯಕ್ಕೆ ಸರಿಯಾದ ಅಧರ್ಮವಿಲ್ಲ. ನಿಷ್ಪಕ್ಷಪಾತಿತ್ವಕ್ಕೆ ಸಮವಾದ ಧರ್ಮವಿಲ್ಲ. ಸ್ವಧರ್ಮದಿಂದ ಚಲಿಸದ ನನ್ನನ್ನು ಜನರು ಧರ್ಮರಾಜನೆಂಬುವುದು ನಿಜವಾಗಲಿ! ನಮ್ಮ ತಂದೆಗೆ ಪತ್ನಿಯರಾದ ಕುಂತೀ ಮಾದ್ರಿಯರಲ್ಲಿ ಕುಂತೀಪುತ್ರನಾಗಿ ನಾನಿರುವೆನು. ಮಾದ್ರೀಪುತ್ರನಾಗಿ ನಕುಲನು ಜೀವಿಸಲಿ!' ಎಂದು ಬೇಡಿದನು. ಯಕ್ಷನು ಧರ್ಮರಾಜನ ಸಗುಣಗಳಿಗೆ ಮೆಚ್ಚಿ ಅವನ ಸೋದರರೆಲ್ಲರೂ ಬದುಕುವಂತೆ ವರವಿತ್ತನು. ಆಗ ಭೀಮ ಅರ್ಜುನ ನಕುಲ ಸಹದೇವರು ನಿದ್ರೆಯಿಂದೆದ್ದಂತೆ, ಎದ್ದು ನಿಂತರು.

ಧರ್ಮರಾಜನು "ಮಹಾತ್ಮ! ನೀನು ಬಕಮಾತ್ರನಲ್ಲ. ವಸು ರುದ್ರ ಆದಿತ್ಯರಲ್ಲಿ ನೀನಾರಿರುವೆ ? ಅಥವಾ ನೀನು ನಮ್ಮ ತಂದೆಯೇ ಇರಬಹುದೇ !" ಎಂದು ಕೇಳಿದನು. ಯಕ್ಷನು "ಅಹುದು ! ನಾನು ನಿನ್ನ ಜನಕನಾದ ಯಮನು. ನಿಮ್ಮನ್ನು ನೋಡಲಪೇಕ್ಷಿಸಿ ಬಂದೆನು. ಜಿಂಕೆರೂಪದಿಂದ ಅರಣಿಯನ್ನು ಹರಿಸಿದವನು ನಾನೇ. ನಿನ್ನಲ್ಲಿರುವ ಧರ್ಮ, ಸತ್ಯ, ಶೌಚ, ಜ್ಞಾನ, ದಾನ, ಸಮತ್ವ, ಶಾಂತಿ ಮೊದಲಾದ ಗುಣಗಳನ್ನು ಕಂಡು ಪ್ರೀತನಾಗಿರುವೆನು. ಶಮ, ದಮ, ಉಪರತಿ, ತಿತಿಕ್ಷೆ, ಸಮಾಧಿಗಳೆಂಬ ಐದು ಗುಣಗಳಲ್ಲಿ ಅನುರಕ್ತನಾಗಿರುವೆ! ಪೂರ್ವಪುಣ್ಯದಿಂದ ಶತ್ರುಷಟ್ಕವನ್ನು ಗೆದ್ದಿರುವೆ! ಮೊದಲು ಬರುವ ಅಶನಾಯಾ ಪಿಪಾಸೆಗಳನ್ನು, ಮಧ್ಯದಿ ಬರುವ ಶೋಕ ಮೋಹಗಳನ್ನು, ಕೊನೆಗೆ ಕಾಣುವ ಜರಾ ಮೃತ್ಯುಗಳನ್ನು ಲೆಕ್ಕಿಸದೆ, ಧೀರನಾಗಿರುವೆ ! ಇನ್ನೊಂದು ವರವನ್ನು ಬೇಡು !' ಯುಧಿಷ್ಠಿರನು 'ತಂದೆ ! ಹನ್ನೆರಡು ವರ್ಷಗಳ ವನವಾಸವು ಮುಗಿಯಿತು. ಹದಿಮೂರನೆಯ ವರ್ಷದ ಅಜ್ಞಾತವಾಸವು ಆರಂಭಿಸಲಿದೆ. ಅಜ್ಞಾತವಾಸದಲ್ಲಿರುವ ನಮ್ಮನ್ನು ಯಾರೂ ತಿಳಿಯದಿರುವಂತೆ ಅನುಗ್ರಹಿಸು !' ಎಂದು ಪ್ರಾರ್ಥಿಸಿದನು. ಅಂತೆಯೇ ವರಪಿತ್ತು ಯಮರಾಜನು 'ವಿರಾಟನಗರದಲ್ಲಿ ನಿಮ್ಮ ಅಜ್ಞಾತವಾಸವಾಗಲಿ. ನಿಮ್ಮ ಮನಸ್ಸಿನಿಂದ ಸಂಕಲ್ಪಿಸಿದ ರೂಪವು ನಿಮಗೆ ಸಿದ್ಧಿಸುವವು. ಮೂರನೆಯ ವರವನ್ನೂ ಬೇಡು ! ಪುತ್ರನಾದ ನಿನ್ನ ಕೀರ್ತಿಯನ್ನು ಲೋಕದಲ್ಲಿ ಹರಡಲೆಂದೇ ಬಂದಿರುವೆನು. ಅರಣಿಯನ್ನು ಸ್ವೀಕರಿಸಿ, ವಿಪ್ರನಿಗೆ ಕೊಡು !' ಎಂದು, ಅರಣಿಯನ್ನು ಧರ್ಮಜನಿಗೆ ಕೊಟ್ಟನು.

ಧರ್ಮರಾಜನು 'ದೇವದೇವನಾದ ನಿನ್ನನ್ನು ಕಂಡು, ಧನ್ಯನಾದೆ. ವರವನ್ನು ಬೇಡೆಂದೆ! ನನ್ನ ಮನಸ್ಸು ಕಾಮ ಕ್ರೋಧ ದೂರವಾಗಲಿ! ತಪೋದಾನರತವಾಗಲಿ!' ಎಂದು ಬೇಡಿದನು. ಆ ವರವನ್ನಿತ್ತು ಧರ್ಮನು ಅಂತರ್ಹಿತನಾದನು. ಯುಧಿಷ್ಠಿರನು ಸಹೋದರರಿಂದ ಕೂಡಿ, ಜಲಪಾನಮಾಡಿ, ತನ್ನ ಆಶ್ರಮಕ್ಕೆ ಬಂದನು. ಅರಣಿಯನ್ನಿತ್ತು ದ್ವಿಜನನ್ನು ಸತ್ಕರಿಸಿ ಕಳಿಸಿ, ತಾನು ಪತ್ನೀ ಸೋದರ ಸಮೇತನಾಗಿ ಸುಖ

ದಿಂದಿದ್ದನು. ಈ ಯಮ-ಯುಧಿಷ್ಠಿರ ಸಮಾಗಮ ಚರಿತೆಯನ್ನು ಹೇಳಿ, ಕೇಳಿದವರು ದೀರ್ಘಾಯುಗಳು, ಧನಧಾನ್ಯಯುತರು, ಧರ್ಮರತರು, ಜಿತೇಂದ್ರಿಯರು ಆಗಿ ಸುಖಿಸುವರು.

ಧರ್ಮರಾಜನು ಅಜ್ಞಾತವಾಸವನ್ನು ಪ್ರಾರಂಭಿಸಲೆಣಿಸಿ, ವಿಪ್ರರನ್ನು ಕರೆಸಿ, ನಮಸ್ಕರಿಸಿ 'ತಮಗೆ ತಿಳಿಯದುದಿಲ್ಲ. ದುಷ್ಟ ದುರ್ಯೋಧನನ ಕುತಂತ್ರದಿಂದ ವನವಾಸದಲ್ಲಿ ಬಹುಕ್ಲೇಶಪಡಬೇಕಾಯಿತು. ಈಗ ಅಜ್ಞಾತವಾಸವನ್ನು ಪ್ರಾರಂಭಿಸು ವವರಿರುವೆವು. ತಾವು ನಮ್ಮನ್ನಾಶೀರ್ವದಿಸಿ, ಅಜ್ಞಾತವಾಸದ ಒಂದು ವರ್ಷಕಾಲ ನಿಮ್ಮ ನಿಮ್ಮ ಆಶ್ರಮಗಳಲ್ಲಿ ನಿವಸಿಸಿ ! ನಿಮ್ಮನ್ನು ಹೋಗೆನ್ನಲಾರದೆ ಇಟ್ಟು ಪೋಷಿಸಲನುವಿಲ್ಲದೆ, ಚಿಂತಿಸುವ ನನ್ನನ್ನು ಧರ್ಮಸಂಕಟದಿಂದ ಪಾರುಮಾಡಿ ರಕ್ಷಿಸಿ!' ಎಂದು ಬೇಡಿ ಕಣ್ಣೀರಿಡುತ್ತಾ ಕುಳಿತನು.

ಆಗ ವಿಪ್ರರೆಲ್ಲರ ಅನುಮತಿಯಿಂದ ಧೌಮ್ಯನು "ರಾಜನ್ ! ಶೋಕಿಸಬೇಡ. ವಿದ್ವಾಂಸನು, ಜಿತೇಂದ್ರಿಯನು, ಧರ್ಮಜ್ಞನು ಆದ ನಿನಗೆ ಹೇಳಬೇಕಾದುದಿಲ್ಲ. ರಾಕ್ಷಸರ ಉಪಟಳದಿಂದ ನೊಂದ ವೃಂದಾರಕರ ಪಾಡನ್ನು ನೆನೆದು, ದೈವಲೀಲೆಗೆ ಶಿರಬಾಗಿ, ಶಾಂತನಾಗು ! ವಾಮನನಾಗಿ ಭಿಕ್ಷೆ ಬೇಡಲಿಲ್ಲವೇ ಲಕ್ಷ್ಮೀರಮಣ ! ಇಂದ್ರನ ವಜ್ರದಲ್ಲಡಗಿ, ಪ್ರಚ್ಛನ್ನನಾಗಿ ವೃತ್ರನನ್ನು ಸಂಹರಿಸಲಿಲ್ಲವೇ ಚಕ್ರಾಯುಧ? ಮನುಜನಂತಾಗಿ, ಮಡದಿಯ ವಿಯೋಗದಿಂದ ನೊಂದವನಂತೆ ನಟಿಸಲಿಲ್ಲವೇ ರಾವಣ ವೈರಿ ? ಅಂತೆಯೇ ಅವನ ದಯದಿಂದ ನೀನು ಕೂಡ ನಿನ್ನ ಶತ್ರುವರ್ಗ ವನ್ನೆಲ್ಲ ಜಯಿಸುವೆ. ನಮಗೆ ಆನಂದಕರನಾಗಿ ಸಕಲ ಭೂಮಂಡಲವನ್ನು ಶ್ರೀಕೃಷ್ಣನ ದಯದಿಂದ ಜಯಿಸಿ, ಪಾಲಿಸುವೆ, ಚಿಂತಿಸಬೇಡ. ನಿನಗೆ ಜಯವಾಗಲಿ ! ಅಜ್ಞಾತವಾಸವು ನಿರ್ವಿಘ್ನವಾಗಿ ನಡೆಯಲಿ ! ಮುಂದೆ ಯುದ್ಧದಲ್ಲಿ ವಿಜಯಿಯಾ ಗುವೆ." ಎಂದು ಪಾಂಡವರನ್ನೂ, ದ್ರೌಪದಿಯನ್ನೂ ಹರಸಿದನು. ಧರ್ಮರಾಜನು ಶಾಸ್ತ್ರಶ್ರವಣಜನಿತ ಜ್ಞಾನಬಲದಿಂದ ಧೀರಚಿತ್ತನಾದನು.

ಮಹಾಬಲನಾದ ಭೀಮಸೇನನು ಧರ್ಮರಾಜನಿಗೆ ಧೈರ್ಯವನ್ನು ತುಂಬುತ್ತ ಇಂತೆಂದನು—"ಅಣ್ಣ ! ಗಾಂಡೀವಧನುರ್ಧಾರಿಯಾದ ಅರ್ಜುನನು ಸಾಹಸಿಸಲಿಲ್ಲ ವೆಂದರೆ, ಗದಾಪಾಣಿಯಾದ ನನ್ನ ವಿಕ್ರಮಾಗ್ನಿಗೆ ಕೌರವರು ಆಹುತಿಯಾಗದೆ ಇನ್ನೂ ಉಳಿದಿರುವರೆಂದರೆ, ಅದು ನಿನ್ನಲ್ಲಿ ನಮಗಿರುವ ಗೌರವದಿಂದ. ನಕುಲ ಸಹದೇವರು ವಿಕ್ರಮಿಸದಂತೆ, ಅವರನ್ನು ನಾನು ತಡೆಯುತ್ತಿರುವೆನು. ನೀನು ಧರ್ಮಾನುಗತನಾಗಿರುವೆ. ನಾವು ನಿನ್ನ ಅನುಗತರಾಗಿರುವೆವು. ನಿನ್ನ ಆಜ್ಞೆಯು ನಮಗೆ ಮಾನ್ಯವಾಗಿದೆ." ಹೀಗೆ ನುಡಿದ ಭೀಮನನ್ನು ಶ್ಲಾಘಿಸಿ, ಮಿಕ್ಕ ಬ್ರಾಹ್ಮಣಾದಿ ಸರ್ವಪ್ರಜರು ಪಾಂಡವರ ಅಪ್ಪಣೆಯನ್ನು ಪಡೆದು ತಂತಮ್ಮ ನಿವಾಸ ಗಳಿಗೆ ತೆರಳಿದರು.

ಮರುದಿನ ಬೆಳಗಾಗುತ್ತಲೆ, ಪಂಚಪಾಂಡವರು ದ್ರೌಪದಿಯೊಡಗೂಡಿ ದ್ವೈತ ವನದಿ ಆಶ್ರಮದಿಂದ ಒಂದು ಕ್ರೋಶ ದೂರ ನಡೆದು ಅಲ್ಲಿ ಒಂದು ಆಲದ ಮರದ ಬುಡದಲ್ಲಿ ವಿಶ್ರಮಿಸಿದರು. ಧೌಮ್ಯನೂ ಅಲ್ಲಿಗೆ ಬಂದನು. ಸರ್ವಶಾಸ್ತ್ರವಿಶಾರದರು, ಶಸ್ತ್ರಾಸ್ತ್ರಕುಶಲರು, ದಿವ್ಯಾಯುಧಧರರು, ಮಂತ್ರವಿದ್ವರರು, ಸಂಧಿವಿಗ್ರಹಕಾಲಜ್ಞರಾದ ಪಾಂಡವರು ಮುಂದಿನ ಅಜ್ಞಾತವಾಸದ ಪರಿಯನ್ನು ವಿಚಾರಿಸಲು ನಿಶ್ಚಯಿಸಿದರು.

ಇಂತು ಜನಮೇಜಯ ! ಆರಣ್ಯಕವನ್ನು ನಿನಗೆ ನಿರೂಪಿಸಿದೆನು. ಇದನ್ನು ಕೇಳಿದವರು ಮಹಾಪಾಪಮುಕ್ತರಾಗುವರು. ಇದನ್ನು ಹೇಳಿದವರು, ಅನುಮೋದಿಸಿದವರು ಕೂಡ ಧನವಂತರು, ದೀರ್ಘಾಯುವಂತರು, ಆರೋಗ್ಯಶಾಲಿಗಳು, ಸಂತಾನಸಂಪನ್ನರು ಆಗುವರು. ಅವರ ಕಾಮಿತಗಳೆಲ್ಲವೂ ಈಡೇರುವವು. ಆರಣ್ಯಕವನ್ನು ಅಧ್ಯಯನಮಾಡಿ, ಪಾಯಸಾದಿಗಳಿಂದ ವಿಪ್ರರನ್ನುಣಿಸಿ, ವಸ್ತ್ರ, ಗೋ, ಧನ, ರತ್ನ ದಾನಗಳನ್ನಿತ್ತವನು ಶ್ರೀಹರಿಪ್ರಸಾದಪಾತ್ರನಾಗುವನು. ಅವನಿಗೆ ಶ್ರೀವಿಷ್ಣು ಬ್ರಹ್ಮ ಮುಖ್ಯಪ್ರಾಣ ರುದ್ರ ಶಕ್ರಮುಖ ದೇವತೆಗಳು ಪ್ರೀತರಾಗಿ, ಬೇಕಾದ ಶ್ರೇಯಸ್ಸನ್ನು ನೀಡುವರು. ಮುನಿಗಳು ಪಿತೃಗಳು ಸುಪ್ರಸನ್ನರಾಗಿ, ವನಪರ್ವ-ವಕ್ತೃ ಶ್ರೋತೃಗಳಿಗೆ ಸರ್ವಮಂಗಳಪ್ರದರಾಗುವರು.

ವನಪರ್ವವು ಮುಗಿಯಿತು

|| ಶ್ರೀಮಧ್ವೇಶಾರ್ಪಣಮಸ್ತು ||



# ೪. ವಿರಾಟಪರ್ವ

## ಅಜ್ಞಾತವಾಸ ವಿಧಾನ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—"ರಾಜನ್ ! ಪುರುಷನು ಪೂರ್ವಪುಣ್ಯದಿಂದ ಶ್ರೀಹರಿದಯಾಪಾತ್ರನಾಗುವನು. ಅವನು ಶಮದಮಾದಿ ಗುಣಾನ್ವಿತನಾಗಿ, ಬಾಲ್ಯದಿಂದ ಬಂದ ಅಶನಾಯಾ ಪಿಪಾಸೆಗಳನ್ನು, ಮಧ್ಯದಲ್ಲಿ ಬಂದ ಶೋಕ ಮೋಹಗಳನ್ನು, ಕೊನೆಗೆ ಬರುವ ಜರಾಮೃತ್ಯುಗಳನ್ನು ಅಂದರೆ—ಷಡೂರ್ಮಿಗಳನ್ನು ಜಯಿಸಿ, ಅಪರೋಕ್ಷಜ್ಞಾನಿಯಾಗುವನು. ಅವನು ತನ್ನ ಸ್ವರೂಪ ಗುಣಗಳನ್ನು ತೋರಿಸದೆ ಪ್ರಚ್ಛನ್ನನಾಗಿದ್ದು, ಶ್ರೀಹರಿಕೃಪಾ ಪಾತ್ರನಾಗಿ ಕೊನೆಗೆ ವ್ಯಕ್ತಸ್ವರೂಪನು, ಜಿತಸಮಸ್ತ ಶತ್ರುಚಯನು, ಪ್ರಾಪ್ತ ಸ್ವರಾಜ್ಯಸುಖಪೂರ್ಣನು ಆಗುವನೆಂದು, ನಾವು ಪಾಂಡವ ದೃಷ್ಟಾಂತದಿಂದ ತಿಳಿಯ ಬಹುದಾಗಿದೆ.

ಜನಮೇಜಯನು "ಸ್ವಾಮಿನ್ ! ನನ್ನ ಪೂರ್ವಪಿತಾಮಹರು ದುರ್ಯೋಧನ ಭಯಾರ್ದಿತರಾಗಿ ಅಜ್ಞಾತವಾಸವನ್ನೆಂತು ಕಳೆದರು ? ಪಾಪ ! ಪತಿವ್ರತಾ ಶಿರೋಮಣಿಯಾದ ದ್ರೌಪದೀದೇವಿಯೂ ಎಂತು ತನ್ನ ಸ್ವರೂಪವು ಗೊತ್ತಾಗದಂತೆ ವಾಸಮಾಡಿದಳು ?" ಎಂದು ಕೇಳಿದನು.

ವೈಶಂಪಾಯನನಿಂತೆಂದನು—"ರಾಜನ್ ! ಧರ್ಮನಿಂದ ವರಗಳನ್ನು ಪಡೆದು, ನೀರನ್ನು ಕುಡಿದು ಸೋದರರಿಂದ ಆಶ್ರಮಕ್ಕೆ ಹಿಂದಿರುಗಿಬಂದ ಧರ್ಮರಾಜನು, ಅಲ್ಲಿದ್ದ ವಿಪ್ರಾದಿಗಳಿಗೆ ನಡೆದುದೆಲ್ಲವನ್ನೂ ತಿಳಿಸಿದನು. ಅರಣಿಯನ್ನು ವಿಪ್ರನಿಗಿತ್ತು ಕಳಿಸಿದನು. ಮಿಕ್ಕ ವಿಪ್ರರನ್ನೂ ಬೀಳ್ಕೊಂಡು, ನ್ಯಗ್ರೋಧ ತರು ಮೂಲದಲ್ಲಿ ಕೂತು ಸೋದರರಿಂದ ಕೂಡಿ, ಮುಂದೆ ಹದಿಮೂರನೆಯ ವರ್ಷದ ಅಜ್ಞಾತವಾಸ ವನ್ನು ಎಲ್ಲಿ ಮಾಡಬೇಕೆಂದು ಅರ್ಜುನನನ್ನು ಪ್ರಶ್ನಿಸಿದನು. ಅರ್ಜುನನು—"ಧರ್ಮಜ ! ಧರ್ಮನ ವರಪ್ರಭಾವದಿಂದ ನಮ್ಮ ಅಜ್ಞಾತವಾಸವು ನಿರ್ವಿಘ್ನವಾಗಿ ನೆರವೇರುವುದು, ಸಂಶಯವಿಲ್ಲ. ಕೆಲವು ರಮಣೀಯ ರಾಷ್ಟ್ರಗಳನ್ನು ಪೆಸರಿಸು ವೆನು, ಕೇಳು—ನಿನಗೆ ಸರಿಯಾದುದೆಂದು ತೋರಿದ ದೇಶದಲ್ಲಿ ನಮ್ಮ ಅಜ್ಞಾತವಾಸ ವನ್ನು ಮಾಡಿ ಮುಗಿಸೋಣ. ಕುರುದೇಶಕ್ಕೆ ನಾತಿದೂರದಲ್ಲಿ ಅಜ್ಞಾತವಾಸ ಮಾಡಬೇಕಷ್ಟೆ! ಅಂತಹ ದೇಶಗಳೆಂದರೆ—ಪಾಂಚಾಲ, ಚೇದಿ, ಮತ್ಸ್ಯ, ಶೂರಸೇನ, ಪಟಚ್ಚರ, ದಾಶಾರ್ಣ, ಶಾಲ್ವ, ಯುಗಂಧರ, ಕುಂತಿ, ಸೌರಾಷ್ಟ್ರ, ಅವಂತಿ, ಮೊದಲಾದುವು. ಇವುಗಳಲ್ಲಿ ನಿನಗೆ ಸರಿದೋರುವ ದೇಶವಾವುದು ?" ಎಂದು ಕೇಳಿದನು.

ಆ ಮಾತನ್ನಾಲಿಸಿ, ಧರ್ಮಜನು ಸ್ವಲ್ಪ ಆಲೋಚಿಸಿ, ಇಂತೆಂದನು—"ಮಹಾಬಾಹೋ! ಭಗವಾನ್ ಯಮರಾಜನು ಕೊಟ್ಟ ಅಭಯವಚನವು ನಮ್ಮನ್ನು ರಕ್ಷಿಸುವುದು ನಿಜ! ಸುಖಕರವು, ನಿರುಪದ್ರವವು, ಗುಪ್ತವು ಆದ ದೇಶವನ್ನು ತಿಳಿದು, ಅಲ್ಲಿರಬೇಕಲ್ಲವೆ? ಅಂತಹ ದೇಶವೆಂದರೆ ಮತ್ಸ್ಯದೇಶವು. ವಿರಾಟನು ಬಲವಂತನು ಮತ್ತು ಪಾಂಡವ ಪ್ರಿಯನೂ ಆಗಿರುವನು. ಅವನು ಧರ್ಮಶೀಲನು, ವದಾನ್ಯನು, ವೃದ್ಧನು, ಸಜ್ಜನ ಸಮ್ಮತನೂ ಅಹುದು. ಅವನಲ್ಲಿ ಆಶ್ರಯ ಪಡೆದು, ನಾವು ಈ ಹದಿಮೂರನೆಯ ವರ್ಷವನ್ನು ಗುಪ್ತವೇಷರಾಗಿ ಕಳೆಯುವುದು ಶ್ರೇಯಸ್ಕರವೆಂದು ನಾನು ತಿಳಿದಿರುವೆನು. ಆಶ್ರಯಾಪೇಕ್ಷಿಗಳಾದ ನಾವು ವಿರಾಟರಾಜನನ್ನು ಸೇವಿಸುವ ವಿಧಾನವನ್ನು ವಿಚಾರಿಸಿ, ನೀವೆಲ್ಲರೂ ಪೇಳಿ; ಯುಕ್ತವಾದಂತೆ ನಡೆಯೋಣ!"

ಅರ್ಜುನನು ಆ ಮಾತನ್ನಾಲಿಸಿ, ವಿಷಾದಾನ್ವಿತನಾದನು. ಸ್ವಲ್ಪ ಆಲೋಚಿಸಿ ಮತ್ತೆ ಅಣ್ಣನಿಗಿಂತೆಂದನು—"ಅಣ್ಣ! ಮಹಿತವೈಭವದಿಂದ ಮಹೀಮಂಡಲವನ್ನಾಳಿ ಮಾನ್ಯನೆನಿಸಿದೆ! ಕಮಲದ ಸೌಕುಮಾರ್ಯತೆ, ಕಮಲಭವನ ಸಾರಳ್ಯ, ಸುಮಗಳ ಮಾರ್ದವ, ವಿಷ್ಣುವಿನ ಪ್ರಭುತೆ, ರುದ್ರದೇವನ ದಯೆ, ಹರಿಶ್ಚಂದ್ರನ ಸತ್ಯಸಾರತೆ, ಯಮನ ಸಮವರ್ತಿತ್ವ, ಇಂದ್ರನ ಐಶ್ವರ್ಯಗಳೆಲ್ಲ ಒಟ್ಟುಗೂಡಿ ಬಂದು ನಿನ್ನಲ್ಲಿ ನೆಲೆಮಾಡಿ ನಿಂತಿದ್ದವು. ಇನ್ನೊಬ್ಬರನೆಂದಿಗೂ ಸೇವಿಸಿ ಅರಿಯೆ! ಇಂತಹ ಮಹಾನುಭಾವನು ವಿರಾಟನೆಂಬ ಸಾಮಾನ್ಯ ರಾಜನನ್ನು 'ಹಸಾದೆ'ಂದು ನಿಂತು ಸೇವಿಸುವಂತೆ ಮಾಡಿದ ವಿಧಿ ವಿಲಾಸಕ್ಕೇನೆಂಬೆನು! ನೀನು ಆ ರಾಜಾಸ್ಥಾನದಲ್ಲಿ ಎಂತಿರಲು ನಿಶ್ಚಯಿಸಿರುವೆ?"

ಧರ್ಮರಾಜನು ಸೋದರರ ವ್ಯಸನವನ್ನರಿತು ತಾನೂ ಅವರ ಕಷ್ಟಪರಂಪರೆಯನ್ನು ನೆನೆದು ನೊಂದು, ಪ್ರಸ್ತುತ ಕಾರ್ಯವು ನಿರ್ವಹಿಸಬೇಕಾಗಿರುವುದರಿಂದ, ಧೈರ್ಯವಹಿಸಿ ಇಂತೆಂದನು—"ಕೇಳಿ! ವಿರಾಟನ ಸಭೆಯಲ್ಲಿ ಸಭಾಸ್ತಾರನಾಗಿ ವರ್ತಿಸಲು ನಿಶ್ಚಯಿಸಿರುವೆನು. ಕಂಕನೆಂಬ ಹೆಸರಿನಿಂದ ಸನ್ಯಾಸಿವೇಷಧರನಾಗಿ ನನ್ನ ದ್ಯೂತವಿದ್ಯಾ ನೈಪುಣ್ಯದಿಂದ ಲೆತ್ತವಾಡುತ್ತಾ, ವಿರಾಟನ ಮನವು ಮೆಚ್ಚುವಂದದಿ ನಿಗೂಢನಾಗಿ ಪ್ರವರ್ತಿಸುವೆನು. ವೈಡೂರ್ಯ, ನೀಲ, ಮಾಣಿಕ್ಯ, ವಜ್ರಸದೃಶವಾದ ಅಕ್ಷಗಳಿಂದ ಆಟವಾಡುವುದಲ್ಲದೆ, ಪೂರ್ವರಾಜನ್ಯರ ಕಥಾ ಪ್ರಸಂಗದಿಂದ ರಾಜನನ್ನು ರಂಜಿಸುವೆನು. ಅವನ ಮಂತ್ರಿ ಸೇನಾಪತಿಗಳಿಗೂ ಅವಿರೋಧವಾಗಿ ಮಾತಾಡುತ್ತಾ, ಅವರ ಪ್ರೀತಿಯನ್ನೂ ಗಳಿಸುವೆನು. ಹಿಂದೆ ಯುಧಿಷ್ಠಿರನ ಆಸ್ಥಾನದಲ್ಲಿ ಅವನ ಪ್ರಾಣಸಖನಾಗಿದ್ದೆನೆಂದು ವಿಶ್ವಾಸವನ್ನು ಪುಟ್ಟಿಸುವೆನು."

ಇಂತು ನುಡಿದು ಧರ್ಮರಾಜನು ಭೀಮಸೇನನನ್ನೀಕ್ಷಿಸಿ, ಕಣ್ಣೀರನ್ನೊರಸಿಕೊಂಡು, ನಿಟ್ಟುಸಿರಿಟ್ಟು, ಮೆಲ್ಲನೆ ಇಂತೆಂದನು—"ಭೀಮಸೇನ! ದುಷ್ಟ ದುರ್ಯೋಧನನ ಕಪಟೋಪಾಯಗಳ ಅಪಾಯದಿಂದ ನಮ್ಮನ್ನು ರಕ್ಷಿಸಿದೆ. ಬಕಹೈಡಿಂಬ

ನನ್ನು ಕೊಂದು ಏಕಚಕ್ರನಗರ ಜನರಿಗೆ ಪ್ರಾಣದಾನವನ್ನು ಮಾಡಿದೆ. ಕಿಮ್ಮೀರ ದಾನವನನ್ನು ಬಿಮ್ಮನೆ ಕೆಡಹಿ, ವನವನ್ನು ನಿಷ್ಕಂಟಕವಾಗಿರಿಸಿದೆ. ಮಣಿಮದಾದಿ ದುಷ್ಟ ಯಕ್ಷರನ್ನು ಸಂಹರಿಸಿ, ಸೌಗಂಧಿಕ ಕುಸುಮಗಳನ್ನು ಸುಂದರಿಗೆ ತಂದಿತ್ತೆ. ಪ್ರಬಲನಾದ ಜಟಾಸುರನನ್ನು ಕುಟ್ಟಿ ಕೊಂದು ನಮ್ಮನ್ನು ಕಾಪಾಡಿದೆ. ದುಷ್ಟ ಸೈಂಧವನನ್ನು ದಂಡಿಸಿ, ದ್ರೌಪದಿಯನ್ನು ಬಿಡಿಸಿತಂದೆ. ಒಂದೇ ಎರಡೇ? ನಿನ್ನ ಅವಕ್ರ ಪರಾಕ್ರಮದಿಂದ ನಾವು ರಕ್ಷಿತರಾಗಿ ಉಳಿದಿರುವೆವು. ಇಂತಹ ದರ್ಪ, ವೀರ್ಯ, ಬಲ, ಧೈರ್ಯ ಗುಣಗಳ ಮೂರ್ತಿಯಂತಿರುವ ನೀನು ವಿರಾಟನನ್ನೆಂತು ಸೇವಿಸಿ, ತಿಳಿಯಲ್ಪಡದಂತೆ ಇರುವುದೆಂತೋ ನಾ ಕಾಣೆನು! ನೀನೇನು ಮಾಡಲಿರುವೆ? ಪೇಳು".

ಭೀಮನು—"ಅಣ್ಣ! ನನಗಾಗಿ ಚಿಂತಿಸಬೇಡ. ವಿಪ್ರ ಕ್ಷತ್ರಿಯ ವೇಷಗಳಿಂದ ನಾನಡಗಿರಲು ಸಾಧ್ಯವಿಲ್ಲ. ವೇದವಿಚಾರ ಸಮಯದಲ್ಲಿ ವಿಷ್ಣು ಪಾರಮ್ಯವನ್ನು ನಿರ್ಣಯಿಸಿ ಪೇಳುವಾಗ ನನ್ನ ಸ್ವರೂಪವು ಬಯಲಾಗಬಹುದು. ಆದುದರಿಂದಲೂ ಪರಪಾಕವು ಕ್ಷತ್ರಿಯನಿಗೆ ನಿಂದ್ಯವಾದುದರಿಂದಲೂ ನಾನು ವಿರಾಟನ ಪಾಕಶಾಲಾ ಅಧ್ಯಕ್ಷನಾಗಿ, ಸೂದವೇಷದಿಂದ ಕಾಲ ಕಳೆವೆನು. ವಿರಾಟನ ಮನ ಮೆಚ್ಚುವಂದದಿ ಚಂದವಾದ ಭಕ್ಷ್ಯ ಭೋಜ್ಯಗಳನ್ನು, ಶಾಕ ಪಾಕಗಳನ್ನು, ಮಾಡಿ ಬಡಿಸುವೆನು. ನನ್ನಂತಹ ಪಾಚಕನಿನ್ನಿಲ್ಲ ಎನಿಸುವೆನು. ನಲನನ್ನು ನಿತ್ಯವೂ ನೆನೆಯುವಂತೆ ಮಾಡುವೆನು. ಕಟ್ಟಿಗೆ ಕಡಿಯಲು ಕತ್ತಿ ಕೊಡಲಿಗಳನ್ನು ಬೇಡದೆ, ಕೈಗಳಿಂದಲೇ ಕಡಿದು, ಮುರಿದು, ಉರಿಗಿಕ್ಕುವೆನು. ಮಿಕ್ಕ ಸೂಪಕಾರರ ನೇಹವನ್ನು ಸಂಪಾದಿಸಿ, ಅಂತಃಪುರದಿ ಪ್ರಿಯ ಪಾಚಕನಾಗಿ ಚರಿಸುವೆನು. ವಲ್ಲವನೆಂಬ ಹೆಸರಿನಿಂದ ವಿಖ್ಯಾತ ನಾಗಿ ಬಲ್ಲವರಿನ್ನಿಲ್ಲವೆನಿಸುವೆನು. ಶ್ರೀಕೃಷ್ಣನ ದಯವಿರಲಿ ಸಾಕು! ಭಕ್ಷ್ಯಾನ್ನ ರಸಪಾನಗಳಿಗೊಡೆಯನಾಗಿ, ಅದರಿಂದ ತೃಪ್ತನೂ ಆಗುವೆನು. ಹೊಂತಕಾರಿಯಾಗಿ ಭೂಕಾಂತನ ಸಭೆಯಲ್ಲಿ ಎದುರಾಗಿ ನಿಂತ ಮಲ್ಲರನ್ನು ಮುರಿದು, ಲೋಕೋತ್ತರ ಪರಾಕ್ರಮದಿಂದ ಮೆರೆದು, ಭುಜಗಳ ತಿಂಡಿಯನ್ನಣಗಿಸುವೆನು. ಹಪ್ಪಳದಂತೆ ಆನೆ ಗಳನ್ನು ಚಪ್ಪಟಮಾಡಿ, ಶಾವಿಗೆಯಂತೆ ಎತ್ತುಗಳನ್ನು ಸುತ್ತಿ ಸೆಳೆದು, ತೊವ್ವಿಯಂತೆ ಹುಲಿಗಳನ್ನು ಮುದ್ದೆಮಾಡಿ ವೀರವಿಕ್ರೀಡೆಯನ್ನಾಡುವ ನನ್ನನ್ನು ನೋಡಿ ವಿನೋದಿಸಲಿ ವಿರಾಟನ ವನಿತೆಯರು! ಅದರಿಂದ ಅವನಿಗೂ ಉಪಕಾರವಾದೀತು! ಕೇಳಿದರೆ ಪಾಂಡವಾಗ್ರಜನ ಬಾಣಸಿಗನೆಂದು ಪೇಳುವೆನು. ರಾಜನ್! ನನ್ನ ಮರ್ಮವನ್ನು ಇತರರು ಅರಿಯದಂತೆ ವರ್ತಿಸುವೆನು."

ಧರ್ಮಜನು ಭೀಮನ ಮಾತಿಗೆ ಸಮ್ಮತಿಸಿ, ಅರ್ಜುನನ ಕಡೆ ನೋಡಿ, ಮನಸ್ಸಿಗೆ ವಾತ್ಸಲ್ಯದ ತೊರೆ ತುಂಬಿ ಹರಿಯಲು, ದುಃಖೋದ್ವೇಗವನ್ನು ತಡೆಯ ಲಾರದೆ, ಕಣ್ಣೀರಿಡುತ್ತಾ "ಅರ್ಜುನಾರ್ಜುನ! ಎಂತಿರುವೆ ಅನ್ಯರ ಸೇವಕನಾಗಿ? ಖಾಂಡವವನ್ನು ಸುಟ್ಟು ಅಗ್ನಿಗಾಹುತಿಯಾಗಿ ಕೊಟ್ಟೆ. ದೇವತೆಗಳು ಕಾಣದ

ಶಿವನನ್ನು ತಪದಿಂದ ಸಂತೋಷಪಡಿಸಿ ಕಂಡೆ. ಕಾಲಕೇಯ ನಿವಾತಕವಚಾದಿ ದುರ್ಜಯ ರಾಕ್ಷಸರನ್ನು ನಿರ್ಜಿಸಿದೆ. ಪುರಂದರನ ಪ್ರೀತಿಯನ್ನು ಪಡೆದು, ಆ ದೇವರಾಜನ ಅರ್ಧಸಿಂಹಾಸನವನ್ನಲಂಕರಿಸಿದೆ. ಇಂತಹ ಮಹಾನುಭಾವನಾದ ನಿನಗೆ ಒಬ್ಬ ಮರ್ತ್ಯನನ್ನು ಸೇವಿಸೆಂದು ವಿಧಿಯು ಫಾಲದಲ್ಲಿ ಲಿಖಿಸಿದನೇ? ವಾಸುಕಿಯ ತಂಗಿ ಉಲೂಪಿಯು ಯಾವನ ಸೌಂದರ್ಯಕ್ಕೆ ಮುಗ್ಧಳಾದಳೊ, ವಾಸುದೇವನ ತಂಗಿಯಾದ ಸುಭದ್ರೆ ಯಾವ ವೀರನ ವಾಮಾಂಗಿಯಾಗಬಯಸಿದಳೊ, ಅಂತಹ ಅರ್ಜುನನಿಗೆ ಇಂತಹ ಗತಿಯೇ! ಹಾ! ತಾಪಸ್ರದರಲ್ಲಿ ಸೂರ್ಯನು ಶ್ರೇಷ್ಠನು; ದ್ವಿಪಾದರಲ್ಲಿ ವಿಪ್ರನುತ್ತಮನು; ತೇಜಸ್ವಿಗಳಲ್ಲಿ ಅಗ್ನಿಯು ಮುಖ್ಯನು; ಆಯುಧಗಳಲ್ಲಿ ವಜ್ರವು ಪ್ರಬಲವು; ಗೂಳಿಯು ಗೋಗಣದಲ್ಲಿ ಎದುರಿಲ್ಲದುದು; ಸರೋವರಗಳಲ್ಲಿ ಸಾಗರಕ್ಕೆ ಸಮವಿಲ್ಲ; ವರ್ಷಣಕಾರರಲ್ಲಿ ಪರ್ಜನ್ಯನು ವರನು; ನಾಗರಲ್ಲಿ ಧೃತರಾಷ್ಟ್ರನು ವರನು; ಆನೆಗಳಲ್ಲಿ ಐರಾವತವು ಪ್ರಭುವು; ಪ್ರಿಯಕರಗಳಲ್ಲಿ ಮಗನೇ ಪ್ರಿಯತಮನು: ಸುಹೃದರಲ್ಲಿ ಭಾರ್ಯೆಗೆ ಎಣೆಯಿಲ್ಲ; ಅಂತೆಯೇ ಧನುರ್ಧಾರಿಗಳಲ್ಲಿ ನಿನಗೆ ಸಮರಿಲ್ಲ. ಅಂತಹ ಇಂದ್ರಸಮ ವೀರನು ನೀನು. ವಾಸುದೇವನ ಪ್ರಿಯಸಖನು ನೀನು. ಅರ್ಜುನ! ಹನ್ನೆರಡನೆಯ ರುದ್ರನೋ ಹದಿಮೂರನೆಯ ಆದಿತ್ಯನೋ, ಒಂಬತ್ತನೆಯ ವಸುವೋ, ಹತ್ತನೆಯ ಗ್ರಹವೋ, ಎಂಬಂತೆ ಮೆರೆಯುವ ಸಿಂಹ ಸಂಹನನನಾದ ಅರ್ಜುನನು ಅಜ್ಞಾತನಾಗಿ ಇರುವುದಾದರೂ ಎಂತು!" ಎಂದು ಮರುಗಿದನು.

ಅರ್ಜುನನು ಅಣ್ಣನನ್ನು ಸಂತೈಸುತ್ತಿಂತೆಂದನು—"ಅಣ್ಣ! ನಾನು ನಪುಂಸಕನಾಗಿ ಆ ವೇಷದಿಂದಲೇ ವಿರಾಟನ ಅಂತಃಪುರದಲ್ಲಿ ವಾಸಿಸುವೆನು. ಜ್ಯಾಘಾತದಿಂದ ಕಾಯಿಗಟ್ಟಿದ ಕೈಗಳನ್ನು, ರವಿಕೆ ಕಂಕಣಗಳಿಂದ ಮುಚ್ಚಿಡುವೆನು. ರತ್ನ ಕುಂಡಲಗಳನ್ನು ಬಿಚ್ಚಿಟ್ಟು, ಜೆಂಡೋಲೆಯನ್ನಿಟ್ಟು, ಬೃಹನ್ನಲೆ ಎಂಬ ಹೆಸರಿನಿಂದ ಖ್ಯಾತನಾಗುವೆನು. ಊರ್ವಶೀ ಶಾಪದಿಂದ ನನ್ನ ಒಂದು ವರ್ಷದ ಷಂಡತ್ವವೂ ಅನಿವಾರ್ಯವಾಗಿದೆ. ಹೆರಳ ಜಡೆ ಧರಿಸಿ, ಬಳೆ ತೊಟ್ಟು, ನರ್ತನ ಸಂಗೀತ ವಿದ್ಯಾಪಾರಂಗತನೆನಿಸಿ, ಆ ವಿದ್ಯೆಗಳನ್ನು ಅಂತಃಪುರದ ಅಂಗನೆಯರಿಗೆ ಕಲಿಸುತ್ತಿರುವ ನನ್ನನ್ನು ಯಾರೂ ಅರ್ಜುನನೆಂದು ತಿಳಿಯಲಾರರು. ಚಿತ್ರರಥನಿತ್ತ ಗಾಂಧರ್ವ ವಿದ್ಯೆಯು ಸಮಯಕ್ಕೆ ಉಪಕರಿಸಿದಂತಾಗುವುದು. 'ಎಲ್ಲಿಂದ ಬಂದೆ?' ಎಂದು ಮನುಜಪತಿ ಕೇಳಿದರೆ, ದ್ರೌಪದಿಯ ಪರಿಚಾರಿಕೆಯಾಗಿದ್ದು, ಅವರು ಅಜ್ಞಾತವಾಸಕ್ಕೆಂದು ತೆರಳಿದಾಗ, ಇಲ್ಲಿಗೆ ಬಂದೆನೆಂದು ಹೇಳುವೆನು. ಬಾಹುಕನಾಗಿ ನಲನು ಕಷ್ಟಕಾಲವನ್ನು ಕಳೆದಂತೆ, ಬೃಹನ್ನಲೆಯಾಗಿ ನಾನು ಅಜ್ಞಾತವಾಸ ಕಾಲವನ್ನು ಕಳೆಯುವೆನು".

ಆ ಮಾತಿಗೆ ಅಂಗೀಕರಿಸಿ ಧರ್ಮರಾಜನು, ಮೆಲ್ಲಗೆ ನಕುಲನನ್ನು ಕರೆದು, ಮಾನಸಿಕ ವ್ಯಥೆಯಿಂದ ಕಂಠದ ಸೆರೆ ಬಿಗಿದುಬರುತ್ತಿರಲು, "ನಕುಲ! ಸುಕುಮಾರನು,

ದರ್ಶನೀಯ ದಿವ್ಯರೂಪನು, ಸುಖೋಚಿತನು ಆದ ನೀನು ವಿರಾಟಪುರಿಯಲ್ಲಿ, ಅಜ್ಞಾತನಾಗಿ ಇರುವ ಬಗೆ ಹೇಗೆ ? ತಮ್ಮ ! ನನ್ನಿಂದ ಅಮಾಯಕರಾದ ಸೋದರರು ಕಷ್ಟಪಡುವಂತಾಯಿತು ! ಪರಸೇವೆಯನ್ನು ಮಾಡಿ ಹೊಟ್ಟೆ ಹೊರೆಯುವ ಕಾಲ ಬಂದಿತಲ್ಲ ಎಂದು ನೊಂದಿರುವೆನು. ಏನು ಮಾಡಲಿ ? ನೀನೆಂತು ವಿರಾಟನಲ್ಲಿ ವರ್ತಿಸುವೆ ಹೇಳು ?" ಎಂದು ಕೇಳಿದನು. ನಕುಲನು, "ಅಣ್ಣ ! ಚಿಂತಿಸಬೇಡ ! ವಿಧಿವಿಲಾಸವನ್ನು ಅನ್ಯಥಾಕರಿಸಲಾಗದು. ಕೇಳು ! ದಾಮಗ್ರಂಥಿ ಎಂಬ ನಾಮದಿಂದ ಅಶ್ವಶಿಕ್ಷಕನಾಗಿ ವಿರಾಟನನ್ನು ಸೇವಿಸುವೆನು. ವಿರಾಟನ ಅಂತರ್ಯಾಮಿಯಾದ, ನಿನ್ನ ಸ್ವಾಮಿಯಾದ ಶ್ರೀಹರಿಯನ್ನು ತಿಳಿದು ಸೇವಿಸುವ ನಮಗೆ ಪರಸೇವೆಯಿಂದ ಬರುವ ಕುಂದಿಲ್ಲ. ಧರ್ಮಮರ್ಮವನ್ನರಿತ ನಿನಗೆ ಹೇಳಬೇಕೆ ? ವೇದ ವಿದ್ಯಾ ವಿಶಾರದನಿಗೆ ವಿಶ್ವವೆಲ್ಲವೂ ಸ್ವತ್ವವೆನಿಸಿದೆ. ವೇದಾದಿ ಸಚ್ಛಾಸ್ತ್ರ ವಿಚಕ್ಷಣರಾದ ನಾವು ಬಲಜ್ಞಾನಗಳಿಂದ ವಿರಾಟಾದಿ ನೃಪರಿಂದ ಹೆಚ್ಚೆನಿಸಿರುವುದರಿಂದ, ನಮಗೆ ಅವರ ಸೇವೆಯ ಪ್ರಸಕ್ತಿಯೇ ಇಲ್ಲ. ಮತ್ತೇನೆಂದರೆ ನಮ್ಮಿಂದಲೇ ಅವರಿಗೆ ಶ್ರೇಯಸ್ಸಾಗುವ ಪ್ರಸಂಗವು ಬರಬಹುದು. ನನಗೆ ಅಶ್ವಗಳೆಂದರೆ ಬಲು ಪ್ರೀತಿ. ಅಶ್ವವಿದ್ಯಾವಿಶಾರದ ಸೂತವೇಷದಿಂದ ಅಶ್ವಶಾಲಾಧ್ಯಕ್ಷನೆನಿಸಿ, ವಿರಾಟನನ್ನು ಸಂತೋಷಪಡಿಸುವೆನು. ಸಕಾಲದಲ್ಲಿ ವಡವಾಸಂಗಮವನ್ನು ಮೇಲ್ಜಾತಿ ಸೈಂಧವಗಳಿಂದ ಸಾಧಿಸಿ, ವಿರಾಟನ ಮಂದುರೆಯನ್ನು ಬೆಳೆಸುವೆನು. ನಡಿಗೆ ಕಲಿಸಿ, ಮದವಿಳಿಸಿ, ಮೊಂಡತನ ಬಿಡಿಸಿ, ಪಳಗಿಸಿ, ಕುದುರೆಗಳನ್ನು ಚೊಕ್ಕಟವಾಗಿರಿಸಿ, ಕೀಳ್ಜಾತಿಯ ಸೋಂಕು ತಗಲದಂತೆ ಜೇರ್ಪಡಿಸಿ, ಜೂಲು ಬಾಲಗಳ ಕತ್ತರಿಸಿ, ಕೆಟ್ಟಸುಳಿಯ ವಾರುವಗಳನ್ನು ತಿಳಿದು ಪರದೇಶಗಳಲ್ಲಿ ಮಾರಿಸಿ, ಎಲ್ಲ ಕುದುರೆ ಸವಾರರ ಯೋಗಕ್ಷೇಮವನ್ನು ವಿಚಾರಿಸಿ, ವರ್ತಿಸುವ ನನ್ನ ಅಶ್ವವಿದ್ಯಾ ವೈಶದ್ಯವನ್ನು ಕಂಡು, ವಿರಾಟನು ಮೆಚ್ಚುವಂತೆ ಮಾಡುವೆನು. ಎಲ್ಲಿಂದ ಬಂದೆ ಎಂದು ಕೇಳಿದರೆ, ಧರ್ಮರಾಜನ ಆಶ್ರಿತನೆಂದು ಹೇಳುವೆನು" ಎಂದು ನಿವೇದಿಸಿದನು.

ಧರ್ಮಜನು ಸಹದೇವನನ್ನು ಕಂಡು, ಅವನ ಸೇವಾವಿಧವನ್ನರಿಯಲು ತೊಡಗಿ, ಕಡು ಕಷ್ಟದಿಂದ, ಕಣ್ಣೀರಿಡುತ್ತಾ, "ಸಹದೇವ ! ಅಕುಟಿಲನು, ಆರ್ಯ ಸಮ್ಮತನು, ನೀತಿ ನಿರ್ಮಲನು, ಸುಜನನುತಶೀಲನು ಆದ ನಿನ್ನನ್ನು ನಮ್ಮ ತಾಯಿ ಬಲು ಮುದ್ದಿನಿಂದ ಬೆಳೆಸಿ, ಅರಣ್ಯವಾಸ ಕ್ಲೇಶವನ್ನು ನೆನೆದು ದುಃಖಿಸಿ ಕಳಿಸಿದಳು. ಅವಳ ಮಾತಿನಂತೆ ನಡೆಯಲಾರದೆಹೋದ ನನ್ನ ದೌರ್ಭಾಗ್ಯಕ್ಕೆ ಮರುಗುತ್ತಿರುವೆನು. ವತ್ಸ ! ಚನ್ನಾಗಿ ನೋಡಿಕೊ. ಚಿಕ್ಕವನಿವನೆಂದು ಹೇಳಿದ ಮಾತೆಯ ಮಾತನ್ನೂ, ನೀನು ನನ್ನಿಂದ ಪಟ್ಟ ಕಷ್ಟಗಳನ್ನೂ ಸ್ಮರಿಸಿ, ಲಜ್ಜಿತನಾಗಿರುವೆನು. ಈಗ ಅಜ್ಞಾತ ವಾಸ ಕ್ಲೇಶಗಳಿಗೆ ನಿನ್ನನ್ನು ಗುರಿಮಾಡುತ್ತಿರುವೆನು. ನೀನು ವಿರಾಟಪುರಿಯಲ್ಲಿ ಎಂತು ವರ್ತಿಸಲು ನಿಶ್ಚಯಿಸಿರುವೆ, ಹೇಳು ?" ಎಂದು ಕೇಳಿದನು. ಸಹದೇವನು, "ಅಣ್ಣ ! ನಿನ್ನ ಆಶೀರ್ವಾದದಿಂದ ನಾನು ಸುಖವಾಗಿ ಅಜ್ಞಾತವಾಸವನ್ನು ಮಾಡುವೆನು.

ಶಿವನನ್ನು ತಪದಿಂದ ಸಂತೋಷಪಡಿಸಿ ಕಂಡೆ. ಕಾಲಕೇಯ ನಿವಾತಕವಚಾದಿ ದುರ್ಜಯ ರಾಕ್ಷಸರನ್ನು ನಿರ್ಜಿಸಿದೆ. ಪುರಂದರನ ಪ್ರೀತಿಯನ್ನು ಪಡೆದು, ಆ ದೇವರಾಜನ ಅರ್ಧಸಿಂಹಾಸನವನ್ನಲಂಕರಿಸಿದೆ. ಇಂತಹ ಮಹಾನುಭಾವನಾದ ನಿನಗೆ ಒಬ್ಬ ಮರ್ತ್ಯನನ್ನು ಸೇವಿಸೆಂದು ವಿಧಿಯು ಫಾಲದಲ್ಲಿ ಲಿಖಿಸಿದನೇ? ವಾಸುಕಿಯ ತಂಗಿ ಉಲೂಪಿಯು ಯಾವನ ಸೌಂದರ್ಯಕ್ಕೆ ಮುಗ್ಧಳಾದಳೊ, ವಾಸುದೇವನ ತಂಗಿಯಾದ ಸುಭದ್ರೆ ಯಾವ ವೀರನ ವಾಮಾಂಗಿಯಾಗಬಯಸಿದಳೊ, ಅಂತಹ ಅರ್ಜುನನಿಗೆ ಇಂತಹ ಗತಿಯೇ! ಹಾ ! ತಾಪಪ್ರದರಲ್ಲಿ ಸೂರ್ಯನು ಶ್ರೇಷ್ಠನು ; ದ್ವಿಪಾದರಲ್ಲಿ ವಿಪ್ರನುತ್ತಮನು; ತೇಜಸ್ವಿಗಳಲ್ಲಿ ಅಗ್ನಿಯು ಮುಖ್ಯನು; ಆಯುಧಗಳಲ್ಲಿ ವಜ್ರವು ಪ್ರಬಲವು ; ಗೂಳಿಯು ಗೋಗಣದಲ್ಲಿ ಎದುರಿಲ್ಲದುದು ; ಸರೋವರಗಳಲ್ಲಿ ಸಾಗರಕ್ಕೆ ಸಮವಿಲ್ಲ ; ವರ್ಷಣಕಾರರಲ್ಲಿ ಪರ್ಜನ್ಯನು ವರನು ; ನಾಗರಲ್ಲಿ ಧೃತರಾಷ್ಟ್ರನು ವರನು ; ಆನೆಗಳಲ್ಲಿ ಐರಾವತವು ಪ್ರಭುವು ; ಪ್ರಿಯಕರಗಳಲ್ಲಿ ಮಗನೇ ಪ್ರಿಯತಮನು : ಸುಹೃದರಲ್ಲಿ ಭಾರ್ಯೆಗೆ ಎಣೆಯಿಲ್ಲ ; ಅಂತೆಯೇ ಧನುರ್ಧಾರಿಗಳಲ್ಲಿ ನಿನಗೆ ಸಮರಿಲ್ಲ. ಅಂತಹ ಇಂದ್ರಸಮ ವೀರನು ನೀನು. ವಾಸುದೇವನ ಪ್ರಿಯಸಖನು ನೀನು. ಅರ್ಜುನ ! ಹನ್ನೆರಡನೆಯ ರುದ್ರನೋ ಹದಿಮೂರನೆಯ ಆದಿತ್ಯನೋ, ಒಂಬತ್ತನೆಯ ವಸುವೋ, ಹತ್ತನೆಯ ಗ್ರಹವೋ, ಎಂಬಂತೆ ಮೆರೆಯುವ ಸಿಂಹ ಸಂಹನನನಾದ ಅರ್ಜುನನು ಅಜ್ಞಾತನಾಗಿ ಇರುವುದಾದರೂ ಎಂತು !" ಎಂದು ಮರುಗಿದನು.

ಅರ್ಜುನನು ಅಣ್ಣನನ್ನು ಸಂತೈಸುತ್ತಿಂತೆಂದನು—"ಅಣ್ಣ ! ನಾನು ನಪುಂಸಕನಾಗಿ ಆ ವೇಷದಿಂದಲೇ ವಿರಾಟನ ಅಂತಃಪುರದಲ್ಲಿ ವಾಸಿಸುವೆನು. ಜ್ಯಾಘಾತದಿಂದ ಕಾಯಿಗಟ್ಟಿದ ಕೈಗಳನ್ನು, ರವಿಕೆ ಕಂಕಣಗಳಿಂದ ಮುಚ್ಚಿಡುವೆನು. ರತ್ನ ಕುಂಡಲಗಳನ್ನು ಬಿಚ್ಚಿಟ್ಟು, ಜೆಂಡೋಲೆಯನ್ನಿಟ್ಟು, ಬೃಹನ್ನಲೆ ಎಂಬ ಹೆಸರಿನಿಂದ ಖ್ಯಾತನಾಗುವೆನು. ಊರ್ವಶೀ ಶಾಪದಿಂದ ನನ್ನ ಒಂದು ವರ್ಷದ ಷಂಡತ್ವವೂ ಅನಿವಾರ್ಯವಾಗಿದೆ. ಹೆರಳ ಜಡೆ ಧರಿಸಿ, ಬಳೆ ತೊಟ್ಟು, ನರ್ತನ ಸಂಗೀತ ವಿದ್ಯಾಪಾರಂಗತನೆನಿಸಿ, ಆ ವಿದ್ಯೆಗಳನ್ನು ಅಂತಃಪುರದ ಅಂಗನೆಯರಿಗೆ ಕಲಿಸುತ್ತಿರುವ ನನ್ನನ್ನು ಯಾರೂ ಅರ್ಜುನನೆಂದು ತಿಳಿಯಲಾರರು. ಚಿತ್ರರಥನಿತ್ತ ಗಾಂಧರ್ವ ವಿದ್ಯೆಯು ಸಮಯಕ್ಕೆ ಉಪಕರಿಸಿದಂತಾಗುವುದು. 'ಎಲ್ಲಿಂದ ಬಂದೆ?' ಎಂದು ಮನುಜಪತಿ ಕೇಳಿದರೆ, ದ್ರೌಪದಿಯ ಪರಿಚಾರಿಕೆಯಾಗಿದ್ದು, ಅವರು ಅಜ್ಞಾತವಾಸಕ್ಕೆಂದು ತೆರಳಿದಾಗ, ಇಲ್ಲಿಗೆ ಬಂದೆನೆಂದು ಹೇಳುವೆನು. ಬಾಹುಕನಾಗಿ ನಲನು ಕಷ್ಟಕಾಲವನ್ನು ಕಳೆದಂತೆ, ಬೃಹನ್ನಲೆಯಾಗಿ ನಾನು ಅಜ್ಞಾತವಾಸ ಕಾಲವನ್ನು ಕಳೆಯುವೆನು".

ಆ ಮಾತಿಗೆ ಅಂಗೀಕರಿಸಿ ಧರ್ಮರಾಜನು, ಮೆಲ್ಲಗೆ ನಕುಲನನ್ನು ಕರೆದು, ಮಾನಸಿಕ ವ್ಯಥೆಯಿಂದ ಕಂಠದ ಸೆರೆ ಬಿಗಿದುಬರುತ್ತಿರಲು, "ನಕುಲ! ಸುಕುಮಾರನು,

ದರ್ಶನೀಯ ದಿವ್ಯರೂಪನು, ಸುಖೋಚಿತನು ಆದ ನೀನು ವಿರಾಟಪುರಿಯಲ್ಲಿ, ಅಜ್ಞಾತನಾಗಿ ಇರುವ ಬಗೆ ಹೇಗೆ? ತಮ್ಮ! ನನ್ನಿಂದ ಅಮಾಯಕರಾದ ಸೋದರರು ಕಷ್ಟಪಡುವಂತಾಯಿತು! ಪರಸೇವೆಯನ್ನು ಮಾಡಿ ಹೊಟ್ಟೆ ಹೊರೆಯುವ ಕಾಲ ಬಂದಿತಲ್ಲ ಎಂದು ನೊಂದಿರುವೆನು. ಏನು ಮಾಡಲಿ? ನೀನೆಂತು ವಿರಾಟನಲ್ಲಿ ವರ್ತಿಸುವೆ ಹೇಳು?" ಎಂದು ಕೇಳಿದನು. ನಕುಲನು, "ಅಣ್ಣ! ಚಿಂತಿಸಬೇಡ! ವಿಧಿವಿಲಾಸವನ್ನು ಅನ್ಯಥಾಕರಿಸಲಾಗದು. ಕೇಳು! ದಾಮಗ್ರಂಥಿ ಎಂಬ ನಾಮದಿಂದ ಅಶ್ವಶಿಕ್ಷಕನಾಗಿ ವಿರಾಟನನ್ನು ಸೇವಿಸುವೆನು. ವಿರಾಟನ ಅಂತರ್ಯಾಮಿಯಾದ, ನಿನ್ನ ಸ್ವಾಮಿಯಾದ ಶ್ರೀಹರಿಯನ್ನು ತಿಳಿದು ಸೇವಿಸುವ ನಮಗೆ ಪರಸೇವೆಯಿಂದ ಬರುವ ಕುಂದಿಲ್ಲ. ಧರ್ಮಮರ್ಮವನ್ನರಿತ ನಿನಗೆ ಹೇಳಬೇಕೆ? ವೇದ ವಿದ್ಯಾ ವಿಶಾರದನಿಗೆ ವಿಶ್ವವೆಲ್ಲವೂ ಸ್ವತ್ವವೆನಿಸಿದೆ. ವೇದಾದಿ ಸಚ್ಛಾಸ್ತ್ರ ವಿಚಕ್ಷಣರಾದ ನಾವು ಬಲಜ್ಞಾನಗಳಿಂದ ವಿರಾಟಾದಿ ನೃಪರಿಂದ ಹೆಚ್ಚೆನಿಸಿರುವುದರಿಂದ, ನಮಗೆ ಅವರ ಸೇವೆಯ ಪ್ರಸಕ್ತಿಯೇ ಇಲ್ಲ. ಮತ್ತೇನೆಂದರೆ ನಮ್ಮಿಂದಲೇ ಅವರಿಗೆ ಶ್ರೇಯಸ್ಸಾಗುವ ಪ್ರಸಂಗವು ಬರಬಹುದು. ನನಗೆ ಅಶ್ವಗಳೆಂದರೆ ಬಲು ಪ್ರೀತಿ. ಅಶ್ವವಿದ್ಯಾವಿಶಾರದ ಸೂತವೇಷದಿಂದ ಅಶ್ವಶಾಲಾಧ್ಯಕ್ಷನೆನಿಸಿ, ವಿರಾಟನನ್ನು ಸಂತೋಷಪಡಿಸುವೆನು. ಸಕಾಲದಲ್ಲಿ ವಡವಾಸಂಗಮವನ್ನು ಮೇಲ್ಜಾತಿ ಸೈಂಧವಗಳಿಂದ ಸಾಧಿಸಿ, ವಿರಾಟನ ಮುಂದುರೆಯನ್ನು ಬೆಳೆಸುವೆನು. ನಡಕೆ ಕಲಿಸಿ, ಮದವಿಳಿಸಿ, ಮೊಂಡತನ ಬಿಡಿಸಿ, ಪಳಗಿಸಿ, ಕುದುರೆಗಳನ್ನು ಚೊಕ್ಕಟವಾಗಿರಿಸಿ, ಕೀಳ್ಜಾತಿಯ ಸೊಂಕು ತಗಲದಂತೆ ಜೇರ್ಪಡಿಸಿ, ಜೂಲು ಬಾಲಗಳ ಕತ್ತರಿಸಿ, ಕೆಟ್ಟಸುಳಿಯ ವಾರುವಗಳನ್ನು ತಿಳಿದು ಪರದೇಶಗಳಲ್ಲಿ ಮಾರಿಸಿ, ಎಲ್ಲ ಕುದುರೆ ಸವಾರರ ಯೋಗಕ್ಷೇಮವನ್ನು ವಿಚಾರಿಸಿ, ವರ್ತಿಸುವ ನನ್ನ ಅಶ್ವವಿದ್ಯಾ ವೈಶದ್ಯವನ್ನು ಕಂಡು, ವಿರಾಟನು ಮೆಚ್ಚುವಂತೆ ಮಾಡುವೆನು. ಎಲ್ಲಿಂದ ಬಂದೆ ಎಂದು ಕೇಳಿದರೆ, ಧರ್ಮರಾಜನ ಆಶ್ರಿತನೆಂದು ಪೇಳುವೆನು" ಎಂದು ನಿವೇದಿಸಿದನು.

ಧರ್ಮಜನು ಸಹದೇವನನ್ನು ಕಂಡು, ಅವನ ಸೇವಾವಿಧವನ್ನರಿಯಲು ತೊಡಗಿ, ಕಡು ಕಷ್ಟದಿಂದ, ಕಣ್ಣೀರಿಡುತ್ತಾ, "ಸಹದೇವ! ಅಕುಟಿಲನು, ಆರ್ಯ ಸಮ್ಮತನು, ನೀತಿ ನಿರ್ಮಲನು, ಸುಜನನುತಶೀಲನು ಆದ ನಿನ್ನನ್ನು ನಮ್ಮ ತಾಯಿ ಬಲು ಮುದ್ದಿನಿಂದ ಬೆಳೆಸಿ, ಅರಣ್ಯವಾಸ ಕ್ಲೇಶವನ್ನು ನೆನೆದು ದುಃಖಿಸಿ ಕಳಿಸಿದಳು. ಆವಳ ಮಾತಿನಂತೆ ನಡೆಯಲಾರದೆಹೋದ ನನ್ನ ದೌರ್ಭಾಗ್ಯಕ್ಕೆ ಮರುಗುತ್ತಿರುವೆನು. ವತ್ಸ! ಚನ್ನಾಗಿ ನೋಡಿಕೊ. ಚಿಕ್ಕವನಿವನೆಂದು ಪೇಳಿದ ಮಾತೆಯ ಮಾತನ್ನೂ, ನೀನು ನನ್ನಿಂದ ಪಟ್ಟ ಕಷ್ಟಗಳನ್ನೂ ಸ್ಮರಿಸಿ, ಲಜ್ಜಿತನಾಗಿರುವೆನು. ಈಗ ಅಜ್ಞಾತ ವಾಸ ಕ್ಲೇಶಗಳಿಗೆ ನಿನ್ನನ್ನು ಗುರಿಮಾಡುತ್ತಿರುವೆನು. ನೀನು ವಿರಾಟಪುರಿಯಲ್ಲಿ ಎಂತು ವರ್ತಿಸಲು ನಿಶ್ಚಯಿಸಿರುವೆ, ಪೇಳು?" ಎಂದು ಕೇಳಿದನು. ಸಹದೇವನು, "ಅಣ್ಣ! ನಿನ್ನ ಆಶೀರ್ವಾದದಿಂದ ನಾನು ಸುಖವಾಗಿ ಅಜ್ಞಾತವಾಸವನ್ನು ಮಾಡುವೆನು.

ಚಿಂತಿಸಬೇಡ! ತಂತ್ರೀಪಾಲನಾಮದಿಂದ ಗೋವಳನಾಗಿ ವಿರಾಟನ ಗೋಗಣ ಸಮೃದ್ಧಿ ಯನ್ನು ಸಾಧಿಸುವೆನು. ಬಂಜೆ ಎನಿಸಿದ ಗೋವುಗಳನ್ನು ಔಷಧಾದ್ಯುಪಚಾರಗಳಿಂದ ಸರಿಪಡಿಸಿ, ಕ್ಷೀರಪ್ರದವನ್ನಾಗಿಸುವೆನು. ಬಡ ಗೂಳಿಗಳನ್ನು ಆರೈಕೆ ಮಾಡಿ, ಆರ್ತವ ಕಾಲದಿ ಬಂದು ನಿಂತ ಧೇನುಶತಗಳಿಂದ ಕೂಡಿಸಿ, ಪಶು ಸಂಖ್ಯೆಯನ್ನು ಹೆಚ್ಚಿಸುವೆನು. ಪಶುರೋಗವನ್ನರಿತು, ಚಿಕಿತ್ಸೆಮಾಡಿ, ಕೆಟ್ಟರೋಗದ ಗೋವುಗಳನ್ನು ದೂರದಲ್ಲಿಟ್ಟು ವಿರಾಟನ ಗೋಗಣವನ್ನು ಕಾಪಾಡುವೆನು. ಹಾಲು ಹಿಂಡುವುದು, ನೀರಿದ್ದ ಮೈದಾನ ಗಳಲ್ಲಿ ಮೇಯಲು ಬಿಡುವುದು, ಬೆದರು ಗೊಡ್ಡನ್ನು ಸಾಧುಪಡಿಸುವುದು, ಕ್ರೂರ ಮೃಗಗಳ ಬಾಯ ತುತ್ತಾಗದಂತೆ ರಕ್ಷಿಸಿ, ಕಳ್ಳರನ್ನೋಡಿಸಿ ಕರುಗಳನ್ನುಳಿಸು ವುದು, ಮೊದಲಾದ ಗೋಕೃತ್ಯಗಳನ್ನು, ನಿನ್ನ ಸೇವೆಮಾಡಿ, ಚನ್ನಾಗಿ ಅರಿತಿರು ವುದರಿಂದ ಈಗ ಅನುಕೂಲವೇ ಆಯಿತು. ನೀನೆಲ್ಲಿಯವನೆಂದರೆ, ಯುಧಿಷ್ಠಿರನ ಗೋಷ್ಠಾಧಿಕಾರಿಯೆಂದು ಪೇಳುವೆನು" ಎಂದನು.

ಅದು ಯುಕ್ತವಾಗಿದೆ ಎಂದು ಸಮ್ಮತಿಸಿ ಧರ್ಮರಾಜನು, ದ್ರೌಪದಿಯನ್ನೀಕ್ಷಿಸಿ, ಬರುತ್ತಿದ್ದ ಕಣ್ಣೀರನ್ನೊರೆಸಿಕೊಂಡು, ಗದ್ಗದಿತಕಂಠನಾಗಿ, ಮೆಲ್ಲನೆ ಇಂತೆಂದನು— "ಕೃಷ್ಣೆ ! ನೀನೆಂತಿರುವೆ ವಿರಾಟಪುರಿಯಲ್ಲಿ, ಹೇಳು ! ಉದಾತ್ತಚರಿತೆಯಾದ ನಿನಗೆ ಪರರನ್ನಾಶ್ರಯಿಸಬೇಕಾಯಿತೇ ? ಕುಸುಮ ಕೋಮಲಿಗೆ ಪರರ ಮನೆ ಕೆಲಸವೇ ? ಮಹಾರಾಣಿಗೆ ಪರಸೇವೆಯೋ ? ಹಾ ! ದಾಸದಾಸೀಶತಸೇವಿತಳು ಇನ್ನೊಬ್ಬರನ್ನು ಉಪಚರಿಸುವಂತಾಯಿತಲ್ಲ ! ಹತವಿಧಿ ! ಏನು ಮಾಡಲಿ ? ಪ್ರಿಯ ಪತ್ನಿಯು, ಪ್ರಾಣಾಧಿಕಳು, ಮಾತೆಯಂತೆ ಪರಿಪಾಲ್ಯಳು, ಜ್ಯೇಷ್ಠ (ಭೀಮ) ಪತ್ನಿಯಂತೆ ಪೂಜ್ಯಳು ಆದ ಪಾಂಚಾಲಿಯನ್ನು ಇಷ್ಟು ವ್ಯಸನಗಳಿಗೆ ಗುರಿಪಡಿಸಿದ ನನ್ನ ಅವಿವೇಕಕೃತ ದ್ಯೂತಕ್ಕೆ ಧಿಕ್ಕಾರವಿರಲಿ !" ಹೀಗೆ ಗೋಳಾಡುತ್ತಿದ್ದ ಧರ್ಮಜನನ್ನು ಸಮಾಧಾನಪಡಿಸುತ್ತಾ, ದ್ರೌಪದಿಯು, "ಮಹಾರಾಜ ! ಸುಕುಮಾರಿಯು, ರಾಜ ಪುತ್ರಿಯು ಆದರೂ ನಾನು ಪತಿವ್ರತೆಯು. ಪತಿಪರಾಯಣೆಗೆ ದುಷ್ಕರವಿಲ್ಲ. ಹೂವು, ಗಂಧ, ದುಕೂಲ, ಭೂಷಣಗಳ ಮಧ್ಯದಿ ಬೆಳೆದ ನನಗೆ, ಸೈರಂಧ್ರೀ ವೃತ್ತಿಯು ತಕ್ಕುದಾಗಿದೆ. ಸೈರಂಧ್ರಿಯರು ಸುರಕ್ಷಿತೆಯರಾಗಿರಬಲ್ಲರು. ಅವರ ಕೆಲಸವು ಅಂತಃಪುರದಲ್ಲಿ ; ರಾಜಪುರುಷರ ದೃಷ್ಟಿಪಾತಕ್ಕೊಳಗಾಗದೆ, ಅಂತಃಪುರಾಂಗನೆಯರ ಕೇಶಾಲಂಕರಣ, ಮಾಲ್ಯ, ಗಂಧ, ಕರಣ ಮುಂತಾದ ಗೌರವನೀಯ ಪರಿಚರಣದಲ್ಲಿ ರತಳಾಗಿರುವ ಸೈರಂಧ್ರಿಯು ಗುಪ್ತಳಾಗಿರಬಹುದು. ಆದುದರಿಂದ ದ್ರೌಪದಿದೇವಿಯ ಪರಿಚಾರಿಕೆಯಾಗಿದ್ದೆನೆಂದು ವಿರಾಟಪತ್ನಿಗೆ ಹೇಳಿ, ಅವಳ ಆಶ್ರಯವನ್ನು ಪಡೆಯು ವೆನು. ಸುದೇಷ್ಣೆಯನ್ನು ಬಿಟ್ಟು, ಇತರರನ್ನು ಸೇವಿಸೆನು. ಅವಳಿಂದ ರಕ್ಷಿತಳಾಗಿ, ಗುಪ್ತಳಾಗಿರುವ ನನ್ನ ಚಿಂತೆ ಮಾಡಬೇಡಿ ! ನನ್ನ ಶೀಲವನ್ನು ನಾನೇ ರಕ್ಷಿಸಿಕೊಳ್ಳ ಬಲ್ಲೆನು. ವಲ್ಲವನೂ ಪಾಕಶಾಲೆಯಲ್ಲಿದ್ದು, ಎಲ್ಲವನ್ನೂ ಬಲ್ಲವನಾಗಿ, ಎಲ್ಲೆ ಮೀರಿದ ದುಷ್ಟ ರಾಜಪುರುಷರನ್ನು ಶಾಸಿಸುತ್ತಿರುವನು. ಅವನಂತೆ ಶೂದ್ರಜಾತಿಯ ಸೈರಂಧ್ರಿ

ವೇಷವನ್ನು ಧರಿಸಿ, ನಾನು ಆ ಮಹಾನುಭಾವನ ಸಜಾತೀಯಳಾಗಿರುವುದರಿಂದ ನನ್ನ ಧರ್ಮವೂ ಉಳಿಯುವುದು ಮತ್ತು ನನಗೆ ಅದರಿಂದ ಅನುಕೂಲತೆಯೂ ಹೆಚ್ಚು" ಎಂದು ನುಡಿದಳು.

ಧರ್ಮರಾಜನು—"ನಿಜ, ದ್ರೌಪದಿ ! ಹುಟ್ಟಿ ಬಂದ ವಂಶದ ಸೌಗುಣ್ಯವನ್ನು ತೋರುವ ಮಾತನ್ನಾಡಿದೆ! ಸಾಧ್ವಿ ಶಿರೋಮಣಿಯು, ನಿಷ್ಪಾಪಳು, ಕೃಷ್ಣಾನುಗ್ರಹ ಪಾತ್ರಳು ಆದ ನಿನಗೆ ಹೆಚ್ಚಿಗೆ ಹೇಳಲೇಕೆ ? ಪಾಪಿಗಳ ಕಣ್ಣಿಗೆ ಬೀಳದಂತೆ ಅಲೌಕಿಕ ರೂಪ ಲಾವಣ್ಯವತಿಯಾದ ನಿನ್ನ ಸ್ವರೂಪವನ್ನು ಮರೆಮಾಚಿಕೊಂಡು ಇರು. ಮತ್ತೆ ನಮ್ಮನ್ನರಿತೆಡೆ, ಕೌರವಹತಕರು ಅರಣ್ಯಕ್ಕಟ್ಟದೆ ಬಿಡರು. ಎಚ್ಚರದಿಂದಿರು." ಎಂದು, ತಮ್ಮಂದಿರನ್ನು, ತರುಣಿಯನ್ನು ಕರೆದುಕೊಂಡು, ಧೌಮ್ಯಾದಿ ವಿಪ್ರರಿಗೆ ವಂದಿಸಿ, ಬೀಳ್ಕೊಡಲನುವಾದನು. "ಧೌಮ್ಯಾಚಾರ್ಯ ! ನಿನ್ನಂತಹ ಪುರೋಹಿತ ನಿಂದ ನಾವು ಪುನೀತರಾದೆವು. ನಿನ್ನ ಆಶೀರ್ಬಲದಿಂದ ಅಜ್ಞಾತವಾಸವನ್ನು ನಿರ್ವಿಘ್ನ ವಾಗಿ ಮುಗಿಸುವೆವು. ನಮ್ಮ ಅಗ್ನಿಹೋತ್ರಗಳನ್ನು ನಿನ್ನ ಆಶ್ರಮದಲ್ಲಿಟ್ಟು ರಕ್ಷಿಸುತ್ತಿರು. ಸೂತಪಾಚಕಾದಿ ಪರಿವಾರದಿಂದ ಕೂಡಿ, ಇಂದ್ರಸೇನಾದಿ ಸಾರಥಿಗಣವು ಶೀಘ್ರವಾಗಿ ದ್ವಾರವತಿಯನ್ನು ಸೇರಿ, ಅಲ್ಲೇ ಇರಲಿ. ದಾಸೀಜನವು ಪಾಂಚಾಲ ಪುರಿಯಲ್ಲಿರಲಿ. ಪಾಂಡವರ ವೃತ್ತವನ್ನು ಕೇಳಿದವರಿಗೆ 'ನಮಗೆ ಗೊತ್ತಿಲ್ಲ' ವೆಂದು ಹೇಳಿರಿ. 'ನಮ್ಮನ್ನು ಬಿಟ್ಟು ದ್ವೈತವನದಿಂದ ತೆರಳಿದ ಪಾಂಡವರ ವೃತ್ತಾಂತವನ್ನು ನಾವರಿಯೆವೆಂದು' ತಿಳಿಸಿರಿ. ನಿಮ್ಮ ದಯೆ ಇರಲಿ !" ಎಂದು ಧರ್ಮರಾಜನು, ಸೂತಾದಿ ಪರಿವಾರವನ್ನು, ಧೌಮ್ಯಾದಿ ವಿಪ್ರರನ್ನು ಬೀಳ್ಕೊಟ್ಟನು.

## ಧೌಮ್ಯೋಪದೇಶ

ಆಗ ಧರ್ಮರಾಜಾದಿಗಳನ್ನು ತನ್ನ ಸಮೀಪದಲ್ಲಿ ಕೂಡಿಸಿಕೊಂಡು ಧೌಮ್ಯನು ಅವರಿಗೆ ಹಿತವನ್ನು ಉಪದೇಶಿಸಿದನು—

ಧರ್ಮರಾಜ! ಕೌರವಕುಲಾಲಂಕಾರರಾಗಿ ಮಹನೀಯ ಶೌರ್ಯ ಔದಾರ್ಯ ಗಾಂಭೀರ್ಯ ವೀರ್ಯಾದಿಗುಣಗಳಿಂದ ವಿರಾಜಿಸುವ ನೀವು ಪರರನ್ನು ಸೇವಿಸುವಾಗ ಸಂಭವಿಸಬಹುದಾದ ಮಾನಾಪಮಾನಗಳಿಗೆ ಎಂತು ಸಹಿಸಿ, ನಿರ್ವಿಕಾರರಾಗಿ ನಿರ್ವಹಿಸುವಿರೋ ಎಂದು ನಾನು ಚಿಂತಿಸುತ್ತಿರುವೆನು. ಒಂದುವೇಳೆ ಪರಿಭವ ಪ್ರಭಂಜನನಿಂದ ನಿಮ್ಮ ವೀರ್ಯಾಗ್ನಿಯು ವಿಜೃಂಭಿಸಿದರೆ ನಿಮ್ಮ ಸ್ವರೂಪವು ಪ್ರಕಟ ವಾಗದಿರುವುದೇ ? ಪ್ರಕಟವಾದರೆ ಮತ್ತೆ ಅರಣ್ಯವಾಸಾದಿ ಕ್ಲೇಶಗಳನ್ನು ಅನುಭವಿಸ ಬೇಕಾದೀತು. ಆದುದರಿಂದ ಕಾಲ ವೈಪರೀತ್ಯವನ್ನರಿತು ಶಾಂತರಾಗಿ ವರ್ತಿಸುವುದು ಉಚಿತವು. ಪ್ರಮಾದಕ್ಕೊಳಗಾಗದೆ, ನಾನು ಹೇಳುವ ತೆರದಿ ಪ್ರವರ್ತಿಸಿ, ಸುಖ ವಾಗಿ ನಿಮ್ಮ ಅಜ್ಞಾತವಾಸವನ್ನು ಮುಗಿಸಿಕೊಂಡು ಬನ್ನಿ ! ರಾಜಸನ್ನಿಧಾನದಲ್ಲಿ ಸೇವಕಜನರು ವರ್ತಿಸುವ ವಿಧಾನವನ್ನು ನೀವರಿಯದಿರುವಿರಿ. ಪರಿಪಾಲನವನ್ನರಿತು

ಚಿಂತಿಸಬೇಡ! ತಂತ್ರೀಪಾಲನಾಮದಿಂದ ಗೋವಳನಾಗಿ ವಿರಾಟನ ಗೋಗಣ ಸಮೃದ್ಧಿ ಯನ್ನು ಸಾಧಿಸುವೆನು. ಬಂಜೆ ಎನಿಸಿದ ಗೋವುಗಳನ್ನು ಔಷಧಾದ್ಯುಪಚಾರಗಳಿಂದ ಸರಿಪಡಿಸಿ, ಕ್ಷೀರಪ್ರದವನ್ನಾಗಿಸುವೆನು. ಬಡ ಗೂಳಿಗಳನ್ನು ಆರೈಕೆ ಮಾಡಿ, ಆರ್ತವ ಕಾಲದಿ ಬಂದು ನಿಂತ ಧೇನುಶತಗಳಿಂದ ಕೂಡಿಸಿ, ಪಶು ಸಂಖ್ಯೆಯನ್ನು ಹೆಚ್ಚಿಸುವೆನು. ಪಶುರೋಗವನ್ನರಿತು, ಚಿಕಿತ್ಸೆಮಾಡಿ, ಕೆಟ್ಟರೋಗದ ಗೋವುಗಳನ್ನು ದೂರದಲ್ಲಿಟ್ಟು ವಿರಾಟನ ಗೋಗಣವನ್ನು ಕಾಪಾಡುವೆನು. ಹಾಲು ಹಿಂಡುವುದು, ನೀರಿದ್ದ ಮೈದಾನ ಗಳಲ್ಲಿ ಮೇಯಲು ಬಿಡುವುದು, ಬೆದರು ಗೊಡ್ಡನ್ನು ಸಾಧುಪಡಿಸುವುದು, ಕ್ರೂರ ಮೃಗಗಳ ಬಾಯ ತುತ್ತಾಗದಂತೆ ರಕ್ಷಿಸಿ, ಕಳ್ಳರನ್ನೋಡಿಸಿ ಕರುಗಳನ್ನುಳಿಸು ವುದು, ಮೊದಲಾದ ಗೋಕೃತ್ಯಗಳನ್ನು, ನಿನ್ನ ಸೇವೆಮಾಡಿ, ಚನ್ನಾಗಿ ಅರಿತಿರು ವುದರಿಂದ ಈಗ ಅನುಕೂಲವೇ ಆಯಿತು. ನೀನೆಲ್ಲಿಯವನೆಂದರೆ, ಯುಧಿಷ್ಠಿರನ ಗೋಷ್ಠಾಧಿಕಾರಿಯೆಂದು ಪೇಳುವೆನು" ಎಂದನು.

ಅದು ಯುಕ್ತವಾಗಿದೆ ಎಂದು ಸಮ್ಮತಿಸಿ ಧರ್ಮರಾಜನು, ದ್ರೌಪದಿಯನ್ನೀಕ್ಷಿಸಿ, ಬರುತ್ತಿದ್ದ ಕಣ್ಣೀರನ್ನೊರೆಸಿಕೊಂಡು, ಗದ್ಗದಿತಕಂಠನಾಗಿ, ಮೆಲ್ಲನೆ ಇಂತೆಂದನು— "ಕೃಷ್ಣೆ ! ನೀನೆಂತಿರುವೆ ವಿರಾಟಪುರಿಯಲ್ಲಿ, ಹೇಳು ! ಉದಾತ್ತಚರಿತೆಯಾದ ನಿನಗೆ ಪರರನ್ನಾಶ್ರಯಿಸಬೇಕಾಯಿತೇ ? ಕುಸುಮ ಕೋಮಲಿಗೆ ಪರರ ಮನೆ ಕೆಲಸವೇ ? ಮಹಾರಾಣಿಗೆ ಪರಸೇವೆಯೇ ? ಹಾ ! ದಾಸದಾಸೀಶತಸೇವಿತಳು ಇನ್ನೊಬ್ಬರನ್ನು ಉಪಚರಿಸುವಂತಾಯಿತಲ್ಲ ! ಹತವಿಧಿ ! ಏನು ಮಾಡಲಿ ? ಪ್ರಿಯ ಪತ್ನಿಯು, ಪ್ರಾಣಾಧಿಕಳು, ಮಾತೆಯಂತೆ ಪರಿಪಾಲ್ಯಳು, ಜ್ಯೇಷ್ಠ (ಭೀಮ) ಪತ್ನಿಯಂತೆ ಪೂಜ್ಯಳು ಆದ ಪಾಂಚಾಲಿಯನ್ನು ಇಷ್ಟು ವ್ಯಸನಗಳಿಗೆ ಗುರಿಪಡಿಸಿದ ನನ್ನ ಅವಿವೇಕಕೃತ ದ್ಯೂತಕ್ಕೆ ಧಿಕ್ಕಾರವಿರಲಿ !" ಹೀಗೆ ಗೋಳಾಡುತ್ತಿದ್ದ ಧರ್ಮಜನನ್ನು ಸಮಾಧಾನಪಡಿಸುತ್ತಾ, ದ್ರೌಪದಿಯು, "ಮಹಾರಾಜ ! ಸುಕುಮಾರಿಯು, ರಾಜ ಪುತ್ರಿಯು ಆದರೂ ನಾನು ಪತಿವ್ರತೆಯು. ಪತಿಪರಾಯಣೆಗೆ ದುಷ್ಕರವಿಲ್ಲ. ಹೂವು, ಗಂಧ, ದುಕೂಲ, ಭೂಷಣಗಳ ಮಧ್ಯದಿ ಬೆಳೆದ ನನಗೆ, ಸೈರಂಧ್ರೀ ವೃತ್ತಿಯು ತಕ್ಕುದಾಗಿದೆ. ಸೈರಂಧ್ರಿಯರು ಸುರಕ್ಷಿತೆಯರಾಗಿರಬಲ್ಲರು. ಅವರ ಕೆಲಸವು ಅಂತಃಪುರದಲ್ಲಿ ; ರಾಜಪುರುಷರ ದೃಷ್ಟಿಪಾತಕ್ಕೊಳಗಾಗದೆ, ಅಂತಃಪುರಾಂಗನೆಯರ ಕೇಶಾಲಂಕರಣ, ಮಾಲ್ಯ, ಗಂಧ, ಕರಣ ಮುಂತಾದ ಗೌರವನೀಯ ಪರಿಚರಣದಲ್ಲಿ ರತಳಾಗಿರುವ ಸೈರಂಧ್ರಿಯು ಗುಪ್ತಳಾಗಿರಬಹುದು. ಆದುದರಿಂದ ದ್ರೌಪದಿದೇವಿಯ ಪರಿಚಾರಿಕೆಯಾಗಿದ್ದೆನೆಂದು ವಿರಾಟಪತ್ನಿಗೆ ಹೇಳಿ, ಅವಳ ಆಶ್ರಯವನ್ನು ಪಡೆಯು ವೆನು. ಸುದೇಷ್ಣೆಯನ್ನು ಬಿಟ್ಟು, ಇತರರನ್ನು ಸೇವಿಸೆನು. ಅವಳಿಂದ ರಕ್ಷಿತಳಾಗಿ, ಗುಪ್ತಳಾಗಿರುವ ನನ್ನ ಚಿಂತೆ ಮಾಡಬೇಡಿ ! ನನ್ನ ಶೀಲವನ್ನು ನಾನೇ ರಕ್ಷಿಸಿಕೊಳ್ಳ ಬಲ್ಲೆನು. ವಲ್ಲವನೂ ಪಾಕಶಾಲೆಯಲ್ಲಿದ್ದು, ಎಲ್ಲವನ್ನೂ ಬಲ್ಲವನಾಗಿ, ಎಲ್ಲೆ ಮೀರಿದ ದುಷ್ಟ ರಾಜಪುರುಷರನ್ನು ಶಾಸಿಸುತ್ತಿರುವನು. ಅವನಂತೆ ಶೂದ್ರಜಾತಿಯ ಸೈರಂಧ್ರಿ

ವೇಷವನ್ನು ಧರಿಸಿ, ನಾನು ಆ ಮಹಾನುಭಾವನ ಸಜಾತೀಯಳಾಗಿರುವುದರಿಂದ ನನ್ನ ಧರ್ಮವೂ ಉಳಿಯುವುದು ಮತ್ತು ನನಗೆ ಅದರಿಂದ ಅನುಕೂಲತೆಯೂ ಹೆಚ್ಚು" ಎಂದು ನುಡಿದಳು.

ಧರ್ಮರಾಜನು—"ನಿಜ, ದ್ರೌಪದಿ ! ಪುಟ್ಟಿ ಬಂದ ವಂಶದ ಸೌಗುಣ್ಯವನ್ನು ತೋರುವ ಮಾತನ್ನಾಡಿದೆ! ಸಾಧ್ವಿ ಶಿರೋಮಣಿಯು, ನಿಷ್ಪಾಪಳು, ಕೃಷ್ಣಾನುಗ್ರಹ ಪಾತ್ರಳು ಆದ ನಿನಗೆ ಹೆಚ್ಚಿಗೆ ಹೇಳಲೇಕೆ ? ಪಾಪಿಗಳ ಕಣ್ಣಿಗೆ ಬೀಳದಂತೆ ಅಲೌಕಿಕ ರೂಪ ಲಾವಣ್ಯವತಿಯಾದ ನಿನ್ನ ಸ್ವರೂಪವನ್ನು ಮರೆಮಾಚಿಕೊಂಡು ಇರು. ಮತ್ತೆ ನಮ್ಮನ್ನರಿತೆಡೆ, ಕೌರವಹತಕರು ಅರಣ್ಯಕ್ಕಟ್ಟದೆ ಬಿಡರು. ಎಚ್ಚರದಿಂದಿರು." ಎಂದು, ತಮ್ಮಂದಿರನ್ನು, ತರುಣಿಯನ್ನು ಕರೆದುಕೊಂಡು, ಧೌಮ್ಯಾದಿ ವಿಪ್ರರಿಗೆ ವಂದಿಸಿ, ಬೀಳ್ಕೊಡಲನುವಾದನು. "ಧೌಮ್ಯಾಚಾರ್ಯ ! ನಿನ್ನಂತಹ ಪುರೋಹಿತ ನಿಂದ ನಾವು ಪುನೀತರಾದೆವು. ನಿನ್ನ ಆಶೀರ್ಬಲದಿಂದ ಅಜ್ಞಾತವಾಸವನ್ನು ನಿರ್ವಿಘ್ನ ವಾಗಿ ಮುಗಿಸುವೆವು. ನಮ್ಮ ಅಗ್ನಿಹೋತ್ರಗಳನ್ನು ನಿನ್ನ ಆಶ್ರಮದಲ್ಲಿಟ್ಟು ರಕ್ಷಿಸುತ್ತಿರು. ಸೂತಪಾಚಕಾದಿ ಪರಿವಾರದಿಂದ ಕೂಡಿ, ಇಂದ್ರಸೇನಾದಿ ಸಾರಥಿಗಣವು ಶೀಘ್ರವಾಗಿ ದ್ವಾರವತಿಯನ್ನು ಸೇರಿ, ಅಲ್ಲೇ ಇರಲಿ. ದಾಸೀಜನವು ಪಾಂಚಾಲ ಪುರಿಯಲ್ಲಿರಲಿ. ಪಾಂಡವರ ವೃತ್ತವನ್ನು ಕೇಳಿದವರಿಗೆ 'ನಮಗೆ ಗೊತ್ತಿಲ್ಲ' ವೆಂದು ಹೇಳಿರಿ. 'ನಮ್ಮನ್ನು ಬಿಟ್ಟು ದ್ವೈತವನದಿಂದ ತೆರಳಿದ ಪಾಂಡವರ ವೃತ್ತಾಂತವನ್ನು ನಾವರಿಯೆವೆಂದು' ತಿಳಿಸಿರಿ. ನಿಮ್ಮ ದಯೆ ಇರಲಿ !" ಎಂದು ಧರ್ಮರಾಜನು, ಸೂತಾದಿ ಪರಿವಾರವನ್ನು, ಧೌಮ್ಯಾದಿ ವಿಪ್ರರನ್ನು ಬೀಳ್ಕೊಟ್ಟನು.

## ಧೌಮ್ಯೋಪದೇಶ

ಆಗ ಧರ್ಮರಾಜಾದಿಗಳನ್ನು ತನ್ನ ಸಮೀಪದಲ್ಲಿ ಕೂಡಿಸಿಕೊಂಡು ಧೌಮ್ಯನು ಅವರಿಗೆ ಹಿತವನ್ನು ಉಪದೇಶಿಸಿದನು—

ಧರ್ಮರಾಜ! ಕೌರವಕುಲಾಲಂಕಾರರಾಗಿ ಮಹನೀಯ ಶೌರ್ಯ ಔದಾರ್ಯ ಗಾಂಭೀರ್ಯ ವೀರ್ಯಾದಿಗುಣಗಳಿಂದ ವಿರಾಜಿಸುವ ನೀವು ಪರರನ್ನು ಸೇವಿಸುವಾಗ ಸಂಭವಿಸಬಹುದಾದ ಮಾನಾಪಮಾನಗಳಿಗೆ ಎಂತು ಸಹಿಸಿ, ನಿರ್ವಿಕಾರರಾಗಿ ನಿರ್ವಹಿಸುವಿರೋ ಎಂದು ನಾನು ಚಿಂತಿಸುತ್ತಿರುವೆನು. ಒಂದುವೇಳೆ ಪರಿಭವ ಪ್ರಭಂಜನನಿಂದ ನಿಮ್ಮ ವೀರ್ಯಾಗ್ನಿಯು ವಿಜೃಂಭಿಸಿದರೆ ನಿಮ್ಮ ಸ್ವರೂಪವು ಪ್ರಕಟ ವಾಗದಿರುವುದೇ ? ಪ್ರಕಟವಾದರೆ ಮತ್ತೆ ಅರಣ್ಯವಾಸಾದಿ ಕ್ಲೇಶಗಳನ್ನು ಅನುಭವಿಸ ಬೇಕಾದೀತು. ಆದುದರಿಂದ ಕಾಲ ವೈಪರೀತ್ಯವನ್ನರಿತು ಶಾಂತರಾಗಿ ವರ್ತಿಸುವುದು ಉಚಿತವು. ಪ್ರಮಾದಕ್ಕೊಳಗಾಗದೆ, ನಾನು ಪೇಳುವ ತೆರದಿ ಪ್ರವರ್ತಿಸಿ, ಸುಖ ವಾಗಿ ನಿಮ್ಮ ಅಜ್ಞಾತವಾಸವನ್ನು ಮುಗಿಸಿಕೊಂಡು ಬನ್ನಿ ! ರಾಜಸನ್ನಿಧಾನದಲ್ಲಿ ಸೇವಕಜನರು ವರ್ತಿಸುವ ವಿಧಾನವನ್ನು ನೀವರಿಯದಿರುವಿರಿ. ಪರಿಪಾಲನವನ್ನರಿತು

ಪರಿಪಾಲನಕ್ಕೊಳಗಾಗದ ನಿಮಗೆ ಹಿತವಾಗಲು, ನಾನರಿತಂತೆ ಕೆಲ ಮಾತುಗಳನ್ನು ಹೇಳುವೆನು—

ಬ್ರಾಹ್ಮಣರಿಗೆ ವಿಧೇಯರಾಗಿ, ಮಿತ್ರರಿಗೆ ಹಿತಕರರಾಗಿ, ವಿಜಯ ಯಾತ್ರೆಯಲ್ಲಿ ಅಪ್ರಮತ್ತರಾಗಿ, ಶಸ್ತ್ರಾಸ್ತ್ರ ಸಂಗ್ರಹಣದಲ್ಲಿ ಜಾಗರೂಕರಾಗಿ, ಅಗ್ನಿ ಜಲಾದಿವಿಪತ್ತಿನಿಂದ ಎಚ್ಚರವಹಿಸಿ ಇದ್ದವನಿಗೆ ಶ್ರೇಯಸ್ಸಾಗುವುದು. ಅಂತಃಪುರದಲ್ಲಿರುವ ಕೃಷ್ಣೆಯನ್ನು, ಅಲ್ಲೇ ಸಮೀಪಸ್ಥನಾಗಿರುವ ಅರ್ಜುನನು ಕಣ್ಣಿಟ್ಟು ಕಾಪಾಡುತ್ತಿರಬೇಕು. ಎಲ್ಲ ಲೋಕ ವೃತ್ತವನ್ನೂ ಚೆನ್ನಾಗಿ ಅರಿತಿರುವವನಾಗಿರುವೆ! ಆದರೂ ಸುಹೃದ್ಭಾವದಿಂದ ನಾನಾಡುವ ಹಿತನುಡಿಯನ್ನಾಲಿಸಿ, ಅದರಂತೆ ನಡೆ! ಧರ್ಮಾರ್ಥ ಕಾಮಗಳು ಕೆಡದಂತೆ ರಾಜಗೃಹಗಳಲ್ಲಿ ವಾಸಮಾಡುವುದು ಬುದ್ಧಿವಂತನಿಗೆ ಮಾತ್ರ ಸಾಧ್ಯವಾಗಿದೆ. ಮಾನವೆಂದು, ಅವಮಾನವೆಂದು ಹಿಗ್ಗುವುದಾಗಲಿ, ತಗ್ಗುವುದಾಗಲಿ ತರವಲ್ಲ. ಏನೋ ಒಂದು ರೀತಿ ಈ ಅಜ್ಞಾತವತ್ಸರವನ್ನು ಕಳೆಯಿರಿ. ಹದಿನಾಲ್ಕನೆಯ ವರ್ಷವು ಬರಲಿ! ಆಗ ಯುದ್ಧದಲ್ಲಿ ಜಯವನ್ನು ಸಾಧಿಸಿ, ರಾಜ್ಯವಾಳಿ ಸುಖದಿಂದಿರುವಿರಿ! ನಿಮ್ಮಿಂದ ನಮಗೂ ಸುಖವಾಗಲಿ!

ಪ್ರತೀಹಾರಿಯ ದ್ವಾರಾ ಹೇಳಿಕಳಿಸಿ, ರಾಜನ ಅಪ್ಪಣೆ ಪಡೆದು, ಅನಂತರ ಅವನನ್ನು ಕಾಣಬೇಕು. ಅನುಜ್ಞೆ ಪಡೆಯದೆ ಒಳಗೆ ಪ್ರವೇಶಿಸಕೂಡದು. ರಾಜನು ಮಂತ್ರಾಲೋಚನೆ ಮಾಡುವಲ್ಲಿಗೆ, ಅವನಿಗೆ ಸಮ್ಮತವೆಂದು ಧೈರ್ಯದಿಂದ ಒಳಗೆ ಹೋಗಬಾರದು. ರಾಜರು ಮಂತ್ರರಕ್ಷಣ ವಿಷಯದಲ್ಲಿ ಪುತ್ರರನ್ನೂ ನಂಬರೆಂಬ ವಿಷಯವನ್ನು ನೆನಪಿನಲ್ಲಿಡಿ! ಮಂತ್ರ ವಿಪ್ಲವ ಶಂಕೆ ಬಂತೆಂದರೆ ತತ್ಕ್ಷಣವೇ ಅನನುಜ್ಞಾತನನ್ನು ಕೊಲ್ಲಿಸಿಬಿಡುವರು. ಇನ್ನೊಬ್ಬ ರಾಜಾಧಿಕಾರಿಗಾಗಿ ಕಾದಿರಿಸಿಟ್ಟ ಆಸನ ಪೀಠಾದಿಗಳನ್ನು ಎಂದಿಗೂ ಆಕ್ರಮಿಸಬಾರದು. ರಾಜಸಮ್ಮತನೆಂದು ಕೊಬ್ಬಿ, ಇತರರ ಆಸನ, ಪೀಠ, ವಾಹನ, ರಥಗಳನ್ನು ಆರೋಹಿಸಬಾರದು. ದ್ಯೂತಶಾಲೆ, ಪಾನಶಾಲೆ, ವೇಶ್ಯಾಗೃಹ, ನರ್ತನಾಗಾರಗಳಲ್ಲಿ ಕೂತಿರಬಾರದು. ದ್ಯೂತಪ್ರಿಯ, ಪಾನಮತ್ತನೆಂದು ರಾಜನ ಮುಂದೆ ಅಪನಿಂದೆ ಹೊರಿಸಲು ಹೆದರದ ದುಷ್ಟಚಾರರಿಂದ ಜಾಗರೂಕನಾಗಿರಬೇಕು. ವೇಶ್ಯೆಯರಲ್ಲಿದ್ದರೆ ಪರರಾಜರಿಂದ ಧನಾದಿಗಳನ್ನು ಸ್ವೀಕರಿಸಿ, ರಾಜಕಾರ್ಯವನ್ನು ಮದ್ಯಮತ್ತನಾಗಿ ಹೊರಗೆಡಹುವನೆಂಬ ದೂರಿಗೆ ಗುರಿಯಾಗಿ, ಪ್ರಾಣಕ್ಕೆ ಎರವಾಗಬೇಕಾದೀತು. ನರ್ತನಶಾಲಾರತನು ನಟ ವಿಟ ಗಾಯಕರ ಸಹವಾಸದಿಂದ ಶೀಲಭ್ರಷ್ಟನಾಗಿ ರಾಜಮನ್ನಣೆಗೆ ದೂರನಾಗುವನು.

ಕೇಳಿದಾಗ ಮಾತ್ರ ರಾಜನಿಗೆ ಸಲಹೆಯನ್ನು ಕೊಡಬಹುದು. ತಾನಾಗಿ ಉಪದೇಶಿಸುವವನು ರಾಜಾವಮಾನ ಮಾಡಿದವನಂತಾಗಿ ಶಿಕ್ಷಾರ್ಹನೆನಿಸುವನು. ಪರಾಕ್ರಮಿಸಿ ರಾಜಾದಿಗಳನ್ನು ರಕ್ಷಿಸಿ, ಕೊಚ್ಚಿಕೊಳ್ಳದಿರುವವನು ರಾಜಾದರಕ್ಕೆ ಪಾತ್ರನಾಗುವನು. ಕೇಳಕೇಳದವನು ರಾಜಾಗ್ರಹಕ್ಕೆ ಪಾತ್ರನಾಗುವನು. ಸಮಯ

ವನ್ನರಿತು ರಾಜಗುಣ ಪ್ರಶಂಸೆಯನ್ನು ಮೃದುವಾಗಿ ನುಡಿದವನು ರಾಜನಿಗೆ ಸ್ನೇಹಿತನಾಗುವನು.

ಮೃಷಾವಾದಿ ಜನರನ್ನು ನೋಡಿ ರಾಜರು ಅಸೂಯೆಪಡುವರು. ಮಂತ್ರಿಗಳು ಸುಳ್ಳಾಡಿದರೆ ಅವರಿಗೆ ಅವಮರ್ಯಾದೆ ಅಥವಾ ಪದವಿನಾಶ ಕಾದಿದೆ ಎಂದು ತಿಳಿ. ರಾಜಸ್ತ್ರೀಯರನ್ನು, ಅಂತಃಪುರ ಪರಿಚಾರಿಕೆಯರನ್ನು ಕಣ್ಣೆತ್ತಿ ನೋಡುವುದಾಗಲಿ, ಅವರೊಡನೆ ಸಲಿಗೆಯಿಂದ ವರ್ತಿಸುವುದಾಗಲಿ ಕೂಡದು. ಅದು ಪ್ರಾಣಾಂತಕವಾಗಿದೆ. ರಾಜದ್ವೇಷಿಗಳ ಕೂಡ ಮೈತ್ರಿ ಸಲ್ಲದು. ಅವರ ಮಿತ್ರರಿಂದಲು ಸ್ನೇಹ ಒಳಿತಲ್ಲ. ಸಣ್ಣ ಕೆಲಸವನ್ನಾದರೂ ರಾಜನಿಗೆ ತಿಳಿಯುವಂತೆ ಮಾಡಿದರೆ, ಆದರಿಂದ ಪ್ರಭುವು ಪ್ರೀತನಾಗುವನು. ದೊಡ್ಡ ಉಪಕೃತಿಯನ್ನಾದರೂ ಅಪ್ಪಣೆ ಪಡೆಯದೆ ಮಾಡಿದವನು ರಾಜಧಿಕ್ಕಾರವನ್ನು ಮಾಡಿದವನಂತೆ ಅವಮಾನಿತನಾಗುವನು.

ಉತ್ಕೃಷ್ಟ ಪದವಿಯನ್ನು ಹೊಂದಿದ್ದರೂ, ಸಭಾಪ್ರವೇಶವನ್ನು ಮಾಡಿದ ತತ್‌ಕ್ಷಣ, ತನ್ನದೇ ಎಂಬ ಕಾರಣದಿಂದ ತನ್ನ ಆಸನದಲ್ಲಿ ಕೂಡಲಾಗದು. ಅಂಥನಂತೆ ಅತ್ತ ಗಮನ ಕೊಡದೆ ನಿಂತಿದ್ದು, ರಾಜಾಜ್ಞೆಯನ್ನು ಪಡೆದಮೇಲೆ ಆಸೀನನಾಗಬೇಕು. ಪುತ್ರನಾಗಲಿ, ಸೋದರನೇ ಆಗಲಿ, ಮರ್ಯಾದೆಯನ್ನು ಮೀರಿ ನಡೆದರೆ ರಾಜರು ಅವನನ್ನು ಕ್ಷಮಿಸುವುದಿಲ್ಲ. ಅಗ್ನಿಯನ್ನಂತೆ ದೂರದಿಂದ, ದೇವತೆಯನ್ನಂತೆ ಗೌರವದಿಂದ, ಸಿಂಹವನ್ನಂತೆ ಭಯದಿಂದ, ವಿಷ್ಣುವಿನನ್ನಂತೆ ಭಕ್ತಿಯಿಂದ ಸೇವಿಸುವ ನರನು ರಾಜಕೃಪೆಗೆ ಪಾತ್ರನಾಗುವನು. ಕೂಟನೀತಿಯಿಂದ ಸೇವಿಸುವ ದಡ್ಡರನ್ನು ಮೊದಲು ಸನ್ಮಾನಿಸಿದರೂ, ನಿಜವನ್ನರಿತಮೇಲೆ ಬಿಡದೆ ಸಂಹರಿಸುವರು ನರಪಾಲರು.

ರಾಜನ ಅನುಜ್ಞೆಯನ್ನು ಪಡೆಯದೆ ಯಾವ ವಸ್ತುವನ್ನೂ ವಿನಿಯೋಗಿಸಲಾಗದು. ಅದು ಸಭಾಮರ್ಯಾದೆ. ಪ್ರಮಾದವನ್ನು ಮಾಡದೆ, ಗರ್ವಪಡದೆ, ಕೋಪಕ್ಕೊಳಗಾಗದೆ ಸೇವಿಸುವ ಭೃತ್ಯನು ಸುಖಿಸುವನು. ಕಾರ್ಯ-ಅಕಾರ್ಯ ಪರೀಕ್ಷಣೆ ನಡೆದಾಗ ರಾಜನಿಂದ ಕೇಳಲ್ಪಟ್ಟವನಾಗಿ ಹಿತವನ್ನು ಪ್ರಿಯವನ್ನು ತಿಳಿದು ನುಡಿಯಬೇಕು. ಪ್ರಿಯವಲ್ಲದಿದ್ದರೂ ಹಿತವಾದುದಾದರೆ ಹಿತವನ್ನೇ ತಿಳಿಸಿಕೊಡಬೇಕು. ಹಿತವಿರೋಧಿಯಾದ ಪ್ರಿಯವಚನವು ಅನರ್ಥಾಪಾದಕವಾಗಿದೆ. ರಾಜನ ಅರ್ಥಸಾಧನೆಯಲ್ಲಿ ಸರ್ವಪ್ರಕಾರದಿಂದಲು ಯತ್ನಶೀಲನಾಗಿ, ಅನುಕೂಲನಾಗಿ ಮಾತಾಡಬೇಕು. ರಾಜ-ಹಿತವನ್ನು ಪ್ರಮಾದಾಲಸ್ಯಗಳಿಲ್ಲದೆ ಸಾಧಿಸಬೇಕು. ಅಪ್ರಿಯವು ಅಹಿತವು ಆದ ವಚನವನ್ನೆಂದಿಗೂ ನುಡಿಯಲಾಗದು. ಹಿತವನ್ನು ಪ್ರಿಯವನ್ನು ಮಾಡುತ್ತಾ, ಮಾಡಿದ್ದನ್ನು ದಂಭವಿಲ್ಲದೆ ತಿಳಿಸುತ್ತಾ, ಪ್ರಿಯನೆಂದು ಪ್ರಮತ್ತನಾಗದೆ ಇರುವ ರಾಜಸೇವಕನು ಸರ್ವಶ್ರೇಯಃ ಪಾತ್ರನಾಗುವನು. ರಾಜನಿಗೆ ಇಷ್ಟವಲ್ಲದ ವಸನ ಭೂಷಣ, ಸುಮ ಭೋಜನಗಳನ್ನು ಮುಟ್ಟದೆ, ಅವನ ಅಹಿತರಿಂದ ಮಾತಾಡದೆ, ಅವನಿತ್ತ ಪದದಿಂದ ಚಲಿಸದೆ ಇರುವ ನರನು ರಾಜಸೇವೆಯ ಸವಿಯನ್ನು ಕಂಡು ಸುಖಿಸುವನು.

*

ಸಭೆ ನೆರೆದಾಗ ರಾಜನ ಎಡಬಲದ ಪಾರ್ಶ್ವಗಳಲ್ಲಿ ಅವನಿಗೆ ಕಾಣುವಂತೆ ಸ್ವಲ್ಪ ದೂರದಲ್ಲಿ ಕೂಡಬೇಕು. ಅವನ ಹಿಂದೆ ಆತ್ತಶಸ್ತ್ರರಾದ ಅಂಗರಕ್ಷಕರಿಗೆ ಮಾತ್ರ ಸ್ಥಾನ. ರಾಜನ ಎದುರಿನಲ್ಲಿ ಯಾರೂ ಕೂಡಲಾಗದು. ವೇತನಾದಿಗಳನ್ನು ಸ್ವೀಕರಿಸುವಾಗಲೂ ರಾಜಾಧಿಕಾರಿಯು ಕರೆದಾಗ ಎದ್ದು ಬಂದು, ರಾಜ ಸಮ್ಮುಖದಿ ವಿನಯದಿಂದ ನಿಂತು, ವೇತನವನ್ನು ಸ್ವೀಕರಿಸಬೇಕು. ಧಾರ್ಷ್ಟ್ಯವನ್ನು ಸಾಮಾನ್ಯರೇ ಸಹಿಸರೆಂದಮೇಲೆ ರಾಜರು ಸುತರಾಂ ಸಹಿಸರು. ರಾಜನು ಹೇಳಿದ ಮಾತು, ಸುಳ್ಳಾಗಿದ್ದರೂ, ಸರಿಯಲ್ಲದಿದ್ದರೂ, ಅದನ್ನು ಹೊರಗೆಡಹಬಾರದು. 'ಇದು ಉತ್ತಮವಲ್ಲ' ಎಂದು ನುಡಿದ ರಾಜನು, 'ಇದು ಉತ್ತಮ' ಎಂದು ಪ್ರಕಟಿಸುವ ಭೃತ್ಯನನ್ನು ಶಿಕ್ಷಿಸದಿರನು.

ರಾಜರು ಅನೃತವಾದಿಗಳನ್ನು, ಪಂಡಿತಮಾನಿಗಳನ್ನು ಮೆಚ್ಚರು. ಶೂರನಲ್ಲ, ಬುದ್ಧಿವಂತನೂ ಅಲ್ಲ; ರಾಜನಿಗೆ ಪ್ರಿಯರಾದವರೇ ಸುಖಿಸುವರು. ರಾಜನಿಂದ ಸಿರಿ ಸಂಪತ್ತುಗಳನ್ನು ಪೊಂದಿ, ಎಚ್ಚರವಿಲ್ಲದೆ ಅಪಚರಿಸಿದವನು ಸಿರಿಗೆ ಎರವಾಗಿ ಕಷ್ಟಪಡುವನು. ಯಾವನ ದಯವು ಮಹಾಫಲಕಾರಿಯೋ, ಯಾವನ ಕೋಪವು ಪ್ರಾಣಾದಿ ಸರ್ವಹಾರಿಯೋ, ಅಂತಹ ರಾಜನಿಗೆ ಮನಸಾಪಿ ಅನರ್ಥವನ್ನೆಣಿಸಲಾಗದು; ಎಣಿಸಿ ಬದುಕಲಾಗದು; ಬದುಕಿ ಸುಖ ಪಡಲಾಗದು. ರಾಜನಿಂದ ಮಾತಾಡುವಾಗ ತುಟಿಗಳನ್ನಲುಗಿಸುವುದು, ಭುಜಗಳನ್ನು ಹಾರಿಸುವುದು, ಕಣ್ಣರೆಪ್ಪೆ ಬಡಿಯುವುದು, ಕೂಡದು. ಸಭೆಯಲ್ಲಿ ವಾತವಿಸರ್ಜನ, ನಿಷ್ಠೀವನ, ಮಾಡಬಾರದು. ಕೆಮ್ಮು, ಆಕಳಿಕೆ, ತೂಕಡಿಕೆ, ನಗುವು—ಇವುಗಳನ್ನು ಪರಿವರ್ಜಿಸಬೇಕು. ಹುಚ್ಚನಂತೆ ಗಟ್ಟಿಯಾಗಿ ನಕ್ಕರೆ ರಾಜನು ಮೆಚ್ಚನು. ಇತರ ರಾಜಸೇವಕರು ಉಷ್ಣೀಷಾದಿ ವೇಷ ವಿಕಾರರಾಗಿದ್ದರೂ, ರಾಜನು ನೋಡಿ ನಕ್ಕರೆ, ತಾನು ಮಂದಸ್ಮಿತಮಾತ್ರವಾಗಿ ಹಾಸವನ್ನು ತೋರಬೇಕು. ಗಟ್ಟಿಯಾಗಿ ನಕ್ಕವನು ಕ್ಷುದ್ರನೆನಿಸುವನು; ಸುಮ್ಮನಿದ್ದವನು ಜಡನೆನಿಸುವನು; ಕಿರುನಗೆಯಿಂದ ಗೌರವಪಾತ್ರನಾಗುವನು. ರಾಜನಿತ್ತ ದ್ರವ್ಯಾದಿ ಗೌರವದಿಂದ ಸಂತೋಷಪಟ್ಟವನು, ಅವನಿಂದ ಅವಮಾನಿತನಾದಾಗ ವ್ಯಥೆಯನ್ನೂ ಪಡದಿರಲು ಕಲಿತಿರಬೇಕು. ರಾಜನನ್ನು, ರಾಜಪುತ್ರನನ್ನು ಮೃದುವಾಗಿ ಪ್ರಶಂಸಿಸಲು ಕಲಿತವನು, ಬೇಗನೆ ರಾಜಮಂತ್ರಿಯೋ, ಆಸ್ಥಾನ ಪಂಡಿತನೋ ಆಗುವನು. ಒಂದುವೇಳೆ ಕುಪಿತನಾದ ರಾಜನು ಸಂಪತ್ತನ್ನು ಕಸಿದರೆ, ಮುನಿಯದೆ ಮತ್ತೆ ಸೇವಿಸುವ ನಿರ್ವಿಕಾರನು ಮತ್ತೆ ಸಂಪತ್ತನ್ನು ಹೊಂದಿ, ಇನ್ನೂ ಹೆಚ್ಚು ರಾಜಾದರಕ್ಕೆ ಪಾತ್ರನಾಗುವನು. ರಾಜನ ದೇಶದಲ್ಲಿದ್ದು, ರಾಜನಿತ್ತ ಧನದಿಂದ ಜೀವಿಸುವ ನರನು, ರಾಜನನ್ನು ಪೊಗಳದಿದ್ದರೆ ಅವನ ಜೀವಿಕೆಯು ಹಾಳಾಗಿ, ಜೀವನವೇ ದುಸ್ತರವಾದೀತು! ಅಮಾತ್ಯ ಸೇನಾನಾಯಕರು ರಾಜವಿರೋಧಿಗಳಾದರೆ, ಅವರು ಸ್ಥಾನಚ್ಯುತರಾಗುವುದಲ್ಲದೆ, ಪ್ರಾಣಸಂಶಯದಲ್ಲಿ ತೊಳಲಾಡುವರು. ಆದುದರಿಂದ ರಾಜ್ಯವಸತಿಯನ್ನು, ಸುಖಜೀವನವನ್ನು ಬಯಸುವ

ನರನು ರಾಜಭಕ್ತನಾಗಿರಬೇಕು ; ರಾಜಶತ್ರುಗಳಿಂದ ಕಲೆತಿರಬಾರದು, ತನ್ನ ರಾಜನನ್ನು ಸಮಯುವರಿತು ಪ್ರಶಂಸಿಸಿ, ಸೇವಿಸಬೇಕು.

ಉತ್ಸಾಹ ಬಲ ಸಮನ್ವಿತನು, ಬುದ್ಧಿವಂತನು, ಸತ್ಯವಚನನು, ಶೂರನು, ಅನುಸರಣಶೀಲನು, ನಿಷ್ಠುರವಚನರಹಿತನು, ಜಿತೇಂದ್ರಿಯನು ಆದ ನರನು ರಾಜಸೇವೆಯನ್ನು ಮಾಡಲು ಅರ್ಹನೆನಿಸುವನು. ಇನ್ನೊಬ್ಬರಿಗೆ ನಿಯಮಿಸುವ ಕಷ್ಟಕಾರ್ಯವನ್ನರಿತು, ಯತ್ನದಿಂದ ಸಾಧಿಸಿದವನು ರಾಜಪ್ರೀತಿಯನ್ನು ಗಳಿಸುವನು. ಧನ ದಾರ ರಕ್ಷಣಾದಿ ಆಂತರಿಕ ವ್ಯಾಪಾರಗಳಲ್ಲಿಯು, ಸಾಮಂತಜಯ ಪ್ರಜಾರಕ್ಷಣಾದಿ ಬಾಹ್ಯ ವ್ಯಾಪಾರಗಳಲ್ಲಿಯು ನಿಯಮಿತನಾಗಿ, ಸಂಶಯ ಭಯಗಳಿಗೆಡೆಗೊಡದೆ, ನಿರ್ವಿಕಾರನಾಗಿ ಪ್ರವರ್ತಿಸುವವನು ರಾಜಪ್ರೀತಿ ವಿಷಯನಾಗುವನು. ರಾಜಕಾರ್ಯಾಸಕ್ತನಾಗಿ ಪ್ರವಾಸದಲ್ಲಿದ್ದು, ಮನೆ ಮಡದಿ ಮಕ್ಕಳನ್ನು ನೆನೆಯದೆ, ದುಃಖಗಳು ಕವಿದಾಗ ಬಾಯಿಬಿಡದೆ, ಅನ್ನಪಾನ ಶಯನಾದಿ ಸೌಖ್ಯಗಳನ್ನಾಶಿಸದೆ ಇರಬಲ್ಲವನು ರಾಜಪ್ರೀತಿಪಾತ್ರನಾಗುವನು.

ರಾಜನಂತೆ ವಸ್ತ್ರಾಲಂಕಾರಾದಿಗಳನ್ನು ಧರಿಸಬೇಕಾಗಲಿ, ರಾಜನಷ್ಟಲ್ಲ; ಅಷ್ಟು ಅನರ್ಘಗಳನ್ನೂ ಧರಿಸಬಾರದು. ರಾಜನು ಕೂತಕಡೆಗೆ ಮೇಲ್ಗಡೆ ಇರಲಾಗದು. ಮಂತ್ರಾಲೋಚನೆ ಮಾಡುವಾಗ ಮೆಲ್ಲಗೆ ಮಾತಾಡುವವನು ರಾಜಪ್ರೀತಿ ವಿಷಯನಾಗುವನು. ಕಾರ್ಯವನ್ನು ಮಾಡಿ, ರಾಜನಿತ್ತ ಪ್ರತಿಫಲವನ್ನು ಮುಟ್ಟದೆ, ಬಲಾತ್ಕರಿಸಿ ಕೊಟ್ಟುದುದನ್ನು ಮಾತ್ರ ಸ್ವೀಕರಿಸುವುದೊಳಿತಾಗಲಿ, ರಾಜದ್ರವ್ಯವನ್ನು ಕೈಗೆ ಸಿಕ್ಕಿದೆ ಎಂದು ಅಪಹರಿಸಿದವನು, ಕಾರಾಗಾರವನ್ನೋ ಅಥವಾ ಯಮಾಗಾರವನ್ನೋ ಕಾಣುವನು. ರಾಜನಿತ್ತ ಯಾನವನ್ನು, ವಸ್ತ್ರಭೂಷಣಗಳನ್ನು ಉಪಯೋಗಿಸುತ್ತಾ ನರನು ರಾಜನ ಪ್ರೀತಿಗೆ ಪಾತ್ರನಾಗುವನು. ಇಂತು ಧರ್ಮರಾಜ ! ರಾಜವಸತಿಯ ಮರ್ಮವನ್ನು ನಿನಗರುಹಿದೆನು. ಇದರಂತೆ ಒಂದು ವರ್ಷ ನಡೆದು, ಅಜ್ಞಾತವಾಸದಿಂದ ಪಾರಾಗಿ ಬನ್ನಿ ! ನಿಮಗೆ ಶುಭವಾಗಲಿ ! —ಎಂದು ಹರಸಿ, ಧೌಮ್ಯನು 'ಪಾಂಡುಪುತ್ರರೇ! ಹೋಗಿಬನ್ನಿ!' ಎಂದು ಬಿಡಲಾರದೆ ಬಿಟ್ಟು, ಕಳಿಸಿದನು.

ಧರ್ಮರಾಜನು, 'ಸ್ವಾಮೀ! ನಿನ್ನ ಉಪದೇಶವನ್ನು ಮರೆಯದೆ ನಡೆಸುವೆವು. ನಮಗೆ ಕುಂತಿಯು ತಾಯಿ, ವಿದುರನು ಚಿಕ್ಕಪ್ಪನು. ಅವರೀರ್ವರಂತೆ ನೀವೂ ಗುರುಗಳಾಗಿರುವಿರಿ. ಬ್ರಾಹ್ಮಣರಿಂದ ನಮಗೆ ಶ್ರೇಯಸ್ಸಾಗಬೇಕಾಗಿದೆ. ನೀನು, ಇತರ ವಿಪ್ರರು ನಮ್ಮ ವ್ಯಸನತರಣಕ್ಕೆ ತಕ್ಕ ಜಪ ತಪ ಹೋಮಗಳನ್ನು ಮಾಡಿ, ನಮ್ಮನ್ನು ಕಾಪಾಡಿ ಎಂದು ಅವರಿಗೆ ವಂದಿಸಿದನು.

ಪಾಂಡವರ ವಿಜಯಕ್ಷೇಮಗಳನ್ನು ಬಯಸಿ, ಧೌಮ್ಯನು ಅಗ್ನಿಹೋತ್ರಗಳಲ್ಲಿ ಆಹುತಿಗಳನ್ನಿತ್ತು ಅಗ್ನಿಗಳಿಂದ ಕೂಡಿ ತನ್ನ ಆಶ್ರಮಕ್ಕೆ ತೆರಳಿದನು. ಇಂದ್ರಸೇನಾದಿ ಸಾರಥಿಗಳು ರಥಾಶ್ವಗಳಿಂದ ದ್ವಾರಕೆಗೆ ಹೋಗಿ, ಅಲ್ಲೇ ಸುಖವಾಗಿದ್ದರು.

ಪರಿಪಾಲನಕ್ಕೊಳಗಾಗದ ನಿಮಗೆ ಹಿತವಾಗಲು, ನಾನರಿತಂತೆ ಕೆಲ ಮಾತುಗಳನ್ನು ಹೇಳುವೆನು—

ಬ್ರಾಹ್ಮಣರಿಗೆ ವಿಧೇಯರಾಗಿ, ಮಿತ್ರರಿಗೆ ಹಿತಕರರಾಗಿ, ವಿಜಯ ಯಾತ್ರೆಯಲ್ಲಿ ಅಪ್ರಮತ್ತರಾಗಿ, ಶಸ್ತ್ರಾಸ್ತ್ರ ಸಂಗ್ರಹಣದಲ್ಲಿ ಜಾಗರೂಕರಾಗಿ, ಅಗ್ನಿ ಜಲಾದಿವಿಪತ್ತಿನಿಂದ ಎಚ್ಚರವಹಿಸಿ ಇದ್ದವನಿಗೆ ಶ್ರೇಯಸ್ಸಾಗುವುದು. ಅಂತಃಪುರದಲ್ಲಿರುವ ಕೃಷ್ಣೆಯನ್ನು, ಅಲ್ಲೇ ಸಮೀಪಸ್ಥನಾಗಿರುವ ಅರ್ಜುನನು ಕಣ್ಣಿಟ್ಟು ಕಾಪಾಡುತ್ತಿರಬೇಕು. ಎಲ್ಲ ಲೋಕ ವೃತ್ತವನ್ನೂ ಚೆನ್ನಾಗಿ ಅರಿತಿರುವವನಾಗಿರುವೆ ! ಆದರೂ ಸುಹೃದ್ಭಾವದಿಂದ ನಾನಾಡುವ ಹಿತನುಡಿಯನ್ನಾಲಿಸಿ, ಅದರಂತೆ ನಡೆ ! ಧರ್ಮಾರ್ಥ ಕಾಮಗಳು ಕೆಡದಂತೆ ರಾಜಗೃಹಗಳಲ್ಲಿ ವಾಸಮಾಡುವುದು ಬುದ್ಧಿವಂತನಿಗೆ ಮಾತ್ರ ಸಾಧ್ಯವಾಗಿದೆ. ಮಾನವೆಂದು, ಅವಮಾನವೆಂದು ಹಿಗ್ಗುವುದಾಗಲಿ, ತಗ್ಗುವುದಾಗಲಿ ತರವಲ್ಲ. ಏನೋ ಒಂದು ರೀತಿ ಈ ಅಜ್ಞಾತವತ್ಸರವನ್ನು ಕಳೆಯಿರಿ. ಹದಿನಾಲ್ಕನೆಯ ವರ್ಷವು ಬರಲಿ ! ಆಗ ಯುದ್ಧದಲ್ಲಿ ಜಯವನ್ನು ಸಾಧಿಸಿ, ರಾಜ್ಯವಾಳಿ ಸುಖದಿಂದಿರುವಿರಿ ! ನಿಮ್ಮಿಂದ ನಮಗೂ ಸುಖವಾಗಲಿ !

ಪ್ರತೀಹಾರಿಯ ದ್ವಾರಾ ಹೇಳಿಕಳಿಸಿ, ರಾಜನ ಅಪ್ಪಣೆ ಪಡೆದು, ಅನಂತರ ಅವನನ್ನು ಕಾಣಬೇಕು. ಅನುಜ್ಞೆ ಪಡೆಯದೆ ಒಳಗೆ ಪ್ರವೇಶಿಸಕೂಡದು. ರಾಜನು ಮಂತ್ರಾಲೋಚನೆ ಮಾಡುವಲ್ಲಿಗೆ, ಅವನಿಗೆ ಸಮ್ಮತವೆಂದು ಧೈರ್ಯದಿಂದ ಒಳಗೆ ಹೋಗಬಾರದು. ರಾಜರು ಮಂತ್ರರಕ್ಷಣ ವಿಷಯದಲ್ಲಿ ಪುತ್ರರನ್ನೂ ನಂಬರೆಂಬ ವಿಷಯವನ್ನು ನೆನಪಿನಲ್ಲಿಡಿ ! ಮಂತ್ರ ವಿಪ್ಲವ ಶಂಕೆ ಬಂತೆಂದರೆ ತತ್‌ಕ್ಷಣವೇ ಅನನುಜ್ಞಾತನನ್ನು ಕೊಲ್ಲಿಸಿಬಿಡುವರು. ಇನ್ನೊಬ್ಬ ರಾಜಾಧಿಕಾರಿಗಾಗಿ ಕಾದಿರಿಸಿಟ್ಟ ಆಸನ ಪೀಠಾದಿಗಳನ್ನು ಎಂದಿಗೂ ಆಕ್ರಮಿಸಬಾರದು. ರಾಜಸಮ್ಮತನೆಂದು ಕೊಬ್ಬಿ, ಇತರರ ಆಸನ, ಪೀಠ, ವಾಹನ, ರಥಗಳನ್ನು ಆರೋಹಿಸಬಾರದು. ದ್ಯೂತಶಾಲೆ, ಪಾನಶಾಲೆ, ವೇಶ್ಯಾಗೃಹ, ನರ್ತನಾಗಾರಗಳಲ್ಲಿ ಕೂತಿರಬಾರದು. ದ್ಯೂತಪ್ರಿಯ, ಪಾನಮತ್ತನೆಂದು ರಾಜನ ಮುಂದೆ ಅಪನಿಂದೆ ಹೊರಿಸಲು ಹೆದರಿದ ದುಷ್ಟಚಾರರಿಂದ ಜಾಗರೂಕನಾಗಿರಬೇಕು. ವೇಶ್ಯೆಯರಲ್ಲಿದ್ದರೆ ಪರರಾಜರಿಂದ ಧನಾದಿಗಳನ್ನು ಸ್ವೀಕರಿಸಿ, ರಾಜಕಾರ್ಯವನ್ನು ಮದ್ಯಮತ್ತನಾಗಿ ಹೊರಗೆಡಹುವನೆಂಬ ದೂರಿಗೆ ಗುರಿಯಾಗಿ, ಪ್ರಾಣಕ್ಕೆ ಎರವಾಗಬೇಕಾದೀತು. ನರ್ತನಶಾಲಾರತನು ನಟ ವಿಟ ಗಾಯಕರ ಸಹವಾಸದಿಂದ ಶೀಲಭ್ರಷ್ಟನಾಗಿ ರಾಜಮನ್ನಣೆಗೆ ದೂರನಾಗುವನು.

ಕೇಳಿದಾಗ ಮಾತ್ರ ರಾಜನಿಗೆ ಸಲಹೆಯನ್ನು ಕೊಡಬಹುದು. ತಾನಾಗಿ ಉಪದೇಶಿಸುವವನು ರಾಜಾವಮಾನ ಮಾಡಿದವನಂತಾಗಿ ಶಿಕ್ಷಾರ್ಹನೆನಿಸುವನು. ಪರಾಕ್ರಮಿಸಿ ರಾಜಾದಿಗಳನ್ನು ರಕ್ಷಿಸಿ, ಕೊಚ್ಚಿಕೊಳ್ಳದಿರುವವನು ರಾಜಾದರಕ್ಕೆ ಪಾತ್ರನಾಗುವನು. ಕೊಚ್ಚಿಕೊಂಡವನು ರಾಜಾಗ್ರಹಕ್ಕೆ ಪಾತ್ರನಾಗುವನು. ಸಮಯ

ಾಂಡವರು ದ್ರೌಪದೀ ದೇವಿಯಿಂದ ಕೂಡಿ, ವಿರಾಟನಗರದ ಮಾರ್ಗವನ್ನು ಹಿಡಿದು, ಿರಾತವೇಷದಿಂದ ಸಂಚರಿಸುತ್ತಾ, ಪರರಿಗೆ ಗೊತ್ತಾಗದಂತೆ ಮತ್ಸ್ಯದೇಶವನ್ನು ಹೊಕ್ಕು, ಕೊನೆಗೆ ವಿರಾಟಪುರಿಯನ್ನು ಸೇರಪೋದರು.

## ಆಯುಧ ಸಂಗೋಪನ—ದುರ್ಗಾ ಸ್ತವನ

ಪಾಂಡವರು ಕಾಳಿಂದಿಯ ದಕ್ಷಿಣತೀರವನ್ನವಲಂಬಿಸಿ ಪಶ್ಚಿಮಾಭಿಮುಖರಾಗಿ ಪ್ರಯಾಣಿಸಿದರು. ನಾನಾ ಮೃಗವಧ ವಿಹಾರದಿಂದ ಆಹಾರವನ್ನು ಸಂಪಾದಿಸಿ ವನಗಳನ್ನು ದಾಟಪೋದರು. ಅನೇಕ ವೃಕ್ಷಲತೆಗಳ ಕುಸುಮ ಸುಗಂಧವನ್ನು ಹೊತ್ತು ಬರುವ ಮಂದ ಮಾರುತನು ಅವರ ಶ್ರಮೆಯನ್ನು, ವೃಕ್ಷಗಳು ತಮ್ಮ ರಸಭರಿತ ಫಲಗಳಿಂದ ಅವರ ಹಸಿವನ್ನು ನಿವಾರಿಸುತ್ತಿರಲು, ಪಾಂಡವರು ಕಾನನಮಾರ್ಗಗಳನ್ನನುಸರಿಸಿ ಮತ್ಸ್ಯ ಮಹೀಖಂಡವನ್ನು ಸೇರಿದರು. ನಗರಪ್ರವೇಶಮಾಡದೆ, ಅಡವಿಯ ಮಾರ್ಗದಿಂದ ಪ್ರಯಾಣಿಸುವ ಪಾಂಡವರು, ಕೇಳಿದವರಿಗೆ ವ್ಯಾಧರೆಂದು ಹೇಳುತ್ತಾ ಮುಂದೆ ಸಾಗುತ್ತಿದ್ದರು. ಖಡ್ಗಗಳನ್ನು ಕಟಿಯಲ್ಲಿ ಕಟ್ಟಿ ಗೋಧಾಂಗುಳಿತ್ರಾಣಗಳನ್ನಿಟ್ಟು, ಬಿಲ್ಲು ಬತ್ತಳಿಕೆಗಳನ್ನು ಧರಿಸಿ ಶ್ಮಶ್ರುಬಹುಲರಾಗಿರುವ ಮಹಾವೀರರು, ಬೂದಿಯಲ್ಲಡಗಿದ್ದ ಕೆಂಡದಂತೆ ಗುಪ್ತರಾಗಿ, ಕಿರಾತರಂತೆ ಕಾಣುತ್ತಿದ್ದರು.

ಆಗ ಪಾಂಚಾಲಿಯು ಮಾರ್ಗಾಯಾಸದಿಂದ ನೊಂದು ಮುಂದೆ ಹೆಜ್ಜೆ ಇಡಲಾರದೆ ಇಂತೆಂದಳು–'ಬಹುಶ್ರಮವಾಗಿದೆ. ನೀರಡಿಕೆ ತಡೆಯಲಾರದಿರುವೆನು. ನಡೆದು, ನಡೆದು ಕಾಲ ಬೆರಳ ತುದಿಯಲ್ಲಿ ನೆತ್ತರು ಒತ್ತಿಬಂದಿದೆ. ಚಿತ್ತವು ಅವಶವಾಗಿದೆ. ಇನ್ನು ವಿರಾಟಪುರಿಯು ಎಷ್ಟು ದೂರವೋ ಕಾಣೆನು. ಮುಂದೆ ಹೆಜ್ಜೆಯನ್ನೆತ್ತಿ ಇಡಲಾರದಿರುವೆನು. ಏನುಮಾಡಲಿ!' ಇಂತು ನುಡಿದ ಕಾಂತೆಯ ಮಾತನ್ನಾಲಿಸಿ, ಮನದಿ ಚಿಂತಿಸಿ, ಧರ್ಮರಾಜನು ಅರ್ಜುನನನ್ನು ಕರೆದಿಂತೆಂದನು. 'ವತ್ಸ ! ದ್ರುಪದನಂದನೆ ಬಳಲಿರುವಳು. ಬಹುದೂರ ನಡೆದು ಬಂದೆವು. ಇಂದೇ ವಿರಾಟಪುರಿಯನ್ನು ಸೇರಬೇಕಾಗಿದೆ. ನಕುಲನೂ ಬಳಲಿ ಮೆಲ್ಲನೆ ನಡೆದುಬರುತ್ತಿರುವನು. ನಾವೆಲ್ಲರೂ ಆಯಾಸಪಟ್ಟಿರುವೆವು ; ಮಧ್ಯಮಾರ್ಗದಿ ನಿಲ್ಲಲು ಸರಿಯಾದ ತಾಣವಿಲ್ಲ. ನೀನಿವಳನ್ನು ವಹಿಸಿ, ರಾಜನಗರದ ಸಮೀಪವನ್ನು ಸೇರಿಸು !' ಆ ಮಾತಿನಂತೆ ಅರ್ಜುನನು ಕುಸುಮ ಕೋಮಲಿಯನ್ನು ವಹಿಸಿ ನಡೆದುಬಂದನು. ವಿರಾಟನಗರವು ದೃಗ್ಗೋಚರವಾಯಿತು. ಅಲ್ಲಿ ಒಂದೆಡೆ ಕೂತು, ಧರ್ಮರಾಜನು ಸೋದರರಿಗೆ ಇಂತೆಂದನು—'ಸಿಂಪಸಂಹನನ ಶರೀರಗಳು, ವಹಿಸಿರುವ ಕೋದಂಡಾದ್ಯಾಯುಧಗಳನ್ನು ನೋಡಿ ನಮ್ಮನ್ನು ಪಾಂಡವರೆಂದು ಜನರು ತಿಳಿಯಬಹುದು. ಗಾಂಡೀವ ಧನಸ್ಸು, ಭೀಮಗದೆ—ಇವೇ ಹೇಳದೆ ಹೇಳುತ್ತಿರಲು ನಾವು ಪ್ರಕಟರಾಗದಿರುವ ಬಗೆ ಹೇಗೆ ? ಪ್ರಕಟವಾದರೆ ಮತ್ತೆ ಹನ್ನೆರಡು ವರ್ಷದ ಅರಣ್ಯವಾಸವು ತಪ್ಪುವುದಿಲ್ಲ, ಆಯುಧಗಳನ್ನು ಧರಿಸಿ ನಗರವನ್ನು ಪ್ರವೇಶಿಸುವುದು ತರವಲ್ಲ. ನಾವೂ ವೇಷಾಂತರ

ಧಾರಿಗಳಾಗಿ ಹೋಗಬೇಕಲ್ಲವೇ ?' ಎಂದ ಧರ್ಮರಾಜನ ಮಾತಿಗೆ ಸಮ್ಮತಿಸಿ, ಅರ್ಜುನನು 'ತನ್ನ ಭೀಷಣಗಾಂಡೀವವನ್ನು, ಭೀಮಸೇನನ ಗದೆಯನ್ನು ಕಂಡೊಡನೆ ಜನರು ನಮ್ಮನ್ನು ತಿಳಿಯುವರು. ಆದರೆ ಗಾಂಡೀವ ಪರಿತ್ಯಾಗವೆಂದರೆ ಪ್ರಾಣತ್ಯಾಗ ದಷ್ಟು ದುಸ್ಸಹವಾಗಿದೆ. ವಿಧಿಯಿಲ್ಲ. ನಮ್ಮ ಆಯುಧಗಳನ್ನೊಂದು ಗುಪ್ತಸ್ಥಲದಲ್ಲಿ ನಿಕ್ಷೇಪಿಸಿ, ವಿರಾಟಪುರಿಗೆ ಹೋಗೋಣ !'

ಯೋಗ್ಯಸ್ಥಲವಾವುದೆಂದು ಸುತ್ತು ನೋಡಿ ಅಲ್ಲೇ ಅನತಿದೂರದ ಪರೇತ ಭೂಮಿಯ ಸಮೀಪದಲ್ಲಿ ಬಂದು ಶಮೀವೃಕ್ಷವನ್ನು ಕಂಡು ಅರ್ಜುನನು—'ಅಣ್ಣ ! ನೋಡು ಆ ಶಮೀವೃಕ್ಷವನ್ನು ! ಆಕಾಶವನ್ನು ಮುಟ್ಟುವಂತಿರುವ ಕೊಂಬೆಗಳಿಂದ ನಿಬಿಡವಾಗಿರುವ ಮಹಾವೃಕ್ಷದಲ್ಲಿ ನಮ್ಮ ಆಯುಧಗಳನ್ನು ಇಡುವುದುಚಿತವು. ಕಾಕ ಘೂಕ ಸಮಾಕುಲವು, ಭೀಕರ ಭುಜಗ ಕುಲಚಂಡವು, ಪಕ್ಷಿ ಕಲಕಲ ನಾದ ತುಮುಲವು, ಸ್ಮಶಾನ ಪರಿಸರಸ್ಥಿತವು, ಆದ ಈ ಶಮೀವೃಕ್ಷವು ದುರ್ಗಮವಾಗಿದೆ. ಕಂಟಕದುರಾಸವಾದುದರಿಂದ ಜನರಾರೂ ಇದರ ಗೊಡವೆಗೆ ಬಾರರು. ಇದರಲ್ಲಿ ನಮ್ಮ ಶಸ್ತ್ರಾಸ್ತ್ರಗಳನ್ನು ಶವಾಕಾರವಾಗಿ ಕಟ್ಟಿ ಇಡುವುದರಿಂದ ಅವು ಸುರಕ್ಷಿತ ವಾಗಿರುವುವು. ಈಗ ಈ ಪರಿಸರದಲ್ಲಿ ಜನರಾರೂ ಕಾಣಿಸುತ್ತಿಲ್ಲ. ಮುಂದೆ ಬೇಕಾದಾಗ ಬಂದು ನಮ್ಮ ಆಯುಧಗಳನ್ನು ಪಡೆಯೋಣ' ಎಂದನು. ಧರ್ಮರಾಜಾದಿ ಗಳು ಅರ್ಜುನನ ಮಾತಿಗೊಪ್ಪಿದರು.

ಅರ್ಜುನನು ದೇವದಾನವ ಮಾನವ ಕದಂಬವನ್ನು ಮುತ್ತಿ ಗೆಲ್ಲಲು ಸಹಾಯ ವಾದ ತನ್ನ ಗಾಂಡೀವವನ್ನು ಹೆದೆಇಳಿಸಿ, ದೈವನಿರ್ಣಯಕ್ಕೆ ತಲೆಬಾಗಿ, ವಿಷಾದ ಪರಿಖಿನ್ನನಾಗಿ ಕೆಳಗಿಟ್ಟನು. ಪಾಂಡವಾಗ್ರಜನು ಕುರುದೇಶ ಪರಿರಕ್ಷಣವು, ದನುಜ ಶಿಕ್ಷಣವು, ಶತ್ರುವಿತ್ರಾಸವು, ರತ್ನಪ್ರಕಾಶವು ಆದ ತನ್ನ ಬಿಲ್ಲಿನ ಹೆದೆಬಿಚ್ಚಿಟ್ಟನು. ಪಾಂಚಾಲದೇಶ ವಿಜಯದಲ್ಲಿ ಬಹು ವೀರರ ಗರ್ವವನ್ನು ಮುರಿದು ದಿಗ್ವಿಜಯವನ್ನು ಸಾಧಿಸಲನುವಾದ ಪರ್ವತೋಪಮಧನುವನ್ನು ಭೀಮಸೇನನು ಜ್ಯಾಮುಕ್ತವನ್ನಾಗಿ ಸಿದನು. ಪಶ್ಚಿಮ ದಿಕ್ಕಿನ ರಾಜನ್ಯರನ್ನು ಸೋಲಿಸಿದ ನಕುಲನು ತನ್ನ ಬಿಲ್ಲನ್ನು ಹೆದೆಬಿಚ್ಚಿ ಕೆಳಗಿಟ್ಟನು. ಸುಂದರನು, ತಾಮ್ರಾಸ್ಯನು, ಮಿತಭಾಷಿಯು ಆದ ನಕುಲನ ಅನಂತರ ಸಹದೇವನು ತಾನೂ ಧನುರ್ಜ್ಯಾವೋಚನವನ್ನು ಮಾಡಿದನು. ಐವರು ಪಾಂಡವರು ಮಿಕ್ಕ ಖಡ್ಗ ಗದಾತೂಣೀರಾಧಿ ಆಯುಧ ಪರಿಕಾರಗಳನ್ನು ರಾಶಿಯಾಗಿಟ್ಟರು.

ಆಗ ನಕುಲನು ಭಯಂಕರ ಸರ್ಪಗಳನ್ನು ಪೇಟಿಕೆಯಲ್ಲಿಡುವಂತೆ ಗದಾ ಖಡ್ಗ ಮುದ್ಗರ ಪರಶು ಧನು ಸ್ತೂಣಾದ್ಯಾಯುಧಗಳನ್ನು ಶವಾಕಾರವಾಗಿ ದೃಢಪಾಶಗಳಿಂದ ಬಿಗಿಸಿ ಕಟ್ಟಿದನು. ಧರ್ಮರಾಜನು ತನ್ನ ತಂದೆ ಧರ್ಮದೇವತೆ ಹಿಂದೆ ತನಗೆ ಕೊಟ್ಟ ವರವನ್ನು ನೆನೆದು, ಅವನಿಗೆ ನಮಸ್ಕರಿಸಿದನು. ವಿಷ್ಣು ಬ್ರಹ್ಮ ಶಂಕರ ಮಹೇಂದ್ರ ಸೂರ್ಯ ಚಂದ್ರಾದಿ ದೇವತೆಗಳಿಗೂ, ವನದೇವತೆಗಳಿಗೂ, ಪಿತೃ ಮುನಿಗಳಿಗೂ

ವನ್ನರಿತು ರಾಜಗುಣ ಪ್ರಶಂಸೆಯನ್ನು ಮೃದುವಾಗಿ ನುಡಿದವನು ರಾಜನಿಗೆ ಸ್ನೇಹಿತ ನಾಗುವನು.

ಮೃಷಾವಾದಿ ಜನರನ್ನು ನೋಡಿ ರಾಜರು ಅಸೂಯೆಪಡುವರು. ಮಂತ್ರಿಗಳು ಸುಳ್ಳಾಡಿದರೆ ಅವರಿಗೆ ಅವಮರ್ಯಾದೆ ಅಥವಾ ಪದವಿನಾಶ ಕಾದಿದೆ ಎಂದು ತಿಳಿ. ರಾಜಸ್ತ್ರೀಯರನ್ನು, ಅಂತಃಪುರ ಪರಿಚಾರಿಕೆಯರನ್ನು ಕಣ್ಣೆತ್ತಿ ನೋಡುವುದಾಗಲಿ, ಅವರೊಡನೆ ಸಲಿಗೆಯಿಂದ ವರ್ತಿಸುವುದಾಗಲಿ ಕೂಡದು. ಅದು ಪ್ರಾಣಾಂತಕ ವಾಗಿದೆ. ರಾಜದ್ವೇಷಿಗಳ ಕೂಡ ಮೈತ್ರಿ ಸಲ್ಲದು. ಅವರ ಮಿತ್ರರಿಂದಲು ಸ್ನೇಹ ಒಳಿತಲ್ಲ. ಸಣ್ಣ ಕೆಲಸವನ್ನಾದರೂ ರಾಜನಿಗೆ ತಿಳಿಯುವಂತೆ ಮಾಡಿದರೆ, ಅದರಿಂದ ಪ್ರಭುವು ಪ್ರೀತನಾಗುವನು. ದೊಡ್ಡ ಉಪಕೃತಿಯನ್ನಾದರೂ ಅಪ್ಪಣೆ ಪಡೆಯದೆ ಮಾಡಿದವನು ರಾಜಧಿಕ್ಕಾರವನ್ನು ಮಾಡಿದವನಂತೆ ಅವಮಾನಿತನಾಗುವನು.

ಉತ್ಕೃಷ್ಟ ಪದವಿಯನ್ನು ಹೊಂದಿದ್ದರೂ, ಸಭಾಪ್ರವೇಶವನ್ನು ಮಾಡಿದ ತತ್ಕ್ಷಣ, ತನ್ನದೇ ಎಂಬ ಕಾರಣದಿಂದ ತನ್ನ ಆಸನದಲ್ಲಿ ಕೂಡಲಾಗದು. ಅಂಥನಂತೆ ಅತ್ತಗಮನ ಕೊಡದೆ ನಿಂತಿದ್ದು, ರಾಜಾಜ್ಞೆಯನ್ನು ಪಡೆದಮೇಲೆ ಆಸೀನನಾಗಬೇಕು. ಪುತ್ರನಾಗಲಿ, ಸೋದರನೇ ಆಗಲಿ, ಮರ್ಯಾದೆಯನ್ನು ಮೀರಿ ನಡೆದರೆ ರಾಜರು ಅವನನ್ನು ಕ್ಷಮಿಸುವುದಿಲ್ಲ. ಅಗ್ನಿಯನ್ನಂತೆ ದೂರದಿಂದ, ದೇವತೆಯನ್ನಂತೆ ಗೌರವ ದಿಂದ, ಸಿಂಹವನ್ನಂತೆ ಭಯದಿಂದ, ವಿಷ್ಣುವಿನನ್ನಂತೆ ಭಕ್ತಿಯಿಂದ ಸೇವಿಸುವ ನರನು ರಾಜಕೃಪೆಗೆ ಪಾತ್ರನಾಗುವನು. ಕೂಟನೀತಿಯಿಂದ ಸೇವಿಸುವ ದಕ್ಷ ರನ್ನು ಮೊದಲು ಸಮ್ಮಾನಿಸಿದರೂ, ನಿಜವನ್ನರಿತಮೇಲೆ ಬಿಡದೆ ಸಂಹರಿಸುವರು ನರಪಾಲರು.

ರಾಜನ ಅನುಜ್ಞೆಯನ್ನು ಪಡೆಯದೆ ಯಾವ ವಸ್ತುವನ್ನೂ ವಿನಿಯೋಗಿಸ ಲಾಗದು. ಅದು ಸಭಾಮರ್ಯಾದೆ. ಪ್ರಮಾದವನ್ನು ಮಾಡದೆ, ಗರ್ವಪಡದೆ, ಕೋಪ ಕ್ಕೊಳಗಾಗದೆ ಸೇವಿಸುವ ಭೃತ್ಯನು ಸುಖಿಸುವನು. ಕಾರ್ಯ-ಅಕಾರ್ಯ ಪರೀಕ್ಷಣೆ ನಡೆ ದಾಗ ರಾಜನಿಂದ ಕೇಳಲ್ಪಟ್ಟವನಾಗಿ ಹಿತವನ್ನು ಪ್ರಿಯವನ್ನು ತಿಳಿದು ನುಡಿಯಬೇಕು. ಪ್ರಿಯವಲ್ಲದಿದ್ದರೂ ಹಿತವಾದುದಾದರೆ ಹಿತವನ್ನೇ ತಿಳಿಸಿಕೊಡಬೇಕು. ಹಿತವಿರೋಧಿ ಯಾದ ಪ್ರಿಯವಚನವು ಅನರ್ಥಾಪಾದಕವಾಗಿದೆ. ರಾಜನ ಅರ್ಥಸಾಧನೆಯಲ್ಲಿ ಸರ್ವ ಪ್ರಕಾರದಿಂದಲು ಯತ್ನಶೀಲನಾಗಿ, ಅನುಕೂಲನಾಗಿ ಮಾತಾಡಬೇಕು. ರಾಜ- ಹಿತವನ್ನು ಪ್ರಮಾದಾಲಸ್ಯಗಳಿಲ್ಲದೆ ಸಾಧಿಸಬೇಕು. ಅಪ್ರಿಯವು ಅಹಿತವು ಆದ ವಚನವನ್ನೆಂದಿಗೂ ನುಡಿಯಲಾಗದು. ಹಿತವನ್ನು ಪ್ರಿಯವನ್ನು ಮಾಡುತ್ತಾ, ಮಾಡಿದ್ದನ್ನು ದಂಭವಿಲ್ಲದೆ ತಿಳಿಸುತ್ತಾ, ಪ್ರಿಯನೆಂದು ಪ್ರಮತ್ತನಾಗದೆ ಇರುವ ರಾಜ ಸೇವಕನು ಸರ್ವಶ್ರೇಯಃ ಪಾತ್ರನಾಗುವನು. ರಾಜನಿಗೆ ಇಷ್ಟವಲ್ಲದ ವಸನ ಭೂಷಣ, ಸುಮ ಭೋಜನಗಳನ್ನು ಮುಟ್ಟದೆ, ಅವನ ಅಹಿತರಿಂದ ಮಾತಾಡದೆ, ಅವನಿತ್ತ ಪದದಿಂದ ಚಲಿಸದೆ ಇರುವ ನರನು ರಾಜಸೇವೆಯ ಸವಿಯನ್ನು ಕಂಡು ಸುಖಿಸುವನು.

*

ಮನಸಾ ನಮಿಸಿ, ಸ್ತುತಿಸಿದನು. ಮೇಲೆ, ಕೆಳಗೆ, ಸುತ್ತುಮುತ್ತಲು ನೋಡಿ ಮತ್ತೆ ಶಮೀವೃಕ್ಷ ದೇವತೆಗೆ ನಮಸ್ಕರಿಸಿ, ಧರ್ಮರಾಜನು ಆಯುಧಭಾರವನ್ನು, ಗಿಡ ಹನ್ನೇರಿ ಕೂತಿದ್ದ ನಕುಲನ ಕೈಗೆತ್ತಿಕೊಟ್ಟನು. ನಕುಲನು ಶವವಂತೆ ಕಾಣುವ ಆಯುಧಭಾರವನ್ನು ಗುಬುರಾಗಿದ್ದ ಒಂದು ಶಮೀ ಶಾಖೆಗೆ ಬಿಗಿಸಿ ಕಟ್ಟಿ, ಧರ್ಮರಾಜ ಮತ್ತ ಪಶುಚರ್ಮವನ್ನು ಸುತ್ತಿ, ಕೆಳಗಿಳಿದನು. ಚರ್ಮಾವೃತವಾದ ಆಯುಧ ಸಮೂಹವು ದುರ್ಗಂಧವನ್ನು ಬೀರುತ್ತಾ ಭಯಂಕರವಾಗಿತ್ತು.

ಧರ್ಮಜಾದಿಗಳು ಶಮೀವೃಕ್ಷಕ್ಕೆ ಪ್ರದಕ್ಷಿಣಿಸಿ, ನಮಸ್ಕರಿಸಿದರು. ನಂತರ ಧರ್ಮಜನು ವಿಷವಿಸ್ಫುರಿತ ಮಹಾ ಸರ್ಪಗಳಂತಿದ್ದ ಅಸ್ತ್ರಗಳಿಗೆ ನಮಿಸಿ 'ಅಸ್ತ್ರಶಸ್ತ್ರ ದೇವತೆಗಳಿರಾ ! ನರನಿಗೆ, ನನಗೆ, ಭೀಮನಿಗೆ ಹೊರತು ಇತರರಿಗೆ ನಿಮ್ಮ ಸ್ವರೂಪವು ಕಾಣದಂತಾಗಲಿ ! ಭಯಂಕರ ಭುಜಂಗಗಳಂತೆ ಜನರಿಗೆ ತೋರಿ, ಅವರನ್ನು ದೂರ ಇಲ್ಲಿಡಿ ! ಭೀಮಸೇನನು ಧಾರ್ತರಾಷ್ಟ್ರ ಕುಲನಾಶಕದ ಪ್ರತಿಜ್ಞೆಯನ್ನು ಮಾಡಿರು ವನು. ಅವನ ಮನಸ್ಸಿಗೆ ಎಂದು ಎಂತು ರೋಷಾವೇಶವು ತುಂಬಿಬರುವುದೋ ಹೇಳಲಾರೆನು. ಅವನು ಸ್ವೀಕರಿಸಲು ಬರಲಾರನು. ಏಕೆಂದರೆ ಬಾಹುಬಲದಿಂದಲೇ ಆ ಮಹಾಬಲನು ಸರ್ವಶತ್ರು ನಿರ್ಮೂಲವನ್ನು ಮಾಡಲು ದಕ್ಷನಿರುವನು. ಒಂದು ವೇಳೆ ನಿಮ್ಮಲ್ಲಿಗೆ ಬಂದರೆ ಭೀಮನನ್ನು ಅನುನಯಿಸಿ ಅವನಿಗೆ ಸಿಗದಂತೆ ವರ್ತಿಸಿರಿ !' ಎಂದು ಬೇಡಿದನು ; ಭೀಮನನ್ನು ಕರೆದಪ್ಪಿ, ಕಣ್ಣೀರಿಟ್ಟು 'ಭೀಮಸೇನ ! ನಿನ್ನಿಂದ ರಕ್ಷಿತರಾಗಿ ವನವಾಸ ಕ್ಲೇಶಗಳಿಂದ ಪಾರಾದೆವು. ಒಂದು ವರ್ಷದ ಅಜ್ಞಾತವಾಸ ದಲ್ಲಿಯು ಶಾಂತನಾಗಿ, ವಿಜೃಂಭಿಸದೆ ನಮ್ಮ ಹಿತವನ್ನು ಸಾಧಿಸು ! ಶತ್ರುಕೃತ ನಾನಾಯೋಪಾಯದ ಅಪಾಯದಿಂದ ನಮ್ಮನ್ನು ರಕ್ಷಿಸು !' ಎಂದು ನುಡಿದನು. ಭೀಮಸೇನನು ಅಣ್ಣನ ಮಾತನ್ನು ವಿನಯದಿಂದ ಸ್ವೀಕರಿಸಿದನು.

ಪಾಂಡವರು ಸ್ವಲ್ಪ ದೂರ ಸಾಗಿ ಅಲ್ಲಿದ್ದ ಗೋಪಾಲರನ್ನು ನೋಡಿ ಅಯ್ಯಾ ! ನಮ್ಮ ವೃದ್ಧ ಜನನಿಯು ಈಗ ಮೃತಳಾದುದರಿಂದ, ಅವಳ ಶವವನ್ನು ನಮ್ಮ ಕುಲ ಪದ್ಧತಿಯಂತೆ ಶಮೀವೃಕ್ಷದ ಮೇಲಿಟ್ಟಿರುವೆವು. ಆಕೆಯನ್ನು ಮುಟ್ಟದಂತಿರಿ!' ಎಂದು ಅವರನ್ನು ಹೆದರಿಸಿದರು. ಅಂತೆಯೇ ಅಲ್ಲಿ ಬಿದ್ದಿದ್ದ ಒಂದು ಮಾನವ ಕಂಕಾಳವನ್ನು ಸಹದೇವನು ಹೊತ್ತು, ಶಮೀವೃಕ್ಷದ ಮೇಲಿಟ್ಟು, ಕಟ್ಟಿ ಬಂದನು. ಆಗ ಪಾಂಡವರು ನಿಶ್ಚಿಂತರಾಗಿ ವಿರಾಟಪುರದ ಮಾರ್ಗವನ್ನು ಹಿಡಿದು, ಅಲ್ಲಿ ಪುಣ್ಯನದೀ ತೀರ್ಥಾವಗಾಹನವನ್ನು ಮಾಡಿ ಶುಚಿರ್ಭೂತರಾದರು. ದೇವ, ಋಷಿ, ಪಿತೃತರ್ಪಣ, ಮಂಗಳಕರ ಗಾಯತ್ರ್ಯಾದಿಮಂತ್ರಜಪ, ಪವಮಾನಾದಿ ಹೋಮಗಳನ್ನು ನೆರವೇರಿಸಿ ಅವರು ತಮ್ಮ ರಹಸ್ಯ ವ್ಯವಹಾರಕ್ಕೆ ಅನುವಾಗಿ ಇರಲೆಂದು, ಜಯ, ಜಯಂತ, ವಿಜಯ, ಜಯತ್ಸೇನ, ಜಯದ್ಬಲ ಎಂಬ ಸಂಕೇತಗಳನ್ನು ಕ್ರಮವಾಗಿ ಧರಿಸಿದರು. ಪಾಂಚಾಲಿಯು ಮಾಲಿನಿ ಎಂಬ ಹೆಸರಿನಿಂದ ಸೈರಂಧ್ರಿವೇಷವನ್ನು ಧರಿಸಿದಳು.

ಧರ್ಮರಾಜನು ಧರ್ಮದೇವತೆ ತನಗಿತ್ತ ವರವನ್ನು ನೆನೆದು 'ತಂದೇ ! ಯಕ್ಷ ರೂಪನಾಗಿ ಬಂದೆ ! ಸತ್ತ ಅನುಜರನ್ನು ಬದುಕಿಸಿಕೊಟ್ಟೆ ! ಅವರಿಗೆಲ್ಲ ನಯ ವಿಕ್ರಮ ಪ್ರಾಭವಗಳನ್ನಿತ್ತು ಅನುಗ್ರಹಿಸಿದೆ ! ನಮ್ಮ ವೇಷಧಾರಣೆಯು ಸಹಜವಾಗಿ ಕಾಣುವಂತೆ ಅನುಗ್ರಹಿಸು ! ನಮ್ಮನ್ನು ಪರರರಿಯದಂತೆ ರಕ್ಷಿಸು !' ಎಂದು ಪ್ರಾರ್ಥಿಸಿದನು. ತತ್‌ಕ್ಷಣವೇ ಪಾಂಡವರು ಸನ್ಯಾಸಿ, ಪಾಚಕ, ನಟ, ಅಶ್ವರಕ್ಷಕ, ಗೋಪಾಲರ ರೂಪಗಳಿಗೆ ಅನುವಾದ ಅಂಬರಾಭರಣ ಪರಿಕರಣಂಗಳು ಸನ್ನಿಹಿತ ವಾಗಲು ನೋಡಿ, ಮುದದಿಂದ ತಂತಮ್ಮ ಸಂಕಲ್ಪಿತ ವೇಷಗಳನ್ನು ಧರಿಸಿ, ಒಬ್ಬೊಬ್ಬರಾಗಿ ವಿರಾಟನ ಆಸ್ಥಾನವನ್ನು ಸೇರಲು ನಿಶ್ಚಯಿಸಿದರು.

ಆಗ ಧರ್ಮರಾಜನು ವಿರಾಟನಗರವನ್ನು ಸೇರಹೋಗುತ್ತಾ, ದುರ್ಗಮಸಂಕಟ ತಾರಿಣಿಯಾದ ದುರ್ಗಾದೇವಿಯನ್ನು ಕಂಡು, ಕೈಜೋಡಿಸಿ, ಇಂತು ನುತಿಸಿದನು—

ದೇವಿ! ನಿನಗೆ ನಮಸ್ಕಾರ ! ತ್ರಿಭುವನೇಶ್ವರಿ ! ಯಶೋದಾಗರ್ಭಸಂಭೂತೇ! ನಾರಾಯಣಪ್ರಿಯೇ ! ನಂದಗೋಪ ಕುಲದಲ್ಲಿ ಹುಟ್ಟಿದೆ ! ಕುಲವರ್ಧಿನಿ ! ಅವನಿಗೆ ಮಂಗಲವನ್ನು ತಂದೆ ! ಕಂಸನನ್ನು ಹೆದರಿಸಿದೆ ! ಅಸುರರನ್ನು ನಾಶಗೊಳಿಸಿದೆ ! ಶಿಲಾ ತಲದಿ ಒಗೆಯಲ್ಪಟ್ಟರೂ ಬೀಳದೆ ಅಂಬರಕ್ಕೆ ಹಾರಿ ನಿಂತೆ ! ವಾಸುದೇವನ ಭಗಿನಿ ಎನಿಸಿದೆ ! ದಿವ್ಯಮಾಲ್ಯಾಭರಣಗಳಿಂದ ಮೆರೆದೆ ! ದಿವ್ಯಾಂಬರವನ್ನುಟ್ಟು, ಖಡ್ಗ ಖೇಟ ಶರ ಚಾಪ ಬಾಣ ಶಂಖ ಚಕ್ರ ಪದ್ಮಗಳನ್ನು ಎಂಟು ಕೈಗಳಲ್ಲಿ ಧರಿಸಿದ ಅಷ್ಟ ಭುಜೆ ಮಹಾಲಕ್ಷ್ಮಿ ! ಸದಾ ದಿವ್ಯಶುಭಗಳನ್ನೀವ ನಿನ್ನನ್ನು ನೆನೆದವರನ್ನು ಕೆಸರಿ ನಿಂದ ಆಕಳನ್ನಂತೆ, ಪಾಪ ಪಂಕದಿಂದ ಉದ್ಧರಿಸುವಿ! ಅಮ್ಮಾ! ನನಗೂ ನನ್ನವರಿಗೂ ನಿನ್ನ ದಿವ್ಯದರ್ಶನವನ್ನಿತ್ತು ಕರುಣಿಸು !

ಕೃಷ್ಣವರ್ಣೆ ! ಕುಮಾರಿ ! ಬ್ರಹ್ಮಚಾರಿಣಿ ! ಬ್ರಹ್ಮಶಬ್ದವಾಚ್ಯನಾದ ನಾರಾಯಣನಲ್ಲಿ ಸದಾ ಭಕ್ತಿಯುಕ್ತಳಾಗಿ ಧ್ಯಾನಿಸುತ್ತಾ ಚರಿಸುವೆ ! ನಿತ್ಯಯೌವನ ಳಾದ, ಬಾಲಾರ್ಕ ಸಮ ತೇಜಪುಂಜಳಾದ ನಿನಗೆ ನಮಸ್ಕಾರವು! ಪೂರ್ಣಚಂದ್ರನನ್ನು ಧಿಕ್ಕರಿಪ ವದನ, ಕಲ್ಪವೃಕ್ಷ ಶಾಖೆಗಳನ್ನು ಸೋಲಿಸುವ ಭುಜಚತುಷ್ಟಯ, ಚತುರ್ವೇದಗಳನ್ನು ನುಡಿಸುವ ಚತುರ್ಮುಖಗಳು, ಪೀನ ಶ್ರೋಣಿದ್ವಯ, ಕನಕ ಕುಂಭ ಸದೃಶ ವಾತ್ಸಲ್ಯರಸಪೂರ್ಣ ವಕ್ಷೋಜ ಯುಗ್ಮ, ಇಂದ್ರ ನೀಲಮಣಿ ಖಚಿತ ದಿವ್ಯಕನಕವಲಯುಗಳು, ನವರತ್ನ ವಿಭಾಸಿ ಕೇಯೂರಾಂಗದ ಕಟಕಸಮೂಹ, ದಿವ್ಯ ಮಾಂಗಲ್ಯ ವಿರಾಜಿ ಗಲಪ್ರದೇಶ, ಪಾರಿಜಾತ ಮಲ್ಲಿಕಾ ಮಂದಾರ ಕುಂದ ಚಂಪಕಾ ಜಾತೀಸುಮಹಾರಗಳು, ವಿದ್ಯುದದ್ಭುತ ಕಮನೀಯಕಾಂಚೀಕಲಾಪ, ನವರತ್ನ ಖಚಿತ ಕುಂಡಲಯುಗಳ, ಆಹಾ ! ಎಂತಹ ಮಂಗಳ ಸ್ವರೂಪವಮ್ಮ ! ಜಗಜ್ಜನನಿ! ನಿತ್ಯಯೌವನಿ ! ಲೋಕಕಲ್ಯಾಣಿ ! ನಾರಾಯಣನ ಪ್ರಿಯಪತ್ನಿಯಾದ ನಿನ್ನ ಶೋಭೆಯನ್ನು ನಾನು ವರ್ಣಿಸಲಾಪನೇ ? ನೀಲಮೇಘ ಶ್ಯಾಮವರ್ಣದಿಂದ ಕೃಷ್ಣ ನಿಗೆ ಸವರ್ಣೆಯಾಗಿ, ಭಕ್ತರ ಪಾಪಾಕರ್ಷಣದಿಂದ ಸಂಕರ್ಷಣ ಪ್ರಿಯೆಯಾಗಿ,

ಮುಡಿಯಿಟ್ಟ ಜಡೆಯಲ್ಲಿ ಮುಡಿದ ಪೂಮಾಲೆಗಳಿಂದ ಮುಕುಂದ ಪಾದಾಸಕ್ತಚಿತ್ತ ಳಾಗಿ ಮೆರೆವ ನಿನ್ನ ಮಹಿಮೆಗೆ ನಮೋ ನಮಃ. ಕೌಮಾರ ವ್ರತಧಾರಿಣಿಯಾದ ನಿನ್ನಿಂದ ಮೂರ್ಲೋಕಗಳು ಪಾವಿತವಾದವು. ತ್ರಿದಶರಿಂದ ಪ್ರಾರ್ಥಿತಳಾಗಿ ತ್ರಿಲೋಕದ ಜನರನ್ನು ರಕ್ಷಿಸಲು ದುಷ್ಟ ಮಹಿಷಾಸುರನನ್ನು ಮರ್ದಿಸಿದೆ ! ಮಂಗಳಕರೇ ಶಿವೇ ! ಪ್ರಸನ್ನಳಾಗು ! ಜಯಾದೇವಿ ! ಸಂಗ್ರಾಮರಂಗದಲ್ಲಿ ನಮಗೆ ಜಯವನ್ನು ಕೊಡು ! ವಿಂಧ್ಯವನವಾಸಿನಿ ! ಪಾಪನಾಶಿನಿ ! ಪ್ರಭಾತದಲ್ಲಿ ಶುಚಿರ್ಭೂತರಾಗಿ ನಿನಗೆ ಪ್ರಣಾಮಗಳನ್ನು ಮಾಡಿ ಸ್ತುತಿಸುವ ಸುಜನರಿಗೆ ದುರ್ಲಭ ವಾದುದಿಲ್ಲ. ಪುತ್ರ ಧನ ಧಾನ್ಯ ಆಯುರಾರೋಗ್ಯಾದಿ ಸಕಲಸಂಪತ್ತನ್ನಿತ್ತು ಪೊರೆವ ನಿನಗೆ ಸಮರಾದ ವರದರಿಲ್ಲ. ಕಾಲಿ ! ಕರಾಲಿ ! ಭದ್ರೇ ! ಮಧುಮಾಂಸಪ್ರಿಯೇ ! ದುರ್ಗಮಕಷ್ಟಗಳಿಂದ ಉತ್ತಾರಿಸಿ ಕಾಪಾಡುವೆಯಾದುದರಿಂದ ನಿನ್ನನ್ನು ದುರ್ಗೆ ಎನ್ನುವರು. ಕಾಂತಾರಗಳಲ್ಲಿ, ಅಟವಿಗಳಲ್ಲಿ, ನದೀಸಮುದ್ರಗಳಲ್ಲಿ ಬರುವ ಕಳ್ಳಕಾಕರು ಕ್ರೂರ ಮೃಗಗಳು, ಜಲಜಂತುಗಳಿಂದ ಸುಜನರನ್ನು ರಕ್ಷಿಸುವೆ. ನಿನ್ನನ್ನು ಸ್ಮರಿಸು ವರಿಗೆ ವಿಪತ್ತಿಲ್ಲ. ಕೀರ್ತಿ, ಶ್ರೀ, ಹ್ರೀ, ಧೃತಿ, ಸಿದ್ಧಿ, ವಿದ್ಯಾ, ಸನ್ನತಿ, ಮತಿ—ಈ ನಾಮಗಳಿಂದ ಖ್ಯಾತಳಾದ ನಿನ್ನಿಂದ ಕೀರ್ತ್ಯಾದಿಗಳು ಲಭಿಸುವವು. ನಿನ್ನನ್ನು ಭಜಿಸದ ವರಿಗೆ ಬಂಧಮೋಹಗಳು, ನಾಶಕ್ಷಯಗಳು ತಪ್ಪುವುದಿಲ್ಲ. ವ್ಯಾಧಿ ಮೃತ್ಯುಭಯ ಗಳನ್ನು ಪರಿಹರಿಸುವೆ ನಿನ್ನ ಭಕ್ತರಿಗೆ. ತಾಯೆ ! ರಾಜ್ಯದೂರನಾಗಿ, ಕಷ್ಟದಿಂದ ನೊಂದ ಸೋದರ ಸತಿಯರಿಂದ ಕೂಡಿ, ನಿನಗೆ ಶರಣಾಗತನಾಗಿರುವೆನು. ಶಿರಬಾಗಿ ನಮಿಸಿ ಕಾಪಾಡೆಂದು ಬೇಡುತ್ತಿರುವೆನು. ಪದ್ಮಪತ್ರ ವಿಶಾಲವಾದ ನಿನ್ನ ಕಮನೀಯ ನೇತ್ರ ಕಟಾಕ್ಷಗಳಿಂದ ನೋಡಿ ರಕ್ಷಿಸು ! ಭಕ್ತವತ್ಸಲೇ ! ನಿನಗೆ ನಮೋ ನಮಃ.

ಇಂತು ನುತಿಸಿದ ಧರ್ಮರಾಜನಿಗೆ ದುರ್ಗಾದೇವಿಯು ಪ್ರತ್ಯಕ್ಷಳಾಗಿ, ಅಭಯ ವನ್ನಿತ್ತು, ಇಂತೆಂದಳು—ರಾಜನ್ ! ಕೇಳು, ಅಚಿರಕಾಲದಲ್ಲೇ ಜರುಗುವ ಭಾರತ ರಣದಲ್ಲಿ ನೀನು ವಿಜಯವಂತನಾಗುವೆ! ನನ್ನ ದಯದಿಂದಲು, ಶ್ರೀಕೃಷ್ಣನ ಅನುಗ್ರಹ ದಿಂದಲು, ನಿನ್ನ ಸರ್ವಶತ್ರುಗಳು ನಷ್ಟರಾಗುವರು ಮತ್ತು ಸರ್ವಸಂಪದ್ಯುಕ್ತ ರಾಜ್ಯ ವನ್ನು ನೀನು ಹೊಂದುವೆ. ನಿನ್ನ ಸೋದರರಿಂದಲೂ ಸತಿಯಿಂದಲೂ ಕೂಡಿ ಚಿರಕಾಲ ಸುಖವಾಗಿ ಬಾಳುವೆ. ಮತ್ಸರವಿಲ್ಲದೆ ನೀನು ಮಾಡಿದ ದುರ್ಗಾಸ್ತುತಿಯನ್ನು ಪಠಿಸಿದ ವರು, ಆಯುರಾರೋಗ್ಯಗಳನ್ನು, ಧನಧಾನ್ಯಗಳನ್ನು, ಜ್ಞಾನಭಕ್ತಿಗಳನ್ನು ಪೊಂದು ವರು. ನನ್ನನ್ನು ಸ್ತುತಿಸಿದವರು ದುರ್ಗ ಕಾಂತಾರ ಸಾಗರ ಗಿರಿ ರಾಜ ದ್ವಾರಗಳಲ್ಲಿ ಒದಗುವ ವಿಪತ್ತಿನಿಂದ ಪಾರಾಗುವರು. ನನ್ನ ದಯದಿಂದ, ಧರ್ಮರಾಜ ! ವಿರಾಟ ನಗರದಲ್ಲಿ ಅಜ್ಞಾತರಾಗಿರುವ ನಿಮ್ಮನ್ನು ಯಾರೂ ತಿಳಿಯದಂತಾಗಲಿ ! ನಿಮಗೆ ಶುಭವಾಗಲಿ !' ಎಂದು ಹರಸಿ, ವರವಿತ್ತು ಶ್ರೀ ದುರ್ಗೆಯು ಅಂತರ್ಹಿತಳಾದಳು. ಪಾಂಡವರು ದುರ್ಗಾನುಗ್ರಹ ಪಾತ್ರರಾಗಿ ಪ್ರಸನ್ನಮನಸ್ಕರಾದರು.

## ವಿರಾಟರಾಜ ದರ್ಶನ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ರಾಜನ್ ! ಮೊಟ್ಟಮೊದಲು ಧರ್ಮರಾಜನು ವಿರಾಟಸಭೆಯನ್ನು ಪ್ರವೇಶಿಸಿದನು. ವೈದೂರ್ಯಮಣಿ ಖಚಿತವಾದ ಅಕ್ಷಗಳನ್ನು ವಸ್ತ್ರದಿ ಸುತ್ತಿ ಕಕ್ಷದಲ್ಲಿಟ್ಟು, ಸಿಂಹಸದೃಶಖೇಲನು, ವಿಶಾಲಫಾಲನು, ಮಹಾನುಭಾವನು, ನರರೂಪ ಯಮದೇವನು, ಅಪೂರ್ವ ರೂಪಯುತನು, ಧವಳವಸನ ಸಂವೀತನು ಆದ ಕಂಕನು ಸಭೆಗೆ ಬಂದಾಗ ನೋಡಿ ವಿರಾಟನು ವಿಸ್ಮಿತನಾದನು. ಮುಗಿಲು ಮುಚ್ಚಿದ ಚಂದ್ರನೋ, ಭಸ್ಮಚ್ಛನ್ನವಾದ ಅಗ್ನಿಯೋ ಎಂಬಂತೆ ಬೆಳಗಿ ಬೆಳಗದಿರುವ ಕಂಕನನ್ನು ಕಂಡು ಸಭಾಸದರು ಅಪ್ರಯತ್ನವಾಗಿ ಎದ್ದು ನಿಂತರು. ವಿರಾಟನು ಮಂತ್ರಿ ಪುರೋಹಿತರನ್ನೀಕ್ಷಿಸಿ 'ಯಾರೀ ಮಹಾನುಭಾವನು ? ಏಕೆ ಬರುತ್ತಿರುವನು ? ಸಮಸ್ತ ಪೃಥಿವೀಮಂಡಲಪತಿಯಂತೆ ತೋರುವ ಮಹಾನುಭಾವನು ಸಾಮಾನ್ಯ ದ್ವಿಜನಲ್ಲ. ದಾಸರಿಲ್ಲ, ರಥಕುಂಜರ ತುರಗಗಳಿಲ್ಲ, ಆದರೂ ಇಂದ್ರನಂತೆ ವಿರಾಜಿಸುವನಿವನಾರಿರಬಹುದು ? ಶರೀರಶುಭಲಕ್ಷಣಗಳನ್ನು ನೋಡಿದರೆ ಮೂರ್ಧಾಭಿಷಿಕ್ತನಾದ ರಾಜನ್ಯನೆಂದು ಖಚಿತವಾಗುತ್ತಿದೆ. ಮದೋತ್ಕಟವಾದ ಭದ್ರಗಜವು ತಾಮರಸ ಸರವನ್ನಂತೆ ಗಂಭೀರವಾಗಿ ನನ್ನ ಸಭೆಯನ್ನು ಪ್ರವೇಶಿಸುವನಲ್ಲ ! ವೇತ್ರಹಸ್ತರ ಬರಾಬರಿಗಳಿಲ್ಲದೆ, ಧವಳಾತಪತ್ರವಿಲ್ಲದೆ, ಅಂಗರಕ್ಷಕಭಟರಿಲ್ಲದೆ, ಮದಕರಿ ತುರಗಗಳಿಲ್ಲದೆ ವಿರಕ್ತನಾಗಿ ಸಕಲವನ್ನು ತ್ಯಜಿಸಿಬಂದ ಸಾರ್ವಭೌಮನಿರಬಹುದೇ ? ಯತಿವೇಷನಾಗಿರುವ ಈ ಮಹಾತ್ಮನಿಗೆ ನಮ್ಮಲ್ಲಿ ಯಾವ ಕೆಲಸವಿರಬಹುದು ? ಇವನು ಬೇಡಿದ್ದನ್ನೆಲ್ಲ ಕೊಡಬೇಕೆನ್ನಿಸುತ್ತಿದೆ. ಮತ್ಸ್ಯರಾಜ್ಯವನ್ನೇ ಕೊಟ್ಟು, ಭಕ್ತಿಯಿಂದ ಇವನನ್ನು ಅಮಾತ್ಯಸುತಭೃತ್ಯಸಹಿತನಾಗಿ ಅನುಸರಿಸಿ, ಸೇವಿಸಲು ಸಿದ್ಧನಿರುವೆನು' ಎಂದು ನುಡಿದನು.

ವಿರಾಟನು ಎದ್ದುಬಂದು ಕಂಕನಿಗೆ ಸ್ವಾಗತವನ್ನಿತ್ತನು ; ಅವನನ್ನು ಕರೆತಂದು ಸಮುನ್ನತಾಸನದಲ್ಲಿ ಕೂಡಿಸಿ, ನಮಸ್ಕರಿಸಿದನು. ಕಂಕನು ಆಶೀರ್ವದಿಸಿ ಕೂತಿರಲು, ವಿನಯದಿಂದ ವಿರಾಟನು, "ಸ್ವಾಮೀ ! ನಿನ್ನ ಜನ್ಮಭೂಮಿ ಯಾವುದು ? ಪೆಸರೇನು? ಕುಲವಾವುದು ? ಎಲ್ಲಿಂದ ಬಂದೆ ? ಬರಲು ಕಾರಣವೇನು ? ನನ್ನಿಂದ ಏನು ಸೇವೆಯಾಗಬೇಕು ? ಹೇಳು ; ಅವಹಿತನಾಗಿರುವೆನು" ಎಂದು ಪ್ರಾರ್ಥಿಸಿದನು. ಕಂಕನು "ರಾಜನ್ ! ಇದ್ದುದನ್ನೆಲ್ಲವನ್ನು ಪೇಳಲು ಯಾರಿಗೂ ಆಳವಲ್ಲ. ಈಗ ತೋಚಿದ್ದನ್ನು ಮಾತ್ರ ಹೇಳಬಲ್ಲೆನು. ಕೇಳು ! ನಮ್ಮ ಶರೀರವು ಪಂಚಭೂತಮಯವು—ಮನಸ್ಸು ಅತಿಚಂಚಲವು. ಸತ್ಯವನ್ನು ನುಡಿದು, ಅದರಂತೆ ನಡೆಯುವುದು ಬಹು ದುಷ್ಕರವಾಗಿದೆ. ಆದರೂ ಸತ್ಯವನ್ನೇ ಪೇಳುವುದೆನ್ನವ್ರತವು. ನಾನು ದ್ವಿಜನು ; ಕುರುದೇಶದವನು. ಸುಜನಪ್ರಿಯನಾದ ಧರ್ಮರಾಜನ ಸಖನು. ಪರಿವ್ರಜನಾಶ್ರಮವೀಗ

ಬಂದಿದೆ. ಧರ್ಮನೆಂದರೆ ನಾನೆಂದರೆ ಬೇರೆಯಲ್ಲ. ನಮ್ಮಿರ್ವರಿಗೆ ಒಂದೇ ಜೀವ. ಬಹು ವಿನೋದ ವಿದ್ಯಾಚತುರನೆನಿಸಿರುವೆನು. ದ್ಯೂತಕ್ರೀಡೆಯನ್ನೂ ಕಲಿತಿರುವೆನು. ದ್ಯೂತ ದಲ್ಲಿ ಕಪಟ ಜನರು ನನ್ನ ಸರ್ವಸ್ವವನ್ನಪಹರಿಸಿ, ಅವಮಾನಪಡಿಸಿದರು ; ಅದರಿಂದ ವಿರಕ್ತನಾಗಿ ವನದಲ್ಲಿ ಕೆಲಕಾಲವನ್ನು ಧರ್ಮಪರರ ಸತ್ಸಂಗತಿಯಲ್ಲಿ ಕಳೆದೆನು. ಕಂಕ ನೆಂಬರು ನನ್ನನ್ನು. ನೀಚವರ್ತನದಿಂದ ಜೀವಿಸಲಾರೆನು. ನೀನು ಸಾಧುಜನವತ್ಸಲ ನೆಂದು ಕೇಳಿ, ನಿನ್ನ ಆಶ್ರಯದಿ ಜೀವಿಸಲು ನಿಶ್ಚಯಿಸಿ ಬಂದೆನು. ಒಂದು ವರ್ಷಮಾತ್ರ ವಿರುವೆನು. ಮುಂದೆ ಶ್ರೀಶಾನುಗ್ರಹದಿಂದ ನನಗೆ ದ್ರೋಹವನ್ನು ಬಗೆದ ದುಷ್ಟರನ್ನು ಜಯಿಸಲು ಪೋಗುವೆನು. ನಿನಗೆ ಸಮ್ಮತವಾದರೆ ನನ್ನನ್ನು ಸ್ವೀಕರಿಸು !" ಎಂದನು.

ವಿರಾಟನು "ನಿನಗಿಷ್ಟವಿದ್ದಂತಾಗಲಿ ! ನೀನೆನ್ನ ದ್ಯೂತಸಖನಾಗಿ ನನ್ನ ಆಸ್ಥಾನ ವನ್ನು ಅಲಂಕರಿಸು! ಉನ್ನತಾಸನಗಳನ್ನು, ವಾಹನಗಳನ್ನು, ಭೋಜನವಸನಗಳನ್ನು, ತಕ್ಕ ಭೋಗಗಳನ್ನು ಹೇರಳವಾಗಿ ಒದಗಿಸುವೆನು. ಜನರು ನನ್ನನ್ನಂತೆ ನಿನ್ನನ್ನೂ ಗೌರವಿಸಲು ಕಟ್ಟಪ್ಪಣೆ ಮಾಡುವೆನು. ಯಾವ ಅನುಚರನೇ ಆಗಲಿ, ಬಂಧುವೇ ಆಗಲಿ, ನಿನ್ನಲ್ಲಿ ಭಯಭಕ್ತಿಗಳನ್ನು ತೋರದೆ ಹೀಯಾಳಿಸಿದಲ್ಲಿ, ಅಂತಹ ನೀಚನನ್ನು ದಂಡಿಸುವೆನು. ನಿನ್ನನ್ನು ಸಮಾನಾಸನದಿ ಕೂಡಿಸಿ ಗೌರವಿಸುವೆನು. ರಾಜಾಧಿಕಾರಿ ಗಳು ವಿಪ್ರವೃತ್ತಿಯನ್ನು ಕಸಿದೆಡೆ, ವಿಪ್ರರು ನಿನಗೆ ಶರಣಾಗತರಾಗಿ ಬರಲು, ನಿನ್ನ ಮಾತಿನಂತೆ ಅವರಿಗೆ ಅವರ ವೃತ್ತಿಯನ್ನು ತತ್‌ಕ್ಷಣ ಕೊಡಿಸುವೆನು. ನಿನಗೆ ಸಮಯಾಸಮಯಗಳಿಲ್ಲದೆ ರಾಜದ್ವಾರವು ಸದಾ ಮುಕ್ತವಾಗಿರುವುದು. ಇಷ್ಟೇಕೆ ? ಮತ್ಸ್ಯದೇಶವನ್ನೇ ನಿನಗರ್ಪಿಸಿ, ನಾನು ನಿನ್ನನ್ನು ಸಾಮಂತನಂತೆ ಸೇವಿಸುವೆನು. ದ್ಯೂತಚತುರರು ನನಗೆ ಬಲು ಪ್ರಿಯರು. ನೀನು ದೇವಸದೃಶನಿರುವೆ. ಆಳಿನ್ನ ರಾಜ್ಯವನ್ನು" ಎಂದನು.

ಆ ವಿನಯವಚನವನ್ನಾಲಿಸಿ ಕಂಕನು ನಸುನಕ್ಕು, "ರಾಜನ್ ! ನನ್ನದೆಲ್ಲ ವನ್ನೂ ಕೈಯಾರೆ ಕಳೆದುಕೊಂಡ ನನಗೆ ಪರರ ಸೊತ್ತೇಕೆ ? ಉಣ್ಣುವುದು ಹವಿಷ್ಯ ವನ್ನು ! ಮಲಗುವುದು ಭೂಮಿಯಮೇಲೆ ! ಇಂತು ವತ್ಸರ ವ್ರತದೀಕ್ಷಿತನಾದೆನಗೆ ರಾಜ್ಯವೇಕೆ ? ಭೋಗಗಳೇಕೆ ? ದ್ಯೂತದಲ್ಲಿ ನಾನು ಗೆದ್ದ ಧನವನ್ನು ಮೋಸದಿಂದ ಕಸಿಯದೆ ಕೊಟ್ಟರೆ ಸಾಕು !" ಎಂದನು. ಅದಕ್ಕೆ ಸಮ್ಮತಿಸಿ ವಿರಾಟನು "ನಿನಗೆಷ್ಟು ದಿನಗಳಿರಬೇಕೋ ಎಂತಿರಬೇಕೋ, ಅಷ್ಟು ಕಾಲ, ಅಂತೆಯೆ ಇರು ! ನೀನಿರುವುದೆನಗೆ ಬೇಕು" ಎಂದು ಕುಂತೀಸುತಜ್ಯೇಷ್ಠನನ್ನು ದಿಟ್ಟಿಸಿ ನೋಡಿ, ಪ್ರೀತನಾಗಿ, ತನ್ನ ಕೈಯಿಂದ ಅವನ ಕೈಯನ್ನು ಕುಲುಕಿ ಭಾವವನ್ನರಿತು, ಬೇಕಾದ ವಸನ ವಾಸ ಭೋಗಗಳನ್ನಿತ್ತು ಸತ್ಕರಿಸಿ, ತಾನೂ ಸಂತುಷ್ಟಾಂತರಂಗನಾದನು.

ಆಗ ಭೀಮಸೇನನು ಸೂದವೇಷಧರನಾಗಿ ವಿರಾಟನ ಸಭೆ ಹೊಕ್ಕನು. ಅವನ ಕಂಕುಳಲ್ಲಿ ಖಡ್ಗ (ಶಾಕಪಾಕ ಮಾಂಸಾದಿ ಖಂಡನಕ್ಕೆ), ಒಂದು ಕೈಯಲ್ಲಿ ಸೌಟು, ಇನ್ನೊಂದು ಕೈಯಲ್ಲಿ ಕೋಲು, ಚೂಚುಕಗಳಿದ್ದವು. ಸಣ್ಣ ಪಂಚೆಯನ್ನುಟ್ಟು

ವಸ್ತ್ರವಲ್ಲಿಯನ್ನು ಭುಜದಲ್ಲಿಟ್ಟು ಭೀಮನು ಧರ್ಮರಾಜನು ಪ್ರವೇಶಿಸಿದ ದ್ವಾರವನ್ನು ವರ್ಜಿಸಿ, ಬೇರೊಂದು ಬಾಗಿಲಿನಿಂದ ವಿರಾಟನ ಸಭೆಯನ್ನು ಹೊಕ್ಕು, ರಾಜನ ಸಮೀಪಕ್ಕೆ ಸಾಗಿದನು. ಮದವಾರಣಗಮನನು, ಸಿಂಹಸಂಹನನನು, ಪುಷ್ಪ ಶುಭಲಕ್ಷಣ ವಿಶಿಷ್ಟ ಸುಂದರಕಾಯನು, ನಿರ್ಭಯನು ಆದ ವಲಲನನ್ನು ನೋಡಿ ವಿರಾಟನು ವಿಸ್ಮಯ ಭಯಚಕಿತನಾದನು. ಸಭಿಕರು ದಿಗಿಲುಪಟ್ಟು ಎದ್ದು ನಿಂತರು. ಅವನ ವಿಶಾಲವಕ್ಷದ ಸುಭಗ ಸುಂದರ ಸನ್ನಿವೇಶದಿಂದ ಮುಗ್ಧನಾದ ವಿರಾಟನು ತನ್ನ ಮನದಿ ಇಂತು ಚಿಂತಿಸಿದನು—

'ಈ ಮಹಾನುಭಾವನಾರು ? ಮಾನವಾಕಾರದಿ ಮಹಿಗಿಳಿದುಬಂದ ಮರುತ್ ದೇವನೋ ! ಮಹಾದೇವನೋ ! ಸೂರ್ಯನೋ! ಇಂದ್ರನೋ! ಇವನು ಕೇವಲ ನರನಲ್ಲ. ನನ್ನ ಸಭೆಯಲ್ಲಿ ಇವನನ್ನರಿತವರು ಯಾರಾದರು ಇರುವರೇ ?' ಎಂದು ಪರಿಕಿಸುವಾಗ (ವಲಲನು) ಪವಮಾನ ನಂದನನು ಸಮೀಪಿಸಿ, ವಿರಾಟನಿಗೆ ಬಾಗಿ ನಮಿಸಿ, ವಿನಯದಿಂದಿಂತೆಂದನು—

"ದೇವಾ ! ನಾನು ಪಾಚಕನು. ವಲಲನೆಂದು ಹೆಸರು. ಬೇಕಾದಷ್ಟು, ಬೇಕಾದುದೆಲ್ಲವೂ ಇತ್ತು. ಈಗಿಲ್ಲ. ಅಡಿಗೆಯವನಾಗಿ ಒಂದು ವರ್ಷ ಮಾತ್ರ ನಿನ್ನಲ್ಲಿರಲು ಬಂದಿರುವೆನು. ನೀ ಮೆಚ್ಚುವಂದದಿ ಪಾಕವನ್ನು ಮಾಡಬಲ್ಲೆನು. ನನ್ನ ಪಾಕವೆಂದರೆ ನಲಪಾಕವನ್ನು ಮರೆಸಿಬಿಡುವುದೆಂದು ತಿಳಿ! ಸಾವಿರಮಾತೇಕೆ ? ಉಂಡರಲ್ಲವೇ ತಿಳಿಯುವುದು ಅಡಿಗೆಯ ರುಚಿ! ಅನ್ನವಸ್ತ್ರಗಳಿತ್ತರೆ ಸಾಕು. ಇನ್ನೇನೂ ಬೇಡೆನು. ಇನ್ನೊಬ್ಬರನ್ನು ಬೇಡಿ ಅಭ್ಯಾಸವೂ ಇಲ್ಲ".

ಹೀಗೆಂದ ವಲಲನನ್ನು ನೋಡಿ ವಿರಾಟನು, "ಅಯ್ಯಾ! ನಿನ್ನನ್ನು ಶೂದ್ರನೆಂದು ನಾನು ನಂಬಲಾರದಿರುವೆನು. ಈ ಧರಾಮಂಡಲವನ್ನಾಳಲು ಅರ್ಹನಾದ ಚಕ್ರವರ್ತಿಯಂತಿರುವೆ. ಸೂದವೃತ್ತಿಯನ್ನು ಬಿಡು ! ನಿನಗೆ ಅನುರೂಪವಾದ ವಾಹನ, ಆಸನ, ವಸನ, ಶ್ವೇತಚ್ಛತ್ರ, ಚಾಮರ, ದಾಸದಾಸೀ ಸಹಸ್ರವನ್ನು ಸಮರ್ಪಿಸುವೆನು. ಸ್ವೀಕರಿಸಿ ನನ್ನ ಗಜಸೈನ್ಯಾಧ್ಯಕ್ಷನಾಗಿರು !" ಎಂದನು.

ಭೀಮನಾಮಾತಿಗೊಪ್ಪದೆ "ಮಹಾರಾಜ ! ನನಗೆ ಅವೆಲ್ಲ ಏಕೆ ? ರಾಜರಿಗೆ ಅವರ ಬಂಧು ಮಿತ್ರ ಪರಿವಾರದವರಿಗೆ ಪ್ರಿಯವಾಗುವಂತೆ ಪಾಕವನ್ನು ಮಾಡಬಲ್ಲ ನನಗೆ ಪಾಚಕವೃತ್ತಿಯೇ ಸರಿ ! ಹಿಂದೆ ಧರ್ಮರಾಜನ ಪಾಕಶಾಲಾಧ್ಯಕ್ಷನಾಗಿ, ರಾಜಸೂಯಾದಿ ಯಾಗಕಾಲದಲ್ಲಿ ಕೋಟಿಗಟ್ಟಲೆ ಜನರಿಗೆ ಅಮೃತಾನ್ನವನ್ನುಣಿಸಿದ ಬಾಣಸಿಗನು ನಾನು. ನನಗೆ ಮತ್ತಾವ ವೃತ್ತಿಯೂ ರುಚಿಸದು. ಬೇಕಾದರೆ ಸ್ವೀಕರಿಸು ! ಇಲ್ಲದಿರೆ ಇಲ್ಲನೆಂದು ಕಳಿಸು ! ನಾನು ಬಲವಂತನೆಂದು ನೀನೇ ಕಾಣಬಹುದಾಗಿದೆ. ನನ್ನನ್ನು ಮಲ್ಲಯುದ್ಧದಲ್ಲಿ ಗೆಲ್ಲುವ ಮಲ್ಲನು ನ ಭೂತೋ ನ ಭವಿಷ್ಯತಿ! ಮಲ್ಲರಂಗದಿ ನನ್ನನ್ನು ಕಂಡವನು, ಉತ್ತರಕ್ಷಣದಲ್ಲಿ ಯಮರಾಜನನ್ನು ಕಾಣುವನು. ಇದು ದರ್ಪದ ಮಾತಲ್ಲ. ವಿನೋದಕ್ಕಾಗಿ ಕಾಡುಕೋಣ, ಸಿಂಹ, ಹುಲಿ, ಆನೆಗಳಿಂದ

ಹೋರಾಡಿ, ಲೀಲಾಜಾಲವಾಗಿ ಅವನನ್ನು ಮಟ್ಟಕ್ಕಿ, ಮಣ್ಣು ಮುಕ್ಕಿಸಿದ ನನ್ನ ಆಹವ ಮಲ್ಲತೆಯನ್ನು ಕಂಡು ಯುಧಿಷ್ಠಿರನು ಸಂತೋಷಪಟ್ಟು ನನ್ನನ್ನು ತಮ್ಮನನ್ನಂತೆ ಗೌರವಿಸುತ್ತಿದ್ದನು. ಇಂದವನಿಗೆ ರಾಜ್ಯವಿಲ್ಲದುದರಿಂದ ಗತಿಗೆಟ್ಟು ನಾನು ನಿನ್ನ ಕೀರ್ತಿಯನ್ನು ಕೇಳಿ, ನಿನ್ನನ್ನು ಸೇವಿಸಲು ಬಂದಿರುವೆನು. ನಿನ್ನ ಚಿತ್ತ!" ಎಂದು ಹೊರಡಲನುವಾದನು.

ವಿರಾಟನು ಸಿಂಹಾಸನದಿಂದಿಳಿದು ಬಂದು ವಲಲನ ಕೈಪಿಡಿದು, ನಿಲ್ಲಿಸಿ, ಅನು ನಯಿಸುತ್ತ "ಮಹಾನುಭಾವ! ನಿನ್ನ ಸುಭದ್ರರೂಪ ಮಹಿಮೆಯನ್ನು ಕಂಡು, ಬೆರಗಾಗಿ, ನಾನಾಡಿದ ಮಾತುಗಳನ್ನು ಮರೆತುಬಿಡು! ಸರ್ವವಿಧದಿಂದಲು ನೀನು ನನ್ನಲ್ಲಿ ಎಂತಾದರೂ ನಿಲ್ಲುವುದೆನಗೆ ಬೇಕಾಗಿದೆ. ನನ್ನ ಬಾಣಸಿಗರಿಗೆ ಅಧ್ಯಕ್ಷ ನಾಗಿರು! ನಿನಗೆ ವಿಧೇಯರಾಗದ ಸೇವಕರನ್ನು ನಾನು ದಂಡಿಸುವೆನು ಅಥವಾ ನೀನೇ ದಂಡಿಸಲರ್ಹನಿರುವೆ" ಎಂದು ಅವನನ್ನು ಪಾಕಶಾಲಾಧ್ಯಕ್ಷನಾಗಿ ನೇಮಿಸಿದನು.

ಆಗ ದ್ರೌಪದಿಯು ಭೀಮನು ಶೂದ್ರವೇಷದಿಂದಿರುವುದರಿಂದ ತತ್ಸಜಾತೀಯ ವಾದ ಸೈರಂಧ್ರಿ ವೇಷದಿಂದ ವಿರಾಟಪುರವನ್ನು ಪ್ರವೇಶಿಸಿದಳು. ಆಕೆ ಜಡೆಯಾಗಿ ಹೆಣೆದ ಕಬರೀ ಭಾರವನ್ನು ಬಿಚ್ಚಿ, ಎಡಕೊಪ್ಪು ಧರಿಸಿದಳು. ಸ್ವಲ್ಪ ಮಾಸಿದ ಬಣ್ಣದ ವಸನವನ್ನುಟ್ಟಳು. ಕನಕಕಲಶದ್ವಯವನ್ನು ಪೋಲ್ವ ಸ್ತನಯುಗವನ್ನು ವಲ್ಕಲದ ಹಳೆಯ ಸೆರಗಿನಿಂದ ಮುಚ್ಚಿ, ಪರಿಚಾರಿಕಾಭಾವವನ್ನು ಸ್ಯೈಮನಗಳಿಗೆ ಅಳವಡಿಸಿ, ನಡೆದುಬರುವ ಪಾಂಡವರ ಮಡದಿಯನ್ನು ವಿರಾಟನಗರ ವಾಸಿಗಳು ನಿಬ್ಬೆರಗಾಗಿ ನೋಡಿದರು.

ಮಳೆಗಾಲದ ಮುಗಿಲು ಮುಚ್ಚಿ ಸ್ವಚ್ಛಕಾಂತಿಯನ್ನು ಬೀರದಿರುವ ಚಂದ್ರಕಳೆ ಯಂತೆ, ಶಿಶಿರದ ಹಿಮಕವಿದು ವಿಕಾಸಹೀನವಾದ ಕಮಲ ಸುಮದಂತೆ, ಹೊಗೆ ಮುತ್ತಿ ಕಾಂತಿಗುಂದಿದ ದೀಪಕಳಿಕೆಯಂತೆ, ಧೂಳಿ ಅಡರಿ ಕೆಟ್ಟ ಲತೆಯಂತೆ, ಗ್ರೀಷ್ಮಕಾಲದಿ ಜೀವನಧಾರೆಯೊದಗದೆ ಕೃಶವಾದ ನದಿಯಂತೆ, ಬಿರುಗಾಳಿಗೆ ಸಿಕ್ಕು ಬಳಲುವ ಬಾಳೆಯ ಗಿಡದಂತೆ, ಕ್ರಮವಾಗಿ ಪ್ರಭಾ ಲಾವಣ್ಯ ತೇಜೋ ವೈಭವ ಸೌಂದರ್ಯಗಳನ್ನು ಸೈರಂಧ್ರಿ ವೇಷದಲ್ಲಿ ಅಡಗಿಸಿಟ್ಟು, ಮೆಲ್ಲನೆ ಸುದೇಷ್ಣೆಯ ಮಂದಿರವನ್ನು ಸೇರಪೋಗುವ ಪಾಂಡುನಂದನ ಮಹಿಷಿಯನ್ನು ನಗರನಾರಿಯರು ನೋಡಿ ಇಂತು ಚಿಂತಿಸಿದರು—

ಯಾರಿವಳು? ರತಿಯೋ? ಭಾರತಿಯೋ ಸರಸ್ವತಿಯೋ? ಸಾಮಾನ್ಯ ಮನುಜಕಾಂತೆಗೀ ಸೊಬಗುಂಟೇ? ಲಾವಣ್ಯ ಸೌಂದರ್ಯ ಹಾವಭಾವ ವಿಲಾಸಗಳನ್ನು ಕಂಡು ಇವಳು ಬೃಂದಾರಕ ಸುಂದರಿ ಎಂದು ಸಂದೇಹವಾಗುತ್ತಿದೆ—ಇಂತು ಚಿಂತಿಸಿ, ಕೆಲ ಪುರಕಾಂತೆಯರು ಸೈರಂಧ್ರಿಯನ್ನು ಸಮೀಪಿಸಿ "ಯಾರು ನೀನು? ಎಲ್ಲಿಗೆ ಪೋಗುತ್ತಿರುವೆ? ಯಾರವಳು?" ಎಂದು ಕೇಳಿದರು. ಮಾಲಿನಿಯು ಅವರನ್ನು

ನೋಡಿ ಸಂಭಾವಿಸಿ, ಸುಮುಖಳಾಗಿ "ನಾನು ಸೈರಂಧ್ರಿಯು. ಅನ್ನವಸ್ತ್ರಗಳನ್ನಿತ್ತು, ಗೌರವದಿಂದ ಕಾಪಾಡುವ ಸುಜನರನ್ನು ಸೇವಿಸಲು ಬಂದಿರುವೆನು' ಎಂದು ಬದಲುತ್ತರಿಸಿದಳು. ಅವರಿಗೆ ಆಶ್ಚರ್ಯವಾಯಿತು. "ಇಂತಹ ಸೌಭಾಗ್ಯವತಿ ಪರರ ಸೇವೆ ಗೈವಳಂತೆ! ಅನ್ನ ವಸ್ತ್ರಗಳ ಹೊರತು ಅನ್ಯವನ್ನು ಒಲ್ಲಳಂತೆ! ಗೌರವದಿಂದ ನಡೆದುಕೊಳ್ಳುವವರಾಗಬೇಕಂತೆ? ಈ ವನಿತಾರತ್ನವು ರಾಣಿಯ ಅಂತಃಪುರಭೂಷಣ ವಾಗಬಹುದಾಗಲಿ ಸಾಮಾನ್ಯರಲ್ಲಲ್ಲ" ಎಂದು ಮಾತನಾಡುತ್ತಿದ್ದ ಸಮಯದಲ್ಲಿ ರಾಜಪತ್ನಿ ಸುದೇಷ್ಣೆ ಅವಳನ್ನೂ ಅವರನ್ನೂ ಜಾಲರಂಧ್ರದಿಂದ ನೋಡಿ, ಕೌತೂಹಲ ಸಮನ್ವಿತಳಾದಳು. ಆವಳು ಕಳಿಸಿದ ಪರಿಚಾರಿಕೆಯರು ಬಂದು "ಅಮ್ಮ! ರಾಜ ಮಹಿಷಿಯು ನಿನ್ನನ್ನು ನೋಡಲಿಚ್ಛಿಸಿರುವಳು ಬಾ!" ಎಂದು ಕರೆದರು.

ಮಾಲಿನಿಯು ತನ್ನ ಸೆರಗನ್ನು ತಲೆಯಮೇಲೆ ಸರಿಯಾಗಿ ಸೆಳೆದು, ವಿನಯ ನಯಲಾವಣ್ಯಗಳು ಮೂರ್ತೀಭವಿಸಿ ಬಂದಂತೆ ಮೆಲ್ಲನೆ ನಡೆದು, ಕೇಕಯ ರಾಜಸುತೆ ಯಾದ ಸುದೇಷ್ಣೆಯ ಸೌಧಾಗ್ರಭಾಗವನ್ನು ಸೇರಿ, ಸುದೇಷ್ಣೆಯನ್ನು ಸಮೀಪಿಸಿದಳು. ಆ ವನಿತಾಮಣಿ ನಡೆದೆಡೆ ಕಮಲಕೋಮಲ ಪಾದತಲಗಳ ಅರುಣಕಾಂತಿ ಪಸರಿಸಿ, ಮಾಣಿಕ್ಯಕುಟ್ಟಿಮವಾಯಿತು. ಅವಳ ಸುವರ್ಣಶರೀರ ಕಾಂತಿಯಿಂದ ಕುಡ್ಯಖಚಿತ ವಾಗಿದ್ದ ಸ್ಫಟಿಕಶಿಲೆಗಳು ಕನಕಶಿಲೆಗಳಾದವು. ಕಮಲನೇತ್ರಿಯ ಕಟಾಕ್ಷಗಳು ವ್ಯಾಪಿಸಿದಲ್ಲಿ ನೀಲಕಮಲಹಾರಗಳು ಜೋತುಬಿಟ್ಟಂತಿತ್ತು. ಅವಳ ನೀಲಕೇಶರಾಶಿಯ ಕಪ್ಪಡರಿ ಮೇಲಿನ ಧವಳವಿಕಾರವು ಮೇಘಮಂಡಲವಾಯಿತು. ಇಂತು ದ್ರೌಪದೀ ದೇವಿಯು ಮಂದಿರಕ್ಕೆ ಬಂದುದರಿಂದ ವಿರಾಟನ ಅಂತಃಪುರವು ದಿವ್ಯನೂತನ ಶೋಭಾ ಸಂಪನ್ನವಾಯಿತು.

ಬಂದ ಸುಂದರಿಯನ್ನು ಕಂಡು ಕೇಕಯರಾಜನಂದನೆಯು ದಿಗ್ಭ್ರಮೆಹೊಂದಿ, ಮತ್ತೆ ಎಚ್ಚೆತ್ತು, ಮುಂದೆ ಬಂದು, ಅವಳನ್ನು ಆಪಾದಮಸ್ತಕವಾಗಿ ವೀಕ್ಷಿಸಿದಳು. ರಾಣಿಯ ಮುಖದಲ್ಲಿ ಗೌರವ, ಮುಂಚಾಚಿದ ಕೈಯಲ್ಲಿ ಆದರ, ಬಾಗಿದ ಶರೀರದಲ್ಲಿ ನಮ್ರತೆ, ಮಂದಹಾಸದಲ್ಲಿ ಪ್ರೀತಿ, ಅರಳಿದ ಕಣ್ಣಲ್ಲಿ ಸ್ವಾಗತಸೂಚನೆ, ಅಪ್ರಯತ್ನ ವಾಗಿ ತೋರುತ್ತಿದ್ದವು. ದ್ರೌಪದಿಯು ತಲೆ ತಗ್ಗಿಸಿ, ರಾಣಿಯ ಸಹೃದ್ಭಾವವನ್ನು ಮೆಚ್ಚಿ, ಕೃತಜ್ಞಳಾದಳು.

ಸುದೇಷ್ಣೆಯು 'ಸುಂದರಾಂಗಿ! ಯಾರು ನೀನು? ಯಾರವಳು? ಕುಲ ವಾವುದು? ಪೆಸರೇನು? ಏಕೆ ಬಂದೆ?' ಎಂದಳು. ಆ ಮಾತಿಗೆ ದ್ರೌಪದಿಯು 'ಅಮ್ಮಾ! ನಾನು ಸೈರಂಧ್ರಿ ಜಾತಿಗೆ ಸೇರಿದವಳು. ನನ್ನನ್ನು ಮಾಲಿನೀ ಎಂದು ಕರೆಯಬಹುದು. ಪತಿಗಳೈವರು ವೀರಗಂಧರ್ವರೆನಗೆ. ಕಾರಣಾಂತರದಿಂದ ದುರ್ವೈರಿ ಜನರ ಕೈಗೆ ಸಿಕ್ಕಿದೆ. ಪರಿಭೂತಿಪಟ್ಟೆ. ಕೊನೆಗೆ, ವನದಿ ಬಲುಕಾಲವಿದ್ದು ವಲ್ಲಭರ ಕೂಡ, ಬ್ರಹ್ಮಚರ್ಯವ ನಡೆಸಿದೆ ನಿಂದು ನಿಯಮದಿಂದ ಸಂವತ್ಸರವನಿಲ್ಲಿ ಕಳೆಯಲೆಣಿಸಿ ಬಂದೆನೋ ದೇವಿ! ನೀ ಧರ್ಮಪರಳು ಎಂದು ಕೇಳಿ ನಿನ್ನನ್ನು

ಸೇವಿಸಬಂದ ನನ್ನ ಗೌರವದ ರಕ್ಷೆ ನಿನ್ನ ಹೊಣೆ ಎಂದು ತಿಳಿದು ಕಾಪಾಡು !" ಎಂದು ಪ್ರಾರ್ಥಿಸಿದಳು.

ಸುದೇಷ್ಣೆಯು ಆ ಮಾತನ್ನು ನಂಬಲಾರದೆ "ದೇವಿ ! ಸುರ ಕಿನ್ನರ ವಿದ್ಯಾಧರ ನಾಗ ಸಿದ್ಧ ವನಿತೆಯರಲ್ಲಿ ನೀನಾರೋ ತಿಳಿಯದಾಗಿದೆ. ನಿನ್ನನ್ನು ಸೇವಾವೃತ್ತಿಗೆ ಗುರಿಮಾಡಲಾಗದು. ನಿಜವನ್ನು ಹೇಳು ! ನೀನಾರು ?" ಎಂದು ಕೇಳಿದಳು. ದ್ರೌಪದಿಯು ಮಂದಸ್ಮಿತಭಾಸುರವದನೆಯಾಗಿ "ಕೇಳು ರಾಜಪತ್ನಿ ! ಹಿಂದೆ ಕೃಷ್ಣ ದೇವನ ಮಹಿಷೀಮಣಿಯಾದ ಸತ್ಯಭಾಮಾದೇವಿಯು ಮಂದಿರದಲ್ಲಿದ್ದೆ. ಅನಂತರ ಪಾಂಚಾಲಿಯಲ್ಲಿ ವರ್ತಿಸಿದೆನು. ಪರಿಚಾರಿಕೆಯಾಗಿದ್ದು ಸೈರಂಧ್ರಿ ಕಾರ್ಯನಿರ್ವಹಣ ಪರಳಾಗಿ ಅವಳ ಮೆಚ್ಚುಗೆಯನ್ನು ಗಳಿಸಿದೆನು. ನನಗೆ ದ್ರೌಪದೀದೇವಿಯು ಪ್ರಾಣ ವಾಗಿದ್ದಳು. ನಾನವಳ ಪ್ರಾಣದಂತೆ ಪ್ರಿಯಕರಳಾಗಿ, ಗೌರವದಿಂದ ಬಾಳಿದೆನು. ನೀನು ಕೂಡ ನನಗೆ ನೀಚಕಾರ್ಯಗಳನ್ನು ಹೇಳದೆ, ಮರ್ಯಾದೆಯಿಂದ ನಡೆಸಿ ಕೊಳ್ಳುವೆಯಾದರೆ ನಿನ್ನಲ್ಲಿರುವೆನು. ಸದಾಚಾರ ವಿರುದ್ಧವನ್ನೆಂದಿಗೂ ಮಾಡೆನು, ತಿಳಿ ! ದಿವ್ಯ ಗಂಧಗಳನ್ನು ತಯಾರಿಸುವೆನು. ಬಹುವಿಧ ತಿಲಕಗಳನ್ನು ತಿದ್ದಿ ಮುದ್ದಾಗಿ ಇಡುವೆನು. ಪುಷ್ಪಮಾಲೆಗಳನ್ನು ಚಿತ್ರಚತುರವಾಗಿ ಕಟ್ಟುವೆನು. ಪಾದಸಂವಾಹನ, ಶಯ್ಯಾಸ್ತರಣ, ಜಲಾನಯನ ಮೊದಲಾದ ನೀಚಕಾರ್ಯ ಗಳನ್ನೆಂದಿಗೂ ಮಾಡಲಾರೆನು. ನಿನಗೆ ಸಮ್ಮತವಾದರೆ ನನ್ನ ಸೇವೆಯನ್ನು ಸ್ವೀಕರಿಸು !' ಎಂದು ತಿಳಿಸಿದಳು.

ಸುದೇಷ್ಣೆ ಮಾಲಿನಿಯ ಮಾತಿಗೊಪ್ಪಿದಳು. ಆದರೆ ಕೊಂಚ ಸಂಶಯ ದಿಂದಲು, ಮಾಲಿನಿಯ ದಿವ್ಯರೂಪವನ್ನು ನೋಡಿದ ಆಶ್ಚರ್ಯದಿಂದಲು ಚಕಿತಳಾಗಿ, "ಮಾಲಿನಿ ! ನಿನ್ನನ್ನು ನೋಡುವ ಮಡದಿಯರಿಗೂ ಮೋಹವುಂಟಾಗುತ್ತಿರಲು, ಪುರುಷರ ಪಾಡೇನು ? ನಿನ್ನ ರೂಪಶ್ರೀಗೆ ಮಾರುಹೋದ ವಿರಾಟನಿಂದ ನನ್ನ ಸಂಸಾರವೇ ಕುಸಿದರೆ ನನ್ನ ಗತಿ ಏನು ? ನಿನ್ನನ್ನು ನನ್ನಲ್ಲಿಟ್ಟುಕೊಳ್ಳುವುದೆಂದರೆ ಕರ್ಕಟಿಕಾಗರ್ಭಧಾರಣದಂತೆ ಆತ್ಮವಿನಾಶಕಾರಣವೇ ಆಗಿದೆ. ಇದಕ್ಕೆ ಪರಿಹಾರ ವೇನು ?" ಎಂದು ಕೇಳಿದಳು.

ಮಾಲಿನಿಯು 'ಅಮ್ಮ ! ನಿನ್ನ ಅಭಿಪ್ರಾಯವು ಸರಿಯಲ್ಲ. ನಾನು ಮಹಾ ಪತಿವ್ರತೆಯು. ನನ್ನ ಐವರು ಪತಿಗಳು ಸಾಮಾನ್ಯರಲ್ಲ. ನಯ ವಿಕ್ರಮ ಬಲೋ ಪಾಯ ಚತುರರಾದ ಅವರಿಗೆ ತ್ರಿಲೋಕಗಳಲ್ಲಿ ಎದುರಿಲ್ಲ. ಒಂದು ಕ್ಷಣವಾದರೂ ಬಿಡದೆ, ಅವರು ಗಂಧರ್ವರೂಪರಾಗಿ, ಇತರರಿಗೆ ಗೋಚರವಾಗದೆ, ಗುಪ್ತರಾಗಿದ್ದು ನನ್ನನ್ನು ರಕ್ಷಿಸುತ್ತಿರುವರು. ನಿನ್ನ ಶಂಕೆಯನ್ನು ಬಿಡು ! ಇನ್ನು ದುಷ್ಟರು ನನ್ನನ್ನು ಕೆಟ್ಟಕಣ್ಣಿನಿಂದ ನೋಡಿದರೆ, ಮರುದಿನ ಸೂರ್ಯೋದಯವನ್ನು ಅವರು ಕಾಣದಾಗು ವರು. ಶೌರ್ಯಮದಾಂಧರಾದ ಬಂಧುಶತಸಹಿತರಾಗಿ ಬಂದರೂ ನನ್ನ ಪತಿ ಗಂಧರ್ವರು ಲೀಲಾಜಾಲವಾಗಿ ಅದರ ಸಂಧಿಬಂಧಗಳನ್ನು ಮುರಿದು ವಿಚಿತ್ರಮರಣಕ್ಕೆ

ಗುರಿವಮಾಡುವರು. ಇದನ್ನರಿತು ಯಾವ ನರನೂ ನನ್ನನ್ನು ಕಣ್ಣೆತ್ತಿ ನೋಡ ಲಾರನು. ನನ್ನ ಚಿತ್ತವನ್ನು ನೀನರಿಯೆ. ಅಸ್ಮದೀಯ ಕುಲಾಚಾರಶಿಕ್ಷಿತವಾದ ನನ್ನ ಮನವು ನಿರ್ಮಲವಾಗಿದೆ. ಇನ್ನಂತಹ ಕೀಳುನುಡಿಗಳನ್ನೆನ್ನ ಮುಂದೆ ನುಡಿಯ ಬೇಡ! ನಿರ್ಭಯಳಾಗಿರು! ಬಿಡು ಅನುಮಾನವನ್ನು! ಕೊಡು ನಿನ್ನಾಶ್ರಯ ವನ್ನೆನಗೆ! ಸಾಧುಜನರು ಹಿರಿಯರು ಮೆಚ್ಚುವಂದದಿ ಅಚ್ಚುಮೆಚ್ಚಾಗಿ ಕಾರ್ಯ ಗಳನ್ನು ನಿರ್ವಹಿಸಿ ನಿನ್ನ ಪ್ರೀತಿಗೆ ಪಾತ್ರಳಾಗುವೆನು. ಆದರೆ ಕೇಳಿಲ್ಲಿ! ಎಂಜಲನ್ನು ಕೊಡಬೇಡ! ನೀಚಕಾರ್ಯಗಳಲ್ಲಿ ನಿಯಮಿಸಬೇಡ!" ಎಂದು ಪೇಳಿದಳು. ಸುದೇಷ್ಣೆ ಸಮಾಧಾನಪಟ್ಟು, ಸಂತಸದಿಂದ ಸೈರಂಧ್ರಿಯನ್ನು ತನ್ನಲ್ಲಿರಿಸಿಕೊಂಡಳು. ಮಾಲಿನಿಯೂ ಅವಳ ಮನದಿಂಗಿತದಂತೆ ವರ್ತಿಸುತ್ತಾ, ಮಾನಾಭಿಮಾನ ರಕ್ಷಣತತ್ಪರ ಳಾಗಿ, ಮಾನಿನಿಯರ ಮಧ್ಯದಲ್ಲೇ ವರ್ತಿಸುತ್ತಿದ್ದಳು.

ಆಗ ಅರ್ಜುನನು ಬೃಹನ್ನಟ ವೇಷದಿಂದ ವಿರಾಟನ ಸಭೆಗೆ ಬಂದನು. ಕಟಿ ಯಲ್ಲಿ ಸೀರೆಯನ್ನುಟ್ಟು, ಸೆರಗಿಲ್ಲದೆ ಕುಪ್ಪಸವನ್ನು ತೊಟ್ಟು, ಸ್ತ್ರೀ ವೇಷದಿಂದ ತನ್ನ ದಿವ್ಯ ಸೌಂದರ್ಯವನ್ನು ಮರೆಮಾಚಿ, ಮುಂಗುರುಳಡರಿದ ಮುಖವನ್ನು ತಗ್ಗಿಸಿ ಬಂದ ಬೃಹನ್ನಳೆಯು ಮೇಘಾವೃತನಾದ ಮಾರ್ತಾಂಡನಂತೆ, ಬೆಳಗಿ- ಬೆಳಗದಿದ್ದಳು. ವಿಷ್ಣುವೇ ಸ್ತ್ರೀ ವೇಷವನ್ನು ಧರಿಸಿ ಬಂದನೆಂಬಂತಿದ್ದ ಅರ್ಜುನನು ಹೇಡಿ ಯಂತೆ ನಟಿಸುತ್ತಾ ಸಭೆಯನ್ನು ಪ್ರವೇಶಿಸಿದನು. ಬೈತಲೆಯನ್ನು ತಿದ್ದಿ, ಕೇಶರಾಶಿಯನ್ನು ಹರವಿ, ಕಿವಿಯಲ್ಲಿ ಹವಳದ ಓಲೆಗಳನ್ನು ಧರಿಸಿ, ಕೈಲಿ ಕಂಕಣ ಗಳನ್ನು ಧರಿಸಿ ಬಂದ ಅರ್ಜುನನನ್ನು ನೋಡಿ, ಬಚ್ಚಿಡಲಾಗದ ಅವನ ಪ್ರಾಂಶುದೇಹ, ವಿಶಾಲವಕ್ಷ, ದೀರ್ಘಬಾಹು, ಗಂಭೀರಗಮನಗಳನ್ನು ಉಪಲಕ್ಷಿಸಿ, ವಿರಾಟನು ತನ್ನ ಸಭಿಕರಿಗಿಂತೆಂದನು—

"ವನಿತಾವೇಷದಿ ಬಂದ ಮಹಾಪುರುಷನಂತಿದೆ! ಈ ಮಹಾನುಭಾವ ಯಾರಿರಬಹುದು? ಲೀಲೆಗಾಗಿ ಬಾಲೆಯ ರೂಪದಿಂದ ಬಂದ ಇಂದ್ರನಿರಬಹುದೇ? ನಿಮ್ಮಲ್ಲಿ ಇವನನ್ನು ಕಂಡರಿತವರಿರುವಿರೇ?"

ವಿರಾಟನ ಮಾತಿಗೆ ಸಭಿಕರು ಬದುಲಿಡದೆ ಸುಮ್ಮನಿರಲು, ವಿಜಯನು ವಿರಾಟ ನನ್ನು ಸಮೀಪಿಸಿ, ವಿನಯದಿಂದ ನಮಿಸಿ, "ಮಹಾರಾಜ! ನಿನ್ನ ಸೇವೆಕೋರಿ ಬಂದಿರುವೆನು. ನನ್ನ ಹೆಸರು ಬೃಹನ್ನಳೆ. ಕನ್ಯೆಯರಿಗೆ ನೃತ್ಯಗಾನಂಗಳನ್ನು ಕಲಿಸಬಲ್ಲೆನು" ಎಂದು ಬೇಡಿದನು.

ಆ ಮಾತನ್ನು ನಂಬದೆ ವಿರಾಟನು "ಮಹಾತ್ಮ! ವಿಶಾಲವಕ್ಷ, ತಾಮರಸ ಲೋಚನಗಳು, ಉನ್ನತ ಭುಜಗಳು, ಪ್ರಸನ್ನ ಮುಖಮಂಡಲ, ದಿವ್ಯರೂಪಗಳು, ನೀನು ದೇವಪರಿವೃಢನೆಂದು ಪೇಳದೆ ಪೇಳುತ್ತಿವೆ. ಇಂತಹ ಸರ್ವಾಂಗ ಸುಂದರನನ್ನು, ಇಂತಹ ಸಿಂಹಸಂಹನನನ್ನು ಹೇಡಿಯನ್ನಾಗಿ ನಿರ್ಮಿಸಿದ ವಿಧಿಯನ್ನು ನಿಂದಿಸದೆ ವಿಧಿಯಿಲ್ಲ. ಕೋದಂಡ ಕಾಂಡವನ್ನು, ತೂಣದ್ವಯವನ್ನು ದಿವ್ಯ ಕವಚಖಡ್ಗ

ಗಳನ್ನು ನಿನಗೆ ಕೊಡುವೆನು. ಗಜ ತುರಗ ರಥಗಳನ್ನೂ ಸಮರ್ಪಿಸುವೆನು. ಸರಿಯಾದ ಪದವಿಯನ್ನು ತಕ್ಕ ವೈಭವವನ್ನು ನಿನಗಿತ್ತು, ಸ್ನೇಹಿತನಾಗಿ ಇರಬೇಕೆನಿಸುತ್ತದೆ. ನೀನೋ ಹೇಡಿಯಾಗಿ, ನರ್ತನಾಗಾರದ ಉದ್ಯೋಗವನ್ನು ಬಯಸುತ್ತಿರುವೆ !" ಎಂದನು.

ಬೃಹನ್ನಳೆ ಇಂತೆಂದಳು—"ರಾಜನ್! ನಿಜವಾದ ತರುಣಿಯಲ್ಲ ನಾನು, ಶಾಪವಶದಿಂದ ನಪುಂಸಕತ್ವವು ಒದಗಿಬಂದಿದೆ. ಇದು ಶಾಶ್ವತವಲ್ಲ, ಪೂರ್ವಕರ್ಮಫಲವನ್ನು ಎಂತಹವರೂ ಉಣದೆ ಬಿಡಲಾಗದು. ಕೈಯಿಂದ ದೂರದೂಡಲಪುದೇ ಕೈಯಾರ ಮಾಡಿದ ಕರ್ಮದ ಫಲವನ್ನು? ಇನ್ನೊಂದು ಕೆಲಸವನ್ನು ಈಗ ನಾನು ಮಾಡಲಾರೆನು: ಲಾಸ್ಯ ನೃತ್ಯ ವಾದ್ಯ ಗೀತಗಳನ್ನು ಚಿಕ್ಕಂದಿನಿಂದ ಕಲಿತಿರುವೆನು. ಕುಣಿಯುವುದಲ್ಲದೆ ಕುಣಿಸಲು ಬಲ್ಲೆನು. ವಿಶ್ರುತ ವಾದ್ಯಗಳನ್ನು, ಮಂಜುಲ ಶ್ರುತಿವಿಧಾನಗಳನ್ನು, ಸಪ್ತಸ್ವರ ವೈಚಿತ್ರ್ಯವನ್ನು, ತ್ರಿಂಶದ್ಗೀತಿಕಾ ಗತಿಯನ್ನು, ಸದ್ಭಾವ ಭಂಗಿಯನ್ನು, ಜನ್ಯ ಜನಕ ರಾಗದ ಸಮುತ್ಪಾದನವನ್ನು—ಇವೆಲ್ಲವನ್ನೂ ಪ್ರತಿಬಿಂಬಿಸುವ ದಿವ್ಯಾಭಿನಯವನ್ನು ಅರಿತಿರುವೆನು. ಚತುರರಲ್ಲದ ತರುಣಿಯರು ನನ್ನ ಶಿಷ್ಯಾಣಿಯರಾದರೆ ಬೇಗನೆ ಗೀತನರ್ತನ ಚತುರರಾಗುವರು. ನಗರಿಯಲ್ಲಿ ನೇಪಥ್ಯ ಶೃಂಗಾರ, ವೇಷಗುಂಭನ, ವರ್ಣವಿಲೇಪನ, ಪುಷ್ಪ ವಸ್ತ್ರಾಲಂಕರಣಗಳನ್ನು ಮಾಡುವಲ್ಲಿ ನನಗೆ ಮೇಲ್ಮೈಯುವರಿಲ್ಲವೆಂದು ತಿಳಿ!" ಆ ಮಾತನ್ನು ಕೇಳಿ ಸಭಾಸದರು ವಿಧಿವಿಲಾಸವನ್ನು ನೆನೆದು ವಿಷಣ್ಣರಾದರು.

ವಿರಾಟನು ನಿಪುಣಮತಿಯಾದ ಬೃಹನ್ನಳೆಯ ಸೇವೆಯನ್ನು ಸ್ವೀಕರಿಸಲು ನಿಶ್ಚಯಿಸಿ, ತನ್ನ ಮುದ್ದುಕುವರಿಯಾದ ಉತ್ತರೆಯನ್ನು ಕರೆತರಿಸಿದನು. ಕಮಲಗಳು ಹಾಸಿದಂತಾಗುತ್ತಿರಲು ನಡೆದುಬರುವ ಉತ್ತರೆ, ಕಂದರ್ಪದರ್ಪವನ್ನಡಗಿಸುವ ಉದ್ದೇಶದಿಂದ ವಿಧಿಯು ನಿರ್ಮಿಸಿದ ಚಿನ್ನದ ಗೊಂಬೆಯಂತೆ ಬೆಳಗುತ್ತಾ, ಮುಂಗುರುಳ ದುಂಬಿಗಳನ್ನು ಮುಖಪದ್ಮದಿಂದ ದೂರಕ್ಕೆ ದೂಡುತ್ತಾ, ಒತ್ತಿಬರುವ ಸ್ತನಕುಟ್ಮಲ ಭಾರದಿಂದ ಬಳುಕುತ್ತಾ, ಮಿಂಚಿನ ಬಳ್ಳಿಗಳನ್ನು ದಿಕ್ಕೆಡುವಂತೆ ಮಾಡುವ ನೋಟಗಳನ್ನು ಬೀರುತ್ತಾ, ವಿರಾಟನ ಸಭೆಯನ್ನು ಪೊಕ್ಕಳು. ಪಾದಾರವಿಂದಗಳು, ಅಂಗುಲೀ ರಸಾಲಪಲ್ಲವಗಳು, ಅಧರಾಶೋಕಸುಮಕುಟ್ಮಲ, ದಂತಪಂಕ್ತಿನವಮಲ್ಲಿಕೆ, ನಯನ ನೀಲೋತ್ಪಲಗಳೆಂಬ ಪಂಚಬಾಣಗಳನ್ನು ಭ್ರೂಧನುವಿನಲ್ಲಿ ಹೂಡಿ ಪುಷ್ಪಬಾಣನು ಬಿಟ್ಟ ಅಮೋಘ ಶರದಂತೆ ನಡೆದುಬರುವ ಉತ್ತರೆ, ತನ್ನ ಸಖಿಯರನ್ನು ದೂರದಲ್ಲಿ ನಿಲ್ಲಿಸಿ, ವಲ್ಲಿಯಂತೆ ಬಾಗಿ, ತಂದೆಗೆ ವಂದಿಸಿದಳು. ಅವಳನ್ನೆತ್ತಿ ವಿರಾಟನು, ತಲೆಯ ಮೇಲೆ ಕೈಸವರಿ, ಕಣ್ಣೆಟ್ಟು ತಣಿಯದೆ ನೋಡಿ ನೋಡಿ, ಉಪಲಾಲಿಸಿದನು. ಅವನು ಬೃಹನ್ನಳೆಯನ್ನು ಕರೆದು, ಅವಳಿಗೆ ಉತ್ತರೆಯನ್ನೊಪ್ಪಿಸಿ, ಕರ್ಪೂರ ತಾಂಬೂಲ ವಸ್ತ್ರಭೂಷಣಗಳನ್ನು ಸಂಭಾವನೆಯಾಗಿತ್ತು—

"ಬೃಹನ್ನಲೆ! ಚತುರಮತಿಯಾದ ನಿನಗೆ ಹೇಳಬೇಕಾದುದಿಲ್ಲ. ಈ ಕನ್ಯೆಯನ್ನು ಇಂದು ನಿನಗೊಪ್ಪಿಸಿರುವೆನು. ನನಗೆ ಉತ್ತರೆಯೆಂದರೆ ಪ್ರಾಣವೆಂದು ತಿಳಿ! ಸಖಿಯರಿಂದ ಕೂಡಿ ಆಟಗಳನ್ನಾಡುತ್ತಾ, ಬಲು ಬೇಗ ಬೆಳೆದು ನಿಂತಿಹಳು. ಮುದ್ದಿನ ಮಗಳೆಂದು ಶಿಕ್ಷೆಗೆ ಗಮನ ಕೊಟ್ಟಿಲ್ಲ. ಇವಳ ಮನಸ್ಸು ಲಲಿತ ಕಳಾಸಕ್ತವಾಗುವಂತೆ ನಯವಾಗಿ ಶಿಕ್ಷಿಸುವ ಭಾರ ನಿನ್ನದು. ಇವಳಿಗೆ ನೀನೇ ಗತಿಯು" ಇಂತೆಂದು ವಿರಾಟನು ಉತ್ತರಾಹಸ್ತವನ್ನೆತ್ತಿ, ಬೃಹನ್ನಲಾ ಹಸ್ತದಿ ಸಮರ್ಪಿಸಿ, "ಕುಮಾರಿ! ಇವಳು ನಿನ್ನ ಗುರುವು. ಅವಳು ಪೇಳದಂತೆ ನಡೆ! ಭಕ್ತಿಯಿಂದ ಗೌರವಿಸು! ಆಹಾರ-ಪಾನೀಯಗಳಲ್ಲಿ, ವಿಹಾರ ವಿಶ್ರಾಂತಿಗಳಲ್ಲಿ, ಚಂದನ ಸುಮಶಯನಾದಿ ಭೋಗಗಳಲ್ಲಿ ಕೊರತೆ ಬರದಂತೆ ನೋಡಿಕೊಳ್ಳುವುದು ನಿನ್ನ ಕರ್ತವ್ಯ! ಗುರುವೆಂದರೆ ಎಲ್ಲ ಬಂಧುಗಳಿಗೂ ಮಿಗಿಲೆಂದು ತಿಳಿ! ಬುದ್ಧಿಯಿಂದ ವರ್ತಿಸಿ ಸುಶಿಕ್ಷಿತಳೆನಿಸು" ಎಂದು ಮಗಳಿಗೆ ಉಪದೇಶಿಸಿದನು. ಉತ್ತರೆಯು ಬೃಹನ್ನಲೆಯನ್ನು ಕರೆದುಕೊಂಡು, ಸಖಿಯರಿಂದಲು ಕೂಡಿ, ಅಂತಃಪುರವನ್ನು ಪ್ರವೇಶಿಸಿದಳು.

ಆಗ ನಕುಲನು ಸೂತವೇಷದಿಂದ ವಿರಾಟ ಸಭೆಗೆ ಬಂದನು. ದೈವಯೋಗದಿಂದ ಆ ಸಮಯದಲ್ಲಿ ರಾಜನು ಸಿಂಧುದೇಶದಿಂದ ಬಂದಿದ್ದ ತುರಗಗಳನ್ನು ಪರೀಕ್ಷಿಸುತ್ತಿದ್ದನು. ಸೂರ್ಯನ ದರ್ಶನದಿಂದ ಕಮಲಗಳಂತೆ, ನಕುಲನ ವಿಭ್ರಾಜಮಾನ ಸುಂದರ ಶರೀರದರ್ಶನದಿಂದ ಸಭಾಸದರ ನೇತ್ರಕಮಲಗಳು ವಿಕಸಿತವಾದುವು. ನಕುಲನು ವಿರಾಟನನ್ನು ಸಮೀಪಿಸಿ, ಅಲ್ಲಿ ನಿಂತಿದ್ದ ಸುಂದರ ಸೈಂಧವಗಳನ್ನು ಕಣ್ಣಿಟ್ಟು ನೋಡಿ ಪರೀಕ್ಷಿಸುತ್ತಿದ್ದನು. ಅದನ್ನು ಕಂಡು ವಿರಾಟನು ತನ್ನ ಪರಿಜನರಿಗಿಂತೆಂದನು— "ಯಾರೀ ಮಹಾನುಭಾವನು? ಇವನ ದಿವ್ಯ ಸುಂದರರೂಪವನ್ನು ನೋಡಿದರೆ ಮನ್ಮಥನೋ, ಜಯಂತನೋ, ವಸಂತನೋ ಎನಿಸುತ್ತಿದೆ. ಅಶ್ವಪರೀಕ್ಷಣವನ್ನು ಆಸಕ್ತಚಿತ್ತನಾಗಿ ಮಾಡುವನಿವನು ಅಶ್ವಶಾಸ್ತ್ರನಿಪುಣನಿರಬಹುದೇ? ನಿಮ್ಮಲ್ಲಿ ಯಾರಿಗಾದರೂ ಇವನ ಪರಿಚಯವಿದೆಯೇ? ವಿಚಾರಿಸಿ ಪೇಳಿ!" ಆ ಮಾತನ್ನಾಲಿಸಿ ನಕುಲನು ವಿರಾಟನನ್ನು ಸಮೀಪಿಸಿ, "ಮಹಾರಾಜ! ನನ್ನನ್ನು ದಾಮಗ್ರಂಥಿ ಎಂಬುವರು' ಎಂದು ವಂದಿಸಿ, ಮತ್ತೆ ಇಂತೆಂದನು—'ಅಶ್ವವಿದ್ಯಾಪಾರಂಗತನಾದ ನನಗೆ ಒಂದು ವರ್ಷ ಮಾತ್ರ ಆಶ್ರಯವನ್ನು ನೀಡು! ಅಶ್ವಲಕ್ಷಣಗಳನ್ನು, ಅವುಗಳ ಆಯುಃಪ್ರಮಾಣ, ಗರ್ಭಲಿಂಗಾದಿ ವಿವರ, ವಯೋಮಾನ, ದೇಶಕಾಲೋಚಿತ ಆಹಾರದಾನ, ಔಷಧಾದ್ಯುಪಚಾರ, ಜಾತಿವಿವೇಕ, ಶಿಕ್ಷಾವಿಧಿ, ವ್ಯಾಯಾಮ ವಿಧಾನ, ಚಿಕಿತ್ಸಾ ಪರಿಕರ, ಮೊದಲಾದ ಎಲ್ಲ ವಿಷಯಗಳನ್ನು ತಿಳಿದು, ನಿನ್ನ ಅಶ್ವ ಸಂಖ್ಯೆಯನ್ನು ಇಮ್ಮಡಿ ಮೂರ್ಮಡಿಯಾಗಿ ಬೆಳೆಸಬಲ್ಲೆನು. ಯುದ್ಧ ಸಮಯಗಳಲ್ಲಿ ಅಶ್ವಸೈನ್ಯವನ್ನು ನಡೆಸಿ ಜಯಶಾಲಿಯಾಗುವಂತೆ ನಡೆಸುವೆನು. ಎಲ್ಲ ರೀತಿಯಿಂದಲು ಪ್ರಯತ್ನಿಸಿ, ಅಶ್ವಶಾಲಾಧ್ಯಕ್ಷನಾಗಿ ಹಿಂದೆ ಧರ್ಮರಾಜನನ್ನು ಮೆಚ್ಚಿಸಿದಂತೆ ನಿನ್ನನ್ನೂ ಸಂತೋಷಪಡಿಸುವೆನು."

*

ವಿರಾಟನು ನಕುಲನ ಮಾತಿಗೆ ಮನದಿ ಮೆಚ್ಚಿ "ಅಯ್ಯಾ! ಅಶ್ವಶಾಲೆಗೇಕೆ? ನನ್ನ ಸರ್ವಸೈನ್ಯಾಧ್ಯಕ್ಷನಾಗಲು ಅರ್ಹನಿರುವೆ. ನಿನ್ನ ದಿವ್ಯರೂಪದರ್ಶನದಿಂದ ಆನಂದಿತನಾಗಿರುವೆನು. ನನ್ನ ಸೈನ್ಯನೇತನಾಗಿರು!" ಎಂದನು. ನಕುಲನು ತಲೆಯಲ್ಲಾಡಿಸಿ ವಿರಾಟನಿಗಿಂತೆಂದನು—"ರಾಜನ್! ತಾವು ಕಲಿತ ವಿದ್ಯೆಗಳಲ್ಲಿ ಪಳಗಿ, ಅದರಿಂದ ಜೀವಿಸುವುದರಿಂದ ಮನುಜನು ಜನಮನ್ನಣೆಯನ್ನೂ, ರಾಜಪ್ರೀತಿಯನ್ನೂ ಗಳಿಸುವನು. ಕೈಲಾಗದ ಕೆಲಸಕ್ಕೆ ನಾನೆಂದು ಮುಂದಾಗುವನು ಹಾಸ್ಯಾಸ್ಪದನೇ ಸರಿ! ಧರ್ಮರಾಜನ ತುರಗಶಿಕ್ಷಣ ಕರ್ಮದಲ್ಲಿ ದಕ್ಷನೆನಿಸಿದೆನು. ಆ ಮಹಾನುಭಾವನ ಪ್ರೀತಿಯನ್ನು ಗಳಿಸಿ, ಸೋದರನಂತೆ ಸುಖವಾಗಿದ್ದೆನು. ಇಂದು ನನ್ನ ದುರದೃಷ್ಟದಿಂದ ಆ ಚಕ್ರವರ್ತಿಯು ರಾಜ್ಯದೂರನಾಗಿ, ಗುಪ್ತನಾಗಿರುವುದರಿಂದ ನನಗೀ ಗತಿ ಬಂತು. ಜನರು ನಿನ್ನನ್ನು ಧರ್ಮಪರನೆಂದು ಪ್ರಶಂಶಿಸುವುದನ್ನು ಕೇಳಿ, ನಿನ್ನನ್ನೇ ಧರ್ಮರಾಜನೆಂದು ಭಾವಿಸಿ, ಅನುರಾಗದಿಂದ ಸೇವಿಸಲು ಬಂದಿರುವೆನು. ಇನ್ನು ನಿನ್ನ ಚಿತ್ತಕ್ಕೆ ಬಂದರೆ ನಿಲ್ಲಿಸಿಕೋ! ಇಲ್ಲದಿರೆ ಹೋಗೆಂದು ಕಳಿಸು!"

ಆ ಮಾತಿಗೆ ಸಮ್ಮತಿಸಿ ವಿರಾಟನು "ಅಶ್ವಗಳನ್ನು ಪರಿಕಿಸುವ ತೀರನ್ನು ಗಮನಿಸಿ, ಅಂತೆಂದೆನಾಗಲಿ ಅನ್ಯಥಾ ಅಲ್ಲ. ನಿನ್ನಿಷ್ಟದಂತೆ ಅಶ್ವಶಾಲಾಧ್ಯಕ್ಷನಾಗಿ ನನ್ನಲ್ಲಿರು. ನಿನ್ನಯ ಅಶನ ವಸನ ವಸ್ತ್ರಭೂಷಣಾದಿ ಸತ್ಕಾರಗಳನ್ನು ನಾನು ನೋಡಿಕೊಳ್ಳುವೆನು, ನಿಶ್ಚಿಂತನಾಗಿರು" ಎಂದು ತಾಂಬೂಲವನ್ನಿತ್ತು, ನಕುಲನನ್ನು ಸನ್ಮಾನಿಸಿದನು. ನಕುಲನು ವಿರಾಟನ ಅಶ್ವಶಾಲೆಯ ಅಧಿಪತಿಯಾಗಿ ನಿಂತನು.

ಆಗ ಸಹದೇವನು ಗೋಪಾಲವೇಷದಿಂದ ವಿರಾಟನ ಪ್ರಾಸಾದವನ್ನು ಸಮೀಪಿಸಿದನು. ನಿಜಕ್ಷತ್ರಿಯ ತೇಜವನ್ನು, ಶಾಂತ ಗೋಪವೇಷದಿಂದ ಮುಚ್ಚಿ, ಮನುಜವೇಷದಿಂದ ಬಂದ ಹವ್ಯವಾಹನನಂತೆ ಬೆಳಗುವ ಪಾಂಡು ಕನಿಷ್ಠ ಸುತನು, ತಲೆಗೆ ಉಷ್ಣೀಷವನ್ನು ಸುತ್ತಿದ್ದನು. ಒಂದು ಕೈಲಿ ಕೋಲನ್ನು, ಇನ್ನೊಂದರಲ್ಲಿ ಕರುವಿನ ಕಟ್ಟುವ ಕಣ್ಣಿಗಳನ್ನೂ ಹಿಡಿದು, ನಡುವಿಗೆ ಬಟ್ಟೆ ಬಿಗಿದು, ಸೆರಕಚ್ಚೆ ಕಟ್ಟಿ ಪಂಚೆಯುಟ್ಟು, ಒಂದು ಕಾಲಿಗೆ ಬೆಳ್ಳಿಯ ಅಂದುಗೆಯನ್ನಿಟ್ಟು, ಕೊಳಲನ್ನು ನಡುವಿನಲ್ಲಿ ಸಿಗಿಸಿ ಬರುವ ಸಹದೇವನು, ಕೃಷ್ಣಾನುಸರಣಶೀಲನೆಂದು ಪ್ರಕಟಿಸುತ್ತಾ ಬಂದನು. ಅವನ ಸುಕುಮಾರಶರೀರವನ್ನು ನೋಡುವ ರಾಜಪ್ರಜರ ನಯನರಾಜೀವಗಳು ಎವೆಯಿಕ್ಕದಾದವು. ಅವನ ವನಜಾತಲೋಚನಗಳು ಹರಿದೆಡೆ ಜನರು ಸಂಭ್ರಮಾನ್ವಿತರಾದರು. ಸಹದೇವನು ಗೋಪಸಹಜವಾದ ಭಯವನ್ನು ಚಂಚಲದೃಕ್ಪ್ರಸಾರದಿಂದ ನಟಿಸುತ್ತಾ, ವಿರಾಟನನ್ನು ಸೇರಿ, ಶಿರಬಾಗಿ ವಂದಿಸಿ, ವನಚರ ಭಾಷೆಯಿಂದ ಇಂತೆಂದನು—

"ರಾಜ! ನಿನ್ನ ಆಕಳ ಮಂದೆಯನ್ನು ಕಾಯಲು ಬಂದಿರುವೆನು. ನಾನು ಕಾಯುತ್ತಿರಲು ನಿನ್ನ ಪಶುಗಳಿಗೆ ರೋಗರುಜಿನಗಳ ಭಯವಿರಲಾರದು; ನೀರಡಿಕೆ, ಆಯಾಸಗಳ ಬಾರಿಗೆ ನಾಶವಾಗದಂತೆ, ಅರಸಿ ಪೋಷಿಸಬಲ್ಲ ನನ್ನಿಂದ ನಿನ್ನ ಪಶುಸಂತಾನವು

ಮೂರಿಲೆ ಆರುಕಾಯಾಗಿ, ತಾವರೆ ತಂಪರೆಯಾಗಿ ಬೆಳೆಯುವುವು. ಮೃಗಬಾಧೆಯನ್ನು ತಪ್ಪಿಸಿ, ರೋಗಪೀಡೆಯನ್ನು ನಿವಾರಿಸಿ ಪೊರೆಯುವುದಲ್ಲದೆ, ಸಮಯವನ್ನರಿತು, ಜೋಡುಕೂಡಿಸಿ, ಕರುಗಳನ್ನು ಬೆಳೆಸಿ, ಹಾಲು ಮೊಸರು ತುಪ್ಪಗಳ ಕಾಲುವೆಗಳನ್ನು ನಿನ್ನ ಮನೆಯಲ್ಲಿ ಹರಿಸುವೆನು. ನನ್ನ ಸಂಗಡಿಗರಾದ ಗೊಲ್ಲರಿಗೆ ಅಚ್ಚುಮೆಚ್ಚಾಗಿ ನಡೆದು, ನಿನ್ನ ನೆಚ್ಚಿನ ಗೋಪಾಲಕನಾಗಿ ಸೇವಿಸಲು ಬಂದ ನನಗೆ 'ನಾಸ್ತಿ' ಎನಬೇಡ!"

ಆ ಮಾತಿಗೆ ನಕ್ಕು ವಿರಾಟನು 'ಏನು ಮಾತಿದು! ನಿನ್ನಂತಹ ತೇಜೋವಂತನೆಲ್ಲಿ? ಗೊಲ್ಲತನವೆಲ್ಲಿ? ದೇಹ ಲಾವಣ್ಯ, ವಚನಗಾಂಭೀರ್ಯಗಳೇ ಸಾರುತ್ತಿವೆ ನೀನು ಸಾಮಾನ್ಯ ಗೊಲ್ಲನಲ್ಲವೆಂದು! ಎಲ್ಲವನ್ನು ಬಲ್ಲ ಬಲ್ಲಿದ ರಾಜರಲ್ಲಿ ನೀನಾರು ಹೇಳು! ಬೇಕಾದರೆ ಮನ ಬಿಚ್ಚಿ ಮಾತಾಡಿ, ನನ್ನ ದೇಶದ ರಾಜನಾಗಿ ಆಳು! ಇಲ್ಲದಿರೆ ನಿನಗೆ ಬೇಕಾದ ಪದವಿಯನ್ನು ಬೇಡು! ಇಷ್ಟವಾದೆಡೆ ಇರು! ನೀಚದ ಗೊಲ್ಲ ಕೆಲಸದ ಮಾತನ್ನು ಬಿಡು! ಉತ್ತಮ ರಥ ತುರಗಗಳನ್ನು, ನಿಶಿತ ಶಸ್ತ್ರಗಳನ್ನು ಕೊಡುವೆನು. ನನ್ನ ಸೇನಾಪತಿಯಾಗಿ ಮತ್ಸ್ಯದೇಶ ಶ್ರೀಯನ್ನು ಹೆಚ್ಚಿಸು!" ಎಂದನು.

ಸಹದೇವನು "ಮಹಾರಾಜ! ನನಗೇಕೆ ಸೈನ್ಯಾಧಿಪತ್ಯ? ನನಗೇಕೆ ಸಿರಿ ಸಂಪತ್ತು? ಇದ್ದುದನ್ನು ತೃಣದಂತೆ ಬಿಟ್ಟುಬಂದಿರುವೆನು. ನನಗೆ ಸಾಕು ಗೋಕುಲ ಸೇವೆ! ನನ್ನನ್ನು ತಂತ್ರೀಪಾಲನೆಂಬುವರು. ಹಿಂದೆ ಪಾಂಡುನಂದನನಾದ ಸಹದೇವನ ಸಹಚರನಾಗಿ, ಧರ್ಮನಂದನನ ಗೋಸಂತಾನಾಭಿವೃದ್ಧಿಯನ್ನು ಸಾಧಿಸಿದ ನನ್ನ ಚಾತುರ್ಯವು ನಿನ್ನಲ್ಲಿಷ್ಟು ವಿನಿಯುಕ್ತವಾಗಲಿ! ಕೇಳು! ನನ್ನ ಪಳಗಿದ ಕೈತಾಕಿ ಬೆಳೆದ ಗೂಳಿಗಳ ಮೂತ್ರವನ್ನು ಮೂಸಿದರೆ ಸರಿ, ಎಂತಹ ಬಂಜೆಯು ಗಬ್ಬಾಗಿ ನಿಲ್ಲುವುದು; ಪಡ್ಡೆ ಮಣಕಗಳ ಜಾತಿಯನ್ನರಿತು, ವಿಂಗಡಿಸಿ, ಕೀಳು ಜಾತಿಯ ಸೊಂಕಾಗದಂತೆ ಕೂಡಿಸಿ, ವಾತಾದಿ ರೋಗಗಳ ಗಾಳಿ ತಗುಲದಂತೆ ಕಾಪಾಡಿ, ನಿನ್ನ ಪಶುಗಳ ಸಂಖ್ಯೆಯನ್ನು ಒಂದೇ ವರ್ಷದಲ್ಲಿ ನಾಲ್ಮಡಿಯಾಗಿಸಿ, ನಾನು ವ್ರತಾಂತವನ್ನು ಸಾಧಿಸಿ ಹೋಗುವೆನು. ಬೇರೆ ಮಾತುಗಳನ್ನಾಡದೆ ನನ್ನ ಸೇವೆಗೆ ಸಮ್ಮತಿಸು!" ಎಂದು ಬೇಡಿದನು.

ವಿರಾಟನು "ಸರಿ! ನಿನ್ನಿಷ್ಟದಂತಾಗಲಿ. ನನ್ನ ಗೋಗಣ ಲಕ್ಷಗಟ್ಟಲೆಯಾಗಿದೆ. ಗೋಪಾಲಕರು ಸಾವಿರ ಇರುವರು. ಅವರಿಗೆಲ್ಲ ಅಧಿನಾಯಕನಾಗಿರು! ನನ್ನಿಂದ ಬೇಕಾದ ಸತ್ಕಾರ ವೇತನಗಳೂ ಕರಗತವಾಗಿವೆ ಎಂದು ತಿಳಿ! ಸುಖವಾಗಿರು!" ಎಂದು ಅವನ ಸೇವೆಯನ್ನೂ ಸ್ವೀಕರಿಸಿದನು.

ಇಂತು ಪಂಚಪಾಂಡವರು ಪಾಂಚಾಲಿಯು ಕೂಡ, ತಾವು ಸಂಕಲ್ಪಿಸಿದಂತೆ, ತಮಗೆ ಇಷ್ಟವಾದ ವ್ಯಾಪಾರಗಳಲ್ಲಿ ಗೌರವಯುತರಾಗಿ ವಿರಾಟನ ಅಂತರ್ಯಾಮಿಯಾದ ಶ್ರೀಕೃಷ್ಣನ ಸೇವೆಯನ್ನು ಮಾಡುತ್ತಾ, ಯಾರಿಗೂ ತಿಳಿಯಬರದಂತೆ, ನಾಲ್ಕು ತಿಂಗಳ ಕಾಲವನ್ನು ಕಳೆದರು.

ವಿರಾಟನು ನಕುಲನ ಮಾತಿಗೆ ಮನದಿ ಮೆಚ್ಚಿ "ಅಯ್ಯಾ! ಅಶ್ವಶಾಲೆಗೇಕೆ? ನನ್ನ ಸರ್ವಸೈನ್ಯಾಧ್ಯಕ್ಷನಾಗಲು ಅರ್ಹನಿರುವೆ. ನಿನ್ನ ದಿವ್ಯರೂಪದರ್ಶನದಿಂದ ಆನಂದಿತನಾಗಿರುವೆನು. ನನ್ನ ಸೈನ್ಯನೇತನಾಗಿರು!" ಎಂದನು. ನಕುಲನು ತಲೆಯಲ್ಲಾಡಿಸಿ ವಿರಾಟನಿಗಿಂತೆಂದನು—"ರಾಜನ್! ತಾವು ಕಲಿತ ವಿದ್ಯೆಗಳಲ್ಲಿ ಪಳಗಿ, ಅದರಿಂದ ಜೀವಿಸುವುದರಿಂದ ಮನುಜನು ಜನಮನ್ನಣೆಯನ್ನೂ, ರಾಜಪ್ರೀತಿಯನ್ನೂ ಗಳಿಸುವನು. ಕೈಲಾಗದ ಕೆಲಸಕ್ಕೆ ನಾನೆಂದು ಮುಂದಾಗುವನು ಹಾಸ್ಯಾಸ್ಪದನೇ ಸರಿ! ಧರ್ಮರಾಜನ ತುರಗಶಿಕ್ಷಣ ಕರ್ಮದಲ್ಲಿ ದಕ್ಷನೆನಿಸಿದೆನು. ಆ ಮಹಾನುಭಾವನ ಪ್ರೀತಿಯನ್ನು ಗಳಿಸಿ, ಸೋದರನಂತೆ ಸುಖವಾಗಿದ್ದೆನು. ಇಂದು ನನ್ನ ದುರದೃಷ್ಟದಿಂದ ಆ ಚಕ್ರವರ್ತಿಯು ರಾಜ್ಯದೂರನಾಗಿ, ಗುಪ್ತನಾಗಿರುವುದರಿಂದ ನನಗೀ ಗತಿ ಬಂತು. ಜನರು ನಿನ್ನನ್ನು ಧರ್ಮಪರನೆಂದು ಪ್ರಶಂಶಿಸುವುದನ್ನು ಕೇಳಿ, ನಿನ್ನನ್ನೇ ಧರ್ಮರಾಜನೆಂದು ಭಾಪಿಸಿ, ಅನುರಾಗದಿಂದ ಸೇವಿಸಲು ಬಂದಿರುವೆನು. ಇನ್ನು ನಿನ್ನ ಚಿತ್ತಕ್ಕೆ ಬಂದರೆ ನಿಲ್ಲಿಸಿಕೋ! ಇಲ್ಲದಿರೆ ಹೋಗೆಂದು ಕಳಿಸು!"

ಆ ಮಾತಿಗೆ ಸಮ್ಮತಿಸಿ ವಿರಾಟನು "ಅಶ್ವಗಳನ್ನು ಪರಿಕಿಸುವ ತೀರನ್ನು ಗಮನಿಸಿ, ಅಂತೆಂದೆನಾಗಲಿ ಅನ್ಯಥಾ ಅಲ್ಲ. ನಿನ್ನಿಷ್ಟದಂತೆ ಅಶ್ವಶಾಲಾಧ್ಯಕ್ಷನಾಗಿ ನನ್ನಲ್ಲಿರು. ನಿನ್ನಯ ಅಶನ ವಸನ ವಸ್ತ್ರಭೂಷಣಾದಿ ಸತ್ಕಾರಗಳನ್ನು ನಾನು ನೋಡಿಕೊಳ್ಳುವೆನು, ನಿಶ್ಚಿಂತನಾಗಿರು" ಎಂದು ತಾಂಬೂಲವನ್ನಿತ್ತು, ನಕುಲನನ್ನು ಸನ್ಮಾನಿಸಿದನು. ನಕುಲನು ವಿರಾಟನ ಅಶ್ವಶಾಲೆಯ ಅಧಿಪತಿಯಾಗಿ ನಿಂತನು.

ಆಗ ಸಹದೇವನು ಗೋಪಾಲವೇಷದಿಂದ ವಿರಾಟನ ಪ್ರಾಸಾದವನ್ನು ಸಮೀಪಿಸಿದನು. ನಿಜಕ್ಷತ್ರಿಯ ತೇಜವನ್ನು, ಶಾಂತ ಗೋಪವೇಷದಿಂದ ಮುಚ್ಚಿ, ಮನುಜವೇಷದಿಂದ ಬಂದ ಹವ್ಯವಾಹನನಂತೆ ಬೆಳಗುವ ಪಾಂಡು ಕನಿಷ್ಠ ಸುತನು, ತಲೆಗೆ ಉಷ್ಣೀಷವನ್ನು ಸುತ್ತಿದ್ದನು. ಒಂದು ಕೈಲಿ ಕೋಲನ್ನು, ಇನ್ನೊಂದರಲ್ಲಿ ಕರುವಿನ ಕಟ್ಟುವ ಕಣ್ಣಿಗಳನ್ನೂ ಹಿಡಿದು, ನಡುವಿಗೆ ಬಟ್ಟೆ ಬಿಗಿದು, ಸೆರಕಚ್ಚೆ ಕಟ್ಟಿ ಸಂಚೆಯುಟ್ಟು, ಒಂದು ಕಾಲಿಗೆ ಬೆಳ್ಳಿಯ ಅಂದುಗೆಯನ್ನಿಟ್ಟು, ಕೊಳಲನ್ನು ನಡುವಿನಲ್ಲಿ ಸಿಗಿಸಿ ಬರುವ ಸಹದೇವನು, ಕೃಷ್ಣಾನುಸರಣಶೀಲನೆಂದು ಪ್ರಕಟಿಸುತ್ತಾ ಬಂದನು. ಅವನ ಸುಕುಮಾರಶರೀರವನ್ನು ನೋಡುವ ರಾಜಪ್ರಜರ ನಯನರಾಜೀವಗಳು ಎವೆಯಿಕ್ಕದಾದವು. ಅವನ ವನಜಾತಲೋಚನಗಳು ಹರಿದೆಡೆ ಜನರು ಸಂಭ್ರಮಾನ್ವಿತರಾದರು. ಸಹದೇವನು ಗೋಪಸಹಜವಾದ ಭಯವನ್ನು ಚಂಚಲದೃಕ್ಪ್ರಸಾರದಿಂದ ನಟಿಸುತ್ತಾ, ವಿರಾಟನನ್ನು ಸೇರಿ, ಶಿರಬಾಗಿ ವಂದಿಸಿ, ವನಚರ ಭಾಷೆಯಿಂದ ಇಂತೆಂದನು—

"ರಾಜ! ನಿನ್ನ ಆಕಳ ಮಂದೆಯನ್ನು ಕಾಯಲು ಬಂದಿರುವೆನು. ನಾನು ಕಾಯುತ್ತಿರಲು ನಿನ್ನ ಪಶುಗಳಿಗೆ ರೋಗರುಜಿನಗಳ ಭಯವಿರಲಾರದು; ನೀರಡಿಕೆ, ಆಯಾಸಗಳ ಬಾರಿಗೆ ನಾಶವಾಗದಂತೆ, ಅರಸಿ ಪೋಷಿಸಬಲ್ಲ ನನ್ನಿಂದ ನಿನ್ನ ಪಶುಸಂತಾನವು

ಮೂರಿಲಿ ಆರುಕಾಯಾಗಿ, ತಾವರೆ ತಂಪರೆಯಾಗಿ ಬೆಳೆಯುವುವು. ಮೃಗಬಾಧೆಯನ್ನು ತಪ್ಪಿಸಿ, ರೋಗಪೀಡೆಯನ್ನು ನಿವಾರಿಸಿ ಪೊರೆಯುವುದಲ್ಲದೆ, ಸಮಯವನ್ನರಿತು, ಜೋಡುಕೂಡಿಸಿ, ಕರುಗಳನ್ನು ಬೆಳೆಸಿ, ಹಾಲು ಮೊಸರು ತುಪ್ಪಗಳ ಕಾಲುವೆಗಳನ್ನು ನಿನ್ನ ಮನೆಯಲ್ಲಿ ಹರಿಸುವೆನು. ನನ್ನ ಸಂಗಡಿಗರಾದ ಗೊಲ್ಲರಿಗೆ ಅಚ್ಚುಮೆಚ್ಚಾಗಿ ನಡೆದು, ನಿನ್ನ ನೆಚ್ಚಿನ ಗೋಪಾಲಕನಾಗಿ ಸೇವಿಸಲು ಬಂದ ನನಗೆ 'ನಾಸ್ತಿ' ಎನಬೇಡ!"

ಆ ಮಾತಿಗೆ ನಕ್ಕು ವಿರಾಟನು 'ಏನು ಮಾತಿದು! ನಿನ್ನಂತಹ ತೇಜೋವಂತನೆಲ್ಲಿ? ಗೊಲ್ಲತನವೆಲ್ಲಿ? ದೇಹ ಲಾವಣ್ಯ, ವಚನಗಾಂಭೀರ್ಯಗಳೇ ಸಾರುತ್ತಿವೆ ನೀನು ಸಾಮಾನ್ಯ ಗೊಲ್ಲನಲ್ಲವೆಂದು! ಎಲ್ಲವನ್ನು ಬಲ್ಲ ಬಲ್ಲಿದ ರಾಜರಲ್ಲಿ ನೀನಾರು ಹೇಳು! ಬೇಕಾದರೆ ಮನ ಬಿಚ್ಚಿ ಮಾತಾಡಿ, ನನ್ನ ದೇಶದ ರಾಜನಾಗಿ ಆಳು! ಇಲ್ಲದಿರೆ ನಿನಗೆ ಬೇಕಾದ ಪದವಿಯನ್ನು ಬೇಡು! ಇಷ್ಟವಾದೆಡೆ ಇರು! ನೀಚದ ಗೊಲ್ಲ ಕೆಲಸದ ಮಾತನ್ನು ಬಿಡು! ಉತ್ತಮ ರಥ ತುರಗಗಳನ್ನು, ನಿಶಿತ ಶಸ್ತ್ರಗಳನ್ನು ಕೊಡುವೆನು. ನನ್ನ ಸೇನಾಪತಿಯಾಗಿ ಮತ್ಸ್ಯದೇಶ ಶ್ರೀಯನ್ನು ಹೆಚ್ಚಿಸು!" ಎಂದನು.

ಸಹದೇವನು "ಮಹಾರಾಜ! ನನಗೇಕೆ ಸೈನ್ಯಾಧಿಪತ್ಯ? ನನಗೇಕೆ ಸಿರಿಸಂಪತ್ತು? ಇದ್ದುದನ್ನು ತೃಣದಂತೆ ಬಿಟ್ಟುಬಂದಿರುವೆನು. ನನಗೆ ಸಾಕು ಗೋಕುಲ ಸೇವೆ! ನನ್ನನ್ನು ತಂತ್ರೀಪಾಲನೆಂಬುವರು. ಹಿಂದೆ ಪಾಂಡುನಂದನನಾದ ಸಹದೇವನ ಸಹಚರನಾಗಿ, ಧರ್ಮನಂದನನ ಗೋಸಂತಾನಾಭಿವೃದ್ಧಿಯನ್ನು ಸಾಧಿಸಿದ ನನ್ನ ಚಾತುರ್ಯವು ನಿನ್ನಲ್ಲಿಷ್ಟು ವಿನಿಯುಕ್ತವಾಗಲಿ! ಕೇಳು! ನನ್ನ ಪಳಗಿದ ಕೈತಾಕಿ ಬೆಳೆದ ಗೂಳಿಗಳ ಮೂತ್ರವನ್ನು ಮೂಸಿದರೆ ಸರಿ, ಎಂತಹ ಬಂಜೆಯು ಗಬ್ಬಾಗಿ ನಿಲ್ಲುವುದು; ಪಡ್ಡೆ ಮಣಕಗಳ ಜಾತಿಯನ್ನರಿತು, ವಿಂಗಡಿಸಿ, ಕೀಳು ಜಾತಿಯ ಸೊಂಕಾಗದಂತೆ ಕೂಡಿಸಿ, ವಾತಾದಿ ರೋಗಗಳ ಗಾಳಿ ತಗುಲದಂತೆ ಕಾಪಾಡಿ, ನಿನ್ನ ಪಶುಗಳ ಸಂಖ್ಯೆಯನ್ನು ಒಂದೇ ವರ್ಷದಲ್ಲಿ ನಾಲ್ಮಡಿಯಾಗಿಸಿ, ನಾನು ವ್ರತಾಂತವನ್ನು ಸಾಧಿಸಿ ಹೋಗುವೆನು. ಬೇರೆ ಮಾತುಗಳನ್ನಾಡದೆ ನನ್ನ ಸೇವೆಗೆ ಸಮ್ಮತಿಸು!" ಎಂದು ಬೇಡಿದನು.

ವಿರಾಟನು "ಸರಿ! ನಿನ್ನಿಷ್ಟದಂತಾಗಲಿ. ನನ್ನ ಗೋಗಣ ಲಕ್ಷಗಟ್ಟಲೆಯಾಗಿದೆ. ಗೋಪಾಲಕರು ಸಾವಿರ ಇರುವರು. ಅವರಿಗೆಲ್ಲ ಅಧಿನಾಯಕನಾಗಿರು! ನನ್ನಿಂದ ಬೇಕಾದ ಸತ್ಕಾರ ವೇತನಗಳೂ ಕರಗತವಾಗಿವೆ ಎಂದು ತಿಳಿ! ಸುಖವಾಗಿರು!" ಎಂದು ಅವನ ಸೇವೆಯನ್ನೂ ಸ್ವೀಕರಿಸಿದನು.

ಇಂತು ಪಂಚಪಾಂಡವರು ಪಾಂಚಾಲಿಯು ಕೂಡ, ತಾವು ಸಂಕಲ್ಪಿಸಿದಂತೆ, ತಮಗೆ ಇಷ್ಟವಾದ ವ್ಯಾಪಾರಗಳಲ್ಲಿ ಗೌರವಯುತರಾಗಿ ವಿರಾಟನ ಅಂತರ್ಯಾಮಿಯಾದ ಶ್ರೀಕೃಷ್ಣನ ಸೇವೆಯನ್ನು ಮಾಡುತ್ತಾ, ಯಾರಿಗೂ ತಿಳಿಯಬರದಂತೆ, ನಾಲ್ಕು ತಿಂಗಳ ಕಾಲವನ್ನು ಕಳೆದರು.

## ಮಲ್ಲ ಪರಾಜಯ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ಕಂಕನೆಂದು ಯಮರಾಜನ ಹೆಸರು. ಯಮಪುತ್ರನಾದುದರಿಂದ ಯುಧಿಷ್ಠಿರನು ಕಂಕನಾಮದಿಂದ ಖ್ಯಾತನೆಂದು ಹೇಳಿದುದೂ ಸುಳ್ಳಲ್ಲ. ವೃಕೋದರನೂ ವಲ್ಲವನೆಂಬ ಸಾರ್ಥಕ ನಾಮಧೇಯನಾಗಿದ್ದನು. ವಲ್ಲವನೆಂದರೆ ಬಲದಿಂದ ಎಲ್ಲರನ್ನೂ ತೃಣೀಕರಿಸುವ ಮುಖ್ಯಪ್ರಾಣನೆಂದರ್ಥ. ಅವನ ವೃತ್ತಿಯು ಪೌರೋಗವ ವೃತ್ತಿ. ಪೌರೋಗವನೆಂದರೆ ಪುರಃ=ಮೊದಲು; ಗವಃ=ಕಿರಣರೂಪ ನಾಗಿ ಹೊರಬರುವವನು ಎಂದರೆ, ಪಿಂಡೋತ್ಪತ್ತಿಕಾರಣನಾದ ಪ್ರಥಮ ತತ್ವದೇವ ನೆಂದರ್ಥ. ಬೃಹನ್ನಲೆ ಎಂದರೆ ಬೃಹತ್=ದೊಡ್ಡವನಾಗಿದ್ದೂ ಅದನ್ನು ಮರೆಮಾಚಿ ನಟಿ=ನಟಿಸುವವನು ಅಥವಾ ಜಾಣ ನಟನೆಂದು ಅರ್ಥ; ಬೃಹತ್ ನರ ಅಂದರೆ ನಾರಾಯಣ ಸಖನಾದ ನರನೆಂದೂ ಅರ್ಥ. ದಾಮಗ್ರಂಥಿ ಎಂದರೆ ಅಥ್ವರ್ಯ ವನ್ನು, ಆಯುರ್ವೇದ ಗ್ರಂಥವನ್ನು ಅರಿತವನು ಎಂದರ್ಥ. ನಕುಲನು ಅಶ್ವಿನೀ ನಾಮಕ ದೇವವೈದ್ಯ ಶಿಖಾಮಣಿಯರಲ್ಲಿ ನಾಸತ್ಯನೆಂಬುವನು. ಸಹದೇವನು ತಂತ್ರೀಪಾಲನೆಂದು ಪೆಸರಿಟ್ಟುಕೊಂಡನು. ತಂತ್ರೀ ಎಂದರೆ ಭಗವದ್ವಚನ. ಅದನ್ನು ಪಾಲಿಸಿ ನಡೆವನೆಂದರೆ ಯುಧಿಷ್ಠಿರನ ವಚನದಂತೆ ನಡೆಯುವನೆಂದರ್ಥ. ಮಾಲಿನಿ ಎಂದರೆ ಮಲಿನಭಾವವನ್ನು ಹೊಂದುವಂತೆ ಬ್ರಹ್ಮನಿಂದ ಶಪಿಸಲ್ಪಟ್ಟ ಪಾರ್ವತೀ, ಶಚೀ, ಶ್ಯಾಮಲಾ, ಉಷಾದೇವಿಯರನ್ನು ಬ್ರಹ್ಮದೇವನ ಶಾಪದಂತೆ ತನ್ನೊಳಗೆ ಇಟ್ಟು, ಅವರವರ ಪತಿ ಸಂಸರ್ಗವನ್ನು ಮಾತ್ರ ಪ್ರಸಾದಿಸಿ, ಪಾರ್ವತಿಗೆ ಮೂರ್ಛೆ ಯಿತ್ತು ಸಂಸರ್ಗವಿಲ್ಲದೆ ಕಾಪಾಡಿ, ಮಲಿನರಾಗದಂತೆ ಕಾಪಾಡುವ ಭಾರತೀದೇವಿ ಎಂದರ್ಥ. ಇಂತು ಸುಳ್ಳನ್ನು ಹೇಳದಂತೆ ನಿಗೂಢಚರ್ಯೆಯನ್ನೂ ಸಾಧಿಸುತ್ತ ಪಾಂಡವರು, ದ್ರೌಪದೀಯುತರಾಗಿ, ಆಗಾಗ್ಗೆ ಪರಸ್ಪರ ವಿಲೋಕನಗಳಿಂದ ಯೋಗ ಕ್ಷೇಮವನ್ನು ತಿಳಿದುಕೊಂಡು, ಸುಖವಾಗಿ ಅಜ್ಞಾತವಾಸದ ಕಾಲವನ್ನು ಕಳೆದರು. ತೃಣಬಿಂದುಋಷಿಯ ಅನುಗ್ರಹದಿಂದಲು, ಯಮಧರ್ಮನ ವರದಿಂದಲು, ದುರ್ಗಾ ದೇವೀ ಪ್ರಸಾದದಿಂದಲು, ಅವರು ಯಾರಿಗೂ ತಮ್ಮ ನಿಜಸ್ವರೂಪ ಗೊತ್ತಾಗದಂತೆ ಇರುತ್ತಿದ್ದರು.

ಕಂಕನು ಅಕ್ಷವಿದ್ಯಾಚಾತುರ್ಯವನ್ನು ತೋರಿ, ಪ್ರಜರೂ ಸಭಾಸದರೂ ಮೆಚ್ಚುವಂದದಿ ವಿನೋದ ಕಥಾಕವನವನ್ನು ಮಾಡಿ ರಾಜನ ಪ್ರಶಂಸೆಗೆ ಪಾತ್ರನಾಗಿ ದ್ದನು ; ತಾನು ವಿನೋದ ದ್ಯೂತವನ್ನಾಡಿ ತನ್ನಾಟದ ಜಾಣ್ಮೆಗೆ ಮೆಚ್ಚಿದ ವಿರಾಟನಿತ್ತ ವಿಪುಲ ದ್ರವ್ಯವನ್ನು ತನ್ನವರಿಗೆಲ್ಲ ಕೊಡುತ್ತಿದ್ದನು: ವಲಲನು ಮಿಕ್ಕ ಮಾಂಸಾದಿ ಭಕ್ಷ್ಯಗಳನ್ನು ವಿಕ್ರಯಿಸುವ ಅಧಿಕಾರ ಉಳ್ಳವನಾದುದರಿಂದ, ಅವನ್ನು ಮಾರುವ ನೆವದಿಂದ ಮಿಕ್ಕ ಐವರಿಗೆ ಮೃಷ್ಟಾಹಾರವನ್ನೊದಗಿಸುತ್ತಿದ್ದನು. ಬೃಹನ್ನಲೆಯು

ಸಂಗೀತ ಪ್ರಸಂಗದಿಂದ ಬಹುಮಾನವಾಗಿ ಗಳಿಸಿದ ಚೀನಿಚೀನಾಂಬರ, ರತ್ನಭೂಷಣ ಗಳನ್ನು ಸೋದರರಿಗೆ ಸಮರ್ಪಿಸುತ್ತಿದ್ದನು. ದಾಮಗ್ರಂಥಿಯು ಅಶ್ವಗ್ರಾಸಾದಿ ಗಳಿಂದ ಪಡೆದ ಧನವನ್ನು ಅಣ್ಣತಮ್ಮಂದಿರಿಗೆ ಕೊಡುತ್ತಿದ್ದನು. ತಂತ್ರೀಪಾಲನು ಗೋಸಮೃದ್ಧಿಯನ್ನು ಕಂಡು ಆನಂದಿಸಿದ ಭೂಮಿಪಾಲನಿತ್ತ ಅಪರೂಪದ ಪದಾರ್ಥ ಗಳನ್ನೂ ಧನವನ್ನೂ ಅಣ್ಣಂದಿರಿಗೆ ಕೊಡುವುದಲ್ಲದೆ, ಅವರಿಗೂ ಮಾಲಿನಿಗೂ ಕಾಣಿಕೆಯ ನೆವದಿಂದ ಹಾಲು ಮೊಸರುಗಳನ್ನು ಸಮರ್ಪಿಸುತ್ತಿದ್ದನು. ಮಾಲಿನಿಯು ತನ್ನನ್ನೊಂದು ಕಣ್ಣಿಂದ ನೋಡಿ, ಕಾಪಾಡುತ್ತಿರುವ ಪಂಚಪಾಂಡವರನ್ನು, ಅವರ ಸೇವಾವೃತ್ತಿಯನ್ನು ಕಂಡು ದೀನಳಾಗಿ, ದೈವಸಂಕಲ್ಪಕ್ಕೆದುರಿಲ್ಲವೆಂದು ತಿಳಿದು, ಕಾಲವನ್ನು ನೂಕುತ್ತಿದ್ದಳು. ಅವರೆಲ್ಲರು ಉಚಿತವರ್ತನರಾಗಿ, ತಮ್ಮ ಪರಿಸರದ ಜನರಿಗೆ ಅನುಮಾನವಾಗದಂತೆ ಎಚ್ಚರವಹಿಸಿ, ಗುಣ ಶೀಲ ವಿನಯಾನುರಾಗಗಳಿಂದ ಎಲ್ಲರಿಗೂ ಪ್ರೀತಿಪಾತ್ರರಾಗಿದ್ದರು. ಗರ್ಭದಲ್ಲಿರುವ ಅರ್ಭಕರಂತೆ ಪ್ರಚ್ಛನ್ನರಾಗಿ, ಧೃತರಾಷ್ಟ್ರ ಸುತರ ಭಯದಿಂದ ಗುಪ್ತಗುಣರಾಗಿ ವಾಸಮಾಡುತ್ತಿರುವಾಗ ನಾಲ್ಕು ತಿಂಗಳು ಕಳೆದವು.

ಆಗ ಮತ್ಸ್ಯದೇಶದಲ್ಲಿ ರಮಣೀಯವಾದ ಬ್ರಹ್ಮರಥೋತ್ಸವವು ನಡೆಯುತ್ತಿತ್ತು. ನಾನಾ ದಿಕ್ಕುಗಳಿಂದ ಅನೇಕ ಜನರು ಅದನ್ನು ನೋಡಲು ಬಂದಿದ್ದರು. ಬಹು ದೇಶ ಗಳಿಂದ ಅನೇಕ ಮಲ್ಲರು ದಿಗ್ವಿಜಯಾಕಾಂಕ್ಷಿಗಳಾಗಿ ಬಂದಿದ್ದರು. ಮಹಾಕಾಯರೂ ಬಾಹುಬಲ ಸಂಪನ್ನರೂ ಆದ ಮಲ್ಲರು ಮಲ್ಲರ ಕಣದಲ್ಲಿ ಸಲಗಗಳಂತೆ ತೂಗುತ್ತಾ ನಿಂತಿದ್ದರು. ವೀರ್ಯೋನ್ಮತ್ತರಾದ ಮಲ್ಲರು ಅಂಜನ ಪರ್ವತಗಳಂತೆ ಸ್ಥೈರ್ಯ ದಿಂದ ನಿಂತು, ಸಡ್ಡನ್ನು ಹೊಡೆಯುತ್ತಿದ್ದರು. ವಿರಾಟನು ಮಲ್ಲರನ್ನು ಯಥೋಚಿತ ವಾಗಿ ತನ್ನ ಪರಿಜನರಿಂದ ಸತ್ಕರಿಸಿದನು. ಆಗ ಅವರಲ್ಲಿಂದ ಜೀಮೂತನೆಂಬ ಮಲ್ಲರವನು ಎದ್ದು, ರಂಗಸ್ಥಲದಲ್ಲಿ ನಿಂತು, ಮಲ್ಲ ಮಸಗಿ, ಸಡ್ಡು ಹೊಡೆದು, ಗರ್ಜಿಸಿ —"ಮಹಾರಾಜ ! ಚಿತ್ತೈಸು ! ಭೂಮಂಡಲವನ್ನೆಲ್ಲ ಸುತ್ತಿ ಬಂದಿರುವೆನು. ನನ್ನೆದುರಿಗೆ ನಿಲ್ಲಬಲ್ಲ ಮಲ್ಲರನ್ನಿಂದಿನವರೆಗೂ ಕಂಡಿಲ್ಲ. ನಿಮ್ಮ ಆಸ್ಥಾನದಲ್ಲಿ ಯಾದರೂ ನನಗೆ ಪ್ರತಿಮಲ್ಲನಿರಬಹುದೆಂದು ಬಂದಿರುವೆನು. ಅಪ್ಪಣೆಯಾಗಲಿ ಮಲ್ಲರಿಗೆ."

ಇಂತು ಸಾರಿ, ನಿರ್ಭೀತಾಗಿ ನಿಂತಿದ್ದ ಜೀಮೂತನನ್ನು ನೋಡಿ, ವಿರಾಟನ ಮಲ್ಲರು ಭಯದಿಂದ ಹಿಂಜರಿದು ನಿಂತರು.. ಅವನ ಕಡೆ ಕಡೆಗೆ ಕಣ್ಣೆತ್ತಿ ನೋಡದೆ ತಲೆ ತಗ್ಗಿಸಿ ನಿಂತಿರುವ ತನ್ನ ಮಲ್ಲರನ್ನು ನೋಡಿ, ಅವಮಾನವಾದಂತಾಗಿ, ವಿರಾಟನು ಏನನ್ನೂ ಪೇಳಲಾರದೆ ನಿರ್ವಿಣ್ಣನಾಗಿದ್ದನು. ಅದನ್ನು ಕಂಡು ಕಂಕನು "ಮಹಾರಾಜ! ಚಿಂತಿಸಲಾಗದು. ದುರ್ಮದನಾದ ಜೀಮೂತನನ್ನು ಸೋಲಿಸಬಲ್ಲ ಮಲ್ಲರು ನಮ್ಮಲ್ಲಿಲ್ಲ ನಿಜ! ಆದರೆ ಅಂತಹ ಮಹಾಬಾಹುಬಲನನ್ನು ನಾನೊಂದು ಸಲ ಧರ್ಮಜನ ಆಸ್ಥಾನದಲ್ಲಿ ಕಂಡಿರುವೆನು. ಅವನಾರೂ ಅಲ್ಲ. ನಮ್ಮ ಬಾಣಸಿಗ

ವಲಲನೇ. ಅವನ ವಿಷಯವನ್ನೆಲ್ಲ ನಾ ಬಲ್ಲೆ. ಅವನು ಇಂತಹ ಅನೇಕ ದುಷ್ಟ ಮಲ್ಲರನ್ನು ಸದೆಬಡಿದಿರುವನು. ನಿನ್ನನ್ನು ಮೆಚ್ಚಿಸಬಲ್ಲ ವಲಲನಲ್ಲದೆ ಮತ್ತಾರೂ ನಮ್ಮ ಆಸ್ಥಾನಗೌರವವನ್ನು ಕಾಪಾಡಲಾರರು. ಕರೆಸು ಅವನನ್ನು!" ಎಂದನು.

ವಿರಾಟನು ಕರೆಗಳಿಸಲು ಬರಲು ಹಿಂಜರಿದ ಭೀಮನು, ಕಂಕನು ಸಮ್ಮತಿಸುವನೆಂದರಿತು, ಭುಜವನ್ನು ಉಬ್ಬಿಸಿ, ಉತ್ಸಾಹದಿಂದ ರಾಜಸಭೆಗೆ ಬಂದನು. ಮೈಗುಡಿ ಕಟ್ಟಿದ ಹೆಬ್ಬುಲಿಯಂತೆ ಮೈಪೆರ್ಚಿ ಗುಡುಗುವ ವಲಲನನ್ನು ಕಂಡು, ಪ್ರತಿಮಲ್ಲರು ಭೀತರಾಗಿ ಹಿಂಜರಿದರು. ವಿರಾಟನದನ್ನು ಗಮನಿಸಿ, ಪ್ರೀತನಾಗಿ ಜೀಮೂತನನ್ನು ವಲಲನಿಗೆ ತೋರಿ ಅವನಿಂದ ಮಲ್ಲಯುದ್ಧವನ್ನು ಮಾಡಿ, ಸೋಲಿಸಿ, ಆಸ್ಥಾನಗೌರವವನ್ನು ಉಳಿಸೆಂದು ಬೇಡಿದನು. ಪವಮಾನನಂದನನು ಧರ್ಮಜನ ಕಡೆ ನೋಡಿ, ಅವನ ಸನ್ನೆಯ ಸಮ್ಮತಿಯನ್ನು ಪಡೆದು, ವಿರಾಟನಿಗೆ ನಮಿಸಿ, "ಮಹಾರಾಜ! ಧರ್ಮರಾಜನ ವಿನೋದಕ್ಕಾಗಿ ಆಗಾಗ ಮಲ್ಲರೊಡನೆ ಕಾದು ಗೆಲ್ಲುವುದೆನಗೆ ಲೀಲೆಯಾಗಿತ್ತು. ಇಂದೂ ಅಂತೆಯೇ ಲೀಲಾಜಾಲವಾಗಿ ಈ ಮಲ್ಲರನ್ನೆಲ್ಲ ಸೋಲಿಸಿ, ನಿನ್ನನ್ನು ಸಂತೋಷಪಡಿಸುವೆನು" ಎಂದನು.

ಭೀಮಸೇನನು ಗರ್ಜಿಸಿ, ಭುಜವನ್ನಪ್ಪಳಿಸಿ ಸಡ್ಡು ಹೊಡೆಯುತ್ತಾ ಕಣಕ್ಕಿಳಿದಾಗ, ಮಲ್ಲವರನಾದ ಜೀಮೂತನೂ, ಬದ್ಧಪರಿಕರನಾಗಿ ಅಲ್ಲಿಗೆ ಬಂದನು. ಮಲ್ಲರಂಗದ ಮಣ್ಣನ್ನು ಕೈಯಿಂದೆತ್ತಿ, ಹಸೆಗಿಟ್ಟು, ಶಿರದಿ ಚಲ್ಲಿ, ವಲಲ ಜೀಮೂತರು ಕೈ ಕೈ ಹಿಡಿದು, ಜಗ್ಗಿ ಸೆಳೆದು, ಭುಜವನ್ನಪ್ಪಳಿಸಿ, ಹೆಣಗುವ ಸಮಯದಿ, ಎವೆಯಿಕ್ಕದೆ ಅವರನ್ನು ನೋಡುವ ಸಭಾಸದರು ಚಿತ್ರಪ್ರತಿಮೆಗಳಂತೆ ನಿಶ್ಚೇಷ್ಟರಾಗಿದ್ದರು. ಅವರು ಉಸಿರನ್ನು ಕೂಡ ಗಟ್ಟಿ ಹಿಡಿದು ಬಿಡದೆ, ಕೈಗಳಿಂದ ಮಲ್ಲರನ್ನು ಅನುಕರಿಸುತ್ತಾ, ತದೇಕಮಗ್ನರಾಗಿದ್ದರು.

ಕೈಯನ್ನೆತ್ತಿ ಬಡಿಯುವ ಶಬ್ದವು, ಗರ್ಜನ ರವದಿಂದ ಮೇಳವಿಸಿ, ತಾಳಬದ್ಧವಾಗಿರುವಂತೆ ಹೋರಾಡುವ ಮಲ್ಲದ್ವಯರು ಭಯಂಕರ ಸಿಂಹಯುಗದಂತೆ ಕಂಗೊಳಿಸಿದರು. ವಿವಿಧ ತಾನಕಗಳಿಂದ, ತೋರ ಹಸ್ತಗಳಿಂದ, ನಡುಸುತ್ತುಗಳಿಂದ, ಪಾದ ಬಂಧಗಳಿಂದ ಬಲು ಪಟ್ಟುಗಳಿಂದ ಪರಸ್ಪರ ಜಯೈಷಿಗಳಾಗಿ ಭೀಮಮಲ್ಲರು ಬಹುಕಾಲ ಕುಸ್ತಿ ಆಟವಾಡಿದರು. ಕಾಲ ಕೆಳಗೆ ತೂರಲು ಹವಣಿಸುವ ಜೀಮೂತನನ್ನು ನಡುವಿನಲ್ಲಿ ಹಿಡಿದು ತಿರುವಿ ವಲಲನು ನೆಲಕ್ಕಪ್ಪಳಿಸಿದನು. ಅವನು ಅಂಗಾತನಾಗಿ ಬೀಳದೆ, ಭಢಿಯಂತೆ ಎದ್ದುನಿಂತು ವಲಲನ ಭುಜಗಳನ್ನು ಹಿಡಿದು ಸೆಳೆದು ಮುಗ್ಗರಿಸುವಂತೆ ಕೆಡಹಿದನು. ವಲಲನು ಛಲದಿಂದ ವಿಜೃಂಭಿಸಿ, ಅವನನ್ನು ಮದಕರಿಯನ್ನು ಭದ್ರಗಜದಂತೆ ಹಿಂದಕ್ಕೆ ನೂರು ಗಜದ ದೂರ ದೂಡಿದನು. ಅವನು ಮುಷ್ಟಿಘಾತದಿಂದ ನೋಯಿಸಲು, ಇವನು ಬೆದರದೆ, ಜೀಮೂತನನ್ನು ಹಿಡಿದು, ಮೇಲಕ್ಕೆತ್ತಿ, ಕೈಕಾಲುಗಳು ಜೋತಾಡುವಂತೆ ಗಿರಗಿರ ತಿರುಗಿಸಿ, ನೆಲಕ್ಕೆ ಅಪ್ಪಳಿಸಿದನು. ಜೀಮೂತನು ಗಟ್ಟಿಯಾಗಿ ಚೀರಿ, ಮೂಗು ಬಾಯಿಗಳಿಂದ ರಕ್ತವನ್ನು ಕಾರಿ,

ಕೆಳಗೆಬಿದ್ದು, ಮೃತನಾದನು. ಸಿಂಹದಂತೆ ಗರ್ಜಿಸುತ್ತಾ, ಗಜಲೀಲೆಯಿಂದ ಕಣದಲ್ಲಿ ತಿರುಗಾಡುವ ವಲಲನನ್ನು ಕಂಡು, ಮಿಕ್ಕ ಪ್ರತಿಮಲ್ಲರು ಪೌಹಾರಿ ಅಲ್ಲಿಂದ ಓಡಿ ಹೋದರು. ವಿರಾಟನ ಮಲ್ಲರು ಭೀಮನನ್ನು ಶ್ಲಾಘಿಸುತ್ತಿರಲು, ವಿರಾಟನು ವಲಲ ನಿಗೆ ಬಹು ಧನ ರಾಶಿಯನ್ನು ಬಹುಮಾನವಾಗಿ ಕೊಟ್ಟನು. ವಲಲನು ಅದನ್ನು ಅಲ್ಲಿದ್ದ ವಿಪ್ರರಿಗೂ, ಮಲ್ಲರಿಗೂ ಕೊಟ್ಟು, ಸಭಾಸದರು ಸಬಹುಮಾನವಾಗಿ ನೋಡು ತ್ತಿರಲು, ಸ್ವಲ್ಪ ತಲೆಬಾಗಿ ನಮಿಸಿ, ತನ್ನ ನಿವಾಸವನ್ನು ಸೇರಪೋದನು.

ಜೀಮೂತನಂತೆ ಕೊಚ್ಚಿಕೊಳ್ಳುವ ಮಲ್ಲರು ಬಂದಾಗ, ವಲಲನು ವಿರಾಟನ ಮಾಶಿಗೆ ಮನ್ನಣೆಯನ್ನಿತ್ತು, ಅವರೊಡನೆ ಕಾದಿ, ಸೋಲಿಸಿ ಕಳುಹಿಸುತ್ತಿದ್ದನು. ಮಲ್ಲರಾರೂ ಬರದಾದಾಗ, ಅಂತಃಪುರದ ತರುಣೀಜನರ ವಿನೋದಕ್ಕೆಂದು, ಸಿಂಹ ಶಾರ್ದೂಲಗಳೊಡನೆ ಹೋರಾಡಿ, ಅವನ್ನು ಗೆದ್ದು, ಸಂಹರಿಸುತ್ತಿದ್ದನು. ಮಹಾ ಬಲನಾದ ವಲಲನ ವಿಕ್ರಮ ವಿಲಾಸಗಳು ಅಂತಃಪುರದ ರಾಜಪರಿವಾರಕ್ಕೆ ಆಶ್ಚರ್ಯ ವಿಭ್ರಮಾನಂದಗಳನ್ನುಂಟುಮಾಡಿದರೆ, ಮಾಲಿನಿಯ ಮನಕ್ಕೆ ವಿಷಾದರೇಖೆಯನ್ನು ಮೂಡಿಸುತ್ತಿದ್ದವು. ಒಬ್ಬ ರಾಜಮಾತ್ರನಿಗೆ ವಿನೋದಕರನಾದ ಮಲ್ಲನಂತೆ ವರ್ತಿಸುವ ಭೀಮಸೇನನ ಬಲಪ್ರದರ್ಶನವು ಆ ಪತಿವ್ರತಾಶಿರೋಮಣಿಯ ಹೃದಯ ಶಲ್ಯವಾಗಿತ್ತು. ಗೀತನೃತ್ಯಗಳಿಂದ ಬೃಹನ್ನಲೆಯು, ವಿವಿಧಾಶ್ವವಿದ್ಯಾನೈಪುಣ್ಯದಿಂದ ದಾಮಗ್ರಂಥಿಯು, ವೃಷಭ ಸಂವರ್ಧನ ಗೋಸಮೃದ್ಧಿಗಳಿಂದ ತಂತ್ರೀಪಾಲನು, ವಿರಾಟನ ಮೆಚ್ಚುಗೆ ಪಡೆಯಲು ಪ್ರಯತ್ನಿಸುವುದನ್ನು ಕಂಡಾಗ, ಮಾಲಿನಿಯ ಮನಸ್ಸರೋವರದ ಕಟ್ಟೆಯೊಡೆದಂತಾಗಿ, ಕಣ್ಣಲ್ಲಿಂದ ಉಷ್ಣ ಬಾಷ್ಪಗಳು ಧಾರೆಯಾಗಿ ಹರಿದುಬರುತ್ತಿದ್ದವು. ಅವಳು ನಿಟ್ಟುಸಿರಿಟ್ಟು, ವಿಧಾತೃವಿಲಿಖಿತವನ್ನು ನೆನೆದು ಚಿಂತಾ ಮ್ಲಾನವಮುಖಳಾಗಿರುತ್ತಿದ್ದಳು. ಕುಂಜರ ಪಂಚಕವು ಒಂದು ಸೊಳ್ಳೆಯ ಕುತ್ತಿಗೆ ಯಲ್ಲಿ ಹೊಕ್ಕಂತಾಗಿತ್ತು ಪಾಂಡವರ ಬವಣೆ! ಇಂತು ಹತ್ತು ತಿಂಗಳು, ಕೆಲ ದಿನಗಳ ಅಜ್ಞಾತವಾಸವು ಕಳೆಯಿತು. ಮಾಲಿನಿಯು ಸುದೇಷ್ಣೆಯನ್ನು ಗಂಧಲೇಪನ ಪುಷ್ಪೋಪಚಾರಗಳಿಂದ ಸೇವಿಸುತ್ತಾ, ಅಂತಃಪುರದ ರಮಣಿಯರಿಗೂ, ರಾಣಿಗೂ ಕೂಡ ಪ್ರೀತಿಪಾತ್ರಳಾಗಿದ್ದಳು. ದೈವಾನುಗ್ರಹದಿಂದ ಪಾಂಡವರ ಗುಟ್ಟು ರಟ್ಟಾಗದೆ, ಅವರು ಸುರಕ್ಷಿತರಾಗಿದ್ದರು.

## ಕೀಚಕ ಪ್ರಲಾಪ

ಒಂದು ದಿನ ಕೀಚಕನು ತನ್ನ ಅಕ್ಕನಾದ ಸುದೇಷ್ಣೆಯನ್ನು ನೋಡಿ, ವಂದಿಸಲು ಅಂತಃಪುರಕ್ಕೆ ಬಂದನು. ಕೇಕಯ ರಾಜನಿಗೆ ಸೂತತರುಣಿಯಲ್ಲಿ ಜನಿಸಿದ ನೂರ ಆರು ಜನ ಸುತರಲ್ಲಿ ಅವನು ಜ್ಯೇಷ್ಠನಾಗಿದ್ದನು. ಸುದೇಷ್ಣೆಯು ಕೇಕಯ ರಾಜನ ಪಟ್ಟಮಹಿಷಿ ಕ್ಷತ್ರಿಯಳಲ್ಲಿ ಜನಿಸಿದವಳು. ಅವಳು ವಿರಾಟನನ್ನು ಮದುವೆಯಾಗಿ ಬಂದಾಗ ಕೀಚಕರು ನೂರಾರು ಜನ ಅವಳನ್ನನುಸರಿಸಿ ಬಂದು ಮತ್ಸ್ಯಪುರಿಯಲ್ಲಿ

ವಿರಾಟನ ಸೇನಾಪತಿಗಳಾಗಿ ಇರುತ್ತಿದ್ದರು. ಜ್ಯೇಷ್ಠನಾದ ಕೀಚಕನು ಬಾಣಾಸುರ
ಅಂಶದಿಂದ ಜನಿಸಿ, ಸಿಂಹಬಲನೆಂಬ ನಾಮದಿಂದ ಪ್ರಖ್ಯಾತನಾಗಿದ್ದನು. ಅವನ ಭಯ
ದಿಂದ ಶತ್ರುರಾಜರು ಮತ್ಸ್ಯದೇಶವನ್ನು ಕಣ್ಣೆತ್ತಿ ನೋಡದೆ, ದೂರವಾಗಿರುತ್ತಿದ್ದರು
ರಾಜ್ಯದಲ್ಲಿ ಸುತ್ತಿಬರಲು ಹೋದ ಕೀಚಕನು ಹತ್ತು ತಿಂಗಳ ನಂತರ ಮತ್ಸ್ಯಪುರಿ
ಹಿಂದಿರುಗಿ ಬಂದನು. ರೂಪವಂತನೆಂಬ ಅಭಿಮಾನವು ಅಯುತಗಜಬಲದಿಂ
ಬೆಳೆದು, ಅವನು ದುರ್ವಿದಗ್ಧನು, ಅಖರ್ವಗರ್ವನಿಧಿಯೂ ಆಗಿದ್ದನು. ನಾನಾ
ರತ್ನಾಭರಣಭೂಷಿತನಾದ ಸಿಂಹಬಲನು, ಸುದೇಷ್ಣೆಯ ಅಂತಪುರದಲ್ಲಿ, ರಾಹುವ
ಚಂದ್ರಕಳೆಯನ್ನಂತೆ, ಸುಮಮಾಲಾರಚನ ಕಾರ್ಯದಲ್ಲಿ ತೊಡಗಿದ್ದ ಸೈರಂಧ್ರಿ
ಯನ್ನು ನೋಡಿದನು.

ಕೋಮಲ ಪಲ್ಲವಗಳು ಸುಮತತಿಯಲ್ಲಾಡುವಂತೆ ತೋರುವ ಬೆರಳುಗಳಿಂದ
ಪೂಮಾಲೆಯನ್ನು ಕಟ್ಟುತ್ತಾ, ಪುಷ್ಪಗಳನ್ನು ತಾಮರಸದಳ ವಿಶಾಲನಯನಗಳಿಂದ
ನೋಡುತ್ತಾ, ಕುಂಚಿತಗಾತ್ರಳಾಗಿ, ಚಿತ್ರ ಬರೆದಂತೆ ವಿಚಿತ್ರರೂಪ ಲಾವಣ್ಯ ವಿಲಾಸ
ಗುಣರಾಶಿಯಾಗಿ ಕಂಡುಬರುವ ಮಾಲಿನಿಯನ್ನು ನೋಡುವ ಕೀಚಕನ ನಯನಗಳು
ಅರವಿಂದರಸವನ್ನು ಹೀರುವ ದುಂಬಿಗಳಂತೆ, ಚಲಿಸದೆ, ಎವೆಯಿಕ್ಕದೆ, ಮಾಲಿನಿಯ
ಸೌಂದರ್ಯರಸಪಾನನಿಮಗ್ನವಾದವು. ಅವನು ಸ್ತಂಭೀಭೂತನಾಗಿ ಸ್ವಲ್ಪ ಕಾಲ
ಸುಮ್ಮನೆ ನಿಂತನು. ಸುತ್ತುಮುತ್ತಿನ ಜನರು ನೋಡುವರೆಂಬ ಲಜ್ಜಾಭಯಗಳಿಂದ
ಕೀಚಕನು ಕದಲಿಪೋಗಲು ಹವಣಿಸಿ, ವಿಫಲ ಪ್ರಯತ್ನನಾದನು. ಅವನ ಕಾಲು
ಗಳು ಚಲಿಸಲಾರದೆ ಗಿಡದ ಬುಡದಂತೆ ನೆಲಕ್ಕಂಟಿನಿಂತವು. ಅವನ ಕಣ್ಣುಗಳು
ಕಿತ್ತಿದರೂ ಹಿಂದಿರುಗದೆ, ಮಾಲಿನಿಯ ಮುಖದಲ್ಲಿ ನಟ್ಟು ನಿಂತವು. ಮಹಾಬಲ
ನಾದ ಕೀಚಕನು ಕಾಮನ ವಶನಾಗಿ, ಹುಚ್ಚನಂತಾದನು. ಲಜ್ಜಾಭಯಗಳು ತಾವೇ
ಅವನನ್ನು ಬಿಟ್ಟೋಡಿದವು. ಮಾಲಿನಿಯ ರೂಪವೆಂಬ ಜಾಲವನ್ನು ಹರಡಿ,
ಕೀಚಕ ಮೃಗವನ್ನು ಹಿಡಿದು, ಮದನ ಕಿರಾತನು ಪಂಚಬಾಣಗಳಿಂದ ತಿವಿಯಲು,
ನೊಂದು ಸಿಂಹಬಲನು ತನ್ನ ಮನದಿ ಇಂತು ಚಿಂತಿಸಿದನು—

'ಎಲ್ಲಿಯೂ ಇಂತಹ ರೂಪ ಲಾವಣ್ಯ ವಿಭ್ರಾಜಿತೆಯರನ್ನು ನಾನು ಕಂಡಿಲ್ಲ!
ಆಹಾ! ಜಯಂತ ವಸಂತ ಮನ್ಮಥರನ್ನು ಧಿಕ್ಕರಿಸುವ ರೂಪ ಸಂಪತ್ತಿನಿಂದ ಮೆರೆವ
ನನ್ನ ಕಣ್ಣೆ ಕೊರೆಯುತ್ತಿರಲು, ಇವಳ ಸೌಂದರ್ಯವಿನ್ನಾರನ್ನು ದಿಗ್ಭ್ರಮೆಗೊಳಿಸದು?
ಪೂರ್ವ ಪುಣ್ಯ ಸಮೃದ್ಧಿಗೆ ಫಲವಲ್ಲವೇ ಸುಂದರಾಂಗಿಯ ಭೋಗಸಿದ್ಧಿ? ಹಿಂದೆ
ಎಂದೋ ಇಂದುಧರನ ಫಾಲನೇತ್ರದ ಕಡುಕಿಚ್ಚಿಗೆ ಸಿಕ್ಕು ಬೂದಿಯಾದ ಅನಂಗನು
ಇಂದು ಸುಂದರಿಯ ಸಹಾಯದಿಂದ ಸಾಂಗನಾಗಿ ನನ್ನನ್ನೇ ಅಲ್ಲದೆ, ಅದೇ
ಶಂಕರನನ್ನೂ ಗೆಲ್ಲಲು ಸಮರ್ಥನಾಗಿರುವನು. ಇವಳ ಚೆಲುವನ್ನು ನೋಡುವ
ಸಹಸ್ರಾಕ್ಷನು, ತಣಿಯದೆ, ಲಕ್ಷನೇತ್ರನಾಗಬಯಸುವನು. ಇವಳಿಗೆ ಸರಿಸುಂದರಿ
ಯರಿನ್ನಿಲ್ಲೆಂದು ಶತಾನಂದನಿಂದ ಹಂದೆವಾಡಿ ಗೆಲ್ಲಬಹುದಾಗಿದೆ. ಸೃಷ್ಟಿಕರ್ತನು

ಸೌಂದರ್ಯವಿನಿಮಯದ ಪರಾಕಾಷ್ಠೆಯನ್ನು ಮುಟ್ಟಲೆಣಿಸಿ, ಇವಳನ್ನು ಪುಟ್ಟಿಸಿ, ಕೃತಕೃತ್ಯನಾದಂತಿದೆ. ಇವಳ ಕೈಪಿಡಿದವನೇ ಪುರುಷೋತ್ತಮನು! ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲಗಳ ಸೊಬಗು ಒಟ್ಟುಗೂಡಿ, ಬಂಗಾರದ ಸಂಪುಟದಲ್ಲಡಗಿನಿಂತಂತೆ ಕಂಗೊಳಿಪ ಈ ಅಂಗನಾಮಣಿಯು ಸಿಂಗಾರ, ಅಪೂರ್ವರಮಣೀಯವಾಗಿದೆ. ಇವಳನ್ನೊಮ್ಮೆ ನೋಡಿದರೆ ಸಾಕು, ಮನ್ಮಥನು ಕೂಡ ವಿರಹಾಗ್ನಿಯಿಂದ ಮತ್ತೊಮ್ಮೆ ಸುಟ್ಟು ಬೂದಿಯಾಗದಿರುವನೇ ?

'ಯಾರಿವಳ ಜನನೀಜನಕರು? ಯಾರು ಪತಿ? ಎಲ್ಲಿ ವಾಸ? ಇವಳ ಪೆಸರಾವುದೋ ? ಇಂತಹ ಕಾಂತೆಯನ್ನು ನಾನೆಂತು ಪಡೆಯಲಿ ? ಮಾನಿನೀಮಣಿಯ ಭೋಗಭಾಗ್ಯವು ನನಗೆ ಒದಗುವಂತೆ ಸಹಾಯ ಮಾಡುವ ಮಮತೆಯ ಬಂಧು ಜನರಾರು ? ಏನು ಮಾಡಲಿ ! ಈಗಲೇ ಈ ರಮಣೀಮಣಿಯನ್ನು ಕೈಪಿಡಿದು ನನ್ನ ಮಂದಿರವನ್ನು ಸೇರಿಸಲೇ ? ಸುತ್ತುಪರಿವಾರವಿದೆಯಲ್ಲ ! ಅಂತಹ ಸಾಹಸ ವೇಕೆ ? ನನ್ನಂತಹ ಸುಂದರನಿಗೆ ವಶರಾಗದ ಬಿಸಜಾಕ್ಷಿಯರಿರುವರೆ? ಆಗಲಿ!' ಎಂದು, ಅಲ್ಲೇ ಹಿಂದುಮುಂದು ಸಂಚರಿಸುತ್ತಿದ್ದು, ಮದನಬಾಣವಿದ್ಧನಾದ ಸಿಂಹ ಬಲನು ನಿರ್ಬಲನಂತೆ ನಿಲ್ಲಲಾರದೆ, ಕುಡಿದವನಂತೆ ತೂಗುತ್ತಾ, ಹುಚ್ಚನಂತೆ ಗೊಣಗುತ್ತಾ, ಅಲ್ಲಿಂದ ಮೆಲ್ಲಗೆ ತನ್ನ ಅಕ್ಕನ ಬಳಿಗೆ ಸಾರಿದನು.

ಪಾಪಿ ಕೀಚಕನು ನಿರ್ಭಯನಾಗಿ ದಿಟ್ಟಿಸಿ ನೋಡುವ ಕೆಟ್ಟ ದೃಷ್ಟಿಯನ್ನರಿತು ಮಾಲಿನಿಯು ಮೈಯಲ್ಲಿ ಕಿರುಬೆವರಿಟ್ಟಳು. ಅಂತಹ ದುರ್ಮಾರ್ಗರ ಬಾಗಿಗೆ ತನ್ನನ್ನು ಕೆಡಹುವ ವಿಧಿವಿಲಾಸವನ್ನು ನೆನೆದು ನಿಟ್ಟುಸಿರಿಟ್ಟಳು. ಅಲ್ಲಿ ತನ್ನನ್ನಾಂತು ರಕ್ಷಿಪ ರಾರೂ ಇಲ್ಲವಲ್ಲ ಎಂದು ಆಕೆ ನಡುಗಿದಳು. ಪಾರಾಗುವ ಉಪಾಯವನ್ನರಿಯದೆ ಆಕೆಯ ಮುಖ ಬಿಳುಚಿಟ್ಟಿತು. ಇಂತು ಚಿಂತೆಗೊಳಗಾಗಿ ದುಃಖಿಸುವ ಕಾಂತೆಯ ಬೆವರ ಚುಕ್ಕೆಗಳನ್ನು, ನಿಟ್ಟುಸಿರನ್ನು, ನಡುಕವನ್ನು, ಬಿಳುಚೇರಿದ ಮುಖವನ್ನು ನೋಡಿ, ವಿವೇಕರಹಿತನಾದ ಕೀಚಕನು ಅವನ್ನು ಮದನ ವಿಕಾರಗಳೆಂದು ಭ್ರಮಿಸಿ, ಮೈಮರೆತನು. ಸುದೇಷ್ಣೆಯನ್ನು ಸೇರಬರುವ ಅವನ ಶರೀರವು ಮುಂದಕ್ಕೆ ಸಾಗುತ್ತಿದ್ದರೂ, ಅವನ ನಯನಗಳೆರಡೂ ಮಾಲಿನಿಯ ಮೈಬೆಡಗನ್ನು ವೀಕ್ಷಿಸುತ್ತಾ 'ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ' ಎಂದು ಸಾರುತ್ತಿದ್ದವು.

ಮಾಲಿನಿಯ ಮೈಸಿರಿ ಆ ನಿರ್ಭಾಗ್ಯನ ಕಣ್ಣು ಕುಕ್ಕಿತು. ಅವಳ ಲಾವಣ್ಯ ಚಂದ್ರಿಕೆಯಲ್ಲಿ ಅವನು ಮೈಮರೆತು ಪುಲಕಾನ್ವಿತನಾದನು. ಅವಳ ಕಟಾಕ್ಷವೆಂಬ ಮಿಂಚಿನ ಹೊಡೆತದಿಂದ ನಿಶ್ಚೇಷ್ಟನಾದ ಕೀಚಕನು ಅವಳ ಕೊಪ್ಪಿನ ಕಪ್ಪು ಕತ್ತಲು ಕವಿದಂತಾಗಲು ತಡವಾಡುತ್ತಾ, ಮದನನು ಪಿಡಿದಾಡಿಸುವ ಗೊಂಬೆಯಂತಾಗಿ, ತನ್ನ ಅಕ್ಕನನ್ನು ಸಮೀಪಿಸಿ, ಶಿರಬಾಗಿ ನಮಿಸಿ, ಕೆಳಗೆ ಬಿದ್ದಿದ್ದನು. ಸುದೇಷ್ಣೆಯು ಅವನ ಅವಸ್ಥೆಯನ್ನರಿತು, ಕೈಯಿಂದ ಪಿಡಿದೆಬ್ಬಿಸಿ, ಕನಕಸಿಂಹಾಸನದಲ್ಲಿಕೂಡಿಸಿದಳು. ತನ್ನನ್ನು ಅಕ್ಕರೆಯಿಂದ ನೋಡುವ ಅಕ್ಕನನ್ನು ಒಂದು ಕಣ್ಣಿಂದಲು, ತಾನು

ಬಯಸಿದ ಮಾಲಿನಿಯನ್ನು ಒಂದು ಕಣ್ಣಿಂದಲು ನೋಡುತ್ತಾ, ಕೀಚಕನು, ಕುಶಲ ಪ್ರಶ್ನಾದಿ ಸಂಭಾವಿತ ಸಂಪ್ರದಾಯವನ್ನೂ ಮರೆತು, ಕೈಬೆರಳಿಂದ ಮಾಲಿನಿಯನ್ನು ತೋರಿ, ಅಕ್ಕಗಿಂತೆಂದನು—

"ಅಕ್ಕ! ಈ ಪಾಟಲಗಂಧಿ ಯಾರೇ? ಇವಳ ಕುಲವಾವುದು? ಪೆಸರೇನು? ನಾಥನಿರುವನೇ? ಎಲ್ಲಿ! ಇವಳು ನಿನ್ನಲ್ಲಿ ಮೊದಲಿರಲಿಲ್ಲ. ಹೊಸದಾಗಿ ಬಂದಂತಿದೆ. ಯಾವಾಗ ಬಂದಳು? ಇಂತಹ ನೀಚ ಕಾರ್ಯವನ್ನಿವಳಿಗೇಕೆ ಕೊಟ್ಟೆ? ರತಿ ಯಂತಿರುವ ಈ ಸುದತಿಯನ್ನು ನೋಡಿ ಮತಿಗೆಟ್ಟಂತಾಗಿದೆ." ಆ ಮಾತನ್ನಾಲಿಸಿ, ಸುದೇಷ್ಣೆ 'ಆಹಾ! ಇವನ ಚಿತ್ತ ಆ ಮತ್ತಕಾಶಿನಿಯಲ್ಲಿ ಹತ್ತಿ ನಿಂತಿದೆ. ಯಾರೇನು ಪೇಳಿದರೂ ತಿಳಿಯುವ ಸ್ಥಿತಿಯಲ್ಲಿವನಿಲ್ಲ. 'ಏನು ಮಾಡಲಿ? ಗಂಧರ್ವರಕ್ಷಿತಳಾದ ಮಾಲಿನಿಯನ್ನು ಇವನ ಉಪಟಳದಿಂದ ಉಳಿಸುವ ಬಗೆ ಹೇಗೆ?' ಎಂದು ಚಿಂತಿಸಿ, ಕೀಚಕನನ್ನು ಭಕ್ಷ್ಯ ಪಾನೀಯಗಳಿಂದ ತಣಿಸಲು ಪವಣಿಸಿದಳು. ಅವನು ಅಕ್ಕನ ಉಪಚಾರಗಳನ್ನು ಜರಿದು, ಅಲ್ಲಿಂದೆದ್ದು, ಮೆಲ್ಲನೆ ಸೈರಂಧ್ರಿಯನ್ನು ಸಮೀಪಿಸಿ— 'ಸುಂದರಿ! ಏನು ಚಲುವೇ ನಿನ್ನದು! ಯಾರವಳು ನೀನು? ನಿನ್ನ ಹೆಸರೇನು?' ಎಂದನು.

ಆ ಮಾತನ್ನು ಕೇಳಿ, ಕೇಳದವಳಂತೆ ಮಾಲಿನಿಯು ನಿರ್ವಿಕಾರಳಾಗಿದ್ದಳು. ಉನ್ಮತ್ತನಾದ ಕೀಚಕನು, ಅವಳನ್ನು ನೋಡಿ, ಮತ್ತೆ ಇಂತೆಂದನು. 'ಕಮಲ ನಯನೇ! ಒಂದು ಸಲ ಕಣ್ಣೆತ್ತಿ ನೋಡಬಾರದೇ? ಸರೋಜಮುಖಿ! ಮಂದಹಾಸ ಮನೋಹರವಾದ ನಿನ್ನ ವದನಾರವಿಂದವನ್ನೆತ್ತಿ ತೋರಬಾರದೇ? ಕುಂದಕುಟ್ಮಲ ರದನೇ! ಮಾತಾಡಿದರೆ ಮುತ್ತು ಸುರಿಯುವುದೇ? ಲತಾಂಗಿ! ನನ್ನ ಕೈಪಿಡಿದರೆ ನಿನ್ನ ಬೆರಳ ಪಲ್ಲವಗಳು ಬಾಡುವವೇ?' ಎಂದು ಪಾಪಿ ಕೀಚಕನು ಮಾಲಿನಿಯನ್ನು ದಿಟ್ಟಿಸಿ ನೋಡುವನು; ನಗುವನು; ಕೈಪಿಡಿಯಲು ತವಕಿಸುವನು; ಮುಟ್ಟಲು ಹಾತೊರೆಯುವನು. ಅವಳ ಮನೋಗತವನ್ನು ಊಹಿಸಿ ತಿಳಿಯಲಾರದೆ, ನಯ ವಿನಯ ದೂರನಾಗಿ ಜಾರಾಧಮನಾದ ಕೀಚಕನು, ಮಾಲಿನಿಯನ್ನು ಸಮೀಪಿಸಿ, 'ಸುಂದರಾಂಗಿ! ದೃಷ್ಟಿ ತಾಗೀತೆಂದು ನಿನ್ನನ್ನು ಕಣ್ಣೆತ್ತಿ ತಣಿಯುವಂತೆ ನೋಡದಿರು ವೆನು. ಮನದ ನನ್ನಿಯ ಮಾತನ್ನು ನಿನ್ನ ಮುಂದೆ ಹೇಳಲಾರದಿರುವೆನು. ಕೈಪಿಡಿಯಲೆಣಿಸಿ ಪ್ರೇಮಭರದಿಂದ ನಡುಗುವ ಕೈಯಿಂದ ನಿನ್ನನ್ನು ಮುಟ್ಟಲಾರ ದಿರುವೆನು. ನಿನ್ನ ಮನದಿಂಗಿತವನ್ನು ತಿಳಿಯಲಾರದೆ ತಳಮಳಿಸುತ್ತಿರುವೆನು. ಚೆಲುವೆ! ಕೇಳು! ಇಷ್ಟಾಗಿ ಬೇಡಿದರೂ ಒಲಿಯದೆ ನೀನು ಸುಮ್ಮನಿದ್ದರೆ, ಮನ್ಮಥನ ತೀವ್ರಾಘಾತಗಳಿಗೆ ಬಲಿಯಾಗಿ ನಾನು ಸಾಯುವುದು ನಿಜ! ಆಗ ನನ್ನಂತಹ ಸುಂದರನನ್ನು ಪಡೆಯಲು ನೀನು ಪಡುವ ಪಾಟಲ್ಲವೂ ವ್ಯರ್ಥವಾಗುವುದು ತಿಳಿ!' ಎಂದು ತನ್ನ ಅಭಿಪ್ರಾಯವನ್ನು ಪ್ರಕಟಿಸಿದನು.

ಮಾಲಿನಿಯು ಕೀಚಕನ ದುರ್ವಾಕ್ಯಗಳನ್ನಾಲಿಸಿ ನೊಂದಳು. ಪರಿಭವ [illegible]

ಕೀಚಕನನ್ನು ನಯದಿಂದಲು, ಭಯದಿಂದಲು ನಿವಾರಿಸಲು ಯತ್ನಿಸುತ್ತಿಂತೆಂದಳು. "ನಾನಿರುವ ಸ್ಥಿತಿ ಏನು? ನೀನಾಡುವ ಮಾತೇನು? ಸೈರಂಧ್ರೀಜಾತಳಾದ ನನ್ನ ಹೇವದರೂಪಿಗೆ ಮುಸುಕುವ ಮೂರ್ಖರಿರುವರೇ? ಅಂತಹ ಮೂಢರಿಗೂ ಅಕ್ಕ ತಂಗಿಯರಿಲ್ಲವೇ? ಸಜ್ಜನರು ಪರಸತಿಯರೆಂದರೆ ಪಡೆದ ಮಗಳನ್ನಂತೆ ನೋಡುವರು. ಅಂತಹ ಸದಾಚಾರವನ್ನು ಮಣ್ಣುಗೂಡಿಸಿ ಕೆಡಬೇಡ! ನಡೆ ಇಲ್ಲಿಂದ!" ಇಂತು ಧಿಕ್ಕರಿಸಿದ ಮಾಲಿನಿಯ ಮಾತಿನಿಂದ ಮದನೋನ್ಮಾದವಿಮ್ಮಡಿಸಿ ತನ್ನನ್ನು, ಸುತ್ತಲಿದ್ದ ಪರಿವಾರದವರನ್ನು, ಅಕ್ಕ ಸುದೇಷ್ಣೆಯನ್ನು ಮರೆತು, ನಿರ್ಲಕ್ಷಿಸಿ ಕೀಚಕನು ಮತ್ತೆ ಮಾಲಿನಿಗಿಂತೆಂದನು—

"ಸೈರಂಧ್ರಿ! ಪೆಸರನ್ನೂ ಪೇಳದಿರುವೆ! ಚಿಂತೆ ಇಲ್ಲ. ಕಮಲಾಕ್ಷಿ! ವಿಕಸ ಮಾನತಾಮರಸದಳಗಳ ಮಾರ್ದವರಾಗತೇಜಃಪುಂಜಗಳನ್ನು, ಚಕ್ರವಾಕಯುಗದ ವರ್ತುಲಕೋಮಲಾಂಗವನ್ನು, ನಿಷ್ಕಳಂಕ ಚಂದ್ರಮನ ಧವಳಕಾಂತಿಯನ್ನು ಭ್ರಮರಕುಲ ನೀಲವರ್ಣವನ್ನು ತಂದು, ಅವನ್ನೆಲ್ಲ ಸಾಣೆ ಹಿಡಿದು, ಕುಂದು ಕಶ್ಮಲಗಳ ವಿಂಗಡಿಸಿ, ಸೃಷ್ಟಿಕರ್ತನು ನಿನ್ನ ಚರಣ, ಸ್ತನ, ವದನ, ವೇಣೀಭರಗಳನ್ನು ಮಾಡಿರುವನೋ ಏನು! ಎಂತಹ ಮನೋಹರಾಕೃತಿ! ಎಂತಹ ರೂಪರಾಶಿ! ಎಂತಹ ಸೌಂದರ್ಯನಿಧಿ! ಸಕಲಭೋಗಗಳಿಗಾಕರವಾಗಿರುವ ನಿನ್ನನ್ನು ಪಡೆದು ಸುಖಿಸದ ಮನುಜನು ಬದುಕಿದ್ದು ಫಲವೇನು? ಸುಮ್ಮನೆ ಪೀಡಿಸಬೇಡ! ತಡ ಮಾಡದೆ ನನ್ನ ಕೈಪಿಡಿದು, ಸುಖಸಾಮ್ರಾಜ್ಯವನ್ನಾಳಿಸು! ನೀನು ನೀಚ ಜಾತಿ ಯವಳಲ್ಲವೆಂದು ನಿನ್ನ ಅಸಮಾನ ರೂಪ ವಿಭ್ರಮಗಳೇ ಸಾರುತ್ತಿವೆ. ಸಾರಸಾಕ್ಷಿ! ಪರಸತೀ ಸಂಗದಿಂದ ಬರಬಹುದಾದ ಪಾಪಕ್ಕೆ ಹೆದರೆನು. ಪಾಪಿ ಮದನನ ಪುಷ್ಪಶರ ಗಳಿಗಂಜುತ್ತಿರುವೆನು. ಕೈಪಿಡಿದು ಕಾಪಾಡು!"

ಇಂತು ನುಡಿಯುವ ಕೀಚಕನ ಮಾತನ್ನಾಲಿಸಿ, ಮಾಲಿನಿಯು ಸಿಂಹಿಣಿ ಯಂತಾದಳು; ಅವಳ ಕಣ್ಣು ಕೆಂಪಾಯಿತು; ತುಟಿ ಅಲುಗಿತು; ಆ ನೀಚನನ್ನು ಬೆದರಿಸಿ ಕಳಿಸಲು ನಿಶ್ಚಯಿಸಿ, ಆ ಮಹಾಪತಿವ್ರತೆ ದೃಷ್ಟಿಪಾತದಿಂದಲೇ ಅವನನ್ನು ದೂರ ಸರಿಸಿ, ಗಂಭೀರ ರವದಿಂದ ಇಂತು ನುಡಿದಳು—

"ಕೀಚಕಾ! ದುರ್ವಾರ ಪರಾಕ್ರಮದಿಂದ ಶತ್ರುಗರ್ವ ನಿರ್ವಾಪಣವನ್ನು ಸಾಧಿಸಲು ಸಮರ್ಥರಾದ ಪತಿಗಳೈವರನ್ನು ಪಡೆದು ಬಂದಿರುವೆನು. ಅನಾಥಳು ನಾನೆಂದು ತಿಳಿದು, ಕೊಬ್ಬಿ ನಡೆಯಬೇಡ! ಗಂಧರ್ವ ವೀರರೆನ್ನ ಪತಿಗಳು. ಅವರು ದುರ್ಮಾರ್ಗನಾದ ನಿನ್ನ ಮಾನ ಪ್ರಾಣಗಳನ್ನು ಹರಿಸದೆ ಬಿಡರು. ಎಚ್ಚರ ದಿಂದಿರು!"

ಆ ಮಾತಿಗಂಜದೆ ಕೀಚಕನು "ಏನೆಂದೆ? ಗಂಧರ್ವಪತಿಗಳೈವರಿರುವರೆ! ನನ್ನ ಬಾಹುಬಲದ ಮುಂದೆ ಐದು ಜನ ಗಂಧರ್ವರೆ ಅಲ್ಲ, ಮೂರ್ಲೋಕದ ವೀರಾದಿವೀರರೂ ನಿಲ್ಲಲಾರರು. ತಿಳಿ! ನನ್ನ ವಶವಾಗಿ ಸುಖದಿಂದಿರು! ಇಲ್ಲದ

ಅಲ್ಲದ ಗಂಧರ್ವರ ಮಾತೆತ್ತಬೇಡ! ಅವರಿಂದ ನಿನಗೇನು ಸುಖವಾಗಿದೆ? ದಾಸಿಯಂತಾಗಿರುವ ನಿನ್ನನ್ನು ಅರೆಚಣದಲ್ಲಿ ರಾಣಿಯನ್ನಾಗಿಸುವೆನು" ಎಂದು ಪ್ರಲಪಿಸಿದನು. ಮತ್ತೆ "ಪ್ರಿಯವಾದಿಯು, ಬಹು ಸುಂದರನು ಆದ ನನ್ನಂತಹ ಪುರುಷನು ದುರ್ಲಭನೆಂದು ತಿಳಿ! ನನ್ನವಳಾಗು! ಸುಭಗೇ! ಈ ರಾಜ್ಯವೆಲ್ಲವು ನನ್ನಧೀನವಾಗಿದೆ! ಮೂಲೋಕಗಳನ್ನೂ ಗೆಲ್ಲಬಲ್ಲ ನನಗೆ ಸರಿವೀರವರರೆಲ್ಲಿಯೂ ಇಲ್ಲ. ನನ್ನನ್ನು ತಿರಸ್ಕರಿಸಿ, ಆಮೇಲೆ ಪಶ್ಚಾತ್ತಾಪಪಡಬೇಕಾದೀತು! ಸರ್ವಭೋಗಗಳನ್ನೊದಗಿಸುವೆನು. ಹಾರಾಲಂಕಾರ ಯೋಗ್ಯವಾದ ವಕ್ಷೋಜ ಯುಗವು ನಿರಂತರವು, ಪೀನವು, ಸುಶೋಭನವು ಆಗಿದೆ. ಕಾಮನ ಪ್ರತೋದಗಳೆಂಬಂತೆ ನನ್ನ ಮನಃಕವಾಟವನ್ನು ತಿವಿದು ಗಾಯಪಡಿಸಿದೆ. ನಿನ್ನ ಅಧರಾಮೃತವೇ ಅದಕ್ಕೆ ಮದ್ದು. ವಲೀತ್ರಯ ಸುಂದರವು, ಸ್ತನಭಾರವಿನಿಮಿತವು ಆದ ನಿನ್ನ ನಡುವು ಕೈಪಿಡಿಯಲ್ಲಿ ಅಡಗುವಂತಿದೆ. ವಿಶಾಲಪುಲಿನ ಮನೋಹರವಾದ ಜಂಘವನ್ನು ಕಂಡು, ಅಲ್ಲಿ ಕ್ರೀಡಿಸಬೇಕೆಂಬ ಕಾಮವ್ಯಾಧಿಯು ಅಸಾಧ್ಯವಾಗಿ ಬೆಳೆಯುತ್ತಿದೆ. ನಿರ್ದಯನಾಗಿ ವಿರಹಾಗ್ನಿಯಿಂದ ಸುಡುವ ಮದನನಿಂದ ನನ್ನ ಜೀವವನ್ನುಳಿಸು! ನಿನ್ನ ಸಂಗಸುಧಾವರ್ಷದಿಂದ ಮದನಾನಲವನ್ನು ಆರಿಸು! ಸರ್ವಾಭರಣ ಭೂಷಿತಳಾಗು! ಸುಖಾರ್ಥಳೆನಿಸಿ, ದಾಸ್ಯದಲ್ಲಿರಲೇಕೆ? ಅನುತ್ತಮ ಸುಖಗಳು ನನ್ನ ಮನೆಯಲ್ಲಿ ನಿನಗಾಗಿ ಕಾದಿವೆ. ಅಮೃತ ಮಧುರ ಪಾನೀಯಗಳನ್ನು ಕುಡಿ! ನನಗೂ ಕುಡಿಸು! ನನ್ನೊಡನೆ ರಮಿಸು! ಬಳಸಿ ಮುಡಿದು ಮೂಸದ ಹೂಮಾಲೆಯಂತೆ ನಿನ್ನ ವಯಸ್ಸು ವ್ಯರ್ಥವಾಗಿ ಕಳೆಯಬೇಡ! ನಿನಗಾಗಿ ಹಿಂದಿನ ತರುಣಿಯರನ್ನೆಲ್ಲ ಪರಿತ್ಯಜಿಸುವೆನು. ಅವರು ನಿನಗೆ ದಾಸಿಯಂತಾಗಿ ಸೇವಿಸುವಂತೆ ಮಾಡುವೆನು. ನಾನೇ ನಿನ್ನ ದಾಸನಾಗಿ, ಅಡಿಗೆ ಮುಡಿ ಹಾಸುವೆನು" ಎಂದಿತ್ಯಾದಿ ರೀತಿಯಾಗಿ ಬಡಬಡಿಸುವ ದುರ್ಮಾರ್ಗನನ್ನು ಅಸಡ್ಡೆಯಿಂದ ನೋಡಿ, ಸೈರಂಧ್ರಿಯು ಇಂತೆಂದಳು—

"ಎಲವೊ ಪಾಪಿ! ಪ್ರಾಣಿಗಳಿಗೆ ದಾರೆಯರಕಿಂತ ರಕ್ಷಣೀಯವಿಲ್ಲ. ನನ್ನನ್ನು ಕೆಣಕಿ ಗಂಧರ್ವರ ಕೋಪಾಗ್ನಿಗಾಹುತಿಯಾಗಬೇಡ! ಪರದಾರಾಮರ್ಶನದಿಂದ ಅಯಶಸ್ಸಾಗುವುದಲ್ಲದೆ ಮಹಾಭಯವೂ ಸಿಡಿಲಂತೆ ಬಡಿಯುವುದು. ತುಂಬಿಹರಿಯುವ ತೊರೆಯನ್ನು ಕೈಯಿಂದ ದಾಟುವ ಬಾಲನಂತೆ ಕೆಡುವೆ! ದೇವಸಮರಾದ ನನ್ನ ಪತಿವೀರರು ಪಾತಾಳದಲ್ಲಡಗಿದರೂ, ಆಕಾಶಕ್ಕೆ ಹಾರಿದರೂ, ಸಮುದ್ರ ಪಾರವನ್ನು ಸೇರಿದರೂ, ನಿನ್ನನ್ನು ಹುಡುಕಿ ಕೊಲ್ಲದೆ ಬಿಡುವರಲ್ಲ. ತ್ರಿಪುರಘ್ನ ಶಿವನ ಮಡದಿಯಾದ ಭದ್ರಕಾಳಿಯನ್ನು ಜೀಡಿ ಆಲಿಂಗಿಸುವ ಮೂರ್ಖನಂತೆ ಸಾಯುವೆ! ಚಂದ್ರಬಿಂಬವನ್ನು ಕೈಯಿಂದ ಹಿಡಿಯಲೆಣಿಸಿ ಹಾಸ್ಯಾಸ್ಪದನಾಗುವೆ! ನಾನೆಂದಿಗೂ ನಿನ್ನನ್ನು ಎಡಗಾಲಿನಿಂದಲೂ ಸ್ಪೃಶಿಸುವಳಲ್ಲ. ನಡೆ!" ಎಂದು ತಿರಸ್ಕರಿಸಿದ ಮಾಲಿನಿಯನ್ನು ಬಿಟ್ಟು, ಕೀಚಕನು ತನ್ನ ಅಕ್ಕನನ್ನು ಸೇರಪೋದನು.

ಮದನಾಗ್ನಿ ಜ್ವಾಲೆಗಳಿಂದ ಸುಡುವ ಕೀಚಕನ ಮುಖವು ಬಾಡಿತು. ಅವನ

ಮನಸ್ಸು ಚಿಂತಾಸಾಗರವಾಗಿತ್ತು. ಮುಖದಿಂದ ಬಿಸಿಯುಸಿರು ಹೊರಸೂಸಿ ಬರುತ್ತಿರಲು, ಮಾಲಿನಿಯ ಧಿಕ್ಕಾರವನ್ನು ಸಹಿಸಲಾರದೆ, ಅವಳನ್ನು ಪಡೆಯುವ ಹಠತೊಟ್ಟು ಕೀಚಕನು ಅಕ್ಕನಿಗಿಂತೆಂದನು—

"ನಾನಾಗ ನಿನಗೆ ನೋಡಿಸಿದ ಮಡದಿಯಲ್ಲಿ ನನ್ನ ಮನವು ಲಗ್ನವಾಗಿದೆ. ಅವಳೀಗ ನನ್ನ ಪ್ರಾರ್ಥನೆಯನ್ನು ತಿರಸ್ಕರಿಸಿ ಹೊರಟುಹೋದಳು. ಕರೆಸು ಅವಳನ್ನು! ಅವಳಿರದೆ ಕ್ಷಣವಾದರು ಜೀವಿಸಲಾರೆನು." ಇಂತು ಮದನ ವಿಕಾರಮನಸ್ಕನಾಗಿ ಮಾತಾಡುವ ತಮ್ಮನನ್ನು ನೋಡಿ, ಸುದೇಷ್ಣೆ 'ಏನು ಮಾಡಲಿ! ಬೇಡ, ಒಳಿತಲ್ಲ ವೆಂದರೆ ಕೇಳುವವನಲ್ಲ. ಹಿಂದೆ ರಾವಣನಿಗಾದ ಪಾಡು ಇವನಿಗೂ ಕಾದಿದೆಯೋ ಏನು? ಆದರೂ ಇವನನ್ನು ಈ ದುಷ್ಕೃತ್ಯದಿಂದ ನಿವಾರಿಸಲು ಯತ್ನಿಸುವೆನು. ಮುಂದೆ ದೈವೇಚ್ಛೆಯಂತಾಗಲಿ' ಎಂದು ನಿಶ್ಚಯಿಸಿ, ಮೆಲ್ಲನೆ ಕೀಚಕನನ್ನು ಕರೆದು, ಹತ್ತಿರ ಕೂಡಿಸಿಕೊಂಡು, ಇಂತು ನುಡಿದಳು—

"ಕೀಚಕ! ನೀರಸಾಕಾರೆಯಾದ ಒಬ್ಬ ನಿಕೃಷ್ಟ ದಾಸಿಯನ್ನೇಕೆ ಬಯಸುವೆ? ನಿನ್ನನ್ನು ಸೇವಿಪ ಸುಂದರಿಯರಿಗೆ ಕೊರತೆಯೇ? ಕಾಲಂದುಗೆಯ ಝಣಝಣತ್ಕಾರದೊಡನೆ ಹಂಸಿಯಂತೆ ನಡೆದುಬರುವ ಬೆಡಗಿನ ಮಡದಿಯರಿಗೆ ಕಡಿಮೆಯಿಲ್ಲವಲ್ಲ. ಸೆರಗನ್ನು ಸವರಿಸುವ ಸೋಗಿನ ಪದ್ಮಗಂಧಿಯರು ಪಾದಸೇವೆಗೆ ಸಿದ್ಧರಿರುವರು. ನಡೆದು ಬರುವ ಮಿಂಚಿನ ಬಳ್ಳಿಯಂತೆ ಹೊಳೆವ ತರುಣಿಯರಿಂದ ವಿಹರಿಸು! ಮಂದಹಾಸ ಕಟಾಕ್ಷಗಳನ್ನು ಬೀರಿ, ಗಿಳಿಯಂತೆ ಮಾತಾಡುವ ಮಾನಿನಿಯರನ್ನು ಬಿಟ್ಟು ತುಚ್ಛ ಸೈರಂಧ್ರಿಗಾಗಿ ಏಕೆ ಹಾತೊರೆಯುವೆ! ಇದು ನಿನಗೆ ತರವಲ್ಲ. ಕೇಳೆನ್ನ ಮಾತನ್ನು!" ಅಂತು ಸಮಾಧಾನಪಡಿಸುವ ಸೋದರಿಯ ಮಾತನ್ನು ಲೆಕ್ಕಿಸದೆ ನೆಕ್ಕಸವಾಗುವ ಕಾಮವಿಕಾರದಿಂದ ಮತಿಗೆಟ್ಟು ಕೀಚಕನು ಮತ್ತೆ ಸುದೇಷ್ಣೆಗಿಂತೆಂದನು.

## ಕೀಚಕೋನ್ಮಾದ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ರಾಜನ್! ಕೇಳು! ಇಂತು ಸುದೇಷ್ಣೆ ನುಡಿದ ಮಾತುಗಳನ್ನು ಕೇಳಿ ನಗುತ್ತಾ ಕೀಚಕನು ಇಂತೆಂದನು—

"ಅಕ್ಕ! ನನ್ನ ತರುಣಿಯರಲ್ಲಿ ಸೈರಂಧ್ರಿಯನ್ನು ಪೋಲ್ವ ಸುಂದರಿಯರಿಲ್ಲ. ಸ್ವರ್ಗ ಲೋಕದ ಅಪ್ಸರೆಯರೂ ಅವಳಿಗೆ ಸರಿಬಾರರು. ಪಂಕಜಾತಗಳ ಪಂಕವನ್ನು ತೆಗೆದು ಗಂಡುಮೀನಿನ ಬೆಡಗನ್ನು ಸೇರಿಸಿದರೆ ಅವಳ ಕಣ್ಣಾದೀತು! ತಾಮರಸನಾಳಗಳ ಪಾಚಿಯನ್ನು ತೆಗೆದು ಕುಂದನವನ್ನು ಹೊದಿಸಿದರೆ ಅವಳ ಕೈಯಾದೀತು! ರಸಾಲ ಪಲ್ಲವಗಳ ವಕ್ರತೆಯನ್ನು ಸರಿತಿದ್ದಿ ಅರವಿಂದ ಕೋಮಲತೆಯನ್ನು ಕೂಡಿಸಿದರೆ ಅವಳ ಬೆರಳಾದೀತು! ಬಂಗಾರ ಕಲಶಗಳ ಕಾಠಿನ್ಯವನ್ನು ತೆಗೆದು ಲಿಕುಚಫಲ ಲಾವಣ್ಯ ವನ್ನು ಕೂಡಿಸಿದರೆ ಅವಳ ವಕ್ಷೋಜವಾದೀತು! ತಿಳಿಯದೆ ಅವಳ ರೂಪವನ್ನು

ಜರಿದೆ ! ಅಥವಾ ನನ್ನನ್ನು ಮರುಳನೆಂದು ಮಾತು ಮರೆಸಲು ನುಡಿಯುವೆಯೋ ? ಆ ರೂಪರೇಖೆ, ಆ ವರ್ಣಸೌಭಾಗ್ಯ, ಆ ಗಾಂಭೀರ್ಯ, ಆ ಹಾವಭಾವಗಳು—ಎಲ್ಲವೂ ಒಟ್ಟುಗೂಡಿ ಸೈರಂಧ್ರಿಯಲ್ಲಿ ಮೂರ್ತಿಮಂತವಾಗಿ ನಿಂತಿವೆ. ಸಾವಿರ ಮಾತಾಡಬೇಡ! ಅವಳನ್ನು ಯಾವ ಉಪಾಯದಿಂದಲಾಗಲಿ ನನ್ನ ಮನೆಗೆ ಕಳಿಸು ! ಇಲ್ಲದಿರೆ ಮದನ ಬಾಧೆಯಿಂದ ಬೆಂದು ಸಾಯುವೆನು."

ಸುದೇಷ್ಣೆ ಕೀಚಕನ ದುರವಸ್ಥೆಯನ್ನರಿತಳು. ಹಿತೋಪದೇಶಕ್ಕೆ ಕಿವುಡಾಗಿರುವ ತಮ್ಮನನ್ನು ಭಯತೋರಿಸಿ ಉಳಿಸಲೆಣಿಸಿ, ಇಂತೆಂದಳು. "ಅಯ್ಯಾ! ನಿನ್ನ ದುರ್ಬುದ್ಧಿಯನ್ನು ಬಿಡು ! ಅವಳಿಗೆ ಐವರು ಪತಿಗಳಂತೆ ! ಅವರು ಗಂಧರ್ವರಂತೆ ! ಸದಾ ಅದೃಶ್ಯರಾಗಿ ಅವಳನ್ನು ಕಾಪಾಡುತ್ತಿರುವರಂತೆ ! ಈ ಮಾತು ನೆನೆದರೆ ನನಗೆ ಎದೆ ಝಲ್ಲೆನಿಸುತ್ತಿದೆ. ನಿನ್ನಂತ ವಿವೇಕಿಯು ದುಷ್ಟವೂ, ಅಪಾಯಕಾರಿಯೂ, ಲಜ್ಜಾಕರವೂ, ಹೇಯವೂ ಆದ ಪರದಾರಾಭಿಮರ್ಶನವನ್ನು ಮನಸಾ ಸ್ಮರಿಸಲಾಗದು." ಎಂದು ನುಡಿದ ರಾಣಿಯ ವಚನಗಳನ್ನು ಸಹಿಸದೆ ಕೀಚಕನು ಮದನಪರವಶನಾಗಿ, ಹಿತವನ್ನು ಅಹಿತವನ್ನು ವಿವೇಚಿಸಿ ತಿಳಿಯಲಾರದೆ, ಇಂತೆಂದನು—

"ಅಕ್ಕ ! ನನ್ನ ಮಾತನ್ನಾಲಿಸು ! ಚತುಸ್ಸಮುದ್ರಮುದ್ರಿತ ಧರಾವಲಯದಲ್ಲಿ ಬಾಹುಬಲದಿಂದ ನನ್ನನ್ನೆದಿರಿಸಿ ನಿಲ್ಲುವ ವೀರರಿಲ್ಲ. ಗಂಧರ್ವರು ಗಿಂಧರ್ವರು ನನಗೆ ಲೆಕ್ಕವಿಲ್ಲ. ಸೈರಂಧ್ರೀಭುಜಾಸಕ್ತನಾದ ನನ್ನನ್ನು ಕೆಣಕಿ, ಗಂಧರ್ವರು ವಜ್ರಾಘಾತ ದಿಂದುರುಳುವ ಬೆಟ್ಟಗಳಂತೆ, ನಾಶವಾಗುವರು. ನಾನೊಲ್ಲದ ಹಿತವಚನವನ್ನು ಬಿಡು! ಎಂತಾದರೂ ಸರೇ ! ಆ ಕಾಂತಾಮಣಿಯ ಸಂಗನೆನಗಾಗುವಂತೆ ಸಾಧಿಸು !"

ಇಂತು ನುಡಿದು ಕೀಚಕನು ಧಿಗ್ಗನೆ ಎದ್ದು, ಅಕ್ಕನ ಪಾದಗಳಿಗೆ ಬಿದ್ದು, ಬಿಡದೆಯಿರಲು ನೋಡಿ, ಸುದೇಷ್ಣೆ ತನ್ನ ಮನದಲ್ಲಿ 'ಸೈರಂಧ್ರಿಯನ್ನು ಬೇಡುವ ಕೀಚಕ ನನ್ನು ಗಂಧರ್ವರು ಕೊಲ್ಲದೆ ಬಿಡರು. ಸೈರಂಧ್ರಿಯ ಸಂಗವಿಲ್ಲದಿರೆ, ಇವನನ್ನು ಮದನನು ಕೊಲ್ಲದೆ ಬಿಡನು. ಎರಡು ಬಗೆಯಿಂದಲು ಈ ಮೂರ್ಖನು ಸಾಯಲಿರುವನು. ದೈವೇಚ್ಛೆ ಇದ್ದಂತಾಗಲಿ ! ನನ್ನ ಹಿತವಚನವಿವನ ತಲೆಗೇರದಾಗಿದೆ. ಮುಂದೆ ಬರುವ ವಿಪತ್ತಿಗೆ ತಲೆಯೊಡ್ಡಿ ನಿಂತಿರುವ ಇವನ ಪಾಡೇನಾದರಾಗಲಿ ! ಈಗ ಸೈರಂಧ್ರಿಯನ್ನು ಉಪಾಯದಿಂದ ಇವನ ಮಂದಿರಕ್ಕೆ ಕಳಿಸದೆ ವಿಧಿಯಿಲ್ಲ !' ಎಂದು ಚಿಂತಿಸಿ, ಅವನನ್ನು ಕೈಪಿಡಿದೆತ್ತಿ, ಕಣ್ಣಲ್ಲಿ ತುಂಬಿಬರುವ ಬಾಷ್ಪಪೂರವನ್ನು ತಡೆದು, ಅನುನಯದಿಂದ "ಕೀಚಕ ! ಚಿಂತಿಸಬೇಡ ! ಏನಾದರೂ ಮಾಡಿ, ನೀ ಬೇಡುವ ಮಾಲಿನಿಯನ್ನು ನಿನ್ನ ಮನೆಗೆ ಕಳಿಸುವೆನು. ಇನ್ನಿಲ್ಲಿರಬೇಡ ! ಹೋಗು ! ನಾಳೆ ಪೂರ್ಣಿಮೆಯದಿನ ನಿನ್ನ ಮನೆಯಲ್ಲಿ ಮಾಂಸಭಕ್ಷ್ಯಗಳನ್ನು ಮಾಡಿಸು ! ಮದ್ಯಸುರಾಸವಗಳನ್ನು ಸಿದ್ಧಪಡಿಸು ! ದ್ರಾಕ್ಷಾರಸವನ್ನು ನನಗಾಗಿ ತರಲು ಹೇಳ, ಆ ತಲೋದರಿಯನ್ನು ಕಳಿಸುವೆನು. ಮುಂದೆ ವಿಧಿ ಬರೆದಂತಾಗಲಿ !" ಎಂದು ಅವನನ್ನು ಕಳಿಸಿದಳು.

ಕೀಚಕನು ಅಕ್ಕನ ಮಾತಿಗೆ ಮುದಿತನಾಗಿ ತತ್‌ಕ್ಷಣವೇ ಅಲ್ಲಿಂದ ಹೊರಟು, ತನ್ನ ಮನೆ ಸೇರಿದನು. ಪೂರ್ಣಿಮಾದಿನವು ಬಂತು. ಅಂದು ಕೀಚಕನ ಆನತಿಯಂತೆ, ಅವನ ಪಾಚಕರು ವಿವಿಧ ಭಕ್ಷ್ಯಭೋಜ್ಯಗಳನ್ನೂ ಮಧುರಸಗಳನ್ನೂ ತಯಾರಿಸಿದರು. ಕೀಚಕನು ತನ್ನ ಮಂದಿರ ಪ್ರಾಂಗಣವನ್ನು ನಿರ್ಜನವನ್ನಾಗಿಸಿ, ಅಲ್ಲಿ, ಏಕಾಂತದಲ್ಲಿ ಕಾಂತಾಗಮನವನ್ನು ಚಿಂತಿಸುತ್ತಾ, ಕಷ್ಟದಿಂದ ಕಾಲವನ್ನು ಕಳೆಯುತ್ತಿದ್ದನು. 'ಆಹಾ! ಇಂದಿಗೆ ನನ್ನ ಜನ್ಮ ಸಫಲವಾಯಿತು! ಅಲೋಕರಮಣೀಯ ತರುಣೀಸಂಗದಿಂದ ನನಗೆ ಸ್ವರ್ಗವೇ ಸಿಕ್ಕಂತಾಗುವುದು. ಅಂದವಳು ನನ್ನನ್ನು ತಿರಸ್ಕರಿಸಿದಳೆಂದರೆ ಅದು ನನ್ನ ತಪ್ಪೇ ಸರಿ! ಹೊಸ ಪರಿಯಾದುದರಿಂದ ಬೇಗ ವಶಳಾಗದೆ, ನಾರೀಸಹಜ ಲಜ್ಜೆಯಿಂದ ವರ್ತಿಸುವ ತಲೋದರಿಯನ್ನನುನಯಿಸದೆ, ಬಲಾತ್ಕರಿಸಲು ಯತ್ನಿಸಿ ಮೂರ್ಖನಾದೆನು. ಆಗಲಿ! ಇಂದಿಗೆ ನನ್ನಂತಹ ಸುಂದರನ ಸೌಭಾಗ್ಯವು ಏಕಾಂತದಲ್ಲಿ ಅವಳಿಗೆ ಸಿಗುವುದಿದೆ. ತನ್ವಂಗೀ! ನೀನೆನ್ನ ಕಡೆಗೆ ಬಂದು ಸುಳಿದರೆ ಸಾಕು! ಇನ್ನು ದೇವಾಂಗನೆಯರನ್ನೂ ಲೆಕ್ಕಿಸೆನು. ಅರವಿಂದದಳವಿಲೋಚನೆ! ನೋಡಿದರೆ ಸಾಕು! ಇನ್ನು ಸಹಸ್ರಾಕ್ಷನಾಗುವೆನು. ತನುಮಧ್ಯೆ! ನಿನ್ನ ಆಲಿಂಗನ ದೊರೆತರೆ ಸಾಕು! ಮೋಕ್ಷವನ್ನೂ ಬೇಡದಿರುವೆನು. ಚಂದ್ರವದನೆ! ನೀನು ನಕ್ಕರೆ ಸಾಕು! ಅಮೃತ ಸೇಚನವಾದಂತಾಗಿ ಮೈಮರೆವೆನು. ನಿನ್ನ ಸೊಬಗಿನ ಸಿರಿಯನ್ನು ಸೂರೆಗೊಳ್ಳುವ ತವಕದಿಂದ ಕಾದಿರುವ ಕಳ್ಳನಂತಿರುವ ನನ್ನನ್ನು ನಿನ್ನ ಕೋಮಲ ಬಾಹುಪಾಶದಿಂದ ಬಂಧಿಸು! ನಿನ್ನ ಅಪ್ಪುಗೆಯ ಸೆರೆಯುಲ್ಲಿಡು!' ಎಂದು ಪ್ರಲಾಪಿಸುವ ಕೀಚಕನು ಕೈಯಿಂದ ನೂಕಿದರೂ ಸಾಗದ ವೇಳೆಯನ್ನು ನಿಂದಿಸುತ್ತಿದ್ದನು.

ಸುದೇಷ್ಣೆ ಶಯ್ಯಾರೂಢಳಾಗಿ ಮಾಲಿನಿಯನ್ನು ಕರೆಸಿದಳು. ತಲೆಗೆ ಸುಂಠಿಯ ಪಟ್ಟನ್ನಿಟ್ಟು, ಮುಲುಗುತ್ತಾ, ತೃಷ್ಣಾಭರದಿಂದ ನೊಂದವಳಂತೆ ನಟಿಸುತ್ತಾ, ಮಹಾರಾಣಿ, ತನಗನರ್ಹವಾದ ಕಾರ್ಯದಲ್ಲಿ ಪ್ರವೃತ್ತಳಾದಳು! ಬಂದ ಸೈರಂಧ್ರಿಯನ್ನು ನೋಡಿ, "ಮಾಲಿನಿ! ತಲೆನೋಯುತ್ತಿದೆ. ಕುಡಿಯಲು ಮನಸಾಗಿದೆ. ಸುವಾಸಿತವು, ಕನಕವರ್ಣವು ಆದ ಮದಿರಾರಸವನ್ನು ತಂದುಕೊಡು! ಇಂದು ಹುಣ್ಣಿಮೆಯಲ್ಲವೇ? ನಮ್ಮ ತಮ್ಮನಾದ ಕೀಚಕಾಗ್ರಜನ ಮನೆಯಲ್ಲಿ ಪರ್ವದಿನವೆಂದು ವಿವಿಧ ಮಧುರ ಮದಿರಾರಸಗಳನ್ನು ತಯಾರಿಸಿಟ್ಟಿರುವರು. ಬೇಗಬೇಗನೆ ಹೋಗಿ, ಕೀಚಕನನ್ನು ಕೇಳಿ, ಸ್ವಲ್ಪ ಮದಿರಾರಸವನ್ನು ಕೊಂಡುಬಾ! ನೋಡುವೆನು ನಿನ್ನ ಗಮನವೇಗವನ್ನು!" ಎಂದು ತಮ್ಮನಿಗಾಗಿ ತವಕಿಸುವ ತರುಣಿಯ ಕಾಪಟ್ಯವನ್ನರಿತು, ಮಾಲಿನಿಯೂ ಮನದಲ್ಲೇ ಮರುಗಿದಳು; ಅವಳ ಎದೆ ಝಲ್ಲೆಂದಿತು, ಮೈ ಬೆವರಿಟ್ಟಿತು, ಚಿಂತೆಯಿಂದ ಕಂಬನಿ ಉಕ್ಕಿಬಂತು. ಹೋಗುವೆನು—ಹೋಗಲಾರೆನು ಎನ್ನಲಾರದೆ ಅವಳ ಮನಸ್ಸು ಹೊಯ್ದಾಡಿತು. ಎಂತು ಪಾರಾಗುವುದೆಂಬ ಆಲೋಚನೆ ಮೂಡಿತು. ದೈವವಿಲಾಸವನ್ನು ಕಂಡು ಅವಳ ಮನಸ್ಸು ಪಲ್ಲಟಿಸಿತು.

ಮಾಲಿನಿ ಸುದೇಷ್ಣೆಯನ್ನು ಮನದಲ್ಲೇ ಶಪಿಸಿ, "ಅಮ್ಮಾ! ಕಳ್ಳ ನಾ

ತರಲಾರೆನು. ಅದನ್ನು ಅಲ್ಲಿಂದ ತರಲು ಬೇರಾವ ತರುಣಿಯನ್ನಾದರೂ ಕಳಿಸು ! ನಿನ್ನಲ್ಲಿ ನಿಂತಾಗಲೇ ಗೌರವನೀಯಕಾರ್ಯಗಳಲ್ಲಿ ನಿಯುಕ್ತಳಾಗಿರುವೆನೆಂದು ನಿಬಂಧನವನ್ನು ತಿಳಿಸಿಲ್ಲವೇ ? ಅದಕ್ಕೊಪ್ಪಿ, ಅಂತೆಯೇ ನಡೆದು ನಡೆಸಿ, ಇಂದು ನನ್ನನ್ನು ನೀಚಪರಿವಾರಯೋಗ್ಯವಾದ ಸುರಾನಯನ ಕಾರ್ಯದಲ್ಲಿ ನಿಯಮಿಸಬಹುದೇ? ನಿನ್ನ ಮನೆ ಎಂದರೆ ಅತಿ ನಿರ್ಮಲಚರಿತಭರಿತವೆಂದು ನಂಬಿ ನಿಂತೆನು. ನನ್ನ ಪತಿಗಳು ಗುಪ್ತರಾಗಿ ಎಲ್ಲವನ್ನೂ ವೀಕ್ಷಿಸುತ್ತಿರುವರು. ನಿನ್ನಂತಹ ಸಾಧುಜನರು, ತಮ್ಮನ್ನಾಶ್ರಯಿಸಿದವರನ್ನು ದುರ್ಮಾರ್ಗರ ಪೀಡೆಗೆ ಗುರಿಯಾಗಿಸದೆ ಕಾಪಾಡುವುದು ಉಚಿತವಾಗಿದೆ. ನಿನ್ನ ನೆರಳಲ್ಲಿ ನಿಂತ ಪತಿವ್ರತೆಯಾದೆನಗೆ ಒಂದಪಾಯ ಘಟಿಸಿದರೆ, ಅದರಿಂದ ನಿಂದೆ ಬಾರದೇ ? ನನಗೆ ಅಪರಾಧವೆಸಗುವ ಪಾಪಿಗಳು ಬದುಕುವರೇ ? ವಿಚಾರಿಸು ! ನೀಚವಾದ ಮದ್ಯಮಾಂಸಾನಯನ ಕಾರ್ಯದಲ್ಲಿ ನನ್ನನ್ನು ವಿನಿಯೋಗಿಸಬೇಡ ! ಯಾವನೊಬ್ಬನ ಮನೆಗೆ ಏನೊಂದನ್ನು ತರಲು ನನ್ನನ್ನು ಕಳಿಸುವುದು ನಿನಗೆ ತರವಲ್ಲ. ಆಗುವ ಅನರ್ಥಕ್ಕೆ ನನ್ನನ್ನು ತೆಗಳಬೇಡ !" ಎಂದು ನುಡಿದು ಸುಮ್ಮನಾದಳು.

ಸುದೇಷ್ಣೆ ಚಿಂತೆಗೊಳಗಾದಳು. ಸುರೆಗೆಂದು ನೆವದಿಂದ ಸುಂದರಿಯನ್ನು ಸೊಕ್ಕಿದ ಸೂತಸುತನ ಮಂದಿರಕ್ಕೆ ಕಳಿಸುವುದು ತಪ್ಪೆಂದು ಅವಳಿಗೆ ತಿಳಿಯದಿರಲಿಲ್ಲ; ಆದರೆ ತಮ್ಮನೆಂಬ ಅಭಿಮಾನವು ಅವಳ ವಿವೇಕವನ್ನು ಮುಚ್ಚಿತು. ಅವಳು, "ಅಲ್ಲ! ಏನೋ ಆಸೆಯಾಗಿ, ಹೊಸ ಸುರೆ ಕುಡಿಯಲೆಣಿಸಿ, ಇನ್ನೊಬ್ಬ ಪರಿಚಾರಿಕೆಯನ್ನು ಕಳಿಸಲಾರದೆ, ನಿನಗೆ ಹೇಳಿದರೆ, ಆಪ್ತಳಾದ ನೀನು ನನ್ನ ಮಾತನ್ನು ತಿರಸ್ಕರಿಸಬಹುದೇ? ಇದು ಅಂತಹ ನೀಚಕಾರ್ಯವೇ? ತರಲಾರೆನೆನ್ನುವುದು ನೇಹದ ಕುರುಹೇ? ಅದು ನನ್ನ ತಮ್ಮನ ಮನೆಯಲ್ಲವೇ ? ಎಲ್ಲಿಗೆ ಹೋದರೇನು ? ನಿನ್ನನ್ನು ಆಡಿಕೊಂಬುವರಿರುವರೇ ? ನಿನ್ನಂತಹ ಸತೀಮಣಿ ಇನ್ನಿಲ್ಲವೆಂದು ನಾನೇ ಬಲ್ಲವರ ಮುಂದೆ ಎಷ್ಟೋ ಸಲ ಬಣ್ಣಿಸಿರುವೆನು. ಸುರೆ ತಂದರೆ ನಿನಗಾಗುವ ಕುಂದಿಲ್ಲ. ಹೋಗಿ ಬೇಗ ಬಾ !" ಎಂದು ಬೇಡಿದಳು. ಇನ್ನು ವಾದಮಾಡಿ ಪ್ರಯೋಜನವಿಲ್ಲೆಂದು ತಿಳಿದ ಮಾಲಿನಿಯು, ತಲೆದೂಗಿ 'ಹೋಗಿ ಸುರೆ ತರುವೆ'ನೆಂದು ಸೂಚಿಸಿ, ಅವಳಿತ್ತ ಕನಕ ಚಷಕವನ್ನು ಕೈಲಿ ಹಿಡಿದು, ಅನುಮಾನದಿಂದ ಹೊಯ್ದಾಡುವ ಮನದಿಂದ ಚಿಂತಿಸುತ್ತಾ ಅಲ್ಲಿಂದ ಹೊರಟಳು.

ನೀಚ ಕೀಚಕನಾಡಿದ ವಚನನಾರಾಚಗಳ ಗಾಯವಿನ್ನೂ ಮಾಯದೆ ನೋಯಿಸುತ್ತಿರಲು, ಉಗುರುಸುತ್ತಿನ ಮೇಲೆ ಬಿದ್ದ ಒನಿಕೆಯ ಪೆಟ್ಟಿನಂತೆ ಇಂತೊದಗಿಬಂದ ಅನುಚಿತ ವ್ಯಾಪಾರಕರಣಕ್ಕೆ ಹೆದರುತ್ತಾ ಮಾಲಿನಿಯು 'ಹಾ ! ಹತವಿಧೀ ! ಎಷ್ಟು ಸಂಕಟಗಳಿಗೀಡುಮಾಡಿದರೂ ನಿನಗೆ ಸಾಕಾಗದೇ ? ಯಾರೆನಗೆ ದಿಕ್ಕು ?' ಎಂದು ಮುಂದೆ ನಡೆದಳು. ಅವಳ ಕಣ್ಣೀರು ಕೋಡಿಯಾಗಿ ಹರಿದು ಮುಖಪಂಕಜವನ್ನು ಮ್ಲಾನವಾಗಿಸಿತು ; ಪದಗಳು ತಡಬಡಿಸಿದವು ; ಚಿತ್ತವು ವ್ಯಸನಾಕ್ರಾಂತವಾಯಿತು ; ಮುಖಮಂಡಲವು ಬಿಳುಚೇರಿತು ; ಭಯದಿಂದ ಅಂಗಗಳು ನಡುಗಿದವು ; ಅವಳು

ಹಿಂದಿರುಗಲು ಹವಣಿಸಿ ಮತ್ತೆ ವಿಧಿಯಿಲ್ಲದೆ ಮುಂದೆ ಸಾಗಿದಳು. ಆಗ ಸರ್ವಾಪತ್ಪರಿ ಹರಣವು ಶ್ರೀಹರಿಸ್ಮರಣವೆಂದು ಅವಳು ಸ್ಮರಿಸಿದಳು. ಹಿಂದೆ ಕಾಪಾಡಿದ ಗೋವಿಂದ ನಲ್ಲದೆ ಗತಿಯಿಲ್ಲವೆಂದು ನಿಶ್ಚಯಿಸಿ, ಮಾಲಿನಿಯು ತನ್ನ ಹೃದಯಕಮಲ ಸಿಂಹಾಸನ ದಲ್ಲಿ ಯದುಸಿಂಹನನ್ನು ಪ್ರತಿಷ್ಠಿಸಿ, ಕಣ್ಣುಮುಚ್ಚಿ, ಕಡುಭಕ್ತಿಯಿಂದ 'ಇಂದಿರೇಶಾ!' ಎಂದೊರಲಿದಳು. 'ಪಾಂಡುಪುತ್ರರಲ್ಲಿ ನಾನು ಅನುವ್ರತೆಯಾಗಿದ್ದರೆ, ಓ ಸೂರ್ಯ ನಾರಾಯಣ! ನನ್ನ ಪಾತಿವ್ರತ್ಯವನ್ನು ಉಳಿಸು! ಪಾಪಿ ಕೀಚಕನಿಂದ ನನ್ನನ್ನು ಕಾಪಾಡು!' ಎಂದು ಬೇಡಿದ ಸಾಧ್ವಿಯ ಮೊರೆಯನ್ನಾಲಿಸಿ ಸೂರ್ಯನು ತನ್ನ ಪರಿವಾರದ ಒಬ್ಬ ರಕ್ಕಸನನ್ನು 'ದುಃಖಿತೆಯಾಗಿರುವ ದ್ರೌಪದೀದೇವಿಯನ್ನು ಬರುವ ವಿಪತ್ತಿನಿಂದ ಕಾಪಾಡು!' ಎಂದಾಜ್ಞಾಪಿಸಿ ಕಳಿಸಿದನು. ರಾಕ್ಷಸನು ಅದೃಶ್ಯರೂಪನಾಗಿ ಮಾಲಿನಿಯ ಹಿಂದೆಯೇ ಬರುತ್ತಿದ್ದನು.

ಇಂತು ಶ್ರೀಕೃಷ್ಣನನ್ನು ನೆನೆದು, ಧೈರ್ಯವಹಿಸಿದ ಮಾಲಿನಿಯು ಕೀಚಕನ ಮನೆಯನ್ನು, ಹೆಬ್ಬುಲಿಯ ಗುಹೆಗೆ ಹೊಗಿಸಲ್ಪಡುವ ಹರಿಣಿಯಂತೆ ಪ್ರವೇಶಿಸಿದಳು. ಅವಳನ್ನು ನೋಡಿ ಕೀಚಕನು ಆನಂದಮಗ್ನನಾಗಿ ಮೇಲೆದ್ದು, ತ್ವರೆಯಿಂದ ಮುಂದೆ ಬಂದು, ಸಂಭ್ರಮ ಚಂಚಲ ಮನಸ್ಕನಾಗಿ, ತನ್ನ ವಸ್ತ್ರ ಭೂಷಣ ಹಾರಗಳನ್ನು ಸರಿಪಡಿಸಿಕೊಂಡು, ಮದನವಿಕಾರ ವಿವಶನಾಗಿದ್ದನು. ಮಾಲಿನಿಯು 'ದೇವಿಗೆ ಸುರೆ ಬೇಕಂತೆ! ಬೇಗ ಕೊಡಿಸಿ ಸುರೆಯನ್ನು' ಎಂದು ಕನಕಪಾತ್ರೆಯ ಮುಚ್ಚಳವನ್ನು ತೆಗೆದು ಕೆಳಗಿಟ್ಟಳು. ಕೀಚಕನು ಅವಳ ಮುಖವನ್ನು ದಿಟ್ಟಿಸಿ ನೋಡುತ್ತಾ, ಮದನಕಾತರ ನಾಗಿ 'ಇರಲಿ ನಿನ್ನ ರಾಣಿಯ ತೃಷೆ! ಮೊದಲು ನನ್ನ ರಾಣಿಯಾಗಿ, ನನ್ನ ಕಾಮತೃಷೆ ಯನ್ನು ಅಡಗಿಸು! ಬಾ! ಮಾತಾಡು! ನಿನ್ನ ಕಟಾಕ್ಷಕಿರಣದಿಂದ ನನ್ನ ಮುಖಾರ ವಿಂದವು ಅರಳಲಿ! ನಿನ್ನ ಮಧುರವಚನಗಳೆನಗೆ ಕರ್ಣರಸಾಯನವಾಗಲಿ! ನಿನ್ನ ಮಂದಹಾಸ ಚಂದ್ರಿಕೆಯು ವಿರಹಾಗ್ನಿಯಲ್ಲಿ ಬೆಂದ ನನ್ನ ತಾಪವನ್ನಡಗಿಸಲಿ! ನಿನ್ನ ಸುಭಗ ಸುಂದರ ಸಂಗದಿಂದ ನನ್ನ ಜನ್ಮ ಸಫಲವಾಗಲಿ! ಏಕೆ ಲಜ್ಜೆ? ಏನು ಸಂಕೋಚ?' ಎಂದು ಬಗುಳಿದನು.

ಅವನ ನುಡಿಗೆ ಕಿವಿಗೊಡದೆ ಮಾಲಿನಿ, 'ಸುರೆ ಕೊಡಿಸು! ದೇವಿ, ನಿಮ್ಮಕ್ಕ, ಕಾದಿರುವಳು! ಆಲಸ್ಯವಾದರೆ ಮುನಿಯುವಳು' ಎಂದಳು. ಆ ಮಾತಿಗೆ ನಕ್ಕು ಕೀಚಕಾಧಮನು 'ಸುದೇಷ್ಣೆಗೆ ಸುರೆಯನ್ನು ಮತ್ತೋರ್ವ ಮಡದಿಯ ಕೈಲಿ ಕಳಿಸು ವೆನು. ಅದರ ಗೊಡವೆ ನಿನಗೇಕೆ? ನೀನು ನನ್ನೊಡನೆ ಸುರೆ ಕುಡಿದು, ನಿನ್ನ ಅಧರ ಸುಧೆಯನ್ನೆನಗೆ ಕೊಡು! ನಿಶಾತ ಮದನ ಶರಗಳ ಬಾರಿಗೆ ಬಿದ್ದು ಮರಣಿಸದಂತೆ ನನ್ನನ್ನು ಕಾಪಾಡು! ನನ್ನ ಮನೆಯ ಸಿರಿಯನ್ನು ನಿನಗೆ ಸಮರ್ಪಿಸುವೆನು! ನಿನ್ನ ದಾಸನಾಗುವೆನು. ಕರಿ ತುರಗ ಮಣಿ ಭೂಷಾವಳಿಗೆ ಕಡಿಮೆಯಿಲ್ಲ. ಬೇಕಾದ ಭೋಗ ಗಳಿವೆ. ವಿಹಾರಭೂಮಿಗಳು ವಿಶಾಲವಾಗಿವೆ. ಸುಂದರ ಗಣಿಕಾಸಹಸ್ರವೆನಗಿದೆ. ಅವರೆಲ್ಲರೂ ನಿನ್ನ ಮನೆಯ ದಾಸಿಯರಂತಾಗಲಿ! ನೀನು ಕಣ್ಣಿಂದ ಹೇಳಿದುದನ್ನು

ತಡವಿಲ್ಲದೆ ಕೈಯಿಂದ ಮಾಡಿ ಮೆಚ್ಚಿಸುವೆನು. ಬಾ !' ಎಂದು ಬಡಬಡಿಸಿ, ಮದನ ವೇಗವನ್ನು ತಡೆಯಲಾರದೆ ಮಾಲಿನಿಯನ್ನು ಹಿಡಿಯಲು ಧಾವಿಸಿ, ಕೈಹಿಡಿದನು.

ಧೀರಭಾವದಿಂದ ನಿರ್ವಿಕಾರಳಾದ ಮಾಲಿನಿಯು ರೋಷಭೀಷಣ ದುರ್ಗೆಯಂತಾಗಿ ಅವನ ಕೈಯನ್ನು ಕೊಡಹಿ, ಬಿಡಿಸಿಕೊಂಡು, ಅವನ ಮಂದಿರದಿಂದ ಸರಸರನೆ ಹೊರ ಸಾರಿದಳು. ಹಿಂದೆ ಬರುವ ನೀಚನನ್ನು ನೋಡಿ ಅವಳು ಭಯಾಕ್ರಾಂತಳಾದಳು. ಎಲ್ಲಿ ಸೇರಿದರೆ ಅಭಯವಾಗುವುದೋ ಎಂದು ಚಿಂತಿಸಿ, ವಿರಾಟನು ಸಭೆ ನೆರೆದಿರುವ ಸಮಯವೆಂದರಿತಳು. ಶೀಘ್ರವಾಗಿ ನಡೆದು ಸಭೆಯನ್ನು ಪ್ರವೇಶಿಸಲು ಹೋಗುವ ಮಾಲಿನಿಯನ್ನು ಅನುಸರಿಸಿ ಕೀಚಕನೂ ಓಡಿಬಂದನು. ಕಾಮಚಲಿತನು, ದರ್ಪಕಲಿತನು ಆದ ಸಿಂಹಬಲನು, ಜನಸಮೂಹವನ್ನು ನೋಡಿ ನಾಚದೆ, ರಾಜಸಭೆ ಎಂದು ಹೆದರದೆ, ಮತಿಗೆಟ್ಟು, ಮಾನಿನಿಯನ್ನು ಹಿಂಬಾಲಿಸಿದನು.

ಮತ್ತ ಮಾತಂಗ ಶುಂಡಾದಂಡದಿ ಸಿಕ್ಕ ಮಾಲತೀಲತೆಯಂತೆ, ರೂಕ್ಷರಾಕ್ಷಸನ ಕೈಯ ಸೆಳೆತಕ್ಕೆ ಸಿಕ್ಕು ಚಡಪಡಿಸುವ ಗಂಧರ್ವಾಂಗನೆಯಂತೆ, ಕ್ರುದ್ಧ ಗೃಧ್ರನಖಗಳಿಗೆ ತಗುಲಿ ಬಿದ್ದ ನಾಗಕನ್ಯೆಯಂತೆ, ಘೋರ ಮಾರ್ಜಾಲನ ಹೊಡೆತಕ್ಕೀಡಾದ ಬಾಲ ಶಾರಿಕೆಯಂತೆ, ಹೆದರಿ, ಅಳುತ್ತಾ, ಮಾಲಿನಿಯು ಸಭೆಯನ್ನು ಪ್ರವೇಶಿಸಿದಳು. ಸಭೆಯು ಗಗ್ಗೋಲಾಯಿತು. ಹಾಹಾಕಾರಗಳು ವ್ಯಾಪಿಸಿದವು. ಮಾಲಿನಿಯ ಹಠದಿಂದ ಮುನಿದ ಕೀಚಕನು ಯಾರನ್ನೂ ಲೆಕ್ಕಿಸದೆ, ಸಭೆ ಹೊಕ್ಕು, ಮಾಲಿನಿಯ ಕೇಶರಾಶಿಯನ್ನು ಜಗ್ಗಿ, ಅವಳು ನೆಲಕ್ಕುರುಳಲು, ನೋಡಿ, ಕಟಕಟ ಹಲ್ಲು ಕಡಿದು, ಶಂಕಾತಂಕಿತನಾಗದೆ, ಅವಳನ್ನು ಕಾಲಿಂದ ಒದೆದನು. ಆಗ ಸೂರ್ಯಪ್ರೇಷಿತನಾದ ರಾಕ್ಷಸನು ಅಲ್ಲಿ ನಿಂತಿದ್ದ ಕೀಚಕನನ್ನು ಅದೃಶ್ಯನಾಗಿದ್ದು, ಕಾಲಿಂದೊದ್ದು ಕೆಡಹಿದನು. ಬಿರುಗಾಳಿಗೆ ಬೇರು ಕಡಿದು ಬೀಳುವ ಗಿಡದಂತೆ, ಕೀಚಕನು ಪತಿತನಾಗಿ, ತನ್ನನ್ನೊದ್ದವರನ್ನು ಕಾಣದೆ, ಆಶ್ಚರ್ಯ ಭಯ ಸಂಭ್ರಮಾನ್ವಿತನಾಗಿ ತತ್ತರಿಸುತ್ತ, ನಿಶ್ಚೇಷ್ಟನಾಗಿ ನಿಂತಿದ್ದನು.

ಆ ಸಮಯದಲ್ಲಿ ಭೀಮಸೇನನು ವಲ್ಲವ ವೇಷದಿಂದ ಕಂಕನ ಸಮೀಪದಲ್ಲಿ ನಿಂತಿದ್ದು, ತನ್ನ ಕೈಹಿಡಿದ ಮಾನಿನೀ ಮಣಿಯನ್ನು ಕಾಲಿಂದೊದ್ದು ಅವಮಾನಿಸಿದ ಕೀಚಕಾಧಮನ ದುರ್ನಯವನ್ನು ಸಹಿಸದಾದನು. ಅವನ ಕಣ್ಣಿಂದ ಕೋಪಾಗ್ನಿಯ ಕಿಡಿಗಳುದುರಿದವು ; ಅವನ ಮೈ ಕೋಪವೇಗದಿಂದ ನಡುಗಿತು ; ಹಣೆಯಲ್ಲಿ ಬೆಮರ ಚುಕ್ಕೆಗಳು ಮೂಡಿದವು ; ಆ ಮಹಾಬಲನು ಕಟಕಟ ಹಲ್ಲು ಕಡಿದು, ಹುಬ್ಬನ್ನು ಗಂಟಿಕ್ಕಿ, ಭಯಂಕರ ಪ್ರಳಯ ರುದ್ರನಂತೆ ವಿಜೃಂಭಿಸಿ, ಅಟ್ಟಹಾಸವನ್ನು ಮಾಡಿದನು.

ನಭೋ ಭೂ ಮಂಡಲಗಳನ್ನು ತಾಳವಾಗಿಸಿ ಬಾರಿಸುವನೋ, ಕುಲ ಪರ್ವತಗಳನ್ನು ಒಟ್ಟುಗೂಡಿಸಿ ಚೆಂಡಾಡುವನೋ, ಸಪ್ತ ಸಮುದ್ರಗಳನ್ನು ಕಲಕಿ ಗಗ್ಗೋಲುಪಡಿಸುವನೋ, ದಿಗ್ಗಜಗಳನ್ನು ಕಟ್ಟಿ ಕುಟ್ಟಿ, ಮುದ್ದೆ ಮಾಡುವನೋ,

ಬ್ರಹ್ಮಾಂಡ ಭಾಂಡವನ್ನು ಒಡೆದುಬಿಡುವನೋ ಎಂಬಂತೆ ಭಯಂಕರಾಕಾರನಾದ ಭೀಮಸೇನನು ಪ್ರಳಯತಾಂಡವಭಯದನಾದ ಶ್ರೀ ನೃಸಿಂಹನನ್ನು ನೆನಪಿಗೆ ತರುವಂತಿದ್ದನು. ಅಜ್ಞಾತವಾಸವೆಂಬುವ ಎಚ್ಚರವೂ ತಪ್ಪಿ, ಕೀಚಕನನ್ನು ಕೊಲ್ಲದೆ ಬಿಡೆನೆಂದು ನಿಶ್ಚಯಿಸಿದನು. ಕೀಚಕನಿಗೆ ಹೆದರಿ, ಅವನ ಅಕಾರ್ಯವನ್ನು ವಾರಿಸದೆ ಸುಮ್ಮನಿರುವ ವಿರಾಟನೂ ಶಿಕ್ಷಾರ್ಹನೆಂದೆಣಿಸಿ, ಭೀಮನು ಸಭಾಪ್ರಾಂಗಣದಲ್ಲಿದ್ದ ವೃಕ್ಷವನ್ನು ಕೀಳಲು ಹವಣಿಸಿ ಮುಂದೆ ಧಾವಿಸಿದನು.

ಭೀಮನ ಸಾಹಸವನ್ನರಿತು, ಕಂಕನು ಅವನ ಕಾಲನ್ನು ತನ್ನ ಕಾಲಹೆಬ್ಬೆರಳಿಂದ ತುಳಿದು, ಅವಸರಪಡಬಾರದೆಂದು ಸೂಚಿಸಿದನು. ಭೀಮನ ಚೇಷ್ಟಿತವನ್ನು ಅನ್ಯಥೀಕರಿಸಲು ಕಂಕನು, 'ಏನಿದು ! ವಲಲನು ಸಭೆಯಲ್ಲಿರುವುದನ್ನು ಮರೆತನೋ ಹೇಗೆ ? ಇದು ಪಾಕಶಾಲೆ ಎಂದು ಭ್ರಮಿಸಿ, ಅಡಿಗೆ ಕಟ್ಟಿಗೆಗಾಗಿ, ಈ ಗಿಡವನ್ನು ಕೆಡಹಬಹುದೇ ? ಇನ್ನೊಂದೆಡೆ ಕೆಲಸಕ್ಕೆ ಬಾರದ ತುಚ್ಛ ವೃಕ್ಷಗಳು ಸಿಗವೇ ? ವರಶಾಖೆಗಳಿಂದ ವಿಸ್ತಾರಚ್ಛಾಯೆಯನ್ನೀವ ವಿರಾಟ ವೃಕ್ಷವನ್ನು ಕಡಿದರೆ, ಮುಂದೆ ನಮ್ಮಂತಹ ತಾಪಭೀತರಿಗೆ ಆಶ್ರಯವೇನು ? ಪ್ರೀತಿಪಾತ್ರವಾದ ಮತ್ತು ಫಲಭರಿತವಾದ ವೃಕ್ಷವನ್ನು ಹಾಳುಮಾಡಿದರೆ, ನಮಗೆಲ್ಲರಿಗೂ ಅನರ್ಥವಲ್ಲವೇ ?' ಎಂದು ನಿಗೂಢವಚನಗಳಿಂದ ನುಡಿದು, ಭೀಮನ ಕೋಪಾಗ್ನಿಯನ್ನಾರಿಸಿದನು. ವಲಲನು ಅಣ್ಣನ ಎಚ್ಚರಿಕೆಯ ಮಾತಿನಿಂದ ತಿಳಿದು. ಶಾಂತನಾದನು.

ಅವರೀರ್ವರ ವರ್ತನವನ್ನು ಕಂಡು, ಮಾಲಿನಿ ಮೆಲ್ಲನೆ ಎದ್ದು, ಅವರನ್ನೂ ಸಭಾಜನರನ್ನೂ ರೂಕ್ಷವೀಕ್ಷಣಗಳಿಂದ ಈಕ್ಷಿಸುತ್ತ ನಿಂತಳು. ಮೈಯಲ್ಲಿ ಮೆತ್ತಿದ ನೆಲದ ಧೂಳಿಯಿಂದಲು, ಸಂಪಿಗೆ ಹೂವಿಂದ ಸೂಸಿಬರುವ ಸುಗಂಧದಂತೆ ನೀಳವಾದ ನಾಸಿಕೆಯಿಂದ ಹೊರಬರುವ ನಿಟ್ಟುಸಿರಿನಿಂದಲು, ಕಮಲದಳಗಳಿಂದುದುರುವ ಜಲಬಿಂದುಗಳಂತಿರುವ ಕಂಬನಿಯಿಂದಲು, ಇಂದುಬಿಂಬಕ್ಕೆ ಕವಿದ ಮೇಘಜಾಲದಂತೆ ಹಾರಾಡುವ ಕೇಶರಾಶಿಯಿಂದಲು, ದೀನತೆಯೇ ಮೂರ್ತೀಭವಿಸಿ ನಿಂತಂತಿರುವ ಆಕಾರದಿಂದಲು, ನಿಂತು, ಕೋಪ ಭಯ ವಿಸ್ಮಯಾನ್ವಿತೆಯಾಗಿ, ಗದ್ಗದಿತ ಸ್ವರದಿಂದ ಸಭೆಗಿಂತು ನುಡಿದಳು. ಭೀಮಭಯಂಕರಾಕಾರವನ್ನು ಕಂಡು ವಿಸ್ಮಯವು, ಧರ್ಮಜನ ಇಂಗಿತ ವಚನಗಳನ್ನು ಕೇಳಿ ಸಮಯಭಂಗ ಭಯವು, ಕೀಚಕನ ದುರ್ನಯದಿಂದ ನೊಂದ ಕೋಪವು ಕಲೆತು, ಮುಪ್ಪಿರಿಗೊಂಡು ಮೂಡಿಬರಲು ತಡೆದು, ತಡೆದು ಆ ಮಹಾಸಾಧ್ವಿ ಇಂತು ನುಡಿದಳು—

"ಹಾ ಹತವಿಧೀ ! ನನ್ನ ಪತಿಗಳಂತಹ ವೀರರಿಲ್ಲ ; ನನ್ನಂತಹ ಸಾಧ್ವಿಯೂ ಇಲ್ಲ ; ನಾನು ಪಟ್ಟಂತಹ ಪಾಡಿನ್ನಾರೂ ಪಟ್ಟಿಲ್ಲ ; ಮೈಯೆಲ್ಲ ದೂಳಿ ಕವಿದು ಮೃತಕಲ್ಪಳಾದರೂ ಯಮನಿಗೆ ಕರುಣೆ ಬರಲಿಲ್ಲ. ದುಃಖದ ನಿಟ್ಟುಸಿರಿಟ್ಟರೂ ವಾಯುದೇವನು ಸುಳಿದು ಕಾಪಾಡಲಿಲ್ಲ. ಕಣ್ಣೀರ ಮಳೆ ಸುರಿಸಿದರೂ ದೇವೇಂದ್ರನಿಳಿದು ಬರಲಿಲ್ಲ. ಮುಖವು ಅವಮಾನ ಜ್ವರದಿಂದ ಬಾಡಿದರೂ ಅಶ್ವಿನಿಗಳು ಉದ್ಧರಿಸಲಿಲ್ಲ.

ದೇವತೆಗಳೇ ಕೈಬಿಟ್ಟಮೇಲೆ ದೇವಕಲ್ಪರಾದ ನನ್ನ ಪತಿಗಳು ಪೊರೆಯುವರೇ? ಪೊರೆಯಲೆಣಿಸಿದರೆ ಅವರಿಗೆ ಅಸದಳವಿತ್ತೆ? ಮನಸಾ ಸಾಕು, ದ್ರೋಹವಮಾಡಿದವರಿಗೆ ಮರುದಿನ ಬೆಳಗಾಗುವುದನ್ನು ನೋಡಗೊಡಿಸದ ವೀರ ಗಂಧರ್ವರ ಸತಿಯನ್ನು ಸೂತ ಪುತ್ರನಾದೊಬ್ಬ ನೀಚ ಕಾಲಿಂದ ಒದೆದನಲ್ಲ! ಕೊಡಲು ಬಲ್ಲ ಮತ್ತು ಬೇಡಲು ಒಲ್ಲದ ಬ್ರಾಹ್ಮಣ ವತ್ಸಲರು, ಸತ್ಯಸಂಧರು ಆದ ವೀರರ ಸತಿಗಿಂತಹ ಅವಮಾನವೇ? ಯಾರ ರಣದುಂದುಭಿ ನಿರ್ಘೋಷವನ್ನು ಕೇಳಿ, ಅರಿವೀರರು ಶರಣಾಗತರಾಗುವರೋ, ಅಂತಹ ವೀರ ಗಂಧರ್ವರ ಸತಿಯನ್ನೊಬ್ಬ ದುರ್ಮಾರ್ಗ ಪರಾಭವಿಸುವಂತಾಯಿತೇ? ತೇಜಶ್ಶಾಲಿಗಳು, ಇಂದ್ರಿಯ ಜಯವಂತರು, ಬಲೋತ್ಸಾಹ ಭರಿತರು, ಪರಿಪೂತ ಚರಿತರು ಆದ ವೀರಗಂಧರ್ವರೀ ಪಾಪಿಯನ್ನು ಏಕೆ ಶಿಕ್ಷಿಸದಿರುವರು? ಧರ್ಮಪಾಶ ಬದ್ಧ ರಾಗಿ ಸುಮ್ಮನಿರುವರಾಗಲಿ, ಇಲ್ಲದಿರೆ ನನ್ನ ಪತಿಗಳು ವಿಕ್ರಮಿಸಿ ಮೂಲ್ಲೋಕದ ದುಷ್ಟ ರನ್ನೂ ಮಣ್ಣುಗೂಡಿಸಬಲ್ಲರಲ್ಲವೇ? ಪ್ರಸನ್ನ ಜನಪಾಲನ ದೀಕ್ಷಿತರಾದ ಆ ಮಹಾ ರಥರೆನ್ನ ಮೊರೆ ಆಲಿಸದಾದರೇ? ಪ್ರಿಯ ಸತಿಯನ್ನೊಬ್ಬ ನೀಚ ಸಭೆಯಲ್ಲಿ ಒದೆಯು ವುದನ್ನು ಅವರೆಂತು ಸಹಿಸಿ ಸುಮ್ಮನಿರುವರು? ಇನ್ನಿಂತಹ ದಶೆಯಲ್ಲಿ ಕಾಂತೆಯನ್ನು ಕಂಡು ಕಲ್ಲಾದರೂ ಕರಗುವಾಗ, ಲೋಕೈಕವೀರರಾದ ನನ್ನ ವೀರ ಗಂಧರ್ವರು ಸಹಿಸಿ ರುವರೆಂದರೆ, ಅದು ನನ್ನ ದುಷ್ಕರ್ಮ ಪರಿಪಾಕವೇ ಸರಿ! ನನ್ನ ಪತಿಗಳ ಧರ್ಮಾಧರ್ಮ ವಿವೇಕ, ನನ್ನ ಪತಿಗಳ ಶಿಷ್ಟರಕ್ಷಣ ದುಷ್ಟ ಶಿಕ್ಷಣ ನೀತಿ, ನನ್ನ ಪತಿಗಳ ಸಕಲ ಶಸ್ತ್ರಾಸ್ತ್ರ ನೈಪುಣ್ಯ, ನನ್ನ ಪತಿಗಳ ಪ್ರತಿವೀರ ಮರ್ದನ ವೀರ ವಿಹಾರ—ಎಲ್ಲ ಮಹಾಗುಣಗಳು ನನ್ನ ಪಾಲಿಗಿಲ್ಲವಾಯಿತೇ? ನನ್ನ ಪಾಡೇ ಇಂತಾದಮೇಲೆ, ಮತ್ತಿನ್ನಾರ ಸತಿಯರು ಪರಿಭವದಾವಾಗ್ನಿಗೆ ಆಹುತಿಯಾಗದೆ ಉಳಿಯಬಲ್ಲರು? ಇದು ಸಭೆಯೇ? ಇವನು ರಾಜನೇ? ಒಬ್ಬನಾದರೂ ಧರ್ಮಲೋಪವಾಗುತ್ತಿದೆ ಎಂದು ತುಟಿ ಅಲುಗಿಸಿ ಮಾತಾಡಿದನೇ? ಇಂತಹ ಜನಸಮೂಹವು ನೋಡುತ್ತಿರಲು, ಅಂಜದೆ ಪತಿವ್ರತೆಯಾದ ನನ್ನನ್ನೀ ನೀಚನು—ಎಂದೂ ಎಲ್ಲಿಯೂ ಯಾವ ತರುಣಿಗೂ ಆಗದ ಪಾಡಿಗೆ ಗುರಿ ಪಡಿಸಿದನಲ್ಲ! ಈಗಲಾದರೂ ಮಾತಾಡದೆ, ಇವನನ್ನು ನಿಂದಿಸದೆ ಮೂಕರಂತಿರುವ ನೀವು ಈ ಪಾಪ ಫಲವನ್ನು ಹಂಚಿಕೊಳ್ಳಬೇಕಾದೀತು! ಮತ್ಸ್ಯದೇಶವನ್ನಾಳುವ ದೊರೆ ಎನಿಸಿ, ತನ್ನೆದುರಿಗೇ ತನ್ನ ಮನೆಯಲ್ಲಿ ನಿಂತ ಮಾನವತಿಯನ್ನು ಪರಿಭವಿಸುವ ತನ್ನ ಮೈದುನನನ್ನು ದಂಡಿಸದಿರುವ ವಿರಾಟರಾಜನಿಗೆ ಇದು ಶ್ರೇಯಸ್ಕರವೇ? ರಾಜನೆಂದರೆ ಕೀಚಕನಿಗೆ ರಾಜನಲ್ಲವೇ? ಈ ಸಭೆಯಲ್ಲಿ ಚೋರಧರ್ಮವು ಪ್ರಚಲಿತವಾಗಿದೆ! ಯಾರನ್ನು ನಿಂದಿಸಿ ಏನು ಪ್ರಯೋಜನ? ರಾಜನು ಧರ್ಮಜ್ಞನಲ್ಲ; ಕೀಚಕನೂ ಧರ್ಮಜ್ಞನಲ್ಲ; ಸಭಿಕರೂ ಧರ್ಮಜ್ಞರಲ್ಲ; ಧರ್ಮಜ್ಞರಾದ ನನ್ನ ಪತಿಗಳಿಗೆ ದಯೆ ಇಲ್ಲ! ಶ್ರೀ ಹರಿಯೇ ಎನಗೆ ಗತಿ!" ಎಂದು ಗೋಳಾಡಿದಳು.

ವಿರಾಟನು ಅವಳ ನುಡಿಯ ಸತ್ಯತೆಯನ್ನರಿತನು; ಆದರೂ ಕೀಚಕನನ್ನು ದಂಡಿಸುವ ಸತ್ವವಿಲ್ಲದೆ ಅವನು ಮೈದುನನನ್ನು ಕರೆದು, ಸಮಾಧಾನದ ನುಡಿಗಳಿಂದ

ಅವನನ್ನು ಸಂತೈಸಿ, ಮನೆಗೆ ಕಳಿಸಿದನು. ಆಗ ಅಲ್ಲಿ ನೆರೆದ ಸಭಾಸದರು ತಮಗೆ ತೋಚಿದಂತೆ ಮಾತಾಡಿಕೊಂಡರು—

'ಇಂತಹ ಶುಭಲಕ್ಷಣವತಿಗೆ ಇಂತಹ ಕಷ್ಟವೇ ? ದೈವವೆಷ್ಟು ನಿರ್ದಯವು !' ಎಂದು ಕೆಲವರು; 'ಮಹಾರಾಣಿಯಾಗಿರಬೇಕಾದ ಸುಂದರಿ ಸೈರಂಧ್ರಿಯಾಗಿದ್ದಳೇಕೆ?' ಎಂದು ಕೆಲವರು ; 'ನಾವೆಲ್ಲರೂ ನೋಡುತ್ತಿರಲು ಹೆದರದೆ ದುಷ್ಟ ಕೀಚಕನು ಆ ಸಾಧ್ವಿಯನ್ನವಮಾನಿಸಬಹುದೇ ? ಈ ಪಾಪ ಕೃತ್ಯದ ಫಲವನ್ನು ಅವನು ತಪ್ಪದೆ ಉಣ್ಣಬೇಕಾದೀತು !' ಎಂದು ಮತ್ತೆ ಕೆಲವರು ; 'ಮಹಾರಾಣಿಯು ಸುರೆಗೆಂದು ಇಂತಹ ಸಾಧ್ವಿಯನ್ನು ಕಳಿಸಬಾರದಿತ್ತು. ಆದರಿಂದಲೇ ಇಷ್ಟು ಅನರ್ಥವಾಯಿತು' ಎಂದು ಬೇರೆ ಕೆಲವರು, ಗುಜ ಗುಜ ಮಾತಾಡುವಾಗ, ಅವರನ್ನು ವಾರಿಸಿ ವಿರಾಟನು 'ಸಾಧ್ವಿ! ಸುಮ್ಮನೆ ನನ್ನನ್ನು ನಿಂದಿಸಬೇಡ! ಅಂತಃಪುರದಲ್ಲಿ ನಡೆದುದೆನಗೆ ಗೊತ್ತಿಲ್ಲ. ನಿಮ್ಮೀರ್ವರ ಜಗಳದ ಮೂಲಕಾರಣವನ್ನು ತಿಳಿಯದ ನಾನು ಯುಕ್ತಾಯುಕ್ತ ವಿನಿರ್ಣಯವನ್ನೆಂತು ಮಾಡಲಿ? ಆದುದಾಯಿತು. ಹೋಗು! ಶೋಕಿಸಿ ಫಲವಿಲ್ಲ' ಎಂದನು. ಆ ಮಾತನ್ನಾಲಿಸಿ, ವಿರಾಟನ ನಿಸ್ಸಹಾಯತೆಯನ್ನರಿತು ಜನರು ಖಿನ್ನರಾದರು.

ಧರ್ಮಜನ ಹೃದಯವು ಕೈಯಿಟ್ಟು ಕಲಕಿದಂತಾಯಿತು. ಅವನ ಫಾಲಾಕಾಶದಿ ಘರ್ಮಬಿಂದು ತಾರೆಗಳು ಮೂಡಿದವು. ಉಕ್ಕಿಬರುವ ರೋಷವನ್ನೊಳಗದುಮಿಟ್ಟು, ನಿರ್ವಿಕಾರನಾದ ಆ ಮಹಾನುಭಾವನು, ಎಂದಿನಂತೆ ಮಂದ್ರಮಧುರ ಸ್ವರದಿಂದ ಸೈರಂಧ್ರಿಗಿಂತೆಂದನು—

"ಮಾಲಿನಿ ! ಶಾಂತಳಾಗು ! ರಾಜನೂ ಸಭಾಸ್ತಾರರಾದ ನಾವೂ ಎಲ್ಲರೂ ನಿನಗಾದ ಪರಿಭವವನ್ನು ನೋಡಿರುವೆವು. ಮತ್ತೆ ಮಾತುಗಳಿಂದ ಬಣ್ಣಿಸಲೇಕೆ ? ನಡೆ ಸುದೇಷ್ಣೆಯ ಮನೆಗೆ! ನಿನಗಾದ ಸುಖ ದುಃಖಗಳನ್ನು ತಮಗಾದುವೆಂದು ತಿಳಿಯದಿರುವರೇ ನಿನ್ನ ಗಂಧರ್ವ ಪತಿಗಳು ! ಸುಮ್ಮನೆ ಅವರ ಹೆಸರನ್ನು ಮುಂದೆ ತರುವುದುಚಿತವಲ್ಲ. ಸಮಯವಲ್ಲವೆಂದು ಅವರು ಸುಮ್ಮನಿರುವರೆಂದು ನನಗೆ ತೋರುತ್ತಿದೆ. ಅಥವಾ ನೀನೂ ಅವರೂ ಕೂಡಿ ಮಾಡಿಕೊಂಡ ಕಟ್ಟಳೆಯೊಂದಿರಬೇಕು ! ಆದರಿಂದ ಅವರು ಸಿಟ್ಟಾಗದಿರುವರೆಂದು ತಿಳಿ! ನಿಷ್ಕಾರಣವಾಗಿ ಪತಿನಿಂದೆ ಮಾಡುವುದು ಮಹಾಸಾಧ್ವಿ ಎಂದು ಹೇಳಿಕೊಳ್ಳುವ ನಿನಗೆ ತರವಲ್ಲ. ಸಭೆಯಲ್ಲಿ ತಡವಾಗಿ ನಿಂತಿರುವುದು ಮೊದಲ ತಪ್ಪು. ನಿಂತು ಶಂಕಾರಹಿತಳಾಗಿ ಮಾತಾಡುವುದು ಮತ್ತೆ ತಪ್ಪು ! ನೋಡು ! ಉಚಿತಾನುಚಿತವನ್ನರಿತ ನಿನಗೆ ಹೆಚ್ಚಿಗೆ ಹೇಳಲೇಕೆ ?"

ಧರ್ಮರಾಜನ ನುಡಿಗಳಂಕುಶವಾಗಿ ತಿವಿದರೂ ಆ ಮತ್ತಗಜಗಮನೆ ರೋಷಾವೇಶವಶಳಾಗಿ ಕದಲದೆ, ಮತ್ತೆ ಪ್ರತ್ಯುತ್ತರವನ್ನೀಯಲು ತೊಡಗಿದಾಗ, ಕಂಕನು ಸಿಟ್ಟಾಗಿ ಇಂತೆಂದನು. "ಬಲು ಸಭೆಗಳಲ್ಲಿ ತಿರುಗಿ, ಗಲುಗಲುರೆಂದು ಗೆಜ್ಜೆ ಕಟ್ಟಿ ನಾಟ್ಯವಾಡುವ ನಟಿಯಂತೆ ಮಾತಾಡಬೇಡ ! ಕುಲಸತಿಯರಿಗಿದು ಸರಿಯಲ್ಲ." ಆ

ಮಾತಿಗೆ ಸುಮ್ಮನಿರಲಾರದೆ ಮಾಲಿನಿಯು "ಅಹುದು ! ನನ್ನ ಪತಿ ನಟನೂ, ಸೂತ್ರಧಾರನೂ ಅಹುದು ! ಪತಿಯ ವೃತ್ತಿಯೇ ಸತಿಗೂ ಸರಿ ಎನಿಸುವುದು. ನಟನಲ್ಲದೆ ನನ್ನ ಪತಿಯು ಜೂಜುಗಾರನೂ ಅಹುದು. ನಟಕಿತವರ ಸತಿಯರಿಗೆ ಗೌರವವೇಕೆ ? ಅಭಿಮಾನವೇಕೆ ?" ಎಂದು ಬಿರುಸಿನಿಂದ ತೆರಳಿ, ಸುದೇಷ್ಣೆಯ ಮಂದಿರವನ್ನು ಸೇರಿದಳು.

'ಆಹಾ ! ಇಷ್ಟು ಅನರ್ಥಕ್ಕೂ ಕಾರಣಳಲ್ಲವೇ ಆ ಗಯ್ಯಾಳಿ ? ಅವಳಿಗೂ ಹೇಳುವೆನೆನ್ನ ಬನ್ನವನ್ನು ! ಅನುಭವಿಸಲಿ ಅವಳೂ ಅದರ ಫಲವನ್ನು !' ಎಂದು ಚಿಂತಿಸುತ್ತಾ, ದೀನಳಾಗಿ ಬರುವ ಸೈರಂಧ್ರಿಯನ್ನು ಸುದೇಷ್ಣೆ ನೋಡಿದಳು. ಏನೂ ತಿಳಿಯದವಳಂತೆ, ವ್ಯಸನವನ್ನು ನಟಿಸುತ್ತಾ ಅವಳು ಮಾಲಿನಿಗಿಂತೆಂದಳು—

"ಏನಾಯಿತು ಸೈರಂಧ್ರಿ ? ಏಕೆ ಅಳುವೆ ? ಧೂಳಿ ಕವಿದು ಮೈಬಣ್ಣ ಮಾಸಿದೆ, ಅತ್ತತ್ತು ಮುಖವು ಕಂದಿದೆ. ಬೆವರಿಗೆ ತೊಯ್ದ ಕುರುಳಿಂದ ಹಣೆಯ ಸೊಗ ಕೆಟ್ಟಿದೆ. ಕಂಬನಿ ಹರಿದು ಕಣ್ಣು ಸಣ್ಣಗಾಗಿದೆ. ಯಾರೇನು ಮಾಡಿದರು ? ಹೇಳು ! ಎಂತಹವರೇ ಆಗಲಿ ನಿನ್ನನ್ನಿಂತು ಮಾಡಿದ ತುಡುಗರನ್ನು ಅಂತಕನ ಮನೆಗೆ ಕಳಿಸದೆ ಬಿಡುವುದಿಲ್ಲ."

"ಅಮ್ಮಾ ! ಎಲ್ಲವನ್ನರಿತೂ ಅರಿಯದವಳಂತೆ ಮಾತಾಡುವ ನಿನಗೆ ಏನೆಂದು ಬಣ್ಣಿಸಲಿ ? ಆದರೂ ಕೇಳು ! ಸುರೆ ತರಲು ಚಷಕವನ್ನಿತ್ತು ನಿನ್ನ ತಮ್ಮನ ಮನೆಗೆ ಕಳಿಸಿದೆ ಅಲ್ಲವೇ ? ಆ ದುರ್ಜಾತಿಯು ನಯವಿನಯರಹಿತನಾಗಿ ಪ್ರವರ್ತಿಸಲು, ಹೆದರಿ, ಅಲ್ಲಿಂದೋಡಿಪೋಗಿ, ನಿನ್ನ ಪತಿಯ ಆಸ್ಥಾನವನ್ನು ಪ್ರವೇಶಿಸಿದೆನು. ಅಲ್ಲಿಯೂ ಬಂದು ನಿನ್ನ ದುಷ್ಟ ಸೋದರನು ನನ್ನನ್ನು ಒದೆದನು. ಇನ್ನೇನು ಪೇಳಲಿ !' ಎಂದು ನುಡಿವ ಮಾಲಿನಿಗೆ ಸುದೇಷ್ಣೆ "ಮಾನಿನಿ ! ಚಿಂತಿಸಬೇಡ ! ಕೀಚಕನನ್ನು ದಂಡಿಸುವೆನು" ಎಂದಾಗ ಆ ಮಾಲಿನಿಯು, "ರಾಣೀಮಣೀ ! ನಿನಗೇಕಾಚಿಂತೆ ? ನನ್ನ ದುಃಖವನ್ನು ಕಂಡು ಮರುಗಿದ ಪುರಜನರ ಅನುತಾಪವೆನಗೆ ಸಾಕು ! ನನ್ನ ಪತಿಗಳಿರುವರು ಪರಿಭವದವಾನಲವನ್ನಾರಿಸಲು. ನನ್ನನ್ನು ಕೆಣಕಿದ ನೀಚನ ಆಯುರ್ದಾಯವು ಮುಗಿಯಿತೆಂದು ತಿಳಿ !" ಎಂದು ನುಡಿದು ಸುಮ್ಮನಾದಳು.

ಸುದೇಷ್ಣೆಯು ಭಯಾಶ್ಚರ್ಯಭರಿತಳಾಗಿ ಸುಮ್ಮನಿದ್ದಳು. ಮಿಕ್ಕ ಅಂತಃಪುರ ನಾರಿಯರು ನೀಚ ಕೀಚಕನ ದುಷ್ಕೃತ್ಯವನ್ನು ನೆನೆದು ಅವನು ಉಳಿಯಲಾರನೆಂದು ನಿಶ್ಚಯಿಸಿದರು. ಮಾಲಿನಿಯು ನಿಜಶಯನದಿ ಮಲಗಿ, ಸಂತತ ಬಾಷ್ಪಧಾರೆಯನ್ನು ಸುರಿಸುತ್ತಾ, ನಿರ್ಭರವ್ಯಸನದಿಂದ ಮರುಗುತ್ತಾ 'ಈಗೆನ್ನ ಪರಿಭವವನ್ನು ತೀರಿಸಲು ಸಮರ್ಥನೆಂದರೆ ಭೀಮಸೇನನೇ; ಮತ್ತಾರೂ ಅಲ್ಲ. ಎಂದಿಗೂ ವಾಯುನಂದನನೇ ಎನಗೆ ಗತಿ' ಎಂದು ನಿಶ್ಚಯಿಸಿ, ರಾತ್ರಿಯ ದ್ವಿತೀಯ ಯಾಮವನ್ನು ನಿರೀಕ್ಷಿಸಿ ನಿದ್ರೆ ಮಾಡದೆ, ಶ್ರೀಹರಿವಾಯು ಧ್ಯಾನಮಗ್ನಳಾಗಿದ್ದಳು.

## ಮಾಲಿನೀ ವಲ್ಲವಂ

ರಾತ್ರಿಯ ದ್ವಿತೀಯ ಯಾಮವಾಗಲು, ಸಮಸ್ತ ಜನರು ನಿದ್ರಿಸಲು ಹೋದರು. ಮಾಲಿನಿಯು ಶಯ್ಯೆಯಿಂದೆದ್ದು, ಮೈತೊಳೆದು, ಧೌತವಸನವನ್ನು ಧರಿಸಿ, ಮೆಲ್ಲನೆ ಮಹಾನಸದಲ್ಲಿ ಭೀಮನ ಮಂದಿರವನ್ನು ಪ್ರವೇಶಿಸಿದಳು. ಗೋಮತೀ ತೀರದ ಮಹಾಶಾಲವೃಕ್ಷವನ್ನು ಸುತ್ತಿದ ಲತೆಯಂತೆ, ಭೀಮನನ್ನು ಬಾಹುಲತೆಯಿಂದ ಸುತ್ತಿ, ಅಲ್ಲಾಡಿಸಿ ಎಬ್ಬಿಸಿದಳು. ವನಗುಹೆಯಲ್ಲಿ ಮಲಗಿದ್ದ ಸಿಂಹವನ್ನು ಸಿಂಹಿಣಿಯಂತೆ ತಟ್ಟಿ, ಗಾಂಧಾರ ಸ್ವರದಲ್ಲಿ 'ಭೀಮಸೇನ ! ನಾಥ !' ಎಂದು ಕೂಗಿದಳು. ಭೀಮನಿಗೆ ನಿದ್ರೆ ಬಂದಿರಲಿಲ್ಲ. ಕೀಚಕ ಕೃತಪರಾಭವಾಗ್ನಿಯು ಅವನ ಹೃದಯ ವೇದಿಯಲ್ಲಿ ಉರಿಯುತ್ತಿತ್ತು. ಸ್ವರವನ್ನು ಪಿಡಿದು ಬಂದಿರುವಳು ದ್ರೌಪದಿ ಎಂದರಿತನು. ಕೀಚಕನ ನೀಚ ಕೃತ್ಯವನ್ನರುಹಿ ಪ್ರತೀಕಾರವನ್ನು ಬಯಸಿ ಬಂದಿರುವಳೆಂದೂ ತಿಳಿದನು; ಆದರೆ ಅವಳ ಮುಖದಿಂದಲೇ ಎಲ್ಲ ವೃತ್ತಾಂತವನ್ನು ಕೇಳಲಿಚ್ಛಿಸಿ ಭೀಮಸೇನನು, ಶಯ್ಯೆಯಲ್ಲಿ ಎದ್ದು ಕೂತನು. ಸುತ್ತಲು ನೋಡಿ, ಯಾರಿಲ್ಲವೆಂದು ಪರೀಕ್ಷಿಸಿ, ಭೀಮನು "ಪ್ರಿಯೇ ! ಇಂತಹ ನಿಶೀಥದಲ್ಲಿ ಇಲ್ಲಿಗೇಕೆ ಬಂದೆ ? ನೀ ಬರುವುದನ್ನು ಯಾರೂ ನೋಡಿಲ್ಲವಲ್ಲ ?" ಎಂದು ಕೇಳಿದನು.

ದ್ರೌಪದಿಯು "ತಿಳಿದೂ, ತಿಳಿಯದವನಂತೆ ಕೇಳುತ್ತಿರುವೆ ! ಇಷ್ಟರಲ್ಲಿ ನಾನು ಪಟ್ಟ ಬವಣೆಯನ್ನು ಮರೆತೆಯೇ ? ಆಗಲಿ ! ನನ್ನ ಬಾಯಿಂದಲೇ ಎಲ್ಲವನ್ನೂ ಕೇಳಬೇಕೆಂಬ ಅಭಿಲಾಷೆಯಾದರೆ ಹೇಳುವೆನು ಕೇಳು !

"ನಿಮ್ಮೆದುರಿಗೇ ನನ್ನನ್ನು ಪರಿಭವಿಸಿದ ಕೀಚಕಾಧಮನು ಮನೆ ಸೇರಿ ಮೊದಲಿನಂತೆ ಸುಖಶಯನದಲ್ಲಿ ನಿದ್ರೆಮಾಡುತ್ತಿರಲು ತಿಳಿದು ತಿಳಿದೂ ಎಲ್ಲವನ್ನು ಮರೆತು ನೀನು ನಿಶ್ಚಿಂತನಾಗಿ ನಿದ್ರಿಸಿರುವುದು ಆಶ್ಚರ್ಯಕರವಾಗಿದೆ. ಭೀಮಸೇನ ! ನಿಮ್ಮಣ್ಣ ನಿನ್ನ ವಿಕ್ರಮ ವಿಜೃಂಭಣವನ್ನು ತಡೆದನೆಂದು, ನನ್ನನ್ನು ದಯೆದೋರದೆ ಕಡೆಗಣಿಸಿದೆಯಾ ?" ಎಂದು ಕಾಂಭೋಜೀ ಮೇಳವಿ ಪಂಚಿಕಾರವಸುಧಾಪೂರವು ತೋರೆವಾಗೆ ರೋದಿಸಿದಳು. ರಾಕಾನಿಶಾರಾಜಶ್ರೀ ಸಖವಾದ ಅವಳ ಮುಖವು ಕಂಬನಿಯ ಕೋಡಿ ಹರಿದು ಮ್ಲಾನವಾಯಿತು. ಅವಳ ಕಣ್ಣೀರನ್ನೊರೆಸಿ ಭೀಮನು "ದ್ರೌಪದಿ ! ನಿನ್ನ ಸುಖ ದುಃಖಗಳನ್ನು ಹಂಚಿಕೊಳ್ಳುವ ಭೀಮಸೇನನಿನ್ನೂ ಜೀವದಿಂದಿರುವನು. ಸರ್ವಾಪತ್ಸಮಯದಲ್ಲಿ ನಿನ್ನನ್ನು ಕಾಪಾಡಿ ಕರ್ತವ್ಯ ನಿರ್ವಹಣವನ್ನು ಮಾಡಿದವನು ನಾನೆಂದು ನೀನರಿತಿರುವೆ ! ಈಗ ಏನಾಗಬೇಕು ನನ್ನಿಂದ, ಬೇಗ ಹೇಳು !" ಎಂದು ಅವಳನ್ನು ಸಂತವಿಸಿದನು.

ಆಗ ದ್ರೌಪದಿಯು "ವಿರಾಟನ ಮೈದುನನಂತೆ ; ಪೆಸರು ಸಿಂಹಬಲನಂತೆ ! ಅವನೊಂದು ದಿನ ತನ್ನ ಅಕ್ಕನನ್ನು ನೋಡಲು ಅಂತಃಪುರಕ್ಕೆ ಬಂದನು. ದುರದೃಷ್ಟದಿಂದ ನಾನಲ್ಲಿ ಪೂಮಾಲೆಗಳನ್ನು ಕಟ್ಟುತ್ತಿದ್ದೆನು. ನನ್ನ ಕಡೆ ಕಡೆಗಣ್ಣಿನಿಂದ ನೋಡಿ, ಆಡಬಾರದ ಮಾತುಗಳನ್ನಾಡಿ, ಕೆಣಕಿದ ಕೀಚಕನನ್ನು ನಾನು 'ಎಲವೋ ನೀಚ !

ದುರ್ವಾರಬಾಹುವೀರ್ಯರಾದ ಗಂಧರ್ವರೈವರೆನ್ನ ಪತಿಗಳಿರುವರು. ಪ್ರತಿವೀರ ಗರ್ವ ನಿರ್ವಾಪಣಕುಶಲರಾದ ಅವರಿಗೆ ದ್ರೋಹಮಾಡಿ, ಕೆಡಬೇಡ! ನನ್ನನ್ನು ಕೆಣಕಿದರೆ ನಿನ್ನ ಮಾನ ಪ್ರಾಣಗಳು ಉಳಿಯಲಾರವು' ಎಂದು ಜಬರಿಸಿ ಕಳಿಸಿದೆನು. ಮತ್ತೊಂದು ದಿನ—ನಿನ್ನೆ—ಪೂರ್ಣಿಮೆ—ಕುಟಿಲ ಚಿತ್ತೆಯಾದ ಸುದೇಷ್ಣೆ ಸುರೆಯನ್ನು ತರಲು ಕೀಚಕನ ಮನೆಗೆ ಕಳಿಸಿದಳು. ನಾನು ನಿರಾಕರಿಸಿದರೂ ಕೇಳದೆ, ನಯವಾಗಿ ಬಲಾತ್ಕರಿಸಿದಳು. ನಿಮ್ಮ ಬಾಹುಬಲವನ್ನು ನಂಬಿ, ನಾನು ಧೈರ್ಯವಹಿಸಿ, ಸೂರ್ಯಾಂತರ್ಗತ ಶ್ರೀ ನಾರಾಯಣನನ್ನು ಮೊರೆಹೊಕ್ಕು, ಕೀಚಕನ ಮನೆಗೆ ಹೋದೆನು. ದುಷ್ಟನು ತಟ್ಟನೆದ್ದು ಬಂದು ಕೆಟ್ಟ ಮಾತುಗಳನ್ನಾಡಿ, ಹಿಡಿಯಲು ಬರಲು, ಅವನನ್ನೊದೆದು ಕೆಡಹಿ ಓಡುತ್ತಾ, ಸಭೆಗೆ ಬಂದೆನು. ಆ ದುರ್ಜಾತಿಯು ಬಿಡದೆ ಹಿಂಬಾಲಿಸಿ, ಸಭೆಯಲ್ಲಿ ನನ್ನನ್ನೊದೆದನು. ಮುಂದಿನ ವಿಚಾರವೆಲ್ಲ ನಿನಗೆ ಪ್ರತ್ಯಕ್ಷವಾಗಿದೆ. ನಿಮ್ಮಣ್ಣನು ನಿನ್ನನ್ನು ವಾರಿಸಿದುದನ್ನೂ ಕಂಡೆನು.

"ಕೈಪಿಡಿದಿರುವುದು ಧರ್ಮರಾಜನನ್ನು! ಪಡುವುದು ನಾನಾ ಕ್ಲೇಶಗಳನ್ನು! ನಿನಗೆ ತಿಳಿಯದುದಿಲ್ಲ. ನಾ ಪಟ್ಟ ಬವಣೆಗಳಿಗೆ ಕೊನೆಯಿಲ್ಲ. ಪ್ರಾತಿಕಾಮಿ ಎಂಬ ನೀಚನೊಬ್ಬನು ನನ್ನನ್ನು ದಾಸಿಯಂತಾಗಿಸಿ, ಕರೆದು ಸಭಾಮಧ್ಯದಲ್ಲಿ ನಿಲ್ಲಿಸಿದನಲ್ಲ! ಅವಮಾನಿತಳಾದ ನನಗೆ ಸಾವು ಬರಲಿಲ್ಲ. ನಿಮ್ಮಿಂದ ಅವನೂ ಸಾಯಲಿಲ್ಲ. ಅಂದು ಸಭೆಯಲ್ಲಿ ನೀವೈವರು ನೋಡುತ್ತಿರುವಾಗ, ಸಿಂಹಪತ್ನಿಯನ್ನು ಜಂಬುಕನಂತೆ ಪರಿಭವಿಸಿದ ದುಶ್ಶಾಸನಿಗೇನಾಗಿದೆ? ವನದಲ್ಲಿದ್ದ ನನ್ನನ್ನು ಧರ್ಮದೂರನಾದ ಜಯದ್ರಥನು ಸೆಳೆದೊಯ್ದನಲ್ಲ! ಅವನ ಪ್ರಾಣದ ಉಸಿರು ನಿಂತಿತೇ? ಇಂದು ಸಭೆಯಲ್ಲಿ ಮತ್ತೆ ನನ್ನನ್ನು ಕಾಲಿಂದ ಒದೆದ ಉನ್ಮತ್ತ ಕೀಚಕ ನಿನ್ನೂ ಬದುಕೇ ಇರುವನು! ಒಂದಲ್ಲ—ಮೂರು ಸಲ ಮರಣಾಧಿಕವಾದ ಯಾತನೆಗೆ ಗುರಿಯಾದ ರಾಜಪುತ್ರಿ ಮತ್ತೋರ್ವಳಿರುವಳೇ ನನ್ನ ಕಣ್ಣೀರು ನಿನಗೂ ದಯೆ ಪುಟ್ಟಿಸದಾದೊಡೆ, ಇನ್ನು ನಾನೇಕೆ ಜೀವಿಸಿರಲಿ ಪೇಳು! ಕಾಲದಲ್ಲಿ ಪಕ್ವವಾದ ಕರ್ಬುರ ಫಲದಂತೆ ನನ್ನ ಗುಂಡಿಗೆ ಸಾವಿರ ಹೋಳಾಗಿದೆ. ಹೃದಯಸಾಗರವು ದುಃಖ ಜಲದಿಂದ ತುಂಬಿ ಹರಿದಿದೆ. ಅವಮಾನವೆಂದರೆ ನನಗೆ ನಿತ್ಯಾನುಭವವಾಗಿ, ಜೀವನವೇ ಹೇಯವಾಗಿದೆ. ಮಗಳ ಕಂಬನಿಯನ್ನು, ಹೆಂಡತಿಯ ಕಂಬನಿಯನ್ನು ಒರೆಸದ ಪುರುಷರಿಲ್ಲವೆನ್ನುವರು. ಆ ಮಾತೆನ್ನ ಪಾಲಿಗೆ ಸುಳ್ಳಾಯಿತೇ?

"ಇಷ್ಟು ಕಷ್ಟಗಳಿಗೂ ಮೂಲಕಾರಣವಾದ ದ್ಯೂತವನ್ನಾಡಿದ ಧರ್ಮರಾಜನನ್ನು ನೋಡಿ ಪರಿತಾಪವಾಗುತ್ತಿದೆ. ಸಮೃದ್ಧ ಸಾಮ್ರಾಜ್ಯವನ್ನು, ಸರ್ವಸ್ವವನ್ನಿಟ್ಟು ಆಡಿದರೆ ಆಡಲಿ! ವನವಾಸ ಪಣದಿಂದ ಜೂಜಾಡಿದವರಿನ್ನಾರಾದರಿರುವರೇ? ಸಾವಿರ ಹೊನ್ನಿನ ಪಣವನ್ನಿಡುತ್ತಾ ಸಾಯಂಪ್ರಾತಃಕಾಲಗಳಲ್ಲಿ ಬಿಡದೆ ಆಡಿದರೂ, ಸಾವಿರ ವರ್ಷಕ್ಕೂ ಸವಿಯದ ಸಂಪತ್ತನ್ನೆಲ್ಲ ಅರೆಕ್ಷಣದಲ್ಲಿ ಸೋತು, ದಾರಿದ್ರ್ಯವನ್ನು ತಲೆಯ ಮೇಲಿಟ್ಟುಕೊಂಡವರಿಗೇನೆನ್ನಬೇಕು? ಅಂತಹ ಅವಿಚಾರಿತ ಕಾರ್ಯದ

ಫಲವನ್ನು ನಾವೆಲ್ಲರೀಗ ಉಣ್ಣುತ್ತಿರುವೆವು" ಎಂದು ನುಡಿದು, ಸುಸ್ವರವಾಗಿ ರೋದಿಸಿದಳು.

ಭೀಮನು,"ಸಾಧ್ವಿ! ಕೋಪಭರದಿಂದ ತಿಳಿಯದೆ ಧರ್ಮರಾಜನನ್ನು ನಿಂದಿಸುವೆ ! ನಮ್ಮ ವ್ಯಸನಗಳಿಗೆ ತಾನು ಕಾರಣನೆಂದು ತಿಳಿದು ತಪಿಸುವ ಮಹಾರಾಜನ ಪಶ್ಚಾತ್ತಾಪದ ಮಾತನ್ನು ನೀನು—ನಾನು—ಎಷ್ಟು ಸಲ ಕೇಳಿಲ್ಲ? ಅದು ಅವನ ತಪ್ಪಲ್ಲ. ನಮ್ಮ ದುರ್ವಿಧಿ ವಿಲಾಸವೆಂದು ತಿಳಿ! ಒಂದು ಮಾತು ನೋಡು! ಕೀಚಕನನ್ನೂ ವಿರಾಟನನ್ನೂ ಸಂಹರಿಸಬೇಕೆಂದಡರುವ ನನ್ನ ಮಹೋಗ್ರ ಕೋಪವನ್ನು ಗಿಡದ ನೆವದಿಂದ ತಡೆದು ನಿವಾರಿಸಿದ ಮೇರುಧೀರನಾದ ಧರ್ಮಜನು ನಿಂದಾರ್ಹನೇ? ಒಂದು ವೇಳೆ ನನ್ನಿಂದಲೇನಾದರೂ ಅಕಾರ್ಯವಾಗಿದ್ದರೆ, ನಮ್ಮ ಸ್ವರೂಪವು ಪ್ರಕಟಿತವಾಗಿ ಮತ್ತೆ ಅರಣ್ಯವಾಸವು ಒದಗುತ್ತಿತ್ತಲ್ಲವೇ? ಆಗ ಅಪನಿಂದೆಗೆ ಗುರಿಯಾಗುವುದೆಂದರೆ ನಾವಿಬ್ಬರೇ ತಿಳಿ! ಸತ್ಯವ್ರತನು, ಪರಮ ಶಾಂತನು, ನಮ್ಮೆಲ್ಲರಿಗೂ ಜೀವಾಳವೂ ಆಗಿರುವ ಧರ್ಮಜನನ್ನು ನಿಂದಿಸಲಾಗದು. ಇನ್ನು ಕೀಚಕನ ವಿಷಯವೇ? ದುಶ್ಶಾಸನ ರಕ್ತಪಾನದೀಕ್ಷಿತನು, ಜಯದ್ರಥ ಮುಂಡನ ಚತುರನು ಆದ ಭೀಮನು ನೀಚ ಕೀಚಕ ಮರ್ದನನೂ ಆಗುವನು. ಚಿಂತೆ ಬಿಡು! ಪರರರಿಯದಂತೆ ವೈರಿಯನ್ನು ಮಟ್ಟಿಕ್ಕುವ ವಿಧಾನವನ್ನಾಲೋಚಿಸುತ್ತಿರುವೆನು. ವೈರಿಯ ಸಂಹಾರವೊಂದು ಕ್ಷಣದ ಕೆಲಸ!" ಎಂದು ಅವಳನ್ನು ಸಂತಯಿಸಿದನು.

ದ್ರೌಪದಿಯು ಸ್ವಲ್ಪ ಸಮಾಧಾನಪಟ್ಟಳು. ಪಾಂಡವರ ಕ್ಲೇಶಗಳನ್ನು ಕಂಡು, ಧೃತಿಗೆಟ್ಟು, ತಾನಾಡಿದ ವಚನಗಳನ್ನು ನೆನೆದು ಲಜ್ಜಿಸಿದಳು. ಸ್ವಭಾವ ಧೀರಗಂಭೀರ ವಚನಗಳಿಂದ ಭೀಮನಿಗಿಂತೆಂದಳು—

"ಭೀಮಸೇನ! ಅರಣ್ಯಾಜ್ಞಾತವಾಸಗಳ ವ್ಯಸನ ಪರಂಪರೆಯಿಂದ ನೊಂದು, ಮಾನಸಿಕ ವ್ಯಥೆಯಿಂದ ಮರೆತು ಮಾತನಾಡಿದುದನ್ನು ಕ್ಷಮಿಸು! ಓರ್ವ ನೀಚನಿಂದ ಹೀಗಾದಾಗ ಯಾವ ಸಾಧ್ವಿಗೆ ಧೃತಿ ನಿಲ್ಲುವುದು? ಧರ್ಮರಾಜನ ಧರ್ಮನಿಯತಿಯಿಂದಲು, ಸತ್ಯವ್ರತ ನಿಷ್ಠೆಯಿಂದಲು ನಾವು ಉಳಿದಿರುವೆವು. ಇದು ನನಗೆ ಗೊತ್ತು. ಅಜಾತಶತ್ರುವಾಗಿ ದಿಗ್ವಿಜಯವನ್ನು ಸಾಧಿಸಿದನು. ಶ್ರೀ ಕೃಷ್ಣಾನುಗ್ರಹದಿಂದ ರಾಜಸೂಯಮಹಾಧ್ವರವನ್ನು ಪೂರ್ಣಗೊಳಿಸಿದನು. ಧರ್ಮದಿಂದ ವಿರಾಜಿಸಿ ಸಾರ್ಥಕನಾಮನಾದನು. ಸತ್ಯವ್ರತವನ್ನು ಹಿಡಿದು ಬಿಡದೆ ಪಾಲಿಸಿದನು. ಕೀರ್ತಿ ಚಂದ್ರಿಕೆಯನ್ನು ನಾಲ್ಕು ನಿಟ್ಟಿಗೂ ಹರಡಿ, ಕರುಣಾಧಾರೆಯಿಂದ ಎಲ್ಲರನ್ನೂ ತಣಿಸಿ, ದಾನಶೌಂಡನಾಗಿ ಬ್ರಾಹ್ಮಣಪ್ರಶಂಸೆ ಗಳಿಸಿ, ನಿರ್ವ್ಯಾಜೋಪಕಾರಗಳಿಂದ ಪ್ರಜಾಪ್ರೀತಿಯನ್ನು ಪಡೆದು, ಮೆರೆವ ಧರ್ಮರಾಜನಿಗೆ ಸಮರಿಲ್ಲ. ಕುಲಕ್ಕೆ ತಕ್ಕ ಗುಣ, ಗುಣಕ್ಕೆ ತಕ್ಕ ಸಂಪತ್ತು, ಸಂಪತ್ತಿಗೆ ತಕ್ಕ ದಾನ, ದಾನಕ್ಕೆ ತಕ್ಕ ಹರಿಧಯೆ— ಇಷ್ಟು ಗುಣಗಳಿಂದ ಮೆರೆಯಲು ಕುಂತೀದೇವಿಯ ದೊಡ್ಡ ಮಗನಿಗಲ್ಲದೆ, ಮತ್ತಾರಿಗೆ ಸಾಧ್ಯ?

"ಆ ಮಹಾತ್ಮನ ಮಹಾವೈಭವವನ್ನು ನಾನು ಮರೆತಿಲ್ಲ. ಆ ಮಹಾರಾಜನನ್ನು ಸೇವಿಸಲು ಬಂದ ಸಾಮಂತ ರಾಜರ ಮದ್ದಾನೆಗಳ ಕುಂಭಸ್ಥಲವು ಅವನ ಪಾದಧೂಳಿಯಿಂದ ಸಮಲಂಕೃತವಾಗುವುದು. ಆ ಸುಜನ ಶಿರೋಮಣಿಯ ಸೌಶೀಲ್ಯ ಸಚ್ಚಾರಿತ್ರಗಳು ಎಲ್ಲ ಲೋಕದ ಜನರಿಗೆ ಅನುಕರಣೀಯವಾಗಿವೆ. ಆ ದಯಾನಿಧಿಯ ಕಟಾಕ್ಷಕಲ್ಪವೃಕ್ಷವು ಸರ್ವಜನಕಾಮಿತ ಫಲದಾಯಿಯಾಗಿದೆ. ಆ ಗುಣನಿಧಿಯ ಕೀರ್ತಿಕಿರಣಗಳು ಲೋಕಾಲೋಕ ಪರ್ವತವನ್ನು ಮುಟ್ಟಿ ಬೆಳಗುತ್ತಿವೆ. ಅಂತಹ ಪರಾಕ್ರಮ, ಅಂತಹ ಧೈರ್ಯ, ಅಂತಹ ಶಾಂತಿ, ಅಂತಹ ವಿನಯ, ಇನ್ನೊಂದೆಡೆ ದುರ್ಲಭವಾಗಿವೆ. ಧರ್ಮಸುತನೆಂದರೆ ಸಾಮಾನ್ಯ ಮನುಜನೇ? ಯಾರ ಮನೆಯ ಮುಂಬಾಗಿಲಿನಲ್ಲಿನಿಂದ ವಂದಿಮಾಗಧರ ಸ್ತುತಿಪಾಠವೊ, ಯಾರ ಮಂದಿರದ ಅಂತರ್ಭವಂತಿಯಲ್ಲಿ ಕೂತ ವಿಪ್ರವರರ ವೇದಘೋಷವೋ, ಯಾರ ಪಾಕಶಾಲೆಯಲ್ಲಿ ಬಡಿಸುವ ದಾಸೀ ಸಹಸ್ರದ ಕಂಕಣ ಧ್ವಾನವೋ, ಯಾರ ಪ್ರಾಸಾದದ ಹಿಂಬದಿಯಲ್ಲಿ ಅಂಧವೃದ್ಧ ಯಾಚಕ ದೀನ ಜನರ ಅಭಿನಂದನದ ಕಲಕಲವೋ, ಅಂತಹ ಸಾರ್ವಭೌಮನಿಂದು ವಿಧಿನಿಯತನಾಗಿ ವಿರಾಟದಾಸ್ಯ ನರಕದಲ್ಲಿ ಬಿದ್ದಿರುವನೆಂದರೆ—ಯಾರಿಗೆ ದುಃಖವಾಗದು? ಹೊಟ್ಟೆ ಬಟ್ಟೆಗಳಿಗಾಗಿ, ದ್ಯೂತವಿನೋದರತನಾಗಿ, ಅಹುದು-ಅಲ್ಲ ಎಂದರೆ ಅಂತೆಯೆ ಮಾರ್ನುಡಿಯುತ್ತಾ, ಹೆಸರನ್ನಳಿಸಿಕೊಂಡು ನಿಂತು, ವಿರಾಟನನ್ನು ಸೇವಿಸುವ ಪತಿಯನ್ನು ನೋಡಿ ನನ್ನ ಮಾನಸಿಕ ಧೈರ್ಯವೆಲ್ಲ ಹಾರಿಹೋಗುವುದು. ಋಷಿಜನಸ್ತುತ್ಯನಾದವನು ಕಂಕಭಟ್ಟನಾಗಿರುವನು. ರಾಜಾಧಿರಾಜ ವಂದ್ಯನಾದವನು ಸಾಮಾನ್ಯ ರಾಜನೊಬ್ಬನೆದುರು ಕೈ ಕಟ್ಟಿ ನಿಂತಿರುವನು. ಸಕಲ ಪ್ರಜಾವಿಪ್ರಾದಿಗಳಿಗೆ ಅನ್ನದಾತನೆನಿಸಿದವನು ತನ್ನ ಹೊಟ್ಟೆಗಾಗಿ ಬೇಡುತ್ತಿರುವನು. ಇಂತು ಕಷ್ಟಪಡುವ ಧರ್ಮರಾಜನನ್ನು ನೋಡಿ ನಾನು ಶೋಕಸಾಗರ ಮಗ್ನಳಾಗಿರುವೆನು. ಈ ದಶೆಗೆ ನಮ್ಮನ್ನಿಳಿಸಿದ ಪಾಪಿ ಕೌರವರನ್ನೇನೆಂದರೂ ಸಾಲದು!

"ಇನ್ನೂ ದುಃಖತರವಾದುದನ್ನು ಪೇಳುವೆನು. ಕೇಳು! ಕೋಪಿಸಬೇಡ! ಪವಮಾನನಂದನ! ನಿನ್ನ ಭುಜಬಲವಿಕ್ರಮಗಳು ಧರಣೀಭಾರವನ್ನು ಪೊತ್ತ ನಾಗರಾಜ, ದಿಗ್ಗಜ ಗಿರಿರಾಜರಿಗೆ ವಿಶ್ರಾಂತಿಸ್ಥಾನಗಳಾಗಿವೆ. ನಿನ್ನ ಕರುಣಾಕಟಾಕ್ಷ ಸಂಭಾವನೆಗಳು ವಿಪ್ರಾದಿಭೂಪ್ರಜರಿಗೆ ಭೋಗಭಾಗ್ಯ ವಸತಿಗಳಾಗಿವೆ. ನಿನ್ನ ಕೋಪ ರೇಖಾವಿಜೃಂಭಣೆಯು ವೈರಿ ಜನರ ದೀರ್ಘಶಯನ ನಿಲಯಗಳಾಗಿವೆ. ನಿನ್ನ ನಯ ವಿನಯ ಸದ್ಗುಣಗಳು ಸೋದರಾದಿ ಬಂಧುಜನರ ಕ್ರೀಡಾಮಂದಿರಗಳಾಗಿವೆ. ನಿನ್ನ ವಿಜ್ಞಾನ ಭಕ್ತಿ ವಿಶಾಲಹೃದಯವು ಶ್ರೀ ಕೃಷ್ಣನ ದೇವಗೃಹವಾಗಿದೆ. ಇಂತಹ ಬಲವಂತನು ಅಡಿಗೆಯ ಕಟ್ಟೆಗೆಯನ್ನು ಮುರಿಯಲಣಿಯಾದನೆಂದರೆ, ಇನ್ನು ದುಃಖತರವಾದುದುಂಟೇ? ಜರಾಸಂಧಾಂತಕನ ಕೈಲಿ ಸೌಟೇ? ದುಷ್ಟಲೋಕ ಭೀಕರವು, ದಿಗ್ವಿಜಯಾಕರವು ಆದ ನಿನ್ನ ಕರದ್ವಯವು ಭೋಜ್ಯಪಾತ್ರೆಗಳಿಗೆ ವಿನಿಯುಕ್ತ

ವಾಗಿರುವುದನ್ನು ಕಂಡು ಕಂಬನಿ ತುಂಬಿಬರಲು, ಯಾರೇನೆಂಬುವರೋ ಎಂದು ಹೆದರಿ, ಹೊಗೆಯನ್ನು ನಿಂದಿಸುವೆನು.

"ವಿರಾಟನ ವಿನೋದಕ್ಕಾಗಿ ಮಹಿಷಿಗಜಸಿಂಹಗಳಿಂದ ಹೆಣಗುವ ಸಮಯದಲ್ಲಿ 'ಆಹಾ! ಜಗನ್ಮಾನ್ಯನಾದ ವಾಯುಸುತನಿಂತಹ ನೀಚವಿಹಾರವನ್ನು ತೋರಬೇಕಾಯಿತಲ್ಲ!' ಎಂದು ದುರ್ವಿಧಿಯನ್ನು ಹಳಿವೆನು. ನಿನ್ನ ಮಹಿಮೆಯನ್ನರಿಯದ ವಿರಾಟನು ಕರೆಸಲು, ಬಂದು ಅಂತಃಪುರವನಿತೆಯರ ವಿನೋದಕ್ಕೆಂದು, ನೀನು ಸಿಂಹಾದಿಗಳನ್ನು ಲೀಲೆಯಾಗಿ ಗೆಲ್ಲುವ ವಿಹಾರಸಂರಂಭಗಳನ್ನು ನೋಡಿ ಆನಂದಿಸದೆ ಇರಲಾರೆನು. ಆಗ ನನ್ನ ಮುಖ ವಿಕಾಸವನ್ನು ಗುರ್ತಿಸಿ, ಸುದೇಷ್ಣೆಯು ತನ್ನ ಪರಿಜನರಿಂದ ವಿವಿಧವಾಗಿ ಮಾತನಾಡಿಕೊಂಡಾಗ, ಲಜ್ಜಿಸದೆ ಇರಲಾರೆನು. 'ನೋಡಿದೆಯಾ ಮಾಲಿನಿಯನ್ನು! ಅವಳು ವಲಲನ ಕಡೆ ನೋಡುವ ರೀತಿಯನ್ನು ಕಂಡಿರೇ? ಇವರೀರ್ವರೂ ಒಂದೇ ದಿನ ನಮ್ಮೂರಿಗೆ ಬಂದರಲ್ಲವೇ ?' ಎಂದು ಏನೇನೋ ಗುಜಗುಜ ಮಾತಾಡುವರನ್ನು ನಾನು ಲೆಕ್ಕಿಸದೆ ಇರುವೆನು. 'ಕಲ್ಯಾಣರೂಪನೀ ವಲ್ಲವ. ಸುಂದರಿ ಈ ಸೈರಂಧ್ರಿ. ಇಬ್ಬರೂ ಧರ್ಮರಾಜನ ಸೇವೆಯಲ್ಲಿದ್ದು ಬಂದವರಂತೆ! ಸ್ತ್ರೀಯರ ವೃತ್ತವನ್ನರಿಯುವದತಿಕಷ್ಟ! ಅಥವಾ ಒಂದೆಡೆ ಇದ್ದುದರಿಂದ ಪುಟ್ಟಿದ ಅಭಿಮಾನವೋ?' ಎಂದು ಶಂಕಿಸುವ ತರುಣಿಯರ ಮಾತನ್ನು ಕೇಳಿ, ಕೇಳದಂತೆ, ಸುಮ್ಮನಿರುವೆನು. ಪ್ರಭಂಜನನಂದನನಿಗಿಂತಹ ಪಾಡು ಬಂದುದನ್ನು ಕಂಡು ನಾನು ನೊಂದು ಸಾಯಲಿಚ್ಛಿಸುವೆನು. ನನ್ನ ಪರಿಭವಾನಲವನ್ನು ಆರಿಸುವವರು ನಿನ್ನ ಹೊರತನ್ಯರನ್ನು ಕಾಣೆನು. ರಹಸ್ಯ ಪ್ರಕಾರವಾಗಿ ನಿನಗೆ ತೋಚಿದ ಉಪಾಯದಿಂದ ಕೀಚಕನನ್ನು ಸಂಹರಿಸು !

"ಹರನಿಂದ ಕಾದಾಡಿ ಮೆಚ್ಚಿಸಿ ಪಾಶುಪತಾಸ್ತ್ರವನ್ನು ತಂದ ಮಹಾವೀರ; ಅಮರ ವಲ್ಲಭನ ಅರ್ಧ ಸಿಂಹಾಸನವನ್ನಲಂಕರಿಸಿದ ತಪಶ್ಶಾಲಿ; ಯಮನ ಮನೆಯಿಂದ ಬಿಡಿಸಿ ತರುವ ಶರಣಾಗತ ವತ್ಸಲ ; ಊರ್ವಶಿಯಂತಹ ಸುಂದರಿ ತಾನಾಗಿ ಬಂದರೂ ವಿವಶನಾಗದ ಇಂದ್ರಿಯಜಯವಂತ; ಶೌರ್ಯ ಪ್ರಾಭವ ಗಾಂಭೀರ್ಯಗಳಿಗೆ ಮನೆ; ಇಂತಹ ಅರ್ಜುನನಿಗೆ ಬಂದಿರುವ ಪಾಡನ್ನು ಕಂಡೆಯಾ? ಭರತಕುಲವರ್ಧನನು, ಅರಿವೀರ್ಯ ಮರ್ದನನು, ಅಮರೇಂದ್ರಸುತನು, ತೇಜೋಯುತನು ಆದ ಅರ್ಜುನನು ಹೇಡಿಯಂತೆ ಪ್ರವರ್ತಿಸುವುದನ್ನು ನೋಡಿ, ನನಗೆ ವಿಷಕುಡಿದಂತಾಗುತ್ತಿದೆ. ಜೀವನಕ್ಕಾಗಿ ದೇವನಂದನನು ರಂಗಸ್ಥಲದಿ ಗೆಜ್ಜೆಕಟ್ಟಿ, ತಾಳಪಿಡಿದು, ನರ್ತನ ಸಂಗೀತಗಳನ್ನು ಕಲಿಸುವಂತೆ ಮಾಡಿದ ವಿಧಿಯನ್ನೆಂತು ನಿಂದಿಸಲಿ? ಖಾಂಡವವನವನ್ನು ಗಾಂಡೀವಧರನಾಗಿ ನಿರ್ದಹಿಸಿ, ಆಖಂಡಲನನ್ನು ಮೆಚ್ಚಿಸಿದ ಪಾಂಡವಮಧ್ಯಮನು, ಅಂತಃಪುರದಲ್ಲಿ ಹೇಡಿಯಾಗಿದ್ದು ಕಾಲ ಕಳೆಯುತ್ತಿರುವನಲ್ಲ! ಕಿರೀಟಸಮಲಂಕೃತ ಶಿರಸ್ಸನು ಜಡೆಹಾಕಿ, ಬೆಂಡೋಲೆಯನ್ನಿಟ್ಟು, ಕನ್ಯಾಶಿಕ್ಷಕನಾಗಿರುವನಲ್ಲ! ಅವನ ರಥಘೋಷದಿಂದ ಭೂಮಿಯು ನಡುಗುತ್ತಿತ್ತು. ಅವನ ಜ್ಯಾನಾದವನ್ನು ಕೇಳಿ ಶತ್ರುವೀರರು ಓಡುತ್ತಿದ್ದರು. ಅವನು ಪುಟ್ಟಿದಾಗ ನಮ್ಮತ್ತೆ 'ಇವನು ಬಲು ವೀರ. ಇವನಿಂದ ಕುರುಕುಲ

ಬೆಳಗುವ'ದೆಂಬ ಆಕಾಶವಾಣಿಯನ್ನು ಕೇಳಿ, ಆನಂದಿಸಿದಳಂತೆ! ಭೂಮಂಡಲದಲ್ಲಿ ಅಸಮಾನವೀರನೆನಿಸಿ, ಶಂಕರ ಪುರಂದರಾದಿ ದೇವತೆಗಳಿಂದ ದಿವ್ಯಾಸ್ತ್ರಗಳನ್ನು ಗಳಿಸಿ, ರಾಜಸೂಯದ ಉತ್ತರದಿಗ್ವಿಜಯವನ್ನು ಸಾಧಿಸಿ, ಮೆರೆದ ಅರ್ಜುನನು ಕನ್ಯಾಜನರಿಗೆ ಗಾನವಿದ್ಯೆ ಕಲಿಸಿ, ಹೊಟ್ಟೆ ಹೊರೆಯುವುದನ್ನು ನೋಡಿದರೆ, ಕುಂತಿದೇವಿಯು ಎದೆಯೊಡೆದು ಸಾಯುವಳು !

"ಒಮ್ಮೆ ನೋಡಿದರೆ ಸಾಲದೆ, ಮತ್ತೆ ಮತ್ತೆ ನೋಡಬೇಕೆನಿಸುವ ದಿವ್ಯ ರೂಪಸಂಪನ್ನನು, ಮುನಿಜನರಿಂದ ದಿವ್ಯವರ್ತನವಿಧವನ್ನರಿತ ಸಮುದಾಚಾರನು, ಪರಾಕ್ರಮದಿಂದ ಶತ್ರುಗಳನ್ನೂ ತಲೆದೂಗಿಸುವ ವೀರವರನು, ದಾನಗುಣದಿಂದ ಕಾಮಧೇನು ಕಲ್ಪತರುಗಳ ಪ್ರಶಂಸೆಯನ್ನು ಗಳಿಸಿದ ಪರಮೋದಾರನು, ಆದ ನಕುಲನು ವಿರಾಟನ ಅಶ್ವಬಂಧಕನಾಗಿ ಜೀವಿಸುವಂತೆ ಮಾಡಿದ ಕಾಲವಿಪರ್ಯಯ ವನ್ನು ನೋಡು! ದುಷ್ಟಾಶ್ವಗಳನ್ನು ಪಳಗಿಸಿ, ಮಹಾರಾಜನನ್ನು ಮೆಚ್ಚಿಸಲು ಪ್ರಯತ್ನಿಸುವ ನಕುಲನನ್ನು ಕಂಡಾಗ ನನ್ನ ದುಃಖಸಾಗರವು ಉಕ್ಕೇರಿಬರುವುದು.

"ಸಹದೇವನು ಗೊಲ್ಲನಾಗಬೇಕಾಯಿತೆಂದರೆ ಇದಕ್ಕೂ ಮಿಗಿಲಾದ ದುಃಖವು ಉಂಟೇ ? ಅವಿಕಾರವಾದ ಆಕಾರ ; ಅಸದಳವಾದ ಭುಜಬಲ ; ಶುಭರೀತಿಯಾದ ಅರ್ಥ ನೀತಿ ; ನಿರ್ವ್ಯಾಜವಾದ ಭೂತದಯೆ, ಸುಜ್ಞಾನ ಪ್ರಖರವಾದ ವಾದವೈಖರಿ; ಇಷ್ಟೆಲ್ಲ ಗುಣಮಣಿಗಳಿಗೆ ಖಣಿಯಾದ ಸಹದೇವನು ಗೊಲ್ಲನಂತೆ ಅಡವಿಯಲ್ಲಿ ಸುತ್ತುತ್ತಾ ಕಷ್ಟಪಡುವುದನ್ನು ಕಂಡು, ಯಾರ ಮನವು ಕರಗದಿರುವುದು? ಮಾದ್ರೀ ದೇವಿಯ ಚಿಕ್ಕ ಮಗನ ವೃತ್ತವನ್ನು ನೆನೆದು, ನಾನು ನಿದ್ರೆ ಮಾಡಲಾರದೆ ಚಿಂತಿಸು ತ್ತಿರುವೆನು. ಸತ್ಯವಿಕ್ರಮನಾದ ಸಹದೇವನಿಗಿಂತಹ ವ್ಯಸನವು ಬರಬೇಕಾದರೆ, ಅದಾವ ಪಾಪ ಫಲವೋ ಎಂದಾಲೋಚಿಸಿ, ತಿಳಿಯದೆ, ತಲ್ಲಣಿಸುವೆನು. ನಿನ್ನ ಪ್ರಿಯ ಸೋದರನು, ಭೀಮಸೇನ! ಧರ್ಮಜನನ್ನಂತೆ, ವಿರಾಟನನ್ನು ಸೇವಿಸುವುದನ್ನು ನೋಡಿ, ಕಡುವ್ಯಸನಪಡುವೆನು.

"ನಾವು ವನವಾಸಕ್ಕೆಂದು ತೆರಳಿದಾಗ, ಕುಂತಿದೇವಿಯು ನನ್ನನ್ನು ಏಕಾಂತದಿ ಕರೆದು, 'ವತ್ಸೆ! ಕೃಷ್ಣೆ! ಸಹದೇವನನ್ನು ನಿನ್ನ ಕೈಲಿಟ್ಟು ಕಳಿಸುತ್ತಿರುವೆನು. ಕೇಳು! ಅವನಿನ್ನೂ ಚಿಕ್ಕ ಬಾಲನು; ಸುಕುಮಾರನು; ವಿಷಮವಾದ ವನವಾಸ ಕ್ಲೇಶವನ್ನಿವ ನೆಂತು ಸಹಿಸುವನೋ ? ಪಾಪ! ಇವನಿಗೆ ಏನೂ ತಿಳಿಯದು. ಅಮಾಯಿಕನಾದ ಸಹದೇವನ ಕೋಮಲಹೃದಯವು ನೋಯದಂತೆ ನೋಡಿಕೊಳ್ಳುವ ಭಾರ ನಿನ್ನದು. ಇವನೆಂದರೆ ನನಗೆ ಪ್ರಾಣ ! ಏನು ಮಾಡಲಿ ? ಹಾಳು ವಿಧಿಗೆ ಕನಿಕರವಿಲ್ಲ. ಇವನನ್ನು ಚೆನ್ನಾಗಿ ರಕ್ಷಿಸಿ, ಕರೆತಂದು, ನನಗೊಪ್ಪಿಸಿ, ನನ್ನ ಆಶೀರ್ವಾದವನ್ನು ಪಡೆ!' ಎಂದು, ಕಂಬನಿಗರೆದು, ಕಳಿಸಿದಳು. ಅಂತೆಯೇ ಆ ಮುದ್ದುಕುಮಾರನನ್ನು ವನವಾಸದಿ ಕಾಪಾಡಿದೆನು. ಇಲ್ಲಿ ವಿಧಿಯಿಲ್ಲದೆ, ದೂರವಿದ್ದು ದುಃಖಪಡುವಷ್ಟು ಮಾತ್ರವಾಗಿ, ಅಜ್ಞಾತ ಕಾಲ ಸಮಾಪ್ತಿಯನ್ನು ನಿರೀಕ್ಷಿಸುತ್ತಿರುವೆನು.

"ಇನ್ನು ನನ್ನ ವ್ಯಸನ ಪರಂಪರೆಯನ್ನೂ ಆಲಿಸು! ಇನ್ನಾರ ಮುಂದೆನ್ನ ಪಾಡನ್ನು ಉಸುರಲಿ ? ಭೀಮಸೇನ ! ನಿನ್ನ ಪ್ರಿಯಸತಿಯು ಸುದೇಷ್ಣೆಯ ಮನೆಯಲ್ಲಿ ಸೈರಂಧ್ರಿಯಾಗಿ, ಅವಳ ಕಾಲಿಗೆ ನೀರು, ಕೈಗೆ ಗಂಧ, ಕೊರಳಿಗೆ ಮಾಲೆ, ತಲೆಗೆ ಮುಡಿಯನ್ನು ಸಮರ್ಪಿಸುವ ಹೇವದ ಬದುಕು ನೂಕುತ್ತಿರುವಳಲ್ಲ ! ಸರ್ವದುಃಖಗಳಿಗೂ–ನಿಶೆಗೆ ಹಗಲಂತೆ–ಕೊನೆ ಉಂಟು ನಿಜ! ಆದರೆ ದಾಸಿಯಂತೆ ಇನ್ನೊರ್ವರ ಮುಖಭಾವವನ್ನು ನೋಡಿ ನಡೆಯುವ ಕೆಡುಬಾಳು ಸಾಕಾಗಿದೆ. ಸಾವನ್ನಾದರೂ ಅಪ್ಪುವೆನೆಂದರೆ, ಅದೂ ನನ್ನನ್ನು ಕಂಡು, ಒಲ್ಲದೆ, ದೂರಸರಿಯುತ್ತಿದೆ. ಮರ್ತ್ಯರಿಗೇ ಸುಖದುಃಖಗಳು, ಅವು ಶಾಶ್ವತವಲ್ಲವೆಂದು ಪೇಳುವ ಬುಧಜನರ ವಚನದಿಂದ ಧೈರ್ಯವಹಿಸಿರುವೆನು. ಪರಾಜಯವನ್ನು ತಂದೊಡ್ಡಿದ ದೈವವು ಜಯವನ್ನೂ ಕೊಡುವುದೆಂದು ವಿಶ್ವಾಸದಿಂದಿರುವೆನು. ಕಾಲವೈಪರೀತ್ಯದಿಂದ, ಕೊಡುವವರು ಬೇಡುವರಾಗುವರು ; ಕೊಲ್ಲುವವರು ವಧ್ಯರಾಗುವರು. ದೈವಲೀಲೆಗೆ ದುಷ್ಕರವಾದುದಿಲ್ಲ : ಅದನ್ನು ಮೀರಿನಡೆಯುವವರೂ ಇಲ್ಲ. ಶ್ರೀಹರಿ ಕೊಟ್ಟದ್ದನ್ನುಂಡು ನಿರ್ವಿಕಾರಳಾಗಿರಲು ಕಲಿತಿರುವೆನು. ಬರಿದಾದ ಕೆರೆಗೆ ಮಳೆ ಸುರಿಸಿ ತುಂಬಿಸುವ ಭಗವಂತನ ಕೈ ಬರಿದಾಗಿಲ್ಲ. ದೈವಾನುಕೂಲವಿಲ್ಲದಾಗ ಮಹಾ ಪ್ರಯತ್ನವೂ ಫಲಕಾರಿ ಆಗದು. ಆದುದರಿಂದ ಬುದ್ಧಿವಂತರು ದೈವವನ್ನು ಪ್ರಸನ್ನೀಕರಿಸಿಕೊಳ್ಳಬೇಕು. ಇಷ್ಟೇಕೆ ಮಾತೆಂದೆನಬೇಡ ! ಕೇಳು !

"ದ್ರುಪದರಾಜನ ಮಗಳಾಗಿ ಅಗ್ನಿಕುಂಡದಿಂದ ಜನಿಸಿದೆನು. ಅಗ್ನಿಯಂತಿರುವ ಅಣ್ಣನೊಡಹುಟ್ಟಿದೆನು. ದೇವಸದೃಶರಾದ ಪಾಂಡುಸುತರ ಕೈಪಿಡಿದು ಮಹಾರಾಣಿ ಎನಿಸಿ, ಬಹುಕಾಲ ಅಸೂರ್ಯಂಪಶ್ಯೆಯಾಗಿ ಬಾಳಿದೆನು. ಅಂತಹ ರಾಜಸೂಯಯಾಗದಲ್ಲಿ ಯಜ್ಞಪತ್ನಿಯಾಗಿ ವಿರಾಜಿಸಿದೆನು. ಶ್ರೀಕೃಷ್ಣನ ಸೋದರಿ ಎನಿಸಿದೆನು. ಇಂತಪ ಮಹಾಮಹಿಮೆ ಇಂದೇನಾಯಿತು ? ನನ್ನ ಅವಸ್ಥೆ ವೈರಿಗಳಿಗೂ ಬೇಡವೆನಿಸುವಂತಿದೆ. ನನ್ನ ಪರಿಭವದ ವದಾಹದಿಂದ ನೀವೇ ಅಲ್ಲದೆ, ಸರ್ವಕೌರವ ಪಾಂಚಾಲರೂ ತಲೆ ತಗ್ಗಿಸುವಂತಾಗಿದೆ. ಸೋದರರಿದ್ದರು ; ಮಾವನೂ ಇದ್ದನು; ಗಂಡಂದಿರೂ ಇದ್ದರು; ಯಾರೆನ್ನ ಬನ್ನವನ್ನು ಬಿಡಿಸಿದರು? ಯಾವ ಜನುಮದಿ ಬ್ರಹ್ಮದೇವನಿಗೆ ಏನಪರಾಧವನ್ನು ಮಾಡಿದೆವೊ, ಅದರ ಫಲವನ್ನಿಂದು ಉಣುತ್ತಿರುವೆವು. ಭೀಮ ! ಮಹಾ ಪ್ರಾಸಾದದಲ್ಲಿ ಅತ್ಯಂತಸುಖಳಾಗಿದ್ದುದನ್ನೂ ಕಂಡೆ ! ಇಂದು ಇಂತು ಪರರ ಮನೆಯ ದಾಸಿಯಂತಾಗಿ ಕಷ್ಟಪಡುವುದೂ ಕಾಣುತ್ತಿರುವೆ ! ಭೀಮ ಗದಾಧಾರಿಯು, ಚಂಡಗಾಂಡೀವಪಾಣಿಯು ಆದ ಪಾರ್ಥರಿಂದು ಬೂದಿಮುಚ್ಚಿದ ಕೆಂಡದಂತೆ, ಮರೆಮಾಚಿಕೊಂಡಿರುವರೆಂದರೆ, ದೈವವಿಧಿಯು ಅನುಲ್ಲಂಘ್ಯವೆಂದು ನಾನು ತಿಳಿದಿರುವೆನು.

"ಸಾಗರ ಪರ್ಯಂತವಾದ ಮಹೀಮಂಡಲವನ್ನಾಳಿದ ಚಕ್ರವರ್ತಿಯ ಮಹಿಷಿಯು, ಸುದೇಷ್ಣೆಯಂತಹ ಸಾಮಾನ್ಯ ರಾಣಿಗೆ ಭೀತಳಾಗಿ, ಅವಳ ಪರಿಚರ್ಯೆಯಲ್ಲಿ ನಿರತಳಾಗಿರುವಳಲ್ಲ ! ಸಾವಿರಾರು ದಾಸಿಯರ ಒಡತಿ ಇಂದು ತಾನೇ

ದಾಸಿಯಾಗಿರುವಳಲ್ಲ! ನೀಚತರವರ್ತನದಿ ಜೀವಿಸಿ, ಹೊಟ್ಟೆಗಾಗಿ ದೀನಳಾಗಿ, ಸುದೇಷ್ಣೆಯ ಕಣ್ಣ ಸನ್ನೆಯಂತೆ ನಡೆಯುವ ಮಡದಿಯ ಪಾಡು ನಿಮ್ಮ ಮನಸ್ಸಿಗೆ ವ್ಯಥೆಯನ್ನು ತರಲಿಲ್ಲ! ಏನು ಮಾಡಲಿ? ಒಂದು ದಿನವಾದರೂ ಕುಂತೀದೇವಿಯು ನನ್ನನ್ನು ಜಬರಿಸಿದುದಿಲ್ಲ. ಪರಿಚಾರಿಕೆಯರಿಗೆ ಕಲಿಸುವ ನೆವದಿ ನನಗೆ ಕೆಲಸಗಳನ್ನು ಕಲಿಸಿಕೊಡುವ ನಮ್ಮತ್ತೆಯ ದಯಾವರ್ಷದೂರಳಾಗಿ, ನೊಂದಿರುವ ನನಗೆ ನೀವಾದರೂ ಆಸರೆಯಾಗಿರದಿರೆ, ಇನ್ನೇನು ಗತಿ? ಗಂಧವನ್ನು ತೆಗೆದು ನಿಮ್ಮಮ್ಮಗೆ ಹಚ್ಚುವೆಂದದಿ, ಮೆಲ್ಲಗೆ ಸೈರಂಧ್ರಿಯ ಕೆಲಸವನ್ನು ನಿರ್ವಹಿಸುತ್ತಾ, ಸುದೇಷ್ಣೆಗೆ ಹಚ್ಚುವಾಗ ನನ್ನ ಮಾನಸಿಕ ವ್ಯಥೆ ಹೇಳತೀರದು. ಕಸ್ತೂರೀ ಕುಂಕುಮ ಘನಸಾರ ಗಂಧ ಬಂಧುರವಾದ ಚಂದನ ಕಲಾಪವನ್ನು ತೆಗೆದು, ಅವಳು ಮೆಚ್ಚುವಳೋ ಇಲ್ಲವೋ? ವಿರಾಟನ ಮನಸ್ಸಿಗೆ ಬರುವುದೋ ಇಲ್ಲವೋ? ಎಂದು ಹೆದರುವ ದುಃಸ್ಥಿತಿ ಯಾವ ವೈರಿವನಿತೆಗೂ ಬೇಡ! ಗಂಧ ತೇದುತೇದು ನನ್ನ ಕೈಗಳು ಕಾಯಿಕಟ್ಟಿವೆ! ನೋಡು!"

ಎಂದು ಆ ಮಹಾಸಾಧ್ವಿ ತನ್ನ ಕೈಗಳೆರಡನ್ನೂ ಭೀಮನ ಕೈಲಿಟ್ಟು, ಅಶ್ರುಧಾರೆಯನ್ನು ಸುರಿಸುತ್ತಾ ಅತ್ತಳು. ಅವಳ ಮುಖವವನ ವಕ್ಷಕ್ಕಾನಿತು; ಭೀಮಸೇನನು ದ್ರೌಪದಿಯ ವ್ಯಸನಾತಿಶಯವನ್ನು ಅರಿತನು. ಅವನ ಕಣ್ಣಲ್ಲಿಯೂ ನೀರು ಧಾರಾಕಾರವಾಗಿ ಸುರಿಯಿತು. ಅವನು ಅವಳ ಕಣ್ಣೀರೊರೆಸಿ, ಆಕೆಯ ಕೈಗಳಿಂದ ತನ್ನ ಮುಖವನ್ನು ಮುಚ್ಚಿ, ನಿಟ್ಟುಸಿರಿಟ್ಟು, ಚಿಂತಾಕ್ರಾಂತನಾಗಿ ಸುಮ್ಮನಿದ್ದನು.

ಭೀಮಸೇನನ ಅನುತಾಪವನ್ನು ಕಂಡು ದ್ರೌಪದಿಯು "ನಾಥ! ನನ್ನ ಪಾಪ ರಾಶಿಯು ಅನಂತವಾಗಿದೆ! ಇಲ್ಲದಿರೆ ನನ್ನಿಂದ ನಿಮಗೆಲ್ಲರಿಗೂ ದುಃಖಪರಂಪರೆ ಒದಗು ತ್ತಿದ್ದಿಲ್ಲ. ನಾನು ಬದುಕಿರುವುದಕ್ಕಿಂತ ಸಾಯುವುದೇ ಲೇಸು! ಇಷ್ಟಕ್ಕು ಮೂಲವಾದ ಜೂಜನ್ನಾಡಿದ ಧರ್ಮರಾಜನನ್ನು ನಿಂದಿಸದೆ ವಿಧಿಯಿಲ್ಲ. ದುಃಖಗಳನ್ನು ನನಗಾಗಿ ವಿಧಿ ಸೃಜಿಸಿದಂತಿದೆ. ನೀವೆಲ್ಲರೂ ಜೀವಂತರಿದ್ದು, ಎದುರಿಗಿರುವಾಗ ಒಬ್ಬ ನೀಚನಿಂದ ಸಭೆಯಲ್ಲಿ ಅವಮಾನಿತಳಾದೆ! ಇದು ನನಗೆ ಹೊಸತಲ್ಲ! ವಾಸುದೇವನ ದಯದಿಂದ ಎಲ್ಲ ವಿಪತ್ಸಮುದ್ರವನ್ನು ದಾಟುವೆನು. ಈಗ ದುಷ್ಟಕೀಚಕನು ಕೈಸೆಳೆದು ಒದೆದುದ ಕ್ಕಾಗಿ ಮರುಗುತ್ತಿರುವೆನು. ಭೀಮಸೇನ! ನೀನೇ ಮಾನಪ್ರಾಣರಕ್ಷಕನೆಂದು ನಂಬಿ ನಿನ್ನ ಮುಂದೆ ಕಂಬನಿಸುರಿಸಿ, ಮನಸ್ಸಿನ ವ್ಯಥೆಯನ್ನು ತೋಡಿಕೊಳ್ಳುತ್ತಿರು ವೆನು. ನೀನು ನೀಚ ಕೀಚಕನನ್ನು ಸಂಹರಿಸದಿದ್ದೊಡೆ, ಕೇಳು! ನೀರಪಾಲೋ, ಅಗ್ನಿಪಾಲೋ ಆಗಿ ಸಾಯುವೆನು. ವಿಷವನ್ನಾದರೂ ಕುಡಿವೆನು. ನಿನ್ನಾಣೆ!" ಎಂದು ನುಡಿದಳು.

ಭೀಮನು ದ್ರೌಪದಿಯ ಕೈಯನ್ನು ತನ್ನ ಕೈಲಿಟ್ಟು, ಪರಮ ದುಃಖಾರ್ತ ನಾಗಿ ಇಂತೆಂದನು—"ಸಾಧ್ವಿ! ದ್ರುಪದನಿಗೆ ಮಗಳು, ಪಾಂಡುರಾಜನಿಗೆ ಸೊಸೆ,

ಪಂಚಪಾಂಡವರಿಗೆ ಪ್ರಾಣ, ಪ್ರಜರಿಗೆ ತಾಯಿ, ವಿಪ್ರರಿಗೆ ಅನ್ನಪೂರ್ಣೆ, ಅಖಿಲ ಜನರಿಗೆ ಕಲ್ಪವೃಕ್ಷ ಆದ ನಿನಗೆ ಬಂದ ವ್ಯಸನಕ್ಕೆ ನಾನೆಷ್ಟು ಕಷ್ಟಪಡುವೆನೋ ಶ್ರೀಹರಿಗೇ ಗೊತ್ತು ! ಏನು ಮಾಡಲಿ ? ಧರ್ಮಿಷ್ಠನು ಸತ್ಯವಂತನು ಆದ ಅಣ್ಣನ ಆಜ್ಞೆ ಇಲ್ಲದೆ ಸುಮ್ಮನಿರುವೆನು. ಸಮಯಭಂಗ ಭಯದಿಂದ ಆ ಮಹಾನುಭಾವನೂ ನಮ್ಮನ್ನು ತಡೆಯುತ್ತಿರುವನು. ನನ್ನ ಕೈಪಿಡಿದ ಮಡದಿಯ ಕಷ್ಟವನ್ನು ಕಳೆಯದಿರುವ ನನ್ನ ಗದೆಗೆ ಧಿಕ್ಕಾರವಿರಲಿ! ಅರ್ಜುನನ ಗಾಂಡೀವದಿಂದೇನು ಪ್ರಯೋಜನ? ಕೃಷ್ಣೇ! ಕೀಚಕ ನನ್ನು ನಿನ್ನನ್ನೊದೆದ ಉತ್ತರ ಕ್ಷಣದಲ್ಲೇ ಯಮಸದನವನ್ನು ಮುಟ್ಟಿಸುತ್ತಿದ್ದೆನು. ಹದಿಮೂರನೆಯ ವರ್ಷವಿನ್ನು ಹದಿಮೂರು ದಿನಗಳಿರುವಾಗ, ಅವಿವೇಕಿಯಾಗಿ ನಾನು ವಿಜೃಂಭಿಸದಂತೆ ತಡೆದ ಧರ್ಮರಾಜನನ್ನು ನಿಂದಿಸಬೇಡ ! ನಿನ್ನ ಸಿಟ್ಟನ್ನು ಬಿಡು ! ನೀನಿಂತು ಮಾತಾಡಿದುದನ್ನು ನಮ್ಮಣ್ಣ ತಿಳಿದರೆ, ತತ್ಕ್ಷಣವೇ ಮರಣವನ್ನಪ್ಪು ವನು. ಅವನನ್ನು ಅನುಸರಿಸಿ ನಾವೆಲ್ಲರೂ ಮೃತರಾಗುವೆವು. ಆಲೋಚಿಸು! ನಿನ್ನಂತೆ ಕಷ್ಟಪಟ್ಟ ಪತಿವ್ರತೆಯರೆಷ್ಟೋ ಜನ ! ವಲ್ಮೀಕದಿಂದ ಹೊರಬಂದ ಎಂಭತ್ತೆಂಟು ವರ್ಷದ ವೃದ್ಧ ಚ್ಯವನನನ್ನು ಸುಕನ್ಯೆ ಸೇವಿಸಲಿಲ್ಲವೇ? ನಲಪುತ್ರಿ ಇಂದ್ರಸೇನೆಯಂತೆ ರೂಪವತಿಯರಾರು? ಅಂತಹವಳು ಮುದುಕ ಮುದ್ಗಲನನ್ನು ಕಟ್ಟಿಕೊಂಡಿರಲಿಲ್ಲವೇ? ದಮಯಂತಿಯು ನಲನೊಡನೆ ಅಡವಿಸೇರಿ ಪಟ್ಟ ಕಷ್ಟವೇನು ಸ್ವಲ್ಪವೇ ? ಜನಕಸುತೆ ಸೀತಾದೇವಿ, ಶ್ರೀರಾಮನನ್ನನುಸರಿಸಿ, ವನವಾಸ ಮಾಡಿ, ದುಃಖಿಸಿದಳೇ ? ರಾವಣ-ಪೀಡಿತಳಾದರೂ ಶ್ರೀರಾಮನನ್ನೊಂದು ಕ್ಷಣವಾದರೂ ಮರೆತಳೇ? ಲೋಪಾಮುದ್ರೆ ಸರ್ವ ರಾಜಸುಖಗಳನ್ನು ಬಿಟ್ಟು ಅಗಸ್ತ್ಯನ ಆಶ್ರಮ ಸೇರಲಿಲ್ಲವೇ ? ಅಂತೆಯೇ ರೂಪವತಿಯೂ, ಪತಿವ್ರತೆಯೂ ಆದ ನಿನಗೂ ಕಷ್ಟಾಂತಕಾಲವು ಪ್ರಾಪ್ತವಾಗಲಿದೆ. ಮುಂದೆ ರಾಜಾಧಿರಾಜ ಮಹಿಷಿಯಾಗಿ ವಿರಾಜಿಸುವೆ.

ಇನ್ನು ಕೀಚಕನನ್ನು ಸಂಹರಿಸೆಂದು ನೀನು ಹೇಳಬೇಕೆ? ನನ್ನೆದುರಿಗೆ ನಿನ್ನನ್ನಂತು ಪರಿಭವಿಸಿದ ದುಷ್ಟನಿಗೆ ಅವನ ಪೂರ್ವ ಪಿತಾಮಹರನ್ನು ನೋಡಿಸುವೆನು. ಆ ಪಾಪಿ ಇನ್ನಿಲ್ಲವೆಂದು ತಿಳಿ! ಅವನುಳಿದರೆ ಇನ್ನು ಪತಿವ್ರತೆಯರ ಮಾನ ಪ್ರಾಣಗಳು ದಕ್ಕು ವವೇ ? ಆಗಲೆ ನನ್ನ ಭುಜಬಲವನ್ನು ತೋರದ ತಪ್ಪೇ ಸಾಕು ! ನಾಳೆ ಆ ನೀಚ ನೆಲ್ಲಡಗಿದರೂ, ಧರ್ಮಜನು ನಿವಾರಿಸಿದರೂ, ಕೊನೆಗೆ ನೀನೇ ಕರುಣೆಯನ್ನು ವಹಿಸಿ ಬಿಡಿಸಬಂದರೂ, ತಪ್ಪದೆ ನನ್ನ ಕೈಲಿ ಸಾಯುವನೆಂದು ತಿಳಿ! ಇನ್ನಾ ಮಾತು ಬಿಡು!

ಕೀಚಕನಂತೆಯೇ ದುಷ್ಟರಾದ ದುರ್ಯೋಧನ ದುಶ್ಶಾಸನ ಕರ್ಣ ಶಕುನಿ ವಿಕರ್ಣ ಸೈಂಧವ ಪ್ರಮುಖ ಕುರುವೀರರನ್ನೂ ಅಧೋಲೋಕವನ್ನು ಸೇರಿಸುವೆನು. ನಿನ್ನ ಮನಶ್ಶಲ್ಯವನ್ನು ಕಿತ್ತೊಗೆಯುವೆನು. ಸಿಂಹಬಲನು ನಾಳೆಯೂ ನಿನ್ನನ್ನು ಪೀಡಿಸಬರು ವನು. ನೀನು ಒಡಂಬಟ್ಟಂತೆ ನಟಿಸಿ, ನರ್ತನಶಾಲೆಗೆ ಒಬ್ಬಂಟಿಗನಾಗಿ ನಾಳೆ ರಾತ್ರಿ ಬರುವಂತೆ ಹೇಳು ! ನಾನಲ್ಲಿ ನಿನ್ನೊಡನೆ ಅಡಗಿದ್ದು, ಬಂದ ದುಷ್ಟನನ್ನು ಕೊಂದು, ನಿನಗಾನಂದವನ್ನು ತರುವೆನು. ಸಮಯಭಂಗವಾಗದಿರಲು ಇದೇ ಸರಿಯಾದ

ಉಪಾಯ. ಬೆಳಗಾಗಬರುತ್ತಿದೆ. ಇನ್ನಿಲ್ಲಿರಬೇಡ ! ಹೋಗು !' ಎಂದು ನುಡಿದು, ದ್ರೌಪದಿಯನ್ನು ಸಮಾಧಾನಪಡಿಸಿ, ಭೀಮನು ಅವಳನ್ನು ಕಳಿಸಿದನು.

## ಕೀಚಕ ವಧೆ

ಮರುದಿನ ಬೆಳಗಾಯಿತು. ವ್ಯಸನಪಡುವ ಮಾಲಿನಿಯ ಮುಖದಿಂದ ನಿಟ್ಟುಸಿರಂತೆ, ಕಮಲಗಳರಳಿದಾಗ ಗಂಧ ಮಾರುತವು ಹೊರಬಂತು. ಸೂರಿ ಜನರ ಸಾಂಗತ್ಯದಿಂದ ಅಜ್ಞಾನದಂತೆ ಸೂರ್ಯಕಿರಣಗಳಿಂದ ಕತ್ತಲು ದೂರವಾಯಿತು. ವೇದಾದಿ ಸಚ್ಛಾಸ್ತ್ರ ವಿಚಾರದಿಂದ ಜ್ಞಾನದಂತೆ, ಕಮಲಾದಿ ಪುಷ್ಪಗಳು ವಿಕಸಿತವಾದವು. ರಾತ್ರಿಯಲ್ಲಿ ತಪಿಸಿದ ಚಕ್ರವಾಕಗಳ ವಿರಹ ದುಃಖವು ದೂರವಾಯಿತು. ಪ್ರತ್ಯೂಷಪವನಾಂಕುರಗಳು ಮೈಸೋಕಿದಾಗ, ಮಲಗಿದ್ದ ರಮಣಿಯರು, ರಮಣಸ್ಪರ್ಶದಿಂದೆಂಬಂತೆ ಪುಲಕಾಂಚಿತ ಗಾತ್ರಿಯರಾಗಿ, ಪುನಃ ರತಿಗೆಂದು ತವಕಿಸಿದರು. ಯುವಜನ ಸಲ್ಲಾಪಗಳೊಡನೆ ಪಕ್ಷಿಗಳ ಕಲಕಲನಿನಾದವು ಮೇಳವಿಸಿತು. ಮಧುವನದಲ್ಲಿ ನಿಧುವನರತರಾದ ವಧೂಜನರು ಪ್ರಿಯಬಾಹುವಲ್ಲರಿಯ ಆಸರೆ ಪಿಡಿದು, ತೆಗೆದಿಟ್ಟದ್ದ ಆಭರಣರಾಜಿಯನ್ನು ಮರೆತುಹೋದರೆಂಬಂತೆ ಪಲ್ಲವಕುಸುಮ ತತಿಯು ನೆಲದಲ್ಲಿ ಹರಡಿತ್ತು. ಮೈಗೆ ಮೆತ್ತಿದ್ದ ಕಸ್ತೂರೀ ಕೇಸರ ಘನಸಾರ ಮಿಶ್ರಿತ ಚಂದನ ಪಂಕವು ಜಲಕ್ರೀಡೆಗೆ ತೊಡಗಿದಾಗ ಕರಗಿ, ಸುಮನಸ್ಸಂಪರ್ಕ ಫಲವನ್ನು ಸೂಚಿಸುವಂತೆ, ಸರಸೀಜಲವು ಸುಗಂಧಿತವು ಸುವರ್ಣರಂಜಿತವು ಆಗಿ ಶೋಭಿಸಿತು. ದಿನಕರನ ಪ್ರಚಂಡ ಕರತಾಡನದಿಂದ ಹೆದರಿ ತಾರೆಗಳು ಜಾರಿಣಿಯರಂತೆ ಮರೆಯಾದವು. ಮೃಗಪಕ್ಷಿ ಸಂತಾನವು ಸಂತಾನ ಪೋಷಣೆಗೆಂದು ಗೃಹಮೇಧಿ ಜನರಂತೆ ದಿಗಂತಗಳಿಗೆ ಧಾವಿಸಿದವು. ಹಂಸಗಳು ದ್ವಿಜಕುಲಶ್ರೇಷ್ಠರಾದುದರಿಂದ ತಮ್ಮಲ್ಲಿಗೇ ದೇವನು ತಂದಿತ್ತ ತಾವರೆಯ ನಾಳಗಳನ್ನು ಭುಜಿಸಿ, ತೃಪ್ತರಾಗಿ, ಕಮಲಾಸೀನಗಳಾಗಿ, ಕೃತಜ್ಞತೆಯಿಂದ ಶ್ರೀಹರಿಧ್ಯಾನರತವಾದವು.

ಪ್ರಾಚೀದಿಕ್ಕಾಮಿನಿಯ ವಿಶಾಲ ಫಾಲದಲ್ಲಿಟ್ಟ ಕುಂಕುಮತಿಲಕದಂತೆ, ಪ್ರಭಾಕರನು ರಾಗಮಯನಾಗಿ ವಿರಾಜಿಸಿದನು. ಯಾಮಿನೀಚರರ ಕಾಟಗಳಡಗಿದವು ; ಕುಕ್ಕುಟಾರಾವಗಳು ಸಂತತವಾದವು. ಹೋಮಾದಿ ದೇವ ಕಾರ್ಯಮಗ್ನರಾದ ವಿಪ್ರವರರ ವೇದಘೋಷವು ಪಸರಿಸಿತು. ದೀಪಕಳಿಕೆಗಳು ಕಳಾವಿಹೀನವಾದವು. ಗಾಯತ್ರೀನಾಮಕ ಶ್ರೀನಾರಾಯಣನನ್ನು ಅರ್ಘ್ಯಾದಿಗಳಿಂದ ಪೂಜಿಸುವ ಸುಜನರ ಹೃದಯರೋಗವನ್ನು ಕಳೆವ ಸೂರ್ಯನು ತನಗವನಿತ್ತದಿವ್ಯಕಾಂತಿಯಿಂದ ಬೆಳಗುತ್ತ, ಮೇಲೇರಿಬಂದನು. ನಿಖಿಲವೇದ ನಿಧಾನವೋ, ಶ್ರೀಹರಿ ಮುಖ್ಯಪ್ರಾಣ ಸನ್ನಿಧಾನವೋ, ತ್ರಿಲೋಕ ಪ್ರಕಾಶಕ ದಿವ್ಯನೇತ್ರವೋ, ಪಾಪಾಂಧಕಾರ ನಿರಾಸಕ ತೇಜಃಪಾತ್ರವೋ ಎಂಬಂತೆ ಸೂರ್ಯಮಂಡಲವು ಉದಿತವಾಯಿತು. ಮೃತರಂತೆ ಬಿದ್ದಿದ್ದ ಚೇತನರು ಮಾರ್ತಾಂಡ ಪ್ರಭಾವದಿಂದ, ಜೀವನವಂತರಾದರು. ಒಂದು

ದಿನದ ಆಯುವು ಕಳೆದುಹೋಯಿತೆಂಬ ಕಳಕಳಿ ಇಲ್ಲದ ಮತ್ತ್ರಜೀವರ ಉನ್ಮತ್ತ ವೃತ್ತಿಲತೆಯು ಮತ್ತೆ ಮೊನೆಚಾಚಿ ಚಿಗುರಿತು.

ಕೀಚಕನು ಚುರುಕಾದ ಬಿಸಿಲಿಗೆ ಎಚ್ಚೆತ್ತು, ಸ್ನಾನವನ್ನು ಮುಗಿಸಿ, ಸಿಂಗಾರ ವನ್ನು ಧರಿಸಿ, ಸೈರಂಧ್ರಿಯನ್ನು ಸ್ಮರಿಸಿದನು. ಅವನಿಗೆ ಅವಳಲ್ಲಿ ಅನುರಾಗದೊಡನೆ, ಆಗ್ರಹವೂ ಮೂಡಿತು. ಮದನನು ಹಿಂದೆನಿಂತು ದೂಡಿದಂತೆ, ದಡದಡನೆ ನಡೆದು ಆ ತುಡುಗನು, ಮಾಲಿನಿಯನ್ನು ಕಲೆಯುವ ಕೌತುಕದಿಂದ, ತನ್ನ ಅಕ್ಕನ ಅಂತಃಪುರ ವನ್ನು ಸೇರಿದನು. ಅಲ್ಲಿ ಆ ದಿವ್ಯಾಂಗನೆಯನ್ನು ಕಂಡು, ಅನಂಗವಶನಾಗಿ, ಕೀಚಕನು ಮತಿಗೆಟ್ಟು, ಬೇಟೆಗಾರನು ಹರಡಿದ್ದ ಬಲೆಗೆ ಬೀಳುವ ಮೃಗದಂತೆ, ಮಾಲಿನಿಯನ್ನು ಸಮೀಪಿಸಿದನು. ಮಾಲಿನಿಯು ಹೆದರದೆ ಮಾಲೆಗಳನ್ನು ಕಟ್ಟುತ್ತಾ, ಅವನು ದುಡುಕುವನೆಂದು ತಿಳಿದು, ದೂರಸರಿದು ನಿಂತಳು.

ಕೀಚಕನು ಹಲ್ಲುಕಿರಿದು ನಗುತ್ತಾ, ಕಾಲಕೆರೆದಿಂದ ಕರೆದು, ನೆಲಕ್ಕಪ್ಪಳಿಸುತ್ತಾ, ಹುಚ್ಚಾಗಿ ಮಾತಾಡುತ್ತಾ, ಕೈಕೈ ಹಿಸುಕುತ್ತಾ, ದುರ್ವಿಲಾಸಮಯನಾಗಿ, ಮಾಲಿನಿ ಯನ್ನು ಸಮೀಪಿಸಿ, ಇಂತೆಂದನು. 'ಸುಂದರಿ ! ಕೇಳಿಲ್ಲಿ ! ನಿನ್ನ ಚರಣ ಸೇವೆಯನ್ನು ಪಡೆಯಲೆಣಿಸಿ ಬಂದ ಮಂದಭಾಗ್ಯನೆಂದು ತಿಳಿ ! ಕಾಮಸುಖಕೇಳಿಗೆ ವಿಮುಖಳಾಗ ಬೇಡ ! ಇಲ್ಲದ ಸಲ್ಲದ ಜಗಳವನ್ನಾಡಿ, ರಾಜಸಭೆಯಲ್ಲಿ ನನ್ನ ಮಾನವನ್ನು ಕಳೆದೆ ! ಕೀಚಕನೆಂದರೆ ಒಲ್ಲದ ರಮಣಿಯರಿಂದಿನವರೆಗೂ ಇಲ್ಲ. ಅಂತಹ ಅಂದಚಂದಗಳನ್ನು ನಿನಗರ್ಪಿಸಲು ಬಂದ ಸುಂದರಾಂಗನನ್ನು ದೂರದೂಡಿ, ಪಶ್ಚಾತ್ತಾಪಪಡಬೇಡ! ಕೂಡೆ ನ್ನನ್ನು ! ಪಾಲಿಸೆನ್ನ ಬಿನ್ನಹವನ್ನು ! ಆಳು, ನಿನ್ನಾಳೆಂದು ಜಗದೇಕವೀರನಾದ ಸಿಂಹ ಬಲನನ್ನು ! ನನ್ನೆದುರಾಳಾಗಿ ಭಯಂಕರ ರಣರಂಗದಿ ನಿಲ್ಲುವ ಪ್ರತಿವೀರರು ಪೃಥಿವಿ ಯಲ್ಲೇಕೆ? ಮೂರ್ಲೋಕಗಳಲ್ಲಿಯೂ ಇಲ್ಲ. ಹೆಸರಿಗೆ ವಿರಾಟನು ರಾಜನು! ನಾನೇ ನಿಜ ರಾಜನು. ನಿನ್ನಂತಹ ಕಾಂತೆಯರನ್ನು ಒಲಿದು ಬಲಾತ್ಕರಿಸಲು ಸಮರ್ಥನಾದ ನನ್ನನ್ನು ನಿವಾರಿಸುವವರಿಲ್ಲ. ಸಾವಿರ ಜನರಿದ್ದ ಸಭೆಯಲ್ಲಿ ನಿನ್ನನ್ನು ಕಾಲಿಂದೊದೆ ದಾಗ—ಅಲ್ಲ, ಸಲ್ಲದೆಂಬ ಧೀರನಾವನಾದರೂ ಇದ್ದನೇ ? ಸುಮ್ಮನೆ ಹಠಮಾಡಿ ಕೆಡಬೇಡ ! ನಿನ್ನನ್ನು ಭೋಗಿಸದೆ ಬಿಡುವವನಲ್ಲ" ಎಂದು ಕುಡಿದು ನುಡಿಯುವ ಸಿಂಹಬಲನನ್ನು—ಅವನ ಪ್ರಲಾಪವನ್ನು ತಡೆಯಲೆಣಿಸಿ, ಮಾಲಿನಿ ಮೆಲ್ಲನೆ ನಗುತ್ತಾ, ಕಡೆಗಣ್ಣಿನಿಂದ ನೋಡುತ್ತಾ, ಇಂತೆಂದಳು—

'ಇಷ್ಟೇಕೆ ತ್ವರೆ ? ಕಾಮಫಲವನ್ನು ಕಸಿಮಾಡಿ ಭುಜಿಸುವರುಂಟು! ನಿನ್ನಂತಹ ಹುಚ್ಚರಿನ್ನಿಲ್ಲ. ಮದನವಿಕಾರವಶನಾದವನು ಮದನಾರಿ ನಿವಾಸವನ್ನು ಸೇರುವನಿದು ನಿಜ ! ನನ್ನನ್ನು ಬೇಡಿ ಸತ್ತವರಿದ್ದರು. ಅವರಂತೆಯೇ ನನಗಾಗಿ ಸಾಯಲು ತವಕಿಸುವ ನಿನ್ನನ್ನು ಕಂಡು ಆನಂದವಾಗಿದೆ. ನಿನ್ನ ಕೋರಿಕೆಯನ್ನು ಕೊನೆಗಾಣಿಸುವೆನು. ಉತ್ತರೆ ಮೊದಲಾದ ಬಿತ್ತರಿಯರಾಡುವ ನರ್ತನಶಾಲೆಯನ್ನು ಕಂಡಿರುವೆಯಲ್ಲ. ನಿಶೀಥ ಸಮಯ ಅದು ಶೂನ್ಯಾಗಾರವಾಗಿರುವುದು. ಅಲ್ಲಿ ನಿನಗೆ ಶೂನ್ಯಸಂಪಾದನೆಯೊಂದಿಗೆ

ಎಂದೂ ಹೊಂದದಿರದ ಅಂದಗಾತಿಯು ಅಂಗಸಂಗವಾಗಲಿ! ನಾಳೆ ರಾತ್ರಿ, ಸುಮ ಚಂದನ ಭೋಗದ್ರವ್ಯಗಳೊಂದಿಗೆ, ನೀನೊಬ್ಬನೇ ಯಾರಿಗೂ ತಿಳಿಸದೆ, ಬಾ! ಗಂಧರ್ವರಿಗೆ ಹೆದರಿ ನುಡಿಯುತ್ತಿರುವೆನು. ರಹಸ್ಯ ಪ್ರಕಾಶವಾದರೆ ಕಾರ್ಯವು ಕೆಡುವುದು. ನಡೆ ಇಲ್ಲಿಂದ!'

ಕೀಚಕನು 'ಅಬ್ಬ! ಧನ್ಯನಾದೆನು. ನೀನು ನುಡಿದಂತೆ ಮಾಡುವೆನು. ಇಲ್ಲಿ ನಿನ್ನೊಡನೆ ಮಾತಾಡಬೇಕೆಂಬ ಹಂಬಲವಿದ್ದೂ, ಜನರಿಗೆ ಅನುಮಾನವೇಕೆಂದು ಹೋಗುತ್ತಿರುವೆನು. ನಾಳೆ ತಪ್ಪದೆ ಬರುವೆನು' ಎಂದು ನುಡಿದು, ಹಿಂದಿರುಗಿ, ಆನಂದಪರವಶನಾಗಿ ತನ್ನಲ್ಲೆ ಹಾಡಿಕೊಳ್ಳುತ್ತಾ, ತನ್ನ ಮಂದಿರವನ್ನು ಸೇರಿದನು.

ಮಾಲಿನಿಯೂ ಸಮಯವರಿತು, ಮಹಾನಸ ಶಾಲೆಗೆ ಹೋದಳು. ಅವಳ ಮುಖ ವಿಕಾಸದಿಂದಲೇ ಭೀಮಸೇನನು ಎಲ್ಲವನ್ನೂ ಅರಿತು, ನಗುತ್ತಾ, ಅವಳನ್ನು ನೋಡಿದನು. ಆಗ ಮಾಲಿನಿಯು, 'ವಲ್ಲವ! ನನ್ನ ವಂತಿನ ಕೆಲಸವಾಯಿತು. ಇನ್ನು ನಿನ್ನ ವಂತಿನ ಮಹಾನಾಶ ಕಾರ್ಯವು ಉಳಿದಿದೆ. ನಾಟ್ಯರಂಗದಲ್ಲಿ ಇಂದು ರಾತ್ರಿ ಪ್ರಳಯ ತಾಂಡವವನ್ನು ಮಾಡಿ, ನನ್ನ ಮೆಚ್ಚಿಗೆಯ ಕಿರುನಗೆಯನ್ನು ಬಹುಮಾನವನ್ನಾಗಿ ಪಡೆ!' ಎಂದು ಭೀಮನನ್ನು ಹುರಿದುಂಬಿಸಿದಳು.

ಭೀಮಸೇನನ ಹೃದಯವು ಅಗ್ನಿಕುಂಡವಾಗಿ, ಕ್ರೋಧಾಗ್ನಿಜ್ವಾಲೆಗಳನ್ನು ನೇತ್ರ ರಂಧ್ರಗಳಿಂದ ಕಾರಿತು; ಒಡನೆ ಸಮಾಧಾನಪಟ್ಟು, ಸಮಚಿತ್ತನಾದ ವೃಕೋದರನು ದುಷ್ಟದಮನ ದೀಕ್ಷಿತನಾದನು. ಅವನ ಕೈಯ ಸೌಟು ಗದೆಯಂತೆ ವಿಜೃಂಭಿಸಿತು. ಅವನ ನಡೆ ಬಿರುಸಾಯಿತು. ದ್ರೌಪದಿಯ ಜಾಣತನವು ಅವನ ಉತ್ಸಾಹಶಕ್ತಿಯನ್ನು ಇಮ್ಮಡಿಸಿತು. ರಹಸ್ಯವು ಹೊರಬೀಳದಂತೆ, ಧರ್ಮರಾಜನು ಸಂತಸಿಸುವಂತೆ, ದುಷ್ಟ ಕೀಚಕನನ್ನು ಮಟ್ಟೆಕ್ಕಿ ಅಂತಕನ ಮನೆಗೆ ಕಳಿಸಲು ಅನುಕೂಲೋಪಾಯವನ್ನು ಹೂಡಿದ ಮಡದಿಯನ್ನು ನೋಡಿ, ಅವನಿಂತೆಂದನು—

"ಮಾಲಿನಿ! ಒಳ್ಳೆಯದಾಯಿತು. ಅಡುಗೆಯನ್ನು ಮುಗಿಸಿ, ನಾಳೆ ಬೆಳಗಾಗುವಲ್ಲಿ ನಿನ್ನ ಕೆಲಸವನ್ನೂ ಮಾಡಿ ಮುಗಿಸುವೆನು" ಎಂದು ಮತ್ತೆ, ರಹಸ್ಯವಾಗಿ 'ಅವನು ಬರುವನೋ? ಇಲ್ಲವೋ? ಗಂಧರ್ವರು ಬೀಸಿದ ಬಲೆ ಎಂದು ತಿಳಿದು ನಿಲ್ಲುವನೋ? ಆದರೆ ಅವನ ವರ್ತನವನ್ನು ಕೇಳಿ, ತಪ್ಪದೆ ಬರುವನೆಂದು ತೋರುತ್ತಿದೆ. ಬರಲಿ! ಆ ಮದಮತ್ತನನ್ನು ಮತ್ತೆ, ಮತ್ತಕಾಶಿನಿಯರ ಗೊಡವೆಗೆ ಹೋಗದಂತೆ ಮಾಡುವೆನು. ನೋಡು ಆಗ ನನ್ನ ಬಾಹುಬಲವೈಭವವನ್ನು! ಹೆಬ್ಬುಲಿಯ ಅಬ್ಬರದ ಕೋರೆಗಳಿಗೆ ಸಿಕ್ಕ ಕೊಬ್ಬಿದ ಕೋಣನಂತಾಗುವ ದುಷ್ಟ ಕೀಚಕನನ್ನೂ ಅವನ ವಿಚಿತ್ರ ಭಯಾನಕ ಮರಣವನ್ನೂ ಕಾಣುವೆ! ನಡೆ!' ಎಂದಬ್ಬರಿಸಿದನು.

ಭೀಮಸೇನನ ರೌದ್ರಾಕಾರವನ್ನು ಕಂಡು, ಅಜ್ಞಾತವಾಸಭಂಗಭಯದಿಂದ ಚಕಿತಳಾಗಿ, ಮಾಲಿನಿ "ಭೀಮಸೇನ! ಕಾರ್ಯವನ್ನು ನಿರ್ವಹಿಸುವೆಡೆ, ಧೃತಿಗೆಡಬೇಡ! ಧರ್ಮಸುತನಿಗೆ ಸಮ್ಮತವಾಗುವಂತೆ, ಜನರಿಗೆ ಗಂಧರ್ವ ಕೃತ್ಯವೆಂದು

ತೋರಿಬರುವಂತೆ, ದುರ್ಯೋಧನಾದಿ ದುಷ್ಟರಿಗೆ ಮರ್ಮ ಸಿಗದಂತೆ, ಕೀಚಕನನ್ನು ಸಂಹರಿಸು! ನನ್ನ ಅಭಿಮತವನ್ನೀಡೇರಿಸುವಾಗ ಪ್ರಯಾಸವು ವ್ಯರ್ಥವಾಯಿ ತೆಂದೆನಿಸಬೇಡ!" ಎಂದು ಕೈಪಿಡಿದು ಬೇಡಿದಳು. ಆಗ ಭೀಮನು ನಗುತ್ತಾ 'ಸಾಧ್ವಿ! ಇದನ್ನು ನೀನೆನಗೆ ಹೇಳಬೇಕೆ? ನೀನೆಂದು ತಿಳಿದು ನನ್ನನ್ನು ಕೈಪಿಡಿಯಲು ಬರುವ ಬಡಕೀಚಕನನ್ನು ಕದುಚಿತ್ರವಧೆ ಮಾಡದೆ ಬಿಡೆನು. ರಹಸ್ಯವನ್ನು ರಕ್ಷಿಸುವುದನ್ನೂ ಮರೆಯದಿರುವೆನು. ನಿಶ್ಚಿಂತಳಾಗು!' ಎಂದು ಅವಳನ್ನು ಕಳುಹಿಸಿದನು. ಮಾಲಿನಿ ಶಾಕಾದಿಗಳನ್ನು ತೆಗೆದುಕೊಂಡು, ಸುದೇಷ್ಣೆಯ ಮನೆಗೆ ಹೋದಳು.

ಕೀಚಕನು ಮನೆಸೇರಿ, ಮಾಲಿನಿಯ ಮಮತೆಯ ಹಗಲುಕನಸನ್ನು ಕಾಣುತ್ತಾ, ಕಾಲವನ್ನು ಕೈಗಳಿಂದ ದೂಡಿ ಕಳೆಯುತ್ತಿದ್ದನು. ಸುಂದರಾಂಗಿಯ ಲಾವಣ್ಯರಸದಿ ವಿಂದು, ರೂಪ ಮಧುಪಾನದಿಂದ ಮತ್ತನಾಗಿ, ಲಾಲಿತ್ಯ ಸೌಕುಮಾರ್ಯಧ್ಯಾನ ದಿಂದ ಮೈಮರೆತು, ಪರಮಯೋಗಿಯಂತೆ ವಿವಶನಾಗಿದ್ದ ಕೀಚಕನು ವಿರಹತಾಪ ವನ್ನು ತಡೆಯಲಾರದೆ, ವಿವಿಧ ವಿಭ್ರಮಗಳಿಗೊಳಗಾದನು; ನಿಟ್ಟುಸಿರನ್ನಿಡುವನು; ಎದ್ದು ಪರಿಭ್ರಮಿಸುವನು; ಧೈರ್ಯವನ್ನು ಕಳೆದುಕೊಂಡು ಚಿಂತಿಸುವನು!

'ಆಹಾ! ಮಾಲಿನೀ! ನಿನ್ನ ಬಾಹುವಲ್ಲರೀ ಮಾಲೆಗಳಿಂದ ನನ್ನನ್ನಲಂಕರಿಸು ವೆಯೋ? ಸುಮ್ಮನೆ ಆಶೆಯನ್ನು ಪುಟ್ಟಿಸಿ, ಕೊನೆಗೆ ಮೋಸಮಾಡುವೆಯೋ? ಮಾಲಿನಿಯು ನರ್ತನಾಗಾರಕ್ಕೆ ಬರುವಳೇ? ಬಂದರೆ, ಹಿಂದಿನಂತೆ ಒದೆದು ತಿರಸ್ಕರಿಸು ವಳೋ? ತಿರಸ್ಕರಿಸದೆ ಸಂಗಸ್ವರ್ಗವನ್ನು ಸೇರಿಸುವಳೋ? ಗಂಧರ್ವರೈವರು ಬಲಶಾಲಿ ಗಳು ಪತಿಗಳೆಂದ ಆ ಕುಸುಮಗಂಧಿಯಮಾತು ನಿಜವೇನೋ? ನಿಜವಾದರೆ ಗಂಧರ್ವರು ಅವಳ ಮಾನಸಂರಕ್ಷಣೆಗೆ ಹಾತೊರೆದು ಬರದಿರುವರೇ? ಬಂದರೆ ನಾನು ಅವರೊಡನೆ ಕಾದು ಬದುಕುವೆನೇ? ಮದನತಾಪದಿಂದಲೋ ಅಥವಾ ಗಂಧರ್ವಕೋಪದಿಂದಲೋ ನಾನು ಸಾಯುವುದು ನಿಶ್ಚಯ! ಏನಾದರಾಗಲಿ! ನಮ್ಮ ಅಕ್ಕ ಗಂಧರ್ವಭೀತಳಾಗಿ ಸೈರಂಧ್ರಿಯನ್ನು ಕಳಿಸದಿರೆ ಏನುಗತಿ? ವಿರಾಟನನ್ನೂ, ಅಡ್ಡಿ ಬರುವ ಗಂಧರ್ವರನ್ನೂ ಸಂಹರಿಸಿ, ಸುಂದರಿಯ ಸಂಗ ಸುಖ ಸಾಮ್ರಾಜ್ಯವನ್ನು ಸೂರೆಗೊಳ್ಳುವೆನು. ಇಲ್ಲದಿರೆ ಮದನನು ನನ್ನನ್ನೇ ಸಂಹರಿಸದೆ ಬಿಡನು. ಅವಳೂ ನನ್ನಲ್ಲಿ ಅನುರಕ್ತಳಾಗಿ ಏಕಾಂತ ಸ್ಥಲವನ್ನು ಸೂಚಿಸಿರುವಳು. ನನ್ನಂತಹ ಸುಂದರತರುಣನ ಬಲೆಗೆ ಬೀಳದ ಬಿನ್ನಾಣ ಗಾರ್ತಿಯರಿರುವರೇ? ವೃಥಾಚಿಂತೆ ಏಕೆ? ಆಗಲಿ ನಿಶೀಥ ಕಾಲ! ಚಿಗುರಿ ಫಲಿಸಲಿ ನನ್ನ ಆಶಾಕಲ್ಪಸಾಲ!'

ಇಂತು ತದೇಕಮಗ್ನಮಾನಸನಾದ ಕೀಚಕನು ಮನ್ಮಥ ವಿಕಾರಯುತನಾಗಿ ಮನಸಿಡದೆ ಮಜ್ಜನ ಭೋಜನಾದಿ ಕೃತ್ಯಗಳನ್ನು ಮುಗಿಸಿ, ಉದ್ಯಾನವನವನ್ನು ಸೇರಿದನು. ಕಮಲವನವನ್ನು ನೋಡಿ, ಸಿಂಹಬಲನು ಕಮಲಮುಖಿಯನ್ನೂ, ರಂಭಾ ಸ್ತಂಭಗಳಿಂದ ರಂಭೋರುಯುಗಳೆಯನ್ನೂ, ಭ್ರಮರ ಪಂಕ್ತಿಯಿಂದ ಅಲಿವೇಣಿ ಯನ್ನೂ, ಸುಮರಾಜಿಯಿಂದ ಪಾಟಲಗಂಧಿಯನ್ನೂ, ಲತಾಜಾಲದಿಂದ ತನ್ವಂಗಿ

ಯನ್ನೂ, ರಸಾಲಪಲ್ಲವಗಳಿಂದ ಬಿಂಬಾಧರೆಯನ್ನೂ, ನೆನೆನೆನೆದು ಪರವಶನಾದನು. ಗಾಳಿಗೆ ಸಿಕ್ಕಿಬಂದ ಪೂದೂಳಿಯನ್ನು ಸೈರಂಧ್ರಿಪೂಸಿದ ಗಂಧವೆಂತಲು, ಜಾರಿ ಸೋನೆಯಾಗಿ ಹರಿಯುವ ಮಕರಂದರಸವನ್ನು ಮಾಲಿನಿಯ ಅಧರಾಮೃತವೆಂತಲು, ನಿಂತ ಚೈತ್ಯ ಪ್ರತಿಮೆಗಳನ್ನು ಒಲಿದು ಬಂದ ಸುಂದರಿ ಎಂತಲು, ಉದುರುವ ಕುಸುಮತತಿಯನ್ನು ಮಾಲಿನಿ ಸುರಿಸಿದ ಪೂಮಳೆ ಎಂತಲು ಭ್ರಮಿಸಿ, ಲೀಲೋದ್ಯಾನದಲ್ಲಿ ಹುಚ್ಚನಂತೆ ಸಂಚರಿಸಿದನು. ಇಂದೀವರ ಶುಭಲೋಚನೆಯ ಯೋಚನೆಯಿಂದ ಮಾನಸಿಕ ಮದನ ಕೇಳೀ ವಿಲಾಸ ದುಗ್ವೃತ್ತನಾಗಿ ಕೀಚಕನು ಪರಿಚಾರಿಕೆಯರ ಶಿಶಿರ ಸುಖೋಪಚಾರಗಳಿಂದಲೂ ತಣಿಯದೆ, ಕಷ್ಟದಿಂದ ಕಾಲವನ್ನು ಕಳೆದನು.

'ಇಂದೇಕೆ ರವಿಯು ಮುಣುಗದಿರುವನು ? ಈ ದಿವಸಕ್ಕೆ ಕೊನೆ ಇಲ್ಲವೇ ? ನಿಶೀಥವೆಂಬ ನಿಧಿಯನ್ನು ವಿಧಿ ಬಚ್ಚಿಟ್ಟನೇ ? ಈ ಜಗದ ಕಣ್ಣು ಮುಚ್ಚುವ ತಮಃ ಪಟಲವನ್ನು ಯಾರಾದರೂ ಹರಿದು ಬಿಸುಟದರೇ! ಆಹಾ! ಎಂತು ಹೊತ್ತುಕಳೆಯಲಿ? ಎಂದಾಗುವುದು ನಿಶೀಥ ! ಎಂದು ಸುಂದರೀ ಸಂಗ ?' ಎಂದು ಕೀಚಕನು ತನ್ನ ಮನ, ತನ್ನ ಇಂದ್ರಿಯಗಳು, ತನ್ನ ದೇಹವು ಕೂಡ ತನ್ನ ವಶವಾಗದೆ ತಪಿಸುತ್ತಿರಲು, ದೇಹ ಎಲ್ಲಿ, ಮನವಲ್ಲಿಯಾಗಿ ತಟಪಡಿಸುತ್ತಿದ್ದನು.

ಇಂತು ತಪಿಸುವ ಸಿಂಹಬಲನ ಹೃದಯ ಪದ್ಮವು ಅರಳಿ, ಸರಸ್ಸಿನ ಪದ್ಮಗಳು ಮುಕುಳಿತವಾಗುವಂತೆ ಸೂರ್ಯನು ಅಸ್ತಂಗತನಾದನು. ಪ್ರಕೃತಿವಿಕಲನಾದ ಸಿಂಹಬಲನ ಆಯುರ್ದಾಯವೂ ಅಸ್ತಂಗತವಾಯಿತು. ಅವನ ಮನೋರಥಗಳಂತೆ ತಾರೆಗಳು ಮೂಡಿ ಮಿನುಗಿದವು. ಅವನ ದುರ್ವಿಲಾಸದಂತೆ ತಮಸ್ಸು ಜಗವನ್ನಾವರಿಸಿ ದಿಕ್ಕೆಡಿಸಿತು.

ಸೂರಕಾಂತನು ಬಂದನೆಂದು ಪಶ್ಚಿಮಾಂಗನೆ ಸಿಂಧೂರ ಕುಂಕುಮರಾಗರಂಜಿತಳಾದಳು. ಚಕ್ರವಾಕ ಮಿಥುನಗಳು ವಿರಹದಿಂದ ಬೆಂದು ಗೋಳಿಟ್ಟವು. ಜಾರಚೋರ ಜನರ ಸಂಚಾರವು ಹೆಚ್ಚಾಯಿತು. ಕತ್ತಲುಕವಿದು ತಗ್ಗುದಿಣ್ಣೆಗಳು ಕಾಣದಾದವು. ಜನರು ಪ್ರಪಂಚವನ್ನು ಮರೆತು ನಿದ್ರಾವಶರಾದರು. ಜಗದಂತೆ ನಾಟ್ಯರಂಗವೂ ನಿಶ್ಶಬ್ದವಾಯಿತು. ಆಗ ಕೃಶೋದರಿಯಾದ ದ್ರೌಪದಿಯು ವೃಕೋದರನ ಬಳಿ ಸಾರಿದಳು. ಅವನಿಗೆ ನಿದ್ರೆಬಂದಿದ್ದಿಲ್ಲ. ಮದುವೆಗೆ ಕರೆಯಲು ಬಂದಳೆಂಬಂತೆ ಆನಂದದಿಂದ ಭೀಮಸೇನನು ಅವಳನ್ನು ತನ್ನೊಡನೆ ಕರೆದುಕೊಂಡು, ನರ್ತನಾಗಾರವನ್ನು ಸೇರಿದನು. ರೋಷಸಂರಂಭವನ್ನು ಉಟ್ಟ ಸೀರೆಯಲ್ಲಿಯು, ಬಾಹುಬಲವನ್ನು ತೊಟ್ಟ ಕುಪ್ಪುಸದಲ್ಲಿಯು, ಮರೆಮಾಚಿ, ತರುಣಿವೇಷ ಧರಿಸಿ ಬರುವ ಭೀಮನನ್ನು ನೋಡಿ, ದ್ರೌಪದಿಯು ಆಶ್ಚರ್ಯ ಸಂತೋಷಪರವಶಳಾದಳು.

ಕೀಚಕ ಹೃದಯದಂತೆ ನರ್ತನಾಗಾರವು ತಮೋದೂಷಿತವಾಗಿತ್ತು ; ಅವನ ಮನೋರಥಗಳಂತೆ ಅದು ದುರ್ನಿರೂಪವಾಗಿತ್ತು. ಕಾರಡವಿಯಂತೆ ನಿರ್ಮಾನುಷವು, ಲೋಭಿಧನದಂತೆ ನಿರುಪಯೋಗವು, ದುಷ್ಟ ಮಾಯಿಶಾಸ್ತ್ರದಂತೆ ಸುಜನದುರ್ಗಮವು,

ಕುಕವಿಕಾವ್ಯದಂತೆ ಅಸ್ಪಷ್ಟಾಲಂಕಾರವು, ಸ್ವಪ್ನಪದಾರ್ಥದಂತೆ ನೇತ್ರಾಗೋಚರವು, ಕಲಿರಾಜ್ಯದಂತೆ ಜಾರಚೋರ ಮನೋಹರವು, ಸ್ಮಶಾನಭವನದಂತೆ ವಿಕಟಭಯಂಕರವು ಆದ ನರ್ತನಶಾಲೆಯನ್ನು ಪ್ರವೇಶಿಸಿ, ಭೀಮನು, ದ್ರೌಪದಿಯನ್ನು ಕರದಿಂದ ಪಿಡಿದು ನಡೆಸುತ್ತಾ ತಡವಿನೋಡಿ ನಡೆದು, ತನ್ಮಧ್ಯಪ್ರದೇಶದಲ್ಲಿದ್ದ ಉತ್ತರೆಯ ಲೀಲಾ ಪರ್ಯಂಕವನ್ನು ಸಮೀಪಿಸಿ ಕೂತನು. ಮಾಲಿನಿಯು ಸ್ವಲ್ಪದೂರದಲ್ಲಿದ್ದ ನೇಪಥ್ಯ ಶಾಲೆಯ ಮುಂಬಾಗಿಲಿನಲ್ಲಿ ಅಡಗಿ ನಿಂತಳು. ಅವರೀರ್ವರು ಕೌತುಕಪರವಶರಾಗಿ, ಉಸಿರನ್ನೂ ಬಿಡದೆ, ಕೀಚಕಾಗಮನವನ್ನು ನಿರೀಕ್ಷಿಸುತ್ತಿದ್ದರು.

ಕೀಚಕನು ಸಮಯವನ್ನರಿತು, ಸಿಂಗರಿಸಿಕೊಂಡು, ವಿವಿಧ ಸುಮಚಂದನ ಭಕ್ಷ್ಯಂಗಳನ್ನು ತಾನೇ ಹೊತ್ತುಕೊಂಡು, ಮಾಲಿನೀ ಸಂಗ ಕಾತರನಾಗಿ ಬಂದನು. ಮಧುಪಾನಘೂರ್ಣಿತನೇತ್ರನಾದ ಸಿಂಹಬಲನ ಅಪವಿತ್ರ ಗಂಧವು ಮುಂದಾಗಿ ಬಂದು ಅವನ ಆಗಮನವನ್ನು ಸೂಚಿಸಿತು. ಭೀಮನು ತಲೆಯಮೇಲೆ ಮುಸುಗನ್ನು ಹೊದ್ದು, ಮುದುಡಿ ಕೂತನು. ಅವನ ಹೃದಯ ಗುಹೆಯಲ್ಲಿ ರೋಷಸಿಂಹವು ಅಡಗಿ, ಹಾರಲು ಹಾತೊರೆಯುತ್ತಿತ್ತು. ಸಿಂಹವಿದ್ದ ಗುಹೆಗೆ ಹೋಗುವ ಮದ್ದಾನೆಯಂತೆ ಕೀಚಕನು ನರ್ತನಾಗಾರವನ್ನು ಪ್ರವೇಶಿಸಿ, ವೇದಿಕೆಯನ್ನು ತಡವಿ ತಿಳಿದು, ಅದರಮೇಲೆ ತಾನು ತಂದ ದ್ರವ್ಯಗಳನ್ನಿಟ್ಟು, ಮಂಚವನ್ನು ಸಮೀಪಿಸಿದನು. ಅನಂದದಿಂದ ಮುಂದೆಬಂದ ಕೀಚಕನ ಕರವು, ಭೀಮಸ್ಪರ್ಶದಿಂದ ಪುಳಕಿತವಾಯಿತು. ಉಕ್ಕಿಬರುವ ಕೋಪವನ್ನು ಹತ್ತಿಕ್ಕಿ, ಸಮೀರಕುಮಾರನು ಕೀಚಕನ ದುರ್ವಿಲಾಸ ದುರ್ವಚನಗಳನ್ನು ನೋಡಿ, ಕೇಳುವ, ಕುತೂಹಲದಿಂದ ಸುಮ್ಮನಿದ್ದನು.

ಕೀಚಕನು ಸೈರಂಧ್ರಿಯೇ ಬಂದಿರುವಳೆಂದು ಭ್ರಮಿಸಿ, 'ಸುಂದರಿ! ಬಂದೆಯಾ, ತಂದಿರುವೆನು ನಿನಗಾಗಿ ಮನೋಹರ ವಸ್ತು ಭೂಷಣರಾಜಿಯನ್ನು ! ಸುಮಚಂದನ ತತಿಯೂ ನಿನಗಾಗಿ ಕಾದಿದೆ. ಭೋಜ್ಯಗಳೂ ಹೇರಳವಾಗಿವೆ. ತಡವೇಕೆ? ನನ್ನೊಡನೆ ರಮಿಸು! ನನ್ನಂತಹ ರತಿಚತುರನಿಲ್ಲವೆಂದು ಸುಂದರ ತರುಣಿಯರು ಬಂದು ನನ್ನ ಪಾದ ದಾಸಿಯರಾಗಲು ತವಕಿಸುವರು. ನನ್ನ ಲಾವಣ್ಯ, ನನ್ನ ರೂಪ, ನನ್ನ ವಿಲಾಸ, ನನ್ನ ವಿವೇಕ, ನನ್ನ ಮಧುರ ವಚನ ಚಾತುರ್ಯಗಳಿಗೆ ಮರುಳಾಗದ ಮಾನಿನಿಯರಿಲ್ಲ. ಅಂತಹ ಕೀಚಕನಿಂದು ನಿನ್ನ ಪಾದದಾಸನಾಗಿ ಬಂದು, ನಿನ್ನ ಪ್ರೇಮಭಿಕ್ಷೆಯನ್ನು ಬೇಡುತ್ತಿರುವನು. ಬಿಡಿಯಬೇಡ ! ಕೊಡು ವೀಳೆಯ ! ಸಾಕು ವಿಡಂಬನೆ ! ತೋರು ನಿನ್ನ ರೂಪ !' ಎಂದು ಬಡಬಡಿಸಿದನು.

ಅವನ ವಚನವಾತಾಹತಿಯಿಂದ ಉರಿದೆದ್ದ ಕೋಪವಹ್ನಿಯನ್ನು ಅಡಗಾರಿಸಿ, ಭೀಮನು ಮರ್ಮಭಾಷಗಳಿಂದ ಅವನಿಗಿಂತೆಂದನು—

'ಅಹುದು! ನಿನ್ನನ್ನು ನೀನೇ ಹೊಗಳಿಕೊಳ್ಳುವಂತಹ ದಿವ್ಯರೂಪನಿರುವೆ ನಿಜ! ಕೇಳಿಲ್ಲಿ! ನನ್ನಂತಹ ಸುಂದರಿಯನ್ನು ಮೂರ್ಲೋಕಗಳಲ್ಲಿ ಹುಡುಕಿಯೂ ನೀನು ಕಾಣಲಾರೆ! ತಿಳಿಯದೆ ಮಾತಾಡುತ್ತಿರುವೆ! ನನ್ನ ಮೈ ಮುಟ್ಟಿದೊಡನೆ ನಿನ್ನ ಮೈ ಎಂತಾಗು

ವುದೋ ಏನಾಗುವುದೋ! ಅಂತಹ ಪರಮಸುಖವನ್ನು ಕೊಡಲೆಂದೇ ಬಂದಿರುವೆನು. ಎಲ್ಲ ಅಬಲೆಯರಂತೆಯೇ ನನ್ನನ್ನು ಹೀನಾಯಿಸಬೇಡ! ಹಾಗೆಣಿಸಿ ತಪ್ಪುಮಾಡಿರುವೆ! ನಾನು ಸಾಮಾನ್ಯ ಸುಂದರಿಯಲ್ಲ. ನನ್ನನ್ನು ಕಲೆತು ಮತ್ತೆ ಬೇರೊಬ್ಬ ಮಡದಿಯ ಗೊಡವೆಗೆ ನೀನು ಹೋಗುವಂತಾದರೆ, ಇನ್ನು ನಾನು ಜನ್ಮತಾಳಿದುದರ ಫಲವೇನು? ಮದನಪೀಡಿತ ಮನೋವಿಕಾರಗಳನ್ನಡಗಿಸುವೆನು—ಬಾ!' ಎಂದು, ಭೀಮಸೇನನು ದಿಗ್ಗನೆ ಎದ್ದು, ಕೀಚಕನ ಕೈಸೆಳೆದು, ಕೆಳಗೆ ಕೆಡಹಿದನು. ದಿವ್ಯಬಾಹುಬಲ ಸಮುಜ್ಜೃಂಭಭಯಂಕರನಾದ ಭೀಮನ ಕರಾಘಾತವನ್ನರಿತು, ಕೀಚಕನು ಗಂಧರ್ವ ನೆಂದು ತಿಳಿದು, ತಾನೂ ಕೋಪಾಟೋಪದಿಂದ ಯುದ್ಧಸನ್ನದ್ಧನಾದನು.

ಭೀಮಸೇನನು 'ಕೀಚಕಾಧಮ ! ಸತ್ತ ಮಹಾಗಜವನ್ನು ಸೆಳೆದಾಡುವ ಸಿಂಹ ದಂತೆ, ನಿನ್ನನ್ನು ನೆಲದಲ್ಲಿ ಸೆಳೆದಾಡಿ, ಕಾಲಿಂದ ಒದ್ದು ಸಂಹರಿಸುವೆನು. ನಿನ್ನ ಭಗಿನಿ ಸುದೇಷ್ಣೆ ನಿನ್ನ ಶವವನ್ನು ನೋಡಿ ದುಃಖಿಸಲಿ! ಸೈರಂಧ್ರಿ ನಿರಾಬಾಧಳಾಗಿ ಸುಖದಿಂದಿ ರಲಿ! ಸೈರಂಧ್ರೀಪತಿಗಳಿಗೆ ಶಾಂತಿ ಸಿಗಲಿ!' ಎಂದು ಅಟ್ಟಹಾಸವನ್ನು ಮಾಡಿ ಕೀಚಕನ ಕೇಶರಾಶಿಯನ್ನು ಪಿಡಿದು ಸೆಳೆದನು. ಕೀಚಕನು ಮುಡಿದಿದ್ದ ಪುಷ್ಪಗಳು ಉದುರಿ ಬಿದ್ದವು. ಅವನು ಭೀಮನ ಹಿಡಿತದಿಂದ ಬಿಡಿಸಿಕೊಂಡು, ಅವನ ಕೈಗಳನ್ನು ಪಿಡಿದು ದೂಡಿದನು.

ಕ್ರುದ್ಧ ಸಿಂಹಗಳಂತೆ ಕಾದುವ ಕೀಚಕ-ಭೀಮಸೇನರ ಅಟ್ಟಹಾಸದ ಸಿಂಹನಾದ ಗಳು ನರ್ತನ ಶಾಲೆಯಲ್ಲಿ ಪ್ರತಿಧ್ವನಿಸಿದವು. ತನ್ನ ಪರಾಜಯದ ಪಗರಣವನ್ನು ಮುಚ್ಚಿಡಲೆಣಿಸಿದ ಕೀಚಕನೂ, ಅಜ್ಞಾತವಾಸ ಮರ್ಮವನ್ನು ತಿಳಿಯಗೊಳಿಸದ ಭೀಮನೂ, ಹೆಚ್ಚು ಶಬ್ದವಾಗದಂತೆ ಗೂಢ ಮರ್ಮಭೇದನ ಪ್ರಹಾರಗಳಿಂದ ಬಾಹಾಬಾಹವಿಯಾಗಿ ಹೋರಾಡಿದರು. ಕಾಲನ್ನು ಸೆಳೆದ ಕೀಚಕನ ನಡುವನ್ನು ಪಿಡಿದು ಭೀಮನು ಕೆಳಗೆ ಕೆಡಹಿದನು. ಕೀಚಕನು ಮೇಲೆದ್ದು ಮುಷ್ಟಿಘಾತಗಳಿಂದ ಭೀಮನ ವಕ್ಷಸ್ಥಲವನ್ನು ನೋಯಿಸಿದನು. ಬಕ ವೈರಿಯು ಅದನ್ನು ಲೆಕ್ಕಿಸದೆ, ಅವನ ಕುತ್ತುಕೆಯನ್ನು ಪಿಡಿದು ಬಾಗಿಸಿ ನೆಲಕ್ಕಪ್ಪಳಿಸಿದನು. ಸಮೀಪಿಸಿ ಹಿಡಿ ಯುತ್ತಾ, ದೂರಸರಿಯುತ್ತಾ, ಮುಷ್ಟಿಘಾತದ ಮಳೆ ಸುರಿಸುತ್ತಾ, ಕ್ರೂರ ಸರ್ಪ ಗಳಂತೆ ಬುಸುಗುಟ್ಟುತ್ತಾ, ಪರಸ್ಪರ ವಧಾಕಾಂಕ್ಷಿಗಳಾಗಿ ಅವರೀರ್ವರೂ ಬಹುಕಾಲ ಕಾದರು. ಕೀಚಕನ ಬಲವು ಕುಗ್ಗುತ್ತಾ ಬಂದಂತೆ, ಭೀಮಸೇನನ ಪರಾಕ್ರಮವು ವಿಜೃಂಭಿಸಿತು.

ಗಂಧರ್ವನಿಂದ ತನಗೆ ಸಾವು ನಿಶ್ಚಯವೆಂದರಿತನು; ಆದರೆ ಆ ದುರಭಿಮಾನಿಯ ದರ್ಪಾಹಂಕಾರಗಳು ಪಲಾಯನ ಪರಸಹಾಯಗಳನ್ನು ಬಯಸಲಿಲ್ಲ. ವಾಲಿ ಸುಗ್ರೀವ ರಂತೆ ಮರಣಾಂತಿಕ ಸಮರದಲ್ಲಿ ತೊಡಗಿ, ಸಿಂಹದ್ವಯದಂತೆ ಘೂರ್ಣಿಸುತ್ತಾ ಎರಡು ಗೂಳಿಗಳಂತೆ ತಿವಿಯುತ್ತಾ, ಹೋರಾಡುವ ಕೀಚಕ-ಭೀಮರನ್ನು ದೂರದಿಂದ ನೋಡುವ ಪಾಂಚಾಲಿಯು ಭಯಾಕ್ರಾಂತಳಾಗಿ, ಭೀಮ ವಿಜಯವನ್ನು ಕೋರಿ,

ಶ್ರೀಕೃಷ್ಣನಿಗೆ ಶರಣಾಗಿ, ಕೈಮುಗಿದಳು. ಕಾದುವ ಮದಗಜಗಳಿಂದ ಸುರಿಯುವ ದಾನ ಧಾರೆಯಂತೆ ಆ ವೀರರ ಸ್ವೇದಜಲವು ಹರಿಯಿತು. ಭೀಮಸೇನನು ಕೀಚಕನನ್ನು ಇನ್ನು ಉಪೇಕ್ಷಿಸಬಾರದೆಂದು ನಿಶ್ಚಯಿಸಿ, ಮಾತಂಗಮಸ್ತಕಕ್ಕೆ ಹಾರುವ ಮೃಗರಾಜನಂತೆ ವಿಕ್ರಮಿಸಿ, ಅವನನ್ನು ಶಿರದಿ ಹಿಡಿದು ಕೆಳಗೆ ಕೆಡಹಿದನು. ಮೇಲೆರಗುವ ಯಮರಾಜ ನಂತೆ ಹಿಡಿದ ಭೀಮನ ಕೈಲಿ ಸಿಕ್ಕು, ಕೀಚಕನು ಬೆಕ್ಕಿನ ಕೈಲಿ ಸಿಕ್ಕ ಇಲಿಯಂತಾದನು. ಭೀಮನ ವಜ್ರಮುಷ್ಟಿ ಪ್ರಹಾರಗಳು ಕೀಚಕನ ಪರ್ವತಕಾಯವನ್ನು ಪುಡಿಮಾಡಿದವು. ವಿಜಯಶೀಲನಾದ ಭೀಮಸೇನನು, ಶಾರ್ದೂಲವು ಮಹಾಮೃಗದ ಮೇಲೆರಗುವಂತೆ, ಕೀಚಕನ ಎದೆಮೇಲೆ ಕೂತು ಕೀಚಕನನ್ನು ಹೆಡೆಮುಡಿ ಕಟ್ಟಿ, ಅವನನ್ನೆತ್ತಿ, ಗಿರಗಿರನೆ ತಿರುಗಿಸಿ, ನೆಲಕ್ಕಪ್ಪಳಿಸಿದನು. ಭೇರಿಯನ್ನು ಒಡೆದಂತೆ ಮಹಾಭಯಂಕರವಾದ ಶಬ್ದ ದೊಡನೆ, ಚೀರಿಕೊಂಡು, ರಕ್ತಕಾರಿ, ಕೀಚಕನು ಬಿದ್ದನು. 'ನೀಚ ಕೀಚಕ! ಇಂದು ನಿನ್ನಂತಹ ಪರದಾರಾಭಿಲಾಷಿಯನ್ನು ಕೊಂದು, ನಾನು ಅನೃಣಿಯಾಗಿರುವೆನು. ಸೈರಂಧ್ರಿಕಂಟಕನಾದ ನಿನ್ನ ಸಂಹಾರದಿಂದ ನನಗಿಂದು ಶಾಂತಿ ದೊರಕಿತು. ದ್ರೌಪದೀ ಮಾನಸಂರಕ್ಷಕನಾದ ಭೀಮನಿಂದ ನೀನು ಹತನಾಗಿರುವೆ! ಕಾದಿದೆ ನಿನಗೆ ಘೋರ ನರಕ! ಸಾಯಿ!' ಎಂದು ಭೀಮನು ಅವನನ್ನು ಕಾಲಿಂದೊದೆದನು. ಮೂಲ್ಗಿ ಮೃತ ನಾದ ಕೀಚಕನಬೆನ್ನನ್ನು ಬಾಗಿಸಿ, ಕೈಗಳಿಂದ ಅವನ ಕೈಕಾಲುಗಳನ್ನೂ ತಲೆಯನ್ನೂ ಹೊಟ್ಟೆಯಲ್ಲಿ ಹಿಸುಕಿ ನೂಕಿ, ಅವನ ಕಾಯವನ್ನು ಗೋಳಾಕಾರವಾಗಿಸಿ, ನೆಲದಲ್ಲಿ ಬಿಸಾಟಿದನು.

ಕೀಚಕನ ವಸ್ತ್ರಾಭರಣಗಳು ಅಸ್ತವ್ಯಸ್ತವಾದವು. ಅವನ ಮುಖಾದಿದೇಹ ವಿವರ ಗಳಿಂದ ರಕ್ತವು ಚಿಮ್ಮಿಹರಿಯಿತು. ಮಾಂಸಪಿಂಡದಂತೆ ಬಿದ್ದಿದ್ದ ಅವನ ದೇಹವು ಬೀಭತ್ಸವಾಗಿತ್ತು. ಭೀಮಸೇನನಾಗ ಭಯಕಂಪಿತ ಗಾತ್ರಿಯಾಗಿ ನಿಂತಿದ್ದ ಕಮಲ ನೇತ್ರಿಯನ್ನು ಸಮೀಪಿಸಿ, ಅವಳಿಗೆ ಅಭಯವನ್ನಿತ್ತು, ಕೈಹಿಡಿದು, ಮೆಲ್ಲನೆ ಕರೆತಂದು ನಿಗೂಢವಾಗಿ ತಂದಿಟ್ಟಿದ್ದ ಉರಿಯುವ ಕೊಳ್ಳಿಯ ಬೆಳಕಿನಲ್ಲಿ ಅವಳಿಗೆ ಪಾಪಿ ಕೀಚಕನ ಶವವನ್ನು ತೋರಿಸಿ, ಇಂತೆಂದನು—'ಪಾಂಚಾಲಿ! ನೋಡು, ದುಷ್ಟಕಾಮುಕನಾದ ಕೀಚಕನಿಗಾದ ಪಾಡನ್ನು! ಹಗೆ ತೀರಿತೇ? ಚಿಂತೆ ಸವೆಯಿತೇ? ನಿನ್ನ ರೋಷವು ಶಾಂತವಾಯಿತೇ? ನಿನ್ನನ್ನು ಕೆಣಕುವ ದುರಾತ್ಮರಿಗಾಗುವ ಗತಿಯನ್ನು ಲೋಕವು ನೋಡಿ ತಿಳಿಯಲಿ!'

ಪಾಂಚಾಲಿಯು ಕೀಚಕನ ವಿಕೃತಶವವನ್ನು ನೋಡಿ ಬೆಚ್ಚಿಬಿದ್ದಳು. ಮೂಗಿನ ಮೇಲೆ ಬೆರಳಿಟ್ಟು ಆಶ್ಚರ್ಯಸಂಭ್ರಮಗಳು ತುಳುಕಿ ಬರುತ್ತಿರಲು, ತಲೆಯಾಡಿಸಿ, ಮನದಿ ಭೀಮಸೇನನನ್ನು ಮೆಚ್ಚಿದಳು. ಪಾಂಚಾಲಿಯು ಸಬಹುಮಾನ ವಿಲೋಲ ಲೋಚನಗಳಿಂದ ಕೀಚಕಾರಿಯನ್ನು ನೋಡಿ, ಮನಸ್ಸರದಿ ತುಂಬಿದ ಸಮ್ಮೋದ ರಸವು ಆನಂದಬಾಷ್ಪಗಳಾಗಿ ಹರಿಯುತ್ತಿರಲು, ದರಹಸಿತ ಸುಂದರವದನಾರವಿಂದೆ ಯಾಗಿ ಇಂತೆಂದಳು—

'ಭೀಮಸೇನ! ನಿನ್ನಂತಹ ಉತ್ತಮ ನಾಯಕರಿನ್ನಿಲ್ಲ. ಸಭೆಯಲ್ಲಿ ಅವಮಾನಿತಳಾದ ನನ್ನ ದುರವಸ್ಥೆಗೆ ಕುಪಿತನಾಗಿ, ಮತ್ತೆ ಧೈರ್ಯದಿಂದ ತಡೆದು, ಸಮಯಭಂಗವಾಗದಂತೆ, ಶಾಂತನಾದೆ. ಇಂದೀಗ ಪ್ರಜರು ತಿಳಿಯದಂತೆ ನಿಶೀಥದಲ್ಲಿ, ರಹಸ್ಯವಾಗಿ ದುಷ್ಟ ಕೀಚಕನನ್ನು ಸಂಹರಿಸಿದೆ! ನಮ್ಮವರನ್ನಾರನ್ನೂ ಸಹಾಯವಾಗಿ ಕರೆದೆ, ಒಬ್ಬಂಟಿಗನಾಗಿ ಸಿಂಹಬಲವನ್ನು ವಿಜೃಂಭಿಸಿ ಯಮಸದನಕ್ಕೆ ಅಟ್ಟಿದೆ! ಉರಿಯುವ ಅರಗಿನ ಮನೆಯಿಂದ ಪಾರುಗಾಣಿಸಿ, ಹಿಡಿಂಬ ಬಕ ಕಿಮ್ಮೀರ ಜಟಾಸುರರನ್ನು ಮರ್ದಿಸಿ, ದುಷ್ಟ ದುಶ್ಶಾಸನ ದುರ್ಯೋಧನರನ್ನು ಸಮರದಲ್ಲಿ ಕೊಲ್ಲಲು ಪ್ರತಿಜ್ಞೆಗೈದು, ಜಯದ್ರಥನನ್ನು ಪರಾಭವಿಸಿ, ಕಾಪಾಡಿದ ನಿನಗೆಣೆಯಾಗುವ ವೀರರಿನ್ನಿಲ್ಲ; ಇಂದು ಕೀಚಕನನ್ನು ಮಟ್ಟಿಕ್ಕಿ ಮೆರೆವ ನಿನ್ನ ಸಾಹಸ ವಿಕ್ರಮ ವೀರ್ಯ ಗಾಂಭೀರ್ಯಾದಿಗುಣಗಳನ್ನು ಕಂಡು ವಿಸ್ಮಯಾನಂದಸಾಗರ ಮಗ್ನಳಾಗಿರುವೆನು.' ಹೀಗೆ ಅಭಿನಂದಿಸಿದ ದ್ರೌಪದಿಯನ್ನು 'ಇನ್ನಿಲ್ಲಿ ತಡೆಯಲಾಗದು! ಬೆಳಗಾಗುತ್ತಲಿದೆ. ಮನೆಗೆ ನಡೆ! ಹೆದರಬೇಡ!' ಎಂದು ಸಂತೈಸಿ, ಭೀಮಸೇನನು ಮಹಾನಸವನ್ನು ಪ್ರವೇಶಿಸಿದನು.

## ಉಪಕೀಚಕ ವಧೆ

ಜನಮೇಜಯ ಕೇಳು! ಇಂತು ಪವಮಾನನಂದನನು ಮಹಾನಸವನ್ನು ಸಮೀಪಿಸಿ, ಹತ್ತಿರ ಹರಿಯುವ ಹೊಳೆಯಲ್ಲಿ ಮಿಂದು, ರಕ್ತಗಂಧವನ್ನು ಅಡಗಿಸಿ, ಕೃತಕೃತ್ಯನಾಗಿ, ಶಯ್ಯಾತಲದಲ್ಲಿ ಸುಖಸುಪ್ತನಾದನು. ಅಲ್ಲಿ ನರ್ತನಶಾಲೆಯಲ್ಲಿಂದ ದ್ರೌಪದಿಯು ಹೊರಬಂದು, ಕಾವಲುಗಾರರನ್ನು ಕಂಡಳು. ಅವರೂ ಅವಳನ್ನು ನೋಡಿ ಆಶ್ಚರ್ಯಸಂಭ್ರಮಾನ್ವಿತರಾಗಿರಲು ಮಾಲಿನಿಯು 'ನನ್ನ ಪತಿಯಾಗಿರುವ ಗಂಧರ್ವನ ಕೈಸಿಕ್ಕು ನಿಮ್ಮ ಕೀಚಕನು ಮೃತನಾಗಿರುವನು! ದುರಾತ್ಮನ ದುರ್ವ್ಯಾಪಾರದಿಂದಾಗಿರುವ ದುಷ್ಫಲವನ್ನು ನೋಡಿ!' ಎಂದು ನುಡಿದಳು.

ಕಾವಲುಗಾರರು ಸಂಭ್ರಮಾನ್ವಿತರಾಗಿ, ಕೂಗಾಡುತ್ತಾ, ಉರಿಯುವ ಕೊಳ್ಳಿಗಳನ್ನು ಹಿಡಿದು ನರ್ತನಶಾಲೆಯನ್ನು ಪ್ರವೇಶಿಸಿದರು. ಅವರ ಗದ್ದಲವನ್ನು ಕೇಳಿ, ಉಪಕೀಚಕರು ನೂರೈದು ಜನರು ಓಡಿಬಂದರು. ಕೀಚಕನ ವಿಕಾರ ಕಾಯವನ್ನು ನೋಡಿ, ಭಯಭ್ರಾಂತರಾಗಿ ಅವರು 'ಹಾ!' ಎಂದು ರೋದಿಸಿದರು; ಕೆಲವರು ಮೂರ್ಛಿತರಾದರು. ಕೆಲವರು ಆಶ್ಚರ್ಯಭಯಮಗ್ನರಾಗಿ ಕದಲದೆ ನಿಂತರು. ಕೆಲವರು ಅಣ್ಣನ ಮೇಲೆ ಬಿದ್ದು ಅತ್ತರು. ಆಗ ಇತರ ಬಂಧುಜನಗಳೂ ಬಂದರು. ಕೀಚಕನ ವಿಕೃತ ಶರೀರವನ್ನು ಕಂಡು ಅವರು 'ಆಹಾ! ಎಂದಾದರೆಲ್ಲಿಯಾದರೂ ಇಂತಹ ಸಾವನ್ನು ಕಂಡಿರೇ? ಇಷ್ಟು ದುರ್ಮದನಾಗಿ ನಡೆದರೆ ಕೇಡಾಗದಿರುವುದೇ? ಅಕಟ! ಇವನ ಕೈಗಳೆಲ್ಲಿ? ಕಾಲುಗಳೆಲ್ಲಿ? ತಲೆಯೇ ಕಾಣುವುದಿಲ್ಲವಲ್ಲ! ಇದೇನು ಗಂಧರ್ವರು ಮಾಡುವ ಶಿಕ್ಷಾವಿಧಾನವೋ ಏನು? ಮಾಂಸಪಿಂಡವಾಗಿ ಕಾಣುವಂತೆ

ಭಯಂಕರ ಮಾರಣ ಹೋಮವನ್ನು ಮಾಡಿದವರು ಸಾಮಾನ್ಯರಲ್ಲ' ಎಂದು ಗೋಳಾಡಿದರು.

ಉಪಕೀಚಕನೋರ್ವನು ತನ್ನಿತರ ಸೋದರರನ್ನು ಕಂಡು ಶೋಕ ರೋಷಪರೀತ ಮನಸ್ಕನಾಗಿ ಉತ್ತರಕಾರ್ಯವನ್ನು ಮಾಡಲು ತ್ವರೆಪಡಿಸಿದನು. ಅಂತೆಯೇ ನಿಶ್ಚಯಿಸಿ ಸೂತಸುತರು, ಶವಬಂಧನಾದಿ ಕಾರ್ಯದಲ್ಲಿ ತೊಡಗಿದರು. ಅವರ ವ್ಯಸನ ವಿಧಾನವನ್ನು ನೋಡಲೆಣಿಸಿ, ಸ್ವಲ್ಪ ದೂರದಲ್ಲಿ ನಿಂತಿದ್ದ ಮಾಲಿನಿಯು ಅವರಿಗೆ ಕಾಣಿಸಿದಳು. ಅವಳನ್ನು ನೋಡಿ ಅವರ ಕೋಪವಹ್ನಿಯು ಉರಿದೆದ್ದಿತು. 'ಇವಳಲ್ಲವೇ ನಮ್ಮ ಅಣ್ಣನ ದುರ್ಮರಣಕಾರಣಳು? ಇವಳನ್ನು ಕೊಲ್ಲುವುದುಚಿತ' ವೆಂದು ಕೆಲ ಉಪಕೀಚಕರು ನುಡಿದರು. ಮತ್ತೆ ಕೆಲವರು 'ಇವಳ ಸಂಗಕ್ಕಾಗಿ ಹಾತೊರೆದು ಸಿಂಪಬಲನು ಮಾಯೋಪಾಯ ಕುಶಲರಾದ ಗಂಧರ್ವರಿಂದ ಕೊಲ್ಲಲ್ಪಟ್ಟನು. ಪರಲೋಕದಲ್ಲಾದರೂ ಇವಳ ಸಂಗವು ನಮ್ಮಣ್ಣನಿಗಾಗುವಂತೆ, ಇವಳನ್ನು ಅವನ ಶವದ ಜೊತೆಗೆ ಕಟ್ಟಿ, ಜೀವಂತವಾಗಿ ಸುಟ್ಟುಬಿಡುವುದುಚಿತವು. ಆಗ ನಮ್ಮಣ್ಣನ ಮನಸ್ಸಿಗೆ ತೃಪ್ತಿಯಾಗುವುದಲ್ಲದೆ, ದುಷ್ಟಬುದ್ಧಿಯಾದ ಇವಳ ಸಾವಿನಿಂದ ನಮ್ಮ ಸೇಡೂ ತೀರುವುದು. ವಿರಾಟನಿಗೆ ತಿಳಿಸಿ, ಈ ಕಾರ್ಯವನ್ನು ಮಾಡೋಣ!' ಎಂದು ನುಡಿದರು.

ಕೆಲವರು ಉಪಕೀಚಕರು ವಿರಾಟನನ್ನು ಕಂಡು ತಮ್ಮ ನಿಶ್ಚಯವನ್ನವನಿಗೆ ತಿಳಿಸಿದರು. ಕೀಚಕನ ದುರ್ಮರಣವನ್ನು ಚಾರರಿಂದ ಕೇಳಿ, ಸಂಭ್ರಾಂತಚಿತ್ತನಾದ ವಿರಾಟನು ಅವರ ಕೋಪಾಟೋಪವನ್ನು ಉಪಲಕ್ಷಿಸಿ, ತನ್ನ ಮನದಿ 'ಇವರು ದುರ್ಮಾರ್ಗರು. ತಾವು ಮಾಡುವ ದುಷ್ಕೃತಿಯನ್ನು ನಿವಾರಿಸಿದರೂ ಬಿಡರು. ದೈವೇಚ್ಛೆಯಂತಾಗಲಿ! ಕೀಚಕನಿಗಾದ ಶಿಕ್ಷೆ ಇವರಿಗೂ ಕಾದಿದೆಯೋ ಏನೋ!' ಎಂದು ಚಿಂತಿಸಿ, 'ಸರಿ! ನಿಮ್ಮಿಷ್ಟ'ವೆಂದು ಸುಮ್ಮನಾದನು. ವಿರಾಟನು ಸಮ್ಮತಿ ಇತ್ತನೆಂದು ತಿಳಿದು ಉಪಕೀಚಕರು ಕೇಕೆಗಳನ್ನು ಹಾಕುತ್ತಾ, ಓಡಿಬಂದರು. ಅಂಗಜರಾಗಮತ್ತನಾಗಿ ಸತ್ತ ತಮ್ಮಣ್ಣನೊಡನೆ ಆ ಮತ್ತಕಾಶಿನಿಯನ್ನು ಕಟ್ಟಿ ಸುಡಲು ನಿಶ್ಚಯಿಸಿ ಅವರು ಮಾಲಿನಿಯನ್ನು ಪಿಡಿದು, ದೀನಳಾಗಿ ಅಳುವ ಅವಳನ್ನು ಸೆಳೆತಂದು, ಕೀಚಕ ಶವ ಸಮೀಪದಲ್ಲಿ ಕಟ್ಟಿ, ದಯಾರಹಿತರಾಗಿ, ಅವರೀರ್ವರನ್ನು ಹೊತ್ತು ಅಳುತ್ತಾ ಸ್ಮಶಾನ ಭೂಮಿಯನ್ನು ಸೇರಪೋದರು. ಅಶುಚಿಯು, ದುಷ್ಟನು, ನೀಚನು ಆದ ಕೀಚಕನ ಶವದೊಡನೆ, ನಿತ್ಯಶುಚಿಯು, ಪರಮ ಪತಿವ್ರತೆಯು, ಉದಾತ್ತ ಚರಿತೆಯು ಆದ ಮಾನಿನೀಮಣಿಯನ್ನು ಕಟ್ಟಿ, ಪೊತ್ತುಕೊಂಡು, ಬಂಧು ಜನರು ಪ್ರಲಪಿಸುತ್ತಾ ಹಿಂಬಾಲಿಸಲು, ಉಪಕೀಚಕರು ಕರದೀಪಗಳನ್ನು ಪಿಡಿದು ಮಸಣದ ಕಡೆ ನಡೆಯುತ್ತಿದ್ದರು.

ದ್ರೌಪದಿಯು ಭಯಭ್ರಾಂತಮತಿಯಾಗಿ, ಮೇಲಿಂದ ಮೇಲಾಗಿ ಒದಗುವ

ವಿಪತ್ಪರಂಪರೆಯನ್ನು ನೆನೆದು, ಕಣ್ಣೀರು ಕೋಡಿಯಾಗಿ ಹರಿಯಲು ಆಕ್ರಂದಿಸಿ ಇಂತು ನುಡಿದಳು—

'ಅನಾಥಳಂತೆ ಆಪತ್ತಿಗೊಳಗಾದೆನು. ನಿಮ್ಮಂತಹ ವೀರಪತಿಗಳೈವರಿರಲು ನನ್ನನ್ನು ಸೂತಸುತರಿಂತು ಪರಿಭವಿಸಲಹುದೇ? ಅಜಾತಶತ್ರುವಾದ ಓ ಜಯ! ಮಹಾಬಲನಾದ ಓ ಜಯಂತ! ವೈರಿ ಪರ್ವತ ಭೇದನ ವಜ್ರಪಾಣಿ ಓ ವಿಜಯ! ತೇಜೋರೂಪವಿಜಿತ ಮದನ ಓ ಜಯತ್ಸೇನ! ದುರ್ನೀತಿ ಪರಾಯಣ ಜನಭಂಜನ ಓ ಜಯದ್ಬಲ! ಹಿಡಿದ ಕೆಲಸವನ್ನು ಬಿಡದೆ ಕಡೆಗಾಣಿಸುವ ಮಹಾಪ್ರಭುವರರೇ! ಕಾದಾಡುವ ಕಾಲಯಮನ ಕೋರೆಗಳನ್ನು ಕೀಳುವ ವೀರವರರೇ! ಶರಣಾಗತ ಜನರಕ್ಷಣ ದೀಕ್ಷಾದಕ್ಷರಾದ ಉದಾರಚರಿತರೇ! ಬೇಡುವ ಯಾಚಕರಿಗೆ ಪ್ರಾಣಗಳನ್ನಾದರೂ ನೀಡುವ ಸಜ್ಜನ ಶಿಖಾಮಣಿಗಳೇ! ಎನ್ನ ನಾಥರೇ! ಗಂಧರ್ವ ನಾಥರೇ! ಹಾಳು ಉಪಕೀಚಕರೆನ್ನನ್ನು ತಮ್ಮಣ್ಣನ ಶವಕ್ಕೆ ಕಟ್ಟಿ, ಕರೆದೊಯ್ಯುತ್ತಿರುವರು. ಬೇಗ ಬನ್ನಿ! ನನ್ನನ್ನು ಕಾಪಾಡಿ!'

ಇಂತು ರೋದಿಸುವ ಮಾಲಿನಿಯ ಆರ್ತನಾದವನ್ನು, ಮಹಾನಸಶಾಲೆಯಲ್ಲಿದ್ದ ಪವಮಾನನಂದನನು ಕೇಳಿದನು. 'ಮತ್ತೆ ಮದ್ವಲ್ಲಭೆಗೆ ಮದಮತ್ತರಾದ ಉಪ-ಕೀಚಕರಿಂದ ಪೀಡೆಯೇ?' ಎಂದು, ಭೀಮಸೇನನು ಪ್ರಳಯರುದ್ರನಂತೆ ರೋಷ ಭಯಂಕರನಾದನು. ತಡಮಾಡದೆ ಅಡುಗೆಮನೆಯ ದಿಡ್ಡಿಯ ಬಾಗಿಲಿನಿಂದ ರಹಸ್ಯ ಪ್ರಕಾರವಾಗಿ ಹೊರಬಂದು, ಅಲ್ಲಿದ್ದ ಒಂದು ಮಹೋನ್ನತ ವೃಕ್ಷವನ್ನೇರಿ, ಸುತ್ತು ನೋಡಿದನು. ಉಪಕೀಚಕರು ಹೋಗುತ್ತಿದ್ದ ಪ್ರದೇಶವನ್ನು ಗುರ್ತಿಸಿ, ಭೀಮನು ಕೆಳಗಿಳಿದು, ಸರಸರನೆ ನಡೆದು ಪ್ರೇತಾವಾಸವನ್ನು ಸಮೀಪಿಸಿದನು. ಉಗ್ರರುದ್ರನಾಗಿ, ಅಲ್ಲಿ ಒಣಗಿ ನಿಂತಿದ್ದ ಒಂದು ಮಹಾಸಾಲವೃಕ್ಷವನ್ನು ಬುಡಪಿಡಿದಲ್ಲಾಡಿಸಿ, ಕಿತ್ತಿ, ಭುಜದಿ ಹೊತ್ತು, ಉಪಕೀಚಕರನ್ನು ಸಮೀಪಿಸಿದನು.

ಭೀಮಸೇನನ ಭಯಂಕರಾಕಾರವನ್ನು ನೋಡಿ ಉಪಕೀಚಕರು ಭಯಭ್ರಾಂತರಾದರು. ಅವನ ಗಂಟಿಕ್ಕಿದ ಹುಬ್ಬು, ಬೆವರಿದ ಫಾಲ, ಕದಲುವ ತುಟಿ, ಬೆಳೆದ ಮೈ, ಉಕ್ಕಿಬರುವ ಕೋಪಾಟೋಪ, ಕೈಲಿ ಪಿಡಿದಿದ್ದ ಹತ್ತು ಬಾರುದ್ದದ ಗಿಡ, ಹಾಕಿದ್ದ ಗಂಧರ್ವ ಸದೃಶ ವೇಷಗಳನ್ನು ನೋಡಿ ನೂರೈದು ಜನ ಉಪಕೀಚಕರು 'ಬಂದ ಗಂಧರ್ವ! ಇನ್ನು ಉಳಿಗಾಲವಿಲ್ಲೆಮಗೆ. ಬಿಡಿ ಮಾಲಿನಿಯನ್ನು! ಓಡಿ ನಗರದ ಕಡೆಗೆ!' ಎಂದು ಒದರುತ್ತಾ, ಮಾಲಿನಿಯನ್ನು ಬಿಚ್ಚಿ, ಅಣ್ಣನ ಶವವನ್ನು ನೆಲದಲ್ಲೊಗೆದು ಊರಿನ ಕಡೆ ಓಡತೊಡಗಿದರು. ಭೀಮನು ರಹಸ್ಯಭೇದನವಾಗುವುದೆಂದು ಹೆದರಿ, ಓಡುತ್ತಿದ್ದ ಉಪಕೀಚಕರನ್ನೆಲ್ಲ ಗಿಡದಿಂದ ಬಡಿದು ಕೆಡಹಿ, ಸಂಹರಿಸಿದನು. ಗಿಡಗಳ ಮರೆಯಲ್ಲಿ ಅಡಗಿ ನಿಂತ ಉಪಕೀಚಕರನ್ನು ಗಿಡದ ಮೇಲೇರಿ ಬಚ್ಚಿಟ್ಟುಕೊಂಡಿದ್ದ ಸೂತಸುತರನ್ನು, ನೀರಲ್ಲಡಗಿ ಮುಣುಗಿದ್ದ ಸುದೇಷ್ಣಾ ಸೋದರರನ್ನು ಹುಡುಕಿ ಹುಡುಕಿ ಎಲ್ಲ ಉಪಕೀಚಕರನ್ನೂ ಕೊಂದು, ಭೀಮನು ದ್ರೌಪದಿ

ಯನ್ನು ಸಮೀಪಿಸಿದನು. ಅವಳ ಕಣ್ಣೀರೊರೆಸಿ, ಸಂತೈಸುತ್ತ 'ಸಾಧ್ವಿ! ನಿರಪ ರಾಧಿನಿಯಾದ ನಿನ್ನನ್ನು ಪೀಡಿಸುವ ತುಡುಗರಿಗೆಲ್ಲ ಇದೇ ಶಿಕ್ಷೆಯಾಗುವುದು. ನಿರ್ಭಯಳಾಗಿರು! ನಡೆ ಸುದೇಷ್ಣೆಯ ಮನೆಗೆ!' ಎಂದು ಭೀಮಸೇನನು ಅವಳನ್ನು ಕಳಿಸಿ, ತಾನು ಇನ್ನೊಂದು ಮಾರ್ಗದಿಂದ ಹೋಗಿ, ಗುಪ್ತವಾಗಿ ಮಹಾನಸವನ್ನು ಪ್ರವೇಶಿಸಿ, ಏನೂ ಅರಿಯದವನಂತೆ ಇದ್ದನು. ಮಾಲಿನಿಯು ಮೆಲ್ಲನೆ ನಡೆದು ಮಹಾರಾಣೀ ಮಂದಿರವನ್ನು ಕುರಿತು ಹೊರಟಳು.

ಬೆಳಗಾಗಲು, ಕೀಚಕಾನುಜರೆಲ್ಲ ಹತರಾಗಿ ಬಿದ್ದುದನ್ನು ಪುರದ ನರನಾರಿಯರು ಕಂಡರು. ಮಾಲಿನಿಯು ಸಚೇಲ ಸ್ನಾನವನ್ನು ಮಾಡಿ, ಸಿಂಹಬಲಪ್ರಮುಖ ಕೀಚಕರ ವಿನಾಶದಿಂದ ಆನಂದಪಟ್ಟು, ಮಂದಗಮನದಿಂದ ರಾಜಮಾರ್ಗದಲ್ಲಿ ನಡೆದುಬರು ತ್ತಿರುವುದನ್ನು ನಗರವಾಸಿಗಳು ನೋಡಿ, ಹುಲಿಯನ್ನು ಕಂಡ ಹುಲ್ಲೆಗಳಂತೆ ದಿಕ್ಕಾ ಪಾಲಾಗಿ ಓಡಿಹೋದರು. ನಮ್ಮ ಕೀಚಕರಿಗೆ ಮಾರಿಯಾದವಳಿವಳೇ ಎಂದು ಬೆರಳಿಟ್ಟು ತೋರುತ್ತಾ, ತೋರುವ ಬೆರಳನ್ನು ಮೂಗಿನಲ್ಲಿಟ್ಟು ನೋಡುತ್ತಾ, ನೋಡುವವರಿಗೆ ಕೇಡನ್ನು ಸೂಚಿಸುತ್ತಾ, ರಾಕ್ಷಸಿಯನ್ನು ಕಂಡಂತೆ, ಅಂಜಿ ಓಡುತ್ತಾ ಭಯಭೀತರಾದ ಪುರಜನರನ್ನು ಉಪಲಕ್ಷಿಸಿ, ಆ ಉತ್ಪಲಾಕ್ಷಿಯು ತನ್ನ ಮನದಲ್ಲೇ ನಕ್ಕಳು. ಮಹಾನಸದ ಮಹಾದ್ವಾರದಲ್ಲಿ ನಿಂತಿದ್ದ ಭೀಮಸೇನನನ್ನು ನೋಡಿ, ಮಾಲಿನಿಯ ಮನವು ಸಮ್ಮೋದ ಬಹುಮಾನಭರಿತವಾಯಿತು.

ತನ್ನೊಳಗೆ ತಾನು ಮಾತಾಡಿಕೊಳ್ಳುವ ತೆರದಿ, ವಲಲನ ಕಡೆ ನೋಡದೆ ಅವನಿಗೆ ಕೇಳಿಸುವಂತೆ ಪಾಂಚಾಲಿಯು 'ಕೀಚಕರ ನೀಚಕೃತ್ಯವನ್ನಡಗಿಸಿ, ನನ್ನನ್ನು ರಕ್ಷಿಸಿದ ಪರಮ ಧರ್ಮಜ್ಞನಾದ ಗಂಧರ್ವಪತಿಗೆ ಸದಾ ಕೃತಜ್ಞಳಾಗಿರುವೆನು' ಎಂದು ನುಡಿದು ಕೈಯೆತ್ತಿ ಮುಗಿದಳು. ಅವಳ ಅಭಿಪ್ರಾಯವನ್ನರಿತು ವಲಲನು, ಇತರ ಜನರಿಗೆ ತಿಳಿಯಲಾಗದಂತೆ ನಿಗೂಢ ಚತುರ ವಚನಗಳಿಂದ 'ಮಾಲಿನಿ! ನಿನ್ನಂತಹ ಸಾಧ್ವಿಯು ನೀಚರ ಕೈಲಿ ಸಿಕ್ಕು ನರಳುವಾಗ ನಿನ್ನನ್ನು ಸಂರಕ್ಷಿಸದವನು ಪತಿಯೇ? ಅದು ಲೋಕಧರ್ಮವೇ? ಒಳ್ಳೆಯದಾಯಿತು. ನಿನ್ನ ಗಂಧರ್ವ ಪತಿಗಳಿಂತು ಕಾಪಾಡಿದರೆಂದರೆ ಅವರ ಕರ್ತವ್ಯವನ್ನವರಾಚರಿಸಿದಂತಾಯಿತು. ಸ್ವಾಭಾವಿಕ ವಾಗಿ ನಿನ್ನ ಸಾಧುವರ್ತನಕ್ಕೆ ಒಲಿದು, ದುಷ್ಟಶಿಕ್ಷಾಪರಾಯಣನಾದ ಪತಿಯನ್ನು ಪ್ರಶಂಸಿಸುವ ಪ್ರಮೇಯವಿಲ್ಲ' ಎಂದನು. ಇಂತು ಸರಸಸಲ್ಲಾಪಗಳಿಂದ ಅವಳನ್ನು ಸಂತೈಸಿದ ಭೀಮನನ್ನು ಮನದಿ ಮೆಚ್ಚಿ ಸೈರಂಧ್ರಿಯು ನರ್ತನಾಗಾರವನ್ನು ರಾಜ ಕನ್ಯಾನರ್ತನವನ್ನೀಕ್ಷಿಸುವವಳಂತೆ ಪ್ರವೇಶಿಸಿದಳು.

ವಿರಾಟನು ಕೀಚಕನಂತೆ ಅವನ ಅನುಜರೆಲ್ಲರು ಗಂಧರ್ವರಿಂದ ಹತರಾದರೆಂದು ಕೇಳಿ ಭೀತನಾದನು. ಸಹೋದರರ ಸಾವಿಗೆ ನೊಂದ ತನ್ನ ಮಡದಿಯನ್ನು ಸಂತೈಸಲು ಬಂದು, ಅವಳಿಗೆ ಸಮಾಧಾನವಾಗುವಂತೆ ಇಂತೆಂದನು. 'ಜೀವಿತೇಶ್ವರಿ! ಇನ್ನಾ ಸೈರಂಧ್ರಿಯನ್ನಿಲ್ಲಿಂದ ಕಳಿಸಿಬಿಡು! ನನ್ನ ವಿನ್ನಪವೆಂದು, ಅವಳಿಗೆ 'ಇನ್ನೆಲ್ಲಾದರೂ

ನಡೆ! ನಮ್ಮಲ್ಲಿ ನಿನಗೆ ಸ್ಥಾನವಿಲ್ಲ' ಎಂದು ಹೇಳು. ಪುರುಷರು ಆ ಸುಂದರಿಯ ಸಮೀಪದಲ್ಲಿ ಸುಳಿದಾಡುವುದಪಾಯಕರವಾದುದರಿಂದ ನಾನಾಗಿ ಅವಳಿಗೆ ಆಜ್ಞಾಪಿಸ ಲಾರದಿರುವೆನು. ಹೆಣ್ಣಾದ ನಿನಗಾಭಯವಿಲ್ಲ. ಮೃದುವಚನಗಳಿಂದ ಅವಳನ್ನು ದೂರೀಕರಿಸುವುದೇ ಕರ್ತವ್ಯವು. ಮಾಲಿನಿಯೋ ಮನೋಹರ ರೂಪಳು. ಮನುಜರೋ ಭೋಗೈಕ ಪರಾಯಣರು. ಮದನನೋ ದುರ್ನಿವಾರವಿಜೇಷ್ಟಾ ದುಷ್ಟನು. ಅವಳಿಂದ ಪುರಜನರಿಗೆ ಮೃತ್ಯುವು ಬಾರದ ಮುನ್ನ, ಅವಳನ್ನು ಕಳಿಸಿ ಬಿಡು! ಹಾವನ್ನಂತೆ ಅವಳನ್ನು ಮನೆಯಲ್ಲಿಟ್ಟುಕೊಂಡಿರಲಾಗದು.' ಎಂದು ನುಡಿದ ಪತಿಯ ಮಾತು ಹಿತವಾಗಲು ಸುದೇಷ್ಣೆಯು ಅಂತೆಯೇ ನುಡಿಯಲು ನಿಶ್ಚಯಿಸಿ, ಸುಮ್ಮನಿದ್ದಳು.

ವಿರಾಟಕನ್ಯೆಯರ ಆಟಪಾಟಗಳನ್ನು ನೋಡುವ ನೆವದಿಂದ ನರ್ತನಶಾಲೆಯನ್ನು ಸೇರಿದ ಸೈರಂಧ್ರಿಯನ್ನು ಕಂಡು ಬೃಹನ್ನಲೆಯೂ ಅವನ ಶಿಷ್ಯಾಣಿಯರೂ ಅವಳಿಗೆ ಸಮಾಧಾನವಾಗುವಂತೆ, ಇಂತೆಂದರು—

'ಕೀಚಕ ನೀಚರಿಂದ ಸಂಕಟಕ್ಕೀಡಾಗಿ, ದೈವಾನುಗ್ರಹದಿಂದ ಪಾರಾಗಿಬಂದೆ. ನಿನ್ನಂತಹ ಸಾಧ್ವಿಯನ್ನು ಪೀಡಿಸಿದ ಪಾಪಾತ್ಮರು ನರಕಾಗ್ನಿಯಲ್ಲಿ ಬಿದ್ದರು. ನಿನ್ನ ಗಂಧರ್ವರೂ ಸಮಯಕ್ಕಾದು ನಿಂತು ಕಾಪಾಡಿದುದರಿಂದ ಒಳ್ಳೆಯದಾಯಿತು. ಇನ್ನು ನಿನಗೆ ಭಯವಿಲ್ಲ. ನೆಮ್ಮದಿಯಿಂದಿರು!' ಆಗ ನಡೆದ ವೃತ್ತಾಂತವನ್ನೆಲ್ಲ ಸೈರಂಧ್ರಿ ಅವರಿಗೆ ವರ್ಣಿಸಲು, ಕೇಳಿ, ಸಂತಾಪಕರ್ಶಿತನಾಗಿ ಅರ್ಜುನನು ಇಂತೆಂದನು—

'ಪಾಪಾತ್ಮರ ನೀಚ ವ್ಯಾಪಾರವಹ್ನಿಯೇ ಅವರನ್ನು ಸುಟ್ಟುಬಿಸುಟಿತು. ಸುಜನರಿಗೆ ಕೇಡೆಣಿಸಿದವರಿಗೆ ಶ್ರೇಯವಾಗುವುದೇ? ಇಲ್ಲಿ ಕನ್ಯಾಮಣಿಗಳಿಗೆ ನರ್ತನ ಸಂಗೀತಗಳನ್ನು ಕಲಿಸುತ್ತಾ, ಹೊರಗಿನ ಪ್ರಪಂಚಜ್ಞಾನವಿಲ್ಲದೆ, ವಿಧಿ ತಂದ ದುಸ್ಥಿತಿ ಯಲ್ಲಿ ಕಾಲ ಕಳೆಯುತ್ತಿರುವ ನನ್ನಿಂದ ಅನುತಾಪವೇ ಹೊರತು ಅನ್ಯವೇನೂ ಆಗದು. ಅಸಹ್ಯ ಜೀವನವನ್ನು ಅನುಭವಿಸುವ ನನ್ನ ಈ ದುರವಸ್ಥೆ ಅಂತವಾಗುವು ದೆಂದೋ? ಹಿಂದೆ ದ್ರೌಪದೀದೇವಿಯಲ್ಲಿ ನೀನಿದ್ದಾಗ ನಿನ್ನ ಪರಿಚಯವೆನಗಿದೆ. ಸದಾ ನಿರ್ಮಲ ಚರಿತೆಯಾದ ನಿನ್ನನ್ನು ಮನದಿ ಮೆಚ್ಚುತ್ತಿದ್ದವರಲ್ಲಿ ನಾನೊಬ್ಬನೆಂದು ತಿಳಿ! ಕೃಷ್ಣಭಕ್ತರಾದೆಮಗೆ ಸದಾ ಕೃಷ್ಣಪಕ್ಷವಿರುವುದಿಲ್ಲ. ಸ್ವಲ್ಪ ತಾಳು!

ಇಂತು ನುಡಿಯುವ ಅರ್ಜುನನ ಅಂತಃಕ್ಲೇಶವನ್ನರಿತು, ಸಾಭಿಪ್ರಾಯ ವಚನ ಗಳಿಗೆ ಮನದಲ್ಲಿ ಮೆಚ್ಚಿ, ಸೈರಂಧ್ರಿಯು ಕಿರುನಗೆಯಿಂದ ಅವನನ್ನು ಸತ್ಕರಿಸಿ, ಕನ್ಯಕೆ ಯರು ಹಿಂಬಾಲಿಸಿ ಬರಲು ಅಂತಃಪುರವನ್ನು ಸೇರಿದಳು. ಉಬ್ಬಿಬರುವ ಮೋದದಿಂದ ತಬ್ಬಿಬ್ಬಾಗದೆ, ಮನವನ್ನು ನಿಗ್ರಹಿಸಿ, ಸಮುಚಿತ್ತಳಾದ ಮಾಲಿನಿಯು, ಯಥಾಪೂರ್ವ ವಾಗಿ ತನ್ನ ಕಾರ್ಯಗಳಲ್ಲಿ ಮಗ್ನಳಾದಳು. ಅವಳನ್ನು ನೋಡಿ, ಅವಳ ಧೀರ ಗಂಭೀರ ವರ್ತನವನ್ನು ಪರಿಕಿಸಿ, ಭಯಶೋಕಾಕುಲಳಾದ ಸುದೇಷ್ಣೆಯು, ವಿನಯ

ಪ್ರೀತಿರಸಗಳನ್ನು ಮುಖದಿ ತಂದು ಮಾಲಿನಿಯನ್ನು ಕರೆದು, ತನ್ನ ಸಮೀಪದ ಸಿಂಹಾಸನದಿ ಕೂಡಿಸಿ, ಅವಳ ಮುಖವನ್ನವಲೋಕಿಸುತ್ತಾ, ಇಂತೆಂದಳು —

'ಸುಂದರಿ! ನೀನು ರತಿಯಂತಿರುವೆ! ಪುರುಷರು ಮದನನಾಡಿಸುವ ಗೊಂಬೆಗಳು. ನಿನ್ನನ್ನು ಕೆಣಕಿ ಸತ್ತ ಕೀಚಕನಂತೆ ಇತರರೂ ಆಗದಿರಲೆಂದು ಮಹಾರಾಜನು ನಿನ್ನನ್ನು ಬೇರೆಡೆಗೆ ಹೋಗುವಂತೆ ಪ್ರಾರ್ಥಿಸಿರುವನು. ತಾನಾಗಿ ನಿನಗೆ ಹೇಳಲು ಹೆದರಿ, ನನ್ನ ದ್ವಾರಾ ಆಜ್ಞಾಪಿಸಿರುವನು. ತಮ್ಮಂದಿರೆಲ್ಲರೂ ಹತರಾದರೆಂಬ ದುಃಖವೂ ದುರ್ಭರವಾಗಿದೆ. ನಿನ್ನ ಪತಿಗಳಾದ ಗಂಧರ್ವರು ಮಹಾವೀರರು. ದಶಸಹಸ್ರನಾಗಬಲನಾದ ಕೀಚಕನನ್ನು ಕೊಂದು, ಮಾಂಸಪಿಂಡದಂತೆ ಮಾಡಿದ ಗಂಧರ್ವರಿಗೆ ಊರ ಜನರೆಲ್ಲ ಹೆದರುತ್ತಿರುವರು. ದಯುಮಾಡಿ ಇನ್ನಿಲ್ಲಿರದೆ, ಬೇಕಾದ ಪುರವನ್ನು ಸೇರಪೋಗು!'

ರಾಣಿಯ ವಚನವಾಲಿಸಿ ಮಾಲಿನಿಯು ಯೋಚಿಸಿ, ಇಂತೆಂದಳು—'ಮಹಾರಾಣಿ! ಆಗಲಿ! ಇನ್ನು ಹದಿಮೂರು ದಿನಗಳಾಗಲಿ! ಅಲ್ಲಿಯವರೆಗೂ ನಿನ್ನ ಮಂದಿರದಲ್ಲಿ ಮೊದಲಿನಂತೆಯೇ ಸೈರಂಧ್ರೀ ಕೃತ್ಯರತಳಾಗಿರುವೆನು. ಅಷ್ಟು ಮಾತ್ರ ಅವಕಾಶವನ್ನು ಕೊಡು! ನನಗೆ ಆಶ್ರಯವನ್ನಿತ್ತ ನಿಮಗೆ ಕಲ್ಯಾಣವಾಗುವುದು. ನನ್ನ ಪತಿಗಳು ಕೃತಘ್ನರಲ್ಲ. ಪರೋಪಕಾರ ಪರಾಯಣರು, ಪರಾಪರಾಧವಿಸ್ಮರಣಶೀಲರು, ಮಹಾಸಮರ್ಥರು, ದೇವಸಮರು ಆದ ನನ್ನ ಪತಿಗಳು ಸಮಯಬಂದಾಗ, ಒಂದು ವರ್ಷ ಕಾಲವೆನ್ನನ್ನು ಚನ್ನಾಗಿ ಸಲಹಿದ ನಿನಗೆ ಶ್ರೇಯಸ್ಸನ್ನು ಮಾಡದಿರರು. ಇನ್ನು ಹದಿಮೂರು ದಿನಗಳಾದ ಮೇಲೆ ನಿನಗೆ ಎಲ್ಲವೂ ಗೊತ್ತಾಗುವುದು' ಎಂದು ನುಡಿದ ಮಾಲಿನಿಯ ಮಾತಿಗೆ, ಸುದೇಷ್ಣೆ ತನ್ನ ಮನದಲ್ಲಿ ಚಿಂತಿಸಿ ಸಮ್ಮತಿಸಿದಳು.

'ಸೈರಂಧ್ರಿಯು ಇನ್ನು ಹದಿಮೂರು ದಿನಗಳ ಅವಧಿಯನ್ನೇಕೆ ಕೇಳಿರುವಳು? ಆಮೇಲೆ ಇವಳಿಂದ ನಮಗಾಗುವ ಶ್ರೇಯವಾವುದು? ಆಗಲಿ ನೋಡೋಣ!' ಇಂತು ಚಿಂತಿಸಿ 'ಮಾಲಿನಿ! ನಿನ್ನ ಮಾತಿನಂತೆ ಹದಿಮೂರು ದಿನಗಳಲ್ಲಿ ಮೊದಲಿನಂತೆ ಇರು! ನನ್ನ ವಲ್ಲಭನನ್ನು, ನನ್ನ ಸುತರನ್ನು ನಿನ್ನ ಅಣ್ಣ ತಮ್ಮಂದಿರಂತೆ ತಿಳಿದು ಕಾಪಾಡು! ಅವರಿಗೆ ಯಾವ ವಿಧವಾದ ಕೇಡಾದರೆ ನಾನು ಉಳಿಯಲಾರೆನು. ನಿನ್ನ ಮನಸ್ಸಿಗೆ ಬಂದಂತೆ, ಉಚಿತ ವರ್ತನಳಾಗಿರು. ನಿನ್ನ ಗೌರವರಕ್ಷೆಯು ಎನಗೆ ಸೇರಿದೆ. ಚಿಂತಿಸಬೇಡ!' ಎಂದು ಅವಳನ್ನು ಸಂತೈಸಿ, ಕಳಿಸಿದಳು. ಮಾಲಿನಿಯು ದಿನಗಳನ್ನೆಣಿಸುತ್ತಾ ಕಾಲವನ್ನು ಕಳೆಯುತ್ತಿದ್ದಳು.

ವಿರಾಟನ ಮೈದುನನಾದ ಕೀಚಕನೋರ್ವಳನ್ನು ಕೆಣಕಿ ಗಂಧರ್ವರಿಂದ ಚಿತ್ರವಧೆಗೀಡಾದನಂತೆ! ಅಂತಹ ಬಲದರ್ಪ ಮತ್ತ ಚಿತ್ತನನ್ನು ಅಂತಹ ಭಯಂಕರ ಪರಾಕ್ರಮನನ್ನು, ಅಂತಹ ದುರಂತ ವರ್ತನನನ್ನು ಇಂತು ವಿಚಿತ್ರವಾಗಿ ಸಂಹರಿಸಿ, ಅವನ ತಮ್ಮಂದಿರನ್ನೂ ನಿಶ್ಶೇಷವಾಗಿ ಕೆಡಹಿ ಕೊಂದ ವೀರರಿನ್ನೆಂತಹರಿರಬಹುದು! ಕೀಚಕರ ಬಲದಿಂದ ನಿಹತಕಂಟಕನಾಗಿದ್ದ ವಿರಾಟನಿನ್ನು ದುರ್ಬಲನಾದನು.' ಎಂದು

ಇತ್ಯಾದಿ ವಾರ್ತೆಯು ಜನಪರಂಪರಾವ್ಯಾಪ್ತವಾಗಿ, ಸಮಸ್ತ ದೇಶಗಳಲ್ಲಿಯೂ ಹರಡಿತು. ಹಸ್ತಿನಾನಗರ ಜನರ ಮುಖದಿಂದಲು, ತನ್ನ ಚಾರರ ಮುಖದಿಂದಲು ದುರ್ಯೋಧನನೂ ಅದನ್ನು ತಿಳಿದನು.

## ಕೌರವ ದುರ್ಮಂತ್ರಣ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ರಾಜನ್! ಕೀಚಕರ ವಿಚಿತ್ರ ಮರಣವನ್ನು ಕೇಳಿ, ನಗರಗ್ರಾಮಜನರು 'ವಿರಾಟನ ಮೈದುನನಂತೆ! ಕೀಚಕನಂತೆ! ವಿಕ್ರಮ ದುರ್ಮದನು, ಪರಸೈನ್ಯ ಭಯಂಕರನು, ತರುಣೀಲಂಪಟನು ಆದ ಅವನನ್ನು ಗಂಧರ್ವರು ಕೊಂದರಂತೆ! ಅಂತಃಪುರದ ಸೈರಂಧ್ರಿಯನ್ನು ಕಾಮಿಸಿ, ಸಿಂಹಬಲನು ವಿಚಿತ್ರಮೃತ್ಯುವನ್ನಾಲಿಂಗಿಸಿದನಂತೆ! ಅಂತಹ ಬಲವಂತನನ್ನು ಸಂಹರಿಸಿ ಮಾಂಸದ ಮುದ್ದೆಯನ್ನಾಗಿಸಿ, ಸೈರಂಧ್ರಿಯನ್ನು ಕೆಣಕಿದ ಉಪಕೀಚಕರನ್ನು, ನೂರೈದು ಜನರನ್ನೂ ಬಿಡದೆ ಕೊಂದ ಗಂಧರ್ವರಿನ್ನೆಂತಹ ಬಲ್ಲಿದರೋ! ಕೀಚಕರ ದುರ್ದಾಂತ ವಿಕ್ರಮದಿಂದ, ಶತ್ರು ಜನರು ಹೆದರಿ ಕಣ್ಣೆತ್ತಿ ನೋಡಲಾರದಿದ್ದ ನಮ್ಮ ರಾಜ್ಯವೀಗ ದುರ್ಬಲವಾಯಿತು. ಮತ್ಸ್ಯರಾಜನಿಗೆ ಕೌರವ ತ್ರಿಗರ್ತಾದಿ ರಾಜರು ಶತ್ರುಗಳಾಗಿರುವರು. ಸೂತಕುಲ ನಾಶದಿಂದ ಅವರು ನಿರ್ಭಯರಾಗಿ, ದಂಡೆತ್ತಿ ಬಾರದಿರರು!' ಎಂದು ತಮ್ಮೊಳಗೆ ತಾವು ಮಾತನಾಡಿಕೊಳ್ಳುತ್ತಿದ್ದರು. ಈ ವಾರ್ತೆಯು ಕ್ರಮವಾಗಿ ಸಕಲ ದೇಶಗಳಲ್ಲಿಯೂ ವ್ಯಾಪಿಸಿತು.

ಪಾಪಿ ದುರ್ಯೋಧನನು, ಪಾಂಡವರ ಅಜ್ಞಾತವಾಸದ ಅವಧಿಯೊಳಗಾಗಿ ಅವರನ್ನು ತಿಳಿದು, ಮತ್ತೆ ಅರಣ್ಯವಾಸಕ್ಕೆ ಅಟ್ಟಬೇಕೆಂಬ ಹಂಬಲದಿಂದ ಕಳಿಸಿದ್ದ ವಿವಿಧ ಚಾರರು ಭೂತಲವನ್ನೆಲ್ಲ ಶೋಧಿಸಿ, ಮತ್ತೆ ಒಂದೆಡೆ ಕಲೆತು, ತಮ್ಮ ಪ್ರಯತ್ನಗಳೆಲ್ಲವೂ ವ್ಯರ್ಥವಾದುದಕ್ಕೆ ಚಿಂತಿಸುತ್ತಾ, ನಡೆದುಬಂದು, ಹಸ್ತಿನಾವತಿಯನ್ನು ಮುಟ್ಟಿದರು.

ಮದ್ದಾನೆಗಳ ಮದಜಲಧಾರೆಯೇ ತಳಿಲನೀರಾಗಿ, ಸಾಮಂತರಾಜರು ಸಮರ್ದದಲ್ಲಿ ತಿಕ್ಕಾಡುವಾಗ ಉದುರಿದ ತೊಡಿಗೆಗಳ ಪುಡಿಯೇ ರಂಗೋಲೆಯಾಗಿ, ದಾಸೀಸಹಸ್ರಗಳ ಹಾರಗಳಿಂದ ಜಾರಿಬಿದ್ದ ಸುಮಗಳೇ ಉಪಹಾರವಾಗಿ, ಪರದೇಶರಾಜರ ಧ್ವಜಪತಾಕೆಗಳೇ ತೋರಣಗಳಾಗಿ, ವಿಚಿತ್ರ ಶೋಭಾಸಂಪನ್ನವಾಗಿದ್ದ ಕೌರವರಾಜನ ಮಂದಿರ ದ್ವಾರದೇಶವನ್ನು ಸೇರಿ, ಚಾರರು, ಪ್ರತೀಹಾರಿಗಳಿಂದ ತಿಳಿಸಿ, ಅಪ್ಪಣೆ ಪಡೆದು ಮಹಾಸಭೆಯನ್ನು ಪ್ರವೇಶಿಸಿದರು.

ದ್ರೋಣ ಭೀಷ್ಮ ಕರ್ಣ ಕೃಪ ಶಲ್ಯ ಶಕುನಿ ಸುಶರ್ಮರಿಂದಲು ದುಶ್ಶಾಸನಾದಿ ಸೋದರರಿಂದಲು ಮಂತ್ರಿ ಸೇನಾಪತಿಗಳಿಂದಲು ವಿವಿಧ ವರ್ಣದ ನಾಗರೀಕರಿಂದಲು

ಪರಿವೃತನಾಗಿ, ಮಹಾರ್ಹಕಾಂಚನ ದಿವ್ಯಾಸನದಲ್ಲಿ ವಿರಾಜಮಾನನಾದ ದುರ್ಯೋಧನನಿಗೆ ವಂದಿಸಿ, ಇಂತು ನುಡಿದರು—

ಜಯವಾಗಲಿ ಕೌರವೇಂದ್ರನಿಗೆ! ಪ್ರಭುವಿನ ಅಪ್ಪಣೆಯಂತೆ ಪಾಂಡವರನ್ನು ಹುಡುಕಿ ತಿಳಿದುಬರಲು ಹೊರಟು, ಕಾಮ್ಯಕ ದ್ವೈತ ವನಗಳನ್ನು ಸೇರಿದೆವು. ಒಂದಂಗುಲವಾದರೂ ಬಿಡದೆ ಎಲ್ಲ ಕಡೆ ಹುಡುಕಿ, ದ್ರೌಪದೀದೇವಿಯನ್ನಾಗಲಿ, ಪಾಂಡವರನ್ನಾಗಲಿ ಕಾಣದಾದೆವು. ಮತ್ತೆ ಗಿಡ ಪೊದರುಗಳೆನ್ನದೆ, ಗುಹೆಗಹ್ವರಗಳೆನ್ನದೆ, ಬೇಸರದೆ ಹುಡುಕಿ, ಒಂದೆಡೆ ರಥ ಚಕ್ರಗಳ ಗುರುತರಿತು, ಅವನ್ನನುಸರಿಸಿ ಪ್ರಯಾಣಿಸಿ, ರಥಗಳನ್ನು ದ್ವಾರಾವತಿಯಲ್ಲಿ ಕಂಡೆವು. ಅವುಗಳಲ್ಲಿ ಸೂತರು ಮಾತ್ರ ಪಯಣಿಸುತ್ತಿದ್ದರು. ದ್ವಾರಾವತಿಯಲ್ಲಿ ಚೆನ್ನಾಗಿ ವಿಚಾರಿಸಿ, ಕುಂತೀನಂದನರ ಸದ್ದಿಲ್ಲದುದನ್ನು ಕಂಡು, ನಾವು ಗುಂಪುಗುಂಪಾಗಿ, ನಾನಾ ದೇಶಗಳಿಗೆ ಹೋದೆವು. ಅಂಗ, ವಂಗ, ಕಳಿಂಗ, ಕಾಶ್ಮೀರ, ಚೇದಿ, ಸಾಲ್ವ, ಮಾಗಧ, ಬಾಹ್ಲೀಕ, ಬರ್ಬರ, ಆಂಧ್ರ, ದ್ರಾವಿಡ, ಕೇರಳ, ಕರ್ಣಾಟಕ, ಮದ್ರ, ಮತ್ಸ್ಯ, ಪುಲಿಂದ, ಕುಂತಲಾದಿ ದೇಶಗಳಲ್ಲಿ ಪುರಗ್ರಾಮವನಾಕರ ಖೇಟ ಖರ್ವಟಗಳಲ್ಲಿ ಜಾಲಾಡಿಸಿ ಹುಡುಕಿದೆವು. ಎಲ್ಲಿ ನೋಡಿದರೂ ಪಾಂಡವರ ಸುಳಿವನ್ನು ಕಾಣದೆ, ಬೇಸತ್ತು, ಕೊನೆಗೆ ಸಂಕೇತಿಕ ಸ್ಥಲದಲ್ಲಿ ಮತ್ತೆ ಕಲೆತು, ನಡೆದುದೆಲ್ಲವನ್ನೂ ಆಳುವ ದೊರೆಗೆ ತಿಳಿಸುವುದೊಳಿತೆಂದು ಇಲ್ಲಿಗೆ ಬಂದಿರುವೆವು. ನೋಡಿದರೆ ಪಾಂಡವರು ಅಡವಿಗಳಲ್ಲಿ ತಿರುಗುತ್ತಾ ಕಾಡುಮಿಕಗಳ ಬಾಯುತುತ್ತಾಗಿರಬಹುದೆಂದು ತೋರುತ್ತಿದೆ. ಈ ಲೋಕದಲ್ಲೇ ಅವರಿಲ್ಲವೆಂದೇ ನಮಗವರು ಕಂಡುಬಂದಿಲ್ಲ. ನಾವು ಹುಡುಕಿನೋಡದ ಪ್ರದೇಶವೂ ಈ ಭೂಮಂಡಲದಲ್ಲಿಲ್ಲ. ಮುಂದೇನು ಅಪ್ಪಣೆ? ಮತ್ತೆ ಹುಡುಕಲು ಹೋಗಿರೆಂದರೆ, ಹೋಗಿಬರುವೆವು.

ಆದರೆ ಮಹಾಪ್ರಭುಗಳಿಗೆ ಹಿತಕರವಾದೊಂದು ವಾರ್ತೆಯನ್ನು ತಂದಿರುವೆವು. ನಮ್ಮಲ್ಲಿ ಕೆಲವರು ಮತ್ಸ್ಯದೇಶಕ್ಕೆಂದು ಹೋಗಿದ್ದೆವಲ್ಲವೇ? ಅಲ್ಲಿ ನಡೆದ ವಿಚಿತ್ರವನ್ನು ಕೇಳಿ!—

ಮತ್ಸ್ಯ ದೇಶದ ಒಡೆಯನು ವಿರಾಟರಾಜನಷ್ಟೆ! ಅವನ ಮೈದುನನಾದ ಸಿಂಹಬಲನು ಪರಮ ಸುಂದರಿಯಾದೊರ್ವಳನ್ನು ಕಾಮಿಸಿ, ಅವಳ ಪತಿಗಳಾದ ಗಂಧರ್ವರ್ರೈವರಿಂದ ಹತನಾದನಂತೆ! ನಿಶೀಥದಲ್ಲಿ, ಗಂಧರ್ವರು ಕೀಚಕನನ್ನು ಸಂಹರಿಸಿ, ಅವನ ಕೈಕಾಲು ತಲೆಗಳನ್ನು ಹೊಟ್ಟೆಯಲ್ಲಿ ತುರುಕಿ ಮಾಂಸಪಿಂಡದಂತೆ ಮಾಡಿ ಒಗೆದಿದ್ದರಂತೆ! ಆ ಭಯಾನಕವನ್ನು ಕಂಡು, ಅವನ ತಮ್ಮಂದಿರು ಸೈರಂಧ್ರಿಯನ್ನವನೊಡನೆ ಕಟ್ಟಿ ಮಸಣದ ಕಡೆಗೆ ನಡೆಯುತ್ತಿರಲು, ಅವರನ್ನು ಗಂಧರ್ವರು ಬಂದು ಕೊಂದ ಬೀಭತ್ಸವನ್ನು ಕೇಳಿ, ಪುರಜನರು ಹೌಹಾರಿರುವರು. ಆ ಸುಂದರಿಯು ಅಂತಃಪುರದಲ್ಲಿರುವಳಂತೆ!

ಮಹಾರಾಜ! ತಮಗೆ ಅಹಿತನಾದ ವಿರಾಟನಿಗೊದಗಿದ ಮಿತ್ರನಾಶವನ್ನು ತಮಗೆ ಪ್ರಿಯವೆಂದು ಅರುಹಿದೆವು. ಅನ್ಯಥಾ ಭಾವಿಸಬೇಡ! ಹಿಂದೆ ಗೋಧನಕ್ಕಾಗಿ ಕಾದಾಡಿದ ತ್ರಿಗರ್ತೇಶ್ವರರನ್ನು ವಿರಾಟನು ಕೀಚಕನ ಸಹಾಯದಿಂದ ಸೋಲಿಸಿ, ಅವಮಾನಪಡಿಸಿರುವನಲ್ಲವೇ? ಈಗಲಂತು ವಿರಾಟನ ಗೋಗಣವು ಅತ್ಯಂತ ಸಮೃದ್ಧವಾಗಿದೆ. ಅದನ್ನೂ ಕಂಡುಬಂದಿರುವೆವು.

ದುರ್ಯೋಧನನು ಅವರ ಮಾತನ್ನಾಲಿಸಿ, ಸ್ವಲ್ಪ ಕಾಲ ಆಲೋಚಿಸಿದನು. ದುಶ್ಶಾಸನದಿಂದ ಅವರಿಗೆ ಸತ್ಕಾರಗಳನ್ನು ಸಂಬಳಗಳನ್ನು ಕೊಡಿಸಿ, ಸರಿ! ಮುಂದೆ ಆಲೋಚನೆ ಮಾಡಿ, ತಿಳಿಸುವೆವೆಂದು ಹೇಳಿಕಳಿಸಿದನು. ಸಭೆಯನ್ನಾಲೋಕಿಸಿ, ನಗುತ್ತಾ, 'ಸಭಾಸದರೇ! ಬಂಧುಮಿತ್ರರೇ! ಪಾಂಡವರು ಸಮಯಭಂಗವಾಗದಂತೆ ಅಜ್ಞಾತವಾಸವನ್ನು ಮುಗಿಸಿ, ರಾಜ್ಯದ ಪಾಲನ್ನು ಕೇಳಲು ಬರಬಹುದು. ಆ ದುಷ್ಟರನ್ನು ಮತ್ತೆ ಅರಣ್ಯದ ಕಷ್ಟಗಳಿಗೀಡುಮಾಡುವೆನಾಗಲಿ, ಜೀವವಿದ್ದಂತೆ ರಾಜ್ಯಾರ್ಧವನ್ನು ಕೊಡಲಾರೆನು. ಇನ್ನಿರುವ ಅಜ್ಞಾತವಾಸದ ಸ್ವಲ್ಪ ದಿನಗಳಲ್ಲಿ ಅವರನ್ನು ಕಂಡುಹಿಡಿದು, ಸಮಯಭಂಗವನ್ನು ಸಾಧಿಸುವ ಉಪಾಯವನ್ನು ನಿಮಗೆ ತೋಚಿದಂತೆ ಸೂಚಿಸಿರಿ!' ಎಂದನು. ನಾಗೇಂದ್ರರಂತೆ ಮದಮತ್ತರಾಗಿ ಮೇಲೇರಿ ಬರುವ ಭೀಮಾದಿ ಪಾಂಡವರ ಸಿಂಹನಾದ, ಗದಾಘಾತ, ಶಸ್ತ್ರಪಾತಗಳನ್ನು ಮನೋರಂಗದಲ್ಲಿ ಊಹಿಸಿ ನಾಗಕೇತನನು ನಿಡುಸುಯ್ದನು.

ಅವನ ನಿರುತ್ಸಾಹವನ್ನು ಕಂಡು, ಕರ್ಣನು, 'ರಾಜನ್! ಆಲೋಚಿಸಬೇಡ! ಪಾಂಡವರನ್ನು ಹುಡುಕಲು ಅತ್ಯಂತ ನಿಪುಣರಾದ ಧೂರ್ತ ದೂತರನ್ನು ಕಳಿಸು! ಅವರು ವೇಷಾಂತರಚಾರಿಗಳಾಗಿ, ಪುರಗಳಲ್ಲಿ, ಜನಪದಗಳಲ್ಲಿ, ಗೋಷ್ಠಿಗಳಲ್ಲಿ, ಆಶ್ರಮಗಳಲ್ಲಿ, ತೀರ್ಥಗಳಲ್ಲಿ ಹುಡುಕಿ ಬರಲಿ! ಪಾಂಡವರು ಸತ್ಯಸಂಧರಿದ್ದು ನಿಜ! ಸಮೀಪದ ಪುರದಲ್ಲಿ ಅಜ್ಞಾತರಾಗಿ ಇರಬೇಕೆಂಬ ನಿಯಮಕ್ಕೆ ವಿರುದ್ಧವಾಗಿ, ಅವರೆಂದಿಗೂ ನಡೆಯುವುದಿಲ್ಲ. ಹಾಗಿರದಿದ್ದರೆ ಸಮಯಭಂಗವೆಂದು ಅವರು ತಿಳಿಯದಿಲ್ಲ. ಕೃತಜ್ಞರು, ಪಾಂಡವ ಶತ್ರುಗಳು, ನೀತಿಕುಶಲರು ಆದ ದೂತರನ್ನು ಮತ್ತೆ ಕಳಿಸು! ಪಾಂಡವರು ಬದುಕಿದ್ದರೆ, ತಪ್ಪದೆ ಸಿಗುವರು' ಎಂದು ನುಡಿದನು.

ದುಶ್ಶಾಸನನು ತನ್ನಣ್ಣನಂತೆ ಪಾಪಭಾವಾಕುಲನಾಗಿ, ಅವನಿಗಿಂತೆಂದನು— ರಾಜನ್! ಕರ್ಣನು ನುಡಿದಂತೆ ದೂತರನ್ನು ಕಳಿಸು! ಅವರನ್ನು ಚನ್ನಾಗಿ ಧನ ವಸ್ತ್ರಾದಿಗಳಿಂದ ಸತ್ಕರಿಸು! ಇಂದಿನವರೆಗೂ ಸಿಗದ ನೀಚ ಪಾಂಡವರ ವಾರ್ತೆ ಮುಂದೆ ಸಿಗಬಹುದು. ಅತ್ಯಂತ ನಿಗೂಢ ವೇಷರಾಗಿರುವುದರಿಂದಲೋ, ಅಥವಾ ಸಮುದ್ರವನ್ನು ದಾಟಿ, ದೇಶಾಂತರವನ್ನು ಸೇರಿರುವುದರಿಂದಲೋ, ಅಥವಾ ವನ್ಯಮೃಗಗಳ ಹೊಟ್ಟೆಯನ್ನು ಹೊಕ್ಕಿರುವುದರಿಂದಲೋ, ಅವರ ಸುಳಿವು ಸಿಗದಾಗಿದೆ. ಕಷ್ಟ ಪರಂಪರೆಗೆ ಸಿಲುಕಿ ನಷ್ಟರಾಗಿರುವ ದುಷ್ಟಾತ್ಮರ ಚಿಂತೆ ಬಿಡು! ಯಮಮಂದಿರದಲ್ಲಿ ಸುಖಿಗಳಾಗಿರುವ ಪಾಪಿಗಳು ಮತ್ತೆ ಬರಲಾರರು. ಸಮ್ಮೋದ

ಭರಿತನಾಗಿ, ರಾಜ್ಯಭೋಗಗಳನ್ನು ಅನುಭವಿಸು! ಸ್ರಕ್, ಚಂದನ, ವನಿತಾ, ವನ-ವಿಹಾರ, ಮಧುಪಾನ, ದ್ಯೂತ ಕ್ರೀಡಾದಿಗಳ ಮಧುರಾಹ್ವಾನವನ್ನು ಮನ್ನಿಸು!

ಅವನ ಮಾತಿಗೆ ನಸುನಕ್ಕು, ದುರ್ಯೋಧನನ ಕಡೆ ನೋಡಿ ದ್ರೋಣಾಚಾರ್ಯನಿಂತೆಂದನು—ಮಹಾರಾಜ! ಭೀರುವಾಗಬೇಡ! ಮತ್ತೆ ದ್ಯೂತವಾಡಿ ಪಾಂಡವರನ್ನು ವನಕ್ಕಟ್ಟುವುದು ವನಜಭವನಿಂದಲೂ ಆಗದು. ಯುಧಿಷ್ಠಿರನು ಜೂಜಾಡಿದನೆಂದರೆ—ಅಕ್ಷಹೃದಯವನ್ನವನು ಬೃಹದಶ್ವ ಋಷಿಯಿಂದ ಕಲಿತಿರುವನಾದುದರಿಂದ—ಅವನನ್ನು ನಿನ್ನ ಶಕುನಿಯು ಗೆಲ್ಲಲಾರನು. ಅಕ್ಷರಂಗವನ್ನು ಬಿಟ್ಟು, ರಣರಂಗವನ್ನು ಆರಿಸಿಕೊಂಡರೆ ಭೀಮನ ಗದೆಗೂ, ವಿಜಯನ ಗಾಂಡೀವಕ್ಕೂ, ಶ್ರೀ ಕೃಷ್ಣನ ನೀತಿಗೂ ಗೆಲುವು ತಪ್ಪಿದ್ದಲ್ಲ. ಪಾಂಡವರು ವನದಲ್ಲಿ ನಷ್ಟರಾಗಿರುವರೆಂಬ ನಿನ್ನ ತಮ್ಮನ ನುಡಿಯು ಅವಿಚಾರಿತ ರಮಣೀಯವಾಗಿದೆ. ಶೂರ ಶಿಖಾಮಣಿಗಳು, ಕೃತವಿದ್ಯರು, ಬುದ್ಧಿವಂತರು, ಜಿತೇಂದ್ರಿಯರು, ಅನ್ಯೋನ್ಯ ಸ್ನೇಹಪಾಶ ಬದ್ಧರು, ಉದಾತ್ತ ಕೃಷ್ಣಾನುಗ್ರಹಪಾತ್ರರು ಆದ ಪಾಂಡವರಿಗೆ ನಾಶವಿಲ್ಲ. ವಿಪ್ರರನ್ನು, ಧರ್ಮವನ್ನು, ಅಚ್ಯುತನನ್ನು ಆಶ್ರಯಿಸಿದವರು ಹಾಳಾಗುವರೇ? ಧರ್ಮರಾಜನೂ ತಮ್ಮಂದಿರಲ್ಲಿ ಅನುರಕ್ತನಾಗಿ, ಅವರ ಶ್ರೇಯಸ್ಸಂಪಾದನೆಯಲ್ಲಿ ಬದ್ಧದೀಕ್ಷಾ ಕಂಕಣನಾಗಿರುವನು. ನನಗೆ ತೋಚಿದಂತೆ ನಿಮಗೆ ಹಿತವಾಗಲು ಒಂದೇ ಮಾರ್ಗವಿದೆ. ಭೇದ ದಂಡಗಳು ವ್ಯರ್ಥವಾಗುವಲ್ಲಿ, ಸಾಮ ದಾನಗಳನ್ನು ನೀಡಬೇಕೆಂದು ನೀತಿವಿದರು ಪೇಳುವರು. ಅವರನ್ನು ಕರೆತರಿಸಿ, ಒಳ್ಳೆಯ ಮಾತಾಡಿ, ಹಳೆಯ ವೈರವನ್ನಳಿಸಿ, ಅವರ ರಾಜ್ಯವನ್ನವರಿಗಿತ್ತು ಕಳಿಸುವುದೇ ಈಗ ವಿಹಿತವಾಗಿದೆ. ಅಜ್ಞಾತ-ವಾಸವು ಕೂಡ ಇನ್ನು ಕೆಲವೇ ದಿನಗಳು ಉಳಿದಿದೆ ಎಂದು ನಾನು ತಿಳಿದಿರುವೆನು. ಅಥವಾ ನಿಮ್ಮ ಮನಕ್ಕೆ ಸರಿದೋರುವಂತೆ, ಅವರನ್ನು ಕಂಡುಹಿಡಿದು, ಮತ್ತೆ ಅರಣ್ಯವಾಸಕ್ಕೆ ಕಳಿಸಿ, ರಾಜ್ಯವನ್ನು ದಕ್ಕಿಸಿಕೊಳ್ಳಲೂಬಹುದು. ನೋಡಿ, ಆಲೋಚಿಸಿ! ನಿಮಗೆ ಹಿತವಾದ ವಿಧಾನವನ್ನನುಸರಿಸಿ, ನಮಗೂ ಕೌರವ ಕುಲಕ್ಕೂ ಕ್ಷೇಮವನ್ನು ಸಂಪಾದಿಸಿ!

ದ್ರೋಣನಿಂತು ನುಡಿದು ತನ್ನ ಮನದಲ್ಲಿ, 'ಎಷ್ಟು ಹುಡುಕಿದರೇನು? ತಪೋಬಲಸಮನ್ವಿತರಾದ ಪಾರ್ಥರು ಕಾಣಸಿಗರು, ಪ್ರಚ್ಛನ್ನರಾಗಿರುವರು. ಅವರಿಗೆ ದೈವಾನುಗ್ರಹವಿದೆ. ರಾಜ್ಯದಲ್ಲಿದ್ದು ಕುದಿಯುವ ಕೌರವರಂತಲ್ಲದೆ, ವನದಲ್ಲಿದ್ದು ಪಾಂಡವರು ನಿಶ್ಚಿಂತರಾಗಿ ಸುಖವಾಗಿರಲು ಶ್ರೀಶಾನುಗ್ರಹವೇ ಕಾರಣ. ಧರ್ಮಿಷ್ಠರಿಗೆ ಶ್ರೀಶಾನುಗ್ರಹವು ಮೀಸಲಾಗಿದೆಯಲ್ಲವೇ? ಅವರು ಎದುರಿಗೆ ಬಂದು ನಿಂತರೂ, ಪಾಂಡವರಿವರೆಂದು ತಿಳಿಯಲುಬಾರದಂತೆ ಅವರ ಧರ್ಮ, ಸತ್ಯ, ದಯಾ, ದಾನಗಳು ಕವಚದಂತೆ ಮುಚ್ಚಿ ಕಾಪಾಡುತ್ತಿವೆ. ನಿಜವಾಗಿಯೂ ಅಜ್ಞಾತವಾಸವನ್ನು ಮುಗಿಸಿ, ಕುಪ್ಪಸ ಬಿಚ್ಚಿದ ಕ್ರೂರ ಫಣಿಗಳಂತೆ ಎತ್ತಿಬರುವ ಪಾಂಡವರನ್ನು ಕಣ್ಣೆತ್ತಿ ನೋಡುವುದೂ ಕಷ್ಟವಾಗುವುದು! ಕೌರವರಿಗೆ ಕೇಡು ಕಾದಿದೆ. ಇಂತಹ ದುರ್ಮಾರ್ಗರನ್ನು

ಮಹಾರಾಜ! ತಮಗೆ ಅಹಿತನಾದ ವಿರಾಟನಿಗೊದಗಿದ ಮಿತ್ರನಾಶವನ್ನು ತಮಗೆ ಪ್ರಿಯವೆಂದು ಅರುಹಿದೆವು. ಅನ್ಯಥಾ ಭಾವಿಸಬೇಡ! ಹಿಂದೆ ಗೋಧನಕ್ಕಾಗಿ ಕಾದಾಡಿದ ತ್ರಿಗರ್ತೇಶ್ವರರನ್ನು ವಿರಾಟನು ಕೀಚಕನ ಸಹಾಯದಿಂದ ಸೋಲಿಸಿ, ಅವಮಾನಪಡಿಸಿರುವನಲ್ಲವೇ? ಈಗಲಂತು ವಿರಾಟನ ಗೋಗಣವು ಅತ್ಯಂತ ಸಮೃದ್ಧವಾಗಿದೆ. ಅದನ್ನೂ ಕಂಡುಬಂದಿರುವೆವು.

ದುರ್ಯೋಧನನು ಅವರ ಮಾತನ್ನಾಲಿಸಿ, ಸ್ವಲ್ಪ ಕಾಲ ಆಲೋಚಿಸಿದನು. ದುಶ್ಯಾಸನದಿಂದ ಅವರಿಗೆ ಸತ್ಕಾರಗಳನ್ನು ಸಂಬಳಗಳನ್ನು ಕೊಡಿಸಿ, ಸರಿ! ಮುಂದೆ ಆಲೋಚನೆ ಮಾಡಿ, ತಿಳಿಸುವೆವೆಂದು ಹೇಳಿಕಳಿಸಿದನು. ಸಭೆಯನ್ನಾಲೋಕಿಸಿ, ನಗುತ್ತಾ, 'ಸಭಾಸದರೇ! ಬಂಧುಮಿತ್ರರೇ! ಪಾಂಡವರು ಸಮಯಭಂಗವಾಗದಂತೆ ಅಜ್ಞಾತವಾಸವನ್ನು ಮುಗಿಸಿ, ರಾಜ್ಯದ ಪಾಲನ್ನು ಕೇಳಲು ಬರಬಹುದು. ಆ ದುಷ್ಟರನ್ನು ಮತ್ತೆ ಅರಣ್ಯದ ಕಷ್ಟಗಳಿಗೀಡುಮಾಡುವೆನಾಗಲಿ, ಜೀವವಿದ್ದಂತೆ ರಾಜ್ಯಾರ್ಧವನ್ನು ಕೊಡಲಾರೆನು. ಇನ್ನಿರುವ ಅಜ್ಞಾತವಾಸದ ಸ್ವಲ್ಪ ದಿನಗಳಲ್ಲಿ ಅವರನ್ನು ಕಂಡುಹಿಡಿದು, ಸಮಯಭಂಗವನ್ನು ಸಾಧಿಸುವ ಉಪಾಯವನ್ನು ನಿಮಗೆ ತೋಚಿದಂತೆ ಸೂಚಿಸಿರಿ!' ಎಂದನು. ನಾಗೇಂದ್ರರಂತೆ ಮದಮತ್ತರಾಗಿ ಮೇಲೇರಿ ಬರುವ ಭೀಮಾದಿ ಪಾಂಡವರ ಸಿಂಹನಾದ, ಗದಾಘಾತ, ಶಸ್ತ್ರಪಾತಗಳನ್ನು ಮನೋರಂಗದಲ್ಲಿ ಊಹಿಸಿ ನಾಗಕೇತನನು ನಿಡುಸುಯ್ದನು.

ಅವನ ನಿರುತ್ಸಾಹವನ್ನು ಕಂಡು, ಕರ್ಣನು, 'ರಾಜನ್! ಆಲೋಚಿಸಬೇಡ! ಪಾಂಡವರನ್ನು ಹುಡುಕಲು ಅತ್ಯಂತ ನಿಪುಣರಾದ ಧೂರ್ತ ದೂತರನ್ನು ಕಳಿಸು! ಅವರು ವೇಷಾಂತರಚಾರಿಗಳಾಗಿ, ಪುರಗಳಲ್ಲಿ, ಜನಪದಗಳಲ್ಲಿ, ಗೋಷ್ಠಿಗಳಲ್ಲಿ, ಆಶ್ರಮಗಳಲ್ಲಿ, ತೀರ್ಥಗಳಲ್ಲಿ ಹುಡುಕಿ ಬರಲಿ! ಪಾಂಡವರು ಸತ್ಯಸಂಧರಿದ್ದು ನಿಜ! ಸಮೀಪದ ಪುರದಲ್ಲಿ ಅಜ್ಞಾತರಾಗಿ ಇರಬೇಕೆಂಬ ನಿಯಮಕ್ಕೆ ವಿರುದ್ಧವಾಗಿ, ಅವರೆಂದಿಗೂ ನಡೆಯುವುದಿಲ್ಲ. ಹಾಗಿರದಿದ್ದರೆ ಸಮಯಭಂಗವೆಂದು ಅವರು ತಿಳಿಯದಿಲ್ಲ. ಕೃತಜ್ಞರು, ಪಾಂಡವ ಶತ್ರುಗಳು, ನೀತಿಕುಶಲರು ಆದ ದೂತರನ್ನು ಮತ್ತೆ ಕಳಿಸು! ಪಾಂಡವರು ಬದುಕಿದ್ದರೆ, ತಪ್ಪದೆ ಸಿಗುವರು' ಎಂದು ನುಡಿದನು.

ದುಶ್ಯಾಸನನು ತನ್ನಣ್ಣನಂತೆ ಪಾಪಭಾವಾಕುಲನಾಗಿ, ಅವನಿಗಿಂತೆಂದನು— ರಾಜನ್! ಕರ್ಣನು ನುಡಿದಂತೆ ದೂತರನ್ನು ಕಳಿಸು! ಅವರನ್ನು ಚನ್ನಾಗಿ ಧನ ವಸ್ತ್ರಾದಿಗಳಿಂದ ಸತ್ಕರಿಸು! ಇಂದಿನವರೆಗೂ ಸಿಗದ ನೀಚ ಪಾಂಡವರ ವಾರ್ತೆ ಮುಂದೆ ಸಿಗಬಹುದು. ಅತ್ಯಂತ ನಿಗೂಢ ವೇಷರಾಗಿರುವುದರಿಂದಲೋ, ಅಥವಾ ಸಮುದ್ರವನ್ನು ದಾಟಿ, ದೇಶಾಂತರವನ್ನು ಸೇರಿರುವುದರಿಂದಲೋ, ಅಥವಾ ವನ್ಯಮೃಗಗಳ ಹೊಟ್ಟೆಯನ್ನು ಹೊಕ್ಕಿರುವುದರಿಂದಲೋ, ಅವರ ಸುಳಿವು ಸಿಗದಾಗಿದೆ. ಕಷ್ಟ ಪರಂಪರೆಗೆ ಸಿಲುಕಿ ನಷ್ಟರಾಗಿರುವ ದುಷ್ಟಾತ್ಮರ ಚಿಂತೆ ಬಿಡು! ಯಮಮಂದಿರದಲ್ಲಿ ಸುಖಿಗಳಾಗಿರುವ ಪಾಪಿಗಳು ಮತ್ತೆ ಬರಲಾರರು. ಸಮ್ಮೋದ

ಭರಿತನಾಗಿ, ರಾಜ್ಯಭೋಗಗಳನ್ನು ಅನುಭವಿಸು ! ಸ್ರಕ್, ಚಂದನ, ವನಿತಾ, ವನ-ವಿಹಾರ, ಮಧುಪಾನ, ದ್ಯೂತ ಕ್ರೀಡಾದಿಗಳ ಮಧುರಾಹ್ವಾನವನ್ನು ಮನ್ನಿಸು !

ಅವನ ಮಾತಿಗೆ ನಸುನಕ್ಕು, ದುರ್ಯೋಧನನ ಕಡೆ ನೋಡಿ ದ್ರೋಣಾಚಾರ್ಯನಿಂತೆಂದನು—ಮಹಾರಾಜ ! ಭೀರುವಾಗಬೇಡ ! ಮತ್ತೆ ದ್ಯೂತವಾಡಿ ಪಾಂಡವರನ್ನು ವನಕ್ಕಟ್ಟುವುದು ವನಜಭವನಿಂದಲೂ ಆಗದು. ಯುಧಿಷ್ಠಿರನು ಜೂಜಾಡಿದನೆಂದರೆ—ಅಕ್ಷಹೃದಯವನ್ನವನು ಬೃಹದಶ್ವ ಋಷಿಯಿಂದ ಕಲಿತಿರುವನಾದುದರಿಂದ—ಅವನನ್ನು ನಿನ್ನ ಶಕುನಿಯು ಗೆಲ್ಲಲಾರನು. ಅಕ್ಷರಂಗವನ್ನು ಬಿಟ್ಟು, ರಣರಂಗವನ್ನು ಆರಿಸಿಕೊಂಡರೆ ಭೀಮನ ಗದೆಗೂ, ವಿಜಯನ ಗಾಂಡೀವಕ್ಕೂ, ಶ್ರೀ ಕೃಷ್ಣನ ನೀತಿಗೂ ಗೆಲುವು ತಪ್ಪಿದ್ದಲ್ಲ. ಪಾಂಡವರು ವನದಲ್ಲಿ ನಷ್ಟರಾಗಿರುವರೆಂಬ ನಿನ್ನ ತಮ್ಮನ ನುಡಿಯು ಅವಿಚಾರಿತ ರಮಣೀಯವಾಗಿದೆ. ಶೂರ ಶಿಖಾಮಣಿಗಳು, ಕೃತವಿದ್ಯರು, ಬುದ್ಧಿವಂತರು, ಜಿತೇಂದ್ರಿಯರು, ಅನ್ಯೋನ್ಯ ಸ್ನೇಹಪಾಶಬದ್ಧರು, ಉದಾತ್ತ ಕೃಷ್ಣಾನುಗ್ರಹಪಾತ್ರರು ಆದ ಪಾಂಡವರಿಗೆ ನಾಶವಿಲ್ಲ. ವಿಪ್ರರನ್ನು, ಧರ್ಮವನ್ನು, ಅಚ್ಯುತನನ್ನು ಆಶ್ರಯಿಸಿದವರು ಹಾಳಾಗುವರೇ? ಧರ್ಮರಾಜನೂ ತಮ್ಮಂದಿರಲ್ಲಿ ಅನುರಕ್ತನಾಗಿ, ಅವರ ಶ್ರೇಯಸ್ಸಂಪಾದನೆಯಲ್ಲಿ ಬದ್ಧದೀಕ್ಷಾಕಂಕಣನಾಗಿರುವನು. ನನಗೆ ತೋಚಿದಂತೆ ನಿಮಗೆ ಹಿತವಾಗಲು ಒಂದೇ ಮಾರ್ಗವಿದೆ. ಭೇದ ದಂಡಗಳು ವ್ಯರ್ಥವಾಗುವಲ್ಲಿ, ಸಾಮ ದಾನಗಳನ್ನು ನೀಡಬೇಕೆಂದು ನೀತಿವಿದರು ಪೇಳುವರು. ಅವರನ್ನು ಕರೆತರಿಸಿ, ಒಳ್ಳೆಯ ಮಾತಾಡಿ, ಹಳೆಯ ವೈರವನ್ನಳಿಸಿ, ಅವರ ರಾಜ್ಯವನ್ನವರಿಗಿತ್ತು ಕಳಿಸುವುದೇ ಈಗ ವಿಹಿತವಾಗಿದೆ. ಅಜ್ಞಾತ-ವಾಸವು ಕೂಡ ಇನ್ನು ಕೆಲವೇ ದಿನಗಳು ಉಳಿದಿದೆ ಎಂದು ನಾನು ತಿಳಿದಿರುವೆನು. ಅಥವಾ ನಿಮ್ಮ ಮನಕ್ಕೆ ಸರಿದೋರುವಂತೆ, ಅವರನ್ನು ಕಂಡುಹಿಡಿದು, ಮತ್ತೆ ಅರಣ್ಯವಾಸಕ್ಕೆ ಕಳಿಸಿ, ರಾಜ್ಯವನ್ನು ದಕ್ಕಿಸಿಕೊಳ್ಳಲೂಬಹುದು. ನೋಡಿ, ಆಲೋಚಿಸಿ! ನಿಮಗೆ ಹಿತವಾದ ವಿಧಾನವನ್ನನುಸರಿಸಿ, ನಮಗೂ ಕೌರವ ಕುಲಕ್ಕೂ ಕ್ಷೇಮವನ್ನು ಸಂಪಾದಿಸಿ !

ದ್ರೋಣನಿಂತು ನುಡಿದು ತನ್ನ ಮನದಲ್ಲಿ, 'ಎಷ್ಟು ಹುಡುಕಿದರೇನು? ತಪೋಬಲಸಮನ್ವಿತರಾದ ಪಾರ್ಥರು ಕಾಣಸಿಗರು, ಪ್ರಚ್ಛನ್ನರಾಗಿರುವರು. ಅವರಿಗೆ ದೈವಾನುಗ್ರಹವಿದೆ. ರಾಜ್ಯದಲ್ಲಿದ್ದು ಕುದಿಯುವ ಕೌರವರಂತಲ್ಲದೆ, ವನದಲ್ಲಿದ್ದು ಪಾಂಡವರು ನಿಶ್ಚಿಂತರಾಗಿ ಸುಖವಾಗಿರಲು ಶ್ರೀಶಾನುಗ್ರಹವೇ ಕಾರಣ. ಧರ್ಮಿಷ್ಠರಿಗೆ ಶ್ರೀಶಾನುಗ್ರಹವು ಮೀಸಲಾಗಿದೆಯಲ್ಲವೇ? ಅವರು ಎದುರಿಗೆ ಬಂದು ನಿಂತರೂ, ಪಾಂಡವರಿವರೆಂದು ತಿಳಿಯಲುಬಾರದಂತೆ ಅವರ ಧರ್ಮ, ಸತ್ಯ, ದಯಾ, ದಾನಗಳು ಕವಚದಂತೆ ಮುಚ್ಚಿ ಕಾಪಾಡುತ್ತಿವೆ. ನಿಜವಾಗಿಯೂ ಅಜ್ಞಾತವಾಸವನ್ನು ಮುಗಿಸಿ, ಕುಪ್ಪಸ ಬಿಟ್ಟಿದ ಕ್ರೂರ ಫಣಿಗಳಂತೆ ಎತ್ತಿಬರುವ ಪಾಂಡವರನ್ನು ಕಣ್ಣೆತ್ತಿ ನೋಡುವುದೂ ಕಷ್ಟವಾಗುವುದು! ಕೌರವರಿಗೆ ಕೇಡು ಕಾದಿದೆ. ಇಂತಹ ದುರ್ಮಾರ್ಗರನ್ನು

ಅನ್ನಕ್ಕಾಗಿ ಕಟ್ಟುಬಿದ್ದು ಅನುಸರಿಸುವ ನವುಗೂ ಕೇಡು ಕಾದಿದೆ. ಶ್ರೀಶೇಚ್ಛೆ ಯಂತಾಗಲಿ!' ಎಂದು ಚಿಂತಿಸಿದನು.

ಆಗ ಭೀಷ್ಮನು—ದುರ್ಯೋಧನ! ದ್ರೋಣನಾಡಿದ ಮಾತು ಸತ್ಯವೂ, ಹಿತವೂ ಆಗಿದೆ. ಪಾಂಡವರಲ್ಲಿ ಬುದ್ಧಿಬಲ, ಬಾಹುಬಲ, ದೈವಬಲಗಳ ತ್ರಿವೇಣೀ ಸಂಗಮವಿದೆ. ಧರ್ಮಶೀಲರಾದ ಮಹಾತ್ಮರಿಗೆ ಅರಿಷ್ಟವಿಲ್ಲ. ಅವರನ್ನು ಹಿಡಿದು, ಮತ್ತೆ ವನವಾಸಕ್ಕಟ್ಟುವ ಮಾತೂ ಸ್ವಪ್ನಸಾಮ್ರಾಜ್ಯವೆಂದು ತಿಳಿ! ನನಗೆ ನೀವೆಂತೋ ಅವರೂ ಅಂತೇ! ಆದರೂ ನೀನು ಹಿತವಾವುದೆಂದು ಕೇಳಿರುವೆ ಯಾದುದರಿಂದ ನುಡಿಯುತ್ತಿರುವೆನು. ನಿಜಸ್ಥಿತಿಯನ್ನು ನಿರೂಪಿಸುವುದೆನ್ನ ಕರ್ತವ್ಯ ವೆಂದು ತಿಳಿದಿರುವೆನು. ಸತ್ಯ ಧರ್ಮಗಳಿಗೆ ಅವಿರೋಧವಾಗಿ ನುಡಿಯುವ ಸಮಯವು ಬಂದಾಗ ನುಡಿಯದಿದ್ದರೆ, ದೈವಾಪರಾಧವಾಗುವುದು; ನುಡಿದಂತೆ ನಡೆಯರೆಂಬ ಅರಿವಿದ್ದರೂ ನುಡಿಯಬೇಕಾದ ಮಾತನ್ನು ನುಡಿಯಬೇಕು. ಹಾಗೆ ನುಡಿಯಲು ಅಪರಾಧದ ಅರ್ಧಾಂಶವು ನಷ್ಟವಾಗುವುದು. ನೀವೂ ನಾನುಡಿದಂತೆ ನಡೆದೊಡೆ ಅನರ್ಥವೆಲ್ಲವೂ ದೂರಾಗುವುದು. ಬ್ರಾಹ್ಮಣೋತ್ತಮನಾದ ದ್ರೋಣ ನಾಡಿದುದೆಲ್ಲವೂ ನಿಷ್ಪಕ್ಷಪಾತಿಗಳಿಗೆ ಮಾನ್ಯವಾಗಿದೆ.

ಪಾಂಡವರಲ್ಲಿ ಸಸ್ಮಾನ್ಯ ಗುಣಗಳಗಣಿತವಾಗಿದೆ. ಬ್ರಾಹ್ಮಣ ಭಕ್ತರಾದರೂ ಪರಹಿತಶಕ್ತರು, ನಿರ್ಮಲಮತಿಗಳಂತೆಯೇ ನೀತಿಮತಿಗಳು, ಸತ್ಯಭಾಷರಂತೆಯೇ ಸಾಧುಪೋಷರು, ಸನ್ಮಾರ್ಗ ರಕ್ಷಕರಾದರೂ ದುರ್ಮಾರ್ಗ ಶಿಕ್ಷಕರು, ಧನಯುತ ರಾದರೂ ದಾನರತರು, ವೈಭವೋಪೇತರಾದರೂ ದಯಾರತರು, ಸಾಮ್ರಾಜ್ಯಶಾಸಕ ರಾದರೂ ಶ್ರೀಕೃಷ್ಣದಾಸರು. ರೂಪನವಾವತಾರರಾದರೂ ಅಸ್ಖಲಿತದಮಸಾರರು, ಶಾಸ್ತ್ರವಿಶಾರದರಾದರೂ ವಿನಯಮಹಾದರರು, ಆದ ಪಾಂಡವರನ್ನು ಅನ್ಯಾಯ ದಿಂದ ಅರಣ್ಯಕ್ಕಟ್ಟುವೆನೆಂಬ ಮಾತು ಬಾಲಿಶಮನೋಹರವಾಗಿದೆ. ಇಂತಹ ಪಾಂಡವರಿಗೆ ಇಷ್ಟು ಕಷ್ಟ ಕೊಟ್ಟದ್ದೇ ಸಾಕು! ನಿಮಗೆ ದ್ರೋಹವನ್ನು ಬಗೆಯು ವವನಲ್ಲ ನಾನು! ಇದು ನಿಮಗೂ ಗೊತ್ತು. ಹಿತವೆಂದು ನುಡಿಯುವೆನು. ವೃದ್ಧ ನಾದೆನ್ನ ಮಾತನ್ನು ಕೇಳಿ!

ಧರ್ಮರಾಜಾದಿ ಪಾಂಡವರು ಕೃಷ್ಣೆಯೊಡನೆ ಸಾಮಾನ್ಯ ಜನರಂತೆ ಅನಾವೃತ ರಾಗಿ, ಬಹುಜನ ಮಧ್ಯದಲ್ಲಿ ಇರುವರೆಂಬ ಭ್ರಮೆಯನ್ನು ಬಿಡಿ! ಸಮಯಭಂಗ ವನ್ನೆಂದಿಗೂ ಮಾಡಲಾರನು ನಮ್ಮ ಧರ್ಮರಾಜ! ಅವನಿಗೆ ಅಸೂಯೆ ಇಲ್ಲ, ಅಧರ್ಮರತಿಯೂ ಇಲ್ಲ; ಅವನು ದಾನಶೀಲನೂ ಅಹುದು, ಸತ್ಯವ್ರತನೂ ಅಹುದು; ಅವರೆಲ್ಲರೂ ಒಂದೇ ನಗರದಲ್ಲಿ, ಸ್ವರೂಪವನ್ನು ವೇಷಾಂತರದಿಂದ ಮುಚ್ಚಿ, ಅಜ್ಞಾತವಾಸದ ಉಳಿದ ಕೆಲ ದಿನಗಳನ್ನು, ನನಗೆ ತೋಚುವಂತೆ—ಆರೆಂಟು ದಿನ ಗಳನ್ನು—ನೂಕಿ ಕಳೆಯುತ್ತಿರುವರು. ಪತಿವ್ರತೆಯಾದ ಪಾಂಚಾಲಿಯೂ ಅಲ್ಲೇ ಇರುವಳು. ಅವರನ್ನು ಹುಡುಕಿ ತಿಳಿಯುವುದೆಂದರೆ ಮೃಗತೃಷ್ಣಾ ಜಲಪಾನವೇ ಸರಿ!

ಶುಭ ಲಕ್ಷಣನಾದ ಧರ್ಮರಾಜನನ್ನು, ಅವನಿದ್ದ ದೇಶದ ಸುಭಿಕ್ಷೆಯಿಂದ ತಿಳಿಯ ಬೇಕು. ಕಸ್ತೂರಿಯನ್ನು ಗಂಧದಿಂದ ತಿಳಿಯುವಂತೆ ಧರ್ಮರಾಜಾದಿ ಪಾಂಡವರನ್ನು ಗುರ್ತಿಸುವ ಲಕ್ಷಣಗಳನ್ನು ಹೇಳುವೆನು, ಕೇಳು !—

ಧರ್ಮರಾಜನಿರುವ ದೇಶದ ಜನರು ಪ್ರಾಯಃ ದಯಾದಾನಶೀಲರು, ಅನಸೂಯಕರು, ನಿಷಿದ್ಧಕರಣವಿಮುಖರು, ಪ್ರಿಯವಾದಿಗಳು, ದಾಂತರು, ಶಾಂತರು, ಪರೋಪಕಾರ ಪರಾಯಣರು ಆಗಿರುವರು. ಅಂತೆಯೇ ಅವರಿಗೆ ಕ್ಷಾಮಡಾಮರಾದ್ಯುಪದ್ರವಗಳಿಲ್ಲದೆ, ಅವರು ಹೃಷ್ಟಪುಷ್ಟರಾಗಿರುವರು. ಅಂತಹ ದೇಶದಲ್ಲಿ ಪೂರ್ಣಾಹುತಿಗಳೊಡನೆ ಬ್ರಹ್ಮಘೋಷಗಳು ಕೇಳಬರುವುವು. ಸಸ್ಯಸಂಪತ್ತಿನೊಡನೆ ತಳಿಲ ತೋರಣಗಳು ಕಾಣಸಿಗುವುವು. ಮತ್ಸರಿಗಳೊಡನೆ ಮಿತ್ರದ್ರೋಹಿಗಳು ದೇಶವನ್ನು ಬಿಟ್ಟೋಡುವರು. ಅವನಿರುವಲ್ಲಿ ಮಳೆಗಳು ಕಾಲಕ್ಕೆ ಸರಿಯಾಗಿ ಬರುವುವು; ಮಹೀಮಂಡಲವು ಸಸ್ಯ ಸಮೃದ್ಧವಾಗಿರುವುದು; ಮಾರಿಕಾದ್ಯುಪದ್ರವರಹಿತವು, ಝಂಝಾವಾತ ನದೀಪೂರಾದಿ ವಿಹೀನವು ಆದ ದೇಶವಾವುದೋ, ಗೋಕ್ಷೀರ ಧನಧಾನ್ಯಾದಿ ಸಮೃದ್ಧವಾವುದೋ, ಆ ದೇಶದಲ್ಲಿ ಧರ್ಮರಾಜನನ್ನು ಕಾಣಬಹುದು. ಶಬ್ದ ಸ್ಪರ್ಶ ರೂಪ ರಸ ಗಂಧ ಬಹುಲವಾಗಿ, ಸುಖಪ್ರದವಾಗಿರುವ ದೇಶವಾವುದೋ, ಅಲ್ಲಿ ಯುಧಿಷ್ಠಿರನಿರುವನೆಂದು ತಿಳಿಯಿರಿ ! ಧರ್ಮರಾಜನಿರುವಲ್ಲಿ ವರ್ಣಾಶ್ರಮ ಧರ್ಮಗಳು ಅಸ್ತವ್ಯಸ್ತವಾಗದೆ ನಡೆಯುವುವು; ಸರ್ವಜನರು ಸಂತುಷ್ಟರಾಗಿ, ಧರ್ಮತತ್ಪರರಾಗಿರುವರು. ಅಲ್ಲಿ ದೇವತಾ ಅತಿಥಿ ಪೂಜನಗಳು, ಯಜನದಾನಗಳು ಯಥೇಚ್ಛವಾಗಿ ನಡೆಯುತ್ತಿರುವುವು. ಅಶುಭಗಳು ದೂರ ತೊಲಗಿ, ಶುಭ ಸಿದ್ಧಿಯಾಗುತ್ತಿರುವುದು. ಇಂತಹ ಲಕ್ಷಣಗಳಿಂದ ಧರ್ಮರಾಜನ ವಾಸಸ್ಥಾನವನ್ನು ತಿಳಿಯಬಹುದಾಗಲಿ, ದೇವಗುಪ್ತನಾದ ಅವನನ್ನಾಗಲಿ, ತದನು ರೂಪ ಗುಣಸಂಪನ್ನರಾದ ಅವನ ಸತೀ ಸೋದರರನ್ನಾಗಲಿ ತಿಳಿಯಲು ವಿಪ್ರವರರಿಗೆ ಅಸದಳವೆಂದಮೇಲೆ, ದೂತಮಾತ್ರರಿಂದೇನಾಗುವುದು? ಪೂರ್ವಾಪರಗಳನ್ನು ಚನ್ನಾಗಿ ವಿಚಾರಿಸಿ, ಮುಂದಿನ ಕರ್ತವ್ಯವನ್ನು ನಿಶ್ಚಯಿಸಿರಿ. ಆಚಾರ್ಯ ವಚನದಂತೆ ಸಂಧಿಯೇ ಸಮಂಜಸವೆಂದು ನನಗೂ ತೋರುತ್ತಿದೆ; ಆದರ ಮೇಲೆ ನಿಮಗೆ ಹಿತವೆನಿಸುವಂತೆ ಮಾಡಿರಿ ! ಎಂದು ನುಡಿದು ಸುಮ್ಮನಾದನು.

ಆಗ ಕೃಪಾಚಾರ್ಯನಿಂತೆಂದನು—ರಾಜನ್ ! ವಯೋಜ್ಞಾನವೃದ್ಧನಾದ ಭೀಷ್ಮನ ಮಾತು ಸಕಲ ಶ್ರೇಯಃಸಾಧಕವಾಗಿದೆ. ಆದರೂ ನಿಮಗೆ ಸಮ್ಮತವೂ ಹಿತವೂ ಆದ ನನ್ನ ಮಾತನ್ನೂ ಕೇಳಿ! ಬುದ್ಧಿಯುಕ್ತರು ಬಹುಜನರಿರುವಲ್ಲಿ ಬಹು ವಿಧವು, ಪರಸ್ಪರ ವಿರೋಧಜನಕವು ಆದ ವಚನಗಳು ಕೇಳಬಂದರೆ, ಅದು ಆಶ್ಚರ್ಯವಲ್ಲ. ಪಾಂಡವರು ತಮ್ಮ ಮಾತಿನಂತೆ ವನವಾಸವನ್ನು ಮಾಡಿ ಮುಗಿಸಿದರು. ಅಜ್ಞಾತವಾಸವೂ ಮುಗಿಯುತ್ತಾ ಬಂತು. ಅವರು ಕಷ್ಟಸಂತಪ್ತರಾಗಿ, ಕೌರವರೆಂದರೆ ವಿಷವನ್ನು ಕಾರುತ್ತಿರಬಹುದು. ಅಂತಹವರ ಸಂಗಡ ಸಂಧಿಯು

ದುಷ್ಕರವೇ ಸರಿ! ನಾವೀಗ ಸುಮ್ಮನಿರಲಾಗದು. ಅಣುವೆಂದಗ್ನಿಯನ್ನು ಅಲಕ್ಷಿಸಿದರೆ, ಮುಂದೆ ಮಹಾನರ್ಥವಾಗುವಂತೆ, ಅಡಗಿರುವ ಹುಲಿಯಂತೆ ಹಾರಿ ಬೀಳಲಿರುವ ಪಾಂಡವರನ್ನು ಉಪೇಕ್ಷಿಸಲಾಗದು. ಮನುಜರೆಲ್ಲರಿಗೂ ಶತ್ರು-ಮಿತ್ರರಿರುವರು. ಇಂದು ನಿರ್ಬಲರಾಗಿರುವ ಪಾಂಡವರು ಮಿತ್ರಸಹಾಯದಿಂದ ವಿಜೃಂಭಿಸುವ ಮುನ್ನ, ನಾವೂ ಮಿತ್ರಸಹಾಯವನ್ನು ಪಡೆದು ಸಿದ್ಧವಾಗಿರುವುದೇ ಈಗಿನ ಕರ್ತವ್ಯ. ಅವರನ್ನು ಕಂಡುಹಿಡಿದು ವನವಾಸಕಟ್ಟುವ ಮಾತೀಗ ಉಳಿದಿಲ್ಲ. ಇರುವ ನಾಲ್ಕಾರು ದಿನಗಳ ಅಜ್ಞಾತವಾಸಾವಧಿಯಲ್ಲಿ, ಅವರನ್ನು ಹುಡುಕುವ ಹವ್ಯಾಸವನ್ನು ಬಿಟ್ಟು, ಸೈನ್ಯಸಂಗ್ರಹಣತತ್ಪರರಾಗಿರಿ. ಅಜ್ಞಾತದಿಂದ ಹೊರಬಂದು ಮೇಲೆರಗುವ ಪಾಂಡವರ ವಿಕ್ರಮಾಗ್ನಿಗೆ ಶಲಭಗಳಾಗಿ ಹಾಳಾಗಬೇಡಿ! ನಮಗೂ ವಿಕ್ರಮದುರ್ದಮವಾದ ಸೈನ್ಯವಿದೆ. ಮಿತ್ರರೂ ಲಕ್ಷಗಟ್ಟಲೆ ಇದ್ದಾರೆ. ಅವರು ಕೌರವೇಂದ್ರನಿಗಾಗಿ ಕಾದಿ, ಪ್ರಾಣಗಳನ್ನು ಪಣವಾಗಿಡಲು ಸಿದ್ಧರಿರುವರು. ನನಗೆ ತೋಚಿದ್ದನ್ನು ನುಡಿದಿರುವೆನು. ಒಂದು ವೇಳೆ ಪಾಂಡವರು ಬಂಧುಕಲಹಕ್ಕಂಜಿ, ಸಂಧಿಗೆ ಬಂದರೆ, ಅದಕ್ಕಿಂತ ಉಭಯಶ್ರೇಯೋದಾಯಕವಿನ್ನೊಂದಿಲ್ಲ. ಸಂಧಿಯಾದೊಡೆಯೂ, ಸೈನ್ಯಸಂಗ್ರಹವು ಶ್ರೀ ಕೀರ್ತಿ ವಿಕ್ರಮ ವರ್ಧಕವಾಗುವುದಾಗಲಿ, ಅದರಿಂದ ನಷ್ಟವಿಲ್ಲ. ಸೈನ್ಯದಂತೆ ಕೋಶವೂ ವೃದ್ಧವಾಗಲಿ!

ಎಲ್ಲರ ಮಾತನ್ನೂ ಕೇಳಿ, ದುರ್ಯೋಧನನು ತನ್ನ ಮನದ ನಿಶ್ಚಯವನ್ನಿಂತು ಸಭೆಗರುಹಿದನು—

ಸಭಾಸದರೆ! ಕೇಳಿ ನನ್ನ ಮಾತನ್ನು! ಭೀಮಸೇನ, ಬಲರಾಮದೇವ, ಶಲ್ಯ, ಕೀಚಕರೆಂಬ ನಾಲ್ವರು ಸಮಾನ ಬಲರೆಂದು ಪ್ರಸಿದ್ಧವು. ಐದನೆಯ ವೀರನನ್ನು ತತ್ಸಮಾನನೆನಿಸಿದವನನ್ನು ನಾವು ಕೇಳಿ ತಿಳಿದಿಲ್ಲ. ಆ ನಾಲ್ವರು ಬಲೋತ್ಸಾಹಸಮನ್ವಿತರು ಮತ್ತು ಬಾಹುಯುದ್ಧವಿಶಾದರು. ಈಗ ಕೀಚಕನನ್ನು ಕೊಂದವನೆಂದರೆ ಭೀಮಸೇನನೇ ಆಗಲಿ, ದೂರದ ದ್ವಾರಾವತೀ ಮದ್ರದೇಶಗಳಲ್ಲಿರುವ ಬಲರಾಮ ಶಲ್ಯರಾಗಲಾರರು. ಭೀಮನಲ್ಲಿ ಗಂಧರ್ವನೆಂಬ ನೆವದಿಂದ ನಿಗೂಢ ನಿಶೀಥದಲ್ಲಿ ಗರ್ವಿತಮತಿಯಾದ ಕೀಚಕನನ್ನು ಸಂಹರಿಸಿ ವಿಕೃತರೂಪನನ್ನಾಗಿ ಸಿರುವನೆಂಬುದಕ್ಕೆ ಸಂಶಯವಿಲ್ಲ. ಸೈರಂಧ್ರಿಯೇ ದ್ರೌಪದಿ; ಗಂಧರ್ವನೇ ಭೀಮಸೇನನು; ಆದರೆ ಮಿಕ್ಕ ನಾಲ್ವರ ಸುಳಿವಿಲ್ಲದಿದ್ದುದರಿಂದ ಸ್ವಲ್ಪ ಸಂಶಯವಾಗಿದೆ. ಕೀಚಕನನ್ನು, ಉಪಕೀಚಕರನ್ನು ಕೂಡ ಕಾಲಲೊರೆಸಿ ಕೊಲ್ಲಲು ಭೀಮನಿಗಲ್ಲದೆ ಮತ್ತಾರಿಗೂ ಸಾಧ್ಯವಲ್ಲ. ಮಿಕ್ಕ ನಾಲ್ವರೂ ಪ್ರಚ್ಛನ್ನರಾಗಿ ಅಲ್ಲೇ ನೆಲೆಸಿರುವರೆನ್ನಲು, ಪಿತಾಮಹನ ವಚನಗಳು ಸಾಕ್ಷಿಯಾಗಿವೆ. ಅವನು ಪೇಳಿದ ಸುಭಿಕ್ಷ ಗೋಸಮೃದ್ಧಿಗಳು ನಮ್ಮ ಚಾರರಿಗೂ ಗೋಚರವಾಗಿವೆ.

ವಿರಾಟನು ಕೀಚಕ ಬಲದರ್ಪಿತನಾಗಿ ನಮ್ಮನ್ನು ಲಕ್ಷ್ಯಮಾಡದಿರುವನು. ಈಗ ಹಲ್ಲು ಕಿತ್ತ ಹಾವಿನಂತೆ ನಿರ್ಬಲನಾದ ವಿರಾಟನನ್ನೆದುರಿಸಿ, ಅವನ ಗೋಧನ

ವನ್ನು ಅಪಹರಿಸುವುದರಿಂದ ನಮ್ಮ ಕಾರ್ಯವಾಗುವುದು. ಅಲ್ಲಿ ಪಾಂಡವರಿದ್ದರೆ ಅವನಿಗೆ ಸಹಾಯಕರಾಗಿ ಬಾರದಿರರು; ಬಂದರೆ ಸಿಗದಿರರು; ಸಿಕ್ಕರೆ ಸಮಯಭಂಗ ವಾಯಿತೆಂದು ಮತ್ತೆ ವನವಾಸಕ್ಕೆ ಅಟ್ಟುವುದನ್ನು ನಾವು ಬಿಡೆವು. ಪಾಂಡವ ರಲ್ಲಿಲ್ಲದೆ, ಸಹಾಯಕರಾಗಿ ಬಾರದೆ ಇದ್ದರೆ, ಆಗ ಗೋಧನವು ಲಕ್ಷೋಪಲಕ್ಷವಾಗಿ ನಮಗೆ ದಕ್ಕುವುದು. ಎರಡು ವಿಧವಾಗಿಯು ನಮಗೆ ಲಾಭಕರವಾದ ಗೋ ಗ್ರಹಣವೇ ಕರ್ತವ್ಯವಾಗಿದೆ.

ದುರ್ಯೋಧನನ ವಚನವನ್ನು ಶ್ಲಾಘಿಸಿ, ಕರ್ಣ, ಶಕುನಿ, ದುಶ್ಶಾಸನರು ಕರತಾಡನವನ್ನು ಮಾಡಿದರು. ಆಗ ತ್ರಿಗರ್ತರಾಜನಾದ ಸುಶರ್ಮನು ಎದ್ದು ನಿಂತು, ರಾಜರಾಜನಿಗಿಂತು ಬಿನ್ನವಿಸಿದನು—

ಹಿಂದೆ ಕೇಕಯರೂ ಸಾಲ್ವರೂ ಸಹಾಯವಾಗಿ ಬರಲು ವಿರಾಟನು ನನ್ನನ್ನು ರಣರಂಗದಲ್ಲಿ ಪರಾಭವಿಸಿರುವವನು. ಕೀಚಕನು ಸೈನ್ಯಪತಿಯಾಗಿದ್ದುದರಿಂದ ನನಗೆ ಸೋಲಾಯಿತು. ಆ ಸೇಡನ್ನೀಗ ತೀರಿಸಬೇಕೆಂದು ತವಕಿಸುತ್ತಿರುವ ನನಗೆ ಅವಕಾಶವನ್ನು ಕೊಡು! ಸಸೈನ್ಯನಾಗಿ ಹೋಗಿ, ಕೀಚಕರು ಸತ್ತಿರುವುದರಿಂದ ನಿರ್ಬಲನಾಗಿರುವ ವಿರಾಟನ ನಗರವನ್ನು ಮುತ್ತಿ, ಅವನ ಗೋಧನವನ್ನು ಅಪಹರಿಸಿ ತರುವೆನು. ಅವನ ಗರ್ವವನ್ನಡಗಿಸಿ ಬರುವೆನು. ಒಂದು ವೇಳೆ ಪಾಂಡವ ರವನಿಗೆ ಸಹಾಯರಾಗಿ ಬಂದರೆ, ಸಮಯಭಂಗ ವನವಾಸಗಳನ್ನ ರ್ಪಿಸಿ, ನಿನ್ನ ಕಾರ್ಯ ಸಾಧಿಸುವೆನು. ಕೌರವತ್ರಿಗರ್ತರು ಕಲೆತು ವಿರಾಟನನ್ನು ಮುತ್ತಿ, ಹತ್ತಿಕ್ಕಿ, ಅವನ ಗ್ರಾಮಗಳನ್ನೂ, ಧನರತ್ನಗಳನ್ನೂ ಪಡೆದು ಹಂಚಿಕೊಳ್ಳಬಹುದು.

ಸುಶರ್ಮನ ಮಾತನ್ನು ಮೆಚ್ಚಿ ಕರ್ಣನಿಂತೆಂದನು—ರಾಜನ್! ಸುಶರ್ಮನು ಕಾಲಾನುಕೂಲವಾಗಿಯೂ, ಹಿತಕರವಾಗಿಯೂ ನುಡಿದಿರುವನು. ವಿರಾಟನನ್ನು ಮಟ್ಟಿಕ್ಕುವುದೂ ನಿನಗೆ ಸಮ್ಮತವಾಗಿದೆ. ಬೇಗನೆ ಸೈನ್ಯಗಳನ್ನು ಹೊರಡಿಸು. ಎರಡು ಭಾಗವಾಗಿ ಹೋಗುವುದುಚಿತವೆಂದು ನನಗೆ ತೋರುತ್ತಿದೆ. ಪ್ರಜ್ಞಾ ವಂತನು, ಕುಲವೃದ್ಧನು ಆದ ಪಿತಾಮಹನಿರುವನು. ಆಚಾರ್ಯನಾದ ದ್ರೋಣ ನಿರುವನು. ಕೃಪಾಚಾರ್ಯನಿರುವನು. ಇವರಿಗೆ ಸಮ್ಮತವಾದಂತೆ ಮಾಡು! ಕಾರ್ಯಸಾಧನದಲ್ಲಿ ಆಲಸ್ಯವು ಕೂಡದು. ರಾಜ್ಯಧನಹೀನರು; ಬಲಪೌರುಷ ರಹಿತರು ಆದ ಪಾಂಡವರಿಂದ ನಮಗೇನು? ಅವರು ಜೀವಂತರಾಗಿಲ್ಲ; ಇದ್ದರೂ ಸತ್ತಂತೇ ತಿಳಿ! ಭಯವಿಲ್ಲದೆ ವಿರಾಟನಗರವನ್ನು ಮುತ್ತಿ, ಅವನ ಗೋಗಣವನ್ನೂ ಧನರತ್ನಗಳನ್ನೂ ಅಪಹರಿಸೋಣ.

ಆಗ ಕರ್ಣನ ಮಾತಿಗೆ ಸಮ್ಮತಿಸಿ ದುರ್ಯೋಧನನು, ಶಾಸನಕಾರ್ಯ ನಿಯುಕ್ತನಾದ ದುಶ್ಶಾಸನನನ್ನು ನೋಡಿ, 'ಬೇಗನೆ ಸೈನ್ಯಗಳನ್ನು ಹೊರಡಿಸು!

ತ್ರಿಗರ್ತೇಶನಾದ ಸುಶರ್ಮನು ತನ್ನ ಸೈನ್ಯವನ್ನು ತೆಗೆದುಕೊಂಡು, ಮೊದಲು ಪ್ರಯಾಣಿಸಲಿ! ಅವನು ವಿರಾಟನ ಗೋಗಣವನ್ನು ದಕ್ಷಿಣ ದಿಕ್ಕಿನಲ್ಲಿಂದ ಮುತ್ತಿ ಹಿಡಿಯುವನು. ಆಗ ಮತ್ಸ್ಯರಾಜನು ಸಸೈನ್ಯನಾಗಿ ಅವನೊಡನೆ ಕಾದಲು ಬರುವನು. ಮರುದಿನ ನಾವೆಲ್ಲರೂ ಚತುರಂಗಬಲ ಸಮನ್ವಿತರಾಗಿ ಉತ್ತರ ಗೋಗ್ರಹಣವನ್ನು ನಡೆಸೋಣ! ಆಗ ನಿರುಪಾಯರಾಗಿ ಪಾಂಡವರು—ಬದುಕಿ ಅಲ್ಲಿದ್ದರೆ—ತಪ್ಪದೆ ಕದನರಂಗಕ್ಕಿಳಿದುಬರುವರು. ತ್ರಿಗರ್ತರೂ ನಾವೂ ಸಂಕೇತ ಸ್ಥಲದಲ್ಲಿ—ಮತ್ತೆ ವಿಜಯಾನಂತರ ಕಲೆಯುವುದು. ಕೃಷ್ಣಪಕ್ಷ ಸಪ್ತಮಿಯ ದಿನ ಸುಶರ್ಮನು ನಡೆಯಲಿ! ನಾವು ಅಷ್ಟಮಿಯಂದು ದಿಗ್ವಿಜಯ ಯಾತ್ರೆಗೆ ಹೊರಡುವೆವು' ಎಂದಪ್ಪಣೆ ಇತ್ತನು.

ಇಂತು ನಿಶ್ಚಯಿಸಿ ಕೌರವತ್ರಿಗರ್ತರು ವಿರಾಟರಾಜನ ಗೋಗಣವನ್ನು ಹಿಡಿದು ತರಲು ಹೊರಟರು.

## ದಕ್ಷಿಣ ಗೋಗ್ರಹಣ

ವಿರಾಟನಗರದಲ್ಲಿ ಪಾಂಡವರು ದುಷ್ಕರವಾದ ಅಜ್ಞಾತವಾಸದ ಕೊನೆದಿನಗಳು ಎಂತು ಕಳೆಯುವುವೊ ಎಂಬ ಚಿಂತೆಯಿಂದ ಬಹುಜಾಗರೂಕರಾಗಿ ನಿವಸಿಸುತ್ತಿದ್ದರು. ಸುಶರ್ಮನು ದುರ್ಯೋಧನಾಜ್ಞಾನುಸಾರವಾಗಿ ಚತುರಂಗಬಲ ಸಮನ್ವಿತನಾಗಿ ಹೊರಟನು. ಪರಶು, ಖಡ್ಗ, ಚರ್ಮ, ಕುಂತ, ಪ್ರಾಸ, ತೋಮರ, ಮುದ್ಗರ, ಗದಾದಿ ವಿವಿಧಾಯುಧಗಳನ್ನು ಧರಿಸಿ, ಅಭೇದ್ಯ ಕವಚಗಳನ್ನು ತೊಟ್ಟು, ತ್ರಿಗರ್ತ ಸೈನಿಕರು ಸಿಂಹನಾದವನ್ನು ಮಾಡುತ್ತಾ ತೆರಳಿ, ದಕ್ಷಿಣದಿಶೆಯಲ್ಲಿ ಮತ್ಸ್ಯ ನಗರವನ್ನು ಮುತ್ತಿ, ಅಲ್ಲಿದ್ದ ಲಕ್ಷ ಗೋವುಗಳನ್ನು ಹಿಡಿದೋಡಿಸಿದರು. ರಾತ್ರಿಯಲ್ಲಿ ಸಂಚರಿಸುತ್ತಾ, ಪ್ರಜರಿಗೆ ಗೋಚರರಾಗದೆ, ಉದ್ಧತವರ್ತನರಾಗದೆ, ಬಿಡಿದಿಗಳನ್ನು ದಾಟಿ ಬೇಗ ಬಂದು ಮುತ್ತಿದ ತ್ರಿಗರ್ತ ಸೈನ್ಯದ ಕೋಲಾಹಲ ತರ್ಜನತಾಡನಗಳಿಗೆ ಹೆದರಿ, ವಿರಾಟನ ಗೋಸಮೂಹವು ದಿಕ್ಕೆಟ್ಟು ಓಡತೊಡಗಿತು. ಅದನ್ನು ಕಂಡು ಗೋಪಾಲಕರು ತ್ರಿಗರ್ತರೆಂದು ತಿಳಿದು, ಸಾಯುಧರಾಗಿ ಬಂದು ಹೋರಾಡಿ ಹೆಣಗಿದರು. ಸಾಮಾನ್ಯ ಗೋಪಾಲಕರು ಮಹಾ ಸೈನ್ಯದ ಮುಂದೆ ನಿಲ್ಲಲಾರದೆ, ಅಶ್ವಿಕರ ಬಾಣ ಖಡ್ಗಾದಿಗಳಿಗೆ ಬಲಿಯಾಗಿ ಕೆಳಗೆಬಿದ್ದರು. ಕೆಲವರು ಗೋಪಾಲರು ರಣರಂಗದಿಂದ ನುಸುಳಿ, ವೈಗಾಯಗಳಿಂದ ನೆತ್ತರು ಧಾರೆಯಾಗಿ ಸುರಿಯುತ್ತಿರಲು, ಏದುಸಿರಿಡುತ್ತಾ, ಮತ್ಸ್ಯಧರಣೀನಾಥನ ಸಭೆಯನ್ನು ಹೊಕ್ಕು, ಆರ್ತಮೂರ್ತಿಗಳಾಗಿ ಭೂಭರ್ತನಿಗಿಂತು ಮೊರೆಯಿಟ್ಟರು—

ಮಹಾರಾಜ! ತ್ರಿಗರ್ತರಾಜನಾದ ಸುಶರ್ಮನು ಸೈನ್ಯದಿಂದ ಕೂಡಿಬಂದು. ನಮ್ಮೆಲ್ಲ ಗೋವುಗಳನ್ನು ಹಿಡಿದುಕೊಂಡು ಹೋಗುತ್ತಿರುವನು. ಚತುರಂಗಬಲ

ದಿಂದ ಬಂದು ಕಾದುವ ತ್ರಿಗರ್ತರನ್ನೆದಿರಿಸಿ, ಗೋಪಾಲ ಭಟರೆಷ್ಟೋ ಜನ ಸತ್ತು ಬಿದ್ದರು. ತಂತ್ರೀಪಾಲನಿಗೂ, ನಿಮಗೂ ತಿಳಿಸಲು ಬಂದಿರುವೆವು. ಬೇಗಬಂದು ಗೋವುಗಳನ್ನು ಬಿಡಿಸಿ! ಇಲ್ಲದಿರೆ ತ್ರಿಗರ್ತರರು ಗೋಗಣವನ್ನಪಹರಿಸಿಕೊಂಡು ಪೋಗುವರು. ತ್ವರೆ ಮಾಡಿ!'

ಗೋಪಾಲಕರ ಮಾತನ್ನು ಕೇಳಿ ವಿರಾಟನು ಬೆಚ್ಚಿಬಿದ್ದನು. ಅವನ ಮನದಲ್ಲಿ ಆಶ್ಚರ್ಯ ಕೋಪರಸಗಳು ತುಂಬಿತುಳುಕಿ, ಕಣ್ಣಲ್ಲಿ ಕ್ರೋಧಬಿಂದುಗಳಾಗಿ ಹೊರ ಬಂದವು. 'ಏನೇನು? ಸುಶರ್ಮನಿಷ್ಟು ಕೊಬ್ಬಿದನೆ? ಮತ್ತೆ ನನ್ನ ಗೋಧನ ವನ್ನಪಹರಿಸುವಷ್ಟು ಧೈರ್ಯವವನಿಗೆಂತು ಬಂತು? ಆಗಲಿ! ಮೊನ್ನೆ ಸೋತು ಹೋದದ್ದನ್ನು ಮರೆತು ಬಂದ ತ್ರಿಗರ್ತನಿಗೆ ಸರಿಯಾದ ಬುದ್ಧಿಯನ್ನು ಕಲಿಸಿ ಕಳಿಸು ವೆನು' ಎಂದು ಗೋಪಾಲಕರನ್ನು ಕಳಿಸಿ, ವಿರಾಟನು, ಸರ್ವಸೇನಾಪತಿಯನ್ನು ಕಂಡು ಇಂತಾಜ್ಞಾಪಿಸಿದನು—

ಸೈನ್ಯಗಳೆಲ್ಲವೂ ಶೀಘ್ರವಾಗಿ ಹೊರಡಲಿ! ಇಲ್ಲದಿರೆ ಕಳ್ಳ ಸುಶರ್ಮನು ಗೋಗಣದಿಂದ ಕೂಡಿ ದೂರಸೇರುವನು. ದಂಡನಾಥರಿಗೆ ತತ್‌ಕ್ಷಣವೇ ಕವಚ ಆಯುಧಧಾರಿಗಳಾಗಿ, ಚತುರಂಗಬಲದೊಡನೆ ಹೊರಡುವಂತೆ ಆಜ್ಞಾಪಿಸು! ಆಲಸ್ಯಬೇಡ!'

ವಿರಾಟನಾಜ್ಞೆಯಂತೆ ಮತ್ಸ್ಯಸೇನೆಯು ವೀರಾಲಾಪ ಕೋಲಾಹಲವಾಗಿ, ನಗರದಕ್ಷಿಣ ಪಾರ್ಶ್ವದ ಬಯಲನ್ನು ಸೇರಿತು. ರಥನೇಮೀಧ್ವಾನಗಳೊಡನೆ ಭೇರೀ ಭಾಂಕಾರಗಳು ಮುಗಿಲನ್ನು ಮುಟ್ಟಿದವು. ಹಯಹೇಷಾರವಗಳೊಡನೆ ಗಜ ಘೀಂಕಾರ ಗಳು ಸೈನಿಕರ ಕಿವಿಗಡಚಿಕ್ಕುವಂತೆ ಮಾಡಿದವು. ಶಸ್ತ್ರ ಕವಚಾದಿ ಮರ್ಮರಗಳು ಹುಂಕಾರ ಸಹಿತವಾಗಿ ಶತ್ರುಭಯಂಕರವಾದವು. ವಿರಾಟನು ತನ್ನ ಸಾರಥಿಯನ್ನು ಕರೆದು, ವಿಚಿತ್ರಾಶ್ವಗಳನ್ನು ಕಟ್ಟಿ, ಸಕಲಾಯುಧಗಳನ್ನಿಟ್ಟು, ಧ್ವಜವನ್ನೆತ್ತಿ ಅವನು ತಂದ ರಥದಲ್ಲಿ ಕೂತು ಯುದ್ಧಸನ್ನದ್ಧನಾಗಿ ಹೊರಟನು. ಕಾಂಚನಬಿಂದು ಸಂದೋ ಹಾಲಂಕೃತವಾದ ಕವಚವನ್ನಿಟ್ಟು, ಬಾಯ್ತೆಗೆದು ನಿಂತ ಸರ್ಪಯುಗದಂತೆ ಭಯಂಕರ ವಾದ ಬಿಲ್ಲನ್ನು ಧರಿಸಿ, ವೀರವಿಹಾರ ಕುತೂಹಲಿಯಾಗಿ ತೆರಳಿದ ವೃದ್ಧ ವಿರಾಟನನ್ನು ಅವನ ತಮ್ಮಂದಿರಾದ ಶತಾನೀಕ, ಮದಿರಾಶ್ವ, ಸೂರ್ಯದತ್ತರು ಹಿಂಬಾಲಿಸಿ ಹೊರಟರು.

ಸರ್ವಾಯಸವಾದ ದಿವ್ಯ ಕವಚವನ್ನು ಧರಿಸಿ ಶತಾನೀಕನು ರಥ ಗಜ ತುರಗ ಭಟ ಸಮುದ್ಭ್ರಾಂತವಾದ ತನ್ನ ಸೇನೆಯೊಡನೆ ಪ್ರಿಯನಾದ ವಿರಾಟನನ್ನನುಸರಿಸಿದನು. ಮದಿರಾಶ್ವನು ಸೂರ್ಯಚಿಹ್ನ ಸಮಲಂಕೃತವು, ಕನಕವರ್ತುಲಶತವು, ಶತರಂಧ್ರವು ಆದ ಕನಕ ಕವಚವನ್ನು ಧರಿಸಿ, ಧರಣೀ ಪರಾಗವು ಗಗನವನ್ನು ಮುಟ್ಟುವಂತೆ ನಡೆಯುವ ಮದ್ದಾನೆಗಳ ಸೈನ್ಯದೊಡನೆ, ಅಣ್ಣನಿಗೆ ಸಹಾಯವಾಗಿ ಬಂದನು. ಸೂರ್ಯದತ್ತನು ಬೆಳ್ಳಿಯ ತಗಡನ್ನು ಹೊದಿಸಿದ ಉಕ್ಕಿನ ಕವಚವನ್ನು ಧರಿಸಿ,

ತನ್ನ ಸೈನಿಕರು ಹಿಡಿದ ಭಯದ ದಿವ್ಯಾಯುಧಗಳ ಕಾಂತಿಯು, ಹುಟ್ಟುತ್ತಿದ್ದ ಸೂರ್ಯನ ತೇಜವನ್ನಡಗಿಸುತ್ತಿರಲು, ಸರಭಸವಾಗಿ ಹೊರಟನು.

ಧವಳಕುಂಡಲ ಕವಚಾಲಂಕೃತನಾಗಿ ವಿರಾಟನ ಹಿರಿಯಮಗನಾದ ಶಂಖನು ವೈರಿ ವೀರಗರ್ವನಿರ್ವಾಪಣ ನಿಶ್ಶಂಕನಾಗಿ, ಶಂಖಧ್ವಾನವನ್ನು ಮಾಡುತ್ತಾ, ದಿವ್ಯ ರಥದಲ್ಲಿ ಕೂತು, ಜಿಂಕೆಗಳ ಹಿಂಡಿನ ಮೇಲೆರಗುವ ಸಿಂಹದಂತೆ ಗರ್ಜಿಸುತ್ತಾ ಬಂದನು.

ಅನೇಕ ಯೋಧರು ವಿವಿಧಾಯುಧಗಳನ್ನು ಧರಿಸಿ, ಸ್ವಯೋಗ್ಯವಾಹನಗಳನ್ನೇರಿ ವಿರಾಟರಾಜನ ಗೋಗಣವನ್ನು ರಕ್ಷಿಸಲು ಬದ್ಧಕಂಕಣರಾಗಿ ಬಂದು ನಗರಬಹಿರಂಗಣ ದಲ್ಲಿ ಕಲೆತರು. ಆಗ ಧರ್ಮರಾಜನು ತಮ್ಮಂದಿರಿಂದಾಲೋಚಿಸಿ, ವಿರಾಟನಿಗೆ ಸಹಾಯ ವಾಗಿ ರಣರಂಗಕ್ಕೆಹೋಗಲು ನಿಶ್ಚಯಿಸಿದನು. ತಂತ್ರೀಪಾಲ, ದಾಮಗ್ರಂಥಿ, ವಲಲರು ಅಲ್ಲಲ್ಲಿ ಸ್ವಕಾರ್ಯವ್ಯಗ್ರರಾಗಿರುವಂತೆ ನಿಂತಿರಲು ನಿಯಮಿಸಿ, ಕಂಕನು ವಿರಾಟನನ್ನು ಸಮೀಪಿಸಿ 'ಜಯವಾಗಲಿ ಮಹಾರಾಜನಿಗೆ ! ಹಿಂದೆ ಋಷಿವರನಿಂದ ಕಲಿತ ಶಸ್ತ್ರಾಸ್ತ್ರ ವಿದ್ಯೆಯು ಸದುಪಯುಕ್ತವಾಗುವ ಕಾಲ ಬಂದಿದೆ. ಗೋಗಣವನ್ನು ಹಿಂದಿರುಗಿಸಿ ಕಾಪಾಡಲು ಪೋಗುವವನಿಗೆ ಸಹಾಯಕರಾಗದ ನಮ್ಮ ವೀರ್ಯಶೌರ್ಯಧೈರ್ಯ ಗಳಿಂದೇನು ಪ್ರಯೋಜನ? ನೀವುಮಾಡಿದ ಉಪಕೃತಿಗೆ ಪ್ರತ್ಯುಪಕಾರವನ್ನು ಕೈಲಾದಂತೆಮಾಡಲು ನಿನ್ನ ಗೋಪಾಲಕ, ತುರಗಪಾಲಕ, ಮಹಾನಸಪಾಲಕರೂ ಕಾತರರಾಗಿರುವರು. ವಲಲನ ಬಲವನ್ನು ನೀನರಿತಿರುವೆ ! ದಾಮಗ್ರಂಥಿ ತಂತ್ರೀ-ಪಾಲರೂ ಸಾಮಾನ್ಯರಲ್ಲ. ಇವರು ಮಹಾರಥರಂತೆ ಕಾದುವರೆಂದು ನಾನು ಧರ್ಮರಾಜನ ಮುಖದಿಂದ ಕೇಳಿ, ತಿಳಿದಿರುವೆನು. ಇವರಿಗೆ ತಕ್ಕ ರಥವರ್ಮ ಮಹಾಯುಧಗಳನ್ನು ಕೊಡಿಸು !' ಎಂದು ನುಡಿದನು.

ವಿರಾಟನಾಮಾತನ್ನು ಕೇಳಿ, ಕಂಕನನ್ನು ಮೆಚ್ಚಿ ಅವನ ಪ್ರಾರ್ಥನೆಯಂತೆ, ಅವನಿಗೂ, ವಲಲ ತಂತ್ರೀಪಾಲ ದಾಮಗ್ರಂಥಿಗಳಿಗೂ ದಿವ್ಯ ರಥಗಳನ್ನೂ, ಸಕಲ ಶಸ್ತ್ರಗಳನ್ನೂ, ಅಭೇದ್ಯಕವಚಗಳನ್ನೂ ಉತ್ತಮ ಜವನಾಶ್ವಗಳನ್ನೂ, ಶತಾನೀಕ ನಿಂದ ತರಿಸಿಕೊಡಿಸಿದನು. ಪಾಂಡವಚತುಷ್ಟಯವೂ ಪ್ರಹೃಷ್ಟಾಂತರಂಗವಾಯಿತು. ಪ್ರಹೃಷ್ಟರಾಗಿ ವಿವಾಹಕ್ಕೆ ಬರುವವರಂತೆ ರಥಾರೂಢರಾಗಿ ಉತ್ಸಾಹದಿಂದ ಬರುವ ಕಂಕ ವಲಲ ತಂತ್ರೀಪಾಲ ದಾಮಗ್ರಂಥಿಗಳನ್ನು ಕಂಡು ವಿರಾಟನು ಸಂತೋಷ ಪರವಶನಾದನು. ವಿರಾಟನಿತ್ತ ದಿವ್ಯ ಕವಚಗಳನ್ನು ತೊಟ್ಟು, ಹಯಸಂಪನ್ನವಾದ ಕನಕರಥದಲ್ಲಿ ಕೂತು, ಧನುಷ್ಟಂಕಾರವನ್ನು ಮಾಡುತ್ತಾ ಬರುವ ಪಾಂಡವ ವೀರರು ಸುಕ್ಷತ್ರಿಯ ಕುಮಾರರೆಂದು, ಅಪರ ಧೈರ್ಯಚಾತುರ್ಯಗಳೇ ಸಾರುತ್ತಿದ್ದವು. ಅಂಗರಾಗವನ್ನು ಹಚ್ಚಿ ಮಾಲ್ಯಗಳನ್ನು ಧರಿಸಿ, ಭೂಷಣ ರಾಜಿಯನ್ನಿಟ್ಟು ರಾಜಿಸುವ ಪಾಂಡವರು ದೇವಕುಮಾರರಂತೆ ಕಂಗೊಳಿಸಿದರು. ತಮ್ಮ ರಥಗಳನ್ನು ತಾವೇ ನಡೆಸಿಕೊಂಡು ಬರುವ ವೀರರನ್ನು ಕಂಡು ವಿರಾಟನು ಇವರು ಸರ್ವವಿದ್ಯಾಪ್ರವೀಣ

ರೆಂದು ತಿಳಿದು ಬೆರಗಾದನು. ಸಾಮಾನ್ಯ ಯತಿ ಸೂದ ಗೋಪಾಲ ತುರಗಪಾಲರಲ್ಲದೆ, ಕಾರಣಾಂತರದಿಂದ ವೇಷವನ್ನು ಮರೆಮಾಚಿ ವರ್ತಿಸುವ ಮಹಾರಾಜರಿರಬಹುದೆಂಬ ಶಂಕೆಯು ವಿರಾಟನ ಮನೋಗಗನದಲ್ಲಿ ಮಿಂಚಿನಂತೆ ಹೊಳೆಯದಿರಲಿಲ್ಲ. ಆದರೂ ಸುಶರ್ಮನನ್ನು ತಡೆದು, ಗೋಗಣವನ್ನು ರಕ್ಷಿಸುವ ತ್ವರೆಯಿಂದ ಮತ್ಸ್ಯರಾಜನು ವಿಚಾರಸಮಯವಲ್ಲವೆಂದು ಮುಂದೆ ಸಾಗಿದನು.

ಮದಜಲಧಾರೆಗಳಿಂದ ಕಷಾಯ ಗಂಧಬಂಧುರವಾದ ಸಿಂಧುರಸಹಸ್ರವು ನಡೆದು ಬರುವ ಬೆಟ್ಟಗಳ ಸಾಲಿನಂತೆ ಶೋಭಿಸಿತು. ಅವೆಲ್ಲವೂ ಅರವತ್ತರ ಪೂರ್ಣಯೌವನದಲ್ಲಿ ಮದವೇರಿದ್ದವು. ಅವುಗಳ ಮೇಲಿದ್ದ ಮಾವಟಿಗರು ಹಸ್ತಿಯುದ್ಧ ನಿಪುಣರಾಗಿದ್ದರು. ಯುದ್ಧ ವಿಶಾರದರಾದ ರಥಿಕರಿಂದ ಕೂಡಿ, ಅಶ್ವವಿದ್ಯಾವಿಚಕ್ಷಣರಾದ ಸೂತರಿಂದ ನಡೆಸಲ್ಪಡುವ ಎಂಟುಸಾವಿರ ರಥಗಳು ತಮ್ಮ ಚಕ್ರಧ್ವಾನದಿಂದ ಹೆದರಿಸುವಂತಿರಲು, ಅದ್ರಿತಟಗಳು ಪ್ರತಿಧ್ವಾನದಿಂದ ಶರಣಾಗಿ ಸಾಗಿಬೀಳುತ್ತಿದ್ದವು. ಅರವತ್ತು ಸಾವಿರ ತುರಗಗಳ ಖುರ ಪುಟಗಳಿಂದೆದ್ದ ಧೂಳಿ, ಹರಿಯುವ ನದಿಗಳ ನೀರನ್ನು ಕಲೆತು ಕೆಸರಾಗುತ್ತಿತ್ತು. ಒಂದುಲಕ್ಷ ಕಾಲ್ಬಲದ ಭಾರದಿಂದ ಭೂಮಿ ಗಡಗಡನೆ ನಡುಗಿತು. ಇಂತು ಅತಿಶಯೋತ್ಸಾಹದಿಂಡ ನಡೆದು ವಿರಾಟನ ಸೈನ್ಯವು, ಸುಶರ್ಮನನ್ನು ಮುಟ್ಟಿ, ಅವನ ಸೈನ್ಯವನ್ನು ತಡೆಯಿತು.

ವಿರಾಟ ಸೈನ್ಯದಿಂದ ತ್ರಿಗರ್ತಸೈನ್ಯವು ಭಯಂಕರ ಸಂಗ್ರಾಮಕ್ಕಿಳಿದು, ಪರಸ್ಪರ ಹಿಂಸಾವಿಹಾರರತವಾಯಿತು. ಎರಡು ಸಮುದ್ರಗಳು ನೂಕಾಡುವವೋ ಅಥವಾ ಎರಡು ಪರ್ವತಗಳು ಉರುಳಾಡುವವೋ ಎಂಬಂತೆ ಹಗೆಯಿಂದ ಬಡಿದಾಡುವ ಸೈನ್ಯಗಳ ಕೋಲಾಹಲವು ಮುಗಿಲುಮುಟ್ಟಿತು. ಧನುಷ್ಟಂಕಾರಗಳು, ಕೃಪಾಣಘಟ್ಟನಗಳು, ರಥ ಘಂಟಾನಿನಾದಗಳು, ತುರಗ ಹೇಷಾರವಗಳು, ಗಜಬೃಂಹಿತಗಳು, ಶಕ್ತ್ಯಾದ್ಯಾ-ಯುಧ ಕಿಂಕಿಣೀ ನಿಕ್ವಣಗಳು ಮೊದಲಾದುವು ಕೇಳಿಬರದಂತೆ, ಹತರಾಗಿ ಬೀಳುವ ಯೋಧರ ಆಕ್ರಂದನಾರ್ತರಾವಗಳು ವ್ಯಾಪಿಸಿದವು. ಮಧ್ಯಾಹ್ನದ ಸಮಯದಲ್ಲಿ (4 p.m.) ತ್ರಿಗರ್ತ ಸೇನೆಗಳನ್ನು ಮುತ್ತಿ ವಿರಾಟನ ಸೇನೆಗಳು ವಿಜೃಂಭಿಸಿದವು. ಯುದ್ಧ ದುರ್ಮದರಾದ ತ್ರಿಗರ್ತರೂ ಹಿಂಜರಿಯದೆ, ವೀರಲಾಪಗಳಿಂದ ತಮ್ಮವರನ್ನು ಹುರಿದುಂಬಿಸಿ, ಜೀವದಾಶೆ ತೊರೆದು ಮತ್ಸ್ಯವೀರರೊಡನೆ ಕಡಿದಾಡಿದರು.

ಅಂಕುಶತೋಮರಗಳಿಂದ ತಿವಿಯಲ್ಪಟ್ಟ ಮಾತಂಗಗಳು ಮದಿರಾಪಾನ ಮತ್ತವಾಗಿ ಸೊಂಡಿಲುಗಳಲ್ಲಿ ಮುದ್ಗರಗಳನ್ನು ಹಿಡಿದು ತಿರುಗಿಸುತ್ತಾ ಕಾಲಿಂದ ತುಳಿದು ನರ ತುರಗರಾಜಿಯನ್ನು ಕೊಲ್ಲುತ್ತಾ, ಬೆಟ್ಟದಂತೆ ಮೇಲೆರಗಿ ಬರುತ್ತಿದ್ದವು. ಗಜಾಕ್ರಮಣದಿಂದ ನೊಂದ ಭಟರು ದಿಕ್ಕಾಪಾಲಾಗಿ ಓಡುತ್ತಿದ್ದರು. ಗಜಯುದ್ಧವಿಂತು ಭಯಂಕರವಾಗಿ ಪರಗಜನಾಶವನ್ನು ಮಾಡುತ್ತಿರಲು ನೋಡುವವರ ಮೈನವಿರೇಳುತ್ತಿತ್ತು.

ಹೇಷಾರವದ ಸಂದಡಿಯಲ್ಲಿ ದಿಕ್ಕೆಟ್ಟೋಡುವ ಭಟರನ್ನು ತುಳಿಯುತ್ತಾ ಧಾವಿಸುವ ತುರಗ ಸೈನ್ಯವು ಚಲಿಸಿದೆಡೆ, ಸವಾರರು ಕಡಿದ ಪದಾತಿಭಟರ ರಕ್ತದ ಕಾಲುವೆಗಳು ಹರಿದವು. ಬಾಣವರ್ಷವು ಅವ್ಯಾಹತವಾಗಿ ವ್ಯಾಪಿಸುತ್ತಿರಲು, ಉರಿಯುವ ಕೊಳ್ಳಿಗಳು ಹಾರಾಡಿದಂತೆ ಕಂಡುಬಂದವು. ಕತ್ತರಿಸಲ್ಪಟ್ಟ ಬಾಣಗಳು ಕೆಳಗುರುಳಿದವು. ಕೆಲ ಬಾಣಗಳು ಶತ್ರುವರ್ಮಗಳನ್ನು ಭೇದಿಸಿದವು. ಬಾಣಗಳಿಂದ ತಲೆಗಳು ನೆಲಕ್ಕುರುಳಿ ಬೀಳಲು, ಮಹಾವೇಗ ಸಂಸ್ಕಾರದಿಂದ ಶರೀರಗಳು ಮುಂದೋಡಿ ಬೀಳುತ್ತಿದ್ದವು. ಒಂದೊಂದು ಬಾಣದಿಂದ ನಾಲ್ಕಾರು ವೀರ ಭಟರನ್ನು ಸಂಹರಿಸಿ, ವೀರವಿಹಾರ ಕುಶಲರಾದ ಭಟರಿಂದ ರಣರಂಗವು ಭಯಾನಕವಾಯಿತು. ಬಲಕ್ಕೆ ಛಲವು ಜೋಡಾಗಿ ವಿಜೃಂಭಿಸುವ ವೀರರನ್ನು ಉಪಾಯದಿಂದ ಕೆಡಹುತ್ತ ಮತ್ಸ್ಯರಾಜಭಟರು ಮುನ್ನುಗ್ಗಿದರು. ಕೆಳಗೆ ಬಿದ್ದವರನ್ನು ತುಳಿದುಕೊಂಡು ಬರುವ ಮದಗಜಗಳ ಸೊಂಡಿಲುಗಳನ್ನು ಕಡಿದರು. ಅವು ಹುಚ್ಚೆದ್ದು ತಮ್ಮವರು ಪರರೆಂಬ ಅರಿವಿಲ್ಲದೆ ತುಳಿದಾಡಿ, ಅನೇಕ ಭಟರನ್ನು ಯಮಸದನಕ್ಕಟ್ಟಿ, ತಾವೂ ಸತ್ತುಬಿದ್ದವು.

ಅಸಂಖ್ಯಾತ ಭಟ ತುರಗ ಗಜ ಪದಘಟ್ಟನದಿಂದ ಮೇಲಕ್ಕೆದ್ದ ಧೂಳಿ ಕಣ್ಣಿಗಡರಿ ಗಗನದಲ್ಲಿ ಹಾರಾಡುವ ಪಕ್ಷಿಗಳು ಕೆಳಗುರುಳಿಬಿದ್ದವು. ನರಿ ನಾಯಿಗಳು ಸತ್ತವರನ್ನು ಕಿತ್ತಿ ತಿನ್ನುತ್ತಿದ್ದವು. ರಣರಂಗವೆಲ್ಲವು ಕಂಕಾಳಗಳಿಂದ ತುಂಬಿ, ಮಸಣದಂತೆ ಭೀಭತ್ಸವಾಯಿತು.

ಒಂದೆಡೆ ರಥಯುದ್ಧವೂ ಘೋರವಾಗಿ ನಡೆಯಿತು. ರಥಗಳೆರಡು ಸಮೀಪಿಸಿದಾಗ, ತಮ್ಮ ರಥದಿಂದ ಹಾರಿ, ಶತ್ರು ರಥವನ್ನೇರಿ, ಸೂತ ತುರಗ ರಥಿಕರನ್ನು ಚೆಂಡಾಡುವ ಶೂರ ಶಿಖಾಮಣಿಗಳಿಂದಲು, ಕುಮರಿಗಳು ಸಾಯಲು ವಿರಥರಾಗಿ ಕೆಳಗಿಳಿದು ಖಡ್ಗ ಗದಾ ಮುದ್ಗರಾದಿ ಘೋರಾಯುಧಗಳನ್ನು ಪಿಡಿದು, ಅರಿ ವೀರರನ್ನು ಸಂಹರಿಸುವ ರಥಿಕವರರಿಂದಲು, ಸಾರಥಿಯು ಬಿದ್ದನೆಂದು ಹೆದರದೆ ತಾವೇ ರಥವನ್ನು ನಡೆಸುತ್ತಾ, ಶರವರ್ಷವನ್ನು ಸುರಿವ ಧನುರ್ಧಾರಿಗಳಿಂದಲು, ರಥಗಜಗಳನ್ನು ಪುಡಿಮಾಡಿ, ಆನೆಗಳನ್ನು ಕೊಂದ ಸಿಂಹಗಳಂತೆ ಶತ್ರುವೀರ ಸಂಹಾರಕರಾದ ಗದಾಯುದ್ಧ ವಿಶಾರದರಿಂದಲು ಸಂಗ್ರಾಮ ರಂಗವು ಸಂಕುಲ ಸಂರಂಭವಾಯಿತು.

ಆಗ ಶತಾನೀಕನು ಪ್ರಳಯ ಕಾಲಮೇಘದಂತೊಪ್ಪುವ ರಥದಲ್ಲಿ ಕೂತು ತೊಟ್ಟ ಕವಚವು ಮಿಂಚಿನಂತೆ ಹೊಳೆಯುತ್ತಿರಲು, ಸಿಂಹಗರ್ಜನವನ್ನು ಮಾಡಿ, ಬಾಣವರ್ಷದಿಂದ ನೂರಾರು ರಥಿಕರು ಕಾಲ ಪ್ರವಾಹದಲ್ಲಿ ಕೊಚ್ಚಿ ಹೋಗುವಂತೆ ವೀರವಿಹಾರವನ್ನು ಮಾಡಿದನು. ಅವನ ಶಸ್ತ್ರಾಸ್ತ್ರಗಳಿಗೆ ಬಲಿಯಾಗಿ ಸಾವಿರಾರು ಭಟರು, ನೂರಾರು ಕುದುರೆಗಳು, ಹತ್ತಾರು ಹಸ್ತಿಗಳು ಯಮಸದನವನ್ನು ಮುಟ್ಟಿದವು.

ಮದಿರಾಶ್ವನೂ ಸಹೋದರನಿಗೆಣೆಯಾಗಿ ನಿಂತು ಮೂರ್ತಿಮದ್‌ರುದ್ರನಂತೆ ಕಡಿದಾಡಿದನು. ನಾಲ್ಕುನೂರು ರಥಗಳವನ ಮುದ್ಗರಾಘಾತಕ್ಕೆಸಿಕ್ಕು ಪುಡಿಯಾದವು.

ಸೂರ್ಯದತ್ತನು ರಥವನ್ನು ಮಂಡಲಾಕಾರವಾಗಿ ತಿರುಗಿಸುತ್ತಾ, ಶತ್ರುಬಾಣಗಳ ಗುರಿಯನ್ನು ತಪ್ಪಿಸಿ, ಅನಿವಾರ್ಯ ಶೌರ್ಯನಾಗಿ, ಅನೇಕ ಗಜವಾಹರನ್ನು ಬಾಣಗಳಿಂದ ಕೆಡಹಿ ವಿಜೃಂಭಿಸಿದನು. ಶಂಖನು ಅತ್ಯುತ್ಸಾಹ ಸಮನ್ವಿತನಾಗಿ, ತನ್ನ ಕವಚ ಶಸ್ತ್ರಾದ್ಯಾಯುಧ ಕಾಂತಿಪುಂಜವು ಶತ್ರುಭಟರ ನೇತ್ರಗಳಿಗೆ ಮಂಕು ಕವಿಸುತ್ತಿರಲು, ರಣರಂಗದಲ್ಲಿ ನೋಡಿದೆಡೆ ಎಲ್ಲ ತಾನೇತಾನಾಗಿ ಮರ್ದಿಸುತ್ತ—ತ್ರಿಗರ್ತರಾಜನ ಸೇನೆಗಳನ್ನು ಹಿಮ್ಮೆಟ್ಟಿಸಿದನು.

ಸೋದರತನಯಾದಿ ವಿಕ್ರಮಲೀಲೆಯನ್ನು ಕಂಡು ವಿರಾಟನು ಕಡಿಮೆ ಎನಿಸದೆ, ತ್ರಿಗರ್ತರಾಜನನ್ನು ಮುತ್ತಿ ಅರಿಭಯಂಕರನಾಗಿ ಹೋರಾಡಿದನು. ಭರದಿಂದ ಬರುವ ವಿರಾಟನ ರಥ ಚಕ್ರಗಳಿಗೆ ಸಿಕ್ಕು ಅನೇಕ ಭಟರು ನುಚ್ಚುನೂರಾದರು. ನುಗ್ಗಿ ಬರುವ ಸುಶರ್ಮನ ಸೈನ್ಯವು ವಿರಾಟ ಶತಾನೀಕಾದಿ ವೀರರ ವಿವಿಧ ಶಸ್ತ್ರಾಘಾತದಿಂದ, ಸೇತು ಬಂಧದಿಂದ ನದಿಯಂತೆ, ಹಿಮ್ಮೆಟ್ಟಿತು. ದೈನ್ಯದಿಂದೋಡುವ ಸೈನ್ಯವನ್ನು ನೋಡಿ, ಸುಶರ್ಮನು ಕೈಬೀಸಿ ಅವರನ್ನು ಕರೆದು ಹಿಂದಿರುಗಿಸಿ, ಸೋದರಸಹಿತನಾಗಿ ವಿಜೃಂಭಿಸಿ, ಕೋಪಾಟೋಪದಿಂದ ಕಣ್ಣಿನಿಂದ ಕಿಡಿಗಳು, ಬಿಲ್ಲಿನಿಂದ ಬಾಣಗಳು ಅಗ್ನಿವರ್ಷವಾಗುವಂತೆ ಮೇಲೇರಿಬಂದನು. ತಾವರೆಯ ಕೊಳದಲ್ಲಿ ನುಗ್ಗಿದ ಮದ್ದಾನೆಯಂತೆ ಎದುರಿಲ್ಲದೆ ಶತ್ರು ವೀರರನ್ನು ಕಡಿದು ಕೆಡಹುವ ಸುಶರ್ಮನನ್ನು, ಅವನ ತಮ್ಮನನ್ನು ನೋಡಿ, ತ್ರಿಗರ್ತ ಸೈನ್ಯವು ಮತ್ತೆ ಪರ್ವದಿನದ ಸಮುದ್ರದಂತೆ ಉಕ್ಕೇರಿಬಂದು, ಶತ್ರುಭಟರನ್ನು ಮುತ್ತಿ ವಿಜೃಂಭಿಸಿತು.

ವಿರಾಟನು ಶತ್ರುಸಮುಜ್ಜೃಂಭಣವನ್ನು ಸಹಿಸದೆ, ಹತ್ತು ಬಾಣಗಳನ್ನು ಹೂಡಿ, ಆಕರ್ಣಾಂತವಾಗಿ ಸೆಳೆದು, ತ್ರಿಗರ್ತರಾಜನ ವಕ್ಷಃಸ್ಥಲವನ್ನು ಗುರಿಯಿಟ್ಟು ಹೊಡೆದನು; ಮತ್ತೆ ಹತ್ತು ಬಾಣಗಳಿಂದ ಅವನ ಕುದುರೆಗಳನ್ನು ಕೆಡಹಿ ಆರ್ಭಟಿಸಿದನು. ಸುಶರ್ಮನು ಬೇರೊಂದು ರಥವನ್ನೇರಿ, ವಿರಾಟನನ್ನು ಎದುರಿಸಿ ಮಹಾಘೋರ ಯುದ್ಧವನ್ನು ಮಾಡಿದನು. ರಾಜರಿಬ್ಬರೂ ಹೋರಾಡುವುದನ್ನು ನೋಡಿ, ಕಡುರೇಗಿ ಉಭಯ ಸೈನ್ಯಗಳು ಆಯುಧಗಳ ಹೊಳಪು, ಸರಿದುಬರುವ ಕತ್ತಲನ್ನು ನೂಕುತ್ತಿರಲು ಚಿಮ್ಮಿ ಸೂಸುವ ರಕ್ತಧಾರೆಗಳು ಪದಘಟ್ಟನದ ಧೂಳಿಯಲ್ಲಿ ಬೆರೆತು ಕೆಳಗೆ ಬೀಳುತ್ತಿರಲು, ಬಡಿದಾಡಿದರು. ಅವರ ಆಯುಧಗಳ ಝಣ ಝಣ ಧ್ವಾನಗಳು ಮಿನ್ನು ಮುಟ್ಟಿದವು. ಸಮರದಲ್ಲಿ ಶ್ರಮಖಿನ್ನರಾದ ಸೈನಿಕರಿಗೆ ವಿಶ್ರಾಂತಿಯನ್ನೀಯಲೆಣಿಸಿದನೆಂಬಂತೆ ಭಾನುಮಂತನು ಪಶ್ಚಿಮಾಂಬುಧಿಯಲ್ಲಿ ಮುಳುಗಿದನು. ಪಕ್ಷಿಗಳು ಕಲಕಲನಾದವನ್ನು ಮಾಡಿ, ಸುಮ್ಮನಾಗಿ ಗಿಡಗಳಲ್ಲಿ ವಿಶ್ರಮಿಸಿದವು. ಬಿಡದೆ ಕಡಿದಾಡುವ ಭಟರನ್ನು ಮುಚ್ಚಿ ತಮಃಪಟಲವು ವ್ಯಾಪಿಸಿತು. ಬಹುಳ ಸಪ್ತಮಿ ಆದುದರಿಂದ ಚಂದ್ರಮನುದಿಸಿ, ಸ್ವಪರವಿವೇಕವಾಗುವವರೆಗೂ ಯುದ್ಧವನ್ನು ನಿಲ್ಲಿಸುವುದೊಳಿತೆಂದು ನಿಶ್ಚಯಿಸಿ, ಸೇನಾಪತಿಗಳು ಶಂಖಾರಾವದಿಂದ ಸೂಚಿಸಿದರು. ಸೈನ್ಯಗಳೆರಡೂ

ಬೇರ್ಪಟ್ಟು, ಎದಿರುಬದಿರಾಗಿ ಎರಡು ಸಮುದ್ರಗಳಂತೆ ನಿಂತು, ಚಂದ್ರೋದಯ ವನ್ನು ನಿರೀಕ್ಷಿಸುತ್ತಿದ್ದರು.

ಮಧ್ಯರಾತ್ರದಲ್ಲಿ ಚಂದ್ರೋದಯವಾಯಿತು. ಹಗಲು ಯುದ್ಧದಲ್ಲಿಳಿಯದೆ, ನಿಗೂಢರಾಗಿ, ಶಿಬಿರಗಳಲ್ಲಡಗಿದ್ದ ಧರ್ಮಾದಿಗಳು, ವೀರವೇಷಗಳನ್ನು, ಧರಿಸಿ, ಸಮಯ ಭಂಗದ ಭಯವಿಲ್ಲದೆ ಕಾದುವ ಸದವಕಾಶ ಒದಗಿತೆಂದು ಹಾತೊರೆದು ನಿಂತಿದ್ದರು. ತನ್ನ ವಂಶದ ಪಾಂಡವರ ವಿಕ್ರಮ ವಿಹಾರವನ್ನು ನೋಡಲು ಬಂದನೆಂಬಂತೆ ಸುಧಾಕಿರಣನು ಆಕಾಶದ ಮೇಲೇರಿ ನಿಂತನು. ಹಿಟ್ಟು ಚಲ್ಲಿದಂತೆ, ಹಾಲುಹೊನಲು ಹರಿದಂತೆ, ಬೆಳುದಿಂಗಳು ಭೂಮಿಯನ್ನೆಲ್ಲ ಪಸರಿಸಿತು. ಸೈನ್ಯಗಳೆರಡೂ ಮತ್ತೆ ಹರಿದೋಡಿ, ಕಚಾಕಚಿ, ಬಾಹಾಬಾಹವಿಯಾಗಿ ಕಡಿದಾಡತೊಡಗಿದವು.

ವಿರಾಟನು ಸುಶರ್ಮನನ್ನೆದುರಿಸಿ, ಬಹು ಬಾಣಗಳಿಂದ ಅವನನ್ನು ಪೀಡಿಸುತ್ತಿರಲು ಸುಶರ್ಮಾನುಜನು ವಿರಾಟನ ಕುದುರೆಗಳನ್ನು ಕೆಡಹಿ, ಅವನನ್ನು ವಿರಥನನ್ನಾಗಿ ಮಾಡಿದನು. ರಥದಿಂದ ಧುಮ್ಮಿಕ್ಕಿ, ಬೇರೊಂದು ರಥದ ಕಡೆ ನಡೆಯುವ ವಿರಾಟನನ್ನು ಸುಶರ್ಮನು ಅತಿರಭಸದಿಂದ ಬಂದು ಪಿಡಿದು, ತನ್ನ ರಥದಲ್ಲಿಟ್ಟು, ಕಟ್ಟಿ, ಸಿಂಹನಾದ ವನ್ನು ಮಾಡುತ್ತಾ ಹೊರಟನು. ರಾಜನಿಗೆ ಬಂದ ವಿಪತ್ತನ್ನು ಕಂಡು, ಭಯ ಗೊಂಡು, ವಿರಾಟನ ಸೈನ್ಯವು ಆರ್ತಧ್ವಾನಗಳನ್ನು ಮಾಡುತ್ತಾ, ಓಡತೊಡಗಿತು. ಸುಶರ್ಮನ ಭಟರು ವಿಜಯದುಂದುಭಿಗಳನ್ನು ಬಾರಿಸಿ, ಜಯಜಯ ಧ್ವಾನಗಳನ್ನು ಮಾಡಿದರು.

ಅವರ ವಿಜಯಕೋಲಾಹಲವನ್ನೂ ಇವರ ಆರ್ತನಾದವನ್ನೂ ಕೇಳಿದ ಧರ್ಮರಾಜಾದಿ ಪಾಂಡವರು ನಡೆದ ಅನರ್ಥವನ್ನರಿತರು. ಇನ್ನು ತಡಮಾಡಲಾಗ ದೆಂದು ತಿಳಿದು ಧರ್ಮರಾಜನು 'ಭೀಮಸೇನ ! ವಿರಾಟನ ಆಶ್ರಯದಲ್ಲಿ ಒಂದು ವರ್ಷ ಕಾಲವನ್ನು ನಿರ್ವಿಘ್ನವಾಗಿ ಕಳೆದೆವು. ಅವನಿಗಿಂದು ಬಂದಿರುವ ವಿಪತ್ತನ್ನು ಕೃತಜ್ಞ ರಾದ ನಾವು ಉಪೇಕ್ಷಿಸಲಾಗದು. ರಾತ್ರಿಯಾದುದರಿಂದಲು, ವೇಷಾಂತರಿತವಾಗಿರು ವುದರಿಂದಲು ನಮ್ಮನ್ನು ಪರರು ಗುರ್ತಿಸುವ ಭಯವಿಲ್ಲ. ಶತ್ರುಹಸ್ತಗತನಾಗಿ ನರಳುತ್ತಿರುವ ವಿರಾಟನನ್ನು ಬಿಡಿಸು ! ನಿನಗೆ ಸಹಾಯರಾಗಿ ನಾವು ಮೂವರೂ ಬರುವೆವು. ತ್ವರೆಮಾಡು !' ಎಂದಾಜ್ಞಾಪಿಸಿದನು.

ಭೀಮಸೇನನು ಪ್ರೈಪರ್ಚಿ ನಿಂತು, 'ಅಣ್ಣ ! ಈ ಸಣ್ಣ ಕೆಲಸಕ್ಕೆ ಇಷ್ಟೇಕೆ ಸಡಗರ ? ನೀವೆಲ್ಲರೂ ನೋಡುತ್ತಿರಿ ! ಈ ಸಾಲವೃಕ್ಷವನ್ನು ಕಿತ್ತಿ, ಮಹಾವೇಗದಿಂದ ನಡೆದು, ಸಕಲ ಶತ್ರುಬಲವನ್ನೂ ಮಟ್ಟಿಟ್ಟು, ಸುಶರ್ಮನ ಗರ್ವವನ್ನು ಮುರಿದು, ವಿರಾಟನನ್ನು ಬಿಡಿಸಿತರುವೆನು. ನೋಡಲಿ ರಿಪುಗಳು ನನ್ನ ವೀರವಿಹಾರವನ್ನು !' ಎಂದನು. ಆ ಮಾತಿಗೆ ತಲೆಯಾಡಿಸಿ, ನಕ್ಕು ಧರ್ಮಸುತನು ವಾಯುಸುತನಿಗೆ ಇಂತೆಂದನು—'ನಿಜ ! ಭೀಮಸೇನ ! ನಿನಗೀ ಕಾರ್ಯವು ದುರ್ಘಟವಲ್ಲ. ಆದರೆ ಸಾಲವೃಕ್ಷವನ್ನು ಪಿಡಿದು, ಬಡಿದಾಡುವ ನಿನ್ನ ವಿಕ್ರಮವನ್ನು ಕಂಡು, ಯಾರಾದರೂ

ನಿನ್ನನ್ನು ಭೀಮಸೇನನೆಂದು ತಿಳಿದುಬಿಡುವಂತಾಗುವುದು. ಅದು ಒಳಿತಲ್ಲ! ಯಮಳರು ನಿನಗೆ ಚಕ್ರರಕ್ಷಕರಾಗಿ ಬರಲು, ರಥಾರೂಢನಾಗಿ ಹೊರಡು. ಸಾಮಾನ್ಯ ರಥಿಕನಂತೆ, ಧನುರ್ಬಾಣ ಗದಾದ್ಯಾಯುಧಗಳನ್ನು ಬಳಸಿ, ವಿರೋಧಿವಧವನ್ನು ಸಾಧಿಸಿ, ಬಾ! ನಿನ್ನ ಹಿಂದೆಯೇ ನಾನೂ ಬರುವೆನು. ನಡೆ!' ಎಂದನು.

ಅಂಕುಶದಿ ತಿವಿಯಲ್ಪಟ್ಟ ಆನೆಯಂತೆ, ಉಕ್ಕಿಬರುವ ಸಾಹಸವನ್ನು ಅಡಗಿಸಿ, ಭೀಮನು, ಹುಬ್ಬನ್ನು ಮುರಿದು, ಒಳ್ಳೆಯದಂತೇ ಮಾಡುವೆನು ಎಂದು ನುಡಿದನು. ನಾಲ್ವರು ಸೋದರರು ರಥಾರೂಢರಾದರು. ಸೂತರೂ ರಥಿಕರೂ ತಾವೇ ಆಗಿ, ಬಲು ವೇಗದಿಂದ ತೆರಳಿ, ಮೇಲೆರಗುವ ಪಾಂಡವ ವೀರರ ಸಿಂಹನಾದ ಧನುಷ್ಟಂಕಾರ ಗಳನ್ನು ಕೇಳಿ, ಸುಶರ್ಮನು ಭಯಾಶ್ಚರ್ಯ ಸಂಭ್ರಮಭರಿತನಾಗಿ, ಸೈನ್ಯದೊಡನೆ, ಹಿಂದಿರುಗಿದನು.

ಬಾಣವರ್ಷದಲ್ಲಿ ಮುಳುಗಿಸಿ, ಗದೆಯನ್ನು ಬೀಸುತ್ತಾ, ಖಡ್ಗದಿಂದ ಕಡಿಯುತ್ತಾ ಎದುರಿಲ್ಲದೆ ಬರುವ ವೀರಚತುಷ್ಟಯವನ್ನು ನೋಡಿ, ಓಡುತ್ತಿದ್ದ ವಿರಾಟ ಸೈನ್ಯವು ಮತ್ತೆ ಆರ್ಭಟಿಸುತ್ತಾ ಹಿಂದಿರುಗಿಬಂದು, ಸುಶರ್ಮಸೇನೆಯೊಡನೆ ಕಾದಾಡಿತು. ವಾಯು ಸುತನು ಎರಡು ಸಾವಿರ ರಥಗಳನ್ನು ಪುಡಿಮಾಡಿ, ಆನೆಗಳನ್ನು ಕೆಡಹಿ, ಕುದುರೆ ಗಳನ್ನು ಸಂಪರಿಸಿದನು. ನಕುಲನು ಏಳು ನೂರು ರಥಿಕರನ್ನೂ ಬಹುಭಟರನ್ನೂ ಯಮಸದನಕ್ಕಟ್ಟಿದನು. ಸಹದೇವನು ಕೆರಳಿ ಕೇಕೆಹಾಕುತ್ತಾ, ಮುನ್ನೂರು ರಥಿಕ ರನ್ನೂ ಅನೇಕಾಶ್ವಿಕರನ್ನೂ ನಾಮರೂಪರಹಿತರನ್ನಾಗಿಸಿದನು. ಧರ್ಮರಾಜನು ಸಾವಿರ ರಥಿಕರನ್ನೂ, ಎರಡು ನೂರು ಆನೆಗಳನ್ನೂ, ಮುನ್ನೂರು ಕುದುರೆ ಗಳನ್ನೂ ನೆಲಸಮಮಾಡಿ, ವಿಜೃಂಭಿಸಿದನು.

ಸಿಡಿಲಂತೆ ಬಡಿದ ಪಾಂಡವ ವೀರರ ಪರಾಕ್ರಮವನ್ನು ನೋಡಿ, ಅನಿರೀಕ್ಷಿತವಾಗಿ ಬಂದ ಆಪತ್ತನ್ನು ಗುರ್ತಿಸಿ, ಸುಶರ್ಮನು ನಾಲ್ಕು ಬಾಣಗಳಿಂದ ಕಂಕನ ಕುದುರೆ ಗಳನ್ನೂ, ಹತ್ತರಿಂದ ಅವನನ್ನೂ ನೋಯಿಸಿದನು. ಕಂಕನು ಸಿಟ್ಟಿಗೆದ್ದು, ಬಾಣವರ್ಷ ದಲ್ಲಿ ಸುಶರ್ಮನನ್ನು ಮುಳುಗಿಸಿ, ಅವನ ವಾಹನಗಳನ್ನು ಕೊಂದು ಕೆಡಹಿದನು. ಸಮಯವನ್ನರಿತು, ಅವನ ರಥದಲ್ಲಿದ್ದ ವಿರಾಟನು, ಬಂಧಗಳನ್ನು ಕಡಿದು ಬಿಸುಟ, ಉತ್ಸಾಹದಿಂದ ಮೇಲೆದ್ದು, ಅಲ್ಲಿದ್ದ ಘನಗದಾದಂಡವನ್ನು ಎತ್ತಿಪಿಡಿದು, ಹುಡುಗನಂತೆ ಹಾರಿಬಂದು, ಸುಶರ್ಮನನ್ನು ಹೊಡೆದನು. ಅದೇ ಕ್ಷಣದಲ್ಲಿ ಭೀಮನೂ ತ್ರಿಗರ್ತ ರಾಜನ ರಥಕ್ಕೆ ಹಾರಿ, ಅವನನ್ನು ಹಿಡಿದು, ಹೆಡೆಮುಡಿ ಕಟ್ಟಿ, ಸಿಂಹನಾದವನ್ನು ಮಾಡಿದನು. ನಕುಲಸಹದೇವರು ತ್ರಿಗರ್ತನ ಚಕ್ರರಕ್ಷಕರಾದ ಶೋಣಾಶ್ವನೇ ಮುಂತಾದ ವೀರರನ್ನು ಸಂಹರಿಸಿದರು. ಸುಶರ್ಮನು ಬದ್ಧನಾಗಲು ನೋಡಿ, ಪರರ ಸೋಲನ್ನು ವಿಜಯವನ್ನಾಗಿಸಿದ ಹೊಸ ವೀರರಾರೆಂದು ತಿಳಿಯಲಾರದೆ, ಭಯ ಭ್ರಾಂತರಾಗಿ ಸುಶರ್ಮನ ಭಟರು ದಿಕ್ಕಾಪಾಲಾಗಿ, ಓಡಿಹೋದರು.

ಆಗ ಭೀಮನು ಸುಶರ್ಮನಿಗೆ ಕಾವಲಾಗಿ ತಮ್ಮಂದಿರನ್ನಿಟ್ಟು ಧರ್ಮನನ್ನು ಶಿಬಿರಕ್ಕೆ ಕಳಿಸಿ, ತಾನು ಬಹುವೇಗದಿಂದ ಸಾಗಿ ಗೋಗಣವನ್ನು ಮುಟ್ಟಿ, ಅದನ್ನು ಹಿಂದಿರುಗಿಸಿದನು. ಮತ್ಸ್ಯನಗರದ ಕಡೆಗೆ ನಡೆಸುವಂತೆ ಬಂದ ಗೋಪಾಲರಿಗೆ ಕಟ್ಟಪ್ಪಣೆ ಮಾಡಿದನು. ತಾನು ಮತ್ತೆ ಹಿಂದಿರುಗಿಬಂದು, ಬಂದಿಯಾದ ಸುಶರ್ಮನನ್ನು ರಥದಲ್ಲಿಟ್ಟು, ನಕುಲಸಹದೇವರೊಡನೆ ಧರ್ಮರಾಜನ ಬಳಿಗೆ ಬಂದು ಸೇರಿದನು. ವಿಜಯಹರ್ಷಿತನಾದ ವಿರಾಟನು ಅಲ್ಲಿಗೆ ಬಂದಿದ್ದನು. ಆಗ ಭೀಮನು ಸುಶರ್ಮನನ್ನು ಧರ್ಮರಾಜನ ಕಾಲಬಳಿ ಕೆಡಹಿ, 'ದುರ್ಮಾರ್ಗ ! ಈ ಮಹಾತ್ಮನಿಗೆ ದಾಸನೆಂದು ಶರಣಾಗು ! ಆಗ ನಿನ್ನನ್ನು ಜೀವದಿಂದ ಬಿಡುವೆನೆಂದು ನುಡಿದನು. ಸುಶರ್ಮನ ದೀನತೆಯನ್ನು ನೋಡಿ ಧರ್ಮರಾಜನು 'ವಲಲ ! ಅವನು ವಿರಾಟನ ದಾಸನು. ವಿರಾಟನಾದರೂ ಅವನನ್ನು ಕ್ಷಮಿಸಿ ಬಿಟ್ಟುಬಿಡಲಿ, ಹೋಗಲಿ ಪಾಪಿ ! ಅವನ ದುಷ್ಕರ್ಮದ ಫಲವನ್ನು ದೈವವವನಿಂದ ಉಣಿಸುವುದು' ಎಂದು ಭೀಮನನ್ನು ಶಾಂತಪಡಿಸಿದನು. ಅವರ ವರ್ತನವನ್ನೀಕ್ಷಿಸಿ ವಿರಾಟನು ಆದರ ಸಮ್ಮೋದಮೇದುರಮಾನಸನಾಗಿ ಕಂಕಾದಿಗಳನ್ನು ಸಬಹುಮಾನವಾಗಿ ವೀಕ್ಷಿಸಿ, 'ಕಂಕ ! ನನ್ನ ಮಾನಪ್ರಾಣಗಳು ನಿನ್ನಿಂದ ಉಳಿದವು. ನೀವು ಸಾಮಾನ್ಯರಲ್ಲ. ಮಹಾನುಭಾವರು. ಏನು ಕಾರಣವೋ ನನ್ನ ಊಳಿಗದಲ್ಲಿರುವಿರಿ. ನನ್ನ ಶರೀರ, ನನ್ನ ಸಿರಿ, ನನ್ನ ರಾಜ್ಯ—ಎಲ್ಲವೂ ನೀನಿತ್ತುದಾಗಿದೆ. ಕರುಣೆಯಿಂದ ಕಾದ ನಿಮಗೆ ನಾನು ಕೃತಜ್ಞನಾಗಿರುವೆನು. ನನ್ನ ರಾಜ್ಯವೇ ನಿನಗೆ ಸಮರ್ಪಿತವಾಗಿದೆ. ರಾಜನಾಗಿ, ನನ್ನನ್ನೂ ಮತ್ಸ್ಯದೇಶವನ್ನೂ ಪರಿಪಾಲಿಸು !' ಎಂದು ವಂದಿಸಿದನು.

ಅಜಾತಶತ್ರುವಿಂತೆಂದನು—'ರಾಜನ್! ನನ್ನ ಕರ್ತವ್ಯವನ್ನು ನಾನು ಮಾಡಿರುವೆನು. ನಿನ್ನ ಶತ್ರುಗಳು ನಷ್ಟರಾದರು. ನಿನ್ನ ಬಂಧನವು ನನಗೆ ತಡೆಯಲಾರದಾಗಿ, ನಾವು ನಾಲ್ವರು ನಿನಗೆ ಸಹಾಯಮಾಡಿ, ನಿನ್ನ ಋಣವನ್ನು ತೀರಿಸಿರುವೆವು. ನಿನ್ನ ರಾಜ್ಯವನ್ನು ನಾವು ಒಲ್ಲೆವು. ಸುಖಿಯಾಗಿರು !'

ಆ ಮಾತಿಗೆ ಮೆಚ್ಚಿ ವಿರಾಟನು ವಲಲನನ್ನೀಕ್ಷಿಸಿ, ಕಣ್ಣಲ್ಲಿ ಆನಂದಬಿಂದುಗಳುದುರುತ್ತಿರಲು, ಕೃತಜ್ಞನಾಗಿ 'ಮಹಾನುಭಾವ ! ಕಡುಸುಡುವ ಕಾಳ್ಗಿಚ್ಚಿನಂತೆ ಅಡರಿದ ತ್ರಿಗರ್ತನ ಸೈನ್ಯವನ್ನು ಒಂದೇ ಕ್ಷಣದಲ್ಲಿ, ನಿನ್ನ ಬಾಣವರ್ಷದಿಂದ ಆರಿಸಿ ಮೆರೆದೆ. ನಿನ್ನ ವೀರವಿಹಾರವನ್ನು ನಾನು ಮರೆಯುವಂತಿಲ್ಲ. ನೀನು ಸಾಮಾನ್ಯ ಅಡುಗೆಯವನಲ್ಲ. ನಿನ್ನ ಮಹಾದ್ಭುತ ಪರಾಕ್ರಮದಿಂದ ನಾನು ಉಳಿದೆನು. ದಾಮಗ್ರಂಥಿಯು ರಣದಲ್ಲಿ ವಿಜೃಂಭಿಸಿದಾಗ ತಲೆಗಳುರುಳಿದವು ; ರಕ್ತದ ಕಾಲುವೆಗಳು ಹರಿದವು ; ಶತ್ರುಭಟರು ದಿಕ್ಕೆಟ್ಟು ಓಡಿದರು ; ತಂತ್ರೀಪಾಲನು ಎಲ್ಲಿ ನೋಡಿದರೂ ತಾನಾಗಿ ಮೆರೆಯುತ್ತಾ ಶತ್ರುಸೇನೆಯನ್ನು ತಗಣೆಗಳನ್ನಂತೆ ಸವರಿ ನಾಶ ಮಾಡಿದನು. ಅಸಮಾನ ವೀರರಾದ ನಿಮ್ಮಿಂದ ಸೋಲಿನ ಬಾಗಿಲಿನಲ್ಲಿ ನಿಂತಿದ್ದ ನನ್ನ ವಿಜಯಪತಾಕೆಯು ಮತ್ತೆ ಮೇಲಕ್ಕೆ ಹಾರಿತು. ಈ ವಿಜಯ

ಕೀರ್ತಿಗಳು ನಿಮ್ಮವು. ನಾನು ನಿಮ್ಮ ಉಪಕಾರವನ್ನು ಮರೆಯಲಾರೆನು' ಎಂದು ಅವರನ್ನು ಅಭಿನಂದಿಸಿದನು. ಅವರಿಗೆ ಬೇಕಾದ ರಥ ಗಜ ತುರಗಗಳನ್ನು, ವಸ್ತ್ರಾಭರಣ ಗಳನ್ನು, ದೇವರಮಣೀ ಸಮಾನ ತರುಣಿಯರನ್ನು, ನಾನಾ ವೈಭವದ ವಸ್ತು-ನಿಚಯುವನ್ನು ಮತ್ಸ್ಯನಗರವನ್ನು ಮುಟ್ಟಿದಕೂಡಲೇ ಸಮರ್ಪಿಸುವಂತೆ ಶತಾನೀಕ ನಿಗೆ ಅಪ್ಪಣೆಯಿತ್ತನು. ವಲಲಾದಿಗಳು ಅವನ ಸೌಜನ್ಯಗುಣಕ್ಕೆ ಮೆಚ್ಚಿ, 'ಅನಘಾ! ಪ್ರತಿಫಲಾಪೇಕ್ಷೆಯಿಲ್ಲದೆ ಕರ್ತವ್ಯವನ್ನು ನೆರವೇರಿಸಿದ ನಮ್ಮನ್ನು ಇಷ್ಟಾಗಿ ಪ್ರಶಂಸಿಸುವ ಪ್ರಮೇಯವಿಲ್ಲ. ನಿನ್ನ ಪ್ರೀತಿಯೇ ನಮಗೆ ಬೇಕಾದ ಬಹುಮಾನ! ಊರ ಸೇರಿ, ಸರಿದೋರಿದಂತೆ ನಡೆ!' ಎಂದರು. ಆಗ ಕಂಕನು 'ಮಹಾರಾಜ! ನನಗೆ ಪ್ರಿಯವಾಗುವಂತೆ ಒಂದು ಕೆಲಸವನ್ನು ಮಾಡು! ತ್ರಿಗರ್ತರಾಜನನ್ನು ಬಂಧ ಮುಕ್ತನನ್ನಾಗಿ ಮಾಡಿ, ಕಳಿಸಿಬಿಡು! ನಮ್ಮ ನಗರದಲ್ಲಿ ವಿಜಯೋತ್ಸವವನ್ನು ಸಾರುವಂತೆ ಹೇಳಿಕಳಿಸು! ಶೋಭನಕರ ಧ್ವಜ ವ್ಯಜನ ಚಾಮರ ಪಾಣಿಗಳಾಗಿ ಮಂಗಳತೂರ್ಯನಾದದೊಡನೆ, ನಿನ್ನನ್ನೆದುರ್ಗೊಂಡು ನಾಗರಿಕರು ಸ್ವಾಗತ ವನ್ನೀಯಲಿ! ನಗರವೂ ತಳಿಲನೀರಿಂದ, ತೋರಣಪತಾಕೆಗಳಿಂದ, ಪೂರ್ಣಕುಂಭ ರಂಭಾಸ್ತಂಭಗಳಿಂದ ಅಲಂಕೃತವಾಗಲಿ!' ಎಂದನು.

ವಿರಾಟನು, ಲಜ್ಜಾವನತವದನನಾಗಿ ನಿಂತಿದ್ದ ಸುಶರ್ಮನನ್ನು ಸಪರಿವಾರ ವಾಗಿ ಬಂಧದಿಂದ ಬಿಡಿಸಿ, ರಣರಂಗದಿಂದ ಹೊರಬಂದನು. ಮದಗಜಗಳು ಕಿತ್ತೊಗೆದ ಕದಳೀ ಕಾಂಡಗಳಂತೆ ಬಿದ್ದಿರುವ ತೊಡೆಗಳಿಂದಲು, ಕಡಿದುಬಿಸುಟಿದ ಚಿಗುರೆಲೆಯ ರೆಂಬೆಗಳಂತೆ ಅಸ್ತವ್ಯಸ್ತವಾಗಿರುವ ಕೈಗಳಿಂದಲು, ಹಂಸ ಸಮೂಹವು ಕಡಿದುಹಾಕಿದ ತಾಮರಸಕಾಂಡಗಳಂತೆ ಕಳಾಹೀನವಾದ ಕರುಳರಾಶಿಗಳಿಂದಲು, ಹುತ್ತನಿಂದ ಸೆಳೆದು ಕೊಂದ ಜಾತಿನಾಗಗಳಂತೆ ತುಂಡಾಗಿ ಬಿದ್ದಿದ್ದ ಮುದ್ರಿಕಾಯುಕ್ತ ಹಸ್ತಗಳಿಂದಲು, ಸರೋವರದಿಂದ ತೆಗೆದು ಮುರಿದುಹಾಕಿದ ಕಮಲಗಳಂತೆ ಕಣ್ಣು ಮುಚ್ಚಿದ ತಲೆಗಳಿಂದಲು, ಯಮರಾಜನ ಶಿಕ್ಷಾಶಾಲೆಯೋ ಎಂಬಂತೆ ಅತಿಭಯಂಕರ ವಾದ ರಣರಂಗವನ್ನು ಬಿಟ್ಟು, ವಿರಾಟನು ಸಕಲಪರಿವಾರಸಮನ್ವಿತನಾಗಿ, ನಗರ ಸಮೀಪದ ನದೀಸೈಕತ ಪ್ರದೇಶವನ್ನು ಸೇರಿ, ಚಂದ್ರಿಕಾಸುಂದರವಾದ ಒಂದು ಮೈದಾನದಲ್ಲಿ ಆ ರಾತ್ರಿ ಶೇಷವನ್ನು ಕಳೆಯಲು ನಿಶ್ಚಯಿಸಿದನು. ಅವನೊಡನೆ ಪಾಂಡವರೂ ಅಲ್ಲೇ ತಂಗಿ, ಅಜ್ಞಾತವಾಸಶೇಷವನ್ನೆಣಿಸುತ್ತಾ ನಿದ್ದೆಬಾರದೆ ರಾತ್ರಿ ಶೇಷವನ್ನು ಕಳೆದರು.

## ಉತ್ತರ ಗೋಗ್ರಹಣ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ರಾಜನ್! ನವಮಿಯ ದಿನ ಸೂರ್ಯೋದಯವಾಗುತ್ತಿರಲು, ದುರ್ಯೋಧನನ ಸೈನ್ಯವು ವಿವಿಧಾಯುಧ ಧಾರಿಯಾಗಿ ಭೀಷ್ಮ ದ್ರೋಣ ಕೃಪ ಕರ್ಣ ಅಶ್ವತ್ಥಾಮ ಶಕುನಿ ದುಶ್ಶಾಸನಾದಿ ವೀರಯುತವಾಗಿ ವಿರಾಟನಗರವನ್ನು ಸೇರಿತು. ಮತ್ಸ್ಯನಗರದ ಬಹಿಃಪ್ರಾಂತದಲ್ಲಿದ್ದ ಅರುವತ್ತುಸಾವಿರ ಸಂಖ್ಯಾಕವಾದ ಗೋಗಣವನ್ನು ಮುತ್ತಿ ಅವರು ಹಸ್ತಿನಾವತಿಯ ಕಡೆಗೆ ತಿರುಗಿಸಿ ಹೊಡೆದರು. ಅದನ್ನು ಕಂಡು ಗೋಗಣ ರಕ್ಷಕರು ಕೆರಳಿ, ಖಡ್ಗಾದಿ ವಿವಿಧಾಯುಧಗಳನ್ನು ಧರಿಸಿ, ಮುತ್ತಿದ ಕುರು ಸೇನೆಯನ್ನು ಎದುರಿಸಿದರು. ಆಗ ಭೀಷ್ಮ ದ್ರೋಣಾದಿ ವೀರರು ನಿಶಾತ ಬಾಣ ಗಳಿಂದ ಅವರನ್ನು ಸಂಹರಿಸಿದರು. ಗೋಪಾಲಕರು 'ಬಂದುದು ಕೌರವಸೇನೆ' ಎಂದರಿತು, ಹೆದರಿ, ಕೆಲವರು ನಗರವನ್ನು ಮುಟ್ಟಿ, ರಾಜನಿಗೆ ವೃತ್ತಾಂತವನ್ನು ತಿಳಿಸಬೇಕೆಂದು, ಧಾವಿಸಿದರು. ಗವಾಧ್ಯಕ್ಷನು ರಾಜಮಂದಿರವನ್ನು ಸೇರಿ, ರಥ ದಿಂದಿಳಿದು, ಆಕ್ರೋಶವನ್ನು ಮಾಡುತ್ತಾ, ಅಂತಃಪುರದಲ್ಲಿದ್ದ ಉತ್ತರಕುಮಾರನನ್ನು ಸಮೀಪಿಸಿ, ತಡಬಡುತ್ತಿಂತೆಂದನು—

ರಾಜಕುಮಾರ! ಕೌರವರು ಸಸೈನ್ಯರಾಗಿ ಭೂಮಂಡಲವು ಕಂಪಿಸುವಂತೆ ದಂಡೆತ್ತಿಬಂದು, ನಿನ್ನ ಗೋಗಣವನ್ನು ಹಿಡಿದಿರುವರು. ಗೋಗಣವು ಹಸ್ತಿನಾವತಿಯ ದಾರಿ ಹಿಡಿದಿದೆ. ಆಲಸ್ಯವಾದರೆ ಪ್ರಮಾದವಾಗುವುದು. ಗೋಗಣವು ಕೈತಪ್ಪಿ ಹೋಗುವ ಮುನ್ನ, ಯುದ್ಧಸನ್ನದ್ಧನಾಗಿ ಬಾ! ನಿನ್ನ ಶರವರ್ಷದಲ್ಲಿ ಕೌರವರು ಮುಣುಗಿ ಸಾಯಲಿ! ಧನುಃಕೋಟಿಗಳೇ ಉಪಧಾನವಾಗಿ, ಹೆದೆಯೇ ತಂತ್ರಿಯಾಗಿ, ಚಾಪದಂಡವೇ ವೀಣಾದಂಡವಾಗಿ, ಬಾಣಗಳೇ ಹೊರಹೊಮ್ಮುವ ವರ್ಣಗಳಾಗಿ, ಮಹಾಸ್ವನವಾದ ನಿನ್ನ ಧನುರ್ವೀಣೆಯನ್ನು ಶತ್ರುಮಧ್ಯದಲ್ಲಿ ಬಾರಿಸು! ರಜತ ಪ್ರಖ್ಯವಾದ ನಿನ್ನ ಕುದುರೆಗಳು ರಥಕ್ಕೆ ಕಟ್ಟಲ್ಪಡಲಿ! ಸಿಂಹಧ್ವಜವು ಮೇಲೇರಿ ಸಲ್ಪಡಲಿ! ಬಂಗಾರದ ಪುಂಖಗಳಿಂದ ಅಲಂಕೃತವಾಗಿರುವ ನಿಶಿತ ಬಾಣಗಳು ನಿನ್ನ ವೀರಹಸ್ತದಿಂದ ಬಿಡಲ್ಪಟ್ಟು, ಶತ್ರುರಾಜರ ಮಾರ್ಗವನ್ನೂ ಸೂರ್ಯಮಂಡಲವನ್ನೂ ಒಂದೇಸಲ ಮುಚ್ಚಲಿ! ವಜ್ರಪಾಣಿಯು ದೈತ್ಯರನ್ನಂತೆ, ರಣದಲ್ಲಿ ಗರ್ವಿತ ಕುರು ವೀರರನ್ನು ಸದೆಬಡೆದು, ದಿವ್ಯಕೀರ್ತಿ ಕಾಂತಾಮಣಿಯೊಡನೆ ಪುರವನ್ನು ಸೇರಬರುವ ಉತ್ತರಕುಮಾರನನ್ನು ಪುರಜನರು ವಿಜಯಮಾಲೆಗಳಿಂದ ಪೂಜಿಸಿ, ಸಂಭಾವಿಸಲಿ! ಬೇಗನೆ ಬಾ! ಕವಚ ಬಾಣ ತೂಣೀರ ಚಾಪ ಖಡ್ಗ ಗದಾ ತೋಮರ ಮುದ್ಗರಾದ್ಯಾಯುಧಗಳನ್ನು ರಥದಲ್ಲಿಟ್ಟು ನಡೆ! ರಾಜನು ದಕ್ಷಿಣ ಗೋಸಮೂಹ ರಕ್ಷಣೆಗೆ ಹೊರಟಿರುವುದರಿಂದ, ಪುರದಲ್ಲಿ ಮತ್ತಾವ ವೀರರೂ ಇಲ್ಲ. ವೀರಶಿಖಾಮಣಿಯಾದ ನಿನಗೆ ಅನ್ಯರ ಸಹಾಯವೂ ಬೇಕಿಲ್ಲ. ರಾಜ್ಯದ ರಕ್ಷಣೆಗೆ, ಪುರದ ಸಂಪತ್ತಿಗೆ

ಮೂಲಾಧಾರನಾದ ನಿನ್ನ ಕೈಚಳಕವನ್ನು, ವೀರವಿಹಾರವನ್ನು ನೋಡಿ, ಕೌರವ ಪತಕರು ಬೆರಗಾಗಿ ಓಡುವಂತೆ ಮಾಡು! ವಿರಾಟರಾಜನು ಎಷ್ಟೋ ಸಲ ಸಭೆಯಲ್ಲಿ 'ನನ್ನ ಕುಮಾರನಾದ ಉತ್ತರನು ಬಹುಪರಾಕ್ರಮಯುಕ್ತನು. ಬಾಹುಬಲ ಶಾಲಿಯು, ಕುಲದೀಪಕನು ಆದ ಉತ್ತರನನ್ನು ಮಗನನ್ನಾಗಿ ಪಡೆಯಲು ನಾನೂ, ರಾಜನನ್ನಾಗಿ ಪೊಂದಲು ಪ್ರಜರೂ ಅನೇಕ ಜನ್ಮಗಳ ತಪವನ್ನು ಮಾಡಿ, ಭಗವಂತ ನನ್ನು ಮೆಚ್ಚಿಸಿ, ಪಡೆದಿರುವೆವು. ಇವನಂತಹ ವೀರನಿಲ್ಲ' ಎಂದು ಪೊಗಳುತ್ತಿದ್ದು ದನ್ನು ಕೇಳಿರುವೆವು. ಆ ಮಾತಿಗೆ ತಕ್ಕಂತೆ ವಿಕ್ರಮಿಸು.

ಇಂತು ಕಾಂತಾಜನರ ಮಧ್ಯದಲ್ಲಿ ತನ್ನನ್ನು ಪೊಗಳುವ ಗೋಪಾಲಕರ ಮಾತಿ ನಿಂದ ಹಿಗ್ಗಿ, ತಾನೊಬ್ಬ ಮಹಾವೀರನೆಂದು ತಿಳಿದು, ದರ್ಪೋದ್ಧತನಾಗಿ ಉತ್ತರನು 'ಒಂದೇ ಏಟಿಗೆ ಕೌರವರನ್ನೆಲ್ಲ ರಣರಂಗದಲ್ಲಿ ಮಲಗಿಸಿಬಿಡುವೆನು. ಉತ್ತರನೆಂದರೆ ಸಾಮಾನ್ಯನಲ್ಲ ಎಂಬುವ ಸತ್ಯವನ್ನು ಎಲ್ಲರೂ ತಿಳಿಯಲಿ! ಮುಹೂರ್ತ ಮಾತ್ರದಲ್ಲಿ ಗೋವುಗಳನ್ನು ಹಿಂದಿರುಗಿಸಿ ತರುವೆನು. ಆದರೆ ಸಾರಥಿಯೊಬ್ಬನಿಲ್ಲದುದರಿಂದ ಸುಮ್ಮನಿರಬೇಕಾಗಿದೆ. ಏನು ಮಾಡಲಿ! ಅಶ್ವವಿದ್ಯಾಚತುರನೂ, ನನ್ನ ಪರಾ ಕ್ರಮವನ್ನು ನೋಡಿ ಮೆಚ್ಚುತ್ತ ಹೆಚ್ಚಿಸುವ ರಣಕುಶಲನೂ ಆದ ಸಾರಥಿಯನ್ನಾರಾ ದರೂ ಹುಡುಕಿ ತರಬಾರದೆ? ಸರಿಯಾದ ಸೂತನಿದ್ದರೆ, ಶತ್ರುಗಳನ್ನು ನಿರ್ಜಿಸಿ, ಗೋಗಣವನ್ನು ಹಿಮ್ಮೆಟ್ಟಿಸುವುದೇನು ಕಷ್ಟ? ಇಪ್ಪತ್ತೆಂಟು ದಿನಗಳಾಗಿರಬಹುದು! ಅಥವಾ ತಿಂಗಳಾಗಿರಬಹುದು—ಅಂದು ನಡೆದ ಮಹಾಯುದ್ಧದಲ್ಲಿ ನನ್ನ ಸಾರಥಿಯು ಹತನಾದನು. ಆಹಾ! ಎಂತಹ ಚತುರನವನು! ಅಂತಹ ಸೂತ ಮತ್ತೊಬ್ಬ ನನಗೆ ಮತ್ತೆ ಸಿಗಲಿಲ್ಲ. ಸೂತನಿದ್ದು, ರಥವನ್ನು ನಡೆಸಿದನೆಂದರೆ ಸಾಕು. ಕೌರವ ಸೈನ್ಯ ಸಾಗರವನ್ನು ಬಾಣಾಗ್ನಿಯಿಂದ ಇಂಗಿಸಿ, ಗಜವಾಜಿಗಳನ್ನು ಗಜಬಿಜಿ ಗೊಳಿಸಿ, ರಥಗಳನ್ನು ಶಿಥಿಲಿಸಿ, ಕಾಲ್ಬಲವು ಕಾಲ್ಬಲವಿದ್ದಷ್ಟು ಓಡಿಹೋಗುವಂತೆ ವಿಕ್ರಮಿಸಿ, ಕ್ಷಣಾರ್ಧದಲ್ಲಿ ವಿಜಯಪತಾಕೆಯನ್ನೆತ್ತಿಸಿ ಬರೆನೆ? ನಿರ್ವೀರ್ಯರಾದ ದುರ್ಯೋಧನ ದುಶ್ಶಾಸನ ಕರ್ಣ ಗುರುಪುತ್ರರನ್ನು ಲೀಲಾಜಾಲವಾಗಿ ಒಂದೇ ಕ್ಷಣದಲ್ಲಿ ಜಯಿಸಬಲ್ಲ ಈ ಉತ್ತರ ಭೂಪನಿಗೆ ವೃದ್ಧರಾದ ಭೀಷ್ಮ ದ್ರೋಣ ಕೃಪಾದಿಗಳ ಲೆಕ್ಕವೇನು? ನಾನಲ್ಲಿದ್ದಿದ್ದರೆ ಹೀಗಾಗುತ್ತಿತ್ತೆ? ಹೇಡಿ ಕೌರವರು ಕಳ್ಳರಂತೆ ಬಂದು ಗೋಗಣ ವನ್ನು ಕೊಂಡುಹೋಗುತ್ತಿರುವರಂತೆ! ಎಷ್ಟು ದೂರ ಓಡಿಹೋಗಿರುವರೋ ಇಷ್ಟು ಹೊತ್ತಿಗೆ! ಆಗಲಿ ಚಿಂತೆಯಿಲ್ಲ! ಸಾರಥಿಯನ್ನೋರ್ವ ನರಮಾತ್ರನನ್ನು ಕರೆತನ್ನಿ ಸಾಕು! ಕೌರವವೀರರು ನನ್ನ ರಣೋತ್ಸಾಹವನ್ನು ನೋಡಿ, 'ಇವನೇನು ಅರ್ಜುನ ನಿರಬಹುದೆ?' ಎಂದು ಭಯ ಸಂಭ್ರಮ ಕಾತರರಾಗುವಂತೆ ವಿಕ್ರಮಿಸಿ, ಗೋಗಣ ವನ್ನು ತರುವೆನು. ಅಂತು ತರದಿದ್ದರೆ ಮಹಾರಾಜನೂ, ಮಿತ್ರರೂ, ನೀವೂ ನನ್ನನ್ನು ಮೆಚ್ಚುವಿರೆ?' ಎಂದು ಜಂಬ ಕೊಚ್ಚಿದನು.

*

ಅವನ ಮಾತನ್ನಾಲಿಸಿ, ಅಲ್ಲಿದ್ದ ಮಾಲಿನಿಯು ಮನದಲ್ಲೇ ನಕ್ಕಳು. ಅವನ ದರ್ಪವನ್ನು ನೋಡಿ ಆಕೆಗೆ ಸ್ವಲ್ಪ ಸಿಟ್ಟೂ ಬಂತು. ಅವಳಲ್ಲಿಂದ ಮೆಲ್ಲನೆ ಸರಿದು, ಬೃಹನ್ನಲೆಗೆ ಉತ್ತರನ ವಚನವನ್ನು ಅನುವದಿಸಿ ತಿಳಿಸಿದಳು. ಅರ್ಜುನನು ಉತ್ತರ ವಚನತತಿಯನ್ನು ತಿಳಿದು ನಸುನಕ್ಕು, ಅಜ್ಞಾತವಾಸದ ಅವಧಿಯು ಮುಗಿದಿದೆ ಎಂದು ಗಣಿಸಿ ನಿಶ್ಚಯಿಸಿ, ದ್ರೌಪದಿಗಿಂತೆಂದನು—

ಪಾಂಚಾಲಿ! ಮತ್ತೆ ಉತ್ತರನಲ್ಲಿಗೆ ಹೋಗು! 'ಬೃಹನ್ನಲೆಗೆ ಸಾರಥ್ಯ ವಿದ್ಯೆಯು ಪರಿಚಯವಿದೆ—ಹಿಂದೆ ಖಾಂಡವದಹನ ಸಮಯದಲ್ಲಿ ಅರ್ಜುನನಿಗೆ ಸಾರಥಿ ಯಾಗಿ, ವಿಜಯವನ್ನು ಸಂಪಾದಿಸಿಕೊಟ್ಟ ಬೃಹನ್ನಲೆಗೆ ಸರಿ ಸೂತರಿಲ್ಲ. ಅವನ ಸಹಾಯದಿಂದ ಕುರುಸೈನ್ಯವನ್ನು ಗೆಲ್ಲುವುದು ದುಷ್ಕರವಲ್ಲ. ನಿನ್ನಂತಹ ವೀರನಿಗೆ ಅಂತಹ ಸಾರಥಿ ದೊರೆತರಲ್ಲವೆ ಶತ್ರುಜಯವು ಸುಕರವಾಗುವುದು!' ಎಂದು ಉತ್ತರ ನಿಗೆ ಹೇಳು; ನನ್ನನ್ನು ಸಾರಥಿಯಾಗಲು ಕರೆಸುವಂತೆ ಮಾಡು!

ದ್ರೌಪದಿಯು ಅದಕ್ಕೆ ಸಮ್ಮತಿಸಿ, ಉತ್ತರನಿದ್ದ ಸಭೆಗೆ ಬಂದು, ಉತ್ತರೆಗೆ ಬೃಹನ್ನಲನ ಸಾರಥ್ಯ ಚಾತುರ್ಯವನ್ನು ಪೊಗಳಿ ತಿಳಿಸಿದಳು. 'ರಾಜಕುಮಾರಿ! ನಿಮ್ಮಣ್ಣ ಉತ್ತರ ಕುಮಾರನು ಸೂತನಿಗಾಗಿ ಅರಸುತ್ತಿರುವನು. ಹಿಂದೆ ಧರ್ಮ ರಾಜನ ಮನೆಯಲ್ಲಿದ್ದ ಬೃಹನ್ನಲೆಗೆ ಸೂತಕೃತ್ಯವು ಪರಿಚಿತವೆಂಬುದನ್ನು ನಾನರಿತಿರು ವೆನು. ಅರ್ಜುನನಿಗೆ ಸಾರಥಿಯಾಗಿದ್ದನಂತೆ ನಿನ್ನ ನರ್ತನಾಚಾರ್ಯನು. ಖಾಂಡವ ವನ್ನು ಸುಡುವಲ್ಲಿ ಸಹಾಯಕನಾದ ಬೃಹನ್ನಲೆಯನ್ನು ಅರ್ಜುನನೂ ಆತ್ಮಸಮನೆಂದು ತಿಳಿದಿದ್ದನಂತೆ! ಬೃಹನ್ನಲೆಯ ರಥವಿದ್ಯೆಯು ಜಗತ್ಪ್ರಸಿದ್ಧವಾಗಿದೆ. ಬೇಕಾದರೆ ಉತ್ತರ ಕುಮಾರನಿಗೆ ಈ ವಿಷಯವನ್ನು ತಿಳಿಸು!' ಎಂದು ನುಡಿದ ಮಾಲಿನಿಯನ್ನು ಕರೆದುಕೊಂಡು ಉತ್ತರೆಯು ಉತ್ತರನನ್ನು ಸೇರಿ, ಎಲ್ಲ ವಿವರವನ್ನೂ ತನ್ನಣ್ಣನಿಗೆ ತಿಳಿಸಿದಳು.

ಉತ್ತರನು ನಗುತ್ತಾ, ಪಾಂಚಾಲಿಯನ್ನು ನೋಡಿ 'ಮಾಲಿನಿ! ಗೊತ್ತಿಲ್ಲದೆ ನುಡಿಯುವೆ! ಹೇಡಿ ಎಂದರೆ ಕಣ್ಣೆತ್ತಿ ಕೂಡ ನೋಡಲು ಹೇಸುವ ನಾನು ಬೃಹನ್ನಲೆ ಯನ್ನು ಸಾರಥಿಯಾಗಿ ಸ್ವೀಕರಿಸುವೆನೆ? ಕೇಳಿಲ್ಲಿ! ಬಂದಿರುವುದು ಕೌರವಸೈನ್ಯ! ಹಿಡಿದಿರುವುದು ನಮ್ಮ ಗೋಗಣವನ್ನು! ಪರಾಕ್ರಮಿಸಿ ಗೋಗಣವನ್ನು ಬಿಡಿಸಲು ಹೋಗುತ್ತಿರುವುದು ವೀರಶೂರ ಶಿಖಾಮಣಿಯಾದ ಉತ್ತರಕುಮಾರ! ಅಂತಹ ಸಮಯದಲ್ಲಿ ಬೃಹನ್ನಲೆಯ ಹೆಸರೆತ್ತಬೇಡ! ಆ ಹೇಡಿಯನ್ನು ಸೂತನಾಗಿಸಿ, ಹೊರಡುವ ನನ್ನನ್ನು ನೋಡಿ, ಪುರದ ನಾರಿಯರು ನಗುವುದಿಲ್ಲವೆ? ರಥಚೋದಕ ರಿಗೆ ಬರ ಬಂದಿದೆಯೇ ನನ್ನ ಊರಿನಲ್ಲಿ!' ಎಂದನು.

ಮಾಲಿನಿಯು 'ಮಹಾವೀರ! ಹೇಡಿ ಎಂದು ಬೃಹನ್ನಲೆಯನ್ನು ಕಡೆಗಣಿಸ ಬೇಡ! ಕೌರವ ಸೇನೆ ಏಕೆ, ತ್ರಿಜಗತ್ತಿನ ಸುರಾಸುರರೆತ್ತಿ ಬಂದರೂ ಬೃಹನ್ನಲೆ ರಥದಲ್ಲಿದ್ದೊಡೆ, ವಿಜಯವು ಕಟ್ಟಿಟ್ಟ ಗಂಟೆಂದು ತಿಳಿ! ಅವನು ಬರಿಯ ಸೂತನಲ್ಲ;

ಮಹಾರಥಿಕರನ್ನೂ ಲೆಕ್ಕಿಸದೆ ಕಾದುವ ಶೂರನು. ಇಂದಿನ ತನುವಿಕಾರದಿಂದ ಕಂಗೆಟ್ಟು ಕೂತಿದ್ದರೆ, ಸ್ವಾಭಾವಿಕ ಧೈರ್ಯಶೌರ್ಯಗಳು ಅಳಿಸಿ ಹೋಗುವುದಿಲ್ಲ. ನೋಡು ನನ್ನ ಮಾತಿನ ಯಾಥಾರ್ಥ್ಯವನ್ನು!' ಎಂದಳು.

'ಇನ್ನೊಬ್ಬ ಸಾರಥಿ ಸಿಗುವಂತಿಲ್ಲ, ಗೋಗಣವನ್ನು ರಕ್ಷಿಸದೆ ಇರುವಂತಿಲ್ಲ! ಏನು ಮಾಡಲಿ! ಸೈರಂಧ್ರಿ! ಹೋಗಿ ಅವನನ್ನೇ ಕರೆದುಕೊಂಡು ಬಾ! ಏನೆಂದರೂ ಕೇಳದೆ ಉತ್ತರ ಕುಮಾರನಿರುವನೆಂದು ಧೈರ್ಯವಿತ್ತು ಕರೆ ತಾ! ಬೇಗ ಬಾ!' ಎಂದು ಉತ್ತರನು ನುಡಿದನು. ಮಾಲಿನಿಯು ಹೊರಡಲನುವಾದಳು. ಆಗ ಉತ್ತರೆಯು, ಅವಳನ್ನು ತಡೆದು ತಾನೇ ಕರೆತರುವೆನೆಂದು ಅಲ್ಲಿಂದ ಅಂತಃಪುರ ಕ್ಕೆಂದು ಹೊರಟಳು.

ಆ ಸುಂದರಿಯ ಪಾದಾರವಿಂದಗಳ ಅರುಣ ವರ್ಣದಿಂದ ಕುಟ್ಟಿಮದ ಸ್ಫಟಿಕ ಶಿಲೆ ಗಳು ರಾಗರಂಜಿತವಾದವು. ವಕ್ಷೋಜಗಳ ಭಾರದಿಂದ ನಡುವು ಕಡುಬಳಲಿ ಬಳುಕು ತ್ತಿತ್ತು. ಅಂಧಕಾರದ ಗಗನದಿ ಹೊಳೆವ ಕೋಲ್ಮಿಂಚಿನಂತೆ, ಜಡೆಯಲ್ಲಿ ಮುಡಿದ ಪೂಸರವು ಬೆಳಗಿತು. ಶ್ರವಣ ರತ್ನಕುಂಡಲ ಶೋಭೆಯನ್ನಡಗಿಸಿ ಪುಂಡರೀಕ ಧವಳ ನಯನ ಕಟಾಕ್ಷವು ಮನೋಹರವಾಗಿತ್ತು. ಬಿಂಬಾಧರದಿಂದ ಸೂಸಿ ಬರುವ ಮಂದ- ಹಾಸವು ಪಸರಿಸಿದೆಡೆ ಪ್ರವಾಳ ವಜ್ರಗಳನ್ನು ಚೆಲ್ಲಿದಂತಿತ್ತು. ಕಾಲಪೈಜಣಿಯ ಜಣಜಣ ಧ್ವಾನವನ್ನು ಕೇಳಿ ಬಂದ ಹಂಸಗಳು ಆ ಸುಂದರಿಯ ಮಂದಗಮನವನ್ನು ಅನುಕರಿಸಿ ನಡೆಯುತ್ತ ನರ್ತನಶಾಲೆಯನ್ನು ಸೇರಿದವು.

ಪದ್ಮರಾಗಗಳಿಂದ ಕಪೋಲವನ್ನು, ಪುಂಡರೀಕಗಳಿಂದ ನಯನಗಳನ್ನು, ವಜ್ರ ಗಳಿಂದ ದಂತಪಂಕ್ತಿಯನ್ನು, ವೈಡೂರ್ಯಗಳಿಂದ ನಖರಾಜಿಯನ್ನು, ಗೋಮೇಧಿಕ ದಿಂದ ಹುಬ್ಬುಜತೆಯನ್ನು, ಪುಷ್ಯರಾಗದಿಂದ ಮುಖವನ್ನು, ಮರಕತಗಳಿಂದ ವಕ್ಷೋ ಜಘನ ರೋಮರಾಜಿಯನ್ನು, ನೀಲಗಳಿಂದ ಕೇಶರಾಶಿಯನ್ನು, ಮಾಣಿಕ್ಯಗಳಿಂದ ಅಧರವನ್ನು, ಪ್ರವಾಲದಿಂದ ಅಂಗುಲೀಗಣವನ್ನು, ಮೌಕ್ತಿಕಗಳಿಂದ ಮಂದಹಾಸ ವನ್ನು ರಚಿಸಿದ ವಿಧಿ ತಂದಿಟ್ಟ ನವನಿಧಿಯಂತೆ ಕಂಗೊಳಿಸುವ ಅಂಗನಾಮಣಿ, ರಂಗಸ್ಥಲದಲ್ಲಿದ್ದ ಬೃಹನ್ನಳೆಯನ್ನು ಸೇರಿ, ಅವನಿಗೆ ಬಾಗಿ ನಮಿಸಿ, ಪ್ರೀತಿ ವಿನಯ ಸಂಭ್ರಮಕಾತರಳಾಗಿ ಇಂತೆಂದಳು—

ಗುರುವರ್ಯ ! ಕೌರವರು ಬಂದು ಪಶುಸಂತತಿಯನ್ನು ಹಿಡಿದು, ಅಪಹರಿಸಿ ಹೋಗುತ್ತಿರುವರೆಂಬ ಸುದ್ದಿ ಈಗ ಬಂತು. ಅದನ್ನು ಕೇಳಿ ನಮ್ಮಣ್ಣ, ಉತ್ತರನು ಕ್ರೋಧಾವಿಲನಾಗಿ ಯುದ್ಧಕ್ಕೆಂದು ಹೊರಡುವವನು, ತಕ್ಕ ಸಾರಥಿ ಇಲ್ಲದೆ, ನಿಸ್ಸಹಾಯನಾಗಿರುವನು. ಅವನ ಸೂತನು ಕೆಲದಿನಗಳ ಹಿಂದೆ ರಣದಲ್ಲಿ ಮಡಿದನಂತೆ! ನಿನ್ನ ನೈಪುಣ್ಯವನ್ನು ಮಾಲಿನಿಯು ತಿಳಿಸಿ ಪುಣ್ಯವನ್ನು ಕಟ್ಟಿಕೊಂಡಳು. ನಮ್ಮ ಸೋದರನಿಗೆ ಸಾರಥಿಯೋ ರಥಿಯೋ ಆಗಿ, ಆಕಳ ಹಿಂಡನ್ನು ಹಿಂದಿರುಗುವಂತೆ

ಮಾಡು ! ನಮ್ಮಪ್ಪನ ಗೌರವವನ್ನುಳಿಸು ! ಕೌರವರ ಗರ್ವವನ್ನಳಿಸು ! ನಾನು ಶಿಷ್ಯಳೆಂಬ ಅಭಿಮಾನದಿಂದ ನನ್ನ ಪ್ರಾರ್ಥನೆಯನ್ನು ಮನ್ನಿಸು !

ಬೃಹನ್ನಲೆಯು ಇಷ್ಟವಿಲ್ಲದಂತೆ ನಟಿಸುತ್ತಾ, ಉತ್ತರೆಯನ್ನು ನೋಡಿ 'ರಾಜ ಪುತ್ರಿ ! ನಾನು ನಿಪುಣ ಸಾರಥಿಯಲ್ಲ ! ಆದರೂ ನಿನ್ನ ಮಾತಿಗೆ ಇಲ್ಲವೆನ್ನಲಾರದೆ, ನಿಮ್ಮಣ್ಣನಿಗೆ ಸಹಾಯವಾಗಿ ಹೋಗಲು ಒಪ್ಪಿ ಬರುವೆನು. ಸಾರಥ್ಯವನ್ನೇ ಅಲ್ಲದೆ, ನಿನಗಾಗಿ ಬೇಕಾದ ದುಷ್ಕರ ಕಾರ್ಯಗಳನ್ನೂ ನಾನು ಸಾಧಿಸಿ, ವಿಜಯಶ್ರೀ ಸಹಿತನಾಗಿ ಬರುವೆನು. ನಡೆ !' ಎಂದು, ಉತ್ತರೆಯನ್ನು ಅನುಸರಿಸಿ ಸಭೆಗೆ ಬಂದನು.

ಗೋಪಾಲಕರು ತ್ವರೆಪಡಿಸುತ್ತಿರಲು, ಸಾರಥಿಗಾಗಿ ತವಕಿಸುವ ಉತ್ತರನಿಗೆ, ಮತ್ತಗಜದಂತೆ ಗಂಭೀರನಾಗಿ ನಡೆದುಬರುವ ಬೃಹನ್ನಲೆಯ ದರ್ಶನದಿಂದ ಆನಂದ ವಾಯಿತು ; ಅವನ ರಣೋತ್ಸಾಹವು ಇಮ್ಮಡಿಸಿತು. ಉತ್ತರನು ಬೃಹನ್ನಲೆಯನ್ನು ಗೌರವದಿಂದ ಕರೆದು ಕೂಡಿಸಿ, 'ಕೌರವರಿಂದ ನನಗೆ ಯುದ್ಧವು ಘಟಿಸಿದೆ. ಆಲಸ್ಯವಿಲ್ಲದೆ ಹೊರಟು, ಹೋರಾಡಿ, ಗೋಗಣವನ್ನು ಉಳಿಸಬೇಕು. ನನ್ನಂತಹ ರಥಿಕನಿಗೆ, ನಿನ್ನಂತಹ ಸಾರಥಿ ಸರಿಯಲ್ಲ. ಆದರೂ ಬೇರೊಬ್ಬ ಸಾರಥಿ ಊರಲ್ಲಿಲ್ಲ. ವಿಧಿಯಿಲ್ಲದೆ ನನ್ನ ಹಿಂದೆ ಸಾರಥಿಯಾಗಿ ಬಂದು, ನನಗೆ ಸಹಾಯನಾಗು ! ಬೇಗ ಬಾ! ಕವಚವನ್ನಿಟ್ಟು, ರಥಕ್ಕೆ ಕುದುರೆಗಳನ್ನು ಕಟ್ಟು ! ಆಯುಧಗಳನ್ನು ರಥದಲ್ಲಿಡು ! ಮರೆಯಬೇಡ ! ಸೈರಂಧ್ರಿ ಹೇಳಲು ಗೊತ್ತಾಯಿತು ನನಗೆ ನಿನ್ನ ವೀರ್ಯ ಶೌರ್ಯ ಧೈರ್ಯ ಸಾಹಸಗಳು ! ಏಳು !' ಎಂದು ಬಲಾತ್ಕರಿಸಿದನು.

'ರಾಜಕುಮಾರ ! ಆಟಪಾಟಗಳಿದ್ದಾಗ ನನ್ನನ್ನು ಕರೆಸುವುದುಚಿತವಾಗಲಿ, ರಣರಂಗದಲ್ಲಿ ಸಾರಥಿಯಾಗೆಂದು ನನ್ನನ್ನು ಕರೆದುದು ಸರಿಯಲ್ಲ. ನಾನು ಸೂತನಲ್ಲ. ನನಗೇಕೆ, ಬಾರದ ಸಾಹಸದ ಕೆಲಸ ? ಬೇರೊಬ್ಬ ಬಾಹುಬಲಾಢ್ಯನಾದ ಸಾರಥಿ ಯನ್ನು ನೋಡು ! ನನ್ನನ್ನು ಬಿಟ್ಟುಬಿಡು !' ಎಂದ ಬೃಹನ್ನಲೆಗೆ ಉತ್ತರನು ಇಂತೆಂದನು—

ಬೃಹನ್ನಲೇ ! ಖಾಂಡವದಹನಸಮಯದಲ್ಲಿ ಅರ್ಜುನನಿಗೆ ವಿಜಯವನ್ನು ಸಾಧಿಸಿಕೊಟ್ಟ ನಿನ್ನ ಚಾತುರ್ಯ, ನಿನ್ನ ವೀರ್ಯ ಧೈರ್ಯಗಳು ಇಂದು ಇಲ್ಲ ವಾದವೇ ? ಹೀಗೇಕೆ ನನ್ನನ್ನು ಹೀಯಾಳಿಸುವೆ ? ಅರ್ಜುನ ಸಮನೆಂದು ಖ್ಯಾತ ನಾದ ನನ್ನ ಪ್ರಾರ್ಥನೆಯನ್ನು ಮನ್ನಿಸು ! ಭಯಪಡಬೇಡ ! ಏಳು ಬೇಗ.

ಬೃಹನ್ನಲೆಯು ಅವನ ಮಾತಿಗೆ ಬದಲು ಹೇಳಲಾಗದವನಂತೆ, ಎದ್ದು, 'ಸಾರಥಿ ಯಾಗುವೆ'ನೆಂದನು. ಉತ್ತರನಿಗೆ ಆನಂದವಾಯಿತು. ಅವನು ದೃಢವಾದ ಕವಚ ವನ್ನು ತರಿಸಿ, ಧರಿಸೆಂದು ಪಾರ್ಥನಿಗೆ ಕೊಟ್ಟನು. ಬೃಹನ್ನಲೆಯು ಕವಚವನ್ನು ತಲೆ ಕೆಳಗಾಗಿ ಧರಿಸಿ ನಿಂತನು. ಅದನ್ನು ನೋಡಿ, ಅಲ್ಲಿದ್ದ ಅಂಗನೆಯರು ನಕ್ಕರು. ಆಗ ಉತ್ತರನು ತಾನಾಗಿ ಬಂದು, ಅರ್ಜುನನಿಗೆ ಕವಚವನ್ನು ತೊಡಿಸಿ, ತಾನೂ ತೊಟ್ಟು,

ಅಂತಃಪುರದಿಂದ ಹೊರಬಂದನು. 'ಕಟ್ಟು ಕುದುರೆಗಳನ್ನು, ಧ್ವಜವನ್ನೆತ್ತು! ಗೋಗಣವನ್ನು ಉಳಿಸಿಕೊಂಡು ಬೇಗ ಬರಬೇಕಾಗಿದೆ' ಎಂದು ಅವಸರಪಡಿಸುವ ಉತ್ತರನನ್ನು ನೋಡಿ, ಅರ್ಜುನನು 'ಆಗಲಿ! ನೀ ಹೇಳಿದಂತೆ ಮಾಡುವುದೊಳಿತು. ನೀನಿದ್ದೆಡೆ ಇರುವುದೊಳಿತು. ಹೋಗೆಂದೆಡೆಗೆ ನಡೆಯುವುದು ಸರಿ. ನನ್ನ ಶಕ್ತಿಯನ್ನರಿದು, ತಕ್ಕಂತೆ ಕೆಲಸವನ್ನಿತ್ತು, ಹಗೆಯನ್ನೋಡಿಸಿ, ವಿಜಯಯುತನಾಗಿ ಬಾ!' ಎಂದು ತ್ವರೆಯಿಂದ ರಥವನ್ನು ತಂದು, ಕುದುರೆಗಳನ್ನು ಪರೀಕ್ಷಿಸಿ ಆರಿಸಿ ತಂದು ಕಟ್ಟಿದನು. ಮೇಲೆ ಸಿಂಹಧ್ವಜವನ್ನೆತ್ತಿದನು. ಇಂತು ಸಮರಸನ್ನದ್ಧರಾದ ಸೂತರಥಿಕರನ್ನು ನೋಡಿ, ಉತ್ತರೆಯು ಮುಂದೆ ಬಂದು—

ಕೌರವವೀರರನ್ನು ಗೆದ್ದು, ಅವರು ಹೊದ್ದಿರುವ ಚಿತ್ರವರ್ಣಭಾಸುರಗಳಾದ ವಸ್ತ್ರಗಳನ್ನು ತನ್ನಿ! ನಮ್ಮ ಗೊಂಬೆ-ಉಡುಪಿಗೆ ಬೇಕಾಗಿವೆ.—ಎಂದು ಬೇಡುವ ಸುಂದರಿಗೆ ಪುರಂದರನಂದನನಿಂತೆಂದನು—

ರಾಜಕುಮಾರಿ! ನಮ್ಮ ಉತ್ತರಭೂಪನು ಕೌರವರನ್ನು ಗೆದ್ದು, ಗೋಗಳನ್ನೂ, ವಿಜಯಲಕ್ಷ್ಮಿಯನ್ನೂ ತರುವ ವೀರನಾಗಿರಲು, ನಿನ್ನ ಗೊಂಬೆಗಳಿಗೆ ಉಡುಪಾಗಿ ಆ ದುಡುಕರ ಉಡಿಗೆ ತೊಡಿಗೆಗಳನ್ನು ತರಲಾರೆನೇ? ಆಗಲಿ ಚಿಂತಿಸಬೇಡ—ಎಂದು ಹೇಳಿ, ಅರ್ಜುನನು, ರಥದಲ್ಲಿರುವ ಧನುಸ್ತೂಣೀರ ಕೃಪಾಣಗದಾದಿ ವಿವಿಧಾಯುಧಗಳನ್ನು ಪರೀಕ್ಷಿಸಿ ನೋಡಿ, ತಲೆಯಾಡಿಸಿ, ನಗುತ್ತಾ, ರಥಪುರೋಭಾಗದಲ್ಲಿ ಏರಿ ಕುಳಿತನು; ಕುದುರೆಗಳ ಕಡಿವಾಣದ ಸಿಕ್ಕುಬಿಡಿಸಿ, ಉತ್ತರನ ಕಡೆ ನೋಡಿದನು. ಉತ್ತರನು ಗೋಪಾಲಕನನ್ನು ಕಂಡು 'ಕೌರವಾಧಮರು ಪಶುಗಣವನ್ನು ಹಿಡಿದು ಹೋಗುವ ದಿಕ್ಕಾವುದೆಂದು ಕೇಳಲು, ಅವನು 'ಶ್ಮಶಾನದ ಸಮೀಪದಲ್ಲಿ' ಎಂದನು. ಉತ್ತರನು ಅವನ ಮಾತಿಗೆ ಸಿಟ್ಟಾಗಿ, ಹುಬ್ಬನ್ನು ಗಂಟಿಕ್ಕಿ, ಅಲ್ಲಿದ್ದ ಪೌರವೃದ್ಧವಿಪ್ರಾದಿ ಜನರನ್ನು ನೋಡುತ್ತಾ, 'ಹಿಂದೆ ಖಾಂಡವದಹನ ಕಾಲದಲ್ಲಿ ಧನಂಜಯನಿಗಾದ ವಿಜಯಮಂಗಲವು ಇಂದು ನಿನ್ನಿಂದ ಭೂಮಿಂಜಯನಿಗಾಗಲಿ!' ಎಂದು ನುಡಿವ ಬ್ರಾಹ್ಮಣಾಶೀರ್ವಾದವನ್ನು ಕೇಳುತ್ತಾ, ರಥವನ್ನೇರಿ ಕುಳಿತನು. ನಾರೀಜನವು ಲಾಜಾಕ್ಷತೆಗಳನ್ನು ಚೆಲ್ಲಿದರು.

ಉತ್ತರ-ಧನಂಜಯರು ಪುರವನ್ನು ದಾಟಿ ಪರೇತನಿಲಯ ಪ್ರಾಂತವನ್ನು ಸೇರಿದರು. ಅರ್ಜುನನ ಕೈಸೋಕಿ ಊರ್ಜಿತ ವೇಗದಿಂದೋಡುವ ಜವನಾಶ್ವಗಳು ಕೌರವಸೇನೆಯನ್ನು ಬಲು ಬೇಗನೆ ಸಮೀಪಿಸುತ್ತಿದ್ದುವು. ಆಗ ಉತ್ತರನು ನಾಗಕೇತನನ ಭಯಂಕರ ಸೈನ್ಯವನ್ನು ದೂರದಿಂದ ನೋಡಿದನು.

ಮೇಘಶ್ಯಾಮವಾದ ಧರಾಧೂಳಿ–ಗುಂಪಾದ ಎಲೆಗಳಂತಿರಲು, ಸಂಧ್ಯಾರಾಗರಕ್ತವಾದ ಪರಾಗ–ಎಳೆಯ ಚಿಗುರೆಲೆಗಳಂತಿರಲು, ರಾಜಮರಾಳಧವಳವಾದ ಭೂರೇಣುವು–ಪುಷ್ಪಗುಚ್ಛಗಳಂತಿರಲು, ಹಾರಿದ್ರಗೌರವಾದ ಧರಿತ್ರೀ ರೇಣುವು–ಹೂಹುಡಿಯಂತಿರಲು, ಬೆರೆತು, ಗೋಗಣಖುರಘಟ್ಟಿತವಾದ ಧರಾಧೂಳಿ, ಸ್ವರ್ಗ

ವನ್ನು ಸೇರಿ ನಂದನವನವನ್ನು ಸ್ಪರ್ಧಿಸಲು ಹೋಗುವ ಭೂತಲವನದಂತೆ ಮೇಲಕ್ಕೆ ಏಳುತ್ತಿತ್ತು. ಗೋಗಣದ ಹಿಂದೆ ಕೌರವರಾಜಸೇನೆಯು ಸಮುದ್ರದಂತೆ ಘೂರ್ಣಿಸುತ್ತಾ, ನಡೆಯುತ್ತಿತ್ತು. ರಥಗಳೇ ಬೆಟ್ಟಗಳಾಗಿ, ಆನೆಗಳೇ ತಿಮಿಂಗಿಲಗಳಾಗಿ, ಕುದುರೆ ಸಾಲುಗಳೇ ಅಲೆಗಳಾಗಿ, ಕಾಲಸೇನೆಯೇ ನೊರೆಯಾಗಿ, ಮೆರೆವ ಕೌರವ ಸೈನ್ಯಸಾಗರವನ್ನು ನೋಡಿ, ಉತ್ತರನು ಭಯಭ್ರಾಂತನಾದನು. ಅದರ ಧೂಳಿಯಿಂದ ಕಣ್ಣು ಕುರುಡಾಗಿ, ಶಂಖಭೇರೀ ನಿನಾದದಿಂದ ಕಿವಿಗಡಚಿಕ್ಕಿ, ಆಕಾಶದಲ್ಲಿ ಕಾಲುಗಳಿಂದ ಬರೆಯುವಂತೆ ಧಾವಿಸುವ ಅಶ್ವಗಳ ವೇಗದಿಂದ ತಲೆ ತಿರುಗಿ, ಉತ್ತರನು ದಿಕ್ಕೆಟ್ಟನು. ಭಯದಿಂದ ಅವನ ಸೈನವಿರೆದ್ದಿತು. ಕಣ್ಣುಗಳಲ್ಲಿ ನೀರು ತುಂಬಿಬಂತು; ಅವನ ಕೈಕಾಲು ನಡುಗತೊಡಗಲು, ಅಸ್ತ್ರಗಳನ್ನು ಕೆಳಗಿಟ್ಟು, ಭಯದಿಂದ ಗದ್ಗದಿತ ಕಂಠನಾಗಿ, ಅವನು ಅರ್ಜುನನೊಡನೆ ಮಾತಾಡಿ ತಡೆಯಲೆಣಿಸಿದನು.

ವೈಶಾಖ ಶುದ್ಧ ಸಪ್ತಮೀ ತಿಥಿಗೇ ಹದಿಮೂರು ವರ್ಷಗಳ ಅರಣ್ಯವಾಸ-ಅಜ್ಞಾತವಾಸಗಳು ಮುಗಿದಿರುವುದರಿಂದ, ಬೃಹನ್ನಲೆಯು ಊರ್ವಶೀಶಾಪಮುಕ್ತನಾಗಿ, ಅರ್ಜುನನಾಗಿದ್ದನು. ಹರೆ ಬಿಚ್ಚಿದ ನಾಗರಹಾವಿನಂತೆ, ಚುರುಕಾಗಿ ಸಮರರಂಗದಿ ಧುಮುಕಲು ಪರಿದಾಡುವ ವೀರವರನಿಗೆ ಕೌರವಸೇನೆಯ ಕಡೆಗೆ ಗಮನವಿತ್ತು. ರಥಗಳ ನೇಮಿರವವು ಗುಡುಗಾಗಿ, ಆನೆಗಳು ಮೇಘವಾಗಿ, ಅಶ್ವಗಳು ಮಿಂಚಾಗಿ, ಪದಾತಿ ಪಂಕ್ತಿಗಳು ಇಂದ್ರಧನುವಾಗಿ, ಬಾಣವರ್ಷವನ್ನು ಸುರಿಸುವ ಕೌರವ ಸೈನ್ಯವನ್ನು ನೋಡಿ, ಅರ್ಜುನನು ಖಾಂಡವದಾಹವನ್ನು ನೆನೆದು, ಗೋಖಂಡವನ್ನು ಕೌರವೇಂದ್ರನಿಂದ ನಾಶವಾಗದಂತೆ ರಕ್ಷಿಸಲು ನಿಶ್ಚಯಿಸಿ, ಮುಂದೆ ಸಾಗುತ್ತಿದ್ದನು. ಉತ್ತರನು ಅವನನ್ನು ತಡೆದು ನಿಲ್ಲಿಸಿ, ಇಂತೆಂದನು—

ಬೃಹನ್ನಲೇ ! ನಿಲ್ಲು ! ನೋಡಾ ಸೇನೆಯನ್ನು ! ಭೀಷ್ಮ ದ್ರೋಣ ಕರ್ಣ ಕೃಪ ಅಶ್ವತ್ಥಾಮರಾದಿ ಮಹಾರಥಿಕರಿಂದಲು, ದುರ್ಯೋಧನ ದುಶ್ಶಾಸನ ಶಕುನಿ ವಿಕರ್ಣಾದಿ ಮಾಯಾವಿಗಳಿಂದಲು ತುಂಬಿ, ತಿಮಿ ನಕ್ರ ಝುಷಾಕುಲವಾದ ಪಾರಾವಾರದಂತೆ ಪಾರವಿಲ್ಲದ ಕೌರವ ಸೇನಾಮಧ್ಯದಲ್ಲಿ ಹೊಕ್ಕರೆ ನನ್ನ ಗತಿ ಏನು ? ಅವರು ಹಿಡಿದ ಅಸ್ತ್ರ ಶಸ್ತ್ರಾದಿಗಳ ಕಾಂತಿಪುಂಜವೆಡರಿ ನನ್ನ ಕಣ್ಣು ಕುರುಡಾಗಿದೆ. ನಾನಿನ್ನೂ ಬಾಲಕನೆಂದು ನಿನಗೆ ತಿಳಿಯದೇ ? ನಿನಗೂ ಭಯವಾಗಿರಬೇಕು ! ಧನುರ್ವಿದ್ಯಾ-ನೈಪುಣ್ಯವಿಲ್ಲದ ನಾನೆಲ್ಲಿ? ಮಹಾಯುದ್ಧ ಚತುರರಾದ ಕರ್ಣವಿಕರ್ಣ ಭೀಷ್ಮಾದಿ ವೀರರೆಲ್ಲಿ ? ಎಂದೋ ಪ್ರಭಾಸದಲ್ಲಿ ಒಂದು ಮಡಿಯುಟ್ಟು ಬಡ ವಿಪ್ರರಂತಿದ್ದ ಕೌರವರನ್ನು ಕಂಡಿದ್ದೆನು. ಆದರೆ ಅವರಿಂದು ಇಷ್ಟು ಶ್ರೇಷ್ಠ ವೀರರಾಗಿರುವರೆಂದು ತಿಳಿಯದೆ, ಬಂದುದು ತಪ್ಪಾಯಿತು. ಭಯವಾಗುತ್ತಿದೆ ! ನೋಡು ನನ್ನ ಮೈ ನಡುಗುತ್ತಿದೆ ! ನಿಲ್ಲಲಾರದಿರುವೆನು. ಇಂತಹ ನನ್ನ ಅವಸ್ಥೆಯನ್ನು ಹೇಳಿದರೂ ಕಿವಿಗೊಡದೆ—ನನ್ನ ಕಡೆ ನೋಡದೆ, ಸುಮ್ಮನೆ ರಥವನ್ನು ಓಡಿಸುತ್ತಿರುವೆ ! ಇದು ನಿನಗೆ ತರವಲ್ಲ. ನಾನು ನಿಶ್ಚಯವಾಗಿ ಯುದ್ಧವನ್ನು ಮಾಡಲಾರೆನು. ಬೇಗನೆ ರಥವನ್ನು ಹಿಂದಿರುಗಿಸು !

ಊರು ಸೇರಿದರೆ ಜೀವ ಉಳಿದೀತು! ನಪುಂಸಕನಾದ ನಿನಗೆ ಇಂತಹ ದಿಟ್ಟತನವೇಕೆ? ಪ್ರಾಣಕ್ಕಿಂತಲು ಪ್ರಿಯವಾದುದಿಲ್ಲ ಎಂದನು.

ಅರ್ಜುನನದನ್ನು ಕೇಳಿ ನಕ್ಕು 'ಕುಮಾರ ! ನಾನಾಗಿ ಅಸದೃಶರಾದ ವೀರಭಟರನ್ನೆದುರಿಸಿ ಹೋರಾಡುವಷ್ಟು ಬುದ್ಧಿಹೀನನಲ್ಲ. ನಮಗೆ ಬೇಕಾದುದು ಗೋಧನವಲ್ಲವೇ ? ಗೋಗಣವನ್ನು ಕೊಂಡೊಯ್ಯುತ್ತಿರುವ ತುಚ್ಛ ಸೈನಿಕರನ್ನು ಹೆದರಿಸಿ ಓಡಿಸಿ, ನಮ್ಮ ಪಶುಸಮೂಹವನ್ನು ನಗರದ ಕಡೆಗೆ ತಿರುಗಿಸಿ, ನಡೆದು, ಮನೆ ಸೇರುವುದು ಉಚಿತವಾಗಿದೆ. ಗೋಗಣವು ಶತ್ರುಕರಗತವಾಗಿ ಅತ್ತ ಹೋಗುತ್ತಿರಲು, ನೀನಿತ್ತ ಓಡಿಹೋಗುವುದು ಸರಿಯಲ್ಲ. ಅಂತಃಪುರದ ಅಂಗನಾಮಣಿಗಳ ಮುಂದೆ ಪಶುಧನವನ್ನು ಕ್ಷಣದಲ್ಲಿ ತರುವೆನೆಂದು ಸಾರಿ, ರಥವನ್ನೇರಿ ಇಲ್ಲಿಯವರೆಗೂ ಸಾಗಿ ಬಂದು, ಈಗ ರಥ ಗಜ ತುರಗ ಭಟ ಸಮೂಹವನ್ನು ಕಂಡು, ಹೆದರಿ, ಓಡುವುದು ರಾಜಕುಮಾರನಾದ ನಿನಗೆ ಸಲ್ಲದು' ಎಂದನು. ಉತ್ತರನು 'ಅಯ್ಯಾ! ಪಶು ಸಮೂಹವು ಹಾಳಾಗಲಿ ! ಅಂಗನೆಯರ ಮೆಚ್ಚಿಕೆ ನನಗೆ ಬೇಕಾಗಿಲ್ಲ. ಯುದ್ಧವೆಂದರೆ ನನ್ನ ಕೈಲಾಗದ ಕೆಲಸ ! ನಡೆ ಮನೆಗೆ' ಎಂದು ಬೇಡಿದನು.

ಅರ್ಜುನನು 'ಉತ್ತರಕುಮಾರ! ಕೇಳಿಲ್ಲಿ! ಧೈರ್ಯವನ್ನು ತಾಳು! ಶತ್ರುಗಳಿಂದ ಹೋರಾಡಿ, ಅಶಕ್ಯವಾದಾಗ ಹಿಂದಿರುಗಿ ಹೋಗುವುದು ತಪ್ಪಲ್ಲ. ಆದರೆ ನಿಜಶೂರರು ಶತ್ರುಗಳಿಗೆ ಬೆನ್ನು ತೋರಿ ಓಡುವುದಕ್ಕಿಂತಲು ರಣಮರಣವೇ ಶ್ರೇಯವೆಂದು ತಿಳಿದಿರುವರು. ಯುದ್ಧವೇ ಆರಂಭವಾಗಿಲ್ಲ. ಕೌರವವೀರರು ನಿನ್ನ ಕಡೆ ಕಣ್ಣೆತ್ತಿ ನೋಡಿಲ್ಲ. ಆಗಲೇ ಓಡಿಹೋಗುವೆನೆನ್ನಲು ಕಾರಣವಾದರೂ ಏನು ?'

ದಿಕ್ಕುಡ್ಯಗಳೊಡೆಯುವಂತೆ ಶಂಖಗಳು ಮೊಳಗುವವು. ಭಟರು ಮೇಲೇರಿ ಬರುವ ಪದಘಟ್ಟನಗಳಿಂದ ಧರಾಧೂಳಿ ಮೈಮುಚ್ಚುವದು. ಚತುರಂಗಬಲವು ಕೋಲಾಹಲದಿಂದ, ಭಯಂಕರವಾಗಿ ಸುತ್ತುಗಟ್ಟುವುದು. ಶಸ್ತ್ರ ಸಮೂಹವು ಕುದುರೆಗಳನ್ನು, ಸೂತನನ್ನು, ರಥಿಕನನ್ನು ನೋಯಿಸಿ ಕೆಡಹುವವು. ಯುದ್ಧರಂಗದಿ ನಡೆಯುವ ಇಂತಹ ಆಕ್ರಮಣವನ್ನು ಲೆಕ್ಕಿಸದೆ, ಪರಾಕ್ರಮಿಸಿ, ವೀರವಿಹಾರವನ್ನು ಮಾಡಿ, ಶತ್ರುಭಟರನ್ನು ಚೆಂಡಾಡಿದವನೇ ಮಹಾವೀರನೆನಿಸಿ ಕೀರ್ತಿ ಪಡೆಯುವನು. ನಿನ್ನಂತೆ ಹೆದರಿ, ದೂರದಿಂದಲೇ ಓಡಿಹೋದವನಿಗೆ ಅಪಕೀರ್ತಿ ಬರುವುದಲ್ಲದೆ, ಅವನು ಹಾಸ್ಯಾಸ್ಪದನಾಗುವನು. ಮತ್ತು ಶತ್ರುಗಳು ಕೃತಕೃತ್ಯರಾಗಿ ಸಂತೋಷದಿಂದ ಹೋಗುವರು. ಪುರಜನರು ನಿಂದಿಸುವಂತೆ, ಪಶುಗಣವನ್ನು ಕಾಪಾಡದೆ, ಕೈಬಿಟ್ಟು, ಹಿಂದಿರುಗುವುದು ನನ್ನಿಂದಾಗದು.' ಎಂದನು.

ಉತ್ತರನು 'ಅಯ್ಯಾ ! ಮಹಾಶೂರ ! ತ್ರಿಗರ್ತರಾಜನು ದಕ್ಷಿಣದ ಗೋಗಣವನ್ನು ಹಿಡಿದನೆಂದು, ನಮ್ಮ ತಂದೆ ಸೈನ್ಯಗಳನ್ನೆಲ್ಲ ತೆಗೆದುಕೊಂಡು ಅಲ್ಲಿಗೆ ಹೋದನು. ಊರಲ್ಲಿ ಸಹಾಯಕವಾದ ಸೈನ್ಯವಿಲ್ಲ. ಸೂತರೂ ಸಿಗದೆ, ನಿನ್ನನ್ನು ಬೇಡಿ ತಂದೆನು. ನನ್ನ ದುರ್ವಿಧಿ ನನ್ನನ್ನಿಲ್ಲಿಗೆ ತಂದಿತು. ನಾನೊಬ್ಬನು ; ಶತ್ರುವೀರರು ಲಕ್ಷಗಟ್ಟಲೆ

ಇರುವರು. ಯುದ್ಧಮಾಡುವುದೆಂದರೆ ಸಂಗೀತವೆಂದು ಅಥವಾ ನಾಟ್ಯವೆಂದು ತಿಳಿದೆಯಾ ? ಹುಚ್ಚನಂತಾಡಬೇಡ ! ಅವರು ನಮ್ಮನ್ನು ನೋಡದ ಮುನ್ನ ತಿರುಗು ಮನೆಯ ಕಡೆಗೆ !' ಎಂದಾಜ್ಞಾಪಿಸಿದನು.

ಅರ್ಜುನನು 'ಉತ್ತರಾ! ಸೈರಂಧ್ರಿಯು ನನ್ನ ಚಾತುರ್ಯವನ್ನು ಬಣ್ಣಿಸಿದಳು. ಅದನ್ನು ಕೇಳಿ ನೀನು ಸಾರಥಿಯಾಗೆಂದು ನನ್ನನ್ನು ಕರೆತಂದೆ ! ಮಹಾಪರಾಕ್ರಮಿ ಎಂದು ಹೇಳಿಕೊಂಡೆ ! ಪುರಜನರೂ ಪ್ರಶಂಸಿಸಿ ಕಳಿಸಿಕೊಟ್ಟರು. ಇಷ್ಟಾಗಿ, ಇಲ್ಲಿಯವರೆಗೂ ಬಂದು, ಕೌರವಾಧಮರಿಗೆ ಪಶುಧನವನ್ನೊಪ್ಪಿಸಿ, ಬರಿಗೈಯಿಂದ ಪುರವನ್ನು ಸೇರುವ ಹೇಡಿಯಲ್ಲ ನಾನು. ನೀನೂ ಅಂತಾಗಬೇಡ ! ಹಿಡಿ ಧೈರ್ಯವನ್ನು ! ಬಿಡು ಭಯವನ್ನು ! ಸ್ವಲ್ಪ ಕಾಲದಲ್ಲೇ ಕೌರವರನ್ನು ಮಟ್ಟಕ್ಕಿ, ಅವರ ಕಣ್ಣಲ್ಲಿ ಮಣ್ಣೆರಚಿ, ಗೋಗಣವನ್ನು ಕೊಂಡು ಹೋಗೋಣ!' ಎಂದು ರಥವನ್ನು ಮುಂದಕ್ಕೆ ಸಾಗಿಸಿದನು.

ಆಗ ಉತ್ತರನು, 'ಅವರು ನೋಡದ ಮುನ್ನ ಓಡಿಹೋದರೆ, ಯಾರು ನಗುವವರು ? ಏನು ಹುಚ್ಚು ಸಾಹಸ ನಿನ್ನದು ! ಅಷ್ಟು ಕೊಬ್ಬಿದ್ದರೆ ಹೋಗಿ ಕೌರವರಿಂದ ಕಾದಾಡಿ ಸಾಯಿ! ನನ್ನನ್ನು ಬಿಟ್ಟುಬಿಡು!' ಎಂದು ನುಡಿದು, ಪ್ರತ್ಯುತ್ತರವನ್ನಿರೀಕ್ಷಿಸದೆ ರಥದಿಂದ ಕೆಳಗೆ ಧುಮುಕಿ, ಅತಿ ವೇಗವಾಗಿ, ನಗರದ ಕಡೆಗೆ ಓಡತೊಡಗಿದನು. ಶರಶರಾಸನಗಳನ್ನು ರಥದಿ ಬಿಸುಟು ಓಡುವ ಉತ್ತರನನ್ನು ನೋಡಿ, ಹೇಸಿ ಅರ್ಜುನನು ಕುದುರೆಗಳ ಕಡಿವಾಣವನ್ನು ರಥಯುಗದಿ ಬಿಗಿಸಿಟ್ಟು, ತಾನೂ ರಥದಿಂದಿಳಿದು, ಉತ್ತರನನ್ನು ಹಿಡಿಯಲು ಹಿಂಬಾಲಿಸಿದನು.

## ಉತ್ತರ ಸಾರಥ್ಯ—ಯುದ್ಧ ಸನ್ನಾಹ

ಜನಮೇಜಯ ! ಕೇಳು ! ಅಂಜಿ ಓಡುವ ಉತ್ತರನ ಹಿಂದೋಡುತ್ತಿದ್ದ ಬೃಹನ್ನಳೆಯನ್ನು ನೋಡಿ, ಅನತಿದೂರದಲ್ಲಿದ್ದ ಕೌರವ ಸೇನೆಯು ಆಶ್ಚರ್ಯಭರಿತವಾಯಿತು. ಕೆಲರಜ್ಞ ಸೈನಿಕರು ನಿಡುಹೆರಳನ್ನೂ, ಹಾರುವ ಸೀರೆಯ ಸೆರಗನ್ನೂ ಕಂಡು ಹೇಡಿ ಎಂದರಿತು ನಗುತ್ತಾ, 'ಆಹಾ ! ಬಾಲನೋರ್ವ ! ನಪುಂಸಕನೋರ್ವ !, ಕೌರವಸೇನೆಯನ್ನು ಓಡಿಸಲು ಬಂದ ಮಹಾವೀರರು' ಎಂದು ಅಪಹಾಸ್ಯ ಮಾಡಿದರು. ಕೆಲವರು ಮಹಾರಥರು 'ಏನು ಸೌಮ್ಯವಾದ ಆಕಾರ ! ಎಷ್ಟು ದೀರ್ಘವಾಗಿವೆ ಬಾಹುಗಳು ! ಮಹಾಪರಾಕ್ರಮಿಯಂತೆ ಕಾಣುತ್ತಿದೆ. ಆದರೆ ವೇಷವನ್ನು ನೋಡಲು ನಪುಂಸಕನಂತೆ ಕಾಣುವುದು ! ಬೂದಿ ಮುಚ್ಚಿದ ಕೆಂಡದಂತೆ, ಹೊಳೆದೂ ಹೊಳೆಯದಿರುವ ಈ ಮಹಾಪುರುಷನೇಕೆ ಆ ಬಾಲನ ಹಿಂದೆ ಓಡುತ್ತಿರುವನು ? ಆಜಾನುಲಂಬಿ ಬಾಹುದಂಡವನ್ನು, ಗಂಭೀರ ಗಜಗಮನವನ್ನು ನೋಡಿದರೆ, ಅರ್ಜುನನಂತೆ ಕಾಣುತ್ತಿರುವನಲ್ಲ. ಏನಾಶ್ಚರ್ಯ ! ಮತ್ಸ್ಯ ನಗರದಲ್ಲಿ ಪಾರ್ಥನು

ಹೇಡಿಯ ವೇಷದಿಂದಿದ್ದನೋ ಏನು ? ಅರ್ಜುನನಲ್ಲದಿನ್ನೊಬ್ಬನಿಗೆ ಕುರುಬಲವನ್ನು ಮುತ್ತ ಬರುವ ಧೈರ್ಯ ಉಂಟೇ ?

'ವಿರಾಟನು ದಕ್ಷಿಣಗೋಗ್ರಹಣವನ್ನು ಮಾಡಿದ ಸುಶರ್ಮನನ್ನೆದುರಿಸಿ ಕಾದಲು, ಸರ್ವಸೈನ್ಯ ಸಮೇತನಾಗಿ ಹೋಗಿಬರಲು, ಊರಲ್ಲಿ ಮತ್ತಾರು ವೀರರಿಲ್ಲದೆ, ಉತ್ತರ ಕುಮಾರನು, ತಾನೇ 'ಕಾದಿ, ಗೋಗಣವನ್ನು ಬಿಡಿಸುವೆನೆ'ಂಬ ಭ್ರಾಂತಿಯಿಂದ ಬರುತ್ತಾ, ಸಾರಥ್ಯ ಕಾರ್ಯನಿರ್ವಹಣೆಗೆಂದು ಈ ಹೇಡಿಯನ್ನು ಕರೆತಂದಿರಬಹುದು. ಈಗ ತಾನೇ ಹೇಡಿಯಂತೆ ಓಡಿಹೋಗುವ ಉತ್ತರನನ್ನು, ಅರ್ಜುನನು ಹಿಡಿಯಲು ಹೋಗುವಂತಿದೆ. ನಮ್ಮ ಸೈನ್ಯವನ್ನು ನೋಡಿ ಹೆದರದ ವೀರನಿರುವನೇ? ಬಾಲನಾದ ಉತ್ತರನ ಮಾತೇನು ? ಅರ್ಜುನನೇ ಸಾರಥಿಯಾಗಿ ಬಂದಿರುವನೆಂದು, ಅವನಿಗೆ ತಿಳಿದಿರಲಿಕ್ಕಿಲ್ಲ. ಅರ್ಜುನನೇ ಆದರೆ ಹೇಡಿಯಾದುದೆಂತು ? ಅಥವಾ ಇದು ಬರಿಯ ವೇಷವೋ ?

'ಆಗಲಿ ! ನೋಡೋಣ ! ನಿಜವು ತಾನಾಗಿ ಹೊರಬೀಳುವುದು' ಎಂದು ಅನೇಕ ಪ್ರಕಾರವಾಗಿ, ತಮ್ಮಲ್ಲಿ ತಾವು, ಮಾತಾಡಿಕೊಂಡರು.

ಅರ್ಜುನನು ಮದಗಜವಿಲಾಸಗಮನನಾಗಿ ನೂರು ಹೆಜ್ಜೆಗಳಷ್ಟು ಓಡಿ, ಉತ್ತರ ನನ್ನು ಹಿಡಿದು, ರಥದ ಕಡೆಗೆ ಸೆಳೆತಂದನು. ಉತ್ತರನು ಕಣ್ಣೀರಿಡುತ್ತಾ, ಕೈಕಾಲು ನಡುಗುತ್ತಿರಲು, ಗದ್ಗದಕಂಠದಿಂದ 'ಅಯ್ಯಾ ! ನೀನು ಮಹಾವೀರನಿರಬಹುದು ; ನಾನಲ್ಲ. ನನ್ನನ್ನು ಬಿಟ್ಟುಬಿಡು ! ನಿನಗೆ ನಮಸ್ಕಾರ !' ಎಂದು ಬೇಡುತ್ತಿದ್ದನು. ಅವನ ಮುಖವು ಭಯಾಕ್ರಾಂತವಾಗಿ ಬಿಳುಚಿಟ್ಟಿತು ; ನಾಲಗೆ ಒಣಗಿ ಮಾತು ಬರದಾಯಿತು ; ಮೈ ಎಲ್ಲ ಬೆವರಿಟ್ಟಿತು ; ಕೈಕಾಲು ನಡುಗಿದವು ; ಗುಂಡಿಗೆ ಡಬಡಬ ಹೊಡೆದುಕೊಂಡಿತು. ಅವನು ದೀನನಾಗಿ ಅಳುತ್ತಾ, ಗದ್ಗದ ಸ್ವರದಿಂದ, ಮಹಾನು ಭಾವ ! ಬಿಡು ನನ್ನನ್ನು ! ಕೌರವ ಸೇನೆಯನ್ನು ನಾನು ಕಣ್ಣೆತ್ತಿ ನೋಡಲಾರೆನು. ಯುದ್ಧ ಮಾಡುವುದಂತೂ ದೂರದ ಮಾತಾಯಿತು. ಏಕೆ ನನ್ನನ್ನು ಆ ಕಟುಕರ ಕೈಗೊಪ್ಪಿಸುವೆ ? ನನ್ನ ಮೇಲೆ ನಿನಗೆ ಸಿಟ್ಟಿದ್ದರೆ, ನೀನೇ ಕೊಂದುಬಿಡು !' ಎಂದು ಅಂಗಲಾಚಿದನು.

ಅರ್ಜುನನಿಗೆ ಉತ್ತರನ ಹೇಡಿತನವನ್ನು ನೋಡಿ ಅಸಹ್ಯವಾಯಿತು. ಅವನು ಸಿಟ್ಟಿನಿಂದ 'ಎಲವೋ ! ಸುಮ್ಮನಿರು ! ನಿನಗೆ ಭಯವಿಲ್ಲ. ಬಾ ! ರಥದಲ್ಲಿ ಕೂತು, ಸಾರಥ್ಯವನ್ನಾದರೂ ಮಾಡು !' ಎಂದನು. ಉತ್ತರನು, 'ಅಯ್ಯಾ ಮಹಾರಾಜ-ಕುಮಾರಾ ಎಂದೆ ! ರಾಜಕುಮಾರಾ ಎಂದೆ ! ಕುಮಾರಾ ಎಂದೆ ! ಉತ್ತರಾ ಎಂದೆ ! ಕೊನೆಗೆ ಎಲವೋ! ಎಂದೆ! ಏನಾದರನ್ನು ! ನನ್ನನ್ನು ಮಾತ್ರ ಊರಿಗೆ ಕಳಿಸಿ ನೀನೆಲ್ಲಿ ಗಾದರೂ ಹೋಗು ! ಚಿಕ್ಕಮಗನೆಂದು, ನಮ್ಮಮ್ಮ ನನ್ನನ್ನು ಕಡುಮುದ್ದಾಗಿ ಸಾಕಿ ಸಲಹಿರುವಳು. ಅವಳು ನನಗಾಗಿ ಪ್ರತೀಕ್ಷಿಸುತ್ತಿರುವಳು. ಹೋಗಿ ಅವಳ ಮನಸ್ಸನ್ನು ಶಾಂತಪಡಿಸುವೆನು. ಬಿಟ್ಟುಬಿಡಪ್ಪಾ ! ಬಿಡು ! ನೀನು ಮಾತ್ರ

ಸಾಯಲು ಹೋಗಲೇಕೆ? ಬಾ ನನ್ನ ಜೊತೆಗೆ! ನಗರವನ್ನು ಸೇರಿಸಿದ ತತ್‍ಕ್ಷಣವೇ ನಿನಗೆ ಹತ್ತಾನೆಗಳನ್ನು, ಕುಂದನದ ಆಭರಣಗಳನ್ನು, ವಜ್ರವೈಡೂರ್ಯಗಳನ್ನು, ದಿವ್ಯ ಕಾಂಚನ ರಥವನ್ನು, ಒಂದು ಗ್ರಾಮವನ್ನು ಬಹುಮಾನವಾಗಿ ಕೊಡಿಸುವೆನು. ಸುಳ್ಳಲ್ಲ. ನಮ್ಮಮ್ಮನನ್ನು ತೋರಿಸು!' ಎಂದು 'ಹೋ' ಎಂದಳಲು ಪ್ರಾರಂಭಿಸಿದನು.

ಅರ್ಜುನನು ನಗುತ್ತಾ, ಅವನನ್ನು ಪಿಡಿದು ತಂದು, ರಥದಲ್ಲಿ ಕೂಡಿಸಿ, ತಾನು ರಥಿಕ ಸ್ಥಾನದಲ್ಲಿ ಕೂತು, ಇಂತೆಂದನು—'ಭಯಪಡಬೇಡ! ನೀನು ಸಾರಥಿಯಾಗಿ ನನ್ನನ್ನು ರಥಿಕನೆಂದು ಮನ್ನಿಸು! ಕುರುವೀರರಿಂದ ಕಾದುವ ಸಾಮರ್ಥ್ಯ ನಿನಗಿಲ್ಲ. ಅಗ್ನಿವರ್ಷವೆಂಬಂತೆ ಶರಜಾಲಗಳನ್ನು ಬಿಟ್ಟು, ಸಾವಿರಾರು ಶೂರರನ್ನು ಯಮನ ಮನೆ ಗಟ್ಟುವೆನು. ನಂಬು ನನ್ನ ಮಾತನ್ನು! ಗೋವುಗಳನ್ನು ಕ್ಷಣಾರ್ಧದಲ್ಲಿ ನಮ್ಮೂರ ಕಡೆ ತಿರುಗಿಸುವೆನು.' ಎಂದು ಇಷ್ಟವಿಲ್ಲದೆ ಚಟಪಡಿಸುವ ಉತ್ತರನನ್ನು ರಥದ ನೊಗದಲ್ಲಿ ಇಟ್ಟು, ಕೈಯಲ್ಲಿ ಕಡಿವಾಣಗಳನ್ನಿಟ್ಟು, ಅರ್ಜುನನು ಶಮೀವೃಕ್ಷವನ್ನು ಸೇರ ಪೋದನು. ಇಂತು ವೃಕ್ಷಗಳಲ್ಲಡಗಿ ಕಣ್ಮರೆಯಾದ ವೀರಪಾರ್ಥನ ಉದ್ದೇಶ್ಯವನ್ನರಿಯದೆ ಕೌರವ ಸೈನಿಕರು ಆಶ್ಚರ್ಯ ಭಯಯುಕ್ತರಾದರು.

ದ್ರೋಣನಾಗ ಭೀಷ್ಮಾದಿವೀರರನ್ನವಲೋಕಿಸಿ, 'ಕಂಡಿರೇ ದುಶ್ಶಕುನಗಳನ್ನು! ಆಕಾಶವು ಕಾಂತಿಹೀನವಾಗಿದೆ. ನರಿಗಳು 'ಹೋ' ಎಂದು ತಲೆ ಎತ್ತಿ ಅಳುತ್ತಿವೆ. ತೂರ್ಯಗಳು ಅಪಸ್ವರವಾಗಿ ಮೊಳಗುತ್ತಿವೆ. ಆನೆಗಳು ಮುಗ್ಗರಿಸುತ್ತಿವೆ. ಅಶ್ವಗಳ ನೇತ್ರಗಳಲ್ಲಿ ಅಶ್ರುಜಲವು ತುಂಬಿ ಉದುರುತ್ತಿದೆ. ಧ್ವಜಗಳು ಬಾಗಿ ಬೀಳುತ್ತಿವೆ. ದಿಕ್ಕು ಉರಿದಂತೆ ಕಾಣುತ್ತಿದೆ. ಇದೆಲ್ಲವನ್ನು ನೋಡಿದರೆ ಯುದ್ಧವು ಸಿದ್ಧವೆಂದು ತೋರುತ್ತಿದೆ. ವಾಹನಗಳಲ್ಲಿ ಸ್ಥಿರಾಸೀನರಾಗಿರಿ! ಆಯುಧಗಳನ್ನು ಕೈಲಿ ಪಿಡಿದು ನಿಲ್ಲಿರಿ! ಗೋವುಗಳು ಬೆದರದಂತೆ, ಮೆಲ್ಲನೆ ನಡೆಸಿಕೊಂಡು, ಕೆಲವರು ಮುಂದಾಗಿ ಹೊರಡಲಿ! ಬರುವ ವೀರನಾವನೋ? ಅವನ ಶೌರ್ಯ ಎಂತಹದೋ ಗೊತ್ತಿಲ್ಲ. ವೃಕ್ಷದ ಹೆಸರನ್ನಿಟ್ಟುಕೊಂಡವನೊಬ್ಬ, ಲಂಕೇಶ ವನಧ್ವಂಸಿಯ ಕೇತುವನ್ನೆತ್ತಿದ ರಥದಲ್ಲಿ, ನಗಾರಿಯ ಮಗನಂತೆ ತೋರುತ್ತಾ, ಮಹಾಬಲೋತ್ಸಾಹಯುತನಾಗಿ ಬರುತ್ತಿರುವನು. ಅವನಿಗೆ ಸಮಯಾಸಮಯ ವಿವೇಕವಿದ್ದಂತೆ ಕಾಣದು. ಅಂಗನಾ ವೇಷವೇನು? ಆಕಳ ಗುಂಪನ್ನು ಹಿಡಿದು, ಕೊಂಡುಪೋಗಲು ಬರುವನಾರೇ ಆಗಲಿ, ಅವನ ಬಾಣಾಗ್ನಿಗಾಹುತಿಯಾಗದಂತೆ ಕಾಪಾಡಿಕೊಳ್ಳಿ! ನಮ್ಮ ರಾಜನನ್ನೂ ಕಾಪಾಡಿ!' ಎಂದು ನುಡಿದು, ಅಜ್ಞಾತವಾಸವು ಮುಗಿದಿದೆಯೋ ಇಲ್ಲವೋ ಎಂಬ ಶಂಕೆಯಿಂದ, ಭೀಷ್ಮನ ಕಡೆ ಸಾಭಿಪ್ರಾಯವಾಗಿ ನೋಡಿದನು.

ಭೀಷ್ಮನು ಆಚಾರ್ಯನ ಇಂಗಿತವನ್ನರಿತು, 'ಆಚಾರ್ಯ! ಭಯವೇಕೆ? ಶತ್ರುಗಳಿಗೆ ಸಿಗದಷ್ಟು ದೂರ ದಾಟಿ ಬಂದಿರುವೆವು. ಸಮಯವೂ ಅತಿಕ್ರಾಂತವಾಯಿತು. ಯಾರೇ ಮುತ್ತಲಿ, ಅಕುಂಠಿತ ಧೈರ್ಯದಿಂದ ಮೆರೆದು, ಕಾದುವ

ಸೌಕರ್ಯವಿದೆ. ಶತ್ರುಗಳಾರೂ ಏನೂ ಮಾಡಲಾರರು!' ಎಂದು, ಅಜ್ಞಾತಾವಧಿಯು ದಾಟಿರುವುದೆಂದು ಸೂಚಿಸಿದನು. ಆಚಾರ್ಯನೂ ಸಂತೋಷಿಸಿ, ಇನ್ನು ಸಮಯ ಭಂಗಭಯವಿಲ್ಲೆಂದು ನಿಶ್ಚಯಿಸಿ—ಮನದ ಪ್ರೀತಿಯನ್ನು ಮುಖದಿ ತೋರಿಸದೆ, ಗಂಭೀರನಾಗಿ ಸೈನಿಕರಿಗಿಂತೆಂದನು—

ವೀರಭಟರೇ! ಬರುತ್ತಿರುವವನು ಅರ್ಜುನನು ; ಗುಹಾಂತರ್ಭಾಗದಲ್ಲಿ ಕ್ಷುದ್ಬಾಧೆಯಿಂದ ಅಡಗಿದ್ದ ಸಿಂಹವು ಮಾತಂಗ ಯೂಥವನ್ನು ಕಂಡೊಡನೆ ಕೆರಳಿ ಗರ್ಜಿಸುತ್ತಾ, ಮೇಲೆರಗುವಂತೆ ಪಾರ್ಥನು ಸಮರಸಮುಲ್ಲಸಿತಚಿತ್ತನಾಗಿ ನಮ್ಮೊಡನೆ ಕಾದಲು ಬರುತ್ತಿರುವನು. ಈಗ ಇವನೊಡನೆ ಹೋರಾಡಿ ನಿಲ್ಲುವರೆಮ್ಮ ಸೇನೆಯಲ್ಲಿ ಯಾರೂ ಇಲ್ಲ. ಅರಣ್ಯಾಜ್ಞಾತವಾಸಗಳ ಕ್ಲೇಶದಿಂದ ನೊಂದು, ಇಂದ್ರಾದಿಗಳತ್ತ ದಿವ್ಯಾಸ್ತ್ರಗಳನ್ನು ಧರಿಸಿ, ಗಾಂಡೀವವನ್ನು ಪಿಡಿದು ಬರುವ ಅರ್ಜುನನನ್ನು ಗೆಲ್ಲುವುದು ಅಸಾಧ್ಯವೇ ಸರಿ! ಸಾಕ್ಷಾತ್ ರುದ್ರನನ್ನು ರಣದಲ್ಲಿ ಮೆಚ್ಚಿಸಿ ಬಂದ ಕುಂತೀನಂದನನಿಗಿಂದು ಗೋಗಣ ವಿಜಯವು ಸುಕರವೆಂದು ತೋರುತ್ತಿದೆ. ಅತ್ಯಂತ ಜಾಗರೂಕರಾಗಿ, ಸಹಸ್ರಾಕ್ಷಸುತನನ್ನೆದುರಿಸಿ ನಿಲ್ಲಿರಿ !

ಆಚಾರ್ಯನ ಪಾರ್ಥಪ್ರೀತಿಯನ್ನು ಸಹಿಸದೆ ಕರ್ಣನಿಂತೆಂದನು—'ದ್ರೋಣಾಚಾರ್ಯ, ನಿನ್ನನ್ನು ದಂಡಿಸುವವರಿಲ್ಲವೆಂದು, ಬಾಯಿಗೆ ಬಂದಂತೆ ಮಾತಾಡುತ್ತಿರುವೆ! ನೀನು ಪಾಂಡವ ಪಕ್ಷಪಾತಿ ಎಂಬುದು ಜಗತ್ಪ್ರಸಿದ್ಧವಾಗಿದೆ. ನಿನ್ನ ಹೊರತಿಲ್ಲಿ ಅರ್ಜುನನನ್ನು ಸೋಲಿಸುವ ವೀರರಿಲ್ಲವೆಂದು ತಿಳಿದೆಯಾ ? ನಾವೆಲ್ಲ ಸತ್ತಿರುವೆವೆ? ಶತ್ರುಗಳನ್ನು ಪೊಗಳುವ ತಿಳಿಗೇಡಿತನವನ್ನು ಬಿಡು ! ವಿಚಾರಿಸಿ ನೋಡಲು ಪಾರ್ಥನಂತಹ ವೀರನೆ? ಅವನೇ ಬಂದರೆ ನನ್ನ ನಿಶಾತಬಾಣ ಭಿನ್ನಹೃದಯನಾಗಿ, ರಣರಂಗದಲ್ಲಿ ಬೀಳುವಂತೆ ಮಾಡದಿರೆ ನಾನು ಕರ್ಣನಲ್ಲ. ನೋಡಿರೆಲ್ಲರು ನನ್ನ ರಣಪಾಂಡಿತ್ಯವನ್ನಿಂದು! ಸುಯೋಧನನ ನೇತ್ರೋತ್ಸವವಾಗುವುದು ನನ್ನಿಂದ!'

ಅವನ ಮಾತನ್ನು ತಡೆದು ಸುಯೋಧನನಿಂತೆಂದನು—'ಕರ್ಣ ! ಸುಮ್ಮನಿರು! ಯುದ್ಧವೇ ಇಲ್ಲದೆ ನಮ್ಮ ಕಾರ್ಯವಾಯಿತೆಂದು ತಿಳಿ! ಬರುವವನು ಅರ್ಜುನನಾದರೆ, ಸಮಯಭಂಗವಾಗಿ, ಮತ್ತೆ ಹನ್ನೆರಡು ವರ್ಷಗಳು ಅರಣ್ಯದಲ್ಲಿ ಪಾಂಡವರೆಲ್ಲರಿರಬೇಕಾಗುವುದು. ಮತ್ತೊಬ್ಬನಾದರೆ ನನ್ನ ನಿಶಾತಶರಗಳಿಂದ ಕೃತಾಂತ ಮಂದಿರಕ್ಕಟ್ಟುವೆನು.'

ದುರ್ಯೋಧನನ ಮಾತಿಗೆ, ಭೀಷ್ಮ ದ್ರೋಣ ಕೃಪಾಶ್ವತ್ಥಾಮರು 'ಸರಿ! ಸರಿ!' ಎಂದು ಅಭಿನಂದಿಸಿ, ಸುಮ್ಮನಾದರು.

ಅರ್ಜುನನು ಶಮೀವೃಕ್ಷವನ್ನು ಸೇರಿ, ರಥದಿಂದಿಳಿದು ಉತ್ತರನಿಗಿಂತೆಂದನು—

ಉತ್ತರ ! ಈ ಗಿಡದ ಮೇಲೆ ಗಾಂಡೀವವಿದೆ. ನನ್ನ ಭುಜೋದ್ರೇಕ ವಿಲಾಸವನ್ನು ತಡೆದುಕೊಳ್ಳಲು ಇತರ ಧನುಸ್ಸಿಗಳಗಾಗದು. ಸಣ್ಣವಾಗಿ ಅಲ್ಪಬಲಗಳಾದ

ನಿನ್ನ ಬಿಲ್ಲುಗಳಿಂದ ನನ್ನ ಕೆಲಸವಾಗದು. ಇಂತಹ ಬಿಲ್ಲುಗಳೊಂದು ಲಕ್ಷವಾದರೂ ಗಾಂಡೀವಕ್ಕೆ ಸಮ ಶಕ್ತವಲ್ಲವೆಂದು ತಿಳಿ! ಸರಿಯಾದ ಆಯುಧಗಳಿಲ್ಲದೆ ಯುದ್ಧ ಭೂಮಿಯಲ್ಲಿ ಧುಮ್ಮಿಕ್ಕಲು ಹೋಗುವ ಹುಚ್ಚರುಂಟೆ? ಆ ಗಿಡವನ್ನೇರಿ, ಅಲ್ಲಿ ಕಟ್ಟಿಟ್ಟಿರುವ ಗಾಂಡೀವವನ್ನು ತೆಗೆದು, ನನಗೆ ಕೊಡು! ಅದರ ಜೊತೆಗಿರುವ ಭೀಮ ಧರ್ಮಜ ನಕುಲ ಸಹದೇವರ ಬಿಲ್ಲುಗಳನ್ನಲ್ಲೇ ಇಡು.

ಉತ್ತರನಾಪಮಾತಿಗೆ ಸಮ್ಮತಿಸಿ, ಶಮೀವೃಕ್ಷವನ್ನಾಲೋಕಿಸಿ, ಅಸಹ್ಯಕುಂಚಿತ ಮುಖನಾಗಿ, 'ರಾಜಕುಮಾರನೆಂಬ ಗೌರವವಿಲ್ಲದೆ, ಹೆಣವನ್ನು ಮುಟ್ಟುವಂತೆ ಹೇಳುವುದು ನಿನಗುಚಿತವಲ್ಲ. ಇಂತಹ ನೀಚಕಾರ್ಯವೆನ್ನಿಂದಲಾಗದು' ಎಂದನು. ಅರ್ಜುನನು, 'ರಾಜಕುಮಾರ! ಅದು ಶವವಲ್ಲ. ಮನುಷ್ಯರು ನೋಡಿ ಬೆದರಿ ದೂರ ಹೋಗುವಂತೆ ಕಟ್ಟಿಟ್ಟ ಅಸ್ತ್ರ ಶಸ್ತ್ರಗಳ ಗಂಟು. ಶವವಲ್ಲಿ ದೂರವಾಗಿದೆ, ಚಿಂತಿಸಬೇಡ! ನಮಗೆ ಬಂಧುವಾದ ನಿನ್ನಂತಹ ಉತ್ತಮಕುಲಪ್ರಸೂತನಿಗೆ ಅಂತಹ ಕಾರ್ಯವನ್ನು ನಾನೆಂದಿಗೂ ಹೇಳುವವನಲ್ಲ. ಏರು ಗಿಡವನ್ನು! ಅಸ್ತ್ರಗಳ ಗಂಟನ್ನು ಬಿಚ್ಚಿ ಗಾಂಡೀವ ತೂಣೀರಗಳನ್ನು ಮಾತ್ರ ನನಗೆ ಕೊಡು!' ಎಂದನು.

ಉತ್ತರನು ಗಿಡವನ್ನೇರಿ, ಗಂಟನ್ನು ಬಿಚ್ಚಿದನು. ಒಳಗಿದ್ದ ಆಯುಧಗಳ ದಿವ್ಯ ಪ್ರಭೆಯು ಅವನ ಕಣ್ಣನ್ನು ಕುಕ್ಕಿತು. ಹೆಬ್ಬಾವಿನಂತಿರುವ ಬಿಲ್ಲುಗಳನ್ನೂ ಆನೆಯ ತಲೆಯಂತಿರುವ ಗದೆಯನ್ನು ಇತರ ರತ್ನಖಚಿತಕೋಶಗಳಲ್ಲಿಟ್ಟ ಖಡ್ಗಾದಿ ಪರಿಕರ ವನ್ನು ನೋಡಿ, ಉತ್ತರನು ಭಯಪಟ್ಟು ನಡುಗಿದನು. ಅರ್ಜುನನವನನ್ನು ಸಮಾಧಾನ ಪಡಿಸಿ, ಧೈರ್ಯ ತುಂಬಲು, ಅವನು 'ಸಾರಥಿ! ಇವು ಯಾರ ಆಯುಧಗಳು? ಪಾಂಡವರಲ್ಲಿ ಯಾರಾರು ಯಾವಾವ ಆಯುಧಗಳನ್ನು ಧರಿಸು ವರು? ಅಬ್ಬ! ಇಂತಹ ದಿವ್ಯಾಯುಧಗಳನ್ನು ಪಿಡಿದು, ಮೆರೆವ ಪಾಂಡವರೆನಗೆ ಬಂಧುಗಳಾಗಬೇಕು; ನಿನಗೆ ಗೊತ್ತಿಲ್ಲ ಅಂತಹ ವೀರವರರ ಅಳಿಯನೆಂದು ಹೆಮ್ಮೆ ಎನಗಾಗುತ್ತಿದೆ. ಬಂಗಾರದ ನೂರು ಚುಕ್ಕೆಗಳಿಂದೊಪ್ಪಿ, ಲಕ್ಷ ಧನುಸ್ಸಮಬಲ ವಾದಂತಿರುವ ಈ ಬಿಲ್ಲು ಯಾರದು? ಕನಕಗಜಗಳು ಕೆತ್ತಿರುವ ಇದಾರದು? ಇಂದ್ರ ಗೋಪಕೀಟ ಚಿತ್ರಗಳಿರುವ ಬಂಗಾರದ ಬಿಲ್ಲು ಯಾರದು? ಮೂರು ಸೂರ್ಯಚಿತ್ರ ಗಳಿಂದೊಪ್ಪುವ ದಿವ್ಯಧನುವಿದು ಯಾರದು? ಸುವರ್ಣಮಣಿಮಯ ಶಲಭಗಳಿಂದ ಒಪ್ಪುವ ಈ ಬಿಲ್ಲಾರದು? ಈ ವಿಪಾಠಗಳು, ಗಾರ್ಧಪತ್ರಗಳು ಆದ ದಿವ್ಯ ನಾರಾಚಗಳಿವೆ—ಅವು ಯಾರಿಗೆ ಸೇರಿದವು? ಈ ಧನುಸ್ಸು ಪಂಚಶಾರ್ದೂಲಲಕ್ಷಿತ ವಾಗಿ ಕಪ್ಪಾಗಿದೆ. ಇದಾರದು? ಹುಲಿಚರ್ಮದ ಕೋಶದಲ್ಲಿರುವ ನಿಶಶಿತಖಡ್ಗ ವಾರದು? ವೃಷಭ, ಮೇಷ, ಹರಿಣ ಕನಕಕೋಶಗಳಲ್ಲಿರುವ ಖಡ್ಗಗಳಾರವು? ಸರ್ವಾವಯಸವೂ, ಹೇಮಬಿಂದುಚಿತ್ರವೂ ಮಹಾಭಾರವೂ ಆದ ಈ ಗದೆ ಭೀಮ ಸೇನನದೆಂದು ತೋರುತ್ತಿದೆ. ಎಲ್ಲವನ್ನೂ ತಿಳಿಸು' ಎಂದನು.

ಅರ್ಜುನನು 'ಉತ್ತರಕುಮಾರ! ದೊಡ್ಡ ಬಿಲ್ಲಿದೆ ನೋಡು! ಅದೇ ಗಾಂಡೀವವು. ಆದಿಪುರುಷನು ಆ ಧನುಸ್ಸನ್ನು ಬ್ರಹ್ಮದೇವನಿಗಿತ್ತನು. ಬ್ರಹ್ಮದೇವನು ಲಕ್ಷ ವರ್ಷ ಗಳದನ್ನು ಧರಿಸಿ, ದೈತ್ಯರನ್ನು ನಿರ್ಜಿಸಿದನು. ಅವನಿಂದ ಮರೀಚಿ ಕಶ್ಯಪರು ಪಡೆದು ಒಂದುಸಾವಿರ ಐದುನೂರು ವರ್ಷಕಾಲ ಧರಿಸಿ, ಇಂದ್ರನಿಗಿತ್ತರು. ಇಂದ್ರನು ಎಂಟು ನೂರೈವತ್ತು ವರ್ಷವದನ್ನು ಧರಿಸಿ ಚಂದ್ರನಿಗಿತ್ತನು. ಚಂದ್ರನು ಐದುನೂರುವರ್ಷದ ಮೇಲೆ ಅದನ್ನು ವರುಣನಿಗಿತ್ತನು. ವರುಣನಿಂದ ತಂದು ಅಗ್ನಿಯು ಖಾಂಡವದಹನ ಕಾಲದಲ್ಲಿ ಅರ್ಜುನನಿಗಿತ್ತನು. ಪಾರ್ಥನು ಅದನ್ನು ಮೂವತ್ತೆರಡುವರೆ ವರ್ಷಗಳು ಧರಿಸಿರುವನು. ಮುಂದೆ ಮತ್ತಷ್ಟು ಕಾಲ ಧರಿಸಬಹುದು. ಗಾಂಡೀವ ಸಹಾಯನಾಗಿ, ಅರ್ಜುನನು ದೇವದಾನವರನ್ನು ಸಮರದಲ್ಲಿ ಗೆಲ್ಲಬಲ್ಲನು. ಅದೇ ಬಂಗಾರದಚುಕ್ಕೆ ಗಳಿರುವ ಬಿಲ್ಲು. ಅದೊಂದೇ ಲಕ್ಷ ಧನುಸ್ಸಮವೆನಿಸಿ, ಅಭೇದ್ಯವೆಂದು ಖ್ಯಾತವಾಗಿದೆ.

ಭೀಮಸೇನನ ಧನುಸ್ಸಿಗೆ ಕನಕಗಜಗಳಿವೆ. ಅದನ್ನು ಸುಪಾರ್ಶ್ವವೆಂಬರು. ಇಂದ್ರಗೋಪದ ಧನುಸ್ಸು ಧರ್ಮರಾಜನದು. ಸೂರ್ಯರಿರುವ ಬಿಲ್ಲು ನಕುಲನದು. ಸಹದೇವನ ಬಿಲ್ಲಿನಲ್ಲಿ ಶಲಭಗಳೊಂದಿಗೆ ಕನಕಪುಷ್ಪಗಳಿವೆ. ದಿವ್ಯನಾರಾಚಗಳಿರುವ ತೂಣೀರದ್ವಯವು ಅರ್ಜುನಲಾಲಿತವು. ಪಂಚಶಾರ್ದೂಲ ಚಿತ್ರಿತವಾದ ಬಿಲ್ಲು ನಕುಲನದೆಂದು ತಿಳಿ! ಹುಲಿಚರ್ಮದ ಕೋಶದಲ್ಲಿರುವ ಖಡ್ಗವು ಭೀಮಸೇನನದು. ಮಿಕ್ಕವು ಮಿಕ್ಕವರವು. ಗದೆ ಭೀಮನದೇ!' ಎಂದು ವಿವರವಾಗಿ ನಿರೂಪಿಸಿದನು. ಆಗ ಉತ್ತರನು ಎದುರಿಗಿರುವವನೇ ಪಾರ್ಥನೆಂದರಿಯಲಾರದೆ, ಮತ್ತೆ ಇಂತು ಕೇಳಿದನು.

'ಬೃಹನ್ನಳೇ! ಪಾಂಡವರು ತಮ್ಮ ಆಯುಧಗಳನ್ನು ಇಲ್ಲಿಟ್ಟು, ಎಲ್ಲಿಗೆ ಹೋದರೋ? ಪಾಪ! ಅಂತಹ ಮಹಸೀಯರಿಗೆ ಎಂತಹ ಕಷ್ಟ ಬಂತು? ಅವರ ವಿಚಾರವನ್ನು ತಿಳಿದಿದ್ದರೆ ಹೇಳು! ನಾನವರ ಸೋದರಳಿಯನು. ಶತ್ರುಗರ್ವ ನಿರ್ವಾಪಣ ಮಹಾಬಲರಾದ ಪಾಂಡವರೆಂದರೆ ನಮಗೆ ಬಲು ಪ್ರೀತಿ. ಹಾ! ಪಾಂಚಾಲಿಯಂತಹ ಮಹಾರಾಣಿ ಎಲ್ಲಿ ಯಾವ ಕಷ್ಟಗಳಿಗೆ ಗುರಿಯಾಗಿರುವಳೋ? ದುರ್ಮಾರ್ಗರಾದ ಕೌರವರಿಂದ ಇಷ್ಟನರ್ಥವಾಯಿತು. ಆ ನೀಚರು ಮಾಯಾ ದ್ಯೂತದಲ್ಲಿ ಗೆದ್ದೆವೆಂದು, ಮೋಸಮಾಡಿ, ಭುಜಬಲಗರಿಷ್ಠನಾದ ಯುಧಿಷ್ಠಿರನನ್ನು ಅರಣ್ಯಕ್ಕಟ್ಟಿದರು. ಈಗ ಪಾಂಡವರೆಲ್ಲಿರುವರು? ಏನು ಮಾಡುತ್ತಿರುವರು? ಹೇಳು!'

ಅರ್ಜುನನು 'ಉತ್ತರ ಕುಮಾರ! ಪಾಂಡವರೀಗ ಸುಕ್ಷೇಮದಿಂದ ನಿಮ್ಮ ನಗರದಲ್ಲಿ ಅಜ್ಞಾತವಾಸವನ್ನು ಮಾಡುತ್ತಿರುವರು. ಅದೂ ನಿನ್ನೆ ಮೊನ್ನೆಗೇ ಮುಗಿದು ಹೋಗಿದೆ. ಕಂಕನೇ ಧರ್ಮರಾಜನು; ಮಾಲಿನಿಯೇ ದ್ರೌಪದಿ; ಅವಳನ್ನು ಕೆಣಕಿದ ಕೀಚಕನನ್ನೂ ಉಪಕೀಚಕರನ್ನೂ ಗಂಧರ್ವನಾಮದಿಂದ ಕೊಂದವನು ಭೀಮ ಸೇನನು ; ಅವನು ನಿಮ್ಮ ಮನೆಯಲ್ಲಿ ವಲಲನೆನಿಸಿ, ಪಾಕಶಾಲಾಧ್ಯಕ್ಷನಾಗಿರುವನು. ಹಯಶಿಕ್ಷಕನೇ ನಕುಲನು ; ಪಶುಪಾಲಕನೇ ಸಹದೇವನು; ಇನ್ನು ಬಚ್ಚಿಡಲೇಕೆ ? ನಾನೇ ಅರ್ಜುನನೆಂದು ತಿಳಿ!' ಎಂದನು.

ಉತ್ತರನು ಸಂತೋಷಾಶ್ಚರ್ಯ ಸಂಭ್ರಮಗಳಿಂದ ತಬ್ಬಿಬ್ಬಾದನು. ಅವನ ಕಣ್ಣಲ್ಲಿ ಆನಂದಬಾಷ್ಪಗಳುದುರಿದುವು. ಸಬಹುಮಾನವಾಗಿ ನೋಡುತ್ತಾ ಉತ್ತರನು ಅರ್ಜುನನೇ ಬೃಹನ್ನಳೆ ಎಂದು ನಾನೆಂತು ತಿಳಿಯಲಿ? ಅವನಿಗೆ ಹತ್ತು ಹೆಸರುಗಳಿದ್ದವಂತೆ. ಅಷ್ಟು ನಾಮಗಳಿರಲು ಕಾರಣವನ್ನೂ ಹೇಳು! ಆಗ ನನಗೆ ವಿಶ್ವಾಸವು ಹುಟ್ಟುವುದು' ಎಂದು ಪ್ರಾರ್ಥಿಸಿದನು.

ಅರ್ಜುನನಿಂತೆಂದನು —

ಅರ್ಜುನ, ಫಲ್ಗುನ, ಪಾರ್ಥ, ಕಿರೀಟೀ, ಶ್ವೇತವಾಹನ, ಭೀಭತ್ಸು, ವಿಜಯ, ಜಿಷ್ಣು, ಸವ್ಯಸಾಚಿ, ಧನಂಜಯ — ಇವು ನನ್ನ ಹತ್ತು ನಾಮಗಳು. ಅಷ್ಟು ಬಿರುದುಗಳೆನಗೆ ಬರಲು ಶ್ರೀಕೃಷ್ಣಾನುಗ್ರಹವೇ ಕಾರಣವು.

ಧರಣೀಜನರಿಗೆ ದುರ್ಲಭವಾದ ಧವಳವರ್ಣ ನನಗಿರುವುದರಿಂದ ನನ್ನನ್ನು ಅರ್ಜುನನೆಂಬರು. ಉತ್ತರಫಲ್ಗುನೀ ನಕ್ಷತ್ರದಲ್ಲಿ ಜನಿಸಿದೆನಾದುದರಿಂದ ಫಲ್ಗುನನೆಂದೂ, ಪೃಥೆ ಎಂದು ನಾಮಾಂತರದಿಂದ ಖ್ಯಾತಳಾದ ಕುಂತಿಗೆ ಮಗನಾದುದರಿಂದ ಪಾರ್ಥನೆಂದೂ ನನ್ನನ್ನು ಕರೆಯುವರು. ರವಿಪ್ರಭಾಭಾಸಮಾನವಾದ ಕಿರೀಟವನ್ನಿಟ್ಟು ರಣದಲ್ಲಿ ಮೆರೆವೆನಾದುದರಿಂದ ಕಿರೀಟೀ ಎಂಬುವರು. ಆ ಕಿರೀಟವನ್ನು ಇಂದ್ರನು ನನ್ನ ಪರಾಕ್ರಮಕ್ಕೆ ಮೆಚ್ಚಿ ಕೊಟ್ಟಿರುವನು. ನನ್ನ ರಥದ ಕುದುರೆಗಳು ಚಂದ್ರಧವಳವಾದ್ದರಿಂದ ಶ್ವೇತವಾಹನನೆಂಬುವರು! ವೀರರು ದಿಕ್ಕೆಟ್ಟು ಓಡುವಷ್ಟು ಬೀಭತ್ಸವಾಗಿ, ಪ್ರಚಂಡ ಭಂಡನವನ್ನು ಮಾಡುವುದರಿಂದ ಬೀಭತ್ಸುವೆಂಬುವರು. ಎಂತಹ ವೀರವರರನ್ನೂ ಗೆದ್ದುಬರುವೆನಾದ್ದರಿಂದ ವಿಜಯನೆಂದು ಹೆಸರು ಬಂದಿದೆ. ನನ್ನ ಕಣ್ಣೆದುರಿನಲ್ಲಿ ಧರ್ಮಜನನ್ನು ಕೆಣಕಿ ಗಾಯಗೊಳಿಸಿದವರು, ದೇವತೆಗಳೇ ಆಗಲಿ — ಬಿಡದೆ ಸಂಹರಿಸುವುದರಿಂದ ಜಿಷ್ಣುವೆಂದು ಖ್ಯಾತನಾಗಿರುವೆನು. ಗಾಂಡೀವವನ್ನು ಬಲ ಎಡ ಕೈಗಳಿಂದ ಹಿಡಿದು, ಎಡಬಲ ಕೈಗಳಿಂದ ಬಾಣಗಳನ್ನು ಪ್ರಯೋಗಿಸುವ ಚತುರನೆಂದು, ಸವ್ಯಸಾಚಿ ಎಂಬ ನಾಮವು ಬಂದಿದೆ. ಧರಣೀಮಂಡಲವನ್ನು ಸುತ್ತಿ, ಸಮಸ್ತರಾಜರನ್ನೂ ಗೆದ್ದು, ಕಪ್ಪವಾಗಿ ಧನರಾಶಿಗಳನ್ನು ತಂದು, ಧರ್ಮನಿಗೆ ಸಮರ್ಪಿಸಿದುದರಿಂದ, ನನ್ನನ್ನು ಧನಂಜಯನೆಂಬುವರು. ತಿಳಿಯಿತೇ? ಖಾಂಡವ ದಹನ ಸಮಯದಲ್ಲಿ ರುದ್ರವಿರಿಂಚರಿತ್ತ ಕೃಷ್ಣ ನಾಮದಿಂದಲೂ ಪ್ರಸಿದ್ಧನಾಗಿರುವೆನು. ಇಂದ್ರಾದಿಗಳಿತ್ತ ದಿವ್ಯಾಸ್ತ್ರಗಳಿವೆ! ಗಾಂಡೀವವಿದೆ! ಅಕ್ಷಯ ತೂಣಗಳಿವೆ; ದುರ್ಜಯನಿವಾತಕವಚರೆಂಬ ಕೋಟಿಗಟ್ಟಲೆ ದುಷ್ಟದೈತ್ಯರನ್ನು ಸಂಹರಿಸಿದ ಪರಾಕ್ರಮವಿದೆ. ಕಾರಣಾಂತರದಿಂದ ಬಂದಿದ್ದ ಪೀಡಿತನವಿಂದು ಇಂದ್ರಪ್ರಸಾದದಿಂದ ದೂರವಾಗಿದೆ. ಇಂದ್ರದೇವನಿತ್ತ ದೇವದತ್ತವೆಂಬ ಶಂಖವನ್ನು ಹಿಡಿದು, ಕಿರೀಟವನ್ನು ಧರಿಸಿ, ಗಾಂಡೀವನಿರ್ಮುಕ್ತ ಬಾಣವರ್ಷದಲ್ಲಿ ಕುರುಸೇನೆಯು ಕೊಚ್ಚಿ ಹೋಗುವಂತೆ ವಿಕ್ರಮಿಸುವೆನು; ನಿನ್ನ ಗೋಗಣವನ್ನು ಕಾಪಾಡುವೆನು.

ಅರ್ಜುನನ ವಚನಾಮೃತಪಾನದಿಂದ ಉತ್ತರನು ಆನಂದಿತನಾಗಿ, ಗಾಂಡೀವ, ತೂಣೀರ, ಶಂಖ, ತೂಣಗಳನ್ನವನಿಗೆ ಕೊಟ್ಟು, ತಾನು ಗಿಡದಿಂದಿಳಿದು ಬಂದು, ಸಾಷ್ಟಾಂಗವಾಗಿ ನಮಸ್ಕರಿಸಿದನು; ಎದ್ದುನಿಂತು ಕೈಜೋಡಿಸಿ ಅವನು ಪಾರ್ಥ ನಿಗಿಂತೆಂದನು—'ಮಹಾನುಭಾವ! ಶತ್ರುಭಯಂಕರನು, ಸಮರಾಂಗಣ ಸಾರ್ವ-ಭೌಮನು, ಮಿತ್ರ ಮನೋಹರ ದಿವ್ಯರೂಪನು, ಅಸ್ಮದ್ಬಂಧುವರನು ಆದ ನಿನ್ನ ದರ್ಶನದಿಂದ ಪುನೀತನಾದೆನು. ಬಡವನಿಗೆ ಕಡುದೊಡ್ಡ ನಿಧಿ ಸಿಕ್ಕಂತಾಗಿದೆ ನನ್ನ ಮನಕ್ಕೆ. ನಿನ್ನನ್ನರಿಯದೆ ನಾನು ನುಡಿದ ಕೆಡುನುಡಿಗಳನ್ನು ಮನದಲ್ಲಿಡದೆ ಮನ್ನಿಸು! ಕೃಪೆಯಿಂದ ನೋಡು!'

ಇಂತು ಬೇಡಿದ ಉತ್ತರನನ್ನು ಅರ್ಜುನನು ಪ್ರೀತಿಯಿಂದ ಕರೆದಪ್ಪಿ, ಪರಮ ಪ್ರಮೋದ ಪರವಶನಾದನು. ಉತ್ತರನು 'ಮಹಾವೀರ! ಅಯಸ್ಕಾಂತ ಸನ್ನಿಧಾನ ದಿಂದ ಆಕರ್ಷಿತವಾಗುವ ಅಯಃಕಣದಂತೆ ನಿನ್ನ ಸಾನ್ನಿಧ್ಯದಿಂದ ನಾನು ಪರವಶ ನಾಗಿ, ಮಹಾಧೈರ್ಯವನ್ನವಲಂಬಿಸಿರುವೆನು. ನನ್ನ ಮನದ ಭಯ ಶಂಕೆಗಳು ದೂರ ವಾದವು. ನಿನ್ನಂತಹ ಅಖಂಡ ಶೌರ್ಯಮಹಿತನಿಗೆ ಸಾರಥ್ಯವನ್ನು ಮಾಡುವ ಭಾಗ್ಯವಂತನಾದೆನು. ನಡೆ! ಕುರುಸೇನೆಯನ್ನು ಗೆದ್ದು ಗೋಗಣವನ್ನು ತರಲು ಹೊರಡೋಣ!' ಎಂದನು.

ಅರ್ಜುನನು 'ವತ್ಸ! ನನ್ನ ದೃಷ್ಟಿಪಥದಲ್ಲಿರುವ ನಿನ್ನನ್ನೂ ಅಶ್ವಗಳನ್ನೂ ಶತ್ರು ಗಳಿಂದ ರಕ್ಷಿಸುತ್ತಾ ಗೋಗಣವನ್ನು ಮೊದಲು ನಗರಕ್ಕಟ್ಟಿ, ಕೌರವರನ್ನು ಮಟ್ಟಿಕ್ಕು ವೆನು. ನಾನಿರಲು ನಿನಗೆ ಭಯವಿಲ್ಲ. ನಾನೂ ಶ್ರೀಕೃಷ್ಣಾನುಗ್ರಹದಿಂದ, ಶಾಪಪ್ರಾಪ್ತ ವಾಗಿದ್ದ ಷಂಡತ್ವವನ್ನು ಕಳೆದುಕೊಂಡಿರುವೆನು. ನೂತ್ನವಾಗಿ ರಣೋತ್ಸಾಹವು ಸೂಸಿ ಬರುತ್ತಿದೆ.' ಎಂದು, ಉತ್ತರನು ಗಿಡದಿಂದಿಳಿಸಿಕೊಟ್ಟ ಕವಚತೂಣಗಳನ್ನು ಧರಿಸಿ, ಗಾಂಡೀವವನ್ನು ಪಿಡಿದು, ಶ್ರೀಕೃಷ್ಣ ಚರಣಾರವಿಂದವನ್ನೂ, ಇತರ ರುದ್ರೇಂದ್ರಾದಿ ವೃಂದಾರಕರನ್ನೂ ನೆನೆದು, ಮನಸಾ ವಂದಿಸಿದನು. ಕೇಶಪಾಶವನ್ನು ಕಟ್ಟಿ, ವೀರ ಕಂಕಣವನ್ನಿಟ್ಟನು; ಇಂದ್ರನಿತ್ತ ಕುಂಡಲಗಳನ್ನು ಧರಿಸಿದನು. ಕೈಯಲ್ಲಿದ್ದ ಕಂಕಣ ಗಳನ್ನು ನೋಡಿ ನಗುತ್ತಾ, ರಥವನ್ನೇರಿದನು. ಉತ್ತರನೂ ಸಾರಥಿಯಾಗಿ ಹುರುಪಿ ನಿಂದ ಅಶ್ವಗಳನ್ನು ಓಡಿಸಲಣಿಯಾದನು. ಉಜ್ವಲವಾದ ದಿವ್ಯರತ್ನ ಖಚಿತ ಕಿರೀಟವು ನೆನೆದ ತತ್ಕ್ಷಣವೇ ಆಕಾಶದಿಂದಿಳಿದು ಬಂದಂತೆ, ಅವನ ಶಿರದಿ ರಾರಾಜಿಸಿತು. ಇಂತು ಮಹಾರಥಿಶ್ರೇಷ್ಠನಾದ ಅರ್ಜುನನು ಯುದ್ಧಸನ್ನದ್ಧನಾಗಿ, ಮುಂದೆ ಸಾಗಿ, ಗಾಂಡೀವಧನುಷ್ಟಂಕಾರವನ್ನು ಮಾಡಿದನು. ದೇವವರವಾಗಿ ಬಂದ ದೇವದತ್ತವನ್ನು ಊದಿ, ಸಿಂಹಗರ್ಜನವನ್ನು ಮಾಡಿದನು. ಶಂಖಧ್ವಾನಧನುಷ್ಟಂಕಾರಗಳಿಗೆ ದಿಕ್ಕು ಗಳು ಪ್ರತಿಧ್ವನಿಸಿದವು. ಪಕ್ಷಿಗಳು ಹೆದರಿ ಕಲಕಲನಾದವನ್ನು ಮಾಡುತ್ತಾ ಚೆದರಿ ಹಾರಿದವು. ಕುರುಸೈನ್ಯವೂ ಭಯಾಕ್ರಾಂತವಾಯಿತು.

ಅಗ್ನಿಯನ್ನೂ ಹನುಮಂತನನ್ನೂ ನೆನೆದ ಕ್ಷಣದಲ್ಲೇ ಬಂದ ಕಪಿಕೇತನವನ್ನು ರಥಕ್ಕೆ ಕಟ್ಟಿಸಿ, ಉತ್ತರ ಸಿಂಹಪತಾಕೆಯನ್ನು ತೆಗೆದು ಶಮೀವೃಕ್ಷದಲ್ಲಿಡಿಸಿದನು. ವಿವಿಧ ಭೂತಗಳು ಭಯಂಕರಾರಾವಗಳನ್ನು ಮಾಡುತ್ತಾ, ಕೇತನದ ಸುತ್ತಲು ಹಾರಾಡುತ್ತಾ ಹಿಂಬಾಲಿಸಲು ಅರ್ಜುನನು ಕುರುಸೇನೆಯನ್ನು ಸಮೀಪಿಸುವ ಮುನ್ನ ಶಮೀದೇವಿಗೆ ಪ್ರದಕ್ಷಿಣಿಸಿ, ತ್ವರೆಯಿಂದ ಗೋಗಣವನ್ನು ಸೇರು' ಎಂದು ಉತ್ತರನಿಗೆ ಆಜ್ಞಾಪಿಸಿದನು.

## ಅರ್ಜುನ ಕೌರವ ಸಮಾಗಮ—ಗೋಗಣ ಸಂರಕ್ಷಣ

ಉತ್ತರನು ತೇರನ್ನು ಶಮೀವೃಕ್ಷಕ್ಕೆ ಪ್ರದಕ್ಷಿಣಾಕಾರವಾಗಿ ಹೊರಡಿಸಿ, ರಣೋತ್ಸಾಹದಿಂದ ಹೂಂಕರಿಸುತ್ತಾ, ಕೌರವ ಸೇನೆಯನ್ನು ಸಮೀಪಿಸಿದನು. ಪಾರ್ಥನು ದೇವದತ್ತವನ್ನೊತ್ತಲು ಸುತ್ತಲಿನ ಗಿರಿಗಳು ಕಂಪಿಸಿದವು. ಭೂಮಿ ನಡುಗಿತು. ಗ್ರಹತಾರಕಾ ಕುಲವು ಆಕುಲವಾಯಿತು. ಆ ಭಯಂಕರಾರಾವಕ್ಕೆ ಕುದುರೆಗಳು ಮುಗ್ಗರಿಸಿದವು. ಉತ್ತರನು ಮೂರ್ಛೆಹೊಂದಿ ಬಿದ್ದನು. ಅರ್ಜುನನು ಅವನ ಮೈ ನಿವಿರಿ, ಎಚ್ಚರಬರಿಸಿ, 'ಕುಮಾರ! ಶಂಖಭೇರೀನಿನಾದಗಳನ್ನೂ ಗಜಬೃಂಹಿತಗಳನ್ನೂ ಹಯಹೇಷಾರವಗಳನ್ನೂ ಭಟಕೋಲಾಹಲವನ್ನೂ ಕೇಳಿ ಹೆದರುವ ರಾಜಸುತರಿರುವರೇ? ಏಳು! ಧೈರ್ಯವಹಿಸು!' ಎಂದನು. ಉತ್ತರನು, 'ಮಹಾನುಭಾವ' ಶಂಖನಿಸ್ವನಗಳನ್ನು, ಭೇರೀನಿನಾದಗಳನ್ನು ಬೃಂಹಿತ ಹೇಷಾದಿಗಳನ್ನೂ ಕೇಳಿರುವೆನು. ಆದರೆ ಇಂತಹ ಭಯಂಕರಾರಾವವು ಯಾರನ್ನು ಮೋಹಪಡಿಸದು? ಇದು ಬರಿಯ ಶಂಖಾರಾವವಲ್ಲ; ಕೇತನದ ಸುತ್ತಲು ಕೇಳಬರುವ ಭಯದ ಶಬ್ದಗಳಿಂದ ಕೂಡಿ, ತಲೆಯಮೇಲೆ ಸಿಡಿಲು ಬಡಿದಂತಾಯಿತು' ಎಂದು ಧೈರ್ಯವನ್ನು ತುಂಬಿಕೊಂಡು ರಥವನ್ನು ಸಾಗಿಸಿದನು.

ಅರ್ಜುನನು ಅವನಿಗೆ ಎಚ್ಚರಿಕೆಯನ್ನಿತ್ತು, ಮತ್ತೆ ದೇವದತ್ತವನ್ನೊತ್ತಿ, ಗಾಂಡೀವ ಧನುಷ್ಟಂಕಾರವನ್ನು ಮಾಡಿದನು. ಆ ಪ್ರಳಯಾಭೀಲಗರ್ಜಾಭೀಷಣವಾದ, ಆ ಘೋಷಣವನ್ನು ಕೇಳಿ ಕೌರವ ಸೇನೆ ದಿಗಿಲಿನಿಂದ ದಿಕ್ಕು ತೋಚದೆ ನಿಂತಿತು. ಆಗ ಆಚಾರ್ಯನು ದುರ್ಯೋಧನಾದಿಗಳನ್ನು ನೋಡಿ, ಇಂತೆಂದನು—

'ಕೇಳಿದಿರಾ ಆ ಧನುಷ್ಟಂಕಾರವನ್ನು? ಶ್ರವಣ ಘಟಗಳು ಒಡೆಯುವಂತಿವೆ. ಬ್ರಹ್ಮಾಂಡ ಖರ್ಪರವನ್ನು ಸೀಳುವಂತೆ ಮೊಳಗುವ ಆ ಶಂಖಾರಾವವೆಷ್ಟು ಭಯಂಕರವಾಗಿದೆ! ಕೇತನದ ಪ್ರಖರಕಾಂತಿಯು ಪ್ರಳಯಾಭೀಲ ಜ್ವಾಲಾಕುಲವಹ್ನಿಯಂತಿದೆ. ಬರುವ ರಥಿಕನಿಟ್ಟ ಕಿರೀಟವು ಸೂರ್ಯನಂತೆ ಕಣ್ಣು ಕುಕ್ಕುತ್ತಿದೆ. ವಿಚಾರಿಸಿ ನೋಡಲು ಅದು ಗಾಂಡಿವವದು, ದೇವದತ್ತವದು, ಕಪಿಧ್ವಜನಾಬರುವವನು ಕಿರೀಟಿಯೇ ಎಂದು ನಿಶ್ಚಯವಾಗುತ್ತಿದೆ. ಬೇರಾದರೆ ಇಷ್ಟು ಭಯಂಕರನೇ? ಇಷ್ಟು ಅದ್ಭುತವೆ? ಹದಿಮೂರು ವರ್ಷಗಳ ನಂತರ ರಣರಂಗ ವಿಹಾರವನ್ನಪೇಕ್ಷಿಸಿ

ಅರ್ಜುನನೇ ಬರುತ್ತಿರುವನು. ಇದಕ್ಕೆ ಅನುಮಾನವಿಲ್ಲ. ನಾವೀಗ ಬಹು ಸಾಹಸದಿಂದ ಎಚ್ಚರವಹಿಸಿ ಕಾದಬೇಕಾಗಿದೆ. ಕಾಣಬರುವ ದುಶ್ಶಕುನಗಳು ನಮಗೆ ಅಪಜಯವನ್ನು ಸಾರುತ್ತಿವೆ. ಆದರೆ ಹೆದರದೆ ನಿಂತು ಕಾದಾಡುವುದೆಮ್ಮ ಕರ್ತವ್ಯವಾಗಿದೆ. ನನ್ನ ಅಭಿಪ್ರಾಯವನ್ನು ಹೇಳುವೆನು. ಸರಿದೋರಿದರೆ ಅದರಂತೆ ಮಾಡಿ! ಮೊದಲು ಮಹಾರಾಜನು ಹಸ್ತಿನಾವತಿಗೆ ತೆರಳಲಿ! ಅವನ ಸುಕ್ಷೇಮ ವೆಮಗೆ ಬಲು ಮುಖ್ಯವಲ್ಲವೇ! ಆಮೇಲೆ ಗೋಗಣವನ್ನು ತೆಗೆದುಕೊಂಡು ಕೆಲ ಭಟರು ಹೊರಡಲಿ! ಅವರ ಹಿಂದೆ ನಾವೆಲ್ಲರೂ ಹೋಗುತ್ತಾ, ಅರ್ಜುನನು ಬಂದು ಮುತ್ತಿದರೆ, ಅವನೊಡನೆ ಯುದ್ಧವಾಡಿ. ಬುದ್ಧಿ ಕಲಿಸೋಣವಂತೆ !' ಎಂದನು.

ಸುಯೋಧನನು ಭೀಷ್ಮ, ಕೃಪ, ಕರ್ಣ, ದುಶ್ಶಾಸನರನ್ನು ನೋಡಿ 'ಮೊದಲೇ ನಾನು ಹೇಳಿದಂತೆ, ಹದಿಮೂರನೆಯ ವರ್ಷವಾಗದ ಮುನ್ನ, ಅರ್ಜುನನು ಕಾಣಿಸಿಕೊಂಡರೆ, ಮತ್ತೆ ಪಾಂಡವರು ಹನ್ನೆರಡು ವರ್ಷ ಅರಣ್ಯಕ್ಕೆ ಹೋಗಬೇಕಾಗುವುದು. ದ್ಯೂತಸಮಯದ ನಿಬಂಧನೆಯನ್ನು ನೀವೆಲ್ಲರರಿತಿರುವಿರಿ. ಪಾಂಡವರಿಗೂ ಆ ಜ್ಞಾನವಿರಬೇಕು. ಒಂದು ವೇಳೆ ಲೋಭದಿಂದಲೋ, ರೋಷದಿಂದಲೋ ಕಣ್ಣು ಕಾಣದೆ, ವಿಚಾರ ಮಾಡದೆ ಅವರೆಲ್ಲಾದರೂ ಹೊರಬಿದ್ದರೆ ಅವರಿಗೆ ಅರಣ್ಯವಾಸ ತಪ್ಪಿದ್ದಲ್ಲ. ಒಂದುವೇಳೆ ಅಜ್ಞಾತವಾಸ ಮುಗಿದಿಲ್ಲವೆಂದು ನಾವೂ ತಿಳಿದಿರಬಹುದು. ಅಜ್ಞಾತವಾಸ ಮುಗಿದು ಪಾಂಡವರು ಕಾಣಿಸಿಕೊಂಡರೆ, ಮತ್ತೆ ದ್ಯೂತವಾಡಲಿ ! ಅಥವಾ ಯುದ್ಧ ಮಾಡಲಿ! ನಾನಂತೂ ರಾಜ್ಯವನ್ನೀಯುವವನಲ್ಲ. ಅಂತೂ ಇಂತೂ ಕುಂತೀ ಪುತ್ರರಿಗೆ ರಾಜ್ಯವಿಲ್ಲ. ಇರಲಿ! ಬರುವವನು ಪಾರ್ಥನಾಗಿದ್ದರೆ ನಮ್ಮ ಬಂದ ಕೆಲಸವಾಯಿತು. ಅಜ್ಞಾತವಾಸವಿನ್ನೂ ಮುಗಿದಿದೆಯೋ ಇಲ್ಲವೋ ಎಂಬ ಶಂಕೆಯನ್ನು ಪಿತಾಮಹನೇ ನಿವಾರಿಸಿ, ಪರಿಷ್ಕರಿಸಲಿ! ಗೋಧನವು ವಿರಾಟನಿಗೆ ಸೇರಿದುದು. ಅದನ್ನು ಹಿಡಿದ ಊರ್ಜಿತ ಕ್ರಮರು ಕೌರವರು. ಯುದ್ಧವಾದರೆ ಕುರು ಮತ್ಸ್ಯರಾಜರಿಗೆ ನಡೆಯಬೇಕಾಗಲಿ, ವಾಲಿಸುಗ್ರೀವರ ಕಾಳಗದಲ್ಲಿ ರಾಮನು ಹೊಕ್ಕಂತೆ, ಅರ್ಜುನನು ಜೊಕ್ಯವನ್ನು ಕಲ್ಪಿಸಿಕೊಂಡರೆ ನ್ಯಾಯವಲ್ಲ. ನಮ್ಮ ಸೈನ್ಯವು ಅಪಾರ ಪಾರಾವಾರದಂತಿದೆ. ನಮ್ಮ ಬಲವು ಅಗಣಿತವಾಗಿದೆ. ಯಾರಿಗೂ ಹೆದರುವ ಕೆಲಸವಿಲ್ಲ. ವಿರಾಟನ ಗೋಗಳನ್ನು ಹಿಡಿಯಲೆಣಿಸಿ ಬರುವಾಗ ಪಾಂಡವರನ್ನು ತಿಳಿದು ಅರಣ್ಯಕಟ್ಟಲೆಣಿಸಿ ಬಂದೆವಾಗಲಿ, ಗೋವುಗಳ ಆಸೆಯಿಂದಲ್ಲ. ನೀವೆಲ್ಲರೂ ಇದನ್ನು ತಿಳಿದುದಿಲ್ಲ. ಸನ್ನದ್ಧರಾಗಿ ನಿಲ್ಲಿರಿ! ಶತ್ರುವಿನ್ನೂ ದೂರದಲ್ಲಿರಲು, ಸುಮ್ಮನೆ ಅರ್ಜುನ ಅರ್ಜುನ ಎನ್ನುತ್ತಾ ಹೆದರಿ ನಿಲ್ಲುವುದು ವೀರರ ಲಕ್ಷಣವಲ್ಲ. ಆಚಾರ್ಯ! ಕೇಳಲ್ಲಿ! ಇರುವವನೊಬ್ಬ ವೀರ! ಆ ವೀರನು ಅರ್ಜುನನೇ ಆಗಲಿ, ನಮಗೇನು ಭಯ! ಮಹಾರಾಜನಾಗಿ ನಾನಿರಲು, ನನ್ನೆದುರಿಗೆ ಅರ್ಜುನನನ್ನು ಪೊಗಳಿ, ಸೇನಾನಿಗಳ ಮನದಿ ಭಯವನ್ನು ಹೊಗಿಸುವುದು ನಿನಗೆ—ಉಭಯ ಗುರುವಿಗೆ—ತರವಲ್ಲ. ನಿಮ್ಮ ದೂರಾಲೋಚನೆ ನಮಗೆ ಬೇಕಾಗಿಲ್ಲ. ಬುದ್ಧಿವಂತರು ಬೇರೆ,

ಶೌರ್ಯವಂತರು ಬೇರೆ. ಮನೆಯಲ್ಲಿ ಭೋಜನಾವಸರದಲ್ಲಿ, ಆಯುಧ ವಿದ್ಯಾಭ್ಯಾಸ ಸಮಯದಲ್ಲಿ, ಮಂತ್ರಾಲೋಚನದಲ್ಲಿ ಬುದ್ಧಿವಂತರೆ ಉಪಯೋಗವಾಗಲಿ, ರಣರಂಗ ದಲ್ಲಿ ಅಲ್ಲ. ಇಲ್ಲಿ ಕರ್ಣನಂತಹ ಶೌರ್ಯವಂತರಿಂದ ಕೆಲಸವಾಗುವುದು, ವಿಪ್ರರಿಂದಲ್ಲ' ಎಂದು ಚುಚ್ಚು ಮಾತಾಡಿದನು.

ಹಿತವನ್ನು ನುಡಿದ ಆಚಾರ್ಯನನ್ನು ಅವಗಣಿಸಿ ಮಾತಾಡಿದ ದುರಭಿಮಾನಿ ದುರ್ಯೋಧನನ ವಚನತತಿಯು ಕಿವಿಗೆ ಶೂಲವಾಗಿ ತಿವಿಯಲು, ಅಶ್ವತ್ಥಾಮನು 'ಏನೇನು ? ಕಾವಲಿದ್ದ ಕೀಳು ಭಟರನ್ನು ಹೊಡೆದೋಡಿಸಿ, ಪಶುಗಣವನ್ನು ಅಪ ಹರಿಸಿ, ಓಡಿಹೋಗುತ್ತಿರುವ ವೀರನಿಗೆ ಎಷ್ಟು ದರ್ಪ ! ಎಷ್ಟು ದುರಾಲೋಚನೆ ! ಸಮರರಂಗದಲ್ಲಿ ಶತ್ರುವಿನನ್ನು ಗೆದ್ದು ರಾಜ್ಯವನ್ನು ಪೊಂದಿದವನಾದರೂ ಸುಜನ ನಿಂತಾಡುವುದಿಲ್ಲ. ದ್ಯೂತದಲ್ಲಿ ಗೆದ್ದ ರಾಜ್ಯವನ್ನು ಸಮಯ ನಿರ್ವಹಣ ಮಾಡಿ ಬಂದ ಸುಜನ ಪಾಂಡವರಿಗೆ ಕೊಡಲಾರೆ'ನೆಂಬ ಮಾತು ನಿನಗೆ ಸರಿಯಾಗಿದೆ. ಹಿಂದಿನಂತೆ ಜೂಜಾಡುವ ಮೋಜನ್ನು ಬಿಡು ! ರಣರಂಗದಿ ಗೆದ್ದ ರಾಜರೂ ರಾಣಿ ವಾಸವನ್ನು ಸಭೆಗೆ ತರಿಸುವುದಿಲ್ಲ. ಅವಮಾನಿಸುವುದಿಲ್ಲ. ಮಾಯಾದ್ಯೂತದಲ್ಲಿ ಗೆದ್ದವರಿಗೇ ಅವೆಲ್ಲ ಸಲ್ಲುವಂತಿದೆ ! ದ್ಯೂತಕುಶಲನಾದ ನಿಮ್ಮ ಮಾವನೇ ಬರಲಿ ! ಅವನೇ ದಾಳದಿಂದ ಹೊಡೆದು ಅರ್ಜುನನನ್ನು ಓಡಿಸಲಿ ! ಅವಮಾನಿತರಾಗಿಯೂ ನಾಚಿಕೆಯಿಲ್ಲದೆ, ನಿನಗಾಗಿ ಸಾಯಲು ಸಿದ್ಧರಿರುವ ವಿಪ್ರರಿಗೆ ಬುದ್ಧಿಯಿಲ್ಲ. ಪ್ರಿಯ ಶಿಷ್ಯನಹುದೆಂದು ಅರ್ಜುನನ ಪರಾಕ್ರಮವನ್ನಿದ್ದುದನಿದ್ದಂತೆ ಪೇಳಿದ ದ್ರೋಣಾಚಾರ್ಯ ಅಪರಾಧಿಯಾದನೇ? ದುರ್ಯೋಧನ!ಅರ್ಜುನನನ್ನು ಹೊಡೆದೋಡಿಸುವೆನೆಂದೆ! ವಿಪ್ರ ಧರ್ಮಾಚ್ಯುತರನ್ನು ನಿಂದಿಸುವ ಕರ್ಣನ ಸಹಾಯವೊಂದೇ ಸಾಕೆಂದು ತಿಳಿದಿರುವೆ ! ಇನ್ನೂ ಗೋಗಣವನ್ನು ವಶಪಡಿಸಿಕೊಂಡಿಲ್ಲ; ಹಸ್ತಿನಾವತಿಯನ್ನು ಸೇರಿಲ್ಲ ; ಇಷ್ಟು ದರ್ಪದ ಮಾತು ಕರ್ಣನಿಗೆ ಸೊಗಸಲ್ಲ. ಅಗ್ನಿಯು ಉರಿಯುವನು, ಮೌನವಾಗಿ ; ಸೂರ್ಯನು ಮಾತಾಡದೆ ಬೆಳಗುವನು ; ವಸುಧೆ ಜನರನ್ನು ಸುಮ್ಮನಿದ್ದು ವಹಿಸಿ ರುವಳು ; ವಿಪ್ರನು ವೇದಾಧ್ಯಯನ ಯಜನಗಳಿಂದ ಪೂಜ್ಯನಿರುವನು. ಕ್ಷತ್ರಿಯನು ಶಸ್ತ್ರಾಸ್ತ್ರಧಾರಿಯಾಗಿ ದುರ್ಜನಶಿಕ್ಷೆ, ಶಿಷ್ಟಜನರಕ್ಷೆಗಳಿಂದ ಪೂಜ್ಯನಾಗುವನು. ವೈಶ್ಯನು ವಿತ್ತಕೃಷಿದಾನಗಳಿಂದ ಸಮ್ಮಾನನೀಯನಾಗುವನು. ಶೂದ್ರನು ಕೃಷಿ ಶಿಲ್ಪಾದಿಗಳಿಂದ ಗೌರವನೀಯನಾಗುವನು. ಇವರೆಲ್ಲರೂ ಗುರುವಾದ ವಿಪ್ರನನ್ನು ವಿಗುಣನಾದರೂ ಗಣಿಸದೆ ಮನ್ನಿಸುವರು. ಜೂಜಾಡಿ ಗೆದ್ದ ರಾಜ್ಯದಿಂದ, ಪರರು ದಾನವಾಗಿತ್ತ ರಾಜ್ಯದಿಂದ ಕೊಬ್ಬಿ ಕೆಡಬಾರದು! ಮೋಸದಿಂದ, ಕೀಳುಬುದ್ಧಿಯಿಂದ ವ್ಯಾಧರಂತೆ ರಾಜ್ಯ ಧನಗಳನ್ನು ಪಡೆದವರು ವಿಕತ್ಥನ ಪರರಾಗಬಾರದು. ಯಾವ ಮಹಾಯುದ್ಧದಲ್ಲಿ ನೀವು ಧರ್ಮಜನನ್ನು, ಬಲಶಾಲಿಯಾದ ಭೀಮನನ್ನು, ಅರ್ಜುನ ನನ್ನು, ಯಮಳರನ್ನು ಗೆದ್ದು, ರಾಜ್ಯವನ್ನು ಪಡೆದಿರುವಿರಿ ಹೇಳು ! ಯಾವ ರಣದಲ್ಲಿ ಇಂದ್ರಪ್ರಸ್ಥವು ನಿನ್ನ ಪಾಲಾಯಿತು ? ಏಕವಸ್ತ್ರಳಾಗಿದ್ದ ಸಾಧ್ವಿಯನ್ನು ಯಾವ

ಸಂಗ್ರಾಮದಲ್ಲಿ ಗೆದ್ದು ಸಭೆಗೆ ತರಿಸಿದೆ? ಚೇಗಿಗಾಗಿ ಚಂದನವನ್ನು ಕಡಿವ ರಥಕಾರನಂತೆ, ಧರ್ಮಮೂಲರಾದ ಪಾಂಡವರಿಗೆ ಚೇಗಿನಂತಿರುವ ಕೃಷ್ಣನಿಗೆ ದ್ರೋಹವನ್ನೆಸಗಿದೆ! ಕ್ಷಯಮೂಲವಾದ ದ್ಯೂತವೆಂದು ವಿದುರನು ನಿವಾರಿಸಿದರೆ ಅವನನ್ನು ಬೈದೆ! ಇಂದು ಸೂತಪುತ್ರನೊಡನೆ ನೀನು ಮಾಡಿದ ಕುಕರ್ಮದ ಫಲವನ್ನು, ನಿನ್ನ ಅನುಗರಾದ ನಾವೆಲ್ಲರು ಉಣ್ಣುತ್ತಿರುವೆವು. ದ್ರೌಪದೀ ಪರಿಕ್ಲೇಶವನ್ನು ಪಾಂಡವರು ಮರೆತಿಲ್ಲ. ಶ್ರೀಕೃಷ್ಣನೂ ಮರೆತಿಲ್ಲ. ದೇವತೆಯಾದರೆ ದೇವತೆಯಿಂದ ಕಾದಾಡಲರ್ಹನು; ನರ ಮಾತ್ರರಿಗದು ಶಕ್ಯವಲ್ಲ. ದೇವಸಮರಾದ ದ್ರೋಣ ಕೃಪರನ್ನು ನಿಂದಿಸಿ, ನೀನಾರ ಆಶ್ರಯದಿಂದ ಅರ್ಜುನನನ್ನು ಗೆಲ್ಲುವ ಆಶೆಯನ್ನಿಟ್ಟುಕೊಂಡಿರುವೆಯೋ, ಅಂತಹ ಕರ್ಣನ ಸೋಲನ್ನೀಗ ನೋಡುವೆ! ನಿಜವಾದ ಶೂರನಾದರೆ ಅರ್ಜುನನ ಪರಾಕ್ರಮ ವನ್ನು ಮೆಚ್ಚದಿರಲಾರನು. ಮನೆಯ ಜೋಯಿಸನೆಂದು ತಿರಸ್ಕರಿಸುವ ನಿನಗಾಗಿ, ನಮ್ಮಪ್ಪ ಕಾದಾಡಲಿ! ನಾನಂತು ನಿನ್ನ ದುಡುಕು ಮಾತನ್ನು ಸಹಿಸೆನು. ರಣರಂಗದಲ್ಲಿ ನಮ್ಮ ಉಪಯೋಗ ನಿನಗಾಗುವುದು ಬೇಡ! ಪ್ರಳಯಾನಲ ಬಡಬಾಗ್ನಿ ಮೃತ್ಯು ಗಳನ್ನು ಕಲಸಿ, ಮುದ್ದೆ ಮಾಡಿ, ಅರ್ಜುನ ಶರಗಳನ್ನದರದಿಂದ ಮಾಡಿರುವನೆಂದು ನಿನಗೇನು ಗೊತ್ತು? ಇದು ರಣರಂಗ! ಕುಟಿಲೋಪಾಯಗಳಿಗೆಡೆ ಇಲ್ಲ: ದೋರ್ಬಲವನ್ನು ತೋರಬೇಕು. ಗಾಂಡೀವದಿಂದ ಬರುವುವು ದಾಳಗಳಲ್ಲ; ನಿಶಾತ ಬಾಣಗಳು; ನಿನ್ನ ಹಿಂದೆ ಬಂದೆವು ನಿಜ. ಗೋಗಣವನ್ನು ಪಿಡಿದೆವು. ಮತ್ಸ್ಯ-ರಾಜನನ್ನೆದುರಿಸಿ ಹೋರಾಡುವೆವಾಗಲಿ, ಅರ್ಜುನನಿಂದಲ್ಲ. ತಿಳಿದು ಮಾತಾಡು!' ಎಂದು ಧಿಕ್ಕರಿಸಿದನು.

ಕರ್ಣನು ಅಶ್ವತ್ಥಾಮನ ಮಾತಿಗೆ ಕೋಪಗೊಂಡು 'ಎಲವೋ ಬ್ರಹ್ಮಚಾರಿ! ಗೋಗಣವನ್ನು ಪಿಡಿಯಲು ಬಂದು, ಬಿಡಿಸುವವರಿಂದ ಕಾದಾಡೆವೆಂಬ ಕಪಟವು ನಿನಗೆ ಸರಿಯಲ್ಲ. ಅರ್ಜುನನಂತಹನಿಂತಹನೆಂದು ಪೊಗಳುತ್ತ ನಿಲ್ಲುವ ಸಮಯವೂ ಅಲ್ಲ. ಸುಮ್ಮನೆ ಮಾತಾಡಿ, ಮಹಾರಾಜನನ್ನು ಹೀಯಾಳಿಸುವುದಂತೂ ಅನ್ಯಾಯವೇ ಸರಿ. ಅರ್ಜುನನ ಭಯವಿದ್ದರೆ, ನೀವೆಲ್ಲ ಹಿಂದೆ ನಿಲ್ಲಿರಿ! ಗೋಗಣವನ್ನು ರಕ್ಷಿಸಿರಿ! ನಾನೊಬ್ಬನೇ ಸಾಕು, ಕ್ಷಣದಲ್ಲಿ ಗಾಂಡೀವವನ್ನು ತುಂಡರಿಸಿ, ಬಾಣಗಳನ್ನು ಖಂಡಿಸಿ, ಕಪಿಧ್ವಜವನ್ನು ನೆಲಕ್ಕುರುಳಿಸಿ, ಧ್ವಜರಕ್ಷಕ ಭೂತಪಿಶಾಚಗಳನ್ನು ದಿಕ್ಕಾಪಾಲಾಗಿ ಓಡಿಸಿ, ಸಾರಥಿಯನ್ನು ಸಂಹರಿಸಿ, ವಿಜಯವನ್ನು ಸಂಪಾದಿಸಿ, ಮಹಾರಾಜನಿಗೆ ಆನಂದವನ್ನು ತರುವೆನು. ನನ್ನ ಜ್ಯಾಘೋಷವನ್ನು ಕೇಳಿ, ಶತ್ರು ಜನರು ಭಯಕಂಪಿತರಾಗುವರು. ನನ್ನ ನಿಶಿತಶರವರ್ಷದಿಂದ ದಿಕ್ಚಕ್ರವು ತುಂಬಿ, ಮೃತ್ಯುದೇವೀ ನಾಟ್ಯರಂಗದ ತಳಲನೀರಾಗುವುದು. ಅರ್ಜುನಾಗ್ನಿ ನನ್ನ ಬಾಣವರ್ಷದಲ್ಲಿ ಆರಿ ತಣ್ಣಗಾಗುವುದು. ಅರ್ಜುನನಂತೆ ನಾನೂ ಗುರುಸೇವೆಯನ್ನು ಮಾಡಿ ಸಂಪಾದಿಸಿ ತಂದ ದಿವ್ಯಾಸ್ತ್ರ ಶಕ್ತಿಗಳಿಂದು ಸಾರ್ಥಕವಾಗುವುವು. ದಿನ ದಿನ ಪ್ರವರ್ಧಮಾನವಾಗುತ್ತಿರುವ ದುರ್ಯೋಧನನ ಮನ್ನಣೆಗೆ ತಕ್ಕಂತೆ ವಿಕ್ರಮಿಸಿ,

ರಣರಂಗದಿ ಅರ್ಜುನನನ್ನು ಗೆಲ್ಲುವೆನೆಂಬ ಪ್ರತಿಜ್ಞೆಯನ್ನು ನಿರ್ವಹಿಸಿ ಬರುವೆನು. ಕರ್ಣಾರ್ಜುನರಲ್ಲಿ ಯಾರು ಘನತರ ವೀರನೆಂಬುವ ಸಂಶಯವಿಂದು ತೊಲಗಲಿ ! ಪರಶುರಾಮದೇವರ ಕೃಪೆಯಿಂದ ಪಡೆದ ವಿದ್ಯಾಚಾತುರ್ಯ ಸಫಲವಾಗಲಿ ; ನೀವೆಲ್ಲ ಸುಮ್ಮನೆ ನಿಂತು ನೋಡುತ್ತಿರಿ ! ಎಂದನು.

ಕೃಪಾಚಾರ್ಯನಾಗ ಕರ್ಣನನ್ನು ನೋಡಿ, 'ಕರ್ಣ! ಯುದ್ಧವೆಂದರೆ ಆತತಾಯಿ ಯಂತೆ ಸದಾ ಶಸ್ತ್ರವನ್ನು ಹಿಡಿದು ಸಿದ್ಧನಾಗುವೆ! ನೀತಿಯನ್ನರಿತು, ಹಿತವನ್ನು ತಿಳಿದು ನಡೆಯಲು ಕಲಿಯಲಿಲ್ಲ. ಯುದ್ಧವನ್ನು ಅಧಮ ಸಾಧನವೆಂದು ಜ್ಞಾನಿಜನರು ಹೇಳು ವರು. ದೇಶ ಕಾಲ ಬಲಗಳನ್ನು ವಿಚಾರಿಸಿ ಕಾರ್ಯವನ್ನು ನಿಶ್ಚಯಿಸಬೇಕಾಗಲಿ ಸಾಹಸಪ್ರಿಯರಾಗಿ ಒರಟಾಗಿ ನಡೆದರೆ ಅನರ್ಥವಾಗುವುದು. ಅರ್ಜುನನೊಬ್ಬನೆಂದೆ ! ಖಾಂಡವದಹನಕಾಲದಲ್ಲಿ ಶಕ್ರಾದಿಸುರರನ್ನು ಮುತ್ತಿದವನರ್ಜುನನೊಬ್ಬನೇ ಅಲ್ಲವೇ? ಯಾದವ ವೀರರನ್ನು ಸೋಲಿಸಿ ಸುಭದ್ರೆಯನ್ನು ತಂದುದೂ ಅರ್ಜುನನೊಬ್ಬನೇ ! ದಿಗ್ವಿಜಯವನ್ನು ಸಾಧಿಸಿ, ಧನವನ್ನು ತಂದವನರ್ಜುನನೊರ್ವನೇ ! ಗಂಧರ್ವರಾಜ ನಿಂದ ಕೌರವ ರಾಜನನ್ನು ಸೆರೆಬಿಡಿಸಿ ತಂದವನೂ ಅರ್ಜುನನೇ ! ನಿವಾತಕವಚ ಕಾಲಕೇಯರನ್ನು ಗೆದ್ದವನೊಬ್ಬನೇ ! ಅರ್ಜುನನೇ ಏಕೆ ? ಕುಂತೀನಂದನರೆಲ್ಲರೂ ಅಸಹಾಯ ಶೂರರೇ ಆಗಿರುವರು. ಅಂತಹ ಅರ್ಜುನನಿಗೆ ನೀನು ಹೆಚ್ಚೆಂದೆ ! ವೃಥಾ ದರ್ಪಾಲಾಪಗಳಿಂದೇನು ಪ್ರಯೋಜನ ಹೇಳು ! ಸಮುದ್ರವನ್ನು ಕೈಯಿಂದೀಜಿದಂತೆ, ಅಗ್ನಿಯನ್ನು ನುಂಗಿದಂತೆ, ವಾಸುಕಿಯ ಕೋರೆಗಳನ್ನು ಕಿತ್ತುವಂತೆ ಅರ್ಜುನನಿಂದ ಹೊಡೆದಾಟ. ನಾಲಿಗೆಗಳನ್ನು ಚಾಚಿ ಉರಿಯುತ್ತಾ ಬರುವ ದಾವಾಗ್ನಿಯನ್ನು ಗಡಿಗೆಯ ನೀರನ್ನೆರಚಿ ಆರಿಸಲಾಗದಂತೆ, ಅರ್ಜುನನನ್ನು ನೀನು ಎದುರಿಸಿ, ಉಳಿಯ ಲಾರೆ ! ನೀನು, ನಾನು, ಗುರು ಭೀಷ್ಮರು, ಗುರುಪುತ್ರರೆಲ್ಲ ಕಲೆತು ಅರ್ಜುನನನ್ನು ಮುತ್ತಿ ಹಿಂದಿರುಗಿಸಬಹುದಾಗಲಿ, ಒಬ್ಬಂಟಿಗನಾಗಿ ಕಿರೀಟಿಯನ್ನು ತಿವಿದು, ಪರ್ವತದ ಬಂಡೆಯನ್ನು ತಿವಿದ ಟಗರಿನಂತೆ ಕೆಡುವುದುಚಿತವಲ್ಲ. ಗೋಧನವು ಹಾಳಾಗಲಿ ! ಮೊದಲು ರಾಜನನ್ನು ಉಳಿಸಿಕೊಳ್ಳಲು ಯತ್ನಿಸಿ' ಎಂದನು.

ಕರ್ಣನು 'ಕೃಪಾಚಾರ್ಯ ! ನೀವೆಲ್ಲರು ಹಿತಶತ್ರುಗಳು. ನಿಮಗೆ ಪ್ರೀತಿ ಪಾಂಡವರಲ್ಲಿ ; ಊಟ ಉಪಚಾರ ನಮ್ಮಲ್ಲಿ. ಪೌರುಷ ವಚನಗಳು ಸಭೆಯಲ್ಲಿ ; ಸಂಧಿ ಮಾತುಗಳು ರಣರಂಗದಲ್ಲಿ. ಯಜ್ಞವು ನಡೆದಾಗ ಮೃಷ್ಟಾನ್ನವನ್ನು ಉಂಬುವ ಪಾಂಡಿತ್ಯವಿದ್ದವರಿಗೆ ಯುದ್ಧರಂಗದಲ್ಲಿ ದಡ್ಡತನವು ಸಹಜವಾಗಿದೆ. ಮನೆಗೆ ಹೋಗಿ ಮಲಗು ! ನೀವೆಲ್ಲರೂ ತೊಲಗಿರಿಲ್ಲಿಂದ ! ನಾನೊಬ್ಬನೇ ಪ್ರಾಣಪಣ ವನ್ನಿಟ್ಟು, ಹಿಂಜರಿಯದೆ, ಲೋಕಭೀಕರ ಸಮರವನ್ನು ಮಾಡಿ, ರಾಜರಾಜನನ್ನೂ, ಗೋಗಣವನ್ನೂ ರಕ್ಷಿಸಿ, ಅರ್ಜುನನ ಕಥೆ ಮುಗಿಸಿಬಿಡುವೆನು' ಎಂದನು.

ಅವರ ಜಗಳವನ್ನು ನಿಲ್ಲಿಸಿ ಪಿತಾಮಹನು 'ಕೌರವೇಶ್ವರ! ದ್ರೋಣನು ಧರ್ಮಾರ್ಥಗಳನ್ನು ವಿಚಾರಿಸಿ ವಿಹಿತವಾಗಿ ನುಡಿದಿರುವನು. ಗುರುಪುತ್ರನು ಅರ್ಥ

ವನ್ನು ನೋಡದೆ ಹಿತವನ್ನು ಮಾತ್ರ ಹೇಳಿರುವನು. ಕೃಪಾಚಾರ್ಯನಾಡಿದುದ ರಲ್ಲಿ ತಪ್ಪೇನಿಲ್ಲ. ಇನ್ನು ಕರ್ಣನೋ ರಣರಂಗ ಪಾಂಡಿತ್ಯವನ್ನು ಪ್ರಕಟಿಸಿ ಉತ್ಸಾಹ ದಿಂದ ಮಾತಾಡಿದನು ; ಆದರೆ ಅವಿನಯ ವಚನಗಳವನಿಗೆ ತಕ್ಕುವಲ್ಲ. ಕಾರ್ಯ ವನ್ನು ಮಾಡಿ ನುಡಿದವನು ಕಪುಜಾಣ. ಕಾರ್ಯವಾಗದ ಮುನ್ನ ಇತರ ಮಿತ್ರರ ಕಿವಿಗೆ ಕಠೋರವಾದ ಮಾತನ್ನಾಡುವುದನ್ನಾರಾದರೂ ಬಿಡುವುದೊಳಿತು. ಶತ್ರು ಗುಣವನ್ನು ಪ್ರಶಂಸಿಸುವುದೆಷ್ಟು ಘನಗುಣವೋ, ಮಿತ್ರದೋಷವನ್ನು ತಿದ್ದಲು ನುಡಿಯುವುದೂ ಅಷ್ಟೇ ದೊಡ್ಡ ಗುಣವು. ಕರ್ಣನು ಹಿಂದುಮುಂದು ನೋಡದೆ, ಯಾವಾಗಲೂ ಬಿರುಸಾಗಿ ಮಾತನಾಡಿ, ಎಂತಹವರನ್ನೂ ಅವಮಾನಿಸುವನು. ಇದು ಸರಿಯಲ್ಲ. ಆಚಾರ್ಯರೆಂದರೆ ಪೂಜಾರ್ಹರಲ್ಲವೇ ? ಅವರನ್ನು ನಿಷ್ಕಾರಣವಾಗಿ —ಕರೆದು ಕೇಳಿದಾಗ ಹಿತವನ್ನು ಹೇಳಿದ ತಪ್ಪಿಗಾಗಿ—ಗರ್ಹಿಸಿ ಮಾತಾಡಬಾರದು' ಎಂದನು. ಅಲ್ಲಿಗೆ ನಿಲ್ಲದೆ ಭೀಷ್ಮನು ಕೃಪಾಶ್ವತ್ಥಾಮರನ್ನು ಕೈಹಿಡಿದು ತಂದು 'ವಿಪ್ರವರರೇ ! ಬೇಕಾದಷ್ಟು ಮಹತ್ಕಾರ್ಯವಿದೆ. ಬರುತ್ತಿರುವವನು ಬೀಭತ್ಸ! ನಮ್ಮಲ್ಲಿ ನಾವು ಕಡಿದಾಡುವ ಸಮಯವಲ್ಲ. ನಾವೆಲ್ಲರು ಏಕಮತ್ಯದಿಂದ ಕೂಡಿ, ಕುರುರಾಜನ ಗೌರವವನ್ನು ಉಳಿಸೋಣ ! ಮುಖದಲ್ಲಿ ವೇದರಾಶಿಯನ್ನೂ ಬೆನ್ನಲ್ಲಿ ಧನುಸ್ತೂಣೀರಗಳನ್ನೂ ಧರಿಸಿ ಮೆರೆವ ಮಹಾನುಭಾವರು ತಾವು! ಯಾರೇನೇ ಅಂದರೂ ಕುರುರಾಜನಲ್ಲಿ ಕೃಪೆ ಮಾಡಿ ಅವನಿಗಾಗಿ ಯುದ್ಧಸನ್ನದ್ಧರಾಗಿರಿ !' ಎಂದು ಬೇಡಿದನು.

ದುರ್ಯೋಧನನು ಭೀಷ್ಮನ ಹಿತವನ್ನರಿತು, ಕರ್ಣನನ್ನೂ ಕೂಡಿ ಗುರುವಿನನ್ನು ಸಮೀಪಿಸಿ, ವಿನಯದಿಂದ 'ಕ್ಷಮಿಸಿ!' ಎಂದು ಬೇಡಿದನು. ಕ್ಷಣಕೋಪಿಗಳಲ್ಲವೇ ಮಹಾತ್ಮರು! ದ್ರೋಣನು 'ಮಹಾರಾಜ! ಭೀಷ್ಮನ ನುಡಿಗಳಿಂದಲೇ ನನ್ನ ಕೋಪವು ದೂರವಾಯಿತು. ನೀನೂ ನನ್ನ ಶಿಷ್ಯನೆಂದು ಹಿತವನ್ನು ನುಡಿದೆನಾಗಲಿ, ಅರ್ಜುನನಿಗೆ ಹೆದರಿ ಮಾತಾಡಿದವನಲ್ಲ. ಮಹಾವೀರನಿಂದ ಮಹಾರಾಜನನ್ನು ಕಾಪಾಡುವುದು ನಮ್ಮ ಮೊದಲ ಕೆಲಸ! ವಾಸವಸುತನೀಗ ಸಿಟ್ಟಿನ ರಭಸದಿಂದ ಬರುತ್ತಿರುವನು. ಹೊಸತಾಗಿ ತಂದ ಅಸ್ತ್ರಗಳವನಲ್ಲಿ ಹೇರಳವಾಗಿವೆ. ಅವನು ಯಾರನ್ನೂ ಲೆಕ್ಕಿಸದೆ ಕಾದುವನು. ನಾವು ಕೂಡಿ ಕಾದುವುದೊಳಿತೆಂದು ನನ್ನ ಮತ'ವೆಂದನು.

ಆಗ ದುರ್ಯೋಧನನು ಸಮಯಗಣನವನ್ನು ಕುರಿತು ಪಿತಾಮಹನನ್ನು ಪ್ರಶ್ನಿಸಿ ದನು. ಭೀಷ್ಮನು ಆಲೋಚಿಸಿ ಬೆರಳೆಣಿಸಿ, ತಲೆತೂಗಿ, ಇಂತೆಂದನು—'ಸಮಯ ನಿರ್ವಹಣ ವಿಷಯದಲ್ಲಿ ಚಾಂದ್ರಮಾನವನ್ನೆಣಿಸುವರಾಗಲಿ, ಸೌರಮಾನ ವನ್ನಲ್ಲ. ಜೂಜಾಡಿ, ಸೋತು, ಅರಣ್ಯವಾಸಕ್ಕೆಂದು ಪಾಂಡವರು ಹೊರಟಿದ್ದು ವಿಜಯದಶಮಿ. ಹುಣ್ಣಿಮೆಗೆ ಮಾಸವೆಣಬುವರು. ಅಂತಹ ಮಾಸಗಳು ನೂರ ಐವತ್ತಾರಾದರೆ ಹದಿಮೂರು ವರ್ಷಗಳಾದಂತೆಯೇ ಸರಿ. ಹದಿಮೂರು ವರ್ಷಗಳಲ್ಲಿ

ಐದು ಚಾಂದ್ರಮಾಸಗಳು, ಎರಡು ದಿನ, ಮುಪ್ಪತ್ತೇಳು ಘಟಿಗಳು, ನಲ್ವತ್ತೈದು ಪಳಗಳು ಹೆಚ್ಚಾಗುವವು. ಅಧಿಕಮಾಸ, ಸೂರ್ಯಚಂದ್ರರ ಶೀಘ್ರಗಮನಾದಿಗಳಿಂದ ಹೀಗಾಗುವುದು. ಎಲ್ಲವನ್ನೂ ವಿಚಾರಿಸಿ, ಲೆಕ್ಕಹಾಕಿ ನೋಡಿದರೆ ಸೌರ ತ್ರಯೋದಶ ವರ್ಷಗಳ ಮುಂಚಿತವಾಗಿಯೇ—ಐದು ತಿಂಗಳ ಮೊದಲೇ ಚಾಂದ್ರ ತ್ರಯೋದಶ ವರ್ಷಗಳು ಮುಗಿದುಹೋಗಿವೆ. ನಾಳೆ ವಿಜಯದಶಮಿಗೆ ಹದಿಮೂರು ವರ್ಷಗಳಾಗುವುವೆಂದು ಸೌರಮಾನದಿಂದ ಎಣಿಸಿ ತಿಳಿಯಲಾಗದು. ಸಮಯ ಬಂಧ, ಯಜ್ಞ, ಆರ್ತವ, ಗರ್ಭ, ಪಿತೃ ತಿಥಿಗಳನ್ನು ಚಾಂದ್ರಮಾನದಿಂದಲೇ ತಿಳಿಯಬೇಕು. ಇಂದು ವೈಶಾಖ ಶುದ್ಧ ನವಮಿ. ನಿನ್ನೆ ಅಷ್ಟಮಿ ನಾವು ಗೋಗ್ರಹಣವನ್ನು ಮಾಡಿರುವೆವು. ಮೊನ್ನೆಗೇ ಹದಿಮೂರು ವರ್ಷಗಳು ತುಂಬಿವೆ—ಇದಕ್ಕೆ ಸಂಶಯವಿಲ್ಲ. ಎಲ್ಲವನ್ನರಿತೇ ವಿಜಯನು, ಸಂಗ್ರಾಮೇಚ್ಛೆಯು ಉತ್ಕಟವಾಗಿ ಉಕ್ಕಿಬರಲು ನಮ್ಮೊಡನೆ ಕಾದು, ಹಗೆ ತೀರಿಸಲು ಬರುತ್ತಿರುವನು. ಯುಧಿಷ್ಠಿರನು ಪಾಲಕನಾಗಿರುವಲ್ಲಿ ಅಧರ್ಮಕ್ಕಾಸ್ಪದವಿಲ್ಲ. ಅಂತೆಯೇ ಮಾತಿನಂತೆ ಹನ್ನೆರಡು ವರ್ಷದ ಅರಣ್ಯವಾಸವನ್ನು ಮುಗಿಸಿ ಅವರು ಕಾಣದಾಗಿನಿಂದ ಹುಡುಕುತ್ತಾನಾವು ಹನ್ನೆರಡು ತಿಂಗಳಿಂದಲೂ ಅವರ ವಾರ್ತೆಯನ್ನು ನಿರೀಕ್ಷಿಸುತ್ತಿದ್ದೇವೆಂದು ಎಲ್ಲರಿಗೂ ಗೊತ್ತು. ಈಗ ಅಜ್ಞಾತವಾಸವು ಮುಗಿದಿಲ್ಲವೆಂಬುದು ಅನುಚಿತವಾಗಿದೆ. ಜೂಜಾಡುವ ಹಂಬಲವೂ ಉಳಿದಿಲ್ಲ. ಶಕುನಿಯನ್ನೂ ಸೋಲಿಸುವಷ್ಟು ಅಕ್ಷವಿದ್ಯಾಚತುರನಾಗಿರುವನು ಧರ್ಮಸುತನು. ಇನ್ನು ಯುದ್ಧವೇ ಗತಿ! ಅದರ ರುಚಿಯನ್ನು ಇಂದು ಸ್ವಲ್ಪ ನೋಡಿಸಲು, ಅರ್ಜುನನು ಬರುತ್ತಿರುವನು. ಅವರು ಮರಣವನ್ನಪ್ಪುವರಾಗಲಿ ಅಸತ್ಯವನ್ನಾಡರು. ಸಾಕ್ಷಾದಿಂದ್ರನಿಂದ ರಕ್ಷಿತನಾಗಿದ್ದರೂ, ಬಿಡದೆ ಸಂಹರಿಸಿ, ಕಾಲಪ್ರಾಪ್ತನಾದ ಪ್ರತೀಕಾರವನ್ನು ಮಾಡದೆ ಬಿಡರು. ಎಲ್ಲರೂ ಕೂಡಿ, ಧೈರ್ಯದಿಂದ, ಸವ್ಯಸಾಚಿಯೊಡನೆ ಯುದ್ಧಮಾಡಿ, ನಮ್ಮ ಕಾರ್ಯವನ್ನು ಸಾಧಿಸೋಣ! ಬರುವನು ಅರ್ಜುನ! ತಪ್ಪದೆ ಗೆಲ್ಲುವೆವೆಂಬ ನಿಶ್ಚಯವಿಲ್ಲ. ಹೆಣಗಾಡುವ ಸೇನೆಗಳಲ್ಲಿ ಎರಡು ಪಕ್ಷದವರಿಗೂ ಗೆಲುವಾಗುವುದೇ? ಆಗಲಿ! ಎಷ್ಟೇ ವಿಶಿಷ್ಟನಾದರೂ, ಅರ್ಜುನನು ಧರ್ಮಪರನು. ಅನ್ಯಾಯ ಯುದ್ಧವವನಿಗೆ ರುಚಿಸದು. ಎಷ್ಟು ಕೆಣಕಿದರೂ, ತಮ್ಮ ಧರ್ಮಪಥವನ್ನು ಬಿಡದೆ, ಮಾತಿನಂತೆ ಹದಿಮೂರು ವರ್ಷಗಳನ್ನು ಕಳೆದಿರುವ ಪಾಂಡವರ ಕ್ರೋಧಾಗ್ನಿ ಒಟ್ಟುಗೂಡಿ, ಅರ್ಜುನನಾಗಿ ಬಂದಿದೆ. ಅವನನ್ನೆದುರಿಸಿ ಕಾದಲು ಸರ್ವ ಸೈನ್ಯವು ಸನ್ನದ್ಧವಾಗಲಿ!' ಎಂದನು.

ದುರ್ಯೋಧನನು 'ಏನಾದರೂ ನಾನು ರಾಜ್ಯವನ್ನು ಕೊಡೆನು. ರಣಾಂಗಣದಲ್ಲಿ ಗೆದ್ದವರಿಗಾಗುವುದು ರಾಜ್ಯ' ಎಂದನು. ದ್ರೋಣನು, 'ಸರಿ! ಈಗ ಮಾಡಬೇಕಾದ ಕಾರ್ಯವನ್ನು ನನಗೆ ತೋಚಿದಂತೆ ಹೇಳುವೆನು. ಮೊದಲು ಸೇನೆಯ ನಾಲ್ಕನೇ ಭಾಗದಿಂದ ಕೂಡಿ ಮಹಾರಾಜನು ನಡೆಯಲಿ! ಅವನ ಹಿಂದೆ ಆಕಳ ಹಿಂಡನ್ನು ಹೊಡೆದು

ಕೊಂಡು ಕಾಲುಭಾಗದ ಸೈನ್ಯ ನಡೆಯುವುದು. ಮಿಕ್ಕ ಅರ್ಧಭಾಗದಿಂದ ಕೂಡಿ ನಾವೆಲ್ಲರು ಹಸ್ತಿನಾವತಿಯ ಮಾರ್ಗವನ್ನು ಹಿಡಿದು, ಅರ್ಜುನನು ಬಂದ ಕಡೆ, ಅವನನ್ನು ತಡೆದು ಹೋರಾಡಿ, ಸೋಲಿಸಲು ಯತ್ನಿಸುವುದು. ಮಹಾರಾಜನ ಕ್ಷೇಮಕ್ಕಾಗಿ ಹೀಗೆ ನುಡಿಯುತ್ತಿರುವೆನು' ಎಂದನು. ಭೀಷ್ಮಾದಿಗಳದಕ್ಕೊಡಂಬಟ್ಟು ರಾಜ ರಾಜನನ್ನೂ, ಪಶುವರ್ಗವನ್ನೂ ಕಳಿಸಿ, ತಾವು ಹಿಂದೆ ಹೋಗುತ್ತಿದ್ದರು. ದ್ರೋಣಾಚಾರ್ಯನು ಸೇನಾಮಧ್ಯದಲ್ಲಿ ಕನಕರಥಾರೂಢನಾಗಿದ್ದನು. ಅವನಿಗೆ ಬಲಗಡೆ ಕೃಪನು, ಎಡದಲ್ಲಿ ಅಶ್ವತ್ಥಾಮನು, ಹಿಂದುಗಡೆ ಭೀಷ್ಮನು, ಮುಂದೆ ಕರ್ಣನು ಸೈನ್ಯಸಮೇತರಾಗಿ ನಡೆದರು. ವಿಕರ್ಣ, ದುಶ್ಶಾಸನ, ಶಕುನಿ, ಸೈಂಧವ, ಬಾಹ್ಲಿಕ, ಸೋಮದತ್ತ, ಭೂರಿಶ್ರವ ದುರ್ಮುಖಾದಿ ಯೋಧವರರು ತಕ್ಕ ಮರ್ಮಸ್ಥಾನಗಳಲ್ಲಿ ನಿಂತು ನಡೆಸುವ ಆ ಮಹಾಸೇನೆಯು ಸಾಗರದಂತೆ ಘೂರ್ಣಿಸುತ್ತಾ ಹೊರಟಿತು.

ಅರ್ಜುನನೊಬ್ಬನೇ ಇಂತಹ ಮಹಾಸೈನ್ಯವನ್ನು ತಾಗಿ ಕಾದಾಡುವ ಸಮಾರಂಭವನ್ನು ನೋಡಲೆಳಸಿ, ಇಂದ್ರಾದಿ ವೃಂದಾರಕರು ವಿಮಾನಗಳಲ್ಲಿ ಕೂತು ಆಕಾಶದಲ್ಲಿ ಬಂದು ಅಲ್ಲಲ್ಲಿ ನೆಲೆಸಿದ್ದರು. ಋಷಿಗಂಧರ್ವರೂ ಕುತೂಹಲದಿಂದ ಅಪೂರ್ವ ಸಂಗ್ರಾಮವನ್ನು ನೋಡಲೆಂದು ಬಂದಿದ್ದರು. ಪಾಂಡುರಾಜನೂ ಇಂದ್ರನ ಸಮೀಪದಲ್ಲಿ ಕೂತು, ಮಗನ ಪರಾಕ್ರಮವನ್ನು ವೀಕ್ಷಿಸುತ್ತಿದ್ದನು.

ನಡೆಯುತ್ತಿದ್ದ ಸೈನ್ಯವು ದೇವದತ್ತಾಭೀಲರಾವವನ್ನು ಕೇಳಿ ದಿಗ್ಭ್ರಾಂತವಾಗಿ ಚಿತ್ರದಲ್ಲಿ ಬರೆದ ಸೇನೆಯಂತೆ ನಿಶ್ಚಲವಾಯಿತು. ಅರ್ಜುನರಥದ ಧೂಳಿ ಮುಚ್ಚಿ ಸೈನಿಕರು ಕಂಗೆಟ್ಟು, ವಿವರ್ಣವದನರಾದರು. ಕಪಿಧ್ವಜದ ಕಾಂತಿಯಿಂದ ಕಣ್ಣು ಕುಕ್ಕಿದಂತಾಗಿ ಕುರುವೀರರು ವಿಹ್ವಲ ಹೃದಯರಾದರು. ಧ್ವಜದ ಸುತ್ತು ನಡೆದು ಬರುವ ಅದೃಶ್ಯಭೂತ ಪಿಶಾಚಗಳ ಭಯಂಕರ ಗರ್ಜನವು ಕಿವಿಗೆ ಬಡಿದು, ಅವರು ಎದೆಯೊಡೆದರು. ಪ್ರಳಯಭೈರವ ಗರ್ಜನ ಭಯಂಕರವಾದ ಧನುಷ್ಟಂಕಾರವನ್ನು ಮಾಡುತ್ತಾ ಅರ್ಜುನನು, ಬಲು ವೇಗದಿ ಬಂದು, ಕ್ರೋಶ ದೂರ ಹೋಗುವಷ್ಟರಲ್ಲೇ ಕೌರವ ಸೈನ್ಯವನ್ನು ಮುಟ್ಟಿದನು.

'ಉತ್ತರಾ ! ಎಂತಹ ದೊಡ್ಡ ಸೇನೆ ! ಅಲ್ಲಿ ದೂರದಲ್ಲಿ ಕೆಲ ಸೈನಿಕರು ! ಅವರ ಹಿಂದೆ ಗೋಗಣವೂ ಇದೆ. ವೃಥಾಭಿಮಾನಧನನಾದ ದುರ್ಯೋಧನನೆಲ್ಲಿರುವನೋ ತಿಳಿಯದಾಗಿದೆ. ಇರಲಿ ! ರಾಜನನ್ನು ಹಿಡಿದರೆ ಭಟರೆಲ್ಲ ತಾವಾಗಿ ಸಿಗುವರು. ಮೊದಲು ರಥವನ್ನು ಗೋಗಣದ ಕಡೆಗೆ ನಡೆಸು ! ಅದನ್ನು ಹಿಂದಿರುಗಿಸುವುದು ಆದ್ಯ ಕರ್ತವ್ಯ ! ಆಗ ರಾಜರಾಜನು ತಾನಾಗಿ ಬಂದು ಕಾದುವನು. ಮಿಕ್ಕ ವೀರರ ಕೆಲಸವನ್ನೂ ಆಗಲೇ ಮುಗಿಸಬಹುದು' ಎಂದಾಜ್ಞಾಪಿಸಿದನು.

ಉತ್ತರನಾಮಾತಿಗೆ ತಲೆದೂಗಿ 'ಅರ್ಜುನ ! ನಮ್ಮೂರಲ್ಲಿ ಈ ಕುದುರೆಗಳಿಗೆ ಸಾಟಿಯಾದ ಅಶ್ವಗಳಿಲ್ಲ. ಇವು ಶೈಬ್ಯ ಸುಗ್ರೀವ ಮೇಘ ಪುಷ್ಪವಲಾಹಕಗಳ ಜಾತಿಗೆ ಸೇರಿದವು. ನಾನೂ ಸೂತವಿದ್ಯೆಯಲ್ಲಿ ಪರಿಣತನಾಗಿರುವೆನು. ನಿನ್ನ ಸನ್ನಿಧಾನದಿಂದ

ಉತ್ಸಾಹಭರಿತನಾಗಿರುವೆನು. ಸಾವಿಗೂ ಹೆದರದೆ ಕಾದುವೆನೆಂದವೇಲೆ ಸಾರಥ್ಯವನ್ನು ಮಾಡೆನೇ ? ಕ್ಷಣದಲ್ಲಿ ಸೇನೆಯನ್ನು ಬಲಕ್ಕೆ ಹಾಕಿ, ಸರಸರಸಾಗಿ, ಗೋಗಣವನ್ನು ಸೇರುವೆನು. ನೋಡು !' ಎಂದು ರಥವನ್ನು ವೇಗವಾಗಿ ಓಡಿಸಿದನು.

ಅರ್ಜುನನು 'ಆಗಲಿ ! ಖಾಂಡವದಹನದಲ್ಲಿ, ನಿವಾತಕವಚ ದುರ್ಜಯ ಕಾಲ ಕೇಯ ಸಂಗ್ರಾಮದಲ್ಲಿ, ಪಾಂಚಾಲೀ ಸ್ವಯಂವರದಲ್ಲಿ, ನನಗೆ ವಿಜಯವನ್ನಿತ್ತ ಶ್ರೀಕೃಷ್ಣಾನುಗ್ರಹವಿಂದೂ ಇದೆ. ಕೌರವರ ಸೊಕ್ಕನ್ನು ಮುರಿಯುವೆನು. ಭಯಪಡ ಬೇಡ !' ಎಂದು ಶಂಖವನ್ನೂದಿ, ಧನುಷ್ಟಂಕಾರವನ್ನು ಮಾಡಿದನು. ದೂರದಲ್ಲಿರುವ ಗುರು ಕೃಪ ಗಾಂಗೇಯರು ಅವನ ನಯನಪಥ ಗೋಚರರಾದರು. ಅರ್ಜುನನವರಿಗೆ ಶಿರದಿಂದ ಬಾಗಿ ನಮಿಸಿ, ಎರಡೆರಡು ಬಾಣಗಳನ್ನು ಅವರ ಚರಣ ಸಮೀಪದಲ್ಲಿ ಬೀಳು ವಂತೆ ಬಿಟ್ಟು, ಎರಡೆರಡು ಬಾಣಗಳನ್ನು ಅವರ ಕರ್ಣ ಸಮೀಪದಲ್ಲಿ ಸೋಕದಂತೆ 'ಸುಂಯ್' ಎಂದು ಶಬ್ದಿಸುವಂತೆ ಬಿಟ್ಟನು.

ಆಚಾರ್ಯನು ತನ್ನ ಪರಿಸರದ ಜನರನ್ನು ಕಂಡು, ಬಾಣಗಳನ್ನು ಬಿಟ್ಟ ಅರ್ಜುನನ ಕಡೆ ನೋಡುತ್ತಾ 'ಬಳಿರೆ ! ಅರ್ಜುನಾ !' ಎಂದು ಶ್ಲಾಘಿಸಿ, ಅವರಿಗೆ ಇಂತೆಂದನು—'ನೋಡಿದಿರಾ ಅರ್ಜುನನ ಹಸ್ತಲಾಘವವನ್ನು ! ಗಾಂಡೀವವನ್ನು ವಿದ್ಯುಲ್ಲತೆಯನ್ನಾಗಿಸಿ, ಕಪಿಧ್ವಜಗತ ಭೂತನಾದಗಳೇ ಸಿಡಿಲಂತೆರಗುತಿರಲು, ತೇರು ಮೇಘವಾಗಿ, ಅದರಲ್ಲಿದ್ದ ಅರ್ಜುನನೆಂಬ ಪರ್ಜನ್ಯನು, ಬಾಣಧಾರೆಗಳಿಂದ ಕೌರವ ಗರ್ವ ಮಹಾಗ್ನಿಜ್ವಾಲೆಗಳನ್ನು ಆರಿಸುತ್ತಾ ಬರುತ್ತಿರುವನು. ಪ್ರಣಾಮಬಾಣ ಗಳನ್ನೂ, ಕುಶಲಪ್ರಶ್ನ ಬಾಣಗಳನ್ನೂ ಕಳಿಸಿ 'ಆಚಾರ್ಯ ! ಹದಿಮೂರು ವರ್ಷ ಗಳ ಕಷ್ಟ ಕಾಲವು ತೀರಿತು. ನಿಮ್ಮ ಆಶೀರ್ವಾದವಿರಲಿ ! ಇನ್ನಾದರೂ ರಾಜ್ಯಾಭ್ಯುದಯವನ್ನು ಪಡೆದು ಸುಖದಿಂದ ಜೀವಿಸುವಂತಾಗಲಿ !' ಎಂದು ನುಡಿದಂತಿರುವನು. ರಾತ್ರಿಯ ತಮಃಪಟಲವನ್ನು ಸೀಳುತ್ತಾ ಬರುವ ಮಾರ್ತಾಂಡ ನಂತೆ, ಸಮುಜ್ಜ್ವಲ ತೇಜೋವಿರಾಜಮಾನನಾಗಿ ಬರುತ್ತಿರುವ ಅರ್ಜುನನಿಗೆದುರಿಲ್ಲ.'

ಅಶ್ವತ್ಥಾಮ ಕೃಪ ಭೀಷ್ಮರೂ ಅರ್ಜುನನ ಪ್ರಣಾಮ ಪ್ರಶ್ನಗಳಿಂದ ಮನದಿ ಸಂತೋಷಿಸಿದರು. ಮಿಕ್ಕವರನ್ನು ನಿರ್ಲಕ್ಷಿಸಿ ಅರ್ಜುನನು ಗೋಗಣವನ್ನು ಮಹಾ ವೇಗದಿಂದ ಹೋಗಿ ಮುಟ್ಟಿದನು.

ಭೀಷ್ಮನು 'ಎಷ್ಟು ಕಾಲವಾಯಿತು ಅರ್ಜುನನನ್ನು ನೋಡಿ! ಇವನು ಸುಗುಣ ಖನಿ—ಸುಹೃದ್ವಲ್ಲಭ–ಬಂಧುಹಿತಸಾಧಕ, ಶತ್ರುಭಯಂಕರ ಇಂತಹ ವೀರರಿನ್ನವನಿಯ ಲ್ಲಿಲ್ಲ. ಇವನ ತೇಜವು ದುರ್ನಿರೀಕ್ಷ್ಯವಾಗಿದೆ. ಇವನ ಮೂರ್ತಿ ಉನ್ನತೋದಾತ್ತ ವಾಗಿದೆ. ಇವನ ಕೀರ್ತಿ ತ್ರಿಲೋಕವ್ಯಾಪ್ತವಾಗಿದೆ. ಹಿಂದಿನಿಂದ ಬಂದು ಮುತ್ತಿದ ಅರ್ಜುನನು ಕಲೆಬೀಳದೆ—ನೋಡಿ—ಅಲ್ಲಿ ಹೋಗುತ್ತಿರುವನಲ್ಲ ! ಇಲ್ಲಿ ರಾಜನಿಲ್ಲ ವೆಂದು ತಿಳಿದು, ಅಲ್ಲಿಗೆ ಹೋಗುವಂತಿದೆ ಇವನ ರಥಗಮನ ರೀತಿ ! ಕೋಪಾಟೋಪ ದಿಂದ ದುರ್ಯೋಧನನನ್ನು ಹಿಡಿಯಲು ಪೋಗುವ ಅರ್ಜುನನನ್ನು ಅಲಕ್ಷ್ಯ ಮಾಡ

ಬೇಡಿ ! ನಮ್ಮ ಸೇನೆಗೂ, ರಾಜರಾಜನ ಸೇನೆಗೂ ಮಧ್ಯದಲ್ಲಿ ನಿಂತನೆಂದರೆ ತೀರಿತು ನಮ್ಮ ಕೆಲಸ ! ದುರ್ಯೋಧನನು ಏಕಾಕಿಯಾಗಿ ಸಿಕ್ಕನೆಂದರೆ ಒಳಿತಲ್ಲ. ಮಹಾದೇವ ನೊಡನೆ ಕಾದುಬಂದ ಸುರೇಂದ್ರನಂದನನಿಗೆ ನಮ್ಮ ರಾಜನು ಸಾಟಿಯೇ? ಸರಿಯೇ? ನಾವೆಲ್ಲರೂ ಕೂಡಿ ಅವನನ್ನು ಕಾಪಾಡಲು ಹೋಗೋಣ! ಬೇಗ ನಡೆಯಿರಿ! ದುರ್ಯೋಧನನೇ ಸವ್ಯಸಾಚಿಗೆ ಸೋತು ಸೆರೆಸಿಕ್ಕರೆ, ಇನ್ನು ಗೋಗಣವೇಕೆ? ನಮ್ಮ ಜೀವನವನ್ನೆ ಪಣವಿಟ್ಟು ಹೊಡೆದಾಡುವ ಸಮಯವಿದು' ಎಂದು, ಸೈನಿಕರನ್ನು ಹುರಿದುಂಬಿಸಿ, ತ್ವರೆಯಿಂದ ನಡೆದನು. ಸೇನಾಪತಿಗಳೂ ರಥಗಜತುರಗಾದಿ ಸೈನ್ಯ ವನ್ನು ನಡೆಸಿಕೊಂಡು, ದುರ್ಯೋಧನನ ಸಹಾಯಕ್ಕಾಗಿ ಧಾವಿಸಿದರು.

ಅರ್ಜುನನು ಗೋವರ್ಗವನ್ನು ಸೇರಿ, ಎರಡು ಸೇನಾಭಾಗಗಳ ಮಧ್ಯವಾಗಿ ನಿಂತು ಬರುವ ಸೈನ್ಯವನ್ನು ಬಾಣವರ್ಷದಿಂದ ತಡೆದು ನಿಲ್ಲಿಸಿದನು. ತೇರನ್ನು ಪೂರ್ವ ಮುಖವಾಗಿ ಹೋಗುತ್ತಿದ್ದ ಪಶುಗಣಕ್ಕೆ ಸಮ್ಮುಖವಾಗುವಂತೆ ತಿರುಗಿಸಿ, ಕೈ ಎತ್ತಿ 'ನಿಲ್ಲಿರಿ ! ನಿಲ್ಲಿರಿ !' ಎಂದು ಪಶುಪಾಲಕರಿಗೆ ಧೈರ್ಯವನ್ನಿತ್ತನು. ಅವನ ಗಾಂಡೀವ ಮೇಘದಿಂದ ಬರುವ ಬಾಣವರ್ಷದಿಂದ ದಿಕ್ಕುತೋಚದಂತಾಗಿ ಸೇನೆ ಎಲ್ಲವೂ ನಿಂತಲ್ಲಿ ನಿಂತಿತು. ಕತ್ತಲು ಕವಿದಂತಾಗಿ ಭಟರ ಹೃದಯದಲ್ಲಿ ಭಯವು ಹೊಕ್ಕಿತು. ಕಪಿಧ್ವಜದ ಭೂತಗರ್ಜನದಿಂದಲು, ದೇವದತ್ತಶಂಖ ಭಯಂಕರಾರಾವದಿಂದಲು, ಗಾಂಡೀವ ಧನುಷ್ಟಂಕಾರದಿಂದಲು ಎದೆ ಒಡೆದು ನಿಂತ ಕುರುವೀರರು ನಿಂತು ಕಾದಲಾರದೆ, ಓಡಿ ಹೋಗಲಾರದೆ ನಿಶ್ಚೇಷ್ಟರಾಗಿದ್ದರು. ಅರ್ಜುನನು ಗೋಗಣವನ್ನು ಹಿಂದಿರುಗಿಸಲು, ತನ್ನ ಕೈಯಲ್ಲಿ ಬಿಳಿಬಟ್ಟೆಯನ್ನೆತ್ತಿ ಬೀಸಿದನು. ರಥನೇಮಿನಿನದ, ಕಪಿಹುಂಕಾರ ಭೂತಗರ್ಜಾ, ಧನುಷ್ಟಂಕಾರ, ಭಟ ಕೋಲಾಹಲಗಳೊಂದಾಗಿ ಪ್ರಳಯಭಯಂಕರ ವಾದಾಗ, ಗೋಗಣವು ಬೆದರಿ ಚೆದರಿತು. ಅರ್ಜುನನು ವಿರಾಟನ ಗೋಪಾಲಕರನ್ನು ಕರೆದು, ಚೆದರುವ ಪಶುಗಳನ್ನು ಮತ್ಸ್ಯಪುರಿಯ ಕಡೆಗೆ ತಿರುಗಿಸುವಂತೆ ಆಜ್ಞಾಪಿಸಿ ದನು. ಕೆಲವು ಗೋವುಗಳನ್ನವರು ಕೈಬೀಸಿ, ಹೊಡೆದೋಡಿಸಿದರು. ತತ್‌ಕ್ಷಣವೇ ಕುಪ್ಪಳಿಸಿ ಹಾರುತ್ತಾ, ಆಕಳುಗಳೆಲ್ಲವೂ, ಅಡ್ಡಬಂದ ಕುರುವೀರರನ್ನು ಕೆಡವಿ, ತಿವಿದು, ಅಂಭಾರವವನ್ನು ಮಾಡುತ್ತಾ, ವಿರಾಟಪುರಿಯ ಕಡೆ ತಿರುಗಿ ಓಡತೊಡಗಿ ದವು. ಗೋಪಾಲಕರು ಅವನ್ನೊಟ್ಟುಗೂಡಿಸಿ, ಕರೆದುಕೊಂಡು ವಿರಾಟನಗರವನ್ನು ಸೇರಹೋದರು.

ಕೌರವಸೈನ್ಯವು ಮತ್ತೆ ಗೋಗಣವನ್ನು ಮುಟ್ಟಿ ಹಿಡಿಯದಂತೆ, ಅರ್ಜುನನು ಗೋಗಣದ ಹಿಂಬದಿಗೆ ನಿಂತು, ಬರುವ ಕುರುವೀರರನ್ನು ಯಮಸದನಕ್ಕಟ್ಟಿದನು. ಸೈನಿಕರೆಷ್ಟು ಪ್ರಯತ್ನಿಸಿದರೂ ಗೋಗಣವು ಅವರ ಕೈಗೆ ಸಿಗದೆ ವೇಗದಿಂದೋಡಿ, ಮತ್ಸ್ಯಪುರಿಯನ್ನು ಸೇರಿದವು.

## ವೀರಪರಿಚಯ—ಕರ್ಣ ಕೃಪರ ಪರಾಜಯ

ವೈಶಂಪಾಯನನು ಜನಮೇಜಯನಿಗೆ ಪೇಳಿದನು.–ಅರ್ಜುನನ ವಿಕ್ರಮವನ್ನು ಕಣ್ಣಾರಕಂಡು, ಅವನು ದುರ್ಯೋಧನನನ್ನು ಮುತ್ತಿ ಪೀಡಿಸುವನೆಂದು ಹೆದರಿ, ಮೂರು ಸಾವಿರ ರಥಿಕರಿಂದ ಕೂಡಿ, ಗಾಂಗೇಯ ದ್ರೋಣ ಕರ್ಣರು, ಅರ್ಜುನನ ಮಾರ್ಗವನ್ನು ತಡೆಗಟ್ಟಿ, ಮಧ್ಯೆ ನಿಂತರು. ದುರ್ಯೋಧನನು ಗೋಗಣವೆಲ್ಲ ಕಳೆದು ಹೋದುದಕ್ಕೆ ಚಿಂತಿಸಿ, ಮೇಲೇರಿಬರುವ ಪಾರ್ಥನನ್ನು ಕಂಡು, ಅನುಜರಿಂದ ಕೂಡಿ, ಹಿಂಬದಿಯಿಂದ ಅವನನ್ನು ಕವಿದನು. ಪರಿಕ್ರಮಿಸಿ ಬರುವ ಕುರುಸೈನ್ಯದ ವಿಜೃಂಭಣ ವನ್ನು ನೋಡಿ, ನಸುನಕ್ಕು, ಅರ್ಜುನನು ವಿರಾಟಸುತನಿಗಿಂತೆಂದನು—

'ವತ್ಸ! ಇವರಿಂದ ನನಗೆ ಕೆಲಸವಿಲ್ಲ, ನಿನ್ನ ಶ್ವೇತಾಶ್ವಗಳನ್ನು ಕುರುಸಿಂಹನಿರು ವಲ್ಲಿಗೆ ವೇಗವಾಗಿ ನಡೆಸು! ಭದ್ರಗಜದಿಂದ ಹೋರಾಡುವ ಮೃಗೇಂದ್ರನಂತೆ ಎರಗಿ, ದುಷ್ಟಾತ್ಮನಾದ ದುರ್ಯೋಧನನನ್ನು ಮೊದಲು ಸೋಲಿಸುವೆನು. ನನ್ನಿಂದ ಯುದ್ಧ ಮಾಡಬೇಕೆಂದು ಸದಾ ಕೋರುವ ಅವನ ದಾಸ ಕರ್ಣನಿಗೂ ನನ್ನ ಬಾಣಾಗ್ನಿಯ ಸೆಕೆಯನ್ನು ತಾಗಿಸುವೆನು. ಕರ್ಣನು ಸೋತನೆಂದರೆ, ದುರ್ಯೋಧನನು ಸಿಕ್ಕನೆಂದೇ ತಿಳಿ! ಅಲ್ಲಿ ನೋಡು ! ದ್ರೋಣನು ಮಧ್ಯದಲ್ಲಿರುವನು. ಕೃಪಾಶ್ವತ್ಥಾಮರು ನನಗಾಗಿ ಕಾದಿರುವರು. ಅವರನ್ನು ಬಿಟ್ಟು ನಡೆ ಕರ್ಣನಲ್ಲಿಗೆ !'

ಉತ್ತರನು ತನ್ನ ರಥವನ್ನು ಮಹಾವೇಗದಿಂದ ಕರ್ಣನ ಕಡೆ ಹೊಡೆದು, ಅನೇಕ ರಥಿಕರನ್ನು ಕೆಡಹಿ, ಭಟರನ್ನು ನುಗ್ಗಾಡಿದನು. ಕರ್ಣನನ್ನು ಮುತ್ತಲು ಹವಣಿಸುವ ಅರ್ಜುನನನ್ನು ತಡೆಯಲೆಣಿಸಿ, ಶತ್ರುಂತಪ ಸಂಗ್ರಾಮಜಿಜ್ಞಯರು ಹುಲಿಗಳಂತೆ ಗರ್ಜಿಸುತ್ತಾ ಬಂದರು. ಅವರ ರಥಗಳನ್ನು ಬಾಣಾಗ್ನಿಯಿಂದ ಸುಟ್ಟು ಅರ್ಜುನನವರನ್ನು ಹಿಂದಿರುಗಿಸಿದನು. ಆಗ ವಿಕರ್ಣನು ಭಯಂಕರ ವಿಪಾಟವರ್ಷವನ್ನು ಸುರಿಸುತ್ತಾ ಭೀಮಾನುಜನನ್ನು ತಡೆದು, ಕಾದಿದನು. ಅರ್ಜುನನು ಕಾಂಚನ ಚಿತ್ರ ವಾದ ವಿಕರ್ಣನ ಧನುವನ್ನು ಬಾಣದಿಂದ ಮುರಿದು, ಅವನ ಧ್ವಜವನ್ನು ಎರಡು ಬಾಣಗಳಿಂದ ಮುರಿದನು. ವಿಕರ್ಣನು ಹೆದರಿ ಓಡಿಹೋದನು.

ಶತ್ರುಗಣ ಹಿಂಸಕನು, ಅಮಾನುಷ ವಿಕ್ರಮನು ಆದ ಅರ್ಜುನನ ನಿರ್ವಕ್ರ ಪರಾಕ್ರಮವನ್ನು ಸಹಿಸದೆ, ಶತ್ರುಂತಪನೆಂಬ ಕೌರವನು ಬಾಣವರ್ಷದಲ್ಲಿ ಅರ್ಜುನ ರಥವನ್ನು ಮುಚ್ಚಿ, ಆರ್ಭಟಿಸಿದನು. ಅರ್ಜುನನು ಸಲೆರೇಗಿ ಐದು ಬಾಣಗಳಿಂದ ಅವನನ್ನು ಪೀಡಿಸಿ, ಹತ್ತು ಬಾಣಗಳಿಂದ ಹೊಡೆದು ಅವನ ಸೂತನನ್ನು ಸಂಹರಿಸಿ ದನು. ಶತ್ರುಂತಪನು ಅರ್ಜುನಬಾಣಪೀಡಿತನಾಗಿ, ಬಿರುಗಾಳಿಗೆ ಬೀಳುವ ಗಿಡದಂತೆ, ನೆಲದಿ ಬಿದ್ದು ಮೃತನಾದನು. ನರನಿಂದ ನೊಂದ ನರಪತಿಗಳು ಪ್ರೇತಪತಿಯನ್ನು ಕಾಣ ಹೊರಟರು. ಪ್ರಭಂಜನನಿಂದ ಪ್ರಕಂಪಿತವಾಗುವ ಮಹಾವನದಂತೆ, ತೂಗಾಡಿ, ಬಿದ್ದು, ಸತ್ತ ರಥಿಕ ಸಾದಿಭಟರು ನೆಲಕ್ಕುರುಳಿದರು. ದಿವ್ಯ ಕಾಷ್ಣಾಯಸ ಕವಚ

ವನ್ನು ಧರಿಸಿ, ಗಾಂಡೀವಧನುರ್ಧರನು ರಣರಂಗದಲ್ಲಿ, ದಿಕ್ಕು ವಿದಿಕ್ಕುಗಳಲ್ಲಿ ನಾಲಗೆ ಚಾಚಿ ಉರಿಯುವ ಕಾಡುಗಿಚ್ಚಿನಂತೆ, ಸುವರ್ಣಪುಂಖಬಾಣಗಳನ್ನು ಸರ್ವತ್ರ ವ್ಯಾಪಿಸುವಂತೆ ಪ್ರಯೋಗಿಸಿ, ದುಸ್ಸಹ ದುರ್ನಿರೀಕ್ಷ್ಯನಾದನು. ಅವನ ನಿಶಿತ ಬಾಣ ಗಳಿಗೆ ಕರ್ಣಾನುಜನಾದ ಸಂಗ್ರಾಮಜಿತನ ಕೆಂಪು ಕುದುರೆಗಳು ತಮ್ಮ ಪ್ರಾಣ ವನ್ನರ್ಪಿಸಿದವು. ವಿರಥನಾಗಿ ಕೆಳಗಿಳಿದು ಕಾದುವ ಸಂಗ್ರಾಮಜಿತನ ಶಿರವನ್ನು ಒಂದು ಬಾಣದಿಂದ ಕೆಡಹಿ, ಅರ್ಜುನನು ಕರ್ಣನನ್ನು ಸಮೀಪಿಸಿದನು. ತಮ್ಮನ ಸಾವನ್ನು ಕಂಡು, ಹಲ್ಲುಕಡಿದು ಭದ್ರಗಜದ ಮೇಲೆ ಹಾರಲು ಬರುವ ಹುಲಿಯಂತೆ ಭಯಂಕರನಾದ ಕರ್ಣನು ಹನ್ನೆರಡು ಬಾಣಗಳಿಂದ ಪಾರ್ಥನನ್ನೂ, ಒಂದು ಬಾಣದಿಂದ ಉತ್ತರನನ್ನೂ, ನಾಲ್ಕು ಬಾಣಗಳಿಂದ ಕುದುರೆಗಳನ್ನೂ ಹೊಡೆದನು. ಅರ್ಜುನನು ಅವನ ಬಾಣಗಳನ್ನು ಲಕ್ಷಿಸದೆ, ಘೋರಶರವೃಷ್ಟಿಯಿಂದ ಕರ್ಣನ ರಥವೇ ಕಾಣಿಸದಂತೆ ಮಾಡಿ, ಮತ್ತೆ ಭೀಷ್ಮ ದ್ರೋಣ ದುರ್ಯೋಧನಾದಿಗಳ ರಥ ವಾಹನ ಗಳು ಮರೆಯಾಗುವಷ್ಟು ಬಾಣಗಳಿಂದ ಮುಚ್ಚಿ ವಿಕ್ರಮಿಸಿದನು. ಕರ್ಣನು ಅರ್ಜುನ ಬಾಣಗಳನ್ನು ಕಡಿದು ಬಿಸುಟ ಮೇಘಮಂಡಲನಿರ್ಗತನಾಗುವ ಮಾರ್ತಾಂಡನಂತೆ ಬೆಳಗಿದನು. ಅದನ್ನು ಕಂಡು ಕುರುಸೈನಿಕರು ಕರತಾಳ ಧ್ವನಿಗಳಿಂದಲು, ಶಂಖಭೇರಿ ನಾದಗಳಿಂದಲು, ಕರ್ಣನನ್ನು ಪ್ರಶಂಸಿದರು. ಅರ್ಜುನನು ಗಾಂಡೀವಗುಣಟಂಕಾರ ವನ್ನು ಮಾಡಿ, ಮೇಲಿರುವ ಭೂತಗಳ ಕಲಕಲನಾದದಿಂದ ದ್ವಿಗುಣಭಯಂಕರನಾಗಿ, ಬಾಣವರ್ಷದಿಂದ ಕರ್ಣನ ರಥ ಸಾರಥಿ ತುರಗಗಳನ್ನು ಮುಣುಗಿಸಿ, ಭೀಷ್ಮ ದ್ರೋಣರ ಕಡೆ, ಸಾಭಿಪ್ರಾಯವಾಗಿ ನಿರೀಕ್ಷಿಸಿದನು.

ಇಂತು ಪರಸ್ಪರ ಕಡಿದಾಡುವ ಪಾಂಡವ-ರಾಧೇಯರ ಧನುರ್ಯುದ್ಧದಿಂದ ಜ್ಯಾನಿರ್ಘೋಷದೊಂದಿಗೆ ಬಾಣವರ್ಷವು ಆಕಾಶದಲ್ಲಿ ತುಂಬಿ ನಿಂತಿತು. ಎರಡು ರಥಗಳಲ್ಲಿ ಚಂದ್ರಸೂರ್ಯರು ಕೂತು ಕಿರಣ ಜಾಲವನ್ನು ಸೂರ್ಸಿ ಸುರಿಸುವರೆಂಬಂತೆ ಪಾರ್ಥ-ಕರ್ಣರು ಬಾಣಯುದ್ಧವನ್ನು ಮಾಡುತ್ತಿದ್ದರು. ಕರ್ಣನು ನಾಲ್ಕು ಬಾಣ ಗಳಿಂದ ಅರ್ಜುನನ ಕುದುರೆಗಳನ್ನು ನೋಯಿಸಿ, ಮೂರು ಬಾಣಗಳಿಂದ ಉತ್ತರ ನನ್ನೂ, ಮೂರರಿಂದ ಧ್ವಜವನ್ನೂ ಹೊಡೆದನು! ಅರ್ಜುನನ ಚತುರ ವಿಕ್ರಮ ಲೀಲೆಯಿಂದಾಗಿ ಕರ್ಣಬಾಣಗಳು ರಥಸಾರಥಿ ತುರಗಗಳನ್ನು ಸೇರುವ ಮೊದಲೇ ಖಂಡಿತಗಳಾಗಿ ಉರುಳುತ್ತಿದ್ದವು. ಇಂತು ತನ್ನನ್ನೂ, ಅಶ್ವಗಳನ್ನೂ ರಕ್ಷಿಸುವ ಅರ್ಜುನನ ದಿವ್ಯ ಪರಾಕ್ರಮವನ್ನು ಕಂಡು ಉತ್ತರನು ಆಶ್ಚರ್ಯ ಸಂತೋಷ ಭರಿತ ನಾಗಿ, ಬಾಲ್ಯದಿ ತಾನು ಕಲಿತ ರಥಚೋದಕ ವಿದ್ಯಾಪಾಟವವನ್ನು ತೋರಿಸಿ, ನಿರಪಾಯವಾಗಿ ರಥವನ್ನು ನಡೆಸುತ್ತಿದ್ದನು. ಕರ್ಣನ ವಿಕ್ರಮದಿಂದ ಸಿಡಿದೆದ್ದ ಪಾರ್ಥನು ಮಲಗಿದಾಗ ಒದೆಯಲ್ಪಟ್ಟ ಸಿಂಹದಂತೆ ಕೆರಳಿ, ಗಾಂಡೀವವನ್ನು ಪಿಡಿದು ಸವ್ಯಸಾಚಿಯಾಗಿ—ಸೂರ್ಯಪುತ್ರನ ರಥವನ್ನು ಸೂರ್ಯಕಿರಣಗಳಂತೆ ನಿರಂತರ ವಾದ ಬಾಣಗಳಿಂದ ಮುಚ್ಚಿದನು. ಆನೆಯ ಸೊಂಡಿಲಪೆಟ್ಟನ್ನು ತಿಂದ ಸಿಂಹದಂತೆ

ವಿಜೃಂಭಿಸಿ ಅರ್ಜುನನು ಆಕರ್ಣಾಂತವಾಗಿ ಧನುವನ್ನು ಸೆಳೆದು ಬಿಟ್ಟ ಬಾಣಜಾಲ ದಿಂದ ಸೂತಪುತ್ರನ ಗಾತ್ರವನ್ನು—ಲಲಾಟ, ವಕ್ಷೋಬಾಹೂರುಗಳಲ್ಲಿ—ಹೊಡೆದು, ಅವನಿಗೆ ಉಸಿರಾಡುವ ಅವಕಾಶವನ್ನೀಯದೆ, ಸಿಡಿಲಿನಂತಹ ನಾರಾಚಗಳಿಂದ ಮತ್ತೆ ಹೊಡೆದನು. ಕರ್ಣನು ಬಾಣಪೀಡಿತನಾಗಿ ಸಂಗ್ರಾಮರಂಗವನ್ನು ಬಿಟ್ಟೋಡಿದನು.

ದುರ್ಯೋಧನನು ಕರ್ಣಪರಾಜಯದ ಸೇಡಿನಿಂದ ಭಯಂಕರನಾಗಿ, ತನ್ನ ಸೇನೆಯನ್ನು ಕೂಡಿ, ಅರ್ಜುನನನ್ನು ಮುತ್ತಿದನು. ಕುರುಸೇನೆಯ ಬಾಣತರಂಗ ಗಳನ್ನು ವೇಲೆಯಂತೆ ತಡೆದು, ಪಾರ್ಥನು ಅವರನ್ನೆದುರಿಸಿದನು. ಪಾರ್ಥನ ಶರಜಾಲ ಗಳಲ್ಲಿ ನೋಡಲಲ್ಲಿ ನೆರೆದು, ಕೌರವವೀರರ ಶರೀರ ರಥಸಾರಥಿ ತುರಗಗಳನ್ನು ಎರಡು ಅಂಗುಳವಾದರೂ ಅವಕಾಶವಿರದಂತೆ ಮುಚ್ಚಿದವು. ಪಾರ್ಥನ ದಿವ್ಯಾಸ್ತ್ರಪ್ರಯೋಗವು ಉತ್ತರನ ಸಾರಥ್ಯಕೌಶಲದಿಂದ ಮೆರೆದೆದ್ದು ಶತ್ರುಭಯಂಕರವಾಯಿತು. ಪ್ರಳಯ ಕಾಲಾಗ್ನಿಯಂತೆ ಭಟಭಯವಾದ ಬಾಣವರ್ಷವನ್ನು ಸುರಿಸುವ ಗಾಂಡೀವಧನುವಿನ ಜ್ಯಾನಾದವು ಕ್ಷಣವಿರಾಮವಿಲ್ಲದೆ ಮೊರಹುತ್ತಿತ್ತು. ಜ್ವಲತ್ಪಾವಕನಂತೆ ಉರಿಯುವ ಪಾರ್ಥನನ್ನು ಕಣ್ಣೆತ್ತಿ ನೋಡಲಾರದೆ, ಕೌರವವೀರರು ದಿಗ್ಭ್ರಾಂತರಾಗಿ ನಿಂತರು. ಅಶೋಕಪುಷ್ಪಗಳು ಹರಡಿದಂತೆ ರಣರಂಗವೆಲ್ಲವೂ ಕ್ಷಣದಲ್ಲಿ ರಕ್ತಸಿಕ್ತವಾಯಿತು. ಧ್ವಜಗಳುದುರಿದವು. ಛತ್ರಗಳು ಮುರಿದುಬಿದ್ದವು; ಭಟರು ಸತ್ತುಬಿದ್ದರು. ರಥದ ನೊಗೆಯು ಕಡಿಯಲ್ಪಟ್ಟು ಕುದುರೆಗಳು ನೊಗೆಯನ್ನುಹೊತ್ತು ಓಡಿದಾಗ, ರಥಗಳು ಸುಮ್ಮನೆ ನಿಂತವು. ಕಿವಿ, ಬಗಲು, ಬಾಯಿಗಳಲ್ಲಿ ಬಾಣಪಾತವಾಗಲು ಭದ್ರಗಜಗಳು ಘೀಂಕರಿಸಿ, ಬೆಟ್ಟಗಳಂತೆ ಕೆಳಗುರುಳಿಬಿದ್ದವು. ಮೃತಭಟರು ಅಸಂಖ್ಯಾತರಾಗಿ ನೆಲಕ್ಕೆ ಉರುಳಲು ರಣರಂಗವು ರಕ್ತಮೇಘಾವೃತಗಗನದಂತೆ ಬೀಭತ್ಸವಾಯಿತು.

ಪ್ರಳಯಕಾಲದಲ್ಲಿ ಸಂಕರ್ಷಣಮುಖೋತ್ಥ ವಹ್ನಿಜ್ವಾಲೆಯು ಪ್ರಪಂಚವನ್ನೆಲ್ಲ ಸುಡುವಂತೆ, ರಿಪುಗಳನ್ನು ಸಂಹರಿಸಿ ಕೆಡಹುವ ಪಾರ್ಥನ ಬಾಣವಹ್ನಿಯನ್ನು ಭೀಷ್ಮದ್ರೋಣಾದಿ ಮಹಾವೀರರೂ ನಿವಾರಿಸಲಾಗದೆ ನಿರ್ವಿಣ್ಣರಾದರು. ಕಪಿಧ್ವಜ ದಲ್ಲಿ ಬಂದುನಿಂತ ಮರುದ್ವಲ್ಲಭನ ಮಹಾಘೋಷದೊಂದಿಗೆ ಕೇಳಿಬರುವ ಪಿಶಾಚ ನಾದವೂ, ದೇವದತ್ತದ ಮಹಾಧ್ವಾನವೂ ಸೇರಿ, ಕೌರವರು ಕಿವಿಗಡಚಿಕ್ಕುವಂತಾಗಲು, ಭೀತರಾಗಿ ಓಡತೊಡಗಿದರು. ಅರ್ಜುನನು ಆನೆಗಳಡ್ಡವಾಗಿ ಬಿದ್ದಿರಲು ಹಿಂದಿರುಗಿ ಸುತ್ತಿಕೊಂಡು ಹೋಗುವಾಗ, ಅವನು ಹೆದರಿದನೆಂದು ಭ್ರಮಿಸಿ ಎದುರ್ಗೊಂಡ ರಥಿಕರು, ಮತ್ತೆ ಬಂದು, ಅವರು ಹಿಂದಿನಿಂದ ಮುತ್ತಿದಾಗ ಭಯಭ್ರಾಂತರಾಗಿ ಪಲಾಯನ ಪರಾಯಣರಾದರು. ಕೆಲವರು ಅವನನ್ನು ಮುತ್ತಲು ಹೆದರಿ, ಓಡಲು ಆನೆಗಳಡ್ಡವಾಗಿರಲು, ಬೇರೆ ಮಾರ್ಗವಿಲ್ಲದೆ, ಅವನ ಬಾಣಗಳು ತೋರಿದ ಯಮ ಪುರಕ್ಕೆಂದೇ ತೆರಳಿದರು. ರಕ್ತವನ್ನು ಕುಡಿವ ಆಶೆಯಿಂದ ಅರ್ಜುನನ ಬಾಣಗಳು ಸೂರ್ಯಕಿರಣಗಳಂತೆ ಎಲ್ಲ ಕಡೆಯೂ ಹಾರಾಡಿದವು. ಅವನ ಒಂದು ಬಾಣ ವಾದರೂ ವ್ಯರ್ಥವಾಗದೆ ಪರಪ್ರಾಣಾನಿಲವನ್ನು ಹೀರುವ ಭುಜಗರಾಜಿಯಂತೆ

ತೋರಿತು. ಅವನ ರಥವು ಶತ್ರುಲಕ್ಷ್ಯವಾಗದಷ್ಟು ಮಂಡಲಾಕಾರವಾಗಿ ಸುತ್ತುತ್ತಿರಲು, ಸಾವಿರಹೆಡೆಯ ಶೇಷನು ಸಾಗರದಲ್ಲೀಜದಂತೆ ಕಾಣುತ್ತಿತ್ತು. ಅವನ ರಥದ ಹಿಂದೆ ಮುತ್ತಲು ಬರದಂತೆ ರಥ ಗಜ ತುರಗಗಳು ಭಗ್ನವಾಗಿ ಮಾರ್ಗವನ್ನು ಮುಚ್ಚುತ್ತಿದ್ದವು. ಪಾರ್ಥಪಕ್ಷಪಾತಿಯಾದ ದೇವೇಂದ್ರನು ಆಕಾಶದಿ ನಿಂತು ಸಿಡಿಲ ಮಳೆಯನ್ನು ಕರೆಯುವನೆಂಬಂತೆ, ಅರ್ಜುನನ ಬಾಣಗಳು ಹಾರಿಬಂದು ಭಟರ ಮೇಲೆರಗಿ, ಕೌರವಬಲವನ್ನು ನಾಶಪಡಿಸಿದವು. ಪ್ರಳಯರುದ್ರನರ್ತನ ಶಾಲೆಯಂತೆ ರಣರಂಗವು ಭಯಂಕರವಾಯಿತು. ಟಂಕಾರವೀಣೆಗೆ ಶಂಖತಾಳಗಳು ಶ್ರುತಿಗೂಡಿದವು; ಧ್ವಜಪತಾಕೆಗಳು ತೋರಣಗಳಂತೆ ಹಾರಾಡಿದವು; ಭೇರಿಭಾಂಕಾರಗಳು ಮರ್ದಲವಾದವು! ಭೂತರವಗಳು ಹಿಮ್ಮೇಳವಾದವು: ರುದ್ರಪ್ರಿಯಭಕ್ತನಾದ ಪಾರ್ಥನ ರಣತಾಂಡವಕ್ಕೆ ಶತ್ರುನಿರ್ಮುಕ್ತ ಬಾಣವೃಷ್ಟಿಯು ಪೂಮಳೆಯಾಯಿತು. ಆಗ ನಡೆದ ಪಾರ್ಥನ ಯುದ್ಧವು ಪಾರ್ಥಯುದ್ಧದಂತೇ ಇತ್ತು.

ಅರ್ಜುನನು ಭತ್ತದ ತೆನೆಗಳನ್ನು ರೈತರಂತೆ—ಶತ್ರುಭಟಶಿರಗಳನ್ನು ಕಡಿದು ಕೆಡಹುತ್ತಾ ಸಾಗಿದಾಗ, ಧರಣಿಯು ರಕ್ತಾಂಬರಧಾರಿಣಿಯಂತಾದಳು. ವಾಯು ಧೂತಗಳಾದ ರಕ್ತಬಿಂದುಗಳಿಂದ ಗಗನಮಣಿಯ ಕಿರಣಗಳು ಅರುಣವರ್ಣವಾಗಲು ಅಕಾಲ ಸಂಧ್ಯೆಯಂತೆ ಕಾಣಿಸಿತು. ಅರ್ಜುನನು ದ್ರೋಣನನ್ನು ಎಪ್ಪತ್ತುಮೂರು ನಾರಾಚಗಳಿಂದಲು, ದುಸ್ಸಹನನ್ನು ಹತ್ತುಬಾಣಗಳಿಂದಲು, ಅಶ್ವತ್ಥಾಮನನ್ನು ಎಂಟು ಶರಗಳಿಂದಲು ದುಶ್ಶಾಸನನನ್ನು ಹನ್ನೆರಡು ಗಾರ್ಧಪತ್ರಗಳಿಂದಲು, ಕೃಪನನ್ನು ಮೂರು ಕಾಂಡಗಳಿಂದಲು, ಭೀಷ್ಮನನ್ನು ಅರವತ್ತು ಬಾಣಗಳಿಂದಲು, ಕರ್ಣನನ್ನೊಂದರಿಂದಲು, ದುರ್ಯೋಧನನನ್ನು ನೂರರಿಂದಲು, ಹೊಡೆದು, ವಿಜೃಂಭಿಸಿದನು. ಅವನ ಶರವಿದ್ಧನಾಗಿ ಕುರುಸೇನೆಯು ಹೆದರಿ, ದಿಕ್ಕಾಪಾಲಾಗಿ ಚೆದರಿತು.

ಆಗ ಉತ್ತರನು, 'ಜಿಷ್ಣೋ! ರಥವನ್ನು ಯಾವ ವೀರನಿಗಭಿಮುಖನಾಗಿ ನಡೆಸಲಿ?' ಎಂದು ಕೇಳಿದನು.

ಅರ್ಜುನನು ವಿವಿಧ ಕುರುವೀರಲಕ್ಷಣಗಳನ್ನು ವಿವರಿಸುತ್ತಿಂತೆಂದನು—'ವ್ಯಾಘ್ರಚರ್ಮಾವೃತವಾದ ನೀಲಾಶ್ವಚತುಷ್ಟಯವನ್ನು ಕಟ್ಟಿ, ಕಮಂಡಲುಚಿಹ್ನಿತ ಧ್ವಜವನ್ನೆತ್ತಿ ದ್ರೋಣಾಚಾರ್ಯನು ರಥಾರೂಢನಾಗಿ ನನಗಾಗಿ ಕಾದಿರುವನು. ಆ ಮಹಾನುಭಾವನು ಸರ್ವಶಸ್ತ್ರಧಾರಿಗಳಿಗೆ ಶ್ರೇಷ್ಠನು. ನನಗೆ ಪರಮಪೂಜ್ಯನಾದ ಆಚಾರ್ಯನು; ಸುಪ್ರಸನ್ನನಾದ ಆಚಾರ್ಯನಿಗೆ ಪ್ರದಕ್ಷಿಣವಾಗಿ ರಥವನ್ನು ನಡೆಸು! ಒಂದುವೇಳೆ ಆಚಾರ್ಯನು ತಾನಾಗಿ ನನ್ನನ್ನು ತಾಕಿದರೆ, ಆಮೇಲೆ ಆತನ ಕೂಡ ಯುದ್ಧಮಾಡುವೆನು. ಆತನ ಕೋಪಕ್ಕೆ ನಾನು ಹೆದರುವೆನು.

ಅಲ್ಲಿ ಆತನ ಪಕ್ಕದಲ್ಲಿ ಧನುರ್ಧ್ವಜದ ರಥದಲ್ಲಿ ಆಚಾರ್ಯಪುತ್ರನಿರುವನು. ಆ ಮಹಾರಥನು ನನಗೆ ಸದಾ ಮಾನ್ಯನಾಗಿರುವನು. ಸರ್ವಶಸ್ತ್ರಧಾರಿಗಳಿಗೂ ಅಂತೆಯೇ ಮಾನ್ಯನು. ಅವನಿಗೂ ನನ್ನ ನಮಸ್ಕಾರವಿರಲಿ!

ಬಂಗಾರದ ಕವಚವನ್ನಿಟ್ಟು, ಸೇನಾಗ್ರದಲ್ಲಿ ನಾಗಕೇತನನಾದ ದುರ್ಯೋಧನನು ನಿಂತಿರುವನು. ಆ ಮಹಾರಾಜನಿಗಭಿಮುಖವಾಗಿ ನಮ್ಮ ತೇರನ್ನು ನಡೆಸು! ಶೀಘ್ರಾಸ್ತ್ರನು, ದ್ರೋಣ ಶಿಷ್ಯನು ಆದ ಅವನ ಯುದ್ಧ ದುರ್ಮದವನ್ನಿಂದು ಇಳಿಸುವೆನು.

ಹಸ್ತಿಪ್ರಶಸ್ತ ಪತಾಕನಾಗಿ ಅಲ್ಲಿರುವವನು ವೀರಮಾನಿಯಾದ ಕರ್ಣನು. ಈ ರಾಧೇಯನು ಸದಾ ನನ್ನಲ್ಲಿ ಸ್ಪರ್ಧಿಸುತ್ತಿರುವನು. ಅವನನ್ನು ನೀನು ತಿಳಿದಿರುವೆ!

ಪಂಚತಾರೆಗಳ ಧ್ವಜ ಉಳ್ಳ ರಥದಲ್ಲಿರುವವನು ಮಹಾಬಲಶಾಲಿಯಾದ ನಮ್ಮ ಪಿತಾಮಹನು. ಆ ಮಹಾರಥಶ್ರೇಷ್ಠನೇ ಸರ್ವಸೇನಾಪತಿ ಎಂದು ಶ್ವೇತಛತ್ರವು ಸೂಚಿಸುತ್ತಿದೆ ನೋಡು! ಅವನ ಮಹಾಧನುವು, ಕನಕಶಿರಸ್ತ್ರಾಣ, ಹೇಮಚಂದ್ರ ಕವಚಗಳನ್ನು ನೋಡಿ, ನನಗೂ ಹೆದರಿಕೆಯಾಗುತ್ತಿದೆ. ಮೇಘಮಂಡಲದ ಮುಂದೆ ಬೆಳಗುವ ಸೂರ್ಯನಂತೆ ವಿರಾಜಿಸುವ ನಮ್ಮ ಪಿತಾಮಹನು ನಿತ್ಯರಾಜಶ್ರೀ ವಿಲಸಿತನು. ದೈವವಿಲಾಸದಿಂದ ಈತನು ದುರ್ಯೋಧನವಶನಾಗಿರುವನು. ಈ ಮಹಾವೀರನ ಗೊಡವೆ ಈಗ ನಮಗೆ ಬೇಡ!'

ಇಂತು ವರ್ಣಿಸುವ ಪಾರ್ಥನ ಮಾತಿನಂತೆ ಕೃಪಾಚಾರ್ಯನನ್ನು ಬಳಸಿ, ದುರ್ಯೋಧನನನ್ನು ಸೇರಲು ಹವಣಿಸುವ ಉತ್ತರನನ್ನು ತಡೆದು ಕೌರವ ಸೈನ್ಯವು ರಥಗಜತುರಗಾರೂಢವಾಗಿ ಬಂದು ಮಹಾಘೋರವಾಗಿ ಕಾದಾಡಿತು.

ಇಂತಹ ಮಾನವಲೋಕ ಸಂಗ್ರಾಮವನ್ನು ನೋಡಲೆಣಿಸಿ, ಇಂದ್ರಾದಿ ಬೃಂದಾರಕರು ವಿಮಾನಾರೂಢರಾಗಿ, ವಿಹಾಯಸದಲ್ಲಿ ವೀಕ್ಷಿಸುತ್ತ ನೆರೆದರು. ಕೌರವ ಅರ್ಜುನರ ಯುದ್ಧವು ಘೋರವಾಯಿತು. ದಿವ್ಯಮಾಲ್ಯಧಾರಿಗಳಾಗಿ ನೆರೆದಿದ್ದ ಬ್ರಹ್ಮ ರುದ್ರ ಶಕ್ರ ವಹ್ನಿ ವರುಣಾದಿ ದೇವತೆಗಳನ್ನು ಬಳಸಿ ಬಂದ ಮಂದಮಾರುತವು ಶೈತ್ಯ ಮಾಂದ್ಯ ಸೌಗಂಧ್ಯಯುಕ್ತವಾಗಿ ಕುರುವೀರರ ರಣಾಯಾಸವನ್ನು ನಿವಾರಿಸುತ್ತಿತ್ತು. ರತ್ನಾಭರಣಭೂಷಿತರಾದ ದೇವಗಂಧರ್ವರಿಂದ ಚಿತ್ರರಂಜಿತ ವಿತಾನದಂತೆ ಆಕಾಶವು ಶೋಭಿಸಿತು.

ಉತ್ತರನು ಕನಕ ಕವಚ ರಕ್ಷಿತವಾದ ಅಶ್ವಚತುಷ್ಟಯವನ್ನು ಮಹಾವೇಗದಿ ನಡೆಸಿ, ಕುರುಸೇನೆಯನ್ನು ಮುಟ್ಟಿದನು. ದಕ್ಷಿಣವಾಮಪಾರ್ಶ್ವಗಳಲ್ಲಿ ತಿರುಗಿ ಅನಿರೀಕ್ಷಿತವಾಗಿ ಮುನ್ನುಗ್ಗುವ ಪಾರ್ಥರಥವನ್ನು ಗುರಿಯಿಡಲಾಗದೆ ಕುರುವೀರರು ದಿಗ್ಭ್ರಾಂತರಾದರು. ಅರ್ಜುನನ ದಿವ್ಯಶಂಖಧ್ವಾನವು ಸಿಡಿಲಿನಂತೆ ಎರಗಿ ದಿಕ್ಕುಗಳಲ್ಲಿ ಪ್ರತಿಧ್ವನಿಸಿದಾಗ, ವೀರಭಟರನೇಕರು ಮೂರ್ಛಾಕ್ರಾಂತರಾದರು. ಅರ್ಜುನನ ಆರ್ಭಟವನ್ನು ಸಹಿಸದೆ ಕೃಪಾಚಾರ್ಯನು ಅವನೊಡನೆ ಕಾದುವೆನೆಂದು ಶಂಖಧ್ವಾನದಿಂದ ತಿಳಿಸಿ, ಧನುಷ್ಟಂಕಾರವನ್ನು ಮಾಡಿದನು. ಕ್ಷಣಾರ್ಧದಲ್ಲಿ ಅರ್ಜುನನು ಕೃಪನ ರಥವನ್ನು ಪ್ರದಕ್ಷಿಣವಾಗಿಸಿ, ಮುಂದೆ ನಿಂತನು. ಸಿಂಹದ್ವಯದಂತೆ ಧನುರ್ಯುದ್ಧದಲ್ಲಿ ಹೋರಾಡುವ ಕೃಪಾರ್ಜುನರ ಕಾಳಗವು ಕಡುಭಯಂಕರವಾಯಿತು.

ಕನಕವೇದೀವಿರಾಜಿತ ಧ್ವಜನಾದ ಕೃಪನು ಹತ್ತು ಬಾಣಗಳಿಂದ ಹೊಡೆಯಲು ಅರ್ಜುನನವನ್ನು ಮಧ್ಯದಲ್ಲಿ ಕಡಿದು ಕೆಡಹಿ, ತೀವ್ರನಾರಾಚಗಳನ್ನನೇಕವನ್ನು ಕೃಪನಿಗೆ ಗುರಿಯಿಟ್ಟುಬಿಟ್ಟನು. ಆಚಾರ್ಯನವನ್ನು ಖಂಡಿಸಿದನು. ಗುರು-ಶಿಷ್ಯರ ಬಾಣಪರಂಪರೆ ಅವಿರತವಾಗಿ ಸೂರ್ಯನನ್ನು ಮುಚ್ಚುವ ಮೇಘದಂತೆ ನಿಬಿಡವಾಗಲು ಕತ್ತಲು ಕವಿಯಿತು.

ಕೃಪನಾಗ ಹತ್ತು ಬಾಣಗಳಿಂದ ಅರ್ಜುನನನ್ನು ಪೀಡಿಸಿ, ಸಿಂಹಗರ್ಜನೆ ಮಾಡಿದನು. ಅರ್ಜುನನು ಸಿಂಹದಂತೆ ಕೆರಳಿ, ಗಾಂಡೀವಮುಕ್ತವಾದ ನಾಲ್ಕು ಬಾಣಗಳಿಂದ ಕೃಪನ ಕುದುರೆಗಳನ್ನು ಹೊಡೆದನು. ಅವು ಪೆಟ್ಟು ತಿಂದು ಮುಗ್ಗರಿಸಿದವು. ಕೃಪನೂ ರಥನೀಡದಿಂದ ಜಾರಿದನು. ಸ್ಥಾನಚ್ಯುತನಾದುದರಿಂದ ಪ್ರತಿ-ಕ್ರಿಯಾ ಶಕ್ತನಾಗಿದ್ದ ಗೌತಮನನ್ನು ಹೊಡೆಯದೆ, ಪಾರ್ಥನು ತನ್ನ ಗುರುಭಕ್ತಿಯನ್ನೂ ಮಹತ್ವವನ್ನೂ ತೋರಿ, ಮತ್ತೆ ಸ್ಥಾನಾಪನ್ನನಾದ ಗೌತಮನನ್ನು ನೋಡಿ, ಅವನು ಪ್ರಯೋಗಿಸಿದ ಹತ್ತು ಬಾಣಗಳನ್ನು ಖಂಡಿಸಿ, ಧನುಸ್ಸನ್ನು ಭಲ್ಲದಿಂದ ಮುರಿದನು. ಮತ್ತೆ ಪಾರ್ಥನು ನಿಶಿತಬಾಣಗಳನ್ನು ಬಿಟ್ಟು ಕೃಪನ ಕವಚವನ್ನು ಭೇದಿಸಿದನಾದರೂ ಆ ಮಹಾನುಭಾವನಿಗೆ ಗಾಯವನ್ನುಂಟುಮಾಡಲಿಲ್ಲ. ಕವಚವು ಜಾರಿಬೀಳುವಾಗ ಗೌತಮನು ಪರೆಬಿಚ್ಚಿ ಹೊರಬರುವ ಉರಗರಾಜನಂತೆ ಕಂಗೊಳಿಸಿದನು. ಕೋಪದಂತೆಯೇ ಮೆಚ್ಚುಗೆಯೂ ಆಚಾರ್ಯನ ಕಂಗಳಲ್ಲಿ ತೋರುತ್ತಿತ್ತು. ಮತ್ತೊಂದು ಧನುಸ್ಸನ್ನು ತೆಗೆದು ಹೆದೆಯನ್ನೇರಿಸುವ ಕೃಪನನ್ನು ನೋಡಿ, ಅರ್ಜುನನು, ಆ ಧನುಸ್ಸನ್ನೂ ನಿಶಾತಭಲ್ಲದಿಂದ ಮುರಿದನು. ಎಷ್ಟು ಧನುಸ್ಸುಗಳನ್ನು ಪಿಡಿದರೂ, ಅವನ್ನೆಲ್ಲ ತುಂಡಾಗಿಸುವ ಪಾರ್ಥನನ್ನು ಕಂಡು, ಕೆಂಡವಾಗಿ ಕೃಪನು ಅಶನಿಯಂತೆ ಉರಿಯುವ ಶಕ್ತಿಯನ್ನು ಅವನ ಮೇಲೆ ಪ್ರಯೋಗಿಸಿದನು. ಶಕ್ತಿಯನ್ನೂ ಮಧ್ಯಾಕಾಶದಲ್ಲೇ ತುಂಡರಿಸಿ ಕೆಡಹಲು, ನೋಡಿ ಕೃಪನು ಬೇರೊಂದು ಧನುವನ್ನು ಸಜ್ಜಾಗಿಸಿ ಹತ್ತು ಬಾಣಗಳಿಂದ ಅರ್ಜುನನನ್ನು ಹೊಡೆದನು. ಪಾರ್ಥನು ಕುಪಿತನಾಗಿ ಹದಿಮೂರು ಬಾಣಗಳನ್ನು ಬಿಟ್ಟನು. ಒಂದು ಬಾಣವು ನೊಗೆಯನ್ನು ಮುರಿದುಹಾಕಿತು. ನಾಲ್ಕು ಬಾಣಗಳು ನಾಲ್ಕು ಕುದುರೆಗಳನ್ನು ಕೊಂದವು. ಆರನೆಯ ಬಾಣದಿಂದ ಸಾರಥಿ ನೆಲಕ್ಕುರುಳಿದನು. ಮೂರು ಬಾಣಗಳಿಂದ ತ್ರಿವೇಣುದಂಡಗಳು ಮುರಿದುಬಿದ್ದವು. ಎರಡು ಬಾಣಗಳು ಇರುಸನ್ನು ಮುರಿದವು. ಹನ್ನೆರಡನೆಯ ಬಾಣದಿಂದ ಧ್ವಜವು ಉರುಳಿತು. ಹದಿಮೂರನೆಯ ಬಾಣವು ಕೃಪನ ಎದೆಗೆ ತಾಕಿತು. ಕೃಪನು ಗದಾಪಾಣಿಯಾಗಿ ರಥದಿಂದ ಕೆಳಗೆ ಧುಮುಕಿ, ಗದೆಯನ್ನು ತಿರುಗಿಸಿ ಅರ್ಜುನನಿಗೆ ಗುರಿಯಿಟ್ಟು ಹೊಡೆದನು. ಅರ್ಜುನನು ಕೃಪನ ಗದೆಯನ್ನು ಬಾಣಗಳಿಂದ ಹೊಡೆಯಲು, ಆದು ಹಿಂದಿರುಗಿ ಬಿತ್ತು. ಕೃಪನ ರಕ್ಷಣೆಗಾಗಿ ಧಾವಿಸಿಬಂದ ಕೌರವಯೋಧರ ಬಾಣವರ್ಷವು ಮುತ್ತಲು ನೋಡಿ, ಉತ್ತರನು ರಥವನ್ನು ಯಮುಕಮಂಡಲಾಕಾರವಾಗಿ ತಿರುಗಿಸಿ, ಅವರಿಗೆ ಗುರಿಸಿಗದಂತೆ

ಮಾಡಿದನು. ಅವರು ವಿರಥನಾಗಿದ್ದ ಕೃಪನನ್ನು ಅಲ್ಲಿಂದ ಬೇರೆಡೆಗೆ ಕರೆದುಕೊಂಡು ಹೋದರು.

ಆಗ ದ್ರೋಣಾಚಾರ್ಯನು ಶೋಣಾಶ್ವಗಳನ್ನು ಕಟ್ಟಿದ ಕನಕರಥದಲ್ಲಿ ಕೂತು ಧನುಷ್ಟಂಕಾರವನ್ನು ಮಾಡುತ್ತಾ ಬಂದನು. ಅರ್ಜುನನು 'ಉತ್ತರಾ! ಸ್ನಿಗ್ಧಶೋಣ ವರ್ಣಗಳಾದ ದಿವ್ಯಾಶ್ವಗಳನ್ನು ಕಟ್ಟಿದ ರಥದಲ್ಲಿ ಕಮಂಡಲುಧ್ವಜವನ್ನೆತ್ತಿ ಕೂತಿರುವ ನಮ್ಮ ಆಚಾರ್ಯನು ಬರುತ್ತಿರುವನು ನೋಡು! ದೀರ್ಘಬಾಹುದಂಡನು, ತೇಜಃ ಪ್ರಚಂಡನು, ಬಲರೂಪಸಮನ್ವಿತನು, ಸರ್ವಲೋಕವಿಖ್ಯಾತನು ಆದ ಭಾರದ್ವಾಜ ನಿಗೆ ತ್ರಿಲೋಕಗಳಲ್ಲಿ ಸಮವೀರರಿಲ್ಲ. ಬುದ್ಧಿಯಿಂದ ಶುಕ್ರನೋ, ನಯದಿಂದ ಬೃಹಸ್ಪತಿಯೋ ಎಂಬಂತೆ ವಿರಾಜಿಸುವ ನಮ್ಮ ಗುರುವರನು ವೇದವೇದಾಂಗ ಚತುರನು. ದಿವ್ಯಾಸ್ತ್ರಗಳ ಪ್ರಯೋಗೋಪಸಂಹಾರಕಲೆ ಆತನಿಗೆ ಕರತಲಾಮಲಕವು. ಧನುರ್ವೇದವು ಆ ಮಹಾತ್ಮನಲ್ಲಿ ನಿತ್ಯ ಪ್ರತಿಷ್ಠಿತವಾಗಿದೆ. ಕ್ಷಮೆ, ದಮ, ಸತ್ಯ, ಆರ್ಜವ ಮೊದಲಾದ ಮಹಾಗುಣಗಳಿಗೆ ಖಣಿಯಾದ ಆಚಾರ್ಯನಿಂದ ಯುದ್ಧ ಮಾಡುವುದೆಂದರೆ ಅದೊಂದು ಹಬ್ಬ. ಹೊಡೆ ಅಲ್ಲಿಗೆ ರಥವನ್ನು!' ಎಂದಾಜ್ಞಾಪಿಸಿದನು.

ಮದಗಜದಂತೆ ಸಮೀಪಿಸುವ ಪಾರ್ಥನನ್ನು ಮತ್ತೊಂದು ಮದಗಜದಂತೆ ಎದುರಿಸಿ ನಿಂತನು. ಶೋಣಾಶ್ವಗಳಿಂದ ಶ್ವೇತಾಶ್ವಗಳು ಮಿಲಿತವಾದಾಗ ಆಶ್ಚರ್ಯ ಪಡುವ ಸೈನಿಕರು, ಅರ್ಜುನನ ಶಂಖಧ್ವಾನದಿಂದ ದಿಗಿಲ್ಪಟ್ಟು, ನಿಶ್ಚೇಷ್ಟರಾದರು. ವಿದ್ಯಾಚತುರರಾದ ಗುರು-ಶಿಷ್ಯರ ಸಂಗ್ರಾಮವನ್ನು ನೋಡಬಯಸಿ, ಎಲ್ಲ ವೀರರು ಸುತ್ತುಗಟ್ಟಿ ನಿಂತರು. ಕೆಳಗಿಳಿದು ಬಂದು ವಂದಿಸಲು ಆಚಾರ್ಯನು ಅವನನ್ನು ಬಿಗಿದಪ್ಪಿ ಹರಸಿದನು. ಅದನ್ನು ಕಂಡು ದ್ರೋಣಾಚಾರ್ಯನು ಅರ್ಜುನಪಕ್ಷವನ್ನು ವಹಿಸಿ, ನಮ್ಮನ್ನೇ ಕೊಲ್ಲುವನೆಂಬ ಭ್ರಮೆಹೊಂದಿ, ಕುರುಸೈನಿಕರು ಅಳುಕುತ್ತಿದ್ದರು.

ಪುನಃ ರಥಾರೂಢರಾದ ಆಚಾರ್ಯ-ಶಿಷ್ಯರಿಗೆ ಯುದ್ಧವು ಪ್ರಾರಂಭವಾಯಿತು. ಆಗ ಅರ್ಜುನನು 'ಆಚಾರ್ಯ! ವನವಾಸದಲ್ಲಿ ಹನ್ನೆರಡು ವರ್ಷವಿದ್ದು, ಅಜ್ಞಾತ ವಾಸವನ್ನೂ ಮುಗಿಸಿ ಬಂದಿರುವ ನಮ್ಮ ಕಷ್ಟವನ್ನು ತಿಳಿದು, ಕೋಪಿಸಬೇಡ! ನಿನ್ನನ್ನು ಸಮರಾಂಗಣದಲ್ಲಿ ಗೆಲ್ಲುವ ವೀರರಿಲ್ಲ. ಮಹಾನುಭಾವನಾದ ನಿನ್ನ ಮೇಲೆ ಮೊದಲು ಕೈಯೆತ್ತಿ ಹೊಡೆಯಲಾರೆನು. ನೀನು ಮೊದಲು ಪ್ರಹರಿಸು! ಆಮೇಲೆ ನನ್ನ ವಿದ್ಯಾಪರೀಕ್ಷೆ!' ಎಂದನು. ದ್ರೋಣನು ಸಾವಿರ ಬಾಣಗಳಿಂದ ಅರ್ಜುನನ ರಥವನ್ನು ಮುಚ್ಚಿ, ಹಯಗಳನ್ನು ಗಾಯಗೊಳಿಸಿ, ಅರ್ಜುನನನ್ನೂ ನೋಯಿಸಿದನು. ಅರ್ಜುನನೂ ಬಿಡದೆ ಸಾವಿರಾರು ಬಾಣಗಳಿಂದ ಆಚಾರ್ಯನ ರಥವನ್ನು ಮುಚ್ಚಿ ಅಶ್ವ ಸಾರಥಿಗಳನ್ನು ನೋಯಿಸಿದನು. ಸಮವಿಕ್ರಮರಾಗಿ ಬಡಿದಾಡುವ ದಿವ್ಯಾಸ್ತ್ರವಿದರ ಶರಜಾಲಪ್ರಸಾರವು ನೋಡುವ ರಾಜರ ಕಣ್ಣಿಗೆ ಯಾರದು ಯಾವುದು ಎಂಬುವ ವಿವೇಕವಾಗದಂತೆ ಮಾಡಿತು. ಅವರು 'ಸಾಧು! ಅರ್ಜುನ!

ಸಾಧು! ಆಚಾರ್ಯ!' ಎಂದು ಮೆಚ್ಚುವ ನುಡಿಗಳು, ಗಗನಚಾರಿ ದೇವತೆಗಳ ಪ್ರಶಂಸಾವಾಕ್ಯಗಳಿಂದ ಬೆರೆತು ವ್ಯಾಪಿಸಿದವು.

'ದ್ರೋಣನಿಂದ ಕಾದುವುದೆಂದರೆ ಅರ್ಜುನನಿಗಲ್ಲದೆ ಮತ್ತಿತರರಿಗೆ ಶಕ್ಯವೆ? ಅಬ್ಬ! ಏನು ಕ್ರೂರವೀ ಕ್ಷತ್ರಿಯಧರ್ಮ! ಗುರು-ಶಿಷ್ಯರು ಬಡಿದಾಡುವಂತೆ ಮಾಡುತ್ತಿದೆಯಲ್ಲ!' ಎಂದು ಸಂಗ್ರಾಮರಂಗದ ತುದಿಯಲ್ಲಿ ನಿಂತು ನೋಡುವ ಜನರು ಬೆರಗಾದರು. ದ್ರೋಣಾರ್ಜುನರ ಬಾಣವರ್ಷವು ಪರಸ್ಪರ ದಿಗಭಿಮುಖ ವಾಗಿ ವ್ಯಾಪಿಸುವಾಗ, ಧನುಷ್ಟಂಕಾರ, ಬಾಣಫೂತ್ಕಾರಗಳು ಕೇಳಿಬರುತ್ತಿದ್ದವಾಗಲಿ, ಆರ್ತನಾದಗಳಿಲ್ಲ. ಮೇಘವು ಮಳೆಯಿಂದ ಬೆಟ್ಟವನ್ನಂತೆ ದ್ರೋಣನು ಬಾಣವರ್ಷ ದಿಂದ ಅರ್ಜುನ ರಥವನ್ನು ಮುಚ್ಚಿ, ನೇತ್ರಗೋಚರವಾಗದಂತೆ ಮಾಡಿದನು. ಅರ್ಜುನನೂ ಗಾಂಡಿವ ನಿರ್ಮುಕ್ತ ಚಂಡ ನಾರಾಚಗಳಿಂದ, ಆಚಾರ್ಯನ ಬಾಣ ಗಳನ್ನು ಕಡಿದು ಕೆಡಹಿ, ಒಂದೇ ಸಲ ಸರ್ವದಿಕ್ಕುಗಳಲ್ಲಿ ದಿವ್ಯ ಬಾಣಗಳನ್ನು ತುಂಬಿದಾಗ, ನೀಹಾರಪಟಲದಲ್ಲಡಗಿದ ಸೂರ್ಯನಂತೆ ದ್ರೋಣನು ಮರೆಯಾದನು. ಕನಕಬಾಣಾವೃತನಾದ ದ್ರೋಣನು ದಾವಜ್ವಾಲಪರೀತಪರ್ವತದಂತೆ ಬೆಳಗಿದನು. ಅಗ್ನಿಚಕ್ರದಂತೆ ಉರಿದೇಳುವ ದಿವ್ಯಬಾಣದಿಂದ ಆತನು ಅರ್ಜುನನ ಬಾಣಗಳನ್ನು ಹೊಡೆದು ಕೆಡಹಿದನು. ಬಾಣಗಳು ತುಂಡಾಗಿ ಬೀಳುವಾಗ ಬಿದುರಿನ ಪೊಳೆ ಉರಿದು ಬೀಳುವಂತೆ ಚಟಚಟಾತ್ಕಾರವೆದ್ದಿತು. ದ್ರೋಣನ ದಿವ್ಯಧನುರ್ಮುಕ್ತವಾಗಿ ಹೊರ ಬರುವ ನಾರಾಚಗಳು ಪುಂಖಾನುಪುಂಖವಾಗಿ ಎಡೆಬಿಡದೆ, ಆಕಾಶದಲ್ಲಿ ಸರಸರ ಬರು ವಾಗ ಒಂದೇ ದೀರ್ಘ ಬಾಣವೇನೋ ಎಂಬಂತೆ ಕಂಗೊಳಿಸಿದವು. ಅವರೀರ್ವರ ಬಾಣಗಳು ಆಕಾಶದಲ್ಲಿ ಹರಡಿರುವಾಗ, ಸ್ವರ್ಣಪುಂಖಗಳು ಉರಿಯುವ ಕೊಳ್ಳಿಗಳಂತೆ ಕಂಡವು; ಬಾಣಗಳು ಪಕ್ಕಗಳನ್ನು ತೆರೆದು ಬರುವ ಹಂಸಪಕ್ಷಿಗಳಂತೆ ತೋರಿದವು.

ಮದಿಸಿ ಕಾದುವ ಭದ್ರಗಜಗಳಂತೆ ಘೂರ್ಣಿಸುವ ದ್ರೋಣಾರ್ಜುನರು ಹುರುಪಿ ನಿಂದ ಬಡಿದಾಡುವಾಗ ಕೂಡ ಪರಸ್ಪರ ಸಂಹಾರೇಚ್ಛೆಯಿಂದಲ್ಲದೆ ಕ್ರೀಡೆಗಾಗಿ ಹೋರಾಡುತ್ತಿದ್ದರು. ದಿವ್ಯಾಸ್ತ್ರವರ್ಷಣದಿಂದ ರಣವು ತುಮುಲವಾಯಿತು. ಅಸ್ತ್ರ ಗಳಿಗೆ ಪ್ರತ್ಯಸ್ತ್ರವನ್ನು ಪ್ರಯೋಗಿಸುವ ಚತುರತೆ ಪ್ರಶಂಸನೀಯವಾಯಿತು. ವೃತ್ರ-ವಾಸವರಂತೆ ಹೋರಾಡುತ್ತಾ, ಅವರು ಇಂದ್ರ, ವಾಯು, ಅಗ್ನಿ, ಯಮ, ವರುಣಾದಿ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದರು. ಯಾವ ಶಸ್ತ್ರವೂ ಪರ್ವತದಲ್ಲಿ ಬಿದ್ದ ವಜ್ರದಂತೆ ಭೀಷಣಘೋಷಣಯುಕ್ತವಾಗಿತ್ತಾಗಲಿ, ಉಭಯ ವೀರರ ಕಾಯದಲ್ಲಿ ಗಾಯಗೊಳಿಸ ಲಾರದಾಗಿ, ಮಧ್ಯೇಮಾರ್ಗದಲ್ಲಿ ಖಂಡಿತವಾಗಿ ಬೀಳುತ್ತಿತ್ತು. ಅರ್ಜುನನ ಬಾಣ ಗಳಿಗೆ ಸಿಕ್ಕುಬಿದ್ದ ಗಜತುರಗಭಟರ ಶರೀರಗಳು ರಕ್ತಸಿಕ್ತವಾಗಿ ಪುಷ್ಪಿತ ಕಿಂಶುಕಗಳಂತೆ ತೋರಿತು. ಕೇಯೂರಾಲಂಕೃತ ಬಾಹುಗಳಿಂದಲು, ಚಿತ್ರಿತ ರಥಭಾಗಗಳಿಂದಲು, ಸುವರ್ಣಕವಚಗಳಿಂದಲು, ಧ್ವಜಪತಾಕೆಗಳಿಂದಲು, ನಿಹತಯೋಧರಿಂದಲು ರಣ ರಂಗವು ಆಕ್ರಾಂತವಾಗಿ, ಅರ್ಜುನನ ಬೀಭತ್ಸನಾಮವನ್ನು ಸಾರ್ಥಕಗೊಳಿಸುತ್ತಿತ್ತು.

*

ಪ್ರಾಣವನ್ನೇ ಪಣವಿಟ್ಟು ಹೋರಾಡುವವರಂತೆ ಕಾದುವ ದ್ರೋಣಾರ್ಜುನರ ಯುದ್ಧದ್ಯೂತದಲ್ಲಿ ಯಾರು ಗೆಲ್ಲುವರೆಂದು ಹೇಳಲು ಬರುತ್ತಿದ್ದಿಲ್ಲ.

'ಆಹಾ! ಆಚಾರ್ಯನ ರಣಪಾಂಡಿತ್ಯವನ್ನೆಷ್ಟು ಪ್ರಶಂಸಿಸಿದರೂ ಸಾಲದು. ಅರ್ಜುನನಂತಹ ಮಹಾವೀರನೊಡನೆ, ದಿವ್ಯಾಸ್ತ್ರ ತತ್ವಜ್ಞನೊಡನೆ, ಸರ್ವ ದೈತ್ಯ ವಿಧ್ವಂಸಕನೊಡನೆ, ಮಹಾರಥನೊಡನೆ ಕಾದುವುದಿನ್ನೊಬ್ಬರಿಗೆ ಸಾಧ್ಯವೇ?' ಎಂದು ಅಂಬರದಿ ದೇವವೃಂದವು ಆಚಾರ್ಯನನ್ನು ಪೊಗಳುತ್ತಿರಲು, ದ್ರೋಣನು 'ಭೇಷ್! ಅರ್ಜುನ! ನಿನ್ನ ಲಾಘವ, ನಿನ್ನ ದೂರಪಾತನ ಸಾಮರ್ಥ್ಯ, ನಿನ್ನ ಅಸ್ತ್ರಶಿಕ್ಷೆ— ಎಲ್ಲವೂ ನನಗೆ ಮಹಾನಂದಜನಕವಾಗಿದೆ!' ಎಂದು ಶಿಷ್ಯನನ್ನು ಪ್ರಶಂಸಿಸಿದನು.

ಅರ್ಜುನನು ಬಿಟ್ಟ ಬಾಣ ಪರಂಪರೆಯು, ಶಲಭ ಪಂಕ್ತಿಯಂತೆ ಮುತ್ತಲು ನೋಡಿ ಕುರುವೀರರೂ ಮೆಚ್ಚಿ, 'ಸಾಧು! ಸಾಧು!' ಎಂದು ಕೂಗಿದರು. ಅರ್ಜುನ-ಬಾಣಗಳ ಮಧ್ಯದಲ್ಲಿ ಗಾಳಿಯೂ ತೂರುವಂತಿದ್ದಿಲ್ಲ. ಯಾವಾಗ ಬಾಣವನ್ನು ತೆಗೆವನೋ, ಯಾವಾಗ ಜೋಡಿಸುವನೋ, ಯಾವಾಗ ಬಿಡುವನೋ ಎಂದು ತಿಳಿಯದೆ, ದಿಗ್ಭ್ರಾಂತರಾಗಿದ್ದ ಸೈನಿಕರು, ಕ್ಷಣದಲ್ಲಿ ಯಮರಾಜನನ್ನು ಸೇರುವಂತೆ, ಸವ್ಯ ಸಾಚಿಯು ಪ್ರಚಂಡ ರಣಪಾಂಡಿತ್ಯವನ್ನು ತೋರಿದನು. ಶೀಘ್ರ ಬಾಣವನ್ನು ಬಿಡುವ ದ್ರೋಣನನ್ನು ಶೀಘ್ರತರ ಬಾಣದಿಂದ ಹೊಡೆಯುವ ಅರ್ಜುನನ ಬಾಣ ವರ್ಷದಲ್ಲಿ ದ್ರೋಣರಥವು ಮುಚ್ಚಿಹೋಯಿತು. ದ್ರೋಣನು ಆಶ್ಚರ್ಯ ಸಂಭ್ರ ಮಾನ್ವಿತನಾಗಿರಲು ನೋಡಿ, ಇಂದ್ರಾದಿದೇವವೃಂದವು ಅರ್ಜುನನ ಅಸ್ತ್ರಶಸ್ತ್ರಲಾಘವ ವನ್ನು ಮೆಚ್ಚಿ ಮಾತಾಡಿಕೊಂಡರು.

ಅಶ್ವತ್ಥಾಮನು ಅರ್ಜುನನ ಚತುರ ಕರ್ಮವನ್ನು ಮೆಚ್ಚಿದರೂ, ದ್ರೋಣನಿಂದ ಕಾದುವುದಕ್ಕೆ, ಕುಪಿತನಾಗಿ, ಗುರು-ಶಿಷ್ಯರ ಮಧ್ಯೆ ನಿಂತು, ಸಾವಿರಾರು ಬಾಣ ಗಳಿಂದ, ಮಳೆಗರೆವ ಪರ್ಜನ್ಯನಂತೆ, ಅರ್ಜುನನನ್ನು ಮುಚ್ಚಿ ಸಿಂಹನಾದವನ್ನು ಮಾಡಿ ದನು. ಅರ್ಜುನನೂ ಆಚಾರ್ಯನಿಗೆ ಅಲ್ಲಿಂದ ತೆರಳಿಹೋಗುವ ಅವಕಾಶವನ್ನಿತ್ತು, ಗುರುಪುತ್ರನನ್ನೆದುರಿಸಿ ನಿಂತನು. ದ್ರೋಣನು ಅರ್ಜುನಾಸ್ತ್ರ ಪೀಡಿತನಾಗಿದ್ದು, ಅಲ್ಲಿಂದ ದೂರಕ್ಕೆ ಸಾಗಿದನು.

ದೇವಾಸುರ ಸಮರದಂತೆ ಭಯಂಕರವಾದ ಸಂಗ್ರಾಮದಲ್ಲಿ ತೊಳಲಿ ಅಶ್ವತ್ಥಾಮ ಧನಂಜಯರು ಬಿಟ್ಟ ಬಾಣಗಳ ಶಬ್ದ, ಛಟ ಛಟ ಎಂದುರಿಯುವ ಬಿದಿರಪೊಳೆಯ ಶಬ್ದದಂತೆ ಕರ್ಣ ಭಯಂಕರವಾಯಿತು. ಅರ್ಜುನನು ಅಶ್ವತ್ಥಾಮನ ಕುದುರೆಗಳನ್ನು ನೋಯಿಸಲು, ಅಶ್ವತ್ಥಾಮನು ವಿವರವನ್ನು ಕಂಡು, ಶೀಘ್ರವತ್ತರ ಬಾಣದಿಂದ ಅರ್ಜುನನ ಜ್ಯಾಲತೆಯನ್ನು ಕಡಿದನು ಅದ್ಭುತವಾದ ಗಾಂಡೀವಜ್ಯಾಖಂಡನವನ್ನು ಕಂಡು, 'ಭೇಷ್! ಎಂತಹ ಅಮಾನುಷ ಕರ್ಮ! ಸಾಧು ಗುರುಪುತ್ರ!' ಎಂದು ದೇವತೆಗಳು ಪೊಗಳಿದರು. ದ್ರೋಣ ಭೀಷ್ಮ ಕೃಪ ಕರ್ಣರೂ ಆ ಮಹಾವೀರನ ಚಾತುರ್ಯ ವೀರ್ಯ ಧೈರ್ಯ ಸಾಹಸಗಳನ್ನು ಮೆಚ್ಚಿದರು. ಅಶ್ವತ್ಥಾಮನು

ಮತ್ತೆ ಧನುಷ್ಟಂಕಾರವನ್ನು ಮಾಡಿ, ಒಂದು ದಿವ್ಯಬಾಣದಿಂದ ಕಿರೀಟಿಯ ವಕ್ಷವನ್ನು ಹೊಡೆದನು. ಅರ್ಜುನನು ನಕ್ಕು, ಹೆದರದೆ, ಶ್ರೀಕೃಷ್ಣಪಾದಾರವಿಂದವನ್ನು ನೆನೆದು, ಅರ್ಧಚಂದ್ರ ಬಾಣದಿಂದ ಹೊಡೆದು, ಗುರುಪುತ್ರನನ್ನು ಪೀಡಿಸಿದನು. ಪೃಥಿವೀಮಂಡಲದ ವೀರವರರಾದ ಅವರೀರ್ವರ ತುಮುಲಯುದ್ಧವು ಭಯಂಕರ ವಾಯಿತು. ಅದನ್ನು ನೋಡುವವರ ಮೈ ನವಿರೇಳುತ್ತಿತ್ತು. ವಿಸ್ಮಯ ಚಕಿತ ರಾಗಿ ನೋಡುವ ಕುರುವೀರರಿಗೆ ನಿರುತ್ಸಾಹವಾಗುವಂತೆ, ಅಶ್ವತ್ಥಾಮನ ತೂಣೀರವು ಬರಿದಾಗಿ ಅರ್ಜುನನ ತೂಣದ್ವಯವುಅಕ್ಷಯವಾದುದರಿಂದ ಬೆಳೆಯುತ್ತಹೋಯಿತು. ಅಂತೆಯೇ ಅರ್ಜುನನು ಪ್ರಬಲನೆನಿಸಲು, ಅಶ್ವತ್ಥಾಮನು ರಣರಂಗದಿಂದ ಸರಿದು ಹೋದನು. ದೂರದಲ್ಲಿದ್ದ ಕರ್ಣನನ್ನು ನೋಡಿ, ಅರ್ಜುನನವನಿಂದ ಕಾದಲು ಸಂಭ್ರಮಿಸಿದನು. ಕರ್ಣನು ಧನುಷ್ಟಂಕಾರದೊಡನೆ ಸಿಂಹನಾದವನ್ನು ಮಾಡುತ್ತಾ ಕೋಪದಿಂದ ಅರ್ಜುನನನ್ನು ಸಮೀಪಿಸಿದನು. ಅರ್ಜುನನು, ಬಾಣಗಳನ್ನು ಸೇವಕರಿಂದ ತೆಗೆಸಿ ತರಿಸುವ ಗುರುಪುತ್ರನೊಡನೆ ಕಾದುವ ಇಷ್ಟವಿಲ್ಲದೆ, ಕರ್ಣನ ರಥಕ್ಕೆ ಎದುರಾಗಿ ತನ್ನ ರಥವನ್ನು ಹೊಡೆಸಿದನು.

## ಕರ್ಣ ದುರ್ಯೋಧನಾದಿ ಪರಾಜಯ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ಅರ್ಜುನನು ಕರ್ಣನನ್ನು ನೋಡಿ, 'ಸಭಾಮಧ್ಯದಲ್ಲಿ ಅನೇಕಸಲ ನೀನು ನಿನಗೆ ಸಾಟಿವೀರರಿಲ್ಲವೆಂದು ಕೊಚ್ಚಿಕೊಳ್ಳುತ್ತಿದ್ದೆ! ಆ ವಾಕ್ಯಗಳ ಸತ್ಯಾಸತ್ಯತೆಗಳನ್ನು ತಿಳಿಯುವ ಕಾಲ ಬಂದಿದೆ. ಮಹಾಯುದ್ಧದಲ್ಲಿ ನನ್ನೊಡನೆ ಸ್ಥಿರನಾಗಿ ನಿಂತು ಕಾದಾಡು! ನನ್ನ ಪರೋಕ್ಷದಲ್ಲಿ ನುಡಿದ ಪರುಷವಚನಗಳಿಗೆ ತಕ್ಕಂತೆ ಸಕಲ ಕುರುಸೇನಾ ಮಧ್ಯದಲ್ಲಿ ನನ್ನೆದುರಿಗೆ ನಿಂತು ನಡೆ! ಹಿಂದೆ ಕುರುಕುಲಪಾಂಸನರ ಸಭೆಯಲ್ಲಿ ಪಾಂಚಾಲಿಯನ್ನು ಕ್ಲೇಶಪಡಿಸಿದ ದುಷ್ಕರ್ಮದ ಫಲವನ್ನೀಗ ಉಣ್ಣುವೆ! ಆಗಲೇ ನಿನ್ನನ್ನು ಸಂಹರಿಸದೆ ಬಿಟ್ಟೆನೆಂದರೆ ಕೈಲಾಗದೆ ಅಲ್ಲ; ಧರ್ಮಪಾಶ ವಿಬದ್ಧನಾಗಿದ್ದುದರಿಂದ. ಈಗ, ನಮ್ಮನ್ನು ಮಾಯಾದ್ಯೂತದಲ್ಲಿ ಸೋಲಿಸಿ ವನಕ್ಕಟ್ಟಿದ ಪಾಪದ ಫಲವನ್ನುಣ್ಣುವೆ! ಆ ಸೇಡನ್ನೀಗ ತೀರಿಸಿ ವಿಜಯನು ವಿಜಯಿಯಾಗುವನು. ನೋಡಲಿ ನಿನ್ನ ಸೋಲನ್ನು ದುರ್ಯೋಧನಾದಿ ದುಷ್ಪಾತ್ರರು!' ಎಂದನು.

ಕರ್ಣನು, 'ಪಾರ್ಥ! ಬರಿ ಬಾಯಮಾತಿನಿಂದ ಪೌರುಷವಂತನೆನಿಸಬೇಡ! ಕ್ರಿಯಾಶೀಲನಾಗು! ಕರ್ಣನನ್ನು ಗೆಲ್ಲುವುದೆಂದರೆ ಅಷ್ಟು ಸುಲಭವಲ್ಲ. ನೋಡುವೆ ನಿನ್ನ ಪರಾಕ್ರಮವನ್ನಿಂದು. ಧರ್ಮಪಾಶ ಬದ್ಧನಾಗಿ ಆಗ ಸುಮ್ಮನಿದ್ದೆ! ಈಗ ನನ್ನ ಬಾಣಪಾಶ ಬದ್ಧನಾಗಿ ಸುಮ್ಮನಾಗುವೆ! ವನದಲ್ಲಿ ಧರ್ಮಾರ್ಥ ಭೋಗ ದೂರನಾಗಿದ್ದು ಚರಿಸಿದೆ! ಈಗಲೂ ನಿನ್ನನ್ನು ಅರ್ಥಕಾಮದೂರನನ್ನಾಗಿಸಿ, ವಿಕ್ರಮಿಸುವೆನು. ಇಂದ್ರನೇ ಬಂದು ನಿನಗೆ ಸಹಾಯನಾಗಿ ನಿಂತರೂ, ವಿಕ್ರಮ

ವಿಲಸಿತನಾಗಿ ಹೆದರದೆ ನಿನ್ನೊಡನೆ ಕಾದುವೆನು. ಬಹುಕಾಲದಿಂದ ನನ್ನೊಡನೆ ಯುದ್ಧ ಮಾಡಲು ಹಾತೊರೆಯುತ್ತಿದ್ದ ನಿನ್ನ ಕೋರಿಕೆ ಸಫಲವಾಗಲಿ!' ಎಂದನು.

ಅರ್ಜುನನು, 'ಕರ್ಣ! ಆಗ ನನ್ನೆದುರಿಗೆ ನಿಂತು ಕಾದಲಾರದೆ ಓಡಿಹೋದೆ! ಅಂತೆಯೆ ಉಳಿದಿರುವೆ! ನಿನ್ನ ತಮ್ಮನು ನಿಂತು ಕಾದಿ, ವೀರಸ್ವರ್ಗವನ್ನು ಮುಟ್ಟಿದನು. ಅವನನ್ನು ನನ್ನ ಬಾಣಗಳಿಗೊಪ್ಪಿಸಿ, ಹೆದರಿ ಓಡಿಹೋದ ನೀನೀಗ ಇಷ್ಟು ಬಿರುಸಾಗಿ ನುಡಿಯುವುದನ್ನು ಕಂಡು ಆಶ್ಚರ್ಯವಾಗಿದೆ. ಆಗಲಿ!' ಎಂದು, ಅನೇಕ ಬಾಣಗಳನ್ನು ಪ್ರಯೋಗಿಸಿ, ಕರ್ಣಭಟರನ್ನನೇಕರನ್ನು ಕೊಂದನು. ಮಳೆಗರೆವ ಮೇಘವನ್ನು ಬೆಟ್ಟದಂತೆ, ಕರ್ಣನು ಪಾರ್ಥ ಬಾಣಗಳನ್ನು ತಡೆದು, ತಾನೂ ಬಹು ಭಲ್ಲಗಳನ್ನು ಬಿಟ್ಟು, ಅರ್ಜುನನ ಅಶ್ವಗಳನ್ನು ಪೀಡಿಸಿದನು. ಕರ್ಣನ ಬಾಣಗಳನ್ನು ಮಧ್ಯದಲ್ಲೇ ಕಡಿಯುತ್ತಾ, ಅರ್ಜುನನು ಸಾರಥಿಯನ್ನೂ, ಅಶ್ವಗಳನ್ನೂ ರಕ್ಷಿಸಿ, ಕರ್ಣನ ತೂಣೀರವನ್ನು ಕೆಳಗೆ ಬೀಳಿಸಿದನು. ಕರ್ಣನಾಗ ಉಪಾಸಂಗದಲ್ಲಿದ್ದ ಬಾಣಗಳನ್ನು ತೆಗೆದು, ಒಂದು ಬಾಣದಿಂದ ಅರ್ಜುನನನ್ನು ಮುಷ್ಟಿ ದೇಶದಲ್ಲಿ ಹೊಡೆದನು. ಪಾರ್ಥನು ಕರ್ಣನ ಧನುಸ್ಸನ್ನು ಮುರಿಯಲು, ಅವನು ಸಿಟ್ಟಾಗಿ ಶಕ್ತಿಯನ್ನು ಪ್ರಯೋಗಿಸಿದನು. ಅರ್ಜುನನು ಶಕ್ತಿಯನ್ನು ತುಂಡರಿಸಿ, ಕರ್ಣನ ಭಟರನ್ನನೇಕರನ್ನು ಯಮಸದನಕ್ಕೆ ಕಳಿಸಿದನು. ಅಲ್ಲಿಗೆ ಬಿಡದೆ ಅರ್ಜುನನು ತೀಕ್ಷ್ಣಶರಗಳಿಂದ ಕರ್ಣನ ಕುದುರೆಗಳನ್ನು ಹೊಡೆಯಲು, ಅವು ಬಿದ್ದು ಸತ್ತವು. ಇನ್ನೊಂದು ನಿಶಿತಶರವನ್ನು ಗುರಿಯಿಟ್ಟು ಕರ್ಣನ ವಕ್ಷಃಸ್ಥಲಕ್ಕೆ ಹೊಡೆದನು. ಅದು ಕರ್ಣನ ಕವಚವನ್ನು ಮುರಿದು ಎದೆಯನ್ನು ಗಾಯಗೊಳಿಸಿತು. ಮೂರ್ಛೆ ಬಂದಂತಾಗಿ ಕರ್ಣನು ರಥನೀಡದಲ್ಲೊರಗಿದ್ದು, ಮತ್ತೆ ಎಚ್ಚೆತ್ತು, ವೇದನಾಭರದಿಂದ ನೊಂದು, ಉದಙ್ಮುಖನಾಗಿ ಹೊರಟುಹೋದನು. ಅರ್ಜುನ ವಿರಾಟತನಯರ ಕೂಗು ಅವನ ಕಿವಿಯನ್ನು ಮುಟ್ಟದಾಯಿತು.

ಇಂತು ರಾಧೇಯನನ್ನೋಡಿಸಿ ಪಾರ್ಥನು ಉತ್ತರನಿಗಿಂತೆಂದನು—'ಹಿರಣ್ಮಯ ತಾಲಧ್ವಜವಿರುವೆಡೆ ನನ್ನ ರಥವನ್ನು ಹೊಡೆ! ಅಲ್ಲಿ ನಮ್ಮ ಪಿತಾಮಹನಿರುವನು. ದೇವಸದೃಶನಾದ ಆ ಮಹಾವೀರನಿಂದ ಯುದ್ಧವಾಡುವುದೊಂದು ಸಮಾರಂಭ! ಆ ಮಾತನ್ನು ಕೇಳಿ ಉತ್ತರನು ಬೇಸತ್ತು, 'ಮಹಾನುಭಾವ! ಇನ್ನು ರಥವನ್ನು ನಡೆಸುವುದೆನ್ನ ಕೈಲಾಗದು. ನಾನು ನಿಸ್ಸತ್ವನಾಗಿರುವೆನು. ಮೈಯೆಲ್ಲ ಬಾಣಜರ್ಝರಿತವಾಗಿದೆ. ರಥನಾಗತುರಗಗಳು ಬೆಟ್ಟಗಳಂತೆ ಬಿದ್ದಿರಲು, ಭಟರು ಚೀರುತ್ತಾ ಸಾಯುತ್ತಿರಲು, ನೋಡಿ ಜುಗುಪ್ಸೆ ಉಂಟಾಗಿದೆ. ಹತ್ತು ದಿಕ್ಕುಗಳಲ್ಲಿಯೂ ವ್ಯಾಪಿಸುವ ನಿನ್ನ ಬಾಣಗಳ ಪ್ರಭಾವವನ್ನು ಕಂಡೆನು. ಹತ್ತು ದಿಕ್ಕುಗಳಿಗೂ ಓಡುವ ಕುರುವೀರರನ್ನೂ ಕಂಡೆ. ವಸಾ ರುಧಿರ ಮೇದೋಮಾಂಸಗಳ ದುರ್ಗಂಧವು ದುಸ್ಸಹವಾಗಿದೆ. ಎಂದೂ ಇಂತಹ ಶೂರಸಮಾಗಮವನ್ನು ನಾನು ಕಂಡಿದ್ದಿಲ್ಲ. ನನ್ನ

ಮನವು ವಿಚಲಿತವಾಗುತ್ತಿದೆ. ನಿನ್ನನ್ನು ನೋಡಿ ಸ್ವಲ್ಪ ಧೈರ್ಯ ತಾಳುವೆನಾದರೂ ಶಂಖಧ್ವಾನ, ಗದಾಪಾತ, ಸಿಂಹನಾದ, ಗಜಬೃಂಹಿತ, ಗಾಂಡೀವ ಟಂಕಾರಗಳಿಂದ ನನ್ನ ಬುದ್ಧಿ ಅವಶವಾಗಿದೆ. ಕಣ್ಣು ಕತ್ತಲು ಕವಿದು ಬರುತ್ತಿದೆ. ಅಲಾತಚಕ್ರದಂತೆ ಬಾಣಗಳನ್ನು ಸುರಿಸುವ ನಿನ್ನ ಗಾಂಡೀವ, ವಿಕ್ರಮಿಸಿ ಹುಂಕರಿಸುವ ನಿನ್ನ ಸಿಂಹ ಲಾಲಿತ್ಯ, ಭಯಂಕರ ಭುಜದ್ವಯ ಸಂಪ್ರಯೋಗ—ಇವುಗಳನ್ನು ಕಂಡು ಮೂಢನಾಗಿ ದಿಕ್ಕು ತೋಚದಂತಾಗಿರುವೆನು. ಕಾಲಕೆಳಗೆ ಭೂಮಿಯು ಚಲಿಸುವಂತಿದೆ. ಕಡಿವಾಣಗಳು ಕೈಜಾರಿ ಬೀಳುತ್ತಿವೆ' ಎಂದು, ಯುದ್ಧವನ್ನು ನಿಲ್ಲಿಸಿ ಹೋಗುವುದೆಂದು ಸೂಚಿಸಿದನು.

ಅರ್ಜುನನು ಅವನಿಗೆ ಧೈರ್ಯವನ್ನು ತುಂಬುತ್ತಾ ಇಂತೆಂದನು—'ಭಯಪಡಬೇಡ! ರಾಜಕುಮಾರನಲ್ಲವೆ? ರಣರಂಗದಲ್ಲಿ ಕಾಣುವುದೆಂದರೆ ಇವೇ ಆಗಲಿ ಅನ್ಯವಲ್ಲ. ಭೀಭತ್ಸವಾಗದೆ ಯುದ್ಧಭೂಮಿಯು ಶಾಂತವಾಗಿರಲು ಯಜ್ಞವಾಟವೆ? ನಿನಗೆ ವಿಜಯವಾಗುವುದು. ಶತ್ರುನಿಗ್ರಹಕ್ಕಾಗಿ ಹುಟ್ಟಿದ ನೀನಿನ್ನು ಭಯಪಿಶಾಚಿಯನ್ನು ಸೇರಗೊಡಬೇಡ! ಧೈರ್ಯವಹಿಸಿ, ಹೊಡೆ ರಥವನ್ನು! ಭೀಷ್ಮನ ಸಮೀಪವಾಗಿ ನಡೆ! ಆತನ ಧನುವನ್ನೂ ಹೆದೆನಾರನ್ನೂ ತುಂಡರಿಸಿಬಿಡುವೆನು. ನೋಡು ನನ್ನ ತಾತನ ಅಸ್ತ್ರ ಪಾಂಡಿತ್ಯವನ್ನು! ಅವನ ಮೊಮ್ಮಗನೆನಿಸಿ ಮೆರೆಯುವ ನನ್ನ ಅಸ್ತ್ರಲಾಘವವನ್ನೂ ನೋಡು! ಸಿಡಿಲಿನೊಡನೆ ಬರುವ ಮಿಂಚಿನಂತೆ ಧನುಷ್ಟಂಕಾರದೊಡನೆ ವ್ಯಾಪಿಸುವ ಬಾಣಪರಂಪರೆಯನ್ನು ನೋಡುವೆ! ಎಲ್ಲಿಂದ ಬರುವನೋ, ಎಂತು ಮೇಲೆರಗುವನೋ ಎಂದು ಶತ್ರುಗಳು ಭಯಪಡುವಂತೆ, ಧನುರ್ಯುದ್ಧ ಚಾತುರ್ಯವನ್ನು ಪ್ರದರ್ಶಿಸುವೆನು. ಶೋಣಿತವೇ ನೀರಾಗಿ, ರಥಗಳಾವರ್ತಗಳಾಗಿ, ಆನೆಗಳು ನಕ್ರಗಳಾಗಿ ಹರಿವ ರಣರಂಗ ನದಿಯು ಪರಲೋಕ ಪ್ರವಾಹಿನಿ ಎನಿಸಿದೆ. ಸನ್ನತ ಪರ್ವಗಳಾದ ನಿಶಿತಶರಗಳಿಂದ ಕುರುವನವನ್ನು ಛೇದಿಸಿ, ಪಾಣಿ ಪಾದ ಶಿರಃ ಪೃಷ್ಠ ಬಾಹುಶಾಖೆಗಳನ್ನು ನೆಲಕ್ಕುರುಳಿಸುವೆನು. ಪಾವಕನು ವನದೊಳಂತೆ, ರಣರಂಗದಲ್ಲಿ ಶತಮಾರ್ಗನಾಗಿ ಮಾರ್ಗಣ ಜ್ವಾಲೆಗಳಿಂದ ವಿಹರಿಸಿ, ನಾನೊಬ್ಬನೇ ಸಕಲ ಕುರುಸೇನೆಯನ್ನೂ ಕೇಶವನ ದಯದಿಂದ ಗೆಲ್ಲುವೆನು. ನೋಡುತ್ತಿರು ನನ್ನ ಅಸ್ತ್ರಶಸ್ತ್ರ ವೈಶಾರದ್ಯವನ್ನು! ಇಂದ್ರವಚನದಿಂದ, ಪೌಲೋಮ, ಕಾಲಕೇಯ, ಕಾಲಖಂಜರನ್ನು ಗೆದ್ದ ನನ್ನ ವಿಕ್ರಮ ಖಡ್ಗವಿಂದು ಅಜ್ಞಾತ ಶಾಣೋಲ್ಲೀಢವಾಗಿ ಹದವಾಗಿದೆ. ಇಂದ್ರವರದಿಂದ ದೃಢಮುಷ್ಟಿಯನ್ನು, ಬ್ರಹ್ಮನಿಂದ ಹಸ್ತಲಾಘವವನ್ನು, ಪ್ರಜಾಪತಿಯಿಂದ ಚಿತ್ರಯುದ್ಧವನ್ನು ಪಡೆದು, ಹಿರಣ್ಯಪುರವಾಸಿಗಳಾದ ಅರವತ್ತು ಸಾವಿರ ದುರ್ಜಯನಾಮಕ ರಾಕ್ಷಸರನ್ನು ಸದೆಬಡಿದ ಚಂಡವಿಕ್ರಮವಿನ್ನೂ ಜಾಗ್ರತವಾಗಿದೆ. ಪ್ರಭಂಜನನಂತೆ ವಿಜೃಂಭಿಸಿ, ಕುರುವನವನ್ನು ಕೆಡಹಿ, ಧ್ವಜವೃಕ್ಷವು, ರಥಸಿಂಹವು, ಪದಾತಿ ತೃಣವು ಆದ ಆ ವನವನ್ನು ನನ್ನ ಅಸ್ತ್ರಜ್ವಾಲೆಯಿಂದ ಸುಡುವೆನು. ರುದ್ರವರುಣವಹ್ನಿವಾಯುಶಕ್ರಾಸ್ತ್ರ

ಗಳನ್ನು ಅವರಿಂದ ಪಡೆದುಬಂದುದಕ್ಕೆ ಸಾರ್ಥಕವಾಗುವಂತೆ ಧಾರ್ತರಾಷ್ಟ್ರಬಲವನ್ನೆಲ್ಲ ಏಕವೀರನಾಗಿ ಗೆದ್ದು ನಾಶವಮಾಡುವೆನು. ನಿನಗೇಕೆ ಭಯ? ನಡೆ!' ಎಂದನು.

ಇಂತು ಆಶ್ವಾಸಿತನಾಗಿ ಉತ್ತರನು ಧೈರ್ಯವಹಿಸಿ, ರಥವನ್ನು ಭೀಷ್ಮನಿಗಭಿಮುಖವಾಗಿ ಹೊಡೆದನು. ಅದನ್ನು ನೋಡಿ ಗಂಗಾಸುತನು ಅವನಿಗೆದುರಾಗಿ ನಿಂತು ಕಾದಲು ಪ್ರಾರಂಭಿಸಿದನು. ಅರ್ಜುನನು ಪಿತಾಮಹನ ಧ್ವಜವನ್ನು ಕಡಿದು ಕೆಡಹಲು ನೋಡಿ, ತಾತನಿಗೆ ಸಹಾಯಕರಾಗಿ ದುಶ್ಶಾಸನ ದುಸ್ಸಹ ವಿಕರ್ಣ ವಿವಿಂಶತಿಗಳೆಂಬ ನಾಲ್ವರು ಧಾರ್ತರಾಷ್ಟ್ರರು ಬಂದು ಅರ್ಜುನನನ್ನು ಬಾಣವರ್ಷದಿಂದ ತಡೆದರು. ದುಶ್ಶಾಸನನು ಭಲ್ಲದಿಂದ ಉತ್ತರನನ್ನು ಗಾಯಗೊಳಿಸಿ. ಬಾಣದಿಂದ ಅರ್ಜುನನನ್ನು ಎದೆಯಲ್ಲಿ ಹೊಡೆದನು. ಅರ್ಜುನನು ಅವನ ಬಾಣಗಳನ್ನು ಕಡಿದು, ಬಿಲ್ಲನ್ನು ಮುರಿದು ಅವನನ್ನು ಐದು ಬಾಣಗಳಿಂದ ಎದೆಗೆ ಹೊಡೆದನು. ಪಾರ್ಥ-ಬಾಣಪೀಡಿತನಾಗಿ ದುಶ್ಶಾಸನನು ರಣವನ್ನು ಬಿಟ್ಟೋಡಿದನು.

ವಿಕರ್ಣನು ಬಾಣವರ್ಷವನ್ನು ಸುರಿಸುತ್ತಾ ಬರಲು ಪಾರ್ಥನೊಂದು ಬಾಣವನ್ನು ಅವನ ಲಲಾಟದಲ್ಲಿ ಮೂಡಿಸಿ ಅವನನ್ನೂ ಓಡಿಸಿದನು. ವಿವಿಂಶತಿ ದುಸ್ಸಹರು ಬರಲು ಒಂದೇ ಸಲ ಎರಡು ಬಾಣಗಳಿಂದ ಇಬ್ಬರನ್ನೂ ಗಾಯಗೊಳಿಸಿ, ಅವರ ಕುದುರೆಗಳನ್ನು ಭಲ್ಲಗಳಿಂದ ಕೆಡಹಿದನು. ಅವರು ನಿಲ್ಲಲಾರದೆ ಯುದ್ಧರಂಗದಿಂದ ಓಡಿಹೋದರು. ಎಲ್ಲಿ ನೋಡಿದರಲ್ಲಿ ಬೀಭತ್ಸುನಾಗಿ, ಪಾರ್ಥನು ದೇವದತ್ತವನ್ನೂದುತ್ತಾ ಬಾಣವರ್ಷವನ್ನು ಸುರಿಸುತ್ತಾ, ಪರಸೈನ್ಯಗಳಿಗೆ ಯಮಸದೃಶನಾದನು.

ಆಗ ಸರ್ವಕೌರವವೀರರೊಂದೆಡೆ ಕಲೆತು ಷಡ್ರಥರಾಗಿ ಕಾದುವುದೆಂದು ನಿಶ್ಚಯಿಸಿದರು. ಅವರೆಲ್ಲರ ಬಾಣಗಳನ್ನು ಕಡಿದು, ಅರ್ಜುನನು —ನೀಹಾರವು ಬೆಟ್ಟವನ್ನಂತೆ, ತನ್ನ ಬಾಣಗಳಿಂದ ಅವರನ್ನು ಮುಚ್ಚಿದನು. ಕುದುರೆಯ ಕೆನೆತಗಳೊಂದಿಗೆ ಗಜಬೃಂಹಿತಗಳು ಕೇಳಿ ಬರುತ್ತಿದ್ದವಾಗಲಿ, ಯಾರೆಲ್ಲಿ ಎಂತು ಕಾದುವರೆಂಬ ವಿವೇಕವು ಕಳೆದು, ದಿಗ್ಭ್ರಾಂತರಾದ ಕುರುವೀರರು ತಮ್ಮವರು ಕೆಳಗುರುಳುವುದನ್ನು ನೋಡುತ್ತಾ ನಿಶ್ಚೇತನರಾದರು. ಮಧ್ಯಂದಿನ ಸೂರ್ಯನಂತೆ ಬಾಣಕಿರಣಗಳಿಂದ ಶತ್ರುಜೀವಗಳನ್ನು ಸೆಳೆವ ಅರ್ಜುನನು ಕ್ಷಣದಲ್ಲಿ ರಣರಂಗವೆಲ್ಲವು ಭಗ್ನರಥ, ಮೃತಗಜತುರಗಭಟಾವೃತವಾಗುವಂತೆ ಭಯಂಕರಸಮರ ನಿರತನಾದನು. ರಣರಂಗಸ್ಥಲದಿ, ಗಾಂಡೀವ ವೀಣೆಯನ್ನು ಪಿಡಿದು ನರ್ತಿಸುವನೆಂಬಂತೆ ಧನಂಜಯನು ತೋರಿ ಶತ್ರುಗಳಿಗೂ ಪ್ರಶಂಸಾಪಾತ್ರನಾದನು. ಗಾಂಡೀವ ಧ್ವನಿಯನ್ನಾಲಿಸಿ, ಅಲ್ಲಿ ನಿಲ್ಲದೆ ಕೌರವಭಟರು ಪಲಾಯನಪರರಾದರು. ಶಿರಗಳು ಬೀಳುತ್ತಿದ್ದರೆ, ಆಕಾಶದಿಂದ ಶಿಲಾವೃಷ್ಟಿಯಾದಂತೆ ತೋರುತ್ತಿತ್ತು. ರಣರಂಗವೆಲ್ಲವೂ ಛಿನ್ನಾಂಗರಾದ ಭಟರ ಕಂಕಾಳಗಳಿಂದ ತುಂಬಿ, ರಕ್ತನದಿಗಳು ಹರಿಯತೊಡಗಿದವು. ರುದ್ರಪರಾಕ್ರಮನಾದ

ಅರ್ಜುನನು ಹದಿಮೂರು ವರ್ಷಗಳಡಗಿಸಿಟ್ಟ ವಿಕ್ರಮ ಸಾರವನ್ನು ಉಕ್ಕಿಸಿ ಹರಿಸು ವಂತೆ ಹೋರಾಡುತ್ತಿದ್ದನು.

ಅವನನ್ನೆದುರಿಸಿ ನಿಲ್ಲಲಾರದೆ ಕೆಲ ಮಹಾರಥರು ರಣವಿಮುಖರಾದರೆ ಕೆಲರು ಶಾಂತಿಪರರಾದರು. ಪ್ರಳಯಕಾಲದ ಮಹಾನದಿಯಂತೆ ಶೋಣಿತ ಜಲವು, ಅಸ್ಥಿ ಪರ್ವತವು, ಕೇಶಶೈವಾಲವು, ಮುಖಕಮಲವು, ಶರಚಾಪತರಂಗವು, ಗಜಕೂರ್ಮವು, ಅಶ್ವಗಣಾವರ್ತವು, ಆದ ರಣರಂಗ ನದಿಯು ಮಹಾಭಯವಿವರ್ಧನವಾಯಿತು. ಅದರ ತೀರಗಳಲ್ಲಿ ನರಿ ನಾಯಿಗಳು, ಮೇಲೆ ಕಂಕಗೃಧ್ರಗಳು ವಿಕೃತಾರಾವವನ್ನು ಮಾಡಿ ಭಯವನ್ನು ಹೆಚ್ಚಿಸುತ್ತಿದ್ದವು.

ಆಗ ದುರ್ಯೋಧನ, ದುಶ್ಶಾಸನ, ಕರ್ಣ, ವಿಕರ್ಣ, ವಿವಿಂಶತಿಗಳೂ, ದ್ರೋಣ ಕೃಪ ಗುರುಪುತ್ರರೂ ಕಲೆತು ಧನಂಜಯನನ್ನು ಗೆಲ್ಲಲು ನಿಶ್ಚಯಿಸಿ ಬಂದರು. ಯುದ್ಧ ಸಂರಬ್ಧರಾದ ಅವರ ಧನುಷ್ಟಂಕಾರ ಸಿಂಹನಾದಗಳನ್ನು ತನ್ನ ಶಂಖನಾದದಲ್ಲಿ ಅಡಗಿಸಿ, ಕಪಿಕೇತನನೆಲ್ಲಿ ನೋಡಿದರಲ್ಲಿ ಹಾರಾಡುವಂತೆ ಅರ್ಜುನನು ರಣವಿಹಾರವನ್ನು ಮಾಡಿದನು. ಮೇಘಗಳು ಮಳೆಗರೆದು, ಸೂರ್ಯನನ್ನು ಮುಚ್ಚುವಂತೆ, ಕೌರವರು ಧನಂಜಯನನ್ನು ಬಾಣವರ್ಷದಿಂದ ಮುಚ್ಚಿ, ಅವನನ್ನು ಸಂಹರಿಸಲಾರದೆ, ವ್ಯರ್ಥ ಪ್ರಯತ್ನರಾದರು. ಎರಡಂಗುಲವಾದರೂ ಅವಕಾಶವಿಲ್ಲದಂತೆ ಅರ್ಜುನನ ರಥವನ್ನು ಮುಚ್ಚುವ ವೀರರನ್ನು ನೋಡಿ, ಪಾರ್ಥನು ನಕ್ಕು, ಐಂದ್ರಾಸ್ತ್ರವನ್ನು ಅಭಿಮಂತ್ರಿಸಿ ಬಾಣವರ್ಷದಿಂದ ಅವರನ್ನು ಗಾಯಪಡಿಸಿದನು. ಪರ್ಜನ್ಯನಂತೆ ಶರವರ್ಷವನ್ನು, ವಿದ್ಯುತ್ತಿನಂತೆ ಕಾಂತಿಯನ್ನು, ಸಿಡಿಲಿನಂತೆ ಶಬ್ದವನ್ನು ನಿರ್ಮಿಸುವ ಗಾಂಡೀವಕ್ಕೆ ಹೆದರಿ, ಸೈನಿಕರೆಲ್ಲರು ಭಯಭ್ರಾಂತರಾಗಿ ಓಡತೊಡಗಿದರು.

ಜೀವದಾಶೆಯಿಂದ ಪಲಾಯಿಸುವ ಭಟರನ್ನು ಹಿಂದಿರುಗಿಸಿ ಧೈರ್ಯತುಂಬಲೆಣಿಸಿ, ಭೀಷ್ಮನು ಧನಂಜಯನಿಗೆ ಎದುರೊಡ್ಡಿನಿಂತನು. ಅವನ ರಥವು ಕನಕಮಯವಾಗಿತ್ತು. ಮೇಲೆತ್ತಿದ ಶ್ವೇತಛತ್ರವು ಚಂದ್ರನಂತೆ ಹೊಳೆಯುತ್ತಿತ್ತು. ಶಂಖವನ್ನೂದುವ ಮಾತ್ರದಿಂದಲೇ ಕೌರವರ ಹೃದಯದಲ್ಲಿ ಹರ್ಷಧೈರ್ಯಗಳನ್ನು ತುಂಬಿ, ಎಂಟು ಬಾಣ ಗಳಿಂದ ಅರ್ಜುನರಥ ಧ್ವಜವನ್ನು ಹೊಡೆದನು. ಆ ಬಾಣಗಳು ಧ್ವಜದಲ್ಲಿದ್ದ ಪಿಶಾಚ ಗಳಿಗೆ ಬಡಿದು ಅವು ವಿಕೃತ ಭಯಂಕರವಾಗಿ ಕೂಗಿಕೊಂಡವು. ಅರ್ಜುನನು ಭಲ್ಲದಿಂದ ಪಿತಾಮಹನ ಛತ್ರವನ್ನು ಕಡಿದು ಕೆಡಹಿದನು. ಮತ್ತೊಂದು ಬಾಣದಿಂದ ಅವನ ಧ್ವಜವನ್ನು ಮುರಿದನು. ಶೀಘ್ರಶರಗಳಿಂದ ರಥ್ಯಸಾರಥಿಗಳನ್ನು, ರಥ ರಕ್ಷಕರನ್ನು ಹೊಡೆದನು. ಅದನ್ನು ಸಹಿಸದೆ ಭೀಷ್ಮನು ದಿವ್ಯಾಸ್ತ್ರದಿಂದ ಅರ್ಜುನನೊಡನೆ ಕಾದಿ ದನು. ಅವರೀರ್ವರ ಅಸ್ತ್ರಯುದ್ಧವು ತುಮುಲವಾಗಲು ನೋಡುವವರ ಮೈನವಿರೇಳು ತ್ತಿತ್ತು. ಬಲಿವಾಸವರಂತೆ ಕಾದುವ ಭೀಷ್ಮಪಾರ್ಥರನ್ನು ನೋಡುತ್ತಾ ಕುರುವೀರರು ನಿಂತುಬಿಟ್ಟರು.

ವೀರದ್ವಯವಿನಿರ್ಮುಕ್ತ ವಿಶಿಖಗಳ ಪಂಕ್ತಿ, ಮಳೆಗಾಲದಲ್ಲಿ ಹಾರಾಡುವ ಖದ್ಯೋತಗಳಂತೆ ಕಂಗೊಳಿಸಿತು. ಎಡಬಲ ಕೈಗಳೆರಡರಿಂದಲೂ ಗಾಂಡೀವವನ್ನು ಹಿಡಿದು ಬಲ-ಎಡಗೈಗಳಿಂದ ಬಿಡುವ ಬಾಣಗಳ ವೇಗದಿಂದ ಗಾಂಡೀವವು ಅಲಾತ ಚಕ್ರ ವಾಯಿತು, ಬಾಣಗಳು ಕಿಡಿಗಳಾದವು. ಭೀಷ್ಮನನ್ನು ನೂರು ಬಾಣಗಳಿಂದ ಹೊಡೆದು, ಉಕ್ಕೇರುವ ಉದಧಿಯಂತೆ ಆರ್ಭಟಿಸುವ ಪಾರ್ಥನನ್ನು ನೋಡಿ, ಪಿತಾಮಹನು ಅವನ ಬಾಣಗಳನ್ನು ತುಂಡರಿಸಿ, ಶಲಭಗಳ ಸಾಲಿನಂತೆ ಬರುವ ಪಾರ್ಥಶರಗಳಿಗೆ ಪ್ರತಿಯಾಗಿ ತಾನೂ ಶರಜಾಲವನ್ನು ಪ್ರಯೋಗಿಸಿದನು. ಅದನ್ನು ನೋಡಿ ಕುರುವೀರರು 'ಭೇಷ್! ಅರ್ಜುನನಿಂದ ಕಾದಾಡಲು ಪಿತಾಮಹನಿಗಲ್ಲದೆ ಮತ್ತೊಬ್ಬರಿಗೆ ಶಕ್ಯವೇ ? ದೇವಕೀ ಸುತನಾಗಲಿ, ದ್ರೋಣಾಚಾರ್ಯನಾಗಲಿ, ಭೀಷ್ಮನಾಗಲಿ, ಅರ್ಜುನನೊಡನೆ ಹೊಡೆ ದಾಡಬಲ್ಲರು. ಇತರರವನನ್ನು ಕಣ್ಣೆತ್ತಿ ನೋಡಲಾರರು' ಎಂದು ಪ್ರಶಂಸಿಸಿದರು.

ಪುರುಷಪ್ರವರರಾದ ಭೀಷ್ಮಾರ್ಜುನರು ದಿವ್ಯಾಸ್ತ್ರಗಳನ್ನು ಪ್ರಯೋಗಿಸಿ ಕಾದು ವಾಗ, ಅವುಗಳ ಕಾಂತಿಯಿಂದ ನೋಡುವವರ ಕಣ್ಣುಗಳು ಕುಕ್ಕಿ ಮಂಜಾದವು. ಪ್ರಾಜಾಪತ್ಯ, ಐಂದ್ರ, ರೌದ್ರ, ಆಗ್ನೇಯ, ಕೌಬೇರ, ವಾರುಣ, ಯಾಮ್ಯ, ವಾಯವ್ಯ ಮುಂತಾದ ಅಸ್ತ್ರಗಳಿಂದ ಯುದ್ಧವು ಆಶ್ಚರ್ಯಜನಕವಾಯಿತು. 'ಸಾಧು ! ಪಾರ್ಥ! ಸಾಧು! ಭೀಷ್ಮ!' ಎಂಬ ಶಬ್ದಗಳು ದಿಕ್ಕುಗಳಲ್ಲಿ ತುಂಬಿತು. ಅಂದು ಪಾರ್ಥ-ಪರಾಕ್ರಮವು ಅಪ್ರತಿಮವೆನಿಸಿತು.

ಅಸ್ತ್ರಯುದ್ಧವಾದಮೇಲೆ ಶಸ್ತ್ರಯುದ್ಧವಾರಂಭವಾಯಿತು. ಅರ್ಜುನನು ನಿಶಿತ ಬಾಣದಿಂದ ಭೀಷ್ಮನ ಧನುವನ್ನು ಖಂಡಿಸಿದನು. ಆತನಿನ್ನೊಂದು ಧನುವನ್ನು ತೆಗೆದು, ಸಜ್ಯವನ್ನಾಗಿಸಿ, ಬಹುಶರಗಳನ್ನು ಬಿಟ್ಟನು. ಅವನ್ನೆಲ್ಲ ಕತ್ತರಿಸಿ, ಅರ್ಜುನನು ಬಹು ಶರಗಳನ್ನು ಬಿಟ್ಟನು. ನೋಡುವವರಿಗೆ ಸಮವಿಕ್ರಮರಾಗಿ ತೋರುತ್ತಾ ಅದ್ಭುತಸಮರ ವಿಹಾರರಾದ ಪಾರ್ಥ ಭೀಷ್ಮರು ತಮ್ಮ ಶರಜಾಲದಿಂದ ದಿಙ್ಮಂಡಲವನ್ನು ಮುಚ್ಚಿದರು. ಅರ್ಜುನನು ಭೀಷ್ಮನ ರಥ ಚಕ್ರರಕ್ಷಕರನ್ನು ಸಂಹರಿಸಿ, ಹಂಸಪಂಕ್ತಿಯಂತೆ ಹಾರಾ ಡುತ್ತಾ ಬರುವ ಬಾಣಗಳನ್ನು ಪುಂಖಾನುಪುಂಖವಾಗಿ ಪ್ರಯೋಗಿಸಿದನು. ಅಂತಹ ದಿವ್ಯಾಸ್ತ್ರ ಚಾತುರ್ಯವನ್ನು ಕಂಡು ಚಿತ್ರಸೇನನು ಪ್ರೀತನಾಗಿ, ವಿಮಾನವರಸ್ಥಿತ ನಾದ ದೇವೇಂದ್ರನನ್ನು ನೋಡಿ, 'ಪ್ರಭೂ ! ಈಗ ಪಾರ್ಥನು ಬಿಟ್ಟ ದಿವ್ಯಾಸ್ತ್ರವು ಅಪೂರ್ವವಾದುದು. ಪೃಥಿವಿಯಲ್ಲಿರುವ ವೀರರಾರಿಗೂ ಅದು ಪರಿಚಿತವಲ್ಲ. ಮಧ್ಯಂದಿನ ಸೂರ್ಯನಂತೆ ಬಾಣಕಿರಣ ಜ್ವಾಲೆಯಿಂದ ಸುಡುವ ಅರ್ಜುನನ ಪ್ರತಾಪವನ್ನು ಸಹಿಸಲಾರದೆ, ಭಯದಿಂದ ವೈಬೆವರಿಟ್ಟು, ಕುರುವೀರರು ಓಡಿಹೋಗುತ್ತಿರುವರು. ಭೀಷ್ಮನಾದರೂ ಮಹಾರಥಶ್ರೇಷ್ಠನೇ! ಇವರ ಅದ್ಭುತ ರಣಕರ್ಮವು ಪ್ರಶಂಸನೀಯ ವಾಗಿದೆ!' ಎಂದನು. ಇಂದ್ರನು ಆ ಮಾತು ನಿಜವೆಂದು ಆ ವೀರರ ಮೇಲೆ ಪೂಮಳೆಗರೆಸಿದನು.

ಭೀಷ್ಮನು ಅರ್ಜುನನನ್ನು ಎಡಬಗಲಿನಲ್ಲಿ ಬಾಣದಿಂದ ಹೊಡೆದನು. ಪಾರ್ಥನು ಅದನ್ನು ಲೆಕ್ಕಿಸದೆ ನಕ್ಕು ಭೀಷ್ಮನ ಧನುವನ್ನು ನಿಶಿತಭಲ್ಲದಿಂದ ತುಂಡರಿಸಿದನು; ಮತ್ತು ಅವನ ಎದೆಯಲ್ಲಿ ಹತ್ತು ಬಾಣಗಳನ್ನು ನಾಟಿಸಿದನು. ಭೀಷ್ಮನು ಮೂರ್ಛಾಕ್ರಾಂತನಾಗಲು ನೋಡಿ, ಅವನ ಸಾರಥಿಯು ಯುದ್ಧಧರ್ಮಾನುಸಾರವಾಗಿ ರಥವನ್ನು ದೂರ ಸರಿಸಿ, ಅವನನ್ನು ಶತ್ರುಹತನಾಗದಂತೆ ಕಾಪಾಡಲೆಣಿಸಿದನು.

ಭೀಷ್ಮನು ರಣರಂಗದಿಂದ ದೂರನಾದುದನ್ನು ಕಂಡು, ನಾಗಕೇತನನು ರಥದಲ್ಲಿ ಕೂತು, ಅರ್ಜುನನ್ನೆದುರಿಸಿದನು. ಎದುರಿಲ್ಲದೆ ಸಂಚರಿಸುವ ಪಾರ್ಥನ ಸಾಹಸವನ್ನು ಸಹಿಸದೆ, ದುರ್ಯೋಧನನು ಭಲ್ಲದಿಂದ ಅರ್ಜುನನ ಲಲಾಟವನ್ನು ಹೊಡೆದು, ಸಿಂಹನಾದವನ್ನು ಮಾಡಿದನು. ಅರ್ಜುನ ಫಾಲದಿಂದ ಉಷ್ಣರಕ್ತವು ಹರಿಯತೊಡಗಿತು. ಪರ್ವತದ ಮೇಲ್ಭಾಗದಿ ನಿಲ್ಲಿಸಿದ ವಂಶನಾಳದಂತಿರುವ ಭಲ್ಲವನ್ನು ಪಾರ್ಥನು ಕಿತ್ತೊಗೆದು, ಕೆರಳಿ ಕೆಂಡವಾಗಿ, ಚಂಡನಾರಾಚಗಳಿಂದ ರಾಜರಾಜನನ್ನು ಬಾಧಿಸಿದನು. ಪರಸ್ಪರ ಬಾಣ ಪೀಡಿತರಾಗಿ ಹೋರಾಡುವ ಕುರುರಾಜನ್ಯರಿಬ್ಬರ ಸಂಗ್ರಾಮವು ಭಯಂಕರವಾಯಿತು. ಅಣ್ಣನು ಸೋಲುವಂತೆ ತೋರಿ ವಿಕರ್ಣನು, ಅವರೀರ್ವರ ಮಧ್ಯದಲ್ಲಿ, ಮತ್ತಗಜಾರೂಢನಾಗಿ ನಿಂತು, ಅನೇಕ ಬಾಣಗಳನ್ನು ಪ್ರಯೋಗಿಸಿದನು. ಅರ್ಜುನನು ಆಕರ್ಣಪೂರ್ಣವಾಗಿ ಸೆಳೆದುಬಿಟ್ಟ ಬಾಣದಿಂದ ಅದರ ಕುಂಭಸ್ಥಲವನ್ನು ಹೊಡೆದನು. ಆ ಬಾಣವು, ಇಂದ್ರನಿಸೃಷ್ಟವಾದ ವಜ್ರವು ಶೈಲವನ್ನಂತೆ, ಪೂರ್ಣವಾಗಿ ಪ್ರವೇಶಿಸಿ, ಕುಂಭವನ್ನು ಸೀಳಿತು. ಆನೆಯು ಗೀಳಿಡುತ್ತಾ, ಕೆಳಗೆ ಬಿದ್ದು ಸತ್ತಿತು. ಆಗ ವಿಕರ್ಣನು ನೂರಾರು ಹೆಜ್ಜೆಗಳಷ್ಟು ಓಡಿ ವಿವಿಂಶತಿಯ ರಥವನ್ನೇರಿ ಕುಳಿತನು. ಅರ್ಜುನನು ಅಂತಹ ಮತ್ತೊಂದು ಬಾಣದಿಂದ ದುರ್ಯೋಧನನನ್ನು ವಕ್ಷಃಸ್ಥಲದಲ್ಲಿ ಪೀಡಿಸಿದನು. ಅನೇಕ ಶರಪೀಡಿತರಾದ ಸೈನಿಕರೂ ರಣರಂಗವನ್ನು ಬಿಟ್ಟೋಡಿದರು. ಎಲ್ಲವನ್ನೂ ನೋಡಿ, ದುರ್ಯೋಧನನು ಎದೆಗುಂದಿದನು.

ಭೀಷ್ಮನಂತಹನೇ ತೊಲಗುವಾಗ ಇತರರು ನಿಲ್ಲಲಾಗದೆಂದು ತಿಳಿದು, ದ್ರೋಣ ಅಶ್ವತ್ಥಾಮ ಕೃಪರೂ ಹೊರಟುಹೋಗುತ್ತಿರಲು, ಕರ್ಣನಿಂದ ಕೂಡಿ ದುರ್ಯೋಧನನೂ ರಥವನ್ನು ಹಿಂದಿರುಗಿಸಿ ಓಡಿಹೋಗುತ್ತಿದ್ದನು. ರಾಜಭಯಂಕರನಾದ ದುರ್ಯೋಧನನು ಬಾಣವಿದ್ಧನಾಗಿ ಹೋಗುವುದನ್ನು ನೋಡಿ, ಪಾರ್ಥನು ನಗುತ್ತಿಂತೆಂದನು—

ಕೌರವೇಶ್ವರ! ಹಿಂದಿರುಗು! ರಣರಂಗದಿಂದ ಓಡಿಹೋಗುವುದು ನಿನಗೆ ತರವಲ್ಲ. ಕೀರ್ತಿಪಟದಿ ಮಸಿಯನ್ನು ಬಳಿಯಬೇಡ! ವಿಜಯದುಂದುಭಿಗಳನ್ನು ಮೊಳಗಿಸಿ ಹಸ್ತಿನಾವತಿಯನ್ನು ಗೋಗಣದಿಂದ ಸೇರುವುದೆಂಬ ನಿನ್ನ ಪ್ರತಿಜ್ಞೆ ಇನ್ನೂ ನೆರವೇರಿಲ್ಲ. ನಿನ್ನಿಂದ ವನಕ್ಕಟ್ಟಲ್ಪಟ್ಟ ಯುಧಿಷ್ಠಿರನ ತಮ್ಮ ನಾನು! ಭೀಮಸೇನನ ಪ್ರಿಯ ಸೋದರನು ನಾನು! ತೃತೀಯ ಪಾರ್ಥನ ಯುದ್ಧಾಹ್ವಾನವನ್ನು ಮನ್ನಿಸು!

ನೀ ಮಾಡಿದ ಅಧರ್ಮಕಾರ್ಯಗಳ ನೆನಪನ್ನು ತಂದುಕೊಡುವೆನು, ಬಾಣಗಳಿಂದ. ಅಯ್ಯೋ ಪಾಪ ! ದುರ್ಯೋಧನನೆಂದು ನಿನಗೆ ಹೆಸರಿಟ್ಟಿರುವರು, ಅದನ್ನು ವ್ಯರ್ಥ ಗೊಳಿಸುತ್ತಿರುವೆ ! ರಣವನ್ನು ಬಿಟ್ಟೋಡುವ ನೀನಾವ ದುರ್ಯೋಧನ ? ಓಡು ! ಓಡು ! ನಿನ್ನನ್ನು ರಕ್ಷಿಸುವ ವೀರರೆಲ್ಲ ಓಡಿಹೋಗುತ್ತಿರಲು ನೀನಿರಲಾಗುವುದೇ ? ಪ್ರಿಯ ಪ್ರಾಣಗಳನ್ನು ಮಧ್ಯಮ ಪಾಂಡವನಿಂದ ಕಾಪಾಡಿಕೋ !

ಅರ್ಜುನನ ಬಿರುನುಡಿಗಳಿಂದ ರೇಗಿ, ದುರ್ಯೋಧನನು ಅಂಕುಶದಿಂದ ತಿವಿಯಲ್ಪಟ್ಟ ಆನೆಯಂತೆ, ಹಿಂದಿರುಗಿ ವೇಗದಿಂದ ಅರ್ಜುನನನ್ನು ಸಮೀಪಿಸಿದನು. ಪಾದತಾಡಿತಭುಜಂಗರಾಜನಂತೆ ನಾಗಧ್ವಜನುಬುಸುಗುಟ್ಟುತ್ತಾ ಹೋಗುವುದನ್ನು ನೋಡಿ, ಕರ್ಣನು ದುರ್ಯೋಧನನ ಎಡಬದಿಯಿಂದ ಸುತ್ತಿಬಂದು ಪಾರ್ಥನನ್ನೆದುರಿಸಿದನು. ಶತ್ರುಪರಾಭವ ಸಮರ್ಥನಾದ ಶಾಂತನವನೂ ಹಿಂದಿರುಗಿಬಂದು ದುರ್ಯೋಧನನನ್ನು ಹಿಂದುಗಡೆ ನಿಂತು ರಕ್ಷಿಸುತ್ತಿದ್ದನು. ದ್ರೋಣಾಶ್ವತ್ಥಾಮಕೃಪರೂ ವಿವಿಂಶತಿ ದುಶ್ಶಾಸನರೂ ದುರ್ಯೋಧನನ ಮುಂದುಗಡೆ ಬಂದು ನಿಂತರು. ಇಂತು ಸರ್ವ ಕೌರವ ಸೇನೆಯು ಹಿಂದಿರುಗಿ ಬಂದು ಯುದ್ಧಸನ್ನದ್ಧವಾಗಿರುವುದನ್ನು ನೋಡಿ, ಹಂಸವು ಮೇಘವನ್ನು ಹೊಗುವಂತೆ, ಮಹಾವೇಗನಾಗಿ ಕುರುಸೇನೆಯನ್ನೆದುರಿಸಿ, ಪಾರ್ಥನು ಮೇಘವು ಬೆಟ್ಟದ ಮೇಲೆ ಮಳೆಗರೆವಂತೆ ಬಾಣವರ್ಷವನ್ನು ಸುರಿವ ಕುರುವೀರರ ಬಾಣಗಳನ್ನು ಖಂಡಿಸಿದನು. ಅವರ ಅಸ್ತ್ರಗಳಿಗೆ ಪ್ರತ್ಯಸ್ತ್ರಗಳನ್ನು ಪ್ರಯೋಗಿಸಿ ವಿಫಲಗೊಳಿಸಿ, ಶತ್ರುಂಜಯನಾದ ಧನಂಜಯನು ದುರ್ನಿವಾರವಾದ ಸಂಮೋಹನಾಸ್ತ್ರವನ್ನು ಬಿಟ್ಟನು. ದಿಕ್ಕು-ವಿದಿಕ್ಕುಗಳಲ್ಲಿ ಅರ್ಜುನ ಶರಸಹಸ್ರವು ವ್ಯಾಪಿಸಿ, ಶತ್ರುಗಳ ಎದೆಗುಂದಿತು. ಗಾಂಡೀವ ಘೋಷ ದೇವದತ್ತ ಧ್ವಾನಗಳಿಂದ ಅವರು ಕಿವುಡಾದರು. ಪಾರ್ಥನ ಸಂಮೋಹನಾಸ್ತ್ರದಿಂದ ಕುರುಸೈನಿಕರೆಲ್ಲರು ಮೂರ್ಛೆಬಂದಂತಾಗಿ, ಕೈಯಲ್ಲಿ ಹಿಡಿದ ಚಾಪಾದ್ಯಾಯುಧಗಳನ್ನು ಕೆಳಗೆ ಬಿಟ್ಟು, ಸುಮ್ಮನೆ ಮಲಗಿಬಿಟ್ಟರು. ಅವರ ಮೈಮೇಲೆ ಎಚ್ಚರವಿಲ್ಲದಾಗಲು ನೋಡಿ, ಪಾರ್ಥನು ಉತ್ತರೆಯ ಪ್ರಾರ್ಥನೆಯನ್ನು ನೆನೆದು, ಉತ್ತರನಿಗಿಂತೆಂದನು—

ರಾಜಪುತ್ರ ! ಕುರುಭಟರು, ವೀರರೆಲ್ಲರು ಭೀಷ್ಮನೊಬ್ಬನನ್ನು ಬಿಟ್ಟು— ಮೈಮರೆತು ಬಿದ್ದಿರುವರು. ಬೇಗ ಹೋಗಿ ಅವರ ವಸ್ತ್ರಗಳನ್ನು ತಾ ! ಆಚಾರ್ಯ ಕೃಪರ ಉಷ್ಣೀಷಗಳು ಬಿಳಿಯವು. ಕರ್ಣನ ವಸ್ತ್ರವು ಪೀತವಾಗಿದೆ. ಅಶ್ವತ್ಥಾಮ ದುರ್ಯೋಧನರ ಉತ್ತರೀಯಗಳು ನೀಲವಾಗಿವೆ. ಭೀಷ್ಮನ ಗೊಡವೆಗೆ ಹೋಗಬೇಡ! ಆ ಮಹಾನುಭಾವನು ಈ ಅಸ್ತ್ರದ ಪ್ರತಿಘಾತವಾದ ವಿಜ್ಞಾನಾಸ್ತ್ರವನ್ನರಿತಿರುವನು. ಆತನಿಗೆ ಬಲಗಡೆಯಾಗಿ ತಿರುಗಿ ಹೋಗಿ, ಮಿಕ್ಕವರ ಉತ್ತರೀಯಗಳನ್ನು ತಂದುಬಿಡು !

ಉತ್ತರನು ಅಂತೆಯೇ ಅವರ ವಸ್ತ್ರಗಳನ್ನು ತಂದು ಮತ್ತೆ ರಥದಲ್ಲಿ ಕುಳಿತನು.

ಉತ್ತರನು ಚೋದಿಸಲು, ರಥದ ಶ್ವೇತಾಶ್ವಗಳು, ರಣರಂಗದಿಂದ ಮಹಾವೇಗದಿಂದ ಓಡತೊಡಗಿದವು.

ತಮ್ಮೆಲ್ಲರನ್ನೂ ಗೆದ್ದು ವಿಜಯನು ಹೋಗುತ್ತಿರುವುದನ್ನು ನೋಡಿ, ಭೀಷ್ಮನು ಪಾರ್ಥನನ್ನು ಶರಜಾಲದಿಂದ ಪೀಡಿಸಿದನು. ಪಾರ್ಥನು ಹತ್ತು ಬಾಣಗಳಿಂದ ಭೀಷ್ಮನ ಅಶ್ವಗಳನ್ನು ಕೆಡಹಿ, ಭೀಷ್ಮನನ್ನು ದಾಟಿಕೊಂಡು ಮುಂದೆ ಸಾಗಿದನು. ಮೇಘವೃಂದವನ್ನು ಸೀಳಿ ನಿಂತ ದಿನಕಾಂತನಂತೆ ಕುಂತೀಸುತನು ಶತ್ರುಗಳಿಂದ ಪಾರಾಗಿಹೋದನು. ಕುರುಪ್ರವೀರರಾಗ ಎಚ್ಚತ್ತು, ಇಂದ್ರಸಮ ವಿಕ್ರಮನಾದ ಅರ್ಜುನನು ಪಾರಾಗಿಹೋಗುತ್ತಿರುವುದನ್ನು ನೋಡಿ 'ಎಲ ಎಲ! ಓಡಿಹೋಗುತ್ತಿರುವ ಅರ್ಜುನನನ್ನು ಬಿಡಬೇಡಿ! ಮೈಮರೆತು ಬಿದ್ದಿದ್ದ ನಮ್ಮನ್ನು ಕೊಲ್ಲದೆ ಬಿಟ್ಟು ಹೋಗುತ್ತಿರುವುದೂ ಒಳ್ಳೆಯದಾಯಿತು' ಎಂದು ಕೂಗಾಡಿದರು. ಅವರನ್ನು ನೋಡಿ ಭೀಷ್ಮನು ಇಂತು ನುಡಿದನು—'ನೀವೆಲ್ಲರೂ ಅಸ್ತ್ರಪ್ರಭಾವದಿಂದ ಮೈಮರೆತು ಬಿದ್ದಾಗ ನಿರಾಯುಧರೂ ನಿಸ್ಸಹಾಯರೂ ಆಗಿದ್ದ ನಿಮ್ಮ ಪ್ರಾಣಗಳನ್ನು ತೆಗೆಯಲು ಯತ್ನಿಸದಿದ್ದ ಪಾರ್ಥನು ನಿಜವಾಗಿ ಮಹಾತ್ಮನು. ಮೂರ್ಲೋಕದ ರಾಜ್ಯಕ್ಕಾದರೂ ಅರ್ಜುನನು ಅಧರ್ಮವನ್ನು ಮಾಡಲೊಲ್ಲನು. ನಿಷ್ಪಾಪನಾದ ಪಾರ್ಥನು ಹೋಗಲಿ. ರಾಜನ್! ಮೊದಲು ಕುರುದೇಶವನ್ನು ಶತ್ರುಕರಗತವಾಗದಂತೆ ನೋಡು! ಹೋಗಲಿ ಗೋಗಣ! ಪಾರ್ಥನ ಗೊಡವೆಗೆ ಹೋಗುವುದೊಳಿತಲ್ಲ.' ಇಂತು ಎಚ್ಚರಿಸಿದ ಪಿತಾಮಹನ ವಚನವನ್ನು ನಿಶ್ಚಯವೆಂದು ಮನಗಂಡು, ಗೋಗಣವು ಕೈತಪ್ಪಿ ಹೋಗುವುದಲ್ಲದೆ, ಪರಾಜಯವೂ ಆದುದಕ್ಕೆ ಚಿಂತಿಸುತ್ತಾ, ದುರ್ಯೋಧನನು, ತನ್ನ ಸೇನೆಯೊಡನೆ ಹಸ್ತಿನಾವತಿಗೆ ತೆರಳಿದನು.

ಕುರುಪ್ರವೀರರು ತಿರುಗಿಹೋಗುತ್ತಿರುವುದನ್ನು ಪಾರ್ಥನು ನೋಡಿದನು. ತನ್ನ ರಥವನ್ನು ಹಿಂದಿರುಗಿಸಿ, ಪಿತಾಮಹ ಗುರುಗಳಿಗೆ ಶಿರಬಾಗಿ ಎರಡೆರಡು ನಮಸ್ಕಾರ ಬಾಣಗಳಿಂದ ವಂದಿಸಿದನು. ಪೂಜ್ಯರಾದ ಅಶ್ವತ್ಥಾಮ ಕೃಪರಿಗೂ ನಮಸ್ಕಾರವನ್ನು ಶರಗಳಿಂದ ಸಮರ್ಪಿಸಿದನು. ಕುರುರಾಜನ ಮಣಿಖಚಿತ ಕಿರೀಟವನ್ನೊಂದು ಬಾಣದಿಂದ ಕೆಳಗೆ ಕೆಡಹಿ, 'ಆಸನ್ನಮರಣನು ನೀನೆಂ'ದು ಅವನಿಗೆ ಸೂಚಿಸಿದನು. ಮಿಕ್ಕ ವೀರರಿಗೆ ಕೈಚೀಸಿ, ಅಪ್ಪಣೆ ಪಡೆದು, ದೇವದತ್ತವನ್ನೊಮ್ಮೆ ಊದಿ, ಶತ್ರು ಹೃದಯದಲ್ಲಿ ಭಯವನ್ನು ತುಂಬಿದನು. 'ಮತ್ತೆ ರಥವನ್ನು ಮತ್ಸ್ಯಪುರಿಯ ಕಡೆಗೆ ತಿರುಗಿಸಿ ನಡೆ!' ಎಂದು ಉತ್ತರನಿಗಾಜ್ಞಾಪಿಸಿದನು. 'ಪಶುಗಳು ಸುಖವಾಗಿ ಊರನ್ನು ಸೇರಿವೆ. ಕೌರವರು ಪರಾಜಿತರಾದರು. ಬಂದ ಕಾರ್ಯವಾಯಿತು!' ಎಂದು ಪ್ರಶಂಸಿಸುವ ಉತ್ತರ ಕುಮಾರನೊಡನೆ, ಆಕಾಶದಿ ನಿಂತಿದ್ದ ದೇವಋಷಿ ಗಂಧರ್ವಾದಿಗಳೂ 'ಏಕವೀರನಾಗಿ ಪಾರ್ಥನು ಕೌರವರನ್ನು ಗೆದ್ದೋಡಿಸಿದುದು ಅತ್ಯದ್ಭುತವಾಗಿದೆ!' ಎಂದು ಪೊಗಳಿದರು. ಪಾರ್ಥನ ಪರಾಕ್ರಮವನ್ನು ಪಾಡಿ ಪೊಗಳುತ್ತಾ ದೇವಾದಿಗಳು ಸ್ವಸ್ಥಲಗಳಿಗೆ ಪೋರ ಮಟ್ಟಿಮೇಲೆ ವನದಲ್ಲಿ ತನಗೆ ಹೆದರಿ ಅಡಗಿದ್ದ ಕೌರವ ಸೈನಿಕರನ್ನು ನೋಡಿ 'ಪಾಪ!

ನನ್ನಿಂದ ನಿಮಗೆ ಭಯವಿಲ್ಲ! ಹೋಗಿ! ಆರ್ತರನ್ನು ಶರಣಾಗತರನ್ನು ಕೊಲ್ಲುವವನಲ್ಲ ಪಾಂಡವ !' ಎಂದು, ಅವರಿಗೆ ಅಭಯವನ್ನಿತ್ತು ಕಳಿಸಿದನು. ಅವರು 'ಮಹಾತ್ಮ! ನೀನು ಚಿರಕಾಲ ಬಾಳು ! ನಿನ್ನ ಕೀರ್ತಿ ದಿಗಂತವಾಗಿ ಬೆಳಗಲಿ !' ಎಂದು ಹರಸಿ, ಹೊರಟುಹೋದರು. ವಿರಾಟನಗರಾಭಿಮುಖನಾಗಿ ಹೋಗುವ ಪಾರ್ಥನ ರಥವನ್ನು ತಡೆಯುವ ಗೋಜಿಗೂ ಹೋಗದೆ, ಕೌರವವೀರರು ಭೀತರಾಗಿ ತ್ವರೆಯಿಂದ ಹೊರಟು ಹೋದದ್ದನ್ನು ನೋಡಿ, ಆಶ್ಚರ್ಯಭರಿತನಾಗಿದ್ದ ಉತ್ತರನಿಗೆ ಅರ್ಜುನನಿಂತೆಂದನು—

ಕುಮಾರ ! ಮತ್ಸ್ಯನಗರದಲ್ಲಿ ಪಾಂಡವರೆಲ್ಲರಿರುವರೆಂದು ನಿನಗೆ ಗೊತ್ತಾಯಿ ತಲ್ಲ ! ಊರು ಸೇರಿದಮೇಲೆ ಈ ರಹಸ್ಯವನ್ನು ಯಾರಿಗೂ ತಿಳಿಸಬೇಡ ! ತಿಳಿಸಿದೆ ಯಾದರೆ ಮತ್ಸ್ಯರಾಜನು ಭೀತಿಯಿಂದ ಮೃತನಾಗಬಹುದು ! ಮೆಲ್ಲನೆ ತಿಳಿಸೋಣ ! 'ನೀನೇ ಕೌರವರನ್ನು ಗೆದ್ದು ಗೋಗಣವನ್ನು ಪಡೆದು ಬಂದುದಾಗಿ ತಿಳಿಸು!' ಆ ಮಾತ ನ್ನಾಲಿಸಿ, ಉತ್ತರನು ಸಮ್ಮತಿಸಿ 'ಅಯ್ಯಾ! ನೀನು ಇಂದು ನಡೆಸಿದ ಮಹಾಸಂಗ್ರಾಮ ಕಾರ್ಯವನ್ನು ನಾನು ಅದರಲ್ಲಿ ಸಹಸ್ರಾಂಶವನ್ನಾದರೂ ಮಾಡಲಾಪೆನೇ? ಆದರೆ ನಿನ್ನ ಮಾತು ನನಗೆ ಶಿರೋಧಾರ್ಯವಾಗಿದೆ. ನಮ್ಮ ತಂದೆಯ ಮುಂದೆ ನಿಮ್ಮ ರಹಸ್ಯವನ್ನು ತಿಳಿಸದೆ ಇರುವೆನು.' ಎಂದು ರಥವನ್ನು ಮತ್ತೆ ಶಮೀವೃಕ್ಷದ ಅಡಿಯಲ್ಲಿ ತಂದು ನಿಲ್ಲಿಸಿದನು. ತತ್‌ಕ್ಷಣವೇ ಧ್ವಜಸ್ಥಿತನಾದ ವಾಯುಕುಮಾರನು ಅಂತರ್ಹಿತನಾದನು. ಭೂತಗಳೂ ಹಾರಿಹೋದವು. ಧ್ವಜವೂ ಅಂತರ್ಹಿತವಾಗಲು, ಉತ್ತರನು ರಥದ ಮೇಲೆ ತನ್ನದಾದ ಸಿಂಹಧ್ವಜವನ್ನೆತ್ತಿ, ಗಾಂಡೀವಾದ್ಯಾಯುಧಗಳನ್ನು ಯಥಾ ಪೂರ್ವವಾಗಿ ಶಮೀವೃಕ್ಷದ ಮೇಲಿಟ್ಟು, ಕೆಳಗಿಳಿದನು. ಉತ್ತರನನ್ನು ರಥಿಕ ಸ್ಥಾನದಿ ಕೂಡಿಸಿ, ತಾನು ಸಾರಥಿಯಾಗಿ ಅರ್ಜುನನು ಪ್ರಹೃಷ್ಟಾಂತರಂಗನಾಗಿ, ನಗರವನ್ನು ಪ್ರವೇಶಿಸಲು ನಿಶ್ಚಯಿಸಿದನು. ಬೃಹನ್ನಲಾರೂಪದಿಂದ, ಅಲಂಕಾರ ಶಸ್ತ್ರಗಳನ್ನು ಶಮಿಯಲ್ಲಿಟ್ಟು, ಅಪರಾಹ್ನ ಸಮಯದವರಿವಿಗೂ ಕಾದಿದ್ದ ಕುದುರೆಗಳಿಗೆ ವಿಶ್ರಾಂತಿ ಯನ್ನಿತ್ತು, ಗೋಪಾಲಕರನ್ನು ಕರೆಯಿಸಿ, ಪಾರ್ಥನು ಅವರಿಗಿಂತೆಂದನು.

'ತ್ವರಿತವಾಗಿ ಪೋಗಿ ! ನಗರದಲ್ಲಿ ಗೋಗಣವನ್ನು ತಂದ ವಾರ್ತೆಯನ್ನು ಸಾರಿರಿ ! ಉತ್ತರಕುಮಾರನ ವಿಜಯ ವಾರ್ತೆಯನ್ನು ಕೇಳಿ, ರಾಜನೇ ಮೊದ ಲಾದವರು ಸಂತೋಷಪಡಲಿ !' ಉತ್ತರನೂ ಕೆಲ ದೂತರಿಗೆ ಅಂತೆಯೇ ಆದೇಶ ವನ್ನಿತ್ತನು. ಗೋಪಾಲಕರು ಆನಂದದಿಂದ ಕುಣಿಯುತ್ತಾ ಹೊರಟುಹೋದರು. ದೂತರೂ ರಾಜಮಂದಿರವನ್ನು ಸೇರಪೋದರು. ಅಪರಾಹ್ನವಾದ ಮೇಲೆ ಪಾರ್ಥ ವಿರಾಟಸುತರು ನಗರವನ್ನು ಪ್ರವೇಶಿಸಿದರು.

## ಪಾಂಡವಾವಿಷ್ಕಾರ—ಉತ್ತರಾಭಿಮನ್ಯು ವಿವಾಹ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ವಿರಾಟರಾಜನು ದಕ್ಷಿಣ ಗೋಗ್ರಹಣವನ್ನು ತಡೆದು, ಸುಶರ್ಮಾದಿ ಪ್ರತಿವೀರರನ್ನು ವಲಲ ಕಂಕ ತಂತ್ರಿಪಾಲ ದಾಮಗ್ರಂಥಿಗಳ ಸಹಾಯದಿಂದ ಗೆದ್ದು, ತಾನೂ ಉಳಿದು, ಹರ್ಷಭರಿತನಾಗಿ ನಗರವನ್ನು ಪ್ರವೇಶಿಸಿದನು. ಸಭೆಯಲ್ಲಿ ಪಾರ್ಥರಿಂದ ಮೆರೆವ ಪಾರ್ಥಿವನನ್ನು ವಿಜಯ ಘೋಷಗಳಿಂದ ಸಾಮಂತರು ಅಭಿನಂದಿಸಿದರು ಪ್ರಜರು ವಿಪ್ರಮುಖರಾಗಿ ಪ್ರಶಂಸಿಸಿದರು. ವಿರಾಟನು ಅವರಿತ್ತ ಕಾಣಿಕೆಗಳನ್ನು ಸ್ವೀಕರಿಸಿ, ಪಾರ್ಥರಿಗಿತ್ತು, ಅವರನ್ನೆಲ್ಲ ಸತ್ಕರಿಸಿ ಕಳಿಸಿದನು.

ಅಂತಃಪುರವನ್ನು ಹೊಕ್ಕರಾಜನು ರಾಜರಮಣಿಯರಿಂದ ಉತ್ತರನು ಬೃಹನ್ನಲಾ ಸಹಾಯನಾಗಿ, ಉತ್ತರಗೋವಿಮೋಚನಾರ್ಥಿಯಾಗಿ ಹೋಗಿರುವನೆಂದು ತಿಳಿದನು. ಕರ್ಣ ದುರ್ಯೋಧನ ದುಶ್ಶಾಸನ ಭೀಷ್ಮ ದ್ರೋಣ ದ್ರೋಣಪುತ್ರರಂತಹ ಮಹಾರಥಿಕರೊಡನೆ ಕಾದಾಡಲು ನಪುಂಸಕ ಸಾರಥಿಯಾಗಿ ಹೋಗಿರುವ ಮಗನ ಕ್ಷೇಮವನ್ನು ಶಂಕಿಸಿ ಮತ್ಸ್ಯರಾಜನು ಮಂತ್ರಿಮುಖ್ಯರನ್ನು ಕರೆಯಿಸಿ, ಇಂತೆಂದನು—

'ಉತ್ತರ ಗೋಗ್ರಹಣವನ್ನು ಕೌರವವೀರರು ಮಾಡಿರಲು, ಉತ್ತರನೊಬ್ಬನೇ ಬಿಡಿಸಲು ಹೋಗಿರುವನಂತೆ! ಕುರುವೀರರು ಮಹಾಮಾಯಾವಿಗಳು. ಕ್ರೂರರು; ತ್ರಿಗರ್ತರನ್ನು ನಾವು ಸೋಲಿಸಿರುವುದನ್ನು ತಿಳಿದು ಮತ್ತೆ ಕೆರಳಿ ಕಾದುವರು. ಬಾಲಕನೊಬ್ಬ ! ನಪುಂಸಕನೊಬ್ಬ ! ಇವರಿಂದೇನಾಗುವುದು ? ನನ್ನ ಕುಮಾರನ ರಕ್ಷೆಗಾಗಿ ವಿಪುಲ ಸೇನೆಯನ್ನು ಕಳಿಸಿ ! ರಥಗಜತುರಗಪದಾತಿ ಸಂಕುಲವಾದ ಸೈನ್ಯವು ವಿಚಿತ್ರಾಯುಧಧಾರಿಯಾಗಿ ಹೊರಡಲಿ ! ಬೇಗ ಹೋಗಿರಿ ! ನನ್ನ ಕುಮಾರನು ಜೀವದಿಂದಿದ್ದರೆ ಸಾಕು !'

ಇಂತು ನುಡಿಯುವ ಭೂಕಾಂತನನ್ನು ನೋಡಿ ನಕ್ಕು ಧರ್ಮರಾಜನಿಂತೆಂದನು. 'ರಾಜನ್ ! ಬೃಹನ್ನಲೆಯು ಸಾರಥಿಯಾಗಿರುವಾಗ, ಯಾವ ಶತ್ರುಗಳೂ ನಿನ್ನ ಗೋವ್ರಗಳನ್ನು ಕದಿಯಲಾರರು. ಕುರುರಾಜನೇ ಮೊದಲಾದ ಸರ್ವರಾಜರನ್ನೇ ಅಲ್ಲದೆ, ದೇವಾಸುರರನ್ನು ಕೂಡ ನಿನ್ನ ಮಗನು ಬೃಹನ್ನಲೆ ಸಾರಥಿಯಾಗಿದ್ದರೆ— ಗೆಲ್ಲಬಲ್ಲನು.' ಎಂದು ಸಮಾಧಾನಪಡಿಸಿದನು. ಆಗ ಉತ್ತರನು ಕಳಿಸಿದ ದೂತರು ಬಂದು, ಉತ್ತರನ ವಿಜಯವಾರ್ತೆಯನ್ನು ಮಂತ್ರಿಗಳಿಗೆ ತಿಳಿಸಿದರು. ಅವರು ಆನಂದದಿಂದ ರಾಜನಿಗೆ ತಿಳಿಸಿದರು. 'ರಾಜನ್ ! ಶುಭವಾಗಲಿ ! ಕುಮಾರನು ಕುರುವೀರರನ್ನು ಗೆದ್ದು ತುರುಗಳನ್ನು ತಂದಿರುವನು. ಅವನು ದೈವಾನುಗ್ರಹದಿಂದ ಅಕ್ಷತನಾಗಿರುವನು.' ಆ ಮಾತನ್ನಾಲಿಸಿ, ಧರ್ಮಜನು, 'ರಾಜನ್ ! ನಿನ್ನ ಸುದೈವದಿಂದ ಕುರುಗಳು ಸೋತುಹೋದರು. ತುರುಗಳು ತಿರುಗಿ ಬಂದವು. ನಿನ್ನ ಮಗನು ಕುರುವೀರರನ್ನೆಲ್ಲ ಜಯಿಸಿದನೆಂದರೆ ಆಶ್ಚರ್ಯವಲ್ಲ ಕೇಳು ! ಯಾರಿಗೆ

ಬೃಹನ್ನಳೆಯ ಸಹಾಯವಿರುವುದೋ, ಅವರಿಗೆ ವಿಜಯವು ಕಟ್ಟಿಟ್ಟದ್ದೆಂದು ತಿಳಿ!' ಎಂದು ನುಡಿದನು.

ವಿರಾಟನು ವಿಜಯವಾರ್ತೆಯನ್ನಾಲಿಸಿ ಆನಂದ ಸಾಗರ ಮಗ್ನನಾದನು: ಮಗನ ಮಹಾ ಪರಾಕ್ರಮವನ್ನು ಮನದಿ ನೆನೆದು, ಮೈನವಿರೆದ್ದು, ಆನಂದಬಾಷ್ಪಗಳನ್ನು ಸುರಿಸಿದನು. ದೂತರನ್ನೂ, ಮಂತ್ರಿಗಳನ್ನೂ ಚೆನ್ನಾಗಿ ಸತ್ಕರಿಸಿ, ಕಳಿಸಿದನು. 'ರಾಜಮಾರ್ಗಗಳನ್ನು ಪನ್ನೀರ ತಳಿಯಿಂದ ಸ್ವಚ್ಛಗೊಳಿಸಿ! ಧ್ವಜ ಪತಾಕೆಗಳು ಹಾರಾಡಲಿ; ದೇವಮಂದಿರಗಳಲ್ಲಿ ಪುಷ್ಪನೈವೇದ್ಯಗಳಿಂದ ಮಹಾ ಪೂಜೆ ನಡೆಯಲಿ; ತರುಣಯೋಧರು, ಸುಂದರಗಣಿಕೆಯರು ಮಂಗಳದ್ರವ್ಯಗಳಿಂದಲು, ತೂರ್ಯವಾದ್ಯಗಳಿಂದಲು ನನ್ನ ಮಗನನ್ನು ಎದುರ್ಗೊಂಡು ತರಲಿ! ಮಾತಂಗವನ್ನೇರಿ ನಗರದ ನಾಲ್ಕು ನಿಟ್ಟನಲ್ಲಿ ನಿಂತು ದೂತರು ಘಂಟಾಪಟಹ ಶಬ್ದಗಳೊಡನೆ ಕುಮಾರನ ವಿಜಯವನ್ನು ಘೋಷಿಸಲಿ! ಅನೇಕ ಸುಂದರ ಕುಮಾರೀಯುತಳಾಗಿ ನನ್ನ ಮಗಳು ಉತ್ತರೆ ಸರ್ವಾಭರಣಭೂಷಿತಳಾಗಿ ಕುಮಾರನನ್ನೆದುರ್ಗೊಂಡು ಕರೆತರಲಿ!' ಎಂಬ ರಾಜಾಜ್ಞೆಯಂತೆ, ಸರ್ವವೂ ಸಿದ್ಧವಾಯಿತು. ನಾರಿಯರು ಮಂದಿರ ದ್ವಾರಗಳಲ್ಲಿ ಮಂಗಳಾರ್ತಿಕಾಹಸ್ತಪ್ರಶಸ್ತೆಯರಾಗಿ ನಿಂತರು. ಭೇರೀತೂರ್ಯದುಂದುಭಿಗಳು ಮೊಳಗಿದವು. ಸೂತಮಾಗಧವಂದಿಗಳ ಪ್ರಶಂಸಾ ಪದ್ಯಗಳು ವಿಪ್ರಾಶೀರ್ವಾದದೊಡನೆ ಮೇಳವಿಸಿದವು. ಉತ್ತರನನ್ನು ಕರೆತರಲು ಉತ್ತರಾದಿಕನ್ಯೆಯರು ಹೊರಟರು.

ವಿಜಯಾನಂದತುಂದಿಲನಾದ ವಿರಾಟನು 'ಸೈರಂಧ್ರಿ! ಪಗಡೆಗಳನ್ನು ಹಲಗೆಯನ್ನು ತಾ!' ಎಂದನು. 'ಕಂಕ! ಬಾ! ವಿನೋದಕ್ಕಾಗಿ ಪಗಡೆ ಆಡೋಣ!' ಎಂದ ರಾಜನಿಗೆ ಧರ್ಮಜನು, 'ರಾಜನ್! ಹರ್ಷವಿವಶನಾದವನೊಡನೆ ಮತ್ತು ಮೋಸಗಾರನೊಡನೆ ಪಗಡೆಯಾಡಬಾರದೆಂದು ಕೇಳಿರುವೆನು. ನೀನೀಗ ಹರ್ಷಮತ್ತನಾಗಿರುವೆ! ನಾನೀಗ ನಿನ್ನನ್ನು ಕೂಡಿ ಅಕ್ಷವಾಡಲಾಗದು' ಎಂದನು. ವಿರಾಟನು ಬಲಾತ್ಕರಿಸಲು, ಧರ್ಮಜನು ವಿಧಿಯಿಲ್ಲದೆ, ಒಪ್ಪಿ ಆಟವಾಡತೊಡಗಿದನು.

'ದ್ಯೂತವಾಡಲೇಬೇಕೆಂದಿಲ್ಲ. ನನ್ನ ಸ್ತ್ರೀ ಧನ ಗೋಹಿರಣ್ಯ ರಾಜ್ಯಾದಿ ಸರ್ವಸ್ವವನ್ನೂ ನಿನಗೆ ಕೊಡಲು ನಾನು ಹಿಂಜರಿಯುವುದಿಲ್ಲ.' ಎಂದ ರಾಜನಿಗೆ ಕಂಕನು, 'ರಾಜೇಂದ್ರ! ದ್ಯೂತವು ಬಹುದೋಷಯುತವಾಗಿದೆ. ಅದನ್ನು ಬಿಡಬೇಕು. ಧರ್ಮರಾಜನ ವಿಷಯವನ್ನು ನೀನು ಕೇಳಿರುವೆ! ಆತನನ್ನು ನೋಡಿರುವೆ ಅಲ್ಲವೇ? ಕೇಳು! ದ್ಯೂತವಾಡುತ್ತಾ ಮೈಮರೆತ ಧರ್ಮರಾಜನು, ರಾಜ್ಯವನ್ನೂ, ಸೋದರರನ್ನೂ, ತನ್ನನ್ನೂ, ಕೊನೆಗೆ ಸತಿಯನ್ನೂ ಸೋತು, ವನದಲ್ಲಿರುವಂತಾದನು. ನನಗಂತೂ ದ್ಯೂತವೆಂದರೆ ಇಷ್ಟವಿಲ್ಲ. ಇದರ ಮೇಲೆ ನಿನ್ನಿಷ್ಟ!' ಎಂದು ಮತ್ತೆ ನಿವಾರಿಸಿದನು. ವಿರಾಟನು ಬಿಡದೆ ಜೂಜಾಡಲು ಪ್ರಾರಂಭಿಸಿದನು. ಆಟ ನಡೆಯುತ್ತಿತ್ತು.

ವಿಜಯವಮತ್ತನಾದ ವಿರಾಟನ ಮನಸ್ಸು ಕುಣಿದೇಳುತ್ತಿತ್ತು. 'ಕಂಕ! ಎಂತಹ ವೀರರು ಕೌರವರು! ಅಂತಹವರನ್ನೆಲ್ಲ ನನ್ನ ಮಗನೊಬ್ಬನೇ ಗೆದ್ದು ಬಂದಿರುವನು. ಅವನಿಗೆ ಸಮರಿಲ್ಲ!' ಎಂದು ಪೊಗಳುವ ರಾಜನನ್ನು ನೋಡಿ, ಧರ್ಮ-ರಾಜನು, 'ಅಹುದು! ಯಾರಿಗೆ ಬೃಹನ್ನಲೆಯ ಸಹಾಯವಿದೆಯೋ ಅವರಿಗೆ ಜಯವು ನಿಶ್ಚಯವು; ಅಂತೆಯೇ ಉತ್ತರನು ವಿಜಯಯುತನಾಗಿ ಬರುತ್ತಿರುವನು' ಎಂದನು. ಆ ಮಾತಿಗೆ ರಾಜನು ಕುಪಿತನಾಗಿ, ಧರ್ಮರಾಜನನ್ನು ನೋಡಿ, 'ಕಂಕ; ಬ್ರಹ್ಮಬಂಧೋ; ಷಂಡನನ್ನು ವೀರಕುಮಾರನಿಗೆ ಸಮನಾಗಿಸಿ ಮಾತಾಡುತ್ತಿರುವೆ; ಇದು ನನಗಾಗುವ ಅವಮಾನವೆಂದು ತಿಳಿ; ಏನು ಯಾರಿಗೆ ಮಾತನ್ನಾಡಬೇಕೆಂದು ನಿನಗೆ ಗೊತ್ತಿದ್ದಂತಿಲ್ಲ. ನನ್ನ ಮಗನು ಭೀಷ್ಮದ್ರೋಣಾದಿ ಮಹಾವೀರರನ್ನು ಸ್ವಯಂ ಗೆಲ್ಲಬಲ್ಲವನಾಗಿರುವನು. ಮಹಾವೀರನಾದ ಉತ್ತರನನ್ನು ಹೀಯಾಳಿಸಬೇಡ; ಕೇಳಿಲ್ಲಿ; ಮತ್ತೊಮ್ಮೆ ಈ ಮಾತನ್ನಾಡಿದರೆ, ನಿನಗೆ ಒಳಿತಲ್ಲ ಎಂದು ರೇಗಿದನು. ಧರ್ಮರಾಜನು 'ರಾಜನ್! ನಿಜವನ್ನಾಡಿದೆನು. ನಿನಗದು ರುಚಿಸಲೊಲ್ಲದು. ಭೀಷ್ಮದ್ರೋಣಾಶ್ವತ್ಥಾಮ ಕೃಪ ಕರ್ಣರೆಂದರೆ ಸಾಮಾನ್ಯರೇ? ದುರ್ಯೋಧನಾದಿ ಮಹಾರಥರನ್ನು ಸಾಕ್ಷಾದಿಂದ್ರನು ಕೂಡ ಗೆಲ್ಲಲಾರನು. ಅಂತಹ ಮಹಾರಥರನ್ನು ಗೆಲ್ಲಲು ಬೃಹನ್ನಲೆಗೇ ಶಕ್ಯವಾಗಲಿ ಇತರರಿಗಲ್ಲ. ಬೃಹನ್ನಲೆಗೆ ಸಮಾನವೀರರು ನ ಭೂತೋ ನ ಭವಿಷ್ಯತಿ; ಸಂಗರ ರಂಗವೆಂದರೆ ಬೃಹನ್ನಲೆಗೆ ಮದುವೆಯ ಮಂಟಪವಿದ್ದಂತೆ. ಆವನು ಸುರಾಸುರ ಮಾನವರೊಟ್ಟುಗೂಡಿ ಬಂದರೂ ಜಯಿಸಬಲ್ಲನು. ಅಂತಹ ಬೃಹನ್ನಲೆಯ ಸಹಾಯವಿರಲಾಗಿ, ನಿನ್ನ ಮಗನೂ ಜಯವನ್ನು ತಂದಿರುವನು.' ಎಂದನು.

ವಿರಾಟನು ಸಿಟ್ಟಾಗಿ, 'ಕಂಕ! ಸ್ನೇಹಿತ, ಬ್ರಾಹ್ಮಣ ಎಂದು ಕ್ಷಮಿಸಿದೆನು. ಎಷ್ಟು ಸಲ ಹೇಳಿದರೂ, ಆ ನಪುಂಸಕನ ಪ್ರಶಂಸೆಯನ್ನು ಬಿಡದಿರುವೆ! ಶಿಕ್ಷಕರಿಲ್ಲದೊಡೆ ಯಾರೂ ಧರ್ಮಮಾರ್ಗದಿ ನಡೆಯರೆಂಬುದು ನಿಜ;' ಎಂದವನೆ, ಕೈಲಿದ್ದ ಅಕ್ಷದಿಂದ, ಧರ್ಮರಾಜನ ಮುಖಕ್ಕೆ ಹೊಡೆದನು. ತತ್‌ಕ್ಷಣವೇ ಧರ್ಮರಾಜನ ನಾಸಿಕಾರಂಧ್ರಗಳಿಂದ ರಕ್ತವು ಹರಿಯತೊಡಗಿತು. ರಕ್ತವು ನೆಲದಲ್ಲಿ ಬೀಳದಂತೆ ಧರ್ಮರಾಜನು ಅದನ್ನು ತನ್ನ ಅಂಜಲಿಯಲ್ಲಿ ಹಿಡಿದು, ದ್ರೌಪದಿಯ ಕಡೆಗೆ ಸಾಭಿಪ್ರಾಯವಾಗಿ ನೋಡಿದನು. ಆಕೆಯು ಆತನ ಇಂಗಿತವನ್ನರಿತು, ಜಲಪೂರ್ಣ ಸುವರ್ಣಪಾತ್ರೆಯಲ್ಲಿ ಕಾರುವ ರಕ್ತವನ್ನು ಹಿಡಿದಳು.

ಆಗ ಉತ್ತರನು ಪುರಜನರು, ಅಂತಃಪುರದವರು ಹಾಕಿದ ಪೂಮಾಲೆಗಳಿಂದ ಶೋಭಿತನಾಗಿ, ಸಂತೋಷದಿಂದ ತಂದೆಯ ಮಂದಿರಕ್ಕೆಂದು ಬಂದು. ಹೇಳಿಕಳಿಸಿದನು. ದ್ವಾರಪಾಲಕನು ವಿರಾಟನನ್ನು ಸೇರಿ, 'ಮಹಾರಾಜ! ಉತ್ತರಕುಮಾರನು ಬೃಹನ್ನಲೆಯೊಡನೆ ವಿಜಯಯುತನಾಗಿ ಬಂದಿರುವನು' ಎಂದು ತಿಳಿಸಿದನು. ವಿರಾಟನು ತತ್‌ಕ್ಷಣವೇ ಅವರಿಬ್ಬರನ್ನೂ ಅಭಿನಂದಿಸಲಿಚ್ಛಿಸಿ, 'ಪ್ರವೇಶ ಮಾಡಿಸು'

ಎಂದು, ತನ್ನ ಸೂತನಿಗೆ ಆಜ್ಞಾಪಿಸಿದನು. ಧರ್ಮರಾಜನು ಆ ಸೂತನನ್ನು ಕರೆದು ಅವನ ಕಿವಿಯಲ್ಲಿ, ಮತ್ತಾರಿಗೂ ಕೇಳಿಸದಂತೆ, 'ಸೂತ ! ಉತ್ತರನನ್ನೊಬ್ಬನನ್ನೆ ಕರೆತಾ ! ಬೃಹನ್ನಲೆ ಬೇಡ ! ಅವನು 'ರಣರಂಗದಲ್ಲಲ್ಲದೆ ಬೇರೆಡೆ ನನ್ನನ್ನು ಗಾಯಪಡಿಸಿ ರಕ್ತಕಾರಿಸಿದವನನ್ನು ಕೊಲ್ಲದೆಬಿಡೆನೆ'ಂದು ಪ್ರತಿಜ್ಞೆ ಮಾಡಿರುವನು ಇಂತು ರಕ್ತಸಿಕ್ತನಾಗಿರುವ ನನ್ನನ್ನು ಕಂಡೊಡನೆ ಕುಪಿತನಾಗಿ ಆ ಮಹಾವೀರನ ವಿರಾಟನನ್ನೂ ಅವನ ಮಂತ್ರಿಸೇನಾ ಸಮುದಾಯವನ್ನೂ ನಿಶ್ಶೇಷವಾಗಿ ಕೊಂದ ಬಿಡುವನು. ಆದುದರಿಂದ ಕುಮಾರನನ್ನೊಬ್ಬನನ್ನೇ ಕರೆತಾ ! ಎಂದು ಹೇ ಕಳಿಸಿದನು.

ಉತ್ತರಕುಮಾರನು ಮಂದಿರವನ್ನು ಪ್ರವೇಶಿಸಿ ತಂದೆಗೆ ವಂದಿಸಿ, ಕಂಕನನ ನೋಡಿ, ನಮಸ್ಕರಿಸಿ, ಅವನ ಮೂಗಿನಿಂದ ಬರುವ ರಕ್ತವನ್ನು ಕಂಡು, ವ್ಯ ಮನಸ್ಕನಾದ ಆ ಮಹಾತ್ಮನಿಗೆ ಉಪಚರಿಸುವ ಸೈರಂಧ್ರಿಯನ್ನೂ ನೋಡಿ ಭಯಭ್ರಾಂತನಾಗಿ, 'ಜನಕ ! ಯಾರೀ ಮಹಾತ್ಮನನ್ನು ಹೊಡೆದರು ? ಯಾರಿಂತ ಪಾಪವನ್ನೆಸಗಿದವರು?' ಎಂದು ಕೇಳಿದನು. ವಿರಾಟನು 'ನಾನೇ ಅಕ್ಷದಿಂ ಹೊಡೆದೆನು. ಷಂಡನನ್ನು ಪೊಗಳಿ, ನಿನ್ನಂತಹ ಮಹಾವೀರನನ್ನು ತೆಗಳುವ ಈ ನಿಗೆ ಇಷ್ಟು ಸಾಲದು !' ಎಂದನು. ಉತ್ತರನಾ ಮಾತಿಗೆ ಗಡಗಡ ನಡುಗಿದನ 'ರಾಜನ್ ! ಬಹಳ ತಪ್ಪಾಯಿತು. ಬೇಗನೆ ಆ ಮಹಾನುಭಾವನ ಕಾಲಿ ಬಿದ್ದು ಕ್ಷಮಿಸಲು ಬೇಡು ! ಬ್ರಹ್ಮದ್ರೋಹವು ವಿಷದಂತೆ ಸಮೂಲವಾಗಿ ನಾಶಪಡಿ ವುದೆಂದು ತಿಳಿ !' ಇಂತು ನುಡಿದ ಮಗನ ಮಾತನ್ನು ತಿಳಿದು ವಿರಾಟ ಪಶ್ಚಾತ್ತಾಪಪಟ್ಟು, ಎದ್ದು ಬಂದು, ಧರ್ಮರಾಜನ ಕ್ಷಮೆಯನ್ನು, ಕಾಲಿಗೆ ಯಾಚಿಸಿದನು. ಆತನು 'ರಾಜನ್ ! ನಿನ್ನ ಮೇಲೆನಗೆ ಸಿಟ್ಟಿಲ್ಲ. ನಿನ್ನನ ಕ್ಷಮಿಸಿರುವೆನು. ನನ್ನ ದೇಹದಿಂದ ಉದುರಿದ ರಕ್ತಬಿಂದುಗಳು ಬೀಳುವಲ್ಲಿ ಸ ನಾಶವಾಗುವುದು. ಆದುದರಿಂದ, ನಿನಗೆ ಕ್ಷೇಮವಾಗಲೆಂದು ರಕ್ತವನ್ನು ನೆಲ ಬೀಳದಂತೆ ಹಿಡಿದಿರುವೆನು. ನಿನ್ನ ತಪ್ಪಿಲ್ಲ. ತಪ್ಪಿದ್ದರೂ ಕ್ಷಮಿಸಿರುವೆನು. ನಾ ಸಿಟ್ಟಾದೆನೆಂದರೆ ಎಂತಹ ಬಲವಂತನೂ ಹಾಳಾಗದಿರನು' ಎಂದು ಸಮಾಧಾನಪಡಿ ರಕ್ತಸ್ರಾವವು ನಿಂತಮೇಲೆ, ತೊಳೆದುಕೊಂಡು, ಬೃಹನ್ನಲೆಯನ್ನು ಕರೆ ಕಳಿಸಿದನ ಅರ್ಜುನನು ಕಂಕವಿರಾಟರಿಗೆ ವಂದಿಸಿ ನಿಂತನು. ಕಂಕನ ಕ್ಷಮೆಯನ್ನು ಪಡೆದ ವಿರಾಟನು, ಸವ್ಯಸಾಚಿಯು ಕೇಳುತ್ತಿರಲು, ತನ್ನ ಮಗನಿಗಿಂತೆಂದನು—

'ಕುಮಾರ ! ನಿನ್ನಿಂದ ನನ್ನ ವಂಶವು ಧನ್ಯವಾಯಿತು. ನಿನ್ನಂತಹ ವ ನನ್ನು ಪಡೆದು, ನಾನು ನಿನ್ನ ತಾಯಿಯು ಧನ್ಯರಾದೆವು. ಶತ್ರು ದುರ್ಧರ್ಷನಾ ಕರ್ಣನಿಂದ ನೀನೆಂತು ಕಾದಾಡಿದೆ ? ಮನುಜಲೋಕದಲ್ಲಿ ಅಸಮಾನವೀರನೆನಿ ಭೀಷ್ಮನಿಂದ ಹೇಗೆ ಹೊಡೆದಾಡಿದೆ ? ಸರ್ವಯಾದವ ಕೌರವರಿಗೂ ಗುರುವಾ ಸರ್ವಶಸ್ತ್ರದಿವ್ಯಾಸ್ತ್ರಚತುರನೂ ಆದ ದ್ರೋಣನಿಂದ ಯುದ್ಧವೆಂತಾಯಿತು? ಮಹ

ರಥ ಶ್ರೇಷ್ಠನಾದ ಅಶ್ವತ್ಥಾಮನನ್ನು ಎಂತು ಎದುರಿಸಿನಿಂತೆ? ಧನವನ್ನು ಕಸಿವ ರಾಜರಿಗೆ ಹೆದರುವ ವಣಿಗ್ಜನರಂತೆ ಶತ್ರುವೀರರು ಕೃಪನಿಗೆ ಹೆದರುವರು. ಅಂತಹ ಕೃಪನಿಗೆ ಎಂತು ವಿರೋಧಿಸಿ, ಉಳಿದುಬಂದೆ? ಬಾಣಜಾಲದಿಂದ ಪರ್ವತವನ್ನು ಬೇಕಾದರೆ ಸೀಳಿಬಿಡುವ ಮಹಾವೀರನಾದ ದುರ್ಯೋಧನನ ಮುಂದೆ ನಿಂತು ಎಂತು ಹೋರಾಡಿದೆ? ನಿನ್ನಿಂದ ನನ್ನ ಗೌರವ ಉಳಿಯಿತು. ನನ್ನ ಶತ್ರುಗಳು ಪರಾಜಿತ ರಾದರು. ಕುರುವೀರರು ಹಿಡಿದಿದ್ದ ನಮ್ಮ ಗೋಧನವನ್ನು—ಹುಲಿಯ ಬಾಯಲ್ಲಿಂದ ಮಾಂಸಖಂಡವನ್ನಂತೆ—ಬಿಡಿಸಿ ತಂದೆ! ಬಹು ಸಂತೋಷವಾಗಿದೆ!'

ಆಗ ಉತ್ತರನಿಂತೆಂದನು—'ಜನಕ! ನಾನಲ್ಲ ಗೋಧನವನ್ನು ಬಿಡಿಸಿದುದು. ನಾನು ಶತ್ರುಗಳನ್ನೂ ಗೆದ್ದು ಬಂದವನಲ್ಲ. ಒಬ್ಬ ದೇವಪುತ್ರನೆನಗೆ ಸಹಾಯವಾಗಿ ಬಂದು, ಎಲ್ಲವನ್ನೂ ಸಾಧಿಸಿಕೊಟ್ಟಿರುವನು. ಅವನೇ ಭೀತನಾಗಿ ಓಡುವ ನನ್ನನ್ನು ನಿಲ್ಲಿಸಿ, ತಾನು ರಥಿಕನಾಗಿ ಕಾದು ಕುರುಗಳನ್ನು ಗೆದ್ದು, ತುರುಗಳನ್ನು ಬಿಡಿಸಿ ತಂದಿರುವನು. ಆ ಮಹಾನುಭಾವನು ಕೃಪ ದ್ರೋಣ ಭೀಷ್ಮ ಕರ್ಣ ಗುರುಪುತ್ರ ದುರ್ಯೋಧನರನ್ನು ಗೆದ್ದು, 'ರಾಜಪುತ್ರನಲ್ಲವೇ ದುರ್ಯೋಧನ! ಹಸ್ತಿನಾವತಿಯಲ್ಲ ಡಗಿದ ಮಾತ್ರದಿಂದ ನೀನು ಉಳಿಯುವೆ ಎಂದು ತಿಳಿಯಬೇಡ! ಪರಾಕ್ರಮಿಸಿ ದೇಹವನ್ನು ಉಳಿಸಿಕೊಳ್ಳಲು ಪ್ರಯತ್ನಿಸು! ಹೂಡು ಯುದ್ಧವನ್ನು! ಆದರಲ್ಲಿ ಸತ್ತರೆ ಸ್ವರ್ಗವಾದೀತು! ಗೆದ್ದರೆ ರಾಜ್ಯವು ಸಿಗುವುದು' ಎಂದು, ಓಡಿಹೋಗುತ್ತಿದ್ದ ದುರ್ಯೋಧನನನ್ನು ರೇಗಿಸಿದನು. ಆಗ ಕುರುರಾಜನು ರೋಷದಿಂದ ಹಿಂದಿರುಗಿ ಬಂದು, ಯುದ್ಧವಾಡಿದನು. ಷಡ್ರಥರು ಬಂದು ಮುತ್ತಿದರು. ದೇವಪುತ್ರನು ಅವರನ್ನೆಲ್ಲ ನಿರ್ಜಿಸಿ, ಮೃಗಮಧ್ಯದಿ ತೂರಿ ಬರುವ ಹುಲಿಯಂತೆ. ಅದ್ಭುತ ವಿಜಯ ನಾಗಿ ಬಂದನು. ನಾನು, ಸತ್ತಂತೆ ಬಿದ್ದಿದ್ದ ಕುರುವೀರರ ಉತ್ತರೀಯಗಳನ್ನು ಉತ್ತರೆಗಾಗಿ ತಂದಿರುವೆನು.' ವಿರಾಟನು ಆಶ್ಚರ್ಯಚಕಿತನಾಗಿ, 'ಉತ್ತರ! ಎಲ್ಲಿ ಆ ಮಹಾವೀರ? ಆ ದೇವಪುತ್ರನನ್ನು ತೋರಿಸು! ಗೋಧನವನ್ನು ಬಿಡಿಸಿ, ಶತ್ರು ಗಳನ್ನು ಜಯಿಸಿಬಂದು, ನಿನ್ನನ್ನು, ಗೋವುಗಳನ್ನು ರಕ್ಷಿಸಿಕೊಟ್ಟ ಆ ಮಹಾ ಪುರುಷನನ್ನು ನಾನು ಸತ್ಕರಿಸಲಿಚ್ಛಿಸುವೆನು' ಎಂದು ಕೇಳಿದನು.

ಉತ್ತರನು, 'ರಾಜನ್! ಅಲ್ಲೇ ಆತನು ಅಂತರ್ಹಿತನಾದನು. ನಾಳೆಯೋ ನಾಡಿದ್ದೋ, ಆ ಮಹಾನುಭಾವನು ಮತ್ತೆ ಕಾಣಸಬಹುದು' ಎಂದು ಆಶ್ವಾಸಿ ಸಿದನು. ಅಲ್ಲಿ ನಟವೇಷದಿಂದ ನಿಂತಿರುವ ಬೃಹನ್ನಳೆಯೇ ಆ ದೇವಪುತ್ರನೆಂದು ರಾಜನು ತಿಳಿಯಲಾರದಿದ್ದನು. ಆಗ ಸವ್ಯಸಾಚಿಯು ಧರ್ಮಜನನ್ನು ವಿರಾಟನು ಅಕ್ಷದಿಂದ ಹೊಡೆದುದನ್ನು ತಿಳಿದು, ಭೀಮಸೇನನಿಗೂ ತಿಳಿಸಿದನು. ಅವರೀರ್ವರು ಅತ್ಯಂತ ಕುಪಿತರಾಗಿ, ವಿರಾಟನನ್ನು ಸಪರಿವಾರನಾಗಿ ನಾಶಮಾಡಲೆಣಿಸುವುದನ್ನರಿತು, ಧರ್ಮರಾಜನು ಅವರನ್ನು ಶಾಂತಪಡಿಸಿ, 'ನಾಳೆ ನಾವು ನಿಜರೂಪದಿಂದ ವಿರಾಟನ ಸಭೆಯಲ್ಲಿ ವಿರಾಜಿಸೋಣ! ಆಗ ಅವನು ಮಾಡಿದ ತಪ್ಪನ್ನರಿತು, ನಮಸ್ಕರಿಸಿ,

*

ಕ್ಷಮಾಪ್ರಾರ್ಥನೆಯನ್ನು ಮಾಡದಿದ್ದರೆ ನಿಮ್ಮಿಂದ ವಧ್ಯನೆನಿಸುವನು' ಎಂ
ನುಡಿದನು.

ಅರ್ಜುನನು ತಾನು ಉತ್ತರನಿಂದ ತರಿಸಿದ್ದ ವಸ್ತ್ರಗಳನ್ನು ಉತ್ತರೆಗೆ ಕೊಟ
ಅವಳನ್ನು ಸಂತೋಷಪಡಿಸಿದನು. ಮುಂದಿನ ಕಾರ್ಯವನ್ನು ನಿಶ್ಚಯಿಸಿ, ಉತ್ತ
ನಿಗೂ ತಿಳಿಸಿ, ಕುಂತೀಪುತ್ರರು ನಿಶ್ಚಿಂತರಾಗಿ, ದಿನಶೇಷವನ್ನು ಕಳೆದರು.

ಇಂತು ಕೀಚಕರನ್ನು ಸಂಹರಿಸಿ, ಆ ಪಾಪಿಗಳನ್ನು ತಮಸ್ಸಿಗೆ ಕಳ
ಭೀಮಸೇನನು ದಕ್ಷಿಣ ದಿಕ್ಕಿನ ಗೋಗಣ ಸಂರಕ್ಷಣದಿಂದ ಬಂದ ಮಹಾ ಪುಣ್ಯವ
ಶ್ರೀಶನಿಗರ್ಪಿಸಿದನು. ಅರ್ಜುನನೂ ಉತ್ತರಗೋವಿಮೋಚನ ಪುಣ್ಯವ
ಶ್ರೀಕೃಷ್ಣಚರಣಾರವಿಂದಗಳಿಗರ್ಪಿಸಿ, ಭೀಮಾದಿ ಸೋದರ ಪ್ರೀತಿ ವಿಷಯನಾದ

ಶ್ರೀಶದಯದಿಂದ ಅಜ್ಞಾತವಾಸವನ್ನು ಮುಗಿಸಿ, ಪಾಂಡವರು ಮರು ದಿನ
ಸ್ನಾತಾಲಂಕೃತರಾಗಿ, ಧವಳಾಂಬರಗಳನ್ನುಟ್ಟು, ಸರ್ವಾಭರಣಗಳನ್ನಿಟ್ಟು, ವಿರ
ಸಭೆಯನ್ನು ಪ್ರವೇಶಿಸಿದರು. ಮತ್ತ ಮಾತಂಗ ಗಣದಂತೆ ವಿರಾಜಿಸುವ ಪಾಂಡವ
ಭೂಮಿಪಾಲಾಸನಗಳಲ್ಲಿ ಕುಳಿತು, ಅಗ್ನಿಕುಂಡಗಳಲ್ಲಿ ಬೆಳಗುವ ಅಗ್ನಿಗಳ
ಕಂಗೊಳಿಸಿದರು.

ವಿರಾಟನು ರಾಜಕಾರ್ಯಗಳನ್ನು ನೆರವೇರಿಸಲು ಸಭೆಗೆ ಬಂದು, ತನ್ನ ಆಸನ
ರುವ ಕಂಕನನ್ನೂ, ಇತರ ರಾಜಾಸನಾಸೀನರಾದ ವಲಲ ಬೃಹನ್ನಲಾ ತಂತ್ರೀಪ
ದಾಮಗ್ರಂಥಿಗಳನ್ನೂ ನೋಡಿ, ಸ್ವಲ್ಪ ಯೋಚಿಸಿ, ಸಿಟ್ಟಿನಿಂದ, ದೇವತಾಮಧ್ಯ
ವಿರಾಜಿಸುವ ದೇವರಾಜನಂತಿದ್ದ ಧರ್ಮರಾಜನನ್ನು ಕಂಕನೆಂದು ತಿಳಿದು, 'ನನ್ನೊ
ದ್ಯೂತಕ್ರೀಡಾರತನಾಗಿರಲೆಂದು ನಿನ್ನನ್ನು ನನ್ನ ಸಭಾಸ್ತಾರನಾಗಿ ಮಾಡಿದೆನು ನೀ
ಆದರೆ ರಾಜಾಸನದಲ್ಲಿ ರಾಜನಂತೆ ಅಲಂಕೃತನಾಗಿ ಕೂತಿರುವೆ! ಏಕೆ?' ಎಂ
ಕೇಳಿದನು.

ಆ ಮಾತನ್ನಾಲಿಸಿ ತಂದೆಯನ್ನು ಎಚ್ಚರಿಸುತ್ತ ಉತ್ತರನು 'ಜನಕ!
ಮಹಾನುಭಾವನು ಧರ್ಮರಾಜನು. ಇವರು ಪಾಂಡವರು. ತಪ್ಪು ಮಾಡಿರುವೆ
ಕ್ಷಮೆಬೇಡು!' ಎಂದನು. ವಿರಾಟನು ಭಯಾಕ್ರಾಂತನಾದನು. ಧರ್ಮಜನ
ವಂದಿಸಿ 'ಕ್ಷಮಿಸೆಂ'ದು ಬೇಡಿದನು. ಆಗ ಅರ್ಜುನನು ವಿರಾಟನನ್ನು ಸಮಾಶ್ವಸಿ
ಇಂತು ನುಡಿದನು—

'ರಾಜನ್! ಈತನಾರೆಂದು ತಿಳಿದೆ? ಇಂದ್ರನ ಅರ್ಧಾಸನದಲ್ಲಿಯಾದ
ಕೂಡಲರ್ಹನಾದ ಮಹಾಮಹಿಮನು; ಬ್ರಾಹ್ಮಣ ಭಕ್ತನು, ಯಜ್ಞಶೀಲನು, ದ
ವ್ರತನು, ವೇದಾದಿಸಚ್ಛಾಸ್ತ್ರ ಚತುರನು, ದಾನಶೌಂಡನು ಆದ ಪಾಂಡವ ಜ್ಯೇ
ನೆಂದು ತಿಳಿ! ಧರ್ಮವೇ ಮೂರ್ತಿ ಪೆತ್ತು ಬಂದಂತಿರುವ ಧರ್ಮರಾಜನು ತಪಸ್ವಿಯ
ವೀರ್ಯಯುತನು, ಬುದ್ಧಿ ಸಂಪನ್ನನು, ಅಸ್ತ್ರಶಸ್ತ್ರ ನಿಪುಣನು ಆಗಿರುವನು. ಈತ
ಸಮರಾದವರು ಮೂಲೋಕದಲ್ಲಿಲ್ಲ. ದೇವ ದಾನವ ಮಾನವಾದಿಗಳಲ್ಲಿ ಈತ

ಉತ್ತಮನಿರುವವನು. ಪುರಜನರಿಗೆ ಪ್ರಾಣಕ್ಕಿಂತಲು ಪ್ರಿಯನಾಗಿರುವನು. ಅನೇಕ ಯಜ್ಞಗಳನ್ನು ಮಾಡಿ, ಭೂರಿದಕ್ಷಿಣೆಗಳಿಂದ ವಿಪ್ರರನ್ನು, ಮೃಷ್ಟಾನ್ನಾದಿಗಳಿಂದ ಎಲ್ಲ ಪ್ರಜರನ್ನೂ ಸಂತೋಷಪಡಿಸಿರುವವನು. ಈ ರಾಜರ್ಷಿಯ ಧವಳಕೀರ್ತಿಯು ಸರ್ವ ಲೋಕಗಳಲ್ಲಿಯೂ ಹರಡಿದೆ. ಶಕ್ರಕುಬೇರರಂತೆ ಧನವಂತನು, ಮನುರಾಜನಂತೆ ಲೋಕ ರಕ್ಷಕನು, ಪರ್ಜನ್ಯನಂತೆ ಪ್ರಜಾನುಗ್ರಹಕಾರಕನು ಆದ ಧರ್ಮರಾಜನ ಯಶಶ್ಚಂದ್ರಿಕೆಯಲ್ಲಿ ಮಿಂದು ಆನಂದಿಸದವರುಂಟೇ? ಮಹಾರಾಜನಾಗಿ ಇಂದ್ರಪ್ರಸ್ಥದಲ್ಲಿ ಮೆರೆವಾಗ, ಹತ್ತುಸಾವಿರ ಹಸ್ತಿ ಸಮೂಹವು, ಮೂವತ್ತುಸಾವಿರ ರಥಗಳು, ಸಾವಿರಾರು ಕುದುರೆಗಳು, ಇವನನ್ನು ಸೇವಿಸಿಬರುತ್ತಿದ್ದವು. ಸುಮೃಷ್ಟ ಮಣಿಕುಂಡಲರಾದ ಸೂತರೆಂಟುನೂರು ಜನರು ಮಾಗಧರಿಂದೊಡಗೂಡಿ ಇವನ ಮಹಿಮೆಯನ್ನು ಪಾಡುತ್ತಿದ್ದರು. ಕುರುಕುಮಾರರು ಕಿಂಕರರಂತೆ ಸೇವಿಸುತ್ತಿರಲು, ರಾಜರು ಕಪ್ಪಗಳನ್ನೊಪ್ಪಿಸುತ್ತಿರಲು, ಸೂರ್ಯನಂತೆ ಬೆಳಗುವ ಚಕ್ರವರ್ತಿ ಇವನು. ಈ ದಾನಶೀಲನ ಮನೆಯಲ್ಲಿ ಎಂಭತ್ತೆಂಟು ಸಾವಿರ ಸ್ನಾತಕರು ನಿತ್ಯವೂ ಸ್ವರ್ಣಪಾತ್ರೆಗಳಲ್ಲಿ ಮೃಷ್ಟಾನ್ನವನ್ನುಣ್ಣುತ್ತಿದ್ದರು. ವೃದ್ಧ ಅನಾಥ ಪಂಗು ಬಧಿರ ಮೂಕ ಅಂಧರಿಗೆ ಆಶ್ರಯನಾಗಿ ಈತನು ಕಲ್ಪವೃಕ್ಷವನ್ನು ಮರೆಸುತ್ತಿದ್ದನು. ಪ್ರಜರನ್ನು ಮಕ್ಕಳಂತೆ ತಿಳಿದು ಧರ್ಮದಿಂದ ಪಾಲಿಸಿದನು. ಧರ್ಮ, ದಯೆ, ಅಕ್ರೋಧ, ಪ್ರಸಾದ, ಸತ್ಯ ಮುಂತಾದ ಗುಣಗಳಿವನಲ್ಲಿ ಮನೆಮಾಡಿಕೊಂಡಿರುವವು. ಇವನ ವಿರೋಧದಿಂದ ಕರ್ಣ ದುಶ್ಶಾಸನ ಶಕುನಿ ಸಮೇತನಾಗಿ ದುರ್ಯೋಧನನು ಕುದಿಯುತ್ತಿರುವನು. ಇವನ ಗುಣಗಣವನ್ನು ಎಣಿಸಲಾಗದು. ಇಂತಪ ಧರ್ಮರಾಜನು ನಿನ್ನ ಸಿಂಹಾಸನವನ್ನೇರಲು ಅರ್ಹನಾಗಲಾರನೇ ?'

ಆ ಮಾತನ್ನಾಲಿಸಿ, ವಿರಾಟನು 'ಈ ಮಹಾತ್ಮನು ಧರ್ಮರಾಜನು ಸರಿ! ಮತ್ತೆ ಭೀಮಾರ್ಜುನ ನಕುಲಸಹದೇವರಾರು ? ದ್ರೌಪದೀದೇವಿಯು ಎಂತಿರುವಳು ? ಅದನ್ನೆಲ್ಲ ನನಗೆ ತಿಳಿಸಿಕೊಡು !' ಎಂದು ಕೇಳಿದನು.

ಅರ್ಜುನನು, 'ರಾಜನ್! ಕೇಳು! ನಿನ್ನ ಮನೆಯಲ್ಲಿ ಮಹಾನಸಾಧ್ಯಕ್ಷನಾಗಿದ್ದ ವಲ್ಲವನೇ ಭೀಮಸೇನನು. ಆ ಮಹಾತ್ಮನಿಲ್ಲಿರುವನು ನೋಡು! ಹಿಂದೆ ಗಂಧಮಾದನದಲ್ಲಿ ಕ್ರೋಧವಶರನ್ನೂ ಮಣಿಮದ್ದೈತ್ಯನನ್ನೂ ಸಂಹರಿಸಿ, ಕೃಷ್ಣೆ ಬೇಡಿದ ಸೌಗಂಧಿಕ ಸುಮಗಳನ್ನು ತಂದಿತ್ತ ಮಹಾವೀರನಿವನು. ಹಿಡಿಂಬ ಬಕ ಕಿಮ್ಮೀರಜಟಾಸುರರನ್ನು ಕೊಂದು ಅಂಧಂತಮದಲ್ಲಿ ಕೆಡಹಿದ ಈತನ ವಿಕ್ರಮವು ಲೋಕವಿಖ್ಯಾತವಾಗಿ, ಸುಯೋಧನ ಹೃದಯಶಲ್ಯವಾಗಿದೆ. ಈ ಮಹಾಬಲನೇ ಗಂಧರ್ವವ್ಯಾಜದಿಂದ ದುಷ್ಟ ಕೀಚಕನನ್ನು ಮಟ್ಟಿಕ್ಕಿ ಉಪಕೀಚಕರನ್ನೂ ನಾಶಮಾಡಿದವನು. ನಿನಗಾಗಿ ವಿನೋದ ಕ್ರೀಡಾರತನಾಗಿ ಸಿಂಹವ್ಯಾಘ್ರಭಲ್ಲೂಕಗಳೊಡನೆ ಹೋರಾಡಿ, ಅವನ್ನು ಕೊಂದು ಕೆಡಹಿದ ಅತ್ಯದ್ಭುತ ಬಾಹುಬಲನೂ, ದಕ್ಷಿಣ ಗೋಗ್ರಹಣದಲ್ಲಿ ನಿನ್ನನ್ನು ಸುಶರ್ಮನಿಂದ ಬಿಡಿಸಿ, ರಕ್ಷಿಸಿದ ಮಹಾಪರಾಕ್ರಮಿಯೂ ಭೀಮಸೇನನೇ! ನಿನ್ನ ಅಶ್ವಪಾಲಕ

ನಾಗಿದ್ದವನೇ ನಕುಲನು. ಗೋಶಾಲಾಪಾಲಕನಾಗಿದ್ದವನೇ ಸಹದೇವನು. ಶೃಂಗಾ ವೇಷಾಭರಣರೂ, ದಿವ್ಯರೂಪರೂ, ಯಶೋವಿಶಾಲರೂ ಆದ ನಕುಲಸಹದೇವ ಸಾವಿರ ಮಹಾರಥರೊಡನೆ ಕಾದು ಗೆಲ್ಲಬಲ್ಲವರು. ಅವರೂ ನಿನಗೆ ದಕ್ಷಿಣಗೋಗ್ರಹ ದಲ್ಲಿ ಸಹಾಯಕರಾಗಿದ್ದರು.

'ಇನ್ನು ದ್ರೌಪದಿಯನ್ನು ತಿಳಿಸುವೆನು ಕೇಳು ! ಯಾವ ಪದ್ಮಪತ್ರವಿಶಾ ಲೋಚನೆಗೆ ಮರುಳಾಗಿ, ಕೀಚಕನು ಪುಡಿಯಾದನೋ, ಸೈರಂಧ್ರಿವೇಷದಿಂದ ನಿನ ಅಂತಃಪುರದಲ್ಲಿರುವ ಪದ್ಮಗಂಧಿ ಯಾವಳೋ, ಅವಳೇ ದ್ರೌಪದಿ ಎಂದು ತಿಳಿ! ನಾನೆ ಅರ್ಜುನ. ಇನ್ನೇಕೆ ಮುಚ್ಚಿಡಲಿ ? ಭೀಮಸೇನನ ಪ್ರಿಯಾನುಜನು, ಯಮಳ ಅಗ್ರಜನೂ ಆದ ನನ್ನ ವಿಷಯ ನಿನಗೆ ತಿಳಿದಿರಬೇಕು !

'ಮಹಾರಾಜ ! ನಮ್ಮ ಅಜ್ಞಾತವಾಸದ ಒಂದು ವರ್ಷವನ್ನು ನಿನ್ನೂರ ನಿರ್ವಿಘ್ನವಾಗಿ ಕಳೆದಿರುವೆವು. ಗರ್ಭವಾಸದಲ್ಲಿರುವ ಶಿಶುಗಳಂತೆ ಗುಪ್ತವಾಗಿ, ಕೆ ದಿನಗಳ ಹಿಂದೆ ಅಜ್ಞಾತವಾಸವು ಮುಗಿದುದರಿಂದ, ಇಂದು ಪ್ರಕಟರಾಗಿರುವೆವು.'

ಆಗ ಭೀಮಸೇನನು 'ವಿರಾಟರಾಜ ! ಷಂಡರೂಪದಿಂದ ಪ್ರಚ್ಛನ್ನನಾಗಿ, ನಿನ ಅಂತಃಪುರದಲ್ಲಿ ನಾಟ್ಯಾಚಾರ್ಯನಾಗಿದ್ದ ಬೃಹನ್ನಲೆಯೇ ಅರ್ಜುನನು. ಈ ಮಹ ವೀರನು ಆಖಂಡಲನನ್ನು ಸಹಿಸಿ, ಖಾಂಡವವನ್ನು ಅಗ್ನಿದೇವನಿಗಾಹುತಿಯಾಗಿತ್ತನು ಇಂದ್ರಾಜ್ಞೆಯಂತೆ ಕಾಲಕೇಯನಿವಾತಕವಚರನ್ನು ಗೆದ್ದು, ದಿವ್ಯಾಸ್ತ್ರಗಳನ್ನು ಪಡೆದ ಬಂದನು. ರುದ್ರನನ್ನು ಮೆಚ್ಚಿಸಿ ಪಾಶುಪತವನ್ನು ಪೊಂದಿರುವನು. ದುರ್ಯೋಧ ನನ್ನು ಚಿತ್ರಸೇನನ ಸೆರೆಯಿಂದ ಬಿಡಿಸಿದನು' ಎಂದು ಹೇಳುವಾಗ, ಆತನ ಅಪ್ಪ ಯನ್ನು ಪಡೆದು, ಉತ್ತರನು ಇಂತು ವರ್ಣಿಸಿದನು—

'ಜನಕ ! ಕನಕವರ್ಣನು, ಸಿಂಹಸಂಹನನನು, ಪ್ರಚಂಡ ಘೋಣನು, ದೀರ್ಘ ನೇತ್ರನಾದ ಮಹಾತ್ಮನೇ ಧರ್ಮರಾಜನು. ಮತ್ತಗಜರಾಜಗಮನನು, ತಪ್ತಕಾಂಚ ಗೌರನು, ವಿಶಾಲಭುಜನು, ದೀರ್ಘಬಾಹುದಂಡನು, ಆದ ಮಹಾಬಲನೇ ಭೀಮ ಸೇನನು. ಆತನ ಪಕ್ಕದಲ್ಲಿರುವ ಮಹಾಧನುರ್ಧರನು, ಧವಳಸುಂದರ ಶರೀರನು, ಪದ ವಿಶಾಲನೇತ್ರನು ವಿಶಾಲವಕ್ಷನು ಆದ ಮಹಾವೀರನೇ ಅರ್ಜುನನು. ರಾಜವರ ಇನ್ನೊಂದು ಬಗಲಲ್ಲಿರುವ ನರವರರು, ಇಂದ್ರೋಪೇಂದ್ರವಿಕ್ರಮರಾದ ನಕುಲ ಸಹದೇವರು. ಮನುಜಲೋಕದಲ್ಲಿ ಅವರಿಗೆ ಸಮರಾದ ರೂಪವಂತರಿಲ್ಲ, ಶೀಲವಂ ರಿಲ್ಲ, ಬಲವಂತರಿಲ್ಲ, ಅಲ್ಲಿ ನಿಂತಿರುವ ಕನಕಾಂಗಿಯೇ ದ್ರೌಪದೀದೇವಿಯು. ಮೂರ್ತಿ ಮತ್ತಾಗಿಳಿದ ಸೂರ್ಯಪ್ರಭೆಯಂತೆ ಬೆಳಗುವ, ಎರಡನೇ ಶ್ರೀದೇವಿಯಂತಿರು ಕೃಷ್ಣಾದೇವಿಯು ಈ ಮಹಾಸಾಧ್ವಿ ಎಂದು ಬೇರೆ ಬೇರೆಯಾಗಿ ಬಣ್ಣಿಸಿ, ಅರ್ಜುನ ವಿಕ್ರಮವನ್ನು ನೆನೆದು ಮತ್ತೆ ಇಂತೆಂದನು—

'ಇಂದು ನಮ್ಮ ಗೋಗಣವನ್ನುಳಿಸಿದ ದೇವಪುತ್ರನಾರೆಂದು ತಿಳಿದೆ? ಆ ಮಹ ವೀರನೇ ಅರ್ಜುನನು. ಶತ್ರುಮೃಗಗಳಿಗೆ ವೀರಸಿಂಹನಾಗಿ, ರಥಗಳಿಗೆ ಪಿಡುಗಾ

ಮತ್ತಮಾತಂಗಗಳನ್ನುರುಳಿಸಿ, ಕುದುರೆಗಳನ್ನು ಕೆಡಹಿ, ವೀರರನ್ನು ಚೆಂಡಾಡಿದ ಮಹಾಪರಾಕ್ರಮನ ವೀರವಿಹಾರವನ್ನು ನಾನು ಕಣ್ಣಾರಕಂಡು ಬೆರಗಾದೆನು. ಈತನೇ ಏಕವೀರನಾಗಿ, ಸಕಲಕೌರವ ವೀರರನ್ನು ಗೆದ್ದು, ನಮ್ಮ ಗೋಗಣವನ್ನು ಉಳಿಸಿದ ವನು. ಈತನ ಶಂಖಧ್ವಾನದಿಂದ ನನ್ನ ಕಿವಿಗಡಚಿಕ್ಕಿದೆ. ಈತನೇ ಭೀಷ್ಮಾದಿ ಮಹಾ ರಥರನ್ನು ಕಾದುಗೆದ್ದು. ನನ್ನನ್ನು ಕಾಪಾಡಿದವನು. ನಾನು ಭೀತನಾಗಿ, ರಥದಿಂದಿ ಳಿದು ಬರುತ್ತಿದ್ದಾಗ, ನನ್ನನ್ನು ತಡೆದು, ಧೈರ್ಯವನ್ನು ತುಂಬಿ, ಸಾರಥಿಯನ್ನಾಗಿ ಕೂಡಿಸಿ, ತಾನು ರಥಿಕನಾದನು. ಈತನ ಬಾಹುಬಲವನ್ನಾಶ್ರಯಿಸಿ, ಜೀವದಿಂದ ಹಿಂದಿರುಗಿ ಬಂದಿರುವೆನು' ಎಂದು ಉತ್ತರನು ಪಾಂಡವರಿಗೆ ವಂದಿಸಿ, ನಿಂತನು.

ವಿರಾಟನು ಆನಂದಭರಿತನಾಗಿ 'ಉತ್ತರ! ನಮಗಿಂತು ಉಪಕರಿಸಿ, ನನ್ನ ಮತ್ತು ನಿನ್ನ ಪ್ರಾಣಗಳನ್ನು ಕಾಪಾಡಿದ ಪಾಂಡವರಿಗೆ ನಾನು ಕೃತಜ್ಞನಾಗಿರುವೆನು. ನಿನಗೆ ಸಮ್ಮತವಾದರೆ ನಮ್ಮ ಉತ್ತರೆಯನ್ನು ಪಾರ್ಥನಿಗೆ ಕೊಡೋಣ' ಎಂದನು. ಉತ್ತರನು, 'ಆರ್ಯ! ಪಾಂಡವರು ಪರಮಪೂಜ್ಯರು. ಅವರನ್ನು ತಿಳಿದು ಸನ್ಮಾನಿಸುವ ಯೋಗವೂ ನಮಗೆ ಒದಗಿದೆ. ಪೂಜನಾರ್ಹರನ್ನು ಪೂಜಿಸು!' ಎಂದು ಸಂತೋಷದಿಂದ ಉತ್ತರಿಸಿದನು.

ವಿರಾಟನು, 'ಕುಮಾರ! ನಾನು ಸುಶರ್ಮನ ಕೈಲಿಸಿಕ್ಕು ಭೀಮಸೇನನ ದಯ ದಿಂದ ವಿಮುಕ್ತನಾದೆನು. ದಕ್ಷಿಣದ ಗೋಗಣವು ಇವರ ವೀರವಿಲಾಸದಿಂದುಳಿದು ಬಂತು. ಇಂತಹ ಪರಮೋಪಕಾರಿಗಳನ್ನು ಎಂತು ಪೂಜಿಸಿ, ಸತ್ಕರಿಸಿದರೂ ಸಾಲದು' ಎಂದು ಕುಮಾರಾಮಾತ್ಯಸಹಿತನಾಗಿ, ಧರ್ಮರಾಜನನ್ನು ಸಮೀಪಿಸಿ, ಅರ್ಜುನ ನನ್ನೂ ಭೀಮಸೇನನನ್ನೂ ಕೃತಜ್ಞನಾಗಿ ನೋಡುತ್ತಿಂತೆಂದನು—

'ಧರ್ಮರಾಜ! ದೈವಾನುಗ್ರಹದಿಂದ ನೀವೆಲ್ಲರೂ ವನವಾಸಾಜ್ಞಾತವಾಸಗಳನ್ನು ಕಳೆದು ಪಾರಾಗಿರುವಿರಿ! ಇದೆಲ್ಲವೂ ನಮಗೆ ಮಹಾನಂದಸಂದಾಯಕವಾಗಿದೆ. ನಿಮ್ಮನ್ನು ಪೀಡಿಸಿದ ದುಷ್ಟಾತ್ಮರು ತಪ್ಪದೆ ನಾಶವಾಗುವರು. ನಾನೆಂದಿಗೂ ನಿಮ್ಮ ಉಪಕಾರವನ್ನು ಮರೆಯಲಾರೆನು. ನಿಮ್ಮನ್ನು ತಿಳಿಯದೆ, ನಿಮ್ಮಿಂದ ಸೇವೆ ಸ್ವೀಕರಿ ಸಿದ ತಪ್ಪನ್ನು ಮನ್ನಿಸಿ! ಮತ್ತೂ ನಾವೇನಾದರೂ ತಪ್ಪಾಡಿದ್ದರೆ ಅದನ್ನೂ ಮನ ದಲ್ಲಿಡದೆ, ಕ್ಷಮಿಸಿ! ಈ ನನ್ನ ರಾಜ್ಯ, ನನ್ನ ಸಿರಿ, ಕೋಶ, ಸೈನ್ಯ—ಸರ್ವವನ್ನೂ ಧರ್ಮಮೂರ್ತಿಯಾದ ನಿನಗೆ ಸಮರ್ಪಿಸುತ್ತಿರುವೆನು. ಸ್ವೀಕರಿಸಿ, ಅನುಗ್ರಹಿಸು! ಮತ್ತೂ ನನ್ನ ಕುಮಾರಿಯಾದ ಉತ್ತರೆಯನ್ನೂ ಅರ್ಜುನನಿಗಾಗಿ ಸ್ವೀಕರಿಸು!' ಎಂದು ಪ್ರಾರ್ಥಿಸಿದನು.

ಆ ಮಾತನ್ನಾಲಿಸಿ ನಾಚಿ, ಧರ್ಮರಾಜನು ಪಾರ್ಥನಕಡೆ ನೋಡಿದನು. ಸವ್ಯ-ಸಾಚಿಯು ವಿರಾಟನಿಗಿಂತೆಂದನು. 'ರಾಜನ್! ನಿನ್ನ ಮಗಳನ್ನು ಸ್ವೀಕರಿಸುವೆವು; ನನಗಲ್ಲ; ಅಭಿಮನ್ಯು ಕುಮಾರನಿಗಾಗಿ! ಮತ್ಸ್ಯರಾಜ ಭಾರತರಾಜರ ಸಂಬಂಧವು

ಅನೂಚಾನವಾಗಿದೆ ; ಅಂತೆಯೇ ಅತಿಪ್ರಶಸ್ತವಾಗಿದೆ !' ಎಂದ ಅರ್ಜುನನ ಮಾತನ್ನಾಲಿಸಿ ಧರ್ಮಜನು ಆನಂದಪಟ್ಟನು.

ವಿರಾಟನು 'ಅರ್ಜುನ ! ನಾನಿತ್ತ ಕುವರಿಯನ್ನು ನೀನೇಕೆ ಸ್ವೀಕರಿಸಲಾರೆ ?' ಎಂದು ಕೇಳಿದನು. ಅರ್ಜುನನು 'ರಾಜನ್! ಕೇಳು! ನಾನು ನಾಟ್ಯಗುರುವಾಗಿ ಆಕೆಗೆ ಕಲಿಸುತ್ತಾ, ಸದಾ ಅಂತಃಪುರದಲ್ಲಿ ಇರುತ್ತಿದ್ದೆನಲ್ಲವೇ ? ಅವಳು ನನ್ನಲ್ಲಿ ತಂದೆ ಎಂಬ ವಿಶ್ವಾಸವನ್ನಿಟ್ಟು ನಡೆಯುತ್ತಿದ್ದಳು. ನಾನೂ ಆಕೆಯನ್ನು ಮಗಳಂತೆ ಭಾವಿಸಿದೆನು. ನಾನೋ ನರ್ತನಗೀತಕೋವಿದನು. ಒಂದುವರ್ಷವಿಡೀ ಆವಳೊಡನೆ ಸಲುಗೆಯಿಂದ ವರ್ತಿಸಿದೆನು. ನಮ್ಮಿಬ್ಬರಲ್ಲಿ ಕಲಂಕವಿಲ್ಲ; ಆದರೂ ಲೋಕರು ಕಾಕರು! ಅವರು ಏನಾದರೂ ಶಂಕಿಸಿ ಮಾತಾಡುವರು ! ಆದುದರಿಂದ ಅವಳನ್ನು ನನ್ನ ಮಗನಿಗಾಗಿ ತೆಗೆದುಕೊಂಡು, ಅವಳಿಗೂ ನನಗೂ ಬರಬಹುದಾದ ಅಪನಿಂದೆಯನ್ನು ನಿವಾರಿಸಿದೆನು. ನಾನು ಶುದ್ಧನು ; ಜಿತೇಂದ್ರಿಯನು; ದಾಂತನು ; ಅವಳೂ ಶುದ್ಧಳೆಂದು ತೋರಲೆಂದೇ ನನ್ನ ಸೊಸೆಯನ್ನಾಗಿ ಸ್ವೀಕರಿಸುವೆನು. ಸೊಸೆ ಎಂದರೆ ಮಗಳಂತಲ್ಲವೇ ?' ಎಂದು ಸಮಾಧಾನಪಡಿಸಿ, ಸರ್ವರನ್ನೂ ಸಂತೋಷಪಡಿಸಿದನು.

ವಿರಾಟನೂ ಆನಂದದಿಂದ, 'ಸರಿ! ನನ್ನ ಮಗಳನ್ನು ಅಭಿಮನ್ಯು ಕುಮಾರನಿಗೇ ಕೊಡುವೆನು. ಶ್ರೀವಾಸುದೇವನ ಅಳಿಯ ಸಾಕ್ಷಾತ್ ಅಳಿಯನಾಗುವ ಯೋಗ ನನಗೊದಗಿತೆಂದರೆ ಅದು ಶ್ರೀಶಾನುಗ್ರಹವೇ ಸರಿ! ಚಕ್ರಹಸ್ತನ ಬಂಧುವು, ಸರ್ವಶಸ್ತ್ರಾಸ್ತ್ರ ವಿದ್ಯಾಸಿಂಧುವು ಆದ ಅಭಿಮನ್ಯುವೆನಗೆ ಬಂಧುವಾದನು. ನಾನು ಧನ್ಯನಾದೆನು ! ಕುಂತೀಪುತ್ರನಾದ ಧನಂಜಯನು ಧರ್ಮನಿಷ್ಠನು, ಜ್ಞಾನನಿಷ್ಠನು ಎಂದು ಲೋಕಕ್ಕೆ ವಿದಿತವಾಯಿತು. ಪಾಂಡವರೇ ! ಮುಂದಿನ ಕಲ್ಯಾಣ ಕಾರ್ಯವನ್ನು ಆಲೋಚಿಸಿ, ನನಗೆ ಆಜ್ಞಾಪಿಸಿದರೆ, ಅಂತೆಯೇ ಸರ್ವವನ್ನೂ ಸಿದ್ಧಪಡಿಸುವೆನು.' ಎಂದು ವಿಜ್ಞಾಪಿಸಿದನು.

ಧರ್ಮರಾಜ ವಿರಾಟರು ಶ್ರೀಕೃಷ್ಣನನ್ನು ಕರೆತರಲು ದೂತರನ್ನು ಕಳಿಸಿಕೊಟ್ಟರು. ಅಜ್ಞಾತವಾಸವನ್ನು ಮುಗಿಸಿ, ಯಶಸ್ವಿಗಳಾದ ಪಾಂಡವರ ವಾರ್ತೆಯನ್ನು ಕೇಳಿ,ನಿತ್ಯಾನಂದ ಜ್ಞಾನನಿಧಿಯಾದ ಶ್ರೀಕೃಷ್ಣನು ಆನಂದಪಟ್ಟು, ಎಲ್ಲ ಬಂಧುಜನರಿಂದ ಕೂಡಿ ಅಭಿಮನ್ಯು ಕುಮಾರನನ್ನೂ ಕರೆದುಕೊಂಡು ಪಾಂಡವರನ್ನು ಸೇರಿದನು. ಕಾಶಿರಾಜ ಶೈಬ್ಯರು ಪಾಂಡವಾಭ್ಯುದಯವನ್ನು ಕಂಡು ಪ್ರಹರ್ಷಿತರಾದರು. ಒಂದೊಂದು ಅಕ್ಷೌಹಿಣಿಯೊಡನೆ ಅವರು ಪಾಂಡವರನ್ನು ಸೇರಬಂದರು. ದ್ರುಪದರಾಜನೊಂದು ಅಕ್ಷೌಹಿಣಿ ಸೇನೆಯನ್ನು ತಂದನು. ಆತನ ಹಿಂದೆ ದ್ರೌಪದೀಸುತರು ಐವರು, ಶಿಖಂಡಿ, ಧೃಷ್ಟದ್ಯುಮ್ನ, ದುರ್ಧರ್ಷ ಮೊದಲಾದ ಪಾಂಚಾಲರಾಜಪುತ್ರರು ಬಂದರು. ಯಜ್ಞ-ದಾನಶೀಲರಾದ ಆ ಮಹಾರಾಜರನ್ನು ಎದುರ್ಗೊಂಡು, ವಿರಾಟನು ಕರೆತಂದು, ಸತ್ಕರಿಸಿದನು. ಶ್ರೀಕೃಷ್ಣನು ಬಲರಾಮ, ಕೃತವರ್ಮ, ಸಾತ್ಯಕಿ, ಅಕ್ರೂರ, ಸಾಂಬ, ನಿಶಠಾದಿ ಯದುವೀರರಿಂದಲು, ಮದುಮಗನಾದ ಅಭಿಮನ್ಯುವಿನಿಂದಲು, ತಂಗಿ

ಸುಭದ್ರೆಯಿಂದಲೂ ಕೂಡಿ ಬಂದನು. ಇಂದ್ರಸೇನಾದಿ ಸಾರಥಿಗಳು ಪಾಂಡವರ ರಥಗಳೊಡನೆ ಆಗಮಿಸಿದರು. ವಾಸುದೇವನು ಪಾಂಡವರ ಸಹಾಯಕ್ಕೆಂದು ಹತ್ತು ಸಾವಿರ ಆನೆಗಳಿಂದಲೂ ಹತ್ತುಲಕ್ಷ ರಥಗಳಿಂದಲು, ಅರ್ಬುದ ತುರಗಗಳಿಂದಲು, ಒಂದು ನಿಖರ್ವ ಸೈನಿಕರಿಂದಲೂ ಕೂಡಿದ ಸೈನ್ಯವನ್ನು ತಂದನು. ಪರಮವೀರ್ಯ-ತೇಜೋನಿಧಿಗಳಾದ ಯದು, ವೃಷ್ಣ್ಯಂಧಕ ಭೋಜ ದಾಶಾರ್ಹವೀರರು ಶ್ರೀವಾಸು ದೇವನನ್ನನುಸರಿಸಿ ಬಂದರು.

ಶ್ರೀಕೃಷ್ಣನು ಮಹಾತ್ಮರಾದ ಪಾಂಡವರಿಗೆ ತರುಣೀಗಣ, ರತ್ನರಾಜಿ, ವಸ್ತ್ರ ದುಕೂಲಗಳನ್ನು ಬೇರೆಬೇರೆಯಾಗಿ ಕೊಟ್ಟು ಗೌರವಿಸಿದನು. ಮಂಗಳಮುಹೂರ್ತದಲ್ಲಿ ಉತ್ತರಾಭಿಮನ್ಯು ವಿವಾಹಮಹೋತ್ಸವವು ಸಂಭ್ರಮದಿಂದ ನೆರವೇರಿತು. ಶಂಖ ಭೇರೀ ಗೋಮುಖ ತೂರ್ಯಾದಿ ಮಂಗಳವಾದ್ಯಗಳ ಮಂಜುಲರವವು ಕರ್ಣಮನೋಹರ ವಾಗಿರಲು, ವಿವಾಹವೇದೀ ಸಮಾಸೀನರಾದ ವಧೂವರರು ನಯನಾನಂದಕರ ರಾಗಿದ್ದರು.

ವಿರಾಟನು ವಿವಿಧ ಭಕ್ಷ್ಯ, ಭೋಜ್ಯ, ಲೇಹ್ಯ, ಪಾನೀಯಗಳಿಂದ ಬಂದ ಬಂಧು ಜನರನ್ನೆಲ್ಲರನ್ನು ಸಂತೋಷಪಡಿಸಿದನು. ನರ್ತನವನ್ನು ಮಾಡಿ ನಟವೈತಾಲಿಕರೂ, ಗಾನಮಾಡಿ ಸೂತ ಮಾಗಧ ವಂದಿಗಳೂ ವಿವಾಹಕ್ಕೆ ಬಂದಿದ್ದ ಬಂಧುಜನರನ್ನಾನಂದ ಪಡಿಸಿದರು.

ಮತ್ಸ್ಯದೇಶದ ರಾಜತರುಣಿಯರು ಸುಮೃಷ್ಟಮಣಿಕುಂಡಲಾದಿ ಸರ್ವಾಭರಣ ಭೂಷಿತೆಯರಾಗಿ ಸುದೇಷ್ಣೆಯನ್ನನುಸರಿಸಿ ವಿವಾಹ ಮಂಟಪದಲ್ಲಿ ಸಂಚರಿಸಿ, ಬಂಧು, ಸುಹೃನ್ಮಿತ್ರಾದಿಗಳನ್ನು ಸತ್ಕರಿಸಿದರು. ವಿಚಿತ್ರವಸನಾಭರಣಧಾರಿಣಿಯರಾಗಿ ನಕ್ಷತ್ರ ಗಳಂತೆ ಬೆಳಗುವ ನಾರೀಮಣಿಗಳ ಮಧ್ಯದಲ್ಲಿ, ಯಶೋವೈಭವರೂಪ ಗಾಂಭೀರ್ಯ ಗುಣಗಳಿಂದ ಸರ್ವಾಧಿಕಳಾದ ದ್ರೌಪದೀದೇವಿಯು, ಅತ್ಯಂತವಾಗಿ ಶೋಭಿಸಿದಳು. ಅಲಂಕೃತಳಾದ ಉತ್ತರಾದೇವಿಯನ್ನು ಮತ್ಸ್ಯರಾಜನು ಧಾರಾಪೂರ್ವಕವಾಗಿ ಕನ್ಯಾ ದಾನ ಮಾಡಲು, ಧನಂಜಯನು ಅಭಿಮನ್ಯುಕುಮಾರನಿಗಾಗಿ, ಅವಳನ್ನು ಸ್ವೀಕರಿ ಸಿದನು. ಇಂದ್ರನಂತೆ ಶೋಭಿಸುತ್ತಿದ್ದ ಧರ್ಮರಾಜನು ಸೊಸೆಯನ್ನು ಸ್ವೀಕರಿಸಿ, ಶ್ರೀಕೃಷ್ಣನ ಅನುಗ್ರಹವೆಲ್ಲವೆಂದು ತಿಳಿದು ಆನಂದಿಸಿದನು. ಶ್ರೀಶನ ಪ್ರತ್ಯವೇಕ್ಷಣ ದಲ್ಲಿ ವಿವಾಹಸಂರಂಭವು ನಿರುಪಮ ವೈಭವದಿಂದ ನಿರ್ವಿಘ್ನವಾಗಿ ನಡೆಯಿತು.

ವಿರಾಟನು ಅಳಿಯನಿಗೆ ಏಳುಸಾವಿರ ಕುದುರೆಗಳನ್ನು, ಇನ್ನೂರು ಭದ್ರಗಜ ಗಳನ್ನು ಬಹುಧನವನ್ನು ವಸ್ತ್ರಾಲಂಕಾರಾದಿಗಳನ್ನು ಸಮರ್ಪಿಸಿ, ಪೂಜಿಸಿದನು.

ವಿವಾಹಾಂಗ ಹೋಮ, ಸಪ್ತಪದೀ, ನಾಕಬಲಿಗಳೆಲ್ಲವೂ ವಿಧ್ಯುಕ್ತವಾಗಿ ನೆರ ವೇರಿದವು. ವಿರಾಟನು ವಿಪ್ರರಿಗೆ ಭೂ, ಗೋ, ತಿಲ, ಹಿರಣ್ಯಗಳನ್ನು ದಾನಮಾಡಿದನು. ಧರ್ಮರಾಜನೂ ಶ್ರೀಕೃಷ್ಣನು ತನಗಿತ್ತ ದ್ರವ್ಯವನ್ನು ಬ್ರಾಹ್ಮಣರಿಗಿತ್ತು, ಸತ್ಕರಿ ಸಿದನು. ಸಕಲಜನರೂ ಮೃಷ್ಟಾನ್ನ ಭೋಜನಾದಿ ಸತ್ಕಾರಗಳಿಂದ ಸಂತುಷ್ಟರಾದರು.

ಅನೂಚಾನವಾಗಿದೆ ; ಅಂತೆಯೇ ಅತಿಪ್ರಶಸ್ತವಾಗಿದೆ !' ಎಂದ ಅರ್ಜುನನ ಮಾತನ್ನಾಲಿಸಿ ಧರ್ಮಜನು ಆನಂದಪಟ್ಟನು.

ವಿರಾಟನು 'ಅರ್ಜುನ ! ನಾನಿತ್ತ ಕುವರಿಯನ್ನು ನೀನೇಕೆ ಸ್ವೀಕರಿಸಲಾರೆ ?' ಎಂದು ಕೇಳಿದನು. ಅರ್ಜುನನು 'ರಾಜನ್! ಕೇಳು! ನಾನು ನಾಟ್ಯಗುರುವಾಗಿ ಆಕೆಗೆ ಕಲಿಸುತ್ತಾ, ಸದಾ ಅಂತಃಪುರದಲ್ಲಿ ಇರುತ್ತಿದ್ದೆನಲ್ಲವೇ ? ಅವಳು ನನ್ನಲ್ಲಿ ತಂದೆ ಎಂಬ ವಿಶ್ವಾಸವನ್ನಿಟ್ಟು ನಡೆಯುತ್ತಿದ್ದಳು. ನಾನೂ ಆಕೆಯನ್ನು ಮಗಳಂತೆ ಭಾವಿಸಿದೆನು. ನಾನೋ ನರ್ತನಗೀತಕೋವಿದನು. ಒಂದುವರ್ಷವಿಡೀ ಅವಳೊಡನೆ ಸಲುಗೆಯಿಂದ ವರ್ತಿಸಿದೆನು. ನಮ್ಮಿಬ್ಬರಲ್ಲಿ ಕಲಂಕವಿಲ್ಲ; ಆದರೂ ಲೋಕರು ಕಾಕರು! ಅವರು ಏನಾದರೂ ಶಂಕಿಸಿ ಮಾತಾಡುವರು ! ಆದುದರಿಂದ ಅವಳನ್ನು ನನ್ನ ಮಗನಿಗಾಗಿ ತೆಗೆದುಕೊಂಡು, ಅವಳಿಗೂ ನನಗೂ ಬರಬಹುದಾದ ಅಪನಿಂದೆಯನ್ನು ನಿವಾರಿಸಿದೆನು. ನಾನು ಶುದ್ಧನು ; ಜಿತೇಂದ್ರಿಯನು; ದಾಂತನು ; ಅವಳೂ ಶುದ್ಧಳೆಂದು ತೋರಲೆಂದೇ ನನ್ನ ಸೊಸೆಯನ್ನಾಗಿ ಸ್ವೀಕರಿಸುವೆನು. ಸೊಸೆ ಎಂದರೆ ಮಗಳಂತಲ್ಲವೇ ?' ಎಂದು ಸಮಾಧಾನಪಡಿಸಿ, ಸರ್ವರನ್ನೂ ಸಂತೋಷಪಡಿಸಿದನು.

ವಿರಾಟನೂ ಆನಂದದಿಂದ, 'ಸರಿ! ನನ್ನ ಮಗಳನ್ನು ಅಭಿಮನ್ಯು ಕುಮಾರನಿಗೇ ಕೊಡುವೆನು. ಶ್ರೀವಾಸುದೇವನ ಅಳಿಯ ಸಾಕ್ಷಾತ್ ಅಳಿಯನಾಗುವ ಯೋಗ ನನಗೊದಗಿತೆಂದರೆ ಅದು ಶ್ರೀಶಾನುಗ್ರಹವೇ ಸರಿ! ಚಕ್ರಹಸ್ತನ ಬಂಧುವು, ಸರ್ವಶಸ್ತ್ರಾಸ್ತ್ರ ವಿದ್ಯಾಸಿಂಧುವು ಆದ ಅಭಿಮನ್ಯುವೆನಗೆ ಬಂಧುವಾದನು. ನಾನು ಧನ್ಯನಾದೆನು ! ಕುಂತೀಪುತ್ರನಾದ ಧನಂಜಯನು ಧರ್ಮನಿಷ್ಠನು, ಜ್ಞಾನನಿಷ್ಠನು ಎಂದು ಲೋಕಕ್ಕೆ ವಿದಿತವಾಯಿತು. ಪಾಂಡವರೇ ! ಮುಂದಿನ ಕಲ್ಯಾಣ ಕಾರ್ಯವನ್ನು ಆಲೋಚಿಸಿ, ನನಗೆ ಆಜ್ಞಾಪಿಸಿದರೆ, ಅಂತೆಯೇ ಸರ್ವವನ್ನೂ ಸಿದ್ಧಪಡಿಸುವೆನು.' ಎಂದು ವಿಜ್ಞಾಪಿಸಿದನು.

ಧರ್ಮರಾಜ ವಿರಾಟರು ಶ್ರೀಕೃಷ್ಣನನ್ನು ಕರೆತರಲು ದೂತರನ್ನು ಕಳಿಸಿಕೊಟ್ಟರು. ಅಜ್ಞಾತವಾಸವನ್ನು ಮುಗಿಸಿ, ಯಶಸ್ವಿಗಳಾದ ಪಾಂಡವರ ವಾರ್ತೆಯನ್ನು ಕೇಳಿ,ನಿತ್ಯಾನಂದ ಜ್ಞಾನನಿಧಿಯಾದ ಶ್ರೀಕೃಷ್ಣನು ಆನಂದಪಟ್ಟು, ಎಲ್ಲ ಬಂಧುಜನರಿಂದ ಕೂಡಿ ಅಭಿಮನ್ಯು ಕುಮಾರನನ್ನೂ ಕರೆದುಕೊಂಡು ಪಾಂಡವರನ್ನು ಸೇರಿದನು. ಕಾಶಿರಾಜ ಶೈಬ್ಯರು ಪಾಂಡವಾಭ್ಯುದಯವನ್ನು ಕಂಡು ಪ್ರಹರ್ಷಿತರಾದರು. ಒಂದೊಂದು ಅಕ್ಷೌಹಿಣಿಯೊಡನೆ ಅವರು ಪಾಂಡವರನ್ನು ಸೇರಬಂದರು. ದ್ರುಪದರಾಜನೊಂದು ಅಕ್ಷೌಹಿಣಿ ಸೇನೆಯನ್ನು ತಂದನು. ಆತನ ಹಿಂದೆ ದ್ರೌಪದೀಸುತರು ಐವರು, ಶಿಖಂಡಿ, ಧೃಷ್ಟದ್ಯುಮ್ನ, ದುರ್ಧರ್ಷ ಮೊದಲಾದ ಪಾಂಚಾಲರಾಜಪುತ್ರರು ಬಂದರು. ಯಜ್ಞ-ದಾನಶೀಲರಾದ ಆ ಮಹಾರಾಜರನ್ನು ಎದುರ್ಗೊಂಡು, ವಿರಾಟನು ಕರೆತಂದು, ಸತ್ಕರಿಸಿದನು. ಶ್ರೀಕೃಷ್ಣನು ಬಲರಾಮ, ಕೃತವರ್ಮ, ಸಾತ್ಯಕಿ, ಅಕ್ರೂರ, ಸಾಂಬ, ನಿಶಠಾದಿ ಯದುವೀರರಿಂದಲು, ಮದುಮಗನಾದ ಅಭಿಮನ್ಯುನಿಂದಲು, ತಂಗಿ

ಸುಭದ್ರೆಯಿಂದಲು ಕೂಡಿ ಬಂದನು. ಇಂದ್ರಸೇನಾದಿ ಸಾರಥಿಗಳು ಪಾಂಡವರ ರಥಗಳೊಡನೆ ಆಗಮಿಸಿದರು. ವಾಸುದೇವನು ಪಾಂಡವರ ಸಹಾಯಕ್ಕೆಂದು ಹತ್ತು ಸಾವಿರ ಆನೆಗಳಿಂದಲು ಪತ್ತ್ತುಲಕ್ಷ ರಥಗಳಿಂದಲು, ಅರ್ಬುದ ತುರಗಗಳಿಂದಲು, ಒಂದು ನಿಖರ್ವ ಸೈನಿಕರಿಂದಲು ಕೂಡಿದ ಸೈನ್ಯವನ್ನು ತಂದನು. ಪರಮವೀರ್ಯ-ತೇಜೋನಿಧಿಗಳಾದ ಯದು, ವೃಷ್ಣ್ಯಂಧಕ ಭೋಜ ದಾಶಾರ್ಹವೀರರು ಶ್ರೀವಾಸುದೇವನನ್ನನುಸರಿಸಿ ಬಂದರು.

ಶ್ರೀಕೃಷ್ಣನು ಮಹಾತ್ಮರಾದ ಪಾಂಡವರಿಗೆ ತರುಣೀಗಣ, ರತ್ನರಾಜಿ, ವಸ್ತ್ರ ದುಕೂಲಗಳನ್ನು ಬೇರೆಬೇರೆಯಾಗಿ ಕೊಟ್ಟು ಗೌರವಿಸಿದನು. ಮಂಗಳಮುಹೂರ್ತದಲ್ಲಿ ಉತ್ತರಾಭಿಮನ್ಯು ವಿವಾಹಮಹೋತ್ಸವವು ಸಂಭ್ರಮದಿಂದ ನೆರವೇರಿತು. ಶಂಖ ಭೇರೀ ಗೋಮುಖ ತೂರ್ಯಾದಿ ಮಂಗಳವಾದ್ಯಗಳ ಮಂಜುಲರವವು ಕರ್ಣಮನೋಹರವಾಗಿರಲು, ವಿವಾಹವೇದೀ ಸಮಾಸೀನರಾದ ವಧೂವರರು ನಯನಾನಂದಕರರಾಗಿದ್ದರು.

ವಿರಾಟನು ವಿವಿಧ ಭಕ್ಷ್ಯ, ಭೋಜ್ಯ, ಲೇಹ್ಯ, ಪಾನೀಯಗಳಿಂದ ಬಂದ ಬಂಧು ಜನರನ್ನೆಲ್ಲರನ್ನು ಸಂತೋಷಪಡಿಸಿದನು. ನರ್ತನವನ್ನು ಮಾಡಿ ನಟವೈತಾಲಿಕರೂ, ಗಾನಮಾಡಿ ಸೂತ ಮಾಗಧ ವಂದಿಗಳೂ ವಿವಾಹಕ್ಕೆ ಬಂದಿದ್ದ ಬಂಧುಜನರನ್ನಾನಂದಪಡಿಸಿದರು.

ಮತ್ಸ್ಯದೇಶದ ರಾಜತರುಣಿಯರು ಸುಮೃಷ್ಟಮಣಿಕುಂಡಲಾದಿ ಸರ್ವಾಭರಣ ಭೂಷಿತೆಯರಾಗಿ ಸುದೇಷ್ಣೆಯನ್ನನುಸರಿಸಿ ವಿವಾಹ ಮಂಟಪದಲ್ಲಿ ಸಂಚರಿಸಿ, ಬಂಧು, ಸುಹೃನ್ಮಿತ್ರಾದಿಗಳನ್ನು ಸತ್ಕರಿಸಿದರು. ವಿಚಿತ್ರವಸನಾಭರಣಧಾರಿಣಿಯರಾಗಿ ನಕ್ಷತ್ರಗಳಂತೆ ಬೆಳಗುವ ನಾರೀಮಣಿಗಳ ಮಧ್ಯದಲ್ಲಿ, ಯಶೋವೈಭವರೂಪ ಗಾಂಭೀರ್ಯ ಗುಣಗಳಿಂದ ಸರ್ವಾಧಿಕಳಾದ ದ್ರೌಪದೀದೇವಿಯು, ಅತ್ಯಂತವಾಗಿ ಶೋಭಿಸಿದಳು. ಅಲಂಕೃತಳಾದ ಉತ್ತರಾದೇವಿಯನ್ನು ಮತ್ಸ್ಯರಾಜನು ಧಾರಾಪೂರ್ವಕವಾಗಿ ಕನ್ಯಾದಾನ ಮಾಡಲು, ಧನಂಜಯನು ಅಭಿಮನ್ಯುಕುಮಾರನಿಗಾಗಿ, ಅವಳನ್ನು ಸ್ವೀಕರಿಸಿದನು. ಇಂದ್ರನಂತೆ ಶೋಭಿಸುತ್ತಿದ್ದ ಧರ್ಮರಾಜನು ಸೊಸೆಯನ್ನು ಸ್ವೀಕರಿಸಿ, ಶ್ರೀಕೃಷ್ಣನ ಅನುಗ್ರಹವೆಲ್ಲವೆಂದು ತಿಳಿದು ಆನಂದಿಸಿದನು. ಶ್ರೀಶನ ಪ್ರತ್ಯವೇಕ್ಷಣದಲ್ಲಿ ವಿವಾಹಸಂರಂಭವು ನಿರುಪಮ ವೈಭವದಿಂದ ನಿರ್ವಿಘ್ನವಾಗಿ ನಡೆಯಿತು.

ವಿರಾಟನು ಅಳಿಯನಿಗೆ ಏಳುಸಾವಿರ ಕುದುರೆಗಳನ್ನು, ಇನ್ನೂರು ಭದ್ರಗಜಗಳನ್ನು ಬಹುಧನವನ್ನು ವಸ್ತ್ರಾಲಂಕಾರಾದಿಗಳನ್ನು ಸಮರ್ಪಿಸಿ, ಪೂಜಿಸಿದನು.

ವಿವಾಹಾಂಗ ಹೋಮ, ಸಪ್ತಪದೀ, ನಾಕಬಲಿಗಳೆಲ್ಲವೂ ವಿಧ್ಯುಕ್ತವಾಗಿ ನೆರವೇರಿದವು. ವಿರಾಟನು ವಿಪ್ರರಿಗೆ ಭೂ, ಗೋ, ತಿಲ, ಹಿರಣ್ಯಗಳನ್ನು ದಾನಮಾಡಿದನು. ಧರ್ಮರಾಜನೂ ಶ್ರೀಕೃಷ್ಣನು ತನಗಿತ್ತ ದ್ರವ್ಯವನ್ನು ಬ್ರಾಹ್ಮಣರಿಗಿತ್ತು, ಸತ್ಕರಿಸಿದನು. ಸಕಲಜನರೂ ಮೃಷ್ಟಾನ್ನ ಭೋಜನಾದಿ ಸತ್ಕಾರಗಳಿಂದ ಸಂತುಷ್ಟರಾದರು.

ಆಬಾಲವೃದ್ಧರನ್ನು ಯಥಾಯೋಗ್ಯವಾಗಿ ತೃಪ್ತಿಪಡಿಸಿ ಧರ್ಮರಾಜನು ವಿರಾಟ ನಗರವನ್ನು ಬಿಟ್ಟು ಉಪಪ್ಲಾವ್ಯವನ್ನು ಸೇರಿ, ಅಲ್ಲಿ ಶ್ರೀಕೃಷ್ಣನೊಡನೆ ಮುಂದಿನ ಕಾರ್ಯವನ್ನು ನಿಶ್ಚಯಿಸಲು ಮಂತ್ರಾಲೋಚನೆ ಮಾಡುತ್ತಿದ್ದನು.

ಉತ್ತರ ಗೋಗ್ರಹಣ ಕಾಲದಲ್ಲಿ ಅರ್ಜುನನಿಗೆ ಸೋತು ದುರ್ಯೋಧನಾದಿಗಳು ಹಸ್ತಿನಾವತಿಯನ್ನು ಸೇರಿ, 'ಅರ್ಜುನನ ಅಜ್ಞಾತವಾಸದ ವರ್ಷ ಮುಗಿಯದ ಮುಂಚೆಯೇ ಕಾಣಿಸಿಕೊಂಡನಾದುದರಿಂದ ಪಾಂಡವರು, ಮತ್ತೆ ಅರಣ್ಯಕ್ಕೆ ಹೊರ ಡಲಿ!' ಎಂದು ಆಲೋಚಿಸಿದರು. ಅವರ ದುರಾಲೋಚನೆಯನ್ನು ತಿಳಿದು, ಭೀಷ್ಮನು ಅಜ್ಞಾತವಾಸವು ಮುಗಿದಿದೆ ಎಂದನು. ಅಂತೆಯೇ ದ್ರೋಣಾಚಾರ್ಯನೂ ಹೇಳಿದನು.

ಪಾಪಿಗಳಾದ ಕೌರವರಿಗೆ ಅವರ ಮಾತು ರುಚಿಸಲಿಲ್ಲ. 'ಮತ್ತೆ ಪಾಂಡವರು ವನವಾಸಕ್ಕೆ ಹೋಗಬೇಕೆಂದು' ಅವರು ದೂತನನ್ನು ಪಾಂಡವರಲ್ಲಿಗೆ ಕೊಟ್ಟುಕಳಿಸಿ ದರು. 'ಭೀಷ್ಮದ್ರೋಣರೂ ವಿಪ್ರರೂ ಅಜ್ಞಾತವಾಸ ಮುಗಿದಿದೆ' ಎಂದಿರುವುದ ರಿಂದ ರಾಜ್ಯಾರ್ಧವನ್ನು ಕೊಡಬೇಕೆಂದು, ಧರ್ಮರಾಜನು ನುಡಿದನು.

ದಿನಾಧಿಪನು ಸೂರ್ಯನು; ಪಕ್ಷಮಾಸಸಂವತ್ಸರಾಧಿಪತಿಯು ಚಂದ್ರನು; ಐದು ವರ್ಷಗಳಲ್ಲಿ ಎರಡಧಿಕ ಮಾಸಗಳು ಬರುವವು. ಅಂತು ಹದಿಮೂರುವರ್ಷಗಳಲ್ಲಿ ಐದು ಅಧಿಕಮಾಸಗಳೂ ಕೆಲದಿನಗಳು ಹೆಚ್ಚುಬರುವವು. ಅವೆಲ್ಲಕಲಿಸಿ, ಹನ್ನೆರಡು ತಿಂಗಳಿಗೆ ಒಂದುವರ್ಷವೆಂದು ಗಣಿಸಲು, ಹದಿಮೂರುವರ್ಷಗಳು ದಾಟಿಹೋಗಿವೆ—ಇದು ಭೀಷ್ಮಾದಿಗಳ ಅಭಿಪ್ರಾಯ. ಸೌರಮಾನದಲ್ಲಿ ಸಂಕ್ರಮಣಗಳನ್ನೆಣಿಸಿ, ಅಧಿಕಮಾಸ ವನ್ನದರಲ್ಲೇ ಸೇರಿಸುವುದರಿಂದ ಸೌರಮಾನದ ಪ್ರಕಾರ ಹದಿಮೂರುವರ್ಷಗಳಾಗಿಲ್ಲ ವೆಂದು ಕುರುರಾಜ ಕರ್ಣಾದಿಗಳ ಅಭಿಪ್ರಾಯ. ಆದರೆ ಗೋದಾವರಿಯ ದಕ್ಷಿಣದಲ್ಲು, ಉತ್ತರದಲ್ಲು ಕೂಡ ಚಾಂದ್ರಮಾಸಗಳನ್ನೇ ಹಿಡಿದು ಯಜ್ಞಾದಿಕಾರ್ಯಪ್ರವೃತ್ತ ರಾಗುತ್ತಿರುವರು. ಪೌರ್ಣಮಾಸೀ ಎಂದರೆ ಮಾಸವು ತುಂಬಿದ ದಿನವೆಂದರ್ಥ. ತಮ್ಮ ದೇಶದಲ್ಲೇ ನಡೆಯುವ ಮಾಸವರ್ಷಗಳನ್ನು ಲೆಕ್ಕಿಸದೆ, ಲೋಭ ಕ್ರೋಧ ಮೋಹಗಳಿಂದ ವಿ ವೇ ಕ ರ ಹಿ ತ ರಾ ಗಿ, ಕೌರವರು ರಾಜ್ಯವನ್ನು ಕೊಡಲು ತಿರಸ್ಕರಿಸಿದರು.

ಹದಿಮೂರು ವರ್ಷಗಳೂ ಮುಗಿದಿವೆ ಎಂದು ಬ್ರಾಹ್ಮಣ ಶ್ರೇಷ್ಠರಿಂದ ಪ್ರಸಿದ್ಧಿ ಪಡಿಸಿ, ಧರ್ಮರಾಜನು ಶ್ರೀಕೃಷ್ಣನೊಡಗೂಡಿ, ಉಪಪ್ಲಾವ್ಯವನ್ನು ಸೇರಿದನು. ಪಾಂಚಾಲ ಮಾತ್ಸ್ಯರಾಜರೂ ಸಪರಿವಾರವಾಗಿ ಬಂದರು. ಶ್ರೀಕೃಷ್ಣನಿಂದ ಧರ್ಮಾದಿ ವಿಷಯಗಳನ್ನು ತಿಳಿಯುತ್ತ, ಕೆಲಕಾಲ ಅವರು ಉಪಪ್ಲಾವ್ಯದಲ್ಲಿ ಸುಖವಾಗಿದ್ದರು.

ವಿರಾಟಪರ್ವವು ಮುಗಿಯಿತು

|| ಶ್ರೀಮಧ್ವೇಶಾರ್ಪಣಮಸ್ತು ||

# ೫. ಉದ್ಯೋಗಪರ್ವ

## ಪಾಂಡವ ಮಂತ್ರಾಲೋಚನೆ

ಶ್ರೀ ವೈಶಂಪಾಯನನು ಜನಮೇಜಯನಿಗೆ ಉದ್ಯೋಗಪರ್ವದ ಕಥೆಯನ್ನು ನಿರೂಪಿಸಿದನು—

ಶ್ರೀಶಾನುಗ್ರಹದಿಂದ ಪಾಂಡವರು ಉತ್ತರೆ-ಅಭಿಮನ್ಯು ವಿವಾಹವನ್ನು ಸಂಭ್ರಮದಿಂದ ಮುಗಿಸಿ, ನಾಲ್ಕುದಿನ ವಿಶ್ರಮಿಸಿದರು. ವಿರಾಟನು ಅವರಿಗಾಗಿ ಉಪಪ್ಲಾವ್ಯದಲ್ಲಿ ದಿವ್ಯ ಸಭೆಯನ್ನು ನಿರ್ಮಿಸಿಕೊಟ್ಟನು. ಮಣಿಕುಟ್ಟಿಮದಿಂದಲೂ ರತ್ನಚಿತ್ರಿತ ಸ್ತಂಭಶತದಿಂದಲೂ, ವಿತಾನ ವಿವಿಧ ಮಾಲ್ಯ ಗಂಧ ಧೂಪಗಳಿಂದಲೂ, ಅಲಂಕೃತವಾದ ದಿವ್ಯ ಸಭೆಯಲ್ಲಿ ಮಧ್ಯದಲ್ಲಿ ಪಾಂಡವರೈವರು ದಿವ್ಯಾಸನಾಸೀನರಾಗಿದ್ದರು. ವಿರಾಟ-ದ್ರುಪದರು ಒಂದು ಕಡೆ ಕೂತಿದ್ದರು. ಮತ್ತೊಂದೆಡೆ ಬಲರಾಮ-ಕೃಷ್ಣರು ಆಸೀನರಾಗಿದ್ದರು. ವಸುದೇವರಾಜನೂ ಅವರೊಡನೆ ಕೂತಿದ್ದನು. ದ್ರುಪದನ ಸಮೀಪದಲ್ಲಿ ಗದ-ಸಾತ್ಯಕಿಯರು ವಿರಾಟನ ಸಮೀಪವಾಗುವಂತೆ ಶ್ರೀಕೃಷ್ಣ-ಧರ್ಮರಾಜರು ಕುಳಿತಿದ್ದರು. ಭೀಮ, ಪಾರ್ಥ, ನಕುಲ-ಸಹದೇವರು, ದ್ರುಪದರಾಜಪುತ್ರರು, ಪ್ರದ್ಯುಮ್ನ-ಸಾಂಬರು, ವಿರಾಟಪುತ್ರರು, ಅಭಿಮನ್ಯು ಮುಂತಾದ ಶೂರರು ಹಿಂದೆ ಹೇಳಿದವರ ಇಕ್ಕೆಲಗಳಲ್ಲಿ ಸ್ವಯೋಗ್ಯಾಸನಗಳಲ್ಲಿ ಮಂಡಿಸಿದ್ದರು. ದಿವ್ಯಾಂಬರಾಭರಣಭೂಷಿತರಾಗಿ, ಕನಕಾಸನಗಳಲ್ಲಿ ಕೂತಿದ್ದ ರಾಜನ್ಯರಿಂದ ಸಭೆಯು ಗ್ರಹಗಳಿಂದ ಆಕಾಶದಂತೆ ಶೋಭಿಸಿತು.

ಸಮಯೋಚಿತ ಸಂಭಾಷಣಾನಂತರದಲ್ಲಿ, ಅವರೆಲ್ಲರು ಶ್ರೀಕೃಷ್ಣಮುಖಾರವಿಂದವನ್ನು ನೋಡಿ, ಪಾಂಡವ ಕಾರ್ಯನಿರ್ವಹಣ ದಕ್ಷನಾದ ಅಧೋಕ್ಷಜನೇನು ಹೇಳುವನೋ ಎಂದು ಪ್ರತೀಕ್ಷಿಸಿದರು. ಆಗ ಶ್ರೀಕೃಷ್ಣನಿಂತೆಂದನು—

'ರಾಜವರರೇ ! ತಮಗೆ ತಿಳಿದೇ ಇದೆ ! ಯುಧಿಷ್ಠಿರನು ಶಕುನಿಗೆ ಮಾಯಾದ್ಯೂತದಲ್ಲಿ ಸೋತು, ಮಾತಿನಂತೆ ವನವಾಸಾಜ್ಞಾತವಾಸಗಳನ್ನು ಮುಗಿಸಿರುವನು. ಸ್ವಬಲದಿಂದ ಮಹೀಮಂಡಲವನ್ನೆಲ್ಲ ಗೆಲ್ಲಲುಬಲ್ಲ ಬಲ್ಲಿದರಾದರೂ, ಸತ್ಯವ್ರತರಾದುದರಿಂದ ಉಗ್ರಕ್ಲೇಶವಿಶಿಷ್ಟವಾದ ವನವಾಸವನ್ನೂ, ಬಹು ಕಷ್ಟಸಾಧ್ಯವಾದ ಅಜ್ಞಾತವಾಸವನ್ನೂ ದೈವಾನುಗ್ರಹದಿಂದ ಮುಗಿಸಿ ಪಾರಾಗಿರುವರು. ಪರರ ಮನೆಯಲ್ಲಿ ಅಜ್ಞಾತರಾಗಿರಬೇಕೆಂದು ಸೊಳ್ಳೆಯ ಕುತ್ತಿಗೆಯಲ್ಲಿ ಆನೆಗಳಂತೆ ಸ್ವರೂಪವನ್ನು ಮುಚ್ಚಿಕೊಂಡು, ಸೇವಾ ಜೀವನವನ್ನು ಕಳೆದು, ಪ್ರಕಟರಾಗಿ ತಮ್ಮ ಪರಾಕ್ರಮಾರ್ಜಿತ ರಾಜ್ಯವನ್ನು ಮತ್ತೆ ಪಡೆಯಲೆಣಿಸುತ್ತಿರುವರು. ಇವರಿಗೂ ಮತ್ತು ದುರ್ಯೋಧನನಿಗೂ ಹಿತಕರವಾಗಲು ಏನು ಮಾಡಬೇಕು? ಎಂತು

ನಡೆಯಬೇಕೆಂದು ನೀವೆಲ್ಲ ನಿಶ್ಚಯಿಸಿ, ಕುರುಪುಂಗವರ ಶ್ರೇಯಸ್ಸನ್ನು ನಿರೂಪಿಸಿರಿ. ಧರ್ಮಸಮ್ಮತವು, ಯುಕ್ತಿಯುಕ್ತವು ಮತ್ತು ಯಶಸ್ಕರವಾದ ಮಾರ್ಗವಾವುದು ? ಅಧರ್ಮದಿಂದ ಬಂದ ಸುರರಾಜ್ಯವನ್ನಾದರೂ ಧರ್ಮರಾಜನು ಬಯಸುವದಿಲ್ಲ. ಧರ್ಮದಿಂದ ಬಂದ ಸ್ವಲ್ಪ ರಾಜ್ಯವನ್ನಾದರೂ ಹೊಂದಿ ಧರ್ಮನಂದನನು ತೃಪ್ತನಾಗುವನು.

ನಿಮಗೆಲ್ಲ ತಿಳಿದಂತೆ ಇವರ ತಂದೆಯು ಭಾಗವನ್ನು ಮಾಯಾದ್ಯೂತದಲ್ಲಿ ಕಸಿದು ವನಕ್ಕಟ್ಟಿದರೇ ಆಗಲಿ, ರಣವಿಜಯಿಗಳಾಗಿ ಅಲ್ಲ. ಇಷ್ಟಾದರೂ ನಿಮ್ಮಂತಹ ಸ್ನೇಹವಂತರಿಂದ ಕೂಡಿದ ಧರ್ಮರಾಜನು ಧಾರ್ತರಾಷ್ಟ್ರರ ಕುಶಲವನ್ನೇ ಬಯಸು ತ್ತಿರುವನು. ಇನ್ನು ಪಾಂಡುಸುತರು ಸ್ವಬಾಹುಬಲದಿಂದ ದಿಗ್ವಿಜಯವನ್ನು ಸಾಧಿಸಿ ಸಂಪಾದಿಸಿದ ರಾಜ್ಯಭಾಗವನ್ನು ಬಯಸುವುದು ಸಹಜವಾಗಿದೆ.

ಬಾಲ್ಯದಲ್ಲಿ ದುಷ್ಟಾತ್ಮರು ಭೀಮಾದಿಗಳನ್ನು ನಾಶಪಡಿಸಲು ಹೂಡಿದ ಕುತಂತ್ರಗಳು ಸರ್ವವಿದಿತವಾಗಿವೆ. ಅವರು ರಾಜ್ಯಲೋಭದಿಂದ ಯಾವ ದುಷ್ಕಾ ರ್ಯಕ್ಕೂ ಹೇಸರೆಂದು ಲಾಕ್ಷಾಗೃಹದಾಹ, ಮಾಯಾದ್ಯೂತಗಳೇ ಸಾರುತ್ತಿವೆ. ದುರ್ಯೋಧನಾದಿಗಳು ಕ್ರೋಧಲೋಭಾಕ್ರಾಂತರು. ಧೃತರಾಷ್ಟ್ರನು ಅವರನ್ನು ನಿಯಮಿಸಲಾರದ ವೃದ್ಧನು. ಧರ್ಮರಾಜನೋ ಅತ್ಯಂತ ಧರ್ಮಶೀಲನು. ಎಲ್ಲವನ್ನೂ ಆಲೋಚಿಸಿ ಕಾರ್ಯನಿಶ್ಚಯವನ್ನು ಮಾಡುವುದೊಳಿತು ! ಒಂದುವೇಳೆ ಇವರು ಅಲ್ಪಬಲರೆಂದು ಭ್ರಮಿಸಿ, ರಾಜ್ಯಭಾಗವನ್ನು ಕೌರವರು ಕೊಡದಿದ್ದರೆ ಅವರನ್ನಿವರು ರಣದಲ್ಲಿ ಕೊಲ್ಲದೆಬಿಡರು. ಇವರೂ ತಮ್ಮ ಸುಹೃಜ್ಜನರಿಂದ ಕೂಡಿ ನ್ಯಾಯವಾದ ರಾಜ್ಯಭಾಗಕ್ಕಾಗಿ ಹೋರಾಡಿ, ಜಯಿಸಲು ಸಮರ್ಥರಾಗಿರುವರು. ದುರ್ಯೋಧನನ ಮನಸ್ಸೆಂತಿದೆಯೋ ಏನೋ ? ಆದುದರಿಂದ ಧರ್ಮಜನಿಗೆ ರಾಜ್ಯಾರ್ಧವನ್ನು ಕೊಡಿ ರೆಂದು ಹೇಳಲು ಸಮರ್ಥನು, ಕುಲೀನನು, ಧರ್ಮಶೀಲನು, ಅಪ್ರಮತ್ತನು ಆದ ದೂತನನ್ನು ಕಳಿಸುವುದೀಗ ಯುಕ್ತವೆಂದು ತೋರುತ್ತದೆ.'

ಧರ್ಮಾರ್ಥಯುಕ್ತವು, ಮಧುರವು ಆದ ಶ್ರೀಕೃಷ್ಣನ ವಚನವನ್ನಾಲಿಸಿ, ಮೆಚ್ಚಿ ಬಲರಾಮನಿಂತೆಂದನು—

'ಗದಾಗ್ರಜನ ವಾಕ್ಯವು ಉಭಯ ಹಿತಕಾರಿಯಾಗಿದೆ. ಪಾಂಡವರಿಗೆ ಅವರ ಅರ್ಧರಾಜ್ಯವನ್ನಿತ್ತು, ದುರ್ಯೋಧನನೂ ನಮ್ಮೆಲ್ಲರಿಂದ ಕೂಡಿ ಸುಖಿಯಾಗಿರಬಹು ದಾಗಿದೆ ನಿಜ ! ರಾಜ್ಯಾರ್ಧವನ್ನು ಹೊಂದಿ, ಇವರು ಶಾಂತರಾದರೆ ಲೋಕಕ್ಕೆಲ್ಲವು ಪ್ರಶಾಂತಿಲಾಭದಿಂದ ಹಿತವಾದೀತು ! ಆದುದರಿಂದ ಕುರುಪಾಂಡವರ ಸಂಧಿಯನ್ನು ಸಾಧಿಸಲು ದೂತನನ್ನು ಕಳಿಸಬೇಕೆಂಬುವುದು ನನಗೂ ಸಮ್ಮತವಾಗಿದೆ. ಅವನು ಭೀಷ್ಮದ್ರೋಣ ಗುರುಪುತ್ರ ಕೃಪ ಶಕುನಿ ಕರ್ಣರೇ ಮೊದಲಾದ ನೀತಿಶಾಸ್ತ್ರಜ್ಞರ ಸಭೆಯಲ್ಲಿ ವಿನಯದಿಂದ ನಮಿಸಿ, ತನ್ನ ಮನದಿ 'ಪಾಂಡವರು ತೀರ್ಣಪ್ರತಿಜ್ಞರಾಗಿರು ವರು ನಿಜ ! ಸತ್ಯಪಾಲನ ತತ್ಪರರು, ಬಲವಂತರು ಆದ ಪಾಂಡವರ ವಿದ್ವೇಷವು

ಒಳಿತಲ್ಲ. ಆದರೆ ಹಿಂದೆ ಭ್ರಾತ್ರಾದಿ ಸುಹೃಜ್ಜನರು ನಿವಾರಿಸಿದರೂ ಕೇಳದೆ ಜೂಜಾಡುವ ಹಂಬಲದಿಂದ ಮಿಕ್ಕವರನ್ನು ಬಿಟ್ಟು, ದ್ಯೂತಕುಶಲನಾದ ಶಕುನಿಯೊಡನೆ ಆಡಿ ಸೋತು ಧರ್ಮರಾಜನೇ ತಪ್ಪು ಮಾಡಿರುವನು. ಶಕುನಿಯ ತಪ್ಪೇನೂ ಇಲ್ಲ. ಆಡುವ ಸಂರಂಭದಲ್ಲಿ ಮೈಮರೆತು ತಾನಾಗಿ ಒಡ್ಡಿ ಸೋತು, ಪರರಲ್ಲಿ ಸಿಟ್ಟಾಗುವುದು ಸರಿಯಲ್ಲ' ಎಂಬುವ ವಿಷಯವನ್ನು ಮರೆಯದೆ, ಸಾಮದಿಂದ ದುರ್ಯೋಧನಾದಿಗಳ ಮನವನ್ನು ಸರಿಯಾದ ಮಾತುಗಳಿಂದ ಒಲಿಸಲಿ! ಸಾಮದಿಂದಾಗುವ ಮಹಾರ್ಥವು ಯುದ್ಧದಿಂದಾಗಲಾರದು.' ಇಂತು ದುರ್ಯೋಧನ ಪಕ್ಷಪಾತಿಯಾಗಿ ನುಡಿಯುವ ಬಲರಾಮದೇವನ ವಚನವನ್ನು ಸಹಿಸದೆ, ಸಾತ್ಯಕಿಯು ಎದ್ದುನಿಂತು ಇಂತೆಂದನು—

'ನಮ್ಮಣ್ಣನಿಂತಾದುದೆನಗೆ ಆಶ್ಚರ್ಯವಾಗಿದೆ. ಇಂತಹ ಮಾತನ್ನು ನೀನಾಡಿದರೆ ಅದನ್ನಾದರಿಸಿ ಕೇಳುವವರನ್ನು ನಿಂದಿಸುವೆನಾಗಲಿ ನಿನ್ನನ್ನಲ್ಲ. ಶಿಷ್ಯನಾದೊಡೆ ಮಾತ್ರ ಪಾಪಿ ಕೌರವನಲ್ಲಿ ಪಕ್ಷಪಾತವು ಉಚಿತವೇ? ಧರ್ಮಜನು ತಾನಾಗಿ ಹೋಗಿ ಜೂಜಾಡಿದನೆ? ಆಡಿದ ಜೂಜು ನ್ಯಾಯಸಮ್ಮತವಾಗಿತ್ತೇ? ಜೂಜಿನ ಸೋಲು ಸೋಲೇ? ಮೋಸದಿಂದ ಕಸಿದ ರಾಜ್ಯವನ್ನೊಪ್ಪಿಸಿ, ಸತ್ಯವಚನಕ್ಕೆ ಕಟ್ಟುಬಿದ್ದು, ವನವಾಸವನ್ನು ಮಾಡಲು ಪೋದುದು ಧರ್ಮರಾಜನ ಅಪರಾಧವೇ? ಒಂದೇ ಗಿಡದಲ್ಲಿ ಫಲವತ್ತಾದ ಶಾಖೆಯು, ಫಲರಹಿತವಾದ ಶಾಖೆಯು ಇರುವಂತೆ ಕುರುಕುಲದಲ್ಲಿ ಪಾಂಡವರಂತಹ ಧರ್ಮಪರರೂ ಕೌರವರಂತಹ ಪಾಪಿಷ್ಠರೂ ಹುಟ್ಟಿರುವರು. ಅಂತಹ ಪಾಪಿಗಳನ್ನು ವಹಿಸಿ ಮಾತಾಡುವುದು, ಅವರು ಬಂದು ತಮ್ಮಿಂದಿರಿಂದ ಕಲೆತು ತನ್ನ ಮನೆಯಲ್ಲಿ ಜೂಜಾಡುವ ಧರ್ಮಜನನ್ನು ನ್ಯಾಯದಿಂದ ಗೆದ್ದಿದ್ದರೆ ಮಾತ್ರ ಸರಿ ಎನ್ನಬಹುದಾಗಿದೆ. ಅವರಿಗೆ ವಂದಿಸಿ ವಿನಯದಿಂದ ಮಾತನಾಡಿ ಯಾಚಿಸಲು ಪಾಂಡವರು ಭಿಕ್ಷುಕರಲ್ಲ. ಇವರು ಪರವಿತ್ತವನ್ನಾಶಿಸುವುದಿಲ್ಲ, ತಮ್ಮ ಸೊತ್ತನ್ನು ಯಾಚಿಸಿ ಪಡೆಯುವ ನಿರ್ಬಲರಲ್ಲ. ಅಜ್ಞಾತವಾಸಕಾಲವು ಮುಗಿದಿದೆ ಎಂದು ಭೀಷ್ಮದ್ರೋಣರಂತಹ ಮಹಾತ್ಮರು ಹೇಳಿದರೂ ಮುಗಿದಿಲ್ಲವೆಂದು ಹಟತೊಟ್ಟು, ಪೈತೃಕದಾಯವನ್ನು ಕೊಡುವುದಿಲ್ಲವೆನ್ನುವ ಕೌರವಹತಕರನ್ನು ಸಾಮದಿಂದ ಒಲಿಸಲಾಗದು. ನಾನಂತೂ ಅವರನ್ನು ರಣರಂಗದಲ್ಲಿ ಸೋಲಿಸಿ, ಕುಂತೀಸುತಾಗ್ರಜನ ಪಾದದಲ್ಲಿ ತಂದು ಕೆಡಹಬೇಕೆಂದಿರುವೆನು. ಶರಣಾಗತರಾಗಿ ಉಳಿಯಬೇಕಿಲ್ಲದಿರೆ ಈ ಯುಯುಧಾನನ ಶೌರ್ಯವೇಗವನ್ನು ಸಹಿಸಲಾರದೆ ಕೌರವರು ವಜ್ರಾಘಾತದಿಂದ ಪರ್ವತದಂತೆ ಅಳಿಯಬೇಕಾಗುವುದು. ಚಕ್ರಾಯುಧನಾದ ಶ್ರೀಕೃಷ್ಣನನ್ನೂ ಗದಾದಂಡಪ್ರಚಂಡನಾದ ಭೀಮಸೇನನನ್ನೂ ಗಾಂಡೀವಧನುರ್ಧರನಾದ ಅರ್ಜುನನನ್ನೂ ಯಮಕಾಲಸದೃಶರಾದ ಯಮಳರನ್ನೂ ವೀರಭಯಂಕರರಾದ ವಿರಾಟ-ದ್ರುಪದರನ್ನೂ ಮಹಾವೀರರಾದ ಧೃಷ್ಟದ್ಯುಮ್ನ-ದ್ರೌಪದೇಯರನ್ನೂ ಮಹೇಷ್ವಾಸನಾದ ಅಭಿಮನ್ಯುಕುಮಾರನನ್ನೂ ಸೂರ್ಯಾನಲ ಸಮಬಲರಾದ ಪ್ರದ್ಯುಮ್ನಗದಸಾಂಬಾದಿ ಯದುವೀರರನ್ನೂ ಎದುರಿಸಿ ನಿಲ್ಲುವ ವೀರ

ುವರೇ ? ನೀವೂ ಮಹಾಬಲೋತ್ಸಾಹ ಸಂಪನ್ನರಾಗಿ ಸಹಾಯವಾಗಿ ಬರಲು
ರ್ಣ ಶಕುನಿ ಸಮೇತನಾದ ದುರ್ಯೋಧನನನ್ನು ರಣದಲ್ಲಿ ಸಂಹರಿಸಿ, ಧರ್ಮರಾಜ
ರಾಜ್ಯದಲ್ಲಿ ಪಟ್ಟಕಟ್ಟುವುದು ದುಷ್ಕರವಲ್ಲ. ಅದು ಅಧರ್ಮವೂ ಅಲ್ಲ. ಶತ್ರು
ಗೆ ಕೈಯೊಡ್ಡಿ ಬೇಡುವುದು ಅಧರ್ಮವು ಮತ್ತು ಯಶೋಹಾನಿಕರವು. ಆತ-
ಯಿಗಳನ್ನು ಕೊಲ್ಲುವುದು ವಿಹಿತವೇ ಆಗಿದೆ. ಧರ್ಮರಾಜನ ಅಭಿಪ್ರಾಯವನ್ನೂ
ಳಿ ! ಕೌರವರು ರಾಜ್ಯಾರ್ಧವನ್ನು ಸಮರ್ಪಿಸಲಿ ! ಅಥವಾ ರಣರಂಗದಿ ನಿಹತ
ಗಲಿ ! ಎಂಬುದೇ ನನ್ನ ಮತ.'

ಆಗ ದ್ರುಪದನಿಂತೆಂದನು—'ಅಹುದು ! ದುರ್ಯೋಧನನು ಮಧುರವಚನ
ಂದ ರಾಜ್ಯವನ್ನೀಯುವವನಲ್ಲ. ಸುತಪ್ರಿಯನಾದ ಧೃತರಾಷ್ಟ್ರನೂ ಕೊಡಿಸುವು
. ಕಾರ್ಪಣ್ಯದಿಂದ ಭೀಷ್ಮ-ದ್ರೋಣರೂ ಮೂರ್ಖರಾಗಿ, ಕರ್ಣಶಕುನಿಗಳೂ ಕೌರವ
ಜನನ್ನು ಕೈಬಿಡದೆ ಅವನ ಕಡೆ ಕಾದಾಡುವರು. ಬಲದೇವನ ವಾಕ್ಯದಂತೆ ಯಾಚಿ
ವುದೂ ಸಮಂಜಸವಲ್ಲ. ಪಾಪಿಗಳಿಗೆ ಮಾರ್ದವವು ಸಲ್ಲದು. ದುರ್ಯೋಧನನನ್ನು
ಧುವಚನದಿಂದ ಒಲಿಸಲು ಯತ್ನಿಸುವುದು ಗೋವಿನನ್ನು ದೂಡಿ ಕತ್ತೆಯನ್ನು
ಸುವಂತೆ ವ್ಯರ್ಥವು. ಪಾಪಿಯು ಮೃದುವಚನರನ್ನು ಅಶಕ್ತರೆಂದು ತಿಳಿದು, ತನ್ನ
ವನ್ನು ಬಿಡದೆ ಸಾಧಿಸುವನು. ಆದರೂ ಯತ್ನವನ್ನು ಮಾಡದಿರಲಾಗದು. ನಮ್ಮ
ರೋಹಿತ) ವಿಪ್ರನನ್ನು ದೂತನಾಗಿ ಕಳಿಸೋಣ ! ಮೊದಲು ದೂತರನ್ನು ನಮ್ಮ
ತ್ರರೆಲ್ಲರ ಕಡೆಗೂ ಕಳಿಸಿ, ಅವರ ಸಹಾಯವನ್ನು ಪಡೆದು, ಯುದ್ಧಸನ್ನದ್ಧರಾಗಿರು
ು ಒಳಿತು. ಶಲ್ಯ-ಧೃಷ್ಟಕೇತು, ಚೇಕಿತಾನ-ಕೈಕಯರೂ ನಮಗೆ ಸಹಾಯ
ವರು. ಮೊದಲು ಬೇಡಿದವರಿಗೆ ಸಹಾಯ ನೀಡುವರೆಂಬುದು ಪ್ರಸಿದ್ಧವಾದುದ
ಮಿತ್ರರಿಗೆಲ್ಲ ಸಂದೇಶಕರಿಂದ ಹೇಳಿಕಳಿಸಿರಿ! ದುರ್ಯೋಧನನೂ ಸೈನ್ಯಸಂಗ್ರಹ
ರನಾಗದೆ ಸುಮ್ಮನಿರನು. ಮುಂದೆ ಮಹಾಕಾರ್ಯವಿದೆ. ಬಲವಂತನೂ ಬಂಧುವೂ
ಶಲ್ಯನಿಗೆ ಮೊದಲು ಹೇಳಿಕಳಿಸಿ. ಭಗದತ್ತ, ಕೃತವರ್ಮ, ಅಮಿತೌಜ,
ೀಚಮಾನ, ಸೇನಾಬಿಂದು, ಸೇನಜಿತ್, ಬಾಹ್ಲೀಕ, ಚೈದ್ಯ (ಶಿಶುಪಾಲಪುತ್ರ),
ುತ್ಸೇನ ಮುಂತಾದ ರಾಜನ್ಯರು ಪ್ರಾರ್ಥಿತರಾಗಿ ನಮಗೆ ಸಹಾಯಕರಾಗಿ ವಿಪುಲ
ೖದಿಂದ ಬರಲಿ. ಈ ಬ್ರಾಹ್ಮಣೋತ್ತಮನು ನನ್ನ ಪುರೋಹಿತನು. ಇವನು
ತನಾಗಿ ಕೌರವಸಭೆಯನ್ನು ಸೇರಿ, ಧೃತರಾಷ್ಟ್ರ, ಶಾಂತನವ, ದ್ರೋಣ,
ರ್ಯೋಧನರರನ್ನು ನೋಡಿ, ತಕ್ಕಂತೆ ಮಾತಾಡಿ, ಸಂಧಿಯನ್ನು ಸಾಧಿಸಿ ಬರಲಿ !
ವಾ ಯುದ್ಧವು ಸಿದ್ಧವೇ ಇದೆ.'

ಶ್ರೀವಾಸುದೇವನು 'ದ್ರುಪದನು ಪಾಂಡವ ಹಿತಚಿಂತಕನು. ಅವನಾಡಿದಂತೆ
ಯುವುದೊಳಿತು. ಸಾಹಸಿಸಿ ಕಾರ್ಯವನ್ನು ಮಾಡಲಾಗದು. ನಾವೆಲ್ಲರೂ ವಿವಾಹ
ದು ಬಂದವರು. ಮುಗಿಯಿತು ವಿವಾಹ. ಈಗ ನಮ್ಮನಮ್ಮನಗರಗಳಿಗೆ ತೆರಳಿ, ಮತ್ತೆ
ವು ಕೋರಿದಾಗ ಯುದ್ಧಸನ್ನದ್ಧರಾಗಿ ಬರುವೆವು. ದ್ರುಪದರಾಜನೆಂದರೆ ನಮಗೆಲ್ಲ

ಹಿರಿಯನು. ಅವನಿಗೆ ದ್ರೋಣ ಕೃಪರು ವಯಸ್ಯರು. ಅವನ ದೂತನಾಗಿ ವಿಪ್ರವರನು ಹೋಗಿಬರಲಿ ! ಕುರುಪಾಂಡವರ ಸಂಧಿಯಾಯಿತೆಂದರೆ, ಲೋಕಕ್ಷಯಕರವಾದ ಯುದ್ಧವು ನಿವಾರಿತವಾಗಿ, ಕುರುಪಾಂಡವರು ಕೂಡಿರುವರು. ಮೋಹದರ್ಪವಶನಾಗಿ, ದುರ್ಯೋಧನನು ಸಂಧಿಯ ಕೈಯನ್ನು ತಿರಸ್ಕರಿಸಿದರೆ, ಭೀಮಾರ್ಜುನರ ಗದಾ ಗಾಂಡೀವಗಳು ಸರ್ವಕೌರವನಾಶವನ್ನು ಸಾಧಿಸುವುವು' ಎಂದು ವಿರಾಟನೂ ಪಾಂಡವರೂ ಮಾಡಿದ ಸತ್ಕಾರಗಳನ್ನು ಸ್ವೀಕರಿಸಿ, ಸಪರಿವಾರನಾಗಿ ದ್ವಾರಕೆಗೆ ತೆರಳಿದನು.

ವಿರಾಟನು ಭೂಪಾಲಕರ ಕಡೆಗೆ ದೂತರನ್ನು ಕಳಿಸಿ, ಪಾಂಡವರಿಗೆ ಸಹಾಯ ವಾಗುವಂತೆ ಬೇಡಿದನು. ದ್ರುಪದನೂ ಅಂತೆಯೇ ಮಿತ್ರರಾಜರಿಗೆ ಸಂದೇಶವನ್ನಿತ್ತು, ಪ್ರಾರ್ಥಿಸಿದನು. ಪಾಂಡವರಿಗೆ ಸಹಾಯವಾಗಿ ಅನೇಕ ರಾಜರು ಸೈನ್ಯಸಮೇತರಾಗಿ ಬಂದು, ಉಪಪ್ಲಾವ್ಯದಲ್ಲಿ ನಿಂತರು. ಅಂತೆಯೇ ದುರ್ಯೋಧನನಿಗೆ ಸಹಾಯವಾಗಿ ಅನೇಕ ರಾಜರು ಸೈನ್ಯಸಮೇತರಾಗಿ ಬಂದು, ಹಸ್ತಿನಾವತಿಯ ಸಮೀಪವಾಗಿ ನಿಂದರು. ಬರುವ ಸೈನ್ಯಗಳ ಹಾವಳಿಯಿಂದ ಮಹೀಮಂಡಲವು ಆಕುಲವಾಯಿತು. ಚತುರಂಗಬಲದ ಭಾರದಿಂದ ಭೂಮಿಯು ನಡುಗಿತು. ಉಪಪ್ಲಾವ್ಯಾದಿ ದೇಶಗಳು ಸೈನ್ಯಸಂಕುಲವಾಗಿ, ಸಮುದ್ರದಂತೆ ಘೂರ್ಣಿಸುತ್ತಿದ್ದವು.

ದ್ರುಪದನು ತನ್ನ ಪುರೋಹಿತನನ್ನು ಕರೆದು, ಸತ್ಕರಿಸಿ, 'ಭೂತಗಳಲ್ಲಿ ಚಲ ಚ್ಚೇತನರು, ಅವರಲ್ಲಿ ಬುದ್ಧಿಜೀವಿಗಳು, ಅವರಲ್ಲಿ ನರರು, ನರರಲ್ಲಿ ವಿಪ್ರರು ಶ್ರೇಷ್ಠರು, ವಿಪ್ರರಲ್ಲಿ ವಿದ್ವಾಂಸರು, ಅವರಲ್ಲಿ ಸಿದ್ಧಾಂತಜ್ಞಾನಿಗಳು, ಅವರಲ್ಲಿ ತತ್ತ್ವೋಪದೇಶಕರು, ಅವರಲ್ಲಿ ಬ್ರಹ್ಮವಾದಿಗಳು ಶ್ರೇಷ್ಠರು. ವಯಸ್ಸಿನಿಂದಲು, ಕುಲದಿಂದಲು, ವಿದ್ಯೆ ಯಿಂದಲು ಮಹನೀಯನಾದ ನಿನ್ನನ್ನು ಸಿದ್ಧಾಂತಜ್ಞವರನೆಂದು ತಿಳಿದಿರುವೆನು. ಶುಕ್ರಾಂಗಿರಸರಂತೆ ಪ್ರಜ್ಞಾವಂತನಾದ ನಿನಗೆ ತಿಳಿಸಿಕೊಡಬೇಕಿಲ್ಲ. ಕೌರವರಾಜನ ದುರ್ವರ್ತನ, ಧರ್ಮಜನ ಸತ್ಯಸಂಧತೆ, ಧೃತರಾಷ್ಟ್ರನ ಪಕ್ಷಪಾತ ಎಲ್ಲವೂ ನಿನಗೆ ತಿಳಿದಿದೆ. ವಿದುರನ ಹಿತವನ್ನು ಕೇಳುವವರಲ್ಲಿಲ್ಲ. ಮೋಸದಿಂದ ಗೆದ್ದು ಪಾಂಡವ ರನ್ನು ವನಕ್ಕಟ್ಟಿದ ದುಷ್ಟನು ಏನುಮಾಡಿದರೂ ರಾಜ್ಯಾರ್ಧವನ್ನು ಕೊಡುವವನಲ್ಲ, ನಿಜ ! ಆದರೆ ನೀನು ಧೃತರಾಷ್ಟ್ರನನ್ನು ಕಂಡು, ಧರ್ಮಯುಕ್ತವಾಗಿ ನುಡಿಯುವುದ ರಿಂದ ಅವರ ಮನಸ್ಸು ನಿಜವನ್ನು ತಿಳಿದೀತು. ವಿದುರನೂ ನಿನ್ನ ವಚನವನ್ನು ಪುಷ್ಟೀಕರಿಸುವನು. ಭೀಷ್ಮದ್ರೋಣಕೃಪಾದಿಗಳ ಮನದಲ್ಲಿ ಭೇದಬೀಜವು ನಟ್ಟ, ಅಮಾತ್ಯಸೇನಾಪತಿಗಳೂ ಅಧರ್ಮವನ್ನರಸಿ ರೋಸಿ, ಕಾದಾಡಲು ವಿಮುಖರಾಗ ಬಹುದು. ಅವರನ್ನೆಲ್ಲ ಒಟ್ಟುಗೂಡಿಸುವಲ್ಲಿ ಕೌರವೇಶನು ತೊಡಗಿರುವಾಗ, ಪಾರ್ಥ ರಿಲ್ಲಿ ಏಕಾಗ್ರಮನಸ್ಕರಾಗಿ ಸೇನಾಸಂಗ್ರಹವನ್ನು ಮಾಡುವರು. ಮತ್ತು ದ್ರವ್ಯರಾಶಿ ಯನ್ನು ಕೂಡಿಡುವರು. ಸಂಧಿಯಾದರೂ, ಬಿಟ್ಟರೂ, ಮಿತ್ರಭೇದವೂ, ಕಾರ್ಯಾ ಲಸ್ಯವೂ ಶತ್ರುವ್ಯೂಹದಲ್ಲಿ ಉಂಟಾಗಿ, ನಿನ್ನ ದೂತಕಾರ್ಯವು ಸಫಲವಾಗುವುದು.

ಪಾಂಡವರ ವನವಾಸಾದಿ ಕ್ಲೇಶವನ್ನೂ, ಕುಲಧರ್ಮವನ್ನೂ, ಪೂರ್ವಜನಾನುಷ್ಠಾನ ವನ್ನೂ ವರ್ಣಿಸಿ, ಅವರ ಮನದಲ್ಲಿ ಕರುಣೆ ಹುಟ್ಟುವಂತೆ ಮಾಡು. ದೂತನೂ, ವೃದ್ಧನೂ, ವೇದವಿದಗ್ರಣಿಯೂ ಆಗಿರುವ ನಿನಗೆ ಅವರ ಭಯವಿಲ್ಲ. ಒಳ್ಳೆಯ ಮುಹೂರ್ತದಲ್ಲಿ ಇಲ್ಲಿಂದ ಹೊರಡು!' ಎಂದು ಹೇಳಿದನು.

ವಿಪ್ರನು ಶಿಷ್ಯರಿಂದ ಕೂಡಿ, ಪಾಂಡವ ಹಿತಸಾಧಕನಾಗಿ ಹಸ್ತಿನಾವತಿಯನ್ನು ಸೇರಹೋದನು. ದೂತರು ಬೇರೆ ಬೇರೆ ರಾಜರನ್ನು ಕರೆಯಲು ಹೋದಮೇಲೆ, ಧನಂಜಯನು ತಾನಾಗಿ ಶ್ರೀಕೃಷ್ಣನ ಸಹಾಯವನ್ನು ಯಾಚಿಸಲು ದ್ವಾರಕೆಗೆ ಹೊರಟನು.

## ಶ್ರೀಕೃಷ್ಣಸಹಾಯ ಪ್ರಾರ್ಥನೆ

ಶ್ರೀಕೃಷ್ಣನು ದ್ವಾರಕೆಗೆ ತೆರಳಿದನೆಂದು ಚಾರರಿಂದ ತಿಳಿದು, ದುರ್ಯೋಧನನು ಜವನಾಶ್ವಗಳ ರಥದಲ್ಲಿ ಕೂತು ಪರಿವಾರ ಸೇನಾಯುತನಾಗಿ, ದ್ವಾರಕೆಯನ್ನು ಸೇರಿದನು. ಅಂದೇ ಅರ್ಜುನನೂ ಅಲ್ಲಿಗೆ ಬಂದನು. ಮೊದಲು ಶ್ರೀಕೃಷ್ಣಮಂದಿರ ವನ್ನು ಪ್ರವೇಶಿಸಿದ ದುರ್ಯೋಧನನನ್ನು ಕಂಡು, ಶ್ರೀಶನು ಮಲಗಿದ್ದವನಂತೆ ನಟಿಸಿ ದನು. ಸುಪ್ತಿರಹಿತನಾದರೂ ಸುಪ್ತನಾದಂತೆ ತೋರಿದ ಶ್ರೀಹರಿಯ ಮಹಿಮೆ ಯನ್ನರಿಯಲಾರದ ಕೌರವನು "ರಾಜಾಧಿರಾಜನಾದ ನಾನು ಕೃಷ್ಣನ ಪಾದಗಳ ಸಮೀಪದಲ್ಲಿ ಕೂಡುವುದಿಲ್ಲ"ವೆಂದು ದುರಭಿಮಾನದಿಂದ ಶಿರಃಸಮೀಪದಲ್ಲಿ ಕುಳಿತು, ಶ್ರೀಕೃಷ್ಣನ ಜಾಗೃತೆಯನ್ನು ಕಾಯುತ್ತಿದ್ದನು.

ಅರ್ಜುನನೂ ಪ್ರವೇಶಿಸಿ, ಶ್ರೀಕೃಷ್ಣನನ್ನು ಕಂಡು, ಪಾದಗಳಿಗೆ ನಮಿಸಿ ಭಕ್ತ್ಯುದ್ರೇಕದಿಂದ ಕರಮುಗಿದು, ಶಿರಬಾಗಿ ಶ್ರೀಚರಣಸಮೀಪದಲ್ಲಿ ನಿಂತು, ನಿರೀಕ್ಷಿ ಸುತ್ತಿದ್ದನು. ಶ್ರೀಕೃಷ್ಣನಾಗ ಎಚ್ಚತ್ತವನಂತೆ ಎದ್ದುಕುಳಿತು, ಮೊದಲು ಅರ್ಜುನ ನನ್ನು ನೋಡಿ, 'ಅರ್ಜುನ! ಯಾವಾಗ ಬಂದೆ? ಚನ್ನಾಗಿರುವೆಯಾ? ನಿನಗೆ ಸ್ವಾಗತ!' ಎಂದನು. ಅದನ್ನು ಕೇಳಿ ದುರ್ಯೋಧನನು 'ಕೃಷ್ಣ! ನಾನು ಮೊದಲು ಬಂದಿರುವೆನು' ಎಂದನು. ಶ್ರೀಕೃಷ್ಣನು, 'ಓಹೋ! ನಿನಗೂ ಸ್ವಾಗತ!' ಎಂದು, 'ನೀವೀರ್ವರೂ ಬರಲು ಕಾರಣವೇನು?' ಎಂದು ಕೇಳಿದನು. ಆಗ ದುರ್ಯೋಧನ ನಿಂತೆಂದನು—'ಕೃಷ್ಣ! ಮುಂದೆ ನಡೆಯುವ ಯುದ್ಧದಲ್ಲಿ ನಿನ್ನ ಸಹಾಯವನ್ನು ಕೇಳಲು ಬಂದಿರುವೆನು. ನಿನಗೆ ಪಾಂಡವರಂತೆ ಕೌರವರೂ ಬಂಧುಗಳು. ಇಬ್ಬ ರಲ್ಲಿಯೂ ನೀನು ಸಮನಾಗಿರಬೇಕಲ್ಲವೆ? ಮೊದಲು ಬಂದವನನ್ನು ಮೊದಲು ಸಂಭಾವಿಸಬೇಕೆಂಬ ಸತ್ಪರಂಪರೆ ನಿನಗೆ ತಿಳಿಯದೇ ಇಲ್ಲ. ಈಗ ಲೋಕದಲ್ಲಿ ನಿನಗೆ ಸಮರಿಲ್ಲ. ಸ್ನೇಹದಿಂದ ಬಂದಿರುವ ನನ್ನ ಕೋರಿಕೆ ನೆರವೇರಿಸು' ಎಂದ ಸುಯೋಧನನಿಗೆ ಮುಕುಂದನಿಂತೆಂದನು—

'ನಿಜ, ನೀನು ಮೊದಲು ಬಂದವನು. ಆದರೆ ನಾನು ಮೊದಲು ಕಂಡದ್ದು ಅರ್ಜುನನನ್ನು. ಆದುದರಿಂದ ನಿಮ್ಮಿಬ್ಬರಿಗೂ ಯುಕ್ತವಾಗುವಂತೆ ಸಾಹಾಯ್ಯ ವನ್ನು ಮಾಡುವುದೀಗ ಸರಿಯಾಗಿದೆ. ಕಾಮಿತಪ್ರದಾನವು ಮೊದಲು ಬಾಲಕರಿ ಗೆಂದು ಶಾಸ್ತ್ರವಿದೆ. ಆದುದರಿಂದ ಮೊದಲು ಅರ್ಜುನನು ಬೇಡಲಿ! ಕೇಳು! ಒಂದು ಪಕ್ಷದಲ್ಲಿ ನಾನೊಬ್ಬನೇ ನಿರಾಯುಧನಾಗಿ ಬರುವೆನು. ಮತ್ತೊಂದು ಪಕ್ಷದಲ್ಲಿ ಹತ್ತು ಲಕ್ಷ ಗೋಪಾಲಸೈನ್ಯವಿರುವದು. ಅವರು ನನ್ನ ಸುತರು ಮತ್ತು ಮಹಾಪರಾಕ್ರಮಿಗಳು. ನಾರಾಯಣರೆಂದು ಖ್ಯಾತರಾಗಿರುವ ಆ ಕಾಲ್ಬಲ ಬೇಕೋ ಯುದ್ಧವನ್ನು ಮಾಡದ ನಾನು ಬೇಕೋ ಆಲೋಚಿಸಿ ಅರ್ಜುನನು ಕೇಳಲಿ!' ಆಗ ಅರ್ಜುನನು ಆನಂದದಿಂದ ನಂದನಂದನನನ್ನು ಆರಿಸಿಕೊಂಡನು. ಶ್ರೀಶದ್ವೇಷಿ ಯಾದುದರಿಂದ ದುರ್ಯೋಧನನು ನಾರಾಯಣಸೈನ್ಯವನ್ನೇ ಸ್ವೀಕರಿಸಿ, ದೇವ-ದಾನವದುಸ್ಸಹರಾದ ಭಟರು ಹತ್ತುಲಕ್ಷ ಸಿಕ್ಕರಿನ್ನು ಕೃಷ್ಣನು ನಿಸ್ಸಹಾಯನಾದನು. 'ಯುದ್ಧ ಮಾಡದ ಇವನಿಂದ ನನಗೇನು ಪ್ರಯೋಜನ'ವೆಂದು ಸಂತೋಷದಿಂದ ಹೋದನು. ಬ್ರಹ್ಮಾದಿಸರ್ವದೇವನಿಯಾಮಕನಾದ ವಾಸುದೇವನನ್ನು ಲಕ್ಷಭಟರಿಗೆ ಸಮನೆಂದು ಭ್ರಮಿಸಿ, ದುರ್ಯೋಧನನು ಅವರನ್ನಾರಿಸಿಕೊಂಡನು. ಶ್ರೀಕೃಷ್ಣನೂ ಇಂತು ದುರ್ಯೋಧನನ ದುಷ್ಟಸ್ವಭಾವವನ್ನು ಜಗತ್ತಿಗೆ ತಿಳಿಸಿ, ತನಗೆ ಭಕ್ತರಾದುದ ರಿಂದ ಪ್ರೀತಿವಿಷಯರಾದ ಪಾಂಡವರನ್ನು ಸೇರಹೋದನು.

ದುರ್ಯೋಧನನು ಬಲರಾಮನನ್ನು ಕಂಡು, ಆತನ ಸಹಾಯವನ್ನು ಯಾಚಿ ಸಿದನು. ಬಲರಾಮನು 'ದುರ್ಯೋಧನ! ಭವಿತವ್ಯವನ್ನು ನಿವಾರಿಸಲಾಗದು. ಅಭಿಮನ್ಯು ವಿವಾಹ ಸಂದರ್ಭದಲ್ಲಿ ನಾನಾಡಿದ ಮಾತುಗಳನ್ನು ಸರಿ ಅಲ್ಲವೆಂದು ಸಾತ್ಯಕಿಪ್ರಮುಖರೆಂದರು. ನಿನ್ನನ್ನು ವಹಿಸಿ ಮಾತಾಡಿದ ನನ್ನ ವಚನಗಳು ಯಾರಿಗೂ ರುಚಿಸಲಿಲ್ಲ. ಶ್ರೀಕೃಷ್ಣನೂ ಅವರಂತೆ ಮಾತಾಡಿದನು. ನಾನು ಶ್ರೀಕೃಷ್ಣನಿಗೆ ಇಷ್ಟವಲ್ಲದುದನ್ನು ಮಾಡಲಾರೆನು. ಒಂದು ಕ್ಷಣವಾದರೂ ಶ್ರೀಕೃಷ್ಣ ನನ್ನು ಬಿಟ್ಟಿರಲಾರೆನು! ಇದು ನಿಜ! ಅಂದೇ ಯಾರಿಗೂ ಸಹಾಯವನ್ನು ಮಾಡ ದಿರಲು ಸಂಕಲ್ಪಿಸಿರುವೆನು. ಕ್ಷತ್ರಿಯನಿರುವೆ! ಭರತಕುಲದಲ್ಲಿ ಪುಟ್ಟಿರುವೆ! ಹೆದರ ಬೇಡ! ಹೋಗು. ಕ್ಷಾತ್ರ ಧರ್ಮದಂತೆ ಕಾದಾಡು!' ಎಂದು ಕಳಿಸಿದನು.

ದುರ್ಯೋಧನನು ಬಲರಾಮದೇವನನ್ನಪ್ಪಿ, ಬೀಳ್ಕೊಂಡು, ಕೃತವರ್ಮನನ್ನು ಕಂಡನು. ಆತನು ಒಂದಕ್ಷೌಹಿಣೀ ಸೇನೆಯೊಂದಿಗೆ ಕೌರವ ಸಹಾಯಕನಾಗಿ ಬರಲು, ಇನ್ನು ಕೃಷ್ಣ-ಪಾರ್ಥರು ಸೋತರೆಂದು ತಿಳಿದು, ದುರ್ಯೋಧನನು ಆನಂದ ದಿಂದ ಆನೆಗಳೂರಿಗೆ ಹೊರಟನು.

ಜಗತ್ಪ್ರಭುವಾದ ಯದುಸಿಂಹನಾಗ ಪಾರ್ಥನನ್ನು ನೋಡಿ, 'ಪಾರ್ಥ, ಯುದ್ಧಮಾಡದ ನನ್ನನ್ನೇಕೆ ಕೋರಿದೆ?' ಎಂದು ಕೇಳಿದನು. ಅರ್ಜುನನು 'ಶ್ರೀಶ! ಜಗತ್ತೆಲ್ಲವನ್ನು ಸೃಜಿಸಿ, ಪಾಲಿಸಿ. ಸಂಹರಿಸುವ ನಿನಗೆ ಎದುರುಂಟೇ? ನಿನ್ನ ದಯ

ವಿರಲಿ! ಜನಾರ್ದನ! ನಾನೊಬ್ಬನೇ ಸರ್ವ ಕೌರವರನ್ನು ಕೊಲ್ಲಲು ಸಮರ್ಥ ನಿರುವೆನು. ಪುಣ್ಯಶ್ಲೋಕ ಶಿಖಾಮಣಿಯಾದ ನಿನ್ನ ಕರುಣೆಯಿಂದ ನನಗೆ ಜಯ, ಕೀರ್ತಿ, ಧರ್ಮ, ಶ್ರೀಸಂಪತ್ತುಗಳು ಒದಗುವವು. ನನಗೆ ಸಾರಥಿಯಾಗಿ, ನನ್ನ ಚಿರಕಾಲದ ಕೋರಿಕೆಯನ್ನು ಮನ್ನಿಸು' ಎಂದು ಬೇಡಿದನು.

ವಾಸುದೇವನು, 'ಸಾರಥಿಯಾಗುವೆನು ನಡೆ! ನಿನ್ನ ಕೋರಿಕೆಯನ್ನು ನಡೆ ಸುವುದೆನ್ನ ವ್ರತ' ಎಂದು ಅನುಗ್ರಹಿಸಲು, ಅರ್ಜುನನು ಹಿಗ್ಗಿ 'ಕೃಷ್ಣ! ನೀನು ಚಕ್ರಹಸ್ತನಾಗಿ ನಿಂತರೆ ಎದುರಿಗೆ ನಿಲ್ಲುವವರಿಲ್ಲ. ಎಲ್ಲರನ್ನು ನೀನೇ ಗೆದ್ದೊಡೆ, ನಮ್ಮ ಕೆಲಸವೇನು? ನಿನ್ನ ಭಕ್ತರಾದ ಪಾಂಡವರ ಕೀರ್ತಿಯು ಹರಡಲೆಂದು, ನಿರಾಯುಧ ನಾಗಿ ನಿಲ್ಲುವ ನಿನ್ನ ಕರುಣೆಗೆ ನಮೋ ನಮಃ! ಪಾರ್ಥಸಾರಥಿ! ನೀನಿದ್ದರೆ ಜಯ ವಿದೆ' ಎಂದು ವಂದಿಸಿ, ನಂದನಂದನನೊಡಗೂಡಿ, ಉಪಪ್ಲಾವ್ಯವನ್ನು ಸೇರಿದನು.

## ಶಲ್ಯಸಂಗ್ರಹ—ನಹುಷ ಕಥೆ

ಶಲ್ಯರಾಜನು ಪಾಂಡವದೂತನ ವಾಕ್ಯವನ್ನು ಕೇಳಿ, ಮಹಾಸೈನ್ಯ ಸಮೇತ ನಾಗಿ ಉಪಪ್ಲಾವ್ಯವನ್ನು ಸೇರಲು ಹೊರಟನು. ಒಂದೂವರೆ ಯೋಜನದ ದೂರ ವ್ಯಾಪಿಸಿ, ಒಂದಕ್ಷೌಹಿಣಿಯ ಆ ಮಹಾಸೇನೆಯು ಉಕ್ಕೇರಿ ಬರುವ ಸಮುದ್ರದಂತೆ ಕಾಣುತ್ತಿತ್ತು. ಇಂತು ಬರುವ ಶಲ್ಯನನ್ನು ತನ್ನ ಕಡೆಗೆ ಸೆಳೆಯಲಿಚ್ಛಿಸಿ, ದುರ್ಯೋಧನನು ಆಪ್ತ ಜನರನ್ನು ಕಳಿಸಿ ಶಲ್ಯನು ಬರುವ ಮಾರ್ಗದಲ್ಲಿ ದಿವ್ಯ ಸಭೆ ಗಳನ್ನು ಕಟ್ಟಿಸಿದನು. ಅಲ್ಲಿ ಸಕಲ ಸೌಕರ್ಯಗಳನ್ನೂ ಒದಗಿಸಿದನು.

ಪರಿಚಾರಕರು ಹೊರಗೆ ಹಸಿರು ಹಂದರವನ್ನು ಕಟ್ಟಿ, ಒಳಗೆ ವಿತಾನಗಳಿಂದ ಅಲಂಕರಿಸಿದ್ದರು. ಮಣಿಕುಟ್ಟಿಮದಲ್ಲಿ ರತ್ನಕಂಬಳಗಳನ್ನು ಹಾಸಿ, ಒರಗುದಿಂಬು ಗಳನ್ನಿಟ್ಟಿದ್ದರು. ಸಭೆಗಳಲ್ಲಿ ನಾನಾ ಮಂದಿರಗಳನ್ನು ನಿರ್ಮಿಸಿ, ಶಯನಾಸನ ಸ್ನಾನ ಸೌಕರ್ಯಗಳನ್ನು ಕಲ್ಪಿಸಿದ್ದರು. ಸಭೆಯ ಹಿಂದೆ ಅಮೃತಮಧುರಜಲಪೂರ್ಣವಾದ ದೀರ್ಘಿಕೆಗಳಿದ್ದವು. ಆನೆ ಕುದುರೆಗಳಿಗೆ ನಿಲ್ಲಲು ಕೊಟ್ಟಿಗೆಗಳಿದ್ದವು. ಸರ್ವಭೋಜನ ಪದಾರ್ಥಗಳು, ಪಶುಗಳಿಗೆ ಹುಲ್ಲು, ಕಬ್ಬು ಮೊದಲಾದುವನ್ನು ಸಮೃದ್ಧವಾಗಿ ಒಟ್ಟಿದ್ದರು. ಇಷ್ಟು ಅನುಕೂಲವಾಗಿರುವ ಬಿಡದಿಗಳನ್ನು ಕಂಡು, ಪರಿಚಾರಕರು ಮಾಡುವ ಸದುಪಚಾರಗಳಿಗೆ ಹಿಗ್ಗಿ, ಶಲ್ಯನು ಅವೆಲ್ಲವನ್ನು ಅಳಿಯನಾದ ಧರ್ಮಜನೇ ನಿರ್ಮಿಸಿರುವನೆಂದು ತಿಳಿದನು. ಆನಂದದಿಂದ ಅವನು ಪರಿವಾರದವರನ್ನು ಕಂಡು 'ಯಾರೀ ಸೌಕರ್ಯಗಳನ್ನು ಇಷ್ಟು ಚನ್ನಾಗಿ ಕಲ್ಪಿಸಿರುವರೋ, ಅವರಿಗೆ ಬೇಕಾದ ವರವನ್ನು ಕೊಡುವೆ'ನೆಂದನು. ಅಲ್ಲೇ ಅಡಗಿದ್ದ ದುರ್ಯೋಧನನು 'ಇದೇ ಸಮಯ' ವೆಂದು ತೋರಿ, ದುರ್ಯೋಧನನು ನಮಸ್ಕರಿಸುತ್ತಿರುವನೆಂದು ತಿಳಿಸಿ, ವಂದಿಸಿದನು. ಅವೆಲ್ಲವನ್ನೂ ಮಾಡಿಸಿದವನು ಕೌರವೇಶನೆಂದರಿತಾಗ, ಶಲ್ಯನು ಆಶ್ಚರ್ಯಸಂಭ್ರ- ಮಾನ್ವಿತನಾದನು. ಸುಯೋಧನನು 'ಮದ್ರರಾಜ! ನಿನ್ನ ವಚನವು ಸತ್ಯವಾಗಲಿ!

ನೆನಗೆ ಸಹಾಯಕನಾಗಿ, ನನ್ನ ಸೈನ್ಯಗಳನ್ನು ನಡೆಸು! ಪಾಂಡವ ಧಾರ್ತರಾಷ್ಟ್ರರೆಂದರೆ ನಿನಗೆ ಬೇರಲ್ಲ. ಮಹಾರಥವರನು, ಮಹಾಬಲನು, ಆದ ನಿನ್ನ ಸಹಾಯವು ದೊರೆತರೆ, ಪಾಂಡವರಿಗೆ ಕೃಷ್ಣನ ಸಹಾಯದಿಂದ ಆದ ಆನಂದವೆನಗಾಗುವುದು. ಅನುಗ್ರಹಿಸು !' ಎಂದು ಬೇಡಿದನು.

ಶಲ್ಯನು 'ಅಹುದು ! ನೀವೀರ್ವರೂ ನನಗೆ ಬಂಧುಗಳು. ನನ್ನ ಮಾತಿನಂತೆ ನಿನಗೆ ಸಹಾಯಕನಾಗಿ ಬರುವೆನು ನಡೆ ! ನೀನು ಹಸ್ತಿನಾವತಿಯನ್ನು ಸೇರು ! ನಾನು ಪಾಂಡವರನ್ನು ಕಂಡು ಬರುವೆನು. ಸಂಶಯಬೇಡ !' ಎಂದು ಅವನನ್ನು ಕಳಿಸಿ, ತಾನು ಪಾಂಡವರನ್ನು ಸೇರಬಂದನು. ನಡೆದ ವ್ಯತ್ಯಯದಿಂದ ಆತನ ಮನವು ಭಿನ್ನನಾಗಿತ್ತು. ದೈವೇಚ್ಛೆಗೆ ಶಿರಬಾಗಿ ಶಲ್ಯನು ಪಾಂಡವರಿಗೆ ಆ ವಿಷಯ ವನ್ನು ತಿಳಿಸಲು ಬಂದನು. ಧರ್ಮರಾಜಾದಿಗಳು ಅವನನ್ನೆದುರ್ಗೊಂಡು, ವಂದಿಸಿ, ಕರತಂದು, ಕಾಂಚನಾಸನದಲ್ಲಿ ಕೂಡಿಸಿ, ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದರು. ಕುಶಲ ಪ್ರಶ್ನಾನಂತರದಲ್ಲಿ ಶಲ್ಯನು ಧರ್ಮರಾಜನನ್ನು ಕರೆದಪ್ಪಿ, ಕಣ್ಣೀರಿಟ್ಟು ಇಂತೆಂದನು—

'ಹನ್ನೆರಡು ವರ್ಷದ ವನವಾಸವನ್ನು ದೈವಾನುಗ್ರಹದಿಂದ ಕಳೆದು, ಪತ್ನೀ ಸೋದರರಿಂದ ಕಲೆತು ಅಜ್ಞಾತವಾಸವನ್ನೂ ನಡೆಸಿ ಪಾರಾದೆ ! ಇತರ ದುಷ್ಕರವಾದ ಮಹತ್ಕಾರ್ಯಗಳನ್ನೂ ನೀವು ಸಾಧಿಸಿರುವಿರಿ ! ಧೃತರಾಷ್ಟ್ರತನೂಜರಿಂದ ಬಂದ ಕಷ್ಟಪರಂಪರೆಯು ಕೊನೆಗಂಡಿರಿ ! ಶತ್ರುಗಳನ್ನು ನಿರ್ಜಿಸಿ ಸುಖಪಡುವ ಸಮಯವು ಸಮೀಪಿಸುತ್ತಿದೆ. ನಿನ್ನಲ್ಲಿ ಲೋಭವಿಲ್ಲ. ಹಿಂದಿನ ರಾಜರ್ಷಿಗಳ ಧರ್ಮಮಾರ್ಗವನ್ನು ನಡೆಸುವ ನಿನ್ನಲ್ಲಿ ಸತ್ಯ-ಧರ್ಮ-ದಯಾ-ದಾನ-ಕ್ಷಮಾದಿ ಗುಣಗಳು ನೆಲೆಮಾಡಿ ನಿಂತಿವೆ. ನಿನಗೆ ತಿಳಿಯದ ಧರ್ಮವಿಲ್ಲ. ನಿನಗೆ ಜಯವಾಗುವುದು ; ಸಂಶಯವಿಲ್ಲ' ಎಂದು ಶಲ್ಯನು ದುರ್ಯೋಧನನು ಮಾಡಿದ ಉಪಚಾರ ಕೈತವವನ್ನೂ, ತಾನು ತಿಳಿ ಯದೆ ಕೊಟ್ಟ ವರವನ್ನೂ ತಿಳಿಸಿದನು.

ಧರ್ಮರಾಜನಾಮಾತನ್ನಾಲಿಸಿ ಅಪ್ರಸನ್ನನಾಗಲಿಲ್ಲ. 'ಮಾವ! ಒಳ್ಳೆಯ ದಾಯಿತು. ಸಂತುಷ್ಟನಾಗಿ ನೀನಿತ್ತ ವರವು ಸತ್ಯವಾಗಲಿ ! ನಿನ್ನಿಂದ ನಾನೊಂದು ಸಹಾಯವನ್ನು ಬೇಡುತ್ತಿರುವೆನು. ನಿನ್ನ ಭಗಿನೀ ಪುತ್ರರಿಗಾಗಿ, ಅಕಾರ್ಯವೆನ್ನದೆ ನಮ್ಮ ಪ್ರಾರ್ಥನೆಯನ್ನು ಮನ್ನಿಸು ! ನಮಗೆ ನೀನು ವಾಸುದೇವನಂತೆ ಪರಮ ಹಿತಂಕರನು. ಮಹಾರಥನಾದ ನಿನಗೆ ಕೃಷ್ಣಸಮಬಲನೆಂಬ ಪ್ರಖ್ಯಾತಿ ಇದೆ ಕರ್ಣ-ಅರ್ಜುನರ ಕಾಳಗವು ನಡೆಯುವುದು ತಪ್ಪದು ಆಗ ಅರ್ಜುನನನ್ನು ಕಾಪಾಡುವ ಹೊಣೆಯನ್ನ ನಿನಗೊಪ್ಪಿಸುತ್ತಿರುವೆನು. ನಮಗೆ ಜಯವಾಗಬೇಕೆಂದರೆ, ನೀನು ಕರ್ಣನ ತೇಜೋವಧವನ್ನು ಮಾಡಲೇಬೇಕು. ಅವನನ್ನು ನಿರುತ್ಸಾಹಗೊಳಿಸಲು ಅವನ ಸಾರಥಿಯಾಗಿದ್ದು, ಅರ್ಜುನ ಪ್ರಶಂಸೆಯನ್ನು ಮಾಡು ! ನಮ್ಮಲ್ಲಿಗೆ ಬರುವ

ನಿನ್ನನ್ನು ಮೋಸದಿಂದ ತನ್ನ ಕಡೆಗೆ ಸೆಳೆದ ಕೌರವರಾಜನಿಗೆ ಪ್ರತೀಕಾರವು ಪಾಪವಲ್ಲ !' ಎಂದು ಪ್ರಾರ್ಥಿಸಿದ ಧರ್ಮರಾಜನ ಮಾತಿಗೆ ಶಲ್ಯನು ಸಮ್ಮತಿಸಿ, 'ರಾಜನ್ ನಿನಗೆ ಮಂಗಳವಾಗಲಿ ! ನೀನು ನುಡಿದಂತೆ ನಾನು ಕರ್ಣಸಾರಥಿಯಾಗಿ, ಅವನ ಉತ್ಸಾಹ ಭಂಗವನ್ನು ಸಾಧಿಸುವೆನು. ಅವನೂ ನನ್ನನ್ನು ವಾಸುದೇವ ಸಮನೆಂದು ತಿಳಿದಿರುವನು. ಅಹಿತವಚನಗಳನ್ನಾಡಿ ಅವನ ಉತ್ಸಾಹವನ್ನು ಮುರಿಯುವೆನು. ಅವನ ದರ್ಪವೂ ಅಸಹ್ಯವಾಗಿದೆ. ಚಿಂತಿಸಬೇಡ ! ಇನ್ನು ನಿನಗೆ ಬೇಕಾದ ಹಿತವನ್ನು ಮಾಡುವೆನು. ದ್ಯೂತಕಾಲದಲ್ಲಿ ಸೂತಸುತನಾಡಿದ ಪರುಷವಚನಗಳ ಫಲವನ್ನವನಿಂದ ದೈವವು ಉಣಿಸದೆ ಬಿಡದು. ಯಾವ ಪ್ರಾರಬ್ಧದುಷ್ಕರ್ಮವೋ ನಶಿಸಿ, ವನದಲ್ಲಿ ಪಟ್ಟ ಕಷ್ಟಗಳೆಲ್ಲವೂ ನಿಮಗೆ ಸುಖರೂಪವೇ ಆದವು. ನಿಜವಾಗಿ ವಿಚಾರಿಸಲು ನಿಮಗೆ ದುಃಖವಿಲ್ಲ ; ದುಷ್ಟಪೀಡಿತಳಾದ ದಮಯಂತಿಯಂತೆ ದ್ರೌಪದಿಯು ಕೊನೆಗೆ ಸುಖವನ್ನೇ ಹೊಂದುವಳು. ದೈವವು ದುರ್ಲಂಘ್ಯವಾಗಿದೆ. ಎಂತಹ ದೇವತೆಗಳನ್ನೂ ಅದು ಕಾಡಿ ಪೀಡಿಸಿದೆ. ದೇವರಾಜನೂ ಆತನ ಪತ್ನಿಯೂ ಪಟ್ಟ ಕಷ್ಟವೇನು ಸ್ವಲ್ಪವೇ ?' ಎಂದನು.

'ಹಿಂದೆ ತ್ವಷ್ಟನೆಂಬ ಪ್ರಜಾಪತಿಯು ಇಂದ್ರನ ಮೇಲಿನ ಸಿಟ್ಟಿನಿಂದ ವಿಶ್ವರೂಪನೆಂಬ ಮಗನನ್ನು ಸೃಜಿಸಿದನು. ಸೂರ್ಯ ಚಂದ್ರ ಪಾವಕರಂತೆ ಬೆಳಗುವ ಮೂರು ವದನಗಳಿದ್ದ ವಿಶ್ವರೂಪನು ಇಂದ್ರಪದವನ್ನು ಬೇಡಿ, ತಪಸ್ಸನ್ನು ಮಾಡುತ್ತಿದ್ದನು. ಒಂದು ಮುಖದಿಂದ ವೇದಗಳನ್ನುಚ್ಚರಿಸುತ್ತಾ, ಮತ್ತೊಂದರಿಂದ ಸುರೆಯನ್ನು ಕುಡಿಯುತ್ತಾ, ಮೂರನೆಯ ಮುಖದಿಂದ ದಿಕ್ಕನ್ನು ನುಂಗುವಂತೆ ನೋಡುತ್ತಾ, ಭಯಂಕರ ತಪವನ್ನು ಮಾಡುವ ವಿಶ್ವರೂಪನನ್ನು ಕಂಡು, ಇಂದ್ರನು ಅವನ ತಪಸ್ಸಿಗೆ ಅಂಜಿ, ಅದನ್ನು ಕೆಡಿಸಲು ಅಪ್ಸರೆಯರನ್ನು ಕಳಿಸಿದನು. ಶೃಂಗಾರವೇಷರೂ, ಸುಮಹಾರಭೂಷರೂ ಆದ ದೇವಯೋಷಿಜ್ಜನರು ಇಂದ್ರಭಯವನ್ನು ನಿವಾರಿಸಲು ನಿಶ್ಚಯಿಸಿ, ತ್ರಿಶಿರಸ್ಕನನ್ನು ಸಮೀಪಿಸಿ, ನೃತ್ಯಗಾನಗಳಿಂದಲು, ಹಾವಭಾವವಿಲಾಸಗಳಿಂದಲು, ಅವನ ಮನ ಸೆಳೆಯಲು ಯತ್ನಿಸಿದರು. ವಿಶ್ವರೂಪನು ಕಣ್ಣೆತ್ತಿ ನೋಡದಿರಲು ಅವರು ವಿಫಲಪ್ರಯತ್ನರಾಗಿ, ದೇವರಾಜನಿಗೆ ಎಲ್ಲವನ್ನೂ ತಿಳಿಸಿದರು. ಶತ್ರುವು ದುರ್ಬಲನೆಂದು ಉಪೇಕ್ಷಿಸಬಾರದೆಂದರಿತು ದೇವೇಂದ್ರನು ಖಡ್ಗಾಯುಧದಿಂದ ಅವನನ್ನು ಸಂಹರಿಸಿದನು. ಪರ್ವತಶಿಖರವೇ ಕಡಿದು ಬಿದ್ದಂತಿರುವ ವಿಶ್ವರೂಪನು ಮೃತನಾಗಿದ್ದರೂ ಅವನ ಮುಖಗಳು ತೇಜೋವಂತವಾಗಿ ಬದುಕಿರುವಂತೆ ಕಂಡವು. ಆ ಭಯಂಕರ ದೃಶ್ಯವನ್ನು ಕಂಡು, ಇಂದ್ರನು ಭೀತನಾದನು. ಆಗ ವಿಶ್ವಕರ್ಮನು ಮಹಾಪರಶುವನ್ನು ಧರಿಸಿ, ಅಲ್ಲಿಗೆ ಬಂದುದನ್ನು ನೋಡಿ, ಇಂದ್ರನು ಅವನನ್ನು ವಿಶ್ವರೂಪನ ತಲೆಗಳನ್ನು ತುಂಡರಿಸೆಂದು ಆಜ್ಞಾಪಿಸಿದನು. ತಕ್ಷನು 'ನಿಂದ್ಯವಾದ ಕರ್ಮವಿದು, ಮಾಡುವುದಿಲ್ಲ'ವೆಂದನು. ಇಂದ್ರನು 'ಎಲವೋ ತಕ್ಷ! ನಾನು ದೇವೇಂದ್ರನು, ಕೇಳೆನ್ನ ಮಾತನ್ನು ! ಬ್ರಾಹ್ಮಣಪುತ್ರನನ್ನು ಕೊಂದುದಕ್ಕೆ

ಪ್ರಾಯಶ್ಚಿತ್ತಮಾಡಿಕೊಳ್ಳುವೆನು. ಮಹಾಶತ್ರುವಾದುದರಿಂದ ವಿಪ್ರನೆಂದು ಗಣಿಸದೆ ಇವನನ್ನು ವಜ್ರಾಯುಧದಿಂದ ಹೊಡೆದು ಕೊಂದಿರುವೆನು. ಆದರೂ ಇವನ ಮುಖ ಗಳು ಭಯಂಕರವಾಗಿವೆ. ಹೊಡೆ ಇವನನ್ನು ! ಮುಂದೆ ಯಜ್ಞಗಳಲ್ಲಿ ಪಶುಶಿರವು ನಿನಗೆ ಸಮರ್ಪಿತವಾಗುವಂತೆ ವರವಿತ್ತಿರುವೆನು.' ಎಂದು ತ್ವರೆಪಡಿಸಿದನು. ಆಗ ವರ್ಧಕಿಯು ತನ್ನ ಪರಶುವಿನಿಂದ ವಿಶ್ವರೂಪನ ತಲೆಗಳನ್ನು ತುಂಡರಿಸಿದನು. ಆ ಮೂರು ತಲೆಗಳಿಂದ ಮೂರು ಪಕ್ಷಿಗಳು ಹೊರಬಂದವು. ವೇದವನ್ನೋದುತ್ತಾ ಸೋಮರಸವನ್ನು ಕುಡಿಯುವ ಮುಖದಿಂದ ಕಪಿಂಜಲಗಳು, ದಿಕ್ಕುಗಳನ್ನು ನೋಡುವ ಮುಖದಿಂದ ತಿತ್ತಿರಿಗಳು, ಸುರಾಪಾನಮುಖದಿಂದ ಕಲವಿಂಕಗಳು, ಶ್ಯೇನಗಳು ಹೊರಬಂದವು. ಇಂದ್ರನು ನಿಶ್ಚಿಂತನಾಗಿ, ಸ್ವರ್ಗವನ್ನು ಸೇರಿದನು. ತಕ್ಷನೂ ಸ್ವಗೃಹಕ್ಕೆ ಪೋದನು.

ಶಕ್ರನು ಸುತನನ್ನು ಕೊಂದ ವೃತ್ತಾಂತವನ್ನು ಕೇಳಿ, ತ್ವಷ್ಟನು ಕೋಪಗೊಂಡು ಶಕ್ರವಿನಾಶಕ್ಕೆಂದು ವೃತ್ರನೆಂಬ ದೈತ್ಯನನ್ನು ಅಗ್ನಿಕುಂಡದಿಂದ ಹುಟ್ಟಿಸಿದನು. 'ಇಂದ್ರಶತ್ರೋ! ವಿವರ್ಧಸ್ವ!' ಎಂದು ಆಹುತಿಯನ್ನಿತ್ತ ತ್ವಷ್ಟನ ಮುಂದೆ ನಿಂತು, ಪ್ರಳಯಾಗ್ನಿಯಂತೆ ಉರಿಯುವ ವೃತ್ರನು 'ಏನಪ್ಪಣೆ' ಎಂದನು. 'ಇಂದ್ರನನ್ನು ಕೊಲ್ಲು' ಎಂದ ತ್ವಷ್ಟನ ಮಾತಿನಂತೆ ವೃತ್ರನು ಇಂದ್ರಲೋಕವನ್ನು ಮುತ್ತಿದನು. ಭಯಂಕರವಾಯಿತು ವೃತ್ರವಾಸವರ ಕಾಳಗ ! ವೃತ್ರನು ಬಾಯ್ತೆರೆದು ಇಂದ್ರನನ್ನು ನುಂಗಿಬಿಟ್ಟನು. ಅದನ್ನು ಕಂಡು, ಹೆದರಿ ದೇವತೆಗಳು ಜೃಂಭಿಕಾ ಎಂಬ ಶಕ್ತಿ ಯನ್ನು ಉತ್ಪಾದಿಸಿ, ವೃತ್ರನಲ್ಲಿಗೆ ಕಳಿಸಿದರು. ಅವನು ಆಕಳಿಸಿದನು. ತತ್‌ಕ್ಷಣವೇ ಇಂದ್ರನು ಅವನ ಮುಖದಿಂದ ಹೊರಬಂದು ಪಾರಾದನು.

ಮತ್ತೆ ವೃತ್ರವಾಸವರಿಗೆ ಯುದ್ಧವಾಗಿ, ಬಹುಕಾಲ ಘೋರವಾಗಿ ನಡೆಯಿತು. ವೃತ್ರನು ಪೀಡಿಸಲು ನೊಂದು, ಇಂದ್ರನು ಹಿಂದಿರುಗಿ ಹೋದನು. ಆಗ ದೇವ-ಮುನಿಗಳು ಭಯಮೋಹಿತರಾಗಿ ದಿಕ್ಕುತೋಚದೆ, ಮಂದರ ದ್ರೋಣಿಯಲ್ಲಿ ಕಲೆತು ಆಲೋಚನೆ ಮಾಡಿದರು. ಇಂದ್ರನು ಶ್ರೀಶನನ್ನು ನೆನೆದು, ಅಧೋಕ್ಷಜ ನಿಂದಲೇ ಕ್ಷೇಮವೆಂದರಿತು, ದೇವತೆಗಳಿಗಿಂತೆಂದನು—'ದೇವತೆಗಳಿರಾ! ವೃತ್ರನಿಂದ ಜಗವೆಲ್ಲವೂ ತುಂಬಿದೆ. ಅವನಿಗೆ ಎದುರಿಲ್ಲದಂತಾಗಿದೆ. ಹಿಂದೆ ಅವನನ್ನು ಗೆಲ್ಲಲು ಸಮರ್ಥನೆನಿಸಿದ ನಾನಿಂದು ನಿರ್ಬಲನಾಗಿರುವೆನು. ಏನು ಮಾಡಿದರೆ ನಮಗೆ ಶುಭ ವಾಗುವುದೋ ಅದನ್ನು ಕೇಳಿ ! ಶ್ರೀವಿಷ್ಣುವಿಗೆ ಶರಣಾಗಿ ಹೋಗೋಣ ! ಆ ದುಷ್ಟವೃತ್ರನ ವಧೋಪಾಯವನ್ನು ಭಗವಂತನೇ ತಿಳಿಸುವನು.' ಅಂತೆಯೇ ಋಷಿ ಗಣದಿಂದ ಕೂಡಿ ದೇವತೆಗಳು ಶರಣ್ಯನಾದ ಶ್ರೀನಾರಾಯಣನನ್ನು ಕಂಡು, ಇಂತು ವಿಜ್ಞಾಪಿಸಿದರು—

'ದೇವೇಶ ! ವೃತ್ರಭಯದಿಂದ ನೊಂದು ಬಂದಿರುವೆವು. ನಮಗೆ ನೀನೇ ರಕ್ಷಕನು. ಮೂರು ಪಾದಗಳಿಂದ ಮೂಲೋಕಗಳನ್ನು ಪಡೆದು, ಬಲಿಯನ್ನೂ

ನಿರ್ಜಿಸಿ, ಶಕ್ರನನ್ನು ಪುನಃ ದೇವರಾಜ್ಯದಲ್ಲಿ ನಿಲ್ಲಿಸಿದೆ. ನೀನೇ ಸರ್ವದೇವ ಪ್ರಭು ವಾಗಿರುವೆ ! ಎಲ್ಲ ಜಗವೂ ನಿನ್ನಿಂದ ವ್ಯಾಪ್ತವಾಗಿದೆ. ದೇವತೆಗಳಿಗೆ ಅಮೃತವನ್ನಿತ್ತ ವನೂ ನೀನೆ! ವೃತ್ರನಿಂದ ನಮ್ಮನ್ನು ಕಾಪಾಡು.'

ಶ್ರೀಶನಿಂತೆಂದನು —'ದೇವಮುನಿ ಸುಜನಪ್ರಿಯನಾದೆನಗೆ ನಿಮ್ಮ ಹಿತಸಾಧನೆ ಅವಶ್ಯವೆನಿಸಿದೆ. ವೃತ್ರನಾಶವಾಗುವ ಒಂದು ಉಪಾಯವನ್ನು ಕೇಳಿ ! ಒಳ್ಳೆಯ ಮಾತನ್ನಾಡಿ, ಅವನಿಂದ ಸ್ನೇಹವಾಗಿರಿ ! ಮುಂದೆ ನನ್ನ ತೇಜದಿಂದ ಇಂದ್ರನನ್ನೂ, ವಜ್ರಾಯುಧವನ್ನೂ ಪ್ರವೇಶಿಸಿ, ನಿಮಗೆ ವಿಜಯವನ್ನು ತಂದುಕೊಡುವೆನು.'

ಶ್ರೀಶನಿತ್ತ ಅಭಯದಿಂದ ಪ್ರಹರ್ಷಿತರಾಗಿ ಋಷಿವರರು, ಗಂಧರ್ವರು, ದೇವತೆ ಗಳು ಕಲೆತು ಶಕ್ರನನ್ನನುಸರಿಸಿ ಹೋಗಿ, ವೃತ್ರನನ್ನು ಕಂಡರು. 'ಮಹಾಬಲ!ನಿನ್ನಿಂದ ಲೋಕಗಳು ವ್ಯಾಪ್ತವಾಗಿವೆ. ನೀನು ಮಹಾಸಮರ್ಥನಹುದು. ಆದರೆ ಇಂದ್ರನನ್ನು ನೀನು ಗೆಲ್ಲಲಾರೆ ! ನಿಮ್ಮಿಬ್ಬರ ಯುದ್ಧವು ಕೊನೆಯಿಲ್ಲದಂತೆ ಸಾಗುತ್ತಿದೆ. ಸುರನರ ಗಂಧರ್ವರ ಪೀಡೆಯು ನಿಲ್ಲಲಿ ! ನಿನಗೂ ಇಂದ್ರನಿಗೂ ಸ್ನೇಹವಾಗಲಿ ! ಆಗ ನಿನಗೂ ಸ್ವರ್ಗ-ಸುಖಗಳು ಸಿಗುವವು' ಎಂದರು. ವೃತ್ರನು ಋಷಿಗಳಿಗೆರಗಿ ಪರಸ್ಪರ ವಿರುದ್ಧರಾದ ತಮಗೆ ಸ್ನೇಹವೆಂತಾಗುವುದೆಂದು ಕೇಳಿದನು. ಋಷಿಗಳು 'ಹಾಗಲ್ಲ ! ಸಜ್ಜನ ಸಂಗವು ತಾನಾಗಿ ಒದಗಿರಲು ಬಿಡಬಾರದು. ಸುಜನ ಸಂಗ ದಿಂದ ಅರ್ಥ ಧರ್ಮ ಲಾಭವಾಗುವುದಲ್ಲದೆ ಕಷ್ಟಗಳೂ ತೊಲಗುವವು. ಇಂದ್ರನು ಸಜ್ಜನ ಸಮ್ಮತನೂ, ಮಹಾತ್ಮರಿಗೆ ಆಧಾರನೂ, ಆಗಿರುವನು. ಧರ್ಮಜ್ಞನೂ, ಸತ್ಯಸಂಧನೂ ಆದ ಇಂದ್ರನಿಂದ ಸ್ನೇಹದಿಂದಿರು !' ಎಂದರು.

ವೃತ್ರನು ಮಹರ್ಷಿಗಳೇ ! ನೀವೆನಗೆ ಪೂಜ್ಯರು. ನನ್ನದೊಂದು ನಿಬಂಧನೆ ಕೇಳಿ ! ಅದರಂತೆ ನಡೆದರೆ ಮಾತ್ರ ಇಂದ್ರನು ನನ್ನ ಸ್ನೇಹಿತನೆಂದು ಸ್ವೀಕರಿಸುವೆನು. 'ಒಂದು ವೇಳೆ ಇಂದ್ರನಿಂದ ವಿರೋಧವಾದರೆ ಅವನು ನನ್ನನ್ನು ಕೊಲ್ಲಲೆಣಿಸುವನು. ಆಗ ನನ್ನನ್ನು ಶುಷ್ಕವಲ್ಲದ, ಆರ್ದ್ರವಲ್ಲದ ಕಲ್ಲು, ಕಟ್ಟಿಗೆ, ಶಸ್ತ್ರಗಳಲ್ಲದ ಆಯುಧ ದಿಂದ ಕೊಲ್ಲಲಿ ! ನನಗೆ ಹಗಲಾಗಲಿ ರಾತ್ರಿಯಾಗಲಿ ಸಾವು ಬರಬೇಡ !' ಎಂದನು. ಇಂತು ವೃತ್ರವಾಸವರು ಸ್ನೇಹಿತರಾಗಿ, ಸುಖವಾಗಿದ್ದರು. ವೃತ್ರವಧೋಪಾಯವನ್ನು ಚಿಂತಿಸುತ್ತಾ ಇಂದ್ರನು ಸಮಯಕ್ಕಾಗಿ ಕಾದಿದ್ದನು. ಒಂದು ದಿನ ಮಹಾಸುರನು ಸಮುದ್ರತೀರದಲ್ಲಿ ವಿಹರಿಸುತ್ತಿರಲು ಸಂಧ್ಯಾಕಾಲವಾಯಿತು. ಇದೇ ಅವನ ಸಂಹಾರ ಸಮಯವೆಂದರಿತು, ದೇವೇಂದ್ರನು ಶ್ರೀಶನನ್ನು ಭಕ್ತಿಯಿಂದ ಸ್ಮರಿಸಿ, ಸಮುದ್ರಫೇನ ವನ್ನು ವಜ್ರಾಯುಧಕ್ಕಂಟಿಸಿ, ಅದರಿಂದ ವೃತ್ರನನ್ನು ಹೊಡೆದನು. ಶ್ರೀಹರಿಯು ಫೇನದಲ್ಲಿ ಆವಿಷ್ಟನಾಗಿ ವೃತ್ರಾಸುರನನ್ನು ಸಂಹರಿಸಿದನು. ಇಂತು ಸಂಧ್ಯಾಕಾಲದಲ್ಲಿ ಶುಷ್ಕಾರ್ದ್ರಗಳಲ್ಲದ ಫೇನ(ನೊರೆ)ದಿಂದ ದುಷ್ಟ ವೃತ್ರನನ್ನು ಕೊಂದು ಶ್ರೀಶಾನುಗ್ರಹ ಪಾತ್ರನಾದ ಇಂದ್ರನು ವೃತ್ರಹಣನೆಂದು ಖ್ಯಾತನಾದನು. ಲೋಕಗಳು ವಿಜ್ವರ ವಾದವು. ಮಂಗಳಕಾರ್ಯಗಳು ಪ್ರವೃತ್ತವಾದವು. ಮಂದಮಾರುತವು ಸಂಚರಿಸಿ

ಸುಖವನ್ನಿತ್ತಿತು. ದುಷ್ಟವಧೆಯಿಂದ ಪ್ರಜರು ಆನಂದಿಸಿದರು. ಋಷಿ ದೇವ ಗಂಧರ್ವರು ಪುರಂದರನನ್ನು ಪಾಡಿಪೊಗಳಿದರು. ಶತ್ರುವಧೆಯಿಂದ ಪ್ರಹರ್ಷಿತನಾದ ಇಂದ್ರನೂ ಸರ್ವಭೂತಗಳಿಗೆ ಸುಖವನ್ನಿತ್ತು, ತನಗೆ ಜಯವನ್ನಿತ್ತ ಶ್ರೀವಿಷ್ಣು ವನ್ನು ಪೂಜಿಸಿದನು.

ವೃತ್ರನು ನಿಹತನಾದನು; ಆದರೆ ಇಂದ್ರನಿಗೆ ಲೋಕಾಪವಾದದ ಆಘಾತ ವಾಯಿತು. ಹಿಂದೆ ವಿಶ್ವರೂಪನನ್ನು ಕೊಂದುದರಿಂದ ಬಂದ ಬ್ರಹ್ಮಹತ್ಯೆಯನ್ನು ಬ್ರಹ್ಮ ದಯದಿಂದ ಸ್ತ್ರೀವೃಕ್ಷಭೂಜಲಾಗ್ನಿಗಳಿಗೆ ಹಂಚಿ ಕಳೆದುಕೊಂಡಿದ್ದರೂ, ಈಗ ವೃತ್ರವಧ ರೂಪವಾದ ಬ್ರಹ್ಮಹತ್ಯೆಯ ಭಯವು ಕಾಡತೊಡಗಲು, ಇಂದ್ರನು ನಿಷಧಾಚಲವನ್ನು ಸೇರಿ ನೀರಿನಲ್ಲಡಗಿ ಕಾಣದಾದನು. ಇಂದ್ರನಿಲ್ಲದೆ ಸಸ್ಯಗಳು ಬೆಳೆಯಲಿಲ್ಲ. ಭೂಮಿಯು ಶುಷ್ಕಕಾನನಗಳಿಂದ ಭೀಕರವಾಗಿ ಕಂಡಿತು. ನದಿಗಳು ಒಣಗಿದವು, ಅನಾವೃಷ್ಟಿ ಯಿಂದ ಜೀವರು ತಲ್ಲಣಿಸಿದರು. ದೇವತೆಗಳೂ ಋಷಿಗಳೂ ಜಗವೆಲ್ಲ ಅರಾಜಕವಾದು ದಕ್ಕೆ ಚಿಂತಿಸಿ, ನಹುಷನನ್ನು ಇಂದ್ರಪದವಿಯಲ್ಲಿ ಕೂಡಿಸಲು ನಿಶ್ಚಯಿಸಿದರು. ತೇಜೊ ಯಶಶ್ರೀಧರ್ಮಯುತನಾದ ನಹುಷನನ್ನುನೋಡಿ, ಅವರು ಇಂದ್ರನಾಗಿ ಲೋಕ ಗಳನ್ನು ರಕ್ಷಿಸು ಎಂದು ಬೇಡಿದರು. ತನಗಂತಹ ಶಕ್ತಿ ಇಲ್ಲವೆಂದು ನಹುಷನು ಹಿಂಜರಿ ಯಲು ಋಷಿದೇವರು ತಮ್ಮ ತಪಸ್ಸನ್ನು ಅವನಿಗೆ ಧಾರೆಯೆರೆದು ಅವನನ್ನು ಇಂದ್ರ ನನ್ನಾಗಿ ಮಾಡಿದರು. ಅಷ್ಟಲ್ಲದೆ ಅವನ ಕಣ್ಣಿಗೆ ಬೀಳುವ ದೇವದಾನವಮಾನವಾದಿ ಸರ್ವಭೂತಗಳ ತೇಜೋಬಲಗಳು ಅವನಿಗೆ ಲಭಿಸುವಂತೆ ವರವಿತ್ತರು. ಧರ್ಮದಿಂದ ಆಳಿ ಸರ್ವಲೋಕಗಳನ್ನು ರಕ್ಷಿಸೆಂದೂ ಆಶಾಸಿಸಿದರು. ದುರ್ಲಭವರದಿಂದ ಇಂದ್ರನಾದ ನಹುಷನು ಧರ್ಮವನ್ನು ಕಡೆಗಣಿಸಿ, ಕಾಮಾತ್ಮಕನಾದನು. ನಂದನವನದಲ್ಲಿ, ಅಲಕಾಪುರೋಪವನದಲ್ಲಿ, ಮಂದರದ್ರೋಣಿಯಲ್ಲಿ ಅಪ್ಸರೆಯರಿಂದಕೂಡಿ, ಬಹು ಕಾಲ ಕ್ರೀಡಿಸಿದನು. ಗೀತವಾದ್ಯಗಳ ಮಧುರಸ್ವರಗಳಿಂದಲು, ವಿಶ್ವಾವಸು, ನಾರದರ ಗಾನದಿಂದಲು, ಮಂದಮಾರುತ ಸಂಚಾರದಿಂದಲು, ನಂದನಸುಮಹಾರಗಳಿಂದಲು, ಕೂಡಿ ವಿಹರಿಸುವ ನಹುಷನಿಗೆ ಒಂದು ದಿನ ಶಚೀದೇವಿಯು ನೇತ್ರಗೋಚರಳಾದಳು; ಅವನು ಕಾಮಮೋಹಿತನಾಗಿ, ದೇವಸಭೆಯನ್ನು ಕೂಡಿಸಿ 'ನಾನಿಂದ್ರನಲ್ಲವೇ? ಆದುದರಿಂದ ಶಚೀದೇವಿಯು ನನ್ನನ್ನು ಪೊಂದಲಿ' ಎಂದನು.

ನಹುಷನು ದುಷ್ಟನಾಗಿ ತನ್ನನ್ನು ಕಾಮಿಸಿ ಆಡಿದ ನುಡಿಗಳನ್ನು ಶಚೀ ದೇವಿಯು ಕೇಳಿ, ಖಿನ್ನಳಾದಳು. ಆಕೆ ಬೃಹಸ್ಪತಿಗೆ ಶರಣಾಗತಳಾಗಿ 'ಬ್ರಹ್ಮನ್! ನನ್ನನ್ನು ದುಷ್ಟನಹುಷನಿಂದ ರಕ್ಷಿಸು! ಸರ್ವಲಕ್ಷಣ ಸಂಪನ್ನೆ, ಪತಿವ್ರತೆ, ದೇವರಾಜ ದಯಿತೆ, ಸುಮಂಗಲಿ, ಎಂದು ನೀನೇ ನನ್ನನ್ನು ನೋಡಿ ನುಡಿದಿರುವ ವಚನವು ಸತ್ಯವಾಗಲಿ!' ಎಂದು ಪ್ರಾರ್ಥಿಸಿದಳು. ದೇವಗುರುವು, ಕಲ್ಯಾಣಿ! ನನ್ನ ಮಾತು ಸುಳ್ಳಾಗದು. ಇಂದ್ರನನ್ನು ಬೇಗನೆ ಪಡೆಯುವೆ! ನಹುಷನಿಗೆ ಭಯ ಪಡುವ ಕೆಲಸವಿಲ್ಲ. ಇಲ್ಲೇ ಇರು!' ಎಂದು ಆಕೆಗೆ ಅಭಯವಿತ್ತನು.

ನಹುಷನಿಗೆ ವೃತ್ತಾಂತ ತಿಳಿದು, ಅವನು ಗುರುವಿನಲ್ಲಿ ಸಿಟ್ಟಾಗಿ, ಭಯಂಕರ ದರ್ಶನನಾದನು. ದೇವತೆಗಳು ಹೆದರಿ, 'ದೇವರಾಜ ! ಸಿಟ್ಟಾಗಬೇಡ ! ನೀ ಸಿಟ್ಟಾದರೆ ಜಗವೆಲ್ಲ ನಾಶವಾದೀತು ! ನಿನ್ನಂತಹವರಿಗೆ ಕ್ರೋಧವು ಉಚಿತವಲ್ಲ. ಪರದಾರಾಭಿಲಾಷೆಯು ಧರ್ಮವಲ್ಲ. ಪ್ರಜರನ್ನು ಧರ್ಮದಿಂದ ಪಾಲಿಸುವ ದೇವರಾಜ ಪದವಿಯಲ್ಲಿರುವೆ !' ಎಂದು ಬೇಡಿದರು. ನಹುಷನು ಅವರ ಮಾತನ್ನು ಕೇಳದೆ 'ಅಹಲ್ಯೆಯನ್ನು ಸೇರಪೋಗುವ ಇಂದ್ರನನ್ನು ನೀವೇಕೆ ತಡೆಯಲಿಲ್ಲ? ವಿಶ್ವರೂಪನನ್ನು ಕೊಂದ ಇಂದ್ರನನ್ನು ನೀವೇಕೆ ತಿರಸ್ಕರಿಸಲಿಲ್ಲ? ವೃತ್ರನಿಂದ ಕಪಟಸ್ನೇಹಗೈದು ಕೊಂದುದು ಇಂದ್ರನ ತಪ್ಪಲ್ಲವೇ? ನಾನು ಶಚಿಯನ್ನು ಬಿಡಲಾರೆನು. ಇದರಿಂದ ಆಕೆಗೂ, ನಿಮಗೂ ಸುಖವಾಗುವುದು' ಎಂದನು. ದೇವತೆಗಳಾಗ ಬೃಹಸ್ಪತಿಯ ಮನೆಗೆ ಬಂದು, 'ಗುರೋ ! ಪ್ರಸನ್ನನಾಗು ! ಶಚಿಯನ್ನು ನಹುಷನಿಗಿತ್ತು, ನಮ್ಮನ್ನು ಕಾಪಾಡು! ಎಂದು ಪ್ರಾರ್ಥಿಸಿದರು. ಅವರ ಮಾತನ್ನು ಕೇಳಿ, ಶಚೀದೇವಿಯು ಭೀತಳಾಗಿ ರೋದಿಸತೊಡಗಿದಳು. ಬೃಹಸ್ಪತಿಯು ಆಕೆಯ ಭಯವನ್ನು ನಿವಾರಿಸುತ್ತ, 'ದೇವತೆಗಳಿರಾ ! ಇಂತು ನುಡಿಯುವುದು ನಿಮಗೆ ತರವಲ್ಲ. ಶರಣಾಗತಳಾದ ಶಚೀದೇವಿಯನ್ನು ನಾನು ಬಿಡುವವನಲ್ಲ. ಶ್ರುತಶಾಸ್ತ್ರನು, ಸತ್ಯ-ಶೀಲನು, ಆದ ನನಗೆ ಇಂತಹ ಅಕಾರ್ಯವನ್ನು ಮನಸಾಪಿ ಮಾಡಲಾಗದು. ಶರಣಾಗತರನ್ನು ಕೈಬಿಟ್ಟ ಕೆಟ್ಟವನ ದೇಶದಲ್ಲಿ ಮಳೆ ಬೀಳುವುದಿಲ್ಲ ; ಬೆಳೆ ಬೆಳೆಯುವುದಿಲ್ಲ. ಭೀತನಾಗಿ ಬಂದವನನ್ನು, ಅವನ ಶತ್ರುವಿಗೊಪ್ಪಿಸುವ ಪಾಪಿಗೆ ಗತಿಯಿಲ್ಲ. ಇದು ನನ್ನ ಮಾತಲ್ಲ. ಬ್ರಹ್ಮದೇವನೇ ಇಂತು ಶಾಸಿಸಿರುವನು. ಕೇಳಿರಿ ! ಅಂತಹವನಿಗೆ ಪುಣ್ಯಲೋಕಗಳಾಗುವುದಿಲ್ಲ ; ಅವನ ಹವಿಸ್ಸನ್ನು ದೇವತೆಗಳು ಸ್ವೀಕರಿಸುವುದಿಲ್ಲ. ಅವನ ಪ್ರಜೆ ನಷ್ಟವಾಗುವುದು. ಅವನ ಪಿತೃಗಳಿಗೆ ಸದ್ಗತಿಯಾಗದೆ ಅವರು ಅಲೆಯುತ್ತಿರುವರು. ಹೋಗಿ ಇಲ್ಲಿಂದ. ನಾನು ಶಚೀದೇವಿಯನ್ನು ನಹುಷನಿಗೊಪ್ಪಿಸುವುದಿಲ್ಲ. ಆಕೆಗೆ ಹಿತವಾವುದೋ, ಅದೇ ನನಗೂ ಹಿತವಾಗಿದೆ!' ಎಂದನು.

ದೇವತೆಗಳು ಆಪತ್ತಿನಿಂದ ಪಾರಾಗುವ ಬಗೆಯನ್ನು ಹೇಳೆಂದು ಪ್ರಾರ್ಥಿಸಲು ಬೃಹಸ್ಪತಿಯು, ಕಾಲಾವಕಾಶವನ್ನು ಪಡೆಯಬೇಕೆಂದು ಸೂಚಿಸಿದನು. ಸರ್ವಗ್ರಸನ ಸಮರ್ಥವಾದ ಕಾಲಕ್ಕೆದುರಿಲ್ಲವೆಂದರಿತು ಬೃಹಸ್ಪತಿಯು ಸೂಚಿಸಿದಂತೆ, ಶಚೀದೇವಿಯು, ಕ್ರೋಧದುರ್ನಿರೀಕ್ಷ್ಯನಾದ ನಹುಷನನ್ನು ಕಂಡು, ಮನದಲ್ಲಿ ಶ್ರೀಶ ಬ್ರಹ್ಮರನ್ನು ನೆನೆದು ನಮಿಸಿ, 'ದೇವರಾಜ ! ಇಂದ್ರನೆಲ್ಲಿರುವನೋ ತಿಳಿಯದಾಗಿದೆ. ಇನ್ನೂ ಹುಡುಕಬೇಕಾಗಿದೆ. ನನಗೆ ಸ್ವಲ್ಪ ಕಾಲವನ್ನು ಕೊಡು ! ಇಂದ್ರನು ಸಿಗನೆಂದು ನಿಶ್ಚಯವಾದಮೇಲೆ ನಿನ್ನಲ್ಲಿಗೆ ಬರುವೆನು' ಎಂದು ಪ್ರಾರ್ಥಿಸಿದಳು. ನಹುಷನು ಅದಕ್ಕೆ ಸಮ್ಮತಿಸಿ, ಆಕೆಯನ್ನು ಕಳಿಸಿದನು. ಶಚಿಯು ಬೃಹಸ್ಪತಿಯ ಮನೆಗೆ ಬಂದು ನಡೆದುದನ್ನು ತಿಳಿಸಿದಳು.

ದೇವತೆಗಳು ಶರಣ್ಯನಾದ ಬ್ರಹ್ಮಣ್ಯದೇವನನ್ನು ಕಂಡು 'ದೇವದೇವ! ಬ್ರಹ್ಮ-ಹತ್ಯಾಭಯದಿಂದ ಶಕ್ರನೆಲ್ಲಿ ಅಡಗಿರುವನೋ ತಿಳಿಯದಾಗಿದೆ. ಇಂದ್ರಪದವಿಯಲ್ಲಿರುವ ನಹುಷನ ಪೀಡೆಯೂ ದುರ್ಭರವಾಗಿದೆ. ಜಗದೇಕವಲ್ಲಭನಾದ ನೀನಲ್ಲದಿನ್ನೆಮಗೆ ದಿಕ್ಕಿಲ್ಲ. ಜಗವೆಲ್ಲ ತುಂಬಿ ರಕ್ಷಿಸುವ ನಿನ್ನನ್ನು ವಿಷ್ಣು ಎಂದು ಪೂಜಿಸುವೆವು. ನಿನ್ನ ತೇಜದಿಂದ ವರ್ಧಿತನಾದ ಇಂದ್ರನು ವೃತ್ರನನ್ನು ಕೊಂದು ಲೋಕಹಿತವನ್ನು ಸಾಧಿಸಿದನು. ಆದರೆ ಬ್ರಹ್ಮಹತ್ಯಾಭಯವು ಆತನನ್ನು ಕಾಡುತ್ತಿದೆ. ಆತನನ್ನೆಂತು ಕಾಣುವೆವು, ಎಂತು ಭಯ ನಿವಾರಣೆ? ಎಲ್ಲವನ್ನೂ ತಿಳಿಸು !' ಎಂದು ಪ್ರಾರ್ಥಿಸಿದರು. ಶ್ರೀ ನಾರಾಯಣನು 'ದೇವತೆಗಳಿರಾ ! ಸ್ವಲ್ಪ ಕಾಲ ನಹುಷನ ಪೀಡೆಯನ್ನು ಸಹಿಸಿ, ಸುಮ್ಮನಿರಿ ! ಇಂದ್ರನು ಅಶ್ವಮೇಧವನ್ನು ಮಾಡಿ, ನನ್ನನ್ನು ಸಂತೋಷಪಡಿಸಲಿ! ಆಗ ಅವನು ಸರ್ವಭಯಮುಕ್ತನಾಗಿ ಮತ್ತೆ ಇಂದ್ರನಾಗುವನು. ನಹುಷನು ತನ್ನ ದುಷ್ಕರ್ಮಗಳ ದೆಶೆಯಿಂದ ತಾನೇ ನಷ್ಟನಾಗುವನು' ಎಂದು ಅವರನ್ನು ಸಮಾಧಾನಪಡಿಸಿ ಕಳಿಸಿದನು. ಶ್ರೀಶನಿಂದ ಇಂದ್ರನ ಸ್ಥಾನವನ್ನು ತಿಳಿದು ದೇವತೆಗಳು ನಿಷಧಗಿರಿಯಲ್ಲಿ ಆತನನ್ನು ಕಂಡರು. ಋಷಿವರರು, ದೇವತೆಗಳು ಕಲೆತು ಇಂದ್ರನಿಂದ ಅಶ್ವಮೇಧವನ್ನು ಮಾಡಿಸಿದರು. ಇಂದ್ರನು ಯಜ್ಞಮಾಡದಿದ್ದರೂ ಆತನಿಗೆ ಪಾಪಲೇಶವಿರುತ್ತಿದ್ದಿಲ್ಲ. ವೇದನಿಷಿದ್ಧವಾದ ಬ್ರಹ್ಮಹತ್ಯೆಯು ಅಪರೋಕ್ಷಜ್ಞಾನಿಯಾದ ಇಂದ್ರನಿಗೆ ಇತರರಿಗೆ ಬಾಧಿಸುವಂತೆ ಬಾಧಿಸದು. ಆದರೂ ಇಂದ್ರನು ಪಾಪವ್ಯಾಜದಿಂದ ಒಂದುಸಾವಿರ ವರ್ಷ ಶ್ರೀನೃಸಿಂಹನ ಧ್ಯಾನದಲ್ಲಿ ಕಳೆದು, ಮಹಾ ಪುಣ್ಯವನ್ನೇ ಹೊಂದಿದನು. ಯಾಗವನ್ನೂ ಶ್ರೀಹರಿಪ್ರೀತಿಗಾಗಿಯೇ ಮಾಡಿದನು. ದುಷ್ಟ ವೃತ್ರನನ್ನು ಶ್ರೀಹರಿಯ ಆಜ್ಞೆಯಂತೆ ಸಂಹರಿಸಿ, ಲೋಕಗಳನ್ನು ರಕ್ಷಿಸಿ, ಇಂದ್ರನು ಧರ್ಮವೃದ್ಧಿಯನ್ನೇ ಹೊಂದಿದನು.

ಇಂದ್ರನು ಸ್ವರ್ಗವನ್ನು ಸೇರಿ, ಸರ್ವ ಭೂತಗಳ ತೇಜೋಬಲವನ್ನಾಕರ್ಷಿಸಿ, ಭಯಂಕರನಾಗಿದ್ದ ನಹುಷನನ್ನು ನೋಡಿ, ಹಿಮಾಲಯದ ಉತ್ತರದ ಸರೋವರದಲ್ಲಿ ಕಮಲನಾಳದಲ್ಲಡಗಿದನು. ಶಚಿಯು ಪತಿಯು ಮತ್ತೆ ಕಾಣದಾಗಲು, ಚಿಂತಿಸಿ, ರಾತ್ರಿ ದೇವಿಗೆ ಶರಣಾಗತಳಾದಳು. 'ಅಮ್ಮಾ ದುರ್ಗೆ ! ನಾನು ಸತ್ಯ-ವಂತಳೂ ಪತಿವ್ರತೆಯೂ ಆಗಿದ್ದರೆ, ದಾನತಪೋ ಯಜ್ಞಗಳನ್ನು ಮಾಡಿದ್ದರೆ, ಗುರುಜನರನ್ನು ಸಂತೋಷಪಡಿಸಿದ್ದರೆ, ನನ್ನ ಪತಿಯು ಸಿಗಲಿ !' ಎಂದು ಪ್ರಾರ್ಥಿಸಿದ ಶಚಿಯ ಮೊರೆಯನ್ನಾಲಿಸಿ, ದುರ್ಗಾದೇವಿಯು ಪ್ರತಿಧ್ವನಿಯನ್ನಿತ್ತಳು. ಅದನ್ನು ಕೇಳಿ ಶಚಿಯು 'ಇಂದ್ರನನ್ನೆನಗೆ ತೋರಿಸಿಕೊಡೆಂದು' ಬೇಡಿದಳು. ಆಗ ದುರ್ಗಾ ದೇವಿಯು ಪ್ರತ್ಯಕ್ಷಳಾಗಿ 'ಶಚೀ ! ನಿನ್ನ ಪಾತಿವ್ರತ್ಯ ಗುಣವನ್ನು ಕಂಡು ಮೆಚ್ಚಿರುವೆನು. ನಿನಗೆ ಇಂದ್ರನನ್ನು ತೋರಿಸುವೆನು' ಎಂದು, ಕರೆದುಕೊಂಡು ಹೋಗಿ, ನಾನಾ ದ್ರುಮಲತಾವೃತವಾದ ದ್ವೀಪದಲ್ಲಿ ಸರೋವರವನ್ನು ಸೇರಿದಳು. ಅಲ್ಲಿ ಪಂಚವರ್ಣ ಕಮಲಗಳು ಅರಳಿ ನಿಂತಿದ್ದವು. ಅಲ್ಲಿ ಒಂದು ಪದ್ಮನಾಳವನ್ನು

ಅವರೀರ್ವರೂ ಸೂಕ್ಷ್ಮರೂಪಿಣಿಯರಾಗಿ ಪ್ರವೇಶಿಸಿದರು. ಒಳಗೆ ಅಡಗಿದ್ದ ಇಂದ್ರನನ್ನು ನೋಡಿಸಿ, ಉಪಶ್ರುತಿ ದೇವಿಯು (ರಾತ್ರಿದೇವಿ), ಮರೆಯಾದಳು. ಶಚಿಯು ಇಂದ್ರನನ್ನು ಸ್ತುತಿಸಿ, ನಹುಷನ ದೌಷ್ಟ್ಯವನ್ನು ನಿರೂಪಿಸಿ, ಅವನಿಂದ ತನ್ನನ್ನು ಕಾಪಾಡೆಂದಳು. ತೇಜೋಬಲವಂತನಾಗಿ, ಮತ್ತೆ ಸುರರಾಜ್ಯವನ್ನಾಳೆಂದು ಪ್ರೇರಿಸಿದಳು.

ಇಂದ್ರನು, 'ಸತಿ! ಇದು ವಿಕ್ರಮಕ್ಕೆ ಕಾಲವಲ್ಲ. ಋಷಿಗಳಿತ್ತ ಹವ್ಯಾದಿಗಳಿಂದ ಅವನು ಬಲವಂತನಾಗಿರುವನು. ಉಪಾಯದಿಂದ ಅವನನ್ನು ನಾಶಪಡಿಸಬೇಕು. 'ಋಷಿಯಾನದಲ್ಲಿ ಕೂತುಬಂದರೆ ನಿನ್ನನ್ನು ಸೇರುವೆ'ನೆಂದು ಅವನಿಗೆ ತಿಳಿಸು! ಋಷಿವರರಿಗೆ ಅಪರಾಧವನ್ನು ಮಾಡಿ ಅವನು ಕೆಡುವನು. ನೀನೂ ಉಳಿಯುವೆ!' ಎಂದು ಹೇಳಿ ಕಳಿಸಿದನು. ಅಂತೆಯೇ ಶಚೀದೇವಿಯು ನಹುಷನನ್ನು ನೋಡಿ, 'ಸುರಾಧಿಪ! ನನ್ನ ಹೃದಯದಾಸೆಯನ್ನು ನಿನಗೆ ತಿಳಿಸುವೆನು. ಕೇಳು! ಆಮೇಲೆ ನಿನಗೆ ವಶಳಾಗುವೆನಂತೆ! ಇಂದ್ರನು ಆನೆಗಳು, ಕುದುರೆಗಳನ್ನೇರಿ ಅಥವಾ ರಥದಲ್ಲಿ ಕೂತು ಬರುತ್ತಿದ್ದನು. ನೀನು ಅಪೂರ್ವ ವಾಹನದಲ್ಲಿ ಕೂತು ಬಂದರೆ, ನಿನ್ನವಳಾಗುವುದು ಇದು ನನ್ನ ನಿರ್ಣಯ. ಋಷಿಗಳನ್ನು ವಾಹನವಾಗಿಸಿ, ಪಲ್ಲಕ್ಕಿಯಲ್ಲಿ ಕೂತು ನನ್ನ ಮಂದಿರಕ್ಕೆ ಬಾ! ನಿನಗೆ ಎದುರಿಲ್ಲ. ತೇಜೋಬಲ ಸಂಪನ್ನರಿಗೆ ದುರ್ಘಟವಿಲ್ಲ' ಎಂದಳು.

ನಹುಷನು ಅಂತೆಯೇ ಬರುವೆನೆಂದು ಆಕೆಯನ್ನು ಕಳಿಸಿದನು. ಸಪ್ತರ್ಷಿಗಳನ್ನು ಕರೆಸಿ ಅವರಿಂದ ತಾನು ಕೂತ ಅಂದಣವನ್ನು ಹೊರಿಸಿಕೊಂಡು ಬರುತ್ತಿದ್ದನು. ಇದನ್ನುನೋಡಿ ಶಚೀದೇವಿಯು ಭೀತಳಾಗಿ ಮತ್ತೆ ಬೃಹಸ್ಪತಿಗೆ ಶರಣುಹೋದಳು. ಬೃಹಸ್ಪತಿಯು ಆಕೆಗೆ ಅಭಯವನ್ನಿತ್ತು, ದೇವರಾಜನನ್ನು ಹುಡುಕಿತರಲು ಹೋಮವನ್ನು ಮಾಡಿ, ಅಗ್ನಿದೇವನನ್ನೇ ಕಳಿಸಿದನು. ಸ್ತ್ರೀವೇಷಧರನಾದ ಅಗ್ನಿಯು ಎಲ್ಲಕಡೆ ಹುಡುಕಿ ಶಕ್ರನನ್ನು ಕಾಣದೆ, ಹಿಂದಿರುಗಿಬಂದು, 'ಬೃಹಸ್ಪತಿ! ನೀರನ್ನು ಬಿಟ್ಟು ಎಲ್ಲ ಕಡೆಯೂ ನೋಡಿದೆನು ಇಂದ್ರನನ್ನು ಕಾಣೆನು' ಎಂದು ತಿಳಿಸಿದನು. 'ನೀರನ್ನೂ ಹುಡುಕಿ ಬಾ!' ಎಂದ ದೇವಗುರುವಿಗೆ ಅಗ್ನಿಯು, 'ನನಗೆ ನೀರಲ್ಲಿ ಪ್ರವೇಶಿಸುವ ಶಕ್ತಿ ಇಲ್ಲ. ನೀರಿನಿಂದ ಅಗ್ನಿಯು, ಬ್ರಹ್ಮವರ್ಣದಿಂದ ಕ್ಷತ್ರಿಯವರ್ಣವು, ಕಲ್ಲಿನಿಂದ ಲೋಹವು ಉತ್ಪನ್ನವಾಗುತ್ತಿದೆ. ಅಗ್ನಿ ಕ್ಷತ್ರಿಯ ಲೋಹಗಳು ತಮ್ಮ ಕಾರಣಗಳಲ್ಲಿ ವಿರೋಧಿಸಲಾರವು ಎಂದನು.

ಬೃಹಸ್ಪತಿಯು 'ಅಗ್ನೇ! ನೀನು ಸರ್ವದೇವತೆಗಳಿಗೆ ಮುಖದಂತಿರುವೆ. ಅವರಿಗೆ ನಿನ್ನ ದ್ವಾರಾ ಹವ್ಯಗಳು ತಲುಪುತ್ತಿವೆ. ನಿನಗೆರಗಿ ಪೂಜಿಸಿ ವಿಪ್ರರು ಸತಿಸುತಯುತರಾಗಿ ಕರ್ಮಜ ಪುಣ್ಯಲೋಕಗಳನ್ನು ಸೇರಿ ಸುಖಿಸುವರು. ಯಜ್ಞಗಳಲ್ಲಿ ಪ್ರಧಾನ ಸಾಧನನಾದ ನಿನಗೆ ಮೂರುಲೋಕಗಳೂ ಮನೆಯಾಗಿವೆ. ಭೂತಗಳ ಅನ್ನಪಚನ, ಮೇಘವರ್ಷಣ ಜೀವನಗಳು ನಿನ್ನಿಂದ. ನಿನಗೆ ಮೂರು ಲೋಕದಲ್ಲಿ ತಿಳಿಯದುದಿಲ್ಲ.

ಹವಿರ್ದಾನದಿಂದ ನಿನ್ನ ಶಕ್ತಿಯನ್ನು ಹೆಚ್ಚಿಸುವೆನು. ಬ್ರಾಹ್ಮಮಂತ್ರಗಳಿಂದ ವಿಜೃಂಭಿಸಿ, ನೀರಿನಲ್ಲಿಯೂ ಪ್ರವೇಶಿಸು ! ಲೋಕದಲ್ಲಿ ಸ್ವಕಾರಣವನ್ನು ಸೇರಿ, ಕೆಡದಿರುವರು. ಕ್ಷತ್ರ ಲೋಹಾದಿಗಳು ಬ್ರಹ್ಮಾಶ್ಮಗಳನ್ನು ಭಜಿಸುತ್ತಿವೆ. ಹೋಗು!' ಎಂದು ಮತ್ತೆ ಕಳಿಸಿದನು.

ಅಗ್ನಿಯು ಪ್ರೀತನಾಗಿ, ಇಂದ್ರನಿದ್ದ ಸರೋವರವನ್ನು ಸೇರಿ, ಕಮಲನಾಳಗತ ನಾದ ಇಂದ್ರನನ್ನು ಕಂಡನು. ಅಗ್ನಿಯು ತಿಳಿಸಲು, ಬೃಹಸ್ಪತಿಯು ದೇವ ಋಷಿ ಸಂಘದಿಂದ ಕೂಡಿ, ಅಲ್ಲಿಗೆ ಬಂದನು. ಇಂದ್ರ ಪರಾಕ್ರಮವನ್ನು ಹೊಗಳುತ್ತಾ, ಇಂದ್ರನನ್ನು ಮೇಲೆದ್ದು ಬಂದು, ನಹುಷನನ್ನು ನಿರ್ಜಿಸಿ, ತ್ರಿಲೋಕ ಸಾಮ್ರಾಜ್ಯ ವನ್ನಾಳೆಂದು ಬೇಡುತ್ತಿದ್ದ ದೇವತೆಗಳ ನುಡಿಗೆ, ಋಷಿಗಳೂ ಜೋಡಾದರು. ಬೃಹಸ್ಪತಿಯು ಸ್ತುತಿಸಲು ಇಂದ್ರನು ತೇಜೋಬಲಸಮನ್ವಿತನಾಗಿ, ಮೇಲೆ ಬಂದು, ನಹುಷನನ್ನು ನಿರ್ಜಿಸುವ ಉಪಾಯವನ್ನಾಲೋಚಿಸುತ್ತಿದ್ದನು. ಆಗ ಕುಬೇರ ಯಮ ವರುಣ, ಸೋಮರೂ ಅಲ್ಲಿಗೆ ಬಂದರು. ವೃತ್ರವಧವನ್ನು ಸಾಧಿಸಿದ ಶಕ್ರನನ್ನು ಅಭಿನಂದಿಸಿ, ನಹುಷನನ್ನು ಜಯಿಸೆಂದರು. ಇಂದ್ರನು ಅವರಿಗೆ ಜಲಪತಿತ್ವಾದಿ ಪದವಿ ಗಳನ್ನಿತ್ತು, ಅಗ್ನಿದೇವನಿಗೂ ಹುತಭಾಗವನ್ನಿತ್ತು ಸತ್ಕರಿಸಿದನು. ನಹುಷನಿಂದ ಹೋದ ಜಲಪತಿತ್ವ, ಪಿತೃಪತಿತ್ವ, ನಿಧಿಪತಿತ್ವ, ಓಷಧಿಪತಿತ್ವಗಳನ್ನು ಹೊಂದಿ ಅವರು ಯಥಾಪೂರ್ವವಾಗಿ ವಿರಾಜಿಸಿದರು.

ಅವರೆಲ್ಲರೂ ಕೂಡಿ ನಹುಷವಧೋಪಾಯವನ್ನು ಚಿಂತಿಸುತ್ತಿರಲು. ಪೂಜ್ಯ ನಾದ ಅಗಸ್ತ್ಯನು ಅಲ್ಲಿಗೆ ಬಂದನು. ಆತನು ಇಂದ್ರನನ್ನು ನೋಡಿ, ಅವನಿತ್ತ ಪೂಜೆಯನ್ನು ಸ್ವೀಕರಿಸಿ ಕೂತನು. 'ಇಂದ್ರ ! ದೈವಾನುಗ್ರಹದಿಂದ ನಹುಷನೂ ವಿಶ್ವರೂಪವೃತ್ರರಂತೆ ನಷ್ಟನಾದನು. ನೀನೂ ಸುಖಿಯಾಗಿರುವೆ !' ಎಂದು ಅಭಿನಂದಿಸಿದನು. ಆ ಮಹಾಮುನಿಯನ್ನು, ಇಂದ್ರನು 'ನಹುಷನೆಂತು ನಷ್ಟನಾದ ನೆ'ಂದು ಕೇಳಿದನು. 'ಇಂದ್ರ ! ಪ್ರಕೃಷ್ಟಜ್ಞಾನರಸವನ್ನು ಸೂಸುವ ಮಂತ್ರಗಳನ್ನು ಚತುರ್ಮುಖಬ್ರಹ್ಮದೇವನು ಹೇಳಿರುವನಲ್ಲವೆ? ಮಂತ್ರರೂಪವಾದ ಆಶಬ್ದರಾಶಿಗಳು ಅಂದರೆ ವೇದಗಳು ಪ್ರಮಾಣವೋ ಅಲ್ಲವೋ ಎಂದು ನಾವು ಪಲ್ಲಕ್ಕಿಯನ್ನು ಹೊರು ತ್ತಿರುವಾಗ ಕೇಳಿದೆವು. ಶಚಿಯನ್ನು ಸೇರಲು ಹೋಗುವ ನಹುಷನಿಗೆ ವೇದಗಳು ಪ್ರಮಾಣವೆಂಬುವುದು ವಿರುದ್ಧವಾಯಿತು. ನ ಪರದಾರಾಂ ಗಚ್ಛೇತ್;ನಸ್ತ್ರಿಯಮುಪ ಗಚ್ಛೇತ್—ಇತ್ಯಾದಿ ವೇದಗಳು ಅವನಿಗೆ ಸಮ್ಮತವಾಗದೆ—ಅವನು ವೇದಗಳು ಅಪ್ರಮಾಣವೆಂದನು. ನಾನು ಪ್ರಮಾಣವೆಂದೆನು. ಅವನು ಸಿಟ್ಟಿನಿಂದ ನನ್ನನ್ನು ನನ್ನ ಜಟೆಯಲ್ಲಿ ಅಡಗಿ, ಅವನಿಗೆ ಕಾಣದಿದ್ದ ಭೃಗುವನ್ನೂ ಒದ್ದನು. ಅಲ್ಲಿ ಬ್ರಹ್ಮನು ಆವಿಷ್ಟನಾಗಿ, ತಾನು ನುಡಿದ ವೇದಗಳನ್ನು ಅಪ್ರಮಾಣವೆಂದು ನಿಂದಿಸುವ ನಹುಷ ನಿಗೆ ಅಜಗರವಾಗಿ ಬೀಳು! ಎಂದು ಶಾಪವಿತ್ತನು. ಇಂತು ಬ್ರಾಹ್ಮಣಾವಮಾನವನ್ನೂ ವೇದ ನಿಂದನವನ್ನೂ ಮಾಡಿ ನಹುಷನು ಸ್ವರ್ಗಚ್ಯುತನಾಗಿ ಬಿದ್ದನು. ಹತ್ತುಸಾವಿರ

ವರ್ಷ ಪರ್ಯಂತವಾಗಿ ಅವನಂತು ಬಿದ್ದಿದ್ದು, ಮುಂದೆ, ಭೀಮಸೇನ ಧರ್ಮರಾಜ ರಿಂದ ಬಲಹೀನನು ಶಾಪಮುಕ್ತನು ಆಗಿ, ಮತ್ತೆ ಪುಣ್ಯಲೋಕವನ್ನೈದುವನು. ಇಂದ್ರ ! ಬ್ರಾಹ್ಮಣಕಂಟಕನು ಮೃತನಾದನು. ಬಂದು ಸ್ವರ್ಗವನ್ನು ಸೇರಿ, ಲೋಕ ಗಳಿಗೆ ಸುಖವಾಗುವಂತೆ ಪರಿಪಾಲಿಸು ! ಎಂದು ಅಗಸ್ತ್ಯನು ಪೇಳಿ, ಅವರನ್ನೆಲ್ಲ ಸಂತೋಷಪಡಿಸಿದನು.

ಇಂದ್ರನು ದೇವಋಷಿಗಂಧರ್ವರು ಸ್ತುತಿಸುತ್ತಿರಲು ಐರಾವತವನ್ನೇರಿ ಅಮರಾವತಿಯನ್ನು ಸೇರಿದನು. ಶಚೀದೇವಿಯನ್ನು ಸಂತವಿಸಿ, ಎಂದಿನಂತೆ ಸುಖವಾಗಿ ಸುರಸಾಮ್ರಾಜ್ಯವನ್ನಾಳಿದನು. ಬೃಹಸ್ಪತಿಯು ಇಂದ್ರನನ್ನು ಅಥರ್ವವೇದಮಂತ್ರ ಗಳಿಂದ ಸ್ತುತಿಸಿ, ಅಭಿನಂದಿಸಿದನು. ಇಂದ್ರನು ಪ್ರೀತನಾಗಿ, ಅಥರ್ವಾಂಗಿರಸನೆಂಬ ಬಿರುದನ್ನು, ಹವಿರ್ಭಾಗವನ್ನು ಇತ್ತು, ಆತನನ್ನು ಸತ್ಕರಿಸಿದನು. ಇಂತಹ ದೇವತೆ ಗಳೂ ಅಜ್ಞಾತರಾಗಿದ್ದು, ಕಾಲವನ್ನನುಸರಿಸಿ ವರ್ತಿಸಿದರೆಂದು ತಿಳಿಸಿದೆನು. ನೀನೂ ಸತೀಸೋದರರೊಡನೆ ಸುಖವಾಗಿರುವೆ ; ನಿನ್ನ ಶತ್ರುಗಳು ನಾಶವಾಗುವ ಕಾಲವು ಸಮೀಪಿಸಿದೆ. ಚಿಂತಿಸಬೇಡ ! ಧರ್ಮರಾಜ ! ಶಕ್ರವಿಜಯ ಕಥೆಯನ್ನು ಕೇಳಿದ ರಾಜನು ಶತ್ರುಗಳನ್ನು ಜಯಿಸಿ ಸುಖಿಸುವನು. ಆದುದರಿಂದಲೇ ನಿನಗೆ ಈ ಚರಿತವನ್ನು ನಿರೂಪಿಸಿದೆನು ದುರ್ಯೋಧನಾಪರಾಧದಿಂದ ಕ್ಷತ್ರಿಯರೆಷ್ಟೋ ವೀರರು ಸಾಯಬೇಕಾಗಿದೆ. ದೈವವಿಧಿಗೆದುರಿಲ್ಲ. ಭೀಮಾರ್ಜುನರಿಗೆ ಸಮ ವೀರರಿಲ್ಲ. ನಿಮಗೆ ವಿಜಯ ನಿಶ್ಚಯ ! ಶಕ್ರವಿಜಯ ಕಥೆಯನ್ನು ಕೇಳಿದವನಿಗೆ ಶ್ರೀಶನು ಪ್ರಸನ್ನ ನಾಗುವನು. ಅವನು ಪಾಪರಹಿತನಾಗಿ, ಇಹಪರಸುಖಗಳನ್ನು ಹೊಂದುವನು. ಅವನಿಗೆ ಪುತ್ರಧನಲಾಭವಾಗುವುದು. ಅವನ ಶತ್ರುಗಳು ಅಂತರ್ಬಾಹ್ಯಶತ್ರು ಗಳೆಲ್ಲರು ನಷ್ಟರಾಗುವರು."

ಶಲ್ಯನ ನುಡಿಕೇಳಿ, ಧರ್ಮರಾಜನು 'ನೀನು ಕರ್ಣಸಾರಥಿಯಾಗಿ ಅವನ ತೇಜೋಭಂಗವನ್ನು ಮಾಡು. ಅರ್ಜುನನನ್ನು ಪೊಗಳುವುದರಿಂದ ಅವನು ನಿರುತ್ಸಾಹ ನಾಗುವನು' ಎಂದನು. ಶಲ್ಯನದಕ್ಕೆ ಸಮ್ಮತಿಸಿ, ತನ್ನ ತಂಗಿಯ ಮಕ್ಕಳಾದ ನಕುಲ ಸಹದೇವರನ್ನೂ ಪಾರ್ಥನನ್ನೂ ಅಪ್ಪಿ, ಅವರಿಂದ ಸತ್ಕೃತನಾಗಿ ತಾನು ಕೊಟ್ಟ ಮಾತಿನಂತೆ, ದುರ್ಯೋಧನನನ್ನು ಸೇರಲು ಪೋದನು.

## ಸೈನ್ಯಸಂಗ್ರಹ—ವಿಪ್ರದೌತ್ಯ

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ಯುಯುಧಾನನು ಮಹಾಸೈನ್ಯ ಸಮೇತನಾಗಿ ಬಂದನೆಂದು ಮೊದಲೇ ಹೇಳಿ ರುವೆನು. ಪರಶು-ಭಿಂದಿಪಾಲ-ಶೂಲ-ತೋಮರ-ಮುದ್ಗರಾದಿ ವಿವಿಧಾಯುಧಗಳನ್ನು ಧರಿಸಿ, ನಾನಾದೇಶದ ವಿಚಿತ್ರವೇಷದ ಭಟರು ಗಜತುರಗರಥಗಳು ಬರುತ್ತಿರಲು, ಮಿಂಚಿನ ಸಾಲಿನಿಂದ ಬೆಳಗುವ ಮೇಘದಂತೆ ಆ ಸೈನ್ಯವು ಒಂದಕ್ಷೌಹಿಣೀ ಸಂಖ್ಯಾಕ

ವಾಗಿದ್ದರೂ ಧರ್ಮರಾಜನ ಸೇನೆಯನ್ನು ಕಲೆತಾಗ ಸಮುದ್ರದಲ್ಲಡಗುವ ನದಿಯಂತಾಯಿತು. ಚೇದಿರಾಜನಾದ ಧೃಷ್ಟಕೇತುವು, ಮಾಗಧನಾದ ಸಹದೇವನು, ಐದು ಜನ ಕೇಕಯರು, ಪಾಂಡ್ಯರಾಜನು, ದ್ರುಪದ-ವಿರಾಟರೂ ಒಂದೊಂದಕ್ಷೌಹಿಣೀ ಸೈನ್ಯದಿಂದ ಬಂದು, ಧರ್ಮರಾಜನಿಗೆ ಸಹಾಯವಾದರು. ಇನ್ನೂ ಪಾರ್ವತೀಯರು ಮೊದಲಾದವರೂ ಬಂದರು. ಒಟ್ಟು ಪಾಂಡವರ ಸೇನೆಯು ಏಳಕ್ಷೌಹಿಣೀಯುತವಾಯಿತು.

ಒಂದು ಅಕ್ಷೌಹಿಣಿ ಎಂದರೆ ೨೧೮೭೦ ರಥಗಳು, ೨೧೮೭೦ ಗಜಗಳು, ೬೫೬೧೦ ಕುದುರೆಗಳು, ೧೦೯೩೫೦ ಕಾಲಾಳುಗಳು ಕಲೆತರೆ ಆಗುವ ಸೈನ್ಯ. ಅಂತಹ ಹನ್ನೊಂದಕ್ಷೌಹಿಣೀ ಸೈನ್ಯವು ದುರ್ಯೋಧನನಲ್ಲಿ ಸೇರಿತು. ಭಗದತ್ತನು ಒಂದಕ್ಷೌಹಿಣಿಯನ್ನು, ಭೂರಿಶ್ರವ ಶಲ್ಯರು ಒಂದೊಂದಕ್ಷೌಹಿಣಿಯನ್ನು ತಂದರು. ಭೋಜಾಂಧಕ ವೀರರಿಂದ ಕೂಡಿದ ಕೃತವರ್ಮನು, ಸಿಂಧು ಸೌವೀರ ರಾಜರಿಂದ ಕೂಡಿದ ಜಯದ್ರಥನು ಕಾಂಭೋಜ-ಯವನ-ಶಕರಿಂದ ಕೂಡಿದ ಸುದಕ್ಷಿಣನು, ಒಂದೊಂದಕ್ಷೌಹಿಣಿಯನ್ನು ತಂದರು. ಬಾಹ್ಲಿಕರಾಜನು, ಭೀಷ್ಮದ್ರೋಣಕೃಪರು ಕೂಡ ಧೃತರಾಷ್ಟ್ರನ ಪ್ರೀತಿಗಾಗಿ ದುರ್ಯೋಧನನನ್ನು ಅನುಸರಿಸಿದರು. ಅವಂತೀಶರಾದ ವಿಂದಾನುವಿಂದರೊಂದಕ್ಷೌಹಿಣಿಯನ್ನು ತಂದರು. ಮಾಹಿಷ್ಮತೀಪತಿಯಾದ ನೀಲನು ಒಂದಕ್ಷೌಹಿಣಿಯಿಂದ ಬಂದನು. ಇನ್ನು ಮಿಕ್ಕರಾಜರ ಸೈನ್ಯಗಳು ಕೂಡಿ, ಮೂರಕ್ಷೌಹಿಣಿಗಳಾದವು. ದೇವಪಕ್ಷದಲ್ಲಿರುವ ಪುರುಜಿತನು, ಕುಂತಿಭೋಜನು, ಚೇಕಿತಾನನು ಕೂಡ ಪಾಂಡವರನ್ನು ಸೇರಿದರು. ಅಸುರಪಕ್ಷದವರಾದ ಜಯತ್ಸೇನ, ಅಸುರಪಕ್ಷದ ಕೈಕಯರು, ಕ್ಷೇಮಧೂರ್ತಿ, ದಂಡಧರ, ಕಲಿಂಗ, ಅಂಬಷ್ಠ, ಶ್ರುತಾಯುವು, ಅಚ್ಯುತಾಯುವು, ಬೃಹದ್ಬಲ, ಅಲಂಬುಸ, ಆಲಾಯುಧ, ಆಲಂಬಲರೆಂಬ ರಾಕ್ಷಸರು ದುರ್ಯೋಧನನ ಸೈನ್ಯದಲ್ಲಿ ಸೇರಿದರು. ಭಗದತ್ತನನ್ನು ದುರ್ಯೋಧನನೇ ಹೋಗಿ ಪ್ರಾಗ್ಜ್ಯೋತಿಷಪುರದಿಂದ ಕರೆತಂದನು. ಹಸ್ತಿನಾವತಿಯ ಸುತ್ತಲು ಸ್ಥಲವಿಲ್ಲದೆ ಬಂದ ಸೈನ್ಯಗಳು ಕುರುಜಾಂಗಲದಲ್ಲಿಯು, ರೋಹಿತಕವನದಲ್ಲಿಯು, ಮರುಭೂಮಿಯಲ್ಲಿಯು, ಅಹಿಚ್ಛತ್ರ ಕಾಲಕೂಟ ಗಂಗಾಕೂಲಗಳಲ್ಲಿಯೂ, ವಾರಣಾವತ ವಾಟಧಾನಗಳಲ್ಲಿಯು, ಬೇಕಾದೆಡೆ ಬಿಡಾರಮಾಡಿ ನಿಂತವು. ಮಹಾಸೈನ್ಯವನ್ನು ಕಂಡು, ಮುದದಿಂದ ಮೈಯುಬ್ಬಿ ಸುಯೋಧನನು ಅವರಿಗೆಲ್ಲ ಬೇಕಾದ ಧನಧಾನ್ಯ ಗ್ರಾಸವಸನ ಶಿಬಿರಾದಿ ಸೌಕರ್ಯಗಳನ್ನು ಒದಗಿಸಿ ಆನಂದದಿಂದಿದ್ದನು.

ದ್ರುಪದರಾಜನು ಕಳಿಸಿದ ಪುರೋಹಿತನು ಆ ಸೈನ್ಯ ವಿನ್ಯಾಸಗಳನ್ನು ನೋಡುತ್ತಾ ಹಸ್ತಿನಾವತಿಯನ್ನು ಪ್ರವೇಶಿಸಿ, ಧೃತರಾಷ್ಟ್ರಾದಿ ಕೌರವರನ್ನು ಕಂಡನು. ಧೃತರಾಷ್ಟ್ರ ಭೀಷ್ಮ ವಿದುರರು ಅವನನ್ನು ಯಥೋಚಿತವಾಗಿ ಪೂಜಿಸಿ, ಕುಶಲಪ್ರಶ್ನೆಗಳನ್ನು ಮಾಡಿದರು. ಅವನೂ ಕುಶಲವಾರ್ತೆಯಾದನಂತರ ಸರ್ವಸೇನಾಪತಿಗಳು ನೆರೆದ ಸಭೆಯಲ್ಲಿ ತನ್ನ ಸಂದೇಶವನ್ನು ತಿಳಿಸಿದನು.

'ಸಭಾಸದರೇ ! ಸನಾತನ ರಾಜಧರ್ಮವನ್ನು ತಾವೆಲ್ಲರರಿತಿರುವಿರಿ ! ಆದರೂ ವಕ್ತವ್ಯವನ್ನು ತಿಳಿಸಿ ಹೇಳುವುದೆನ್ನ ಕರ್ತವ್ಯವೆಂದು ಹೇಳುತ್ತಿರುವೆನು. ಧೃತರಾಷ್ಟ್ರ ಪಾಂಡುರಾಜರು ವಿಚಿತ್ರವೀರ್ಯನ ಸುತರಾಗಿ, ಸಮ ದಾಯವನ್ನು ಹೊಂದಲರ್ಹ ರಾಗಿರುವರು. ಇದರಲ್ಲಿ ಯಾರಿಗೂ ಸಂಶಯವಿಲ್ಲ. ಧೃತರಾಷ್ಟ್ರಪುತ್ರರು ಪೈತೃಕ ಧನರಾಜ್ಯಾದಿಗಳನ್ನು ಹೊಂದಿ ಸುಖದಿಂದಿರುವರು. ಆದರೆ ಪಾಂಡುಪುತ್ರರಿಗವರ ತಂದೆಯ ಭಾಗವಾದರೂ ಸಿಗದೇಹೋಯಿತು. ಅವರ ಪ್ರಾಣವನ್ನು ತೆಗೆಯುವ ಕುತಂತ್ರಗಳೆಷ್ಟೋ ನಡೆದವು. ಆದರೂ ಆಯುಶ್ಶೇಷವಿರುವುದರಿಂದ ಅವರನ್ನು ಯಮಮಂದಿರಕ್ಕಟ್ಟುವುದು ಯಾರಿಗೂ ಸಾಧ್ಯವಾಗಿಲ್ಲ. ಬದುಕಿ ಬಂದು, ಸ್ವಬಲ ದಿಂದ ಸಂಪಾದಿತವಾದ ಸಾಮ್ರಾಜ್ಯವನ್ನು ಕಟ್ಟಿ ಆಳುತ್ತಾ ಅವರು ಸುಖವಾಗಿರುವು ದನ್ನು ಸಹಿಸಲಾರದೆ, ಶಕುನಿಸಹಾಯರಾದ ಧಾರ್ತರಾಷ್ಟ್ರರು ಅವರ ರಾಜ್ಯಾದಿ ಗಳನ್ನು ಮಾಯಾದ್ಯೂತದಲ್ಲಿ ಅಪಹರಿಸಿದರು. ಯುದ್ಧದಲ್ಲಿ ಸೋಲಿಸಿ ಗೆಲ್ಲಲಿಲ್ಲ. ಮತ್ತೆ ಜೂಜಾಡಿ, ಅವರನ್ನು ಅರಣ್ಯಕ್ಕಟ್ಟಿದರು. ಹನ್ನೆರಡು ವರ್ಷ ವನವಾಸವನ್ನೂ ಒಂದು ವರ್ಷದ ಅಜ್ಞಾತವಾಸವನ್ನೂ ಮುಗಿಸಿ, ಈಗ ಪಾರಾಗಿ, ತಮ್ಮ ರಾಜ್ಯವನ್ನು ತಾವು ಬೇಡುವುದು ತಪ್ಪಲ್ಲವಲ್ಲ! ಸಭೆಯಲ್ಲಿ ಸತಿಗಿತ್ತ ಪರಾಭವವನ್ನು, ಅರಣ್ಯ ಕ್ಲೇಶಗಳನ್ನು, ಗರ್ಭದಲ್ಲಿರುವ ಶಿಶುವಂತೆ ಗೊತ್ತಾಗದೆ ವಿರಾಟನಗರದಲ್ಲಿ ಪಟ್ಟ ಕಷ್ಟಗಳನ್ನು ಅವರು ಪ್ರಾರಬ್ಧಪಾಪಕ್ಷಯವೆಂದು ತಿಳಿದು, ಜನ್ಮಾಂತರಕ್ಲೇಶಗಳನ್ನಂತೆ ಮರೆತಿರುವರು. ಪಾಪಿಗಳಿಗೆ ಅಂತಹ ಕಷ್ಟಗಳು ಬರಬಹುದು. ಆದರೆ ಮಹಾನು ಭಾವರಾದ ಪಾಂಡವರಿಗೆ ಬಂದ ಕಷ್ಟಗಳನ್ನು ಕಂಡು ಎಂತಹ ಮನುಷ್ಯನೂ ಅನುತಾಪ ಪಡದೆ ಇರಲಾರನು. ಆದರೂ ಅವರು ನಿಮ್ಮಿಂದ ಸ್ನೇಹವನ್ನೇ ಬಯಸುತ್ತಿರುವರು. ಅವರ ಮತ್ತು ಅವರ ವರ್ತನಗಳನ್ನು ತೂಗಿ ನೋಡಿ ಉಭಯ ಹಿತವನ್ನು ಬಯಸುವ ಸುಪ್ರಜ್ಞನರು ಧೃತರಾಷ್ಟ್ರನಿಗೆ ತಿಳಿಸಿಕೊಡುವುದು ಅವಶ್ಯಕವಾಗಿದೆ. ಲೋಕನಾಶಕವಾದ ಯುದ್ಧವನ್ನು ಅವರೆಂದಿಗೂ ಕೋರರು. 'ಏಳಕ್ಷೌಹಿಣಿ ಸೈನ್ಯ ವನ್ನು ಗೆಲ್ಲಬಹುದು ; ರಾಜ್ಯವನ್ನು ಕೊಡೆನು—ಯುದ್ಧವೇ ಆಗಲಿ! ಎಂದು ದುರ್ಯೋಧನನು ತಿಳಿದಂತಿದೆ. ಅದು ಭ್ರಮೆ. ಒಬ್ಬೊಬ್ಬರೇ ಸಹಸ್ರಾರು ವೀರರನ್ನು ಅಕ್ಷೌಹಿಣಿಗಳನ್ನು ಗೆಲ್ಲಬಲ್ಲ ವೀರರು ಅಲ್ಲಿರುವರು. ಚನ್ನಾಗಿ ಆಲೋಚಿಸಿರಿ ! ಧರ್ಮರಾಜನ ವಿರೋಧವು ಒಳಿತಲ್ಲ. ಭೀಮಾರ್ಜುನರು ಅವನಿಗೆ ಎರಡು ತೋಳ ನಂತೆ ಸಹಾಯಕರಾಗಿರುವರು. ಅವರಿಗೆಲ್ಲ ಶ್ರೀಕೃಷ್ಣನೇ ಪ್ರೇರಕನು.

ಭೀಮನು, ರುದ್ರವರದಿಂದ ಅವಧ್ಯರಾದ ಜರಾಸಂಧಾದಿ ರಾಕ್ಷಸರನ್ನು ಕೊಂದನು. ತೀರ್ಥಗಳಲ್ಲಿದ್ದು ಲೋಕಪೀಡಾಕರರಾಗಿದ್ದ ವಿಘ್ನಕರರಾಗಿದ್ದ, ಮೂರು ಕೋಟಿ ರಾಕ್ಷಸರನ್ನು ಭೀಮಸೇನನು ಸಂಹರಿಸಿ ತೀರ್ಥಗಳನ್ನು ಸುಗಮವಾಗಿಸಿರು ವನು. ಇವೆಲ್ಲವು ನಿಮಗೆ ತಿಳಿಯದುದಲ್ಲ. ಪಾಪಿಯಾದ ಜಟಾಸುರನು ಪಾರ್ವತೀ ದೇವಿಯ ವರದಿಂದ ಅವಧ್ಯನೆನಿಸಿ, ಪಾಂಡವರನ್ನು ವಿಪ್ರರೂಪದಿಂದ ವಂಚಿಸು

ತ್ತಿದ್ದನು. ವಿಪ್ರರೂಪಿಯಾಗಿದ್ದುದರಿಂದ ಅವನನ್ನು ಕೊಲ್ಲದೆ ಭೀಮಸೇನನು ಅವನ ಸ್ವರೂಪವನ್ನರಿತೂ ಸುಮ್ಮನಿದ್ದನು. ಭೀಮಸೇನನು ಬೇಟೆಗೆಂದು ಹೋದಾಗ ಸಹದೇವ ನಕುಲ ಧರ್ಮರಾಜ ದ್ರೌಪದಿಯರನ್ನು ಹೊತ್ತು ಓಡಿಹೋದಾಗ ಭೀಮ ಸೇನನು ಅವನನ್ನು ಹಿಡಿದು ಯುದ್ಧಮಾಡಿ ಕೆಳಗೆ ಕೆಡಹಿ ಅವನ ತಲೆಯನ್ನು ತುಳಿದು ಪುಡಿಪುಡಿಮಾಡಿದನು. ಪಾಪಿಜಟಾಸುರನು ತಮುಸ್ಸನ್ನೇ ಹೊಂದಿದನು ಇದೂ ವಿದುರ ನಿಂದ ನಿಮಗೆ ತಿಳಿದಿದೆ. ಇಂತಹ ಭೀಮಸೇನನ್ನೆದುರಿಸಿ ಕೌರವರು ಉಳಿಯುವುದಿಲ್ಲ. ನಿವಾತ ಕವಚರನ್ನೂ, ಪೌಲೋಮ ಕಾಲಕೇಯರನ್ನೂ ಸಂಹರಿಸಿದ ಅರ್ಜುನನಿಗೆ ಮಿಗಿಲಾದ ಧಾನುಷ್ಕರು ಈ ಲೋಕಗಳಲ್ಲೇಕೆ ಮೂರ್ಲೋಕಗಳಲ್ಲಿಯೂ ಇಲ್ಲ. ರುದ್ರವರದಿಂದ ಪಾಶುಪತವನ್ನೂ, ಇಂದ್ರಾದಿಗಳಿಂದ ದಿವ್ಯಾಸ್ತ್ರಗಳನ್ನೂ ಪಡೆದಿರುವ ಪಾರ್ಥನಿಗೆ ಕಿಚ್ಚಿಗೆ ಗಾಳಿಯಂತೆ ಶ್ರೀಕೃಷ್ಣನು ಸಾರಥಿಯಾಗಿ, ಜೆಂಗಾವಲಾಗಿರು ವನು. ಅವನ ಪರಾಕ್ರಮವು ಜಗಜ್ಜೇಗೀಯಮಾನವಾಗಿದೆ. ಅವನ ವಶದಲ್ಲಿದೆ, ಚೇತನಾಚೇತನಾತ್ಮಕವಾದ ಜಗವೆಲ್ಲ. ಬ್ರಹ್ಮರುದ್ರೇಂದ್ರಾದಿ ದೇವತೆಗಳವನ ಕಿಂಕರರು. ಇಂತಹ ಶ್ರೀಕೃಷ್ಣಾದಿರಕ್ಷಿತರಾದ ಪಾಂಡವರಿಂದ ವಿರೋಧವು ಅನರ್ಥಕರ ವಾಗುವುದು. ಅವರಿಗೆ ಅವರ ದ್ರವ್ಯರಾಜ್ಯಾದಿಗಳನ್ನು ಕೊಟ್ಟು ಉಭಯರೂ ಸುಖವಾಗಿರಿ! ಆಲಸ್ಯ ಕೂಡದು' ಎಂದು ವಿಪ್ರನು ಸುಮ್ಮನಾದನು.

ಅವನ ಮಾತನ್ನು ಪ್ರಶಂಸಿಸಿ ಭೀಷ್ಮನು ಇಂತೆಂದನು—'ದೈವಾನುಗ್ರಹದಿಂದ ಪಾಂಡವರು ಕುಶಲಿಗಳಾಗಿ, ದಾಮೋದರ ಸಹಾಯವಂತರಾಗಿರುವರು. ಧರ್ಮದಲ್ಲಿ ನಿಂತು, ಯುದ್ಧಮಾಡುವ ಹಠವನ್ನು ಬಿಟ್ಟು ಸ್ನೇಹವನ್ನು ತೋರಿರುವುದು ನ್ಯಾಯ ವಾಗಿದೆ. ನೀನಾಡಿದ ವಚನಗಳು ಕಠಿಣವಾದರೂ, ಸತ್ಯವಾಗಿವೆ. ಪಿತೃಧನವನ್ನು ಅವರು ಬೇಡುವುದು ತಪ್ಪಲ್ಲ. ಕಷ್ಟಗಳನ್ನು ಪಟ್ಟಿರುವರೆಂದೆ! ಅದೂ ಸರೇ! ಧನಂಜಯನನ್ನು ಗೆಲ್ಲುವ ವೀರರಿಲ್ಲ. ಭೀಮಸೇನನು ಅಸಹಾಯಶೂರನು. ಎಲ್ಲವೂ ನಿಜ!'

ಹೀಗೆನ್ನುತ್ತಿದ್ದ ಭೀಷ್ಮನನ್ನು ತಡೆದು, ಕರ್ಣನು ದುರ್ಯೋಧನನ ಮುಖ ವನ್ನು ನೋಡಿ, ಸಿಟ್ಟಿನಿಂದ ವಿಪ್ರನಿಗಿಂತೆಂದನು—

'ಪಾಂಡವರ ಬಲಾಬಲಗಳನ್ನು ತಿಳಿಯದವರಿಲ್ಲಿಲ್ಲ. ಅವನ್ನೆಲ್ಲ ಮತ್ತೆ ಇಲ್ಲಿ ಹೇಳಿ ಏನು ಪ್ರಯೋಜನ? ದುರ್ಯೋಧನನಿಗಾಗಿ ಶಕುನಿಯು ಜೂಜಾಡಿ ಗೆದ್ದನು. ಸೋತ ಧರ್ಮರಾಜನು ಒಪ್ಪಂದದಂತೆ ಅರಣ್ಯವನ್ನು ಸೇರಿದರೆ ಅದರಲ್ಲಿ ನಮ್ಮ ತಪ್ಪೇ ನಿದೆ? ಸಮಯದಂತೆ ಅವರು ಮತ್ತೆ ಅರಣ್ಯವಾಸವನ್ನು ಮಾಡಿ ಬರಲಿ! ಆಗ ದುರ್ಯೋಧನನ ನೆರಳಿನಲ್ಲಿ ಸುಖವಾಗಿ ಬಾಳಲಾದೀತು! ಮತ್ಸ್ಯ ಪಾಂಚಾಲರ ಬಲ ದಿಂದ ಕೊಬ್ಬಿ ಹೆದರಿಸುವ ಪಾಂಡವರಿಗೆ ಅಂಜುವವನಲ್ಲ ಕೌರವೇಶ! ಅರ್ಧರಾಜ್ಯವಲ್ಲ, ಪಾದವಾದರೂ ನಮ್ಮ ರಾಜನು ಕೊಡನೆಂದು ತಿಳಿಸು! ಧರ್ಮದಿಂದ ಕೇಳಿದರೆ ಮಹೀಮಂಡಲವನ್ನೇ ಕೊಡಲು ಸಿದ್ಧನಿರುವನು. ಪ್ರತಿಜ್ಞಾ ಪ್ರಕಾರವಾಗಿ ಮತ್ತೆ

ವನವಾಸಕ್ಕೆ ಹೊರಡಲಿ ಪಾಂಡವರು ! ಧರ್ಮವನ್ನು ಕಡೆಗಣಿಸಿ, ಅವರು ಯುದ್ಧ ಮಾಡಬಂದರೆ ನನ್ನ ಈ ಮಾತನ್ನು ನೆನೆದು ಪಶ್ಚಾತ್ತಾಪಪಡಬೇಕಾದೀತು !'

ಆಗ ಭೀಷ್ಮನು, 'ರಾಧೇಯ ! ಸುಮ್ಮನೆ ಮಾತಿನ ಪರಾಕ್ರಮವನ್ನು ತೋರಿಸಬೇಡ! ಒಬ್ಬನಾಗಿ ಬಂದು ಧನಂಜಯನು ನಮ್ಮ ಷಡ್ರಥರನ್ನೆಲ್ಲಗೆದ್ದು ಆಕಳ ಗುಂಪನ್ನು ತೆಗೆದುಕೊಂಡು ಹೋಗುವಾಗ ನೀನೇನು ಮಾಡಿದೆ ? ಚಿತ್ರಸೇನನಿಂದ ರಾಜನನ್ನು ಪಾರುಮಾಡಿದವನು ನೀನಾ? ವಿಪ್ರನಾಡಿದ ಮಾತೆಲ್ಲವೂ ನಿಜ. ಅದರಂತೆ ನಡೆಯದೆ, ನಿನ್ನನ್ನು ನಂಬಿ ಯುದ್ಧಮಾಡಿದರೆ ಮಣ್ಣು ಮುಕ್ಕಬೇಕಾದೀತು ! ತಿಳಿ!' ಎಂದು ಧಿಕ್ಕರಿಸಿದನು.

ಧೃತರಾಷ್ಟ್ರನು ಭೀಷ್ಮನನ್ನು ಸಮಾಧಾನಪಡಿಸಿ, ಕರ್ಣನನ್ನು ಜಬರಿಸಿ, ವಿಪ್ರನಿಗಿಂತೆಂದನು—'ವಿಪ್ರವರ! ಭೀಷ್ಮನು ನಮಗೂ ಪಾಂಡವರಿಗೂ, ಸಕಲ ಜಗತ್ತಿಗೂ ಹಿತವಾದ ಮಾತನ್ನಾಡಿರುವನು. ಆಗಲಿ ! ಆಲೋಚಿಸಿ, ಸಂಜಯನನ್ನು ಪಾಂಡವರಿಗೆ ಸಂದೇಶವಿತ್ತು, ಕಳಿಸುವೆನು. ನೀನು ಹೊರಡಬಹುದು' ಎಂದು ಆ ಬ್ರಾಹ್ಮಣನನ್ನು ಸತ್ಕರಿಸಿ, ಕಳಿಸಿಕೊಟ್ಟನು.

ಸಭೆಗೆ ಸಂಜಯನನ್ನು ಕರೆಯಿಸಿ, ಅಂಧರಾಜನವನಿಗಿಂತೆಂದನು —'ಪಾಂಡುಪುತ್ರರು ಉಪಪ್ಲಾವ್ಯದಲ್ಲಿ ಬಂದು ನೆಲಸಿರುವರಂತೆ ! ನೀನು ಧರ್ಮರಾಜನಲ್ಲಿಗೆ ನನ್ನ ಸಂದೇಶವನ್ನು ಕೊಂಡು ಹೋಗು! ಅವರಿಗೆ ಸ್ವಸ್ತಿಯಾಗಲಿ ! ಅವರಿಗೆ ಅಂತಹ ಕಷ್ಟಗಳು ಬರಬಾರದಾಗಿತ್ತು. ನಮ್ಮಲ್ಲಿ ನಿಷ್ಕಪಟರಾಗಿ, ಶಾಂತಿಯನ್ನು ಬಯಸಿಬಂದುದೂ ಒಳ್ಳೆಯದಾಯಿತು. ಅವರು ಮೊದಲಿನಿಂದಲೂ ಸಜ್ಜನೋಪಕಾರಿಗಳು ಮತ್ತು ನಿಷ್ಕಪಟಿಗಳು. ತಾವು ಗೆದ್ದುತಂದ ಸಂಪತ್ತನ್ನು ನನಗೇ ಕೊಡುತ್ತಿದ್ದರು. ಎಷ್ಟು ಪರೀಕ್ಷಿಸಿದರೂ ಅವರಲ್ಲಿ ದೋಷವನ್ನು ಕಾಣಲಾಗದು. ಧರ್ಮಾರ್ಥಗಳಿಗೆ ವಿರೋಧವಾಗದಂತೆ ಪತ್ನೀಪುತ್ರರನ್ನು ಪೋಷಿಸಿ ಧೈರ್ಯದಿಂದ ಶೀತೋಷ್ಣ ಸುಖದುಃಖ ರಾಗದ್ವೇಷಗಳ ವಿಕಾರಕ್ಕೊಳಗಾಗದಿರುವರು. ಮಿತ್ರರನ್ನು ದಾನಮಾನಾದಿಗಳಿಂದ ಪೂಜಿಸುವರು. ಆದರಿಂದ ಪ್ರೈತ್ರಿಯು ಕಾಲಬಲದಿಂದ ನಾಶವಾಗದು. ಧರ್ಮರಾಜನನ್ನು ಕಂಡು, ಎಲ್ಲರೂ ಪ್ರೀತಿಸುವರು. ಅಂತಹ ಗುಣವಂತರು ಸುಖದೂರರಾಗಿರುವುದನ್ನು ಕಂಡು, ಯಾರಿಗಾದರೂ ಸಿಟ್ಟು ಬರದಿರದು. ನಮ್ಮ ದುರ್ಯೋಧನನೋ ಆರಂಭಶೂರನು. ಸುಖವಾಗಿ ಬೆಳೆದು ಕಷ್ಟವನ್ನು ಪಡಲಾರನು. ಇವನು, ಇವನ ಸ್ನೇಹಿತನಾದ ಕರ್ಣ ಇವರೀರ್ವರೂ ಸದಾ ಪಾಂಡವರನ್ನು ಕಡೆಗಣಿಸಿ ನಿಂದಿಸುತ್ತಿರುವರು. ಭೀಮಾರ್ಜುನ-ಸಹಾಯನು, ಶ್ರೀಕೃಷ್ಣ ರಕ್ಷಿತನು ಆದ ಯುಧಿಷ್ಠಿರನ ರಾಜ್ಯಭಾಗವನ್ನು ಕೊಡಲೊಲ್ಲದೆ, ಕೆಡುತ್ತಿರುವನು. ಅರ್ಜುನ, ಸಾತ್ಯಕಿ, ಧರ್ಮ, ನಕುಲ, ಸಹದೇವರೊಬ್ಬೊಬ್ಬರೇ ಪೃಥ್ವಿಯನ್ನು ಜಯಿಸಬಲ್ಲರು. ಸರ್ವಲೋಕ ವರೇಣ್ಯನಾದ ಶ್ರೀಕೃಷ್ಣನಿಗೆ ಎದುರಾಗಿ ನಿಲ್ಲುವ ಯೋಧರು ಮೂರು ಲೋಕಗಳಲ್ಲಿಯೂ ಇಲ್ಲ. ಅವನಿದ್ದೆಡೆ ವಿಜಯ ; ಗದಾಪಾಣಿಯಾದ ಭೀಮಸೇನನಿಗೆ ರಥ

ಯುದ್ಧ ಹಸ್ತಿ ಯುದ್ಧಗಳಲ್ಲಿಯು ಎಂದಿಗೂ ಅಪಜಯವಿಲ್ಲ. ಕ್ರುದ್ಧನಾದ ಭೀಮನು ಲೀಲಾಜಾಲವಾಗಿ ಧಾರ್ತರಾಷ್ಟ್ರರನ್ನೆಲ್ಲ ಅಗ್ನಿಯಂತೆ ಪರಾಕ್ರಮಿಸಿ ಸುಡಬಲ್ಲನು. ಅವನಂತಹ ಬಲವಂತನಿಲ್ಲ; ವೇಗವಂತನಿಲ್ಲ. ವಾಸವನಿಗೂ ಅವನು ದುರ್ಜಯನು. ಪಾರ್ಥಶಿಕ್ಷಿತರಾದ ಮಾದ್ರೇಯರೂ ಪರಾಕ್ರಮ ಸಂಪನ್ನರು. ಇಲ್ಲಿ ಭೀಷ್ಮದ್ರೋಣಾದಿ ವೀರರಿರುವ ನಮ್ಮ ಸೇನೆಯು ನಿರ್ವೀರ್ಯವಲ್ಲ. ಆದರೆ ಪಾಂಡವರನ್ನೆ ದುರಿಸಿ ನಿಲ್ಲ ಲಾರದಿದು ನಿಜ. ಧೃಷ್ಟದ್ಯುಮ್ನನು ಪಾಂಡವರಿಗಾಗಿ ಪ್ರಾಣಗಳನ್ನರ್ಪಿಸಲು ಹಿಂಜರಿ ಯದೆ, ಅಗ್ನಿತೇಜನಾಗಿ ನಿಂತಿರುವನು. ವಿರಾಟ ದ್ರುಪದರೂ ಮಹಾರಥರು. ಇನ್ನೂ ಬಹು ವೀರರು ಪಾಂಡವರ ಸಹಾಯಕ್ಕಾಗಿ ಬಂದಿರುವರು. ಪ್ರದ್ಯುಮ್ನನಂತೆ ವಿಜೃಂಭಿಸುವ ಸಾತ್ಯಕಿಯು ಚೇದಿ ಕಾಶಿರಾಜರೂ ಪಾಂಡವ ಹಿತವನ್ನು ಸಾಧಿಸು ವರು. ಸಭಾಮಧ್ಯದಲ್ಲಿ ತೇಜಶ್ಶಾಲಿಯಾದ ಶಿಶುಪಾಲನನ್ನು ಕೊಂದು, ಪಾಂಡವರ ಯಶೋಮಾನಗಳನ್ನು ಬೆಳಸಿದ ಕೃಷ್ಣನ ಕಡೆ ಬೆರಳುಮಾಡಿ ತೋರುವ ಧೈರ್ಯ ವಾರಿಗಿತ್ತು? ಅಸಹ್ಯವಿಕ್ರಮನಾದ ಶ್ರೀಚಕ್ರಪಾಣಿಯನ್ನು ಕಂಡು, ಸತ್ತ ಶಿಶುಪಾಲ ನನ್ನು ಬಿಟ್ಟು ರಾಜರು ಸಿಂಹವನ್ನು ಕಂಡ ಹರಿಣಗಳಂತೆ ಓಡಿಹೋದರು. ಚಾರರು ಬಣ್ಣಿಸುವ ಶ್ರೀಕೃಷ್ಣನ ವಿಕ್ರಮ ಚರಿತೆಯನ್ನು ಕೇಳಿ, ನನಗೆ ಮನಶ್ಶಾಂತಿ ಇಲ್ಲದಂತಾಗಿದೆ. ನನ್ನ ಎದೆ ನಡುಗುತ್ತಿದೆ. ಅಂತಹ ಕೃಷ್ಣನು ಅರ್ಜುನನಿಗೆ ಸಾರಥಿ ಯಾಗುವನಂತೆ! ಅವರೀರ್ವರು ಏಕರಥರಾಗಿ ಬಂದರೆ, ಇಂದ್ರೋಪೇಂದ್ರರನ್ನೆದುರಿ ಸುವ ದೈತ್ಯಸೇನೆಯಂತೆ ಕುರುಸೇನೆಯು ನಾಶವಾಗದಿರುವುದೇ ?

ದುರ್ಯೋಧನನ ದುಷ್ಕಾರ್ಯಗಳಿಗೆ ರೋಸಿ, ವಾಸುದೇವನಲ್ಲದಿನ್ನೊಬ್ಬನಾದರೆ ಎಂದೋ ಅವನನ್ನೂ ಅವನವರನ್ನೂ ಸುಟ್ಟುಬಿಡುತ್ತಿದ್ದನು. ಶ್ರೀಕೃಷ್ಣನು ಜಿತಮನಸ್ಕ ನಾದುದರಿಂದ ಸಹಿಸಿರುವನು. ವಾಸುದೇವ ಭೀಮಾರ್ಜುನರಕಿಂತಲು ಯುಧಿಷ್ಠಿರ ನೆಂದರೆ ನನಗೆ ಬಲು ಭಯ. ಮಹಾತಪಸ್ವಿಯು, ಬ್ರಹ್ಮಚರ್ಯನಿಷ್ಠನು ಆದ ಧರ್ಮರಾಜನು ಮನಸ್ಸಿನಿಂದಲೇ ಸಂಕಲ್ಪಿಸಿದನೆಂದರೆ, ಕೌರವರು ಯಮಸದನದಲ್ಲಿ ಇದ್ದಂತೆಯೇ ಸರಿ! ಅವನಿಂತು ಸಿಟ್ಟಾದನೆಂದರೆ, ಅದು ತಪ್ಪಲ್ಲ, ಇವರ ದುಷ್ಕೃತ್ಯ ಗಳಿಗೆ ಯಾವ ಶಿಕ್ಷೆಯೂ ಅನುಚಿತವಲ್ಲ. ಅವನು ನಿಷೇಧಕಾರ್ಯವೆಂದರೆ ಹಿಂದೆಗೆವ ಮಹಾತ್ಮನು. ಸಂಜಯ! ಆದುದರಿಂದ ರಥಾರೂಢನಾಗಿ ಹೋಗಿ ಪಾಂಡವ ರನ್ನೂ ಪಾಂಚಾಲಾದಿರಾಜರನ್ನೂ ಕಾಣು! ಕುಶಲವನ್ನು ಕೇಳು! ಶ್ರೀಕೃಷ್ಣನ ಮಾತನ್ನು ಪಾಂಡವರು ವೇದವಾಕ್ಯದಂತೆ ತಿಳಿದು ಪಾಲಿಸುವರು. ಪ್ರಾಣಸಮ ರೆಂದು ತಿಳಿದು ಕೃಷ್ಣನೂ ಅವರ ಹಿತಸಾಧಕನಾಗಿರುವನು. ನಮಗೆ ಹಿತವಾಗ ಬೇಕು ಮತ್ತು ಯುದ್ಧವಾಗಬಾರದು. ಪರಪಕ್ಷದವರಿಗೆ ತಲೆನೋವಾಗದಂತೆ, ಪಾಂಡವರು ವನದಲ್ಲೇ ಸುಖವಾಗಿ ಇರುವಂತೆ, ತಿಳಿಯಹೇಳು!' ಎಂದು ಕಳಿಸಿದನು.

## ಸಂಜಯ ರಾಯಭಾರ

ಧೃತರಾಷ್ಟ್ರನ ಅಭಿಪ್ರಾಯವನ್ನರಿತು, ಅವನ ಸೂತನಾದ ಸಂಜಯನು, ರಥಾ ರೂಢನಾಗಿ ಉಪಪ್ಲಾವ್ಯವನ್ನು ಸೇರಿದನು. ಸಭೆಯಲ್ಲಿದ್ದ ಪಾಂಡವರಿಗೆ ವಂದಿಸಿ, ಶ್ರೀಕೃಷ್ಣನಿಗೆ ನಮಿಸಿ, ಎಲ್ಲರ ಕುಶಲವನ್ನು ಕೇಳಿ, ಇಂತೆಂದನು—

'ಧರ್ಮರಾಜ! ಅದೃಷ್ಟದಿಂದ ನೀವೆಲ್ಲರೂ ಆರೋಗ್ಯವಂತರೂ. ಸಹಾಯ ವಂತರೂ ಆಗಿರುವಿರಿ, ಸಂತೋಷ! ಧೃತರಾಷ್ಟ್ರರಾಜನು ನಿಮ್ಮ ಕುಶಲವನ್ನು ತಿಳಿಯಕಳಿಸಿರುವನು. ನೀವೆಲ್ಲರೂ ಕ್ಷೇಮವೇ ತಾನೆ?' ಎಂದು ಕೇಳಿದ ಸಂಜಯ ನಿಗೆ ಧರ್ಮರಾಜನಿಂತೆಂದನು—

'ಗಾವಲ್ಗಣೇ! ಸಂಜಯ! ನಿನಗೆ ಸ್ವಾಗತವು. ನಿನ್ನನ್ನು ಕಂಡು ಸಂತಸ ವಾಗಿದೆ. ನಾವು ಕ್ಷೇಮಿಗಳು. ಬಹುಕಾಲಾನಂತರದಲ್ಲಿ ನಮ್ಮ ಕ್ಷೇಮವನ್ನು ಕೇಳುವ ನಮ್ಮ ದೊಡ್ಡಪ್ಪನನ್ನು ನೋಡಿದಷ್ಟು ಆನಂದವಾಗಿದೆ. ನಮ್ಮ ಪಿತಾಮಹನಾದ ಭೀಷ್ಮನು ಕುಶಲನೇ? ಧಾರ್ತರಾಷ್ಟ್ರರಿಂದ ಕೂಡಿದ ಧೃತರಾಷ್ಟ್ರ ಬಾಹ್ಲೀಕರು ಕ್ಷೇಮದಿಂದಿರುವರೇ? ದ್ರೋಣಕೃಪಾಶ್ವತ್ಥಾಮರು ನಮಗೆ ಗುರುಗಳು. ಅವರು ಚನ್ನಾಗಿರುವರೇ? ವೈಶ್ಯಾಪುತ್ರನಾದ ಯುಯುತ್ಸುವು ಕ್ಷೇಮವೇ? ಮಂದನಾದ ಸುಯೋಧನನನ್ನು ಗೊಂಬೆಯಂತಾಡಿಸುವ ರಾಧೇಯನು ಕ್ಷೇಮವೇ? ರಾಜನಾದ ಧೃತರಾಷ್ಟ್ರನು ವಿಪ್ರವೃತ್ತಿಗಳನ್ನು ನಡೆಸಿಕೊಂಡುಬರುವನೇ? ನಾವು ವಿಪ್ರರಿಗಿತ್ತ ಗ್ರಾಮಗಳ ಬಳುವಳಿಗಳನ್ನು ಕಸಿದಿಲ್ಲವಲ್ಲ? ವಿಪ್ರರಕ್ಷಣದಿಂದ ಯಶಸ್ಸಿಲ್ಲಿ, ಅಲ್ಲಿ ಸುಖ. ಅವರನ್ನು ಹಿಂಸಿಸಿದವನು ಉಳಿಯುವುದಿಲ್ಲ. ದ್ರೋಣಾದಿಪೂಜ್ಯರು ನಮ್ಮನ್ನು ನಿಂದಿಸದೆ, ಸನ್ಮನದಿಂದ ಕಾಣುತ್ತಿರುವರೇ? ಯುದ್ಧ ಸಮಯಗಳಲ್ಲಿಯು ಚೋರಾದ್ಯುಪದ್ರವಗಳಲ್ಲಿಯು, ಭೀಮಪಾರ್ಥರನ್ನು ನೆನೆಯುವರೇ? ಒಂದು ಸಲಕ್ಕೆ ಅರವತ್ತು ಬಾಣಗಳನ್ನು ಬಿಡಬಲ್ಲ ಗಾಂಡೀವಧಾರಿ ಅರ್ಜುನನನ್ನು, ತೃಣಜಾಲದಲ್ಲಿ ಮದ್ದಾನೆಯಂತೆ ಶತ್ರುಮಧ್ಯದಿ ನಿರ್ಭೀತನಾಗಿ ಸಂಚರಿಸುವ ಭೀಮನನ್ನು ಯಾರೂ ಮರೆತಿಲ್ಲವಲ್ಲ? ದಿಗ್ವಿಜಯವನ್ನು ಸಾಧಿಸಿ ಬಂದ ನಕುಲ ಸಹದೇವರನ್ನೂ ಸ್ಮರಿಸು ವರೇ? ಸಾಮದಿಂದ ನಮ್ಮ ಕಾರ್ಯದ ಸಾಧನವಾಗದಿದ್ದರೆ ಮಾತ್ರ ನಾವು ದಂಡ ವನ್ನು ಪ್ರಯೋಗಿಸಬೇಕಾಗುವುದು. ದುರ್ಯೋಧನನಲ್ಲಿ ದಂಡೋಪಾಯವೇ ಸರಿ ಎಂದು ಕಾಣುತ್ತಿದೆ!'

ಸಂಜಯನಾಮಾತಿಗೊಪ್ಪದೆ, 'ಧರ್ಮರಾಜ! ನೀ ಕೇಳಿದವರೆಲ್ಲರೂ ಕುಶಲ ದಿಂದಿರುವರು. ದುರ್ಯೋಧನನಲ್ಲಿ ಸಾಧುಗಳೂ ಇರುವರು. ಎಲ್ಲರೂ ಪಾಪಿಗಳಲ್ಲ. ಶತ್ರುಗಳಿಗೂ ಜೀವನವನ್ನೀವ ಧಾರ್ತರಾಷ್ಟ್ರನು ವಿಪ್ರರನ್ನು ಪೋಷಿಸದಿರುವನೇ? ಅನಪಕಾರಿಗಳಿಗೆ ದ್ರೋಹವನ್ನೆಣಿಸುವುದು ನಿಮಗೆ ತರವಲ್ಲ. ಅಂಥವರು ದ್ರೋಹ ವನ್ನೆಸಗಿದಾಗಲೂ, ಪ್ರತಿದ್ರೋಹವನ್ನು ಮಾಡದ ಸಾಧುಗಳಿಗೆ ಇಂದು ದ್ರೋಹ

ಹಿಂಸೆಗಳು ಸುತರಾಂ ನ್ಯಾಯವಲ್ಲ. ಅವರವರ ಪಾಪವನ್ನವರು ಅನುಭವಿಸುವರು. ಸಾಧುವರ್ತನರಾದ ನಿಮ್ಮನ್ನು ನಿಂದಿಸುವವರು ಮಿತ್ರದ್ರೋಹಿಗಳೆನಿಸುವರು. ನಿನಗೆ ಗೊತ್ತಿಲ್ಲ. ಅಂಧರಾಜನು ಪಾಪ ! ಮನದಲ್ಲೇ ನಿಮ್ಮ ಕಷ್ಟಗಳಿಗೆ ಮರುಗುತ್ತಿರುವನು. ಸಂಧಿಯನ್ನು ನಿರಾಕರಿಸುವ ಸುತರು ನಷ್ಟರಾಗುವರೆಂದು ತಪಿಸುತ್ತಾ, ವಿಪ್ರರನ್ನು ಕರೆಸಿ ಹಿತೋಪದೇಶಗಳನ್ನಾಲಿಸುವನು. ಭೀಮಸೇನಾದಿಗಳ ಪರಾಕ್ರಮವನ್ನು ಕೇಳಿ, ನಿಮ್ಮನ್ನು ಸ್ಮರಿಸುವನು. ಸರ್ವ-ಧರ್ಮ ಸಮನ್ವಿತರಾದ ನಿಮಗೆ ವನವಾಸಾದಿಕ್ಲೇಶಗಳಾದುದನ್ನು ಕೇಳಿ, ಭವಿತವ್ಯವು ಬಲವತ್ತರವೆಂದು ತಿಳಿದಿರುವನು.

ಧರ್ಮಜ ! ಈಗ ಎಲ್ಲರಿಗೂ ಹಿತವಾಗುವಂತೆ ನಡೆಯುವುದು ನಿನ್ನ ಕೈಲಿದೆ. ಕಾಮಕ್ಕಾಗಿ ಧರ್ಮವನ್ನು ಬಿಡುವವರಲ್ಲ ನೀವು. ಇಂದ್ರಪರಾಕ್ರಮರಾದ ನಿಮಗೆ ದುರ್ಘಟವಿಲ್ಲ. ವೃದ್ಧರಾಜನು ನನ್ನನ್ನು ಕರೆದು ನಿಶಾಸಮಯದಿ ಸಂದೇಶವನ್ನಿತ್ತಿರುವನು. ಅದನ್ನು ಕೇಳು ! ವೃಕೋದರ ವಾಸುದೇವಾದಿ ಸರ್ವರೂ ಸರ್ವಕೌರವ ಕ್ಷೇಮಂಕರವಾದ ನನ್ನ ವಚನವನ್ನು ಕೇಳಲಿ ! ಶಾಂತಿಯನ್ನು ಬಯಸಿ ಧೃತರಾಷ್ಟ್ರ ನಾಡಿದ ಮಾತನ್ನು ಹೇಳುವೆನು.

ಪಾರ್ಥರು ಧರ್ಮವಂತರು, ಆಕಾರದಿಂದ ಸೌಮ್ಯರು. ಕೃಪಾ, ಆರ್ಜವ, ದಾನ, ಕರ್ಮನಿಷ್ಠೆ, ನಿಷಿದ್ಧಕರಣಲಜ್ಜೆ, ಮುಂತಾದ ಉದಾಹರಣಗಳಿಗೆ ನಿಧಿಗಳು. ಬಿಳಿಯ ವಸ್ತ್ರದಲ್ಲಿ ಬಿದ್ದ ಅಂಜನ ಬಿಂದುವಂತೆ ಎದ್ದುಕಾಣುವ ದೋಷಲೇಶವಿಲ್ಲದ ನಿರ್ಮಲಚರಿತ್ರರು. ಯುದ್ಧವೆಂದರೆ ಸರ್ವನಾಶವಾಗುವುದಲ್ಲವೇ ? ಜಯವಾದರೂ ಬಂಧುನಾಶದಿಂದ ಪರಾಜಯವೆನಿಸುವ ಹಿಂಸಾವ್ಯಾಪಾರವನ್ನು, ತಿಳಿದವರು ಮಾಡಬಹುದೇ ? ಜ್ಞಾತಿಗಳು ಶತ್ರುಹಸ್ತಗತರಾಗಿರಲು, ಕರ್ತವ್ಯವೆಂದು ತಿಳಿದು, ಅವರನ್ನು ಬಿಡಿಸಿ, ಅಮೇಲೆ ನಿಂದಿಸುವುದೊಳಿತೇ ? ಶತ್ರುಗಳಾರೆಂದು ನಿಶ್ಚಯಿಸಿ, ಎಲ್ಲ ಕೌರವರನ್ನೂ ಕೊಂದು, ಬಂಧುಪ್ರೀತಿಯನ್ನೂ ತ್ಯಜಿಸಿ, ರಾಜ್ಯವಾಳುತ್ತಾ ಬದುಕಿದ್ದರೂ ಸತ್ತಂತಲ್ಲವೇ ? ಎಲ್ಲರನ್ನೂ ನಾಶಮಾಡಿ ನೀವೇ ಬಾಳಬಹುದೇ ? ನಿಮಗೆ ಕೇಶವ ಪಾಂಚಾಲ ಕೇಕಯಾದಿ ವೀರರು ಬೆಂಬಲವಾಗಿರುವಾಗ, ನಿಮ್ಮನ್ನು ಇಂದ್ರನೂ ಗೆಲ್ಲಲಾರನು. ಇಂತು ನಿಮಗೇ ಜಯವು ನಿಶ್ಚಯವೆಂದು ತಿಳಿದು ಯುದ್ಧಕಾತರರಾಗಬೇಡಿ ! ಧೃತರಾಷ್ಟ್ರಸುತನ ಸೈನ್ಯವು ಅಪಾರವಾಗಿದೆ. ಅದನ್ನು ನಾಶಪಡಿಸಲು ಯಾರಿಗೆ ಸಾಧ್ಯ ? ಭೀಷ್ಮ, ದ್ರೋಣ, ಕೃಪಾಶ್ವತ್ಥಾಮ ಕರ್ಣರೇನು ಸಾಮಾನ್ಯರೇ ? ಆದುದರಿಂದ ಜಯಾಪಜಯಗಳನ್ನು ನಿಶ್ಚಯಿಸಲಾಗದು. ನೀಚರಂತೆ ಪಾರ್ಥರು ಕಾದಾಡುವುದು ಸರಿ ಅಲ್ಲ. ಅಂತೆಯೇ ನಾನು ಕೈಜೋಡಿಸಿ ನಿಮ್ಮನ್ನು ಬೇಡಿಕೊಳ್ಳುವೆನು. ಯುದ್ಧವನ್ನು ಮಾಡಬೇಡಿ ! ಕುರುಸೃಂಜಯರಿಗೆ ಕ್ಷೇಮವಾಗುವಂತೆ ನಡೆಯಿರಿ ! ಸಂಧಿಗಾಗಿ ಇಷ್ಟು ನುಡಿಯುತ್ತಿರುವೆನು. ನೀವೆಲ್ಲಾದರೂ ಸುಖವಾಗಿರುವುದೇ ಪಿತಾಮಹ ಧೃತರಾಷ್ಟ್ರರಿಗೆ ಬೇಕಾಗಿದೆ ! ಎಂದನು.

*

ಧರ್ಮರಾಜನಿಂತೆಂದನು—'ಸಂಜಯ! ಯುದ್ಧವೇ ಬೇಕೆಂದು ಯಾರಂದರು ? ಯುದ್ಧವೆಂದರೆ ನಿನಗೇಕೆ ಇಷ್ಟು ಹೆದರಿಕೆ ? ಯುದ್ಧಕ್ಕಿಂತಲೂ ಸಂಧಿಯೇ ಶ್ರೇಯಸ್ಕರವೆಂದು ನಮಗೂ ಗೊತ್ತು. ಸಂಧಿಯಿಂದಲೇ ಕಾರ್ಯವಾಗುವುದಾದರೆ, ಕಾಳಗವೆಂದು ಕಾಲ ಕೆದರುವರಿಲ್ಲಿ ಯಾರೂ ಇಲ್ಲ. ಯುದ್ಧಾದಿ ಪ್ರಯತ್ನವಿಲ್ಲದೆ ಕಾರ್ಯವಾಗುವುದಾದರೆ ಮಾತ್ರ ಯುದ್ಧವನ್ನು ಬಿಟ್ಟು, ಅದಕ್ಕಿಂತಲೂ ಸುಲಭವಾದ ಸಂಧಿಯನ್ನೇ ನಡೆಸುವೆವು. ಸುಖವನ್ನು ಬಯಸಿ, ಲೋಕಪೂಜಿತ ಮಾರ್ಗದಲ್ಲಿ ನಡೆದು, ನಮ್ಮ ರಾಜ್ಯವನ್ನು ನಾವು ಕೇಳುವುದು ಧರ್ಮವೇ ಆಗಿದೆ. ಧರ್ಮದಿಂದ ಬರುವ ಸುಖವೆಮಗೆ ಬೇಕು, ಆದರೆ ಅದು ಸಂಕಟಕರವು, ಹಿಂಸ್ರವು ಆದ ಯುದ್ಧದಿಂದಲೇ ಬರಬೇಕಾಗಿಲ್ಲ. ಕರ್ಮಕುಶಲನಾದವನು ಪ್ರೀತಿವಶರಾದವರ ಸುಖಕ್ಕಾಗಿ, ಇಂದ್ರಿಯಗಳು ಬೇಡುವ ಬಹುವಿಧಸುಖಕ್ಕಾಗಿ, ತನ್ನ ಶರೀರವನ್ನು ಕಷ್ಟಪಡಿಸದೆ, ಪ್ರವರ್ತಿಸುವನು. ಕಾಮಿತಗಳ ಸಂತತಚಿಂತೆಯು ಸಂತಾಪಕಾರಣವು. ದುಷ್ಕಾಮ-ವರ್ಜನದಿಂದ ದುಃಖವು ದೂರವಾಗುವುದು. ಅಗ್ನಿಯು ಸಮಿತ್ತುಗಳನ್ನು ಹಾಕಿದಂತೆಲ್ಲ ಉರಿದೇಳುವಂತೆ, ಆಶೆಯು ಕಾಮಿತಗಳಿಂದ ಹೆಚ್ಚುವುದು. ಆಶೆಗೆ ಪಾರವೇ ಇಲ್ಲ. ನೂರೈದು ಮಕ್ಕಳಿಂದ ಕೂಡಿ ಬಾಳುವ ಧೃತರಾಷ್ಟ್ರನ ಭೋಗ-ಭಾಗ್ಯಗಳಿಗೆ ಕೊನೆ ಇಲ್ಲದಾಗುವುದು. ಆದರೂ ಆತನು ಎಲ್ಲ ರಾಜ್ಯವನ್ನು ತಾನೇ ಉಳಿಸಿಕೊಂಡು, ನಮ್ಮನ್ನು ದೂರದಲ್ಲಿಟ್ಟರೆ, ಅದು ದುರಾಶೆಗೊಳಗಾಗಿ ಅಲ್ಲವೇ ?

'ನೋಡು, ಶ್ರೀಕೃಷ್ಣನ ಮಹಾಮಹಿಮೆಯನ್ನು ಮತ್ತು ವೈಭವವನ್ನು ! ಆ ಮಹಾನುಭಾವನ ಸೇನೆಯಲ್ಲಿ ಎಲ್ಲರೂ ಸಭಾಗ್ಯರೇ ! ಅವನು ಗಂಧರ್ವರ ಗೀತಶಬ್ದವನ್ನು ಕೇಳುತ್ತಾ, ಸುಖದಿಂದಿರಲು, ಪಟ್ಟೆ ಪೀತಾಂಬರಗಳನ್ನುಟ್ಟಿರಲು ಸ್ವಸಂಪಾದಿತ ಭಾಗ್ಯವೇ ಕಾರಣ ! ಅವನು ನಮಗೂ ಅಂತಹ ಸುಖಗಳನ್ನು ಸಂಪಾದಿಸಿ ಕೊಡುವವರೆಗೂ ಸುಮ್ಮನಿರನು. ಭಾಗ್ಯವಂತರಿಗೆ ಯುದ್ಧಗಳು ಸಾಧ್ಯ. ವನದಿಂದ ಬಂದ ನಮ್ಮಂತಹವರಿಗೆ ಶ್ರೀಕೃಷ್ಣನು ಮತ್ತು ಮಿತ್ರರಾಜರೇ ಭಾಗ್ಯ. ಸಕಲ ರಾಜ್ಯವನ್ನಾಳುವ ದುರ್ಯೋಧನನಿಗೆ ಮೂರ್ಖತನದಿಂದ ದುಃಖವೇ ಆಗುತ್ತಿದೆ. ನಮಗೆ ಶ್ರೀಶನಿಂದ ಸರ್ವವೂ ಸಂಪನ್ನವಾಗಿದೆ. ನಮಗೆ ದುಃಖವಿಲ್ಲ. ಕೃಷ್ಣಭಕ್ತರ ನ್ಯಾಯವಾದ ಕೋರಿಕೆಯು ಪರರಿಗೆ ತಾಪಕರವಾಗಿದೆ. ಇವರ ಬಲ ಶೌರ್ಯಗಳು ಅವರಿಗೆ ಭೀತಿದಾಯಕವಾಗಿವೆ. ನಿದಾಘದ ಬಿಸಿಲಿನಲ್ಲಿ ಉರಿದೆದ್ದು ಬರುವ ಗಭೀರ ವನಮಧ್ಯದಿ ನಿಂತು, ಕ್ಷೇಮವೆಂತೆಂದು ಚಿಂತಿಸುವವನಂತೆ, ಧೃತರಾಷ್ಟ್ರನು, ಕುಮಾರಕ್ಷೇಮಚಿಂತೆಯಿಂದ ಯುದ್ಧಭೀತನಾಗಿರುವನು. ದುರ್ಯೋಧನನಂತೆಯೇ ಕರ್ಣಾದಿಸಹಾಯಕರೂ ಪಾಂಡವಾಗ್ನಿಯನ್ನು ಆರಿಸಲಾರರೆಂದು ಆತನಿಗೆ ತಿಳಿಯದೇ ? ತನ್ನಂತೆ ಇತರರೂ ಸುಖದಿಂದಿರಬೇಕೆಂಬ ವಿವೇಕ ಬೇಡವೇ ?

'ರಾಜ್ಯವಾಳುವ ಧೃತರಾಷ್ಟ್ರನಿಗೆ ದೀನಾಲಾಪಗಳೇಕೆ? ಆಪ್ತತಮನಾದ ವಿದುರನ ವಚನಗಳನ್ನು ಕಡೆಗಣಿಸಿ, ಅನಾಪ್ತನಾದ ದುರ್ಯೋಧನನ ದುರ್ಬುದ್ಧಿಗೆ ಕಿವಿಗೊಟ್ಟು, ನಮ್ಮ ದೊಡ್ಡಪ್ಪನು ಅಧರ್ಮವನ್ನೇ ಮಾಡುತ್ತಿರುವನು. ಪುತ್ರವಶನಾಗಿ ಧೃತರಾಷ್ಟ್ರನು, ಮೇಧಾವಿಯು, ಬಹುಶ್ರುತನು, ಶೀಲವಂತನು, ಆದ ವಿದುರನನ್ನು ತಿರಸ್ಕರಿಸಿ, ಈರ್ಷ್ಯಾಳುವು, ಸಂರಂಭಿಯು, ದುರಭಿಮಾನಿಯು, ಧರ್ಮಬಾಹಿರನು ಆದ ದುರ್ಯೋಧನನನ್ನು ಪುರಸ್ಕರಿಸಿ ಧರ್ಮ ಕಾಮಗಳೆರಡನ್ನೂ ಕಳೆದುಕೊಂಡನು. ಜೂಜಾಡುವಾಗಲೇ ಇದರಿಂದ ಕೌರವಕುಲ ನಾಶವಾಗುವುದೆಂದು ಹೇಳಿದ ವಿದುರನನ್ನು ಕಡೆಗಣಿಸಿ, ಇಷ್ಟಾಯಿತು! ದುಶ್ಶಾಸನ ಕರ್ಣ-ಶಕುನಿಯುತನಾದ ದುರ್ಯೋಧನನಾಡಿಸಿದಂತೆ ಆಡಿದ ವೃದ್ಧರಾಜನ ಅತಿ ಲೋಭವೀಗ ಕೌರವ-ಸೃಂಜಯರನ್ನು ನಾಶಮಾಡಲಿದೆ. ನಾನು ಸತಿ-ಸೋದರರಿಂದ ಕೂಡಿ ವನವನ್ನು ಸೇರಲು, ನಿಷ್ಕಂಟಕಮಹೀರಾಜ್ಯವೆಲ್ಲ ತಮ್ಮದೇ ಆಯಿತೆಂದು ಕೊಚ್ಚುವ ಧೃತರಾಷ್ಟ್ರ ದುರ್ಯೋಧನರಿಗೆ ಶಾಂತಿ ಬೇಕಾಗಿಲ್ಲ. ಅರ್ಜುನನನ್ನು ಯುದ್ಧದಲ್ಲಿ ಗೆಲ್ಲುವ ಹಂಬಲದಿಂದ ಮೆರೆವ ಕರ್ಣನು ಘೋಷಯಾತ್ರಾ ಗೋಗ್ರಹಣಗಳಲ್ಲಿ ಪಲಾಯಿತನಾದುದೇಕೆ? ಕರ್ಣನೊಬ್ಬನಲ್ಲದೆ, ದ್ರೋಣ ಭೀಷ್ಮ ಕೃಪ ಗುರುಪುತ್ರರೂ ದುರ್ಯೋಧನಾದಿ ಕೌರವವೀರರೆಲ್ಲರೂ ಅರ್ಜುನನಿಗೆ ಸಮನಾದ ಧನುರ್ಧರನಿಲ್ಲವೆಂದು ಚನ್ನಾಗಿ ಅರಿತಿರುವರು. ರಣರಂಗದಲ್ಲಿ ಭೀಮಾರ್ಜುನರಿರಲು, ದುರ್ಯೋಧನನ ಗೆಲುವು ಕನಸಿನ ಗಂಟೆಂದು ಎಲ್ಲ ರಾಜರಿಗೂ ಗೊತ್ತು. ಆದರೂ ಯುದ್ಧವೆಂದರೆ ಸಿದ್ಧನಾಗಿರುವನು ದುರ್ಯೋಧನ. ಯುದ್ಧಮಾಡಿ ಗಾಂಡೀವಧಾರಿಯ ಕೈಯಿಂದ, ರಾಜ್ಯವನ್ನು ಹರಿಸಬಹುದೆಂದು ಭ್ರಮಿಸಿರುವನು. ಕ್ರುದ್ಧನಾದ ಭೀಮಸೇನನನ್ನು ರಣದಿ ಕಂಡಾಗ ಅವನ ಭ್ರಮೆ ಹರಿದೀತು! ನಮ್ಮ ಭೀಮಸೇನನಿರಲು ಇಂದ್ರನಾದರೂ ನಮ್ಮದಾದ ಐಶ್ವರ್ಯವನ್ನು ನಮ್ಮಿಂದ ಕಸಿಯಲಾರನು. ಧನಂಜಯ ನಕುಲ ಸಹದೇವರೂ ಅದನ್ನು ಸಹಿಸರು. ಶ್ರೀಕೃಷ್ಣನೂ ನಮಗೆ ಸಹಾಯನಾಗಿರುವನು. ವೃದ್ಧರಾಜನು ನಮ್ಮ ರಾಜ್ಯವನ್ನು ಕೊಡುವಂತೆ ಮಕ್ಕಳಿಗೆ ಹೇಳಿದನೆಂದರೆ ಮಾತ್ರ, ಧಾರ್ತರಾಷ್ಟ್ರರು ಪಾಂಡವಕೋಪದಗ್ಧರಾಗದೆ ಉಳಿಯಬಹುದೆಂದು ತಿಳಿಸು!

'ವಿಷಾನ್ನದಾನ, ಜತುಗೃಹದಹನ, ದ್ಯೂತವಂಚನ ಮೊದಲಾದುವನ್ನು ನೀನು ಮರೆತಿರಲಿಕ್ಕಿಲ್ಲ. ಆದರೂ ನಾವು ಅವನ್ನೆಲ್ಲ ಮರೆತು, ನಿನ್ನಲ್ಲಿ ಗೌರವದಿಂದ ಸಂಧಿಗೊಡಂಬಡುವೆವು. ಇಂದ್ರಪ್ರಸ್ಥದಲ್ಲಿ ನಾವಿರುವೆವು. ಸುಯೋಧನನು ಹಸ್ತಿನಾವತಿಯಲ್ಲಿರಲಿ!'

ಆಗ ಸಂಜಯನು 'ಧರ್ಮರಾಜ! ನೀನು ಧರ್ಮನಿತ್ಯನೆಂದು ಖ್ಯಾತನಾಗಿರುವೆ! ನವದ್ವಾರಗಳಲ್ಲಿ ಸ್ರವಿಸುವ ಜೀವಿತವು ನಿತ್ಯವಲ್ಲ. ಆದರೂ ಯುದ್ಧದಲ್ಲಿ ಜೀವಿತವನ್ನು ಹಾಳುಮಾಡಿಕೊಳ್ಳುವುದುಚಿತವಲ್ಲ. ರಾಜ್ಯವನ್ನು ಕೊಡದಿದ್ದರೇನಾಯಿತು?

ಅಂಧಕವೃಷ್ಣಿ ರಾಜ್ಯಗಳಲ್ಲಿ ಎಲ್ಲಾದರೂ ಭಿಕ್ಷಾವೃತ್ತಿಯಿಂದ ಜೀವಿಸಿರುವುದು ಶ್ರೇಯಸ್ಕರವಾಗಲಿ ಯುದ್ಧವಲ್ಲ. ಬಂಧುಹನನವನ್ನು ಮಾಡಿ ಬದುಕಿದ್ದರೂ ಏನು ಸುಖ ? ಅಲ್ಪಕಾಲ ಬದುಕಿದ್ದರೂ ಮಹಾಯಶಸ್ಸಾಗುವಂತೆ ಯುದ್ಧದೂರನಾಗಿ ಯಾವ ವನದಲ್ಲಿದ್ದರೂ ನಡದೀತು ! ಪಾಪಕೂಪವಾದ ಯುದ್ಧವನ್ನು ಬಿಡು ! ದುಷ್ಟ ಕಾಮಗಳನ್ನು ಹತ್ತಿಕ್ಕಿ ಲೋಕದಲ್ಲಿ ಪ್ರಶಂಸಾಪಾತ್ರನಾಗು! ಅರ್ಥತೃಷ್ಣೆಯು ಧರ್ಮವನ್ನು ಕೆಡಿಸುವುದು. ಧರ್ಮಪರನು ಅರ್ಥಕಾಮನಾಗಬಾರದು. ಧರ್ಮವಂತನು ಸೂರ್ಯನಂತೆ ಬೆಳಗುವನು. ಧರ್ಮಹೀನನು ಪಾಪರತನಾಗಿ ಕೆಡುವನು. ವೇದಗಳನ್ನೋದಿರುವೆ! ಯಜ್ಞಗಳನ್ನು ಮಾಡಿರುವೆ ! ವಿಪ್ರರಿಗಿತ್ತು ತಣಿಸಿರುವೆ ! ಇದೆಲ್ಲವೂ ಪರಲೋಕ ಸುಖಕ್ಕೆಂದು ತಿಳಿದು, ವೈರಾಗ್ಯದಿಂದ ಜೀವಿಸಿದೆ ! ಪುತ್ರಕಳತ್ರರನ್ನು ಸೇವಿಸುವ ಇಂದ್ರಿಯದಾಸನಿಗೆ ಯೋಗಾಭ್ಯಾಸವಿಲ್ಲ. ಮನಶ್ಶಾಂತಿ ಇಲ್ಲ. ಅವನಿಗೆ ವಿತ್ತ ಕ್ಷಯವಾದಂತೆಲ್ಲ ದುಃಖವೇ ಆಗುತ್ತಿರುವುದು. ಪರಬ್ರಹ್ಮಾನುಸಂಧಾನವಂತೂ ದೂರವೇ ಸರಿ ! ಅವನು ಧರ್ಮದೂರನಾಗಿ, ಅಧರ್ಮವನ್ನು ಮಾಡುವನು. ಆದರಿಂದ ನರಕವನ್ನು ಪೊಂದಿ, ದುಃಖಿಸುವನು. ಕರ್ಮಫಲವನ್ನುಣ್ಣದೆ ಇರಲಾಗದು. ಇದೆಲ್ಲವನ್ನರಿತು ನೀನು ಅಧರ್ಮವನ್ನು ಮಾಡಿಲ್ಲ. ನ್ಯಾಯಾರ್ಜಿತ ಧನವನ್ನಿತ್ತು, ವಿಪ್ರರಿಗುಣಿಸಿ, ತಣಿಸಿ, ಪುಣ್ಯವಂತನೆನಿಸಿರುವೆ ! ಪರಲೋಕ ಸುಖವನ್ನು ಸಾಧಿಸಿರುವೆ ! ಇಂತಹ ನಿನಗೆ ಧರ್ಮನಾಶಕವಾದ ಯುದ್ಧವು ಶ್ರೇಯಸ್ಕರವಲ್ಲ.

'ಕಾಮ್ಯಕರ್ಮವನ್ನು ಮಾಡಿದವನಿಗೆ ಪರಲೋಕ ಸುಖವು ಸಿಗುವುದಾಗಲಿ, ಅದು ಶಾಶ್ವತವಲ್ಲ. ನಿಷ್ಕಾಮಕರ್ಮವನ್ನು ಮಾಡಿದವನೇ ಮನಶ್ಶುದ್ಧಿ, ಜ್ಞಾನ, ಪ್ರಸಾದಗಳ ದ್ವಾರಾ ಮುಕ್ತಿಯನ್ನು ಹೊಂದಿ ಶಾಶ್ವತ ಸುಖವನ್ನು ಹೊಂದುವನು. ನೀನು ನಿಷ್ಕಾಮಕರ್ಮರತನು. ಕ್ರೋಧದಿಂದಾಗುವ ನರಕವನ್ನೂ, ಕಾಮದಿಂದಾಗುವ ಸ್ವರ್ಗವನ್ನೂ ಬೇಡದೆ, ಮೋಕ್ಷದ ಶಾಶ್ವತ ಸುಖವನ್ನೀವ ವೈರಾಗ್ಯಭಾಗ್ಯವನ್ನು ಬೇಡುವುದುಚಿತವಾಗಲಿ ಬಂಧುನಾಶದಿಂದ ಬರುವ ರಾಜ್ಯವನ್ನಲ್ಲ. ನೀನಿಂತು ನಿಶ್ಚಯಿಸಿ ಕಾಮವನ್ನು ಪರಿತ್ಯಜಿಸಿ, ಮೋಕ್ಷಮಾರ್ಗರತನಾಗು ! ಸತ್ಯ, ದಮ, ದಯಾ—ಧರ್ಮಗಳನ್ನು ಬಿಡಬೇಡ. ರಾಜಸೂಯಾದಿ ಯಜ್ಞಗಳನ್ನು ಮಾಡಿರುವೆ! ಮತ್ತೆ ಪಾಪಕರ್ಮದ ಮಾರ್ಗವನ್ನು ಹಿಡಿಯಬೇಡ. ರಾಜ್ಯಾರ್ಥಗಳಿಗಾಗಿ, ಸರ್ವ ಲೋಕವನ್ನೂ ನಾಶಮಾಡಲು ಎಣಿಸುವರಾದರೆ, ನಿಮಗೆ ದುರ್ಯೋಧನನಿತ್ತ ವನವಾಸವೂ ಧರ್ಮವೇ ಎಂದಾದೀತು !

'ಆಗ ನಮಗೆ ಸಹಾಯವಿದ್ದಿಲ್ಲ ಎನ್ನಲಾಗದು. ಈ ಶ್ರೀಕೃಷ್ಣ, ಸಾತ್ಯಕಿಯರು ಈ ವಿರಾಟ ದ್ರುಪದರು, ಈ ರಾಜನ್ಯರು ಎಂದೂ ನಿಮ್ಮವರೇ ! ಆಗಲೇ ವಿಜೃಂಭಿಸಿ ಹಿರಿಯರನ್ನೂ ಕೊಂದು, ದುರ್ಯೋಧನನ ದರ್ಪವನ್ನು ಏಕೆ ಮುರಿಯಲಿಲ್ಲ? ಇಷ್ಟು ಕಾಲ ಪರರ ಬಲವು ಹೆಚ್ಚುವಂತೆ ಅವಕಾಶವಿತ್ತು, ನೀವು ವನದಲ್ಲಿ ಬಡವಾಗಿದ್ದು

ದೇಕೆ ? ಧರ್ಮಕ್ಕಾಗಿ ! ಆಗ ಧರ್ಮಕ್ಕಾಗಿ ಯುದ್ಧ ಮಾಡದೆ ಹೋದವರಿಗೆ, ಈಗಲೂ ಯುದ್ಧಮಾಡುವುದು ಧರ್ಮವಲ್ಲ.

'ಯುದ್ಧದಲ್ಲಿ ಪ್ರಜ್ಞಾವಂತನೇ ಗೆಲ್ಲುವನೆಂಬ ನಿಶ್ಚಯವಿಲ್ಲ. ಪ್ರಾಜ್ಞನಾದರೂ ಐಶ್ವರ್ಯಭ್ರಷ್ಟನಾಗಲು ದೈವವೇ ಕಾರಣ ; ಯುದ್ಧವಲ್ಲ. ಹಿಂದೆ ಪಾಪಭೀತನಾಗಿ ಮಾಡದ ಕುಕರ್ಮವನ್ನು ಈಗೇಕೆ ಮಾಡಲೆಣಿಸುವೆ ? ಕೋಪವೆಂಬ ವಿಷವನ್ನು ಕಾರಬೇಡ ! ವ್ಯಾಧಿಯಿಲ್ಲದೆ ಕೊಲ್ಲುವ, ಪಿತ್ತಾದಿ ವಿಕಾರಗಳಿಂದ ಪುಟ್ಟದ, ತಲೆ ಕೆಡಿಸುವ, ಕೀರ್ತಿಯನ್ನಳಿಸುವ, ಪಾಪವನ್ನು ಬೆಳಿಸುವ, ತಾಪವನ್ನು ಹೆಚ್ಚಿಸುವ ಕೋಪವಿಷವನ್ನು ನುಂಗು ! ಶಾಂತನಾಗು ! ಪಾಪಮೂಲವಾದ ರಾಜ್ಯಾದಿ ಭೋಗ ಗಳಿಗಾಶೆ ಪಡಬೇಡ ! ಭೀಷ್ಮ ದ್ರೋಣಾಶ್ವತ್ಥಾಮರು, ಕೃಪ ಶಲ್ಯರು, ಭೂರಿಶ್ರವ ಬಾಹ್ಲಿಕರು, ನಿನಗೆ ಹಿರಿಯರು. ದುರ್ಯೋಧನ ವಿಕರ್ಣ ಪ್ರಮುಖರು ಬಂಧುಗಳು. ಅವರನ್ನೆಲ್ಲ ಕೊಲ್ಲದೆ ರಾಜ್ಯಲಾಭವಿಲ್ಲ. ಕೊಂದು ನೀನು ಪೊಂದುವ ಸುಖವಾದರೂ ಉಂಟೇ ? ಹೇಳು ! ಸಾಗರಾಂತವಾದ ಭೂಮಂಡಲವನ್ನು ಗೆಲ್ಲುವೆ ಆಗಲಿ ಜರಾಮೃತ್ಯುಗಳನ್ನು ಗೆಲ್ಲುವೆಯಾ ? ನಿನ್ನ ಸಚಿವಾದಿಗಳ ಮಾತಿನಿಂದ ಯುದ್ಧ ಮಾಡಬೇಡ ! ಅವರಿಗೆ ಬೇಕಾದುದು ಅರ್ಥ ; ಧರ್ಮವಲ್ಲ. ಅವರಿಗೆ ಬೇಕಾದು ದನ್ನಿತ್ತು, ಅವರನ್ನು ಕಳಿಸಿಬಿಡು ! ನಿನ್ನ ಧರ್ಮಮಾರ್ಗವನ್ನು ನೀನು ರಕ್ಷಿಸಿಕೋ ! ಮೋಕ್ಷಮಾರ್ಗದಲ್ಲಿರುವೆ ! ಅದನ್ನು ಬಿಟ್ಟು ಕೆಡಬೇಡ !' ಎಂದನು.

ಧರ್ಮರಾಜನು—'ಧರ್ಮವೇ ಪುರುಷಾರ್ಥಗಳಲ್ಲಿ ಉತ್ತಮವೆಂದೆ ! ನಿಜ ! ಧರ್ಮಾಧರ್ಮ ಸ್ವರೂಪವನ್ನು ತಿಳಿದು, ನಾನು ಅಧರ್ಮದಲ್ಲಿ ನಡೆದಿದ್ದರೆ, ನನ್ನನ್ನು ನಿಂದಿಸಬಹುದಾಗಿದೆ. ಪಾಖಂಡಿಗಳಂತೆ ಧರ್ಮವನ್ನು ಅಧರ್ಮವೆಂದು ತಿಳಿದಿಲ್ಲ. ಅಧರ್ಮವನ್ನು ಧರ್ಮವೆಂದೂ ತಿಳಿದಿಲ್ಲ. ನನ್ನನ್ನು ನಿಂದಿಸುವುದು ಉಚಿತವಲ್ಲ. ಪಾಖಂಡಿಗಳ ದೇಶದಲ್ಲಿ ಭಸ್ಮಧಾರಣಾದಿ ಅಧರ್ಮವು ಧರ್ಮವೆನಿಸುವುದು ಮತ್ತು ಊರ್ಧ್ವಪುಂಡ್ರ ಧಾರಣಾದಿ ಧರ್ಮವೂ ಅಧರ್ಮವೆನಿಸುವುದು. ವಿವೇಕಿಗಳ ದೇಶ ದಲ್ಲಿ ಹಾಗಲ್ಲ. ಧರ್ಮಾಧರ್ಮಗಳನ್ನವರು ಪರಿಶೀಲಿಸಿ ನಿಶ್ಚಯ ಜ್ಞಾನವಂತ ರಾಗಿರುವರು. ಅಂತು ತಿಳಿದು ಧರ್ಮವನ್ನು ಬಿಡದೆ ನಡೆಸುವ ವಿದ್ವಾಂಸರಿಂದ ಧರ್ಮ ಸ್ವರೂಪವನ್ನು ತಿಳಿಯಬಹುದಾಗಿದೆ. ಅನಾಪತ್ತಿನಲ್ಲಿ ನಿಯತ ಧರ್ಮವನ್ನು ಬಿಡ ಲಾಗದು. ಆಪತ್ಸಮಯದಲ್ಲಿ ಸಾಧುಜನರು ಕೂಡ ಪಾಷಂಡಿಲಿಂಗವನ್ನು ಧರಿಸುವ ದುಂಟು. ಮ್ಲೇಚ್ಛದೇಶದಲ್ಲಿ ಸಾಧುಗಳು ಸ್ವಶಿರವನ್ನು ಬೋಳಿಸಿ, ಶೂನ್ಯಲಲಾಟ ರಾಗಿ ತಿರುಗುವುದನ್ನು ನೋಡು ! ಆ ಸಾಧುಗಳಿಗೆ ಅಂತಹ ಅಧರ್ಮವೂ ಧರ್ಮ ವೆನಿಸುವುದು. ಅಧರ್ಮವಾದರೂ ಆಪತ್ತಿನಲ್ಲಿ ನಡೆಸಿದುದರಿಂದ ಧರ್ಮಪ್ರಾಯ ವಾಗುವುದು. ಅದರಿಂದ ನರಕಾದ್ಯನರ್ಥವಾಗದು. ಅಂತೆಯೇ ಆಪತ್ತಿನಲ್ಲಿ ಸಿಕ್ಕಿರುವ ನಮಗೆ ಬಂಧುಮಿತ್ರರ ವಧವು ಪಾಪವಾಗುವುದಿಲ್ಲ.

'ಜೀವಿಕಾ ಹೇತು ಮೂಲ ಧನವು ಸರ್ವಾತ್ಮನಾ ನಾಶವಾದಾಗ ಆಪದ್ಧರ್ಮ ವನ್ನು ಹಿಡಿದು ಜೀವಿಸಬೇಕು. ಆಪತ್ತಿಲ್ಲದಿರುವಾಗ ಆಪದ್ಧರ್ಮದಿಂದ ಜೀವಿಸುವವನು, ಆಪತ್ತಿನಲ್ಲಿ ನಿಯತ ಧರ್ಮವನ್ನೇ ಸಾಧಿಸಲು ನೋಡುವವನು, ಇವರಿಬ್ಬರೂ ನಿಂದನೀಯರಾಗುವರು. ಆಪತ್ತಿನಲ್ಲಿದ್ದೂ ನಾನು ಯುದ್ಧವನ್ನು ಮಾಡದಿದ್ದರೆ ಲೋಕವು ನನ್ನನ್ನು ನೋಡಿ, ನಗುವುದಿಲ್ಲವೇ ಹೇಳು? ನಮ್ಮ ರಾಜ್ಯವನ್ನು ನಮಗಿತ್ತರೆ ನಾವು ಯುದ್ಧವನ್ನೇಕೆ ಅವಲಂಬಿಸುವೆವು? ನಿತ್ಯ ನಿಯತಕರ್ಮ ಲೋಪವಾಗದಿರಲು ಕೊನೆಗೆ ಭಿಕ್ಷಾವೃತ್ತಿಯನ್ನು—ಸ್ವವೃತ್ತಿ ಅಲ್ಲದಿದ್ದರೂ—ಅವಲಂಬಿಸಬೇಕಾಗುವುದು. ಇಲ್ಲದಿರೆ ಕರ್ಮಲೋಪ ಪ್ರಾಣನಾಶಗಳಾಗುವವು. ಅವನ ಕುಟುಂಬವು ಪೀಡಿತ ವಾಗುವುದು. ನಾವೂ ಭೂಮಿ ಶಸ್ತ್ರಗಳಿಂದ ಜೀವಿಸುವ ಕ್ಷತ್ರಿಯರಲ್ಲವೇ ? ಭೂಮಿ ಯನ್ನೇ ಕೊಡದಿರೆ ನಾವು ಜೀವಿಸುವುದೆಂತು ? ಜೀವನಕ್ಕಾಗಿ ಶಸ್ತ್ರಪಿಡಿದರೆ ತಪ್ಪಾಗುವುದಿಲ್ಲ.

'ಆಪತ್ತಿನಲ್ಲಿ ಅನ್ಯಧರ್ಮವನ್ನು ಆಶ್ರಯಿಸುವುದೂ ಅನಿವಾರ್ಯವಾಗಿರಲು ರಾಜನ್ಯರಿಗೆ ಸಂಗ್ರಾಮವು ಸ್ವಧರ್ಮವೇ ಆಗಿದೆ. ಬ್ರಾಹ್ಮಣರಿಂದ ಚಂಡಾಲ ಪರ್ಯಂತ ರಾಗಿರುವ ಸರ್ವರಿಗೂ ಶ್ರೀಹರಿಭಕ್ತಿಯೂ, ಯಥಾಯೋಗ್ಯವಾಗಿ ಪೂಜೆಯೂ ಧರ್ಮವು. ಶ್ರೀಹರಿಜ್ಞಾನದಿಂದಲೇ ಸಕಲ ಪುರುಷಾರ್ಥ ! ಶ್ರೀಶನೇ ತಂದೆ, ಅವನೇ ತಾಯಿ, ಅವನೇ ಗುರುವು. ಸರ್ವೋತ್ತಮನಾದ ಶ್ರೀಹರಿಯನ್ನು ಪೂಜಿಸಲು ಸ್ವಧರ್ಮಾನುಷ್ಠಾನವು ಆವಶ್ಯಕ ಸಾಧನವಹಾದೆ. ರಮಾದಿದೇವತೆಗಳೂ ವಿಷ್ಣುಭಕ್ತ ರಾಗಿ ಪೂಜಾರ್ಹರಾಗಿರುವರು. ಶ್ರೀಹರಿಯು ಸ್ವತಂತ್ರನು ; ಸರ್ವಗುಣಪೂರ್ಣನು; ನಿರ್ದೋಷನು ; ಸೀಮಾರಹಿತಮಹಾಮಹಿಮನು. ತಾರತಮ್ಯಕ್ಕೆ ತಕ್ಕಂತೆ ಪೂಜಿಸು ವವರಿಗೆ ಶ್ರೀಹರಿಯು ಮುಕ್ತಿಯನ್ನು ಕೊಡುವನು. ಅವನ ಪ್ರೇರಣೆ ಮುಖ್ಯ. ಅವನೇ ಹೇಳಿದ ಧರ್ಮವನ್ನು ಬಿಟ್ಟವನಿಗೆ ಶ್ರೀಹರಿಯು ದುಃಖವನ್ನೇ ಕೊಡುವನು. ಕ್ಷತ್ರಿಯರಿಗೆ ದುಷ್ಟರಲ್ಲಿ ಅತಿಕ್ಷಮೆಯು ಧರ್ಮವಲ್ಲ; ದುಷ್ಟರನ್ನು ಕ್ಷಮಿಸುವುದು ಪಾಪಹೇತುವಾಗಿದೆ. ಯುದ್ಧದಲ್ಲಿ ದುಷ್ಟರನ್ನು ಸಂಹರಿಸಿ, ಶ್ರೀಹರಿಪೂಜೆಯೆಂದು ಯಾವನು ಅರ್ಪಿಸುವನೋ, ಬಲವಂತರಾದ ಪಾಪಿಗಳ ಪೀಡೆಯಿಂದ ಸುಜನರನ್ನು ಯಾವನು ಕಾಪಾಡುವನೋ, ಅವನು ಮುಕ್ತಿಯಲ್ಲಿ ಆನಂದವೃದ್ಧಿಯನ್ನು ಹೊಂದು ವನು. ಶ್ರೀವಿಷ್ಣು ಪ್ರೀತಿಗಾಗಿ ನಾವು ಕೌರವರನ್ನು ಸಂಹರಿಸಿದರೆ ನಮಗೆ ಪಾಪವಿಲ್ಲ. ದ್ಯೂತರತರು, ಕಪಟಿಗಳು, ಶ್ರೀಶದ್ವೇಷಿಗಳು ಆದ ಧಾರ್ತರಾಷ್ಟ್ರರು ವಧಾರ್ಹರೇ ಸರಿ; ಆದರೂ ಯುದ್ಧವೇ ಬೇಕೆಂಬ ಹಠವಿಲ್ಲ ನಮಗೆ. ಅಧರ್ಮದಿಂದ ಬರುವ ಸ್ವರ್ಗ ಲೋಕಸುಖವೂ ಬೇಡ ! ನಮ್ಮ ಪೂರ್ವಜರು ನಡೆದ ಧರ್ಮಮಾರ್ಗವನ್ನು ನಾನು ಬಿಟ್ಟಿಲ್ಲ. ನಾನು ನಾಸ್ತಿಕನಲ್ಲ. ಧರ್ಮಫಲಪ್ರದನು, ನೀತಿಕುಶಲನು, ಸುಜನ-ಬ್ರಾಹ್ಮಣರ ದೇವನು, ಸರ್ವಜ್ಞನು, ರಾಜಾಧಿರಾಜವಂದ್ಯನು ಆದ ಶ್ರೀಕೃಷ್ಣನು ನನಗೆ ಶಾಸಕನಾಗಿರುವನು. ನಾನು ಸಾಮವನ್ನು ಬಿಟ್ಟು ಮಾತಾಡಿದ್ದರೆ ನಿಂದಿಸು.

ಅಥವಾ ಸ್ವಧರ್ಮವಾದ ಯುದ್ಧವನ್ನು ಬಿಟ್ಟೆನೆಂದರೆ ನಿಂದಿಸು ! ಸಾಮ ಯುದ್ಧ ಗಳೆರಡೂ ನನಗೆ ಸಮ್ಮತವೇ ! ಆರಿಸಿಕೊಳ್ಳುವುದು ಕೌರವರ ಕೈಲಿದೆ.

'ಕಾಶಿರಾಜಪುತ್ರನಾದ ಬಭ್ರುವು ಶ್ರೀಕೃಷ್ಣನಿಗೆ ತಮ್ಮನೂ, ಅನುರಕ್ತನೂ ಆಗಿ ಸಕಲಸಂಪತ್ಸಮೃದ್ಧನಾಗಿರುವನು. ಉಭಯವಂಶಹಿತಕರನಾದ ಕೇಶವನು ನನ್ನ ಮಾತಿನ ಯುಕ್ತಾಯುಕ್ತತೆಗಳನ್ನು ನಿರ್ಣಯಿಸಿ ಹೇಳಲಿ ! ಅದರಂತೆ ನಡೆಯಲು ನಾನು ಸಿದ್ಧನಿರುವೆನು. ಅವನಂತೆ ನಡೆದು ಶೈನೇಯ, ಚೇದಿ, ವೃಷ್ಣಿ, ಸೃಂಜಯಾದಿ ರಾಜನ್ಯರು ಶತ್ರುಗಳನ್ನು ಸದೆಬಡಿದು, ಮಿತ್ರರನ್ನಾನಂದಪಡಿಸುತ್ತಿರುವರು. ಅವನನ್ನು ನಂಬಿ ಕೆಟ್ಟವರಿಲ್ಲ. ಪ್ರಿಯತಮನು, ನಿತ್ಯನಿರ್ದೋಷನು, ಕರ್ಮನಿಶ್ಚಯ ನಿಪುಣನು, ವಿದ್ವದ್ವಂದ್ಯನು ಆದ ಶ್ರೀಕೃಷ್ಣನ ವಚನದಂತೆ ನಾವು ನಡೆಯುವೆವು. '

ಆಗ ವಾಸುದೇವನು ಸಂಜಯನನ್ನು ನೋಡಿ ಇಂತೆಂದನು—' ಸಂಜಯ ! ಪಾಂಡವರು ಸುಖವಾಗಿ ಬದುಕಿ ಬಾಳಬೇಕೆಂದು ನಾನು ಕೋರುವೆನು. ಬಹು ಪುತ್ರನಾದ ಧೃತರಾಷ್ಟ್ರನೂ ಚನ್ನಾಗಿರಲಿ ! ನಿತ್ಯವೂ ನಾನು ಆಶಾಸಿಸುವುದು ಸಂಧಿ ಯನ್ನೇ ! ಪಾಂಡವರ ಪುರುಷಾರ್ಥಗಳು ಸಿದ್ಧಿಸಿದರೆ ಸಾಕು ಯುದ್ಧವಾರಿಗೆ ಬೇಕು ? ಧರ್ಮರಾಜನು ಕ್ಷಮೆಯ ಪರಾಕಾಷ್ಠೆಯನ್ನು ಮುಟ್ಟಿರುವನು. ಇನ್ನು ಅಧರ್ಮವನ್ನವನು ಸಹಿಸನು ಅಂತಾದರೆ ಕಲಹವು ತಪ್ಪದೆಂದು ತಿಳಿ ! ನಾನಾಗಲಿ, ಪಾಂಡವರಾಗಲಿ ಧರ್ಮವನ್ನು ಬಿಡುವವರಲ್ಲವೆಂದು ತಿಳಿದು ನಮಗೇಕೆ ಧರ್ಮೋಪದೇಶವನ್ನು ನೀಡುವೆ ? ಸ್ವಧರ್ಮಪಾಲಕನಾಗಿ ಕಾದುವ ಧರ್ಮರಾಜನ ತಪ್ಪಿಲ್ಲ.

'ಗೃಹಸ್ಥಧರ್ಮದಿಂದ ನಡೆವ ಸುಜನನು ಯಜ್ಞಾದಿಗಳನ್ನು ನಡೆಸಿ, ಜ್ಞಾನವನ್ನು ಸಂಪಾದಿಸಿ, ಸ್ವಧರ್ಮದಿಂದ ದೇವನನ್ನು ಪೂಜಿಸುತ್ತ ಮುಕ್ತನಾಗುವನು. ಭೋಜನ ಕರ್ಮ ನಡೆಯಲು ಭೋಜನ ವಿಷಯ ಜ್ಞಾನಮಾತ್ರ ಸಾಲದು. ಜ್ಞಾನ ಕರ್ಮ ಗಳೆರಡೂ ಆವಶ್ಯಕವೆಂದು ತಿಳಿ! ಕರ್ಮಾನುಕೂಲವಾದ ವಿದ್ಯೆ ಫಲಿಸುವುದು ಕರ್ಮ ಪ್ರತಿಕೂಲವಲ್ಲ. ಕರ್ಮಸಾಧಕ ವಿದ್ಯೆಯು ಫಲವತ್ತಾಗಿದೆ. ನೀರು ಕುಡಿದವನಿಗೆ ಬಾಯಾರಿಕೆ ಅಡಗುತ್ತದೆ. ಕರ್ಮವನ್ನು ಬಿಟ್ಟವನಿಗೆ ಗತಿಯಿಲ್ಲ. ಸ್ವವಿಹಿತಕರ್ಮವನ್ನು ಮಾಡಿದವನು ಮನಃಶುದ್ಧಿಶ್ರವಣಾದಿಗಳಿಂದ ಜ್ಞಾನವಂತನಾಗಿ ಭಗವತ್ಪ್ರಸಾದದಿಂದ ಮುಕ್ತನಾಗುವನು. ಅಪರೋಕ್ಷಜ್ಞಾನಿಯೂ ವಿಹಿತಕರ್ಮವನ್ನು ಬಿಡಲಾಗದು. ಕರ್ಮನಿಯಾಮಕನಾದ ಭಗವದಾಜ್ಞೆಯಿಂದ ದೇವತೆಗಳು ಬೆಳಗುತ್ತಿರುವರು. ಸೂರ್ಯ, ವಾಯು, ಅಗ್ನಿ, ಪೃಥಿವೀ, ನದೀ, ಮೇಘ, ಕಾಲಗಳು, ಇಂದ್ರ, ಗುರು, ಯಮರು, ಋಷಿಗಳು ಎಲ್ಲರೂ ಭಗವಂತನಿಂದ ವಿಹಿತವಾದ ಕರ್ಮದಲ್ಲಿ ತೊಡಗಿ, ಲೋಕಹಿತಸಾಧಕರಾಗಿರುವರು. ಇಂತು ವಿಹಿತಕರ್ಮವನ್ನು ಮಾಡಲು ಇಚ್ಛಿಸುವ ಧರ್ಮರಾಜನನ್ನು ಕೌರವ ಪಕ್ಷಪಾತಿಯಾಗಿ, ವಿದ್ವಾಂಸನಾದ ನೀನು ನಿಂದಿಸಬಹುದೇ ? ವಿದ್ಯಾ, ಧರ್ಮ, ಶೌರ್ಯಗಳು ಮೂರ್ತಿಪೆತ್ತು ನಿಂತಿರುವ

ಧರ್ಮರಾಜನಿಗೆ ಇನ್ನೊಬ್ಬನಿಂದ ಕಲಿಯಬೇಕಾದುದಿಲ್ಲ. ಪುಷ್ಕಲ ರಥ ಗಜ ತುರಗ ಭಟರಿರುವ ಪಾಂಡವರಿಗೆ ಇನ್ನೊಬ್ಬನಿಂದ ಸೋಲಿನ ಭಯವಿಲ್ಲ.

'ಕೌರವರಾಜನು ರಾಜ್ಯವಿತ್ತರೇನೇ ಸಾವುದ ಮಾತು. ಭೀಮಸೇನನ ಸೈನ್ಯವನ್ನು ವಿಜೃಂಭಿಸದ ಮುನ್ನ ನಿಲ್ಲಿಸಿ, ಯುದ್ಧದಲ್ಲಿ ಕೌರವರು ಸಾಯದಂತೆ ಮಾಡುವಷ್ಟು ಪುಣ್ಯವನ್ನು ಧೃತರಾಷ್ಟ್ರಾದಿಗಳು ಮಾಡಿಲ್ಲವೆಂದು ತೋರುತ್ತಿದೆ. ಒಂದು ವೇಳೆ ಪಾರ್ಥರು ಕ್ಷಾತ್ರಧರ್ಮರತರಾಗಿ, ಯುದ್ಧಮೃತರಾದರೂ ಶ್ರೇಯಸ್ಕರವೇ ! ತಪ್ಪಲ್ಲ. ಸ್ವಧರ್ಮವಾದ ದುಷ್ಟವಧೆಯು ಮೇಲೋ, ಭಿಕ್ಷೆ ಬೇಡಿಸುವ ಸಂಧಿಯೇ ಮೇಲೋ ನೀನೇ ಆಲೋಚಿಸಿ ಹೇಳು ! ನಿನ್ನ ಮಾತೇ ನಡೆಸುವೆವು.

'ಬ್ರಾಹ್ಮಣನು ವೇದಗಳನ್ನೋದಿ, ಯಜ್ಞಗಳನ್ನು ಮಾಡಬೇಕು. ಯೋಗ್ಯ ಶಿಷ್ಯರಿಗೆ ಉಪದೇಶಿಸಬೇಕು. ಯಾಜ್ಯರಿಂದ ಯಜ್ಞ ಮಾಡಿಸಬೇಕು. ವಿಹಿತ ಪ್ರತಿಗ್ರಹವನ್ನು ಸ್ವೀಕರಿಸಿ, ತಾನೂ ದಾನಶೀಲನಾಗಿ ಪಾತ್ರರನ್ನರಿತು ಪೂಜಿಸಬೇಕು. ರಾಜನ್ಯನು ಪ್ರಜರನ್ನು ರಕ್ಷಿಸಿ, ಅಪ್ರಮತ್ತನಾಗಿ ಧರ್ಮವನ್ನವರಿಂದ ನಡೆಯಿಸಬೇಕು. ವೇದವನ್ನು ಓದಿ, ಯಜ್ಞದಾನಶೀಲನಾಗಿರಬೇಕು. ವೈಶ್ಯನು ವೇದಾಧ್ಯಯನ, ಕೃಷಿ, ಗೋರಕ್ಷಣ, ವ್ಯಾಪಾರಗಳನ್ನು ಮಾಡುತ್ತಾ, ಪುಣ್ಯಸಂಪಾದನೆಗಾಗಿ ದಾನ-ವ್ರತನಾಗಿರಬೇಕು. ಶೂದ್ರನು ಸ್ವಯೋಗ್ಯ ಶಿಲ್ಪಾದಿ ವಿದ್ಯಾರತನಾಗಿ, ಆಲಸ್ಯರಹಿತನಾಗಿ, ಯಜ್ಞಾಧ್ಯಯನದೂರನಾಗಿ, ಶ್ರೀಪರಬ್ರಹ್ಮ ಸೇವೆಯನ್ನು ಮಾಡಬೇಕು. ರಾಜನಾದವನು ಮೇಲ್ಕಂಡ ನಾಲ್ಕು ವರ್ಣದ ಧರ್ಮವ್ಯವಸ್ಥೆಯು ಕೆಡದಂತೆ, ಶಾಸಕನಾಗಿ, ಶಿಷ್ಟರಿಂದ ಧರ್ಮೋಪದೇಶಗಳನ್ನು ಕೊಡಿಸಬೇಕು. ಇಂತಿರುವ ರಾಜನು ಧರ್ಮಾತ್ಮನೆಂದು ತಿಳಿದು, ಅವನಿಗೆ ಅಮಂಗಲವನ್ನು ಯಾರೂ ಕೋರಬಾರದು.

'ಪರರು ದಂಡೆತ್ತಿ ಮುತ್ತಿದಾಗ ಕೋಪವು ಪುಟ್ಟಿ, ತನ್ನ ಸೈನಿಕರನ್ನು, ಶತ್ರುಗಳನ್ನು ಸಂಹರಿಸಲು ಪ್ರೇರಿಸುವ ರಾಜನು ಅಧರ್ಮಿಯಾಗಲಾರನು. ಕವಚ ಖಡ್ಗ ಧನುಸ್ಸುಗಳನ್ನು ಇಂದ್ರನು ದಸ್ಯು ಸಂಹಾರಕ್ಕಾಗಿ ನಿರ್ಮಿಸಿ, ಅಧರ್ಮವನ್ನು ತುಳಿದಿಟ್ಟನು. ದಸ್ಯುಪ್ರಾಯರಾದ ದುರ್ಯೋಧನಾದಿಗಳನ್ನು ಅದೇ ಆಯುಧಗಳಿಂದ ಧರ್ಮರಾಜನು ಸಂಹರಿಸಿದರೆ ಅದು ಅಧರ್ಮವಲ್ಲ, ಪುಣ್ಯವೇ ಆಗುವುದು. ಪಿತ್ರ್ಯವಾದ ಪಾಂಡವರ ಸಂಪತ್ತನ್ನು ವಂಚಿಸಿ ಹರಿಸಿದ ದುರ್ಯೋಧನನು ಕಳ್ಳನಾಗಿ, ರಾಜಧರ್ಮವನ್ನು ಕೆಡಿಸಿದನು. ಅವನ ಪರಿವಾರವು ಅವನಂತೇ ಕಳ್ಳರಾಗಿರುವರು. ಕಳ್ಳನು ನೋಡದಂತೆ ಕದಿಯುವನು. ನೋಡಿದರೂ ಬಲಾತ್ಕಾರದಿಂದ ಹೊಡೆದು, ವಂಚಿಸಿ ಕದಿಯುವನು. ಸಂಜಯ ! ನಿಮ್ಮ ದುರ್ಯೋಧನನಿಗೂ ಕಳ್ಳನಿಗೂ ಇರುವ ವ್ಯತ್ಯಾಸವಾದರೂ ಏನು ? ಲೋಭ ಕ್ರೋಧಗಳಿಂದ ತುಂಬಿ, ರಾಜ್ಯಭಾಗವನ್ನು ಕೊಡದ ದುರ್ಯೋಧನನನ್ನು ಕೊಂದು ಇವರು ರಾಜ್ಯವನ್ನು

ಪಡೆಯದೇ ಇರುವರೇ ? ನನ್ನನ್ನು ಕೇಳಿದರೆ ಬೇಡಿ ಪಡೆವ ರಾಜ್ಯಕ್ಕಿಂತ ಕಾದಿ ಪಡೆವ ಸ್ವರ್ಗವೇ ಲೇಸು !

'ನೀನು ನಮಗೆ ಹೇಳಿದ ಉಪದೇಶವನ್ನು ಕೌರವರಾಜ ಸಭೆಯಲ್ಲಿ ಕೊಡು ! ಅವರು ವನವಾಸ ಮಾಡಲಿ ! ನಾವು ರಾಜ್ಯವನ್ನಾಳುವೆವು. ಯುದ್ಧ ವಾರಿಗೆ ಬೇಕು ? ಸಂಧಿಯೇ ಆಗಲಿ ! ನೀನು ಹೇಳುವೆ ! ಆದರೆ ಆ ಪಾಪಾತ್ಮರು ನಿನ್ನ ಮಾತಿಗೆ ಕಿವಿ ಕೊಡುವರೇ ? ಮೃತ್ಯುದೇವಿಯ ವದನಗಹ್ವರದಲ್ಲಿರುವವರಿಗೆ ಹಿತನುಡಿ ರುಚಿಸುವುದಿಲ್ಲ. ಸಭಾಮಧ್ಯದಲ್ಲಿ ಸೆಳೆಯಲ್ಪಟ್ಟು ಗೋಳಿಡುವ ಪತಿವ್ರತೆಯನ್ನು ಉಪೇಕ್ಷಿಸದೆ, ಆ ದುಷ್ಟರನ್ನು ನಿವಾರಿಸಿದ್ದರೆ, ನಾನು ಪ್ರೀತನಾಗುತ್ತಿದ್ದೆನು ; ಧೃತರಾಷ್ಟ್ರನೂ ಮಕ್ಕಳನ್ನು ಳಿಸಿಕೊಳ್ಳುತ್ತಿದ್ದನು. ಅನಾಥಳಂತೆ ಅಳುವ ದ್ರೌಪದಿಯ ಕಣ್ಣೀರನ್ನೊಬ್ಬನಾದರೂ ಒರೆಸಲು ಯತ್ನಿಸಿದನೇ ? ಎಷ್ಟು ಜನ ಹಿರಿಯರಿದ್ದೇನು ಮಾಡಿದರು ? ಒಬ್ಬ ವಿದುರನು ಮಾತ್ರ ಧರ್ಮವನ್ನು ನಿರ್ಭಯವಾಗಿ ನುಡಿದು, ನನಗೆ ಪ್ರೀತಿಪಾತ್ರನಾಗಿರುವನು. ಇರಲಿ ! ಸಂಜಯಾ ! ನೀನಾ ಸಭೆಯಲ್ಲಿ ನಡೆದ ಅಧರ್ಮವನ್ನು ಅಧರ್ಮವೆಂದು ಸಾರದೆ, ಇಂದು ಇಲ್ಲಿ ಪಾಂಡವರಿಗೆ ಧರ್ಮೋಪದೇಶಕನಾಗಿ ಬಂದೆಯಾ ? ಕೃಷ್ಣೆ, ಅದ್ಭುತ ಪಾತಿವ್ರತ್ಯ ಮಹಿಮೆಯಿಂದ ನೌಕೆಯು ಯಾತ್ರಿಕರಿಂದ ಕೂಡಿ ದಡ ಸೇರುವಂತೆ ತನ್ನನ್ನೂ, ತನ್ನ ಪತಿಗಳನ್ನೂ ದಾಸ್ಯಭಾವದಿಂದ ಬಿಡಿಸಿದಳು.

'ದಾಸಿಯಾದೆ ! ದುರ್ಯೋಧನನ ಮನೆ ಸೇರು !' ಎಂದಾಡಿದ ಸೂತಪುತ್ರನ ವಾಗ್ಬಾಣವು ಅರ್ಜುನನ ಹೃದಯದಲ್ಲಿ ನಟ್ಟು ನಿಂತಿದೆ. 'ಷಂಡತಿಲರು ಪಾಂಡವರು ಹಾಳಾದರು ; ನರಕದ ಪಾಲಾದರು' ಎಂದು ಅಣಕಿಸಿದ ದುಶ್ಶಾಸನನ ಕಟುವಚನ ಗಳನ್ನು ಭೀಮನು ಮರೆಯಲಾಗುವುದೇ ? 'ನಕುಲನನ್ನು ಸೋತೆ ! ಕೃಷ್ಣೆಯ ನ್ನೊಡ್ಡು !' ಎಂದು ನುಡಿದ ಮಾಯ ಶಕುನಿಯನ್ನು ಧರ್ಮಜನು ಕ್ಷಮಿಸುವುದೆಂತು? ಎಲ್ಲವೂ ನಿನಗೆ ತಿಳಿದಿದೆ. ಸಂಧಿಯನ್ನು ಸಾಧಿಸಲು ನಾನೇ ಬರಬೇಕೆಂದಿರುವೆನು. ಕೆಲಸವು ಕೆಡುತ್ತಲಿದೆ ! ಪಾಂಡವರಿಗೆ ಅವರ ಭಾಗವನ್ನು ಕೊಡಿಸಿ, ಕೌರವರಿಗೆ ವೈಷಮ್ಯ ಲೋಭಗಳನ್ನು ಕಳೆಯುವಂತಾದರೆ, ನನಗೂ ಒಳ್ಳೆಯ ಕಾರ್ಯ ಮಾಡಿ ದಂತಾಗುವುದು. ಮತ್ತು ಕೌರವರೂ ಮೃತ್ಯುಪಾಶದಿಂದ ಮುಕ್ತರಾಗುವರು. ಕವಿ ಜನಸಮ್ಮತವು, ಧರ್ಮಸಮ್ಮತವು, ಅರ್ಥ ಕಾಮ ಸಾಧಕವು, ಹಿಂಸಾದಿ ಪಾಪ ಬಾಧಕವು ಆದ ನನ್ನ ಮಾತನ್ನು ಕೇಳಲಿ ಕೌರವರು. ಹಿರಿಯರೂ 'ಸರಿ' ಎಂದು ಮೆಚ್ಚುವಂತಾಗಲಿ ! ಹಾಗಾಗದಿರೆ ಕೇಳು ! ಭೀಮಸೇನನ ಗದೆ, ಅರ್ಜುನನ ಬಿಲ್ಲು ಆ ಕಾರ್ಯವನ್ನು ಸಾಧಿಸುವುವು. ಆಗ ಭೀಮನ ನೆನಪಾಗುವುದು ದುರ್ಮದಾಂಧ ನಾಗಿರುವ ಕೌರವರಾಜನಿಗೆ !

'ಸುಯೋಧನನೆಂಬ ಕ್ರೋಧವಿಷವೃಕ್ಷಕ್ಕೆ, ಕರ್ಣನೇ ಬಲಿತ ಶಾಖೆ, ಶಕುನಿಯೇ ಕೊಂಬೆ, ದುಶ್ಶಾಸನನೇ ಫಲಪುಷ್ಪಗಳು, ಧೃತರಾಷ್ಟ್ರನೇ ಅದರ ಮೂಲ. ಇನ್ನು

ಯುಧಿಷ್ಠಿರನೆಂಬ ಧರ್ಮಾವೃತ ವೃಕ್ಷಕ್ಕೆ ಭೀಮನೇ ಬಲಿತ ಶಾಖೆ, ಅರ್ಜುನನೇ ಕೊಂಬೆ, ನಕುಲ ಸಹದೇವರೇ ಫಲಪುಷ್ಪಗಳು, ಮೂಲವಾಗಿರುವೆನು ನಾನು, ಮೂಲವಾಗಿವೆ ವೇದಗಳು, ಮೂಲವಾಗಿರುವರು ಬ್ರಾಹ್ಮಣರು. ಬಹು ಮೂಲವಾದ ಪಾಂಡವ ಕಲ್ಪವೃಕ್ಷವನ್ನು ಯಾರೂ ಕಡಿಯಲಾರರು.

'ವನದಂತೆ ಸಪುತ್ರನಾದ ಧೃತರಾಷ್ಟ್ರ! ವ್ಯಾಘ್ರಗಳಂತೆ ಪಾಂಡವರು. ಪಾಂಡವರನ್ನಾಶ್ರಯಿಸಿದರೇನೇ ಕೌರವರಿಗೆ ಜೀವನವಿಲ್ಲದಿರೆ ಇಲ್ಲ. ನಿರ್ವ್ಯಾಘ್ರವಾದ ವನವನ್ನು ಎಲ್ಲರೂ ಕಡಿಯುವರು. ವನವೂ ವ್ಯಾಘ್ರವನ್ನು ತನ್ನಲ್ಲಿಟ್ಟು ಪಾಲಿಸಬೇಕಾಗಿದೆ. ಲತೆಗಳಂತೆ ಇರುವ ಕೌರವರು ವೃಕ್ಷಗಳಂತಿರುವ ಪಾಂಡವರನ್ನವಲಂಬಿಸಿ ಬದುಕಬೇಕು. ಪಾರ್ಥರು ಸೇವೆಮಾಡಿ ದೊಡ್ಡಪ್ಪನನ್ನು ಮೆಚ್ಚಿಸಲೂ ಸಿದ್ಧರು. ಯುದ್ಧಮಾಡಿ ಕೌರವರನ್ನು ನಿರ್ಮೂಲಿಸಲೂ ಸಿದ್ಧರಿರುವರು. ಬಂಧುತ್ವವನ್ನೆಣಿಸಿ, ಸಂಧಿ ಬೇಡುವ ಪಾಂಡವರು ನಿರ್ಬಲರಲ್ಲ. ಅಂತಹ ವೀರರಿಂದ ಸೆಣಸಾಟವು ಒಳಿತಲ್ಲ. ಇದೆಲ್ಲವನ್ನೂ ಅವರಿಗೆ ತಿಳಿಸು!'

ಆ ಮಾತನ್ನಾಲಿಸಿ ಸಂಜಯನು ನಿರ್ವಿಣ್ಣನಾದನು. 'ದೇವ ದೇವ! ಜನಾರ್ದನ! ಕ್ಷಮಿಸೆನ್ನ ಅವಿನಯವನ್ನು! ಧರ್ಮರಾಜ! ನಿನಗೆ ಶುಭವಾಗಲಿ! ಹೋಗಿಬರುವೆನು, ಅಭಿಮಾನಾವೇಗದಿಂದ ನಾನಾಡಿದ ಬಿರುನುಡಿಗಳನ್ನು ಕ್ಷಮಿಸು! ನಿಮ್ಮೆಲ್ಲರ ಅಪ್ಪಣೆ ಪಡೆದು, ಹೊರಡಲಿರುವ ನನ್ನಲ್ಲಿ ದಯಮಾಡಿ, ಅನುಗ್ರಹ-ಪೂರ್ಣ ನೇತ್ರಗಳಿಂದ ನೋಡಿ ಬೀಳ್ಕೊಡಿ!' ಎಂದು ವಂದಿಸಿ ನಿಂತ ಸಂಜಯನಿಗೆ ಧರ್ಮರಾಜನಿಂತೆಂದನು—

'ಸಂಜಯ! ಒಳ್ಳೆಯದು. ಶುದ್ಧಾತ್ಮನಾದ ನಿನ್ನನ್ನು ಮೊದಲಿನಿಂದಲು ತಿಳಿದಿರುವೆವು. ನಿನಗೆ ಪರರ ದುರುಕ್ತಿಗಳಿಂದ ಕೋಪವಿಲ್ಲ. ನೀನಾಡಿದ ಮಾತು ಅರ್ಥವಂತವು, ಹಿಂಸಾರಹಿತವು ಆಗಿದೆ. ನೀನು ಮತ್ತು ವಿದುರನೆಂದರೆ ನಮಗೆ ಬಲು ಪ್ರೀತಿ. ನಮ್ಮ ಅರ್ಜುನನಿಗೆ ಪ್ರಾಣಸಖನಾಗಿರುವೆ! ಇಲ್ಲಿಂದ ಹೋಗಿ ಕುಲೀನರು, ಆಚಾರಶುದ್ಧರು, ಧರ್ಮನಿರತರು, ತಪಸ್ವಿಗಳು ಆದ ಬ್ರಾಹ್ಮಣರಿಗೆ ನಮಸ್ಕರಿಸಿ ಕುಶಲವನ್ನು ಕೇಳುವೆವೆಂದು ತಿಳಿಸು! ಶೀಲಬಲೋಪಪನ್ನರಾದ ವೃದ್ಧರಿಗೆ ನಮ್ಮ ನಮಸ್ಕಾರಗಳನ್ನು ಮುಟ್ಟಿಸು!

'ಸತ್ಯ ಧರ್ಮ ದಯಾ ಶೌಚ ನಿರತನು, ಮಂತ್ರ ಉಪಚಾರ ಪ್ರಯೋಗ ಉಪಸಂಹಾರಗಳೆಂಬ ಧನುರ್ವಿದ್ಯಾಪಾದಗಳನ್ನು ತಿಳಿದವನು, ವೇದವಿದಗ್ರಣಿಯು ಆದ ಆಚಾರ್ಯ ದ್ರೋಣನು ಪ್ರಸನ್ನನಾಗುವಂತೆ ಹೇಳಿ ವಂದಿಸು! ಕ್ಷತ್ರಿಯವೃಂದ ವಂದಿತನು, ಧನುರ್ವಿದ್ಯಾ ನಿಪುಣನು, ಸದಾಚಾರಶೀಲನಾದ ಅಶ್ವತ್ಥಾಮನ ಕುಶಲವನ್ನು ಕೇಳು! ಮಹಾರಥನು, ಆತ್ಮವಿದ್ಯಾ ವಿಶಾರದನಾದ ಕೃಪಾಚಾರ್ಯನ ಪಾದಗಳಿಗೆ ನಮಿಸುವೆವು ಎಂದು ತಿಳಿಸು! ಶೌರ್ಯ ತಪಃ ಪ್ರಜ್ಞಾ ಶೀಲಗಳಿಗೆ ಗಣಿಯಾದ

ಪ್ರಜ್ಞನು. ಅಂತಹ ನಮ್ಮ ದೊಡ್ಡಪ್ಪನಿಗೆ ವಂದಿಸಿ, ನಮ್ಮ ಕುಶಲವನ್ನು ತಿಳಿಸು ! ಶಠನು, ಮೂರ್ಖನು, ಪಾಪಶೀಲನು, ಪೃಥಿವೀಪಾಲಕನು ಆಗಿರುವ ದುರ್ಯೋಧನ, ಅವನ ತಮ್ಮನಾಗಿರಲರ್ಹನಾದ ದುಶ್ಶಾಸನ, ಇನ್ನಿತರ ಕುರುಮುಖ್ಯರನ್ನೂ ಕುಶಲ ವಾರ್ತೆ ಕೇಳಿದೆವೆಂದು ಹೇಳು ! ಭಾರತ ವಂಶಜರ ಕ್ಷೇಮವನ್ನೇ ಬಯಸುವ ಬಾಹ್ಲೀಕನು, ಪೂಜ್ಯನಾದ ಸೋಮದತ್ತನು, ನನ್ನ ಪ್ರಿಯ ಸೋದರನಾದ ಭೂರಿಶ್ರವನು, ಅವರ ಮಂತ್ರಿ, ಸೇನಾಪತಿಗಳು ಮೊದಲಾದವರು ನಮ್ಮಲ್ಲಿ ಪ್ರಸನ್ನ ರಾಗುವಂತೆ ಮಾತಾಡಿ, ಯಥಾಯೋಗ್ಯವಾಗಿ ಸತ್ಕರಿಸು ! ನಮ್ಮ ಕ್ಷೇಮವನ್ನವರಿಗೆ ತಿಳಿಸು ! ಸುಜ್ಞಾನವಂತನಾಗಿ ರಾಜವೃಂದವನ್ನು ಸಂತೋಷಪಡಿಸುವ ವೈಶ್ಯಾಪುತ್ರ ಯುಯುತ್ಸುವಿನನ್ನು ಕಂಡು, ಕುಶಲವನ್ನು ತಿಳಿಸು ! ಮಿಥ್ಯಾಬುದ್ಧಿಯು, ಅಕ್ಷ ವಿದ್ಯಾವಿಚಕ್ಷಣನು ಆದ ಶಕುನಿಯನ್ನೂ ನೋಡಿ ಕುಶಲವನ್ನು ಕೇಳು !

'ನಮಗೆ ವಿದುರನೆಂದರೆ ಪರಮ ಆಪ್ತನು. ಗುರುವಿನಂತೆ ಹಿತವನ್ನು ಪೇಳಿ ತಂದೆ ಯಂತೆ ಕಾಪಾಡಿ, ಆ ಮಹಾತ್ಮನು ನಮಗೆ ಮಾಡಿದ ಮಹೋಪಕಾರವನ್ನೆಂದಿಗೂ ಮರೆಯಲಾರೆವು. ಆತನಿಗೂ ಕುಶಲವನ್ನು ತಿಳಿಸು ! ವೃದ್ಧಸ್ತ್ರೀಯರಿಗೂ, ಇತರ ಮಾತೃಜನರಿಗೂ ವಂದಿಸಿ, 'ಅವರ ಮಕ್ಕಳು, ಸಾಕು ಮಕ್ಕಳು ಚನ್ನಾಗಿರುವರೇ ?' ಎಂದು ವಿಚಾರಿಸಿ, ನಮ್ಮ ಕ್ಷೇಮವನ್ನವರಿಗೆ ತಿಳಿಸು. ನಮಗೆ ಮುಂದೆ ಭರಿಸಲು ಯೋಗ್ಯರಾಗುವ ಕೌರವ ಪತ್ನಿಯರ ಕ್ಷೇಮ ಸುಖಗಳನ್ನೂ ವಿಚಾರಿಸು. ಹಿರಿಯ ರನ್ನು ಸೇವಿಸುತ್ತಾ, ಪತ್ಯನುಕೂಲರಾಗಿರುವಂತೆ ಹೇಳು! ಸೊಸೆಯರು, ಕನ್ಯೆಯರು ಮೊದಲಾದವರನ್ನು ಸಂತೈಸುವೆವೆಂದು ತಿಳಿಸು. ದಾಸದಾಸೀಜನರು, ಪಂಗು ಖಂಜರು, ವೃದ್ಧಬಧಿರಾಂಧರು ಮೊದಲಾದವರಿಗೆ ' ಭಯಪಡಬೇಡಿ ! ಶತ್ರುಗಳನ್ನು ಜಯಿಸಿ, ಧರ್ಮಜನು ನಿಮ್ಮನ್ನು ವಸ್ತ್ರಾನ್ನದಾನದಿಂದ ಸುಖಪಡಿಸುವನು' ಎಂದು ತಿಳಿಸು ! ಬ್ರಾಹ್ಮಣ ವೃತ್ತಿಗಳನ್ನು ಕೊಡದ ಅಧಿಕಾರಿಗಳನ್ನು ಶಿಕ್ಷಿಸಿ, ಅವರನ್ನು ಸುಖಪಡಿಸುವೆನೆಂಬ ನನ್ನ ನಿಶ್ಚಯವನ್ನು ದುರ್ಯೋಧನನಿಗೆ ತಿಳಿಸು ! ಎಲ್ಲರ ಕುಶಲವನ್ನು ತಿಳಿದು ಆಮೇಲೆ ಅವರಿಗೆ ನಮ್ಮ ಕುಶಲವನ್ನು ತಿಳಿಸು !

'ಧಾರ್ತರಾಷ್ಟ್ರನ ಸೈನ್ಯದಲ್ಲಿ ಅತಿರಥ ಮಹಾರಥರಿರುವರು. ಅವರನ್ನು ಗೆಲ್ಲುವ ವೀರರೀಲೋಕದಲ್ಲಿಲ್ಲ. ಆದರೆ ನಮಗೆ ಧರ್ಮವೇ ಬಲ. ಧರ್ಮಪಾಲಕನಾದ ಶ್ರೀಕೃಷ್ಣನೇ ಬಲ ! ಇನ್ನೊಂದು ಮಾತನ್ನವನಿಗೆ ತಿಳಿಸು ! ' ಸರ್ವಕೌರವರಿಗೂ ರಾಜನಾಗಿ ಶತ್ರುಗಳನ್ನು ನಿರ್ಮೂಲಿಸಿ, ಬಾಳುವೆ'ನೆಂಬ ಹಠ ಸಲ್ಲದು. ಅವನಾಡಿಸಿ ದಂತಾಡುವ ಗೊಂಬೆಗಳಲ್ಲ ನಾವು. ಇಂದ್ರಪ್ರಸ್ಥವನ್ನು ಕೊಡುವುದೊಂದು ಮಾರ್ಗ; ಯುದ್ಧವಾಡುವುದಿನ್ನೊಂದು ; ಮೂರನೇ ಗತಿ ಇಲ್ಲ.

'ಸಂಜಯ! ವಿಧಿ ಬಲೀಯವಾಗಿದೆ! ಸಜ್ಜನರು, ದುರ್ಜನರು, ಬಾಲವೃದ್ಧರು, ಸಬಲ ದುರ್ಬಲರು, ಎಲ್ಲರೂ ವಿಧಿವಶರಾಗಿರುವರು. ಸರ್ವತಂತ್ರಸ್ವತಂತ್ರನಾದ ಭಗವಂತನಿಗೆದುರಿಲ್ಲ. ಪ್ರಾಚೀನ ಕರ್ಮದಂತೆ ಫಲಕೊಡುವ ದೇವನ ಇಚ್ಛೆ ಬಂತೆಂದರೆ

ಪಂಡಿತನು ದಡ್ಡನಾಗಿಬಿಡುವನು. ದಡ್ಡನೂ ಪಂಡಿತನೆನಿಸುವನು. ಹೋಗು ! ಸಭೆಯಲ್ಲಿ ಕೂತಿರುವ ಧೃತರಾಷ್ಟ್ರನಿಗೆ ವಂದಿಸಿ, ಕುಶಲವನ್ನು ಕೇಳು ! ಆಮೇಲೆ ನಮ್ಮ ವಿಜ್ಞಪ್ತಿಯನ್ನು ತಿಳಿಸು !

'ರಾಜನ್ ! ನಿನ್ನ ದಯದಿಂದ ಪಾಂಡವರು ಕುಶಲಿಗಳು. ನಿನ್ನಿಂದ ಪೋಷಿಸಲ್ಪಟ್ಟು ದೊಡ್ಡವರಾಗಿ ದೊಡ್ಡರಾಜ್ಯವನ್ನು ಕಟ್ಟಿ, ವಂಚಕರಿಗೆ ಕೊಟ್ಟು, ಸಮಯವನ್ನು ನಿರ್ವಹಿಸಿ ಬಂದಿರುವರು. ಮತ್ತೆ ಅವರಿಗೆ ಅವರ ರಾಜ್ಯವನ್ನು ಕೊಡು ! ಉಪೇಕ್ಷಿಸಲು ಒಳಿತಲ್ಲ. ಅವರೂ ಕಷ್ಟಪಟ್ಟು ಬೇಸತ್ತಿರುವರು. ಬ್ರಹ್ಮಾಂಡವನ್ನಿತ್ತರೂ ಮನುಜನು ತೃಪ್ತನಾಗನು. ನಾವೆಲ್ಲರೂ ಕಲೆತು ಜೀವಿಸೋಣ ! ಶತ್ರುಗಳು ನಮ್ಮನ್ನು ಕಣ್ಣೆತ್ತಿ ನೋಡದಂತಾಗಲಿ !'

'ಸಂಜಯ ! ವ್ರತಶೀಲನು, ಮದ್ಯಾದಿನಿಷಿದ್ಧಾಚರಣರಹಿತನು ಆದ ಭೀಷ್ಮನಿಗೂ ವಂದಿಸಿ, ತಾತ ! ನಿನ್ನ ಪೌತ್ರರು ಪರಸ್ಪರ ಪ್ರೀತಿಯಿಂದ ಜೀವಿಸಿರುವಂತೆ ಮಾಡು ! ಎಂದು ಪ್ರಾರ್ಥಿಸುತ್ತಿರುವುದನ್ನು ತಿಳಿಸು ! ವಿದುರನಿಗೂ ಹೇಳು !

'ಕುರುಮಧ್ಯದಲ್ಲಿ ಕೂತಿರುವ ಕುರುರಾಜನಿಗೆ ಇಂತು ತಿಳಿಸು ! 'ರಾಜನ್ ! ಸಭೆಯಲ್ಲಿ ನಿಷ್ಪಾಪಳಾದ ಪಾಂಚಾಲಿಗಾದ ಪರಾಭವವನ್ನು ಕ್ಷಮಿಸಿ ಸುಮ್ಮನಿದ್ದೆವು. ವಿಷದಾನ ಅಗ್ನಿದಾಹಾದಿಗಳನ್ನೂ ಮರೆತಿರುವೆವು. ನಾರಬಟ್ಟೆಗಳನ್ನುಡಿಸಿ ವನಕ್ಕಟ್ಟಿದುದನ್ನೂ ಸಹಿಸಿರುವೆವು. ಎಲ್ಲವನ್ನೂ ಕ್ಷಮಿಸಿರುವೆವೆಂದೇ ಕೌರವರು ಇನ್ನೂ ಜೀವದಿಂದಿರುವರು. ನಮಗೆ ನಮ್ಮ ರಾಜ್ಯಭಾಗವನ್ನು ಕೊಡು ! ಪರದ್ರವ್ಯಕ್ಕಾಶೆ ಪಡಬೇಡ ! ಪರಸ್ಪರ ಪ್ರೀತಿಯಿಂದ ಬಾಳುವಂತೆ ಮಾಡು ! ಹೋಗಲಿ ! ನಮ್ಮೈವರಿಗೆ ಐದು ಗ್ರಾಮಗಳನ್ನಾದರೂ ಕೊಡು ! ಕುಶಸ್ಥಲ, ವೃಕಸ್ಥಲ, ಮಾಕಂದಿ, ವಾರಣಾವತ, ಇನ್ನೊಂದೂರು ಸಾಕು ! ಶಮದಿಂದ ಸುಖದಿಂದ ಕೂಡಿ ಕೌರವ ಪಾಂಚಾಲರು ಬದುಕಿರಲಿ ! ಯುದ್ಧವಾದರೂ, ಸಂಧಿಯಾದರೂ ನಾವು ಸಿದ್ಧರು. ನಮಗೆ ಸಂಹರಿಸಲೂ ಬರುವುದು, ಕ್ಷಮಿಸಲೂ ಆಗುವುದು' ಇಂತು ಸಂದೇಶವನ್ನಿತ್ತು ಧರ್ಮರಾಜನು, ಸಂಜಯನನ್ನು ಸತ್ಕರಿಸಿ, ಕಳಿಸಿದನು.

## ವಿದುರ ನೀತಿ—೧

ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ಸಂಜಯನು ಹಸ್ತಿನಾವತಿಯನ್ನು ಮುಟ್ಟಿ, ದ್ವಾರಪಾಲನಿಂದ ತಿಳಿಸಿ, ಅಪ್ಪಣೆ ಪಡೆದು ಧೃತರಾಷ್ಟ್ರನನ್ನು ಕಂಡನು; ನಾಮವನ್ನುಚ್ಚರಿಸಿ ನಮಿಸಿದನು; ಪಾಂಡವರ ನಮಸ್ಕಾರಗಳನ್ನು ತಿಳಿಸಿ, ಕುಶಲವಾರ್ತೆಯನ್ನರುಹಿದನು ; ಹಿಂದಿನ ತಮ್ಮ ರಾಜ್ಯಭಾಗವನ್ನವರು ಬೇಡುತ್ತಿರುವರೆಂದು ಸಂಗ್ರಹವಾಗಿ ತಿಳಿಸಿ ಇಂತೆಂದನು—

'ಧರ್ಮಾರ್ಥಕುಶಲನು, ಬಹುಶ್ರುತನು, ಶೀಲಾದಿಗುಣಸಂಪನ್ನನು ಆದ ಧರ್ಮರಾಜನಿಗೆ ಧರ್ಮವು ಮುಖ್ಯವಾಗಿದೆ ; ಧನವಲ್ಲ. ಅಧರ್ಮವನ್ನು ಮಾಡದೆ

ಸುಖದಿಂದಿರುವುದವನಿಗೆ ಬೇಕಾಗಿದೆ. ಕರ್ಮವನ್ನು ಮಾಡಿದಂತೆ ಫಲವಾಗುವುದು. ಕರ್ಮವೂ ಸ್ವತಂತ್ರವಲ್ಲ. ಶ್ರೀಹರಿಯ ಪ್ರೇರಣೆಯಂತೆ ಸತ್ಕರ್ಮವನ್ನು ಮಾಡಿ, ಸುಜನನು ಸುಖಪಡುವನು ; ದುರ್ಜನನು ದುಃಖಪಡುವನು.

'ಧರ್ಮರಾಜನು ಪರೋಪಕಾರಕ್ಕಾಗಿ ಅರ್ಥವನ್ನು ಬಯಸುವನು. ನೀನೂ ಬಯಸಿರುವೆ ಪರೋಪದ್ರವಕ್ಕೆಂದು ! ಪ್ರಬಲ ಶತ್ರುಗಳ ಕಣ್ಣಿಗೆ ಬೀಳದಿರುವವರೆಗೂ ನಿಮ್ಮ ಕುಣಿತ ! ಹೇಳಲಾಗದ ಪಾಪಗಳನ್ನು ಮಾಡಿ, ವಂಚಿಸುವ ನೀವೆಲ್ಲಿ ? ಪರೆ ಬಿಚ್ಚಿದ ಹಾವಿನಂತೆ ಬೆಳಗುತ್ತಾ ಪಾಪದೂರನಾಗಿರುವ ಯುಧಿಷ್ಠಿರನೆಲ್ಲಿ ? ಧರ್ಮವನ್ನು ಕೆಡಿಸಿ, ಅರ್ಥವನ್ನೂ ಬಿಡಿಸುವ ಪಾಪಕರ್ಮವನ್ನು ಮಾಡಿರುವುದರಿಂದಲೇ ಇಲ್ಲಿ ಅಳುತ್ತಿರುವೆ; ಅಲ್ಲಿಯೂ ಪಾಪಫಲವನ್ನುಣ್ಣುವೆ! ಪುತ್ರವಶನಾಗಿ ಸರ್ವರಾಜ್ಯವನ್ನಾಶಿಸುವ ನಿನ್ನನ್ನು ಲೋಕವು ನಿಂದಿಸದಿರುವುದೇ ? ಭರತಕುಲ ಶ್ರೇಷ್ಠನೆನಿಸಿದ ನಿನಗಿದು ಯೋಗ್ಯವಲ್ಲ. ನೀಚಬುದ್ಧಿ, ದೀರ್ಘವೈರ, ಯುದ್ಧಚಪಲ, ಕ್ಷತ್ರವಿದ್ಯಾ ಧೈರ್ಯರಹಿತ, ದುಷ್ಟಸಖ ಇವರೆಲ್ಲರೂ ಕಷ್ಟಪಡುವರು. ಸತ್ಕುಲಪ್ರಸೂತ, ಬಹುಶ್ರುತ ಬಲವಂತ, ಯಶಸ್ವಿ ಮನೋನಿಗ್ರಹವಂತ, ಧರ್ಮಾಧರ್ಮ ನಿಪುಣ, ಇವರೆಲ್ಲರೂ ಸುಖಪಡುವರು. ಶ್ರೀಹರಿಯ ಅನುಗ್ರಹದಿಂದ ಕುಲ, ಬಲ, ಧನ, ಕೀರ್ತ್ಯಾದಿಗಳು ಉಂಟಾಗುವವು. ನೀನೂ ಸತ್ಕುಲಜಾತನೇ ಆದರೂ ದುಷ್ಟ-ಸಂಸರ್ಗದಿಂದ ಗುಣಹೀನನಂತಾಗಿರುವೆ !

'ಭೀಷ್ಮಾದಿ ಸುಜನರ ಮಾತಿಗೆ ಕಿವಿಗೊಡದೆ ಪಾಂಡವರನ್ನು ದ್ಯೂತದಲ್ಲಿ ವಂಚಿಸಿ ವನಕ್ಕಟ್ಟಿ, ಕರ್ಣಾದಿಗಳಂತೆ ಆಡಿದುದರಿಂದ ಕುರುಕ್ಷಯಕ್ಕೆ ಕಾರಣನಾದೆ ! ಅಜಾತಶತ್ರುವು ಹಿಂಸಾರೂಪ ಪಾಪವನ್ನು ಮಾಡಲೆಣಿಸದೆ, ದುರ್ದ್ಯೂತದೇವಿಗಳಾದ ದುರ್ಯೋಧನಾದಿಗಳನ್ನು ಆಗಲೇ ಕೊಲ್ಲಲಿಲ್ಲ; ನಿನ್ನವರಿಗೆ ಮರಣಕಾಲವಾಗಿದ್ದಿಲ್ಲವೆಂದೇ ಇನ್ನೂ ಉಳಿದಿರುವರು. ದೇವತೆಗಳಂತೆ ಉಭಯಲೋಕ ಸಂಚಾರಿಯಾಗಿ ದೇವಹಿತವನ್ನು ಸಾಧಿಸಿ ಬಂದ ಮಹಾವೀರ ಪಾರ್ಥನು ಮನುಜ ಮಾತ್ರನಲ್ಲ. ಅಂತಹ ಬಲವಂತ ಸೋದರರಿಂದ ಕೂಡಿದ ಧರ್ಮರಾಜನು, ಬರುವ ಸುಖ ದುಃಖಾದಿಗಳನ್ನು ಪ್ರಾರಬ್ಧಕರ್ಮಫಲವೆಂದು ತಿಳಿದು ಶ್ರೀಹರೀಚ್ಛೆಗೆ ಎದುರಿಲ್ಲವೆಂದು ಸ್ವೀಕರಿಸುತ್ತಿರುವನು. ಇಂದ್ರಿಯಗಳಿಗೆ ವಿಷಯಗಳನ್ನಿತ್ತು ತೃಪ್ತಿಪಡಿಸಲಾಗದು. ಹರಿಯನ್ನು ಮರೆತು ವಿಷಯಗಳತ್ತ ಧಾವಿಸುವವನಿಗೆ ಇಂದ್ರಿಯ ಜಯವಿಲ್ಲ. ಇದನ್ನರಿತು ಬುದ್ಧಿವಂತನು ವಿಷಯ ತೃಷ್ಣೆಯನ್ನಡಗಿಸಿ, ಇಂದ್ರಿಯಗಳನ್ನು ಜಯಿಸಿ, ಶ್ರೀಹರಿಧ್ಯಾನ-ರತನಾಗಬೇಕು. ಶ್ರೀಹರಿಯಿಂದ ಪ್ರಿಯಾಪ್ರಿಯಗಳು, ಸುಖದುಃಖಗಳು, ನಿಂದಾಪ್ರಶಂಸೆಗಳು ಬರುವುವೆಂದು ತಿಳಿದು ಪಾಂಡವರು ನಿರ್ವಿಕಾರರಾಗಿರುವರು. ಅವರಿಗೆ ಅವರ ರಾಜ್ಯವನ್ನು ನೀನು ಕೊಡದಿರೆ, ನಿನ್ನ ಅಪರಾಧದಿಂದ ಭಾರತ ಯುದ್ಧವಾಗಿ ಕುಲವು ನಶಿಸಿಹೋಗುವುದು. ಕೃಷ್ಣವರ್ತ್ಮನಾದ ಅಗ್ನಿಯು ಹುಲ್ಲವನವನ್ನಂತೆ, ಕೃಷ್ಣವರ್ತ್ಮರಾದ ಪಾಂಡವರು ಕೌರವರನ್ನು ಸುಟ್ಟುಬಿಡುವರು. ಕಾಮಾತ್ಮಕನಾದ

ಮಗನ ಜೂಜಿನ ಗೆಲುವಿನಿಂದ ಧನ್ಯನಾದಂತೆ ತಿಳಿದು, ಮಾಡಿದ ಕುಕರ್ಮಗಳ ಫಲ ವನ್ನುಣ್ಣಬೇಕಾಗಿದೆ. ಪ್ರಬಲ ಶತ್ರುಗಳು ಕಸಿಯುವ ರಾಜ್ಯದ ಸಿರಿಯನ್ನು ಉಳಿಸಿ ಕೊಳ್ಳುವ ಸಾಮರ್ಥ್ಯವೀಗ ನಿಮಗಿಲ್ಲ. ಇರಲಿ, ನನಗೂ ಶ್ರಮವಾಗಿದೆ; ಹೋಗಿ ಮಲಗಬೇಕೆನಿಸಿದೆ; ಬೆಳಗಾಗಲಿ, ಸಭಾಮಧ್ಯದಲ್ಲಿ ಅಜಾತಶತ್ರು ವಚನವನ್ನು ನಿರೂಪಿಸುವೆನು, ನನಗೆ ಅಪ್ಪಣೆಕೊಡು !'

ಧೃತರಾಷ್ಟ್ರನು ಸಂಜಯನನ್ನು ಕಳಿಸಿ, ನಿದ್ದೆಬಾರದೆ ವಿದುರನಿಗೆ ಹೇಳಿ ಕಳಿಸಿದನು. ವಿದುರನು ದ್ವಾರಪಾಲಕನಿಂದ ಪ್ರವೇಶಿತನಾಗಿ, ಧೃತರಾಷ್ಟ್ರನಿಗೆ ಕೈಮುಗಿದು 'ವಿದುರನು ಬಂದಿಹೆನು. ಏನು ಕೆಲಸ ?'ವೆಂದು ಕೇಳಿದನು.

ಧೃತರಾಷ್ಟ್ರನು, 'ವಿದುರ! ಸಂಜಯನು ಬಂದು ನನ್ನನ್ನು ನಿಂದಿಸಿ ಹೋದನು. ನಾಳೆ ಸಭೆಯಲ್ಲಿ ಧರ್ಮರಾಜಾದಿಗಳ ವಾಕ್ಯವನ್ನು ತಿಳಿಸುವನಂತೆ ! ಅವನ ವಚನ ವಿಧವನ್ನರಿಯದ ನನ್ನ ಮನವು ಚಿಂತೆಯಿಂದ ಉರಿಯುತ್ತಿದೆ. ನಿದ್ದೆಬಾರದಾಗಿದೆ. ನನಗೆ ಹಿತವಾಗುವಂತೆ ಮಾತಾಡು ! ನೀನು ಧರ್ಮಾರ್ಥ ಕುಶಲನೆಂದು ನಿನಗೆ ಹೇಳಿ ಕಳಿಸಿದೆನು ' ಎಂದನು.

' ಮಹಾರಾಜ ! ಬಲವಂತನ ದ್ವೇಷವನ್ನು ಕಟ್ಟಿಕೊಂಡ ಬಲಹೀನನಿಗೆ ನಿದ್ದೆ ಬಾರದು. ಎಲ್ಲ ಸೊತ್ತನ್ನು ಕಳೆದುಕೊಂಡವನಿಗೆ ನಿದ್ದೆಬಾರದು. ಕಳ್ಳನಿಗೆ ಹಾಗೂ ದುಷ್ಕಾಮಿಗೆ ನಿದ್ದೆಬಾರದು. ಈ ದೋಷಗಳಲ್ಲಿ ನೀನು ಬಲವದ್ವೇಷದಿಂದ ಕುದಿಯು ತ್ತಿರುವೆ ಅಥವಾ ಪರವಿತ್ತವನ್ನಾಶಿಸಿ, ನಾಚದಿರುವೆ !' ಎಂದ ವಿದುರನನ್ನು ನೋಡಿ, ಧೃತರಾಷ್ಟ್ರನು, ' ವಿದುರ ! ನಮ್ಮ ರಾಜರ್ಷಿ ವಂಶದಲ್ಲಿ ನೀನು ಪ್ರಾಜ್ಞಸಮ್ಮತನಾಗಿ ರುವೆ ! ನಿನ್ನಿಂದ ಧರ್ಮೋಪದೇಶವನ್ನು ಕೇಳಲಿಚ್ಛಿಸುವೆನು ' ಎಂದನು.

ವಿದುರನಿಂತು ನುಡಿದನು—

' ರಾಜ್ಯವನ್ನಾಳುವ ಶುಭಲಕ್ಷಣಗಳಿಂದ ವಿರಾಜಮಾನನಾದ ಧರ್ಮರಾಜನಿಗೆ ' ರಾಜ್ಯವನ್ನು ಕೊಡಲಾರೆನು ' ಎಂದು ದೂತರನ್ನು ಕಳಿಸಿದೆ ! ಮತ್ತೂ ಕಳಿಸುವೆ! ನಿನ್ನ ದೌತ್ಯವೆಲ್ಲ ವ್ಯರ್ಥವಲ್ಲವೇ ? ಮೂರು ಲೋಕಗಳನ್ನೂ ಆಳಲರ್ಹನಾಗಿರು ವನು ಧರ್ಮರಾಜ. ಅವನು ದುಶ್ಶೀಲರಾದ ದುರ್ಯೋಧನಾದಿ ಕೌರವರಂತೆ ಕುಟಿಲನಲ್ಲ. ರಾಜಲಕ್ಷಣ ಹೀನನಾದರೂ, ರಾಜ್ಯವನ್ನಾಳುತ್ತಾ, ರಾಜ್ಯ ಭಾಗ ವನ್ನು ಕೊಡಲೊಲ್ಲದ ನಿನ್ನನ್ನು ಪ್ರಾಜ್ಞರು ಮೆಚ್ಚರು.

' ದಯಾ ಧರ್ಮ ಸತ್ಯಪರನಾದ ಧರ್ಮರಾಜನು ಹಿರಿಯನೆಂದು, ನಿನ್ನಿಂದಾದ ಕ್ಲೇಶಗಳನ್ನು ಸಹಿಸಿರುವನು. ದುರ್ಯೋಧನ ದುಶ್ಶಾಸನ ಕರ್ಣ ಶಕುನಿಗಳಿಗೆ ವಶ ನಾಗಿರುವ ನಿನಗೆ ಧರ್ಮವಿಲ್ಲ; ಸುಖವೂ ಇಲ್ಲ. ಅವರು ಪಂಡಿತರಲ್ಲ. ಪಂಡಿತನು ಆತ್ಮ ಜ್ಞಾನಿಯಾಗಲು ಶಕ್ತಿಯನ್ನನುಸರಿಸಿ, ಸುಖದುಃಖ ವಿಕಾರಗಳಾಗದಂತೆ ವೈರಾಗ್ಯ ದಿಂದ ವರ್ತಿಸಿ, ಸ್ವಧರ್ಮವನ್ನು ನಡೆಸುವನು. ಅವನು ಪುರುಷಾರ್ಥಭಾಜನನಾಗು ವನು; ಅವನು ಪ್ರಶಸ್ತ ಕರ್ಮಗಳನ್ನು ಮಾಡುವನು. ನಿಂದಿತ ಕರ್ಮಗಳನ್ನು

ಬಿಡುವನು; ವೇದಶಾಸ್ತ್ರ ಗುರುವಚನಗಳನ್ನು ನಂಬುವನು. ಪರರನ್ನು ನೋಯಿಸದೆ, ಕೋಪ ದರ್ಪಗಳನ್ನು ಹತ್ತಿಕ್ಕಿ, ಪುರುಷಾರ್ಥಗಳನ್ನು ಸಂಪಾದಿಸುವನು.

'ಒಂದು ಅಶ್ವತ್ಥ ವೃಕ್ಷದಿಂದ ಯಜ್ಞಪಾತ್ರೆಗಳನ್ನೂ ಸ್ರುಕ್ಕನ್ನೂ ಮಾಡುವರು; ಅದೇ ಕಟ್ಟಿಗೆಯಿಂದ ದೊಣ್ಣೆಯನ್ನೂ, ವಿಷಾದಿರಸಲೋಡನ ಪಾತ್ರೆಯನ್ನೂ ಮಾಡುವರು. ಅಂತೆಯೇ ನಿನ್ನ ಕುಲದಲ್ಲಿ ಸತ್ಪುತ್ರರೂ ಹುಟ್ಟಿರುವರು. ದುಷ್ಟ ಪುತ್ರರೂ ಹುಟ್ಟಿರುವರು. ಅವರು ಪಂಡಿತರು, ಇವರು ಮೂರ್ಖರು.

'ಪರರಿಗೆ ತಿಳಿಯದಂತೆ ಮಂತ್ರಾಲೋಚನೆ ಮಾಡುವವನು, ಕೆಲಸ ಮಾಡಿ ತಿಳಿಸುವವನು, ಶೀತೋಷ್ಣ ಭಯಸಂಪದ್ವಿಪತ್ತಿಗಳಿಗೆ ಹೆದರದೆ ಕಾರ್ಯವನ್ನು ಕೊನೆಗಾಣಿಸುವವನು, ಉಭಯಲೋಕ ಸುಖಸಾಧನವಾದ ಧರ್ಮಾರ್ಥಗಳಿಗಾಗಿ ಐಹಿಕ ಕಾಮ ಸುಖವನ್ನು ಬಿಟ್ಟವನು, ಶಕ್ತಿಯನ್ನು ತಿಳಿದು ಪ್ರಯತ್ನಿಸುವವನು, ಪರರನ್ನು ಕಡೆಗಣಿಸದವನು, ಜ್ಞಾನಕ್ಕಾಗಿ ಸರ್ವ ಕಾಮಗಳನ್ನು ಬಿಟ್ಟವನು, ಮತ್ತೆ ಮತ್ತೆ ಶಾಸ್ತ್ರ ಶ್ರವಣವನ್ನು ಮಾಡುವವನು, ಬೇಗನೆ ಗ್ರಹಿಸುವವನು, ತಿಳಿದು ತೊಡಗುವವನು, ಕೇಳಿದರೆ ಮಾತ್ರ ಹೇಳುವವನು, ಬಾರದುದನ್ನು ಬೇಡದವನು, ಕಳೆದುದಕ್ಕೆ ಚಿಂತಿಸದವನು ಆಪತ್ತಿನಲ್ಲಿ ಅಜ್ಞಾನಸಕಾತರನಾಗದವನು, ಕಾಲವನ್ನು ವ್ಯರ್ಥಗೊಳಿಸದವನು, ಹಿರಿಯರ ಮಾರ್ಗದಲ್ಲಿ ನಡೆವವನು, ಮಂಗಳ ಕ್ರಿಯಾಸಕ್ತನು, ಸುಜನರಲ್ಲಿ ಅಸೂಯೆ ಇಲ್ಲದವನು; ಇವರೆಲ್ಲರೂ ಪಂಡಿತರೆನಿಸುವರು.

'ಪಂಡಿತನು ಮಾನಾವಮಾನಗಳಿಗೆ ಹಿಗ್ಗನು; ಕುಗ್ಗನು. ಅವನು ಗಂಗಾನದಿಯ ಮಡುವಿನಂತೆ ಗಂಭೀರನಾಗಿರುವನು. ಅವನು ಸರ್ವಭೂತಗಳು ಅಶಾಶ್ವತವೆಂದು ತಿಳಿದಿರುವನು. ಅವನಿಗೆ ಸರ್ವ ಕರ್ಮಗಳಲ್ಲಿ ಕೌಶಲವಿರುವುದು. ಅವನು ದೊಡ್ಡವರ ಚರಿತೆಯನ್ನು ಚಿತ್ರ ವಿಚಿತ್ರವಾಗಿ ವರ್ಣಿಸುವನು. ಅವನು ತತ್ಕಾಲ ಸ್ಫೂರ್ತಿಯಿಂದ ಊಹಿಸಿ, ಸರಿಯಾಗಿ ಮಾತಾಡುವನು. ಗ್ರಂಥಾರ್ಥಗಳನ್ನು ನಿಂತಲ್ಲೇ ಹೇಳುವ ಶಾಸ್ತ್ರಾರ್ಥಜ್ಞಾನವವನಿಗೆ ಕೈಗನ್ನಡಿಯಾಗಿರುವುದು. ಅವನು ಪರಸ್ಪರ ವಿರೋಧವಾಗಿ ಮಾತಾಡನು; ಸತ್ಸಂಪ್ರದಾಯವನ್ನು ಬಿಡನು.

'ಇನ್ನು ಮೂಢನ ಲಕ್ಷಣವನ್ನು ಕೇಳು! ಶಾಸ್ತ್ರಪುರಾಣ ಶ್ರವಣರಹಿತನಾಗಿಯೂ, ದರ್ಪಸಹಿತನು; ದರಿದ್ರನಾಗಿಯೂ ದುಂದು ಮಾಡುವವನು; ಕೆಲಸ ಮಾಡದೆ ಜೂಜು ಪಂದ್ಯಾಟದಿಂದ ಧನವನ್ನು ಬಯಸುವವನು; ಸ್ವವಿಹಿತ ಸ್ನಾನ ಜಪಾದಿಗಳನ್ನು ಬಿಟ್ಟು ಪರಕರ್ಮವನ್ನು ಅನುಸರಿಸಿ ನೀಚ ಸೇವೆ ಮಾಡುವವನು; ಮಿತ್ರರಿಗೆ ಕಪಟನಾಗಿ ದ್ರೋಹವನ್ನೆಸಗುವವನು. ಪರದಾರಾರ್ಥಿಯಾಗಿ ಸ್ವದಾರೆಯನ್ನು ಬಿಟ್ಟವನು; ನಿಜಮಿತ್ರರನ್ನು ದ್ವೇಷಿಸಿ, ಗೂಢಶತ್ರುಗಳಿಗೆ ಪ್ರಿಯಕರನಾದವನು; ವಿಷದಾನ, ಅಗ್ನಿದಾಹಾದಿ ದುಷ್ಟ ಕೃತ್ಯಗಳನ್ನು ನಡೆಸುವವನು; ಇತರರಿಗೆ ಪುಣ್ಯಕರ್ಮಗಳನ್ನುಪದೇಶಿಸಿ ತಾನು ಮಾಡದವನು; ಬೇಗಮಾಡುವ

ಕೆಲಸದಲ್ಲಿ ತಡಮಾಡುವವನು; ಪಿತೃಶ್ರಾದ್ಧವನ್ನೂ ದೇವಪೂಜೆಯನ್ನು ಬಿಟ್ಟ ವನು; ಸರಿಯಾದ ಸ್ನೇಹಿತರನ್ನು ಕೂಡದವನು; ಇವರೆಲ್ಲರೂ ಮೂಢರು.

'ಮೂಢನು ಕರೆಯಲ್ಪಡದೇ ಹೋಗುವವನು, ಕೇಳಲ್ಪಡದೆ ಮಾತಾಡುವವನು, ಕಪಟಿಗಳನ್ನು ನಂಬುವವನು, ತನ್ನಲ್ಲಿರುವ ದೋಷವನ್ನೆಣಿಸದೆ ಪರದೋಷವನ್ನೆಣಿಸು ವನು, ಸುಮ್ಮನಿದ್ದು ಮಹಾಲಾಭವನ್ನು ಬಯಸುವವನು, ಪರದಾರರತನು, ಲೋಭಿ ಯನ್ನು ಸೇವಿಸುವವನೂ ಮೂರ್ಖರೆನಿಸುವರು.

'ಧನ, ವಿದ್ಯಾ, ರೂಪಗಳನ್ನು ಪೊಂದಿಯೂ ಗರ್ವಪಡದವನು, ಭೃತ್ಯಪರಿವಾರ ಮಿತ್ರರಿಗಿತ್ತು ಭುಜಿಸುವವನು, ಪಂಡಿತನು.

'ಒಬ್ಬನು ಪಾಪವನ್ನು ಮಾಡುವನು, ಅವನ ಸಂಸರ್ಗದಿಂದ ಅದರ ಫಲವಾದ ದುಃಖವನ್ನು ಇತರರೂ ಅನುಭವಿಸುವರು. ಆದರೆ ಪರಲೋಕದಲ್ಲಿ ಅವನೊಬ್ಬನು ನರಕದಲ್ಲಿ ಬೀಳುವನು. ಇತರರಿಗೆ ನರಕವಿಲ್ಲ. ಬಾಣವು ಒಬ್ಬನನ್ನು ಕೊಲ್ಲುವುದು; ಆದರೆ ಬುದ್ಧಿವಂತನ ಯುಕ್ತಿಯು ರಾಜರನ್ನೂ ರಾಷ್ಟ್ರವನ್ನೂ ಹಾಳುಮಾಡು ವುದು. (ಒಂದಾದ ಬುದ್ಧಿಬಲದಿಂದ ಕಾರ್ಯಾಕಾರ್ಯಗಳೆರಡನ್ನೂ ನಿಶ್ಚಯಿಸಿ, ಮಿತ್ರೋದಾಸೀನ ಶತ್ರುಗಳೆಂಬ ಮೂವರನ್ನು ಸಾಮ ದಾನ ಭೇದ ದಂಡಗಳೆಂಬ ನಾಲ್ಕರಿಂದ ವಶಪಡಿಸಿ, ಐದಾದ ಇಂದ್ರಿಯಗಳನ್ನು ಜಯಿಸಿ, ಅಶನಾಯಾ ಪಿಪಾಸಾ ಶೋಕ ಮೋಹ ಜರಾ ಮೃತ್ಯುಗಳ ಆರನ್ನು ವಿವೇಚಿಸಿ, ವೇಶ್ಯಾ ದ್ಯೂತ ಮೃಗಯಾ ಪಾನ ವಾಕ್ಪಾರುಷ್ಯ ದಂಡಪಾರುಷ್ಯ ಅರ್ಥದೂಷಣಗಳೆಂಬ ಏಳು ವ್ಯಸನಗಳನ್ನು ಬಿಟ್ಟವನು ಸುಖಿಸುವನು. ದುಂದುಗಾರಿಕೆಯೇ ಅರ್ಥದೂಷಣ.

'ಒಂದಾದ ಕರ್ಮಕಾಂಡವನ್ನು ವಿಚಾರಿಸಿ, ಪ್ರವೃತ್ತಿ, ನಿವೃತ್ತಿ (ಎರಡು), ಮಾರ್ಗಗಳನ್ನು ವಿವೇಕದಿಂದ ಬೇರಾಗಿ ತಿಳಿದು, ನಿವೃತ್ತಿಮಾರ್ಗವನ್ನವಲಂಬಿಸಬೇಕು. ಮೂರಾದ ಧರ್ಮಾರ್ಥ ಕಾಮಗಳನ್ನು ವಶದಲ್ಲಿಟ್ಟು, ಅವಕ್ಕೆ ವಶನಾಗದೆ, ಯಜ್ಞ ದಾನ ತಪೋ ವೇದಾಧ್ಯಯನಗಳೆಂಬ ನಾಲ್ಕರಿಂದ ಮೂರನ್ನು ಪ್ರಾಣಧಾರಣಾರ್ಥ ವಾಗಿ ಬೇಕಾಗುವಷ್ಟೇ ಬಳಸಿ, ಶುದ್ಧಾಂತಃಕರಣನಾಗಬೇಕು. ಆಗ ಒಂದಾದ ವೇದಾಂತ ಶಾಸ್ತ್ರದಿಂದ ಜೀವಪರಮಾತ್ಮರೆಂಬ ಎರಡನ್ನು ವಿಚಾರಿಸಿ, ಜೀವಭಿನ್ನನಾದ ಶ್ರೀಹರಿಯ ಕಲ್ಯಾಣಗುಣಪೂರ್ಣತೆಯನ್ನು ತಿಳಿದು, ವೈರಾಗ್ಯ ಭಕ್ತಿ ಜ್ಞಾನ ಅಪರೋಕ್ಷಜ್ಞಾನಗಳೆಂಬ ನಾಲ್ಕರಿಂದ ಶ್ವೇತದ್ವೀಪ ಅನಂತಾಸನ ವೈಕುಂಠಗಳೆಂಬ ಮೂರು ಶ್ರೀಹರಿ ಲೋಕಗಳನ್ನು ಪೊಂದಲು ಶ್ರೀಹರಿಯ ಅನುಗ್ರಹಪಾತ್ರನಾಗ ಬೇಕು. ಶ್ರೀಶಾನುಗ್ರಹದಿಂದ ಪ್ರಾರಬ್ಧಕರ್ಮಭೋಗದ ಪರಿಪಾಕವಾಗುತ್ತಿರಲು, ಬಾಹ್ಯಪಂಚೇಂದ್ರಿಯಗಳನ್ನು ವಶಪಡಿಸಿ, ಕಾಮಕ್ರೋಧಾದಿ ಶತ್ರುಗಳನ್ನು (ಆರು) ಗೆದ್ದು, ತ್ವಕ್ ಚರ್ಮ ರುಧಿರ ಮಾಂಸ ಮೇದೋ ಮಜ್ಜಾಸ್ಥಿಗಳೆಂಬ ಏಳು ಧಾತು ಗಳನ್ನು ಬಿಟ್ಟು, ಸ್ವರೂಪ ಸುಖವಂತನಾಗುವನು.

'ಧೃತರಾಷ್ಟ್ರ ! ತನ್ನಲ್ಲಿ ತನಗೆ ಭೇದವಿಲ್ಲದೆ ಒಂದಾಗಿ, ಜೀವಜಡರಿಂದ ಭಿನ್ನನಾಗಿ, ಸರ್ವೋತ್ತಮನಾಗಿ, ತನಗೆ ಸಮಾನವಾದುದಿನ್ನೊಂದಿಲ್ಲದೆ ಬೆಳಗುವ ಶ್ರೀಹರಿಯನ್ನು ತಿಳಿದೂ ತಿಳಿಯದಂತಿರುವೆ. ಅವನೇ ಸಂಸಾರ ಸಾಗರವನ್ನು ದಾಟಿಸಿ, ಪೊರೆವ ನೌಕೆ; ಅವನೇ ಸ್ವರ್ಗಸೋಪಾನ. ನಿನ್ನ ಮಕ್ಕಳಲ್ಲ! ಕ್ರೋಧವನ್ನೂ ಹಟವನ್ನೂ ಬಿಟ್ಟು ಕ್ಷಮಾವಂತನಾಗು. ಕ್ಷಮಾವಂತನು ಅಶಕ್ತನೆನಿಸುವನು ; ಆದರೂ ಇನ್ನಾವ ದೋಷವೂ ಅವನಲ್ಲಿ ಬರಲಾರದು. ಕ್ಷಮೆಯೇ ಅವನ ಬಲವು. ಅಶಕ್ತನಿಗೆ ಗುಣವೆನಿಸುವ ಕ್ಷಮೆಯು, ಶಕ್ತರಿಗೆ ಭೂಷಣವೆನಿಸುವುದು. ಕ್ಷಮಿಗೆ ದುಷ್ಕರವಿಲ್ಲ. ಶಾಂತಿಖಡ್ಗವನ್ನು ಪಿಡಿದವನನ್ನು ದುರ್ಜನನೇನೂ ಮಾಡಲಾರನು. ಹುಲ್ಲಿಲ್ಲದ ನೆಲದಲ್ಲಿ ಬಿದ್ದ ಬೆಂಕಿಯು ತಾನಾಗಿ ಆರಿಹೋಗುವುದು. ಕ್ಷಮಾರಹಿತನು ಪರರನ್ನು ಕೆಡಿಸುವನು. ತಾನೂ ಕೆಡುವನು. ಧರ್ಮವೇ ಉತ್ತಮ ಶ್ರೇಯಃಸಾಧನ, ಕ್ಷಮೆಯೇ ಶಾಂತಿ, ವಿದ್ಯೆಯೇ ತೃಪ್ತಿ, ಅಹಿಂಸೆಯೇ ಸುಖ.

'ಯುದ್ಧವಿಮುಖನಾದ ರಾಜ, ಮತ್ತು ಯಾತ್ರಾವಿಮುಖನಾದ ವಿಪ್ರ, ಇವರೀರ್ವರು ಸರ್ಪದ ಕೈಲಿ ಸಿಕ್ಕ ಇಲಿಗಳಂತೆ ನಷ್ಟರಾಗುವರು. ಪರುಷವನ್ನಾಡದೆ, ದುಷ್ಟರನ್ನು ಪೂಜಿಸದೆ ಮನುಜನು ಪ್ರಕಾಶಿಸುವನು. ಇನ್ನೊಬ್ಬರು ಪೂಜಿಸಿದವನನ್ನು ಗುಣದೋಷವಿಚಾರವಿಲ್ಲದೆ ಪೂಜಿಸುವವನು, ಮತ್ತು ಇನ್ನೊಬ್ಬರು ಬೇಡಿದಂತಹುದನ್ನೇ ಬೇಡುವ ಸ್ತ್ರೀಯರು ಇವರೀರ್ವರು ಸ್ವಬುದ್ಧಿರಹಿತರು. ಅಧನನ ಕಾಮಿತ, ಅಸಮರ್ಥನ ಕೋಪ, ಇವೆರಡು ಅವರಿಗೆ ತಾಪದಾಯಕ. ಉದಾಸೀನ ಗೃಹಸ್ಥ, ವ್ಯವಹಾರ ನಿರತ ಯತಿ, ಇವರೀರ್ವರೂ ವಿಪರೀತಕರ್ಮಿಗಳೆನಿಸಿ ಶೋಭಿಸರು. ನ್ಯಾಯಾಗತ ದ್ರವ್ಯವು ಪಾತ್ರರಿಗೆ ಕೊಡದಿರುವುದರಿಂದಲು, ಅಪಾತ್ರರಿಗೆ ನೀಡುವುದರಿಂದಲು ಹಾಳಾಗುವುದು. ತಪವನ್ನು ಮಾಡದ ದರಿದ್ರನನ್ನೂ, ದಾನಮಾಡದ ಧನಿಕನನ್ನೂ, ಕಂಠದಿ ಕಲ್ಲುಕಟ್ಟಿ ಕಡಲಿಗ ದೂಡಬೇಕು. ಯೋಗಯುಕ್ತನಾದ ಯತಿಯು, ವೀರಶಯಿತನಾದ ಯೋಧನು ಸೂರ್ಯಮಂಡಲವನ್ನು ಹೊಕ್ಕು ಪುಣ್ಯಲೋಕವನ್ನೈದುವರು.

'ಯುದ್ಧವು ಅಧಮೋಪಾಯ ; ಭೇದದಾನಗಳು ಮಧ್ಯಮ ; ಸಾಮವೇ ಉತ್ತಮೋಪಾಯ; ನೀನು ಮಂತ್ರಕಾರ್ಯಗಳಲ್ಲಿ ಅದಕ್ಕೆ ಸಲ್ಲದ ಅಧಮ ಜನರನ್ನು ಆರಿಸಿ, ಕೆಡುತ್ತಿರುವೆ! ಪರದ್ರವ್ಯಾಪಹಾರ, ಪರದಾರಾಭಿಮರ್ಶನ, ಮಿತ್ರದ್ರೋಹ— ಇವು ಮೂರೂ ಸಮೂಲ ನಾಶಕಾರಣಗಳು. ಕಾಮ ಕ್ರೋಧ ಲೋಭಗಳು ಈ ಮೂರು ನರಕದ ಬಾಗಿಲುಗಳು ; ಅವನ್ನು ಬಿಡಬೇಕು. ವರದಾನ, ಪುತ್ರಜನ್ಮ, ರಾಜ್ಯಪ್ರಾಪ್ತಿಗಳಿಗೆ ಸಮವಾದುದು ಶತ್ರುಗಳಿಂದ ಬಿಡಿಸಿಕೊಂಡು ಪಾರಾಗುವುದೆಂದು ತಿಳಿ! ಪಾಂಡವರಿಂದ ನಿನ್ನ ಮಕ್ಕಳು ಸಾಯದಂತೆ ಉಳಿಸು !

'ಬಲಿಷ್ಠನಾದ ರಾಜನು ಕೂಡ, ಬುದ್ಧಿಹೀನರು, ಕಾರ್ಯಾಲಸ್ಯವಂತರು ಸುಖತರಲರು, ಯುದ್ಧವನ್ನರಿಯದ ಜೂಜುಗಾರರು, ಸ್ತೋತ್ರಪಾಠಕರು, ಬಹುಭೋಜಿ

*

ಗಳಾದ ನರರಿಂದ ಕಾರ್ಯಾಲೋಚನೆ ಮಾಡಬಾರದು. ವೃದ್ಧನಾದ ಜ್ಞಾತಿಯನ್ನು, ದರಿದ್ರನಾದ ವಿಪ್ರನನ್ನು, ಕಷ್ಟದಲ್ಲಿರುವ ಮಿತ್ರನನ್ನು, ಮಕ್ಕಳಿಲ್ಲದ ಸೋದರಿಯನ್ನು ಕೈಬಿಡದೆ ಪೋಷಿಸಬೇಕು. ದೇವತೆಗಳ ಸಂಕಲ್ಪ, ಮಹಾತ್ಮರ ಪ್ರಭಾವ, ವಿದ್ಯಾವಂತರ ವಿನಯ, ಪಾಪ ಕರ್ಮಿಗಳ ದುಷ್ಕೃತ್ಯ—ಇವು ತತ್‌ಕ್ಷಣವೇ ಫಲವನ್ನೀಯುವವು. ಅಗ್ನಿಹೋತ್ರ, ಮೌನ, ಅಧ್ಯಯನ, ಯಜ್ಞಗಳನ್ನು ದಂಭದಿಂದ ಮಾಡಿದರೆ ಫಲವಿಲ್ಲ; ಶ್ರೀಹರಿಪ್ರೀತಿಗಾಗಿ ಮಾಡಿದರೆ ಅಭಯಪ್ರದವಾಗುವವು. ತಂದೆ, ತಾಯಿ, ದೇವ, ಗುರು, ಅಗ್ನಿ—ಇವು ಪಂಚಾಗ್ನಿಗಳು ಪೂಜನೀಯವಾಗಿವೆ. ದೇವ, ಪಿತೃ, ಮನುಷ್ಯ, ಭಿಕ್ಷು, ಅತಿಥಿಗಳನ್ನೂ ಪೂಜಿಸಿದವನು ಕೀರ್ತಿವಂತನಾಗುವನು. ಇಂದ್ರಿಯಗಳಲ್ಲಿ ಒಂದಿಂದ್ರಿಯವಾದರೂ ದುರ್ವಿಷಯದಿಂದ ಕೆಟ್ಟರೆ, ಅಂತಹ ಮನುಜನ ಜ್ಞಾನವು ಚರ್ಮದ ಕಪಾಲಿಯಿಂದ ನೀರಿನಂತೆ ಸೋರಿಹೋಗುವುದು.

'ಅಜ್ಞಾನ, ಆಲಸ್ಯ, ಭಯ, ದ್ವೇಷ, ತಂದ್ರಿ (ಶೈಥಿಲ್ಯ), ಅಲಕ್ಷ್ಯಭಾವನೆಗಳನ್ನು ಬಿಟ್ಟವನು ಸುಖಿಸುವನು. ಉಪದೇಶಿಸದ ಗುರು, ಅಧ್ಯಯನವಿಲ್ಲದ ಪುರೋಹಿತ, ರಕ್ಷಿಸದ ರಾಜ, ಅಪ್ರಿಯವನ್ನಾಡುವ ಪತ್ನಿ, ಗ್ರಾಮದಲ್ಲಿರುವ ಗೊಲ್ಲ, ವನದಲ್ಲಿರುವ ಕ್ಷೌರಿಕ—ಇವರನ್ನು ಒಡೆದ ಹಡಗಿನಂತೆ ತಿಳಿದು ಬಿಡಬೇಕು. ಸತ್ಯ, ದಾನ, ತಪ, ಕ್ಷಮಾ, ಧೈರ್ಯ, ಸಹನೆಗಳೆಂಬ ಆರು ಗುಣಗಳನ್ನು ಸಂಪಾದಿಸಬೇಕು. ಗೋವು, ಉದ್ಯೋಗ, ಕೃಷಿ, ಭಾರ್ಯೆ, ವಿದ್ಯೆ, ವೃಷಲಸ್ನೇಹ—ಇವು ಆರೂ ಕ್ಷಣ ಬಿಟ್ಟರೆ ಸಾಕು ಕೆಡುವವು. ಪೂರ್ವೋಪಕಾರಿಗಳನ್ನು ವಿದ್ಯೆ ಕಲಿತ ಶಿಷ್ಯ, ಮದುವೆಯಾದ ಮಗ, ಭೋಗಿಸಿದ ಜಾರ, ಆರೋಗ್ಯವನ್ನು ಪೊಂದಿದ ರೋಗಿ, ತೀರವನ್ನು ಸೇರಿದ ಯಾತ್ರಿಕ, ದಕ್ಷಿಣೆ ಪಡೆದ ವಿಪ್ರ—ಇವರಾರು ಜನರು ನಿರ್ಲಕ್ಷಿಸುವರು.

'ಆರೋಗ್ಯ, ಸಾಲವಿಲ್ಲದಿರುವಿಕೆ, ಸ್ವಸ್ಥಲವಾಸ, ಸಜ್ಜನಸಹವಾಸ, ಅಧೀನವಿರುವ ಜೀವಿಕೆ, ಅಭಯ—ಇವು ಆರು ಜೀವರಿಗಾಗುವ ಸುಖಗಳು. ಈರ್ಷ್ಯಾಳು, ದಯಾವಂತ, ಅತೃಪ್ತ, ಕೋಪಿಷ್ಠ, ನಿತ್ಯಶಂಕಿತ, ಪರಭಾಗ್ಯ ಜೀವಿ—ಇವರಾರು ದುಃಖಭಾಗಿ ಜನರು. ಕಾಮಕ್ರೋಧಾದಿ ಶತ್ರುಗಳನ್ನು ಜಯಿಸಿದವನು ಪಾಪ ಭಾಜನನಾಗನು.

'ವೈಮರಿತವನಿಂದ ಚೋರರು, ರೋಗಿಗಳಿಂದ ವೈದ್ಯರು, ಕಾಮಿಗಳಿಂದ ವೇಶ್ಯೆಯರು, ಯಜಮಾನನಿಂದ ಯಾಜಕರು, ವಾದಿ ಪ್ರತಿವಾದಿಗಳಿಂದ ರಾಜರು, ಮೂರ್ಖರಿಂದ ಪಂಡಿತರು ಜೀವಿಸುವರು. ರಾಜನು ಸ್ತ್ರೀ, ದ್ಯೂತ, ಪಾನ, ಮೃಗಯಾ, ವಾಕ್ಪಾರುಷ್ಯ, ಕ್ರೂರದಂಡ, ದುಂದುಗಾರಿಕೆ ಎಂಬ ಏಳು ವ್ಯಸನಗಳನ್ನು ಬಿಡಬೇಕು.

'ನಾಶವಾಗುವ ನರನ ದುರ್ಲಕ್ಷಣಗಳನ್ನು ಕೇಳು! ಬ್ರಹ್ಮದ್ವೇಷದಿಂದ ಅವರಿಗೆ ವಿರೋಧವನ್ನು ಮಾಡುವನು; ಅವರ ಸೊತ್ತನ್ನಪಹರಿಸುವನು; ಅವರನ್ನು ಕೊಲ್ಲಿಸುವನು; ಅವರನ್ನು ಬೈದು ಹಿಗ್ಗುವನು; ಅವರ ಸ್ತುತಿಯನ್ನು ಸಹಿಸನು,

ಅವರ ಆಲೋಚನೆ ಕೇಳನು, ಅವರು ಬೇಡಿದರೆ ನೀಡನು, ಇಂತಹ ಬ್ರಹ್ಮದ್ವೇಷ ವನ್ನು ಬಿಟ್ಟವನು ಸುಖಿಸುವನು. ಎಂಟು ಸುಖಗಳನ್ನು ಕೇಳು! ಮಿತ್ರಸಮಾಗಮ, ಧನಲಾಭ, ಪುತ್ರಾಲಿಂಗನ, ಭಾರ್ಯಾಪ್ರೀತಿ, ಪ್ರಿಯವಚನ, ಸ್ವಜನಗೌರವ, ಜನಪೂಜೆ, ಇಷ್ಟಪ್ರಾಪ್ತಿ, ಇವು ಸುಖವನ್ನೀಯುವುವು. ಪ್ರಜ್ಞೆ, ಸತ್ಕುಲ, ದಮ, ವಿದ್ಯೆ, ವೀರ್ಯ, ದಾನ, ವಕ್ತೃತ್ವ, ಕೃತಜ್ಞತೆ ಎಂಬ ಎಂಟು ಗುಣಗಳಿಂದ ಸತ್ಪುರುಷನು ಪ್ರಕಾಶಿಸುವನು.

'ಒಂದು ಮನೆಯಿದೆ; ಅದಕ್ಕೆ ನವದ್ವಾರಗಳು, (ಇಂದ್ರಿಯ) ಮೂರು ಮೂಲ ಗಳು (ತ್ರಿಗುಣ), ಐದು ಸಾಕ್ಷಿಗಳು (ಶಬ್ದಾದಿಗಳು); ಇಲ್ಲಿ ಕ್ಷೇತ್ರಜ್ಞನು (ಶ್ರೀಹರಿ) ಇರುವನು ; ಇಂತು ತಿಳಿದವನೇ ವಿದ್ವಾಂಸಜೀವನು. ಮದ್ಯಪಾಯಿ, ವಿಷಯಾಸಕ್ತ, ಹುಚ್ಚ, ಶ್ರಾಂತ, ಕೋಪನ, ಹಸಿದಿರುವವ, ವೇಗಶೀಲ, ಲುಬ್ಧ, ಭೀತ, ಕಾಮಿ— ಇವರು ಹತ್ತು ಜನರು ಧರ್ಮವನ್ನರಿಯಲಾರರು. ಅವರ ಸ್ನೇಹ ಕೂಡದು.

'ಅಸುರೇಂದ್ರನಾದ ಪ್ರಹ್ಲಾದನು, ತನ್ನ ಮಗನಾದ ವಿರೋಚನನು ಮತ್ತು ಅಂಗಿರಸ ಪುತ್ರನಾದ ಸುಧನ್ವನು ಬಂದು ತನ್ನನ್ನು ಧರ್ಮ ಸಂಶಯವನ್ನು ಬಿಡಿಸಲು ಕೇಳಿದಾಗ ಮಗನೆಂಬ ಪಕ್ಷಪಾತವನ್ನು ಮಾಡದೆ, ಅವನ ಪ್ರಾಣವೇ ಪಣವಾಗಿದೆ ಎಂದು ತಿಳಿದು ಕೂಡ ಹೆದರದೆ, ಸುಧನ್ವನೇ ಶ್ರೇಷ್ಠತರನೆಂದು ನಿರೂಪಿಸಿದನು. ಆ ವಿಪ್ರನು ಮೆಚ್ಚಿದಾಗ ಪುತ್ರ ಭಿಕ್ಷೆಯನ್ನು ಕೇಳಿ, ವಿರೋಚನನನ್ನು ಉಳಿಸಿದನು. ರಾಜರಿಗೆ ಮಕ್ಕಳಾಗಿಲ್ಲವೇ ? ಆದರೆ ಅವರಿಷ್ಟು ದುರ್ಮಾರ್ಗರಾಗಿ ವರ್ತಿಸಿದಾಗ ಉಪೇಕ್ಷಿಸಿ, ಸುಮ್ಮನೆ ಕೂತರೇ ? ಧರ್ಮನಂದನನ ವದನದಿಂದ ಒಂದು ಬಿರು ನುಡಿ ಯನ್ನು ಯಾರಾದರೆಂದಾದರೂ ಕೇಳಿರುವರೇ ? ನಿನ್ನ ಕುಪುತ್ರರು ನಿಕೃಷ್ಟವಚನ ಗಳನ್ನು ನಿನ್ನೆದುರಿಗೇ ಆಡುವಾಗ ನೀನು ನಿವಾರಿಸಿದೆಯಾ ? ನಿನ್ನ ಅವಿನೀತಿಯನ್ನು, ನಿನ್ನ ಪಕ್ಷಪಾತವನ್ನು ಜನರು ನಿಂದಿಸುವುದನ್ನು ಕೇಳಿ, ಕೇಳಿ, ಕಿವಿಗಳು ಕೀವಾಗಿ ನೋಯುತ್ತಿವೆ.

'ಬುದ್ಧಿವಂತನಾದ ರಾಜನು ವಿದ್ಯಾವಂತರನ್ನು ಗೌರವಿಸುವನು. ದುಷ್ಟರನ್ನು ದಂಡಿಸದೆ ಬಿಡನು. ಕ್ಷಮಾ ಕೋಪಗಳನ್ನು ಸಮಯವರಿತು ಬಳಸುವನು. ಬಲ ವಂತರಿಂದ ವಿರೋಧಿಸನು. ಆಪತ್ತಿಗೆ ಹೆದರನು, ಮಿತ್ರರಿಂದ ವಾದಿಸನು, ಪಾಪಿ ಗಳಿಂದ ಕೂಡನು, ಜಂಭವಚನವಾಡನು, ವೈರವನ್ನು ಬೆಳಸನು, ದೇಶ ಕಾಲ ಜಾತಿ ಧರ್ಮಗಳನ್ನು ಪಾಲಿಸುವನು, ಹೀನ ಸಖ್ಯವನ್ನು ಮಾಡನು, ಮಂತ್ರರಹಸ್ಯವನ್ನು ರಕ್ಷಿಸುವನು. ತಾನು ಮಾಡಿದ ಅಕಾರ್ಯಕ್ಕೆ ಪಶ್ಚಾತ್ತಾಪ ಪಡುವನು. ಅಂತಹವನು ಶುದ್ಧನಾಗಿ ಜನರಿಂದ ಪೂಜಿಸಲ್ಪಡುವನು. ನೀನು ಬಾಲರಾದ ಪಾಂಡವರನ್ನು ಪೋಷಿಸಿದೆ ! ವಿದ್ಯೆ ಕಲಿಸಿದೆ ! ಅವರೀಗಲೂ ನಿನ್ನ ಆಜ್ಞೆಯನ್ನು ಪಾಲಿಸುವರು. ಅವರಿಗೆ ಅವರ ರಾಜ್ಯವನ್ನು ಕೊಡು ! ಧರ್ಮವನ್ನು ಪಾಲಿಸು ! ನಿಂದೆಯಿಂದ ಪಾರಾಗು ! ಇಹಲೋಕ ಸುಖವು ಉಳಿಯಲಿ ! ಪರಲೋಕ ಸುಖವು ದೊರಕಲಿ !"

ವಿದುರನ ವಚನಾಮೃತವನ್ನು ಕುಡಿದು, ಧೃತರಾಷ್ಟ್ರನು ಸಾಕೆನಿಸದೆ ಮತ್ತೆ ಧರ್ಮೋಪದೇಶವನ್ನು, ಕುಲಹಿತವನ್ನು ಕೇಳಿದನು. ಆಗ ವಿದುರನು ಭೋರ್ಗಲ್ಲ ಮೇಲೆ ನೀರೆರೆದಂತೆ ವ್ಯರ್ಥವೆಂದರಿತೂ, ಹಂಸನಾಮ ಗಂಧರ್ವಾಂಶನಾದ ಧೃತರಾಷ್ಟ್ರನು ಅಣ್ಣನಾಗಿರುವುದರಿಂದ, ಮತ್ತೆ ಇಂತು ನುಡಿದನು—

'ನೀ ಕೇಳಿದೆಯಾದುದರಿಂದ ಹೇಳುತ್ತಿರುವೆನು. ಕೇಳಿದವರಿಗಲ್ಲದೆ ಇತರರಿಗೆ ಶುಭಾಶುಭಗಳನ್ನಾಗಲಿ, ಪ್ರಿಯಾಪ್ರಿಯಗಳನ್ನಾಗಲಿ ಹೇಳಬಾರದು. ಧರ್ಮದ ಮಾತನ್ನರುಹುವೆನು. ಕೇಳು ! ಕಾಪಟ್ಯದಿಂದ ಕೂಡಿದ ಕರ್ಮಗಳಿಂದ ತಾತ್ಕಾಲಿಕ ಸುಖವಾದೀತು ! ಆದರೂ ಅದರಿಂದ ಪಾಪವು ಹೆಚ್ಚಿ, ಪಶ್ಚಾತ್ತಾಪವನ್ನೂ ದುಃಖವನ್ನೂ ಉಂಟುಮಾಡುವುದು. ವಿಧಿವಿಹಿತವಾದ ಸತ್ಕರ್ಮವು ಸಿದ್ಧಿಸದಿರುವುದುಂಟು. ಆದರೂ ಅದರ ಫಲವು ಕಾಲಾಂತರದಲ್ಲಿ ಅಥವಾ ಜನ್ಮಾಂತರದಲ್ಲಾದರು ಆಗುವುದು. ಭಾರೀ ಕೆಲಸವನ್ನು ಸುಜನರ ಸಹಾಯದಿಂದ ಮಾಡಬೇಕು. ಆಗ ಆ ಕಾರ್ಯವು ಸಿದ್ಧಿಸುವುದು.

'ರಾಜ್ಯದ ಸಿರಿಯು ಕೈಗೆ ಬಂದಿತೆಂದು ಅನ್ಯಾಯ ಕಾರ್ಯವನ್ನು ಮಾಡಬಾರದು. ಉತ್ತಮರೂಪವನ್ನು ಮುಪ್ಪಿನಂತೆ, ಅವಿನೀತಿಯು ಸಂಪತ್ತನ್ನು ಕೆಡಿಸುವುದು. ಲೋಭಿಯು ಅರ್ಥವನ್ನಾಶಿಸಿ, ಮೀನವು ಗಾಳವನ್ನು ನುಂಗುವಂತೆ, ಎಲ್ಲವನ್ನೂ ಆಶಿಸಿ ಕೆಡುವನು. ನುಂಗಿದರೆ ಜೀರ್ಣವಾಗಬೇಕು. ಜೀರ್ಣವಾದೊಡೆ ಹಿತವಾಗಬೇಕು. ಅಂತಹದನ್ನೇ ಬುದ್ಧಿವಂತನು ಭುಜಿಸುವನು. ಕಸುಕಾಯನ್ನು ಕಿತ್ತಿದವನಿಗೆ ರಸವಿಲ್ಲ; ಆ ಕಾಯಿಯು ಬೀಜವಾಗುವುದೂ ಇಲ್ಲ. ಕಾಲವನ್ನು ನಿರೀಕ್ಷಿಸಿ ಹಣ್ಣನ್ನು ತಿಂದವನಿಗೆ ರಸವೂ ಉಂಟು. ಬೀಜವೂ ಸಿಗುವುದು. ಮಧುವನ್ನು ಹೀರುವ ಮಧುಕರದಂತೆ ಪರಹಿಂಸೆ ಮಾಡದೆ ನರನು ಅರ್ಥವನ್ನು ಸಂಪಾದಿಸಬೇಕು. ಮಾಲಾಕಾರನಂತೆ ಹೂವನ್ನಾರಿಸಬೇಕಾಗಲಿ, ಅಂಗಾರಕಾರನಂತೆ ಬುಡವನ್ನು ಕಡಿಯಬಾರದು. ಕೆಲ ಕಾರ್ಯಗಳು ದೈವದಿಂದಲೇ ಸಿದ್ಧಿಸುವುವು ಎನ್ನಲು ದುಃಖವೇ ಸಾಕ್ಷಿ. ಸಣ್ಣಬುಡವಿದ್ದರೂ ಮಹಾಫಲವಿರುವ ಕಾರ್ಯಗಳನ್ನು ಬುದ್ಧಿವಂತನು ಬಿಡದೆ ಮಾಡುವನು. ಎಲ್ಲರನ್ನೂ ಪ್ರಸನ್ನನೇತ್ರನಾಗಿ ನೋಡುವವನು ಜನಪ್ರೀತಿಯನ್ನು ಗಳಿಸುವನು.

'ನೀತಿಕುಶಲನಾದ ರಾಜನು ಕಣ್ಣಲ್ಲಿ ದಯದೋರಬೇಕು. ಕೈಯಿಂದ ಕಾಸು ಕೊಡಬಾರದು ; ಕಾಸು ಕೊಟ್ಟರೂ ಸೇವಕರ ಅಧೀನನಾಗಬಾರದು ; ಅಂತರ್ ಬಲಹೀನನಾದರೂ, ಬಲವಂತನಂತೆ ತೋರಬೇಕು ; ಅಳಬಾರದು, ದಾನ ಕೊಡಬೇಕು. ಇತರರಿಗೆ ಭಯಂಕರನಾಗಬಾರದು ; ಧರ್ಮವನ್ನು ಬಿಟ್ಟು ಅಧರ್ಮವನ್ನು ಮಾಡುವವನ ಐಶ್ವರ್ಯವು ಅಗ್ನಿಯಲ್ಲಿಟ್ಟಚರ್ಮದಂತೆ ಸಂಕುಚಿತವಾಗಿ ಫಲಪ್ರದವಾಗದು. ಕಲ್ಲಿನಿಂದ ಬಂಗಾರವನ್ನು ಪಡೆದಂತೆ ಬಾಲರಿಂದ, ಉನ್ಮತ್ತರಿಂದ ಕೂಡ ಸಾರವಚನವನ್ನು ಆಲಿಸಿ ಪಾಲಿಸಬೇಕು. ಒಳ್ಳೆಯ ಮಾತುಗಳನ್ನು ಪಾರಾವತವು ಕಲ್ಲಲ್ಲಿ ಕಾಳನ್ನಾರಿಸುವಂತೆ, ಆರಿಸಿ, ನೆನಪಿನಲ್ಲಿಡಬೇಕು.

ಗೋವುಗಳು ಗಂಧದಿಂದಲು, ವಿಪ್ರರು ವೇದಗಳಿಂದಲು, ರಾಜರು ಚಾರರಿಂದಲು ನೋಡುವರು ; ಸಾಮಾನ್ಯರು ಬರಿಗಣ್ಣಿನಿಂದ ನೋಡಿ ತಿಳಿವರು. ಕರೆಸುವ ಆಕಳನ್ನು ಹಿಂಸಿಸರು ; ಕರೆಯದುದನ್ನು ಕಟ್ಟಿ ಹಿಂಡುವರು ; ತಾನಾಗಿ ಬಗ್ಗಿದ ಬಿದುರನ್ನು ಯಾರೂ ಕಾಸಿ ಬಾಗಿಸರು. ಬಲವಂತನಿಗೆ ಬಾಗಿ ನಡೆದರೆ ಬಾಳು ಸುಖವಾಗುವುದು. ಬಲವಂತರಿಗೆ ನಮಿಸಿದರೆ ಇಂದ್ರನಿಗೆ ನಮಿಸಿದಂತಾಗಿ, ವಿನಯದಿಂದ ಬಾಗಿದವರನ್ನು ಇಂದ್ರನು ರಕ್ಷಿಸುವನು. ಪಶುಗಳಿಗೆ ಪರ್ಜನ್ಯನು ಬಂಧುವು ; ರಾಜರಿಗೆ ಮಂತ್ರಿಗಳು, ಸತಿಯರಿಗೆ ಪತಿಗಳು, ವಿಪ್ರರಿಗೆ ವೇದಗಳು ಬಂಧುಗಳಂತೆ ಕಾಪಾಡುವುವು. ನಡತೆ ಕೆಟ್ಟವನಿಗೆ ಕುಲದಿಂದ ಹಿರಿಮೆ ಇಲ್ಲ. ಎಲ್ಲ ಜಾತಿಯವರೂ ನಡತೆಯಿಂದ ಶ್ರೇಷ್ಠರೆನಿಸಿ ತಮ್ಮ ಜಾತಿಯಲ್ಲಿ ಪೂಜ್ಯರೆನಿಸುವರು. ಪರರ ಸಂಪತ್ತು, ರೂಪ, ವೀರ್ಯ, ಕುಲ, ಸುಖ ಸೌಭಾಗ್ಯಗಳನ್ನು ಕಂಡು ಕುದಿಯುವ ನರನ ಅಸೂಯಾ ರೋಗಕ್ಕೆ ಮದ್ದಿಲ್ಲ. ವಿದ್ಯಾ ಧನ ಕುಲಗಳು ದುಷ್ಟರಿಗೆ ಮದವನ್ನೀಯುವವು ; ಅವೇ ಸುಜನರಿಗೆ ದಮವನ್ನೀಯುವವು. ಸಜ್ಜನರು ಬೇಡಿದರೂ ಬಿಡದೆ ಅವರ ಕಾರ್ಯಕ್ಕೆ ವಿಘ್ನವನ್ನು ಮಾಡುವ ದುರ್ಮಾರ್ಗರು ತಾವೇ ಸುಜನರೆಂದು ತಿಳಿದು ಕೊಬ್ಬಿರುವರು. ಸಜ್ಜನರೇ ಸುಜನರಿಗೂ ದುರ್ಜನರಿಗೂ ಗತಿಯಾಗುವರು ; ದುಷ್ಟರು ಯಾರಿಗೂ ಎಂದಿಗೂ ರಕ್ಷಕರಾಗುವುದಿಲ್ಲ. ವಸ್ತ್ರಭೂಷಿತನು ಸಭೆಯನ್ನು, ವಿದ್ವತ್ಸಭೆಯನ್ನು ವಚನ-ರಚನಾ ಚತುರನು, ವಾಹನವಂತನು ಮಾರ್ಗವನ್ನು, ಸರ್ವವನ್ನು ಶೀಲವಂತನು ಗೆದ್ದಿರುವನು. ಶೀಲವಿಲ್ಲದವನು ಹಾಳಾದನೆಂದು ತಿಳಿ ! ಅವನು ಬದುಕಿದ್ದೂ ಸತ್ತಂತೇ ಸರಿ !

' ಧನವಂತರು ತುಪ್ಪ ತಿಂದು ದಪ್ಪವಾಗಬಹುದು; ಮಧ್ಯಮರು ಮಜ್ಜಿಗೆ ಹಾಲಿನಿಂದ ತೃಪ್ತರಾಗಬಹುದು; ದರಿದ್ರರು ಉಪ್ಪು ಎಣ್ಣೆಗಳಿಂದ ಊಟ ಮುಗಿಸಬಹುದು; ಆದರೂ ದರಿದ್ರರು ಹಸಿವೆಯಿಂದ ತಿಂದ ಕದನ್ನವೂ ಮಿಷ್ಟವೆನಿಸುವುದು; ಧನವಂತರಿಗೆ ಧನವಿದೆ, ಹಸಿವೆ ಇಲ್ಲ; ದರಿದ್ರರು ಕಟ್ಟಿಗೆ ತಿಂದು ಕರಗಿಸಿಕೊಂಬುವರು; ಧನವಂತರು ತಿಂದ ತುಪ್ಪ ಕರಗದೆ ಕೊಬ್ಬಾಗುವುದು. ಜೀವಿತಕ್ಕಾಗಿ ಅಳುವವರು ಅಧಮರು; ಮರಣಕ್ಕಾಗಿ ಅಂಜುವವರು ಮಧ್ಯಮರು; ಅವಮಾನಕ್ಕಾಗಿ ನೋಯುವವರು ಉತ್ತಮರು. ನೀಚರು ದುರ್ಜಯವಾದ ಇಂದ್ರಿಯಗಳಿಗೆ ದಾಸರಾಗಿ, ಸೂರ್ಯಕಿರಣಗಳಿಗೆ ಸಿಕ್ಕ ನಕ್ಷತ್ರಗಳಂತೆ ತಪಿಸಿ, ತೇಜೋಹೀನರಾಗುವರು. ತನ್ನ ಮನವನ್ನು ಗೆಲ್ಲದೆ ಪುತ್ರ ಮಂತ್ರಿಗಳನ್ನು ಗೆಲ್ಲಲಾಗದು ; ಪುತ್ರರನ್ನು ದಂಡಿಸಲಾರದವನು ಶತ್ರುಗಳನ್ನೇನು ಗೆಲ್ಲುವನು ? ಪಾಂಡವರು ಅಧನರಾದರೂ ತಮ್ಮನ್ನು ಸೇರಿರುವ ರಾಜರನ್ನು ವಶದಲ್ಲಿಟ್ಟು ಆಳಲು ಅವರು ಜಿತಮನಸ್ಕರಾಗಿರುವುದೇ ಕಾರಣವು. ಶರೀರವೆಂಬ ರಥದಲ್ಲಿ ಇಂದ್ರಿಯಾಶ್ವಗಳನ್ನು ಹೂಡಿ, ಧೀರನಾದ ಜೀವ ರಥಿಕನು ಕ್ಷೇಮವನ್ನು ಸೇರುವನು. ಆ ಕುದುರೆಗಳನ್ನು ಹರಿಬಿಟ್ಟು ಬೇಕಾದಂತೆ ಓಡಿಸಿದರೆ ಅಪಾಯವು ತಪ್ಪದು. ಕೆಟ್ಟ ಧನವನ್ನು ಅನ್ಯಾಯದಿಂದ ಪೊಂದುವ ಮೂರ್ಖನು ಕೊನೆಗೆ

ದುಃಖವನ್ನೇ ಹೊಂದುವನು. ಅರ್ಥ ಧರ್ಮಗಳನ್ನು ಬಿಟ್ಟು ಕುಡುಕನಂತಿರುವ ನರನು ಬೇಗ ಹಾಳಾಗುವನು. ಆದುದರಿಂದ ಮನಸ್ಸಿನಿಂದ ಶ್ರೀಹರಿಯ ವಿಚಾರವನ್ನು ಮಾಡ ಬೇಕು. ಇಂದ್ರಿಯ ಜಯವಂತವಾದ ಮನಸ್ಸೇ ಜೀವ ಬಂಧುವು. ಇಂದ್ರಿಯ ವಶ ವಿಲ್ಲದ ಮನಸ್ಸೇ ಜೀವಶತ್ರುವು. ಸಣ್ಣ ದಾರದ ಬಲೆಯಿಂದ ಕಾಮ ಕ್ರೋಧಗಳೆಂಬ ಮೀನುಗಳನ್ನು ಹಿಡಿಯಲಾಗದು; ಅವನ್ನು ಕೊಲ್ಲಲು ಮಹಾ ಪ್ರಯತ್ನ ಬೇಕು. ರಾವಣಾದಿ ಬಲವದ್ರಾಜರು ಕೂಡ ಇಂದ್ರಿಯ ದಾಸರಾಗಿ ಕೆಟ್ಟರಲ್ಲವೇ ? ಒಣ ಕಟ್ಟಿಗೆಯ ಜತೆಯಲ್ಲಿದ್ದ ಹಸಿ ಕಟ್ಟಿಗೆಯು ಸುಟ್ಟು ಹೋಗುವಂತೆ, ಪಾಪಿಯ ಸಂಗ ದಲ್ಲಿದ್ದ ಸುಜನನೂ ನಷ್ಟನಾಗುವನು.

'ಕೆಟ್ಟ ಮಾತು, ನಿಂದಾ ವಚನಗಳಿಂದ ದುಷ್ಟರು ಸುಜನರನ್ನು ಪೀಡಿಸುವರು. ಕೊನೆಗೆ ಅವರೇ ಕೆಡುವರು; ಸುಜನರು ನಿಂದಾ ಮುಕ್ತರಾಗಿ ಸುಖಿಸುವರು. ಅಸಾಧು ಗಳಿಗೆ ಪರ ಹಿಂಸೆಯೇ ಬಲ; ರಾಜರಿಗೆ ದಂಡವೇ ಬಲ; ಸ್ತ್ರೀ ಜನರಿಗೆ ಸೇವೆಯೇ ಬಲ; ಗುಣವಂತರಿಗೆ ಕ್ಷಮೆಯೇ ಬಲ; ಮಾತನ್ನು ಮೀರದಂತಾಡಬಲ್ಲವನೇ ಪಂಡಿತನು. ಕೊಡಲಿಯಿಂದ ಕಡಿದ ವನವು ಮತ್ತೆ ಬೆಳೆಯುವುದು. ಆದರೆ ದುರ್ವಚನ ದಿಂದ ಆದ ಗಾಯವು ಎಂದಿಗೂ ಮಾಯದು. ವಾಗ್ಬಾಣವು ನಟ್ಟ ಕಿತ್ತಲು ಬಾರ ದಂತಾಗಿರುವುದು. ಬುದ್ಧಿಯು ದೇವ ಕೋಪದಿಂದ ಕೆಡಲು, ದುಷ್ಟನು ದುರ್ಭಾಷಣ ವನ್ನೂ ದುಷ್ಕಾರ್ಯವನ್ನು ಮಾಡಿ, ಸುಜನರನ್ನು ಕೆಡಿಸಲು ಪ್ರಯತ್ನಿಸಿ, ತಾನೇ ಕೆಡುವನು. ನಿನ್ನ ಪುತ್ರರೂ ಸುಜನ ಶಿರೋಮಣಿಗಳಾದ ಪಾಂಡು ಪುತ್ರರ ವೈರದಿಂದ ಕೆಡಲಿರುವರು. ಧರ್ಮರಾಜನು ದಯಾಪೂರ್ಣನಾದುದರಿಂದ ಕ್ರೂರ ಕರ್ಮವನ್ನು ಮಾಡದೆ, ನಿನ್ನ ಮುಖ ನೋಡಿ, ಸುಮ್ಮನಿರುವನು.

'ಸರ್ವತೀರ್ಥ ಸ್ನಾನಕ್ಕಿಂತಲೂ ಆರ್ಜವವೇ ದೊಡ್ಡದಾಗಿದೆ. ಮನಸಾ, ವಾಚಾ ಕಾಯೇನ ಬೇರೆ ಬೇರೆಯಾಗಿರುವ ನಿನ್ನ ಮಕ್ಕಳನ್ನು ದಂಡಿಸು; ಒಂದೇ ಆಗಿರುವ ಪಾಂಡವರಿಗೆ ಅವರ ರಾಜ್ಯವನ್ನು ಕೊಡು ! ಅಂತಾದರೆ ನಿನಗೆ ಇಲ್ಲಿ ಕೀರ್ತಿ; ಅಲ್ಲಿ ಪುಣ್ಯ ಲೋಕಗಳು; ಕೀರ್ತಿಯು ಭೂಮಿಯಲ್ಲಿರುವವರೆಗೂ, ನರನು ಸ್ವರ್ಗದಲ್ಲಿ ಸುಖಿಸುತ್ತಿರುವನು.

'ಹಿಂದೆ ಕೇಶಿನಿಯ ಸ್ವಯಂವರಕ್ಕೆಂದು ವಿರೋಚನನೆಂಬ ದೈತೇಯನು ಬಂದನು. ಸುಧನ್ವನೆಂಬ ವಿಪ್ರನೂ ಬಂದನು. ಕೇಶಿನಿಯು ಅವನನ್ನು ನೋಡಿ, 'ಸುಧನ್ವನು ವಿಪ್ರನು ! ನೀನು ದೈತ್ಯನು; ಅವನು ಉತ್ತಮನಾಗಿರಲು, ಅವನನ್ನೇಕೆ ಸ್ವಾಗತಿಸ ಬಾರದು' ಎಂದಳು. ವಿರೋಚನನು 'ನಾವು ಕಶ್ಯಪ ಪ್ರಜಾಪತಿಯ ಮಕ್ಕಳು, ನಮಗೆ ದೇವ ವಿಪ್ರರು ಸಮರಲ್ಲ' ಎಂದನು. ಮರುದಿನ ಬೆಳಿಗ್ಗೆ ಅವರನ್ನಿಬ್ಬರನ್ನು ಬರುವಂತೆ ಹೇಳಿ, ಕೇಶಿನಿ ಕಳಿಸಿದಳು. ಬೆಳಗಾಗುತ್ತಲೇ ವಿರೋಚನನು ಬಂದು ಸ್ವರ್ಣಾಸನದಲ್ಲಿ ಕೂತನು. ಸುಧನ್ವನು ಬಂದುದನ್ನು ನೋಡಿ, ದೈತ್ಯರಾಜನು ತನ್ನ ಸಮಾಸನದಲ್ಲಿ ಕೂಡೆಂದನು. ವಿಪ್ರನು ಅವನ ಸಿಂಹಾಸನವನ್ನು ಸುಮ್ಮನೆ ಮುಟ್ಟಿ

ಅವನಿಗೆ ಸಮವಾಗಿ ಕೂಡುವುದಿಲ್ಲವೆಂದನು. ವಿರೋಚನನು ಸಿಟ್ಟಾಗಿ 'ಅಹುದು ! ನೀನು ಸ್ವರ್ಣಸಿಂಹಾಸನವನ್ನೇರಲರ್ಹನಲ್ಲ. ಮಣೆಯೋ ದರ್ಭಾಸನವೋ ನಿನಗೆ ಸರಿ! ಎಂದು ಹಂಗಿಸಿದನು. ಸುಧನ್ವನು 'ಹಾಗಲ್ಲ ! ತಂದೆ ಮಕ್ಕಳು, ಇಬ್ಬರು ವಿಪ್ರರು ಇಬ್ಬರು ಕ್ಷತ್ರಿಯರು, ಹೀಗೆ ಸಮಾಸನದಲ್ಲಿ ಕೂಡಬಹುದು. ನಿಮ್ಮ ತಂದೆಯು ಕೂಡ ಕೆಳಗಿದ್ದು ನಮ್ಮನ್ನು ಸೇವಿಸುವನು. ನೀನು ಸುಖವಾಗಿ ಮನೆಯಲ್ಲಿ ಬೆಳೆದ ಬಾಲಕನು ನಿನಗೆ ಗೊತ್ತಿಲ್ಲ' ಎಂದನು. ಇಂತು ಕಾದಾಡಿ, ಅವರೀರ್ವರು ಪ್ರಾಣ ಪಣವನ್ನೊಡ್ಡಿ ಪ್ರಹ್ಲಾದನನ್ನೇ ಸೇರಿ, ಧರ್ಮ ನಿರ್ಣಯವನ್ನು ಮಾಡೆಂದರು.

ಪ್ರಹ್ಲಾದನಿತ್ತ ಮಧುಪರ್ಕಾದಿ ಪೂಜೆಯನ್ನು ತಡೆದು, ಸುಧನ್ವನು ನಡೆದು ದನ್ನು ತಿಳಿಸಿ, ಬ್ರಾಹ್ಮಣನಕಿಂತಲೂ ವಿರೋಚನನು ದೊಡ್ಡವನೇನೆಂದು ಕೇಳಿದನು. ಪ್ರಹ್ಲಾದನು ಮಗನ ವಿಷಯವೆಂದು ಸಂಕೋಚಿಸಲು ನೋಡಿ, ಸುಧನ್ವನು 'ಮಗ ನಿಗೆ ಧನವನ್ನು ಕೊಡು! ವಿವಾದವು ಬಂದಾಗ ಯಥಾರ್ಥವನ್ನು ತಿಳಿಸು! ಎಂದನು. 'ತಿಳಿಸದಿರೆ ಏನಾಗುವುದೆಂ'ದ ಪ್ರಹ್ಲಾದನಿಗೆ ಸುಧನ್ವನು 'ಸವತಿಯನ್ನು ಸೇರಿದ ಗಂಡ ನನ್ನು ಕಂಡು, ರಾತ್ರಿಯಲ್ಲಿ ಕುಂದುವ ಮಡದಿಗಾಗುವ ದುಃಖವು ; ಜೂಜಾಡಿ ಸೋತವನಿಗಾಗುವ ದುಃಖವು; ಭಾರವನ್ನು ಹೊತ್ತು ನೊಂದವನ ದುಃಖವು; ದುಷ್ಟ ಸಾಕ್ಷಿ ಹೇಳಿದವನಿಗಾಗುವುದು. ನಗರ ದ್ವಾರದಲ್ಲಿ ಹಸಿದು ನಿಂತವನಿಗೆ ಶತ್ರು ಜನರು ಕಂಡರೆ ಆಗುವ ದುಃಖವು ; ಸುಳ್ಳು ಧರ್ಮವನ್ನು ಹೇಳಿದವನಿಗಾಗುವುದು. ಪಶುವಿ ಗಾಗಿ ಸುಳ್ಳನ್ನಾಡಿದರೆ ಐದು ತಲೆವರೆಗೂ ಪಿತೃಗಳು ಪುಣ್ಯಲೋಕದಿಂದ ಬೀಳುವರು, ಗೋವಿಗಾಗಿ ಸುಳ್ಳಾಡಿದರೆ ಹತ್ತು ತಲೆ, ಕುದುರೆಗಾಗಿ ನೂರು ತಲೆ, ಪುರುಷನಿಗಾಗಿ ಸಾವಿರ ತಲೆ, ಬಂಗಾರಕ್ಕಾಗಿ ಹಿಂದು ಮುಂದಿನ ನೂರಾರು ತಲೆಮಾರುಗಳು, ಭೂಮಿಗಾಗಿ (ಕನ್ಯೆ) ಸುಳ್ಳಾಡಿದರೆ ಸರ್ವವೂ ಹಾಳಾಗುವುದು. ಭೂಮಿಯಂತಿರುವ ಕೇಶಿನಿಗಾಗಿ ಬಂದಿರುವ ನಮ್ಮೀರ್ವರಲ್ಲಿ ಯಾರು ಶ್ರೇಷ್ಠರು ನಿಜ ಹೇಳು!' ಎಂದನು. ಪ್ರಹ್ಲಾದನು, 'ನನಕಿಂತಲು ಅಂಗಿರಸನು ದೊಡ್ಡವನು. ಇವನ ತಾಯಿಕಿಂತಲು ನಿಮ್ಮ ತಾಯಿ ದೊಡ್ಡವಳು. ಸುಧನ್ವ ! ನೀನು ವಿರೋಚನನಿಗೆ ಬಲು ದೊಡ್ಡವನು. ಬ್ರಾಹ್ಮಣೋತ್ತಮನಾದ ನಿನ್ನನ್ನು ಮಗನ ಪ್ರಾಣಕ್ಕಾಗಿ ಬೇಡುವ ನನ್ನಲ್ಲಿ ಕೃಪೆ ಮಾಡು!' ಎಂದನು. ಸುಧನ್ವನು 'ಹಾಗೆ ಆಗಲಿ! ಆದರೆ ನನ್ನೆದುರಿಗೆ ವಿರೋಚನನು ಕೇಶಿನಿಯ ಪಾದಗಳನ್ನು ಹರಿದ್ರೋದಕದಿಂದ ತೊಳೆಯಬೇಕೆ'ಂದನು. ಧರ್ಮವನ್ನು ನುಡಿದ ಪ್ರಹ್ಲಾದನನ್ನು ಕೊಂಡಾಡುತ್ತಾ ಸುಧನ್ವನು ಕೇಶಿನಿಯನ್ನು ಸೇರಪೋದನು.

'ರಾಜೇಂದ್ರ! ಭೂಮಿಗಾಗಿ ಸುಳ್ಳಾಡಬೇಡ! ಸಸುತಾಮಾತ್ಯನಾಗಿ ಕೆಡಬೇಡ! ದೇವತೆಗಳು ಕುರುಬರಂತೆ ಕೋಲ ಪಿಡಿದು, ನಿಂತು ರಕ್ಷಿಸುವವರಲ್ಲ; ಒಳ್ಳೆಯ ಬುದ್ಧಿ ಯನ್ನಿತ್ತು ಕಾಪಾಡುವರು. ನಾವು ಸತ್ಕಾರ್ಯಗಳನ್ನು ಮಾಡಿದರೆ, ದೇವಸಹಾಯ ದಿಂದ ಅವು ಸಿದ್ಧಿಸುವವು. ವೇದವನ್ನೋದಿದ ಮಾತ್ರದಿಂದ ಕಪಟಿಗೆ ಪಾಪಲೇಪ ವಿಲ್ಲೆಂದು ತಿಳಿಯಬೇಡ ! ರೆಕ್ಕೆ ಬಂದ ಹಕ್ಕಿಗಳು ಕೂಡುವ ಕೋಲನ್ನು ಬಿಟ್ಟೋಡು

ವಂತೆ, ಅಂತಹವನನ್ನು ವೇದವಿದ್ಯೆ ಬಿಟ್ಟೋಡುವುದು. ಮನೆಗೆ ಬೆಂಕಿ ಇಟ್ಟವನು, ವಿಷವನ್ನಿಟ್ಟವನು, ಭಗ ಭಕ್ಷಕನು, ಸೋಮರಸ ವಿಕ್ರಯ ಕರ್ತನು, ಶರಕಾರನು, ಪರದೋಷ ಮಾತ್ರ ಸೂಚಕನು, ಮಿತ್ರದ್ರೋಹಿಯು, ಪರದಾರಾರತನು, ಗುರುತಲ್ಪ ಗಮನನು, ಮದ್ಯಪಾಯಿಯು, ನಾಸ್ತಿಕ, ಮಹಾತೀಕ್ಷ್ಣ ವೇದನಿಂದಕ, ಸುಂಕದಾರ, ಮೊದಲಾದವರು ಬ್ರಹ್ಮಹಂತಕರಿಗೆ ಸಮರಾದ ಪಾಪಿಗಳು. ಅಗ್ನಿಯಿಂದ ಬಂಗಾರವನ್ನು, ವ್ಯವಹಾರದಿಂದ ಸುಜನನನ್ನು, ಭಯ ಸಮಯದಲ್ಲಿ ಶೂರನನ್ನು, ದಾರಿದ್ರ್ಯದಲ್ಲಿ ಧೀರನನ್ನು, ಆಪತ್ತಿನಲ್ಲಿ ಮಿತ್ರ ಶತ್ರುಗಳನ್ನು ಪರೀಕ್ಷಿಸಿ, ತಿಳಿಯ ಬಹುದು.

'ಜರೆಯು ರೂಪವನ್ನು, ಆಶೆಯು ಧೈರ್ಯವನ್ನು, ಮೃತ್ಯುವು ಪ್ರಾಣವನ್ನು, ಅಸೂಯೆ ಧರ್ಮವನ್ನು, ಕೋಪವು ಸಂಪತ್ತನ್ನು, ದುಷ್ಟಸಂಗವು ಶೀಲವನ್ನು, ಕಾಮವು ಲಜ್ಜೆಯನ್ನು, ಅಭಿಮಾನವು ಎಲ್ಲವನ್ನೂ ಹರಿಸಿಬಿಡುವುದು. ಒಳ್ಳೆಯ ಕೆಲಸದಿಂದ ಹುಟ್ಟಿದ ಸಂಪತ್ತು, ಬುದ್ಧಿಯಿಂದ ಬೆಳೆದು, ಸಾಮರ್ಥ್ಯದಿಂದ ಬೇರು ಬಿಟ್ಟು, ನೀತಿಯಿಂದ ನಿಲ್ಲುವುದು. ಯಜ್ಞ, ದಾನ, ತಪೋ, ವೇದಾಧ್ಯಯನಗಳು ನಾಲ್ಕು ಸ್ವರ್ಗ ಸಾಧನಗಳು. ದಮ, ಸತ್ಯ, ಆರ್ಜವ, ದಯೆಗಳು ಸ್ವರ್ಗದಲ್ಲೂ ಹಿಂಬಾಲಿಸಿ, ಧರ್ಮವನ್ನು ಬೆಳೆಸುವುವು. ಯಜ್ಞ, ಅಧ್ಯಯನ, ದಾನ, ತಪಸ್ಸು ಗಳನ್ನು ದಂಭಕ್ಕಾಗಿಯು ಮಾಡುವುದುಂಟು. ಆದರೆ ಸತ್ಯ, ದಯಾ, ಕ್ಷಮಾ, ಔದಾರ್ಯಗಳು ದಂಭವಿಲ್ಲದ ಮಹಾತ್ಮರಲ್ಲೇ ಕಾಣಬರುತ್ತವೆ. ವೃದ್ಧರಿಲ್ಲದುದು ಸಭೆ ಯಲ್ಲ. ಧರ್ಮವನ್ನು ನುಡಿಯದವರು ವೃದ್ಧರಲ್ಲ. ಸತ್ಯವಲ್ಲದುದು ಧರ್ಮವಲ್ಲ. ಅಂತಹ ಸತ್ಯವೂ ಕಪಟರಹಿತವಾಗಿರಬೇಕು. ಪಾಪವು ಬುದ್ಧಿಯನ್ನು ಕೆಡಿಸಿ, ಪಾಪವನ್ನೇ ಮಾಡಿಸುವುದು. ಪುಣ್ಯವು ಬುದ್ಧಿಯನ್ನು ತಿದ್ದಿ, ಪುಣ್ಯವನ್ನೇ ಮಾಡಿಸುವುದು.

'ರಾತ್ರಿಯನ್ನು ಸುಖವಾಗಿ ಕಳೆಯಬೇಕೆಂದರೆ ದೀಪಾದಿ ಸಾಧನಗಳನ್ನು ಹಗಲೇ ಸಂಗ್ರಹಿಸಬೇಕು. ವರ್ಷಾಕಾಲದಲ್ಲಿ ನೆಮ್ಮದಿಯಾಗಿರಲು ಮಿಕ್ಕೆಂಟು ತಿಂಗಳು ದುಡಿ ದಿಡಬೇಕು. ವೃದ್ಧನಾಗಿ ಸುಖಪಡಲು ಯೌವನದಲ್ಲಿ ಶ್ರಮಿಸಬೇಕು. ಅಂತೆಯೇ ಪರಲೋಕ ಸುಖಕ್ಕಾಗಿ ಇಲ್ಲಿ ದಾನ, ಸತ್ಯ ತಪೋವ್ರತಗಳನ್ನು ಆಚರಿಸಬೇಕು. ಜೀರ್ಣವಾದಮೇಲೆ ಅನ್ನವು ನಮ್ಮದಾಗುವುದು. ಯೌವನದಲ್ಲಿ ಶೀಲವತಿಯಾಗಿದ್ದು ಮುಪ್ಪಾದ ಹೆಂಡತಿಯನ್ನು, ಗೆದ್ದು ಬಂದ ಶೂರನನ್ನು, ತತ್ವಜ್ಞಾನವನ್ನು ಪೊಂದಿದ ತಪಸ್ವಿಯನ್ನು—ಆಗ ಸತಿ ಶೂರ ಯೋಗಿಗಳೆಂದು ಮೆಚ್ಚಬಹುದು. ಮುನಿಗಳಿಗೆ ಗುರುವು, ದುಷ್ಟರಿಗೆ ರಾಜ ಶಾಸಕನಾದರೆ, ಪ್ರಚ್ಛನ್ನ ಪಾಪಿಗಳಿಗೆ ದಂಡಧರನಾದ ಯಮರಾಜನೇ ಶಾಸಕನು. ಶೂರನು, ವಿದ್ಯಾವಂತನು, ಸೇವಾಚತುರನು ಈ ಮೂವರು ಭೂಮಿಯಿಂದ ಸುವರ್ಣಪುಷ್ಪಗಳನ್ನು ಆರಿಸಿ ಪಡೆವರು. ರಾಜ್ಯಪಾಲನ ಉಪದೇಶಾದಿ ಬುದ್ಧಿಕಾರ್ಯವು ಉತ್ತಮವು. ಕೃಷಿವಾಣಿಜ್ಯಾದಿ ಬಾಹುಕರ್ಮವು ಮಧ್ಯಮವು. ಕಾಷ್ಟ ವಹನಾದಿ ಶ್ರಮಸಾಧ್ಯ ಕಾರ್ಯಗಳು ಅವರವೆನಿಸುವುವು.

ಅವರ ಕರ್ಮವನ್ನು ವಿಪ್ರರಾಜರೆಂದಿಗೂ ಮಾಡಬಾರದು. ನೀಚರಾದ ದುರ್ಯೋಧ ನಾದಿಗಳನ್ನು ನಂಬಿ ಪಾಂಡವರಿಂದ ರಾಜ್ಯವನ್ನು ಕಸಿಯುವೆನೆಂಬ ನೀನು ಕೊನೆಗೆ ಹತಾಶನಾಗುವೆ ! ಸರ್ವಗುಣಸಂಪನ್ನರಾದ ಪಾಂಡವರು ನಿನ್ನನ್ನು ತಂದೆ ಎಂದೇ ತಿಳಿದಿರುವರು. ನೀನೂ ಅವರನ್ನು ಮಕ್ಕಳಂತೆ ನೋಡಿ ನಡೆ !

## ವಿದುರನೀತಿ—೨

ವಿದುರನು, 'ಧೃತರಾಷ್ಟ್ರ ! ಒಂದುಕಥೆ ಹೇಳುವೆನು ಕೇಳು ! ಹಿಂದೆ ಆತ್ರೇಯನಾದ ಮುನಿಯೋರ್ವನು ಹಂಸರೂಪದಿಂದ ಚರಿಸುತ್ತಿರಲು ಸಾಧ್ಯರೆಂಬ ದೇವತೆಗಳು ಅವನನ್ನು ನೋಡಿ ಉಪದೇಶಿಸೆಂದು ಬೇಡಿದರು. ಆಗ ಹಂಸನಿಂತೆಂದನು. 'ದೇವತೆಗಳಿರಾ ! ದುಃಖಗಳಿಂದ ವಿಚಲನಾಗದೆ, ಇಂದ್ರಿಯಗಳನ್ನು ಜಯಿಸಿ, ಶ್ರೀ ಹರಿಯನ್ನು ನಂಬಿ, ಸ್ವಧರ್ಮವನ್ನು ಬಿಡದೆ ಮಾಡಿ, ಅವನಡಿಗೆ ಸಮರ್ಪಿಸಿದವನು ಮುಕ್ತನಾಗುವನೆಂದು ಗುರುಮುಖದಿಂದ ಕೇಳಿರುವೆನು. ನನ್ನನ್ನು ಧೃತರಾಷ್ಟ್ರ ನೆಂಬುವರು.

'ಶ್ರೀಹರಿಯು ವಾಗಿಂದ್ರಿಯವನ್ನು ಎಲ್ಲರಿಗೂ ಕೊಟ್ಟಿಲ್ಲ. ವಾಗರ್ಥಗಳನ್ನು ಅರಿತು ಉಪಯೋಗಿಸುವ ನರನು ಮಾತನ್ನು ಸರಿಯಾದ ವಿಧದಲ್ಲಿ ಬಳಸಬೇಕು. ರೂಕ್ಷವಚನವನ್ನಾಡಬಾರದು. ಆಣೆ ಇಡಬಾರದು. ಪರುಷವಚನವು ಬಾಣದಂತೆ ಬಾಧಕವು, ವಿಷದಂತೆ ಮಾರಕವು ಆಗಿದೆ. ಅತಿವಾದವನ್ನಾಡದೆ ನಿಂದಿಸಿದವನನ್ನು ನಿಂದಿಸದೆ ಇರುವ ಸುಜನನು ದೇವತೆಗಳಿಗೆ ಇಷ್ಟನಾಗುವನು. ಪರುಷವನ್ನಾಡುವು ದಕ್ಕಿಂತ ಮೌನ ಲೇಸು. ಸತ್ಯವಾಡುವುದು, ಪ್ರಿಯವಾಡುವುದು, ಧರ್ಮಸಮ್ಮತ ವಾಗಿ ಆಡುವುದು ಉತ್ತಮ ಶ್ರೇಯಸ್ಸಾಗಿದೆ. ಸರ್ವಸುಜನಹಿತವನ್ನು ಬಯಸಿ, ಸತ್ಯವನ್ನಾಡುತ್ತಾ, ಇಂದ್ರಿಯಂಗಳನ್ನು ಜಯಿಸಿ, ಹರಿಗುರುಭಕ್ತನಾಗಿರುವವನು ಉತ್ತಮನು. ಹೇಳಿದಂತೆ ನಡೆದು, ಪರರ ಲೋಪಗಳನ್ನರಿತು ತಾನು ಎಚ್ಚತ್ತು, ಉದಾರನಾಗಿರುವವನು ಮಧ್ಯಮನು. ಹೊಡೆದರು, ಬಡಿದರು ಸರಿಯಾಗದೆ ಪರನ ಉಪಕೃತಿಯನ್ನು ಮರೆತು, ಮಿತ್ರದ್ರೋಹಿಯು, ಸರ್ವಹಿಂಸಕನು ಆದವನು ಅಧಮನು. ಉತ್ತಮರನ್ನು ಸೇವಿಸಿದವನು ಉತ್ತಮನಾಗುವನು. ಅಧಮರಂತೆ ನಡೆದವನು ಅಧಮಾಧಮನೆನಿಸುವನು.

'ಧೃತರಾಷ್ಟ್ರ! ಬಲದಿಂದ ವಿತ್ತಾದಿಗಳನ್ನು ಕಸಿದು, ಪ್ರಜ್ಞಾಪ್ರಯತ್ನಗಳಿಂದ ಕಷ್ಟಪಡದೆ ಸುಖಪಡಲೆಣಿಸುವ ದುರ್ವೃತ್ತರನ್ನು ದುರ್ಜಾತರೆಂದು ತಿಳಿ ! ಮಹಾ ಕುಲೀನರ ಗುಣಗಳನ್ನು ಕೇಳು ! ಅವರು ಸದಾಚಾರವನ್ನು ವಿಪತ್ತಿನಲ್ಲಿಯೂ ಬಿಡರು. ಬ್ರಹ್ಮಜ್ಞಾನಕ್ಕಾಗಿ ಸರ್ವವನ್ನೂ ತ್ಯಜಿಸಲು ಸಿದ್ಧರಿರುವರು. ಅನ್ನದಾನಮಾಡು ವರು. ಕುಲಶೀಲಗಳನ್ನು ನೋಡಿ ವಿವಾಹಸಂಬಂಧವನ್ನು ಬೆಳೆಸುವರು ಆಗಲಿ ಅವರಿಗೆ ಧನ ರೂಪಗಳು ಮುಖ್ಯವಲ್ಲ. ತಪೋಯಜ್ಞಗಳನ್ನು ಮಾಡುವರು. ಯಜ್ಞಾದಿ

ಸತ್ಕರ್ಮಗಳನ್ನು ಬಿಟ್ಟು, ವಿಚಾರಿಸದೆ ವಿವಾಹವಾಗಿ ಕೆಟ್ಟು, ಕುಜನರು ಇತರರನ್ನೂ ಕೆಡಿಸಲೆಣಿಸುವರು. ಸತ್ಪುರುಷರು ಸ್ವಭಾವದಿಂದ ಪರೋಪಕಾರವನ್ನು ಮಾಡಿ, ಪ್ರಿಯವಚನವನ್ನಾಡಿ, ತಮ್ಮ ಕುಲವನ್ನು ಬೆಳಗುವರು. ಧನವು ಬರುವುದು; ಹೋಗುವುದು. ಧನ ಹೋದರೆ ದರಿದ್ರನಾಗುವನು; ಆದರೆ ಶೀಲವೇ ಹೋದರೆ ಸತ್ತಂತೆಯೇ ಸರಿ; ಸತ್ಕುಲವು ಪಶು, ಧನ, ಮಿತ್ರ. ಸಮೃದ್ಧಿಯಿಂದಲ್ಲದೆ ಶೀಲದಿಂದ ಶೋಭಿಸುವುದು. ದೀರ್ಘ ವೈರಿ, ಪರರಾಜ ವಧ್ಯ, ಮಿತ್ರದ್ರೋಹಿ, ಕಪಟ, ಪಿತೃ-ದೇವನಿಂದಕ, ಬ್ರಹ್ಮದ್ವೇಷಿ ಇಂತಹವರು ಕುಲಪಾಂಸನರು. ಇವರಿಂದ ಕುಲವೇ ಕೆಡುವುದು.

'ಮನೆಗೆ ಬಂದವರಿಗೆ ಅಸನ, ಇರಲು ಸ್ಥಲ, ನೀರು, ಮತ್ತು ಒಳ್ಳೆಯ ಮಾತು ಇವು ಸರಿಯಾದ ರೀತಿಯಲ್ಲಿ ಆದರಪೂರ್ವಕವಾಗಿ ಕೊಡಲ್ಪಟ್ಟರೆ—ಅದು ಮನೆ. ಅವರು ಸಜ್ಜನರು. ಅಂಜಿಸುವನು, ಅನುಮಾನಿಸುವನು, ಅಪಕರಿಸುವನು ಮಿತ್ರನಲ್ಲ. ಚಂಚಲಚಿತ್ತನಿಂದ ಸ್ನೇಹವು ಶುಭಕರವಲ್ಲ. ಪ್ರತಿಪ್ರಯೋಜನವನ್ನು ಬೇಡುವವನು ಮಿತ್ರನಲ್ಲ. ಆಪತ್ತಿನಲ್ಲಿ ಮಿತ್ರನ ಬಣ್ಣ ಹೊರಬೀಳುವುದು. ಆಪತ್ತಿನಲ್ಲಿ ಕೂತು ಶೋಕಿಸುವವನನ್ನು ನೋಡಿ ಶತ್ರುಜನರು ಆನಂದಿಸುವರು. ಸುಖದುಃಖಾದಿ ದ್ವಂದ್ವಗಳನ್ನು ಶ್ರೀಹರಿ ಕೊಟ್ಟವೆಂದು ತಿಳಿದು, ಹರ್ಷ ಶೋಕ ವಶನಾಗದವನೇ ಧೀರನು.

'ನಿತ್ಯವೂ ಕುದಿಯುವ ಮನಸ್ಸಿಗೆ ವಿದ್ಯಾತಪಗಳಿಂದಲು, ಇಂದ್ರಿಯನಿಗ್ರಹದಿಂದಲು, ಲೋಭತ್ಯಾಗದಿಂದಲು, ಗುರುಶುಶ್ರೂಷೆಯಿಂದಲು, ಶ್ರೀಹರಿಭಕ್ತಿಯಿಂದಲು ಸಮಾಧಾನವಾಗುವುದು. ಸುಖಶಯ್ಯೆಯಲ್ಲಿ ತರುಣೀಯುತನಾಗಿ ಮಲಗಿ, ವಂದಿಮಾಗಧರ ಸ್ತುತಿಗೆ ಏಳುವವನಿಗೆ ಸಿಗದ ಸುಖವು ಮನೋನಿಗ್ರಹವಂತನಾದ ಧರ್ಮಿಷ್ಠನಿಗೆ ಸಿಗುವುದು. ಕೊಳ್ಳಿಗಳಂತೆ ಜ್ಞಾತಿಗಳು ಕಲೆತಿದ್ದರೆ ಬೆಳಗುವರು; ದೂರ ಮಾಡಿದರೆ ಹೊಗೆ ಆಡುವರು. ವಿಪ್ರರಲ್ಲಿಯು, ಸ್ತ್ರೀಯರಲ್ಲಿಯು, ಗೋವುಗಳಲ್ಲಿಯು, ಸದ್ಬಂಧುಜನರಲ್ಲಿಯು ದ್ವೇಷಸಾಧಿಸುವವರು ತುಂಬು ಕಡಿದ ಹಣ್ಣಿನಂತೆ ಕೆಳಗೆ ಬೀಳುವರು. ಬಿರುಗಾಳಿಗೆ ಒಂಟಿಯಾಗಿರುವ ಗಿಡವು ಬೀಳುವುದು. ವೃಕ್ಷಬಹುಲವಾದ ವನವು ಗಾಳಿಯನ್ನು ಸಹಿಸಿ ನಿಲ್ಲುವುದು. ಬಂಧುಜನರನ್ನು ಕೂಡಿ ನಿನ್ನ ಮಕ್ಕಳು ಬದುಕುವರು; ಇಲ್ಲದಿರೆ ಸಾಯುವರು. ಕ್ರೋಧಮೋಹಗಳನ್ನು ಬಿಟ್ಟು ಶಾಂತನಾಗು. ನಿನ್ನ ಮಗನನ್ನು ನಿಗ್ರಹಿಸಿ, ಧರ್ಮರಾಜನಿಗೆ ರಾಜ್ಯವನ್ನು ಕೊಡು. ಇಬ್ಬರನ್ನೂ ಸುಖವಾಗಿಟ್ಟು, ನೀನೂ ನಿಶ್ಚಿಂತನಾಗು! ಅಲ್ಪನಾದ ದುರ್ಯೋಧನನಿಗೆ ಪಟ್ಟಗಟ್ಟಿ, ರಾಜನೆನಿಸಿ, ನೀನೇ ಮಾಡಿದ ತಪ್ಪಿನ ಫಲವನ್ನು ಅನುಭವಿಸುತ್ತಿರುವೆ.

'ಆಕಾಶವನ್ನು ಗುದ್ದುವಂತೆ, ಇಂದ್ರಧನುವನ್ನು ಬಾಗಿಸುವಂತೆ, ಕಿರಣಗಳನ್ನು ಕೈಲಿ ಪಿಡಿವಂತೆ, ವ್ಯರ್ಥಪ್ರಯತ್ನವನ್ನು ಮಾಡಿ ಕೆಡುವ ಮೂಢರು ಹದಿನೇಳು

ಜನರಿರುವರು ಕೇಳು ! ಅಶಿಷ್ಟರಿಗೆ ಉಪದೇಶಕ, ಅಲ್ಪಲಾಭದಿಂದ ತೃಪ್ತ, ಕಾರ್ಯ ಕಾತರನಾಗಿ ಶತ್ರುಗಳನ್ನು ಭಜಿಸುವವನು, ಸ್ತ್ರೀರಕ್ಷಕನಾಗಿಯೂ ಮಲಗಿರುವವನು, ಜಂಬಗಾರ, ಬಲವದ್ವೇಷಿ, ಕುಲೀನನಾಗಿ ಕುಕಾರ್ಯರತ, ಶ್ರದ್ಧಾರಹಿತನಿಗೆ ವಿಧಿಸುವವನು, ದುಷ್ಟ ಕಾಮಾಸಕ್ತ, ಸೊಸೆಯನ್ನು ಕೂಡಿದ ಮಾವ, ಬೀಗರ ಸಹಾಯದಿಂದ ಬದುಕಿ ನಗೆಗೀಡಾದವನು, ಜನರ ಅಂಜಿಕೆ ತೊರೆದವನು, ನೀಚಯೋನಿಯಲ್ಲಿ ಮಕ್ಕಳನ್ನು ಪಡೆದವನು, ಸಾಧ್ವೀನಿಂದಕ, ಕೊಟ್ಟ ದಾನವನ್ನು ಪ್ರಕಟಿಸುವವನು, ಕೊಂಡದ್ದನ್ನು ಮರೆಯುವವನು, ದುಷ್ಟರ ಕುಕರ್ಮವನ್ನು ಧರ್ಮವೆಂದು ಸಾಧಿಸುವವನು—ಇಂತಹ ಪಾಪಿಗಳನ್ನು ಸುಜನರೆಂದು ತಿಳಿದು ಸನ್ಮಾನಿಸುವುದು ತಪ್ಪಲ್ಲವೇ? ಯಾರನ್ನು ಎಂತು ಕಾಣುವುದುಚಿತವೋ ಅಂತು ಕಂಡು ವ್ಯವಹರಿಸುವುದೇ ಧರ್ಮ ಸಮ್ಮತವು. ಪಾಪಿಗಳನ್ನು ಕ್ಷಮಿಸುವುದರಿಂದ ಲೋಕವೇ ಹಾಳಾಗುವುದು.

ಶತಾಯುನಾದ ಪುರುಷನು ಪೂರ್ಣಾಯುನಾಗದಿರಲು ಕಾರಣವನ್ನು ಕೇಳು. ದುರಭಿಮಾನ, ದುರ್ವಾದ, ದಾನರಾಹಿತ್ಯ, ಸುಜನದ್ವೇಷ, ಮಿತ್ರದ್ರೋಹ, ಶಿಶ್ನೋದರ ಮಾತ್ರಜೀವನ—ಇವು ಆರೂ ಖಡ್ಗದಂತೆ ಆಯುಃಪಾಶವನ್ನು ತುಂಡರಿಸುವವು. ಇದನ್ನು ಬಿಟ್ಟರೆ ಮಾತ್ರ ನಿನ್ನ ಸುತರು ಶತಾಯುಷಿಗಳಾಗಬಹುದು. ರಾಜನ್ ! ಸಂತತವು ಪ್ರಿಯವಾಡುವವರು ಸಿಗಬಹುದು. ಅಪ್ರಿಯವಾದರೂ ಪಥ್ಯವಾದುದನ್ನು ಹೇಳುವವನು ದುರ್ಲಭನು; ಹೇಳಿದರೂ ಕೇಳುವವನು ಇನ್ನೂ ದುರ್ಲಭನು. ಪ್ರಿಯಾಪ್ರಿಯಗಳನ್ನು ಲೆಕ್ಕಿಸದೆ ಹಿತವನ್ನು ಹೇಳುವವನೇ ನಿಜವಾದ ಸ್ನೇಹಿತನು. ದ್ಯೂತವು ವೈರಬೀಜವೆಂದು ಪ್ರಸಿದ್ಧವಾಗಿದೆ. ಹಾಸ್ಯಕ್ಕಾಗಿಯೂ ಜೂಜಾಡಬಾರದು. ನಾನು ಮಾಯಾದ್ಯೂತವನ್ನು ನಿಲ್ಲಿಸೆಂದು ಪೇಳಿದ ವಚನಾಮೃತವನ್ನು ನೀನು ಕುಡಿಯಲಿಲ್ಲ. ನೀನು ಮಯೂರಗಳನ್ನೋಡಿಸಿ, ಕಾಗೆಗಳನ್ನು ಸಾಕುತ್ತಿರುವೆ ! ಸಿಂಹಗಳನ್ನು ಬಿಟ್ಟು ನರಿಗಳನ್ನು ನಂಬಿರುವೆ ! ಮುಂದೆ ನಿನ್ನ ಅವಿವೇಕದಿಂದ ದುಃಖಪಡುವೆ; ಸದಾ ಕುಪಿತನಾಗಿ ಬೈದ ಯಜಮಾನನನ್ನು ಸೇವಕರು ಕಷ್ಟದಲ್ಲಿ ಕೈಬಿಡುವರು; ಅವರ ಹಿತವನ್ನೆಣಿಸುವವನಿಗೆ ಪ್ರಾಣವನ್ನಾದರೂ ಕೊಡುವರು.

ಕುಜನಸಂಗದಲ್ಲಿ ಮಂತ್ರಾಲೋಚನೆಗೈವ ರಾಜನನ್ನು ವಿರೋಧಿಸಿ ಮಾತಾಡಬಾರದು. 'ನದಿ ಭರಪೂರವಾಗಿದೆ; ಮಳೆಗಾಲ, ಈಗೇಕೆ? ಮುಂದೆ ವಿಚಾರಿಸುವ ದೊಳಿತು' ಎಂಬಿತ್ಯಾದಿ ವಚನಗಳಿಂದ ಅವನ ಅಕಾರ್ಯವನ್ನು ಮುಂದೂಡಬೇಕು. ಸಾಧ್ಯವಾಗದಿದ್ದರೆ 'ಕೆಲಸವಿದೆ, ಈಗ ಬರುವೆ'ನೆಂದು, ಅಲ್ಲಿಂದ ಹೊರಬರಬೇಕು. ದಂಡಿಸಲು ನಾಚುವ ರಾಜ, ವ್ಯಭಿಚಾರಿಣಿ, ರಾಜಪುತ್ರ, ಸೇವಕ, ರಾಜಸೋದರ, ಬಾಲಪುತ್ರರಿರುವ, ವಿಧವೆ, ಸೈನಿಕ, ನಷ್ಟಧನರೆಂಬ, ಎಂಟು ಜನರು ವ್ಯವಹಾರದಲ್ಲಿ ಕುಶಲರಲ್ಲ. ಅವರು ಸ್ವಾರ್ಥಿಗಳಾಗಿ ಮೃದುರಾಜನನ್ನು ಕೆಡಿಸಬಹುದು. ಮಿತ ಭೋಜನನಾದವನು ಆರೋಗ್ಯ ಬಲ ಸುಖ ಶಾಂತಿಗಳನ್ನು ದೀರ್ಘಾಯುವನ್ನು ಹೊಂದುವನು. ಅವನ ಮಕ್ಕಳು ಹೊಟ್ಟೆಬಾಕನೆಂದು ನಿಂದಿಸುವುದು ತಪ್ಪುವುದು.

ವಿಕೃತ ಶೃಂಗಾರ, ತಿಂಡಿಬಾಕ, ಸೋಮಾರಿ, ಮಾಯಿಕ, ಕ್ರೂರ, ಬಹುಜನದ್ವೇಷಿ, ಇವರಾರು ಜನರನ್ನು ಮನೆ ಸೇರಿಸಬಾರದು. ಬಹು ಜನರು ಕಲೆತಲ್ಲಿ ಪೂಜಾದಿಗಳನ್ನು ನೆರೆಸುವ ದಾಂಭಿಕ, ಸುಳ್ಳುಗಾರ, ಪ್ರಮಾದವಶ, ಚಂಚಲ ಸ್ನೇಹಿತ, ಪ್ರೀತಿ ತೊರೆದವನು, ದುರಭಿಮಾನಿ, ಎಂಬ ಆರು ದುಷ್ಟರನ್ನು ಸೇರಬಾರದು. ಅರ್ಥದಿಂದ ಜನಸಹಾಯವು ಕೈಗೂಡುವುದು. ಜನರೂ ಅರ್ಥಕ್ಕಾಗಿ ಸೇವಿಸುವರು. ಮಕ್ಕಳನ್ನು ಪಡೆದು ವಿದ್ಯಾಧನಗಳನ್ನಿತ್ತು, ಕುಮಾರಿಯರನ್ನು ಒಳ್ಳೆಯ ಮನೆ ಸೇರಿಸಿ, ಸುಜನ ಸಂಗದಲ್ಲಿ ಶ್ರೀಹರಿಯನ್ನು ಸೇವಿಸುವವನೇ ಧನ್ಯನು. ಬುದ್ಧಿ ಪ್ರಯತ್ನ ಪ್ರಭಾವಗಳಿರುವವನಿಗೆ ಜೀವಿಕಾಭಯವಿಲ್ಲ,

ಪಾಂಡವರಿಂದ ಯುದ್ಧವಾದರೆ ಬಹುಲಾನರ್ಥವಾಗುವುದು. ನಿನ್ನ ಪುತ್ರರು ನಷ್ಟರಾಗುವರು; ನಿನ್ನ ಶತ್ರುಗಳು ಸಂತೋಷಪಡುವರು. ಭೀಷ್ಮದ್ರೋಣ ಪಾಂಡವರು ವಿಜೃಂಭಿಸಿ, ಧೂಮಕೇತುವಿನಂತೆ ಲೋಕವನ್ನೇ ಸಂಚರಿಸಬಲ್ಲರು. ಅವರಿಗೆ ವಿರೋಧಿಸಿ, ಯಾರೂ ಬದುಕಲಾರರು. ಪಾಂಡವರಿಗೆ ರಾಜ್ಯವಿತ್ತು, ಧರ್ಮವನ್ನು ಪಾಲಿಸು ! ಆಪತ್ತಿನಲ್ಲಿ ಕುಗ್ಗದೆ, ಸಂಪತ್ತಿನಲ್ಲಿ ಹಿಗ್ಗದೆ, ಕ್ರೋಧ ಲೋಭಗಳನ್ನು ಹತ್ತಿಕ್ಕಿ ಮಕ್ಕಳಿಂದ ಸುಖವಾಗಿರಬಹುದೆಂದು ತಿಳಿ ! ಬಾಹುಬಲ, ಮಂತ್ರಿಬಲ, ಧನಬಲ, ಪೈತಾಮಹವಾದ ಕುಲಬಲ, ಬುದ್ಧಿಬಲ—ಎಂಬ ಐದು ಬಲಗಳಲ್ಲಿ ಬುದ್ಧಿ ಬಲಕ್ಕೆ ಎಲ್ಲವೂ ಅಡಿ. ಬುದ್ಧಿವಂತನ ಬಾಣಕ್ಕೆ ಔಷಧವಿಲ್ಲ. ಕ್ಷಮಾವಂತರಾದ ಪಾಂಡವರು ಕಾಷ್ಠಗತವಾಗಿರುವ ಅಗ್ನಿಯಂತೆ ಸುಮ್ಮನಿರುವರೆಂದು ತಿರಸ್ಕರಿಸಬೇಡ; ಯುದ್ಧ ಘರ್ಷಣದಿಂದ ಉರಿದೇಳುವ ಪಾಂಡವಾಗ್ನಿಯು ಶ್ರೀಕೃಷ್ಣಮಾರುತ ಪ್ರೇರಿತರಾಗಿ ಕೌರವ ವಂಶವನ್ನು ಸುಡದ ಮುನ್ನ ಜಾಗ್ರತನಾಗು !

ಜ್ಞಾನವಯೋವೃದ್ಧನು ಬಂದಾಗ ಯುವಕನು ಎದ್ದು, ಕರೆತಂದು, ವಂದಿಸಿ, ಸತ್ಕರಿಸದಿದ್ದರೆ, ಅಂತಹ ಅವಿವೇಕಿಯ ಆಯುಸ್ಸು ಕಡಿಮೆಯಾಗುವುದು ; ಆಸನಾದಿ ಸತ್ಕಾರವಿತ್ತರೆ, ಮೇಲೆದ್ದ ಪ್ರಾಣಗಳು ಮತ್ತೆ ಸ್ವಸ್ಥವಾಗುವುವು. ಲೋಭದಿಂದಲೋ ಭಯದಿಂದಲೋ ಪೂಜ್ಯರನ್ನು ಪೂಜಿಸದವನಿಗೆ ಅನರ್ಥವು ತಪ್ಪದು.

ಶಸ್ತ್ರವೈದ್ಯ, ಬಾಣಾದಿಶಸ್ತ್ರಕರ್ತ, ಚೋರ, ಕ್ರೂರ, ವ್ರತಭ್ರಷ್ಟ, ಮದ್ಯಪಾಯಿ, ವೇದವಿಕ್ರಯಕರು ಜ್ಞಾನಿಗಳಂತೆ ವಂದನಾರ್ಹರಲ್ಲ; ಅತಿಥಿಗಳಾಗಿ ಬಂದಾಗ ಅವರೂ ಅನ್ನಾದಿಗಳಿಗೆ ಯೋಗ್ಯರೇ ಆಗಿರುವರು. ಅಂದಮೇಲೆ ಸಮಶೀಲನು ವಿರಾಗಿಯು, ಜ್ಞಾನಿಯು ಆದ ಅತಿಥಿಯು ಸರ್ವಥಾ ಪೂಜ್ಯನೆಂದು ಹೇಳಬೇಕೆ ! ಅಂತಹವನ ವಿಷಯದಲ್ಲಿ ಸಂಶಯಪಡಬಾರದು. ಅಗ್ನಿಕಾರ್ಯಾದಿಗಳನ್ನು ಅವನು ಬಿಡುವವನಲ್ಲ.

ಮನೆಗೆ ದೀಪವಾಗಿ ಬೆಳಗುವ ಸಾಧ್ವಿಯರನ್ನು ಸತ್ಕರಿಸುವವನ ಸಿರಿ ಹೆಚ್ಚುವುದು. ಸ್ತ್ರೀಜನಾವಮಾನಿಯು ರಾಜ್ಯಭ್ರಷ್ಟನಾಗುವನು. ಮುಂದೆ ಮಾಡಲೆಣಿಸುವ ಕಾರ್ಯವನ್ನು ಮೊದಲೇ ಹೇಳದೆ ಕಾರ್ಯವಾದಮೇಲೆ ಪ್ರಕಟಿಸುವವನು

ಬುದ್ಧಿವಂತನೆನಿಸುವನು. ಮುಂದಿನ ಧರ್ಮಾರ್ಥಕಾಮಗಳನ್ನು ತಿಳಿಸದವನ ರಹಸ್ಯವು ಕೆಡದಿರುವುದರಿಂದ ಅವು ಚೆನ್ನಾಗಿ ಸಿದ್ಧಿಸುವುವು. ಅಪ್ರಶಸ್ತಕಾರ್ಯಗಳನ್ನು ಯೋಚಿಸುವವನ ಧರ್ಮಾರ್ಥಕಾಮಗಳು ಕೆಟ್ಟು, ಅವನು ಸ್ವಜನರಿಗೂ ಬೇಡ ವೆನಿಸುವನು. ವಿದ್ವಾಂಸ ವಿಪ್ರನನ್ನು ವಿಪ್ರರೇ ತಿಳಿಯಬಲ್ಲರು. ಗಂಡನು ಹೆಂಡತಿ ಯನ್ನು, ಮಂತ್ರಿಯನ್ನು ರಾಜನು ತಿಳಿಯಬಲ್ಲರು. ಆದರೆ ರಾಜನನ್ನು ರಾಜನೇ ತಿಳಿಯಬಲ್ಲನು. ಬುದ್ಧಿವಂತನು ದೇವ ದ್ವಿಜ ರಾಜ ವೃದ್ಧರಲ್ಲಿ ಸಿಟ್ಟಾಗಿ ದುಡುಕ ಬಾರದು. ಮೂಢರನ್ನು ಸೇರಬಾರದು. ಸುಮ್ಮನೆ ಬಡಿದಾಡಬಾರದು. ಮೂಢ ನಾದವನು ವಿನಾಶಕಾಲವು ಒದಗಿ, ವಿದ್ಯಾಶೀಲವಯೋವೃದ್ಧರನ್ನು ಕೆಣಕುವನು. ಶಮ, ದಮ, ಧೈರ್ಯ, ಶೌಚ, ದಯಾ, ಪ್ರಿಯಹಿತವಚನ, ಮಿತ್ರಪ್ರಿಯಕಾರ್ಯ ಗಳೆಂಬ ಏಳು ಗುಣಗಳಿಂದ ಸಂಪದ್ದೀಪವು ಹೆಚ್ಚಿ ಪ್ರಕಾಶಿಸುವುದು. ಮೋಸ ಗಾರರು, ಚಾರಣರು, ವೇಶ್ಯೆಯರು—ಇವರ ಪ್ರಶಂಸೆಗೆ ಪಾತ್ರನಾದ ದಡ್ಡನು ಹಾಳಾದನೆಂದು ತಿಳಿ! ಶಕುನಿ ಕರ್ಣ ದುಶ್ಶಾಸನರ ಪ್ರಶಂಸೆಗೆ ಪಾತ್ರನಾದ ದುರ್ಯೋಧನನು ಕಲ್ಲಿನ ಹಡಗದಲ್ಲಿ ಕಡಲನ್ನು ದಾಟುವವನಂತೆ ಕೆಡುವನು. ಶ್ರೀಕೃಷ್ಣ ಭೀಷ್ಮ ದ್ರೋಣರಂತಹ ಮಹನೀಯರು ಮೆಚ್ಚುವಂದದಿ ನಡೆಯುವ ಪಾಂಡವರು ವಿಜಯವಂತರಾಗುವರು' ಎಂದು ನುಡಿದನು.

ಧೃತರಾಷ್ಟ್ರನು 'ವಿದುರ! ಸೂತ್ರದಾರನ ಕೈಗೊಂಬೆಯಂತೆ ಮನುಜನು ಈಶವಶನಾಗಿ. ಅಸ್ವತಂತ್ರನಾಗಿರುವನು. ಸಂಪದ್ವಿಪತ್ತುಗಳನ್ನು ಶ್ರೀಹರಿಯೇ ಕೊಡುವನು. ನನ್ನನ್ನೇಕೆ ದೂರುವೆ?' ಎಂದು ಕೇಳಿದನು. ಆಗ ವಿದುರನಿಂತೆಂದನು.

'ರಾಜನ್! ಬೇಡವೆನಿಸಿದಾಗ ಬೃಹಸ್ಪತಿಯೇ ಬಂದು ಹೇಳಿದರೂ ಕೇಳದೆ, ಜನರು ಅವನನ್ನು ಕಡೆಗಣಿಸುವರು. ಶ್ರೀಹರಿಯೇ ಪ್ರಿಯನು. ಮಿಕ್ಕ ನರರೆಲ್ಲರು ದಾನಮಾನಗಳಿಂದ ಪ್ರಿಯರು. ದಾನಾದಿಗಳು ನಿಂತರೆ ಅವರೇ ಅಪ್ರಿಯರು. ಮಂತ್ರಬಲದಿಂದ ಇಂದ್ರಾದಿಗಳೂ ಪ್ರಿಯರಾಗುವರು. ಸಾಧುಜನರನ್ನು, ಬುದ್ಧಿ ವಂತರನ್ನು, ಪಂಡಿತರನ್ನು ದ್ವೇಷಿಸಬಾರದು. ದ್ವೇಷಿಯಾದವನಲ್ಲಿ ಸಾಧುತ್ವವಿದ್ದರೂ ಕಾಣದೆ, ಪ್ರಿಯನಲ್ಲಿ ದೋಷವಿದ್ದರೂ ತಿಳಿಯದೆ, ನಮಗೆ ಬೇಕಾದವರು ಒಳ್ಳೆ ಯವರು, ಬೇಡಾದವರು ಕೆಟ್ಟವರೆಂಬ ಕುಕಲ್ಪನೆಯು ಒಳಿತಲ್ಲ. ಒಳ್ಳೆಯವರು ಯಾವಾಗಾದರೂ ಒಳ್ಳೆಯವರೇ! ದುಷ್ಟರು ನಮ್ಮವರಾದರೂ ದುಷ್ಟರೇ ಸರಿ! ದುಷ್ಟನಾದ ದುರ್ಯೋಧನನ ಜನ್ಮಕಾಲದಲ್ಲೇ, ಅವನೊಬ್ಬನನ್ನು ಬಿಟ್ಟು ಕುಲವನ್ನು ಉಳಿಸೆಂದು ನಾನು ಹೇಳಿದೆನು. ಅದನ್ನು ನೀನು ಕೇಳದೆ ಇಷ್ಟಾಯಿತು; ಒಂದು ಕಳೆದು ನೂರು ಬಂದರೆ ಅದು ನಷ್ಟವಲ್ಲ; ಒಂದು ಬಂದು ನೂರು ಹಾಳಾದರೆ ಅದು ಲಾಭವಲ್ಲ. ದುರ್ಯೋಧನನೊಬ್ಬನಿಂದ ನಿನ್ನ ಕುಲವೇ ಕೆಡಲಿದೆ; ಶ್ರೀಕೃಷ್ಣ ನೊಬ್ಬನಿಂದ ಪಾಂಡವರು ವಿಜಯಶ್ರೀಯುತರಾಗುವುದಿದೆ.'

ಧೃತರಾಷ್ಟ್ರನು 'ವಿದುರ ! ನೀನಾಡುವ ಮಾತು ಧರ್ಮಸಮ್ಮತವು, ಹಿತವೂ ಆಗಿದೆ. ಆದರೂ ಸುತನನ್ನು ಹೇಗೆ ಬಿಡಲಿ ? ಹೇಳು ! ಎಲ್ಲಿ ಧರ್ಮವೋ ಅಲ್ಲಿ ಜಯವಾಗಲಿ' ಎಂದನು. ವಿದುರನಿಂತೆಂದನು—'ರಾಜನ್ ! ಪುತ್ರನನ್ನು ಬಿಡಲಾರದಿದ್ದರೆ ಅವನನ್ನು ಕೆಡಿಸುವ ಕರ್ಣಶಕುನ್ಯಾದಿಗಳನ್ನಾದರೂ ಬಿಡು ! ಗುಣವಂತನು ಮಾತಾಡಿದಂತೆ ಮಾತಾಡುವೆ! ಆದರೆ ನಿನಗೆ ನಿನ್ನ ಮಾತಿನಲ್ಲೇ ಶ್ರದ್ಧೆಯಿಲ್ಲ. ಯುದ್ಧದಿಂದೊದಗುವ ಕುಲನಾಶವನ್ನು ಉಪೇಕ್ಷಿಸುತ್ತಿರುವೆ ! ಪರನಿಂದೆ, ಪರಸ್ಪರವಿರೋಧ, ಪರರ ದುಃಖಕ್ಕೆ ಸಂತೋಷಪಡುವಿಕೆ—ಇವು ಮೂರ್ಖಲಕ್ಷಣಗಳು. ಅವರು ಧನವನ್ನು ಕೊಟ್ಟರೆ ಕೊಬ್ಬುವರು; ಕೊಡದಿದ್ದರೆ ದ್ವೇಷಿಸುವರು. ನಮ್ಮ ಭಾಗ್ಯವು ಕ್ಷೀಣಿಸಿದಂತೆ ಆ ಪಾಪಿಗಳ ಸ್ನೇಹವೂ ಕ್ಷೀಣಿಸುವುದು. ಸ್ವಲ್ಪ ಕೆಡುಕಾದರೂ ಅವರು ಕೆರಳಿ ಕಾಡುವರು. ಈ ಲಕ್ಷಣಗಳನ್ನು ಕಂಡು ಅವರನ್ನು ದೂರದಲ್ಲಿಡಬೇಕು.

ಜ್ಞಾತಿಯು ಕಷ್ಟದಲ್ಲಿರಲು ಸಹಾಯ ಮಾಡಿದವನಿಗೆ ಬಲುಶ್ರೇಯವಾಗುವದು. ವಿಷದಿಗ್ಧ ಹಸ್ತನಾದ ದುರ್ಮಾರ್ಗನನ್ನು ನೋಡಿ, ಜ್ಞಾತಿಗಳು ಮೃತ್ಯುಜಾಲದಿಂದೋಡುವ ಮೃಗದಂತೆ, ದೂರ ಸರಿವರು. ಪಾಂಡವರು ಗುಣವಂತರು; ನಿನ್ನ ಪ್ರಸಾದವನ್ನು ಬೇಡುತ್ತಿರುವರು. ಅವರಿಗೆ ಕೆಲವು ಇಂದ್ರಪ್ರಸ್ಥಾದಿ ಗ್ರಾಮಗಳನ್ನಾದರೂ ಕೊಡು ! ಅವರೂ ಬದುಕಿರಲಿ ! ನಿನಗೂ ಯಶಸ್ಸಾಗಲಿ ! ವೃದ್ಧನಾದ ನಿನಗೆ ಪಕ್ಷಪಾತವೇಕೆ ? ಕುಲ ಕಲಹ ಒಳಿತಲ್ಲ. ನಾನು ನಿನ್ನ ಹಿತಕ್ಕಾಗಿ ನುಡಿಯುವೆನು. ದುರ್ಯೋಧನನನ್ನು ದಂಡಿಸಿ, ರಾಜ್ಯವನ್ನು ಹಂಚಿಕೊಡಲು ರಾಜನಾಗಿರುವ ನಿನಗೆ ಅಧಿಕಾರವಿದೆ. ಪಾಂಡವರು ಮೃತರಾದರೆ ಮಾತ್ರ ನಿನಗೆ ದುಃಖವಾಗದಿರುವುದೇ ? ನೀತಿಶಾಸ್ತ್ರಕಾರನಾದ ಶುಕ್ರನನ್ನು ಬಿಟ್ಟು ಎಲ್ಲ ನರರೂ ನೀತಿಯನ್ನು ಯಾವಾಗಲೂ ಅನುಸರಿಸುವರೆಂದು ತಿಳಿಯಬೇಡ ! ನಡೆದುದಾಯಿತು. ಮುಂದೆ ನೀತಿಯನ್ನು ಪಾಲಿಸು ! ಕುಂಬಾರನು ಬಹು ಬ್ರಾಹ್ಮಣ ಸಮಾರಾಧನೆಗೆಂದು ಕೊಟ್ಟ ಭಾಂಡಾದಿಗಳನ್ನು ತಂದು ಮತ್ತೆ ಪರರಿಗೆ ಮಾರುವಂತೆ, ಯಾರೂ ಕೊಟ್ಟುದನ್ನು ಮತ್ತೆ ಕಸಿಯುವುದಿಲ್ಲ. ಅವರ ರಾಜ್ಯವನ್ನಿತ್ತು, ಮತ್ತೆ ಜೂಜಾಡಿಸಿ, ಕಸಿದೆ ! ಇದು ಚಂದವಲ್ಲ. ದುರ್ಯೋಧನನ ಪಾಪಕ್ಕೆ ಪ್ರತಿಹಾರವು ನಿನ್ನಿಂದ ನಡೆಯಲಿ !

ಓದಿದ್ದನ್ನು ಅರ್ಥಮಾಡಿಕೊಳ್ಳದೆ, ವೃದ್ಧರನ್ನು ಸೇವಿಸದೆ, ಬೃಹಸ್ಪತಿಯಂತಹನು ಕೂಡ ಧರ್ಮಾರ್ಥಗಳ ತತ್ವವನ್ನು ತಿಳಿಯಲಾರನು. ಸಮುದ್ರದಲ್ಲಿ ಬಿದ್ದ ರತ್ನದಂತೆ ಕಿವಿಗೊಟ್ಟಾಲಿಸದವನಿಗೆ ಮಾಡಿದ ತತ್ತ್ವೋಪದೇಶವು ವ್ಯರ್ಥವಾಗುವುದು. ಭೋಜನ ವಸನ ವಸ್ತ್ರಗಳಿಂದಲು, ಹುಟ್ಟಿದ ವಂಶದಿಂದಲು, ಮನೆತನವನ್ನು ತಿಳಿಯಬೇಕು. ವಿದ್ವಾಂಸರು, ಧಾರ್ಮಿಕರು, ಮಿತ್ರವಂತರು ಆದ ಸುಜನರು ಯಾವ ಕುಲದವರಾದರೂ ಸರಿ ! ಅವರ ಮಾತನ್ನು ಲಾಲಿಸಬೇಕು. ತೃಣದಿಂದ ಮುಚ್ಚಲ್ಪಟ್ಟ ಭಾವಿಯಂತಿರುವ ದುಷ್ಟನನ್ನು ದೂರಮಾಡಿ, ಸುಜನ ಸಂಗದಲ್ಲಿದ್ದು ಕಲ್ಯಾಣಕರ

ಕಾರ್ಯಗಳನ್ನು ಮಾಡುತ್ತಿರಬೇಕು. ಅವಿನೀತನಾದ ಮೂರ್ಖನನ್ನು, ತಿಳಿಹೇಳಿ ಸಾಧ್ಯವಾದರೆ ತಿದ್ದಬೇಕು. ಬೇಸರಪಡದೇ ಪ್ರಯತ್ನಿಸುವುದರಿಂದ ಲಾಭವಾದೀತು ; ದುಃಖದಿಂದ ದೀನನಾದವನು, ನಾಸ್ತಿಕ, ಪ್ರಮತ್ತ, ಇಂದ್ರಿಯದಾಸ, ಉತ್ಸಾಹ ಹೀನ—ಇವರಲ್ಲಿ ಸಂಪತ್ತು ನಿಲ್ಲಲಾರದು. ಕೆಟ್ಟವರಿಗೂ ಒಳ್ಳೆಯವನಾಗಲೆಣಿಸುವ ವನು ಕೈಲಾಗದವನೆಂದು ತಿಳಿಯಲ್ಪಟ್ಟು, ದುರ್ಜನರ ಹಿಂಸೆಗೆ ಗುರಿಯಾಗುವನು. ವ್ರತವನ್ನು ನಡೆಸದೆ, ಹಿರಿಯರನ್ನು ಗೌರವಿಸದೆ ಧೂರ್ತನಾದವನೂ ಧನಹೀನನಾಗು ವನು. ದುರ್ಮಾರ್ಗನು ಮಾಡಿದ ಉತ್ತರಕ್ರಿಯಾ ಕಲಾಪವು ಪರಲೋಕಸುಖವಾಗಲು ಕಾರಣವಾಗದು. ಕ್ಷಮೆಯಿಂದ ಕ್ರೋಧವನ್ನು, ಕದರ್ಯನನ್ನು ದಾನದಿಂದಲು, ದುಷ್ಟನನ್ನು ಸಾಧುತ್ವದಿಂದಲು, ಅನೃತವನ್ನು ಸತ್ಯದಿಂದಲು ವಶಪಡಿಸಿ, ವೃದ್ಧರನ್ನು ಸೇವಿಸುವವನ ಕೀರ್ತಿ, ಆಯು, ಧರ್ಮ, ಬಲಗಳು ಹೆಚ್ಚಾಗುವವು. ವೇದವು ಅಭ್ಯಾಸ ದಿಂದ ಜ್ಞಾನಸಪ್ರದವಾಗುವುದು. ಸುವರ್ಣವು ಬೆಳ್ಳಿಯಿಂದಲು, ಬೆಳ್ಳಿ ತವರದಿಂದಲು ತವರ ಸೀಸದಿಂದಲು ಕೂಡಿ ಕೆಡುವುದು. ಪುರುಷನು ಸುಳ್ಳಿನಿಂದ ಕೆಡುವನು. ಮಲಗಿ ನಿದ್ರೆಯನ್ನು, ಕಾಮಿತವಿತ್ತ ತರುಣಿಯನ್ನು, ಕಟ್ಟಿಗೆಯನ್ನಿಟ್ಟು ಅಗ್ನಿಯನ್ನು, ಕುಡಿದು ಸುರಾಪಾನವನ್ನು ಜಯಿಸಲಾಗದು. ಪೃಥಿವಿಯಲ್ಲಿರುವ ಸರ್ವೈಶ್ವರ್ಯವನ್ನಿತ್ತರೂ ಮನುಜನಿಗೆ ಸಾಕೆನಿಸದು. ತೃಪ್ತನಾದವನು ಸುಖವಾಗಿರುವನು. ದುರಭಿ ಮಾನವನ್ನು ಬಿಟ್ಟ ಸಜ್ಜನನಿಗೆ ಶಕ್ತಿಯಿದ್ದಷ್ಟೇ ಸಾಕು. ಮೇಲು ಮಾಡಿದವನು ಅವರ ಪ್ರೀತಿಯಿಂದ ಚನ್ನಾಗಿ ಸುಖಪಡುವನು. ಅನ್ಯಾಯದಿಂದ ಬಂದ ಧನದಿಂದ ಸುಖ ವಿಲ್ಲ. ಸರ್ಪವು ಪೊರೆಯನ್ನು ಬಿಡುವಂತೆ, ಅನೃತಧನವನ್ನು ಮುಟ್ಟದವನು ನಿಶ್ಚಿಂತ ನಾಗುವನು. ಎತ್ತು, ಚಂದನ, ಪೀಣೆ, ಕನ್ನಡಿ, ಜೇನುತುಪ್ಪ, ತುಪ್ಪ, ನೀರು, ತಾಮ್ರ ಭಾಂಡ, ಶಂಖ, ಶಾಲಗ್ರಾಮ, ಮೊದಲಾದ ಶುಭದ್ರವ್ಯಗಳನ್ನು ಮನೆಯಲ್ಲಿಟ್ಟಿರಬೇಕು. ಅವು ಅತಿಥಿ ದೇವಬ್ರಾಹ್ಮಣರ ಪೂಜೆಗೆ ಸಾಧನವಾಗುವವು. ಧರ್ಮದಿಂದ ನಡೆದವ ನಿಗೆ ದೇವವಿಪ್ರರು ಪ್ರಸನ್ನರಾಗುವರು. ಲೋಭದಿಂದ ಅಥವಾ ಭಯದಿಂದ ಧರ್ಮ ವನ್ನು ಬಿಡಬೇಡ ! ಮಹಾಬಲರಾದ ರಾಜರು ಆಳಿ ಹೋದರು. ಅವರ ಹಿಂದೆ ಹಿಡಿ ಮಣ್ಣನ್ನೂ ಕೊಂಡು ಹೋದವರಿಲ್ಲ. ಅವರನ್ನು ಸುಟ್ಟು, ಅತ್ತವರು ಮನೆಗೆ ಬಂದು ಅವನ ಧನಕ್ಕಾಗಿ ಕಾದಾಡಿ ತಮ್ಮ ಕಾಲ ಬಂದಾಗ ತಾವೂ ಸತ್ತರು. ಮನುಜನ ಹಿಂದೆ ಬರುವವು ಪುಣ್ಯಪಾಪಗಳೆರಡೇ. ಆದುದರಿಂದ ಪುರುಷನು ಧರ್ಮವನ್ನು ಮಾಡಿ ಪುಣ್ಯಗಳಿಸಬೇಕು.

'ಮೇಲೆ ಸ್ವರ್ಗವಿದೆ ; ಕೆಳಗೆ ಅಂಧಂತಮವಿದೆ. ಪುಣ್ಯವಂತರ ಸ್ವರ್ಗವನ್ನು ಸೇರಲು ಪುಣ್ಯವನ್ನು ಮಾಡು! ಮನುಜ ದೇಹವು ನದಿಯಂತೆ, ಸತ್ಯ ಸದ್ಗುಣಪೂರ್ಣ ನಾದ ನಾರಾಯಣನಿಂದ ಬಂದಿದೆ. ನದಿಯಲ್ಲಿ ಪುಣ್ಯತೀರ್ಥಗಳಂತೆ ಸಚ್ಛಾಸ್ತ್ರವಿದೆ. ಸ್ನಾನಮಾಡಿ ಪುನೀತನಾಗು! ಮನುಜಶರೀರದಲ್ಲಿ ಯುಕ್ತಾಯುಕ್ತ ಜ್ಞಾನವಾಗುತ್ತಿದೆ, ಅದರಿಂದ ತಿಳಿದು, ಧರ್ಮವನ್ನು ಮಾಡು ! ಸ್ನಾನಾಚಾರತತ್ಪರನು, ಸಂಧ್ಯಾ ಪೇವ

ಪೂಜಾರತನು, ವೇದಾದಿಸಚ್ಛಾಸ್ತ್ರ ಚಿಂತಕನು, ದುಷ್ಟಾನ್ನ ದೂರನು, ಸತ್ಯವಚನನು ಹರಿ ಗುರು ಭಕ್ತನು ಆದ ಬ್ರಾಹ್ಮಣನು ಬ್ರಹ್ಮಲೋಕದಲ್ಲಿ ಸುಖಿಸುವನು. ಅವರವರ ಸ್ವಧರ್ಮದಿಂದ ವಿಪ್ರ ಕ್ಷತ್ರಿಯ ವೈಶ್ಯ ಶೂದ್ರರು ಶ್ರೀಹರಿಪ್ರೀತಿವಿಷಯರಾಗಿ ಮುಕ್ತರಾಗುವರು. ಪೃಥಿವೀಪಾಲನರೂಪ ಕ್ಷತ್ರಧರ್ಮದಿಂದ ಪಾಂಡವರನ್ನು ದೂರ ಮಾಡಬೇಡ; ಅದಕ್ಕೆ ಅವರು ಯೋಗ್ಯರಾಗಿರುವರು. ಅಯೋಗ್ಯರಾದ ನಿನ್ನ ಮಕ್ಕಳನ್ನು ವಹಿಸಿ, ಅಧರ್ಮದಿಂದ ಅವರಿಗೆ ರಾಜ್ಯವೀಯದೆ, ಕೆಡಬೇಡ!' ಎಂದು ಹೇಳಿದನು.

'ವಿದುರ! ನೀನಾಡುವುದೆಲ್ಲವು ಧರ್ಮ ಸಮ್ಮತವಾಗಿದೆ. ನನಗೂ ಹಾಗೆ ನಡೆಯಬೇಕೆನಿಸುತ್ತಿದೆ. ಆದರೆ ದುರ್ಯೋಧನನನ್ನು ನೋಡಿದೊಡನೆ ಮತ್ತೆ ಬುದ್ಧಿಯೇ ಕೆಟ್ಟು, ಸುಮ್ಮನಿರಬೇಕಾಗಿದೆ. ಏನು ಮಾಡಲು ತೋಚದಂತಿದೆ. ಅದೃಷ್ಟವಿದ್ದಂತಾಗಲಿ! ಭಗವದಿಚ್ಛೆಗೆದುರಿಲ್ಲ. ಅದರ ಮುಂದೆ ನಮ್ಮ ಪೌರುಷವು ನಿರರ್ಥಕವು. ಬ್ರಹ್ಮಜ್ಞಾನವು ಸರ್ವಪಾಪ ಪರಿಹಾರಕವೆಂಬರು. ಶ್ರೀಹರಿ ತತ್ವಜ್ಞಾನವನ್ನು ನಾನು ಎಂತು ಹೊಂದಲಿ?' ಎಂದು ಕೇಳಿದ ಧೃತರಾಷ್ಟ್ರನಲ್ಲಿ ಕರುಣಿಸಿ, ವಿದುರನು 'ರಾಜನ್! ನಾನು ಶೂದ್ರ ಯೋನಿಜನು; ಆದುದರಿಂದ ಬ್ರಹ್ಮವಿದ್ಯೆಯನ್ನು ಉಪದೇಶಿಸುವ ಅಧಿಕಾರವೆನಗೇಗಿಲ್ಲ. ಸನತ್ಕುಮಾರನೆಂಬ ಮಹಾನುಭಾವನು ನಿನ್ನ ಸಂಶಯಗಳನ್ನು ಬಿಡಿಸಿ, ಹೇಳುವನು. ಆತನು ಶಿಷ್ಯರಿಗೆ 'ಮೃತ್ಯುವು ಆಗುವುದಿಲ್ಲ' ವೆಂದು ಉಪದೇಶಿಸಿರುವನು. ಮೃತ್ಯುತರಣೋಪಾಯವನ್ನವನಿಂದ ತಿಳಿ! ಆ ಸುಹಾತ್ಮನು ಬ್ರಹ್ಮಮಾನಸ ಪುತ್ರನು; ಬ್ರಾಹ್ಮಣೋತ್ತಮನು' ಎಂದನು. 'ನಾನು ಮನುಜ ದೇಹದಲ್ಲಿರುವಾಗ, ದೇವಸಮಾಗಮವೆನಗಾಗುವುದೆಂತು' ಎಂದ ಧೃತರಾಷ್ಟ್ರನಲ್ಲಿ ದಯೆಮಾಡಿ, ವಿದುರನು ಶಂಸಿತವ್ರತನಾದ ಸನತ್ಕುಮಾರ ಋಷಿಯನ್ನು ಧ್ಯಾನಿಸಿದನು. ತತ್ಕ್ಷಣವೇ ಸನತ್ಸುಜಾತನು ಪ್ರತ್ಯಕ್ಷನಾದನು. ಧೃತರಾಷ್ಟ್ರನು ವಿಧಿವಿಹಿತ ಪೂಜೆಯನ್ನರ್ಪಿಸಿ ಪೂಜಿಸಿ, ಆ ಮಹಾಮುನಿಯನ್ನು ಸುಖಾಸನದಿ ಕೂಡಿಸಿದನು. ವಿದುರನು 'ಮಹರ್ಷೇ! ಧೃತರಾಷ್ಟ್ರನ ಸಂದೇಹಗಳನ್ನು ಬಿಡಿಸು! ಪೂಜ್ಯನಾದ ನಿನ್ನ ಉಪದೇಶದಿಂದ ನಮ್ಮಣ್ಣನು ದುಃಖದೂರನಾಗಲಿ!' ಎಂದು ಪ್ರಾರ್ಥಿಸಿದನು.

## ಶ್ರೀಸನತ್ಸುಜಾತೀಯಂ–೧

ಕಂ|| ಶ್ರೀಶ! ಶ್ರೀಪಯವದನ! ಸುರೇಶ! ದರಜ್ಞಾನಪುಸ್ತಕಾಕ್ಷಯುತಕರಾ?
ಆಶಿಸುವೆ ನಮಿಸಿ, ನಿನ್ನಯ ದಾಸರ ದಾಸನನು ಮಾಡು! ದಯದಿ ಮುಕುಂದಾ!

ಕಂ|| ಶ್ರೀಮಧ್ವವಾದಿರಾಜರು, ಶ್ರೀಮದ್ಗುರುರಾಜರಾದಿ ಗುರುಗಳಿಗೆ ನಮಃ
ಶ್ರೀಮತ್ಸನತ್ಸುಜಾತೀಯಾಮಿತತತ್ವಾಲಿನುಡಿವಸನ್ಮತಿಕೊಡಿರೈ!
ಶ್ರೀಗಣೇಶಾಯ ನಮಃ ಶ್ರೀಗುರುಭ್ಯೋ ನಮಃ ಹರಿಃ ಓಂ ||

ಶ್ರೀಯಮಾವತಾರನಾದ ವಿದುರನು ಧೃತರಾಷ್ಟ್ರನಾಮಕಗಂಧರ್ವ ಸ್ವರೂಪ ನಾದ ತನ್ನ ಅಣ್ಣ ಧೃತರಾಷ್ಟ್ರನನ್ನು ಪ್ರಾರಬ್ಧ ವಶವಾಗಿ ಬಂದ ದುಷ್ಟಪುತ್ರ ಸ್ನೇಹ ದಿಂದ ಆಗುವ ಮಹಾನರ್ಥದಿಂದ ಕಾಪಾಡಲೆಣಿಸಿ, ನೀತಿಯನ್ನು ಪೇಳಿದನು. ಆಗ ಅದರಿಂದ ಅವನಿಗೆ ವೇದಾಂತ ಶಾಸ್ತ್ರದ ಶ್ರವಣದಲ್ಲಿ ಅಭಿರುಚಿಯು ಹುಟ್ಟಿತು. ಸ್ತೋತ್ರಮನಾದ ವಿದುರನ ಉಪದೇಶದಿಂದ ವೈರಾಗ್ಯವು ಹುಟ್ಟಿತು. ಶೋಕನಾಶಕ ವಾದ ಬ್ರಹ್ಮವಿದ್ಯೆಯನ್ನು ಕೇಳಲಿಚ್ಛಿಸಿದ ಅಣ್ಣನಿಗೆ—ಬ್ರಹ್ಮಜ್ಞಾನ ಸಂಪನ್ನ ನಾದರೂ, ಶೂದ್ರನಾದುದರಿಂದ ವಿದುರನು ತಾನು ಹೇಳದೆ, ಧ್ಯಾನಿಸಲು ಬಂದ ಸನತ್ಕುಮಾರನಿಂದ ಪೇಳಿಸಲೆಣಿಸಿ, ಅಂತೆಯೇ ಆ ಮಹಾನುಭಾವನನ್ನು ಉಪದೇಶಿಸಲು ಬೇಡಿದನು. ಸನತ್ ಎಂದರೆ ನಿತ್ಯ. ಸುಜಾತನೆಂದರೆ ಪ್ರಾದು-ರ್ಭೂತನು, ಸನತ್ಕುಮಾರನೆಂಬ ಶ್ರೀಹರಿಯ ಆವೇಶವಿತ್ತು ಬ್ರಹ್ಮಪುತ್ರ ಸನತ್ಕುಮಾರ ಋಷಿಯಲ್ಲಿ. ಆತನು ಸ್ವಯಂ ಕಾಮಾವತಾರನು.

ಪರಾಪರತತ್ವ ವಿಚಾರವನ್ನು ತಿಳಿಯುವ ಸದಭಿಲಾಷೆಯಿಂದ ಧೃತರಾಷ್ಟ್ರನು, ಏಕಾಂತ ಸ್ಥಲದಲ್ಲಿ ಸನತ್ಕುಮಾರನಿಗೆ ವಂದಿಸಿ, ಇಂತು ಪ್ರಾರ್ಥಿಸಿದನು—

'ಪೂಜ್ಯಸನತ್ಕುಮಾರನೇ! ನೀನು ಮೃತ್ಯುವೇ ಇಲ್ಲವೆಂದು ಶಿಷ್ಯರಿಗೆ ಉಪದೇಶಿ ಸಿದೆಯಂತೆ! ಪರಮ ಸಜ್ಜನ ವಿದುರನಿಂದ ಹೀಗೆ ಕೇಳಿದೆನು. ಮೃತ್ಯುವನ್ನು ಗೆಲ್ಲಲು ಇಂದ್ರಾದಿಗಳು ಬ್ರಹ್ಮಚರ್ಯಾದಿ ಪ್ರಯತ್ನಗಳನ್ನು ಮಾಡಿದಂತೆ ಶ್ರುತಿಯಲ್ಲಿ ಕೇಳ ಬರುತ್ತದೆ. ಮೃತ್ಯುವೇ ಇಲ್ಲದಿರೆ ದೇವತೆಗಳು ಅಮೃತವನ್ನೇಕೆ ಕುಡಿದರು? ಅಸುರರು ರುದ್ರಾದಿಗಳನ್ನು ಕುರಿತು ಮೃತ್ಯುದೂರವಾಗಲು ತಪಸ್ಸೇಕೆ ಮಾಡಿದರು?'

ಸನತ್ಕುಮಾರನು ಇಂತು ಉಪದೇಶಿಸಿದನು—

'ರಾಜನ್! ಮೃತ್ಯುವಿದೆ; ಆದರೂ ವೇದೋಚಿತ ಕರ್ಮಾನುಷ್ಠಾನದಿಂದ ಜ್ಞಾನದ್ವಾರಾ ಅದನ್ನು ಕಳೆಯಬಹುದೆಂದು ಕೆಲವರು ಜ್ಞಾನಿಗಳು ಹೇಳುವರು. ಮೃತ್ಯುವಿನ ಅಭಾವವೆಂದರೆ ಮೋಕ್ಷ; ಅದನ್ನು ಕರ್ಮ ಅಂದರೆ ಸರ್ವಕರ್ತನು, ಸರ್ವಜ್ಞನು ಆದ ಶ್ರೀಹರಿದಯದಿಂದ ಪಡೆಯಬಹುದು. ಕೆಲವರು ಮೃತ್ಯುವೇ ಇಲ್ಲವೆಂಬರು. ಅವರೂ ಜ್ಞಾನಿಗಳೇ; ಪರಸ್ಪರವಿರೋಧವಿರುವಂತೆ ತೋರುವ ಎರಡು ವಾದಗಳೂ ಸತ್ಯವೆಂದು ತಿಳಿ! ದೇಹ ವಿಯೋಗ ರೂಪ ಮರಣವು ಸಂಸಾರದಶೆಯಲ್ಲಿ ಎಲ್ಲ ಜೀವರಿಗೂ ಉಂಟು. ಆದರೆ ಸ್ವತಃ ಜೀವನು ಅಚ್ಛೇದ್ಯ, ಅನಾದಿ ನಿತ್ಯನಾದುದ ರಿಂದ ಮೃತ್ಯುವಿಲ್ಲ ಎಂದು ಹೇಳುವುದೂ ಸರಿ! ನಾನು ಜೀವವನ್ನು ಸ್ವರೂಪವನ್ನು ಕುರಿತು ಮೃತ್ಯುವೇ ಇಲ್ಲ ಎಂದು ಹೇಳಿದೆನು. ಸಾತ್ವಿಕ ಜೀವರು ಬಿಂಬೋಪಾಸನ ಮರೆತು ದೇಹಗೇಹಗಳಲ್ಲಿ ಅಭಿಮಾನದಿಂದ ವಿಪರೀತ ಜ್ಞಾನವನ್ನು ಪೊಂದಿದಾಗ, ಹುಟ್ಟಿಸಾಯುವ ಸಂಸಾರವೇ ಮೃತ್ಯು. ತಾಮಸರು ಜೀವೈಕ್ಯಚಿಂತನೆ ಬಿಟ್ಟು, ವೇದ ಧರ್ಮವನ್ನು ವಿಪರೀತ ಜ್ಞಾನದಿಂದ ಮಾಡುತ್ತಾ ಇರುವ ಸಂಸಾರವೇ ಮೃತ್ಯು. ಇಂತು ಎಲ್ಲರಿಗೂ ಮೃತ್ಯುವಿದೆ.

*

'ಬಾಹ್ಯ ಸಂಶಯ ವಿಪರೀತ ಜ್ಞಾನಗಳನ್ನು ಕಳೆದುಕೊಂಡು ಮೃತ್ಯುದೂರರಾಗುವುದರಿಂದ ಮುಕ್ತಿಯಲ್ಲಿ ಮೃತ್ಯುವಿಲ್ಲವೆಂದು ತಿಳಿ! ಮುಕ್ತಿಯಾದ ನಂತರ ಲಿಂಗ-ಶರೀರವಿಲ್ಲದುದರಿಂದ ತ್ರಿವಿಧ ಜೀವರೂ ಮೃತ್ಯುರಹಿತರೆಂದರ್ಥ. ಕವಿಗಳು ಮೋಹವನ್ನು ಮೃತ್ಯುವೆಂಬರು. ತನ್ನಲ್ಲಿ 'ತಾನು ಸ್ವತಂತ್ರ ಕರ್ತನೆಂಬ' ಮಿಥ್ಯಾಜ್ಞಾನವನ್ನು ಹೊಂದಿರುವುದೇ ಮೃತ್ಯು. ಇಲ್ಲದ ಕರ್ತೃತ್ವವನ್ನು ತಿಳಿಯದೆ ಶ್ರೀಹರಿಯೇ ಸ್ವತಂತ್ರ ಕರ್ತನೆಂಬುವುದೇ ಅಮೃತತ್ವ. ಅಹಂಕಾರದಿಂದ ಅಸುರರು ಕೆಟ್ಟರು. ಆ ಪ್ರಮಾದವನ್ನು ಮಾಡದೆ ಸುರರು ಮುಕ್ತರಾಗಿ ವಿಷ್ಣುಲೋಕವನ್ನು ಸೇರಿದರು. ವಿಶ್ವವು ಮಿಥ್ಯೆ; ಬ್ರಹ್ಮನು ನಿರ್ಗುಣನು; ಜೀವಬ್ರಹ್ಮರಿಗೆ ಭೇದವಿಲ್ಲ; ವೇದವು ಪ್ರಮಾಣವಲ್ಲ ಎಂದಿತ್ಯಾದಿ ಮಿಥ್ಯಾಜ್ಞಾನದಿಂದ ವಿಷ್ಣು ವೈಷ್ಣವ ದ್ವೇಷಿಗಳಾದ ಕಲ್ಯಾದಿಗಳು ಇಲ್ಲಿ ಪರಾಜಯವನ್ನು, ಅಲ್ಲಿ ಅಂಧಂತಮದ ನಿತ್ಯ ದುಃಖವನ್ನು ಪೊಂದಿದರು. ಮುಖ್ಯ-ಪ್ರಾಣಾದಿ ದೇವತೆಗಳು, ವಿಶ್ವ ಸತ್ಯ ; ಶ್ರೀಹರಿಯು ಅನಂತಕಲ್ಯಾಣಗುಣನಿಧಿಯು; ಜೀವನು ಜಡೇಶಭಿನ್ನನು ; ಶ್ರೀಶನು ಸ್ವತಂತ್ರನು ಸರ್ವೋತ್ತಮನು, ವೇದವು ಪರಮ ಪ್ರಮಾಣವೆಂದು ನಂಬಿ ಇಲ್ಲಿ ಸುಖವನ್ನು, ಅಲ್ಲಿ ಮೋಕ್ಷಾನಂದವನ್ನು ಹೊಂದಿದರು.

'ಎಲ್ಲರಿಗೂ ದೇಹಪಾತವು ನಿಶ್ಚಿತವು. ಪ್ರತ್ಯಕ್ಷ ಮೃತ್ಯುವು (ಮಾರಿಕಾ)ಯಮ, ರುದ್ರ, ವಾಯು, ವಿಷ್ಣುಗಳಿಗೆ ಅಧೀನವಾಗಿ, ಆಯುಃಕ್ಷಯವಾದಾಗ ಮಾತ್ರ ಕೊಲ್ಲುವುದರಿಂದಲು, ಪ್ರತ್ಯಕ್ಷಕಾಣಬರದಿರುವುದರಿಂದಲು, ಅದನ್ನು ಮೃತ್ಯುವೆನ್ನಲಾಗದು. ಆ ದೇವತೆಗೂ ಪ್ರಳಯದಲ್ಲಿ ಮರಣವಿದೆ. ಅವರವರ ಸ್ವಭಾವವನ್ನು ಮುಚ್ಚುವ ಪ್ರಮಾದವೇ ಮೃತ್ಯು. ಅಸುರರಿಗೆ ಪ್ರಮಾದವು ಸ್ವರೂಪವಾಗಿ ಮುಕ್ತಿದಿಶೆಯಲ್ಲಿ ಪ್ರಮಾದವೇ ವ್ಯಕ್ತವಾಗುವುದರಿಂದ, ಪ್ರಮಾದವನ್ನು ಮೃತ್ಯುವೆಂದು ನಿರೂಪಿಸಿದೆನು. ಸುರರು ಮೊದಲಾದ ಸಾತ್ವಿಕರಿಗೆ ಪ್ರಮಾದವು ಅಸ್ವಾಭಾವಿಕವಾಗಿ ನಷ್ಟವಾಗುವುದು; ಸ್ವರೂಪಾನಂದವು ಆವಿರ್ಭವಿಸುವುದು. ಆದುದರಿಂದ ಅಪ್ರಮಾದವೇ ಮುಕ್ತಿ ಎಂದೂ ತಿಳಿಸಿದೆನು. ಜ್ಞಾನವೇ ಮುಕ್ತಿ ಸಾಧನವು ; ಬೇರೆಲ್ಲ ಕರ್ಮವು ಜ್ಞಾನ ಸಾಧನವು.

'ಯಮರಾಜನನ್ನು ಮೃತ್ಯುವೆಂಬರು. ಆದರೆ ಪ್ರಳಯದಲ್ಲಿಯು ಜಗವನ್ನೆಲ್ಲ ನುಂಗಿ, ಪೂರ್ಣ ಸಚ್ಚಿದಾನಂದ ಸ್ವರೂಪನಾಗಿರುವ ಶ್ರೀಲಕ್ಷ್ಮೀನೃಸಿಂಹನೇ ಮೃತ್ಯುಶಬ್ದದ ಮುಖ್ಯಾರ್ಥನು. ಅವನು ಅಮೃತನು; ಮೃತರಾಗುವ ಇತರರಿಂದ ವಿಲಕ್ಷಣನು. ಸರ್ವಸ್ವತಂತ್ರನು. ಅವನನ್ನು ವೇದಾದಿ ಸಚ್ಛಾಸ್ತ್ರದಿಂದಲೇ ತಿಳಿಯಲಹುದು. ಅವನೇ ಸರ್ವಸಂಹಾರಕನು. ಅವನೇ ರಾಮರೂಪದಿಂದ ಪಿತೃ (ಯಮ) ಲೋಕದಲ್ಲಿದ್ದು, ಯಮಾದಿಗಳನ್ನು ಪಾಲಿಸುವನು. ಬ್ರಹ್ಮನಿಂದ ಪೂಜಿತನೂ ಆಗಿರುವನು. ಅವನೇ ಯಮನಲ್ಲಿದ್ದು, ಪುಣ್ಯವಂತರಿಗೆ ಸ್ವರ್ಗವನ್ನೂ ಪಾಪಿಗಳಿಗೆ ನರಕವನ್ನೂ ಕೊಡುವನು. ಬ್ರಹ್ಮನಲ್ಲಿದ್ದು ಸಾತ್ವಿಕರಿಗೆ ಮುಕ್ತಿಯನ್ನೂ ತಾಮಸರಿಗೆ

ತಮಸ್ಸನ್ನೂ ಕೊಡುವನು. ಆದುದರಿಂದ ಭಗವನ್ನಾರಾಯಣನೇ ಮುಖ್ಯ ಮೃತ್ಯುವೆಂದು ತಿಳಿ !

ಮಿಥ್ಯಾಜ್ಞಾನವೇ ಪ್ರಮಾದವು; ಅದೇ ಮೃತ್ಯುಪ್ರದವೆಂದೆನು. ಅದರಿಂದ ಕ್ರೋಧ ಮೋಹಗಳು; ಅವುಗಳಿಂದ ಜೀವನು ಅಜ್ಞಾನಿಯಾಗಿ ಕೆಟ್ಟ ಕಾರ್ಯಗಳನ್ನು ಮಾಡುವನು. ಲಿಂಗ ಶರೀರ ಸಂಬಂಧದಿಂದಾಗುವ ಅಹಂ ಮಮತೆಗಳಿಂದ ಜೀವನು— ಶ್ರೀನಾರಾಯಣನ ಆಜ್ಞೆಯಂತೆ ಬರುವ ಪ್ರಮಾದವೆಂಬ ಮೃತ್ಯುವಶನಾಗುವನು. ಕ್ರೋಧ ಮೋಹಗಳಿಂದ ಶ್ರುತಿಸ್ಮೃತಿ ನಿಷಿದ್ಧ ಕಾರ್ಯಗಳನ್ನು ಮಾಡುತ್ತಾ, ಶ್ರೀಹರಿವಿಷಯಕವಾದ ಜ್ಞಾನಕ್ಕೆ ವಿಮುಖನಾಗುವನು. ಸಾತ್ವಿಕ ಜೀವನೂ ಸಂಸಾರ ದಶೆಯಲ್ಲಿ ಅಹಂಕಾರದಿಂದ ಜ್ಞಾನದೂರನಾಗುವನೆಂದಮೇಲೆ ಇನ್ನು ರಾಜಸ ತಾಮಸರ ಪಾಡು ಹೇಳತೀರದು. ಇಂತು ಜೀವರು ದೇಹಪಾತವಾದಮೇಲೆ ನರಕಾದಿಗಳನ್ನು ಅನುಭವಿಸಿ, ಮತ್ತೆ ಪಾಪಾದಿ ಶೇಷಸಹಿತರಾಗಿಯೇ, ವರ್ಷಾದಿ ಮಾರ್ಗದಿಂದ ಬಂದು ದೈವವಿತ್ತ ಯೋನಿಯಲ್ಲಿ ಹುಟ್ಟುವರು. ಗರ್ಭಗತನಾದ ಜೀವನ ಶರೀರದಲ್ಲಿ ಶ್ರೀಹರಿ ಮುಖ್ಯಪ್ರಾಣರೂ ತತ್ವದೇವತೆಗಳೂ ಪ್ರವೇಶಿಸುವರು. ಮೃತ್ಯುದೇವನೂ ಹೋಗುವನು. ಮತ್ತೆ ಮರಣ ಪರ್ಯಂತವೂ ಅಲ್ಲಿದ್ದು ನಡೆಸುವರು. ಜೀವನು ಇಂತು ಜನನ-ಮರಣಗಳನ್ನು ಹೊಂದುತ್ತಾ ಇರುವನು; ಇದಕ್ಕೆ ವಿಷಯಾನುರಾಗವೇ ಕಾರಣವು. ಸ್ರಕ್ ಚಂದನ ವನಿತಾದಿ ಭೋಗಗಳನ್ನೇ ಬಯಸಿ, ಅದಕ್ಕಾಗಿ ಪ್ರವೃತ್ತಿ ಕರ್ಮವನ್ನು ಮಾಡುವವರು ಮೃತ್ಯು ಸಂಸಾರವನ್ನು ದಾಟಲಾರರು. ಭಗವತ್ಪ್ರೀತಿಯನ್ನು ಬೇಡಿ ಮಾಡಿದ ಕರ್ಮವೇ ಜ್ಞಾನದ್ವಾರಾ ಮೋಕ್ಷಹೇತುವಾಗಿದೆ. ಕರ್ಮ-ಫಲವನ್ನು ಬೇಡದೇ ಸ್ವವಿಹಿತ ಕರ್ಮಾನುಷ್ಠಾನವನ್ನು ಮಾಡಿ, ಆ ಪುಣ್ಯವನ್ನು ಶ್ರೀಶನಿಗೆ ಸಮರ್ಪಿಸಿದಾಗಲೇ ಮನಶ್ಶುದ್ಧಿ; ಅದರಿಂದ ಜಿಜ್ಞಾಸೆ; ಅದರಿಂದ ಜ್ಞಾನ; ಅದರಿಂದ ಭಗವತ್ಪ್ರಸಾದ; ಅದರಿಂದಲೇ ಮೋಕ್ಷ. ಈ ಅರಿವಿಲ್ಲದೆ ಸಂಸ್ಕಾರಬಲದಿಂದ ಫಲಾಪೇಕ್ಷೆಯನ್ನು ಬಿಡದ ಕರ್ಮಿಗಳಿಗೆ ಮೋಕ್ಷವಾಗುವುದಿಲ್ಲ. ವಿಷಯರಾಗದಿಂದ ವಿವೇಕವು ನಷ್ಟವಾಗುವುದು. ಜ್ಞಾನನಾಶಕವಾದ ವಿಷಯಾಭಿನಿವೇಶನವು ಅಹಂ ಕರ್ತಾ ಎಂಬ ವಿಪರೀತಜ್ಞಾನವನ್ನು ಹುಟ್ಟಿಸಿ ವ್ಯರ್ಥ ಶಬ್ದಾದಿ ವಿಷಯಗಳತ್ತ ಜೀವನವನ್ನು ಓಡಿಸುವುದು. ಅದರಿಂದ ಕೆಟ್ಟ ಮನಸ್ಸುಳ್ಳ ಜೀವನು ಮತ್ತೆ ಮತ್ತೆ ವಿಷಯಗಳನ್ನು ಬೇಡಿ, ಅನೇಕ ಜನ್ಮಗಳನ್ನು ಹೊಂದುತ್ತಿರುವನು. ಅವನ ಕರ್ಮಾನುಗುಣವಾಗಿ ಆಯಾ ದೇಹಗಳನ್ನೂ, ಕರ್ಮ ಫಲವನ್ನೂ ಕೊಡುವ ಭಗವಂತನನ್ನು ಸೇವಿಸದಿರುವನು.

ದುರ್ವಿಷಯಗಳ ನಿರಂತರ ಚಿಂತೆ ಅಗ್ನಿಯಂತೆ ಸುಡುವುದು. ಅದರಿಂದ ವಿಷಯಾಭಿಲಾಷೆ ಹುಟ್ಟುವುದು. ವಿಷಯ ಸಿಗದಿರೆ ಕಾಮದಿಂದ ಕ್ರೋಧವು ಹುಟ್ಟುವುದು. ಅವೆರಡೂ ಮೃತಪ್ರಾಯನಾಗಿ ಚಿಂತಿಸುವ ಜೀವನನ್ನು ಸ್ವಾಧೀನಪಡಿಸಿಕೊಂಡು, ಅವನನ್ನು ವಿವೇಕ ಜ್ಞಾನ ಶೂನ್ಯನಾಗಿಸುವುವು. ಅಭಿಧ್ಯಾನ ಕಾಮ

ಕ್ರೋಧಗಳೇ ಸಾಂಸಾರಿಕ ಮೃತ್ಯುವನ್ನು ಹೊಂದಿಸುವ ಕಾರಣಗಳೆಂದು ತಿಳಿ! ಇಂತಾದರೂ ಧೀರರಾದ ಸಾತ್ವಿಕ ಜೀವರು ನಶ್ವರ ವಿಷಯ ವಿರಕ್ತರಾಗಿ, ಸ್ವೋತ್ತಮ ಜ್ಞಾನಿ ಗುರು ಸೇವೆಯನ್ನು ಮಾಡುವವರು ಕ್ರಮವಾಗಿ ಶ್ರೀಹರಿಯಿತ್ತ ಅಪರೋಕ್ಷ ಜ್ಞಾನಬಲದಿಂದ ತಮಗೆ ಅಜ್ಞಾನದಶೆಯಲ್ಲಿದ್ದ ಸಂಸಾರಮೃತ್ಯುವನ್ನು ದಾಟುವರು.

'ಹಾರಿ ದೂರಹೋಗುವ ವಿಷಯಗಳನ್ನೇ ಚಿಂತಿಸಿ, ಹಿಂಬಾಲಿಸುವ ಮೂರ್ಖರು ಶ್ರುತಿಸ್ಮೃತಿ ವಿರುದ್ಧಾಚಾರಗಳನ್ನು ತಮ್ಮ ಇಹ ಪರ ಲೋಕ ವಿಷಯಕ್ಕಾಗಿ ಪಶು ಗಳನ್ನು ಕೊಂದು, ಯಜ್ಞಗಳನ್ನೂ ಮಾಡುವರು. ಆ ಪಶುಗಳು ಕಾಕ ಬಕ ಕ್ರೂರ ಮೃಗರೂಪದಿಂದ ಅವನು ನರಕದಲ್ಲಿ ಬಿದ್ದಾಗ ತಿನ್ನಲು ಬರುವವು. ಇಂತಹ ಅನರ್ಥ ವನ್ನು ತಿಳಿದು ವೈರಾಗ್ಯವನ್ನು ಧರಿಸಿ ಅನಾದಿಕಾಮವಾಸನಾಪ್ರಾಪ್ತವಾದ ದುರ್ವಿಷಯ ಗಳನ್ನು ಬಿಡುವವನೇ ವಿದ್ವಾಂಸನು. ಅನಿತ್ಯವು, ಅಶುಚಿಯು, ದುಃಖಯುತವು ಆದ ವಿಷಯದ ಚಿಂತೆಯನ್ನು ಅವು ಪುರುಷಾರ್ಥವಲ್ಲವೆಂದು ತಿಳಿದು ಪರಿತ್ಯಜಿಸಿ, ಶ್ರೀಹರಿಭಕ್ತನು ಮೃತ್ಯು (ಸಂಸಾರ)ವಿಗೆ ಮೃತ್ಯುವೆನಿಸುವನು. ಕಾಮಾನುಸಾರಿಯು ಕಾಮಿತಗಳಾದ ಸ್ರಕ್ ಚಂದನ ವನಿತಾ ಪಾನ ಭೋಜನಗಳ ನಾಶವನ್ನನುಸರಿಸಿ ತಾನೂ ನಷ್ಟನಾಗುವನು ಆವನಿಗೆ ತತ್ವಜ್ಞಾನವಾಗದಿರುವುದು. ಧೀರನು ವೈರಾಗ್ಯ ದಿಂದ ಕಾಮಗಳ ಹಿಂದೋಡದೆ ಶ್ರೀಶಧ್ಯಾನದಿಂದ ಪಾಪಮುಕ್ತನಾಗುವನು.

'ವಿಷಯ ವರ್ಗವೆಲ್ಲ ನರಕ ಸದೃಶವಾಗಿದೆ. ಸುಖಸಾಧನವಾಗಿ ತೋರುವ ತರುಣೀ ಪುತ್ರಾದಿ ದೇಹಗಳೆಲ್ಲವು ಸೌಕುಮಾರ್ಯ ಸೌಗಂಧ್ಯ ಸೌಂದರ್ಯಗಳೆಂಬ ಮುಸುಕು ಹಾಕಿಕೊಂಡು ಬಂದ ನರಕವು; ಶ್ಲೇಷ್ಮರಕ್ತ ಮೂತ್ರ ಮಲಗಳಿಂದ ತುಂಬಿ, ಮುಪ್ಪು ಚಿಂತೆಗಳ ಬೀಡಾಗಿ, ರೋಗ ಮೃತ್ಯು ಪ್ರಾಪಕವಾಗಿರುವ ದೇಹವು ಆಚ್ಛಾದಿತ ನರಕವಲ್ಲದೆ ಮತ್ತೇನು? ಅದನ್ನು ಸುಖಸಾಧನವೆಂದು ಭ್ರಮಿಸಿ, ಧಾವಿಸುವ ಜನರು ಸಂಸಾರಮೃತ್ಯುಮುಖದಲ್ಲಿ ಅಥವಾ ಮಲಮೂತ್ರಗಭೀರ ವೈತರಣಿಯಲ್ಲಿ ಬೀಳುವರು. ಕಣ್ಣು ಮುಚ್ಚಿ ಓಡುವವನಿಗೆ ಹಾಳು ಭಾವಿಯೇ ಗತಿ.

'ಜ್ಞಾನ ಮಾರ್ಗವನ್ನನುಸರಿಸುವ ಸಾತ್ವಿಕನನ್ನು ಸಂಸಾರ ಮೃತ್ಯುವು ಬಾಧಿಸ ಲಾರದು. ಕಣ್ಣು ತಗೆದಿರುವವನು ಭಾವಿಗೆ ಬೀಳನು. ತಿಳಿಯದವನು ಹುಲ್ಲಿನಹಾವಿಗೆ ಹೆದರುವಂತೆ, ತಿಳಿದವನು ಹೆದರುವನೇ? ಇಲ್ಲ. ಸದ್ಗುರುಗಳಿಂದ ಸಚ್ಛಾಸ್ತ್ರವನ್ನು ಕೇಳಿ, ತಿಳಿದು, ಧ್ಯಾನಿಸದಿಲ್ಲದೆ ಅಪರೋಕ್ಷಜ್ಞಾನವಿಲ್ಲ. ಅದಿಲ್ಲದೆ ಸಂಸಾರ ರೂಪ ಮೃತ್ಯುವು ತನ್ನ ಕ್ರೋಧ ಲೋಭ ಮೋಹ ಬೀಜಗಳನ್ನು ಶರೀರದಲ್ಲಿ ಚಲ್ಲಿ, ಇಲ್ಲೇ ಇರುವುದೆಂಬುದು ನಿನಗೂ ಗೊತ್ತಿರಬೇಕು! ಧೃತರಾಷ್ಟ್ರ! ವಿಷಯ ಸುಖವನ್ನೇ ಸುಖವೆಂದು ಭ್ರಮಿಸದೆ, ಪಾರತ್ರಿಕ ನೈಜ ಸುಖ ಸಾಧನವಾದ ಸಚ್ಛಾಸ್ತ್ರವನ್ನು ಅಭ್ಯಸಿಸಿ, ಸಂಸಾರವೆಂಬ ಸುಂಟರಗಾಳಿಯಿಂದ ತಪ್ಪಿಸಿಕೊಂಡು ಮುಕ್ತನಾಗುವವನೇ ಪಂಡಿತನು. ಪಾಂಡವರು ರಾಜ್ಯವನ್ನು ಬೇಡುವುದರಿಂದ ಕೋಪಿಸಬೇಡ! ಭಾಗ್ಯವು

ಹಂಚಿ ಹೋಗುವದೆಂಬ ಲೋಭವನ್ನು ಬಿಡು ! ಕೋಪದಿಂದ ವಿವೇಕಹೀನನಾಗಿ ಲೋಭದಿಂದ ಕೆಡುವುದುಚಿತವಲ್ಲ.

ಅಹಂಕಾರದಿಂದ ಪ್ರಮಾದ, ಅದರಿಂದ ಮೃತ್ಯುಪ್ರದವಾದ ಸಂಸಾರ, ಸರ್ವವು ನಶ್ವರವೆಂಬ ಜ್ಞಾನವನ್ನು ಆರ್ಜಿಸಿ, ನಿವೃತ್ತಿಕರ್ಮವನ್ನು ಮಾಡುವವನು ಶ್ರೀಹರಿ-ಭಕ್ತಿಭಾಗ್ಯವನ್ನು ಪಡೆಯುವನು. ಅವನಿಗೆ ಮೃತ್ಯುಭಯವಿಲ್ಲ. ಅವನು ಅಪರೋಕ್ಷಿಯಾಗುವತನಕ ಗೋಳಾಡಿಸಿದ ಮೃತ್ಯು (ಭಯ), ಲಿಂಗಶರೀರಪಾತದ ವರೆವಿಗೂ ತನ್ನ ಕಾರ್ಯ ಮಾಡಲಾರದೆ ಬಿದ್ದಿದ್ದು, ಮುಂದೆ ಸ್ವರೂಪದಿಂದಲೇ ನಾಶವಾಗಿ ಹೋಗುವುದು. ಇತರ ಜನರನ್ನು ಕೊಲ್ಲುವ ಮೃತ್ಯುವು ಆಗ ಅವನಿಗೆ ಹೆದರಿ ಓಡುವುದು.'

ಧೃತರಾಷ್ಟ್ರನು 'ನಿತ್ಯ ಪುಣ್ಯತಮಗಳಾದ ವೈಕುಂಠಾದಿ ಲೋಕಗಳು ಜ್ಞಾನದಿಂದಲು, ವೇದವಿಹಿತ ಯಜ್ಞಾನುಷ್ಠಾನದಿಂದಲು ಹೊಂದಲ್ಪಡುವವು ಎಂದು ಹೇಳುವ ವೇದಗಳೇ, ಕೆಲವೆಡೆ ವಿಹಿತ ಯಜ್ಞಾನುಷ್ಠಾದಿಂದಲೇ ಹೊಂದಲ್ಪಡುವ ಪರಲೋಕ ಮಹಾಫಲವನ್ನೂ ಹೇಳುತ್ತಿರುವಂತೆ ತೋರುತ್ತದೆ. ಕರ್ಮಪ್ರಾಪ್ತ ಲೋಕಗಳು ಅನಿತ್ಯವಾದರೆ ಜ್ಞಾನವಂತರು ವೇದವಿಹಿತಯಾಗಾದಿ ಕರ್ಮಗಳಲ್ಲಿ ಏಕೆ ತೊಡಗಿರುವರು ? ವ್ಯರ್ಥ ಕರ್ಮಗಳನ್ನು ಯಾರೂ ಮಾಡರಲ್ಲವೇ ?' ಎಂದು ಕೇಳಿದನು.

ಸನತ್ಸುಜಾತನು 'ರಾಜನ್! ಜ್ಞಾನಿಗಳಿಗೆ ಸರ್ವವೇದ ಮುಖ್ಯ ಪ್ರತಿಪಾದ್ಯನು ಶ್ರೀಹರಿಯು. ಅವನ ಪ್ರಾಪ್ತಿಗಾಗಿ ಜ್ಞಾನ, ಧ್ಯಾನ; ಅದನ್ನೀಯುವ ಶ್ರವಣ ಮನನಗಳು ಗುರುಮುಖದಿಂದ ಮಾಡಬೇಕು. ನಿವೃತ್ತಿ ಕರ್ಮವು ಮನಶ್ಶುದ್ಧಿ ಸಂಪಾದಕವಾಗಿದೆ; ಅಂತೆಯೇ ಅವರು ಫಲಾಸಕ್ತರಾಗಿ ವಿಹಿತ ಕರ್ಮಗಳನ್ನಾಚರಿಸಿ, ಶ್ರೀಹರಿಗರ್ಪಿಸಿ, ಜ್ಞಾನ ಭಕ್ತಿಗಳಿಂದ ಸ್ವಾಮಿಯನ್ನು ಮೆಚ್ಚಿಸಿ ಧನ್ಯರಾಗುವರು. ಕರ್ಮಜ್ಞಾನಗಳಿಗೆ ವಿರೋಧವಿಲ್ಲ. ಸ್ವರ್ಗಾದಿಗಳನ್ನೀವ ಪ್ರವೃತ್ತಿ ಕರ್ಮವು ಪುರುಷಾರ್ಥ ಸಾಧನವಲ್ಲ. ಕರ್ಮಫಲವು ಶ್ರೀಹರಿಗರ್ಪಿತವಾದಾಗ ಮೋಚಕವಾಗುವುದು; ಬಂಧಕವಲ್ಲ. ಇಂತು ತಿಳಿದು ಕರ್ಮಾನುಷ್ಠಾನ ಮಾಡಿದವನು ಮತ್ತೆ ಸಂಸಾರಕೂಪದಿ ಬೀಳುವುದಿಲ್ಲ. ಸರ್ವೇಶನು, ಪಾಲಕನು, ಪೂರ್ಣನು ಆದ ಶ್ರೀಹರಿಯಲ್ಲಿ ಮನವಿಟ್ಟು ಜ್ಞಾನಿಯು ಅರ್ಚಿರಾದಿ ಮಾರ್ಗದಿಂದ ಸತ್ಯಲೋಕವನ್ನೋ, ಶ್ರೀಹರಿಲೋಕವನ್ನೋ ಸೇರುವನು. ಕ್ರೂರ ಮೃಗಗಳಂತಿರುವ, ಇತರ ಜನರು ಕೋರುವ ವಿಷಯಗಳನ್ನು ಅವನು ನಾಶಪಡಿಸಿರುವನು. ಪ್ರವೃತ್ತಿ ಕರ್ಮದಿಂದ ಬರುವ ಸ್ವರ್ಗಾದಿ ಸುಖಗಳು ಈ ಲೋಕ ಸುಖದಂತೆ ನಶ್ವರವೂ ಹೇಯವೂ ಆಗಿರುವುದರಿಂದ ಜ್ಞಾನಿಯು ಅದನ್ನು ಕೋರನು. ಕರ್ಮಫಲವು ಜ್ಞಾನವೇ ಮತ್ತೊಂದಲ್ಲ ! ಜ್ಞಾನಫಲವು ಮೋಕ್ಷವೇ ಮತ್ತೊಂದಲ್ಲ !' ಎಂದನು.

ಧೃತರಾಷ್ಟ್ರನು. 'ಸರ್ವಜ್ಞ ! ಜನನಾದಿ ದೋಷರಹಿತನು, ಅನಾದಿ ಮಧ್ಯಾಂತನು, ಜೀವಪ್ರೇರಕನು ಆಗಿರುವ ಭಗವಂತನ ಲಕ್ಷಣಗಳಾವುವು ? ಅಂತಹ ಶ್ರೀಹರಿಗೆ ಜಗತ್ಸರ್ಜನಾದಿ ವ್ಯಾಪಾರದಿಂದ ಏನು ಪ್ರಯೋಜನ ? ಅದರಿಂದಾಗುವ ಸುಖವು ಉಂಟೇ ? ಪ್ರಯೋಜನವಿಲ್ಲದೆ ಎಂತಹ ಹುಚ್ಚರೂ ಯಾವ ಕೆಲಸವನ್ನೂ ಮಾಡರು. ದಯಮಾಡಿ ಎಲ್ಲವನ್ನೂ ತಿಳಿಸಿಕೊಡು !' ಎಂದು ಬೇಡಿದನು.

## ಶ್ರೀಸನತ್ಸುಜಾತೀಯ—೨

ಪೂಜ್ಯನಾದ ಸನತ್ಕುಮಾರನು ಇಂತು ಉಪದೇಶಿಸಿದನು—

'ಶ್ರೀಲಕ್ಷ್ಮೀರಮಣನು ಅನಾದಿಕಾಲದಿಂದಲು ಸ್ವತಃ ಅವಾಪ್ತಸಕಲಕಾಮನು, ಪರಿಪೂರ್ಣನು, ನಿತ್ಯಾನಂದನೂ ಆಗಿರುವನು. ಜಗಜ್ಜನ್ಮಾದಿ ವ್ಯಾಪಾರದಿಂದ ಅವನಿಗೆ ಪ್ರಯೋಜನವಿಲ್ಲ. ಆದರೂ ಅನಾದಿನಿತ್ಯರು, ಅಸ್ವತಂತ್ರರು ಅನೇಕವಿಧ ಭೇದ ಭಿನ್ನರು, ಆಗಿರುವ ಸಾತ್ವಿಕಾದಿ ಜೀವರಿಗೆ ತತ್ತದ್ಯೋಗ್ಯ ಸ್ವರೂಪದ ಅಭಿವ್ಯಕ್ತಿಯನ್ನಿತ್ತು, ಶುಭಾಶುಭಫಲವನ್ನೀವಸಲುವಾಗಿ ಜಗಜ್ಜನ್ಮಾದಿಕರ್ತನಾದ ನಾರಾಯಣನು ಪರಪ್ರಯೋಜನಕ್ಕಾಗಿ ವ್ಯಾಪಾರ ಶೀಲನಾಗಿರುವನು. ಇದು ಅವನ ಲೀಲೆ.

'ಸರ್ವೋತ್ತಮನಾದ ಶ್ರೀಶನು ಅನಾದಿಪ್ರಾಪ್ತಲಿಂಗಶರೀರ ಸಂಬಂಧಉಳ್ಳವರೂ ಸ್ವರೂಪತಃ ನಿತ್ಯರೂ ಆದ ಜೀವರಿಗೆ, ಭೌತಿಕ ದೇಹಗಳನ್ನಿತ್ತು ಸೃಜಿಸಿದನು. ಜೀವರು ಅನಾದಿ ನಿತ್ಯಚೇತನರು ನಿಜ ; ಆದರೂ ಪರಮನಿತ್ಯನು, ಪರಮಚೇತನನು ಆದ ಶ್ರೀಹರಿಗೆ ಅವರು ಸಮರಾಗಲಾರರು. ಸಮರೇ ಇಲ್ಲವೆಂದಮೇಲೆ ಅಧಿಕ ರಿಲ್ಲವೆಂದು ಹೇಳಬೇಕೆ? ಶ್ರೀಹರಿಯ ಪ್ರತಿಬಿಂಬರಾದ ಜೀವರೆಲ್ಲರು ಅವನ ಅಧೀನರೂ ಭಿನ್ನರೂ ಆಗಿರುವರು. ಇಚ್ಛಾಜ್ಞಾನಕ್ರಿಯಾಗಳಿಂದ ಜೀವರು ಅಸ್ವತಂತ್ರರು ಶ್ರೀಹರಿಯು ಸ್ವತಂತ್ರನು; ಜೀವರ ಯೋಗ್ಯತೆಯಂತೆ ಅವರವರ ಗತಿಯನ್ನು ಕೊಟ್ಟು ಸ್ವಭಾವಾಭಿವ್ಯಕ್ತಿಯನ್ನುಂಟುಮಾಡುವುದರಿಂದ ಶ್ರೀಶನು ಜೀವೋಪಕಾರಿ ಎನಿಸಿರುವನು.

'ಶ್ರೀಶನು ತನ್ನ ಸ್ವರೂಪವಾದ ಅಚಿಂತ್ಯಾದ್ಭುತ ಶಕ್ತಿಯಿಂದ, ತಾನಾಗಿ ಅನಾದಿ ನಿತ್ಯಗಳಾದ ಅನಂತಾವತಾರಗಳನ್ನು ಧರಿಸುವನು. ಅವತಾರ ರೂಪಗಳಿಗೂ ಶ್ರೀಶನಿಗೂ ಭೇದವಿಲ್ಲ; ಭೇದಾಭೇದವೂ ಇಲ್ಲ. ಶ್ರೀಶನ ಅವತಾರಗಳಲ್ಲಿ ಭೇದವನ್ನೆಣಿ ಸುವುದು ಮಿಥ್ಯಾಜ್ಞಾನವು ; ಅದರಿಂದ ತಮಸ್ಸಾಗುವುದು. ಶ್ರೀಹರಿಯು ಪ್ರಕೃತಿ ಯಿಂದ ನಿರ್ಮಿಸಿದ ಜಗವು ಪ್ರವಾಹತಃ ಅನಾದಿನಿತ್ಯವಾಗಿ, ಸತ್ಯವಾಗಿದೆ. ಮಹತ್ತು, ಅಹಂಕಾರ, ಪಂಚಭೂತಗಳು, ತನ್ಮಾತ್ರಗಳು ಮೊದಲಾದ ತತ್ವಗಳಿಂದ ನಿರ್ಮಿತ ವಾದ ಜಗವು ಶ್ರೀಶನ ಸೊತ್ತೆಂದೂ, ಸತ್ಯವಾದುದೆಂದೂ ವೇದಾದಿ ಸಚ್ಛಾಸ್ತ್ರ ಸಾರುತ್ತಿದೆ. ನಾನು ಅಂತೆಯೇ ತಿಳಿದಿರುವೆನು '

ಧೃತರಾಷ್ಟ್ರನು 'ಸ್ವಾಮಿ ! ಮನುಜ ಲೋಕದಲ್ಲಿ ಕೆಲವರು ಅಪರೋಕ್ಷ ಜ್ಞಾನಿಗಳು ನಿಷ್ಕಾಮಿಗಳಾಗಿ, ಕೇವಲ ವಿಷ್ಣು ಪ್ರೀತಿಗಾಗಿ ಕರ್ಮಗಳನ್ನು ಮಾಡುವರು. ಒಂದು ವೇಳೆ ಪ್ರಾರಬ್ಧ ವಶರಾಗಿ, ಅವರು ನಿಷಿದ್ಧ ಕರ್ಮಗಳನ್ನು ಮಾಡಿದರೆ, ಆಗ ಮೊದಲು ಮಾಡಿದ ಪುಣ್ಯಕರ್ಮವೂ ಹಿಂದೆ ಮಾಡಿದ ಪಾಪದಿಂದ ನಷ್ಟವಾಗುವುದೋ ? ಅಥವಾ ಧರ್ಮವು ತಾನು ನಾಶವಾಗದಿರುವುದರಿಂದ ಪಾಪ ವನ್ನೇ ನಾಶಮಾಡುವುದೋ? ಕೆಲವರು ಮಧ್ಯಮಾಧಿಕಾರಿಗಳು (ಗೃಹಾಶ್ರಮಿಗಳು) ಶ್ರುತಿವಿಹಿತ ಸಂಧ್ಯಾ ಪೂಜಾದಿ ಕರ್ಮಗಳನ್ನು ಶ್ರೀಹರಿಪ್ರೀತಿಗಾಗಿ ಮಾಡುವರು. ಅಂತಹವರ ಧರ್ಮವು ಪ್ರತಿಗ್ರಹರೂಪವಾದ ಪಾಪದಿಂದ ಕೆಡುವುದೋ ? ಅಥವಾ ಧರ್ಮವು ತನ್ನ ಬಲದಿಂದ ಪ್ರತಿಗ್ರಹಾದಿ ಪಾಪವನ್ನೇ ನಾಶಮಾಡುವುದೋ ? ಹೇಳಿ' ಎಂದು ಕೇಳಿದನು.

ಶ್ರೀಸನತ್ಸುಜಾತನು ನಿರೂಪಿಸಿದನು—

'ಜ್ಞಾನಿಗಳು, ಅಜ್ಞಾನಿಗಳು ಎಂದು ಅಧಿಕಾರಿ ಭೇದವಿದೆ. ಅವರು ಮಾಡುವ ಪುಣ್ಯ ಪಾಪ ಕರ್ಮಗಳೂ ವಿಭಿನ್ನವಾಗಿವೆ, ಕೇಳು ! ಅಪರೋಕ್ಷಜ್ಞಾನಿಯು ಜ್ಞಾನೋತ್ತರ ಕ್ಷಣದಲ್ಲೇ ಸಂಚಿತಾಗಾಮಿ ಪುಣ್ಯ ಪಾಪಗಳನ್ನು ಕಳೆದುಬಿಡುವನು. ನಶ್ವರವಾದ ಸ್ವರ್ಗನರಕಗಳನ್ನು ಹೊಂದಿಸುವ ಪುಣ್ಯಪಾಪಗಳು ನಾಶವಾಗುವವು. ಅವನು ಮುಂದೆ ಮಾಡುವ ಪುಣ್ಯ ಕರ್ಮಗಳನ್ನು ಭಗವತ್ಪ್ರೀತಿಗಾಗಿ ಮಾತ್ರ ಮಾಡುತ್ತಿರುವನು.

'ಅಪಕ್ವ ಯೋಗಿಯು ಫಲಾಭಿಸಂಧಾನದಿಂದ ಮಾಡಿದ ಪುಣ್ಯದಿಂದ ಸ್ವರ್ಗ ವನ್ನೂ, ಪಾಪದಿಂದ ನರಕವನ್ನೂ ತಪ್ಪದೇ ಹೊಂದುವನು. ಅಪರೋಕ್ಷಿಗಳು ಪ್ರಾರಬ್ಧವಶರಾಗಿ ಒಂದುವೇಳೆ ಪಾಪಮಾಡಿದರೆ, ಅದು ಅನುಭುಕ್ತವಾದುದೆನಿಸಿ ನಷ್ಟ ವಾಗುವುದಾಗಲಿ, ಮುಂದೆ ಅವರಿಗೆ ಜನ್ಮಾದಿ ಕಷ್ಟಗಳನ್ನು ಕೊಡಲು ಸಮರ್ಥವಾಗ ಲಾರದು. ಪ್ರಾರಬ್ಧಪುಣ್ಯವೂ ಅಂತೆಯೇ ನಶಿಸಿಹೋಗುವುದರಿಂದ ಸ್ವರ್ಗಾದಿಗಳನ್ನು ಕೊಡಲಾರದು. ಪ್ರಾರಬ್ಧಾವಸಾನದಲ್ಲಿ ಅವರು ಮುಕ್ತರಾಗುವರು. ಅಜ್ಞಾನಿಗಳಿಗೆ ಪಾಪ ಪುಣ್ಯಗಳಿಂದ ನರಕ ಸ್ವರ್ಗಗಳು ತಪ್ಪಿದ್ದಲ್ಲ. ಶ್ರೀಹರಿಪ್ರೀತಿಗಾಗಿ ಸ್ವವಿಹಿತ ಕರ್ಮಗಳನ್ನು ಮಾಡುವುದರಿಂದ ಅವರಿಗೆ ಜ್ಞಾನಮಾರ್ಗವು ದೊರಕಿ, ಅವರೂ ಮುಕ್ತರಾಗಬಹುದು. ಕಾಮ್ಯಕರ್ಮಗಳು ಫಲವನ್ನು ಕೊಡದೆಹೋಗುವುದಿಲ್ಲ. ಅವು ಜ್ಞಾನಸಾಧನವೆನಿಸಲಾರವು. ಅಪರೋಕ್ಷಜ್ಞಾನಿಯ ಪುಣ್ಯವು ಎಲ್ಲ ಪಾಪ ವನ್ನು ನಾಶಪಡಿಸಲು ಸಮರ್ಥವಾಗಿರುವುದು.

'ಪುಣ್ಯಾಧಿಕ್ಯದಿಂದ ಸ್ವರ್ಗಾದಿ ಫಲಾಧಿಕ್ಯವಿರುವುದೆಂದು ತಿಳಿದು ಕೆಲವರು ಕಾಮ್ಯ ಕರ್ಮಿಗಳು ಇತರ ಪುಣ್ಯವಂತರನ್ನು ನೋಡಿ, ಸ್ಪರ್ಧೆಯಿಂದ ಪುಣ್ಯ ಕರ್ಮ ಗಳನ್ನು ಮಾಡುವರು. ಬಲವತ್ತರ ರಾಜರನ್ನು ನೋಡಿ, ಸ್ಪರ್ಧೆಯಿಂದ ಸೈನ್ಯ

ಕೋಶಾದಿ ಬಲವನ್ನು ಹೆಚ್ಚಿಸಿಕೊಳ್ಳುವ ರಾಜರಂತೆ, ಸ್ಪರ್ಧಿಸುವ ಕಾಮ್ಯ-ಕರ್ಮಶೀಲರು ತಾವು ಮೃತರಾದಮೇಲೆ ಸ್ವರ್ಗವನ್ನು ಸೇರಿ, ಅಧಿಕ ಸುಖವಂತರಾಗುವರು.

'ದುಷ್ಟ ಸ್ಪರ್ಧೆಯನ್ನು ದೂರ ಸರಿಸಿ, ಶ್ರುತಿವಿಹಿತ ಕರ್ಮಗಳನ್ನು ಫಲಾಸಕ್ತಿಯಿಲ್ಲದೆ ಮಾಡಿ, ಶ್ರೀವಿಷ್ಣು ಪ್ರೀತಿಯನ್ನು ಮಾತ್ರ ಬೇಡುವ ಸುಜನರು, ಜಿಜ್ಞಾಸಾ-ಫಲವಾದ ಜ್ಞಾನವನ್ನು ಹೊಂದಿ, ಬ್ರಹ್ಮಜ್ಞಾನಿಗಳಾಗುವರು. ಅವರು ಮುಂದೆ ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿ (ತ್ರಿವಿಷ್ಟಪ) ಸ್ವಯೋಗ್ಯವಾದುದನ್ನು ಹೊಂದಿ, ಸ್ವತಂತ್ರನು, ಸ್ವರೂಪಜ್ಞಾನದಾತನು ಆದ ಹರಿಯ ಪ್ರಸಾದದಿಂದ ಸುಖಿಸುವರು. ಎಲ್ಲ ವೇದಗಳು ಭಗವತ್ಪರಗಳೆಂದು ತಿಳಿದ ಜ್ಞಾನಿಜನರು ವಿಷ್ಣುಪ್ರೀತಿಗಾಗಿ ಮಾಡುವ ಕರ್ಮಗಳು ಶುಭಫಲಗಳಾಗಿವೆ. ಅಂತಹ ಜ್ಞಾನಿಜನರ ಸ್ವರೂಪವನ್ನು ಅಜ್ಞಾನಿಗಳು ಎಂದಿಗೂ ತಿಳಿಯಲಾರರು. ಇಂತುಜ್ಞಾನಿಗಳು ಅಪರೋಕ್ಷ-ಜ್ಞಾನಿಗಳು ಎಂಬ ಉಭಯ ವಿಧ ಜ್ಞಾನಿಗಳನ್ನು ಅಜ್ಞರು ತಿಳಿಯದೆ, ಮೋಕ್ಷಾ-ಪಾದಕವಾದ ನಿಷ್ಕಾಮ ಕರ್ಮಜ್ಞಾನಗಳನ್ನು ಬಿಟ್ಟು, ಭಾಗವತಧರ್ಮ ವಿಮುಖರಾಗಿ ಕೆಡುವರು. ಜ್ಞಾನಿಜನರನ್ನು ಜ್ಞಾನಿಯೇ ತಿಳಿಯುವನು. ಮಳೆಗಾಲದಲ್ಲಿ ಹುಲ್ಲ ಮೇಲಿರುವ ನೀರಿನ ಬಾಹುಳ್ಯವನ್ನು ಕಣ್ಣಾರೆ ನೋಡಿ ತಿಳಿಯುವಂತೆ, ದೊಡ್ಡವರ ಜ್ಞಾನವನ್ನು ತಿಳಿದು ಗೃಹಸ್ಥನು ಅನ್ನಪಾನಗಳಿಂದ ಅವರನ್ನು ಸತ್ಕರಿಸಿದರೆ, ಸಂಸಾರತಾಪ ನಿರ್ಮುಕ್ತನಾಗುವನು. ಮಹತ್ಸೇವೆಗಿಂತ ಸರ್ವಾನಿಷ್ಟ-ನಿವರ್ತಕವಿಲ್ಲ.

'ವೃದ್ಧನಿಗೆ ಸತ್ಕಾರವನ್ನೀಯದ ತರುಣನನ್ನು ಅಜ್ಞಾನಿ ಎಂಬರು. ಅಂತಹವನ ಆಯುಸ್ಸು ಕ್ಷೀಣವಾಗುವುದು. ಆದುದರಿಂದ ಶ್ರೇಯಸ್ಕಾಮರು ಅಭ್ಯುತ್ಥಾನ, ಅಭಿ-ವಾದನಗಳಿಂದ ಜ್ಞಾನವೃದ್ಧನನ್ನು ಪೂಜಿಸುವುದತ್ಯಂತಾವಶ್ಯಕವಾಗಿದೆ. ಜ್ಞಾನಿಗಳನ್ನು ನೋಡಿ ಒಳ್ಳೆಯ ಮಾತು, ಒಳ್ಳೆಯ ನೋಟ, ಒಳ್ಳೆಯ ಮನಸ್ಸು ಕೊಟ್ಟು ಪೂಜಿಸದವನನ್ನು ದೇವತೆಗಳು ನರಕ ಮರಣಾದಿಗಳನ್ನಿತ್ತು ಶಿಕ್ಷಿಸುವರು.

'ಜ್ಞಾನಿಯು ಪರರು ಮಾಡುವ ಅಪಮಾನಾದಿಗಳಿಂದ ಕುಪಿತನಾಗದೆ, ತನ್ನ ದೊಡ್ಡಸ್ತಿಯನ್ನು ಬಿಚ್ಚಿ ನೋಡಿಸದೆ ಶಾಂತನಾಗಿರುವನು. ಅಂತಹ ಜ್ಞಾನಿಯು 'ಗೇಯಾಗೇಯ ನಿಂದಾ ಸ್ತುತಿಗಳನ್ನು ಬಿಟ್ಟು ಶ್ರೀಯರಸನ ಚಿಂತಿಸುತ್ತಾ ಅನುದಿನ ಕಳೆದು ಅಪರೋಕ್ಷವನ್ನೈದುವನು. ಹೊಡೆವ ಕೈಯನ್ನು, ಗಂಧಹಚ್ಚುವ ಕೈಯನ್ನು ಸ್ವೀಕರಿಸಿ ಶ್ರೀಹರಿಸ್ಮರಣೆಯಿಂದ ನಿರ್ವಿಕಾರನಾಗಿರುವವನೇ ನಿಜವಾದ ಜ್ಞಾನಿಯು. ವಿಚಾರಿಸಿ ನೋಡಲು ಸನ್ಮಾನದಿಂದ ತಪಃಕ್ಷಯವು, ಅವಮಾನದಿಂದ ತಪೋವೃದ್ಧಿಯು ಆಗುವುದು. ದುಃಖದಲ್ಲಿ ಸುಜನನು ಶ್ರೀಹರಿಗೆ ಶರಣಾಗತನಾಗಿ, ಇಹವನ್ನು ತ್ಯಜಿಸಿ, ಶ್ರೀಶನನ್ನು ಚನ್ನಾಗಿ ಭಜಿಸುವನು; ಸುಖದಲ್ಲಿ ಮದಮತ್ತನಾಗಿ ಮಾನವನು ಮಾಧವನನ್ನು ಮರೆಯಬಹುದು. ಅಂತೆಯೇ ಜ್ಞಾನಿಯು ಅನ್ಯರಿಗೆ ಆತ್ಮಮಹಿಮೆ

ಯನ್ನು ತೋರಗೊಡದೆ, ಬಂದ ಕಷ್ಟಗಳನ್ನು ಲೆಕ್ಕಿಸದೆ, ಸರ್ವಸ್ವತಂತ್ರನಾದ ಶ್ರೀಹರಿ ವಶವೆಲ್ಲವೆಂದರಿತು, ನಿಶ್ಚಿಂತನಾಗಿರುವನು. 'ನಾನು ಸ್ವತಂತ್ರನು, ನಾನು ಬ್ರಹ್ಮನು; ಸುಖದುಃಖಗಳನ್ನು ನಾನೇ ಸಂಪಾದಿಸುವೆನು' ಎಂದು ಇತ್ಯಾದಿ ದುಷ್ಟಭಾವನೆ ಯನ್ನು ಎಂದಿಗೂ ಸ್ಮರಿಸದವನೇ ಅಪರೋಕ್ಷಜ್ಞಾನಿಯು; ಅಂತಹ ಬ್ರಹ್ಮಜ್ಞಾನ-ಸಂಪನ್ನನಿಗಿತ್ತ ಅನ್ನಾದಿದ್ರವ್ಯವು ಮಹಾಫಲಪ್ರದವಾಗುವುದು. ಅಥವಾ ಅಂತಹ ಜ್ಞಾನಿಯ ಕೈಯಿಂದ ಬಂದ ಅನ್ನ ಜಲಗಳನ್ನು ಸ್ವೀಕರಿಸುವುದರಿಂದ, ಮಹಾಪಾಪವು ನಾಶವಾಗಿ, ಜ್ಞಾನಸಾಧಕವಾಗುವುದೆಂದು ಶಾಸ್ತ್ರವನ್ನರಿತ ಜ್ಞಾನಿಗಳು ಪೇಳುತ್ತಿರು ವರು. ಜ್ಞಾನಸಂಪನ್ನ ನಿವೃತ್ತ ಧರ್ಮಶೀಲನಾದ ಗೃಹಸ್ಥನು ತನ್ನ ಮಹಿಮೆಯನ್ನು ಬಚ್ಚಿಡಬೇಕು. ಅನಂತಮಹಿಮನಾಗಿ ಶ್ರೀಶನಿರಲು, ಅವನ ಮಹಿಮೆಯನ್ನು ಯಥಾ ಶಕ್ತಿ ತಿಳಿಯಲು ಪ್ರಯತ್ನಿಸಬೇಕು. ಅಂತಹ ಜ್ಞಾನಿಯು—ನೀರಿನಲ್ಲಿರುವ ನೀರಜ ಪತ್ರದಂತೆ—ಕಳತ್ರ ಪುತ್ರ ಪರಿವಾರ ಮಧ್ಯದಲ್ಲಿ ಗೃಹಸ್ಥಧರ್ಮದಿಂದಿದ್ದರೂ, ಪಾಪದ ಲೇಪವನ್ನು ಹೊಂದದೆ, ಮುಂದೆ ಮುಕ್ತನಾಗುವನು.

'ಶ್ರುತ್ಯಾದಿಗಳಲ್ಲಿ ಅಪರಿಚ್ಛೇಯ ಮಹಾಮಹಿಮನೆಂದು ಪ್ರಸಿದ್ಧನಾದ ಶ್ರೀಹರಿ ಯನ್ನು ಸಂಪೂರ್ಣವಾಗಿ ತಿಳಿಯುವುದು ಶ್ರೀಬ್ರಹ್ಮರುದ್ರೇಂದ್ರಾದಿಗಳಿಗೇ ಸಾಧ್ಯವಲ್ಲ; ಇತರರ ಪಾಡೇನು ? ಶ್ರೀಶನು ಲಿಂಗಶರೀರವಿಲ್ಲದ ಆನಂದ ಜ್ಞಾನಾದ್ಯನಂತ ಕಲ್ಯಾಣ ಗುಣದೇಹನು; ಸರ್ವದೈಕಪ್ರಕಾರನು; ಸರ್ವದೋಷದೂರನು; ಶೀತೋಷ್ಣಾದಿ-ದ್ವಂದ್ವಗಳಿಂದ ಜೀವರಿಗಾಗುವ ಸುಖದುಃಖಗಳ ಲೇಪವಿಲ್ಲದಿರುವನು; ಅವನೆಲ್ಲ ವನ್ನರಿತ ಸರ್ವಜ್ಞನು; ಅವನನ್ನಾರೂ ಸಾಕಲ್ಯೇನ ತಿಳಿಯಲಾರರು. ಇಂತಹ ಅನಂತ ಕಲ್ಯಾಣಗುಣ ಪೂರ್ಣನನ್ನು, ಇಂತಹ ದುಃಖಾದಿದೋಷದೂರನನ್ನು, ಇಂತಹ ಸರ್ವತಂತ್ರಸ್ವತಂತ್ರನನ್ನು ಮಿಥ್ಯಾಜ್ಞಾನಿಗಳು 'ನಿರ್ಗುಣ, ನಿರಾಕಾರ, ಜೀವ, ಜಡ' ಎಂದು ತಿಳಿದು ನಿಂದಿಸಿ, ಅಂಧಂತಮವನ್ನು ಹೊಂದುವರು. ಅವರು ಶ್ರೀಹರಿಯ ಗುಣಗಳನ್ನು ಅಪಹರಿಸಿದವರು; 'ನಾನೇ ಬ್ರಹ್ಮ'ನೆಂಬ ಚೋರರು; ತಮ್ಮಲ್ಲಿಲ್ಲದ ಭಗವದೇಕನಿಷ್ಠವಾದ ಸ್ವಾತಂತ್ರ್ಯಾದಿ ಗುಣಗಳನ್ನು ಕದ್ದು, ಮಹಾನರಕಭಾಜನ ರಾಗುವರು; ಐಕ್ಯೋಪಾಸನೆಗಿಂತ ಪಾಪವಿಲ್ಲ. ಶ್ರೀಹರಿಭಕ್ತಿಕಿಂತಲು ಪುಣ್ಯವಿಲ್ಲ.

'ಸುಜನರು ಶ್ರೀಶನ ಗುಣಗಳನ್ನು ತಮ್ಮಲ್ಲಿ ತರದೆ, ಮಿಥ್ಯಾಜ್ಞಾನವನ್ನು ಬಿಟ್ಟು ತಮೋದುಃಖ ದೂರರಾಗಿ ಸುಖಿಸುವರು. ಅವರು ದುಃಖವನ್ನೀವ ವಿಷಯಸುಖಗಳಿಗೆ ಪರೆದಾಡರು. ಶ್ರೀಹರಿ ಕೊಟ್ಟುದನ್ನುಂಡು ಶಿಷ್ಟರಿಗೆ ಸಮ್ಮತರಾಗಿ, ವೇದಶಾಸ್ತ್ರ ಗಳನ್ನು ಓದಿ, ದೇಹಗೇಹಾದಿಗಳಲ್ಲಿರುವ ಅಹಂ ಮಮಕಾರಗಳನ್ನು ಕಿತ್ತೊಗೆಯು ವರು. 'ಎಲ್ಲವೂ ಗೊತ್ತಿದೆ. ನನಗಾರೂ ಹೇಳಬೇಕಾದುದಿಲ್ಲ. ಎಲ್ಲ ಜನರ ವಾದ ವನ್ನೂ ಅಲ್ಲಗಳೆಯಬಲ್ಲೆನೆಂಬ ದುರಹಂಕಾರವನ್ನು, ಹುಲಿಯನ್ನಂತೆ ದೂರಮಾಡಿ, ಮತ್ತೆ ಮತ್ತೆ ಅವರು ಸಚ್ಛಾಸ್ತ್ರವನ್ನು ಅಭ್ಯಾಸಿಸುವರು. ತನ್ನನ್ನು ತಾನು ಉದ್ಧರಿಸಿ

ಕೊಂಡು ಶ್ರೀಹರಿಗುರುಕೃಪಾಪಾತ್ರನಾಗಬೇಕಾಗಲಿ, ಮತ್ತ್ಯಾರ್ವನು ನಮಗಾಗಿ ಪುಣ್ಯ ಜ್ಞಾನಗಳನ್ನು ಸಂಪಾದಿಸಿಕೊಡಲಾರನು.

'ಈಗ ಪರಮಹಂಸರ ಧರ್ಮವನ್ನು ಕೇಳು ! ಸಂಸ್ಥಾನಾಧಿಪತಿಗಳಾದ ಪರಮ ಹಂಸಪರಿವ್ರಾಜಕರು ರಾಜರಂತೆ ಮಹಾವೈಭವದಿಂದಿದ್ದರೂ, ಅದೆಲ್ಲವೂ ಶ್ರೀಹರಿ ವೈಭವವೆಂದು ತಿಳಿದಿರುವುದರಿಂದ, ಆ ಮಹಾನುಭಾವರು ನಿರ್ಲಿಪ್ತರು, ನಿಷ್ಕಿಂಚನರೇ ಸರಿ !

'ಇತರ ಬಹೂದಕಾದಿಗಳು ತಾವಾಗಿ ಬಿಟ್ಟುಹೋದ ಪೂರ್ವಾಶ್ರಮದಲ್ಲಿ ಅರ್ಜಿಸಿಟ್ಟ ಅನ್ನಾದಿಗಳಿಂದ ತಮ್ಮ ದೇಹಯಾತ್ರೆ ಮಾಡಲಾಗುವುದು. ಅರ್ಜಿತ ಸ್ವರ್ಣಾದಿಗಳನ್ನೂ ಶ್ರೀಹರಿಗರ್ಪಿಸಿ ಮತ್ತೆಅದನ್ನು ಸ್ವೀಕರಿಸುವವರು—ವಾಂಯನ್ನೇ ತಿನ್ನುವ ಶ್ವಾನದಂತೆ ನಿಂದ್ಯರೆನಿಸುವರು ; ಅದನ್ನು ವಿಪ್ರಪುತ್ರಾದಿಗಳಿಗಿತ್ತು, ಶ್ರೀ-ಹರಿ ಪೂಜಾತತ್ಪರರಾಗಿ, ಶ್ರೀಹರಿಪ್ರೀತಿಗಾಗಿ ಗೃಹಸ್ಥರಿತ್ತ ಭೂ ಧನ ಸ್ವರ್ಣಾನ್ನಾದಿ ಗಳನ್ನು ಸ್ವೀಕರಿಸಿ, ಸಮರ್ಪಿಸಿ, ತಾವು ವಿರಕ್ತರಾಗಿರುವ ಮಹಾಮಠಾಧೀಶರು, ಶ್ರೀಹರಿಯಿಂದಲೇ ಜೀವಿಸುತ್ತಾ, ಜ್ಞಾನಾನ್ನ ದಾನಗಳಿಂದ ಶಿಷ್ಯಸುಜನರನ್ನು ತಣಿ ಸುತ್ತಾ, ಸರ್ವಸುಜನರನ್ನು ಕ್ಷೇಮಂಕರರೆನಿಸಿ, ಮುಕ್ತಿಯ ಮಹಾನಂದಭಾಗಿಗಳಾಗಿ, ಲೋಕದಲ್ಲಿ ಸದಾ ಪೂಜಿತರಾಗಿರುವರು. ದುಡ್ಡಿಲ್ಲದಿರೆ ಏನಾಯಿತು ? ಜ್ಞಾನವೆಂಬ ನಿಧಿಯಿಂದ ಅವರು ಮಹಾಪುರುಷಾರ್ಥವನ್ನು ತಾವೂ ಪೊಂದಿ, ಇತರ ಸುಜನರನ್ನೂ ಉಪದೇಶಾಮೃತಪಾನವಿತ್ತು ಪೊಂದಿಸುವರು. ಅಂತಹ ಮಹಾತ್ಮರು ನಿವೃತ್ತಿ ಮಾರ್ಗದಿಂದ ಚಲಿಸದೆ, ದುರ್ವಾದಿಗಳಿಗೆ ಹೆದರದೆ ವೈಷ್ಣವದೀಕ್ಷಾದಕ್ಷರಾಗಿರುವರು. ಅವರು ಶ್ರೀಶನ ವಿಶೇಷ ಸನ್ನಿಧಾನಪಾತ್ರರಾಗಿ, ಪೂಜ್ಯರಾಗಿರುವರು. ಅಂತಹ ಪರಮ ಹಂಸರನ್ನು ಶ್ರೀಹರಿ ಮುಖ್ಯಪ್ರಾಣರಿಗೆ ಪ್ರತಿಮೆಗಳೆಂದು ತಿಳಿದು ಪೂಜಿಸಬೇಕು. ಜ್ಞಾನನಿಷ್ಠರು, ಕರ್ಮನಿಷ್ಠರು ಎನಿಸಿ, ಲೋಕ ವೃತ್ತವನ್ನು ಶಿಕ್ಷಿಸುವ ಸನ್ಯಾಸಿ ಗಳೆಲ್ಲರು ಸನ್ಮಾನ್ಯರೇ ಆಗಿರುವರು.

'ತನ್ನ ದೇಹದಲ್ಲಿದ್ದು ನಡೆಸುವ ಶ್ರೀಹರಿಪರಿವಾರರಾದ ಶ್ರೀರಮಾಬ್ರಹ್ಮಾದಿ ತತ್ವದೇವತೆಗಳನ್ನೂ ತಾರತಮ್ಯಕ್ಕೆ ತಕ್ಕಂತೆ ಪೂಜಿಸಬೇಕು. ಅವರು ನಮ್ಮ ಇಂದ್ರಿಯಾದಿ ಪ್ರೇರಕರಾಗಿ ಪರಮೋಪಕಾರಿಗಳಾಗಿರುವರೆಂದು ತಿಳಿದು ಭಜಿಸು ವವನೇ ಜ್ಞಾನಿಯು. ಬರಿಯ ವೇದಾಧ್ಯಯನ ಸಾಲದು; ತಾರತಮ್ಯ ಜ್ಞಾನವಂತನಿಗೆ ಅಂತಹ ತಾರತಮ್ಯವನ್ನರಿಯದವನು ಸಮಾನನಾಗಲಾರನು. ಅವನಿನ್ನೂ ಅಭಿ ಮಾನದಿಂದ ದೇಹಗೇಹಾದಿಗಳಲ್ಲಿ ಆಸಕ್ತನಾಗಿ ತತ್ವದೇವತೆಗಳನ್ನರಿಯದೆ, ತಾನೇ ಕರ್ತನೆಂದು ತಿಳಿದಿರುವನು. ತತ್ವದೇವ ವ್ಯಾಪಾರವನ್ನು ತಿಳಿದು, ತಾನು ಅಸ್ವತಂತ್ರ ನೆಂದು ವರ್ತಿಸುವ ಜ್ಞಾನಿಯನ್ನು ನೋಡಿ ಅಜ್ಞಾನಿಯು ಕ್ರಮವಾಗಿ ದುರಭಿಮಾನ ವನ್ನು ಬಿಟ್ಟು, ಶ್ರೀಹರಿಗುರುಭಕ್ತನಾಗಬಹುದಾಗಿದೆ. ಅಂತಹ ಅಭಿಮಾನ ರಹಿತನು ಮತ್ತೊಬ್ಬರಿಂದ ಸತ್ಕಾರಕ್ಕೆಹಾತೊರೆಯದೆ, ನಿಂದಾವಮಾನಗಳಿಗೆ ತಪಿಸದೆ ನಿರ್ವಿಕಾರ

ನಾಗಿರುವನು. ಸನ್ಮಾನ, ಅವಮಾನಗಳನ್ನೀವುದು, ಲೋಕಸ್ವಭಾವವಾಗಿದೆ. ಸಂಸಾರದಿಶೆಯಲ್ಲಿ ಸುಖದುಃಖಗಳು ಚಕ್ರದ ಅಲುಗಿನಂತೆ ಮೇಲೆಕೆಳಗಾಗಿಸುವುವು. ಇದು ತಪ್ಪದೆಂದು ತಿಳಿದ ಜ್ಞಾನಿಯು ನಿರ್ವಿಕಾರನಾಗಿರುವನು. ಅನ್ಯಕೃತ ಸುಖ ದುಃಖಗಳು ನಿತ್ಯವಲ್ಲ! ಅವರು ಅವನ್ನೀಯಲು ಸ್ವತಂತ್ರರಲ್ಲ ಎಂದು ಅಪರೋಕ್ಷಿಯು ತಿಳಿದಿರುವನು. ಒಂದು ವೇಳೆ ದುರ್ಮಾರ್ಗರು ಅವಮಾನಿಸಿದರೆ, ಅವರು ಮೇಲೆ ತಿಳಿಸಿದ ಶಾಸ್ತ್ರಜ್ಞಾನವಿಲ್ಲವೆ, ಅಸೂಯಾದ್ವೇಷಗಳಿಂದ ಅಧರ್ಮಪರರಾಗಿ ನಿಂದಿಸು ವರೆಂದು ತಿಳಿದು, ಜ್ಞಾನಿಯು ಸುಮ್ಮನಿರುವನು. ಸನ್ಮಾನ್ಯರನ್ನು ಗೌರವಿಸದಿರುವುದೇ ದುಷ್ಟಲಕ್ಷಣವು; ಶ್ರೀಕೃಷ್ಣನಿಂದೆಯೇ ದುರ್ಯೋಧನ ಲಕ್ಷಣವು!

'ದೇಹಗೇಹಾದಿಗಳು ನನ್ನವೆಂಬ ದುರಭಿಮಾನವಿದ್ದೆಡೆ ವಿಷಯಸಂಬಂಧದಿಂದ ಬರುವ ಸುಖದುಃಖಾದಿ ವಿಕಾರವಿದ್ದೇ ಇದೆ. ದುರಭಿಮಾನವಿದ್ದೆಡೆ ವಿಕಾರವನ್ನು ತೋರಗೊಡದಂತೆ ಅಡಗಿಸುವ ಮೌನವಿಲ್ಲ. ಮೌನವಿದ್ದೆಡೆ ದುರಭಿಮಾನವಿಲ್ಲ. ಲೋಕದ ಜನರು ಮಾನವನ್ನಾಶಿಸಿದರೆ, ಜ್ಞಾನಿಗಳು ಮೌನವನ್ನಾಶ್ರಯಿಸುವರು. ಅಂತಹ ಜ್ಞಾನಿಗೆ ಮಾನದ ಸೋಂಕಿಲ್ಲ.

'ಅಭಿಮಾನಿಗಳು ಮಾಡುವ ಪ್ರವೃತ್ತ ಕರ್ಮವು ಮೋಕ್ಷಮಾರ್ಗ ವಿರೋಧಿ ಯಾಗಿದೆ. ಅಂತಹ ಕರ್ಮಫಲವೂ ಅನಿತ್ಯವಾಗಿದೆ. ಸುಖವೆಂದು ಬೇಡುವ ಸ್ವರ್ಗಾದಿ ಗಳು ಮುಮುಕ್ಷುವಾಗಬಯಸುವವನಿಗೆ ಹೇಯವೂ ಆಗಿವೆ. ಆದುದರಿಂದ ಬ್ರಹ್ಮ-ಜ್ಞಾನದಿಂದಾಗುವ ಮೋಕ್ಷಸಂಪತ್ತು, ಪ್ರವೃತ್ತದಿಂದಲ್ಲದೆ ನಿವೃತ್ತಕರ್ಮದಿಂದಲೇ ಲಭಿಸುವುದೆಂದು ತಿಳಿದು ಬುದ್ಧಿವಂತನು, ಅಹಂಕಾರವನ್ನು ಬಿಟ್ಟು, ಕರ್ಮಪುಣ್ಯ ವನ್ನು ಶ್ರೀಶನಿಗರ್ಪಿಸಿ, ಶ್ರೀಹರಿಸರ್ವೋತ್ತಮನೆಂಬ ಜ್ಞಾನವನ್ನು ಜೀವೋತ್ತಮ ನಾದ ಶ್ರೀಮುಖ್ಯಪ್ರಾಣನ ಸಚ್ಛಾಸ್ತ್ರದಿಂದ ತಿಳಿದು, ನಿತ್ಯವಾದ ಮೋಕ್ಷ ಸುಖವನ್ನು ಹೊಂದಬೇಕು. ಸ್ತ್ರೀಶೂದ್ರಾದಿ ಸಜ್ಜೀವರು ಕೂಡ ಮಾನ ಮೋಹಗಳನ್ನು ಬಿಟ್ಟು, ದೇಹಗೇಹಾದಿಗಳು ಅನಿತ್ಯವೆಂದು ತಿಳಿಯಬೇಕು. (೧) ಭೂತಹಿತವು, ಯಥಾರ್ಥವು ಆದ ಸತ್ಯ, (೨) ಮನೋವಾಕ್ಕಾಯಗಳಿಂದ ಕಾಪಟ್ಯರಾಹಿತ್ಯ (ಆರ್ಜವ), (೩) ನಿಷಿದ್ಧಾಚರಣೆಯಲ್ಲಿ ಲಜ್ಜೆ, (೪) ಇಂದ್ರಿಯ ನಿಗ್ರಹ, (೫) ಬಾಹ್ಯಶೌಚ, ಭಾವಶುದ್ಧಿ, (೬) ಬ್ರಹ್ಮವಿದ್ಯೆ—ಇವು ಆರು ದುರಭಿಮಾನ ದುಷ್ಟಜ್ಞಾನಗಳನ್ನು ನಾಶಪಡಿಸುವುವೆಂದು ತಿಳಿದು, ಅವನ್ನು ಅಳವಡಿಸಿ ನಡೆಯಬೇಕು.

## ಶ್ರೀಸನತ್ಸುಜಾತೀಯ—೩

ಧೃತರಾಷ್ಟ್ರನು ಮೌನಾದಿ ಸ್ವರೂಪವನ್ನು ತಿಳಿಯಲಿಚ್ಛಿಸಿ, 'ಸರ್ವಜ್ಞ! ಸನತ್ಸುಜಾತ! ನೀನು ನಿರೂಪಿಸಿದ ಮೌನವೆಂದರೇನು? ಅದಾರಿಗೆ ಲಭ್ಯವು? ಮೌನದ ಲಕ್ಷಣವೇನು? ಮೌನವನ್ನು ಅನುಷ್ಠಿಸಿ, ಜ್ಞಾನಿಯು ಮುನಿಪ್ರಾಪ್ಯ ನಾದ ಭಗವಂತನನ್ನು ಹೊಂದುವುದೆಂತು? ಮೌನನಿಷ್ಠ! ಮಹಾಪುರುಷಾರ್ಥ

ಸಾಧನವೆಂದು ನೀ ಪೇಳುವ ಮೌನವನ್ನು ಜ್ಞಾನಿಗಳು ಆಚರಿಸುವುದೆಂತು? ನನಗೆ ಚನ್ನಾಗಿ ತಿಳಿಸಿಕೊಡು!' ಎಂದು ಕೇಳಿದನು.

ಶ್ರೀಸನತ್ಸುಜಾತನು 'ಅನಾದಿಕಾಲದಿಂದ ಬಂದ ಸಂಸಾರ ಸಂಬಂಧದಿಂದ ಅಜ್ಞಾನ, ಅನ್ಯಥಾಜ್ಞಾನಗಳಿಂದ ಜೀವನು ಭಗವಂತನನ್ನು ತಿಳಿಯದೆ, ಧ್ಯಾನಿಸದೆ, ಪ್ರವೃತ್ತಿಕರ್ಮರತನಾಗಿ ಸಂಸರಿಸುವನು. ಅವನು ವೇದಗಳನ್ನು ಓದಿದರೂ, ಭಗವಂತನೇ ಸರ್ವವೇದ ಪ್ರತಿಪಾದ್ಯನೆಂಬ ಅನುಸಂಧಾನವಿಲ್ಲದುದರಿಂದ ವೇದಯಥಾರ್ಥಜ್ಞಾನರಹಿತನಾಗುವನು. ವೇದಗಳಿಂದ ಅನುಗ್ರಹೀತನಾಗದ ಜೀವನಿಗೆ ಬ್ರಹ್ಮಜ್ಞಾನವೆಂತು ಲಭಿಸುವುದು? ಮೌನವೆಂದರೆ ಬ್ರಹ್ಮಜ್ಞಾನವು. ಅದು ವೇದಯಥಾರ್ಥಜ್ಞಾನಿಗಳಿಗೇ ಲಭ್ಯವಾಗಿದೆ. ಅಜ್ಞಾನಿಯಾದ ಬ್ರಾಹ್ಮಣನಿಗೆ ವೇದಾಧಿಕಾರವಿದೆ. ಆದರೂ ಅವನಿಗೆ ವೇದದಿಂದ ಬ್ರಹ್ಮಜ್ಞಾನವಾಗಲಾರದು.

'ವೇದಶಬ್ದನನ್ನು ಅಂದರೆ ಅನಂತ ವೇದಪ್ರತಿಪಾದಿತನಾದ ನಾರಾಯಣನನ್ನು ಯಥಾರ್ಥಜ್ಞಾನಪೂರ್ವಕವಾಗಿ ಅಧ್ಯಯನ ಮಾಡಿ, ಸರ್ವೋತ್ತಮನೆಂದು ತಿಳಿದ ಅಧಿಕಾರಿಯು ಸ್ವಯೋಗ್ಯಬ್ರಹ್ಮಜ್ಞಾನವನ್ನು ಚನ್ನಾಗಿ ಪೊಂದಿ ವಿಶೇಷವಾಗಿ ಪ್ರಕಾಶಿಸುವನು. ವೇದಶಬ್ದಗಳು ಭಗವಂತನನ್ನೇ ನಿರ್ದೇಶಿಸಿ, ವ್ಯವಹಾರಾರ್ಥವಾಗಿ ಭಗವಂತನ ನಾಮಗಳನ್ನು ಸಮಾಕರ್ಷಿಸಿ ಜಗವನ್ನೂ ಹೇಳುತ್ತಿವೆ. ಇಂತು ತಿಳಿದ ಯಥಾರ್ಥಜ್ಞಾನಿಯು ಭಗವಂತನನ್ನು ಸೇರಿ, ಮುಕ್ತನಾಗುವನು. ಮೌನವನ್ನು ಆಚರಿಸುವ ಬ್ರಹ್ಮಜ್ಞಾನಿಯನ್ನು ಅನುಗ್ರಹಿಸಿ, ವೇದಪುರುಷನು ಸರ್ವವೇದ ಪ್ರತಿಪಾದಿತ ಭಗವತ್ ಸ್ವರೂಪದ ಅನುಸಂಧಾನವನ್ನಿತ್ತು ಕಾಪಾಡುವನು. ಅದೇ ಮೌನದ ಸ್ವಭಾವವೆಂದು ತಿಳಿ! ಸರ್ವೋತ್ತಮನೆಂದು ಶ್ರೀಹರಿಯನ್ನು ತಿಳಿಯುತ್ತಾ, ವೇದಗಳ ಅಧ್ಯಯನಾದಿಗಳೇ ಮೌನವನ್ನಾಚರಿಸುವ ವಿಧ. ಅಂತು ನಡೆವವರೇ ಜ್ಞಾನಿಗಳು' ಎಂದು ವಿವರಿಸಿ ಹೇಳಿದನು.

ಧೃತರಾಷ್ಟ್ರನು, 'ಅಪರೋಕ್ಷ ಜ್ಞಾನದಿಂದ ಹಿಂದು ಮುಂದಿನ ಎಲ್ಲ ಕರ್ಮಗಳು ನಷ್ಟವಾಗುವುವೆಂದು ಕೇಳಿದೆನು. ಅಂತೆಯೇ ವೇದಗಳನ್ನು ಓದುವುದರಿಂದಲೂ ಮಹಾಪುಣ್ಯವು ಬಂದು ಹಿಂದಿನ ಪಾಪಗಳೆಲ್ಲ ನಷ್ಟವಾಗುವವೋ ಇಲ್ಲವೋ ತಿಳಿಸು! ಅವನಿಗೆ ಪಾಪಲೇಪವು ಉಂಟೆ?' ಎಂದು ಕೇಳಿದನು.

ಶ್ರೀಸನತ್ಸುಜಾತನು, 'ಅಧ್ಯಯನ ಮಾತ್ರದಿಂದ ಬ್ರಾಹ್ಮಣನು ಪಾಪಗಳಿಂದ ಬಿಡಲ್ಪಡುವನೆಂದು ತಿಳಿಯಬೇಡ! ಇದು ನಿಜ! 'ವೇದ ಓದಿ ದಡ್ಡನಾದ' ಎಂಬಂತೆ ವೇದಪ್ರತಿಪಾದಿತನಾಗಿರುವ ಶ್ರೀನಾರಾಯಣನ ಜ್ಞಾನವಿಲ್ಲದೆ ಪಾಠ ಮಾಡುತ್ತಾ, ದುಷ್ಟಾಚಾರ ಮಿಥ್ಯಾಜ್ಞಾನಗಳಿಂದ ಕೂಡಿರುವ ಬ್ರಾಹ್ಮಣನ ಪಾಪ ಕಳೆಯುವುದೆಂತಿರಲಿ! ಅಂತಕಾಲದಲ್ಲಿ ಅವನ ಕೈಬಿಟ್ಟು, ವೇದಾಭಿಮಾನಿದೇವತೆಗಳು ಗೂಡಿನಿಂದ ಹಾರಿಹೋಗುವ ಪಕ್ಷಿಗಳಂತೆ, ಬಿಟ್ಟುಹೋಗುವರು. ವೇದಗಳನ್ನು ತನ್ನ

ಮನಕೆ ಬಂದಂತೆ ತಿಳಿದು, ವ್ಯರ್ಥಕರ್ಮಗಳಲ್ಲಿ ತೊಡಗಿರುವ, ಮಿಥ್ಯಾಜ್ಞಾನಿಯನ್ನು ವೇದಗಳು ನರಕಾದ್ಯನರ್ಥಗಳಿಂದ ಪಾರುಗಾಣಿಸವು' ಎಂದುತ್ತರವಿತ್ತನು.

ಧೃತರಾಷ್ಟ್ರನು 'ಓದುವ ವಿಪ್ರರ ಪಾಪವನ್ನು ಕಳೆಯದ ವೇದಾಧ್ಯಯನವು ಅರಣ್ಯರೋದನದಂತೆ ವ್ಯರ್ಥವೆನಿಸುವುದಿಲ್ಲವೇ? ಆದರೂ ವೇದಗಳನ್ನು ಅನಾದಿ ಕಾಲದಿಂದ ಬ್ರಾಹ್ಮಣರು ಪಠಿಸುತ್ತಿರಲು ಕಾರಣವೇನು?' ಎಂದು ಕೇಳಿದನು.

ಶ್ರೀಸನತ್ಸುಜಾತನು 'ರಾಜನ್! ವೇದಗಳೆಲ್ಲವೂ ಶ್ರೀನಾರಾಯಣನೇ ಜಗಜ್ಜನ್ಮಾದಿನಿಮಿತ್ತ ಕಾರಣನೆಂದು ಪೇಳುತ್ತಿವೆ. ಇಂತು ಸಮನ್ವಯಪೂರ್ವಕವಾದ ವೇದಾಧ್ಯಯನವು ಶಿಷ್ಟಸಂಪ್ರದಾಯದಿಂದ ನಡೆದುಬಂದಿದೆ. ಅಂತಹ ವೇದ-ಪಠನವು ವ್ಯರ್ಥವಲ್ಲ. ಶ್ರೀಶಾನುಸಂಧಾನವಿಲ್ಲದ ವೇದಪಠನವು ವ್ಯರ್ಥವೆಂದು ತಿಳಿ! ಶ್ರೀಹರಿಯು ವಾಸುದೇವಾದಿ ಅನಂತಾವತಾರನಾಗಿ ಪ್ರಾದುರ್ಭವಿಸುವನು. ಅವನು ಅನಂತಕಲ್ಯಾಣಗುಣಸ್ವರೂಪನು. ವಿಶೇಷಬಲದಿಂದ ಗುಣರೂಪಗಳಲ್ಲಿ ಭೇದವಿದ್ದಂತೆ ತೋರಿದರೂ ಶ್ರೀಹರಿಯ ಗುಣರೂಪಗಳಿಗೆ ಎಳ್ಳಷ್ಟೂ ಭೇದವಿಲ್ಲ. ಭೇದಾಭೇದವೂ ಇಲ್ಲ. ಅವನಿಂದ ಸೃಷ್ಟವಾದ ಜೀವಜಡಾತ್ಮಕವಾದ ಜಗತ್ತಿನಿಂದ ಅವನು ಅತ್ಯಂತ ವಿಲಕ್ಷಣನು, ಸರ್ವೋತ್ತಮನು ಆಗಿರುವನು.

'ಸುಜೀವರು ವೇದವಿಹಿತಕರ್ಮಗಳನ್ನು ಮಾಡಿ, ಶ್ರೀಹರಿಗರ್ಪಿಸಿ, ಅಂತಃಕರಣ ಶುದ್ಧರಾಗುವರು. ಅವರು ಜ್ಞಾನವನ್ನಾರ್ಜಿಸಿ ಅಪರೋಕ್ಷಜ್ಞಾನವನ್ನೂ ಪಡೆದು, ಶ್ರೀಹರಿಯ ಅನುಗ್ರಹದಿಂದ ಮುಕ್ತರಾಗುವರು. ವೇದಗಳಲ್ಲಿ ನಿರೂಪಿಸಿರುವ ತಪೋ ಜಪ ಯಜ್ಞದಾನಾದಿಗಳೆಲ್ಲವೂ ಭಗವತ್ಪ್ರೀತಿಗಾಗಿ ಹೇಳಲ್ಪಟ್ಟಿವೆ. ಅಂತಹ ತಪೋಯಜ್ಞ ಗಳಿಂದ ಪವಿತ್ರವಾದ ಜ್ಞಾನವು, ಪುಣ್ಯವು ಲಭಿಸುವುದು, ಅದರಿಂದ ಅಪರೋಕ್ಷವು, ಅದರಿಂದ ಪರೋಕ್ಷಾಪರೋಕ್ಷ ದಶೆಗಳಲ್ಲಿ ಮಾಡಿದ ಪಾಪವು ನಷ್ಟವಾಗುವುದು. ಅಂತಹ ಜ್ಞಾನಿಯು ನಿರ್ದುಷ್ಟವಾದ ಅಪರೋಕ್ಷಜ್ಞಾನಬಲದಿಂದ ಪ್ರಕಾಶಿಸುವನು. ಅವನಿಗೆ ಸ್ವಯೋಗ್ಯ ಸ್ವಬಿಂಬ ಜ್ಞಾನವಾಗಿ ಕೊನೆಗೆ ಶ್ರೀಹರಿದಯದಿಂದ ಅವನು ಮುಕ್ತನಾಗುವನು. ವೇದವನ್ನೋದಿ ಕರ್ಮಗಳನ್ನು ಫಲಾಶಾಯುಕ್ತನಾಗಿ ಮಾಡಿ ದವನು ಪುಣ್ಯವಿರುವವರೆಗೂ ಸ್ವರ್ಗಾದಿಗಳಲ್ಲಿದ್ದು, ಮತ್ತೆ ಮರ್ತ್ಯಲೋಕದಲ್ಲಿ ಹುಟ್ಟುವನು.

'ಕಾಮ್ಯಕರ್ಮವು ಸುಲಭವಾದರೂ ನಶ್ವರಫಲಪ್ರದವಾಗಿದೆ ನಿಷ್ಕಾಮ ಕರ್ಮವು ಆಯಾಸಕರವಾದರೂ ಶಾಶ್ವತ ಫಲವನ್ನೀಯುತ್ತದೆ. ಅಧಿಕಾರಿಗಳೂ, ಎರಡು ವಿಧವಾಗಿ, ಆಯಾ ಕರ್ಮಗಳನ್ನು ಮಾಡಿ ಸ್ವರ್ಗ ಮೋಕ್ಷಗಳನ್ನು ಹೊಂದು ತ್ತಿರುವರು. ಬ್ರಹ್ಮಜ್ಞಾನಿಗಳು ಅನುಷ್ಠಾನಕಾಲದಲ್ಲಿ ಕರ್ಮದಿಂದಾಗುವ ಫಲವನ್ನು ಹೊಂದಿ, ಮುಕ್ತಿದಶೆಯಲ್ಲಿಯು ಹೆಚ್ಚಿನ ಸುಖವನ್ನು ಪಡೆಯುವರು. ಕರ್ಮಿಗಳು ಕರ್ಮಾನುಸಾರವಾದ ಸ್ವರ್ಗಸುಖವನ್ನುಂಡು ಕೆಳಗೆ ಬರುವರು. ಜ್ಞಾನಿಕೃತ ಕರ್ಮವು ಮಹಾಫಲಪ್ರದವಾಗಿದೆ' ಎಂದನು.

ಧೃತರಾಷ್ಟ್ರನು, 'ನಿಹಿತ ಕರ್ಮವನ್ನು ವಿಧಾನದಿಂದ ಮಾಡಿದರೆ ಫಲವನ್ನೀವುದೆಂಬುದು ಸರಿ ! ಹೆಚ್ಚು ಫಲವನ್ನೀವುದೆಂದೆ ! ಅದೆಂತು ಹೆಚ್ಚಾಗುವುದು' ಎಂದು ಕೇಳಿದನು.

ಶ್ರೀ ಸನತ್ಸುಜಾತನು ನಿರೂಪಿಸಿದನು—

'ರಾಜನ್ ! ರೋಗ ಕಾರಣವೆನಿಸುವ ಕದಲಿಯು ಘೃತಶರ್ಕರಾ ಸಂಯೋಗದಿಂದ ಆರೋಗ್ಯಕಾರಣವಾಗುವಂತೆ, ಚನ್ನಾಗಿ ಮಾಡಿದ ಕರ್ಮವು ಕೂಡ ಸ್ವರ್ಗಾದಿ ನಶ್ವರ ಫಲವನ್ನು ಮಾತ್ರ ಕೊಟ್ಟು, ಭಗವತ್ಪ್ರೀತಿ ಎಂಬ ಅನುಸಂಧಾನವನ್ನು ಕೂಡಿಸಿ ಮಾಡಿದಾಗ ಶಾಶ್ವತ ಮೋಕ್ಷ ಫಲವನ್ನು ಕೊಡುತ್ತಿರುವುದು. ತಪಸ್ಸು ಮೊದಲಾದ ಪುಣ್ಯ ಕರ್ಮಗಳು ನಿರ್ದೋಷವಾಗಿದ್ದರೇ ಸಮೃದ್ಧ ಫಲವನ್ನೀಯುವವೆಂದು ಜ್ಞಾನಿಗಳು ಪೇಳುವರು. ಫಲಾಶಾಯುತರು ಮಾಡಿದ ಕರ್ಮಗಳು ಋದ್ಧವೆನಿಸುವವು; ಸಮೃದ್ಧವಲ್ಲ. ಋದ್ಧಫಲವು ಕ್ಲಿಷ್ಟವಾಗಿರಲು, ಸಮೃದ್ಧಫಲವು ಸ್ವಯೋಗ್ಯಪೂರ್ಣವೂ ಶಾಶ್ವತವೂ ಆಗಿದೆ.

'ಧೃತರಾಷ್ಟ್ರ ! ತಪದಿಂದಲೇ ಐಹಿಕಾಮುಷ್ಮಿಕ ಸುಖವು ದೊರೆಯುತ್ತಿದೆ. ಜ್ಞಾನಿಗಳೂ ಬ್ರಹ್ಮವಿಚಾರರೂ ತಪಃಪ್ರಭಾವದಿಂದ ಲಿಂಗಭಂಗವನ್ನು ಹೊಂದಿ, ಅಮೃತವೆನಿಸುವ ವೈಕುಂಠವನ್ನು ಸೇರಿ, ಸುಖಿಸುವರು.'

ಧೃತರಾಷ್ಟ್ರನು 'ನಿಷ್ಕಲ್ಮಷ ತಪಸ್ಸೆಂದೆ. ತಪಸ್ಸಿಗೊದಗುವ ದೋಷಗಳಾವವು? ನಿಷ್ಕಲ್ಮಷ ತಪದಿಂದಲೇ ಬ್ರಹ್ಮಾಪರೋಕ್ಷಜ್ಞಾನವೆಂದಮೇಲೆ, ಕಲ್ಮಷಗಳನ್ನು ತಿಳಿದು ಬಿಡಬೇಕಲ್ಲವೇ ?' ಎಂದು ಕೇಳಿದನು.

ಶ್ರೀ ಸನತ್ಸುಜಾತನು ನಿರೂಪಿಸಿದನು—

'ಭಗವಂತನಲ್ಲಿ ಭಕ್ತಿ ಇಲ್ಲದ ತಪಸ್ಸಿನ ದೋಷಗಳು ಬಹಳವಾಗಿವೆ. ಕ್ರೋಧಾದಿಗಳು ಹನ್ನೆರಡು, ನೃಶಂಸಾದಿಗಳು ಹದಿಮೂರು, ಇವು ತಪೋದೋಷಗಳು. ತಪಸ್ಸಿಗೆ ಹೆಚ್ಚಳವನ್ನೀವ ಗುಣಗಳು ಹನ್ನೆರಡು. ಅವು ಜ್ಞಾನಾದಿಗಳು. ಇದು ಧರ್ಮಶಾಸ್ತ್ರದಲ್ಲಿ ನಿರೂಪಿತವಾಗಿದೆ.

'ಕ್ರೋಧ, ಕಾಮ, ಲೋಭ (ಪಾತ್ರರಿಗೂ ಕೊಡದಿರುವಿಕೆ), ಮೋಹ, (ಸ್ವಹಿತದ ಮರೆವು), ವಿವಿತ್ಸಾ (ವಿಷಯಭಾವನೆ), ಅಕೃಪಾ, ಅಸೂಯಾ (ಸಜ್ಜನರಲ್ಲಿ ನಿಂದಾ-ಅಸಹನೆ), ಮಾನ (ತಾನು ದೊಡ್ಡವನೆಂಬ ಮದ), ಶೋಕ (ಗತಚಿಂತೆ), ಸ್ಪೃಹಾ (ದುರಾಶೆ), ಈರ್ಷ್ಯೆ (ಪರಸಂಪತ್ತಿಗೆ ನೀಡುಕುವಿಕೆ), ಜುಗುಪ್ಸಾ (ಪರ-ಗುಣವನ್ನು ಮುಚ್ಚುವುದು) --ಇವು ಹನ್ನೆರಡು ಬ್ರಹ್ಮಜ್ಞಾನಿಯು ದೂರದಲ್ಲಿಡಬೇಕಾದ ತಪೋದೋಷಗಳು.

ಸಿಂಹಾದಿ ಕ್ರೂರ ಮೃಗಗಳು, ಹರಿಣಾದಿ ಸಾಧು ಮೃಗಗಳನ್ನು ಕೊಲ್ಲಲು ಹೊಂಚು ಹಾಕಿರುವಂತೆ, ಬೇಟೆಗಾರನು ಗಿಡದಲ್ಲವಿತು ಹೊಡೆಯುವ ಸಮಯಕ್ಕಾಗಿ ಕಾದಿರುವಂತೆ, ಕ್ರೋಧಾದಿ ದುರ್ಗುಣಗಳು ಮನುಜ ದೇಹದಲ್ಲಿ ವ್ಯಾಪಿಸಿ ನಿಂತು,

ಅವನು ಅವಕಾಶವಿತ್ತರೆ ಸಾಕೆಂದು ವಿಜೃಂಭಿಸಿ, ಅವನನ್ನು ನಾಶಮಾಡಲು ಸಮರ್ಥ ವಾಗಿವೆ. ಈ ದೋಷಗಳಲ್ಲಿ ಒಂದೊಂದೂ ಮಹಾನರ್ಥಕಾರಿ ಎಂದು ತಿಳಿದು ವರ್ಜಿಸ ಬೇಕು.

'ನೃಶಂಸಾದಿ ಹದಿಮೂರು ದುರ್ಗುಣಗಳುಳ್ಳ ಜನರನ್ನು ನಿರೂಪಿಸುವೆನು ಕೇಳು! ೧. ಅಸಂಬದ್ಧಪ್ರಲಾಪಿ, ೨. ವಿಷಯಲೋಲುಪ, ೩. ಸ್ವೇಚ್ಛಾಚಾರ, ೪. ಕೋಪಶೀಲ ೫. ಚಂಚಲ ಮನಸ್ಸು, ೬. ಸ್ವಧರ್ಮರಕ್ಷಣ ಶೂನ್ಯ–ಇವರು ಆರು ಜನರು ನೃಶಂಸರು ಅಂದರೆ ನಿಂದಾರ್ಹರು. ಸಜ್ಜನರು ಮಹಾಪತ್ತಿನಲ್ಲಿಯೂ ನೃಶಂಸರಾಗರು. ಮತ್ತೇಳು ನೃಶಂಸರನ್ನು ಪೇಳುವೆನು. ೭. ವಿಷಯ ಪಂಡಿತ, ೮. ವಿಷದಂತಿರುವ ದುಷ್ಟಪ್ರಮಾಣ ಗಳನ್ನು ನಂಬಿದವನು, ೯. ಸತ್ಪಾತ್ರರಿಗಿತ್ತು ತಪಿಸುವವನು, ೧೦. ಅಲ್ಪ ಲಾಭಕ್ಕಾಗಿ ಮಹಾಕಷ್ಟ ತಿರಸ್ಕಾರಗಳನ್ನು ಸಹಿಸುವ ಕೃಪಣ, ೧೧. ಸಚ್ಛಾಸ್ತ್ರ ಬಲಹೀನ, ೧೨. ವಿಷಯ ಸ್ತೋತ್ರಪಾಠಕ, ೧೩. ಪತಿವ್ರತಾ ವಿರೋಧಿ ಇವರೂ ನೃಶಂಸರೇ!

'ಈಗ ತಪಸ್ಸಿಗೆ ವಿಸ್ತಾರವಾದ ಜ್ಞಾನಾದಿ ಹನ್ನೆರಡು ಗುಣಗಳನ್ನು ಪೇಳುವೆನು— ೧. ಜ್ಞಾನ (ಪರಾಪರ); ೨. ಸತ್ಯ (ಯಥಾರ್ಥವಚನಭೂತಹಿತ) ೩. ದಮ(ಇಂದ್ರಿಯ ನಿಗ್ರಹ); ೪. ಅಮಾತ್ಸರ್ಯ (ಸ್ವೋತ್ತಮ ಸ್ನೇಹ); ೫. ಹ್ರೀ (ನಿಷಿದ್ಧಾಚರಣ ಲಜ್ಜೆ); ೬. ತಿತಿಕ್ಷಾ (ದ್ವಂದ್ವವಿಕಾರ ರಾಹಿತ್ಯ); ೭. ಅನಸೂಯಾ (ಸಜ್ಜನರ ದೋಷವನ್ನೆತ್ತಿ ತೋರಿಸದಿರುವುದು); ೮. ಯಜ್ಞ; ೯. ದಾನ; ೧೦. ಧೃತಿ (ವಿಷಯಸನ್ನಿಧಿಯಿದ್ದರೂ ನಿಗ್ರಹ); ೧೧. ಶಮ (ಭಗವನ್ನಿಷ್ಠೆ); ೧೨. ಶ್ರುತ (ಭಾರತಾದಿಸಚ್ಛಾಸ್ತ್ರಶ್ರವಣ)—ಇವು ಹನ್ನೆರಡು ಅಧಿಕಾರಿಯಾದ ಬ್ರಾಹ್ಮಣನು ಮೋಕ್ಷಸಾಧಕ ಜ್ಞಾನಕ್ಕಾಗಿ ನಡೆಸುವ ಸಾಧನಗಳು. ಇವನ್ನು ಸಂಪಾದಿಸಲು ಉತ್ತಮ ಗುರುಗಳನ್ನು ಸೇವಿಸಬೇಕು. ಆಗ ಅಂತಹ ಅಧಿಕಾರಿಯು ಸ್ವಯೋಗ್ಯ ಜ್ಞಾನವನ್ನು ಪೊಂದಿ ಮುಕ್ತನಾಗುವನು. ಅವನು ಮೋಕ್ಷದಲ್ಲಿ ಸ್ವಯೋಗ್ಯಾ- ನಂದಾನುಭವವನ್ನು ಪೊಂದುವೆನು.

'ಜ್ಞಾನಾದಿ ದ್ವಾದಶಗುಣಗಳೆಲ್ಲವೂ ಇರಬೇಕೆಂದಿಲ್ಲ, ಕೇಳು! ಎರಡು ಮೂರಾ ದರೂ ಸಾಕು; ಜ್ಞಾನ ಸತ್ಯ ದಮಾದಿಗಳಾಗಲಿ, ಜ್ಞಾನ, ಸತ್ಯಗಳಾಗಲಿ, ಕೊನೆಗೆ ಜ್ಞಾನವಾಗಲಿ ಪಡೆದು ಸ್ವಯೋಗ್ಯತಾನುಸಾರವಾಗಿರುವ ಸಾಧನಸಂಪತ್ತಿಯನ್ನು ಪೊಂದಿದ ಸಾತ್ವಿಕಜೀವರು ಮುಕ್ತರಾಗಿ, ಸ್ವೋತ್ತಮದೇವತಾನುಪ್ರವೇಶ ಕ್ರಮ ದಿಂದ ಕ್ರಮವಾಗಿ ಲಿಂಗಶರೀರವನ್ನು ಬಿಟ್ಟು, ಮೌನವೆಂಬ ಬ್ರಹ್ಮಜ್ಞಾನಬಲದಿಂದ ಶ್ರೀಹರಿಪ್ರಸಾದ ಲಬ್ಧವಾಗುವ ಸಾಯುಜ್ಯ, ಸಾರೂಪ್ಯ, ಸಾಮೀಪ್ಯ, ಸಾಲೋಕ್ಯ, ಮುಕ್ತಿಗಳಲ್ಲಿ ತಮಗೆ ಯೋಗ್ಯವಾದುದನ್ನು ಪೊಂದಿ ಸುಖದಿಂದಿರುವರು.

'ಜ್ಞಾನಾದಿ ದ್ವಾದಶಗುಣಗಳಲ್ಲಿ ೧. ದಮ (ಇಂದ್ರಿಯ ನಿಗ್ರಹ), ೨. ತ್ಯಾಗ (ವಿಷಯಾಭಿಲಾಷತ್ಯಾಗ), ೩. ಅಪ್ರಮಾದ (ಭಗವನ್ನಿಷ್ಠೆ–ಶ್ರಮ), ಎಂಬ ಮೂರೂ ಗುಣಗಳು ಮುಖ್ಯ. ಇವು ಇರುವ ಅಧಿಕಾರಿಗೆ ಶ್ರೀಹರಿಯು ಜ್ಞಾನಾದಿಗಳನ್ನು

ಅನುಗ್ರಹಿಸುವನು. ದಮಾದಿಗಳನ್ನು ಹೊಂದಲು ಸ್ತೋತ್ರಮರಾದ ಸಜ್ಜನರಿಗೆ ಹಿತವನ್ನು ನುಡಿದು, ಮಾಡಿ, ಅವರ ಅನುಗ್ರಹವನ್ನು ಸಂಪಾದಿಸಬೇಕು. ವೇದ-ಶಾಸ್ತ್ರ ಸಂಪನ್ನರಾದ ಬ್ರಾಹ್ಮಣರೇ ಇಂತು ನಿರೂಪಿಸಿರುವರು.

'ದಮಾದಿ ಮೂರು ಗುಣಗಳು ಶುದ್ಧವಾಗಿರಬೇಕು. ಅಶುದ್ಧವಾದ ದಮಾದಿಗಳು ಭಗವದಪರೋಕ್ಷಜ್ಞಾನವನ್ನು ಸಂಪಾದಿಸಿಕೊಡಲಾರವು. ದಮದೋಷಗಳನ್ನು ಹೇಳುವೆನು—ಅವು ಹದಿನೆಂಟು. ೧. ಪೈಶುನ್ಯ (ಪರದೋಷ ವಚನ), ೨. ಅನೃತ (ಸುಳ್ಳು), ೩. ತೃಷ್ಣಾ (ವಿಷಯಾಕಾಂಕ್ಷೆ), ೪. ಪ್ರಾತಿಕೂಲ್ಯ (ಸ್ತೋತ್ರಮರಿಗೆ ವಿರೋಧ), ೫. ತಮಃ (ಶಾಸ್ತ್ರ ಜ್ಞಾನ ಹೀನತ್ವ), ೬. ಅರತಿ (ಅತೃಪ್ತಿ), ೭. ಲೋಕದ್ವೇಷ (ಜ್ಞಾನಿದ್ವೇಷ), ೮. ಅಭಿಮಾನ (ಇಲ್ಲದ ದೊಡ್ಡಸ್ತಿಕೆ), ೯. ವಿವಾದ (ಶಿಷ್ಯಜನರಲ್ಲಿ ವಿತಂಡವಾದ), ೧೦. ಪ್ರಾಣಿ ಪೀಡನ (ಅಹಿತ ಯಜ್ಞದ ಪಶು ಹಿಂಸೆ), ೧೧. ಪರಿವಾದ (ಸ್ತೋತ್ರಮ ನಿಂದೆ), ೧೨. ಅತಿವಾದ (ವ್ಯರ್ಥ ಪ್ರಲಾಪ), ೧೩. ಪರಿತಾಪ (ಸುಮ್ಮನೆ ದುಃಖದ ಧ್ಯಾನ), ೧೪. ಅಕ್ಷಮಾ (ಸಜ್ಜನರಲ್ಲಿ ಅಸಹನೆ), ೧೫. ಅಧೃತಿ (ವಿಷಯಚಾಪಲ್ಯ), ೧೬. ಅಸಿದ್ಧಿ (ಕೆಲಸವನ್ನು ಮುಗಿಸದಿರುವಿಕೆ), ೧೭. ಪಾಪಕೃತ್ಯ, ೧೮. ಹಿಂಸೆ—ಎಂಬ ಹದಿನೆಂಟು ದೋಷಗಳಿಲ್ಲದಿರೆ ದಮವೆಂಬ ಗುಣವು ಶುದ್ಧವೆನಿಸುವುದು.

'ಅಪ್ರಮಾದವೆಂಬ ಶಮವೂ ದಮಕ್ಕೆ ಒದಗುವ ೧೮ ದೋಷಗಳಿಂದ ಕೆಡುವುದು. ತ್ಯಾಗವು ಆರು ದೋಷಗಳಿಂದ ಕೆಡುವುದು. ಪೈಶುನ್ಯಾದಿ ಹದಿನೆಂಟು ದಮದೋಷಗಳು ವಿಪರೀತವಾಗಿ ಆಚರಿಸಲ್ಪಟ್ಟಾಗ ಮದದೋಷಗಳಾಗುವವು. ಅಂದರೆ ಮದಾದಿ ಪಾಪಗಳನ್ನು ಖಂಡಿಸಿ ನಾಶಪಡಿಸುವವು. ಪೈಶುನ್ಯದ ವಿಪರೀತವೆಂದರೆ ಅಪೈಶುನ್ಯ—ಎಂದು ಇತ್ಯಾದಿ ತಿಳಿಯಬೇಕು. ಪೈಶುನ್ಯಾದಿಗಳಿದ್ದರೆ ದಮ-ಜ್ಞಾನಗಳು ಕೆಡುವವು. ಅಪೈಶುನ್ಯಾದಿಗಳಿದ್ದರೆ ಮದ-ಪಾಪಗಳು ನಾಶವಾಗುವವು.

'ರಾಜನ್ ! ತ್ಯಾಗವೆಂದರೆ ಪಾತ್ರರಿಗೆ ದಾನವೆಂದರ್ಥ. ಆದರೂ ಕಾಮಾದಿ ಶತ್ರುತ್ಯಾಗವು ಮಹಾ ಶ್ರೇಯಸ್ಸಾಧನವಾಗಿರುವುದರಿಂದ ಕಾಮಾದಿತ್ಯಾಗವೇ ನಿಜವಾದ ತ್ಯಾಗ. ಅಂತೆಯೇ ತ್ಯಾಗವು ಆರು ವಿಧವೆಂದು ಹೇಳಿರುವೆನು. ತ್ಯಾಗಗಳಲ್ಲಿ ಕಾಮತ್ಯಾಗವು ದುಷ್ಕರವು. ದೇವಾದಿಗಳು ಮಹಾ ಪ್ರಯತ್ನದಿಂದ ದುಷ್ಟ-ಕಾಮಾದಿ ಆರು ಶತ್ರುಗಳನ್ನು ಜಯಿಸುವರು. ಕ್ರೋಧ ಲೋಭಗಳು, ಮದ ಮತ್ಸರಗಳು, ಮೋಹ (ದಂಭ) ಕಾಮಗಳು ಈ ಮೂರು ಜತೆಗಳಲ್ಲಿ ಮೂರನೆ ಗುಂಪಿನ ಕಾಮನು ಪ್ರಬಲ ಶತ್ರುವೆಂದು ತಿಳಿ ! ಕಾಮಜಯದಿಂದ ಸಂಸಾರ ದುಃಖ ನಾಶವೆಂದು ತಿಳಿದ ಜ್ಞಾನಿಗಳು ಅದನ್ನು ಜಯಿಸಿ ನಾಲ್ಕು ಪುರುಷಾರ್ಥಗಳನ್ನು ಜಯಿಸಿದಂತಾಗುವರು.

'ದಾನಯೋಗ್ಯನಾದ ವಿಪ್ರನಿಗೆ, ಕುಟುಂಬನಿರ್ವಾಹಕ್ಕೆಂದು ಯಾಚಿಸಿದಾಗ, ಪುತ್ರವಿತ್ತಗಳನ್ನಿತ್ತು ಕ್ರೋಧವನ್ನೂ ಲೋಭವನ್ನೂ ಬಿಡಬೇಕು. ಧನಾದಿಗಳು ನಿತ್ಯ, ದೇಹಾದಿಗಳು ಅನಿತ್ಯ; ದೇವನಿತ್ತ ಹಿರಣ್ಯಾದಿಗಳನ್ನು ದಾನಮಾಡಿ, ಯಜ್ಞ ಮಾಡಿ ಪುಣ್ಯವನ್ನು ಶ್ರೀಹರಿಗಿತ್ತು ಶ್ರೇಯಸ್ಸನ್ನು ಸಂಪಾದಿಸಬೇಕು. ಇದೇ ವೈರಾಗ್ಯ; ಇಂತು ತಿಳಿದು ದಾನಮಾಡಿ, ತಟಾಕ ವನ ದೇವಾಲಯಗಳನ್ನು ನಿರ್ಮಿಸಿ, ಮದ ಮತ್ಸರಗಳೆಂಬ ಎರಡನೇ ಶತ್ರುದ್ವಯವನ್ನು ಜಯಿಸಬೇಕು. ಯಜ್ಞ ಶ್ರೀಹರಿ ಪ್ರೀತಿಗಳಿಂದ ಮದವು ಹೋಗುವುದು. ಪೂರ್ತಗಳಿಂದ ಮತ್ಸರವು ನಾಶವಾಗು ವುದು. ವಿಷಯವೈರಾಗ್ಯದಿಂದ ಕಾಮತ್ಯಾಗವೆಂದು ಶಾಸ್ತ್ರಗಳು ಹೇಳುತ್ತಿವೆ! ದಾಂಭಿಕನಿಗೆ ವೈರಾಗ್ಯವಿಲ್ಲ; ಕಾಮಲಂಪಟನಿಗೆ ವಿಷಯ ತ್ಯಾಗವಿಲ್ಲ; ಆದುದ ರಿಂದ ವೈರಾಗ್ಯವನ್ನು ವಹಿಸಿ ಜಂಭವನ್ನೂ, ವಿಷಯಸಂಗವನ್ನು ಬಿಟ್ಟು ಕಾಮ ವನ್ನೂ ಜಯಿಸಬೇಕು. ವನಿತಾದಿ ವಿಷಯಗಳನ್ನು ಸರ್ವಥಾ ಬಿಡುವುದು ಕಷ್ಟ ವೆಂದೇ ಕಾಮತ್ಯಾಗವು ದುಷ್ಕರವೆಂದು ನಾನು ಮೊದಲೇ ನಿರೂಪಿಸಿರುವೆನು. ಇಂತು ಶತ್ರುಷಡ್ವರ್ಗವನ್ನು ಜಯಿಸಿ, ಭಗವತ್ಸೇವೆಯಲ್ಲಿ ಪ್ರಮಾದವಿಲ್ಲದವನಿಗೆ ಶಮವು ಕೈಗೂಡುವುದು. ಶಮವೆಂದರೆ ಭಗವನ್ನಿಷ್ಠೆ; ಅದು ಎಂಟು ವಿಧವಾಗಿವೆ. ೧. ಸತ್ಯ, ೨. ಅನಿಂದಿತ ಕರ್ಮಾಚರಣ, ೩. ಸಮಾಧಾನ (ಭಗವಂತನಲ್ಲಿ ಮನ ಸ್ಸಿಡುವುದು), ೪. ಚೋದ್ಯ (ತತ್ತ್ವ ವಿಷಯಕ ಪ್ರಶ್ನೆ), ೫. ವೈರಾಗ್ಯ (ವಿಷಯಾಲಂ ಬುದ್ಧಿ), ೬. ಅಸ್ತೇಯ ('ಅಹಂ ಬ್ರಹ್ಮಾಸ್ಮಿ' ಎಂದು ದೇವರ ಗುಣವನ್ನು ಕದಿಯದಿರುವುದು), ೭. ಬ್ರಹ್ಮಚರ್ಯ, ೮. ಅಸಂಗ್ರಹ (ಜೀವನಾವಶ್ಯಕಕ್ಕಿಂತ ಹೆಚ್ಚು ಸಂಗ್ರಹಿಸದಿರುವುದು)—ಇಂತು ಅಪ್ರಮಾದವೆಂಬ ಶಮವು ಎಂಟು ಗುಣ ಗಳಿಂದ ವಿರಾಜಿಸುವುದು. ಅಧಿಕಾರಿಯು ದೋಷಗಳನ್ನೆಲ್ಲ ಸದಾ ಸಂಪೂರ್ಣವಾಗಿ ಬಿಟ್ಟು ಸತ್ಯಾದಿ ಶಮಗುಣಗಳನ್ನು ಸಂಪಾದಿಸಬೇಕು.

'ಧೃತರಾಷ್ಟ್ರ! ಪರಮಪುರುಷನು ನಿರ್ಮಿಸಿದ ಜಗತ್ತು ಸತ್ಯವಾಗಿದೆ. ಸತ್ಯ ವೆಂದರೆ ಮೂರು ವಿಧವೆಂದು ಕೆಲವರು ನುಡಿಯುವರು; ಅಸತ್ಯವಲ್ಲ. ಪಾರಮಾರ್ಥಿಕ ವಾದ ಸತ್ಯವೇ ಸತ್ಯ. ಅರ್ಥಕ್ರಿಯಾಕಾರಿಯಾದುದೆಲ್ಲವೂ ಸತ್ಯ. ಪ್ರಾತಿಭಾಸಿಕ ವ್ಯಾವಹಾರಿಕ ಸತ್ಯಗಳು ಎರಡೂ ಸತ್ಯವಲ್ಲ. ಅವು ಅಸತ್ಯವೇ ಸರಿ! ಸರ್ವಜ್ಞ ನಾದ ಮುಖ್ಯಪ್ರಾಣನು ಒಂದೇ ಸತ್ಯವನ್ನು ತಿಳಿದು ಪರಮಾತ್ಮನ ಪೂರ್ಣಜ್ಞಾನಿ ಯಾಗಿರುವುದರಿಂದ ಆತನನ್ನು ಪೂರ್ಣಪ್ರಜ್ಞನೆಂಬುವರು. ಜಗತ್ಪ್ರಭುವನ್ನು ಆತ ನಿಂದ ತಿಳಿದವರೂ ನಿಜಜ್ಞಾನಿಗಳು.

'ರಾಜೇಂದ್ರ! ಸಜ್ಜನರಿಗೆ ಹಿತವನ್ನು ಮಾಡುವುದೇ ಸತ್ಯವು. ಸತ್ಯವೇ ಜ್ಞಾನಾದಿ ಗುಣಗಳಲ್ಲಿ ಮುಖ್ಯವಾಗಿದೆ. ಸಜ್ಜನರಿಗೆ ಅನಿಷ್ಟವನ್ನು ಮಾಡಬೇಡ! ಆದರಿಂದ ಶ್ರೀಹರಿಯು ಮೆಚ್ಚನು. ಸಜ್ಜನಹಿತದ ಫಲವು ಮೋಕ್ಷವೆಂದು ತಿಳಿ! ಮಹಾಫಲವನ್ನು ಬೇಡುವ ನರನು ಮಹಜ್ಜನರನ್ನು ಸೇವಿಸಬೇಕು. ಯಥಾರ್ಥ

ಭಾಷಣದಿಂದ ಸ್ವರ್ಗಾದಿಗಳು ಸಿಗುತ್ತವೆ. ಸತ್ಯವೇ ಸ್ವಧರ್ಮಗಳಲ್ಲಿ ಶ್ರೇಷ್ಠವಾಗಿದೆ. ಸಜ್ಜನೋತ್ತಮರಾದ ಪಾಂಡವರಿಗೆ ದ್ರೋಹ ಬಗೆಯಬೇಡ! ಅವರಿಗೆ ಹಿತವಾಗುವಂತೆ ನಡೆ! ಸತ್ಯವನ್ನು ಜ್ಞಾನಿಜನರು ಬಿಡದೆ ಆಚರಿಸಿ, ಇತರರಿಗೂ ಉಪದೇಶಿಸುತ್ತಿರುವರು. ತಪಸ್ಸು ನಿರ್ದೋಷವಾಗಿರಬೇಕೆಂದು ವಿಧಾತನು ಸಾರಿ ಹೇಳಿದಂತೆ ಋಷಿಜನರೂ ಮಾಡುವರು. ನಾನೂ ಅಂತೇ ನಡೆಯುತ್ತಿರುವೆನು. ಕ್ರೋಧಾದಿದೋಷಗಳನ್ನು ಬಿಟ್ಟು ಜ್ಞಾನಾದಿಗುಣಗಳಿಂದ ಕೂಡಿದ ತಪಸ್ಸು ಶಾಸ್ತ್ರದಲ್ಲಿ ಹೇಳಿದಂತೆ ಸ್ವರ್ಗಾದಿಫಲವನ್ನೀಯುವುದು; ಆದರೂ ಕರ್ಮಗಳನ್ನು ಭಗವತ್ಸಮರ್ಪಣಬುದ್ಧಿಯಿಂದ ಮಾಡುವ ಜ್ಞಾನಿಗಳಿಗೆ, ಆಯಾಕರ್ಮಾಧಿಕಾರಿಗಳಾದ ದೇವತೆಗಳಿಗೆ ಅದೇ ಕರ್ಮವು ಇನ್ನೂ ಸಮೃದ್ಧವಾಗುವುದು. ಅಂದರೆ ಮುಕ್ತಿಯಲ್ಲಿ ಆನಂದಾತಿಶಯವನ್ನು ಹೊಂದಲು ಕಾರಣವಾಗುವುದು. ಇನ್ನೇನು ಕೇಳುವೆಯೋ ಕೇಳು! ಪ್ರಮಾದವೇ ಮೃತ್ಯುವು; ಅಪ್ರಮಾದವೇ ಅಮೃತ್ಯುವು; ಶ್ರವಣಮನನಾದಿಗಳಿಂದ ಜನನಮರಣರೂಪವಾದ ಸಂಸಾರ ಸಂಬಂಧದಿಂದ ಬಿಡಿಸುವುದೂ ಆಗಿದೆ.

'ತಪಸ್ವಿಯು ಅನಶನಾದಿತಪದಿಂದ ಇಂದ್ರಿಯಜಯವನ್ನು ಸಾಧಿಸಿ, ಶ್ರವಣಾದಿ ಸಾಧನಜಾತದಿಂದ ಪ್ರೀತನಾದ ಶ್ರೀಹರಿಯ ಅಪರೋಕ್ಷಜ್ಞಾನವನ್ನು ಪಡೆಯುವನು. ಅವನ ಸಂಚಿತ ಆಗಾಮಿ ಪಾಪಗಳೆಲ್ಲವು ನಾಶವಾಗುವುದಲ್ಲದೆ ಅನಿಷ್ಟಪುಣ್ಯಪಾಪಗಳೂ ದೂರವಾಗಿ ಅವನು ಸ್ವರೂಪಸುಖವನ್ನು ಹೊಂದುವನು.'

ಧೃತರಾಷ್ಟ್ರನು, 'ಮಹಾಸ್ವಾಮಿ! ಈಗ ಪಾತ್ರಾಪಾತ್ರ ವಿಚಾರವನ್ನು ತಿಳಿಸಿಕೊಡು! ಲೋಕದಲ್ಲಿ ವೇದಾಧ್ಯಯನ ಜ್ಞಾನಗಳಿಂದ ಪಾತ್ರನನ್ನು ತಿಳಿಯುವುದುಂಟು. ಎಲ್ಲರೂ ಪಂಚವೇದಗಳನ್ನೋದುವುದಾಗದು. ಕೆಲವರು ಬ್ರಾಹ್ಮಣರು ಇತಿಹಾಸಾದಿಗಳೇ ಪಂಚಮವಾಗಿ ಉಳ್ಳ ನಾಲ್ಕು ವೇದಗಳನ್ನೋದಿ ಚತುರ್ವೇದಿಗಳೆಂದು ಹೇಳಿಕೊಳ್ಳುವರು ಹೀಗೆಯೇ ತ್ರಿವೇದಿಗಳು, ದ್ವಿವೇದಿಗಳು, ಏಕವೇದಿಗಳೂ ತಮ್ಮ ಹಿರಿಮೆಯನ್ನು ಪ್ರಕಟಿಸುತ್ತಿರುವರು. ಕೆಲವರು ವೇದಪ್ರವಚನಾದಿಗಳನ್ನು ಬಿಟ್ಟು, ಕೇವಲ ಭಗವದ್ಧ್ಯಾನ ಪೂಜಾದಿ ತತ್ಪರರಾಗಿದ್ದು ತಾವೇ ದೊಡ್ಡವರೆಂದು ಹೇಳುತ್ತಿರುವರು. ಇವರಲ್ಲಿ ಉತ್ತಮ ಪಾತ್ರರಾರು ?' ಎಂದು ಕೇಳಿದನು.

ಶ್ರೀಸನತ್ಸುಜಾತನು ನಿರೂಪಿಸಿದನು —

'ಮೂಲವೇದವು ಒಂದೇ ರಾಶಿಯಾಗಿತ್ತು. ಅದಕ್ಕೆ ಮೂರರ್ಥಗಳು—ಕರ್ಮಾದಿಗಳನ್ನು ತಿಳಿಸುವುದು ಅಮುಖ್ಯಾರ್ಥ. ಅಧಿಕೃತದೇವತಾ ಪರವಾದುದು ಮುಖ್ಯಾರ್ಥ. ಭಗವಂತನನ್ನು ನಿರೂಪಿಸುವುದು ಪರಮ ಮುಖ್ಯಾರ್ಥ. ಜ್ಞಾನ ಪೂಜಾ ಗಾನಾದಿಗಳನ್ನು ಪ್ರತಿಪಾದಿಸುವ ವೇದಗಳ ಅಭಿಪ್ರಾಯವನ್ನು ಅಲ್ಪಾಧಿಕಾರಿಗಳು ತಿಳಿಯಲಾರರು. ಪರಮಮುಖ್ಯಾರ್ಥವನ್ನು ತಿಳಿಯದೆ, ಸ್ವಯೋಗ್ಯಜ್ಞಾನವಾಗದು. ಅಂತಹ ಸುಜನರಿಗೆ ಜ್ಞಾನವಾಗಲೆಂಬ ದಯದಿಂದ ಬ್ರಹ್ಮರುದ್ರಾದಿಗಳು ಭಗವಂತನನ್ನು ಪ್ರಾರ್ಥಿಸಿದರು. ಆಗ ಶ್ರೀಶನು ವ್ಯಾಸನಾಗಿ ಅವತರಿಸಿ, ಋಗಾದಿ ವೇದಗಳನ್ನು

ಮೂಲವೇದದಿಂದ ವಿಂಗಡಿಸಿದನು. ಅನಂತವೇದಗಳನ್ನು ಅಲ್ಪಾಧಿಕಾರಿಗಳರಿತು, ಆಚರಿಸಲಾರರೆಂದು ಅವರಲ್ಲಿ ಕರುಣೆಸಿ ಶ್ರೀವೇದವ್ಯಾಸನು ವೇದವನ್ನು ಶಾಖೋಪ ಶಾಖಾರೂಪವಾಗಿ ವಿಭಜಿಸಿ ಪೈಲಾದಿ ಶಿಷ್ಯರಿಗೆ ಉಪದೇಶಿಸಿದನು. ಪಂಚಮವೇದ ವೆನಿಸಿದ ಭಾರತವು ಅರ್ಥತಃ ನಿತ್ಯವು. ಅದನ್ನೂ ಶಬ್ದತಃ ರಚಿಸಿದನು. ಐದು ವೇದ ಗಳಿಂದ ಸ್ವಗತಭೇದವರ್ಜಿತನು, ಸರ್ವೋತ್ತಮನು, ಉತ್ತಮ ಆನಂದ ಜ್ಞಾನ ಪೂರ್ಣ ನಾದ ಶ್ರೀನಾರಾಯಣನ ಜ್ಞಾನವಾಗಲಿ ! ಎಂದು ಶ್ರೀಶನ ಉದ್ದೇಶವು. ಅಂತೆಯೇ ಸಾತ್ವಿಕ ಜೀವರು ಅಂದರೆ ಬ್ರಹ್ಮಾದಿ ಮನುಷ್ಯೋತ್ತಮಪರ್ಯಂತವಾಗಿರುವ ಸುಜೀವರು ವೇದಾಧ್ಯಯನವನ್ನು ಮಾಡಿ ವೇದಾದಿ ಪರಮ ಮುಖ್ಯಾರ್ಥನಾದ ನಾರಾಯಣನನ್ನು ತಿಳಿದು, ಅಪರೋಕ್ಷಿಗಳೂ ಆಗುವರು. ಮತ್ತೆ ತದೇಕನಿಷ್ಠರಾಗಿ ಶ್ರೀಹರಿಯನ್ನು ಸೇರಿ, ಸ್ವಯೋಗ್ಯ ಸ್ವರೂಪಾನಂದವನ್ನು ಹೊಂದುವರು. ಯತ್ನ ಮಾಡಿ, ಸಾಧನ ಪೂರ್ತಿಯಾಗದ ಮುನ್ನ ಅಪರೋಕ್ಷವಾಗಲಾರದು. ಅನಂತ ವೇದಗಳನ್ನು ಭಗವತ್ಪರವೆಂದು ತಿಳಿದು, ನಿತ್ಯಾಪರೋಕ್ಷಿಯು ಅಖಂಡ ಭಕ್ತಿ ಭರಿತನು ಆದವನೆಂದರೆ ಶ್ರೀ ಮುಖ್ಯಪ್ರಾಣನೇ ! ಆತನೇ ಮುಖ್ಯಪಾತ್ರನು.

'ಶ್ರೀಹರಿಯೇ ಸರ್ವೋತ್ತಮನು, ವಾಯುವೇ ಜೀವೋತ್ತಮನು—ಎಂಬ ಯಥಾರ್ಥಜ್ಞಾನವನ್ನು ಬಿಟ್ಟ ಜನರು ಏನು ಯಜ್ಞಮಾಡಿದರೂ ವ್ಯರ್ಥ ಸಂಕಲ್ಪ ರಾಗುವರು. ಅನ್ಯದೇವತೆಗಳನ್ನು ಉಪಾಸಿಸುವ ಮಿಥ್ಯಾಜ್ಞಾನಿಗಳು ಕಾಮ್ಯಕರ್ಮ ಗಳನ್ನು ಮಾಡಿ 'ನಾನು ಕೊಟ್ಟೆನು, ನಾನು ಯಜ್ಞಮಾಡಿದೆನು' ಎಂದು ಹೇಳಿ ಕೊಳ್ಳುತ್ತಾ ಅಜ್ಞಾನದಲ್ಲಿಯೇ ತೊಳಲುತ್ತಿರುವರು. ಅವರೆಷ್ಟು ಪುಣ್ಯವನ್ನು ಗಳಿಸಿದರೂ ಕೊನೆಗೆ ಅದೆಲ್ಲವೂ ನಷ್ಟವಾಗಿ, ಅವರು ಮತ್ತೆ ಸಂಸಾರದಲ್ಲಿ ಬೀಳುವರು. ಇಂತಹ ಅಜ್ಞಾನಿಗಳು ಪಾತ್ರರೆನಿಸರು. ಅರ್ಥಜ್ಞಾನವಿಲ್ಲದ ವೇದಾಧ್ಯಯನವು ವ್ಯರ್ಥ ವಾಗುವುದು. ತಿರುಗಿ ತಿರುಗಿ ಓದಿದ ಮಾತ್ರದಿಂದ ಬ್ರಾಹ್ಮಣನು ಉತ್ತಮ ಪಾತ್ರ ನೆನಿಸನು. ಎಲ್ಲ ವೇದಗಳ ಮುಖ್ಯಪ್ರತಿಪಾದ್ಯನಾದ ವಿಷ್ಣುವೇ ಸರ್ವೋತ್ತಮನೆಂದು ತಿಳಿದು ವೈಷ್ಣವ ದೀಕ್ಷಾಯುತನಾಗಿ, ಚಲಿಸದೆ ಇರುವ ಬ್ರಾಹ್ಮಣನು ಉತ್ತಮ ಪಾತ್ರನು. ಅವನೇ ನಿಜವಾದ ಬ್ರಾಹ್ಮಣನು. ವೇದಪಾಠವಿಲ್ಲದಿದ್ದರೂ ನಿತ್ಯ ನೈಮಿತ್ತಿಕ ಕರ್ಮಕಲಾಪವನ್ನು ಮಾಡಿ, ಶ್ರೀಹರಿಗರ್ಪಿಸುವ ಬ್ರಾಹ್ಮಣನು ಉತ್ತಮನು. ತಪ್ತಮುದ್ರಾಧರನಾಗಿ ವಿಷ್ಣುದೀಕ್ಷೆಯನ್ನು ಧರಿಸಿರುವ ಹರಿಭಕ್ತನು ಉತ್ತಮಪಾತ್ರನು. ಅವೈಷ್ಣವನಿಗೆ ವೇದಾಧಿಕಾರವಿಲ್ಲ; ಹಾಗೂ ಬ್ರಾಹ್ಮಣ್ಯ ಪಾತ್ರತ್ವವೂ ಇಲ್ಲ.

ಮನುಜಶ್ರೇಷ್ಠ ! ಸ್ವೇಚ್ಛೆಯಿಂದ ಗುರೂಪದೇಶಭಕ್ತಿಗಳಿಲ್ಲದೆ ಓದಿದ ವೇದಪಾಠ ದಿಂದ ಭಗವಂತನ ಜ್ಞಾನವಾಗುವುದಿಲ್ಲ. ಇದನ್ನರಿತು ಜ್ಞಾನಿಗಳು ಗುರುಮುಖ ದಿಂದ ವೇದಾದಿಸಚ್ಛಾಸ್ತ್ರವನ್ನು ಕಲಿತು, ಸಮಸ್ತವೇದವೇದ್ಯನು ಶ್ರೀಹರಿಯೇ ಎಂದು ತಿಳಿವರು. ಗುರುಪ್ರಸಾದವಿಲ್ಲದ ವೇದವಿದ್ಯೆಯಿಂದ ಭಗವತ್ಪ್ರಸಾದವೆಂದಿಗೂ

ಆಗಲಾರದು. ಮಹಾಯೋಗವಿದ್ವದ್ರೂಢಿಗಳಿಂದ ವೇದಗಳು ಶ್ರೀನಾರಾಯಣನ ಪ್ರತಿಪಾದಕಗಳೆಂದು ತಿಳಿದು ಗುರುಭಕ್ತರು ಪರಿಪ್ರಸಾದ ಪಾತ್ರರಾಗಿ ವೈಕುಂಠಾದಿ ಲೋಕಗಳನ್ನೈದುವರು. ಕೆಲವರು ಅಸದ್ಗುರುಗಳಿಂದ ವೇದಪಾಠವನ್ನು ಕಲಿತು, ಅಮುಖ್ಯಾರ್ಥರಾದ ಇಂದ್ರಾದಿಗಳೇ ಮುಖ್ಯಾರ್ಥರೆಂದು ಭ್ರಮಿಸಿ, ಶ್ರೀಹರಿಯನ್ನರಿಯದೆ, ಸಂಸಾರಕೂಪದಿ ನರಳುವರು.

'ವೇದದೇವತೆಗಳು ಹೇಳುವ ಪರಮ ಮುಖ್ಯಾರ್ಥನಾದ ಶ್ರೀನಾರಾಯಣನನ್ನು ವೇದದ ಎಲ್ಲ ಶಬ್ದಗಳೂ ಅಕ್ಷರಗಳೂ ಪ್ರಳಯಕಾಲದಲ್ಲಿ ಪೊಗಳುತ್ತಿರುವುವು. ವೇದ ದೇವಿ ದುರ್ಗಾದೇವಿಯು ಪೊಗಳುವ ಶ್ರೀಶನ ಮಹಿಮೆ ಅಪಾರವು. ಸೃಷ್ಟಿ ಆದಮೇಲೆ ಅಲ್ಲವೇ ವೇದಗಳು ಅಮುಖ್ಯಾರ್ಥದಿಂದ ಕರ್ಮದೇವತೆಗಳನ್ನು ನಿರೂಪಿಸುವುದು! ಶ್ರೀಹರಿಯ ಜ್ಞಾನವು ದುರ್ಲಭವು. ವೇದವನ್ನು ಓದಿ ಸರಿಯಾಗಿ ತಿಳಿದ ಶ್ರೀಹರಿ-ಭಕ್ತನೂ ದುರ್ಲಭನು. ವೇದೈಕವೇದ್ಯನಾದ ನಾರಾಯಣನನ್ನು ಸಾಕಲ್ಯೇನ ತಿಳಿದವನು ಇಲ್ಲವೇ ಇಲ್ಲ. ಅಧಿಕಾರಿ ಜೀವನಾದರೂ ಶ್ರೀಹರಿಯನ್ನು ಸ್ವಯೋಗ್ಯತಾನುಸಾರವಾಗಿ ತಿಳಿದಿರುವನು. ವೇದವನ್ನೋದಿ, ನಿರ್ದುಷ್ಟ ಜ್ಞಾನಾನಂದಾತ್ಮಕನಾದ ವೇದವೇದ್ಯ ನಾರಾಯಣನನ್ನು ತಿಳಿಯದವನು ಏನೂ ತಿಳಿದಿಲ್ಲ. ಋಗಾದಿ ಸರ್ವವೇದಗಳನ್ನು ಪಾಠಮಾಡಿ ಅರ್ಥವನ್ನು ತಿಳಿದವನಿಗೆ ಭಗವಂತನು ಸ್ವಯೋಗ್ಯಜ್ಞಾನವನ್ನಿತ್ತು ಸಲುಹುವನು. ಐದು ವೇದಗಳನ್ನು ತಿಳಿದವನಿಗೂ ಭಗವಂತನ ಸಂಪೂರ್ಣ ಜ್ಞಾನವಾಗದು. ಏಕೆಂದರೆ, ಅವನ ಮಹಿಮೆ ಅಪರಿಚ್ಛಿನ್ನವೂ ಅಪ್ರಮೇಯವೂ ಆಗಿದೆ. ವೇದಾಭಿಮಾನಿದೇವತೆಗಳೂ ಸಾಕಲ್ಯೇನ ಶ್ರೀಶನನ್ನು ತಿಳಿಯಲಾರರು ಎಂದ ಮೇಲೆ ಇತರರೆಂತು ತಿಳಿಯುವರು? ಆದರೂ ಸ್ವಯೋಗ್ಯಜ್ಞಾನವನ್ನು ಪೊಂದಲು ವೇದೈಕವೇದ್ಯನಾದ ಭಗವಂತನನ್ನು ವೇದದಿಂದಲೇ ಬ್ರಾಹ್ಮಣರು ತಿಳಿಯುವುದು ಅವಶ್ಯವಾಗಿದೆ.

'ವೇದಗಳು ಅಪರಿಮಿತ ಗುಣಪೂರ್ಣನಾದ ನಾರಾಯಣನ ಗುಣಗಳಲ್ಲಿ ಏಕ-ದೇಶವನ್ನು ಮಾತ್ರ ಹೇಳುತ್ತಿವೆಯಾಗಲಿ ಸಮಗ್ರವಾಗಿ ಹೇಳಲಾರದಾಗಿವೆ. ಅಂಕುರೋತ್ಪತ್ತಿ, ಬೇರಿನಿಂದ ನೀರರಸಗಳನ್ನು ಸೆಳೆವ ಶಕ್ತಿ, ಜೀವಂತವಿರುವುದು ಮೊದಲಾದ ಗಿಡದ ಸ್ವಾಭಾವಿಕ ಗುಣಗಳಲ್ಲಿ ಜಡತ್ವಾದಿ ಕೆಲಧರ್ಮಗಳು ಮಾತ್ರ ಶಾಖೆಗಳಲ್ಲಿ ಬರುವಂತೆ ಅನಂತಗುಣಪೂರ್ಣನಾದ ನಾರಾಯಣನ ಗುಣೈಕದೇಶವನ್ನು ವೇದಗಳು ಹೇಳುತ್ತಿವೆ. ಅಂತೂ ತಮ್ಮಲ್ಲಿರುವ ಪದ, ವಾಕ್ಯ, ಋಗಾದಿಗಳ ಸಮನ್ವಯದಿಂದ ಶ್ರೀಹರಿಯನ್ನೇ ತಿಳಿಸುವ ಋಗಾದಿಗಳಿಂದಲ್ಲದೆ, ಸ್ವಯೋಗ್ಯಜ್ಞಾನವನ್ನು ಹೊಂದುವ ಮಾರ್ಗವಿನ್ನೊಂದಿಲ್ಲ. ಭಗವತ್ಪರವಾಗಿ ವೇದಗಳನ್ನು ವ್ಯಾಖ್ಯಾನಮಾಡುವ ಬ್ರಾಹ್ಮಣನು ಉತ್ತಮಪಾತ್ರನೆಂದು ನಾನು ತಿಳಿದಿರುವೆನು. ಮುಖ್ಯವೃತ್ತಿಯಿಂದ ಇಂದ್ರಾದಿಗಳನ್ನು ಹೇಳಿದರೂ, ಪರಮ ಮುಖ್ಯವೃತ್ತಿಯಿಂದ

ಶ್ರೀಶನನ್ನು ಪೇಳಿ, ತಿಳಿವ ಬ್ರಹ್ಮಜ್ಞಾನಸಂಪನ್ನನೇ ಉತ್ತಮನು. ಅವನೇ ಉತ್ತಮ ಪಾತ್ರನು.

'ಧೃತರಾಷ್ಟ್ರ! ಅಂತಹ ಬ್ರಹ್ಮಜ್ಞಾನಿಯನ್ನು ಸೇವಿಸು! ಅವನಿಂದ ನಿಜವಾದ ಜ್ಞಾನವಾಗುವುದು. ವಿಷ್ಣುಭಕ್ತರಲ್ಲದ ಗುರುಗಳಿಂದ ವೇದಜ್ಞಾನವೆಂತು? ಅವರನ್ನು ಹುಡುಕುವ ಗೊಡವೆಗೆ ಹೋಗಬೇಡ! ವೇದ ಭಾರತ ಪಂಚರಾತ್ರ ಮೂಲ ರಾಮಾಯಣಗಳನ್ನು ವಿಮರ್ಶಿಸಿ ತಿಳಿಯಲಾದೀತು ಆಗಲಿ ಪಾಶುಪತಾದ್ಯಾಗಮಗಳಿಂದ ಹರಿಜ್ಞಾನವಾಗಲಾರದು. ಮಿಥ್ಯಾರ್ಥಗಳನ್ನು ಪೇಳುವ ದುಷ್ಟಶಾಸ್ತ್ರಗಳನ್ನು ಬಿಡು! ಪಾಖಂಡಿ ಪಾಶುಪತಾದಿ ದುಷ್ಟ ಶಾಸ್ತ್ರಗಳಿಂದ ಅನರ್ಥವಾಗುವುದು. ಅದನ್ನು ಬಿಟ್ಟು ಸಚ್ಛಾಸ್ತ್ರವನ್ನು ಗುರುಮುಖದಿಂದ ಅಭ್ಯಸಿಸು! ಶ್ರೀಹರಿಯು ಪ್ರೀತನಾಗುವನು. ಫಲಾಭಿಸಂಧಿಯನ್ನು ಬಿಟ್ಟು, ಶ್ರೀಹರಿ ಗುರುಸೇವೆ ಮಾಡುತ್ತಾ, ದುರ್ವಿಷಯದೂರನಾಗಿರುವ ಭಕ್ತನಿಗೆ ಶ್ರೀನಾರಾಯಣನು ಪ್ರಸನ್ನನಾಗುವನು. ಶ್ರೀನಿಕೇತನನು ಪ್ರಸನ್ನನಾದರೆ, ಇನ್ನು ಅಲಭ್ಯವಾದುದಿಲ್ಲ. ಸರ್ವ ಪುರುಷಾರ್ಥಗಳವನಿಗೆ ಕರತಲಾಮಲಕಗಳೆಂದು ತಿಳಿ! ಮನಸಾಪಿ ಗುರುಗಳಿಗೆ ಅಪ್ರಿಯವನ್ನೆಣಿಸದೆ, ವೇದವನ್ನೋದಿ ತಿಳಿವ ಭಕ್ತನಿಗೆ ಬ್ರಹ್ಮಜ್ಞಾನವು ಸುಲಭವಾಗಿದೆ.

'ಅರಣ್ಯದಲ್ಲಿದ್ದರೂ ಮನೋದೋಷಯುಕ್ತನು ಮುನಿ ಎನಿಸಲಾರನು. ಗೃಹದಲ್ಲಿದ್ದರೂ ಮುನಿಪ್ರಾಪ್ಯನಾದ ಶ್ರೀಹರಿಯನ್ನು ಭಜಿಸುವ ಬ್ರಹ್ಮಜ್ಞಾನಿಯು ನಿರ್ಮಲ ಮನಸ್ಕನಾಗಿ ಮುನಿ ಎನಿಸುವನು. ವಾಗಿಂದ್ರಿಯವನ್ನು ನಿಗ್ರಹಿಸುವುದರಿಂದ ಮಾತ್ರ ಯಾರೂ ಮುನಿಗಳೆನಿಸರು. ಅಕ್ಷರನು, ವ್ಯಾಪ್ತನು ಆದ ಶ್ರೀ ನಾರಾಯಣನ ಪ್ರೀತಿಗಾಗಿ ಶುಭ ಕರ್ಮಗಳನ್ನು ಮಾಡಿ, ಸಮರ್ಪಿಸಿ, ಹೇಳಿಕೊಳ್ಳದಿರುವವನೇ ಮುನಿಶ್ರೇಷ್ಠನು. ಬರಿಯ ಶಬ್ದಶಾಸ್ತ್ರ ಚತುರರು ವೈಯಾಕರಣರೆನಿಸರು. ಶಬ್ದಗಳೆಲ್ಲವೂ ಪರಬ್ರಹ್ಮನನ್ನೇ ಪೇಳುವವೆಂದು ವ್ಯಾಖ್ಯಾನಿಸುವವರೇ ಚತುರ ವೈಯಾಕರಣಿಗಳು; ಅವರೇ ಉತ್ತಮ ಬ್ರಾಹ್ಮಣರು. ಶಬ್ದಗಳ ಪ್ರವೃತ್ತಿ ನಿಮಿತ್ತಗಳಿಂದ ಶಬ್ದವಾಚ್ಯನು ನಾರಾಯಣನೆಂದು ನಿರೂಪಿಸುವ ಬ್ರಾಹ್ಮಣನಂತೆ ಕೇವಲ ಶಬ್ದನಿಷ್ಪತ್ತಿ ನಿರ್ದೋಷತ್ವಗಳನ್ನು ಸಾಧಿಸುವ ವೈಯಾಕರಣನು ಉತ್ತಮನೆನಿಸಲಾರನು.

'ಸರ್ವಶಬ್ದ ಸಮನ್ವಯ ಸಾಧಕನು ಭಗವದಪರೋಕ್ಷ ಜ್ಞಾನವನ್ನು ಪೊಂದುವನು. ಅಜ್ಞ ಜನರು ವಿಷಯಾಸಕ್ತರಾಗಿ ಮಾಡುವ ಅಶುಭ ಕರ್ಮಗಳನ್ನು ಜ್ಞಾನನೇತ್ರದಿಂದ ನೋಡುತ್ತಾ ಯಥಾ ಯೋಗ್ಯ ಸರ್ವಾಪರೋಕ್ಷಜ್ಞಾನವನ್ನೂ ಪೊಂದುವನು; ಅವನ ಜ್ಞಾನವು ನಷ್ಟವಾಗದು. ಅವನು ತನ್ನ ಇಂದ್ರಿಯಜಾತವನ್ನು ಭಗವಂತನ ಪೂಜಾ ಸೇವೆಗಳಿಗೆಂದು ಮೀಸಲಿಡುವನು. ತಾನು ಅಪರೋಕ್ಷಜ್ಞಾನಿಯಾದುದರಿಂದ ಸರ್ವಾಂತರ್ಯಾಮಿಯಾದ ಶ್ರೀನಾರಾಯಣನ ಮಹಿಮೆಯನ್ನರಿತು,

'ನಾರಾಯಣನ ಹೊರತಿನ್ನೇನೂ ಬೇಡ! ಎಲ್ಲವೂ ಶ್ರೀಹರಿಗಾಗಿ! ಶ್ರೀಶನು ಶ್ರೀಶನಿಗಾಗಿ! ಎಂದು ಭಾವಿಸಿ, ಸುಖಿಸುವನು. ಸ್ವಯೋಗ್ಯ ತ್ರಿಕಾಲಜ್ಞಾನವೂ ಅವನಿಗೆ ಲಭಿಸುವುದು.

'ಬ್ರಾಹ್ಮಣರಂತೆ ಕ್ಷತ್ರಿಯರಿಗೂ ಇದೇ ಸಾಧನವು; ಇನ್ನೊಂದಿಲ್ಲ. ನೀನು ಗಂಧರ್ವಾಂಶನಿರುವೆ! ಸ್ವೋತ್ತಮರಾದ ಧರ್ಮರಾಜಾದಿಗಳ ದ್ರೋಹ ಒಳಿತಲ್ಲ. ಜ್ಞಾನ ಭಕ್ತಿ ವೈರಾಗ್ಯಗಳಲ್ಲಿ ನಿಷ್ಣಾತನಾಗು! ವೇದ-ವಿಚಾರವನ್ನು ಮಾಡು! ಕರ್ಮಗಳ ಫಲವನ್ನು ಶ್ರೀಹರಿಗೆ ಸಮರ್ಪಿಸು! ನಿನಗೂ ಪರಬ್ರಹ್ಮನ ದರ್ಶನ ವಾಗುವುದು.'

## ಶ್ರೀಸನತ್ಸುಜಾತೀಯ—೪

ಧೃತರಾಷ್ಟ್ರನು 'ಸನತ್ಕುಮಾರ ಮುನೇ! ಮಹಾನುಭಾವ! ಬ್ರಹ್ಮಜ್ಞಾನ ವನ್ನುಪದೇಶಿಸಿ ಕುತ್ಸಿತಸಂಸಾರವನ್ನು ಕಳೆಯುವ ನಿನಗೆ ನಮಃ. ಶ್ರೀಹರಿಯನ್ನು ಮುಖ್ಯಾರ್ಥದಿಂದ ಪೇಳುವ ವೇದಗಳನ್ನು ನಮ್ಮಂತಹ ಅಲ್ಪಜ್ಞರು ಅನ್ಯಾರ್ಥಗಳನ್ನೇ ಅರುಹುತ್ತಿವೆ ಎಂದು ತಿಳಿದು ಜ್ಞಾನದೂರರಾಗುತ್ತಿರುವೆವು. ಅಂತಹ ದೀನರಿಗೆ ಯಥಾರ್ಥಜ್ಞಾನವನ್ನಿತ್ತು ಪರಮೋಪಕಾರಿಯಾಗಿರುವೆ! ನಮ್ಮಂತಹ ಪಾಮರರಿಗೆ ತಿಳಿಯುವಂತೆ ಬ್ರಹ್ಮಚರ್ಯವನ್ನು ನಿರೂಪಿಸು! ಬ್ರಹ್ಮಚರ್ಯವು ಸರ್ವಾಶ್ರಮ ಗಳಿಗೆ ಮೂಲವೂ ಪ್ರಥಮವೂ ಆಗಿದೆ. ಬ್ರಹ್ಮಜ್ಞಾನವಾಗುವಂತೆ ನಡೆಸಲ್ಪಡ ಬೇಕಾದ ಬ್ರಹ್ಮಚರ್ಯವನ್ನು ವಿವರಿಸು' ಎಂದು ಕೇಳಿದನು.

ಶ್ರೀಸನತ್ಸುಜಾತನು 'ಬ್ರಹ್ಮಜ್ಞಾನವು ತ್ವರೆಮಾಡಿದರೆ ಸಿಗದು. ತ್ವರೆಯಿಲ್ಲದೆ ಮಹಾಪ್ರಯತ್ನವನ್ನು ಮಾಡುವವನಿಗೆ ಶ್ರೀಹರಿಯ ಜ್ಞಾನವಾಗುವುದು. ಬ್ರಹ್ಮ-ಜ್ಞಾನದಂತೆ ಬ್ರಹ್ಮಪ್ರಾಪ್ತಿಯೂ ಮಹಾಪ್ರಯತ್ನ ಸಾಧ್ಯವಾಗಿದೆ. ಎಡೆಬಿಡದ ವಿಚಾರದಿಂದ ಬ್ರಹ್ಮವಿದ್ಯೆ. ಅಹಿಂಸಾ ಬ್ರಹ್ಮಚರ್ಯಗಳೂ ಬ್ರಹ್ಮವಿದ್ಯೆಗೆ ಸಾಧನ ವಾಗಿವೆ. ಭಕ್ತಿಯೂ ಬೇಕು. ವಿದ್ಯೆಯು ಬ್ರಹ್ಮಚರ್ಯಾಶ್ರಮದಲ್ಲಿ ಲಭ್ಯವಲ್ಲವೇ? ವಿಷ್ಣುವೆಂಬ ಸತ್ಯವನ್ನು ನಿರೂಪಿಸುವ ವಿದ್ಯೆಯು ಅವಿನಾಶಿಯು, ಜ್ಞಾನಪ್ರಕಾಶವು ಆಗಿದೆ. ಬ್ರಹ್ಮವಿದ್ಯೆಯಿಂದ ಮನುಜದೇಹವನ್ನು ಬಿಟ್ಟು ಮುಕ್ತರಾಗುವರು. ಅದು ಗುರ್ವನುಗ್ರಹದಿಂದ ಹಿರಿಯರಾದ — ವಯಸ್ಸಿನಿಂದಲ್ಲ — ಸುಜನರಲ್ಲಿ ನಿಂತಿದೆ.' ಎಂದನು.

ಧೃತರಾಷ್ಟ್ರನು 'ಮಹಾಮುನೇ! ಬ್ರಹ್ಮಚರ್ಯದಿಂದ ಬ್ರಹ್ಮವಿದ್ಯೆ ಎಂದೆ! ಅಂತಹ ಬ್ರಹ್ಮಚರ್ಯದ ಲಕ್ಷಣಗಳನ್ನು ನನಗೆ ಪೇಳು! ಬ್ರಹ್ಮಚರ್ಯವು ಎಂತು ವಿದ್ಯಾಪ್ರಾಪಕವಾಗುವುದು?' ಎಂದು ಕೇಳಿದನು.

ಶ್ರೀಸನತ್ಸುಜಾತನು ಪೇಳಿದನು—

'ರಾಜನ್! ಮಿತ್ರದೇವತಾಕವಾದ ಗಾಯತ್ರಿಯ ಉಪದೇಶವನ್ನು ಹೊಂದಿ

ದರೆ ಸಾಲದು; ಗುರುಕುಲವಾಸವನ್ನು ಮಾಡಿ, ಪ್ರಸನ್ನರಾದ ಗುರುಗಳಿಂದ ಅನುಗ್ರಹ ಪೂರ್ವಕವಾಗಿ ಕೊಡಲ್ಪಟ್ಟ ವೇದಾದಿ ಸಚ್ಛಾಸ್ತ್ರಾದಿಗಳನ್ನು ಚನ್ನಾಗಿ ಅಭ್ಯಸಿಸಿ, ಜಿತೇಂದ್ರಿಯನಾಗಿಯೂ ಇರುವುದವಶ್ಯವಾಗಿದೆ. ಆಗ ಬ್ರಹ್ಮಚರ್ಯಾಶ್ರಮವು ಫಲಿತವಾಯಿತೆಂದು ತಿಳಿ! ಗುರುಪ್ರೀತಿಯನ್ನು ಗಳಿಸಿದ ಶಿಷ್ಯನು ಇದೇ ಜನ್ಮದಲ್ಲಿ ಸರ್ವ ವೇದಾದಿ ಸಚ್ಛಾಸ್ತ್ರಗಳನ್ನು ಯಥಾಯೋಗ್ಯವಾಗಿ ತಿಳಿದು, ಶ್ರೀಹರಿಯನ್ನು ನಿರೂಪಿಸುವ ಸದ್ಗ್ರಂಥಗಳನ್ನು ರಚಿಸಲು ಅರ್ಹನಾಗುವನು. ಕೊನೆಗೆ ಚರಮದೇಹ ವನ್ನು ಬಿಟ್ಟು, ಅಂತಹ ಸುಜೀವನು ನಿರ್ದೋಷ ಜ್ಞಾನಾನಂದ ಸ್ವರೂಪನಾದ ಶ್ರೀಹರಿ ಯನ್ನು ಗುರೂತ್ತಮರಾದ ಮುಖ್ಯಪ್ರಾಣದೇವರ ದ್ವಾರಾ ಸೇರಿ, ಸುಖಿಸುವನು. ಈ ಲೋಕದ ವಿಷಯಗಳೂ ಅವನಿಗೆ ಸಿಗುವವು. ಬ್ರಹ್ಮಚರ್ಯಬಲದಿಂದ ಶ್ರೀಹರಿ ಯನ್ನು ಸದಾ ನೆನೆಯುತ್ತಾ, ಅವನು ದ್ವಂದ್ವಗಳನ್ನು ಸಹಿಸಿ, ಶರೀರೇಂದ್ರಿಯ ಯಗಳನ್ನು ಸ್ವೇಚ್ಛೆಯಿಂದಲೂ ಧೈರ್ಯದಿಂದಲೂ ಜಯಿಸುವನು. ಅವು ಬೇರೆ, ತಾನು ಬೇರೆ ಎಂದು ಮುಂಜಹುಲ್ಲಿನಿಂದ ಇಷೀಕವನ್ನು ತೆಗೆದಂತೆ—ಮನವನ್ನು ಬಿಡಿಸಿ ಶ್ರೀಶಾನುಗ್ರಹದಿಂದ ಮುಕ್ತನಾಗುವನು.

'ತಂದೆ-ತಾಯಂದಿರು ಶರೀರವನ್ನು ಮಾತ್ರ ಕೊಡುವರು. ಆಚಾರ್ಯನು ಜ್ಞಾನಿ ಎಂಬ ಬೇರೆ ಜನ್ಮವನ್ನೇ ಕೊಡುವನು. ಜ್ಞಾನವು ವಿನಾಶವನ್ನು ದೂರ ಮಾಡಿ, ಶ್ರೀಹರಿಪ್ರೀತಿಯನ್ನು ಗಳಿಸಿಕೊಡುವುದು. ಪರಬ್ರಹ್ಮವಿಷಯಕವಾದ ಜ್ಞಾನವನ್ನು ಕೊಟ್ಟು, ವಿಸ್ತಾರಗೊಳಿಸುವ ವೇದೋಪದೇಶದಿಂದ ಶಿಷ್ಯರನ್ನು ಉದ್ಧರಿಸುವ ಗುರುಗಳ ಉಪಕಾರವನ್ನೆಂದಿಗೂ ಮರೆಯಲಾಗದು.

'ಶುದ್ಧ ಮನಸ್ಕನಾಗಿ ಆಚಾರ್ಯರ ಸೇವೆ ಮಾಡುತ್ತಾ, ವಿದ್ಯೆಯನ್ನು ಕಲಿಯು ವುದು ಬ್ರಹ್ಮಚರ್ಯದ ಪ್ರಥಮ ಪಾದವು. ಗುರುಗಳಂತೆ ಗುರುಪುತ್ರ, ಗುರುಪತ್ನಿಯ ರಲ್ಲಿಯು ಭಕ್ತಿಯನ್ನು ಮಾಡಿ ಸೇವಿಸುವುದೇ ಎರಡನೆಯ ಪಾದವು. ಆಚಾರ್ಯರು ಜ್ಞಾನವನ್ನಿತ್ತು ನನಗೆ ಬೇರೆ ಜನ್ಮವನ್ನೇ ದಯಪಾಲಿಸಿರುವರೆಂದು ತಿಳಿಯುವುದು ಮೂರನೇ ಪಾದವು. ಪ್ರಾಣಧನಗಳನ್ನಾದರೂ ಸಮರ್ಪಿಸಿ, ಕರ್ಮದಿಂದ,ಮನದಿಂದ, ವಚನದಿಂದ ನಿಷ್ಕಲ್ಮಷನಾಗಿ ಆಚಾರ್ಯರನ್ನು ಸಂತೋಷಪಡಿಸುವುದು ನಾಲ್ಕನೇ ಪಾದವು. ಗುರುಪ್ರಸಾದದಿಂದ ಮೊದಲ ಪಾದವನ್ನು, ಉತ್ಸಾಹ (ಪ್ರಯತ್ನ)ದಿಂದ ಬುದ್ಧಿಯನ್ನು ಪಯೋಗಿಸಿ ಎರಡನೇ ಪಾದವನ್ನು, ಒಡಗೂಡಿ ಓದುವ ವಿದ್ಯಾರ್ಥಿ ಗಳನ್ನು ನೋಡಿ ಮೂರನೇ ಪಾದವನ್ನು, ತಾನು ಶಿಷ್ಯರಿಗೆ ಹೇಳಿ ಶ್ರಮಪಟ್ಟು ನಾಲ್ಕನೇ ಪಾದವನ್ನು ಇಂತು ಬ್ರಹ್ಮವಿದ್ಯೆಯನ್ನು ಸ್ವಯೋಗ್ಯತೆಯಂತೆ ಚನ್ನಾಗಿ ಪಡೆಯಬಹುದಾಗಿದೆ.

'ಜ್ಞಾನಾದಿ ದ್ವಾದಶ ಗುಣಗಳು ಆಚಾರ್ಯ ಸನ್ನಿಧಾನದಲ್ಲಿ ಫಲಿಸುವುವೆಂದು ಪ್ರಾಜ್ಞರು ಹೇಳುವರು. ಕಾಮಾದಿತ್ಯಾಗ, ಸತ್ಯಾದಿಗುಣಗಳು ಮೀಮಾಂಸಾದಿ

ಯುಕ್ತಿಬಲ—ಇದೆಲ್ಲವೂ ಬ್ರಹ್ಮಚರ್ಯದ ಲಕ್ಷಣಗಳು. ಪರಬ್ರಹ್ಮನಾದ ಶ್ರೀಹರಿಯಲ್ಲಿ ಭಕ್ತಿಯಿಂದ ಅವು ಫಲವಂತವಾಗುವವು.

'ಗುರುಕುಲದಿ ಇದ್ದ ಮನುಜನು ತನ್ನದಾದ ಧನಾದಿಗಳೆಲ್ಲವೂ ತನ್ನವೆಂದು ತಿಳಿಯದೆ, ಗುರುಚರಣದಲ್ಲಿ ಸಮರ್ಪಿಸಬೇಕು. ಇದು ಸಜ್ಜನರ ಸ್ವಭಾವವು. ಗುರುಪುತ್ರರನ್ನೂ ಗುರುಗಳಂತೆ ಗೌರವಿಸಬೇಕು. ಇಂತು ಆಯಾಸದಿಂದ ಗುರುಸೇವೆ ಮಾಡಿದವನು ಜ್ಞಾನಿಯಾಗುವನು. ಪುತ್ರರನ್ನೂ ಕೀರ್ತಿಯನ್ನೂ ಪಡೆದು, ದೊಡ್ಡವನೆನಿಸುವನು. ಅವನ ಕಾಮಗಳೆಲ್ಲ ಈಡೇರುವವು. ಅವನನ್ನು ಶಿಷ್ಯರು ಬಂದು ಸೇವಿಸುವರು. ಇಂತು ಗುರುಭಕ್ತಿಯಿಂದ ದೇವತೆಗಳು ದೇವತ್ವವನ್ನೂ, ಋಷಿಗಳು ಋಷಿತ್ವವನ್ನೂ ಹೊಂದಿ ಮಹಾಭಾಗರೆನಿಸಿರುವರು ಗಂಧರ್ವರು, ಅಪ್ಸರೆಯರು, ಇದರಿಂದ ಇತರ ಅವರರಕ್ಕಿಂತಲೂ ರೂಪಾದಿಗುಣವಂತರಾಗಿರುವರು. ಬ್ರಹ್ಮಚರ್ಯದಿಂದ ತನ್ನ ಶರೀರವನ್ನು ಶೋಷಿಸಿ ತಪಗೈದವನು ಮೂಢನಾಗದೆ, ಸಾವನ್ನೇ ಅಂಜಿಸಿ, ತಾನು ಮುಕ್ತನಾಗುವನು.

'ಪಾರಿಜಾತಾದಿಗಳು ಬೇಡಿದ ಅರ್ಥವನ್ನು ನೀಡುವಂತೆ, ಬ್ರಹ್ಮಚರ್ಯವೆಂಬ ಧರ್ಮವು ಚನ್ನಾಗಿ ಸೇವಿಸಲ್ಪಟ್ಟು, ದೇವತ್ವವನ್ನು ದೇವತೆಗಳಿಗೆ ಇತ್ತಿರುವುದು. ಬ್ರಹ್ಮಚರ್ಯವು ಜ್ಞಾನದ್ವಾರಾ ಮೋಕ್ಷಕಾರಣವಾಗಿದೆ. ಕರ್ಮಸ್ವರೂಪವನ್ನರಿತ ಜನರು ನಿರ್ಮಲಕರ್ಮವನ್ನು ಮಾಡಿ ಸ್ವರ್ಗಾದಿಗಳನ್ನು ಪಡೆವರು ನಿಜ. ಅವು ಕೊನೆಗೆ ಹಿಂದಿರಿಗಿಸುವ ಲೋಕಗಳು. ಆದರೆ ಬ್ರಹ್ಮಚರ್ಯದಿಂದ ಅಪರೋಕ್ಷ ಜ್ಞಾನದ್ವಾರಾ ಮೋಕ್ಷವೆಂಬ ಶಾಶ್ವತವಾದ ಮಹಾಫಲವು ಸಿಗುವುದು. ಮೋಕ್ಷಕ್ಕೆ ಜ್ಞಾನದ ಹೊರತು ಬೇರೆ ಸಾಧನವಿಲ್ಲ.'

ಧೃತರಾಷ್ಟ್ರನು 'ಬ್ರಹ್ಮಸ್ವರೂಪವು ಶುಕ್ಲವರ್ಣವೋ ಅಥವಾ ಕೆಂಪೋ? ಇಲ್ಲದಿರೆ ಕಪ್ಪೋ? ಅದರ ಧರ್ಮವಾವುದು? ಬ್ರಹ್ಮಜ್ಞಾನಿಯು ಬ್ರಹ್ಮನನ್ನು ನೋಡುವುದೆಲ್ಲಿ?' ಎಂದು ಕೇಳಿದನು.

ಶ್ರೀಸನತ್ಸುಜಾತನು 'ಧೃತರಾಷ್ಟ್ರ! ಬ್ರಹ್ಮಸ್ವರೂಪವು ಅಪ್ರಾಕೃತವಾದುದರಿಂದ ಮಾನುಷಾದಿರೂಪದಂತೆ ಪ್ರಾಕೃತವರ್ಣದಿಂದ ಕೂಡಿರುವುದಿಲ್ಲ. ದಿವ್ಯಮಂಗಳನು, ಅಪ್ರಾಕೃತನು, ನಾಶರಹಿತನು, ಕೋಟಿ ಸೂರ್ಯ ಪ್ರಭಾಸಂಪನ್ನ ದಿವ್ಯ ಸ್ವರೂಪನು ಆದ ಭಗವಂತನು, ನಮ್ಮಂತೆ ಪೃಥಿವ್ಯಾದಿಗಳಲ್ಲಿ ಅವನ್ನು ಅವಲಂಬಿಸಿ ನಿಂತಿರುವುದಿಲ್ಲ. ಪೃಥಿವಿ, ಅಂತರಿಕ್ಷ, ಸಮುದ್ರಜಲ, ನಕ್ಷತ್ರ ಲೋಕಗಳಲ್ಲಿ ಅವನು ಸರ್ವಾಧಾರನಾಗಿ ಸರ್ವತ್ರ ಇರುವನು. ಋಗ್ಯಜುಸ್ಸಾಮಾದಿಗಳಲ್ಲಿ ಅವನನ್ನು ಹುಡುಕಿ, ಅವನ ಅನುಗ್ರಹವಿಲ್ಲದೆ, ಕಾಣಲಾಗದು. ಜ್ಞಾನಾದಿ ಮಹಾವ್ರತಗಳನ್ನು ನಡೆಸಿದ ಭಕ್ತನು ಮನಸ್ಸಿನಲ್ಲಿ ಶ್ರೀಶನನ್ನು ಕಾಣುವನು. ಅವನು ಪ್ರಾಕೃತವರ್ಣರಹಿತನಾದರೂ ಅಪ್ರಾಕೃತರೂಪನು; ಒಂದೇ ಲೋಕದಲ್ಲಿ ಒಮ್ಮೆ ಇಲ್ಲದವನಾದರೂ ಲೋಕವಿಲಕ್ಷಣನಾದ ಶ್ರೀಶನು ಎಲ್ಲಕಡೆಯು ಸದಾ ಸನ್ನಿಹಿತನಿರುವನು. ಅಂತಹ

ವೇದೈಕವೇದ್ಯನನ್ನು ಬ್ರಹ್ಮಚರ್ಯ, ಜ್ಞಾನಾದಿ ಸಾಧನದಿಂದ ಪ್ರಸನ್ನೀಕರಿಸಿಕೊಂಡು ಅಪರೋಕ್ಷವಾಗಿ ನೋಡಬಹುದು.

'ಪ್ರಕೃತಿಯ ಬಂಧ ಮತ್ತು ಅಜ್ಞಾನಗಳಿಲ್ಲದ, ಮಹತ್ತತ್ವಾಭಿಮಾನಿಯಾದ ಬ್ರಹ್ಮದೇವನು ಪ್ರಳಯದಲ್ಲಿ ಶ್ರೀಶನನ್ನು ಸೇರುವನು. ಜಗತ್ತೆಲ್ಲವೂ ಅವನನ್ನೇ ಸೇರುವುದು. ಶ್ರೀಹರಿಯು ಅಣುವಿಗೆ ಅಣುವೂ, ಪರ್ವತಾದಿ ಮಹತ್ತಿಗೆ ಮಹತ್ತೂ ಆಗಿರುವನು. ಜಗವೆಲ್ಲವೂ ಅವನಲ್ಲಿ, ಅವನಿಂದ ನಿಂತಿದೆ. ಅವನು ಚತುರ್ವಿಧ ನಾಶರಹಿತನು; ಸರ್ವಲೋಕನಿಯಾಮಕನು; ಯಶೋವಿಶಾಲನು; ಅವನಿಂದ ಸಕಲ ಭೂತಗಳು ಸೃಷ್ಟಿಕಾಲದಲ್ಲಿ ಹೊರಬರುವುವು; ಕೊನೆಗೆ ಪ್ರಳಯದಲ್ಲಿ ಅವನಲ್ಲೇ ಸೇರುವುವು. ಸರ್ವಾಧಾರನು, ಸರ್ವಪ್ರಕಾಶನು, ಆದ ಶ್ರೀಶನನ್ನು ಬ್ರಹ್ಮಜ್ಞಾನಿಯು ಕಾಣುವನು. ಇಂತು ತಿಳಿದವರು ಜನನಮರಣಗಳನ್ನು ದೂರಮಾಡುವ ಶ್ರೀಹರಿ-ವಾಯುಗುರುಗಳ ಕೃಪೆಗೆ ಪಾತ್ರರಾಗುವರು ಮತ್ತು ಮುಕ್ತರಾಗುವರು.'

## ಶ್ರೀ ಸನತ್ಸುಜಾತೀಯ—೫

ಶ್ರೀಸನತ್ಸುಜಾತನು ಮತ್ತೆ ಕ್ರೋಧಾದಿಗಳಿಂದ ಆಗುವ ಐಹಿಕಾನರ್ಥವನ್ನೂ, ಋದ್ಧ, ಸಮೃದ್ಧ, ಕೇವಲ ತಪಸ್ಸುಗಳನ್ನೂ ನಿರೂಪಿಸಿದನು –

'ಧೃತರಾಷ್ಟ್ರ! ಶೋಕ, ಕ್ರೋಧ, ಲೋಭ, ಕಾಮ, ಮೋಹ, ಪರಾಸುತಾ (ಮೈಮರೆವ ನಿದ್ರೆ), ಈರ್ಷೆ, ಮಾನ, ವಿಚಿತ್ಸಾ, ಸ್ಪೇಯ, ಜಿಗುಪ್ಸಾ, ಅಕೃಪಾ— ಎಂಬ ಹನ್ನೆರಡು ಮಹಾದೋಷಗಳು ಮನುಜನ ಪ್ರಾಣವನ್ನಪಹರಿಸುವಂತಹವೆಂದು ತಿಳಿ; ಅವುಗಳಲ್ಲಿ ಒಂದೊಂದೂ ಪ್ರಾಣನಾಶಕವಾಗಿದೆ. ಶೋಕ, ಕ್ರೋಧಗಳಿಂದ ಆತ್ಮಹತ್ಯೆ ಮಾಡಿಕೊಳ್ಳುವುದುಂಟು. ಲೋಭದಿಂದ ದುರ್ಗಮದೇಶದಲ್ಲಿ ಸಿಕ್ಕು ಸಾಯುವುದುಂಟು. ಕಾಮದಿಂದ ಪರಸ್ತ್ರೀಗಮನ ಮಾಡಿ ಸಾಯುವುದುಂಟು. ಈ ದೋಷಗಳಿಂದ ಕೂಡಿದವನು ಮೂಢನಾಗಿ, ಯಾವ ಪಾಪಕಾರ್ಯವನ್ನು ಮಾಡಲೂ ಹಿಂಜರಿಯನು.

'ಸ್ಪೃಹಯಾಲು, ಉಗ್ರ (ಚಪಲ), ಮನಸ್ವೀ, ಪರುಷ, ವಿಕತ್ಥಮಾನ, ಸಂಭೋಗಸಂವಿತ್, ವಿಷಮ, ಅಭಿಮಾನಿ, ದತ್ತಾನುತಾಪಿ, ಕೃಪಣ, ಅಬಲೀಯ, ವರ್ಗಪ್ರಶಂಸಿ, ವನಿತಾವಮಾನಿ—ಎಂಬ ಹದಿಮೂರು ಜನರು ನೃಶಂಸರು. ಇವರು ಪಾಪಶೀಲರಾಗಿರುವರು.

'ಧರ್ಮ (ಜ್ಞಾನ) ಸತ್ಯ, ತಪ, ದಮ, ಅಮಾತ್ಸರ್ಯ, ಪ್ರೀತಿ, ತಿತಿಕ್ಷಾ, ಅನಸೂಯ, ದಾನ, ಧೃತಿ, ಶ್ರುತಿ, ಕ್ಷಮಾ (ಶಮ) ಎಂಬ ಹನ್ನೆರಡು ತಪೋವೃದ್ಧಿಯನ್ನು ಸಂಪಾದಿಸುವುವು ಮತ್ತು ಮೋಕ್ಷಾದಿಪುರುಷಾರ್ಥ ಕಾರಣಗಳಾಗಿವೆ. ಈ ಗುಣಗಳನ್ನು ಪೊಂದಲು ನಿಶ್ಚಯಿಸಿ—ಅಥವಾ ಒಂದು, ಎರಡು, ಮೂರಾದರೂ

ಗುಣಗಳನ್ನು ಹೊಂದಲೆಣಿಸಿ ಗುರುಕುಲವಾಸವನ್ನು ಮಾಡುವವನು, ತನ್ನದೇನಿಲ್ಲವು —ಎಲ್ಲವೂ ಈಶ್ವರಾಧೀನವೆಂದು ತಿಳಿದು ಬ್ರಹ್ಮಜ್ಞನಿಯಾಗುವನು.

'ದಮ, ತ್ಯಾಗ, ಅಪ್ರಮಾದ (ಶಮ)ಗಳಲ್ಲಿ ಭಗವಂತನು ಮೋಕ್ಷವನ್ನಿಟ್ಟಿರುವನು. ವೇದವನ್ನೋದಿ, ಭಗವನಂತನ ಸರ್ವೋತ್ತಮತ್ವವನ್ನರಿತ ಬುದ್ಧಿವಂತರಿಗೆ ಈ ಗುಣಗಳು ಲಭಿಸುವುವು.

'ಇಲ್ಲದ ಸಲ್ಲದ ಬ್ರಾಹ್ಮಣ ನಿಂದೆಯು ನರಕಪ್ರಾಪ್ತಿಗೆ ಕಾರಣವಾಗಿದೆ. ಇದ್ದುದನ್ನು ಇದ್ದಂತೆ ಆಡಿ ನಿಂದಿಸಿದೆನೆಂದು ನರಕದಿಂದ ತಪ್ಪಿಸಿಕೊಳ್ಳಲಾಗದು. ಬ್ರಾಹ್ಮಣ ನಿಂದೆಯು ಸದಾ ವರ್ಜನೀಯವಾಗಿದೆ.

'ಲೋಕದ್ವೇಷ, ಪ್ರಾತಿಕೂಲ್ಯ, ಅಸೂಯಾ, ಸುಳ್ಳು, ಕಾಮ, ಕ್ರೋಧ, ಪರಾಧೈನ್ಯ (ಉತ್ತಮರಲ್ಲಿ ಅವಿನಯ), ಪರಿವಾದ(ನಿಂದೆ), ಪೈಶುನ, ಅರ್ಥಹಾನಿ, ವಿವಿತ್ಸಾ, ಮಾತ್ಸರ್ಯ, ಪ್ರಾಣಿ ಪೀಡನ, ಈರ್ಷ್ಯ, ಮೋಹ, ವಿವಾದ, ಸಂಜ್ಞಾನಾಶ (ಓದಿದ ಶಾಸ್ತ್ರದ ಮರೆವು), ಅಭ್ಯಸೂಯತಾ (ಗುಣಗಳನ್ನೂ ದೋಷವೆಂದು ಹೇಳುವುದು)—ಈ ಹದಿನೆಂಟು ದಮದೋಷಗಳು ಮದಕಾರಣಗಳು. ಆದುದರಿಂದ ಪ್ರಾಜ್ಞನು ಆ ದೋಷಗಳಿಗೆ ಅಧೀನನಾಗಬಾರದು.' (ಇವುಗಳ ಅರ್ಥ ಹಿಂದೆ ಹೇಳಲ್ಪಟ್ಟಿದೆ.)

'ಸ್ನೇಹಿತನ ಆರು ಗುಣಗಳನ್ನು ಹೇಳುವೆನು. ಮಿತ್ರನಿಗೆ ಪ್ರಿಯವಾದರೆ ತಾನೂ ಪ್ರೀತನಾಗಿ, ಅವನಿಗೆ ಅಪ್ರಿಯವೊದಗಿದರೆ ತಾನೂ ವ್ಯಥೆಪಡುವನು ತನ್ನಲ್ಲಿದ್ದು ಕೊಡಲು ಶಕ್ಯವಾದುದನ್ನು ಕೇಳಿದರೆ, ಒಳ್ಳೆಯ ಮನಸ್ಸಿನಿಂದ ಇಲ್ಲವೆನ್ನದೆ ಕೊಡುವನು. ಯೋಗ್ಯನು ಕೇಳಿದರೆ ಗುರು ವಿಪ್ರ ಸೇವೆಗಾಗಿ ದಾರಾಪುತ್ರಾದಿಗಳನ್ನೂ, ವಿತ್ತವನ್ನೂ ಸಂತೋಷದಿಂದ ಕೊಡುವನು, ವಿಶ್ವಾಮಿತ್ರನಿಗೆ ಮಗನನ್ನಿತ್ತ ದಶರಥನಂತೆ, ಸೌಭರಿಗೆ ಹೆಂಡಿರಾಗಲು ದುಹಿತೆಯರನ್ನಿತ್ತ ಮಾಂಧಾತನಂತೆ ಕೊಟ್ಟು ನಿಶ್ಚಿಂತನಾಗಿರುವನು. ಆಪತ್ತಿನಲ್ಲಿ ತನ್ನಲ್ಲಿಟ್ಟುಕೊಳ್ಳುವನು. ಅವನಿಗೆ ಉಣಿಸಿ, ತಾನೂ ಅವನಿತ್ತುದನ್ನು ಆದರದಿಂದ ಉಣ್ಣುವನು. ಅವನಿಗಾಗಿ ತನ್ನ ಮನೋರಥವನ್ನು ಬಿಟ್ಟು, ಅವನ ಮನೋರಥವೀಡೇರಿಸಲು ಕಷ್ಟಪಡುವನು. ದ್ರವ್ಯವಂತನು, ಗುಣವಂತನು, ಸಾತ್ವಿಕನು ಆದ ಮಹಾನುಭಾವನೇ ತ್ಯಾಗ ಮಾಡುವನು. ಪಂಚ ವಿಷಯಗಳಿಂದ ಮನಸ್ಸನ್ನು ಬಿಡಿಸಿ, ತ್ಯಾಗಿಯು ಭಗವಂತನ ಪ್ರೀತಿಗೆ ಪಾತ್ರನಾಗುವನು.

'ತಪಸ್ಸು ಕೇವಲವಾಗಿದ್ದರೂ ಮುಕ್ತಾಮುಕ್ತನಿಯಾಮಕನಾದ ಭಗವಂತನ ಜ್ಞಾನದಿಂದ ಕೂಡಿ ಸಮೃದ್ಧಪೆನಿಸಿ, ಅನಂತಫಲವನ್ನೀಯುವುದು. ಅಂತಹ ಜ್ಞಾನದಿಂದ ಯಜ್ಞಗಳು ಕೂಡ ಫಲಪ್ರದವಾಗುವುವು. ಭಗವಂತನ ಜ್ಞಾನವಿಲ್ಲದವರು ಮಾಡುವ ತಪೋಯಜ್ಞಾದಿಗಳು ಮಹಾಫಲವನ್ನೀಯಲಾರವು. ಆರ್ಜವವೆಂದರೆ ತ್ರಿಕರಣಶುದ್ಧಿ. ದುರ್ಜನರಿಗೆ ಅದಿಲ್ಲ; ಅವರು ಮನಸಾ ಒಂದನ್ನು ನೆನೆದು, ವಚನ

ದಿಂದ ಬೇರೊಂದನ್ನು ಹೇಳಿ, ಕಾರ್ಯದಿಂದ ಇನ್ನೊಂದನ್ನು ಮಾಡುತ್ತಿರುವರು. ಮನೋವಾಕ್ಕರ್ಮಗಳಲ್ಲಿ ಒಂದಾಗಿರುವ ಸಂಕಲ್ಪಸಿದ್ಧನು, ಉತ್ತಮ ತಪಸ್ವಿ ಎನಿಸುವನು. ಅವನಾಡಿದುದೆಲ್ಲವೂ ನಿಜವಾಗುವುದು. ಅಂತಹ ಸಜ್ಜನನನ್ನು ದಡ್ಡನೆಂದು ಪ್ರಚಾರ ಮಾಡುತ್ತಾ, ಮನೋವಾಕ್ಕರ್ಮಗಳಲ್ಲಿ ಭಿನ್ನನಾಗಿರುವ ದುರ್ಮಾರ್ಗನು ತಾನೇ ಜಾಣನೆಂದು ತಿಳಿದಿರುವನು. ಇಂತಹ ಜಾಣತನವು ಮೋಸವೇ ಸರಿ ! ಬ್ರಹ್ಮಜ್ಞಾನಕ್ಕೂ ಮೋಸಕ್ಕೂ ಬಲು ದೂರ.

'ಬ್ರಹ್ಮಜ್ಞಾನಿಯು ಆರ್ಜವವನ್ನು ಸಂಪಾದಿಸಿ, ಅಧ್ಯಯನಶೀಲನಾಗಿರಬೇಕು. ಅನಂತಗುಣಪೂರ್ಣನು, ವೇದವಚನಗೋಚರನು, ಉತ್ತಮಯಶನು ಆದ ಶ್ರೀನಾರಾಯಣನ ಮಹಿಮೆಯನ್ನು ತಾನು ಗುರುಗಳಿಂದ ಕಲಿತು, ಶಿಷ್ಯರಿಗೂ ಉಪದೇಶಿಸಬೇಕು. ಕರ್ಮ, ಜ್ಞಾನ, ಭಕ್ತಿ ಯೋಗಗಳಿಂದ ಸಿಗುವ ಯೋಗನೆಂಬ ಶ್ರೀಹರಿಯನ್ನು ಜಗದಾಧಾರನೆಂದು ತಿಳಿದು ಪೇಳುವ ಬ್ರಹ್ಮಜ್ಞಾನಿಗಳು ಮುಕ್ತರಾಗುವರು. ಪುಣ್ಯಕರ್ಮಗಳನ್ನು ಮಾಡಿದರೆ ಸಾಲದು; ಸತ್ಯ ಪೇಳಿದರೆ ಸಾಲದು; ಯಜ್ಞಮಾಡಿದರೆ ಸಾಲದು; ಜಪ ದಾನಗಳನ್ನು ಮಾಡಿದರೆ ಸಾಲದು; ಮೃತ್ಯುವೆನಿಸುವ ಮಿಥ್ಯಾಜ್ಞಾನವನ್ನು ಗೆದ್ದು ಮುಕ್ತನಾಗಲು ಜ್ಞಾನವೇ ಕಾರಣ. ಅಪರೋಕ್ಷಜ್ಞಾನಿಗೆ ಸುಖವಾಗಿ ಉತ್ಕ್ರಮಣವಾದಂತೆ, ಅನಪರೋಕ್ಷಿಗಳಿಗೆ ಆಗದು. ಕರ್ಮ ಯಜ್ಞ ಜಪ ದಾನಾದಿಗಳು ಜ್ಞಾನಸಾಧನವಾಗುವಂತೆ ಶ್ರೀಹರಿಸಮರ್ಪಿತವಾಗಿ ಮಾಡಬೇಕು. ಸ್ವಗತ ಭೇದರಹಿತನು, ಸ್ವಸಮಾನರಹಿತನು, ಆದ ಪರಮಾತ್ಮನನ್ನು ಉಪಾಸಿಸುವವನು ವಾಕ್ಕನ್ನು ನಿಗ್ರಹಿಸಿಡಬೇಕು. ಆಗ ಮನಸಾ ಕೂಡ ವಿಷಯ ಸ್ಮರಣೆ ಕೂಡದು; ನಿಂದಾ ಸ್ತುತಿಗಳಿಂದ ರೋಷ ಪ್ರೀತಿಗಳನ್ನು ಹೊಂದದವನು ಭಗವದಪರೋಕ್ಷಜ್ಞಾನಿ ಎನಿಸುವನು. ಭಗವದಪರೋಕ್ಷಜ್ಞಾನಿಯು ವೈಕುಂಠಾದಿ ಲೋಕಗಳಲ್ಲಿ ಸುಖವಾಗಿರುವನು. ನಿನಗೆ ನಾನು ಪೇಳಿದ ಪ್ರಮೇಯವು ವೇದಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. ಅದನ್ನು ನಿನ್ನ ಪ್ರಶ್ನೆಗಳಿಗುತ್ತರವಾಗಿ ನಿರೂಪಿಸಿರುವೆನು.'

## ಶ್ರೀಸನತ್ಸುಜಾತೀಯ—೬

ಶ್ರೀ ಸನತ್ಕುಮಾರನು ನಿರೂಪಿಸಿದನು—

'ಬ್ರಹ್ಮಜ್ಞಾನದಿಂದ ಮೋಕ್ಷವಾಗುವುದೆಂದು ಹೇಳಿದೆನು. ಈಗ ಬ್ರಹ್ಮಸ್ವರೂಪವನ್ನು ವಿವರಿಸಿ, ಬ್ರಹ್ಮಜ್ಞಾನವು ಯಾರಿಗೆ ಸಿಗುವುದೆಂಬುದನ್ನು ಹೇಳುವೆನು. ಕೇಳು !

'ಶ್ರೀ ನಾರಾಯಣನು ವ್ಯಾಪ್ತನು, ಶುದ್ಧನು, ಶೋಕಾದಿ ಸಮಸ್ತ ದೋಷರಹಿತನು, ಸರ್ವಪ್ರಕಾಶಕನು, ಸ್ವಯಂಪ್ರಕಾಶಮಾನನು, ಪೂರ್ಣನೂ ಆಗಿರುವನು. ಸೂರ್ಯಾದಿ ಭಾಸಕನು, ಪ್ರಾಣಾದಿ ಪ್ರೇರಕನು ಆದ ಶ್ರೀರಮಣನನ್ನು ಬ್ರಹ್ಮಾದಿ

ಸರ್ವ ದೇವತೆಗಳು ಉಪಾಸಿಸುವರು. ಅಂತಹ ನಾರಾಯಣನನ್ನು ಧ್ಯಾನಾದಿ ಯೋಗಸಂಪನ್ನರು ಚನ್ನಾಗಿ ತಿಳಿದಿರುವರು.

'ಶ್ರೀಶನಿಂದ ಚತುರ್ಮುಖ ಬ್ರಹ್ಮನು ಪುಟ್ಟಿ, ಅವನಿಂದ ಬೆಳೆದು, ಅವನಿಂದ ಪ್ರೇರಿತನಾಗಿ ಜಗವನ್ನು ಸೃಜಿಸುವನು. ಜ್ಯೋತಿರ್ಗಣದಲ್ಲಿ ನಿಯಾಮಕನಾಗಿರುವ ಹರಿಗೆ ಅವುಗಳ ಪ್ರಕಾಶದ ಅವಶ್ಯಕತೆ ಇಲ್ಲ. ಅವೇ ಅವನಿಂದ ಬೆಳಗುತ್ತಿವೆ. ಗುಣಪೂರ್ಣನಾದ ಶ್ರೀನಾರಾಯಣನು ಬ್ರಹ್ಮಾದಿ ದೇವತೆಗಳು ಸುಜನೋದ್ಧಾರ ರಕ್ಷಣೆಗಳನ್ನೂ ದುರ್ಜನ ಶಿಕ್ಷಣವನ್ನೂ ಮಾಡೆಂದು ಪ್ರಾರ್ಥಿಸಿದಾಗ ಪೂರ್ಣವೇ ಆದ ರಾಮಾದಿ ರೂಪಗಳಿಂದ ಹೊರಬಂದು, ಭೂರಾದಿ ಲೋಕಗಳಲ್ಲಿ ಅವತರಿಸುವನು. ಪ್ರಳಯದಲ್ಲಿ ತನ್ನ ಸ್ವರೂಪಗಳನ್ನು ತನ್ನಲ್ಲೇ ಏಕೀಕರಿಸಿ—ಎಲ್ಲ ರೂಪಗಳಿಂದಲೂ ಯಾವಾಗಲೂ ಪೂರ್ಣನೇ ಆಗಿರುವನು. ಅವನ ಮೂಲರೂಪದಿಂದ ಅವತಾರ ರೂಪಗಳಿಗೆ ಭೇದವಿಲ್ಲ; ಸೂಕ್ಷ್ಮಸೃಷ್ಟಿಯನ್ನು ಮಾಡಿ, ಶ್ರೀನಾರಾಯಣನು ಬಾಹ್ಯಾವರಣದ ಉದಕದಿಂದ ಬ್ರಹ್ಮಾಂಡದೊಳಗಿನ ಉದಕಗಳನ್ನು ಸೃಜಿಸಿದನು. ಅದರ ಅವಕಾಶದಲ್ಲಿ, ಎಲ್ಲೆಡೆಯೂ ಮೇಲೆ ಕೆಳಗೆ ವ್ಯಾಪಿಸಿರುವ ಉದಕಗಳನ್ನು ವಸ್ತ್ರಗಳಂತೆ ಧರಿಸಿರುವನು. ಶ್ರೀಭೂದೇವಿಯರು ಅವನನ್ನಾಶ್ರಯಿಸಿ ನಿಂತಿರುವರು. ಆ ಪರಮಾತ್ಮನೇ ಧಾರಕಳಾದ ಭೂದೇವಿಯನ್ನೂ, ಪ್ರಕಾಶಮಾನಳಾದ ಶ್ರೀದೇವಿಯನ್ನೂ ಧರಿಸಿ ಪೋಷಿಸುತ್ತಿರುವನು. ಆಮೇಲೆ ಮಹದಾದಿ ತತ್ವಗಳ ಸೃಷ್ಟಿಯಾಗುವುದು. ಆಗ ಪಂಚಭೂತಗಳು ಪುಟ್ಟುವವು. ಅವುಗಳಿಂದ ಪಂಚಭೂತಾತ್ಮಕವಾದ ಸ್ಥೂಲ ದೇಹವನ್ನು ಸೃಜಿಸಿ, ಶ್ರೀ ಮುಖ್ಯಪ್ರಾಣ ಶ್ರೀನಾರಾಯಣರೀರ್ವರು ಅಲ್ಲಿ ಹೃದಯಾಕಾಶದಲ್ಲಿ ನೆಲಸಿರುವರು. ಅಷ್ಟೇ ಅಲ್ಲದೆ ಅವರು ದಿಕ್ಕುವಿದಿಕ್ಕುಗಳಲ್ಲಿಯು ಮೇಲೆ ಕೆಳಗೂ ವ್ಯಾಪ್ತರಾಗಿ, ಪೃಥಿವೀ ದಿವಗಳನ್ನು ಧರಿಸಿ ಪೋಷಿಸುತ್ತಿರುವರು.

'ಶ್ರೀಭಗವಂತನನ್ನು ಸಾಕಲ್ಯೇನ ಯಾರೂ ತಿಳಿಯಲಾರರು. ಅವನು ಚಕ್ಷುರಾದಿ ಇಂದ್ರಿಯಗಳಿಗೆ ಸಿಗುವವನಲ್ಲ ಶಾಸ್ತ್ರಜ್ಞಾನವನ್ನು ಸಂಪಾದಿಸಿದ ಬುದ್ಧಿವಂತರು ತದೇಕನಿಷ್ಠವಾದ ಮನಸ್ಸಿನಿಂದ, ಅವನಾಗಿ ಪ್ರಸನ್ನನಾದಾಗ ಸ್ವಯೋಗ್ಯತಾನುಸಾರವಾಗಿ ಅವನನ್ನು ಕಂಡು, ತಿಳಿದು, ಮುಕ್ತರಾಗುವರು. ಭಗವಂತನ ದಿವ್ಯ ರೂಪಕ್ಕೆ ಸಮಾನವಿನ್ನೊಂದಿಲ್ಲ; ಅಂತೆಯೇ ಅವನನ್ನು ನಿರೂಪನೆಂಬರು. ಅವನು ದಿವ್ಯ ಮಂಗಳ ವಿಗ್ರಹನು.

'ಧ್ರುವಮಂಡಲದ ಸುತ್ತಲೂ, ಜ್ಯೋತಿಶ್ಚಕ್ರವನ್ನು ತಿರುಗಿಸುತ್ತಾ, ಸೂರ್ಯ-ರಥದಲ್ಲಿ ಧ್ವಜಸಹಿತನಾಗಿ ಕೂತು, ಲೋಕಯಾತ್ರೆಯನ್ನು ನಡೆಸುವ ದೇವ ದೇವ ನಾರಾಯಣನನ್ನು, ಏಳು ಛಂದಗಳೆಂಬ ಕುದುರೆಗಳು ಹೊತ್ತು ಅಂತರಿಕ್ಷದಲ್ಲಿ ಮಹಾ ವೇಗದಿಂದ ಹೋಗುತ್ತಿರುವವು. ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಮನಸ್ಸು, ಬುದ್ಧಿ ಎಂಬ ಹನ್ನೆರಡು ಇಂದ್ರಿಯಗಳ ಗುಂಪುಗಳನ್ನು ಕ್ರೀಡಾದಿಗುಣ ವಿಶಿಷ್ಟನಾದ ಶ್ರೀಶನು ಪ್ರೇರಿಸಿದಾಗ, ಅವು ವಿಷಯಗಳನ್ನು ಹೊಂದಲು ಶಕ್ತ

ವಾಗುತ್ತಿವೆ. ಸ್ವತಃ ವಿಷಯಗಮನಶೀಲವಾದ ಇಂದ್ರಿಯಗಳು ಆಪಾತಮನೋಹರ ವಾದ ವಿಷಯಗಳನ್ನು ಹೊಂದಲು ಧಾವಿಸುವುದೂ ಅವನ ಆಜ್ಞೆಯಿಂದಲೇ ಎಂದು ತಿಳಿ !'

'ಆ ಭಗವಂತನಿಂದ ಸಂತೋಷಕರವು, ಪಾಪಪರಿಹಾರಕವು ಆದ ಗಂಗಾ ಯಮುನಾದಿ ಹನ್ನೆರಡು ಪ್ರಕಾರಗಳಾದ ನದಿಗಳು, ಯಾವಾಗಲೂ ಸಮುದ್ರವನ್ನು ಸೇರಿ ಅಲ್ಲಿರುವ ಬಡಬಾಗ್ನಿಯಲ್ಲಿ ನಿಯಾಮಕನಾಗಿರುವ ಶ್ರೀನೃಸಿಂಹನ ಪಾದವನ್ನು ಸೇರಲು, ಧಾವಿಸುತ್ತಿರುವವು. ಸರ್ವಹರನಾದ ನೃಸಿಂಹನು ಪ್ರಳಯದಲ್ಲಿ ವಿಜೃಂಭಿಸಿ ಎಲ್ಲವನ್ನೂ ಬಡಬಾಗ್ನಿರೂಪನಾಗಿ ಸುಟ್ಟುಬಿಡುವನು.

'ಮಧುಪಾನಾಸಕ್ತವಾದ ಭ್ರಮರಗಳಂತೆ ಪ್ರಾಚ್ಯಾದಿ ದಿಕ್ಕುಗಳಲ್ಲಿರುವ ಆದಿತ್ಯರು, ರುದ್ರರು, ವಸುಗಳು, ಮರುತ್ತರು, ಸಾಧ್ಯರು ಎಂಬ ದೇವತೆಗಳು ತಮ್ಮ ಸುಕೃತ್ಯದಿಂದ ಕೂಡಿಟ್ಟ ಪುಣ್ಯದಿಂದ ಪ್ರಸನ್ನನಾದ ಭಗವಂತನು ಕೊಟ್ಟ ದಿವ್ಯದರ್ಶನ ದಿಂದ ಆನಂದಚಕಿತರಾಗಿ, ಆ ಆನಂದಮಧುವನ್ನು ಅಂದರೆ ಸೂರ್ಯಾಂತರ್ಗತ ಪರಮಾತ್ಮನನ್ನು, ಪಾನಮಾಡಿ ಅಂದರೆ ಉಪಜೀವಿಸಿ ಸುಖದಿಂದಿರುವರು. ಸರ್ವ ಭೂತಗಳೂ ತಮ್ಮ ಸ್ವಾಮಿಯಾದ ಭಗವಂತನಿತ್ತ ಪ್ರಾಣಾಗ್ನಿಹೋತ್ರದಲ್ಲಿ, ಅನ್ನಾದಿಹವಿಸ್ಸನ್ನಿತ್ತು, ಅವನಿಂದ ಬದುಕಿರುವರು.

'ಶ್ವೇತದೀಪದಲ್ಲಿ ವಾಸುದೇವನಿರ್ಮಿತ ಅಮೃತವರ್ಷಣವಾದ ಅಶ್ವತ್ಥವಿದೆ. ಅಲ್ಲಿ ಊರ್ಧ್ವಲೋಕವನ್ನು ಸೇರಲು ಜ್ಞಾನವೆಂಬ ರೆಕ್ಕೆಗಳುಳ್ಳ ಪಕ್ಷಿಗಳೆಂಬ ಸುಜೀವರು ಸೇರುವರು. ಜ್ಞಾನರಹಿತರು ಶ್ರವಣಾದಿಗಳಿಂದ ಬಂದ ಅಪರೋಕ್ಷಜ್ಞಾನವನ್ನು ಪೊಂದಿ, ರೆಕ್ಕೆಗಳು ಬಂದಂತಾಗಿ, ಸುವರ್ಣವರ್ಣ (ಪರ್ಣ)ವಾದ ಅಶ್ವತ್ಥನನ್ನು ಸೇರಿ ಶ್ರೇಷ್ಠರೆನಿಸುವರು. (ಅವರಕಿಂತಲು ಶ್ರೇಷ್ಠರಾದವರು ತಮ್ಮವರಿಂದಲು ಕೂಡಿ ಪಕ್ಷಿಗಳಂತೆ ಹಾರಿಬಂದು, ಅಲ್ಲಿ ಬೇಕಾದೆಡೆ ಅಶ್ವತ್ಥನನ್ನು ಆಶ್ರಯಿಸಿ, ನಿಲ್ಲುವರು.) ಅಶ್ವತ್ಥನೆಂದರೆ ಶಶ್ವದೇಕಪ್ರಕಾರನಾದ ಶ್ರೀಹರಿಯು.

'ಪ್ರಳಯವಾಗಿ ಮೋಕ್ಷಕಾಲ ಬಂದಾಗ ದೇವತೆಗಳು ಸ್ವೋತ್ತಮರಲ್ಲಿ ಲಯ ವನ್ನು ಹೊಂದುವರು. ಲಯವೆಂದರೆ ಪ್ರವೇಶ ಮತ್ತು ಸಹಗತಿ. ಅಪಾನನನ್ನು ಪ್ರಾಣನು, ಅವಾಂತರ ಪ್ರಾಣವನ್ನು ಚಂದ್ರನು, ಚಂದ್ರನನ್ನು ಅನಿರುದ್ಧನು, ಅವನನ್ನು ಕಾಮನು ನುಂಗುವನು. ಕಾಮನು ವಾರುಣೀದೇವಿಯಲ್ಲಿ, ವಾರುಣಿಯು ಶೇಷನಲ್ಲಿ, ಶೇಷನು ಭಾರತಿಯಲ್ಲಿ, ಭಾರತಿಯು ಮುಖ್ಯಪ್ರಾಣನಲ್ಲಿಯು ಸೇರಿ, ಎಲ್ಲರೂ ಕೊನೆಗೆ ಶ್ರೀರಮಾನಾರಾಯಣನನ್ನು ಸೇರುವರು. ಶ್ರೀಶನು ಗರ್ಭೋದಕ ವನ್ನು ಎರಡಾಗಿಸಿ ತಾನು ಮೇಲಾಗಿ ತಿರುಗುತ್ತಾ, ಜೀವರನ್ನು ಕೆಳಗೆ ಇಟ್ಟಿರುವನು. ಅವರು ಅವನ ಭಿನ್ನಾಂಶರು ಮತ್ತು ಒಂದು ಪಾದವೆನಿಸುವರು. ಮಿಕ್ಕ ಮೂರು ಪಾದಗಳು ಸ್ವರೂಪಾಂಶಗಳು ಅವನ್ನು ಮೇಲಿಟ್ಟಿರುವನು. ಅವೇ ವೈಕುಂಠಾದಿ ಲೋಕತ್ರಯದಲ್ಲಿರುವವು. ಅವು ಅಮೃತಪಾದಗಳು.

'ಋತ್ವಿಗಾದಿನಿಯಾಮಕನಾದ ಶ್ರೀಶನು ಋತ್ವಿಜನೆನಿಸುವನು. ಜೀವ ನಿಯಾಮಕನಾಗಿ ಚತುರಷ್ಪಾದನಾಗಿರುವ ಭಗವಂತನನ್ನು ನಿರಂತರ ವೇದಾಂತಾದಿ ಸಚ್ಛಾಸ್ತ್ರಗಳ ಶ್ರವಣಾದಿಗಳನ್ನು ಮಾಡಿ, ಅಪರೋಕ್ಷಜ್ಞಾನವನ್ನು ಪಡೆದ ಶ್ರೀಹರಿ-ಭಕ್ತರಿಗೆ ಮೃತ್ಯುವಿಲ್ಲ; ಜನನಮರಣರೂಪ ಸಂಸಾರವಿಲ್ಲ. ಎಲ್ಲ ಜೀವರೂ ಎಂದಿಗೂ ಶ್ರೀಹರಿಗೆ ಸಮರಾಗಲಾರರು. ಅಂಗುಷ್ಠಮಾತ್ರನಾಗಿರುವ ಅಂತರ್ಯಾಮಿಯು ಪೂರ್ಣಷಡ್ಗುಣಭರಿತನು. ಅಂತೆಯೇ ಪ್ರತಿಕಲ್ಪದಿ ರಾಮಾದಿರೂಪ ಅವತಾರಗಳೂ ಪೂರ್ಣಷಡ್ಗುಣ ಭರಿತಗಳು. ನಿತ್ಯನು, ಅವಿನಾಶಿಯು, ಸ್ವಾಮಿಯು, ಸ್ತುತ್ಯನು ಆದ ಆದಿಪುರುಷನನ್ನು ಲಿಂಗದೇಹದ ಸಂಬಂಧದಿಂದ ಅಜ್ಞಾನಿಗಳಾಗಿರುವ ಜನರು ನೋಡ ಲಾರರು. ಒಳಗೇ ಸ್ವಶಕ್ತಿಯಿಂದ ನಿರ್ಲಿಪ್ತನಾದ ಶ್ರೀಶನ ಜ್ಞಾನವು ಮೂಢರಿಗೆ ದೊರೆಕದು. ಅಂತೆಯೇ ಅಜ್ಞಾನಿಜೀವರು ಸಂಸಾರದ ಸುಳಿಯಲ್ಲಿ ಬಿದ್ದು ತಿರುಗು ತ್ತಿರುವರು. ದುಃಖಹರಣ ಹರಿಸ್ಮರಣೆಯನ್ನು ಮಾಡದೆ, ವಿಷಯಗಳತ್ತ ತಿರುಗಾಡುವ ನರನು ನರನಲ್ಲ; ಅವನು ಕತ್ತೆ ಎಂದು ತಿಳಿ!'

'ಸರ್ಪಗಳು ಬಿಲದಿಂದ ಹೊರಬಂದು ಸ್ವಭಾವಸಹಜವಾದ ಕಚ್ಚುವ ವ್ಯಾಪಾರ ವನ್ನು ನಡೆಸಿ, ಮರ್ತ್ಯರನ್ನು ನಾಶಪಡಿಸಿ, ಮತ್ತೆ ಬಿಲಗಳನ್ನು ಸೇರಿ ಅಡಗಿರುವಂತೆ. ಇಂದ್ರಿಯಗಳು ಗೋಲಕಗಳಿಂದ ಹೊರಬಂದು, ಸ್ವಭಾವಸಿದ್ಧವಾದ ವಿಷಯಗಳನ್ನು ಅನುಭವಿಸುವ ವ್ಯಾಪಾರದಿಂದ, ಮರ್ತ್ಯರನ್ನು ಅವಿವೇಕಿಗಳನ್ನೂ ವೈಮರೆತವರನ್ನೂ ಮಾಡಿ, ಮತ್ತೆ ಗೋಲಕಗಳಲ್ಲಿ ಅವಿತುಕೊಂಡುವವು. ಜನರೂ ತತ್ವಜ್ಞಾನಶೂನ್ಯ ರಾಗಿ, ತಮ್ಮ ಇಂದ್ರಿಯಗಳಿಂದ ವಿಷಯಭೋಗಗಳನ್ನಿತ್ತು, ಇತರರನ್ನೂ ಮೋಹ ಪಡಿಸುವರು. ಇಂತು ವಿಷಯಾಸಕ್ತರಾದ ಜನರು, ವಿಷಸಕ್ತರಾದವರಂತೆ ಜ್ಞಾನ-ಹೀನರಾಗುವರು. ಭಗವಂತನು ನಿರ್ಗುಣನು, ನಿರಾಕಾರನು, ಜೀವಾಭಿನ್ನನೆಂದು ತಿಳಿದು ಕೆಡುವರು. ಜ್ಞಾನಿಗಳು ಬಿಲದಲ್ಲಡಗಿರುವ ಸರ್ಪದಂತೆ ಹೊರತೋರಗೊಡದೆ ಶಿರೋರತ್ನವನ್ನು ರಕ್ಷಿಸುವ ಸರ್ಪದಂತೆ ಅನಧಿಕಾರಿಗಳಿಗೆ ಉಪದೇಶಿಸದೆ, ಬ್ರಹ್ಮ-ಜ್ಞಾನವನ್ನು ರಕ್ಷಿಸಿ, ಶುಭಗತಿಯನ್ನೈದುವರು.

'ಮನುಜರಲ್ಲಿ ಮೋಕ್ಷಸಾಧನಸಹಿತರೂ ಮೋಕ್ಷಸಾಧನರಹಿತರೂ ಇರುವರು. ಅವರಲ್ಲಿರುವ ಪರಮಾತ್ಮನು ಸಮಾನನಾಗಿರುವನು. ಅಲ್ಲಿ ಹೆಚ್ಚಾಗಿಲ್ಲ, ಇಲ್ಲಿ ಕಡಿಮೆ ಯಾಗಿಲ್ಲ; ಆದರೆ ಅಧಿಷ್ಠಾನದ ಯೋಗ್ಯತೆಯಂತೆ ಅಭಿವ್ಯಕ್ತನಾಗಿರುವನು ಎಂದು ಯೋಗಿಗಳು ತಿಳಿದಿರುವರು. ಮೋಕ್ಷವನ್ನು ಕೊಡುವಲ್ಲಿಯು ಶ್ರೀಹರಿಯು ಅವರವರ ಯೋಗ್ಯತೆಯಂತೆ ಆನಂದಾದಿಗಳನ್ನು ವ್ಯಕ್ತೀಕರಿಸುವುದರಿಂದ ಸಮನೆನಿಸಿರುವನು. ಯೋಗ್ಯರಿಗೆ ಮೋಕ್ಷವನ್ನೀವ ಶ್ರೀಶನು ಅಯೋಗ್ಯರಿಗೂ ಕೊಟ್ಟರೆ ಸಮನೆನಿಸು ವನೇ! ನಿಷ್ಪಕ್ಷಪಾತಿಯಾಗಿರುವ ಮಧ್ವನುತನಾದ ಶ್ರೀಹರಿಯು ಯೋಗ್ಯರನ್ನೇ ತನ್ನ ಲೋಕದಲ್ಲಿ ಕರೆಸುವನು. ಅಯೋಗ್ಯರನ್ನೆಂದಿಗೂ ಆನಂದತೀರ್ಥರ ಪರಮಾನಂದ ಕರವಾದ ಶಾಸ್ತ್ರದಿಂದಲೇ ಸಿಗುವ ಮೋಕ್ಷಸಾಮ್ರಾಜ್ಯದಲ್ಲಿ ಸೇರಗೊಡನು. ಆನಂದದ

ಮುಖ್ಯಾಧಿಕಾರಿಗಳಾದ ಮಧ್ವಗುರುವರರ ಅನುಗ್ರಹ ಉಳ್ಳವರೇ ಶ್ರೀಹರಿಯ ಅನುಗ್ರಹಕ್ಕೂ ಪಾತ್ರರಾಗಿ ಮುಕ್ತರಾಗುವರು. ಶ್ರೀಹರಿಜ್ಞಾನವಿಲ್ಲದ ಅಗ್ನಿ ಹೋತ್ರಾದಿ ಕರ್ಮವೆಲ್ಲವು ವ್ಯರ್ಥವು. ಜ್ಞಾನದಿಂದಲೇ ಉಭಯಲೋಕ ಸುಖಗಳು ಮತ್ತು ಮುಕ್ತಿ. ರಾಜನ್! ಅಂತಹ ಬ್ರಹ್ಮಜ್ಞಾನವನ್ನು ಬಿಟ್ಟು ಅಲ್ಪನಾಗಬೇಡ! ಇಂದ್ರಾದಿಗಳನ್ನು ನಿರೂಪಿಸುವಂತೆ ತೋರುವ ವೇದದ ಆಪಾತಾರ್ಥವನ್ನು ಬಿಟ್ಟು, ಶ್ರೀನಾರಾಯಣ ಪ್ರತಿಪಾದಕವೆಂದು ತಿಳಿದು ಪರಮಮುಖ್ಯವೃತ್ತಿಯಿಂದ ಸರ್ವೋತ್ತಮ ಶ್ರೀಹರಿಯ ಜ್ಞಾನವನ್ನು ಪೊಂದಿದ ಧೀರರು ಅಪರೋಕ್ಷವನ್ನು ಪಡೆದು ಮುಕ್ತರಾಗುವರು.

'ನಿತ್ಯ ನಿರ್ದುಃಖ ನಿರತಿಶಯಾನಂದ ಜ್ಞಾನಾದಿಗುಣನು, ವ್ಯಾಪ್ತನು, ಅಂತರ್ನಿಯಾಮಕನು, ನಾಮಸ್ಮರಣಮಾತ್ರದಿಂದ ಸಕಲಪಾಪನಾಶಕನು, ಪೂರ್ಣ ಷಡ್ಗುಣನು ಆದ ಶ್ರೀಹರಿಯನ್ನು ಮುಖ್ಯಪ್ರಾಣಾದ್ಯಂಗ ದೇವತೆಗಳ ಸಹಿತವಾಗಿ ಪೂಜಿಸಿ ಸುಖಿಸುವ ಅಧಿಕಾರಿ ಜೀವನು ದುಃಖಾದ್ಯನರ್ಥವನ್ನು ಹೊಂದುವುದಿಲ್ಲ. ಅವನನ್ನು ಪರಮಾತ್ಮನು ಕೈಬಿಡದೆ ಕಾಪಾಡುವನು.

ಅನ್ನನಾಮಕನಾಗಿ, ಅನ್ನದಲ್ಲಿದ್ದು ಶ್ರೀಹರಿಯು ಮೂರ್ತಾಮೂರ್ತ ಜಗವನ್ನು ಅನ್ನದಿಂದ ಪೋಷಿಸುವನು. ಸಜ್ಜನರಿಗೂ ದುರ್ಜನರಿಗೂ ಅವನೇ ಅನ್ನದಾತನು; ಪೋಷಕನು; ಇಂತಹ ಸ್ವಾಮಿಯನ್ನು ತಿಳಿದು ಮೋಕ್ಷಮಾರ್ಗದ ಪಾಥೇಯವು ಶ್ರೀಹರಿಯಾಗಿರುವಾಗ ಭೌತಿಕಾನ್ನದಿಂದೇನೆಂದು ಅಲ್ಪಾಹಾರವನ್ನು ಸ್ವೀಕರಿಸಿ, ಅಮೃತಪ್ರಾಯವೆಂದು ಭಾವಿಸಿ, ಆಹಾರ ಚಿಂತೆಯನ್ನು ಬಿಟ್ಟ ಜ್ಞಾನಿಯನ್ನು ಮೃತ್ಯುವು ಪೀಡಿಸಲಾರದು. ಸತ್ಪಾತ್ರವು ಸಿಗದಿದ್ದರೆ, ಕೈಯಲಿ ಧನವಿಲ್ಲದಿರೆ ಕೊಡಲಾರೆ ನೆಂದು ಪೇಳುವ ಜ್ಞಾನಿಯೂ ಸಂಸಾರದಿಂದ ಮುಕ್ತನಾಗುವನು. ಇದ್ದಾಗ ಕೊಡು ವುದೂ ಉಚಿತವೇ ಸರಿ! ಹೃದಯಾಕಾಶದಲ್ಲಿ ಅಂತರಾತ್ಮನು ಅಂಗುಷ್ಠಪ್ರಮಾಣ ನಾಗಿರುವನು; ಹೃದಯದಲ್ಲಿದ್ದರೂ ಮೂಢರು ಅವನನ್ನು ತಿಳಿಯದಿರುವರು. ಆಲಸ್ಯ ಪ್ರಮಾದಗಳನ್ನು ಬಿಟ್ಟು, ಧ್ಯಾನಿಸುವ ಜ್ಞಾನವಂತನು ಸ್ವರೂಪಸುಖವನ್ನು ಹೊಂದು ವನು. ಶ್ರೀಹರಿಯೇ ಸೃಷ್ಟ್ಯಾದಿಸ್ವತಂತ್ರಕಾರಣನು. ಅವನಿಂದ ಮುಖ್ಯಪ್ರಾಣನು ಪುಟ್ಟಿ, ಪ್ರಳಯದಲ್ಲಿ ಅವನಲ್ಲೇ ಸೇರುವನು. ಅವನಿಂದಲೇ ಅಗ್ನಿ ಚಂದ್ರ ಅಹಂಕಾರಿಕ ಪ್ರಾಣಾದಿಗಳು ಪುಟ್ಟುವರು. ಸರ್ವಾಶ್ರಯನು, ನಿತ್ಯನು, ಸರ್ವಲೋಕನಿಯಾಮಕನು ಪುಣ್ಯಕೀರ್ತಿಯು ಆದ ನಾರಾಯಣನು ಸೃಷ್ಟಿಯಂತೆ ಪ್ರಳಯವನ್ನೂ ಕ್ರಮ-ವ್ಯುತ್ಕ್ರಮರೂಪವಾಗಿ ಮಾಡುವನು. ಅವನು ಸೂರ್ಯ ಚಂದ್ರರನ್ನು, ಭೂ ಸ್ವರ್ಗಾದಿ ಲೋಕಗಳನ್ನು, ದಿಕ್ಕುಗಳನ್ನು ಧರಿಸಿರುವನು. ಅವನಿಂದ ಪ್ರೇರಿತರಾಗಿ ದೇವತೆಗಳು ತಂತಮ್ಮ ಕಾರ್ಯಗಳನ್ನು ಮಾಡುತ್ತಿರುವರು. ಅವನಿಂದ ನದಿಗಳು ಹರಿಯುವವು. ಲಕ್ಷ ಯೋಜನ ವಿಸ್ತಾರಗಳಾದ ಸಮುದ್ರಗಳೂ ಅವನಿಂದಲೇ

ಆಜ್ಞಪ್ತವಾಗಿ ಭೂಮಿಯನ್ನು ಸುತ್ತಿ ಉಕ್ಕೇರದೆ ನಿಂತಿವೆ. ಅದರ ಅಲೆಗಳೂ ಅವನ ಉಸಿರ ಹೊಡೆತದಿಂದ ಏರಿ ಬೀಳುತ್ತಿವೆ.

ಒಂದು ಸಾವಿರ ಸಾವಿರ ರೆಕ್ಕೆಗಳಿಂದ ಹಾರಿ ಮನೋಜವದಿಂದ ಹೋದರೂ ಜಗತ್ಕಾರಣ ವಸ್ತುವಿನ ಕೊನೆಯನ್ನು ಮುಟ್ಟಲಾಗದು. ಲಕ್ಷಾನುಸಂಖ್ಯಾಕವಾದ ಭಾರತಾದಿ ಗ್ರಂಥಗಳನ್ನು ಚನ್ನಾಗಿ ಓದಿದರೂ, ಮನಸ್ಸಿನಿಂದ ಎಷ್ಟು ವಿಚಾರಿಸಿದರೂ ಭಗವಂತನನ್ನು ಸಂಪೂರ್ಣವಾಗಿ ಯಾರೂ ತಿಳಿಯಲಾರರು. ಸಾವಿರ ಮಾಸಗಳು ಸಾವಿರ ಪಕ್ಷಗಳ ಕಾಲ ಅಂದರೆ ೧೨೦ ವರ್ಷ ಕಾಲ ಚನ್ನಾಗಿ ದೃಢನಾಗಿ ಬದುಕಿದ್ದು, ವಿಚಾರಿಸಿದರೂ ಸಾಕಲ್ಯೇನ ತಿಳಿಯಲಾಗದ ಅಪ್ರಮೇಯ ಮಹಿಮನನ್ನು ಚನ್ನಾಗಿ ಬೆಳೆದ ಸತ್ವಗುಣದಿಂದ ನಿಷ್ಕಲ್ಮಷರಾದವರು ಶಾಸ್ತ್ರಾರ್ಥಜ್ಞಾನಪೂತವಾದ ಮನ ದಿಂದ ಯಥಾಯೋಗ್ಯವಾಗಿ ತಿಳಿದು, ಮುಕ್ತರಾಗುವರು. ಶ್ರೀಹರಿಯು ಸರ್ವ ಭೂತಾಂತರ್ಯಾಮಿಯು. ಭೂತಗಳು ಅವನಲ್ಲಿ ಆರಾಧಿಸಿ, ಉಪಜೀವಿಸಿ ನಿಂತಿವೆ— ಎಂದು ತಿಳಿದವನು ಸಂಸಾರ ದುಃಖದಿಂದ ದೂರನಾಗುವನು.

ಮನುಜನಿಗೆ ಬಾವಿಯಿಂದಾಗುವ ಸ್ನಾನ ಪಾನಾದಿ ಪ್ರಯೋಜನವು ದೊಡ್ಡ ಜಲಾಕರದಲ್ಲಿ ಆಗದಿರುವುದೇ? ಅಂತೆಯೇ ಕಾಮ್ಯದಿಂದ ಆಗುವ ಸ್ವರ್ಗಾದಿಫಲದ ಕಿಂತಲೂ ಹೆಚ್ಚಾದ ಮೋಕ್ಷಫಲವು ಸ್ವರ್ಗನಿಯಾಮಕನಾದ ಬ್ರಹ್ಮ(ಶ್ರೀಶ) ನನ್ನು ತಿಳಿದವನಿಗೆ ಸಿಗುವುದು.

ಈಗ ಭಗವಂತನು ಜೀವರಿಗೆ ಅವರ ಉದ್ಧಾರಕ್ಕೆಂದು ಹೇಳಿದ ಮಾತನ್ನು ಅನುವದಿಸುವೆನು ಕೇಳು !—

'ಶ್ರೀರಮಣನು ಮುಖ್ಯಪ್ರಾಣಾಂತರ್ಗತನು ಆದ ನಾನೇ ಎಲ್ಲ ಜೀವರ ತಾಯಿ, ತಂದೆ, ಮಗ, ಗುರುವಾಗಿರುವೆನು. ಇರುವ ಬರುವ ಎಲ್ಲಾ ಜಗದ ಜೀವರ ಸ್ವಾಮಿಯು ನಾನೇ. ಜ್ಞಾನರತ ಜೀವರೇ! ಕೇಳಿ! ನೀವೆಲ್ಲ ನನ್ನಲ್ಲಿ ಆಧಾರ ಮಾಡಿ ನಿಂತಿರುವಿರಿ. ನೀವು ನಾನಲ್ಲ. ನಾನು ನಿಮ್ಮಲ್ಲಿ ಅಧೀನನಾಗಿಲ್ಲ. ನನಗೆ ಪ್ರಾಕೃತ ಸಂಬಂಧವಿಲ್ಲ; ಕರ್ಮಲೇಪವಿಲ್ಲ. ನಾನು ನಿರಪೇಕ್ಷನು. ಸ್ವರಮಣನು. ನನ್ನ ಮಹಿಮೆಯಲ್ಲಿ ನಾನಿರುವೆನು. ನನ್ನಿಂದ ನಾನು ಪ್ರಾದುರ್ಭವಿಸುವೆನು. ನನಗೆ ನಿಯಾಮಕರು ಬೇರಿಲ್ಲ. ನಾನು ಜರಾಮರಣ ರಹಿತನು. ವೈಕುಂಠಾದಿಗಳು ನನ್ನ ಶಾಶ್ವತ ಧಾಮಗಳು. ಅಣುವಿಗೂ ಅಣುತರನೂ, ಚಿದಾನಂದ ರೂಪನೂ, ಸ್ವರೂಪ ಚಿದಾನಂದ ಮಾನಸನೂ, ಹೃದಯಕಮಲ ನಿವಾಸನೂ ಆದ ಶ್ರೀನಿವಾಸನೆಂದು ಯೋಗಿಗಳು ತಿಳಿದು, ಪರಮಾನಂದ ಭಾಜನರಾಗುವರು.

ಇಂತು ಸನತ್ಸುಜಾತ ಮುನಿವರನು ಧೃತರಾಷ್ಟ್ರನಿಗೆ ನಿರೂಪಿಸಿದನು.

ಶ್ರೀಸನತ್ಸುಜಾತೀಯವು ಸಂಪೂರ್ಣವಾದುದು.

॥ ಶ್ರೀಮಧ್ವೇಶಾರ್ಪಣಮಸ್ತು ॥

ಶ್ರೀಶ ದಯದಿಂದ, ಶ್ರೀಮಧ್ವವಾದಿರಾಜ ರಾಘವೇಂದ್ರಾದಿಗುರುಗಳು
ನುಡಿಸಿದಂತೆ ನುಡಿಯುತಲಿ, ಶ್ರೀಸನತ್ಸುಜಾತೀಯ ಬರೆದ
ಪುಣ್ಯಗುರುಚರಣಾಂಬುಜಕರ್ಪಿಸುವೆನು.

ಅಸ್ಮದ್ಗುರುವರಾಂತರ್ಗತ ಶ್ರೀಗುರುರಾಜಾಂತರ್ಗತ
ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀವೇಂಕಟೇಶ
|| ಶ್ರೀಚರಣಾರವಿಂದಾರ್ಪಿತಮಸ್ತು ||

## ಸಂಜಯ ವಚನ—ಧೃತರಾಷ್ಟ್ರ ಚಿಂತನ

ಶ್ರೀ ವೈಶಂಪಾಯನನು ಜನಮೇಜಯನಿಗೆ ಪ್ರಾಸಂಗಿಕವಾಗಿ ಸನತ್ಸುಜಾತೀಯ ವೆಂಬ ಪವಿತ್ರವಾದ ಪ್ರಮೇಯವನ್ನು ತಿಳಿಸಿ, ಮತ್ತೆ ಮುಂದಿನ ಕಥೆಯನ್ನು ಹೇಳ ತೊಡಗಿದನು—

'ರಾಜನ್ ! ಇಂತು ನಿರೂಪಿಸಿ, ಶ್ರೀಸನತ್ಕುಮಾರನು ಅಂತರ್ಹಿತನಾದನು. ಬೆಳಗೂ ಆಯಿತು. ಸೂತನು ತಂದ ವಾರ್ತೆಯನ್ನು ಕೇಳುವ ಕುತೂಹಲದಿಂದ ಧೃತರಾಷ್ಟ್ರ ಮುಂತಾದ ಕೌರವರು ಅಲಂಕೃತವಾಗಿದ್ದ ಸಭೆಯನ್ನು ಸೇರಿ, ಸುಖಾಸೀನ ರಾದರು. ಭೀಷ್ಮ-ದ್ರೋಣ-ಕೃಪರು, ಕೃತವರ್ಮ-ಶಲ್ಯರು, ಅಶ್ವತ್ಥಾಮ-ಸೋಮ ದತ್ತ-ಬಾಹ್ಲೀಕ ವಿದುರರು, ಯುಯುತ್ಸು ಧೃತರಾಷ್ಟ್ರನ ಸುತ್ತುವರಿಸಿ ಕೂತರು. ದುಶ್ಶಾಸನ, ವಿಕರ್ಣ, ಶಕುನಿ, ಕರ್ಣ, ಚಿತ್ರಸೇನ, ದುಃಸಹ, ದುರ್ಮುಖ, ಉಲೂಕ, ವಿವಿಂಶತಿ ಮೊದಲಾದ ವೀರರು ದುರ್ಯೋಧನನ ಸಮೀಪದಿ ಕುಳಿತರು. ಆಗ ಸಂಜಯನು ಸಿಂಹಗಳಿದ್ದ ಕಂದರದಂತೆ ಶೋಭಿಸುವ ಸಭೆಯನ್ನು ಪ್ರವೇಶಿಸಿ, ರಾಜನಿಗೆ ನಮಿಸಿ, ಪಾಂಡವರ ಸಂದೇಶವನ್ನು ಧೃತರಾಷ್ಟ್ರನಿಗೆ ತಿಳಿಸುತ್ತಿತ್ತೆಂದನು—

'ಮಹಾರಾಜ ! ಶ್ರೀಕೃಷ್ಣ, ಭೀಮಸೇನ, ಧರ್ಮರಾಜರು ಕೇಳುತ್ತಿರಲು, ಅವರ ಸಮ್ಮತಿಯಿಂದ ಅರ್ಜುನನಾಡಿದ ಮಾತನ್ನು ಕೇಳು ! ದುರ್ಯೋಧನನಿಗೂ ತಿಳಿಸೆಂದು ಆ ವೀರನಿಂತೆಂದನು—

'ಸೂತ ! ದುರ್ಯೋಧನನಿಗೂ, ನನ್ನೊಡನೆ ಕಾದಾಡಲು ತವಕಿಸುವ ಮೂಢ ಕರ್ಣನಿಗೂ ನನ್ನ ಮಾತನ್ನು ತಿಳಿಸು ! ನಮ್ಮೊಡನೆ ಕಾದಲು ಕೂಡಿ ಕೌರವರಾಜನ ಬೆಂಬಲಿಗರಾಗಿರುವ ರಾಜರೂ ಕೇಳಲಿ ! ಧರ್ಮರಾಜನಿಗೆ ನ್ಯಾಯವಾಗಿ ಸಂದ ಬೇಕಾದ ರಾಜ್ಯವನ್ನು ಕೊಡದಿದ್ದರೆ, ದುರ್ಯೋಧನನು ಉಣ್ಣಬೇಕಾಗಿರುವ ಪಾಪ ಫಲವು ದೊಡ್ಡದಾಗಿದೆ. ಶ್ರೀಕೃಷ್ಣಾನುಚರರಾದ ಭೀಮಾರ್ಜುನರು, ಧರ್ಮ, ಯಮಳರು, ಸಾತ್ಯಕಿ ಧೃಷ್ಟದ್ಯುಮ್ನರು ಕೂಡಿ ಮುತ್ತಿದಾಗ ಕೌರವ ಸೈನ್ಯವು ಉಳಿಯಲಾರದು. ಧರ್ಮರಾಜನು ಪರಮಶಾಂತನಾದರೂ, ಅವಮಾನಿತನಾಗಿ ಮುನಿ ದರೆ, ಭೂ-ಸ್ವರ್ಗಗಳೆರಡನ್ನೂ ನಾಶಮಾಡಬಲ್ಲನು. ದುರ್ಯೋಧನನು ರಾಜ್ಯವನ್ನು

ಕೊಡದೆ ಯುದ್ಧಕ್ಕೆ ನಿಲ್ಲುವುದೇ ನಮಗೆ ಮೇಲು. ರಾಜ್ಯವನ್ನಿತ್ತರೆ ಅರ್ಧರಾಜ್ಯ; ಯುದ್ಧವನ್ನಿತ್ತರೆ ಪೂರ್ಣರಾಜ್ಯವೇ ನಮ್ಮದಾಗುವುದು. ಯುದ್ಧದಲ್ಲಿ ಸೋಲು ನಿಶ್ಚಯವೆಂದು ತಿಳಿದು, ಬದುಕಬೇಕೆಂದಿದ್ದರೆ ಯುದ್ಧವನ್ನೂ ಬಿಟ್ಟು ದುರ್ಮಾರ್ಗನು ವನವನ್ನು ಸೇರಲಿ! ಅನ್ಯಾಯಕಾರಿಯಾದ ದುರ್ಯೋಧನನಿಗೆ ರಾಜ್ಯವೆಲ್ಲ ಬಿಟ್ಟು, ವನದಲ್ಲಿರಲು ನಮಗೆ ಸಂದೇಶವನ್ನು ತಂದಿರುವಿಯಲ್ಲವೇ? ಸಂಜಯ! ಜ್ಞಾನ ತಪೋ ದಮ ಶೌರ್ಯ ಧರ್ಮಗಳಿಂದ ವಿರಾಜಿಸುವ ಧರ್ಮರಾಜನಿಗೆ ರಾಜ್ಯವಾಗಲಿ! ಪ್ರಜರು ಅವನಲ್ಲಿ ಅನುರಕ್ತವಾಗುವಂತೆ ನುಡಿ! ದುರ್ಯೋಧನನ ಪಕ್ಷ ವಹಿಸಿ, ಸತ್ಯವಂತನು, ಧರ್ಮಪರನು, ಇಷ್ಟುದಿನ ವನವಾಸಾದಿ ಕ್ಲೇಶವನ್ನು ಸಹಿಸಿದವನು ಆದ ಧರ್ಮಜನಿಗೆ ದ್ರೋಹವನ್ನು ಬಗೆಯುವುದುಚಿತವಲ್ಲ. ಇಷ್ಟುಕಾಲವಡಗಿಟ್ಟ ಕ್ರೋಧಾಗ್ನಿಯನ್ನು ಹೊತ್ತಿಸಿ ಮುತ್ತುವ ಧರ್ಮರಾಜನನ್ನು ನೋಡಿ, ದುರ್ಯೋಧನನು ಪಶ್ಚಾತ್ತಾಪ ಪಡುವಂತಾದೀತು! ಯುಧಿಷ್ಠಿರಕ್ರೋಧವೆಂಬ ಅಗ್ನಿಯು ಕುರುಸೈನ್ಯತೃಣವನ್ನು ಸುಡದೆ ಬಿಡದು.

ಕಾಂಚನ ರಥದಲ್ಲಿ ಗದಾಪಾಣಿಯಾಗಿ ಕೂತು ವಿಷವನ್ನು ಕಾರುತ್ತಾ ಸನ್ನದ್ಧನಾಗಿ ಬರುವ ಭೀಮಸೇನನನ್ನು ಕಣ್ಣೆತ್ತಿ ನೋಡಿ ಬದುಕುವರುಂಟೇ? ಕಾಣಿಸಿದ ಆ ಪುರುಷರನ್ನು ಕಾಲನ ಮನೆಗಟ್ಟದೆ ವೃಕೋದರನು ಬಿಡುವವನಲ್ಲ. ಮದ್ದಾನೆಯ ಕುಂಭಗಳನ್ನೊಡೆದು, ಸಿಂಹದಂತೆ ನುಗ್ಗಿ, ಕುರಿಗಳಂತೋಡುವ ಧಾರ್ತರಾಷ್ಟ್ರರನ್ನು ಗದೆಯಿಂದ ಕೊಂದು, ರಥಿಕ ಪದಾತಿ ತುರಗ ವಾಹರನ್ನು ನುಚ್ಚುನೂರಾಗಿಸುವ ಭೀಮಸೇನನಿಗೆದುರಿಲ್ಲ. ಅವನಿಗೆದುರಾದ ಭದ್ರಗಜಗಳನ್ನೆತ್ತಿ ಬಿಸುಟೆ, ಪರಶುವಿನಿಂದ ವನವನ್ನಂತೆ, ಸೈನಿಕರನ್ನು ಚಂಡಾಡಿ, ಹುಲ್ಲಿನ ಗುಡಿಸಲನ್ನು ಅಗ್ನಿಯಂತೆ, ಪಕ್ವಸಸ್ಯಗಳನ್ನು ಸಿಡಿಲಂತೆ ಸುಡುತ್ತಾ ವೀರವಿಹಾರಗೈವ ವೃಕೋದರನನ್ನು ನೋಡಿ ರಣರಂಗದಿಂದ ಕಾಲ್ತೆಗೆಯದವರಿಲ್ಲ.

ಎರಡು ಕೈಗಳಿಂದ ಬಾಣವರ್ಷವನ್ನು ಬಿಡುತ್ತಾ, ರಥಿಕರ ತಲೆಗಳನ್ನು ಕೆಡಹಿ ರಾಶಿಹಾಕುವ ನಕುಲನು ಧರ್ಮರಾಜನ ಸಹಾಯಕರಾದ ವೀರರಾಜರಿಂದ ಕೂಡಿ, ವನವಾಸದ ಸೇಡನ್ನು ತೀರಿಸುವಾಗ ದುರ್ಯೋಧನನು ಅನುತಾಪ ಪಡುವಂತಾಗುವುದು. ಪಂಚದ್ರೌಪದೇಯರು, ಸಹದೇವ, ಅಭಿಮನ್ಯು, ವಿರಾಟದ್ರುಪದರು, ಶಂಖ ಶಿಖಂಡಿಯರು ಮೊದಲಾದ ಅತಿರಥ ಮಹಾರಥರು ಯುದ್ಧರಂಗದಿ ನಿರ್ಭಯರಾಗಿ ಚರಿಸಿ, ಶತ್ರುಶಿರಗಳನ್ನು ರಾಶಿ ಮಾಡಿ, ಮೇಘದಂತೆ ಬಾಣವರ್ಷವನ್ನು ಸುರಿಸುತ್ತಾ ಮಿಂಚಿನಂತೆ ಬೆಳಗುತ್ತಾ, ಸಿಡಿಲಂತೆ ಬಡಿಯುತ್ತಾ, ಅಗ್ನಿಯಂತೆ ಉರಿಯುತ್ತಾ ಬರುವಾಗ ನೋಡಿ, ದುರ್ಯೋಧನನು ಬಾಯಿಬಿಟ್ಟು ಅಳಬೇಕಾದೀತು! ಅಗ್ನಿಯಂತೆ ಉರಿಯುತ್ತಾ, ಗರುಡನಂತೆ ಹಾರುತ್ತಾ ಬರುವ ಧೃಷ್ಟದ್ಯುಮ್ನ ಸಾತ್ಯಕಿಯರು ನಮ್ಮ ಸೇನಾನಾಯಕರಾಗಿರುವಾಗ ದುರ್ಯೋಧನನಿಗೆ ರಾಜ್ಯದಾಶೆ ಇನ್ನೇಕೆ? ದ್ರೋಣ-ಶಿಷ್ಯನಾಗಿ, ದ್ರೋಣಾಚಾರ್ಯನನ್ನು ಕೊಲ್ಲಲು ಹುಟ್ಟಿರುವ ಧೃಷ್ಟದ್ಯುಮ್ನನನ್ನು

ನೋಡಿ, ಕೌರವ ಸೈನಿಕರು ಎದೆ ಒಡೆದು ದಿಕ್ಕೆಟ್ಟು ಓಡುವರು. ಮಹಾತ್ಮನಾದ ಸಾತ್ಯಕಿಯು ನನ್ನೀ ಶಿಷ್ಯನೂ, ಸಖನೂ ಆಗಿರುವನು. ಅವನು ಶ್ರೀಕೃಷ್ಣನಂತೆ ಅಸ್ತ್ರವಿದ್ಯಾಚತುರನೆನಿಸಿರುವನು. ಇನ್ನು ಮಾಧವನು ಸಾರಥಿಯಾಗಿರಲು ಶ್ವೇತ-ವಾಹನನಾಗಿ, ಕಪಿಧ್ವಜನಾಗಿ, ಗಾಂಡೀವವನ್ನು ಪಿಡಿದು, ಬಾಣವರ್ಷವನ್ನು ಕಾರುತ್ತಾ ಗಜ ಗುರಗ ಭಟರನ್ನೂ ನಾಶಮಾಡುವ ನನ್ನನ್ನು ನೋಡಿ ದುರ್ಯೋಧನನು ವಿಜಯಾಶೆಯನ್ನು ಬಿಟ್ಟು, 'ಯುದ್ಧವನ್ನೇಕೆ ಹೂಡಿದನೆ'ಂದು ಅನುತಾಪ ಪಡುವಂತಾಗುವುದು. ಅವನ ವೀರರ ಬಾಣಗಳನ್ನು ತುಂಡರಿಸಿ, ಅವರ ತಲೆಗಳನ್ನು ಒಟ್ಟುಗೂಡಿಸಿ. ಗಜ ತುರಗಗಳ ಮೇಲಿದ್ದ ವೀರರನ್ನು ಕೆಳಗುರುಳಿಸಿ, ಹತಶೇಷರನ್ನು ಓಡಿಸಿ, ದೇವದತ್ತವನ್ನೂದುವ ಶಬ್ದವನ್ನು ಕೇಳಿ, ದುರ್ಯೋಧನನು ಪಶ್ಚಾತ್ತಾಪ ಪಡಬೇಕಾದೀತು! ಅಗ್ನಿಗೆ ಸಿಕ್ಕ ಹುಲ್ಲಿನ ಕಂತೆಗಳಂತೆ ಸುತರು ಭೀಮಸೇನನಿಗೆ ಸಿಕ್ಕು ನಾಶವಾದಾಗ ಧೃತರಾಷ್ಟ್ರನು ಅನುತಾಪಪಡಬೇಕಾದೀತು!

ಒಂದು ದಿನ ಸಂಧ್ಯಾವಂದನ ಮಾಡಿ ನಾನು ನಿಂತಿರಲು, ಮಹಾತ್ಮನಾದ ವಿಪ್ರನು ಬಂದನು. ಅವನಿಗೆ ನಾನು ವಂದಿಸಿ, ಸತ್ಕರಿಸಿದೆನು. ಆಗ ಬ್ರಾಹ್ಮಣನು 'ಪಾರ್ಥ! ನಿನ್ನಿಂದ ಒಂದು ಮಹತ್ಕಾರ್ಯ ನಡೆಯುವುದು. ಶತ್ರುಗಳಿಂದ ಯುದ್ಧ ವಾದಾಗ ನಿನಗೆ ಜಯವಾಗುವುದು. ರುದ್ರೇಂದ್ರರು ನಿನಗೆ ರಕ್ಷಕರಾಗಿ ಮುಂದೆ ಹೋಗುತ್ತಾ, ನಿನ್ನ ಶತ್ರುಗಳನ್ನು ಸಂಪರಿಸುವರು. ಅದೃಶ್ಯರಾಗಿ ದಿವ್ಯರಥಗಳಲ್ಲಿ ಕೂತು ಅವರು ನಿನಗೆ ಜಯವನ್ನೀಯಲಿ! ಅವರ ಹಿಂದೆ ನಿನ್ನ ರಥದಲ್ಲಿ ಶ್ರೀಕೃಷ್ಣ ನಿದ್ದು, ಮೇಲೆ ಧ್ವಜದಲ್ಲಿ ಮುಖ್ಯಪ್ರಾಣನಿದ್ದು ನಿನಗೆ ರಕ್ಷಕರಾಗಲಿ!' ಎಂದು ಆಶೀರ್ವದಿಸಿದನು. ಕಳ್ಳರಂತೆ ನಮ್ಮ ರಾಜ್ಯವನ್ನು ನಮಗೆ ಕೊಡದಿರುವ ಕೌರವ ರನ್ನು ಕೊಲ್ಲುವಲ್ಲಿ ಶ್ರೀವಾಸುದೇವನೇ ನನಗೆ ಸಹಾಯನಾಗಿರುವನು; ಇದು ಶ್ರೀಶನ ದಯೆ! ಸುಮ್ಮನಿದ್ದರೇನು? ಮನಸಾ ನಮ್ಮನ್ನು ಆಶೀರ್ವದಿಸುವ ಶ್ರೀಕೃಷ್ಣನ ಅನುಗ್ರಹದಿಂದ ನಾವು ದೇವತೆಗಳನ್ನು ಗೆಲ್ಲಬಲ್ಲೆವು. ಇನ್ನು ಮನುಜ ದೈತ್ಯರ ಪಾಡೇನು? ಕೃಷ್ಣನನ್ನು ವಿರೋಧಿಸಿ, ಜಯಿಸುವುದೆಂದರೆ ಸಾಗರವನ್ನು ಕೈಲಿ ಈಜಹೋದಂತೆ; ಬೆಟ್ಟವನ್ನು ಕೈಯಿಂದ ಗುದ್ದಿದಂತೆ. ಅವನ ವಿರೋಧಿಗಳು ಸಮೂಲವಾಗಿ ನಾಶವಾಗುವರು. ಅಗ್ನಿಯನ್ನು ತಿಕ್ಕಿ ಆರಿಸುವಂತೆ, ಚಂದ್ರಸೂರ್ಯರ ಗಮನವನ್ನು ನಿಲ್ಲಿಸುವಂತೆ, ಅಮೃತವನ್ನು ಹರಿಸಿಹೋದಂತೆ, ಶ್ರೀಕೃಷ್ಣನನ್ನು ಗೆಲ್ಲಲು ಇಚ್ಛಿಸುವುದು. ರಾಜರನ್ನು ತಿರಸ್ಕರಿಸಿ ರುಕ್ಮಿಣೀ ದೇವಿಯನ್ನು ತಂದನು; ಎತ್ತುಗಳನ್ನು ಕಟ್ಟಿ ನೀಲಾದೇವಿಯನ್ನು ವರಿಸಿದನು; ಶ್ರೀಕೃಷ್ಣನು ಪಾಂಡ್ಯಕಳಿಂಗ ರನ್ನು ಕೊಂದನು; ಕಾಶಿಯನ್ನು ಸುಟ್ಟು ಮಹಾಶ್ಮಶಾನವೆನಿಸಿದನು; ಮಣಿಮಂತನ ಅಂಶದಿಂದ ಪುಟ್ಟಿದ ಏಕಲವ್ಯನೆಂಬ ದುರ್ಮಾರ್ಗನನ್ನು ಸಂಹರಿಸಿದನು; ಕಂಸನನ್ನು ಕೊಂದು, ಉಗ್ರಸೇನನಿಗೆ ರಾಜ್ಯವನ್ನಿತ್ತನು. ಮಾಯಾಚತುರನಾದ ಶಾಲ್ವನನ್ನು ಕೊಂದು ಅವನಿಗೆ ರುದ್ರನಿತ್ತ ಸೌಭವಿಮಾನವನ್ನು ಕೆಡಹಿದನು. ಅದಿತಿದೇವಿಯ

ಕುಂಡಲಗಳನ್ನು ಕದ್ದ ನರಕನನ್ನು ನಾಶಮಾಡಿ, ಸೆರೆಯಲ್ಲಿದ್ದ ಸುಂದರೀಸಹಸ್ರಷೋಡಶ ವನ್ನು ಸ್ವೀಕರಿಸಿದನು. ದೇವತೆಗಳು ಬ್ರಹ್ಮರುದ್ರೇಂದ್ರಾದಿಗಳು ಕೂಡಿ ಪ್ರಾರ್ಥಿಸಲು, ದೈತ್ಯರನ್ನು ಕೊಂದು ಧರ್ಮವನ್ನು ಸ್ಥಾಪಿಸಲು ಅವತರಿಸುವ ನಾರಾಯಣನೇ ಶ್ರೀಕೃಷ್ಣನು. ಅವನಿದ್ದೆಡೆ ಜಯ; ಅವನಿದ್ದೆಡೆ ಕಾರ್ಯಸಿದ್ಧಿ; ಅವನಿಂದ ಐಶ್ವರ್ಯ; ಅವನಿಂದ ಬಲ; ಮುರವೈರಿಗೆದುರಿಲ್ಲ. ಅವನ ಕಾರ್ಯವನ್ನು ಮೆಚ್ಚಿ ದೇವತೆಗಳು 'ಸರ್ವತ್ರ ನಿನಗೆ ಆತಂಕವಿಲ್ಲದಿರಲಿ! ನರಕ ಮುರರನ್ನು ಕೊಂದು ಉಪಕಾರಮಾಡಿದ ನಿನಗೆ ಶ್ರಮ ದುಃಖಗಳು ಇಲ್ಲದಿರಲಿ! ಶಸ್ತ್ರಗಳಿಂದ ನಿನಗೆ ಗಾಯವಾಗದಿರಲಿ' ಎಂದು ವರವಿತ್ತರು. ನಿತ್ಯವೂ ಸ್ವತಃ ಕೃತಾರ್ಥನಾದ ಶ್ರೀಕೃಷ್ಣನು, ಅವರ ವರ ದಿಂದ ಕೃತಾರ್ಥನಾದಂತೆ ತೋರಿಸಿ, ದೇವತೆಗಳನ್ನು ಅನುಗ್ರಹಿಸಿದನು. ಇಂತಹ ಅಸಹ್ಯಾನಂತ ವೀರ್ಯನಾದ ಕೃಷ್ಣನನ್ನು ಗೆಲ್ಲುವೆನೆಂಬ ದುರ್ಯೋಧನನಕಿಂತಲು ದುಷ್ಟರುಂಟೆ? ಶ್ರೀಕೃಷ್ಣನು ನಮ್ಮ ಕಡೆ ನೋಡಿ, ಇಷ್ಟುದಿನ ಅವನನ್ನು ಸಹಿಸಿರು ವನು. ಪಾಂಡವ ಕೃಷ್ಣರಿಗೆ ಮಿತ್ರಭೇದವನ್ನು ಮಾಡಲೆಣಿಸುವ ಪಾಪಿಯು ಕುರು ಕ್ಷೇತ್ರದಲ್ಲಿ ಬರಲಿ! ಆಗ ನೋಡಲಿ ಶ್ರೀಶನಿಗೆ ನಮ್ಮಲ್ಲಿರುವ ವಾತ್ಸಲ್ಯವನ್ನು!

'ಸಂಜಯ! ಪಿತಾಮಹನಿಗೆ, ಆಚಾರ್ಯನಿಗೆ, ಆಚಾರ್ಯಪುತ್ರನಿಗೆ, ಕೃಪನಿಗೆ ನಮ್ಮ ಪರವಾಗಿ ನಮಸ್ಕರಿಸು! ನಮ್ಮ ರಾಜ್ಯಕ್ಕಾಗಿ ನಾವು ಕಾದಿದರೆ ಅದು ಅಧರ್ಮವಲ್ಲ. ಅದನ್ನು ಕೊಡೆನೆಂಬ ದುರ್ಯೋಧನನು ಅಧರ್ಮಿಯು. ಮಾಯಾ ದ್ಯೂತವಾಡಿ, ವನಕ್ಕಟ್ಟಿ, ಹೆಸರಿಲ್ಲದೆ ಒಂದು ವರುಷವಿರುವಂತೆ ಮಾಡಿದುದಲ್ಲದೆ, ನಿರ್ವಹಿಸಿ ಬಂದ ಪಾಂಡವರಿಗೆ ಅವರ ರಾಜ್ಯವನ್ನು ಕೊಡದಿರುವ ತುಡುಗನನ್ನು ಕಡಿದು ಕೆಡಹುವೆವು. ಬಿಡುವುದಿಲ್ಲ. ಅವರೇ ನಮ್ಮನ್ನು ಜಯಿಸಿ ಕೊಂದರೆ ಇನ್ನು ಧರ್ಮವು ನಿಷ್ಫಲವೆನಿಸಿ, ಅಧರ್ಮವೇ ಪ್ರಬಲವಾದೀತು! ನಾವು ಧರ್ಮಿಷ್ಠರು. ಮಾಯದ ಜೂಜಿನಲ್ಲಿ ಸೋತಿರುವೆವು. ಆದರೆ ಈಗ ನಡೆಯುವುದು ಧರ್ಮಯುದ್ಧ. ನಮಗೆ ಸಹಾಯವಾಗಿರುವವನು ಶ್ರೀವಾಸುದೇವ! ನಮಗೇ ಜಯವೆಂದು ತಿಳಿ! ಆಗ ಜೂಜಿನಲ್ಲಿ ಗೆದ್ದು, ನಮ್ಮನ್ನೋಡಿಸಿ, ಈಗ ರಾಜ್ಯವನ್ನು ಕೊಡದ ಪಾಪಿಗಳು ತಪ್ಪದೇ ತಮ್ಮ ದುಷ್ಕರ್ಮದ ಫಲವನ್ನು ಉಣ್ಣುವ ಕಾಲ ಬಂದಿದೆ. ಯುದ್ಧವಿಲ್ಲದಿರೆ ಕೆಲಕಾಲ ಉಳಿಯುವರೇನೋ! ಆಗಲಿ; ಯುದ್ಧವಾದರೆ ಕೌರವ ಹತಕರು ಸತ್ತರೆಂದು ಹೇಳು! ಇರುವ ಅಲ್ಪಾವಧಿಯಲ್ಲಿ ಇದ್ದ ಭೋಗಗಳನ್ನು ವನಿತಾಸುತರಿಂದ ಕೂಡಿ ಅನುಭವಿಸಿ ಮುಗಿಸಿ, ಕೌರವರೂ, ಕರ್ಣಾದಿಗಳೂ ರಣರಂಗಕ್ಕೆ ಬರಲಿ!

ಜ್ಯೋತಿರ್ವಿದರು, ಬಹುಶ್ರುತರು, ಶೀಲವಂತರು, ಕುಲೀನರು ಆದ ವಿಪ್ರರು ನಮಗೇ ಜಯವೆಂದು ಸ್ಪಷ್ಟವಾಗಿ ಹೇಳಿರುವರು. ಸರ್ವಜ್ಞ ಶ್ರೀಕೃಷ್ಣನೂ ಅಭಯ ವನ್ನಿತ್ತು, ಜಯವು ನಿಸ್ಸಂಶಯವೆಂದಿರುವನು. ನಮ್ಮ ಹೃದಯವೂ ಸುಪ್ರಸನ್ನ ವಾಗಿದೆ. ಗಾಂಡೀವವು ಶತ್ರುಪ್ರಾಣಾನಿಲವನ್ನು ಕುಡಿಯುವ ಸರ್ಪದಂತೆ ವಿಜೃಂಭಿ ಸುತ್ತಿದೆ. ಬಾಣಗಳು ತೂಣದಿಂದ ಹೊರಹೊಮ್ಮುತ್ತಿವೆ. ಖಡ್ಗವು ಕೋಶದಿಂದ

ಹರಿಬಿಟ್ಟ ಹಾವಿನಂತೆ ಸರ ಸರ ಸರಿಯುತ್ತಿದೆ. ಧ್ವಜದ ಭೂತಗಳು ರಣವಾವಾಗ ಎಂದು ಕೇಳುತ್ತಿವೆ. ನಾನೊಬ್ಬನೇ ಸಾಲದೇ ಸರ್ವಕೌರವ ಸೈನ್ಯವನ್ನು ನಾಶ ಪಡಿಸಲು? ಇನ್ನು ವೃಕೋದರ ಶ್ರೀಕೃಷ್ಣರ ಸಹಾಯವೂ ಸಿಕ್ಕಮೇಲೆ ನನ್ನನ್ನು ಡೀಕೊಟ್ಟು ನಿಲ್ಲುವ ಗಂಡಿರುವನೇ? ಬ್ರಹ್ಮಾಸ್ತ್ರವಿದೆ; ಪಾಶುಪತವಿದೆ; ಇಂದ್ರ ನಿತ್ತ ದಿವ್ಯಾಸ್ತ್ರಗಳಿವೆ. ಸ್ಥಿರವಾಗಿ ನಿಲ್ಲಿರೆಂದು ಅವರಿಗೆ ಹೇಳು! ನಮಗೂ ರಾಜ್ಯ ವಿತ್ತರೆ ಮಾತ್ರ ಶಾಂತಿ ಎಂದು ಹೇಳು! ಯಾರಿಂದ ಕಾದಿ ಇಂದ್ರಾದಿ ದೇವತೆಗಳೂ ಗೆಲ್ಲಲಾರರೋ ಅಂತಹ ಪಾಂಡವರಿಂದ ಕಾಡಿ ಕಾದುವ ದುರ್ಯೋಧನನೆಷ್ಟು ಮೂಢನೋ ನೀನೇ ಆಲೋಚಿಸು! ಇರುವರು, ಭೀಷ್ಮದ್ರೋಣ ಕೃಪ ಗುರುಪುತ್ರ ವಿದುರಾದಿ ಹಿರಿಯರು. ಅವರಿಗೆ ಬೇಕಾದಂತೆ ನಾವೆಲ್ಲರೂ ನಡೆಯುವೆವು. ಸರ್ವ ಕುರುಪಾಂಡವರಿಗೆ ಕ್ಷೇಮವಾಗಲಿ! ಅವರು ಸಂಧಿಗೊಪ್ಪಿದರೆ ಮತ್ತೆ ಬಾ ಅಥವಾ ವಿದುರನಾದರೂ ಬರಲಿ! ಇಲ್ಲದಿರೆ ಬರಬೇಡಿ! ಯುದ್ಧವನ್ನೇ ಆ ಪಾಪಿಯು ಆರಿಸಿರುವನೆಂದು ನಾವು ತಿಳಿಯುವೆವು.' ಇಂತು ಸಂಜಯನು ನುಡಿದು ಕೂತನು.

ಆಗ ಭೀಷ್ಮನು ದುರ್ಯೋಧನನಿಗಿಂತೆಂದನು—'ಬೃಹಸ್ಪತಿ ಶುಕ್ರರು ಬ್ರಹ್ಮ ದೇವನ ಸಭೆಗೆ ಹೋಗಿ ಆತನನ್ನು ಸೇವಿಸಿದರು. ಇಂದ್ರ, ವಸು, ರುದ್ರಾದಿತ್ಯರು, ಗಂಧರ್ವರು ಕೂಡಿ ಆತನನ್ನು ಸುತ್ತುಗಟ್ಟಿ ನಿಂತಿದ್ದರು. ಆಗ ಅವರೆಲ್ಲರ ಕಣ್ಣು ಕುಕ್ಕುವಂತಹ ದಿವ್ಯತೇಜದಿಂದ ಕೂಡಿದ ನರನಾರಾಯಣ ಋಷಿವರರು ಅಲ್ಲಿಗೆ ಬಂದರು. ಬೃಹಸ್ಪತಿಯು ಬ್ರಹ್ಮನನ್ನು 'ಸ್ವಾಮೀ! ನಿಮಗೂ ವಂದಿಸದಿರುವ ಈ ಮಹಾತ್ಮನಾರು?' ಎಂದು ಕೇಳಿದನು. ಬ್ರಹ್ಮನು 'ಇವರೇ ನರನಾರಾಯಣರು! ಇವರ ಕಾಂತಿಯಿಂದ ಸರ್ವಲೋಕಗಳು ಬೆಳಗುವುವು. ಇವರ ತಪೋಬಲವು ಅನಂತ ವಾಗಿದೆ. ಅದರಿಂದ ಇವರು ಲೋಕಗಳನ್ನು ಧರಿಸಿ, ಆನಂದಪಡಿಸುತ್ತಿರುವರು. ದೇವಗಂಧರ್ವರಿಂದ ನುತರಾಗಿ ಇವರು ಅಸುರರನ್ನು ನಾಶಪಡಿಸುವರು. ಶ್ರೀನಾರಾ ಯಣನೇ ನಾರಾಯಣರ್ಷಿಯು; ನರನಲ್ಲಿ ಶ್ರೀಹರಿಯ ಶುಕ್ಲಕೇಶಾವೇಶವಿದೆ! ಶ್ರೀನಾರಾಯಣನು ನನಗೂ ವಂದ್ಯನು' ಎಂದನು. ಆ ಮಾತನ್ನಾಲಿಸಿ ಇಂದ್ರನು ಗುರುಗೀರ್ವಾಣರಿಂದ ಕೂಡಿ ಅವರಿದ್ದ ಗಂಧಮಾದನಗಿರಿಯನ್ನು ಸೇರಿ, 'ದೈತ್ಯರನ್ನು ಗೆಲ್ಲಲು ಸಹಾಯವಾಗಿ!' ಎಂದು ಬೇಡಿದನು. ಅದಕ್ಕೊಪ್ಪಿ ಅವರು ದೇವಸಹಾಯ ರಾಗಿ ಬಂದರು. ನರನು ಪೌಲೋಮಕಾಲಜಂಘರನ್ನೂ ಸಂಹರಿಸಿ, ಅಲ್ಲಾಡುವ ರಥದಲ್ಲಿ ಕೂತಿದ್ದರೂ ತಾನು ಚಲಿಸದೆ ಜಂಭನನ್ನು ಕೊಂದನು. ಆ ನರನೇ ಅರ್ಜುನನು. ಅವನೂ ಖಾಂಡವವನ್ನು ದಹಿಸಿ, ನಿವಾತಕವಚರನ್ನು ಕೊಂದು, ಮೇಲಾಗಿ ಪಾಶುಪತವನ್ನೂ ಪಡೆದಿರುವನು. ಶ್ರೀನಾರಾಯಣನು ಆಗ ದೈತ್ಯ ರನ್ನೇಕರನ್ನು ಕೊಂದನು. ಅವನೇ ಈಗ ಶ್ರೀಕೃಷ್ಣನಾಗಿರುವನು. ಅವರೀರ್ವ ರನ್ನು ದೇವತೆಗಳೂ ಗೆಲ್ಲಲಾರರು. ಅವರಿಗೆ ಪರಸ್ಪರ ವಿರೋಧವನ್ನು ಕಲ್ಪಿಸಲು ಹೋದವರು ತಾವೇ ಹಾಳಾಗುವರು. ಸಂಧಿ ಮಾಡುವುದೇ ಒಳಿತು!' ಇದೆಲ್ಲವನ್ನು

ನಾರದನು ನನಗೆ ತಿಳಿಸಿರುವನು. ದುರ್ಯೋಧನ! ಶಂಖಚಕ್ರಗದಾ ಹಸ್ತನಾದ ಶ್ರೀಕೃಷ್ಣನು ಸಾರಥಿಯಾಗಿರಲು, ಗಾಂಡೀವಪಾಣಿಯಾದ ಅರ್ಜುನನು ಅಸ್ತ್ರವರ್ಷ ವನ್ನು ಸುರಿಸುತ್ತಾ ಬಂದಾಗ ನನ್ನ ಮಾತನ್ನು ನೆನೆಯುವೆ! ಧರ್ಮಾರ್ಥಗಳಿಗೆ ಕೆಡದಂತೆ ಈಗಲೇ ಸಂಧಿಮಾಡಿಕೋ! ಸುಜನರ ಮಾತು ಕೇಳು! ಕುರುಕುಲ ನಾಶಕನೆನಿಸಬೇಡ! ಶ್ರೀಪರಶುರಾಮನ ಶಾಪಕ್ಕೀಡಾದ ದುರ್ಜಾತಿಯೊಬ್ಬ! ನೀಚ ಗಾಂಧಾರದೇಶದ ಜೂಜುಗಾರನೊಬ್ಬ! ಕ್ಷುದ್ರನಾದ ತಮ್ಮನೊಬ್ಬ! ಇಂತಹ ದುರ್ಮಾರ್ಗರ ಮಾತೇ ನಿನಗೆ ಹಿತವಾಗಿದೆ. ವಿಧಿಯೂ ಬಲೀಯವಾಗಿದೆ.'

ಆ ಮಾತನ್ನಾಲಿಸಿ ಕರ್ಣನು ಸಿಟ್ಟಿನಿಂದ, 'ಪಿತಾಮಹ! ಬದುಕಬೇಕೆಂದಿರುವ ರಾರೂ ನಿನ್ನಂತೆ ಮಾತನಾಡರು. ಇರಲಿ! ನಾನು ಕ್ಷತ್ರಧರ್ಮವನ್ನಾರಿಸಿಕೊಂಡು, ಬಿಡದೆ ನಡೆಸುತ್ತಿರುವೆನು. ನನ್ನಲ್ಲಿ ನಿಂದಿಸಲರ್ಹವಾದ ದೋಷವಾವುದೂ ಇಲ್ಲ. ಧಾರ್ತರಾಷ್ಟ್ರರೆಲ್ಲರು ನನ್ನ ಅಪರಾಧವೇನೂ ಇಲ್ಲವೆಂದು ತಿಳಿದಿರುವರು. ದುರ್ಯೋಧನ ನಿಗೆ ಎಂದೂ ನಾನು ದ್ರೋಹವನ್ನೆಣಿಸಿಲ್ಲ, ಎಣಿಸುವುದೂ ಇಲ್ಲ. ಪಾಂಡವರಿಂದ ಯುದ್ಧವಾಗಲಿ! ಆಗ ಅವರೆಲ್ಲರನ್ನೂ ನಾನೇ ಕೊಲ್ಲುವೆನು. ವಿರೋಧಿಗಳಾದ ಪಾಂಡವರಿಂದ ಸಂಧಿ ಸಲ್ಲದು! ರಾಜನಾದ ಧೃತರಾಷ್ಟ್ರನಿಗೂ, ದುರ್ಯೋಧನನಿಗೂ ಹಿತವನ್ನು ಪ್ರಿಯವನ್ನು ಸಾಧಿಸುವುದೆನ್ನ ಕೆಲಸ'ವೆಂದನು.

ಭೀಷ್ಮನು ಧೃತರಾಷ್ಟ್ರನನ್ನು ಸಂಬೋಧಿಸಿ 'ಸುಮ್ಮನೆ ಪಾಂಡವರನ್ನು ಕೊಲ್ಲು ವೆನು, ಕೊಲ್ಲುವೆನು, ಎಂದು ನಿತ್ಯವೂ ಕೊಚ್ಚುವ ಕರ್ಣನು ಪಾಂಡವರಲ್ಲಿ ಪ್ರತಿ ಯೊಬ್ಬನ ಹದಿನಾರನೆಯ ಅಂಶಕ್ಕಾದರೂ ಸರಿದೂಗುವನೇ? ಹೊಸತಾಗಿ ಬಂದು ಸೇರಿ, ಮೊದಲೇ ಕೆಟ್ಟವರಾದ ನಿನ್ನ ಮಕ್ಕಳನ್ನು ಇನ್ನೂ ಕೆಡಿಸುವ ಇವನ ಜಂಬದ ಮಾತನ್ನು ನಂಬಬೇಡ! ಇವನ ಮಾತಿಗೆ ಮರುಳಾಗಿ ನಿನ್ನ ಮಗ, ದೇವಪುತ್ರರಾದ ಪಾಂಡವರಿಗೆ ಕೇಡೆಣಿಸಿ ಕೆಡುವನು. ಇವನ ಪರಾಕ್ರಮವೆಂತಹದೋ ಯಾರರಿಯರು? ಉತ್ತರಗೋಗ್ರಹಣಕಾಲದಲ್ಲಿ ಇವನ ತಮ್ಮನನ್ನು ಇವನೆದುರಿಗೇ ಕೊಂದ ಪಾರ್ಥ ನನ್ನಿವನೇನು ಮಾಡಿದನು? ತಲೆ ರುಮಾಲುಗಳನ್ನು ಪಾರ್ಥನು ತೆಗೆಸುವಾಗ ಇವನೇನು ಮಾಡುತ್ತಿದ್ದನು? ಗಂಧರ್ವರು ಹಿಡಿದುಕೊಂಡು ಹೋಗುತ್ತಿದ್ದ ಕುರು ರಾಜನನ್ನು ಕೈಬಿಟ್ಟು, ಈಗ ವೀರನಂತೆ ಗರ್ಜಿಸುವ ಸೂತಪುತ್ರನು, ದುರ್ಯೋಧನ ನನ್ನು ಬಿಡಿಸಿದ ಭೀಮಾರ್ಜುನ ನಕುಲ ಸಹದೇವರೊಡನೆ ಕಾದಿ ಗೆಲುವನಂತೆ! ಇದಕ್ಕಿಂತ ಸುಳ್ಳುಂಟೇ? ಮಾತಿನ ಮಲ್ಲನಾದ ಕರ್ಣನ ವಚನಗಳನ್ನು ನಂಬಿ, ಸುತರನ್ನು ರಣಕ್ಕಿಳಿಸಬೇಡ!' ಎಂದನು.

ಭೀಷ್ಮನ ಮಾತನ್ನು ಮೆಚ್ಚಿ, ಆಚಾರ್ಯನು ಇಂತೆಂದನು. 'ಭೀಷ್ಮನ ಮಾತು ಸಮಂಜಸವಾಗಿದೆ. ರಾಜನ್! ಕಾಮವನ್ನು, ಅರ್ಥವನ್ನು ಮಾತ್ರ ಬೇಡುವ ದುಡುಕುಜನರ ಮಾತು ಕೇಳಿ ಕೆಡಬೇಡ! ಅರ್ಜುನನಾಡಿದ ಮಾತೆಲ್ಲವೂ ಸತ್ಯ

ವಾಗಿದೆ. ಅಂತೆಯೇ ಮಾಡಲು ಅವರು ಸಮರ್ಥರು! ಸಂಧಿ ಮಾಡಿಕೊಳ್ಳುವು ದೊಳಿತು.'

ಆ ಮಾತನ್ನು ನಿರ್ಲಕ್ಷಿಸಿ, ಧೃತರಾಷ್ಟ್ರನು ಸಂಜಯನನ್ನು ನೋಡಿ, 'ಸೂತ! ಧರ್ಮಪುತ್ರನೇನೆಂದನು? ಅವನಿಗೆ ಸಹಾಯವಾಗಿ ಬಹುಸೇನೆ ಕಲೆತಿದೆಯಂತೆ! ಅವನ ತಮ್ಮಂದಿರು ಮಕ್ಕಳು ಅವನ ಆಜ್ಞೆಯಲ್ಲಿರುವರೇ? ಯುದ್ಧವು ಕೂಡವೆಂದು ಯಾರಾದರೂ ವಾದಿಸುವರೇ? ಧರ್ಮಜ್ಞನಾದ ಧರ್ಮಜನಿಗೆ ಸಿಟ್ಟು ಬರುವಂತೆ ಮೂರ್ಖರು ಕೆಲವರಿದ್ದಂತಿದೆ' ಎಂದನು.

ಸಂಜಯನಾಮಾತಿಗೆ ನಕ್ಕು, 'ರಾಜನ್! ಪಾಂಚಾಲ ಪಾಂಡವ ಮತ್ಸ್ಯ ಕೇಕಯಾರಾದಿಯಾಗಿ ಸರ್ವರೂ ಧರ್ಮಜನು ಹಾಕಿದ ಗೆರೆ ದಾಟದಿರುವರು. ಆಬಾಲಗೋಪಾಲವಾಗಿ ಸರ್ವಜನರೂ ಧರ್ಮರಾಜನಲ್ಲಿ ಪ್ರೀತಿಯಿಂದಿರುವರು. ಅವನು ಮೂರ್ಖರ ಮಾತಿಗೆ ಕಿವಿಗೊಡುವವನಲ್ಲ. ಅವನವರಲ್ಲಿ ಮಿತ್ರಭೇದ ವನ್ನು ಸಾಧಿಸುವುದು ಆಕಾಶವನ್ನು ಸೀಳುವುದೆಂದು ತಿಳಿ! ಅವರೆಲ್ಲರೂ ಏಕ ಮನಸ್ಕರಾಗಿ ಯುದ್ಧಸನ್ನಾಹವನ್ನು ನಡೆಸಿರುವರು' ಎಂದನು.

ಧೃತರಾಷ್ಟ್ರನು ವಿಷಣ್ಣನಾಗಿ, 'ಸಂಜಯ! ಯಾರ ಬಲವನ್ನು ನಂಬಿ ಪಾಂಡವರು ನಮ್ಮ ಮೇಲೆ ಕೈ ಮಾಡುತ್ತಿರುವರು? ಅವರ ಸೈನ್ಯವನ್ನು ಪರೀಕ್ಷಿಸಿ ತಿಳಿದು ಬಂದಿರುವೆಯಾ?' ಎಂದು ಕೇಳಿದನು.

ಆ ಮಾತನ್ನಾಲಿಸಿ ಸಂಜಯನು ನಿಟ್ಟುಸಿರಿಟ್ಟು ಸ್ವಲ್ಪಕಾಲ ಮೂರ್ಛಿತ ನಾದಂತಾದನು. ವಿದುರನವನ ಅವಸ್ಥೆಯನ್ನು ಪೇಳಲು, ತಿಳಿದು ಅಂಧರಾಜನು 'ಪಾಪ! ಪಾಂಡವಸೈನ್ಯದ ಅಪಾರ ಬಲವನ್ನು ಕಂಡು ನಮ್ಮ ಸಂಜಯನು ಅದನ್ನು ನೆನೆದು ನಿರ್ವಿಣ್ಣನಾಗಿರುವನು' ಎಂದನು. ಸಂಜಯನು ತಿಳಿದು, 'ರಾಜೇಂದ್ರ! ಮಹಾರಥರಿಂದ ತುಂಬಿದ ಪಾಂಡವ ಸೇನೆಯನ್ನು ಕಂಡೆನು. ಪಾಂಡವರು ಯಾರ ಬಲದಿಂದ ಮೈಯುಬ್ಬಿ ಕಾದಲು ಬರುವರೆಂದು ಕೇಳಿದೆ? ಕೇಳು! ಧರ್ಮವನ್ನು ರೋಷ, ಲೋಭ, ಭಯಗಳಿಂದ ತ್ಯಜಿಸದ ಧೃಷ್ಟದ್ಯುಮ್ನನು, ಕಾಶೀಶ ಮಗಧೇಶ ರನ್ನು ಗೆದ್ದ ವೃಕೋದರ ಅವರಿಗೆ ಬಲವಾಗಿರುವರು. ಅರಗಿನ ಮನೆಯಲ್ಲಿ ಅಗ್ನಿ ಯಿಂದಲೂ; ಬಕ ಹಿಡಿಂಬ ಕಿರ್ಮೀರ ಕೀಚಕರಿಂದಲು, ಕಳ್ಳನಂತೆ ಕಾಂತೆಯನ್ನು ಗೆದ್ದ ಸೈಂಧವನಿಂದಲು ಕಾಪಾಡಿ ಗಂಧಮಾದನದಲ್ಲಿ ಕ್ರೋಧವಶರನ್ನು ಕೊಂದು, ಈಗ ಕೌರವ ವನವನ್ನು ಸುಡಲು ಅಗ್ನಿಯಂತೆ ಉರಿದೇಳುವ ಭೀಮಸೇನನ ಬಲವಿದೆ ಅವರಿಗೆ. ಖಾಂಡವವನ್ನು ಸುಟ್ಟು, ಪಶುಪತಿಯನ್ನು ಮೆಚ್ಚಿಸಿ, ದೇವತೆಗಳಿತ್ತ ಮಹಾಸ್ತ್ರಗಳಿಂದ ಕೂಡಿದ ಅರ್ಜುನನ ಬಲವವರಿಗೆ ಆಶ್ರಯವಾಗಿದೆ. ನಕುಲ ಸಹದೇವರು ಮಹಾವೀರರು; ಶಿಖಂಡಿಯು ಭೀಷ್ಮನನ್ನು ಕೊಲ್ಲಲೆಂದೇ ಹುಟ್ಟಿರು ವನು. ಧೃಷ್ಟದ್ಯುಮ್ನನು ದ್ರೋಣಹಂತನಾಗಲಿರುವನು; ಇದೆಲ್ಲರಿಗೂ ಗೊತ್ತಿದೆ. ಸಾತ್ಯಕಿ ವಿರಾಟ ದ್ರುಪದರು, ದ್ರೌಪದೇಯರು, ಧೃಷ್ಟಕೇತು, ಚೇಕಿತಾನ,

ಅಭಿಮನ್ಯು ಇನ್ನು ಅನೇಕ ರಾಜನ್ಯರು ಬೆಂಬಲಿಗರಾಗಿರಲು ಧರ್ಮರಾಜನು ನಿರ್ಭೀಕನಾಗಿ ಯುದ್ಧವನ್ನು ನಿರೀಕ್ಷಿಸುತ್ತಿರುವನು' ಎಂದನು.

ಆ ಮಾತನ್ನು ಕೇಳಿ ಧೃತರಾಷ್ಟ್ರನು ಎದೆ ಒಡೆದಂತಾಗಿ ಸಂಜಯನಿಗಿಂತೆಂದನು —'ಸಂಜಯ! ನೀ ಪೇಳಿದ ಮಹಾವೀರರೆಲ್ಲ ಭೀಮನಿಗೆ ಸಮರೆಸುವರು. ನನಗೆ ಭೀಮನ ಭಯವೇ ಹೆಚ್ಚಾಗಿ ಕಾಡಿ, ನಿದ್ದೆ ಬರದಂತಾಗಿದೆ. ನಮ್ಮ ಸೈನ್ಯದಲ್ಲಿ ಆ ಮಹಾವೀರನಿಗೆದುರಾಗಿ ನಿಂತು ಹೆದರದೆ ಕಾದುವ ವೀರರನ್ನು ನಾನು ಕಾಣದಿರುವೆನು. ಅವನ ಸಿಟ್ಟು ಮಹಾನರ್ಥಕರ! ಅವನ ಬಲ ಅಸಮಾನ! ಹಾಸ್ಯಕ್ಕೂ ಅವನು ಸುಳ್ಳಾಡನು. ಶತ್ರುಗಳನ್ನು ನಗೆಯಾಡಿ ಸುಮ್ಮನಾಗುವವನಲ್ಲ; ದೀರ್ಘವೈರವನ್ನು ಸಾಧಿಸುವ ಭೀಮನಿಗೆ ಕ್ಷಮೆ ಇಲ್ಲ. ಮಿತ್ರರಲ್ಲಿ ಅವನಿಗೆ ಅಪಾರ ದಯೆ. ಅವನು ರಣರಂಗದಲ್ಲಿ ಪ್ರಳಯದ ರುದ್ರನನ್ನೂ, ಯಮನನ್ನೂ ಮರೆಸುವನು. ಎಂಟುಮೂಲೆ ಗಳಿಂದಲು, ಕಾಂಚನಚಿತ್ರದಿಂದಲು ಶೋಭಿಸುವ ಗದೆಯನ್ನು ಭೀಮನು ಪಿಡಿದು, ನನ್ನ ಸುತರನ್ನು ಕೊಲ್ಲಲು ಬರುತ್ತಿರುವಂತೆ ನನಗೆ ಸದಾ ಭಾಸವಾಗುತ್ತಿದೆ. ಅವನ ಗದೆಯು ಬ್ರಹ್ಮದಂಡದಂತೆಯೇ ಸರಿ! ಬಾಲ್ಯದಿಂದಲು ಭೀಮನು ಬಹುಳಾನ್ನ ಭೋಜನನು, ಬಹುಬಲನು, ಬಹು ಶಸ್ತ್ರ ಶಾಸ್ತ್ರ ಪಂಡಿತನೂ ಆಗಿರುವನು. ಅವ ನಿಂದಲೇ ಬಂತೀ ವೈರ. ಕ್ರೋಧಮೂರ್ಛಿತನಾಗಿ ಗದಾದಂಡವನ್ನು ಬೀಸುತ್ತಾ, ಗಜ ತುರಗ ಭಟರನ್ನು ಗಜಿಬಿಜಿಯಾಗಿಸಿ ಕೊಲ್ಲುವ ಭೀಮನ ಮೂರ್ತಿ ಈಗಲೇ ನನ್ನ ಮನೋನೇತ್ರದಲ್ಲಿ ಮೂಡಿ ನಿಂತಿದೆ. ಅಸ್ತ್ರಬಲದಲ್ಲಿ ದ್ರೋಣಾರ್ಜುನರನ್ನೂ ವೇಗ ದಲ್ಲಿ ವಾಯುವನ್ನೂ, ಕ್ರೋಧದಲ್ಲಿ ರುದ್ರನನ್ನೂ ಮೀರುವ ಭೀಮನನ್ನು ರಣದಲ್ಲಿ ಕೊಲ್ಲುವ ವೀರರಿಲ್ಲ. ಅವನು ಅಂದೇ ನನ್ನ ದುಷ್ಟಪುತ್ರರನ್ನು ಕೊಲ್ಲದೆ ಬಿಟ್ಟನೆಂದರೆ ಅವರಿಗಿನ್ನೂ ಆಯುಸ್ಸಿತ್ತೆಂದು ತಿಳಿದು, ಅಷ್ಟೇ ಲಾಭವೆಂದು ಸುಮ್ಮನಿರುವೆನು. ಬಾಲ್ಯದಲ್ಲಿ ಅವನನ್ನು ಹತ್ತಿಡುವುದೇ ದುಷ್ಕರವಾಗಿತ್ತು. ಈಗ ಬಲವಂತನಾಗಿ ಅಸಮಾನ ವಿಕ್ರಮನೆನಿಸಿರುವ ಆ ಮಹಾಬಲನನ್ನು ದೇವತೆಗಳು ಸಹಿಸಿ ನಿಲ್ಲಲಾರರು. ಇನ್ನು ಮನುಜರ ಪಾಡೇನು? ಅರ್ಜುನನಕಿಂತಲೂ ಚೋಟುದ್ದನಾಗಿರುವ ಭೀಮನು ಅಮಿತಬಲನಾಗಿರುವನು. ಭೀಮನ ವಿಷಯವನ್ನು ನನಗೆ ಶ್ರೀವ್ಯಾಸರೇ ತಿಳಿಸಿರು ವರು. ರೂಪ, ವೀರ್ಯ, ಬಲ, ಜ್ಞಾನ, ಧರ್ಮ ವಾತ್ಸಲ್ಯ, ಶತ್ರುದಂಡನಗಳಲ್ಲಿ ಭೀಮನು ಸಾಟಿ ಇಲ್ಲದವನಾಗಿರುಹನು. ಗದೆಯ ಒಂದೇಟಿಗೆ ರಥಗಜಾದಿ ಸೈನ್ಯ ವನ್ನು ನಾಶಮಾಡಬಲ್ಲ ವೃಕೋದರನಿಗೆ ದ್ರೋಹ ಬಗೆದಿರುವ ನನ್ನ ಸುತರು ಎಂತು ಬದುಕುವರು? ಅಪಾರವು, ಅಗಾಧವು, ಶರತರಂಗವು, ಗದಾತಿಮಿಂಗಿಲವು, ಕ್ರೋಧ ಬಾಡಬವು ಆದ ಭೀಮಸೇನ ಶೌರ್ಯ ಸಮುದ್ರವನ್ನು ಮೆಂದರಾದ ನನ್ನ ನಂದನರು ದಾಟಲೆಣಿಸಿ, ಬೇಡವೆಂಬ ನನ್ನ ಕೂಗನ್ನು ಮನ್ನಿಸದೆ ಹಾಳಾಗುತ್ತಿರುವರು. ಅವರ ಕಣ್ಣಿಗೆ ರಾಜ್ಯವೆಂಬ ಮಧು ನಿಧಿ ಕಾಣುತ್ತಿದೆಯಾಗಲಿ, ಕೆಳಗಿರುವ ಮಹಾ ಪ್ರಪಾತವು ಕಾಣದಾಗಿದೆ. ವಿಧಿಪ್ರೇರಿತವಾದ ಮೃಗಗಳು ಸಿಂಹಕಂದರದಲ್ಲಿ ಮೇಯಲು

ಹೋಗುವಂತೆ, ನರರೂಪ ಮಹಾಮೃತ್ಯುವಾಗಿರುವ ಭೀಮನೊಡನೆ ಕಾದಲು ಹೊರಟಿರುವರೀ ಪಾಪಿಗಳು ! ಸಂಜಯ ! ಭೀಮನ ಗದೆ ಅಯೋಮಯವು, ಅತಿ ಭಾರವು; ಅದನ್ನಿನ್ನೊಬ್ಬನು ಎತ್ತಲಾರನು. ನೆಲದಲ್ಲಿಟ್ಟರೆ ಭೂಮಿಯೇ ಸೀಳುವು ದೆಂದು ಅದನ್ನು ಭೀಮನು ನೆಲುವಿಗೆ ತೂಗಿಟ್ಟಿರುವನು. ನಾಲ್ಕು ಗಂಟು, ಆರು ಮೊನೆ, ಎಂಟು ನೊಲೆಗಳುಳ್ಳ ಆ ಗದೆಯ ಹೊಡೆತಕ್ಕೆ ನುಚ್ಚು ನೂರಾಗದೆ ಉಳಿಯು ವುದಿಲ್ಲ. ಅದನ್ನು ಯಮದಂಡಪ್ರಭವಾದ ಹಸ್ತದಲ್ಲಿ ಪಿಡಿದು, ಹಸ್ತಿ ಮಸ್ತಗಳನ್ನೂ, ಶಸ್ತ್ರರಥಗಳನ್ನೂ, ಪ್ರಶಸ್ತ ತುರಗಗಳನ್ನೂ ಪುಡಿ ಮಾಡುತ್ತಾ, ಗರ್ಜಿಸುತ್ತಾ, ತುಟಿ ನೆಕ್ಕುತ್ತಾ, ಹಲ್ಲು ಕಡಿಯುತ್ತಾ, ತಾಪಕಾರಿಯಾಗಿ ಬರುವ ಭೀಮಸೇನನ ಮುಂದೆ ನಿಲ್ಲುವವರಾರು ? ನಿಂತರೆ ಹೋರಾಡುವವರಿಲ್ಲ. ಹೋರಾಡಿದರೆ ಬದುಕಿ ಹೋದವ ರಿಲ್ಲ. ಅಗ್ನಿಯಂತೆ ಉರಿಯುವ ಭೀಮನಿಗೆ ಆಯುಧವೇ ಬೇಕಿಲ್ಲ. ಆ ಮಹಾ ವೀರನ ಚಂದನರೂಷಿತ ಬಾಹುದಂಡಗಳೇ ಸಾಕು. ಅವನು ಸಾಗಿದೆಡೆ ಸೈನ್ಯಗಳು ಇಬ್ಭಾಗವಾಗಿ ರಾಜಮಾರ್ಗದಂತಾಗುವುದು. ಮೃತ್ಯುದೇವಿಗೆ ರಕ್ತದ ತಳಿಲ ನೀರನ್ನು ಚಲ್ಲಿ, ತಲೆಗಳ ಸಮವೃಷ್ಟಿಯನ್ನು ಬೀರಿ, ಶತ್ರುಗಳನ್ನು ಬಲಿಕೊಡುವ ಭೀಮನು ಮಾರಣಹೋಮದಲ್ಲಿ ಶ್ರೀ ನೃಸಿಂಹನು ಗರ್ಜಿಸುವನು; ಶ್ರೀ ರುದ್ರನು ಪ್ರಳಯ ತಾಂಡವವನ್ನಾಡುವನು. ಅವನಿಗೆದುರಿಸಿ ನಿಲ್ಲಲಾರದೆ ನನ್ನವರು ಓಡಿ ಹೋಗುವರು.

'ಸಕಲ ರಾಜಲೋಕವನ್ನು ಗೆದ್ದು, ವಶಪಡಿಸಿ, ಕೆಲವರನ್ನು ಬಲಿ ಕೊಡಲಿದ್ದ ಜರಾಸಂಧನನ್ನು ಶ್ರೀಕೃಷ್ಣಸಹಾಯನಾಗಿ ಭೀಮಸೇನನು ಬಾಹುಯುದ್ಧದಲ್ಲಿ ಸೀಳಿ ಕೊಂದುದನ್ನಾರರಿಯರು ? ಭೀಷ್ಮಾದಿ ಮಹಾ ವೀರರಿಂದ ನಾವು, ಶ್ರೀಕೃಷ್ಣ ನಿಂದ ವೃಷ್ಣಿಯಾದವರು, ಅವನಿಗೆ ವಶರಾಗದಿದ್ದೆವು. ಅಂತಹ ಜರಾಸುತನನ್ನು ನಿರಾಯುಧನಾಗಿ ಕೊಂದ ಭೀಮನಿಗಿನ್ನಾರು ಪ್ರತಿವೀರರು ? ಇಷ್ಟು ಕಾಲವು ಕೂಡಿಟ್ಟ ವೈರವಿಷವನ್ನು ಭೀಮಸರ್ಪವು ಕಾರಿದಾಗ ನನ್ನ ಸುತರು ಸುಡದೆ ಉಳಿ ಯುವುದಿಲ್ಲ. ಭೀಮನಿಗೆ ಗದೆ ಬೇಡ ! ಬಿಲ್ಲುಬೇಡ ! ಖಡ್ಗವೂ ಬೇಡ ! ಕೃಷ್ಣಾ ! ಎಂದು ಗರ್ಜಿಸಿ ಬರಿಗೈಲಿ ಮೇಲೆರಗುವ ವಾಯುಪುತ್ರನನ್ನು ಭೀಷ್ಮ ದ್ರೋಣ ಕೃಪ ಅಶ್ವತ್ಥಾಮರೂ ತಡೆಯಲಾರರು. ಇಂತಹ ಅಸಹಾಯ ಶೂರನಿವನೆಂದು ಇವರೂ ಅರಿತಿರುವರು. ಉಂಡ ಅನ್ನಕ್ಕಾಗಿ ಋಣಿಗಳಾಗಿ, ನಮಗೆ ಪ್ರಾಣಗಳನ್ನರ್ಪಿಸಲು ಸಿದ್ಧರಾಗಿ ನಿಂತಿರುವರಾಗಲಿ, ಈ ಮಹಾನುಭಾವರು ಬೆಟ್ಟಕ್ಕೆ ಡೀ ಕೊಡುವ ಟಗರಿ ನಂತೆ ಕೆಡಲಿರುವ ನನ್ನ ಪುತ್ರರಂತೆ ಮೂಢರಲ್ಲ.

'ಸಂಜಯ ! ದೈವವು ಬಲೀಯವಾಗಿದೆ. ಅವರು ಸ್ವರ್ಗಮಾರ್ಗವನ್ನು ಪಿಡಿದಿ ರಲು, ನನ್ನವರು ನರಕಮಾರ್ಗದಲ್ಲಿರುವರು. ವಿದುರನು ಅಂದೇ ತಿಳಿಹೇಳಿದ ಚಂದದ ಮಾತನ್ನು ಕೇಳದೆ ನಾನೂ ಕೆಟ್ಟು, ಸುತರನ್ನೂ ಅವರಿಗೆ ಸಹಾಯವಾಗಿ ಬಂದಿರುವ ರಾಜರನ್ನೂ ಕೆಡಿಸಿದೆನು. ನನ್ನ ಜ್ಞಾನವು ದುರ್ಬಲವಾಗಿ ಪ್ರಬಲವಾಗಿರುವ

ದುಃಖಾಗ್ನಿಯನ್ನು ಆರಿಸಲಾರದಾಗಿದೆ. ಋಷಿಗಳೂ ಸುಖದಿಂದ ಹಿಗ್ಗಿ ದುಃಖದಿಂದ ಕುಗ್ಗುವರಂತೆ ! ಲೋಕದಂತೆ ನಡೆದು ನುಡಿವ ಮಹಾನುಭಾವರ ಮಾತು ಬೇರೆ ! ನನ್ನಂತಹ ಮನುಜನು ರಾಜ್ಯಧನ ಪುತ್ರರಲ್ಲಿ ಆಸಕ್ತನಾಗಿದ್ದು, ಆಪತ್ತು ಬಂದಾಗ ದುಃಖಪಡದೆ ಇರಲಾಗುವುದೇ ? ಜೂಜೆಂಬ ಬೀಜವು ವನವಾಸದಿ ಬೆಳೆದು, ಅಜ್ಞಾತವಾಗಿ ಹಣ್ಣಾಗಿ ಇಂದು ವಿಷರಸವನ್ನು ಕಾರುತ್ತಿದೆ. ಅದನ್ನು ತಿಂದು ಕುರುಪುತ್ರರಾರೂ ಉಳಿಯರು. ನಾವು ಮಾಡಿದ ಪಾಪದ ಫಲವನ್ನು ನಾವು ಉಣ್ಣದೆ ಇರಲಾಗದು; ಉಣ್ಣೆನೆಂದರೆ ಕಾಲವು ಉಣಿಸದೆ ಬಿಡದು. ಚಕ್ರದಲ್ಲಿ ಸಿಕ್ಕಿಬಿದ್ದಿರುವ ನೇಮಿಯು ಅದರಂತೆ ತಿರುಗಬೇಕಲ್ಲವೇ ? ಏನು ಮಾಡಲಿ ? ಎಂತು ಮಾಡಲಿ ? ಎಲ್ಲಿ ಹೋಗಲಿ ? ಮಂದರಾದ ಕುರು ಕುಮಾರರು ಕಾಲಪಾಶಕ್ಕೆ ಸಿಲುಕಿ ಸಾಯಲಿರುವರು. ಪುತ್ರ ಪತ್ನಿಯರ ರೋದನ ಧ್ವನಿಯು ವಜ್ರಾಘಾತವಾಗಿ ಕಿವಿಗೆ ಬಡಿದಾಗ ಏನು ಹೇಳಲಿ ?'

'ಗಾಂಡೀವ ಧನುವನ್ನು ಧರಿಸಿ ಮೆರೆವ ಧನಂಜಯನಿಗೆ ಎದುರಿಲ್ಲ. ಅವನು ಮಾಡಿದ ಪ್ರತಿಜ್ಞೆಯನ್ನು ಮುಗಿಸದೆ ಬಿಡುವವನಲ್ಲ. ಅವನ ಬಾಣಗಳು ಪ್ರಾಣಾಪಹಾರಮಾಡದೆ ಬಿಡುವುದಿಲ್ಲ. ಅವನನ್ನು ವಾರಿಸುವ ಪ್ರತಿವೀರರಿಲ್ಲ. ಇರುವರು ದ್ರೋಣಕರ್ಣರು, ನಿಜ ! ಆದರೆ ಆಚಾರ್ಯನು ಮುದುಕನಾಗಿರುವನು. ಕರ್ಣನು ಜಂಬಗಾರ, ಪ್ರಮಾದವಶ್ಯ; ಇಂತಹವರು ಬಲವೀರ್ಯ ವಿಜೃಂಭಣನಾದ ಅರ್ಜುನನನ್ನು ಗೆಲ್ಲಬಲ್ಲರೇ? ವಿಚಾರಿಸಿನೋಡಲು ಪಾಂಡವರ ಜಯ ಕಟ್ಟಿಟ್ಟ ಗಂಟಾಗಿ ತೋರುತ್ತಿದೆ. ಅಸ್ತ್ರಗಳನ್ನರಿತವರು ಅನೇಕರಿರುವರು; ಅವರು ಗೆಲುವನ್ನೂ ಸೋಲನ್ನೂ ಕಂಡಿರುವರು. ಆದರೆ ಅರ್ಜುನನು ಸೋತನೆಂದು ಯಾರೂ ಕೇಳಿಲ್ಲ. ಮೂವತ್ತು ಮೂರು ವರ್ಷಗಳಾದವೆಂದು ತೋರುತ್ತಿದೆ; ಅಗ ಖಾಂಡವವನವನ್ನು ಸುಟ್ಟು ಪಾರ್ಥನು ಅಂದಿನಿಂದ ವಿಜಯಗಳನ್ನೇ ಸಾಧಿಸಿರುವನು. ಕೈಲಿ ಗಾಂಡೀವ, ರಥದಲ್ಲಿ ಧನಂಜಯ, ಸಾರಥಿಯಾಗಿ ಶ್ರೀಕೃಷ್ಣ; ಈ ಮೂರಗ್ನಿಗಳು ಕಲೆತುಬಂದಾಗ ನಿಂದು ಕಾದುವ ಮಂದರಿರುವರೇ ? ಅಂತಹ ಧನುವಿಲ್ಲ; ಅಂತಹ ರಥಿಕನಿಲ್ಲ; ಅಂತಹ ಸಾರಥಿಯೂ ಇಲ್ಲ. ಸಿಡಿಲು ಬಡಿದರೆ ಅದೃಷ್ಟದಿಂದ ಉಳಿಯಬಹುದು; ಅರ್ಜುನನ ಬಾಣ ಬಡಿದರೆ ನಿಶ್ಶೇಷವಾಗಿ ನಾಶವಾಗುವರು. ಅರ್ಜುನನು ಬಾಣಜ್ವಾಲೆಗಳಿಂದ ಕೌರವ ವನವನ್ನು ಸುಡುತ್ತಾ ವಿಜೃಂಭಿಸಿದಾಗ ಸರ್ವಹರನಾದ ಯಮನಿಗೆ ಹಬ್ಬವೆಂದು ತಿಳಿ ! ಭರತಕುಲದವರಿಗೆ ಪ್ರಳಯವೇ ಬಂತೋ ಏನೋ ?

'ಸಂಜಯ ! ಅವರೆಲ್ಲರೂ ಏಕಮತಿಕರಾಗಿ ಸಮರಸನ್ನದ್ಧರಾಗಿರುವರೆಂದೆ ! ಅವರಿಗೆ ಶ್ರೀಕೃಷ್ಣನ ಸಹಾಯವಿದೆ. ಶ್ರೀಕೃಷ್ಣನು ಸಾಮಾನ್ಯನಲ್ಲ. ಬ್ರಹ್ಮ-ರುದ್ರೇಂದಾದಿಗಳೆಲ್ಲರು ಅವನ ಅಧೀನರಾಗಿರುವರು. ಅವನು ಜಗಜ್ಜನ್ಮಾದಿಕಾರಣನಾದ ನಾರಾಯಣನು. ಅವನು ಪಾಂಡವರಿಗೆ ಜಯವನ್ನೀಯಲು ಕಂಕಣವನ್ನು ಕಟ್ಟಿ ನಿಂತಿರುವನಂತೆ! ಅವನಂತೆ ನಡೆಯುವ ಧರ್ಮರಾಜನು ಬ್ರಹ್ಮತೇಜಸಂಪನ್ನನು,

ಬುದ್ಧಿವಂತನು, ಧರ್ಮನಿರತನು, ದರ್ಶನೀಯನು ಆಗಿರುವನು. ಧರ್ಮರಾಜನ ಕ್ರೋಧ, ಭೀಮಸೇನನ ಗದೆ, ಅರ್ಜುನನ ವಿಕ್ರಮ, ಯಮಳರ ನೀತಿ, ದ್ರುಪದಾದಿ ರಾಜರ ಒಮ್ಮನದ ಸಹಾಯ, ಎಲ್ಲಕ್ಕೂ ಮಿಗಿಲಾದ ಶ್ರೀಕೃಷ್ಣನ ಅಭಯ ಹಸ್ತ, ಇಷ್ಟು ಸುಗುಣಸಂಪನ್ನರಾದ ಪಾಂಡವರಿಗಲ್ಲದೆ ಮಾಯಾವಿಗಳು, ದುರ್ಬಲರು, ಪ್ರಮಾದಿಗಳು, ಹರಿದ್ವೇಷಿಗಳಾದ ಕೌರವರಿಗೆ ಜಯವಾಗುವುದೇ? ಸಣ್ಣವನಾದಂದಿನಿಂದ ಬೆಳೆಸಿ, ಪ್ರೀತಿಸಿ, ನಾನಾಗಿ ದುರ್ಯೋಧನ ವಿಷವೃಕ್ಷವನ್ನು ಕಡಿಯಲಾರದೆ ಮಿಡುಕುತ್ತಿರುವೆನು. ಇವನಿಂದ ಕುರುಕುಲವೇ ಹಾಳಾಗುವುದು. ಒಂದು ವೇಳೆ ದುರ್ಯೋಧನನು ಸಮ್ಮತಿಸಿದರೆ ಸಂಧಿಯಾದೀತು! ಕುರುಕುಲವು ಉಳಿದೀತು! ನನ್ನನ್ನೇ ಕಲಹಕಾರಣನೆಂದು ತಿಳಿದು ಧರ್ಮರಾಜಾದಿಗಳು ಮಾಡುವ ನಿಂದೆ ಅಳಿಸುವಂತಾದೀತು!'

ಆ ಮಾತಿಗೆ ಸಂಜಯನಿಂತೆಂದನು—'ಮಹಾರಾಜ! ಬರಿ ಬಾಯಮಾತಿನಿಂದ ಕಾರ್ಯವಾಗಲಾರದು. ನಿತ್ಯವೂ ಅನುತಾಪಪಡುವೆ! ಮತ್ತೆ ಪುತ್ರವಶನಾಗಿ ಕೆಡುವೆ! ದೊಡ್ಡಪ್ಪನೆನಿಸಿ ಮಕ್ಕಳಾದ ಪಾಂಡವರಿಗೆ ದ್ರೋಹ ಬಗೆದೆ! ಅವರಿಗೆ ನೀ ಮಾಡಿದ ಹಿತವಾವುದು ಹೇಳು! ಏನು ಗೆದ್ದನೇನು ಗೆದ್ದನೆಂದು ಕೇಳಿದುದಾಯಿತು. ಹುಡುಗರಂತೆ ಪಗಡೆಯಾಡಿ ಮಾಡಬಾರದುದೆಲ್ಲವನ್ನೂ ಮಾಡಿಸಿದೆ! ಈಗ ಯಾರು ಬಿದ್ದರು ಯಾರು ಬಿದ್ದರೆಂದು ಕೇಳು! ಮುದುಕನಾಗಿ ಮೂಲೆಯಲ್ಲಿ ಕೂತು ಅನುತಾಪ ಪಡುವುದೊಂದು ಉಳಿದೀತು, ಮತ್ತಾವುದೂ ಅಲ್ಲ. ಪಾಂಡವರು ಬಾಹುವೀರ್ಯದಿಂದ ಗೆದ್ದ ರಾಜ್ಯವನ್ನು, ಪಾಪ! ಹಿರಿಯನೆಂದು ನಿನಗರ್ಪಿಸಿದರೆ, ಅದನ್ನು ನಿನ್ನ ಮಕ್ಕಳಿಗೆ ಮೀಸಲೆಂಬ ನಿನ್ನ ದುರಾಶೆಗೆ ಎಣೆ ಇಲ್ಲ. ಅವರು ವನಕ್ಕೆ ನಡೆದರೆ ಹುಡುಗರಂತೆ ಹಿಗ್ಗಿದೆ! ನಿನ್ನ ಮಕ್ಕಳನ್ನು ಗಂಧರ್ವರಿಂದ ಬಿಡಿಸಿದವರು ಭೀಮ-ಅರ್ಜುನರು! ನಿನ್ನವರ ತಲೆ ಕೊಯ್ಯದೆ, ತಲೆ ರುಮಾಲನ್ನು ಮಾತ್ರ ಕೊಂಡು ಪೋದವನು ಪಾರ್ಥ! ಅವರ ಬಾಣಾಗ್ನಿಗೆ ಸಮುದ್ರವೇ ಒಣಗುವಾಗ ಮಾಂಸಯೋನಿಗಳಾದ ಮನುಜರು ಉಳಿಯುವರೇ! ಭೀಮನ ಗದೆ, ಅರ್ಜುನನ ಗಾಂಡೀವ, ಶ್ರೀಕೃಷ್ಣನ ಚಕ್ರ, ಧ್ವಜದಲ್ಲಿರುವ ಕಪಿರಾಜ ಇವೆಲ್ಲವನ್ನು ಪಡೆದುಬಂದಿರುವ ಧರ್ಮರಾಜನು ಜಯಿಸಿ ಚಕ್ರವರ್ತಿ ಎನಿಸುವನು. ಅವಲಕ್ಷಣಗಳಿಗೆ ಜಯವೆಲ್ಲಿ? ರಾಜ್ಯವೆಲ್ಲಿ? ಮತ್ಸ್ಯಪಾಂಚಾಲ ಕೇಕಯಾದಿ ರಾಜರು ಈಗ ನಿನಗೆ ವಿರೋಧಿಪಕ್ಷದಲ್ಲಿರುವರು. ಸೋದರರಿಗೆ ವಿಷವನ್ನು, ಧರ್ಮಯುಕ್ತರಿಗೆ ಪಾಪವನ್ನು, ಹರಿಭಕ್ತರಿಗೆ ದ್ವೇಷವನ್ನು ಸುರಿಸುವ ಪಾಪಪುರುಷನನ್ನು ನಿಗ್ರಹಿಸಿಡು! ದ್ಯೂತಕಾಲದಲ್ಲೇ ನಾನು ಹೇಳಿದೆನು; ವಿದುರನೂ ಹೇಳಿದನು. ನೀನು ಕೇಳಲಿಲ್ಲ. ಈಗ ನೀನು ಅಳುತ್ತಿರುವುದೆಲ್ಲವು ನಿರರ್ಥಕವೆಂದು ತಿಳಿ!'

ಧೃತರಾಷ್ಟ್ರನ ಚಿಂತೆಯನ್ನರಿತು ದುರ್ಯೋಧನನು ಅವನನ್ನು ಸಮೀಪಿಸಿ, ಧೈರ್ಯವನ್ನು ತುಂಬುತ್ತಾ ಇಂತೆಂದನು—'ಮಹಾರಾಜ! ಭಯಪಡಬೇಡ!

ನಾವಷ್ಟು ನಿರ್ಬಲರಲ್ಲ. ಶತ್ರುಗಳೇ ವನವಾಸಾದಿ ಕ್ಲೇಶದಿಂದ ದುರ್ಬಲರಾಗಿರುವರು. ಶ್ರೀಕೃಷ್ಣ, ಕೇಕಯರು, ಧೃಷ್ಟಕೇತು, ಬೀಗರಾದ ವಿರಾಟ ದ್ರುಪದರು, ಸಾತ್ಯಕಿ ಚೇಕಿತಾನರು, ಎಲ್ಲರೂ ಮಹಾ ಸೈನ್ಯಗಳಿಂದ ಕೂಡಿ ಪಾಂಡವರ ಸಹಾಯಕ್ಕೆಂದು ಬಂದರು. ಅವರೆಲ್ಲ ಸಭೆಗೂಡಿ ನಮ್ಮನ್ನೂ ನಿನ್ನನ್ನೂ ನಿಂದಿಸಿ ಧರ್ಮರಾಜನನ್ನು ಸಮಾಧಾನಪಡಿಸಿ, ರಾಜ್ಯವನ್ನು ಕೊಡಿಸುವೆವೆಂದರು. ನಮ್ಮನ್ನು ಕೊಂದು ಧರ್ಮ-ರಾಜನನ್ನು ಸಿಂಹಾಸನವನ್ನೇರಿಸುವ ಅವರ ಹೊಂಚನ್ನು ನಮ್ಮ ಚಾರರು ನನಗೆ ತಿಳಿಸಿದರು. ನಾನು ಜ್ಞಾತಿಕ್ಷಯವಾಗುವುದೆಂದು ಹೆದರಿ ಅಜ್ಞಾತಸಮಯವಾಗದಿದ್ದುದರಿಂದ ಅವರನ್ನು ವನವಾಸಕ್ಕೆ ಹೋಗುವಂತೆ ಹೇಳಿ ಕಳಿಸಿದೆನು. ಅದನ್ನೆಲ್ಲಗಳೆದು ವಾಸುದೇವನು ನಮ್ಮನ್ನೆಲ್ಲ ಅಳಿಸಿ, ನಿನ್ನನ್ನು ಮಾತ್ರ ಉಳಿಸಬೇಕೆಂದು ನಿಶ್ಚಯಿಸಿದನು. ಅವರೆಲ್ಲರೂ ಅಂತೆಯೇ ನಿಶ್ಚಯಿಸಿ ಹಿಂಸಾಮಯವಾದ ಯುದ್ಧವನ್ನು ಹೂಡಿದರು. ಇದನ್ನರಿತು ಅದಕ್ಕೆ ಪ್ರತಿಯಾಗಿ ನಾನು ಯುದ್ಧವನ್ನೇ ಹೂಡಿರುವೆನು. ಅವರಿಗೆ ಬಾಗಿ ಸಂಧಿಮಾಡಿ ಜೀವಿಸುವುದಕ್ಕಿಂತ ಯುದ್ಧಮರಣವೇ ಲೇಸೆಂದು ನನ್ನ ಮತ. ನೀನೂ ನಮ್ಮ ಶ್ರ�ೀಯಸ್ಸಿಗಾಗಿ ಇತರರ ಹಿತವನ್ನು ಲೆಕ್ಕಿಸದೆ ರಾಜ್ಯವನ್ನೆಲ್ಲ ನನ್ನಲ್ಲಿಟ್ಟಿರುವೆ. ಅದಕ್ಕಾಗಿ ಕಾದು ಕುಲವನ್ನೇ ನಾಶಮಾಡಲಿರುವರು ಪಾಂಡವರು. ನಾನು ಕುಲನಾಶಕ್ಕಾಗಿ ಚಿಂತಿಸುತ್ತಿರಲು ಭೀಷ್ಮ, ದ್ರೋಣ, ಕೃಪಾಶ್ವತ್ಥಾಮರು ನನಗೆ ಧೈರ್ಯವನ್ನು ತುಂಬಿ, ಅವರ ದರ್ಪವನ್ನು ಮುರಿಯುವೆವೆಂದು ಆಶ್ವಾಸನವಿತ್ತಿರುವರು. ಅವರಲ್ಲಿ ಪ್ರತಿ ವೀರನೂ ಪಾಂಡವರನ್ನೆಲ್ಲ ಗೆಲ್ಲಲು ಸಮರ್ಥನಿರುವನು. ಭೀಷ್ಮನು ಸಕಲರನ್ನು ಗೆದ್ದು, ಪರಶುರಾಮನನ್ನೂ ಮೆಚ್ಚಿಸಿರುವನು. ಪೃಥಿವಿಯು ವೀರರ ಕೈಲಿದೆ; ಭೀರುಗಳ ಕೈಲಲ್ಲ. ಪಾಂಡವರೂ ಮೊದಲಿನಂತೆ ಬಲವಂತರಾಗಿಲ್ಲ. ರೆಕ್ಕೆ ಕಡಿದ ಪಕ್ಕಿಗಳಂತೆ ವೀರ್ಯಹೀನರಾಗಿರುವರು. ರಾಜ್ಯವೆಲ್ಲ ನಮ್ಮ ವಶದಲ್ಲಿದೆ. ನಮ್ಮ ಸಹಾಯಕ್ಕೆಂದು ಬಂದವರೂ ನಮಗಾಗಿ ಅಗ್ನಿ ಪ್ರವೇಶವನ್ನಾದರೂ ಮಾಡಲು ಸಿದ್ಧರಿರುವರು. ಪಾಂಡವರ ಮಿಥ್ಯಾ ಪ್ರಶಂಸೆಯನ್ನು ಮಾಡುವ ಹೊಗಳುಭಟ್ಟರ ಮಾತನ್ನು ಕೇಳಿ ನೀನು ಅಳುತ್ತಿರುವೆ! ಅದನ್ನು ನೋಡಿ ಅವರೆಲ್ಲರೂ ನಗುವುದಿಲ್ಲವೇ ? ನಮ್ಮ ಸೇನೆಯನ್ನು ಇಂದ್ರನೂ ಗೆಲ್ಲಲಾರನು. ಬ್ರಹ್ಮನೂ ಕೊಲ್ಲಲಾರನು. ಧರ್ಮಜನು ಪುರವನ್ನು ಬಿಟ್ಟು ಐದು ಗ್ರಾಮಗಳಿಗಾಗಿ ಬೇಡುತ್ತಿರುವನೆಂದರೆ ನನ್ನ ಪ್ರಭಾವಕ್ಕೆ ಹೆದರಿ ಅಲ್ಲವೇ ? ಭೀಮನಿಗೇಕೆ ಹೆದರುವೆ? ನಾನು ಬಲರಾಮನನ್ನು ಆಶ್ರಯಿಸಿ ಯುದ್ಧವನ್ನು ಕಲಿತಿರುವೆನು. ಅವನಿಗೆ ಸಮನಾಗಿ, ಭೀಮನಿಗೂ ಬಲಾಧಿಕನಾದ ನನ್ನನ್ನು ಯಾರೂ ಗೆಲ್ಲಲಾರರು ಒಂದೇ ಪೆಟ್ಟಿಗೆ ಭೀಮನನ್ನು ಯಮಸದನಕ್ಕಟ್ಟಿ ವಿಜೃಂಭಿಸುವ ನನ್ನ ಪ್ರಭಾವ ನಿನಗೆ ಗೊತ್ತಿಲ್ಲ. ಅವನೊಡನೆ ಗದಾಯುದ್ಧಕ್ಕಾಗಿ ನಾನು ಕಾದಿರುವೆನು. ಅವನನ್ನು ನಾನು ಕೊಂದ ತತ್‍ಕ್ಷಣವೇ ಕರ್ಣಾದಿ ವೀರರು ಹಲ್ಲುಕಿತ್ತಿದ ಹಾವಿನಂತಾದ ಅರ್ಜುನನನ್ನು ಕೊಂದುಬಿಡುವರು. ಭೀಷ್ಮಾದಿ ಶತ ಯೋಧರು ಮುತ್ತಿ ಒಬ್ಬ

ಅರ್ಜುನನನ್ನು ಕೊಲ್ಲಲಾರರೇ ? ಪಿತಾಮಹನು ಸ್ವಚ್ಛಂದಮರಣನು; ದ್ರೋಣಾಚಾರ್ಯನು ಧನುರಾಚಾರ್ಯನೆನಿಸಿ ದುರ್ನಿರೀಕ್ಷ್ಯನಾಗಿರುವನು. ಕೃಪಾಶ್ವತ್ಥಾಮರು ಅವಧ್ಯರೇ. ಇವರನ್ನೆದುರಿಸಿ ಇಂದ್ರನೂ ಚಿಂತಿಸಬೇಕಾಗುವುದು. ಇವರೆಲ್ಲರ ಸಮನಾದ ಕರ್ಣನು ನನ್ನ ಪ್ರಾಣಸಖನಾಗಿರುವನು. ಶಚಿಗಾಗಿ ಯಾಚಿಸಿದ ದೇವೇಂದ್ರನಿಗೆ ಕುಂಡಲಗಳನ್ನಿತ್ತು, ಅವನಿಂದ ಪಡೆದ ಶಕ್ತಿಯು ಕರ್ಣನಲ್ಲಿದೆ. ಅದು ಅಮೋಘವು. ಅದರ ಹೊಡೆತದಿಂದ ಧನಂಜಯನು ತಪ್ಪಿಸಿಕೊಳ್ಳಲಾರನು. ವಿಜಯವು ನನ್ನ ಕೈಲಿರುವ ಫಲವೆಂದು ತಿಳಿ ! ಐದು ಜನ ಪಾಂಡವರು, ಸಾತ್ಯಕಿ, ಧೃಷ್ಟದ್ಯುಮ್ನರು ಈ ಏಳು ವೀರರು ದುರ್ಜಯರು ನಿಜ ! ಅವರನ್ನು ಬಿಟ್ಟು ಯಾವ ವೀರನಿರುವನಲ್ಲಿ? ಹೇಳು ! ನಮ್ಮಲ್ಲಿರುವ ವೀರರು ಅಸಂಖ್ಯಾತರು. ನಮ್ಮ ಸೈನ್ಯ ಹನ್ನೊಂದ ಕ್ಷೌಹಿಣಿಗಳು. ಅವರದು ಏಳೇ ! ನೀನು ಸುಮ್ಮನೇ ಭಯಪಡಬೇಡ ! ನಮಗೇ ಜಯವಿದು ನಿಜ !'

## ಸಂಜಯ ವಚನ—ಕರ್ಣನ ಅಸ್ತ್ರಸನ್ಯಾಸ

ಶ್ರೀ ವೈಶಂಪಾಯನನು ಜನಮೇಜಯನಿಗೆ ನಿರೂಪಿಸಿದನು—

ರಾಜನ್ ! ದುರ್ಯೋಧನನು ತಂದೆಯನ್ನು ಸಂತೈಸಿಸಿ, ಸೂತನ ಕಡೆ ತಿರುಗಿ 'ಸಂಜಯ ! ಸುಮ್ಮನೇ ಜೂಜಿನಲ್ಲಿ ಸೋತುಹೋದ ದಡ್ಡರನ್ನು ಹೊಗಳಬೇಡ ! ಅವರೆಂತು ಸನ್ನದ್ಧರಾಗಿರುವರು ? ಧರ್ಮರಾಜನೇನು ಮಾಡಲೆಣಿಸಿರುವನು ? ಅವರ ರಥ ತುರಗ ಶಸ್ತ್ರಾದಿ ಸನ್ನಾಹವನ್ನು ಅರಿತು ಬಂದಿರುವೆಯಾ ?' ಎಂದು ಕೇಳಿದನು.

ಸಂಜಯನು—'ರಾಜನ್ ! ಧರ್ಮರಾಜನು ಬಲು ಉತ್ಸಾಹದಿಂದಿರುವನು. ಅವನ ಏಳಕ್ಷೌಹಿಣಿಗಳ ಸೈನ್ಯವೂ ಸರ್ವಪ್ರಕಾರದಿಂದಲು ಅನುರಕ್ತವಾಗಿ, ಅವನ ಸೇವೆಗೆ ಸಿದ್ಧವಾಗಿರುವುದು. ವಿಶ್ವಕರ್ಮನು ಇಂದ್ರಾಜ್ಞೆಯಿಂದ ನಿರ್ಮಿಸಿದ ದಿವ್ಯ ರಥದಲ್ಲಿ ಶ್ವೇತವಾಹನವಾಗಿ ಅರ್ಜುನನು ಶಸ್ತ್ರಾಸ್ತ್ರಪರೀಕ್ಷಣವನ್ನು ಮಾಡುವಾಗ ನಾನು ಕಂಡೆನು. ಆ ರಥದ ಕುದುರೆಗಳು ಚಿತ್ರರಥನಿತ್ತವು. ನೂರು ಕುದುರೆಗಳಲ್ಲಿ ಕೆಲವು ಯುದ್ಧ ಹತವಾದರೆ ಮತ್ತೆ ದೇವಗಂಧರ್ವ ವರದಿಂದ ನೂರಾಗಿರುವವು. ಧ್ವಜವು ಭೀಮಸೇನನಲ್ಲಿ ಪ್ರಸನ್ನನಾಗಿ ವರವಿತ್ತ ವಾನರರಾಜನ ಪ್ರಕೃತಿಯಿಂದ ಶೋಭಿಸಿ, ರಥಕ್ಕೆ ಭಾರವಾಗದೆ, ಗಿಡಗಳಿಗೆ ಬಾಗದೆ ಶಕ್ರಧನುವಿನಂತೆ ವಿಚಿತ್ರ ವರ್ಣವಾಗಿದೆ. ವಾತವೇಗವಾದ ಶ್ವೇತತುರಗಗಳನ್ನದಕ್ಕೆ ಕಟ್ಟಿ, ಅಕ್ಷಯತೂಣಗಳನ್ನೆರಡನ್ನು ಧರಿಸಿಬರುವ ಗಾಂಡೀವಧರನು ಭೂಮಿ, ಅಂತರಿಕ್ಷ, ಸ್ವರ್ಗಗಳಲ್ಲಿಯೂ ಅವ್ಯಾಹತನಾಗಿ ಸಂಚರಿಸಬಲ್ಲನು. ಅಂತಹ ದಿವ್ಯ ತುರಗಗಳನ್ನು ಅರ್ಜುನನು ತನ್ನ ಸೋದರರಿಗಿತ್ತಿರುವನು. ಭೀಮಸೇನನ ಕುದುರೆಗಳು ಸಾರಂಗಗಳಂತೆ ಓಡಬಲ್ಲವು. ಕೃಷ್ಣ ಪಾಂಡುರ ಚಿತ್ರವರ್ಣವು, ತಿತ್ತಿರಿಪಕ್ಷಿವರ್ಣವು ಆದ ಕುದುರೆಗಳ ರಥದಲ್ಲಿ

ಸಹದೇವನು ವಿರಾಜಿಸುವನು. ನಕುಲನೂ ದೇವದತ್ತ ತುರಗಗಳ ರಥದಿ ಮೆರೆಯುತ್ತಿರುವನು. ಇನ್ನಿತರರೂ ಕವಚಖಡ್ಗಾದಿ ದಿವ್ಯಾಯುಧಸನ್ನದ್ಧರಾಗಿರುವರು" ಎಂದನು.

ಧೃತರಾಷ್ಟ್ರನು 'ಯಾರಾರು ಬಂದಿರುವರು ಪಾಂಡುನಂದನರಿಗಾಗಿ ಕಾದಲು?' ಎಂದು ಕೇಳಲು ಸಂಜಯನಿಂತೆಂದನು—'ರಾಜನ್! ಶ್ರೀಕೃಷ್ಣ, ಸಾತ್ಯಕಿ, ಚೇಕಿತಾನರು ಯಾದವರು. ಅವರು ತಂದ ಸೈನ್ಯ ಎರಡಕ್ಷೌಹಿಣಿಗಳು. ದ್ರುಪದರಾಜನು ತನ್ನ ಹತ್ತು ಸುತರಿಂದ ಒಂದಕ್ಷೌಹಿಣಿಯಿಂದ ಬಂದಿರುವನು. ವಿರಾಟನು ಶಂಖೋತ್ತರಕುಮಾರರಿಂದಲು, ಸೂರ್ಯದತ್ತ ಮದಿರಾಕ್ಷರಿಂದಲು ಕೂಡಿ ಒಂದಕ್ಷೌಹಿಣಿ ತಂದಿರುವನು. ಸಹದೇವ (ಜರಾಸಂಧಸುತ) ಧೃಷ್ಟಕೇತು (ಶಿಶುಪಾಲಸುತಗಳು) ಎರಡಕ್ಷೌಹಿಣಿಯಿಂದ ಬಂದಿರುವರು. ಕೇಕಯರು ಒಂದಕ್ಷೌಹಿಣಿ ತಂದಿರುವರು. ಪಾಂಡವರ ಅಕ್ಷೌಹಿಣಿಯಿಂದ ಕೂಡಿ ಏಳಕ್ಷೌಹಿಣಿಗಳಿಗೆ ಅಯೋನಿಜನಾದ ಧೃಷ್ಟದ್ಯುಮ್ನನು ಸರ್ವಸೇನಾಧಿಪತಿಯಾಗಿರುವನು. ಶಿಖಂಡಿಯು ಭೀಷ್ಮನನ್ನು; ಧರ್ಮರಾಜನು ಶಲ್ಯನನ್ನು; ಸುತಸೋದರರ ಸಹಿತನಾದ ದುರ್ಯೋಧನನನ್ನು ಭೀಮನು; ಕರ್ಣಾಶ್ವತ್ಥಾಮ ವಿಕರ್ಣಸೈಂಧವರನ್ನು ಅರ್ಜುನನು; ಪಂಚಕೇಕಯರು ಇಲ್ಲಿರುವ ಕೇಕಯರನ್ನು, ಕುರುತರುಣರನ್ನು ಅಭಿಮನ್ಯುವು, ದ್ರೋಣನನ್ನು ಧೃಷ್ಟದ್ಯುಮ್ನನು, ಚೇಕಿತಾನ ಸೋಮದತ್ತನನ್ನು, ಕೃತವರ್ಮನನ್ನು ಸಾತ್ಯಕಿಯು, ಸಹದೇವನು ಶಕುನಿಯನ್ನು, ಉಲೂಕನನ್ನು ನಕುಲನು, ಇತರರಿತರನ್ನು ಪ್ರತಿವೀರರೆಂದಾರಿಸಿ, ಕೊಲ್ಲಲಿರುವರಂತೆ! ಇದ್ದುದನ್ನರುಹಿದೆನು. ಮುಂದಿನ ಕಾರ್ಯವು ನಿನಗೆ ಸೇರಿದೆ.' ಅದನ್ನು ಕೇಳಿ ಧೃತರಾಷ್ಟ್ರನು ಭೀತನಾಗಿ 'ರಾಜನು ಯುಧಿಷ್ಠಿರನು, ರಕ್ಷಕನು ಮಧುಸೂದನನು, ಯೋಧಮುಖ್ಯರು ಭೀಮಾರ್ಜುನರು, ಸೇನಾಪತಿ ಧೃಷ್ಟದ್ಯುಮ್ನನು—ಇಂತಹ ಲೋಕೈಕವೀರರಿಂದ ಕಲಹವು ಒಳಿತಲ್ಲವೆಂದು ನಾನು ಕುಟ್ಟಿಕೊಂಡರೂ ಕೇಳದೆ ದುರ್ಯೋಧನನು ಹಾಳಾಗುವನಲ್ಲ! ಎಂದು ಅಂಗಲಾಚಿದನು.

ದುರ್ಯೋಧನನು 'ಜನಕ! ನಾವಿರ್ವರೂ ಕುರುಕುಲದವರು. ಈರ್ವರೂ ಭೂಮಿಗೋಚರರು. ಇನ್ನು ಪಾಂಡವರಿಗೆ ಯಾವ ಕೋಡು ಮೂಡಿದೆಯೆಂದು ಅಳುತ್ತಿರುವೆ? ಭೀಷ್ಮಾದಿವೀರರು ಅಮರರನ್ನೂ ಜಯಿಸಬಲ್ಲರು. ಜಿಂಕೆಮರಿಗಳನ್ನು ಬಲೆಬೀಸಿ ಹಿಡಿದಂತೆ ಅನಾಯಾಸವಾಗಿ ನಾವು ಪಾಂಡವರನ್ನು ಕೊಲ್ಲುವೆವು.' ಎಂದನು. ಆಗ ಧೃತರಾಷ್ಟ್ರನು ಸಂಜಯನನ್ನು ಕುರಿತು 'ಸಂಜಯ! ನನ್ನ ಮಗನು ಉನ್ಮತ್ತನಂತೆ ಮಾತಾಡುತ್ತಿರುವನು. ಇರಲಿ! ಪಾಂಡವರನ್ನು ಉತ್ಸಾಹಗೊಳಿಸುವ ವೀರರಿನ್ನೂ ಯಾರಿರುವರಲ್ಲಿ?' ಎಂದು ಕೇಳಿದನು.

ಸಂಜಯನು 'ಧೃಷ್ಟದ್ಯುಮ್ನನಿಗೆ ಸೇನಾಪತಿಪಟ್ಟಗಟ್ಟಲು ನಿಶ್ಚಯಿಸಿ, ಪಾಂಡವನು 'ಮಹಾವೀರ' ನಿನ್ನ ಧೈರ್ಯ ವೀರ್ಯಗಳನ್ನವಲಂಬಿಸಿ ನಿಂತಿರುವೆವು.

ಯುದ್ಧಸಾಗರದ ಪಾರ ಸೇರಿಸುವ ಭಾರ ನಿನ್ನದು. ನೀನೊಬ್ಬನೇ ಕೌರವರನ್ನೆಲ್ಲ ನಾಶಮಾಡಬಲ್ಲೆ ! ಸಂಗ್ರಾಮರಂಗದಲ್ಲಿ ಭೀಷ್ಮಾದಿ ಮಹಾರಥಿಕರಿಗೆ ಹೆದರಿ ಓಡುವ ನಮ್ಮ ಸೈನಿಕರನ್ನು ಹುರಿದುಂಬಿಸಿ, ಹಿಂದಿರುಗುವಂತೆ ಮಾಡು ! ಶೌರ್ಯದಿಂದ ವಿಜೃಂಭಿಸು !' ಎಂದು ಕೇಳಿಕೊಂಡನು. ಆಗ ವೈಯುಬ್ಬಿಸಿ ಧೃಷ್ಟದ್ಯುಮ್ನನು ನನ್ನನ್ನು ನೋಡಿ, 'ಸೂತ ! ಹೇಳು ದುರ್ಯೋಧನನಿಗೆ ! ಹೇಳು ಕರ್ಣನಿಗೆ ! ದ್ರೋಣಾಚಾರ್ಯನಿಗೆ ವಂದಿಸಿ ಹೇಳು ! ಇನ್ನು ಸಂಧಿಯಾಗದು. ದೇವಗುಪ್ತನಾದ ಅರ್ಜುನನನ್ನು ಕೊಲ್ಲಲಾಗದು. ಭೀಮನನ್ನೆದುರಿಸಿ ನಿಲ್ಲಲಾಗದು. ಕೊಡಿ ರಾಜ್ಯ ವನ್ನು ! ಇಲ್ಲದಿರೆ ರಣದಲ್ಲಿ ಬಿಡಿ ಪ್ರಾಣವನ್ನು !' ಎಂದು ಸಂದೇಶವಿತ್ತನು' ಅನ್ನಲು ಧೃತರಾಷ್ಟ್ರನು 'ದುರ್ಯೋಧನ ! ನಮಗೆ ಜೀವಿಸಲು ಅರ್ಧರಾಜ್ಯ ಸಾಲದೇ ? ಬದುಕಿದ್ದರೆ ಸಾಕಲ್ಲವೇ? ಕೊಡು ಅವರಿಗೆ ಅವರ ಭಾಗವನ್ನು ! ಮೃತ್ಯುವನ್ನಪ್ಪಬೇಡ! ನನಗಂತೂ ಯುದ್ಧವೆಂದರೆ ಮರಣಕಂಪವಾಗುತ್ತಿದೆ. ಭೀಷ್ಮದ್ರೋಣಗುರುಸುತ ಕೃಪರೂ ಯುದ್ಧವನ್ನು ಬೇಡರು. ಬಾಹ್ಲೀಕ ಸೋಮದತ್ತಾದಿಗಳಿಗೂ ಹಿತ ವಾಗದು. ಕೇಳು ಹಿತರ ಮಾತನ್ನು ! ಯಮನ ಮನೆಗೆ ಹೋಗುತ್ತಾ ನಿನ್ನನ್ನೂ ಕೊಂಡು ಪೋಗುವ ಕರ್ಣ ಶಕುನಿ ದುಶ್ಶಾಸನರ ಮಾತಿಗೆ ಮರುಳಾಗಬೇಡ !' ಎಂದು ಬೇಡಿದನು.

ದುರ್ಯೋಧನನು 'ರಾಜನ್ ! ನೀ ಪೇಳಿದ ಮಹಾನುಭಾವರನ್ನು ನಾನು ನಂಬಿಲ್ಲ; ಅವರೆಲ್ಲ ನನಗೆ ಹಿತಶತ್ರುಗಳು. ನನ್ನ ಮಿತ್ರನೆಂದರೆ ಕರ್ಣನೊಬ್ಬನೇ ! ಅವನೂ ನಾನೂ ಆಲೋಚಿಸಿ ಯುದ್ಧಯಾಗದಲ್ಲಿ ಧರ್ಮಜ(ಯುಧಿಷ್ಠಿರ)ಪಶುವನ್ನು ಬಲಿಕೊಡಲು ನಿಶ್ಚಯಿಸಿರುವೆವು. ಶರಗಳೇ ದರ್ಭೆ, ಯಶವೇ ಹವಿಸ್ಸು, ಶತ್ರುವಧ ದಿಂದ ಪ್ರಕಾಶಿಸಲಿರುವ ನಮ್ಮನ್ನು ತಡೆಯಬೇಡ ! ನಾನು ಪಾಂಡವರನ್ನು ಕೊಂದು ಸರ್ವಮಹೀರಾಜ್ಯವನ್ನಾಳುವೆನು. ಇಲ್ಲದಿರೆ ಪಾಂಡವರು ನನ್ನನ್ನು ಕೊಂದು ಆಳಲಿ! ಅವರೊಡಗೂಡಿ, ರಾಜ್ಯವನ್ನು ಹಂಚಿ, ಬದುಕುವದೆನಗೆ ಬೇಡ ! ಸೂಜಿಯ ಕೊನೆಗೆ ಪತ್ತಿದ ಮಣ್ಣನ್ನೂ ನಾನಾಗಿ ನನ್ನ ಕೈಯಿಂದ ಅವರಿಗೆ ಕೊಡೆನು. ಇದು ನನ್ನ ನಿಶ್ಚಯ ಎಂದನು.'

ಅವನ ಮೂರ್ಖತನವನ್ನು ನೋಡಿ ಧೃತರಾಷ್ಟ್ರನು ನಿರ್ವಿಣ್ಣನಾಗಿ 'ಆಯಿ-ತಿನ್ನು ನನ್ನ ಸುತರೆಲ್ಲರು ದುರ್ಯೋಧನಾಪರಾಧದಿಂದ ಸತ್ತಂತೇ ಸರಿ.' ಹುಲಿಗಳಿಗೆ ಸಿಕ್ಕ ಕುರಿಗಳಂತೆ, ದೀರ್ಘ ಬಾಹುಬಲವಂತನ ಕೈಲಿ ಸಿಕ್ಕ ತರುಣಿಯಂತೆ ಪರಾಭವ ವನ್ನೂ ಮರಣವನ್ನೂ ಹೊಂದುವ ಕೌರವರಿಗಿನ್ನು ತರಣೋಪಾಯವಿಲ್ಲ. ಭೀಮ ನಿಂದ ಕೆಡಲ್ಪಟ್ಟ ಗಜಯೂಥಗಳನ್ನೂ ಮಹಾರಥರನ್ನೂ ನೋಡಿದಾಗ ದುರ್ಯೋಧನ ! ನನ್ನ ಮಾತನ್ನು ನೆನೆಸುವೆ !' ಎಂದು ನುಡಿದು ಧೃತರಾಷ್ಟ್ರನು, ಸರ್ವ ಪೃಥಿವೀಪಾಲರ ಅಪ್ಪಣೆ ಪಡೆದು, ಏಕಾಂತದಲ್ಲಿ ಮತ್ತೆ ಸಂಜಯನಿಗೆ ಇಂತೆಂದನು—

'ಸಂಜಯ! ವಾಸುದೇವ ಧನಂಜಯರನ್ನು ನೀನೆಲ್ಲಿ ಕಂಡೆ? ಅವರು ನಿನಗೇನೆಂದು ಸಂದೇಶವಿತ್ತರು? ಹೇಳು!' ಎಂದು ಕೇಳಿದ ರಾಜನಿಗೆ ಸಂಜಯನು ಶ್ರೀಹರಿಸ್ಮರಣೆಯಿಂದ ವಿವಶನಾಗಿ ಮತ್ತೆ ತಿಳಿದಿಂತೆಂದನು—'ರಾಜನ್! ಮಹಾ ಆಶ್ಚರ್ಯವನ್ನು ಕೇಳು! ನಾನು ಅರ್ಜುನನ ಅಂತಃಪುರದಲ್ಲಿ ಅವರೀರ್ವರನ್ನು ಕಂಡೆನು. ಅಲ್ಲಿ ಅಭಿಮನ್ಯು ಯಮಳರಿಗೂ ಪ್ರವೇಶವಿಲ್ಲ. ಅಲ್ಲಿ ಕೃಷ್ಣಾರ್ಜುನರು ಸತ್ಯಾದೇವಿ ದ್ರೌಪದಿ ದೇವಿಯರೊಡನೆ ಪರ್ಯಂಕದಲ್ಲಿ ದಿಂಬಿಗಾತು ಕೂತಿದ್ದರು. ಚಂದನವನ್ನು ಹಚ್ಚಿ, ಹೂಮಾಲೆ ಧರಿಸಿ, ವರವಸ್ತ್ರಗಳನ್ನುಟ್ಟು, ದಿವ್ಯಾಭರಣಗಳನ್ನಿಟ್ಟು ಶೋಭಿಸುವ ದೇವೀ ದೇವರನ್ನು ನೋಡಿ, ಮಹದಾನಂದತುಂದಿಲನಾಗಿ, ಪಾದಾಂಗುಲೀ ಪಲ್ಲವಗಳಿಗೆ ದೃಷ್ಟಿಯಿಟ್ಟು ನಮಿಸಿದೆನು. ಕೇಶವನ ಪಾದಗಳು ಅರ್ಜುನನ ತೊಡೆಯಲ್ಲಿ ಶೋಭಿಸುತ್ತಿದ್ದವು. ಕೃಷ್ಣೆಯು ಮಂಚಸಮೀಪದಲ್ಲಿ ಕೆಳಗಿದ್ದ ಕಾಂಚನ ಪೀಠದಲ್ಲಿ ಕೂತು, ಅರ್ಜುನ ಪಾದಗಳನ್ನು ಸೇವಿಸುತ್ತಿದ್ದಳು. ನನ್ನನ್ನು ನೋಡಿ ದ್ರೌಪದಿ ದೇವಿಯು ಎದ್ದು ಸತ್ಯಾದೇವಿಯ ಸಮೀಪದಲ್ಲಿ ಹೋಗಿ ಕೂತಳು. ಅರ್ಜುನನು ಆ ಪೀಠವನ್ನು ಕಾಲಿನಿಂದ ನನ್ನ ಕಡೆ ಸರಿಸಿ ಕೂಡೆಂದನು. ಅದನ್ನು ಕೈಲಿ ಮುಟ್ಟಿ ನಾನು ಭೂಮಿಯಲ್ಲೇ ಕೂತೆನು. ಸರಿಸುವಾಗ ಅರ್ಜುನನ ಪಾದಗಳಲ್ಲಿದ್ದ ಊರ್ಧ್ವರೇಖಾಮಯವಾದ ಶುಭ-ಲಕ್ಷಣಗಳನ್ನು ಕಂಡು ನಾನು ಚಕಿತನಾದೆನು. ಏಕಾಸನಗತರಾಗಿ ಕೂತಿದ್ದ ಆ ಮಹಾನುಭಾವರು ಇಂದ್ರೋಪೇಂದ್ರರಂತೆ ಕಂಗೊಳಿಸಿದರು. ಆ ಕ್ಷಣವೇ 'ಇವರಿಗೆ ವಿರೋಧವೆಣಿಸುವ ದುರ್ಯೋಧನನು ಇನ್ನು ಬದುಕಲಾರನು. ದ್ರೋಣ-ಭೀಷ್ಮರನ್ನು ಜಂಬಗಾರ ಕರ್ಣನನ್ನು ನಂಬಿ ದುರ್ಯೋಧನನು ಕೆಡುವನು. ಇಂತಪ ಮಹಾನುಭಾವರನ್ನು ಸಹಾಯವಾಗಿ ಪಡೆದಿರುವ ಧರ್ಮರಾಜನ ಸಂಕಲ್ಪಗಳೀಡೇರಿದವು.' ಎಂದು ನಾನು ಚಿಂತಿಸಿ, ಭಯದಿಂದ ನಿಶ್ಚೇಷ್ಟನಾದೆನು. ಅವರಿತ್ತ ಫಲಪಾನಾದಿ ಸತ್ಕಾರಗಳನ್ನು ಸ್ವೀಕರಿಸಿ ಬಂದು, ತಲೆ ಮೇಲೆ ಕೈಗಳಿಟ್ಟು ಗೋವಿಂದ! ಗೋವಿಂದ! ಎನ್ನುತ್ತ ನಿಂತು ಸಂದೇಶವೇನೆಂದು ಪ್ರಾರ್ಥಿಸಿದೆನು. ಧನುರ್ಗುಣದಿಂದ ಕಿಣಗಟ್ಟಿದ ಕೈಯಿಂದ ಗೋವಿಂದನ ಶುಭಪಾದಾರವಿಂದವನ್ನು ಕೆಳಗಿಳಿಸಿ, ಅರ್ಜುನನು ಶ್ರೀಕೃಷ್ಣನ ಕಡೆ ನೋಡಿದನು. ಆಗ ಶ್ರೀಶನು ಇಂದ್ರಕೇತುವಿನಂತೆ ಎದ್ದು ಕೂತನು. ಸರ್ವಾಭರಣಭೂಷಿತನೂ ಇಂದ್ರಾದಿದೇವ ವಂದಿತನೂ ಆದ ಶ್ರೀಕೃಷ್ಣನನ್ನು ಕಣ್ಣಾರೆ ಕಂಡು ಧನ್ಯನಾದೆನು. ನನ್ನ ಜನ್ಮವೇ ಪಾವನವಾಯಿತು!

'ಶ್ರೀಕೃಷ್ಣನ ಮಧುರವಾಣಿಯು ಕಿವಿಗೆ ಅಮೃತವೆರೆದಂತಾಯಿತು— ಸಂಜಯ! ಧೃತರಾಷ್ಟ್ರನಿಗೆ, ಭೀಷ್ಮನಿಗೆ, ದ್ರೋಣನಿಗೆ ಮಿಕ್ಕ ಹಿರಿಯರಿಗೆ ನಮಸ್ಕಾರಗಳನ್ನು ತಿಳಿಸು! ಚಿಕ್ಕವರ ಕ್ಷೇಮ ವಿಚಾರಿಸು! ಆ ನಮ್ಮ ಸಂದೇಶವನ್ನು ತಿಳಿಸು. ಬೇಗ ಬೇಗ ಕಾರ್ಯಗಳನ್ನು ಮುಗಿಸಿ! ಯಜ್ಞಮಾಡಿ! ದಾನಕೊಡಿ! ಪತ್ನಿಯರನ್ನು ಕೂಡಿ! ಸುತಹಿತರಿಂದ ಮಾತಾಡಿ! ಮುಂದೆ ಮತ್ತೆ ಸಿಗದ

ಕೆಲಸಗಳಿವು. ಕೇಳಿ! ಮಹಾಭಯವು ನಿಮ್ಮ ಮನೆಗಳ ಅಂಗಳದಲ್ಲಿ ವಿಕಟಾಟ್ಟ ಹಾಸವನ್ನು ಮಾಡುತ್ತಿದೆ. ಧರ್ಮರಾಜನ ವಿಜಯಮಾಲೆ ಸಿದ್ಧವಾಗಿದೆ. ಕೃಷ್ಣೆ— ಎನ್ನ ತಂಗಿ ಕೃಷ್ಣೆ, ವಸ್ತ್ರಾಪಹರಣಕಾಲದಲ್ಲಿ ಗೋವಿಂದಾ! ಎಂದೊದರಿದ ಭಕ್ತಿಯ ಋಣವಿನ್ನೂ ತೀರಿಲ್ಲ. ವಸ್ತ್ರಪ್ರದಾನ ಮಾತ್ರದಿಂದ ಅದು ತೀರದು. ಸೀರೆಸೆಳೆದ, ಸೆಳೆಸಿದ, ಸೆಳೆದುದನ್ನು ವಾರಿಸದ, ಸರ್ವದುರ್ಜನರ ಪ್ರಾಣಪಕ್ಷಿಗಳನ್ನು ಅವರವರ ಶರೀರಕುಂಜಗಳಿಂದ ಸೆಳೆದಾಗ ಅದು ತೀರುವುದು. ಅದನ್ನು ಮಾಡಿಸದೆ ಬಿಡೆನೆಂದು ನನ್ನ ಮಾತಾಗಿ ಅವರಿಗೆ ಹೇಳು! ಗಾಂಡೀವವನ್ನು ಧರಿಸಿ ಮೆರೆವ ಪಾರ್ಥನಿಗೆ ನಾನು ಬೆಂಗಾವಲಾಗಿರುವಾಗ ಸಾಕ್ಷಾತ್ ಪುರಂದರನೂ ಗೆಲ್ಲಲಾರನು. ಅರ್ಜುನ ನನ್ನು ಗೆಲ್ಲಬೇಕೆನ್ನುವರು ಮೊದಲು ಕೈಗಳಿಂದ ಭೂಮಂಡಲವನ್ನೆತ್ತಲಿ! ಕೆಂಗಣ್ಣಿ-ನಿಂದ ಸರ್ವಸಂಹಾರ ಮಾಡಲಿ! ದೇವತೆಗಳನ್ನು ಸ್ವರ್ಗದಿಂದ ಕೆಡಹಲಿ! ಆಮೇಲೆ ಅರ್ಜುನನ ಮಾತು. ಅವನನ್ನು ಕೊಲ್ಲುವವರು ದೇವಾಸುರಸಿದ್ಧಯಕ್ಷನಾಗ ಗಂಧರ್ವರಲ್ಲಿಲ್ಲ. ಅವನೊಬ್ಬನೇ ಬಂದಾಗ ವಿರಾಟನಗರದಲ್ಲಿ ನಿಮಗಾದ ಪಾಡು ನೆನೆಯಿರಿ! ಅವನಿಗೆ ನಮ್ಮ ಭೀಮಸೇನನು ಜೋಡಾದಾಗ ನಾವು ಮೂರ್ಲೋಕ ಗಳನ್ನೂ ಗೆಲ್ಲಬಲ್ಲೆವು.' ಇಂತಹ ಗಂಭೀರ ಮಧುರ ವಚನವನ್ನಾಲಿಸಿ ಅರ್ಜುನನು ಆನಂದಭರಿತನಾದನು. ರಾಜನ್! ನನ್ನ ಮನದಿ ಆಶ್ಚರ್ಯ ಭಯ ಸಂಭ್ರಮಗಳು ಮೂಡಿ ನಾನು ಅವರಿಗೆ ವಂದಿಸಿ, ಬಂದೆನು' ಎಂದನು.

ಆಗ ಧೃತರಾಷ್ಟ್ರನು ಪಾಂಡವಗುಣಗಳನ್ನು ತನ್ನವರ ದೋಷಗಳನ್ನು ತೂಗಿ ನೋಡಿ, ದೇವಮಾನುಷ ಶಕ್ತಿ ಸಂಪನ್ನರಾದ ಪಾಂಡವರಿಗೆ ಕೇವಲ ಮನುಜ ಶಕ್ತಿ ಸಂಪನ್ನರಾದ ಸುತರು ಸಮರಲ್ಲವೆಂದು ಮನಗಂಡು ಸಭೆಯಲ್ಲಿ ಮಗನನ್ನು ಸೇರಿ ಇಂತೆಂದನು—

'ದುರ್ಯೋಧನ! ನನ್ನ ಚಿಂತೆ ಅಪಾರವಾಗಿದೆ. ನನಗೆ ನಿಮ್ಮ ವಿಪತ್ತನ್ನು ಕಂಡು ನಿದ್ದೆ ಬಾರದಾಗಿದೆ. ಲೋಕದಲ್ಲಿ ಸರ್ವರೂ ಸ್ವಸಂತಾನವನ್ನು ಪ್ರೀತಿಸುವ ರೆಂಬುದು ಪ್ರತ್ಯಕ್ಷಸಿದ್ಧವಾಗಿದೆ. ಅಂತೆಯೇ ಸಜ್ಜನರೂ ಉಪಕಾರಕ್ಕೆ ಪ್ರತ್ಯುಪ-ಕಾರವನ್ನು ಮಾಡದೆಬಿಡರು. ಪಾಂಡವರಿಗೆ ಅಗ್ನಿಯು ಖಾಂಡವದಾಹದಿಂದ ಋಣಿ ಯಾಗಿರುವನು. ಅವರು ಧರ್ಮ ವಾಯು ಶಕ್ರ ನಾಸತ್ಯ ದಸ್ರರ ವರದಿಂದ ಜನಿಸಿ ಅವರ ಮಕ್ಕಳೆನಿಸಿರುವುದರಿಂದ ಆ ದೇವತೆಗಳು ಅವರಿಗೆ ಪ್ರೀತಿಯಿಂದ ಸಹಾಯ ಮಾಡುವರು. ಭೀಷ್ಮ-ದ್ರೋಣ-ಕೃಪಾದಿಗಳನ್ನು ಗುರುಗಳೆಂಬ ಭಯದಿಂದ ಬಿಟ್ಟು ಪಾಂಡವರು ದೇವಸಹಾಯಸಂಪನ್ನರಾಗಿ ನಿಮ್ಮನ್ನು ನಾಶಮಾಡುವರು. ಅರ್ಜುನನು ಒಂದೊಂದು ಸಲ ಐನೂರು ಬಾಣಗಳನ್ನು ಬಿಡಬಲ್ಲನಂತೆ. ಅವನು ಅಜೇಯನೆಂದು ಭೀಷ್ಮ-ದ್ರೋಣ-ಕೃಪಾಶ್ವತ್ಥಾಮ ಶಲ್ಯರಾದಿ ಮಧ್ಯಸ್ಥರೆಲ್ಲರೂ ಒಪ್ಪಿರುವರು. ಈ ಕುಲನಾಶಕವಾದ ಯುದ್ಧವನ್ನು ಮಾಡಬೇಡ! ಸಂಧಿಗೆ ಒಪ್ಪು!'

*

ಆ ಮಾತಿಗೆ ಕೋಪಿಸಿ ದುರ್ಯೋಧನನು 'ಜನಕ! ಕಾಮದ್ವೇಷಗಳನ್ನು ಬಿಟ್ಟು, ವೈರಾಗ್ಯದಿಂದ ದೇವತ್ವವನ್ನು ಪಡೆದವರೆಂದು ಕೃಷ್ಣದ್ವೈಪಾಯನನೇ ನನಗೆ ತಿಳಿಸಿರುವನು. ಪರಶುರಾಮನೂ ಅಂತೇ ಹೇಳಿರುವನು. ಕಾಮ ಕ್ರೋಧಗಳಿಗೆ ವಶರಾಗದ ದೇವತೆಗಳು ಕಡಿದಾಡುವ ಪಾಂಡವರಿಗೆ ಸಹಾಯವಾಗಿ ಬರುವರೇ? ಬಂದರೆ ಬಿಡುವೆವೇ? ಅವರ ಪ್ರಯತ್ನವು ನಿಷ್ಫಲವಾಗುವುದೆಂದು ತಿಳಿ! ನಾನು ಸಾಮಾನ್ಯನಲ್ಲ ಕೇಳು! ಮಂತ್ರಶಕ್ತಿಯಿಂದ ನಾನು ಅಗ್ನಿಯನ್ನಾರಿಸಬಲ್ಲೆನು. ಲೋಕಗಳನ್ನು ಕಣ್ಣಿಂದ ನೋಡಿ ಸುಡಬಲ್ಲೆನು. ನಾನು ದೇವತೆಗಳಿಗೆ ಕಡಿಮೆಯಲ್ಲ. ಒಡೆದು ಚೂರಾಗಿಸಿ ಭೂಮಿಯನ್ನು ಮತ್ತೆ ಸ್ಥಾಪಿಸಬಲ್ಲೆನು. ಜಂಗಮಸ್ಥಾವರಾತ್ಮಕವಾದ ಜಗವನ್ನು ಬೇಕಾದಂತೆ ಕೆಡಿಸುವ ಗಾಳಿ-ಮಳೆಗಳನ್ನು ನಿಲ್ಲಿಸಬಲ್ಲೆನು. ನನ್ನ ಕುದುರೆಗಳೂ ಬೇಕಾದೆಡೆ ಹೋಗಬಲ್ಲವು. ವ್ಯಾಲಮೃಗಗಳು ನನ್ನ ಮಂತ್ರ ಶಕ್ತಿಗೆ ಮೆತ್ತಗಾಗುವವು. ನನ್ನ ದ್ವೇಷಿಗಳನ್ನು ದೇವತೆಗಳು ಯಾರೂ ರಕ್ಷಿಸಲಾರರು. ಹಾಗಿದ್ದರೆ ಪಾಂಡವರನ್ನು ವನವಾಸಾದಿ ಕಷ್ಟಪಡದಂತೆ ಅವರು ಕಾಪಾಡುತ್ತಿರಲಿಲ್ಲವೇ? ನನ್ನ ಶತ್ರುಗಳು ಬದುಕಿಲ್ಲ; ನನ್ನ ಮಿತ್ರರು ಸತ್ತಿಲ್ಲ. ನನ್ನ ಮಾತು ಸುಳ್ಳಾಗಿಲ್ಲ. ನನ್ನ ಮಹಿಮೆ ಎಲ್ಲರಿಗೂ ಗೊತ್ತಿದೆ. ನಿನಗೆ ಸಮಾಧಾನಕ್ಕೆಂದು ಹೇಳಿದೆನಾಗಲಿ, ಆತ್ಮಪ್ರಶಂಸೆಗಾಗಿ ಅಲ್ಲ. ಪಾಂಡವರನ್ನೇ ಏಕೆ? ಸಾತ್ಯಕಿಯನ್ನೂ ಕೊನೆಗೆ ಶ್ರೀಕೃಷ್ಣನನ್ನೂ ದುರ್ಯೋಧನನು ಗೆದ್ದನೆಂದು ನೀನೇ ಕೇಳುವೆ! ದ್ರೋಣ-ಕೃಪ-ಭೀಷ್ಮರ ಅಸ್ತ್ರವಿದ್ಯೆ ನನ್ನಲ್ಲಿ ಕಲೆತಿದೆ, ಭಯಪಡಬೇಡ! ಎಂದನು.

ಧೃತರಾಷ್ಟ್ರನು ಮತ್ತೆ ಪಾರ್ಥನ ವಿಷಯವನ್ನು ತಿಳಿಯಲು ಸಂಜಯನನ್ನು ಪ್ರಶ್ನಿಸಲಿರುವಾಗ, ಆವನನ್ನು ನಿರ್ಲಕ್ಷಿಸಿ, ಕರ್ಣನು ದುರ್ಯೋಧನನ ಸಂತೋಷಕ್ಕಾಗಿ ಸಭೆಯಲ್ಲಿ ಇಂತೆಂದನು—'ರಾಜನ್! ಶ್ರೀ ಪರಶುರಾಮನು ನನಗೆ–ಸುಳ್ಳಾಡಿದನೆಂಬ ಕಾರಣದಿಂದ, ಶಾಪವನ್ನಿತ್ತಿರುವನು ನಿಜ! ಅದರಂತೆ ಬ್ರಹ್ಮಾದಿ ಅಸ್ತ್ರಗಳು ನನಗೆ ಪ್ರತಿಭಾತವಾಗದಿರುವುದು ಅಂತ್ಯಕಾಲದಲ್ಲಿ! ಈಗ ಅಲ್ಲ. ಆ ಮಹರ್ಷಿಯು ಸಾಗರ ಸಹಿತವಾದ ಸಮಗ್ರ ಪೃಥಿವಿಯನ್ನೂ ಬೇಕಾದರೆ ಸುಟ್ಟು ಅಂತೇ ಸೃಜಿಸಬಲ್ಲನು ಅಂತಹವನು ನನ್ನ ಮಹಾಪರಾಧವನ್ನು ಸಹಿಸಿರುವನೆಂದರೆ, ನಿನಗೆ ನನ್ನಿಂದ ಸಹಾಯವಾಗಲೆಂದೇ ಅಲ್ಲವೇ? ಅಂದಮೇಲೆ ಧೈರ್ಯಗೆಡಬೇಡ! ನಿಮಿಷಮಾತ್ರದಲ್ಲಿ ಪಾರ್ಥ ಪಾಂಚಾಲ ಮಾತ್ಸ್ಯರನ್ನು ಅಸ್ತ್ರಬಲದಿಂದ ಸುಟ್ಟು, ನಿನ್ನನ್ನು ಸರ್ವ ಭೂಮಿಗೆ ಪಟ್ಟಗಟ್ಟುವೆನು. ಭೀಷ್ಮದ್ರೋಣಾದಿಗಳು ಸುಮ್ಮನಿರಲಿ! ನಾನೊಬ್ಬನೇ ಹೋಗಿ ಪಾರ್ಥರನ್ನು ಕೊಂದುಬರುವೆನು' ಎಂದನು.

ಆ ಮಾತನ್ನು ಸಹಿಸದೆ ಭೀಷ್ಮನು,—'ಕರ್ಣ! ಮೃತ್ಯುಕಾಲವು ಒದಗಿ ಬಾಯಿಗೆ ಬಂದಂತೆ ಮಾತಾಡುತ್ತಿರುವೆ! ನೀನು ಸತ್ತರೆ ಪಾಪ! ಧೃತರಾಷ್ಟ್ರಪುತ್ರರೂ ಸತ್ತಂತಾದಾರು! ಅದಕ್ಕೆ ನಿನ್ನನ್ನು ಕಾಪಾಡಿಕೋ! ಸಾಯಬೇಡ! ಖಾಂಡವದಹನವನ್ನು ಸಾಧಿಸಿದ ಪಾರ್ಥಕೃಷ್ಣರು ಕೌರವ ದಹನವನ್ನು ಮಾಡಲು ಬರುತ್ತಿರುವರು.

ನಿನ್ನ ಕೆಡುಮನವನ್ನು ಹಿಡಿದಿಡು ! ಅರ್ಜುನದ್ವೇಷ ನಿನಗೆ ಒಳಿತಲ್ಲ. ಅವನು ದುರ್ಜಯನು ತಿಳಿ! ಇಂದ್ರನಿತ್ತ ಶಕ್ತಿಯನ್ನು ಶ್ರೀಕೃಷ್ಣ ಚಕ್ರವು ಸುಟ್ಟು ನಾಶ ಮಾಡುವುದು.' ಮನೆಯಲ್ಲಿ ಪೂಜಿಸುವ ನಿನ್ನ ಸರ್ಪಶರವು ಅರ್ಜುನ ಬಾಣಗಳಿಗೆ ಧ್ವಂಸವಾಗುವುದು. ನಿನ್ನಂತಹರನ್ನೂ, ಇನ್ನೂ ದೊಡ್ಡ ವೀರರನ್ನೂ ಕೊಲ್ಲಬಲ್ಲ ಪಾರ್ಥನಿಗೆ ನರಕಾಸುರ ಸಂಹಾರಕನು, ಸಹಾಯನಾಗಿರುವನು' ಎಂದನು.

ಕರ್ಣನಾಮಾತಿಗೆ ಕಿಡಿಕಿಡಿಯಾಡಿದನು. ಪಿತಾಮಹನಾಡಿದಂತೆ ಕೃಷ್ಣನು ಮಹಾತ್ಮನೇ ನಿಜ ! ಆದರೆ ಅವನಕಿಂತಲೂ ನಾನಿನ್ನೂ ಮಹಾತ್ಮನು. ಈಗ ಭೀಷ್ಮ ನಾಡಿದ ಪರುಷವಚನಗಳ ಫಲವನ್ನವನು ಉಣ್ಣಲಿ ! ಭೀಷ್ಮನು ಸಾಯುವವರೆಗೂ ನಾನು ಅಸ್ತ್ರಸನ್ಯಾಸವನ್ನು ಮಾಡಿರುವೆನು ನನ್ನ ಸಹಾಯವವನಿಗಿಲ್ಲದಾಗಲಿ ! ನಾನೂ ಕಾದಿದರೆ ಅವನು ನನ್ನ ಬಲದಿಂದ ರಕ್ಷಿತನಾಗಬಹುದು. ಅದಿಲ್ಲದೆ ನಿಸ್ಸಾರ-ನಾಗಿ ಈತನು ಸಾಯಲಿ ! ಆಮೇಲೆ ನನ್ನ ಪ್ರಭಾವವನ್ನು ಭೂಪಾಲಕರು ನೋಡಿ ಮೆಚ್ಚಲಿ ! ಇಂತು ನುಡಿದು ಕರ್ಣನು ಅಸ್ತ್ರಸನ್ಯಾಸವನ್ನು ಮಾಡಿ, ಸಿಟ್ಟಿನಿಂದ, ತನ್ನ ಮನೆಗೆ ಹೋದನು. ಅದನ್ನು ಕಂಡು ನಗುತ್ತಾ, ಭೀಷ್ಮನು ಕುರುರಾಜನಿ ಗಿಂತೆಂದನು—

'ದುರ್ಯೋಧನ! ಎಲ್ಲರನ್ನೂ ನಾನೇ ಗೆಲ್ಲುವೆ'ನೆಂದು ಈಗ 'ಭೀಷ್ಮನು ಮೃತ ನಾಗುವವರೆಗೂ ಅಸ್ತ್ರವನ್ನು ಮುಟ್ಟೆನೆಂದ ಕರ್ಣನನ್ನು ನಂಬಿ ಕೆಟ್ಟೆ ! ನಿನ್ನ ವ್ಯೂಹ ವನ್ನೊಡೆದು, ತಲೆಗಳನ್ನು ಉರುಳಿಸುವ ಭೀಮಸೇನನಿಂದಾಗುವ ಮಹಾಕ್ಷಯ ವನ್ನು ನೋಡುತ್ತಾ ಕೂಡು ! ಭಗವಂತನಲ್ಲಿ 'ನಾನು ಬ್ರಾಹ್ಮಣನೆಂದು ಸುಳ್ಳು ನುಡಿದು ಅಸ್ತ್ರಗಳನ್ನು ಪಡೆದಾಗಲೇ ಕರ್ಣನ ತಪೋಧರ್ಮಗಳು ಹಾಳಾದವು. ಮಹಾತ್ಮರಾದ ಬಾಹ್ಲೀಕಾದಿಗಳನ್ನು ಲೆಕ್ಕಿಸದೆ ನಾನು ಪಾಂಡವರನ್ನು ಕೊಲ್ಲು ವೆನು. ನಾನೊಬ್ಬನೇ ಕೊಲ್ಲುವೆ'ನೆಂದು ಕೊಚ್ಚಿದ ಅಧಮಪುರುಷನ ಮಾತು ಈಗ ಏನಾಯಿತು ?

ಆ ಮಾತಿಗೆ ನೊಂದು ದುರ್ಯೋಧನನು ತನ್ನ ಅಲ್ಪಬುದ್ಧಿಗೆ ತಕ್ಕಂತೆ ಭೀಷ್ಮ ನನ್ನು ನೋಡಿ, 'ಪಿತಾಮಹ! ಪಾಂಡವರಲ್ಲಿ ಯಾವ ಮಹಾಗುಣವನ್ನು ಕಂಡು ನಮ್ಮನ್ನು ಹೀಯಾಳಿಸುತ್ತಿರುವೆ ? ನಾವು ಉಭಯರೂ ಭರತಕುಲಜರು, ಉಭಯರೂ ವಯಸ್ಸಿನಿಂದ, ಬಲದಿಂದ, ಸೈನ್ಯದಿಂದ, ವಿದ್ಯೆಯಿಂದ, ವೀರ್ಯದಿಂದ ಸಮರು. ಇಂತಿರಲು ಅವರಿಗೇ ಜಯವೆಂದು ನೀನು ಘೋಷಿಸಲು ಕಾರಣವೇನು? ನಾನು ನಿಮ್ಮನ್ನು ನಂಬಿ, ಯುದ್ಧಕ್ಕಾಗಿ ನಿಂತಿಲ್ಲ. ನನಗೆ ಕರ್ಣನು ಸಾಕು, ದುಶ್ಶಾಸನನು ಸಾಕು. ಅವರ ಸಹಾಯದಿಂದ ನಾನು ಶತ್ರುಜಯವನ್ನು ಸಾಧಿಸುವೆನು. ಕರ್ಣ-ಧಾರನಿಲ್ಲದ ಹುಟ್ಟುಗಳಿಲ್ಲದ ನೌಕೆಯಲ್ಲಿರುವವರಂತೆ ನಿಸ್ಸಹಾಯರಾಗಿರುವ ಪಾಂಡವ ರನ್ನು ಗೆಲ್ಲುವುದೆನಗೆ ದುಷ್ಕರವಲ್ಲ. ರಾಜ್ಯಾರೂಢನಾಗಿ ನಾನೂ ಯಜ್ಞಗಳನ್ನು ಮಾಡಿ, ಬ್ರಾಹ್ಮಣರನ್ನು ತೃಪ್ತಿಪಡಿಸುವೆನು' ಎಂದನು.

ಕುಲಕ್ಷಯಕಾರಣನಾದ ದುರ್ಯೋಧನನ ದರ್ಪವನ್ನು ಸಹಿಸದೆ ವಿದುರನು, 'ದಮವೇ ನಿಶ್ರೇಯಃಕಾರಣವು. ಅದರಿಂದ ತೇಜೋವೃದ್ಧಿ. ಇಂದ್ರಿಯನಿಗ್ರಹವಿಲ್ಲದವರಿಗೆ ಕ್ರೂರ ಮೃಗಗಳಂತಿರುವ ಇಂದ್ರಿಯಗಳಿಂದ ಸದಾ ಭಯವು ತಪ್ಪದು. ಕ್ಷಮಾ, ಧೃತಿ, ಅಹಿಂಸಾ, ಸತ್ಯಗಳೇ ಮೊದಲಾದವು ದಮವಂತರ ಗುಣಗಳು. ಜಂಬ, ಸುಳ್ಳು, ಹಿಂಸೆ, ದರ್ಪ, ಮೊದಲಾದ ದುರ್ಗುಣಗಳನ್ನು ದಮವಂತನು ದೂರ ಬಿಡುವನು. ಶೀಲಸಂಪನ್ನನು ಇಲ್ಲಿ ಕೀರ್ತಿಯನ್ನು ಅಲ್ಲಿ ಪುಣ್ಯಲೋಕವನ್ನು ಪಡೆಯುವನು. ಸರ್ವಭೂತ ಹಿತಕಾರಿಗೆ, ತೃಪ್ತನಿಗೆ, ದಾಂತನಿಗೆ ಭಯವಿಲ್ಲ. ಆಕಾಶದಲ್ಲಿ ಹಾರುವ ಪಕ್ಷಿಗಳ ಗಮನದಂತೆ, ಪ್ರಜ್ಞಾನತೃಪ್ತನಾದ ಮುನಿಯನ್ನಾರೂ ಅರಿಯಲಾರರು. ಗೃಹಾದಿ ವಿಷಯಗಳನ್ನು ಬಿಟ್ಟು ವಿರಕ್ತನಾಗಿ ಜ್ಞಾನವನ್ನಾರ್ಜಿಸಿದವನಿಗೆ ತೇಜೋಮಯವು, ಶಾಶ್ವತವು ಆದ ವಿಷ್ಣುಲೋಕದಲ್ಲಿ ನಿವಾಸವು ಸಿದ್ಧಿಸುವುದು.

ಕಾಮ ಕ್ರೋಧಗಳಿಗೆ ವಶರಾಗಿ ಕಲಹವಾಡುವವರು ಉಭಯರು ನಾಶವಾಗುವರು. ಹಿಂದೆ ಬೇಡನೊಬ್ಬ ಜಾಲವನ್ನು ನಿರ್ಮಿಸಿ, ಪಕ್ಷಿಗಳಿಗಾಗಿ ಕಾದಿದ್ದನು. ಅದರಲ್ಲಿ ಎರಡು ಪಕ್ಷಿಗಳು ಸಿಕ್ಕಿಬಿದ್ದವು. ಅವು ಸ್ವಬಲದಿಂದ ಜಾಲವನ್ನು ಕಿತ್ತಿ, ಅದರೊಡನೆ ಆಕಾಶಕ್ಕೆ ಹಾರಿದವು. ವ್ಯಾಧನು ಅವನ್ನನುಸರಿಸಿ ನೆಲದಮೇಲೆ ಓಡುತ್ತಿದ್ದನು. ಮುನಿಯೊಬ್ಬನದನ್ನು ಕಂಡು 'ಆಕಾಶದಿ ಹಾರುವ ಹಕ್ಕಿಗಳನ್ನು ನೆಲದಿ ಓಡಿ ಹಿಡಿಯಲಾಗುವುದೇ ?' ಎಂದು ಕೇಳಲು, ವ್ಯಾಧನು 'ಇವೆರಡೂ ಒಂದೇ ಪಾಶದಲ್ಲಿ ಸಿಕ್ಕಿಬಿದ್ದಿವೆ. ಇವಕ್ಕೆ ಜಗಳವಾಗದಿರದು. ಆಗ ಅವು ನನ್ನ ವಶವಾಗುವುವು' ಎಂದು, ಅವನ್ನನುಸರಿಸಿದನು. ಪಕ್ಷಿಗಳು ಜಾಲವನ್ನು ಜಗ್ಗಿ ಜಗಳವಾಡಿ ಕೆಳಗೆ ಬಿದ್ದವು. ವ್ಯಾಧನವನ್ನು ಕೊಂಡುಹೋದನು. ಇಂತು ಜಗಳವಾಡುವ ಜ್ಞಾತಿಗಳು ಹಾಳಾಗುವರು. ಏಕಮತ್ಯದಿಂದ ಇರುವವರು ಸಿಂಹಸಹಿತವಾದ ವನದಂತೆ ವೃದ್ಧಿಯನ್ನೈದುವರು. ಮಹಾಧನವು ಸಿಕ್ಕಾಗ ದೀನರಂತೆ ಅಳುವ ಲೋಭಿಗಳ ಧನವನ್ನು ಶತ್ರುಗಳು ಕಸಿಯುವರು. ಕೊಳ್ಳಿಗಳಂತೆ ಜ್ಞಾತಿಗಳು ಕಲೆತಿದ್ದರೆ ಪ್ರಕಾಶಿಸುವರು. ಬೇರಾದರೆ ಆರಿಹೋಗುವರು. ಔಷಧಿಗಳನ್ನು, ಯಂತ್ರಮಂತ್ರಗಳನ್ನು ಮಾಡುವ ವಿಪ್ರರು ಹೇಳಿದ ಮಾತಿಗೆ ಮಾರುಹೋಗಿ ಕೆಲ ಕಿರಾತರು ಪರ್ವತಾಗ್ರದಲ್ಲಿದ್ದ ಬಂಗಾರದ ಜೇನುಗೂಡನ್ನು ಕಿತ್ತಲು ಹೋದರು. ಅಮೃತಸಮವಾದ ಮಧುಧಾತುಗಳನ್ನು ರಕ್ಷಿಸುತ್ತಿದ್ದ ಸರ್ಪಗಳಲ್ಲಿ ಕೆಳಗೆ ಕಂದರದಲ್ಲಿದ್ದವು. ಕಿರಾತರು (ಸುವರ್ಣಮಾಕ್ಷಿಕ) ಜೇನು ತೆಗೆಯಲು ಹೋಗಿ ಜಾರಿ ಬಿದ್ದು, ಸರ್ಪದಷ್ಟರು ಆಗಿ ಸತ್ತರು. ಅವರಂತೆ ನಿನ್ನ ಸುತರು ರಾಜ್ಯಮಧುವನ್ನು ಬೇಡಿ, ಯುದ್ಧಪ್ರಪಾತದಲ್ಲಿ ಬೀಳುತ್ತಿರುವರು. ಜಗಳವಾಡಿ ಪಾಂಡವರು ಸತ್ತರೂ ಕೌರವರು ಸತ್ತರೂ ನೀನು ದುಃಖಪಡಬೇಕಾಗುವುದು' ಎಂದನು.

ಆಗ ದುರ್ಯೋಧನನನ್ನು ಕುರಿತು ಧೃತರಾಷ್ಟ್ರನು 'ಕುಮಾರ! ಸಂಧಿ ಮಾಡಿಕೋ! ಕಣ್ಣುಮುಚ್ಚಿ, ಅಮಾರ್ಗದಲ್ಲಿ ನಡೆಯುತ್ತಿರುವೆ. ನಿನಗೆ ಜಯ ವಾಗದು. ಭೀಮನು ಮಹಾವಾತವು; ಗಿಡಗಳನ್ನಂತೆ ನಿಮ್ಮನ್ನು ನಾಶಮಾಡುವನು. ಶ್ರೀಕೃಷ್ಣನು ದಾರಾಪುತ್ರಾದಿಗಳಿಗಿಂತ ಹೆಚ್ಚಾಗಿ ಧನಂಜಯನನ್ನು ಪ್ರೀತಿಸುತ್ತಿರು ವನು. ಶ್ರೀಕೃಷ್ಣನಿದ್ದಲ್ಲಿ ವಿಜಯ. ಪಾಂಡವರು ನಿನಗೆ ಸೋದರರು, ಬೇರೆ ಯವರಲ್ಲ. ಕಾದಿ ಕೆಡಬೇಡ! ಕೊಡು ಅವರ ರಾಜ್ಯವನ್ನವರಿಗೆ!' ಎಂದನು.

ದುರ್ಯೋಧನನು ಸುಮ್ಮನಿರಲು ಧೃತರಾಷ್ಟ್ರನು ಹತಾಶನಾಗಿ, ಸಂಜಯನಿ ಗಿಂತೆಂದನು 'ಸಂಜಯ! ಅರ್ಜುನನು ಶ್ರೀಕೃಷ್ಣವಚನವನ್ನಾಲಿಸಿ ಮತ್ತೇನೆಂದನು? ಎಂಬು ಕೇಳಲು ಸಂಜಯನಿಂತೆಂದನು. "ಅರ್ಜುನನು 'ಸಂಜಯ! ದುರ್ಯೋಧನನು ಯುದ್ಧಕ್ಕಾಗಿ ಕರೆಸಿರುವ ರಾಜರನ್ನು ಬರಿ ಯುದ್ಧಕ್ಕಲ್ಲ; ಸಾಯಲು ಕರೆಸಿರುವನು. ಅವರಿಗೆ ವಂದಿಸಿ ಸಂಜಯ! ಸಭೆಯಲ್ಲಿ ನನ್ನ ಸಂದೇಶವನ್ನು ತಿಳಿಸು. ಶ್ರೀಕೃಷ್ಣ ನಾಡಿದಂತಾಗುವುದು ತಪ್ಪದು. ದುರ್ಮದನು, ಪಾಪಿಯು, ಲೋಭಿಯು, ಧರ್ಮ ದ್ರೋಹಿಯು ಆದ ದುರ್ಯೋಧನನು ಉಳಿಯನು. ಭೀಮವಾಯುವಿನಿಂದ ವಿಜೃಂಭಿಸಿ ಧನಂಜಯಾಗ್ನಿಯು ಕೃಷ್ಣವರ್ತ್ಮವಾಗಿ ಕೌರವವನವನ್ನು ಸುಟ್ಟುಬಿಡು ವುದೆಂದು ತಿಳಿದು ಜಾಗೃತರಾಗಿರಿ!' ಇಂತಾಡಿದ ಪಾರ್ಥನಿಗೂ, ಚತುರ್ಭುಜನಿಗೂ ವಂದಿಸಿ, ಅವರ ಅಪ್ಪಣೆಪಡೆದು ನಾನಲ್ಲಿಂದ ಹೊರಟು ನಿನ್ನಲ್ಲಿಗೆ ಬಂದೆನು."

ಧೃತರಾಷ್ಟ್ರನು 'ಸಂಜಯ! ಎಲ್ಲ ವಿವರವನ್ನು ಅರಿತು ಬಂದಿರುವೆ! ನಮ್ಮವರ ಸೈನ್ಯವನ್ನೂ ತಿಳಿದಿರುವೆ! ಇಬ್ಬರಲ್ಲಿ ಬಲವಂತರು ಯಾರು? ಸಾರಾಸಾರಗಳನ್ನು ನಿಜವಾಗಿ ನಿರೂಪಿಸು!' ಎಂದನು. ಆಗ ಸಂಜಯನು 'ಮಹಾರಾಜ! ಇದ್ದುದ ನ್ನಿದ್ದಂತಾಡಿದರೆ ಹಿತವಾಗದು ನೀನು ನನ್ನಲ್ಲಿ ಸಿಟ್ಟಾಗಬಹುದು. ನಿನ್ನ ತಂದೆ ಕೃಷ್ಣದ್ವೈಪಾಯನರು ಬರಲಿ, ಗಾಂಧಾರಿಯೂ ಬರಲಿ, ಅವರೆದುರಿಗೆ ನಿಜವನ್ನರು ಹುವೆನು' ಎಂದನು,

ಆಗ ಧೃತರಾಷ್ಟ್ರನು ಸ್ಮರಿಸಲು ಶ್ರೀ ವ್ಯಾಸರಲ್ಲಿಗೆ ಬಂದರು. ಗಾಂಧಾರಿಯೂ ಬಂದಳು. ಆಗ ವ್ಯಾಸರಿಂತೆಂದರು. 'ಸಂಜಯ! ಬಿಡಿಸು ಧೃತರಾಷ್ಟ್ರನ ಸಂಶಯ ವನ್ನು! ವಾಸುದೇವಾರ್ಜುನರ ವಿಷಯವನ್ನು ನಿನಗೆ ತಿಳಿದಷ್ಟು ಸರಿಯಾಗಿ ತಿಳಿಸು! ಆಗ ಅವರಿಗೆ ಶಿರಬಾಗಿ ಸಂಜಯನು 'ರಾಜನ್! ಅರ್ಜುನ ವಾಸುದೇವರು ಲೋಕ ಹಿತಕ್ಕಾಗಿ ಅವತರಿಸಿರುವರು. ಶ್ರೀ ವಾಸುದೇವನು ಸಾಕ್ಷಾನ್ನಾರಾಯಣನು. ಅರ್ಜುನನು ನರಾವೇಶಯುತನು. ಶ್ರೀಕೃಷ್ಣನ ಚಕ್ರವು ಬಾರುದ್ದದ ವ್ಯಾಮ ವಾಗಿದೆ. ಆತನು ಚಿಂತಿಸಿದಷ್ಟು ದೊಡ್ಡದಾಗಿ, ಅದು ಅವನ ಇಚ್ಛೆಯಂತೆ ದುಷ್ಟರನ್ನು ಸಂಹರಿಸುವುದು. ಅದು ಸುಜನರಿಗೆ ಅಭಯ ನೀಡುತ್ತಿದೆ. ನರಕ ಚೈದ್ಯ ಸಾಲ್ವ ರನ್ನು ಮಧುಸೂದನನು ಅದರಿಂದ ಲೀಲಾಜಾಲವಾಗಿ ಕೊಂದಿರುವನು. ಶ್ರೀಕೃಷ್ಣನು ಹದಿನಾಲ್ಕು ಲೋಕಗಳನ್ನು ತನ್ನ ವಶದಲ್ಲಿಟ್ಟು, ತಾನು ಸ್ವತಂತ್ರನಾಗಿರುವನು.

ಮತ್ತೆ ಮತ್ತೆ ಪಾಂಡವ-ಕೌರವರ ಸಾರಾಸಾರಗಳನ್ನು ತಿಳಿಯಲೆಣಿಸುವ ನಿನ್ನನ್ನು ನೋಡಿ ಅನುಕಂಪವಾಗುತ್ತಿದೆ. ಒಂದು ಕಡೆ ಜಗವೆಲ್ಲವಿಟ್ಟು ಇನ್ನೊಂದೆಡೆ ಶ್ರೀಕೃಷ್ಣನನ್ನು ಇಡು! ಆಗ ಶ್ರೀಕೃಷ್ಣನೇ ಸರ್ವ ಜಗಕ್ಕಿಂತಲೂ ಶ್ರೇಷ್ಠನೆಂದು ತಿಳಿ! ಜೀವ-ಜಡರೂಪ ಜಗವೆಲ್ಲವೂ ಸೇರಿದರೂ ಶ್ರೀಕೃಷ್ಣನನ್ನು ಬಾಧಿಸಲಾರದು. ಸತ್ಯಧರ್ಮಗಳಿದ್ದಲ್ಲಿ ಶ್ರೀಕೃಷ್ಣನಿರುವನು. ಶ್ರೀಕೃಷ್ಣನಿದ್ದಲ್ಲಿ ಜಯವಿದೆ. ಅವನು ಸರ್ವ ಜೀವ-ಪ್ರೇರಕನು. ಈಗ ಪಾಂಡವರ ನೆವದಿಂದ ದುಷ್ಟರನ್ನೆಲ್ಲ ನಾಶಮಾಡಲು ಯುದ್ಧವನ್ನು ಹೂಡಿರುವುದು ಶ್ರೀಕೃಷ್ಣನ ಲೀಲೆ ಎಂದು ತಿಳಿ! ಅವನು ಸಂವತ್ಸರ ಮಾಸಾದಿ ಕಾಲಚಕ್ರವನ್ನೂ, ಜನ್ಮಸ್ಥಿತಿ ಲಯ ರೂಪ ಜಗಚ್ಚಕ್ರವನ್ನೂ, ನಾಲ್ಕು-ಮೂರೆರಡೊಂದು ಧರ್ಮಪಾದಗಳ ಯುಗಚಕ್ರವನ್ನೂ ಸ್ವರೂಪಸಾಮರ್ಥ್ಯದಿಂದ ನಡೆಸುತ್ತಿರುವನು. ಸರ್ವೇಶನಾದರೂ ಶ್ರೀಕೃಷ್ಣನು ಮನುಜರಲ್ಲಿ ಅವತರಿಸಿದಾಗ ಅವರಂತೆ ನಡೆದು ತನ್ನ ಜ್ಞಾನವಿತರರಿಗಾಗದಂತೆ ಲೋಕಮೋಹಕನಾಗಿರುವನು. ಅವನನ್ನು ನಂಬಿದ ಸುಜನರು ಅವನ ಮಾಯೆ ಅಂದರೆ ಬಂಧಕಶಕ್ತಿಯಿಂದ ಮುಕ್ತರಾಗಿ, ಶ್ರೀಶಾನುಗ್ರದಿಂದ ಮುಕ್ತರಾಗುವರು' ಎಂದನು.

ಧೃತರಾಷ್ಟ್ರನು 'ಸಂಜಯ! ನೀನು ಮಾಧವನನ್ನು ಎಂತು ತಿಳಿದೆ! ನನಗೇಕೆ ಆ ಮಹಾನುಭಾವನ ಜ್ಞಾನವಾಗದಿದೆ?' ಎಂದು ಕೇಳಿದನು. ಸಂಜಯನು 'ರಾಜನ್! ನಿನ್ನ ಜ್ಞಾನವು ಪುತ್ರಮೋಹದಿಂದ ಪ್ರತಿಬಂಧಿತವಾಗಿದೆ. ನಾನು ಭಕ್ತಿಯಿಂದಲು ಮಹಜ್ಜನರಿಂದಲು ಶ್ರೀಹರಿಯನ್ನು ಯಥಾಯೋಗ್ಯವಾಗಿ ತಿಳಿದಿರುವೆನು. ಸರ್ವಕರ್ತನಾದರೂ ಕರ್ಮಲೇಪನವಿಲ್ಲ ಶ್ರೀಶನಿಗೆ. ಆನಂದಾದಿಗುಣಭರಿತನಿಗೆ ಪ್ರಕೃತಿಗುಣವಿಕಾರವಿಲ್ಲ. ಅವನನ್ನು ಜಗಜ್ಜನ್ಮಾದಿಕಾರಣನೆಂದು ತಿಳಿದು ನಾನು ಭಜಿಸುವೆನು!' ಎಂದನು.

ಧೃತರಾಷ್ಟ್ರನು 'ಸಂಜಯ! ಭಕ್ತಿ ಎಂತು ಜನಿಸುವುದು? ತ್ರಿಯುಗಗಳಲ್ಲಿ ಅವತರಿಸುವ ಜನಾರ್ದನನನ್ನು ನೀನೆಂತು ತಿಳಿದಿರುವೆ?' ಎಂದು ಕೇಳಲು ಸಂಜಯನಿಂತೆಂದನು—'ರಾಜನ್! ನನಗೆ ಕಾಪಟ್ಯವಿಲ್ಲ. ನಾನು ಧರ್ಮವನ್ನು ಹಿರಿಯರಿಂದ ತಿಳಿದು, ಅಂತೇ ನಡೆಯುವೆನು. ಶಾಸ್ತ್ರವಿಚಾರದಿಂದ ಭಗವಂತನನ್ನರಿತು, ಎಲ್ಲ ವಸ್ತುಗಳಿಂದಲೂ ಹೆಚ್ಚಾಗಿ ಅವನನ್ನು ಪ್ರೀತಿಸುವುದೇ ಭಕ್ತಿಯು. ಭಕ್ತಿಯಿಂದ ಶುದ್ಧರಾದವರೇ ಭಾಗವತರು. ಅಂತಹ ಶುದ್ಧ ಭಾಗವತರೆಂದರೆ ಭೀಮಾರ್ಜುನಾದಿಗಳು. ಅವರಿಗೆ ವಿರೋಧವನ್ನಾಚರಿಸುವ ನಿನ್ನ ಸುತನು ಶ್ರೀಕೃಷ್ಣನಿಗೂ ವಿರೋಧಿಯಾಗಿ ಕೆಡುವನು.' ಆ ಮಾತನ್ನಾಲಿಸಿ ಧೃತರಾಷ್ಟ್ರನು ದುರ್ಯೋಧನನಿಗಿಂತೆಂದನು. 'ಕುಮಾರ! ಆಪ್ತನಾದ ಸಂಜಯನ ವಚನವನ್ನು ಕೇಳಿದೆಯಾ? ಕೆಡಬೇಡ! ಶ್ರೀಕೃಷ್ಣನಿಗೆ ಶರಣಾಗತನಾಗು'.

ದುರ್ಯೋಧನನು 'ಭಗವಂತನಾದ ದೇವಕೀಪುತ್ರನು ಅರ್ಜುನನ ಸ್ನೇಹಿತನಾಗಿ, ಸರ್ವ ಲೋಕವನ್ನು ಸಂಹರಿಸಿದರೂ, ನಾನು ಕೇಶವನಿಗೆ ಶರಣಾಗಿ ಹೋಗ

ಲಾರೆನು. ಅವನು ನನಗೆ ಸಹಜ ಶತ್ರುವು ' ಎಂದನು. ಧೃತರಾಷ್ಟ್ರನು 'ಕೇಳಿದೆಯಾ ಗಾಂಧಾರಿ ! ನಿನ್ನ ಮಗನ ನೀಚತನವನ್ನು ? ಈ ದುರ್ಮತಿಗೆ ದುರ್ಗತಿ ತಪ್ಪದು ' ಎಂದನು. ಗಾಂಧಾರಿಯು 'ದುಷ್ಟ! ಐಶ್ವರ್ಯ ಕಾಮ ! ಹಿರಿಯರ ಮಾತನ್ನು ಮೀರುವ ನೀನು ಐಶ್ವರ್ಯವನ್ನು ಜೀವಿತವನ್ನು ಬಿಟ್ಟು, ನಮ್ಮನ್ನು ಅಳಿಸುವೆ! ಭೀಮಸೇನನಿಂದ ನಿಹತನಾದಾಗ ನನ್ನ ಮಾತನ್ನು ನೆನೆಯುವೆ !' ಎಂದಳು. ವ್ಯಾಸರು ' ಧೃತರಾಷ್ಟ್ರ! ಕೃಷ್ಣಭಕ್ತನಿರುವೆ ! ಸಂಜಯನೂ ಶ್ರೀಹರಿಭಕ್ತನು. ಅವನಿಂದ ಹರಿಮಹಿಮೆ ಕೇಳಿ, ಪಾಪರಹಿತನಾಗು ! ಕ್ರೋಧದೋಷವರರಾದ ಪುರುಷರು ಹಿತಾಹಿತಗಳನ್ನರಿಯರು. ಅವರು ಯಮನ ವಶರಾಗುವರು. ಜ್ಞಾನ-ಮಾರ್ಗವವರಿಗೆ ದೂರವು. ಸಜ್ಜನರಿಗೆ ಮುಕ್ತಿಹೊಂದಲು ಜ್ಞಾನವೇ ಸಾಧನ !' ಎಂದನು. ಧೃತರಾಷ್ಟ್ರನು 'ಸಂಜಯ! ನನಗೆ ಅಭಯವನ್ನು ತೋರಿಸು! ಏನು ಮಾಡಲಿ ? ಎಂತು ಹೃಷೀಕೇಶನನ್ನು ಮೆಚ್ಚಿಸಲಿ ?' ಎಂದು ಕೇಳಿದನು.

ಸಂಜಯನು 'ರಾಜನ್ ! ಇಂದ್ರಿಯಜಯವಿಲ್ಲದವನು ಪೂರ್ಣಾನಂದನಾದ ಶ್ರೀಶನನ್ನು ತಿಳಿಯಲಾರನು. ಇಂದ್ರಿಯಗಳನ್ನು ನಿಗ್ರಹಿಸಿ, ಮನಸ್ಸನ್ನು ಪ್ರಮಾದ ಗಳಿಗೆ ಗುರಿಮಾಡದೆ, ಜ್ಞಾನವನ್ನಾರ್ಜಿಸು! ವಿಷಯಗಳಿಂದ ದೂರನಾಗು. ಮಮತೆ ಯನ್ನು ಬಿಡು! ಕೇಶವನಲ್ಲಿ ಭಕ್ತಿ ಮಾಡು! ನಿಗಮಾದಿಸಚ್ಛಾಸ್ತ್ರಗಳಿಂದ ಶ್ರೀಹರಿ ಯನ್ನು ಗುರುಮುಖದಿಂದ ತಿಳಿ ! ಶ್ರೀವಾಸುದೇವನು ಸರ್ವಶಬ್ದವಾಚ್ಯನಿರುವನು. ಅಂತು ತಿಳಿದು ವಾಗ್ವ್ಯಾಪಾರವನ್ನು ಹರಿಬಿಡದೆ, ಶಬ್ದ ಪ್ರವೃತ್ತಿ ನಿಮಿತ್ತಗಳೆಲ್ಲ ಅವನ ಅಧೀನವೆಂದು ಭಜಿಸು !

'ಸರ್ವಭೂತಗಳಲ್ಲಿ ಅಂತರ್ಯಾಮಿಯಾಗಿ ವಾಸವಾಗಿರುವುದರಿಂದಲು, ಕ್ರೀಡಾದಿ ಗುಣವಿಶಿಷ್ಟನಾಗಿರುವುದರಿಂದಲು, ದೇವತೆಗಳವನಲ್ಲಿ ವಾಸಮಾಡಿರುವುದರಿಂದಲು, ಶ್ರೀಹರಿಯನ್ನು ಪ್ರಾಜ್ಞರು ವಾಸುದೇವನೆಂಬರು; ಮೌನ (ಜ್ಞಾನ) ಧ್ಯಾನಗಳಿಂದ ತುಂಬಿ, ಸಾಮರ್ಥ್ಯ ಸರ್ವಸ್ವ ಸಾರಸಂಗ್ರಹನಾಗಿರುವ ಲಕ್ಷ್ಮೀಪತಿಯನ್ನು ಮಾಧವ ನೆಂಬರು ; ಭೂಮಿಯಲ್ಲಿ ಅವತರಿಸಿಬಂದಾಗಲೂ ಪೂರ್ಣಸದ್ಗುಣನಾದ ಕಾರಣ ಕೃಷ್ಣನೆಂಬರು; ವ್ಯಾಪ್ತನಾದುದರಿಂದ ವಿಷ್ಣುವೆಂಬರು ; ಪುಂಡರೀಕವೆಂದರೆ ಹೃದಯ-ಕಮಲ, ಅಲ್ಲಿದ್ದರೂ ಕ್ಷೀಣನಾಗದ ಕಾರಣ ಪುಂಡರೀಕಾಕ್ಷನೆಂಬರು; ದುಷ್ಟ ಜನರನ್ನು ಮರ್ದಿಸಿ, ಸುಜನರ ಆರ್ತಿಯನ್ನು ಕಳೆಯುವುದರಿಂದ ಜನಾರ್ದನನೆಂಬರು ; ಶುದ್ಧ ಸತ್ವಜ್ಞಾನಾನಂದಾದಿಗುಣಗಳಿಂದ ಕೂಡಿಯೇ ತತ್ಸ್ವರೂಪನಾಗಿರುವುದರಿಂದ ಸಾತ್ವತನೆಂಬರು ; ಋಷಿಗಳಿಂದ ವೇದ-ವೇದ್ಯನಾಗಿರುವುದರಿಂದ ಋಷಭೇಕ್ಷಣ ನೆಂಬರು. ದಮರೂಪನಾದುದರಿಂದ ದಾಮೋದರನೆಂಬರು ; ಜನನವಿಲ್ಲದುದರಿಂದ ಅಜನೆಂಬರು. ಹರ್ಷ, ಸುಖ, ಐಶ್ವರ್ಯಭರಿತನಾಗಿ ಇಂದ್ರಿಯಗಳನ್ನು ಪ್ರೇರೇಪಿಸು ವುದರಿಂದ ಹೃಷೀಕೇಶನೆಂಬರು; ಕೈಗಳಿಂದಲೇ ಲೋಕ-ಸ್ವರ್ಗಗಳನ್ನು ಧರಿಸಿರುವುದ ರಿಂದ ಮಹಾಬಾಹುನೆಂಬರು ; ನರರಿಗೆ ಆಶ್ರಯನಾಗಿರುವುದರಿಂದ ನಾರಾಯಣ-

ನೆಂಬರು. ಅಕ್ಷ-ಇಂದ್ರಿಯಗಳಿಗೆ ನಿಲುಕದಿರುವುದರಿಂದ ಅಧೋಕ್ಷಜನೆಂಬರು ; ಪೂರ್ಣನಾಗಿ ಸರ್ವಾಧಾರನಾಗಿರುವುದರಿಂದ ಪುರುಷೋತ್ತಮನೆಂಬರು ; ಕ್ಷರಾಕ್ಷರ ಪುರುಷರಕಿಂತ ಭಿನ್ನನೂ ಉತ್ತಮನೂ ಆಗಿರುವನೆಂದು ಪುರುಷೋತ್ತಮನೆಂಬರು; ಸರ್ವಜಗತ್ತಿಗೆ ಸೃಷ್ಟಿಸಂಹಾರಕಾರಣನಾಗಿ ವ್ಯಾಪಿಸಿರುವುದರಿಂದ ಸರ್ವನೆಂಬರು. ಸತ್ಯದಲ್ಲಿದ್ದು ನಿತ್ಯನಿರ್ದುಃಖಜ್ಞಾನಾನಂದಪೂರ್ಣನಾಗಿರುವುದರಿಂದ ಸತ್ಯನೆಂಬರು. ಜಯಶೀಲನಾದುದರಿಂದ ಜಿಷ್ಣುನೆಂಬರು. ವೇದಾದಿಶಬ್ದವೇದ್ಯನಾದುದರಿಂದ ಗೋವಿಂದನೆಂಬರು. ಜೀವ-ಜಡಾದಿ ಸರ್ವಶಕ್ತಿಪ್ರೇರಕನಾದ ಕೃಷ್ಣನನ್ನು ಯಾರೂ ಸಾಕಲ್ಯೇನ ತಿಳಿಯಲಾರರು. ಕುರುಕ್ಷಯವನ್ನು ನಿವಾರಿಸುವ ಕೃಪೆ ಮಾಡಿ ಗೋವಿಂದನು ಸಂಧಿಗಾಗಿ ಬರುತ್ತಿರುವನು' ಎಂದನು.

ಧೃತರಾಷ್ಟ್ರನು 'ಸಂಜಯ! ಕಣ್ಣುಳ್ಳವರದೇ ಭಾಗ್ಯವೋ! ಅವರು ಶ್ರೀ ವಾಸುದೇವನನ್ನು ಪ್ರತ್ಯಕ್ಷವಾಗಿ ನೋಡುವರು. ದಿಕ್ಕುಗಳನ್ನು ಬೆಳಗುತ್ತಾ, ಬರುವ ದಿವ್ಯ ಮಂಗಳ ವಿಗ್ರಹನನ್ನು ನೋಡಲಾರೆನಲ್ಲ. ಅವನ ಮಾತು ಪಾಂಡವರ ಸಂದೇಶ. ಅವನ ಚಕ್ರ ರಕ್ಷೋಭಯಂಕರ! ಅವನ ಲೀಲೆ ಅಪ್ರಮೇಯ. ಅವನು ಸನಾತನನಾದ ನಾರಾಯಣರ್ಷಿಯು. ಅವನ ವದನ ಸುಧಾ ಸಮುದ್ರ. ಅವನ ವಾಹನ ಗರುಡ. ಅವನ ಪ್ರಜರು ನಾವೆಲ್ಲರು. ಅವನ ಮನೆ ಬ್ರಹ್ಮಾಂಡ. ಅವನ ಸತಿ ಜಗಜ್ಜನನಿ. ಆಹಾ! ಇಂತಹ ಬ್ರಹ್ಮರುದ್ರೇಂದ್ರವಂದ್ಯ ನನ್ನ ಮನೆಗೆ ಬರುತ್ತಿರುವನು! ಶ್ರೀಶಾ! ನಿನಗೆ ಶರಣು! ನಿನ್ನ ಚರಣಾರವಿಂದಕ್ಕೆ ಶರಣು!' ಎಂದು ಸುಮ್ಮನಾದನು.

## ಪಾಂಡವ ಮಂತ್ರಾಲೋಚನೆ

ಶ್ರೀ ವೈಶಂಪಾಯನನು ಜನಮೇಜಯನಿಗೆ ಪೇಳಿದನು—

ರಾಜನ್! ಸಂಜಯನು ತೆರಳಿದಮೇಲೆ ಧರ್ಮರಾಜನು ಸಂಜಯನಾಗಲಿ, ವಿದುರನಾಗಲಿ ಬಾರದಿರುವುದನ್ನು ಕಂಡು, ಯುದ್ಧವೇ ಕೌರವರಿಗೆ ಬೇಕಾಗಿದೆ ಎಂದು ತಿಳಿದು ವಿನಯದಿಂದ ಶ್ರೀಕೃಷ್ಣನಿಗಿಂತೆಂದನು—'ಮಿತ್ರವತ್ಸಲ! ಮಿತ್ರರನ್ನ ಪೇಕ್ಷಿಸುವ ಕಾಲವೀಗ ಬಂದಿದೆ. ಆಪತ್ತಿನಿಂದ ನಮ್ಮನ್ನು ಕಾಪಾಡಲು ನೀನಲ್ಲದೆ ಇನ್ನಾರು ಸಮರ್ಥರು? ನಿನ್ನನ್ನು ನಂಬಿ, ನಿನ್ನ ಕರುಣೆಯಿಂದ ಧಾರ್ತರಾಷ್ಟ್ರರನ್ನು ಗೆಲ್ಲಬೇಕೆಂದಿರುವೆವು. ನಿನಗೆ ಯಾದವರಂತೆ, ನಾವೂ ರಕ್ಷಣೀಯರಲ್ಲವೆ?' ಎಂದು ಬಾಗಿದ ಧರ್ಮಜನಿಗೆ ಭಗವಂತನಿಂತೆಂದನು—'ಧರ್ಮರಾಜ! ಸಿದ್ಧನಿರುವೆನು. ಹೇಳು ನನ್ನಿಂದೇನಾಗಬೇಕು? ಅದು ಆಯಿತೆಂದು ತಿಳಿ!'

ಧರ್ಮರಾಜನು, 'ಶ್ರೀಕೃಷ್ಣ! ನಿನಗೆ ತಿಳಿಯದುದಿಲ್ಲ. ಕೇಳು! ದೂತನಾದ ಸಂಜಯನು ಧೃತರಾಷ್ಟ್ರನ ಮಾತನ್ನೇ ಹೇಳಿರುವನು. ರಾಜ್ಯವನ್ನು ಕೊಡೆನು; ನೀವು ಯುದ್ಧವನ್ನು ಮಾಡಬೇಡಿ' ಎಂದು ಅದರ ಸಾರಾಂಶ. ನಮ್ಮ ದೊಡ್ಡಪ್ಪ

ಲೋಭದಿಂದ ಇಂತಾಡಿರುವನು; ಮಾತಿನಂತೆ ವನವಾಸಾಜ್ಞಾತವಾಸಗಳನ್ನು ಮಾಡಿ ಬಂದಿರುವ ನಮಗೆ ನಮ್ಮ ರಾಜ್ಯವನ್ನು ಕೊಡದೆ ಅಧರ್ಮವನ್ನು ಮಾಡಿರುವನು; ಅವನು ದುಷ್ಪುತ್ರವಶನಾಗಿ, ಕೈಗೊಂಬೆಯಂತೆ ಆಡುತ್ತಿರುವನು. ಇಂತಹವನ ಮನೆಯಲ್ಲಿ ಹಡೆದ ತಾಯನ್ನು ಬಿಟ್ಟು ಬಂದಿಹ ನನ್ನ ಮನೋವೇದನೆ ನಿನಗೆ ತಿಳಿಯದೇ ಇಲ್ಲ. ಬದುಕಿ ನಿವಾಸವಾಗಿರಲು, ಇಂದ್ರಪ್ರಸ್ಥ, ವೃಕಪ್ರಸ್ಥ, ಮಾಕಂದಿ, ವಾರಣಾವತಗಳನ್ನು ಇನ್ನೊಂದಾವ ಗ್ರಾಮವನ್ನಾದರೂ ಕೇಳಿದರೆ, ದುರಾತ್ಮನಾದ ದುರ್ಯೋಧನನು ನಮ್ಮ ಸೊತ್ತನ್ನು ಕದ್ದು ಕೊಡೆನೆನ್ನುತ್ತಿರುವನು ವೃದ್ಧರಾಜನ ಜ್ಞಾನವನ್ನು ಲೋಭವು ಮುಚ್ಚಿದೆ. ಜ್ಞಾನಹೀನನು ಲಜ್ಜಾಹೀನನಾಗಿ ಧರ್ಮವನ್ನು ಬಿಟ್ಟುಬಿಡುವನು. ಧರ್ಮಹೀನನು ಶ್ರೀಹೀನನಾಗುವನು. ಆಗ ಅವನು ಸತ್ತಂತೆ ಸರಿ! ದಾರಿದ್ರ್ಯದಕಿಂತ ದುಃಖವಿಲ್ಲ, ಧನದಿಂದ ಧರ್ಮ; ಧನದಿಂದ ಯಶ; ಧನದಿಂದ ಕಾಮ; ಧನವಿಲ್ಲದವನು ಹೆಣವೇ ಸರಿ. ಇಂತು ಧನಹೀನರಾಗಿ ಪ್ರಾಣಬಿಟ್ಟವರೂ ಉಂಟು. ಧನಕ್ಕಾಗಿ ದಾಸರಾಗಿ ದುಡಿಯುವವರುಂಟು. ಮೊದಲಿನಿಂದ ದರಿದ್ರರಾಗಿದ್ದವರಿಗೆ ದುಃಖವಿಲ್ಲ. ಚನ್ನಾಗಿ ಬಾಳಿ, ಬದುಕಿ, ಕೆಟ್ಟವರ ಪಾಡು ದೇವನೇ ಬಲ್ಲ.

'ಇನ್ನು ಧನಬಹುಳನು ಉನ್ಮತ್ತನಾಗಿ, ಅಸೂಯಾಕ್ರೋಧವಶನಾಗಿ ಪಾಪವನ್ನು ಮಾಡುವನು. ಪಾಪದಿಂದ ಸಂಕರವಾಗುವುದು. ಸಂಕರದಷ್ಟು ಪಾಪವಿನ್ನೊಂದಿಲ್ಲ. ಧನಮದಯುಕ್ತನು ಎಚ್ಚತ್ತಿರದಿದ್ದರೆ ನರಕಕ್ಕೆ ಬೀಳುವನು. ಎಚ್ಚತ್ತರೆ ಮದವನ್ನು ಬಿಟ್ಟು, ಗುರುಸೇವೆ ಮಾಡಿ, ಜ್ಞಾನವಂತನಾಗಿ, ದಾನ-ಯಜ್ಞಗಳನ್ನು ನಡೆಸಿ ಸ್ವರ್ಗವನ್ನು ಸೇರುವನು. ವಿನಯದಷ್ಟು ಪುಣ್ಯವಿನ್ನೊಂದಿಲ್ಲ.

ನಮಗೆ ನ್ಯಾಯವಾದ ಸಿರಿಯನ್ನು ನಾವು ಬಿಡುವುದಿಲ್ಲ. ಅದಕ್ಕಾಗಿ ನಾವು ಸತ್ತರೂ ಚಿಂತೆಯಿಲ್ಲ. ಸಂಧಿ-ಯುದ್ಧಗಳಲ್ಲಿ ಸಂಧಿಯೇ ಉತ್ತಮ. ಆದರೆ ರಾಜ್ಯವಿಲ್ಲದ ಸಂಧಿ ಯಾರಿಗೂ ಬೇಕಿಲ್ಲ. ಆಗ ವಿಧಿಯಿಲ್ಲದೆ ಯುದ್ಧಸನ್ನದ್ಧರಾಗುವೆವು. ಕ್ರೂರವಾದ ಯುದ್ಧಕರ್ಮದಲ್ಲಿ ಬಾಂಧವರೇ ಅಲ್ಲದೆ ಮಿಕ್ಕವರೂ ಸಾಯುವರು; ಯುದ್ಧದಲ್ಲಿ ಯುಕ್ತಾಯುಕ್ತ ವಿಚಾರವಿಲ್ಲ. ಜಯವೇ ಗುರಿಯಾಗಿಟ್ಟು ನಡೆಯಬೇಕಾದಾಗ ಪಾಪವೂ ಘಟಿಸುವುದು. ಕ್ಷತ್ರಿಯರಾದ ನಮಗೆ ಅದು ವಿಹಿತವಾಗಿದೆ. ನಾವು ಭಿಕ್ಷೆ ಬೇಡಲು ಬ್ರಾಹ್ಮಣರಲ್ಲ. ಯುದ್ಧದಲ್ಲಿ ದುಷ್ಟವಧೆಯಿಂದ ನಮಗೆ ಪುಣ್ಯವೇ ಬರುವುದು. ಮೀನು ಮೀನನ್ನು, ನಾಯಿ ನಾಯಿಯನ್ನು ಕಚ್ಚಿ ಕಾದುವಂತೆ ಕ್ಷತ್ರಿಯನು ಕ್ಷತ್ರಿಯನೊಡನೆ ಕಡಿದಾಡಬೇಕಾಗಿದೆ. ಜೀವನ-ಮರಣಗಳಂತೆ ಯುದ್ಧದ ಜಯಾಪಜಯಗಳೂ ದೈವಾಧೀನವಾಗಿವೆ. ಇಬ್ಬರಿಗೂ ಜಯವಿಲ್ಲ; ಪರಾಜಯವೂ ಇಲ್ಲ. ಅಲ್ಲಿ ಕೊಂದವನು ಕೊಲ್ಲಲ್ಪಡುವನು. ಯುದ್ಧವು ಸರ್ವಥಾ ಪಾಪರೂಪವಾಗಿದೆ. ಜಯವಾದರೂ ಸ್ವಜನನಾಶದಿಂದ ಅಪಜಯದಂತೆ

ದುಃಖಕರವು ; ಅಪಜಯವಾದರೂ ಆಮರಣಾಂತಿಕವಾದ ದುಃಖವು. ಇಂತಹ ಯುದ್ಧವಾರಿಗೆ ಬೇಕು ?

'ನನಗೇಕೋ ಯುದ್ಧವೇ ಬೇಡವೆನಿಸಿವೆ. ಧೀರರು, ಪಾಪಭೀರುಗಳು, ಕರುಣಾಳುಗಳೇ ಯುದ್ಧದಲ್ಲಿ ಸಾಯುವರು. ಯುದ್ಧದಿಂದ ಪಶ್ಚಾತ್ತಾಪ, ಪಾಪ. ಶತ್ರುಶೇಷವು ಉಳಿದು, ಆಮೇಲೆ ಬೆಳೆದು ಸರ್ವನಾಶಮಾಡಲು ಸಮರ್ಥವಾಗ ಬಹುದು. ವೈರವಹ್ನಿಯು ಆರದೆ ಉರಿಯುವಾಗ ಯಾರಿಗೆ ಸಮಾಧಾನ? ಎಲ್ಲಿ ಶಾಂತಿ? ಶತ್ರುಗಳನ್ನು ನಿರ್ಮೂಲಗೊಳಿಸಿದರೆ ನಿಷ್ಕಂಟಕ ರಾಜ್ಯಪ್ರಾಪ್ತಿಯಾಗು ವುದೇನೋ ನಿಜ! ಆದರೆ ಅಪಕೀರ್ತಿಯು ತಪ್ಪುವುದಿಲ್ಲ. ಅಂತಹ ಕ್ರೂರ ಕಾರ್ಯವನ್ನು ಧರ್ಮಜ್ಞನು ಯಾವನೂ ಮಾಡಲಾರನು. ಕಲಹಕ್ಕೆ ಕಾರಣ ವಾಗಿರುವ ವಸ್ತು ರಾಜ್ಯಾದಿಗಳನ್ನು ಬಿಡುವುದು, ಅಥವಾ ದೇಶವನ್ನು ಬಿಡುವುದು ಇಲ್ಲದಿರೆ ಪ್ರಾಣವನ್ನೇ ಬಿಡುವುದು ಅವನಿಗೆ ಉಳಿದಿರುವ ಮಾರ್ಗ. ಶಾಂತಿಯನ್ನು ಬಯಸಿ ಪಡೆದು ಸುಮ್ಮನಿದ್ದರೂ ದುಷ್ಟಶತ್ರುವು ನಿರ್ಬಲರು, ನಿರ್ಜನರು ಆದ ಸಮಾ ಧಾನಶೀಲರನ್ನು ನಿರ್ಮೂಲಗೊಳಿಸದೆ ಬಿಡುವುದಿಲ್ಲ. ರಾಜ್ಯವನ್ನು ಬಿಡಲಾರೆವು, ಯುದ್ಧವನ್ನು ಮಾಡಲಾರೆವು. ಸಾಮದಿಂದ ಕಾರ್ಯವಾದರೆ ಬಹಳ ಒಳ್ಳೆಯದು. ಇಲ್ಲದಿರೆ ಯುದ್ಧವೇ ಆಗಲಿ ; ನಾಯಿಗಳು ಎತ್ತಿನ ಮಾಂಸಕ್ಕಾಗಿ ಕಾದಾಡುವಂತೆ ಯುದ್ಧವಾಡೋಣ! ಬಾಲವನ್ನಾಡಿಸಿ, ಕೂಗಿ, ಮಾರುತ್ತರವಿತ್ತು, ಹೊರಳಾಡಿ, ಹಲ್ಲು ತೋರಿ, ಬೊಗಳುವ ನಾಯಿಗಳಂತೆ ಧ್ವಜವನ್ನೇರಿಸಿ, ಶಂಖಗಳನ್ನೂದಿ, ಬಾಣ ಗಳನ್ನು ಬಿಟ್ಟು, ಪರಸ್ಪರ ಛಿದ್ರಾನ್ವೇಷಣವನ್ನು ಮಾಡಿ, ನಿಂದಿಸಿ, ಸಿಂಹಗರ್ಜನೆ ಮಾಡೋಣ! ಕೊನೆಗೆ ಬಲಶಾಲಿಯು ಗೆಲ್ಲುವನು.

'ಧೃತರಾಷ್ಟ್ರನು ನಮ್ಮ ದೊಡ್ಡಪ್ಪನು; ನಮಗೆ ಪೂಜ್ಯನು; ಪುತ್ರವಶನಾಗಿ ರಾಜ್ಯಭಾಗವನ್ನು ಕೊಡನು. ನಾವು ಸಂಧಿಯನ್ನು ಬಯಸಿ ದುರ್ಬಲರೆನಿಸುವೆ ವಾಗಲಿ, ಯಾರೂ ನಮ್ಮನ್ನು ಶಾಂತಿಪರರೆಂದು ಮೆಚ್ಚುವುದಿಲ್ಲ. ಶ್ರೀಕೃಷ್ಣ! ಇಂತಹ ಧರ್ಮಸಂಕಟ, ಅರ್ಥಸಂಕಟದಿಂದ ಪಾರಾಗಲು ಏನು ಮಾಡಲಿ? ನಿನ್ನ ಹೊರತು ನಮಗಾಪ್ತರಿಲ್ಲ. ಪ್ರಿಯನು, ಸರ್ವಕರ್ಮವಿಶಾರದನು, ಧರ್ಮಾರ್ಥ ಕುಶಲನು ಆದ ನೀನೇ ನಮಗೆ ಗತಿ!' ಎಂದನು.

ಶ್ರೀಕೃಷ್ಣನು ಆ ಮಾತನ್ನಾಲಿಸಿ, 'ನಿಮ್ಮೀರ್ವರ ಕಾರ್ಯವಹಿಸಿ ನಾನೇ ಕುರುಸಭೆಗೆ ಹೋಗುವೆನು. ನಿಮ್ಮ ಕೆಲಸ ಕೆಡದಂತೆ ನಿಮಗೆ ರಾಜ್ಯ ಸಿಕ್ಕು, ಶಾಂತಿ ಸಂಭವಿಸಿದರೆ, ನನಗೂ ಬಹಳ ಸಮ್ಮತ. ಕೌರವ-ಪಾಂಡವರನ್ನು ಮೃತ್ಯುಮುಖ ದಿಂದ ಬಿಡಿಸಿದಂತಾಗುವುದು' ಎಂದನು. ಧರ್ಮರಾಜನು 'ಕೃಷ್ಣ! ನೀನು ಕೌರವ ಸಭೆಗೆ ಹೋಗುವುದು ನನಗೆ ಸಮ್ಮತವಲ್ಲ. ನೀನು ಏನು ಹೇಳಿದರೂ ಸುಯೋಧನನು ಕೇಳುವವನಲ್ಲ. ಬಹುರಾಜರು ದುರ್ಯೋಧನನ ಪಕ್ಷವನ್ನು ವಹಿಸಿ ಬಂದಿರುವರು. ಅವರ ಮಧ್ಯದಲ್ಲಿ ನಿನ್ನನ್ನು ದೂತನಂತೆ ನಿಂತು ಮಾತಾಡಲು ಕಳಿಸಲಾರೆನು.

ನಿನ್ನನ್ನು ದೂತನೆಂದು ಕಳಿಸುವ ದ್ರೋಹವನ್ನು ಮಾಡಲಾರೆನು. ಆ ದುರ್ಮಾರ್ಗರು ನಿನಗೆ ಮಾಡುವ ಅಪಮಾನವನ್ನೂ ಸಹಿಸಲಾರೆನು. ರಾಜ್ಯ, ದ್ರವ್ಯ, ಬಂಧು, ಸುಖಗಳು, ಸರ್ವದೇವೈಶ್ವರ್ಯಗಳು ಕಲೆತು ನಿನಗಿಂತ ಹೆಚ್ಚಲ್ಲ' ಎಂದನು. ಶ್ರೀಕೃಷ್ಣನು 'ಮಹಾರಾಜ! ಗೊತ್ತಿದೆ ನನಗೆ ದುರ್ಯೋಧನನ ಪಾಪ ಬುದ್ಧಿ! ನಾನಾಗಿ ದೂತನಾಗಿ ಹೋಗುತ್ತಿರುವಾಗ ನಿನಗೇಕೆ ಆ ಚಿಂತೆ? ಸಂಧಿಗಾಗಿ ಪ್ರಯತ್ನಿಸುವುದರಿಂದ 'ಪಾಂಡವರು ಯುದ್ಧ, ಯುದ್ಧವೆನ್ನುವರು. ಶ್ರೀಕೃಷ್ಣನು ಹೇಳಿದ್ದರೆ ಸಂಧಿಯಾಗುತ್ತಿತ್ತು' ಎಂಬ ಅಪಕೀರ್ತಿಯು ದೂರವಾಗುವುದು. ಇನ್ನು ಆ ದುಷ್ಟರು ಎಲ್ಲರೂ ಕಲೆತು ಮುತ್ತಿದರೂ ನನ್ನೆದುರು ನಿಲ್ಲಲಾರರು. ಒಂದು ವೇಳೆ ಅವರಂತಹ ಅಕೃತ್ಯವನ್ನು ಮಾಡಿದರೆ, ಕೌರವಾದಿ ಸರ್ವರಾಜರನ್ನೂ ಸುಟ್ಟು, ನಾಶಮಾಡಬಲ್ಲೆನು. ನಾನು ಹೋಗುವುದರಿಂದ ನಷ್ಟವಿಲ್ಲ. ಬಂದರೆ ರಾಜ್ಯ ಬರುವುದು. ಇಲ್ಲದಿರೆ ಅಪನಿಂದೆ ತೊಲಗುವುದು' ಎಂದನು.

ಧರ್ಮರಾಜನು 'ಸರಿ! ನಿನಗೆ ಸಂದೋರಿದಂತೆ ಮಾಡು! ಕೃಷ್ಣ! ನೀನು ಕಾರ್ಯವನ್ನು ಸಾಧಿಸಿ, ಸುಖವಾಗಿ ಬಂದರೆ ಸಾಕು. ಕುರು-ಪಾಂಡವರ ಸಂಧಿ ಮಾಡಿಸು! ಎಲ್ಲರಿಗೂ ಸುಖವಾಗಲಿ! ನಮ್ಮನ್ನರಿತಿರುವೆ! ಅವರನ್ನೂ ಅರಿತಿರುವೆ! ಮಾತನ್ನರಿತಿರುವೆ! ಪ್ರಯೋಜನವನ್ನರಿತಿರುವೆ! ನಮಗೆ ಹಿತವೆಂದು ತೋರಿದಂತೆ ಮಾತಾಡು! ನಯಭಯಗಳಿಂದ ಹೇಳು!' ಎಂದನು. ಶ್ರೀಕೃಷ್ಣನು 'ರಾಜನ್! ಸಂಜಯನ ಮಾತನ್ನೂ, ನಿನ್ನ ಮಾತನ್ನೂ ಕೇಳಿ, ತಿಳಿದೆನು. ನಿನ್ನ ಬುದ್ಧಿ ಧರ್ಮವನ್ನಾಶ್ರಯಿಸಿದೆ. ಅವರ ಬುದ್ಧಿ ವೈರವನ್ನು ತುಂಬಿಕೊಂಡಿದೆ. ನೀನು ಯುದ್ಧವಿಲ್ಲದೆ ಏನು ಬಂದರೂ ಸಾಕು ಎನ್ನುವೆ; ಎಲ್ಲವೂ ಬೇಕೆಂಬರವರು. ಕ್ಷತ್ರಿಯನಿಗೆ ಯುದ್ಧವು ಸ್ವಧರ್ಮವು. ಜಯವಾಗಲಿ, ವಧವಾಗಲಿ ಅವನು ವರಿಸುವುದು. ಕ್ಷತ್ರಿಯನಿಗೆ ಧರ್ಮರಕ್ಷಣೆಗಾಗಿ ಮಾಡುವ ಯುದ್ಧದಿಂದ ಪಾಪವಿಲ್ಲ. ಅವನು ಐದೂರು ಕೊಡಲಿ, ಸಾಕೆಂದು ಬಿಕ್ಷೆ ಬೇಡುವುದು ಸರಿಯಲ್ಲ. ದೀನನಾಗಬೇಡ! ವಿಕ್ರಮಿಸಿ ಶತ್ರುಗಳನ್ನು ಕೊಂದು, ಸುಖಿಸು! ಅತಿ ಲೋಭಿಗಳು, ದುಷ್ಟಮಿತ್ರರು, ರಾಜ್ಯದ ಐಶ್ವರ್ಯವನ್ನು ಕೈಲಿ ಹಿಡಿದಿರುವವರು ಬಲವಂತರು ಆದ ಕೌರವರು ನಿನ್ನ ಸ್ನೇಹಹಸ್ತವನ್ನು ಮುಟ್ಟರು. ಅವರು ನಿನಗೆ ಮಾಡಬಾರದ ಅಪರಾಧಗಳನ್ನು ಮಾಡಿ ಪಶ್ಚಾತ್ತಾಪ ಪಡದೆ ಇರಲು ನಿನ್ನ ಮಾರ್ದವವೇ ಕಾರಣ. ನೀನು ಬೇಡಿದಂತೆಲ್ಲ ಅವರು ಹಠ ಮಾಡುವರು. ಅವರಿಗೆ ಅನುಕ್ರೋಶವಿಲ್ಲ. ಧರ್ಮಾರ್ಥಗಳನ್ನು ವಿವೇಚಿಸಿ ಸರಿಯಾಗಿ ನಡೆಯುವ ಜ್ಞಾನವಿಲ್ಲ. ನೀನು ಕೌಪೀನವನ್ನು ಧರಿಸಿ ಸತಿ-ಸೋದರರಿಂದ ಯಾವಜ್ಜೀವವೂ ವನದಲ್ಲಿದ್ದರೂ ಅವರಿಗೆ ಅನುತಾಪವಿಲ್ಲ.

'ಮೋಸದ ಜೂಜಿನಲ್ಲಿ ವಂಚಿಸಿ ರಾಜ್ಯವನ್ನು ಕಸಿದ ದುರ್ಯೋಧನನಿಗೆ ನಾಚಿಕೆ ಇದೆಯೇ? ನಿಮ್ಮನ್ನು ಆಡಬಾರದ ಮಾತುಗಳನ್ನಾಡಿ ನೋಯಿಸಿದ

ಪಾಪಿಯನ್ನು ಅವನ ಸೋದರರು ಮಿತ್ರರು ಹೊಗಳಿದರಾಗಲಿ ನಿಂದಿಸಿದರೇ? 'ಪಾಂಡವರು ಸತ್ತಂತಾದರು. ಅಂತಃಪುರವನ್ನು ಸೇರೆ'ಂದು ಬೊಗಳಿದ ದುಶ್ಶಾಸನ ನನ್ನು ಯಾರಾದರೂ ದಂಡಿಸಿದರೇ? ಕೇಶಗಳಿಂದ ಪಿಡಿದು, ಆ ದುರಾತ್ಮನು ದ್ರೌಪದೀ ದೇವಿಗೆ ಮಾಡಿದ ಅವಮಾನವನ್ನು ಗೌಃ ಗೌಃ (ಸರ್ವಭೋಜ್ಯಳಾಗು) ಎಂದು ಕೂಗಾಡಿದ ದುರ್ವಚನಗಳನ್ನು, ಇತರ ದುಸ್ವರ ಪ್ರಲಾಪಗಳನ್ನು ನೀನಾದುದರಿಂದ ಸಹಿಸಿದೆ. ನಿನ್ನ ತಮ್ಮಂದಿರಾಗಿ ಹುಟ್ಟಿದುದರಿಂದ ಧರ್ಮಪಾಶಬದ್ಧರಾಗಿ ಭೀಮಾದಿ ಗಳು ಸುಮ್ಮನಿದ್ದರು. ಇಂತಹ ಕು-ಕೃತ್ಯಗಳನ್ನು ಮಾಡಿದ ದುರ್ಯೋಧನನಿಗೆ ಮಿಗಿಲಾದ ಪಾಪಿಗಳುಂಟೇ? ಅಂತೆಂದು ತಿಳಿದು ಯಾರಾದರೂ, ಭೀಷ್ಮ, ದ್ರೋಣ, ಧೃತರಾಷ್ಟ್ರರಾದರೂ ಅವನನ್ನು ವಾರಿಸಿದರೇ? ಇಂದು ಅವನನ್ನು ನಿಂದಿಸುವ ಧೀರ ನೊಬ್ಬನಾದರು ಅಲ್ಲಿರುವನೇ? ವಿದುರ ಭೀಷ್ಮ-ದ್ರೋಣಾದಿಗಳು ಕಣ್ಣೀರಿಡುತ್ತಾ ಮನದಲ್ಲೇ ಮರುಗಿದರು ನಿಜ! ಬ್ರಾಹ್ಮಾದಿ ಪ್ರಜರೂ ನಿಂದಿಸಿದರು ಸತ್ಯ! ಆದರೆ ದುರ್ಯೋಧನನನ್ನು ದಂಡಿಸಿ ವಾರಿಸುವವರಿದ್ದರೇ? ಅವನಿಗೆ ತಾನು ಮಾಡಿದ ಅಕಾರ್ಯಗಳಿಗೆ ಪಶ್ಚಾತ್ತಾಪವಿಲ್ಲ. ಅಂತಹವನನ್ನು ತುಚ್ಛೀಕರಿಸುವುದೇ ವಧೆಗೆ ಸಮಾನ. ಅವನು ಅಂದೇ ಪಾಪದಿಂದ ಹತನಾಗಿರುವನು. ಸರ್ವಲೋಕದ್ರೋಹಿ ಯಾದ ಸರ್ಪವನ್ನಂತೆ ಆ ಪಾಪಿಯನ್ನು ಕೊಲ್ಲು! ಸ್ತ್ರೈಣನು, ನಿರ್ವೀರ್ಯನು ಆಗಿರುವ ದುರ್ಯೋಧನನನ್ನು ತೊಗಟೆಗಳಿಲ್ಲದ ಗಿಡದಂತೆ ಕಡಿದುಹಾಕು! ಸಂಶಯ ಪಡಬೇಡ! ನಾನು ದುರ್ಯೋಧನನ ಪಾಪಬುದ್ಧಿಯನ್ನು ಹೊರಗೆಡಹಿ, ಲೋಕಕ್ಕೆ ತಿಳಿಸಲು ಹೋಗುತ್ತಿರುವೆನು. ಧರ್ಮಾರ್ಥಸಮ್ಮತವಾದ ನನ್ನ ವಾಕ್ಯಗಳನ್ನು ಕೇಳಿ, ಬಂದಿರುವ ರಾಜನ್ಯರಲ್ಲಿ ಕೆಲವರಾದರೂ ನಿಜವರಿತು ದುರ್ಯೋಧನನಲ್ಲಿ ವಿರಕ್ತರಾಗಲಿ! ಅವನ ಲೋಭ-ಮೋಹ-ಕ್ರೋಧಗಳಂತೆ ನಿನ್ನ ಸತ್ಯ-ಧರ್ಮ ಶಮ ಗಳೂ ಪ್ರಕಾಶಿತವಾಗುವುವು. ಜನರು ಧೃತರಾಷ್ಟ್ರ ದುರ್ಯೋಧನರನ್ನು ನಿಂದಿಸು ವರು. ಸಂಧಿಗಾಗಿ ಯತ್ನಿಸುವೆನು. ಆದರೆ ಯುದ್ಧವೇ ನಿಶ್ಚಯವೆಂದು ನನಗೆ ತೋರುತ್ತಿದೆ. ಮನುಜಲೋಕ ನಾಶಕಾರಣಗಳಾದ ದುಶ್ಶಕುನಗಳು ಕಾಣಬರುತ್ತಿವೆ. ಯಮರಾಜನು ಭಟರಿಂದ ಕೂಡಿ ಧರೆಗಿಳಿದುಬಂದಿರುವಂತಿದೆ. ನಿನ್ನ ಸೈನ್ಯವು ಸರ್ವಸಿದ್ಧವಿರಲಿ!' ಎಂದನು.

ಭೀಮಸೇನನು, 'ಶ್ರೀಕೃಷ್ಣ! ಆಗಲಿ! ಸಂಧಿಯೇ ಆಗಲಿ! ಅವರಿಗೆ ಯುದ್ಧದ ಭಯವನ್ನು ಪುಟ್ಟಿಸಿ, ಶಾಂತಿಯನ್ನು ಕೆಡಿಸಬೇಡ! ಪಾಪಿಯು ಸುಜನದ್ವೇಷಿಯು, ಸ್ವೇಚ್ಛಾಚಾರನು ಆದ ದುರ್ಯೋಧನನಿಗೆ ಸಾವುವನ್ನೇ ತೋರು! ಅವನು ನಿಷ್ಠುರನು, ಕ್ರೂರ ಪರಾಕ್ರಮನು, ಐಶ್ವರ್ಯಮದಮತ್ತನು, ಜೋರರಾಜನು, ಸುಜನ ನಿಂದಕನು ಆಗಿರುವನು. ಅವನಿಂದ ಸಂಧಿ ದುಷ್ಕರಣವು. ಅವನು ಒಣ ಕಟ್ಟಿಗೆಯಂತೆ ಮುರಿದು ಬೀಳುವನಾಗಲಿ ಬಾಗಿ ನಮಿಸನು. ಸ್ನೇಹಿತರು, ಬಂಧು ಗಳು ಎನ್ನದೆ ಅವರ ಮನಸ್ಸನ್ನು ನೋಯಿಸುವ ನೀಚನು ಇತರರಿಗೆ ಹಿತನಾಗುವನೆ?

ಸ್ವಭಾವದಿಂದಲೇ ಪಾಪಿಯಾದ ದುರ್ಯೋಧನನ ಸುತ್ತಿರುವ ಸ್ನೇಹಿತರೆಂತಹವರೆಂದು ಹೇಳಬೇಕಿಲ್ಲ. ಹಿಂದೆ ಸುಖವಾಗಿದ್ದ ಕುರು-ಪಾಂಡವರು ಈಗ ದುರ್ಯೋಧನನ ಕ್ರೋಧದಿಂದ ನಾಶವಾಗಬೇಕಾಗಿದೆ.

ಧರ್ಮದೂರವಾದ ಕಲಿಕಾಲವು ಬರಲಿದೆ. ಕುಲನಾಶಕರಾದ ರಾಜರು ಹುಟ್ಟಿ ಲೋಕೋಪದ್ರವವನ್ನು ಮಾಡಿರುವರು. ಹೈಹಯಗಲ್ಲಿ ಉದಾವರ್ತ, ನೀಪರಲ್ಲಿ ಜನಮೇಜಯ, ತಾಲಜಂಘರಲ್ಲಿ ಬಾಹುಲ ನಂದಿ, ವೇಗರಲ್ಲಿ ಶಮ ಮುಂತಾದ ಹದಿನೆಂಟು ರಾಜರು ಕುಲನಾಶಕರಾಗಿ ಜನಿಸಿರುವರು. ಈಗ ದ್ವಾಪರ ಯುಗಾಂತ್ಯ ದಲ್ಲಿ ದುರ್ಯೋಧನನು ಕುಲವನ್ನು ನಾಶಪಡಿಸಲಿರುವನು. ಇರಲಿ! ನೀನೆಲ್ಲ ವನ್ನರಿತಿರುವೆ. ಸಂಧಿಗೆಂದು ಹೊರಟಿರುವೆ. ನಾನೇಕೆ ಬೇಡವೆನ್ನುವೆನು? ಮೃದುವಾಗಿ ಮಾತಾಡು! ಕುಲಕ್ಷಯವಾಗದಿರಲಿ! ನಾವು ದುರ್ಯೋಧನನ ಕೈಕೆಳಗೆ ಇರುವೆವು. (ಅವನು ಯುದ್ಧದಲ್ಲಿ ಸತ್ತು ಕೆಲಕಾಲ ವೀರಸ್ವರ್ಗದಲ್ಲಿರುವಾಗ ಮೇಲಿದ್ದುದರಿಂದ ಭೂಮಿಯಲ್ಲಿ ರಾಜ್ಯಪಾಲನೆಗೆಂದು ಸಂಚರಿಸುವ ನಾವು ಕೆಳಗಿರುವೆವು.) ಧರ್ಮಜನಿಗೆ ಸಂಧಿ ಬೇಕು! ಅರ್ಜುನನಿಗೆ ಬಹು ದಯೆ; ಆದುದರಿಂದ ಅವನಿಗೂ ಸಂಧಿ ಬೇಕು! ನನಗೆ ಮಾತ್ರ ಯುದ್ಧ ಬೇಕೆಂಬ ನಿಂದೆ ಏಕೆ? ನನಗೂ ಸಂಧಿಯೇ ಬೇಕು' ಎಂದನು.

ಆ ಮಾತನ್ನಾಲಿಸಿ ಶ್ರೀಕೃಷ್ಣನು ಗಟ್ಟಿಯಾಗಿ ನಕ್ಕನು. 'ಭೀಮಸೇನನೀ ಮಾತನ್ನಾಡುತ್ತಿರುವನೆ? ಗಿರಿಯು ಲಘುವಾಯಿತೆ? ಅಗ್ನಿಯೇ ಮಂಜಾಯಿತೆ?' ಎಂದು ಕೃಷ್ಣನು ಲೋಕಪಿಡಂಬನೆಗಾಗಿ ಭೀಮನೊಡನೆ ಸಂಪಾದಿಸಿದನು. ಭೀಮನು ಸಮೀಚೀನ ಸದ್ಗುಣಭರಿತನು. ದುರ್ಯೋಧನನು ದುರ್ಗುಣಭರಿತನು. ಎಂದು ಲೋಕದ ಜನರಿಗೆ ತೋರಿಸಿಕೊಡಲು ಶ್ರೀಕೃಷ್ಣನು ಭೀಮನಿಗಿಂತೆಂದನು—

'ಭೀಮಸೇನ! ಎಂದೂ ಸಂಧಿಯ ಮಾತನ್ನಾಡದ ನೀನಿಂದು ಏಕೆ ಮೃದು- ವಾದೆ? ದುಷ್ಟರಾದ ದುರ್ಯೋಧನಾದಿಗಳನ್ನು ಅವರು ಮಾಡಿದ ಮಹಾ ದ್ರೋಹ ವನ್ನು ನೆನೆದು ಕಾಲ ಕೆಳಗೆ ಸವರಬೇಕೆಂಬ ನಿನ್ನ ಹಠವನ್ನಾರರಿಯರು? ಗಿಡಗಳನ್ನು ಕೆಡಹುವ ಮದಗಜದಂತೆ, ಭೂಮಿಯು ಕಂಪಿಸುವಂತೆ ನಡೆಯುವೆ! ನಿಟ್ಟುಸಿರ- ನ್ನಿಡುವೆ! ಏಕಾಂತದಲ್ಲಿರುವೆ! ಕಣ್ಣು ಮುಚ್ಚಿ ಆಲೋಚಿಸುವೆ! ಹುಬ್ಬನ್ನು ಗಂಟಿಕ್ಕಿ ಹಲ್ಲಿನಿಂದ ತುಟಿ ಕಡಿಯುವೆ! ಸೂರ್ಯನ ಉದಯಾಸ್ತಗಳಂತೆ ಗದಾಘಾತ ದಿಂದಾಗುವ ಕೌರವಮರಣವೂ ನಿಶ್ಚಯವೆಂಬ ನೀನಿಂದು ಸಭೆಯಲ್ಲಿ ಸಂಧಿಯ ಮಾತನ್ನಾಡುವುದೇ? ಯಾವ ದುಸ್ಸ್ವಪ್ನವನ್ನು ಕಂಡೆ? ಯಾವ ದುಶ್ಶಕುನ ಗಳನ್ನು ನೋಡಿದೆ? ಭೀಮಸೇನ! ಯುದ್ಧಕಾಲವು ಸನ್ನಿಹಿತವಾದಾಗ ಮಹಾ ವೀರನೂ ಭೀರುವಿನಂತಾಡಲಹುದೆ? ಶಾಲ್ಮಲೀತರು ಶಾಖೆಯು ವಾತಘಾತದಿಂದ ಕಂಪಿಸುವಂತೆ ನಿನ್ನ ಚಿತ್ತವು ಯುದ್ಧವಾರ್ತೆಯನ್ನಾಲಿಸಿ ಚಲಿಸಿತೆ? ನಿನ್ನ ಮಾತ ನ್ನಾಲಿಸಿ ಪಾಂಡುಪುತ್ರರು, ಹಡಗ ಒಡೆದು ಸಮುದ್ರದಿ ಸಿಕ್ಕ ನಾವಿಕರಂತಾಗಿರುವರು.

ಪರ್ವತವೇ ಜಾರಿಸಿದಂತೆ, ನೀನು ಸಂಧಿಗಾಗಿ ಮಾತಾಡುವುದು ನನಗೂ ಆಶ್ಚರ್ಯ ವೆನಿಸಿದೆ. ವಿಷಾದವನ್ನು ತ್ಯಜಿಸು! ಭರತಕುಲಾಲಂಕಾರನಿರುವೆ! ಅತ್ಯದ್ಭುತ ಕರ್ಮಗಳನ್ನು ಮಾಡಿರುವೆ| ಏಳು! ಯುದ್ಧಸ್ಥಿರನಾಗು!' ಎಂದನು.

ಭೀಮಸೇನನು ಜವನಾಶ್ವದಂತೆ ರಭಸದಿಂದ ಮುಂದೆ ಬಂದು, 'ಅಚ್ಯುತ! ದೇವ! ಯುದ್ಧವೇ ಮಾಡಬೇಕೆಂಬ ನನ್ನನ್ನು ಸಂಧಿಕಾತರನಂತೆ ತಿಳಿದು ಏಕೆ ಮಾತಾಡುವೆ? ನನ್ನ ವಿಷಯವನ್ನು ಬಹುಕಾಲದಿಂದ ಚನ್ನಾಗಿ ತಿಳಿದೂ ತಿಳಿದೂ ನೌಕೆಯನ್ನಪೇಕ್ಷಿಸದೇ ಕೈಲಿ ಹ್ರದವನ್ನು ದಾಟುವವನನ್ನು ಜಲದಂತೆ ತಿಳಿಯದೆ ಮಾತಾಡುತ್ತಿರುವೆಯಾ? ಇನ್ನೊಬ್ಬನಿಂತು ಮಾತಾಡಿ ಉಳಿಯಬಲ್ಲನೆ? ನನ್ನ ಬಲ ಪರಾಕ್ರಮಗಳನ್ನು ತಿಳಿಯಲೆಣಿಸಿ ಲೋಕಕ್ಕೆ ತಿಳಿಯಲೆಣಿಸಿ, ನನ್ನನ್ನು ರೇಗಿಸುವ ನಿನ್ನ ಲೀಲೆಗೆ ನಮೋನಮಃ ಆತ್ಮಪ್ರಶಂಸೆ ಕೂಡದು. ಆದರೂ ನಿನ್ನ ಪ್ರಶ್ನೆಗೆ ಉತ್ತರವೀಯಬೇಕೆಂದು ಹೇಳುತ್ತಿರುವೆನು.

'ಈ ದ್ಯಾವಾಪೃಥಿವಿಗಳೆರಡನ್ನೂ ಕಂಡೆಯಾ? ಅವುಗಳ ಮಧ್ಯದಲ್ಲಿ ನಿಂತ ಈ ಸರ್ವಲೋಕಗಳನ್ನು ನೋಡು! ಅವು ಶಿಲೆಯಂತಾದುವೆನ್ನು! ಆಗ ಅವೆರಡನ್ನು ಮಹಾಪರಿಘ ಸನ್ನಿಭವಾದ ನನ್ನ ಬಾಹುಯುಗಗಳ ಮಧ್ಯದಲ್ಲಿ ಅಮುಕಿ, ತಾಳ ಕಡಿಯ ಬಲ್ಲೆನೆಂದು ನಿನಗೆ ತಿಳಿಸಬೇಕೆ? ಆಗ ಹಿಮಾಲಯವಾಗಲಿ, ಸಮುದ್ರವಾಗಲಿ, ಸಾಕ್ಷಾದಿಂದ್ರನಾಗಲಿ ನನಗೆ ಅಡ್ಡಿ ಬರಲಾಗುವನೆ? ಪಾಂಡವರಿಗೆ ದ್ರೋಹವೆಸಗಿದ, ದ್ರೌಪದಿಯನ್ನು ಅವಮಾನಿಸಿದ ಪರಮ ದುರ್ಮಾರ್ಗರನ್ನು ಕಾಲ ಕೆಳಗೆ ಹಾಕಿ, ತಿಗಣೆಯನ್ನಂತೆ ಸವರಿಬಿಡುವೆನು. ನನ್ನ ವಿಕ್ರಮ ನಿನಗೆ ಗೊತ್ತಿಲ್ಲದಿಲ್ಲ. ಮುಂದೆ ಯುದ್ಧದಲ್ಲಿ ಮತ್ತೆ ತೋರುವೆನು. ನೀನೇ ನೋಡಿ ಮೆಚ್ಚುವಂತಾದೀತು! ಭರತ ಕುಲವು ನಾಶವಾಗಬಾರದೆಂಬ ಕರುಣೆಯಿಂದ ನಾನಂತಾಡಿದೆನು' ಎಂದನು.

ಶ್ರೀಕೃಷ್ಣನು 'ಭೀಮಸೇನ! ನಿನ್ನ ಕ್ಷಮಾವೀರ್ಯಬಲಗಳನ್ನು ಎಲ್ಲರೂ ತಿಳಿ ಯಲೆಂದು ನಾನು ನಿನ್ನನ್ನು ಆಕ್ಷೇಪಿಸಿದಂತೆ ಮಾತಾಡಿದೆನು. ನಿನ್ನ ಮಹಿಮೆ ನನಗೆ ತಿಳಿದಿದೆ. ನಿನ್ನ ಆ ಅದ್ಭುತ ಕರ್ಮಗಳನ್ನು ನಾನು ಮರೆತಿಲ್ಲ. ನೀನು ಹೇಳಿದ ಮಹಾ ಪರಾಕ್ರಮ, ಬಲ, ಪೌರುಷಗಳು ನೀ ಹೇಳಿದಷ್ಟೇ ಅಲ್ಲದೆ ಇನ್ನೂ ಸಾವಿರಾರು ಪಟ್ಟು ಹೆಚ್ಚಾಗಿ ನಿನ್ನಲ್ಲಿವೆ. ಸರ್ವರಾಜಾಭಿಪೂಜಿತವಾದ ಭರತಕುಲದಲ್ಲಿ ಪುಟ್ಟಿರುವೆ! ನಿನ್ನ ಬಂಧು ಮಿತ್ರರೂ ನಿನ್ನಂತೆ ಮಹಾತ್ಮರು. ದೇವತೆಗಳು ನಿಶ್ಚಯಪಟ್ಟ ವಿಷಯ ದಲ್ಲಿ ಮನುಜರು ಸಂಶಯಪಡುವರು. ದುರ್ಜನರಿಂದ ಯುದ್ಧವೇ ಶ್ರೇಯ. ಸುಜನನಿಂದ ಮಾತ್ರ ಸಂಧಿಯೇ ಶ್ರೇಯ. ಈ ವಿಷಯವನ್ನು ನಿನ್ನಿಂದ ನಿಶ್ಚಯ ಪಡಿಸಿ ಇತರರ ಸಂಶಯವನ್ನು ನಿವಾರಿಸಲೆಂದು ನನ್ನ ಅಭಿಮತ. ಶೂರರೂ ಒಂದೊಂದು ಸಲ ಭೀರುಗಳಂತಾಡುವರು. ಜ್ಞಾನಿಗಳು ಕರ್ತವ್ಯವೆಂದು ನಿರೂಪಿಸು ವುದನ್ನು ದೋಷದರ್ಶಿಗಳು ಅಲ್ಲವೆನ್ನುವರು. ಚನ್ನಾಗಿ ಆಲೋಚಿಸಿ ಮಾಡಿದ ಮಾನುಷಕರ್ಮ, ದೈವದಿಂದ ಕೆಡಬಹುದು. ವಿನಯದಿಂದ ಹುಲಿಯನ್ನು ಸಾಧು

ಪಡಿಸಲು ಹೋದಂತೆ, ಅದು ವ್ಯರ್ಥವಾಗುವುದು. ಹುಲಿಯನ್ನು ಅತಿ ನಿಷ್ಠುರ ಸ್ವಭಾವದನ್ನಾಗಿಸಿದ ದೈವವಲ್ಲಿ ಬಲೀಯು. ದೈವಕೃತ ಅನಾವೃಷ್ಟ್ಯಾದಿ ಕಷ್ಟಗಳಲ್ಲಿ ಕೃಷೀವಲನು ಬಾವಿ-ಕೆರೆಗಳಿಂದ ನೀರನ್ನು ಹರಿಸಿ, ಫಲವನ್ನು ತೆಗೆಯುವುದನ್ನು ನೋಡಿದರೆ ಪುರುಷಪ್ರಯತ್ನವು ಬಲೀಯವೇನೋ ಎಂದು ತೋರುವುದು; ಆದರೆ ಕೆರೆ ಬಾವಿಗಳನ್ನೂ ಒಣಗಿಸುವ ದೈವದ ಮುಂದೆ ಪೌರುಷವೇನೂ ಮಾಡಲಾರದು. ಹಾಗೆಂದು ಶೀತೋಷ್ಣದಿಬಾಧೆಗಳನ್ನು ನೀಗಲು ಪ್ರಾವಾರಾಗಳನ್ನು ಸ್ವೀಕರಿಸದಿರುವೆವೆ? ಹಸಿವೆಗೆ ಅನ್ನ ಹಾಕದಿರುವೆವೆ? ಒಂದು ಪ್ರಾರಬ್ಧ ಬಿಟ್ಟು ಮಿಕ್ಕ ಸಂಚಿತಾಗಾಮಿಗಳು ಅಪರೋಕ್ಷಜ್ಞಾನಿಗಳಿಗೆ ನಷ್ಟವಾಗುವುವು. ಆದರೆ ಅವರು ಪ್ರಾರಬ್ಧವನ್ನುಣ್ಣಬೇಕಲ್ಲವೆ? ಅದನ್ನು ಉಣಿಸುವ ದೈವದಕಿಂತ ಬಲೀಯವಿಲ್ಲ. ಪ್ರಯತ್ನವು ದೈವಾನುಕೂಲ್ಯದಿಂದಲೇ ಫಲಿಸುವುದು. ಪ್ರಯತ್ನವೇ ಇಲ್ಲದಿರೆ ದೈವವು ತಾನಾಗಿ ಫಲ ಕೊಡದು. ಕರ್ಷಕನಂತೆ ಫಲಾಫಲಗಳನ್ನು ಲೆಕ್ಕಿಸದೆ, ಕೃಷಿರತನಾಗುವುದುಚಿತವು. ಶತ್ರುಗಳಿಂದ ಕಾದುವಾಗ ಜಯವೇ ನಿಶ್ಚಯವೆಂದು ಮದಿಸಬಾರದು. ಶತ್ರುವು ಕ್ಷೀಣನಾದೊಡನೆ ಅಲಕ್ಷಿಸಬಾರದು. ಅತಿ-ನೀತಿಯನ್ನು ಹುಡುಕಬಾರದು. ಮನೆಗೆ ಬೆಂಕಿ ಬಿದ್ದಾಗ ಆರಿಸಲು ರಾಹುಕಾಲವೆಂದು ಬಿಟ್ಟು ಕೂಡಬಾರದು. ಶತ್ರುವಿನ ಸಂಪೂರ್ಣ ನಾಶವನ್ನು ಆಲಸ್ಯವಿಲ್ಲದೆ ಸಾಧಿಸಿದವನು ಬುದ್ಧಿವಂತನು.

'ಭೀಮಸೇನ! ನಾಳೆ ಕೌರವರಲ್ಲಿಗೆ ಹೊರಡುವೆನು. ಗರ್ವದಿಂದ ಕಣ್ಣು ಕಾಣದೆ ಅವರು ನನ್ನ ಮಾತನ್ನು ಕೇಳದಿದ್ದರೆ ಯುದ್ಧವನ್ನೇ ಸಿದ್ಧಮಾಡಿಕೊಂಡು ಬರುವೆನು. ಭೀಮ! ಈ ಯುದ್ಧದ ಭಾರವೆಲ್ಲ ನಿನ್ನ ಮೇಲಿಟ್ಟಿರುವೆನು. ನಿನ್ನನ್ನು ರಥವನ್ನಾಗಿಸಿ, ಅರ್ಜುನನನ್ನು ಅಶ್ವಗಳಂತೆ ಮಾಡಿ, ನಾನು ಸಾರಥಿಯಾಗಿ, ಎಲ್ಲ ಪಾಂಡವರನ್ನೂ ಕೌರವ ಕಂಟಕಿತ ಮಾರ್ಗವನ್ನು ದಾಟಿಸುವೆನು. ಧನಂಜಯನ ಕೋರಿಕೆಯಂತೆ ಅವನಿಗೆ ಸಾರಥಿಯಾಗಿ ನಾನು ಯುದ್ಧಮಾಡದಿರುವೆನು. ನಿನ್ನಿಂದ ಸರ್ವದುರ್ಜನ ನಾಶವಾಗಲೆಂದು ನಾನು ನಿನ್ನನ್ನು ರೇಗಿಸಿದೆನು' ಎಂದನು.

ಆಗ ಅರ್ಜುನನು ಕೃಷ್ಣನಿಗಿಂತೆಂದನು—'ಕೃಷ್ಣ! ಅಣ್ಣ ಧರ್ಮಜನ ಮಾತೂ ಕೇಳಿದೆನು. ಧಾರ್ತರಾಷ್ಟ್ರರ ಲೋಭವು ನಮ್ಮ ದೈನ್ಯದಿಂದ ಹೆಚ್ಚೇ ಆಗುವುದು. ಸಂಧಿ ಆಗದು' ಎಂದು ನೀನು ತಿಳಿದಂತಿದೆ. ಪುರುಷಪ್ರಯತ್ನವೇ ಇಲ್ಲದಿರೆ ದೈವವೆಂತು ಫಲವೀಯುವುದು? ಸಂಧಿಪ್ರಯತ್ನವನ್ನು ಮಾಡೋಣ! ನಿನ್ನ ಮಾತು ಸುಳ್ಳಲ್ಲ. ನಮ್ಮ ಅಣ್ಣನ ಮಾತು ಸಂಧಿ ಯುದ್ಧಗಳನ್ನು ಎರಡನ್ನೂ ಬೇಡುವಂತಿದೆ. ಆದರೂ ಶ್ರೀಕೃಷ್ಣ! ಸರ್ವರಕ್ಷಣವಾಗುವ ಸಂಧಿಕಾರ್ಯವು ನಿನಗೆ ದುಷ್ಕರವಲ್ಲ. ಸಾಮದಿಂದ ಬಾಗದ ಕೌರವರು ಸಂಧಿಯನೊಪ್ಪರು; ಅವರಲ್ಲಿ ದಂಡವೇ ಲೇಸು ಎಂದರಿತು ನಾನು ಸಂಧಿಗಾಗಿ ಹೋಗುವ ನಿನ್ನ ಕಾರ್ಯವು ಸಫಲವಾಗಲಿ! ಎಂದು ಹಾರೈಸುತ್ತಿರುವೆನು. ನೀನು ಪ್ರಭುವಾಗಿರುವೆ. ಸರ್ವೇಂದ್ರಿಯ ಪ್ರೇರಕನಾಗಿರುವೆ!

ನಿನ್ನ ಕಾಮದಂತೆ ನಮ್ಮ ಕಾಮ. ಕುರು-ಪಾಂಡವರಿಗೆ ನೀನು ಪ್ರಥಮ ಮಿತ್ರ ನಾಗಿರುವೆ ! ನಮ್ಮ ಹಿತವನ್ನು ಸಾಧಿಸುವುದು ನಿನಗೆ ದುಷ್ಕರವಲ್ಲ. ದುರ್ಯೋಧನನು ದುಷ್ಟನು ನಿಜ! ಸ-ಸುತಬಾಂಧವನಾಗಿ ಸಾಯಲಿರುವನು. ಧರ್ಮಜನ ಸಿರಿಯನ್ನು ಸಹಿಸದೆ ದುರ್ದ್ಯೂತವನ್ನಾಡಿ, ಅಮಾಯಿಕನಾದ ನಮ್ಮಣ್ಣನನ್ನು ವನಕ್ಕಟ್ಟಿದಾಗಲೇ ಅವನು ವಧಾರ್ಹನಾಗಿರುವನು. ದ್ರೌಪದಿಯ ಕಷ್ಟವೂ ನಿನಗೆ ಗೊತ್ತಿದೆ. ಅದರ ಪ್ರತಿಫಲವೂ ಅವನನ್ನು ಸೇರಬೇಕಾಗಿದೆ. ನಿನ್ನ ಸಂಧಿಯ ಮಾತು ಊಷರದಲ್ಲಿ ಬಿತ್ತಿದ ಬೀಜದಂತೆ ಅವನಲ್ಲಿ ಫಲಿಸದು. ನಿನಗೆ ತೋರಿದಂತೆ ಮಾಡಿಕೊಂಡು ಬಾ ! '

ಶ್ರೀಕೃಷ್ಣನು, 'ಅರ್ಜುನ ! ನೀನು ನುಡಿದುದು ನಿಜ ! ಉಭಯರ ಹಿತವನ್ನು ಸಾಧಿಸಲೆಂದಲ್ಲವೇ ನಾನು ಹೊರಟಿರುವುದು. ನೀವಿಬ್ಬರೂ ಸಂಧಿಯುದ್ಧಗಳೆರಡಕ್ಕೂ ಸಿದ್ಧರಿರುವಿರಿ! ಸಾರವಾದ ಭೂಮಿಯಲ್ಲಿ ಬಿತ್ತಿದ ಬೀಜವು ಕೂಡ ಮಳೆಯಿಲ್ಲದಿರೆ ಫಲ ಕೊಡದು. ದೈವವೂ ಪುರುಷಪ್ರಯತ್ನಕ್ಕೆ ಅನುಕೂಲಿಸಿ ಬರಬೇಕು. ದೈವಸಂಕಲ್ಪವನ್ನು ನಾನು ಅನ್ಯಥಾ ಮಾಡಬಾರದು. ಧರ್ಮವನ್ನೂ ಲೋಕನೀತಿಯನ್ನೂ ಪಾಲಿಸದವನು ದುರ್ಮತಿಯೇ ಸರಿ! ದುರ್ಯೋಧನನಿಗೆ ತಾನು ಮಾಡಿದ ಪಾಪಕೃತ್ಯಗಳ ನೆನಪಿಲ್ಲ; ಪಶ್ಚಾತ್ತಾಪವೂ ಇಲ್ಲ. ಅವನ ದುರ್ಮಂತ್ರಿಗಳೂ ಅಂತಹರೇ ! ಅವರು ರಾಜ್ಯ ಕೊಡುವುದಿಲ್ಲ. ನಾವು ಬಿಡುವುದಿಲ್ಲ. ಇಂತಹ ಪಾಪಿ ದುರ್ಯೋಧನನೊಡನೆ ಯುದ್ಧ ತಪ್ಪಿದ್ದಲ್ಲ. ಅವನು ಬಾಲ್ಯಾರಭ್ಯದಿ ಮಾಡಿದ ಪಾಪಗಳಿಗೆಣೆ ಇಲ್ಲ. ನಿನ್ನ ಮಿತ್ರನೆಂದು ನನ್ನನ್ನೂ ಅವನು ದ್ವೇಷಿಸುವುದು ನಿನಗೂ ಗೊತ್ತಿದೆ. ಭೂಭಾರಪರಣಾರ್ಥವಾಗಿ ಬಂದಿರುವ ದೇವಕಾರ್ಯವನ್ನು ಮರೆಯಬೇಡ! ನನಗೆ ಸಾಧ್ಯವಾದಷ್ಟುಮಟ್ಟಿಗೆ ಸಂಧಿಯನ್ನು ಸಾಧಿಸಲು ಯತ್ನಿಸುವೆನು. ಭೀಷ್ಮನ ಮಾತನ್ನು ತಿರಸ್ಕರಿಸಿ, ಧರ್ಮರಾಜನಿಗೆ ರಾಜ್ಯಲೇಶವನ್ನು ಕೊಡದ ದುರಾತ್ಮನೀಗ ಕೊಡುವನೆಂಬ ವಿಶ್ವಾಸವಾರಿಗೂ ಇಲ್ಲ. ಆದರೂ ತಿಳಿಯಲಿ ಜನರು ಅವನ ಪಾಪಬುದ್ಧಿಯನ್ನು! ಎಂದೇ ಹೋಗಿಬರುವೆನು' ಎಂದನು.

ಆಗ ನಕುಲನು ಶ್ರೀಕೃಷ್ಣನನ್ನು ಮನುಜನೆಂಬಂತೆ ಭಾವಿಸಿ, ಸರ್ವಜ್ಞನೆಂದು ಮರೆತು, 'ಶ್ರೀಕೃಷ್ಣ ! ಎಲ್ಲರ ಮಾತನ್ನೂ ಕೇಳಿರುವೆ! ಯುಕ್ತವಾದುದನ್ನು ಮಾಡು! ನಿಮಿತ್ತಭೇದದಿಂದ ಅಭಿಪ್ರಾಯಭೇದವು ತಪ್ಪಿದ್ದಲ್ಲ. ಕುಲನಾಶಕವಾದುದರಿಂದ ಯುದ್ಧವೇ ಬೇಡ ಎಂಬುದು ಧರ್ಮರಾಜನ ಅಭಿಪ್ರಾಯ. ಕೇಶಾಕರ್ಷಣ ಮಾಡಿದ ಪಾಪಿಗಳನ್ನು ಕೊಲ್ಲಬೇಕೆಂಬುದು ಭೀಮ-ದ್ರೌಪದಿಯರ ಮತ. ನಾವು ಅಂದುಕೊಂಡಂತೆ ಎಲ್ಲವೂ ಆಗುವುದಿಲ್ಲ. ಅಜ್ಞಾತವಾಸಕಾಲದಲ್ಲಿ ಯಾರಿಗೂ ತಿಳಿಯದೆ ಚರಿಸಿದರೆ ಸಾಕೆಂದವರು, ಈಗ ರಾಜ್ಯವು ಎಂತು ಯಾವಾಗ ಸಿಕ್ಕೀತೆಂದು ಕಾತರರಾಗಿರುವೆವು. ಸೈನ್ಯವೂ ಸಾಕಷ್ಟು ಸೇರಿದೆ. ಎಲ್ಲವನ್ನೂ ವಿಚಾರಿಸಿ ನೀತಿಕುಶಲನಾದ ನೀನು ಮೊದಲು ಸಾಮವನ್ನು ಮತ್ತು ಭಯವನ್ನು

ಪ್ರಯೋಗಿಸು ! ದುರ್ಯೋಧನನು ನಿನ್ನ ಮಾತನ್ನು ಕೇಳಿ ಕೆರಳದಿರಲಿ! ಇಲ್ಲಿರುವ ಮಹಾವೀರರನ್ನೆದುರಿಸಿ ನಿಲ್ಲಬಲ್ಲವರಿಲ್ಲ. ಅಲ್ಲಿರುವ ಭೀಷ್ಮಾದಿಗಳೂ ನಿನ್ನ ಮಹಿಮೆಯನ್ನು ತಿಳಿದಿರುವರು. ಅವರು ಧೃತರಾಷ್ಟ್ರನಿಗೂ, ಅವನ ಮಗನಿಗೂ ತಿಳಿಹೇಳಬಲ್ಲರು; ನಿನ್ನ ಕಾರ್ಯವು ಫಲಪ್ರದವಾಗಲಿ ! ' ಎಂದನು.

ಸಹದೇವನು ಶೌರ್ಯವನ್ನು ತೋರುತ್ತಾ, 'ಎಲ್ಲರೂ ನುಡಿದುದನ್ನು ಕೇಳಿರುವೆ! ಕೃಷ್ಣ ! ಯುದ್ಧವನ್ನೇ ಸಾಧಿಸಿಕೊಂಡು ಬಾ! ಅವರು ಸಂಧಿಯನ್ನು ಬಯಸಿದರೂ ನಮಗದು ಬೇಕಿಲ್ಲ. ಪಾಂಚಾಲಿಯ ಪರಿಕ್ಲೇಶವನ್ನು ಸಹಿಸಿ, ಅವರನ್ನು ಕೊಲ್ಲದೆ ಸುಮ್ಮನಿರುವುದೆನ್ನ ಕೈಲಾಗದ ಮಾತು. ಭೀಮಾರ್ಜುನರು ಮತ್ತು ಧರ್ಮರಾಜನು ಧಾರ್ಮಿಕನೆನಿಸಿ ಯುದ್ಧ ಬಿಟ್ಟರೂ, ನಾನು ಅಂತಹ ಹೇಡಿಧರ್ಮವನ್ನು ಬಿಟ್ಟು ಕಾದಾಡಲು ಸಿದ್ಧನಿರುವೆನು' ಎಂದನು. ಸಾತ್ಯಕಿಯೂ ಅವನ ಮಾತನ್ನನುಸರಿಸಿ, 'ಅಹುದು! ಸಹದೇವನಾಡಿದುದು ಸರಿಯಾಗಿದೆ. ದುರ್ಯೋಧನನ ಸಾವಿನಿಂದಲ್ಲದೆ ನಮ್ಮ ಸೇಡು ತೀರದು. ಶ್ರೀಕೃಷ್ಣ ! ವನವಾಸದಲ್ಲಿದ್ದ ಪಾಂಡವರನ್ನು ನೋಡಿ ನೀನೂ ಸಿಟ್ಟಾಗಲಿಲ್ಲವೆ ? ಸಹದೇವನ ಮಾತಿನಂತೆ ಯುದ್ಧವನ್ನೇ ನಿಶ್ಚಯಿಸು ! ಎಲ್ಲ ಯೋಧರೂ ಅದನ್ನೇ ಬಯಸುತ್ತಿರುವರು.' ಎಂದನು. ಅದನ್ನು ಕೇಳಿ ಅಲ್ಲಿ ನೆರೆದಿದ್ದ ವೀರರು ಮೆಚ್ಚಿ 'ಸಾಧು ಸಾಧು !' ಎಂದು ಹೊಗಳಿ, ಸಿಂಹನಾದಗಳನ್ನು ಮಾಡಿದರು.

ಆಗ ದ್ರೌಪದೀದೇವಿಯು ಶ್ರೀಕೃಷ್ಣನನ್ನು ಸಮೀಪಿಸಿ ನಮಿಸಿದಳು. ಸಹದೇವ ಸಾತ್ಯಕಿಯರನ್ನು ಮನದಿ ಮೆಚ್ಚಿ, ಭೀಮಸೇನನ ಔದಾಸೀನ್ಯಕ್ಕೆ ನೊಂದು ಕಣ್ಣಲ್ಲಿ ನೀರಿಟ್ಟು ಆಕೆಯು ಇಂತು ನುಡಿದಳು—

' ಮಧುಸೂದನ ! ಮೋಸದಿಂದ ರಾಜ್ಯ ಕಸಿದರು. ರಾಜ್ಯ ಕೊಡೆವು. ಯುದ್ಧ ಬಿಡಿರಿ !' ಎಂದು ಸಂಜಯನಿಂದ ಹೇಳಿ ಕಳಿಸಿದರು. ಇವರು ಐದೂರುಗಳನ್ನಿತ್ತರೆ ಸಾಕೆಂದು ಹೇಳಿಕಳಿಸಿದರು. ಅಷ್ಟನ್ನೂ ಕೊಡುವುದಿಲ್ಲವೆಂಬ ಕೌರವನ ಮತ ಗೊತ್ತಾಯಿತಲ್ಲ. ರಾಜ್ಯವನ್ನು ಕೊಡದ ದುರ್ಯೋಧನನಿಂದ ಸಂಧಿ ನಡೆಸಲು ಹೋಗುವುದರಲ್ಲಿ ಅರ್ಥವಿಲ್ಲ. ನಮ್ಮವರು ಮಹಾವೀರರು. ಕೌರವರನ್ನೆಲ್ಲ ಸದೆಬಡಿಯಲು ಸಮರ್ಥರು. ಸಾಮದಾನಗಳಿಗೆ ವಶರಾಗದ ದುರ್ಮಾರ್ಗರಲ್ಲಿ ನೀನು ಕೃಪೆ ಮಾಡುವುದು ಸರಿಯಲ್ಲ. ನಾವು ಬದುಕಿರಬೇಕೆಂದರೆ ಅವರು ಸಾಯಬೇಕು. ಬೇರೊಂದು ಮಾರ್ಗವಿಲ್ಲ. ನೀನು ಸಹಾಯನಾಗಿರಲು ನಮಗೆ ದುಷ್ಕರವಿಲ್ಲ. ಕ್ಷತ್ರಿಯನಾಗಲಿ, ಇತರನಾಗಲಿ ಲೋಭಕ್ರೋಧವಶನಾಗಿ ಪರದ್ರೋಹವನ್ನು ಬಗೆದರೆ ಅವನನ್ನು ದಂಡಿಸುವುದು ಕ್ಷತ್ರಿಯರ ಧರ್ಮ. ಪ್ರಕೃಷ್ಟನೆನಿಸಿಕೊಡಲಟ್ಟರೆ ಪ್ರಾಪ್ತವಾದ ಸದನ್ನದ ಅಗ್ರಭಾಗವನ್ನು ಮೊದಲು ಸ್ವೀಕರಿಸಲು ಯೋಗ್ಯನಾದ ಬ್ರಾಹ್ಮಣನು ಜಾತ್ಯಾ ಪೂಜ್ಯನಿರುವನು. ಅಂತಹವನನ್ನು ಬಿಟ್ಟು ಮತ್ತಾರನ್ನಾದರೂ ವಧಾರ್ಹವಾದ ಅಪರಾಧವನ್ನು ಮಾಡಿದಾಗ ಕೊಲ್ಲುವುದು ತಪ್ಪಲ್ಲ. ವಧ್ಯ

*

ನನ್ನು ಬಿಡುವುದು ಅವಧ್ಯನನ್ನು ಕೊಲ್ಲುವಂತೆ ಮಹಾದೋಷವು. ಆ ದೋಷವು ನಿನ್ನಿಂದ ದೂರವಿರಲಿ.

'ಭೂಮಿಯಲ್ಲಿ ನನ್ನಂತೆ ಧನ್ಯಳೆನಿಸಿದ ಕಾಂತೆಯನ್ನು ತೋರು! ದ್ರುಪದ ರಾಜನ ಯಜ್ಞವೇದಿಯಲ್ಲಿ ಹುಟ್ಟಿಬಂದೆನು. ಧೃಷ್ಟದ್ಯುಮ್ನನ ತಂಗಿಯಾದೆನು. ನಿನಗೆ ಪ್ರಿಯ ಭಕ್ತಳೆನಿಸಿದೆನು. ಅಜಮೀಢನಾದ ಪಾಂಡುರಾಜನ ಸೊಸೆಯಾದೆನು. ಪಂಚೇಂದ್ರಕಲ್ಪರಾದ ಪಾಂಡುಪುತ್ರರ ಪಟ್ಟಮಹಿಷಿಯಾದೆನು. ಮಹಾರಥರಾದ ಐವರು ಪುತ್ರರನ್ನು ಪಡೆದೆನು. ಅವರನ್ನು ನೀನು ಅಭಿಮನ್ಯುವಿನನ್ನಂತೆ ಕಾಣು-ತ್ತಿರುವೆ; ಇಂತು ವೀರಪುತ್ರಿ, ವೀರಪತ್ನಿ, ವೀರಮಾತೆಯೂ ಆದ ನನ್ನ ಅವಸ್ಥೆ ಯನ್ನು ಕೇಳು! ಕೇಶದಲ್ಲಿ ಪಿಡಿದು ಸಭೆಗೆ ಸೆಳೆಯಲ್ಪಟ್ಟೆನು. ಸಭೆಯಲ್ಲಿ ಪಟ್ಟ ಪಾಡು ನಿನಗೇ ಗೊತ್ತು. ಪಾಂಡುಪುತ್ರರೆದುರು, ನೀನಿನ್ನೂ ಅವತಾರವನ್ನು ಮುಗಿಸ ದಿರಲು ದಾಸಿಯಂತಾದೆನು. ಗೋವಿಂದಾ! ಗೋವಿಂದಾ! ಎಂದು ಕೂಗಿದ ನನ್ನ ಆರ್ತನಾದ ಧರ್ಮಬದ್ಧರಾಗಿ ಅಸಹಾಯರಾಗಿದ್ದ ನನ್ನ ಪತಿಗಳಿಗೆ ಕೇಳಿಸಿ ಕೂಡ ವ್ಯರ್ಥವಾಯಿತು. 'ನೀ ಬಂದೆ ಎನ್ನ ತಂದೆ' ನಾನೂ ಉಳಿದೆನು. ಮಾವನ ವರ ದಿಂದ ಸರಥ ಸಾಯುಧರಾದ ಯಜಮಾನರೂ ಉಳಿದರು. ಮತ್ತೆ ಜೂಜಾಡಿ ವನಕ್ಕೆ ಹೊರಟೆವು. ಅಜ್ಞಾತವನ್ನೂ ಕಳೆದೆವು. ಅಲ್ಲಿ ಪಟ್ಟ ಕಷ್ಟಗಳನ್ನು ಮತ್ತೆ ಹೇಳ ಬೇಕಿಲ್ಲ.

'ಪುಂಡರೀಕಾಕ್ಷ! ಭರ್ತೃಬಾಂಧವಯುತಳಾದ ನನ್ನನ್ನು ಕಾಪಾಡು! ಕೇಶವ! ನನ್ನನ್ನು ಪೇಕ್ಷಿಸಿದರು ಭೀಷ್ಮ-ಧೃತರಾಷ್ಟ್ರರು. ಸೊಸೆ ಎಂದು ತಿಳಿದೂ ಕಾಪಾಡ-ಲಿಲ್ಲ. ದುರಾತ್ಮನಾದ ದುರ್ಯೋಧನಾದಿಗಳನ್ನು ಶಿಕ್ಷಿಸದ ಪಾರ್ಥನ ಧನುರ್ವಿದ್ಯೆಗೆ ಧಿಕ್ಕಾರವಿರಲಿ! ಭೀಮಸೇನನ ಬಲಕ್ಕೆ ಧಿಕ್ಕಾರವಿರಲಿ! ಇನ್ನೂ ಆ ಪಾಪಿಯು ಉಸಿರೆಳೆಯುತ್ತಿರುವನೆಂದರೆ ಆದಕ್ಕಿಂತ ಸೋಜಿಗವೇನು? ಕೃಷ್ಣ! ನಾನು ನಿನ್ನ ಕೃಪೆಗೆ ಪಾತ್ರಳಾಗಿದ್ದರೆ, ನಿನ್ನ ಅನುಗ್ರಹವೆನ್ನಲ್ಲಿದ್ದರೆ ನಿನಗಿರುವ ಕೋಪವೆಲ್ಲವನ್ನೂ ಬೀರಿ, ಧಾರ್ತರಾಷ್ಟ್ರನನ್ನು ಸುಟ್ಟುಬಿಡು!'

ಇಂತು ನುಡಿದು ಕೃಷ್ಣಾದೇವಿಯು ಮೃದು ನೀಲವು, ಕುಟಿಲಾಗ್ರವು, ಸುಗಂಧ ವಾಸಿತವು, ಮಹಾಸರ್ಪಭಯಂಕರವು ಆದ ತನ್ನ ಕೇಶರಾಶಿಯನ್ನು ಎಡಗೈಯಿಂದ ಮುಂದಕ್ಕೆಳೆದು, ಶ್ರೀಶನಿಗೆ ತೋರಿ, ಉಷ್ಣಾಶ್ರುಗಳಿಂದ ಉರೋಜಗಳನ್ನು ತೋಯಿಸುತ್ತಾ ಮತ್ತೆ ಇಂತೆಂದಳು—'ಕೃಷ್ಣ! ಪುಂಡರೀಕಾಕ್ಷ! ಪರರ ಸಭೆಯಲ್ಲಿ ಸಂಧಿವಚನವನ್ನಾಡುವಾಗ ಪಾಪಿ ದುಶ್ಶಾಸನನ ಕೈಲಿ ಸಿಕ್ಕು ನರಳುವ ಈ ಕೇಶರಾಶಿ ಯನ್ನು ನೆನೆದು ಮಾತಾಡು! ಸ್ವಾಮೀ! ಭೀಮಾರ್ಜುನರು ಸಂಧಿಕಾಮುಕರಾಗಿ ಸುಮ್ಮನಿರಲಿ! ಮುದುಕನಾದರೂ ನಮ್ಮಪ್ಪನು ತನ್ನ ಸುತರಿಂದ ಕೂಡಿ, ನನ್ನ ಸುತರಿಂದ ಕೂಡಿ, ಅಭಿಮನ್ಯುವಿನನ್ನು ಮುಂದೆ ಮಾಡಿಕೊಂಡು ಯುದ್ಧಮಾಡಿ ನನ್ನ ಸೇಡನ್ನು ತೀರಿಸುವನು. ಕೇಶವನ್ನೆಳೆದ ಕೈ ಕಡಿದು ಮಣ್ಣಿನಲ್ಲಿ ಉರುಳಾಡು

ವುದನ್ನು ನಾನು ನೋಡುವವರೆಗೂ ನನಗೆ ಶಾಂತಿ ಎಲ್ಲಿಯದು? ಹೃದಯಕುಂಡದ ಪ್ರತೀಕಾರಾಗ್ನಿಯನ್ನು ಹದಿಮೂರು ವರ್ಷ ಕಾದಿಟ್ಟು, ಇಂದು ಭೀಮಾರ್ಜುನರು ಸಂಧಿಕಾಮುಕರಾಗಿ ಅದನ್ನಾರಿಸುವಂತೆ ತೋರಿ, ನಾನು ಎದೆ ಒಡೆದಿರುವೆನು' ಇಂತು ನುಡಿದು ಪಾಂಚಾಲಿಯು ಗದ್ಗದಿತಕಂಠಳಾಗಿ ಸುಸ್ವರವಾಗಿ ರೋದಿಸಿದಳು.

ಅದನ್ನು ಕಂಡು ಕೃಷ್ಣನ ಕರುಣಾಸಾಗರದ ಕಟ್ಟೆ ಒಡೆದಂತಾಯಿತು. ಶ್ರೀಶನು ಆಕೆಯನ್ನು ಸಮಾಧಾನಪಡಿಸುತ್ತಾ ಇಂತೆಂದನು—'ಕೃಷ್ಣೇ! ಕೌರವವನಿತೆಯರು ಪತಿರಹಿತರಾಗಿ ಅಳುವುದನ್ನು ಬೇಗನೆ ನೋಡುವೆ! ಮಿತ್ರ ಬಾಂಧವರು ರಣರಂಗದಿ ಬಿದ್ದಿರಲು ಅವರನ್ನಪ್ಪಿ ಅಳುವ ವನಿತೆಯರನ್ನು ನಾನು ನಿನಗೆ ತೋರಿಸುವೆನು. ನಿನಗೆ ದ್ರೋಹವೆಸಗಿದವರಾರೂ ಉಳಿಯುವುದಿಲ್ಲ. ದೈವಸಂಕಲ್ಪವೇ ಹಾಗಿದೆ. ಧರ್ಮ-ರಾಜನ ಆಜ್ಞೆಯಂತೆ ಭೀಮಾರ್ಜುನ ನಕುಲ-ಸಹದೇವರಿಂದ ಕೂಡಿ ನಾನೇ ನಿಂತು ದುಷ್ಟಸಂಹಾರವನ್ನು ಸಾಧಿಸುವೆನು. ನನ್ನ ಮಾತು ಕೇಳದ ಧಾರ್ತರಾಷ್ಟ್ರರು ಕಲ ಮಾಗಿದ ಫಲಗಳಂತೆ ತಪ ತಪ ಉರುಳುವರು. ಹದ್ದು-ನರಿ-ನಾಯಿಗಳಿಗೆ ಆಹಾರ ವಾಗುವುದು. ಇದು ತಪ್ಪದು! ಹಿಮಾಲಯವು ಚಲಿಸಿದರೂ ಚಲಿಸೀತು! ಭೂಮಿಯು ನೂರು ಹೋಳಾದೀತು! ಆಕಾಶವು ಕಳಚಿಬಿದ್ದೀತು! ನನ್ನ ಮಾತು ಎಂದಿಗೂ ಸುಳ್ಳಾಗದು. ಕೃಷ್ಣೇ! ಪ್ರತಿಜ್ಞೆ ಮಾಡಿ ಹೇಳುವೆನು. ನಿನ್ನ ಪತಿಗಳು ನಿಷ್ಕಂಟಕ ಮಹೀಮಂಡಲವನ್ನಾಳುವುದನ್ನು ಬೇಗ ಕಾಣುವೆ! ಚಿಂತಿಸಬೇಡ!'

ಅರ್ಜುನನೂ 'ಕೃಷ್ಣ! ನಿನ್ನ ಧರ್ಮಾರ್ಥಸಮ್ಮತವಾದ ವಾಕ್ಯವನ್ನು ಕೇಳ ದಿದ್ದರೆ, ದುರ್ಯೋಧನನು ಸತ್ತನೆಂದೇ ತಿಳಿ!' ಎಂದನು.

## ಭಗವದ್ಯಾನ

ಶ್ರೀ ವೈಶಂಪಾಯನನು ಜನಮೇಜಯನಿಗೆ ಹೇಳಿದನು—

ರಾಜನ್! ಮರುದಿನ ಬೆಳಗಾಯಿತು. ನಿರ್ಮಲಾಕಾಶದಲ್ಲಿ ಸೂರ್ಯನು ವಿರಾಜಿಸಿದನು. ಅಂದು ಕಾರ್ತೀಕ ಶುದ್ಧ ತ್ರಯೋದಶಿ. ನಕ್ಷತ್ರ ರೇವತಿ. ಅರ್ಜುನನಿಗೆ ಅದು ಮಿತ್ರತಾರವಾಗಿತ್ತು (ಪುಬ್ಬದಿಂದ). ಎಲ್ಲಿ ನೋಡಿದರೂ, ಭೂಮಿಯು ಸಸ್ಯಶ್ಯಾಮಲವಾಗಿ ಕಣ್ಣಿಗಿಂಪಾಗಿತ್ತು. ಶ್ರೀಕೃಷ್ಣನು ಸ್ನಾನಮಾಡಿ, ಅಲಂಕೃತನಾದನು. ವಿಪ್ರರು ಪುಣ್ಯಾಹಮಂತ್ರಗಳನ್ನು ಉಚ್ಚರಿಸುತ್ತಿದ್ದರು. ಶ್ರೀಶನು ಅಗ್ನಿಗೆ ಹವಿಸ್ಸನ್ನಿತ್ತನು. ಋಷಭಪುಚ್ಛವನ್ನು ಮುಟ್ಟಿ, ವಿಪ್ರರಿಗೆ ನಮಸ್ಕರಿಸಿದನು. ಶುಭವಚನಗಳನ್ನಾಲಿಸುತ್ತಾ, ಸಾತ್ಯಕಿಯನ್ನು ಕರೆದು, 'ರಥವು ಸಜ್ಜೀಕೃತವಾಗಲಿ! ಹೋಗುವುದು ದುರಾತ್ಮನಲ್ಲಿ. ಶಂಖ ಚಕ್ರ ಗದಾ ತೂಣ ಧನುಃ ಖಡ್ಗಾದಿ ವಿವಿಧಾ ಯುಧಗಳನ್ನು ರಥದಲ್ಲಿಡು!' ಎಂದು ಆಜ್ಞಾಪಿಸಿದನು.

ಶ್ರೀಕೃಷ್ಣನ ರಥವು ಸಿದ್ಧವಾಯಿತು. ಅದರ ಚಕ್ರಗಳು ಸೂರ್ಯ ಚಂದ್ರ ರಂತೆ ಪ್ರಕಾಶಿಸಿದವು. ಅರ್ಧಚಂದ್ರ ಪುಷ್ಪಾದಿ ವಿಚಿತ್ರಚಿತ್ರಗಳಿಂದ ಅಲಂಕೃತವಾಗಿ,

ಸರ್ವಾಯುಧ ಸಮನ್ವಿತವಾದ ಆ ರಥವು ಗರುಡಕೇತನದಿಂದ ವಿರಾಜಿಸಿತು. ಶೈಬ್ಯ-ಸುಗ್ರೀವ ಮೇಘಪುಷ್ಪ-ಬಲಾಹಕಗಳನ್ನು ಕಟ್ಟಿದ ರಥ ರತ್ನದಲ್ಲಿ ರಾಜೀವಾಕ್ಷನು ಸಾತ್ಯಕಿಯೊಡನೆ ಕೂತು ಪ್ರಯಾಣಬೆಳೆಸಿದನು. ಶ್ರೀಹರಿಯ ಪ್ರಯಾಣ ಸಮಯದಲ್ಲಿ ಆಕಾಶವು ನಿರ್ಮಲವಾಗಿತ್ತು. ತಂಗಾಳಿಯು ಸುಗಂಧಿತವಾಗಿ ಮೇಲೆ ಸೂಸಿ ಬೀಸುತ್ತಿತ್ತು. ಶುಭ ಮೃಗ ಪಕ್ಷಿಗಳು ಪ್ರದಕ್ಷಿಣಾಕಾರವಾಗಿ ಸಂಚರಿಸಿದವು. ವಿಪ್ರರೇ ಮೊದಲಾದ ಪ್ರಜರು 'ವಿಜಯೀಭವ' ಎಂದು ಹರಸಿದರು. ಮಂತ್ರಾಹುತಿಗಳಿಂದ ಪ್ರದೀಪಿತವಾದ ಅಗ್ನಿಹೋತ್ರವು ಶಾಂತವಾಗಿ ಉರಿಯುತ್ತಿತ್ತು. ವಶಿಷ್ಠಾದಿ ಮಹಾಮುನಿಗಳ ಆಶೀರ್ವಚನಗಳನ್ನಾಲಿಸುತ್ತಾ, ಶ್ರೀಕೃಷ್ಣನು ಕುರುಸದನಕ್ಕೆಂದು ತೆರಳಿದನು.

ಶ್ರೀಶನನ್ನು ಹಿಂಬಾಲಿಸಿ ಪಂಚ-ಪಾಂಡವರು, ದ್ರುಪದಾದಿರಾಜರು, ಇತರರು ಸ್ವಲ್ಪ ದೂರ ಬಂದು ಬೀಳ್ಕೊಂಡರು. ಆಗ ಯುಧಿಷ್ಠಿರನು ಸರ್ವಗುಣಸಂಪನ್ನನು, ಶ್ರೀವತ್ಸಕೃತಲಕ್ಷಣನು ಆದ ಕೇಶವನನ್ನಪ್ಪಿ, ತನ್ನ ತಾಯಿಯನ್ನು ನೆನೆದು, ಕಣ್ಣೀರಿಟ್ಟು, 'ಶ್ರೀಕೃಷ್ಣ! ನಮ್ಮ ತಾಯಿಯು, ನಿನ್ನ ಸೋದರತ್ತೆಯು ಆದ ಕುಂತೀ ದೇವಿಯನ್ನು ನೋಡಿ, ಆಕೆಗೆ ನಮ್ಮ ಹೆಸರುಗಳನ್ನುಚ್ಚರಿಸಿ ನಮಿಸು! ಬಾಲಕರಾಗಿದ್ದ ನಮ್ಮ ಯೋಗಕ್ಷೇಮಗಳನ್ನರಸಿ, ದೇವ-ವಿಪ್ರರನ್ನು ಪೂಜಿಸಿದಳು. ನಮಗೆ ಪ್ರಾಣಸಮಳಾದ ಮಾತೆಯ ಸೇವೆಯನ್ನು ಮಾಡಲಾಗಲಿಲ್ಲ. ನಮ್ಮ ಕಷ್ಟಗಳನ್ನು ನೆನೆದು ಅಕೆ ಕಣ್ಣೀರಿಡದ ದಿನವಿಲ್ಲ. ಆಕೆಯ ಕಣ್ಣೀರೊರಸಿ ಸಂತೈಸುವೆವೆಂದು ಪೇಳು! ಸುಖಾರ್ಹಳಾದ ಪೃಥಾದೇವಿಯು ದುಃಖದಿಂದ ದುಷ್ಟರ ನಗರಿಯಲ್ಲಿರಬೇಕಾಗಿದೆ. ಅಂತಹ ತಾಯಿಯ ದುಃಖವನ್ನು ಕಳೆದು, ಮರೆಸಲು ಹವಣಿಸುವೆವೆಂದು ತಿಳಿಸು! ನಿನ್ನ ಅನುಗ್ರಹದಿಂದ ಆಕೆಯ ಪುತ್ರರು ದುಃಖಾಂತವನ್ನು ಕಾಣುವರೆಂದು ಆಕೆಯೂ ಹಾರೈಸುತ್ತಿರುವಳಲ್ಲವೆ? ಮಿಕ್ಕ ಭೀಷ್ಮ-ದ್ರೋಣ-ಕೃಪ-ಧೃತರಾಷ್ಟ್ರರಿಗೂ ಅಭಿನಮಿಸಿ ನಮ್ಮ ಕುಶಲವನ್ನು ತಿಳಿಸು!' ಎಂದು ಸಂದೇಶವಿತ್ತನು.

ಅರ್ಜುನನು 'ಗೋವಿಂದ! ನಾವು ಅರ್ಧ ರಾಜ್ಯವನ್ನು ಪಡೆಯದೆಬಿಡೆವೆಂದು ನಿಶ್ಚಯಿಸಿ ಅಲ್ಲವೇ ಸಂಧಿಗಾಗಿ ನಿನ್ನನ್ನು ಕಳಿಸುತ್ತಿರುವುದು. ರಾಜ್ಯವೇ ಇಲ್ಲದ ಸಂಧಿಯು ಯಾರಿಗೂ ಸಮ್ಮತವಲ್ಲ. ಅವಮಾನಿಸದೆ, ಪ್ರೀತಿಯಿಂದ ಕೊಟ್ಟ ರಾಜ್ಯದಿಂದ ನಾವು ತೃಪ್ತರಾಗುವುದಲ್ಲದೆ ಮಹಾ ಘೋರ ಯುದ್ಧವೂ ನಿವಾರಿತವಾಗುವುದು. ರಾಜ್ಯವನ್ನೀಯದ ದುರ್ಯೋಧನನ ದುಷ್ಟ ಹಟದಿಂದ ಸರ್ವ ಕ್ಷತ್ರಿಯಕುಲವೇ ನಾಶವಾಗುವುದು. ಅಂತೆಯೇ ನಿನ್ನಿಚ್ಛೆ ಎಂದು ತೋರುತ್ತಿದೆ' ಎಂದನು. ಭೀಮಸೇನನು ಕೋಪಾವೇಶದಿ ಮೈ ನಡುಗುತ್ತಿರಲು, ಧನಂಜಯನ ವಚನವನ್ನು ಮೆಚ್ಚಿ, ಸಿಂಹಗರ್ಜನವನ್ನು ಮಾಡಿದನು. ಆ ಭೀಷಣ ಘೋಷಣವನ್ನಾಲಿಸಿ, ವೀರ ಧನುರ್ಧರರು ಗಡಗಡ ನಡುಗಿದರು. ಗಜ ತುರಗಗಳು ಹೆದರಿ

ಶಕ್ಯನೂ್ತ್ರಗಳನ್ನು ವಿಸರ್ಜಿಸಿದವು. ಅದೇ ಭೀಮಸೇನನ ನಿಶ್ಚಿತ ಸಂದೇಶವೆಂದು ಗ್ರಹಿಸಿ, ಶ್ರೀಶನು ನಸುನಗುತ್ತಾ, ಆ ಮಹಾಬಲನನ್ನು ಬೀಳ್ಕೊಂಡು, ತ್ವರೆಯಿಂದ ಪಯಣಿಸಿದನು. ಪಾಂಡವಾದಿಗಳು ಉಪಪ್ಲಾವ್ಯದ ಶಿಬಿರಗಳಿಗೆ ಹಿಂದಿರುಗಿದರು.

ಶ್ರೀಕೃಷ್ಣನ ಕುದುರೆಗಳು ಆಕಾಶವನ್ನಳೆಯುವವೆಂಬಂತೆ ಓಡುತ್ತಿರಲು ವೃಕಸ್ಥಲವು ಸಮೀಪವಾಗುತ್ತಿತ್ತು. ಹಾದಿಯಲ್ಲಿ ಕೆಲ ವಿಪ್ರರನ್ನು ನೋಡಿ, ಶ್ರೀಶನು ರಥವನ್ನು ನಿಲ್ಲಿಸಿ, ಕೆಳಗಿಳಿದು ಅವರಿಗೆ ನಮಸ್ಕರಿಸಿದನು. 'ಮಹಾತ್ಮರೇ! ಕುಶಲವೇ ಲೋಕಗಳಿಗೆ ? ಧರ್ಮಾನುಷ್ಠಾನವು ನಿರ್ವಿಘ್ನವಾಗಿ ನಡೆಯುತ್ತಿರುವುದೇ ? ವಿಪ್ರರ ಹಿತನುಡಿಯಂತೆ ಮಿಕ್ಕವರು ನಡೆಯುತ್ತಿರುವರೇ ? ತಾವೆಲ್ಲಿಗೆ ಹೊರಟಿರುವಿರಿ ? ನನ್ನಿಂದ ಏನಾಗಬೇಕು ?' ಎಂದು ಕೇಳಿದನು.

ವಿಪ್ರರ ಮಧ್ಯದಿ ಚಂದ್ರಮನಂತೆ ಕಂಗೊಳಿಸುವ ಶ್ರೀ ಪರಶುರಾಮನು, ಕೃಷ್ಣನನ್ನು ಸಮೀಪಿಸಿ, ಆಲಿಂಗಿಸಿ, 'ಶ್ರೀಕೃಷ್ಣ ! ದೇವ ವಿಪ್ರರು ಸುಪೂಜಿತರಾಗಿರುವರು. ರಾಜರ್ಷಿಗಳು ಪರಿಪಾಲಿಸುತ್ತಿರುವಲ್ಲಿ ತಪಸ್ವಿಗಳೂ ಸುಖಿಗಳಾಗಿರುವರು. ದೇವಾಸುರರು ಕಲೆತಂತೆ ತೋರುವ ಕೌರವಸಭೆಯ ಕ್ಷತ್ರವೀರರನ್ನು ನೋಡಿ, ಧರ್ಮಾರ್ಥ ಸಮ್ಮತವಾಗಿ ನೀನಾಡುವ ಮಾತುಗಳನ್ನಾಲಿಸಬೇಕೆಂದು ಈ ವಿಪ್ರರೆಲ್ಲರು ಬಂದಿರುವರು. ಭೀಷ್ಮಾದಿ-ಸುಜನರನ್ನು, ದುರ್ಯೋಧನಾದಿ ದುರ್ಜನರನ್ನು ಅವರವರ ಮಾತಿನಿಂದಲೇ ತಿಳಿಯಲಾಗುವುದು. ಇರಲಿ ! ಮುಂದೆ ಹೊರಡು ! ಸಭಾಸೀಮೆಯಲ್ಲಿ ಆಸೀನನಾಗಿರುವ ನಿನ್ನನ್ನು ಮತ್ತೆ ಕಾಣುವೆವು' ಎಂದು ಅಭಿನಂದಿಸಿ ಕಳಿಸಿದನು.

ಶ್ರೀಕೃಷ್ಣನಾಡುವ ಮಾತಿನ ಅಭಿಪ್ರಾಯವನ್ನು ಶ್ರೀಕೃಷ್ಣನ ಹೊರತಿನ್ನಾರೂ ಪೂರ್ಣವಾಗಿ ತಿಳಿಯಲಾರರು. ಅವನೇ ಸರ್ವಜ್ಞನು, ಅವನ ಗುಣಗಳು ಅನಂತಗಳು. ಆದುದರಿಂದ ಶ್ರೀಕೃಷ್ಣನನ್ನು ಶ್ರೀಶಾವತಾರರಾದ ಶ್ರೀ ಪರಶುರಾಮ ಶ್ರೀ ವೇದವ್ಯಾಸರು ಹಿಂಬಾಲಿಸಿ ಹೊರಟರು. ಅವರ ಹಿಂದೆ ಅನೇಕ ವಿಪ್ರವರರೂ ಪಯಣಿಸಿದರು. ಉಪಪ್ಲಾವ್ಯದಿಂದ, ಶ್ರೀಕೃಷ್ಣನನ್ನನುಸರಿಸಿ, ಹತ್ತು ಮಹಾರಥರು ಸಾವಿರ ಪದಾತಿಗಳು, ಸಾವಿರ ಸಾದಿಗಳು ಅಲ್ಲದೆ, ದಾಸದಾಸೀ ಜನರೂ ನೂರಾರು ಜನರು ಭೋಜ್ಯಾದಿಪದಾರ್ಥಗಳೊಡಗೂಡಿ, ಬರುತ್ತಿದ್ದರು.

ಮಹಾಮಹಿಮನಾದ ಕೃಷ್ಣನು ಶುಭಶಕುನಗಳನ್ನು ಕಾಣುತ್ತಾ ಹೊರಟಂತೆ, ಕೌರವ ರಾಜಧಾನಿಯಲ್ಲಿ ದುಶ್ಶಕುನಗಳು ಕಾಣತೊಡಗಿದವು. ಮೇಘವಿಲ್ಲದ ಆಕಾಶದಿಂದ ಸಿಡಿಲು ಬಡಿಯಿತು; ಮಿಂಚು ಹೊಳೆಯಿತು; ಮಳೆಯು ಬಿರುಗಾಳಿಯಿಂದ ಕೂಡಿ ಭಯಂಕರವಾಯಿತು. ಸಮುದ್ರಶರಣವಾದ ನದಿಗಳು ಪೂರ್ವದಿಕ್ಕಿನಿಂದ ಹಿಂದಿರುಗಿ ಹರಿದವು. ದಿಕ್ಕುಗಳಲ್ಲಿ ಕತ್ತಲು ಕವಿಯಿತು. ಭೂಮಿ ನಡುಗಿತು. ಪುರುಷರ ಶರೀರಚ್ಛಾಯೆಗಳಲ್ಲಿ ತಲೆಯೇ ಕಾಣುತ್ತಿದ್ದಿಲ್ಲ. ನೈಋತ್ಯ ದಿಕ್ಕಿನಿಂದ ಬೀಸಿದ ಬಿರುಗಾಳಿಗೆ ಹಸ್ತಿನಾಪುರವು ಕಂಪಿಸಿತು; ಗಿಡಗಳು ನೆಲಕ್ಕುರುಳಿದವು.

ಆದರೆ ಶ್ರೀಕೃಷ್ಣನು ಬಂದಲ್ಲಿ ಶುಭಶಕುನಗಳೇ ಕಂಡುಬಂದವು. ಪುಷ್ಪವೃಷ್ಟಿ ಯೊಡನೆ, ಬ್ರಹ್ಮಾದಿದೇವವರರ ಪುರುಷೋತ್ತಮ ಸ್ತುತಿಯ ಶಬ್ದವು ದಿವದಿಂದ ಭುವಿಗಿಳಿಯಿತು. ಕುಶಕಂಟಕರಹಿತವಾದ ರಾಜಮಾರ್ಗವು ಸುಖಗಮನವಾಯಿತು. ಹಾದಿಯ ಆಶ್ರಮ ಗ್ರಾಮಗಳ ಪ್ರಜರು ವಿಪ್ರಮುಖರಾಗಿ ಬಂದು ಗೋವಿಂದ ನನ್ನು ಆರ್ಘ್ಯಮಧುಪರ್ಕ ಫಲ-ಪುಷ್ಪ ದಕ್ಷಿಣಾದಿಗಳಿಂದ ಪೂಜಿಸಿದರು. ಅವರು ನಿತ್ಯಹೃಷ್ಟರು, ನಿಷ್ಕಪಟಿಗಳೂ ಆಗಿದ್ದರು. ಶ್ರೀಕೃಷ್ಣನು ವೃಕಸ್ಥಲ (ಕುಶಸ್ಥಲ) ವನ್ನು ಸೇರಿ, ಸೂರ್ಯನು ಅಸ್ತಂಗತನಾಗುತ್ತಿರುವುದನ್ನು ಕಂಡು, ಅಂದು ಅಲ್ಲೇ ತಂಗಿದನು! ಶ್ರೀಶನಪ್ಪಣೆಯಂತೆ, ದಾರುಕನು ರಥದಿಂದಿಳಿದು, ಕುದುರೆಗಳಿಗೆ ಪ್ರದಕ್ಷಿಣೆಸಿ, ಬಿಚ್ಚಿ, ಲಾಯದಲ್ಲಿ ಕಟ್ಟಿ, ತಾನೂ ವಿಶ್ರಮಿಸಿದನು. ವೃಕಸ್ಥಲದ ವಿಪ್ರವರರು ಹೃಷೀಕೇಶನನ್ನು ಸಮೀಪಿಸಿ, ಸಕಲ ಸೌಕರ್ಯಗಳಿಂದ ಕೂಡಿದ ತಮ್ಮ ಮನೆಗಳಲ್ಲಿ ತಂಗಿ, ತಮ್ಮನ್ನು ಪಾವನಮಾಡಬೇಕೆಂದು ಕೇಳಿಕೊಂಡರು. ಅವರ ಆದರದಿಂದ ಪ್ರೀತನಾದ ಶ್ರೀನಾಥನು ಅವರ ಮನೆಗಳಿಗೆ ಹೋಗಿ, ಪಾದರಜದಿಂದ ಪಾವನಗೊಳಿಸಿ, ಹಿಂತಿರುಗಿಬಂದನು. ವಿಪ್ರರನ್ನು ಮೃಷ್ಟಾನ್ನ ಪಾನ ದಕ್ಷಿಣಾದಿ ಗಳನ್ನಿತ್ತು, ಕಳಿಸಿ, ತಾನೂ ಭುಜಿಸಿ ವಿಶ್ರಮಿಸಿದನು.

ಶ್ರೀಕೃಷ್ಣಾಗಮನವನ್ನು ದೂತರಿಂದರಿತು, ಧೃತರಾಷ್ಟ್ರನು ಸಭೆಯಲ್ಲಿ ನೆರೆದ ಭೀಷ್ಮಾದಿಗಳ ಸಮಕ್ಷಮದಲ್ಲಿ ಮಗನಿಗಿಂತೆಂದನು. 'ಕುಮಾರ! ಸ್ತ್ರೀ ಬಾಲವೃದ್ಧ ರಾದಿ ಪುರಜನರು ಸಂರಂಭದಿಂದ ಕೃಷ್ಣಸತ್ಕಾರವನ್ನು ಮಾಡಲು ಸಜ್ಜಾಗಿರುವರು. ಪಾಂಡವದೂತನಾಗಿ ಬರುತ್ತಿರುವ ದಾಶಾರ್ಹನು ನಮಗೂ ಪೂಜಾರ್ಹನಾಗಿರುವನು. ಅವನಿಂದ ತಿಳಿದು ಲೋಕವು ಧರ್ಮಮರ್ಯಾದೆಯನ್ನು ಮೀರದಿರುವುದು. ಆ ಭೂತೇಶನಲ್ಲಿ ಧೃತಿ ವೀರ್ಯ ಪ್ರಜ್ಞಾ ಧರ್ಮಗಳು ನೆಲೆಮಾಡಿ ನಿಂತಿವೆ. ನಮ್ಮ ಉಪಚಾರದಿಂದ ಅವನು ಪ್ರೀತನಾದನೆಂದರೆ ನಮ್ಮ ಶ್ರೇಯಸ್ಸಂಪಾದನೆಯೂ ಆಗುವುದು. ಅವನ ಸುಖಾಗಮನವಾಗುವಂತೆ ಹಾದಿಯಲ್ಲಿ ಸರ್ವ ಸೌಖ್ಯಭರಿತ ವಾದ ಶಿಬಿರಗಳನ್ನು ನಿರ್ಮಿಸು!' ಆ ಮಾತನ್ನು ಭೀಷ್ಮಾದಿಗಳು ಅನುಮೋದಿಸಿದರು. ಅಂತೆಯೇ ದುರ್ಯೋಧನನು ರಮ್ಯ ಸಭೆಗಳನ್ನು ರಾಜಮಾರ್ಗದಲ್ಲಿ ಶ್ರೀಕೃಷ್ಣನಿಗಾಗಿ ನಿರ್ಮಿಸಲು ಸೇವಕರನ್ನು ನಿಯೋಗಿಸಿದನು. ಅವರು ಹಸ್ತಿನಾವತಿಯ ಹಾದಿಯಲ್ಲಿ, ರಮಣೀಯ ಪ್ರದೇಶಗಳಲ್ಲಿ, ಸರ್ವಕಾಮ ಸಮೃದ್ಧವಾದ ಸಭೆಗಳನ್ನು ನಿರ್ಮಿಸಿದರು. ವೃಕಸ್ಥಲದಲ್ಲಿಯೂ ಅವರು ಸಭೆಗಳನ್ನು ಕಟ್ಟಿದರು. ಶ್ರೀಕೃಷ್ಣನು ಅವನ್ನು ಕಣ್ಣಿಂದ ನೋಡದೆ, ನಿರ್ಲಕ್ಷಿಸಿ, ತನ್ನ ಶಿಬಿರದಲ್ಲೇ ತಂಗಿ, ಪ್ರಾತಃಕಾಲವಾಗಲು, ಕುರು ರಾಜಧಾನಿಯ ಕಡೆ ತೆರಳಿದನು.

ಧೃತರಾಷ್ಟ್ರನು ಅದನ್ನರಿತು, 'ವಿದುರ! ಶ್ರೀಕೃಷ್ಣನಿಂದಿಲ್ಲಿಗೆ ಬರುತ್ತಿರುವನು. ಅವನು ತ್ರಿಲೋಕಾಧಿಪತಿಯಾಗಿರುವನು. ಬ್ರಹ್ಮನಿಗೂ ತಂದೆಯಾಗಿ ಪ್ರಪಿತಾಮಹ ನೆನಿಸಿರುವನು. ಆದಿತ್ಯ ವಸು ರುದ್ರಾದಿ ಸರ್ವ ವೃಂದಾರಕರಿಗೂ ವಂದ್ಯನಾದ

ಗೋವಿಂದನೆಮಗೆ ಪೂಜಾರ್ಹನೇ ಸರಿ! ಬಂಗಾರದ ಹದಿನಾರು ರಥಗಳನ್ನು ಉತ್ತಮ ಬಾಹ್ಲೀಕ ತುರಗ ಚತುಷ್ಟಯ ಯುಕ್ತನಾಗಿ ಅವನಿಗೆ ಸಮರ್ಪಿಸುವೆನು. ಎಂಟು ಭದ್ರಗಜಗಳನ್ನು, ತರುಣೀ ದಾಸಿಯರನ್ನು ನೂರನ್ನು ಒಂದು ಸಾವಿರದ ಹದಿನೆಂಟು ಶಹಲುಗಳನ್ನು, ಚೀನ ದೇಶದ ಸಾವಿರ ಕೃಷ್ಣ ಚರ್ಮಗಳನ್ನು, ದಿವ್ಯಮಣಿಯನ್ನು, ಉತ್ತಮವಾದ ನನ್ನ ಅಶ್ವತರೀ ರಥವನ್ನು, ಬೇಕಾದಷ್ಟು ಭಕ್ಷ್ಯ, ಭೋಜ್ಯ ಪೇಯ ಗಳನ್ನು ಸಮರ್ಪಿಸುವೆನು. ದುರ್ಯೋಧನನನ್ನು ಬಿಟ್ಟು ಮಿಕ್ಕ ಸುತರು ಶ್ರೀಕೃಷ್ಣ ನನ್ನು ಎದುರ್ಗೊಂಡು ಕರೆತರುವರು. ವಾರವನಿತೆಯರು, ಸುಂದರ ಕನ್ಯೆಯರು ಅವನಿಗೆ ಆರ್ತಿಗಳನ್ನೆತ್ತುವರು. ನಗರವನ್ನು ಹಸಿರು ತೋರಣಗಳಿಂದಲು, ತಳಿಲ ನೀರಿನಿಂದಲು, ಪೂರ್ಣ ಕುಂಭಗಳಿಂದಲು, ಅಲಂಕರಿಸಿ ನಗರದ ನರ-ನಾರಿಯರು ತಾವೂ ಅಲಂಕೃತರಾಗಿ ಮಾಧವನನ್ನು ಸ್ವಾಗತಿಸುವರು. ಶ್ರೀಕೃಷ್ಣನನ್ನು ದುಶ್ಶಾಸನನ ಮನೆಯಲ್ಲಿ ಇಳಿಸಲು ನಿಶ್ಚಯಿಸಿರುವೆನು. ನನ್ನ ಮನೆಯಲ್ಲಿಯು, ದುರ್ಯೋಧನನ ಮನೆಯಲ್ಲಿಯು ಇರುವ ಯಾವ ದಿವ್ಯರತ್ನಾದಿ ವಸ್ತುಜಾತವನ್ನಾ ದರೂ ಕೃಷ್ಣನಿಗೆ ಕೊಡಲು ಸಿದ್ಧನಿರುವೆನು' ಎಂದನು.

ವಿದುರನು ಆ ಅಂಧರಾಜನ ಇಂಗಿತವನ್ನರಿತು, ನಕ್ಕು 'ರಾಜನ್! ಶ್ರೀಕೃಷ್ಣನು ಬರುತ್ತಿರುವನೆಂದು ತಿಳಿದು, ನೀನಾಡಿದ ಮಾತು ಸಮಂಜಸವಾಗಿದೆ. ಶಾಸ್ತ್ರವೂ ಪೂಜ್ಯ ಪೂಜೆಯನ್ನು ವಿಧಿಸುತ್ತಿದೆ. ಪೂಜಿಸಲು ನೀನೂ ಯೋಗ್ಯನಿರುವಿ! ಶಿಲಾ ಲೇಖದಂತೆ, ಸೂರ್ಯನಲ್ಲಿ ಶಾಂತಿಯಂತೆ, ಸಾಗರದಲ್ಲಿ ಅಲೆಗಳಂತೆ, ನಿನ್ನಲ್ಲಿ ಧರ್ಮ ವಿದೆ ಎಂದು ಪ್ರಜರಿಗೆ ಗೊತ್ತು. ಆದರೆ ನಿನ್ನಲ್ಲಿ ಆರ್ಜವವಿಲ್ಲ. ಕೃಷ್ಣನಿಂದ ಹುಡುಗಾಟವಾಡಲು ನೋಡುವ ನಿನ್ನ ಮರುಳುಮಾತಿಗೆ ನಾನು ಸೋತಿಲ್ಲ. ನೀನು ಕೊಡುವ ರಥ ಗಜ ತುರಗ ರತ್ನ ದಾಸಿಯರಿಗೆ ಆಶೆ ಪಡುವವನಲ್ಲ, ಶ್ರೀರಮಣ. ಅವನಿಗೆ ಪೃಥಿವಿಯನ್ನಿತ್ತರೂ ಸಾಲದು, ನಿಜ! ಆದರೂ ಅವನು ಭಕ್ತರಿಡುವ ಪತ್ರ ಪುಷ್ಪ ಫಲ ಜಲಗಳಿಂದಲೂ ಪ್ರೀತನಾಗುವನು. ಭಕ್ತಿಯಿಲ್ಲದ ನಿನ್ನ ವಸ್ತುಜಾತವನ್ನು ಅವನು ಸ್ವೀಕರಿಸುವುದಿಲ್ಲ. ನಿನ್ನ ಕಾಪಟ್ಯವವನಿಗೆ ಗೊತ್ತಾಗದೆಂದು ತಿಳಿಯಬೇಡ! ಅವನು ಸರ್ವಜ್ಞನು. ವಿತ್ತವಿತ್ತು ಅವನ ಚಿತ್ತವನ್ನು ಹರಿಸಲು ಯತ್ನಿಸುತ್ತಿರುವೆ! ಪಾಂಡವರಿಂದ ಅವನನ್ನು ದೂರೀಕರಿಸಲು ನಡೆಸುವ ಕುತಂತ್ರವು ಫಲಿಸುವುದಿಲ್ಲ. ಪಾಂಡವರಿಗೂ ಶ್ರೀಕೃಷ್ಣನಿಗೂ ಮಿತ್ರ-ಭೇದವನ್ನುಂಟುಮಾಡಲಾರೆ! ಇಷ್ಟಿತ್ತು ಪೂಜಿಸುವ ನಿನ್ನನ್ನು ಕಂಡು ಪಾಂಡವರಿಗಂಜಿರುವಿಯೆಂದು ಯಾರಾದರೂ ತಿಳಿಯ ಬಹುದಾಗಿದೆ. ಶ್ರೀನಲ್ಲ ನಿನ್ನ ಪದಾರ್ಥಗಳನ್ನೊಲ್ಲ. ಪೂರ್ಣ ಕುಂಭ, ಪಾದ್ಯ, ಕುಶಲ ಪ್ರಶ್ನೆಗಳನ್ನುಳಿದು ಮತ್ತೇನನ್ನೂ ಜನಾರ್ದನನು ಬೇಡನು. ಮಾನಾರ್ಹನಾದ ಸ್ವಾಮಿ ಬರುತ್ತಿರುವನು. ಕುರುಕುಲಕ್ಷೇಮವನ್ನು ಸಾಧಿಸಲು ಬರುವ ದೇವದೇವನ ಹಿತವಚನದಂತೆ ನಡೆ! ಪಾಂಡವರು, ನಿನ್ನ ಸುತರು, ಉಭಯರೂ ಸುಖವಾಗಿರಲಿ!

ನೀನು ತಂದೆ ಅವರಿಗೆ; ಅವರು ನಿನ್ನ ಮಕ್ಕಳು. ನೀನು ಮುದುಕನು, ಅವರು ಯುವಕರು. ತಂದೆಯಾಗಿ ನಡೆದು ನಡೆಸಿಕೋ!'

ಆ ಮಾತನ್ನಾಲಿಸಿ, ದುರ್ಯೋಧನನು 'ವಿದುರನಾಡಿದ್ದು ಸರಿ! ಕೃಷ್ಣನು ಪಾಂಡವರಲ್ಲಿ ಅನುರಕ್ತನಾಗಿರುವನು. ಅವರನ್ನು ಅವನು ಬಿಡುವವನಲ್ಲ. ರಥ ತುರಗಾದಿ ಪದಾರ್ಥಗಳನ್ನವನಿಗೆ ಕೊಡುವುದುಚಿತವಲ್ಲ. ಕೇಶವನು ಪೂಜಾರ್ಹನೇ ನಿಜ. ಆದರೂ ದೇಶಕಾಲಗಳನ್ನಾಲೋಚಿಸಿದರೆ ನಾವು ಭಯದಿಂದ ಪೂಜಿಸಿದೆವೆಂದೇ ತಿಳಿಯಲ್ಪಡುವುದು. ಅಂತಹ ಅವಮಾನವನ್ನು ನಾನೆಂದಿಗೂ ಸಹಿಸೆನು. ಈಗ ಯುದ್ಧವು ಪ್ರಸಕ್ತವಾಗಿದೆ. ಅತಿಥಿಪೂಜಾಮಾತ್ರದಿಂದ ಸಂಧಿ ಆಗದು' ಎಂದನು.

ಭೀಷ್ಮನು ಧೃತರಾಷ್ಟ್ರನನ್ನು ನೋಡಿ 'ರಾಜನ್! ನೀನು ಮಾಡುವ ಸತ್ಕಾರ ಅಸತ್ಕಾರಗಳಿಂದ ಶ್ರೀಕೃಷ್ಣನು ಪ್ರೀತನಾಗುವುದಿಲ್ಲ; ಹಾಗೂ ಕುಪಿತನೂ ಆಗು ವುದಿಲ್ಲ. ಅವನಿಗೆ ಅವಮರ್ಯಾದೆಯಾಗದಂತೆ ನೋಡಿಕೋ, ಸಾಕು! ಜಗದ್ವಲ್ಲಭ ನಾದ ಶ್ರೀಕೃಷ್ಣನ ಇಚ್ಛೆಗೆ ಎದುರಿಲ್ಲ. ವಾಸುದೇವನ ಮಾತನ್ನು ಲಾಲಿಸಿ ನಡೆ! ಪಾಂಡವರಿಂದ ಕೂಡಿ ಬಾಳು!' ಎಂದನು. ದುರ್ಯೋಧನನು, 'ನಾನು ಮೊದಲೇ ತಿಳಿಸಿದಂತೆ, ರಾಜ್ಯವನ್ನು ಹಂಚಿಕೊಡಲಾರೆನು; ಪಾಂಡವರಿಂದ ಕೂಡಿ ಬಾಳ ಲಾರೆನು; ಈಗ ಬರುವ ಶ್ರೀಕೃಷ್ಣನನ್ನು ಬಂಧಿಸಿಡುವೆನು; ಆಗ ಹಲ್ಲು ಕಿತ್ತಿದ ಹಾವುಗಳಂತೆ ಪಾಂಡವರು ಮೆತ್ತಗಾಗಿ, ನನ್ನ ಮಾತಿನಂತೆ ನಡೆಯುವರು; ಅಪಾಯ ವಲ್ಲದ ಈ ಉಪಾಯದಿಂದ ನನ್ನ ಶೌರ್ಯವು ಈಡೇರುವುದು' ಎಂದನು.

ಆ ಕುಟಿಲಮತಿಯ ಕಟುವಚನಗಳನ್ನು ಕೇಳಿ ಧೃತರಾಷ್ಟ್ರನು ಖಿನ್ನನಾದನು. 'ದುರ್ಯೋಧನ! ಕೇಶವನು ದೂತನಾಗಿ ಬರುತ್ತಿರುವನು; ಬಂಧುಸತ್ತಮನಾದ ಕೃಷ್ಣನು ಪ್ರಿಯನಾಗಿರುವನು; ಕೌರವರಿಗೆ ಅವನು ಅಪರಾಧವನ್ನೆಸಗಿಲ್ಲ; ಅಂತಹ ವನನ್ನು ನಿಗ್ರಹಿಸುವುದು ನಿನಗೆ ತರವಲ್ಲ' ಎಂದನು. ಭೀಷ್ಮನು 'ರಾಜನ್! ನಿನ್ನ ಮಗನಂತಹ ದುರಾತ್ಮರಿಲ್ಲ; ಇವನು ಹಿತ ಬಂಧುಗಳ ಮಾತನ್ನಾಲಿಸದೆ ಮಾಧವ ನನ್ನು ಕೆಣಕಿ ಕೆಡಲಿರುವನು. ಈ ಪಾಪಿಯ ಮಾತಿನಂತೆ ನೀನೂ ಕುಣಿಯುತ್ತಿರುವೆ. ನೀಚರ ಸ್ನೇಹಿತನಾದ ಈ ನೀಚತಮನ ವಚನಗಳನ್ನು ಕೇಳಲಾರೆನು' ಎಂದು ಸಿಟ್ಟಿನಿಂದ ಎದ್ದು ಹೊರಟುಹೋದನು.

## ಕುಂತೀ ಕೃಷ್ಣ ವಿದುರರ ಸಮಾಗಮ

ಶ್ರೀಕೃಷ್ಣನು ಪ್ರಾತಃಕಾಲವಾಗಲು ಬ್ರಾಹ್ಮಣರನ್ನು ಬೀಳ್ಕೊಂಡು ಹಸ್ತಿನಾವತಿಗೆ ತೆರಳಿದನು. ಭೀಷ್ಮ-ದ್ರೋಣ-ಕೃಪಾದಿ ವೃದ್ಧರು, ಪೌರರು, ದುರ್ಯೋಧನನ ಹೊರತಾದ ಕುರು-ಕುಮಾರರು ಶ್ರೀಶನನ್ನು ಎದುರ್ಗೊಂಡು ಕರೆತಂದರು. ನಗರವು ತಳಿರು-ತೋರಣಗಳಿಂದಲು, ಪೂರ್ಣ ಕುಂಭಗಳಿಂದಲು, ಧ್ವಜಪತಾಕೆಗಳಿಂದಲು ಅಲಂಕೃತವಾಗಿತ್ತು. ಸ್ತ್ರೀ ವೃದ್ಧ ಬಾಲ ಯುವಕರಾದಿಯಾಗಿ ಪುರಜನರು

ಪುರುಷೋತ್ತಮನ ದಿವ್ಯದರ್ಶನವನ್ನು ಪಡೆಯಲು ಕಾತರರಾಗಿ ಅಂಗಣ ಮುಂಗಣ ಗಳಲ್ಲಿಯೂ, ಸೌಧಾಗ್ರದ ಚಂದ್ರಸೂರ್ಯ ಶಾಲೆಗಳಲ್ಲಿಯೂ ಕಿಕ್ಕಿರಿದು ನಿಂತಿದ್ದರು. ಹಸ್ತಿನಾನಗರವೇ ಮೂರ್ತಿವೆತ್ತು ಕದಲುವಂತಿದ್ದ ಜನಸ್ತೋಮವು ಸಾಗರದಂತೆ ಘೂರ್ಣಿಸುತ್ತಿತ್ತು. ನಯನಾನಂದಕರನಾದ ಶ್ರೀರಮಣನ ದರ್ಶನದಿಂದ ಪಾವನರಾಗಿ, ಶ್ರೀಕೃಷ್ಣನನ್ನು ಜನರು ಪುಷ್ಪಫಲಗಳಿಂದ ಪೂಜಿಸಿದರು.

ಶ್ರೀಕೃಷ್ಣನು ಮೂರು ಕಕ್ಷ್ಯಗಳನ್ನು ದಾಟಿ, ಧೃತರಾಷ್ಟ್ರನ ಪ್ರಾಸಾದವನ್ನು ಪ್ರವೇಶಿಸಿದನು. ಪ್ರಜ್ಞಾಚಕ್ಷುನಾದ ಧೃತರಾಷ್ಟ್ರನು ಭೀಷ್ಮ-ದ್ರೋಣರಿಂದ ಕೂಡಿ ಎದ್ದು ಬಂದು, ಶ್ರೀಶನನ್ನು ಕರೆತಂದನು. ಶ್ರೀಕೃಷ್ಣನು ಭೀಷ್ಮನನ್ನು ಸು-ವಚನ-ಗಳಿಂದ ಸಂಭಾವಿಸಿದನು. ವಯೋಜ್ಞಾನಗಳಿಗೆ ತಕ್ಕಂತೆ ಬಾಹ್ಲೀಕ, ಸೋಮದತ್ತ, ಭೂರಿಶ್ರವರನ್ನು ಸಮ್ಮಾನಿಸಿದನು. ದ್ರೋಣ ಕೃಪ ಗುರುಪುತ್ರರನ್ನು ಸತ್ಕರಿಸಿದನು. ರಾಜನಿತ್ತ ದಿವ್ಯಕಾಂಚನ ಸಿಂಹಾಸನದಿ ವಿರಾಜಮಾನನಾಗಿ, ಮಧುಪರ್ಕ ಪಾದ್ಯ ಗಳೊಡನೆ ಅವನ ಪುರೋಹಿತರಿಂದ ಸ್ವೀಕರಿಸಿದನು. ನಗುತ್ತಾ ಅವರೆಲ್ಲರೊಡನೆ ಸರಸವಾಗಿ ಮಾತಾಡಿದನು. ರಾಜನ ಅಪ್ಪಣೆ ಪಡೆದು, ವಿದುರನ ಮನೆಗೆ ಪೋದನು. ವಿದುರನು ಪರಮೋತ್ಸಾಹಭಕ್ತಿಭರಿತನಾಗಿ ಶ್ರೀಕೃಷ್ಣನನ್ನು ಕರೆತಂದು, ಅವನಿತ್ತ ಸಿರಿ-ಸಂಪತ್ತಿಗೆ ತಕ್ಕಂತೆ ಆ ಮಹಾಪ್ರಭುವನ್ನು ಪೂಜಿಸಿದನು. 'ಕಮಲನಯನ! ನೀನೆನ್ನ ಮನೆಗೆ ಬಂದುದರಿಂದ ನನಗಾಗಿರುವ ಆನಂದವನ್ನೆಂತು ಬಣ್ಣಿಸಲಿ? ಅಂತರಾತ್ಮ ನಾದ ನಿನಗೆ ಬಣ್ಣಿಸಬೇಕೆ? ಸರ್ವಜ್ಞ! ನಮೋ ನಮಃ' ಎಂದು ಮುಂದೆ ಮಾತಾಡ ಲಾರದೆ, ಪಾದಕ್ಕೆರಗಿ ತಣ್ಣನ ಕಣ್ಣೀರಿಂದ ಕೃಷ್ಣಚರಣವನ್ನು ತೊಳೆದು ಪಾಂಡವರ ಕುಶಲವನ್ನು ಕೇಳಿದನು. ಎಲ್ಲ ವಿಷಯವನ್ನೂ ವಿದುರನಿಗೆ ವರ್ಣಿಸಿ, ಅಲ್ಲಿದ್ದ ಕುಂತೀದೇವಿಯ ಮನೆ ಸೇರಿದನು ಶ್ರೀಶನು.

ಬಂದ ಗೋವಿಂದನನ್ನು ಬಿಗಿದಪ್ಪಿ, ತನಯರನ್ನು ನೆನೆದು ಕಣ್ಣೀರಿಡುತ್ತಾ, ಪಾಂಡುರಾಜ ಮಹಿಷಿ ಕೃಷ್ಣನಿಗೆ ಹಾಲು ಹಣ್ಣುಗಳನ್ನಿತ್ತು, ಕೂಡಿಸಿ, ಇಂತೆಂದಳು. 'ಕೃಷ್ಣ! ನಿನಗೆ ಗೊತ್ತಿಲ್ಲದುದೇನಿದೆ? ನನ್ನ ಸುತರು ಬಾಲ್ಯದಿಂದ ಪಟ್ಟ ಕಷ್ಟಗಳಿಗೆ ಕೊನೆಯಿಲ್ಲ. ಬ್ರಾಹ್ಮಣ ಭಕ್ತರು, ವಿನೀತರು, ವಿದ್ಯಾವಿಶಾರದರು, ಧರ್ಮಾತ್ಮರು ಆದ ನನ್ನ ಸುತರಿಗೆ ವನವಾಸವಾಯಿತು. ತಂದೆ ಮೃತನಾಗಲು ನಾನವರನ್ನು ಬೆಳಸಿ ಪೋಷಿಸಬೇಕಾಯಿತು. ಅವರನ್ನು ದೊಡ್ಡಪ್ಪನ ಮನೆಗೆ ಸೇರಿಸಿದೆನು. ವಿಷಾನ್ನದಿಂದ, ಅಗ್ನಿದಾಹದಿಂದ, ಬಕ ಹಿಡಿಂಬಾದಿ ದಾನವರಿಂದ ಪಾರಾಗಿ, ನಿನ್ನ ದಯೆಯಿಂದ ವಿಕ್ರಮವಿಜೃಂಭಿತರಾಗಿ ಅವರು ರಾಜ್ಯವನ್ನು ಕಟ್ಟಿ, ಯಾಗವನ್ನೂ ಮಾಡಿದರು. ಅಂತಹವರಿಗೆ ವನವಾಸವಾಯಿತು. ಪ್ರಾಸಾದಗಳಲ್ಲಿ, ಮೃದುತಲ್ಪದಿ ಶಯನಿಸಿ, ವಂದಿಗಳ ಸ್ತುತಿಪಾಠಗಳನ್ನಾಲಿಸುತ್ತಾ ಏಳುವ ನನ್ನ ಮಕ್ಕಳು ಗಿಡದ ಬುಡಗಳಲ್ಲಿ ಹುಲ್ಲುಹಾಸಿಗೆಯಲ್ಲಿ ಮಲಗಿ, ಕ್ರೂರ ವ್ಯಾಘ್ರರಾವಕ್ಕೆ ಬೆಚ್ಚಿ ಏಳು ವಂತಾಯಿತು.

'ಅಂಬರೀಷ ಮಾಂಧಾತೃ ಭರತ ದಿಲೀಪಾದಿ ರಾಜರ್ಷಿಗಳ ಗುಣಗಳನ್ನೊಟ್ಟು ಗೂಡಿಸಿ ಮಾಡಿದಂತಿರುವ ಧರ್ಮರಾಜ; ನಾಗಾಯುತ ಮಹಾಬಲನು, ಜ್ಯೇಷ್ಠಾನುವರ್ತಿಯು, ಪುಣ್ಯಮೂರ್ತಿಯು ಆದ ಭೀಮ; ಕಾರ್ತವೀರ್ಯಾರ್ಜುನನಂತೆ ವೀರ ವಿಹಾರಗೈವ ಧನಂಜಯ, ಸರ್ವಭೂತ ದಯಾಪರನು ಸುಕುಮಾರನು ಆದ ನಕುಲ; ಶೂರ ಸತ್ತ್ವನುನು, ನೀತಿವಿತ್ತಮನು ಆದ ಸಹದೇವ; ಕುಲೀನಳು, ಸರ್ವ ಸುಗುಣ ಸಂಪನ್ನಳಾದ ದ್ರೌಪದಿ, ಅವಳ ಮಕ್ಕಳು ಎಲ್ಲರ ಯೋಗಕ್ಷೇಮವನ್ನು ನನಗೆ ತಿಳಿಸಿ, ಒಣಗಿ ನಿಂತಿರುವ ಪೈರನ್ನು ಮಳೆಯಂತೆ ಆನಂದಪಡಿಸು! ಅವರನ್ನೆಲ್ಲ ಕಂಡು ಹದಿಮೂರು ವರ್ಷಗಳಾದವು. ಇನ್ನವರಿಗೆ ನಾನಿಲ್ಲದಂತೆ ಆಯಿತು. ಅವರೂ ನನಗಿಲ್ಲ ದಂತಾದರು. ಕೃಷ್ಣ! ನನಗೆ ಭೀಮನೆಂದರೆ ಬಲು ಪ್ರೀತಿ. ಅರ್ಜುನ ಧರ್ಮಜ ಯಮಳರು ನನ್ನ ಪ್ರಾಣಸಮರು, ಆದರೆ ದ್ರೌಪದಿಕಿಂತಲು ಅವರೆನ್ನ ಪ್ರೀತಿ ವಿಷಯ ರಲ್ಲ. ಅಂತಹ ಕೃಷ್ಣೆಗೆ ಅಂತಹ ಪಾಡೇ? ನೆನೆದರೆ ಎದೆ ಒಡೆಯುತ್ತಿದೆ. ಒಬ್ಬ ಅನಾರ್ಯನು ಸೆಳೆದುತಂದು ಸಭೆಯಲ್ಲಿ ಸೀರೆ ಸೆಳೆದನೆಂದರೆ, ಇಂತಹ ಅನ್ಯಾಯ ವೆಂದಾದರೂ ಎಲ್ಲಾದರೂ ಯಾವ ಹೆಣ್ಣಿಗಾದರೂ ಆಗಿತ್ತೇ? ಕ್ರೋಧ-ಲೋಭಗಳ ಪ್ರಳಯತಾಂಡವವನ್ನು ಹಿರಿಯರು ನೋಡುತ್ತಾ ಕೂಡಬೇಕೆ? ಒಬ್ಬ ವಿದುರನನ್ನು ಬಿಟ್ಟು, 'ಇದು ಅನ್ಯಾಯ'ವೆಂದು ಯಾರಾದರೂ ಹೇಳಿದರೇ? ಅಂತೆಯೇ ವಿದುರನು ಶೀಲದಿಂದ ಲೋಕಾಲಂಕಾರನೆನಿಸಿರುವನು.

'ನನ್ನ ಸುತರ ಕಷ್ಟವಲ್ಲಿಗೆ ಮುಗಿಯಲಿಲ್ಲ. ವನವಾಸದ ನಾನಾ ವ್ಯಸನಗಳನ್ನುಂಡು, ಅಜ್ಞಾತವನ್ನೂ ಕಳೆದು ಬಂದು, ಈಗ ರಾಜ್ಯಕ್ಕಾಗಿ ಅವರು ಯಾಚಿಸುತ್ತಿರಬೇಕಾಯಿತಲ್ಲ! ಕೃಷ್ಣ! ಸುಖದಿಂದ ಪುಣ್ಯಕ್ಷಯವಂತೆ. ದುಃಖದಿಂದ ಪಾಪ ಕ್ಷಯವಂತೆ. ಪಾಪಕ್ಷಯಕಾರಣವಾದ ದುಃಖವನ್ನು ನಾನು ದ್ವೇಷಿಸುವುದಿಲ್ಲ. ನಾನು ಕೌರವರ ಕೇಡನ್ನು ಬಯಸುವವಳಲ್ಲ. ನನ್ನ ಮಕ್ಕಳ ಕ್ಷೇಮ-ಸುಖಗಳನ್ನು ಬಯಸು ವುದು ನನ್ನ ತಪ್ಪಲ್ಲ. ಕೌರವರು ರಾಜ್ಯವನ್ನು ಕೊಡುವವರಲ್ಲ. ಕೊಡದಿರೆ ನನ್ನ ಸುತರು ಕಾದಾಡಲಿ! ಅವರಿಗೇ ಜಯವಾಗುವುದೆಂದು ನನ್ನ ಸತ್ಯಧರ್ಮಗಳ ಬಲದಿಂದ ನಂಬಿರುವೆನು. ನನ್ನನ್ನು ದಾನವಿತ್ತ ಧನದಂತೆ ಕುಂತಿಭೋಜನಿಗೆ ಮಗಳಾಗಿ ಕೊಟ್ಟ ತಂದೆ ಶೂರಸೇನನನ್ನು ನಿಂದಿಸುವಂತಾಗಿದೆ. ಕೌರವ ವಂಶಕ್ಕಿತ್ತು ಇಷ್ಟು ಕಷ್ಟಗಳಿಗೀಡುಮಾಡಿದ ಕುಂತೀಭೋಜನನ್ನೂ ನಿಂದಿಸಬೇಕಾಗಿದೆ. ತಂದೆಗೆ ಬೇಡ ವಾದ ಮಗಳು ಮಾವನಿಗೂ ಬೇಡವಾದ ಸೊಸೆಯಾದಳು. ಭೀಷ್ಮ-ಧೃತರಾಷ್ಟ್ರರು ನನ್ನ ಕಣ್ಣೀರನ್ನೊರೆಸಿದರೇ? ದೇವವರದಿಂದ ವೀರಸುತರನ್ನು ಪಡೆದೆನು. ಅವರು ಪುಟ್ಟಿದಾಗ ಕೇಳಿಸಿದ ಆಕಾಶವಾಣಿಯು ಗಾಳಿಯ ಮಾತಾಯಿತು. ಕೃಷ್ಣ! ನನಗೆ ಜೀವನದಲ್ಲಿ ಸುಖಲೇಶವೂ ಕಾಣಬರದಾಗಿದೆ. ನಾನೇಕೆ ಬದುಕಿರಬೇಕು? ಸರ್ವೇಶನು, ಸರ್ವ ಸಮರ್ಥನು ಆದ ನಿನ್ನಂತಹ ಅಳಿಯನನ್ನು ಪಡೆದುಬಂದ ಸೋದರತ್ತೆಯು ವ್ಯಥೆ ಒಂದು ಕಥೆಯಾಗಿದೆ. ಆದು ನಿನಗೆ ಗೊತ್ತಿಲ್ಲದಿಲ್ಲ. ತಿಳಿದೂ ಸುಮ್ಮನಿರುವೆ

ಎಂದರೆ ನಮ್ಮ ಪ್ರಾರಬ್ಧ ಕರ್ಮವು ಬಲೀಯವೆಂದು ತಿಳಿದು ಅನುಭವಿಸುತ್ತಿರುವೆನು. ವೈಧವ್ಯ, ರಾಜ್ಯನಾಶ, ಕಲಹಗಳಿಗೆ ನಾನು ದುಃಖಪಡುವುದಿಲ್ಲ; ಮಕ್ಕಳನ್ನು ಬಿಟ್ಟಿರ ಬೇಕಾಗಿ ನನ್ನ ದುಃಖದ ಕೆರೆಯು ಕಟ್ಟೆ ಒಡೆದಂತಾಗಿದೆ.

'ವಾಸುದೇವ ! ಪರರ ಮನೆಯಲ್ಲಿ ಬಿದ್ದಿರುವ ನನ್ನ ಬಾಳಿಗೆ ಧಿಕ್ಕಾರವಿರಲಿ ! ಮಗನಾದ ಧರ್ಮನಿಗೆ ಮಾತೃಪಾಲನ ಧರ್ಮವನ್ನು ನಿರ್ಲಕ್ಷಿಸಬಾರದೆಂದು ಹೇಳು ! ಬೇಡಿ ಬಾಳುವುದಕ್ಕಿಂತ ಸಾವೇ ಲೇಸು.

'ಹೇಳು ವೃಕೋದರನಿಗೆ ! ಹೇಳು ಅರ್ಜುನನಿಗೆ ! ಕ್ಷತ್ರಿಯಳು ಪುತ್ರರನ್ನು ಪಡೆಯುವುದೇತಕ್ಕೆ? ಪುತ್ರರು ಕರ್ತವ್ಯವನ್ನು ಪಾಲಿಸಿ. ಮಾತೆಯ ಕಾರ್ಪಣ್ಯವನ್ನು ನೀಗುವ ಕಾಲ ಬಂದಿದೆ! ಅದನ್ನು ಬಿಟ್ಟು ನಡೆದರೆ ನಿಂದನೀಯರಾಗುವ ನಂದನರನ್ನು ಬಿಟ್ಟುಬಿಡುವೆನೆಂದು ತಿಳಿಸು ! ಲೋಕಸಂಭಾವಿತ ವೀರರು ಭೀರುಗಳಂತೆ ವರ್ತಿಸ ಬಾರದು. ಜೀವನವನ್ನಾದರೂ ಪಣವಾಗಿಟ್ಟು ಕೀರ್ತಿಗಾಗಿ ಹೋರಾಡಲಿ ! ಕ್ಷತ್ರಿಯ ರಿಗೆ ವಿಕ್ರಮೋಪಾರ್ಜಿತ ಭೋಗಗಳು ವಿಹಿತವಾಗಿವೆ. ಭಿಕ್ಷೆಯಿಂದ ಬಂದ ಗ್ರಾಮ ಗಳಲ್ಲಿ ಸಭಾಗತಳಾದ ಕೃಷ್ಣೆಯ ಮೊರೆ ಕಿವಿಯಲ್ಲಿ ಪ್ರತಿಧ್ವನಿಸುತ್ತಿಲ್ಲವೇ ಭೀಮ-ಅರ್ಜುನರಿಗೆ ! ಕರ್ಣ-ದುಶ್ಯಾಸನ-ದುರ್ಯೋಧನರ ಪರುಷವಚನಗಳಿಗೆ ಶಿಕ್ಷೆಯೇ ಬೇಡವೇ ? ಮಾಯಾವಿ ಶಕುನಿಯನ್ನು ಕೊಲ್ಲುವ ಪ್ರತಿಜ್ಞೆಯನ್ನು ಸಹದೇವನು ಮರೆತಿರುವನೇ ? ನಕುಲನ ಸೇಡಿನ ಕಿಡಿ ತಣ್ಣಗಾಯಿತೇ ? ಕೃಷ್ಣ ! ಭೀಮಸೇನ ನೆಂದಿಗೂ ದುಷ್ಟರನ್ನು ಶಾಸಿಸದೆ ಬಿಡನು. ಅವನ ವೈರವಹ್ನಿ ಶತ್ರುಪಶುಗಳನ್ನು ನುಂಗದೆ ಶಾಂತವಾಗದು. ರಜಸ್ವಲೆಯಾಗಿದ್ದ ಪತಿವ್ರತೆಯು ಅನಾಥಳಂತೆ ಗೋಳಿ ಟ್ಟಾಗ ಬಂದು ಪೊರೆದೆ ಗೋವಿಂದ ! ನೀನೆಮ್ಮ ಕೈ ಬೀಡಬೇಡ ! ನನ್ನ ಮಕ್ಕಳಿಗೆ, ನನ್ನ ಸೊಸೆಗೆ, ನನಗೆ ನೀನೇ ಗತಿ ! ದೇವದೇವ ! ರಾಮಪ್ರದ್ಯುಮ್ನರಂತಹ ಬಂಧುಗಳಿದ್ದೂ ನನ್ನ ಬವಣೆ ಬಗೆಹರಿಯಲಿಲ್ಲ. ನೋಡು ! ನನ್ನ ಸುತರನ್ನು ಕಾಪಾಡು !'

ಇಂತಾಡಿ ರೋದಿಸುವ ಕುಂತೀದೇವಿಯನ್ನು ಶ್ರೀಕೃಷ್ಣನು ಸಮಾಧಾನಪಡಿ-ಸುತ್ತಿಂತೆಂದನು—'ಅತ್ತೆ! ನಿನ್ನಂತಹ ಸಾಧ್ವಿಯನ್ನು ಮತ್ತೊಬ್ಬಳನ್ನು ತೋರು ! ಶೂರಸೇನನ ಮನೆಯಲ್ಲಿ ಹುಟ್ಟಿದೆ ! ಅಜಮೀಢನ ಮನೆ ಮೆಟ್ಟಿದೆ ! ಹ್ರದದಲ್ಲಿ ಸೇರುವ ಹ್ರದದಂತೆ ಪವಿತ್ರ ವಂಶಗಳನ್ನು ಬೆಳಗಿದೆ ! ವೀರನ ಕೈ ಹಿಡಿದು, ವೀರ ರನ್ನು ಪಡೆದೆ ! ನೀನೇನು ಅಜ್ಞಳಲ್ಲ. ಸುಖ-ದುಃಖಗಳನ್ನು ಸಹಿಸಬೇಕೆಂದು ನಿನಗೆ ಹೇಳಬೇಕೆ? ನಿನ್ನ ಮಕ್ಕಳು ಮಹಾತ್ಮರು, ನಿದ್ರಾ ಕ್ರೋಧ ಹರ್ಷ ತೃಷ್ಣಾ ಶೀತೋಷ್ಣ ಗಳನ್ನು ನಿಗ್ರಹಿಸಿ, ನಿತ್ಯಸುಖಿಗಳಾಗಿರುವ ಪಾಂಡು-ಪುತ್ರರಿಗೇಕೆ ದುಃಖಪಡುವೆ ? ವೀರ ಸುಖ ಪ್ರಿಯರಾದ ಪಾಂಡವರು ನೀಚ ಗ್ರಾಮ್ಯ ಸುಖಗಳಿಗಾಶಿಪಡರು. ಪುರುಷಾರ್ಥ ಚತುಷ್ಟಯದಿ ಕೊನೆಗಳಿಂದ ಅಂದರೆ ಧರ್ಮ ಮೋಕ್ಷಗಳಿಂದ ಸುಖ ಪಡುವವರು ಧೀರರು ; ಮಧ್ಯಗಳಿಂದ ಅಂದರೆ ಅರ್ಥ ಕಾಮಗಳಿಂದ ಮಾತ್ರ ಸುಖ

ಪಡಲೆಣಿಸುವವರು ಅಲ್ಪರು. ಅತಿ ಧೀರರು ಇಲ್ಲಿ ಪರಿಕ್ಲೇಶಗಳನ್ನು ಸಹಿಸಿ, ಲಕ್ಷಿಸದೆ ಸುಖವಾಗೇ ಇರುವರು; ಅಲ್ಲಿಯೂ ಅವರು ಅತಿಮಾನುಷ ಸುಖವನ್ನು ಪಡೆಯು ವರು. ಮೋಕ್ಷಕ್ಕಾಗಿ ಮಿಕ್ಕ ಮೂರನ್ನು ಸಂಗ್ರಹಿಸಿದವರು ಅತಿ ಧೀರರು. ನಿನ್ನ ಮಕ್ಕಳು ಕುಶಲಿಗಳು. ಕೃಷ್ಣೆಯೂ ಮಿಕ್ಕವರೆಲ್ಲರೂ ಕ್ಷೇಮದಿಂದಿರುವರು. ಅವರು ತಮ್ಮ ನಮಸ್ಕಾರಗಳನ್ನು ನಿನಗೆ ತಿಳಿಸಿರುವರು. ವಿಜಯವನ್ನು ಸಾಧಿಸಿ ಕೃತಾರ್ಥ ರಾದ ಸುತರನ್ನು ಬೇಗನೆ ತೋರುವೆನು. ಚಿಂತಿಸಬೇಡ !'

ಆಗ ಕುಂತಿಯು ಸುತಸ್ನೇಹದಿಂದ ಪುಟ್ಟಿದ ಶೋಕ-ಮೋಹಗಳನ್ನು ಬಿಟ್ಟು 'ಕೃಷ್ಣ ! ಸರ್ವಜ್ಞನಾದ ನಿನಗೆ ಹೇಳಬೇಕಾದುದಿಲ್ಲ. ಸರ್ವಶಕ್ತನಾದ ನಿನಗೆ ಅಸಾಧ್ಯ-ವಿಲ್ಲ. ಧರ್ಮಲೋಪವಾಗದಂತೆ, ನನ್ನ ಸುತರಿಂದ ಅಕೃತ್ಯವಾಗದಿರುವಂತೆ, ನೋಡಿ ಅವರನ್ನು ನಡೆಸು! ನೀನು ನಮ್ಮ ಕುಲಸ್ವಾಮಿಯಾಗಿರುವೆ! ಸತ್ಯ ತಪೋ ವಿಜ್ಞಾನಾದಿ ಕಲ್ಯಾಣಾನಂತಗುಣಪೂರ್ಣನಾದ ನಿನ್ನಲ್ಲಿ ಜಗವೆಲ್ಲ ನಿಂತಿದೆ. ನೀನಾಡಿ-ದುದೆಂದೂ ಸುಳ್ಳಲ್ಲ; ನಮ್ಮನ್ನು ಕಾಪಾಡಿ, ನಿನ್ನ ಚರಣಭಜಕರನ್ನಾಗಿಸುವ ಭಾರ ನಿನ್ನದಯ್ಯಾ! ಜೀಯಾ!' ಎಂದು ಅವನನ್ನು ಕೊಂಡಾಡಿ ಕಳಿಸಿದಳು.

ಅಲ್ಲಿಂದ ಶ್ರೀಕೃಷ್ಣನು ದುರ್ಯೋಧನನ ಮನೆಗೆ ಪೋದನು. ಅಲ್ಲಿ ಮೂರು ಕಕ್ಷ್ಯಗಳನ್ನು ದಾಟಿ, ನೀಲಾಭ್ರದಿ ನಿಂತಿರುವ ಕನಕಗಿರಿ ಶಿಖರದಂತಿರುವ ಪ್ರಾಸಾದ ವನ್ನಾರೋಹಿಸಿ ರಾಜಸಹಸ್ರವಿರಾಜಿತನಾದ ರಾಜರಾಜನನ್ನು ಕಂಡನು. ದುಶ್ಶಾಸನ-ಕರ್ಣ-ಶಕುನಿಯರನ್ನೂ ಅವನ ಸಮೀಪದ ಆಸನಗಳಲ್ಲಿ ಕಂಡನು. ದುರ್ಯೋ-ಧನನು ಮಿತ್ರ ಅಮಾತ್ಯ ಪರಿವೃತನಾಗಿ ಎದ್ದುಬಂದು, ಶ್ರೀಕೃಷ್ಣನನ್ನೆದುರ್ಗೊಂಡು ಕರೆತಂದನು. ಅಲ್ಲಿ ದಿವ್ಯ ಪರ್ಯಂಕದಲ್ಲಿ ಶ್ರೀಕೃಷ್ಣನು ಸುಖಾಸೀನನಾದನು. ಆಗ ದುರ್ಯೋಧನನು ಮಧುಪರ್ಕ ಪಾದ್ಯಗಳಿಂದ ಗೋವಿಂದನನ್ನು ಪೂಜಿಸಿದನು. ಸರ್ವಕೌರವರು ಮಿಕ್ಕ ರಾಜರು ಕೇಳುತ್ತಿರಲು, ಅವನು ಶ್ರೀಕೃಷ್ಣನನ್ನು ಭೋಜನ-ಕ್ಕೆಂದು ಆಹ್ವಾನಿಸಿದನು. ಕೇಶವನು ಸಮ್ಮತಿಸದೆ ಸುಮ್ಮನಿರಲು ನೋಡಿ ದುರ್ಯೋಧನನು ಕರ್ಣನ ಕಡೆ ನೋಡಿ, ತನ್ನ ಶಠಬುದ್ಧಿಯನ್ನು ತೋರುತ್ತ 'ಕೃಷ್ಣ ! ನೀ ಬರುವೆ ಎಂದು ನಿನಗಾಗಿ ಸಿದ್ಧಪಡಿಸಿದ ಮೃಷ್ಟಾನ್ನಗಳನ್ನೇಕೆ ತಿರಸ್ಕರಿಸುವೆ? ಇಬ್ಬರಿಗೂ ಹಿತನೆನಿಸಿ, ಇಬ್ಬರಿಗೂ ಸಹಾಯವನ್ನು ಮಾಡಿ, ಒಬ್ಬರಿಗೊಂದು ಮಾಡುವ ಈ ಬಗೆ ಅಬ್ಬರವಲ್ಲವೆ ? ಚಕ್ರಗದಾಧರ ! ಇಂತು ಮಾಡಲು ಕಾರಣ ವೇನು ?' ಎಂದು ಕೇಳಿದನು.

ಅವನ ಕಟುವಚನವನ್ನಾಲಿಸಿ ಗೋವಿಂದನು 'ರಾಜನ್! ನಾನು ದೂತನಾಗಿ ಬಂದಿರುವೆನು, ಬಂದಿರುವ ಕಾರ್ಯವಾದಮೇಲೆ ಭೋಜನದ ಮಾತು ! ನನ್ನ ಬಂದ ಕಾರ್ಯವನ್ನು ಸಫಲವಾಗಿಸಿ, ಆಗ ನನ್ನನ್ನು ಸತ್ಕರಿಸು!' ಎಂದನು. ದುರ್ಯೋಧನನು 'ಕೃಷ್ಣ ! ಈ ಸಮಯದಲ್ಲಿ ಆಡಬಾರದ ಮಾತನ್ನಾಡುವುದು ನಿನಗೆ ಸರಿಯಲ್ಲ; ಕಾರ್ಯವಾದರೇನು? ಆಗದಿದ್ದರೇನು? ನಿನ್ನನ್ನು ಪೂಜಿಸುವ ನಮ್ಮ

ಪ್ರೀತಿಯ ಆತಿಥ್ಯವನ್ನು ನೀನು ಸ್ವೀಕರಿಸದಿರಲು ಕಾರಣವೇನು ?' ಎಂದು ಕೇಳಿದನು. ಕೃಷ್ಣನು ಸಾತ್ಯಕಿಯನ್ನೀಕ್ಷಿಸಿ, ನಕ್ಕು ಮತ್ತೆ ಧೃತರಾಷ್ಟ್ರನ ಪುತ್ರರಿಗಿಂತೆಂದನು. ಭಗವಂತನ ವಾಣಿಯು ಸ್ಪಷ್ಟವಾಗಿಯು, ಅನಾಯಾಸವಾಗಿಯು, ಸಂಬದ್ಧವಾಗಿಯು, ಮೇಘಗಂಭೀರವಾಗಿಯು ಕೇಳಬರುತ್ತಿತ್ತು.

'ದುರ್ಯೋಧನ! ನಾನು ಕಾಮದಿಂದಾಗಲಿ, ಕ್ರೋಧದಿಂದಾಗಲಿ, ದ್ವೇಷ ಲೋಭಗಳಿಂದಾಗಲಿ ಧರ್ಮವನ್ನು ಬಿಡುವವನಲ್ಲ. ಅನ್ನವನ್ನು ಸಂಪ್ರೀತಿಯಿಂದ ಇತ್ತಾಗ ಭುಜಿಸಬಹುದು; ಅಥವಾ ಆಪದ್ದಶೆಯಲ್ಲಿ ಜೀವಿಸಿರಲು ಸ್ವೀಕರಿಸಬಹುದು; ನನ್ನಲ್ಲಿ ನಿನಗೆ ಪ್ರೀತಿಯಿಲ್ಲ; ನಾನು ಆಪತ್ತಿನಲ್ಲಿ ಬಿದ್ದಿಲ್ಲ. ಹುಟ್ಟಿದಂದಿನಿಂದ ಪಾಂಡವರನ್ನು ನಿಷ್ಕಾರಣವಾಗಿ ದ್ವೇಷಿಸುತ್ತಿರುವೆ. ಅವರು ಸರ್ವಗುಣ ಸಂಪನ್ನರು. ಪ್ರಿಯಾನುವ್ರತರು; ಅಂತಹವರನ್ನು ದ್ವೇಷಿಸುವುದು ಸರಿಯಲ್ಲ. ಯಾರಾದರೂ ಎಂದಾದರೂ ಅವರಲ್ಲಿ ಇಂತಹ ದೋಷವಿದೆ ಎಂದು ತೋರಿಸಲಾಗಿಲ್ಲ. ಅಂತಹ ಪಾಂಡರನ್ನು ದ್ವೇಷಿಸುವವನು ನನ್ನನ್ನೂ ದ್ವೇಷಿಸುವವನೇ! ಅವರನ್ನು ಸೇರಿ ನಡೆದವನು ನನ್ನನ್ನು ಸೇರಿ ನಡೆದವನೇ ! ಧರ್ಮರತರಾದ ಪಾಂಡವರೆಂದರೆ ನನ್ನ ಪಂಚಪ್ರಾಣಗಳಿಗೆ ಸಮರೆಂದು ತಿಳಿ! ಗುಣವಂತರಾದ ಸುಜನರನ್ನು ಕಾಮಕ್ರೋಧ ವಶನಾಗಿ ಪೀಡಿಸುವ ಪುರುಷಾಧಮನು ಬೇಗನೆ ಐಶ್ವರ್ಯಭ್ರಷ್ಟನಾಗುವನು. ತನಗಾಗದಿದ್ದರೂ ಸರೀ ಸುಜನರ ಗುಣಗಳನ್ನು ನೋಡಿ, ಅವರಿಂದ ಕೂಡಿ ಬಾಳಲು ಪ್ರಯತ್ನಿಸುವವನು ಬೇಗನೆ ಯಶೋಧನಗಳನ್ನು ಪೊಂದುವನು. ಪಾಂಡವದ್ವೇಷಿಗಳೆನ್ನ ದ್ವೇಷಿಗಳು. ದ್ವೇಷಿಗೆ ಉಣಿಸಬಾರದು. ದ್ವೇಷಿಯಿತ್ತರೆ ಉಣಬಾರದು. ದುಷ್ಟಾಭಿಸಂಧಿತವಾದ ಯಾರ ಅನ್ನವೂ ನನಗೆ ಬೇಡವೆನಿಸಿದೆ. ವಿದುರನೊಬ್ಬನ ಸತ್ಕಾರವೆನಗೆ ಬೇಕಾಗಿದೆ' ಎಂದು ಗೋವಿಂದನು, ರುಷಾದೂಷಿತನಾದ ಕೌರವನ ಮನೆಯನ್ನು ಬಿಟ್ಟು ವಿದುರನ ಮನೆ ಸೇರಿದನು.

ಭೀಷ್ಮ-ದ್ರೋಣ-ಬಾಹ್ಲೀಕಾದಿ ವೃದ್ಧಜನರು ವಿದುರನ ಮನೆಗೆ ಬಂದು, ತಮ್ಮ ರತ್ನಪೂರ್ಣಗೃಹಗಳನ್ನು ಶ್ರೀಶನಿಗರ್ಪಿಸಿ, ಅಲ್ಲಿ ಬಿಡದಿ ಮಾಡೆಂದರು. ಶ್ರೀ ಕೃಷ್ಣನು 'ಬಂತು ನಿಮ್ಮ ಪೂಜೆ! ನಾನಿಲ್ಲೇ ಇರುವೆ'ನೆಂದು, ಅವರನ್ನು ಕಳಿಸಿ ಬಿಟ್ಟನು. ಶ್ರೀಶನ ದಿವ್ಯಚಿತ್ತದಿ ಅವರು ಕೌರವರ ಸಭೆಯಲ್ಲಿ ಕೃಷ್ಣಾವಮಾನವನ್ನು ನಿವಾರಿಸಲಿಲ್ಲವೆಂಬ ತಿರಸ್ಕಾರವಿತ್ತು. ಅವರೂ ಅದನ್ನರಿತು, ಖಿನ್ನರಾಗಿ ಹೊರಟುಹೋದರು.

ಭಕ್ತಿಭರಿತ ವಿದುರನು ಸರ್ವಕಾಮಿತಗಳಿಂದ ಶ್ರೀಕೃಷ್ಣನನ್ನು ಪೂಜಿಸಿದನು. ಶುಚಿಯು, ಗುಣವಂತನು ಆದ ವಿದುರನ ಆಹಾರಪಾನಗಳನ್ನು ಪೂರ್ಣನಾದ ಲೋಕೇಶನು ಪ್ರೀತಿಯಿಂದ ಸ್ವೀಕರಿಸಿ, ಬ್ರಾಹ್ಮಣರಿಗಿತ್ತು, ಅನಂತರ ತಾನು ಭುಂಜಿಸಿದನು. ಅಂದು ರಾತ್ರಿ ವಿಶ್ರಮಿಸುವ ಗೋವಿಂದನ ಪಾದ ಸಮೀಪದಿ ಕೂತು ವಿದುರನು ಇಂತೆಂದನು—'ಭಗವನ್! ನೀನೀಗ ದೂತನಾಗಿ ಬಂದುದೆನಗೆ ಸರಿ

ಎನಿಸದು. ದುರ್ಯೋಧನನು ಮಹಾಪಾಪಿಯು; ಮಂದಪ್ರಜ್ಞನು. ದುರಭಿಮಾನಿಯು; ಪರಾಪಮಾನಚತುರನು ಆದ ದುರಾತ್ಮನು ನಿನ್ನ ಮಾತಿಗೆ ಒಪ್ಪಿ, ರಾಜ್ಯವನ್ನೀವನೆ ? ಅವನಿಗೆ ಧರ್ಮಾರ್ಥಗಳ ಅರಿವಿದೆಯೇ ? ಪಂಡಿತಂಮನ್ಯಸಿನ್ನೊಬ್ಬರ ಮಾತನ್ನಾಲಿಸುವನೇ ? ಅತ್ಯಂತ ಕೃತಘ್ನನಿಗೆ ಪಾಂಡವರು ಮಾಡಿದ ಉಪಕಾರದ ನೆನಪಿದೆಯೇ? ಇಂದ್ರಿಯದಾಸನು, ಸ್ವೇಚ್ಛಾಚರಣನು ಆಗಿರುವ ಕೌರವಾಧಮನಿಗೆ ನಿನ್ನ ಧರ್ಮದ ನುಡಿ ರುಚಿಸುವುದಿಲ್ಲ. ಭೀಷ್ಮ-ದ್ರೋಣ-ಬಾಹ್ಲೀಕರು ಯುದ್ಧವಿಜಯಿಗಳಾಗಿ ರಾಜ್ಯವನ್ನು ತಂದುಕೊಡುವರೆಂದು ಅವನು ನಂಬಿರುವನು. ಅವನಿಗೆ ಧನಸಂಪತ್ತು ವಶದಲ್ಲಿಟ್ಟಿರುವನು. ಕರ್ಣನೊಬ್ಬನಿಂದಲೇ ಪಾಂಡವರು ಸಾಯುವರೆಂದು ಕೌರವರು ನಿಶ್ಚಯಿಸಿ, ಜಯವಿಷಯದಲ್ಲಿ ಸಂಶಯವಿಲ್ಲದಿರುವರು. ಇಂತಹವರು ಸಂಧಿಯ ಮಾತಿಗೆ ಕಿವಿಗೊಡುವರೆ? ಯುದ್ಧದಲ್ಲಿ ತಲೆ ಕೊಡುವನಾಗಲಿ ಮೂಢ ದುರ್ಯೋಧನನು ಪಾಂಡವರಿಗೆ ಅವರ ರಾಜ್ಯವನ್ನೀಯನು. ಸೂಕ್ತದುರುಕ್ತಗಳೆರಡೂ ಸಮವೆಂಬ ಬುದ್ಧಿಹೀನರಿಗೆ ತಿಳಿಹೇಳುವುದು ಕಿವುಡನಿಗೆ ಕಿನ್ನರಿ ಬಾರಿಸಿದಂತೆ ವ್ಯರ್ಥವಾಗುವುದು. ಪಾಪಬುದ್ಧಿಗಳು ಕೂತಿರುವ ದುಷ್ಟಸಭೆಗೆ ನೀನು ಹೋಗುವುದು ನನಗೇನೋ ಸರಿ ಎನಿಸದು. ಅವರು ಗುರುಜನ ವಿನೀತರಲ್ಲ; ಕುಲ ವಯೋ ದ್ರವಿಣ ಮದಮತ್ತರಾದ ಕೌರವರ ಸಭೆಗೆ ಹೋಗಬೇಡ! ಯುದ್ಧದಲ್ಲಿ ಅವರನ್ನು ಸೋಲಿಸಲು ಇಂದ್ರನಿಗೂ ಶಕ್ಯವಲ್ಲವಂತೆ! ಅಂತಹ ದುರ್ಯೋಧನನು ರೋಷಮಯನಾಗಿರುವುದರಿಂದ ಅವನು ರಾಜ್ಯವೆಲ್ಲ ತನ್ನ ಕೈಯಲ್ಲಿದೆ ಎಂದು ಭ್ರಮಿಸಿ, ನಿನ್ನ ಹಿತವನ್ನು ಕೇಳನು. ಹಿಂದೆ ನಿನ್ನಿಂದ ಹೋರಾಡಿ ಸೋತ ರಾಜರನೇಕರು ಸೇಡಿನಿಂದ ದುರ್ಯೋಧನನಿಗೆ ಸಹಾಯವಾಗಿ ಬಂದಿರುವರು. ಅವರ ಸಭೆಗೆ ಹೋಗಬೇಡ ! ಕೃಷ್ಣ ! ಸರ್ವಲೋಕದುರಂಧರನಾದ ನಿನ್ನ ಪರಾಕ್ರಮವೆನಗೆ ಗೊತ್ತಿದೆ. ಆದರೂ ನೀನೆನಗೆ ಪಾಂಡವರಕಿಂತಲೂ ಪ್ರಿಯನಾಗಿರುವೆ! ಸ್ವಾಮೀ ! ಪ್ರೇಮದಿಂದಲು, ಸೌಹಾರ್ದದಿಂದಲು ನಾನಾಡಿದ ಮಾತನ್ನು ಕ್ಷಮಿಸು! ನಿನ್ನಲ್ಲಿ ಎನಗಿರುವ ಭಕ್ತಿಯ ರೀತಿಯನ್ನು ಅಂತರ್ಯಾಮಿಯಾದ ನಿನಗೆ ತಿಳಿಸಬೇಕೆ? ನಿನ್ನ ದರ್ಶನದಿಂದ ನಾನು ಧನ್ಯನಾದೆನು.'

ಆ ಮಾತಿಗೆ ನಗುತ್ತಾ ವಾಸುದೇವನು 'ವಿದುರ! ನೀನಾಡಿದುದೆಲ್ಲವೂ ನಿಜ! ನಿನ್ನಂತಹ ಸುಹೃಜ್ಜನರಿಂದ ನಾನು ಪ್ರೀತನಾಗಿರುವೆನು. ತಂದೆ-ತಾಯಂದಿರು ಮಕ್ಕಳಿಗೆ ಹೇಳಿದಂತೆ ಹಿತವನ್ನರುಹಿದೆ! ನಿನ್ನ ಮಾತೂ ಧರ್ಮಾರ್ಥಯುಕ್ತವಹುದು. ನಾನು ಬರಲು ಕಾರಣವನ್ನು ಕೇಳು ! ದುರ್ಯೋಧನನ ದೌರಾತ್ಮ್ಯವನ್ನು ರಾಜರ ವಿರೋಧವನ್ನು ತಿಳಿದು ತಿಳಿದೇ ಅದನ್ನು ಲೋಕದಲ್ಲಿ ಪ್ರಕಟಿಸಬೇಕೆಂದು ನಾನು ಬಂದಿರುವೆನು. ಪೃಥಿವಿಯಲ್ಲಿ ತುಂಬಿ ನಿಂತಿರುವ ಭಟ ಗಜ ತುರಗಗಳನ್ನು ಮೃತ್ಯುಪಾಶದಿಂದ ಬಿಡಿಸುವವನಿಗೆ ಮಹಾಪುಣ್ಯವು ಬರುವುದು. ಬಿಡಿಸಲಾಗದಿದ್ದರೂ ಸೆಣಸಿ ಮಾತಾಡುವವನಿಗೂ ಅಂತಹ ಪುಣ್ಯವು ಬರುವುದು.

ವಿಷ್ಣು ಧರ್ಮವು ಇಚ್ಛಾಮಾತ್ರದಿಂದ ಅಥವಾ ಸ್ವಲ್ಪವಾಗಿ ಆಚರಿಸಲ್ಪಟ್ಟರೂ ನಿಷ್ಫಲವಾಗುವುದಿಲ್ಲ. ಪಾಪವನ್ನು ಮನಸಾ ಮಾಡಿದರೂ, ಕ್ರಿಯಾರೂಪವಾಗಿ ಮಾಡದೆ ಬಿಟ್ಟ ಪಾಪಭೀರುವಿಗೆ ಪಾಪಫಲವಿಲ್ಲ. ನನ್ನ ಯತ್ನವು ಸಫಲವಾಗದು; ಆದರೂ ಘೋರ ಯುದ್ಧದ ಹತ್ಯಾದೋಷವು ಪಾಂಡವಾದಿ ನನ್ನ ಭಕ್ತರಿಗೆ ಸೋಕದಂತಾಗುವುದು. ಅದು ದುರ್ಯೋಧನನ ತಲೆ ಏರಿ, ಅವನನ್ನು ತವುದಲ್ಲಿ ಕೆಡಹುವುದು. ಅವನ ನೀಚಬುದ್ಧಿಯನ್ನು ಪ್ರಕಟಿಸುವುದರಿಂದ ನನಗೆ ಬರಬಹುದಾದ ಅಪನಿಂದೆಯೂ ತೊಲಗುವುದು.

'ಜ್ಞಾತಿಗಳಿಗೆ ಪರಸ್ಪರ ವೈರವು ಸಂಭವಿಸಿದಾಗ, ಅದನ್ನು ಕಳೆಯಲು ಯತ್ನಿಸದ ಮಿತ್ರನು ಮಿತ್ರನಲ್ಲ. ಅಧರ್ಮಿಷ್ಟರು ಮತ್ತು ಮೂಢರು 'ಶಕ್ತನಾಗಿದ್ದೂ ಕೃಷ್ಣನು ಪಾಂಡವ ಕೌರವರ ಯುದ್ಧನಾಶವನ್ನು ತಪ್ಪಿಸಲಿಲ್ಲ'ವೆಂದು ನಿಂದಿಸುತ್ತಿದ್ದರು; ನಾನು ಬಂದಿರುವುದರಿಂದ ಅವರ ಬಾಯಿಗೆ ಬೀಗ ಬಿತ್ತು. ಧರ್ಮಾರ್ಥಸಮ್ಮತವಾದೆನ್ನ ಮಾತನ್ನು ಕೇಳದ ದುರ್ಯೋಧನನು ಸಮಿತ್ರಭೃತ್ಯನಾಗಿ ಯಮರಾಜನ ವಶನಾಗುವನು. ಅವನು ರಾಜ್ಯವನ್ನಿತ್ತರೆ ಲೋಕಕ್ಷೇಮವನ್ನು ಸಾಧಿಸಿದಂತೆ ಆಗುವುದು. ಒಂದುವೇಳೆ ಅವನು ಮದಿಸಿ ಮೀರಿ ನಡೆದರೆ ಇಂದೇ ಸಾಯುವನೆಂದು ತಿಳಿ! ಸಿಂಹವನ್ನೆದುರಿಸುವ ಮೃಗಗಳಂತೆ ಸರ್ವ ದುಷ್ಟರೂ ನನ್ನ ವಿರೋಧದಿಂದ ಹಾಳಾಗುವರು.' ಎಂದು ವಿದುರನನ್ನು ಸಂತೈಸಿ, ವಾಸುದೇವನು ಅವನ ವಿಚಿತ್ರ ಧರ್ಮವಚನಗಳನ್ನು ಕೇಳಿ ಮೆಚ್ಚುತ್ತಾ ಆ ರಾತ್ರಿಯನ್ನು ಕಳೆದನು.

## ಶ್ರೀಕೃಷ್ಣ ಭಾರ್ಗವ ಕಣ್ವರ ಹಿತನುಡಿ

ಪ್ರಾತಃಕಾಲವಾಯಿತು. ಸೂತಮಾಗಧರ ಮಂಗಳ ಸ್ತುತಿ ಪಾಠಗಳೊಂದಿಗೆ ಶಂಖ ದುಂದುಭಿ ಘೋಷಗಳು ಮೊಳಗಿಸಿದವು. ಶ್ರೀಕೃಷ್ಣನು ಪ್ರಾತಃಕಾಲ ಕೃತ್ಯಗಳನ್ನು ಮುಗಿಸಿ, ಅಗ್ನಿಯಲ್ಲಿ ಹೋಮಿಸಿ, ವಿಪ್ರರನ್ನು ಪೂಜಿಸಿದನು. ಸಂಧ್ಯಾವಂದನರತನಾಗಿದ್ದಾಗ ಶಕುನಿ ದುರ್ಯೋಧನರು ಶ್ರೀಕೃಷ್ಣನನ್ನು ಕೌರವ ಸಭೆಗೆ ಕರೆದೊಯ್ಯಲು ಬಂದರು. ಅವರನ್ನು ಕೂಡಿಸಿ, ಜನಾರ್ದನನು ವಿಪ್ರರಿಗೆ ಗೋಹಿರಣ್ಯ ದಾನಗಳನ್ನು ಮಾಡಿದನು. ದಾರುಕನು ಬಂದು ವಂದಿಸಲು, 'ಸರಿ' ಎಂದು ಸ್ಯಂದನದಲ್ಲಿ ಕೂತು, ಶ್ರೀಶನು ಹಸ್ತಿನಾವತಿಯ ರಾಜಮಾರ್ಗದಲ್ಲಿ ನಡೆದನು. ಕಂಠದ ಕೌಸ್ತುಭಮಣಿಯ ಕನಕನತ್ಕಿರಣಗಳಿಂದ ದಿವ್ಯಶೋಭಿತವಾದ ವಕ್ಷಸ್ಥಲದಿ ಹಾರಗಳನ್ನಿಟ್ಟು ಮೆರೆದು ಬರುವ ಮುರಾರಿಯ ಮಂಗಳವಿಗ್ರಹವನ್ನು ನೋಡಲು ನರ-ನಾರಿಯರು ಸಾಲುಗಟ್ಟಿ ನಿಂತಿದ್ದರು. ಕೊಂಬು ತುತ್ತೂರಿಗಳು ಮೊಳಗುತ್ತಿದ್ದವು. ಅಂಬರದಿ ನಿಂತ ಬ್ರಹ್ಮರುದ್ರೇಂದ್ರಾದಿ ದೇವವೃಂದವು ಪೂಮಳೆಗರೆಯಿತು.

ಶ್ರೀಕೃಷ್ಣನರಥದ ಹಿಂದೆ ದುರ್ಯೋಧನ-ಶಕುನಿಯರ ರಥ, ಅದರ ಹಿಂದೆ ಸಾತ್ಯಕಿ ಕೃತವರ್ಮರ ರಥಗಳು ಹೊರಟವು. ಅನೇಕ ರಥಗಳು, ತರುಣ ವೀರರು, ಐದುನೂರು

ಆನೆಗಳು, ಸಾವಿರ ಕುದುರೆಗಳು ಶ್ರೀಕೃಷ್ಣನನ್ನು ಹಿಂಬಾಲಿಸಿ ಹೊರಟಾಗ, ಆಬಾಲ-ವೃದ್ಧರಾಗಿ ಪುರಜನರು ರಾಜಬೀದಿಯಲ್ಲಿ ನೆರೆದು, ಕಟ್ಟೆಗಳಲ್ಲಿ ನಿಂತು, ಮಹಡಿಗಳನ್ನೇರಿ ನೋಡಿ, ಧನ್ಯರಾದರು. ಕೆಲವರು ಹಾರಗಳನ್ನು ಹಾಕಿದರು; ಕೆಲವರು ಫಲಗಳನ್ನರ್ಪಿಸಿದರು. ಕೆಲವರು ಹಾಡಿ-ಪಾಡಿ ಕೊಂಡಾಡಿದರು. ಮೆರವಣಿಗೆ ಕುರುಸಭೆಯನ್ನು ಸೇರಿತು. ಸಾತ್ಯಕಿ-ಪ್ರಮುಖ ಯದುವೀರರ ಶಂಖಧ್ವಾನವು ಆಕಾಶದ ದೇವಕರ್ಣಗಳನ್ನು ಸೇರಿತು. ರಾಜಸಭೆಯಲ್ಲಿ ನೆರೆದ ಜನರು ಕೃಷ್ಣದರ್ಶನದಿಂದ ಸಂಭ್ರಮಕಾತರರಾದರು. ಶ್ರೀಶನ ರಥಧ್ವಾನವು ಪರ್ಜನ್ಯಗರ್ಜನೆಯಂತೆ ಸಭಿಕ-ಮಯೂರಮುಖದಿಂದ ಜಯಧ್ವಾನಕ್ರೇಂಕಾರವನ್ನು ಪುಟ್ಟಿಸಿತು. ಶ್ರೀಶನು ಕೈಲಾಸ ಶಿಖರದಂತೊಪ್ಪುವ ದಿವ್ಯರಥದಿಂದ ಸಾತ್ಯಕಿಯ ಹಸ್ತವನ್ನು ಪಿಡಿದು ಇಳಿದನು. ವಿದುರನನ್ನು ಕೈಯಿಂದ ಕೈ ಪಿಡಿದು ಸಭೆಯನ್ನು ಪ್ರವೇಶಿಸುವ ಜಗನ್ಮೋಹನ ಮಧುರಮೂರ್ತಿಯ ದಿವ್ಯ ತೇಜದಿಂದ ಸಭೆಯೇ ಬೆಳಗಿತು. ಸೂರ್ಯನ ಮುಂದಿಟ್ಟ ದೀವಿಗೆಗಳಂತೆ ಇತರ ರಾಜರು ನಿಸ್ತೇಜಸ್ಕರಾದರು.

ಕರ್ಣ ದುರ್ಯೋಧನರು ಮುಂದೆ ನಡೆಯಲು ಅವರ ಹಿಂದೆ ಗೋವಿಂದ, ಅವನ ಹಿಂದೆ ಕೃತವರ್ಮಾದಿ ಯದುವೀರರು ನಡೆದುಬಂದರು. ತತ್ಕ್ಷಣವೇ ಭೀಷ್ಮ-ದ್ರೋಣಾದಿಗಳು ಧೃತರಾಷ್ಟ್ರನನ್ನು ಮುಂದೆ ಮಾಡಿಕೊಂಡು, ಎದ್ದು ಬಂದು ಕೃಷ್ಣನನ್ನೆದುರ್ಗೊಂಡರು. ಒಡನೆ ಸರ್ವ ರಾಜರೂ ಎದ್ದುನಿಂತರು. ಶ್ರೀಕೃಷ್ಣನು ಅವರನ್ನೆಲ್ಲ ಯಥಾಯೋಗ್ಯವಾಗಿ ಸತ್ಕರಿಸಿ ನೋಡಿ, ಪ್ರಜ್ಞಾಚಕ್ಷುನಾದ ಧೃತರಾಷ್ಟ್ರನು ಸಮರ್ಪಿಸಿದ ಸರ್ವತೋಭದ್ರ ಸಿಂಹಾಸನದಿ ಕೂಡಲು ಹೊರಟನು. ಅಷ್ಟರಲ್ಲೇ ಸಭಾದ್ವಾರದಿ ವಿರಾಜಿಸುವ ಬ್ರಹ್ಮತೇಜಸ್ಸಂಪನ್ನರಾದ ಶ್ರೀ ವೇದವ್ಯಾಸ ಶ್ರೀ ಪರಶುರಾಮಾದಿ ವಿಪ್ರವರರು ಶ್ರೀಕೃಷ್ಣನ ನೇತ್ರಗೋಚರರಾದರು. ಶ್ರೀಶನು, 'ಭೀಷ್ಮ! ನೋಡಿದೆಯಾ ಮಹರ್ಷಿಗಳನ್ನು! ರಾಜಸಭೆಯನ್ನು ನೋಡಲು ಬಂದಿರುವ ಮಹಾನುಭಾವರನ್ನು ಕರೆದು, ಕೂಡಿಸಿ, ಪೂಜಿಸು! ಅಲ್ಲಿಯವರೆಗೂ ಯಾರೂ ಕೂಡಲಾಗದು' ಎಂದು ಆಜ್ಞಾಪಿಸಿದನು. ಶಂತನುಸುತನು ಸಂತಸದಿಂದ ಋಷಿವರರನ್ನು ಕರೆತಂದು, ದಿವ್ಯಾಸನಗಳನ್ನು ತರಿಸಿ, ಕೂಡಿಸಿ, ಅರ್ಘ್ಯಪಾದ್ಯಗಳನ್ನಿತ್ತು ಪೂಜಿಸಿದನು. ಆನಂತರ ಶ್ರೀಕೃಷ್ಣನು ಕೂತು, ಮಿಕ್ಕವರನ್ನೂ ಕೂಡೆಂದನು.

ಕರ್ಣ-ದುರ್ಯೋಧನರು ಕೃಷ್ಣನಿಗೆ ಸಮೀಪದಲ್ಲಿ ಏಕಾಸನರಾಗಿ ಕೂತರು. ಅವರ ಹಿಂದೆ ಶಕುನಿ ಸಪರಿವಾರನಾಗಿ ಆಸೀನನಾಗಿದ್ದನು. ಕೃಷ್ಣನ ಪಾರ್ಶ್ವಗಳಲ್ಲಿ ಸಾತ್ಯಕಿ ಕೃತವರ್ಮರು ಕೂತಿದ್ದರು. ವಿದುರನು ಶ್ರೀಕೃಷ್ಣನ ಪಾದ ಪೀಠದ ಹತ್ತಿರ ಕೃಷ್ಣಾಜಿನಾಸನದಿ ವಿರಾಜಿಸಿದನು. ಸಭಿಕರು ಶ್ರೀಕೃಷ್ಣನನ್ನು ನೋಡುತ್ತಾ ಅಮೃತಪಾನದಿಂದೆಂಬಂತೆ, ತೃಪ್ತರಾಗದೆ ನಿಂತಿದ್ದರು. ಅತಸೀ ಕುಸುಮ ಸಂಕಾಶನು, ಪೀತವಾಸನು ಆದ ಚತುರ್ಭುಜನು ಕುಂದಣದಿ ಜೋಡಿಸಿದ ಮಹಾನೀಲಮಣಿಯಂತೆ ನಯನಾನಂದಕರನಾಗಿದ್ದನು. ಸಭೆಯು ನಿಶ್ಶಬ್ದವಾಗಿತ್ತು.

ಶ್ರೀಕೃಷ್ಣನು ಎಲ್ಲರನ್ನೊಮ್ಮೆ ವೀಕ್ಷಿಸಿ, ಮೇಘ ಗಂಭೀರ ಧ್ವನಿಯಿಂದ ಧೃತರಾಷ್ಟ್ರನಿಗಿಂತೆಂದನು—'ಮಹಾರಾಜ ! ಕುರುಪಾಂಡವರಿಗೆ ಸಂಧಿ ಮಾಡಲು ಬಂದಿರುವೆನು. ಅದರಿಂದ ಜನನಾಶವು ತಪ್ಪುವುದು. ನಿನಗೆ ಶ್ರೇಯಸ್ಕರವಾದ ನನ್ನ ಮಾತೊಂದಿದೆ ಕೇಳು ! ನಿನಗೆಲ್ಲಾ ತಿಳಿದಿದೆ; ಆದರೂ ತಿಳಿಸಬೇಕಾಗಿದೆ. ಇಂದಿನ ಕ್ಷತ್ರಿಯ ವಂಶಗಳಲ್ಲಿ ನಿಮ್ಮ ವಂಶವು ಶ್ರೇಷ್ಠವೆನಿಸಿದೆ; ವಿದ್ಯಾ, ವರ್ತನ, ದಯಾ-ದಾಕ್ಷಿಣ್ಯ, ಸತ್ಯ ಧರ್ಮಾದಿ-ಸದ್ಗುಣಗಳಿಗೆ ಗಣಿಗಳಾದ ರಾಜರ್ಷಿಗಳಿಂದ ಸಂಪನ್ನವಾಗಿ ಅಪಾರ ಕೀರ್ತಿವಂತವಾಗಿದೆ. ಅಲ್ಲಿ ಜನಿಸಿದ ನಿನಗೆ ಅನ್ಯಾಯ ವರ್ತನವು ಸಲ್ಲದು. ಕುರುಶ್ರೇಷ್ಠನಾದ ನಿನಗೆ ಸರ್ವರೂ ಶಾಸನೀಯರಾಗಿರುವರು; ಅನ್ಯಾಯವನ್ನು ತಡೆಗಟ್ಟುವುದು ನಿನ್ನ ಕೈಲಿದೆ. ನಿನ್ನ ಪುತ್ರರು ದುರ್ಯೋಧನಾದಿಗಳು. ಅವರು ನೃಶಂಸರಾಗಿ ಧರ್ಮಾರ್ಥಗಳಿಗೆ ದೂರರಾದರೆ ನಿನಗೂ ಒಳಿತಲ್ಲ. ಲೋಭದಿಂದ ಮತಿಗೆಟ್ಟು ಬಂಧು ಜನಗಳಿಗೇ ದ್ರೋಹವನ್ನು ಬಗೆವ ಕೆಡುರೋಗ ಕುರುವಂಶಕ್ಕೆ ತಗುಲಿದೆ. ಮಹಾ ಘೋರವಾದ ಈ ವಿಷಬೀಜವನ್ನು ಉಪೇಕ್ಷಿಸಿ ಯಾದರೆ ಪೃಥಿವಿಯ ಜನರನ್ನೆಲ್ಲ ಅದು ನಾಶಮಾಡದೆ ಬಿಡದು. ನೀನಾಗಿ ಬಯಸಿದರೆ ಮಹಾ ಸಂಕಟವು ದೂರವಾದೀತು. ಸಂಧಿ ಮಾಡಿಕೊಂಡು ಮಕ್ಕಳನ್ನುಳಿಸಿಕೊಳ್ಳುವುದು ನಿನಗೆ ದುಷ್ಕರವಲ್ಲ. ನಾನೂ ಅದಕ್ಕಾಗಿಯೇ ಬಂದಿರುವೆನು; ಉಭಯರ ಹಿತವನ್ನು ಕೋರಿ ನುಡಿದ ನನ್ನ ಮಾತಿನಂತೆ ನಡೆ ! ಪಾಂಡವರು ನಿನಗೆ ಅವಿಧೇಯರಲ್ಲ. ಸಂಧಿಗಾಗಿ ತವಕಿಸುವ ನಿನ್ನ ಮಾತಿನಂತೆ ನಡೆಯಲು ಅವರು ಸಿದ್ಧರಿರುವರು. ನಿನ್ನ ಮಕ್ಕಳನ್ನೂ ದಂಡಿಸಿ, ಅವರ ರಾಜ್ಯವನ್ನವರಿಗೆ ಕೊಡಿಸು ! ವೈರದಿಂದ ಕೆಲಸ ಕೆಡುವುದು. ಅವರೂ ಇವರೂ ನಿನಗೆ ಭುಜದ್ವಯದಂತಿರೆ ನಿನಗೇ ಮೇಲು. ಪಾಂಡವರಕ್ಷಿತನಾಗಿ ಧರ್ಮಾರ್ಥಗಳನ್ನು ಬೆಳೆಸು ! ಅವರಿಂದ ರಕ್ಷಿತರಾದವರನ್ನು ಇಂದ್ರನೇ ಕಣ್ಣೆತ್ತಿ ನೋಡಲಾರನೆಂದಮೇಲೆ ಇತರ ನೃಪರ ಲೆಕ್ಕವೇನು ? ಭೀಷ್ಮ-ದ್ರೋಣ-ಕೃಪಾಶ್ವತ್ಥಾಮರು, ಕರ್ಣ-ಶಕುನಿ-ದುಶ್ಶಾಸನ ವಿಂಶತಿ ವಿಕರ್ಣರು, ಸೋಮದತ್ತ ಬಾಹ್ಲೀಕರು, ಸೈಂಧವ ಸುದಕ್ಷಿಣರು, ಇವರೆಲ್ಲರು ಮಹಾರಥರು; ಇಂತಹವರೊಂದಿಗೆ ಪಂಚಪಾಂಡವವೀರರು, ಸಾತ್ಯಕಿ ಯುಯುತ್ಸುಗಳೂ ಸೇರಿದರೆ ಉಭಯರೂ ನಿನ್ನನ್ನು ಸೇವಿಸುತ್ತಿರೆ, ನಿನ್ನನ್ನು ಕೆಣಕಿ ಬದುಕುವರುಂಟೇ? ಲೋಕೇಶನಾಗು ! ಶತ್ರುಗಜಗಳಿಗೆ ಸಿಂಹನಾಗು ! ಎಲ್ಲ ರಾಜರೂ ನಿನಗೆ ಸಾಮಂತರಾಗಿ ಬರಲು ಬೇಡುವಂತಾಗಲಿ ! ಸಕಲ ಪುತ್ರ-ಮಿತ್ರಾದಿ ಪರಿವಾರದೊಡನೆ ಚಿರಕಾಲ ಸುಖವಾಗಿ ಬಾಳು! ಕೇಳೆನ್ನ ಮಾತನ್ನು! ಅವರು ವಿಕ್ರಮಿಸಿ ಗೆದ್ದ ರಾಜ್ಯವೂ ನಿನ್ನದಾಗುವುದು. ಇದು ಸಂಧಿಯ ಫಲ ! ಕೊನೆಗೆ ಐದು ಗ್ರಾಮಗಳನ್ನಾದರೂ ಕೊಡಿಸಲಾರದೆ, ಯುದ್ಧವೇ ಆಗಲಿ ಎನ್ನುವುದಾದರೆ ಅದರ ಫಲವನ್ನೂ ಕೇಳು ! ಜನಕ್ಷಯದೊಂದಿಗೆ ನಿನ್ನ ಪುಣ್ಯಕ್ಷಯವೂ ಆಗುವುದು. ಉಭಯ ಪಕ್ಷಗಳಲ್ಲಿ ಯಾರು ಮೃತರಾದರೂ ನಿನಗೆ ಹಿತವಲ್ಲ. ಯುದ್ಧಸನ್ನದ್ಧರಾಗಿರುವ ಕುರು-ಪಾಂಡವರನ್ನೂ

ಮಿಕ್ಕ ರಾಜರನ್ನೂ ಸರ್ವನಾಶವಾಗದಂತೆ ಕಾಪಾಡು ! ಯುದ್ಧವು ಮುಗಿದಾಗ ನಿನಗೆ ಗೋಚರವಾಗುವವರ ಪಾಡು, ಅವರ ಪರಿವಾರದ ಗೋಳು ಹೇಳತೀರದು. ಇಂದಿರು ವವರೆಲ್ಲರೂ ಅಂದಿರುವವರೆಂದು ಭ್ರಮಿಸಬೇಡ! ರೋಷದಿಂದ ಕಣ್ಣು ಕಾಣದೆ ರಣ ಕಣಕ್ಕೆ ನುಗ್ಗುವ ರಾಜರಿಂದ ಪ್ರಜಾನಾಶವಾಗುವುದು. ಗೋತ್ರವಧೆಯು ಮಹಾ ಪಾಪವು. ಅದಕ್ಕೆ ಎಡೆ ಕೊಡಬೇಡ !

'ರಾಜನ್'! ಅನ್ಯೋನ್ಯ ಸ್ನೇಹಿತರು ಮತ್ತು ಬಂಧುಗಳು ಕಡಿದಾಡಿ ಸಾಯ-ದಂತೆ, ತಿಂದುಂಡು ಸುಖವಾಗಿರುವಂತೆ ಮಾಡುವುದು ನಿನ್ನ ಕರ್ತವ್ಯವಾಗಿದೆ. ವೈರ ವನ್ನು, ಲೋಭವನ್ನು ದೂರ ಸರಿಸಿ ಎಲ್ಲರೂ ಸುಖವಾಗಿರುವಂತಾಗಲಿ! ಪಾಂಡವರು ನಿನ್ನ ಮಕ್ಕಳು ಬೇರೆಯವರಲ್ಲ. ಬಾಲ್ಯದಿಂದ ಕಾಪಾಡಿ, ಈಗ ಕೈ ಬಿಡಬೇಡ! ಅವರು ನಿನಗೆ ನಮಸ್ಕರಿಸಿ ಇಂತು ವಿಜ್ಞಾಪಿಸುತ್ತಿರುವರು—

'ನಿನ್ನ ಶಾಸನದಂತೆ ವನವಾಸಾಜ್ಞಾತವಾಸಗಳನ್ನು ಮುಗಿಸಿ ಬಂದಿರುವೆವು. ಮುಗಿಸಿರುವೆವೆಂದು ಬ್ರಾಹ್ಮಣರು ನಿನಗೂ ತಿಳಿಸಿರುವರು. ಸಮಯಬಂಧದಂತೆ ನಮ್ಮ ರಾಜ್ಯವನ್ನು ನಮಗೆ ಕೊಡಿಸು ! ಬಹುಕ್ಲೇಶಗಳನ್ನು ಸಹಿಸಿದುದಾಯಿತು. ನೀನೇ ನಮಗೆ ತಂದೆಯೂ ತಾಯಿಯೂ ಆಗಿರುವೆ. ಶಿಷ್ಯರು ಗುರುಗಳಿಗೆ ನಡೆದು-ಕೊಂಬುವಂತೆ ನಿನಗೆ ನಾವು ನಡೆದುಕೊಳ್ಳುವೆವು. ನೀನೂ ತಂದೆಯಾಗಿ ನೋಡಿ ನಡೆ! ಧರ್ಮವನ್ನು ಪಾಲಿಸು! ಧರ್ಮಜ್ಞರಾದ ಸಭಾಸದರೂ ನಮಗೆ ಅನ್ಯಾಯ ವಾಗದಂತೆ ತಿಳಿಸಿ, ತಾವೂ ನ್ಯಾಯದಿಂದ ನಡೆಯಲಿ! ಧರ್ಮವನ್ನು ಅಧರ್ಮವೂ, ಸತ್ಯವನ್ನು ಅನೃತವೂ ಪೀಡಿಸುವಾಗ, ನೋಡುತ್ತಾ ಸುಮ್ಮನಿರುವ ಸಭಾಸದರು ಜೀವಚ್ಛವರೇ ಸರಿ ! ಧರ್ಮವನ್ನು ತಿಳಿದೂ ಪೇಳದವರನ್ನು ಧರ್ಮವು, ಉಕ್ಕಿ ಬರುವ ನದಿಯು ತೀರದ ಗಿಡಗಳನ್ನಂತೆ, ಸಮೂಲವಾಗಿ ಕಿತ್ತು ಬಿಸುಟುವುದು. ದುರ್ಮಾರ್ಗರು ಸಾಧುಜನರನ್ನು ನಿಂದಿಸುವಾಗ ನಿವಾರಿಸದ ಸಭಿಕರು ಪಶ್ಚಾತ್ತಾಪವೇ ಹೃದಯಶಲ್ಯವಾಗಲು ದುಃಖಪಡಬೇಕಾಗುವುದು.'

'ಆದುದರಿಂದ ಧೃತರಾಷ್ಟ್ರ! ಸಂಧಿಮಾಡಿ, ಪಾಂಡುರಾಜನ ರಾಜ್ಯಾಂಶವನ್ನು ಪಾಂಡವರಿಗೆ ಕೊಡು ! ಅಜಾತಶತ್ರುವು, ಧರ್ಮರಾಜನು ಆದ ನಿನ್ನ ಸತ್ಪುತ್ರನಿಗೆ ಶತ್ರುವಾಗಬೇಡ ! ಅಧರ್ಮವನ್ನು ಮಾಡಬೇಡ ! ವಿಷವಿಟ್ಟು, ಸುಟ್ಟು ಕಾಡಿ ಗೋಡಿಸಿ, ಬಿಕ್ಕೆಬೇಡಿಸಿ, ಜಾಡಿಸಿ ಕೆಡಿಸಿದರೂ ನಿನ್ನನ್ನೇ ನಂಬಿ ನಿಂತಿರುವರು. ಶಕುನಿಯ ಮಾಯಾಜಾಲವನ್ನೊಡ್ಡಿ ಪಡೆದ ರಾಜ್ಯವನ್ನವರಿಗೆ ಕೊಟ್ಟು ಮಾತನ್ನು ಉಳಿಸಿಕೋ! ದ್ರೌಪದಿಯ ಕ್ಲೇಶವನ್ನೂ ಅವರು ಕ್ಷಮಿಸಿರುವರು. ನಾನೂ ಉಭಯರ ಶ್ರೇಯಸ್ಸನ್ನು ಸಾಧಿಸಲು ಬಂದಿರುವೆನು. ಧರ್ಮಾರ್ಥಗಳನ್ನು ಬಿಡದೆ ಸುಖಪಡು! ಲೋಭವಶರಾದ ಪುತ್ರರನ್ನು ನಿಗ್ರಹಿಸು! ಪಾಂಡವರು ನಿನ್ನ ಶುಶ್ರೂಷೆಗೂ ಸಿದ್ಧ ರಾಗಿರುವರು. ನಿನ್ನ ಮಕ್ಕಳೊಡನೆ ಯುದ್ಧವಾಡಲೂ ಸಿದ್ಧರಾಗಿರುವರು. ನಿನಗೆ ಸರಿದೋರಿದಂತೆ ಮಾಡು !'

ಶ್ರೀಕೃಷ್ಣನ ವಚನಗಳನ್ನು ಕೇಳಿ ಸಭಿಕರೆಲ್ಲರೂ ಮನಸಾರೆ ಮೆಚ್ಚಿ ತಲೆ-ದೂಗಿದರು. ಒಬ್ಬನಾದರೂ ಅದಕ್ಕೆ ಪ್ರತಿಹೇಳಲು ಬಾರದಂತಾಯಿತು. ಭಗವದ್ ವಚನಾಮೃತಪಾನದಿಂದ ಪ್ರೈನವಿರೆದ್ದು, ನಿಶ್ಚೇಷ್ಟರಾಗಿ ಅವರು ಪ್ರತ್ಯುತ್ತರವನ್ನು ಕೊಡಲಾರದೆ ಸುಮ್ಮನಿದ್ದರು. ಆಗ ಶ್ರೀ ಪರಶುರಾಮನು ಸಭಿಕರಿಗಿಂತೆಂದನು— 'ಕೇಳಿ ನನ್ನ ಮಾತನ್ನು! ಸರಿದೋರಿದರೆ ಸ್ವೀಕರಿಸಿ! ಹಿಂದೆ ದಂಭೋದ್ಭವನೆಂಬ ರಾಜನಿದ್ದನು. ತನ್ನ ಸಮಾನ ವೀರರಿಲ್ಲವೆಂದು ಗರ್ವಿಸಿ ಅವನು ಅಂತಹ ವೀರನನ್ನು ತೋರಿರೆಂದು ವಿಪ್ರವರರನ್ನು ಕೇಳುತ್ತಿದ್ದನು. ಬಿಡದೆ ಕೇಳುವ ಅವನ ದರ್ಪವನ್ನು ಮುರಿಯಲೆಣಿಸಿ ವೇದ-ವಿಚಾರ ಚತುರರಾದ ಬ್ರಾಹ್ಮಣರು 'ಗಂಧಮಾದನದ ಬದರಿಕಾಶ್ರಮದಲ್ಲಿ ನರ-ನಾರಾಯಣರೆಂಬ ಋಷಿವರರಿರುವರು. ಅವರಿಗೆ ನೀನು ಸಮನಲ್ಲ'ವೆಂದರು. ಕುಪಿತನಾದ ದಂಭೋದ್ಭವನು ಬದರಿಕಾಶ್ರಮವನ್ನು ಸೇರಿ, ಶ್ರೀನರನಾರಾಯಣರನ್ನು ಕಂಡು, ಅವರಿತ್ತ ಅತಿಥಿಪೂಜೆಯನ್ನು ಸ್ವೀಕರಿಸಿ, ಯುದ್ಧ ಮಾಡಿರೆಂದನು. ಕ್ರೋಧ ಲೋಭಗಳಿಗೆ ನೆಲೆಯಾಗದ ಆಶ್ರಮದಲ್ಲಿ ಯುದ್ಧ-ವೇಕೆಂದು ಅವರು ನಿವಾರಿಸಿದರೂ ಕೇಳದೆ ರಾಜನು ಬಾಣಧನುರ್ಧರನಾಗಿ ನಿಂತನು. ಆಗ ನರನು ನಸುನಕ್ಕು, ಅವನ ಸೊಕ್ಕನ್ನು ಮುರಿಯಲೆಣಿಸಿದನು. ಅವನು ಕೈಯಲ್ಲಿ ಕೆಲವು ಇಷೀಕ (ಕಡ್ಡಿಗಳ) ಗಳನ್ನು ಪಿಡಿದು, 'ಯುದ್ಧಕಾಮುಕ! ಬಿಡು ಬಾಣಗಳನ್ನು!' ಎಂದನು. ದಂಭೋದ್ಭವನ ಶರವರ್ಷವನ್ನು ಹುಲ್ಲುಕಡ್ಡಿಗಳಿಂದ ತುಂಡರಿಸಿ, ನರನು ಇಷೀಕಾಸ್ತ್ರವನ್ನು ಪ್ರಯೋಗಿಸಿದನು. ಆಗ ಸೈನಿಕರು, ರಾಜ ರಾದಿಯಾಗಿ ದಂಭೋದ್ಭವನ ಸೈನ್ಯವೆಲ್ಲವು ಇಷೀಕಾಕ್ರಾಂತವಾಗಿ, ಕಣ್ಣು ಮೂಗು ಕಿವಿ ಬಾಯಿಗಳಲ್ಲಿ ತುಂಬಿ ನಿಂತ ಕಡ್ಡಿಗಳಿಂದ ತತ್ತರಿಸಿದರು. ಶಸ್ತ್ರಯೋಗ್ಯತೆ ಯನ್ನರಿತು ಅಷ್ಟೇ ವೀರ್ಯವನ್ನು ತೋರಿದ ನರನ ಬಾಣಗಳು ಅವನನ್ನು ಗಾಯ-ಗೊಳಿಸದೆ, ಮುಟ್ಟಿಬಿದ್ದವು. ಈ ಮಹದಾಶ್ಚರ್ಯವನ್ನು ಕಂಡ ರಾಜನು ಅಹಂಕಾರ ವನ್ನು ಬಿಟ್ಟು ಋಷಿವರನ ಚರಣಕ್ಕೆರಗಿ ಕ್ಷಮೆ ಬೇಡಿದನು. ಆಗ ನರನು ಅವನನ್ನು ಕ್ಷಮಿಸಿ, 'ರಾಜನ್! ಮುಂದೆ ಹೀಗೆ ಮಾಡಬೇಡ! ಉತ್ತಮರಿಗಾಗಲಿ ಅಧಮರಿ-ಗಾಗಲಿ ಸುಜನರಿಗೆ ದ್ರೋಹ ಬಗೆಯಲಾಗದು. ಬ್ರಾಹ್ಮಣಭಕ್ತನಾಗು!' ಎಂದು ಹೇಳಿ ಕಳಿಸಿದನು. ದಂಭೋದ್ಭವನು ಅವರೀರ್ವರಿಗೂ ವಂದಿಸಿ, ತನ್ನ ಪುರವನ್ನು ಸೇರಿ ದರ್ಪವನ್ನು ತ್ಯಜಿಸಿ, ಪ್ರಜಾರಂಜಕನಾದನು. ನರನ ಮಹದಾಶ್ಚರ್ಯಕರ ವೀರ್ಯವನ್ನು ತಿಳಿಸಿದೆನು. ಅವನಕಿಂತಲೂ ಸಾವಿರಾರು ಪಟ್ಟು ಶ್ರೇಷ್ಠನಾದ ನಾರಾಯಣ ಋಷಿಯ ವೀರ್ಯವನ್ನು ವರ್ಣಿಸಲು ಇತರರಾರಿಗೂ ಸಾಧ್ಯವಿಲ್ಲ.

'ರಾಜನ್! ಆದುದರಿಂದ ಗಾಂಡೀವದಿ ಬಾಣವು ಕೂಡದ ಮುನ್ನ ಧನಂಜಯ ನೊಡನೆ ಸಂಧಿ ಮಾಡಿಕೊ! ತಲೆಯನ್ನು ಸುಡುವ ಕಂಕುದೀಪ, ತಲೆಯನ್ನಾಡಿ ಸುತ್ತಿರುವಂತೆ ಮಾಡುವ ಕಂಕುಲಾಸ, ಎತ್ತಿ ಬಿಸುಟುವ ಆಕ್ಷೇಪ, ಒಂದೇ ಬಾಣ ದಿಂದ ಸಾವಿರಾರು ಬಾಣಗಳನ್ನು ಸೃಜಿಸುವ ಸಂತಾನ, ನಗಿಸಿ ನಗಿಸಿ ಬೀಳಿಸುವ

ಹಾಸ್ಯ, ಸದಾ ಮೂತ್ರಜನಕವಾದ ಔದಕ, ಸ್ವರ್ಗವನ್ನು ತೋರಿಸುವ ನಾಕ, ಕುಣಿಯುವಂತೆ ಮಾಡುವ ನರ್ತನ, ಎಂಬುವ ಎಂಟು ಅಸ್ತ್ರಗಳು, ಮರಣಾಂತಿಕ ವಾಗಿವೆ. ಇಂತಹ ಬಾಣಗಳನ್ನು ಪ್ರಯೋಗಿಸಬಲ್ಲ ಅರ್ಜುನನೊಡನೆ, ನಾರಾಯಣ ಬಂಧುವಿನೊಡನೆ ಯುದ್ಧವು ಒಳಿತಲ್ಲ. ನರನೇ ಅರ್ಜುನನು; ನಾರಾಯಣನೇ ಕೃಷ್ಣನು; ಅವರನ್ನು ಸೆಣಸಿ ಕೆಡದವರು ಮೂರುಲೋಕಗಳಲ್ಲಿಲ್ಲ. ನಿನ್ನ ಹಿತಕ್ಕಾಗಿ ನುಡಿವೆನು; ಸಂಧಿ ಮಾಡಿಕೊಂಡು ಬದುಕಿರು!'

ಆಗ ಕಣ್ವನು ದುರ್ಯೋಧನನನ್ನು ನೋಡಿ ಇಂತೆಂದನು—'ಲೋಕಪಿತಾಮಹನಾದ ಬ್ರಹ್ಮನಿಗೆ ಸಮರಿಲ್ಲ. ಅಂತಹವನಿಗೂ ತಂದೆಯಾದ ನಾರಾಯಣನು ಸರ್ವೋತ್ತಮನಾಗಿರುವನು. ಅವನು ಅಜಯ್ಯನು, ಅಕ್ಷಯನು, ಸರ್ವಲೋಕೇಶನು ಆಗಿರುವನು. ಆಯುವು ತೀರಿದಾಗ ಸಾಯುವವರು ನರಾದಿ ಜೀವರು. ಕಲ್ಪಾಂತದಿ ನಾಶ ಉಳ್ಳವರು ಚಂದ್ರ ಸೂರ್ಯಾದಿ ದೇವತೆಗಳು. ಶ್ರೀವಿಷ್ಣುವು ಸರ್ವಥಾ ನಾಶರಹಿತನು. ಅವನೇ ಕೃಷ್ಣನಾಗಿ ಅವತರಿಸಿರುವನು. ನರನೇ ಅರ್ಜುನನಲ್ಲಿರುವನು. ಇಂತಹ ಪಾಂಡವರಿಂದ ಸಂಧಿಮಾಡಿ ಬದುಕು; ನಾನು ಬಲವಂತನೆಂದು ಕೊಬ್ಬಿ ಕೆಡಬೇಡ! ತಾಳೆಯ ಮರವನ್ನೊಡೆಯುವವನ ತಲೆಯನ್ನೊಡೆಯುವವನೂ ಇರುವನು. ದೇವ-ವಿಕ್ರಮರಾದ ಭೀಮಾರ್ಜುನ-ಧರ್ಮಯಮಳರ ಮುಂದೆ ನಿನ್ನ ಬಲವು ಸಲ್ಲದು.

'ದೇವರಾಜನ ಸಾರಥಿಯಾದ ಮಾತಲಿಗೆ ಗುಣಕೇಶಿ ಎಂಬ ಸುಂದರ ಕುಮಾರಿ ಇದ್ದಳು. ರೂಪ-ಕಾಂತಿ-ವಿಲಾಸಗಳಿಂದ ಅಸಮಾನಳಾದ ಮಗಳಿಗೆ ತಕ್ಕ ವರನನ್ನು ದೇವ ಮನುಜ ಲೋಕಗಳಲ್ಲಿ ಹುಡುಕಿ ಕಾಣಲಾರದೆ ಮಾತಲಿಯು ಪಾತಾಳದಿ ಹುಡುಕಲೆಣಿಸಿ, ದೇವಪ್ರಭಾವದಿಂದ ಮಹೀತಲವನ್ನು ಪ್ರವೇಶಿಸಿದನು. ಕನ್ಯಾಗ್ರಹಣಮಾಡುವವರ ನರಕುಲ ಶುದ್ಧಿಯನ್ನು ಕನ್ಯಾಜನಕನು ಅಪೇಕ್ಷಿಸಿದರೆ, ವರನ ಕಡೆಯವರು ಕನ್ಯೆಯ ಮಾತಾಪಿತೃಗಳ ಉಭಯ ಕುಲ ಶುದ್ಧಿಯನ್ನೂ ಅಪೇಕ್ಷಿಸುವರಲ್ಲವೆ?

'ಮಾತಲಿಯು ಮಾರ್ಗದಿ ನಾರದನನ್ನು ಕಂಡು, ಆ ಮಹರ್ಷಿಯೂ ವರುಣ ದೇವನನ್ನು ಕಾಣಲು ಹೋಗುತ್ತಿರುವುದನ್ನರಿತು, ಅವನೊಡಗೂಡಿ ಹೊರಟನು. ಅವರು ವರುಣ ಲೋಕವನ್ನು ಸೇರಿ, ಆತನಿಂದ ಪೂಜಿತರಾದರು. ಆತನ ಅಪ್ಪಣೆ ಪಡೆದು ನಾಗಲೋಕವನ್ನು ಸೇರಿದರು. ವರುಣನ ಲೋಕದಲ್ಲಿ ವಾರುಣೀಪಾನ ಮತ್ತರಾಗಿ ಸುಖಿಸುವ ವರುಣ ಪ್ರಜರನ್ನು ಕಂಡರು. ರಣದಲ್ಲಿ ವರುಣನಿಗೆ ಸೋತು ಹೋದ ದೈತ್ಯದಾನವರ ದಿವ್ಯಾಯುಧಗಳನ್ನು ಕಂಡರು. ಅಲ್ಲಿ ಗಾಂಡಿ ಎಂಬ ಖಡ್ಗಮೃಗದ ಬೆನ್ನೆಲುಬಿನಿಂದ ಮಾಡಿದ ಗಾಂಡೀವವಿರುತ್ತಿತ್ತು. ಅದು ಸರ್ವದಾ ಲಕ್ಷಚಾಪಬಲಯುಕ್ತವಾಗಿದ್ದು, ಬೇಕಾದಾಗ ಹೆಚ್ಚೆಚ್ಚು ಬಲಯುತವಾಗಿ ಅನಂತ ಬಲವೆನಿಸಿತ್ತು. ಮುಂದೆ ನಡೆದು ಅವರು ಅಮೃತಸ್ರಾವಿಯಾದ ವರುಣನ

ಶ್ವೇತಚ್ಛತ್ರವನ್ನು ಕಂಡರು. ಅಲ್ಲಿಂದ ತೆರಳಿ ನಾರದ ಮಾತಲಿಯರು ಪಾತಾಳವನ್ನು ಸೇರಿದರು. ಅಲ್ಲಿ ಭಯಂಕರ ಪಾತಾಲಾಗ್ನಿಯನ್ನೂ, ವೇದ-ಘೋಷವನ್ನುಚ್ಚರಿಸುವ ಪಾತಾಲದ ಅಗ್ನಿಯನ್ನು ಬೆಳಗಿಸುವ (ಹಯಗ್ರೀವವಾದ ವಡವಾಗ್ನಿಯನ್ನೂ) ಐರಾವತ ಮೊದಲಾದ ದಿಗ್ಗಜಗಳನ್ನು, ಸೋಮಮಂಡಲದಿ ಅಮೃತಪಾನವನ್ನು ಮಾಡಿ ತುಂಬುವ ದೇವಗಣವನ್ನು ತಿಳಿದು ಮುಂದೆ ಸಾಗಿದರು. ಭೂಮಿಯು ಗೋಲಾಕಾರವಾಗಿದ್ದು, ಪ್ರದಕ್ಷಿಣೀಕರಿಸುವಾಗ ಸೂರ್ಯ ಅಥವಾ ಸೋಮನ ಕಾಂತಿ ಯನ್ನು ಮುಚ್ಚುವುದರಿಂದ, ಗೋಲದ ಶಿರದಲ್ಲಿ ಅಥವಾ ಬುಡದಲ್ಲಿರುವ ಜನರಿಗೆ ಕಾಣುವಂತೆ ಸರ್ವದಾ ಚಂದ್ರಸೂರ್ಯರು ಮಧ್ಯದಲ್ಲಿರುವವರಿಗೆ ಕಾಣಬರರು. ಅವರ ಮಧ್ಯದ ಅಂತರವು ಹೆಚ್ಚಾದಂತೆ ಚಂದ್ರಕಲೆಗಳು ಹೆಚ್ಚಾಗುವವು; ಹತ್ತಿರವಾದಂತೆ ಚಂದ್ರಕಲೆಗಳು ಕಡಿಮೆಯಾಗುವವು.ಜಲಪ್ರಾಯವಾದ ಚಂದ್ರಮಂಡಲವು ಸೂರ್ಯ ರಶ್ಮಿಗಳಿಂದಲೇ ಪ್ರಕಾಶಿತವಾಗುವುದು. ಅಗ್ನೇಯಾದಿ ಆವರಣವಿಲ್ಲದ ಪಾತಾಲಾದಿ ಗಳಲ್ಲಿಯು, ಮೇರು ಶಿಖರದಲ್ಲಿಯು ಸರ್ವದಾ ಸಂಪೂರ್ಣ ಚಂದ್ರಮಂಡಲವು ಕಾಣಿಸುತ್ತಿರುವುದು. ಅಲ್ಲಿ ಕೆಲ ದೇಶದಲ್ಲಿ ನಮಗೆ ಹಗಲಾದಾಗ ರಾತ್ರಿಯು, ನಮಗೆ ರಾತ್ರಿಯಾದಾಗ ಹಗಲೂ ಆಗುವುದು. ಅಲ್ಲಿಯೂ ರೂಪಾಂತರದಿಂದ ಚಂದ್ರ-ಸೂರ್ಯರು ಸಂಚರಿಸುತ್ತಿರುವರು. ಅತಲದಲ್ಲಿ ಹಾಟಕೇಶ್ವರನೆಂಬ ಶಿವನು ಸರ್ವಭೂತ ಹಿತಕ್ಕೆಂದು ತಪವನ್ನಾಚರಿಸುತ್ತಿರುವನು. ಎಲ್ಲಂದರಲ್ಲಿ ಮಲಗಿ ತೃಣ ಪರ್ಣಾದಿಗಳಲ್ಲಿ ಏನಾದರೂ ತಿಂದು, ವಲ್ಕಲಾಜಿನಗಳನ್ನು ಏನಾದರೂ ಉಟ್ಟು, (ಗೋವ್ರತ) ತಪಸ್ಸೈವ ಮಹರ್ಷಿಗಳಲ್ಲಿರುವರು. ಅವರು ಪರಮ ಶಾಂತರಾಗಿರುವರು. ಅಲ್ಲಿಂದ ಅವರು ಹಿರಣ್ಯಪುರವನ್ನು ಸೇರಿ, ಕಾಲಕಂಜಾದಿ ಅಸುರಶೇಷವನ್ನು ಕಂಡರು, ಶಕ್ರನಿಗೂ ದುರ್ಜಯರಾಗಿದ್ದ ನಿವಾತ ಕವಚಾದಿ ರಾಕ್ಷಸರನ್ನು ಅರ್ಜುನನು ಸಂಹರಿಸಿದನೆಂದು ಮಾತಲಿಗೆ ನಾರದನು ಸ್ಮರಣೆಗೆ ತಂದನು. ಅಸುರರು ಶತ್ರುಪಕ್ಷ ದವರಾದುದರಿಂದ ಅಲ್ಲಿ ತಕ್ಕ ವರನನ್ನು ಕಾಣದೆ ಮಾತಲಿಯು ಅಲ್ಲಿಂದ ತೆರಳಿ ಗರುಡ ಲೋಕವನ್ನು ಸೇರಿದನು. ಕಶ್ಯಪತನೂಜರಾಗಿ ಬ್ರಾಹ್ಮಣರೆನಿಸಿದರೂ, ಗರುಡಾದಿ ಪಕ್ಷಿಗಳು ದಾಕ್ಷಿಣ್ಯವಿಲ್ಲದೆ ಜ್ಞಾತಿಗಳಾದ ಸರ್ಪಗಳನ್ನು ಭಕ್ಷಿಸುವರಾಗಿ ದ್ದರು. ವಿಷ್ಣುಭಕ್ತರಾದ ಪಕ್ಷಿರಾಜ ಕುಲದವರನ್ನು ನೋಡಿ ಅವರನ್ನೂ ಒಪ್ಪದ ಮಾತಲಿಯನ್ನು ನಾರದನು ಸುರಭಿಸಂತಾನವಿರುವ ರಸಾತಲಕ್ಕೆ ಕರೆದುಕೊಂಡು ಹೋದನು ಅಲ್ಲಿ ಸುರಭಿ ಎಂಬ ಗೋಗಣಮಾತೆಯು ಸ್ವಸಂತಾನಳಾಗಿ ಸರ್ವದಾ ಕ್ಷೀರಧಾರೆಯನ್ನು ಸುರಿಸಿ, ಕ್ಷೀರಸಮುದ್ರವನ್ನು ತುಂಬುತ್ತಿದ್ದಳು. ಅಮೃತ ತೃಪ್ತ ನಾದ ಪಿತಾಮಹನ ವದನದಿಂದ ವಿಪ್ರರೂ ಗೋವುಗಳು ಸೃಷ್ಟವಾಗಿರುವವು. ಫೇನಪ ರೆಂಬ ಋಷಿಗಳೂ ಅಲ್ಲಿ ತಪೋನಿರತರಾಗಿದ್ದರು. ಸುರೂಪಾ, ಹಂಸಿಕಾ, ಸುಭದ್ರಾ, ಕಾಮದುಘಾ ಎಂಬ ಧೇನುರತ್ನಗಳಿಂದ ಪೂರ್ವ ದಕ್ಷಿಣ ಪಶ್ಚಿಮೋತ್ತರ ದಿಕ್ಕುಗಳು ಧರಿಸಲ್ಪಡುತ್ತಿವೆ. ಕ್ಷೀರನಿಧಿಯಿಂದಲಲ್ಲವೇ ವಾರುಣಿಯು, ಲಕ್ಷ್ಮೀದೇವಿಯು,

ಅಪ್ಸರೆಯರು, ಅಮೃತ ಗಜ-ತುರಗಗಳು, ಸ್ವಾಹಾ ಸ್ವಧಾ ದ್ರವ್ಯಗಳು, ಜನಿಸಿ ಬಂದವು? ಜಲರಾಶಿಗಳು ಬೀಳುತ್ತಾ ಶ್ರೀನಾರಾಯಣನಿಗೆ ಸುತ್ತುವರಿಯುವ ಪಾತಾಲವನ್ನು ಮುಟ್ಟಿ, ಅಲ್ಲಿಂದ ಮಾತಲಿ ನಾರದರು ಪಾತಾಳದ ಭೋಗವತಿ ಯನ್ನು ಸೇರಿದರು. ಭೂಮಂಡಲವನ್ನು ಸಾಸಿವೆಯಂತೆ ಅನಾಯಾಸವಾಗಿ ಹೊತ್ತಿರುವ ಶೇಷನಿಗೆ ವಂದಿಸಿ, ಮಿಕ್ಕ ನಾಗವರರನ್ನು ಕಂಡರು. ಒಂದು ಮೊದಲು ಸಾವಿರವರೆಗೂ ಹೆಡೆಗಳುಳ್ಳ ಸರ್ಪರಾಜರ ಮಧ್ಯದಲ್ಲಿ ನಿಂತಿದ್ದ ಸುಮುಖನೆಂಬ ಸರ್ಪ ರಾಜನು ಮಾತಲಿಯ ಮನಸ್ಸಿಗೆ ಬಂದನು. ಅವನ ತಾತನಾದ ಆರ್ಯಕನನ್ನು ಕಂಡು ಕನ್ಯಾಸ್ವೀಕಾರಮಾಡಲು ಬೇಡಿದ ಮಾತಲಿಗೆ ಅವನಿಂತೆಂದನು—'ಮಹಾನು ಭಾವ! ಇಂದ್ರಸಾರಥಿಯಾದ ನಿನ್ನ ಸಂಬಂಧವು ಯಾರಿಗೆ ಬೇಕೆನಿಸದು? ಆದರೂ ಅವನು ಗರುಡನಿಗಾಹಾರವಾಗಲಿರುವನೆಂಬ ಚಿಂತೆಯಿಂದ ನೊಂದು ನಿನ್ನ ಕೋರಿಕೆ ಯನ್ನೀಡೇರಿಸಲಾಗದಿರುವೆನು. ಸುಮುಖನ ತಂದೆಯು ನನ್ನ ಮಗನು ಆದ ಚಿಕುರನನ್ನು ತಿಂದು ಗರುಡನು ಮತ್ತೊಂದು ತಿಂಗಳಿಗೆ ಬಂದು ಇವನನ್ನೂ ತಿನ್ನುವೆನೆಂದು ಹೇಳಿ ಹೋಗಿರುವನು. ಆದುದರಿಂದ ನಿನ್ನ ಕನ್ಯೆಗೆ ಬೇರೊಬ್ಬ ವರನನ್ನು ಹುಡುಕು!' ಎಂದನು.

ಮಾತಲಿಯು ಅಳಿಯನಾಗಿ ವರಿಸಿದ ಸುಮುಖನನ್ನು ಬಿಡಲಾರದೆ, ಮಗಳನ್ನು ಗರುಡಾಹಾರನಾಗಲಿರುವವನಿಗೆ ಕೊಡಲಾರದೆ ಸುಮುಖನಿಗೆ ಬಂದ ವಿಪತ್ತನ್ನು ತಪ್ಪಿಸಲೆಣಿಸಿದನು. ಅವನನ್ನೂ ಕರೆದುಕೊಂಡು ನಾರದ ಮಾತಲಿಯರು ದೇವ-ಲೋಕವನ್ನು ಸೇರಿ, ಮಹೇಂದ್ರನಿಗೆ ಶರಣಾದರು. ಅದೃಷ್ಟದಿಂದ ಅಲ್ಲಿ ಆಗ ಮಹಾಪ್ರಭುವಾದ ವಿಷ್ಣುವೂ ಇದ್ದನು. ನಾರದನ ನುಡಿಯನ್ನು ಆಲಿಸಿ ಶ್ರೀವಿಷ್ಣುವು ದೇವೇಂದ್ರನನ್ನು ಕಂಡು 'ಸುಮುಖನಿಗೆ ಅಮೃತವನ್ನು ಕುಡಿಸಿ, ಮಾತಲಿಯ ಅಭೀಷ್ಟವನ್ನು ಪೂರೈಸೆ'ಂದನು. ವೈನತೇಯನ ಪರಾಕ್ರಮವನ್ನು ಅರಿತ ಇಂದ್ರನು ಶ್ರೀಶನನ್ನು ನೋಡಿ 'ನೀನೇ ಸುಮುಖನಿಗೆ ಸುಧೆಯನ್ನು ಕೊಡು' ಎಂದು ಬೇಡಿ ದನು. ಶ್ರೀಶನು 'ಹಾಗಲ್ಲ! ತ್ರಿಲೋಕೇಶನಾಗಿರುವ ನಿನ್ನ ಆಜ್ಞೆಯನ್ನು ಅಭಯ ವನ್ನು ಕೆಡಿಸಲಾರಿಗೂ ಸಾಧ್ಯವಿಲ್ಲ. ಕೊಡು ಅಭಯವನ್ನು!' ಎಂದು ಸುಮುಖ ನಿಗೆ ಅಭಯದಾನ ಮಾಡಿಸಿದನು. ಸುಮುಖನು ಗುಣಕೇಶಿಯನ್ನು ಮದುವೆ ಯಾಗಿ ತನ್ನ ಮನೆ ಸೇರಿದನು.

ಈ ವೃತ್ತಾಂತವನ್ನರಿತು ಗರುಡನು ಕುಪಿತನಾಗಿ, ದೇವೇಂದ್ರನನ್ನು ಕಂಡು, 'ಮಹೇಂದ್ರ! ಬೇಕಾದಂತೆ ವರ ಕೊಟ್ಟು, ನನ್ನ ಜೀವನವನ್ನು ಕೆಡಿಸಿ, ನನ್ನನ್ನು ಅವಮಾನಪಡಿಸಿದೆ! ಇದು ನಿನಗೆ ಸರಿಯಲ್ಲ! ಸರ್ಪಗಳು ಗರುಡಾಹಾರವೆಂದು ವಿಧಾತೃವಿಹಿತವಾಗಿದೆ. ಸುಮುಖನಿಗೆ ಒಂದು ತಿಂಗಳ ಅವಧಿಯನ್ನು ನಾನಿತ್ತಿದ್ದೆನು. ಅವನನ್ನಲ್ಲದೆ ಬೇರೊಂದು ಸರ್ಪವನ್ನು ನಾನು ಹಿಂಸಿಸಲಾರೆನು. ಆಹಾರವಿಲ್ಲದೆ ನಾನು ಮೃತನಾದರೆ, ನನ್ನ ಪರಿಜನವೂ ಸತ್ತರೆ, ಆಗ ನಿಮಗೆ ಸಂತೋಷವಾಗುವು

ದೆಂದು ತೋರುತ್ತಿದೆ. ನಿನ್ನ ಕಿಂತಲು ಬಲವಂತನೆಂದು ತಿಳಿದೂ ನನಗೆ ಅವಮಾನ ವೆಸಗಿರುವೆ! ಮೂಲೋಕದೊಡೆಯನೆಂತಲು, ವಿಷ್ಣುವಿನ ಅಣ್ಣನೆಂತಲು ತಿಳಿದು ಮದಿಸಿರುವೆ! ನಾನೂ ದಕ್ಷಸುತೆಯಾದ ವಿನತೆಗೆ ಕಶ್ಯಪನಿಂದ ಜನಿಸಿರುವೆನು; ನಿನ್ನಂತೆ ನಾನೂ ಸರ್ವಲೋಕಧುರಂಧರನೆನಿಸಿರುವೆನು. ನನ್ನ ಬಲವು ಅಮಿತವೆಂದು ಎಲ್ಲರರಿತಿರುವರು. ನಾನೂ ಶ್ರುತಸೇನ ಕಾಲಕಾಕ್ಷಾದಿಘೋರ ದೈತ್ಯರನ್ನು ಕೊಂದಿರುವೆನು. ವಿಷ್ಣುವಿನ ಧ್ವಜದಲ್ಲಿದ್ದು, ಅವನನ್ನೂ ಅವನ ಪತ್ನಿಯನ್ನೂ ಹೊತ್ತು ತಿರುಗುವುದರಿಂದ, ಅವನ ಭೃತ್ಯನೆನಿಸಿ, ಅವಮಾನಕ್ಕೀಡಾದೆನು. ನನ್ನ ಕಿಂತಲು ಭಾರವಹನರು, ನನ್ನ ಕಿಂತಲು ಬಲವಂತರು ಯಾರಿರುವರು? ಆದರೂ ನೀನೂ, ನಿನ್ನ ತಮ್ಮನೂ ನನ್ನ ಆಹಾರವನ್ನು ಕಸಿದು, ಗೌರವವನ್ನು ಕಳೆದಿರುವಿರಿ! ಆಯಾಸವಿಲ್ಲದೆ ಹೊತ್ತು ತಿರುಗುವ ನನ್ನ ಬಲವಿಕ್ರಮಗಳನ್ನು ವಿಷ್ಣುವೂ ತಿಳಿಯ ದಾದನೇ?' ಎಂದು ಜಂಬ ಕೊಚ್ಚಿದನು.

ಆ ಮಾತನ್ನಾಲಿಸಿ, ಶ್ರೀಹರಿಯು ಗರುಡನ ಸೊಕ್ಕನ್ನು ಮುರಿಯಲೆಣಿಸಿದನು. 'ಗರುಡ! ಸುಮ್ಮನೆ ಮಾತಾಡಬೇಡ! ನನ್ನೆದುರಿಗೆ ನಿನ್ನನ್ನು ನೀನು ಹೊಗಳಿ ಕೊಳ್ಳುವುದು ನಿನಗುಚಿತವಲ್ಲ. ಮೂರು ಲೋಕದ ಬ್ರಹ್ಮಾದಿ ಸರ್ವಜೀವರು ಕಲೆತು ನನ್ನ ಭಾರವನ್ನು ಹೊರಲಾರರು. ನೀನೇನು ಹೊರುವೆ? ನಾನೇ ನಿನ್ನನ್ನು ಧರಿಸಿ ಬೀಳದಂತೆ ಪಿಡಿದು, ನಾನಾಗಿ ಹಾರುವೆನು. ಇರಲಿ! ಈ ನನ್ನ ಕೈಯನ್ನು ಭುಜದಲ್ಲಿಡುವೆನು. ಧರಿಸಿ ನಿನ್ನ ಮಾತು ನಿಜವೆನಿಸು!' ಇಂತೆಂದು ಶ್ರೀಶನು ತನ್ನ ಕೈಯನ್ನೆತ್ತಿ ಗರುಡನ ಭುಜದ ಮೇಲಿಟ್ಟನು. ಬ್ರಹ್ಮಾಂಡವೇ ಕೂತಂತಾಗಲು ಗರುಡನು ವಿಹ್ವಲನಾಗಿ, ಕೂಗಿ ಒದ್ದಾಡಿದನು; ಅವನಿಗೆ ಮೂರ್ಛೆ ಬಂದಂತಾಯಿತು. ಪಕ್ಕದ ಪುಕ್ಕಗಳು ಉದುರಿ ಬಿದ್ದವು. ಬಾಯ್ಬಿಟ್ಟು ಆರ್ತನಾದವನ್ನು ಮಾಡುವ ಗರುಡನಲ್ಲಿ ಕರುಣಿಸಿ, ಶ್ರೀಶನು ಕೈಯ ಭಾರವನ್ನು ಪೂರಾ ತೋರದಿದ್ದನು. ಆಗ ಗರುಡನು ಗತಗರ್ವನಾಗಿ, ಶಿರಬಾಗಿ ನಮಿಸಿ, 'ದೇವದೇವ! ನಾರಾಯಣ! ಕ್ಷಮಿಸು. ನಿನ್ನ ಭೃತ್ಯನಾದೆನ್ನ ಅಪರಾಧವನ್ನು ಮನ್ನಿಸು! ಮರೆತು ಮಾತಾಡಿದೆನು; ನಿನಗೆ ಸಮರಿಲ್ಲ. ಅಧಿಕರಿನ್ನೆಲ್ಲಿ?' ಎಂದು ಬೇಡಿದನು. ಶ್ರೀಹರಿಯು ಅವನನ್ನು ಕ್ಷಮಿಸಿ, ಸುಮುಖನನ್ನೆತ್ತಿ, ಗರುಡನ ಉರಸ್ಥಲದಿ ನಿಲ್ಲುವಂತೆ ಒಗೆದನು. ಅಂದಿನಿಂದ ಗರುಡರು ಸರ್ಪಚಿಹ್ನಸಹಿತರಾಗಿರುವರು.

'ಆದುದರಿಂದ ಧೃತರಾಷ್ಟ್ರನಂದನ! ಗರುಡನಂತಹ ಬಲವಂತನಿಗಾದ ಪರಾಭವವನ್ನರಿತು ದರ್ಪವನ್ನು ಬಿಡು! ಪಾಂಡುಸುತರನ್ನು ರಣರಂಗದಿ ಕಾಣುವವರೆಗೆ ಮಾತ್ರ ನಿನ್ನ ಜೀವನವೆಂದು ತಿಳಿ! ವಾಯುಪುತ್ರನಿಗೆ ಸಮರಾದ ಬಲವಂತರೆಲ್ಲಿಯೂ ಇಲ್ಲ. ಧನಂಜಯನು ಕೃಷ್ಣರಕ್ಷಿತನಾಗಿರಲು, ಅವನನ್ನೆದುರಿಸುವ ಧನುರ್ಧರರೂ ಇಲ್ಲ. ವಿಷ್ಣು, ವಾಯು, ಶಕ್ರ, ನಾಸತ್ಯ, ದಸ್ರರನ್ನು ಯಾವ ಧೈರ್ಯದಿಂದ ಕೆಣಕಲಿರುವೆ? ವಿರೋಧವನ್ನು ಬಿಡು! ಕುಲವು ನಾಶವಾಗದಂತೆ ಕಾಪಾಡು!

ನಾರದನು ಗರುಡನಿಗಾದ ಗತಿಯನ್ನು ಪ್ರತ್ಯಕ್ಷವಾಗಿ ಕಂಡಿರುವನು. 'ಕೇಳು ಆ ಮಹಾತ್ಮನನ್ನು ಬೇಕಾದರೆ!' ಎಂದನು.

ದುರ್ಯೋಧನನು ಆ ಮಾತಿಗೆ ನಕ್ಕು ಕರ್ಣನ ಕಡೆ ನೋಡಿದನು. ತನ್ನ ತೊಡೆಯನ್ನು ತಟ್ಟಿ ಕಣ್ವನಿಗೆಂತೆಂದನು. 'ಮಹರ್ಷೀ! ವಿಧಿಯಿಂದ ಸೃಷ್ಟ-ನಾದಂತೆ ಇರುವೆನು. ಆಗತಕ್ಕದ್ದನ್ನು ಯಾರೂ ತಡೆಯಲಾರರು. ನಾನು ನನ್ನ ಮನಸ್ಸಿಗೆ ಬಂದಂತೆ ನಡೆಯುವೆನು. ಮತ್ತೊಬ್ಬರ ಮಾತೆನಗೆ ಬೇಕಾಗಿಲ್ಲ.'

ಇಂತು ನಿರೂಪಿಸಿದ ವೈಶಂಪಾಯನನನ್ನು ಜನಮೇಜಯನು 'ಸ್ವಾಮೀ! ಪರಲೋಕದ ಹಿತವನ್ನು ತೊರೆದು, ಇಲ್ಲಿಯೂ ಅನರ್ಥದಲ್ಲಿ ತೊಡಗಿರುವ ದುರ್ಯೋಧನನನ್ನು ನಿವಾರಿಸುವವರಿಲ್ಲದಂತಾಯಿತಲ್ಲ; ಅವನ ಮಿತ್ರರೂ ದುಷ್ಟರೇ ಆಗಿದ್ದರು. ಅವನೂ ಸಾಯಲು ಸಿದ್ಧನಿದ್ದಂತೆ ತೋರುತ್ತಿದೆ. ಅಂತಹ ನೀಚನಿಂದ ಬಂಧುಗಳು ಶೋಕಪಡುವಂತಾಯಿತು. ಭೀಷ್ಮಾದಿ ಪಿತೃಜನವೂ ಅವನನ್ನು ತಡೆಯಲಿಲ್ಲವಲ್ಲ!' ಎಂದು ಕೇಳಿದನು.

ವೈಶಂಪಾಯನನು, 'ರಾಜನ್! ಹೇಳಿದರು ಭೀಷ್ಮಾದಿಗಳು. ಆದರೆ ಕೇಳಬೇಕಲ್ಲ ಕೀಳು ಬುದ್ಧಿಯ ದುರ್ಯೋಧನ!' ಎಂದು ನಾರದನಿತ್ತ ಹಿತೋಪದೇಶವನ್ನು ವರ್ಣಿಸತೊಡಗಿದನು.

## ನಾರದನ ಹಿತೋಪದೇಶ

ನಾರದನು 'ದುರ್ಯೋಧನ! ಪ್ರತ್ಯುಪಕಾರಾಪೇಕ್ಷೆಯಿಲ್ಲದೆ, ಹಿತವನ್ನು ನುಡಿಯುವವನು ದುರ್ಲಭನು; ಕೇಳುವವನಿನ್ನೂ ದುರ್ಲಭನು. ಆದರೂ ಕೇಳು! ಕೆಲಸ ಕೆಡುವುದೆಂದರಿತೂ, ಸುಮ್ಮನೆ ಹಠ ತೊಟ್ಟು ಸೆಣಸುವುದು ಒಳಿತಲ್ಲ; ಹಿಂದೆ ಗಾಲವನು ನಿರ್ಬಂಧವನ್ನು ಮಾಡಿ ಕಷ್ಟಪಟ್ಟ ಕಥೆಯನ್ನು ಹೇಳುವೆನು.

ವಿಶ್ವಾಮಿತ್ರನು ತೀವ್ರ ತಪವನ್ನು ಮಾಡುತ್ತಿರಲು ಅವನನ್ನು ಪರೀಕ್ಷಿಸಲು ವಸಿಷ್ಠನು ಅನ್ಯ ಮುನಿವೇಷದಿಂದ ಬಂದನು. ವಿಶ್ವಾಮಿತ್ರನು ಸಂಭ್ರಮದಿಂದ ಬಂದ ಅತಿಥಿಗಾಗಿ ಪರಮಾನ್ನವನ್ನು ಮಾಡತೊಡಗಿದನು. ಮುನಿಯು ಅದಕ್ಕಾಗಿ ಕಾಯದೆ, ಅನ್ಯರಿತ್ತ ಆತಿಥ್ಯವನ್ನು ಸ್ವೀಕರಿಸಿದನು. ಆಗ ವಿಶ್ವಾಮಿತ್ರನು ಪರ-ಮಾನ್ನದ ಪಾತ್ರೆಯನ್ನು ಹೊತ್ತು ಬಂದನು. 'ಊಟವಾಗಿದೆ. ಮತ್ತೆ ಬರುವೆನು. ಇರು!' ಎಂದು ಹೇಳಿ ಹೋದ ಮುನಿಗಾಗಿ ಕಾದು, ವಿಶ್ವಾಮಿತ್ರನು ಹಾಗೇ ನಿಂತಿದ್ದನು. ಒಂದು ನೂರು ವರ್ಷಗಳ ಕಾಲ ಮಾರುತಾಶನನಾಗಿದ್ದ ವಿಶ್ವಾಮಿತ್ರನನ್ನು ಗಾಲವನು ಭಕ್ತಿಯಿಂದ ಸೇವಿಸುತ್ತಿದ್ದನು. ಆಗ ಮತ್ತೆ ಬಂದ ವಸಿಷ್ಠನು ವಿಶ್ವಾ-ಮಿತ್ರನು ಹೊತ್ತುನಿಂತ ಪಾತ್ರೆಯನ್ನು, ಅಲ್ಲಿದ್ದ ಉಷ್ಣನೂತನವಾದ ಪರಮಾನ್ನ-ವನ್ನು ಕಂಡು, ಪ್ರೀತನಾಗಿ, ಅದನ್ನುಂಡು ಹೊರಟುಹೋದನು. ವಿಶ್ವಾಮಿತ್ರನು ಗಾಲವನಸೇವೆಗೆ ಮೆಚ್ಚಿ, ವಿದ್ಯಾಸಿದ್ಧಿಯನ್ನಿತ್ತು, ಅನುಗ್ರಹಿಸಿ, ಅಪ್ಪಣೆಯನ್ನಿತ್ತನು.

ಗಾಲವನು ' ಗುರುವರ! ಏನು ದಕ್ಷಿಣೆಯನ್ನು ಕೊಡಲಿ ? ದಕ್ಷಿಣಾರಹಿತವಾದ ಕರ್ಮವು ನಿಷ್ಫಲವಾಗುವುದು; ಹೇಳಿ ದಕ್ಷಿಣೆಯನ್ನು!' ಎಂದು ಕೇಳಿದನು. ಗಾಲವನ ಸೇವೆಯೇ ಪುಷ್ಕಲ ದಕ್ಷಿಣವೆಂದು ತಿಳಿದು ವಿಶ್ವಾಮಿತ್ರನು 'ಹೋಗು ದಕ್ಷಿಣೆ ಬಂತು' ಎಂದು ಹೇಳಿದರೂ ಕೇಳದೆ, ಗಾಲವನು ದಕ್ಷಿಣೆಯನ್ನು ಕೇಳಲೇಬೇಕೆಂದು ನಿರ್ಬಂಧಿಸಿದನು. ವಿಶ್ವಾಮಿತ್ರನು ಸ್ವಲ್ಪ ಕುಪಿತನಾದಂತಾಗಿ 'ಬೆಳ್ಳಗಿದ್ದು ಒಂದು ಕಿವಿ ಮಾತ್ರ ಕಪ್ಪಾಗಿರುವ ಕುದುರೆಗಳನ್ನು ಎಂಟುನೂರನ್ನು ತಂದುಕೊಡು!' ಎಂದನು.

ಆ ಮಾತನ್ನಾಲಿಸಿ ಗಾಲವನು ಎದೆಯೊಡೆದಂತಾದನು. ಅಂತಹ ದಕ್ಷಿಣೆ-ಯನ್ನು ಕೊಡಲಾರದ ಚಿಂತೆಯಿಂದ, ಆಹಾರನಿದ್ರೆಗಳನ್ನು ತೊರೆದು ಬಡವಾದನು- 'ಏನು ಮಾಡಲಿ ? ಅಂತಹ ಕುದುರೆಗಳು ಎಂಟುನೂರು ಎಲ್ಲಿಂದ ತರಲಿ ? ಎಂತು ಗುರುಋಣ ನೀಗಲಿ? ಎಂತು ಮಿತ್ರರನ್ನು ಪೋಷಿಸಲಿ? ಇನ್ನೇಕೆ ಬದುಕಿರಬೇಕು? ಅತಿ ನಿರ್ಬಂಧ ಮಾಡಿ ಗುರುನಿಗ್ರಹಕ್ಕೆ ಗುರಿಯಾಗಬೇಕಾಯಿತು. ಕೊಡುವೆನೆಂದು ಕೊಡದವನ ಪುಣ್ಯವೆಲ್ಲ ನಷ್ಟವಾಗುವುದು. ನಾನು ಗುರುಗಳಿಗೆ ಕೊಟ್ಟ ಮಾತ-ನ್ನೆಂತು ಪಾಲಿಸಲಿ? ಶ್ರೀವಿಷ್ಣುವೇ ನನ್ನನ್ನೀ ಸಂಕಟದಿಂದ ಪಾರುಮಾಡಲು ಸಮರ್ಥನಿರುವನು.' ಎಂದು ಚಿಂತಿಸುವ ಗಾಲವನಿಗೆ ಗರುಡನು ಪ್ರತ್ಯಕ್ಷವಾಗಿ, ಸ್ನೇಹಿತನೆಂಬ ಪ್ರೀತಿಯಿಂದ ' ಮಿತ್ರ ! ವಿಪತ್ಸಮಯದಲ್ಲಿ ಉಪಕರಿಸದ ಮಿತ್ರನಿಂದೇನು ಪ್ರಯೋಜನ ? ಸಮರ್ಥನಾದ ಮಿತ್ರನು ಸಮಯಕ್ಕೊದಗಬೇಕಲ್ಲವೇ ? ನಿನ್ನ ವಿಷಯವನ್ನು ನನ್ನ ಸ್ವಾಮಿಯಾದ ಶ್ರೀಹರಿಗೆ ತಿಳಿಸಿರುವೆನು. ನಿನ್ನ ಕಾರ್ಯವಾಗುವಂತೆ ಮಾಡೆಂದು ಶ್ರೀಶನೆನಗಾಜ್ಞಾಪಿಸಿರುವನು. ಎಲ್ಲ ದೇಶಗಳನ್ನು ಕುದುರೆಗಳಿಗಾಗಿ ಹುಡುಕಿ ನೋಡೋಣ!

ಪೂರ್ವದಿಕ್ಕಿನಲ್ಲಿ ಮೊದಲು ಸೂರ್ಯನು ಉದಯಿಸುವನು. ಸಾಧ್ಯರಿಲ್ಲಿ ಧ್ಯಾನ ಬಲದಿಂದ ಸತ್ಯಕಾಮರಾದರು. ಧರ್ಮನ ಕಣ್ಣುಗಳಂತಿರುವ ಅಗ್ನಿಷ್ಟೋಮರಿಲ್ಲಿದ್ದು ಯಜ್ಞಭಾಗಗಳನ್ನು ಸ್ವೀಕರಿಸುವರು. ಅವರೀರ್ವರ ಮಧ್ಯದಿ ಕೊಟ್ಟ ಆಜ್ಯಾಹುತಿಗಳಿಂದ ಯಜ್ಞವು ನಿರ್ವಿಘ್ನವಾಗುವುದು. ದೇವಯಾನದ ಮಾರ್ಗವಿಲ್ಲಿದೆ. ದೇವೇಂದ್ರನಿಲ್ಲಿ ಸುರರಾಜ್ಯದಲ್ಲಿ ಅಭಿಷಿಕ್ತನಾದನು. ಬ್ರಹ್ಮದೇವನು ವೇದಗಳನ್ನು ಉಚ್ಚರಿಸಿದನು. ಸೂರ್ಯನು ಯಾಜ್ಞವಲ್ಕ್ಯನಿಗೆ ಯಜುರ್ವೇದವನ್ನು ಕೊಟ್ಟನು. ಇಲ್ಲಿ ವಸಿಷ್ಠನು ನಿಮಿಶಾಪದಿಂದ ದೇಹವನ್ನು ಬಿಟ್ಟು ಮತ್ತೆ ಮಿತ್ರಾವರುಣರ ದೆಶೆಯಿಂದ ಕುಂಭದಲ್ಲಿ ಜನಿಸಿದನು. ಓಂಕಾರದಿಂದ ಸ್ವರ ಪ್ರಸೂತಿಗಳು ಸಾವಿರ ಇಲ್ಲಿ ಶಾಖಾದಿಭೇದದಿಂದ ಪುಟ್ಟಿ ಪಠಿತವಾದವು. ಇದು ಸ್ವರ್ಗದ್ವಾರವೆನಿಸಿದೆ. ಅಲ್ಲಿಂದ ಪ್ರವೇಶಿಸಿದ ಪುಣ್ಯಶೀಲರು ದುಃಖವಿಲ್ಲದ ಸುಖಪ್ರದೇಶವನ್ನು ಸೇರುವರು.

ಇದು ದಕ್ಷಿಣದಿಶೆ. ಇದನ್ನು ಸೂರ್ಯನು ಯಜ್ಞಮಾಡಿದಾಗ ಗುರು(ತಂದೆಯೂ) ವಾದ ಕಶ್ಯಪನಿಗೆ ದಕ್ಷಿಣೆಯಾಗಿ ಕೊಟ್ಟನು. ಇಲ್ಲಿ ಪಿತೃಯಾಣವಿದೆ. ಊಷ್ಮಪಾದಿ ಪಿತೃದೇವತೆಗಳ ಸ್ಥಾನವಿದು. ಕಾಲದ ತ್ರುಟಿಲವಗಳ ಲೆಕ್ಕವಿಲ್ಲಿರುವ ಧರ್ಮನ ಸಭೆ

ಯಲ್ಲಿ ಸತತ ನಡೆಯುತ್ತಿರುವುದು. ಧರ್ಮ ಸತ್ಯಕರ್ಮಗಳ ನಿರ್ಣಯವೂ ಆಗುವುದು. ಮೃತರಲ್ಲಿ ಸೇರಿ ಕರ್ಮಾನುರೂಪವಾದ ನರಕಾದಿ ಫಲಗಳನ್ನು ಹೊಂದುವರು. ಸಾವರ್ಣಿಯು ಇಲ್ಲಿ ಸ್ಥಾಪಿಸಿದ ವೀಥೀ ಮಾರ್ಗಗಳನ್ನು ನಿಯಮದಿಂದ ಪಾಲಿಸಿ ಸೂರ್ಯ ರಥವು ಸಂಚರಿಸುವುದು. ರಾವಣನಿಲ್ಲಿ ತಪಗೈದನು. ವೃತ್ರನಿಲ್ಲಿ ಜನಿಸಿ ಶಕ್ರನಿಂದ ಸಂಹೃತನಾದನು. ವೈತರಣೀ ನದಿಯು ಇಲ್ಲೇ ಪಾಪಿ ಭಯಂಕರವಾಗಿ ಹರಿಯುವುದು. ಇಲ್ಲೇ ಹಿಂದೆ ನಾನು ಗಜಕಚ್ಛಪಗಳನ್ನು ಕೊಂದು ತಿಂದೆನು. ಕಪಿಲ ಭಗವಂತನಿಲ್ಲೇ ತಪಗೈಯುತ್ತಿರುವನು. ವಾಸುಕಿಯ ಭೋಗವತಿಯು ಇಲ್ಲಿರುವುದು.

ಇದು ವರುಣಪಾಲಿತವಾದ ಪಶ್ಚಿಮ ದಿಕ್ಕು. ಇಲ್ಲಿ ಸೂರ್ಯನು ಅಸ್ತಂಗತನಾಗುವನು. ವರುಣನು ಕೊಟ್ಟ ಆರು ರಸಗಳಿಂದ ಪುಷ್ಟನಾಗಿ ಸೋಮನು ಶುಕ್ಲಪಕ್ಷಾರಂಭದಿಂದ ತರುಣನಾಗುವನು. ಇಲ್ಲಿ ವಾಯುದೇವನು ವಿಜೃಂಭಿಸಿ ದೈತ್ಯರನ್ನು ನಾಶಪಡಿಸಿದನು. ಇಲ್ಲೇ ಮರುದ್ಗಣವು ದಿತೀದೇವಿಯ ಗರ್ಭದಿಂದ ಜನಿಸಿತು. ಹಿಮವಂತನ ಮೂಲವಿಲ್ಲಿ ಮಂದರದವರೆಗೂ ವ್ಯಾಪಿಸಿದೆ. ಸೋಮಸೂರ್ಯರನ್ನಾಚ್ಛಾದಿಸುವ ರಾಹು ದೈತ್ಯನ ಕಬಂಧವಿಲ್ಲಿ ಸಮುದ್ರದ ಮಧ್ಯದಲ್ಲಿ ಬಿದ್ದಿದೆ. ಹರಿಮೇಧ ಮುನಿಯ ಕುಮಾರಿ ಧ್ವಜವತಿಯು ಇಲ್ಲಿ ಸೂರ್ಯಶಾಸನದಿಂದ ಅಂಬರದಿ ನಿಂತಿರುವಳು. ಎಲ್ಲ ಜ್ಯೋತಿಗಳಿಲ್ಲಿ ಸೂರ್ಯಮಂಡಲವನ್ನು ಸೇರುವವು. ಆದಿತ್ಯನು ಅಸ್ತಂಗತನಾಗಿ ಅಗ್ನಿಯನ್ನು ಸೇರುವನು. ಆದಿತ್ಯಪ್ರಭೆಯಿಂದಲೇ ರಾತ್ರಿ ಬೆಳಗುವ ನಕ್ಷತ್ರಾದಿಗಳು ಹಗಲಲ್ಲಿ ಅದರಿಂದಲೇ ಅಡಗಿ ಕಾಣದಾಗುವವು. ಇಪ್ಪತ್ತೆಂಟು ದಿನಗಳಾಗಲು ಸೂರ್ಯನಿಂದ ಕಲೆತು ಸೋಮನು ಮತ್ತೆ ದೂರನಾಗುತ್ತಿರುವುದಿಲ್ಲಿಂದಲೇ. ಅನಾದಿನಿಧನನಾದ ವಿಷ್ಣುವಿನ ನಿವಾಸವಿಲ್ಲಿರುವುದು. ವಾಯುವೂ ಇಲ್ಲೇ ಇರುವನು. ಕಶ್ಯಪನ ಮನೆಯೂ ಇಲ್ಲೇ.

ಇದು ಉತ್ತರದಿಶೆ. ಇಲ್ಲಿ ಪಾಪದಿಂದ ಉತ್ತಾರಣವಾಗುವುದು. ಹಿರಣ್ಯನಿಧಿ ಇಲ್ಲಿದೆ. ಸ್ವರ್ಗಮಾರ್ಗವು ಪಶ್ಚಿಮ ಪೂರ್ವಗಳ ಮಧ್ಯದಿ ನೆಲಸಿದೆ. ಇಲ್ಲಿ ದುರ್ಮಾರ್ಗರಿಗೆ ಹೋಗಲಾಗದು. ಇಲ್ಲಿ ಬದರಿಕಾಶ್ರಮದಿ ವಿಷ್ಣುವು ನಾರಾಯಣರ್ಷಿಯಾಗಿರುವನು; ಶೇಷನು ನರನಾಗಿರುವನು. ಬ್ರಹ್ಮದೇವನೂ ಶಿವನೂ ಇಲ್ಲಿ ಹಿಮವತ್ಪರ್ವತ ಶಿಖರಗಳಲ್ಲಿ ಮುನಿದೇವರಿಗೂ ಅದೃಶ್ಯರಾಗಿರುವರು. ಹಿಂದೆ ಚಂದ್ರಮನಿಲ್ಲಿ ವಿಪ್ರರಾಜ್ಯದಿ ಅಭಿಷಿಕ್ತನಾದನು. ಶಿವನಿಲ್ಲಿ ಗಂಗೆಯನ್ನು ಜಟೆಯಿಂದ ಬಿಟ್ಟು ಹರಿಸಿದನು. ಇಲ್ಲಿ ಉಮೆಯು ಶಿವನಿಗಾಗಿ ತಪಗೈದಳು. ಇಲ್ಲಿರುವ ಕುಬೇರನು ಯಕ್ಷರಾಕ್ಷಸ ಗಂಧರ್ವರಿಗಧಿಪತಿಯಾಗಿರುವನು. ಇಲ್ಲಿ ಚೈತ್ರರಥೋದ್ಯಾನವಿದೆ; ಮಂದಾಕಿನಿಯು ಹರಿಯುತ್ತಿರುವಳು. ಕದಲಿಕಾಖಂಡ, ಸೌಗಂಧಿಕ ವನಗಳಿಲ್ಲೇ ಇರುವವು. ಸಪ್ತರ್ಷಿಗಳು ಪತ್ನೀಯುತರಾಗಿರುವರು. ಗಂಗಾದ್ವಾರವಿಲ್ಲಿದೆ. ಮನುಜ ನೇತ್ರ ಗೋಚರರಾಗದಿರುವ ದೇವಮುನಿ ಸಿದ್ಧರಿಲ್ಲಿ ಸಂಚರಿಸುತ್ತಿರುವರು.

ಶ್ರೀನಾರಾಯಣನು ಸಹಸ್ರಾಕ್ಷನಾಗಿ ಲೋಕವನ್ನೀಕ್ಷಿಸುತ್ತಿರುವುದಿಲ್ಲಿಂದ. ಉತ್ತರ ದಿಕ್ಕೆಂದರೆ ಸರ್ವಕರ್ಮಗಳಿಗೆ ಶ್ರೇಷ್ಠವೆಂದು ತಿಳಿ!' ಎಂದನು.

ಆಗ ಗಾಲವನು ಗರುಡನ ಹೆಗಲೇರಿ ಪೂರ್ವದಿಶೆಗೆ ಹೊರಡೆಂದನು. ಮೇಲೇರಿದಂತೆ ಸೂರ್ಯನು ನಿರಾವರಣನಾಗಿ ಪ್ರಕಾಶಿಸುವುದರಿಂದ, ಕಣ್ಣು ಕುಕ್ಕಿದಂತಾಗಲು, ಗಾಲವನು ಕೆಳನೋಡಿದನು. ಗರುಡನ ಸುವರ್ಣಪಕ್ಷಗಳ ಕಾಂತಿಯಿಂದ ಕೆಳಗಿನ ಗಿಡ-ಗಂಟೆಗಳು ಬಂಗಾರದಂತೆ ಹೊಳೆಯುವುದನ್ನು ನೋಡಿ ಗಾಲವನು ಆಶ್ಚರ್ಯಚಕಿತನಾದನು. ಅವನ ವೇಗವನ್ನು ಸಹಿಸಲಾರದೆ ಗಾಲವನು ಬೇಡಲು, ಗರುಡನು ಋಷಭಗಿರಿಯ ಕಂದರದಲ್ಲಿಳಿದನು. ಮಿತ್ರರಿಬ್ಬರು ಅಲ್ಲಿ ಶಾಂಡಿಲಿ ಎಂಬ ತಾಪಸಿಯನ್ನು ಕಂಡರು. ಆಕೆಯಿತ್ತ ಆತಿಥ್ಯವನ್ನು ಸ್ವೀಕರಿಸಿ ಅವರು ತೃಪ್ತರಾದರು. ಶ್ರಮದಿಂದ ಸುಪ್ತರಾದ ಗರುಡದ್ವಿಜರು ಸ್ವಲ್ಪಹೊತ್ತಿಗೆ ಎದ್ದು ಹೊರಡಲನುವಾದರು. ಆಗ ಗರುಡನು ತನ್ನ ಪಕ್ಕಗಳು ಕಳಚಿ ಬಿದ್ದುದನ್ನು ಕಂಡು, ಖಿನ್ನನಾದನು. ಗಾಲವನು ಅವನು ಮನಸಾ ಮಾಡಿರುವ ಅಪರಾಧದಿಂದ ಹಾಗಾಗಿರಬೇಕೆಂದನು. ಗರುಡನು, 'ಅಹುದು; ಈ ಸಿದ್ಧವನಿತೆಯನ್ನಿಲ್ಲಿಂದ ವಿಷ್ಣು-ಬ್ರಹ್ಮ-ಶಂಕರ ಧರ್ಮಾದಿಗಳಿರುವ ಲೋಕಕ್ಕೆ ಕರೆದೊಯ್ಯಲು ಸಂಕಲ್ಪಿಸಿದುದರಿಂದ ಹೀಗಾಗಿದೆ' ಎಂದು ಶಾಂಡಿಲಿಯನ್ನು ಕ್ಷಮಿಸಲು ಬೇಡಿದನು. ಆಕೆಯು 'ನನ್ನನ್ನು ನಿಂದಿಸಿದವರು ಪುಣ್ಯಲೋಕದಿಂದ ಬೀಳುವರು. ಆಚಾರ ಶುದ್ಧಳಾಗಿ ಸಿದ್ಧಳಾಗಿರುವೆನು. ಆಚಾರದಿಂದ ಧರ್ಮವು ಫಲಿಸುವುದು. ಆಚಾರದಿಂದ ಸಂಪತ್ತು ಬರುವುದು. ಆಚಾರವು ಅಶುಭಗಳನ್ನು ದೂಡುವುದು. ಒಳ್ಳೆಯದು! ಮೊದಲಿನಂತೆ ಪಕ್ಕಗಳು ಬಂದು ಬಲವೀರ್ಯಯುತನಾಗು!' ಎಂದು ನುಡಿದಳು. ಆಗ ಗರುಡನು ವೇಗವತ್ತರವಾದ ರೆಕ್ಕೆಗಳಿಂದ ಯುಕ್ತನಾದನು.

ಇಂತು ವಿಫಲಪ್ರಯತ್ನನಾದ ಗಾಲವನನ್ನು ಹಾದಿಯಲ್ಲಿ ಕಂಡು, ವಿಶ್ವಾಮಿತ್ರನು 'ಶಿಷ್ಯ! ಗುರುದಕ್ಷಿಣೆ ಕೊಡುವ ಕಾಲವಾಗಿದೆ. ತಂದೆಯಾ ಕುದುರೆಗಳನ್ನು?' ಎಂದು ಕೇಳಿದನು. ಗಾಲವನು ದೀನನಾಗಿರಲು ನೋಡಿ ಗರುಡನು, 'ಗಾಲವ! ಭೂಮಿಯಲ್ಲಿರುವ ವಹ್ನಿಯ ಅಂಶವೇ ಧೂಳಿಯಾಗಿ ಸಿಕ್ಕು ಮತ್ತೆ ವಹ್ನಿಯಲ್ಲಿ ಶುದ್ಧವಾದನಂತರ ಹಿರಣ್ಮಯವೆನಿಸುವುದು. ಹಿರಣ್ಮಯವೆಂದರೆ ಸುಖಮಯವೆಂದರ್ಥ. ಸುಖಮಯನಾದ ಶ್ರೀಹರಿಯು ಹಿರಣ್ಮಯನೆನಿಸುವನು. ಧರಿಸಿ ಪೋಷಿಸುವುದರಿಂದ ಶ್ರೀಶನು ಧನನೆನಿಸುವನು. ಪ್ರೋಷ್ಠಪದದ ಪೌರ್ಣಮಿಯಲ್ಲಿ ಶುಕ್ರವಾಸವಿದ್ದಾಗ ಪೂರ್ವಾಭಾದ್ರ, ಉತ್ತರಾಭಾದ್ರ ನಕ್ಷತ್ರಗಳ ದೇವರಾದ ಅಜೈಕಪಾತ್, ಅಹಿರ್ಬುಧ್ನರನ್ನು ಪೂಜಿಸಿ, ಧನಾಧ್ಯಕ್ಷನಾದ ಕುಬೇರನನ್ನು ಪೂಜಿಸಿ. ತದಂತರ್ಯಾಮಿಯಾದ ವಾಮನನನ್ನು ಪೂಜಿಸಿ ಧನವಂತರಾಗುವರು. ಧನವು ಇಂದ್ರನಲ್ಲಿಯು ಕುಬೇರನಲ್ಲಿಯು ಶ್ರೀಹರಿ ಕೊಟ್ಟಷ್ಟು ಪೂರ್ಣವಾಗಿ ಪ್ರತಿಷ್ಠಿತವಾಗಿದೆ. ಶ್ರೀಶಾದಿ ದೇವರ ಅನುಗ್ರಹವಿಲ್ಲದಿರೆ ಧನವು ಲಭಿಸಲಾರದು. ಧನವಿಲ್ಲದವನಿಗೆ ಕುದುರೆಗಳೂ

ಸಿಗಲಾರವು. ಆದುದರಿಂದ ಧನವಂತನಾದ ಯಯಾತಿಯನ್ನು ಯಾಚಿಸು ! ಅವನು ಕುಬೇರನಂತೆ ಧನವಂತನು, ದಾನವಂತನೂ ಆಹುದು.' ಎಂದು ಪೇಳಿದನು.

ಗಾಲವ-ಗರುಡರು ಯಯಾತಿಯನ್ನು ಕಂಡು, ಬಂದ ಕಾರ್ಯವನ್ನು ತಿಳಿಸಿ, ಗುರುದಕ್ಷಿಣೆಯಾಗಿ ಕೊಡಲು, ಎಂಟುನೂರು ಚಂದ್ರವರ್ಣದ ಕಪ್ಪು ಕಿವಿಯ ಕುದುರೆಗಳನ್ನು ಕೊಡೆಂದು ಕೇಳಿದರು. ಗರುಡನು 'ರಾಜನ್ ! ನಿನ್ನಿಂದ ಧನವನ್ನಾದರೂ ಪಡೆದು, ಕುದುರೆಗಳನ್ನು ಗುರುವಿಗಿತ್ತು ಅನೃಣನಾಗಿ ಗಾಲವನು ತಪಸ್ಸಿಗೆಂದು ತೆರಳಲಿರುವನು. ಆ ತಪಸ್ಸಿನ ಫಲದಲ್ಲಿ ನಿನಗೂ ಯೋಗ್ಯ ಭಾಗವು ದೊರೆವುದು. ಪಾತ್ರನಾದ ಮುನಿವರನು ದಾನಶೌಂಡನಾದ ನಿನಗೆ ದೊರೆತುದು ಶಂಖದಲ್ಲಿ ತುಂಬಿದ ಹಾಲಿನಂತಾಯಿತು' ಎಂದನು. ಯಯಾತಿಯು, 'ಎಲ್ಲ ರಾಜರನ್ನೊಲ್ಲದೆ, ನನ್ನಲ್ಲಿ ಬಂದುದಕ್ಕೆ ಎನಗೆ ಅಮಿತಾನಂದವಾಗಿದೆ. ನನ್ನ ಜನ್ಮವೇ ಸಾರ್ಥಕವಾಯಿತು. ನನ್ನ ಕುಲವು ಉದ್ಧೃತವಾಯಿತು. ಗರುಡ ! ಹಿಂದಿನಂತೆ ನಾನೀಗ ವಿತ್ತವಂತನಾಗಿಲ್ಲ. ಹಾಗೆಂದು ವಿಪ್ರರ್ಷಿಯ ಯಾಚನೆಯನ್ನು ವ್ಯರ್ಥಪಡಿಸಲಾರೆನು. ನಿಮ್ಮ ಕಾರ್ಯವು ಸಫಲವಾಗುವಂತೆ ಮಾಡುವ ನನ್ನ ಮಗಳನ್ನು ಸಮರ್ಪಿಸುವೆನು. ಅವಳಿಂದ ನಾಲ್ಕು ವಂಶಗಳು ಬೆಳಗಬೇಕಾಗಿವೆ. ರೂಪಲಾವಣ್ಯವತಿಯಾದ ಇವಳನ್ನು ರಾಜನ್ಯರಿಗೆ ಕೊಟ್ಟು, ಕುದುರೆಗಳನ್ನು ಪಡೆ ! ಇವಳೂ ಪುತ್ರನನ್ನು ಪ್ರಸವಿಸಿದಂತೆ, ಮತ್ತೆ ಕನ್ಯೆಯೇ ಆಗುತ್ತಿರುವಳು. ಇವಳಿಂದ ಅಪುತ್ರರಾದ ರಾಜರ್ಷಿಗಳು ಪುತ್ರವಂತರೂ, ನಾನು ದೌಹಿತ್ರವಂತನೂ ಆಗುವೆವು. ಅರ್ಥಿಯಾಗಿ ಬಂದ ವಿಪ್ರನಿಗಿಲ್ಲವೆಂದು ಕಳಿಸುವುದು ಮಹಾ ಪಾಪವು. ಆದುದರಿಂದ ನನ್ನ ಮಗಳಾದ ಮಾಧವಿಯನ್ನು ಸಮರ್ಪಿಸುತ್ತಿರುವೆನು. ಪುನರ್ದರ್ಶನವಾಗಲಿ !' ಎಂದು ಅವರಿಗೆ ಮಗಳನ್ನಿತ್ತು ಕಳಿಸಿದನು. ಗರುಡನೂ ಗಾಲವನನ್ನು ಬೀಳ್ಕೊಂಡು ತನ್ನ ಮನೆಗೆ ಪೋದನು.

ಗಾಲವನು ಅಯೋಧ್ಯೆಯನ್ನು ಸೇರಿ ಹರ್ಯಶ್ವನೆಂಬ ರಾಜರ್ಷಿಯನ್ನು ಕಂಡು, 'ರಾಜನ್! ಪ್ರಜಾಭಿಕಾಮನಾದ ನಿನಗೆ ಇವಳಿಂದ ನಾಲ್ವರು ಸುತರಾಗುವರು. ಕನ್ಯಾಶುಲ್ಕವಾಗಿ ಎಂಟುನೂರು ಕುದುರೆಗಳನ್ನು ಕೊಡು ! ಅವನ್ನು ನನ್ನ ಗುರುವಿಗೆ ದಕ್ಷಿಣೆಯಾಗಿತ್ತು ನಾನು ಧನ್ಯನಾಗುವಂತೆ ಮಾಡು ! ಕುದುರೆಗಳು ಚಂದ್ರ ಧವಳವಾಗಿದ್ದು ಒಂದು ಕಿವಿ ಮಾತ್ರ ಕಪ್ಪಾಗಿರಬೇಕು ನೋಡು !' ಎಂದನು. ಬಹು ಸುಂದರಿಯಾಗಿ ದೇವವನಿತೆಯಂತೆ ಕಂಗೊಳಿಸುವ ಮಾಧವಿಯು ಚಕ್ರವರ್ತಿ ಜನನಿಯಾಗಲು ಅರ್ಹಳಾಗಿದ್ದಳು. ವಕ್ಷ, ಕುಕ್ಷಿ, ಅಲಕ, ಭುಜ, ಕರ, ಮುಖಗಳು ಉನ್ನತವಾಗಿ; ಚರ್ಮ, ಕೇಶ, ದಶನ, ಕರಾಂಗುಲಿ, ಪಾದಾಂಗುಲಿ, ಪಾದಪರ್ವ, ಕರಾಂಗುಲಿ ಪರ್ವಗಳು ಸೂಕ್ಷ್ಮವಾಗಿ; ಸ್ವರ, ನಾಭಿಗಳು ಗಂಭೀರವಾಗಿ; ಪಾಣಿತಲ, ನೇತ್ರಾಂತ, ತಾಲು, ಜಿಹ್ವಾ, ಅಧರಗಳು ರಕ್ತವಾಗಿ, ಮನವನ್ನು ಹರಿಸಿದ ಮಾಧವಿಯನ್ನು ಬಿಡಲಾರದೆ, ಹರ್ಯಶ್ವನಿಂತೆಂದನು. 'ಗಾಲವ! ನನ್ನಲ್ಲಿ ಇನ್ನೂರು ಕುದುರೆ

ಗಳು ನೀನು ಹೇಳಿದಂತಹವು ಇವೆ. ಹೆಚ್ಚಿಲ್ಲ. ಬೇರೆ ಕುದುರೆಗಳು ಬೇಕಾದಷ್ಟಿವೆ. ಅವನ್ನು ನೀನೊಲ್ಲೆ! ಇವಳಲ್ಲಿ ಒಬ್ಬ ಮಗನನ್ನು ಪಡೆದು, ಬಿಟ್ಟುಕೊಡುವೆನು. ಪುನಃ ಕನ್ಯೆಯಾಗುವ ಇವಳಿಂದ ನಿನ್ನ ಕಾರ್ಯವಾದೀತು' ಎಂದು ಮಾಧವಿಯನ್ನು ಸ್ವೀಕರಿಸಿದನು. ಮಾಧವಿಯೂ ತನಗೆ ಅಂತಹ ವರವಿದೆ ಎಂದು ಗಾಲವನಿಗೆ ತಿಳಿಸಿ, ಹರ್ಯಶ್ವನಿಗೆ ವಸುಮಾನಸನೆಂಬ ಪುತ್ರನನ್ನಿತ್ತಳು.

ಮತ್ತೆ ಮದುಮಗಳಂತಾದ ಮಾಧವಿಯೊಡನೆ ಗಾಲವನು ತೆರಳಿ ಕಾಶಿಯ ದಿವೋದಾಸನನ್ನು ಸೇರಿ, ಅದೇ ನಿಬಂಧನೆಯಂತೆ ಅವಳನ್ನವನಿಗಿತ್ತು ಮತ್ತೆ ಇನ್ನೂರು ಕುದುರೆಗಳನ್ನು ಪಡೆದನು. ದಿವೋದಾಸನು ಮಾಧವಿಯಲ್ಲಿ ಪ್ರತರ್ದನ ನೆಂಬ ಸುತನನ್ನು ಪಡೆದನು. ಮಾಧವಿಯು ಮತ್ತೆ ಕನ್ಯೆಯಾದಳು. ಗಾಲವನು ಭೋಜನಗರವನ್ನು ಸೇರಿ ಔಶೀನರನಿಗೆ ಅವಳನ್ನಿತ್ತು ಮತ್ತೆ ಇನ್ನೂರು ಕುದುರೆ ಗಳನ್ನು ಪಡೆದನು. ಮಾಧವಿಯಲ್ಲಿ ಶಿಬಿ ಎಂಬ ಚಕ್ರವರ್ತಿ ಸುತನನ್ನು ಪಡೆದು, ಮಾತಿನಂತೆ ಅವಳನ್ನು ಔಶೀನರನು ಗಾಲವನಿಗರ್ಪಿಸಿದನು. ಮಗನನ್ನು ಪಡೆದು ರಾಜರ್ಷಿತ್ರಯವು ಪೂರ್ವರಾಜರಂತೆ ಪುಣ್ಯ ಮಾರ್ಗದಿಂದ ತೆರಳಿ ಸುಗತಿಯನ್ನು ಪೊಂದಿತು. ಗಾಲವನು ಮಿಕ್ಕ ಇನ್ನೂರು ಕುದುರೆಗಳನ್ನು ಪಡೆಯುವುದೆಂತೆಂದು ಚಿಂತಿಸುತ್ತಿರಲು, ಗರುಡನು ಬಂದು, 'ಮಿತ್ರ! ಇನ್ನು ಇಂತಹ ಕುದುರೆಗಳು ಭೂ- ಮಂಡಲದಲ್ಲೇ ಇಲ್ಲ. ಹಿಂದೆ ಋಚೀಕನು ವರುಣನಿಂದ ಪಡೆದ ಸಾವಿರ ಕುದುರೆ ಗಳನ್ನು ಗಾಧಿರಾಜನಿಗಿತ್ತು, ಅವನ ಮಗಳಾದ ಸತ್ಯವತಿಯನ್ನು ಸ್ವೀಕರಿಸಿದನು. ಕನ್ಯಾಶುಲ್ಕವಾಗಿ ಬಂದ ಕುದುರೆಗಳನ್ನು ಗಾಧಿರಾಜನು ಪೌಂಡರೀಕ ಯಾಗದಲ್ಲಿ ಬ್ರಾಹ್ಮಣರಿಗೆ ದಾನಮಾಡಿದನು. ಅವನ್ನು ಅವರು ಮೇಲ್ಕಂಡ ರಾಜನಿಗೆ ಮಾರಿ ದರು. ಮಿಕ್ಕ ನಾಲ್ಕು ನೂರು ಕುದುರೆಗಳು ಅಲ್ಲಲ್ಲಿ ಚೆದರಿ ನಷ್ಟವಾದವು. ಅಂತಹ ಕುದುರೆಗಳಿನ್ನಿಲ್ಲ. ಈ ಆರುನೂರು ಕುದುರೆಗಳನ್ನೂ ಕನ್ಯೆಯಾಗಿರುವ ಮಾಧವಿ ಯನ್ನೂ ನಿನ್ನ ಗುರುವಿಗೆ ಸಮರ್ಪಿಸಿ ಧನ್ಯನಾಗು!' ಎಂದು ಗಾಲವನಿಗೆ ತಿಳಿಸಿ ಕೊಟ್ಟನು. ಮಿಕ್ಕ ಇನ್ನೂರು ಕುದುರೆಗಳಿಗಾಗಿ ಮಾಧವಿಯನ್ನು ಸಮರ್ಪಿಸಿ ನಿಂತ ಗಾಲವನನ್ನು ಕಂಡು ವಿಶ್ವಾಮಿತ್ರನು ಪ್ರೀತನಾದನು.

'ಗಾಲವ! ಮೊದಲೇ ಕನ್ಯೆಯನ್ನು ತಂದುಕೊಡಬಾರದಿತ್ತೆ? ಎಲ್ಲ ಕುದುರೆ ಗಳಿಗಾಗಿ ಇವಳನ್ನು ನಾನೇ ಸ್ವೀಕರಿಸುತ್ತಿದ್ದೆನು. ಇರಲಿ ಹೋಗು! ಧನ್ಯನಾದೆ! ಎಂದು ಕಳಿಸಿದ ವಿಶ್ವಾಮಿತ್ರನನ್ನು ಬೀಳ್ಕೊಂಡು ಗಾಲವನು ಮತ್ತೆ ಒಂದು ವರ್ಷಕ್ಕೆ ಬಂದನು. ವಿಶ್ವಾಮಿತ್ರನವಳಿಂದ ಅಷ್ಟಕನೆಂಬ ಮಗನನ್ನು ಪಡೆದು, ಮಾಧವಿಯನ್ನು ಮತ್ತೆ ಗಾಲವನಿಗೊಪ್ಪಿಸಿದನು. ಅಷ್ಟಕನಿಗೆ ರಾಜ್ಯವನ್ನೊಪ್ಪಿಸಿ ವಿಶ್ವಾಮಿತ್ರನು ವನವನ್ನು ಸೇರಿದನು. ಗಾಲವನು ಕೂಡ ಕನ್ಯೆಯಾದ ಮಾಧವಿಯನ್ನು ತಂದೆಯ ಮಾತಿಗೊಪ್ಪಿಸಿ, ತಾನು ವನವನ್ನು ಸೇರಿ ಕೃತಕೃತ್ಯನಾದನು.

ಯಯಾತಿಯು ಮಗಳ ಸ್ವಯಂವರವನ್ನು ಮಾಡಲೆಣಿಸಿದಾಗ, ಮಾಧವಿಯು ಬ್ರಹ್ಮರ್ಷಿ ರಾಜರ್ಷಿಗಳನ್ನೊಲ್ಲದೆ, ವನವನ್ನು ಸೇರಿ ತಾಪಸಿಯಾದಳು. ಯಯಾತಿಯು ಬಹುಕಾಲ ಬಾಳಿ, ಮೃತನಾಗಿ, ಸ್ವರ್ಗವನ್ನು ಸೇರಿದನು. ಅಲ್ಲಿ ತನ್ನ ಸಮರಾದ ಪುಣ್ಯವಂತರಿಲ್ಲವೆಂದು ದುರಹಂಕಾರದಿಂದ ಋಷಿವೃಂದಾರಕರ ನಿಂದೆಗೆ ಗುರಿಯಾದನು. ಶಕ್ರನ ಅಪ್ಪಣೆಯಂತೆ ಅವನನ್ನು ದೇವದೂತರು ಕೆಳಗೆ ಕೆಡಹಿದರು. ಪುಣ್ಯವಶದಿಂದ ಅವನು ನೈಮಿಶಾರಣ್ಯದಲ್ಲಿ ಯಜ್ಞಸಕ್ತರಾಗಿದ್ದ ಪ್ರತರ್ದನ, ವಸುಮನ, ಶಿಬಿ, ಅಷ್ಟಕರ ಹತ್ತಿರ ಬಿದ್ದನು. ಅವನ ವೃತ್ತಾಂತವನ್ನವನಿಂದಲೇ ತಿಳಿದು ಅವರು ತಮ್ಮ ಕ್ರತುಫಲವನ್ನವನಿಗೆ ಕೊಟ್ಟು, ಮತ್ತೆ ಸ್ವರ್ಗಕ್ಕೆ ಕಳಿಸಲು ನಿಶ್ಚಯಿಸಿ, ಅವನಿಗೆ ತಿಳಿಸಿದರು. ಕ್ಷತ್ರಿಯನಾದ ತನಗೆ ಪ್ರತಿಗ್ರಹವು ಕೂಡದೆಂದು ತಿರಸ್ಕರಿಸಿದ ಯಯಾತಿಯನ್ನು ವನದಿಂದ ಬಂದ ಮಾಧವಿಯು ಸಂತೈಸಿ, 'ತಂದೆ! ಇವರು ನಿನ್ನ ದೌಹಿತ್ರರು, ನನ್ನ ಮಕ್ಕಳು. ಇವರಿತ್ತ ಪುಣ್ಯವನ್ನು ಸ್ವೀಕರಿಸುವ ಅಧಿಕಾರ ನಿನಗಿದೆ' ಎಂದಳು. ಆಗ ಅವರು ನಾಲ್ವರು ರಾಜರು ತಾಯಿಯಾದ ಮಾಧವಿಗೂ ವಂದಿಸಿ, ತಾತನಾದ ಯಯಾತಿಗೂ ನಮಸ್ಕರಿಸಿದರು.

ಸಜ್ಜನರ ಸಂಭಾವನೆಯಿಂದ ಯಯಾತಿಯು ಭೂತಲವನ್ನು ಬಿಟ್ಟು ದೇವತೆಗಳಂತೆ ದಿವ್ಯಮಾಲ್ಯಾಂಬರ ಭೂಷಿತನಾಗಿ ಕಂಗೊಳಿಸಿದನು. ವಸುಮಾನನು ದಾನದ ಪುಣ್ಯವನ್ನು, ಪ್ರತರ್ದನನು ವೀರಧರ್ಮದ ಫಲವನ್ನು, ಶಿಬಿಯು ಸತ್ಯದ ಪುಣ್ಯವನ್ನು, ಅಷ್ಟಕನು ಯಜ್ಞದ ಫಲವನ್ನು ಧಾರೆ ಎರೆದು ಕೊಟ್ಟಾಗ, ಕ್ರಮವಾಗಿ ಯಯಾತಿಯು ಸ್ವರ್ಗಲೋಕವನ್ನು ಸೇರಿ, ಸುಖದಿಂದಿದ್ದನು. ಇಂತು ಧರ್ಮವಂತರಾದ ದೌಹಿತ್ರರಿಂದ ಉದ್ಧೃತನಾಗಿ ಮಾತಾಮಹನಾದ ಯಯಾತಿಯು ಸುಖಪಟ್ಟನು. ದೇವರಾಜಾದಿಗಳವನಿಗೆ ಸುಸ್ವಾಗತವನ್ನಿತ್ತು ಸತ್ಕರಿಸಿದರು. ಬ್ರಹ್ಮದೇವನು ಯಯಾತಿಯನ್ನು ಅಭಿನಂದಿಸಿ, 'ಅಹಂಕಾರ ಪಟ್ಟ ನಿನ್ನನ್ನು ಸುಜನರು ತಿರಸ್ಕರಿಸಲು ಪತಿತನಾದೆ! ಸುಜನದೌಹಿತ್ರರಿಂದ ಮತ್ತೆ ಪುಣ್ಯಲೋಕವನ್ನು ಹೊಂದಿರುವೆ' ಎಂದನು. ತನ್ನ ಪುಣ್ಯಕ್ಷಯವೆಂತಾಯಿತೆಂದು ಕೇಳಿದ ಯಯಾತಿಗೆ ಪಿತಾಮಹನಿಂತೆಂದನು.

'ರಾಜನ್! ಪ್ರಜರನ್ನು ಧರ್ಮದಿಂದ ಪಾಲಿಸಿದೆ! ಯಜ್ಞಗಳನ್ನೂ ಮಾಡಿದೆ! ಆದರೆ ಅದೆಲ್ಲ ಪುಣ್ಯವು ದುರಭಿಮಾನದಿಂದ ನಾಶವಾಯಿತು. ರಾಜನ್! ಉತ್ತಮರಾಗಲಿ, ಮಧ್ಯಮರಾಗಲಿ, ಅವರರಾಗಲಿ ಸುಜನರನ್ನು ಗರ್ವದಿಂದ ನೋಯಿಸಿದವನಿಗೆ ಸುಖವಿಲ್ಲ.'

'ಆದುದರಿಂದ ದುರ್ಯೋಧನ! ದುರಭಿಮಾನವನ್ನು ಬಿಡು! ಗಾಲವನಂತೆ ನಿರ್ಬಂಧವೂ, ಯಯಾತಿಯಂತೆ ದುರಭಿಮಾನವೂ ಕೂಡದು. ಹಿತ ಸುಹೃಜ್ಜನರ ಮಾತನ್ನು ಕೇಳಿ, ರಾಜ್ಯವನ್ನು ಪಾಂಡವರಿಗೆ ಹಂಚಿಕೊಟ್ಟು ಸುಖವಾಗಿ ಬಾಳು!

ಯಯಾತಿ ಚರಿತವು ಪಾಪ ನಾಶಕವು, ಪುಣ್ಯ ಸಂಪಾದಕವು, ಕೀರ್ತಿ, ಶತ್ರು ನಾಶ, ಸಂಪದ್ವಿಧಾಯಕವೂ ಆಗಿದೆ!' ಇಂತು ನಾರದನು ನುಡಿದು ಸುಮ್ಮನಾದನು.

## ಶ್ರೀಕೃಷ್ಣವಚನ ; ವಿಶ್ವರೂಪದರ್ಶನ

ಧೃತರಾಷ್ಟ್ರನು ನಾರದನ ಮಾತನ್ನು ಕೇಳಿ, ಅದು ನಿಜವೆಂದರಿತು, ಶ್ರೀಕೃಷ್ಣ-ನನ್ನಿಂತು ಪ್ರಾರ್ಥಿಸಿದನು. 'ಶ್ರೀಕೃಷ್ಣ! ನೀನೆಲ್ಲ ನುಡಿದ ವಚನಗಳು ಧರ್ಮ ಸಮ್ಮತವೂ, ಸತ್ಯಹಿತವೂ ಆಗಿದೆ. ಆದರೆ ನನ್ನ ಮಾತನ್ನು ಕೇಳದೆ ಮೂರ್ಖ ನಾಗಿರುವ ನನ್ನ ಮಗನಿಗೆ ನೀನೇ ಹೇಳಿ ಸರಿಮಾಡು! ಗಾಂಧಾರಿಯ ವಚನವನ್ನೂ ಇವನು ಕೇಳದಿರುವನು. ವಿದುರನೆಂದರೆ ಇವನಿಗಾಗದು; ಭೀಷ್ಮಾದಿಗಳೂ ಹೇಳಿ ರೋಸಿರುವರು. ಈ ಪಾಪಿಗೆ ನೀನಾದರೂ ತಿಳಿಯಹೇಳು! ನಿನಗೆ ಬಲು ಪುಣ್ಯ ವಾದೀತು!' ಆಗ ಶ್ರೀಕೃಷ್ಣನು ದುರ್ಯೋಧನನನ್ನು ನೋಡಿ ಇಂತೆಂದನು—

'ದುರ್ಯೋಧನ! ಕೇಳಿನ್ನ ಹಿತವನ್ನು! ನಿಮಗೆ ಒಳ್ಳೆಯದಾಗಲು ನುಡಿಯುತ್ತಿರುವೆನು. ದೊಡ್ಡ ವಂಶದಲ್ಲಿ ಹುಟ್ಟಿರುವೆ! ಅದಕ್ಕೆ ತಕ್ಕಂತೆ ನಡೆ! ಓದಿರುವೆ! ಗುಣವಂತನೆನಿಸಿರುವೆ! ದುಷ್ಕುಲ ಪ್ರಸೂತರು, ನೀಚರು, ಲಜ್ಜಾ ಹೀನರು ಮಾಡುವ ಕಾರ್ಯಗಳಿಗೆ ಕೈ ಹಾಕುವುದು ಸರಿಯಲ್ಲ. ಸುಜನರಂತೆ ಧರ್ಮಾರ್ಥ ಗಳನ್ನು ಪಾಲಿಸಿ ನಡೆ! ನಿನ್ನ ನಡತೆ ವಿಪರೀತವಾಗಿಯೇ ಇದೆ. ಘೋರವಾದ ಯುದ್ಧಕ್ಕೆ ಕಾಲ ಕೆದರುವುದು ಒಳಿತಲ್ಲ. ಸಂಧಿಯಿಂದ ಎಲ್ಲರಿಗೂ ಶ್ರೇಯಸ್ಸಾದೀತು! ಸೋದರ ಮಿತ್ರ ಭೃತ್ಯರು ಸಾಯದಂತೆ ಮಾಡಿದ ಕೀರ್ತಿಯು ನಿನ್ನದಾಗುವುದು; ಪಾಂಡವರು ಶೂರರು, ಮಹಾತ್ಮರು, ಪ್ರಜ್ಞಾವಂತರು, ಧರ್ಮಿಷ್ಠರು. ಅಂತಹ ರಿಂದ ಕಲೆತಿರುವುದು ನಿಮ್ಮ ತಂದೆ-ತಾಯಿಗಳಿಗೂ ಬೇಕಾಗಿದೆ. ಭೀಷ್ಮ-ದ್ರೋಣ ಕೃಪ ಗುರುಪುತ್ರ ಬಾಹ್ಲೀಕ ಸೋಮದತ್ತಾದಿಗಳೆಲ್ಲರೂ ಸಂಧಿಯಿಂದಲೇ ಕ್ಷೇಮವೆಂದು ತಿಳಿದಿರುವರು. ಹಿರಿಯರ ಶಾಸನವನ್ನು ಮೀರಬೇಡ! ಆಪತ್ತಿನಲ್ಲಿ ಉತ್ತಮರು ಹಿರಿಯರನ್ನು ನೆನೆದು, ಅವರ ಮಾತಿನಂತೆ ನಡೆದು ಶ್ರೇಯಸ್ಸನ್ನು ಹೊಂದುವರು. ನೀನೂ ಅಂತೆಯೇ ನಡೆ! ಹಿತವರ ಮಾತನ್ನು ಪಾಲಿಸದವನು ಕುತ್ಸಿತವಾದ ಬಿಂಬ ಫಲವನ್ನು ತಿಂದ ಮೂರ್ಖನಂತೆ ಕೊನೆಗೆ ದುಃಖಪಟ್ಟು ಸಾಯುವನು. ತತ್ಕಾಲದಿ ಮಧುರವೆಂದು ನೀಚರ ಮಾತನ್ನು ಕೇಳಿದವನು ಮರಣಕಾಲದ ಹರಿಸ್ಮರಣ ಭಾಗ್ಯಕ್ಕೆ ದೂರನಾಗಿ, ನರಕಾದ್ಯನರ್ಥವನ್ನು ಹೊಂದುವನು. ಆಮೇಲೆ ಪಶ್ಚಾತ್ತಾಪ ಪಡುವುದರಿಂದ ಪ್ರಯೋಜನವಿಲ್ಲ. ಮೊದಲೇ ವಿಚಾರಿಸಿ ನಡೆದವನಿಗೆ ಕೇಡಿಲ್ಲ. ಹಿತಜನರನ್ನು ನಿಂದಿಸಿ, ಅಹಿತಮಿತ್ರರ ವಶನಾದವನು ಐಹಿಕ ದುಃಖವನ್ನೂ ಪರಲೋಕದ ನರಕವನ್ನೂ ಹೊಂದುವನು. ಅಂತಹವನನ್ನು ನಂಬಿದ ಸ್ನೇಹಿತರೂ ಕೆಡುವರು. ಮಹಾರಥರು ಜ್ಞಾತಿಸತ್ತಮರು ಆದ ವೀರವರರನ್ನು ಧಿಕ್ಕರಿಸಿ, ದುರ್ಬಲರನ್ನು ನಂಬಿ ಕೆಡುವ ನಿನ್ನಂತಹ ಇನ್ನೊಬ್ಬನನ್ನು ತೋರು!

'ಹುಟ್ಟಿನಿಂದ ಪಾಂಡವರನ್ನು ದ್ವೇಷಿಸುತ್ತಿರುವೆ! ಎಷ್ಟೋ ಅಪಕಾರಗಳನ್ನೂ ಎಸಗಿರುವೆ! ಆದರೂ ಧರ್ಮಶೀಲರಾದ ಪಾಂಡವರು ಅದನ್ನು ಮನಸ್ಸಿನಲ್ಲಿಟ್ಟಿಲ್ಲ. ನಿನ್ನನ್ನು ಸೇರಿ ಬದುಕಬೇಕುವ ಬಂಧುಜನರೊಡನೆ ನೀನೂ ಸೇರು! ಸಿಟ್ಟಿಗೆ ಮೂಗು ಕೊಯ್ದುಕೋಬೇಡ! ಧರ್ಮಾರ್ಥಕಾಮಗಳು ಮೂರು ಸಿಗದಿರೆ ಪ್ರಾಜ್ಞರು ಧರ್ಮಾರ್ಥಗಳಿಗಾಗಿ ಶ್ರಮಿಸುವರು. ಎರಡೂ ಸಿಗದಿರೆ ಧರ್ಮವನ್ನು ಆರಿಸಿಕೊಂಬುವರು. ಇಂದ್ರಿಯವಶನಾಗಿ ಕಾಮಕ್ರೋಧಗಳ ನೆಲೆವೀಡಾಗಿ, ಧರ್ಮವನ್ನು ಬಿಟ್ಟವನು ಹಾಳಾಗುವನು. ಅರ್ಥಕಾಮಗಳು ಧರ್ಮವನ್ನು ಬಿಟ್ಟಿಲ್ಲ. ಬಿಟ್ಟರೆಲು ಅವನ್ನೆ ಬಿಟ್ಟು, ಧರ್ಮವನ್ನೇ ಸ್ವೀಕರಿಸುವವನು ಸುಖಿಸುವನು.

'ನೀನು ದ್ಯೂತಾದಿ ಹೀನೋಪಾಯದಿಂದ ಗಳಿಸಿದ ಅರ್ಥವನ್ನು ಅನರ್ಥವೆಂದು ತಿಳಿ! ವನವು ಪರಶುವಿಗೆ ಕಾವನ್ನಿತ್ತು ಕತ್ತರಿಸಲ್ಪಡುವಂತೆ, ಕಾಮಾರ್ಥಗಳಿಗೆ ಮನವಿತ್ತ ಮೂರ್ಖನು ಸಮೂಲವಾಗಿ ಕೆಡುವನು. ನ್ಯಾಯದಿಂದ ನಡೆವರಿಗೆ ಮೋಸದಿಂದ ನಡೆಯುವುದು ಸರಿಯಲ್ಲ. ಕೆಡಬಾರದೆಂದವನು ಬುದ್ಧಿಯಲ್ಲಿ ಕಾಮವಿಷಬೀಜವನ್ನಿಡಬಾರದು. ಸಾಮಾನ್ಯ ಜ್ಞಾನಿಯನ್ನೂ ಅವಮಾನಿಸಬಾರದೆಂದಮೇಲೆ ಪಾಂಡವರಂತಹ ವೀರಧೀರರನ್ನವಮಾನಿಸಬಾರದೆಂದು ಹೇಳಬೇಕೆ? ಸಿಟ್ಟಿಗೆ ವಶನಾದವನಿಗೆ ಧರ್ಮಮಾರ್ಗವು ಕಾಣುವುದಿಲ್ಲ. ದುರ್ಜನ ಸಂಗ ಬಿಡು! ಪಾಂಡವರನ್ನು ಕೂಡು! ಜ್ಞಾನ-ಧರ್ಮ-ಅರ್ಥಗಳಲ್ಲಿ ನಿನಗೆ ಸಮರಲ್ಲದ ದುಶ್ಶಾಸನ ಕರ್ಣರು, ವಿಕ್ರಮದಲ್ಲಿಯೂ ಪಾಂಡವರಿಗೆ ಸಮರಲ್ಲ. ಇಲ್ಲಿ ಯಾರೂ ಅವರಿಗೆ ಸಮವೀರರಿಲ್ಲ.

'ಕ್ರುದ್ಧನಾಗಿ ಭೀಮಸೇನನು ಬರುವಾಗ ನಿಲ್ಲುವರಿಲ್ಲ. ಭೀಷ್ಮ-ದ್ರೋಣ-ಕೃಪ ಅಶ್ವತ್ಥಾಮ-ಕರ್ಣರು ಧನಂಜಯನಿಗೆ ಪ್ರತಿವೀರರಾಗಿ ಕಾದಲಾರರು. ಸುರಾಸುರರಿಗೆ ಅಜೇಯರಾಗಿರುವ ಭೀಮಾರ್ಜುನರನ್ನು ಕೆಣಕಿ ಕೆಡಲಿರುವೆ! ಸುಮ್ಮನೆ ಜನಕ್ಷಯವನ್ನು ಸಾಧಿಸಬೇಡ! ಅರ್ಜುನನನ್ನೆದುರಿಸಿ ಗೆಲ್ಲಬಲ್ಲವನೊಬ್ಬನಿದ್ದರೆ ಸಾಕು! ಅಂತಹವನನ್ನು ಪೆಸರಿಸು! ಖಾಂಡವ ಪ್ರಸ್ಥದಲ್ಲಿ ದೇವಗಂಧರ್ವರನ್ನು ಸೋಲಿಸಿ, ವಿರಾಟನಗರದಲ್ಲಿ ನಿಮ್ಮ ತಲೆಗಳಂತಹ ತಲೆ ರುಮಾಲುಗಳನ್ನು ಹರಿಸಿ, ಸಾಕ್ಷಾದ್ರುದ್ರನನ್ನು ಸಂತೋಷಪಡಿಸಿ, ದಿವ್ಯಾಸ್ತ್ರಗಳನ್ನು ಸರ್ವಾಮರವರದಿಂದ ಗಳಿಸಿ ಮೆರೆವ ಪಾರ್ಥನ ವೈರವಹ್ನಿಯನ್ನು ಸಹಿಸಲಾರೆ! ನಾನೂ ಕಲಿತು ಬಂದಾಗ ನಿಲ್ಲುವುದಕ್ಕೂ ಆಗುವುದಿಲ್ಲ ತಿಳಿ! ನೋಡು' ನಿನಗಾಗಿ ಸಾಯಲಿರುವ ಸೋದರ ಪುತ್ರ ಮಿತ್ರ ಅಮಾತ್ಯ ಜನರನ್ನು! ವ್ಯರ್ಥವಾಗಿ ಅವರ ಪ್ರಾಣಗಳನ್ನು ತೆಗಿಸಬೇಡ! ಕೌರವ ಕುಲವು ಉಳಿಯಲಿ! ಕುರುಕುಲನಾಶಕನೆನಿಸಬೇಡ! ಧೃತರಾಷ್ಟ್ರನೇ ಮಹಾರಾಜನಾಗಿರಲಿ! ನೀನೇ ಯುವರಾಜನಾಗಿರು! ಬೇಡಿ ಬರುವ ರಾಜ್ಯದ ಸಿರಿಯನ್ನು ಕಾಲಿಂದೊದೆಯಬೇಡ! ಅರ್ಧ ರಾಜ್ಯವನ್ನವರಿಗಿತ್ತು, ನೀನೂ ಮಿಕ್ಕ ರಾಜ್ಯದಿಂದ ಸಂತುಷ್ಟನಾಗಿರು!'

ಭೀಷ್ಮನು ದುರ್ಯೋಧನನನ್ನು ನೋಡಿ, 'ವತ್ಸ! ಕೃಷ್ಣನ ಹಿತನುಡಿಯಂತೆ ನಡೆ! ಕ್ರೋಧವಶನಾಗಬೇಡ! ದುಷ್ಟ ಸ್ನೇಹಿತರಂತೆ ನಡೆದು ಶ್ರೇಯೋದೂರನಾಗುವೆ! ನೀನೂ ಯುದ್ಧಸಿದ್ಧನಾದರೆ ಸಾಯುವುದು ಪ್ರಜರು; ಪಾಪ! ನಿನ್ನ ಹಠಕ್ಕಾಗಿ ಮಿತ್ರಬಾಂಧವರನ್ನು ನಾಶಮಾಡುವುದು ಸರಿಯಲ್ಲ. ಪ್ರಕಾಶಮಾನವಾಗಿರುವ ಕೌರವ ರಾಜ್ಯದ ಸಂಪತ್ತು ನಿನ್ನ ಅಹಂಕಾರವಹ್ನಿಯಲ್ಲಿ ಸುಟ್ಟು ನಿರ್ನಾಮವಾದೀತು! ಮಾತಾ-ಪಿತೃಗಳನ್ನೂ ಶೋಕ ಸಾಗರದಲ್ಲಿ ನೂಕಿ ನೀನೂ ನರಕವನ್ನು ಸೇರುವಂತಾಗುವುದು. ಶ್ರೀಕೃಷ್ಣ-ಪಾಂಡವರ ದ್ವೇಷವು ಸರ್ವಥಾ ಒಳಿತಲ್ಲ' ಎಂದನು.

ದ್ರೋಣನು, ಸಿಟ್ಟಿನಿಂದ ಬುಸುಗುಟ್ಟುವ ಸುಯೋಧನನನ್ನು ನೋಡಿ, 'ರಾಜನ್! ಕೇಶವನಾಡಿದ ಮಾತು ಧರ್ಮಾರ್ಥಯುಕ್ತವಾಗಿದೆ. ನಿನ್ನ ತಾತನೂ ಶಾಂತಿಯನ್ನು ಉಪದೇಶಿಸಿರುವನು. ಅಂತೆಯೇ ಶಾಂತನಾಗು! ಬುದ್ಧಿಗೆಟ್ಟು ಶ್ರೀಕೃಷ್ಣನನ್ನು ಅವಗಣಿಸಬೇಡ! ನಿನ್ನನ್ನು ನೂಕಿ ಹಿಂದಿರುವ ನೀಚರು ಸಮಯ ಬಂದಾಗಲೂ ಹಿಂದೇ ಇರುವರು. ಯುದ್ಧವು ಒದಗಿದಾಗ ಅವರು ನಿನಗೊದಗರು; ಕತ್ತೊಡ್ಡಿ ಕಾದುವವರು ಬೇರೆ ಇರುವರು. ವಾಸುದೇವ-ಭೀಮಾರ್ಜುನರಿದ್ದಲ್ಲಿ ಜಯವು ನಿಶ್ಚಿತವು. ದೇವಕೀಪುತ್ರನೆಂದರೆ ಸಾಮಾನ್ಯನಲ್ಲ, ಸಾಕ್ಷಾನ್ನಾರಾಯಣನೇ. ಅವನೊಡನೆ ವೈರ ಬೆಳಸಿ ಮುಂದೆ ಪಶ್ಚಾತ್ತಾಪಪಡುವೆ! ಹಿತವನ್ನು ಪ್ರಿಯವನ್ನು ಹೇಳಿದೆನು, ನಿನ್ನಿಷ್ಟ ಬಂದಂತೆ ಮಾಡು!' ಎಂದು ಕೂತನು.

ಆಗ ವಿದುರನು, 'ದುರ್ಯೋಧನ! ನಿನಗಾಗಿ ನಾನು ದುಃಖ ಪಡುವುದಿಲ್ಲ, ನಿನ್ನ ಮುದುಕ ತಂದೆ-ತಾಯಂದಿರನ್ನು ನೋಡಿ ರೆಕ್ಕೆಗಳಿಲ್ಲದ ಪಕ್ಕಿಗಳಂತಾಗುವುರಲ್ಲ! ಎಂದು ದುಃಖಪಡುವೆನು. ಕುಲನಾಶಕನಾದ ಪುತ್ರನಿಂದ ನಿರ್ಗತಿಕರಾಗಿ ಸಲ್ಪಟ್ಟು, ಭಿಕ್ಷುಕರಂತಾಗುವ ಇವರಿಗೆ ದುಃಖಪಡಬೇಕಾಗಿದೆ!' ಎಂದನು.

ಧೃತರಾಷ್ಟ್ರನು, 'ವತ್ಸ! ಶ್ರೀಕೃಷ್ಣನ ಮಾತನ್ನು ಲಾಲಿಸಿ ನಡೆ! ಯೋಗಕ್ಷೇಮಗಳನ್ನು ಕೆಡಿಸಿಕೋಬೇಡ! ಶ್ರೀಕೃಷ್ಣನಿಂದ ಕೂಡಿ ಧರ್ಮರಾಜನಿದ್ದಲ್ಲಿಗೆ ಹೋಗು! ಆದದ್ದನ್ನು ಮರೆತು ರಾಜ್ಯವನ್ನು ಸ್ವೀಕರಿಸೆಂದು ಬೇಡು! ಭಾರತಕುಲವನ್ನುಳಿಸು; ಉಭಯರ ಕ್ಷೇಮವನ್ನು ಬಯಸಿ ಹೇಳುವ ಶ್ರೀಕೃಷ್ಣನನ್ನು ಮೀರಿ ನಡೆದರೆ ನಿನಗೆ ಉಳಿಗಾಲವಿಲ್ಲ!' ಎಂದನು.

ಆಗ ಭೀಷ್ಮ-ದ್ರೋಣರು ವೃದ್ಧರಾಜನ ದೀನತೆಯನ್ನು ಕಂಡು ದುಃಖಿತರಾಗಿ 'ದುರ್ಯೋಧನ! ಕೃಷ್ಣ-ಪಾರ್ಥರು ರಥಾರೂಢರಾಗಿ ಕದನರಂಗದಿ ನಿಲ್ಲುವ ಮುನ್ನ, ಭೀಮಸೇನನು ಗದಾಪಾಣಿಯಾಗಿ ನುಗ್ಗಿ ಬರುವ ಮುನ್ನ, ಧೌಮ್ಯನು ಸಂಗ್ರಾಮ-ಯಜ್ಞಾಗ್ನಿಯನ್ನು ಹೊತ್ತಿಸುವ ಮುನ್ನ, ಧರ್ಮರಾಜನ ಕೋಪಾರುಣಿತ ದೃಷ್ಟಿ ನಿನ್ನ ಸೈನ್ಯವನ್ನು ಮುಟ್ಟುವ ಮುನ್ನ, ಹೋಗಿ ಸಂಧಿಯನ್ನು ಸಾಧಿಸಿಕೊಂಡು ಬದುಕು! ಭೀಮಸೇನನು ಗಜಯೂಥಗಳನ್ನು ಉರುಳಿಸಿ, ನಿನ್ನ ಸೈನ್ಯವನ್ನು ನಾಶಮಾಡು

*

ನಕುಲ-ಸಹದೇವರು ವಿಕ್ರಮಿಸಿ ರಣರಂಗದಿ ಎದುರಿಲ್ಲದೆ ವಿಹರಿಸುವರು; ಅರ್ಜುನ ನೊಮ್ಮೆಗೆ ಲಕ್ಷ ಭಟರನ್ನು ಕೊಲ್ಲುವನು; ಬೇಗ ಹೋಗಿ ಅನರ್ಥವನ್ನು ನಿಲ್ಲಿಸು! ಯಜ್ಞಯಾಗಾದಿಗಳಲ್ಲಿ ವ್ರೀಹಿಯವಗಳಿಂದ ರತ್ನಗಳನ್ನು ಕೂಡಿಸಿ ಕೊಟ್ಟ ಬಲಗೈ ಯಿಂದ ಧರ್ಮರಾಜನು ನಿನ್ನ ಭುಜವನ್ನು ಮುಟ್ಟಿ, ನೀನಿತ್ತ ಸಂಧಿಯ ಹಸ್ತವನ್ನು ಹರ್ಷದಿಂದ ಸ್ವೀಕರಿಸುವನು. ನಿನಗೆ ಸಮಾನವಯನಾದ ವೃಕೋದರನೂ ರತ್ನಾಂಗುಲೀಶೋಭಿತವಾದ ಹಸ್ತದಿಂದ ನಿನ್ನ ಕೈಪಿಡಿದು ಲಾಲಿಸುವನು. ಅರ್ಜುನ ಯಮಳರು ನಮಸ್ಕರಿಸಲು ಆಶೀರ್ವದಿಸು! ನೀವೀರ್ವರೂ ಶಾಂತರಾದುದನ್ನು ನೋಡಿ, ಎಲ್ಲ ರಾಜರೂ ಆನಂದದಿಂದ ತುಂದಿಲರಾಗುವಂತಾಗಲಿ! ಭ್ರಾತೃಭಾವ ವನ್ನು ಬೆಳಸು!' ಎಂದು ಪ್ರೇರಿಸಿದರು.

ಶ್ರೀಕೃಷ್ಣಾದಿಗಳ ವಚನಗಳನ್ನು ಕೇಳಿ ದುರ್ಯೋಧನನು ರೋಷದಿಂದ ವಾಸು ದೇವನಿಗಿಂತೆಂದನು—'ಕೃಷ್ಣ! ಚೆನ್ನಾಗಿ ವಿಚಾರಿಸದೆ, ನನ್ನನ್ನೊಬ್ಬನನ್ನೇ ನಿಂದಿಸು ವುದು ನಿನಗೆ ಯುಕ್ತವಲ್ಲ. ನಿನಗೆ ಪಾರ್ಥರು ಭಕ್ತರಿರಬಹುದು; ಆದರೆ ನಮ್ಮ ಬಲಾಬಲಗಳನ್ನರಿತು ಮಾತನಾಡದೆ ಅವರೇ ಹೆಚ್ಚೆಂದು ನೀವೆಲ್ಲರೂ ಕೊಚ್ಚು ತ್ತಿರುವುದು ಆಶ್ಚರ್ಯವಾಗಿದೆ. ನನ್ನಿಂದ ಆಗಿರುವ ಅನ್ಯಾಯವಾದರೂ ಏನು? ಏಕೆ ನೀವೆಲ್ಲರೊಟ್ಟಿಗೂಡಿ ನನ್ನನ್ನು ದ್ವೇಷಿಸುತ್ತಿರುವಿರಿ? ಪಾಂಡವರು ಪ್ರೀತಿ ಯಿಂದ ತಾವಾಗಿ ಬಂದು ಜೂಜಾಡಿ, ಶಕುನಿಗೆ ಸೋತರೆ ನಂದೇನಪರಾಧ? ಸೋತ ದ್ರವ್ಯವನ್ನೂ ಆಗಲೇ ನಾವು ಹಿಂದಿರುಗಿಸಿ ಕೊಡಲಿಲ್ಲವೇ? ಮತ್ತೆ ಸೋತು ವನ ವನ್ನು ಸೇರಿದಮೇಲೆ ಇನ್ನು ರಾಜ್ಯವೆಲ್ಲಿದೆ ಅವರಿಗೆ? ಪಾಂಡವರು ಸೃಂಜಯರು ಕಲೆತು ಧಾರ್ತರಾಷ್ಟ್ರರನ್ನು ಕೊಲ್ಲಲೆಣಿಸುವುದಾವ ನ್ಯಾಯ? ಬೆದರಿಸಿದರೆ ಹೆದರಿ ನಾವು ಇಂದ್ರನಿಗೂ ನಮಸ್ಕರಿಸುವುದಿಲ್ಲ; ಯುದ್ಧಮಾಡಿ ಸಾಯುವೆವಾಗಲಿ, ರಾಜ್ಯ ವನ್ನು ಕೊಡುವುದಿಲ್ಲ. ಭೀಷ್ಮ-ದ್ರೋಣ-ಕೃಪ-ಕರ್ಣರು ದೇವತೆಗಳಿಗೂ ಅಜೇಯ ರಾಗಿರುವರು. ಅವರು ನನಗೆ ಬೆಂಬಲಿಗರಾಗಿರುವರು. ಸತ್ತರೆ ವೀರಸ್ವರ್ಗವಿದೆ! ಗೆದ್ದರೆ ನಿಷ್ಕಂಟಕ ರಾಜ್ಯವೈಭವವಿದೆ. ಯಾವುದಾದರೂ ನಮಗೆ ವ್ಯಸನವಲ್ಲ. ಕಾಷ್ಠ ದಂತೆ ಮುರಿದು ಬೀಳುವೆವಾಗಲಿ ಬಾಗುವವರಲ್ಲ ಕೌರವರು. ಮಾತಂಗಋಷಿಯೂ ಅದೇ ಕ್ಷತ್ರಿಯ ಲಕ್ಷಣವೆಂದು ಹೇಳಿರುವನು. ನನಗೂ ಅದೇ ಸರಿ ಎಂದು ತೋರು ತ್ತಿದೆ. ನಾನು ಜೀವದಿಂದಿರುವವರೆಗೂ ಪಾಂಡವರಿಗೆ ರಾಜ್ಯವನ್ನು ಕೊಡಲಾರೆನು. ಧೃತರಾಷ್ಟ್ರನು ಜೀವದಿಂದುಳಿದಿರಲು ರಾಜ್ಯವಾರದೂ ಅಲ್ಲ. ಅವನ ರಾಜ್ಯವನ್ನು ನಾನೆಂತು ಕೊಡಲಿ? ಹಿಂದೆ ಕೊಟ್ಟಂತೆ ಮತ್ತೆ ಕೊಡಲು ಯತ್ನಿಸುವ ರಾಜನನ್ನೂ ತಡೆಯದೆ ಸುಮ್ಮನಿರಲು ಆಗಿನಂತೆ ನಾನು ಬಾಲನಲ್ಲ. ನನಗೆ ಯಾರ ಭಯವೂ ಇಲ್ಲ. ಕೇಶವ! ಒಂದು ಸೂಜಿಯ ಕೊನೆಗೆ ಹತ್ತಿಬರುವ ಮಣ್ಣನ್ನೂ ನಾನಾಗಿ ಕೈಯೆತ್ತಿ ಪಾಂಡವರಿಗೆ ಕೊಡುವುದಿಲ್ಲ' ಎಂದನು.

ದುರ್ಯೋಧನನ ಪರುಷವಚನವನ್ನಾಲಿಸಿ ಶ್ರೀಕೃಷ್ಣನು ಕುಪಿತನಾದನು. ಪುಂಡರೀಕಾಕ್ಷನು ಅರುಣನೇತ್ರನಾಗಿ, 'ದುರ್ಯೋಧನ! ರಣರಂಗದಿ ವೀರಶಯನ ವನ್ನು ಬಯಸುವೆ! ಅದೇ ನಿನಗೆ ಸಿಕ್ಕೀತು! ಸ್ಥಿರನಾಗು, ಘೋರಯುದ್ಧದಲ್ಲಿ! ಸ್ವಲ್ಪವಲ್ಲ, ಸರ್ವ ರಾಜ್ಯವನ್ನೂ ಪಾಂಡವರೇ ಪಡೆಯುವರು. ನೀನಾರು ಕೊಡಲು? ಅವರ ಸಿರಿಯನ್ನು ಕಂಡು ಉರಿದಲ್ಲವೇ ನೀನೂ ಜೂಜಾಡಿಸಿದುದು? ನಿನಗಾಗಿ ಶಕುನಿಯಾಡಿದುದು ಮೋಸ ಮಾಡಲಲ್ಲವೇ? ಅಮಾಯಿಕರು, ಧರ್ಮವಂತರು ಆದ ಪಾಂಡವರನ್ನು ಮಾಯದಿಂದ, ಅಧರ್ಮದಿಂದ, ಸುಜನನಿಷಿದ್ಧವಾದ ದ್ಯೂತ ದಲ್ಲಿ ಗೆದ್ದು, ನಂದೇನಪರಾಧವೆಂಬುವ ಭ್ರಾತೃದ್ರೋಹಿಯನ್ನು ಇನ್ನೊಬ್ಬರನ್ನಾದರೂ ಕಂಡಿರುವರೆ? ಕುಲೀನಳು, ಶೀಲವತಿ, ಮನಸೊಸೆಯಾದ ಪಾಂಡವ ಮಹಿಷಿ ಯನ್ನಂತು ಅವಮಾನಿಸಿ, ಅಷ್ಟು ಪರುಷವಾಗಿ ಮಾತಾಡಿದ ಮಹಾಪರಾಧವನ್ನೆಲ್ಲರೂ ಮರೆತಿರುವರೇ? ವನವಾಸಕ್ಕೆಂದು ತೆರಳುವ ಧರ್ಮಪಾಶಬದ್ಧರಾದ ಪಾಂಡವರನ್ನು ಅಣಕಿಸಿದ ದುಶ್ಶಾಸನನ ದುಷ್ಕೃತ್ಯವನ್ನು ಸಹಿಸಬಹುದೆ? ಅನಾರ್ಯರಂತೆ ಕರ್ಣ-ದುಶ್ಶಾಸನರು ನುಡಿದ ಕಟು ವಚನಗಳ ಫಲವನ್ನವರು ಉಣ್ಣದಿರಲಾಗುವುದೇ? ಅರಗಿನ ಮನೆಯಲ್ಲಿ ಸುಟ್ಟೆ! ಭೀಮನಿಂದ ಕುಂತೀ ಕುಂತೀಸುತರು ಪಾರಾದರು. ಏಕಚಕ್ರದಿ ಪ್ರಚ್ಛನ್ನರಾಗಿ ಬಿಕ್ಕೆ ಬೇಡುವಂತೆ ಮಾಡಿದೆ! ವಿಷವಿಟ್ಟೆ! ಹಾವು ಗಳನ್ನು ಮೈಮೇಲೆ ಬಿಟ್ಟೆ! ಒಂದೇ? ಎರಡೇ? ನೀ ಮಾಡದ ನೀಚತನ ಉಂಟೆ? ಸುಮ್ಮನೇ ಪಾಂಡವರನ್ನು ದ್ವೇಷಿಸುತ್ತಿರುವೆ! ನಂದೇನು ತಪ್ಪೆಂದು ಕೇಳುವ ನಿನ್ನನ್ನು ಕಂಡು ಜಿಗುಪ್ಸೆಯಾಗುತ್ತಿದೆ. ಅವರು ಸಮಯಬಂಧವನ್ನು ಮುಗಿಸಿ ಬಂದು ಕೇಳುವ ಅವರ ರಾಜ್ಯವನ್ನು ಅವರಿಗೆ ಕೊಡುವುದಿಲ್ಲವೆಂಬುದಪರಾಧವಲ್ಲವೆ? ರಣದಲ್ಲಿ ತೊಡೆ ಬಿರಿದು ಬಿದ್ದಾಗ, ಎಲ್ಲ ರಾಜ್ಯವೂ ಪಾಂಡವರದೇ ಆಗುವುದು. ಅದೂ ನಿನ್ನ ತಪ್ಪಿನಿಂದೇ ತಿಳಿ! ಶಮಿಸಿ, ಸಮಾಧಾನದಿಂದ ಬದುಕೆಂದು ಪೇಳುವ ಹಿರಿಯರ ಮಾತನ್ನು ತಿರಸ್ಕರಿಸುವ ನಿನಗೆ ಶ್ರೇಯವೆಂತು? ಹೇಳು.' ಎಂದನು.

ಆಗ ದುಶ್ಶಾಸನನು, 'ಅಣ್ಣ! ಸಂಧಿಮಾಡಿಕೊಳ್ಳದೆ ಇರುವ ನಿನ್ನನ್ನು ಸೆರೆ ಯಲ್ಲಿ ಕಟ್ಟಿಟ್ಟು, ನನ್ನನ್ನೂ ಕರ್ಣನನ್ನೂ ಬಂಧಿಸಿ, ಈ ಮುದುಕರು ಕೃಷ್ಣನ ಮಾತಿಗೆ ಮರುಳಾಗಿ, ಪಾಂಡವರಿಗೆ ರಾಜ್ಯಭಾಗವನ್ನು ಕೊಡುವರೆಂದು ತೋರು ತ್ತಿದೆ!' ಎಂದನು. ಆ ಮಾತನ್ನು ಕೇಳಿ, ಕಿಡಿಕಿಡಿಯಾದ ದುರ್ಯೋಧನನು ಹೆಬ್ಬಾವಿನಂತೆ ಬುಸುಗುಟ್ಟುತ್ತಾ, ಎಲ್ಲ ಹಿರಿಯರನ್ನೂ ಕೃಷ್ಣನನ್ನೂ ತೃಣೀಕರಿಸಿ, ಸಭಾ ಮರ್ಯಾದೆಯನ್ನು ಉಲ್ಲಂಘಿಸಿ, ಅಲ್ಲಿಂದ ಎದ್ದುಹೋದನು. ಕರ್ಣ-ಶಕುನಿ-ದುಶ್ಶಾಸನರೂ, ರಾಜರೂ ಅವನನ್ನನುಸರಿಸಿ ಸಭಾತ್ಯಾಗವನ್ನು ಮಾಡಿದರು.

ನಿರ್ಲಜ್ಜನು ದುರಭಿಮಾನಿಯು, ಅವಿವೇಕಿಯು ಆದ ದುರ್ಯೋಧನನ ಅಕೃತ್ಯ ವನ್ನು ಕಂಡು ಶಾಂತನವನು 'ಇಂತಹ ದುಸ್ಸಾಹಸಿಯನ್ನು ರಾಜನಾಗಿ ಪಡೆದ ನಮ ಗಿಂತ ನಿರ್ಭಾಗ್ಯರಿಲ್ಲ. ಈ ದುರಾತ್ಮನಿಗೆ ತನಗೆ ಹಿತವಾವುದೋ ಹಿತರಾರೋ ಏನೂ

ಗೊತ್ತಿಲ್ಲ. ಕ್ರೋಧ ಲೋಭ ವಶನಾದ ಇವನಿಂದ ಸರ್ವ ಕ್ಷತ್ರಿಯ ಕುಲ ನಾಶ ವಾಗುವುದೆಂದು ಕಾಣುತ್ತಿದೆ!' ಎಂದು ಚಿಂತಿಸಿದನು. ಶ್ರೀಕೃಷ್ಣನು ಉಳಿದ ಭೀಷ್ಮ-ಧೃತರಾಷ್ಟ್ರಾದಿಗಳನ್ನು ಕಂಡು, 'ಇದು ಬಹಳ ಅನ್ಯಾಯ! ಐಶ್ವರ್ಯಮದಮತ್ತನಾದ ರಾಜನು ಉದ್ವೃತ್ತನಾಗಿ ನಡೆದರೆ, ಅವನನ್ನು ಬಂಧಿಸಿ, ಶಾಸಿಸುವುದು ಶ್ರೇಯ-ಸ್ಕರವು ಧರ್ಮಸಮ್ಮತವು ಆಗಿದೆ. ತಂದೆಯಾದ ಉಗ್ರಸೇನನನ್ನು ಬಂಧಿಸಿ, ರಾಜ್ಯ ವನ್ನು ಕಸಿದ ಕಂಸನನ್ನು ಕೊಂದು, ನಾನು ಸರ್ವಯಾದವರ ಕ್ಷೇಮವನ್ನು ಸಾಧಿಸ ಲಿಲ್ಲವೇ ? ಕುಲವೇ ಒಬ್ಬನಿಂದ ಹಾಳಾಗುವಾಗ, ಒಬ್ಬನನ್ನು ಕೊಂದು ಕುಲವನ್ನು ಕಾಪಾಡಬೇಕು. ದೇವಾಸುರರು ಕಡಿದಾಡಿ ಲೋಕವನ್ನೇ ನಾಶಪಡಿಸುವಂತಾದಾಗ ಪಿತಾಮಹನ ಆಜ್ಞೆಯಿಂದ ಧರ್ಮನು ದೈತ್ಯದಾನವರನ್ನು ಧರ್ಮವರುಣಪಾಶಗಳಿಂದ ನಿರ್ಬಂಧಿಸಿ, ವರುಣಲೋಕದಲ್ಲಿಡಲಿಲ್ಲವೇ ? ಅಂತೆಯೇ ದುಷ್ಟ ಚತುಷ್ಟಯವನ್ನು ಬಂಧಿಸಿ, ಪಾಂಡವರಿಂದ ಸಂಧಿ ಮಾಡಿಕೊಂಡು, ಲೋಕನಾಶವಾಗದಂತೆ ಉಳಿಸಿ !' ಎಂದನು.

ಆ ಮಾತಿಗೆ ಧೃತರಾಷ್ಟ್ರನು ನೊಂದು ವಿದುರನಿಂದ ಗಾಂಧಾರಿಯನ್ನು ಕರೆ ತರಿಸಿ, ಎಲ್ಲ ವಿಷಯವನ್ನೂ ಆಕೆಗೆ ತಿಳಿಸಿದನು. ಗಾಂಧಾರಿಯು, 'ರಾಜನ್ ! ನಿನ್ನ ಮಗನು ರಾಜ್ಯಕಾಮುಕನು, ಧರ್ಮದೂರನೂ ಆಗಿರುವನು. ಧರ್ಮಹೀನನಿಗೆ ರಾಜ್ಯವನ್ನಾಳುವ ಅಧಿಕಾರವಿಲ್ಲ. ಪಾಪರತನಾದ ಮಗನನ್ನು ದಂಡಿಸದೆ, ಅವನಂತೆ ನಡೆವ ನಿನ್ನನ್ನು ನಿಂದಿಸಬೇಕಾಗಿದೆ. ಈಗ ಅವನಿಗೆ ಹೇಳಿ, ರಾಜ್ಯಭಾಗವನ್ನು ಕೊಡಿಸುವುದಾರಿಂದಲೂ ಸಾಧ್ಯವಾಗದು. ಸೋದರರು ಬಡಿದಾಡುತ್ತಿರುವುದನ್ನು ನೋಡಿ, ಕುಲ ಶತ್ರುಗಳು ನಗುವಂತಾಯಿತು. ಸಾಮ-ಭೇದಗಳಿಂದ ಬಾಗದ ರಾಜ್ಯ ಮತ್ತನನ್ನು ದಂಡದಿಂದಲೇ ಬಾಗಿಸಿಡಬೇಕು. ಅದು ನಿನ್ನಿಂದಾಗದು. ಕರೆಸು ಆ ದುಷ್ಟಪುತ್ರನನ್ನು ! ನನಗೆ ತೋಚಿದ ಹಿತವನ್ನು ಹೇಳುವೆನು' ಎಂದಳು. ವಿದುರ ನಾಗ ದುರ್ಯೋಧನನನ್ನು ಸಭೆಗೆ ಕರೆತಂದನು. ಗಾಂಧಾರಿಯು ಅವನನ್ನು ಕರೆದು, ಕೂಡಿಸಿಕೊಂಡು ಇಂತೆಂದಳು—

'ವತ್ಸ ದುರ್ಯೋಧನ ! ನಿನಗೆ ಹಿತವನ್ನು ಪೇಳುತ್ತಿರುವೆನು. ಭೀಷ್ಮಾದಿ ವೃದ್ಧರ ವಚನದಂತೆ ನಡೆ ! ಸಂಧಿಮಾಡಿಕೊಂಡು ನೀವೆಲ್ಲರೂ ಸುಖವಾಗಿರಲು ನೋಡಿ ನಾವೂ ನಿಶ್ಚಿಂತರಾಗುವೆವು. ರಾಜ್ಯವನ್ನು ಧರ್ಮದಿಂದ ಪಾಲಿಸಬಹುದು; ಕಾಮದಿಂದಲ್ಲ. ಪ್ರಜರನ್ನು ಧರ್ಮದಿಂದ ರಂಜಿಸಬಹುದು; ಅರ್ಥದಿಂದಲ್ಲ. ಇಂದ್ರಿಯ ದಾಸನಿಗೆ ಸಿರಿ ಶಾಶ್ವತವಲ್ಲ. ಮನೋನಿಗ್ರಹವಂತನಾದ ಬುದ್ಧಿವಂತನಿಗೆ ರಾಜ್ಯ ಸುಖವು ಶಾಶ್ವತವು. ಕಾಮ-ಕ್ರೋಧಗಳಿಗೆ ವಶನಾಗಬೇಡ ! ಅವು ಕೆಟ್ಟ ಕುದುರೆ ಗಳಂತೆ ಪಾಪಗರ್ತದಲ್ಲಿ ಕೆಡಹುವವು. ರಾಜನು ತನ್ನ ಮನವನ್ನು ಗೆದ್ದು, ಆಮೇಲೆ ಅಮಾತ್ಯರನ್ನೂ ಪ್ರಜರನ್ನೂ ವಶದಲ್ಲಿ ತರಲಹುದಾಗಲಿ, ತನ್ನ ಮನೋನಿಗ್ರಹವಿಲ್ಲದೆ ಪರರನ್ನು ನಿಗ್ರಹಿಸಲಾಗದು. ಕಾಮ-ಕ್ರೋಧವಶನಾದವನಿಗೆ ಸ್ವರ್ಗದ್ವಾರವು

ಮುಚ್ಚಲ್ಪಡುವುದು. ವಿಷಯರಾಗರಹಿತನಿಗೆ ಅವೇ ಭಯಪಟ್ಟು ದೂರ ಸರಿವವು. ಕಾಮ ಕ್ರೋಧ-ಲೋಭಗಳನ್ನು ಪರಿತ್ಯಜಿಸು! ಪಾಂಡವರು ಶೂರರು, ಮಹಾ ಪ್ರಾಜ್ಞರು. ಅವರಿಂದ ಕೂಡಿ ಸುಖವಾಗಿ ಬಾಳು! ಯುದ್ಧದಿಂದ ಕಲ್ಯಾಣವಿಲ್ಲ. ಧರ್ಮಾರ್ಥಗಳನ್ನು ಕೆಡಿಸುವ ಯುದ್ಧದಲ್ಲಿ ಹಠವಿಡಬೇಡ! ಕೇಶವನು ಉಭಯರಿಗೂ ಬೇಕಾದವನು. ಆ ಮಹಾನುಭಾವನ ಮಾತಿನಂತೆ ಪಾಂಡವರಿಗೆ ರಾಜ್ಯವನ್ನು ಕೊಡು! ಪೃಥಿವಿಯ ಅರ್ಧಭಾಗದಿಂದ ತೃಪ್ತನಾಗು! ಅಷ್ಟು ಸಾಲದೇ ನಿನಗೆ ನಿನ್ನವರಿಗೆ? ಕೊಡದಿರೆ ಪೂರಾ ಕಳೆದುಕೊಳ್ಳುವಂತಾದೀತು! ಹದಿಮೂರು ವರ್ಷ ಗಳಿಂದ ಪೀಡಿಸಿದುದು ಸಾಕು! ಇನ್ನಾದರೂ ದುರ್ಜನರನ್ನು ದೂರೀಕರಿಸಿ, ಸುಜನ ರಾದ ಪಾಂಡವರನ್ನು ಸೇರು! ಅವರು ನಿನ್ನ ಸೋದರರು. ಭೀಮಾರ್ಜುನ ಭೀಷ್ಮ ದ್ರೋಣ-ಕೃಪ-ಧೃಷ್ಟದ್ಯುಮ್ನರು ಕುಪಿತರಾದೊಡೆ ಸರ್ವಪ್ರಜರು ನಷ್ಟರಾಗು ವರು. ಪ್ರೀತಿ ಧನ ರಾಜ್ಯಗಳಿಂದ ನೀವೀರ್ವರು ಸಮರಾದರೂ, ಧರ್ಮದಿಂದ ಪಾಂಡವರು ಹೆಚ್ಚಾಗಿರುವರು. ನೀನಿಡುವ ಅನ್ನಕ್ಕಾಗಿ ಕಡಿದಾಡಿ ಸಾಯಬಲ್ಲ ರಾಗಲಿ, ಭೀಷ್ಮ-ದ್ರೋಣಾದಿಗಳು ಧರ್ಮರಾಜನನ್ನು ಸೋಲಿಸಲಾರರು. ಸಂಧಿ ಮಾಡಿಕೋ!'

ದುರ್ಯೋಧನನು ತಾಯಿಯ ಮಾತನ್ನು ನಿರ್ಲಕ್ಷಿಸಿ, ಮತ್ತೆ ಸಭೆಯನ್ನು ತ್ಯಜಿಸಿ ದನು. ದುಶ್ಶಾಸನ-ಶಕುನಿ-ಕರ್ಣರಿಂದ ಕೂಡಿ ಇಂತು ಆಲೋಚಿಸಿದನು.'ಶ್ರೀಕೃಷ್ಣನು ನಮ್ಮನ್ನು ಬಂಧಿಸದ ಮುನ್ನ, ನಾವೇ ಅವನನ್ನು ಬಂಧಿಸಿ ಸೆರೆಯಿಡೋಣ! ಅದನ್ನು ಕೇಳಿ ಪಾಂಡವರು ಎದೆ ಒಡೆದು, ನಿರುತ್ಸಾಹಿಗಳಾಗುವರು. ಹಲ್ಲು ಕಿತ್ತ ಹಾವಿನಂತಾದ ಅವರನ್ನೂ ನಿಗ್ರಹಿಸೋಣ!' ಇಂತಾಲೋಚಿಸುವ ದುಷ್ಟಚತುಷ್ಟ ಯದ ಕುಚೇಷ್ಟೆಯನ್ನು ಸಾತ್ಯಕಿಯು ತಿಳಿದು, ಕೃತವರ್ಮನಿಗೂ ತಿಳಿಸಿದನು. ಭವ-ಬಂಧ ಮೋಚಕನಾದ ಶ್ರೀಮುಕುಂದನನ್ನು ಬಂಧಿಸಲೆಣಿಸಿದ ಕಲಿ ದುರ್ಯೋಧನನು ತನ್ನನ್ನು ತಾನು ಶಾಶ್ವತತಮದಲ್ಲಿ ಬಂಧಿಸಿಕೊಂಡನು. ಸರ್ವಸಮರ್ಥನಾದ ಶ್ರೀಹರಿಗೆ ದುರ್ಯೋಧನಚಿತ್ತನಿಗ್ರಹವೇನೂ ಅಸಾಧ್ಯವಲ್ಲ. ಆದರೂ ಅಂಧಂತಮದಿ ಅವನನ್ನು ಕೆಡಹುವ ಸತ್ಯಸಂಕಲ್ಪನು ಅವನಿಂದ ತತ್ಸಾಧನವನ್ನೇ ಮಾಡಿಸಿದನು. ಕೃತವರ್ಮ ಸಾತ್ಯಕಿಯರು ಸೈನ್ಯಸಮೇತರಾಗಿ ಸಭಾದ್ವಾರದಿ ಮುತ್ತಿನಿಂತರು. ಸಾತ್ಯಕಿಯು ಶ್ರೀಕೃಷ್ಣನಿಗೆ ಅದನ್ನು ತಿಳಿಸಿದನು. ಸರ್ವಜ್ಞನಾದ ಶ್ರೀಶನು ಮೊದಲೇ ಎಲ್ಲವನ್ನೂ ಅರಿತಿದ್ದು, ಸಾತ್ಯಕಿಯ ಮಾತನ್ನಾಲಿಸಿ ನಸುನಕ್ಕನು. ಬಟ್ಟೆಯಲ್ಲಿ ಕೆಂಡವನ್ನು ಕಟ್ಟಲು ಬರುವ ಕೆಟ್ಟಸುತರ ಕುಕರ್ಮದಿಂದ ಧೃತರಾಷ್ಟ್ರ-ವಿದುರರು ನೊಂದರು. ವಿದುರನು 'ಅಣ್ಣ! ನಿನ್ನ ಮಕ್ಕಳೆಲ್ಲರೂ ಈಗಲೇ ಸಾಯುವರು. ಪುಂಡರೀಕಾಕ್ಷನನ್ನು ಕಟ್ಟಲೆಣಿಸುವ ದುಷ್ಟರು ಪಾವಕಜ್ವಾಲೆಗೆ ಬಿದ್ದ ಪತಂಗಗಳಂತೆ ನಾಶವಾಗುವರು. ಜನಾರ್ದನನು ಎಂದಿಗೂ ನಿಂದ್ಯಕರ್ಮವನ್ನು ಮಾಡುವವನಲ್ಲ; ಧರ್ಮವನ್ನು ಬಿಡುವವನಲ್ಲ; ಬೇಕಾದರೆ ಇಲ್ಲಿರುವ ರಾಜರನ್ನೆಲ್ಲರನ್ನೂ ಒಂದೇಕ್ಷಣ

ದಲ್ಲಿ ಯಮಸದನಕ್ಕಟ್ಟಬಲ್ಲ ಕೃಷ್ಣನಿಗೆದುರಿಲ್ಲ' ಎಂದು ನುಡಿದಾಗ ಶ್ರೀಕೃಷ್ಣನು ಧೃತರಾಷ್ಟ್ರನಿಗಿಂತೆಂದನು—

'ರಾಜನ್! ಪಾಂಡವ ವಿರೋಧದಿಂದ ನಿನ್ನ ಸುತರು ಕೆಡುತ್ತಿರುವರು. ನನ್ನನ್ನು ಕಟ್ಟಲೆಣಿಸುವ ಇವರನ್ನು ಇವರಿಗೆ ಸಹಾಯರಾಗಿ ಬರುವ ಮಿತ್ರರನ್ನಾಗಲಿ ಬಿಡದೆ ಸೋಲಿಸಿ, ಕೊಂದು, ಪಾರ್ಥರನ್ನೀಗಲೇ ಜಯಶಾಲಿಗಳೆನಿಸುವೆನು. ಆದರೆ ದುರ್ಯೋಧನನ ಕ್ರೋಧ ವಿಷಫಲವನ್ನು ಎಲ್ಲರೂ ಉಣ್ಣುವಂತಾಗಲಿ ಎಂದು ಸುಮ್ಮನಿರಬೇಕಾಗಿದೆ. ಬರಲಿ ನಿನ್ನ ಸುತರು!' ಎಂದ ಶ್ರೀಶನ ನುಡಿಗೆ ಹೆದರಿ ಧೃತರಾಷ್ಟ್ರನು, ವಿದುರನನ್ನು ಕಳಿಸಿ, ಸಮಿತ್ರಪರಿವಾರನಾದ ದುರ್ಯೋಧನನ್ನು ಸಭೆಗೆ ಕರೆಯಿಸಿದನು. ಮತ್ತು ಅವನನ್ನು ದಂಡಿಸಿ ಇಂತೆಂದನು. 'ಪಾಪಿ! ಕ್ಷುದ್ರರ ಸ್ನೇಹದಿಂದ ಪಾಪಕರ್ಮವನ್ನೆಸಗಲಿರುವೆ! ನಿನಗಿದು ಒಳಿತಲ್ಲ ಮತ್ತು ಸಾಧ್ಯವೂ ಅಲ್ಲ. ದೇವತೆಗಳಿಗೂ ಅಜೇಯನಾದ ಶ್ರೀಕೃಷ್ಣನನ್ನು ಕಟ್ಟಲೆಣಿಸುವ ನಿನ್ನಂತಹ ಮೂರ್ಖನಿಲ್ಲ. ದೇವ ಅಸುರ ನರ ಗಂಧರ್ವರೂ ಸಹಿಸಲಾರದ ಶ್ರೀಕೃಷ್ಣನ ಪರಾಕ್ರಮ ನಿನಗೆ ಗೊತ್ತಿಲ್ಲ. ಕೈಯಿಂದ ಚಂದ್ರನನ್ನು ಹಿಡಿಯಲಾಗದು, ಬಟ್ಟೆಯಲ್ಲಿ ಗಾಳಿಯನ್ನು ಕಟ್ಟಲಾಗದು, ಪೃಥಿವೀಮಂಡಲವನ್ನು ತಲೆಯಮೇಲೆತ್ತಲಾಗದು, ಅಂತೆಯೇ ಶ್ರೀಕೃಷ್ಣನನ್ನು ಕಟ್ಟುವುದೂ ಅಶಕ್ಯವೆಂದು ತಿಳಿ!'

ವಿದುರನು 'ದುರ್ಯೋಧನ! ದ್ವಿವಿದನೆಂಬ ವಾನರೇಂದ್ರನು ಶ್ರೀಕೃಷ್ಣನನ್ನು ಹಿಡಿಯಲೆಣಿಸಿ, ವಿಫಲಪ್ರಯತ್ನನಾದನು; ಅವನನ್ನು ಹಿಡಿಯಲು ನರಕನಿಗಾಗಲಿಲ್ಲ. ಮಹಾಸುರರ ಕೈಲಾಗದ ಕೃಷ್ಣಬಂಧನವನ್ನು ನೀನು ಮಾಡಲೆಣಿಸಿ ಸಾಯುವೆ! ಪೂತನೆಯನ್ನು ಘಾತಿಸಿ, ಗೋವರ್ಧನಗಿರಿಯನ್ನೆತ್ತಿ, ಅರಿಷ್ಟಮುಷ್ಟಿಕಾದಿ ಮಹಾದೈತ್ಯರನ್ನು ಕೊಂದು, ಕಂಸನನ್ನು ಸಂಹರಿಸಿ, ಶಿಶುಪಾಲನನ್ನು ನಿಗ್ರಹಿಸಿದ ಕೃಷ್ಣನಿಗೆ ನೀನು ಸಮನಲ್ಲ. ಪಾರಿಜಾತವನ್ನು ತರುವಾಗ ಇಂದ್ರ ಶಂಕರರೇ ಇವನಿಗೆ ವಿರೋಧಿಸಿ ಸೋತುಹೋಗಿರುವರು. ಸರ್ವಜಗತ್ಕರ್ತನು, ಕರ್ಮಲೇಪರಹಿತನು, ನಿಮಿತ್ತಕಾರಣನು ಆದ ಶ್ರೀಕೃಷ್ಣನು ಬೇಕಾದಂತೆ ಮಾಡಬಲ್ಲನು. ಅಸಹ್ಯವಿಕ್ರಮನಾದ ಗೋವಿಂದನನ್ನು ನೀನೆಂತು ತಿಳಿಯುವೆ? ಅವನನ್ನೆದುರಿಸಿ ಸಾಮಾತ್ಯನಾಗಿ ಸಾಯುವೆ!' ಎಂದನು.

ಶ್ರೀಕೃಷ್ಣನು ಧೃತರಾಷ್ಟ್ರ ದುರ್ಯೋಧನರನ್ನು ಉದ್ದೇಶಿಸಿ ನಾನೊಬ್ಬನೇ ಇರುವೆನೆಂದು ಕಟ್ಟಬರುವ ನಿನ್ನ ಅಜ್ಞಾನ ಘನವಾಗಿದೆ. ನಿನ್ನ ದುರ್ಬುದ್ಧಿ ಅಸಹ್ಯವಾಗಿದೆ. ನೋಡಿಲ್ಲಿ! ಎಲ್ಲ ಪಾಂಡವರು, ಅಂಧಕವೃಷ್ಣಿಗಳು, ಆದಿತ್ಯವಸುರುದ್ರರು, ಮಹರ್ಷಿಗಳು ಎಲ್ಲರೂ ನನ್ನಲ್ಲಿರುವರು.' ಎಂದು ಮೇಘಗರ್ಜನದಂತೆ ನಕ್ಕು, ತನ್ನ ವಿಶ್ವರೂಪವನ್ನು ತೋರಿ ನಿಂತನು. ಆ ದಿವ್ಯರೂಪದಿಂದ ಉರಿಯುತ್ತಿದ್ದ ದೇವತೆಗಳು ಹೊರಬರುತ್ತಿದ್ದರು. ಬ್ರಹ್ಮನು ಲಲಾಟದಲ್ಲಿಯು, ರುದ್ರನು ಮನಸ್ಸಿನಲ್ಲಿಯು, ಲೋಕಪಾಲರು ಭುಜಗಳಲ್ಲಿಯು, ಅಗ್ನಿಯು ಮುಖದಲ್ಲಿಯು, ಆದಿತ್ಯ ವಸು ರುದ್ರ

ವಿಶ್ವೇದೇವ ಸಿದ್ಧ ಸಾಧ್ಯ ಮರುತ್ತುಗಳು ಮಿಕ್ಕ ಅವಯವಗಳಲ್ಲಿಯೂ, ಆಶ್ರಯಿಸಿ ನಿಂತು ಕಂಗೊಳಿಸಿದರು. ಬಲಗೈಯಿಂದ ಅರ್ಜುನನು, ವಕ್ಷಸ್ಥಲದಿಂದ ಭೀಮಸೇನನು ಎಡಗೈಯಿಂದ ಬಲರಾಮನು, ಎದೆಯಿಂದ ಧರ್ಮರಾಜನು, ಬೆನ್ನಿಂದ ನಕುಲ-ಸಹದೇವರು, ಮಿಕ್ಕ ವೀರರು ಮುಂಭಾಗದಿಂದಲು ಪ್ರಾದುರ್ಭವಿಸಿ, ದಿವ್ಯೋದ್ಯತಾಯುಧ ಪಾಣಿಗಳಾಗಿ ಕಂಡರು. ಶಂಖ ಚಕ್ರ ಗದಾ ಶಕ್ತಿ ಶಾರ್ಙ್ಗ ನಂದಕಲಾಂಗಲಾದಿ ಆಯುಧಗಳನ್ನೆತ್ತಿ ಹಿಡಿದ ಶ್ರೀಕೃಷ್ಣನ ಮುಖ ನೇತ್ರ ಶ್ರೋತ್ರ ನಾಸಿಕಾದಿ ವಿವರಗಳಿಂದ ಭಯಂಕರಾಗ್ನಿಜ್ವಾಲೆಗಳು ಹೊರಹೊಮ್ಮಿ ಬರುತ್ತಿದ್ದವು. ರೋಮಕೂಪಗಳಿಂದ ದುಸ್ಸಹಕಿರಣಗಳು ಹೊರಡುತ್ತಿದ್ದವು.

ಇಂತಹ ಕೇಶವನ ಭಯಂಕರ ರೂಪವನ್ನು ನೋಡಲಾರದೆ ರಾಜರು ಕಣ್ಣುಗಳನ್ನು ಮುಚ್ಚಿ ನಿಂತರು. ಭೀಷ್ಮ-ದ್ರೋಣ-ವಿದುರ-ಸಂಜಯರು, ಋಷಿಗಳು ಶ್ರೀಶನ ದಯದಿಂದ ದಿವ್ಯ ನೇತ್ರಗಳನ್ನು ಪೊಂದಿ, ಮಾಧವನ ಮಹದಾಶ್ಚರ್ಯಕರ ರೂಪವನ್ನು ಯಥಾಮತಿ ನೋಡಿದರು. ದೇವದುಂದುಭಿಗಳಂಬರದಿ ಮೊಳಗಿದವು. ದಿವ್ಯವನಿತೆಯರು ಪುಷ್ಪವೃಷ್ಟಿಯನ್ನು ಸುರಿಸಿ, ಶ್ರೀಹರಿಯನ್ನು ಕೊಂಡಾಡಿದರು.

ಧೃತರಾಷ್ಟ್ರನು ಶ್ರೀಕೃಷ್ಣನನ್ನು ಬೇಡಿ, ದಿವ್ಯನೇತ್ರಗಳನ್ನು ಪಡೆದು ಅದ್ಭುತವಾದ ವಿಶ್ವರೂಪವನ್ನು ಕಂಡನು. ಅದನ್ನು ಕಂಡು ಎಲ್ಲರೂ ಆಶ್ಚರ್ಯಭರಿತಾದರು. ಶ್ರೀಕೃಷ್ಣನು ಮತ್ತೆ ಯದುಸುಂದರನಾಗಿ ನಿಂತನು. ವಿಶ್ವರೂಪದ ಉಪಸಂಹಾರವಾದನಂತರ, ಧೃತರಾಷ್ಟ್ರನನ್ನು ಅವನ ಪ್ರಾರ್ಥನೆಯಂತೆ ಮತ್ತೆ ಅಂಧನನ್ನಾಗಿಸಿ, ಶ್ರೀಶನು, ಸಾತ್ಯಕಿ ಕೃತವರ್ಮರೊಡನೆ ಅಲ್ಲಿಂದ ಹೊರಡಲನುವಾದನು. ವೇದವ್ಯಾಸ ಪರಶುರಾಮಾದಿ ಋಷಿಗಳು ಅಂತರ್ಹಿತರಾದರು. ಕೇಶವನನ್ನು ಹಿಂಬಾಲಿಸಿ ಸರ್ವ ರಾಜರೂ ನಡೆದುಬಂದರು. ಅವರನ್ನಾರನ್ನೂ ಲೆಕ್ಕಿಸದೆ ಶ್ರೀಶನು ತನ್ನ ರಥವನ್ನಾರೋಹಿಸಿ, ಸಾತ್ಯಕಿ ಕೃತವರ್ಮರ ರಥವು ಹಿಂದೆ ಬರುತ್ತಿರಲು ಹೊರಟನು.

ಆಗ ಧೃತರಾಷ್ಟ್ರನಲ್ಲಿಗೆ ಬಂದು 'ಶ್ರೀಕೃಷ್ಣ ! ನನ್ನ ಕೈಲಾದಷ್ಟು ಪ್ರಯತ್ನಿಸಿದೆನು ಸಂಧಿಗಾಗಿ; ನಿನಗೆ ಗೊತ್ತೇ ಇದೆ. ನನ್ನಲ್ಲಿ ಕೋಪಿಸಬೇಡ ದೇವ ! ನನಗೆ ಪಾಂಡವರಲ್ಲಿ ದ್ರೋಹವೆಸಗಬೇಕೆಂದಿಲ್ಲ' ಎಂದನು. ಆಗ ಕೃಷ್ಣನು 'ಸರಿ ! ಭೀಷ್ಮ-ದ್ರೋಣ ವಿದುರರ ಮುಂದೆ ಮತ್ತು ನಿನ್ನ ಸಮಕ್ಷಮದಲ್ಲಿ ಮಂದಬುದ್ಧಿಯಾದ ದುರ್ಯೋಧನನು ನಡೆದ ರೀತಿಯನ್ನೆಲ್ಲರರಿತಿರುವಿರಿ. ಇರಲಿ, ಧರ್ಮರಾಜನನ್ನು ಸೇರಪೋಗುವೆನು' ಎಂದು ಶ್ರೀಹರಿಯು ಅವರನ್ನೆಲ್ಲ ಬೀಳ್ಕೊಂಡು, ತನ್ನ ಸೋದರತ್ತೆಯಾದ ಕುಂತೀದೇವಿಯ ಮಂದಿರವನ್ನು ಸೇರಿದನು.

## ಶ್ರೀಕೃಷ್ಣ-ಕುಂತೀ ಸಮಾಗಮ; ವಿದುಲೋಪಾಖ್ಯಾನ

ಶ್ರೀ ವೈಶಂಪಾಯನನು ಜನಮೇಜಯನಿಗೆ ಹೇಳಿದನು — ರಾಜನ್ ! ಶ್ರೀಶನು ಕುಂತಿಗೆ ನಡೆದುದೆಲ್ಲವನ್ನು ತಿಳಿಸಿ, 'ಅತ್ತೇ ! ನಾನು ಋಷಿವರರು

ಭೀಷ್ಮಾದಿಗಳು ಯಾರು ಹೇಳಿದರೂ ಸಂಧಿಗೊಡಂಬಡಲಿಲ್ಲ ದುರ್ಯೋಧನ. ಆ ಪಾಪಿಯು ಕಾರಣವಾಗಿ ಪ್ರಜಾಕ್ಷಯವಾಗಬೇಕಾಗಿದೆ. ಆಗಲಿ! ಹೋಗಿಬರುವೆನು. ನಿನ್ನ ಸುತರಿಗೇನು ಸಂದೇಶವನ್ನು ಕೊಡುವೆ ?' ಎಂದು ಕೇಳಿದನು.

ಕುಂತೀದೇವಿಯು 'ಕೃಷ್ಣ ! ಹೇಳಬೇಕಾದುದನ್ನೆಲ್ಲ ತಿಳಿಸಿರುವೆನು. ಬಹಳ ಧರ್ಮರತನಾಗಿ ಕೆಡಲು ನೀನು ಶ್ರೋತ್ರಿಯ ವಿಪ್ರನಲ್ಲ; ಕ್ಷತ್ರಿಯರಿಗೆ ದುಷ್ಟವಧೆಯು ವಿಹಿತವಾಗಿದೆ. ಪ್ರಜಾಪಾಲನೆಯು ದುಷ್ಟವಧದಿಂದಲೇ ಸಾಧ್ಯವಾಗಿದೆ. ಕುಬೇರನು ಪ್ರೀತನಾಗಿ ಕೊಟ್ಟ ರಾಜ್ಯವನ್ನು ಸ್ವೀಕರಿಸದೆ ಮುಚಕುಂದನು ಬಾಹುವೀರ್ಯದಿಂದ ಶತ್ರುಗಳನ್ನು ಜಯಿಸಿ, ರಾಜ್ಯವನ್ನು ಕಟ್ಟಿ, ದೇವಮಿತ್ರನೆನಿಸಿದನು. ಧರ್ಮಪಾಲಕನಾದ ರಾಜನು ಪ್ರಜರ ಧರ್ಮದ ಚತುರ್ಥಾಂಶವನ್ನು ಪೊಂದುವನು. ದಂಡನೀತಿಯನ್ನರಿತು ನಡೆಸುವ ರಾಜನು ಕೃತಯುಗವೆ ಬಂತೆನಿಸುವನು. ರಾಜನೇ ಕಾಲಕಾರಣನು; ಕಾಲವು ರಾಜಕಾರಣವಲ್ಲ. ಕೃತಯುಗದಂತೆ ಧರ್ಮದ ನಾಲ್ಕು ಪಾದಗಳನ್ನು ನಡೆಸಿ, ಅಧರ್ಮದ ನಾಲ್ಕು ಪಾದಗಳನ್ನು ತುಳಿದ ರಾಜನು ಮೋಕ್ಷವನ್ನು ಪೊಂದುವನು. ತ್ರೇತೆಯಲ್ಲಂತೆ ನಡೆಸಿ ಸ್ವರ್ಗವನ್ನೂ, ದ್ವಾಪರದಂತೆ ನಡೆಸಿ ಪುಣ್ಯವನ್ನೂ, ಕಲಿಯಂತೆ ನಡೆಸಿ ನರಕವನ್ನೂ ಪೊಂದುವನು.

'ಧರ್ಮರಾಜ ! ಹಿಂದಿನ ರಾಜರ್ಷಿಗಳಂತೆ ಕ್ಷಮಾ ದಂಡವನ್ನರಿತು ನಡೆ. ಕ್ಲೀಬನಂತೆ ಸದಾ ಕ್ಷಮಾಶೀಲನಾಗಬೇಡ. ಬಲ ದಾನ ಶೌರ್ಯ ತೇಜೋವಿರಾಜಿತನಾಗಿ, ಯಜ್ಞಶೀಲನಾಗುವೆಯೆಂದು ಬೇಡಿದೆನಾಗಲಿ, ಮಕ್ಕಳು ಷಂಡರಂತೆ ನಿಸ್ತೇಜಸ್ಕರಾಗಲಿ ಎಂದು ಹಾರೈಸಲಿಲ್ಲ. ಕ್ಷತ್ರಿಯ ಯಾಚಿಸಲಾಗದು. ನಿಮ್ಮ ತಂದೆಯ ರಾಜ್ಯಭಾಗವನ್ನು ಪಡೆಯಲು ಈಗ ದಂಡವೇ ಉಳಿದಿರುವ ಉಪಾಯ. ಪರಪಿಂಡವನ್ನು ತಿಂದು ಬದುಕಿರುವ ತಾಯಿಯ ದೀನತೆಯನ್ನು ಕಳೆಯಲೆಣಿಸದ ಮಕ್ಕಳನ್ನು ಪಡೆದ ನನ್ನಂತಹ ನಿರ್ಭಾಗ್ಯರುಂಟೇ ?

'ಹಿಂದೆ ಸಂಜಯನೆಂಬ ಸೌರಾಷ್ಟ್ರದ ರಾಜನು ಸಿಂಧುರಾಜನಿಗೆ ಸೋತು, ಮನೆಸೇರಿ ದೀನನಾಗಿ ಮಲಗಿದ್ದನು. ಅವನ ತಾಯಿ ವಿದುಲೆಯು ಅಭಿಮಾನವತಿಯು ಧರ್ಮಚತುರೆಯು ಆಗಿದ್ದಳು. ತನ್ನ ಸುತನ ಭೀರುತನಕ್ಕೆ ನೊಂದು ಅವಳು ಅವನಿಗಿಂತೆಂದಳು. 'ನೀನು ನನ್ನ ಮಗನಾ ? ಕ್ಲೀಬನಂತೆ ಮಲಗಿರುವ ನಿನ್ನನ್ನು ಕಂಡು ನನಗೆ ನಾಚಿಕೆಯಾಗಿದೆ. ಇಷ್ಟೇಕೆ ಎದೆಗುಂದಿರುವೆ ? ಏಳು ! ವಿಜೃಂಭಿಸಿ ಶತ್ರುಗಳನ್ನು ನಿಗ್ರಹಿಸಿ 'ಯಶೋವಿಶಾಲನಾಗು. ಎಷ್ಟಿದ್ದರಷ್ಟೇ ಸಾಕೆಂದು ಅಲ್ಪಸಂತೋಷಿಯಾಗಬಾರದು. ಸಣ್ಣ ನದಿ ಬೇಗ ತುಂಬುವುದು. ಇಲಿಯ ಕೈ ಬೇಗ ತುಂಬುವುದು. ಕಾಪುರುಷನು ಸ್ವಲ್ಪದಿಂದಲೇ ತುಷ್ಟನಾಗುವನು. ಅಂತಹ ನಿರುತ್ಸಾಹಿಯಿಂದ ಯಾವ ಮಹಾತ್ಕಾರ್ಯವೂ ಆಗಲಾರದು.

'ಯುದ್ಧದಲ್ಲಿ ಮರಣವಾದರೆ ವೀರಸ್ವರ್ಗವಿದೆ. ಜಯವಾದರೆ ರಾಜ್ಯಸಿರಿಯಿದೆ. ವಜ್ರಹತವಾದ ಬೆಟ್ಟದಂತೆ ಸುಮ್ಮನೆ ಬಿದ್ದಿರುವ ನಿರ್ವೀರ್ಯನಿಗೆ ಇಲ್ಲಿ ಕೀರ್ತಿ ಇಲ್ಲ,

ಅಲ್ಲಿ ಪುಣ್ಯವೂ ಇಲ್ಲ. ಸಾಮ ಭೇದಗಳು ಮಧ್ಯಮೋಪಾಯಗಳು, ದಾನವು ಅಧಮೋಪಾಯ, ದಂಡವೇ ಉತ್ತಮೋಪಾಯ. ತೂಬರಿಯ ಕಟ್ಟಿಗೆಯಂತೆ ಕ್ಷಣವಾದರೂ ಉರಿದೆದ್ದು ವಿಜೃಂಭಿಸು! ಹೊಟ್ಟುಗಿಟ್ಟ ಬೆಂಕಿಯಂತೆ ಹೊಗೆಯಾಡಿದರೆ ಸಾಲದು. ಮುಂದಿನ ಜಯಸಾಧನವನ್ನಾಲೋಚಿಸು! ಕೆಳಗೆ ಬಿದ್ದಿರುವಾಗಲೂ ಶತ್ರುವಿನ ಮೀನಖಂಡವನ್ನು ಜಗ್ಗಿ ಕೆಡಹಿ, ಮೇಲೆ ಕೂತು ಕೊಲ್ಲಬೇಕು. ಧರ್ಮವೆಂದು ಬಾಯಿಂದ ಹೊಗಳಿದರೆ ಸಾಲದು. ಧರ್ಮವನ್ನು ನಡೆಸಲು ಧನವನ್ನಾರ್ಜಿಸಬೇಕು. ಧನವಿಲ್ಲದವನಿಗೆ ದಾನಧರ್ಮಗಳೆಲ್ಲಿ? ಯಜ್ಞಯಾಗಗಳೆಲ್ಲಿ? ಹೊಟ್ಟೆ ತುಂಬಿಸಿಕೊಳ್ಳಲು ಮಾತ್ರ ಬದುಕಿದ್ದರೆ ಸಾಕೆಂಬುವನು ಪುರುಷನೂ ಅಲ್ಲ; ಸ್ತ್ರೀಯೂ ಅಲ್ಲ. ದಾನ ಸತ್ಯಗಳಿಂದ ಕೀರ್ತಿ ಗಳಿಸದವನು ತಾಯಿಯ ದೇಹದಿಂದ ಹೊರಬಂದ ಮಲಮೂತ್ರಗಳಂತೆ ನಿಕೃಷ್ಟನು. ಶತ್ರುಗಳಿಗೆ ಸಿಂಹಸ್ವಪ್ನದಂತಿರುವವನ ಬದುಕು ಸ್ವಲ್ಪಕಾಲದ್ದಾದರೂ ಸಾಕು. ಹೀನದ ಭಿಕ್ಷೆಯ ಜೀವನ ಸಾವಿರ ವರ್ಷದ್ದಾದರೂ ಬೇಡ! ನಿನ್ನಂತಹ ದೀನನಿಂದ ಬಂಧುಗಳಿಗೆ ಸುಖವಿಲ್ಲ; ಶತ್ರುಗಳಿಗೆ ಭಯವಿಲ್ಲ. ಸಂತೋಷಕ್ಷಮೆಗಳು ವಿಪ್ರರಿಗೆ ಭೂಷಣ; ಕ್ಷತ್ರಿಯರಿಗೆ ಅವೇ ಅಪಕೀರ್ತಿಯನ್ನೂ, ಅವಮಾನವನ್ನೂ, ನಿರಂತರ ದುಃಖವನ್ನೂ ತಂದುಕೊಡುವವು.' ಎಂದಳು.

ಸಂಜಯನು 'ತಾಯೀ! ನಾನು ನಿನಗೆ ಏಕಪುತ್ರನು. ರಣದಲ್ಲಿ ನಾನು ಮೃತನಾದರೆ ನಿನಗೆ ಜೀವಿತವು ದುರ್ಭರ ದುಃಖಭರಿತವಾಗುವುದಲ್ಲವೇ? ನಾನು ಹೇಡಿಯಲ್ಲ; ಸಹಾಯಕರಿಲ್ಲದೆ, ಧನವಿಲ್ಲದೆ, ಸುಮ್ಮನಿರುವೆನು. ಏನು ಮಾಡಲಿ ಹೇಳು!' ಎಂದು ಕೇಳಿದನು. ವಿದುಲೆಯು 'ನಿನಗೆ ಸಂಜಯ ಎಂದು ಹೆಸರಿಟ್ಟ ನನ್ನನ್ನು ನಾನು ನಿಂದಿಸಬೇಕಾಗಿದೆ. ಚನ್ನಾಗಿ ವಿಚಾರಮಾಡು! ಯಾರು ಅಜರಲ್ಲ, ಅಮರರಲ್ಲ; ರಣಮರಣವು ಎಲ್ಲರಿಗೂ ಸಿಗದು. ನೀನು ಮೃತನಾದರೆ ಸ್ವರ್ಗವಾಟವು ನಿನಗೆ ತೋರಣಾಲಂಕೃತವಾಗುವುದು. ನಾನೂ ವೀರಸೂ ಎನಿಸಿ, ನಿನ್ನ ಹಿಂದೇ ಬರುವೆನು. ನಿನ್ನ ಸತಿಯೂ ವೀರಪತ್ನಿ ಎನಿಸಿ ನಿನ್ನ ಕೂಡ ಸ್ವರ್ಗವನ್ನು ಸೇರುವಳು. ಗೆದ್ದು ಬಂದರೆ ಕೀರ್ತಿ ಸೌಖ್ಯಗಳನ್ನು ನಿನ್ನೊಡಗೂಡಿ ಸೂರೆಗೊಳ್ಳುವೆವು. ಸಂಜಯ! ಏಳು! ಸಂಜಯನಾಗುವೆ. ಮಹಾಕುಲದಿಂದ ಮಹಾಕುಲಕ್ಕೆ ಬಂದೆನು. ನನ್ನ ಹೊಟ್ಟೆಯಲ್ಲಿ ಹಣ್ಣಾಗಿ ಬಂದೆ, ಹುಣ್ಣಾಗಬೇಡ. ಇನ್ನೊಬ್ಬರನ್ನಾಶ್ರಯಿಸಿ ಬದುಕುವವರಲ್ಲ ನಾವು. ನಮ್ಮ ನೆರಳತ್ತು ಪರರಿಗಾಶ್ರಯನೆನಿಸಿ ಬಾಳು. ಇಂದ್ರನು ವೃತ್ರನನ್ನು ಕೊಂದು ಮಹೇಂದ್ರನಾದನು. ಶತ್ರುಗಳನ್ನು ನಿಶ್ಶೇಷವಾಗಿ ನಾಶಮಾಡದವನನ್ನು ಅವರೇ ಬೆಳೆದು ನಾಶಮಾಡುವರು. ಶತ್ರುಗಳನ್ನು ಜಯಿಸು! ನಮ್ಮವರು ಅಳುವಂತೆಯು ಹಗೆ ನಗುವಂತೆಯು ನಡೆಯುವ ನಿನ್ನ ಮುಖವನ್ನು ನಾನು ನೋಡಲಾರೆನು. ನಿನ್ನ ಅಪಕೀರ್ತಿಯನ್ನು ಕೇಳಲಾರೆನು. ಹೇಗಿದ್ದರೇನೆಂದು ಮುದ್ದಾಡಲು ನಾನು ಗಾರ್ದಭಮಾತೆಯಲ್ಲ. ಗೆದ್ದುಬಂದಾಗ ನಿನಗೆ ಪೂಮಾಲೆ ಹಾಕಿ, ಆರತಿಯನ್ನೆತ್ತುವ ನಿನ್ನ ಮಡದಿಯನ್ನೂ ನಿನ್ನನ್ನೂ ನೋಡಿ ಆಮೇಲೆ ನಾನು ಸತ್ತರೂ

ಧನ್ಯಳೇ ಸರಿ! ಧನವಿಲ್ಲವೆಂದು ಚಿಂತಿಸಬೇಡ! ಇಲ್ಲದ ಧನವು ದೈವಾನುಗ್ರಹದಿಂದ ಬರುತ್ತಿದೆ. ಬಂದ ಧನವೂ ದೈವನಿಗ್ರಹದಿಂದ ಹೋಗುತ್ತಿದೆ. ಅರ್ಥವು ಅನಿತ್ಯ ವೆಂದು ತಿಳಿ! ಪ್ರಾಜ್ಞನಾಗಿ ಮಿತ್ರರಿಂದ ಕೂಡಿ ಧರ್ಮದಿಂದ ನಡೆದವನಿಗೆ ಮೂಡಲ ಗಿರಿಯಿಂದ ರವಿಯಂತೆ ಧನವು ಮೂಡಿಬರುವುದು. ಆಪತ್ತು ಬಂದಾಗ ಹೆದರಬೇಡ! ಧೈರ್ಯದಿಂದ ನಡೆದು ನಿನ್ನವರೂ ಧೈರ್ಯಗುಂದದಂತೆ ನಡೆ! ನಮ್ಮ ಪ್ರಾಸಾದದಲ್ಲಿ ಮಹಾನಿಧಿಯಿದೆ. ಅದನ್ನು ನಾನು ಮಾತ್ರ ತಿಳಿದಿರುವೆನು. ನಿನಗೆ ಬೇಕಾದಷ್ಟು ಸ್ನೇಹಿತರೂ ಇರುವರು. ಏಳು! ವಿಕ್ರಮಿಸು! ಜಯವಂತನಾಗುವೆ!' ಎಂದು ನುಡಿದ ವಿದುಲೆಯ ಮಾತನ್ನು ಲಾಲಿಸಿ, ಸ್ವಭಾವವೀರನಾದ ಸಂಜಯರಾಜನು, ಧೈರ್ಯದಿಂದ ವಿಕ್ರಮಿಸಿ, ಸಿಂಧುರಾಜನನ್ನು ಗೆದ್ದು, ವಿಜಯಶ್ರೀಸಮೇತನಾಗಿ ಬಂದನು.

ವಿದುಲೆಯ ವಚನಬಾಣದಿಂದ ತಿವಿಯಲ್ಪಟ್ಟ ಸಂಜಯನು ಸದಶ್ವದಂತೆ ವಿಜೃಂಭಿಸಿದ ಈ ಕಥೆಯನ್ನು ಕೇಳಿದವರೂ ವಿಜಯಶ್ರೀಯುತರಾಗುವರು. ಕೃಷ್ಣ! ಹೇಳು ಧರ್ಮಜನಿಗೆ ನಾನು ಕ್ಷತ್ರಿಯಳೆಂದು! ಕ್ಷತ್ರಿಯ ವೀರಮಾತೆ ಎನಿಸಿ ಬದುಕಲು ಬೇಡುವವಳು. ವಿದ್ಯಾಶೂರರು, ವೀರಶೂರರು, ಧರ್ಮಶೂರರು, ನೀತಿಶೂರರು, ಸರ್ವಶೂರರು ಆದ ಮಕ್ಕಳನ್ನು ಪಡೆದು, ನಾನು ಪರರ ಮನೆಯಲ್ಲಿ ಅವರಿಡುವ ಕೂಳಿಗೆ ಬಿದ್ದಿರುವೆನೆಂದರೆ, ಇದಕ್ಕಿಂತ ದುಃಖಕರವಿನ್ನೊಂದುಂಟೇ? ಭೀಮಾರ್ಜುನಾದಿ ಸುತರನ್ನು ಪಡೆದಾಗ ಆಕಾಶದಿಂದ ಬಂದ ದೇವತಾವಾಣಿಯನ್ನು ಸತ್ಯವಾಗಿಸೆಂದು ಬೇಡುವ ನನ್ನ ಮೊರೆಯನ್ನು ನೀನೂ ಕೇಳಿ, ನನ್ನ ಮಕ್ಕಳಿಗೂ ಅರುಹು! ನನ್ನಲ್ಲಿ ಧರ್ಮವಿದ್ದರೆ, ಸತ್ಯವಿದ್ದರೆ ಅದು ಅಂತೇ ಜರುಗಲಿ! ನೀನಿರುವೇ ಸ್ವಾಮೀ! ಅದನ್ನು ನಡೆಸಿಕೊಡಲು ಭೀಮಸೇನನೂ ಇರುವನು. ನನಗೆ ಗೊತ್ತಿದೆ, ಶತ್ರುನಾಶವು ಸಂಪೂರ್ಣವಾಗುವ ವರೆಗೂ ಆ ಮಹಾಬಲನು ಸುಮ್ಮನಿರನು. ಚಿಕ್ಕವರಾದ ನಕುಲ ಸಹದೇವರನ್ನು ಮೂರ್ಧಾಘ್ರಾಣಮಾಡಿ ಆಶೀರ್ವದಿಸುವೆನೆಂದು ತಿಳಿಸು. ಪರುಷ ವಚನವನ್ನು ಸಭೆಯಲ್ಲಿ ಕೇಳಿ, ತನ್ನ ಸೌಶೀಲ್ಯದಿಂದ ನಮ್ಮ ವಂಶವನ್ನೇ ಉದ್ಧರಿಸಿ, ತಾನು ನೋಯದೆ ನನ್ನ ಸುತರಿಗೂ ಆಸರೆಯಾಗಿರುವ ನನ್ನ ಪ್ರಿಯ ಸೊಸೆ ಕೃಷ್ಣೆಗೂ ಹೇಳು! ಆಕೆಯನ್ನವಮಾನಿಸಿದ ದುರಾತ್ಮರು ರಣರಂಗದಲ್ಲಿ ಶಯಿತರಾಗು ವರೆಂದು ತಿಳಿಸು! ನೀನೂ ಅದಕ್ಕಾಗಿ ನನ್ನ ಸುತರಿಗೆ ಬೆಂಗಾವಲಾಗಿ ನಿಲ್ಲು! ನಿನಗೆ ಶುಭವಾಗಲಿ ಹೋಗಿ ಬಾ!'

ಇಂತು ನುಡಿದ ಕುಂತೀದೇವಿಗೆ ನಮಿಸಿ ಸರ್ವಲೋಕೇಶನು ಅವಳಿಂದ ಅಪ್ಪಣೆ ಪಡೆದು ಅಲ್ಲಿಂದ ಸಿಂಹಗಮನನಾಗಿ ತೆರಳಿದನು. ಹೊರಗೆ ನಿಂತಿದ್ದ ಭೀಷ್ಮಾದಿಗಳನ್ನು ಬೀಳ್ಕೊಂಡು, ಶ್ರೀಕೃಷ್ಣನು ಕರ್ಣನನ್ನು ಕರೆದು, ತನ್ನ ರಥದಲ್ಲಿ ಕೂಡಿಸಿಕೊಂಡು ಹಸ್ತಿನಾಪುರದ ಹೊರಭಾಗವನ್ನು ಸೇರಿದನು. ಅಲ್ಲಿ ಅವನೊಡನೆ ಮಾತಾಡಿ ಅವನನ್ನೂ ಬೀಳ್ಕೊಂಡು ಉಪಪ್ಲಾವ್ಯವನ್ನು ಸೇರಿದನು.

ಶ್ರೀಕೃಷ್ಣನು ಹೊರಟನಂತರ ಕುರುರಾಜಧಾನಿಯಲ್ಲಿ ವಿವಿಧ ಚಿತ್ರವಾರ್ತೆಗಳು ಹರಡಿದವು. ಪೃಥಿವಿಯಲ್ಲಿ ನಿಂತು ಮೃತ್ಯುದೇವಿ ಪಾಶಗಳನ್ನು ಬೀಸಿ ಕುಣಿದಾಡುವ ಸಮಯ ಬಂತೆಂದು ಕೆಲವರಂದರು. ಕೆಲವರು ದುರ್ಯೋಧನನ ಮೂರ್ಖತನದಿಂದ ಲೋಕನಾಶವಾಗುವುದು ನಿಜವೆಂದರು. ಕೆಲವರು ಶ್ರೀಶನ ಮಹಿಮೆಯನ್ನು ನೆನೆನೆನೆದು ಕೊಂಡಾಡಿದರು.

ಪ್ರಶಸ್ತವಚನರಾದ ಭೀಷ್ಮಾದಿ ವೃದ್ಧರು ಕುಂತೀದೇವಿಯ ವಾಗ್ವಜ್ರವನ್ನರಿತು ದುರ್ಯೋಧನನನ್ನು ಸೇರಿ, ಅವನಿಗಿಂತೆಂದರು—'ರಾಜನ್! ಕುಂತಿಯ ವಚನಗಳು ಬಹು ಭೀಕರವಾಗಿದ್ದವು. ಧರ್ಮವನ್ನು ಬಿಡದ, ಅರ್ಥವನ್ನು ತರುವ ಆಕೆಯ ವಚನಗಳನ್ನು ತಪ್ಪದೇ ನಡೆಸುವರು. ರಾಜ್ಯವನ್ನು ಕೊಡದಿರೆ ಅವರು ಯುದ್ಧವನ್ನು ಕೊಡುವರು. ಹಿಂದೆ ಧರ್ಮಪಾಶಬದ್ಧರಾಗಿ ಅವಮಾನಗಳನ್ನು ಸಹಿಸಿ, ಸುಮ್ಮನಿದ್ದರಾಗಲಿ ಈಗ ವಿಶ್ರೃಂಖಲ ಮದಗಜಗಳಂತೆ, ಪಂಜರಮುಕ್ತ ಸಿಂಹಗಳಂತೆ ವಿಕ್ರಮಿಸುವ ಪಾಂಡವರ ಮುಂದೆ ನಮ್ಮಾಟ ನಡೆಯದು. ಭೀಮನ ರೋಷಾಗ್ನಿ ಪ್ರಳಯಾಭೀಲವಾಗಿದೆ. ಅರ್ಜುನನ ಗಾಂಡೀವದಿಂದ ಹೊರಬರುವ ದಿವ್ಯಾಸ್ತ್ರಸರ್ಪಗಳಿಗೆ ಶತ್ರು-ಪ್ರಾಣಾನಿಲವನ್ನು ಹೀರುವ ಹಂಬಲವಿದೆ. ಅವರ ಪರಾಕ್ರಮವನ್ನು ವಿರಾಟನಗರಿಯಲ್ಲಿಯೂ, ಘೋಷಯಾತ್ರೆಯಲ್ಲಿಯೂ ನೀನು ಕಂಡಿರುವೆ! ಸುಮ್ಮನೆ ಸೆಣಸಿ ಸಾಯಬೇಡ! ಎಲ್ಲ ಲೋಕವನ್ನೂ ನಾಶಮಾಡುವ ಯುದ್ಧದಿಂದ ಯಾರಿಗೂ ಕ್ಷೇಮವಿಲ್ಲ. ಧರ್ಮರಾಜನನ್ನು ಸೇರಿ ಅವರ ರಾಜ್ಯವನ್ನವರಿಗಿತ್ತು ಕ್ಷಮಿಸೆಂದು ಬೇಡು! ದಯಾಪರನು, ಕ್ಷಮಾಮೂರ್ತಿಯೂ ಆದ ಧರ್ಮನು ಕಾಲಿಗೆರಗುವ ನಿನ್ನನ್ನು ಕೈಯಿಂದ ಎಬ್ಬಿಸಿ, ತಬ್ಬಿ ಸೌಹಾರ್ದವನ್ನು ತೋರುವನು. ವೃತ್ತಮಹಾಭುಜನಾದ ಭೀಮಸೇನನು ನಿನ್ನನ್ನು ಬಿಗಿದಪ್ಪಿ, ಮಹಾವೀರನಾದ ಅರ್ಜುನನು, ನಕುಲಸಹದೇವರು ನಿನಗೆ ವಂದಿಸಿ, ನಿನ್ನ ಸ್ನೇಹದ ಹಸ್ತವನ್ನು ಸ್ವೀಕರಿಸುವರು. ಬೇಡ ಕಾಳಗ! ನೋಡು ದುಶ್ಶಕುನಗಳನ್ನು! ಬಿಡು ಹಠವನ್ನು! ಕಾಪಾಡು ವೃದ್ಧರಾದ ಜನನೀಜನಕರನ್ನು! ಬಾಳು ಬಹುಕಾಲ! ಇಲ್ಲದಿರೆ ನಿನ್ನಿಷ್ಟ! ಭೀಮಸೇನನ ಉದ್ಯತಗದಾದಂಡವನ್ನೂ, ಅರ್ಜುನನ ಗಾಂಡೀವವನ್ನೂ, ಅವರಿಗೆ ಸಹಾಯನಾಗಿರುವ ವಾಸುದೇವನನ್ನೂ ನೋಡಿದಾಗ ಪಶ್ಚಾತ್ತಾಪಪಡುವಂತಾದೀತು!' ಅವರ ಮಾತನ್ನು ಲಕ್ಷಿಸದೆ ದುರ್ಯೋಧನನು ಹುಬ್ಬುಗಂಟಿಕ್ಕಿ ತಲೆ ತಗ್ಗಿಸಿ ಕೂತನು.

ಅದಕ್ಕೆ ಭೀಷ್ಮನು ನೊಂದು, 'ರಾಜನ್! ನಿನ್ನಂತಹವನ ಪಕ್ಷವನ್ನು ಕಟ್ಟಿಕೊಂಡು, ಬ್ರಹ್ಮಣ್ಯನು, ಅನಸೂಯನು, ಸತ್ಯವಂತನು ಆದ ಧರ್ಮನೊಡನೆ ಕಾದಲು ನಿಂತಿರುವ ನನ್ನಂತಹ ನಿರ್ಭಾಗ್ಯನಿನ್ನಾರೆ'ಂದನು; ದ್ರೋಣನು 'ಧಿಕ್ಕಾರವಿರಲಿ ಕ್ಷತ್ರಿಯಧರ್ಮವನ್ನಾರಿಸಿಕೊಂಡ ವಿಪ್ರರಿಗೆ! ಅಶ್ವತ್ಥಾಮನಿಗೂ ಪ್ರಿಯತರನಾದ ಅರ್ಜುನನೊಡನೆ ಕಾದುವಂತಾಯಿತಲ್ಲ! ಅವನಿಗೆ ಸಮರಾದ ಧನುರ್ಧರರು ಮೂರ್ಲೋಕಗಳಲ್ಲಿಯೂ ಇಲ್ಲ. ದುರ್ಯೋಧನ! ಮಿತ್ರದ್ರೋಹಿಯೂ, ನಾಸ್ತಿಕನು,

ಕ್ರೋಧವಶನು, ಮಹಾಮೂರ್ಖನು ಆದ ರಾಜನಿಗಾಗಿ ಹೋರಾಡುವವನಿಗೂ ಗೌರವವಿಲ್ಲ. ಬೇಡವೆಂದರೂ ದುಷ್ಟನು ಪಾಪಕಾರ್ಯವನ್ನು ಬಿಡನು. ಕೇಡೆಣಿಸಿದರೂ ಸಜ್ಜನನು ಪ್ರತ್ಯಪಕಾರವನ್ನು ಮಾಡನು.' ಎಂದನು.

## ಕರ್ಣ-ಕೃಷ್ಣ ಸಂವಾದ

ಶ್ರೀ ಜನಮೇಜಯನು 'ವೈಶಂಪಾಯನ! ಶ್ರೀಕೃಷ್ಣನು ಕರ್ಣನನ್ನು ಕರೆದುಕೊಂಡು ಏಕಾಂತದಲ್ಲಿ ಕೂತು, ಅವನೊಡನೆ ಏನೆಂದನು? ಕರ್ಣನದಕ್ಕೆ ಉತ್ತರವಿತ್ತ ವಚನಗಳಾವುವು? ದಯಮಾಡಿ ತಿಳಿಸೆ'ಂದನು.

ಶ್ರೀ ವೈಶಂಪಾಯನನು ಜನಮೇಜಯನಿಗೆ ಹೇಳಿದನು. ಅನೋಯಮಹಿಮನಾದ ಶ್ರೀಕೃಷ್ಣನು ರಾಧೇಯನಿಗಿಂತೆಂದನು.

'ಕರ್ಣ! ವೇದಪಾರಗರಾದ ವಿಪ್ರರನ್ನು ಮತ್ಸರವಿಲ್ಲದೆ ಸೇವಿಸಿ, ಧರ್ಮಾರ್ಥಗಳನ್ನರಿತಿರುವೆ! ಕನ್ಯಾಜಾತನಿಗೆ ಅವಳ ಪತಿಯೇ ಪಿತನೆನಿಸುವನು. ಕನ್ಯಾದಶೆಯಲ್ಲಿ ಕುಂತಿಗೆ ಪುಟ್ಟಿದ ನಿನಗೆ ಪಾಂಡುರಾಜನೇ ತಂದೆಯಾಗಿರುವನು. ನಿನ್ನ ತಂದೆಯ ಕಡೆಯವರು ಪಾರ್ಥರು. ನಿನ್ನ ತಾಯಿಯ ಕಡೆಯವರು ಯಾದವರು. ಇಬ್ಬರಿಗೂ ಹಿತನಾದ ನಿನ್ನನ್ನು ನಾವು ಲೇಡುವುದು ತಪ್ಪಲ್ಲ. ಬಾ ಸನ್ನೊಡನೆ! ಧರ್ಮರಾಜನಿಗೂ ಅಣ್ಣನಾಗಿರುವ ನಿನ್ನನ್ನರಿತು ಪಾಂಡವರು ಸ್ನೇಹದಿಂದ ಸ್ವಾಗತಿಸಿ, ಶಿರಬಾಗಿ, ನಮಿಸಿ, ಪೂಜಿಸುವರು. ಪಾಂಡವ ಪಕ್ಷದ ರಾಜರಾದಿ ಸರ್ವರು ನೀನು ಪಾಂಡವನೆಂದು ತಿಳಿದು ಅತ್ಯಂತ ಹರ್ಷಿತರಾಗುವರು. ಪೂರ್ಣಕುಂಭಗಳಿಂದ ನಿನಗೆ ಗಂಗಾದಿ ತೀರ್ಥಗಳಿಂದ ಅಭಿಷೇಕಿಸಿ, ಪಟ್ಟಗಟ್ಟುವರು. ನಾನೂ ಧೌಮ್ಯಾದಿ ಪುರೋಹಿತರೂ ನಿನ್ನನ್ನು ಕುರುರಾಜನೆಂದು ಘೋಷಿಸುವೆವು. ಧರ್ಮರಾಜನು ಯುವರಾಜನಾಗುವನು. ಭೀಮಸೇನನು ನಿನಗೆ ಶ್ವೇತಚ್ಛತ್ರವನ್ನು ಹಿಡಿಯುವನು. ದಿವ್ಯಕಿರೀಟವನ್ನು ಧರಿಸಿ, ಮೆರೆವ ನಿನ್ನ ರಥವನ್ನು ಅರ್ಜುನನು ಪ್ರೇಮದಿಂದ ನಡೆಸುತ್ತಾ ನಿನಗೆ ಸೂತನಂತಾಗುವನು. ದ್ರೌಪದೇಯರೊಡಗೂಡಿ ನಕುಲಸಹದೇವರು ನಿನ್ನ ಹಿಂದೆ ಅಂಗರಕ್ಷಕರಾಗಿ ತಿರುಗುವರು. ತಮ್ಮಂದಿರಾದ ಪಾಂಡವರನ್ನು ಕಲೆತು ವಿಜಯಿಯಾಗಿ ಸಮೃದ್ಧವಾದ ರಾಜ್ಯವನ್ನಾಳು! ನಕ್ಷತ್ರಗಳಿಂದ ಕೂಡಿ ಬೆಳಗುವ ಚಂದ್ರಮನಂತೆ, ನಿನ್ನನ್ನು ನೋಡುವ ಕುಂತ್ಯಾದಿಗಳಿಗೂ ನನಗೂ ಆನಂದವರ್ಧಕನಾಗು. ಕಾದು ಶತ್ರುಗಳನ್ನು; ಕೂಡು ಪಾರ್ಥರನ್ನು, ನೋಡು ಆಗಿನ ನಿನ್ನ ವೈಭವವನ್ನು!'

ಆಗ ಶ್ರೀಕೃಷ್ಣನ ಮುಖವನ್ನು ನೋಡಿ, ಕರ್ಣನು, 'ವಾಸುದೇವ! ನನಗೆ ಸ್ನೇಹದ ಮಾತನ್ನು ತಿಳಿಸಿರುವೆ ನಿಜ! ಅದು ನಿನಗೆ ಶ್ರೇಯವೂ ಆಗಿದೆ. ಪಾಂಡುಪುತ್ರನೆಂದೆ! ಅಹುದು! ಧರ್ಮಶಾಸ್ತ್ರಗಳಿಂದ ವಿಚಾರಿಸಿ ನೋಡಲು ಅದು ಸರಿಯಾಗಿದೆ. ಆದಿತ್ಯನಿಂದ ನನ್ನ ಪಡೆದ ಕುಂತಿಯು ಅಂದೇ ನನ್ನನ್ನು ಬಿಟ್ಟು, ಕ್ಷತ್ರಿಯ

ಕುಲದಿಂದಲೂ ಬಿಡಿಸಿದಳು. ಅಧಿರಥನು ರಾಧೆಯು ನನ್ನನ್ನು ಸಾಕಿ ಸಲಹಿದಂಡೇ ನಾನು ಸೂತನಾದೆನು. ನನ್ನನ್ನು ಕೈಲೆತ್ತಿಕೊಂಡಾಕ್ಷಣವೇ ರಾಧೆಗೆ ಹಾಲು ಸೂಸಿ ಬಂತಂತೆ! ನನ್ನ ಮಲ ಮೂತ್ರಾದಿಗಳನ್ನು ಕೈಲಿ ಹಿಡಿದೆತ್ತಿ, ಅಸಹ್ಯಪಡದೆ ಆ ತಾಯಿ ನನ್ನನ್ನು ಬೆಳಸಿದಳು. ಈಗ ಆಕೆಯ ಮಗನಲ್ಲವೆಂದು ಕೈ ಬಿಟ್ಟರೆ ಅವರಿಗೆ ಮುಂದೆ ಪಿಂಡತ್ಯಾಗ ಮಾಡುವವರಾರು ? ಧರ್ಮವನ್ನರಿತ ನಾನು ಅಧಿರಥನೇ ನನ್ನ ತಂದೆಯೆಂದು ತಿಳಿದಿರುವೆನು. ಅವನೂ ನನ್ನನ್ನು ಮಗನೆಂಡೇ ತಿಳಿದಿರುವನು. ಜಾತಕರ್ಮಾದಿ ಸಂಸ್ಕಾರಗಳನ್ನು ಸೂತಕುಲೋಚಿತವಾಗಿ ಮಾಡಿರುವನು. ವಿಪ್ರಜನ ಸಭೆಯಲ್ಲಿ ವಸುಷೇಣನೆಂದು ಹೆಸರಿಟ್ಟಿರುವನು. ಮದುವೆಯನ್ನೂ ಮಾಡಿರುವನು. ನನಗೀಗ ಮೊಮ್ಮಕ್ಕಳೂ ಆಗಿರುವರು. ಅವರೆಲ್ಲರ ಬಂಧುಪ್ರೀತಿಪಾಶದ ಬಂಧನ ದಲ್ಲಿ ಶಿಲುಕಿ ನಾನು ಬಿಡಿಸಿಕೊಳ್ಳಲಾರದಿರುವೆನು. ಸಕಲಭೂಮಂಡಲವಿತ್ತರೂ, ಸುವರ್ಣಪರ್ವತವನ್ನಿತ್ತರೂ ನಾನು ಅವರನ್ನು ಬಿಟ್ಟು ಬರುವ ಅನ್ಯಾಯಕರ್ಮ ವನ್ನು ಎಂದಿಗೂ ಮಾಡಲಾರೆನು. ಭಯದಿಂದಾಗಲಿ, ಹರ್ಷದಿಂದಲಾಗಲಿ, ಲೋಭದಿಂದಲಾಗಲಿ ನಾನು ಧರ್ಮವನ್ನು ಬಿಡೆನು.

ಇಂದಿಗೆ ಹದಿಮೂರು ವರ್ಷಗಳಾದವು; ದುರ್ಯೋಧನನನ್ನು ಆಶ್ರಯಿಸಿ ಅಂಗ ರಾಜನೆನಿಸಿ ಸುಖವಾಗಿರುವೆನು. ಸೂತರಿಂದ ಕೂಡಿ ತಕ್ಕ ಯಜ್ಞಗಳನ್ನೂ ಮಾಡಿರು ವೆನು. ಸ್ವಕುಲವನ್ನರಿತು ಸೂತ ಕನ್ಯೆಯರನ್ನು ಮನೆಗೆ ತಂದು, ಸೂತರಿಗೆ ಕನ್ಯೆ ಯನ್ನಿತ್ತಿರುವೆನು. ನನ್ನನ್ನು ನಂಬಿ, ಸುಯೋಧನನು ಪಾಂಡವರಂತಹ ಬಲವಂತ ರಿಂದ ವಿರೋಧವನ್ನು ಕಟ್ಟಿಕೊಂಡು, ಯುದ್ಧಸನ್ನದ್ಧನಾಗುತ್ತಿರುವನು. ಸವ್ಯಸಾಚಿಗೆ ಸರಿಯಾದ ಪ್ರತಿವೀರನೆಂದು ನನ್ನನ್ನಾರಿಸಿ, ನಿಶ್ಚಿಂತನಾಗಿರುವನು. ಇಂತಹ ದುರ್ಯೋಧನನಿಗೆ, ಈಗ ಯುದ್ಧಮುಖದಲ್ಲಿ ದ್ರೋಹವನ್ನು ಬಗೆಯಲಾರೆನು. ನನ್ನನ್ನು ಕಟ್ಟಿ ಕೊಂದರೂ ಆ ನೀಚಕಾರ್ಯವೆನ್ನಿಂದಾಗದು.

ಇನ್ನೊಂದು ಮಾತಿದೆ ಕೇಳು ! ನಾನು ಅರ್ಜುನನೊಡನೆ ಕಾದುವೆನೆಂದು ಉಭಯ ಪಕ್ಷದ ವೀರರು ನಿಶ್ಚಯಿಸಿರುವರು. ಒಂದು ವೇಳೆ ನಾನು ಪಾಂಡವ ಪಕ್ಷ ವನ್ನು ಸೇರಿದರೆ ಅರ್ಜುನನಿಗೆ ಆಶಾಭಂಗವಾಗುವುದು; ನನಗೆ ಕೀರ್ತಿಭಂಗವಾಗು ವುದು; ಅರ್ಜುನಾದಿ ಪಾಂಡವರಿಗೆ ನಾನು ಮಾಡಿದ ಅಪರಾಧವನ್ನು ಅವರು ಮರೆಯುವಂತಿಲ್ಲ. ಯಾವ ಬಗೆ ನೋಡಿದರೂ ನಾನವರನ್ನು ಕೂಡುವುದು ಸರಿ ಯಲ್ಲ. ಅನ್ಯೋನ್ಯ ವಧೆಯನ್ನು ಗೈವ ಪ್ರತಿಜ್ಞೆ ಮಾಡಿರುವ ಕರ್ಣಾರ್ಜುನರ ಸ್ನೇಹ ವೆಂದಿಗೂ ಆಗದು. ನೀನು ಸ್ವಾಮಿಯಾಗಿರುವ ಪಾಂಡವರಿಗೆ ಯಾವುದೂ ದುಷ್ಕರ ವಲ್ಲ. ಕೃಷ್ಣ ! ನಿನ್ನನ್ನೊಂದು ಬೇಡುವೆನು— ಈ ನನ್ನ ಜನ್ಮರಹಸ್ಯವನ್ನು ಯಾರಿಗೂ ತಿಳಿಸದಿರು. ಅದೇ ಎಲ್ಲರಿಗೂ ಹಿತ. ಧರ್ಮರಾಜನಿಗೆ ಗೊತ್ತಾದರೆ, ಆ ಮಹಾನು- ಭಾವನೆಂದಿಗೂ ರಾಜ್ಯವನ್ನು ಸ್ವೀಕರಿಸುವುದಿಲ್ಲ. ನನಗೆ ನೀನೂ ಅವರೂ ಕೂಡಿ ರಾಜ್ಯವನ್ನಿತ್ತರೂ ನಾನದನ್ನು ಆಳುವುದಿಲ್ಲ. ಅದನ್ನೆಲ್ಲ ದುರ್ಯೋಧನನ ಸೇವಕ

ನಾದ ನಾನು ಅವನಿಗೆ ಕೊಟ್ಟುಬಿಡುವೆನು. ಹೀಗಾದರೆ ಧರ್ಮನ ರಾಜ್ಯ ತಪ್ಪಿ ಹೋದೀತು! ಭೀಮಾರ್ಜುನರು ಸಹಾಯಕರಾಗಿ, ನೀನು ನಾಯಕನಾಗಿ ಧೃಷ್ಟ-ದ್ಯುಮ್ನ, ಸಾತ್ಯಕಿ,ನಕುಲಸಹದೇವ, ದ್ರೌಪದೇಯಾದಿ ಮಹಾರಥರು ಬೆಂಬಲಿಗರಾಗಿ ರಣೋನ್ಮುಖನಾಗಿರುವ ಧರ್ಮರಾಜನಿಗೆ ಜಯವಾಗುವುದು. ದೇವರಲ್ಲಿ ನಿನ್ನಂತಹ ರಿಲ್ಲ. ವೀರರಲ್ಲಿ ಭೀಮಾರ್ಜುನರಂತಹರಿಲ್ಲ. ನೀನು ನಿಧಿಯಂತೆ ಕಾಮಪೂರಕ ನಾಗಿರಲು ಪಾಂಡವರು ಸರ್ವ ಪೃಥಿವಿಗೂ ಪಾಲಕರಾಗುವರು, ಸಂಶಯವಿಲ್ಲ.

ಈ ರಣಯಜ್ಞದಲ್ಲಿ ನೀನು ಉಪದ್ರಷ್ಟನಿರುವೆ! ಸಾಕ್ಷಿಯಾಗಿ ಅಧ್ವರ್ಯು ವಾಗಿಯೂ ನೀನೇ ಮೆರೆವೆ! ಭೀಮಸೇನನು ಪ್ರಸ್ತೋತನೆನಿಸುವನು. ನಾಗಯೂಥ ಗಳನ್ನು ಕೆಡಹುವ ಆ ಮಹಾಬಲನ ಸಿಂಹ ಗರ್ಜನವೇ ಸ್ತೋತ್ರಸಮೂಹವಾಗು ವುದು. ಅರ್ಜುನನೇ ಹೋತನೆನಿಸುವನು. ಗಾಂಡೀವವೇ ಸ್ರುಕ್ ಆಗುವುದು. ವೀರರ ಪ್ರಾಣಗಳೇ ಆಜ್ಯಾಹುತಿಗಳಾಗುವವು. ಐಂದ್ರ ಪಾಶುಪತಾದಿ ದಿವ್ಯಾಸ್ತ್ರಗಳೇ ಮಂತ್ರಗಳು. ತಂದೆಗೆ ಸಮನಾದ ಅಭಿಮನ್ಯುವು ಉದ್ಗಾತನೆನಿಸಿ ವೀರಗಾನವನ್ನು ಮಾಡುವನು. ಧರ್ಮರಾಜನು ಬ್ರಹ್ಮನಾಗಿ ನಿಲ್ಲುವನು. ಶಂಖಭೇರಿಕಾಹಳಶಬ್ದಗಳೇ ಬ್ರಹ್ಮಘೋಷವಾಗುವುದು. ನಕುಲ-ಸಹದೇವರು ಶತ್ರುಪಶುವಿಶಸನವನ್ನು ಮಾಡಿ ಶಾಮಿತ್ರರೆನಿಸುವರು. ನಾನಾವಿಧ ರತ್ನಕಾಂತಿಗಳಿಂದ ಕೃಷ್ಣಪಾಂಡುರವಾದ ರಥ ಯಷ್ಟಿಗಳೇ ಯೂಪಗಳಾಗುವವು. ನಾರಾಚಗಳು ಚಮಸಗಳು; ತೋಮರಗಳು ಸೋಮಕಲಶಗಳು; ಧನುಸ್ಸುಗಳೇ ಪವಿತ್ರಗಳು; ಖಡ್ಗಗಳೇ ಕಪಾಲಪಾತ್ರೆಗಳು! ತಲೆಗಳೇ ತುಪ್ಪ, ಅನ್ನ! ರಕ್ತವೇ ಸೋಮರಸ! ಶಕ್ತಿಗಳೇ ಕಟ್ಟಿಗೆ; ಗದೆಗಳೇ ಪರಿಸ್ತರಣ; ಸದಸ್ಯರು ದ್ರೋಣಾಶ್ವತ್ಥಾಮಕೃಪರು. ಸಾತ್ಯಕಿಯೇ ಪ್ರತಿಪ್ರಸ್ಥಾತ! ದುರ್ಯೋಧನನೇ ಯಜ್ಞಪಶುವು. ಅವನ ಸೈನ್ಯವೇ ಪಶುಪತ್ನಿ. ಅತಿರಾತ್ರವಾಗುವ ಈ ರಣಯಜ್ಞದಲ್ಲಿ ಘಟೋತ್ಕಚನು ಶಾಮಿತ್ರನಾಗುವನು. ಈ ಯಜ್ಞದ ದಕ್ಷಿಣೆ ಧೃಷ್ಟದ್ಯುಮ್ನನು. ಈ ರಣಯಜ್ಞದಲ್ಲಿ ನಾನೂ ಉಳಿಯೆನು.

ಕೃಷ್ಣ! ಧೃತರಾಷ್ಟ್ರ ನಂದನನಿಗೆ ಪ್ರಿಯವಾಗಲೆಂದು ನಾನು ಪಾಂಡವರನ್ನು ಅವಮಾನಿಸಿ, ಆಡಬಾರದ ಮಾತುಗಳನ್ನಾಡಿದೆನು. ಆದಕ್ಕಾಗಿ ನನಗೆ ಪಶ್ಚಾತ್ತಾಪ ವಾಗುತ್ತಿದೆ. ನನ್ನನ್ನು ಅರ್ಜುನನು ಕೊಂದಾಗ ಈ ರಣಯಜ್ಞದ ಕೊನೆಯ ಉಪಯಜ್ಞವಾಗುವುದು. ಭೀಮಸೇನನು ರಣರಂಗದಿ ದುಶ್ಯಾಸನನನ್ನು ಕೆಡಹಿ, ಅವನ ರಕ್ತವನ್ನು ಹೀರುವಾಗ ಸೋಮರಸಸ್ರವಣವಾಗುವುದು. ದ್ರೋಣ-ಭೀಷ್ಮಾದಿಗಳು ಬೀಳಲು, ಆಗಾಗ ಯಜ್ಞವಿರಾಮವಾಗುವುದು. ಭೀಮನಿಂದ ದುರ್ಯೋಧನನು ಹತನಾಗಿ ಬಿದ್ದಾಗ ಯಜ್ಞವೆಲ್ಲವೂ ಮುಗಿಯುವುದು. ಎಲ್ಲ ವೀರರೂ ಮೃತರಾದ ಮೇಲೆ, ಅವರ ಪತ್ನಿಯರು ಅಳುವಾಗ ಕಣ್ಣೀರಿನ ಅವಭೃಥವೂ ಆಗುವುದು. ಕ್ಷತ್ರಿಯ ಸತ್ತಮರು ಮನೆಗಳಲ್ಲಿ ಹಾಸಿಗೆಯಲ್ಲಿ ಬಿದ್ದು ಸಾಯದೆ, ಶಸ್ತ್ರನಿಪತರಾಗಿ ವೀರಸ್ವರ್ಗವನ್ನು ಪೊಂದುವಂತೆ ರಣಯಜ್ಞವನ್ನು ನಡೆಸಿರುವ ನಿನ್ನ ಸಂಕಲ್ಪಕ್ಕೆ

ನಮೋನಮಃ. ಪುಣ್ಯತಮವಾದ ಕುರುಕ್ಷೇತ್ರದಲ್ಲಿ ಭೂಭಾರವನ್ನಿಳುಹಲು ತೊಡಗಿರುವ ನಿನ್ನ ಸಂಕಲ್ಪದಂತೆ ಆಗಲಿ! ಸುಕ್ಷತ್ರಿಯರೆಲ್ಲರೂ ಸ್ವರ್ಗದಲ್ಲಿ ಸೇರಿ ಸುಖಿಸುವಂತಾಗಲಿ! ಗಿರಿನದಿಗಳಿರುವವರೆಗೂ ನಿನ್ನ ಕೀರ್ತಿಯೊಡನೆ ಮಿಲಿತವಾಗಿ ಭಾರತ ರಾಜರ ಕೀರ್ತಿಯು ಲೋಕದಿ ಬೆಳಗಲಿ! ಸಭೆಗಳಲ್ಲಿ ವಿಪ್ರರು ಭಾರತ ಕಥೆಯನ್ನು ಪಾಡಿ, ನಿನ್ನನ್ನು ಪೊಗಳುವಂತಾಗಲಿ! ಕರೆ ತಾ ಪಾರ್ಥನನ್ನು ನನ್ನೊಡನೆ ಕಾದಲು! ಅದನ್ನೇ ಜಪಿಸುತ್ತಾ ಅವನೊಡನೆ ಕಾದಲು ಕಾತರನಾಗಿರುವೆನು.'

ಆ ಮಾತನ್ನಾಲಿಸಿ ನಸುನಕ್ಕು ಭಗವಂತನಿಂತೆಂದನು—'ಕರ್ಣ! ನಾನಾಗಿ ಸಮರ್ಪಿಸಿದ ರಾಜ್ಯವನ್ನೂ, ಪಾಂಡವರ ಸ್ನೇಹವನ್ನೂ ತಿರಸ್ಕರಿಸಿದೆ! ಅರ್ಜುನನ ಕಪಿಧ್ವಜವು ವಿಜಯಶ್ರೀಸಂಪನ್ನವಾಗಿದೆ. ಅಲ್ಲಿರುವ ವಾನರ ರಾಜನು, ಭೂತಗಳು ಶತ್ರುಭಯಂಕರರಾಗಿರುವರು. ಪಾಂಡವರಿಗೆ ಜಯವು ನಿಶ್ಚಿತವೆಂದು ತಿಳಿ! ಸಂಗ್ರಾಮ ರಂಗದಲ್ಲಿ ಶ್ವೇತವಾಹನನು, ಕೃಷ್ಣಸಾರಥಿಯು, ಗಾಂಡೀವಧಾರಿಯು ಆದ ಅರ್ಜುನನನ್ನು ಕಾಣುವೆ! ಆಗ ಕೃತತ್ರೇತಾದ್ವಾಪರಗಳಲ್ಲಿ ಯಾವಾಗಲೂ ಕಾಣಲಾಗದಿದ್ದ ವಿಚಿತ್ರ ಸಮಾಗಮವನ್ನು ಕಾಣುವೆ! ಮೋಕ್ಷವನ್ನು ಕೋರಿ, ತ್ರಿವರ್ಗವನ್ನಪೇಕ್ಷಿಸದ ಕೃತವಲ್ಲ. ಧರ್ಮಕ್ಕಾಗಿ ಅರ್ಥಕಾಮಗಳನ್ನು ಬಿಟ್ಟ ತ್ರೇತೆಯಲ್ಲ; ಅರ್ಥ ಕಾಮಗಳಿಗೆ ಅಂಗವಾಗಿ ಧರ್ಮವನ್ನು ಮಾಡುವ ದ್ವಾಪರವಲ್ಲ. ಕೇವಲ ಅರ್ಥಕಾಮಗಳ ಕಲಿಯನ್ನೇ ಕಾಣುವಂತಾಗುವುದು. ದುರ್ಯೋಧನನಿಗೆ ಅರ್ಥಕಾಮಗಳೂ ಉಳಿಯದೆ ಹೋಗುವವು. ಸಂಗರದಲ್ಲಿ ಮದವೇರಿದ ಮಾತಂಗದಂತೆ ಎದುರಿಲ್ಲದೆ ಮೆರೆವ ಭೀಮಸೇನನನ್ನು ಕಂಡಾಗ ಯುಗತ್ರಯಗಳ ವೀರ್ಯವು ಒಟ್ಟುಗೂಡಿ ಬಂದಂತಾಗುವುದು. ಉಕ್ಕೇರಿ ಬರುವ ಸಮುದ್ರವನ್ನು ವೇಲೆಯಂತೆ ಅರ್ಜುನನು ದ್ರೋಣ ಭೀಷ್ಮ-ಕೃಪ ಸೈಂಧವ ಸುಯೋಧನರ ವಿಜೃಂಭಣವನ್ನು ತಡೆದಾಗ ಲೋಕೋತ್ತರ ವೀರನನ್ನು ಕಾಣುವೆ! ಕರ್ಣ! ಹೋಗಿನ್ನು! ಹೇಳು ಭೀಷ್ಮ ದ್ರೋಣ-ಕೃಪರಿಗೆ! ಬೆಳದಿಂಗಳು ಚನ್ನಾಗಿರುವ ಕಾಲವಾಗಿದೆ. ಹುಲ್ಲು ಕಟ್ಟಿಗೆ ಸಿಗುವ ಸಮಯವಿದೆ. ಸೊಳ್ಳೆ ಮೊದಲಾದ ಕೀಟಗಳ ಕಾಟ ಹೆಚ್ಚಾಗಿಲ್ಲ. ಕೆಸರಿಲ್ಲದೆ ನದೀ ತಟಾಕಗಳಲ್ಲಿ ನೀರು ನಿರ್ಮಲವಾಗಿದೆ. ಹವೆ ಸಮಶೀತೋಷ್ಣವಾಗಿದೆ. ಇಂದಿಗೆ ಏಳನೆಯ ದಿನ ಅಮಾವಾಸ್ಯೆ. ಇಂದ್ರದೇವತಾಕವಾದ ಆ ತಿಥಿಯಿಂದ ಸಂಗ್ರಾಮ ಸಾಧನಗಳನ್ನು ಕೂಡಿಡುವುದು ಅವಶ್ಯಕವು. ರಾಜನಿಗೂ ಹೇಳೀ ಮಾತನ್ನು! ನಿಮಗೆಲ್ಲ ಸರಿದೋರಿದಂತೆ ಮಾಡೋಣ!'

ಕೇಶವನ ಹಿತವಚನವನ್ನು ಕೇಳಿ ಕರ್ಣನು 'ಕೃಷ್ಣ! ಎಲ್ಲವೂ ನಿನಗೆ ಗೊತ್ತಿದೆ! ನನಗೆ ರಾಜ್ಯದ ಲೋಭವಿಲ್ಲ. ಪೃಥಿವೀ ನಾಶವಾಗುವದಿದೆ. ಅದಕ್ಕೆ ಕಾರಣವಾಗಿ ಶಕುನಿ, ನಾನು, ದುಶ್ಶಾಸನ. ದುರ್ಯೋಧನರು ಸೃಷ್ಟರಾಗಿರುವೆವು. ಮಹಾಯುದ್ಧದಲ್ಲಿ ಪಾಂಡವರಿಗೆ ಜಯವು, ಕೌರವರಿಗೆ ಮರಣವು ಆಗುವುದು ತಪ್ಪದು. ಅಂತಹ ಶಕುನಗಳೂ ಕಾಣಬರುತ್ತಿವೆ. ಪೃಥ್ವಿಯ ಕೂರ್ಮರೇಖೆಯಲ್ಲಿರುವ ರೋಹಿಣೀ

ನಕ್ಷತ್ರವನ್ನು ಶನಿಯು ಪೀಡಿಸುತ್ತಿರುವುದರಿಂದ ಮಹಾಕ್ಷಯವು ಸೂಚಿತವಾಗುತ್ತಿದೆ. ಜ್ಯೇಷ್ಠಾ ನಕ್ಷತ್ರದಿಂದ ಹಿಂದಿರುಗಿ ಅಂಗಾರಕನು ವಕ್ರಗತಿಯಿಂದ ಅನುರಾಧೆಗೆ ಬರುತ್ತಿರುವುದರಿಂದ ಜ್ಯೇಷ್ಠನಾದ ಧೃತರಾಷ್ಟ್ರನ ಮಿತ್ರರೆಲ್ಲರು ನಾಶವಾಗುವರು. ಮಹಾಪಾತವು ಚಿತ್ರಾ ನಕ್ಷತ್ರವನ್ನು ಪೀಡಿಸುವುದರಿಂದ ಮಹಾಭಯವು ಪ್ರಾಪ್ತ ವಾಗಿದೆ. ದರ್ಶವಲ್ಲದ ದಿನವೂ ರಾಹುವು ಸೂರ್ಯನನ್ನು ಪೀಡಿಸುತ್ತಿರುವನು. ಇದರಿಂದ ಚಂದ್ರ ಸೂರ್ಯ ವಂಶ್ಯರಾದ ರಾಜರು ಕ್ಷಯವನ್ನು ಹೊಂದುವರು. ಕುದುರೆಗಳು ಅಳುತ್ತಿವೆ. ಆನೆಗಳು ಸುಮ್ಮನೆ ನಿಂತು ಹುಲ್ಲನ್ನು ತಿನ್ನವು; ನೀರು ಕುಡಿಯುವು, ಸ್ವಲ್ಪ ಉಂಡರೂ ಪುರೀಷವು ಹೆಚ್ಚಾಗಿದೆ. ಇದೆಲ್ಲ ದುರ್ಯೋಧನನ ಸೈನ್ಯದ ಪರಾಭವವನ್ನು ಸೂಚಿಸುತ್ತಿದೆ.

'ಪಾಂಡವರ ವಾಹಿನಿಯು ಪ್ರಹೃಷ್ಟವಾಗಿದೆ, ಎಂದು ಕೇಳಿರುವೆನು. ನವಿಲು, ಹಂಸ, ಸಾರಸ, ಚಾತಕ, ಮೊದಲಾದ ಪಕ್ಷಿಗಳು ಪಾಂಡವರನ್ನನುಸರಿಸಿ ಹೋಗುತ್ತಿವೆ ಜೀವ ಜೀವ (ಎಂಬ) ಪಕ್ಷಿಗಳೂ ಅಲ್ಲೇ ಹಾರಿ ಹರಸುತ್ತಿವೆ. ಇಲ್ಲಿ ಹದ್ದು, ಕಾಗಿ, ಕೊಕ್ಕರೆ, ಗಿಡಗ ಮೊದಲಾದ ಪಕ್ಷಿಗಳು ಕೌರವರನ್ನು ಹಿಂಬಾಲಿಸುತ್ತಿವೆ. ಮಾಂಸ ರಕ್ತಗಳ ಮಳೆ ಬೀಳುತ್ತಿದೆ. ಬಾವಿಗಳಿಂದ ವಿಚಿತ್ರ ಶಬ್ದ ಕೇಳಬರುತ್ತಿದೆ. ನರಿಯು ವಿಕಾರವಾಗಿ ಅಳುತ್ತಿದೆ. ಬ್ರಹ್ಮದ್ವೇಷ, ಗುರುದ್ವೇಷ, ಭಕ್ತಿವಂತರಾದ ಭೃತ್ಯರ ದ್ವೇಷ ಇವನ್ನು ಮಾಡುವ ರಾಜನಿಗೆ ಜಯವಿಲ್ಲ.

'ನನ್ನ ಸ್ವಪ್ನದಲ್ಲಿ, ಯುಧಿಷ್ಠಿರನು ತಮ್ಮಂದಿರೊಡಗೂಡಿ ಸಾವಿರ ಸ್ತಂಭದ ಪ್ರಾಸಾದವನ್ನಧಿರೋಹಿಸಿ ನಿಂತುದನ್ನು ಕಂಡೆನು. ಅವರೆಲ್ಲರು ಬಿಳಿಯ ಬಟ್ಟೆ ಗಳನ್ನುಟ್ಟಿದ್ದರು. ಬಿಳಿಯ ಆನೆಯನ್ನೇರಿ, ಸುವರ್ಣ ಪಾತ್ರೆಯಲ್ಲಿದ್ದ ಪರಮಾನ್ನವನ್ನು ಧರ್ಮರಾಜನು ಭುಜಿಸಿದನು. ಗದಾಪಾಣಿಯಾದ ಭೀಮಸೇನನು ಎತ್ತರವಾದ ಬೆಟ್ಟ ವನ್ನೇರಿ, ಭೂಮಂಡಲವನ್ನು ಚೆಂಡಿನಂತೆ ಕೈಲಿ ಹಿಡಿದಿದ್ದನು. ಆ ನರವ್ಯಾಘ್ರನು ಮಹಾರಣದಲ್ಲಿ ನಮ್ಮೆಲ್ಲರನ್ನೂ ಸಂಹರಿಸುವನು. ಧರ್ಮವೆಲ್ಲಿದೆ ಜಯವೂ ಅಲ್ಲೇ ಇದೆ ಎಂದು ನನಗೆ ಗೊತ್ತು. ಅರ್ಜುನನು ಬಿಳಿಯ ಆನೆಯನ್ನೇರಿ ನಿನ್ನಿಂದ ಕೂಡಿ ಬೆಳಗುತ್ತಿದ್ದುದನ್ನು ಸ್ವಪ್ನದಿ ಕಂಡೆನು. ನಕುಲ-ಸಹದೇವರು ಧವಲಾಂಬರ ಪುಷ್ಪಾಲಂಕೃತರಾಗಿ ಪಾಲಕಿಯಲ್ಲಿ ಕೂತಿರುವುದನ್ನು ಕಂಡೆನು. ನಮ್ಮ ಸೈನ್ಯದಲ್ಲಿ ಅಶ್ವತ್ಥಾಮ, ಕೃಪ, ಕೃತವರ್ಮರು ಈ ಮೂವರು ಮಾತ್ರ ಬಿಳಿಯ ರುಮಾಲ- ನ್ನಿಟ್ಟಿದನ್ನು, ಮಿಕ್ಕ ದುರ್ಯೋಧನಾದಿಗಳೆಲ್ಲರೂ ಕೆಂಪು ರುಮಾಲನ್ನಿಟ್ಟಿದುದನ್ನು ಕಂಡೆನು. ನಾನು ಮತ್ತು ದುರ್ಯೋಧನಾದಿಗಳು ಈ ಯುದ್ಧದಲ್ಲಿ ಬದುಕುಳಿಯ ಲಾರೆವು ' ಎಂದನು.

ಶ್ರೀಕೃಷ್ಣನು ' ಕರ್ಣ ! ಭೂಭಾರ ಇಳಿಯಬೇಕಾಗಿದೆ. ಇಂತಹ ವಿನಾಶಕಾಲ ವಾದುದರಿಂದ ನಿನ್ನಂತಹವನಿಗೂ ನನ್ನ ಹಿತವಚನವು ರುಚಿಸದಾಗಿದೆ. ಅಹಿತವೇ ಹಿತವೆನಿಸಿದೆ' ಎಂದನು. ಆಗ ಕರ್ಣನು ' ವೀರಕ್ಷತ್ರವಿನಾಶಕಾರಕವಾದ ಮಹಾ

ರಣದಿಂದ ಪಾರಾಗಿ ಪರಸ್ಪರ ದರ್ಶನವನ್ನು ಪಡೆಯುವೆವೋ ಇಲ್ಲವೋ ಗೊತ್ತಿಲ್ಲ. ಅಥವಾ ಸ್ವರ್ಗದಲ್ಲಿ ತಪ್ಪದೆ ಕಲೆಯುವೆವು.' ಎಂದು ಶ್ರೀಕೃಷ್ಣನನ್ನು ಗಾಢವಾಗಿ ಆಲಿಂಗಿಸಿ, ಅಪ್ಪಣೆ ಪಡೆದು, ರಥದಿಂದಿಳಿದು ಪೋದನು. ರಾಧೇಯನು ದೀನ ಮಾನಸನಾಗಿ ಹೊರಟುಹೋದುದನ್ನು ಕಂಡ ಸಂಜಯನು ಧೃತರಾಷ್ಟ್ರನಿಗೀ ವೃತ್ತಾಂತವನ್ನು ತಿಳಿಸಿದನು. ಶ್ರೀಕೃಷ್ಣನೂ ಪಾಂಡವರನ್ನು ಸೇರಲು ಪೋದನು.

## ಕುಂತೀ-ಕರ್ಣ ಸಂವಾದ

ಶ್ರೀಕೃಷ್ಣನು ಯುದ್ಧನಿಶ್ಚಯವನ್ನು ಸ್ವೀಕರಿಸಿ ತೆರಳಿದಮೇಲೆ, ವಿದುರನು ಖಿನ್ನನಾಗಿ, ಕುಂತಿಯ ಮನೆಗೆ ಬಂದು, ಆಕೆಗಿಂತೆಂದನು—'ವೀರಮಾತೆ! ನಿತ್ಯವೂ ಪೇಳುತ್ತಿದ್ದ ನನ್ನ ಹಿತವಚನವನ್ನು ಯಾರೂ ಕೇಳದಾದರು. ಬಲವಂತನಾದರೂ ದುರ್ಬಲನಂತೆ ಸಂಧಿಗಾಗಿ ಯತ್ನಿಸಿದ ಧರ್ಮರಾಜನ ಮಹಾಗುಣವನ್ನು ಯಾರೂ ತಿಳಿಯದಾದರು. ಧರ್ಮನಿಗೆ ಶ್ರೀಕೃಷ್ಣನ ಸಹಾಯವಿದೆ. ಭೀಮಾರ್ಜುನರ ಬೆಂಬಲ ವಿದೆ. ಪಾಂಡವರಿಗೆ ಜಯವಾಗುವುದು. ಆದರೆ ಮಹಾಘೋರವಾದ ರಣದಲ್ಲಿ ನಡೆವ ಜನಕ್ಷಯವನ್ನು ಊಹಿಸುವ ನನಗೆ ನಿದ್ದೆಬಾರದಾಗಿದೆ. ಆಹಾರಪಾನೀಯಗಳು ಬೇಡವಾಗಿವೆ.' ಆ ಮಾತಿಗೆ ಕುಂತಿಯು ಚಿಂತಿಸಿ, ನಿಟ್ಟುಸಿರಿಟ್ಟಳು. 'ಜ್ಞಾತಿ. ವಧವನ್ನೂ ಮಾಡಿಸುವ ಅರ್ಥಕ್ಕೆ ಧಿಕ್ಕಾರವಿರಲಿ! ಪಾಂಡವರು ಕೌರವರಿಂದ ಕಾದಿ ಕಡಿದಾಡುವರೆಂದರೆ ಇದಕ್ಕೂ ದುಃಖತರವಿನ್ನೊಂದುಂಟೇ? ಯುದ್ಧವಾದರೆ ಜನ-ಕ್ಷಯದೋಷ! ಯುದ್ಧವಾಗದಿರೆ ಜೀವಿಕಾನಾಶ! ವಿದುರ! ಉಭಯ ಸಂಕಟ ವಾಗಿದೆ! ಉಭಯ ಪಿತಾಮಹನಾದ ಭೀಷ್ಮನು ಪಾಂಡವರಿಂದ ಹೊಡೆದಾಡುವನು. ಧನುರಾಚಾರ್ಯನು ಶಿಷ್ಯರಿಂದ ಸೆಣಸುವನು. ಅಣ್ಣನಾದ ಕರ್ಣನು ತಮ್ಮಂದಿರಿಂದ ಬಡಿದಾಡುವನು. ಪಾಪಿ ದುರ್ಯೋಧನನಿಂದ ಇಂತಾಯಿತು. ಅವನನ್ನು ಆಶ್ರಯಿಸಿ ಕರ್ಣನು ಸದಾ ಪಾಂಡವ ದ್ವೇಷವನ್ನು ಸಾಧಿಸುತ್ತಿರುವುದನ್ನು ಕಂಡು ನನಗೆ ಬಹು ಕಷ್ಟವೆನಿಸುತ್ತಿದೆ. ಅವನು ನನ್ನ ಮೊದಲಮಗನು. ಮಂತ್ರಬಲವನ್ನು ಪರೀಕ್ಷಿಸಲು ಹೊರಟು ಅವನನ್ನು ಸೂರ್ಯನಿಂದ ಪಡೆದೆನು. ಅವನಿಂದ ಪಾಂಡವರಿಗೆ ಮಹಾ ಭಯವಿದೆ. ಮಾತೆಯಾದ ನನ್ನ ಮಾತಿನಿಂದ ಮಗನಾದ ಕರ್ಣನು ಪಾಂಡವರನ್ನು ತಮ್ಮಂದಿರೆಂದು ತಿಳಿದು, ಅವರನ್ನು ಹಿಂಸಿಸದಂತೆ ಮಾಡುವುದು ಉಚಿತವಾಗಿದೆ' ಎಂದು ನುಡಿದು ಕುಂತಿಯು ಭಾಗೀರಥೀ ತೀರದಲ್ಲಿ ಸೂರ್ಯಾರಾಧನಪರನಾಗಿದ್ದ ಕರ್ಣನನ್ನು ಸೇರೆಪೋದಳು.

ಕರುಣಾಳುವು, ಧೀರನು, ಸತ್ಯಪ್ರತಿಜ್ಞನಾದ ಕರ್ಣನು ಹುಟ್ಟುತ್ತಿದ್ದ ಸೂರ್ಯ-ನಿಗಭಿಮುಖನಾಗಿ ಕೈಗಳನ್ನು ತಲೆಯ ಮೇಲಿಟ್ಟು ಜಪತತ್ಪರನಾಗಿದ್ದನು. ಜಪ ಮುಗಿಯಲೆಂದು ಕಾದು ಕುಂತಿಯು ಬಿಸಿಲೇರಿದಂತೆ ಅವನ ಉತ್ತರೀಯದ ನೆರಳ-ನ್ನಾಶ್ರಯಿಸಿದ್ದಳು. ಅಪರಾಹ್ಣವಾಗುವವರೆಗೂ ನಿಯತನಾಗಿದ್ದ ಕರ್ಣನು ಜಪವನ್ನು

ಮುಗಿಸಿ ಹಿಂದಿರುಗಿ ನೋಡಿದನು. ಬಿಸಿಲಿಗೆ ಬಾಡಿದ ಪದ್ಮಮಾಲೆಯಂತೆ ಮ್ಲಾನ ವದನೆಯಾಗಿದ್ದ ಕುಂತೀದೇವಿಯನ್ನು ನೋಡಿ ಕರ್ಣನು ಸಂಭ್ರಮದಿಂದ ಕಾಲಿಗೆರಗಿ ಕೈಜೋಡಿಸಿ ನಿಂತು, 'ದೇವೀ ! ಅಧಿರಥನ ಪುತ್ರನಾದ ರಾಧೇಯನು ನಮಿಸುತ್ತಿರುವನು. ನನ್ನಿಂದ ಏನಾಗಬೇಕೆಂ'ದು ಕೇಳಿದನು.

ಕುಂತಿಯು ತಲೆ ತಗ್ಗಿಸಿ ನಾಚುತ್ತ 'ಕರ್ಣ! ನೀನು ರಾಧೇಯನಲ್ಲ, ಕೌಂತೇಯನಾಗಿರುವೆ; ಸೂತ ಕುಲಜನಲ್ಲ. ನನ್ನ ಹೊಟ್ಟೆಯಲ್ಲಿ ಕಾನೀನನಾಗಿ ಜನಿಸಿದ ನಿನಗೆ ಭಗವಾನ್ ಸೂರ್ಯನೇ ತಂದೆಯಾಗಿರುವನು. ಹುಟ್ಟುವಾಗಲೆ ಕವಚ-ಕುಂಡಲ ಸಮೇತನಾಗಿ ಪ್ರಕಾಶಿಸುವ ದೇವಕುಮಾರನನ್ನು ನಿರ್ಭಾಗ್ಯಳಾದ ನಾನು ಕನ್ಯೆಯಾಗಿದ್ದುದರಿಂದ ಇರಿಸಿಕೊಳ್ಳಲಾರದೆ ಬಿಡಬೇಕಾಯಿತು. ಸೋದರರಾದ ಪಾಂಡವರನ್ನು ಬಿಟ್ಟು, ಅವರ ಶತ್ರುಗಳಾದ ಧಾರ್ತರಾಷ್ಟ್ರರನ್ನು ಸೇವಿಸುವುದು ನಿನಗೆ ನ್ಯಾಯವಲ್ಲ. ಭೀಮಾರ್ಜುನರು ವಿಕ್ರಮಿಸಿ ಸಂಪಾದಿಸಿದ ರಾಜ್ಯವನ್ನು ಧಾರ್ತರಾಷ್ಟ್ರನು ಅಪಹರಿಸಿ ಕೊಡದಿರುವನು. ಅದನ್ನು ನೀನು ದುರ್ಯೋಧನನಿಂದ ಕಸಿದು ರಾಜನಾಗಿ, ಧರ್ಮರಾಜಾದಿಗಳಿಂದ ಸೇವಿತನಾಗು ! ಕರ್ಣಾರ್ಜುನರು ಸೋದರರಾಗಿ ಕಲೆತರೆಂದು ತಿಳಿದು ಶತ್ರುಗಳು ದುರ್ಬಲರಾಗಿ ನಮಿಸುವಂತಾಗಲಿ ! ಬಲರಾಮ ಕೃಷ್ಣರಂತೆ ಕರ್ಣಾರ್ಜುನರು ಕಲೆತಿದ್ದೊಡೆ, ನಿಮಗೆ ಲೋಕದಲ್ಲಿ ಅಸಾಧ್ಯವೆಂಬುದೊಂದಿಲ್ಲ. ಐದು ಜನರು ತಮ್ಮಂದಿರಿಂದ ಕೂಡಿ, ಮಹಾಯಜ್ಞದಿ ಚತುರ್ಮುಖನು ದೇವತೆಗಳಿಂದ ಕೂಡಿದಂತೆ ಶೋಭಿಸುವೆ! ಜ್ಯೇಷ್ಠನಾದ ನೀನು ಗುಣಗಳಿಂದಲು ಶ್ರೇಷ್ಠನಾಗಿರುವೆ ! ಸೂತಪುತ್ರನೆಂಬ ಹೆಸರನ್ನು ತೊಡೆದುಹಾಕು ! ಪಾರ್ಥನೆನಿಸಿ ಮೆರೆ !' ಎಂದು ಬೇಡಿದಳು.

ಆಗ ಅಂತರಿಕ್ಷದಿ ಸೂರ್ಯನಿಂದ 'ಪೃಥೆಯು ಸತ್ಯವನ್ನು ನುಡಿದಿರುವಳು. ಕರ್ಣ! ಆದರಂತೆ ನಡೆ ! ತಾಯಿಯಂತೆ ನಡೆವ ನಿನಗೆ ತಪ್ಪದೆ ಶ್ರೇಯಸ್ಸಾಗುವುದು' ಎಂಬ ವಾತ್ಸಲ್ಯಪೂರಿತ ಧ್ವನಿಯು ಕೇಳಬಂತು. ಇಂತು ಜನನೀ ಜನಕರು ಪೇಳಿದರೂ ಚಲಿಸದೆ, ಸತ್ಯಶೀಲನಾದ ಕರ್ಣನು ಧೈರ್ಯವನ್ನು ವಹಿಸಿ ಇಂತೆಂದನು.

'ಕ್ಷತ್ರಿಯೇ ! ನಿನ್ನ ವಚನದಂತೆ ನಾನು ನಡೆಯಲಾರೆನು. ದುರ್ಯೋಧನನನ್ನು ನಾನು ಬಿಡುವಲ್ಲಿ ಏರ್ಪಡುವ ಹೃದಯವಿಚ್ಛಿದ್ರದಿಂದಲೇ ಧರ್ಮವೂ ತೂರಿಕೊಂಡು ನನ್ನನ್ನು ಬಿಟ್ಟುಹೋಗುವುದು. ಧರ್ಮದೂರನಾಗಿ ಬದುಕುವುದಕಿಂತಲು ನನಗೆ ಸಾವೇ ಲೇಸು !

'ನನಗೆ–ಮಗನಾದ ನನಗೆ–ನೀನು ತಾಯಿಯಾಗಿದ್ದೂ ಮಾಡಬಾರದ ಅಪರಾಧವನ್ನು ಮಾಡಿರುವೆ ! ಅಕಾಲದಲ್ಲಿ ಪುಟ್ಟಿದವನೆಂದು ಪರಿತ್ಯಜಿಸಿದೆ ! ಪೃಥಾಪುತ್ರ, ಸುಕ್ಷತ್ರಿಯನೆಂದು ಹೇಳಿಕೊಳ್ಳಲು ಬಾಯಿ ಬರದಂತೆ ಮಾಡಿದೆ! ಕ್ಷತ್ರಿಯನಾಗಿ ಹುಟ್ಟಿದ ನಿರಪರಾಧಿ ಮಗನಿಗೆ ಕ್ಷತ್ರಿಯಸಂಸ್ಕಾರವಾಗದಂತೆ ಬಿಟ್ಟು ನೀ ಮಾಡಿದ ದ್ರೋಹವನ್ನು ಯಾವ ಶತ್ರುವೂ ಮಾಡಲಾರನು. ಆಗ ಇಲ್ಲದ ದಯೆ, ಇಲ್ಲದ

ಪುತ್ರಪ್ರೇಮ ಈಗ ಹುಟ್ಟಿಬಂತೇ ? ಹೀನ ಸಂಸ್ಕಾರವನ್ನು ಪಡೆಯುವಂತಾದ ನನ್ನ ಮತ್ತೆ ಸ್ವಲಾಭತತ್ಪರಳಾಗಿ ಇಂತು ಪ್ರೇರಿಸುವುದು ಯಾವ ನ್ಯಾಯ ? ತಾಯಿಯಂತೆ ನಡೆಯದವಳೀಗ ನನ್ನನ್ನು ಮಗನಾಗಿ ನಡೆ ಎಂಬಳೆಂದರೆ ಕೇವಲ ಸ್ವಾರ್ಥವಲ್ಲದೆ ಮತ್ತೇನು ? ನಿನಗೆ ಬಂದಿರುವ ಭಯವಾದರೂ ಏನು ? ಕೃಷ್ಣನಿಂದ ಕೂಡಿ ಬರುವ ಧನಂಜಯನನ್ನು ಎದುರಿಸಿ ನಿಲ್ಲುವರಿಲ್ಲ. ನಾನು ಪಾಂಡವರನ್ನು ಸೇರಿದೆನೆಂದರೆ ಅವರಿಗೆ ಭಯಪಟ್ಟು ಬಂದವನೆಂದು ಜನರು ತಿಳಿಯುವುದಿಲ್ಲವೇ ? ಇಂದಿನವರೆಗೂ ಗೊತ್ತಾಗದಿದ್ದ ಅಣ್ಣನಿಂದು ಯುದ್ಧಕಾಲದಲ್ಲಿ ಗೊತ್ತಾದನೆಂದರೆ ಜನರೇನೆಂಬುವರು ?

'ನನ್ನನ್ನು ತನ್ನವನಾಗಿಸಿ, ಸರ್ವಕಾಮಿತವಿತ್ತು, ಅಂಗರಾಜನೆನಿಸಿ, ಇಂದ್ರನಂತೆ ಗೌರವಿಸುತ್ತಿರುವ ದುರ್ಯೋಧನನ ಹೆಬ್ಬಯಕೆಯನ್ನು ವಿಫಲಗೊಳಿಸಲಾರೆನು. ನನ್ನ ಸಹಾಯದಿಂದ ಶತ್ರುಗಳನ್ನು ಜಯಿಸುವ ಆಶೆಯನ್ನು ನನ್ನ ಪ್ರಾಣವನ್ನಾದರೂ ಸಮರ್ಪಿಸಿ ಪೂರೈಸುವುದೆನ್ನ ಧರ್ಮವು. ಸಂಗ್ರಾಮಸಾಗರವನ್ನು ದಾಟಿಸುವ ನಾವೆ ಎಂದು ನನ್ನನ್ನು ನಂಬಿರುವ ಧಾರ್ತರಾಷ್ಟ್ರರನ್ನು ಬಿಟ್ಟುಬರುವ ಕೆಟ್ಟಕಾರ್ಯವೆನ್ನಿಂದಾಗದು. ಇಷ್ಟು ಕಾಲ ದುರ್ಯೋಧನನಿಂದ ಬೆಳೆದ ಈ ದೇಹವನ್ನು ಮರೆಮಾಚದೆ ಅವನಿಗಾಗಿ ಸಮರ್ಪಿಸುವುದರಿಂದ ನಾನು ಕೃತಾರ್ಥನಾಗುವೆನು. ತಿಂದುಂಡು, ಉಟ್ಟು, ಬೆಳೆದು ಕೊಟ್ಟ ಪ್ರಭುವಿಗೆ ಎರಡು ಬಗೆವ ಪಾಪಿಷ್ಠರಿಗೆ ಇಲ್ಲಿ ಸುಖವಿಲ್ಲ. ಅಲ್ಲಿ ಪುಣ್ಯಲೋಕವಿಲ್ಲ ನಾನು ನನ್ನ ಶಕ್ತಿಗೆ ಮೀರಿ ಬಲವನ್ನನುಸರಿಸಿ, ದುರ್ಯೋಧನನಿಗಾಗಿ ಹೆಣಗುವೆನು. ನನಗೆ ಮತ್ತೊಬ್ಬರ ಹೊನ್ನಂದಣ ಬೇಕಾಗಿಲ್ಲ. ನನಗೆ ಶೀಲ ಕೀರ್ತಿಗಳು ರಕ್ಷಿತವಾಗಿದ್ದರೆ ಸಾಕು !

'ಆದರೂ ನೀ ಬಂದ ಕಾರ್ಯವೂ ವ್ಯರ್ಥವಾಗಗೊಡೆನು. ಕೇಳು! ಸಂಗ್ರಾಮದಲ್ಲಿ ವಧ್ಯರೆನಿಸಿ ಕೈಗೆ ಸಿಕ್ಕ ಧರ್ಮ-ಭೀಮ-ನಕುಲ-ಸಹದೇವರನ್ನು ಸಂಹರಿಸುವುದಿಲ್ಲವೆಂದು ಶಪಥ ಮಾಡುತ್ತಿರುವೆನು. ಅರ್ಜುನನನ್ನು ಸಿಕ್ಕರೆ ಬಿಡುವುದಿಲ್ಲವೆಂದೂ ತಿಳಿ ! ಅವನಿಂದ ಸಂಹೃತನಾದರೆ ಕೀರ್ತಿಯನ್ನೂ, ನಾನೇ ಅವನನ್ನು ಕೊಂದರೆ ಕುರುರಾಜನ ಋಣ ವಿಮೋಚನವನ್ನೂ ಪೊಂದುವೆನು. ಎರಡು ಬಗೆಯಾದೊಡೆಯೂ ನಿನಗೆ ಐದು ಜನರು ಸುತರಿರುವರು.'

ಆ ಮಾತನ್ನಾಲಿಸಿ ಕುಂತಿಯು ಕಣ್ಣೀರಿಡುತ್ತ, ಕರ್ಣನನ್ನು ಕರೆದಪ್ಪಿ, ವಿಧಿವಿಲಾಸಕ್ಕೆ ತಲೆಬಾಗಿ, 'ಕರ್ಣ ! ನೀನಾಡಿದುದು ಸತ್ಯವಾಗಿದೆ. ಅಂತೆಯೇ ಮಾಡು! ದೈವವು ದುರ್ಲಂಘ್ಯವಾಗಿದೆ. ಆಡಿದ ಮಾತನ್ನು ನೆನಪಿಡು ! ಹೋಗಿ ಬರುವೆನು. ನಿನಗೆ ಸ್ವಸ್ತಿಯಾಗಲಿ !' ಎಂದು ನುಡಿದು ಅವನ ಅಪ್ಪಣೆ ಪಡೆದು ಮನೆ ಸೇರಿದಳು. ಕರ್ಣನೂ ತನ್ನ ಪ್ರಾಸಾದವನ್ನು ಸೇರಿ, ಅವಳ ಮಾತನ್ನೂ, ಶ್ರೀಕೃಷ್ಣವಚನವನ್ನೂ ನೆನೆದು, ದುರ್ಯೋಧನನ ಪರಾಭವವನ್ನು ನಿಶ್ಚಯಿಸಿ, ಸುಮ್ಮನಾದನು.

## ಶ್ರೀಕೃಷ್ಣ ವಚನ—ಯುದ್ಧ ಸನ್ನಾಹ

ಶ್ರೀಕೃಷ್ಣನು ಹಸ್ತಿನಾವತಿಯಿಂದ ತೆರಳಿ ಉಪಪ್ಲಾವ್ಯವನ್ನು ಮುಟ್ಟಿದನು. ಕೌರವ ಸಭೆಯಲ್ಲಿ ನಡೆದ ಎಲ್ಲ ಸಮಾಚಾರವನ್ನು ಪಾಂಡವಾದಿ ಸರ್ವರಿಗೂ ತಿಳಿಸಿ, ತಾನು ವಿಶ್ರಮಿಸಲು ಪೋದನು.

ಸಾಯಂಕಾಲವಾಗುತ್ತಿರಲು ಮತ್ತೆ ಸಭೆಸೇರಿ ಪಾಂಡವರು ಶ್ರೀಕೃಷ್ಣನಿಗೆ ಹೇಳಿಕಳಿಸಿದರು. ಧರ್ಮರಾಜನು ಕೃಷ್ಣನನ್ನು ನೋಡಿ, 'ದುರ್ಯೋಧನನು ನಿನ್ನ ಮಾತನ್ನು ಕೇಳದೆ ಹಠವನ್ನು ತೊಟ್ಟಾಗ ಭೀಷ್ಮದ್ರೋಣರೇನೆಂದರು ? ನಮ್ಮ ದೊಡ್ಡಪ್ಪನವನಿಗೆ ತಿಳಿಹೇಳಲಿಲ್ಲವೇ ? ಗಾಂಧಾರೀ ದೇವಿಯು ಏನೆಂದಳು ? ನಮ್ಮ ಚಿಕ್ಕಪ್ಪ ವಿದುರನಾಡಿದ ಧರ್ಮವಚನಗಳಾವವು ? ಕುಲಕ್ಷಯವನ್ನು ನಿವಾರಿಸಲು ಅವರಾಡಿದ ವಚನಗಳನ್ನು ಕಾಮ ಲೋಭ ಕ್ರೋಧಗಳಿಂದ ಕಣ್ಣು ಕಾಣದ ದುರ್ಯೋಧನನು ಕೇಳದಂತಾದಾಗ ನೀನೇನು ಮಾಡಿದೆ ? ಕೃಷ್ಣ ! ನೀನೇ ನಮಗೆ ಗತಿಯು ! ನೀನೇ ಪ್ರಭುವು ! ನೀನೇ ಗುರುವು, ನಮ್ಮನ್ನು ಸರಿಯಾದ ಮಾರ್ಗದಲ್ಲಿ ನಡೆಸು !' ಎಂದು ಪ್ರಾರ್ಥಿಸಿದನು.

ಶ್ರೀಕೃಷ್ಣನು, 'ನಾನು ಹಿತವಚನಗಳಿಂದ ಸಂಧಿಯನ್ನು ಪ್ರತಿಪಾದಿಸಿದೆನು. ಅದನ್ನು ಕೇಳಿ ದುರ್ಯೋಧನನು ನಕ್ಕು ತಿರಸ್ಕರಿಸಿದನು. ಭೀಷ್ಮನವನನ್ನು ನೋಡಿ ಕುಪಿತನಾಗಿ ಸಭೆಯಲ್ಲಿ ಇಂತೆಂದನು. 'ದುರ್ಯೋಧನ ! ಕುಲಹಿತವಾಗಲೆಂದು ಹೇಳುತ್ತಿರುವೆನು ಕೇಳು ! ನಮ್ಮ ತಂದೆಗೆ ನಾನೊಬ್ಬನೇ ಮಗನು. ಮತ್ತೆ ಮಕ್ಕಳಿಗಾಗಿ ಚಿಂತಿಸಿದ ಶಂತನು ರಾಜನಿಗೆ ಸತ್ಯವತಿಯನ್ನು ತಂದು ನಾನೇ ಮದುವೆ ಮಾಡಿದೆನು. ಅದಕ್ಕಾಗಿ ನಾನು ರಾಜ್ಯವನ್ನೂ, ಮದುವೆಯನ್ನೂ ಬಿಟ್ಟೆನು. ಶಂತನುಪುತ್ರನಾದ ವಿಚಿತ್ರವೀರ್ಯನು ನಾನು ತಂದಿತ್ತ ಕಾಶಿ ರಾಜಪುತ್ರಿಯರಿಬ್ಬರಲ್ಲಿ ರತನಾಗಿ ಕ್ಷಯರೋಗಗ್ರಸ್ತನಾಗಿ ಸತ್ತನು. ರಾಜ್ಯವು ಅರಾಜಕವಾಗಿ ಈತಿಬಾಧೆಗಳು ಹೆಚ್ಚಾದವು. ಆಗ ಶ್ರೀ ವೇದವ್ಯಾಸದೇವರ ವರದಿಂದ ಧೃತರಾಷ್ಟ್ರ ಪಾಂಡು-ವಿದುರರು ಜನಿಸಿ ಕುಲವರ್ಧಕರಾದರು. ಧೃತರಾಷ್ಟ್ರನು ಅಂಧನಾದುದರಿಂದ ರಾಜನಾಗಲು ಅನರ್ಹನಾದಾಗ, ಪಾಂಡುರಾಜನಿಗೆ ಪಟ್ಟಗಟ್ಟಿ, ನಾನು ರಾಜಸೇವಾಸಕ್ತನಾಗಿದ್ದೆನು. ಧರ್ಮಾತ್ಮನಾದ ಪಾಂಡುರಾಜನು ಅಣ್ಣನಿಗೆ ರಾಜ್ಯವಿತ್ತು, ತಾನು ತಂದ ಸಿರಿಯನ್ನೂ ಅವನಿಗೆ ಸಮರ್ಪಿಸಿ, ಕಾಡಿನಲ್ಲಿರುತ್ತಾ, ಅಲ್ಲೇ ಮೃತನಾದನು. ಅವನದಾದ ರಾಜ್ಯವು ಅವನ ಮಕ್ಕಳಾದ ಪಾಂಡವರಿಗೆ ಸೇರಿದ್ದಾಗಿದೆ. ನಾನು ಜೀವಂತನಿರುವಾಗ, ರಾಜ್ಯವಾರದೂ ಅಲ್ಲ. ಆದರೂ ಸತ್ಯಪ್ರತಿಜ್ಞನಾದ ನನಗದು ಬೇಕಿಲ್ಲ. ನನಗೆ ನೀವೆಂತೋ ಪಾಂಡುವರು ಅಂತೇ ! ನಿಮ್ಮ ತಂದೆಯು, ತಾಯಿಯು ವಿದುರನು ಹೇಳಿದಂತೆ ನಡೆ ! ಪಾಂಡವರಿಗೆ ಅರ್ಧ ರಾಜ್ಯವನ್ನು ಕೊಡು !' ಎಂದು ನಯದಿಂದ ಭಯದಿಂದ ಬೋಧಿಸಿದನು.

ದ್ರೋಣನು, 'ರಾಜನ್! ಶಂತನು ರಾಜನು ಚಿಕ್ಕವನಾದರೂ ಧರ್ಮದಿಂದ ತಾನೇ ರಾಜನಾದನು. ಭೀಷ್ಮನು ಹಿರಿಯನಾದರೂ ಧರ್ಮದಿಂದ ರಾಜ್ಯದೂರ ನಾದನು. ಅಂತೆಯೇ ಧರ್ಮದಿಂದ ರಾಜನಾದ ಪಾಂಡುರಾಜನು ಹಿರಿಯನೆಂದು ನಿಮ್ಮಪ್ಪನಿಗಿತ್ತ ರಾಜ್ಯವು ನಿನ್ನದಾಗದು. ವಿದುರನು ಮಂತ್ರಿಕಾರ್ಯತತ್ಪರನಾಗಿ ಅಣ್ಣನನ್ನು ಸೇವಿಸುತ್ತಿರುವನು. ಪಾಂಡವರಿಂದ ವಿರೋಧಿಸಿ ಕೆಡಬೇಡ ! ಕಲೆತಿದ್ದು ಸರ್ವಲೋಕಕ್ಷೇಮವನ್ನು ಸಾಧಿಸು ! ನಾನು ನಿನಗಂಜಿ ಹೇಳದಿರುವನಲ್ಲ. ನನಗೆ ಅರ್ಥಕಾಮಗಳ ಭ್ರಮೆಯಿಲ್ಲ. ಭೀಷ್ಮನಿತ್ತ ಸಿರಿಯನ್ನುಂಡು ರಾಜಸೇವೆಯನ್ನು ಮಾಡುತ್ತಿರುವೆನು. ನಿನ್ನಿಂದ ನಾನೇನೂ ಆಶಿಸುವುದಿಲ್ಲ. ಭೀಷ್ಮನಿದ್ದೆಡೆ ದ್ರೋಣ ನೆಂದು ತಿಳಿ ! ಭೀಷ್ಮನು ನುಡಿದಂತೆ ಮಾಡು ! ಪಾಂಡವರಿಗೆ ರಾಜ್ಯಾರ್ಧವನ್ನು ಕೊಡು ! ಅದೇ ನನಗೆ ಗುರುದಕ್ಷಿಣೆ ಎನಿಸುವುದು. ಅಶ್ವತ್ಥಾಮನಂತೆಯೇ ಪ್ರೀತಿ-ಪಾತ್ರನಾದ ಅರ್ಜುನನೊಡನೆ ಕಾದಾಡುವಂತೆ ಮಾಡಬೇಡ ! ಇನ್ನುರ ಮೇಲೆ ನಿನ್ನಿಷ್ಟ ! ಎಲ್ಲಿ ಧರ್ಮವೋ ಅಲ್ಲಿ ಜಯವಾಗುವುದು ಹೋಗು !' ಎಂದನು.

ವಿದುರನು ಭೀಷ್ಮನನ್ನವಲೋಕಿಸಿ, 'ಹಾಳಾಗಿ ಮುಗಿದಿದ್ದ ಕುರುವಂಶವನ್ನು ಉದ್ಧರಿಸಿದೆ ! ಈಗ ಅದು ನಾಶವಾಗಲಿರುವುದನ್ನು ನೋಡುತ್ತಾ ಸುಮ್ಮನಿರುವೆ ! ಲೋಭಮತಿಯಾದ ದುರ್ಯೋಧನನಾಡಿಸಿದಂತೆ ಆಡುವುದಂತೂ ಆಶ್ಚರ್ಯವಾಗಿದೆ. ಯಾವ ಹುಳವೀ ಪಾಪಿ ! ಕೃತಘ್ನನು, ನಿಷ್ಠುರನು, ಶಾಸ್ತ್ರಘಾತುಕನು ಆದ ದುರ್ಯೋಧನನಿಂದ ಕುಲವೇ ನಾಶವಾಗದಂತೆ, ನೀನೇ ರಾಜನಾಗಿ ಎಲ್ಲರನ್ನೂ ಶಾಸಿಸು ! ಬ್ರಹ್ಮನು ಪ್ರಜರನ್ನು ಸೃಜಿಸಿ, ಸಂಹರಿಸುವಂತೆ, ನೀನು ಧೃತರಾಷ್ಟ್ರ ನನ್ನು ರಾಜನನ್ನಾಗಿಸಿ, ನನ್ನನ್ನು ಅವನ ಸೇವೆಗೆಂದು ಕೂಡಿಸಿರುವೆ! ಚಿತ್ರದ ಗೊಂಬೆಗಳಂತೆ ನಾವು ನಿಷ್ಪ್ರಯೋಜಕರಾಗಿರುವೆವು. ನೀನುಪೇಕ್ಷಿಸಿದರೆ ಕುಲನಾಶ ವಾಗುವುದು ಅಥವಾ ವಿನಾಶಕಾಲವು ವಿಧಿನಿಯತವಾಗಿರಲು ನಿನಗೂ ಬುದ್ಧಿ ಭ್ರಮಣ ವಾಯಿತೆ ? ಹೋಗಲಿ ! ಧೃತರಾಷ್ಟ್ರನನ್ನು ಕರೆದುಕೊಂಡು ವನಕ್ಕೆ ಹೊರಟು ಹೋಗೋಣ! ದ್ರೋಣನೂ ಬಂದುಬಿಡುವನು. ಆಗ ರೆಕ್ಕೆಗಳಿಲ್ಲದ ಹಕ್ಕಿಯಂತಾದ ದುರ್ಯೋಧನನು ಪಾಂಡವರಿಗೆ ಹೆದರಿ ರಾಜ್ಯವನ್ನೀಯುವನು. ಅಥವಾ ಈಗಲೇ ಆ ದುಷ್ಟಚತುಷ್ಟಯವನ್ನು ಬಂಧಿಸಿ, ಪಾಂಡವರನ್ನು ಕರೆಸಿ, ಧರ್ಮರಾಜನಿಗೆ ರಾಜ್ಯಪಟ್ಟಾಭಿಷೇಕವನ್ನು ಮಾಡು! ಕುಲಹಿತ, ಪ್ರಜಾಕ್ಷೇಮಗಳನ್ನು ಸಾಧಿಸು!' ಎಂದನು.

ಆಗ ಧೃತರಾಷ್ಟ್ರನು ಕೇಳುತ್ತಿರಲು ಗಾಂಧಾರಿಯು ಇಂತೆಂದಳು—'ದುರ್ಯೋಧನ! ಕುಲನಾಶಕನಾಗಬೇಡ! ಹಿರಿಯರಿರಲು ನೀನೆಂತು ರಾಜನೆನಿಸುವೆ ? ಕುಲ ಕ್ರಮಾಗತವಾದ ಸಂಪ್ರದಾಯವನ್ನು ಕಡೆಗಣಿಸಿ, ರಾಜ್ಯವನ್ನು ಆಶಿಸಿ, ಕುಲವನ್ನೇ ಕೆಡಿಸಲಿರುವ ನಿನ್ನಂತಹ ನಿಂದನೀಯರಿನ್ನಿಲ್ಲ. ಮಹಾನುಭಾವನಾದ ಭೀಷ್ಮ ನಿರುವನು ; ನಿಮ್ಮ ತಂದೆಯೂ ಇರುವನು. ಅವರನ್ನಲ್ಲನೆಂದು ತಳ್ಳಿ ರಾಜನೆಂದು

ಮೆರೆಯುವ ನಿನ್ನ ದುರ್ಮದವನ್ನು ಕಂಡು ಜುಗುಪ್ಸೆಯುಂಟಾಗಿದೆ. ನ್ಯಾಯವಾಗಿ ರಾಜ್ಯವು ಪಾಂಡುರಾಜನದಾಗಿದೆ; ಅವನ ಮಕ್ಕಳದಾಗಿದೆ. ಪಾಂಡುವಿನ ಅನುಜ್ಞೆಯಿಂದ ರಾಜ್ಯವನ್ನಾಳುತ್ತಿರುವ ಕೌರವರಿಗೆ ಅವರ ರಾಜ್ಯವನ್ನು ಕದಿಯಲೆಣಿಸುವುದು ಸರಿಯಲ್ಲ. ಧರ್ಮದಿಂದ ನಡೆದು ಧರ್ಮರಾಜನನ್ನು ಕರೆದು, ಅವನ ರಾಜ್ಯವನ್ನವನಿಗೆ ಕೊಡು!'

ಧರ್ಮರಾಜ! ಗಾಂಧಾರಿಯ ವಚನವನ್ನು ಕೇಳಿ, ಧೃತರಾಷ್ಟ್ರನು ಮತ್ತೆ ಮಗನಿಗಿಂತೆಂದನು—'ದುರ್ಯೋಧನ! ಸಭೆಯಲ್ಲಿ ಸತ್ಯವನ್ನರುಹುತ್ತಿರುವೆನು ಕೇಳು! ಚಂದ್ರವಂಶದಲ್ಲಿ ಹುಟ್ಟಿದ ಯಯಾತಿರಾಜನಿಗೆ ಐದುಜನ ಪುತ್ರರು. ಅವರಲ್ಲಿ ಯದುರಾಜನು ಜ್ಯೇಷ್ಠನು. ಆತನು ದೇವಯಾನಿಯ ಪುತ್ರನು. ಅವನ ವಂಶವೇ ಯದುವಂಶವು. ಶರ್ಮಿಷ್ಠೆಯ ಮಗನಾದ ಪುರುರಾಜನ ವಂಶದಲ್ಲಿ ನಾವು ಜನಿಸಿರುವೆವು. ಬಲದರ್ಪಮೋಹಿತನಾದ ಯದುರಾಜನು ತಂದೆಯ ಹಿತವನ್ನು ಸಾಧಿಸಲಾರದೆ, ರಾಜ್ಯಪಾಲನಾನರ್ಹನೆನಿಸಿದನು. ಮಿಕ್ಕ ಮೂವರೂ ಅಂತೆಯೇ ಯಯಾತಿಯ ಶಾಪದಿಂದ ರಾಜ್ಯದೂರರಾದರು. ಕನಿಷ್ಠನಾದರೂ ಪುರುರಾಜನು, ತಂದೆಯ ಮಾತನ್ನು ನಡೆಸಿಕೊಟ್ಟು ಚಕ್ರವರ್ತಿಯಾದನು. ಜ್ಯೇಷ್ಠನಾದರೂ ಯದುರಾಜನು ಚಕ್ರವರ್ತಿಯಾಗಲಿಲ್ಲ.

'ನಮ್ಮ ಮುತ್ತಾತನಾದ ಪ್ರತೀಪನಿಗೆ ದೇವಾಪಿ, ಬಾಹ್ಲೀಕ, ಶಂತನು ರಾಜರು ಪುತ್ರರು. ಜ್ಯೇಷ್ಠಪುತ್ರನಾದರೂ, ದೇವಾಪಿಯು ತ್ವಗ್ದೋಷದಿಂದ ರಾಜ್ಯವನ್ನು ಪೊಂದಲಾರದೆ, ವನವನ್ನು ಸೇರಿದನು. ಬಾಹ್ಲೀಕನು ಮಾತಾಮಹನನ್ನು ಸೇರಿ, ಅವನ ಕುಲವರ್ಧನೆನಿಸಿರುವನು. ಅವನ ಅನುಜ್ಞೆಯನ್ನು ಪಡೆದು ಶಂತನುರಾಜನು ಚಕ್ರವರ್ತಿಯಾದನು. ಇಂತು ದೋಷಯುಕ್ತರಾದ ಜ್ಯೇಷ್ಠರು, ಗುಣಯುಕ್ತರಾದ ಕನಿಷ್ಠರಿಗೆ ರಾಜ್ಯವನ್ನು ಬಿಟ್ಟುಕೊಟ್ಟಿರುವುದೀಗಿನ ಮಾತಲ್ಲ. ಕುರುಡನಾಗಿ ಪುಟ್ಟಿದ ನಿಮ್ಮಪ್ಪನಿಗೇ ರಾಜ್ಯಾಧಿಕಾರವಿಲ್ಲದಿರುವಾಗ, ಅವನ ಮಗನಿಗೆಲ್ಲಿ ಬಂದೀತು? ರಾಜಪುತ್ರನೂ ಅಲ್ಲದ, ಪ್ರಭುತ್ವವಿಲ್ಲದ ನಿನಗೆ ಪರರಾಜ್ಯಾಪಹಾರವು ಒಳಿತಲ್ಲ. ಧರ್ಮರಾಜನು ಸತ್ಯಸಂಧನು, ಶಾಸ್ತ್ರವಿಧೇಯನು, ಬಂಧುಜನಪ್ರಿಯನು, ಪ್ರಜಾವತ್ಸಲನು, ಜಿತೇಂದ್ರಿಯನು, ಭೂತದಯಾಪರನು ಆಗಿರುವನು. ರಾಜಲಕ್ಷಣ ಸಂಪನ್ನನಾದ ಯುಧಿಷ್ಠಿರನಿಗೆ ಅರ್ಧ ರಾಜ್ಯವನ್ನಾದರೂ ಕೊಟ್ಟು, ನೀನು ಅನುಜಮಿತ್ರರಿಂದ ಆನಂದದಿಂದಿರು!'

ಇಂತು ನುಡಿದ ಹಿರಿಯರೆಲ್ಲರನ್ನೂ ನಿರ್ಲಕ್ಷಿಸಿ, ದುರ್ಯೋಧನನು ಅಲ್ಲಿಂದ ಎದ್ದುಹೋದನು. ಅಂದು ಪುಷ್ಯ ನಕ್ಷತ್ರವೆಂದು ಕೌರವರೆಲ್ಲರೂ ರಣಕುತೂಹಲಿಗಳಾಗಿ ಕುರುಕ್ಷೇತ್ರಕ್ಕೆ ತೆರಳಿದರು. ಭೀಷ್ಮನು ಸೇನಾಪತಿಯಾಗಿರಲು, ಸರ್ವರಾಜರೂ ಹೊರಟುದನ್ನು ತಿಳಿದು ನಾನಿಲ್ಲಿಗೆ ಬಂದೆನು. ಧರ್ಮರಾಜ! ಕುರುಸಭೆಯಲ್ಲಿ ನಡೆದ ವೃತ್ತವನ್ನೆಲ್ಲ ತಿಳಿಸಿದೆನು. ಮುಂದಿನ ಕಾರ್ಯವನ್ನಾಲೋಚಿಸು.

ಸೌಭ್ರಾತ್ರವನ್ನೆಣಿಸಿ, ನಾನು ನುಡಿದ ಸಾಮವಚನಗಳೆಲ್ಲವು, ಭೋರ್ಗಲ್ಲ ಮೇಲೆ ಮಳೆಗರೆದಂತಾದವು. ಆಗ ಭೇದವನ್ನು ಪ್ರಯೋಗಿಸಿ, ರಾಜರ ಮನಃಪಟಲದಲ್ಲಿ ದುರ್ಯೋಧನಾದಿ ಕೌರವರ ಪಾಪಕೃತ್ಯಗಳನ್ನು ಚಿತ್ರಿಸಿ ಬಂದಿರುವೆನು. ದುರ್ಯೋಧನನ ಮನದಿ ಭಯವನ್ನೂ, ಕರ್ಣನ ಹೃದಯದಲ್ಲಿ ಕರ್ತವ್ಯಪರಾಙ್ಮುಖತೆಯನ್ನೂ ಬಿತ್ತಿ ಬಂದಿರುವೆನು. ಅಶ್ವತ್ಥಾಮನನ್ನೂ ಕಂಡು ಪಾಂಡವರಲ್ಲಿ ಮಿತ್ರಭಾವವನ್ನು ತೋರೆಂದು ಹೇಳಿದೆನು. ಆತನು ತನ್ನ ತಂದೆಯನ್ನವರು ಕೊಲ್ಲುವವರೆಗೂ ಮಿತ್ರಭಾವವನ್ನು ವಹಿಸಿರುವೆನೆಂದು ಮಾತು ಕೊಟ್ಟನು. 'ದುರ್ಯೋಧನ! ರಾಜ್ಯವನ್ನೆಲ್ಲ ನೀನೇ ಪಾಲಿಸು! ಪಾಂಡವರಿಗೆ ಐದು ಗ್ರಾಮಗಳನ್ನಾದರೂ ಕೊಡು! ಅವರು ನಿನ್ನ ಪ್ರಜರಾಗಿ ನಿನಗೆ ವಿಧೇಯರಾಗಿರುವಂತೆ ಮಾಡಿಕೋ! ಸೋದರರೆಂದಮೇಲೆ ಅವರ ಪೋಷಣಭಾರವು ನಿನ್ನದಲ್ಲವೆ? ಚನ್ನಾಗಿ ಯೋಚಿಸಿ ನಡೆ! ಎಂದು ಬಹು ವಿಧವಾಗಿ ಪೇಳಿದ ನನ್ನ ಮಾತನ್ನು ಕೇಳದೆ ದುಡುಕಿರುವ ದುರ್ಯೋಧನನಲ್ಲಿ ದಂಡೋಪಾಯವೇ ಉಳಿದಿರುವುದು. ಅವನು ರಾಜ್ಯವನ್ನು ಕೊಡನು; ಕೊಡದಿರೆ ನೀವು ಬಿಡುವವರಲ್ಲ. ಅಂತೂ ಯುದ್ಧವೇ ತಿರವೆಂದು ನಿಶ್ಚಯಿಸಿಕೊಂಡು ಬಂದೆನು.'

ಶ್ರೀಕೃಷ್ಣನ ವಚನವನ್ನಾಲಿಸಿ ಧರ್ಮರಾಜನು ಅನುಜಮಿತ್ರಬಂಧುಗಳಿಂದ ಕೂಡಿ ಆಲೋಚಿಸಿದನು. ತನ್ನ ಏಳಕ್ಷೋಹಿಣಿಗಳಿಗೂ ದ್ರುಪದ, ವಿರಾಟ, ಧೃಷ್ಟ-ದ್ಯುಮ್ನ, ಶಿಖಂಡಿ, ಸಾತ್ಯಕಿ, ಚೇಕಿತಾನ, ಧೃಷ್ಟಕೇತುಗಳನ್ನು ಸೇನಾಪತಿಗಳನ್ನಾಗಿ ನಿಯಮಿಸಿ, ಭೀಮಸೇನ (ಯುವರಾಜ) ನಿಗೆ ಸಮರಾಂಗಣ ಸಾರ್ವಭೌಮತ್ವವನ್ನಿತ್ತನು. ಭೀಷ್ಮಾದಿ ಮಹಾವೀರರ ವಿಜೃಂಭಣವನ್ನು ತಡೆಯಬಲ್ಲ ಸೇನಾಪತಿ ಮುಖ್ಯನಾರೆಂದು ಕೇಳಿದ ಧರ್ಮರಾಜನಿಗೆ ಸಹದೇವನಿಂತೆಂದನು—

'ಮಹಾರಾಜ! ನಮಗೆ ಬಂಧುವರನು ಸಮಾನಸುಖದುಃಖನು ಧರ್ಮಮರ್ಮಜ್ಞನು ಆದ ವಿರಾಟನೇ ಸರ್ವಸೇನಾಪತಿಯಾಗಲು ತಕ್ಕವನು. ಭೀಷ್ಮನಿಗೆ ಸಮಬಲನು, ಸಮವಯಸ್ಕನು ಆದ ವಿರಾಟನಿಗೆ ಸೇನಾಪತಿಯಾಗಿ ಪಟ್ಟಗಟ್ಟು!' ನಕುಲನು 'ಕುಲ, ಶಸ್ತ್ರ, ಶಾಸ್ತ್ರ, ಬಲ, ಸಂಪತ್ತು ಮೊದಲಾದ ಸುಗುಣಗಳಿಗೆ ಖಣಿಯಾದ ದ್ರುಪದನು ಸರ್ವಸೇನಾಪತಿಯಾಗಲು ಅರ್ಹನಿರುವನು. ಆತನು ದ್ರೋಣನಲ್ಲಿರುವ ವೈರದಿಂದ ವಿಜೃಂಭಿಸಿ, ನಮಗೆ ಜಯವನ್ನು ತರಬಲ್ಲನು' ಎಂದನು. ಅರ್ಜುನನು 'ಅಗ್ನಿಕುಂಡದಿಂದ ವಿಜೃಂಭಿಸಿ ಬಂದ ಧೃಷ್ಟದ್ಯುಮ್ನನೇ ನಮ್ಮ ಸೇನೆಯನ್ನು ನಡೆಸಲಿ! ಮಹಾಭುಜನು, ಸಿಂಹಪರಾಕ್ರಮನು, ಶತ್ರುಭಯಂಕರನು ಆದ ಧೃಷ್ಟದ್ಯುಮ್ನನಿಗೆ ಸಮರಿಲ್ಲ. ಅವನು ನಮಗೆ ಮೈದುನನೂ ಅಹುದು. ಅಂತೆಯೇ ದ್ರೋಣಸಂಹಾರಕ್ಕೆಂದೇ ಅವನು ಪುಟ್ಟಿರುವನು! ಆದುದರಿಂದ ಅವನೇ ನಮ್ಮ ಸರ್ವಸೈನ್ಯಾಧ್ಯಕ್ಷನಾಗಲಿ!' ಎಂದನು. ಭೀಮಸೇನನು 'ಭೀಷ್ಮನನ್ನು ಸಂಹರಿಸಲೆಂದೇ ವರಪಡೆದು ಬಂದಿರುವ ಶಿಖಂಡಿಯನ್ನು ನಾನು ಸೇನಾಪತಿಸ್ಥಾನದಲ್ಲಿ ಸೂಚಿಸುವೆನು. ಆ ಮಹಾವೀರನಿಂದ ನಮ್ಮ ಕಾರ್ಯವಾಗುವುದು' ಎಂದನು.

ಧರ್ಮಜನು 'ಎಲ್ಲವನ್ನರಿತ ಶ್ರೀಕೃಷ್ಣನು ಹೇಳಿದಂತೆ ಮಾಡುವುದೊಳಿತಲ್ಲವೆ? ಶ್ರೀಕೃಷ್ಣನಿಗೆ ಸಮ್ಮತನಾದವನೇ ನನ್ನ ಸೇನಾಪತಿಯಾಗಲಿ! ಶ್ರೀಕೃಷ್ಣನೇ ನಮಗೆ ಬಂಧುಬಳಗ! ಶ್ರೀಕೃಷ್ಣನೇ ವಿಜಯಮೂಲಕಾರಣನು! ಅವನು ನುಡಿಯಲಿ!' ಎಂದು ಬೇಡಿದನು.

ಶ್ರೀಕೃಷ್ಣನು 'ನೀವೆಲ್ಲರಾಡಿದ ವಚನವನ್ನು ಕೇಳಿದೆನು. ವಿರಾಟ ದ್ರುಪದ ಶಿಖಂಡಿ ಧೃಷ್ಟದ್ಯುಮ್ನರು ಬಲವಿಕ್ರಮ ಸಂಪನ್ನರು. ಇಂದ್ರನೂ ಅವರಿಂದ ಕಾದಲು ಹಿಂಜರಿಯುವನು. ಅಂದಮೇಲೆ ಧಾರ್ತರಾಷ್ಟ್ರರ ಲೆಕ್ಕವೇನು? ಭೀಮಸೇನ, ಪಾರ್ಥ, ಯಮಳರು, ಸಾತ್ಯಕಿ ಚೇಕಿತಾನರು, ಅಭಿಮನ್ಯು ದ್ರೌಪದೇಯರು ಇರುವಲ್ಲಿ ಯಾರು ಸೇನಾಪತಿಗಳಾದರೇನು? ಇವರ ಸಹಾಯವಂತನಾಗಿ ಧೃಷ್ಟದ್ಯುಮ್ನನು ಜಯವನ್ನು ಗಳಿಸ ತರಬಲ್ಲನೆಂದು ನಾನು ತಿಳಿದಿರುವೆನು. ಅವನೇ ತೇಜಸ್ಸು, ಬಲ, ವರ ವೀರ್ಯಗಳಿಂದ ಅಧಿಕನಾಗಿರುವುದರಿಂದ ಸೇನಾಪತಿಯಾಗಲಿ!'

ಶ್ರೀಕೃಷ್ಣನ ವಚನಗಳನ್ನಾಲಿಸಿ ಧರ್ಮರಾಜನು 'ಸರಿ! ಎಂದು ಮೆಚ್ಚಿ ತಲೆ ದೂಗಿದನು. ಸಭಿಕರು ಜಯಘೋಷದಿಂದ ಸಮ್ಮತಿಯನ್ನು ಸೂಚಿಸಿದರು. ಶಂಖ ದುಂದುಭಿ ಧ್ವಾನಗಳು ಭೂನಭೋಂತರದಿ ಪ್ರತಿಧ್ವನಿಸಿದವು. ರಾಜರು ತಮ್ಮ ತಮ್ಮ ಸೈನ್ಯಗಳಿಂದ ಕೂಡಿ, ಹರ್ಷವಿವಶರಾಗಿ ಕುರುಕ್ಷೇತ್ರಕ್ಕೆ ತೆರಳಿದರು.

ಧರ್ಮರಾಜನಿಂದ ಸೈನ್ಯಪತಿಯಾಗಿ ಪಟ್ಟಗಟ್ಟಲ್ಪಟ್ಟ ಧೃಷ್ಟದ್ಯುಮ್ನನು ರಥ ಗಜ ತುರಗ ಪದಾತಿಸಂಕುಲವಾದ ಧರ್ಮರಾಜನ ಸೈನ್ಯವನ್ನು ನಡೆಸಿಕೊಂಡು ಮಹೋತ್ಸಾಹಭರಿತನಾಗಿ ತೆರಳಿದನು. ಕೂಗಿ ಕರೆವರು, ಓಡಿ ಬರುವರು, ಕವಚ ಶಿರಸ್ತ್ರಾಣಗಳ ತೊಡುವರು, ರಥಗಳಲ್ಲಿ ಕೂತು ತೆರಳುವರು ಆಗಿ ಸೈನಿಕರು ಸಂಭ್ರಮ ಭರಿತರಾಗಿದ್ದರು. ಭೀಮಸೇನನು ಸೈನ್ಯದ ಮುಂಭಾಗದಿ ನಡೆಯುತ್ತಿರಲು ಅವನ ಹಿಂದೆ ಸೌಭದ್ರ ದ್ರೌಪದೇಯ ನಕುಲ ಸಹದೇವ ಧೃಷ್ಟದ್ಯುಮ್ನರು ಉದ್ಯತಾಯುಧರಾಗಿ ರಥಗಳಲ್ಲಿ ಕೂತು ಹೊರಟರು. ಮಧ್ಯದಲ್ಲಿ ಧರ್ಮರಾಜನಿದ್ದನು. ಶಕಟಗಳು, ಸಂಭಾರ ವಾಹನಗಳು, ವರ್ತಕರು, ಶಿಬಿರ ನಿರ್ಮಾಪಕರು, ಪರಿಚಾರಕರು, ಸೂದರು, ಕೋಶಾಧಿಕಾರಿಗಳು, ಯಂತ್ರಕುಶಲರು, ವೈದ್ಯಚಿಕಿತ್ಸಕರು, ಸೈನ್ಯಮಧ್ಯಭಾಗದಲ್ಲಿ ವಿರಾಟಾದಿ ವೀರರಿಂದ ರಕ್ಷಿತರಾಗಿ ಹೊರಟರು.

ದ್ರೌಪದೀದೇವಿಯೇ ಮೊದಲಾದ ಅವರೋಧ ಜನವನ್ನು ಉಪಪ್ಲಾವ್ಯದ ದುರ್ಗದಲ್ಲಿಟ್ಟು, ಅವರಿಗೆ ರಕ್ಷಕವಾದ ಮೂಲಬಲವನ್ನು ಕೊಟ್ಟು, ಪಾಂಡುನಂದನರು ಅವಿಂತ್ತ ನೀರಾಜನಗಳನ್ನು ಪೂಮಾಲೆಗಳನ್ನು ಸ್ವೀಕರಿಸಿ, ಗೋಹಿರಣ್ಯಾದಿ ದಾನ ಗಳನ್ನಿತ್ತು ಆಶೀರ್ವದಿಸುವ ಬ್ರಾಹ್ಮಣರ ವೇದಘೋಷವನ್ನಾಲಿಸುತ್ತಾ, ಮಿತ್ರಪರಿ ವೃತರಾಗಿ ರಣಭೂಮಿಯಾದ ಕುರುಕ್ಷೇತ್ರವನ್ನು ಸೇರಪೋದರು. ಕುರುಕ್ಷೇತ್ರವನ್ನು ಮುಟ್ಟ ಪಾಂಡವ ಸೈನ್ಯವು ಬೀಡು ಬಿಟ್ಟಿತು. ಶ್ಮಶಾನ ದೇವಾಲಯ ಆಶ್ರಮ

ವಲ್ಮೀಕ ತೀರ್ಥಗಳಿಗೆ ದೂರವಾಗಿ, ಪೂರ್ವಮುಖವಾಗಿ ನಿರ್ಮಿಸಿದ ಶಿಬಿರಗಳಲ್ಲಿ ಶ್ರೀಕೃಷ್ಣ ಪಾಂಡವರು ಅಂದು ರಾತ್ರಿ ತಂಗಿ ವಿಶ್ರಮಿಸಿದರು.

ಹಿರಣ್ವತೀ ನದೀ ಸಮೀಪದ ಬಯಲಿನಲ್ಲಿ ಮರಳು ಕೆಸರುಗಳಿಲ್ಲದ ಸಮಪ್ರದೇಶ ವನ್ನಾರಿಸಿ ಪಾಂಡವಸೇನೆ ಪರಿಖಾಗುಲ್ಮಗಳಿಂದ ರಕ್ಷಿತವಾಗಿ ಬೀಡುಬಿಟ್ಟು, ಯುದ್ಧ ಸಿದ್ಧತೆಯನ್ನು ನಡೆಸುತ್ತಿತ್ತು. ಶತ ಸಹಸ್ರ ಸಂಖ್ಯಾಕವಾದ ಶಿಬಿರಗಳಲ್ಲಿ ಭಕ್ಷ್ಯ ಭೋಜ್ಯಾನ್ನಪಾನಗಳು ತಯಾರಾಗುತ್ತಿದ್ದವು. ಯವಸ ಧಾನ್ಯಗಳು ಸಮೃದ್ಧವಾಗಿ ಶೇಖರಿಸಲ್ಪಟ್ಟವು. ಶಸ್ತ್ರಾದಿ ನಿರ್ಮಾಣಶಾಲೆಗಳು ಬಾಣಾದಿ ಯುದ್ಧ ಸಾಧನಗಳನ್ನು ಸಿದ್ಧಗೊಳಿಸುವಲ್ಲಿ ಹಗಲು ರಾತ್ರಿ ಎನ್ನದೆ ತೊಡಗಿದ್ದವು. ಶತ್ರುಗಳ ಮೇಲೆಸೆಯಲು ಬೆಲ್ಲಮಯನಗಳನ್ನು ಸೀಸವನ್ನು ಕಾಸುವ ಯಂತ್ರಗಳು, ಬಾಣಗಳನ್ನು ಖಡ್ಗಾದಿ ಸಾಧನಗಳನ್ನು ಮಸೆಯುವ ಸಾಣೆಗಳು. ಕವಚಾದಿಗಳನ್ನು ತಯಾರಿಸುವ ಕರ್ಮ ಶಾಲೆಗಳು ಚಕ್ರಭಾಗಗಳನ್ನು ಜೋಡಿಸುವ ತಕ್ಷವಸತಿಗಳು ವಿಪುಲವಾಗಿ ತಲೆದೋರಿದವು.

ಶ್ರೀಕೃಷ್ಣನು ಸಂಧಿಕಾರ್ಯವಾಗದೆ ಹಿಂದಿರುಗಿ ಹೋದಮೇಲೆ ದುರ್ಯೋಧನನು ದುಷ್ಟತ್ರಯವನ್ನು ನೋಡಿ 'ಕೃಷ್ಣನು ಕುಪಿತನಾಗಿ ಹೋಗಿರುವನು. ಅವನಿಗೆ ಸಂಧಿ ಬೇಕಾಗಿಲ್ಲ. ಪಾಂಡವರಿಗೆ ಜಯವನ್ನೀಯಲು ಸಂಕಲ್ಪಿಸಿರುವ ಕೃಷ್ಣನಂತೆ ಭೀಮಸೇನನು ನಡೆವನು. ಅವನ ವಶವರ್ತಿಗಳಾಗಿರುವರು ಮಿಕ್ಕವರೆಲ್ಲರು. ಅವರು ನಾವು ಮಾಡಿದ ಮಹಾಪರಾಧಗಳನ್ನು ಮರೆತಿಲ್ಲ. ವಿರಾಟ ದ್ರುಪದರೂ ನಮ್ಮ ವೈರಿ ಗಳೇ! ತುಮುಲವಾದ ಯುದ್ಧವು ಆಗುವುದಿದೆ. ಆಲಸ್ಯವಿಲ್ಲದೆ ನಾವೆಲ್ಲರೂ ಸಿದ್ಧ ರಾಗಬೇಕು'ಎಂದು ಆಜ್ಞಾಪಿಸಿದನು. ತತ್‌ಕ್ಷಣವೇ ದುರ್ಯೋಧನ ಪಕ್ಷದ ರಾಜನ್ಯರು ರಥಗಳನ್ನಾರೋಹಿಸಿ, ಶಂಖತೂರ್ಯಾರಾವಗಳಿಂದ ಆಕಾಶವು ಒಡೆದಂತಾಗುತ್ತಿರಲು ರಥ ಗಜ ತುರಗ ಘಟ್ಟನದಿಂದ ಭೂಮಿಯು ಕಂಪಿಸುತ್ತಿರಲು ವಿವಿಧ ಶಸ್ತ್ರಾಸ್ತ್ರಪಾಣಿ ಗಳಾದ ಭಟರಿಂದ ಕೂಡಿ ತೆರಳಿ, ಕುರುಕ್ಷೇತ್ರದಲ್ಲಿ ದಕ್ಷಿಣಾಭಿಮುಖವಾಗಿ ಬೀಡು ಬಿಟ್ಟರು.

ದುರಾತ್ಮನಾದ ಕುರುರಾಜನ ಮೂರ್ಖತೆಯಿಂದ ಕಡಿದಾಡಿ ಸಾಯಲಿರುವ ಮಹಾಸೇನೆಯನ್ನು ಕಂಡು ಧರ್ಮರಾಜನು ವಿಷಾದಭಯಪರೀತನಾದನು. ಶ್ರೀಕೃಷ್ಣನು ಅವನನ್ನು ಕಂಡು 'ರಾಜನ್! ಧರ್ಮಾರ್ಥಸಹಿತವಾದ ನನ್ನ ಹಿತನುಡಿಯನ್ನು ಮನ್ನಿಸದ ಮಾನದೂಷಿತನನ್ನು ಸೇರುವದೀ ಪ್ರಜಾನಾಶಕೃತಪಾಪವೆಲ್ಲವು. ಅವನಿಗೆ ಧರ್ಮವು ಬೇಕಾಗಿಲ್ಲ; ಯಶವೂ ಬೇಕಾಗಿಲ್ಲ. ಕರ್ಣನಿಂದ ಗೆಲುವು ನಿಶ್ಚಿತವೆಂದು ನಂಬಿರುವ ದುರಭಿಮಾನಿಗೆ ಪಾಪದ ಭಯವಿಲ್ಲ. ಇಂತಹ ಪಾಪಿಯೊಡನೆ ಕಾದಾಡಿ ಅವನನ್ನೂ ಅಂತಹ ನೀಚನಿಗಾಗಿ ಹೋರಾಡುವ ಅವನವರನ್ನೂ ಸಂಹರಿಸುವುದರಿಂದ ಪಾಪವಿಲ್ಲ; ಪುಣ್ಯವೇ ಲಭ್ಯವಾಗುವುದು. ಬಿಡು ಚಿಂತೆಯನ್ನು! ನೀನಾಗಿ ಕೋರಿ ತಂದ ಯುದ್ಧವಲ್ಲ. ಜೂಜಾಡಿ ಸತಿಯನ್ನು ಭಂಗಪಡಿಸಿದಾಗಲೇ ಕೊಲ್ಲಬೇಕಾಗಿದ್ದ

ದುಷ್ಟರನ್ನು ಈಗಲಾದರೂ ಸಂಹರಿಸು ! ಭೀಮಸೇನಾದಿಗಳು ಸತ್ಯಪ್ರತಿಜ್ಞರಾಗಲಿ ! ನಿಮ್ಮ ಮಾತೆ ಕುಂತೀ ದೇವಿಯು ವೀರಮಾತೆ ಎಂದು ಖ್ಯಾತಳಾಗಲಿ !' ಎಂದು ಧರ್ಮಜನನ್ನು ಹುರಿದುಂಬಿಸಿದನು.

## ಭೀಷ್ಮಸೇನಾಧಿಪತ್ಯ

ವೈಶಂಪಾಯನನು ಜನಮೇಜಯನಿಗೆ ಹೇಳಿದನು—

ರಾಜನ್ ! ಮರುದಿನ ಬೆಳಗಾಯಿತು. ಯುದ್ಧಸನ್ನದ್ಧವಾದ ಕೌರವಪಾಂಡವ ಸೇನೆಗಳು ಪರಸ್ಪರಾಭಿಮುಖವಾಗಿ ರಣರಂಗದ ಎರಡು ಕೊನೆಗಳಲ್ಲಿ ನೆಲೆಸಿದ್ದವು. ಸಮುದ್ರಗಳಂತೆ ಘೋಷಿಸುವ ಸೈನ್ಯಗಳಲ್ಲಿ ಯುದ್ಧದ ವಿವಿಧ ಪ್ರಯತ್ನಗಳು ನಡೆದಿದ್ದವು. ಕಾಸಿದ ಬೆಲ್ಲ ಮೇಣಗಳನ್ನೊಗೆಯುವ ಮೊರಗಳನ್ನು, ವಿಷಸರ್ಪಗಳನ್ನಿಟ್ಟ ಗಡಿಗೆಗಳನ್ನು, ರಾಳವನ್ನುಗುಳುವ ಕವಣೆಗಳನ್ನು, ಕಟುತಿಕ್ತಧೂಳಿಗಳನ್ನು ತೂರುವ ಕೋಳಿವೆಗಳನ್ನು, ಕಲ್ಲುಗಳನ್ನು ಬೀರುವ ಯಂತ್ರಗಳನ್ನು ಹಿಡಿದು ಸೈನಿಕರು ಯಮಭಟರಂತೆ ಹೂಂಕರಿಸುತ್ತಿದ್ದರು. ತುತ್ತೂರಿಗಳನ್ನೂದಿ, ನಗಾರಿಗಳನ್ನು ಬಾರಿಸಿ, ತಾಳಗಳನ್ನು ಬಡಿದು ಹುರಿದುಂಬಿಸುವ ಭಟರು ರಣಾಂಗಣದ ಅಂಚುಗಳಲ್ಲಿ ನಿಂತಿದ್ದರು. ಪಟ್ಟಿಶ, ಚರ್ಮ, ತೋಮರ, ಪರಿಘ, ಶಕ್ತಿ, ಕುಂತ, ಭಲ್ಲ, ಪ್ರಾಸ, ಮುದ್ಗರ, ಶೂಲಾದಿ ವಿವಿಧಾಯುಧಗಳನ್ನು ಧರಿಸಿ ವೀರಭಟರು ಸಿಂಹನಾದವನ್ನು ಮಾಡುತ್ತಿದ್ದರು. ರಥಗಜತುರಗ ಪಂಕ್ತಿಗಳು ಸಾಗರ-ತರಂಗಗಳಂತೆ ತೂಗುತ್ತಾ ನಿಂತಿದ್ದವು. ಆನೆಗೆ ಏಳು ಭಟರು, ಕುದುರೆಗೆ ನಾಲ್ವರು, ರಥಕ್ಕೆ ಹತ್ತು ಜನರು, ರಕ್ಷಕರಾಗಿ ನಡೆದುಬರುತ್ತಿದ್ದರು.

೫೦೦ ಆನೆ, ೫೦೦ ರಥ, ೧೫೦೦ ಕುದುರೆ, ೨೫೦೦ ಭಟರು, ಕಲೆತು ಸೇನೆ ಎನಿಸುವುದು. ಸೇನೆಗಳು ಹತ್ತಾದರೆ ಪೃತನ, ಅವು ಹತ್ತಾದರೆ ವಾಹಿನಿ, ಅವು ಹತ್ತಾದರೆ ಧ್ವಜಿನಿ, ಅವು ಹತ್ತಾದರೆ ಚಮೂ, ಅವು ಹತ್ತಾಗಿ ಇನ್ನೂ ಹೆಚ್ಚಾದರೆ ಅಕ್ಷೌಹಿಣಿ. ಇಂತಹ ಅಕ್ಷೌಹಿಣಿಗಳು ಹನ್ನೊಂದು ದುರ್ಯೋಧನನ ವಶದಲ್ಲಿದ್ದವು. ಪಾಂಡವರಲ್ಲಿ ಏಳು ಅಕ್ಷೌಹಿಣಿಗಳಿದ್ದವು. [ಅಕ್ಷೌಹಿಣೀ ವಿವರವನ್ನು ಆದಿಪರ್ವದಲ್ಲಿ ಸರಿಯಾಗಿ ವಿವರಿಸಿರುವುದು.]

ದುರ್ಯೋಧನನು ತನ್ನ ಸೇನೆಗೆ ತಕ್ಕ ಸೇನಾಪತಿಗಳನ್ನಾರಿಸಿ, ಅವರಿಗೆ ಆ ಹನ್ನೊಂದು ಭಾಗಗಳನ್ನು ಒಪ್ಪಿಸಿದನು. ಕೃಪ, ದ್ರೋಣ, ಶಲ್ಯ, ಜಯದ್ರಥ, ಕೃತವರ್ಮ, ಅಶ್ವತ್ಥಾಮ, ಕರ್ಣ, ಭೂರಿಶ್ರವ, ಶಕುನಿ, ಬಾಹ್ಲೀಕರನ್ನು ಸೇನಾಪತಿಗಳಾಗಿ ನಿಯಮಿಸಿ, ಅವರನ್ನು ಗೌರವಿಸಿ, ದುರ್ಯೋಧನನು ಅವರಿಗೆ ನಿತ್ಯವೂ ನಡೆಯತಕ್ಕ ಉಪಚಾರ, ವಿರಾಮ, ರಕ್ಷಣಾದಿ ವ್ಯವಸ್ಥೆಯನ್ನು ಕಲ್ಪಿಸಿದನು.

ಅನಂತರ ದುರ್ಯೋಧನನು ತನ್ನ ತಾತನಾದ ಭೀಷ್ಮನನ್ನು ಸಮೀಪಿಸಿ, ಕೈಜೋಡಿಸಿ ನಿಂತು, ಇಂತು ಪ್ರಾರ್ಥಿಸಿದನು. 'ತಾತ! ಸರ್ವಸೇನಾಧ್ಯಕ್ಷನಾಗಿ,

ನನ್ನನ್ನು ವಿಜಯಿಯನ್ನಾಗಿಸು! ಸೇನಾಪತಿಯಿಂದ ರಹಿತವಾದ ಸೇನೆಯು ದಾವಾಗ್ನಿಗೆ ಸಿಕ್ಕು ಸುಡುವ ಗಿಡದ ಬುಡದಲ್ಲಿದ್ದ ಹುತ್ತಿನಲ್ಲಿರುವ ಪಿಪೀಲಿಕಾಕುಲದಂತೆ ದಿಕ್ಕೆಟ್ಟು ಓಡಿಹೋಗುವುದು. ಸೇನಾಪತಿಯಂತೆ ನಡೆಯುವ ಸೈನ್ಯವು ವಿಜಯ ಧಾಮವನ್ನು ತಲುಪುವುದು. ಮನುಜರಲ್ಲಿ ಒಬ್ಬನಾಡಿದ ಮಾತು ಮತ್ತೊಬ್ಬನಿಗೆ ರುಚಿಸದು. ಶೌರ್ಯಬಲಾದಿಗಳಿಂದ ತಾರತಮ್ಯವಿರುವಲ್ಲಿ ಸ್ಪರ್ಧಾಸೂಯೆಗಳು ತಲೆದೋರದಿರವು. ಹಿಂದೆ ಹೈಹಯರೆಂಬ ದುಷ್ಟರಾಜರನ್ನು ಶಿಕ್ಷಿಸಲು ಹೊರಟ ಬ್ರಾಹ್ಮಣಾದಿ ಸರ್ವ ಪ್ರಜರೂ ವಿಫಲಪ್ರಯತ್ನರಾಗಿ, ಅವರನ್ನೇ ಸಮೀಪಿಸಿ, 'ಕ್ಷತ್ರಿಯರು ಕೆಲವರೇ ಇದ್ದರೂ, ಇತರ ವರ್ಣದ ಬಹುಜನರನ್ನು ಗೆದ್ದೋಡಿಸುವಲ್ಲಿ ಸಮರ್ಥರಾಗಿರಲು ಕಾರಣವೇನು?' ಎಂದು ಕೇಳಿದರಂತೆ. ಆಗ ಅವರು ನಕ್ಕು 'ನಾವು ಬುದ್ಧಿವಂತನಾದೊಬ್ಬನನ್ನು ಸೇನಾಪತಿಯೆಂದು ಸ್ವೀಕರಿಸಿ, ಅವನಂತೆ ನಡೆಯುವೆವು. ನೀವು ನಿಮಗೆ ತೋಚಿದಂತೆ ಬೇರೆಬೇರಾಗಿ ನಡೆಯುವಿರಿ. ಆದುದ ರಿಂದ ನಾವು ಗೆಲ್ಲುತ್ತಿರುವೆವು. ಐಕಮತ್ಯವೇ ನಮ್ಮ ಜಯದ ಗುಟ್ಟು' ಎಂದರಂತೆ. ಅದನ್ನರಿತು ವಿಪ್ರರು ಭಾರ್ಗವ ವಿಧೇಯರಾಗಿ, ಸೇನಾಪತಿಯಂತೆ ನಡೆದು ಹೈಹಯ ರನ್ನು ಸದೆಬಡಿದರಂತೆ.

'ತಾತ! ನಮಗೆ ನೀನು ಸೇನಾಧ್ಯಕ್ಷನಾಗು! ನಮ್ಮನ್ನು ಪಾಲಿಸಿ, ಪಾಂಡವ ರನ್ನು ಚಂಡಾಡು! ಕುಮಾರಸ್ವಾಮಿಯಿಂದ ರಕ್ಷಿತರಾದ ದೇವತೆಗಳನ್ನಂತೆ ನಮ್ಮನ್ನು ಶತ್ರುಗಳು ಕಣ್ಣೆತ್ತಿ ನೋಡದಂತೆ ಮಾಡು! ನಾವು ನಿನ್ನ ಹಿಂದೆ ನಿಂತು ಕಡಿದಾಡಿ ಜಯವನ್ನು ಸಂಪಾದಿಸುವೆವು.' ಇಂತು ನುಡಿದ ದುರ್ಯೋಧನನಿಗೆ ಕುರುಪಿತಾಮಹ ನಿಂತೆಂದನು—'ರಾಜನ್ ಆಗಲಿ! ನಿನ್ನ ಸೇನೆಯನ್ನು ನಡೆಸುವೆನು. ಆದರೆ ಕೇಳೊಂದು ಹಿತದ ನುಡಿಯನ್ನು! ನನಗೆ ನಿನ್ನಂತೆ ಪಾಂಡವರೂ ಬಂಧುಗಳು, ಅವರಿಂದ ಕಾದುವೆನೆಂದರೆ ನನ್ನ ಮಾತಿಗೆ ಕಟ್ಟುಬಿದ್ದೆಂದು ತಿಳಿ! ನನಗೆ ಸಮರಾದ ಧನುರ್ಧರರನ್ನು–ಧನಂಜಯನೊಬ್ಬನನ್ನು ಬಿಟ್ಟು–ಅನ್ಯರನ್ನೀ ಭುವಿಯಲ್ಲಿ ಕಾಣೆನು. ಸರ್ವಾಸ್ತ್ರವಿಶಾರದನಾದ ಅರ್ಜುನನೂ ಶ್ರೀಕೃಷ್ಣನ ಸಹಾಯವಿಲ್ಲದಿರೆ, ನನ್ನ ಮುಂದೆ ನಿಲ್ಲಲು ಹೆದರುವನು. ನಾನು ಬಗೆದರೆ ಕ್ಷಣದಲ್ಲಿ ಜಗವನ್ನು ನಿರ್ಮನುಜವೆನಿಸಬಲ್ಲೆನು. ಅಸುರ ಅಮರ ಮಾನವರೆನಗೆ ಸಮವೀರರಲ್ಲ. ಆದರೂ ಪಾಂಡವರ ಮೇಲೆ ನಾನು ಕೈಮಾಡಲಾಗದು. ಅದು ನನ್ನಿಂದ ಶಕ್ಯವೂ ಅಲ್ಲ. ಕೇಳು! ಸಾವಿರಾರು ಭಟರನ್ನು ಕೊಲ್ಲುವ ನನ್ನಿಂದ ಆಗಬೇಕಾದ ಸೇವೆಯನ್ನು ಸಲ್ಲಿಸುವಲ್ಲಿ ಪಾಂಡವರಿಂದ ನನಗೆ ಮರಣವಾಗುವ ದಿನದ ವರೆಗೂ ಯಾವ ಲೋಪವನ್ನೂ ಬರಗೊಡಿಸೆನು. ಒಂದು ನಿಬಂಧನೆಯಂತೆ ನಾನು ಸೈನ್ಯಾಧ್ಯಕ್ಷನಾಗುವೆನು. ಮೊದಲು ಕರ್ಣನು ಕಡಿದಾಡಲಿ! ಅಥವಾ ನಾನು ಹೋರಾಡುವೆನು. ನಾವಿಬ್ಬರೂ ಕಲೆತು ರಣವಿಹಾರ ಮಾಡುವುದನ್ನು ನಾನು ಸಮ್ಮತಿಸೆನು' ಎಂದನು. ಆಗ ಕರ್ಣನು 'ಗಾಂಗೇಯನು ಜೀವದಿಂದಿರುವ ವರೆಗೂ ನಾನು ಯುದ್ಧ ಮಾಡೆನೆಂ'ದು ಅಸ್ತ್ರಸನ್ಯಾಸವನ್ನು ಮಾಡಿದನು.

ದುರ್ಯೋಧನನು ರಾಜಸಭೆಯಲ್ಲಿ ಭೀಷ್ಮನನ್ನು ಸರ್ವಸೇನಾಧ್ಯಕ್ಷನನ್ನಾಗಿ ಪಟ್ಟಗಟ್ಟಿ, ಉಚಿತ ರೀತಿಯಿಂದ ಸನ್ಮಾನಿಸಿದನು. ಭೇರೀ ಭಾಂಕಾರಗಳು, ಶಂಖಾ ರಾವಗಳು, ಸೈನಿಕರ ಸಿಂಹನಾದಗಳು ಸೈನ್ಯಪತಿಯನ್ನು ಸ್ವಾಗತಿಸಿದವು. ಆಗ ತೋರಿದ ದುಃಶಕುನಗಳಿಂದ ಕೌರವ ಭಟರು ಎದೆಗುಂದಿದರು. ಭೂಮಿಯು ಕಂಪಿಸಿತು; ರಕ್ತದ ಮಳೆ ಬಿತ್ತು. ಯಾರೂ ಕಾಣದ ಕಡೆಯಿಂದ ವಚನಗಳು ಕೇಳ ಬಂದವು. ನರಿಗಳು ಕೂಗಾಡಿದವು. ಹದ್ದುಗಳು ಹಾರಾಡಿದವು. ಅವನ್ನು ಲೆಕ್ಕಿಸದೆ ದುರ್ಯೋಧನನು ಸೈನ್ಯದಿಂದ ಕೂಡಿ ಕುರುಕ್ಷೇತ್ರಗಳಲ್ಲಿ ಶಿಬಿರಗಳನ್ನು ಹೂಡಿದನು. ಅವನ ಸ್ಕಂಧಾವಾರವು ಎರಡನೇ ಹಸ್ತಿನಾವತಿಯಂತೆ ಕಂಗೊಳಿಸುತ್ತಿತ್ತು.

ಅಲ್ಲಿ ಧರ್ಮರಾಜನು ರಣಯಜ್ಞದೀಕ್ಷಿತನಾಗಿ, ವಾಸುದೇವನನ್ನು ಪೂಜಿಸಿದನು. ಪಿತಾಮಹನು ಸೇನಾಧ್ಯಕ್ಷನಾಗಿ ಬಂದಿರುವುದನ್ನರಿತು ಅವನು ಶ್ರೀಕೃಷ್ಣನ ಆದೇಶದಂತೆ ತನ್ನ ಏಳು ಸೈನ್ಯ ವಿಭಾಗಗಳಿಗೂ ವಿರಾಟ, ದ್ರುಪದ, ಸಾತ್ಯಕಿ, ಚೇಕಿತಾನ, ಧೃಷ್ಟಕೇತು, ಶಿಖಂಡಿ, ಸಹದೇವ (ಮಾಗಧ) ರನ್ನು ಸೇನಾಪತಿಗಳೆಂದು ನಿಯಮಿಸಿ ಅಭಿಷೇಕಿಸಿದನು. ಧೃಷ್ಟದ್ಯುಮ್ನನು ಸರ್ವಸೇನಾಪತಿಯೆಂದು ಘೋಷಣೆ ಮಾಡಿಸಿ, ಎಲ್ಲರನ್ನೂ ಶ್ರೀಕೃಷ್ಣಭೀಮಸೇನರಿಗೂ ಅರ್ಜುನನಿಗೂ ವಿಧೇಯರಾಗಿರುವಂತೆ ವಿಧಿಸಿ ಸಮರ್ಪಿಸಿದನು. ಅರ್ಜುನನ ಸಾರಥಿಯಾಗಿ ಅವನನ್ನು ಸಂರಕ್ಷಿಸುವಂತೆ ಶ್ರೀಕೃಷ್ಣನನ್ನು ಪ್ರಾರ್ಥಿಸಿದನು.

ಆ ಸಮಯದಲ್ಲಿ ಬಲರಾಮನು ಪಾಂಡವರನ್ನು ನೋಡಲು ಬಂದನು. ಅಕ್ರೂರ ಗದ ಸಾಂಬ ಪ್ರದ್ಯುಮ್ನ ಚಾರುದೇಷ್ಣರಿಂದ ಕೂಡಿಬಂದ ರೋಹಿಣೀನಂದನನನ್ನೆದುರ್ಗೊಂಡು ಕುಂತೀನಂದನರು ಕರೆತಂದು ಕೂಡಿಸಿ, ವಸ್ತ್ರಮಾಲ್ಯಾದಿಗಳಿಂದ ಪೂಜಿಸಿದರು. ನೀಲಾಂಬರನು, ಮದರಕ್ತಾಂತಲೋಚನನು, ಕೈಲಾಸಗಿರಿಧವಲಗಾತ್ರನು, ಸಿಂಹಯಾತ್ರನು ಆದ ಬಲರಾಮದೇವನಿಗೆ ಅಭಿವಾದನವನ್ನು ಮಾಡಿ, ಪಾಂಡವರು ತಾವೂ ಕೂತರು. ಬಲರಾಮನು ವಿರಾಟದ್ರುಪದರಿಗೆ ಶಿರದಿ ನಮಿಸಿ, ಧರ್ಮರಾಜನಿಗೆ ಇಂತೆಂದನು—'ರಾಜನ್! ದಾರುಣವು ಪ್ರಜಾನಾಶಕರವು ಆದ ಯುದ್ಧವು ನಡೆಯುವುದು. ದೈವಸಂಕಲ್ಪಕ್ಕೆ ಎದುರಿಲ್ಲ. ಈ ಯುದ್ಧವು ಮುಗಿದಾಗ, ಅಕ್ಷತಗಾತ್ರರು, ಆರೋಗ್ಯವಂತರು ಆಗಿರುವ ನಿಮ್ಮನ್ನೆಲ್ಲ ನೋಡುವೆನೆಂಬ ಹಂಬಲವಿದೆ. ರಾಜ ಕುಲವು ನಿಃಶೇಷವಾಗುವ ಕಾಲ ಬಂದಿದೆ. ಏಕಾಂತದಲ್ಲಿ ಶ್ರೀಕೃಷ್ಣನಿಗೆ ಬಂಧು ಕಲಹವನ್ನು ನಿವಾರಿಸೆಂದು ಎಷ್ಟೋ ಸಲ ಹೇಳಿಕೊಂಡೆನು. ಪಾಂಡವರಂತೆ ದುರ್ಯೋಧನನನ್ನೂ ನೋಡೆಂದು ನಾನು ಪೇಳಿದ ಮಾತು ಮಧುಸೂದನನ ಮನಸ್ಸಿಗೆ ಬಂದಂತಿಲ್ಲ. ಹೋಗಲಿ ಬಿಡು! ಶ್ರೀಕೃಷ್ಣ-ಪಾರ್ಥರನ್ನೊಂದೆಡೆ ಕಂಡು ಪಾಂಡವ ವಿಜಯವು ನಿಶ್ಚಿತವೆಂದು ನಾನು ತಿಳಿದಿರುವೆನು. ವಾಸುದೇವನ ಮನಸ್ಸಿಗೆ ಇಂತು ಬಂದಾಗ ಯಾರೇನು ಮಾಡುವರು? ಯಾರಿಂದಲೇನಹುದು? ಕೃಷ್ಣನಿಲ್ಲದ ಮೂಲೋಕಗಳೆನಗೆ ಬೇಡ! ಅವನ ಸಂಕಲ್ಪವನ್ನನುಸರಿಸಿ ನಡೆವೆನು ನಾನು.

ಗದಾಯುದ್ಧ ವಿಶಾರದರಾದ ಭೀಮ ದುರ್ಯೋಧನರಿಬ್ಬರೂ ನನ್ನ ಪ್ರಿಯ ಶಿಷ್ಯರು. ಅವರು ಕಾದು ಮಡಿಯುವುದನ್ನು ನಾನು ನೋಡಲಾರೆನು. ಯುದ್ಧದಲ್ಲಿ ಕೌರವ ನಾಶವನ್ನೂ ತಡೆಯಲಾಗದ ನಾನು ತೀರ್ಥಯಾತ್ರೆಗೆ ಹೋಗಿಬಿಡುವೆನು. ಪುನರ್ದರ್ಶನವಾಗಲಿ!' ಎಂದು ನುಡಿದು ಬಲರಾಮನು ಶ್ರೀಕೃಷ್ಣ-ಪಾಂಡವರನ್ನು ಬೀಳ್ಕೊಂಡು, ತೀರ್ಥಯಾತ್ರೆಗೆ ತೆರಳಿದನು.

ಆಗ ಭೀಷ್ಮಕನ ಮಗನಾದ ರುಕ್ಮರಥನು ಪಾಂಡವ ಶಿಬಿರಕ್ಕೆ ಬಂದನು. ಅವನು ರುಕ್ಮಿಯ ತಮ್ಮನು. ರುಕ್ಮಿಯು ವಿಜಯವೆಂಬ ಧನುವನ್ನು ವರವಾಗಿ ಪಡೆದಿದ್ದನು. ಗಾಂಡೀವ ಶಾರ್ಙ್ಗಗಳಿಗೆ ಸರಿಹೋಲುವ ವಿಜಯ ಧನುಸ್ಸಿನ ಬಲದಿಂದ ದರ್ಪಿತನಾಗಿ ರುಕ್ಮಿಯು ರಾಜಭಯಂಕರನಾಗಿದ್ದನು. ಅವನನ್ನು ಬಲರಾಮನು ಅನಿರುದ್ಧನ ವಿವಾಹಕಾಲದಲ್ಲಿ ಜೂಜಾಡುತ್ತ, ಅವನ ಅನ್ಯಾಯವನ್ನು ಸಹಿಸದೆ, ಸಂಹರಿಸಿದನು. ಆವನ ತಮ್ಮನಾದ ರುಕ್ಮರಥನು ಅವನಂತೆ ಗರ್ವಿತನಾಗಿದ್ದನು. ಅವನು ಮಹಾಸೈನ್ಯದಿಂದ ಕೂಡಿ ಪಾಂಡವರನ್ನು ಸೇರಿದನು. ಧರ್ಮರಾಜನು ಅವನನ್ನು ಕರೆತಂದು ಪೂಜಿಸಿದನು. ರುಕ್ಮರಥನು ಸಭಾಮಧ್ಯದಿ ಅರ್ಜುನನಿಗೆ ಇಂತೆಂದನು—

'ಅರ್ಜುನ! ಕೌರವನ ಭಯವನ್ನು ಬಿಡು! ಬೇಕಾದರೆ ನಿನಗೆ ಸಹಾಯ ಮಾಡುವೆನು ಹೇಳು! ನನ್ನಂತಹ ವಿಕ್ರಮಶಾಲಿಗಳು ಭುವಿಯಲ್ಲಿಲ್ಲ. ದ್ರೋಣ ಕೃಪ ಭೀಷ್ಮರನ್ನು ಕ್ಷಣದಲ್ಲಿ ಗೆದ್ದು ನಿಮಗೆ ವಿಜಯಶ್ರೀಯನ್ನು ತಂದುಕೊಡುವೆನು. ಅಥವಾ ನೀವೆಲ್ಲರೂ ಸುಮ್ಮನಿರಿ! ನಾನೊಬ್ಬನೇ ಕಾದು ಕೌರವರನ್ನು ಕಟ್ಟಿತಂದು ಕೌಂತೇಯಾಗ್ರಜನ ಕಾಲಲ್ಲಿ ಕೆಡಹುವೆನು.'

ಧರ್ಮಜ ಭೀಮಸೇನ ಕೇಶವರು ಕೇಳುತ್ತಿರಲು ರುಕ್ಮನಾಡಿದ ಜಂಬದ ಮಾತನ್ನಾಲಿಸಿ ನಕ್ಕು, ಅರ್ಜುನನು ಇಂತೆಂದನು—' ರಾಜನ್! ಹುಟ್ಟಿರುವೆನು ಕುರುಕುಲದಲ್ಲಿ. ಪಾಂಡುರಾಜನ ಪುತ್ರನಾಗಿ, ದ್ರೋಣಾಚಾರ್ಯನ ಶಿಷ್ಯನೆನಿಸಿ, ಶ್ರೀಕೃಷ್ಣನ ಸಹಾಯವನ್ನು ಪಡೆದಿರುವ ನಾನು—ಭೀತನಾಗಿರುವೆನು, ಸಹಾಯಮಾಡೆಂದು—ಯಾರನ್ನೂ ಯಾಚಿಸುವ ಪ್ರಮೇಯವಿಲ್ಲ. ಕೈಲಿ ಗಾಂಡೀವವಿದೆ, ಎದೆಯಲ್ಲಿ ಕೆಚ್ಚಿದೆ. ಘೋಷಯಾತ್ರೆಯಲ್ಲಿ ಗಂಧರ್ವರನ್ನು ಸೋಲಿಸಿದೆನು. ಖಾಂಡವವನ್ನು ಇಂದ್ರನಿಂದ ಕಾದಿ, ದಹಿಸಿದೆನು. ನಿವಾತಕವಚ ಕಾಲಕೇಯರನ್ನು ಸಂಹರಿಸಿದೆನು. ವಿರಾಟಪುರಿಯಲ್ಲಿ ಉತ್ತರಗೋಗ್ರಹಣ ಕಾಲದಿ ಕುರುವೀರರನ್ನು ಓಡಿಸಿದೆನು. ಆಗ ನನಗೆ ಯಾರು ಸಹಾಯವಾಗಿದ್ದರು? ಶಂಕರ ಪುರಂದರ ಕುಬೇರ ಯಮ ವರುಣ ವಹ್ನಿ ದೇವರಿಂದ ದಿವ್ಯಾಸ್ತ್ರಗಳನ್ನು ಪಡೆದು, ಕೃಪದ್ರೋಣರನ್ನು ಸೇವಿಸಿ, ಮಾಧವನ ನಲ್ಮೆಗೆ ಪಾತ್ರನಾಗಿ, ಗಾಂಡೀವಧಾರಿಯಾಗಿ, ವಿಜಯನೆಂಬ ಬಿರುದಿನಿಂದ ಖ್ಯಾತನಾದ ನನಗೆಲ್ಲಿಯ ಭೀತಿ? ಇಂದ್ರನೇ ಬಂದರೂ 'ಭೀತನಾಗಿಹೆ' ನೆನಲಾರೆನು. ನಿನ್ನ ಸಹಾಯವೆಮಗೆ ಬೇಡ!'

ಆಗ ರುಕ್ಮರಥನು ದುರ್ಯೋಧನನನ್ನು ಸೇರಿ, ಅವನ ಸಹಾಯಕ್ಕೆ ಬಂದಿರುವುದಾಗಿ ತಿಳಿಸಿದನು. ಶೂರವಾನಿಯಾದ ದುರ್ಯೋಧನನು ಅವನ ಜಂಬದ ಮಾತನ್ನು ತಿರಸ್ಕರಿಸಲು ರುಕ್ಮರಥನು ಸಿಟ್ಟಾಗಿ, ಯಾರ ಪಕ್ಷವನ್ನೂ ಸೇರದೆ ಭೋಜ ಕಟಕ್ಕೆ ತೆರಳಿದನು. ಇಂತು ಬಲರಾಮ ರುಕ್ಮರಥರನ್ನು ಬಿಟ್ಟು ಮಿಕ್ಕೆಲ್ಲ ಧರಣೀ ಪಾಲಕರು ರಣರಂಗದಲ್ಲಿ ಸೈನ್ಯಸಮೇತರಾಗಿ ಬಂದು ನಿಂತರು.

## ಉಲೂಕದೌತ್ಯ

ಧೃತರಾಷ್ಟ್ರನು ಸಂಜಯನನ್ನು ಕರೆಸಿ, ಸೇನಾನಿವೇಶದಲ್ಲಿ ನಡೆಯುವ ವರ್ತಮಾನಗಳನ್ನು ತಿಳಿಸೆಂದನು. ಆಗ ಸಂಜಯ ಇಂತೆಂದನು—

'ಮಹಾರಾಜ ! ಮಹಾನರ್ಥಕರವಾದ ರಣವು ಪ್ರಾರಂಭವಾಗಲಿದೆ. ಇದರಲ್ಲಿ ದುರ್ಯೋಧನನನ್ನು ನಿಂದಿಸಿ ಪ್ರಯೋಜನವಿಲ್ಲ. ನಿನ್ನನ್ನು ನೀನೆ ನಿಂದಿಸಿಕೊಳ್ಳಬೇಕಾಗಿದೆ. ಮನುಜನು ಮಾಡಿದ ಪಾಪದ ಫಲವನ್ನವನೇ ಅನುಭವಿಸಬೇಕಾಗುವುದು. ಅನರ್ಥ ಕಾರಣನು ನೀನೇ ಆಗಿರುವಾಗ ಕಣ್ಣಿಗೆ ಕಾಣದ ದೈವವನ್ನು, ಕಾಲವನ್ನು ನಿಂದಿಸಲಾಗದು. ವಧಾರ್ಹವಾದ ಅಪರಾಧಗಳನ್ನು ಮಾಡಿರುವ ಮಕ್ಕಳನ್ನು ವಹಿಸಿ ಮಾತಾಡಿದ ಫಲವಿಂದು ಹಾಲಾಹಲದಂತೆ ವಿಜೃಂಭಿಸುತ್ತಿದೆ. ಜೂಜಿನ ಬೀಜದಿಂದ ಪುಟ್ಟಿದ ವೈರವೃಕ್ಷವನ್ನಾಶ್ರಯಿಸಿದ ಕೌರವರು ಕಾಡುಕಿಚ್ಚಿನಂತೆ ಉರಿದೆದ್ದುಬರುವ ಪಾಂಡವರ ಕೈಗೆ ಸಿಕ್ಕು ಸಮೂಲವಾಗಿ ನಾಶವಾಗುವುದನ್ನು ಬೇಗನೆ ಕೇಳುವೆ ! ಎದೆಗೆ ಕಲ್ಲುಬಡಿದುಕೊಂಡು ಕೂತು, ನಡೆಯುವ ಮಾರಣ ಹೋಮದ ಪಶುಗಳ ಹೆಸರುಗಳನ್ನು ಕೇಳು ! ದುರ್ಮಾರ್ಗನೊಬ್ಬನಿಂದ ಲೋಕವೇ ಹಾಳಾಗುವುದು ; ಗಜ ತುರಗ ಭಟರು ಸಾಯುವರು; ಸುಮ್ಮನೆ ನೋಡುವೆವಾಗಲಿ ಇದನ್ನು ನಿಲ್ಲಿಸಲಾಪೆವೇ ? ಈಶನೊಬ್ಬನೇ ಸ್ವತಂತ್ರನು. ಜೀವರು ಅವನಾಡಿಸಿದಂತೆ ಆಡುವ ಗೊಂಬೆಗಳು. ನಿನ್ನ ಪಾಲಿಗೆ ಅಳುವುದೊಂದೆ ಉಳಿದಿದೆ !'

ಉಭಯ ಸೈನ್ಯಗಳು ಕುರುಕ್ಷೇತ್ರದಲ್ಲಿ ನೆಲೆಸಿನಿಂತವು. ಆಗ ದುರ್ಯೋಧನನು ಶಕುನಿಯ ತಮ್ಮ ಉಲೂಕನನ್ನು ಕರೆದು ಅವನನ್ನು ಪಾಂಡವರಲ್ಲಿಗೆ ದೂತನಾಗಿ ಕಳಿಸಿದನು. ಉಲೂಕನು ದುಷ್ಟಚತುಷ್ಟಯವು ಆಲೋಚಿಸಿ ನುಡಿದ ಸಂದೇಶವನ್ನು ಪೊತ್ತು ಪಾಂಡವ ಶಿಬಿರವನ್ನು ಸೇರಿದನು. ಪಾಂಡವಸಭೆಯಲ್ಲಿ ಸತ್ಕೃತನಾಗಿ ಅವನು ತನ್ನ ರಾಜನ ಸಂದೇಶವನ್ನು, ಅವನ ಮಾತಿನಲ್ಲಿ ಇಂತು ತಿಳಿಸಿದನು—

'ಬಹುಕಾಲದಿಂದ ನಿರೀಕ್ಷಿಸುತ್ತಿದ್ದ ಸಂಗ್ರಾಮವಿಂದು ಕೈಗೂಡಿದೆ. ಪಾಂಡವ ಕೌರವ ಯುದ್ಧವು ಲೋಕಭಯಂಕರವಾಗಲಿದೆ. ನೀವು ಸಂಜಯನಿಂದ ಹೇಳಿ ಕಳಿಸಿದ ಕೊಬ್ಬಿನ ಮಾತುಗಳನ್ನು ಕಾರ್ಯರೂಪದಲ್ಲಿ ತನ್ನಿ ! ನಿಮ್ಮ ನಿಮ್ಮ ಪ್ರತಿಜ್ಞೆಗಳು ನೆರವೇರಲಿ !

'ಧರ್ಮರಾಜ! ಯಾರಿಟ್ಟರೀ ಹೆಸರನ್ನು ನಿನ್ನಂತಹ ಅಧರ್ಮಪರನಿಗೆ? ನೀಚರಂತೆ ಜಗವನ್ನೇ ನಾಶಮಾಡುವ ಯುದ್ಧದಲ್ಲಿ ಬಂಧುಮಿತ್ರರಿಂದ ಕೂಡಿ ತೊಡಗಿರುವ ನೀನಾವ ಧರ್ಮರಾಜನು ? ತನ್ನ ರಾಜ್ಯವನ್ನು ಕಸಿದ ದೇವತೆಗಳನ್ನು ನೋಡಿ ಪ್ರಹ್ಲಾದನು ಪೇಳಿದ ಕಥೆ ನೆನಪಿಗೆ ಬರುತ್ತಿದೆ. ದರ್ಭಪವಿತ್ರಗಳನ್ನು ಧರಿಸಿ ಮೆರೆದರೆ ಧಾರ್ಮಿಕನಾಗುವನೇ ? ಧರ್ಮದ ಸೋಗಿನಲ್ಲಿ ಪ್ರಚ್ಛನ್ನ ಪಾಪಗಳನ್ನಾಚರಿಸುವುದನ್ನು ಬಿಡಾಲವ್ರತವೆನ್ನುವರು.

'ಹಿಂದೆ ಬೆಕ್ಕೊಂದು ಗಂಗಾತೀರದಲ್ಲಿ ನಿಂತು ತಪವನ್ನು ಮಾಡುತ್ತಿತ್ತು. ತಾನು ಮಾಡಿದ್ದ ಹಿಂಸಾಕೃತ್ಯಗಳಿಗೆ ಪ್ರಾಯಶ್ಚಿತ್ತವೆಂದು ಸಾರುತ್ತ ತಪವನ್ನು ಗೈವ ಮಾರ್ಜಾಲರಾಜನನ್ನು ನಂಬಿ ಬದಿಗೆ ಸಾರಿಬರುವ ಪಕ್ಷಿಗಳಿಗೆ ಧರ್ಮೋಪದೇಶವನ್ನು ಮಾಡುತ್ತ ಆ ವಂಚಕನು ಅವರು ಕಾಣದಂತೆ ಒಂಟಿಯಾಗಿ ಸಿಕ್ಕ ಹಕ್ಕಿಗಳನ್ನು ತಿಂದು ಬಿಡುತ್ತಿದ್ದನು. ಕಾಲಕ್ರಮದಿ ಬಿಡಾಲನು ಧರ್ಮಪರನೆಂದು ಖ್ಯಾತನಾದನು. ಅಲ್ಲಿ ವನದಲ್ಲಿದ್ದ ಮೂಷಿಕಗಳು ಅವನನ್ನೂ, ಅವನ ಧರ್ಮವಚನಗಳನ್ನೂ ನೋಡಿ, ಕೇಳಿ ಅವನಿಗೆ ಶರಣಾಗಿ ಬಂದವು. ಮೂಷಿಕ ಶತ್ರುಗಳಿಗೆ ಸೋದರಮಾವನಂತಿರುವ ಬಿಡಾಲರಾಜನಿಂದ ತಮ್ಮ ರಕ್ಷಣವಾಗುವುದೆಂದು ನಿಶ್ಚಯಿಸಿ, ಅವು ಅವನನ್ನು ಸೇರಿ 'ಮಾವಯ್ಯ ! ನೀನು ಧರ್ಮಪರನೆಂದು ತಿಳಿದು ಶರಣು ಬಂದಿರುವ ನಮ್ಮನ್ನು ಕಾಪಾಡು ! ನಿನ್ನ ಕರುಣೆಯಿಂದ ಬನ್ನಗಳನ್ನು ದಾಟಿ, ಸ್ವೇಚ್ಛೆಯಾಗಿ ಸಂಚರಿಸುವೆವು ' ಎಂದು ಬೇಡಿದವು. ಬೆಕ್ಕು, ' ತಪಸ್ಸು ಬಿಡಲಾಗದು. ನಿಮ್ಮನ್ನು ರಕ್ಷಿಸದಿರಲೂ ಆಗದು. ಪಾಪ ! ಬೇಡಿ ಕಾಡುವ ನಿಮ್ಮನ್ನು ರಕ್ಷಿಸುವೆನು. ರಹಸ್ಯದಲ್ಲಿ ಮೋಕ್ಷವನ್ನೂ ಕೊಡುವೆನು. ಆದರೆ ತಪಮಾಡಿ ಕೃಶನಾಗಿರುವ ನಾನು ಕದಲಲಾರದಿರುವೆನು. ನನ್ನನ್ನು ನಿತ್ಯವೂ ಸ್ನಾನದ ರೇವಿಗೆ ಕರೆದುಕೊಂಡು ಹೋಗಿ, ಮತ್ತೆ ಕರೆತಂದಿಲ್ಲಿಡಿ !' ಎಂದಿತು. ಇಂತು ಕೆಲಕಾಲವಾಯಿತು. ಬೆಕ್ಕು ಬಲಿತು ಬಾವುಗವಾಯಿತು; ಇಲಿಗಳ ಸಂಖ್ಯೆ ಕಡಿಮೆಯಾಯಿತು. ಒಂದುದಿನ ಡಿಂಡಿಕನೆಂಬ ಇಲಿಯನ್ನು ಹಿಂದೆ ನಡೆದು ಬರುತ್ತಾ, ಮಾರ್ಜಾಲ ವರ್ತನವನ್ನು ಪರೀಕ್ಷಿಸಲು ನಿಯಮಿಸಿ, ಮೂಷಿಕಗಣವು ಮುಂದೆ ಬೆಕ್ಕಿನೊಡನೆ ಸಾಗಿತು. ಮರುದಿನ ಡಿಂಡಿಕನ ಸುಳಿವು ಕಾಣದಾದಾಗ ಇಲಿಗಳು ಭೀತಿಗೊಂಡು ಸಭೆ ಸೇರಿದವು. ಕೋಕಿಲನೆಂಬ ಮೂಷಿಕನು ಬಂಧುಜನರಿಗಿಂತೆಂದನು. 'ಮಾತುಲನು ಧರ್ಮಪರನಲ್ಲ; ಮೋಸಗಾರನಿರುವನು. ಫಲಮೂಲ ಭಕ್ಷಕನ ಮಲದಲ್ಲಿ ರೋಮಗಳಿರಬಾರದಲ್ಲವೇ ? ಡಿಂಡಿಕನೂ ಅವನಿಗಾಹಾರವಾಗಿರುವನು' ಎಂದನು. ಇಲಿಗಳು ಆ ಮಾತನ್ನಾಲಿಸಿ ದಿಕ್ಕಾಪಾಲಾಗಿ ಓಡಿಹೋದವು.

'ಆ ಬೆಕ್ಕಿನಂತೆ ಧರ್ಮರಾಜ ! ನೀನೂ ಜ್ಞಾತಿವಂಚಕನಾಗಿ ಸಂಚರಿಸುತ್ತಿರುವೆ! ನಿನಗೆ ಬಾಯಲ್ಲಿ ಒಂದು, ಕೈಯಲ್ಲಿ ಮತ್ತೊಂದು. ಕಂಕುಳಲ್ಲಿ ದೊಣ್ಣೆ; ಕೈಗಳಲ್ಲಿ ಶರಣು. ಲೋಕಕ್ಕೆ ತೋರುವ ಧರ್ಮದ ವೇಷವನ್ನು ಬಿಡು ! ಕ್ಷತ್ರಧರ್ಮವನ್ನು

ಕೂಡು! ಬಲದಿಂದ ಪೃಥ್ವಿಯನ್ನು ಗೆದ್ದು ಆಳು! ನಿಮ್ಮ ತಾಯಿಯ ಕ್ಲೇಶವನ್ನಳಿಸು! ಐದು ಗ್ರಾಮಗಳನ್ನು ಕೇಳಿದೆಯಲ್ಲವೇ? ಕೊಡದ ನಮ್ಮಿಂದ ಎಲ್ಲವನ್ನೂ ಕಸಿವ ಕೇಶವನ ಪಣವನ್ನು ಕಾಪಾಡು! ಸಂಧಿಸಮರಗಳಿಗೆರಡಕ್ಕೂ ಸಿದ್ಧವೆಂದೆ! ಸಮರವೇ ಆಗಲಿ. ಕ್ಷತ್ರಿಯರಿಗೆ ಯುದ್ಧವೆಂದರೆ ಹಬ್ಬವೆಂದು ತಿಳಿ!

'ವಾಸುದೇವ! ಪಾಂಡವರನ್ನು ಮಾತ್ರವಲ್ಲ, ನಿನ್ನನ್ನುಮೊದಲು ಕಾಪಾಡಿಕೋ. ಕುರುಸಭೆಯಲ್ಲಿ ನೀನು ತೋರಿದ ಮಾಯಾರೂಪಕ್ಕೆ ಹೆದರುವರಿಲ್ಲಿಲ್ಲ. ಮತ್ತೆ ಅದನ್ನು ತೋರಿ, ರಣದಲ್ಲಿ ನಿಲ್ಲು! ನಿನ್ನ ಇಂದ್ರಜಾಲಕ್ಕೆ ಪ್ರತ್ಯುತ್ತರವಾಗಿ ನಮ್ಮ ದಿವ್ಯಾಸ್ತ್ರಗಳನ್ನು ಕಾಣುವೆ! ನಮಗೆ ನಿನ್ನಂತಹ ಮಾಯಾ ನೈಪುಣ್ಯವಿಲ್ಲವೆಂದು ತಿಳಿಯಬೇಡ! ಬೇಕಾದರೆ ನಾವೂ ಸ್ವರ್ಗಪಾತಾಳವನ್ನು ಹೊಗಬಲ್ಲೆವು. ಶರೀರದಲ್ಲಿ ಬಹು ರೂಪಗಳನ್ನು ತೋರಬಲ್ಲೆವು. ಭಯಪ್ರದರ್ಶನದಿಂದ ಜಯವಾಗದು. ನಿನಗಂಜಿ ಓಡುವ ಷಂಡರಲ್ಲ. ನಮ್ಮನ್ನೆಲ್ಲ ಕೊಲ್ಲಿಸಿ, ಪಾಂಡವರನ್ನು ರಾಜ್ಯವಾಳಿಸುವ ನಿನ್ನ ಸೊಲ್ಲು ಸುಳ್ಳಾಗದಂತೆ ನೋಡು! ಸುಮ್ಮನೆ ಸೂತನಾಗಿ ಕೂಡಬೇಡ! ರಣಕಣಕ್ಕಿಳಿದು ಕಡಿದಾಡಿ, ಪುರುಷೋತ್ತಮನೆನಿಸು! ಕೃಷ್ಣ! ಲೋಕದಲ್ಲಿ ನೀನು ವಿಕ್ರಮಬಹುಲನೆಂದು ಖ್ಯಾತನಾಗಿರಲು ಕಾರಣವೇನೋ ಯಾರು ಬಲ್ಲರು? ಷಂಡರೂ ಗಂಡಸರಂತೆ ಇರುವರು. ನಿನಗೆ ನಿನ್ನಂತಹ ವೀರರಾಜನು ಪ್ರತಿಯೋಧನಾಗಿಲ್ಲವೆಂದು ತೋರುತ್ತಿದೆ.

'ಭೀಮಸೇನ! ತೂವರಕ! ತಿಂಡಿಬಾಕನಾದ ನಿನಗೆ ವಿದ್ಯೆ ಎಲ್ಲಿಂದ ಬಂದೀತು? ವಿರಾಟನಗರದಲ್ಲಿ ವಲ್ಲವ ನಾಮದಿಂದ ಅಡಿಗೆಯವನಾಗಿದ್ದೆ ಎಂದರೆ ಅದು ನನ್ನ ಪೌರುಷವೆಂದು ತಿಳಿ! ನಿನ್ನ ಪ್ರತಿಜ್ಞೆಗಳನ್ನು ಪಾಲಿಸುವ ಕಾಲ ಬಂದಿದೆ. ದುಶ್ಯಾಸನನ ರಕ್ತವನ್ನು ಕುಡಿಯಬೇಕು! ನನ್ನ ತೊಡೆ ಮುರಿಯಬೇಕು! ಕೌರವರನ್ನೆಲ್ಲ ಕೊಲ್ಲಬೇಕು! ಓಹೋ! ಇದೇನು ಭಕ್ಷ್ಯ ಸಂಹಾರವೆಂದು ತಿಳಿದೆಯಾ? ಊಟವೇ ಬೇರೆ! ಯುದ್ಧವೇ ಬೇರೆ! ದುರ್ಯೋಧನನ ಗದೆಯಿಂದ ನಿನ್ನನ್ನು ಉಳಿಸಿಕೊಂಡರೆ ಸಾಕು!

'ನಕುಲ! ಧರ್ಮರಾಜನಲ್ಲಿರುವ ಪ್ರೀತಿಯನ್ನೂ ನನ್ನಲ್ಲಿರುವ ದ್ವೇಷವನ್ನೂ ತೋರಿಸುವ ಕಾಲ ಬಂದಿದೆ. ಸ್ಥಿರನಾಗು!

'ಸಹದೇವ! ಕೃಷ್ಣೆಯು ಪಟ್ಟ ಕ್ಲೇಶಗಳನ್ನು ಮರೆಯಬೇಡ! ಮರೆತಂತಿರುವ ನಿಮ್ಮ ಅಣ್ಣಂದಿರಿಗೂ ಜ್ಞಾಪಿಸಿಕೊಡು! ಯುದ್ಧಸನ್ನದ್ಧನಾಗಿ ಬಾ!

'ವಿರಾಟ ದ್ರುಪದರೇ! ಭೃತ್ಯರನ್ನು ಸೇವಿಸುವ ರಾಜರೆಂದರೆ ನೀವೇ ಸರಿ! ಗುಣವಂತನಾದ ನನ್ನಂತಹ ಚಕ್ರವರ್ತಿಯನ್ನು ಬಿಟ್ಟು ನಿರ್ಭಾಗ್ಯರಾದ ಪಾಂಡವರನ್ನು ಸೇವಿಸುವ ನಿಮಗೆ ಧಿಕ್ಕಾರವಿರಲಿ! ನಿಮ್ಮಂತಹ ನಿರ್ಗುಣರನ್ನು ಸೇರಿಸಿದ ಧರ್ಮರಾಜನೂ ಮೂಢನೇ ಸರಿ! ನೀವೆಲ್ಲರು ಕಲೆತು ಬನ್ನಿ! ಸರಿಯಾದ ಲೋಕಕ್ಕೆ ನಿಮ್ಮನ್ನು ಕಳಿಸುವೆನು.

'ಧೃಷ್ಟದ್ಯುಮ್ನ! ನೀನು ಹುಟ್ಟಿಬಂದ ಕಾರ್ಯವನ್ನು ನೆರವೇರಿಸಿ ಧನ್ಯನಾಗು! ದ್ರೋಣಾಚಾರ್ಯರನ್ನೆದುರಿಸಿ ನಿಂತಾಗ ಓಡಿಹೋಗಬೇಡ!

'ಶಿಖಂಡಿ! ಹೆಣ್ಣೆಂದು ತಿಳಿದು ಗಾಂಗೇಯನು ನಿನ್ನನ್ನು ಕೊಲ್ಲದಿರುವನು. ಆದರೆ ನಾವು ಬಿಡೆವು. ತಿಳಿ! ಮಧ್ಯೆ ಬಂದ ಪೌರುಷವನ್ನು ತೋರಿ, ಸ್ಥಿರವಾಗು!

'ಅರ್ಜುನ! ನಮ್ಮನ್ನು ಕೊಂದು ನೀವು ರಾಜ್ಯವಾಳುವುದೋ, ನಿಮ್ಮನ್ನು ಕೊಂದು ನಾವು ರಾಜ್ಯವಾಳುವುದೋ—ಒಂದು ಉಳಿದಿದೆ. ದ್ರೌಪದಿಯನ್ನು ಅಳಿಸಿದಂತೆ ನಿಮ್ಮನ್ನೂ ಅಳಿಸದೆ ಬಿಡೆವು. ಬಲ–ವೀರ್ಯ–ಶೌರ್ಯ–ಧೈರ್ಯ ಯುತನಾಗು! ಶತ್ರುಗಳನ್ನು ವಶದಿ ತಂದು, ರಾಜ್ಯವನ್ನು ಉದ್ಧರಿಸುವುದು ಕ್ಷತ್ರಿಯ ಧರ್ಮವಾಗಿದೆ. ರಾಜ್ಯ ತ್ಯಾಜನ, ವನವಾಸ, ಅಜ್ಞಾತವಾಸ, ದ್ರೌಪದೀ ಕ್ಲೇಶ ಗಳನ್ನು ನೆನೆದು, ರಣಗಂಡನಾಗು! ನಾವೂ ಆಯುಧ ಪೂಜೆಯನ್ನು ಮಾಡಿರುವೆವು. ಕುರುಕ್ಷೇತ್ರವು ಮರಳು ಕೆಸರುಗಳಿಲ್ಲದೆ ಯುದ್ಧಾನುಕೂಲವಾಗಿದೆ. ನಾಳೆ ಯುದ್ಧ ವಾರಂಭವಾಗಲಿ! ಭೀಷ್ಮನಿಂದ ಕಲೆತಾಗ, ಕರ್ಣಶಲ್ಯರನ್ನು ಎದುರಿಸಿದಾಗ, ದ್ರೋಣಾಶ್ವತ್ಥಾಮರ ಧನುಷ್ಟಂಕಾರ ಕೇಳಿದಾಗ, ನನ್ನ ಸಿಂಹಗರ್ಜನವನ್ನಾಲಿಸಿ ದಾಗ, ಭೀತನಾಗಿ ಓಡಬೇಡ! ಕೂಪಸ್ಥಮಂಡೂಕದಂತೆ ನಿನ್ನ ಮಂದಬುದ್ಧಿಗೆ ತೋರು ವಷ್ಟೇ ಬಲವೆನ್ನದೆಂದು ತಿಳಿದಿರುವೆ! ಮೂಢ, ಬಾಯಬೊಗಳುವಿಕೆಯನ್ನು ನಿಲ್ಲಿಸಿ, ಬಾಣಗಳಿಂದ ಮಾತಾಡು! ಹದಿಮೂರು ವರ್ಷ ನಾನು ಆಳಿ, ನಿಮ್ಮನ್ನು ಅಳಿಸಿದ್ದಾ ಯಿತು. ಮುಂದೆ ನಿಮ್ಮನ್ನು ಕೊಂದು ನಾನೇ ರಾಜ್ಯವನ್ನೆಲ್ಲ ಪಾಲಿಸುವೆನು. ಆಗ ಗಾಂಡೀವವಿದ್ದಿಲ್ಲವೇ? ಭೀಮನ ಗದೆ ಇರಲಿಲ್ಲವೇ? ನಿನಗೆ ಸಹಾಯಕನಾಗಿ ಕೃಷ್ಣ ನಿದ್ದಿಲ್ಲವೇ? ಎಲ್ಲವೂ ಇದ್ದು ಏನು ಮಾಡಿದಿರಿ? ಹೆಂಡತಿಯ ಮಾನವನ್ನು ಕಾಯದ ಷಂಡರು ನೀವು ಮನುಷ್ಯರೇ? ಛೀ ಷಂಡತಿಲರೆಂದು ದುಶ್ಶಾಸನನು ನುಡಿದ ಮಾತು ನಿಜವೇ ಸರಿ! ಶ್ರೋಣಿ ವೇಣೀ, ಕಕ್ಷಗಳಲ್ಲಿ ರತಿಗ್ರಹಣ, ಮರ್ದನಗಳನ್ನು ಮಾಡಿ ಕೆಡಿಸುವ ಪುರುಷನಿಗೆ ವಶಳಾಗಿ ತರುಣಿಯು ಸ್ಥಿರಳಾಗಿರುವಳು. ನೀನು ಹೆಂಗಸಿಗೂ ಅಧಮನಾದ ಷಂಡನಾಗಿದ್ದೆ!

'ನಮಗೆ ವಾಸುದೇವನ ಭಯವಿಲ್ಲ. ನಿಮ್ಮ ಭೀಮನ ಭಯವಿಲ್ಲ; ನಿನ್ನ ಭಯ ಮೊದಲೇ ಇಲ್ಲ. ಕರೆ ತಾ ಸಾವಿರ ಕೃಷ್ಣರನ್ನು! ನೀ ನೂರಾಗಿ ಬಾ! ನಿಮ್ಮೆಲ್ಲ ರನ್ನು ಯಮಸದನಕ್ಕೆ ಕಳಿಸುವೆನು. ಕೌರವಸೇನೆ ಅಗಾಧ ಸಮುದ್ರವಾಗಿದೆ. ಭೀಷ್ಮನನ್ನು ಎದುರಿಸುವುದು ಗಿರಿಗೆ ತಲೆ ಘಟ್ಟಿಸಿದಂತೆ ಎಂದು ತಿಳಿ! ಕೃಪನೇ ಮೀನ, ವಿವಿಂಶತಿಯೇ ಮಹಾಸರ್ಪ, ಭೀಷ್ಮನೇ ಭೀಷಣವೇಗ, ದ್ರೋಣನೇ ಮೊಸಳೆ, ಕರ್ಣ ಶಲ್ಯರೇ ಸುಳಿಗಳು, ಕಾಂಭೋಜನೇ ಬಡಬಾಗ್ನಿ, ಭೂರಿಶ್ರವನೇ ತಿಮಿಂಗಿಲನು, ದುಶ್ಶಾಸನನೇ ಪ್ರವಾಹ, ಜಯದ್ರಥನೇ ಒಳಗಿರುವ ಬೆಟ್ಟ, ಶಕುನಿಯೇ ಮಡುವು ಇಂತಹ ಕೌರವವಾಹಿನಿಯನ್ನು ಸೇರಿ ಬದುಕಲಾರೆ! ನಿನ್ನ ಬಂಧುಗಳಾರೂ ಉಳಿಯರು. ಪಾಪಿಗಳಾದ ನಿಮಗೆ ಇಲ್ಲಿ ರಾಜ್ಯವಿಲ್ಲ, ಅಲ್ಲಿ ಸ್ವರ್ಗವಿಲ್ಲ.'

ಇಂತು ನುಡಿದು ಉಲೂಕನು, ಆ ಪಾಪಿಯ ವಚನಗಳನ್ನಾಲಿಸಿ ಕೆರಳಿ ಕೇಸರಿಗಳಂತೆ ನಿಂತ ಪಾಂಡವರನ್ನು ನೋಡಿ, ಗದಗದ ನಡುಗಿದನು. ಧರ್ಮರಾಜನಿಂದ ಅಭಯವನ್ನು ಪಡೆದಿದ್ದರಿಂದ ಅವನು ಕುಸಿಬೀಳದೆ, ಸುಮ್ಮನೆ ನಿಂತಿದ್ದನು. ಮೊದಲೇ ಕುಪಿತರಾಗಿದ್ದ ಪಾಂಡವಸಿಂಹರು, ಉಲೂಕನ ವಚನ ಶೂಲಗಳಿಂದ ತಿವಿಯಲ್ಪಟ್ಟು ಕೆಣಕಿ ಕೆರಳಿಸಿದ ಕೇಸರಿಗಳಂತೆ ಎದ್ದು ನಿಂತರು. ಕೈಗಳನ್ನೆತ್ತಿ ತೂರಾಡುತ್ತಾ, ಒಬ್ಬರನ್ನೊಬ್ಬರು ನೋಡಿ ಗುಡುಗಿದರು. ಭೀಮಸೇನನು ಕಣ್ಣುಗಳಲ್ಲಿ ಕಿಡಿಗಳನ್ನು ಕಾರಿದನು. ಹಾವಿನಂತೆ ಬುಸಗುಡುತ್ತಾ ಸಿಟ್ಟಿನ ಭರದಿಂದ ತೂಗಾಡುವ ಮದ್ದಾನೆಯಂತಿದ್ದ ಭೀಮಸೇನನನ್ನು ತಡೆದು, ಶ್ರೀಕೃಷ್ಣನು ಉಲೂಕನಿಗಿಂತೆಂದನು— 'ಕೈತವ್ಯ ! ಇಲ್ಲಿಂದ ಹೊರಡು ! ಸುಯೋಧನನಿಗೆ 'ನಿನ್ನ ಮಾತನ್ನು ಕೇಳಿದೆವು. ಅದರ ಅರ್ಥವನ್ನೂ ತಿಳಿದೆವು. ನಿನ್ನಿಷ್ಟದಂತೇ ಆಗಲಿ !' ಎಂದು ತಿಳಿಸು !

ಶ್ರೀಕೃಷ್ಣನ ಅಧಿಕ್ಷೇಪವನ್ನು, ಪಾಂಡವರ ನಿಂದೆಯನ್ನು ಕೇಳಿ ಸಭೆಯಲ್ಲಿದ್ದವರೆಲ್ಲರೂ ಕ್ರೋಧದಿಂದ ಉರಿದೆದ್ದರು. ಧೃಷ್ಟದ್ಯುಮ್ನ ಘಟೋತ್ಕಚ ಸಾತ್ಯಕಿ ಪ್ರಮುಖ ವೀರರು ಆಸನಗಳಿಂದ ಎದ್ದುನಿಂತರು. ಅವರ ಕಣ್ಣಲ್ಲಿ ಕಿಡಿಗಳುದುರಿದವು. ಅಂಗದಕೇಯೂರ ಶೋಭಿತವು, ರಕ್ತಚಂದನ ರೂಷಿತವು ಆದ ಬಾಹುಯುಗಳವನ್ನು ತೋರುತ್ತಾ, ಹಲ್ಲುಗಳನ್ನು ಕಟಕಟ ಕಡಿಯುತ್ತಾ, ತುಟಿಯನ್ನು ನೆಕ್ಕುತ್ತಾ ಭೀಮಸೇನನು ಕ್ರೋಧವೇ ಮೂರ್ತೀಭವಿಸಿದಂತೆ ಎದ್ದು ನಿಂತು, ಕೈಕೈಹಿಸುಕಿಕೊಂಡು, ಉಲೂಕನನ್ನು ಕಂಡು ಇಂತೆಂದನು—

'ಮೂರ್ಖ ! ದುರ್ಯೋಧನನಾಡಿದ ದುರ್ವಚನಗಳನ್ನಾಡಿ ವಧಾರ್ಹನೆನಿಸಿರುವೆ! ಆದರೂ ದೂತನಾಗಿ ಉಳಿದೆ! ಹೋಗಿ ಸರ್ವಕ್ಷತ್ರಸಭೆಯಲ್ಲಿ ನೀಚ ದುರ್ಯೋಧನನಿಗೆ ಈ ನನ್ನ ಮಾತನ್ನು ತಿಳಿಸು! ಕರ್ಣ ಶಕುನಿ ದುಶ್ಶಾಸನರಿಗೂ ಕೇಳಿಸಲಿ ಆ ಮಾತು!

'ಅಣ್ಣನಾದ ಧರ್ಮರಾಜನಿಗೆ ವಿಧೇಯರಾಗಿ ನಾವು ನಿನ್ನನ್ನು ಕ್ಷಮಿಸಿದುದರಿಂದ ಉಳಿದಿರುವೆ! ಕುಲನಾಶವಾಗಬಾರದೆಂದು ಕೇಶವನನ್ನು ಸಂಧಿಕಾರ್ಯಕ್ಕೆಂದು ಕಳಿಸಿದೆವು. ನಿಜತತ್ವವನ್ನರಿಯದ ನೀನು ನಮ್ಮನ್ನು ದುರ್ಬಲರೆಂದು ಭಾವಿಸಿದಂತಿದೆ! ಯಮಯಾತನೆಗೀಡಾಗಲಿರುವ ನಿನಗೆ ನನ್ನ ಮಾತುಗಳು ತಕ್ಕುದಾಗಿವೆ. ಪಾಪಿ! ನಾಳಿನ ಯುದ್ಧದಲ್ಲಿ ನಿನ್ನನ್ನು ಸಮೂಲವಾಗಿ ನಾಶಮಾಡದೆ ಬಿಡೆನು. ಶ್ರೀಕೃಷ್ಣನನ್ನು ನಿಂದಿಸಿದ ಒಂದೊಂದಕ್ಷರಕ್ಕು ನಿನ್ನನ್ನೊಂದೊಂದು ಸಲ ಕೊಂದರೂ ನನಗೆ ತೃಪ್ತಿಯಾಗದು. ಯಮ ಕುಬೇರಾದಿಗಳು ನಿನಗೆ ಸಹಾಯರಾಗಿ ಬಂದರೂ, ರುದ್ರನೇ ನಿನಗೆಣೆಯಾಗಿ ನಿಂತರೂ, ನನ್ನ ಗದಾದಂಡವು ನಿನ್ನ ತೊಡೆಯನ್ನು ಮುರಿಯದಿರದು. ದುಶ್ಶಾಸನನ ರುಧಿರವನ್ನು ಕುಡಿಯುವ ನನ್ನ ಪ್ರತಿಜ್ಞೆಯನ್ನು ಯಾರೂ ವಿಫಲಗೊಳಿಸಲಾರರು. ಇದಕ್ಕೆ ಶ್ರೀಕೃಷ್ಣನೇ ಸಾಕ್ಷಿ!

ಸಹದೇವನು 'ದುರ್ಯೋಧನ! ಲೋಕನಾಶವನ್ನು ಮಾಡಲು ಜನಿಸಿರುವ ನಿನ್ನಿಂದಲೇ ಈ ಮಹಾಯುದ್ಧವು ಸಂಪ್ರಾಪ್ತವಾಗಿದೆ. ನೀನಿಲ್ಲದಿರೆ ಕೌರವರೆಲ್ಲರು ಸುಖದಿಂದಿರುತ್ತಿದ್ದರು. ನಿನ್ನಂತೆ ನಡೆದು ನಿಮ್ಮಪ್ಪನೂ ನಿಂದ್ಯನೆನಿಸಿರುವನು. ಶಕುನಿಯನ್ನು ಸಂಹರಿಸಿ, ನಿನ್ನ ಸರ್ವಾಶೆಗಳನ್ನೂ ನಾಶಪಡಿಸುವೆನು' ಎಂದು ಸಂದೇಶವಿತ್ತನು.

ಅರ್ಜುನನು ಭೀಮಸೇನನನ್ನು ನೋಡಿ ನಗುತ್ತಾ 'ವೃಕೋದರ! ಮಹಾನುಭಾವನಾದ ನಿನ್ನಿಂದ ವೈರವನ್ನು ಕಟ್ಟಿಕೊಂಡವರಿನ್ನಿಲ್ಲವೆಂದು ತಿಳಿ! ದೂತನಾದ ಉಲೂಕನನ್ನು ಕ್ಷಮಿಸಿ ಕಳಿಸಿಬಿಡು!' ಎಂದನು. 'ಧೃಷ್ಟದ್ಯುಮ್ನಾದಿ ವೀರರೇ! ಕೈಲಾಗದವರು ಬಾಯಿಮಾತಿನಿಂದ ಉತ್ತರವೀವರು. ಗಾಂಡೀವ ಧ್ವನಿಯು ಬಾಣಗಳಿಂದ ಪ್ರತ್ಯುತ್ತರಿಸುವುದು. ನೀವೂ ಅಂತೆಯೇ ಪರಾಕ್ರಮಿಸಿ, ಪಾಪಿ ದುರ್ಯೋಧನನನ್ನು ತಕ್ಕಂತೆ ಶಿಕ್ಷಿಸಿರಿ!' ಎಂದು ನುಡಿದ ಅರ್ಜುನನ ವಚನವನ್ನು ಕೇಳಿ, ಸಭಿಕರು ಅವನನ್ನು ಪ್ರಶಂಸಿಸಿದರು.

ಧರ್ಮರಾಜನು ಉಲೂಕನನ್ನು ನೋಡಿ, 'ಕೈತವ್ಯ! ಹೋಗಿನ್ನು! ಕೃತಘ್ನನು, ವೈರಮೂರ್ತಿಯು, ಕುಲಪಾಂಸನನು ಆದ ದುರ್ಯೋಧನನಿಗೆ ಈ ಮಾತನ್ನು ತಿಳಿಸು!

'ಪಾಪಿಷ್ಠ! ಸದಾ ಮೋಸಗಾರನಾಗಿ ವಂಚಿಸಿದ. ಆಟವಿನ್ನು ಮುಂದೆ ನಡೆಯದು. ಪರಾಕ್ರಮಿಸಿ, ಕ್ಷತ್ರಿಯನೆನಿಸು! ಬಂಧುಗಳಾದ ನಮ್ಮಿಂದ ಕಾದಾಡಲು ಭೀಷ್ಮ-ದ್ರೋಣಾದಿ ಮಾನ್ಯರನ್ನೂ ಶಕುನಿ-ಲಕ್ಷಣಾದಿ ಅಮಾತ್ಯರನ್ನೂ ಕಲೆಸಿ, ಕೂಡಿ ಬರುತ್ತಿರುವ ನಿನ್ನ ಪರಾಕ್ರಮವೇನು ಹೇಳು! ಜೂಜಾಡಲು ಶಕುನಿಯನ್ನು ಕರೆದಂತಲ್ಲ. ಇದು ಯುದ್ಧರಂಗ! ಆತ್ಮವೀರ್ಯವೇ ಮುಖ್ಯ! ಭೃತ್ಯವೀರ್ಯ ಆಮೇಲೆ. ಆತ್ಮವೀರಗನಾಗದೆ ಪಾರ್ಥರನ್ನು ಗೆಲ್ಲಲು ಬರುವ ನಿನ್ನಂತಹ ಮೂರ್ಖರಿನ್ನಿಲ್ಲ' ಎಂದನು.

ಶ್ರೀಕೃಷ್ಣನು 'ಉಲೂಕ! ನನ್ನ ಮಾತೂ ಇದೆ. ದುರ್ಯೋಧನ! ನಾಳೆ ನಾಡಿದ್ದು ಜರಗುವ ಯುದ್ಧದಲ್ಲಿ ಸ್ಥಿರವಾಗಿ ನಿಲ್ಲು! ನಾನು ಯುದ್ಧಮಾಡುವುದಿಲ್ಲ, ಸಾರಥಿಯಾಗಿರುವೆನೆಂದು ತಿಳಿದು, ಜಂಬಗಳನ್ನು ಕೊಚ್ಚುತ್ತಿರುವೆ. ನಾನೇ ಸಂಕಲ್ಪಿಸಿದರೆ ನಿಮ್ಮೆಲ್ಲರನ್ನೂ ಕ್ಷಣದಲ್ಲೇ ಸಂಹರಿಸಬಲ್ಲೆನು ಕುಪಿತನಾನೆಂದರೆ ಸರ್ವಲೋಕಗಳನ್ನು ನುಂಗಿಬಿಡಬಲ್ಲೆನು! ಮೂರ್ಖ! ನಿನಗೆ ತಿಳಿ ಹೇಳಿ ಏನು ಪ್ರಯೋಜನ? ಎಲ್ಲಿ ಹುದುಗಿದರೂ, ಪಾತಾಳದಲ್ಲಡಗಿದರೂ ಅಲ್ಲಲ್ಲೇ ಅರ್ಜುನ ಗಾಂಡೀವ ಟಂಕಾರವನ್ನು ಕೇಳುವೆ! ಅಲ್ಲಲ್ಲೇ ಭೀಮಗದಾಪ್ರಹಾರವನ್ನು ಪೊಂದಿಸುವೆ! ಇಂದೇ ದುಶ್ಶಾಸನನ ರಕ್ತವನ್ನು ಭೀಮಸೇನನು ಕುಡಿದನೆಂದು ತಿಳಿ! ಇಂದೇ ನಿನ್ನ ತೊಡೆ ಮುರಿಯಿತು, ತಲೆಗೆ ಭೀಮಸೇನನ ಪಾದಪ್ರಹಾರವಾಯಿತೆಂದೂ ತಿಳಿ' ಎಂದು ಸಂದೇಶವಿತ್ತನು.

ಅರ್ಜುನನು 'ದುರ್ಯೋಧನ! ಎಲ್ಲರಿಗೂ ಹಿರಿಯನು ಪೂಜ್ಯನು ಆದ ಬಾಹ್ಲೀಕನನ್ನು, ನಿತ್ಯಸತ್ಯವ್ರತನಾದ ಭೀಷ್ಮನನ್ನು, ಧನುರಾಚಾರ್ಯನೆನಿಸಿದ ಪೂಜ್ಯದ್ರೋಣನನ್ನು ರಣಕ್ಕೆಳಸಿ ಕೊಲ್ಲಿಸಲಿರುವ ನಿನ್ನಂತಹ ಪಾಪಿಯಿನ್ನಿಲ್ಲ. ನೀನು ಆಶ್ರಯಿಸಿರುವ ಭೀಷ್ಮನನ್ನು ಕೆಡಹಿ, ನಿನ್ನ ನೆಚ್ಚಿನ ಮಿತ್ರ ಕರ್ಣನನ್ನೂ ಕೊಂದು, ನಿನ್ನ ಆಶಾಸೌಧವನ್ನು ಪುಡಿ ಮಾಡುವೆನು. ಕ್ರುದ್ಧನಾಗಿರುವ ಭೀಮಸೇನನು ಸತ್ಯಪ್ರತಿಜ್ಞನಾಗುವುದನ್ನು ಬೇಗನೆ ನೋಡುವೆ! ದುರಭಿಮಾನ, ದರ್ಪ, ಕ್ರೋಧ, ಪಾರುಷ್ಯ, ಅಧರ್ಮ, ನೈಷ್ಠುರ್ಯ, ನಿರ್ಲಜ್ಜತೆ, ಧರ್ಮದ್ವೇಷ, ವೃದ್ಧಜನನಿಂದೆ, ಇಂತಹ ದುರ್ಗುಣಗಳ ಖನಿಯಾದ ನಿನ್ನ ಕಾಲವು ಸಮೀಪಿಸಿದೆ. ಬೇಗನೆ ತೀವ್ರ ನರಕವನ್ನು ಉಣ್ಣುವೆ! ಶ್ರೀಕೃಷ್ಣ, ಭೀಮಾರ್ಜುನರ ವಿರೋಧವಿದ್ದವನಿಗೆ ಜೀವನಾಶೆ ಏಕೆ? ಪುತ್ರ ಮಿತ್ರ ಸೋದರ ಬಂಧುಗಳ ಸಾವನ್ನು ಕೇಳಿ, ನೀನೂ ಭೀಮಗದಾಭಗ್ನನಾಗಿ, ನೆಲದಿ ಉರುಳಾಡುವಾಗ ನಿನ್ನ ಪಾಪಗಳ ನೆನಪು ನಿನಗಾದೀತು!' ಎಂದು ಹೇಳಿ ಕಳಿಸಿದನು.

ಧರ್ಮರಾಜನು 'ಸುಯೋಧನ! ಧರ್ಮಾಧರ್ಮಗಳಿಗೆ ಸ್ವರ್ಗನರಕಗಳಿಗೆ ಇರುವ ಅಂತರವಿದೆ. ನನ್ನ ನಿನ್ನ ವೃತ್ತಗಳಿಗೆ, ಕೀಟಗಳಿಗೂ ದ್ರೋಹನ್ನೆಣಿಸದೆ; ಸಂಧಿಗಾಗಿ ಪ್ರಯತ್ನಿಸಿದ ನನ್ನ ಮಾತನ್ನೂ, ಶ್ರೀಕೃಷ್ಣನ ವಚನವನ್ನೂ ತಿರಸ್ಕರಿಸಿ, ಕೆಟ್ಟೆ! ಬಿಡಾಲವರ್ತನನಾರೆಂದು ಶ್ರೀಕೃಷ್ಣನರಿತಿಹನು. ನಾಳೆ ಜರುಗುವ ಯುದ್ಧದಲ್ಲಿ ಸ್ಥಿರನಾಗು!' ಎಂದನು. ಭೀಮಸೇನನು ಮತ್ತೆ ಪ್ರತಿಜ್ಞೆಗಳನ್ನು ಪೂರೈಸುವೆನೆಂದು ತಿಳಿಸಿ, 'ಸುಯೋಧನ! ನೀ ನುಡಿದಂತೆಯೇ ಸಮಸ್ತವೂ ನಡೆಯುವುದು. ದುಶ್ಶಾಸನನ ರಕ್ತವನ್ನು ಕುಡಿವೆನು, ನಿನ್ನ ತೊಡೆ ಮುರಿವೆನು. ಶ್ರೀಕೃಷ್ಣಪ್ರಭುವನ್ನು ನಿಂದಿಸಿದ ನಿನ್ನ ತಲೆಯನ್ನು ಕಾಲಿಂದೊದೆಯುವೆನು!' ಎಂದು ನುಡಿದನು.

ವಿರಾಟ ದ್ರುಪದರು 'ಸಾಧುಜನರಿಗೆ ದಾಸರಾಗುವುದೊಂದು ಭಾಗ್ಯ! ನಾವು ನಿರ್ಗುಣರೋ ಸಗುಣರೋ ಎಂಬುದನ್ನು ನಾಳೆ ರಣರಂಗವೇ ತಿಳಿಸಿಕೊಡುವುದು!' ಎಂದು ಸಂದೇಶವಿತ್ತರು.

ನಕುಲನು 'ಸುಯೋಧನ! ತಿಳಿದೆವು ನಿನ್ನ ಮಾತಿನ ವ್ಯಂಗ್ಯಾರ್ಥವನ್ನು. ಆದರೆ ನೀನಾಡಿದಂತೆಯೇ ನಿಮ್ಮ ನಾಶವಾಗುವುದೆಂದು ತಿಳಿ!' ಎಂದನು.

ಶಿಖಂಡಿಯು 'ದುರ್ಯೋಧನ! ನನ್ನ ಪರಾಕ್ರಮವನ್ನು ನಿನ್ನಂತೆ ಹೊಗಳಿಕೊಳ್ಳಲಾರೆನು. ರಣರಂಗದಿ ವಿಕ್ರಮಿಸುವ ನನ್ನನ್ನು ಭೀಷ್ಮನೂ ತಡೆಯದಾದಾಗ ಅವನನ್ನು ನಾನು ಕೆಡಹಿದಾಗ, ನನ್ನನ್ನು ಸರಿಯಾಗಿ ತಿಳಿಯುವಂತಾದೀತು!' ಎಂದನು.

ಧೃಷ್ಟದ್ಯುಮ್ನನು, 'ದುರ್ಯೋಧನ! ದ್ರೋಣಾಚಾರ್ಯನನ್ನು ಸಂಹರಿಸಲೆಂದೇ ಬಂದಿರುವ ನನ್ನಿಂದ ಎಚ್ಚರವಾಗಿರು! ಅನನ್ಯಸಾಧ್ಯವಾದ ಮಹಾಕಾರ್ಯ

ವೆನ್ನಿಂದಾಗುವುದು. ಕಾಳ್ಗಿಚ್ಚಿನಂತೆ ಮುತ್ತುವ ನನ್ನ ಬಾಣಾಗ್ನಿಯಿಂದ ನಿನ್ನ ಸೈನ್ಯ ರಕ್ಷವನ್ನು ಕಾದುಕೋ!' ಎಂದನು.

ಆಗ ಉಲೂಕನು ಧರ್ಮರಾಜನ ಅಪ್ಪಣೆಯನ್ನು ಪಡೆದು ದುರ್ಯೋಧನನ ಶಿಬಿರವನ್ನು ಸೇರಿ, ಸಕಲವನ್ನವನಿಗೆ ತಿಳಿಸಿದನು. ಅದನ್ನು ಕೇಳಿ ಸುಯೋಧನನು ಬೆಳಗಾಗುವುದರಲ್ಲಿ ಸೇನೆಗಳು ವ್ಯೂಹಗಟ್ಟಿ ನಿಲ್ಲಬೇಕೆಂದು ಕಟ್ಟಪ್ಪಣೆ ಮಾಡಿದನು.

ಧರ್ಮರಾಜನು ಕೂಡ ತನ್ನ ಸೇನಾಪತಿಗಳಿಗೆ 'ಸಿದ್ಧರಾಗಿ'ರೆಂದು ಆಜ್ಞಾಪಿಸಿದನು. ಅರ್ಜುನನು ಕರ್ಣನೊಡನೆ, ಭೀಮಸೇನನು ದುರ್ಯೋಧನಾದಿ ಕೌರವರೊಡನೆ, ಧೃಷ್ಟಕೇತುವು ಶಲ್ಯನೊಡನೆ, ಉತ್ತಮೌಜನು ಕೃಪನೊಡನೆ, ನಕುಲನು ಅಶ್ವತ್ಥಾಮನೊಡನೆ, ಶೈಬ್ಯನು ಕೃತವರ್ಮನೊಡನೆ, ಸಾತ್ಯಕಿಯು ಸೈಂಧವನೊಡನೆ, ಶಿಖಂಡಿಯು ಭೀಷ್ಮನೊಡನೆ, ಸಹದೇವನು ಶಕುನಿಯೊಡನೆ, ಚೇಕಿತಾನನು ಶಲ್ಯನೊಡನೆ, ದ್ರೌಪದೇಯರು ತ್ರಿಗರ್ತರೊಡನೆ, ಅಭಿಮನ್ಯುವು ವೃಷಸೇನನೊಡನೆ, ಘಟೋತ್ಕಚನು ಅಲಂಬುಸನೊಡನೆ ಕಾದಬೇಕೆಂದು ಆಜ್ಞಾಪಿಸಿ, ಧರ್ಮರಾಜನು ಧೃಷ್ಟದ್ಯುಮ್ನನಿಗೆ ದ್ರೋಣನನ್ನು ಕಾದುವಂತೆ ನಿಯಮಿಸಿದನು.

## ರಥ ಮಹಾರಥ ಸಂಖ್ಯಾನ

ಶ್ರೀ ವೈಶಂಪಾಯನನು ಜನಮೇಜಯನಿಗಿಂತೆಂದನು—

ಭೀಷ್ಮನು ಸರ್ವ ಸೇನಾಪತಿಯಾಗಿ ದುರ್ಯೋಧನನನ್ನು ಸಂತೋಷಪಡಿಸುತ್ತ ಇಂತು ನುಡಿದನು. 'ರಾಜನ್! ದೇವಸೇನಾನಿಯಾದ ಕುಮಾರಸ್ವಾಮಿಗೆ ನಮಸ್ಕಾರವಿರಲಿ! ಕೇಳು! ಇಂದು ನನ್ನನ್ನು ಸೇನಾಧ್ಯಕ್ಷನಾಗಿ ನಿಲ್ಲಿಸಿದೆ! ಸೇನಾಕರ್ಮ ನಿಪುಣನಾದ ನನ್ನಿಂದ ಯಾತ್ರಾ, ಯಾನ, ಯುದ್ಧ, ಪ್ರಶಾಂತಿ, ವಿರಾಮಗಳ ಕಾಲಕ್ಕೆ ತಕ್ಕಂತೆ ಯೋಗ್ಯ ಕೃತ್ಯಗಳು ಲೋಪವಾಗದಂತೆ ನಡೆಯುವವು. ನಿಶ್ಚಿಂತನಾಗು! ದೇವ-ಗಂಧರ್ವರನ್ನು ಗೆಲ್ಲಬಲ್ಲ ದಿವ್ಯಾಸ್ತ್ರಗಳಿಂದ ನನ್ನ ಕೈಲಾದಷ್ಟು ಸೆಣಸಿ, ಪಾಂಡವರಿಂದ ಹೋರಾಡುವೆನು.'

ದುರ್ಯೋಧನನು, 'ತಾತ! ನನಗೆ ದೇವಾಸುರರಿಂದಲೂ ಭಯವಿಲ್ಲ. ನಿನ್ನಂತಹ ಸೇನಾಪತಿಯನ್ನು ಪಡೆದ ನನಗೆ ವಿಜಯವು ನಿಶ್ಚಿತವೆಂದು ತಿಳಿದಿರುವೆನು. ದ್ರೋಣಾಚಾರ್ಯನೂ ನಿನಗೆ ಜೋಡಾದಾಗ ಪಾಂಡವರು ಉಳಿಯುವುದೂ ದುಶ್ಶಕ್ಯವೇ ಸರಿ! ನಿಮ್ಮಿಬ್ಬರ ನೆರವಿನಿಂದ ಸುರಧಾನಿಯನ್ನೂ ಸೂರೆಗೊಳ್ಳುವೆನು. ಇರಲಿ! ಈಗ ರಥಿಕ, ಮಹಾರಥ, ಅತಿರಥರನ್ನು ನಿಶ್ಚಯಿಸಿ ಹೇಳು!' ಎಂದನು.

ಭೀಷ್ಮನು, 'ದುರ್ಯೋಧನ! ನೀನು ಕೇಳಿದುದರಿಂದ ಹೇಳಬೇಕಲ್ಲವೇ? ಸೇನಾಪತ್ಯವನ್ನು ವಹಿಸಿ ಸುಮ್ಮನಿರಲಾಗದು. ಕೇಳು! ಮತ್ಸರವಿಲ್ಲದೆ ಸಮರಥ ಅತಿರಥರನ್ನು ಹೆಸರಿಸುವೆನು.

*

'ನೀನು ಅತಿರಥನು ! ನಿನ್ನ ತಮ್ಮಂದಿರು ಸಮರಥ ಶ್ರೇಷ್ಠರು. ನನ್ನ ವಿಷಯ ವನ್ನು ನಾನು ಹೇಳಲಾಗದು. ಅದು ನಿಮಗೆಲ್ಲರಿಗೆ ವಿಶದವಾಗಿದೆ. ಕೃತವರ್ಮನು ಅತಿರಥನು. ಶಲ್ಯನು ಶ್ರೀಕೃಷ್ಣನೊಡನೆ ಸ್ಪರ್ಧಿಸುವನು ಮತ್ತು ಅಳಿಯರನ್ನೂ ಬಿಟ್ಟು ಬಂದಿರುವನು. ಅವನು ಅತಿರಥನು. ಭೂರಿಶ್ರವನೂ ಅತಿರಥಶ್ರೇಷ್ಠನು. ಸೈಂಧವನು ಮಹಾರಥನು. ದ್ರೌಪದೀ ಹರಣದಲ್ಲಿ ಪರಾಭೂತನಾಗಿ ಸೇಡಿನಿಂದ ತಪಗೈದು ರುದ್ರವರವನ್ನು ಸಂಪಾದಿಸಿ ಪ್ರಬಲನಾಗಿರುವನು. ಕಾಂಭೋಜ ರಾಜನಾದ ಸುದಕ್ಷಿಣನು ಸಮರಥನು. ಮಾಹಿಷ್ಮತೀಪತಿ ನೀಲನು ಅತಿರಥನು. ಅವನು ಹಿಂದೆ ಸಹದೇವನಿಗೆ ಸೋತು, ಆ ಹಗೆಯಿಂದ ಕುದಿಯುತ್ತಿರುವನು. ಅವಂತೀಶರಾದ ವಿಂದಾನುವಿಂದರು, ಅರ್ಧರಥರು. ತ್ರಿಗರ್ತರಾಜನು ಐವರು ಸೋದರರು ದಕ್ಷಿಣಗೋಗ್ರಹಣದ ಪರಾಭವದಿಂದ ನೊಂದಿರುವರು. ಸುಶರ್ಮರಾದಿ ತ್ರಿಗರ್ತರೈವರೂ ಮಹಾರಥರು. ನಿನ್ನ ಮಗ ಲಕ್ಷ್ಮಣಕುಮಾರನು ಸಮರಥನು. ಕೋಸಲರಾಜನಾದ ಬೃಹದ್ಬಲನು, ದಂಡಧಾರನು ಸಮರಥರು. ಕೃಪಾಚಾರ್ಯನು ಅತಿರಥೋತ್ತಮನು; ಅವನು ಚದುರಂಗಬಲವನ್ನು ಮುತ್ತಿ ನಾಶಮಾಡಲು ಸಮರ್ಥನು.

'ಶಕುನಿ ಸಮರಥನು; ಮಾಯಾಬಲನೂ ಆಗಿರುವನು, ಅಶ್ವತ್ಥಾಮನು ದಿವ್ಯಾಸ್ತ್ರ ಚತುರನು, ಬಾಹುಘನನು ಆಗಿ ಅರ್ಜುನನನ್ನು ಮುತ್ತಿ ಪೀಡಿಸಲು ಸಮರ್ಥನಾಗಿರುವನು. ಆ ಮಹಾನುಭಾವನಿಗೆ ಸಮರಾದ ವೀರರು ಭೂಲೋಕದಲ್ಲಿಲ್ಲ. ಆತನು ಅತಿರಥಶ್ರೇಷ್ಠನು. ಆದರೂ ಬ್ರಾಹ್ಮಣಭಾವದಿಂದಲು ಜೀವನಾಶೆಯಿಂದಲು ಹಿಂಜರಿಯುವನು; ಇಲ್ಲದಿರೆ ಯಮನಂತೆ ಕಾದಾಡಬಲ್ಲನು. ಅವನ ತಂದೆ ಪೂಜ್ಯ ದ್ರೋಣನು ಧನುರ್ಧಾರಿಗಳಿಗೆಲ್ಲ ಗುರುವು, ಹಿತನು, ಆಗಿರುವನು. ವೃದ್ಧನಾದರೂ ಅಂಗವೈಕಲ್ಯವಿಲ್ಲ. ಸಚರಾಚರವಾದ ಜಗವನ್ನೆಲ್ಲ ಒಂದೇಟಿಗೆ ಆಕುಲಪಡಿಸಿ, ಕಾದುವ ದ್ರೋಣನಿಗೆ ಸಮರಾದ ವೀರವರರು ಎಲ್ಲಿಯೂ ಇಲ್ಲ; ಈತನು ಅರ್ಜುನ ನನ್ನು ಮಗನಂತೆ ಪ್ರೀತಿಸುವನಾದುದರಿಂದ ಅವನನ್ನು ಬಿಟ್ಟು, ಮಿಕ್ಕ ಪಾಂಡವ ಸೇನೆಯನ್ನು ಕಸಿಮಸೆದು ನಾಶ ಮಾಡುವನು. ಅವನು ಅತಿರಥ ಶ್ರೇಷ್ಠನು. ಬಾಹ್ಲಿಕನೂ ಅತಿರಥನೇ. ಅವನ ಮಗ ಸೋಮದತ್ತನು ಅತಿರಥನು. ಅಸುರರಾದ ಹಲ ಅಲಂಬುಸರು ಸಮರಥಶ್ರೇಷ್ಠರು. ಪ್ರಾಗ್ಜ್ಯೋತಿಷಾಧೀಶನಾದ ಭಗದತ್ತನು ಸಮರಥನಾದರೂ ಗಜಯುದ್ಧದಲ್ಲಿ ಅಸಮಾನನೆನಿಸಿರುವನು. ಗಾಂಧಾರರಾಜರಾದ ವೃಷಕ ಅಚಲರು ಸಮರಥರು. ಇನ್ನು ನಿನಗೆ ಪ್ರಿಯಸ್ನೇಹಿತನು, ಕಲಹಪ್ರಿಯನೂ ಆದ ಕರ್ಣನ ವಿಷಯವನ್ನು ಕೇಳು ! ಸಭೆಯಲ್ಲಿ ಬಲು ಮಾತಾಡಿ, ರಣದಲ್ಲಿ ಓಡು ವನು; ಅತ್ಯಂತ ಕರುಣಾಪರನು; ಇಂತಹ ಕರ್ಣನು ತನ್ನ ಕವಚ ಕುಂಡಲಗಳನ್ನು ಕಳೆದುಕೊಂಡಿರುವುದರಿಂದ ರಣರಂಗದಿ ಮಾನ ಪ್ರಾಣಗಳಿಗೆ ಎರವಾಗುವನು. ಇವನು ಅರ್ಧರಥನು ' ಎಂದನು.

ದ್ರೋಣನೂ ಮಾತನ್ನು ಅನುಮೋದಿಸಿ 'ಅಹುದು ! ಮೊದಲು ಮುಗಿಬಿದ್ದು ಕೊನೆಗೆ ಬಿಟ್ಟೋಡುವ ಕರ್ಣನ ಪರಾಕ್ರಮವನ್ನರಿಯರು.. ಅವನು ಅರ್ಧರಥನು ಸರಿ!' ಎಂದನು. ಕರ್ಣನವರ ವಚನವನ್ನಾಲಿಸಿ ಕ್ರೋಧತಾಮ್ರಾಕ್ಷನಾದನು. ಭೀಷ್ಮ! ಸೇನಾಪತಿಯನ್ನಾಗಿಸಿ, ದೊಡ್ಡಸ್ತಿಕೆಯನ್ನಿತ್ತರೆಂದು ಇಲ್ಲದ ಸಲ್ಲದ ಮಾತನ್ನಾಡಿ, ನನ್ನನ್ನು ಅರ್ಧರಥನೆಂದೆ! ನನ್ನಲ್ಲಿ ಯಾವ ಲೋಪವನ್ನು ಕಂಡು ಇಂತಾಡಿದೆ? ಹೇಳು! ದುರ್ಯೋಧನನ ಕಡೆ ನೋಡಿ ಸುಮ್ಮನಿರಬೇಕಾಗಿದೆ; ಕೇಳು ! ನಿಜ ವಿಚಾರಿಸಿ ನೋಡಲು ಬಲ ವೀರ್ಯಗಳಿಂದ ನನಗೆ ಸಮನಲ್ಲದ ನೀನೇ ಅರ್ಧ ರಥನು.' ಎಂದು ಪಿತಾಮಹನನ್ನು ನಿಂದಿಸಿ, ಕರ್ಣನು ಸಭಿಕರಿಗಿಂತೆಂದನು—'ಇವನನು ಹಿತಕರನೆಂದು ನಂಬಿ ರಾಜರಾಜನು ಕೆಟ್ಟನು. ಇವನಾಡಿದ ನುಡಿಗಳು ಕಿಡಿಗಳಾಗಿ ನಮ್ಮ ಮನವನ್ನು ನೋಯಿಸುತ್ತಿವೆ. ಹೆಚ್ಚು ಕಮ್ಮಿ ಎಂದು ನುಡಿದು ನಿಂಗಡಿಸುವ ವಿವೇಕ!ಈ ಮುದಿಗೊಡ್ಡಿಗಿದೆಯೇ ? ವೃದ್ಧ ಜನರ ಮಾತನ್ನು ಆದರಿಸಿ ಕೇಳಬೇಕು ನಿಜ ! ಆದರೆ ಮುದಿಯಾಗಿ ಮತಿಗೆಟ್ಟು ಬಾಯಿಗೆ ಬಂದಂತೆ ಮಾತನಾಡುವ ಹುಚ್ಚನಂತೆ ನಡೆದರೆ ನಾವೂ ಹುಚ್ಚರಾಗಿ ಕೆಡುವಂತಾದೀತು ! ದುಷ್ಟಬುದ್ಧಿಯಾದ ಶಾಂತನವನು ಮಹಾನುಭಾವರಾದ ರಾಜನ್ಯರನ್ನು ಅವಗಣಿಸಿ, ಪರಸ್ಪರ ಭೇದವನ್ನು ಪುಟ್ಟಿಸಿ, ಕಾರ್ಯವನ್ನು ಕೆಡಿಸಿಬಿಟ್ಟನು. ಇವನು ಪಾಂಡವ ಪಕ್ಷಪಾತಿಯಾಗಿ, ನಮಗೆ ದ್ರೋಹವನ್ನು ಬಗೆಯುತ್ತಿರುವನು. ಇಂತಹವನು ಸೇನಾನಾಯಕನಾಗಿರಲು, ಇವನಿಗೆ ವಿಧೇಯರಾಗಿ ಮಹಾರಾಜರು ಸರಿಯಾಗಿ ಯುದ್ಧವಾಡರು. ದುರಭಿಮಾನಿ ಯಾಗಿ, ಪರನಿಂದೆಗೈವನೆಂದೇ ನಾನು, ಇವನು ಜೀವಂತನಿರುವವರೆಗೂ ಯುದ್ಧ ವಾಡೆನೆಂದು ಪ್ರತಿಜ್ಞೆ ಮಾಡಿದೆನು. ಇವನಿಂದಾಗುವ ಮಹಾಲಾಭವೂ ಇಲ್ಲ ! ಇವನಿಲ್ಲದಿರೆ ದುರ್ಯೋಧನನಿಗೆ ನಷ್ಟವೂ ಇಲ್ಲ.'

ಭೀಷ್ಮನು 'ಕರ್ಣ! ನಾನು ಮುದುಕನು ನಿಜ! ಆದರೆ ನನ್ನ ಛಲ-ಬಲಗಳನ್ನು ವಿವಿಧಾಸ್ತ್ರಶಸ್ತ್ರಪಾಂಡಿತ್ಯವನ್ನು ಕಡೆಗಣಿಸಬೇಡ! ನಿನ್ನ ಗುರುವೂ ಆದ ಭಾರ್ಗವ ರಾಮನರಿತಿಹನು ನನ್ನ ರಣರಂಗ ಸಾಮರ್ಥ್ಯವನ್ನು! ನನ್ನನ್ನು ಕೆಣಕಿ ಕಾದಿದವ ರೇನಾದರೆಂದು ಜಗವೆಲ್ಲವು ಅರಿತಿಹುದು. ನಿನಗೆ ತಿಳಿಯದಿದ್ದರೇನಾಯಿತು? ನಾಳೆ ರಣಭೂಮಿಯಲ್ಲಿ ಅರ್ಜುನನು ಬಂದು ಮುತ್ತಿದಾಗ ನನ್ನ ಮುದಿಗೊಡ್ಡುತನ ದಂತೆಯೇ ನಿನ್ನ ಮಹಾ ಪರಾಕ್ರಮವೂ ಬಯಲಾದೀತು ! ದುರ್ಜನಿತನಾದ ನಿನ್ನ ಕೆಡುನುಡಿಗೆ ರೇಗಿ ಸಭೆಯಲ್ಲಿ ನನ್ನನ್ನು ನಾನು ಹೇಳಿ ತಿಳಿಸಬೇಕಾಯಿತಾಗಲಿ, ನಾನು ಬರಿಯ ಮಾತಿನವನಲ್ಲ. ನಿನ್ನ ತಲೆಯ ಮೇಲೆ ಕಾರ್ಯಭಾರವನ್ನಿಟ್ಟು, ಕೈಗೆ ಖಡ್ಗವನ್ನು ಕೊಟ್ಟು ಕೌರವರು ಕೆಟ್ಟರು. ನಿನ್ನಿಂದಾಗುತ್ತಿರುವ ಮಹಾನರ್ಥ ವನ್ನು ನಿವಾರಿಸಲಾರದೆ, ನಿಂತು ಸಾಯಲಿರುವ ವೀರರಿಗೆ ನಿನ್ನ ಸಹಾಯ ಬೇಕಾಗಿಲ್ಲ. ನೆವದಿಂದ ರಣವನ್ನು ಬಿಟ್ಟ ಗುಪ್ತಶತ್ರುವು ನೀನು. ದೊಡ್ಡವರೆಲ್ಲ ಮಡಿಯಲಿ ! ಆಗ ಸಾಯದೆ ಉಳಿದಿರುವವರಿಂದ ಕೂಡಿ ಕಾದಾಡು! ನಿನ್ನ ರಣವಿಹಾರದ ಚಂದ

ವನ್ನು ನೋಡಿ ನಿನ್ನ ಸ್ನೇಹಿತನು ಆನಂದಪಡಲಿ! ದುರ್ಯೋಧನನಿತ್ತ ಭಾರವನ್ನು ಪೊತ್ತು ಕೆಲಸವನ್ನು ಕೆಡಿಸಬಾರದೆಂದು ಸುಮ್ಮನಿರಬೇಕಾಗಿದೆ. ಇಲ್ಲದಿರೆ ನೀನೆಂದೋ ಅಂತಕನ ಅತಿಥಿಯಾಗುತ್ತಿದ್ದೆ. ಸಾಕು ಸುಮ್ಮನಿರು!' ಎಂದು ಸಿಟ್ಟಾಗಿ ಕೂತನು.

ದುರ್ಯೋಧನನು ಖಿನ್ನನಾಗಿ ಭೀಷ್ಮನನ್ನು ಸಮೀಪಿಸಿ, ಕೈಮುಗಿದು 'ತಾತ! ನೀನು ಸಿಟ್ಟಾದರೆ ಕಾರ್ಯವು ಕೆಡುವುದಿಲ್ಲವೆ? ನನ್ನ ಕಡೆ ನೋಡಿ ಎಲ್ಲವನ್ನೂ ಸಹಿಸು!' ಎಂದು ಸಮಾಧಾನಪಡಿಸಿದನು ಮತ್ತು ಅಂಗರಾಜನನ್ನು ಕಂಡು 'ಮಿತ್ರ! ನಮ್ಮನಮ್ಮಲ್ಲಿ ಜಗಳವಾಡುವುದುಚಿತವಲ್ಲ. ನೀವೀರ್ವರೂ ನನಗೆ ಹಿತರು. ಕಲೆತು ಕಾರ್ಯಸಾಧಕರಾಗಬೇಕಲ್ಲದೆ, ನಿಂದಾವಚನಗಳಿಂದೇನು ಪ್ರಯೋಜನ?' ಎಂದು ಅವನನ್ನು ಸುಮ್ಮನಾಗಿಸಿದನು.

'ತಾತ! ಈಗ ಪಾಂಡವರ ಕಡೆ ಇರುವ ಅತಿರಥಾದಿಗಳನ್ನು ಹೇಳು!' ಎಂದು ಕೇಳಿದ ದುರ್ಯೋಧನನಿಗೆ ಭೀಷ್ಮನು 'ಅಯ್ಯಾ! ಪಾಂಡುಪುತ್ರರ ಪಕ್ಷದ ವೀರರ ತಾರತಮ್ಯಗಳನ್ನು ನಿಜವಾಗಿ ವಿವರಿಸಿದೊಡನೆ, ಕರ್ಣನು ನೊಂದು ನಿಂದಿಸುವನು; ನಿನ್ನ ಚಿತ್ತವೆಂತಾಗುವುದೋ ನಾನರಿಯೆ. ನನ್ನ ಕೆಲಸ ನನಗೆ! ನನಗೇಕೆ ಇಲ್ಲದ ಸಲ್ಲದ ಸಲ್ಲಾಪ?' ಎಂದನು. ದುರ್ಯೋಧನನು ಬಲಾತ್ಕರಿಸಲು, ಭೀಷ್ಮನು 'ಸರಿ! ಕೇಳೆ'ಂದು ಪಾಂಡವರ ಬಲಾಬಲಗಳನ್ನು ಇಂತು ವರ್ಣಿಸಿದನು—

'ರಾಜನ್! ಧರ್ಮರಾಜನು ಅತಿರಥನು. ಆಹವದಲ್ಲಿ ಅವನು ಚಂಡ ಯಮನೆಂದು ತಿಳಿ! ಭೀಮಸೇನನ ಬಲವನ್ನು ಅಳೆಯಲು ಯಾರಿಂದಲೂ ಆಗದು. ಅವನು ಅತಿರಥ ಶ್ರೇಷ್ಠನು. ಅವನ ಬಲವು ಅಮಾನುಷವು; ವಿಕ್ರಮವು ಅಸಮಾನವು; ವೇಗವು ದುರ್ನಿವಾರವು; ಗದಾಯುದ್ಧದಲ್ಲಿ ಆತನಿಗೆ ಸಮರಿಲ್ಲ. ಸಾಯಕ ಯುದ್ಧದಲ್ಲೂ ಅವನಿಗೆದುರಿಲ್ಲ. ನಕುಲ-ಸಹದೇವರು ಅತಿರಥರೇ. ಅರ್ಜುನನೆಂತಹ ವೀರನೆಂದು ನಿಷ್ಕರ್ಷಿಸಿ ಹೇಳಲು ಸಾಧ್ಯವಲ್ಲ. ಅವನು ಅತಿರಥ ಶ್ರೇಷ್ಠನು; ದುರ್ವಾರವೀರ್ಯನಾದ ಪಾರ್ಥನಿಗೆ ಶ್ರೀಕೃಷ್ಣನು ಸಾರಥಿಯಾಗಿ ರಕ್ಷಿಸುತ್ತಿರುವನು. ಏನು ಹೇಳಲಿ! ಕಿಚ್ಚಿಗೆ ಗಾಳಿ ಜೋಡಾದಂತೆ ಉರಿದೆದ್ದು ಬರುವ ಗಾಂಡೀವಧಾರಿಯು ಪರಸೇನಾಕಕ್ಷವನ್ನು ಸುಟ್ಟು ನಾಶಮಾಡುವನು. ತನ್ನವರನ್ನೂ ರಕ್ಷಿಸಿಕೊಳ್ಳುವನು. ಪಾಂಡವವೀರರು ವೀರ್ಯವಂತರು ಮಾತ್ರವಲ್ಲ; ಅವರಲ್ಲಿ ಧರ್ಮವಿದೆ; ತಪಸ್ಸಿದೆ; ಅಸ್ತ್ರ ಸಮೂಹವಿದೆ; ಪಟ್ಟಬನ್ನಗಳ ನೆನಪಿದೆ; ಪ್ರತಿಜ್ಞೆಗಳನ್ನು ಸಲ್ಲಿಸುವ ಕೆಚ್ಚಿದೆ. ಆದರೂ ನನ್ನ ಶಕ್ತಿಗೆ ಮೀರಿ ಅವರೊಡನೆ ಕಾದು, ಅವರ ಸೈನ್ಯವನ್ನು ನಾಶ ಮಾಡುವೆನು.

'ಇನ್ನು ದ್ರೌಪದೇಯರೈವರೂ ಮಹಾರಥರು; ಉತ್ತರನೂ ಅಂತೆಯೇ; ಅಭಿಮನ್ಯುವು ಅತಿರಥವರನು; ಅವನು ಅರ್ಜುನ ವಾಸುದೇವರಂತೆ ಮಹಾವೀರನು; ಸಾತ್ಯಕಿಯು ಅತಿರಥೋತ್ತಮನು. ಶೌರ್ಯಘನನಾದ ಯುಯುಧಾನ(ಸಾತ್ಯಕಿ)ನು ಭಯಂಕರವಾಗಿ ಹೋರಾಡುವನು. ದ್ರುಪದ ವಿರಾಟರು ವೃದ್ಧರಾದರೂ ದುರ್ಧರ

ಪರಾಕ್ರಮರು, ಮಹಾರಥರು. ಧೃಷ್ಟದ್ಯುಮ್ನನು ಉಗ್ರ ತೇಜೋ ವಿರಾಜಿತನು; ಅವನು ಅತಿರಥನು. ಅವನ ಸುತನಾದ ಧೃತವರ್ಮನು ಬಾಲ್ಯದಿ ನೈಮುರಿಯದೆ ಅಭ್ಯಾಸಹೀನನಾಗಿ ಅರ್ಧರಥನೆನಿಸಿರುವನು. ಶಿಶುಪಾಲಸುತನಾದ ಧೃಷ್ಟಕೇತುವು, ಭೋಜ, ಅಜ, ಉತ್ತಮೌಜ, ಯುಧಾಮನ್ಯು, ಕ್ಷತ್ರದೇವ, ಜಯಂತ, ಸತ್ಯಜಿತ ಮುಂತಾದ ಪಾಂಚಾಲ ರಾಜಸುತರು ಮಹಾರಥರು. ಪಂಚಕೇಕಯರು ಮಹಾರಥರು. ಕಾಶಿರಾಜ, ಸೂರ್ಯದತ್ತ, ಮದಿರಾಕ್ಷ, ಶಂಖ, ಚೇಕಿತಾನ, ಚಿತ್ರಾಯುಧರೂ ಮಹಾರಥರು. ಸೇನಾಬಿಂದುರಾಜನು ಅತಿರಥೋತ್ತಮನು. ಪಾಂಡ್ಯನು ಅತಿರಥನೇ! ಕಾಶ್ಯನು ಸಮರಥನು. ಅತಿರಥರಲ್ಲಿ ಶ್ರೇಷ್ಠನೆನಿಸುವ ಘಟೋತ್ಕಚನು ಮಾಯಾ ಯುದ್ಧವಿಶಾರದನೂ ಆಗಿರುವನು. ಅವನ ರಾಕ್ಷಸ ಬಲವೂ ಭಯಂಕರವಾಗಿದೆ. ಇನ್ನು ಶಿಖಂಡಿಯು ಮಹಾರಥನು; ಅವನನ್ನು, ಪಾಂಡವರನ್ನೈವರನ್ನೂ ಬಿಟ್ಟು, ವಿಕ್ಕಸೇನೆಯನ್ನು ಲೆಕ್ಕಿಸದೆ ಸೊಕ್ಕು ಮುರಿದು ನಾಶಪಡಿಸಬಲ್ಲೆನು.'

## ಅಂಬೋಪಾಖ್ಯಾನ

ಸಂಜಯನು ಧೃತರಾಷ್ಟ್ರನಿಗೆ ನಿರೂಪಿಸಿದನು—

ದುರ್ಯೋಧನನು ಮತ್ತೆ ಭೀಷ್ಮನನ್ನು ನೋಡಿ 'ತಾತ! ಶಿಖಂಡಿಯನ್ನೇಕೆ ಸಂಹರಿಸಲಾರೆ? ರಹಸ್ಯವಲ್ಲದಿರೆ ನನಗೆ ಅವನ ವೃತ್ತಾಂತವನ್ನು ಹೇಳು' ಎಂದನು.

ಭೀಷ್ಮನು 'ರಾಜನ್! ಶಿಖಂಡಿಯನ್ನು ನಾನು ಸಂಹರಿಸುವುದಂತಿರಲಿ, ಅವನನ್ನು ನೋಡಿದೊಡನೆ ಶಸ್ತ್ರಗಳನ್ನು ಬಿಟ್ಟು ಸುಮ್ಮನೆ ಕೂತುಬಿಡುವೆನು. ಇದು ನನ್ನ ಪ್ರತಿಜ್ಞೆ. ಶಿಖಂಡಿಯ ಕಥೆ ಬಹಳವಿದೆ. ಕೇಳು!

'ನಮ್ಮ ತಂದೆ ಶಂತನು ರಾಜನು ನಿವೃತ್ತನಾಗಲು, ಸತ್ಯವತೀದೇವಿಯ ಅಪ್ಪಣೆ ಪಡೆದು ಚಿತ್ರಾಂಗದನಿಗೆ ಪಟ್ಟಗಟ್ಟಿದೆನು. ಅವನು ಸನಾಮನಾದ ಯಕ್ಷನೊಡನೆ ಕಾದು ಮೃತನಾದನು. ಆಗ ವಿಚಿತ್ರವೀರ್ಯನಿಗೆ ಪಟ್ಟಗಟ್ಟಿ, ಅವನ ಮದುವೆ ಮಾಡಬೇಕೆಂದು ನಿಶ್ಚಯಿಸಿದೆನು.

'ಆಗ ಕಾಶೀರಾಜನು ತನ್ನ ಸುತೆಯರ ಸ್ವಯಂವರವನ್ನು ನಡೆಸಿದ್ದನು. ಅದನ್ನರಿತು ನಾನು ಅಮ್ಮನ ಅನುಮತಿಯಿಂದ ಅಲ್ಲಿಗೆ ಹೋಗಿ ಅಲಂಕೃತೆಯರಾಗಿ ಸ್ವಯಂವರ ಮಂದರದಲ್ಲಿದ್ದ ಅಂಬಾ, ಅಂಬಿಕಾ, ಅಂಬಾಲಿಕಾ ಎಂಬ ಆ ಕನ್ಯೆಯರನ್ನು ರಥದಲ್ಲಿ ಕೂಡಿಸಿಕೊಂಡು ಎಲ್ಲ ರಾಜರನ್ನೂ ಸೋಲಿಸಿ ಕರೆತಂದೆನು. ಸತ್ಯವತಿಯು ಅವರನ್ನಿತ್ತು ವಿಚಿತ್ರವೀರ್ಯನ ವಿವಾಹವನ್ನು ನಡೆಸಲೆಣಿಸಿದಾಗ, ಅವರಲ್ಲಿ ಅಂಬೆ ಎಂಬವಳು 'ಭೀಷ್ಮ! ನಾನು ಸಾಲ್ವರಾಜನನ್ನು ಮನಸಾ ವರಿಸಿರುವೆನು. ಅವನೂ ನನ್ನಲ್ಲಿ ಅನುರಕ್ತನಾಗಿರುವನು. ಧರ್ಮತತ್ಪರನಾದ ನೀನು ಸಾಲ್ವನಲ್ಲಿಗೆ ನನ್ನನ್ನು ಕಳಿಸಿಕೊಡು' ಎಂದು ಬೇಡಿದಳು. ಅಂತೆಯೇ ಮಾಡೆಂದ ಸತ್ಯವತೀದೇವಿಯ ಮಾತಿನಂತೆ ನಾನು ಅಂಬೆಯನ್ನು ವೃದ್ಧ ವಿಪ್ರರಿಂದಲು ಸ್ತ್ರೀ ಜನ ಪರಿವಾರದಿಂದಲು

ಕೂಡಿಸಿ ಸಾಲ್ವನಲ್ಲಿಗೆ ಕಳಿಸಿದೆನು. ಅಂಬಿಕಾಂಬಾಲಿಕೆಯರನ್ನು ವಿಚಿತ್ರವೀರ್ಯ ನಿಗಿತ್ತು ವಿವಾಹಮಾಡಿದೆನು.

'ಅಂಬೆಯು ಸಾಲ್ವನನ್ನು ಸೇರಿ ತನ್ನನ್ನು ಸ್ವೀಕರಿಸೆಂದು ಬೇಡಿದಳು. ಅವನು 'ಭೀಷ್ಮನು ಕೊಂಡುಹೋದ ನಿನ್ನನ್ನು ನಾನು ಮದುವೆಯಾಗಲಾರೆನು. ನಿನ್ನ ಕನ್ಯಾತ್ವವೇ ನಷ್ಟವಾಯಿತು. ಹೋಗು ಅವನಲ್ಲಿಗೆ' ಎಂದನು. ಅಂಬೆಯು ಕಾಮ ಶರಪೀಡಿತಳಾಗಿ 'ರಾಜವರ! ಭೀಷ್ಮನು ತನ್ನ ತಮ್ಮನಿಗೆಂದು ನಮ್ಮನ್ನು ಕೊಂಡು ಹೋದನು, ತನಗೆಂದಲ್ಲ. ನಾನು ಹೇಳಲು ತಿಳಿದು ನಿನ್ನವಳಾದ ನನ್ನನ್ನು ಇಲ್ಲಿಗೆ ಕಳಿಸಿರುವನು. ನಾನು ಶುದ್ಧಳಾಗಿರುವೆನು. ನನ್ನ ಕೈ ಬಿಡಬೇಡ!' ಎಂದು ದೀನ ಳಾಗಿ ಬೇಡಿದಳು. ಎಷ್ಟು ಹೇಳಿದರೂ ಕೇಳದೆ ಸಾಲ್ವನು ಕಣ್ಣೀರಿಟ್ಟು ಅಳುವ ತಲೋದರಿಯನ್ನು ಹೊರದೂಡಿಸಿದನು. ಅವಳು ದುಃಖಪರೀತಳಾಗಿ, 'ಹಾ! ಸಾಲ್ವನಿಗಾಗದ ಸಂಸಾರವೆನಗೇಕೆ? ಭೀಷ್ಮನಲ್ಲಿಗೂ ಹೋಗಲಾಗದು. ನಾನಾಗಿ ಬಿಡಿಸಿಕೊಂಡು ಬಂದು, ಮತ್ತೆ ಹೋದರೆ ಅವನು ನನ್ನನ್ನು ಸ್ವೀಕರಿಸುವನೆ? ಅವನು ನನ್ನನ್ನು ಅಪಹರಿಸದಿದ್ದರೆ ಇಂತಹ ಅನರ್ಥವಾಗುತ್ತಿತ್ತೆ? ನಾನೇಕೆ ರಥದಿಂದ ಧುಮುಕಿ ಸಾಲ್ವನನ್ನು ಸೇರಲಿಲ್ಲ? ನನಗೆಂತಹ ಕೆಡುಬುದ್ಧಿ ಬಂತು! ಈಗೇನು ಮಾಡಲಿ? ಭೀಷ್ಮನೇ ನನ್ನ ಜೀವನವನ್ನು ಹಾಳುಮಾಡಿದವನು. ಅವನನ್ನು ಸಂಹರಿಸುವವರೆಗೂ ನನಗೆ ಸಮಾಧಾನವಿಲ್ಲ. ಬಲದಿಂದ ಅವನನ್ನು ಗೆಲ್ಲಲಾಗದೆಂದ ಮೇಲೆ ತಪವನ್ನು ಗೈದು ತಪೋಬಲದಿಂದ ಸಂಹರಿಸುವೆನು' ಎಂದು ಚಿಂತಿಸಿ, ತವರೂರನ್ನು ತ್ಯಜಿಸಿ, ಒಂದು ಋಷ್ಯಾಶ್ರಮವನ್ನು ಸೇರಿದಳು. ಅವರು ಅವಳ ವೃತ್ತಾಂತವನ್ನರಿತು ಅನುತಾಪಪಟ್ಟರು. 'ಅಂಬ! ರಾಜರು ಮಾಡಿದ ಕೇಡನ್ನು ಸಾಧುಜನರು ತೀರಿಸುವರೆ? ನೀನು ಸುಕುಮಾರಿಯಾಗಿರುವೆ! ತಪಸ್ಸನ್ನು ಮಾಡಲಾರೆ! ನಿಮ್ಮ ತಂಡೆಯ ಮನೆಗೆ ಹೋಗು' ಎಂದರು.

'ಅಂಬೆ ತಪಶ್ಚರಣದಲ್ಲಿ ಮನಮಾಡಿ, ಅಲ್ಲೇ ಇರಲು ನಿಶ್ಚಯಿಸಿದಳು. ಆ ಸಮಯದಲ್ಲಿ ಹೋತ್ರವಾಹನನೆಂಬ ರಾಜರ್ಷಿಯು ಅಲ್ಲಿಗೆ ಬಂದನು. ಋಷಿಗಳಿತ್ತ ಅಭ್ಯಾಗತ ಸತ್ಕಾರವನ್ನು ಸ್ವೀಕರಿಸಿ, ಹೋತ್ರವಾಹನನು ಅವರಿಂದ ಅವಳ ವೃತ್ತಾಂತ ವನ್ನರಿತು, ಅಂಬೆಯು ತನ್ನ ಮಗಳ ಮಗಳೆಂದು ಮನಗಂಡನು. ಅವಳನ್ನು ಕರೆದು ಮಮತೆಯಿಂದ ಲಾಲಿಸಿ, ಎಲ್ಲ ವೃತ್ತಾಂತವನ್ನು ವಿಸ್ತಾರವಾಗಿ ಕೇಳಿ ತಿಳಿದನು. ಅಂಬೆ! ನಿನಗೇಕೆ ತಪದ ಕಷ್ಟ? ನನ್ನ ಮಾತಿನಂತೆ ನಡೆದರೆ ನಿನ್ನ ಅಭೀಷ್ಟವು ನೆರವೇರುವುದು. ಆಶ್ರಿತವತ್ಸಲನಾದ ಭಾರ್ಗವರಾಮನು ಭೀಷ್ಮನ ಗುರುವಾಗಿರು ವನು. ಆ ಮಹಾನುಭಾವನು ಮಹೇಂದ್ರಪರ್ವತದಲ್ಲಿ ತಪಸ್ಸನ್ನಾಚರಿಸುತ್ತಿರುವನು. ನನ್ನಲ್ಲಿ ಆತನಿಗೆ ಸಖ್ಯವಿದೆ. ನನ್ನ ದೌಹಿತ್ರಿಯಾದ ನಿನ್ನನ್ನು ಆತನು ರಕ್ಷಿಸದೆ ಬಿಡನು' ಎಂದು ಹೇಳಿದನು.

'ಅದೇ ವೇಳೆಯಲ್ಲಿ ಪರಶುರಾಮನ ಶಿಷ್ಯನಾದ ಅಕೃತವ್ರಣನೆಂಬ ಮುನಿಯು ಅಲ್ಲಿಗೆ ಬಂದನು. ಅತಿಥಿ ಸತ್ಕಾರವನ್ನು ಸ್ವೀಕರಿಸಿ, ಹೋತ್ರವಾಹನನನ್ನು ನೋಡಿ ಅಕೃತವ್ರಣನು 'ರಾಜರ್ಷೀ! ನೀನು ತನ್ನ ಪ್ರಿಯಸಖನೆಂದು ಶ್ರೀಭಾರ್ಗವನು ಮುನಿಜನರಿಗೆ ಪೇಳುತ್ತಿರುವನು. ಆ ಸರ್ವಜ್ಞನು ನಿನ್ನನ್ನು ನೋಡಲೆಂದೇ ಹೊರ ಟಿರುವನು. ನಾಳೆ ಶಿಷ್ಯಸಮೇತನಾದ ನಮ್ಮ ಗುರುವರನನ್ನು ನೀನಿಲ್ಲಿ ಕಾಣುವೆ!' ಎಂದನು. ಆ ಮಾತನ್ನಾಲಿಸಿ ಎಲ್ಲರೂ ಪರಮಾನಂದಭರಿತರಾದರು.

'ಮರುದಿವಸ ಭಾರ್ಗವರಾಮನು ಅನೇಕ ಶಿಷ್ಯರಿಂದ ಕೂಡಿ ಅಲ್ಲಿಗೆ ಬಂದನು. ಋಷಿಗಳಾ ಮುನಿಚಂದ್ರನನ್ನು ಆದರದಿಂದ ಪೂಜಿಸಿ, ಬೃಸ್ಯಾಸನದಿ ಕೂಡಿಸಿದರು. ಶ್ರೀಭಾರ್ಗವನು ಹೋತ್ರವಾಹನನಿಂದ ಕೂಡಿ ಮಾತಾಡಿ, ಸಂತೋಷವಾಗಿದ್ದನು. ಆಗ ಹೋತ್ರವಾಹನನು 'ಮಹಾನುಭಾವ! ಇದಿಗೋ ಇವಳು ನನ್ನ ದೌಹಿತ್ರಿ ಅಂಬೆ ಎಂಬರಿವಳನ್ನು' ಎಂದು ಅವಳ ವೃತ್ತಾಂತವನ್ನೆಲ್ಲ ವಿವರಿಸಿ ತಿಳಿಸಿದನು. ಆಗ ಅಂಬೆಯು ಬಾಷ್ಪಾಕುಲನೇತ್ರಳಾಗಿ, ಬಂದು ಶಿರಬಾಗಿ ಭಾರ್ಗವನಿಗೆ ನಮಿಸಿ, ತನ್ನ ಕರುಣ ಕಥೆಯನ್ನು ವಿಜ್ಞಾಪಿಸಿದಳು. ಆ ಮಹಾತ್ಮನು ಆರ್ತಶರಣ್ಯನೆಂದು ನಂಬಿ ಕಾಲಿಗೆ ಬಿದ್ದ ರಾಜಪುತ್ರಿಯನ್ನು ನೋಡಿ, 'ವತ್ಸೇ! ನಿನಗೆ ಸಾಲ್ವನೂ ಪಂಭವ ಕಾರಣನಾಗಿರುವನು. ಭೀಷ್ಮನೂ ನಿನಗೆ ಅಪರಾಧವೆಸಗಿರುವನು. ಯಾರನ್ನು ಶಿಕ್ಷಿಸಲಿ ಹೇಳು? ಸಾಲ್ವನನ್ನು ನಿನ್ನಿಂದ ಕೂಡಿಸಲೋ, ಅಥವಾ ಭೀಷ್ಮನನ್ನು ದಂಡಿಸಲೊ? ನಿನ್ನ ಮನೋಗತವನ್ನು ಹೇಳು!' ಎಂದನು. ಅಂಬೆಯು— 'ಸ್ವಾಮೀ! ಸಾಲ್ವನಿನ್ನು ನನ್ನ ಕಡೆ ಕಣ್ಣೆತ್ತಿ ನೋಡನು. ನನ್ನನ್ನೀ ಸ್ಥಿತಿಗೆ ತಂದ ಭೀಷ್ಮನನ್ನು ಕೊಂದಲ್ಲದೆ ನನ್ನ ಮನಸ್ಸಿಗೆ ಶಾಂತಿ ಇಲ್ಲ. ತಪವನ್ನು ಮಾಡಿ ತಪೋ ಬಲದಿ ಆವನನ್ನು ಕೊಲ್ಲಲೆಂದೇ ಇಲ್ಲಿಗೆ ಬಂದೆನು. ಇಂದು ನಿನಗೆ ಶರಣಾಗಿ ಬೇಡು ವುದೊಂದೇ. ಭೀಷ್ಮನನ್ನು ಶಿಕ್ಷಿಸು. ನನ್ನ ಪರಾಭವಾಗ್ನಿಯನ್ನಾರಿಸು.' ಎಂದು ಅಳತೊಡಗಿದಳು.

'ಶ್ರೀ ಭಾರ್ಗವನಾಗ ಅಂಬೆಯನ್ನು ಸಮಾಧಾನಪಡಿಸಿ, 'ಕೇಳು! ನಿನ್ನನ್ನು ತನ್ನ ತಮ್ಮನಿಗಾಗಿ ಸ್ವೀಕರಿಸುವಂತೆ ಭೀಷ್ಮನಿಗೆ ಹೇಳುವೆನು. ಶಿಷ್ಯನಾದುದರಿಂದ ಭೀಷ್ಮನು ನನ್ನ ಮಾತಿಗೆ ಬದಲಾಡನು. ಮುಂದಾದರೂ ಭೀಷ್ಮನು (ವಸು) ನಿನ್ನನ್ನು ಸ್ವೀಕರಿಸುವಂತೆ ಮಾಡುವೆನು. ಒಂದು ವೇಳೆ ಮೀರಿದರೆ, ಕಟ್ಟಿಟ್ಟ ಶಸ್ತ್ರಾಸ್ತ್ರಗಳನ್ನು ಬಿಚ್ಚಿ, ಅವನ ಹುಚ್ಚು ಬಿಡಿಸುವೆನು ಚಿಂತಿಸಬೇಡ!' ಎಂದು ಅವಳನ್ನೂ ಕರೆದು ಕೊಂಡು ಕುರುಕ್ಷೇತ್ರವನ್ನು ಸೇರಿ, ಭೀಷ್ಮ (ನನಗೆ)ನಿಗೆ ಹೇಳಿಕಳಿಸಿದನು.

'(ನಾನು) ಮುನಿಜನಯುತನಾದ ಶ್ರೀಶನನ್ನು ಸರಸ್ವತೀ ತೀರದ ಕುರುಕ್ಷೇತ್ರಾ ಶ್ರಮದಲ್ಲಿ ಕಾಣಲು ಬಂದೆನು. ಪುರೋಹಿತಾಮಾತ್ಯರು ಹಿಂದೆ ಬರಲು, ತಂದ ಪೂಜಾ ದ್ರವ್ಯಗಳಿಂದ ಭಗವಂತನನ್ನು ಪೂಜಿಸಿದೆನು. ನನ್ನ ಭಕ್ತಿ ವಿನಯ ಸಂಭ್ರಮ ಗಳನ್ನು ಕಂಡು ಪ್ರೀತನಾಗಿ ಭಾರ್ಗವೇಶನು, ಅಂಬೆಯನ್ನು ಕರೆದು ತೋರಿಸಿ,

'ಭೀಷ್ಮ! ಇವಳನ್ನು ಬಲಾತ್ಕರಿಸಿ ತಂದು, ನೀನು ತಮ್ಮನಿಗೆ ಕೊಟ್ಟು ಮದುವೆ ಮಾಡದೆ ಕಳಿಸಲು ಕಾರಣವೇನು? ಈಗಲಾದರೂ ಇವಳನ್ನು ವಿಚಿತ್ರವೀರ್ಯನಿಗಿತ್ತು ವಿವಾಹಮಾಡು!' ಎಂದಾಜ್ಞಾಪಿಸಿದನು. ನಾನು 'ಸರ್ವಜ್ಞನಾದ ನಿನಗೆ ತಿಳಿಯದುದಿಲ್ಲ, ಕೇಳು! ಇವಳು ತಾನಾಗಿ ಸಾಲ್ವನನ್ನು ಸೇರಪೋದರೆ, ಇದರಲ್ಲಿ ನನ್ನ ತಪ್ಪೇನಿದೆ? ಸಾಲ್ವನನ್ನು ವರಿಸಿದ ಅಂಬೆಯನ್ನು ನನ್ನ ತಮ್ಮನಿಗೆಂತು ಮದುವೆಮಾಡಿಕೊಡಲಿ? ನಾನು ರಾಜ್ಯದೂರನಾಗಿ, ಆಜನ್ಮ ಬ್ರಹ್ಮಚಾರಿಯಾಗಿಯೂ ಇರಲು ಪ್ರತಿಜ್ಞೆಗೈದು ಅಂತೇ ಇರುವೆನು. ನಾನು ಇವಳನ್ನು ಸ್ವೀಕರಿಸುವುದಂತೂ ಆಗದ ಮಾತು' ಎಂದೆನು.

'ಭಾರ್ಗವನು ಸಿಟ್ಟಾಗಿ 'ಭೀಷ್ಮ! ನನ್ನ ಮಾತಿನಂತೆ ನಡೆಯುವಿಯೋ? ನಿನ್ನನ್ನೂ ನಿನ್ನ ಬಾಂಧವ ಮಿತ್ರರನ್ನೂ ಕೊಂದುಬಿಡಲೋ?' ಎಂದು ಕೇಳಿದನು. ನಾನು ವಿನಯದಿಂದ ಕೈಜೋಡಿಸಿ, 'ಗುರುವಾಗಿರುವೆ! ಸಮಗ್ರ ಕೋದಂಡ ಪಾಂಡಿತ್ಯವನ್ನು ದಯಪಾಲಿಸಿರುವೆ! ಮಹಾತ್ಮ! ಸುಮ್ಮನೆ ಸಿಟ್ಟಾಗಬೇಡ!' ಎಂದು ಬೇಡಿದೆನು. ಭಾರ್ಗವನು, 'ಗುರುವೆಂದೊಡೆ ನನ್ನ ಮಾತಿನಂತೆ ನಡೆ! ಇವಳನ್ನು ವಿಚಿತ್ರವೀರ್ಯನಿಗೆ ಕೊಡು! ಆಗ ನನ್ನ ಕೋಪವು ಅಡಗುವುದು. ಸಾವಿರ ಮಾತಾಡಬೇಡ!' ಎಂದನು. 'ಸ್ವಾಮೀ! ಇವಳು ಪರಾನುರಕ್ತಚಿತ್ತಳೆಂದು ಇವಳೇ ತಿಳಿಸಿರಲು, ಅವಳನ್ನು ಮನೆಗೆ ಸೊಸೆಯಾಗಿ ತರುವ ಅಕೃತ್ಯವೆನ್ನಿಂದಾಗದು. ಅದು ಅಧರ್ಮವೆಂದು ನಿನಗೆ ತಿಳಿಯದಿಲ್ಲ. ಅನ್ಯಾಯವಾದುದನ್ನು ಗುರುಗಳು ಹೇಳಿದರೂ ಶಿಷ್ಯರು ಕೇಳಬಾರದೆಂಬರು. ನನ್ನನ್ನು ಕ್ಷಮಿಸು!' ಎಂದು ನಾನು ಅಂಗಲಾಚಿದರೂ ನನ್ನ ಗುರುವರನಿಗೆ ದಯೆ ಬರಲಿಲ್ಲ. ಆತನು ಕಾಲಾನಲದಂತೆ ಉರಿದೆದ್ದು, ರಣಸಿದ್ಧನಾಗಿ ಬಾರೆಂದು ನನಗೆ ಆಜ್ಞಾಪಿಸಿದನು.

'ವಿಪ್ರರು ಅನ್ಯಾಯ ವಿಷಯದಲ್ಲಿ ಆಗ್ರಹಪಡಬಾರದು ಬರಿಯ ವಿಪ್ರನಲ್ಲಿ; ಗುರುವೂ ಆಗಿರಲು ನಾನು ಸಿಟ್ಟಾಗಬಾರದೆಂದು ಸುಮ್ಮನಿದ್ದರೂ ಬಿಡದೆ ರೇಗಿಸಿದ ಭಾರ್ಗವನಿಗೆ ನಾನು ನಮಿಸಿ, 'ದೇವ! ನಿನ್ನಾಜ್ಞೆಯಂತೆ ಕಾದಿ, ನೀನಿತ್ತ ಶಸ್ತ್ರಾಸ್ತ್ರಗಳನ್ನು ಬಳಸಿ, ನಿನ್ನಿಂದ ಸಂಹೃತನಾಗುವೆನಾಗಲಿ, ಅಧರ್ಮವನ್ನು ಮಾತ್ರ ಮಾಡಲಾರೆನು' ಎಂದು ಹಸ್ತಿನಾವತಿಗೆ ತೆರಳಿದನು. ಸತ್ಯವತೀದೇವಿಯ ಆಶೀರ್ವಾದವನ್ನು ಪಡೆದು ನಾನು ರಥಾರೂಢನಾಗಿ, ವಿಪ್ರಾಶೀರ್ವಾದಗಳನ್ನು ಪೊಂದಿ ಬಂದೆನು. ಆಗ ನನ್ನ ತಾಯಿ ಭಾಗೀರಥಿ, ಭಾಮಿನೀರೂಪದಿಂದ ಬಂದು, ನನ್ನನ್ನು ಅಭಿನಂದಿಸಿದಳು. ಹೊರಟ ಕಾರ್ಯವನ್ನರಿತು, ಆಕೆ ದಿಗಿಲಿನಿಂದ ಭಾರ್ಗವನಿಗೆ 'ಶಿಷ್ಯನನ್ನು ಕ್ಷಮಿಸೆ'ಂದು ವಿಜ್ಞಾಪಿಸಿದಳು. ನನಗೂ ರಣಕ್ಕಿಳಿಯಬೇಡವೆಂದು ಆಜ್ಞಾಪಿಸಿದಳು. ಅಲ್ಲಿ ಕ್ಷಮೆಯನ್ನೂ ಇಲ್ಲಿ ಮಾರ್ದವವನ್ನೂ ಕಾಣಲಾರದೆ ಭಾಗಿರಥಿಯು ನಿರ್ವಿಣ್ಣಳಾಗಿ ಹೊರಟುಹೋದಳು.

'ನಾನು ಜಮದಗ್ನಿ ಸುತನನ್ನು ಸೇರಿ, ಸ್ಯಂದನದಿಂದಿಳಿದು, ವಂದಿಸಿ ನಿಂತೆನು. ದಿವ್ಯ ರಥ ತುರಗಗಳು ಬಂದು ನಿಲ್ಲಲು ಶ್ರೀ ಭಾರ್ಗವನು ಶಸ್ತ್ರಾಸ್ತ್ರಧರನಾಗಿ ರಥಾರೋಹಣವನ್ನು ಮಾಡಿ ಅ ಕೃ ತ ವ್ರ ಣ ನು ಸಾರಥಿಯಾಗಿ ನಡೆಸಲು, 'ರಣಕಣಕ್ಕಿಳಿ' ಎಂದು ನನಗೆ ಆಜ್ಞಾಪಿಸಿದನು. ನಾನು ಮತ್ತೆ ವಿಜ್ಞಾಪಿಸಿದರೂ ಬಿಡದೆ, ಕಾದಲು ತೊಡಗಿದ ಭಾರ್ಗವರಾಮನ ಆಜ್ಞೆಯನ್ನು ಮನ್ನಿಸಿ, ರಥವನ್ನೇರಿ, ಆ ಮಹಾತ್ಮನಿಂದ ಬಂದ ಬಾಣಗಳನ್ನು ಮಧ್ಯೆ ತುಂಡರಿಸಿದೆನು. ಶ್ರೀ ಪರಶುರಾಮನು ಅರವತ್ತು ಬಾಣಗಳಿಂದ ನನ್ನನ್ನೂ ಸೂತನನ್ನೂ ಪೀಡಿಸಿದನು. ನಾನು ಒಂದು ಭಲ್ಲ ದಿಂದ ಆತನ ಬಿಲ್ಲನ್ನು ಮುರಿದೆನು. ಬಾಣವರ್ಷವನ್ನು ಸುರಿಸಿ ಆ ಮಹಾತ್ಮನನ್ನು ಪೀಡಿಸಿದಾಗ ಚಿಗುರೆಲೆಗಳಿಂದ ತುಂಬಿದ ಸಹಕಾರ ತರುವಿನಂತೆ, ಆತನು ರಕ್ತಗಾತ್ರ ನಾಗಿ ಶೋಭಿಸಿದನು. ಅದನ್ನು ಕಂಡು ನಾನು ನನ್ನನ್ನೇ ನಿಂದಿಸಿಕೊಂಡು, ಸುಮ್ಮ ನಾದೆನು. ಶ್ರೀರಾಮನು ಮತ್ತೆ ಬಾಣಗಳನ್ನು ಬಿಡತೊಡಗಿದನು. ನಾನು ವಾಯವ್ಯಾಸ್ತ್ರವನ್ನು ಪ್ರಯೋಗಿಸಲು, ಆತನು ಗುಹ್ಯಕಾಸ್ತ್ರದಿಂದ ಅದನ್ನು ವಾರಿಸಿ ದನು. ನನ್ನ ಅಗ್ನೇಯಾಸ್ತ್ರಾದಿಗಳನ್ನು ವರುಣಾಸ್ತ್ರಾದಿಗಳಿಂದ ನಿವಾರಿಸಿದನು. ದೇವತೆಗಳು ಅಂಬರದಿ ನಿಂತು ಗುರು-ಶಿಷ್ಯರ ಕಾಳಗವನ್ನು ನೋಡುತ್ತಿದ್ದರು. ರಾಮದೇವನೊಂದು ಬಾಣವನ್ನು ಬಿಟ್ಟಾಗ ಅದೆಂತಹದೋ ಏನೋ....! ನನ್ನ ಎದೆಗೆ ತಾಕಿ ನನ್ನನ್ನು ಮೂರ್ಛೆಗೊಳಿಸಿತು. ನನ್ನ ಸೂತನು ರಣಧರ್ಮವನ್ನನು ಸರಿಸಿ ರಥವನ್ನು ದೂರದಲ್ಲಿ ಕೊಂಡ್ಡುಪೋದನು. ಆಮೇಲೆ ತಿಳಿದು ನಾನು ಮತ್ತೆ ಭಾರ್ಗವನನ್ನು ಸೇರಿ ಕಾದಿದೆನು. ಇಂತು ಇಪ್ಪತ್ತೆರಡು ದಿನಗಳು ಕಳೆದವು.

'ಮರುದಿನ ಗುರುವು ಬಿಟ್ಟ ಶಕ್ತಿಪ್ರಾಸಾದಿಗಳನ್ನು ತುಂಡರಿಸಿ, ಆತನನ್ನು ಬಾಣ ಘಾತದಿಂದ ಮೂರ್ಛೆಗೊಳಿಸಿದೆನು. ಶ್ರೀಶನಿಗೆ ಭೇದ ಭೇದ ಮೂರ್ಛಾದಿಗಳಿಲ್ಲ. ಆದರೂ ಅದೆಂತಹ ವಾತ್ಸಲ್ಯವೋ, ಶಿಷ್ಯನ ಕೀರ್ತಿಯನ್ನು ಹರಡುವ ಹಂಬಲವೋ ಕಾಣೆ. ಆತನು ಮೂರ್ಛೆಪಟ್ಟವನಂತೆ ಇದ್ದು, ಮತ್ತೆ ಎಚ್ಚತ್ತು ಪ್ರಳಯಕಾಲಾನಲ ನಾಗಿ ಉರಿದೆದ್ದು, ನನ್ನ ಸೂತನನ್ನು ಸಂಹರಿಸಿದನು. ನಾನೂ ಮೂರ್ಛೆ ಬಂದು ರಥದಿ ಮಲಗಿದೆನು. ಆಗ ಎಂಟು ಜನರು ಋಷಿಗಳು ನನ್ನನ್ನು ಉಪಚರಿಸಿ ಎಚ್ಚರಿಸಿ ದರು. ಭಾಗೀರಥಿಯೇ ನನಗೆ ಸಾರಥಿಯಾಗಿರಲು ಅಂದು ಸೂರ್ಯಾಸ್ತಮಯವಾಗು ವವರೆಗೂ ಕಾದಿ, ಶ್ರಾಂತನಾದೆನು.

'ಅಂದು ರಾತ್ರಿ ಋಷಿಜನರೆಂಟು ಜನ ನನ್ನ ಸ್ವಪ್ನದಲ್ಲಿ ಬಂದು, 'ಭಯಪಡಬೇಡ! ಶ್ರೀರಾಮನನ್ನು ಜಯಿಸುವ ಅಸ್ತ್ರವನ್ನು ಸ್ವೀಕರಿಸು' ಎಂದು, ನನಗೆ ಮೋಹನಾಸ್ತ್ರ ವನ್ನು ಕೊಟ್ಟು ಮಾಯವಾದರು. ಮರುದಿನ ನಾನು ಯುದ್ಧಸನ್ನದ್ಧನಾಗಿ ಬರಲು ನೋಡಿ, ಭಾರ್ಗವನು 'ನಿನ್ನೆ ಅರ್ಧ ಸತ್ತೆ; ಇಂದು ಪೂರ್ತಿಯಾಗಿ ಸಾಯುವೆ! ಬಾ' ಎಂದು ಬಾಣಗಳಿಂದ ನನ್ನನ್ನು ನೋಯಿಸಿದನು. ನಾನೂ ಸೋಲದೆ ಬಾಣ ವರ್ಷದಲ್ಲಿ, ಆತನ ರಥ ಸಾರಥಿ ತುರಗಗಳನ್ನು ಮುಣುಗಿಸಿ, ಆರ್ಭಟಿಸಿದೆನು.

ಶ್ರೀರಾಮನು ಕುಪಿತನಾಗಿ ಬ್ರಹ್ಮಾಸ್ತ್ರವನ್ನು ಬಿಟ್ಟನು. ನಾನೂ ಬ್ರಹ್ಮಾಸ್ತ್ರವನ್ನು ಬಿಡಲು, ಅವೆರಡು ಮಹಾಸ್ತ್ರಗಳ ಹೋರಾಟದಲ್ಲಿ ಲೋಕವು ಪ್ರಳಯ ಬಂತೆಂಬಂತೆ ಅಲ್ಲೋಲಕಲ್ಲೋಲವಾಯಿತು. ಅದೇ ಸಮಯವೆಂದು ನಾನು ಮೋಹನಾಸ್ತ್ರವನ್ನು ಪ್ರಯೋಗಿಸಲೆಂದು ಬಿಲ್ಲಿನಲ್ಲಿಟ್ಟೆನು. ಆಗ ನಾರದನು, 'ನಿಲ್ಲು! ನಿಲ್ಲು! ಕುರುವಂಶ ವರ! ಗುರುವರನಿಗೆ ಅವಮಾನವನ್ನೆಸಗಬಾರದು. ನಿನಗೆ ಸರಿಯಾದ ವಿವೇಕ ವನ್ನೀಯಲು ಬಂದಿರುವ ಅಷ್ಟವಸುಗಳನ್ನು ನೋಡು! ಅವರ ಮಾತನ್ನು ಕೇಳು' ಎಂದನು.

'ಅಂತರಿಕ್ಷದಿಂದಿಳಿದು ಬಂದ ಎಂಟು ಋಷಿವರರು ನನ್ನನ್ನು ಕಂಡು 'ದೇವವ್ರತ! ತ್ರಿಲೋಕಪೂಜಿತನಾದ ನಾರದ ಮುನಿಯ ಮಾತಿನಂತೆ ಯುದ್ಧವನ್ನು ನಿಲ್ಲಿಸು! ಗುರುವಿಷಯದಿ ಕೋಪವು ಉಚಿತವಲ್ಲ' ಎಂದು ನಿಲ್ಲಿಸಿದರು. ಆಗ ಜಮದಗ್ನಿ ಮುಂತಾದ ದೇವಋಷಿಗಳು ಭಾರ್ಗವನನ್ನೂ ಸಮಾಧಾನಪಡಿಸಿದರು. 'ಭಾರ್ಗವ-ರಾಮ! ಶಿಷ್ಯನಲ್ಲೇಕೆ ಸಿಟ್ಟು? ಭೀಷ್ಮನು ವಸುವಿನ ಅಂಶಜಾತನಲ್ಲವೇ? ಅನನ್ಯ ಸಾಮಾನ್ಯ ತೇಜನು, ನಿನ್ನ ಶಿಷ್ಯನೂ ಆದ ಭೀಷ್ಮನನ್ನಿತರರು ಜಯಿಸಲಾಹುದೇ? ನಾವು ವಿಪ್ರರು; ನಮಗೆ ದೋಷಮತ್ಸರಗಳು ಕೂಡದು. ಬಿಡು ಸಮರವನ್ನು! ಶಿಷ್ಯನಾದ ಭೀಷ್ಮನು ಗುರುವಾದ ನಿನ್ನಲ್ಲಿ ದ್ರೋಹ ಮಾಡಿರುವುದರಿಂದ ನಿನಗೆ ಯಾವ ಹಾನಿಯೂ ಇಲ್ಲ. ಅವನೇ ಮುಂದೆ ತನ್ನ ಮೊಮ್ಮಗನಿಂದ ರಣರಂಗದಿ ಕೆಡಹಲ್ಪಟ್ಟು ಮೃತನಾಗುವನು. ಕರ್ಮಫಲವನ್ನು ಜೀವರು ಉಣ್ಣದಿರಲಾಗದು' ಎಂದು ನನಗೆ ಶಾಪವಿತ್ತರು; ಮತ್ತೂ ಅವರು ನನ್ನನ್ನೂ ಪರಶುರಾಮನನ್ನೂ ಅನುನಯಿಸಿ ಶಾಂತಪಡಿಸಿದರು. ಭಾಗೀರಥಿಯೂ ನನ್ನನ್ನು ದಂಡಿಸಿ, ಬ್ರಹ್ಮಾಸ್ತ್ರ ವನ್ನು ಉಪಸಂಹರಿಸುವಂತೆ ಮಾಡಿದಳು. ಶ್ರೀಶನೂ ತನ್ನ ಅಸ್ತ್ರವನ್ನು ಸಂಹರಿಸಿ, ಪ್ರಸನ್ನನಾದನು. ಅಷ್ಟದ್ವಿಜರೂಪ ವಸುಗಳು 'ಅಯ್ಯಾ! ಗುರುವು, ಬ್ರಹ್ಮ ಸ್ವರೂಪನು, ಅಕುಂಠಿತ ತೇಜನು ಆದ ಪರಶುರಾಮನಿಗೆ ಅಪರಾಧವನ್ನೆಸಗಿರುವೆ! ಹೋಗಿ ಆತನ ಕಾಲಿಗೆ ಬಿದ್ದು ಕ್ಷಮಿಸೆಂದು ಬೇಡು!' ಎಂದು ನನ್ನನ್ನು ಭಗವಂತನಲ್ಲಿಗೆ ಕರೆದುಕೊಂಡು ಪೋದರು.

'ಭಗವನ್! ದೇವವ್ರತನು ನಿನ್ನ ಪ್ರಿಯ ಶಿಷ್ಯನು. ಧರ್ಮವನ್ನು ಬಿಡಲಾರದೆ ಕಾದಾಡಿದನೆಂದು ಸರ್ವಜ್ಞನಾದ ನಿನಗೆ ತಿಳಿದೇ ಇದೆ. ಇವನು ನಿನ್ನ ವಿರೋಧಿ ಯಲ್ಲ. ನಿನಗೆ ಭೇದ ಮೋಹಾದಿಗಳೂ ಇಲ್ಲ. ಅಸುರಜನಮೋಹನಾರ್ಥವಾಗಿ ನಿನ್ನ ಲೀಲೆ! ಮುಂದಾಗುವ ವಿಪರೀತ ಫಲವನ್ನು ಕೊಡಲೆಂದೇ ಕರ್ಮಸ್ವಾಮಿ ಯಾದ ನೀನಿವನಿಂದ ಯುದ್ಧವಾಡಿಸಿದೆ. ಕರುಣಿಸು ಇವನಲ್ಲಿ!' ಎಂದು ಬೇಡಿದ ನಾರದಾದಿದೇವತೆಗಳ ಮಾತಿಗೆ ಪ್ರೀತನಾಗಿ ಭಾರ್ಗವದೇವನು, ಕಾಲಿಗೆರಗಿ ಕಣ್ಣೀರಿಡುವ ನನ್ನನ್ನೆತ್ತಿ ಬಿಗಿದಪ್ಪಿ, ಸಂಭಾವಿಸಿ, ಕ್ಷಮಿಸಿದನು.

'ಆ ಮಹಾನುಭಾವನು ಅಂಬೆಯನ್ನು ನೋಡಿ 'ಅಂಬ! ನನ್ನ ಕೈಲಾದಷ್ಟು ಪ್ರಯತ್ನಿಸಿದೆ. ಭೀಷ್ಮನಿಗೆ ನಾನು ಸೋತಿರುವೆನು. ನಿನಗೆ ತೋಚಿದಕಡೆ ಹೋಗು! ನಾನಿನ್ನೇನನ್ನೂ ಮಾಡಲಾರೆನೆ'ಂದನು. ಅಂಬೆಯು, 'ದೇವಾ! ನಿಜ! ನನ್ನ ಕರ್ಮ ಫಲವನ್ನು ನಾನು ಉಣ್ಣಬೇಕು. ನಿನ್ನಾಜ್ಞೆ ಪಡೆದು ನಾನು ತಪಸ್ಸನ್ನು ಮಾಡಲು ಪೋಗುವೆನು. ಈ ಜನ್ಮದಲ್ಲಲ್ಲದಿರೆ, ಮುಂದಿನ ಜನ್ಮದಲ್ಲಾದರೂ ಭೀಷ್ಮನನ್ನು ಕೊಲ್ಲುವಂತೆ ಸಾಧಿಸುವೆನು. ನಿನ್ನ ಕರುಣೆ ಇರಲಿ!' ಎಂದು ಹೇಳಿ, ವಂದಿಸಿ ಹೊರಟುಹೋದಳು. ಋಷಿಗಳೂ ಅಂತರ್ಹಿತರಾದರು. ಸರಿ! ಎಂದು ಅಂಬೆಯನ್ನು ಕಳಿಸಿ, ಭಾರ್ಗವನು ನನ್ನನ್ನು ಕರೆದು, ತಲೆಮೂಸಿ, 'ವತ್ಸ! ಭವಿತವ್ಯವನ್ನು ವಾರಿಸ ಲಾಗದು. ನಿನ್ನ ಧರ್ಮಶ್ರದ್ಧೆಗೆ ಮೆಚ್ಚಿರುವೆನು. ಬ್ರಹ್ಮನ ಶಾಪವನ್ನು, ಬ್ರಾಹ್ಮಣರ ಶಾಪವನ್ನು ಸತ್ಯವಾಗಿಸುವ ನನ್ನ ಸಂಕಲ್ಪದಂತೆ ನಡೆಯುವುದು ತಪ್ಪದು. ಧೈರ್ಯ ವಾಗಿರು!' ಎಂದು ಆಶೀರ್ವದಿಸಿ ಶಿಷ್ಯಜನರಿಂದ ಕೂಡಿ ಮಹೇಂದ್ರಗಿರಿಗೆ ತೆರಳಿದನು. ಬ್ರಹ್ಮಾಂಡ ಭಾಂಡವನ್ನು ನಿರ್ಮಿಸಿ, ಪಾಲಿಸಿ ಅಳಿಸುವ ಅಚಿಂತ್ಯಾದ್ಭುತ ಪರಾಕ್ರಮ ನಾದ ಭಾರ್ಗವದೇವನನ್ನೆದುರಿಸಿ ಹೋರಾಡಿದ ನನ್ನ ಹುಚ್ಚು ನೆನೆದು ಲಜ್ಜಿತನಾಗಿ, ಆ ಸ್ವಾಮಿಯ ಕರುಣೆಗೆ ಶಿರಬಾಗಿ, ನಾನು ಹಸ್ತಿನಾವತಿಯನ್ನು ಸೇರಿದೆನು.

'ಅಂಬೆ ಏನಾದಳು, ಎಂತು ನನ್ನನ್ನು ಸಾಧಿಸುವಳು? ಎಂಬ ಭೀತಿಯಿಂದ ನಾನು ಕಾಲವನ್ನು ಕಳೆಯುತ್ತಿರಲು, ಒಂದು ದಿನ ಶ್ರೀವೇದವ್ಯಾಸ ನಾರದರೇ ನನ್ನಲ್ಲಿಗೆ ಬಂದರು. 'ಭೀಷ್ಮ! ದೈವಾಧೀನವಾಗಿ ನಡೆಯುವುದನ್ನು ಮನುಜರು ತಪ್ಪಿಸಲಾರರು. ಆ ಚಿಂತೆಯನ್ನು ಬಿಡು!' ಎಂದರು. ಆಗ ನಾನು ನಾರದನನ್ನು ಕಂಡು, 'ಕಾಶೀರಾಜಸುತೆಯ ಮುಂದಿನ ಕಥೆ ಏನಾಯಿತು' ಎಂದು ಕೇಳಿದೆನು. ದೇವರ್ಷಿಯು ನಕ್ಕು ಅವಳ ವೃತ್ತಾಂತವನ್ನು ತಿಳಿಸಿದನು.

'ಅಂಬೆ ಮೊದಲು ಯಮುನಾನದೀ ತೀರದಲ್ಲಿ ಉಗ್ರ ತಪವನ್ನು ಮಾಡಿದಳು. ಆಮೇಲೆ ಕಾಶಿಕಾಶ್ರಮವೇ ಮುಂತಾದ ಬಹು ಸಿದ್ಧಾಶ್ರಮಗಳಲ್ಲಿ ತೀವ್ರ ತಪಸ್ಸನ್ನು ಮಾಡಿ ಕೃಶಳಾದಳು. ಆಗ ಜಾಹ್ನವಿಯು ಅವಳನ್ನು ಕಂಡು, ತಪಃಕಾರಣವನ್ನು ಕೇಳಲು, ಅವಳು, 'ಶಾಂತನವನಿಂದ ಬಲು ಭಂಗ ಪಟ್ಟಿರುವೆನು. ಅವನಿಂದ ನನ್ನ ಜನ್ಮವೇ ಹಾಳಾಯಿತು. ಮುಂದಿನ ಜನ್ಮದಲ್ಲಾದರೂ ಅವನನ್ನು ಸಂಹರಿಸು ವಂತಾಗಲೆಂದು ತಪಸ್ಸನ್ನು ಮಾಡುತ್ತಿರುವೆನೆ'ಂದಳು. ಪುತ್ರವತ್ಸಲೆ ಜಾಹ್ನವಿಯು, 'ಕುಟಿಲವರ್ತನಳಾಗಿರುವೆಯಾದುದರಿಂದ, ಈ ಶರೀರವನ್ನು ಬಿಟ್ಟು ನದಿಯಾಗಿ ಹರಿ' ಎಂದು ಶಾಪವಿತ್ತಳು. ಆದರೂ ಅಂಬೆ ಬಿಡದೆ, ಒಂದಂಶದಿಂದ ವತ್ಸತಪೋಭೂಮಿ ಯಲ್ಲಿ ನದಿಯಾಗಿ ಹರಿದು, ಅರ್ಧಾಂಶದಿಂದ ಅಂಬಾಸ್ವರೂಪವನ್ನು ಬಿಡದೆ, ಜಾಹ್ನವೀ ಪ್ರಭಾವವನ್ನು ಸತ್ಯವಾಗಿಸಿ, ತನ್ನ ತಪಃಪ್ರಭಾವದಿಂದ ನಷ್ಟಳಾಗದೆ, ಅಗಣ್ಯತಪ ವನ್ನು ಮಾಡಿದಳು.

ಆಗ ಶಂಕರನು ಅವಳಿಗೆ ತೋರಿ, ವರವನ್ನು ಬೇಡೆಂದನು. 'ಮಹಾದೇವ! ಭೀಷ್ಮನನ್ನು ಕೊಲ್ಲಲಿಚ್ಛಿಸುವೆನು. ಸ್ತ್ರೀಯಾಗಿರುವ ನನ್ನಿಂದ ಭೀಷ್ಮನಂತಹ ಮಹಾ ವೀರನನ್ನು ಗೆಲ್ಲಲಾಗುವುದೆಂತು?' ಎಂದು ಕೇಳಿದಳು. ಶ್ರೀ ಶಂಕರನು, 'ತನ್ವಿ! ನನ್ನ ಮಾತು ಸುಳ್ಳಾಗದು. ಇನ್ನೊಂದು ಜನ್ಮದಲ್ಲಿ ಸ್ತ್ರೀಯಾಗಿ ಪುಟ್ಟಿ, ಮಧ್ಯೆ ಪುರುಷದೇಹವನ್ನು ಹೊಂದುವೆ. ದ್ರುಪದ ರಾಜನ ಪುತ್ರನಾಗಿ ಶಿಖಂಡಿ ಎನಿಸಿ ಖ್ಯಾತನಾಗುವೆ. ಆಗ ನಿನ್ನಿಂದ ಭೀಷ್ಮನ ಪತನವಾಗುವುದು.' ಎಂದು ನುಡಿದು ಒಂದು ಮಾಲೆಯನ್ನಿತ್ತು ಈ ಮಾಲೆಯನ್ನು ಸ್ವೀಕರಿಸಿದವನು ಭೀಷ್ಮನನ್ನು ಕೊಲ್ಲು ವನೆಂದು ಹೇಳಿ, ಅಂತರ್ಹಿತನಾದನು. ಅಂಬೆಯು ಆ ಮಾಲೆಯನ್ನು ಭೀಷ್ಮನಿಗೆ ಹೆದರಿ ಯಾರೂ ಸ್ವೀಕರಿಸದಾದಾಗ, ಅದನ್ನು ದ್ರುಪದನ ರಾಜದ್ವಾರದಲ್ಲಿಟ್ಟು, ವನವನ್ನು ಸೇರಿ ಅಲ್ಲಿ, ಋಷಿಜನರ ಅಪ್ಪಣೆ ಪಡೆದು, ಚಿತಾರೋಹಣವನ್ನು ಮಾಡಿ, 'ಭೀಷ್ಮವಧೆಯನ್ನು ಸಾಧಿಸುವಂತಾಗಲಿ!' ಎಂದು ಪ್ರಾಣವನ್ನು ಬಿಟ್ಟಳು!'

ಇಂತು ನುಡಿದ ಭೀಷ್ಮನ ಮಾತನ್ನಾಲಿಸಿ ದುರ್ಯೋಧನನು 'ಪಿತಾಮಹ! ಶಿಖಂಡಿಯು ಮೊದಲು ತರುಣಿಯಾಗಿದ್ದು ಆಮೇಲೆ ಪುರುಷನಾದದ್ದೆಂತು? ಅದರಲ್ಲೂ ಮಹಾವೀರನೆನಿಸಿರಲು ಕಾರಣವೇನು?' ಎಂದು ಕೇಳಿದನು.

ಭೀಷ್ಮನಿಂತೆಂದನು. 'ರಾಜನ್! ಕೇಳು! ದ್ರುಪದರಾಜನು ತನ್ನ ಸತಿಯೊಡನೆ ಮಕ್ಕಳಿಗಾಗಿ ತಪವನ್ನು ಮಾಡಿದನು. ನನ್ನ ಮೇಲಿನ ಹಗೆಯಿಂದ ನನ್ನನ್ನು ಕೊಲ್ಲುವ ಮಗನಾಗಬೇಕೆಂದು ಅವನು ಶಂಕರನನ್ನು ಪ್ರಾರ್ಥಿಸಿದನು. ಮಹಾ ದೇವನು ಪ್ರತ್ಯಕ್ಷನಾಗಿ 'ರಾಜನ್! ಮಗಳು ಪುಟ್ಟಿ, ಅವಳೇ ಮಗನಾಗುವಳು. ಹೋಗೆ'ಂದು ಅಂತರ್ಹಿತನಾದನು. ಕಾಲಾಂತರದಲ್ಲಿ ದ್ರುಪದ ಸತಿಯು ಹೆಣ್ಣನ್ನು ಪಡೆದಳು. 'ಕೊಟ್ಟಿರುವೆನೆ'ಂದು ಪೋದ ಶಿವನ ಮಾತು ಸುಳ್ಳಾಗದೆಂದು ನಂಬಿ, ರಾಜದಂಪತಿಗಳು 'ಗಂಡು ಕೂಸೆ'ಂದು ಪ್ರಕಟಿಸಿ, ಗಂಡಿನ ವೇಷಭೂಷಣ ಸಂಸ್ಕಾರ ಗಳನ್ನಿತ್ತು ಬೆಳೆಯಿಸಿದರು. ಶಿಖಂಡಿ ಎಂದು ಹೆಸರಿಸಿ, ಯಾರಿಗೂ ತಿಳಿಯದಂತೆ ಸಾಕುತ್ತಾ, ಚಿತ್ರಲೇಖನ, ಶಿಲ್ಪ, ವಿದ್ಯಾಪಾರಂಗತಳನ್ನಾಗಿಸಿದರು. ಯೌವನವನ್ನು ಪೊಂದಿದಾಗ ದ್ರುಪದನ ಚಿಂತೆ ಪ್ರಬಲವಾಯಿತು. ಅವನು ಏನಾದರಾಗಲೆಂದು, ಶಂಕರ ವಚನವನ್ನು ನಂಬಿ, ದಾಶಾರ್ಣದೇಶದ ಹಿರಣ್ಯವರ್ಮನ ಮಗಳನ್ನು ತಂದು ಶಿಖಂಡಿನಿಗೆ ವಿವಾಹ ಮಾಡಿದನು. ವಧುವಿಗೆ 'ಶಿಖಂಡಿಯು ಸ್ತ್ರೀ' ಎಂದು ಗೊತ್ತಾಗಲು ಬಹುಕಾಲ ಬೇಕಾಗಲಿಲ್ಲ. ಅವಳು ತನ್ನ ದಾದಿಯಿಂದ ತಂದೆಗೆ ನಡೆದ ಮೋಸವನ್ನು ತಿಳಿಸಿದಳು. ಹಿರಣ್ಯವರ್ಮನು ರೋಷ ಶೋಕ ಪರೀತನಾಗಿ, ತನ್ನನ್ನು ಮೋಸಗೊಳಿಸಿ, ತನ್ನ ಮಗಳನ್ನು ಗತಿಗೆಡಿಸಿದ ದ್ರುಪದರಾಜನನ್ನು ಶಿಕ್ಷಿಸಲು ನಿಶ್ಚಯಿಸಿ, ಕಾಂಪಿಲ್ಯ ನಗರವನ್ನು ಬಂದು ಮುತ್ತಿದನು. ದೂತಮುಖದಿಂದ ಅವನಿತ್ತ ಕ್ರೂರ ಸಂದೇಶವನ್ನು ಕೇಳಿ ದ್ರುಪದನು ದುರಂತ ಚಿಂತಾಕ್ರಾಂತನಾದನು. ಶಿಖಂಡಿನಿಯ ಸ್ತ್ರೀತ್ವವನ್ನರಿತು ರಾಣಿಯು ದುಃಖಿತಳಾದಳು. ಈಶವರವೆಂತು

ಸುಳ್ಳಾಯಿತೆಂದು ಅವರು ಖಿನ್ನರಾದರು. ಅವರು ಆಪತ್ತಿನ ಪಾರ ಸೇರಲು ದೇವ ಗುರು ಪೂಜಾರತರಾದರು.

'ತನ್ನಿಂದ ದುಃಖಪಡುವ ಬಂಧು ಜನರನ್ನು ಕಂಡು ಶಿಖಂಡಿನಿಯು ನಿರ್ವಿಣ್ಣಳಾಗಿ, ಪ್ರಾಣತ್ಯಾಗವನ್ನು ಮಾಡಲು ನಿಶ್ಚಯಿಸಿ, ಮನೆಯನ್ನು ಬಿಟ್ಟು, ವನವನ್ನು ಸೇರಿದಳು. ಅಲ್ಲಿ ಸ್ಥೂಣಾಕರ್ಣ ಯಕ್ಷನಿದ್ದನು. ಅವನ ಭಯದಿಂದ ಜನರಾರೂ ಅವನ ಆ ವನದಲ್ಲಿ ಕಾಲಿಡುತ್ತಿರಲಿಲ್ಲ. ದೃಢಕರ್ಣನಾದುದರಿಂದ ಸ್ಥೂಣಾಕರ್ಣನೆಂದು ಖ್ಯಾತನಾದ ತುಂಬುರುನಾಮಕ ಗಂಧರ್ವನು, ಅಳುತ್ತಿದ್ದ ಶಿಖಂಡಿನಿಯನ್ನು ಕಂಡನು. ಅವಳಿಂದ ಅವಳ ವೃತ್ತಾಂತವನ್ನರಿತು, ಕರುಣೆಯಿಂದ ತನ್ನ ಪುರುಷ ದೇಹವನ್ನ ವಳಿಗಿತ್ತು, ಅವಳ ಸ್ತ್ರೀ ದೇಹವನ್ನು ತಾನು ಸ್ವೀಕರಿಸಿದನು. ಮತ್ತು ಪೂರ್ವ ಶರೀರದಲ್ಲಿ ತಾನೂ ಒಂದಂಶದಿಂದ ಬಂದು ಕೂತನು. ಸ್ತ್ರೀಯರಿಗೆ ಪುರುಷತ್ವವು ಬರಲಾರದಾದ ಕಾರಣ ತುಂಬುರನು ಅಂಬಾಧಿಷ್ಠಿತ ಪುಂದೇಹದಲ್ಲಿ ತಾನೂ ಅಂಶದಿಂದ ಇದ್ದು ಪುಂಸ್ತ್ವಕಾರಣನಾದನು. ಗಂಧರ್ವನಿಂದ ಸ್ವೀಕೃತವಾದ ಅವಳ ದೇಹವು ಪುರುಷತ್ವವನ್ನು ಹೊಂದಲಿಲ್ಲ. ಪುರುಷಾಧಿಷ್ಠಿತ ಪುಂದೇಹದಲ್ಲಿ ಬಂದ ಅಂಬೆಯು, ರುದ್ರವರದಂತೆ ಶಿಖಂಡಿಯಾಗಿ ಪುರುಷರಂತೆ ಸ್ಥೈರ್ಯ, ಧೈರ್ಯ, ಗಾಂಭೀರ್ಯ, ವೀರ್ಯಗಳುಳ್ಳವಳಾದದ್ದು ಕೂಡ ತುಂಬುರುನಿಂದಲೇ ಎಂದು ತಿಳಿಯಬೇಕು. ತುಂಬುರುನ ಮನೆಯಲ್ಲಿದ್ದ ಅತಿಥಿ ಸನ್ಯಾಸಿಯಂತೆ ಸುಮ್ಮನೆ ಇದ್ದ ಅಂಬೆಗೆ ಎಂದಿಗೂ ಪುಂಸ್ತ್ವವಿಲ್ಲ. ಮನೆಯಲ್ಲಿ ಬಂದಿದ್ದ ಮಾತ್ರದಿಂದ ಸನ್ಯಾಸಿಯು ಗೃಹಸ್ಥನಾಗುವನೇ ? ಆದರೂ ಶಿಖಂಡಿಯು ಗಂಧರ್ವನ ಅನುಗ್ರಹದಿಂದ ಸ್ವಸದೃಶವಾದ ಪುರುಷದೇಹವನ್ನೇ ಹೊಂದಿ ಬಂದಳಾದುದರಿಂದ ಯಾರೂ 'ಶಿಖಂಡಿಯಲ್ಲ' ವೆನ್ನುವ ಹಾಗಿದ್ದಿಲ್ಲ. ಗಂಧರ್ವನು ಮರುದಿನ ಮತ್ತೆ ಶರೀರವಿನಿಮಯವಾಗಬೇಕೆಂದು ನಿಯಮಿಸಿ ಅವಳನ್ನು ಕಳಿಸಿ, ತಾನು ಸ್ತ್ರೀಶರೀರದಲ್ಲಿದ್ದನು.

'ಅಲ್ಲಿಗೆ ಕುಬೇರನು ಬಂದನು. ತನಗೆದುರ್ಗೊಂಡು ಬಂದಿರುವ ತುಂಬುರುನನ್ನು ಕೂಗಿ ಲಜ್ಜೆಯಿಂದ ಹೊದರಿನಲ್ಲಿಡಗಿರುವುದನ್ನು ಕಂಡು, ಎಲ್ಲವನ್ನರಿತು ಕುಬೇರನು 'ಚಾಂಚಲ್ಯದೋಷದಿಂದ ನೀನು ಸ್ವೀಕರಿಸಿರುವ ಸ್ತ್ರೀದೇಹವು ಶಿಖಂಡಿಯು ಅಶ್ವತ್ಥಾಮನಿಂದ ಸಂಹೃತಳಾಗುವವರೆಗೂ ಇರಲಿ! ಆಮೇಲೆ ಮತ್ತೆ ಪುರುಷನಾಗು!' ಎಂದು ಶಪಿಸಿ ತಾನು ಹೊರಟುಹೋದನು. ತುಂಬುರನು ಅಂತೆಯೇ ಕೌರವ-ಪಾಂಡವ ಯುದ್ಧ ಸಮಾಪ್ತನಾಗುವವರೆಗೂ ಇರುವನು. ಆಮೇಲೆ ಯೋಗ ಸಾಮರ್ಥ್ಯದಿಂದ ಅವನಿಗೆ ಅವನ ದೇಹವು ಬರುವುದು.

'ಅನಂತರ ಶಿಖಂಡಿಯು ಮನೆಗೆ ಬಂದು ತನ್ನ ಮಾತಾಪಿತೃಗಳಿಗೆ ತಾನು ಪುರುಷನಾಗಿ ಬಂದಿರುವುದನ್ನು ಪೇಳಲು, ಅವರು ಪರಮಾನಂದಭರಿತರಾದರು. ಮರುದಿನ ದ್ರುಪದನು ದರ್ಪದಿಂದ ದಾಶಾರ್ಣರಾಜನಿಗೆ ' ಬಂದು ನಂದನನನ್ನು ಪರೀಕ್ಷಿಸಿ ಮುಂದೆ ಮಾತಾಡು ! ಮೂರ್ಖನಾಗಬೇಡ !' ಎಂದು ಹೇಳಿ ಕಳಿಸಿದನು.

ಆದರಂತೆ ಹಿರಣ್ಯವರ್ಮನು ಶಿಖಂಡಿಯನ್ನು ಪರೀಕ್ಷಿಸಿ ಪುರುಷನೆಂದು ತಿಳಿದು, ಲಜ್ಜಿತನಾಗಿ ಮಗಳನ್ನೇ ದಂಡಿಸಿ, ಮನೆಗೆ ಹೋದನು. ಶಿಖಂಡಿಯು ಅಂದು ರಾತ್ರಿ ಭಾರ್ಯಾಸಮೇತನಾಗಿದ್ದು ಮರುದಿನ ಮತ್ತೆ ಯಕ್ಷವನಕ್ಕೆ ಬಂದನು. 'ನಿನ್ನ ಸ್ತ್ರೀತ್ವ ವನ್ನು ಕೊಡುವಂತಿಲ್ಲ, ಕುಬೇರನ ಶಾಪವಂತಿದೆ. ನೀನು ಸಾಯುವವರೆಗೂ ಪುಂಶರೀರದಲ್ಲೇ ಇರು ! ಹೋಗು !' ಎಂದು ತುಂಬುರುನು ಕಳಿಸಲು ಶಿಖಂಡಿಯು ಮನೆಗೆ ಬಂದು ಆನಂದದಿಂದಿದ್ದನು. ಅವನು (ಅವಳು) ದ್ರೋಣಶಿಷ್ಯನಾಗಿ ಶಸ್ತ್ರಾಸ್ತ್ರ ಚತುರನೂ ಮಹಾರಥನೂ ಆದನು. ದ್ರುಪದನೂ ಪರಮಾನಂದ ಭರಿತನಾದನು.

'ಇಂತು ಶಿಖಂಡಿಯು ಸ್ತ್ರೀಪೂರ್ವನಾಗಿರುವನು. ಸ್ತ್ರೀಪೂರ್ವರೊಡನೆ, ಸ್ತ್ರೀ-ಸದೃಶನಾಮಧೇಯರೊಡನೆ ನಾನು ಸ್ತ್ರೀಯರೊಡನಂತೆ ಯುದ್ಧ ಮಾಡಲಾರೆನು. ಅವರನ್ನು ರಣದಲ್ಲಿ ಕಂಡರೆ ತತ್ಕ್ಷಣವೇ ಸುಮ್ಮನೇ ಕೂಡುವೆನು.'

ಶಿಖಂಡಿಯ ಅನಂತರದಲ್ಲಿ, ದ್ರುಪದನು ಧೃಷ್ಟದ್ಯುಮ್ನ ಸತ್ಯಜಿದಾದಿ ಪುತ್ರ ರನ್ನೂ ಪಡೆದಿರುವನು. ಅವರೊಡನೆ ಕಾದಾಡಿ, ನಿನ್ನ ಹಿತವನ್ನು ಸಾಧಿಸುವೆನು" ಎಂದು ಭೀಷ್ಮನು ನುಡಿದು 'ಕೌರವೇಶ್ವರ ! ಇದನ್ನೆಲ್ಲ ನಾನು ನಾರದರಿಂದಲು, ಚಾರರಿಂದಲು ತಿಳಿದಿರುವೆನು' ಎಂದು ತಿಳಿಸಿದನು. (ಸಂಜಯನ ವಚನ)

## ಸೇನಾ ನಿರ್ಯಾಣ

ಶ್ರೀವೈಶಂಪಾಯನನು ಜನಮೇಜಯನಿಗೆ ಹೇಳಿದನು—

ರಾಜನ್! ಮರುದಿನ ಬೆಳಗಾಯಿತು. ಆಗ ದುರ್ಯೋಧನನು ಭೀಷ್ಮನನ್ನು ಕಂಡು 'ಪಿತಾಮಹ ! ಭೀಮಾರ್ಜುನ ಧೃಷ್ಟದ್ಯುಮ್ನಾದಿ ವೀರರಿಂದ ಉಕ್ಕುವ ಸಮುದ್ರದಂತಿರುವ ಪಾಂಡವ ಸೇನೆಯನ್ನು ಕಂಡೆಯಾ ? ಅದನ್ನು ನೀನೆಷ್ಟುದಿನ ದಲ್ಲಿ ನಾಶಮಾಡಬಲ್ಲೆ ? ದ್ರೋಣಕೃಪರೆಷ್ಟುದಿನದಲ್ಲಿ ನಾಶಮಾಡಬಲ್ಲರು ? ಕರ್ಣ ನೆಷ್ಟು ? ದಯಮಾಡಿ ಹೇಳು ! ಎಂದು ಕೇಳಿದನು.

ಭೀಷ್ಮನು, 'ಶತ್ರುಗಳ ಬಲಾಬಲಗಳನ್ನು ತಿಳಿಯಲೆಣಿಸುವೆ ! ಕೇಳು ! ಧರ್ಮಿಷ್ಠರು ನ್ಯಾಯ ಯುದ್ಧವನ್ನು, ಪಾಪಿಗಳು ಮಾಯಾ ಯುದ್ಧವನ್ನು ಮಾಡುವರು. ನಾನು ಭಾಗಗಳನ್ನಾಗಿಸಿ ಹತ್ತು ಸಾವಿರ ಭಟವೀರರನ್ನೊಂದು ದಿನ ದಲ್ಲಿ ಸಂಹರಿಸಬಲ್ಲೆನು. ಇನ್ನೂ ಹೆಚ್ಚಿಗೂ ಆದೀತು ! ಅಸ್ತ್ರಬಲದಿಂದ ಕಡಿದಾಡಿದರೆ ನನಗೆ ಪಾಂಡವ ಸೇನಾವಿನಾಶವು ಒಂದು ತಿಂಗಳಲ್ಲಿ ಸಾಧ್ಯವಾಗುವುದೆಂದು ತೋರು ತ್ತಿದೆ' ಎಂದನು.

ದ್ರೋಣನಿಂತೆಂದನು, 'ರಾಜನ್ ! ಮುದುಕನಾಗಿರುವೆನು. ಇಂದ್ರಿಯಗಳು ಜರ್ಝರಿತವಾಗಿವೆ, ಆದರೂ ಶಸ್ತ್ರಾಗ್ನಿಯಿಂದ ಉರಿಯುತ್ತಾ ಪಾಂಡವ ಸೇನಾನಾಶ ವನ್ನು ಒಂದೇ ತಿಂಗಳಲ್ಲಿ, ಭೀಷ್ಮನಂತೆ ಸಾಧಿಸಬಲ್ಲೆನು' ಎಂದನು. ಕೃಪನು ತನಗೆ

ಎರಡು ತಿಂಗಳು ಬೇಕೆಂದನು. ಅಶ್ವತ್ಥಾಮನು ಹತ್ತು ದಿನಗಳಲ್ಲಿ ಸರ್ವಬಲ ಕ್ಷಯ ವನ್ನು ಮಾಡುವೆನೆಂದನು. ಕರ್ಣನು ತನಗೆ ಐದೇ ದಿನಗಳು ಸಾಕು. ಸರ್ವ ಪಾಂಡವ ಸೇನೆಯನ್ನು ನಾಶಮಾಡುವೆನೆಂದನು. ಆ ಮಾತನ್ನಾಲಿಸಿ ಸೇನಾಪತಿಯಾದ ಭೀಷ್ಮನು ನಕ್ಕು 'ರಾಧೇಯ! ರಣಮುಖದಿ ಬಾಣಶಂಖಧನುಷ್ಕನು, ವಾಸುದೇವ ಸಹಾಯನು, ಆದ ಅರ್ಜುನನನ್ನು ಮುಟ್ಟನಿಂತು, ಕ್ಷಣವಾದರೂ ಹೋರಾಡಲಾರೆ! ಸುಮ್ಮನೆ ಜಂಬಕೊಚ್ಚಬೇಡ!' ಎಂದನು.

ಕೌರವ ಶಿಬಿರದ ವೃತ್ತಾಂತವನ್ನು ಕೇಳಿ ಧರ್ಮರಾಜನು ಶ್ರೀಕೃಷ್ಣ ಭೀಮ ಅರ್ಜುನ ನಕುಲ ಸಹದೇವಾದಿಗಳಿಗೆ ಅದನ್ನು ತಿಳಿಸಿ, ಅವರನ್ನೂ ತಮ್ಮ ಬಲವಿಚಾರ ವನ್ನು ವಿವರಿಸಲು ಕೇಳಿದನು. ಅರ್ಜುನನು ವಾಸುದೇವನ ಕಡೆಗೆ ನೋಡಿ, ಮತ್ತೆ ಧರ್ಮರಾಜನಿಗಿಂತೆಂದನು. 'ಮಹಾತ್ಮ! ಇವರೆಲ್ಲರು ಮಹಾವೀರರು. ಚಿತ್ರ ಯೋಧಿಗಳು. ಇಂತಹವರ ಸಹಾಯವಿರಲು ಹೆದರುವ ಕೆಲಸವಿಲ್ಲ. ವಾಸುದೇವ ಸಹಾಯನಾಗಿ ನಾನು ಸಮರಾಂಗಣ ಸಾರ್ವಭೌಮನಾಗಿ ಕ್ಷಣದಲ್ಲಿ ಮುತ್ತಿಬರುವ ತ್ರಿಲೋಕದ ದಾನವ ಮಾನವ ಸೇನೆಯನ್ನೂ ನಾಶಮಾಡಬಲ್ಲೆನು. ಪಶುಪತಿಯು ಪ್ರಸಾದಿಸಿದ ಘೋರಾಸ್ತ್ರವಿದೆ. ಪಾಶುಪತವನ್ನರಿತವರು ಕೌರವಸೇನೆಯಲ್ಲಿ ಯಾರೂ ಇಲ್ಲ. ಆದರೆ ದಿವ್ಯಾಸ್ತ್ರಗಳನ್ನು ಸುಮ್ಮನೆ ಪ್ರಯೋಗಿಸಿ ಜನನಾಶಗೈಯಬಾರದು. ನ್ಯಾಯವಾಗಿ ಬಡಿದಾಡಿ, ಶತ್ರುಜಯವನ್ನು ಸಾಧಿಸೋಣ! ಮಿತ್ರರಾಜರೂ ಸಾಮಾನ್ಯರಲ್ಲ. ದಿವ್ಯಾಸ್ತ್ರವಿದ್ವಾಂಸರು, ಯುದ್ಧ ಕುತೂಹಲಿಗಳು ಆದ ಸೇನಾಪತಿ ಗಳಿರಲು ಜಯವು ನಮಗೆ ಕಟ್ಟಿಟ್ಟ ಗಂಟೆಂದು ತಿಳಿ! ವೇದಗಳನ್ನೋದಿ, ತದುಕ್ತ ಯಜ್ಞಾದಿಕರ್ಮಗಳನ್ನು ಮಾಡಿ, ಅವಭೃತ ಸ್ನಾನದಿಂದ ಪವಿತ್ರರಾದ ನಮ್ಮ ಮಿತ್ರರು ದೇವಸೇನೆಯನ್ನಾದರೂ ಗೆಲ್ಲಬಲ್ಲವರಾಗಿರುವರು. ಭೀಮಸೇನ ನಕುಲ ಸಹದೇವರು, ಯುಯುಧಾನ ಚೇಕಿತಾನರು, ಯುಯುಧಾನ ವಿರಾಟ ದ್ರುಪದರು, ಉತ್ತಮೌಜ ಧೃಷ್ಟಕೇತು ಶಂಖ ಶಿಖಂಡಿ ಸತ್ಯಜಿತರು, ಧೃಷ್ಟದ್ಯುಮ್ನ ದ್ರೌಪ ದೇಯರು, ಅಭಿಮನ್ಯು ಘಟೋತ್ಕಚರು, ನಿನಗೆ ಸಹಾಯರಾಗಿರುವರು. ನೀನು ಸಿಟ್ಟಾಗಿ ನೋಡಿದರೆ ಸಾಕು. ಮೂರು ಲೋಕವೂ ಹಾಳಾಗುವುದು. ಆದುದರಿಂದ ಮಹಾರಾಜ! ಧೈರ್ಯವಾಗಿರು! ಶ್ರೀಕೃಷ್ಣನ ಮಹದನುಗ್ರಹವಿದೆ. ನಮಗೇ ಜಯವಾಗುವುದು! ಭೀಮಗೇ ಜಯವಾಗುವುದು!'

ಮರುದಿನ ಬೆಳಗಾಗಲು ದುರ್ಯೋಧನನ ಸೈನ್ಯವು ರಣೋನ್ಮುಖವಾಗಿ ಕದಲಿತು. ಸ್ನಾತಾಲಂಕೃತರಾದ ರಾಜನ್ಯರು ತಂತಮ್ಮ ಸೈನಿಕರಿಂದ ಕೂಡಿ, ಸಾಲಾದ ವ್ಯೂಹಗಳಲ್ಲಿ ತೆರಳಿದರು. ಸ್ವಸ್ತಿವಾಚನಗಳಾದವು. ಅಗ್ನಿಯಲ್ಲಿ ಆಹುತಿಗಳನ್ನಿತ್ತು ವಿಪ್ರರು ಆಶೀರ್ವದಿಸಿದರು. ಏಕಾಗ್ರಮನಸ್ಕರಾದ ವೀರರು ಶ್ರದ್ಧೆಯಿಂದ ಯುದ್ಧೋ ದ್ಯತರಾಗಿ ಮದುವೆಗೆಂಬಂತೆ ತೆರಳಿದರು. ವಿಂದಾನುವಿಂದರು, ಕೇಕಯ ಬಾಹ್ಲಿಕರು, ಅಶ್ವತ್ಥಾಮ ಕೃಪಾಚಾರ್ಯರು, ಭೀಷ್ಮ ಬಾಹ್ಲಿಕ ಸೋಮದತ್ತ, ಭೂರಿಶ್ರವ

ಶಲ್ಯರು, ಜಯದ್ರಥ ಪಾರ್ವತೇಯರು, ಶಕುನಿ ಉಲೂಕರು ಮೊದಲಾದ ಮಹಾ ವೀರರು ಉದ್ಯತಾಯುಧರಾದ ಸೈನಿಕರಿಂದ ಕೂಡಿ, ರಥ ಗಜ ತುರಗ ಪದಾತಿ ಪದಘಟ್ಟನದಿಂದ ಭೂಮಿಯು ಕಂಪಿಸುತ್ತಿರಲು ಕುರುಕ್ಷೇತ್ರವನ್ನು ಸೇರಿದರು. ಅವರ ಹಿಂದೆ ಕೃತವರ್ಮ ಕೌಶಲ್ಯ ಬೃಹದ್ರಥರು ತೆರಳಿ ಬಂದರು. ತ್ರಿಗರ್ತರಿಂದ ಕೂಡಿ ದುರ್ಯೋಧನನು ಸೋದರ ಸಮೇತ ಮಹಾ ಸೈನ್ಯಮಧ್ಯದಲ್ಲಿ, ಆಕಾಶದಿ ಚಂದ್ರಮನಂತೆ, ರಾರಾಜಿಸಿದನು. ಅದರ ಹಿಂದೆ ಸೂದ ಶಿಲ್ಪ ದಾಸಾದಿ ಪರಿವಾರವು ಬಂತು. ಶಿಬಿರಗಳನ್ನು ಪ್ರವೇಶಿಸಿ ಬೀಡುಬಿಟ್ಟ ಮಹಾಸೈನ್ಯವು ಎರಡನೇ ಹಸ್ತಿನಾವತಿಯಂತೆ ಕಂಗೊಳಿಸಿತು.

ಸಾವಿರಾರು ಶಿಬಿರಗಳಲ್ಲಿ ನೆಲೆಸಿ ಇತರ ರಾಜರು ಯುದ್ಧ ಪ್ರತೀಕ್ಷರಾಗಿದ್ದರು. ಶಿಬಿರಗಳು ಸುಪ್ಪತ್ತಿಗೆ, ಆಸನ, ವಿತಾನ, ತೋರಣ, ಧ್ವಜಾದಿ ಸಮಲಂಕೃತವಾಗಿದ್ದವು. ಅನ್ನ ಜಲ ಸೌಕರ್ಯಗಳನ್ನು ನೋಡಿಕೊಳ್ಳುವ ಸೇವಕ ಜನವು ಸಿದ್ಧವಾಗಿತ್ತು. ಆನೆ ಕುದುರೆ ಸಾಲುಗಳು, ರಥಶಾಲೆಗಳು, ಸಮದೇಶದಲ್ಲಿ ನಿರ್ಮಿತವಾಗಿದ್ದವು.

ಧರ್ಮಪುತ್ರನ ಸೈನ್ಯವೂ ಅಂತೆಯೇ ಕುರುಕ್ಷೇತ್ರದಲ್ಲಿ ಬಂದು ಬೀಡುಬಿಟ್ಟಿತು. ಪಾಂಡವ ಸೇನಾಪತಿಗಳು ಯಜ್ಞಾವಭೃತ ಸ್ನಾತರಾದ ದೀಕ್ಷಿತರಂತೆ ಕಂಗೊಳಿಸಿದರು. ವಿವಿಧ ದೇಶದ ಸೈನಿಕರ ವಿವಿಧವರ್ಣ ವರವಸ್ತ್ರ ವಿನ್ಯಾಸದಿಂದ ಭೂಮಿ ಇಂದ್ರಧನುಸ್ಸಾಹಸ್ರವೇ ಭೂಮಿಗೆ ಬಂದು ವಿಶ್ರಾಂತಿಗಾಗಿ ಮಲಗಿರುವಂತೆ ತೋರಿತು.

ಧರ್ಮರಾಜನು ದೇವಪಿತೃಪೂಜೆಯನ್ನು ಮಾಡಿ, ಶ್ರೀಕೃಷ್ಣನಿಗೆ ಪೂಮಾಲೆ ಹಾಕಿ, ಅಗ್ರಪೂಜೆಯನ್ನು ಮಾಡಿದನು. ಸೈನ್ಯಗಳ ಹಿಂದೆ ಯುದ್ಧೋಪಕರಣಗಳಿಂದ ಸೂದ ಶಿಲ್ಪ ಕರ್ಮಕಾರರು ಹೊರಟರು. ಅಭಿಮನ್ಯು, ದ್ರೌಪದೇಯರು ಧೃಷ್ಟ-ದ್ಯುಮ್ನನಿಂದ ಕೂಡಿ ಹೊರಟರು. ಎರಡನೇ ಗುಂಪಾಗಿ ಭೀಮಸೇನ, ಸಾತ್ಯಕಿ, ಧನಂಜಯರು ಮಹಾಸೇನೆಯೊಡನೆ ಹೊರಟರು. ಧರ್ಮರಾಜನು ವಿರಾಟ ದ್ರುಪದರಿಂದ ಕೂಡಿ ಮೂರನೇ ವ್ಯೂಹವಾಗಿ ಮಧ್ಯೆ ತೆರಳಿದನು. ನಾಲ್ಕನೆಯದಾಗಿ ರಕ್ಷಕ ಸೈನ್ಯವು ಹೊರಟಿತು. ಸೈನ್ಯದ ಸಾಲುಗಳು ತರಂಗಗಳಾಗಿ ಸಿಂಹಗರ್ಜನೆಗಳು ಘೋಷವಾಗಿ, ಆನೆಗಳು ತಿಮಿಂಗಿಲಗಳಾಗಿ, ರಥಗಳು ಬೆಟ್ಟಗಳಾಗಿ, ಹಾರುವ ಧ್ವಜಗಳು ನೊರೆಯಾಗಿ, ಪಾರವಿಲ್ಲದ ಪಾಂಡವ ಸೇನಾಸಮುದ್ರವು ಕೌರವದ್ವೀಪವನ್ನು ಮುಣುಗಿಸಿಬಿಡುವಂತೆ ಉಕ್ಕೇರಿಬಂತು. ಇಷ್ಟೆಲ್ಲವೂ ಜನಮೇಜಯ ! ಅನಂತ ಕರುಣಾಸಮುದ್ರನಾದ ಸಮುದ್ರಶಯನನ ಭದ್ರಕೃಪೆ ಎಂದು ತಿಳಿದು ಭೀಮ ಅರ್ಜುನ ಧರ್ಮ ಯಮಳರು, ರಣಕಣಕ್ಕಿಳಿದರು.

ಮೊತ್ತಮೊದಲು ಭೀಮಸೇನನು ಹತ್ತು ಸಾವಿರ ಕುದುರೆ, ಎರಡು ಸಾವಿರ ಆನೆ ಪತ್ತು ಸಾವಿರ ಪದಾತಿಗಳು, ಐನೂರು ರಥಗಳುಳ್ಳ ಮಹಾಸೇನೆಯಿಂದ ರಣಭೂಮಿಯನ್ನು ಪ್ರವೇಶಿಸಿದನು. ವಿರಾಟಾದಿಗಳು ಆಮೇಲೆ ಬಂದರು. ಮಧ್ಯೆ

ವಾಸುದೇವ ಧನಂಜಯರು ನಡೆದರು. ಅವರನ್ನು ಅನುಸರಿಸಿ ಧರ್ಮಜನು ಬಂದನು. ಇಪ್ಪತ್ತು ಸಾವಿರ ಸೈನಿಕರು, ಐದು ಸಾವಿರ ಗಜಗಳು, ಇಪ್ಪತ್ತು ಸಾವಿರ ಕುದುರೆ ಸವಾರರು ರಥಿಕರಿಗೆ ಮತ್ತು ಪಾಂಡವರಿಗೆ ಅಂಗರಕ್ಷಕ ಸೇನೆಯಾಗಿ ನಡೆದರು. ಚೇಕಿತಾನ, ಧೃಷ್ಟಕೇತು, ಸಾತ್ಯಕಿಯರು ಸೇನಾಪರ್ಯವೇಕ್ಷಕರಾಗಿ ಹಿಂದೆ ಬಂದರು. ಶಕಟ, ಆಪಣವೇಶಗಳು ಸಾವಿರಾರು ಬಂದು ನೆಲಸಿದವು. ವಾಹನಗಳು, ವೇಶ್ಯಾ ಜನರು, ಆಯುಧ ನಿಧಿಗಳು, ಕೋಶಗಳೂ ಅಲ್ಲಲ್ಲಿ ಬೀಡು ಬಿಟ್ಟವು. ಅವರನ್ನು ರಕ್ಷಿಸುತ್ತಾ, ಅಂತಃಪುರ ಪರಿವಾರಗಳನ್ನು ಕಾಪಾಡುತ್ತಾ ಸತ್ಯಧೃತಿ, ಶ್ರೇಣಿಮಾನ್, ವಸುದಾನ, ಕಾಶ್ಯರು, ಮಹಾಸೇನೆಯಿಂದ ಕೂಡಿ ಬಂದರು. ಧರ್ಮರಾಜನ ಸೈನ್ಯದಲ್ಲಿ ಒಂದು ಲಕ್ಷ ಐವತ್ತು ಸಾವಿರ ರಥಗಳಿದ್ದವು. ಅದರಲ್ಲಿ ಅರವತ್ತು ಸಾವಿರ ಪಾಂಡವರವೇ ಆಗಿದ್ದವು. ಅಷ್ಟೇ ಆನೆಗಳೂ ಇದ್ದವು. ಮಳೆಗರೆವ ಮೇಘಗಳಂತೆ ಮದಜಲವನ್ನು ಕಾರುವ ಭದ್ರಗಜಗಳು ಪರ್ವತಗಳಂತೆ ಭೀಕರವಾಗಿ ಭೂಮಿಯು ನಡುಗುವಂತೆ ನಡೆದುಬಂದವು. ಅಷ್ಟೇ ಪರಿವಾರವು ಅದನ್ನು ರಕ್ಷಿಸುತ್ತಿತ್ತು. ನಾಲ್ಕು ಲಕ್ಷ ಐವತ್ತು ಸಾವಿರ ಕಾಲ್ಭಟರು, ನಾಲ್ಕು ಲಕ್ಷ ಐವತ್ತು ಸಾವಿರ ಕುದುರೆಗಳನ್ನು ನೋಡಿಕೊಳ್ಳುತ್ತಿದ್ದರು. ಇದಲ್ಲದೆ ಏಳೂವರೆ ಲಕ್ಷದ ವೀರಭಟರು ಕಾಲಾಳುಗಳಾಗಿ ಕಡಿದಾಡುವ ಉತ್ಸಾಹದಿಂದ ಕೇಕೆಗಳನ್ನು ಹಾಕುತ್ತಾ ನಡೆದುಬಂದರು. ಸಾವಿರ ಭೇರಿಗಳು ಭಾಂಕರಿಸಿದವು. ಸಾವಿರ ದುಂದುಭಿಗಳು ಮೊಳಗಿದವು. ಕೊಂಬು ಕಾಹಳೆಗಳ ಕೋಲಾಹಲವು ಗಗನ ವ್ಯಾಪ್ತವಾಯಿತು. ಪಾಂಡವಸೇನೆಯು ಸಂಪ್ರಹೃಷ್ಟಾಂತರಂಗವಾಗಿ, ಯುದ್ಧಪ್ರತೀಕ್ಷೆಯನ್ನು ಮಾಡುತ್ತಿತ್ತು; ಜನಮೇಜಯ ! ಇಂತು ಶ್ರೀಮಹಾಭಾರತದ ಆದಿಪಂಚಕವನ್ನು ನಿನಗೆ ಯಥಾಮತಿ ನಿರೂಪಿಸಿದೆನು. ಇನ್ನು ಮುಂದೆ ಶ್ರೀಹರಿ ಗುರು ದಯದಿಂದ ಯುದ್ಧಪಂಚಕವನ್ನು ತಿಳಿಸುವೆನು. ಆದಿಪಂಚಕವನ್ನು ಓದಿಕೇಳಿದವರು ಚಿರಾಯುರಾರೋಗ್ಯ ಸಂಪತ್ಸಂತಾನಗಳನ್ನೂ ಜ್ಞಾನಭಕ್ತಿವಿರಕ್ತಿಗಳನ್ನೂ ಪೊಂದುವರು.

ಉದ್ಯೋಗಪರ್ವವು ಮುಗಿಯಿತು.

|| ಶ್ರೀಮಧ್ವೇಶಾರ್ಪಣಮಸ್ತು ||



ಸ್ಮರಂತಿ ಸುಕೃತಾನ್ಯೇವ ನ ವೈರಾಣಿ ಕೃತಾನ್ಯಪಿ ||
ಸಂತಃ ಪರಾರ್ಥಂ ಕುರ್ವಾಣಾ ನಾಪೇಕ್ಷಂತೇ ಪ್ರತಿಕ್ರಿಯಾಮ್ ||
ಸಜ್ಜನರು ಒಳ್ಳೆಯದನ್ನು ಮಾತ್ರ ಸ್ಮರಿಸಿಕೊಳ್ಳುತ್ತಾ ಕೆಟ್ಟದ್ದನ್ನು ಮಾಡಿದ್ದರೂ
ನೆನೆಪಿಗೆ ತಂದುಕೊಳ್ಳುವುದಿಲ್ಲ. ಅವರು ಪರೋಪಕಾರಕ್ಕಾಗಿ ಕೆಲಸ
ಮಾಡುವರೇ ಹೊರತು ಪ್ರತ್ಯುಪಕಾರವನ್ನು ಬಯಸುವುದಿಲ್ಲ.

ಯಶ್ಚ ದಿಷ್ಟಪರೋ ಲೋಕೇ ಯಶ್ಚಾಪಿ ಹಠವಾದಿನಃ ||
ಉಭಾವಪಿ ಶಠಾವೇತಿ ಕರ್ಮಬುದ್ಧಿಃ ಪ್ರಶಸ್ಯತೇ ||
ಲೋಕದಲ್ಲಿ ಯಾವನು ದೈವವನ್ನೇ ನಂಬಿರುವನೋ, ಯಾವನು ಪೌರುಷವನ್ನೇ
ನಂಬಿ ಹಠವಾದಿಯಾಗಿರುವನೋ, ಅವರಿಬ್ಬರೂ ಮೂರ್ಖರೇ ಸರಿ.
ಇದು ಕರ್ತವ್ಯವೆಂದು ತಿಳಿದು ಕಾರ್ಯತತ್ಪರನಾದವನು ಪ್ರಶಂಸಾರ್ಹ.

ಸುವರ್ಣಪುಷ್ಪಾಂ ಪೃಥಿವೀಂ ಚಿನ್ವಂತಿ ಪುರುಷಾಸ್ತ್ರಯಃ ||
ಶೂರಶ್ಚ ಕೃತವಿದ್ಯಶ್ಚ ಯಶ್ಚ ಜಾನಾತಿ ಸೇವಿತುಮ್ ||
ಶೂರ, ವಿದ್ಯಾವಂತ ಮತ್ತು ಸೇವಾಕಾರ್ಯದಲ್ಲಿ ದಕ್ಷ—ಈ ಮೂವರು
ಭೂಮಿಯೆಂಬ ಲತೆಯಿಂದ ಚಿನ್ನದ ಹೂಗಳನ್ನು ಬಿಡಿಸಿಕೊಳ್ಳುತ್ತಾರೆ.

ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ ||
ಚತ್ವಾರಿ ಸಂಪ್ರವರ್ಧಂತೇ ಕೀರ್ತಿರಾಯುರ್ಯಶೋ ಬಲಮ್ ||
ನಿತ್ಯವೂ ಹಿರಿಯರಿಗೆ ಅಭಿವಾದನ ಮಾಡಿ ಅವರ ಸೇವೆಯನ್ನು ಮಾಡ
ತಕ್ಕವನಿಗೆ ಕೀರ್ತಿ, ಆಯುಸ್ಸು, ಒಳ್ಳೆಯ ಹೆಸರು ಮತ್ತು ಬಲ—ಈ ನಾಲ್ಕು
ವರ್ಧಿಸುತ್ತವೆ.

ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ಶ್ರುತಂ ||
ತಯೋರ್ವಿವಾಹಂ ಸಖ್ಯಂ ಚ ನ ತು ಪುಷ್ಟವಿಪುಷ್ಟಯೋಃ ||
ಯಾರಿಗೆ ಹಣ ಮತ್ತು ವಿದ್ಯೆ ಸಮಾನವಾಗಿದೆಯೋ ಅವರ ನಡುವೆ ಮಾತ್ರ
ಮದುವೆಯೂ ಸ್ನೇಹವೂ ಪ್ರಶಸ್ತ, ಹೆಚ್ಚು ಕಡಿಮೆ ಇರುವವರಲ್ಲಿ ಪ್ರಶಸ್ತವಲ್ಲ.

—ಮಹಾಭಾರತ